


ಸಾಮಾಜಿಕ ಕ್ರಾಂತಿಕಾರಿ ರಾಜ

# ರಾಜರ್ಷಿ ಶಾಹು ಛತ್ರಪತಿ

ಸಂಪುಟ ೧-೨

ಕನ್ನಡಕ್ಕೆ
**ಪ್ರೊ. ಹನುಮಂತ**



ಂಪು ಭಾಷಾ ಭಾರತಿ ಪ್ರಾಧಿಕಾರ
ಂಗಳೂರು ೫೬೦೦೫೬

ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಪ್ರಕಟಣೆ - ೩೬೮

ವಿಚಾರ ಸಾಹಿತ್ಯ ಮಾಲೆ - ೧೮೨





# ರಾಜರ್ಷಿ ಶಾಹು ಛತ್ರಪತಿ

## ಸಾಮಾಜಿಕ ಕ್ರಾಂತಿಕಾರಿ ರಾಜ

## ಸಂಪುಟ ೧-೨

# ರಾಜರ್ಷಿ ಶಾಹು ಛತ್ರಪತಿ

## ಸಾಮಾಜಿಕ ಕ್ರಾಂತಿಕಾರಿ ರಾಜ

## ಸಂಪುಟ ೧–೨

ಮೂಲ ಮರಾಠಿ

**ಡಾ. ಜಯಸಿಂಗ ಪವಾರ್**

ಇಂಗ್ಲಿಷ್‌ಗೆ

**ಅರುಣ್ ಸಾಧು**

ಕನ್ನಡಕ್ಕೆ

**ಪ್ರೊ. ಹನುಮಂತ**



**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**

ಕಲಾಗ್ರಾಮ, ಜ್ಞಾನಭಾರತಿ

ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ

ಬೆಂಗಳೂರು – ೫೬೦ ೦೫೬

**RAJASHRI SHAHU CHATRAPATI: SAMPUTA 1-2** — Original Marati by Dr. Jayasingha Pawar; English Translation by Arun Sadhu; Kannada Translation by Professor Hanumantha; Published by Ishwar K. Mirji, Registrar, Kuvempu Bhasha Bharathi Pradhikara; Kalagrama, Jnana Bharathi, Behind Bangalore University Campus, Mallattahalli, Bangalore-560 056; First Edidtion: 2018; Pages: xxxii + 866; Price: Rs. 400.40/-



ಮೊದಲ ಮುದ್ರಣ : ೨೦೧೮
ಪುಟಗಳು : xxxii + ೮೬೬
ಬೆಲೆ : ರೂ. ೪೦೦.೪೦/-
ಪ್ರತಿಗಳು : ೫೦೦

ಪ್ರಕಾಶಕರು:
**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**
ಕಲಾಗ್ರಾಮ, ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ
ಮಲ್ಲತ್ತಹಳ್ಳಿ, ಬೆಂಗಳೂರು – ೫೬೦ ೦೫೬
ದೂ. : ೨೩೧೮೩೩೧೧, ೨೩೧೮೩೩೧೨

ಮುಖಪುಟ ವಿನ್ಯಾಸ : **ಯು.ಟಿ. ಸುರೇಶ್**
ISBN : 978 - 93 - 8759 - 258 - 2



ಮುದ್ರಕರು: ಮೆ: ರಾಜಾ ಪ್ರಿಂಟರ್ಸ್
ಮಖ್ ರಾಜ್ ಲೇಔಟ್, ಬನ್ನೇರುಘಟ್ಟ ರಸ್ತೆ,
ಬೆಂಗಳೂರು–೫೬೦ ೦೩೦ ☎: ೦೮೦–೨೨೨೩೪೦೬೬
ಈಮೇಲ್ : rajaprinters@gmail.com



# ಅಧ್ಯಕ್ಷರ ನುಡಿ

ಕುವೆಂಪು ಭಾಷಾ ಭಾರತಿ ಪ್ರಾಧಿಕಾರವನ್ನು ಕರ್ನಾಟಕ ಸರಕಾರವು ಕನ್ನಡ ಮತ್ತು ಇತರ ಭಾಷೆಗಳೊಡನೆ ತಿಳಿವಿನ ನಂಟನ್ನು ಬೆಳೆಸುವ ಗುರಿಯಿಂದ ರೂಪಿಸಿದೆ. ಬೇರೆ ಭಾಷೆಗಳ ತಿಳಿವನ್ನು ಕನ್ನಡಕ್ಕೆ ದೊರಕಿಸಲು ಅನುವಾಗುವಂತೆ ಸಿದ್ಧಕೃತಿಗಳ ಅನುವಾದ ಮತ್ತು ಪ್ರಕಟಣೆಯ ಕೆಲಸದಲ್ಲಿ ಪ್ರಾಧಿಕಾರವು ತೊಡಗಿಕೊಂಡಿದೆ. ಅಲ್ಲದೆ ಕನ್ನಡದ ತಿಳಿವು ಇತರ ನುಡಿಗಳಿಗೂ ಸಿಗುವಂತಾಗಲು ಬೇಕಾದ ಯೋಜನೆಗಳನ್ನು ಹಮ್ಮಿಕೊಂಡಿದೆ. ಈವರೆಗೆ ಸುಮಾರು ಮುನ್ನೂರ ನಲವತ್ತು ಪುಸ್ತಕಗಳನ್ನು ಕನ್ನಡಿಗರ ಓದಿನ ಲೋಕಕ್ಕೆ ಪ್ರಾಧಿಕಾರವು ಸೇರಿಸಿದೆ. ಅಲ್ಲದೆ ಸರಕಾರವು ಬೇರೆ ಯೋಜನೆಗಳ ಮೂಲಕ ಪ್ರಾಧಿಕಾರಕ್ಕೆ ಕನ್ನಡ ಜಗತ್ತನ್ನು ವಿಸ್ತರಿಸುವ ಹೊಣೆಯನ್ನೂ ನೀಡಿದೆ. ಅದಕ್ಕೆ ಬೇಕಾದ ಅನುದಾನವನ್ನೂ ಒದಗಿಸಿದೆ. ಕನ್ನಡ ನಾಡಿನ ಪ್ರಾಜ್ಞರ ನೆರವಿನಿಂದ ಈವರೆಗೆ ಪ್ರಾಧಿಕಾರವು ತನಗೆ ವಹಿಸಲಾದ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿದೆ.

ನಮ್ಮ ಕಾಲದ ಅಗತ್ಯಕ್ಕೆ ಬೇಕಾದ ಜ್ಞಾನ-ವಿಜ್ಞಾನಗಳನ್ನು ಭಾರತೀಯ ಮತ್ತು ಜಾಗತಿಕ ಮಟ್ಟದಲ್ಲಿನ ಲೇಖನ ಮತ್ತು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುವ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಗಿದೆ. ಇದರ ಜೊತೆಗೆ ಕನ್ನಡದ ಉತ್ತಮ ಜ್ಞಾನ ವಿಜ್ಞಾನಗಳ ಕೃತಿಗಳನ್ನು ಭಾರತೀಯ ಮತ್ತು ಇಂಗ್ಲಿಷ್ ಭಾಷೆಗೆ ಅನುವಾದಿಸುವ ಕೆಲಸವೂ ಮುಂದುವರಿಸಲಾಗುತ್ತಿದೆ.

ಬುದ್ಧ, ಬಸವಣ್ಣ-ಜ್ಯೋತಿ ಬಾಫುಲೆ, ಬಾಬಾಸಾಹೇಬ್ ಅಂಬೇಡ್ಕರ್ ಅವರುಗಳು ಭಾರತೀಯ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದವರು. ಸಾಮಾಜಿಕ, ಧಾರ್ಮಿಕ, ರಾಜಕೀಯ ಚಳುವಳಿಯನ್ನು ಮಾಡಿದ ಶಾಹೂ ಛತ್ರಪತಿಯವರು ಸಾಮಾನ್ಯನಿಗೂ ಸಹ ಎಲ್ಲ ಬಗೆಯ ಅಧಿಕಾರಗಳು ದೊರೆಯಬೇಕೆಂದು ಬಯಸಿದವರು. ರೈತರು, ಕಾರ್ಮಿಕರು, ಸ್ತ್ರೀಯರು, ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರಿಗೆ ಉಚಿತ ಶಿಕ್ಷಣ ನೀಡಿ ಅವರ ಉದ್ಧಾರದ ಸಲುವಾಗಿ ತಮ್ಮ ರಾಜ್ಯದಲ್ಲಿ ಕಾನೂನುಗಳನ್ನು ರೂಪಿಸಿ ಬ್ರಾಹ್ಮಣಶಾಹಿಯ ಗುಲಾಮಗಿರಿಯಿಂದ ಅವರನ್ನು ರಕ್ಷಿಸಿದರು. ಅಸ್ಪೃಶ್ಯ-ಹಿಂದುಳಿದ ವರ್ಗದವರಿಗೆ ಉಚಿತ ಶಿಕ್ಷಣ ನೀಡಿ ಉದ್ಯೋಗದಲ್ಲಿ ಮೀಸಲಾಯಿತಿಯನ್ನು ಜಾರಿಗೆ ತಂದರು. ಡಾ. ಅಂಬೇಡ್ಕರ್ ಅವರ ಪಾಂಡಿತ್ಯವನ್ನು ತುಂಬಾ ಮೆಚ್ಚಿಕೊಂಡಿದ್ದ ಶಾಹೂ ಅವರು ಅಂಬೇಡ್ಕರ್ ಅವರ ಬಗ್ಗೆ ತುಂಬಾ ಗೌರವವನ್ನೂ ಇಟ್ಟುಕೊಂಡಿದ್ದರು. ಭಾರತದ ಭವಿಷ್ಯವನ್ನು ನಿರ್ಮಿಸುವ ಸಂದರ್ಭದಲ್ಲಿ ಅಂಬೇಡ್ಕರ್ ಅನಿವಾರ್ಯವೆನ್ನುವಂತಹ ಮಹಾನ್ ನಾಯಕರಾಗಿ ಹೊರಹೊಮ್ಮುತ್ತಾರೆಂಬ ಭವಿಷ್ಯವಾಣಿಯನ್ನು ಅವರು ನುಡಿದಿದ್ದರು. ಇಂತಹ ಮಹಾನ್ ಸಮಾಜ ಸುಧಾರಕ ಶಾಹು ಮಹಾರಾಜ್ ಅವರ ಬದುಕು ಮತ್ತು ವಿಚಾರಗಳನ್ನೊಳಗೊಂಡ, ಪ್ರಸ್ತುತ ಸಂದರ್ಭಕ್ಕೆ ಅವರ ವಿಚಾರಗಳು ಅತ್ಯಗತ್ಯವಾಗಿರುವ ಈ

ಕೃತಿಯನ್ನು ಪ್ರೊ. ಹನುಮಂತ ಅವರು ತುಂಬಾ ಸೊಗಸಾಗಿ ಅನುವಾದಿಸಿದ್ದಾರೆ. ಅವರಿಗೆ ಪ್ರಾಧಿಕಾರದ ವತಿಯಿಂದ ಹೃತ್ಪೂರ್ವಕ ಅಭಿನಂದನೆಗಳು.

ಈ ಕೃತಿಯ ಅನುವಾದವನ್ನು ಪ್ರಾಧಿಕಾರದ ವತಿಯಿಂದ ಮುದ್ರಿಸಲು ಆಸಕ್ತಿವಹಿಸಿದ ಪ್ರಾಧಿಕಾರದ ಸದಸ್ಯರಿಗೆ ಪ್ರಾಧಿಕಾರದ ಕೆಲಸ ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಪ್ರಾಧಿಕಾರದ ರಿಜಿಸ್ಟ್ರಾರ್ ಶ್ರೀ ಈಶ್ವರ್ ಕು. ಮಿರ್ಜಿ ಅವರಿಗೆ, ಶ್ರೀ ಎಚ್. ದಂಡಪ್ಪನವರಿಗೆ, ಶ್ರೀ ಜೆ.ಎನ್. ಶಾಮರಾವ್ ಅವರಿಗೆ ಹಾಗೂ ಪ್ರಾಧಿಕಾರದ ಇತರ ಸಿಬ್ಬಂದಿ ವರ್ಗದವರಿಗೂ, ಅಂದವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ರಾಜಾಪ್ರಿಂಟರ್ಸ್, ಬೆಂಗಳೂರು ಅವರಿಗೂ ನಮ್ಮ ವಂದನೆಗಳು.

**– ಡಾ. ಕೆ. ಮರುಳಸಿದ್ದಪ್ಪ**
ಅಧ್ಯಕ್ಷರು

**ಭಾರತದ ಸಾಮಾಜಿಕ ಜನತಂತ್ರದ**
**ಸ್ತಂಭಗಳಿಗೆ ಅರ್ಪಣೆ**

ಮಹಾತ್ಮ ಜೋತಿರಾವ್‌ಫುಲೆ
ಶ್ರೀ ನಾರಾಯಣಗುರು
ಪೆರಿಯಾರ್ ಇ.ವಿ. ರಾಮಸ್ವಾಮಿ ನಾಯ್ಕರ್
ಮಹಾರಾಜ ಸಯಾಜಿರಾವ್ ಗಾಯ್ಕವಾಡ್
ಮಹರ್ಷಿ ವಿಠ್ಠಲ್ ರಾಮ್‌ಜಿ ಶಿಂಧೆ
ಡಾ. ಬಾಬಾಸಾಹೇಬ್ ಅಂಬೇಡ್ಕರ್
ಕರ್ಮವೀರ್ ಭಾವುರಾವ್ ಪಾಟೀಲ್
ಡಾ. ಪಂಜಾಬ್‌ರಾವ್ ದೇಶಮುಖ್

## ಸ್ವರಾಜ್ಯದ ಬುನಾದಿ

ಛತ್ರಪತಿ ಶಾಹು ಮಹಾರಾಜರು ಅಸ್ಪೃಶ್ಯತೆಯ ಆಚರಣೆಯನ್ನು ಕೊನೆಗಾಣಿಸಲು ಸತ್ಯಶೋಧಕ ಸಮಾಜದ ತತ್ವಗಳನ್ನು ಅನುಸರಿಸಿದರು. ಇದರಲ್ಲಿ ಅವರು ನಿಜವಾಗಿಯೂ ಸ್ವರಾಜ್ಯಕ್ಕೆ ಅಸ್ತಿವಾರವನ್ನು ಹಾಕಿದರು.

**– ಮಹಾತ್ಮ ಗಾಂಧಿ**

* * * *

## ಸಾಮಾಜಿಕ ಜನತಂತ್ರದ ಸ್ತಂಭ

"ನನ್ನ ಪ್ರೀತಿಯ ಮಹಾರಾಜ ಸಾಹೇಬ,

... ಭಾರತದಲ್ಲಿ ಸಾಮಾಜಿಕ ಜನತಂತ್ರದ ಕಡೆಗೆ ಪ್ರಗತಿ ಸಾಧಿಸುತ್ತಿರುವ ಮಹಾ ಆಂದೋಳನದ ಸ್ತಂಭವಾಗಿರುವ ನೀವು ನಮಗೆ ಎಂದೆಂದಿಗೂ ಅತ್ಯಗತ್ಯ"

**– ಬಿ. ಆರ್.ಅಂಬೇಡ್ಕರ್**

(ಡಾ. ಅಂಬೇಡ್ಕರರು ರಾಜರ್ಷಿ ಶಾಹುರವರಿಗೆ ಬರೆದ ಪತ್ರ)

# ರಾಜರ್ಷಿ ಶಾಹು ಮಹಾರಾಜರ ವ್ಯಕ್ತಿಚಿತ್ರ

ಭಾರತದ ಇತಿಹಾಸ ಸಾವಿರಾರು ರಾಜ–ಮಹಾರಾಜರ ದಾಖಲೆ. ಆದರೆ ಕೆಲವೇ ರಾಜರಾದ ಅಶೋಕ, ಹರ್ಷವರ್ಧನ, ಅಕ್ಬರ, ರಾಣಾಪ್ರತಾಪ ಮತ್ತು ಶಿವಾಜಿಯಂಥವರು ನಿಜವಾಗಿಯು ಮಹಾಶಯರಾಗಿದ್ದಾರೆ. ಅಂತಹ ಮಹಾರಾಜರ ಸಮೂಹಕ್ಕೆ ಮತ್ತೊಂದು ಹೆಸರು – ಕೊಲ್ಹಾಪುರದ ರಾಜರ್ಷಿ ಶಾಹು ಛತ್ರಪತಿಯವರ ಹೆಸರು ಸೇರ್ಪಡೆಯಾಗಬೇಕು. ಶಾಹು ಶಿವಾಜಿ ಮಹಾಶಯರ ವಂಶಸ್ಥರು. ಅವರು ಪಾರಂಪರಿಕವಾಗಿ ಶಿವಾಜಿಯವರ ಸಿಂಹಾಸನವನ್ನು ಪಡೆದದ್ದು ಮಾತ್ರವಲ್ಲದೆ ಅವರು ಅವರ ಆದರ್ಶಗಳನ್ನು ಮತ್ತು ಕಲ್ಯಾಣಕಾರಿ ಆಡಳಿತದ ಬದ್ಧತೆಯನ್ನು ಬಳುವಳಿಯಾಗಿ ಪಡೆದಿದ್ದರು.

ಶಾಹುರವರ ಆಡಳಿತದ ಕೇಂದ್ರೀಯ ಗಮನ ಸಾಮಾನ್ಯ ಮನುಷ್ಯನಾಗಿದ್ದ, ನಿಸ್ವಾರ್ಥ, ಋಷಿಸಮಾನ ಆದರ್ಶ ರಾಜರಾಗಿದ್ದರು. ಅವರು ವಿಶೇಷವಾಗಿ ಜನರಿಗಾಗಿ ದಮನಿತರ ಮತ್ತು ಹಿಂದುಳಿದವರ ಕಲ್ಯಾಣಕ್ಕಾಗಿ ತಮ್ಮ ಅಧಿಕಾರ ಮತ್ತು ಖಜಾನೆಯನ್ನು ಬಳಸಿದರು. ಶಿವಾಜಿಯಂತೆ ಅವರು 'ಜನರ ರಾಜ' ಅಥವಾ 'ರೈತರ ರಾಜ'ನಾಗಿ ಜನಮನ್ನಣೆ ಪಡೆದರು.

ತಾವು ಮಹಾರಾಜರಾಗಿದ್ದುಕೊಂಡು ತಮ್ಮ ಇಡೀ ಜೀವನವನ್ನು ಜಾತಿವ್ಯವಸ್ಥೆ ಮತ್ತು ಅಸ್ಪೃಶ್ಯತೆಯ ಪೀಡೆಯ ವಿರುದ್ಧ ಹೋರಾಡಲು ಮುಡುಪಿಟ್ಟರು. ಅವರು ಅರಮನೆಯ ವೈಭೋಗದ ಜೀವನವನ್ನು ಬದಿಗಿರಿಸಿ, ಅಸ್ಪೃಶ್ಯರನ್ನು, ಅಲೆಮಾರಿ ಪಂಗಡದವರನ್ನು ಮತ್ತು ದಮನಿತರನ್ನು ಆಲಂಗಿಸಿಕೊಂಡರು ಮತ್ತು ಅವರ ಸಂಗಡ ಉಂಡು–ತಿಂದು ಸಂತೋಷದ ಕ್ಷಣಗಳನ್ನು ಕಳೆದರು. ಇಂಥ ಕ್ರಾಂತಿಕಾರಿ ವರ್ತನೆ, ಜಾತಿಪೀಡಿತ, ಕಲ್ಮಶದಿಂದ ಕೂಡಿದ ಸಮಾಜದಲ್ಲಿ ಕೇಳರಿಯದ್ದು. ಅವರು ಅವರನ್ನು ದಾಸ್ಯದಿಂದ ವಿಮೋಚನೆಗೊಳಿಸಿದರು. ಸಾಮಾಜಿಕ ಸಮಾನತೆಯ ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಅವರಿಗೆ ಸಮಾನತೆಯ ಹಕ್ಕನ್ನು ನೀಡಿದರು. ನಿಜವಾಗಿಯೂ ಡಾ.ಅಂಬೇಡ್ಕರರು ಶಾಹುರವರನ್ನು 'ಅಸ್ಪೃಶ್ಯರ ಮಿತ್ರ' ಮತ್ತು ಭಾರತದಲ್ಲಿ 'ಸಾಮಾಜಿಕ ಜನತಂತ್ರದ ಒಂದು ಸ್ತಂಭ' ಎಂದು ಗೌರವಿಸಿದ್ದಾರೆ.

ಚಕ್ರವರ್ತಿ ಅಶೋಕ ಬುದ್ಧನ ಧಮ್ಮವನ್ನು ಹರಡಿದಂತೆಯೇ ರಾಜರ್ಷಿ ಶಾಹು, ಮಹಾತ್ಮ ಫುಲೆಯವರ 'ಸತ್ಯಧರ್ಮ'ವನ್ನು ಬೆಳೆಸಿದರು ಮತ್ತು ತಮ್ಮ ಸಂಸ್ಥಾನದಲ್ಲಿ ಸಾಮಾಜಿಕ ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವಗಳ ಪರಿಕಲ್ಪನೆಗಳನ್ನು ವಾಸ್ತವದಲ್ಲಿ ಸಾಕಾರಗೊಳಿಸಿದರು. ಅವರು ದಲಿತರ ವಿಮೋಚಕರಾಗಿದ್ದರು. ಅವರ ಕ್ರಾಂತಿಕಾರಿ ಸಾಮಾಜಿಕ ಕಾರ್ಯಕ್ಕೆ ಮೆಚ್ಚಿ ಸಂತೋಷಗೊಂಡು ಉತ್ತರಭಾರತದ ಕುರ್ಮಿ ಕ್ಷತ್ರಿಯ ಸಮಾಜ (ರೈತ ಸಮುದಾಯ) ಅವರಿಗೆ 'ರಾಜರ್ಷಿ' ಎಂಬ ಬಿರುದನ್ನು ನೀಡಿ ಗೌರವಿಸಿತು. ಅವರು ಒಬ್ಬ ರಾಜರಾಗಿದ್ದರು. ಆದರೆ ಭಾರತದ ಜನರು ಅವರಿಗೆ ಅಂಥ ಒಂದು ಬಿರುದನ್ನು ನೀಡಿದರು.

# ಪೀಠಿಕೆ

ಛತ್ರಪತಿ ಶಿವಾಜಿ ಅವರು ಮಾಳವ ಪ್ರದೇಶದ ಮಹಾ ಪರಾಕ್ರಮಿ. ಜನರ ಸಹಾಯದಿಂದ ಮಹಾರಾಷ್ಟ್ರದ ಬೆಟ್ಟ-ಗುಡ್ಡಗಳ ಪ್ರದೇಶದಲ್ಲಿ ಹಿಂದವಿ ಸ್ವರಾಜ್ಯ ಅಥವಾ ಸ್ವಯಂ ಆಡಳಿತವನ್ನು ಸ್ಥಾಪಿಸಿದರು. ಮಹಾರಾಷ್ಟ್ರದ ಬೆಟ್ಟಗುಡ್ಡಗಳ ಕೋಟೆಗಳು ಈ ಸಾಹಸಕ್ಕೆ ಸಹಾಯಕವಾಗಿದ್ದವು. ಹಿಂದವಿ ಸ್ವರಾಜ್ಯ ಎಂದರೆ ಹಿಂದುಗಳ ಆಡಳಿತವಲ್ಲ. ಹಿಂದವಿ ಪದವು ಭಾರತದೇಶದ ಉಪ-ಖಂಡದ ಜನರನ್ನು ಕುರಿತದ್ದಾಗಿದೆ. ಶಿವಾಜಿಯವರ ಸ್ವರಾಜ್ಯ ಎಲ್ಲ ಜನರ ಆಡಳಿತ ಅಂದರೆ ಹಿಂದುಗಳ ಮತ್ತು ಮುಸ್ಲಿಮರ ಆಡಳಿತವಾಗಿದೆ. ಹಿಂದುಗಳಲ್ಲಿ ಬ್ರಾಹ್ಮಣರು, ಮರಾಠರು, ಪ್ರಭುಗಳು, ಶೆಣ್ವಿಗಳು, ರಾಮೋಷಿಗಳು, ಕೋಲಿಗಳು, ಭಂಡಾರಿಗಳು, ಧನಗರರು(ಕುರುಬರು), ಮಹರರು ಮತ್ತು ಇತರೆ ಎಲ್ಲಾ ಜನರು-ಮಣ್ಣಿನ ಮಕ್ಕಳು ಸೇರಿದ್ದಾರೆ. ಶಿವಾಜಿಯವರು ಅವರಲ್ಲಿ ಸ್ವಾತಂತ್ರ್ಯಕ್ಕಾಗಿ ಪ್ರೀತಿ ಮತ್ತು ಅಭಿಲಾಷೆಯ ಕಿಡಿಯನ್ನು ಹಚ್ಚಿದರು. ಅವರು ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನೇ ತ್ಯಾಗಮಾಡುವ ದೃಢಸಂಕಲ್ಪವನ್ನು ಅವರಿಗೆ ಬೋಧಿಸಿದರು. ಈ ಮನೋಭಾವವು ತನ್ನ ಜನರ ಸ್ವಾತಂತ್ರ್ಯಕ್ಕಾಗಿ ಮೊಘಲರ ವಿರುದ್ಧ ಹೋರಡುವುದಕ್ಕೆ ಬಹಳ ದೂರದಲ್ಲಿದ್ದ ಬುಂದೇಲಖಂಡದ ಬುಂದೇಲದ ಛಾತ್ರಸಾಲ ಮಹಾರಾಜರಿಗೆ ಸ್ಫೂರ್ತಿ ನೀಡಿತು.

ಶಿವಾಜಿಯ ನಂತರ ಐವತ್ತು ವರ್ಷಗಳಲ್ಲಿ ತನ್ನ ಸ್ವರಾಜ್ಯದ ಉತ್ತರಾಧಿಕಾರಿಗಳು ದೆಹಲಿ ಮೇಲೆ ದಂಡೆತ್ತಿ ಹೋಗಲು ನರ್ಮದಾ ನದಿಯನ್ನು ದಾಟಿದರು ಮತ್ತು ಮೊಘಲ ಚಕ್ರವರ್ತಿಗಳ ಸಿಂಹಾಸನದ ಮೇಲೆ ತಮ್ಮ ನಿಯಂತ್ರಣವನ್ನು ಹೊಂದಿದರು... ನಂತರ ಅಹಮದ್‌ಷಾಹ್ ಅಬ್ದಾಲಿ ಭಾರತವನ್ನು ದಾಳಿ ಮಾಡಿದಾಗ ಸಾವಿರಾರು ಮರಾಠರು ತಮ್ಮ ಹೋರಾಟದಲ್ಲಿ ಪ್ರಾಣಗಳನ್ನೇ ಪಾಣಿಪಟ್ ಯುದ್ಧಭೂಮಿಯಲ್ಲಿ ಬಲಿಕೊಟ್ಟರು. ತಮ್ಮ ಸಂರಕ್ಷಣೆಗಾಗಿ ಅವರು ಹೋರಾಡಿದ್ದು ಮಾತ್ರವಲ್ಲದೆ, ಪರಕೀಯರು ತಮ್ಮ ದೇಶದ ಮೇಲೆ ಆಕ್ರಮಣವನ್ನು ಹಿಮ್ಮೆಟ್ಟಿಸಲು ಹೋರಾಡಿದರು. ಶಿವಾಜಿಯವರು ಕಲಿಸಿದ ಸ್ವಾತಂತ್ರ್ಯದ ಸ್ಫೂರ್ತಿ ಉತ್ತರದಲ್ಲಿರುವ ಬಹುದೂರದ ಪಾಣಿಪತ್ ಯುದ್ಧಭೂಮಿಗೆ ಕಳುಹಿಸಿತು. ಅದೇ ಸ್ವಾತಂತ್ರ್ಯದ ಸ್ಫೂರ್ತಿ ಬ್ರಿಟಿಷ್ ಸಾಮ್ರಾಜ್ಯವಾದಿಗಳ ವಿರುದ್ಧ ಹೋರಾಡಲು ಅವರಿಗೆ ಪ್ರೇರಣೆ ನೀಡಿತು. ಹೀಗೆ ಶಿವಾಜಿ ಭಾರತದಲ್ಲಿ ಸ್ವಾತಂತ್ರ್ಯದ ಸಶಸ್ತ್ರದ ಕ್ರಾಂತಿಕಾರಿಗಳಿಗೆ ಆರಾಧ್ಯಮೂರ್ತಿ ಮಹಾರಾಜರ ಉಲ್ಲೇಖಮಾಡಲಾಗಿದೆ. ಶಿವಾಜಿಯ ಮರಣದ ನಂತರ ಕೂಡಲೆ ಗದ್ದುಗೆಯನ್ನು ಅವರ ವಾರಸುದಾರರು ಸತಾರ ಮತ್ತು ಕೊಲ್ಹಾಪುರವೆಂದು ಎರಡು ಭಾಗ ಮಾಡಿದರು. ಅವರ ಎರಡನೆಯ ಸೊಸೆ ಮಹಾರಾಣಿ ತಾರಾಬಾಯಿ ಕೊಲ್ಹಾಪುರವನ್ನು ಸ್ಥಾಪಿಸಿದರು. ಶಾಹುರವರು ೧೮೮೪ರಲ್ಲಿ ಈ ಗದ್ದುಗೆಯನ್ನು ಬಳುವಳಿಯಾಗಿ ಪಡೆದರು ಮತ್ತು ೧೮೯೪ರಲ್ಲಿ ಪಟ್ಟಾಭಿಷಿಕ್ತರಾದರು. ಅವರು ೧೯೨೨ರಲ್ಲಿ ನಿಧನರಾದರು. ಅವರ ೨೮ ವರ್ಷಗಳ ಆಡಳಿತವು ಮಹಾರಾಷ್ಟ್ರದ ಸಾಮಾಜಿಕ ಇತಿಹಾಸದಲ್ಲಿ ಕ್ರಾಂತಿಕಾರಿ ಪರ್ವವಾಗಿತ್ತು.

ಶಿವಾಜಿಯವರ 'ಹಿಂದವಿ ಸ್ವರಾಜ್ಯ'ದಿಂದ ಕಾಲ ಬದಲಾಗಿದೆ. ಇಂಗ್ಲಿಷಿನವರು ಇಡೀ ಉಪ-

ಖಂಡದಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಿ ಬಿಟ್ಟಿದ್ದರು. ಅವರ ಆಡಳಿತದ ವಿರುದ್ಧ ನಡೆದ ಕೊನೆಯ ೧೮೫೭ರ ಸಿಪಾಯಿದಂಗೆ ಅಸಫಲವಾಗಿತ್ತು. ಅವರು ತಮ್ಮ ಅಧಿಕಾರವನ್ನು ಪುನರ್ ಮೌಲ್ಯಮಾಪನ ಮಾಡಿದರು ಮತ್ತು ಪ್ರಕ್ರಿಯೆಯಲ್ಲಿ ಅವರು ವಿವೇಕಶಾಲಿಗಳಾದರು. ಸ್ಥಳೀಯ ಆಡಳಿತಗಾರರು ಜನರ ಮೇಲೆ ಅಪಾರವಾದ ಪ್ರಭಾವ ಬೀರಿದ್ದಾರೆಂಬುದನ್ನು ಮತ್ತು ಸ್ಥಳೀಯ ರಾಜರನ್ನು ಕಿತ್ತುಹಾಕುವುದು ಅಥವಾ ಅಧಿಕಾರಹೀನಮಾಡುವುದು ಬುದ್ಧಿವಂತಿಕೆಯ ಲಕ್ಷಣವಲ್ಲವೆಂದು ಮನವರಿಕೆ ಮಾಡಿಕೊಂಡರು. ದೇಶೀಯ ರಾಜರ ಸೈನ್ಯಬಲವನ್ನು ಗಮನಾರ್ಹವಾಗಿ ಕುಗ್ಗಿಸುವ ಮೂಲಕ ತಮ್ಮ ಯಜಮಾನಿಕೆ (ಹೆಜಿಮನಿ) ಯನ್ನು ಸ್ಥಾಪಿಸುವ ಚಾಣಕ್ಯನೀತಿಯನ್ನು ಬ್ರಿಟಿಷರು ಹೆಚ್ಚು ಅನುಸರಿಸಿದರು. ದೇಶೀಯ ರಾಜರು ಸಹ ಬ್ರಿಟಿಷರ ಶಕ್ತಿಸಾಮರ್ಥ್ಯವನ್ನು ಮನವರಿಕೆ ಮಾಡಿಕೊಂಡರು ಮತ್ತು ಗೌಣಸ್ಥಾನವನ್ನು ವಹಿಸಿಕೊಳ್ಳುವುದು ಸುರಕ್ಷಿತವೆಂದು ಅರ್ಥಮಾಡಿಕೊಂಡರು. ಭಾರತದಲ್ಲಿ ಸುಮಾರು ೬೦೦ ಸಂಸ್ಥಾನಗಳಿದ್ದವು ಮತ್ತು ಎಲ್ಲರೂ ಬ್ರಿಟಿಷರೊಂದಿಗೆ ಪ್ರತ್ಯೇಕವಾದ ಒಪ್ಪಂದವನ್ನು ಮಾಡಿಕೊಂಡಿದ್ದರು ಮತ್ತು ಬ್ರಿಟಿಷ್ ಸಾಮ್ರಾಜ್ಯದ ಸಾರ್ವಭೌಮತ್ವವನ್ನು ಈ ದೇಶದಲ್ಲಿ ಒಪ್ಪಿಕೊಂಡದ್ದು ಈ ಒಪ್ಪಂದದ ಸಾಮಾನ್ಯ ಅಂಶವಾಗಿತ್ತು. ಮಾತುಕತೆಯ ಚೌಕಾಸಿಯಲ್ಲಿ ಸಾಮ್ರಾಜ್ಯ ವಿಧಿಸಿದ ಕಟ್ಟುನಿಟ್ಟಿನ ಮಿತಿಗಳೊಳಗೆ ಅವರು ತಮ್ಮ ಸಂಸ್ಥಾನಗಳನ್ನು ಆಳುವ ಹಕ್ಕನ್ನು ಉಳಿಸಿಕೊಂಡರು. "ತಪ್ಪಿ ನಡೆಯುವ ರಾಜನನ್ನು" ಶಿಕ್ಷಿಸುವ ಅಥವಾ ಕಿತ್ತುಹಾಕುವ ತಮ್ಮ ಸಾರ್ವಭೌಮ ಅಧಿಕಾರವನ್ನು ಪ್ರದರ್ಶಿಸುವ ಅವಕಾಶವನ್ನು ಬ್ರಿಟಿಷರು ಎಂದಿಗೂ ಕಳೆದುಕೊಳ್ಳಲಿಲ್ಲ.

೧೯ನೇ ಶತಮಾನದ ಕೊನೆಗೆ ಬ್ರಿಟನ್ನಿನ ಭಾರತದ ಸಾಮ್ರಾಜ್ಯವನ್ನು ರಾಜಕೀಯವಾಗಿ ಎರಡು ಭಾಗಗಳಾಗಿ ವಿಭಾಗಿಸಲಾಯಿತು. ಬ್ರಿಟಿಷರು ನೇರವಾಗಿ ಆಡಳಿತ ನಡೆಸಿದ ಗೆದ್ದ ಭಾರತ ಮತ್ತು ತಮ್ಮ ಉಳಿವಿಗಾಗಿ ಬ್ರಿಟಿಷರ ಮೇಲೆ ಅವಲಂಬಿತ ಸಾಮಂತರಾಜರ ಇಂಡಿಯಾದ ಭಾರತ. ಬಲೂಚಿಸ್ತಾನದಿಂದ ಅಸ್ಸಾಂ ಮತ್ತು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಬ್ರಿಟಿಷ್ ಯೂನಿಯನ್ ಜಾಕ್(ಬಾವುಟ) ತನ್ನ ಸಾರ್ವಭೌಮತ್ವವನ್ನು ಘೋಷಿಸಿತು. ಜಗತ್ತಿನಲ್ಲಿ ಬ್ರಿಟನ್ನು ಶಕ್ತಿಶಾಲಿ ರಾಷ್ಟ್ರವಾಗಿತ್ತು ಮತ್ತು ಅದರ ಸಾಮ್ರಾಜ್ಯ ಜಗತ್ತಿನಲ್ಲಿ ಎಂದೆಂದಿಗೂ ಸೂರ್ಯ ಮುಳುಗದಷ್ಟು ದೂರ ಹರಡಿತ್ತು.

ಇಂಥ ಪರಿಸ್ಥಿತಿಗಳಲ್ಲಿ ಭಾರತದ ಮಹಾರಾಜರು ತಮ್ಮ ಚಕ್ರವರ್ತಿಗೆ (ಕ್ರೌನ್) ನಿಷ್ಠರಾಗಿರಬೇಕು ಮತ್ತು ತಮ್ಮ ಸಂಸ್ಥಾನಗಳಲ್ಲಿ ಶಾಂತಿಯುತವಾಗಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಹೋದರೆ ಸಾಕೆಂದು ಬ್ರಿಟಿಷ್ ನಿರೀಕ್ಷಿಸಿತ್ತು. ಮಹಾರಾಜರು ತಮ್ಮ ಪ್ರಜೆಗಳನ್ನು ಶೋಷಿಸಬಾರದು ಅಥವಾ ಅನ್ಯಾಯವನ್ನು ಬೆಳಸಬಾರದೆಂದು ಬ್ರಿಟಿಷ್ ಸರಕಾರ ಒತ್ತಾಯಿಸುತ್ತಿತ್ತು. ಕಲ್ಯಾಣಕಾರಿ ಆಡಳಿತವನ್ನು ನಿರೀಕ್ಷಿಸಲಾಗಿತ್ತು. ಆದರೆ ಒಟ್ಟಾರೆಯಾಗಿ ಬ್ರಿಟಿಷರು ಪರಕೀಯ ಆಡಳಿತಗಾರರಾಗಿದ್ದರು. ಸಂಪೂರ್ಣ ಸುಧಾರಣೆಗಳು ಮತ್ತು ಜನರ ಏಳಿಗೆಗಳು ಜನರಲ್ಲಿ ಜಾಗೃತಿ ಮೂಡಿಸುವುದು, ತತ್ಪರಿಣಾಮವಾಗಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಿರತೆಗೆ ಭಂಗಬರುವುದೆಂಬ ಭಯದಿಂದ ಅವರ ಜನತೆಯ ಕಾಳಜಿಯು ನಿಯಂತ್ರಣಕ್ಕೊಳಗಾಗಿತ್ತು. ಬ್ರಿಟಿಷ್ ಭಾರತದಲ್ಲಿ ಇದು ಆಗುತ್ತಿರುವುದನ್ನು ಅವರು ಕಂಡರು. ಶಿಕ್ಷಿತವರ್ಗದ ಒಂದು ಸಣ್ಣ ಗುಂಪು ಹೆಚ್ಚು ರಾಜಕೀಯ ಹಕ್ಕುಗಳನ್ನು ಕೇಳಲು ಒಂದು ಆಂದೋಲನವನ್ನೇ ಪ್ರಾರಂಭಿಸಿತ್ತು. ರಾಜರು ಯಾವುದೇ ಬಂಡಾಯವನ್ನು ಹತ್ತಿಕ್ಕಲು ಜನರ ಮೇಲೆ ತಮ್ಮ ನಿಯಂತ್ರಣವನ್ನು ಚಲಾಯಿಸಲು

ಇದು ಸಾಕಾಗಿತ್ತು. ಇದನ್ನು ಖಾತ್ರಿಗೊಳಿಸಿ, ಅವರು ತಮ್ಮ ಅರಮನೆಗಳ ವೈಭೋಗಗಳಲ್ಲಿ ಓಲಾಡಲು ತಮ್ಮ ರಾಜರ ಜೀವನ್ನು ನಡೆಸಿದರು.

ಬಹಳಷ್ಟು ಮಹಾರಾಜರು ವೈಭವದ ಜೀವನ ವಿಧಾನದ ಮಾದರಿಯನ್ನು, ಜಗತ್ತಿನಲ್ಲಿ ಸಿಗುವ ಪ್ರತಿಯೊಂದು ಸುಖ-ಸಂತೋಷವನ್ನು ದುಡ್ಡುಕೊಟ್ಟು ಖರೀದಿಸುವುದನ್ನು ಪರಿಪಾಲಿಸಿದರು. ಇದಕ್ಕೆ ಅಪವಾದದ ಕೆಲವು ಮಹಾರಾಜರಿದ್ದರು. ಬರೋಡ, ಕೊಲ್ಹಾಪುರ, ಮೈಸೂರು, ಟ್ರಾವಂಕೂರ್, ಬಿಕನೇರ್ ಸಂಸ್ಥಾನಗಳು ಸಮರ್ಥ, ದಕ್ಷ ಮಹಾರಾಜರನ್ನು ಹೊಂದಿದ್ದವು. ಅವರು ಪರಿಚಯಿಸಿದ ಹಲವಾರು ಸುಧಾರಣೆಗಳಿಗೆ ಬ್ರಿಟಿಷ್ ಇಂಡಿಯ ಸರಿದೂಗಲಾರದು. ಉದಾಹರಣೆಗೆ, ಬರೋಡದ ಮಹಾರಾಜ ಸಯ್ಯಾಜಿರಾವ್ ಗಾಯ್ಕವಾಡ್‌ರು ಮತ್ತು ಕೊಲ್ಹಾಪುರದ ರಾಜರ್ಷಿ ಶಾಹುರವರು ತಮ್ಮ ಸಂಸ್ಥಾನಗಳಲ್ಲಿ ಜಾರಿಗೆ ತಂದ ಪ್ರಾಥಮಿಕ ಶಿಕ್ಷಣ ಉಚಿತ ಮತ್ತು ಕಡ್ಡಾಯಮಾಡಿದ್ದರು. ಬ್ರಿಟಿಷ್ ಭಾರತ ಅಂತಹ ಸೌಲತ್ತನ್ನು ಕಲ್ಪಿಸಿರಲಿಲ್ಲ.

ಸಾಮಾಜಿಕ-ಆರ್ಥಿಕ ಸುಧಾರಣೆಗಳನ್ನು ಪರಿಚಯಿಸುವುದರಲ್ಲಿ ಶಾಹುರವರು ತಮ್ಮ ಕಾಲಕ್ಕೆ ಮೀರಿ ಮುಂದೆ ಹೋಗಿದ್ದರು. ಅವರು ತಮ್ಮ ಜನರಿಗೆ ಸಾಮಾಜಿಕ-ಆರ್ಥಿಕ ಹಕ್ಕುಗಳನ್ನು ನೀಡಿದ್ದು ಮಾನವನ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರಭಾವನೆ ಮೂಲಭೂತ ತತ್ವಗಳಲ್ಲಿ ಅವರಿಗಿರುವ ಅಗಾಧ ನಿಷ್ಠೆಯನ್ನು ಎತ್ತಿತೋರಿಸುತ್ತದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆ ಈ ಆಧುನಿಕ ರಾಜಕಾರಣಿಗಳ ಒಂದು ಚಾಟಿಯಾಗಿದೆ, ಆದರೆ ಆಗ ಅವರ ಕಾಲದಲ್ಲಿ ಚಾಲ್ತಿಯಲ್ಲಿರಲಿಲ್ಲ. ಶಾಹುರವರು ಈ ಪರಿಕಲ್ಪನೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದು ಮಾತ್ರವಲ್ಲದೆ ಅದನ್ನು ತಮ್ಮ ಸಂಸ್ಥಾನದಲ್ಲಿ ದೃಢಸಂಕಲ್ಪದಿಂದ ಜಾರಿಗೊಳಿಸಿದರು. ಶಾಹುರವರು ಇದನ್ನು ಸಾಧಿಸಿದರೆಂಬುದಕ್ಕೆ ಒಂದು ನಿದರ್ಶನ ಸಾಕಾಗುತ್ತದೆ.

ಹಿಂದುಳಿದ ವರ್ಗಗಳಿಗೆ ಆಡಳಿತ ನಡೆಸುವ ಅಧಿಕಾರಶಾಹಿಯಲ್ಲಿ ಸ್ಥಾನ ನೀಡದ ಹೊರತು ಅವರು ಉನ್ನತ ಶಿಕ್ಷಣವನ್ನು ತೆಗೆದುಕೊಳ್ಳಲಾರರು ಮತ್ತು ಅವರ ಜೀವನದ ಸ್ಥಿತಿಗತಿಗಳು ಸುಧಾರಿಸಲಾರವು ಎಂಬ ತೀರ್ಮಾನಕ್ಕೆ ಶಾಹು ಬಂದಿದ್ದರು. ೧೯೦೨ರಲ್ಲಿ ಅವರು ಸರಕಾರಿ ನೌಕರಿಗಳಲ್ಲಿ ಶೇಕಡಾ ೫೦ರಷ್ಟು ಮೀಸಲಾತಿಯನ್ನು ಘೋಷಿಸಿದ್ದರು. ಭಾರತದಲ್ಲಿ ಯಾವ ಮಹಾರಾಜನೂ ಅಂಥ ಕ್ರಾಂತಿಕಾರಿ ಕ್ರಮವನ್ನು ಕೈಗೊಂಡಿರಲಿಲ್ಲ. ಶಾಹುರವರು ಭಾರತದಲ್ಲಿ ಜಾತಿ ಮತ್ತು ವರ್ಗ ಆಧಾರಿತ ಮೀಸಲಾತಿಗೆ ಒಬ್ಬ ಅಗ್ರಗಾಮಿ ಅಥವಾ ಒಬ್ಬ ಮೂಲಕರ್ತರಾಗಿದ್ದಾರೆ. ನಂತರ ಡಾ. ಅಂಬೇಡ್ಕರರು ಭಾರತದ ಸಂವಿಧಾನದಲ್ಲಿ ಮೀಸಲಾತಿ ಪದ್ಧತಿಯನ್ನು ಸೇರಿಸಿದ್ದಕ್ಕೆ ಅದರ ಮೂಲ ಬೇರುಗಳು ಶಾಹುರವರು ೧೯೦೨ರಲ್ಲಿ ಮಾಡಿದ ಘೋಷಣೆಯಲ್ಲಿವೆ. ಶಾಹುರವರ ಹಲವು ಅಂಥ ಕ್ರಮಗಳು ಸಾಮಾಜಿಕ ನ್ಯಾಯವನ್ನು ಬೆಳೆಸುತ್ತದೆ ಎಂಬುದನ್ನು ವಿವರಿಸಲು ಸ್ಥಳದ ಅಭಾವವಿದೆ. ಆದರೆ ಶಾಹುರವರು ಕೇವಲ ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಬಗ್ಗೆ ಬರೀ ಮಾತಾಡಲಿಲ್ಲ. ಅವುಗಳನ್ನು ಕೃತಿಯಲ್ಲಿ ಜಾರಿಗೆ ತಂದಿದ್ದಾರೆ. ದೇಶವು ಬ್ರಿಟಿಷರ ನೊಗದ ಭಾರತದಿಂದ ಮತ್ತು ಭಾರತ ರಾಜ ಮಹಾರಾಜರು ಪಾರಂಪರಿಕ ಮೋಜಿನ ಜೀವನದಲ್ಲಿ ತಲ್ಲೀನರಾಗಿದ್ದಾಗ ದೇಶ ನರಳುತ್ತಿರುವಾಗ ಅವರು ಭಾರತದಲ್ಲಿ ಸಾಮಾಜಿಕ ನ್ಯಾಯದ ಮುನ್ಸೂಚಕರಾಗಿದ್ದರು.

ಆಡಳಿತ ನಡೆಸುವ ವ್ಯವಸ್ಥೆಗಳಲ್ಲಿ ಜನತಂತ್ರವು, ರಾಜಪ್ರಭುತ್ವವು ಸೇರಿದಂತೆ ಇತರೆ ಎಲ್ಲಾ ವ್ಯವಸ್ಥೆಗಳಿಗಿಂತ ಅತ್ಯುತ್ತಮ ವ್ಯವಸ್ಥೆಯೆಂದು ಸಾರ್ವತ್ರಿಕವಾಗಿ ಒಪ್ಪಿತವಾಗಿರುವ ವಿಷಯವಾಗಿದೆ. ರಾಜಪ್ರಭುತ್ವದ ಆಡಳಿತದಲ್ಲಿ

ರಾಜ ಮುಖ್ಯವೆನಿಸಿದರೆ ಜನತಂತ್ರದಲ್ಲಿ ಜನರೇ ಕೇಂದ್ರಸ್ಥಾನದಲ್ಲಿದ್ದಾರೆ. ಬಹುಮಟ್ಟಿಗೆ ನಾವೆಲ್ಲರೂ ಜನತಾಂತ್ರಿಕರು; ಆದರೂ ನಾವು ಚಕ್ರವರ್ತಿ ಅಶೋಕ, ಛತ್ರಪತಿ ಶಿವಾಜಿ ಅಥವಾ ರಾಜರ್ಷಿ ಶಾಹುರವರನ್ನು ಮೆಚ್ಚಿಕೊಳ್ಳುತ್ತೇವೆ. ಏಕೆಂದರೆ ಈ ಮಹಾರಾಜರು ಜನರನ್ನು ಗಮನದಲ್ಲಿಟ್ಟುಕೊಂಡು ತಮ್ಮ ಆಡಳಿತವನ್ನು ನಡೆಸಿದರು. ಅವರು ತಮ್ಮ ಅಧಿಕಾರ ಮತ್ತು ಸಂಪತ್ತನ್ನು ಜನರ ಕಲ್ಯಾಣಕ್ಕಾಗಿ ಬಳಸಿದರು. ಶಾಹು ತಮ್ಮ ಜೀವನವನ್ನು, ತಮ್ಮ ಅಧಿಕಾರವನ್ನು, ತಮ್ಮ ಸಂಸ್ಥಾನದ ಖಜಾನೆಯನ್ನು ಜನರ ಕಲ್ಯಾಣಕ್ಕಾಗಿ ಸವೆಸಿದ್ದರಿಂದ ಮತ್ತು ಬಳಸಿದ್ದರಿಂದ, ಅವರ ಜೀವನದ ಪರಿಸ್ಥಿತಿಗಳನ್ನು ಉತ್ತಮ ಗೊಳಿಸಿದ್ದರಿಂದ ಮತ್ತು ಅವರಿಗೆ ಸಾಮಾಜಿಕ ಮತ್ತು ಆರ್ಥಿಕ ನ್ಯಾಯ ಒದಗಿಸಿದ್ದರಿಂದ ಅವರನ್ನು ಜನರ ರಾಜ ಎಂದು ಕರೆಯಲಾಗುವುದು.

ಸ್ವಾತಂತ್ರ್ಯವನ್ನು ನಾವು ಗಳಿಸಿದ್ದರಿಂದ ನಾವು ಗಣರಾಜ್ಯವನ್ನು ಸ್ಥಾಪಿಸಿದ್ದೇವೆ ಮತ್ತು ಸಂಸದೀಯ ಜನತಂತ್ರವನ್ನು ಜಾರಿಗೆ ತಂದಿದ್ದೇವೆ. ನಮ್ಮ ಜನತಂತ್ರ ನಮಗೆ ರಾಜಕೀಯ ಹಕ್ಕುಗಳನ್ನು ನೀಡುತ್ತದೆ. ಆದರೆ ಅದು ನಮಗೆ ಸಾಮಾಜಿಕ ಸಮಾನತೆ ಮತ್ತು ಸಾಮಾಜಿಕ ನ್ಯಾಯ ನೀಡದ ಹೊರತು ಅವು ಅಪೂರ್ಣ ಜನತಂತ್ರವಾಗುತ್ತದೆ. ಮಹಾರಾಷ್ಟ್ರದಿಂದ ಮೂರು ಮಹಾ ಆತ್ಮಗಳಾದ ಮಹಾತ್ಮ ಫುಲೆ, ರಾಜರ್ಷಿ ಶಾಹು ಮತ್ತು ಡಾ. ಅಂಬೇಡ್ಕರರು ಸಾಮಾಜಿಕ ಜನತಂತ್ರದ ಆದರ್ಶಕ್ಕಾಗಿ ಹೆಣಗಾಡಿದರು. ಅವರು ಮನುಷ್ಯ-ಮನುಷ್ಯರ ನಡುವಿರುವ ಎಲ್ಲಾ ರೀತಿಯ ತಾರತಮ್ಯತೆಗಳ ನಿವಾರಣೆಗಾಗಿ ಮತ್ತು ಎಲ್ಲರ ಅಭಿವೃದ್ಧಿಗಾಗಿ ಸಮಾನ ಅವಕಾಶಗಳ ನಿರ್ಮಾಣಕ್ಕಾಗಿ ಹೋರಾಡಿದರು. ಇವುಗಳಿಗಾಗಿ ಅವರು ಬ್ರಿಟಿಷರ ವಿರುದ್ಧ ಹೋರಾಡಲಿಲ್ಲ, ಆದರೆ ತಮ್ಮ ಜನರ ವಿರುದ್ಧವೇ ಹೋರಾಡಿದರು. ಭಾರತದ ಶಿಕ್ಷಣ ಪಡೆದ ಗಣ್ಯವರ್ಗವು ರಾಜಕೀಯ ಸ್ವಾತಂತ್ರ್ಯವನ್ನು ಒತ್ತಾಯಪೂರ್ವಕಗೊಳಿಸಿ, ತಮ್ಮವರೇ ಆದ ಸಹೋದರರಿಗೆ ಸಾಮಾಜಿಕ ಸಮಾನತೆ ಮತ್ತು ಸ್ವಾತಂತ್ರ್ಯವನ್ನು ನಿರಾಕರಿಸಿದರು. ಫುಲೆ-ಶಾಹು-ಅಂಬೇಡ್ಕರರು ಮಹಾರಾಷ್ಟ್ರದಲ್ಲಿ ಮತ್ತು ಬೇರೆ ಕಡೆಗಳಲ್ಲಿ ಭಾರತದ ರಾಮಸ್ವಾಮಿ ನಾಯ್ಕರ್ ಮತ್ತು ನಾರಾಯಣ ಗುರು ಅವರು ಸಾಮಾಜಿಕ ಜನತಂತ್ರವನ್ನು ಸ್ಥಾಪಿಸಲು ಆಂದೋಲನವನ್ನು ಪ್ರಾರಂಭಿಸಿದರು. ಡಾ. ಅಂಬೇಡ್ಕರ್ ಅವರು ಶಾಹುರವರಿಗೆ ಪತ್ರಬರೆದು, ಶಾಹುರವರು ಮಾಡಿದ ಶ್ರೀಸಾಮಾನ್ಯನಿಗೆ ಸಲ್ಲಿಸಿದ ಸಾಮಾಜಿಕ ಕೊಡುಗೆಯನ್ನು ಗೌರವಿಸುತ್ತಾ ಅವರು ಹೇಳುತ್ತಾರೆ: "ತಾವು ಭಾರತದಲ್ಲಿ ಸಾಮಾಜಿಕ ಜನತಂತ್ರದ ಒಂದು ಸ್ತಂಭ".

ಮಹಾನುಭಾವರು ನುಡಿದಂತೆ ನಡೆವರು. ಶಾಹುರವರು ಅಸ್ಪೃಶ್ಯತೆಯ ಆಚರಣೆ ಮಾನವತೆಗೆ ಒಂದು ಕಳಂಕ ಎಂದು ಖಂಡನೆ ಮಾಡಿ ಅಲ್ಲಿಗೆ ಅವರು ನಿಲ್ಲಲಿಲ್ಲ. ಅವರು ಸಾರ್ವಜನಿಕ ಸ್ಥಳಗಳಾದ ಶಾಲೆಕಾಲೇಜುಗಳು ಮತ್ತು ಆಸ್ಪತ್ರೆಗಳಲ್ಲಿ ಆಚರಣೆಯಲ್ಲಿರುವ ಅಸ್ಪೃಶ್ಯತೆಯನ್ನು ರದ್ದುಗೊಳಿಸುವ ನಿರಂತರವಾಗಿ ಮೂರು ಆಜ್ಞೆಗಳನ್ನು ಹೊರಡಿಸಿದರು. ಅವರು ಅಸ್ಪೃಶ್ಯರನ್ನು ತಮ್ಮ ಆಪ್ತರಕ್ಷಕರಾಗಿ, ಆಪ್ತಸೇವಕರಾಗಿ, ಮಾವುತರಾಗಿ, ಚಾಲಕರಾಗಿ ಮತ್ತು ಬೇಟೆಗೆ ಜೊತೆಗಾರರಾಗಿ ನೇಮಕಮಾಡಿಕೊಂಡರು. ಅವರಿಗೆ ಪೋಲಿಸ್ ಪಡೆಯಲ್ಲಿ ಹುದ್ದೆಗಳನ್ನು ನೀಡಿದರು. ಶಾಹುರವರು ಅಸ್ಪೃಶ್ಯರಲ್ಲಿ ಕೆಲವು ಯುವಕರನ್ನು ಕಾನೂನು ಓದುವಂತೆ ಮಾಡಿದರು ಮತ್ತು ಕೆಲವರನ್ನು ಲಾಯರುಗಳನ್ನಾಗಿ ಮಾಡಿದರು. ಅಸ್ಪೃಶ್ಯರೇ ತಯಾರು ಮಾಡಿದ ಆಹಾರವನ್ನು ಅವರ ಜೊತೆಯಲ್ಲಿ ಶಾಹುರವರು ಸಾರ್ವಜನಿಕವಾಗಿ ಊಟ ಮಾಡಿದರು. ಶಾಹುರವರು ಮಹರ್‌ಜಾತಿಗೆ ಸೇರಿದ ಗಂಗಾರಾಮ್ ಕಾಂಬ್ಳೆ ಅವರು ಕೊಲ್ಹಾಪುರದ ಪ್ರಮುಖರಸ್ತೆಯಲ್ಲಿ ಒಂದು ಹೋಟೆಲು ಪ್ರಾರಂಭಿಸುವುದಕ್ಕೆ ಸಹಾಯ ಮಾಡಿದರು ಮತ್ತು ಅಲ್ಲಿಗೆ ಚಹ

ಕುಡಿಯಲು ಪ್ರತಿನಿತ್ಯ ಹೋಗುವ ರೂಢಿಯನ್ನು ಮಾಡಿಕೊಂಡಿದ್ದರು. ಕೆಲವು ಸಂದರ್ಭಗಳಲ್ಲಿ ಉನ್ನತ ಜಾತಿಯ ಶ್ರೀಮಂತ ಕುಟುಂಬಗಳನ್ನು ತಮ್ಮ ಜೊತೆಯಲ್ಲಿ ಚಹ ಕುಡಿಯಲು ಆ ಹೋಟೆಲಿಗೆ ಕರೆದುಕೊಂಡು ಹೋಗುತ್ತಿದ್ದರು. ಮಹಾರಾಜರ ಬಯಕೆಯನ್ನು ನಿರಾಕರಿಸುವುದಕ್ಕೆ ಯಾರು ಸಾಹಸ ಮಾಡುತ್ತಿರಲಿಲ್ಲ. ಹೀಗೆ ಮಹಾರಾಜರು ತಮ್ಮ ರಾಜರ ಅಧಿಕಾರವನ್ನು ಅಸ್ಪೃಶ್ಯರಿಗೆ ಅನುಕೂಲವಾಗುವಂತೆ ಬಳಸುತ್ತಿದ್ದರು. ನಾಗಪುರದಲ್ಲಿ ಅಸ್ಪೃಶ್ಯರ ಸಮ್ಮೇಳನಕ್ಕೆ ಭಾಗವಹಿಸಲು ಹೋದಾಗ ಮಡಿವಂತಿಕೆಯ ಹಿಂದು ಗುಂಪುಗಳು ಇಡೀ ನಗರದ ತುಂಬ 'ಧೇಡರ ಮಹಾರಾಜ' (ಮಹರರ ಮಹಾರಾಜ) ಎಂಬ ಪೋಸ್ಟರುಗಳನ್ನು ಅಂಟಿಸಿದ್ದರು. ನಾಗಪುರದ ದಲಿತರು ಕೋಪೋದ್ರಿಕ್ತರಾದರು. ಆದರೆ ಅವರನ್ನು ಶಾಂತಗೊಳಿಸಿ, ಅವರು ಸಮ್ಮೇಳನದಲ್ಲಿ ದಲಿತರಿಗೆ ಇದು ಒಂದು ಗೌರವವೆಂದು ಹೇಳಿದರು. ಶಾಹುರವರು ಸತ್ತಾಗ ಡಾ. ಅಂಬೇಡ್ಕರರು "ಶಾಹುರಂತಹ ಸ್ನೇಹಿತನನ್ನು ಅಸ್ಪೃಶ್ಯರು ಎಂದೂ ಹೊಂದಿರಲಿಲ್ಲ ಮತ್ತು ಅಂತಹ ಸ್ನೇಹಿತನನ್ನು ಹೊಂದುವೆವು ಎಂಬುದು ನನಗೆ ಅನುಮಾನ" ಎಂದು ದುಃಖಿಸಿದರು.

ಅಸ್ಪೃಶ್ಯತೆಯು ಜಾತಿ ತಾರತಮ್ಯತೆಯ ಕುರೂಪದ ಪ್ರಕಟಣೆಯಾಗಿದೆ. ಜಾತಿ ಎಂಬ ಸಂಸ್ಥೆಯು ಹಿಂದುಮತ ಮತ್ತು ಸಮಾಜದ ಲಕ್ಷಣಗಳನ್ನು ನಿರೂಪಿಸುವುದಕ್ಕೆ ಪರಿಗಣಿತವಾಗಿದೆ. ಜಾತಿಪದ್ಧತಿಯು ಎಲ್ಲಿಯವರೆಗೆ ಅಸ್ತಿತ್ವದಲ್ಲಿರುವುದೋ ಅಲ್ಲಿಯವರೆಗೆ ಸಾಮಾಜಿಕ ಸಮಾನತೆ ಮತ್ತು ಸಾಮಾಜಿಕ ನ್ಯಾಯ ಸ್ಥಾಪನೆಗೊಳ್ಳಲಾರದೆಂಬುದು ಶಾಹುರವರ ಅನಿಸಿಕೆ. ಅವರು ಕೊನೆಯವರೆಗೂ ಜಾತಿಪದ್ಧತಿಯ ವಿರುದ್ಧ ಭಯಂಕರವಾಗಿ ಹೋರಾಡಿದರು. ತಮ್ಮ ಹೋರಾಟದಲ್ಲಿ ಶಿಕ್ಷಣದ ಪ್ರಚಾರ, ಸಾಮಾಜಿಕ ಜಾಗೃತಿ, ಸರಕಾರಿ ಕೆಲಸಗಳಲ್ಲಿ ಮೀಸಲಾತಿಗಳು ಅವರ ಹೋರಾಟಕ್ಕೆ ಸಾಧನಗಳಾಗಿದ್ದವು. ಅವರು ಅತ್ಯಂತ ಬಲಿಷ್ಠವಾದ ಉಪಕರಣವನ್ನು ಬಳಸಿದ್ದು ಅಂತರ್-ಜಾತಿಯ ಮದುವೆಗಳನ್ನು ನಡೆಸಿದ್ದು. ಪ್ರತಿಯೊಂದು ಜಾತಿಯು ತಮ್ಮ ಕೆಳಗಿನ ಜಾತಿಯನ್ನು ಅತ್ಯಂತ ಹೀನವಾಗಿ ಕಾಣುವ ಸಮಾಜದಲ್ಲಿ ಇದು ಒಂದು ಕ್ರಾಂತಿಕಾರಿ ಹೆಜ್ಜೆಯಾಗಿತ್ತು. ಅವರು ತಮ್ಮ ತಂಗಿಯ ಮದುವೆಯನ್ನು ಇಂದೋರಿನ ಹೋಳ್ಕರರ ಕುಟುಂಬದೊಂದಿಗೆ ವ್ಯವಸ್ಥೆಮಾಡಿದ್ದರು. ಇದು ಒಂದು ಹೆಜ್ಜೆ ತಮ್ಮ ಕಾಲಕ್ಕಿಂತ ಮುಂದೆ ಇತ್ತು. ಹೋಳ್ಕರರು ಧನಗರ್ (ಕುರುಬ) ಜಾತಿಗೆ ಸೇರಿದವರು.

ಸಮಾಜದಲ್ಲಿರುವ ಯಥಾಕಥಿತ ಉನ್ನತಜಾತಿಯ ಜನರು ತಮ್ಮ ಮನಸ್ಸನ್ನು ಬದಲಾಯಿಸಬೇಕು ಮತ್ತು ಈ ೨೧ನೇ ಶತಮಾನದಲ್ಲಿ ತಮ್ಮ ಸಾಮಾಜಿಕ ಹಮ್ಮು-ಬಿಮ್ಮುಗಳನ್ನು ಬಿಡಬೇಕಾಗುತ್ತದೆ. ಸಮಾಜದಲ್ಲಿರುವ ಏಕೈಕ ಜಾತಿ ಮಾನವಜಾತಿ ಒಂದು ಮನುಷ್ಯನೇ ಜಾತಿಗಳನ್ನು ಕಂಡಿಹಿಡಿದದ್ದು ಮತ್ತು ಹೇರಿದ್ದು ಮತ್ತು ಈ ತಾರತಮ್ಯತೆ ಅಸಹಜವಾದದ್ದು(ಕೃತಕ). ಈ ಸಮಸ್ಯೆಯನ್ನು ಶಾಹು ಈ ರೀತಿಕಂಡರು. ನಾವು ಶಾಹುರವರ ದೃಷ್ಟಿಕೋನದೊಂದಿಗೆ ಹೊಂದಾಣಿಕೆ ಮಾಡಿಕೊಂಡರೆ ನಮ್ಮ ದೇಶದಲ್ಲಿ ಸಾಮರಸ್ಯವನ್ನು ಬಲಗೊಳಿಸಿದಂತಾಗುತ್ತದೆ. ಅದು ನಮ್ಮ ದೇಶವನ್ನು ಮತ್ತಷ್ಟು ಬಲಗೊಳಿಸುತ್ತದೆ.

ಸಮಾಜದಿಂದ ಶಿಕ್ಷಣ, ಜ್ಞಾನ ಮತ್ತು ಸಂಪತ್ತು ಮತ್ತು ಘನತೆಗಳಿಂದ ವಂಚಿತಗೊಂಡ ಹಿಂದುಳಿದ ವರ್ಗಗಳು, 'ಅಸ್ಪೃಶ್ಯರ ಅತ್ಯಂತ ಕೀಳುಮಟ್ಟದವರು' ಸಣ್ಣ ರೈತರು ಅಲೆಮಾರಿ ಪಂಗಡಗಳು, ಮಹಿಳೆಯರು ಮತ್ತು ಇತರೆ ನಿರ್ಲಕ್ಷಿತ ಗುಂಪುಗಳನ್ನು ಒಟ್ಟಿಗೆ ಸೇರಿಸಿಕೊಂಡು ಮಹಾತ್ಮಫುಲೆಯವರು ತೋರಿಸಿದ ಹಾದಿಯನ್ನು ಶಾಹುರವರು ಅನುಸರಿಸಿದರು. ಮಹಿಳೆಯರ ಏಳಿಗೆಗಾಗಿ ಶಾಹುರವರು ವಿಧವಾ ಪುನರ್-ವಿವಾಹಗಳನ್ನು ಕಾನೂನುಬದ್ಧಗೊಳಿಸಿದರು, ಅಂತರ್-ಜಾತಿಯ ವಿವಾಹಗಳಿಗೆ ಅನುಕೂಲ ಮಾಡಿಕೊಟ್ಟರು,

ವಿವಾಹವಿಚ್ಛೇದನಗಳನ್ನು ಕಾನೂನುಬದ್ಧಗೊಳಿಸಲು ಶಾಸನಗಳನ್ನು ಮಾಡಿದರು, ಮಹಿಳೆಯರಿಗೆ ಅನುಕೂಲವಾಗುವಂತೆ ಉತ್ತರಾಧಿಕಾರಿ ಕಾನೂನುಗಳನ್ನು ಸುಧಾರಿಸಿದರು ಮತ್ತು 'ದೇವದಾಸಿ' ಎಂಬಂತಹ ಅಮಾನವೀಯ ಪದ್ಧತಿಗಳನ್ನು ತಡೆಯಲು ಪ್ರಗತಿಪರ ಕಾನೂನುಗಳನ್ನು ಶಾಹುರವರು ರೂಪಿಸಿದರು. ತನ್ನ ಕುಟುಂಬದಲ್ಲಿ ಮಹಿಳೆಗೆ ಆಗುತ್ತಿದ್ದ ಕಿರುಕುಳ ಮತ್ತು ಕ್ರೌರ್ಯವನ್ನು ತಡೆಗಟ್ಟುವ ಹೆಚ್ಚು ಮಹತ್ವದ ಪರಿಣಾಮಕಾರಿ ಶಾಸನವನ್ನು ಅವರು ೧೯೧೯ರಲ್ಲಿ ರೂಪಿಸಿದರು. ಆ ದಿನಗಳಲ್ಲಿ ಭಾರತದಲ್ಲಿ ಎಲ್ಲಿಯೇ ಆಗಲಿ, ಮಹಾರಾಜರ ಸಂಸ್ಥಾನಗಳಲ್ಲಿಯೇ ಆಗಲಿ ಅಥವಾ ಬ್ರಿಟಿಷ್ ಭಾರತದಲ್ಲಿಯೇ ಆಗಲಿ ಅಂತಹ ಶಾಸನವನ್ನು ಯಾರೂ ತಂದಿರಲಿಲ್ಲ. ಬಹುಶಃ ಯಾರು ಅದರ ಅಗತ್ಯದ ಬಗ್ಗೆ ಚಿಂತನೆಯೂ ಇರಲಿಲ್ಲ. ಶಾಹುರವರು ಜನಸ್ತೋಮದ ರಾಜರಾಗಿದ್ದರು ಮತ್ತು ಅವರು ತಳಮಟ್ಟದಲ್ಲಿಯೇ ವಾಸ್ತವ ಪರಿಸ್ಥಿತಿಯನ್ನು ಚೆನ್ನಾಗಿ ಅರಿತಿದ್ದರು. ಮಹಿಳೆಯರು ಮನೆಗಳಲ್ಲಿ ಅನುಭವಿಸಿದ ಭಯಾನಕ ಹೇಳಲಾರದ ಮಹಿಳೆಯರ ಹೃದಯದ ವೇದನೆಗಳಿಗೆ ಅವರ ಹೃದಯ ಕಳವಳಗೊಂಡಿತ್ತು. ಅಂಥ ನತದೃಷ್ಟ ಮಹಿಳೆಯರ ಹಿಂದೆ ಸಂಸ್ಥಾನದ ಅಧಿಕಾರಶಕ್ತಿ ಮತ್ತು ಕಾನೂನುಗಳು ನಿಲ್ಲುವಂತೆ ಅವರು ಮಾಡಿದರು. ಸ್ವಾತಂತ್ರ್ಯ ಲಭಿಸಿದ ನಂತರವೂ ಭಾರತ ೨೦೦೬ರಲ್ಲಿ ಅಂತಹ ಶಾಸನ 'ಗೃಹಹಿಂಸೆಯ ಕಾಯ್ದೆ'ಯನ್ನು ರೂಪಿಸಿ ಜಾರಿಗೆ ತರಲು ೬೦ವರ್ಷಗಳ ಕಾಲವನ್ನು ತೆಗೆದುಕೊಂಡಿತು. ಶಾಹುರವರು ೮೫ ವರ್ಷಗಳ ಹಿಂದೆಯೇ ಅಂತಹ ಕಾನೂನು ಮಾಡಿದ್ದರೆಂಬುದು ಬಹಳ ಜನರಿಗೇ ಗೊತ್ತಿಲ್ಲ ಇಂತಹ ಪ್ರಗತಿಪರ ಕಾನೂನಿನ ಬಗ್ಗೆ ಬಹಳ ಬಹಳ ಹಿಂದೆಯೇ ಒಬ್ಬ ಮಹಾರಾಜ ಚಿಂತಿಸಿದ್ದನೆಂದು ಭಾರತೀಯರಾದ ನಮಗೆ ಹೆಮ್ಮೆಯ ವಿಷಯವಾಗಿದೆ.

ಪ್ರೀತಿಯಿಂದ ಮಹಾರಾಜರನ್ನು ನೆನಪಿಸಿಕೊಂಡರೆ ಸಾಲದು. ನಮ್ಮ ದೇಶದಲ್ಲಿ ಇಂದಿಗೂ ಹಲವಾರು ಅಸಹಾಯಕ ಮಹಿಳೆಯರು ತಮ್ಮ ಕುಟುಂಬಗಳಲ್ಲಿ ಹೇಳಬಾರದ ರೀತಿಯಲ್ಲಿ ಕ್ರೌರ್ಯಕ್ಕೆ ಬಲಿ ಯಾಗುತ್ತಿದ್ದಾರೆ. ಹಲವರು ಮುಕ್ತಿಗೆ ಆತ್ಮಹತ್ಯಕ್ಕೆ ಶರಣಾದರೆ ಮತ್ತೆ ಕೆಲವರು ಸುಟ್ಟುಕೊಂಡು ಸಾವನ್ನಪ್ಪಿದ್ದಾರೆ. ಇದು ನಮ್ಮ ಸಮಾಜಕ್ಕೆ ಒಂದು ಕಳಂಕ. ಭಾರತದ ಸಂಸತ್ತು ಇಂಥ ಕ್ರೌರ್ಯಗಳನ್ನು ತಡೆಯಲು ಒಂದು ಕಾನೂನನ್ನು ಮಾಡಿದೆ ಮತ್ತು ಅಂತಹ ಪ್ರಕರಣಗಳಲ್ಲಿ ಮಹಿಳೆಯನ್ನು ಈ ಕಾನೂನು ರಕ್ಷಣೆ ನೀಡುತ್ತದೆ. ಈ ಸಾಮಾಜಿಕ ಕಾರ್ಯಕರ್ತರ ಮತ್ತು ಮಹಿಳಾ ಸಂಘಟನೆಗಳು ಮಹಿಳೆಯರಲ್ಲಿ ಈ ಕಾನೂನುಗಳ ಬಗ್ಗೆ ಅರಿವು-ಜಾಗೃತಿ ಮೂಡಿಸುವುದು ನೈತಿಕ ಕರ್ತವ್ಯವಾಗಿದೆ. ಶಾಹುರವರು ಈ ಬಗ್ಗೆ ಹಾಕಿರುವ ಹೊಣೆಯನ್ನು ನಮ್ಮ ಸಮಾಜ ಒಪ್ಪಿಕೊಂಡಿದೆ.

ಶಾಹುರವರು ತಮ್ಮ ಆಡಳಿತಾವಧಿಯಲ್ಲಿ ಹಲವಾರು ಪ್ರಗತಿಪರ ದೊಡ್ಡ ಹೆಜ್ಜೆಗಳನ್ನು ಹಾಕಿದ್ದಾರೆ. ಆ ದೊಡ್ಡ ಪ್ರಗತಿಪರ ಹೆಜ್ಜೆಗಳಲ್ಲಿ ಮುಖ್ಯವಾಗಿ ಸಾರ್ವಜನಿಕ ನೀರಾವರಿ ಧೋರಣೆಯ ಘೋಷಣೆ, ಅ ಕಾಲದಲ್ಲಿ ರಾಧಾನಗರಿಯಲ್ಲಿ ಅತ್ಯಂತ ಭಾರಿಯಾದ ನೀರಾವರಿಯ ಅಣೆಕಟ್ಟೆಯ ನಿರ್ಮಾಣ, ಕೃಷಿಯಲ್ಲಿ ಸಂಶೋಧನೆಯ ಪ್ರಯೋಗಗಳು, ಸ್ಥಳೀಯ ಸಾಹಸೋದ್ಯಮಗಳಿಗೆ ಪ್ರೋತ್ಸಾಹ ಮತ್ತು ವ್ಯಾಪಾರದಲ್ಲಿ ಮುಂಬಾಯಿಯ ವ್ಯಾಪಾರಗಾರರ ಏಕಸ್ವಾಮ್ಯತೆಯನ್ನು ಮುರಿಯುವುದು, ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಜಾರಿ, ಸಂಗೀತ, ರಂಗಭೂಮಿ, ಚಿತ್ರಕಲೆ, ಶಿಲ್ಪಕಲೆ, ಕುಸ್ತಿ, 'ಸಾತ್‌ಮಾರಿ' ಮತ್ತು ಬೇಟೆ ಮೊದಲಾದವುಗಳಿಗೆ ಪ್ರೋತ್ಸಾಹ ಮತ್ತು ರಾಜಾಶ್ರಯ ಮತ್ತು ಹಿಂದು-ಮುಸ್ಲಿಮರ ಸ್ನೇಹದ ವೃದ್ಧಿಗಳ ಪ್ರೋತ್ಸಾಹಗಳು ಸೇರಿವೆ. ಈ ಸಂದರ್ಭದಲ್ಲಿ ಈ ಎಲ್ಲಾ ಕ್ಷೇತ್ರಗಳನ್ನು ವಿವರಿಸಲು ಇಲ್ಲಿ ಸಾಧ್ಯವಿಲ್ಲ. ಪ್ರಸ್ತುತ ಈ ಸಮಯದಲ್ಲಿ ಕೆಲವನ್ನು ಮಾತ್ರ ಗಮನಿಸಬಹುದು.

ಮಹಾತ್ಮಫುಲೆ ಮತ್ತು ಶಾಹುರವರು ಪ್ರಗತಿಗೆ ಶಿಕ್ಷಣ ಕೀಲಿಕೈಯೆಂದು ಪರಿಭಾವಿಸಿದ್ದರು. ಫುಲೆ ಅವರು ೧೮೮೨ರಲ್ಲಿ ಹಂಟರ್ ಆಯೋಗಕ್ಕೆ ೧೨ ವರ್ಷದ ಕೆಳಗಿರುವ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡಬೇಕೆಂದು ಮನವಿಯನ್ನು ಸಲ್ಲಿಸಿ ಹಕ್ಕೊತ್ತಾಯ ಮಾಡಿದ್ದರು. ತದನಂತರ ೧೯೧೭ರಲ್ಲಿ ರಾಜರ್ಷಿ ಶಾಹುರವರು ಇದನ್ನು ಜಾರಿಗೊಳಿಸಲು ಶಾಸನವನ್ನು ಮಾಡಿದರು. ನಮ್ಮ ಭಾರತದ ಮಕ್ಕಳು ಶಿಕ್ಷಣದ ಹಕ್ಕನ್ನು ಪಡೆಯುವುದಕ್ಕೆ ನಮ್ಮ ಸಂಸತ್ತು ಕಾನೂನು ಮಾಡಲು ೬೦ ವರ್ಷಕ್ಕಿಂತ ಹೆಚ್ಚು ಸಮಯವನ್ನು ತೆಗೆದುಕೊಂಡಿತು. ಇತ್ತೀಚೆಗೆ ಕೇಂದ್ರದಲ್ಲಿ ಯು.ಪಿ. ಎ.ಸರಕಾರ ಅದನ್ನು ಜಾರಿಗೊಳಿಸಲು ಕಾನೂನನ್ನು ರೂಪಿಸಿತು. ಈ ಕಾನೂನನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದೇ ಶಾಹುರವರಿಗೆ ಸಲ್ಲಿಸುವ ಗೌರವವಾಗುತ್ತದೆ.

ಮತ್ತೊಂದು ಮುಖ್ಯ ಅಂಶ ಹಿಂದು–ಮುಸ್ಲಿಂ ಕೋಮು ಸಾಮರಸ್ಯ. ಶಾಹುರವರು ೧೮೯೪ರಲ್ಲಿ ಕೊಲ್ಹಾಪುರದ ಗದ್ದುಗೆಯನ್ನು ಏರಿದ ಕೂಡಲೇ ಮುಂಬಾಯಿಯಲ್ಲಿ ಮೊದಲ ಹಿಂದು–ಮುಸ್ಲಿಂ ಗಲಭೆಗಳು ತಲೆದೋರಿದವು. ಪುಣೆಯಲ್ಲಿ ಶಾಹುರವರನ್ನು ಸನ್ಮಾನಿಸಲು ಒಂದು ಸಭೆಯನ್ನು ಆಯೋಜಿಸಲಾಗಿತ್ತು. ಅದರಲ್ಲಿ ಅವರು ಹಿಂದು–ಮುಸ್ಲಿಮ್ ಐಕ್ಯತೆಯನ್ನು ಕುರಿತು ಮಾತನಾಡಿದರು. ತಮ್ಮ ಆಡಳಿತಾವಧಿಯಲ್ಲಿ ಈ ದಿಸೆಯಲ್ಲಿ ಮರಾಠಿ ಭಾಷೆಯಲ್ಲಿ ಕುರ್‌ಆನನ್ನು ಅನುವಾದಿಸುವ ಕಾರ್ಯವನ್ನು ಮತ್ತು ಮುಸ್ಲಿಮ್ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯವನ್ನು ಕಟ್ಟುವುದನ್ನು ಸೇರಿದಂತೆ ಹಲವಾರು ಕ್ರಮಗಳನ್ನು ಕೈಗೊಂಡರು. ಹಲವಾರು ಸಭೆ ಮತ್ತು ಸಮ್ಮೇಳನಗಳಲ್ಲಿ ಅವರು ಹಿಂದುಗಳು, ಮುಸ್ಲಿಮರು ಮತ್ತು ಜೈನರು ಹಾಗೂ ಇತರರು ಸಮಾನ ಹಕ್ಕುಗಳನ್ನು ಪಡೆದ ಭಾರತ ರಾಷ್ಟ್ರದ ಅವಿಭಾಜ್ಯದ ಭಾಗಗಳಾಗಿದ್ದಾರೆಂದು ತಮ್ಮ ರಾಷ್ಟ್ರೀಯ ದೃಷ್ಟಿಕೋನವನ್ನು ವ್ಯಕ್ತಪಡಿಸಿದ್ದಾರೆ. ಒಂದು ಸಂದರ್ಭದಲ್ಲಿ ಅವರು ಹೇಳುತ್ತಾರೆ: "ನಾವೆಲ್ಲರೂ ಭಾರತೀಯರು; ನಾವೆಲ್ಲರು ಸಹೋದರರು; ಅವರು ಯಾವುದೇ ಜಾತಿ, ಮತ ಅಥವಾ ಜನಾಂಗಕ್ಕೆ ಸೇರಿರಲಿ, ಅವರೆಲ್ಲರೂ ಭಾರತೀಯರು. ಒಬ್ಬ ವ್ಯಕ್ತಿಗೆ ವೈಯಕ್ತಿಕವಾಗಿ ಮತ ಮುಖ್ಯವೆನಿಸಬಹುದು, ಆದರೆ ಅದು ಅವನ ರಾಷ್ಟ್ರೀಯತೆಯಲ್ಲಿ ಅಡ್ಡಬರುವುದಿಲ್ಲ. ಈ ಸಂದರ್ಭದಲ್ಲಿ ಮತವು ಗೌಣವಾಗುತ್ತದೆ ಎಂಬುದು ನನ್ನ ಭಾವನೆ. ನಾವು ಮತ(ಧರ್ಮ) ಎಂದರೆ ದೇವರ ಬಳಿಗೆ ಹೋಗುವ ಒಂದು ದಾರಿಯೆಂದು ನಿರ್ವಚಿಸಬಹುದು. ಉದಾಹರಣೆಗೆ, ಮುಂಬಾಯಿಗೆ ಹೋಗಲು ಹಲವಾರು ಭಿನ್ನ ಭಿನ್ನ ದಾರಿಗಳಿವೆ. ಜನರು ಸುಲಭವಾದ ಮತ್ತು ಮೊಟಕಾದ ದಾರಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಮತವು ಭಿನ್ನ ಭಿನ್ನ ದೇಶಗಳಲ್ಲಿ ಭಿನ್ನ ಭಿನ್ನ ಸಂದರ್ಭಗಳಲ್ಲಿ ಮೂಡಿಬಂದಿದೆ. ಹಾಗೆಯೇ ಜನರು ನಾನಾ ದಾರಿಗಳಿಂದ ದೇವರ ಬಳಿಗೆ ಹೋಗುತ್ತಾರೆ. ಹಾಗಿರುವಾಗ, ಭಿನ್ನ ಭಿನ್ನ ಮತಗಳ ಜನರ ನಡುವೆ ಪರಸ್ಪರ ದ್ವೇಷ ಏಕಿರಬೇಕು?"

ಈ ಚಿಂತನೆಗಳು ರಾಷ್ಟ್ರವನ್ನು ಕಟ್ಟುತ್ತವೆ ಮತ್ತು ಹಾಳುಮಾಡುತ್ತವೆ. "ಪ್ರೀತಿ ಪ್ರೀತಿಯನ್ನು ಹುಟ್ಟಿಸುತ್ತದೆ ಮತ್ತು ದ್ವೇಷವು ದ್ವೇಷವನ್ನು ಬೆಳಸುತ್ತದೆ". ಶಾಹುರವರು ತಮ್ಮ ನುಡಿ ಮತ್ತು ನಡೆಗಳಲ್ಲಿ ಈ ಮಾನವೀಯ ಸಂದೇಶವನ್ನು ಬಿತ್ತಿದರು ಮತ್ತು ಬೆಳೆಸಿದರು. ಭಾರತ ಮತ್ತು ಜಗತ್ತಿಗೆ ಅತಿದೊಡ್ಡ ಬೆದರಿಕೆ ಕುರುಡು ಧಾರ್ಮಿಕ ಭಾವನೆಗಳ ಮೂಲಭೂತವಾದದಿಂದ ಹುಟ್ಟಿಬಂದ ಭಯೋತ್ಪಾದನೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ನಮ್ಮ ಭಾರತೀಯ ಸಮಾಜವು ಜಾತಿ, ಮತ, ಜನಾಂಗ, ಪ್ರದೇಶಿಕತೆಗಳ ಗುರುತುಗಳಿಂದ ಸಮಾಜ ಛಿದ್ರ–ಛಿದ್ರವಾಗಿರುವಾಗ ಶಾಹುರವರ ಚಿಂತನೆಗಳು ಜನರಿಗೆ ಇನ್ನೂ

ಮಾರ್ಗದರ್ಶಕಗಳಾಗಿವೆ.

ಸಾಮಾಜಿಕ ಕ್ರಾಂತಿ ಮತ್ತು ದೇಶಭಕ್ತಿಯ ಬಗ್ಗೆ ಇರುವ ಛತ್ರಪತಿ ಶಾಹುರವರ ಆದರ್ಶಗಳು ಮತ್ತು ಚಿಂತನೆಗಳು ಕಾಲದ ಪರೀಕ್ಷೆಯಲ್ಲಿ ಸಫಲವಾಗಿ ನಿಂತಿವೆ. ಅವರ ಕಾಲದಲ್ಲಿ ಅವರ ಚಿಂತನೆಗಳನ್ನು ಮೇಲು ಜಾತಿ-ವರ್ಗಗಳು ಅಪಹಾಸ್ಯ ಮಾಡಿದವು ಮತ್ತು ಕಡೆಗಣಿಸಿದವು.

ಸಾಮಾಜಿಕ ನ್ಯಾಯ ಮತ್ತು ಸಮಾನತೆಯ ಶಾಹುರವರ ಕ್ರಾಂತಿಕಾರಿ ಆದರ್ಶಗಳ ಕಾರಣದಿಂದ ಗಣ್ಯ ವರ್ಗ ಮತ್ತು ಚಿಂತಕರು ತಮ್ಮ ನೈತಿಕ ಸಮತೋಲನವನ್ನು ಮರೆತು ಶಾಹುರವರನ್ನು ಸ್ವರಾಜ್ಯದ ದ್ರೋಹಿ ಎಂದು ಕರೆದದ್ದುಂಟು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಆಂದೋಲನ ನಡೆಸಿದ ತಮ್ಮ ಕಾಲದ ಮಹಾದೇಶಭಕ್ತ ಸಾಮಾಜಿಕ ಸುಧಾರಣೆಯು ಒಂದು ವಿಮೋಚನಾ ಶಕ್ತಿಯೆಂದು ಪರಿಗಣಿಸಲೇ ಇಲ್ಲ. ಈ ಮನೋಸ್ಥಿತಿಯಿಂದಲೇ ಹಲವು ವರ್ಷಗಳವರೆಗೆ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸಮ್ಮೇಳನದಲ್ಲಿ ಅಸ್ಪೃಶ್ಯತೆಯ ಆಚರಣೆಯನ್ನು ಖಂಡನೆಮಾಡುವ ಒಂದು ನಿರ್ಣಯವನ್ನು ಪಾಸುಮಾಡಲೇ ಇಲ್ಲ. ರಾಜಕೀಯ ಸ್ವಾತಂತ್ರ್ಯಕ್ಕೆ ಪ್ರಥಮ ಆದ್ಯತೆ ನೀಡಿದ್ದ ಮಹಾನುಭಾವರು ತಮ್ಮ ಸಹೋದರರ ಗುಲಾಮತ್ವದ ಸಂಕೋಲೆಗಳನ್ನು ಕಿತ್ತೆಸೆಯಲು ಸ್ವಾತಂತ್ರ್ಯದ ದಿನದವರೆಗೆ ಕಾಯಬೇಕಾದದ್ದು ದುರಾದೃಷ್ಟದ ಸಂಗತಿ.

ಆದ್ದರಿಂದ ಶಾಹುರವರ ಆದರ್ಶಗಳನ್ನು ಅವರ ಕಾಲದಲ್ಲಿಯೇ ಅಲಕ್ಷ್ಯ ಮಾಡಿದ್ದು ಆಶ್ಚರ್ಯ ವೇನಲ್ಲ. ಸ್ವಾತಂತ್ರ್ಯ ಬಂದು ೬೫ ವರ್ಷಗಳಾದರೂ ಶಾಹುರವರು ಸಂಬದ್ಧರಾಗಿದ್ದ ಆದೇಶ ಮತ್ತು ಕ್ರಮಗಳನ್ನು ಸರಿಯಾಗಿ ಜಾರಿಗೊಳಿಸದಿರುವುದೇ ಒಂದು ದುರಂತವಾಗಿದೆ. ನೂರು ವರ್ಷದ ಹಿಂದೆ ಇದ್ದ ಅವರ ಚಿಂತನೆಗಳು ಇಂದಿಗೂ ಸುಸಂಗತವಾಗಿವೆ. ಹೋರಾಟವು ಇನ್ನೂ ಇದೆ ಮತ್ತು ಗ್ರಾಮೀಣ ಪ್ರದೇಶದ ಮಹಿಳೆಯರ, ಭೂಹೀನರ, ಸಣ್ಣ ರೈತರ, ಕಾರ್ಮಿಕರ ಮತ್ತು ದಲಿತರ ಪರಿಸ್ಥಿತಿಗಳನ್ನು ಗಮನಿಸಿದರೆ ಈ ಹೋರಾಟವು ಮತ್ತೆ ಹಲವಾರು ವರ್ಷಗಳವರೆಗೆ ಮುಂದುವರಿಯುತ್ತದೆ. ಈ ಹೋರಾಟ ಗೆಲ್ಲುವವರೆಗೆ ಶಾಹುರವರ ಚಿಂತನೆಗಳು ಭಾರತೀಯರಾದ ನಮ್ಮನ್ನು ಸ್ಫೂರ್ತಿಗೊಳಿಸಲು ಮತ್ತು ಮಾರ್ಗದರ್ಶನ ನೀಡಲು ಮುಂದುವರಿಯುತ್ತವೆ.

ನಮ್ಮ ನಾಯಕ ರಾಜರ್ಷಿ ಶಾಹು ಛತ್ರಪತಿಯವರ ಸಾಧನೆ ಮತ್ತು ಆದರ್ಶದ ಬಗ್ಗೆ ಒಂದು ಪಕ್ಷಿನೋಟವನ್ನು ಕೊಟ್ಟಿದ್ದೇವೆ. ಈ ಪುಸ್ತಕದ ರಚನೆ ಮತ್ತು ಪ್ರಕಟಣೆಯ ಹಿಂದಿರುವ ಇತಿಹಾಸವನ್ನು ಸಂಕ್ಷಿಪ್ತವಾಗಿ ವಿವರಿಸುವುದು ಸೂಕ್ತವೆನಿಸುತ್ತದೆ.

ಯಾವ ಪುಸ್ತಕವೂ ಆಕಸ್ಮಿಕವಾಗಿ ರೂಪಗೊಳ್ಳುವುದಿಲ್ಲ. ಪುಸ್ತಕ ಹೊರಬರುವುದಕ್ಕೆ ಮೊದಲು ಲೇಖಕ ಮತ್ತು ಪ್ರಕಟನೆಕಾರ ಬಹಳ ಕಾಲದವರೆಗೆ ಸಾಕಷ್ಟು ಚಿಂತನ-ಮನನ, ಪ್ರಯತ್ನಗಳು, ಯೋಜನೆ, ಸೃಜನಾತ್ಮಕ ಒತ್ತಾಸೆಗಳು ಕೆಲಸಮಾಡುತ್ತವೆ. ಸತತ ಪರಿಶ್ರಮ ಮತ್ತು ಒತ್ತಾಸೆಗಳು ಸುಮಧುರವಾದ ಅಭಿವ್ಯಕ್ತಿಯಾಗುತ್ತದೆಯೆಂದು ತೋರುತ್ತದೆ. ನಮ್ಮ ಪ್ರಯತ್ನಗಳು ಎಷ್ಟರಮಟ್ಟಿಗೆ ಫಲಕಾರಿ ಎಂಬುದನ್ನು ಓದುಗ ನಿರ್ಣಯಿಸಬೇಕಾಗಿದೆ.

ಪ್ರಾಚೀನ ಪರಂಪರೆ (ಉಗಮ)ಯನ್ನು ಹೊಂದಿರುವ ಐತಿಹಾಸಿಕ ನಗರವಾದ ಕೊಲ್ಹಾಪುರದ

ಕೆಲವು ಇತಿಹಾಸ ಪ್ರಿಯರು ೧೯೭೨ರಲ್ಲಿ ಇತಿಹಾಸದ ಸಂಶೋಧನೆಗಾಗಿಯೇ ಸಮರ್ಪಿಸಿಕೊಂಡ ಮಹಾರಾಷ್ಟ್ರ ಇತಿಹಾಸ ಪ್ರಬೋಧನಿ ಎಂಬ ಹೆಸರಿನ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಹಾಲಿಯಿರುವ ಕೊಲ್ಹಾಪುರದ ಮಹಾರಾಜ ಛತ್ರಪತಿ ಶಾಹುರವರು (ರಾಜರ್ಷಿ ಶಾಹುರವರ ಮೊಮ್ಮಗ) ಅವರು ಮುಖ್ಯ ಪೋಷಕರಾದರು. ವಿದ್ವಾಂಸರು ಮತ್ತು ಇತಿಹಾಸಕಾರರಾದ ಪಂಡಿತ ಸೇತು ಮಹದೇವರಾವ್ ಪಗಡಿ, ಡಾ.ವಿ.ಬಿ. ಕೋಲ್ತೆ ಮತ್ತು ತರ್ಕತೀರ್ಥ ಲಕ್ಷ್ಮಣ ಶಾಸ್ತ್ರಿ ಜೋಷಿ ಅವರು ಅವರ ಸಲಹಾ ಸಮಿತಿಯ ಸದಸ್ಯರಾಗಲು ಸಂತೋಷದಿಂದ ಒಪ್ಪಿಕೊಂಡಿದ್ದಾರೆ. ಮಹಾರಾಷ್ಟ್ರದ ಹಲವು ಪ್ರಸಿದ್ಧ ಚಿಂತಕರು ಮತ್ತು ಸಾಹಿತಿಗಳು ಇಂದು ಮಂಡಲಿಯಲ್ಲಿದ್ದಾರೆ. ಸಂಸ್ಥೆಯ ಮುಖ್ಯ ಉದ್ದೇಶ ಮಹಾರಾಷ್ಟ್ರದ ಇತಿಹಾಸ ಸಂಶೋಧನೆಯಾದರೂ ಜನರಲ್ಲಿ ಸಾಮಾಜಿಕ ಅರಿವನ್ನು ಮೂಡಿಸುವ ಇತರ ಉದ್ದೇಶವನ್ನು ಇದರಲ್ಲಿ ಸೇರಿಸಲಾಗಿದೆ. ಹೀಗೆ ನಮ್ಮ ಸಂಶೋಧನೆ ಮಹಾನ್ ಸಾಮಾಜಿಕ ಕ್ರಾಂತಿಕಾರಿಗಳಾದ ಮಹಾತ್ಮ ಫುಲೆ, ರಾಜರ್ಷಿ ಶಾಹು ಮತ್ತು ಡಾ. ಅಂಬೇಡ್ಕರರ ಜೀವನಗಳ ಮೇಲೆ ಕೇಂದ್ರೀಕೃತವಾಗಿದೆ. ಈ ಪುಸ್ತಕವು ನಮ್ಮ ಪ್ರಯತ್ನಗಳ ಫಲವಾಗಿದೆ.

ಕೊಲ್ಹಾಪುರದ ರಾಜರ್ಷಿ ಶಾಹು ಛತ್ರಪತಿಯವರು ೧೮೯೪ರಲ್ಲಿ ಪಟ್ಟಾಭಿಷಿಕ್ತರಾದರು. ೧೯೯೪ರಲ್ಲಿ ಶಾಹುರವರ ಪಟ್ಟಾಭಿಷೇಕದ ಶತಮಾನೋತ್ಸವವನ್ನು ಮಹಾರಾಷ್ಟ್ರದ ಹಲವು ಸ್ಥಳಗಳಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಮಹಾರಾಷ್ಟ್ರ ಇತಿಹಾಸ ಪ್ರಬೋಧಿನಿ ಈ ಸಂದರ್ಭದಲ್ಲಿ ರಾಜರ್ಷಿ ಶಾಹು ನೆನಪಿನ ಸಂಪುಟವನ್ನು ಮರಾಠಿ ಭಾಷೆಯಲ್ಲಿ ಹೊರತರಲು ನಿರ್ಧರಿಸಿತು. ಈ ಸಂಸ್ಥೆಯ ನಿರ್ದೇಶಕನಾದ ನನಗೆ ಈ ಕೃತಿಯನ್ನು ಹೊರತರುವ ಹೊಣೆಯನ್ನು ವಹಿಸಲಾಯಿತು.

೭ ವರ್ಷಗಳ ಸತತ ಪ್ರಯತ್ನದಿಂದ ಮರಾಠಿಯಲ್ಲಿ ಈ ಸಂಪುಟದ ಮೂರು ಭಾಗಗಳನ್ನು ನಾನು ಸಿದ್ಧಪಡಿಸಿದೆನು. ಸಂಪುಟದ ಮೊದಲ ಭಾಗ ಛತ್ರಪತಿ ಶಾಹುರವರ ವಿಶ್ಲೇಷಣಾತ್ಮಕ ಜೀವನಚರಿತ್ರೆಯನ್ನು ಒಳಗೊಂಡಿದೆ. ಶಾಹುರವರ ಜೀವನ ಮತ್ತು ಕೃತಿಗಳ ವೈವಿಧ್ಯಮಯ ಮುಖಗಳನ್ನು ಪರಿಶೋಧಿಸುವ, ಚಿತ್ರಿಸುವ ಪ್ರಸಿದ್ಧ ವಿದ್ವಾಂಸರು, ಸಮಕಾಲೀನರು, ಚಿಂತಕರು, ಲೇಖಕರು ಮತ್ತು ರಾಜಕೀಯ ನಾಯಕರು ಬರೆದಿರುವ ಲೇಖನಗಳನ್ನು ಎರಡನೆಯ ಭಾಗವು ಒಳಗೊಂಡಿದೆ. ಮೂರನೇ ಭಾಗದಲ್ಲಿ ಶಾಹುರವರ ಭಾಷಣಗಳನ್ನು, ಅವರ ಪತ್ರವ್ಯವಹಾರವನ್ನು, ಸರಕಾರಿ ಆಜ್ಞೆಗಳನ್ನು ಮತ್ತು ಘೋಷಣೆಗಳನ್ನು, ಶಾಸನಗಳನ್ನು ಮತ್ತು ೨೦೦ಕ್ಕೂ ಮಿಕ್ಕು ಅಪರೂಪದ ಫೋಟೋಗಳನ್ನು ವಿಂಗಡಿಸಿ ಕೊಡಲಾಗಿದೆ.

**– ಡಾ. ಜಯಸಿಂಗರಾವ್ ಪವಾರ್**

# ಪ್ರಸ್ತಾವನೆ

ಬ್ರಿಟಿಷರು ೧೮ನೇ ಶತಮಾನದಲ್ಲಿ ಭಾರತದಲ್ಲಿ ಪ್ರಾಂತ್ಯ (ರಾಜ್ಯ)ಗಳನ್ನು ಗೆದ್ದುಕೊಳ್ಳಲು ಪ್ರಾರಂಭಿಸಿದರು ಮತ್ತು ೧೮೫೭ರ ಹೊತ್ತಿಗೆ ಬಹುಮಟ್ಟಿಗೆ ಇಡೀ ಭಾರತದ ಉಪ-ಖಂಡವನ್ನು ತಮ್ಮ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಆಡಳಿತಕ್ಕೆ ಸೇರಿಸಿಕೊಂಡಿದ್ದರು.ಅವರು ನಮ್ಮ ಸ್ವಾತಂತ್ರ್ಯವನ್ನು ದೋಚಿಬಿಟ್ಟರು ಮತ್ತು ನಮ್ಮ ಮೇಲೆ ಗುಲಾಮತ್ವ ಹೇರಿಬಿಟ್ಟಿದ್ದರು. ಭಾರತೀಯರು ೧೮೫೭ರಲ್ಲಿ ಬ್ರಿಟಿಷ್ ಸಾಮ್ರಾಜ್ಯವನ್ನು ಸಶಸ್ತ್ರ ಬಂಡಾಯದಿಂದ ಕಿತ್ತೆಸೆಯಲು ಪ್ರಯತ್ನಿಸಿದರು. ಬ್ರಿಟಿಷರ ಆಧುನಿಕ ಯುದ್ಧೋಪಕರಣಗಳಿಂದ ಮತ್ತು ಅವರ ಕುಟಿಲ ತಂತ್ರಗಳಿಂದ ಅದು ವಿಫಲಗೊಂಡಿತು. ಬ್ರಿಟಿಷರಿಂದ ನೊಂದ, ಅತೃಪ್ತಗೊಂಡ ರಾಜ-ಮಹಾರಾಜರು ಮತ್ತು ಭಾರತೀಯ ಸೈನಿಕರ ಗುಂಪುಗಳು ಮತ್ತು ಬ್ರಿಟಿಷ್ ಸೈನ್ಯದ ನಾಯಕರು ಈ ಬಂಡಾಯವನ್ನು ನಡೆಸಿದ್ದರು. ಒಮ್ಮೆ ಬ್ರಿಟಿಷರಿಂದ ಸೋತ ಇವರು ಮತ್ತೆ ವಸಾಹತು ಆಳರಸರ ವಿರುದ್ಧ ತಲೆ ಎತ್ತಲಿಲ್ಲ. ಆ ಸಂದರ್ಭದಿಂದ ಜನರ ನಾಯಕತ್ವವು ಮಧ್ಯಕಾಲೀನ ಮನಸ್ಥಿತಿಯಲ್ಲಿ ಬೆಳೆದವರಿಂದ ಯುವಕರಾದ ಇಂಗ್ಲಿಷ್ ಶಿಕ್ಷಿತ ಪೀಳಿಗೆ ವರ್ಗಾವಣೆಗೊಂಡಿತು. ಪಾಶ್ಚಿಮಾತ್ಯ ಶಿಕ್ಷಣದಿಂದ ಕಲಿತ ವಿಚಾರ ಮತ್ತು ಚಿಂತನೆಗಳಿಂದ ರೂಪಗೊಂಡ ಈ ಹೊಸಪೀಳಿಗೆ ತಮ್ಮ ಜನರ ಮೇಲೆ ಹೇರಿದ ರಾಜಕೀಯ ಗುಲಾಮಗಿರಿಯ ಬಗ್ಗೆ ಗಂಭೀರವಾಗಿ ಯೋಚಿಸತೊಡಗಿದರು. ಈ ಜನರಲ್ಲಿ ಇಡೀ ದೇಶದಲ್ಲಿ ವಿದೇಶಿ ಆಡಳಿತವನ್ನು ಕಿತ್ತೆಸೆಯದಿದ್ದರೂ ಅದರ ಕಪಿಮುಷ್ಟಿಯನ್ನು ಸಡಿಲಿಸುವ ವಿಧಾನಗಳ ಬಗ್ಗೆ ಹುಡುಕತೊಡಗಿದರು. ಅದು ಬೇಗನೆ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ನೇತೃತ್ವದಡಿಯಲ್ಲಿ ಸ್ವಾತಂತ್ರ್ಯದ ಆಂದೋಲನವನ್ನು ನಡೆಸಿತು.

ಸ್ವಾತಂತ್ರ್ಯದ ಆಂದೋಲನವು ಆಧುನಿಕ ಭಾರತವನ್ನು ಮತ್ತು ಅದರ ನಾಯಕಮಣಿಗಳು ಸೇರಿದಂತೆ ದಾದಾಭಾಯಿ ನವರೋಜಿ, ನ್ಯಾಯಮೂರ್ತಿ ಎಂ.ಜಿ. ರಾಣಡೆ, ಗೌರವಾನ್ವಿತ ಜಿ.ಕೆ. ಗೋಖಲೆ, ಲೋಕಮಾನ್ಯ ತಿಲಕ್ ಮತ್ತು ನಂತರ ಮಹಾತ್ಮ ಗಾಂಧಿ, ಪಂಡಿತ ಜವಾಹರ್ ಲಾಲ್ ನೆಹರು ಮತ್ತು ನಂತರ ಪೀಳಿಗೆಯಾದ ಸುಭಾಷ್‌ಚಂದ್ರ ಬೋಸ್ ಮೊದಲಾದವರಿಂದ ಪ್ರಭಾವಗೊಂಡಿತ್ತು. ಅವರೆಲ್ಲರನ್ನು ರಾಷ್ಟ್ರೀಯ ನಾಯಕರೆಂದು ಪೂಜ್ಯಭಾವದಿಂದ ಕಾಣಲಾಗುತ್ತಿತ್ತು. ಈ ದೃಷ್ಟಿಕೋನದಲ್ಲಿ ಯಾವುದೇ ದೋಷವಿಲ್ಲ. ಅದು ಸರಿಯಾಗಿಯೆ ಇತ್ತು. ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನ ಶಕ್ತಿಯುತವಾಗಿ ಬೆಳೆದಂತೆ ಈ ನಾಯಕ ಜನಪ್ರಿಯತೆ ಮತ್ತು ಘನತೆ ಗೌರವ ಬೆಳೆಯಿತು. ಅವರೆಲ್ಲರನ್ನು ದೇಶದ ಸ್ವಾತಂತ್ರ್ಯದ ಸಂಕೇತಗಳು, ರಾಷ್ಟ್ರೀಯ ಗುರುತು (ಅಸ್ಮಿತೆ) ಮತ್ತು ಭವಿಷ್ಯದ ವೈಭವವೆಂದು ಪರಿಗಣಿಸಲಾಯಿತು.

ಅದೇ ಸಮಯದಲ್ಲಿ ಸ್ವಾತಂತ್ರ್ಯ ಮತ್ತು ಮಾನವ ಸ್ವಾತಂತ್ರ್ಯದ ವಿಶಾಲಾರ್ಥವನ್ನು ಮೈಗೂಡಿಸಿಕೊಂಡಿದ್ದ ಮತ್ತೊಂದು ಆಂದೋಲನ ಈ ದೇಶದಲ್ಲಿ ಇತ್ತು. ಅದು ಜನರ ಜೀವನದ ಎಲ್ಲಾ ಮುಖಗಳನ್ನು ಒಳಗೊಂಡಿತ್ತು ಮತ್ತು ಅದರ ಅಸ್ತಿವಾರಗಳು ತೀರಾ ಸಂಕುಚಿತವಾಗಿರಲಿಲ್ಲ. ಈ ಆಂದೋಲನದ ಆತ್ಮಗಳು ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರ ಭಾವಗಳು ಮೂರು ಪರಮ

ಆದರ್ಶಗಳಾಗಿದ್ದವು. ಈ ಆಂದೋಲನವನ್ನು ಮಹಾರಾಷ್ಟ್ರದಲ್ಲಿ ಮಹಾತ್ಮಫುಲೆ, ರಾಜರ್ಷಿ ಶಾಹು, ಮಹರ್ಷಿ ವಿಠ್ಠಲ್ ರಾಮ್‌ಜಿ ಶಿಂಧೆ ಮತ್ತು ಬಿ. ಆರ್. ಅಂಬೇಡ್ಕರರಾದರೆ ಮಹಾರಾಷ್ಟ್ರದ ಹೊರಗಡೆ ದಕ್ಷಿಣದಲ್ಲಿ ಸಾಮಾಜಿಕ ಸುಧಾರಕರಾದ ಪೆರಿಯಾರ್ ರಾಮಸ್ವಾಮಿ ನಾಯ್ಕರ್, ನಾರಾಯಣ ಗುರು ಅವರು ಈ ಆಂದೋಲನವನ್ನು ನಡೆಸಿದರು. ಆದರೆ ಮಾನವ ನಾಗರೀಕತೆಯ ಮೌಲ್ಯವನ್ನು ವೃದ್ಧಿಸುವ ವಿಶಾಲ ಮನೋಭಾವ ಸಾರ್ವತ್ರಿಕ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದರೂ ಈ ಸಾಮಾಜಿಕ ಸುಧಾರಕರು ರಾಜಕೀಯ ಸ್ವಾತಂತ್ರ್ಯಕ್ಕೆ ಹೋರಾಡುತ್ತಿದ್ದ ನಾಯಕರು ಗಳಿಸಿದ ಘನತೆ ಗೌರವಗಳನ್ನು ಸಮಾನವಾಗಿ ಪಡೆಯಲು ಸಾಧ್ಯವಾಗಲಿಲ್ಲ.

ವ್ಯಂಗ್ಯವಾಗಿ, ಈ ಮಹಾನ್ ಸಾಮಾಜಿಕ ಸುಧಾರಕರು ತಮ್ಮ ಜೀವಿತಾವಧಿಯಲ್ಲಿ ಮತ್ತು ತಮ್ಮ ನಂತರ ಅಪಹಾಸ್ಯಕ್ಕೆ ಮತ್ತು ತಮ್ಮ ಜನರಿಂದಲೇ ದೇಶದ್ರೋಹಿ ಎಂಬ ತೀಕ್ಷ್ಣ ವಿಷಪೂರಿತ ಟೀಕೆಗಳಿಗೆ ಗುರಿಯಾದರು ಮತ್ತು ರಾಜಕೀಯ ಸ್ವಾತಂತ್ರ್ಯಕ್ಕೆ ನೀಡಿದ ಮೊದಲ ಆದ್ಯತೆಯನ್ನು ವಿರೋಧಿಸಿದ್ದರೆ ಅವರು ಬ್ರಿಟಿಷ್ ಅಡಿಯಾಳಾಗಿಬಿಟ್ಟರು. ನಮ್ಮ ನಾಯಕಮಣಿ ಈ ಅನ್ಯಾಯದ ಹುಸಿ ವದಂತಿಗೆ ಬಲಿಪಶು ಎಂಬುದು ಇತಿಹಾಸದಲ್ಲಿ ದಾಖಲೆಯಾಗಿದೆ. ರಾಜಕೀಯ ಚಳುವಳಿಗಳ ಪಕ್ಷಪಾತಿಗಳು ಶಾಹು ಛತ್ರಪತಿಗಳನ್ನು 'ಬ್ರಿಟಿಷರ ಏಜೆಂಟ್' ಮತ್ತು 'ಸ್ವರಾಜ್ಯ ಆಂದೋಲನದ ದ್ರೋಹಿ' ಎಂದು ಕರೆಯಲಾಯಿತು. ವಿರೋಧಿಗಳು ಅವರ ಚಾರಿತ್ರ್ಯಹರಣದಲ್ಲಿ ತಲ್ಲೀನರಾದರು. ಆದರೆ ಸಾಮಾಜಿಕ ಸುಧಾರಕರು ತಮ್ಮ ಜನರವಿರೋಧವನ್ನು ಎದುರಿಸುತ್ತಾ ತಮ್ಮದೇ ಆದ ದಾರಿಯಲ್ಲಿ ಧೈರ್ಯವಾಗಿ ಮುನ್ನುಗ್ಗಿದರು.

ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಾಮಾಜಿಕ ಸುಧಾರಕರೆಂಬ ಎರಡು ಗುಂಪುಗಳು ಏಕೆ ನಿರಂತರವಾಗಿ ಪರಸ್ಪರ ಒಬ್ಬರ ವಿರುದ್ಧ ಮತ್ತೊಬ್ಬರು ಸೆಣಸುತ್ತಿದ್ದರು ಮತ್ತು ಕೆಲವು ಸಂದರ್ಭಗಳಲ್ಲಿ ಏಕೆ ಪರಸ್ಪರ ಬದ್ಧ ದ್ವೇಷವನ್ನು ತೋರಿಸುತ್ತಿದ್ದರೆಂಬುದನ್ನು ಕಂಡುಹಿಡಿಯಲು ಗಂಭೀರವಾದ ಶೈಕ್ಷಣಿಕ ಸಂಶೋಧನೆಯ ಅಗತ್ಯವಿಲ್ಲ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಯ ದಿನಗಳಿಂದ ೧೯೩೦ರ ನಾಗರಿಕ ಅಸಹಕಾರ ಆಂದೋಲನದವರೆಗೆ ರಾಷ್ಟ್ರೀಯ ಸ್ವಾತಂತ್ರ್ಯದ ಆಂದೋಲನದಲ್ಲಿ ಮೇಲುಜಾತಿಯಾದ ಬ್ರಾಹ್ಮಣರ ಪ್ರಾಬಲ್ಯವಿತ್ತು. ಮಹಾರಾಷ್ಟ್ರದಲ್ಲಿ ೧೯೩೦ರವರೆಗೆ ಕಾಂಗ್ರೆಸ್ ನಾಯಕತ್ವದಲ್ಲಿ ಬಹುಮಟ್ಟಿಗೆ ಬ್ರಾಹ್ಮಣರೆ ಇದ್ದರು. ಈ ವರ್ಗವು ಪರಕೀಯ ವಸಾಹತು ಆಡಳಿತವನ್ನು ರಾಷ್ಟ್ರೀಯ ಕಾಂಗೆಸ್ಸಿನ ಸಂಘಟನೆಯ ವೇದಿಕೆಯಡಿಯಲ್ಲಿ ರಾಜಕೀಯ ಸ್ವಾತಂತ್ರ್ಯದ ಬೇಡಿಕೆಯನ್ನಿಟ್ಟು ಕರ್ಕಶವಾಗಿ ದಾಳಿ ಮಾಡುತ್ತಿತ್ತು. ಅದೇ ಜನರು ಶತಮಾನಗಳಿಂದ ಸಮಾಜದಲ್ಲಿ ಇರುವ ಅನ್ಯಾಯ ಮತ್ತು ಗುಲಾಮತನಗಳ ಬಗ್ಗೆ ಮೌನವಹಿಸುತ್ತಿತ್ತು. ಈ ದ್ವಿಮುಖ ನೀತಿಯ ಬಗ್ಗೆ ಪ್ರಶ್ನಿಸಿದಾಗ ಸಾಮಾಜಿಕ ಸುಧಾರಣೆಗಳಿಗೆ ಕಾಲ ಪಕ್ವವಾಗಿಲ್ಲ ಎಂದು ಅರ್ಥಗರ್ಭಿತವಾಗಿ ವಾದಿಸುತ್ತಿದ್ದರು ಮತ್ತು ತಮ್ಮ ಮೂಲಭೂತ ಸಾಮಾಜಿಕ ಮತ್ತು ರಾಷ್ಟ್ರೀಯ ಹೊಣೆಗಾರಿಕೆಗಳಿಂದ ನುಣುಚಿಕೊಳ್ಳುತ್ತಿದ್ದರು.

ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಒಂದು ಪ್ರಕರಣವು ಈ ಬಗ್ಗೆ ಈ ಗಣ್ಯವರ್ಗ ತಿರಸ್ಕರಿಸುವ ಮನೋಭಾವವನ್ನು ತೀಕ್ಷ್ಣವಾಗಿ ನಿದರ್ಶನಪೂರ್ವಕವಾಗಿ ನಿರೂಪಿಸುತ್ತದೆ. ಮಹರ್ಷಿ ವಿಠ್ಠಲ್ ರಾಮ್‌ಜಿ ಶಿಂಧೆ ಅವರು ಒಬ್ಬ ಬ್ರಾಹ್ಮಣೇತರ ಸಾಮಾಜಿಕ ಮತ್ತು ರಾಜಕೀಯ ನಾಯಕರು ಅಸ್ಪೃಶ್ಯತೆಯ ಆಚರಣೆಯನ್ನು ಕೊನೆಗಾಣಿಸಬೇಕೆಂದು ಪ್ರತಿಪಾದಿಸುತ್ತಾ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಒಂದು ಠರಾವು ಪಾಸು ಮಾಡಲು

ಸತತವಾಗಿ ೧೧ವರ್ಷಗಳ ಪ್ರಯತ್ನ ಮಾಡಿದರು. ಆದರೆ ಕಾಂಗ್ರೆಸ್ಸಿನ ಮೇಲುಜಾತಿಯ ನಾಯಕತ್ವ (ಅರ್ಥ ಬ್ರಾಹ್ಮಣರು ಮತ್ತು ಬ್ರಾಹ್ಮಣರ ಪ್ರಭಾವದಲ್ಲಿರುವವರು) ಸುಮ್ಮನೆ ನಿರ್ಲಕ್ಷಿಸಿದರು. ಮತ್ತು ಪ್ರತಿ ವರ್ಷ ಠರಾವು ಬಿದ್ದುಹೋಗುವುದನ್ನು ಖಾತರಿಪಡಿಸುತ್ತಿದ್ದರು. ಅಂತಿಮವಾಗಿ ೧೯೧೭ರಲ್ಲಿ ಕಲಕತ್ತಾ ಅಧೀವೇಶನದಲ್ಲಿ ಠರಾವು ಪಾಸಾಯಿತು. ಆ ವರ್ಷ ಕಾಂಗ್ರೆಸ್ಸಿನ ಅಧ್ಯಕ್ಷರು ಮಹಾ ಮಾನವತಾವಾದಿಯಾದ ಥಿಯೋಸೋಫಿಸ್ಟ್ ಆದ ಡಾ. ಆನಿಬೆಸೆಂಟರು ಎಂಬುದನ್ನು ಗಮನಿಸಿ.

ಕಾಂಗ್ರೆಸ್ ಅಧಿವೇಶನದಲ್ಲಿ ಅಸ್ಪೃಶ್ಯತೆಯನ್ನು ಕೊನೆಗಾಣಿಸಲು ಒಂದು ಠರಾವನ್ನು ಪಾಸುಮಾಡಲು ಅಸಾಧ್ಯವಿರುವಾಗ ಅದಕ್ಕೆ ವಿರುದ್ಧವಾಗಿ ಶಾಹು ಮಾಡುತ್ತಿದ್ದುದು ಏನು? ಶಾಹುರವರು ಈ ವರ್ಷಗಳ್ಲಿ ತಮ್ಮ ಸಂಸ್ಥಾನದಲ್ಲಿ ಅಸ್ಪೃಶ್ಯತೆಯನ್ನು ಬೇರುಸಹಿತ ಕಿತ್ತುಹಾಕಲು ಆಜ್ಞೆಗಳನ್ನು ಹೊರಡಿಸುತ್ತಿದ್ದರು. ಮತ್ತು ಅವುಗಳನ್ನು ಜಾರಿಗೊಳಿಸುತ್ತಿದ್ದರು. ಅವರು ಸಾರ್ವಜನಿಕವಾಗಿ ಅತ್ಯಂತ ಕೀಳುಜಾತಿಗಳೊಂದಿಗೆ ಬೆರೆಯುತ್ತಿದ್ದರು ಮತ್ತು ಅವರೊಡನೆ ಸಹಭೋಜನ ಮಾಡುತ್ತಿದ್ದರು. ಅವರು ತಮ್ಮ ಅರಮನೆಗೆ ದಲಿತನಾಯಕ ಡಾ. ಅಂಬೇಡ್ಕರರನ್ನು ಹಬ್ಬದ ಊಟಕ್ಕೆ ಕರೆದು ಅವರನ್ನು ಸನ್ಮಾನಿಸಿ ಗೌರವಿಸಿದರು. ಅವರು ಚಪ್ಪಲಿ ಹೊಲಿಯುವ ಜಾತಿಯವನನ್ನು ಕೊಲ್ಹಾಪುರ ಮುನಿಸಿಪಲ್ ಕೌನ್ಸಿಲ್‌ಗೆ ಅಧ್ಯಕ್ಷನನ್ನಾಗಿ ಮಾಡಿ, ಗೌರವಿಸಿ, ಅವರು ಸಾಮಾಜಿಕ ಮತ್ತು ರಾಷ್ಟ್ರೀಯ ಸಾಮರಸ್ಯದ ನಿದರ್ಶನವನ್ನು ಹಾಕಿಕೊಟ್ಟರು.

ಶಾಹು ಛತ್ರಪತಿಯಾಗಲಿ, ಮತ್ತು ಡಾ. ಅಂಬೇಡ್ಕರರಾಗಲೀ, ಅಥವಾ ಪೆರಿಯಾರ್ ರಾಮಸ್ವಾಮಿ ನಾಯ್ಕರ ಆಗಲೀ, ರಾಷ್ಟ್ರೀಯ ಸ್ವಾತಂತ್ರ್ಯದ ವಿರುದ್ಧವಿರಲಿಲ್ಲ. ಅವರು ಅದನ್ನು ವಿರೋಧಿಸಲು ಯಾವುದೇ ಕಾರಣವಿರಲಿಲ್ಲ. ರಾಷ್ಟ್ರೀಯವಾದಿಗಳು ಬ್ರಿಟಿಷರು ಹೇರಿದ ಗುಲಾಮತ್ವವನ್ನು ಕೊನೆಗಾಣಿಸಲು ಅವರ ವಿರುದ್ಧ ಹೋರಾಡಿದಂತೆಯೇ ಸಾಮಾಜಿಕ ಸುಧಾರಕರು ರಾಷ್ಟ್ರೀಯ ಹೋರಾಟಗಾರರ ವರ್ಗಕ್ಕೆ ಸೇರಿದವರು ಸಮಾಜದ ಮೇಲೆ ಹೇರಿದ ಗುಲಾಮತ್ವದಿಂದ ಸಮಾಜವನ್ನು ವಿಮೋಚನೆಗೊಳಿಸಲು ಪ್ರಯತ್ನಿಸುತ್ತಿದ್ದೇವೆ ಎಂಬುದು ಅವರ ವಾದವಾಗಿತ್ತು. ಮೊದಲಿಗೆ ನೀವು ನಮ್ಮ ಮೇಲೆ ಹೇರಿದ ಗುಲಾಮತ್ವವನ್ನು ಕೊನೆಗಾಣಿಸಿ, ನಂತರ ಸಾಮ್ರಾಜ್ಯಶಾಹಿಯ ನೊಗದ ಬಗ್ಗೆ ಯೋಚಿಸಿ. ರಾಜಕೀಯ ಸ್ವಾತಂತ್ರ್ಯ ಕೇವಲ ಉತ್ತಮ ಜಾತಿಯ ಗಣ್ಯವರ್ಗಕ್ಕೆ ಮಾತ್ರ ಪ್ರಯೋಜನವಾಗುತ್ತದೆ. ಹಿಂದುಳಿದ ವರ್ಗಗಳು ತಮ್ಮ ಜ್ಞಾನ ಮತ್ತು ಬಡತನಗಳ ಕಾರಣಗಳಿಂದ ಸ್ವಾತಂತ್ರ್ಯದ ಫಲಗಳನ್ನು ಅನುಭವಿಸಲಾರರು, ಉನ್ನತಜಾತಿಯ ವರ್ಗಗಳು ಮಾತ್ರ ಸ್ವಾತಂತ್ರ್ಯದ ಸವಿಯನ್ನು ಅನುಭವಿಸುವರು ಮತ್ತು ಮತ್ತಷ್ಟು ಬಲಗೊಳ್ಳುವರು. ಮೌಢ್ಯಪೀಡಿತ ವರ್ಗದ ಜನರ ಶೋಷಣೆ ಮತ್ತಷ್ಟು ಹೆಚ್ಚಾಗುವುದು. ಹೀಗಿತ್ತು ಅವರ ವಾದದ ಸರಣಿ.

ಭಾರತದ ತತ್ವಜ್ಞಾನ ಮತ್ತು ಮತ–ಧರ್ಮದ ಮಹಾನ್ ವ್ಯಾಖ್ಯಾನಕಾರರಾದ ಸ್ವಾಮಿ ವಿವೇಕಾನಂದರ ಪತ್ರಗಳಲ್ಲಿ ಒಂದು ಪತ್ರವು "ಭಾರತವನ್ನು ಪುನರುಜ್ಜೀವನಗೊಳಿಸಬೇಕು. ಸಾರ್ವತ್ರಿಕವಾಗಿ ಶಿಕ್ಷಣ ಹರಡಿರಬೇಕು. ಪುರೋಹಿತಶಾಹಿ ಕೊನೆಗೊಳ್ಳಬೇಕು. ಪುರೋಹಿತರ ದಬ್ಬಾಳಿಕೆ– ದೌರ್ಜನ್ಯಗಳಿರಬಾರದು. ಸಾಮಾಜಿಕ ದಬ್ಬಾಳಿಕೆಯಿರಬಾರದು..."

ನಮ್ಮ ದೇಶೀಯ ಯುವಜನರು ಬ್ರಿಟಿಷರಿಂದ ಅಧಿಕಾರ ಪಡೆಯಲು ಸಭೆಗಳನ್ನು ನಡೆಸುತ್ತಿದ್ದಾರೆ. ಬ್ರಿಟಿಷರು ಅವರ ಬಗ್ಗೆ ನಗುವರು. ಬೇರೆಯವರಿಗೆ ಸ್ವಾತಂತ್ರ್ಯವನ್ನು ಬಯಸದವರು ತಮಗೇ ಸ್ವಾತಂತ್ರ್ಯ ಬೇಕೆಂದು ಕೇಳುವುದಕ್ಕೆ ಯಾವುದೇ ಹಕ್ಕಿಲ್ಲ. ಬ್ರಿಟಿಷರು ನಿಮಗೆ ಅಧಿಕಾರ ನೀಡಿದರೆಂದು ಒಂದು ಕ್ಷಣ

ಕಲ್ಪಿಸಿಕೊಳ್ಳಿ. ಸ್ವಾತಂತ್ರ್ಯ ಪಡೆದವರು ಇತರರನ್ನು ತುಳಿಯುವರು, ದಮನ ಮಾಡುವರು. ಅಧಿಕಾರ ಬಡವರಿಗೆ ತಲುಪುವುದೇ ಇಲ್ಲ. ಕೆಲವು ಗುಲಾಮರು ಇತರರನ್ನೇ ಗುಲಾಮರನ್ನಾಗಿಸಲು ಅಧಿಕಾರ ದಾಹಿಗಳಾಗಿದ್ದಾರೆ." (ಸ್ವಾಮಿ ವಿವೇಕಾನಂದ ಅವರು ನ್ಯೂಯಾರ್ಕ್‌ನಿಂದ ಮದ್ರಾಸಿನ ಶ್ರೀ ಆಲಸಿಂಗ್ ಪೆರುಮಾಳರಿಗೆ ಬರೆದ ಪತ್ರ, ನವೆಂಬರ್ ೧೯, ೧೮೯೪)

ರಾಜರ್ಷಿ ಶಾಹು ಅವರ ನಿಲುವು ಭಿನ್ನವಾಗಿರಲಿಲ್ಲ. ಅವರು ಹೇಳುತ್ತಾರೆ:

"ಭಾರತದಲ್ಲಿ ಪ್ರಸ್ತುತವಿರುವ ಜಾತಿಪದ್ಧತಿ ಮುಂದುವರೆದರೆ, ನಾವು ಅರ್ಥಮಾಡಿಕೊಂಡಿರುವರೆ, ಸ್ವರಾಜ್ಯವು ಕೇವಲ ಕೆಲವೇ ಜನರ ಕೈಗೆ ಅಧಿಕಾರ ಹಸ್ತಾಂತರವಾಗುತ್ತದೆಯೇ ಹೊರತು ಮತ್ತೇನೂ ಅಲ್ಲ. ಇದನ್ನು ನಾನು ಒತ್ತಿಹೇಳುತ್ತೇನೆ. ಸ್ವರಾಜ್ಯ ಚಳುವಳಿಗೆ ನನ್ನ ವಿರೋಧವಿದೆಯೆಂದು ವ್ಯಾಖ್ಯಾನ ಮಾಡಬಾರದು. ನಾವು ಸ್ವರಾಜ್ಯವನ್ನು ಬಯಸುತ್ತೇವೆ. ಆದರೆ..."

"ಬ್ರಿಟಿಷರು ಶಿಕ್ಷಿತ ಬ್ರಾಹ್ಮಣರ ಅಲ್ಪಸಮುದಾಯಕ್ಕೆ ಅಧಿಕಾರ ಹಸ್ತಾಂತರ ಮಾಡುವ ಸಲುವಾಗಿ ಬ್ರಿಟಿಷರು ಅಧಿಕಾರ ಬಿಟ್ಟುಕೊಡುವ ಪರವಾಗಿ ನಾನು ಖಂಡಿತವಾಗಿ ಇಲ್ಲ. ಪ್ರಾಚೀನಕಾಲದ ಸ್ವಾಮಿ ಪರಶುರಾಮರಿಂದ ಇಂದಿನ ಯುಗದವರೆಗಿನ ಇತಿಹಾಸ ನಮಗೆ ಏನನ್ನು ಕಲಿಸುತ್ತದೆ? ದಕ್ಷಿಣ ಭಾರತದಲ್ಲಿ ಹೇಗೆ ಬ್ರಾಹ್ಮಣ ಆಡಳಿತಶಾಹಿ ಕ್ರಮಬದ್ಧವಾಗಿ ಮತ್ತು ನಿರಂತರವಾಗಿ ಜನರನ್ನು ವಿದ್ಯೆಯಿಂದ ವಂಚಿತಗೊಳಿಸಿತು ಮತ್ತು ಜ್ಞಾನದ ಎಲ್ಲಾ ಮೂಲಗಳನ್ನು ತಾನೇ ಏಕಸ್ವಾಮ್ಯ ಮಾಡಿಕೊಂಡು ಅವರನ್ನು ದಾಸ್ಯತ್ವದಲ್ಲಿಟ್ಟಿತು ಎಂಬ ಐತಿಹಾಸಿಕ ಸಂಗತಿಯನ್ನು ಮರೆಯುವುದು ಬಹುಕಷ್ಟ." (ಶಾಹುರವರ ಭಾಷಣಗಳಿಂದ, ಡಿಸೆಂಬರ್ ೨೭, ೧೯೧೭)

ಮೇಲೆ ಹೇಳಿದ ಈ ಇಬ್ಬರು ಮಹಾನುಭಾವರ ಉದ್ಧರಣೆಗಳು ಸ್ವಯಂಸ್ಪಷ್ಟ ಮತ್ತು ಯಾವ ವಿವರಣೆಯೂ ಬೇಕಾಗಿಲ್ಲ. ವಸ್ತುಸಂಗತಿಗಳು ಮತ್ತು ಮನೋಭಾವಗಳು ಒಂದೇ ತೆರನಾಗಿವೆ. ಛತ್ರಪತಿ ಶಾಹು ಹೇಳಿದ ಈ ಸಂಗತಿಗಳಿಗೆ ಅವರನ್ನು ಸ್ವರಾಜ್ಯದ ದ್ರೋಹಿ ಎಂದು ಮತ್ತು ಸ್ವಾಮಿ ವಿವೇಕಾನಂದರು ಅದೃಷ್ಟವಶಾತ್ ಈ ಕಳಂಕದಿಂದ ಪಾರಾದರು ಎಂಬುದೇ ವ್ಯತ್ಯಾಸ.

ಸ್ವಾತಂತ್ರ್ಯ ಆಂದೋಲನ ಸ್ವಾತಂತ್ರ್ಯದಿಂದ ಮುಕ್ತಾಯಗೊಂಡಿತು ಮತ್ತು ಭಾರತ ಆಗಸ್ಟ್ ೧೫, ೧೯೪೭ರಂದು ಸ್ವತಂತ್ರಗೊಂಡಿತು. ಆದರೆ ಈ ಸ್ವಾತಂತ್ರ್ಯ ಜನಸ್ತೋಮವನ್ನು ನಿಜವಾಗಿ ಸಂತೋಷಗೊಳಿಸಲಿಲ್ಲ. ಬಹಳಷ್ಟು ಜ್ಞಾನಿಗಳು ಭ್ರಮನಿರಸನಗೊಂಡರು. ವಸಾಹತುಶಾಹಿಯ ನೊಗವನ್ನು ಕಿತ್ತು ಎಸೆಯಲಾಯಿತು; ಆದರೆ ಸಾಮಾಜಿಕ ತಾರತಮ್ಯತೆ, ಅಜ್ಞಾನ, ಬಡತನ, ಜಾತಿಯ ಅಸಮಾನತೆ, ಅಸ್ಪೃಶ್ಯತೆಗಳಿಂದ ಬಡವರನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಶೋಷಣೆ ಮಾಡುತ್ತಿರುವುದು ಮೊದಲಿದ್ದ ಹಾಗೆಯೇ ಉಳಿದುಬಿಟ್ಟಿದೆಯೆಂದು ಜನರು ಮನವರಿಕೆ ಮಾಡಿಕೊಂಡಿದ್ದಾರೆ. ಸ್ವಾತಂತ್ರ್ಯವೆಂದರೆ ಈ ಸಮಸ್ಯೆಗಳನ್ನು ಬಗೆಹರಿಸುವುದು. ಫುಲೆ, ಶಾಹು, ಅಂಬೇಡ್ಕರ್, ಪೆರಿಯಾರ್ ಮತ್ತು ನಾರಾಯಣ ಗುರುಗಳು ಇಂಥ ಸ್ವಾತಂತ್ರ್ಯವನ್ನು ಒತ್ತಾಯಿಸಿದ್ದರು.

ಸ್ವಾತಂತ್ರ್ಯ ಬಂದು ೬೫ ವರ್ಷಗಳು ಕಳೆದರೂ ಭಾರತ ಇನ್ನೂ ಬಡತನ ಮತ್ತು ಮೌಢ್ಯಗಳ ಕ್ಲಿಷ್ಟಕರ ಸಮಸ್ಯೆಗಳಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದೆ. ಮಿಲಿಯಗಟ್ಟಲೆ ಜನರು ಬಡತನದ ರೇಖೆಯ ಕೆಳಗಿದ್ದಾರೆ. ಅಸಂಖ್ಯಾತ ಮಹಿಳೆಯರು ಮಧ್ಯಕಾಲೀನ ಮನೋಸ್ಥಿತಿಯಿಂದ ಸುಖವಾಗಿದ್ದಾರೆ.

ಲಿಂಗಸಮಾನತೆಯ ಪರಿಕಲ್ಪನೆ ನಮ್ಮ ಕಲ್ಪನೆಯ ಆಚೆಗಿದೆ. ಸುಶಿಕ್ಷಿತ ಮಹಿಳೆಯನ್ನು ರಾಷ್ಟ್ರಪತಿಗಳನ್ನಾಗಿ ಮಾಡುವ ಮೂಲಕ ಇತಿಹಾಸವನ್ನು ಒಂದು ಕಡೆ ನಿರ್ಮಿಸಿದ್ದರೆ, ಮತ್ತೊಂದು ಕಡೆಗೆ ಸಾವಿರಾರು ಮಹಿಳೆಯರು ದಿನವೂ ಕೌಟುಂಬಿಕ ಕಿರುಕುಳ ಮತ್ತು ಅತ್ಯಾಚಾರಕ್ಕೆ ಒಳಗಾಗುತ್ತಿದ್ದಾರೆ. ಒಂದು ಕಡೆಗೆ ಭಾರತದ ಜಿಡಿಪಿ ಅತ್ಯದ್ಭುತವಾಗಿ ಬೆಳೆಯುತ್ತಿದೆ ಮತ್ತು ಹಲವು ಕೋಟ್ಯಧಿಪತಿಗಳು ಜಾಗತಿಕ ಕೋಟ್ಯಧಿಪತಿಗಳ ಪಟ್ಟಿಗೆ ಸೇರುತ್ತಿದ್ದಾರೆ, ಮತ್ತೊಂದು ಕಡೆಗೆ ಗ್ರಾಮೀಣ ಪ್ರದೇಶದಲ್ಲಿ ಸಾವಿರಾರು ಮಂದಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ವಾಸ್ತವತೆಯನ್ನು ತೆಗೆದುಹಾಕುಂತಿಲ್ಲ. ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರು ೨೦೨೦ಕ್ಕೆ ಭಾರತ ಸೂಪರ್–ಪವರ್ ಆಗುತ್ತದೆ ಎಂಬ ಕನಸು ಕಂಡಿದ್ದಾರೆ. ಈ ವಾಸ್ತವದೊಂದಿಗೆ ಇದು ಸಾಧ್ಯವೇ? ಇಪ್ಪತ್ತೊಂದನೇ ಶತಮಾನದ ಭಾರತದ ಮುಂದೆ ಇದು ಹೆಚ್ಚು ಕಷ್ಟಕರವಾದ ಸಮಸ್ಯೆಯಾಗಿದೆ.

ಭಾರತದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯ ಸ್ಥಾಪನೆಯಲ್ಲದೆ ಮತ್ತಾವ ಉತ್ತರವೂ ಇಲ್ಲ. ಇದನ್ನು ಸಾಧಿಸಬೇಕಾದರೆ ನಾವು ಫುಲೆ, ಶಾಹು ಮತ್ತು ಅಂಬೇಡ್ಕರರ ಜೀವನ ಮತ್ತು ಬೋಧನೆಗಳಿಗೆ ಮೊರೆಹೋಗಬೇಕಾಗಿದೆ. ಗೌತಮಬುದ್ಧನ ವಿಶಾಲವಾದ ಮಾನವೀಯತೆ ಮತ್ತು ಎಲ್ಲರನ್ನೂ ಆಲಂಗಿಸಿಕೊಳ್ಳುವ ಮೈತ್ರಿ ಮತ್ತು ಕರುಣೆ, ಇದರೆ ಜೊತೆಗೆ ಛತ್ರಪತಿ ಶಿವಾಜಿಯವರ ಸ್ವಾತಂತ್ರ್ಯದ ಸ್ಫೂರ್ತಿ ಮತ್ತು ಎಲ್ಲಾ ಅನ್ಯಾಯಗಳನ್ನು ಮತ್ತು ದೌರ್ಜನ್ಯಗಳನ್ನು ಎದುರಿಸುವ ಅವರ ದೃಢಸಂಕಲ್ಪಗಳು ಮತ್ತೊಂದು ಸ್ವಾತಂತ್ರ್ಯ ಆಂದೋಲನವನ್ನು ಎದುರಿಸಲು ನಮಗೆ ಸ್ಫೂರ್ತಿಯಾಗಲಿ. ಸಾಮಾಜಿಕ ಮತ್ತು ಆರ್ಥಿಕ ಸಮಾನತೆಗಾಗಿ, ಸಾಮಾಜಿಕ ತಾರತಮ್ಯತೆ ಮತ್ತು ಅನ್ಯಾಯಗಳಿಂದ ಸ್ವಾತಂತ್ರ್ಯ ಪಡೆಯಲು ಇದು ಮತ್ತೊಂದು ಯುದ್ಧ. ಈ ಬೆಳಕಿನಲ್ಲಿ ಮಹಾರಾಷ್ಟ್ರದ ಈ ಸಾಮಾಜಿಕ ಕ್ರಾಂತಿಕಾರಿ ಮಹಾರಾಜನ ಜೀವನ ಭಾವೀ ಭಾರತದ ಪೀಳಿಗೆಗಳಿಗೆ ಮಾರ್ಗದರ್ಶನ ಮತ್ತು ಸ್ಫೂರ್ತಿ ನೀಡುವುದೆಂದು ನಾವು ಭಾವಿಸುತ್ತೇವೆ.

**– ಜಯಸಿಂಗರಾವ್ ಪವಾರ್**

# ಅನುವಾದಕರ ನುಡಿ

ನನ್ನ ಮೂಲ ಕಾಳಜಿ ಜನತಾಂತ್ರಿಕ ಸಮಾಜವಾದಿ ಸಿದ್ಧಾಂತದ ವಿಚಾರಗಳನ್ನು ತಿಳಿದುಕೊಳ್ಳುವುದು ಮತ್ತು ಅವುಗಳನ್ನು ಯುವಜನರಲ್ಲಿ ಬಿತ್ತುವುದು ಮತ್ತು ಹರಡುವುದು. ಸಮಾಜವಾದಿ ಗೆಳೆಯ ಎಲ್. ಕಾಳಪ್ಪ ಅವರು ತಮ್ಮ ಭಕ್ತರಹಳ್ಳಿಯ ಬಿ. ಎಂ. ವಿ. ಪ್ರೌಢಶಾಲೆಯ ಮಕ್ಕಳಿಗೆ ಒಂದು ರಾಷ್ಟ್ರ ಸೇವಾದಳದ ೮ ದಿನಗಳ ಶಿಬಿರವನ್ನೇರ್ಪಡಿಸಿದ್ದರು. ಆ ಶಿಬಿರದಲ್ಲಿ ಮಕ್ಕಳಿಗೆ ಬೌದ್ಧಿಕ ಶಿಕ್ಷಣ ನೀಡುವ ಸಲುವಾಗಿ ಜೋತಿಬಾ ಫುಲೆ, ಶಾಹು ಮಹಾರಾಜ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಬಗ್ಗೆ ಕೊಲ್ಹಾಪುರದ ಬಾಬಾಸಾಹೇಬ ನದಾಫ್ ಮತ್ತು ಅದೇ ಶಾಲೆಯ ಅಧ್ಯಾಪಕ ಯಾ. ಮ. ನಾರಾಯಣಸ್ವಾಮಿ ಅವರು ಭಾಷಣ ಮಾಡಿದರು. ಅವರ ಭಾಷಣಗಳನ್ನು ಕೇಳಿ ಆಕರ್ಷಿತನಾದ ನಾನು ಅವರ ಬಳಿಯಿದ್ದರೆ ಶಾಹು ಮಹಾರಾಜರ ಕುರಿತ ಪುಸ್ತಕ ಅಥವಾ ಲೇಖನಗಳನ್ನು ಕೊಡಿ ಎಂದು ಕೇಳಿದೆ. ಯಾ. ಮ. ನಾರಾಯಣಸ್ವಾಮಿಯವರು ಒಂದು ದೀರ್ಘವಾದ ಶಾಹು ಬಗೆಗಿನ ಲೇಖನ ಕೊಟ್ಟರು. ಆ ಲೇಖನ ಶಾಹು ಬಗೆಗೆ ಮತ್ತಷ್ಟು ವಿವರವಾಗಿ ತಿಳಿದುಕೊಳ್ಳಲು ಪ್ರಚೋದನೆ ನೀಡಿತು. ಬಾಬಾಸಾಹೇಬ ನದಾಫರನ್ನು ಶಾಹು ಬಗ್ಗೆ ಇಂಗ್ಲಿಷ್ ಅಥವಾ ಹಿಂದಿಯಲ್ಲಿ ಪುಸ್ತಕವಿದ್ದರೆ ನನಗೆ ಕಳುಹಿಸಿಕೊಡಿ ಎಂದು ಕೇಳಿದೆ. ಅವರು 'ರಾಜರ್ಷಿಶಾಹು ಛತ್ರಪತಿ – ಒಬ್ಬ ಕ್ರಾಂತಿಕಾರಿ ರಾಜ' ಎಂಬ ಇಂಗ್ಲಿಷಿನ ಬೃಹತ್ ಗ್ರಂಥವನ್ನು ಖರೀದಿ ಮಾಡಿ ನನಗೆ ಕೊಟ್ಟರು. ಅದನ್ನು ಪೂರ್ತಿ ಓದಿದೆ. ಅದು ನಾನು ನಂಬಿದ್ದ ಜನತಾಂತ್ರಿಕ ಸಮಾಜವಾದಿ ವಿಚಾರಗಳಲ್ಲಿ ಕೆಲವನ್ನು ಶಾಹು ತಮ್ಮ ಕೊಲ್ಹಾಪುರ ಸಂಸ್ಥಾನದಲ್ಲಿ ಜಾರಿಗೊಳಿಸಿದ್ದನ್ನು ಓದಿ ಆಶ್ಚರ್ಯಚಕಿತನಾದೆ. ಈ ಗ್ರಂಥವು ಕನ್ನಡದಲ್ಲಿ ಬಂದರೆ ಉತ್ತಮವೆಂದು ಭಾವಿಸಿ ಅನುವಾದಕ್ಕೆ ತೊಡಗಿದೆ.

ಜನತಾಂತ್ರಿಕ ಸಮಾಜವಾದದ ಗುರಿ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ಮೌಲ್ಯಗಳನ್ನೊಳಗೊಂಡ ಸಮಾನತೆಯ ಸಮಾಜದ ಸ್ಥಾಪನೆ. ಶಾಹು ಮಹಾರಾಜರು ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದು, ಬ್ರಾಹ್ಮಣತ್ವದಡಿಯಲ್ಲಿ ಇತರೆ ಜಾತಿಗಳಾದ ಶೂದ್ರ ಮತ್ತು ಶೂದ್ರಾತಿಜನರನ್ನು, ವಿಶೇಷವಾಗಿ ಬ್ರಾಹ್ಮಣೇತರರನ್ನು ದಾಸ್ಯದಲ್ಲಿಡುವುದು ಸ್ವಾತಂತ್ರ್ಯವಲ್ಲ, ಸ್ವರಾಜ್ಯವಲ್ಲ, ಬ್ರಾಹ್ಮಣೇತರರನ್ನು ಮೊದಲು ಸರ್ವವಿಧದಲ್ಲಿ ಅವರನ್ನು ಗುಲಾಮತ್ವ, ಜಾತಿ ತಾರತಮ್ಯತೆಗಳಿಂದ ವಿಮೋಚನೆಗೊಳಿಸುವುದೇ ಸ್ವಾತಂತ್ರ್ಯ, ಸ್ವರಾಜ್ಯವೆಂದು ದೃಢವಾಗಿ ನಂಬಿ, ಅದರ ಸಾಕಾರಕ್ಕಾಗಿ ಕಾರ್ಯೋನ್ಮುಖರಾಗಿದ್ದರು.

ಸಮಾಜವಾದದ ಎರಡನೇ ತತ್ವವಾದ ಸಮಾನತೆಯನ್ನು ತನ್ನ ಸಂಸ್ಥಾನದಲ್ಲಿ ಸಾಕಾರಗೊಳಿಸಲು ಅವರು ಕಾರ್ಯತತ್ಪರರಾದರು. ಅವರು ಅಸ್ಪೃಶ್ಯರು, ಬ್ರಾಹ್ಮಣೇತರರು, ಮುಸ್ಲಿಮರು ಶೈಕ್ಷಣಿಕವಾಗಿ ಮುಂದುವರಿಯದ ಹೊರತು ಆರ್ಥಿಕವಾಗಿ ಮುಂದುವರಿಯುವುದು ಅಸಾಧ್ಯವೆಂದು ಬಗೆದು ಇಡೀ ಭರತಖಂಡದಲ್ಲಿ ಮೊಟ್ಟಮೊದಲಿಗೆ ತನ್ನ ಸಂಸ್ಥಾನದಲ್ಲಿ ಸರಕಾರಿ ಇಲಾಖೆಗಳ ಉದ್ಯೋಗಗಳಲ್ಲಿ ಶೇಕಡಾ.

೫೦ರಷ್ಟು ಮೀಸಲಾತಿಯನ್ನು ಹಿಂದುಳಿದ ವರ್ಗಗಳಿಗೆ ನೀಡುವಂತೆ ಜುಲೈ ೨೬, ೧೯೦೨ರಂದು ಘೋಷಿಸಿ, ಅಂದಿನಿಂದಲೇ ಜಾರಿಗೊಳಿಸಿದರು. ಮತ್ತೆ ತನ್ನ ಸಂಸ್ಥಾನದಲ್ಲಿ ಬ್ರಾಹ್ಮಣರು, ಪ್ರಭುಗಳು, ಶೇಣ್ವಿಗಳು, ಪಾರ್ಸಿಗಳು ಮತ್ತು ಇತರೆ ಮುಂದುವರಿದವರನ್ನು ಬಿಟ್ಟು ಉಳಿದವರೆಲ್ಲರೂ ಹಿಂದುಳಿದ ಜಾತಿಗಳೆಂದು ಘೋಷಿಸಿದರು. ಇದೇ ಮೀಸಲಾತಿ ತತ್ವವನ್ನು ಸ್ವತಂತ್ರ ಭಾರತದ ಸಂವಿಧಾನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಜಾತಿಪದ್ಧತಿಯು ಸಾಮಾಜಿಕ ಅಸಮಾನತೆಯ ಕರಾಳಮುಖವಾಗಿದೆ. ಅದರ ಅತ್ಯಂತ ನಿಕೃಷ್ಟ ಹೇಯ ಮುಖವೇ ಅಸ್ಪೃಶ್ಯತೆ. ಶಾಹು ಅವರು ಅಂದು ತಮ್ಮ ಸಂಸ್ಥಾನದಲ್ಲಿ ರೂಢಿಯಲ್ಲಿದ್ದ ಈ ಅಸ್ಪೃಶ್ಯತೆಯನ್ನು ಕಾನೂನುಬದ್ಧವಾಗಿ ಸಾರ್ವಜನಿಕ ಜೀವನದಲ್ಲಿ ರದ್ದುಗೊಳಿಸಿದರು ಮತ್ತು ಅದರ ಮುಂದುವರಿಕೆಯಾಗಿ ಮಹರ್ ವತನ, ಕಡ್ಡಾಯ ಹಾಜರಿ ಪದ್ಧತಿ ಮತ್ತು ಬಲೂತ ಪದ್ಧತಿಗಳನ್ನು ರದ್ದುಗೊಳಿಸಿದರು. ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲಿ ಅಸ್ಪೃಶ್ಯತೆಯನ್ನು ಆಚರಿಸಬಾರದೆಂದು ಆಗಾಗ ಆಜ್ಞೆಗಳನ್ನು ಹೊರಡಿಸುತ್ತಿದ್ದರು. ಅಷ್ಟೇ ಅಲ್ಲದೆ ತಮ್ಮ ಅರಮನೆಯಲ್ಲಿ, ಅಸ್ಪೃಶ್ಯರನ್ನು ಮಾವುತರನ್ನಾಗಿ, ಕುದುರೆ ಸವಾರರನ್ನಾಗಿ ಕೆಲಸಕಾರ್ಯಗಳಿಗೆ ನೇಮಕಮಾಡಿಕೊಳ್ಳುತ್ತಿದ್ದರು.

ಶಾಹುರವರು ಆರ್ಥಿಕ ಸಹಾಯ ನೀಡಿ ಕೊಲ್ಹಾಪುರದ ಪೇಟೆಯ ಜನನಿಬಿಡ ರಸ್ತೆಯಲ್ಲಿ ಅಸ್ಪೃಶ್ಯನಾದ ಗಂಗಾರಾಮ್ ಕಾಂಬ್ಲೆ ಅವರಿಂದ ಒಂದು ಹೊಟೆಲ್ಲನ್ನು ತೆರೆಯಿಸುತ್ತಾರೆ. ಅದಕ್ಕೆ ಗಿರಾಕಿಗಳು ಬರದಿರುವುದನ್ನು ನೋಡಿ ಶಾಹುರವರು ಪ್ರತಿದಿನ ತನ್ನ ಅರಮನೆಯ ಬ್ರಾಹ್ಮಣರ ಸಮೇತ ಮೇಲ್ಜಾತಿಯ ಸಿಬ್ಬಂದಿಯನ್ನು ತಮ್ಮ ಸಾರೋಟಿನಲ್ಲಿ ಕೂಡ್ರಿಸಿಕೊಂಡು ಅವರ ಹೊಟೆಲ್ಲಿಗೆ ಹೋಗಿ ಚಹಾ–ತಿಂಡಿ ಸೇವಿಸಿ ಹಣ ಕೊಟ್ಟು ಬರುತ್ತಿದ್ದರು. ಈ ದೃಶ್ಯವನ್ನು ಸಾರ್ವಜನಿಕರು ನೋಡಿ ಮೇಲ್ಜಾತಿಯವರು ಹೊಟೆಲಿಗೆ ಹೋಗಿ ತಿಂಡಿ–ತೀರ್ಥಗಳನ್ನು ಸೇವಿಸಲು ಪ್ರಾರಂಭಿಸಿದರು. ಹೀಗೆ ಶಾಹುರವರು ಆಜ್ಞೆ ಹೊರಡಿಸುವುದು ಮಾತ್ರವಲ್ಲದೆ ಅಸ್ಪೃಶ್ಯತೆಯ ನಿವಾರಣೆಯನ್ನು ಸ್ವತಃ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದರು.

ಸಾಂಸ್ಕೃತಿಕ ಸಮಾನತೆಯನ್ನು ಜಾರಿಗೆ ತರುವ ಸಲುವಾಗಿ ಅವರು ಬ್ರಾಹ್ಮಣೇತರರಾದ ಮರಾಠ, ಲಿಂಗಾಯತರ, ಮುಸ್ಲಿಮ್ ಮೊದಲಾದ ೨೧ ಜಾತಿಗಳ ವಿದ್ಯಾರ್ಥಿನಿಲಯಗಳನ್ನು ಸ್ಥಾಪನೆ ಮಾಡಿ ಆ ಜಾತಿಗಳ ವಿದ್ಯಾರ್ಥಿಗಳ ಉನ್ನತ ವಿದ್ಯಾಭ್ಯಾಸಕ್ಕೆ ನೆರವಾದರು. ಇಡೀ ಭಾರತದಲ್ಲಿ ಮೊಟ್ಟಮೊದಲಿಗೆ ವಿದ್ಯಾರ್ಥಿನಿಲಯಗಳ ಆಂದೋಲನವನ್ನು ಪ್ರಾರಂಭ ಮಾಡಿದರು. ಅವರ ವಿದ್ಯಾಭ್ಯಾಸಕ್ಕೆ ವಿದ್ಯಾರ್ಥಿವೇತನಗಳನ್ನು ನೀಡಿ ಪ್ರೋತ್ಸಾಹಿಸಿದರು. ಅಸ್ಪೃಶ್ಯರಿಗೆ ವಿಶೇಷವಾಗಿ ಶಾಲೆಗಳನ್ನು ತೆರೆದರು. ವಿಶೇಷ ಸನದುಗಳನ್ನು ನೀಡಿ ಅವರನ್ನು ವಕೀಲರನ್ನಾಗಿ ಮಾಡಿದರು. ಜಾತಿ–ಜಾತಿಗಳ ನಡುವೆ ಸಾಮರಸ್ಯವನ್ನು ಮೂಡಿಸಲು ಮತ್ತು ಜಾತಿಪದ್ಧತಿಯಲ್ಲಿರುವವರು ಅಸಮಾನತೆ, ಜಿಗುಟುತನವನ್ನು ನಿವಾರಿಸಲು ಅವರು ಒಂದು ನೂರು ಮರಾಠ ಮತ್ತು ಧನಗರ್(ಕುರುಬ)ನಡುವೆ ಅಂತರ್‌ಜಾತೀಯ ವಿವಾಹಗಳನ್ನು ನಡೆಸಲು ಇಂದೋರಿನ ಮಹಾರಾಜರೊಡನೆ ಯೋಜನೆಯ ವ್ಯವಸ್ಥೆ ಮಾಡಿಕೊಂಡು ಅವರ ಜೀವಿತಾವಧಿಯಲ್ಲಿ ೨೫ ವಿವಾಹಗಳನ್ನು ನಡೆಸುತ್ತಾರೆ. ಇವು ಬಲವಂತದ, ಪ್ರೀತಿಯ ವಿವಾಹಗಳಲ್ಲ. ಎರಡು ಜಾತಿಗಳು ಪರಸ್ಪರ ಒಪ್ಪಿ ಸಂತೋಷದಿಂದ ಮಾಡಿದ ಮದುವೆಗಳಾಗಿದ್ದವು.

ಸಮಾಜವಾದದ ಮೂರನೇ ಮೌಲ್ಯವಾದ ಭ್ರಾತೃತ್ವ ಈ ತತ್ವವನ್ನು ಶಾಹು ಮಹಾರಾಜರು ಕಾನೂನಿನ ಮೂಲಕ ಮಾಡದೆ ಸ್ವಯಂಪ್ರೇರಣೆಯಿಂದ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ಮೂಲಕ

ತಮ್ಮ ಸಂಸ್ಥಾನದಲ್ಲಿ ಮೇಲ್ಪಂಕ್ತಿಯನ್ನು ಹಾಕುತ್ತಾರೆ. ಅವರು ಡಾ. ಭೀಮ್‌ರಾವ್ ಅಂಬೇಡ್ಕರರಿಗೆ ಸಾರ್ವಜನಿಕವಾಗಿ ಗೌರವಿಸಿ ಸನ್ಮಾನ ಮಾಡುವುದು, ಅಸ್ಪೃಶ್ಯರ ಜೊತೆಯಲ್ಲಿ ಸಾರ್ವಜನಿಕವಾಗಿ ಶಾಹು ಭೋಜನ ಸ್ವೀಕರಿಸುವುದು, ಅಸ್ಪೃಶ್ಯರ ಕೇರಿಗಳಿಗೆ ಹೋಗಿ ಅಸ್ಪೃಶ್ಯರ ಹೆಣ್ಣುಮಕ್ಕಳಿಗೆ ತಮ್ಮ ಸೊಸೆ ಮೊದಲಾದ ರಾಜಕುಟುಂಬದವರು ಅರಿಶಿನ–ಕುಂಕುಮ ನೀಡುವುದರ ಮೂಲಕ ಪರಸ್ಪರ ಒಡನಾಟ ಬೆಳೆಸಿಕೊಳ್ಳುವುದು, ಅಸ್ಪೃಶ್ಯರನ್ನು ತಮ್ಮ ಸಾರೋಟಿನಲ್ಲಿ ಕೂಡ್ರಿಸಿಕೊಂಡು ನಗರವನ್ನು ತೋರಿಸಿ ಸುತ್ತಾಡುವುದು, ಈ ಎಲ್ಲಾ ಘಟನೆಗಳು ಜನಸಾಮಾನ್ಯರಲ್ಲಿ ಒಡನಾಟ ಬೆಳೆಸುವ ಸೋದರ ಭಾವನೆಯಲ್ಲದೆ ಮತ್ತೇನು? ಅಸ್ಪೃಶ್ಯರಲ್ಲಿರುವ ಕುಶಲಕಲೆಗಳನ್ನು, ಪ್ರತಿಭೆಯನ್ನು ಬೆಳೆಸುವುದು ಇಂತಹ ಹಲವಾರು ಘಟನೆಗಳನ್ನು ಉದಾಹರಿಸಬಹುದು.

ಒಟ್ಟಿನಲ್ಲಿ ಶಾಹು ಮಹಾರಾಜರು ತಾವು ಸಮಾಜವಾದಿ ಎಮದು ಹೇಳಿಕೊಳ್ಳದಿದ್ದರೂ ಅವರು ಅದರಲ್ಲೂ ಒಬ್ಬ ರಾಜನಾಗಿ ಜನತಾಂತ್ರಿಕ ಮೌಲ್ಯಗಳನ್ನು ರಕ್ತಗತ ಮಾಡಿಕೊಂಡು ತಾವು ತಮ್ಮ ಆಡಳಿತದಲ್ಲಿ ಜಾರಿಗೆ ತಂದದ್ದು ಅತಿಮುಖ್ಯವಾದ ಸಂಗತಿ. ನಿಜವಾಗಿಯೂ ಅವರು ಸಾಮಾಜಿಕ ಜನತಂತ್ರದ ಆಧಾರಸ್ತಂಭ ಮತ್ತು ಅಸ್ಪೃಶ್ಯರ ಪಾಲಿಗೆ ಒಬ್ಬ ಅಬ್ರಹಾಂ ಲಿಂಕನ್.

'ರಾಜರ್ಷಿ ಶಾಹು ಛತ್ರಪತಿ– ಒಬ್ಬ ಕ್ರಾಂತಿಕಾರಿ ರಾಜ' ಎಂಬ ಈ ಕೃತಿಯು ಶಾಹುರವರ ಜೀವನಚರಿತ್ರೆ, ಅವರ ಬಗ್ಗೆ ವಿವಿಧ ಗಣ್ಯರು ಬರೆದ ಲೇಖನಗಳು, ಶಾಹುರವರು ಮಾಡಿದ ಭಾಷಣಗಳು ಮತ್ತು ಅವರು ಹೊರಡಿಸಿದ ರಾಜಾಜ್ಞೆಗಳು ಹಾಗೂ ಅವರು ಬರೆದ ಪತ್ರಗಳನ್ನು ಒಳಗೊಂಡಿದೆ. ಇವುಗಳಲ್ಲಿರುವ ವಿಚಾರಗಳು ಸಾಮಾಜಿಕ, ರಾಜಕೀಯ ಇತಿಹಾಸದ ದಾಖಲೆಗಳಾಗಿವೆ. ಅನುವಾದ ಮಾಡುವಾಗ ನನಗೆ ಶಾಹುರವರ ಗುರುಗಳಾದ ಫ್ರೆಜರ್ ಮತ್ತು ಇತರೆ ಮೂರು–ನಾಲ್ಕು ವಿದ್ವಾಂಸರ ವಿದ್ವತ್‌ಪೂರ್ಣವಾದ ಲೇಖನಗಳು ಅನುವಾದ ಮಾಡಲು ಸವಾಲಾಗಿದ್ದವು. ಅವರ ಭಾಷೆ, ವಾಕ್ಯರಚನೆಗಳು, ನುಡಿಗಟ್ಟು, ಪದಗುಚ್ಛ ಮತ್ತು ಸಂಕೀರ್ಣವಾಕ್ಯಗಳಿಂದ ಕೂಡಿದ್ದವು. ಅವು ನನ್ನ ಅನುವಾದದ ಓಟಕ್ಕೆ ತಡೆ ಒಡ್ಡಿದವು ಮತ್ತು ಅವುಗಳನ್ನು ಒಳಹೊಕ್ಕು ಅರ್ಥಮಾಡಿಕೊಳ್ಳುವುದಕ್ಕೆ ನನ್ನನ್ನು ಹಚ್ಚಿದವು. ನಿಜವಾಗಿಯೂ ಅನುವಾದ ಮಾಡುವಾಗ ನಾನು ರಸಾಸ್ವಾದನೆ ಮಾಡಿದ್ದೇನೆ. ನನಗೆ ಸಂತೋಷವೆನಿಸಿದೆ. ಅನುವಾದದಲ್ಲಿ ಎಲ್ಲಿಯಾದರೂ ಕ್ಲಿಷ್ಟತೆ, ಗೊಂದಲ ಕಂಡುಬಂದರೆ, ಅದು ನನ್ನ ಮಿತಿಯೇ ಹೊರತು ಮೂಲ ಲೇಖಕರದ್ದಲ್ಲ.

ನನ್ನ ಗುರುಗಳಾದ ಡಾ. ಕೆ. ಮರುಳಸಿದ್ಧಪ್ಪ ಅವರು ಕುವೆಂಪು ಭಾಷಾಭಾರತಿ ಪ್ರಾಧಿಕಾರಕ್ಕೆ ಅಧ್ಯಕ್ಷರಾಗಿ ನೇಮಕಗೊಂಡಾಗ ಅವರನ್ನು ಅಭಿನಂದಿಸಲು ಭೇಟಿಯಾಗಿದ್ದಾಗ ಅದು–ಇದು ಮಾತನಾಡುತ್ತಾ ಶಾಹುಮಹಾರಾಜರ ಪ್ರಸ್ತಾಪ ಮಾಡಿ ಈ ಪುಸ್ತಕವನ್ನು ತೋರಿಸಿದ್ದೇ ತಡ, ಅವರು ಕೂಡಲೇ ಇದನ್ನು ಕನ್ನಡಕ್ಕೆ ತರಬಹುದೆಂದು ಸೂಚಿಸಿದರು. ನಾನು ಎರಡು–ಮೂರು ದಿನ ಬಿಟ್ಟು ಅನುವಾದ ಮಾಡುವ ಕೋರಿಕೆಯ ಪತ್ರವನ್ನು ಅವರಿಗೆ ನೀಡಿದೆನು. ಆಗ ಅವರು ನೀವು ಅನುವಾದ ಮಾಡಿ, ಈ ಪತ್ರವನ್ನು ಸಮಿತಿಯ ಮುಂದೆ ಅನುಮೋದನೆಗೆ ಇಡುವೆನು ಎಂದು ಹೇಳಿ ಪ್ರೋತ್ಸಾಹಿಸಿದರು. ಅವರ ಪ್ರೋತ್ಸಾಹವೇ ಈ ಕೃತಿ. ಅವರಿಗೆ ನನ್ನ ಧನ್ಯವಾದಗಳು.

'ರಾಜರ್ಷಿಶಾಹು ಛತ್ರಪತಿ' ಕೃತಿಯನ್ನು ಕನ್ನಡ ಭಾಷೆಯಲ್ಲಿ ಹೊರತರುವುದಕ್ಕೆ ಅವಕಾಶ ನೀಡಿದ ಕುವೆಂಪು ಭಾಷಾಭಾರತಿ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಕೆ. ಮರುಳಸಿದ್ಧಪ್ಪ ಅವರಿಗೂ, ಪ್ರಾಧಿಕಾರದ

ಸದಸ್ಯರಾದ ಡಾ. ಎಂ. ಜಿ. ಹೆಗಡೆ, ಡಾ. ದೇವರಾಜ್, ಶ್ರೀಮತಿ ಶಶಿಕಲಾ ಗೌಡ. ಎಂ. ಎಸ್., ಡಾ. ತಾರಿಣಿ ಶುಭದಾಯಿನಿ, ಡಾ. ಮೋಹನ್‌ಕುಂಟಾರ್, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಶ್ರೀ ಆರಿಫ್‌ರಾಜಾ ಮೊದಲಾದವರಿಗೆ ಕೃತಜ್ಞತೆಗಳು. ಈ ಕೃತಿಯನ್ನು ಹೊರತರಲು ಸಹಕರಿಸಿದ ಪ್ರಾಧಿಕಾರದ ಸಿಬ್ಬಂದಿಗೆ, ಈ ಕೃತಿಯ ಬೆರಳಚ್ಚು ಮಾಡಿದ ಶ್ರೀಮತಿ ಲಕ್ಷ್ಮೀ. ಎಸ್. ಮತ್ತು ಶ್ರೀ ಜ್ಞಾನಮೂರ್ತಿ. ಎಸ್. ಅವರಿಗೆ ನನ್ನ ಕೃತಜ್ಞತೆಗಳು.

**– ಪ್ರೊ. ಹನುಮಂತ**

# ಪರಿವಿಡಿ

---

# ೧

# ಹಿನ್ನೆಲೆ

**ವಿ**ಶ್ವದ ಇತಿಹಾಸ, ಆಕ್ರಮಣಕಾರರು ತಾವು ಆಕ್ರಮಣ ಮಾಡಿದ ಪ್ರದೇಶಗಳಿಗೆ ತಮ್ಮ ಸಂಸ್ಕೃತಿ, ಕಲೆ, ಮತ, ಧರ್ಮ, ನಂಬಿಕೆ ಮತ್ತು ವಿಜ್ಞಾನಗಳನ್ನು ಕೊಂಡೊಯ್ಯುತ್ತಾರೆಂಬುದನ್ನು ತೋರಿಸುತ್ತದೆ. ತಾವು ಜಯಶೀಲರೆಂದು ಘೋಷಿತರಾದ ಕೂಡಲೇ ಆಕ್ರಮಣಕಾರರು ತಾವು ಆಕ್ರಮಿಸಿದ ನೆಲೆಗಳಲ್ಲಿ ಸ್ವತಂತ್ರರಾಗಿ ತಿರುಗಾಡುತ್ತಾರೆ ಮತ್ತು ತಮ್ಮ ಸಾಮ್ರಾಜ್ಯಗಳನ್ನು ಸ್ಥಾಪಿಸುತ್ತಾರೆ. ಒಡನಾಟವು ಮೊದಲಿಗೆ ಜಯಶೀಲರು ಮತ್ತು ಪರಾಜಿತರ ನಡುವೆ ಸಾಂಸ್ಕೃತಿಕ ಸಂಘರ್ಷಗಳಿಗೆ, ನಂತರ ಸಮನ್ವಯ ಹಾಗೂ ಸಾಮರಸ್ಯದ ಸಮಗ್ರತೆಯ ಪ್ರಕ್ರಿಯೆಗೆ ಎಡೆಮಾಡಿಕೊಡುತ್ತದೆ. ಇದರ ಪರಿಣಾಮವಾಗಿ ಆಕ್ರಮಿತ ಭೂಪ್ರದೇಶಗಳಲ್ಲಿ ಒಟ್ಟಿಗೆ ವಿಭಿನ್ನ ರೀತಿಯ ಮಿಶ್ರಿತ ಸಂಸ್ಕೃತಿ ಅಸ್ತಿತ್ವಕ್ಕೆ ಬರುತ್ತದೆ. ಎಲ್ಲಾ ಕಾಲಗಳಲ್ಲೂ ಸಂಸ್ಕೃತಿಯ ಸಮ್ಮಿಶ್ರಣದ ಪ್ರಕ್ರಿಯೆ ಜಗತ್ತಿನ ಹಲವು ಭಾಗಗಳಲ್ಲಿ ನಿರಂತರವಾಗಿ ನಡೆಯುತ್ತಿರುತ್ತದೆ.

ಕಳೆದ ಸಾವಿರಾರು ವರ್ಷಗಳಲ್ಲಿ ಭಾರತದಲ್ಲಿ ಕೂಡ ಅದೇ ಕತೆಯಾಗಿದೆ. ಈ ಅವಧಿಯಲ್ಲಿ ಮೊದಲಿಗೆ ಮುಸ್ಲಿಂ ಆಕ್ರಮಣಕಾರರು ಭಾರತಕ್ಕೆ ಬಂದರು. ಸಂಪತ್ತಿನ ಲೂಟಿ ಮತ್ತು ಸುಲಿಗೆಗಳಲ್ಲದೆ ರಾಜಕೀಯ ಅಧಿಕಾರ ಸ್ಥಾಪನೆಯ ಜೊತೆಗೆ ಇಸ್ಲಾಂ ಧರ್ಮದ ಪ್ರಚಾರವು ಮುಖ್ಯ ಗುರಿಯಾಗಿತ್ತು. ಪ್ರಸ್ತಾಪಿಸಿದ ಸರಂಜಾಮುಗಳ ಜೊತೆಗೆ ಅವರ ಆಕ್ರಮಣ ಸಾಗಿತ್ತು ಮತ್ತು ಇಲ್ಲಿ ಇಸ್ಲಾಮಿನ ಆಡಳಿತ ನೆಲೆಗೊಂಡಿತು. ಇಸ್ಲಾಂ ಮತ್ತು ಹಿಂದು ಧರ್ಮದ ನಡುವೆ ಸಂಸ್ಕೃತಿಯ ಸಂಘರ್ಷ ಮತ್ತು ಸಮನ್ವಯದ ಪ್ರಕ್ರಿಯೆ ಪ್ರಾರಂಭವಾಯಿತು. ಸಮನ್ವಯವು ತಾಜಮಹಲಿನ ನಿರ್ಮಾಣಕ್ಕೆ, ಭಕ್ತಿ ಪಂಥದ ಚಳುವಳಿಗೆ ಹಾಗೂ ಮದ್ದು-ಗುಂಡುಗಳ ಬಳಕೆಗೆ ಮತ್ತು ಮಹಿಳೆಯರ ಪರದಾ ಪದ್ಧತಿಯ ಉಗಮಗಳಿಗೆ ಎಡೆಮಾಡಿಕೊಟ್ಟಿತು.

## ಶಾಹು ಮಹಾರಾಜರಿಗಿಂತ ಮೊದಲಿದ್ದ ಬ್ರಿಟಿಷರ ಆಡಳಿತ

ಮುಸ್ಲಿಮರ ನಂತರ ಭಾರತವನ್ನು ಯೂರೋಪಿಯನ್ನರು ದೊಡ್ಡ ಪ್ರಮಾಣದಲ್ಲಿ ಆಕ್ರಮಣ ಮಾಡಿದರು. ಪರಸ್ಪರ ವೈರಿಗಳಾದ ಪೋರ್ಚುಗೀಸರು, ಫ್ರೆಂಚರು ಮತ್ತು ಡಚ್ಚರ ನಂತರ ಬಂದ ಬ್ರಿಟಿಷರು ಭಾರತದಲ್ಲಿ ರಾಜಕೀಯ ಅಧಿಕಾರವನ್ನು ಕಬಳಿಸುವುದರಲ್ಲಿ ಯಶಸ್ವಿಯಾದರು. ೧೭೫೭ರಲ್ಲಿ ನಡೆದ ಪ್ಲಾಸಿ ಕದನದಲ್ಲಿ ಯಶಸ್ವಿಯಾದ ಬ್ರಿಟಿಷರು ಭಾರತದಲ್ಲಿ ಬ್ರಿಟಿಷ್ ಆಡಳಿತವನ್ನು ಸ್ಥಾಪಿಸಿದರು. ಕೇವಲ ಒಂದು ಶತಮಾನದಲ್ಲಿ (ನೂರು ವರ್ಷಗಳಲ್ಲಿ) ಬ್ರಿಟಿಷರು ಭಾರತದ ರಾಜರು ನೆಲಕಚ್ಚುವಂತೆ ಮಾಡಿದರು ಅಥವಾ ಅವರನ್ನು ಕೈಗೊಂಬೆಗಳನ್ನಾಗಿ ಮಾಡಿದರು ಮತ್ತು ಕಾಶ್ಮೀರದಿಂದ ಕನ್ಯಾಕುಮಾರಿವರೆಗಿನ ಹಾಗೂ ಬಲೂಚಿಸ್ತಾನದಿಂದ ಅಸ್ಸಾಂವರೆಗಿನ ಭೂಮಂಡಲವನ್ನು ತಮ್ಮ ಹಿಡಿತಕ್ಕೆ ತಂದುಕೊಂಡರು. ಬ್ರಿಟಿಷರ ಆಡಳಿತವನ್ನು ಉರುಳಿಸುವ

ಭಾರತೀಯರ ಕೊನೆಯ ಪ್ರಯತ್ನ ೧೮೫೭ರಲ್ಲಿ ನಿಷ್ಫಲಗೊಂಡಿತು. ಬ್ರಿಟಿಷ್ ಆಡಳಿತಗಾರರು ಯಥೇಚ್ಛವಾಗಿ ಬಲಪ್ರಯೋಗ ಮತ್ತು ಭಯೋತ್ಪಾದನೆಯನ್ನು ಪ್ರಯೋಗಿಸಿದರು. ಅಂದಿನಿಂದ ಈ ದೇಶವು ಮೂಕನಂತೆ ತಲೆಬಾಗಿತ್ತು.

ಮುಸ್ಲಿಂ ಆಕ್ರಮಣಕಾರರು ಭಾರತಕ್ಕೆ ಒಂದು ಕೈಯಲ್ಲಿ ಕತ್ತಿ ಮತ್ತೊಂದು ಕೈಯಲ್ಲಿ ಕುರ್‌ಆನ್ ಹಿಡಿದುಕೊಂಡು ಬಂದಿದ್ದರು. ಬ್ರಿಟಿಷ್ ಆಕ್ರಮಣಕಾರರು ವ್ಯಾಪಾರಿಗಳ ವೇಷತೊಟ್ಟು ಒಂದು ಕೈಯಲ್ಲಿ ತಕ್ಕಡಿ ಹಿಡಿದು ಮತ್ತೊಂದು ಕೈಯಲ್ಲಿ ಬೀಸುಗತ್ತಿ ಹಿಡಿದು ಸಿದ್ಧವಾಗಿ ಬಂದಿದ್ದರು. ಅವಕಾಶ ಒದಗಿಬಂದಾಗ ಅವರು ತಕ್ಕಡಿಯನ್ನು ರಕ್ಷಿಸಲು ಕತ್ತಿಯನ್ನು ಹಿಡಿದರು. ಅವರು ಬೈಬಲ್ಲನ್ನು ಸಹ ತಂದಿದ್ದರು. ಆದರೆ ಅದನ್ನು ಸಾಮಾನುಗಳ ಜೊತೆಯಲ್ಲಿ ಭದ್ರವಾಗಿಟ್ಟಿದ್ದರು. ಆದರೆ ಅವರು ತಕ್ಕಡಿ ಮತ್ತು ಕತ್ತಿಗಳು ತಮ್ಮ ಕಾರ್ಯವನ್ನು ಪೂರೈಸಿದ ನಂತರ ಸಂದರ್ಭಕ್ಕೆ ಅನುಗುಣವಾಗಿ ಬೈಬಲ್ಲನ್ನು ಹೊರತೆಗೆದರು. ವ್ಯಾಪಾರಿ ಬ್ರಿಟಿಷರು ಖಂಡಿತವಾಗಿ ಬೈಬಲ್ಲನ್ನು ಪ್ರೀತಿಸಿದರು. ಆದರೆ ಅವರು ಅದು ತಕ್ಕಡಿಗೆ ಅಡ್ಡಬರದಂತೆ ನೋಡಿಕೊಂಡರು. ಸಾಮ್ರಾಜ್ಯಶಾಹಿಗಳ ಇತಿಹಾಸದಲ್ಲಿ ಬ್ರಿಟಿಷರು ಅತ್ಯಂತ ಜಾಣರು ಮತ್ತು ಬುದ್ಧಿವಂತರೆಂದು ಹೆಸರುವಾಸಿಯಾಗಿದ್ದಾರೆ.

ಮತ-ಧರ್ಮ ಮತ್ತು ರಾಜಕಾರಣಗಳು ಮುಸ್ಲಿಂ ರಾಜರಿಗೆ ಪ್ರಮುಖ ಪ್ರೇರಕ ಶಕ್ತಿಗಳಾಗಿದ್ದವು. ಆರ್ಥಿಕ ಚಿಂತನೆ ಅವರಲ್ಲಿ ಸಂಪೂರ್ಣವಾಗಿ ಶೂನ್ಯವಾಗಿತ್ತು. ಅವರು ದುರಾಸೆಯ ಲೂಟಿಕೋರರು ಮತ್ತು ಸುಲಿಗೆಕೋರರು. ಪ್ರಜೆಗಳಿಂದ ಖಜಾನೆ ತುಂಬಲು ವಸೂಲಿ ಮಾಡಿದ ಆದಾಯವನ್ನು (ಕಂದಾಯ) 'ಆರ್ಥಿಕ-ಚಿಂತನೆ' ಎಂದು ಕರೆಯಲು ಸಾಧ್ಯವಿಲ್ಲ. ಯೂರೋಪಿನ ಸಾಮ್ರಾಜ್ಯಶಾಹಿಗಳ ಗುಪ್ತ (ಗಂಭೀರ) 'ಆರ್ಥಿಕ-ಪ್ರೇರಣೆ' ಮುಸ್ಲಿಮರಲ್ಲಿ ತಪ್ಪಿಹೋಗಿತ್ತು. ಇದು ಮುಸ್ಲಿಂ ಮತ್ತು ಬ್ರಿಟಿಷ್ ಆಡಳಿತಗಾರರ ನಡುವಣ ಪ್ರಮುಖ ವ್ಯತ್ಯಾಸ. ವ್ಯಾಪಾರ ಮಾಡುವುದು ಬ್ರಿಟಿಷರ ಮುಖ್ಯ ಆರ್ಥಿಕ ಪ್ರೇರಕ ಶಕ್ತಿಯಾಗಿತ್ತು. ಪ್ರಜೆಗಳನ್ನು ಲೂಟಿಮಾಡುವುದು ತಮ್ಮ ಆರ್ಥಿಕ ನೀತಿಯಾಗಿತ್ತು. ಆದರೆ ಅವರ ದರೋಡೆ, ಹಿಂಸೆ ಮತ್ತು ರಕ್ತಪಾತಗಳಿಂದ ಕೂಡಿರಲಿಲ್ಲ. ಅವರು ಪ್ರಜೆಗಳನ್ನು ಅವರಿಗೆ ಗೊತ್ತಾಗದಂತೆ ಬಹಳ ನಯ-ನಾಜೂಕಿನಿಂದ ಸುಲಿಗೆ ಮಾಡುತ್ತಿದ್ದರು. ಬ್ರಿಟಿಷರು ಯಶಸ್ವಿಗೊಳಿಸಿದ ಸುಲಿಗೆಯ ಈ ತಂತ್ರಗಾರಿಕೆಯನ್ನು 'ಆಧುನಿಕ ವ್ಯಾಪಾರೀ ಸಾಮ್ರಾಜ್ಯವಾದ' ಎಂದು ಕರೆಯಲಾಗುತ್ತದೆ.

ಮುಸ್ಲಿಮ್ ಆಕ್ರಮಣಕಾರರು ನಡೆಸಿದ ಸುಲಿಗೆಯನ್ನು ಈ ಲೂಟಿಯ ಆಧುನಿಕ ತಂತ್ರಗಾರಿಕೆಯೊಂದಿಗೆ ಹೋಲಿಸಬಾರದು. ಲೂಟಿಯ ಭಯಾನಕ ಆಯಾಮದ ಆಧುನಿಕ ತಂತ್ರಗಾರಿಕೆಯನ್ನು ಮೊಟ್ಟಮೊದಲಿಗೆ ಭಾರತದಲ್ಲಿ ಮನವರಿಕೆ ಮಾಡಿಕೊಂಡ ಮಹಾಮುದುಕ ದಾದಾಭಾಯಿ ನವರೋಜಿಯವರು. ೧೮೭೧ ರಲ್ಲಿ ಅವರು ಬ್ರಿಟಿಷರ ಬಗ್ಗೆ ಹೇಳಿದ್ದರು: "ಈ ಶತಮಾನದ ಪ್ರಾರಂಭದಲ್ಲಿ ವಾರ್ಷಿಕ ನಷ್ಟ ಮೂರು ದಶಲಕ್ಷ ಪೌಂಡುಗಳಾಗಿದ್ದದ್ದು, ೩೦ ದಶಲಕ್ಷ ಪೌಂಡುಗಳಿಗೆ ಏರಿದೆ. ಮೊಹಮದ್ ಘಜ್ನಿ ಭಾರತವನ್ನು ೧೮ ಸಾರಿ ಆಕ್ರಮಣ ಮಾಡಿದನು ಮತ್ತು ಹಲವು ಬಾರಿ ಕೊಳ್ಳೆ ಹೊಡೆದನೆಂದು ಇತಿಹಾಸಕಾರರು ಹೇಳುತ್ತಾರೆ. ನೀವು (ಬ್ರಿಟಿಷರು) ಒಂದೇ ಒಂದು ವರ್ಷದಲ್ಲಿ ಲೂಟಿಮಾಡಿದ್ದನ್ನು ಅವನು ಮಾಡಿದ ಎಲ್ಲಾ ದಾಳಿ (ಆಕ್ರಮಣ)ಗಳಲ್ಲಿ ದೋಚಿದ ಹಣದೊಂದಿಗೆ ಹೋಲಿಕೆ ಮಾಡಿದರೆ ಅವನ ಸುಲಿಗೆ ಏನೇನೂ ಅಲ್ಲ. ಜೊತೆಗೆ ಘಜ್ನಿ ಇಂಡಿಯಾಗೆ ಮಾಡಿದ ಗಾಯ ಅವನ ೧೮ನೇ ದಾಳಿಯ ನಂತರ ವಾಸಿಯಾಯಿತು. ಆದರೆ ನೀವು ದಾಳಿ ಮಾಡಿದಾಗ (ಗಾಯಗೊಳಿಸಿದಾಗ) ಅದು ನಿರಂತರ ರಕ್ತ ಸೋರಿಕೆಗೆ ಕಾರಣವಾಗುತ್ತದೆ.

ನಿರಂತರವಾಗಿ ಋತುಗಳು ಸರಿದ ಹಾಗೆ ನಾವು ಉತ್ಪಾದಿಸಿದ ೩೦ ದಶಲಕ್ಷ ಪೌಂಡುಗಳನ್ನು ನಮ್ಮ ಬದುಕು ಮತ್ತು ಸಾವಿನ ಪರಿಗಣನೆಯಿಲ್ಲದೆ ನೀವು ಈ ದೇಶದಿಂದ ಕೊಂಡೊಯ್ಯುತ್ತೀರಿ.

ನಿಮ್ಮ ಸಾಮ್ರಾಜ್ಯವನ್ನು ಭಾರತದ ಜನರ ಸಂಪತ್ತು ಮತ್ತು ರಕ್ತದ ಅಸ್ತಿವಾರದ ಮೇಲೆ ನಿಲ್ಲಿಸಿದ್ದೀರಿ. ಭಾರತವು ಸಂಪೂರ್ಣವಾಗಿ ಹಿಂಡಿ–ಹಿಪ್ಪೆಯಾಗಿದೆ, ಮತ್ತು ಅತಿಯಾದ ಯುದ್ಧದ ಖರ್ಚಿನಿಂದ, ಪ್ರತಿ ವರ್ಷ ಭಾರತದ ಸಂಪತ್ತನ್ನು ಈ ದೇಶದಿಂದ ಕೊಂಡೊಯ್ಯುವ ಧೋರಣೆಯಿಂದ ಸೋತು–ಸುಣ್ಣವಾಗಿದೆ. ರಕ್ತ ಬಸಿಯುವಿಕೆಯು ಭಾರತವನ್ನು ಸಾವಿನ–ಹಾಸಿಗೆಯಲ್ಲಿ ಮಲಗಿಸಿರುವುದು ಆಶ್ಚರ್ಯವಲ್ಲ.''

ಮೊದಲಿಗೆ ಭಾರತದ ಉಳಿದ ಭಾಗ, ನಂತರ ಮಹಾರಾಷ್ಟ್ರ ಬ್ರಿಟಿಷರ ಅಧೀನಕ್ಕೆ ಪಡೆದುಕೊಳ್ಳುವ ಬ್ರಿಟಿಷರ ಅಂತಿಮ ಗುರಿಯನ್ನು ದಾದಾಭಾಯಿ ನವರೋಜಿಯವರ ಹೇಳಿಕೆಯು ಬಹಿರಂಗಗೊಳಿಸುತ್ತದೆ. ೧೬ನೇ ಶತಮಾನದಲ್ಲಿ ಯೂರೋಪಿನಲ್ಲಿ ಉಗಮಗೊಂಡ ಹೊಸಯುಗದ ನಾಯಕ ಬ್ರಿಟಿಷ್ ಆಗಿತ್ತು. ಮಾನವ ಜನಾಂಗದ ಜೀವನಕ್ಕೆ ಸಂಬಂಧಿಸಿದಂತಹ ಮತ–ಧರ್ಮ, ತತ್ವಜ್ಞಾನ, ಸಾಹಿತ್ಯ, ಕಲೆ ಮತ್ತು ವಿಜ್ಞಾನ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಕ್ರಾಂತಿಕಾರೀ ಚಿಂತನೆಯ ಮೇಲೆ ರೂಪಗೊಂಡದ್ದು ಈ ಯುಗವಾಗಿತ್ತು. ೧೮ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿ ಮತ್ತು ಫ್ರಾನ್ಸಿನ ಮಹಾಕ್ರಾಂತಿಗಳು ಹೊಸಯುಗದ ಮೊದಲಿನ ಹೊಸ ಇಣುಕು ನೋಟಗಳು. ತನ್ನ ದಕ್ಷತೆ ಮತ್ತು ಸಾಮರ್ಥ್ಯದ ಬಲದಿಂದ ಇಂಗ್ಲೆಂಡ್ ನೇತೃತ್ವವಹಿಸಿತು. ಇಂಗ್ಲೆಂಡ್ ಇತರೆ ಯೂರೋಪಿನ ದೇಶಗಳಿಗಿಂತ ವ್ಯಾಪಾರ, ನೌಕಾಬಲ, ಭೂಸೇನೆ, ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಮೇಲುಗೈ ಸಾಧಿಸಿತ್ತು. ಇಂಗ್ಲೆಂಡಿನ ಜನತಾಂತ್ರಿಕ ಆಡಳಿತವು ಇಂಗ್ಲೆಂಡನ್ನು ಮುಂಚೂಣಿಗೆ ತಂದು ನಿಲ್ಲಿಸಿತ್ತು. ಇಂಗ್ಲೆಂಡು ''ಜನತಂತ್ರದ ತಾಯಿ''ಯಾಗಿತ್ತು. ಜನತೆಯ ಸಾರ್ವಭೌಮತ್ವ ಹಾಗೂ ವ್ಯಕ್ತಿ ಸ್ವಾತಂತ್ರ್ಯದ ಮೌಲ್ಯಗಳಿಗೆ ಬ್ರಿಟಿಷ್ ಮೊದಲ ಅಗ್ರಗಾಮಿಯಾಗಿತ್ತು. ಇಡೀ ಭಾರತವನ್ನು ೧೯ನೇ ಶತಮಾನದಲ್ಲಿ ಬ್ರಿಟಿಷರು ತಮ್ಮ ಅಧೀನಕ್ಕೆ (ಆಡಳಿತ) ಪಡೆದುಕೊಂಡದ್ದರಿಂದ ಅವರು ಸಾಧಾರಣ ಆಕ್ರಮಣಕಾರರಾಗಿರಲಿಲ್ಲ. ಅವರು ಈ ಭೂಖಂಡದಲ್ಲಿ ಆ ಕಾಲದಲ್ಲಿ ಬಹಳ ಮುಂದುವರಿದ ಮಾನವ–ಜನಾಂಗವಾಗಿತ್ತು. ಭಾರತವು ಜ್ಞಾನ ಮತ್ತು ವಿಜ್ಞಾನ ಕ್ಷೇತ್ರಗಳಲ್ಲಿ ಬಹಳ ಹಿಂದುಳಿದಿದ್ದರಿಂದ ಈ 'ಅತಿಮಾನವ'ರನ್ನು ಎದುರಿಸುವಲ್ಲಿ ಹಿಂದುಳಿದಿತ್ತು.

## ಶಾಹು ಮಹಾರಾಜರಿಗಿಂತ ಮೊದಲಿದ್ದ ೧೯ನೇ ಶತಮಾನ

೧೯ನೇ ಶತಮಾನವು ಭಾರತದ ಇತಿಹಾಸದಲ್ಲಿನ ಕಳೆದ ಸಹಸ್ರಮಾನದ ಅವಧಿಯಲ್ಲಿ ಬಹಳ ಮಹತ್ವದ್ದಾಗಿತ್ತು. ಪಾಶ್ಚಿಮಾತ್ಯ ದೇಶಗಳಲ್ಲಿ ಅತಿ ಪ್ರಬಲವಾಗಿದ್ದ ಮಹಾಬ್ರಿಟನ್ನು ಈ ಶತಮಾನದಲ್ಲಿ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿತು. ಇತಿಹಾಸದಲ್ಲಿ ಮೊಟ್ಟ ಮೊದಲಿಗೆ ಭಾರತದ ಉಪ–ಖಂಡ ಏಕೈಕ ರಾಜಕೀಯ ಆಡಳಿತಕ್ಕೆ ಒಳಪಟ್ಟಿತು. ೧೭ನೇ ಶತಮಾನದಲ್ಲಿ ಸಾಮ್ರಾಟ ಔರಂಗಜೇಬನು ಇಡೀ ಭಾರತವನ್ನು ಗೆದ್ದನೆಂದು ಘೋಷಿಸಿಕೊಂಡಿದ್ದನು. ಆದರೆ ಅವನು ಉಪ–ಖಂಡದ ದಕ್ಷಿಣ ಭಾಗವನ್ನು ಗೆಲ್ಲಲಿಲ್ಲ ಎಂಬ ಸಂಗತಿಯಿದೆ. ಅವನು ಮಹಾರಾಷ್ಟ್ರದಲ್ಲಿ ಮರಾಠರನ್ನು ಮತ್ತು ಕರ್ನಾಟಕದಲ್ಲಿ ನಾಯಕರನ್ನು ಮಣಿಸಲಿಲ್ಲ. ಆದರೆ ೧೮೫೭ರ ಸಿಪಾಯಿದಂಗೆ ಬೇರುಸಹಿತ ಕಿತ್ತುಹಾಕಲಾರದಷ್ಟು ಬಲಶಾಲಿಯಾದ ಸಾಮ್ರಾಜ್ಯದ ಆಡಳಿತವನ್ನು ಬ್ರಿಟಿಷರು ಹಿಮಾಲಯದಿಂದ ಹಿಂದೂ ಮಹಾಸಾಗರದವರೆಗೆ ಸ್ಥಾಪಿಸುವುದರಲ್ಲಿ ಸಫಲರಾಗಿದ್ದರು. ಸಾಮ್ರಾಜ್ಯವು ಮತ್ತಷ್ಟು ಮತ್ತಷ್ಟು ಬಲಗೊಂಡು ಬೆಳೆಯಿತು.

ಬ್ರಿಟಿಷರು ಭಾರತೀಯರಿಗಿಂತ ಕೇವಲ ಮತ–ಧರ್ಮ ಮತ್ತು ಸಂಸ್ಕೃತಿಯಲ್ಲಿ ಮಾತ್ರ ಭಿನ್ನವಾಗಿರಲಿಲ್ಲ. ಅವರು ಸಾಮಾಜಿಕ, ಸರಕಾರಿ (ಆಡಳಿತಾತ್ಮಕ) ಮತ್ತು ಸೈನಿಕ ಸಂಘಟನೆಯ ಸಂರಚನೆಗಳು, ರಾಷ್ಟ್ರ ಮತ್ತು ಜನತಂತ್ರ, ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವಗಳ ಪರಿಕಲ್ಪನೆಗಳಲ್ಲಿ ತೀರಾ ಭಿನ್ನವಾಗಿದ್ದರು. ಸ್ಥಳೀಯ (ದೇಶೀಯ) ಭಾರತೀಯರು ಈ ಎಲ್ಲ ವಿಷಯಗಳಲ್ಲಿ ಸರಿಸಮಾನವಾಗಿರಲಿಲ್ಲ. ಬ್ರಿಟಿಷ್ ಆಡಳಿತದ ಸ್ಥಾಪನೆಯೊಂದಿಗೆ ಭಾರತವು ವಿಶ್ವದ ಮಿಲಿಟರಿ ಶಕ್ತಿಯಾಗಿದ್ದ ಮತ್ತು ವಿಜ್ಞಾನ ಮತ್ತು ತಾಂತ್ರಿಕತೆಗೆ ಅಚಲ ನಿಷ್ಠೆ ಹೊಂದಿದ್ದ, ಆಧುನಿಕ ಆಡಳಿತ ಮತ್ತು ಪಾಶ್ಚಿಮಾತ್ಯ ರಾಷ್ಟ್ರದ ಅಧೀನಕ್ಕೆ ಭಾರತ ಒಳಪಟ್ಟಿತು. ಭಾರತವು ಮೊದಲಿಗೆ ಎಂದೆಂದಿಗೂ ಅಂತಹ ಆಡಳಿತಕ್ಕೆ ಒಳಪಟ್ಟಿರಲಿಲ್ಲ.

ಬ್ರಿಟಿಷ್ ಆಡಳಿತವು ಈ ದೇಶಕ್ಕೆ ಶಾಂತಿ–ನೆಮ್ಮದಿ ನೀಡಿತು. ಭಾರತೀಯರಿಗೆ ಈ ಶಾಂತಿಯ ಅನುಭವವು ಹೊಸದಾಗಿತ್ತು. ಅವರು ಈ ಮೊದಲು ಎಂದೆಂದಿಗೂ ಶಾಂತಿ ಮತ್ತು ಸ್ಥಿರತೆಯನ್ನು ಕಂಡಿರಲಿಲ್ಲ. ಬ್ರಿಟಿಷರು ಭಾರತೀಯರಿಗೆ ಶಾಂತಿ ಮತ್ತು ಸ್ಥಿರತೆಯನ್ನು ನೀಡಿದರು. ಖಂಡಿತವಾಗಿ ೧೮ನೇ ಶತಮಾನದಲ್ಲಿ ಇಂಥ ಶಾಂತಿ ಮತ್ತು ಸ್ಥಿರತೆಯಿರಲಿಲ್ಲ. ಪರಸ್ಪರ ತಮ್ಮಲ್ಲೆ ನಡೆದ ದೇಶೀಯ ರಾಜರ ಸಂಘರ್ಷಗಳು ಮತ್ತು ಜಗಳಗಳು ಇಡೀ ಉಪ–ಖಂಡವನ್ನು ಸಂಕಷ್ಟಕ್ಕೆ ದೂಡಿದ್ದವು. ಅಂಥ ದೇಶೀಯ ರಾಜರಲ್ಲಿ ಮರಾಠ ರಾಜರಾಗಿದ್ದರು. ಶಿಂಧೆ ಮತ್ತು ಹೋಳ್ಕರರ ಎರಡು ಮರಾಠ ಮನೆತನಗಳು ತಮ್ಮ ತಮ್ಮ ರಾಜ್ಯ ಪ್ರದೇಶಗಳಿಗೆ ಕಚ್ಚಾಡಿದ ಅರಾಜಕತೆಯನ್ನು ಪರಿಗಣಿಸದ ಹೊರತು ಬ್ರಿಟಿಷರು ಜಾರಿಗೆ ತಂದ ಶಾಂತಿ ಮತ್ತು ಸ್ಥಿರತೆಯ ಆಡಳಿತದ ಅರ್ಥವನ್ನು ಗ್ರಹಿಸಲಾರವು. ಬ್ರಿಟಿಷರು ದೇಶೀಯ ಎಲ್ಲಾ ರಾಜರನ್ನು ಸದೆಬಡಿದು ಮಣಿಸಿದರು ಮತ್ತು ಅವರನ್ನು ನಿಸ್ಸಹಾಯಕರನ್ನಾಗಿ ಮಾಡಿದರು. ಅವರು ನಂತರ ಪೆಂಢಾರಿ ಮತ್ತು ಠಕ್ಕರಂತಹ ಭಯಂಕರರಾದ ಸುಲಿಗೆಕೋರರು ದೇಶದಲ್ಲೆಲ್ಲ ಅಪಾರವಾದ ಹಾನಿಯನ್ನು ಮಾಡುತ್ತಿದ್ದರು. ಅವರ ಹುಟ್ಟನ್ನು ಅಡಗಿಸಿಬಿಟ್ಟರು.

ಈ ಎಲ್ಲಾ ಕ್ರಮಗಳು ಇಡೀ ದೇಶದಲ್ಲಿ ಶಾಂತಿಯನ್ನು ಸ್ಥಾಪಿಸಿದವು. ಆದರೆ ದೇಶೀಯ ಭಾರತೀಯರು ಈ ಶಾಂತಿಗಾಗಿ ಸ್ವಾತಂತ್ರ್ಯವೆಂಬ ಭಾರೀ ಬೆಲೆಯನ್ನು ತೆತ್ತಬೇಕಾಯಿತು. ಒಳ್ಳೆಯ ಆಡಳಿತವು ಬ್ರಿಟಿಷರ ಆಡಳಿತದಲ್ಲಿ ಶಾಂತಿಯೊಂದಿಗೆ ಇತ್ತು. ಎಲ್ಲಾ ಪ್ರಜೆಗಳು ದೇಶದ ಕಾನೂನಿನ ಮುಂದೆ ಸಮಾನರೆಂದು ಭಾವಿಸಿದ ಒಂದು ಹೊಸ ನ್ಯಾಯಾಂಗ ಪದ್ಧತಿ, ಹೊಸ ಆಡಳಿತ ವ್ಯವಸ್ಥೆ, ಹೊಸ ಕಾನೂನಿನ ಸಂಹಿತೆಗಳು ಸಾರಿ ಹೇಳಿದವು. ಗತಭಾರತದಲ್ಲಿ ಈ ಮೊದಲು ಇಂಥ ಸ್ಫೂರ್ತಿದಾಯಕ ವ್ಯವಸ್ಥೆಯನ್ನು ಕಂಡಿರಲಿಲ್ಲ.

ಇದೇ ಸಮಯದಲ್ಲಿ ಬ್ರಿಟಿಷರು ತಮ್ಮ ಅಧೀನದಲ್ಲಿರುವ ಪ್ರದೇಶಗಳಲ್ಲಿ ಪಾಶ್ಚಿಮಾತ್ಯ ಶಿಕ್ಷಣಕ್ಕೆ ಅಡಿಪಾಯ ಹಾಕಿದರು. ಈ ಶಿಕ್ಷಣದ ಅತಿಮಹತ್ವದ ಲಕ್ಷಣವು ಅಂದು ಏಕಸ್ವಾಮ್ಯತೆಯಿಂದ ಮುಕ್ತವಾಗಿತ್ತು. ಅದು ಸಮಾಜದ ಎಲ್ಲ ವರ್ಗಗಳಿಗೆ ಬಾಗಿಲು ತೆರೆದಿತ್ತು. ಇಂಗ್ಲಿಷ್ ಭಾಷೆಯ ಜೊತೆಗೆ ಈ ಶಿಕ್ಷಣ ಪದ್ಧತಿಯು ಭಾರತೀಯ ಪ್ರಜೆಗಳಿಗೆ ಪಾಶ್ಚಿಮಾತ್ಯ ತತ್ವಜ್ಞಾನ, ಇತಿಹಾಸ, ಕಲೆಗಳು ಮತ್ತು ವಿಜ್ಞಾನಗಳನ್ನು ಪರಿಚಯಿಸಿತು. ಮೊಟ್ಟಮೊದಲಿಗೆ ದೇಶೀಯ ಭಾರತೀಯರು ಭಾರತದ ಹೊರಗಿನ ವಿಶ್ವದಲ್ಲಿ ಯೂರೋಪಿಯನ್ನರಿಂದ ವಿಜ್ಞಾನ ಮತ್ತು ತಾಂತ್ರಿಕತೆಯ ಕ್ಷೇತ್ರಗಳಲ್ಲಿ ಆಗಿರುವ ಬೆಚ್ಚಿಬೀಳುವಂತಹ ಪ್ರಗತಿ ಮತ್ತು ಅದರ ವೈಶಾಲ್ಯವನ್ನು ನೋಡತೊಡಗಿದರು.

ಪಾಶ್ಚಿಮಾತ್ಯ ಶಿಕ್ಷಣದ ಜೊತೆಯಲ್ಲಿ ಮುದ್ರಣ ಕಲೆ ಮತ್ತು ದಿನಪತ್ರಿಕೆಗಳು ಹುಟ್ಟಿದವು. ಕ್ರಿಶ್ಚಿಯನ್ ಮಿಷನರಿಗಳು ಇದರ ಮುಂಚೂಣಿಯಲ್ಲಿದ್ದವು. ಮೊದಲು ಇಂಗ್ಲಿಷ್ ದಿನಪತ್ರಿಕೆಗಳು ಅಸ್ತಿತ್ವಕ್ಕೆ ಬಂದವು. ನಂತರ ಸ್ಥಳೀಯ ಭಾಷೆಗಳಲ್ಲಿ ನಿಯತಕಾಲಿಕೆಗಳು ಪ್ರಕಟಗೊಂಡವು. ಶಿಕ್ಷಿತ ದೇಶೀಯ ಜನರು ಸಾಮಾಜಿಕ ಜಾಗೃತಿಗೆ ದಿನಪತ್ರಿಕೆಗಳು ಪರಿಣಾಮಕಾರಿ ಸಾಧನಗಳೆಂದು ಮನವರಿಕೆ ಮಾಡಿಕೊಂಡರು.

ಬ್ರಿಟಿಷರು ವ್ಯಾಪಕವಾದ ಮೂಲಸೌಕರ್ಯ ಬದಲಾವಣೆಗಳನ್ನು ಮಾಡತೊಡಗಿದರು. ಹೊಸ ಮುಖ್ಯರಸ್ತೆಗಳು, ಸೇತುವೆಗಳು, ಅಂಚೆ-ತಂತಿ ಮತ್ತು ರೈಲ್ವೆಗಳು ಪ್ರಮುಖ ನಗರ ಮತ್ತು ಬಂದರುಗಳಿಗೆ ಸಂಪರ್ಕವನ್ನು ಒದಗಿಸಿದವು. ವಿಶೇಷವಾಗಿ ರೈಲ್ವೆಗಳು ದೇಶದ ಭಿನ್ನ ಭಿನ್ನ ಪ್ರದೇಶಗಳನ್ನು ಬೆಸೆಯುವ ಪ್ರಕ್ರಿಯೆಗೆ ಉತ್ತೇಜನ ನೀಡಿದವು. ಇದು ಒಂದು ರಾಷ್ಟ್ರದ ಪರಿಕಲ್ಪನೆಯ ಉಗಮಕ್ಕೆ ದೊಡ್ಡ ಪ್ರಮಾಣದಲ್ಲಿ ಸಹಕಾರಿಯಾಯಿತು. ಆಧುನಿಕ ಸಂಪರ್ಕ ಸಾಧನಗಳು ಜನರಿಗೆ ಹೊಸಯುಗದ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಪರಿಚಯಿಸಿದವು. ವಿಜ್ಞಾನವು ಹೊಸಯುಗದ ಮತ-ಧರ್ಮವೆಂಬುದು ಮನವರಿಕೆ ಯಾಯಿತು.

ರೈಲ್ವೆ ಮತ್ತು ತಂತಿಗಳು ಕೈಗಾರಿಕೆಯಲ್ಲಿ ಒಂದು ಹೊಸ ಯುಗವನ್ನೇ ತೆರೆದವು. ಕಲ್ಕತ್ತ ಮತ್ತು ಮುಂಬಯಿಗಳಲ್ಲಿ ಸೆಣಬು ಮತ್ತು ಹತ್ತಿ ಗಿರಣಿಗಳನ್ನು ಸ್ಥಾಪಿಸಲಾಯಿತು. ಈ ನಗರಗಳು ಉಪಖಂಡದಲ್ಲಿ ಹೊಸ ಕೈಗಾರಿಕಾ ಕೇಂದ್ರಗಳಾಗಿ ಬೆಳೆದವು. ಯೂರೋಪಿನ ಕಾರ್ಮಿಕನಂತೆ ಭಾರತದ ಕೈಗಾರಿಕಾ ಕಾರ್ಮಿಕ ಹುಟ್ಟಿದನು.

ಹೊಸ ವಿಚಾರ ಮತ್ತು ತಾಂತ್ರಿಕತೆಗಳಿಗೆ ಮುಖಾಮುಖಿಯಾಗಿ ಏಕಕಾಲದಲ್ಲಿ ಭಾರತೀಯ ಸಮಾಜದಲ್ಲಿ ಮಹಾ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಳುವಳಿಗಳು ನಡೆದವು. ಪಾಶ್ಚಿಮಾತ್ಯ ಶಿಕ್ಷಣ ಪಡೆದು ಎಚ್ಚೆತ್ತ ವರ್ಗದ ಜನರು ತನ್ನತನವನ್ನು ಹುಡುಕತೊಡಗಿದರು. ಪಾಶ್ಚಿಮಾತ್ಯ ಶಿಕ್ಷಣ ಅವರಿಗೆ ಒಂದು ಹೊಸ ನೋಟವನ್ನು ನೀಡಿತು ಮತ್ತು ಅದು ಸಮಾಜ ಎದುರಿಸಬೇಕಾಗಿದ್ದ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಿತು. ನಮ್ಮನ್ನು ಬ್ರಿಟಿಷರು ಹೇಗೆ ಸೋಲಿಸಿದರು? ಬ್ರಿಟಿಷರು ಹೊಂದಿರುವ ಆ ಗುಣಗಳಾವುವು? ಮತ್ತು ಬ್ರಿಟಿಷರು ತಮ್ಮ ಆಧಿಪತ್ಯವನ್ನು ಸ್ಥಾಪಿಸಲು ಹೊಂದಿದ್ದ ಶಕ್ತಿಯನ್ನು ನಾವು ಹೊಂದಿಲ್ಲ, ಹೇಗೆ? ನಾವು ಅಸಹಾಯಕರಾಗಲು ಮಾಡಿದ ಕೊರತೆಗಳೇನು? ಬ್ರಿಟಿಷ್ ಸಂಸ್ಕೃತಿಯು ಹೊಸ ಲಕ್ಷಣಗಳಿಂದ ತುಂಬಿತುಳುಕುತ್ತಿದೆ ಏಕೆ? ಮತ್ತು ನಮ್ಮ ಸಂಸ್ಕೃತಿಯಲ್ಲಿ ಅದೇ ಮತ್ತೆ ಏಕೆ ತಪ್ಪಿ ಹೋಗಿದೆ? ಕ್ರಿಶ್ಚಿಯನ್ ಮಿಷನರಿಗಳು ಗುರುತಿಸಿದಂತೆ ಹಿಂದು ಧರ್ಮದ ಓರೆ-ಕೋರೆಗಳು ನಿಜವೆ ಮತ್ತು ಅವು ನಿಜವಾಗಿಯೂ ಸಮಾಜದ ಕಾಲನ್ನು ಎಳೆಯುತ್ತಿವೆಯೇ? ಅವು ನಿಜವಾದರೆ, ಅವುಗಳನ್ನು ಸರಿಪಡಿಸಲು ಏನು ಕ್ರಮಗಳನ್ನು ಕೈಗೊಳ್ಳಬೇಕು? ಆಳವಾಗಿ ಚಿಂತಿಸದ ಹಾಗೂ ಆತ್ಮ-ಶೋಧ ಮಾಡಿಕೊಳ್ಳದ ಹೊರತು ಈ ಪ್ರಶ್ನೆಗಳಿಗೆ ಉತ್ತರ ಸಿಗಲಾರದು.

ತೀವ್ರ ರಾಷ್ಟ್ರವಾದಿ ಮತ್ತು ಮಾನವೀಯತೆಯ ಶಿಕ್ಷಿತ ಭಾರತೀಯರಲ್ಲಿ ಕೆಲವರು ಉತ್ತರ ಕಂಡುಕೊಳ್ಳಲು ನಿರತರಾದರು. ಅದು ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳ ಉದ್ದೇಶದ ಹಲವು ಚಳುವಳಿಗಳನ್ನು ಹುಟ್ಟುಹಾಕಿತು. ಅಂತಹ ಚಳುವಳಿಗಳ ಪರಿಣಾಮಗಳೇ ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ ಮತ್ತು ಸತ್ಯಶೋಧಕ ಸಮಾಜ ಮತ್ತು ಇತರೆ ಕೆಲವು ಸಂಸ್ಥೆಗಳು. ಅವು ಬಹಳ ಹಿಂದೆ ಕಳೆದು

ಹೋದ ಭಾರತದ ಆತ್ಮವನ್ನು ಹುಡುಕಲು ಪ್ರಾಮಾಣಿಕ ಪ್ರಯತ್ನ ಮಾಡಿದವು. ಭಾರತೀಯ ಸಮಾಜದ ಆತ್ಮ-ಗೌರವವನ್ನು ಪುನರ್ ಸ್ಥಾಪಿಸುವುದು ಅವರ ಪ್ರಯತ್ನವಾಗಿತ್ತು. ಆ ಉದ್ದೇಶ ಸಾಧನೆಗಾಗಿ ಅವರು ತಮ್ಮೆಲ್ಲ ಶಕ್ತಿ ಬಳಸಿ ದುಡಿದರು.

ಅದೇ ಸಮಯದಲ್ಲಿ ಮತ್ತೊಂದು ಪರಿಕಲ್ಪನೆಯಾದ ಭಾರತೀಯ ರಾಷ್ಟ್ರೀಯತೆಯು ಹೊರಮೂಡಿತು. ಕೇಂದ್ರೀಕೃತ ಬ್ರಿಟಿಷ್ ಆಡಳಿತ ಮತ್ತು ಪಾಶ್ಚಿಮಾತ್ಯ ಶಿಕ್ಷಣದಿಂದ ಪ್ರೇರಣೆಗೊಂಡ ಆತ್ಮ-ಶೋಧನೆಯ ಬೀಜಗಳನ್ನು ಬಿತ್ತಿದವು. ಉಪಖಂಡದ ಎಲ್ಲಾ ನಿವಾಸಿಗಳು ಐಕ್ಯಕ ಭಾರತ ರಾಷ್ಟ್ರದ ಭಾಗವೆಂಬ ಬೆಳೆಯುತ್ತಿರುವ ಸ್ವ-ಅರಿವು ಹಾಗೂ ಅವರ ಕಲ್ಯಾಣಗಳು ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನದ ಬುನಾದಿಯಾದವು.

ಇವೆಲ್ಲವೂ ಅಭೂತಪೂರ್ವ ಬೆಳವಣಿಗೆಗಳು ಹೊಸ ಸಮಾಜ ಮತ್ತು ಹೊಸ ರಾಷ್ಟ್ರ ಕಟ್ಟಲು ಸಕಾರಾತ್ಮಕ ಮತ್ತು ಉತ್ತೇಜನಕಾರಿಯಾಗಿವೆ. ಈ ಬೆಳವಣಿಗೆಗಳು ಇಂಡಿಯಾದ ಇತಿಹಾಸದಲ್ಲಿ ೧೯ನೇ ಶತಮಾನವು ತನ್ನ ನೆಲೆಯನ್ನು ಗುರುತಿಸಿಕೊಳ್ಳಲು ಅನುಕೂಲ ಮಾಡಿಕೊಟ್ಟವು.

## ಶಾಹು ಮಹಾರಾಜರಿಗಿಂತ ಮೊದಲಿದ್ದ ಮಹಾರಾಷ್ಟ್ರ

ಒಮ್ಮೆ ದೆಹಲಿಯಲ್ಲಿ ಅಧಿಕಾರ ಸನ್ನೆಗಳನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದ ಮರಾಠರ ಅಧಿಕಾರ ಮತ್ತು ಉತ್ತರದಲ್ಲಿ ಅತೋಕದ ಆಚೆಯವರೆಗೆ ಆಳ್ವಿಕೆ ನಡೆಸಿದ್ದರು ಮತ್ತು ಪೇಶ್ವೆಗಳ ಪತನದ ನಂತರ ಅಳಿಸಿಹೋದರು. ಪೇಶ್ವೆ ಎರಡನೇ ಬಾಜಿರಾವ್‌ನ ನಿರ್ಲಕ್ಷ್ಯದ ಆಡಳಿತ, ಶಿಂಧೆ, ಹೋಳ್ಕರ, ಭೋಸಲೆ ಮತ್ತು ಗಾಯಕವಾಡರ ನಡುವಣ ಜಗಳ ಮತ್ತು ಅಪನಂಬಿಕೆಗಳು, ಮುನ್ನೋಟ ಮತ್ತು ವಿವೇಕಗಳ ಕೊರತೆಗಳು ಪೇಶ್ವೆಗಳ ಪತನಕ್ಕೆ ಪ್ರಮುಖ ಕಾರಣಗಳಾಗಿದ್ದವು. ಸ್ವರಾಜ್ಯ ಪಿತೃ ಮಹಾನ್ ಶಿವಾಜಿಯ ಉದ್ದೇಶಗಳನ್ನು ಅವರೆಲ್ಲರೂ ಮರೆತಿದ್ದರು. ಪೇಶ್ವೆಗಳ ಆಡಳಿತ ಕುಸಿಯತೊಡಗಿದಾಗ ಶಿಂಧೆಗಳು ಸ್ವತಃ ಹೋಳ್ಕರರ ಅಧೀನದಲ್ಲಿದ್ದ ಪ್ರದೇಶಗಳನ್ನು ಲೂಟಿಮಾಡತೊಡಗಿದರು ಮತ್ತು ಹೋಳ್ಕರರು ಅದನ್ನೇ ಶಿಂಧೆಗಳಿಗೆ ಮಾಡಿದರು. ಪುಣೆಯ ರಾಜಧಾನಿ ನಗರದ ಪರಿಸ್ಥಿತಿಯು ಬಹಳ ಹಾಳಾಗಿತ್ತು. ಶಿಂಧೆ ಮತ್ತು ಹೋಳ್ಕರರು ಮರಾಠ ಆಧಿಪತ್ಯದ ಸ್ತಂಭಗಳೆಂದು ಪರಿಗಣಿತರಾದ ಅವರು ಸ್ವತಃ ಪುಣೆಯಲ್ಲಿ ಅರಾಜಕತೆಗೆ ಕಾರಣಕರ್ತರಾದರು. ಬ್ರಿಟಿಷರ ಸಂಚಿನಿಂದ ಪೇಶ್ವೆಯನ್ನು ಸೆರೆಹಿಡಿಯಲಾಯಿತು. ಪೇಶ್ವೆಯು ಅಸಹಾಯಕನಾಗಿ ಸಂಚುಹೂಡುತ್ತಾ ಎಡವಟ್ಟಾದ ಚಲನೆಗಳಿಂದ ಹೊರಬರುತ್ತಾನೆ. ಈ ಹಿನ್ನೆಲೆಗೆ ವಿರುದ್ಧವಾಗಿ, ಪೇಶ್ವೆಗಳು ಆಳಿದ ಅರಮನೆಯ ಶನಿವಾರವಾಡದ ಮೇಲೆ ಯೂನಿಯನ್ ಜಾಕ್‌ನ್ನು (ಬ್ರಿಟಿಷರ ಪತಾಕೆ) ಹಾಯಿಸಿದಾಗ ಮರಾಠ ಜನತೆ ಸಾಮೂಹಿಕ ನಿಟ್ಟುಸಿರನ್ನು ಬಿಟ್ಟದ್ದು ಆಶ್ಚರ್ಯವಲ್ಲ. ಬಾಜಿರಾವ್ ಪೇಶ್ವೆಯ ಬ್ರಾಹ್ಮಣರ ಆಡಳಿತ ಕೊನೆಗೊಂಡಾಗ ಬ್ರಾಹ್ಮಣರು ಮಾತ್ರ ಬಹಳ ದುಃಖಪಟ್ಟರು. ಏಕೆಂದರೆ ಅವರು ಅರಮನೆಯ ಭಿಕ್ಷೆ ಮತ್ತು ವಿಶೇಷ ಊಟಗಳಿಂದ ಪರಾವಲಂಬನೆಯ ಜೀವನ ನಡೆಸುತ್ತಿದ್ದರು. ಬಾಜಿರಾವ್‌ನ ಕ್ರೂರವಾದ ಆಡಳಿತದಿಂದ ವರ್ತಕರು ಮತ್ತು ಜಮೀನುದಾರರು ಸಂಕಟಕ್ಕೊಳಗಾಗಿದ್ದರು. ಬ್ರಿಟಿಷರ ಆಡಳಿತವು ಈಗಾಗಲೇ ವರ್ತಕ ಮತ್ತು ಜಮೀನುದಾರರಿಗೆ ಹಕ್ಕು-ಬಾಧ್ಯತೆಗಳನ್ನು ನೀಡಿದ್ದರಿಂದ ಅವರು ಬ್ರಿಟಿಷ್ ಆಡಳಿತವನ್ನು ಒಪ್ಪಿಕೊಳ್ಳಲು ಕಾರಣವಿತ್ತು. ಗೌರ್ನರ್ ಎಲ್ಫಿನ್‌ಸ್ಟನ್‌ನನ್ನು ಬಿಟ್ಟರೆ ಬೇರೆ ಯಾವ ಗೌರ್ನರನು ಸಂಕಟಕ್ಕೊಳಗಾಗಿದ್ದ ಬ್ರಾಹ್ಮಣರ ಸಭೆಯನ್ನು ಪುಣೆ ಮತ್ತು ವೈಗಳಲ್ಲಿ ಕರೆಯಲಿಲ್ಲ. ಮತ್ತು ಅವನು

ಬ್ರಾಹ್ಮಣರನ್ನು ಅವರ ಸಾಂಪ್ರದಾಯಿಕ ಭೋಜನಕೂಟಗಳನ್ನು ನಡೆಸುವುದನ್ನು ನಿಲ್ಲಿಸುವುದಿಲ್ಲವೆಂದು ಸಮಾಧಾನಪಡಿಸಿದನು. ಬ್ರಾಹ್ಮಣರ ಸಾಮಾಜಿಕ ಆಧಿಪತ್ಯ ಹಾಗೆಯೆ ಭದ್ರವಾಗಿ ಉಳಿಯಿತು.

ಆದರೂ ಬ್ರಿಟಿಷರು ಪೇಶ್ವೆಗಳ ಪದಚ್ಯುತಿಯಿಂದ ಉಂಟಾಗುವ ರಾಜಕೀಯ ಶೂನ್ಯತೆ, ಮರಾಠ ಜನತೆಯಲ್ಲಿ ರಾಜಕೀಯ-ಕೋಪ-ದ್ವೇಷ ಉಂಟಾಗುತ್ತದೆಯೆಂದು ನಿರೀಕ್ಷಿಸಲು ಸಾಕಷ್ಟು ಚಾಣಾಕ್ಷರಾಗಿದ್ದರು. ಅವರು ಸತಾರದಲ್ಲಿ ಛತ್ರಪತಿಯ ಆಡಳಿತವನ್ನು ಪುನರ್‌ಸ್ಥಾಪಿಸಲು ನಿರ್ಧರಿಸಿದರು ಮತ್ತು ಛತ್ರಪತಿ ಆ ಪ್ರದೇಶದಲ್ಲಿ ಸರಿಯಾದ ಆಡಳಿತಗಾರ (ದೊರೆ)ನೆಂದು ಮತ್ತು ಪೇಶ್ವೆಗಳು ಮೋಸದಿಂದ ಅವನ ಅಧಿಕಾರಗಳನ್ನು ಕಿತ್ತುಕೊಂಡರೆಂದು ಘೋಷಿಸಿದರು. ಬ್ರಿಟಿಷರು ಮಾತ್ರ ಛತ್ರಪತಿಯನ್ನು ಪುನರ್‌ಪ್ರತಿಷ್ಠಾಪಿಸಿದರು. ತನ್ಮೂಲಕ ಎಲ್ಲಾ ಅಧಿಕಾರವನ್ನು ಹಕ್ಕುದಾರ ಒಡೆಯನಿಗೆ ವಾಪಸ್ಸು ಮಾಡಿದರೆಂದು ಘೋಷಿಸಿದರು. ಹೀಗೆ ಬ್ರಿಟಿಷರು ಸತಾರಾದ ಒಂದು ಚಿಕ್ಕ ಮರಾಠ ಆಧಿಪತ್ಯವನ್ನು (ಸಂಸ್ಥಾನ) ರಚಿಸಿದರು ಮತ್ತು ಸಿಂಹಾಸನದ ಮೇಲೆ ಛತ್ರಪತಿ ಪ್ರತಾಪಸಿಂಗನನ್ನು ತಮ್ಮ ನಾಮಕರಣಗೊಂಡ ವ್ಯಕ್ತಿಯೆಂದು ಕೂಡಿಸಿದರು. ಮರಾಠರ ಭಾವನೆಗಳನ್ನು ಸಮಾಧಾನಗೊಳಿಸುವುದು ಮತ್ತು ಹೊಸ ಆಡಳಿತಗಾರರು ಎಷ್ಟು ಕರುಣೆಯುಳ್ಳವರು ಮತ್ತು ನ್ಯಾಯವಂತರೆಂದು ತೋರಿಸುವುದೇ ಮುಖ್ಯ ವಿಷಯವಾಗಿತ್ತು. ಅಲ್ಲಿಯವರೆಗೆ ಯಾವ ಗುರುತಿಲ್ಲದ ಅವರು ಛತ್ರಪತಿಯ ಆಡಳಿತವನ್ನು ಮರಳಿ ತಂದರು. ಸತಾರಾದ ಸಿಂಹಾಸನದ ಮೇಲೆ ಮರಾಠರಾಜನನ್ನು ಕೂಡಿಸುವುದು ಖಂಡಿತವಾಗಿ ಶಿವಾಜಿಯ ಸ್ವಯಂ ಆಡಳಿತ ಅಥವಾ ಸ್ವರಾಜ್ಯವನ್ನು ಪುನರ್‌ಸ್ಥಾಪಿಸುವ ಅರ್ಥವಲ್ಲ ಎಂಬ ಎಚ್ಚರಿಕೆಯನ್ನು ಬ್ರಿಟಿಷರು ತೆಗೆದುಕೊಂಡಿದ್ದರು.[2] ಇದು ಜಾಣತನದ ನಡೆಯಾಗಿತ್ತು. ನಂತರ, ೧೮೩೯ರಲ್ಲಿ ಅವರು (ಬ್ರಿಟಿಷರು) ಪ್ರತಾಪಸಿಂಗನ ವಿರುದ್ಧ ಹಲವಾರು ಸಂಚುಗಳನ್ನು ಹೂಡಿದ್ದರು. ಮತ್ತು ಅವನನ್ನು ಸಿಂಹಾಸನದಿಂದ ಪದಚ್ಯುತಗೊಳಿಸಿದರು. ಒಂದು ದಶಕದ ನಂತರ, ೧೮೪೮ರಲ್ಲಿ ಅವರು ಲಾಸ್ಸೆಯವರ ಸಿದ್ಧಾಂತವನ್ನು ಉತ್ತರಾಧಿಕಾರಕ್ಕೆ ಅನ್ವಯಿಸಿದರು ಮತ್ತು ಸತಾರ ಸಂಸ್ಥಾನವನ್ನು ಸಂಪೂರ್ಣವಾಗಿ ಕೆಳಗಿಳಿಸಿದರು. ಸತಾರ ಮತ್ತು ಕೊಲ್ಹಾಪುರ (ಕರವೀರ) ಭೋಸಲೆ ವಂಶದ ಎರಡು ಕುಡಿ (ಶಾಖೆ)ಗಳು ಸತಾರವನ್ನು ಸೇರಿಸಿಕೊಂಡ ನಂತರ ಛತ್ರಪತಿಯ ಕೊಲ್ಹಾಪುರದ ಸಿಂಹಾಸನ ಮಾತ್ರ ಉಳಿಯಿತು. ಛತ್ರಪತಿಯನ್ನು ಅಲಕ್ಷಿಸಲು ಪೇಶ್ವೆಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಆದರೆ ಮರಾಠ ಜನರನ್ನು ನಿರ್ಲಕ್ಷಿಸಲಿಲ್ಲ. ಶಿವಾಜಿ ವಂಶಕ್ಕೆ ಸೇರಿದವರೆಂಬ ಮಹಾಗೌರವದಿಂದ ಕೊಲ್ಹಾಪುರದ ಸಿಂಹಾಸನವನ್ನು ಇಡೀ ಮರಾಠಿ-ಮಾತನಾಡುವ ಜನರು ನೋಡುತ್ತಿದ್ದರು. ನಂತರ ಈ ಗೌರವವು ಮಹಾರಾಷ್ಟ್ರದಲ್ಲಿ ರಾಜಕೀಯ ಜಾಗೃತಿಯ ಪ್ರಕ್ರಿಯೆ ಪ್ರಾರಂಭವಾದಾಗ ಅಗಾಧ ಪ್ರಮಾಣದಲ್ಲಿ ಬೆಳೆಯಿತು ಮತ್ತು ಮರಾಠ ಇತಿಹಾಸದ ಸಂಶೋಧನೆಯೊಂದಿಗೆ ಈ ಜಾಗೃತಿಯ ಸಾಧನ ಪ್ರಮುಖವಾಗುತ್ತದೆ.

ಕೊಲ್ಹಾಪುರ ಬಿಟ್ಟು ದಕ್ಷಿಣದಲ್ಲಿ ಇತರೆ ಹಲವಾರು ರಾಜ ಸಂಸ್ಥಾನಗಳಿದ್ದವು. ಅವುಗಳಲ್ಲಿ ಭೋರ್ ಔನ್ಧ್, ಸಾಂಗ್ಲಿ, ಕುರುಂದವಾಡ, ಮುಧೋಳ ಮತ್ತು ಜಮಖಂಡಿ ಪ್ರಮುಖವಾದವು. ಈ ಸಂಸ್ಥಾನಗಳ ಜೊತೆಗೆ ಹಲವು ಸ್ಥಳಗಳಲ್ಲಿ ಜಾಗೀರದಾರರಿದ್ದರು. ರಾಜರು ಮತ್ತು ಜಾಗೀರದಾರರು ಸಂಪೂರ್ಣವಾಗಿ ಬ್ರಿಟಿಷರ ನಿಯಂತ್ರಣದಲ್ಲಿದ್ದವು. ಸೀಮಿತ ಸ್ವಾಯತ್ತತೆಯಲ್ಲಿ ಅವರು ತಮ್ಮ ತಮ್ಮ ಪ್ರದೇಶಗಳಲ್ಲಿ ಆಡಳಿತಗಾರರ ಮರ್ಜಿಯ ಮೇಲೆ ಅವಲಂಬಿಸಿತ್ತು. ಅವರು ಒಪ್ಪಂದದಿಂದ ಮಿತಿಗಳೊಳಗೆ ಬದುಕಬೇಕಾಗಿತ್ತು.

ಭಾರತದ ಉಪಖಂಡವು ಎರಡು ವಿಧದ ಪ್ರದೇಶಗಳಲ್ಲಿ ವಿಭಜಿತವಾಗಿತ್ತು. ಒಂದು ಭಾಗದ ಪ್ರದೇಶವು ನೇರವಾಗಿ ಬ್ರಿಟಿಷ್-ಆಡಳಿತದ ಖಲ್ಸಾ ಪ್ರದೇಶದ ಅಡಿಯಲ್ಲಿತ್ತು ಮತ್ತು ಇನ್ನೊಂದು ಪ್ರದೇಶವು

ಹಲವಾರು ರಾಜರುಗಳ ಭಾರತದ ಭಾರತ ಅಥವಾ ರಾಜ ಸಂಸ್ಥಾನಗಳ ಆಡಳಿತದಲ್ಲಿತ್ತು. ಈ ಎರಡು ವಿಭಾಗಗಳಲ್ಲಿ ಆಡಳಿತವು ಪ್ರತ್ಯೇಕವಾಗಿದ್ದರೂ ತಮ್ಮ ಏಜೆಂಟುಗಳ ಅಥವಾ ಪೂರ್ಣಾಧಿಕಾರವುಳ್ಳವರ ಮೂಲಕ ರಾಜಸಂಸ್ಥಾನಗಳ ಮೇಲೆ ಕಟ್ಟುನಿಟ್ಟಿನ ಮತ್ತು ಪರಿಪೂರ್ಣ ನಿಯಂತ್ರಣವನ್ನು ಬ್ರಿಟಿಷರು ಖಾತರಿಪಡಿಸಿಕೊಂಡಿದ್ದರು. ಅವರು ಯಾವ ರಾಜ ಅಥವಾ ಜಾಗೀರದಾರನನ್ನು ಯಾವುದೇ ಸಮಯದಲ್ಲಿ ಮನಸ್ಸಿಗೆ ಬಂದಂತೆ ಕಳುಹಿಸುತ್ತಿದ್ದರು. ಅದು ಒಂದು ರೀತಿಯ ಅವರ ಅಧಿಕಾರವಾಗಿತ್ತು. ಬರೋಡ ಮಹಾರಾಜ ಮಲ್ಹರ್‌ರಾವ್ ಗಾಯಕ್‌ವಾಡ ಅವರನ್ನು ಅಧಿಕಾರದಿಂದ ಇಳಿಸಿದ್ದು ೧೯ನೇ ಶತಮಾನದಲ್ಲಿ ಈ ಅಧಿಕಾರವನ್ನು ಚಲಾಯಿಸಿದ್ದಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ.

ಇದು ಮಹಾರಾಷ್ಟ್ರದ ರಾಜಕೀಯ ದೃಶ್ಯವಾಗಿದೆ. ಈ ಹಿನ್ನೆಲೆಯ ವಿರುದ್ಧ ಮರಾಠ ಪ್ರದೇಶದ ಮೂಲಕ ಆಧುನಿಕತೆಯ ಗಾಳಿ ಬೀಸತೊಡಗಿದೆ. ೧೯ನೇ ಶತಮಾನದ ಪ್ರಾರಂಭದಲ್ಲಿ ಹಲವು ವರ್ಷಗಳವರೆಗೆ ದೇಶೀಯರಿಗೆ ಸಂಸ್ಕೃತದ ಶಿಕ್ಷಣ ಅಥವಾ ಇಂಗ್ಲೀಷಿನಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಕೊಡಬೇಕೆ ಎಂಬ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ಕೊನೆಗೆ, ಲಾರ್ಡ್ ಬೆಂಟಿಂಕ್‌ನ ಅವಧಿಯಲ್ಲಿ ಲಾರ್ಡ್ ಮೆಕಾಲೆ (೧೮೩೫) ರೂಪಿಸಿದ ತನ್ನ ನೀತಿಯಲ್ಲಿ ಇಂಗ್ಲಿಷ್ ಮಾಧ್ಯಮದ ಮೂಲಕ ಪಾಶ್ಚಿಮಾತ್ಯ ವಿಜ್ಞಾನಗಳ ಶಿಕ್ಷಣವನ್ನು ಬೋಧಿಸಬೇಕೆಂದು ಸರಕಾರ ಘೋಷಿಸಿತು.

ಆದರೆ ಇದಕ್ಕಿಂತ ಮೊದಲು ಮುಂಬಯಿ ಮತ್ತು ಪುಣೆಗಳಲ್ಲಿ ಹೆಣ್ಣು ಮಕ್ಕಳಿಗೂ ಸೇರಿದಂತೆ ಕ್ರಿಶ್ಚಿಯನ್ ಮಿಷನರಿಗಳು ಇಂಗ್ಲಿಷ್ ಶಾಲೆಗಳನ್ನು ತೆರೆದರು. ೧೮೨೨ರಲ್ಲಿ ಮುಂಬೈಯಲ್ಲಿ ಸಾಮಾಜಿಕ ಕಾರ್ಯಕರ್ತರಾದ ಜಮ್‌ಶೆಟ್‌ಜಿ ಜೀಜಾಭಾಯಿ ಮತ್ತು ಜಗನ್ನಾಥ ಶಂಕರಶೇಠ್ ಅವರು 'ದಿ ಬಾಂಬೆ ನೇಟಿವ್ ಎಜುಕೇಶನ್ ಸೊಸೈಟಿ'ಯನ್ನು ಶಿಕ್ಷಣವನ್ನು ಹರಡಲು ಸ್ಥಾಪಿಸಿದರು. ಶೀಘ್ರದಲ್ಲಿಯೆ ನಿವೃತ್ತರಾದ ಗೌರ್ನರ್ ಎಲ್ಫಿನ್‌ಸ್ಟನ್ ಅವರ ಗೌರವಾರ್ಥವಾಗಿ ೧೮೨೭ರಲ್ಲಿ ಎಲ್ಫಿನ್‌ಸ್ಟನ್ ಇನ್‌ಸ್ಟಿಟ್ಯೂಷನನ್ನು ಸ್ಥಾಪಿಸಿದರು. ಈ ಸಂಸ್ಥೆಯು ಎಲ್ಫಿನ್‌ಸ್ಟನ್ ಶಾಲೆ ಮತ್ತು ಎಲ್ಫಿನ್‌ಸ್ಟನ್ ಕಾಲೇಜನ್ನು ಪ್ರಾರಂಭಿಸಿದರು. ೧೮೩೪ರಲ್ಲಿ ವಿಲ್‌ಸನ್ ಪ್ರೌಢಶಾಲೆಯನ್ನು ಸ್ಥಾಪಿಸಲಾಯಿತು. ನಂತರ ಅದು ಪೂರ್ಣಪ್ರಮಾಣದ ಕಾಲೇಜಾಗಿ ಬೆಳೆಯಿತು. ೧೮೪೫ರಲ್ಲಿ 'ಗ್ರಾಂಟ್ ಮೆಡಿಕಲ್ ಕಾಲೇಜನ್ನು' ಸ್ಥಾಪಿಸಲಾಯಿತು. ಇದಕ್ಕೂ ಮೊದಲು ೧೮೨೧ರಲ್ಲಿ 'ಪೂನಾ ಸಂಸ್ಕೃತ ಕಾಲೇಜ'ನ್ನು ಸ್ಥಾಪಿಸಲಾಯಿತು. ಪ್ರಾರಂಭದಲ್ಲಿ ಈ ಕಾಲೇಜು ಸಂಸ್ಕೃತ ಮತ್ತು ಪ್ರಾಚೀನ ಅಧ್ಯಯನಗಳಿಗೆ ಸೀಮಿತವಾಗಿತ್ತು. ತದನಂತರ, ಅದರ ಪಠ್ಯಕ್ರಮದಲ್ಲಿ ಪಾಶ್ಚಿಮಾತ್ಯ ಅಧ್ಯಯನಗಳನ್ನು ಸೇರಿಸಲಾಯಿತು ಮತ್ತು ಅದನ್ನು 'ಡೆಕ್ಕನ್ ಕಾಲೇಜಾಗಿ' ಪರಿವರ್ತಿಸಲಾಯಿತು.[3]

ಮಹಾರಾಷ್ಟ್ರದ ಮುಖ್ಯ ನಗರ ಕೇಂದ್ರಗಳಾದ ಮುಂಬಯಿ, ಠಾಣೆ, ಪುಣೆ, ಅಹಮದ್‌ನಗರ ಮೊದಲಾದ ಕಡೆಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. ಮಿಷನರಿಗಳು ಈ ಚಟುವಟಿಕೆಯ ಮುಂಚೂಣಿಯಲ್ಲಿದ್ದರು. ಶೀಘ್ರದಲ್ಲಿಯೇ ಶಿಕ್ಷಿತ ಭಾರತೀಯರು ಹುರುಪಿನಿಂದ ಶಿಕ್ಷಣವನ್ನು ಹರಡುವ ಕಾರ್ಯದಲ್ಲಿ ಮುಂದಾಳತ್ವ ವಹಿಸಿದರು. ಇವೆಲ್ಲದರ ಜೊತೆಗೆ ಗೌರ್ನರ್ ಎಲ್ಫಿನ್‌ಸ್ಟನ್ ಮಹತ್ತರವಾದ ಕೆಲಸ ಮಾಡಿದರು. ಅವರ ಉಪಕ್ರಮದಿಂದ ಹಲವಾರು ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. ಮುಖ್ಯವಾಗಿ ಅವರು ದೇಶೀಯ ಭಾಷೆಗಳ ಮಾಧ್ಯಮದ ಮೂಲಕ ಪಾಶ್ಚಿಮಾತ್ಯ ಶಿಕ್ಷಣ ನೀಡುವ ಧೋರಣೆಯನ್ನು ಅಂಗೀಕರಿಸಿದರು. ಅವರು ಶಾಲೆಗಳಿಗೆ ವಿಶೇಷ ಪಠ್ಯಪುಸ್ತಕಗಳನ್ನು ತಯಾರಿಸುವುದಕ್ಕೆ ಕ್ರಮ ಕೈಗೊಳ್ಳಲು ಶಿಕ್ಷಣತಜ್ಞರನ್ನು ನೇಮಿಸಿದರು. ಅವರು ತಮಗೆ ಬೇಕಾದಷ್ಟು ಇಂಗ್ಲಿಷ್ ಪುಸ್ತಕಗಳ

ಅನುವಾದವನ್ನು ಪಡೆದರು. ಪ್ರಜೆಗಳಿಗೆ ಶಿಕ್ಷಣ ನೀಡುವುದು ಮತ್ತು ಅವರನ್ನು ಜ್ಞಾನಿಗಳನ್ನಾಗಿ ಮಾಡುವುದು ಆಳುವವರ ಕರ್ತವ್ಯವೆಂದು ಅವರು ಪ್ರಾಮಾಣಿಕವಾಗಿ ನಂಬಿದ್ದರು. ಪಾಶ್ಚಿಮಾತ್ಯ ಶಿಕ್ಷಣ ಪಡೆದು ಬುದ್ಧಿವಂತರಾದ ಜನರು ವಿದೇಶಿ ಆಡಳಿತದ ವಿರುದ್ಧ ಬಂಡೇಳುವವರೆಂದು ಅವರು ತಿಳಿದುಕೊಂಡಿರಲಿಲ್ಲ. ಅಷ್ಟೇ ಅಲ್ಲ, ಇವೆಲ್ಲವೂ ಅನತಿ ಭವಿಷ್ಯದಲ್ಲಿ ಬ್ರಿಟಿಷ್ ಆಡಳಿತಕ್ಕೆ ಅಪಾಯಕಾರಿಯಾಗಬಹುದೆಂದು ಎಲ್ಫಿನ್‌ಸ್ಟನ್‌ರು ನಂಬಲು ಸಿದ್ಧರಾಗಿರಲಿಲ್ಲ.[4]

ಬಾಂಬೆ ಪ್ರೆಸಿಡೆನ್ಸಿಯ ಕೇಂದ್ರಗಳಾದ ಮುಂಬೈ ಮತ್ತು ಪುಣೆಗಳಲ್ಲಿ ಮೊಟ್ಟಮೊದಲಿಗೆ ಪಾಶ್ಚಿಮಾತ್ಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದರಿಂದ ಅವು ಪ್ರಮುಖ ಸಾಮಾಜಿಕ ಜಾಗೃತಿಯ ಕೇಂದ್ರಗಳಾದವು. ೧೮೪೦ರಲ್ಲಿ ಶಿಕ್ಷಣ ಮಂಡಳಿಯ ಸ್ಥಾಪನೆ, ೧೮೫೫ ರಲ್ಲಿ ಶಿಕ್ಷಣ ನಿರ್ದೇಶಕರ ನೇಮಕ ಮತ್ತು ೧೮೫೭ ರಲ್ಲಿ ಮುಂಬೈ ವಿಶ್ವವಿದ್ಯಾಲಯ ಸ್ಥಾಪನೆಗೆ ಅಡಿಗಲ್ಲು, ಇವೆಲ್ಲವು ಪ್ರಸಿಡೆನ್ಸಿಯಲ್ಲಿ ಇಡೀ ಶಿಕ್ಷಣ ವ್ಯವಸ್ಥೆಗೆ ನಿಶ್ಚಿತ ರೂಪ ನೀಡಿದವು.

ಹೀಗೆ ಬ್ರಿಟಿಷರ ಉದಾರ ಶಿಕ್ಷಣನೀತಿಯು ಮಹಾರಾಷ್ಟ್ರದ ಜನತೆಗೆ ಪಾಶ್ಚಿಮಾತ್ಯ ಶಿಕ್ಷಣದ ಪರಂಪರೆಯನ್ನೇ ತೆರೆದುಬಿಟ್ಟಿತು. ಆದರೂ ದೇಶೀಯ ಜನರ ಕೆನೆಪದರದ ವ್ಯಕ್ತಿಗಳಿಗೆ ಮಾತ್ರ ಶಿಕ್ಷಣದ ಪ್ರಯೋಜನಗಳು ಸೀಮಿತವಾಗಿದ್ದವು. ಮುಂಬೈಯಲ್ಲಿ ಪಾರಸಿಗಳು, ಪ್ರಭುಗಳು (ಕಾಯಸ್ಥರು) ಮತ್ತು ಬ್ರಾಹ್ಮಣರು ಮಾತ್ರ ಈ ಕೆನೆ ಪದರದಲ್ಲಿ ಸೇರಿದ್ದರು. ಅವರೆಲ್ಲರು ಶಿಕ್ಷಣದ ಮುಂಚೂಣಿ ಸ್ಥಾನದಲ್ಲಿದ್ದರು. ಉದಾಹರಣೆಗೆ ೧೮೨೭ರಿಂದ ೧೮೪೮ರ ನಡುವೆ ಎಲ್ಫಿನ್‌ಸ್ಟನ್ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣ ಮುಗಿಸಿದ ೧೫೨ ವಿದ್ಯಾರ್ಥಿಗಳ ಜಾತಿವಾರು ವಿಂಗಡಣೆ ಈ ರೀತಿಯಿದೆ: ಪ್ರಭುಗಳು (೭೧), ಪಾರ್ಸಿಗಳು (೨೮), ಬ್ರಾಹ್ಮಣರು (೧೬), ಸಾರಸ್ವತ ಬ್ರಾಹ್ಮಣರು (೧೬), ಇತರೆ ಜಾತಿಗಳು (೨೫). ಪ್ರಮುಖ ನಗರಗಳಾದ ಪುಣೆ, ಕೊಲ್ಹಾಪುರ ಮತ್ತು ನಾಗಪುರಗಳಲ್ಲಿ ಬ್ರಾಹ್ಮಣರು ಬಹಳ ಮುಂದಿದ್ದರು. ಉದಾಹರಣೆಗೆ ೧೮೮೬ ರಲ್ಲಿ ಪುಣೆಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಓದುತ್ತಿದ್ದ ೯೮೨ ವಿದ್ಯಾರ್ಥಿಗಳಲ್ಲಿ ೯೧೧ ವಿದ್ಯಾರ್ಥಿಗಳು ಬ್ರಾಹ್ಮಣರಾಗಿದ್ದರು.[5]

ಮೇಲಿನ ಅಂಕಿ–ಅಂಶಗಳು ಸಮಕಾಲೀನ ಸಮಾಜದಲ್ಲಿನ ಶಿಕ್ಷಣದ ಬಗ್ಗೆ ಬೆಳಕು ಬೀರುತ್ತವೆ. ಬ್ರಾಹ್ಮಣರು ೧೯ನೇ ಶತಮಾನದಲ್ಲಿ ಶಿಕ್ಷಣದಲ್ಲಿ ಮುಂಚೂಣಿಯಲ್ಲಿ ಉಳಿದಿದ್ದರು. ವೇದಗಳ ಕಾಲದಿಂದ ಅವರು ಹಲವು ಶತಮಾನಗಳವರೆಗೆ ಅವರು ಈ ಕಾರಣದಿಂದ ನಾಯಕರಾಗಿದ್ದರು. ಕಲಿಸುವುದು ಮತ್ತು ಕಲಿಯುವುದು ಅವರ ಸ್ವಾಮ್ಯವಾಗಿತ್ತು. ಅದು ಅವರ 'ಮತ–ಧರ್ಮ'ವಾಗಿತ್ತು.

ಮರಾಠರ ಆಳ್ವಿಕೆಯ ಕಾಲದಲ್ಲಿ ಪ್ರಭುಗಳು ಬ್ರಾಹ್ಮಣರಂತೆಯೇ ಮುಂದುವರಿದ ವರ್ಗವಾಗಿತ್ತು. ಅವರು ಕಲಿಕೆ ಮತ್ತು ನಾಗರಿಕ ಆಡಳಿತದಲ್ಲಿ ಬ್ರಾಹ್ಮಣರಿಗೆ ಸರಿಸಮಾನವಾಗಿದ್ದರು. ಶಿವಾಜಿ ಈ ಎರಡು ಜಾತಿಗಳನ್ನು 'ಸ್ವರಾಜ್' ಕಟ್ಟುವುದಕ್ಕೆ ಚೆನ್ನಾಗಿ ಬಳಸಿಕೊಂಡರು. ಆದರೆ ೧೮ನೇ ಶತಮಾನದಲ್ಲಿ ಪೇಶ್ವೆಗಳ ಆಡಳಿತದ ಪ್ರಾರಂಭವನ್ನು ಗುರುತಿಸಲು ಅಧಿಕಾರದ ಚುಕ್ಕಾಣಿಯು ಚಿತ್‌ಪಾವನ (ಕೊಂಕಣಸ್ಥ ಬ್ರಾಹ್ಮಣ) ಭಟ್ ಕುಲದವರ ಕೈಗಳಿಗೆ ಹೋಯಿತು. ಚಿತ್ಪಾವನ ಬ್ರಾಹ್ಮಣರು ಪ್ರಭುಗಳನ್ನು ಮತ್ತು ಬ್ರಾಹ್ಮಣರಲ್ಲಿರುವ ದೇಶಸ್ಥರನ್ನು ಮೂಲೆಗೆ ತಳ್ಳಿ ಮುಂಚೂಣಿಗೆ ಬಂದರು. ಅವರು ದೇಶದ ವ್ಯವಹಾರಗಳಲ್ಲಿ ತಮ್ಮ ಕಪಿಮುಷ್ಟಿ ಭದ್ರವಾಗಿರುವಂತೆ ನಿಭಾಯಿಸಿದರು. ಸಮಾಜದ ಮೇಲೆ ಬ್ರಾಹ್ಮಣರ ಮಿತಿಮೀರಿದ ಆಧಿಪತ್ಯವನ್ನು

ಪ್ರತಿಷ್ಠಾಪಿಸಿದರು. ಬ್ರಾಹ್ಮಣರು ಪೇಶ್ವೆಗಳ ಆಡಳಿತ 'ಬ್ರಾಹ್ಮಣರ ಆಡಳಿತ'ವೆಂದು ಭಾವಿಸತೊಡಗಿದರು. ಈ ಬಗ್ಗೆ ವ್ಯಾಖ್ಯಾನ ಮಾಡುತ್ತಾ ನ್ಯಾಯಮೂರ್ತಿ ಮಹದೇವ ಗೋವಿಂದ ರಾನಡೆ ಅವರು ಹೇಳಿದ್ದಾರೆ: "೧೭೬೦ರ ನಂತರ, ಮರಾಠ ಸಾಮ್ರಾಜ್ಯದ ರಾಜಧಾನಿ ಸತಾರದಿಂದ ಪುಣೆಗೆ ಸ್ಥಳಾಂತರಗೊಂಡಾಗ ಮಿಲಿಟರಿ ವರ್ತಕರ ಮುಖ್ಯ ಕೆಲಸ ಮಿಲಿಟರಿ ಕಾರ್ಯ ಚಟುವಟಿಕೆಗಳನ್ನು ನಿಭಾಯಿಸುವ ಹೊಣೆಯನ್ನು ಬ್ರಾಹ್ಮಣರೇ ಪ್ರಮುಖವಾಗಿ ವಹಿಸಿಕೊಂಡರು. ಬಿಳಿ-ಕಾಲರಿನ ಅಬ್ರಾಹ್ಮಣೇತರ ನೌಕರರಾದ ಪ್ರಭುಗಳು, ಶೆನವಿಗಳು ಮೊದಲಾದವರು ಪುಣೆಯಲ್ಲಿನ ನ್ಯಾಯಾಲಯಗಳಲ್ಲಿ ಕೆಲಸಮಾಡುವುದಕ್ಕೆ ಕಷ್ಟವೆನಿಸಿತು. ಪೇಶ್ವೆಗಳ ಆಡಳಿತದಲ್ಲಿ ಬ್ರಾಹ್ಮಣರು ತಾವೇ ನಿಜವಾದ ರಾಜರೆಂದು ಭಾವಿಸತೊಡಗಿದರು. ಬ್ರಾಹ್ಮಣರು ವಿಶಿಷ್ಟವಾದ ಹಲವು ಸವಲತ್ತುಗಳನ್ನು ಅನುಭವಿಸಿದರು. ಹಲವು ಸಂದರ್ಭಗಳಲ್ಲಿ ಅವರನ್ನು ಕಾನೂನಿಗಿಂತ ಮೇಲಿಡಲಾಯಿತು. ಪೇಶ್ವೆಗಳ ಕೋರ್ಟುಗಳಲ್ಲಿ ಕೆಲಸಮಾಡುತ್ತಿದ್ದ ಬ್ರಾಹ್ಮಣ ಗುಮಾಸ್ತರು ಭಾರೀ ವೇತನಗಳಿಂದ ಸ್ವ-ಪ್ರತಿಷ್ಠೆಯಿಂದ ಗರ್ವ (ಉಬ್ಬಿಹೋಗುತ್ತಿದ್ದರು) ಪಡುತ್ತಿದ್ದರು. ಅವರು ಆಮದು ಮತ್ತು ರಫ್ತು ವಸ್ತುಗಳ ಮೇಲೆ ಆಕ್ಟ್ರಾಯ್ ಸುಂಕವನ್ನು ಕೊಡುತ್ತಿರಲಿಲ್ಲ. ಅಪರಾಧದ ವಿಷಯಗಳಲ್ಲಿ ನ್ಯಾಯಾಂಗದ ಜುಲ್ಮಾನೆ ಮತ್ತು ದಂಡಗಳು ಬ್ರಾಹ್ಮಣರಿಗೆ ಕನಿಷ್ಠ ರೂಪದ್ದಾಗಿದ್ದವು. ಜೈಲುಗಳಲ್ಲಿ ಬ್ರಾಹ್ಮಣರನ್ನು ಬೇರೆಯವರಿಗಿಂತ ಹೆಚ್ಚಿಗೆ ಕರುಣೆಯಿಂದ ನೋಡಿಕೊಳ್ಳುತ್ತಿದ್ದರು. ಸರಕಾರವು ಬ್ರಾಹ್ಮಣರಿಗೆ ದಾನ ನೀಡುವುದಕ್ಕೆ ಮತ್ತು ವಿಶೇಷ ಭೋಜನಕೂಟಗಳನ್ನು ಏರ್ಪಡಿಸುವುದಕ್ಕೆ ವಿಶೇಷ ಅವಕಾಶಗಳನ್ನು ಮಾಡಿಕೊಟ್ಟಿತು. ಈ ವ್ಯವಸ್ಥೆಯು ಪುಣೆ ನಗರವನ್ನು ಬ್ರಾಹ್ಮಣ ಭಿಕ್ಷುಕರ ಕೇಂದ್ರವನ್ನಾಗಿ ಬದಲಾಯಿಸಿತು. ಸರಣಿಯಲ್ಲಿ ಹಲವಾರು ದಿನಗಳವರೆಗೆ ಮೂವತ್ತು ಸಾವಿರದಿಂದ ನಲವತ್ತು ಸಾವಿರ ಬ್ರಾಹ್ಮಣರಿಗೇ ವಿಶೇಷ ಭೋಜನಕೂಟಗಳನ್ನು ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸಲಾಗುತ್ತಿತ್ತು. ಹೀಗೆ ಬ್ರಾಹ್ಮಣರ ಪ್ರಾಬಲ್ಯ ತುತ್ತತುದಿಗೇರಿತ್ತು ಮತ್ತು ೧೮ನೇ ಶತಮಾನದ ಕೊನೆಗೆ ಪರಿಹಾಸ್ಯಕ್ಕೆ ಗುರಿಯಾಗಿತ್ತು."[6]

ಬ್ರಿಟಿಷರ ಆಡಳಿತದಲ್ಲಿ ಬಲಿಷ್ಠ ಮತ್ತು ಪ್ರಭಾವಶಾಲಿಗಳಾಗಿದ್ದ ಬ್ರಾಹ್ಮಣರು ಪಾಶ್ಚಿಮಾತ್ಯ ಶಿಕ್ಷಣ ಪಡೆದ ಮೊದಲ ಫಲಾನುಭವಿಗಳು. ಪ್ರಭುಗಳು ಸಹ ಫಲಾನುಭವಿಗಳೆ. ಪ್ರಭುಗಳು ಅಲ್ಪಸಂಖ್ಯಾತರು ಮತ್ತು ಬ್ರಾಹ್ಮಣರು ಎಂದಿಗೂ ಅವರನ್ನು ತಮ್ಮ ಸಮಾನರೆಂದು ಪರಿಗಣಿಸಿಲ್ಲದ್ದರಿಂದ ಪ್ರಭುಗಳು ಬ್ರಾಹ್ಮಣಿಕೆಯ ವಿರುದ್ಧದ ಸಾಮಾಜಿಕ ಚಳುವಳಿಯಲ್ಲಿ ಬ್ರಾಹ್ಮಣೇತರರ ಉದ್ದೇಶ ಸಾಧನೆಗಾಗಿ ಬೆಂಬಲಿಸಿದರು.

ಬ್ರಾಹ್ಮಣರನ್ನು ಬಿಟ್ಟು ಇತರೆ ಪ್ರಮುಖ ಜಾತಿ ಮರಾಠರಾಗಿದ್ದರು. ಈ ಜಾತಿ ಕೆನೆಪದರವಾಗಿದ್ದವರು ರಾಜ ಸಂಸ್ಥಾನದ ಕುಟುಂಬಗಳು, ಜಾಗೀರದಾರರು, ಇನಾಮದಾರರು ಮತ್ತು ದೇಶಮುಖರಾಗಿದ್ದರು. ಮರಾಠರ ಬಹುಜನರು ಕಿರು-ಗಾಲದ ರೈತರಾಗಿದ್ದರು ಅಥವಾ ಕುಣಬಿಗಳಾಗಿದ್ದರು. ಮರಾಠರಲ್ಲಿ ವರ್ತಕರಾಗಿದ್ದ ಕುಲೀನ ಕುಟುಂಬಗಳಿಗೆ ಅಕ್ಷರಜ್ಞಾನ ೧೯ನೇ ಶತಮಾನದಲ್ಲಿ ಸೀಮಿತವಾಗಿತ್ತು. ಅವರು ಅಕ್ಷರಜ್ಞಾನ ಬ್ರಾಹ್ಮಣರಿಗೆ ಮಾತ್ರ ತಮಗಲ್ಲ ಬ್ರಾಹ್ಮಣರು ಶಿಕ್ಷಣಕ್ಕೆ ಹೇಳಿಮಾಡಿಸಿದವರೆಂದು ಅವರು ಬಲವಾಗಿ ನಂಬಿದ್ದರು. ಮರಾಠರಲ್ಲಿನ ಮೇಲ್ವರ್ಗದ ಈ ರೀತಿಯ ಚಿಂತನೆಯಾಗಿದ್ದರೆ, ಕೆಳವರ್ಗದ ಮರಾಠರಲ್ಲಿ ಶಿಕ್ಷಣ ಕುರಿತು ಚಿಂತಿಸುವುದು ಕನಸಿನ ಮಾತಾಗಿತ್ತು. ಕ್ಷತ್ರಿಯರದ್ದು ಇದೇ ಕತೆಯಾಗಿತ್ತು. ಮರಾಠೇತರರ ಅಧಿಕ ಸಂಖ್ಯೆಯ ಜಾತಿಗಳು, ಅಸ್ಪೃಶ್ಯರು ಮತ್ತು ಮಹಿಳಾ ವರ್ಗಗಳು ಸಂಪೂರ್ಣವಾಗಿ ಶಿಕ್ಷಣದಿಂದ ವಂಚಿತರಾಗಿದ್ದರು. ಸಮಕಾಲೀನ ಗಾದೆಯು ಸಾಮಾಜಿಕ ವಾಸ್ತವತೆಯನ್ನು ಎತ್ತಿ ತೋರಿಸುತ್ತದೆ: 'ಬ್ರಾಹ್ಮಣಚ್ಯ ಘರಿ ಲಿಹಿನೆ, ಕುಣಬಿಚ್ಯ ಘರಿ ದಾನೆ ಆಣೆ ಮಹರಚ್ಯ ಘರಿ ಗಾನೆ!' (ಬ್ರಾಹ್ಮಣರ ಮನೆಯಲ್ಲಿ ಕಲಿಕೆ, ಕುಣಬಿಗಳ ಮನೆಯಲ್ಲಿ ದವಸ-ಧಾನ್ಯಗಳು ಮತ್ತು ಮಹರರ ಮನೆಯಲ್ಲಿ ಹಾಡುಗಾರಿಕೆ!).

ಎಲ್ಫಿನ್‌ಸ್ಟನ್ ಮತ್ತು ಮ್ಯಾಕಾಲೆ ರೂಪಿಸಿದ ಧೋರಣೆಯ ಪ್ರಮುಖ ಪ್ರೇರಣೆ ಶೈಕ್ಷಣಿಕ ಉದಾರವಾದವಾಗಿರಲಿಲ್ಲ. ಬ್ರಿಟಿಷರ ಆಡಳಿತದಲ್ಲಿ ಉಪಖಂಡದಲ್ಲಿ ಕೇವಲ ಬೆರಳೆಣಿಕೆಯಷ್ಟು ಬಿಳಿಯರಿದ್ದರು ಮತ್ತು ಇಂಡಿಯಾದಲ್ಲಿ ತಮ್ಮ ವಿಶಾಲ ಸಾಮ್ರಾಜ್ಯದ ಆಡಳಿತ ನಡೆಸಲು ಅವರಿಗೆ ಗುಮಾಸ್ತರ ಸೈನ್ಯವೇ ಬೇಕಾಗಿತ್ತು. ಅವರಿಗೆ ಸಂಸ್ಕೃತ ವಿದ್ವಾಂಸರು ನಿರುಪಯೋಗಿಗಳಾಗಿದ್ದರು. ಅವರಿಗೆ ಇಂಗ್ಲಿಷ್ ಬಲ್ಲ ಗುಮಾಸ್ತರು ಬೇಕಾಗಿದ್ದರು. ಅವರು ಇಂಗ್ಲಿಷ್ ಶಾಲೆಗಳನ್ನು ಪ್ರಾರಂಭಿಸಿದರು. ಮತ್ತು ಅವರು ಇತರರನ್ನು ಶಾಲೆಗಳನ್ನು ತೆರೆಯಲು ಪ್ರೋತ್ಸಾಹಿಸಿದರು. ೧೯ನೇ ಶತಮಾನದ ಮಧ್ಯದ ಹೊತ್ತಿಗೆ ಮಹಾರಾಷ್ಟ್ರದಲ್ಲಿ ಇಂಗ್ಲಿಷ್ ಬಲ್ಲ ಗುಮಾಸ್ತರ ಸಂಖ್ಯೆ ಗಣನೀಯವಾಗಿ ಹೆಚ್ಚಿತು. ಪಾಶ್ಚಿಮಾತ್ಯ ಶಿಕ್ಷಣದ ಪ್ರಸಾರ ಗಣನೀಯವಾದ ವೇಗದಲ್ಲಿ ಮತ್ತು ಖಚಿತವಾಗಿ ಹರಡಿತ್ತು. ಹಲವಾರು ಕಾಲೇಜುಗಳನ್ನು ಮುಂಬಯಿ, ಪುಣೆ, ಕೊಲ್ಹಾಪುರ, ನಾಗಪುರ ಮತ್ತು ಇತರ ನಗರಗಳಲ್ಲಿ ಸ್ಥಾಪಿಸಲಾಯಿತು. ಅವು ಉಚ್ಚ ಶಿಕ್ಷಣ ಪಡೆದ ಒಂದು ವರ್ಗವನ್ನು ನಿರ್ಮಾಣ ಮಾಡಿದವು. ಅವರಲ್ಲಿ ಬಹಳಷ್ಟು ಜನರು ಸರಕಾರದ ಶ್ರೇಷ್ಠದರ್ಜೆಯ ಹುದ್ದೆಗಳನ್ನು ಪಡೆದರು. ಅವರಲ್ಲಿ ಕೇವಲ ಕೆಲವರು ಮಾತ್ರ ಯಾರ ನೆರವು ಇಲ್ಲದೆ ಏಕಾಂಗಿಯಾಗಿ ಕೆಲಸಮಾಡತೊಡಗಿದರು. ದೇಶ ಬಾಂಧವರ ಏಳಿಗೆಗಾಗಿ ಶಾಲೆಗಳನ್ನು ನಡೆಸಲು, ಸಮಾಜವನ್ನು ಜಾಗೃತಗೊಳಿಸಲು ಮತ್ತು ಶಿಕ್ಷಣ ನೀಡಲು ದಿನಪತ್ರಿಕೆಗಳನ್ನು ಪ್ರಕಟಿಸಲು ಅನಿಷ್ಟಕಾರಿಯಾದ ಹಿಂದು ಪದ್ಧತಿಗಳನ್ನು ನಿಲ್ಲಿಸಲು ಸಂಸ್ಥೆಗಳನ್ನು ಕಟ್ಟುವುದಕ್ಕೆ ತಮ್ಮನ್ನು ತಾವೇ ಸಮರ್ಪಿಸಿಕೊಂಡರು.

'ಇಂಗ್ಲೀಷು ಶಿಕ್ಷಣ'ದ ಪ್ರಸಾರದಿಂದ ಇವೆಲ್ಲವು ಸಂಭವಿಸಿದವು. ಆದರೆ ಈ ಶಿಕ್ಷಣವನ್ನು ಯಾರು ಪಡೆದರು? ಬ್ರಾಹ್ಮಣರಲ್ಲಿ ಮೇಧಾವಿ ವರ್ಗ ಈ ಶಿಕ್ಷಣದ ಫಲಾನುಭವಿಗಳು. ಇದರ ಹಿಂದೆ ಎರಡು ಕಾರಣಗಳಿವೆ. ಮೊದಲಿಗೆ, ಆಡಳಿತಗಾರರು ಶಿಕ್ಷಣಕ್ಕೆ ಸಂಬಂಧಿಸಿದಂತೆ ಲಾರ್ಡ್ ಮ್ಯಾಕಾಲೆಯ 'ಕೆಳಕ್ಕೆ ಹರಿದು ಬರುವ ಸಿದ್ಧಾಂತ'ವನ್ನು ಅಂಗೀಕರಿಸಿದರು. ಒಮ್ಮೆ ಸಮಾಜದ ಮೇಲ್ವರ್ಗ ಜ್ಞಾನವಂತರಾದರೆ ಶಿಕ್ಷಣವು ಸಹಜವಾಗಿ ಕೆಳಗಿನ ಪದರಗಳಿಗೆ ಹರಿದು ಬರುತ್ತದೆಯೆಂದು ಭಾವಿಸಲಾಗಿತ್ತು. ಈ ನಂಬಿಕೆಯು ಅವರಿಗೆ ತುಂಬ ಅನುಕೂಲ ಮತ್ತು ಪ್ರಯೋಜನಕಾರಿಯಾಗಿತ್ತು. ಎರಡನೆಯದಾಗಿ, ಬ್ರಾಹ್ಮಣರಲ್ಲಿ ಮೇಲ್ವರ್ಗವು ಶಿಕ್ಷಣ ಪಡೆಯಲು ತುಂಬ ಮುತುವರ್ಜಿ ವಹಿಸಿತ್ತು. ಮೊದಲಿಗೆ ಈ ವರ್ಗ ಪೇಶ್ವೆಗಳ ಆಡಳಿತದಲ್ಲಿ ಎಲ್ಲ ಹುದ್ದೆಗಳನ್ನು ಆಕ್ರಮಿಸಿಕೊಂಡಿತ್ತು. ಈಗ ದಾರಿಯನ್ನು ಬದಲಾಯಿಸುವ ಪ್ರಶ್ನೆಗೆ ಸೀಮಿತವಾಗಿತ್ತು. ಬ್ರಾಹ್ಮಣರು ಕಾಲ ಬದಲಾಗುವುದನ್ನು ಗ್ರಹಿಸಿದರು. ಇಂಗ್ಲಿಷ್ ಶಿಕ್ಷಣವು ಹೊಸಯುಗಕ್ಕೆ ಪಾಸ್‌ವರ್ಡ್ (ಸಂಕೇತಪದ) ಎಂದು ಅವರು ಮನಗಂಡರು. ಅವರು ಅದನ್ನು ಅಂಗೀಕರಿಸಿದರು ಮತ್ತು ದಾರಿಯನ್ನು ಬದಲಾಯಿಸಿದರು. ಬ್ರಾಹ್ಮಣರು ಬ್ರಿಟಿಷರ ಆಡಳಿತದಲ್ಲಿ ವಿಭಿನ್ನ ಹುದ್ದೆಗಳನ್ನು ಅಲಂಕರಿಸಲು ಮುಂದೆ ಬಂದರು. ಅವರು ಈಗಾಗಲೆ ಮತ–ಧರ್ಮದ ವ್ಯವಹಾರಗಳ ಏಕಸ್ವಾಮ್ಯತೆಯನ್ನು ಪಡೆದಿದ್ದರು. ಈಗ ಅವರು ಸಮಾಜದ ದಿನನಿತ್ಯದ ವ್ಯವಹಾರಗಳಿಗೆ ಸಂಬಂಧಿಸಿ ಆಡಳಿತಕ್ಕೆ ತಮ್ಮ ಏಕಸ್ವಾಮ್ಯತೆಯನ್ನು ವಿಸ್ತರಿಸಬಲ್ಲರು. ಸಮಾಜದ ಮೇಲೆ ಬ್ರಾಹ್ಮಣರ ಕಪಿಮುಷ್ಟಿ ಮತ್ತಷ್ಟು ಭದ್ರಗೊಳ್ಳುವುದು ಒಟ್ಟಾರೆಯ ಪರಿಣಾಮವಾಗಿತ್ತು.

ಹೊಸಯುಗದಲ್ಲಿ ಬ್ರಾಹ್ಮಣೇತರರ ಬಹುಸಂಖ್ಯೆಯು (ಬಹುಜನ ಸಮಾಜ) ತನ್ನ ದಾರಿ ಬದಲಾಯಿಸುವ ಪ್ರಶ್ನೆಯೇ ಇಲ್ಲ. ಏಕೆಂದರೆ, ಅವರು ದಾರಿಯಲ್ಲಿಯೇ ಇಲ್ಲ. ಅವರೆಲ್ಲರೂ ಸಂಪೂರ್ಣವಾಗಿ ವಿದ್ಯಾಭ್ಯಾಸದಿಂದ ವಂಚಿತರಾಗಿದ್ದರು. ತುಳಿತಕ್ಕೊಳಗಾದವರು (ದಲಿತರು) ಮೂಢನಂಬಿಕೆ, ಬಡತನ

ಮತ್ತು ಶಿಕ್ಷಣದ ಕೊರತೆಯಿಂದ ನರಳುತ್ತಿದ್ದಾರೆ. ಪೂಜಾರಿಗಳು, ಲೇವಾದೇವಿಗಾರರು ಮತ್ತು ನೌಕರವರ್ಗಗಳು ಅವರನ್ನು ಶೋಷಣೆ ಮಾಡುತ್ತಿವೆ. ಬರಗಾಲವು ಸಹ ನಿರಂತರ ಶೋಷಣೆಗೆ ಸಾಥ್ ನೀಡುತ್ತಿದೆ. ನೈಸರ್ಗಿಕ ಪ್ರಕೋಪಗಳು ಲಕ್ಷಾಂತರ ಜನರನ್ನು ಬಲಿತೆಗೆದುಕೊಂಡವು. ಸಾಮಾನ್ಯ ಜನರು ಕುರಿಗಳಂತೆ ಮೂಕ ಜೀವಿಗಳಾಗಿದ್ದಾರೆ. ಅಸ್ಪೃಶ್ಯರ ಜೀವನವು ಪ್ರಾಣಿಗಳ ಜೀವನಕ್ಕಿಂತ ಕಷ್ಟಕರವಾಗಿದೆ. ಅವರ ನೋವಿಗೆ ಧ್ವನಿಯೇ ಇಲ್ಲ. ಯಾವ ರಕ್ಷಕನು ಕಣ್ಣಿಗೆ ಕಾಣಿಸುತ್ತಿಲ್ಲ.

ಬಹುಸಂಖ್ಯಾತರಾದ ಅನಕ್ಷರಸ್ಥರು, ಬಡತನ ಪೀಡಿತರು, ಅಧಿಕಾರಹೀನರು, ತಮ್ಮ ಏಳಿಗೆಗಾಗಿ ಮಹಾತ್ಮ ಜ್ಯೋತಿರಾವ್ ಫುಲೆಯವರಲ್ಲಿ ತಮ್ಮ ನಾಯಕನನ್ನು ಕಂಡುಕೊಂಡರು. ಜನರ ದುಃಖ ದುಮ್ಮಾನಗಳಿಗೆ ಮೂಲಕಾರಣ ಮೂಢನಂಬಿಕೆ ಮತ್ತು ಅಜ್ಞಾನವೆಂದು ಅರಿತುಕೊಂಡರು. ಸಮಾಜದ ಈ ಎಲ್ಲಾ ಅನಿಷ್ಟಗಳ ನಿವಾರಣೆಗೆ ವಿದ್ಯೆಯೊಂದೇ ದಿವ್ಯ ಔಷಧಿ ಎಂದು ಅವರು ಬಲವಾಗಿ ನಂಬಿದ್ದರು. ಅವರಿಗೆ ಅಜ್ಞಾನವೆಂದರೆ ಶಿಕ್ಷಣದ ಕೊರತೆಯೆಂದು ಭಾಸವಾಗಿತ್ತು. ಅದು ತನ್ನ ಸಹೋದರರನ್ನು ದುಃಸ್ಥಿತಿಗೆ ತಳ್ಳಿದೆಯೆಂದು ಅವರು ಭಾವಿಸಿದ್ದರು. ಅವರ ದುಃಸ್ಥಿತಿಗಳನ್ನು ವಿಶ್ಲೇಷಿಸುತ್ತಾ ಅವರು ಹೀಗೆ ಬರೆದಿದ್ದಾರೆ:

**ಶಿಕ್ಷಣದ ಕೊರತೆ ಪ್ರಜ್ಞೆಯನ್ನು ವಂಚಿತಗೊಳಿಸಿದೆ !**
**ಪ್ರಜ್ಞೆಯ ಕೊರತೆ ವಿವೇಕವನ್ನು ವಂಚಿತಗೊಳಿಸಿದೆ !**
**ವಿವೇಕದ ಕೊರತೆ ಕ್ರಿಯಾಶಕ್ತಿಯನ್ನು ಕುಗ್ಗಿಸಿದೆ !**
**ಕ್ರಿಯಾಶಕ್ತಿಯ ಕೊರತೆ ಸಂಪತ್ತನ್ನು ವಂಚಿತಗೊಳಿಸಿದೆ !**
**ಸಂಪತ್ತಿನ ಕೊರತೆ ದಮನಿತರನ್ನು ಮತ್ತಷ್ಟು ತುಳಿದಿದೆ !**
**ಅಜ್ಞಾನವೊಂದೇ ಹಲವಾರು ದುಮ್ಮಾನಗಳನ್ನು ತಂದಿದೆ !!**[7]

ಮಹಾತ್ಮ ಫುಲೆಯವರು ಪರಿಸ್ಥಿತಿಯನ್ನು ವಿಶ್ಲೇಷಿಸುತ್ತ ಸುಮ್ಮನೆ ನಿಲ್ಲುವುದಿಲ್ಲ. ಜನರ ಸ್ಥಿತಿಯನ್ನು ಉತ್ತಮಗೊಳಿಸಲು ಕ್ರಿಯಾಯೋಜನೆಯನ್ನು ಪ್ರಾರಂಭಿಸಿದರು. ಅಸ್ಪೃಶ್ಯ ಸಮುದಾಯದ ಮಹರ್ ಮತ್ತು ಮಾಂಗ ಜಾತಿಗಳ ಹುಡುಗ ಮತ್ತು ಹುಡುಗಿಯರಿಗಾಗಿ ಅವರು ಪುಣೆಯಲ್ಲಿ ಕೆಲವು ಶಾಲೆಗಳನ್ನು ತೆರೆದರು. ಬಾಲಕಿಯರ ಶಾಲೆಗೆ ಅವರಿಗೆ ಅಧ್ಯಾಪಕಿ ಬೇಕಾಗಿತ್ತು. ಆದ್ದರಿಂದ ಅವರು ತಮ್ಮ ಅನಕ್ಷರಸ್ಥ ಹೆಂಡತಿಗೆ ಶಿಕ್ಷಣ ನೀಡಿದರು ಮತ್ತು ಅವರನ್ನೆ ಅಧ್ಯಾಪಕಿಯನ್ನಾಗಿ ಮಾಡಿದರು. ಇದು ೧೯ನೇ ಶತಮಾನದ ಮಧ್ಯಭಾಗದಲ್ಲಿ ತೆರೆದುಕೊಂಡಿತು. ಮಹಾತ್ಮ ಫುಲೆಯವರು ಮೆಕಾಲೆಯ 'ಕೆಳಗೆ ಸೋರಿ ಬರುವ ಸಿದ್ಧಾಂತ' ತನ್ನ ತಲೆ ಮೇಲೆ ನಿಲ್ಲುವಂತೆ ಮಾಡಲು ಫುಲೆ ನಿರ್ಧರಿಸಿದರು. ಶಿಕ್ಷಣವು ಕೆಳಗಿನಿಂದ ಮೇಲಕ್ಕೆ ಹೋಗಬೇಕೆಂಬುದು ಅವರ ನಿಷ್ಠೆಯಾಗಿತ್ತು. ಈ ಕ್ರಾಂತಿಕಾರಿ ನಂಬಿಕೆಯನ್ನು ಕೂಡಲೆ ಫುಲೆಯವರನ್ನು ಮಾನವೀಯತೆ ಮತ್ತು ಸಾಮಾಜಿಕ ನ್ಯಾಯ ಎಂಬ ಮೌಲ್ಯಗಳೊಂದಿಗೆ ಸಂಬಂಧವನ್ನು ಕಲ್ಪಿಸಿತು.

ಮಹಾತ್ಮ ಫುಲೆಯವರು ಹಿಂದುಳಿದ ಮತ್ತು ಅಜ್ಞಾನಿ ಜನರ ಮೇಲೆ ಹೆಚ್ಚುತ್ತಿರುವ ಬ್ರಾಹ್ಮಣರ ಪ್ರಾಬಲ್ಯ, ಶಿಕ್ಷಣ ಮತ್ತು ಮತ-ಧರ್ಮದಲ್ಲಿನ ಬ್ರಾಹ್ಮಣರ ಏಕಸ್ವಾಮ್ಯತೆ ಮತ್ತು ಅವರು ಹಿಂದುಳಿದ ಜನರ ಮೇಲೆ ಗುಲಾಮಿತನವನ್ನು ಹೇರಲು ಧಾರ್ಮಿಕ ಮತ್ತು ಸಾಂಸ್ಕೃತಿಕ ಅಧಿಕಾರವನ್ನು ಸಾರಾಸಗಟಾಗಿ ದುರುಪಯೋಗಪಡಿಸಿಕೊಳ್ಳುವ ವಿರುದ್ಧ ಹಿಂದುಳಿದ ಮತ್ತು ಅಮಾಯಕ ಜನರ ಪರವಾಗಿ ಬಂಡಾಯದ ಬಾವುಟವನ್ನು ಹಾರಿಸಿದರು. ಪುರೋಹಿತ ಒಂದಲ್ಲ ಒಂದು ನೆಪದಿಂದ ಜನರನ್ನು ಮೋಸಗೊಳಿಸುತ್ತಿದ್ದನು. ಬ್ರಾಹ್ಮಣರ ಆಡಳಿತದ ಸಿಬ್ಬಂದಿ ಪ್ರಜೆಗಳನ್ನು ಶೋಷಿಸುತ್ತಿದ್ದರು. ೧೯ನೇ ಶತಮಾನದ ಎರಡನೇ ಮಧ್ಯಭಾಗದಲ್ಲಿ

ಶತಮಾನಗಳವರೆಗೆ ಅಜೇಯಕಾರಿಯಾದ ಈ ದಮನಕಾರಿ ಬ್ರಾಹ್ಮಣತ್ವವನ್ನು ಬಹಿರಂಗವಾಗಿ ಫುಲೆಯವರು ಎದುರಿಸಲು ಸವಾಲು ಹಾಕಿದರು.

ಮಹಾತ್ಮ ಫುಲೆಯವರು ತನ್ನ ಪುಸ್ತಕಗಳಾದ 'ಬ್ರಾಹ್ಮಣಾಂಚೆ ಕಸಬ' (ಬ್ರಾಹ್ಮಣರ ಕುತಂತ್ರ), 'ಗುಲಾಮಗಿರಿ' ಮತ್ತು 'ಶೇಟ್ಕರ್‍ಯಾಚ ಅಸುದ್' (ರೈತರ ಚಾಟಿ) ಗಳಲ್ಲಿ ಸಂಪೂರ್ಣವಾಗಿ ಸುಳ್ಳಿನ ಬ್ರಾಹ್ಮಣತ್ವ ಮತ್ತು ದಮನಕಾರಿ ಪುರೋಹಿತಶಾಹಿಯ ಘೋರ ಒಳಾಂಗಗಳನ್ನು ಬಡಜನರಿಗೆ ತೋರಿಸಲು ಪರಿಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ತನ್ನ ಅಧ್ಯಯನದ ಆಧಾರದ ಮೇರೆಗೆ ಫುಲೆಯವರು ಬ್ರಾಹ್ಮಣರ ಪ್ರಾಬಲ್ಯದ ಸಮಾಜಶಾಸ್ತ್ರೀಯವಾದ ಉಗಮ ಹಾಗು ಅದು ನಿರ್ಮಿಸಿದ ಪರಿಪೂರ್ಣ ಗುಲಾಮತ್ವವನ್ನು ವಿವರಿಸಿದ್ದಾರೆ. ಇರಾನಿನ ಆರ್ಯಭಟ್ ತಂಡಗಳು ಈ ದೇಶವನ್ನು ಆಕ್ರಮಣ ಮಾಡಿದವು ಮತ್ತು ಸಂಪೂರ್ಣವಾಗಿ ಸೋಲಿಸಿದವು, ಹೆದರಿಸಿದವು. ಈ ಪ್ರದೇಶದ ಮೂಲನಿವಾಸಿಗಳನ್ನು ಗುಲಾಮರನ್ನಾಗಿ ಮಾಡಿದವು. ಅವರು ಮತಧರ್ಮವನ್ನು ರಚಿಸಿದರು ಮತ್ತು ತನ್ನ ಅಡಿಯಲ್ಲಿ ಜಾತಿ ಸಂರಚನೆಯನ್ನು ರಚಿಸಿದವು ಮತ್ತು ಅವರ ಮುಂದುವರಿಕೆಯನ್ನು ಖಾತರಿಪಡಿಸಲು ನ್ಯಾಯಯುತವಲ್ಲದ ವಿಧಿಗಳನ್ನು, ಗ್ರಂಥಗಳನ್ನು ಮತ್ತು ದಮನಕಾರಿ ಕಾನೂನುಗಳನ್ನು ಬೆಳೆಸಿದರು. ಅವರು ಈ ಭೂಮಿಯ ಒಡೆಯರೆಂದು ತಮ್ಮನ್ನೇ ಘೋಷಿಸಿಕೊಂಡರು. ಬಹುಜನ ಸಮಾಜವನ್ನು ಗುಲಾಮರನ್ನಾಗಿ ಪರಿವರ್ತಿಸಿ, ಅವರಿಗೆ ಸಂಕೋಲೆಗಳನ್ನು ತೊಡಿಸಿದರು.

ಮಹಾತ್ಮ ಫುಲೆಯವರು ಸೈದ್ಧಾಂತಿಕ ವಿವರಣೆಗಳಲ್ಲೆ ನಿಲ್ಲಲಿಲ್ಲ. ಅವರು 'ಸತ್ಯಶೋಧಕ ಸಮಾಜ' ಎಂಬ ಸಂಸ್ಥೆಯನ್ನು ಕಟ್ಟಿದರು. ಅದು ಬ್ರಾಹ್ಮಣರ ಪ್ರಾಬಲ್ಯದ ವಿರುದ್ಧ ಯುದ್ಧ ಸಾರಿತು. ಎಲ್ಲಾ ಮಾನವರನ್ನು ನಿರ್ಮಿಸಿದ ಸೃಷ್ಟಿಕರ್ತ ಒಬ್ಬನೆ. ಅವನನ್ನು ಪೂಜಿಸಲು ಯಾವ ಮಧ್ಯವರ್ತಿಯು ಬೇಕಿಲ್ಲ ಎಂಬುದೇ ಅವರ ಬೋಧನೆಯ ಒತ್ತು. ಮಹಾತ್ಮ ಫುಲೆಯವರು "ಸಾರ್ವಜನಿಕ ಸತ್ಯಧರ್ಮ ಪುಸ್ತಕ" ಎಂಬ ಗ್ರಂಥವನ್ನು ಬರೆದರು. ಅದರಲ್ಲಿ ಅವರು ಸುಳ್ಳಿನ ಬ್ರಾಹ್ಮಣ ಮತ-ಧರ್ಮವನ್ನು ಖಂಡಿಸಿ 'ಸತ್ಯಧರ್ಮ'ವನ್ನು ಅಪ್ಪಿಕೊಳ್ಳುವಂತೆ ತನ್ನ ಅನುಯಾಯಿಗಳಿಗೆ ಕರೆನೀಡಿದ್ದಾರೆ. ಅವರ ಮಾರ್ಗದರ್ಶಕ ತತ್ವಗಳು ಸತ್ಯತೆಯಿಂದ ಕೂಡಿವೆ. ಈ ಪುಸ್ತಕದಲ್ಲಿ ಅವರು ಸ್ವಾತಂತ್ರ್ಯ ಸಮಾನತೆ ಮತ್ತು ಸಾರ್ವತ್ರಿಕ ಸಹೋದರ ಭಾವನೆಗಳನ್ನು ಪ್ರಶಂಸಿಸಿದ್ದಾರೆ ಮತ್ತು ಇಡೀ ವಿಶ್ವ ಒಂದು ಕುಟುಂಬದ ತತ್ವದ ಮೇರೆಗೆ ಇಡಿ ಮಾನವತೆಯನ್ನು ಒಳಗೊಳ್ಳುವ ಮಾನವ-ಧರ್ಮವನ್ನು ಸ್ಥಾಪಿಸಿದ್ದಾರೆ. ಈ ಪುಸ್ತಕವು ಸತ್ಯಶೋಧಕದ ಕಾರ್ಯಕರ್ತರಿಗೆ ಒಂದು ಬೈಬಲ್ (ಪವಿತ್ರ) ಗ್ರಂಥವಾಗಿದೆ. ಹಲವಾರು ಶತಮಾನಗಳವರೆಗೆ ಅಜ್ಞಾನ ಮತ್ತು ಬಡತನಗಳಿಂದ ಶಾಪಗ್ರಸ್ತ ಬಹುಜನ ಸಮಾಜದ ಪ್ರಣಾಳಿಕೆ (ಚಾರ್ಟರ್) ಯಾಗಿದೆ. ಫುಲೆಯವರ ತತ್ವ ಸಿದ್ಧಾಂತ ಮತ್ತು ಅವರ ಕಾರ್ಯಗಳು ಪಾಶ್ಚಿಮಾತ್ಯ ಶಿಕ್ಷಣದಿಂದ ಸ್ಫೂರ್ತಿಗೊಂಡ ಮೂರ್ತ ಪ್ರತಿಕ್ರಿಯೆಯಾಗಿದೆ. ಮಹಾರಾಷ್ಟ್ರದಲ್ಲಿ ಕ್ರಿಶ್ಚಿಯನ್ ಮಿಷನರಿಗಳು ಮಾಡಿದ ಮಾನವೀಯತೆಯ ಕೆಲಸದಿಂದ ಏಸುಕ್ರಿಸ್ತನು ಬೋಧಿಸಿದ ಮಾನವತೆಯಿಂದ ಮತ್ತು ಪಾಶ್ಚಿಮಾತ್ಯ ಬಂಡಾಯ ತತ್ವಜ್ಞಾನಿಯಾದ ಥಾಮಸ್ ಪೈನೆ ಬರೆದ 'ರೈಟ್ಸ್ ಆಫ್ ಮ್ಯಾನ್' ಮತ್ತು 'ಏಜ್ ಆಫ್ ರೀಜನ್' ಎಂಬ ಎರಡು ಪುಸ್ತಕಗಳಿಂದ ಮೂಲಭೂತವಾಗಿ ಫುಲೆಯವರು ಸ್ಫೂರ್ತಿ ಪಡೆದಿದ್ದರು.

ಫುಲೆಯವರ ಕೃತಿಗಳಲ್ಲಿ ಸಮಕಾಲೀನ ಪಾಶ್ಚಿಮಾತ್ಯ ಶಿಕ್ಷಣಕ್ಕೆ ಮಾಡಿದ ಪ್ರಗತಿಪರ ಪ್ರತಿಕ್ರಿಯೆ ವಿರೋಧವೆಂದು ಸಮಕಾಲೀನ ಸಮಾಜ ಭಾವಿಸಿದರೂ ಬಹುಜನ ಸಮಾಜಕ್ಕೆ ಸಂಬಂಧಿಸಿದಂತೆ

ಅಪವಾದವಾಗಿದೆ. ಫುಲೆಗಿಂತ ಬಹಳ ಮೊದಲು ಶಿಕ್ಷಿತ ಬ್ರಾಹ್ಮಣ ಯುವಕರು ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳ ಬಾವುಟವನ್ನು ಹಾರಿಸಿದ್ದರು. ಪಾಶ್ಚಿಮಾತ್ಯ ಶಿಕ್ಷಣದಿಂದ ಮೊಳೆತ ಸುಧಾರಣಾ ವಿಚಾರಗಳು ೧೮೩೨ರಲ್ಲಿ ಮಹಾರಾಷ್ಟ್ರದಲ್ಲಿ ಆಚಾರ್ಯ ಬಾಲಶಾಸ್ತ್ರಿ ಜಂಭೇಕರವರು 'ದರ್ಪಣ' (ಕನ್ನಡಿ) ಎಂಬ ನಿಯತಕಾಲಿಕೆಯನ್ನು ಪ್ರಾರಂಭಿಸಿದಾಗ ಮಾತಿನ ರೂಪವನ್ನು ಪಡೆದವು. ಇದು ಹೊಸಯುಗದ ಮಾತು (ಧ್ವನಿ) ಪುನರುಜ್ಜೀವನವಾಗಿತ್ತು. ತನ್ನ ನಿಯತಕಾಲಿಕೆಯಲ್ಲಿ ಬಾಲಶಾಸ್ತ್ರಿಯವರು ಅತಿ ಪ್ರೀತಿಯಿಂದ ಸುಧಾರಣೆಗಳಾದ ವಿಧವಾ ವಿವಾಹ, ವಯಸ್ಕರ ವಿವಾಹ ಮತ್ತು ಮಹಿಳೆಯರ ಶಿಕ್ಷಣ ಮೊದಲಾದವುಗಳ ಬಗ್ಗೆ ಪ್ರಗತಿಪರ ಅಭಿಪ್ರಾಯಗಳನ್ನು ಪ್ರಕಟಿಸುತ್ತಿದ್ದರು. ಆ ಕಾಲದಲ್ಲಿ ಅಂತಹ ಸುಧಾರಣೆಗಳ ಬಗ್ಗೆ ಮಾತನಾಡುವುದು ಒಂದು ಸಾಹಸವೇ ಆಗಿತ್ತು. ಬಾಲಶಾಸ್ತ್ರಿಗಳು ೧೮೪೬ರಲ್ಲಿ ಮರಣಹೊಂದಿದರು. ಅವರ ನಂತರ ಲೋಕಹಿತವಾದಿ ಗೋಪಾಲ ಹರಿದೇಶಮುಖರು ತಮ್ಮ ಲೇಖನಿಯ ಮೂಲಕ ಬ್ರಾಹ್ಮಣರಿಗೆ ಚಾಟಿ ಏಟುಗಳನ್ನು ಕೊಟ್ಟು ಸಮಾಜವನ್ನು ಜಾಗೃತಗೊಳಿಸಲು ಪ್ರಯತ್ನಿಸಿದರು. ಅವರು ತಮ್ಮ ಅಂಕಣ 'ಶತಪತ್ರ' (ನೂರು ಪತ್ರಗಳು, ೧೮೪೮–೫೦) ಮೂಲಕ ಪರಿಪೂರ್ಣವಾಗಿ ಅನೀತಿಯ ಮತ್ತು ಮತ–ಧರ್ಮದ ಬಗ್ಗೆ ಕನಿಷ್ಠ ಪ್ರಮಾಣದಲ್ಲಿ ಲಕ್ಷ್ಯ ಕೊಡದ ಬ್ರಾಹ್ಮಣರ ಬಗ್ಗೆ ವಾಗ್ಬಾಣಗಳ ಸುರಿಮಳೆಯನ್ನೆ ಕರೆದರು. ಒಮ್ಮೊಮ್ಮೆ ಅವರನ್ನು (ಬ್ರಾಹ್ಮಣರು) 'ಮೂರ್ಖರು' ಮತ್ತು 'ಕಾಡುಪ್ರಾಣಿ'ಗಳೆಂದು ಸಂಬೋಧಿಸಿದ್ದುಂಟು. ಅವರು ಅನಿಷ್ಟ ಮೂಢನಂಬಿಕೆ, ಆಚರಣೆಗಳು, ಬಾಲ್ಯವಿವಾಹ, ಮುದುಕರೊಂದಿಗೆ ಬಾಲಕಿಯರ ಮದುವೆ, ವಿಧವೆಯರ ತಲೆಯನ್ನು ಬೋಳಿಸುವುದು, ಮೊದಲಾದವುಗಳ ಬಗ್ಗೆ ತೀಕ್ಷ್ಣ ಟೀಕೆಗಳನ್ನು ಮಾಡುತ್ತಿದ್ದರು. ಲೋಕಹಿತವಾದಿ ವಿಧವೆಯರ ಪುನರ್ ವಿವಾಹ, ವಯಸ್ಕರ ವಿವಾಹ ಮತ್ತು ಮಹಿಳೆಯ ಶಿಕ್ಷಣ ಮೊದಲಾದ ಸುಧಾರಣೆಗಳನ್ನು ಉತ್ಸಾಹಪೂರ್ಣವಾಗಿ ಬೆಂಬಲಿಸುತ್ತಿದ್ದರು.

ಜಂಭೇಕರ್ ಮತ್ತು ಲೋಕಹಿತವಾದಿಗಳಿಂದ ಪ್ರಾರಂಭಗೊಂಡ ಮಹಾರಾಷ್ಟ್ರದಲ್ಲಿನ ಸಾಮಾಜಿಕ ಚಳುವಳಿಯು ಭಾವು ಮಹಾಜನ, ವಿಷ್ಣುಬುವಾ ಬ್ರಹ್ಮಚಾರಿ, ವಿಷ್ಣುಶಾಸ್ತ್ರಿ ಪಂಡಿತ, ದಾದೋಬ ಪಾಂಡುರಂಗ, ಡಾ. ಆತ್ಮರಾಮ ಪಾಂಡುರಂಗ, ಡಾ. ರಾಮಕೃಷ್ಣ ಭಂಡಾರಕರ, ನ್ಯಾಯಮೂರ್ತಿ ಮಹದೇವ್ ಗೋವಿಂದ ರಾನಡೆ ಮತ್ತು ಪ್ರಾಂಶುಪಾಲ ಗೋಪಾಲ ಗಣೇಶ ಆಗರಕರ ಮೊದಲಾದ ಮಹಾನ್ ಸಾಮಾಜಿಕ ಸುಧಾರಕರನ್ನು ಹುಟ್ಟುಹಾಕಿದೆ. ಈ ಸಾಮಾಜಿಕ ಸುಧಾರಕರು ಹಿಂದು ಧರ್ಮದಲ್ಲಿರುವ ಅನಿಷ್ಟ ಕಂದಾಚಾರಗಳನ್ನು ಕಿತ್ತೊಗೆಯಲು ತನ್ನೆಲ್ಲಾ ಸಾಧ್ಯವಾದ ಪ್ರಯತ್ನಗಳನ್ನು ಮಾಡಿದ್ದಾರೆ. ಒಮ್ಮೊಮ್ಮೆ ಅವರು ಸಾರ್ವಜನಿಕರ ಕೋಪವನ್ನು ಎದುರಿಸಬೇಕಾಗಿತ್ತು. ಮಹಾರಾಷ್ಟ್ರದ ಜ್ಞಾನೋದಯದ ಇತಿಹಾಸದಲ್ಲಿ ಅವರ ಪಾತ್ರ ಮಹತ್ತರವಾದದ್ದು. ಕೆಲವು ಅಪವಾದಗಳನ್ನು ಬಿಟ್ಟರೆ, ಬಹಳಷ್ಟು ಸುಧಾರಕರು ಬ್ರಾಹ್ಮಣ ಜಾತಿಯಿಂದ ಬಂದಿದ್ದಾರೆ. ಮತ್ತು ಬಹುಮಟ್ಟಿಗೆ ಅವರ ಸುಧಾರಣೆಗಳ ವಿಚಾರಗಳು ಬ್ರಾಹ್ಮಣರಿಗೆ ಮಾತ್ರ ಸಂಬಂಧಿಸಿವೆ. ಸಮಾಜದ ಮೇಲ್ವರ್ಗಕ್ಕೆ ಸಂಬಂಧಿಸಿದ ಸಮಸ್ಯೆಗಳಾದ ವಿಧವೆಯ ವಿವಾಹ, ಬಾಲ್ಯ ವಿವಾಹ, ವಿಧವೆಯರ ತಲೆ ಬೋಳಿಸುವಿಕೆ, ಮಹಿಳೆಯ ಶಿಕ್ಷಣ, ಧಾರ್ಮಿಕ ವಿಧಿ–ಆಚರಣೆಗಳು ಮೊದಲಾದ ಸಮಸ್ಯೆಗಳ ಜಾಡಿನಲ್ಲಿಯೇ ಸುಧಾರಣಾ ಚಳುವಳಿ ಚಲಿಸಬೇಕಾಗುತ್ತದೆ. ಸುಧಾರಣಾ ಸಂಸ್ಥೆಗಳಾದ ಬ್ರಹ್ಮ ಸಮಾಜ ಅಥವಾ ಪ್ರಾರ್ಥನಾ ಸಮಾಜಗಳ ಆದರ್ಶಗಳು ಮತ್ತು ಕೆಲಸಗಳು ಸಮಾಜದ ಕೆಳವರ್ಗಗಳಿಗೆ ಇಳಿದು ಬರಲೇ ಇಲ್ಲ.

ಬ್ರಿಟಿಷರ ಆಡಳಿತ ಮತ್ತು ಪಾಶ್ಚಿಮಾತ್ಯ ಶಿಕ್ಷಣದ ಪ್ರಚಾರವು ಗಣ್ಯ ಬ್ರಾಹ್ಮಣರ ವರ್ಗದಲ್ಲಿ ವಿಚಿತ್ರವಾದ ಪ್ರತಿಕ್ರಿಯೆಯನ್ನುಂಟುಮಾಡಿವೆ. ಅದು ಪ್ರತಿಕ್ರಿಯಾ ಸ್ವರೂಪದ್ದಾಗಿದೆ. ಬ್ರಿಟಿಷರ ಆಳ್ವಿಕೆಯನ್ನು ದ್ವೇಷಿಸುವ, ತೀವ್ರವಾದ ರಾಷ್ಟ್ರೀಯ ಹೆಮ್ಮೆಯನ್ನು ಬರಿಸುವ ಮತ್ತು ಹಿಂದೂಧರ್ಮ ಮತ್ತು ಪರಂಪರೆಯನ್ನು ಹೊಗಳುವಂತಹ ಒಂದು ವರ್ಗವು ಮಹಾರಾಷ್ಟ್ರದ ಬ್ರಾಹ್ಮಣರಲ್ಲಿ ಮೂಡಿಬಂದಿದೆ. ಅವರಿಗೆ ಸ್ಫೂರ್ತಿಯ ಸ್ರೋತ ೧೮೭೪ರಲ್ಲಿ 'ನಿಬಂಧ ಮಾಲ' ಎಂಬ ನಿಯತಕಾಲಿಕೆಯನ್ನು ಪ್ರಾರಂಭಿಸಿದ ಲೇಖಕ ವಿಷ್ಣು ಶಾಸ್ತ್ರಿ ಚಿಪ್ಲುಣ್‌ಕರರು. ನಂತರ 'ಲೋಕಮಾನ್ಯ'ರೆಂದು ಹೆಸರುಗಳಿಸಿದ ಬಾಲಗಂಗಾಧರ ತಿಲಕರು ಅವರ ಸಹವರ್ತಿ (ಅಸೋಸಿಯೇಟ್) ಯಾಗಿದ್ದರು. ವಿಷ್ಣುಶಾಸ್ತ್ರಿಗಳು ರಾಜಕೀಯ ಗುಲಾಮಿತನದ ಬಗ್ಗೆ ಉಗ್ರ ವಿರೋಧಿಗಳಾಗಿದ್ದರು. ಮತ್ತು ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾಗಿದ್ದ ಒಂದು ತೀವ್ರವಾದ ರಾಷ್ಟ್ರೀಯತೆಯ ಸ್ಫೂರ್ತಿಯನ್ನು ಜನರಲ್ಲಿ 'ನಿಬಂಧ ಮಾಲೆ'ಯಲ್ಲಿ ತಮ್ಮ ಶಕ್ತಿಯುತ ಪ್ರಬಂಧಗಳ ಮೂಲಕ ತುಂಬಿದರು. ಇದು ನಿಸ್ಸಂದೇಹವಾಗಿ ಸ್ತುತ್ಯಾರ್ಹವಾದ ಕಾಣಿಕೆಯಾಗಿದೆ. ಆದರೆ ಬ್ರಾಹ್ಮಣ ಮೇಲರಿಮೆಯ ರೋಗಕ್ಕೆ ಮತ್ತು ದಮನಕಾರಿ ಕಂದಾಚಾರಗಳು ಸೇರಿದಂತೆ ಧಾರ್ಮಿಕ ಪರಂಪರೆಗಳ ಹೆಮ್ಮೆಗೆ ತುತ್ತಾಗಿ, ಧಾರ್ಮಿಕ ಸುಧಾರಣೆಯ ಶತ್ರುವಾಗಲು ಬಯಸಿದರು. ಇದು ಮಹಾರಾಷ್ಟ್ರದ ಸಾಮಾಜಿಕ ಇತಿಹಾಸದ ಮೇಲೆ ಹೆಚ್ಚು ಪರಿಣಾಮಕಾರಿಯಾದ ಪ್ರಭಾವ ಬೀರಿದೆ.

ಮತಧರ್ಮದಲ್ಲಿ ರೂಢಿತಪ್ಪಿದ ಅನಿಷ್ಟ ಕಂದಾಚಾರಗಳನ್ನು ಹೊಂದಿರುವುದರಿಂದ ಹಿಂದು ಸಮಾಜ ಅಧಃಪಾತಾಳವನ್ನು ಮುಟ್ಟಿರುವುದರಿಂದ ಬೇಗನೇ ಅದಕ್ಕೆ ಪ್ರಬಲವಾದ ಔಷಧಿ ನೀಡಬೇಕಾಗಿದೆಯೆಂದು ಜನರಿಗೆ ದೊಡ್ಡ ಧ್ವನಿಯಲ್ಲಿ ಲೋಕಹಿತವಾದಿ ಮತ್ತು ಫುಲೆಯವರು ಹೇಳಿದ್ದರೂ ಚಿಪ್ಲುಣ್‌ಕರ ಅವರು ಸಾಮಾಜಿಕ ಆರೋಗ್ಯದಲ್ಲಿ ಯಾವ ದೋಷವೂ ಇಲ್ಲವೆಂದು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತಿದ್ದಾರೆ. ವಿಷ್ಣು ಶಾಸ್ತ್ರಿಗಳು ಹೀಗೆ ಹೇಳಿದರು: "ದೇಶದಲ್ಲಿ ಯಾವುದೇ ದೋಷವಿಲ್ಲ, ನಾಡಿಮಿಡಿತ ಸರಿಯಾಗಿದೆ. ತನ್ನ ಹೆಸರಿಗೆ ಉಚಿತವಾದ ಯಾವುದೇ ರೋಗವು ದೇಹವನ್ನು ಬಾಧಿಸುತ್ತಿಲ್ಲ. ನಮ್ಮ ಆಧುನಿಕ ದಿನದ ವಿದ್ವಾಂಸರು ಆಧುನಿಕ ಔಷಧಿಯ ಪದ್ಧತಿಯನ್ನು ಅನುಸರಿಸುತ್ತಿರುವುದರಿಂದ ಅವರು ಪ್ರಬಲ ಪ್ರಮಾಣದ (ಡೋಜ್) ಔಷಧಿ ಕೊಡುವುದಕ್ಕೆ ತೊಡಗಿದ್ದಾರೆ. ಮತ್ತು ಗಂಭೀರವಾದ ಶಸ್ತ್ರಚಿಕಿತ್ಸೆಗಳನ್ನು ನೀಡುತ್ತಿದ್ದಾರೆ. ಒಟ್ಟಿನಲ್ಲಿ ದೇಹಕ್ಕೆ ಬಾಧೆ ಕೊಡಲಾಗುತ್ತಿದೆ ಮತ್ತು ಯಾವ ಕಾರಣವಿಲ್ಲದೆ ಅದಕ್ಕೆ ಶಿಕ್ಷೆ ನೀಡಲಾಗುತ್ತಿದೆ. ನಾವು ಇವೆಲ್ಲವನ್ನು ನಿಲ್ಲಿಸಿ, ಸರಳ ಪೌಷ್ಠಿಕ ಉಪಚಾರ ನೀಡಲು ಪ್ರಾರಂಭಿಸಿದರೆ ಮೊದಲಿನಂತೆ ನಾವು ಬಲಿಷ್ಠರಾಗಿ ಕಳೆಗೂಡುವುದರಲ್ಲಿ ಯಾವ ಸಂದೇಹವು ಇಲ್ಲ. ವಾಸಿಮಾಡಲಾಗದ ಕೊರತೆಗಳಿಂದ ನಮ್ಮ ದೇಶ ದುಃಸ್ಥಿತಿಯಲ್ಲಿದೆ ಎಂಬುದಲ್ಲ. ಎಲ್ಲಾ ರಾಷ್ಟ್ರಗಳು ಸಾಮಾನ್ಯವಾಗಿ ಇವುಗಳನ್ನು ಎದುರಿಸಬೇಕಾಗಿದೆ ಹಾಗೂ ಅಂಥ ಸ್ಥಿತಿಗಳನ್ನು ಎದುರಿಸಿದ್ದೇವೆ."[8]

ಲೋಕಹಿತವಾದಿ ಮತ್ತು ಮಹಾತ್ಮ ಫುಲೆಯವರ ಬರವಣಿಗೆಗಳು ವಿಷ್ಣು ಶಾಸ್ತ್ರಿಯವರ ಬ್ರಾಹ್ಮಣ್ಯದ ಹೆಮ್ಮೆಯನ್ನು ಘಾಸಿಗೊಳಿಸಿದವು. ನೊಂದ ವಿಷ್ಣುಶಾಸ್ತ್ರಿ ಫುಲೆಯ ಮೇಲೆ ಹೀನಾಯವಾಗಿ ದಾಳಿ ಮಾಡಿದರು. ಫುಲೆಯವರು ತಮ್ಮ ಪುಸ್ತಕಗಳಲ್ಲಿ ಬಳಸಿದ ಭಾಷೆಯ ಗುಣಮಟ್ಟಕ್ಕೆ ಉತ್ತರವಾಗಿ ಶಾಸ್ತ್ರಿಯವರು ನಿಂದನಾತ್ಮಕ ಶಬ್ದಗಳನ್ನು ಬಳಸಿದ್ದಾರೆ: "ಆದರೆ ಮತಧರ್ಮದ ಸ್ಥಾಪಕರಾದ ನಮ್ಮ ಶೂದ್ರ ನಲಿದಾಡುತ್ತಿದ್ದಾರೆ. ಅವರಿಗೆ ವ್ಯಾಕರಣದ ಪರಿಜ್ಞಾನವೇ ಇಲ್ಲ ಮತ್ತು ಹೇಗೆ ಶುದ್ಧ ಭಾಷೆಯಲ್ಲಿ ಬರೆಯಬೇಕೆಂಬ ಗಂಧವೆ ಇಲ್ಲ ......... ಈ ಸಂದರ್ಭಗಳಲ್ಲಿ ಶ್ರುತಿ ಮತ್ತು ಸ್ಮೃತಿಗಳನ್ನು ವಿಶ್ಲೇಷಿಸುವ ಚಾಳಿಯನ್ನು ಸ್ವಲ್ಪ ಸಮಯದವರೆಗೆ

ಮರೆಯಬೇಕೆಂದು ನನ್ನ ಶೂದ್ರ ಸಹೋದರನಿಗೆ ಸಲಹೆ ನೀಡುತ್ತೇನೆ. ಮೊದಲು ಅವನು ವ್ಯಾಕರಣ ಮತ್ತು ಬರವಣಿಗೆಯ ಬಗ್ಗೆ ಪಾಠ ಹೇಳಿಸಿಕೊಳ್ಳಲಿ .........."[9]

ಈ ಟೀಕೆಗಳು ತಮ್ಮ ಬ್ರಾಹ್ಮಣ ಮೇಲರಿಮೆಯ ರೋಗದಿಂದ ಹುಟ್ಟಿದ ವಿಷ್ಣುಶಾಸ್ತ್ರಿಗಳ ಒಣಜಂಭವನ್ನು ಎತ್ತಿ ತೋರಿಸುತ್ತವೆ. ಮತ್ತೊಂದು ಸಂದರ್ಭದಲ್ಲಿ ಅವರು ಬರೆಯುತ್ತಾರೆ: " 'ಗುಲಾಮಗಿರಿ'ಯಂತಹ ಪುಸ್ತಕಗಳನ್ನು ಬರೆಯುವುದರಿಂದ ಮತ್ತು ಎಲ್ಲಾ ವಿಧದಲ್ಲೂ ಅವರಿಗಿಂತ ಉತ್ತಮರಾಗಿರುವವರನ್ನು ತೆಗಳುವುದರಿಂದ ಅವರ ಉದ್ದೇಶವು ಎಂದೆಂದಿಗೂ ನೆರವೇರುವುದಿಲ್ಲ. ತನ್ನ ಜಾತಿಯ ಜನರ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿ ಅವರು ಕರ್ತವ್ಯ–ನಿಷ್ಠರಾಗುವುದಕ್ಕೆ ಗಮನಕೊಡಬೇಕು. ಆದರೆ ಬ್ರಾಹ್ಮಣರ ಬಗ್ಗೆ ಕೊಂಕು ನುಡಿದರೂ ವಾಸ್ತವದಲ್ಲಿ ಅವರು ಜ್ಞಾನದ ಕೀಲಿ–ಕೈಗಳನ್ನು ಹಿಡಿದುಕೊಂಡಿದ್ದಾರೆ. ಅವರ ಸಹಕಾರವಿಲ್ಲದೆ ಇತರೆ ಜಾತಿಗಳು ಈ ಜ್ಞಾನವನ್ನು ಪಡೆಯುವುದಕ್ಕೆ ಸಾಧ್ಯವಿಲ್ಲ."[10]

ಲೋಕಮಾನ್ಯ ತಿಲಕರು ಎಗ್ಗಿಲ್ಲದೆ ಬಹಿರಂಗವಾಗಿ ತಮ್ಮ ಬ್ರಾಹ್ಮಣರ ಅಹಂಕಾರವನ್ನು ತೋರಿಸಲಿಲ್ಲ. ಆದರೆ ಅವರು ಸ್ಪಷ್ಟವಾಗಿ ವಿಷ್ಣುಶಾಸ್ತ್ರಿಗಳ ಪಂಥಕ್ಕೆ ಸೇರುತ್ತಾರೆ. ಪ್ರಾರಂಭದಲ್ಲಿ ತಿಲಕರು ಮತ್ತು ತಮ್ಮ ಸ್ನೇಹಿತ, ನಂತರ ಮಹಾನ್ ಸಾಮಾಜಿಕ ಸುಧಾರಕನೆಂದು ಹೆಸರುಗಳಿಸಿದ ಪ್ರಾಂಶುಪಾಲ ಗೋಪಾಲ ಗಣೇಶ ಆಗರ್‌ಕರ್ ಅವರು ವಿಷ್ಣುಶಾಸ್ತ್ರಿ ತಂಡಕ್ಕೆ ಸೇರಿದವರು. ತಿಲಕರು ಮತ್ತು ಆಗರ್‌ಕರ್ ಅವರು ೧೮೮೧ರಲ್ಲಿ 'ಕೇಸರಿ' ಮತ್ತು 'ಮಹ್‌ರಟ್ಟ' ದಿನಪತ್ರಿಕೆಗಳನ್ನು ಪ್ರಾರಂಭಿಸುವಾಗ ವಿಷ್ಣುಶಾಸ್ತ್ರಿಗಳ ಜತೆಯಲ್ಲಿದ್ದರು. ಆದರೆ ಮೂಲಭೂತವಾಗಿ ಆಗರ್‌ಕರ್ ಅವರು ಒಬ್ಬ ನಿಷ್ಠಾವಂತ ಸುಧಾರಣಾವಾದಿ ಮತ್ತು ಗಂಭೀರ ಚಿಂತಕರಾಗಿದ್ದರು. ತಿಲಕರು ಯಥಾಸ್ಥಿತಿವಾದಿಗಳಿಗೆ ಬೆಂಬಲ ನೀಡಿದರು ಮತ್ತು ಸಾಮಾಜಿಕ ಸುಧಾರಣೆಗಳನ್ನು ನಿಧಾನಗೊಳಿಸಬೇಕೆಂದು ಬಯಸಿದ್ದರು. ಜನರ ಒಪ್ಪಿಗೆಯನ್ನು ಪಡೆದು ಹಂತ ಹಂತವಾಗಿ ಸುಧಾರಣೆಗಳನ್ನು ಮಾಡಬೇಕೆಂದು ಹಾಗೂ ತೀರಾ ಅಗತ್ಯವಾಗಿರುವ ಸುಧಾರಣೆಗಳನ್ನು ಮಾತ್ರ ತೆಗೆದುಕೊಳ್ಳಬೇಕೆಂದು ಹೇಳಿದರು. ಆಗರ್‌ಕರ್ ಅವರು ಸುಧರಣಾವಾದಿಗಳಿಗೆ ಬೌದ್ಧಿಕ ನಾಯಕತ್ವವನ್ನು ಒದಗಿಸಿಕೊಟ್ಟರು ಮತ್ತು ಒಮ್ಮೆ ಅವರಿಗೆ ಬೌದ್ಧಿಕವಾಗಿ ಮನವರಿಕೆಯಾದರೆ ಸಾಮಾಜಿಕ ಜೀವನದ ಎಲ್ಲಾ ವಲಯಗಳಲ್ಲಿ ಮೂಲಭೂತ ಸುಧಾರಣೆಗಳನ್ನು ಕೈಗೊಳ್ಳಬೇಕೆಂದು ಸದಾ ಒತ್ತಿ ಹೇಳುತ್ತಿದ್ದರು. ಇಬ್ಬರ ನಡುವೆ ಸಾಮಾಜಿಕ ಸಮಸ್ಯೆಗಳ ಬಗೆಗಿನ ಬೌದ್ಧಿಕ ಭಿನ್ನಾಭಿಪ್ರಾಯಗಳು ಅನಿವಾರ್ಯ. ಇಬ್ಬರ ನಡುವಿನ ಬಿರುಕು ಹೆಚ್ಚಾಯಿತು ಮತ್ತು ೧೮೮೭ರಲ್ಲಿ ಆಗರ್‌ಕರ್ ಅವರು ಕೇಸರಿ–ಮಹ್‌ರಟ್ಟ ದಿನಪತ್ರಿಕೆಗಳಿಂದ ಹೊರಬಂದರು ಮತ್ತು ಅವರು ತಮ್ಮದೇ ಆದ 'ಸುಧಾರಕ' ಎಂಬ ನಿಯತಕಾಲಿಕೆಯನ್ನು ಪ್ರಾರಂಭಿಸಿದರು. ಇದೇ ಸಮಯದಲ್ಲಿ ಮಹಾರಾಷ್ಟ್ರದಲ್ಲಿ ಮಹಿಳಾ ಶಿಕ್ಷಣದ ಬಗ್ಗೆ ಒಂದು ಮಹಾಚರ್ಚೆ ನಡೆಯಿತು. ಆಗರ್‌ಕರ್ ಅವರು ಹುಡುಗ ಮತ್ತು ಹುಡುಗಿಯರಿಗೆ ಒಂದೇ ಗುಣಮಟ್ಟದ ಶಿಕ್ಷಣವನ್ನು ನೀಡಬೇಕೆಂದು ಆಗರ್‌ಕರ್ ಅವರು ಒತ್ತಾಯಿಸಿದರೆ ತಿಲಕರು ಅದನ್ನು ವಿರೋಧಿಸಿದರು. ನಂತರ ೧೮೯೧ರಲ್ಲಿ ಹಿಂದು ಗ್ರಂಥಗಳ ಆದೇಶಕ್ಕನುಗುಣವಾಗಿ ವಿವಾಹಕ್ಕೆ ಒಪ್ಪಿಗೆಯಾದ ವಯಸ್ಸನ್ನು ಕುರಿತ ಮಸೂದೆಯನ್ನು ತಿಲಕರು ಕಟುವಾಗಿ ವಿರೋಧಿಸಿದರು ಮತ್ತು ಅವರು ಯಥಾಸ್ಥಿತಿವಾದಿಗಳ ಬಗ್ಗದ ನಾಯಕರೆಂದು ತೋರ್ಪಡಿಸಿಕೊಂಡಿದ್ದರು.[11]

೧೯ನೇ ಶತಮಾನದ ಕೊನೆಯ ಎರಡು ದಶಕಗಳ ಕಾಲದಲ್ಲಿ ಪ್ರಗತಿಗಾಮಿ ಮತ್ತು ಪ್ರತಿಗಾಮಿಗಳ ನಡುವಣ ಸಂಘರ್ಷದ ಬಗ್ಗೆ ಸೂಕ್ಷ್ಮವಾಗಿ ವ್ಯಾಖ್ಯಾನ ನೀಡುತ್ತಾ ತರ್ಕತೀರ್ಥ ಲಕ್ಷ್ಮಣಶಾಸ್ತ್ರಿ ಜೋಷಿಯವರು

ಹೀಗೆ ಬರೆಯುತ್ತಾರೆ: "ಪ್ರತಿಗಾಮಿಗಳ ಪ್ರತಿಕ್ರಿಯೆ ಗತ ಇತಿಹಾಸದ ಕಷ್ಟಕೋಟಲೆಗಳನ್ನು ಮುಚ್ಚಿಡುತ್ತದೆ ಮತ್ತು ಅವನತಿಗೆ ಹೊಣೆಯಾದ ಶಕ್ತಿಗಳನ್ನು ಸಮರ್ಥಿಸುತ್ತದೆ. ಸುಧಾರಕರ ಪ್ರತಿಕ್ರಿಯೆ ಗತ ಮತ್ತು ಇತಿಹಾಸದ ನಿಖರವಾದ ಅರ್ಥವನ್ನು ಒತ್ತಿ ಹೇಳುತ್ತದೆ ಮತ್ತು ಪ್ರಗತಿಯ ರಹಸ್ಯವನ್ನು ನಿರ್ದಿಷ್ಟವಾಗಿ ಸೂಚಿಸುತ್ತದೆ."[12]

೧೯ನೇ ಶತಮಾನದ ಮಹಾರಾಷ್ಟ್ರದ ಸಾಮಾಜಿಕ ಇತಿಹಾಸದ ತೀವ್ರಗತಿಯ ಪರಿಶೀಲನೆಯಲ್ಲಿ ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆ ಅವರು ನೀಡಿದ ಕಾಣಿಕೆಯನ್ನು ಯಾರೂ ಕಡೆಗಣಿಸುವಂತಿಲ್ಲ. ಮಹಾರಾಷ್ಟ್ರದ ಸಾಮಾಜಿಕ ಆಂದೋಲನದ ಮತ್ತು ೧೯ನೇ ಶತಮಾನದ ಕೊನೆಯ ಮೂರು ದಶಕಗಳ ಕಾಲದಲ್ಲಿನ ಜ್ಞಾನೋದಯದ ಪ್ರಚಾರದಲ್ಲಿ ಅವರು ವ್ಯವಸ್ಥಾಪಕ ಪಾತ್ರವನ್ನು ವಹಿಸಿದ್ದರು. ಎಲ್ಲ ಸಾಮಾಜಿಕ ವಲಯಗಳಲ್ಲಿನ ರಾಜಕಾರಣ, ಸಮಾಜಸೇವೆ, ಮತ_ಧರ್ಮ ಮತ್ತು ಅರ್ಥಶಾಸ್ತ್ರಗಳಲ್ಲಿ ಸಮಗ್ರ ಸುಧಾರಣೆಗಳನ್ನು ಒತ್ತಾಯಿಸಿದರು. ಜನರ ಜಾಗೃತಿಗಾಗಿ ಅವರು ಪ್ರಾರಂಭಿಸಿದ ಸಾಮಾಜಿಕ ಚಳುವಳಿಗಳು ರಾಯಗಢ ಕೋಟೆಯ ತುದಿಯಲ್ಲಿರುವ ಶಿವಾಜಿಯ ಸ್ಮಾರಕದ ನವೀಕರಣದಿಂದ ಹಿಡಿದು ಬರಪೀಡಿತ ರೈತರನ್ನು ಕಿತ್ತು ತಿನ್ನುವ ಸಮಸ್ಯೆಗಳವರೆಗೆ ಇವೆ. ಪ್ರಾರ್ಥನಾ ಸಮಾಜ, ಸಾರ್ವಜನಿಕ ಸಭಾ, ಸಾಮಾಜಿಕ ಪರಿಷತ್ತು ಮತ್ತು ಔದ್ಯೋಗಿಕ ಪರಿಷತ್ತು ಮೊದಲಾದ ಸಂಸ್ಥೆಗಳ ಸ್ಥಾಪನೆಯಲ್ಲಿ ಅವರ ಪಾಲು ಇದೆ. ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನಕ್ಕೆ ನೀಡಿದ ಅವರ ಕಾಣಿಕೆ ಮಹತ್ತರವಾದುದು. ರಾಷ್ಟ್ರೀಯ ಮಟ್ಟದಲ್ಲಿ ದೇಶೀಯ ಭಾರತೀಯರ ಪ್ರಗತಿಪರ ರಾಜಕಾರಣಕ್ಕೆ ಅವರು ಅಡಿಪಾಯವನ್ನು ಹಾಕಿದರು. ತಿಲಕರ ಮಾತುಗಳಲ್ಲಿ ಹೇಳುವುದಾದರೆ ನ್ಯಾಯಮೂರ್ತಿ ರಾನಡೆ ಅವರು ಮಹಾರಾಷ್ಟ್ರದ ಶೀತ, ಜೀವವಿಲ್ಲದ ಜನರಲ್ಲಿ ಬೆಚ್ಚನೆಯ ಜೀವವನ್ನು ತುಂಬುವ ಕಷ್ಟಕರವಾದ ಹೊಣೆಯನ್ನು ನಿಭಾಯಿಸಿದರು.

ನ್ಯಾಯಮೂರ್ತಿ ರಾನಡೆ ಅವರು ತನ್ನ ಸಹವರ್ತಿ ಗಣೇಶ ವಾಸುದೇವ ಜೋಷಿ (ಸಾರ್ವಜನಿಕ ಕಾಕ) ಯವರ ಸಹಕಾರದಿಂದ ೧೮೭೧ ರಿಂದ ಪುಣೆಯಲ್ಲಿ 'ಸಾರ್ವಜನಿಕ ಸಭೆ'ಯ ಕಾರ್ಯ ಕಲಾಪಗಳನ್ನು ನಡೆಸಿದರು. 'ಸಾರ್ವಜನಿಕ ಸಭೆ' ಇಂಡಿಯದ ಆಡಳಿತದ ಹೊಣೆಗಾರಿಕೆಯ ವ್ಯವಸ್ಥೆಯಿಂದ ಹಿಡಿದು ಬರಪೀಡಿತ ರೈತರ ದೊಂಬಿಯ ಸಮಸ್ಯೆಗಳನ್ನು ಎತ್ತಲಾಯಿತು. ತಿಲಕರು ೧೮೯೫ರಲ್ಲಿ ಬಹುಮತದಿಂದ ಸಭೆಯನ್ನು ವಶಪಡಿಸಿಕೊಂಡರು. ಅದೇ ವರ್ಷ, ತಿಲಕರ ಅನುಯಾಯಿಗಳು ರಾನಡೆ ಪ್ರಾಯೋಜಕತ್ವ ನೀಡಿದ 'ಸಾರ್ವಜನಿಕ ಪರಿಷತ್ತನ್ನು' ಕಾಂಗ್ರೆಸ್ ಅಧಿವೇಶನದಿಂದ ಹೊರಹಾಕುವಲ್ಲಿ ಯಶಸ್ವಿಯಾದರು. ಆ ದಿನದವರೆಗೆ ಸಾರ್ವಜನಿಕ ಪರಿಷತ್ತು ಕಾಂಗ್ರೆಸ್ ಅಧಿವೇಶನದಲ್ಲಿ ನಿಯತವಾಗಿ ಸಭೆಗಳನ್ನು ನಡೆಸುತ್ತಿತ್ತು. ಕಾಂಗ್ರೆಸ್ಸಿನ ವೇದಿಕೆಯಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯದ ಸಮಸ್ಯೆಯನ್ನು ಮಾತ್ರ ಚರ್ಚಿಸಬೇಕು ಮತ್ತು ಸಾಮಾಜಿಕ ಸಮಸ್ಯೆಗಳನ್ನು ಇಲ್ಲಿ ಎತ್ತಬಾರದೆಂಬ ನಿಲುವನ್ನು ತಿಲಕರ ಅನುಯಾಯಿಗಳು ತಾಳಿದರು. ಇದು ಮಹಾರಾಷ್ಟ್ರದಲ್ಲಿನ ಸಾಮಾಜಿಕ ಸುಧಾರಣಾ ಆಂದೋಲನಕ್ಕೆ ಭಾರಿ ಹೊಡೆತವಾಗಿತ್ತು ಮತ್ತು ಅಷ್ಟೇ ಅಲ್ಲ ಇಡೀ ದೇಶದ ಸಾಮಾಜಿಕ ಸುಧಾರಣೆಗೆ ಭಾರಿ ಸೋಲಾಗಿತ್ತು.

೧೮೯೩ರಲ್ಲಿ ಮುಂಬೈಯಲ್ಲಿ ಹಿಂದು-ಮುಸ್ಲಿಂ ಗಲಭೆಗಳು ನಡೆದವು. ತಿಲಕರು ಹಿಂದುಗಳ ಪರವಹಿಸಿದ ಈ ಹಿನ್ನೆಲೆಯ ಸಂದರ್ಭದಲ್ಲಿ ತಿಲಕರು ವಾರ್ಷಿಕ ಸಾರ್ವಜನಿಕ ಗಣೇಶೋತ್ಸವಗಳ ಆಚರಣೆಯನ್ನು ಪ್ರಾರಂಭಿಸಿದರು. ನಂತರ ಬೇಗನೆ, ಅವರು ಶಿವಾಜಿ ಹಬ್ಬದ ಆಚರಣೆಗೆ ಹುರಿದುಂಬಿಸಿದರು. ಈ ಎಲ್ಲಾ ಉಪಕ್ರಮಗಳು ಸಾಮಾಜಿಕ ಸಮಸ್ಯೆಗಳಿಗೆ ಬಂದಾಗ ಪುಣೆಯ ಕಟ್ಟಾ ಸಂಪ್ರದಾಯಗಳ

ಪ್ರತಿಗಾಮಿ ಗುಂಪಾದ ಬ್ರಾಹ್ಮಣರ ಕೂಟದ ಬಲವನ್ನು ಗೆದ್ದುಕೊಂಡಿತು. ಈ ಬ್ರಾಹ್ಮಣರು ರಾಷ್ಟ್ರೀಯ ಭಾವನೆಯಿಂದ ಕೂಡಿದ ರಾಜಕೀಯ ಪ್ರಜ್ಞಾವಂತರಾಗಿದ್ದರು. ರಾಜಕೀಯವಾಗಿ ಬಲಿಷ್ಠವಾಗಿದ್ದ ಈ ಗುಂಪು ತಿಲಕರಿಗೆ ಬೆಂಬಲ ನೀಡಿತು ಮತ್ತು ಅವರು ಅವರನ್ನು ನೋಯಿಸಲು ಸಿದ್ಧರಿರಲಿಲ್ಲ. ಈ ಕಾರಣದಿಂದಲೆ ಅವರು ಅನೇಕ ಸಂದರ್ಭಗಳಲ್ಲಿ ಸಾಮಾಜಿಕ ವಿಷಯಗಳನ್ನು ಕುರಿತಂತೆ ಅವರು ಪ್ರತಿಗಾಮಿ ನಿಲುವನ್ನು ಹೊಂದುತ್ತಿದ್ದರು.

ಬ್ರಿಟಿಷ್ ಆಡಳಿತಕ್ಕೆ ಸಶಸ್ತ್ರ ವಿರೋಧವನ್ನು ಮಹಾರಾಷ್ಟ್ರದಲ್ಲಿ ಗಮನಿಸಬೇಕು. ೧೮೫೭ಕ್ಕಿಂತ ಬಹಳ ಮೊದಲು ಪುಣೆ–ಸತಾರ ಪ್ರದೇಶಗಳಲ್ಲಿ ೧೮೨೬ ಮತ್ತು ೧೮೩೧ರ ನಡುವೆ ಉಮಜಿ ನಾಯ್ಕ ನೇತೃತ್ವದಲ್ಲಿ ನಡೆದ ರಾಮೋಷಿ ಬಂಡಾಯ ಮತ್ತು ೧೮೪೪ರಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ಸಮನ್‌ಗಢ, ಪನ್ಹಾಳ ಮತ್ತು ವಿಶಾಲಗಢ್ ಕೋಟೆಗಳಿಂದ ಗಡ್ಕರಿಗಳ (ಕೋಟೆಗಳ ಮುಖ್ಯಸ್ಥರು) ದಂಗೆಗಳು ಕೆಲವು ಉದಾಹರಣೆಗಳಾಗಿವೆ.[13] ಆದರೆ ಬ್ರಿಟಿಷರು ತಮ್ಮ ಭಾರಿ ಸೈನಿಕ ಸಾಧನಗಳಿಂದ ಅವುಗಳ ಹುಟ್ಟಡಗಿಸಿದರು. ೧೮೫೭ರ ಭಾರತದ ದಂಗೆಯ ಪ್ರತಿಧ್ವನಿಗಳು ಮಹಾರಾಷ್ಟ್ರದ ಕೊಲ್ಹಾಪುರ, ಸತಾರ, ನಾಗಪುರ ಕಡೆಗಳಲ್ಲಿ ಕೇಳಿಬಂದವು. ಆದರೆ ಬ್ರಿಟಿಷರು ಆ ಪ್ರತಿಭಟನೆಗಳನ್ನು ಬಹುಬೇಗನೇ ದಮನಗೊಳಿಸಿದರು. ಸಿಪಾಯಿ ದಂಗೆಕೋರರನ್ನು ನಿರ್ದಾಕ್ಷಿಣ್ಯವಾಗಿ ಸದೆಬಡಿಯುತ್ತಾ ದೇಶದ ಬೇರೆ ಭಾಗಗಳಲ್ಲಿ ಏಳುತ್ತಿದ್ದ ಪ್ರತಿಭಟನೆಗಾರರಲ್ಲಿ ಭಯವನ್ನು ಮೂಡಿಸಿದ್ದರು. ಬ್ರಿಟಿಷ್ ರೂಜ್‌ನ ಪ್ರತಿಷ್ಠೆಗೆ ಈ ಪ್ರಕ್ರಿಯೆಯಲ್ಲಿ ಭಂಗವುಂಟಾಯಿತು. ಇದನ್ನು ಸರಿಪಡಿಸುವುದಕ್ಕಾಗಿ ಆಡಳಿತದ ವಿಧಾನದಲ್ಲಿ ಮೂಲಭೂತ ಬದಲಾವಣೆಗಳನ್ನು ಪ್ರಾರಂಭಿಸಿದರು. ಈಸ್ಟ್ ಇಂಡಿಯ ಕಂಪನಿಯ ಆಜ್ಞೆಯನ್ನು ರದ್ದುಗೊಳಿಸಲಾಯಿತು ಮತ್ತು ಇಂಗ್ಲೆಂಡಿನ ರಾಣಿಯ ಆಡಳಿತವನ್ನು ಘೋಷಿಸಲಾಯಿತು. ರಾಣಿಯ ಆಡಳಿತದ ಘೋಷಣೆಯು ಭಾರತದ ಜನತೆಗೆ ಹಲವಾರು ಉದಾರವಾದ ಭರವಸೆಗಳನ್ನು ನೀಡಿತು.

ಮಹಾರಾಷ್ಟ್ರದ ವಿದ್ಯಾವಂತ ವರ್ಗ ಬ್ರಿಟಿಷ್ ಆಳ್ವಿಕೆಗೆ ನಿಷ್ಠೆಯನ್ನು ತೋರಿಸಿತು ಮತ್ತು ದಂಗೆಯಲ್ಲಿ ಭಾಗವಹಿಸಲಿಲ್ಲ ಎಂಬ ಸಂಗತಿಯನ್ನು ಗಮನಿಸಬೇಕು. ಸಾಮಾನ್ಯ ಜನರು ಅಸಹಾಯಕರಾಗಿದ್ದರು. ಬ್ರಿಟಿಷ್ ಆಡಳಿತವನ್ನು ಸಶಸ್ತ್ರ ಹೋರಾಟದಿಂದ ಉರುಳಿಸಬಹುದೆಂಬ ನಂಬಿಕೆಯು ೧೮೫೭ರ ದಂಗೆಯು ವಿಫಲತೆಯಿಂದ ಕುಸಿದುಬಿತ್ತು. ಆದರೆ ಮತ್ತೆ ಸಶಸ್ತ್ರ ಹೋರಾಟದ ಪ್ರಯತ್ನ ನಡೆಯುವುದಿಲ್ಲ ಎಂಬ ಅರ್ಥವಲ್ಲ. ಬ್ರಿಟಿಷ್ ಆಡಳಿತಕ್ಕೆ ತಲೆದೋರಿದ ಸಶಸ್ತ್ರ ಹೋರಾಟಗಳ ಉದಾಹರಣೆಗಳಾಗಿವೆ. ೧೮೭೯ರಲ್ಲಿ ಪುಣೆಯಲ್ಲಿನ ಬ್ರಾಹ್ಮಣರ, ಕೋಲಿಗಳ, ಮಾಂಗರ, ಮಹರರ ಮತ್ತು ಮುಸ್ಲಿಮರ ಸಮುದಾಯಗಳ ಸಹಾಯದಿಂದ ನಡೆದ ವಾಸುದೇವ ಬಲವಂತ ಫಡ್ಕೆಯ ಸಶಸ್ತ್ರ ಹೋರಾಟವು ವಿಫಲವಾದರೂ ಅದರ ಪರಿಣಾಮ ಮಹತ್ತರವಾದುದು. ವಾಸುದೇವ ಬಲವಂತರನ್ನು ದಸ್ತಗಿರಿ ಮಾಡಲಾಯಿತು ಮತ್ತು ಪ್ರತಿಭಟನೆಯನ್ನು ತುಳಿಯಲಾಯಿತು. ಬ್ರಿಟಿಷ್ ಆಡಳಿತಗಾರರು ವಿಶೇಷವಾಗಿ ಹ್ಯೂಮ್ ವಂಶಸ್ಥ ಅಧಿಕಾರಿಗಳನ್ನು ಕೂಡಲೇ ಬದಲಾಯಿಸಲಾಯಿತು. ನಂತರ ಹ್ಯೂಮ್ ರಾಷ್ಟ್ರೀಯ ಕಾಂಗ್ರೆಸ್ಸನ್ನು ಸ್ಥಾಪಿಸಿದರು. ದೇಶೀಯ ಜನರ ಅತೃಪ್ತಿ ಮತ್ತು ಆಶೋತ್ತರಗಳ ಪ್ರಕಟಣೆಗೆ ಒಂದು ರಾಜಕೀಯ ವೇದಿಕೆಯು ಅತ್ಯಗತ್ಯವಾಯಿತು. ನಂತರ ೧೮೮೫ರಲ್ಲಿ ಅಂತಹ ವೇದಿಕೆಯನ್ನು ಭಾರತದ ರಾಷ್ಟ್ರೀಯ ಕಾಂಗ್ರೆಸ್ ರೂಪದಲ್ಲಿ ರಚಿಸಲಾಯಿತು.

ಪುಣೆಯಲ್ಲಿ ೧೮೯೭ರಲ್ಲಿ ಛಾಫೇಕರ್ ಸಹೋದರರು ರ್‍ಯಾಂಡನನ್ನು ಕೊಲೆಮಾಡಿದ್ದ ಫಡ್ಕೆಯ ಬಂಡಾಯದ ನಂತರ ಬ್ರಿಟಿಷರಿಗೆ ಮತ್ತೊಂದು ಹೊಡೆತವಾಗಿತ್ತು. ಆ ವರ್ಷದಲ್ಲಿ ಪುಣೆಯಲ್ಲಿ ಪ್ಲೇಗ್

ಭಾರಿ ಅನಾಹುತವನ್ನುಂಟುಮಾಡಿತ್ತು. ಪರಿಸ್ಥಿತಿಯನ್ನು ತಹಬಂದಿಗೆ ತರಲು ಕಳುಹಿಸಿದ್ದ ರ್‍ಯಾಂಡ್ ಅಧಿಕಾರಿ ಜನರಿಗೆ ಹೆಚ್ಚು ತೊಂದರೆಯನ್ನುಂಟು ಮಾಡಿದ. ಛಾಫೆಕರ್ ಸಹೋದರರು ರಾಣಿ ವಿಕ್ಟೋರಿಯರ ವಜ್ರಮಹೋತ್ಸವ ಆಚರಣೆಯ ಸಂಭ್ರಮದ ದಿನ ರ್‍ಯಾಂಡರನ್ನು ಕೊಲೆ ಮಾಡುವ ಮೂಲಕ ಸೇಡು ತೀರಿಸಿಕೊಂಡರು. ಈ ಘಟನೆಯು ಆಡಳಿತಗಾರರಿಗೆ ಅಪಾರ ಸಿಟ್ಟು ಉಂಟುಮಾಡಿತು. ತಿಲಕರು ತಮ್ಮ 'ಕೇಸರಿ' ಪತ್ರಿಕೆಯಲ್ಲಿ ಆಡಳಿತಗಾರರ ಮೇಲೆ ಕೋಪೋದ್ರಿಕ್ತ ದಾಳಿಯನ್ನು ನಡೆಸಿದರು. ಸರಕಾರವು ಅವರ ರಾಜದ್ರೋಹದ ಲೇಖನಗಳಿಗಾಗಿ ಅವರನ್ನು ಶಿಕ್ಷಿಸಿತು. ಅವರನ್ನು ಸಂಚಿನ ಅಪರಾಧಕ್ಕಾಗಿ ಅವರಿಗೆ ಒಂದುವರೆ ವರ್ಷ ಜೇಲು ಶಿಕ್ಷೆಯನ್ನು ವಿಧಿಸಿತು. ತಿಲಕರು ಅಂತರಂಗದಲ್ಲಿ ಛಾಫೆಕರ್ ಸಹೋದರರ ಬಗ್ಗೆ ಸಹಾನುಭೂತಿ ಹೊಂದಿದ್ದರೂ ಬಹಿರಂಗವಾಗಿ ಅವರ ಪರವಾಗಿ ಇರದಂತಹ ಎಚ್ಚರಿಕೆಯನ್ನು ತಿಲಕರು ವಹಿಸಿದ್ದರು.[14]

ಆಡಳಿತಗಾರರು ವಾಸುದೇವ ಬಲವಂತರ ಸಶಸ್ತ್ರ ಬಂಡಾಯ ಮತ್ತು ರ್‍ಯಾಂಡರ ಕಗ್ಗೊಲೆಯನ್ನು ದೇಶದ್ರೋಹವೆಂದು ಪರಿಗಣಿಸಿದರು. ಬ್ರಿಟಿಷರ ಭಯಾನಕತೆಯಿಂದ ರೊಚ್ಚಿಗೆದ್ದ ಹಲವು ಮರಾಠಿ ಯುವಕರು ಛಾಫೇಕರ್ ಸಹೋದರರ ದೇಶಭಕ್ತಿಯ ಕ್ರಿಯೆಗಳಿಗೆ ಅವರು ಹೆಚ್ಚು ಗೌರವದಿಂದ ನೋಡಿದರು. ಅವರು ಮಹಾರಾಷ್ಟ್ರದಲ್ಲಿ ಸಶಸ್ತ್ರ ಕ್ರಾಂತಿಕಾರರಾದ ಸ್ವಾತಂತ್ರ್ಯವೀರ ಸಾವರ್‌ಕರ್‌ರಿಗೆ ಸ್ಫೂರ್ತಿದಾತರಾದರು. ಸಾಕಷ್ಟು ಸಂಖ್ಯೆಯಲ್ಲಿ ಭಯೋತ್ಪಾದಕರ ಗುಂಪುಗಳು ಪುಣೆ, ಕೊಲ್ಹಾಪುರ, ನಾಗಪುರ ಮತ್ತು ವಾರ್ಧಾಗಳಲ್ಲಿ ನಾಯಿಕೊಡೆಗಳಂತೆ ಹುಟ್ಟಿಕೊಂಡವು. ಕೊಲ್ಹಾಪುರದಲ್ಲಿ 'ಶಿವಾಜಿ ಕ್ಲಬ್' ಅಂತಹ ಗುಂಪುಗಳಲ್ಲಿ ಒಂದು.

೧೯ನೇ ಶತಮಾನದ ಕೊನೆಯ ದಶಕದಲ್ಲಿ ಭಯೋತ್ಪಾದಕ ದೇಶಭಕ್ತರು ಸಕ್ರಿಯರಾಗಿದ್ದರು. ಈ ಅವಧಿಯಲ್ಲಿ ರಾಷ್ಟ್ರ-ವ್ಯಾಪಿ ಸಂಘಟನೆಯಾದ ಭಾರತದ ರಾಷ್ಟ್ರೀಯ ಕಾಂಗ್ರೆಸ್ ೧೮೮೫ರಲ್ಲಿ ಸ್ಥಾಪನೆಗೊಂಡಿತು. ಇದು ಸಂಸದೀಯ ಹೋರಾಟಗಳನ್ನು ಕೈಗೊಂಡಿತು. ಈ ಅವಧಿಯಲ್ಲಿ ಕಾಂಗ್ರೆಸ್ಸಿನ ಅಧಿವೇಶನಗಳು ಮುಂಬೈ, ನಾಗಪುರ ಮತ್ತು ಪುಣೆಗಳಲ್ಲಿ ನಡೆದವು. ಕಾಂಗ್ರೆಸ್ಸಿನ ಉದಯವು ೧೯ನೇ ಶತಮಾನದಲ್ಲಿ ರಾಷ್ಟ್ರೀಯತೆಯ ಆದರ್ಶದಲ್ಲಿ ಕೊನೆಗೊಂಡಿತು. ಒಂದು ವಿಧದಲ್ಲಿ ಇದು ರಾಷ್ಟ್ರೀಯ ಮಟ್ಟದಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಮುಖ್ಯ ರಾಜಕೀಯ ಪರಿಣಾಮವಾಗಿದೆ. ಮಹಾರಾಷ್ಟ್ರದ ನಾಯಕರು ರಾಷ್ಟ್ರೀಯ ಕಾಂಗ್ರೆಸ್ಸಿನ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಮರಾಠಿ ದೇಶೀಯರಾದ ರಾನಡೆ, ಭಂಡಾರಕರ, ತೆಲಾಂಗ್, ನೂಲ್ಕರ್ ಮ್ಹಾಸ್ಕೆ, ಆಪ್ಟೆ ಮತ್ತು ಆಗರ್‌ಕರ್ ಅವರು ದಾದಾಭಾಯಿ ನವರೋಜಿ ಮತ್ತು ಬಾಂಬೆಯ ಫಿರೋಜ್‌ಷಾಹ್ ಮೆಹ್ತರ ಜೊತೆಯಲ್ಲಿ ಕಾಂಗ್ರೆಸ್ಸಿನ ಮೊದಲನೇ ಅಧಿವೇಶನದಲ್ಲಿ ಭಾಗವಹಿಸಿದ್ದರು.

ಮಹಾರಾಷ್ಟ್ರದಲ್ಲಿ ಬ್ರಿಟಿಷರ ಆಡಳಿತ ಸ್ಥಾಪನೆಗೊಂಡಾಗ ದೇಶೀಯರ ಎರಡು ಪೀಳಿಗೆಗಳು ಬ್ರಿಟಿಷ್ ಆಡಳಿತದಿಂದ ಮತ್ತು ಅದು ತಂದ ಪಾಶ್ಚಿಮಾತ್ಯ ಜ್ಞಾನದ ಪರಿಣಾಮದಿಂದ ಮಂತ್ರಮುಗ್ಧರಾದರು. ದಡ್ಡರಾದ ಹಿಂದು ಜನರನ್ನು ಜಾಣರನ್ನಾಗಿ ಮಾಡಲು ದೇವರೆ ಬ್ರಿಟೀಷ್ ಆಡಳಿತವನ್ನು ವ್ಯವಸ್ಥೆಗೊಳಿಸಿದ್ದಾನೆಂದು ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಜನರು ಪ್ರಾಮಾಣಿಕವಾಗಿ ನಂಬಿದ್ದರು. ಲೋಕಹಿತವಾದಿ ತನ್ನ 'ಶತಪತ್ರ'ದಲ್ಲಿ ೧೮೪೯ರಲ್ಲಿ ಈ ಪ್ರಾತಿನಿಧಿಕ ಮನೋಭಾವವನ್ನು ವ್ಯಕ್ತಪಡಿಸಿದ್ದಾರೆ. ೧೯ನೇ ಶತಮಾನದ ಕೊನೆಯವರೆಗೆ ಬಹುಮಟ್ಟಿಗೆ ಮರಾಠಿ ನಾಯಕತ್ವದ ದೃಷ್ಟಿಕೋನ ಇದೇ ಆಗಿತ್ತು. ಮಹಾರಾಷ್ಟ್ರದ ಮಹಾಸುಧಾರಕ ಮತ್ತು ಕಾಂಗ್ರೆಸ್ಸಿನ ಸ್ತಂಭವಾದ ನ್ಯಾಯಮೂರ್ತಿ ರಾನಡೆ ಅವರು ಇದೇ

ಮನೋಭಾವವನ್ನು ಹೊಂದಿದ್ದರು. ಅವರ ಅಭಿಪ್ರಾಯದಲ್ಲಿ ದೈವ ಪ್ರೇರಣೆಯಿಂದ ಈ ದೇಶದಲ್ಲಿ ಕಾನೂನುಬದ್ಧ ಆಡಳಿತ ನಡೆಸಲು ಮತ್ತು ಶಾಂತಿ ಸ್ಥಾಪಿಸಲು ಬ್ರಿಟಿಷರು ಈ ದೇಶಕ್ಕೆ ಬಂದಿದ್ದಾರೆ. ಆದ್ದರಿಂದ ಕಾನೂನು ಮಾಡುವುದು ಮತ್ತು ಅದನ್ನು ಜಾರಿಗೊಳಿಸುವುದು ಅವರ ಕೆಲಸ ಮತ್ತು ನಾವು ಈ ದೇಶದ ಪ್ರಜೆಗಳಾಗಿ ಅದನ್ನು ಶ್ರದ್ಧಾಪೂರ್ವಕವಾಗಿ ಪಾಲಿಸುವುದು ಎಂದು ಅವರು ನಂಬಿದ್ದರು. ಬ್ರಿಟಿಷರು ದೇಶೀಯ ಭಾರತೀಯರನ್ನು ಮಹಾರಾಣಿಯವರ ಘೋಷಣೆಯಂತೆ ಸಮಾನವಾಗಿ ಪರಿಗಣಿಸಬೇಕು ಮತ್ತು ಬದಲಿಗೆ ದೇಶೀಯರು ಅವರಿಗೆ ನಿಷ್ಠರಾಗಿರಬೇಕು ಎಂದು ಅವರು ಭಾವಿಸಿದ್ದರು. ಅವರಿಗೆ ಆಡಳಿತಗಾರರ ಅಂತಃಸಾಕ್ಷಿಯ ಬಗ್ಗೆ ದೃಢವಾದ ನಂಬಿಕೆಯಿತ್ತು. ಅವರ ಅಂತಿಮ ರಾಜಕೀಯ ಗುರಿ ಬ್ರಿಟಿಷ್ ಒಡೆಯರಲ್ಲಿ ಒಂದು ರೀತಿಯ ಸ್ವಾಯತ್ತತೆಯನ್ನು ಗೆಲ್ಲುವುದಾಗಿತ್ತು. ಬ್ರಿಟಿಷರು ದೇಶೀಯರಿಗೆ ಆಡಳಿತದ ಕೌಶಲ್ಯಗಳಲ್ಲಿ ತರಬೇತಿ ನೀಡಬೇಕು ಮತ್ತು ದೇಶೀಯರು ಸ್ವತಃ ಕಾನೂನುಬದ್ಧ ವಿಧಾನಗಳಿಂದ ಅದನ್ನು ಸಾಧಿಸಲು ಮಂದಗಾಮಿ ಆಂದೋಲನದಲ್ಲಿ ತೊಡಗಬೇಕೆಂದು ಅವರು ಬಯಸಿದ್ದರು. ರಾಣಡೆಯವರ ಈ ದೃಷ್ಟಿಕೋನವು 'ಮಂದಗಾಮಿ ಧೋರಣೆ' ಎಂದು ಸುಪರಿಚಿತವಾಗಿದೆ. ಕಾಂಗ್ರೆಸ್ ಪ್ರಾರಂಭದ ದಿನಗಳಲ್ಲಿ ಇದನ್ನು ಅಂಗೀಕರಿಸಿತ್ತು.

ಮಹಾರಾಷ್ಟ್ರದಲ್ಲಿ ವಿಶೇಷವಾಗಿ ಪುಣೆಯಲ್ಲಿ ಚಿಪ್ಳೂಣಕರ್, ತಿಲಕ ಮತ್ತು ಆಗರ್‌ಕರ್ ಅಡಿಯಲ್ಲಿ ತೀವ್ರಗಾಮಿ ಯುವಕ ಗುಂಪೊಂದು ಮಂದಗಾಮಿಗಳ ಗುರಿಯನ್ನು ವಿರೋಧಿಸುತ್ತಾ ಬೆಳೆಯತೊಡಗಿತು. ೧೮೭೦ರ ನಂತರ ಸಾಮಾನ್ಯ ಜನರ ಸ್ಥಿತಿ ತುಂಬಾ ಹದಗೆಟ್ಟಿತ್ತು. ಬರಗಾಲದಂತಹ ಪ್ರಕೃತಿ ವಿಕೋಪಗಳ ಸಂಚಿತ ಪರಿಣಾಮ, ಕಠೋರವಾಗಿ ರೈತರಿಂದ ಕಂದಾಯ ವಸೂಲಿ, ಲೇವಾದೇವಿಗಾರರ ನಿಷ್ಕರುಣೆಯ ಶೋಷಣೆ ಮೊದಲಾದವುಗಳಿಂದ ಸಾಮಾನ್ಯ ಜನರು ದಿವಾಳಿಯಾಗತೊಡಗಿದರು. ಭಾರತದಲ್ಲಿ ೧೮೭೬–೭೭ರಲ್ಲಿ ತಲೆದೋರಿದ ಬರಗಾಲದಿಂದ ಸಾವಿರಾರು ಜನರು ಮತ್ತು ದನಕರುಗಳು ಉಪವಾಸದಿಂದ ಸಾಯುತ್ತಿರುವಾಗ ಬ್ರಿಟನ್ನಿನ ರಾಣಿ 'ಭಾರತದ ಚಕ್ರವರ್ತಿನಿ'ಯಾದಳೆಂಬುದನ್ನು ವೈಭವವಾಗಿ ದೆಹಲಿಯಲ್ಲಿ ಆಚರಿಸುವ ಸಲುವಾಗಿ ಗೌರ್ನರ್ ಜನರಲ್ ಲಿಟನ್ ಲಕ್ಷಾಂತರ ರೂಪಾಯಿಗಳನ್ನು ಸುಲಿಗೆ ಮಾಡಿದನು. ಸರಕಾರದ ಅಂತಹ ಕ್ರಮಗಳು ಖಂಡಿತವಾಗಿ ದೇಶೀಯ ಜನರ ಗಾಯಗಳಿಗೆ ಉಪ್ಪು ಸವರಿದಂತಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ, ಲಿಟನ್ ದೇಶೀಯ ಪತ್ರಿಕೆಗಳ ಕತ್ತು ಹಿಸುಕಲು ಸುಗ್ರೀವಾಜ್ಞೆಯನ್ನು ಹೊರಡಿಸಿದನು. ಈ ಸಂದರ್ಭದಲ್ಲಿ ತಿಲಕರು ಮತ್ತು ಆಗರ್‌ಕರ್ ಅವರು ತಮ್ಮ ತೀವ್ರಗಾಮಿ ರಾಜಕೀಯ ವಿಚಾರಗಳನ್ನು ೧೮೮೦ರ ದಶಕದಲ್ಲಿ ಮಂಡಿಸಿದರು. ಈ ಮಧ್ಯೆ ಆಗರ್‌ಕರ್ ಮತ್ತು ತಿಲಕರ ನಡುವೆ ಸಾಮಾಜಿಕ ವಿಷಯಗಳಲ್ಲಿ ಭಿನ್ನಾಭಿಪ್ರಾಯ ಮೂಡಿತು. ಆಗರ್‌ಕರ್ ಅವರು ತೀವ್ರಗಾಮಿ ಸಾಮಾಜಿಕ ನಿಲುವನ್ನು ಅನುಸರಿಸಿದರೆ ತಿಲಕರು ರಾಜಕೀಯದ ತೀವ್ರಗಾಮಿ ಕಾರ್ಯಕ್ರಮದ ಕಡೆಗೆ ಧಾವಿಸಿದರು. ತಿಲಕರಿಗೆ ರಾಜಕೀಯ ವಿಷಯಗಳು ತುರ್ತಾಗಿ ಕಂಡಂತೆ ಸಾಮಾಜಿಕ ವಿಷಯಗಳು ತುರ್ತಾಗಿ ಕಂಡುಬರಲಿಲ್ಲ. ಅವರು ರಾಜಕೀಯ ಹೋರಾಟಕ್ಕೆ ಪ್ರಥಮ ಆದ್ಯತೆ ಕೊಟ್ಟಂತೆ ಸಾಮಾಜಿಕ ಸುಧಾರಣೆಗಳಿಗೆ ಆದ್ಯತೆ ನೀಡಲಿಲ್ಲ. ೧೮೯೬–೯೭ರ ಭೀಕರ ಬರಪರಿಸ್ಥಿತಿಗಳು, ಪ್ಲೇಗಿನಿಂದಾದ ಅಪಾರ ನಷ್ಟ, ಆಡಳಿತವು ಅನುಸರಿಸಿದ ದೌರ್ಜನ್ಯಗಳು, ಸರಕಾರದ ದರ್ಪ ಮತ್ತು ನಿರ್ಲಕ್ಷ್ಯತನಗಳು ತಿಲಕರ ತೀವ್ರಗಾಮಿ ಚಿಂತನೆಗೆ ಸಾಣೆ ಹಿಡಿದವು.

**ಶಾಹು–ಪೂರ್ವ ಕೊಲ್ಹಾಪುರ ಸಂಸ್ಥಾನ**

ಭಾರತದ ಇತರೆ ರಾಜ ಸಂಸ್ಥಾನಗಳಂತೆಯೇ ಕೊಲ್ಹಾಪುರದ ಸಂಸ್ಥಾನ ಸಹ ೧೯ನೇ ಶತಮಾನದ ಪ್ರಾರಂಭದಿಂದಲೇ ಬ್ರಿಟಿಷರ ಪ್ರಭಾವದ ವಲಯಕ್ಕೆ ಬರತೊಡಗಿತು. ೧೮೧೨ರಲ್ಲಿ ಶಿವಾಜಿ ಛತ್ರಪತಿ–೧೧ಯ ಆಡಳಿತದಲ್ಲಿ ಒಂದು ಸಂಧಿ(ಒಪ್ಪಂದ)ಯನ್ನು ಹೇರಿದರು. ಆ ಒಪ್ಪಂದದ ವಿಧಿ ಹೀಗಿತ್ತು: "ಬ್ರಿಟಿಷ್ ಸರಕಾರದ ಸಮಾಲೋಚನೆಯಿಲ್ಲದೆ ಛತ್ರಪತಿಯವರು ಯಾವುದೇ ವಿದೇಶಿ ಸರಕಾರದ ವಿರುದ್ಧ ಯುದ್ಧ ಮಾಡುವಂತಿಲ್ಲ. ಅಂಥ ಘಟನೆಯ ಸಂದರ್ಭದಲ್ಲಿ ಮೊದಲಿಗೆ ವಿಷಯವನ್ನು ಸರಕಾರಕ್ಕೆ (ಕಂಪನಿ) ಅದನ್ನು ಅವರು ಅಂತಿಮವಾಗಿ ಪರಿಹರಿಸಲು ಅವರಿಗೆ ತಿಳಿಸಬೇಕು."[15] ಈ ವಿಧಿಯು (ಆರ್ಟಿಕಲ್) ಮೊಟ್ಟಮೊದಲಿಗೆ ಕೊಲ್ಹಾಪುರ ಸಂಸ್ಥಾನದ ಸಾರ್ವಭೌಮತ್ವವನ್ನು ಕೊನೆಗೊಳಿಸಿತು. ೧೮೨೬ರಲ್ಲಿ ಬ್ರಿಟಿಷ್ ಕೊಲ್ಹಾಪುರದ ಸಂಸ್ಥಾನದ ಸೈನ್ಯದ ಮೇಲೆ ಕೆಲವು ನಿಷೇಧಗಳನ್ನು ಹೇರಿತು. ೧೮೨೯ರಲ್ಲಿ ಮತ್ತೊಂದು ಒಪ್ಪಂದವನ್ನು ವಿಧಿಯೊಂದಿಗೆ ಅವರು ಹೇರಿದರು: "ಛತ್ರಪತಿಯವರ ಉತ್ತಮ ಆಡಳಿತವನ್ನು ಖಾತರಿಪಡಿಸುವ ದೃಷ್ಟಿಯಿಂದ ಕಂಪನಿ ಸರಕಾರದ ಆಯ್ಕೆಯ ಹೊಣೆಗಾರಿಕೆಯ ಅಧಿಕಾರಿಯನ್ನು ನೇಮಿಸುವುದು. ಅವನಿಗೆ ಆಡಳಿತದ ಅಧಿಕಾರವನ್ನು ಕೊಡಬೇಕು."[16] ಈ ಒಪ್ಪಂದದೊಂದಿಗೆ ಕೊಲ್ಹಾಪುರ ಛತ್ರಪತಿಯ ಸೈನಿಕ ಮತ್ತು ನಾಗರಿಕ ಆಡಳಿತದ ಆಜ್ಞೆ ಮತ್ತು ನಿಯಂತ್ರಣಗಳೆರಡು ಈಸ್ಟ್ ಇಂಡಿಯಾ ಕಂಪನಿಯ ಕೈಗಳಿಗೆ ಹೋದವು.

೧೮೪೪ರಲ್ಲಿ ಕಂಪನಿಯು ದಾದಾಜಿ ಕೃಷ್ಣ ಪಂಡಿತರನ್ನು ತಮ್ಮ ಪರವಾಗಿ ಕೊಲ್ಹಾಪುರ ಸಂಸ್ಥಾನದ ವ್ಯವಹಾರಗಳನ್ನು ನೋಡಿಕೊಳ್ಳಲು ಕಾರಭಾರಿ (ಮುಖ್ಯ ಆಡಳಿತಗಾರ) ಎಂದು ನೇಮಿಸಿತು. ದಾದಾಜಿ ಕೃಷ್ಣ ಅವರ ಅವಧಿಯಲ್ಲಿ ಕೊಲ್ಹಾಪುರ ಸಂಸ್ಥಾನದ ಗಡ್ಕರಿಗಳು ಬಂಡಾಯವೆದ್ದರು. ಬ್ರಿಟಿಷರು ಉಪಾಯವಾಗಿ ಪ್ರತಿಭಟನೆಯನ್ನು ಬಗ್ಗುಬಡಿದರು ಮತ್ತು ಸೈನಿಕ ಮತ್ತು ನಾಗರಿಕ ಅಧಿಕಾರಗಳುಳ್ಳ ರಾಜಕೀಯ ಮೇಲುಸ್ತುವಾರಿ ಅಧಿಕಾರಿಯನ್ನು ನೇಮಿಸಲು ಒಂದು ಹೊಸ ವ್ಯವಸ್ಥೆಯನ್ನು ಮಾಡಿತು. ಆಗ ಬಾಬಾಸಾಹೇಬ ಛತ್ರಪತಿ ಇನ್ನೂ ಬಾಲಕನಾಗಿದ್ದ. ಆದ್ದರಿಂದ ಇಡೀ ಆಡಳಿತವು ರಾಜಕೀಯ ಮೇಲುಸ್ತುವಾರಿ ಅಧಿಕಾರಿಯ ಕೈಯಲ್ಲಿಯೆ ಬಾಲಕ ರಾಜಕುಮಾರ ವಯಸ್ಕನಾಗುವವರೆಗೆ ಇರಬೇಕಾಗಿತ್ತು. ಮೇಜರ್ ಗ್ರಾಹಮ್ ಅವರನ್ನು ಕೊಲ್ಹಾಪುರ ಸಂಸ್ಥಾನದ ಮೊದಲ ರಾಜಕೀಯ ಮೇಲುಸ್ತುವಾರಿ ಅಧಿಕಾರಿಯಾಗಿ ನೇಮಿಸಲಾಯಿತು (೧೮೪೫). ನಂತರ ೧೮೬೧ರಲ್ಲಿ ರಾಜಕೀಯ ಮೇಲುಸ್ತುವಾರಿ ಅಧಿಕಾರಿಯ ಹುದ್ದೆಯನ್ನು 'ರಾಜಕೀಯ ಏಜೆಂಟ್' ಎಂದು ಉನ್ನತೀಕರಿಸಲಾಯಿತು. ಬಾಬಾ ಸಾಹೇಬ್ ಮಹಾರಾಜರು ವಯಸ್ಕರಾದಾಗ ಅವರಿಗೆ ೧೮೬೪ರಲ್ಲಿ ಅಧಿಕಾರವನ್ನು ಕೊಡಲಾಯಿತು. ಆದರೆ ಅವರು ಸಾಯುವುದಕ್ಕೆ ಮೊದಲು ೨ ವರ್ಷಗಳಿಗಿಂತ ಕಡಿಮೆ ಅವಧಿಯಲ್ಲಿ ಅಧಿಕಾರ ಹೊಂದಿದ್ದರು. ಮತ್ತೊಬ್ಬ ಬಾಲಕ ಛತ್ರಪತಿ ರಾಜಾರಾಮ ಸಿಂಹಾಸನಕ್ಕೆ ಉತ್ತರಾಧಿಕಾರಿಯಾದರು. ಆಡಳಿತವು ಬ್ರಿಟಿಷರ ಏಜೆಂಟರ ಕೈಗಳಲ್ಲಿಯೇ ಉಳಿಯಿತು (೧೮೬೬). ಕೊಲ್ಹಾಪುರ ರಾಜಾರಾಮರಲ್ಲಿ ಪ್ರಜ್ಞಾವಂತ ಮತ್ತು ವಿವೇಕಶಾಲಿಯಾದ ರಾಜನನ್ನು ಪಡೆಯುವುದರಲ್ಲಿತ್ತು. ಆದರೆ ದುರಾದೃಷ್ಟ ಮರುಕಳಿಸಿತು. ಯೂರೋಪಿನ ಪ್ರವಾಸದಲ್ಲಿರುವಾಗ ಅವರು ಇಟಲಿಯ ಫ್ಲಾರೆನ್ಸಿನಲ್ಲಿ ಮರಣಹೊಂದಿದರು (೧೮೭೦). ಮತ್ತೆ ಅಧಿಕಾರ ಬ್ರಿಟಿಷರ ಕೈ ಸೇರಿತು. ಆಗ ದುರಾದೃಷ್ಟವಂತ ರಾಜಕುಮಾರ ಶಿವಾಜಿ ಛತ್ರಪತಿ–೪ (೧೮೭೧) ಸಿಂಹಾಸನವೇರಿದನು. ಆಗ ಅವನ ವಯಸ್ಸು ೯ ವರ್ಷ. ಬ್ರಿಟಿಷರು ಕೊಲ್ಹಾಪುರವನ್ನು ತಮ್ಮ ಏಜೆಂಟ್ ಮೂಲಕ ಆಳತೊಡಗಿದರು. ಆ ಕಾಲದಲ್ಲಿ ಕರ್ಮಠ ಮತ್ತು

ಅಹಂಕಾರಿ ಬ್ರಾಹ್ಮಣ ಅಧಿಕಾರಿ ಮಾಧವ ರಾವ್‌ಬಾರ್ವೆ ಅವರನ್ನು 'ದಿವಾನ್' ಎಂದು ಆ ಸಮಯದಲ್ಲಿ ನೇಮಕ ಮಾಡಲಾಯಿತು.

ಕೊಲ್ಹಾಪುರದ ನ್ಯಾಯಾಲಯ ಶಿವಾಜಿ-೪ರವರ ಆಡಳಿತ ಕೊನೆಯಲ್ಲಿ ದುರಾಚಾರ, ಕುಕೃತ್ಯಗಳ ಸಂಚಿನ ಸ್ಥಳವಾಗಿತ್ತು. ಅವರು ರಾಜ ಹುಚ್ಚನೆಂದು ಘೋಷಿಸುವ ಮಟ್ಟಕ್ಕೆ ಹೋಗಿದ್ದರು. ರಾಜನನ್ನು ಅಹಮದ್‌ನಗರದ ಜೇಲಿನಲ್ಲಿಟ್ಟಿದ್ದರು. ಅಲ್ಲಿ ಅವರನ್ನು ದೈಹಿಕವಾಗಿ ಹಿಂಸಿಸಲಾಯಿತು ಮತ್ತು ಅವರನ್ನು ಒಬ್ಬ ಬ್ರಿಟಿಷ್ ಸೈನಿಕ ೧೮೮೩ರ ಡಿಸೆಂಬರ್‌ನಲ್ಲಿ ಕೊಂದುಬಿಟ್ಟನು. ಈ ಮೊದಲು ೧೮೮೨ರಲ್ಲಿ ರಿಜೆನ್ಸಿ ಕೌನ್ಸಿಲ್‌ನ್ನು ಸ್ಥಾಪಿಸಲಾಯಿತು. ಕಾಗಲ್‌ನಿಂದ ಜಾಗೀರದಾರರಾಗಿದ್ದ ಸೀನಿಯರ್ ಜಯಸಿಂಗರಾವ್ ತಂದೆ ಆಬಸಾಹೇಬ್ ಘಾಟ್ಗೆ ಅವರನ್ನು ರಿಜೆಂಟ್ ಆಗಿ ನೇಮಕ ಮಾಡಲಾಯಿತು. ಅವನು ಬಾಬಾ ಸಾಹೇಬ್ ಛತ್ರಪತಿಯ ಸೋದರಳಿಯ ಮತ್ತು ರಾಜಾರಾಮರ ಮೆಟರ್‌ನಲ್ ಆಂಟ್‌ರ ಮಗ ಫ್ಲಾರೆಂಸ್‌ನಲ್ಲಿ ಸತ್ತರು. ಆಗ ಸಾಹೇಬ ಘಾಟ್ಗೆಯವರ ಹಿರಿಯ ಮಗ ಯಶವಂತರಾವ್ ಅವರು ೧೮೮೪, ಮಾರ್ಚ್ ೧೭ರಂದು ಶಾಹು ಛತ್ರಪತಿಯಾಗಿ ಸಿಂಹಾಸನವನ್ನೇರಿದರು. ಅವರು ಏಪ್ರಿಲ್ ೨೪, ೧೮೯೪ ರಿಂದ ಕೊಲ್ಹಾಪುರದ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು.

ಇದು ಸಂಕ್ಷಿಪ್ತವಾಗಿ ಶಾಹು ಪೂರ್ವ-ಕೊಲ್ಹಾಪುರದ ಇತಿಹಾಸ. ೧೯ನೇ ಶತಮಾನದ ಆದಿಭಾಗದಲ್ಲಿ ಕೊಲ್ಹಾಪುರ ಸಾರ್ವಭೌಮ ಸಂಸ್ಥಾನವಾಗಿತ್ತು. ಅದು ೫೦ರಿಂದ ೬೦ ವರ್ಷಗಳಲ್ಲಿ ಬ್ರಿಟಿಷರ ಸಾಮ್ರಾಜ್ಯಶಾಹಿ ಅಧಿಕಾರದಿಂದ ನಿಧಾನವಾಗಿ ಜಾರಿತು ಮತ್ತು ಕೊನೆಗೆ ಒಂದು ಕೈಗೊಂಬೆಯ ಸಂಸ್ಥಾನವಾಗಿ ಪರಿಣಮಿಸಿತು. ಅರ್ಧ ಶತಮಾನದವರೆಗೆ ಬಾಲ ರಾಜಕುಮಾರರ ಆಡಳಿತವನ್ನು ಕೊಲ್ಹಾಪುರ ನೋಡಿದ್ದು ದುರಾದೃಷ್ಟ. ಶಾಹು ಛತ್ರಪತಿ ಸಿಂಹಾಸನ ಏರುವುದಕ್ಕೆ ಮೊದಲು ಬ್ರಿಟಿಷರು ಸಂಪೂರ್ಣವಾಗಿ ಸಂಸ್ಥಾನವನ್ನು ಆಳಿದರು. ಅರ್ಧ ಶತಮಾನದಲ್ಲಿ ಪ್ರಜೆಗಳು ತಮ್ಮ ರಾಜನ ಆಡಳಿತವನ್ನು ನೋಡಲೇ ಇಲ್ಲ. ಅವರಿಗೆ ಕೆಟ್ಟ ಅರ್ಧ ಶತಮಾನ ಕತ್ತಲ ಯುಗವಾಗಿತ್ತು.

ಶಾಹು-ಪೂರ್ವ ಅವಧಿಯಲ್ಲಿ ವಿಶೇಷವಾಗಿ ದಿವಾನ್ ಬಾರ್ವೆ ಅವರು ಹಲವಾರು ದುರಾಚಾರಗಳ ತೀಕ್ಷ್ಣ ದೃಷ್ಟಿಗೆ ಗುರಿಯಾಗಿದ್ದರು. ಶಿವಾಜಿ ಛತ್ರಪತಿ-೪ ಅವರಿಗೆ ನೀಡಿದ ಹೃದಯ ಬಿರಿಯುವಂತ ಮಾನಸಿಕ ಕಿರುಕುಳವು ಇಡೀ ಮಹಾರಾಷ್ಟ್ರವನ್ನೇ ನಡುಗಿಸಿತು. ಇಂತಹ ಘಟನೆಗಳು ಈ ಅವಧಿಯಲ್ಲಿ ನಡೆದುಹೋದವು. ತಿಲಕ ಮತ್ತು ಆಗರ್‌ಕರ್ ಅವರು 'ಕೇಸರಿ'ಯಲ್ಲಿ ನತದೃಷ್ಟ ರಾಜನನ್ನು ಬೆಂಬಲಿಸಿದರು. ಈ ಅಪರಾಧಕ್ಕಾಗಿ ಅವರು ಜೈಲುವಾಸ ಅನುಭವಿಸಿದರು. ಬಾರ್ವೆ ಅವರು ಅಹಂಕಾರಿ ಮತ್ತು ತಲೆ ತಿರುಕ ಅಧಿಕಾರಿಯಾಗಿದ್ದರು. ಅವರು ತಾನು ಚಿತ್ಪಾವನ ಬ್ರಾಹ್ಮಣನೆಂದು ಭಯಂಕರವಾಗಿ ಹೆಮ್ಮೆಪಡುತ್ತಿದ್ದರು. ಅವರು ಮುಖ್ಯ ಕಂದಾಯ ಅಧಿಕಾರಿಗಳಿಂದ ಹಿಡಿದು ಸೇವಕ ಹುದ್ದೆಗಳಿಗೆ ಚಿತ್ಪಾವನ ಬ್ರಾಹ್ಮಣರನ್ನೇ ನೇಮಕ ಮಾಡುತ್ತಿದ್ದರು. ಬಾರ್ವೆ ೧೮೮೪ರಲ್ಲಿ ಹುದ್ದೆ ಬಿಡಬೇಕಾಗಿ ಬಂತು. ಅವರ ಜಾಗಕ್ಕೆ ಪಾರ್ಸಿಯ ಮೆಹೆರ್‌ಜಿ ತಾರಪೋರ್ ವಾಲಾ ಅವರು ಬಂದರು. ಅವರು ಎಲ್ಲಾ ಪಾರ್ಸಿಗಳನ್ನೇ ಕೆಲಸಕ್ಕೆ ತೆಗೆದುಕೊಂಡರು. ಶಾಹು ಛತ್ರಪತಿಯವರು (೧೮೯೪) ರಲ್ಲಿ ಮಹಾರಾಜರಾಗಿ ಪ್ರತಿಷ್ಠಾಪನೆಗೊಂಡಾಗ ಕೊಲ್ಹಾಪುರ ಸಂಸ್ಥಾನದ ಜಾತಿವಾರು ನೌಕರರ ಸಂಖ್ಯೆ ಹೀಗಿತ್ತು: ಕೊಲ್ಹಾಪುರ ಕೋರ್ಟಿನ ೭೧ ಅಧಿಕಾರಿಗಳಲ್ಲಿ ೬೦ ಜನ ಬ್ರಾಹ್ಮಣರಾಗಿದ್ದರು ಮತ್ತು ೧೧ ಜನ ಇತರೆ ಜಾತಿಯವರಾಗಿದ್ದರು. ರಾಜನ ೫೨ ಖಾಸಗಿ ನೌಕರರಲ್ಲಿ ೪೫ ಜನ ಬ್ರಾಹ್ಮಣರು ಮತ್ತು ೭ ಜನ ಇತರೆ ಜಾತಿಗಳಿಗೆ ಸೇರಿದವರು. ಬ್ರಿಟಿಷ್, ಇಂಡಿಯನ್, ಕ್ರಿಶ್ಚಿಯನ್,

ಪಾರ್ಸಿಗಳು ಮತ್ತು ಪ್ರಭುಗಳು ಇತರರಲ್ಲಿ ಸೇರುತ್ತಾರೆ. ಸಂಸ್ಥಾನವು ಮರಾಠ ಸಂಸ್ಥಾನವೆಂದು ಹೆಸರು ಪಡೆದಿತ್ತು. ಆದರೆ ಮರಾಠರು ಯಾವುದೇ ಸ್ಥಾನಗಳಲ್ಲಿರಲಿಲ್ಲ. ಅಥವಾ ಆಡಳಿತದಲ್ಲಿ ಅವರ ಮಾತು ನಡೆಯುತ್ತಿರಲಿಲ್ಲ. ಶಿಕ್ಷಣದಲ್ಲಿ ಏಕಸ್ವಾಮ್ಯತೆಯನ್ನು ಪಡೆದವರು ಆಡಳಿತದಲ್ಲಿ ಅಧಿಕಾರ ಸ್ಥಾನಗಳಲ್ಲಿ ಏಕಸ್ವಾಮ್ಯತೆಯನ್ನು ಪಡೆದಿದ್ದರು.

ಶಿಕ್ಷಣ ಪಡೆದವರಲ್ಲಿ ಶೇಕಡ ೮೦ರಷ್ಟು ಬ್ರಾಹ್ಮಣರಾಗಿದ್ದರು. ಉಳಿದ ಶೇಕಡ ೨೦ರಲ್ಲಿ ಮರಾಠರು, ಜೈನರು, ಲಿಂಗಾಯತರು ಮತ್ತು ಮುಸ್ಲಿಮರು ಸೇರಿದ್ದರು.

---

೨

# ಹೊಸಯುಗದ ಆರಂಭ

**ಕೊ**ಲ್ಹಾಪುರ ಪ್ರದೇಶದಲ್ಲಿರುವ ಕಾಗಲ್‌ನ ಘಾಟ್ಗೆ ಅವರು ಆದಿಲಶಾಹಿ ಸುಲ್ತನತೆಯ ಬಿಜಾಪುರ ಕೋರ್ಟಿನ ಉತ್ತಮ ಗೌರವದ ಕುಲೀನ ಕುಟುಂಬವಾಗಿತ್ತು. ಆದಿಲ್‌ಶಾಹ ಸ್ವತಃ ಈ ಕುಟುಂಬದ ಧೈರ್ಯವಂತ ಮರಾಠ ಸಿಪಾಯಿ ಭಾನಜಿ ಘಾಟ್ಗೆಗೆ 'ಸರ್ಜೆರಾವ್' ಎಂಬ ಬಿರುದನ್ನು ನೀಡಿದ್ದರು. ನಂತರ ಭಾನಾಜಿಯ ಉತ್ತರಾಧಿಕಾರಿ ವಿಠಲರಾವ್ ಅವರು ವಿದೇಶಿ ಆಳ್ವಿಕೆಗಾರರಿಂದ ಜನರು ಸ್ವಾತಂತ್ರ್ಯ ಪಡೆಯುವುದಕ್ಕಾಗಿ ಮಹಾನ್ ಶಿವಾಜಿಯ ಐತಿಹಾಸಿಕ ಸಾಹಸ (ಹೋರಾಟ) ಗಳಲ್ಲಿ ಸೇರಿಕೊಂಡರು. ಘನವಂತ ಶಿವಾಜಿಯೊಂದಿಗೆ ಮತ್ತೊಂದು ಕುಟುಂಬ ಸಂಬಂಧ ಹೊಂದಿತ್ತು.

ಅವನ ಸೊಸೆಯರಲ್ಲಿ ಒಬ್ಬರಾದ ರಾಜಸಬಾಯಿ ಘಾಟ್ಗೆ ಕುಟುಂಬದಿಂದ ಬಂದವರು. ಕೊಲ್ಹಾಪುರದ ಶಿವಾಜಿ–೨ ಅವರು ತಮ್ಮ ಮಗಳು ಆವುಬಾಯಿಯನ್ನು ಯಶವಂತರಾವ್ ಘಾಟ್ಗೆ ಅವರಿಗೆ ಕೊಟ್ಟು ವಿವಾಹ ಮಾಡಿಸಿದಾಗ ಕೊಲ್ಹಾಪುರದ ಗದ್ದುಗೆ (ಸರಕಾರದ ಸ್ಥಾನ ಅಥವಾ ಸಿಂಹಾಸನ) ಯನ್ನು ಸ್ಥಾಪಿಸಿದ ನಂತರ ಸಂಬಂಧಗಳು ಮತ್ತಷ್ಟು ನಿಕಟವಾದವು. ನಂತರ ಅದೇ ಕುಟುಂಬದಿಂದ ನಾರಾಯಣರಾವ್ ಘಾಟ್ಗೆ ಅವರು ಕೊಲ್ಹಾಪುರದ ಶಿವಾಜಿ–೩ ಯವರ (೧೮೩೮–೧೮೬೬) ತಂಗಿ ಬಾಲಾಬಾಯಿ ಅವರನ್ನು ಮದುವೆಯಾಗಿ ನಮ್ಮ ನಾಯಕನ ತಂದೆ ಜಯಸಿಂಗ ರಾವ್ ಅಲಿಯಾಸ್ ಆಬಸಾಹೇಬ (೧೮೫೬) ಅವರಿಗೆ ಜನ್ಮ ನೀಡಿದಳು.

ಛತ್ರಪತಿಯ ಸೋದರಳಿಯನಾಗಿದ್ದರಿಂದ ಆಬಸಾಹೇಬ ತನ್ನ ಬಾಲ್ಯವನ್ನು ಕೊಲ್ಹಾಪುರದ ಅರಮನೆಯಲ್ಲಿ ರಾಜರ ಶಿಸ್ತಿನಡಿಯಲ್ಲಿ ಕಳೆದನು. ಅವನು ೮ನೇ ವಯಸ್ಸಿನಲ್ಲಿ ಮುಧೋಳದ ರಾಜಕುಮಾರಿ ರಾಧಾಬಾಯಿಯನ್ನು ಮದುವೆಯಾದನು. ಆಬಸಾಹೇಬರು ಒಬ್ಬ ಬುದ್ಧಿವಂತ, ಶಕ್ತಿಶಾಲಿ, ಪ್ರೌಢನಾಗಿ ಬೆಳೆದರು. ಅವರು ಘಾಟ್ಗೆಯವರ ಕಾಗಲ್ ಜಹಗೀರ್‌ನಲ್ಲಿ ಸಮರ್ಥ, ದಕ್ಷ ಆಡಳಿತ ವ್ಯವಸ್ಥೆಯನ್ನು ಬೆಳೆಸಿದರು. ಅದು ನಂತರ ಕೊಲ್ಹಾಪುರ ಸಂಸ್ಥಾನದ ಊಳಿಗಮಾನ್ಯ ಜಹಗೀರುದಾರರಲ್ಲಿ ಆದರ್ಶ ಮತ್ತು ದಕ್ಷವೆಂಬ ಹೆಸರನ್ನು ಅವರಿಗೆ ತಂದು ಕೊಟ್ಟಿತು.

ಆಬಸಾಹೇಬ ಮತ್ತು ರಾಧಾಬಾಯಿಯವರು ಜೂನ್ ೨೪, ೧೮೭೪ರಲ್ಲಿ ಕೊಲ್ಹಾಪುರದಲ್ಲಿ ಗಂಡುಮಗುವಿಗೆ ಜನ್ಮ ನೀಡಿದರು..! ಹುಡುಗನಿಗೆ ಯಶವಂತರಾವ್ ಎಂದು ಹೆಸರಿಡಲಾಯಿತು. ಅವನು ಛತ್ರಪತಿಯೆಂದು ಕೊಲ್ಹಾಪುರದ ಗದ್ದುಗೆ (ಸಿಂಹಾಸನ) ಯನ್ನು ಏರಬೇಕಾಯಿತು. ರಾಧಾಬಾಯಿ ಜನವರಿ ೩, ೧೮೭೬ರಲ್ಲಿ ಮತ್ತೊಬ್ಬ ಮಗ ಬಾಪು ಸಾಹೇಬರಿಗೆ ಜನ್ಮ ನೀಡಿದರು. ಬಾಪು ಸಾಹೇಬರು, ರಾಮನಿಗೆ ಲಕ್ಷ್ಮಣನಂತೆ, ತನ್ನ ಅಣ್ಣನಿಗೆ ಕೊನೆಯವರೆಗೆ ಅಚಲನಾಗಿ ನಿಂತು ಬೆಂಬಲ ನೀಡಿದ್ದನು.

## ಶಾಹು ಅವರ ರಾಜ್ಯಾಭಿಷೇಕ

ಈ ಮಧ್ಯೆ ಬಾಬ ಸಾಹೇಬ ಮಹಾರಾಜರು ಶಿವಾಜಿ–೩ರಾಗಿ ಗದ್ದುಗೆ (ಸಿಂಹಾಸನ) ಏರಿದರು. ಛತ್ರಪತಿ ರಾಜಾರಾಮ (೧೮೬೬) ವಯಸ್ಸಿನಲ್ಲಿ ಕಿರಿಯವನಾದರೂ ಉತ್ತಮ ಆಡಳಿತಗಾರನಾಗಿ, ಶಕ್ತಿಯುತವಾಗಿ ಆಧುನಿಕ ದೃಷ್ಟಿಕೋನವನ್ನು ಹೊಂದಿದ ಬುದ್ಧಿವಂತ ಯುವಕನಾಗಿದ್ದನು. ರಾಜನು ಅಪ್ರಾಪ್ತ ವಯಸ್ಸಿನವನಾಗಿದ್ದರಿಂದ ಬ್ರಿಟಿಷ್ ಏಜೆಂಟ್ ರಾಜ ಸಂಸ್ಥಾನದ ಆಡಳಿತದಲ್ಲಿ ಮೇಲುಗೈ ಸಾಧಿಸಿದ್ದನು. ದುರಾದೃಷ್ಟವಶಾತ್ ಅವರು ಯೂರೋಪಿನ ಫ್ಲಾರೆನ್ಸಿನಲ್ಲಿ ಪ್ರಯಾಣ ಮಾಡುತ್ತಿರುವಾಗ ಇಟಲಿಯಲ್ಲಿ (೧೮೭೦) ಅಕಾಲಿಕ ಮರಣಕ್ಕೆ ತುತ್ತಾದರು. ಶಿವಾಜಿ–೪ ಅವರು ೯ನೇ ವಯಸ್ಸಿನಲ್ಲಿ ಅವರಿಗೆ ಉತ್ತರಾಧಿಕಾರಿಯಾದರು, (೧೮೭೧) ಮತ್ತು ಮತ್ತೆ ಆಡಳಿತದ ಚುಕ್ಕಾಣಿ ಬ್ರಿಟಿಷರ ಕೈಯಲ್ಲಿ ಭದ್ರವಾಗಿ ಉಳಿಯಿತು. ಅರಮನೆಯ (ರಾಜನ ಆಸ್ಥಾನ) ಪರಿಸರವು ಸಂಚು–ಚಿತಾವಣೆಗಳ ಗೂಡಾಗಿತ್ತು. ಪರಿಸ್ಥಿತಿಯನ್ನು ಮತ್ತಷ್ಟು ಕೆಡಿಸುವುದಕ್ಕೆ ಬ್ರಿಟಿಷರು ಜಾಣ ಬ್ರಾಹ್ಮಣ ರಾಜಕಾರಣಿ ಮಹದೇವ ಬಾರ್ವೆಯವರನ್ನು ದಿವಾನರನ್ನಾಗಿ (ಮುಖ್ಯಮಂತ್ರಿ) ಸಂಸ್ಥಾನಕ್ಕೆ ನೇಮಿಸಿದರು. ಬಾರ್ವೆಯವರು ಅಹಂಕಾರಿ ಅಧಿಕಾರಿ ಮತ್ತು ಅವರ ಸೊಕ್ಕು ಬೇಗನೆ ಛತ್ರಪತಿ ಮತ್ತು ಅವರ ನಡುವೆ ಮಹಾ ಬಿರುಕಿಗೆ ಕಾರಣವಾಯಿತು.

ಶಿವಾಜಿ–೪ ಅವರ ಆಡಳಿತದ ಕೊನೆಯ ವರ್ಷಗಳು ಒಳಸಂಚುಗಳ ಪರಾಕಾಷ್ಠೆಯನ್ನು ಮುಟ್ಟಿದವು. ಅಂತಿಮವಾಗಿ ಸಂಚನ್ನು ರೂಪಿಸಿ, ಅದನ್ನು ಒಳಸಂಚುಗಾರರು ನಿರ್ವಹಿಸಿ, ಶಿವಾಜಿ–೪ ಅವರು ಮಾನಸಿಕ ಕ್ಷೋಭೆಗೆ ಒಳಗಾದವರೆಂದು ಘೋಷಿಸಿ ಬ್ರಿಟಿಷರ ವಶಕ್ಕೆ ಒಪ್ಪಿಸಲಾಯಿತು. ಬ್ರಿಟಿಷ್ ಸರಕಾರವು ಆಬಸಾಹೇಬ ಘಾಟ್ಗೆ ಅವರನ್ನು ಉಳಿದ ಅವಧಿಗೆ ರಾಜನಾಗಿ ನೇಮಕ ಮಾಡಿತು. ಅಹಮದ್ ನಗರದ ಕೋಟೆಯಲ್ಲಿ ವಶದಲ್ಲಿದ್ದಾಗ ರಾಜನಿಗೆ ಹುಚ್ಚನೆಂಬ ಹಣೆಪಟ್ಟಿ ಕಟ್ಟಿ ಅಮಾನವೀಯವಾಗಿ ಬೈದು ಕ್ರೂರ ಚಿಕಿತ್ಸೆ ನೀಡಲಾಯಿತು. ಅವರು ಡಿಸೆಂಬರ್ ೨೫, ೧೮೮೩ರಲ್ಲಿ ಅನುಮಾನಕರವಾದ ಸನ್ನಿವೇಶಗಳಲ್ಲಿ ಸತ್ತುಹೋದರು.

ಶಿವಾಜಿ–೪ ಅವರಿಗೆ ಮಕ್ಕಳಿಲ್ಲದ ಕಾರಣ ಮತ್ತೆ ಶೂನ್ಯತೆ ಏರ್ಪಟ್ಟಿತು. ಛತ್ರಪತಿ ಕುಟುಂಬದ ರಾಣಿ ವಿಧವೆಯ ಜೊತೆಯಲ್ಲಿ ದೀರ್ಘವಾದ ಚರ್ಚೆ ಮತ್ತು ಸಮಾಲೋಚನೆಗಳನ್ನು ನಡೆಸಿದ ನಂತರ ಶಿವಾಜಿ–೪ರ ವಿಧವೆ ಕೊಲ್ಹಾಪುರದ ಗದ್ದುಗೆ (ಸಿಂಹಾಸನಕ್ಕೆ) ಒಬ್ಬ ಮಗನನ್ನು ದತ್ತು ತೆಗೆದುಕೊಳ್ಳಬಹುದೆಂದು ನಿರ್ಧರಿಸಲಾಯಿತು. ಕುಟುಂಬದ ಜೊತೆಯಲ್ಲಿ ಸಮಾಲೋಚಿಸಿದ ನಂತರ ಬ್ರಿಟಿಷರ ರಾಜನಾದ ಆಬಾಸಾಹೇಬ ಘಾಟ್ಗೆಯ ಮಗ ಯಶವಂತರಾವ್ ಮುಂದಿನ ಛತ್ರಪತಿಯೆಂದು ಆಯ್ಕೆ ಮಾಡಲಾಯಿತು. ಶಿವಾಜಿ–೪ನೆಯ ರಾಣಿ ಆನಂದಿಬಾಯಿ ಕಾನೂನುಬದ್ಧವಾಗಿ ಯಶವಂತರಾವ್ ಅವರನ್ನು ಮಾರ್ಚ್ ೧೭, ೧೮೮೪ರಂದು ದತ್ತು ಪುತ್ರನೆಂದು ಪಡೆಯಲಾಯಿತು. ಹೀಗೆ ಕಾಗಲಿನ ಘಾಟ್ಗೆ ಅವರಿಂದ ಯಶವಂತರಾವ್ ಅವರನ್ನು ಶಾಹು ಛತ್ರಪತಿಯೆಂದು ಸಿಂಹಾಸನದ ಮೇಲೆ ಕೂಡಿಸಲಾಯಿತು. ಬ್ರಿಟಿಷರ ರಾಜಕೀಯ ಏಜೆಂಟ್ ರೀವ್ಸ್ ಅವರು ದತ್ತು ಆಚರಣೆಯ ಸಮಾರಂಭವನ್ನು ವೀಕ್ಷಿಸಿದರು ಮತ್ತು ಶಾಹು ಛತ್ರಪತಿ ಅವರ ಕೊಲ್ಹಾಪುರದ 'ರಾಜ'ನೆಂದು ಘೋಷಿಸಿ, ಪಟ್ಟಾಭಿಷೇಕವನ್ನು ಕಾಯ್ದಿರಿಸಿ ಅದು ಒಂದು ದಶಕದ ನಂತರ ಏಪ್ರಿಲ್ ೨, ೧೮೯೪ರಲ್ಲಿ ನಡೆಯಿತು. ಅಧಿಕೃತ ಪಟ್ಟಾಭಿಷೇಕ ನಡೆಯುವವರೆಗೆ ಬ್ರಿಟಿಷ್ ಸರಕಾರವು ಶಾಹುವನ್ನು ಇಂಗ್ಲೆಂಡಿಗೆ ಆಡಳಿತದಲ್ಲಿ ಉಚ್ಚ ಶಿಕ್ಷಣ ಪಡೆಯಲು ಮತ್ತು ತನ್ನ ವ್ಯಕ್ತಿತ್ವವನ್ನು ಅಭಿವೃದ್ಧಿಪಡಿಸಿಕೊಳ್ಳುವ ಸಲುವಾಗಿ ಕಳುಹಿಸಲು ಉದ್ದೇಶಿಸಿದೆಯೆಂದು ರೀವ್ಸ್ ಘೋಷಿಸಿದರು.[2]

**ಶಾಹುವಿನ ಶಿಕ್ಷಣ**

ಶಾಹು ಅವರ ಔಪಚಾರಿಕ ಶಿಕ್ಷಣವು ಪ್ರಾರಂಭದಲ್ಲಿ ಬ್ರಿಟಿಷ್ ಅಧಿಕಾರಿಯಾದ ಫಿಡ್ಜರಾಲ್ಡ ಅವರ ಉಸ್ತುವಾರಿಯಲ್ಲಿ ಪ್ರಾರಂಭವಾಯಿತು. ಅವರ ಸಮವಯಸ್ಸಿನ ಕಿರಿಯ ಸಹೋದರ ಬಾಪು ಸಾಹೇಬ, ಅವರ ಕಿರಿಯ ಚಿಕ್ಕಪ್ಪ ಕಾಕಾ ಸಾಹೇಬ ಘಾಟ್ಗೆ ಹಾಗೂ ದತ್ತಾಜಿರಾವ್ ಇಂಗ್ಲೆ ಅವರು ಸಹ ವಿದ್ಯಾರ್ಥಿಗಳಾಗಿದ್ದರು. ಕೃಷ್ಣಾಜಿ ಗೋಖಲೆ ಮತ್ತು ಹರಿಪಂತ ಗೋಖಲೆ ಅವರನ್ನು ದೇಶೀಯ ಅಧ್ಯಾಪಕರನ್ನಾಗಿ ನೇಮಿಸಲಾಗಿತ್ತು.

ಏತನ್ಮಧ್ಯೆ ಇಂಗ್ಲೆಂಡಿಗೆ ಭೇಟಿ ನೀಡಿದ್ದ ತಂದೆ ಆಬಸಾಹೇಬ ಅವರು ಅಲ್ಲಿರುವ ಪರಿಸ್ಥಿತಿಗಳನ್ನು ತುಂಬ ಹತ್ತಿರದಿಂದ ವೀಕ್ಷಿಸಿದರು ಮತ್ತು ಇಂಥ ಚಿಕ್ಕ ವಯಸ್ಸಿನಲ್ಲಿ ಭಾವೀ ರಾಜನನ್ನು (ಸೆಪ್ಟೆಂಬರ್ ೧೮೮೫) ಇಂಗ್ಲೆಂಡಿಗೆ ಕಳುಹಿಸುವುದು ಸೂಕ್ತವಲ್ಲವೆಂದು ನಿರ್ಧರಿಸಿದರು. ತದನಂತರ ಬ್ರಿಟಿಷರೊಂದಿಗೆ ಸಮಾಲೋಚಿಸಿದ ನಂತರ ಜನವರಿ ೧೮೮೬ರಲ್ಲಿ ಶಾಹುನನ್ನು ಅವನ ಸಹಪಾಠಿಗಳೊಂದಿಗೆ ರಾಜಕೋಟೆಯ ಪ್ರಸಿದ್ಧವಾದ ರಾಜಕುಮಾರ್ ಕಾಲೇಜಿಗೆ ಕಳುಹಿಸಿಕೊಟ್ಟರು. ಇಬ್ಬರು ಅಧ್ಯಾಪಕರಾದ ಗೋಖಲೆಯವರನ್ನು, ದರಬಾರಿನ ನಂಬಿಕಸ್ತ ಸರದಾರರನ್ನು ಬುವಾ ಸಾಹೇಬ ಇಂಗ್ಲೆ ಅವರ ಜೊತೆಗೆ ಪಾಲಕರಂತೆ ಹೋದರು. ರಾಜಕೋಟೆಯಲ್ಲಿ ಶಾಹು ಅವರು ತಮ್ಮ ಮನಸ್ಸನ್ನು ವಿಶಾಲಗೊಳಿಸುವ ಮತ್ತು ಚಿಂತನೆಯನ್ನು ಬೆಳೆಸುವ ಪರಿಪೂರ್ಣ ಶಿಕ್ಷಣವನ್ನು ಪಡೆದರು. ಅವರು ಕೂಡ ರಾಜಸಂಸ್ಥಾನಗಳ ಯುವರಾಜಕುಮಾರರ ಗೆಳೆತನವನ್ನು ಬೆಳೆಸಿಕೊಂಡರು. ವಿಶೇಷವಾಗಿ ಭಾವನಗರದ ರಾಜಕುಮಾರ ಭಾವಸಿಂಗಜಿ ಜೊತೆಯಲ್ಲಿ ಬಹುಕಾಲ ಉಳಿಯುವಂತಹ ಸ್ನೇಹವನ್ನು ಸಂಪಾದಿಸಿದರು.

ರಾಜಕೋಟೆಯ ಕಾಲೇಜಿಗೆ ಸೇರಿದ ಎರಡು ವರ್ಷಗಳಲ್ಲಿಯೇ ಶಾಹು ಅವರ ತಂದೆ ಆಬಸಾಹೇಬರು ಖಾಯಿಲೆ ಬಿದ್ದು ಇದ್ದಕ್ಕಿದ್ದಹಾಗೆ ಮಾರ್ಚ್ ೨೦, ೧೮೮೬ರಲ್ಲಿ ನಿಧನರಾದರು. ಅವರಿಗೆ ಕೇವಲ ೩೦ ವರ್ಷಗಳ ವಯಸ್ಸಾಗಿತ್ತು. ಸಂಸ್ಥಾನದ ಮೇಲೆ ಮಹಾವಿಪತ್ತು ಬಂದೊದಗಿತು. ಶಾಹು ಆಗಲೆ ತಾನು ಮೂರು ವರ್ಷದವನಾಗಿದ್ದಾಗ ತಾಯಿಯನ್ನು ಕಳೆದುಕೊಂಡಿದ್ದನು. ಈಗ ಅವನಿಗೆ ೧೨ ವರ್ಷ. ಈಗ ಅವನು ಅನಾಥನಾದ. ಅವನು ಮನೆಗೆ ಸಹೋದರನೊಂದಿಗೆ ಕೊಲ್ಹಾಪುರಕ್ಕೆ ತೆರಳಿ ಅಂತಿಮ ಸಂಸ್ಕಾರದ ವಿಧಿಗಳನ್ನು ನಡೆಸಿ ರಾಜಕೋಟೆಗೆ ವಾಪಸ್ಸು ಬಂದು, ತನ್ನ ಅಧ್ಯಯನವನ್ನು ಮುಂದುವರಿಸಿದನು.

ನಿತ್ಯದ ಪಾಠ ಪ್ರವಚನಗಳ ಜೊತೆಗೆ ಶಾಹು ಬಿಲ್ಲುಗಾರಿಕೆ ಅಥವಾ ಬಂದೂಕದಾರಿಕೆ, ಮಲ್ಲಯುದ್ಧ ಮತ್ತು ಕುದುರೆ ಸವಾರಿಯಲ್ಲಿ ತರಬೇತಿ ನೀಡಲಾಯಿತು. ಅವನು ಈ ಶೌರ್ಯದ ಆಟಗಳನ್ನು ಸುಲಭವಾಗಿ ಕಲಿತು ಈ ಎಲ್ಲಾ ಕೌಶಲ್ಯಗಳಲ್ಲಿ ಪಳಗಿದನು. ಈ ಮಧ್ಯೆ ಕೊಲ್ಹಾಪುರ–ಮೀರಜ ರೈಲ್ವೆಯ ಅಸ್ತಿವಾರದ ಸಮಾರಂಭಕ್ಕೆ ಕೊಲ್ಹಾಪುರಕ್ಕೆ ಭೇಟಿ ನೀಡಿದರು. ತಾನು ಛತ್ರಪತಿಯಾದ (ಮೇ ೮, ೧೮೮೮) ನಂತರದಲ್ಲಿ ಇದು ಮೊದಲನೆಯ ಸಾರ್ವಜನಿಕ ಸಮಾರಂಭವಾಗಿತ್ತು.[3]

**ಅವರ ಅಧ್ಯಾಪಕ ಫ್ರೆಜರ್**

ಆಬ ಸಾಹೇಬರು ಸತ್ತಾಗ ಕೊಲ್ಹಾಪುರ ಸಂಸ್ಥಾನದ ಬ್ರಿಟಿಷ್ ರಾಜಕೀಯ ಏಜೆಂಟರ ಹುದ್ದೆಯನ್ನು ಹೊಂದಿದ್ದವರು ವಿಲಿಯಂ ಲೀ–ವರ್ನರು. ಲೀ ಅವರು ಒಬ್ಬ ಉದಾರಿ, ಸುಸಂಸ್ಕೃತ ಮನುಷ್ಯನಾಗಿದ್ದು ಆಬ ಸಾಹೇಬರ ಆತ್ಮೀಯ ಸ್ನೇಹಿತನಾಗಿದ್ದರು. ಸಾವಿನ ಹಾಸಿಗೆಯಲ್ಲಿ ಆಬ ಸಾಹೇಬರು ಶಾಹುವಿನ

ಭವಿಷ್ಯದ ಬಗ್ಗೆ ಕೆಲವು ವಿಶೇಷ ಸೂಚನೆಗಳನ್ನು ನೀಡಿದ್ದರು. ಬುದ್ಧಿವಂತ ಬ್ರಿಟಿಷ್ ಪಾಲಕನ ಉಸ್ತುವಾರಿಯಲ್ಲಿ ತನ್ನ ಮಕ್ಕಳ ಸರಿಯಾದ ವಿದ್ಯಾಭ್ಯಾಸ ನಡೆಯಬೇಕೆಂದು ಹೇಳಿದ್ದರು. ಅವರ ಬಯಕೆಯಂತೆಯೆ ಲೀ-ವರ್ನರ್ ಅವರು ಒಬ್ಬ ಬ್ರಿಟಿಷ್ ಐ.ಸಿ.ಎಸ್. ಅಧಿಕಾರಿ ಸ್ಟುಅರ್ಟ್ ಮಿಟ್‌ಫೋರ್ಡ್ ಫ್ರೆಜರ್ ಅವರನ್ನು ಶಾಹು ಮತ್ತು ನಾಲ್ಕು ಸಹಪಾಠಿಗಳ ಅಧ್ಯಾಪಕ ಮತ್ತು ಪಾಲಕರನ್ನಾಗಿ ನೇಮಕ ಮಾಡಿದರು.[4] ಈ ಮಧ್ಯೆ ಶಾಹು ರಾಜಕೋಟನ್ನು ಬಿಟ್ಟು ಕೊಲ್ಹಾಪುರಕ್ಕೆ (ಏಪ್ರಿಲ್ ೧೮೮೯) ಮತ್ತು ಅಲ್ಲಿಂದ ಧಾರವಾಡಕ್ಕೆ ಹೋದರು. ಅಲ್ಲಿ ಫ್ರೆಜರ್ ಅವರು ತನ್ನ ಶಿಷ್ಯರ ಹೊಣೆ ಹೊತ್ತರು. ಹೀಗೆ ಶಾಹು ಅವರ ಶಿಸ್ತುಬದ್ಧ ಶಿಕ್ಷಣ ಪ್ರಾರಂಭವಾಯಿತು. ಭಾವನಗರದ ರಾಜಕುಮಾರ ಭಾವಸಿಂಗಜಿ ಅವರು ಶಾಹು ಜೊತೆಯಲ್ಲಿ ಧಾರವಾಡಕ್ಕೆ ಬಂದರು. ಕೇಶವರಾವ್ ಗೋಖಲೆಯವರು ಶ್ರೇಷ್ಠ ನೀತಿನಿಷ್ಠೆಯ ವಿದ್ವಾಂಸರಾಗಿದ್ದರು. ಅವರನ್ನು ಶಾಹು ಅವರಿಗೆ ದೇಶೀಯ ಅಧ್ಯಾಪಕರನ್ನಾಗಿ ನೇಮಕಮಾಡಲಾಯಿತು. ಬುವಾ ಸಾಹೇಬ ಇಂಗ್ಲೆ ಅವರು ಧಾರವಾಡದಲ್ಲಿದ್ದು ಹುಡುಗರಿಗೆ ದೇಶೀಯ ಪಾಲಕರಾದರು. ಅವರು ಶಾಹು ಅವರಿಗೆ ಕುದುರೆ ಸವಾರಿಯ, ಬಿಲ್ಲುಗಾರಿಕೆ ಅಥವಾ ಬಂದೂಕುದಾರಿಕೆ ಮತ್ತು ಕುಸ್ತಿಯ ಕೌಶಲ್ಯಗಳನ್ನು ಕಲಿಸಿದರು. ಗುರು ಫ್ರೆಜರ್ ಅವರು ಬುವಾ ಸಾಹೇಬರ ವಿಶ್ವಾಸಾರ್ಹತೆ, ಪ್ರಾಮಾಣಿಕತೆ ಮತ್ತು ನಿಷ್ಠೆಯನ್ನು ಹೊಗಳಿದರು.

ಫ್ರೆಜರ್ ಅವರು ಹುಡುಗರಿಗೆ ಇಂಗ್ಲೀಷು, ಗಣಿತ, ಇತಿಹಾಸ, ಭೂಗೋಳ ಶಾಸ್ತ್ರ ಮತ್ತು ಅರ್ಥಶಾಸ್ತ್ರಗಳನ್ನು ಕಲಿಸಿ ನಿಯತವಾಗಿ ಕೊಲ್ಹಾಪುರದ ರಾಜಕೀಯ ಏಜೆಂಟರಿಗೆ ಮಕ್ಕಳ ವಿದ್ಯಾಭ್ಯಾಸದ ಪ್ರಗತಿಯ ವರದಿಯನ್ನು ಕಳುಹಿಸುತ್ತಿದ್ದರು. ತನ್ನ ವರದಿಗಳ ಒಂದರಲ್ಲಿ ಅವರು ಹೀಗೆ ಹೇಳುತ್ತಾರೆ: "ಒಟ್ಟಿನಲ್ಲಿ ಮಾನ್ಯರು ಒಳ್ಳೆಯ ಮನಸ್ಸಿನವರು, ತೆರೆದ ಮನಸ್ಸಿನವರು, ಉದಾರಿಗಳು ಮತ್ತು ಸತ್ಯನಿಷ್ಠರು. ಅವರು ಸ್ವಪ್ರತಿಷ್ಠೆಯಿಂದ ಮುಕ್ತರು ಮತ್ತು ಅವರ ಚಿಂತನಾಕ್ರಮವು ಒಳ್ಳೆಯ ಸ್ವಭಾವದ್ದು."[5]

## ಶೈಕ್ಷಣಿಕ ಪ್ರವಾಸಗಳು

ಶಾಹು ಅವರು ಇತಿಹಾಸ ಮತ್ತು ಭೂಗೋಳ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ಆದರೆ ಇತಿಹಾಸದ ಪ್ರಮುಖ ಘಟನೆಗಳು ನಡೆದ ಪ್ರದೇಶ, ಸ್ಥಳಗಳಿಗೆ ಖುದ್ದಾಗಿ ಭೇಟಿ ನೀಡಿದಾಗ ಆ ವಿಷಯಗಳನ್ನು ನಿಜವಾಗಿ ಅನುಭವಿಸುವ ಭಾವನೆ ಉಂಟಾಗುತ್ತದೆ. ತನ್ನ ದೇಶ-ಬಾಂಧವರ ಸಾಮಾಜಿಕ-ಧಾರ್ಮಿಕ ಮನಃಸ್ಥಿತಿ ಮತ್ತು ಪರಂಪರೆಗಳ ಪರಿಸ್ಥಿತಿಗಳನ್ನು ಅರಿತಂತಾಗುತ್ತದೆ. ಈ ಉದ್ದೇಶಗಳಿಂದ ಫ್ರೆಜರ್ ಅವರು ಉತ್ತರ, ದಕ್ಷಿಣ ಮತ್ತು ಪೂರ್ವ-ಭಾರತದ ಉದ್ದಕ್ಕೂ ತನ್ನ ಶಿಷ್ಯರಿಗಾಗಿ ವ್ಯಾಪಕವಾದ ಶೈಕ್ಷಣಿಕ ಪ್ರವಾಸವನ್ನು ವ್ಯವಸ್ಥೆಗೊಳಿಸಿದರು. ಮೊದಲನೆಯ ಉತ್ತರ ಭಾರತದ ಪ್ರವಾಸವು ನವೆಂಬರ್ ೧೮೯೦ರಲ್ಲಿ ನಾಸಿಕ್‌ನಿಂದ ಪ್ರಾರಂಭವಾಯಿತು. ತಂಡವು ಮನೆಗೆ ವಾಪಸ್ಸು ಬರುವುದಕ್ಕೆ ಮುಂಚೆ ಬನಾರಸ್, ಅಲಹಾಬಾದ್, ಕಲ್ಕತ್ತ, ದಾರ್ಜಿಲಿಂಗ್, ಆಗ್ರ, ಫತೇಹಪುರ ಸಿಕ್ರಿ, ದೆಹಲಿ, ಜಯಪುರ, ಅಜ್ಮೇರ್ ಮತ್ತು ಬಾಂಬೆಗಳಿಗೆ ಭೇಟಿ ನೀಡಿತ್ತು. ಐದು ಸಾವಿರ ಮೈಲಿಗಳ ದೀರ್ಘ ಪ್ರವಾಸದಲ್ಲಿ ವಿವಿಧ ಜನರ ನಡುವೆ ನಡೆದ ಪರಸ್ಪರ ಚರ್ಚೆ, ಪ್ರತಿಕ್ರಿಯೆಗಳು ಕಿರಿಯ ಶಾಹು ಅವರ ಅದ್ಭುತವಾದ ಅನುಭವ ವಾಗಿತ್ತು. ಈ ಅನುಭವವು ಜನರ ಸೂಕ್ಷ್ಮ ಸಮಸ್ಯೆಗಳಿಗೆ ಸ್ಪಂದಿಸುವ ಅವರ ಜ್ಞಾನ ಭಂಡಾರ ವಿಶಾಲ ಗೊಂಡಿತು. ಪವಿತ್ರ ಸ್ಥಳಗಳಾದ ನಾಸಿಕ, ವಾರಣಾಸಿ ಮತ್ತು ಪ್ರಯಾಗಗಳಲ್ಲಿ ಮತ-ಧರ್ಮ ವಾಣಿಜ್ಯೀಕರಣ, ಅವನತಿಗೊಂಡ ವಿಧಿ ಆಚರಣೆಗಳು ಅವರನ್ನು ಬೇಸರಗೊಳಿಸಿದವು. ಅದೇ ಸಮಯದಲ್ಲಿ ಅವರ

ಹೃದಯದಲ್ಲಿ ಹಿಮಾಲಯ ಮತ್ತು ಮಂಜು ಕವಿದ ಶಿಖರಗಳ ಸೌಂದರ್ಯ ದೀರ್ಘವಾದ ಆಧ್ಯಾತ್ಮಿಕ ಕಿಡಿಗಳನ್ನು ಸ್ಫುರಿಸಿದವು.[6]

ಮುಂದಿನ ವರ್ಷ ೧೮೯೧ರಲ್ಲಿ ಫ್ರೆಜರ್ ಯುವಕರನ್ನು ದಕ್ಷಿಣ ಭಾರತ ಮತ್ತು ಸಿಲೋನ್ (ಶ್ರೀಲಂಕ) ಗಳಿಗೆ ಕರೆದುಕೊಂಡು ಹೋದರು. ಈ ತಂಡವು ಬಿಜಾಪುರ, ಹೈದರಾಬಾದ್, ಮದ್ರಾಸು, ಪಾಂಡಿಚೆರಿ, ತಾಂಜವೂರು, ತೂತ್ತುಕುಡಿ, ಕೊಲಂಬೋ ಮತ್ತು ಕ್ಯಾಂಡಿಗಳಿಗೆ ಭೇಟಿ ನೀಡಿತು. ವಾಪಸ್ಸು ಬರುವಾಗ ಅವರು ಬೆಂಗಳೂರು, ಮೈಸೂರುಗಳಿಗೆ ಭೇಟಿ ನೀಡಿದರು. ಮಹಾನ್ ಶಿವಾಜಿಯ ಕಿರಿಯ ಸಹೋದರ ವೆಂಕೋಜಿ ಸ್ಥಾಪಿಸಿದ ಮರಾಠರ ಸಣ್ಣ ಸಂಸ್ಥಾನ ತಂಜಾವೂರಿನಲ್ಲಿ ಶಾಹು ಅವರನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿತು. ಅವರಿಗೆ ಮೈಸೂರು ಮತ್ತು ಹೈದರಾಬಾದಿನಲ್ಲಿ ಹೃದಯಸ್ಪರ್ಶಿ ಸ್ವಾಗತವನ್ನು ನೀಡಲಾಯಿತು. ಸಿಲೋನಿನಲ್ಲಿ ಬ್ರಿಟಿಷ್ ಗೌರ್ನರ್ ಇಂಡಿಯಾ ಸಂಸ್ಥಾನದ ರಾಜಕುಮಾರ ಶಾಹು ಮತ್ತು ಅವರ ತಂಡಕ್ಕೆ ಭವ್ಯ ಸ್ವಾಗತವನ್ನು ನೀಡಲಾಯಿತು.[7]

ಪಶ್ಚಿಮ ಭಾರತದ ಬರೋಡ, ಜೈಪುರ, ಜೋಧಪುರ, ಆಳ್ವಾರ್ ಮತ್ತು ಭರತಪುರ ಮೊದಲಾದ ರಾಜ ಸಂಸ್ಥಾನಗಳಿಗೆ ೧೮೯೨ರಲ್ಲಿ ಶಾಹು ಅವರು ನೀಡಿದ ಭೇಟಿಯು ವಿಶೇಷ ತರಹದ ಶೈಕ್ಷಣಿಕ ಪ್ರವಾಸವಾಗಿತ್ತು. ಬಾಂಬೆಗೆ ವಾಪಸ್ಸು ಬರುವುದಕ್ಕೆ ಮೊದಲು ಅವರು ಮಥುರಾ, ಅಲಹಾಬಾದ್, ಹರಿದ್ವಾರ, ಅಮೃತಸರ, ಲಾಹೋರ್, ಪೇಶಾವರ, ಸಕ್ಕರ್, ಮುಲ್ತಾನ ಮತ್ತು ಕರಾಚಿಗಳಿಗೆ ಭೇಟಿ ನೀಡಿದ್ದರು. ಬರೋಡ, ಜಸಿಪುರ ಮತ್ತು ಜೋಧಪುರದ ರಾಜರು ಹೆಚ್ಚು ಪ್ರೀತಿಯಿಂದ ಶಾಹು ಅವರನ್ನು ಬರಮಾಡಿಕೊಂಡರು. ಅಲಹಾಬಾದಿನಲ್ಲಿ ಆರ್ಯ ಸಮಾಜದಲ್ಲಿ ಅವರು ಭಾಷಣವನ್ನು ಮಾಡಿದರು. ೧೮೫೭ರ ಸಿಪಾಯಿದಂಗೆಯಲ್ಲಿ ಭಾಗವಹಿಸಿದ ಶಿವಾಜಿ–೩ನೆಯ ಸಹೋದರ ಚಿಮನ್ ಸಾಹೇಬರನ್ನು ಬಂಧಿಸಿ ಇಟ್ಟಿದ್ದ ಕರಾಚಿಯ ಬಂಗಲೆಯಲ್ಲಿ ಶಾಹು ಅವರು ತಂಗಿದ್ದರು. ೧೮೬೯ರಲ್ಲಿ ಸಾಯುವವರೆಗೆ ಚಿಮನ್ ಸಾಹೇಬರು ಈ ಬಂಗಲೆಯಲ್ಲಿ ಕೊಳೆಯುತ್ತಿದ್ದರು. ಶಾಹು ಅವರು ಅವರ ಗೋರಿಗೆ ಭೇಟಿ ನೀಡಿ ಗೌರವ ಸಲ್ಲಿಸಿದರು.[8]

ಫ್ರೆಜರ್ ಅವರ ಉಸ್ತುವಾರಿಯಲ್ಲಿ ನಡೆದ ವಿದ್ಯಾಭ್ಯಾಸದಲ್ಲಿ ಒಂದು ಸಂತೋಷದ ಸಂದರ್ಭ ಮೂಡಿಬರುತ್ತದೆ. ಏಪ್ರಿಲ್ ೧, ೧೮೯೧ರಲ್ಲಿ ಬರೋಡದ ಸರದಾರ ಗುಣಾಜಿರಾವ್ ಖಾನ್‌ವಿಲ್ಕರ್‌ರ ಮಗಳು ಲಕ್ಷ್ಮಿಯೊಂದಿಗೆ ಶಾಹು ಅವರ ವಿವಾಹ ನಡೆಯುತ್ತದೆ.[9] ರಾಜರ ವಿವಾಹವೆಂದೇ ಸಂತೋಷ, ಸಂಭ್ರಮದ ವೈಭವ, ವಿವಾಹದ ಸಂಭ್ರಮದ ನಂತರ ಶಾಹು ಅವರು ಏಪ್ರಿಲ್ ೨೦ರಂದು ಬಾಂಬೆಯ ಗೌರ್ನರ್ ಲಾರ್ಡ್ ಹ್ಯಾರಿಸ್ ಉದ್ಘಾಟಿಸಿದ ಕೊಲ್ಹಾಪುರ–ಮೀರಜ ರೈಲ್ವೆ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದರು. ಅದೇ ದಿನ ಕೊಲ್ಹಾಪುರದಲ್ಲಿ ಗೌರ್ನರರು ಕೈಗಾರಿಕಾ ಪ್ರದರ್ಶನವನ್ನು ಉದ್ಘಾಟಿಸಿದರು.

### ಶಿಕ್ಷಣದ ಕೊನೆಯ ಹಂತ

ಶಾಹು ಅವರ ದೇಶೀಯ ಅಧ್ಯಾಪಕ ಕೇಶವರಾವ್ ಗೋಖಲೆಯವರು ೧೮೯೧ರ ಕೊನೆಗೆ ನಿವೃತ್ತರಾದರು ಮತ್ತು ರಘುನಾಥ ಯಂಕಾಜಿ ಸಬ್ನಿಸ್ ಅವರನ್ನು ಅವರ ಸ್ಥಾನಕ್ಕೆ ಬ್ರಿಟಿಷ್ ಸರಕಾರ ನೇಮಿಸಿತು. ಸಬ್ನೀಸ್ ಅವರು ಬಾಂಬೆ ವಿಶ್ವವಿದ್ಯಾಲಯದ ಸ್ನಾತಕರಾಗಿದ್ದರು ಮತ್ತು ರಾಣಿಯ ಸರಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ವಿಶ್ವಾಸಿ, ಪ್ರಾಮಾಣಿಕ ಮತ್ತು ಮೃದು ಸ್ವಭಾವದ ಸಬ್ನೀಸ್

ಅವರು ಆರ್ಯ ಸಮಾಜದ ಪ್ರಶಂಸಕರಾಗಿದ್ದರು. ಅವರ ಹೃದಯ ದುರಾದೃಷ್ಟ 'ಅಸ್ಪೃಶ್ಯರ' ನೋವುಗಳಿಗೆ ಸ್ಪಂದಿಸುತ್ತಿತ್ತು.

ಶಾಹು ಅವರು ಧಾರವಾಡದಿಂದ ಕೊಲ್ಹಾಪುರಕ್ಕೆ ಜನವರಿ ೧೮೯೩ರಲ್ಲಿ ವಾಪಸ್ಸಾದರು. ಶಿಕ್ಷಣ ಮತ್ತು ಪಾಠ ಪ್ರವಚನಗಳ ಬೋಧನೆ ನವೆಂಬರ್ ಮಧ್ಯದವರೆಗೆ ಮುಂದುವರಿದವು. ಅವರು ಏಕಕಾಲದಲ್ಲಿಯೇ ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು ಮತ್ತು ಆಡಳಿತದ ಕಲೆಯಲ್ಲಿ ಬೋಧನೆಯನ್ನು ಪಡೆಯುತ್ತಿದ್ದರು. ಫ್ರೆಜರ್ ಅವರು ಅವರಿಗೆ ವಿಶೇಷ ಉಪನ್ಯಾಸಗಳನ್ನು ನ್ಯಾಯಾಂಗ ಮತ್ತು ಶಾಸಕಾಂಗಗಳ ಬಗ್ಗೆ ನೀಡಿದರು. ಶಾಹು ಅವರಿಗೆ ಪೊಲೀಸ್ ವ್ಯವಸ್ಥೆ ಮತ್ತು ಅದರ ಕಾರ್ಯ ನಿರ್ವಹಣೆ ಬಗ್ಗೆ ಭಾರತದ ದಂಡ ಸಂಹಿತೆ ಮತ್ತು ಅಪರಾಧಿ ಪ್ರಕ್ರಿಯೆ ಸಂಹಿತೆಯ ಬಗ್ಗೆ ಶಿಕ್ಷಣ ಕೊಡಲಾಯಿತು.

ಶಾಹು ಅವರ ಔಪಚಾರಿಕ ಶಿಕ್ಷಣ ಬಗ್ಗೆ ಫ್ರೆಜರ್ ಅವರು ಸ್ವತಃ ತೃಪ್ತಿಪಟ್ಟ ನಂತರ ಅವರನ್ನು ಅವರ ತಮ್ಮ ಬಾಪು ಸಾಹೇಬರೊಂದಿಗೆ ಇಡೀ ಸಂಸ್ಥಾನದ ವೀಕ್ಷಣೆಗೆ ಕರೆದುಕೊಂಡು ಹೋದರು. ಈ ಪ್ರವಾಸದ ಭೇಟಿಗಳಿಂದ ಶಾಹು ಅವರು ಸಹ್ಯಾದ್ರಿಯ ಉತ್ತುಂಗ ಬೆಟ್ಟ ಗುಡ್ಡಗಳಿಂದ ಹಿಡಿದು ಪೂರ್ವದ ಫಲವತ್ತಾದ ಪ್ರದೇಶಗಳಲ್ಲಿರುವ ಪ್ರಜೆಗಳ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳು ಅವರ ಮನಸ್ಸಿನ ಮೇಲೆ ಗಂಭೀರ ಪ್ರಭಾವ ಬೀರಿದವು. ಈ ಪ್ರವಾಸಗಳಲ್ಲಿ ಶಾಹು ಅವರು ಸ್ವತಃ ಜನರ ಜೀವನವನ್ನು ನೋಡಿದರು ಮತ್ತು ಅವರ ನೋವು ಮತ್ತು ಸಮಸ್ಯೆಗಳನ್ನು ವ್ಯಾಪಕವಾಗಿ ಅರ್ಥಮಾಡಿಕೊಳ್ಳಲು ಅವರೊಡನೆ ಮಾತನಾಡಿದರು.

ಶಾಹು ಅವರು ಕೊಲ್ಹಾಪುರದ ಇತಿಹಾಸದಲ್ಲಿ ಅರಮನೆಯಿಂದ ಹೊರಬಂದು ಜನರೊಡನೆ ಬೆರೆತ ಮೊದಲ ಮಹಾರಾಜರು. ಈ ರೀತಿ ರಾಜನು ಪ್ರಜೆಗಳೊಡನೆ ಬೆರೆತಿದ್ದನ್ನು ಮತ್ತು ಪ್ರತಿಕ್ರಿಯಿಸಿದ್ದನ್ನು ಅವರು ಹಲವು ವರ್ಷಗಳಲ್ಲಿ ನೋಡಿರಲಿಲ್ಲ. ಈಗ ಅವರ ರಾಜ ಪ್ರೌಢನಾಗಿದ್ದಾನೆ. ಬಹುಬೇಗನೆ ೧೮೯೪ರಲ್ಲಿ ಕೊಲ್ಹಾಪುರದಲ್ಲಿ ನಡೆಯುವ ಪಟ್ಟಾಭಿಷೇಕದ ಸಮಾರಂಭದಲ್ಲಿ ರಾಜನ ಅಧಿಕಾರವನ್ನು ವಹಿಸಿಕೊಳ್ಳುವರು.

## ಪಟ್ಟಾಭಿಷೇಕ: ಅದೃಷ್ಟದ ಮುನ್ಸೂಚನೆ

ಏಪ್ರಿಲ್ ೨, ೧೮೯೪ರಲ್ಲಿ ಒಂದು ದರ್ಬಾರ ಸಭೆಯಲ್ಲಿ ಶಾಹು ಛತ್ರಪತಿಗಳು ಸಿಂಹಾಸನವೇರಿದರು. ಗೌರ್ನರ್ ಲಾರ್ಡ್ ಹ್ಯಾರಿಸ್ ಪಟ್ಟಾಭಿಷೇಕ ಸಮಾರಂಭದಲ್ಲಿ ಭಾಗಿಯಾಗಿದ್ದರು. ಹೊಸ ಮಹಾರಾಜ ಕೊಲ್ಹಾಪುರ ಸಂಸ್ಥಾನದ ಅಧಿಕಾರ ವಹಿಸಿಕೊಂಡರು. ಜನರು ಬಹಳ ದಿನಗಳವರೆಗೆ ಯಾವುದಕ್ಕಾಗಿ ಕಾದಿದ್ದರೊ ಅದು ಇಂದು ಸಂಭವಿಸಿತು. ಈ ಬೆಳವಣಿಗೆಯು ಮರಾಠಿ ಜನತೆಗೆ ಪರಿಪೂರ್ಣ ಸಂತೋಷ ತಂದುಕೊಟ್ಟಿತು. ಲೋಕಮಾನ್ಯ ತಿಲಕರು ತಮ್ಮ ಪತ್ರಿಕೆ 'ಕೇಸರಿ'ಯಲ್ಲಿ ಮಹಾರಾಜರನ್ನು ಅಭಿನಂದಿಸುತ್ತಾ ಈ ಸಂದರ್ಭವನ್ನು ಹೀಗೆ ಹೇಳುತ್ತಾರೆ: "ಇಡೀ ಮಹಾರಾಷ್ಟ್ರಕ್ಕೆ ಇದು ಮಹಾ ಸಂತೋಷದ ಗಳಿಗೆಯಾಗಿದೆ. ವಿಶೇಷವಾಗಿ ಕೊಲ್ಹಾಪುರದ ಸಂಸ್ಥಾನದ ಪ್ರಜೆಗಳಿಗೆ ಅದೃಷ್ಟದ ಘಟನೆ ಜನರಿಗೆ ಅಭೂತವಾದ ಪರಮಾನಂದ ಮತ್ತು ಒಳ್ಳೆಯ ಅದೃಷ್ಟವನ್ನು ತಂದಿದೆ."[1]

ಮಹಾನ್ ಶಿವಾಜಿ ವಂಶಸ್ಥರಿಗೆ ಸೇರಿದ ಈ ಕೊಲ್ಹಾಪುರ ಸಂಸ್ಥಾನದ ಸಿಂಹಾಸನಕ್ಕೆ ಗೌರವ ಸಲ್ಲಿಸುವ ಪಾಲನ್ನು ಇಡೀ ಮಹಾರಾಷ್ಟ್ರದ ಜನತೆ ಪಡೆದಿದೆ. ಎಲ್ಲಕ್ಕಿಂತ ಮಿಗಿಲಾಗಿ ಇದು 'ಹಿಂದವಿ

ಸ್ವರಾಜ್' (ದೇಶೀಯರ ಸ್ವರಾಜ್ಯ) ದ ಒಂದು ಮಹಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಸಂಕೇತವಾಗಿದೆ. ಈ ಪರಂಪರೆಯು ಸಮಕಾಲೀನ ಮಹಾರಾಷ್ಟ್ರದ ಪ್ರಮುಖ ಸಾಮಾಜಿಕ ಗಣ್ಯವ್ಯಕ್ತಿಗಳಾದ ತಿಲಕ ಮತ್ತು ಗೋಪಾಲಕೃಷ್ಣ ಗೋಖಲೆ ಅವರು ಕೊಲ್ಹಾಪುರದ ಛತ್ರಪತಿ ಮಹಾರಾಷ್ಟ್ರ ಹಾಗು ಭಾರತ ರಾಷ್ಟ್ರಕ್ಕೆ ತನ್ನ ಕರ್ತವ್ಯಗಳನ್ನು ಮಾಡಬೇಕೆಂದು ನಿರೀಕ್ಷಿಸುತ್ತಿದ್ದಾರೆ. ಸಹಜವಾಗಿ ಮಹಾರಾಷ್ಟ್ರದ ನಾಯಕತ್ವವು ಅವರ ಕೈ ಸೇರಿದೆಯೆಂದು ಭಾವಿಸಲಾಗಿದೆ. ತಿಲಕರು ಬರೆಯುತ್ತಾರೆ: "ಕೊಲ್ಹಾಪುರ ಸಂಸ್ಥಾನವನ್ನು ಸ್ಥಾಪಿಸಿದ ವಂಶಸ್ಥರು ಎಸಗಿದ ಮಹಾಕಾರ್ಯ ಮತ್ತು ಮೆರೆದ ದೇಶಭಕ್ತಿಗಳಿಂದ ಗಳಿಸಿದ ಮಹಾಗೌರವವನ್ನು ಇತಿಹಾಸ ದಾಖಲಿಸಿದೆ. ನಿಜ, ಕಾಲವು ಬದಲಾಗಿದೆ. ಮಹಾರಾಷ್ಟ್ರದ ಹೆಮ್ಮೆಯ ಮಹಾ ಶಿವಾಜಿಯ ವಂಶಸ್ಥರು ಕೊಲ್ಹಾಪುರ ಸಂಸ್ಥಾನ, ಮಹಾರಾಷ್ಟ್ರ ಮತ್ತು ಭಾರತದ ಜನತೆಗೆ ಕಲ್ಯಾಣ ಕಾರ್ಯಗಳನ್ನು ಮಾಡುವುದು ಇನ್ನೂ ಬಹಳ ಉಳಿದಿದೆ. ಜನರ ಏಳಿಗೆಗಾಗಿ ನಿಸ್ವಾರ್ಥವಾಗಿ ಕೆಲಸಮಾಡುವಾಗ ಕೊಲ್ಹಾಪುರದ ರಾಜರು (ಆಳುವವರು) ಭೌತಿಕ ತ್ಯಾಗಗಳನ್ನು ಮಾಡುವುದಕ್ಕಾಗಿ ಹಾಗೂ ಹಿಂದುತ್ವದ ಹೆಮ್ಮೆಗೆ ಸಕಾರಣವಾಗಿ ಬದ್ಧತೆಯನ್ನು ಹೊಂದಬೇಕು. ಶಾಹು ಮಹಾರಾಜರು ಈ ಬದ್ಧತೆಯನ್ನು ಗೌರವಿಸಲು ಮತ್ತು ನಿರಂತರವಾಗಿ ಸಫಲತೆಯನ್ನು ಹೊಂದಲು ಮತ್ತು ಬೆಳೆಯಲು ಅವರಿಗೆ ದೇವರು ವಿವೇಕ, ಧೈರ್ಯ ಮತ್ತು ದೀರ್ಘಾಯುಷ್ಯ ನೀಡಲೆಂದು ನಾವು ಪ್ರಾರ್ಥಿಸುತ್ತೇವೆ.[2]

ಶಾಹು ಮಹಾರಾಜರು ತಮ್ಮ ಪಟ್ಟಾಭಿಷೇಕ ಮುಗಿದ ಕೂಡಲೆ ಪುಣೆಗೆ ಭೇಟಿ ನೀಡಿದಾಗ 'ಸಾರ್ವಜನಿಕ ಸಭೆ' ಅವರಿಗೆ ವೈಭವದ ಸನ್ಮಾನ ಸಮಾರಂಭವನ್ನು ವ್ಯವಸ್ಥೆಗೊಳಿಸಿತ್ತು. ಮಹಾರಾಜರನ್ನು 'ಸಭೆ'ಯ ಪರವಾಗಿ ಸ್ವಾಗತಿಸುತ್ತಾ ಗೋಪಾಲ ಗೋಖಲೆಯವರು ಹೇಳುತ್ತಾರೆ: "...... ಕೊಲ್ಹಾಪುರದ ಸಿಂಹಾಸನವು ಮರಾಠರ ಪರಾಕ್ರಮದ ಸ್ಪಷ್ಟ ಸಂಕೇತ. ಇಡೀ ಮಹಾರಾಷ್ಟ್ರದ ಜನತೆ, ಕೊಲ್ಹಾಪುರ ಸಂಸ್ಥಾನದ ಪ್ರಜೆಗಳಲ್ಲದವರು ಸೇರಿದಂತೆ, ಪಟ್ಟಾಭಿಷಿಕ್ತರಾದ ಛತ್ರಪತಿಯವರ ಬಗ್ಗೆ ಅಪಾರವಾದ ಪ್ರೀತಿ ಮತ್ತು ಗೌರವ ಹೊಂದಿದ್ದಾರೆ. ನಿಸ್ಸಂದೇಹವಾಗಿ ನಿಮ್ಮ ಪ್ರಜೆಗಳ ಸುಖ-ಸಂತೋಷ ಮತ್ತು ಸಂವೃದ್ಧಿಗಾಗಿ ನೀವು ದುಡಿಯುವುದು ನಿಮ್ಮ ಮೊದಲ ಕರ್ತವ್ಯವಾಗಿದೆ. ಆದರೆ ನಿಮ್ಮ ಮಾತೃಭೂಮಿಗಾಗಿ ಕೆಲಸ ಮಾಡುವುದು ನಿಮ್ಮ ಕರ್ತವ್ಯ ಮತ್ತು ವಿಶೇಷವಾಗಿ ಮಹಾರಾಷ್ಟ್ರಕ್ಕೆ ನಿಮ್ಮ ಪ್ರಜೆಗಳ ಬಗೆಗಿರುವ ನಿಮ್ಮ ಕರ್ತವ್ಯದ ನಂತರ ನಿಮ್ಮ ಬಾಧ್ಯತೆಯಾಗಿದೆ."[3]

ಈ ಮಧ್ಯೆ ತಿಲಕರು ಮತ್ತು ಗೋಖಲೆಯವರು ಮಹಾರಾಷ್ಟ್ರಕ್ಕೆ ನಾಯಕರಾಗಿದ್ದು ಮಾತ್ರವಲ್ಲದೆ ಅವರು ಇಡೀ ಭಾರತದ ನಾಯಕರಾಗಿ ಹೊರಹೊಮ್ಮಿದರು. ಶಾಹು ಅವರು ತಮ್ಮ ಯೋಗ್ಯತೆಯನ್ನು ಇನ್ನೂ ತೋರಿಸಬೇಕಾಗಿದೆ. ಕೊಲ್ಹಾಪುರದ ಸಿಂಹಾಸನದ ಪ್ರಾಮುಖ್ಯತೆಯನ್ನು ಪರಿಗಣಿಸುವಾಗ ಅವರ ನಿರೀಕ್ಷೆಗಳು ಅಸೂಕ್ತವೇನು ಅಲ್ಲ. ಶಾಹು ಮಹಾರಾಜರು ಮಹಾರಾಷ್ಟ್ರ ಮತ್ತು ರಾಷ್ಟ್ರಕ್ಕಾಗಿ ನಿರೀಕ್ಷಿಸಿದ ಕರ್ತವ್ಯಗಳನ್ನು ನೆರವೇರಿಸಲು ಹೊರಟಾಗ ತಿಲಕರು ಅವರ ಪ್ರಮುಖ 'ಶತ್ರು'ಗಳಾದದ್ದು ವಿಚಿತ್ರ ವೆನಿಸುತ್ತದೆ.

ಶಾಹು ಅವರು ಪಟ್ಟಾಭಿಷೇಕ ಮಾಡಿಸಿಕೊಂಡಾಗ ಅವರಿಗೆ ಕೇವಲ ೨೦ ವರ್ಷಗಳಾಗಿದ್ದವು. ತನ್ನ ಪ್ರಜೆಗಳಿಗೆ ಪ್ರಯೋಜನಕಾರಿ ಆಡಳಿತ ನೀಡುವುದು ಮತ್ತು ಅವರ ಬಡತನವನ್ನು ಮತ್ತು ದುಃಸ್ಥಿತಿಯನ್ನು ಅಳಿಸಿಹಾಕುವುದೇ ಪ್ರಮುಖ ಕರ್ತವ್ಯವಾಗಿತ್ತು. ಶಾಹು ಮಹಾರಾಜರು ತಮ್ಮ ಪ್ರಣಾಳಿಕೆಯಲ್ಲಿ ಪ್ರಜೆಗಳಿಗೆ ಸುಖ ಮತ್ತು ಕಲ್ಯಾಣಗಳನ್ನು ಖಾತರಿಗೊಳಿಸುವುದು ಪ್ರಾಥಮಿಕ ಗುರಿಯೆಂದು ಘೋಷಿಸಿದ್ದರು. ಪ್ರಣಾಳಿಕೆ

ಹೀಗೆ ಪ್ರಾರಂಭವಾಗುತ್ತದೆ: "ಸ್ವಸ್ತಿ ಶ್ರೀ ರಾಜ್ಯಾಭಿಷೇಕ ಶಕೆ ೨೨೦ ವಿಜಯನಾಮ ಸಂವತ್ಸರೆ ಫಾಲ್ಗುಣ ವದ್ಯ॥ ಇಂದುವಸರೆ ಕ್ಷತ್ರಿಯ ಕುಲವತನ ಶ್ರೀ ರಾಜ ಶಾಹು ಛತ್ರಪತಿಯಾಜಕಮನ್." (ಮಹಾನ್ ಶಿವಾಜಿಯವರ ಪಟ್ಟಾಭಿಷೇಕವು ಪ್ರಾರಂಭವಾಗುವ ಕ್ಯಾಲೆಂಡರಿನ ದಿನದ ಸೂಚನೆ) ಮತ್ತು ದೇವರ ಪ್ರಾರ್ಥನೆಯೊಂದಿಗೆ ಮುಕ್ತಾಯವಾಗುತ್ತದೆ: "ನಮ್ಮ ಎಲ್ಲಾ ಪ್ರಜೆಗಳು ನಿರಂತರವಾದ ಪರಮಸುಖ ಮತ್ತು ಸಂತೋಷದಲ್ಲಿರಲಿ, ಅವರು ಎಡಬಿಡದೆ ಪ್ರವರ್ಧಮಾನಕ್ಕೆ ಬರಲಿ, ಮತ್ತು ನಮ್ಮ ಸಂಸ್ಥಾನವು ಎಲ್ಲ ವಿಧಗಳಲ್ಲಿ ಬೆಳೆಯಲಿ ಎಂಬುದೇ ನಮ್ಮ ತೀವ್ರವಾದ ಆಶೆ. ನಮ್ಮ ಚಿಕ್ಕ ಮತ್ತು ದೊಡ್ಡ ಜಾಗಿರದಾರರು, ಸಂಬಂಧಿಕರು, ಅಶ್ವಾರೋಹಿಗಳು, ವರ್ತಕರು, ಇನಾಮದಾರರು, ಕಾರ್ಮಿಕರು, ವ್ಯಾಪಾರಿಗಳು ಮತ್ತು ಸಾಮಾನ್ಯರಾದ ಎಲ್ಲಾ ಪರಿಶುದ್ಧ ಮನಸ್ಸಿನಿಂದ ಕೂಡಿದ ಪ್ರಜೆಗಳು ಸಿಂಹಾಸನಕ್ಕೆ ನಿಷ್ಠರಾದವರು ನಮ್ಮ ಆಶೆಗಳನ್ನು ಸಾಕಾರಗೊಳಿಸುವುದಕ್ಕೆ ಸಹಾಯ ಮಾಡಲಿ. ಇಡೀ ವಿಶ್ವದ ವ್ಯಾಪಾರವನ್ನು ನಿಯಂತ್ರಿಸುವ ಮಹಾಶಕ್ತನಾದ ಭಗವಂತನನ್ನು ಪ್ರಾರ್ಥಿಸುವೆನು ಮತ್ತು ನಮ್ಮ ಆಡಳಿತ ದೀರ್ಘಕಾಲವಿರಲೆಂದು ಮತ್ತು ಸಫಲವಾಗಲೆಂದು ಹಾರೈಸಲಿ."[4]

ಮೇಲೆ ಹೇಳಿದ ಪ್ರಣಾಳಿಕೆಯ ಮೊದಲ ವಾಕ್ಯಗಳು ಮಹಾ ಅರ್ಥಗರ್ಭಿತವಾಗಿವೆ. ಮೇಲೆ ಹೇಳಿದ ಚಾರ್ಟರಿನ ಮೊದಲ ವಾಕ್ಯಗಳು ಮಹಾನ್ ಶಿವಾಜಿಯ ರಾಜ್ಯವ್ಯವಸ್ಥೆಯಿಂದ ಬಂದ ನುಡಿಗಳು, ಅವು "ಹಿಂದವಿ ಸ್ವರಾಜ್"ನ ಸ್ಥಾಪಕರ ನುಡಿಮುತ್ತುಗಳು, ಅವನು ತನ್ನ ವಂಶಸ್ಥ ಮತ್ತು ಅವನು ಅವರ ಮಹಾಪರಂಪರೆ ಮತ್ತು ಸದ್ಭಾವನೆಯನ್ನು ಬಳುವಳಿಯಾಗಿ ಪಡೆದಿದ್ದಾರೆ. 'ಹಿಂದವಿ ಸ್ವರಾಜ್'ನ ಅಂತಿಮ ಗುರಿ ಪ್ರಜೆಗಳ ಸುಖ ಮತ್ತು ಏಳಿಗೆ. ಮಹಾರಾಜರಾದ ಶಾಹು ತಮ್ಮ ಪ್ರಣಾಳಿಕೆಯ ಪ್ರಾರ್ಥನೆಯ ಕೊನೆಯ ಉದ್ದೇಶದ ಪ್ರಾಮುಖ್ಯತೆಯನ್ನು ಗುರುತಿಸಿದ್ದಾರೆ.

## ನುಡಿದಂತೆ ನಡೆದ ಮಹಾರಾಜ

ಶಾಹು ಮಹಾರಾಜರು ತಮ್ಮ ಮೊದಲ ಪ್ರಣಾಳಿಕೆಯಲ್ಲಿ ಮಹಾನ್ ಶಿವಾಜಿಯ ಆಡಳಿತದ ಗೊತ್ತು-ಗುರಿಗಳನ್ನು ಮನನ ಮಾಡಿಕೊಳ್ಳುವುದು ಕೇವಲ ಆಚರಣೆಯಲ್ಲ. ಸಾಮಾನ್ಯ ಜನರ ಕಲ್ಯಾಣಕ್ಕಾಗಿ ತಮ್ಮ ತೀವ್ರಾಪೇಕ್ಷೆಯ ಬದ್ಧತೆಯಿಂದ ಮೂಡಿಬಂದವುಗಳು. ತಮ್ಮ ಪಟ್ಟಾಭಿಷೇಕವಾದ ೧೨ ದಿನಗಳಲ್ಲಿ ಪ್ರಕಟಿಸಿದ ಮೊದಲ ಅಧಿಕೃತ ಆಜ್ಞೆಯಿಂದ ಸ್ಪಷ್ಟವಾಗುತ್ತದೆ. ಮೂಲೆ-ಮೂಲೆಗಳಲ್ಲಿರುವ ತಮ್ಮ ಪ್ರಜೆಗಳ ದೈನಿಕ ಕಷ್ಟ ಕಾರ್ಪಣ್ಯಗಳಿಗೆ ಸಂಬಂಧಪಟ್ಟ ಆಜ್ಞೆಯಿದು. ಮಹಾರಾಜರು ಬೇಟೆ ಮತ್ತು ಇತರೆ ಉದ್ದೇಶಗಳಿಗಾಗಿ ಸಂಸ್ಥಾನದ ಉದ್ದಕ್ಕೂ ಪ್ರವಾಸಗಳನ್ನು ಕೈಗೊಳ್ಳುವುದು ರೂಢಿಯಾಗಿತ್ತು. ಅಂತಹ ಪ್ರವಾಸಗಳನ್ನು ಕೈಗೊಳ್ಳುವಾಗ ಸಿಬ್ಬಂದಿಯು ಬೆಲೆಕೊಡದೆ ಬೇಕಾಗಿದ್ದ ಸಾಮಾನು ಸರಂಜಾಮುಗಳನ್ನು ಸಂಗ್ರಹಿಸುತ್ತಿದ್ದನ್ನು ಮಹಾರಾಜರು ಖುದ್ದಾಗಿ ನೋಡಿದ್ದರು. ಸಂವೇದನಾಶೀಲರಾದ ಶಾಹು ಮಹಾರಾಜರು ಇದು ಕ್ರೌರ್ಯ ಮತ್ತು ಅನ್ಯಾಯವೆಂದು ಬಗೆದು ತನ್ನ ಮೊದಲ ಆಜ್ಞೆಯಲ್ಲಿ ಈ ಅನಿಷ್ಟ ಪದ್ಧತಿಯನ್ನು ಕೊನೆಗಾಣಿಸಿದರು. ಈ ಆಜ್ಞೆಯು ಹೇಳುತ್ತದೆ: "ಮಹಾರಾಜರು ಸ್ವತಃ ಬೇಟೆಯಾಡಲು ಹೊರಟು ಅಲ್ಲಿಲ್ಲಿ ತಂಗಿದಾಗ ಆಯಾ ಪ್ರದೇಶದ ಜಿಲ್ಲೆಗಳ ಕಂದಾಯ ಅಧಿಕಾರಿಗಳು, ಪೊಲೀಸ್ ಇನ್‌ಸ್ಪೆಕ್ಟರುಗಳು ಸಂಸ್ಥಾನದ ಪಟಾಲಮ್ಮನ್ನು ನೋಡಿಕೊಂಡು ಉಪಚರಿಸುತ್ತಿದ್ದರು. ಪೊಲೀಸ್ ಅಧಿಕಾರಿಯು ತನ್ನ ಅಡಿಯಲ್ಲಿರುವ ಪೇದೆಗಳಿಗೆ ಆಜ್ಞೆಯನ್ನು ಪಾಲಿಸುವಂತೆ ನಿರ್ದೇಶನ ಕೊಡುತ್ತಿದ್ದರು. ಪೊಲೀಸ್ ಪೇದೆಗಳು ಆಗ ಹಳ್ಳಿಗಳಿಗೆ ಹೋಗಿ ಕುರಿ, ಕೋಳಿ, ಮೊಟ್ಟೆ ಮತ್ತು ಇತರೆ ವಸ್ತುಗಳನ್ನು ಜನರಿಂದ ಪಡೆಯುತ್ತಿದ್ದರು. ರಾಜರ ಪಟಾಲಂ

ಕ್ಯಾಂಪನ್ನು ಬಿಟ್ಟು ಹೊರಡುವಾಗ ಮಹಾರಾಜರ ಖಾಸಗಿ ಸಿಬ್ಬಂದಿಯ ಗುಮಾಸ್ತನು ತಮ್ಮ ಕಂದಾಯ ಅಧಿಕಾರಿಯೊಡನೆ ಲೆಕ್ಕಗಳನ್ನು ಪರಿಶೀಲಿಸುತ್ತಿದ್ದನು ಮತ್ತು ಅವನು ವಸ್ತುಗಳನ್ನು ಪಡೆದಿದ್ದಕ್ಕಾಗಿ ಹಣವನ್ನು ಪಾವತಿ ಮಾಡುತ್ತಿದ್ದನು. ಪಾವತಿಯನ್ನು ಕಂದಾಯದ ಅಧಿಕಾರಿಯಿಂದ ಪೊಲೀಸ್ ಇನ್‌ಸ್ಪೆಕ್ಟರ್‌ಗೆ ಹೋಗುತ್ತಿತ್ತು, ನಂತರ ಪೊಲೀಸ್ ಪೇದೆಗೆ ಹೋಗುತ್ತಿತ್ತು, ನಂತರ ಗ್ರಾಮ ಮುಖ್ಯಸ್ಥನಿಂದ ವಸ್ತು ನೀಡಿದ ಮನುಷ್ಯನಿಗೆ ಹಣ ಪಾವತಿಯಾಗುತ್ತಿತ್ತು. ಆದರೆ ಬಡಮನುಷ್ಯನಿಂದ ಖರೀದಿ ಮಾಡಿದ ಅಥವಾ ಪಡೆದ ವ್ಯಕ್ತಿಗೆ ನಿಜವಾಗಿ ಪೂರ್ತಿ ಹಣಪಾವತಿಯಾಗುತ್ತದೆಯೆ ಅಥವಾ ಭಾಗಶಃ ಪಾವತಿಯಾಗುತ್ತದೆಯೆ ಎಂಬುದೇ ಸಂದೇಹ. ಇದು ಹಾಗಾಗಬಾರದು. ಬಡಮನುಷ್ಯನಿಂದ ಪಡೆದ ವಸ್ತುಗಳಿಗೆ ಪೂರ್ಣ ಪರಿಹಾರ ನೀಡಲೇಬೇಕೆಂಬುದು ಮಾನ್ಯ ಮಹಾರಾಜರ ಆಶಯವಾಗಿತ್ತು. ತಮ್ಮ ಪ್ರವಾಸಕಾಲದಲ್ಲಿ ಬಡಮನುಷ್ಯನಿಗೆ ಸ್ವಲ್ಪಮಟ್ಟಿಗೆ ಹಾನಿಯಾಗಕೂಡದು. ಆದ್ದರಿಂದ ವಸ್ತುಗಳ ಸರಬರಾಜು ಕುರಿತಂತೆ ಈ ಕೆಳಕಂಡ ನಿಯಮಗಳನ್ನು ಮಾಡಲಾಯಿತು:

(೧) ಆಹಾರ ಧಾನ್ಯಗಳಾದ ಗೋಧಿ, ಜೋಳ, ಅಕ್ಕಿ, ಕಾಳುಗಳು, ಹಿಟ್ಟು, ಸಕ್ಕರೆ, ಮಸಾಲೆಗಳು ಮತ್ತು ಇತರೆ ವಸ್ತುಗಳನ್ನು ಮಾನ್ಯ ಮಹಾರಾಜರೊಡನೆ ಬರುವ ಸಿಬ್ಬಂದಿ ಜನರಿಗೆ ಸಾಕಾಗುವಷ್ಟು ಕೊಲ್ಹಾಪುರದ ಖಾಸಗಿ ಇಲಾಖೆಯಿಂದ ಖರೀದಿ ಮಾಡಬೇಕು.

(೨) ಮಹಾರಾಜರ ತಂಡ ಹೊರಡುವುದಕ್ಕೆ ಮುಂಚೆ ಖಾಸಗಿ ಸಿಬ್ಬಂದಿಯ ಒಬ್ಬ ನೌಕರನನ್ನು ಮೇಕೆ-ಕುರಿ, ಕೋಳಿ, ಮೊಟ್ಟೆ ಮೊದಲಾದ ವಸ್ತುಗಳನ್ನು ಖರೀದಿಸಲು ಕಳುಹಿಸಬೇಕು. ಅವನು ಹಳ್ಳಿಯ ಮಾರುಕಟ್ಟೆ ದಿನಗಳಲ್ಲಿ ಇವುಗಳನ್ನು ಖರೀದಿ ಮಾಡಬೇಕು ಮತ್ತು ಕೂಡಲೆ ಮಾರಾಟಗಾರನಿಗೆ ಹಣವನ್ನು ಪಾವತಿಸಬೇಕು. ಮುಂಚಿತವಾಗಿಯೇ ಸೌದೆಗಳ ವ್ಯವಸ್ಥೆ ಮಾಡಿರಬೇಕು. ಖರೀದಿಮಾಡಿದ ವಸ್ತುಗಳಿಗೆ ಪಾವತಿಯನ್ನು ಸರಕಾರಿ ನೌಕರನ ಎದುರಿನಲ್ಲಿಯೆ ಮಾಡಬೇಕು. ಒಂದು ವೇಳೆ ಅವನು ಸಿಗದಿದ್ದರೆ, ಹಣದ ಪಾವತಿಯನ್ನು ಆಯಾ ಹಳ್ಳಿಯ ಪಾಟೀಲ ಅಥವಾ ಕುಲಕರ್ಣಿ ಅವರ ಸಮ್ಮುಖದಲ್ಲಿ ಪಾವತಿ ಮಾಡಿ ಮಾರಾಟಗಾರನಿಂದ ರಸೀದಿಯನ್ನು ಪಡೆಯಬೇಕು.........

(೩) ಮಹಾರಾಜರು ಹೊರಕ್ಕೆ ಪ್ರವಾಸ ಹೊರಟಾಗ ಹಾಲಿನ ಸರಬರಾಜಿಗಾಗಿ ಮಾನ್ಯ ಮಹಾರಾಜರ ಖಾಸಗಿ ಲಾಯದವರಿಂದ ಎಮ್ಮೆಗಳನ್ನು ಸಾಗಿಸುವ ವ್ಯವಸ್ಥೆ ಮಾಡಬೇಕು. ಒಂದು ವೇಳೆ ಇದು ಸಾಧ್ಯವಾಗದಿದ್ದರೆ, ಮೇಲೆ ವಿವರಿಸಿದ ನೌಕರನು ಅಥವಾ ಖಾಸಗಿ ಸಿಬ್ಬಂದಿಯ ಗುಮಾಸ್ತನು ಹತ್ತಿರದ ಹಳ್ಳಿಯಿಂದ ಹಾಲು ಮಾರುವವನಿಂದ ಹಾಲು ಖರೀದಿ ಮಾಡಬೇಕು. ಮಹಾರಾಜರು ಹೊರಡುವವರೆಗೆ ಪಾವತಿ ಮಾಡುವುದನ್ನು ತಡಮಾಡಬಾರದು.

(೪) ಹುಲ್ಲು-ಮೇವು: ಎಲ್ಲಾ ಬ್ಲಾಕುಗಳಲ್ಲಿ ಸರಕಾರಿ ಹುಲ್ಲುಗಾವಲುಗಳಿವೆ. ಅಂಥ ವಸ್ತುಗಳನ್ನು ಪಡೆಯುವ ಅವಶ್ಯಕತೆಯಿಲ್ಲ. ಆದರೆ ತುರ್ತುಗಳಲ್ಲಿ ಅಂತಹ ಖರೀದಿಗಳಿಗಾಗಿ ಕೂಡಲೇ ನಗದಾಗಿ ಹಣ ಪಾವತಿ ಮಾಡಬೇಕು.

(೫) ಕರವೀರ ಮತ್ತು ಕರ್ನಾಟಕದ ಪ್ರಾಂತ್ಯಗಳು ಅಥವಾ ಇತರೆ ಪ್ರಾಂತ್ಯಗಳಿಂದ ಗೌರವಾನ್ವಿತ ಬ್ರಿಟಿಷ್ ರಾಜಕೀಯ ಏಜೆಂಟರು ಅಥವಾ ಬ್ರಿಟಿಷ್ ಸರಕಾರದ ಇತರೆ ಉನ್ನತ-ಹುದ್ದೆಯ

ಅಧಿಕಾರಿಗಳು, ಸಂಬಂಧಪಟ್ಟ ಕಂದಾಯದ ಅಧಿಕಾರಿಗಳು ಅಥವಾ ಇತರೆ ಉಪಚರಿಸುವ ಅಧಿಕಾರಿಗಳು ಪ್ರವಾಸ ಮಾಡುವಾಗ ತಪ್ಪದೆ ಗೌರವಾನ್ವಿತ ಅಧಿಕಾರಿಗಳಿಂದ ಅಥವಾ ಅವರ ಪ್ರತಿನಿಧಿಗಳಿಂದ ನಗದನ್ನು ಪಡೆಯಬೇಕು ಮತ್ತು ಮಾರಾಟಗಾರರಿಗೆ ಸ್ಥಳದಲ್ಲೇ ಹಳ್ಳಿಯಲ್ಲಿ ಪ್ರಚಲಿತವಿರುವುದರಲ್ಲಿ ಹಣ ಪಾವತಿ ಮಾಡಬೇಕು.[5]

ಇನ್ನೂರು ವರ್ಷಗಳ ಹಿಂದೆ ಮಹಾರಾಷ್ಟ್ರದಿಂದ ಮರಾಠ ಮಹಾರಾಜ ಮಹಾನ್ ಶಿವಾಜಿ ಅವರು ತನ್ನ ಸೈನ್ಯದ ಸೈನಿಕರ ಮತ್ತು ಅಧಿಕಾರಿಗಳನ್ನು ಕುರಿತು ಇಂತಹದ್ದೇ ಆಜ್ಞೆಯನ್ನು ಹೊರಡಿಸಿದ್ದರು. ಅವರು ಚಿಪ್ಲುನ್‌ನಲ್ಲಿ ಶಿಬಿರ ಹೂಡಿದ್ದಾಗ, ಶಿಬಿರಕ್ಕೆ ಬೇಕಾಗಿದ್ದ ಆಹಾರ ಮತ್ತು ಮೇವುಗಳಿಗೆ ಉತ್ಕೃಷ್ಟವಾದ ವ್ಯವಸ್ಥೆ ಮಾಡಿದ್ದರು. ಸೈನಿಕರು ಮನಸ್ಸಿಗೆ ಬಂದಂತೆ ವಸ್ತುಗಳನ್ನು ಪೋಲು ಮಾಡುತ್ತಿದ್ದರು. ಇದನ್ನು ತಿಳಿದು ಶಿವಾಜಿ ಅವರಿಗೆ ಬೈದರು: ಗುಮಾಸ್ತರು ವಿವಿಧ ಕೋಟೆಗಳಿಂದ, ಖಜಾನೆಗಳಿಂದ ಬಹಳ ಕಷ್ಟದಿಂದ ಲಾಯಗಳಿಗೆ ಸಾಮಾನು ಸರಂಜಾಮುಗಳನ್ನು ವ್ಯವಸ್ಥೆ ಮಾಡಿದ್ದಾರೆ. ಇದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ನೀವು ನಿಮ್ಮ ಮನಸ್ಸಿಗೆ ಬಂದಂತೆ ಮೇವು ಮತ್ತು ದವಸ ಧಾನ್ಯಗಳನ್ನು ಕೇಳಬಹುದು. ನೀವು ಸ್ಟಾಕ್ ಇರುವವರೆಗೆ ಪೋಲು ಮಾಡಿಕೊಂಡು ತಿನ್ನಿಸಬಹುದು. ಸ್ಟಾಕು (ದಾಸ್ತಾನು) ಮುಗಿದ ಮೇಲೆ ನೀವು ಮಳೆಕಾಲದಲ್ಲಿ ಏನನ್ನೂ ಪಡೆಯಲಾರಿರಿ, ಉಪವಾಸದಿಂದ ಕುದುರೆಗಳು ಸಾಯುವಂತೆ ಮಾಡಬಹುದು. ಅದರ ಅರ್ಥ ನೀವು ಕುದುರೆಗಳನ್ನು ಸಾಯಿಸಿದಿರಿ, ಅಂಥ ಸಂದರ್ಭಗಳಲ್ಲಿ ಸಿಪಾಯಿಗಳು ಕುಣ್ಬಿಗಳನ್ನು (ಬಡ ರೈತರು) ಹಿಡಿಯುವಿರಿ. ಕೆಲವರು ಅವರಿಂದ ದವಸ ಧಾನ್ಯಗಳನ್ನು ಕಿತ್ತುಕೊಳ್ಳುವಿರಿ. ಮತ್ತೆ ಕೆಲವರು ಬ್ರೆಡ್ಡು ಅಥವಾ ಹುಲ್ಲು, ಅಥವಾ ಸೌದೆ ಅಥವಾ ತರಕಾರಿಗಳು ಅಥವಾ ಕುರಿಮರಿಗಳನ್ನು ಕಿತ್ತುಕೊಳ್ಳುವಿರಿ. ಇದರ ಪರಿಣಾಮವಾಗಿ ಹೀಗೆ ಜೀವನ ಸಾಗಿಸುತ್ತಿದ್ದ ಕುಣ್ಬಿಗಳು ಈ ಜಾಗವನ್ನು ಬಿಟ್ಟು ಹೊರಟು ಹೋಗುವರು...... ಅವರಲ್ಲಿ ಅನೇಕರು ಹಸಿವಿನಿಂದ ಸಾಯುವರು. ನೀವು ಮೊಘಲ್ ದಾಳಿಕೋರರಿಗಿಂತ ದುಷ್ಟರಾಗಿ ಸಾಧಿತರಾಗುವಿರಿ. ನಿಮಗೆ ಜನರು ಶಾಪ ಹಾಕುವರು, ನೀವು ಪ್ರಜೆಗಳಿಗೆ ಮತ್ತು ಕುದುರೆಗಳಿಗೆ ತೊಂದರೆ ಕೊಡುವುದರಿಂದ ನೀವು ಕೆಟ್ಟ ಹೆಸರನ್ನು ಪಡೆಯುವಿರಿ. ಇದನ್ನು ನೀವು ಚೆನ್ನಾಗಿ ಅರಿತಿದ್ದೀರಿ. ಸೈನಿಕರು ಮತ್ತು ಇತರರು ಪ್ರಜೆಗಳಿಗೆ ಹಾನಿಮಾಡಬಾರದು. ಹಣವನ್ನು ಖಜಾನೆಯಿಂದ ನೀಡಬಹುದು. ದವಸ-ಧಾನ್ಯಗಳು, ದನಗಳಿಗೆ ಮೇವು, ಸೌದೆ, ತರಕಾರಿಗಳು ಮತ್ತು ಇತರೆ ವಸ್ತುಗಳನ್ನು ನೀವು ಹಣ ಕೊಟ್ಟು ಖರೀದಿ ಮಾಡಲೇಬೇಕಾಗುತ್ತದೆ ಅಥವಾ ನೀವು ಮಾರುಕಟ್ಟೆಗೆ ಹೋಗಬೇಕಾಗುತ್ತದೆ. ಏನೇ ಆದರೂ ದೌರ್ಜನ್ಯ ಅಥವಾ ಅತ್ಯಾಚಾರ ಎಸಗುವ ಅಥವಾ ಇತರರೊಡನೆ ಜಗಳ ಕಾಯುವ ಅವಶ್ಯಕತೆಯಿಲ್ಲ. ಲಾಯಗಳಿಗೆ ಸಾಮಾನು-ಸರಂಜಾಮು ಒದಗಿಸುವ ವ್ಯವಸ್ಥೆ ಮಾಡಲಾಗಿದೆ. ಅವುಗಳನ್ನು ಮುಂಗಾರು ಮಳೆಗಾಲ ಮುಗಿಯುವವರೆಗೆ ಮಿತವ್ಯಯದಿಂದ ಬಳಸಬೇಕು."[6]

ಸರಕಾರಿ ಸಿಬ್ಬಂದಿ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಪ್ರಜೆಗಳನ್ನು ಹಿಂಸಿಸುವುದರಿಂದ ರಕ್ಷಿಸುವ ಸಲುವಾಗಿ ಇಬ್ಬರು ಮಹಾರಾಜರು ಪ್ರಕಟಿಸಿದ ಎರಡು ಆಜ್ಞೆಗಳನ್ನು ಪರಿಶೀಲಿಸುವುದಕ್ಕೆ ಇತಿಹಾಸದ ವಿದ್ಯಾರ್ಥಿಗಳಿಗೆ ಅವಕಾಶ ಸಿಕ್ಕಿರುವುದು ಸಂತೋಷದ ಸಂಗತಿ. ನಿಜವಾಗಿ ಇತಿಹಾಸ ತನ್ನಷ್ಟಕ್ಕೆ ತಾನೇ ಹೀಗೆ ಪುನರಾವರ್ತನೆಗೊಳ್ಳುತ್ತದೆ.

ಪ್ರಾರಂಭದಿಂದಲೂ ಶಾಹು ಮಹಾರಾಜರು ಮಹಾರಾಜನ ಅಧಿಕಾರವು ವೈಭವದ ಭೋಗಾಸಕ್ತಿಗಾಗಿ ಅಲ್ಲ ಎಂಬ ದೃಢ ನಿಷ್ಠೆಯನ್ನು ಪರಿಪಾಲಿಸುತ್ತಾ ಬಂದರು. ಆ ಅಧಿಕಾರವನ್ನು ಬಹುಕಾಲದಿಂದಲೂ ಶೋಷಣೆಗೊಳಗಾದ ಪ್ರಜೆಗಳ ವಿಶೇಷವಾಗಿ ಅನಾಥ ಮತ್ತು ಅಜ್ಞಾನದ ಪ್ರಜೆಗಳ ವಿಮೋಚನೆಗಾಗಿ ಬಳಸಿದರು. ಅವರು ಅಧಿಕವಾಗಿ ರಾಜರ ಸ್ವಾರ್ಥ-ತ್ಯಾಗ ಪರಿಕಲ್ಪನೆಯಲ್ಲಿ ನಂಬಿಕೆಯಿಟ್ಟಿದ್ದರು.

ಪಟ್ಟಾಭಿಷೇಕದ ಮೊದಲು ಅವರ ಗುರುಗಳು ಆಡಳಿತ ತರಬೇತಿಯ ಭಾಗವಾಗಿ ಶಾಹು ಮಹಾರಾಜರು ತನ್ನ ಸಂಸ್ಥಾನದ ಮೂಲೆ-ಮೂಲೆಯ ಪ್ರದೇಶಗಳಿಗೆ ಪ್ರವಾಸ ಹೋಗುವುದು ಕಡ್ಡಾಯಗೊಳಿಸಿದ್ದರು. ಇದು ಅವರಿಗೆ ಹಳ್ಳಿಯ ಮತ್ತು ಮೂಲೆಗಳಲ್ಲಿರುವ ಗುಡ್ಡಗಾಡು ಜನವಸತಿಗಳ ಪ್ರಜೆಗಳ ಸ್ಥಿತಿಗತಿಗಳನ್ನು ಅರಿಯಲು ಅವಕಾಶ ಕಲ್ಪಿಸಿಕೊಟ್ಟಿತು. ಅವರು ಇವುಗಳನ್ನು ಅರಿಯಲು ಬಹಳ ಸಂವೇದನಾಶೀಲರಾಗಿದ್ದರು ಮತ್ತು ಅವರು ಬಡತನ-ಪೀಡಿತ ಪ್ರಜೆಗಳ ದುಃಖ ದುಮ್ಮಾನಗಳಿಂದ ವಿಚಲಿತರಾದರು. ಅರಮನೆಯಲ್ಲಿ ರಾಜವೈಭೋಗವನ್ನು ಸವಿಯುವುದಕ್ಕೆ ಬದಲಿಗೆ ಅವರು ಸಂಸ್ಥಾನವನ್ನು ಬಿಡುವಿಲ್ಲದೆ ತಿರುಗಾಡಿ ಆಯಾಸ ವಿಲ್ಲದೆ ನಿರಂತರವಾಗಿ ಪ್ರಜೆಗಳೊಂದಿಗೆ ಪ್ರತಿಕ್ರಿಯಿಸುತ್ತಾ ಪ್ರಜೆಗಳ ದುಃಖ ದುಮ್ಮಾನಗಳಲ್ಲಿ ಪಾಲುಗೊಂಡರು. ಅವರು ಎಟುಕಲಾರದ ಪ್ರದೇಶಗಳಾದ ದಾಜಿಪುರ-ಪನ್‌ಹಾಲಾದಿಂದ ಶಿರೋಳ ಪೇಟೆಯ ನರಸೋಬಾವಡಿಯವರೆಗಿನ ಜನರೊಂದಿಗೆ ಮಾತುಕತೆ ನಡೆಸಿದರು ಮತ್ತು ಅವರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನ ಪಟ್ಟರು. ತಮ್ಮ ಪ್ರವಾಸದಲ್ಲಿಯೇ ಜನರ ಬಡತನವನ್ನು, ಅವರ ನೋವುಗಳನ್ನು, ದುಮ್ಮಾನಗಳನ್ನು, ಮೌಢ್ಯವನ್ನು ಮತ್ತು ಅಜ್ಞಾನವನ್ನು ತಾವೇ ಖುದ್ದಾಗಿ ನೋಡಿದರು ಮತ್ತು ಪರಿಸ್ಥಿತಿಯನ್ನು ಸುಧಾರಿಸಲು ಸದಾ ಚಿಂತಿಸುತ್ತಿದ್ದರು.

ತಮ್ಮ ಪಟ್ಟಾಭಿಷೇಕದ ನಂತರ ಪ್ರವಾಸಮಾಡುವಾಗ ತಾವು ಕಂಡ ಹೃದಯ ವಿದ್ರಾವಕ ದೃಶ್ಯದಿಂದ ವಿಚಲಿತರಾದದ್ದನ್ನು ಶಾಹು ಮಹಾರಾಜರು ಹೀಗೆ ಬರೆಯುತ್ತಾರೆ: "ನಾನು ಇತ್ತೀಚೆಗೆ ಜಿಲ್ಲೆಯ ಪ್ರವಾಸದಿಂದ ವಾಪಸ್ಸು ಬಂದೇ ನಾನೇ ಸ್ವತಃ ವಿಷಯ ಸಂಗತಿಗಳನ್ನು ನೋಡುವುದರಿಂದ ಮತ್ತು ಜನರೊಂದಿಗೆ ನೇರವಾಗಿ ಅವರ ಸಮಸ್ಯೆಗಳ ಬಗ್ಗೆ ಮಾತನಾಡುವುದರಿಂದ ನನಗೆ ಅಪಾರವಾದ ಸಂತೋಷವಾಗುತ್ತದೆ. ಪ್ರವಾಸದಲ್ಲಿ ನಾನು ನರಸೊಬಾಚಿವಾಡಿಯ ಯಾತ್ರಾ ಕೇಂದ್ರವನ್ನು ನೋಡಿದೆ. ಈ ದೇವಸ್ಥಾನಕ್ಕೆ ಎಲ್ಲಾ ಕಡೆಯ ಯಾತ್ರಾರ್ಥಿಗಳು ಬರುತ್ತಾರೆ. ಭಿಕ್ಷುಕರಿಗೆ ಹಲವಾರು ಅನ್ನಛತ್ರಗಳಿದ್ದವು. ಇಲ್ಲಿ ಕುಷ್ಠರೋಗಿಗಳ ರೋಗ ವಾಸಿಯಾಗುತ್ತದೆಯೆಂದು ಜನರು ಭಾವಿಸುತ್ತಾರೆ. ಆದ್ದರಿಂದ ದುರಾದೃಷ್ಟವಶಾತ್ ಅಧಿಕಸಂಖ್ಯೆಯ ರೋಗಿಗಳು ಇಲ್ಲಿಗೆ ಬಂದಿದ್ದರು. ಅವರೊಂದಿಗೆ ಹೇಗೆ ವ್ಯವಹರಿಸಬೇಕೆಂಬುದು ನನ್ನನ್ನು ತೀವ್ರವಾಗಿ ಕಾಡುತ್ತಿದೆ."[7]

ಕುಷ್ಠರೋಗಿಗಳ ಬಗೆಗಿನ ಸಮಾಜದ ಚುಚ್ಚು ಮಾತುಗಳು, ತಿರಸ್ಕಾರಕ್ಕೆ ಗುರಿಯಾದ ಕುಷ್ಠರೋಗಿಗಳು, ಅವರು ಪಡುವ ಬಾಧೆಗಳು ಶಾಹು ಮಹಾರಾಜರನ್ನು ತೀವ್ರವಾಗಿ ಕಾಡಿದವು. ೧೮೯೭ರಲ್ಲಿ ರಾಣಿ ವಿಕ್ಟೋರಿಯಾ ಅವರ ವಜ್ರಮಹೋತ್ಸವದ ಸಮಯದಲ್ಲಿ ಶಾಹು ಮಹಾರಾಜರು ವಿಕ್ಟೋರಿಯ ಕುಷ್ಠರೋಗಿಗಳ ಆಶ್ರಯ – ಎಂಬ ಧರ್ಮಸಂಸ್ಥೆಯನ್ನು ಸ್ಥಾಪಿಸಿದರು. ಅವರು ವೈಯಕ್ತಿಕವಾಗಿ ಅದಕ್ಕೆ ಅಸ್ತಿವಾರವನ್ನು ಹಾಕಿದರು.[8] ಕುಷ್ಠರೋಗಿಗಳು ಭಿಕ್ಷೆ ಬೇಡಲು ತಮ್ಮ ಛಿದ್ರಗೊಂಡ ಭೀಕರ ದೇಹದ ಭಾಗಗಳನ್ನು ತೋರಿಸಬೇಕಾಗಿತ್ತು. ಶಾಹು ಮಹಾರಾಜರು ಸಾಧ್ಯವಾದಷ್ಟು ಮಟ್ಟಿಗೆ ಅವರ ದುಃಖ-ದುಮ್ಮಾನಗಳನ್ನು ಕಡಿಮೆಮಾಡಲು ಪ್ರಾಮಾಣಿಕ ಪ್ರಯತ್ನ ಮಾಡಿದರು.

ಸಾಮಾನ್ಯ ಜನರಿಗಾಗಿ ಮತ್ತು ಅವರ ಕಲ್ಯಾಣಕ್ಕಾಗಿ ಶಾಹು ಮಹಾರಾಜರ ಹೃದಯ ಹೇಗೆ ಮಿಡಿಯುತ್ತದೆಂಬುದಕ್ಕೆ ಒಂದು ಸಣ್ಣಕತೆಯಿದೆ. ಕೊಲ್ಹಾಪುರವು ಕಬ್ಬಿನ ಬೆಳೆ ಮತ್ತು ಆಲೆಮನೆಗೆ ಬಹುಪ್ರಸಿದ್ಧಿ. ಒಮ್ಮೆ ಕಬ್ಬು ಬೆಳೆಯುವವರು ಕಬ್ಬು ಅರೆಯುವಾಗ ತಮ್ಮ ಕೈಗಳನ್ನು ಕಳೆದುಕೊಂಡರು. ಶಾಹು ಮಹಾರಾಜರು ಇದನ್ನು ನೋಡಿದಾಗ ಅವರ ಮೊದಲ ಚಿಂತನೆಯು "ನಾವು ಇದನ್ನು ನಿಲ್ಲಿಸುವುದಕ್ಕೆ ಆಗುವುದಿಲ್ಲವೆ?" ತನ್ನ ಸಂಸ್ಥಾನದ ಕುಶಲಕರ್ಮಿಗಳಿಗೆ ಒಂದು ಮನವಿಯನ್ನು ಮಾಡಿಕೊಂಡರು: ಯಾರಾದರು ಜನವರಿ ೧, ೧೯೯೬ಕ್ಕಿಂತ ಮೊದಲು ಸರಳವಾದ, ಕಡಿಮೆ ಬೆಲೆಯ ಮತ್ತು ಸುಲಭವಾಗಿ ಒಪ್ಪಿಕೊಳ್ಳಬಹುದಾದ ಕಬ್ಬು ಅರೆಯುವ ಯಂತ್ರವನ್ನು ಕಂಡುಹಿಡಿಯಬೇಕು ಮತ್ತು ಆ ಯಂತ್ರದಲ್ಲಿ ಕೈ ಸಿಕ್ಕಿಹಾಕಿಕೊಳ್ಳಬಾರದು ಅಥವಾ ಸಿಕ್ಕಿ ಹಾಕಿಕೊಂಡರೆ ಕೈ ಹಾನಿಯಾಗಬಾರದಂತಹ ಉಪಕರಣವನ್ನು ರೂಪಿಸಬೇಕು."[9]

ಇದಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ ತಮ್ಮ ದರಬಾರಿನಲ್ಲಿ ಕಬ್ಬು ಅರೆಯುವ ಯಂತ್ರಗಳ ಆಕೃತಿಗಳು, ಮಾದರಿಗಳು ಮಂಡಿತವಾದವು. ಅವುಗಳಲ್ಲಿ ಅತ್ಯುತ್ತಮವಾದುದನ್ನು ಅಂಗೀಕರಿಸಲಾಯಿತು. ಮಾರ್ಪಾಟು ಮಾಡಿದ ಯಂತ್ರಗಳನ್ನು ಅಗಾಧ ಪ್ರಮಾಣದಲ್ಲಿ ತಯಾರಿಸಲಾಯಿತು ಮತ್ತು ಬ್ಲಾಕ್ ಅಧಿಕಾರಿಗಳಿಗೆ ಕಳುಹಿಸಿಕೊಡಲಾಯಿತು. ನಂತರ ಶಾಹು ಮಹಾರಾಜರು ಎರಡನೆಯ ಅಧಿಸೂಚನೆಯನ್ನು ಹೊರಡಿಸಿದರು: "ಎಲ್ಲಾ ಜನರು ಸುಲಭವಾಗಿ ಹೊಸದಾಗಿ ರೂಪಿಸಿದ ಕಬ್ಬು ಅರೆಯುವ ಯಂತ್ರವನ್ನು ನೋಡಲು ಅನುಕೂಲವಾಗುವಂತೆ ಒಂದು ಮಾದರಿಯನ್ನು ಮಾಮಲೆದಾರರಿಗೆ ಕಳುಹಿಸಲಾಗುವುದು ಮತ್ತು ಪ್ರತಿಯೊಂದು ಬ್ಲಾಕಿನ ಮಹಲ್‌ಕಾರಿಯವರಿಗೆ (ಕಂದಾಯ ಅಧಿಕಾರಿಗಳು) ಕಳುಹಿಸಲಾಗುವುದು. ಪ್ರತಿಯೊಬ್ಬರು ಇದನ್ನು ನೋಡಲೇಬೇಕು. ತಮ್ಮ ಕಬ್ಬು ಅರಿಯುವ ಯಂತ್ರಗಳಿಗೆ ಸೂಕ್ತವಾದ ಮಾರ್ಪಾಡುಗಳನ್ನು ಮಾಡದ ಹೊರತು ಹಾನಿಯಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಎಲ್ಲಾ ರೈತರು ಈ ಆಕೃತಿಯನ್ನು ಗಮನಿಸಬೇಕು. ತಮ್ಮ ಕಬ್ಬು ಅರೆಯುವ ಯಂತ್ರಗಳನ್ನು ಸುಧಾರಿಸಬೇಕೆಂಬುದನ್ನು ನೋಡಬೇಕು ಮತ್ತು ಸುಧಾರಿಸಬೇಕು ಮತ್ತು ಮಾಮಲೆದಾರರು ಸಹ ಜನರನ್ನು ಮನವೊಲಿಸಿ ಹೇಳಬೇಕು.

......ಈ ವ್ಯವಸ್ಥೆಯನ್ನು ಸಾರ್ವಜನಿಕರ ಪ್ರಯೋಜನಕ್ಕಾಗಿ ಮಾಡಲಾಯಿತು. ಸರಕಾರವು ಸಹ ಜನರು ಈ ಆಕೃತಿಯನ್ನು ನಕಲು ಮಾಡಬೇಕೆಂದು ಬಯಸುತ್ತದೆ. ಇದನ್ನು ಮಾಡದಿದ್ದರೆ ಸರಕಾರ ಸೂಕ್ತ ಕ್ರಮ ಕೈಗೊಳ್ಳುವುದು. ದಿನಾಂಕ ೨೮ ಜನವರಿ, ೧೮೯೯."[10] ಹೀಗೆ ಶಾಹು ಮಹಾರಾಜರು ಮಹಾ ಸಂವೇದನಾಶೀಲ ವ್ಯಕ್ತಿ ಮತ್ತು ಕೆಲಸ ಮಾಡಲು ಇಚ್ಛಾಶಕ್ತಿಯುಳ್ಳವರು, ತಮ್ಮ ಆಡಳಿತದ ಮೊದಲ ಅವಧಿಯಿಂದ (೧೮೯೪-೧೯೦೦) ಮೊದಲ ಹಂತದಿಂದ ಸಾಮಾನ್ಯ-ಮನುಷ್ಯನ ಸಮಸ್ಯೆ ಮತ್ತು ಕಷ್ಟಗಳಲ್ಲಿ ಸ್ವತಃ ಭಾಗಿಯಾಗುತ್ತಿದ್ದರೆಂಬುದನ್ನು ಈ ಎಲ್ಲಾ ಸಣ್ಣ ಸಂಗತಿಗಳು ಸೂಚಿಸುತ್ತವೆ. ಈ ಅವಧಿಯಲ್ಲಿ ಸಂಸ್ಥಾನದಲ್ಲಿ ಎರಡು ಮಹಾ ಪ್ರಕೃತಿ ವಿಕೋಪಗಳು ನಡೆದುಹೋದವು.

೧೮೯೬-೯೭ರ ವಿಚಿತ್ರವಾದ ಬರಗಾಲ ಮತ್ತು ಭಯಂಕರವಾದ ಪ್ಲೇಗು ತಲೆದೋರಿತು. ಈ ಎರಡು ಸವಾಲುಗಳು ಶಾಹುರವರು ಉತ್ತಮ ಆಡಳಿತಗಾರರೆಂಬ ಗಟ್ಟಿತನವನ್ನು ಒರೆಗಲ್ಲಿಗೆ ಹಚ್ಚಿದವು. ಅವರು ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಂಡರು ಮತ್ತು ನ್ಯಾಯಬೆಲೆ ಅಂಗಡಿಗಳ ಅಂತರಜಾಲವನ್ನು ಸ್ಥಾಪಿಸಿದರು. ರೈತರ ಮೇಲೆ ವಿಧಿಸಿದ್ದ ಸೆಸ್ ಅನ್ನು (ತೆರಿಗೆ) ರದ್ದುಗೊಳಿಸಿದರು. ಸುಲಭ ದರದಲ್ಲಿ ದನಗಳ ಮೇವನ್ನು ವ್ಯವಸ್ಥೆಗೊಳಿಸಿದರು ಮತ್ತು ಬಾವಿಗಳನ್ನು ಅಗೆಯುವ ಮೂಲಕ ರಸ್ತೆ ಮತ್ತು ಕೆರೆಗಳ ನಿರ್ಮಾಣದ ಮೂಲಕ ರೈತರಿಗೆ ಉದ್ಯೋಗವನ್ನು ಖಾತರಿಗೊಳಿಸಿದರು. ಪ್ಲೇಗಿನ

ಮಹಾಮಾರಿಯನ್ನು ಎದುರಿಸಲು ಅವರು ಹಳ್ಳಿಗಳಲ್ಲಿರುವ ಹೆಚ್ಚಿನ ಹಳ್ಳಿಗಳನ್ನು ಸ್ಥಳಾಂತರಿಸಿದರು ಮತ್ತು ಜನರನ್ನು ಕ್ಷೇಮಕರವಾದ ಸ್ಥಳಗಳಲ್ಲಿ ವಾಸಿಸುವಂತೆ ಪುನರ್ ವಸತಿ ಮಾಡಿದರು. ಏಕಕಾಲದಲ್ಲಿ ಜನರ ವೈಜ್ಞಾನಿಕ ಶಿಕ್ಷಣಕ್ಕಾಗಿ ಪ್ಲೇಗಿನ ಬಗ್ಗೆ ಆಂದೋಲನ ಪ್ರಾರಂಭಿಸಿದರು. ಶಾಹು ಮಹಾರಾಜರು ತನ್ನ ಜನರನ್ನು ಪ್ಲೇಗ್ ಮಹಾಮಾರಿಯಿಂದ ಹಾಗು ಬರದ ದವಡೆಯಿಂದ ಬದುಕಿಸಲು ಬಿಡುವಿಲ್ಲದೆ ನಿರಂತರವಾಗಿ ಶ್ರಮವಹಿಸಿದರು. ಅವರು ಕುದುರೆ ಅಥವಾ ಒಂಟೆಯ ಮೇಲೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ನಿರಂತರವಾಗಿ ಹೋಗಿ ಜನರನ್ನು ಹುರಿದುಂಬಿಸಿದರು. ಅವರು ತಮ್ಮ ಸ್ನೇಹಿತನಿಗೆ ಹೀಗೆ ಬರೆಯುತ್ತಾರೆ: ನಾನು ಪನ್‌ಹಾಲದಲ್ಲಿರುವ ಅರಮನೆಯನ್ನು ಮಾತ್ರ ಮಲಗಲು ಉಪಯೋಗಿಸಿದೆನು. ಉಳಿದ ಸಮಯದಲ್ಲಿ ನಾನು ನನ್ನ ಕಛೇರಿಯ ಕೆಲಸದಲ್ಲಿ ನಿರತನಾಗಿದ್ದೆ. ನಾನು ನನ್ನ ಬೆಳಗಿನ ಸಮಯವನ್ನು ನಗರದಲ್ಲಿನ ಪ್ಲೇಗಿನ ಪರಿಹಾರ ಕಾರ್ಯಗಳ ಉಸ್ತುವಾರಿಯ ಕೆಲಸ ಮಾಡುತ್ತಿದ್ದೆ. ಕೆಲವು ದಿನ ಹಿಂದೆ ನಾನೇ ಸ್ವತಃ ಬೆಳೆಗಳ ಸ್ಥಿತಿಗತಿಗಳನ್ನು ಸ್ವತಃ ನೋಡುತ್ತಿದ್ದೆ. ನಾನು ಒಳಗಿನ ಪ್ರದೇಶವನ್ನು ನೋಡಲು ಕುದುರೆಯ ಮೇಲೆ ೪೦ ಮೈಲಿಗಳ ದೂರದವರೆಗೆ ಹೋಗುತ್ತಿದ್ದೆ. ನಾನು ಆ ಉದ್ದೇಶಕ್ಕಾಗಿ ಒಂದೇ ಕುದುರೆಯನ್ನು ಬಳಸುತ್ತಿದ್ದೆ. ಪರಿಸ್ಥಿತಿಯನ್ನು ಖುದ್ದಾಗಿ ನೋಡಲು ಕುದುರೆಯ ಮೇಲೆ ಗಂಟೆಗೆ ೩ ಮೈಲಿಗಳ ವೇಗದಲ್ಲಿ ಹೋಗುತ್ತಿದ್ದೆ. ಅದು ನನ್ನನ್ನು ತುಂಬಾ ಆಯಾಸಗೊಳಿಸುತ್ತಿತ್ತು. ಡಿಸೆಂಬರ್–೧೮೯೯.[11]

ಶಾಹು ಮಹಾರಾಜರ ಉದ್ದೇಶಪೂರ್ವಕವಾದ ಯೋಜನೆ ಮತ್ತು ಆಯಾಸಗೊಳ್ಳದ ಪ್ರಯತ್ನಗಳು ಬರಗಾಲದ ಪ್ರಭಾವವನ್ನು ಮೃದುಗೊಳಿಸಿತು ಮತ್ತು ಪ್ಲೇಗ್ ಹರಡುವುದನ್ನು ನಿಲ್ಲಿಸಲಾಯಿತು. ಭಯಂಕರ ಬರಗಾಲದಿಂದ ತನ್ನ ಸಂಸ್ಥಾನದಲ್ಲಿ ಒಂದು ಹಸಿವಿನ ಸಾವು ಸಂಭವಿಸಲಿಲ್ಲ. ಆದರೆ ನೆರೆಯ ಬಾಂಬೆ ಪ್ರೆಸಿಡೆನ್ಸಿಯಲ್ಲಿ ಭಯಂಕರ ಬರಗಾಲದಲ್ಲಿ ಹಸಿವಿನಿಂದ ಸಾವಿರಾರು ಜನರು ಸತ್ತರು. ಶಾಹು ಮಹಾರಾಜರು ಅಂಥ ಪ್ರಕೃತಿ ವಿಕೋಪಗಳಲ್ಲಿ ಮೊದಲಿಗೆ ಯಾವುದೇ ಬೆಂಬಲವಿಲ್ಲದ, ಅಂಗವಿಕಲರು, ಮುದುಕರು, ಅನಾಥರು ಎಂದು ಚೆನ್ನಾಗಿ ಅರಿತಿದ್ದರು. ಅವರು ತನ್ನ ಸಂಸ್ಥಾನದಲ್ಲಿ ಜನರಿಗೆ ಉಣಿಸಲು ಮತ್ತು ಬಟ್ಟೆ ಕೊಡಲು ೯ ಕೇಂದ್ರಗಳನ್ನು ತೆರೆದಿದ್ದರು ಮತ್ತು ೫೦ ಸಾವಿರ ಜನರನ್ನು ಸಾವಿನ ದವಡೆಯಿಂದ ಬದುಕಿಸಿದರು. ರಸ್ತೆಗಳ, ಸೇತುವೆಗಳ ಮತ್ತು ಕೆರೆಗಳ ನಿರ್ಮಾಣದಲ್ಲಿ ತೊಡಗಿದ ಕಾರ್ಮಿಕರ ಮಕ್ಕಳಿಗಾಗಿ ಶಿಶುಪಾಲನಾ ಕೇಂದ್ರಗಳನ್ನು ಸ್ಥಾಪಿಸಿದರು.[12]

ಯಾರು ನೋಡಿಕೊಳ್ಳದ ಮಕ್ಕಳು ಅಳುವುದು ಮತ್ತು ಆ ಮಕ್ಕಳ ತಾಯಂದಿರು ಬರಗಾಲದ ಕಾಮಗಾರಿಗಳಲ್ಲಿ ಕೆಲಸ ಮಾಡುತ್ತಿರುವುದು ಸಂವೇದನಾಶೀಲರಾದ ಶಾಹು ಮಹಾರಾಜರಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ ಎಂಬ ಸಂಗತಿಯು ಹರ್ಷದಾಯಕ. ಇಂದು ಪ್ರಗತಿಪರ ಮಹಾರಾಷ್ಟ್ರದ ರಾಜ್ಯ ಸರಕಾರ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೊಳಿಸುತ್ತಿದೆ ಮತ್ತು ಈ ಯೋಜನೆಯಲ್ಲಿ ಮಕ್ಕಳಿಗೆ ಶಿಶುಪಾಲನೆ ಕಲ್ಪಿಸಲಾಗುತ್ತಿದೆ. ಶಾಹು ಈ ಬಗ್ಗೆ ಚಿಂತನೆ ನಡೆಸಿದ್ದರು ಮತ್ತು ಈ ಯೋಜನೆಗಳನ್ನು ನೂರು ವರ್ಷಗಳ ಹಿಂದೆಯೇ ಜಾರಿಗೊಳಿಸಿದ್ದರು. ಬಹುಶಃ ಇದು ದೇಶದಲ್ಲಿ ಮೊದಲ ನಿದರ್ಶನವಿರಬೇಕು.

## ಶಾಹುರವರ ಆಡಳಿತದಲ್ಲಿ ಮೊದಲ ಹಂತ

ಶಾಹು ಅವರು ೧೮೯೪ರಲ್ಲಿ ಕೊಲ್ಹಾಪುರದ ಸಿಂಹಾಸನವನ್ನು ಏರಿದರೂ ಅವರ ಪೂರ್ಣ ಅಧಿಕಾರಗ್ರಹಣದಲ್ಲಿ ಹಲವು ಅಡೆತಡೆಗಳಿದ್ದವು. ಅವರ ನೈಜ ತಂದೆ ಆಬ ಸಾಹೇಬ ಘಾಟ್ಗೆ ಅವರು ಬದುಕಿದ್ದಿದ್ದರೆ ಸಮಸ್ಯೆಗಳನ್ನು ಬಗೆಹರಿಸಬಹುದಾಗಿತ್ತು. ತಮ್ಮ ದತ್ತು ಪುತ್ರನನ್ನು ಪಡೆದ ಎರಡು ವರ್ಷಗಳ ನಂತರ ಮೂವತ್ತನೇ ವಯಸ್ಸಿನಲ್ಲಿ ದುರಾದೃಷ್ಟವಶಾತ್ ದೈವಾಧೀನರಾದರು. ತಮ್ಮ ಕಿರಿಯ ಸಹೋದರ ಬಾಪುಸಾಹೇಬರ ಹೊರತು ಅವರಿಗೆ ಬೆಂಬಲ ನೀಡುವವರು ರಾಜರ ಕುಟುಂಬದಲ್ಲಿ ಯಾರು ಇರಲಿಲ್ಲ.

ಛತ್ರಪತಿಗಳ ವಂಶದ ಐತಿಹಾಸಿಕ ಮಹತ್ವವನ್ನು ಪರಿಗಣಿಸಿದರೆ ಕೊಲ್ಹಾಪುರವು ಮರಾಠ ಸಂಸ್ಥಾನಗಳ ಪಟ್ಟಿಯಲ್ಲಿ ಸಹಜವಾಗಿ ಮೇಲಿರುತ್ತಿತ್ತು. ಕಳೆದ ೫೦ರಿಂದ ೬೦ ವರ್ಷಗಳಲ್ಲಿ ಅಪ್ರಾಪ್ತ ವಯಸ್ಕ ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಕೊಲ್ಹಾಪುರದ ಸ್ಥಾನ ಅತ್ಯಂತ ಕೆಳಕ್ಕೆ ಕುಸಿಯಿತು ಎಂಬುದು ಸತ್ಯ ಸಂಗತಿ. ಛತ್ರಪತಿಗಳ ಅಧಿಕಾರ ಮತ್ತು ಗೌರವಗಳನ್ನು ಸೀಮಿತಗೊಳಿಸುವ ಸಲುವಾಗಿಯೇ ಬ್ರಿಟಿಷರು ಹಲವಾರು ಒಪ್ಪಂದಗಳನ್ನು ಹೇರಿದರು. ಛತ್ರಪತಿಗಳು ನಾಮಕಾವಸ್ಥೆಯ ರಾಜರಾಗಿ ಉಳಿದರು ಮತ್ತು ಬ್ರಿಟಿಷರು ಮತ್ತು ಅವರು ನೇಮಿಸಿದ ಹೊರಗಿನವರು ನಿಜವಾದ ಅಧಿಕಾರವನ್ನು ಹಿಡಿದಿದ್ದರು. ಪಟ್ಟಾಭಿಷೇಕದ ಸಮಯದಲ್ಲಿ ಯೂರೋಪಿಯನ್ನರು ಮತ್ತು ಪಾರ್ಸಿ ಸಭ್ಯಸ್ಥರು ಸರಕಾರದ ಪ್ರಮುಖ ಹುದ್ದೆಗಳನ್ನು ಹೊಂದಿದ್ದರು. ಉದಾಹರಣೆಗೆ ಸಂಸ್ಥಾನದ ಕಾರ್ಯ ನಿರ್ವಾಹಕ ಇಂಜಿನಿಯರು ಶ್ರೀಮಾನ್ ಶಾನನರು, ಕೋರ್ಟ್ ಸರ್ಜನರು ಶ್ರೀಮಾನ್ ಸಿಂಕ್ಲೇರರು, ರಾಜಾರಾಮ್ ಕಾಲೇಜಿನ ಪ್ರಾಂಶುಪಾಲರು ಶ್ರೀಮಾನ್ ಕ್ಯಾಂಡಿ, ಲೇಡಿ ಸೂಪರಿಂಟೆಂಡೆಂಟ್ ಶ್ರೀಮತಿ ಅಟ್ಲಲ್ ಮತ್ತು ಅಲ್ಬರ್ಟ್ ಎಡ್ವಾರ್ಡ್ ಹಾಸ್ಪಿಟಲ್‌ನ ಸಂಸ್ಥಾನದ ಸೂಲಿಗಿತ್ತಿ ಸಾರಾ ಸೈಕ್ಸ್ ಎಲ್ಲರೂ ಯೂರೋಪಿಯನ್ನರಾಗಿದ್ದರು. ಪಾರ್ಸಿಗಳಲ್ಲಿ ಸಂಸ್ಥಾನದ ದಿವಾನರು ಮೆಹರ್ ಜೀ ತಾರಾಪೋರ್ ವಾಲಾ ಅವರಾಗಿದ್ದರೆ, ದೊರಾಬ್ ಜೀ ಪಲಂಜಿ ಅವರು ಪೊಲೀಸ್ ಮುಖ್ಯಸ್ಥರಾಗಿದ್ದರು. ಬ್ರಾಹ್ಮಣರು ಉಳಿದ ನಾಗರಿಕ ಹುದ್ದೆಗಳನ್ನು ಆಕ್ರಮಿಸಿದ್ದರು. ಅವರು ರಾಜಕೀಯ ಏಜೆಂಟರ ಆಜ್ಞೆಗಳನ್ನು ಪರಿಪಾಲಿಸುವುದರಲ್ಲಿ ಒಗ್ಗಿಹೋಗಿದ್ದರು. ಈಗ ಅವರಿಗೆ ಛತ್ರಪತಿಗಳಿಂದ ಆಜ್ಞೆಗಳನ್ನು ಪಡೆಯುವುದಕ್ಕೆ ಇರುಸು ಮುರುಸುಗೊಳ್ಳುತ್ತಿದ್ದರು. ನೌಕರಶಾಹಿಯ ಈ ಮನೋಭಾವವನ್ನು ಕುರಿತು ಶಾಹು ಅವರು ತಮ್ಮ ಗುರುಗಳಾದ ಫ್ರೆಜರ್ ಅವರಿಗೆ ಪತ್ರ ಬರೆದರು. ತಮ್ಮ ಶಿಷ್ಯನಿಗೆ ಸಲಹೆಯ ರೂಪದಲ್ಲಿ ಒಂದು ಪತ್ರ ಬರೆದರು: "ಕೌನ್ಸಿಲ್ ಮತ್ತು ಉನ್ನತ ಅಧಿಕಾರಿಗಳು ನಿಮ್ಮ ಆಜ್ಞೆಗಳನ್ನು ಪರಿಪಾಲಿಸಲು ಸಿದ್ಧರಾಗಿಲ್ಲ ಎಂದು ನೀವು ಹೇಳಿರುವಿರಿ. ಈ ಸಂದರ್ಭಗಳಲ್ಲಿ ಇದು ನಿರೀಕ್ಷಿತವೆ. ಆದರೆ ಮಹಾರಾಜರೆ, ಮೊದಲಿಗೆ ನೀವು ಒಡೆಯರೆಂಬುದನ್ನು ಖಾತರಿಪಡಿಸಿಕೊಳ್ಳಲು ಪ್ರಯತ್ನಿಸಿದರೆ ಭವಿಷ್ಯದಲ್ಲಿ ಸಾಕಷ್ಟು ಕಡಿಮೆ ಸಮಸ್ಯೆಗಳನ್ನು ಉಳಿಸುವಿರಿ. ಜನರು ನೀವು ಬಹಳ ಒಳ್ಳೆಯರೆಂಬುದನ್ನು ಭಾವಿಸದಿರಲಿ."[13]

ಇಲ್ಲಿಯವರೆಗೆ ರಾಜಕೀಯ ಏಜೆಂಟರು ಸ್ವತಃ ತಾವೇ ಕೊಲ್ಹಾಪುರದ ಪರಮಾಧಿಕಾರಿಗಳೆಂದು ಭಾವಿಸಿದ್ದರು. ಆ ಸಮಯದಲ್ಲಿ ರಾಜಕೀಯ ಏಜೆಂಟರಾದ ಹಂಟರ್ ಅವರು ತಾವು ಸಾರ್ವಭೌಮ ಬ್ರಿಟಿಷ್ ಅಧಿಕಾರದ ಪ್ರತಿನಿಧಿಯೆಂದು ಸಾಮ್ರಾಜ್ಯದ ಹಿರಿಮೆ ಮತ್ತು ಪ್ರತಿಷ್ಠೆಗಳಿಂದ ಉಬ್ಬಿಹೋಗಿದ್ದರು. ಅಂಥವರು ಅಧಿಕಾರವು ಶಾಹು ಮಹಾರಾಜರಿಗೆ ಹೋದಾಗ ತುಂಬಾ ಚಿಂತಿತರಾದರು. ಅವನು

ಕೊಲ್ಹಾಪುರವನ್ನು ಬಿಟ್ಟಾಗ, ಅವನನ್ನು ಬೀಳ್ಕೊಡಲು ಹೊಸ ಮಹಾರಾಜರೇ ರೈಲ್ವೆ ನಿಲ್ದಾಣಕ್ಕೆ ಹೋಗುತ್ತಿದ್ದರೆಂಬುದನ್ನು ನಿರೀಕ್ಷಿಸುತ್ತಿದ್ದನು.[14] ದುರಾದೃಷ್ಟವಶಾತ್ ೧೮೯೬ರಲ್ಲಿ ಮತ್ತೊಬ್ಬ ದುರಹಂಕಾರಿ ಮತ್ತು ತಲೆತಿರುಕನಾದ ಕರ್ನಲ್ ವಿಲಿಯಂ ವ್ರೆ ಅವರನ್ನು ರಾಜಕೀಯ ಏಜೆಂಟರಾಗಿ ನೇಮಿಸಲಾಯಿತು. ಅವನ ಮುಂಗೋಪ ಮತ್ತು ಸ್ವೇಚ್ಛಾ ಪ್ರವೃತ್ತಿಯಿಂದ ಉನ್ನತ ಹುದ್ದೆಗಳಲ್ಲಿರುವ ರಾಜಾರಾಮ್ ಕಾಲೇಜಿನ ಪ್ರಾಂಶುಪಾಲರಾದ ಕ್ಯಾಂಡಿ, ಕೋರ್ಟ್ ಸರ್ಜನರಾದ ಸಿಂಕ್ಲೇರ್, ಸಂಸ್ಥಾನದ ದಿವಾನರಾದ ತಾರಾಪೋರ್‌ವಾಲಾ ಮೊದಲಾದ ಅಧಿಕಾರಿಗಳೊಡನೆ ಸಂಘರ್ಷವೇರ್ಪಟ್ಟಿತು ಮತ್ತು ಒಂದು ಸಂಘರ್ಷದಿಂದ ಮತ್ತೊಂದು ಸಂಘರ್ಷವಾಗಿ ಆಡಳಿತವು ಸಡಿಲವಾಯಿತು. ಇವೆಲ್ಲಕ್ಕೂ ಮಿಗಿಲಾಗಿ, ಅವನು ಮಹಾರಾಜರೇ ಸಮಾರಂಭದಲ್ಲಿ ತಮಗೆ ವಿಷ ಕುಡಿಸಲು ಸಂಚುಹೂಡಿದ್ದರೆಂದು ದೊಡ್ಡ ಆರೋಪ ಮಾಡಿದನು. ಆಗ ಶಾಹು ಅವರೇ ತನಿಖಾ ಅಧಿಕಾರಿಯನ್ನು ಕಳುಹಿಸಿಕೊಡಲು ಬಾಂಬೆ ಸರಕಾರವನ್ನು ಒತ್ತಾಯಿಸಿದರು ಮತ್ತು ಸಮಗ್ರ ತನಿಖೆಯನ್ನು ನಡೆಸಲಾಯಿತು. ತನಿಖೆಯ ನಂತರ ಮಹಾರಾಜರು ಈ ಬಗ್ಗೆ ಮುಗ್ಧರೆಂಬುದು ನಿಸ್ಸಂದೇಹವಾಗಿ ಸಾಧಿತವಾಯಿತು. ವ್ರೆ ಅವರು ಸ್ವತಃ ವ್ಯರ್ಥ ಪ್ರಯತ್ನ ಮಾಡಿದರು. ಕೂಡಲೇ ಅವರು ಗಂಟುಮೂಟೆ ಕಟ್ಟಿಕೊಂಡು ತಮ್ಮ ಹುದ್ದೆ ತೊರೆದು ಹೊರಟುಹೋದರು. ಈ ಎಲ್ಲಾ ಘಟನೆಗಳು ಶಾಹು ಅವರು ಎಂತಹ ಮಾನಸಿಕ ಕ್ಷೋಭೆಗೊಳಗಾಗಿದ್ದರೆಂಬುದನ್ನು ತೋರಿಸುತ್ತವೆ.

ಮೇಲೆ ವಿವರಿಸಿದ ಘಟನೆಗಳು ಕೇವಲ ಕೆಲವೇ ಕೆಲವು. ಇವೆಲ್ಲವು ಛತ್ರಪತಿಯ ಸಿಂಹಾಸನವು ಸುಖದ ಸುಪ್ಪತ್ತಿಗೆಯಲ್ಲಿತ್ತು ಎಂಬುದನ್ನು ಎತ್ತಿ ತೋರಿಸುತ್ತವೆ. ಈ ಕಷ್ಟದಾಯಕ ಹಿನ್ನೆಲೆಯಲ್ಲಿ ಈ ಶತಮಾನದ ಕೊನೆಯ ಆರು ವರ್ಷಗಳಲ್ಲಿ ಶಾಹು ಅವರು ಮಹಾರಾಜರೆಂದು ತಮ್ಮ ಅಧಿಕಾರವನ್ನು ಸ್ಥಾಪಿಸಿದರು. "ಮೊದಲಿಗೆ ನೀವು ಒಡೆಯರೆಂಬುದನ್ನು ಮಾಡಿ ತೋರಿಸು, ತಾವು ಬಹಳ ಒಳ್ಳೆಯವರೆಂಬುದನ್ನು ಜನರು ಭಾವಿಸಲು ಬಿಡಬೇಡಿ" ಎಂಬ ತಮ್ಮ ಗುರುಗಳ ಸಲಹೆಯನ್ನು ಚಾಚು ತಪ್ಪದೆ ಶಾಹು ಮಹಾರಾಜರು ಪರಿಪಾಲಿಸಿದರು. ವಿಶ್ವಾಸದೊಂದಿಗೆ ಖಂಡಿತವಾಗಿ ಮತ್ತು ಕಟ್ಟುನಿಟ್ಟಿನ ಕ್ರಮಗಳೊಂದಿಗೆ ಶಾಹು ಅವರು ನಿಧಾನವಾಗಿ ತಮ್ಮ ಅಧಿಕಾರವನ್ನು ಬೆಳೆಸಿದರು ಮತ್ತು ತಮ್ಮ ಸಿಂಹಾಸನದ (ಗದ್ದುಗೆ) ಪ್ರಭಾವವನ್ನು ವಿಸ್ತರಿಸಿದರು. ತತ್ಪರಿಣಾಮವಾಗಿ, ಕೊಲ್ಹಾಪುರದ ಜಾತಕದಲ್ಲಿ ಆಕ್ರಮಿಸಿದ್ದ ಯೂರೋಪಿಯನ್ನಿನ ಮತ್ತು ಪಾರ್ಸಿಯ ಅನಿಷ್ಟ ನಕ್ಷತ್ರಗಳು ಒಂದಾದ ಮೇಲೆ ಒಂದರಂತೆ ನಾಲ್ಕು ವರ್ಷಗಳಲ್ಲಿ ಅಳಿಸಿಹೋದವು. ಯೂರೋಪಿಯನ್ನರಾದ ಕ್ಯಾಂಡಿ ಮತ್ತು ಶಾನನರು ಹೋದಹಾಗೆ ಪಾರ್ಸಿಯರಾದ ದೊರಾಬ್ಜಿ ಮತ್ತು ಮೆಹರ್ಜಿಯವರು ಹೊರಟುಹೋದರು. ಮಹಾರಾಜರ ಮುಂದಿನ ದಾಪುಗಾಲು ಸುಲಭವಾಯಿತು. ತಮ್ಮ ನಡೆಗೆ ಅಡ್ಡವಾಗಿದ್ದ ಎಲ್ಲ ತೊಡರುಗಳು ತೊಲಗಿಹೋದವು.

ಪಟ್ಟಾಭಿಷೇಕದ ನಂತರದ ಕೂಡಲೇ 'ರಿಜಂಸಿಯ ಕೌನ್ಸಿಲ್ ಅನ್ನು' ರದ್ದುಗೊಳಿಸಿ 'ಆಡಳಿತದ ಮಂಡಳಿ'ಯನ್ನು ನೇಮಿಸಿದರು. ಅದು ದಿವಾನರು, ಮುಖ್ಯ ನ್ಯಾಯಾಧೀಶರು ಮತ್ತು ಸರ್‌ಸುಭೆ ಎಂಬ ಮೂರು ಉನ್ನತ ಅಧಿಕಾರಿಗಳನ್ನು ಒಳಗೊಂಡಿತ್ತು. ಸ್ವಲ್ಪ ಸಮಯದಲ್ಲಿ ಶಾಹು ಅವರು ತಮ್ಮ ಆಯ್ಕೆಯ ಅಧಿಕಾರಿಗಳನ್ನು ಈ ಹುದ್ದೆಗಳಿಗೆ ನೇಮಿಸಿದರು. 'ಆಡಳಿತ ಮಂಡಳಿಯ' ಜೊತೆಗೆ ಅವರು ಮತ್ತೊಂದು ಮುಖ್ಯವಾದ 'ಹುಜೂರ್ ಆಫೀಸ್' ಎಂಬ ಇಲಾಖೆಯನ್ನು ನಿರ್ಮಿಸಿದರು ಮತ್ತು ಅದಕ್ಕೆ ತಮ್ಮ ಗುರುಗಳಾದ ರಾವ್ ಸಾಹೇಬ್ ರಘುನಾಥ ವಿನಾಯಕಜಿ ಸಬ್ನಿಸರನ್ನು ಮುಖ್ಯಸ್ಥರನ್ನಾಗಿ ಏಪ್ರಿಲ್ ೧೮೯೪ರಲ್ಲಿ ನೇಮಿಸಿದರು. ಹೀಗೆ ಆಡಳಿತದಲ್ಲಿದ್ದ ಯೂರೋಪಿಯನ್ನರ ಮತ್ತು ಪಾರ್ಸಿಗಳ

ಏಕಸ್ವಾಮ್ಯತೆಯನ್ನು ಕೆಡವಿದರು. ಆದರೆ ಭದ್ರವಾಗಿ ಊರಿದ್ದ ಬ್ರಾಹ್ಮಣರ ಅಧಿಕಾರದ ಏಕಸ್ವಾಮ್ಯತೆಯ ಕೋಟೆಯನ್ನು ಮುಟ್ಟದೆ ಹಾಗೆ ಉಳಿಸಿದ್ದರು. ದಿವಾನರ ಹುದ್ದೆಗೆ ಪ್ರಭು ಜಾತಿಗೆ ಸೇರಿದ ಸಬ್ನೀಸರ ನೇಮಕವು ಬ್ರಾಹ್ಮಣರ ಭದ್ರಕೋಟೆಗೆ ಮೊದಲ ಸ್ಫೋಟವಾಗಿತ್ತು. ಭಾಸ್ಕರರಾವ್ ಜಾಧವ ಅವರನ್ನು ಕಂದಾಯ ಇಲಾಖೆಯಲ್ಲಿ ಅಸಿಸ್ಟೆಂಟ್ ಕಲೆಕ್ಟರ್ ಮತ್ತು ಪ್ರಥಮ ದರ್ಜೆಯ ಮ್ಯಾಜಿಸ್ಟ್ರೇಟ್ ಎಂದು ನೇಮಕಮಾಡಿದ್ದು ಈ ಭದ್ರಕೋಟೆಗೆ ಎರಡನೆಯ ಸ್ಫೋಟವಾಗಿತ್ತು. ಭಾಸ್ಕರರಾವ್ ಅವರು ಮರಾಠ ಸಮುದಾಯದ ಪ್ರತಿಭಾವಂತ ವಿದ್ಯಾರ್ಥಿ, ಆತ ಬಿ.ಎ ಮತ್ತು ಎಂ.ಎ. ಗಳನ್ನು ಪ್ರಥಮ ದರ್ಜೆಯಲ್ಲಿ ಪಾಸಾಗಿದ್ದ. ಹೊರಗಿನವನಾಗಿ ಅವರನ್ನು ಶಾಹು ಅವರು ವಿಶೇಷವಾಗಿ ಅವರನ್ನು ತಮ್ಮ ಸಂಸ್ಥಾನಕ್ಕೆ ಆಹ್ವಾನಿಸಿದ್ದರು. ಶನಾನ್ ಹೋದ ನಂತರ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಗೆ ಮತ್ತೊಬ್ಬ ಮರಾಠ ಶಿಕ್ಷಿತ ಯುವಕ ದಾಜಿರಾವ್ ಅಮೃತ ವಿಚಾರೆ ಅವರನ್ನು ನೇಮಿಸಿದರು.

ತಮ್ಮ ಆಡಳಿತದ ಮೊದಲ ಹಂತದಿಂದ ಆಡಳಿತದಲ್ಲಿದ್ದ ಬ್ರಾಹ್ಮಣರ ಬಿಗಿಮುಷ್ಟಿಯನ್ನು ಶಾಹು ಮಹಾರಾಜರು ದುರ್ಬಲಗೊಳಿಸಲು ತೊಡಗಿದರು. ಆದರೆ ಪರಿಸ್ಥಿತಿಗಳು ಅನುಕೂಲಕರವಾಗಿರಲಿಲ್ಲ. ಹಲವಾರು ತಲೆಮಾರುಗಳಿಂದ ಶಿಕ್ಷಣದಿಂದ ವಂಚಿತರಾಗಿದ್ದ ಜನರು ಆಡಳಿತಕ್ಕೆ ಬೇಕಾಗಿದ್ದ ಶಿಕ್ಷಿತ ಯುವಕರನ್ನು ಒದಗಿಸಲು ಸಾಧ್ಯವಾಗಲಿಲ್ಲ. ನೀವು ಒಣಗಿದ ಬಾವಿಯಿಂದ ಬಕೆಟ್ಟಿನಲ್ಲಿ ನೀರು ಸೇದಲು ಸಾಧ್ಯವಿಲ್ಲ. ಬಾವಿಯಿಂದ ನೀರು ಸೇದುವುದು ಸಮಸ್ಯೆ ಅಲ್ಲ. ಆದರೆ ಬಾವಿಗಳನ್ನೇ ಅಗೆದಿರಲಿಲ್ಲ. ಶಾಹು ಮಹಾರಾಜರು ಈ ರೂಪಾಂತರದ ಬಾವಿಗಳನ್ನು ಅಗೆಯಲು ಪ್ರಾರಂಭಿಸಿದರು. ಮುಂದಿನ ಹಂತದ ತನ್ನ ಆಡಳಿತ ಅವಧಿಯ ಮುಂದಿನ ಹಂತದಲ್ಲಿ ಶಾಹು ಮಹಾರಾಜರು ಜನರ ಶಿಕ್ಷಣದ ಮೂಲಭೂತ ಸೌಕರ್ಯಗಳನ್ನು ನಿರ್ಮಿಸುವುದಕ್ಕೆ ತೊಡಗಿದರು.

ಶಾಹು ಮಹಾರಾಜರು ತಮ್ಮ ಆಡಳಿತದಲ್ಲಿ ತಮ್ಮ ಬಿಗಿಹಿಡಿತವನ್ನು ಭದ್ರಪಡಿಸಿಕೊಳ್ಳುತ್ತಿರುವಾಗ ಶಾಹು ಅವರು ತಮ್ಮ ಬ್ರಿಟಿಷ್ ಅಧಿಕಾರದೊಂದಿಗಿನ ಸಂಬಂಧವನ್ನು ಸ್ನೇಹಪರವಾಗಿ ವೃದ್ಧಿಸಿಕೊಳ್ಳುತ್ತಿದ್ದರು. ಸಾಮಂತನಾಗಿ ಸುಗಮ ಸಂಬಂಧಗಳನ್ನು ಹೊಂದುವುದರಿಂದ ಸಂಸ್ಥಾನ ಮತ್ತು ಜನಗಳಿಗೆ ಹೆಚ್ಚಿನ ಪ್ರಯೋಜನಗಳಿರುವುದನ್ನು ಕಂಡರು. ಕೊಲ್ಹಾಪುರದ ಸಂಸ್ಥಾನ ಬಾಂಬೆ ಗವರ್ನರ್‌ರ ಮತ್ತು ತಮ್ಮ ಕೌನ್ಸಿಲ್‌ನ ಉಸ್ತುವಾರಿಯಲ್ಲಿ ಬಂದಿತ್ತು. ತಮ್ಮ ಜನತೆಗೆ ಕೆಲಸ ಕಾರ್ಯಗಳನ್ನು ಮಾಡಿಸಿಕೊಡುವುದಕ್ಕೆ ಬ್ರಿಟಿಷರ ನಂಬಿಕೆಯನ್ನು ಗಳಿಸಬೇಕಾದದ್ದು ಮುಖ್ಯವಾಗಿತ್ತು. ಈ ವಿಚಾರದಲ್ಲಿ ಅವರು ಸಫಲರಾದರು. ಅವರು ಪಟ್ಟಾಭಿಷಿಕ್ತರಾದ ಒಂದು ವರ್ಷದಲ್ಲೆ ಅವರಿಗೆ ವಿಕ್ಟೋರಿಯ ಚಕ್ರವರ್ತಿನಿ ಜಿ.ಸಿ.ಎಸ್.ಐ. ಎಂಬ ಬಿರುದನ್ನು ನೀಡಿದರು. ೧೮೯೫ರಲ್ಲಿ ಅಪರಾಧಿಗೆ ಜೀವದಾನ ನೀಡುವ ಅಥವಾ ಮರಣದಂಡನೆ ನೀಡುವ ಅಧಿಕಾರ ಅಥವಾ ಜೀವದಾನ ನೀಡುವ ರಾಜನ ಅಧಿಕಾರವನ್ನು ಶಾಹು ಅವರಿಗೆ ಮರಳಿ ವಾಪಸ್ಸು ಕೊಡಲಾಯಿತು. ಅದನ್ನು ಛತ್ರಪತಿಯವರಿಂದ ಬ್ರಿಟಿಷರು ಹಿಂದೆ ಕಿತ್ತುಕೊಂಡಿದ್ದರು. ಬ್ರಿಟಿಷರು ಛತ್ರಪತಿ ಶಾಹು ಅವರಲ್ಲಿ ವಿಶ್ವಾಸವಿಟ್ಟಿದ್ದರೆಂಬುದಕ್ಕೆ ಸೂಚನೆ. ೧೮೯೯ರಲ್ಲಿ ಕೊಲ್ಹಾಪುರದಲ್ಲಿ ವ್ರೆ ಅವರು ಶಾಹು ಅವರು ತಮ್ಮನ್ನು ವಿಷವಿಕ್ಕಿ ಕೊಲ್ಲಲು ಪ್ರಯತ್ನಿಸಿದರೆಂಬ ಆಪಾದನೆ ಮಾಡುವ ಮೂಲಕ ಸಮಸ್ಯೆಯನ್ನು ಒಡ್ಡಿದ್ದರು. ಬಾಂಬೆ ಸರಕಾರ ನಿಷ್ಪಕ್ಷಪಾತವಾದ ತನಿಖೆಯನ್ನು ನಡೆಸಿ ಶಾಹು ಅವರಿಗೆ ತಗುಲಿದ್ದ ಕಳಂಕದಿಂದ ಮುಕ್ತಗೊಳಿಸಿತು. ಈ ಪ್ರಕರಣ ಮತ್ತು ತನಿಖೆ ಶಾಹುರವರ ಉತ್ಕೃಷ್ಟವಾದ ಪ್ರಾಮಾಣಿಕತೆ, ಧೈರ್ಯ ಮತ್ತು ನ್ಯಾಯದ ಬಗ್ಗೆಯಿದ್ದ ಪ್ರೀತಿಯನ್ನು ಎತ್ತಿತೋರಿಸಿದವು. ಮೇ ೨೪, ೧೯೦೦ರಲ್ಲಿ ಸಾಮ್ರಾಜ್ಞಿ ವಿಕ್ಟೋರಿಯ

ರಾಣಿಯವರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಈ ಆಚರಣೆಯ ಸಂದರ್ಭದಲ್ಲಿ ಬ್ರಿಟಿಷ್ ಸರಕಾರ ಕೊಲ್ಹಾಪುರದ ಛತ್ರಪತಿಯವರಿಗೆ 'ಮಹಾರಾಜ' ಎಂಬ ಬಿರುದನ್ನು ನೀಡಿತು. ಈ ಶಾಹು ಅವರ ಕೆಲಸ ಮತ್ತು ನಿಷ್ಠೆಗೆ ಸಂದ ಗೌರವವಾಗಿತ್ತು. ದಕ್ಷಿಣದಲ್ಲಿ ಕೊಲ್ಹಾಪುರ ಸಂಸ್ಥಾನ ಅತ್ಯಂತ ದಕ್ಷ ಆಡಳಿತ ಸಂಸ್ಥಾನವೆಂದು ಖ್ಯಾತಿ ಪಡೆದಿತ್ತು. ೨೦ನೇ ಶತಮಾನದ ಎರಡನೇ ದಶಕದಲ್ಲಿ ಕೊಲ್ಹಾಪುರವು ಭಾರತದ ಅತ್ಯಂತ ಪ್ರಮುಖವಾದ ಸಂಸ್ಥಾನವಾಗಿತ್ತು. ನಂತರ ನಾವು ಈ ವಿಷಯದ ಬಗ್ಗೆ ಬರೆಯುವೆವು.

ಈ ಮಧ್ಯೆ, ೧೮೯೯ರಲ್ಲಿ ಕೊಲ್ಹಾಪುರದಲ್ಲಿ ಅಮುಖ್ಯವೆನಿಸಿದ್ದ ಒಂದು ಸಮಸ್ಯೆಯು ಸ್ಫೋಟ ಗೊಂಡಿತು. ಆದರೆ ಅದು ಅತ್ಯಂತ ಬಲಶಾಲಿಯ ಸಾಮಾಜಿಕ ಹೋರಾಟಕ್ಕೆ ಎಡೆಮಾಡಿಕೊಟ್ಟಿತ್ತು. ಆ ಸಮಸ್ಯೆಯನ್ನು 'ವೇದೋಕ್ತ' ವಿವಾದ ಎಂದು ಕರೆಯಲಾಗಿದೆ. ಆ ವಿಷಯದ ಅರ್ಥ ಮತ್ತು ಪರಿಣಾಮಗಳ ಬಗ್ಗೆ ನಾವು ಪ್ರತ್ಯೇಕ ಅಧ್ಯಾಯದಲ್ಲಿ ವಿವರಿಸುವೆವು. ಈ ವಿಷಯವು ಈ ಮಹಾರಾಷ್ಟ್ರವನ್ನೇ ನಡುಗಿಸಿತು ಮತ್ತು ಅದರಿಂದ ಶಾಹು ಅವರು ಬಹುಜನರ ರಕ್ಷಕ ಮತ್ತು ಉದ್ಧಾರಕ ಹಾಗೂ ಶ್ರೇಷ್ಠ ಮೇಧಾವಿ ಸಾಮಾಜಿಕ ಕ್ರಾಂತಿಕಾರಿಯಾಗಿ ಮೂಡಿಬಂದರು. ನಾವು ಈ ವಿಷಯವನ್ನು ಮತ್ತು ಅವರ ಕೊಡುಗೆಯನ್ನು ಚರ್ಚಿಸುವ ಮೊದಲಿಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕಾಗಿದೆ. ದಮನಿತ ಬಹುಸಂಖ್ಯಾತರ ಪರವಾಗಿ ಕಹಳೆ ಊದಲು ಮತ್ತು ಸಾಮಾಜಿಕ ಕ್ರಾಂತಿ ಘೋಷಿಸಲು ಶಾಹು ಅವರಿಗೆ ಯಾವುದು ಸ್ಫೂರ್ತಿ ನೀಡಿತು? ದಮನ ಮತ್ತು ಸಾಮಾಜಿಕ ಶೋಷಣೆಯ ಕಗ್ಗತ್ತಲಿನಲ್ಲಿ ಇನ್ನೂ ಪರಿತಪಿಸುತ್ತಿರುವ ದಮನಿತ ಸಹೋದರರ ವಿಮೋಚನೆಗಾಗಿ ಛತ್ರಪತಿಯ ಘನತೆ ಮತ್ತು ಅಧಿಕಾರಗಳನ್ನು ಪಣಕ್ಕೊಡ್ಡಿದ ಅವರ ವ್ಯಕ್ತಿತ್ವವನ್ನು ರೂಪಿಸಲು ಯಾವ ಕೆಮಿಸ್ಟ್ರಿ ಕೆಲಸ ಮಾಡಿತು?

---

೩

# ಚಾರಿತ್ರ್ಯದ ನಿರ್ಮಾಣ

**ಮ**ನುಷ್ಯರು ಮಹಾನರಾಗುವುದಕ್ಕೆ ಏನು ಮಾಡುತ್ತಾರೆ? ಇತಿಹಾಸವನ್ನು ನಿರ್ಮಿಸುವ ವ್ಯಕ್ತಿಗಳ ಚಾರಿತ್ರ್ಯ ಮತ್ತು ವ್ಯಕ್ತಿತ್ವ ಹೇಗೆ ರೂಪುಗೊಳ್ಳುತ್ತದೆ? ಅವರ ಕೊಡುಗೆಗಳ ಹಿಂದೆ ಯಾವ ಸ್ಫೂರ್ತಿಗಳಿವೆ? ಅವರ ಗುರುಗಳು ಯಾರು? ಇತಿಹಾಸದ ವಿದ್ಯಾರ್ಥಿಗಳು ಸದಾ ಅಂತಹ ಪ್ರಶ್ನೆಗಳ ಬಗ್ಗೆ ಪರಿಶೀಲಿಸುತ್ತಾರೆ? ಮಹಾನ್ ಶಿವಾಜಿಯ ಪ್ರತಿಯೊಬ್ಬ ಜೀವನ ಚರಿತ್ರೆಗಾರ ಈ ಪ್ರಶ್ನೆಗಳನ್ನು ಶೋಧಿಸಲು ಪ್ರಾಮಾಣಿಕ ಪ್ರಯತ್ನ ಮಾಡಿರುವರು. ರಾಜರ್ಷಿ ಶಾಹು ಛತ್ರಪತಿ ಮಹಾರಾಜರು ಹೇಗೆ ವ್ಯಕ್ತಿತ್ವವನ್ನು ಬೆಳೆಸಿಕೊಂಡರೆಂಬುದನ್ನು ವಿಶ್ಲೇಷಿಸುವುದು ಸೂಕ್ತ.

### ರಾಜರ ಬೆಳವಣಿಗೆ

ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಅವನ ಅಥವಾ ಅವಳ ಶಿಕ್ಷಣದ ಉತ್ಪನ್ನ. ಎಲ್ಲ ಪ್ರಾರಂಭ ವಾಗುವುದು ಮನೆಯಿಂದಲೆ. ತಂದೆ–ತಾಯಂದಿರು, ಹತ್ತಿರ ಸಂಬಂಧಿಗಳು, ವಂಶದ (ಕುಲ) ಪರಂಪರೆಗಳು, ಕುಟುಂಬದ ಸಾಮಾಜಿಕ ಸ್ಥಾನಮಾನ ಮತ್ತು ಇತರೆ ಸಂಗತಿಗಳು ಒಟ್ಟಿಗೆ ಸೇರಿ ವ್ಯಕ್ತಿಯ ಚಾರಿತ್ರ್ಯವನ್ನು ರೂಪಿಸುತ್ತವೆ. ಶಾಹು ಅವರು ತಂದೆ–ತಾಯಿಗಳ ಪ್ರೀತಿ ಮತ್ತು ಪಾಲನೆಯನ್ನು ಅನುಭವಿಸಿದ ಅದೃಷ್ಟಶಾಲಿಗಳು. ಬಾಲಕನಾದ ಶಾಹು ತಮ್ಮ ತಾಯಿಯನ್ನು ಮೂರು ವರ್ಷ ವಯಸ್ಸಿನಲ್ಲಿ ಕಳೆದುಕೊಂಡರು. ಶಾಹು ಮತ್ತು ತನಗಿಂತ ಒಂದುವರೆ ವರ್ಷ ಕಿರಿಯನಾದ ತಮ್ಮ ಬಾಪು ಸಾಹೇಬರಿಬ್ಬರು ತಂದೆಯ ಹದ್ದುಗಣ್ಣುಗಳಲ್ಲಿ ಬೆಳೆದರು. ಅಂತಹ ಹುಡುಗರು ಸಂಕೋಚದ ಮತ್ತು ಅಂತರ್‌ಮುಖಿಗಳಾಗುವುದು ಸಹಜ. ಶಾಹು ಸಹ ಬಾಲ್ಯದಲ್ಲಿ ಹೆಚ್ಚು ಮಾತನಾಡುತ್ತಿರಲಿಲ್ಲ. ಆದರೆ ಇಂತಹ ಮಾತನಾಡದ ಗೋಡೆಯ ಹಿಂದೆ ಆರೋಗ್ಯಕರ ಮತ್ತು ಸಂವೇದನಾಶೀಲ ಮನಸ್ಸು ಇರುತ್ತದೆ. ಶಾಹುವಿನ ತಂದೆಯೇ 'ಶಾಹು ಒಬ್ಬ ಚಿಂತನಾಪರ, ವಿಧೇಯ, ಉದಾರಿ ಮತ್ತು ನೇರ ಸ್ವಭಾವದ ಸರಳ ಉದಾರ ಮನಸ್ಸಿನ ಸತ್ಯನಿಷ್ಠ ಮತ್ತು ನಿಸ್ವಾರ್ಥ ಸ್ವಭಾವದ ಹುಡುಗನಾಗಿದ್ದನೆಂದು' ಹೇಳುತ್ತಾರೆ.[2]

ಶಾಹುವಿನ ತಂದೆ ಜಯಸಿಂಗರಾವ್ ಅಲಿಯಾಸ್ ಆಬ ಸಾಹೇಬ್ ಘಾಟ್ಗೆಯವರು ಸಾಧಾರಣ ವ್ಯಕ್ತಿಯಾಗಿದ್ದರು. ಅವರು ಕೊಲ್ಹಾಪುರ ಛತ್ರಪತಿ ಕುಲದ ರಕ್ತ ಸಂಬಂಧವನ್ನು ಹೊಂದಿದ್ದರು ಮತ್ತು ಕಾಗಲ್ ಸೀನಿಯರ್ ಜಾಗೀರದಾರರಾಗಿದ್ದರು. ಇದರ ಜೊತೆಗೆ ೧೮೮೨ರಲ್ಲಿ ಕೊಲ್ಹಾಪುರ ಸಂಸ್ಥಾನದ ರಾಜಪ್ರತಿನಿಧಿಯಾಗಿದ್ದರು. ಆಬಸಾಹೇಬರು ಪಾಶ್ಚಿಮಾತ್ಯ ಶಿಕ್ಷಣ ಪಡೆದಿದ್ದರು. ಅವರು ಸ್ಫುರದ್ರೂಪಿ, ಬುದ್ಧಿವಂತ, ಜ್ಞಾನಿಗಳು ಮತ್ತು ಮಹತ್ವಾಕಾಂಕ್ಷೆ ಮನುಷ್ಯರಾಗಿದ್ದರು. ಅವರು ಇಂಗ್ಲೆಂಡಿನಲ್ಲಿ ವಿಕ್ಟೋರಿಯ ಚಕ್ರವರ್ತಿನಿಯನ್ನು ಭೇಟಿ ಮಾಡಿದಾಗ ಅವರ ಮೇಲೆ ವಿಶೇಷ ಪ್ರಭಾವ ಬೀರಿದ್ದರು. ಶಿವಾಜಿ–೪ ಅವರ

ಮತಿಭ್ರಮಣೆಯ ಸಮಯದಲ್ಲಿ ತಮ್ಮ ತಂತ್ರಗಾರಿಕೆಗಳಿಂದ ಶಾಹು ಕೊಲ್ಹಾಪುರದ ಸಿಂಹಾಸನವನ್ನು ಏರಿದರು. ಅವರ ರಾಜಕೀಯ ತಂತ್ರಗಾರಿಕೆಗಳು ಚರ್ಚೆಯ ವಿಷಯವಾಗಿದ್ದರೂ ಕೊಲ್ಹಾಪುರದ ಅತ್ಯುತ್ತಮ ಸಮರ್ಥ ರಾಜರುಗಳಲ್ಲಿ ತಮ್ಮ ಮಗನನ್ನು ನೀಡಿದ ಇತಿಹಾಸವನ್ನು ನಿರಾಕರಿಸುವಂತಿಲ್ಲ.

ಆಬ ಸಾಹೇಬರು ಸ್ವಭಾವತಃ ಪ್ರಗತಿಪರರಾಗಿದ್ದು ಕಾಗಲ್‌ನಲ್ಲಿ ಅಲ್ಪ ಪ್ರಮಾಣದಲ್ಲಿ ಹುಡುಗರಿಗೆ ೧೧ ಶಾಲೆಗಳನ್ನು, ಹುಡುಗಿಯರಿಗೆ ಒಂದು ಶಾಲೆಯನ್ನು ಮತ್ತು ಎರಡು ಇಂಗ್ಲಿಷ್ ಶಾಲೆಗಳನ್ನು ಪ್ರಾರಂಭಿಸಿದರು. ರಾಜನ ಪ್ರತಿನಿಧಿಯಾಗಿ ಮಹಿಳಾ ಶಿಕ್ಷಣ ಅಧಿಕಾರಿಣಿ ಶ್ರೀಮತಿ ಲಿಟ್ಲ ಅವರ ಉಸ್ತುವಾರಿಯಲ್ಲಿ ಕೊಲ್ಹಾಪುರದಲ್ಲಿ ಹುಡುಗಿಯರಿಗೆ ತರಬೇತಿಯ ತರಗತಿಗಳನ್ನು ಪ್ರಾರಂಭಿಸಿದರು ಮತ್ತು ಆಜ್ರ ಮತ್ತು ಪನ್‌ಹಾಲದಲ್ಲಿ (೧೮೮೩) ಹುಡುಗಿಯರ ಶಾಲೆಯನ್ನು ಪ್ರಾರಂಭಿಸಿದರು. ರೈತರಲ್ಲಿ ಪಶು ಸಂಗೋಪನೆ ಮತ್ತು ಆಧುನಿಕ ಕೃಷಿಯ ಬಗ್ಗೆ ಒಲವು ಮೂಡಿಸುವ ಸಲುವಾಗಿ ಅವರು ಹಳ್ಳಿಯ ಜಾತ್ರೆಗಳಲ್ಲಿ ದನಗಳ ಮತ್ತು ಕೃಷಿ ಉತ್ಪನ್ನಗಳ ಅತ್ಯುತ್ತಮ ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸುತ್ತಿದ್ದರು. ಅವರು ಸ್ವತಃ ಕುಸ್ತಿಪಟುವಾಗಿದ್ದರು. ಅವರ ಹವ್ಯಾಸಗಳು ಕುಸ್ತಿ ಮತ್ತು ಬೇಟೆಗಳಾಗಿದ್ದವು. ಶಾಹು ಅವರು ತಮ್ಮ ಶಿಕ್ಷಣವನ್ನು ಪೂರೈಸುವಾಗ ಶಾಹು ಅವರು ರಾಜಕೋಟೆಯಲ್ಲಿ ತಂಗಿರುವಾಗ ಇಬ್ಬರು ಕುಸ್ತಿಪಟುಗಳನ್ನು ಒಬ್ಬ ಉಸ್ತಾದ (ಕುಸ್ತಿಯ ಗುರು) ಕಳುಹಿಸಿಕೊಡುವುದು ಆಬ ಸಾಹೇಬರ ವಿಚಾರವಾಗಿತ್ತು.[3] ಸಂಕ್ಷಿಪ್ತವಾಗಿ ಹೇಳುವುದಾದರೆ, ಚಿಕ್ಕವಯಸ್ಸಿನಲ್ಲಿಯೇ ಅವರ ತಂದೆ ಆಬ ಸಾಹೇಬರು ಮಗನಾದ ಶಾಹು ಅವರಲ್ಲಿ ಶಿಕ್ಷಣ, ಕುಸ್ತಿ, ಬೇಟೆ ಹಾಗೂ ರೈತರ ಬಗ್ಗೆ ಕಾಳಜಿಗಳನ್ನು ಕಲಿಸಿದ್ದರು. ಆಬ ಸಾಹೇಬರು ೩೦ನೇ ವಯಸ್ಸಿನಲ್ಲಿ ವಿಪರೀತ ಕುಡಿತದಿಂದ ಮರಣಹೊಂದಿದರು. ೧೨ ವರ್ಷದ ಶಾಹುವಿಗೆ ಕ್ರೂರ ಆಘಾತವಾಯಿತು. ಆದರೆ ಇದು ಶಾಹುಗೆ ಪಾಠ ಕಲಿಸಿತು. ಅವರು ತಮ್ಮ ಜೀವಮಾನದಲ್ಲಿ ಮದ್ಯವನ್ನು ಮುಟ್ಟಲೇ ಇಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಕುಡುಕರ ಸೆರಳಿನಿಂದ ತಪ್ಪಿಸಿಕೊಳ್ಳುತ್ತಿದ್ದರು.

ಶಾಹು ಮಗುವಾಗಿರುವಾಗ ರಾಜರ ಕುಟುಂಬದಲ್ಲಿ ಯಾರು ಯಾರು ಇದ್ದರು? ಶಾಹು ಅವರ ದತ್ತು ಸ್ವೀಕಾರವಾದಾಗ ರಾಜನ ಅರಮನೆಯಲ್ಲಿ ೪ ಜನ ವಿಧವೆಯರಾದ ರಾಣಿಯರು ಇದ್ದರು. ಅವರ ಹೆಸರುಗಳು ಈ ರೀತಿ ಇವೆ. ಬುವಾ ಸಾಹೇಬನ ವಿಧವೆ – ತಾಯಿ ಸಾಹೇಬ – ರಾಣಿ, ಶಿವಾಜಿ–೩ ಅವರ ವಿಧವೆ – ಅಹಲ್ಯಬಾಯಿ ರಾಣಿ, ರಾಜಾರಾಮರ ವಿಧವೆ – ಸಾಕರ್ ಬಾಯಿ ರಾಣಿ; ಶಿವಾಜಿ–೪ರ ವಿಧವೆ ಆನಂದಿಬಾಯಿ ರಾಣಿ. ಆ ರಾಣಿಯರಲ್ಲಿ ಅಹಲ್ಯಬಾಯಿ ಭಕ್ತಳಾಗಿದ್ದರೆ, ಸಾಕರ್ ಬಾಯಿ ರಾಣಿಯವರಿಗೆ ಆಳ್ವಿಕೆ ಮತ್ತು ಆಡಳಿತದ ವ್ಯವಹಾರಗಳಲ್ಲಿ ಆಸಕ್ತಿಯಿತ್ತು. ವಯಸ್ಸಾದ ಈ ವಿಧವೆಯ ಪ್ರಾಬಲ್ಯದಿಂದ ಅರಮನೆಯ ಕಾರ್ಯನಿರ್ವಹಣೆಯು ಹಳೇ ಸಂಪ್ರದಾಯ ಮತ್ತು ಮೂಢನಂಬಿಕೆಗಳಿಂದ ಪ್ರಭಾವಗೊಂಡಿತ್ತು. ಅವರು ವಿಶಿಷ್ಟರಾಗಿದ್ದರಿಂದ ಶಾಹು ಮತಧರ್ಮ ಮತ್ತು ಜಾತಿಗಳ ಕಟ್ಟಪ್ಪಣೆಗಳಿಗೆ ಒಳಗಾಗಿದ್ದರು. ಯುವಕ ಶಾಹು ಅವರ ಶಿಕ್ಷಣಕ್ಕಾಗಿ ಫ್ರೆಜರ್ ಅವರು ನೇಮಕಗೊಂಡಿದ್ದರೂ ಅವರಿಗೆ ಇವುಗಳ ಆಧಾರದ ಮೇಲೆ ನಿರ್ದೇಶನ ನೀಡಲಾಗಿತ್ತು. ಅವರು ದಟ್ಟಕಾಡುಗಳಲ್ಲಿ ಬೇಟೆ ಮತ್ತು ಮಿಷನ್‌ಗಳಲ್ಲಿ ತೊಡಗಿದ್ದಾಗ ಗುರುಗಳು ಮತ್ತು ಶಿಷ್ಯರು ತಮ್ಮ ಆಹಾರವನ್ನು ಪ್ರತ್ಯೇಕ – ಪ್ರತ್ಯೇಕವಾದ ಮರಗಳಡಿಯಲ್ಲಿ ತೆಗೆದುಕೊಳ್ಳಬೇಕಾಗಿತ್ತು. ಫ್ರೆಜರ್ ಅವರು ತಮ್ಮ ಮನೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿರುವಾಗ ಒಮ್ಮೆ ಟೀ ತೆಗೆದುಕೊಳ್ಳುವುದಕ್ಕೆ ಬಿಡಲಿಲ್ಲ.[4]

ಈ ಎಲ್ಲಾ ವೈಚಿತ್ರ್ಯಗಳು ಅರಮನೆಯ ಸನ್ನಿವೇಶವನ್ನು ನಿರ್ಮಾಣ ಮಾಡುತ್ತಿದ್ದವು. ಮತಧರ್ಮ ಮತ್ತು ಜಾತಿಯ ಸಂಪ್ರದಾಯಗಳ ವಿಧಿ–ಆಚರಣೆಗಳ ನಂತರ ಶಾಹು ಸ್ವತಃ ತನ್ನ ರೂಢಿಯ ಶಿಕ್ಷಣವನ್ನು

ಒಪ್ಪಿಕೊಳ್ಳುತ್ತಾರೆ. ನಾಸಿಕದಲ್ಲಿ ತಾನು ಮಾಡಿದ ಭಾಷಣದಲ್ಲಿ ಅವರು ಹೇಳುತ್ತಾರೆ: "ಪ್ರಾರಂಭದಲ್ಲಿ ನಾನು ಯಥಾಸ್ಥಿತಿವಾದಿಯಾಗಿದ್ದೆ ಮತ್ತು ಹಳೆಯ ಚಿಂತನೆಯ ಪಂಥದ ಬಗ್ಗೆ ಹೆಮ್ಮೆಪಡುತ್ತಿದ್ದೆ. ಕಠಿಣ ಜಾತಿವ್ಯವಸ್ಥೆಯನ್ನು ಹಾಗೆಯೆ ಸುಸ್ಥಿತಿಯಲ್ಲಿಡಬೇಕೆಂದು ಮತ್ತು ಜಾತಿಪದ್ಧತಿಯನ್ನು ಪರಿಪೂರ್ಣವಾಗಿ ಆಚರಿಸಬೇಕೆಂದು ನಾನು ನಂಬಿದ್ದೆ. ನನ್ನ ಕಟ್ಟುನಿಟ್ಟಿನಿಂದ ಇತರರ ಏಳಿಗೆಯನ್ನು ತಡೆಯುತ್ತಿದ್ದೇನೆಂಬುದರ ಬಗ್ಗೆ ನನಗೆ ಅರಿವಿರಲಿಲ್ಲ. ಬೇರೆಯ ಜನರು ಸಂಘಟಿಸಿದ ಸಭೆಗಳಿಗೆ ಅಧ್ಯಕ್ಷತೆ ವಹಿಸುವುದು ನನ್ನ ಮತಧರ್ಮವನ್ನು ಉಲ್ಲಂಘಿಸುತ್ತಿದ್ದೇನೆಂದು ನಾನು ಭಾವಿಸಿದ್ದೆ."[5] ತಾನು ಬೆಳೆಯುವಾಗ ತನ್ನ ಸುತ್ತ ನೇಯಿದಿದ್ದ ಸಂಪ್ರದಾಯವಾದ ಗೂಡನ್ನು ಭೇದಿಸುವ ಧೈರ್ಯವಿತ್ತೆಂದು ಮಹಾರಾಜರ ಜೀವನ ಎತ್ತಿ ತೋರಿಸುತ್ತದೆ.

ಪ್ರಗತಿ ವಿರೋಧಿ ಜಾತಿ ವ್ಯವಸ್ಥೆ ರೂಪಿಸಿದ ಗೊಡ್ಡು ಸಂಪ್ರದಾಯದ ರೂಢಿಗಳು ಮತ್ತು ಚಿಂತನೆಯ ಬಂಧಿಯಾಗಿ ಬಹಳ ಕಾಲ ಉಳಿಯದಿರುವುದೇ ಅವರ ಘನವಂತಿಕೆಯಾಗಿದೆ. ಮತಧರ್ಮದ ಪ್ರಭಾವ ಅವರನ್ನು ಕೊನೆಯವರೆಗೆ ಆವರಿಸಿಕೊಂಡಿತ್ತು. ರಾಣಿಯರಲ್ಲಿ ಅಹಲ್ಯರಾಣಿ ಸಾಹೇಬರು (ಶಾಹು ಅವರ ಮುತ್ತಜ್ಜಿ) ೧೮೯೫ರಲ್ಲಿ ನಿಧನಹೊಂದಿದರು.[6] ಅವರು ತುಂಬಾ ಧಾರ್ಮಿಕರು. ಅರಮನೆಯಲ್ಲಿ ಎಲ್ಲಾ ಕಾಲಗಳಲ್ಲೂ ನಡೆಯುತ್ತಿದ್ದ ಧಾರ್ಮಿಕ ಆಚರಣೆಗಳು ಯುವಕ ಶಾಹುವಿನ ಮೇಲೆ ಪರಿಣಾಮಕಾರಿಯಾಗಿ ಪ್ರಭಾವ ಬೀರಿದ್ದವು. ಅವರು ತಾವು ಸಾಯುವವರೆಗೆ ಅರಮನೆಯ ಸಂಪ್ರದಾಯಗಳಿಗೆ ಅನುಗುಣವಾಗಿ ಧಾರ್ಮಿಕ ಆಚರಣೆ ಮತ್ತು ಪೂಜೆ ಪುರಸ್ಕಾರಗಳನ್ನು ಮಾಡುವುದನ್ನು ಮುಂದುವರಿಸಿದ್ದರು.

ಶಾಹುರವರ ಶಿಕ್ಷಣದ ಮೇಲೆ ಬಿದ್ದ ಇತಿಹಾಸದ ಪ್ರಭಾವವನ್ನು ಸಹ ನಾವು ಗಮನಿಸಬೇಕು. ಉದೇಪುರದ ನೆಸೋಡಿಯ ವಂಶ ರಾಜಪೂತರ ರಾಜಕುಮಾರರಲ್ಲಿ ಗೌರವ ಕೇಳಿದಂತೆಯೇ ಕೊಲ್ಹಾಪುರದ ಛತ್ರಪತಿಗಳು ಮರಾಠ ರಾಜಕುಮಾರರಲ್ಲಿ ಗೌರವವನ್ನು ಬಯಸುತ್ತಿದ್ದರು. ಮಹಾರಾಷ್ಟ್ರದ ಶಿಲ್ಪಿ, ಮಹಾನ್‌ರಾದ ಶಿವಾಜಿ ಮಹಾರಾಷ್ಟ್ರದ ಇತಿಹಾಸವನ್ನು ರೂಪಿಸಿದರು. ಇಡೀ ತಮ್ಮ ಜೀವನದಲ್ಲಿ ಶಾಹು ಮಹಾರಾಜರು ಯುಗ–ನಿರ್ಮಾತೃವಾದ ಶಿವಾಜಿಯ ಪರಂಪರೆಯನ್ನು ಬಳುವಳಿಯಾಗಿ ಪಡೆದಿದ್ದರ ಬಗ್ಗೆ ಪ್ರಜ್ಞಾಶೀಲರಾಗಿದ್ದರು. ಮಹಾನ್‌ರಾದ ಶಿವಾಜಿಯವರ ಪವಿತ್ರ ಸಿಂಹಾಸನದ ಮೇಲೆ ತಾನು ಕುಳಿತಿರುವ ಪ್ರಜ್ಞೆ ಅವರಿಗಿತ್ತು. ತಮ್ಮ ಜೀವನದ ಕೊನೆಯವರೆಗೆ ತಮ್ಮ ಕೃತ್ಯಗಳು ಮಹಾನ್ ಶಿವಾಜಿಯವರ ಹೆಸರಿಗೆ ಕಳಂಕ ಹಚ್ಚಲಿಲ್ಲ.[7]

ಶಾಹು ಮಹಾರಾಜರಿಗೆ ಶಿವಾಜಿಯವರ ಬಗ್ಗೆ ತುಂಬ ಶ್ರದ್ಧೆ ಮತ್ತು ಹೆಮ್ಮೆಯಿತ್ತು. ಆ ಪ್ರೀತಿ ಮತ್ತು ಶ್ರದ್ಧೆಗಳು ಸಿಂಧೂರ ದುರ್ಗದ ಕೋಟೆಯಲ್ಲಿನ ಶಿವಾಜಿ ದೇವಸ್ಥಾನವನ್ನು ನವೀಕರಿಸಲು ಮತ್ತು ಪನ್‌ಹಾಲ ಅರಮನೆಯಲ್ಲಿ ಅದರ ಪ್ರತಿಕೃತಿಯನ್ನು ನಿರ್ಮಿಸಿ ಸ್ಥಾಪಿಸಲು ಪ್ರೇರಣೆ ನೀಡಿದವು. ಸಿಂಧೂರದುರ್ಗದಲ್ಲಿ ಶಿವಾಜಿಯ ಹಬ್ಬದ ದಿನದಂದು ಮಹಾನ್ ರಾಜನಾದ ಶಿವಾಜಿಯ ಪಲ್ಲಕ್ಕಿಯನ್ನು ಹೊರಲು ಶಾಹು ಅವರೇ ಆರಿಸಿಕೊಂಡಿದ್ದರು. ಒಮ್ಮೆ ಖಾರೆಶಾಸ್ತ್ರಿಯವರ ನಾಟಕ 'ಶಿವಸಂಭವ' ಶಿವಾಜಿಯ ಜೀವನದ ನಾಟಕ ನೋಡುತ್ತಿರುವಾಗ, ಶಿವಾಜಿ ಜನನದ ದೃಶ್ಯವನ್ನು ನಟಿಸುತ್ತಿರುವಾಗ ಅವನಿಗೆ ಶ್ರದ್ಧೆ–ಗೌರವ ತೋರಿಸುವ ಸಲುವಾಗಿ ತನ್ನನ್ನು ನಿಯಂತ್ರಿಸಿಕೊಳ್ಳದೆ ತಾನೇ ರಂಗಸ್ಥಳಕ್ಕೆ ಒಳನುಗ್ಗಿದನು.[9] ಇತಿಹಾಸಕ್ಕೆ ಗೌರವ ತೋರಿಸಿದಂತಹ ಶಾಹು ಮಹಾರಾಜರನ್ನು ಮಹಾರಾಷ್ಟ್ರ ನೋಡಲೇ ಇಲ್ಲ.

ಶಾಹು ಮಹಾರಾಜರು ಶಿವಾಜಿಯ ಬಗ್ಗೆ ಭಾವನಾತ್ಮಕ ಮೋಹವಿಟ್ಟುಕೊಂಡಿರಲಿಲ್ಲ. ಅವರು ಶಿವಾಜಿಯ ಮಹತ್ವ ಮತ್ತು ಮುನ್ನೋಟ ಹೃದಯದ ಅಂತರಾಳದಿಂದ ನಂಬಿದ್ದರು ಮತ್ತು ಶಿವಾಜಿಯವರನ್ನು ಕೇವಲ ಮಹಾರಾಷ್ಟ್ರದ ರಾಜ ಮಾತ್ರವಲ್ಲ, ಆದರೆ ದೂರದೃಷ್ಟಿಯ ಒಬ್ಬ ರಾಷ್ಟ್ರೀಯ ನಾಯಕನೆಂದು ಭಾವಿಸಿದ್ದರು. ಆದರೆ ಶಿವಾಜಿ ಮಿಲಿಟರಿಯನ್ನು ಬಳಸಿಕೊಂಡಿದ್ದನ್ನು ತಾನು ಅನುಕರಿಸಲು ಮತ್ತು ಶಿವಾಜಿಯ ಸ್ವರಾಜ್ ಸ್ಥಾಪಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ಅವರು ಭಿನ್ನವಾದ ಕಾಲದಲ್ಲಿ ಬದುಕಿದ್ದರೆಂಬುದು ಚೆನ್ನಾಗಿ ಗೊತ್ತಿತ್ತು. ಸಮಕಾಲೀನ ಕಾಲದಲ್ಲಿ ತನ್ನ ಸಂಘಟನಾತ್ಮಕ ಕೌಶಲ್ಯಗಳನ್ನು ಮತ್ತು ಜನರ ಐಕ್ಯತೆಯನ್ನು ಬೆಳಸುವುದನ್ನು ಅನುಕರಿಸಬೇಕಾಗಿತ್ತು. ಶಾಹು ಅವರು ತಮ್ಮ ಸಾರ್ವಜನಿಕ ಭಾಷಣಗಳಲ್ಲಿ ಈ ಅಭಿಪ್ರಾಯಗಳನ್ನೇ ಮತ್ತೆ ಮತ್ತೆ ಹೇಳಿದ್ದಾರೆ. ಅವರು ಶಿವಾಜಿಯಲ್ಲಿದ್ದ 'ಒಬ್ಬ ಧೈರ್ಯಶಾಲಿಯಾದ ಸಮಾಜ ಸುಧಾರಕನನ್ನು ಕಂಡುಹಿಡಿದರು. ತನ್ನ ಜೀವನದ ಕೊನೆಯ ಘಟ್ಟದಲ್ಲಿ ಕೆಟ್ಟ ಜಾತಿಪದ್ಧತಿಯನ್ನು ನಾಶಮಾಡಲು ಹೋರಾಟವನ್ನು ಪ್ರಾರಂಭಿಸಿದರು. ಶಾಹು ಅವರು ಆಗಾಗ ಶಿವಾಜಿಯ ನಿರ್ಭಯ ಸಾಮಾಜಿಕ ಕ್ರಿಯೆಗಳನ್ನು ಉಲ್ಲೇಖಿಸಿದ್ದಾರೆ. ತನ್ನ ಜಾತಿಯ ಮರಾಠ ಜನರಿಗೆ ಜಾತಿಪದ್ಧತಿಯನ್ನು ನಾಶಮಾಡಬೇಕೆಂದು ಮನವಿ ಮಾಡುತ್ತಾ ಶಾಹು ಹೇಳಿದರು: "ಸಾಮಾಜಿಕ ಸುಧಾರಣೆಗಳ ಚಳುವಳಿಗಳಲ್ಲಿ ಉಪಕ್ರಮ ಕೈಗೊಳ್ಳುವುದು ಉನ್ನತ ಜಾತಿಯ ಕರ್ತವ್ಯ. ಜಪಾನಿನಲ್ಲಿ 'ಸಮುರಾಯ್' ಜಾತಿಯು 'ಕ್ಷತ್ರಿಯ' ಜಾತಿಗೆ ಸಮಾನವಾದದ್ದು ತಮ್ಮ ಜಾತಿಯ ಸಂರಚನೆಯನ್ನು ನಾಶ ಮಾಡಲು ಮೊದಲು ಕ್ರಮಗಳನ್ನು ಕೈಗೊಂಡರು. ಶಿವಾಜಿ ಮಹಾರಾಜರು ೧೭ನೇ ಶತಮಾನದಲ್ಲಿ ಸ್ವತಃ ನಿರ್ಧರಿಸಿದ ಸಾಮಾಜಿಕ ಗುರಿಗಳನ್ನು ನಾವು ನಮ್ಮ ಮುಂದೆ ಇಟ್ಟುಕೊಳ್ಳಬೇಕು. ಫಲ್‌ಟನ್ನಿನ ನಿಂಬಾಳ್‌ಕರ್ ಕುಲದ ಮನುಷ್ಯನು ಇಸ್ಲಾಂ ಧರ್ಮವನ್ನು ಸೇರಿ ಮತ್ತು ಮುಸ್ಲಿಂ ಮಹಿಳೆಯನ್ನು ಮದುವೆಯಾದಾಗ ಘನವಂತನಾದ ಶಿವಾಜಿ ಹಾಕಿದ ನಿದರ್ಶನವನ್ನು ಮರಾಠರು ಮರೆಯಬಾರದು. ಶಿವಾಜಿಯ (ಜಾತಿಯ ಆಜ್ಞೆಗಳನ್ನು ಕಡೆಗಣಿಸಿ) ಆ ವ್ಯಕ್ತಿಯನ್ನು ತನ್ನ ಸ್ವಂತಜಾತಿಯೊಳಕ್ಕೆ ಸೇರಿಸಿಕೊಂಡನು. ಎಲ್ಲಕ್ಕಿಂತ ಮಿಗಿಲಾಗಿ ತನ್ನ ಗೌರವಾನ್ವಿತ ತಾಯಿ ಜೀಜಾಬಾಯಿಯ ಅನುಮೋದನೆ ಪಡೆದು ಶಿವಾಜಿ ತನ್ನ ಸ್ವಂತ ಮಗಳನ್ನು ನಿಂಬಾಳ್‌ಕರನ ಮಗನಿಗೆ ಕೊಟ್ಟು ಮದುವೆ ಮಾಡುತ್ತಾನೆ."[10]

ತನ್ನ ಮಹಾಹಿರಿಯರ ಅಧಿಕೃತ ಜೀವನ ಚರಿತ್ರೆಗಳನ್ನು ಬರೆಸುವ ಅಗತ್ಯವಿದೆಯೆಂದು ಶಾಹು ಅವರು ಪ್ರಾಮಾಣಿಕವಾಗಿ ಭಾವಿಸಿದ್ದರು. ಅವರು ಹೆಸರಾಂತ ಇತಿಹಾಸಕಾರ ಮತ್ತು ಸಂಶೋಧಕ ಪರಸ್‌ನೀಸ್ ಅವರಿಗೆ ಸ್ವಲ್ಪ ಹಣಕಾಸಿನ ನೆರವನ್ನು ನೀಡಿದ್ದರು. ದುರಾದೃಷ್ಟವಶಾತ್ ಪರಸ್‌ನೀಸರು ಈ ಯೋಜನೆಯನ್ನು ಮುಗಿಸಲಿಲ್ಲ. ಈ ವಿಚಾರವಾಗಿ ಶಾಹು ಅವರು ಯಾವಾಗಲೂ ವಿಷಾದಿಸಿದರು. ಅವರ ಮಹರ್ಷಿ ವಿಠಲ್ ರಾಮ್‌ಜಿ ಶಿಂಧೆ ಜೀವನ ಚರಿತ್ರೆ ಬರೆಯಬೇಕೆಂದು ಬಯಸಿದ್ದರು. ೧೯೨೦ರಲ್ಲಿ ಬರೆದ ಪತ್ರದಲ್ಲಿ ಅವರು ಹೇಳಿದ್ದಾರೆ: "ಇಲ್ಲಿಯವರೆಗೆ, ತಿಲಕರು ಗಣೇಶ ಮತ್ತು ಶಿವಾಜಿ ಹಬ್ಬಗಳನ್ನು ಮುಚ್ಚಿಡುವ ಮೂಲಕ ಸ್ವತಃ ಹೆಸರು ಗಳಿಸಿದ್ದಾರೆ. ಅವರು ಗಣೇಶ ಹಬ್ಬವನ್ನು ಮೊಹರಂ ಹಬ್ಬವನ್ನು ಎದುರಿಸಲು ಆಚರಿಸಿದರು. ಅವರು ತಮ್ಮ ವೈಯಕ್ತಿಕ ವರ್ಚಸ್ಸನ್ನು ಬ್ರಾಹ್ಮಣೇತರರಲ್ಲಿ ಬೆಳಸಿಕೊಳ್ಳಲು ಶಿವಾಜಿ ಹಬ್ಬವನ್ನು ಆಚರಿಸಿದರು. ಶಿವಾಜಿಯ ಜೀವನಚರಿತ್ರೆ ಬರೆಯಲು ಯಾರು ಕಷ್ಟಪಡಲಿಲ್ಲ. ಶಿಂಧೆಯವರೆ, ನೀವು ಶಿವಾಜಿಯವರ ಒಳ್ಳೆಯ ಜೀವನ ಚರಿತ್ರೆ ಬರೆದಿದ್ದೀರೆಂದು ಹಾಗೂ ಹೀಗೆ ಮಹಾನ್ ಶಿವಾಜಿಯ ನೆನಪಿಗಾಗಿ ತಾವು ಉತ್ತಮ ಸೇವೆ ಸಲ್ಲಿಸಿದ್ದೀರೆಂದು ನಾನು ಭಾವಿಸುವೆ."[11]

## ಗುರುಗಳ ಬೋಧನೆ

ಇಬ್ಬರು ಗುರುಗಳಾದ ಸರ್ ಸ್ಟುಅರ್ಟ್ ಮಿಟ್‌ಫೋರ್ಡ್ ಫ್ರೆಜರ್ ಮತ್ತು ಸರ್ ರಘುನಾಥರಾವ್ ವ್ಯಂಕಾಜಿ ಸಬ್ನೀಸ್ ಅವರ ಬೋಧನೆಯು ಶಾಹು ಅವರ ಮೇಲೆ ಬೀರಿದ ಮತ್ತೊಂದು ಪ್ರಭಾವವಾಗಿದೆ. ಬ್ರಿಟಿಷ್ ಸರಕಾರವು ೧೮೯೪ರಲ್ಲಿ ಫ್ರೆಜರ್ ಅವರನ್ನು ಟ್ಯುಟರ್ ಮತ್ತು ಪಾಲಕನೆಂದು ನೇಮಿಸಿತು. ಅವರು ೧೮೯೪ರಲ್ಲಿ ಈ ಹುದ್ದೆಯನ್ನು ಬಿಟ್ಟರೂ ಅವರ ಗುರು ಮತ್ತು ಶಿಷ್ಯವೆಂಬ ಸಂಬಂಧ ಬದಲಾಗಲಿಲ್ಲ. ಪ್ರಸಿದ್ಧ ಗುರುಗಳಾದ ಫ್ರೆಜರ್ ಅವರನ್ನು ಪಡೆಯುವುದು ಅದೃಷ್ಟವೇ ಸರಿ. ಫ್ರೆಜರ್ ಅವರು ಬುದ್ಧಿವಂತ ಐ.ಸಿ.ಎಸ್. ಅಧಿಕಾರಿಯಾಗಿದ್ದರೂ ಕೂಡ ಅವರು ಕರುಣಾಳು ತಂದೆಯ ಹೃದಯವನ್ನು ಪಡೆದಿದ್ದರು. ಅವರು ಯಾವಾಗಲೂ ತನ್ನ ಶಿಷ್ಯರ ಕಲ್ಯಾಣ ಮತ್ತು ಸಫಲತೆಗಾಗಿ ಹಿಂದಿನ ಕಾಲದ ಋಷಿಗಳಂತೆ ಪರಿತಪಿಸುತ್ತಿದ್ದರು. ಸಂಸ್ಥಾನದ ರಾಜಕುಮಾರರಿಗೆ ಬೇಕಾಗಿರುವ ಕ್ಷೇತ್ರಗಳ ವಿಷಯಗಳಲ್ಲಿ ಔಪಚಾರಿಕ ಬೋಧನೆಯನ್ನು ಕಲಿಸುತ್ತಿದ್ದರು. ಆದರೆ ಎಲ್ಲಕ್ಕಿಂತ ಮಿಗಿಲಾಗಿ ತಮ್ಮ ಶಿಷ್ಯ ಆದರ್ಶ ಆಡಳಿತಗಾರರಾಗಬೇಕೆಂದು ಫ್ರೆಜರ್ ನೋಡುತ್ತಿದ್ದರು.

ಕರ್ತವ್ಯದ ಬಗ್ಗೆ ಸುಸಂಸ್ಕೃತ ಮನಸ್ಸು, ಪ್ರಾಯೋಗಿಕತೆ, ವಿವೇಕ, ದೂರದೃಷ್ಟಿ, ನಿರಂತರ ಜಾಗೃತಿ, ಅಚಲವಾದ ನಿಷ್ಠೆಯುಳ್ಳ ನ್ಯಾಯದ ಬಗ್ಗೆ ಪ್ರೀತಿ, ದುರಂತಗಳಲ್ಲಿ ಸಂಯಮ, ಶಿಸ್ತು, ಶಾಂತಿ, ಸಮಾಧಾನ, ವಿಶ್ವ ಮತ್ತು ದೇಶದ ಬಗ್ಗೆ ಉದಾರತೆ ಮತ್ತು ಇತ್ತೀಚಿನವರೆಗಿನ ಸಮಗ್ರ ಜ್ಞಾನವುಳ್ಳ ಭಾವೀ ಆಡಳಿತಗಾರರ ವ್ಯಕ್ತಿತ್ವವನ್ನು ರೂಪಿಸುವುದಕ್ಕೆ ಈ ಗುರು ಅವಿಶ್ರಾಂತವಾಗಿ ಕೆಲಸ ಮಾಡಿದ್ದರೆಂಬುದನ್ನು ಸಮಕಾಲೀನದ ಪತ್ರವ್ಯವಹಾರ ತೋರಿಸುತ್ತದೆ.

ಮಗುವನ್ನು ರೂಪಿಸುವ ಸಲುವಾಗಿ ಹಿಂದು ಧರ್ಮದಲ್ಲಿ ಜನಿವಾರ ಹಾಕುವ ಆಚರಣೆಯು ಬಹಳ ಮುಖ್ಯ ಮತ್ತು ಪವಿತ್ರವಾದುದು. ಮಾನವ ಜನಾಂಗದ ನಿರ್ಮಾಣದಲ್ಲಿ ಈ ಆಚರಣೆಯ ಮಹತ್ವವನ್ನು ಫ್ರೆಜರ್ ಅವರು ತಿಳಿದಿದ್ದ ತಮ್ಮ ಶಿಷ್ಯರ ಜನಿವಾರ ಹಾಕುವ ಆಚರಣೆಯ ಸಂದರ್ಭದಲ್ಲಿ ಅವರು ಬೋಧನೆಯಂತಹ ಪತ್ರಗಳನ್ನು ಬರೆಯುತ್ತಾ ಹೀಗೆ ಹೇಳುತ್ತಾರೆ: "ಜನಿವಾರ ಹಾಕುವಂತಹ ಆಚರಣೆಗಳು ರಸ್ತೆ ಪ್ರಯಾಣದಲ್ಲಿ ಎಷ್ಟು ದೂರ ಕ್ರಮಿಸಿದ್ದೇವೆ ಎಂಬುದನ್ನು ತೋರಿಸುವ ಮತ್ತು ಇನ್ನು ಎಷ್ಟು ದೂರ ಪ್ರಯಾಣಿಸಬೇಕಾಗಿದೆ ಎಂದು ತೋರಿಸುವ ಮೈಲಿಗಲ್ಲುಗಳು ಮತ್ತು ಇಲ್ಲಿ ಒಂದು ಕ್ಷಣ ಎಷ್ಟು ದೂರ ಜೀವನದಲ್ಲಿ ಬಂದಿದ್ದೇವೆ ಎಂದು ನೋಡುವಿರಿ. ನೀವು ಹಿಂದಿನ ವಾರ ಮಾಡಿದುದಕ್ಕಿಂತ ಇಂದು ಹಳಬರಾಗಿದ್ದೀರಿ ಎಂಬುದನ್ನು ನೀವು ಪ್ರಜ್ಞಾಪೂರ್ವಕವಾಗಿ ತಿಳಿದಿರುವಿರಿ. ಆದರೆ ನೀವು ಈಗಾಗಲೆ ಒಂದು ಮುಖ್ಯವಾದ 'ತಪ್ಪ' (ಹಂತ) ದಾಟಿ ಬಂದಿದ್ದೀರಿ. ಮತ್ತು ಮತ್ತೆ ಪ್ರಯಾಣದಲ್ಲಿ ಮತ್ತೊಂದು ಹಂತವನ್ನು ಪ್ರಾರಂಭ ಮಾಡಿದ್ದೀರಿ. ತಾವು ಹೆಚ್ಚು ಹಳಬರು, ಬುದ್ಧಿವಂತರು ಮತ್ತು ಮತ್ತಷ್ಟು ಗಂಭೀರರೆಂದು ನಿರೀಕ್ಷಿಸಬಾರದು, ಹಾಗೆ ಮಾಡಿದರೆ ಅದು ಅಸಹಜವಾಗುತ್ತದೆ. ಆದರೆ ನೀವು ಕೆಲವು ವಿಷಯಗಳ ಬಗ್ಗೆ ಹೆಚ್ಚು ಚಿಂತಿಸಬೇಕು, ನಿಮ್ಮ ಚಿಂತನೆ ಮತ್ತು ಕ್ರಿಯೆಗಳಿಗೆ ಹೆಚ್ಚು ಹೊಣೆಯುಳ್ಳವರೆಂಬುದರ ಬಗೆಗೆ ನೀವು ಗಂಭೀರವಾಗಬೇಕು, ನಿಮ್ಮ ಚಿಂತನೆಗಳು ಮತ್ತು ಕ್ರಿಯೆಗಳು ಒಬ್ಬ ಮನುಷ್ಯನಿಂದ ಒಬ್ಬ ಹುಡುಗನನ್ನು, ಒಬ್ಬ ಹುಡುಗನಿಂದ ಒಂದು ಮಗುವನ್ನು ಗುರುತಿಸುವ ಪರಿಪಕ್ವತೆಯ ಹೊಣೆಯಿರಬೇಕೆಂದು ನಿರೀಕ್ಷಿಸಲಾಗುವುದು. ಮಾರ್ಚ್ ೧೮೯೧."

ಇಷ್ಟರಲ್ಲೆ ಶಾಹುವಿನ ಮದುವೆ ನಡೆಯಿತು. ಮಹಾರಾಜರಿಗೆ ೧೭ ವರ್ಷ ವಯಸ್ಸು ಮತ್ತು ಮಹಾರಾಣಿ ಅವರಿಗೆ ೧೨ ವರ್ಷ ವಯಸ್ಸು. ಆ ದಿನಗಳಲ್ಲಿ ಚಿಕ್ಕ ವಯಸ್ಸಿನಲ್ಲಿಯೆ ಮದುವೆಗಳು

ನಡೆಯುತ್ತಿದ್ದವು. ಬಾಲ್ಯ ವಿವಾಹಗಳು ಹಿಂದು ಧರ್ಮದಲ್ಲಿ ಹಲವಾರು ಸಮಸ್ಯೆಗಳನ್ನು ಹುಟ್ಟುಹಾಕಿದವು. ಫ್ರೇಜರ್ ಅವರು ಅಂತಹ ಸಮಸ್ಯೆಗಳು ರಾಜರ ಕುಟುಂಬದಲ್ಲಿ ಉದ್ಭವಿಸಬಾರದು. ಶಾಹು ಅವರ ವೈವಾಹಿಕ ಜೀವನ ಸುಖವಾಗಿರಲಿ, ಫಲದಾಯಕವಾಗಿರಲಿ; ಯುವರಾಣಿಯ ಆರೋಗ್ಯ ಚೆನ್ನಾಗಿರಲಿ ಮತ್ತು ಅವರ ಮಗು (ಸಿಂಹಾಸನದ ಉತ್ತರಾಧಿಕಾರಿ) ಆರೋಗ್ಯ ಮತ್ತು ಗಟ್ಟಿಮುಟ್ಟಾಗಿರಲಿ ಎಂದು ಪ್ರಾಮಾಣಿಕವಾಗಿ ಬಯಸಿದ್ದರು. ಅವರು ತಮ್ಮ ಕಾಗದದಲ್ಲಿ ಈ ಆಶಯವನ್ನು ವ್ಯಕ್ತಪಡಿಸಿದ್ದರು ಮತ್ತು ಅದರಲ್ಲಿ ಈ ಸೂಕ್ಷ್ಮ ವಿಚಾರವನ್ನು ಚರ್ಚಿಸಿದ್ದರು ಮತ್ತು ಶಾಹು ಅವರಿಂದ ಆಣೆಯನ್ನು ಕೇಳಿದ್ದರು: ಈಗ ಮಹಾರಾಜರೆ, ನಾನು ಈ ವಿಚಾರವನ್ನು ನಿಮ್ಮ ವಿವೇಕಕ್ಕೆ ಬಿಟ್ಟಿದ್ದೇನೆ, ನಾವೆಲ್ಲ ನಿಮ್ಮ ಒಳ್ಳೆಯದಕ್ಕೆ ಮತ್ತು ನಿಮ್ಮ ಮತ್ತು ನಿಮ್ಮ ಹೆಂಡತಿಯ ಸುಖಜೀವನವನ್ನು ನಾವೆಲ್ಲ ಬಯಸುತ್ತಿದ್ದೇವೆಂಬುದನ್ನು ನೀವು ಮನಗಾಣುವಿರಿ. ನೀವು ಯುವರಾಣಿಯರು ಸೂಕ್ತವಾದ ಪ್ರಾಯವನ್ನು ಪಡೆಯುವವರೆಗೆ ಅಂದರೆ ೧೮೯೪ರವರೆಗೆ ರಾಣಿಯ ಹತ್ತಿರ ಸುಳಿಯುವುದಿಲ್ಲವೆಂದು ನನಗೆ ನೀವು ಭಾಷೆ ಕೊಡಬೇಕು. ೧೬ ಡಿಸೆಂಬರ್ ೧೮೯೧.[13] ಶಾಹು ಅವರು ಫ್ರೇಜರ್ ಅವರಿಗೆ ವಚನ ನೀಡಿದರು, ಭಾಷೆಯಂತೆ ಸಂಯಮದಿಂದ ನಡೆದುಕೊಂಡರು ಮತ್ತು ತನ್ನಲ್ಲಿಟ್ಟಿರುವ ಫ್ರೇಜರ್ ಅವರ ವಿಶ್ವಾಸವನ್ನು ಮತ್ತಷ್ಟು ಬಲಗೊಳಿಸಿದರು.

ಈ ಎರಡು ನಿದರ್ಶನಗಳು ತನ್ನ ಶಿಷ್ಯರ ವ್ಯಕ್ತಿತ್ವದ ನಿರ್ಮಾಣದಲ್ಲಿ ಫ್ರೇಜರ್ ಅವರು ಹೇಗೆ ಪ್ರಾಮಾಣಿಕವಾಗಿ ಹಾಗೂ ಗಂಭೀರವಾಗಿ ತೊಡಗಿಸಿಕೊಂಡಿದ್ದರೆಂಬುದನ್ನು ತೋರಿಸುತ್ತವೆ. ನಂತರ ಜೀವನದಲ್ಲಿ ಮಹಾರಾಜರು ಸುಖ ಮತ್ತು ದುಃಖಗಳನ್ನು ಜೀವನದಲ್ಲಿ ಹೊರಬೇಕಾಯಿತು ಮತ್ತು ಅಹಿತಕರ ಘಟನೆಗಳನ್ನು ಎದುರಿಸಬೇಕಾಯಿತು. ಬ್ರಿಟಿಷ್ ಅಧಿಕಾರಿಗೆ ವಿಷ ಉಣ್ಣಿಸುವ ಆರೋಪ ಮತ್ತು ವೇದೋಕ್ತ ವಿಷಯದ ಬಗೆಗಿನ ಬಿರುಗಾಳಿಯಂಥ ವಿವಾದಗಳ ಸಂದರ್ಭಗಳಲ್ಲಿ ಯಾವಾಗಲೂ ಮಹಾರಾಜರು ಗುರುಗಳ ಸಲಹೆಗಳನ್ನು ಕೇಳುತ್ತಿದ್ದರು ಮತ್ತು ಗುರುಗಳು ತನ್ನ ಶಿಷ್ಯನಿಗೆ ಒಂದೊ ಅಥವಾ ಎರಡೊ ವಿವೇಕದ ಮಾತುಗಳನ್ನು ಹೇಳುತ್ತಿದ್ದರು. ಗುರು ಮತ್ತು ಶಿಷ್ಯರ ನಡುವಣ ಸಂವಾದ ನಿರಂತರವಾಗಿ ೩೩ ವರ್ಷಗಳ ಉದ್ದಕ್ಕೂ ನಡೆದವು ಮತ್ತು ಸಂವಾದದ ವಿಷಯ ಬೇರೆಯವರು ಈರ್ಷ್ಯೆಪಟ್ಟು ಕೊಳ್ಳುವಂಥದ್ದು ಆಗಿತ್ತು. ಶಾಹು ಅವರು ಫ್ರೇಜರ್ ಅವರ ಬಗ್ಗೆ ಅಪಾರವಾದ ಗೌರವ ಮತ್ತು ಕೃತಜ್ಞತೆಗಳನ್ನು ಹೊಂದಿದ್ದರು. ಅವರು ಫ್ರೇಜರ್ ಅವರನ್ನು ತನ್ನ ಗೆಳೆಯ, ತತ್ವಜ್ಞಾನಿ ಮತ್ತು ಮಾರ್ಗದರ್ಶಕ ಎಂದು ಹೊಗಳಿದ್ದರು ಮತ್ತು ಅದು ಸರಿ ಎನಿಸಿತ್ತು.

ಸರ್ ರಘುನಾಥರಾವ್ ಸಬ್ನೀಸ್ ಅವರು ಶಾಹು ಅವರ ಮತ್ತೊಬ್ಬ ಗುರುಗಳು, ಅವರು ಶಾಹು ಅವರ ಜೀವನದ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದಾರೆ. ಶಾಹು ಅವರ ದೇಶೀಯ ಗುರುಗಳಾದ ಕೃಷ್ಣಜಿ ಗೋಖಲೆಯವರು ೧೮೯೩ರಲ್ಲಿ ನಿವೃತ್ತಿ ಹೊಂದಿದ್ದರು. ಸಬ್ನೀಸ್ ಅವರು ಗುರುಗಳಾಗಿ ಬಂದರು. ಇವರು ಪಟ್ಟಾಭಿಷೇಕಕ್ಕಿಂತ ಮೊದಲು ಒಂದು ವರ್ಷ ಗುರುಗಳಾಗಿದ್ದರು. ಈ ಅಲ್ಪ ಕಾಲದಲ್ಲಿ ಅವರ ಪ್ರಾಮಾಣಿಕತೆ, ಸತ್ಯನಿಷ್ಠೆ ಮತ್ತು ಸಮಚಿತ್ತತೆ ಶಾಹು ಅವರ ಮೇಲೆ ಅತಿಪ್ರಭಾವ ಬೀರಿದವು. ಇದರ ಪರಿಣಾಮವಾಗಿ ಶಾಹು ಮಹಾರಾಜರು ತಮ್ಮ ಪಟ್ಟಾಭಿಷೇಕವಾದ ಮೇಲೆ ಮೊದಲ ಬಾರಿಗೆ 'ಹುಜೂರ್ ಆಫೀಸನ್ನು' ನಿರ್ಮಿಸಿ ಅದಕ್ಕೆ ಸಬ್ನೀಸ್ ಅವರನ್ನು ಮೊದಲ 'ಹುಜೂರ್ ಚಿಟ್ನೀಸ್' (ಮಾನ್ಯ ಮಹಾರಾಜರಿಗೆ ಕಾರ್ಯದರ್ಶಿ) ಆಗಿ ನೇಮಕ ಮಾಡಿದರು. ಅವರ ರಾಜರ ಸೇವೆಯ ರೇಖೆ ಏರುತ್ತಾ ಹೋಯಿತು. ಶಾಹು ಅವರು ಅವರನ್ನು ೧೮೯೮ರಲ್ಲಿ ಕೊಲ್ಹಾಪುರ ಸಂಸ್ಥಾನದ ದಿವಾನರನ್ನಾಗಿ ನೇಮಕ ಮಾಡಿದರು.

ಸಬ್ನೀಸರು ಶಾಹು ಅವರ ಇಡೀ ಆಡಳಿತಾವಧಿಯಲ್ಲಿ ದಿವಾನರಾಗಿದ್ದರು. ಅಷ್ಟೆ ಅಲ್ಲ ಅವರ ನಂತರವೂ ಮುಂದುವರಿದಿದ್ದರು.

ಸಬ್ನೀಸು ಬಹಳ ಬುದ್ಧಿವಂತರು ಮತ್ತು ದಕ್ಷರು. ಅವರು ಇಂಗ್ಲೀಷು ಮತ್ತು ಸಂಸ್ಕೃತ ಎರಡರ ಮೇಲು ಪ್ರಭುತ್ವ ಹೊಂದಿದ್ದರು. ಅವರು ತಮ್ಮ ಕರ್ತವ್ಯದ ಬಗ್ಗೆ ಅಪಾರವಾದ ನಿಷ್ಠೆ ಮತ್ತು ಪ್ರಭುಗಳ ಬಗ್ಗೆ ಅಚಲವಾದ ಶ್ರದ್ಧೆಯನ್ನು ಹೊಂದಿದ್ದರು. ಶಾಹು ಅವರ ಇಡೀ ಜೀವನದಲ್ಲಿ ಫ್ರೆಜರ್ ಮತ್ತು ಸಬ್ನೀಸರು ಸಲಹೆಗಾರರಾಗಿ ಉಳಿದಿದ್ದರು. ಆದರೆ ಇವರಿಬ್ಬರ ನಡುವೆ ಸ್ವಲ್ಪ ಭಿನ್ನಾಭಿಪ್ರಾಯವಿತ್ತು. ಫ್ರೆಜರ್ ಅವರು ಮೈಸೂರು ಅಥವಾ ಹೈದ್ರಾಬಾದಿನಲ್ಲಿರುತ್ತಿದ್ದರು. ಸಬ್ನೀಸರಿಗೆ ಅಂತಹ ಪ್ರಸಂಗವಿರಲಿಲ್ಲ. ಅವರು ಸದಾ ಶಾಹು ಅವರ ಒಡನಾಟದಲ್ಲಿರುತ್ತಿದ್ದರು. ಅವರು ಕೂಡ ತಮ್ಮ ಸಲಹೆಯ ಮೇರೆಗೆ ತೆಗೆದುಕೊಂಡ ನಿರ್ಣಯಗಳ ಜಾರಿಯಲ್ಲಿ ಸಹಾಯ ಮಾಡುತ್ತಿದ್ದರು. ಅವರು ಶಾಹು ಅವರ ಹೆಗಲಿಗೆ ಹೆಗಲು ಕೊಟ್ಟು ಕಷ್ಟ ಕಾರ್ಪಣ್ಯಗಳೊಡನೆ ಹೆಣಗುತ್ತಿದ್ದರು. ಶಾಹು ಅವರು ಸಬ್ನೀಸ್‌ರು ತಮ್ಮ ಕೆಲಸ ಮತ್ತು ಪ್ರಗತಿಯಲ್ಲಿ ಮಹಾಪಾತ್ರ ವಹಿಸಿದ್ದರೆಂಬುದನ್ನು ನಂಬಿದ್ದರು. ಶಾಹು ಅವರು ೧೯೧೫ರಲ್ಲಿ ಸಬ್ನೀಸರ ಕೊಡುಗೆಯನ್ನು ಹೊಗಳುತ್ತಾ ಹೇಳುತ್ತಾರೆ: "ಗೌರವಾನ್ವಿತ ರಾವ್ ಬಹದ್ದೂರ್ ರಘುನಾಥ ವ್ಯಂಕೋಜಿ ಸಬ್ನೀಸ್, ಸಿ.ಐ.ಇ. ದಿವಾನ್ ಸಾಹೇಬರು ಹಲವಾರು ಪೀಳಿಗೆಗಳಿಂದ ವಿಶೇಷವಾಗಿ ನನ್ನ ಬಾಲ್ಯದಿಂದ ನನ್ನ ಜೊತೆಯಲ್ಲಿ ಬಹಳ ದಿನಗಳವರೆಗೆ ಹಾಗೂ ನನ್ನ ಕುಟುಂಬದೊಂದಿಗೆ ನಿಕಟವಾಗಿ ಕೊಲ್ಹಾಪುರ ಸಂಸ್ಥಾನದ ಸಂಬಂಧ ಹೊಂದಿದ್ದಾರೆ. ನಾನು ಗಳಿಸಿದ ಯಾವುದೇ ಒಳ್ಳೆಯ ಅಥವಾ ಕೆಟ್ಟ ಹೆಸರು ಅವರಿಗೆ ಸಲ್ಲುತ್ತದೆ. ನನ್ನ ಆಡಳಿತದಲ್ಲಿ ನಾನು ಗಳಿಸಿದ ಎಲ್ಲಾ ಅಧಿಕಾರಗಳಿಗೆ ಮತ್ತು ಸಂಸ್ಥಾನದ ಎಲ್ಲಾ ಪ್ರಯೋಜನಗಳಿಗೆ ದಿವಾನ ಸಾಹೇಬರಾದ ರಾವ್ ಬಹದ್ದೂರರೆ ಹೊಣೆಯಾಗಿದ್ದಾರೆ."[14]

ಶಾಹು ಮಹಾರಾಜರು ಸಬ್ನೀಸರನ್ನು ಹೊಗಳುತ್ತಾ ೧೯೧೯ರಲ್ಲಿ ಮತ್ತೊಂದು ಆಜ್ಞೆಯನ್ನು ಹೊರಡಿಸುತ್ತಾರೆ: "ಇಂದಿನ ದಿವಾನ್ ಸಾಹೇಬ ರಾವ್ ಬಹದ್ದೂರ್ ಸಬ್ನೀಸ್‌ರ ಮತ್ತು ನನ್ನ ನಡುವಣ ಸಂಬಂಧವು ಗುರು-ಶಿಷ್ಯ ಸಂಬಂಧವಾಗಿದೆ. ನಾನು ಗಳಿಸಿದ ಕೆಟ್ಟ ಅಥವಾ ಒಳ್ಳೆಯ ಹೆಸರಿಗೆ ಅವರೆ ಹೊಣೆಗಾರರು. ಅವರು ನನ್ನ ಬಗ್ಗೆ ಮತ್ತು ನನ್ನ ಕುಟುಂಬದ ಬಗ್ಗೆ, ನನ್ನ ಸಹೋದರರ ಬಗ್ಗೆ ತೋರಿಸಿದ ಸಂಪೂರ್ಣ ನಿಷ್ಠೆ ಮತ್ತು ಮಮತೆಯನ್ನು ಪರಿಗಣಿಸಿ ಅವರ, ಅವರ ಸೇವಕರ ಮತ್ತು ಅತಿಥಿಗಳ ಬಗ್ಗೆ, ಔಷಧಿಗಳು, ಬಂಗ್ಲೆಯ ಬಾಡಿಗೆ ಮತ್ತು ಪ್ರಯಾಣ ಭತ್ತೆಗಳ ಬಗ್ಗೆ ಏನೇ ಖರ್ಚಾಗಿದ್ದರೂ ಅದೆಲ್ಲವನ್ನು ಅವರು ಕೊಲ್ಹಾಪುರ ಬಿಡುವಾಗ ಖಜಾನೆಯಿಂದ ಭರಿಸಲು ಹಣಕಾಸಿನ ಕಾರ್ಯದರ್ಶಿಗೆ ಈ ಆಜ್ಞೆಯನ್ನು ನೀಡುತ್ತಿದ್ದೇನೆ. – ೧೧ ಜನವರಿ ೧೯೧೯.[15] ಶಾಹು ಮಹಾರಾಜರು ತಾವು ಸಬ್ನೀಸರ ಜೊತೆಯಲ್ಲಿ ಹೊಂದಿದ್ದ ನಿಕಟ ಬಾಂಧವ್ಯ ಮತ್ತು ತಮ್ಮ ಆಡಳಿತಾವಧಿಯಲ್ಲಿ ಮಾಡಿದ ಇಡೀ ಕೆಲಸದ ಪ್ರಯೋಜನವನ್ನು ತಮ್ಮ ಗುರು ಸಬ್ನೀಸರಿಗೆ ನೀಡುವುದನ್ನು ಸಾರ್ವಜನಿಕವಾಗಿ ಈ ಎರಡು ಆಜ್ಞೆಗಳಲ್ಲಿ ಘೋಷಿಸಿದ್ದಾರೆ.

## ಸ್ವದೇಶ ಮತ್ತು ವಿದೇಶ ಪ್ರವಾಸ

ಇಪ್ಪತ್ತನೇ ಶತಮಾನದಲ್ಲಿ ಮೊದಲನೇ ದಶಕದಲ್ಲಿ ಪ್ರಗತಿಪರ ಆಡಳಿತಗಾರರೆಂದು ಖ್ಯಾತಿ ಪಡೆದ ಶಾಹು ಮಹಾರಾಜರಿಗೆ ಪ್ರವಾಸವೆಂದರೆ ತುಂಬಾ ಪ್ರೀತಿ. ೧೮೯೦ರಲ್ಲಿ ಅವರ ಸ್ವದೇಶಿ ಮತ್ತು ವಿದೇಶಿ ಪ್ರವಾಸಗಳು ಪ್ರವಾಸದ ಹಿನ್ನೆಲೆಯನ್ನು ರೂಪಿಸಿದ್ದವು. ಅವರು ವಿದ್ಯಾರ್ಥಿಯಾಗಿದ್ದಾಗ ಅವರ ಗುರು

ಫ್ರೇಜರ್ ಅವರು ಎರಡು ಬಾರಿ ಉತ್ತರ ಭಾರತದ ಮತ್ತು ಒಂದು ಬಾರಿ ದಕ್ಷಿಣ ಭಾರತದ ಪ್ರವಾಸಗಳನ್ನು ವ್ಯವಸ್ಥೆಗೊಳಿಸಿದ್ದರು. ಸೂಕ್ಷ್ಮ ದೃಷ್ಟಿಯನ್ನು ಹೊಂದಿದ್ದ ಶಾಹು ಮಹಾರಾಜರು ನೂರಾರು ಐತಿಹಾಸಿಕ ಮಹತ್ವದ ನಿವೇಶನ ಮತ್ತು ಕಟ್ಟಡಗಳಿಗೆ, ಯಾತ್ರಾ ಸ್ಥಳಗಳಿಗೆ ಮತ್ತು ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಿಗೆ ಪೇಶಾವರದಿಂದ ತಾಂಜಾವೂರ್‌ವರೆಗೆ ಭೇಟಿ ನೀಡಿದ್ದರು. ಈ ಪ್ರವಾಸಗಳು ಅವರಿಗೆ ರಾಷ್ಟ್ರದ ಇತಿಹಾಸ ಮತ್ತು ಭಾರತದ ಸಮಕಾಲೀನ ಜನರ ಸ್ಥಿತಿಗತಿಗಳನ್ನು ಕಲಿಸಿದವು. ಅವು ಅವರ ಮನಸ್ಸು ಮತ್ತು ಬುದ್ಧಿಗಳ ಆವರಣ ಮತ್ತು ಗ್ರಹಿಕೆಗಳನ್ನು ವಿಸ್ತರಿಸಿದವು. ಅವು ಅವರ ಜ್ಞಾನದ ಗ್ರಹಿಕೆ ಮತ್ತು ನೋಟದ ಶಕ್ತಿಯನ್ನು ಹಿಗ್ಗಿಸಿದವು. ಪ್ರವಾಸಗಳು ಅವರನ್ನು ಉತ್ತಮ ವ್ಯಕ್ತಿಯನ್ನಾಗಿ ರೂಪಿಸಿದವು. ಉದಾಹರಣೆಗೆ, ಅಕ್ಬರರು ಫತೇಹಪುರ ಸಿಕ್ರಿಯಲ್ಲಿ ನಿರ್ಮಿಸಿ ನಿಲ್ಲಿಸಿದ ಕಟ್ಟಡಗಳ ಮೂಲಕ ವ್ಯಕ್ತಪಡಿಸಿದ ಧರ್ಮ ನಿರಪೇಕ್ಷತೆಯ (ಸೆಕ್ಯುಲರಿಸಂ) ಆದರ್ಶವು 'ವಿದ್ಯಾರ್ಥಿ'ಯಾದ ಶಾಹು ಅವರ ಮೇಲೆ ತುಂಬಾ ಪರಿಣಾಮವುಂಟುಮಾಡಿತು. ತಮ್ಮ ಜೀವನದ ನಂತರದ ದಿನಗಳಲ್ಲಿ ತಮ್ಮ ಸಾರ್ವಜನಿಕ ಭಾಷಣಗಳಲ್ಲಿ ಶಾಹು ಅವರು ಗೌರವಪೂರ್ವಕವಾಗಿ ಮಹಾನ್ ಶಿವಾಜಿಯವರೊಂದಿಗೆ ಅಕ್ಬರ್ ಅವರನ್ನು ನಮೂದಿಸಿ, ಅವರನ್ನು 'ಮಹಾತ್ಮ' ಎಂದು ಕರೆದಿದ್ದಾರೆ.

೧೯೦೨ರಲ್ಲಿ ಯೂರೋಪಿಗೆ ನೀಡಿದ ಭೇಟಿಯು ನಿಜವಾಗಿಯೂ ಅವರ ದೃಷ್ಟಿಕೋನವನ್ನು ವಿಶಾಲಗೊಳಿಸಿತು. ಅವರು ಚಕ್ರವರ್ತಿ ಎಡ್ವರ್ಡ್–೭ ಅವರ ಪಟ್ಟಾಭಿಷೇಕದ ಸಮಾರಂಭಕ್ಕೆ ಇಂಗ್ಲೇಂಡಿಗೆ ಹೋಗಿದ್ದರು. ಅವರು ಫ್ರಾನ್ಸ್ ಮತ್ತು ಇಟಲಿಗೆ ಭೇಟಿ ನೀಡಿದ್ದರು. ಯೂರೋಪಿನ ಈ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ವಿಜ್ಞಾನವು ತಂದ ಆಧುನಿಕ ಕೈಗಾರಿಕೆಗಳು, ಕೃಷಿ ವಿಧಾನಗಳಲ್ಲಿ ಸುಧಾರಣೆ, ಭಾರೀ ಅಣೆಕಟ್ಟುಗಳು, ಸಾಮಾಜಿಕ ಸಂಸ್ಥೆಗಳು, ಜನತಾಂತ್ರಿಕ ಜೀವನ ವಿಧಾನ, ನಾಗರಿಕರ ಶಿಸ್ತು, ಸಾಮಾನ್ಯ ಮನುಷ್ಯನ ದೇಶಭಕ್ತಿ ಮೊದಲಾದ ಬದಲಾವಣೆಗಳು ಮಹಾರಾಜರ ಮೇಲೆ ತುಂಬಾ ಪ್ರಭಾವ ಬೀರಿದವು. ಮಹಾರಾಜರು ತನ್ನ ದೇಶಕ್ಕೆ ವಾಪಸ್ಸು ಬಂದ ಮೇಲೆ ಕೊಲ್ಹಾಪುರದ ಜನರು ವ್ಯವಸ್ಥೆಗೊಳಿಸಿದ್ದ ತಮ್ಮ ಸನ್ಮಾನ ಸಮಾರಂಭದಲ್ಲಿ ಉತ್ತರ ನೀಡಿದ ಭಾಷಣದಲ್ಲಿ ಶಾಹು ಮಹಾರಾಜರು ಎಷ್ಟರಮಟ್ಟಿಗೆ ಪ್ರಭಾವಿತರಾಗಿದ್ದರೆಂಬುದನ್ನು ಅಳೆಯಬಹುದು. ಶಾಹು ಹೇಳುತ್ತಾರೆ: "ನಾನು ಸಾಕಷ್ಟು ಸಂಖ್ಯೆಯಲ್ಲಿ ಸಾರ್ವಜನಿಕ ಸಂಸ್ಥೆಗಳನ್ನು ನೋಡಿದೆನು ಮತ್ತು ಸಾರ್ವಜನಿಕ ಮತ್ತು ರಾಜಕೀಯ ಸಭೆಗಳಿಗೆ ಹಾಜರಾಗಿದ್ದೆನು. ಈ ಸಂಗತಿಗಳು ನನ್ನನ್ನು ಬ್ರಿಟಿಷ್ ಜನರನ್ನು ಹೊಗಳುವಂತೆ ಮತ್ತು ಗೌರವಿಸುವಂತೆ ಮಾಡಿವೆ. ನೀವು ಕಣ್ಣುಗಳನ್ನು ಹಾಯಿಸಿದ ಕಡೆಗಳಲ್ಲಿ ನೀವು ಕಟ್ಟುನಿಟ್ಟಿನ ಶಿಸ್ತು, ಸಕಾರಣತ್ವ, ನಿಷ್ಕಪಟವಾದ ಪ್ರಾಮಾಣಿಕತೆ, ಸತ್ವ ಮತ್ತು ನ್ಯಾಯಕ್ಕಾಗಿ ಪ್ರೀತಿ, ನಿಸ್ವಾರ್ಥದಿಂದ ಸಮಾಜ ಸೇವೆಯ ನಿಷ್ಠೆ, ಸತತವಾದ ಶ್ರಮಗಳನ್ನು ನೋಡುವಿರಿ, ಇವೆಲ್ಲವೂ ಬ್ರಿಟಿಷರ ಗುಣಗಳಾಗಿದ್ದವು ಮತ್ತು ಜಗತ್ತಿನಲ್ಲಿ ಇಂಗ್ಲೆಂಡು ಸಾಧಿಸಿದ ಅದ್ಭುತ ಸಫಲತೆಗೆ ಇವೆಲ್ಲವು ಕೀಲಿಕೈ. ಎದ್ದು ಕಾಣುವ ಸಾರ್ವಜನಿಕ ಕಟ್ಟಡಗಳು, ಸೌಧಗಳು, ಸುಂದರವಾದ ಮೈದಾನ ಮತ್ತು ಉದ್ಯಾನವನಗಳು, ಭೂತಳದ ರೈಲುಗಳು, ಭವ್ಯ ಸೇತುವೆಗಳು, ದೈತ್ಯಾಕಾರದ ಕೈಗಾರಿಕೆಗಳು, ಅಬ್ಬರದ ರೈಲುಗಳು ಮತ್ತು ಇತರೆ ವಾಹನಗಳು, ಭಾರೀ ವಸ್ತು ಸಂಗ್ರಹಾಲಯಗಳಲ್ಲಿ ಶೇಖರಣೆಯಾಗಿರುವ ಸಂಪತ್ತು, ಸಜ್ಜನರಾದ ಹಾರ್ವರ್ಡ್ ವಿಲ್‌ಬರ್‌ಫೋರ್ಸ್ ಅವರಂತಹ ದಾನಿಗಳಿಂದ ಸ್ಥಾಪನೆಗೊಂಡು ಹಲವಾರು ಶತಮಾನಗಳಿಂದ ರಾಷ್ಟ್ರಕ್ಕೆ ಸಮರ್ಪಿತವಾದ ಕಲಾತ್ಮಕ ಮತ್ತು ಆಶ್ಚರ್ಯಗೊಳಿಸುವ ವಸ್ತುಗಳ

ಸಂಗ್ರಹಗಳು ಅದರ ಪ್ರಗತಿಯ ದ್ಯೋತಕಗಳಾಗಿವೆ. ನನ್ನ ಮನಸ್ಸಿನ ಮೇಲೆ ಮಾಡಿರುವ ಮುದ್ರಿಕೆಗಳು (ಪರಿಣಾಮಗಳು) ಮತ್ತು ನನ್ನಲ್ಲಿ ಉಂಟುಮಾಡಿರುವ ಭಾವನೆಗಳನ್ನು ಪೂರ್ಣವಾಗಿ ನನ್ನ ಮಾತುಗಳಲ್ಲಿ ನಾನು ಹೇಳಲಾರೆ.[16]

ಶಾಹು ಮಹಾರಾಜರು ೧೯೦೨ರಲ್ಲಿ ಯೂರೋಪಿಗೆ ಭೇಟಿ ನೀಡಿದಾಗ ಅವರ ಮನಸ್ಸಿನಲ್ಲಿ ಖಾಸ್‌ಬಾಗ್ ಕುಸ್ತಿ ಕ್ರೀಡಾಂಗಣ, ಕೊಲ್ಹಾಪುರದಲ್ಲಿ ಅರಮನೆಯ ರಂಗಮಂದಿರ ಮತ್ತು ಭೋಗಾವತಿ ನದಿಗೆ ಅಡ್ಡವಾಗಿ ರಾಧಾನಗರಿ ಅಣೆಕಟ್ಟುಗಳನ್ನು ಕಟ್ಟುವ ವಿಚಾರ ಹೊಳೆದಿರಬಹುದು. ತನ್ನ ಸಂಸ್ಥಾನದೊಳಗೆ ಪ್ರವಾಸ ಕೈಕೊಂಡಾಗ ವಿದೇಶ ಮತ್ತು ಭಾರತದ ಪ್ರವಾಸಗಳು ವಿಶಾಲವಾದ ಮುನ್ನೋಟ ಆತ್ಮಾವಲೋಕನವನ್ನು ಶಾಹು ಅವರು ಮಾಡಿರಬಹುದು. ಅವರು ತಮ್ಮ ಪಟ್ಟಾಭಿಷೇಕಕ್ಕಿಂತ ಮೊದಲು ಪ್ರವೇಶ ಮಾಡಲಾಗದ ಪ್ರದೇಶಗಳು ಸೇರಿದಂತೆ ದೇಶದ ಉದ್ದ-ಅಗಲಕ್ಕೆ ಪ್ರವಾಸ ಕೈಗೊಂಡಿದ್ದರು. ಆದರೆ ಪಟ್ಟಾಭಿಷೇಕವಾದ ನಂತರ ತನ್ನ ಪ್ರಜೆಗಳ ಕಷ್ಟಕಾರ್ಪಣ್ಯಗಳು, ಬಡತನ, ಸಾಲ-ಸೋಲಗಳು, ಅಜ್ಞಾನ ಮತ್ತು ಮೂಢನಂಬಿಕೆಗಳಲ್ಲಿ ನರಳುತ್ತಿರುವುದನ್ನು ಕಂಡುಕೊಳ್ಳಲು ಸಂಸ್ಥಾನವನ್ನು ಸುತ್ತಾಡಿದರು. ಕಡು ವಾಸ್ತವತೆಯ ನೋಟವು ರಾಜ್ಯದ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವುದಕ್ಕೆ ಆಳ್ವಿಕೆ ಇರುವುದು ಮಾತ್ರವಲ್ಲ, ಅದು ಅನಾಥ ಪ್ರಜೆಗಳು ಸುಖ-ಸಂತೋಷದಿಂದ ಸಂತೃಪ್ತಿಯ ಜೀವನ ನಡೆಸುವಂತೆ ಮಾಡುವುದಕ್ಕೆ ಇದೆ ಎಂಬ ಮನವರಿಕೆಯನ್ನು ಮಾಡಿಕೊಟ್ಟಿತು. ಹೀಗೆ ಶಾಹು ಮಹಾರಾಜರು 'ಜನರ ರಾಜರಾಗಿ' ಮೂಡಿಬಂದರು.

## ಸಾಮಾಜಿಕ ಸಂಸ್ಥೆಗಳ ಪ್ರಭಾವ

ಶಾಹು ಮಹಾರಾಜರ ವ್ಯಕ್ತಿತ್ವ ಮತ್ತು ಅವರು ಮಾಡಿದ ಕೆಲಸವನ್ನು ಗ್ರಹಿಸಲು ನಾಲ್ಕು ಸಮಕಾಲೀನ ಸಾಮಾಜಿಕ ಸಂಸ್ಥೆಗಳಾದ ಆರ್ಯ ಸಮಾಜ, ಸತ್ಯಶೋಧಕ ಸಮಾಜ, ಥಿಯಾಸಾಫಿಕಲ್ ಸೊಸೈಟಿ ಮತ್ತು ಅಮೇರಿಕನ್ ಪ್ರೆಸ್ಬಿಟೇರಿಯನ್ ಮಿಷನ್ನುಗಳು ಮಾಡಿದ ಕೆಲಸಗಳ ಪ್ರಭಾವವನ್ನು ಗಮನಿಸುವುದು ಅತಿಮುಖ್ಯ. ಈ ಸಂಸ್ಥೆಗಳು ಮಾಡಿದ ಕೆಲಸಗಳನ್ನು ನಾವು ಸೂಕ್ತ ಸ್ಥಳದಲ್ಲಿ ಚರ್ಚಿಸುವೆವು. ಶಾಹು ಅವರು ೧೯೦೨ರಿಂದಲೇ ಆರ್ಯ ಸಮಾಜದ ಕಡೆಗೆ ಆಕರ್ಷಿತರಾದರು. ಅವರು ಇಂಗ್ಲೆಂಡಿಗೆ ಹೋಗುವ ಹಡಗಿನಲ್ಲಿ ಅವರು ಇದರಿನ ಮಹಾರಾಜ ಪ್ರತಾಪ ಸಿಂಗರನ್ನು ಭೇಟಿಯಾದಾಗ ಅವರು ಹೇಳಿದ ಆರ್ಯ ಸಮಾಜದ ಮೌಲ್ಯ ಮತ್ತು ತತ್ವಗಳಿಂದ ತಾನು ಪ್ರಭಾವಿತನಾದೆನೆಂದು ಅವರು ಒಂದು ಸಾರ್ವಜನಿಕ ಸಭೆಯಲ್ಲಿ ಹೇಳಿದ್ದಾರೆ. ನಂತರ ಶಾಹು ಅವರು ಖ್ಯಾತ ಆರ್ಯ ಸಮಾಜದವರಾದ ಆತ್ಮರಾಮ ಶಾಸ್ತ್ರಿಯವರ ಸಂಪರ್ಕಕ್ಕೆ ಬಂದರು. ಎಲ್ಲಾ ಹಿಂದುಗಳು ವೇದಗಳನ್ನು ಓದುವ ಹಕ್ಕನ್ನು ಪಡೆದಿದ್ದಾರೆ ಮತ್ತು ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಯ ಬಗ್ಗೆ ತೀವ್ರ ವಿರೋಧವಿದೆಯೆಂದು ಹೇಳುವ ಆರ್ಯ ಸಮಾಜದ ಈ ಎರಡು ಮುಖ್ಯ ತತ್ವಗಳು ಶಾಹು ಅವರಿಗೆ ತುಂಬಾ ಹಿಡಿಸಿದವು. ಬಹಳ ಹಿಂದೆ ಏನು ಅಲ್ಲ, ಅವರು ವೇದೋಕ್ತದ ಬಿರುಗಾಳಿಯನ್ನು ಎದುರಿಸಬೇಕಾಯಿತು. ಮಹಾರಾಷ್ಟ್ರದ ಬ್ರಾಹ್ಮಣರು ಶಾಹು ಮಹಾರಾಜರನ್ನು 'ಶೂದ್ರ' ಎಂದು ಘೋಷಿಸಿದರು. ಮತ್ತು ವೇದಗಳ ಹಕ್ಕನ್ನು ಶಾಹು ಅವರಿಗೆ ಅವರು ನಿರಾಕರಿಸಿದರು. ಆದ್ದರಿಂದ ಅವರು ಆರ್ಯ ಸಮಾಜವನ್ನು ಒಪ್ಪಿದರು ಮತ್ತು ಅದನ್ನು ಅವರು ಅಪ್ಪಿಕೊಂಡರು. ಅದು ಎಲ್ಲಾ ಹಿಂದುಗಳಿಗೆ ವೇದಗಳ ಹಕ್ಕಿದೆಯೆಂದು ಹೇಳಿತು.

ಶಾಹು ಮಹಾರಾಜರು ಸತ್ಯ ಶೋಧಕ ಸಮಾಜವನ್ನು ಕೇಳಿದರೆಂಬುದು ಊಹೆಯ ಸಂಗತಿ. ಕೊಲ್ಹಾಪುರ ಸಂಸ್ಥಾನದಲ್ಲಿ ಭಾಸ್ಕರರಾವ್ ಜಾಧವ್ ಅವರನ್ನು ನೇಮಕ ಮಾಡಿದ ನಂತರ ಚಳುವಳಿಯಲ್ಲಿ ತಿಳಿಯಲಾಯಿತೆಂದು ಭಾವಿಸಬಹುದು. ಮಹಾತ್ಮ ಫುಲೆಯವರ ಸಹೋದ್ಯೋಗಿಗಳಾದ ರಾಮಯ್ಯ ವ್ಯಂಕಪ್ಪ ಅಯ್ಯನವರು ಮತ್ತು ಕೃಷ್ಣಾಜಿ ಅರ್ಜುನ್ ಕೇಲುಸ್ಕರ್ ಅವರ ಉಸ್ತುವಾರಿಯ ಸತ್ಯಶೋಧಕ ಆವರಣದಲ್ಲಿ ಜಾಧವರವರನ್ನು ಬೆಳೆಸಲಾಗಿತ್ತು. ಡಿ. ಎ. ಸುರ್ವೆ ಅವರು ಶಾಹು ನಂತರದ ಆಡಳಿತಾವಧಿಯಲ್ಲಿ ಕೊಲ್ಹಾಪುರ ಸಂಸ್ಥಾನಕ್ಕೆ ದಿವಾನರಾಗಿದ್ದರೆಂದು ತಮ್ಮ ಲೇಖನದಲ್ಲಿ ಈ ಬಗ್ಗೆ ಬೆಳಕು ಬೀರಿದ್ದಾರೆ: "೨೦ನೇ ಶತಮಾನದ ಪ್ರಾರಂಭದಿಂದಲೂ ವಿಶೇಷವಾಗಿ ಹರಿಜನರ ವಿಮೋಚನೆಗೆ ಸಂಬಂಧಿಸಿದ ಸಾಮಾಜಿಕ ಸುಧಾರಣೆಗಳ ಬಗ್ಗೆ ವಿಶೇಷ ಕಾಳಜಿಯನ್ನು ಶಾಹು ಮಹಾರಾಜರು ತೋರಿಸಿದ್ದರು. ಜ್ಯೋತಿ ಬಾ ಫುಲೆಯವರ ಕೃತಿಗಳನ್ನು ಕಂಡಿದ್ದ ಜನರೊಂದಿಗೆ ಚರ್ಚಿಸಿದರು ಮತ್ತು ಫುಲೆಯವರ ಚಿಂತನೆ ಮತ್ತು ಕಾರ್ಯ ಮಾಡುವ ಬಗ್ಗೆ ಹಾಗು ಅವರು ಎದುರಿಸಿದ ಕಷ್ಟ–ಕಾರ್ಪಣ್ಯಗಳು ಮತ್ತು ಅನಾಹುತಗಳ ಬಗ್ಗೆ ಅವರಿಂದ ಮಾಹಿತಿಯನ್ನು ಪಡೆದುಕೊಂಡರು. ತಾವು ಅಪಾರವಾದ ವಿಶ್ವಾಸವನ್ನು ಇಟ್ಟಿದ್ದ ದಿವಾನರಾದ ಸಬ್ನೀಸ್‌ರೊಂದಿಗೆ ಇವರ ಸಭೆಗಳನ್ನು ಆಗಾಗ ವ್ಯವಸ್ಥೆಗೊಳಿಸಿದ್ದರು. ಈ ಚರ್ಚೆಗಳ ಪರಿಣಾಮವಾಗಿ ಸಾಮಾಜಿಕ ಅಸಮಾನತೆ ಮತ್ತು ಅನ್ಯಾಯಗಳ ಮೂಲೋತ್ಪಾಟನೆ ಅವರಲ್ಲಿ ದೃಢ ಬದ್ಧತೆ ಮತ್ತು ಪರಿಪೂರ್ಣ ಕ್ರಮ–ವಿಧಾನಗಳು ಮೂಡಿ ಬಂದವು.

ಅನಿಷ್ಟ ಪದ್ಧತಿಗಳಾದ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯ ಬಗ್ಗೆ ಘೋರ ಯುದ್ಧ ಸಾರಿದ್ದ ಸತ್ಯ–ಶೋಧಕ ಸಮಾಜದ ಚಟುವಟಿಕೆಗಳಿಗೆ ಶಾಹು ಮಹಾರಾಜರು ಸಹಾಯ ಮತ್ತು ಪ್ರೋತ್ಸಾಹ, ಬೆಂಬಲವನ್ನು ದೃಢವಾಗಿ ನೀಡಿದ್ದು ಸಕಾರಣವಾಗಿತ್ತು. ಸತ್ಯಶೋಧಕ ಸಮಾಜದ ಆಂದೋಲನದ ಪುನರ್ ಸ್ಥಾಪನೆ ಮತ್ತು ಪ್ರಚಾರವನ್ನು ಮಹಾರಾಷ್ಟ್ರದ ಮೂಲೆ–ಮೂಲೆಗಳಲ್ಲಿ ಹರಡಲು ಮತ್ತು ತಮ್ಮ ಸಂಸ್ಥಾನದಲ್ಲಿ ಹರಡಲು ಶಾಹು ಮಹಾರಾಜರು ಆಶ್ರಯ ನೀಡಿದರು.

ಅದೇ ಸಮಯದಲ್ಲಿ ಎಲ್ಲಾ ಮತಧರ್ಮಗಳನ್ನು ಗೌರವಿಸುತ್ತಿದ್ದ ಶಾಹು ಮಹಾರಾಜರು ಥಿಯೋಸಫಿ ಆಂದೋಲನದಿಂದ ಪ್ರಭಾವಿತರಾಗಿದ್ದರು. ಥಿಯಾಸಫಿಕಲ್ ಸೊಸೈಟಿಯ ಪ್ರಸಿದ್ಧ ವಕ್ತಾರರಾದ ಶ್ರೀಮತಿ ಆನಿಬೆಂಟರು ಅಧ್ಯಕ್ಷತೆ ವಹಿಸಿದ್ದ ೧೯೧೫ರಲ್ಲಿ ಥಿಯೋಸಫಿಕಲ್ ಸೊಸೈಟಿಯ ಅಧಿವೇಶನವನ್ನು ಶಾಹು ಮಹಾರಾಜರು ವ್ಯವಸ್ಥೆಗೊಳಿಸಿದ್ದರು. ನಿಜ, ಮಹಾರಾಜರು ಸ್ವತಃ ಆಧ್ಯಾತ್ಮಿಕತೆಯ ಬಗ್ಗೆ ಸೈದ್ಧಾಂತಿಕ ಚರ್ಚೆಗಳಲ್ಲಿ ತುಂಬಾ ಆಸಕ್ತಿಯನ್ನು ಹೊಂದಿದ್ದರು. ಆದರೆ ಅವರು ಬಹುಬೇಗನೆ ಮಹಾರಾಷ್ಟ್ರದ ಸಾಮಾಜಿಕ ಜನರ ಧಾರ್ಮಿಕ ಅಥವಾ ಸಾಮಾಜಿಕ ಸಮಸ್ಯೆಗಳು ಕೇವಲ ಚರ್ಚೆಗಳಿಂದ ಪರಿಹಾರವಾಗುವುದಿಲ್ಲ ಎಂದು ಮನವರಿಕೆ ಮಾಡಿಕೊಂಡರು. ಹೀಗೆ ಅವರು ಥಿಯೋಸಫಿಯ ಪ್ರಭಾವದಿಂದ ಹೊರಬಂದರು.

ಫುಲೆಯವರಂತೆಯೇ ಶಾಹು ಸಹ ಕ್ರಿಶ್ಚಿಯನ್ ಮಿಷನರಿಗಳ ಸಮರ್ಪಿತ ಕೆಲಸದಿಂದ ಪ್ರಭಾವಿತ ರಾದರು. ೧೯೦೫ರಿಂದ ಮೀರಜ್‌ನಲ್ಲಿ ಕೆಲಸಮಾಡುತ್ತಿದ್ದ ಇಬ್ಬರು ಅಮೇರಿಕಾದ ಮಿಷನರಿ ಡಾಕ್ಟರುಗಳಾದ ಮೊದಲಿಗೆ ಡಾ. ವೇನ್‌ಲೆಸ್ ಅವರೊಂದಿಗೆ ಮತ್ತು ನಂತರ ಡಾ. ವೈಲ್ ಅವರೊಂದಿಗೆ ಅವರು ಸಂಪರ್ಕಕ್ಕೆ ಬಂದರು. ಅವರು ಕೇವಲ ಕುಟುಂಬದ ವೈದ್ಯರಾಗದೆ ನಿಕಟ–ಆಪ್ತ ಸ್ನೇಹಿತರಾದರು. ಈ ಇರ್ವರು ವೈದ್ಯರು ಮೀರಜ್‌ನ ಮಿಷನ್ ಆಸ್ಪತ್ರೆಯಲ್ಲಿ ಧರ್ಮ ಅಥವಾ ಜಾತಿ ಆಧಾರದ ಮೇಲೆ ಅಸ್ಪೃಶ್ಯತೆ ಮತ್ತು ತಾರತಮ್ಯತೆಯ ಚಿಂತನೆಗೆ ಅವಕಾಶ ನೀಡಲು ಸಂಪೂರ್ಣವಾಗಿ ನಿರಾಕರಿಸಿದರು. ಅವರು

ರೋಗಿಯ ಸೇವೆಯೇ ದೇವರ ಸೇವೆಯೆಂದು ನಂಬಿದ್ದರು. ಅವರ ಮಾನವೀಯ ಮತ್ತು ನಿಸ್ವಾರ್ಥ ಸೇವೆ ಶಾಹು ಅವರಿಗೆ ತುಂಬಾ ಹಿಡಿಸಿತು. ಅವರ ಪ್ರಭಾವ ತೀವ್ರವಾಗಿದ್ದ ಪರಿಣಾಮವಾಗಿ ಶಾಹು ಅವರು ತಮ್ಮ ಜೀವನದ ಕೊನೆಯವರೆಗೆ ಹಲವಾರು ಆಜ್ಞೆಗಳನ್ನು ಅಸ್ಪೃಶ್ಯತೆಯ ನಿವಾರಣೆಗೆ ಹೊರಡಿಸಿದ್ದರು ಮತ್ತು ಶಾಹು ಅವರು ತಮ್ಮ ಅಧಿಕಾರಿಗಳಿಗೆ. ಡಾ.ವೇನ್‌ಲೆಸ್ ಮತ್ತು ಡಾ. ವೇಲ್ ಅವರಿಗೆ ಅಸ್ಪೃಶ್ಯರ ಬಗ್ಗೆ ಇದ್ದ ಬದ್ಧತೆಯನ್ನು ಅನುಸರಿಸಬೇಕೆಂದು ಕರೆಕೊಟ್ಟಿದ್ದರು. ರಾಜನ ಅಂಥ ಒಂದು ಆಜ್ಞೆಯನ್ನು ನೋಡಿರಿ: "................ ಸಾರ್ವಜನಿಕ ಕಟ್ಟಡಗಳು, ಪ್ರವಾಸಿಗರ ಬಂಗಲೆ, ಸರಕಾರಿ ಪ್ರಾಯೋಜಿತ ಊಟದ ಕೇಂದ್ರಗಳು, ನದಿಗಳು, ಸಾರ್ವಜನಿಕ ಬಾವಿಗಳು ಯಾವುದೇ ಸ್ಥಳಗಳಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವಂತಿಲ್ಲ. ಕ್ರಿಶ್ಚಿಯನ್ನರ ಸಾರ್ವಜನಿಕ ಕಟ್ಟಡಗಳಲ್ಲಿ, ಅಮೇರಿಕನ್ ಮಿಷನ್ನಿನ ಬಾವಿಗಳಲ್ಲಿ, ಡಾ. ವೈಲ್ ಮತ್ತು ಡಾ. ವೇನ್‌ಲೆಸ್ ಎಲ್ಲರನ್ನು ಸಮಾನವಾಗಿ ಪರಿಗಣಿಸುತ್ತಾರೆ. ಗ್ರಾಮದ ಪಾಟೀಲ (ಮುಖ್ಯಸ್ಥ) ಮತ್ತು ತಲಾಟಿ (ಲೆಕ್ಕಾಧಿಕಾರಿ) ಈ ಆಜ್ಞೆಯನ್ನು ಪರಿಪಾಲಿಸದಿದ್ದರೆ ಅವರು ಹೊಣೆಯಾಗಿರುತ್ತಾರೆ. ಆಜ್ಞೆಯನ್ನು ಸರಕಾರಿ ಪತ್ರದಲ್ಲಿ ಘೋಷಿಸಲಾಗಿದೆ."[18]

ಆಜ್ಞೆಗಳನ್ನು ಪ್ರಕಟಿಸಿದಾಗ ಸಮಾಜದ ಬುನಾದಿಯೇ ನಡುಗುತ್ತಿತ್ತು. ಕೆಲವು ಯಥಾಸ್ಥಿತಿವಾದಿಗಳು ಶಾಹು ಅವರ ಬಳಿಗೆ ನಿಯೋಗ ಕೊಂಡೊಯ್ಯುತ್ತಿದ್ದರು. ಅವರು ಶಾಹು ಅವರನ್ನು ಈ ಆಜ್ಞೆಗಳನ್ನು ಹೊರಡಿಸುವುದಕ್ಕೆ ಧಾರ್ಮಿಕ ಆಧಾರಗಳನ್ನು ತಮ್ಮ ಆತ್ಮಚರಿತ್ರೆಯಲ್ಲಿ ಡಾ. ವೇನ್‌ಲೆಸ್ ಅವರು ಕೇಳುತ್ತಿದ್ದರು. ಹೇಗೆ ರೈಲ್ವೆ ಬೋಗಿಯಲ್ಲಿ ಶಾಹು ಮಹಾರಾಜರನ್ನು ಭೇಟಿಯಾಗುತ್ತಿದ್ದರೆಂಬುದನ್ನು ತಿಳಿಸುತ್ತಾರೆ ಮತ್ತು ಶಾಹು ಮಹಾರಾಜರು ತನಗೆ ನಂತರ ನಿಯೋಗದ ಇತಿಹಾಸದ ಕತೆಯನ್ನು ಹೇಳಿದರೆಂಬುದನ್ನು ತಿಳಿಸುತ್ತಾರೆ. ಶಾಹು ಡಾಕ್ಟರ್ ಅವರಿಗೆ ಹೇಳಿದರು: "ಕೆಲವು ದಿನಗಳ ನಂತರ ನನ್ನ ಜನರ ಗುಂಪು ಬಂದು ನನಗೆ ಎಲ್ಲಿ ಮತ್ತು ಯಾವ ಅಧಿಕಾರದ ಆಧಾರದ ಮೇಲೆ ನಾನು ಈ ಹೊಸ ಆಡಳಿತಾತ್ಮಕ ನಿಬಂಧನೆಗಳನ್ನು ಹೊರಡಿಸಿದ್ದೇನೆ ಎಂಬುದನ್ನು ಒತ್ತಾಯ ಪೂರ್ವಕವಾಗಿ ಕೇಳಿದರು. 'ಈ ನಿಯಮಗಳ ನಡವಳಿಕೆಗೆ ನಮ್ಮ ಶಾಸ್ತ್ರಗಳಲ್ಲಿ (ಗ್ರಂಥಗಳು) ಅಧಿಕಾರವನ್ನು ಕಂಡುಕೊಳ್ಳಲು ನಮಗೆ ಸಾಧ್ಯವಾಗಿಲ್ಲ' ಎಂದು ಅವರು ಹೇಳಿದರು. ನಾನು ನನ್ನ ಪ್ರತ್ಯುತ್ತರದಲ್ಲಿ ಏನು ಹೇಳಿದೆ ಎಂಬುದು ನಿಮಗೆ ಗೊತ್ತೆ? ನಾನು ಮೊಟ್ಟಮೊದಲಿಗೆ ಈ ನಿಯಮಗಳ ನಡವಳಿಕೆಯನ್ನು ಮೀರಜ್‌ನ ಅಮೇರಿಕಾದ ಮಿಷನ್ ಆಸ್ಪತ್ರೆಯಲ್ಲಿ ಪತ್ತೆಹಚ್ಚಿದನೆಂದು ನಾನು ಅವರಿಗೆ ತಿಳಿಸಿದೆನು. ಅವು ಹಲವು ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿರುವುದನ್ನು ನಾನು ನೋಡಿದೆನು ಮತ್ತು ಆ ತತ್ವಗಳ ಮೇಲೆಯೇ ಆಡಳಿತವನ್ನು ನಡೆಸಿದರೆ ನನ್ನ ಸಂಸ್ಥಾನಕ್ಕೆ ಒಳ್ಳೆಯದಾಗುತ್ತದೆಯೆಂದು ನಾನು ನಿರ್ಧರಿಸಿದೆ."[19] ಅಮೇರಿಕನ್ ಮಿಷನ್ನಿನಲ್ಲಿ ಆಚರಿಸುವ 'ಮಾನವೀಯತೆಯ ನಿಯಮಗಳೇ ನನ್ನ ಧಾರ್ಮಿಕ ಶಾಸನ ಗ್ರಂಥಗಳಾಗಿವೆ'. ಮಿಷನರಿಗಳ ಮಹಾಕರುಣೆಯೇ ನನ್ನ ಮೇಲೆ ಬೀರಿದ ಪ್ರಭಾವವೇ ಬಹುಮಟ್ಟಿಗೆ ಪ್ರಮುಖವಾಗಿದೆ.

## ಶಾಹುವಿನ ನಿಜವಾದ ಗುರು ಯಾರು?

ಹೀಗೆ ಸಮಕಾಲೀನ ಸಮಾಜದ ಹಲವು ವ್ಯಕ್ತಿಗಳು ಮತ್ತು ಸಂಘ–ಸಂಸ್ಥೆಗಳ ಕೆಲಸಗಳು, ತತ್ವಗಳು ಮತ್ತು ಸಿದ್ಧಾಂತಗಳು ಶಾಹು ಅವರ ಮೇಲೆ ಪ್ರಭಾವ ಬೀರಿದವು ಮತ್ತು ಅವರ ವ್ಯಕ್ತಿತ್ವವನ್ನು ರೂಪಿಸಿದವು. ಪುಣೆಯಲ್ಲಿನ ಸ್ಕಾಟಿಷ್ ಮಿಷನ್ನಿನಿಂದ ಥಾಮಸ್ ಪೈನೆ ಅವರ 'ಮಾನವ ಹಕ್ಕುಗಳು' ಎಂಬ ಕೃತಿಯ ಹಲವಾರು ಅಂಶಗಳು ಮಹಾತ್ಮ ಫುಲೆಯವರಲ್ಲಿ ಸಾಮಾಜಿಕ ಸುಧಾರಕರನ್ನು ರೂಪಿಸಿದವು. ಅದೇ

ರೀತಿಯಲ್ಲಿ ಮೀರಜ್ ಅಮೇರಿಕನ್ ಮಿಷನ್ನಿನ ವಿಶಾಲವಾದ ರೋಹಿತದಿಂದ ಹಿಡಿದು ಇಂಗರ್‌ಸೋಲರ ಬರವಣಿಗೆಗಳು ಮತ್ತು ಭಾಷಣಗಳು ಶಾಹುವಿನಲ್ಲಿನ ಸಾಮಾಜಿಕ ಸುಧಾರಕನಿಗೆ ಜನ್ಮ ನೀಡಿದವು.[20] ಆದರೂ ಕೂಡ ನಾವು ಒಂದು ವಿಶಿಷ್ಟ ಭಾಗವು ಹೆಚ್ಚು ಪರಿಣಾಮಕಾರಿ ಅಥವಾ ಸ್ಫೂರ್ತಿದಾಯಕ ಅಥವಾ ಇತರೆ ಭಾಗಗಳು ಕಡಿಮೆ ಮಹತ್ವದವು ಎಂದು ಹೇಳಲಾರೆವು. ಮತ್ತೆ ಈ ಶ್ರೇಷ್ಠ ವ್ಯಕ್ತಿಗಳ ಗುರುಗಳನ್ನು ಕಂಡುಹಿಡಿಯುವುದು ಮತ್ತು ಅವರ ಹಣೆಗಳ ಮೇಲೆ ಅವರು ಮುದ್ರಿಸುವುದು ಸರಿಯಲ್ಲ. ಮಹಾತ್ಮ ಫುಲೆಯವರ ಗುರು ಯಾರು? ಅಥವಾ ಶಾಹು ಅವರ ಗುರು ಯಾರು? ಎಂಬ ಪ್ರಶ್ನೆಗಳು ಅರ್ಥಹೀನ, ಮಹಾಪುರುಷರಿಗೆ ಗುರುಗಳಿಲ್ಲ ಎಂಬುದನ್ನು ನಾವು ನಂಬುತ್ತೇವೆ. ಅವರ ಜೀವನದಲ್ಲಿ ಗುರುಗಳ ಪ್ರವೇಶವು ಕೇವಲ ಒಂದು ಆಕಸ್ಮಿಕ ವಿಷಯವಷ್ಟೆ. ಮುಖ್ಯವಾಗಿ ಮಹಾಪುರುಷರ ಹೃದಯಗಳಲ್ಲಿ ಕರುಣೆಯ ಚಿಲುಮೆ ಮೊದಲಿನಿಂದಲೂ ಅಸ್ತಿತ್ವದಲ್ಲಿದೆ. ಕಾಲ ಸರಿದಂತೆ ಈ ಕರುಣೆಯ ಬುಗ್ಗೆ ದೊಡ್ಡ ನದಿಯಾಗಿ ಬೆಳೆಯಿತು, ದೊಡ್ಡ ನದಿಯು ಕರುಣೆಯ ಸಾಗರವಾಯಿತು. ಇದು ಒಂದು ಸುಂದರವಾದದ್ದು, ನೈಜವಾದ ಪ್ರಕ್ರಿಯೆ. ಸ್ವಯಂ–ಸ್ಫೂರ್ತಗೊಂಡ ಶಕ್ತಿಧಾಮವು ಈ ಮಹಾಪುರುಷರಲ್ಲಿ ಪ್ರಜ್ವಲವಾಗಿ ಉರಿದು ಈ ಪ್ರಕ್ರಿಯೆಯನ್ನು ಕಿಡಿಗಳನ್ನಾಗಿ ಮಾಡುತ್ತದೆ.

ಆದರೂ ಸಹ ಯಾರಾದರು ರಾಜರ್ಷಿಯ ಶಾಹು ಅವರ ಗುರುವನ್ನು ಹುಡುಕಲು ಬಯಸುವವರಿಗೆ ಒಂದು ಸಂದರ್ಭದಲ್ಲಿ ಶಾಹು ಅವರು ಸ್ವತಃ ನುಡಿದ ಮಾತುಗಳೇ ಒಳ್ಳೆಯ ಮಾರ್ಗದರ್ಶಕವಾಗಬಹುದು. ಅವರು ಹೇಳುತ್ತಾರೆ: "ಪೂರ್ವಿಕರ ಇತಿಹಾಸ ಮತ್ತು ನನ್ನ ಸ್ವಂತ ಅನುಭವವೇ ನನ್ನ ಗುರು.[21] ಶಾಹು ಅವರ ಅಭಿಪ್ರಾಯದಲ್ಲಿ ಪೂರ್ವಿಕರ ಇತಿಹಾಸವು ಎಂದರೆ ಪೂರ್ವಿಕರು ಹೋರಾಡಿದ ಯುದ್ಧ ಅಥವಾ ಪರಾಕ್ರಮಗಳಲ್ಲಿ. ಇದಕ್ಕೆ ವಿರುದ್ಧವಾದ ಅರ್ಥ ಪೂರ್ವಿಕರು ಎಸಗಿದ ಮಹಾ ತಪ್ಪುಗಳು (ಪ್ರಮಾದಗಳು) ಮತ್ತು ಅವರು ಇಡೀ ಸಮಾಜವನ್ನು ಹಾಳು ಮಾಡಲು ಅವಕಾಶ ನೀಡುವುದಕ್ಕೆ ಸೃಷ್ಟಿಸಿದ ಅನಿಷ್ಟ ಪದ್ಧತಿಗಳು. 'ನನ್ನ ಸ್ವಂತ ಅನುಭವ'ದ ಅರ್ಥ ಮಹಾರಾಜರು ಸ್ವತಃ ಅನಿಷ್ಟ ಪದ್ಧತಿಗಳನ್ನು ಅನುಭವಿಸಿದ್ದು ಮತ್ತು ಪೂರ್ವಿಕರು ಸಾಮಾನ್ಯವಾಗಿ ಎಸಗಿದ ಮಹಾಪ್ರಮಾದಗಳು. ಶಾಹು ಅವರು 'ಪೂರ್ವಿಕರ ಇತಿಹಾಸ'ದ ಬಗ್ಗೆ ಹೇಳಿದ್ದು ಹೀಗೆ: "ಒಂದು ಕ್ಷಣಕ್ಕೆ ಇಂಡಿಯಾದ ಗತ ಇತಿಹಾಸವನ್ನು ನೋಡೋಣ. ಇಂದಿನ ಇಂಡಿಯ ಮತ್ತು ಒಂದು ಸಾವಿರ ವರ್ಷದ ಹಿಂದಿನ ಇಂಡಿಯದ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಉತ್ತಮ ಗುಣಗಳಾದ ಪರಾಕ್ರಮ, ಪಾಂಡಿತ್ಯ, ಧರ್ಮಶ್ರದ್ಧೆ ಮತ್ತು ಉದಾರತೆಗಳು ಇಂದು ನಶಿಸಿವೆ. ಇಡೀ ಭಾರತ ದೇಶವು ಸಾವಿರಾರು ಅನಿಷ್ಟ ಸಂಪ್ರದಾಯ ಮತ್ತು ವಿಕೃತಗೊಂಡ ಮೌಲ್ಯಗಳ ಕಪಿಮುಷ್ಟಿಯಲ್ಲಿ ಸಿಕ್ಕಿಕೊಂಡಿರುವಾಗ ನಾವು ಸಂಪೂರ್ಣವಾಗಿ ನಿರ್ಲಕ್ಷಿತರಾಗಿದ್ದೇವೆ. ಅನಿಷ್ಟ ಪದ್ಧತಿಗಳಾದ ಬಾಲ್ಯವಿವಾಹ, ಬಹು ವಿವಾಹ ಪದ್ಧತಿ, ಕುಡಿತ, ಸ್ತ್ರೀ ಶಿಕ್ಷಣ ನಿಷೇಧ, ಗೊಂದಲಕಾರಿಯಾದ ಜಾತಿ ವ್ಯವಸ್ಥೆಗಳು ಈ ಸಮಾಜವನ್ನು ಸತ್ತ ಹೆಣವಾಗಿ ಮಾರ್ಪಡಿಸಿವೆ."

ನಿದರ್ಶನಕ್ಕೆ ಚಾತುರ್ವರ್ಣ ಪದ್ಧತಿಯನ್ನು ತೆಗೆದುಕೊಳ್ಳಿ. ಇಂಡಿಯಾದಲ್ಲಿ ವಿಶೇಷವಾಗಿ ಮಹಾರಾಷ್ಟ್ರದ ದಕ್ಷಿಣ ಸಂಸ್ಥಾನಗಳಲ್ಲಿ ಬ್ರಾಹ್ಮಣೇತರರ ಜಾತಿಗಳ ಸ್ಥಿತಿಗತಿಗಳು ಅಸಹನೀಯವಾಗಿವೆ. ಈ ಜಾತಿಗಳಿಗೆ ಒಂದು ಇಂಚು ಅಭಿವೃದ್ಧಿ ಹೊಂದಲು ಮತ್ತು ಮುಂದುವರಿಯಲು ಯಾವುದೇ ರೀತಿಯ ಅವಕಾಶಗಳನ್ನು ನೀಡಿಲ್ಲ. ಇಂದು ೨೦ನೇ ಶತಮಾನದಲ್ಲಿ ಕೆಲವರನ್ನು ಮನುಷ್ಯರಾಗಿ ಪರಿಗಣಿಸದೆ ಅವರನ್ನು ಅಸ್ಪೃಶ್ಯರೆಂದು ಪರಿಗಣಿಸಲಾಗಿದೆ. ಅವರು ಮಾಡಿದ ಪಾಪ (ಅಪರಾಧ) ಒಂದೇ ಒಂದು, ಅವರು ಒಂದು ವಿಶಿಷ್ಟ

ಜಾತಿಯಲ್ಲಿ ಹುಟ್ಟದಿರುವುದು. ನಾವು ಇಂದು ಭಾರತದಲ್ಲಿ ಯಾವುದೇ ಸ್ಥಳದಲ್ಲಿ ಏಕತೆ, ಪ್ರೀತಿ ಮತ್ತು ಸಹಕಾರವನ್ನು ನೋಡುತ್ತಿಲ್ಲ. ಈ ಸ್ಥಿತಿಗೆ ಕಾರಣ ನಮ್ಮ ಮೂರ್ಖತನ. ಭಾರತದಲ್ಲಿ ಅಸ್ತಿತ್ವದಲ್ಲಿರುವ ಕೆಲವು ಜನರು ತಮ್ಮ ಸಹೋದರ ನೆರಳನ್ನು ಸಹಿಸಿಕೊಳ್ಳುವುದಿಲ್ಲ. ಈ ಜನರು ತಮ್ಮನ್ನು ಉಚ್ಚಜಾತಿಯ ಜನರೆಂದು ಭಾವಿಸುತ್ತಾರೆ ಮತ್ತು ಅವರು ತಮ್ಮ ಜಾತಿಯ ಒಣಹೆಮ್ಮೆಯಿಂದ ಉನ್ಮತ್ತರಾಗಿದ್ದಾರೆ. ಅವರು ಮನಸೋಇಚ್ಛೆಯಂತೆ ಈ ಕೆಳಜಾತಿಗಳ ಮೇಲೆ ದಬ್ಬಾಳಿಕೆ ನಡೆಸುತ್ತಾರೆ."[22]

ಶಾಹು ಮಹಾರಾಜರು ಉಲ್ಲೇಖಿಸಿದ ಅನಿಷ್ಟ ಪದ್ಧತಿಗಳ 'ಅನುಭವ' ಏನು? ಶಾಹು ಅವರು ಸ್ವತಃ ಒಂದು ಘಟನೆಯನ್ನು ಬ್ಯಾರಿಸ್ಟರ್ ಶಾಮರಾವ್ ಕೇಳವಕರ್ ಅವರಿಗೆ ಹೇಳಿದ್ದಾರೆ. ಕೇಳವ್‌ಕರ್ ಅವರು ಕೊಲ್ಹಾಪುರ ಸಂಸ್ಥಾನದ ಮೊಟ್ಟಮೊದಲ ಮಹಿಳಾ ಶಿಕ್ಷಣ ಅಧಿಕಾರಿಣಿಯಾದ ರಖ್ಮಬಾಯಿ ಕೇಳವ್‌ಕರ್ ಅವರ ಮಗ. ಅವರು ನೆನಪಿಸಿಕೊಳ್ಳುತ್ತಾರೆ: "..... ಒಮ್ಮೆ ಚರ್ಚೆಯಲ್ಲಿ ಮಹಾರಾಜರು ಹೇಳುತ್ತಾರೆ, 'ಕೇಳವ್‌ಕರ್, ನಾನು ಇಡೀ ಸಂಸ್ಥಾನದಲ್ಲಿ ಪ್ರವಾಸ ಮಾಡಬೇಕು, ನಾನು ಪ್ರತಿಯೊಂದು ಹಳ್ಳಿಗೆ ಭೇಟಿ ನೀಡಬೇಕು, ಮಹರರ ಪ್ರತಿಯೊಂದು ಗುಡಿಸಲು ಮನೆಯಲ್ಲಿ ಊಟಮಾಡಬೇಕೆಂದು ನಾನು ಪ್ರಾಮಾಣಿಕವಾಗಿ ಭಾವಿಸುತ್ತೇನೆ.'

"ಘನತೆವೆತ್ತ ಮಾನ್ಯರೆ, ಹಾಗೆ ನೀವು ಏಕೆ ಭಾವಿಸುವಿರಿ?"

'ಕೇಳವ್‌ಕರರೆ ಒಮ್ಮೆ ಹೀಗಾಯಿತು, ನಾನು ಸತಾರಕ್ಕೆ ಹೋದಾಗ ಆಹಾರವನ್ನು ನಮಗಾಗಿ ಸಿದ್ಧಪಡಿಸಲಾಗಿತ್ತು. ಆಹಾರವು ಬ್ರಾಹ್ಮಣ ಶೈಲಿಯದಾಗಿತ್ತು. ಏಕೆಂದರೆ ಅದನ್ನು ಬ್ರಾಹ್ಮಣರೆ ತಯಾರು ಮಾಡಿದ್ದರು. ಊಟ ಮಾಡುವ ವೇಳೆಯಾಗಿತ್ತು. ನಾನು ಸ್ನಾನಮಾಡಿದೆ ಮತ್ತು ಅಡಿಗೆಮನೆಯಲ್ಲಿ ಏನು ಸ್ಥಿತಿ ಎಂದು ನೋಡಲು ನಾನೇ ಅಡಿಗೆಮನೆಗೆ ನುಗ್ಗಿದೆ. ಆಹಾರದ ತಿಂಡಿತಿನಿಸುಗಳು ಹಲವು ಪಾತ್ರೆಗಳಲ್ಲಿ ಬೇಯುತ್ತಿತ್ತು.

"ಎರಡು ಪಾತ್ರೆಗಳ ನಡುವೆ ಸಾಕಷ್ಟು ಅಂತರವಿತ್ತು. ಬರಿ ಮೈಯಲ್ಲಿದ್ದ ಬ್ರಾಹ್ಮಣನು ಒಂದು ಬೆಕ್ಕನ್ನು ಕಂಕುಳದಲ್ಲಿ ಹಿಡಿದಿಟ್ಟುಕೊಂಡಿದ್ದನು ಮತ್ತು ಅವನು ಎರಡು ಪಾತ್ರೆಗಳ ನಡುವೆ ತಿರುಗಾಡುತ್ತಿದ್ದನು. ನನ್ನನ್ನು ನೋಡಿ ಕಿರುಚಿ ಮಾತಾಡಿದನು, 'ಇಲ್ಲಿ ನೀನು ಈ ರೀತಿ ತಿರುಗಾಡಬೇಡ. ನೀನು ಇಲ್ಲಿ ಏನನ್ನಾದರೂ ಮುಟ್ಟಿದರೆ ದೊಡ್ಡ ಅನಿಷ್ಟವೆ ಸಂಭವಿಸುತ್ತದೆ. ಈ ಮಾತುಗಳು ನನ್ನ ಹೃದಯವನ್ನು ಭೇದಿಸಿದವು. ನನ್ನಲ್ಲಿಯೇ ಬೆಕ್ಕಿಗಿಂತ ನನ್ನ ಸ್ಥಾನಮಾನವು ಕೆಳಗಿನದ್ದೆ ಎಂದು ನನ್ನನ್ನು ನಾನೇ ಕೇಳಿಕೊಂಡೆ?

'ನಾನು ಮಹಾರಾಜ. ಆದರೂ ಕೂಡ ನಾನು ಈ ಅವಮಾನವನ್ನು ಅನುಭವಿಸಬೇಕಾಯಿತು. ಅಸ್ಪೃಶ್ಯ ಜಾತಿಗಳ ಜನರಿಗೆ ಏನಾಗುತ್ತಿರಬಹುದು? ನಾನು ಕೆಳಜಾತಿಗಳಿಗಿಂತ ತೀರಾ ಕೆಳಜಾತಿಗಳಲ್ಲಿ ನಿರ್ಭಯವಾಗಿ ಊಟಮಾಡಬೇಕು ಎನಿಸುತ್ತದೆ.' "[3]

ಅಂತಹ ವೈಯಕ್ತಿಕ ಅನುಭವಗಳು ಶಾಹು ಅವರಿಗೆ ಪಾಠಗಳನ್ನು ಕಲಿಸಿ ಮತ್ತು ಅವರನ್ನು ತನ್ನ ದಾರಿಯಲ್ಲಿ ಹೋಗುವಂತೆ ಮಾರ್ಗದರ್ಶನ ನೀಡಿವೆ. ಸಾಮಾಜಿಕ ಅತ್ಯಾಚಾರ ಮತ್ತು ಗುಲಾಮಿತನದ ಬಗ್ಗೆ ಹತ್ತು–ಹನ್ನೆರಡು ಸಂಪ್ರದಾಯಗಳ ಗ್ರಂಥಗಳನ್ನು ಓದಿದರೂ ಕಲಿಯಲಾರದ್ದನ್ನು ತೀರಾ ಕ್ಷುಲ್ಲಕವೆನಿಸಿದ್ದ ಅನುಭವವು ಒಂದು ಅರೆಕ್ಷಣದಲ್ಲಿ ಕಲಿಸುತ್ತದೆ. ಶಾಹು ಮಹಾರಾಜರು ತನ್ನ ವೈಯಕ್ತಿಕ ಅನುಭವಗಳೇ ತನ್ನ ಮಹಾನ್ ಗುರು ಎಂಬುದನ್ನು ಅವೇ ವಿವರಿಸುತ್ತವೆ. ಈ ಅನುಭವಗಳೇ ಅವರ ವ್ಯಕ್ತಿತ್ವವನ್ನು

ಕೆತ್ತಿದವು. ಅವರ ವ್ಯಕ್ತಿತ್ವವು ಕ್ರಮಬದ್ಧವಾಗಿ ಉತ್ತಮ ರೂಪವನ್ನು ಪಡೆಯಿತು. ೧೮೯೪ರ ಶಾಹು ಅವರು ಜನರ ಕಲ್ಯಾಣದ ಚಾರ್ಟರನ್ನು ಪ್ರಕಟಿಸಿದರು; ೧೯೦೨ರ ಶಾಹು ಅವರು ಶೇಕಡ ೫೦ರಷ್ಟು ಹುದ್ದೆಗಳನ್ನು ಆಡಳಿತದಲ್ಲಿ ಹಿಂದುಳಿದ ಜಾತಿಗಳಿಗೆ ಮೀಸಲಿಟ್ಟರು; ೧೯೦೮ರ ಶಾಹು ಮಹಾರಾಜರು ಅಸ್ಪೃಶ್ಯರಿಗೆ ವಿಶೇಷ ವಿದ್ಯಾರ್ಥಿನಿಲಯಗಳನ್ನು ತೆರೆದರು; ೧೯೧೧ರ ಶಾಹು ಅವರು ಸತ್ಯಶೋಧಕ ಸಮಾಜಕ್ಕೆ ಸರಕಾರದ ಪ್ರಾಯೋಜಕತ್ವವನ್ನು ವಿಸ್ತರಿಸಿದರು; ೧೯೧೮ರ ಶಾಹು ಅಸ್ಪೃಶ್ಯತೆಯ ನಿವಾರಣೆಯ ಅಧಿಸೂಚನೆಯನ್ನು ಹೊರಡಿಸಿದರು ಮತ್ತು ೧೯೨೦-೨೨ರ ಶಾಹು ಅವರು ಇಡೀ ಮಹಾರಾಷ್ಟ್ರದ ಬಹುಸಂಖ್ಯಾತ ಸಮಾಜದವರಿಗೆ ಮತ್ತು ಬಡವರಿಗೆ ನಾಯಕತ್ವವನ್ನು ನೀಡಿದರು. ಒಬ್ಬ ವ್ಯಕ್ತಿಯಾಗಿದ್ದ ಅದೇ ಶಾಹು ಮತ್ತು ಪ್ರತಿಯೊಂದು ಹಂತದಲ್ಲಿ ಅವರ ವ್ಯಕ್ತಿತ್ವವು ಉತ್ತಮೋತ್ತಮರಾಗಿ ಬದಲಾವಣೆಗೊಂಡಿತು. ಇದು ವಿಕಾಸಶೀಲ ಅಭಿವೃದ್ಧಿ ಮತ್ತು ಅದು ಅವರ ವ್ಯಕ್ತಿತ್ವ ಮತ್ತಷ್ಟು ಶ್ರೀಮಂತಗೊಳಿಸುತ್ತದೆ. ಮಹರ್ಷಿ ವಿ. ಆರ್. ಶಿಂಧೆ ಅವರು ಶಾಹು ಅವರ ಮನಸ್ಸಿನ ಶ್ರೀಮಂತಿಕೆಯನ್ನು ಶೋಧಿಸುತ್ತಾ ಹೇಳುತ್ತಾರೆ: "ನಾವು ಶಾಹು ಅವರ ಜೀವನವನ್ನು ವೈಜ್ಞಾನಿಕವಾಗಿ ಮತ್ತು ಸಹಾನುಭೂತಿಪರವಾಗಿ ನೋಡಿದರೆ ಮೊದಲಿಗೆ ಅವರ ಮನಸ್ಸು-ಬುದ್ಧಿ ನಿರಂತರವಾಗಿ ವಿಕಾಸಗೊಳ್ಳುತ್ತಿತ್ತು. ಎರಡನೆಯದಾಗಿ ಅದು ಪ್ರಗತಿಪರ-ಬುದ್ಧಿಯಾಗಿ ಅರಳಿತು."[24]

---

೪

# ವೇದೋಕ್ತ ಬಿರುಗಾಳಿ

೧೮೯೯ರ ಅಕ್ಟೋಬರ್ ತಿಂಗಳು, ಶಾಹು ಮಹಾರಾಜ ತನ್ನ ಕುಟುಂಬದ ಕೆಲವು ಸದಸ್ಯರೊಂದಿಗೆ ಕಾರ್ತೀಕ ಮಾಸದಲ್ಲಿ ಪಂಚಗಂಗಾ ನದಿಯಲ್ಲಿ ಪುಣ್ಯಸ್ನಾನವನ್ನು ಹಿಂದು ಪದ್ಧತಿಯ ಪ್ರಕಾರ ಮಾಡಲು ಹೋಗಿದ್ದರು. ತಮ್ಮ ಜೊತೆಯಲ್ಲಿ ತನ್ನ ಸಹೋದರ ಬಾಪು ಸಾಹೇಬ ಖಣ್ವೆಲ್ಕರ್, ಮಿತ್ರ ರಾಜಾರಾಮ ಶಾಸ್ತ್ರಿ ಭಾಗವತ ಇತರೆ ಕೆಲವರು ಇದ್ದರು ಮತ್ತು ಪೂಜಾರಿ ನಾರಾಯಣ ಭಟ್‌ಜಿ ಅವರನ್ನು ಸ್ನಾನಮಾಡುವಾಗ ಮಂತ್ರಪಠಣ ಮಾಡಲು ನೇಮಕಗೊಂಡಿದ್ದರು. ರಾಜರು ಸ್ನಾನ ಮಾಡುವಾಗ ಪೂಜಾರಿ ಮಂತ್ರ ಪಠಿಸಿದರು. ಸಂಸ್ಕೃತದ ಮಹಾವಿದ್ವಾಂಸರಾದ ಮಹಾಶಾಸ್ತ್ರಿ ಅವರು ಸ್ನಾನ ಮಾಡಿ ಪವಿತ್ರಗೊಳ್ಳದೆ ವೇದಗಳ ಬದಲು ಪುರಾಣದ ಮಂತ್ರಗಳನ್ನು ಪಠಿಸುತ್ತಿದ್ದರು. ರಾಜಾರಾಮ ಶಾಸ್ತ್ರಿ ಅವರು ಮೊದಲಿಗೆ ಕ್ಷತ್ರಿಯರಾದ ಛತ್ರಪತಿ ವೇದ–ಮಂತ್ರಗಳ ಹಕ್ಕುಗಳನ್ನು ಪಡೆದಿದ್ದರೂ ವೇದ–ಮಂತ್ರಗಳ ಬದಲಿಗೆ ಪುರಾಣದ ಮಂತ್ರಗಳನ್ನು ಹೇಳುತ್ತಿದ್ದದನ್ನು (ಕೆಳಜಾತಿಯವರಿಗೆ ಹೇಳುವ ಪದ್ಧತಿ) ಶಾಹು ಅವರ ಗಮನಕ್ಕೆ ತಂದರು. ಆಗ ರಾಜಾರಾಮ ಶಾಸ್ತ್ರಿಯವರು ತಪ್ಪು ಮಾಡುತ್ತಿದ್ದ ಪೂಜಾರಿಗೆ ಪ್ರಶ್ನಿಸಿದಾಗ ಪೂಜಾರಿ ಪ್ರತ್ಯುತ್ತರ ನೀಡಿದರು: 'ಶೂದ್ರರಿಗೆ ಮಾತ್ರ ಪುರಾಣದ ಮಂತ್ರಗಳನ್ನು ಹೇಳುವುದು. ವೇದ–ಮಂತ್ರಗಳನ್ನು ಹೇಳುವಾಗ ಮಾತ್ರ ಪೂಜಾರಿ ಪವಿತ್ರ ಸ್ನಾನ ಮಾಡಬೇಕು. ಈ ಶೂದ್ರರಿಗೆ ಪುರಾಣದ–ಮಂತ್ರಗಳು ಸಾಕು. ಆದ್ದರಿಂದ ಸ್ನಾನ ಮಾಡುವ ಅಗತ್ಯವಿಲ್ಲ.'[1] ಪೂಜಾರಿಯ ಈ ಕೆಟ್ಟ ಮಾತುಗಳು ಶಾಹು ಅವರಿಗೆ ಸಿಡಿಲಿನಂತೆ ಹೊಡೆದವು.

### ವೇದೋಕ್ತದ ಕಿಡಿ: ಒಂದು ಮಹತ್ತರವಾದ ತಿರುವು

ಮಹಾರಾಜರು ಕ್ಷತ್ರಿಯಕುಲವತನ ಹಿಂದು ಪದಪತಶಃ (ಹಿಂದು ಚಕ್ರವರ್ತಿ ಮತ್ತು ಕ್ಷತ್ರಿಯ ಕುಲಭೂಷಣ) ಎಂಬ ಬಿರುದನ್ನು ಹೊಂದಿದ್ದರು. ಎರಡು–ಕಾಸಿನ ಪೂಜಾರಿಯ ಹೀನಭಾಷೆಯು ಕಲ್ಪನೆ ಮತ್ತು ಸಹನೆಗೆ ಮೀರಿದ್ದಾಗಿತ್ತು. ಇದು ಅವನ ಹುಚ್ಚು ಕಲ್ಪನೆಯಾಗಿತ್ತು. ಶಾಹು ಅವರು ಕಟುಸತ್ಯವನ್ನು ಎದುರಿಸಿದರು. ಅಂತಹ ನಿಜವಾದ ಆತ್ಮ–ಅವಲೋಕನವು ಅವರು ಅಂತರ್‌ಮುಖಿಯಾಗಿ ಯೋಚಿಸುವಂತೆ ಮಾಡಿತು. ಈ ಮನವರಿಕೆಯೇ ಅವರನ್ನು ಸಾಮಾಜಿಕ ಬಂಡಾಯದ ಬಾವುಟ ಹಿಡಿಯಲು ಪ್ರೇರೇಪಿಸಿತು.

ಈ ಮೊದಲು ಮಹಾತ್ಮ ಫುಲೆ ಇಂಥದ್ದೇ ಅನುಭವ ಪಡೆದಿದ್ದರು. ತನ್ನ ಬ್ರಾಹ್ಮಣ ಸ್ನೇಹಿತನ ಮದುವೆಯ ಮೆರವಣಿಗೆಯಲ್ಲಿ ಫುಲೆ ನಡೆಯುತ್ತಿರುವಾಗ ಕಟ್ಟಾ ಬ್ರಾಹ್ಮಣನೊಬ್ಬನು ಅವರ ಬಗ್ಗೆ ರೇಗಿದನು: "ಹೇ ಕುಣ್ಬಿ ಪಿಳ್ಳೆ, ನೀನು ಬ್ರಾಹ್ಮಣರ ಭುಜಗಳಿಗೆ ತಾಗಬೇಡ. ನೀನು ಶೂದ್ರ ಜಾತಿಯವನು. ಆದರೂ ಬ್ರಾಹ್ಮಣರ ಪಕ್ಕದಲ್ಲಿ ನಡೆಯುತ್ತಿರುವೆ? ನಿಮ್ಮ ಹಾಳು ಸ್ಪರ್ಶದಿಂದ ನಮಗೆ ರೋಗ ಬರಿಸಬೇಡ?

ನಮ್ಮ ಹಿಂದೆ ಬಾ ಮತ್ತು ಅಂತರವಿಟ್ಟುಕೋ?'.[2] ಆ ಬ್ರಾಹ್ಮಣನ ಕೆಟ್ಟ ಭಾಷೆ ಫುಲೆಯವರ ಆತ್ಮಕ್ಕೆ ಭಾರೀ ಹೊಡೆತ ಕೊಟ್ಟಿತು. ಆದರೆ ಆ ಘಟನೆ ಅವರನ್ನು ಚಿಂತಿಸುವಂತೆ ಮಾಡಿ ಬಂಡಾಯವೇಳುವಂತೆ ಮಾಡಿತು.

ಮತ್ತೊಬ್ಬ ಮಹಾವ್ಯಕ್ತಿ (ಆತ್ಮ) ಅಂತಹದ್ದೇ ನೋವಿನ ಅನುಭವವನ್ನು ಅನುಭವಿಸಬೇಕಾಯಿತು. ಗಾಂಧಿ ಅವರು ದಕ್ಷಿಣ-ಆಫ್ರಿಕೆಯ ರೈಲ್ವೆ-ಸ್ಟೇಷನಲ್ಲಿ ರೈಲು ಹತ್ತುವಾಗ ಇದನ್ನು ಅನುಭವಿಸಿದರು. ಮೊದಲನೇ ದರ್ಜೆಯ ಟಿಕೇಟನ್ನು ಖರೀದಿ ಮಾಡಿ ಮೊದಲನೇ ದರ್ಜೆಯ ಬೋಗಿಯನ್ನು ಹತ್ತುತ್ತಿದ್ದರು. ಆದರೆ ದುರಹಂಕಾರಿ ಬಿಳಿಯರು ಕೂಗಿ ಹೇಳಿ ಅವರನ್ನು ತಡೆದರು: "ನೀವು ಕರಿಯರು, ನೀವು ಬಿಳಿಯರ ಬೋಗಿಯಲ್ಲಿ ಕುಳಿತುಕೊಳ್ಳಬಾರದು." ಗಾಂಧಿ ಹಕ್ಕು ಸಮೇತ ಮತ್ತು ಒತ್ತಾಯಪೂರ್ವಕವಾಗಿ ರೈಲಿನೊಳಕ್ಕೆ ಹೋಗಲು ಯತ್ನಿಸಿದರು. ಬಿಳಿಯರು ಮನಸ್ಸಿಗೆ ಬಂದಂತೆ ಸಿಕ್ಕಾಪಟ್ಟೆ ಬೈದರು ಮತ್ತು ಅವರ ಸಾಮಾನುಗಳನ್ನು ಪ್ಲಾಟ್‌ಫಾರ್ಮಿಗೆ ಎಸೆದುಬಿಟ್ಟರು. ಮಹಾತ್ಮ ಗಾಂಧಿಯವರು, ಫುಲೆ ಮತ್ತು ಶಾಹು ಅವರಿಗಿಂತ ಕೆಟ್ಟದಾಗಿ ಅವಮಾನಕ್ಕೊಳಗಾದರು. ಬಿಳಿಯರು ಕೆಟ್ಟ ಮಾತುಗಳನ್ನು ಹೇಳಿದ್ದು ಮಾತ್ರವಲ್ಲದೆ ಅವರು ಗಾಂಧಿಯನ್ನು ದೈಹಿಕವಾಗಿ ಪ್ಲಾಟ್‌ಫಾರ್ಮಿಗೆ ತಳ್ಳಿಬಿಟ್ಟರು.

ಪಂಚಗಂಗಾ ನದಿಯ ದಡದ ಬ್ರಾಹ್ಮಣ, ಪುಣೆಯ ಬ್ರಾಹ್ಮಣನ ಮದುವೆಯ ಮೆರವಣಿಗೆಯ ಹಳೆಸಂಪ್ರದಾಯದ ಬ್ರಾಹ್ಮಣ ಮತ್ತು ದಕ್ಷಿಣ ಆಫ್ರಿಕೆಯ ರೈಲ್ವೆ ಸ್ಟೇಷನ್ನಿನ ಬಿಳಿಯರು ಒಂದೇ ಗುಂಪಿಗೆ ಸೇರಿದವರಾಗಿದ್ದರು. ಅವರೆಲ್ಲರೂ ಮನುಷ್ಯ ಪ್ರಾಣಿಗಳು ಒಂದೇ ವರ್ಗಕ್ಕೆ ಸೇರಿದವರು. ಅವರೆಲ್ಲರೂ ಶ್ರೇಷ್ಠ ಮನುಷ್ಯರು ಮತ್ತು ಉಳಿದವರು ಕೀಳು ಜನರು ಎಂದು ಅಹಂಕಾರದಿಂದ ಈ ಮೇಲು-ಕೀಳೆಂಬ ಮಿಥ್ಯಾಭಾವನೆಯನ್ನು ಹಲವು ತಲೆಮಾರುಗಳಿಂದ ಹಲವು ತಲೆಮಾರುಗಳವರೆಗೆ ಕೊಂಡೊಯ್ಯುತ್ತಿದ್ದಾರೆ. ಈ ಕುಟುಕು-ನೋವು ಅವರನ್ನು ಕಲಕಿತು ಮತ್ತು ಅವರಲ್ಲಿ ಅಡಗಿದ್ದ 'ಮಹಾತ್ಮ'ನನ್ನು ಹೊರತಂದಿತು. ನಿಜ, ಅಸಂಖ್ಯಾತ ಚೇಳುಗಳ ಕುಟುಕು-ನೋವುಗಳು ಅವಮಾನಗೊಂಡ ಈ ಮೂವರನ್ನು ಚಿಂತಿತರನ್ನಾಗಿ ಮಾಡಿದವು. ಎಲ್ಲರಕ್ಕಿಂತ ಮಿಗಿಲಾಗಿ ಈ ಮೂರು ಜನರ ತಲೆಗಳು ಚಿಂತನೆಗಳ ಬಿರುಸಾದ ಕ್ಷೋಭೆಗೆ ಗಿರ್ರನೆ ತಿರುಗಿದವು. ಪಂಚಗಂಗಾ ನದಿಯ ದಡದಿಂದ ತನ್ನ ಅರಮನೆಗೆ ವಾಪಸ್ಸು ಬಂದ ರಾಜರ್ಷಿ ಶಾಹು ಮಹಾರಾಜರ ಮದುವೆಯ ಮೆರವಣಿಗೆಯಿಂದ ಮನೆಗೆ ವಾಪಸ್ಸು ಬಂದ ಫುಲೆಯವರ ಮತ್ತು ರೈಲ್ವೆ ಸ್ಟೇಷನ್ನಿನ ನಿರೀಕ್ಷಣೆಯ ಕೋಣೆಯಲ್ಲಿ ವಿಶ್ರಾಂತಿ ಪಡೆದ ಗಾಂಧಿ-ಇವರುಗಳ ಮನಸ್ಥಿತಿ ಒಂದೇ ಆಗಿತ್ತು. ಈ ಅವಮಾನವನ್ನು ನಿರ್ಲಕ್ಷಿಸಬೇಕೇ ಅಥವಾ ಪ್ರತಿಭಟಿಸಬೇಕೆಂಬುದೇ ಈ ಬಿರುಗಾಳಿಯ ಕೇಂದ್ರೀಯ ವಸ್ತುವಾಗಿತ್ತು. ಇದು ಒಬ್ಬ ಶಾಹು, ಒಬ್ಬ ಫುಲೆ ಮತ್ತು ಒಬ್ಬ ಗಾಂಧಿಯ ಅವಮಾನವಲ್ಲ. ಆದರೆ ಇಡೀ ಮಾನವತೆಗೆ ಆಗುವ ಅವಮಾನ; ಶತಮಾನಗಳಿಂದಲೂ ಮೇಲುವರ್ಗಗಳು ಕೆಳವರ್ಗದ ಜನತೆಯನ್ನು ಕಾಲಿನಿಂದ ಹೊಸಕುತ್ತಿರುವುದು ಮತ್ತೊಂದು ಅವಮಾನವಾಗಿದೆ. ತಮ್ಮ ವೈಯಕ್ತಿಕ ಅವಮಾನಗಳಲ್ಲಿ ಈ ಮಹಾನುಭಾವರು ಸನ್ನಿವೇಶದಲ್ಲಿ ಅಪಾರವಾದ ಸಾಮಾಜಿಕ ಅನ್ಯಾಯವನ್ನು ನೋಡಿದ್ದಾರೆ ಮತ್ತು ಈ ಅನ್ಯಾಯವನ್ನು ಸರಿಪಡಿಸಲು ಸಾಕಷ್ಟು ರಚನಾತ್ಮಕ ಕೆಲಸ ಮಾಡಿದ್ದಾರೆ. ಅಂತಹ ಅವಮಾನಗಳ ನಿದರ್ಶನಗಳು ವಾಸ್ತವಿಕವಾಗಿ ಹಲವಾರು ಮಹಾಶಯದ ಜೀವನಗಳಲ್ಲಿ ಮಹಾತಿರುವುಗಳಾಗಿವೆಯೆಂದು ಇತಿಹಾಸ ನಿರೂಪಿಸುತ್ತದೆ.

## ಬ್ರಾಹ್ಮಣರ ಪರಮಾಧಿಕಾರದ ಸಿದ್ಧಾಂತ

ಹದಿನಾರು ಆಚರಣೆಗಳನ್ನು ನಡೆಸುವ ಮತ್ತು ವೇದದ ಮಂತ್ರಗಳ ಪಠಣದೊಂದಿಗೆ ಹಿಂದು ಮತಧರ್ಮದ ಇತರೆ ಆಚರಣೆಗಳನ್ನು ಆಚರಿಸುವುದೇ ವೇದೋಕ್ತದ ಹಕ್ಕು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ಎಂಬ ಮೂರು ವರ್ಣದವರಿಗೆ ಈ ಹಕ್ಕು ಇತ್ತು. ಆದರೆ ಬರುಬರುತ್ತ ತಮ್ಮ ಪರಮಾಧಿಕಾರವನ್ನು ಸ್ಥಾಪಿಸುವ ಉದ್ದೇಶದಿಂದ ಬ್ರಾಹ್ಮಣರು ಕ್ಷತ್ರಿಯ ಮತ್ತು ವೈಶ್ಯರನ್ನು ಶೂದ್ರರ ವರ್ಣಕ್ಕೆ ತಳ್ಳಿಬಿಟ್ಟರು ಮತ್ತು ಈ ಎರಡು ವರ್ಣಗಳು ನಶಿಸಿಹೋದವು ಮತ್ತು ಇಡೀ ವಿಶ್ವದಲ್ಲಿ ಬ್ರಾಹ್ಮಣ ವರ್ಣ ಮತ್ತು ಶೂದ್ರ ವರ್ಣ ಎಂಬ ಎರಡು ವರ್ಣಗಳು ಮಾತ್ರ ಇವೆಯೆಂದು ಹೇಳತೊಡಗಿದರು. ಇಷ್ಟಾದರೂ ಬ್ರಾಹ್ಮಣರು ಜೀವನ ನಡೆಸಬೇಕಾಗಿದೆ. ಈಗ ಬಹುಸಂಖ್ಯಾತರಾಗಿರುವ ಶೂದ್ರರ ಧಾರ್ಮಿಕ ವಿಧಿ–ಆಚರಣೆಗಳು ನಡೆಯಬೇಕಾಗಿದೆ. ಹೀಗೆ ನಂತರದ ದಿನಗಳಲ್ಲಿ ಕ್ಲಾಸಿಕ್ ವೇದದ ಮಂತ್ರಗಳು ಬ್ರಾಹ್ಮಣರಿಗೆ ಮೀಸಲಿಟ್ಟು, ಕೆಳದರ್ಜೆಯ ಪುರಾಣದ ಮಂತ್ರಗಳನ್ನು ಶೂದ್ರರ ಹೀನ ಸ್ಥಾನಮಾನವನ್ನು ತೋರಿಸಲು ಅವರಿಗೆ ಮೀಸಲಿಡಲಾಯಿತು.

ಈ ನಿರ್ಣಯಗಳನ್ನು ಯಾರು ಮಾಡಿದರು? ಬ್ರಾಹ್ಮಣರು. ಭೂಲೋಕದ ಮಾನವ ಜಾತಿಯಲ್ಲಿ ಬ್ರಾಹ್ಮಣರೇ ಅತ್ಯಂತ ಶ್ರೇಷ್ಠ ಮತ್ತು ಪರಿಶುದ್ಧರೆಂದು ತಾವೇ ಘೋಷಿಸಿಕೊಂಡರು. ಹೀಗೆ ಬ್ರಾಹ್ಮಣರು ತಮ್ಮ ಅಂತಿಮವಾದ ಬ್ರಾಹ್ಮಣರು ಪರಮಶ್ರೇಷ್ಠರೆಂಬ ತಮಗೆ ಅನುಕೂಲವಾದ ಸಿದ್ಧಾಂತವನ್ನು ಸಮಾಜದ ಮೇಲೆ ಮನುಕಾಲದಿಂದ ರಾಮದಾಸರ ಕಾಲದವರೆಗೆ ಹೇರುತ್ತಾ ಬಂದರು. ಬ್ರಾಹ್ಮಣರು ಪರಮ ಶ್ರೇಷ್ಠರು ಎಂಬ ಸೂತ್ರ (ಮಂತ್ರ) ವನ್ನು ಬೆಂಬಲಿಸಲು ಸೂಕ್ತವಾದ ಧಾರ್ಮಿಕ ಗ್ರಂಥಗಳನ್ನು, ಸ್ಮೃತಿಗಳನ್ನು ಮತ್ತು ಪುರಾಣಗಳನ್ನು ರೂಪಿಸಿದರು. ಅವುಗಳು ಬ್ರಾಹ್ಮಣರು ಶ್ರೇಷ್ಠರು ಎಂಬ ಭಾವನೆಯನ್ನು ಅಪಹಾಸ್ಯಕ್ಕೆ ಗುರಿ ಮಾಡಿದವು. ಬ್ರಾಹ್ಮಣರು 'ಮನುಸ್ಮೃತಿ'ಯಿಂದ ಲಾಭ ಪಡೆದರು. ಅದರಲ್ಲಿ ಬ್ರಾಹ್ಮಣರು 'ನಮ್ಮ ಸಂಸ್ಕೃತಿಯ, ನಡವಳಿಕೆಯ ಹಾಗು ಆಚರಣೆಗಳ ಸ್ತಂಭ ಮತ್ತು ಅದು ಹಲವಾರು ಶತಮಾನಗಳವರೆಗೆ ಹಿಂದುಗಳ ಐಹಿಕ ಮತ್ತು ಪರಲೋಕದ ಜೀವನವನ್ನು ನಿಯಂತ್ರಿಸಿದೆ.[3] ಮನು ಸ್ಪಷ್ಟವಾಗಿ ಹೇಳಿದ್ದಾರೆ:

ಪವಿತ್ರ ಅಗ್ನಿಕುಂಡವನ್ನು (ಬ್ರಾಹ್ಮಣರು ವೇದ ಮಂತ್ರಗಳೊಡನೆ ತಾಮ್ರದ ಪಾತ್ರೆಯಲ್ಲಿ ಬೆಂಕಿ (ಅಗ್ನಿ)ಯ ಪೂಜೆ ಮಾಡುತ್ತಿದ್ದರು) ವಿಧಿಬದ್ಧವಾಗಿ ಅಗ್ನಿಯನ್ನು ಉರಿಸುತ್ತಿದ್ದರು ಮತ್ತು ಪರಿಶುದ್ಧಗೊಳಿಸುತ್ತಿದ್ದರು ಅಥವಾ ಮತ್ಯಾವುದೇ ಸಾಮಾನ್ಯ ವಿಧಾನದಿಂದ ಉರಿಸುತ್ತಿದ್ದರು. ಬೆಂಕಿಯ ಮಹಾದೇವತೆಯಾಗಿದ್ದರು. ಹಾಗೆಯೇ ಬ್ರಾಹ್ಮಣನು ವಿದ್ವಾಂಸನಾಗಿರಲಿ ಅಥವಾ ವಿದ್ವಾಂಸನಾಗಿರದಿರಲಿ ಅವನು ದೇವರಾಗಿಯೇ ಇರುವನು.[4]

ವಿದ್ವಾಂಸರು ಮನುಸ್ಮೃತಿ ೨೫೦೦ ವರ್ಷಗಳಿಗಿಂತ ಹಳೆಯದೆಂದು ಹೇಳುವರು.[5] ಮನುವನ್ನು ಸಫಲವಾಗಿ ಅನುಸರಿಸಿದ ಎಲ್ಲಾ ಧಾರ್ಮಿಕ ನಾಯಕರು ಮನುವಿನ ಎಲ್ಲಾ ಆಜ್ಞೆಗಳನ್ನು (ವಿಧಿಗಳನ್ನು) ಸಮಾಜದ ಮೇಲೆ ಹೇರಿದ್ದಾರೆ. ೧೭ನೇ ಶತಮಾನದಲ್ಲಿ ಸಮರ್ಥ ರಾಮದಾಸರು ಮೊದಲು ಮನು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳಿದ್ದಾರೆ. ರಾಮದಾಸರು ಹೇಳುತ್ತಾರೆ:

*ಸೋಮಾರಿಯಾಗಿದ್ದರೂ*
*ಬ್ರಾಹ್ಮಣ ಎಲ್ಲರಿಗೂ ಗುರುವೇ।*

*ಅವನಿಗೇ ನೀನು ಶರಣಾಗು*
*ಪರಿಪೂರ್ಣ ಭಕ್ತಿಯಿಂದ ।*
*ಸ್ವಾಮಿ ದರ್ಶನ ನೀಡಿದರೆ*
*ಬ್ರಾಹ್ಮಣನಿಗಾಗಿ*
*ವಿಷ್ಣುವಿಗಿಂತ ಬೇರೆ ಯಾರು ಅಲ್ಲ ।*
*ಎದೆಯಲ್ಲಿ ಹೆಮ್ಮೆಯಿಂದ ಇಟ್ಟುಕೋ*
*ಕೇಳು, ಓ ಮರ್ತ್ಯರೆ*
*ಬ್ರಾಹ್ಮಣನ ಹೆಜ್ಜೆ ಗುರುತುಗಳೆ ।*
*ವೇದಗಳು ವಿಧಿಸಿದೆ*
*ಎಲ್ಲರೂ ಬ್ರಾಹ್ಮಣನನ್ನು ಪೂಜಿಸಬೇಕು ।*
*ವೇದಗಳನ್ನು ಅಗೌರವಿಸಿದರೆ*
*ದೇವರ ಅವಕೃಪೆ ಹೊಂದುವೆ ।*
*ಆಚರಣೆಗಳು, ಧಾರ್ಮಿಕ ಕರ್ಮಗಳು, ಪಶ್ಚಾತಾಪ, ನೈವೇದ್ಯಗಳು*
*ಬ್ರಾಹ್ಮಣರಿಲ್ಲದಿದ್ದರೆ ವಿಫಲಕಾರಿ ।*
*ಪವಿತ್ರ ಸ್ಥಳಗಳೆ ಬ್ರಾಹ್ಮಣರು*
*ಬ್ರಾಹ್ಮಣರಿಗೆ ದಾನ ನೀಡು ।*
*ಏನೂ ಫಲವಿಲ್ಲ ಬ್ರಾಹ್ಮಣರ ಆಶೀರ್ವಾದವಿಲ್ಲದಿದ್ದರೆ ।*
*ವೇದಗಳ ಸಾಕಾರ ರೂಪ ಬ್ರಾಹ್ಮಣ ಸಾಕ್ಷಾತ್ ದೇವರೆ ಬ್ರಾಹ್ಮಣ ।*
*ಎಲ್ಲಾ ಆಶೆ–ಆಕಾಂಕ್ಷೆಗಳು ನೇರವೇರುತ್ತವೆ ಬ್ರಾಹ್ಮಣನ ಆಶೀರ್ವಾದದಿಂದ ।*
*ಆತ್ಮ ಶುದ್ಧೀಕರಣಕ್ಕೆ ಪೂಜಿಸು ಬ್ರಾಹ್ಮಣನನ್ನು*
*ಬ್ರಾಹ್ಮಣನ ಮೂಲಕವೇ ದೇವರಿಗೆ ದಾರಿ ।*
*ಪ್ರಾಣಿಗಳು (ಮನುಷ್ಯರು) ಮೋಕ್ಷಗಳಿಸುವರು*
*ಬ್ರಾಹ್ಮಣನ ಪವಿತ್ರ ತೀರ್ಥ ಸೇವನೆಯಿಂದ ।*
*ಎಲ್ಲಾ ದೇವತೆಗಳು ಬ್ರಾಹ್ಮಣನಿಗೆ ವಂದಿಸುವರು*
*ಮಾನವನು ನಿಷ್ಪ್ರಯೋಜಕರು ।*
*ಬ್ರಾಹ್ಮಣ ಮೂರ್ಖನಾದರೂ ಜಗತ್ತಿನಿಂದ ಗೌರವಾನ್ವಿತ ।*
*ವಿದ್ವಾಂಸನಾದ ಶೂದ್ರ ಏನು ಪ್ರಯೋಜನ ।*
*ಅವನು ಪೂಜಿಸಲ್ಪಡಲಾರ ದ್ವಿಜನಂತೆ.*[6]

ರಾಮದಾಸರ ಪ್ರಕಾರ ಇದು ಬ್ರಾಹ್ಮಣ ವರ್ಣದ ಮಹತ್ವವನ್ನು ವಿವರಿಸುತ್ತದೆ. ಈ ಮಹಾ ಸೊಕ್ಕಿನ ಬಗ್ಗೆ ಯಾರೂ ಏನನ್ನೂ ಮಾತನಾಡಲಾರರು. ರಾಮದಾಸರಿಗೆ ಬ್ರಾಹ್ಮಣನನ್ನು ಜಗತ್ತಿನ ಗುರುವೆಂದು ಮಾಡಿದರೂ ತೃಪ್ತಿ ಸಾಲದು. ಬ್ರಾಹ್ಮಣ ದೇವರು, ಭಗವಂತನಿಗಿಂತ ಕಡಿಮೆಯಿಲ್ಲ. ಬ್ರಾಹ್ಮಣ ಜ್ಞಾನಿಯಾಗಬೇಕಾದ ಅಗತ್ಯವಿಲ್ಲ ಅಥವಾ ಉತ್ತಮ ಚಾರಿತ್ರ್ಯವಂತನಾಗಿರಬೇಕಾಗಿಲ್ಲ. ಅವನು 'ಬುದ್ಧಿಗೇಡಿ'ಯಾಗಿದ್ದರೂ ಪರವಾಗಿಲ್ಲ. ಇಷ್ಟಾದರೂ ಮಹಾದೇವತೆಗಳು ಅವನ ಮುಂದೆ ತಲೆಬಾಗುವರು. ಯಃಕಶ್ಚಿತ್ ಮಾನವರ

ಯೋಗ್ಯತೆಯೇನು? ವಿಷ್ಣುವಿನ ಎದೆಯ ಮೇಲೆ ಬ್ರಾಹ್ಮಣ ಭೃಗು ಮಹರ್ಷಿ ಒದ್ದ ಮೇಲೂ ವಿಷ್ಣು ಭಗವಾನರು ತಮ್ಮ ಎದೆಯ ಮೇಲೆ 'ಶ್ರೀವತ್ಸ'ವನ್ನು ಹೊತ್ತು ಮೆರೆಸುತ್ತಾರೆ. ಸಾಮಾನ್ಯ ಜನರು ಲೆಕ್ಕಕ್ಕೆ ಇಲ್ಲ. ಬ್ರಾಹ್ಮಣರು ತಮ್ಮ ಪರಮಾಧಿಕಾರವನ್ನು ಕ್ರೋಢೀಕರಿಸಲು ಮತ್ತೆ ಈ ಸಿದ್ಧಾಂತವನ್ನು ಪ್ರಚಾರ ಮಾಡಿದರು: ಸಮಕಾಲೀನ ಕಲಿಯುಗದಲ್ಲಿ (ಅನಿಷ್ಟಗಳ ಯುಗ) ಕ್ಷತ್ರಿಯ ನಶಿಸಿದರೂ ಮತ್ತು ಕ್ಷತ್ರಿಯರು ಶೂದ್ರರಾಗಿ ರೂಪಾಂತರಗೊಂಡಿದ್ದಾರೆ. ಇದಕ್ಕೆ ಬೆಂಬಲವಾಗಿ ಅವರು ಪುರಾಣಗಳಲ್ಲಿ ಪರಶುರಾಮನು ಅವರನ್ನು ಹೇಳಹೆಸರಿಲ್ಲದಂತೆ ಭೂಮಂಡಳದಲ್ಲಿ ಸುತ್ತಿ ೨೧ ಸಾರಿ ಕೊಚ್ಚಿ ಹಾಕಿದನೆಂಬ ಕತೆಗಳನ್ನು ಹೆಣೆಯಲಾಗಿದೆ. ಅವರು[6] 'ನಂದತಮ್ ಕ್ಷತ್ರಿಯ ಕುಲಮ್' ಎಂಬಂತಹ ಪದಪುಂಜಗಳನ್ನು ಹೆಣೆದಿದ್ದಾರೆ. (ನಂದರಾಜನ ನಂತರ ಕ್ಷತ್ರಿಯ ಜನಾಂಗವಿರುವುದಿಲ್ಲ). ಮೊಘಲ್ ಯುಗದ ಬ್ರಾಹ್ಮಣ ವಿದ್ವಾಂಸರಾದಂತಹ ಕೃಷ್ಣನರಸಿಂಹಶೇಷ ಮತ್ತು ಕಮಲಾಕರಭಟ್ ಅವರು ಆ ಪದಪುಂಜಗಳಿಗೆ ಗೌರವ ತುಂಬಲು ಶೂದ್ರರ ನಿರ್ದಿಷ್ಟ ನಡವಳಿಕೆಗಳ ಬಗ್ಗೆ ಪುಸ್ತಕಗಳನ್ನು ಬರೆದರು. ತಮ್ಮ ಮೇಲರಿಮೆ ಮತ್ತು ಅಹಂಗಳಿಂದ ಉಬ್ಬಿಹೋಗಿ ಅಂತಹ ಕತೆಗಳನ್ನು ಬರೆಯುವಾಗ ತರ್ಕವನ್ನೇ ಮರೆತುಬಿಟ್ಟಿದ್ದಾರೆ. ಪರಶುರಾಮ ಕ್ಷತ್ರಿಯರೆಲ್ಲ ಕೊಂದುಹಾಕಿದಾಗ ಮತ್ತು ಆ ಜನಾಂಗವನ್ನೇ ಅಳಿಸಿಹಾಕಿದಾಗ ೨೧ ಸಾರಿ ಮತ್ತೆ ಮತ್ತೆ ಅವರನ್ನು ಕೊಲ್ಲುವ ಅಗತ್ಯವೇನಿತ್ತು! ಎಂತಹ ಮೂರ್ಖತನ! ೨೧ ಬಾರಿ ಕ್ಷತ್ರಿಯರನ್ನು ನಾಶಗೊಳಿಸಿದ ಬಳಿಕ ಕ್ಷತ್ರಿಯರಾದ ಶ್ರೀರಾಮ ಪ್ರಭು ಮತ್ತು ಭೀಷ್ಮಾಚಾರ್ಯರು ಹೇಗೆ ಪರಶುರಾಮನನ್ನು ತದನಂತರ ಯುದ್ಧಗಳಲ್ಲಿ ಕೊಂದರೆಂಬುದನ್ನು ಅದೇ ಪುರಾಣಗಳು ಹೇಳುತ್ತವೆ. ಸರಿ, ನಂದರಾಜನ ನಂತರ ಕ್ಷತ್ರಿಯ ವಂಶಗಳು ನಿಶ್ಶೇಷವಾಗಿದ್ದವು. ಹಾಗಾದರೆ ಉತ್ತರದಲ್ಲಿ ಗುಪ್ತರು, ಚಾಲುಕ್ಯರು, ಪಾರಮರು, ಯಾದವರು ಮತ್ತು ರಾಜಪುತ್ರರು ಯಾರು ಮತ್ತು ಬಹಳಕಾಲದವರೆಗೆ ಯಾರು ಆಳಿದರು, ಜ್ಞಾನದ ಭಂಡಾರದ ಎಲ್ಲಾ ಬೀಗದ ಕೈಗಳು ಬ್ರಾಹ್ಮಣರ ವಶದಲ್ಲಿದ್ದವು ಮತ್ತು ಅಜ್ಞಾನಿಗಳಾದ ಶೂದ್ರರು ವಿಧಿಯಿಲ್ಲದೆ ಸುಮ್ಮನೆ ಸಮ್ಮತಿಯನ್ನು ಸೂಚಿಸುತ್ತಿದ್ದರೆಂದು ೧೯ನೇ ಶತಮಾನದ ಕೊನೆಯವರೆಗೂ ಬ್ರಾಹ್ಮಣರು ಹೇಳುತ್ತಲೇ ಇದ್ದರು.

ಹೀಗೆ ಬ್ರಾಹ್ಮಣರು ತಮ್ಮ ಕಟ್ಟುಕತೆಗಳಿಂದ ತಮ್ಮ ಪರಮಾಧಿಕಾರವನ್ನು ಪಡೆದುಕೊಂಡು ಕ್ಷತ್ರಿಯರನ್ನು ಶೂದ್ರ ವರ್ಣಕ್ಕೆ ತಳ್ಳಿದರು. ವೈಶ್ಯರು ಸಹ ಕ್ಷತ್ರಿಯರ ಗತಿಯನ್ನೇ ಪಡೆದರು. ಬ್ರಾಹ್ಮಣರು ಈಗಾಗಲೇ ಮಹಿಳೆಯರನ್ನು (ಬ್ರಾಹ್ಮಣ ಮಹಿಳೆಯರು ಸೇರಿದಂತೆ) ಶೂದ್ರ ವರ್ಣಕ್ಕೆ ತಳ್ಳಿದ್ದರು. ಮನು ನಂತರ ಬಂದ ಧಾರ್ಮಿಕ ಪಂಡಿತ ವಲಯವು ಮಹಿಳೆಯರನ್ನು ಶೂದ್ರ ವರ್ಣವೆಂದು ಹಣೆಪಟ್ಟಿ ಹಚ್ಚಿತು. ಆದರೆ ಬ್ರಾಹ್ಮಣ ಪಂಡಿತರು ಶೂದ್ರ ಮಹಿಳೆಯಿಂದ ಜನಿಸಿದ ಮಗು ಹೇಗೆ ಬ್ರಾಹ್ಮಣನಾಗುತ್ತಾನೆಂಬ ಬಗ್ಗೆ ಯೋಚಿಸಲೇ ಇಲ್ಲ. ಅವರ ಮುದ್ದಿನ ಕಟ್ಟಳೆ ಶೂದ್ರ ಗಂಡಸರು ಮತ್ತು ಮಹಿಳೆಯರಿಗೆ ವೇದಗಳ ಹಕ್ಕಿಲ್ಲ ಎಂಬುದು. ಶೂದ್ರರು ಪುರಾಣದ ಮಂತ್ರಗಳಿಂದಲೇ ವಿಧಿ–ಆಚರಣೆಗಳನ್ನು ಆಚರಿಸಬೇಕೆಂಬ ಸಾಮಾಜಿಕ ನಿರ್ಬಂಧವನ್ನು ಹೇರಿದರು. ಕಳೆದ ೨೫೦೦ ವರ್ಷಗಳಿಂದ ಜನಾಂಗೀಯ ಶ್ರೇಷ್ಠತೆಯ ಅಪಹಾಸ್ಯಕರವಾದ ಭಾವನೆಗಳು ಮೂಡಿದ್ದೇ ಬ್ರಾಹ್ಮಣರ ಸಾಮಾಜಿಕ ದೃಷ್ಟಿಕೋನವಾಯಿತು. ಮಹಾರಾಷ್ಟ್ರದ ಬ್ರಾಹ್ಮಣರು ಹೊಂದಿದ್ದ ಈ ಮನಸ್ಥಿತಿಯೇ ಶಾಹು ಅವರು ಪರಂಪರಾಗತವಾಗಿ ಹೊಂದಿದ್ದ ವೇದೋಕ್ತದ ಹಕ್ಕನ್ನು ನಿರಾಕರಿಸಿತು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು.

## ಮೂರು ವೇದೋಕ್ತದ ಪ್ರಕರಣಗಳು

ಮಹಾರಾಷ್ಟ್ರದ ಮರಾಠರು ತಮ್ಮನ್ನು ಕ್ಷತ್ರಿಯರೆಂದೇ ಪರಿಗಣಿಸಿದ್ದರು. ಆದರೆ ಮಹಾರಾಷ್ಟ್ರದ ಬ್ರಾಹ್ಮಣರು ಅವರನ್ನು ಶೂದ್ರರೆಂದು ಪರಿಗಣಿಸಿ ವೇದಗಳನ್ನು ಅವರಿಗೆ ನಿರಾಕರಿಸಿದ್ದರು. ಈ ಎರಡು ಮುಖ್ಯಜಾತಿಗಳು ತದ್ವಿರುದ್ಧವಾದ ಅಭಿಪ್ರಾಯಗಳನ್ನು ಹೊಂದಿದ್ದರಿಂದ ಸಂಘರ್ಷ ಅನಿವಾರ್ಯವಾಗಿತ್ತು. ಬ್ರಾಹ್ಮಣರು ಕೊಲ್ಹಾಪುರ ವೇದೋಕ್ತ ಪ್ರಕರಣಕ್ಕಿಂತ ಮೊದಲು ಮುಖ್ಯ ಮೂರು ಪ್ರಕರಣಗಳ ಸಂದರ್ಭಗಳಲ್ಲಿ ಮರಾಠರ ಕ್ಷತ್ರಿಯತನವನ್ನೇ ಪ್ರಶ್ನಿಸಿದರು. ಮೊದಲನೆಯ ನಿದರ್ಶನವು (ಪ್ರಕರಣ) ೧೬೭೪ರಲ್ಲಿ ರಾಯಗಢ ಕೋಟೆಯಲ್ಲಿ ಶಿವಾಜಿಯ ಪಟ್ಟಾಭಿಷೇಕಕ್ಕೆ ಸಂಬಂಧಿಸಿದ್ದು. ಬ್ರಾಹ್ಮಣರು ಶಿವಾಜಿಯ ಕ್ಷತ್ರಿಯತನವನ್ನೇ ಸಂದೇಹಿಸಿದರು. ಅವರನ್ನು ಬಹಳ ಚಾತುರ್ಯದಿಂದ ಎದುರಿಸಲಾಯಿತು. ಶಿವಾಜಿಯವರ ಭೋಸಲೆವಂಶ (ಕುಲ) ಉದಯಪುರದ ಸಿಸೋಡಿಯರ ಕುಲದ ಮೂಲದವರೆಂದು ಬರವಣಿಗೆಯಲ್ಲಿ ಸಾಕ್ಷ್ಯವನ್ನು ಒದಗಿಸಿದರು. ಜೊತೆಗೆ, ಹಿಂದೂಸ್ತಾನದ ಉಚ್ಚಜಾತಿಯ ಬ್ರಾಹ್ಮಣರ ಪ್ರಭಾವಶಾಲಿ ನಾಯಕರಾದ ಗಂಗಾಭಟ್ಟರನ್ನು ಪವಿತ್ರ ಕಾಶಿ ಪಟ್ಟಣದಿಂದ ಆಹ್ವಾನಿಸಿದ್ದರು. ಗಂಗಾಭಟ್ಟ ಮೂಲ ಮಹಾರಾಷ್ಟ್ರವಾಗಿದ್ದರೂ ಅವರು ತಮ್ಮ ಜ್ಞಾನದ ಬಲದಿಂದ 'ಎರಡನೇ ವ್ಯಾಸ' (ವೇದ ಋಷಿ) ಎಂಬ ಕೀರ್ತಿಯನ್ನು ೧೭ನೇ ಶತಮಾನದಲ್ಲಿ ಪಡೆದಿದ್ದರು. ಅವರು ಒಬ್ಬ ಮಹಾ ಮುತ್ಸದ್ದಿಯಾಗಿದ್ದ ಗಂಗಾಭಟ್ಟರ ಮೂಲಕ ಶಿವಾಜಿ ತಮ್ಮ ಕ್ಷತ್ರಿಯತನವನ್ನು ಘೋಷಿಸಿದರು ಮತ್ತು ಮಹಾರಾಷ್ಟ್ರದ ಬ್ರಾಹ್ಮಣರ ವಿನೋದಶೀಲ ಬಾಯಿಗಳನ್ನು ಮುಚ್ಚಿಸಿದರು. ಗಂಗಾಭಟ್ಟರು ಪಟ್ಟಾಭಿಷೇಕ ಮತ್ತು ಆಚರಣೆಗಳನ್ನು ವೇದಮಂತ್ರಗಳ ಘೋಷಣೆಗಳ ಮೂಲಕ ನೆರವೇರಿಸಿದರು. ರಾಯಗಢದ ಕೋಟೆಯ ತುದಿಯಲ್ಲಿದ್ದ ವೇದೋಕ್ತ ಬಿರುಗಾಳಿ ತಣ್ಣಗಾಯಿತು.

ಎರಡನೇ ಹಗರಣ (ನಿದರ್ಶನ) ಸತಾರದ ಛತ್ರಪತಿ ಪ್ರತಾಪಸಿಂಗ್ ಮಹಾರಾಜರಿಗೆ ಸಂಬಂಧಿಸಿದ್ದು. ಬ್ರಾಹ್ಮಣರು ಅದೇ ತಮ್ಮ ಹಳೆಯ ಜಾಡಿನ ಆಟವನ್ನು ಆಡಿದರು. ಅವರು ಛತ್ರಪತಿಗಳ ಭೋಸಲೆಯ ವಂಶದ ಕ್ಷತ್ರಿಯತ್ವದ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದರು. ಸಾಂಗಲಿಯ ಚಿಂತಮಣ್‌ರಾವ್ ಪಟವರ್ಧನರವರು ಮಡಿವಂತಿಕೆಯ ಬ್ರಾಹ್ಮಣರೊಡನೆ ಗುಪ್ತ ಸಮಾಲೋಚನೆ ಮಾಡಿ ಕಲಿಯುಗದಲ್ಲಿ ಕ್ಷತ್ರಿಯರೇ ಇಲ್ಲದಿರುವುದರಿಂದ ಶಿವಾಜಿ ಮಹಾರಾಜನು ಕ್ಷತ್ರಿಯನೇ ಅಲ್ಲವೆಂದು ಸಂಕೇಶ್ವರದ ಹಿಂದು ಶ್ರೇಷ್ಠ ಪೂಜಾರಿಯಾದ ಶಂಕರಾಚಾರ್ಯರ ಮೂಲಕ ಧಾರ್ಮಿಕ ಕಟ್ಟಳೆಯನ್ನು ಹೊರಡಿಸಿದನು. ಆದ್ದರಿಂದ ಪ್ರತಾಪಸಿಂಗರು 'ಕ್ಷತ್ರಿಯ ಕುಲವಂತರು' ಎಂಬ ಬಿರುದನ್ನು ಹೊಂದಲು ಬರುವುದಿಲ್ಲ.[7] ಪ್ರತಾಪಸಿಂಗರು ಎರಡು ಪಕ್ಷಗಳ ಸಭೆಯನ್ನು ಈ ಪ್ರಶ್ನೆಯನ್ನು ಬಿಡಿಸಲು ಸಾರ್ವಜನಿಕವಾಗಿ ಕರೆದರು. ಕಾಯಸ್ಥ ಪ್ರಭುಗಳ ವಿದ್ವಾಂಸರು ಕ್ಷತ್ರಿಯರ ಪ್ರಕರಣದ ಪರವಾಗಿ ವಾದಮಾಡಿದರು. ಬ್ರಾಹ್ಮಣರು ಈ ಪ್ರಕರಣದಲ್ಲಿ ಸೋತರು. ಕ್ಷತ್ರಿಯರ ಅಸ್ತಿತ್ವವನ್ನು ಎತ್ತಿಹಿಡಿಯಲಾಯಿತು ಮತ್ತು ಕ್ಷತ್ರಿಯತ್ವವನ್ನು ಭೋಸಲೆಯವರಿಗೆ ನೀಡಿದ್ದು ಮಾತ್ರವಲ್ಲದೆ ಮರಾಠರಾದ ಘಾಟ್ಗೆ, ಪಾಲ್ಕರು, ಜಾಧವರು, ಶಿರ್ಕೆ ಮತ್ತು ಮೋಹಿತೆ ಮೊದಲಾದವರಿಗೆ ಕ್ಷತ್ರಿಯರೆಂದು ಸಾಧಿಸಲಾಯಿತು. ಅವರ ವೇದೋಕ್ತ ಹಕ್ಕನ್ನು ಒಪ್ಪಿಕೊಳ್ಳಲಾಯಿತು (೧೮೩೫). ಪ್ರತಾಪಸಿಂಗರು ಈ ವಿವಾದವನ್ನು ಹೆಚ್ಚಿಸಿ ಸಾಮಾಜಿಕ ಸಮಸ್ಯೆಯಾಗಿ ಬದಲಾಯಿಸುವಲ್ಲಿ ವಿಫಲರಾದರು. ಇದಾದ ಅನತಿಕಾಲದಲ್ಲಿ ಬ್ರಿಟಿಷರು ಅವರನ್ನು ಕಿತ್ತುಹಾಕಿದರು. ೧೮೯೬ರಲ್ಲಿ ಬರೋಡಾದ ಗಾಯಕವಾಡದ ಮಹಾರಾಜ ಸಯ್ಯಾಜಿರಾವ್ ಅವರ ಆಸ್ಥಾನದಲ್ಲಿ ಮೂರನೆಯ ಬಾರಿಗೆ ವೇದೋಕ್ತದ ಸಮಸ್ಯೆ ಒಂದು ವಿವಾದವನ್ನೇ ಎಬ್ಬಿಸಿತು. ತನ್ನ ಸಿಬ್ಬಂದಿಯಲ್ಲಿದ್ದ ಮಹಾರಾಷ್ಟ್ರದ ಬ್ರಾಹ್ಮಣ ಪೂಜಾರಿಗಳು ಮಹಾರಾಜರಿಗಾಗಿ

ಆಚರಿಸುವ ವಿಧಿ-ವಿಧಾನಗಳಲ್ಲಿ ವೇದದ ಮಂತ್ರಗಳನ್ನು ಪಠಿಸಲು ನಿರಾಕರಿಸಿದರು. ಸಯ್ಯಾಜಿರಾವ್ ಅವರು ಅವರನ್ನು ಕಿತ್ತುಹಾಕಿ, ಹೊಸ ಗುಜರಾತಿ ಮತ್ತು ರಾಜಾಸ್ತಾನದ ಪುರೋಹಿತರನ್ನು ನೇಮಿಸಿದರು ಮತ್ತು ವೇದೋಕ್ತದ ಮಾದರಿಯಲ್ಲೇ ಅರಮನೆಯಲ್ಲಿ ನಡೆಯುವ ವಿಧಿ-ಆಚರಣೆಗಳನ್ನು ಮುಂದುವರಿಸಲು ಖಾಯಂಗೊಳಿಸಿದರು. ಕೋಪಗೊಂಡ ತಿಲಕರು ಪುಣೆಯಿಂದ ತಮ್ಮ 'ಕೇಸರಿ' ಪತ್ರಿಕೆಯಲ್ಲಿ ಮೊದಲು ವಾಕ್ಬಾಣಗಳನ್ನು ಬಿಟ್ಟರು. ಸಯ್ಯಾಜಿರಾವ್ ಅದನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಅವರು ವೇದೋಕ್ತದ ಸಾಮಾಜಿಕ ಆಯಾಮಗಳನ್ನು ಅರಿತಿದ್ದರು ಮತ್ತು ಈ ಬಗ್ಗೆ ಅವರು ಕೆಲವು ಸುಧಾರಣೆಗಳನ್ನು ಮಾಡಿದರು. ಆದರೆ ಅವರು ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸಲಿಲ್ಲ. ಒಳ್ಳೆಯ ಆಡಳಿತಗಾರರಂತೆ ಅವರು ಪರ್ಯಾಯ ವ್ಯವಸ್ಥೆಗಳನ್ನು ಮಾಡುವ ಮೂಲಕ ಸಮಸ್ಯೆಯನ್ನು ಬಗೆಹರಿಸಿ ಅಲ್ಲಿಗೆ ಅದನ್ನು ನಿಲ್ಲಿಸಿದರು.

## ವೇದೋಕ್ತದ ಭುಗಿಲು

ಬರೋಡಾದಲ್ಲಿ ಆಗದಿದ್ದು ಕೊಲ್ಹಾಪುರದಲ್ಲಿ ಆಯಿತು. ವೇದೋಕ್ತದ ಕಿಡಿಯು ಕೋಪೋದ್ರಿಕ್ತ ಸಾಮಾಜಿಕ ದಳ್ಳುರಿಯಾಗಿ ಸಾಮಾಜಿಕ ನ್ಯಾಯಕ್ಕಾಗಿ ಒಂದು ಆಂದೋಲನವಾಗಿ ರೂಪಾಂತರಗೊಂಡಿತು. ಕೊಲ್ಹಾಪುರದ ಬ್ರಾಹ್ಮಣರು ಸಂಯಮ ಮತ್ತು ವಿಶಾಲ ಮನೋಭಾವ ತೋರಿಸಿದ್ದರೆ ಅದು ಅಷ್ಟು ಬಿರುಸಾಗಿರುತ್ತಿರಲಿಲ್ಲ. ಕಾಲ ಬದಲಾಗಿದೆಯೆಂದು ಶಿವಾಜಿ ಮಹಾಶಯರ ಯುಗದಲ್ಲಿ ಬದುಕುತ್ತಿಲ್ಲವೆಂದು ಅಥವಾ ಛತ್ರಪತಿ ಪ್ರತಾಪಸಿಂಗ ಮಹಾರಾಜರ ಯುಗದಲ್ಲಿ ಬದುಕುತ್ತಿಲ್ಲವೆಂದು ಅವರು ತಮ್ಮಷ್ಟಕ್ಕೆ ತಾವೇ ನೆನಪಿಸಿಕೊಂಡಿದ್ದರೆ ಅವರು ಒಳ್ಳೆಯದನ್ನು ಮಾಡಬಹುದಾಗಿತ್ತು. ಅವರು ಛತ್ರಪತಿಯನ್ನು 'ಶೂದ್ರ' ಎಂದು ಕರೆಯುವ ಮೂಲಕ ಅವರ ಘನತೆಯ ಮೇಲೆ ದಾಳಿ ಮಾಡಿ ಮಹಾರಾಷ್ಟ್ರದ ಸಂಸ್ಕೃತಿ ಮತ್ತು ಇತಿಹಾಸಕ್ಕೆ ಧಕ್ಕೆ ತಂದದ್ದು ಮಾತ್ರವಲ್ಲದೆ ಮಹಾರಾಷ್ಟ್ರದ ಆತ್ಮಗೌರವಕ್ಕೆ ಬಾಧೆಯುಂಟುಮಾಡಿದ್ದನ್ನು ಅವರು ಮನವರಿಕೆ ಮಾಡಿಕೊಳ್ಳಲಿಲ್ಲ. ಅವರು ಇದನ್ನು ಮನವರಿಕೆ ಮಾಡಿದ್ದರೂ ಕೂಡ ಜನಾಂಗೀಯ ಮೇಲರಿಮೆ ಸಂಕೀರ್ಣತೆಯಿಂದ ಮೂಡಿದ್ದ ಅಹಂಕಾರವು ಅವರ ಪ್ರಜ್ಞೆಯನ್ನು ಆವರಿಸಿಕೊಂಡಿತ್ತು. ತಮ್ಮ ಹಿರಿಯರು (ಪೂರ್ವಿಕರು) ಮಾಡಿದ ಮಹಾತಪ್ಪುಗಳನ್ನೇ ತಾವು ಮಾಡುತ್ತಿದ್ದರು.

೨೫ ವರ್ಷದ ವಯಸ್ಸಿನ ಯುವಕನಾಗಿದ್ದ ಛತ್ರಪತಿ ಶಾಹು ರಾಜನಾಗಿದ್ದಾಗ ಪಂಚಗಂಗಾ ನದಿಯ ದಡಗಳಲ್ಲಿ ಸೇವೆಯಲ್ಲಿದ್ದ ಒಬ್ಬ ಬ್ರಾಹ್ಮಣ ಅವರನ್ನು ತಿರಸ್ಕಾರ ಭಾವದಿಂದ ಶೂದ್ರನೆಂದು ವಜಾ ಮಾಡಿದರು. ಇದು ಶಾಹು ಅವರಿಗೆ ಬಹಳ ನೋವುಂಟು ಮಾಡಿತು. ಆದರೆ ಅವರು ಶಾಂತಚಿತ್ತರಾಗಿದ್ದು ತಮ್ಮ ಮನಸ್ಥಿತಿಯನ್ನು ಕಳೆದುಕೊಳ್ಳಲಿಲ್ಲ. ಆದರೆ ನದಿಯ ದಡದಲ್ಲಿ ನಡೆದ ಪ್ರಕರಣ ಕೊಲ್ಹಾಪುರದ ಮರಾಠರಲ್ಲಿ ಅಸಮಾಧಾನದ ಹೊಗೆ ಹರಡತೊಡಗಿತು. ಸ್ಥಳೀಯ ಬ್ರಾಹ್ಮಣರು ಈ ವಿಷಯವನ್ನು ಬಗೆಹರಿಸಲು ತಮ್ಮ ಸಂವೇದನಾಶೀಲತೆಯನ್ನು ತೋರಿಸಬೇಕಾಗಿತ್ತು. ಆದರೆ ಅದಕ್ಕೆ ವಿರುದ್ಧವಾದದ್ದು ನಡೆದುಹೋಯಿತು. ಹಲವು ಬ್ರಾಹ್ಮಣ ನಾಯಕರಾದ ಪ್ರೊ. ವಿಷ್ಣು ಗೋವಿಂದ ವಿಜಾಪೂರ್‌ಕರ್ ಅವರು ರಾಷ್ಟ್ರೀಯ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯ ಶಿಕ್ಷಣದ ಕಟ್ಟಾ ಬೆಂಬಲಿಗರಾಗಿದ್ದು ಬ್ರಾಹ್ಮಣರನ್ನು ಆಕ್ರಮಣಕಾರಿ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದನ್ನು ನಿಯಂತ್ರಿಸುವ ಬದಲಿಗೆ ಮರಾಠರೊಂದಿಗೆ ಹೋರಾಟಕ್ಕೆ ಉತ್ತೇಜಿಸಿದರು. ತತ್ಪರಿಣಾಮವಾಗಿ, ವೇದೋಕ್ತ ಸಮಸ್ಯೆ ಒಂದು ದೊಡ್ಡ ಸಾಮಾಜಿಕ ವಿವಾದವಾಗಿ

ಸ್ಫೋಟಗೊಂಡಿತು. ಛತ್ರಪತಿಯವರಿಗೆ ಅವಮಾನ ಮಾಡಿದ್ದಕ್ಕೆ ಕ್ಷಮಾಪಣೆ ಕೇಳುವ ಬದಲಿಗೆ ಛತ್ರಪತಿ ಅವರು ಕ್ಷತ್ರಿಯ ವರ್ಣಕ್ಕೆ ಸೇರಿದವರಲ್ಲ ಎಂದು ತೋರಿಸುವುದಕ್ಕಾಗಿ ಸಾಕ್ಷ್ಯಗಳನ್ನು ಹುಟ್ಟು ಹಾಕುವುದರಲ್ಲಿ ತಮ್ಮ ಜಾಣತನವನ್ನು ಕಳೆದರು. ಎಲ್ಲಕ್ಕಿಂತ ಮಿಗಿಲಾಗಿ, ಬದಲಾದ ಕಾಲಮಾನಗಳಲ್ಲಿ ಛತ್ರಪತಿಗಳು ವೇದಗಳ ಹಕ್ಕನ್ನು ಕೇಳುವುದು ಅನ್ಯಾಯ ಮತ್ತು ಅಸೂಕ್ತವೆಂದು ಅವರು ವಾದ ಮಾಡತೊಡಗಿದರು. ಕೊಲ್ಹಾಪುರದ ಆಸ್ಥಾನ ಪ್ರೊ. ವಿಜಪೂರ್‌ಕರ್ ಅವರಿಗೆ ಮಾಸಿಕ ಪತ್ರಿಕೆ 'ಗ್ರಂಥಮಾಲ'ಕ್ಕೆ ಅನುದಾನವನ್ನು ೭ ವರ್ಷಗಳಿಂದ ನೀಡುತ್ತಿತ್ತು. ಅನುದಾನವನ್ನು ೧೯೦೧ರಲ್ಲಿ ಕೊಡುವುದನ್ನು ನಿಲ್ಲಿಸಲಾಯಿತು. ವಿಜಪೂರಕರ್ ಅವರು ಮನಸ್ಸಿನ ಸಮತೋಲನ ಮತ್ತು ಘನತೆ ಕಳೆದುಕೊಂಡು ಮರಾಠ ಮತ್ತು ಛತ್ರಪತಿಯರ ಬಗ್ಗೆ ಕಠೋರವಾಗಿ ದಾಳಿ ಮಾಡತೊಡಗಿದರು.

ಇದೇ ಸಮಯದಲ್ಲಿ ತಿಲಕರು ೧೯೦೧ರ ಆಗಸ್ಟ್‌ನಲ್ಲಿ 'ತಾಯ್ ಮಹಾರಾಜ ಪ್ರಕರಣ'ದ ಸಂದರ್ಭದಲ್ಲಿ ಕೊಲ್ಹಾಪುರಕ್ಕೆ ಭೇಟಿ ನೀಡಿದ್ದರು. ಕೊಲ್ಹಾಪುರದ ಬ್ರಾಹ್ಮಣರು ಅವರಿಗೆ ಒಂದು ಸನ್ಮಾನ ಸಮಾರಂಭದ ಸಭೆಯನ್ನು ಸಂಘಟಿಸಿದರು. ಆ ಸಭೆಯಲ್ಲಿ ಉಲ್ಬಣಗೊಳ್ಳುತ್ತಿದ್ದ ವಿವಾದದ ಬಗ್ಗೆ ಚರ್ಚಿಸಿದರೆಂಬುದು ಸುಸ್ಪಷ್ಟವಾಗಿತ್ತು. ಆದರೆ ತಿಲಕರು ಸ್ಥಳೀಯ ಬ್ರಾಹ್ಮಣರಿಗೆ ಏನು ಸಲಹೆ ನೀಡಿದರೆಂಬುದು ತಿಳಿದು ಬಂದಿಲ್ಲ. ಈ ಬಗ್ಗೆ ಇತಿಹಾಸ ಮೌನವಾಗಿದೆ. ತಿಲಕರು ಬರೋಡದ ವೇದೋಕ್ತ ಪ್ರಕರಣದ ಬಗ್ಗೆ ಮಾಡಿದ ಬಹಿರಂಗ ಟೀಕೆಯನ್ನು ಮತ್ತು ಕೊಲ್ಹಾಪುರ ವೇದೋಕ್ತ ವಿವಾದದ ಬಗ್ಗೆ ತೆಗೆದುಕೊಂಡ ಸಾರ್ವಜನಿಕ ನಿಲುವುಗಳನ್ನು ನೆನಪಿಸಿಕೊಂಡರೆ ಅವರು ಏನು ಹೇಳಿರಬಹುದೆಂಬ ಸೂಕ್ಷ್ಮ ಅರಿವಾಗುತ್ತದೆ. ಆದರೆ ಬಾಂಬೆಯ ಗವರ್ನರರು ಲಂಡನ್ನಿಗೆ ಬರೆದ ಪತ್ರವು ಈ ಪ್ರಕರಣದಲ್ಲಿ ತಿಲಕರ ಪಾತ್ರ ಏನು ಎಂಬುದರ ಬಗ್ಗೆ ಬೆಳಕು ಚೆಲ್ಲುತ್ತದೆ. ಗೌರ್ನರರು ಹೇಳುತ್ತಾರೆ: "ಈ ವೇದೋಕ್ತ ಪ್ರಶ್ನೆಯು ಯಾವುದೇ ಅಡಚಣೆಗಳಿಲ್ಲದೆ ಮುಗಿದುಹೋಗಬಹುದಿತ್ತು. ಆದರೆ ಬಾಲಗಂಗಾಧರ ತಿಲಕರು ಬಾಬಾ ಮಹಾರಾಜರ ದತ್ತು ಸ್ವೀಕಾರ ಪ್ರಕರಣದ ಸಂದರ್ಭದಲ್ಲಿ ಕೊಲ್ಹಾಪುರಕ್ಕೆ ಬಂದಾಗ ಈ ವಿಷಯದಲ್ಲಿ ಅವರು ಹಸ್ತಕ್ಷೇಪ ಮಾಡಿ ಶಾಹು–ವಿರೋಧಿ ಬ್ರಾಹ್ಮಣರನ್ನು ಪ್ರಚೋದಿಸಿದರು ಮತ್ತು ಈ ಬಿಕ್ಕಟ್ಟನ್ನು ಮತ್ತಷ್ಟು ವಿಷಮಗೊಳಿಸಿದರು. ಈ ಕಾರಣದಿಂದ ಬ್ರಾಹ್ಮಣರಿಗೆ ಮತ್ತು ಮರಾಠರಿಗೆ ಮರ್ಯಾದೆಯ ಪ್ರಶ್ನೆಯಾಗಿಬಿಟ್ಟಿತು. ಇಲ್ಲದಿದ್ದರೆ, ಈ ಸಮಸ್ಯೆಯು ಕೊಲ್ಹಾಪುರದೊಳಗೆ ಇರುತ್ತಿತ್ತು".[8]

ಇಷ್ಟೊತ್ತಿಗೆ ಮಹಾರಾಷ್ಟ್ರವು ತಿಲಕರು ಯಥಾಸ್ಥಿತಿವಾದಿಗಳ ನಾಯಕ ಮತ್ತು ಒಬ್ಬ ಧರ್ಮ'ರಕ್ಷಕ'ರೆಂದು ಪರಿಗಣಿಸಲು ಪ್ರಾರಂಭಿಸಿತು. 'ಒಮ್ಮತದ ಮಸೂದೆ'ಯ ಬಗೆಗಿನ ಅವರ ಕಟುಟೀಕೆ, ಕಾಂಗ್ರೆಸ್ ವೇದಿಕೆಯಿಂದ 'ಸಾಮಾಜಿಕ ಪರಿಷತ್ತ'ನ್ನು ಹೊರದಬ್ಬುವುದಕ್ಕೆ ಮಾಡಿದ ಅವರ ಕೈವಾಡ ಮತ್ತು ಸಾಮಾಜಿಕ ಸುಧಾರಣೆಗಳ ಬಗೆಗಿನ ಅವರ ವಿರೋಧಿ ಭಾವನೆಗಳು ಅವರ ಈ ಪ್ರತಿಮೆಯನ್ನು (ಗರಿಮೆ) ಸೃಷ್ಟಿಸಿದೆ. ಈ ಹಿನ್ನೆಲೆಯಲ್ಲಿ ಕೊಲ್ಹಾಪುರದ ಮಡಿವಂತಿಕೆಯ ಕಟ್ಟಾ ಬ್ರಾಹ್ಮಣರಿಗೆ ನೀಡಿದ ತಿಲಕರ ಪಕ್ಷಪಾತದ ಬೆಂಬಲವು ಈ ಸಂದರ್ಭದಲ್ಲಿ ಅರ್ಥವಾಗುತ್ತದೆ. ತಾಯ್ ಮಹಾರಾಜರ ಪ್ರಕರಣವು ವೇದೋಕ್ತ ಭುಗಿಲು ಮತ್ತೆ ಹತ್ತಿಕೊಂಡು ಉರಿಯಲು ನಿಜವಾಗಿ ತುಪ್ಪ ಸುರಿಯಿತು ಮತ್ತು ಮಹಾರಾಷ್ಟ್ರದ ಸಮಸ್ತ ಕಟ್ಟಾ ಮಡಿವಂತಿಕೆಯ ಬ್ರಾಹ್ಮಣರ ಪರವಾಗಿ ಛತ್ರಪತಿಯ ಮೇಲೆ ವಿಷಪೂರಿತ ದಾಳಿಗಳನ್ನು ಮಾಡಲು ತಿಲಕರು ಒಪ್ಪಿಕೊಂಡರು. ಆ ಕಾನೂನಿನ ಜಗಳದಲ್ಲಿ ಶಾಹು ಅವರು ತಿಲಕರನ್ನು ವಿರೋಧಿಸುವ ನಿಲುವನ್ನು ತೆಗೆದುಕೊಂಡರು. ಈ ನಿಲುವು ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸಿತು. ಕೊಲ್ಹಾಪುರದಲ್ಲಿ ವೇದೋಕ್ತ ವಿವಾದದ ಸಂದರ್ಭದಲ್ಲಿ

ಹಲವಾರು ಮಿಂಚಿನಂತಹ ಸಂಘರ್ಷಗಳು ಸ್ಫೋಟಗೊಂಡವು; ನಿಷ್ಠುರವಾದಿ ನೇರ ನುಡಿಯ ಬ್ರಾಹ್ಮಣ ಪುರೋಹಿತ ನಾರಾಯಣ ಶಾಸ್ತ್ರೀ ಸೇವೆಕಾರಿ ಅವರು ಶ್ರಾವಣ ಮಾಸದಲ್ಲಿ ಮರಾಠರಿಗೆ ವೇದೋಕ್ತ ಆಚರಣೆಗಳನ್ನು ನಡೆಸಿಕೊಡುತ್ತಿದ್ದ ಅವರಿಗೆ ಬ್ರಾಹ್ಮಣರು ಬಹಿಷ್ಕಾರ ಹಾಕಿದರು; ಶಾಹು ಅವರ ಸಾಕುತಾಯಿ ಆನಂದಿಬಾಯಿ ರಾಣಿ ಸಾಹೇಬ ಅವರ ಚಿತೆಗೆ ಬೆಂಕಿಹಚ್ಚುವಾಗ ವೇದೋಕ್ತ ಮಂತ್ರಗಳನ್ನು ಪಠಿಸಲು ಬ್ರಾಹ್ಮಣರು ನಿರಾಕರಿಸಿದರು. 'ಈ ಶೂದ್ರ ಮಹಿಳೆಗೆ ವೇದೋಕ್ತ ಮಂತ್ರಗಳನ್ನು ಹೇಳುವವರು ಯಾರು?' ಎಂಬ ಅವರ ತಿರಸ್ಕಾರದ ನುಡಿಗಳು; ಅದೇ ದಿನ ಅದೇ ರಾತ್ರಿ ಛತ್ರಪತಿಯ ಹಳೆ ಅರಮನೆಯಲ್ಲಿ ಹತ್ತಿಕೊಂಡ ಬೆಂಕಿ........... ಇವು ಕೆಲವು ನಿದರ್ಶನಗಳು. ಕೊಲ್ಹಾಪುರ ಆಸ್ಥಾನದ ಮುಖ್ಯ ಪುರೋಹಿತ ಅಪ್ಪ ಸಾಹೇಬ ರಾಜೋಪಾಧ್ಯೆ ಅವರು ದಿನನಿತ್ಯದ ಧಾರ್ಮಿಕ ಆಚರಣೆಗಳನ್ನು ಅರಮನೆಯಲ್ಲಿ ವೇದೋಕ್ತದಿಂದ ಆಚರಿಸಲು ನಿರಾಕರಿಸಿದ್ದು ಆಘಾತಕರವಾಗಿತ್ತು. ಬ್ರಾಹ್ಮಣರ ಒತ್ತಾಯದ ಮೇರೆಗೆ ರಾಜೋಪಾಧ್ಯೆ ಅವರು ನಿರ್ಣಯ ಕೈಗೊಂಡಿದ್ದು ಆತ್ಮಹತ್ಯೆಕಾರಿ ಘಟನೆಯಾಗಿದ್ದು ಮಾತ್ರವಲ್ಲದೆ ಅವು ಭುಗಿಲಿಗೆ ತುಪ್ಪ ಸುರಿದಂತಾಯಿತು. ವೇದೋಕ್ತದ ಭುಗಿಲು ತೀವ್ರವಾಗಿ ಹರಡುತ್ತಿರುವಾಗ, ಕರವೀರಪೀಠ ಬ್ರಾಹ್ಮಣನಾಲ್ಕರ ಸ್ವಾಮಿಯ ಶಂಕರಾಚಾರ್ಯರು ಛತ್ರಪತಿ ವಿರುದ್ಧ ನಿಂತರು ಮತ್ತು ಕ್ಷತ್ರಿಯತ್ವವನ್ನು ಪ್ರಶ್ನಿಸಿದರು.

ಶಾಹು ಕ್ರಮ ಕೈಗೊಳ್ಳಲು ಒಪ್ಪಿದರು. ರಾಜೋಪಾಧ್ಯೆ ಅವರಿಗೆ ನೀಡಿದ ಎಚ್ಚರಿಕೆಗಳನ್ನು ಅವರು ಕಿವಿಗೆ ಹಾಕಿಕೊಳ್ಳಲಿಲ್ಲ. ಅಂತಿಮವಾಗಿ, ರಾಜಕುಟುಂಬಕ್ಕೆ ಸಲ್ಲಿಸುತ್ತಿದ್ದ ಧಾರ್ಮಿಕ ಸೇವೆಗಳಿಗಾಗಿ ವಾರ್ಷಿಕ ೩೦,೦೦೦ ರೂ.ಗಳ ಆದಾಯ ನೀಡುವ ಆಸ್ತಿಯನ್ನು ಪುರೋಹಿತರಿಂದ ಶಾಹು ರಾಜರು ವಶಪಡಿಸಿಕೊಂಡರು. ಶಂಕರಾಚಾರ್ಯರ ಮಠದ ೫೦,೦೦೦ ರೂ. ಗಳ ವಾರ್ಷಿಕ ಆದಾಯವನ್ನು ವಶಪಡಿಸಿಕೊಳ್ಳುವ ಮೂಲಕ ಶಾಹು ಮಹಾರಾಜರು ಬ್ರಾಹ್ಮಣನಾಲ್ಕರ ಸ್ವಾಮಿಗೆ ಹೊಡೆತ ನೀಡಿದರು. ಶಾಹು ಅವರನ್ನು ಅನುಸರಿಸಲು ನಿರಾಕರಿಸಿದ ನೂರಾರು ಬ್ರಾಹ್ಮಣರ ಅನುದಾನ ಮತ್ತು ಇನಾಮುಗಳನ್ನು ವಶಪಡಿಸಿಕೊಂಡರು. ಸಂಸ್ಥಾನದ ಆಡಳಿತದಲ್ಲಿ ಶೇಕಡ ೫೦ರಷ್ಟು ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಮೀಸಲಿಟ್ಟ ಅಧಿಸೂಚನೆಯನ್ನು ಹೊರಡಿಸಿದರು. ಶಾಹು ಅವರ ಈ ಕ್ರಮಗಳು ಮಹಾರಾಷ್ಟ್ರದ ಇಡೀ ಬ್ರಾಹ್ಮಣ ಸಮುದಾಯವನ್ನು ಕುಪಿತಗೊಳಿಸಿತು. ವೇದೋಕ್ತ ಪ್ರಶ್ನೆ ಈಗ ಭಯಂಕರ ಯುದ್ಧಭೂಮಿಯಾಗಿಬಿಟ್ಟಿತು. ಪುಣೆ, ವೈ ಮತ್ತು ಬೆಳಗಾವಿಯ ಬ್ರಾಹ್ಮಣರು ಕೊಲ್ಹಾಪುರದ ಬ್ರಾಹ್ಮಣರ ರಕ್ಷಣೆಗೆ ಧಾವಿಸಿದರು. ಬ್ರಾಹ್ಮಣ ದಿನಪತ್ರಿಕೆಗಳು ಶಾಹು ಅವರ ಬಗ್ಗೆ ವಿಷಕಾರತೊಡಗಿದವು. ಈ ಗೊಂದಲದ ಹೋರಾಟದಲ್ಲಿ ಮಡಿವಂತಿಕೆಯ ರಕ್ಷಕ ಮತ್ತು ನಾಯಕ ಮತ್ಯಾರೂ ಅಲ್ಲ, ತಿಲಕರಾಗಿದ್ದರು.

## ವೇದೋಕ್ತದ ಬಗ್ಗೆ ತಿಲಕರ ನಿಲುವು

ವೇದೋಕ್ತದ ಸಮಸ್ಯೆಯ ಬಗ್ಗೆ ತಿಲಕರ ಅಭಿಪ್ರಾಯಗಳು ಏನಾಗಿದ್ದವು? ೧೯೦೧ರ ಅಕ್ಟೋಬರ್‌ನಲ್ಲಿ ಅವರು 'ಕೇಸರಿ'ಯಲ್ಲಿ "ವೇದೋಕ್ತಕ್ಕಾಗಿ ಹುಚ್ಚು ಸಾಹಸ" ಎಂಬ ಹೆಸರಿನಲ್ಲಿ ಎರಡು ಸಂಪಾದಕೀಯಗಳನ್ನು ಬರೆದರು. ಅವುಗಳಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿದರು. ಅವರ ಮುಖ್ಯಾಂಶಗಳು ಈ ರೀತಿಯಿವೆ:

(೧) ಇಂಗ್ಲಿಷ್ ವಿದ್ಯಾಭ್ಯಾಸದ ಮೂಲಕ 'ಸಂಸ್ಕೃತಿ'ಯನ್ನು ಗಳಿಸಿಕೊಂಡಿದ್ದ ಮರಾಠರ ತಲೆಗಳಲ್ಲಿ 'ವೇದೋಕ್ತ' ಎಂಬ ಹುಚ್ಚು ಸಾಹಸ ಹೊಕ್ಕಿದೆ.

(೨) 'ಧರ್ಮಶಾಸ್ತ್ರ'ಗಳ ಪ್ರಸಿದ್ಧ ವಿದ್ವಾಂಸರು ನಿಜವಾದ ಕ್ಷತ್ರಿಯ, ವೈಶ್ಯ ಎಂಬ ಜಾತಿಗಳು ನಶಿಸಿಹೋಗಿವೆ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ.

(೩) ಮಹಾಶಯರಾದ ಶಿವಾಜಿ ಹಿಂದೂ ಧರ್ಮ ಮತ್ತು ಹಿಂದೂ ರಾಷ್ಟ್ರದ ಬದುಕುಳಿಯುವಿಕೆಯನ್ನು ಖಾತ್ರಿಗೊಳಿಸುವ ದೊಡ್ಡ ಕೆಲಸ ನೆರವೇರಿಸಿದ್ದಾರೆ. ಆಭಾರಿಯಾದ ಮಹಾರಾಷ್ಟ್ರವು ಯಾವ ರೀತಿಯಲ್ಲಿ ಅವರಿಗೆ ಉನ್ನತ ಹುದ್ದೆ, ಉನ್ನತ ಗೌರವ ಮತ್ತು ಉನ್ನತ ಅಧಿಕಾರ ನೀಡಬೇಕೆಂದು ಪರಿಗಣಿಸಿತು ಮತ್ತು ಗಂಗಾಭಟ್ಟರ ಉಸ್ತುವಾರಿ ಮತ್ತು ಸಲಹೆಯ ಮೇರೆಗೆ ಎಲ್ಲಾ ಜಾತಿಗಳ ರಾಜನೀತಿಜ್ಞರ ಮತ್ತು ಸಾಹಸವಂತ ಜನರ ಸಮ್ಮತಿಯೊಂದಿಗೆ, ಎಲ್ಲಕ್ಕಿಂತ ಮಿಗಿಲಾಗಿ ಇಡೀ ಮಹಾರಾಷ್ಟ್ರದ ಸಾಮೂಹಿಕ ಇಚ್ಛೆಯೊಂದಿಗೆ ಶಾಸ್ತ್ರೋಕ್ತವಾಗಿ ವೈದಿಕ ವಿಧಾನದಲ್ಲಿ ಅವರಿಗೆ ಪಟ್ಟಾಭಿಷೇಕ ಮಾಡಲಾಯಿತು.

(೪) ಆ ಕಾಲದಲ್ಲಿ ಜನರು ಭೋಸಲೆ ವಂಶದ ಬಗ್ಗೆ ಶ್ರದ್ಧೆಯಿಟ್ಟಿದ್ದರು. ಆದ್ದರಿಂದ ಹಿಂದು ಧರ್ಮವನ್ನು ಕಾಪಾಡಿದ ವ್ಯಕ್ತಿಗೆ ಧರ್ಮಗ್ರಂಥಗಳ ವಿಧಿ ಮತ್ತು ಆಚರಣೆಗಳಂತೆಯೇ ನ್ಯಾಯಸಮ್ಮತವೆಂದು ತೋರುವುದಕ್ಕಿಂತ ಹೆಚ್ಚಿಗೆ ಎಲ್ಲಾ ಸೌಕರ್ಯಗಳನ್ನು ಮನಃಪೂರ್ವಕವಾಗಿ ಜನರು ನೀಡಿದರು. ಮರಾಠರು ಇಂದು ಆ ಹಕ್ಕನ್ನು ಕೇಳುವಂತಿಲ್ಲ.

(೫) ಈ ಪಟ್ಟಾಭಿಷೇಕೋತ್ಸವವನ್ನು ವೈದಿಕ ಮಂತ್ರ ಘೋಷಣೆಗಳಿಂದ ಒಬ್ಬ ಕ್ಷತ್ರಿಯನಿಗೆ ಸೂಕ್ತವಾದ ಶಾಸ್ತ್ರೀಯ ವಿಧಾನದಲ್ಲಿ ನಡೆಸಿದರೂ ಭೋಸಲೆ ಕುಲವನ್ನು ವೇದೋಕ್ತ ಆಚರಣೆಗಳಿಗೆ ಅವಕಾಶ ನೀಡಲಾಗಿದೆಯೆಂಬುದಕ್ಕೆ ಪುರಾವೆಗಳೇ ಇಲ್ಲ. ಆ ಕಾಲಕ್ಕೆ ವಿರುದ್ಧವಾಗಿ ಭೋಸಲೆಯವರಿಗೆ ಗೃಹಕೃತ್ಯದ ಆಚರಣೆಗಳಿಗೆ 'ಪುರಾಣೋಕ್ತ' ಪದ್ಧತಿಯನ್ನು ನಿರ್ಧರಿಸಲಾಗಿತ್ತು. ಇಂದಿನ ಕೆಲವು ಕ್ಷುಲ್ಲಕ ಮರಾಠರು ಶಿವಾಜಿಯ ಜೀವಿತ ಕಾಲದಲ್ಲಿ ಮಾಡಿದ ನಿರ್ಧಾರಗಳನ್ನು ಉಲ್ಲಂಘಿಸುತ್ತಿದ್ದಾರೆ ಮತ್ತು ಮೂರ್ಖರಾಗಿ ವೇದೋಕ್ತ ಚರ್ಚೆಯ ಬೆಂಕಿಗೆ ತುಪ್ಪ ಸುರಿಯುತ್ತಿದ್ದಾರೆ.

(೬) ಭೋಸಲೆಯವರ ಸಾಧನೆಗಳು, ಜಾತಿಯ ಸ್ಥಾನಮಾನ ಮತ್ತು ಗೌರವಗಳಲ್ಲಿ ಕೆಳಗಿರುವ ಮರಾಠರ ಕುಲದವರು ವೇದೋಕ್ತ ಹಕ್ಕಿನ ಬಗ್ಗೆ ಒತ್ತಾಯಿಸುವುದು ನ್ಯಾಯ ಮತ್ತು ಜಾತಿಯ ಪರಂಪರೆಗಳಿಗೆ ಅನುಗುಣವಾಗಿಲ್ಲ.

(೭) ವೇದೋಕ್ತ ಆಚರಣೆಗಳು ಮರಾಠ ಮತ್ತು ಬ್ರಾಹ್ಮಣರು ಒಂದೇ ಜಾತಿಗೆ ಸೇರಿದವರೆಂಬ ಭಾವನೆಗೆ ಯಾವುದೇ ಆಧಾರ-ಬುನಾದಿಯಿಲ್ಲ. ಬ್ರಾಹ್ಮಣ ಮಹಿಳೆಯರು ವೇದೋಕ್ತ ಮಂತ್ರಗಳ ಹಕ್ಕನ್ನು ಹೊಂದದಿದ್ದರೂ ಬ್ರಾಹ್ಮಣ ಮಹಿಳೆಯರು ಬ್ರಾಹ್ಮಣರಾಗಿ ಮತ್ತು ಮರಾಠರು ವೇದೋಕ್ತ ಮಂತ್ರಗಳನ್ನು ಪಠಿಸಿದರೂ ಮರಾಠರಾಗಿಯೇ ಉಳಿಯುವರೆಂಬುದನ್ನು ನೆನಪುಮಾಡಿಕೊಳ್ಳಿ.

(೮) ಮಹಾರಾಜರು ಅಧಿಕಾರವನ್ನು ಸಮಾಜದ ಶಾಂತಿ ಮತ್ತು ಸ್ಥಿರತೆಯನ್ನು ಹಾಳುಮಾಡುವುದಕ್ಕೆ ದುರುಪಯೋಗಪಡಿಸಿಕೊಳ್ಳಬಾರದು ಮತ್ತು ಒಂದು ಸಂಸ್ಥಾನದ ಮಹಾರಾಜರು ಈ ರೀತಿಯಲ್ಲಿ ಅಧಿಕಾರವನ್ನು ದುರುಪಯೋಗಮಾಡಿಕೊಂಡರೆ ಸಾರ್ವಭೌಮತ್ವದ ಸರಕಾರವು

> ಇದನ್ನು ಗಮನಿಸುವುದು. ಸಂಸ್ಥಾನದ ಮುಖ್ಯಸ್ಥನ ಉತ್ತೇಜನದಿಂದ ಸಂಸ್ಥಾನದಲ್ಲಿ ಭಿನ್ನ-ಭಿನ್ನ ಜಾತಿಗಳ ನಡುವಣ ಸಂಘರ್ಷಗಳು ತುತ್ತ ತುದಿಗೆ ಕೆರಳದಂತೆ ಖಾತರಿಗೊಳಿಸುವುದು ಬ್ರಿಟಿಷ್ ಸರಕಾರದ ಕರ್ತವ್ಯ.[9]

ಈ ವಿಷಯದ ಬಗ್ಗೆ ತನ್ನ ವಿಷಯಗಳನ್ನು ವ್ಯಕ್ತಪಡಿಸುವಾಗ ತಿಲಕರು ಜಾಗರೂಕರಾಗಿದ್ದರೂ ವೇದೋಕ್ತದ ಬಗ್ಗೆ ಅವರ ನಿಲುವನ್ನು ಹೀಗೆ ಸ್ಪಷ್ಟವಾಗಿ ತರ್ಕಿಸಬಹುದು: ಪ್ರಸ್ತುತ ಯುಗದಲ್ಲಿ ಬ್ರಾಹ್ಮಣ ಮತ್ತು ಶೂದ್ರ ಎಂಬ ಎರಡು ವರ್ಣಗಳಿವೆ. ಮಹಾಶಯರಾದ ಶಿವಾಜಿ ಸಹ ಶೂದ್ರರೆ, ಆದರೆ ಮಹಾರಾಷ್ಟ್ರದ ಸಮಕಾಲೀನ ಮುಖ್ಯ ಜನರು (ಅಂದರೆ ಬ್ರಾಹ್ಮಣರು) ಅವರ ಕೆಲಸದಿಂದ ಸಂತೋಷಗೊಂಡರು ಮತ್ತು ಅಪವಾದವಾಗಿ ಶಿವಾಜಿಗೆ ಕ್ಷತ್ರಿಯತ್ವವನ್ನು ನೀಡಿ ಮತ್ತು ಅವರ ಪಟ್ಟಾಭಿಷೇಕವನ್ನು ಗಂಗಾಭಟ್ಟರ ಕೈಯಲ್ಲಿ ವೇದೋಕ್ತವಾಗಿ ನಡೆಸಿ ಅವರಿಗೆ ಉಪಕಾರ ಮಾಡಿದರು. ಆದರೆ ಆ ಸಮಯದಲ್ಲಿ ಬ್ರಾಹ್ಮಣ ಆಡಳಿತ ನಡೆಸಿದರು ಮತ್ತು ಭೋಸಲೆಯವರು ಧಾರ್ಮಿಕ ಆಚರಣೆಗಳಿಗಾಗಿ ಕೇವಲ ಪುರಾಣದ ಮಂತ್ರಗಳ ಹಕ್ಕನ್ನು ಹೊಂದಿದ್ದಾರೆ ಎಂದು ನಿರ್ಧರಿಸಿದರು. ಆ ಪರಂಪರೆ ಭೋಸಲೆ ಕುಟುಂಬದಲ್ಲಿ ಮುಂದುವರಿಯಿತು. ಆ ಪರಂಪರೆಯನ್ನು ಮಾತ್ರವೇ ಅನುಸರಿಸಬೇಕು. ಛತ್ರಪತಿ ಕುಲವನ್ನು ಬಿಟ್ಟು ಬೇರೆ ಮರಾಠರು ಕ್ಷತ್ರಿಯರಲ್ಲ. ಆದ್ದರಿಂದ ಅವರಿಗೆ ವೇದೋಕ್ತದ ಹಕ್ಕಿಲ್ಲ.

ಭೋಸಲೆ ಕುಲಕ್ಕೆ ಮಾತ್ರ ಪುರಾಣೋಕ್ತ ಪರಂಪರೆಯ ಆಚರಣೆಗಳನ್ನು ನಿರ್ಧರಿಸಲಾಗಿದೆ ಎಂದು ತಿಲಕರು ಹೇಳುವುದಕ್ಕೆ ಯಾವ ಆಧಾರಗಳೂ ಇಲ್ಲ. ಭೋಸಲೆಯವರು ವೇದೋಕ್ತ ಶೈಲಿಯಲ್ಲಿ ಆಚರಣೆಗಳನ್ನು ಆಚರಿಸಿದ್ದಾರೆಂಬುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದಿರುವುದರಿಂದಲೇ ಭೋಸಲೆಯವರು ಪುರಾಣೋಕ್ತ ಆಚರಣೆಗಳ ಪರಂಪರೆಯನ್ನು ಹೊಂದಿದ್ದರೆಂದು ವಾದಿಸುವ ತರ್ಕವೇ ನೀಚತನದ್ದು. ಇದಕ್ಕೆ ವಿರುದ್ಧವಾಗಿ, ಬಾಬಾ ಸಾಹೇಬ ಛತ್ರಪತಿಯವರ ಜೀವನಾವಧಿಯಲ್ಲಿ ವೇದೋಕ್ತ ಆಚರಣೆಗಳ ಬದಲಿಗೆ ಪುರಾಣೋಕ್ತ ಶೈಲಿ ರೂಢಿಗೆ ಬಂದಾಗ ಛತ್ರಪತಿಯ ಮನೆಯಲ್ಲಿ ೧೮೬೦ರವರೆಗೆ ವೇದೋಕ್ತ ಆಚರಣೆಗಳು ರೂಢಿಯಲ್ಲಿದ್ದವು. ಮತ್ಯಾರು ಅಲ್ಲ, ತಿಲಕರ ಬಿರುಸಾಗಿ ಹೇಳುವ ಸಹೋದ್ಯೋಗಿ ಪ್ರೊ. ವಿಜಪೂರ್‌ಕರ್ ಅವರು ವೇದೋಕ್ತದ ಬಿರುಗಾಳಿಯ ಸಮಯದಲ್ಲಿ ಇದನ್ನೇ ದೃಢೀಕರಿಸಿದ್ದಾರೆ.[10] ಬ್ರಾಹ್ಮಣರು ಛತ್ರಪತಿಯನ್ನು 'ಬೆದರಿಸಿದರು'. ಪುರಾಣೋಕ್ತದಿಂದ ವೇದೋಕ್ತವನ್ನು ಬದಲಾಯಿಸಿದರು. ಜೊತೆಗೆ, ಸತಾರ ಛತ್ರಪತಿಯ ಕುಟುಂಬದಲ್ಲಿ ಆಚರಿಸಿದ ವೇದೋಕ್ತ ಆಚರಣೆಗಳನ್ನು ಬಿಟ್ಟುಬಿಡುವುದಕ್ಕೆ ನಾನಾಫಡ್ನವೀಸ್‌ರು ಉಪಾಯವಾಗಿ ಸಂಚುಹೂಡಿದ್ದನ್ನು ದಾಖಲೆಗಳು ತೋರಿಸುತ್ತವೆ.[11] ಶಿವಾಜಿ ಮಹಾಶಯರ ಪಟ್ಟಾಭಿಷೇಕದ ನಂತರವೂ ಕೂಡ ಭೋಸಲೆಯವರ ಕುಟುಂಬದಲ್ಲಿ ವೇದೋಕ್ತ ಆಚರಣೆಗಳನ್ನು ಪರಿಪಾಲಿಸುವ ಪರಂಪರೆ ಬಹಳ ಕಾಲದವರೆಗೆ ಇತ್ತು ಎಂಬುದನ್ನು ಇದು ಸ್ಪಷ್ಟವಾಗಿ ತೋರಿಸುತ್ತದೆ. ಬ್ರಾಹ್ಮಣರು ಮೋಸದಿಂದ ಇದನ್ನು ನಿಲ್ಲಿಸಿಬಿಟ್ಟರು. ಛತ್ರಪತಿ ಭೋಸಲೆ ಅವರನ್ನು ಬಿಟ್ಟರೆ ಬೇರೆ ಯಾವ ಮರಾಠರಿಗೆ ವೇದೋಕ್ತ ಆಚರಣೆಯ ಹಕ್ಕಿಲ್ಲ ಎಂದು ಘೋಷಿಸುವ ಮೂಲಕ ತಿಲಕರು ಇಡೀ ಮರಾಠ ಸಮುದಾಯದ ಘನತೆ ಮತ್ತು ಆತ್ಮ-ಗೌರವಕ್ಕೆ ಧಕ್ಕೆ (ನೋವು) ತಂದಿದ್ದಾರೆ. ಇವರಲ್ಲಿ ಕಾಗಲ್ಲಿನ ಶಾಹು ಅವರ ಸಹೋದರ ಬಾಪು ಸಾಹೇಬ ಘಾಟ್ಗೆ, ಬರೋಡಾದ ಮಹಾರಾಜ ಸಯ್ಯಾಜಿರಾವ್ ಗಾಯಕವಾಡರು ಸೇರಿದ್ದಾರೆ. ಶಾಹು ಅವರು ಬಹಳ ಚಿಂತಿತರಾದರು. ಆದ್ದರಿಂದಲೇ ಅವರು ವೇದೋಕ್ತದ

ಹಕ್ಕುಗಳನ್ನು ತನ್ನ ರಾಜಕುಟುಂಬಕ್ಕೆ ಒತ್ತಾಯಿಸುತ್ತಾ ಮತ್ತು ಇಡೀ ಮರಾಠ ಸಮುದಾಯಕ್ಕೆ ಈ ಹಕ್ಕುಗಳನ್ನು ವಿಸ್ತರಿಸಬೇಕೆಂಬ ಬೇಡಿಕೆಯನ್ನು ವಿಸ್ತರಿಸಿದರು. ಭೋಸಲೆಯವರು ಮಾತ್ರ ಕ್ಷತ್ರಿಯರು ಮತ್ತು ಉಳಿದ ಮರಾಠ ಸಮುದಾಯದವರು ಶೂದ್ರರೆಂದು ಹಣೆಪಟ್ಟಿ ಹಚ್ಚುವುದು ಸಾಮಾಜಿಕ ಅನ್ಯಾಯವೆಂದು ಅವರು ಬಗೆದರು. ತಿಲಕರ ಮೇಲಿನ ಹೇಳಿಕೆ ಸಂಖ್ಯೆ ೭ ಮುಖ್ಯ ಸಮಸ್ಯೆಯನ್ನು ಬಿಟ್ಟುಬಿಡುವುದು ಮತ್ತು ಚರ್ಚೆಯನ್ನು ದಾರಿತಪ್ಪಿಸುವುದು ತಿಲಕರ ಉದ್ದೇಶವಾಗಿತ್ತು. ಮರಾಠರು ವೇದೋಕ್ತವನ್ನು ಒತ್ತಾಯಿಸಿದ್ದು ಅವರು ಬ್ರಾಹ್ಮಣರಾಗುವುದಕ್ಕಲ್ಲ. ಅವರು ಕ್ಷತ್ರಿಯರಾಗಿ ತಮ್ಮ ಹಕ್ಕುಗಳನ್ನು ಒತ್ತಾಯಿಸಿದ್ದರು. ಹೇಳಿಕೆ ಸಂಖ್ಯೆ ೮ರಲ್ಲಿ ತಿಲಕರು ಶಾಹು ಮಹಾರಾಜರು ಅಧಿಕಾರವನ್ನು ದುರುಪಯೋಗಪಡಿಸಿಕೊಂಡಲ್ಲಿ ಸಾರ್ವಭೌಮ ಬ್ರಿಟಿಷ್ ಸರಕಾರ ಕ್ರಮ ಕೈಗೊಳ್ಳಬೇಕೆಂಬ ಬೆದರಿಕೆಯನ್ನು ತಿಲಕರು ಹಾಕಿದ್ದರು.

ಈ ಮೊದಲು ತಿಲಕರು ಹಿಂದು ಎಂದರೆ ಯಾರು ವೇದಗಳಲ್ಲಿ ನಂಬಿಕೆ, ಶ್ರದ್ಧೆ ಇಟ್ಟಿದ್ದಾರೊ ಅವರು ಹಿಂದು ಎಂದು ನಿರ್ವಚಿಸಿದ್ದರು. ಅದೇ ತಿಲಕರು ಮರಾಠರಿಗೆ ವೇದಗಳ ಮಂತ್ರಗಳ ಹಕ್ಕಿಲ್ಲ ಎಂದು ಹೇಳುತ್ತಾರೆ. ಕ್ರಿಶ್ಚಿಯಾನಿಟಿ, ಇಸ್ಲಾಂ ಅಥವಾ ಜಗತ್ತಿನ ಇತರೆ ಯಾವುದೇ ಧರ್ಮಗಳ ಅನುಯಾಯಿಗಳು ತಮ್ಮ ಧರ್ಮದ ಪವಿತ್ರ ಗ್ರಂಥಗಳನ್ನು ಓದುವುದನ್ನು ನಿಷೇಧಿಸಿಲ್ಲ. ಅದಕ್ಕೆ ವಿರುದ್ಧವಾಗಿ ತಮ್ಮ ಪವಿತ್ರ ಗ್ರಂಥಗಳನ್ನು ಓದಲು ಇತರೆ ಧರ್ಮಗಳ ಅನುಯಾಯಿಗಳನ್ನು ತರಲು ನಿರಂತರವಾಗಿ ಅವರು ಪ್ರಯತ್ನ ಮಾಡುತ್ತಾರೆ ಮತ್ತು ಅವರು ತಮ್ಮ ತಾತ್ವಿಕತೆಯನ್ನು ಒಪ್ಪಿದರೆ ಆ ಧರ್ಮವನ್ನು ಆಲಂಗಿಸಿಕೊಳ್ಳುವರು. ಈ ಉದ್ದೇಶದಿಂದಲೇ ಅವರು ತಮ್ಮ ಬೈಬಲ್ಲನ್ನು ಎಲ್ಲ ಭಾಷೆಗಳಿಗೆ ಅನುವಾದಿಸಿ, ಅವು ವಿಶ್ವದ ಮೂಲೆ-ಮೂಲೆಗೂ ಮುಟ್ಟುವಂತೆ ಮಾಡಲು ಪ್ರಯತ್ನಿಸಿದ್ದಾರೆ. ಹಿಂದುಗಳು ಮಾತ್ರ ಅಪವಾದವಾಗಿದ್ದಾರೆ. ಬ್ರಾಹ್ಮಣರು ಹಿಂದು ಧರ್ಮದ ಸರಂಕ್ಷಕರು, ಹಿಂದುಗಳ ಮಹತ್ತರವಾದ ಧಾರ್ಮಿಕ ಗ್ರಂಥವಾದ ವೇದಗಳ ಏಕಸ್ವಾಮ್ಯತೆಯನ್ನು ಪಡೆದಿದ್ದಾರೆ. ದುರಾದೃಷ್ಟವಶಾತ್ ತಿಲಕರು ಈ ಮಡಿವಂತಿಕೆಗೆ ನಾಯಕರಾಗಿದ್ದಾರೆ.

ಮಹಾರಾಷ್ಟ್ರದಲ್ಲಿ ಹಲವಾರು ದಶಕಗಳವರೆಗೆ ಸಾರ್ವಜನಿಕ ಜೀವನದಲ್ಲಿ ಪ್ರಾಬಲ್ಯ ಪಡೆದಿದ್ದ ಬ್ರಾಹ್ಮಣ-ಬ್ರಾಹ್ಮಣೇತರ ಸಂಘರ್ಷದ ಬೀಜಗಳನ್ನು ಈ ಅವಧಿಯಲ್ಲಿ ಬಿತ್ತಲಾಯಿತು ಮತ್ತು ತಿಲಕರು ಸ್ವಲ್ಪ ವಿಶಾಲ ಮನೋಭಾವವನ್ನು ತೋರಿಸಿದ್ದರೆ ಮತ್ತು ಮೃದು ಭಾವನೆಯನ್ನು ತಾಳಿದ್ದರೆ ಈ ವಿವಾದವು ಅಂಥ ವಿಕೋಪಕ್ಕೆ ಹೋಗುತ್ತಿರಲಿಲ್ಲವೆಂದು ಈ ಅವಧಿಯ ಹಲವು ಸಂಶೋಧಕ ವಿದ್ವಾಂಸರು ಹೇಳುತ್ತಾರೆ. ಇಷ್ಟಾದರೂ ಕೂಡ, ವೇದೋಕ್ತದ ಪ್ರಶ್ನೆಯ ಬಗೆಗಿನ ತಿಲಕರ ವಿವಾದಾತ್ಮಕ ನಿಲುವು ೧೮೯೦ರ ದಶಕದ ಅವರ ಸಾರ್ವಜನಿಕ ಜೀವನದಲ್ಲಿ ಅವರ ನಿಲುವಿನಲ್ಲಿ ಸಾಮರಸ್ಯವಿತ್ತೆಂಬುದನ್ನು ಗಮನಿಸಬೇಕು. ಅವರ ನಿಲುವು ಸಾಮಾಜಿಕ ನ್ಯಾಯದ ಬೇಡಿಕೆಗಳ ವಿರುದ್ಧವಿತ್ತು. ಹಾಗಾದರೆ ವಾಸ್ತವದಲ್ಲಿ ಸಾಮಾಜಿಕ ಸುಧಾರಕರಾದ ರಾನಡೆ ಮತ್ತು ಆಗರ್‌ಕರರನ್ನು ವಿರೋಧಿಸಿದ ಯಥಾಸ್ಥಿತಿಯ ನಾಯಕರಾಗಿ ತಿಲಕರು ಮೂಡಿಬಂದರು. ಅವರ ಈ ಪ್ರತಿಮೆಯು ಸ್ಪಷ್ಟವಾಗಿ ಸರಪಣಿಗಳಿಂದ ಅವರನ್ನು ಕಟ್ಟಿಹಾಕಿತು. ಮನಸ್ಸಿನಲ್ಲಿ ಮರಾಠರ ಕ್ಷತ್ರಿಯತ್ವವನ್ನು ಒಪ್ಪಿಕೊಂಡಿದ್ದರೆ ಸಾಮಾಜಿಕ ಇತಿಹಾಸ ಮಾತ್ರವಲ್ಲ ಮಹಾರಾಷ್ಟ್ರದ ಮುಂದಿನ ನಲವತ್ತು ವರ್ಷಗಳ ರಾಜಕೀಯ ಇತಿಹಾಸವೇ ಭಿನ್ನವಾಗಿ ಕಾಣುತ್ತಿತ್ತು. ಅವರು ಖಂಡಿತವಾಗಿ ಆ ಬಲವನ್ನು ಹೊಂದಿದ್ದರು. ಅಂಥ ಕ್ರಾಂತಿಕಾರಿ ನಿಲುವನ್ನು ತಾನು ಹೊಂದಿದ್ದರೆ ಖಂಡಿತವಾಗಿ ಮಹಾರಾಷ್ಟ್ರದ ಬ್ರಾಹ್ಮಣರ ಬೆಂಬಲವನ್ನು ಒಗ್ಗೂಡಿಸಲು ಸಾಧ್ಯವಾಗುತ್ತಿರಲಿಲ್ಲ ಎಂಬ ಬಗ್ಗೆ ಅವರಿಗೆ ಎಚ್ಚರಿಕೆಯಿತ್ತು.

ಆದರೆ ಬ್ರಾಹ್ಮಣರ ಈ ರಾಜಕೀಯ ಪ್ರಜ್ಞೆಯ ವರ್ಗ ಯಾವ ಸಂದೇಹವಿಲ್ಲದೆ ಅವರ ರಾಜಕೀಯ ಚಳುವಳಿಯಲ್ಲಿ ಆ ವರ್ಗವೇ ಇವರಿಗೆ ಶಕ್ತಿಯಾಗಿತ್ತು. ಮುಕ್ತಾಯ ಅನಿವಾರ್ಯ. ವೇದೋಕ್ತದ ಸಾಮಾಜಿಕ ವಿಷಯಕ್ಕಾಗಿ ಈ ವರ್ಗ ಬೆಂಬಲವನ್ನು ತ್ಯಾಗಮಾಡಲು ತಿಲಕರು ಒಪ್ಪುತ್ತಿರಲಿಲ್ಲ.

## ವಿವಾದದ ಮುಕ್ತಾಯ

ವೇದೋಕ್ತ ಪ್ರಕರಣವು ಕೊಲ್ಹಾಪುರದಲ್ಲಿ ಮುಗಿದಿದ್ದು ಕುತೂಹಲಕಾರಿಯಾಗಿದೆ. ರಾಜೋಪಾಧ್ಯೆ ಅವರ ಆಸ್ತಿಯನ್ನು ಸಂಸ್ಥಾನ ಮುಟ್ಟುಗೋಲು ಹಾಕಿಕೊಂಡ ಕೂಡಲೆ ಅವರು ಸಾರ್ವಭೌಮ ಅಧಿಕಾರದ ಸಹಾಯಕ್ಕೆ ಮೊರೆಹೋದರು. ಅವರು ಕೊಲ್ಹಾಪುರದ ರಾಜಕೀಯ ಏಜೆಂಟನಿಂದ ಹಿಡಿದು ಕಲ್ಕತ್ತಾದ ಗೌರ್ನರ್ ಜನರಲ್‌ವರೆಗೆ ಎಲ್ಲಾ ಅಧಿಕಾರಿಗಳನ್ನು ಮೊರೆಹೊಕ್ಕರು. ಕೊಲ್ಹಾಪುರದ ಮತ್ತು ಇಡೀ ಮಹಾರಾಷ್ಟ್ರದ ಗಮನ ಈ ಪ್ರಕರಣದ ಬಗ್ಗೆ ಕೇಂದ್ರೀಕೃತವಾಗಿತ್ತು. ವೇದೋಕ್ತದ ಭವಿಷ್ಯ ಇದರ ಮೇಲೆ ಅವಲಂಬಿಸಿತ್ತು. ಅಂತಿಮವಾಗಿ, ೧೯೦೫ರಲ್ಲಿ ರಾಜೋಪಾಧ್ಯೆ ಅವರ ಮನವಿಯನ್ನು ಗೌರ್ನರ್ ಜನರಲರು ವಜಾ ಮಾಡಿದರು. ವೇದೋಕ್ತದ ಬಗ್ಗೆ ಯುದ್ಧಮಾಡುತ್ತಿದ್ದ ಬ್ರಾಹ್ಮಣರಿಗೆ ಇದು ಭಾರೀ ಆಘಾತವಾಗಿತ್ತು ಮತ್ತು ಅವರ ಪರವಾದ ವಾದ ಬಹಳ ದುರ್ಬಲಗೊಂಡಿತ್ತು. ತಿಲಕರ 'ಕೇಸರಿ' ರಾಜೋಪಾಧ್ಯೆ ಮತ್ತು ಅವರ ಮುಖ್ಯ ಸಲಹೆಗಾರ ವಿಜಪೂರ್‌ಕರ್‌ರಂತೆ ತುಂಬಾ ನೋವಿಗೊಳಗಾಗಿತ್ತು. 'ಕೇಸರಿ' ಶಪಿಸಿತು: ರಾಜೋಪಾಧ್ಯೆ ಅವರ ಆಸ್ತಿ ಕೊಲ್ಹಾಪುರದ ಖಜಾನೆಯೊಂದಿಗೆ ವಿಲೀನವಾದಂತೆ ಕೊಲ್ಹಾಪುರ ಸಂಸ್ಥಾನ ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ವಿಲೀನವಾದರೆ ಜನರು ಸಂತೋಷಪಡುವರು.

ರಾಜೋಪಾಧ್ಯೆಯವರ ಪ್ರಕರಣವು ಬ್ರಾಹ್ಮಣರಿಗೆ ಕೊನೆಯ ಭರವಸೆಯಾಗಿತ್ತು. ಅವರು ಅದನ್ನು ಸೋತರು ಮತ್ತು ಅವರ ಹುರುಪು ಕುಸಿದುಬಿತ್ತು. ಈ ತುಮುಲದ ಕೊನೆಯಲ್ಲಿ ಶಾಹು ಅವರು ಜಯಶೀಲರಾಗಿ ಮೂಡಿಬಂದರೆ ವಾಸ್ತವದೊಂದಿಗೆ ಬ್ರಾಹ್ಮಣರು ಒಪ್ಪಂದಕ್ಕೆ ಸಿದ್ಧರಾದರು. ಕರವೀರ ಮಠದ ಬ್ರಾಹ್ಮಣಾಲ್ಕರ ಸ್ವಾಮಿ ಶಂಕರಾಚಾರ್ಯರು ತೆವಳಿಕೊಂಡು ಮೊಟ್ಟಮೊದಲಿಗೆ ಶಾಹು ಅವರ ಬಳಿಗೆ ಬಂದರು. ಅವರ ಕ್ಷಮಾಪಣೆ ಕೋರಿದರು ಮತ್ತು ಶಾಹು ಅವರು ಕ್ಷತ್ರಿಯರೆಂದು ಒಪ್ಪಿದರು ಮತ್ತು ಅವರು ವೇದೋಕ್ತದ ಹಕ್ಕನ್ನು ಪಡೆದಿದ್ದಾರೆಂದು ಹೇಳಿದರು. ಶಾಹು ಅವರು ಸ್ವಾಮೀಜಿ ಅವರನ್ನು ಕ್ಷಮಿಸಿದರು ಮತ್ತು ಅವರ ಆಸ್ತಿಯನ್ನು ೧೯೦೫ರಲ್ಲಿ ವಾಪಸ್ಸು ಮಾಡಿದರು. ಕೊಲ್ಹಾಪುರದ ಬ್ರಾಹ್ಮಣರು ಸ್ವಾಮಿಜಿಯವರನ್ನು ಅನುಸರಿಸಿ ಶಾಹು ಅವರಿಗೆ ಕ್ಷತ್ರಿಯತ್ವವನ್ನು ನೀಡಿದರು ಮತ್ತು ೧೯೦೫ರಲ್ಲಿ ಡಿಸೆಂಬರ್‌ನಲ್ಲಿ ಸಾರ್ವಜನಿಕ ಸಭೆಯಲ್ಲಿ ಠರಾವು ಪಾಸುಮಾಡುತ್ತಾ ಅವರ ವೇದೋಕ್ತದ ಹಕ್ಕನ್ನು ಘೋಷಿಸಿದರು. ಕೊನೆಗೆ ಶಾಹು ಅವರು ೭ ವರ್ಷಗಳ ಸಾಮಾಜಿಕ ಯುದ್ಧವನ್ನು ಗೆದ್ದರು. ಮಹಾರಾಷ್ಟ್ರದ ಸಾಮಾಜಿಕ ಇತಿಹಾಸದಲ್ಲಿ ಮಾತ್ರವಲ್ಲ, ಭಾರತದ ಸಾಮಾಜಿಕ ಇತಿಹಾಸದಲ್ಲಿ ಒಂದು ಅದ್ಭುತ ವಿಜಯವಾಗಿತ್ತು. ಆದರೆ, ಇಡೀ ಬ್ರಾಹ್ಮಣ ಸಮುದಾಯ ಶಾಹು ಅವರ ವಿಜಯವನ್ನು ಒಪ್ಪಿಕೊಳ್ಳಲು ಸಿದ್ಧರಾಗಿರಲಿಲ್ಲ. ವೇದೋಕ್ತದ ಪ್ರಶ್ನೆಯನ್ನು ಎತ್ತುತ್ತಿರಲಿಲ್ಲ ಮತ್ತು ಎತ್ತಿದರೆ ಉದ್ದೇಶಪೂರ್ವಕವಲ್ಲ. ಅದು ತನ್ನ ಹಳೆಯ ಕಾವನ್ನು ಕಳೆದುಕೊಂಡಿತ್ತು. ವೇದೋಕ್ತವು ವೈನ ಭಾವುಶಾಸ್ತ್ರೀಲೇಲೆ ಮತ್ತು ಪುಣೆಯ ಇತಿಹಾಸಾಚಾರ್ಯ ವಿ. ಕೆ. ರಾಜವಾಡೆಯವರಂತಹ ಕಟ್ಟಾ ಸಂಪ್ರದಾಯವಾದಿ ಬ್ರಾಹ್ಮಣ ವಿದ್ವಾಂಸರ ಬೌದ್ಧಿಕ ಆಟದ ವಸ್ತುವಾಗಿ ಬಿಟ್ಟಿತು.

ಈ ಸಂಘರ್ಷದಲ್ಲಿ ತಿಲಕ ಮತ್ತು ವಿಜಪೂರ್‌ಕರ್ ಅವರ ಜೊತೆಗೆ ಹೋರಾಡಿದ ಬ್ರಾಹ್ಮಣರ ಲಾಬಿಯ ಪ್ರಮುಖರಲ್ಲಿ ಇಚಲಕರಂಜಿಯಿಂದ ಘೋರ್ಪಡೆ, ಅಡ್ವೋಕೇಟ್ ರಾಶಿಂಗಕರ್ (ಕೊಲ್ಹಾಪುರ) ವಿದ್ಯಾವಿಲಾಸದ ಸಂಪಾದಕ ಶಂಕರಶಾಸ್ತ್ರಿ ಗೋಖಲೆ, ದಾದಾ ಸಾಹೇಬ ಕರಂಡಿಕರ್ (ಸತಾರ), ಸಂಪಾದಕ 'ಧರ್ಮ' ಭಾವು ಶಾಸ್ತ್ರಿಲೇಲೆ (ವೈ), ಮಹಾದೇವ ರಾಜಾರಾಮ ಬೋಡಾಸ್ (ಮುಂಬಾಯಿ), 'ಕಾಲ್' ಪತ್ರಿಕೆಯ ಸಂಪಾದಕ ಶಿವರಾಮ್ ಪಂತ್ ಪರಂಜಪೆ (ಪುಣೆ), ವಿ. ಕೆ. ರಾಜವಾಡೆ, ಎಸ್. ವಿ. ಕೇತ್ಕರ್, ಸರದಾರ್ ಬಾಳಾ ಸಾಹೇಬ ನಾತು ಮೊದಲಾದವರು. ಬ್ರಾಹ್ಮಣ ಪತ್ರಿಕೆಗಳಾದ ಕೇಸರಿ, ಸಮರಥ, ಕಾಲ್, ಮೋದವೃತ್ತ, ಗುರಖಿ, ಧರ್ಮ, ಜಗತಿ ತಿಚ್ಬು ಪ್ರೇಕ್ಷಕ, ಸುಬೋಧ ಸಿಂಧು, ಬೆಳಗಾಂ ಸಮಾಚಾರ ಮತ್ತು ಬ್ರಹ್ಮೋದಯ ಮೊದಲಾದವುಗಳ ನಿರಂತರವಾದ ಟೀಕೆಗಳು ಅವರಿಗೆ ಸಹಾಯಮಾಡುತ್ತಿದ್ದವು.[12]

ಕೆಲವು ಬ್ರಾಹ್ಮಣ ಚಿಂತಕರು, ತತ್ವನಿಷ್ಠೆ ಮತ್ತು ಸಾಮಾಜಿಕ ಬದ್ಧತೆಯ ಬ್ರಾಹ್ಮಣ ಜನರು ಈ ಯುದ್ಧದಲ್ಲಿ ಛತ್ರಪತಿ ಶಾಹು ಮಹಾರಾಜರನ್ನು ಬೆಂಬಲಿಸಿದರು ಎಂಬ ಸಂಗತಿಯನ್ನು ಗಮನಿಸಲೇಬೇಕು. ಅವರಲ್ಲಿ ಕೊಲ್ಹಾಪುರದ ಬ್ರಾಹ್ಮಣರಿಂದ ಬಹಿಷ್ಕಾರ ಶಿಕ್ಷೆಯನ್ನು ಧೈರ್ಯವಾಗಿ ಎದುರಿಸಿದ ವೈದಿಕ ವಿದ್ವಾಂಸ ನಾರಾಯಣ ಶಾಸ್ತ್ರಿ ಸೇವೆಕರಿ ಸೇರಿದ್ದಾರೆ. ರಾಜೋಪಾಧ್ಯೆಯ ಜಾಗಕ್ಕೆ ನೇಮಕಗೊಂಡ ಮುಖ್ಯ ಪುರೋಹಿತ ತಾತ್ಯರಾವ್ ಜೋಷಿರಾವ್; ಕೊಲ್ಹಾಪುರದಲ್ಲಿ ಸ್ಥಾನಮಾನ ಪಡೆದ ಬ್ರಾಹ್ಮಣರಾದ ಗುಂಡೋಪಂತ ಪಿಶಾವಿಕರ್ ಮತ್ತು ದತ್ತಾತ್ರೇಯ ತೋಪಖಾನೆ, ಕುರಂದವಾಡದಿಂದ ಬಾಳಾಸಾಹೇಬ ಪಟವರ್ಧನ, ವೈಯಿಂದ ಮಹದೇವ ಶಾಸ್ತ್ರಿ ದಿವಾಕರ್, ಬಾಂಬೆಯ ಸುಧಾರಣಾವಾದಿ ಚಿಂತಕ ರಾಜಾರಾಮ ಶಾಸ್ತ್ರಿ ಭಾಗವತ ಮತ್ತು ಪುಣೆಯ ಪ್ರಸಿದ್ಧ ವಿದ್ವಾಂಸ ಭರತಾಚಾರ್ಯ, ಸಿ. ವಿ. ವೈದ್ಯ. ರಾಜರ್ಷಿ ಶಾಹು ಅವರ ಬಣವು ವಿಶೇಷವಾಗಿ ಬ್ರಾಹ್ಮಣ ವಿದ್ವಾಂಸರಿಂದ ವಿಶೇಷವಾಗಿ ನೈತಿಕ ಬಲ ಮತ್ತು ಬೆಂಬಲವನ್ನು ಸಂಪೂರ್ಣವಾಗಿ ಪಡೆದರು. ರಾಜಾರಾಮ ಶಾಸ್ತ್ರಿ ಭಾಗವತ ಮತ್ತು ಭರತಾಚಾರ್ಯ ವೈದ್ಯ ಅವರು ಮರಾಠರ ಕ್ಷತ್ರಿಯತ್ವ ಮತ್ತು ಅವರ ವೇದಗಳ ಹಕ್ಕಿಗೆ ಸಂಬಂಧಿಸಿದ ಕಾನೂನಾತ್ಮಕವಾದ ಸಾಕ್ಷ್ಯಾಧಾರಗಳನ್ನು ಸಾರ್ವಜನಿಕವಾಗಿ ಒದಗಿಸಿ ವಾದಿಸಿದರು.

## ವೇದೋಕ್ತದ ಮಹತ್ವ

ಕರವೀರದ ಶಂಕರಾಚಾರ್ಯ ಮತ್ತು ಸಾಮಾನ್ಯ ಬ್ರಾಹ್ಮಣರು ಶಾಹು ಮಹಾರಾಜರಿಗೆ ಶರಣಾಗುವ ಮೂಲಕ ವೇದೋಕ್ತದ ಪ್ರಕರಣ ಮುಕ್ತಾಯವಾದರೂ ಮಹಾರಾಷ್ಟ್ರದ ಸಾಮಾಜಿಕ ವಲಯದಲ್ಲಿ ಅದರ ಪ್ರತಿಧ್ವನಿಗಳು ಮತ್ತೆ ಮತ್ತೆ ಅಪ್ಪಳಿಸುತ್ತಿದ್ದವು. ಪ್ರಾರಂಭದಲ್ಲಿ ಈ ವಿವಾದವು ಛತ್ರಪತಿಯ ಅರಮನೆಗೆ ಸೀಮಿತವಾಗಿತ್ತು. ಆದರೆ ಬರುಬರುತ್ತಾ ಅದು ಒಂದು ಪ್ರಮುಖ ಸಾಮಾಜಿಕ ಸಂಘರ್ಷವಾಗಿ ಮಾರ್ಪಟ್ಟಿತು. ಏಕೆಂದರೆ ಈ ಸಮಸ್ಯೆಯು ಅಂತಿಮವಾಗಿ ಮುಖ್ಯ ತತ್ವದ ಸಾಮಾಜಿಕ ನ್ಯಾಯವನ್ನು ಕುರಿತದ್ದಾಗಿದೆ. ವೈದಿಕ ಮಂತ್ರಗಳೊಡನೆ ಧಾರ್ಮಿಕ ಆಚರಣೆಗಳನ್ನು ನೆರವೇರಿಸುವ ಮೂಲಕ ಮರಾಠ ಜಾತಿಯು ಇದ್ದಕ್ಕಿದ್ದಹಾಗೆ ಅಭಿವೃದ್ಧಿ ಹೊಂದುವುದಿಲ್ಲ. ತಿಲಕ ಮತ್ತು ವಿಜಪೂರ್‌ಕರ್ ಅವರು ವೇದೋಕ್ತ ಹಕ್ಕುಗಳನ್ನು ನಿರಾಕರಿಸುತ್ತ ತಮ್ಮ ಬರವಣಿಗೆಗಳಲ್ಲಿ ಈ ಅಂಶಗಳನ್ನು ಮತ್ತೆ ಮತ್ತೆ ಎತ್ತಿದ್ದಾರೆ. ತಿಲಕರು ಹೇಳಿದರು: "ಪುರಾಣೋಕ್ತ ಮರಾಠರು ರಾಜರ ಸ್ಥಾನಮಾನಗಳನ್ನು ಅನುಭವಿಸುತ್ತಿರುವಾಗ ವೇದೋಕ್ತ ಹಕ್ಕುಗಳನ್ನು ಹೊಂದಿರುವ ಬ್ರಾಹ್ಮಣರು ಕೆಳದರ್ಜೆಯ ಕೆಲಸಗಳನ್ನು ಮಾಡುತ್ತಿರುವುದು ನಮಗೆ ಗೊತ್ತಿದೆ.

ಆದ್ದರಿಂದ ಮರಾಠರು ವೇದೋಕ್ತ ಹಕ್ಕುಗಳನ್ನು ಕೇಳುತ್ತಿರುವುದು ತಪ್ಪಲ್ಲವೇ?".[13] ವಿಜಪೂರ್‌ಕರರು ಸಹ ಹೇಳಿದರು: "...... ಬದಲಾಗುತ್ತಿರುವ ಕಾಲದಲ್ಲಿ ಶಿಕ್ಷಿತ ಬ್ರಾಹ್ಮಣರು ಆಚರಣೆಗಳು ಮಹತ್ವಹೀನ ವಾಗಿದೆಯೆಂದು ಅವುಗಳನ್ನು ನಿರಾಕರಿಸುತ್ತಿದ್ದಾರೆ. ಮತ್ತೆ ಬರಿದಾದ ಅದೇ ಆಚರಣೆಗಳನ್ನು ಅಪ್ಪಿಕೊಳ್ಳುವುದು ಮತ್ತು ಪಠಿಸುವುದು ಒಂದು ಪದವನ್ನು ಅರ್ಥಮಾಡಿಕೊಳ್ಳದೆ ಮಾಡುವ ಸಾಮೂಹಿಕ ಕಸರತ್ತಾಗುತ್ತದೆ. ಆದರೆ ಇದು-ಸಮಯ ಮತ್ತು ಹಣದ ಅಪವ್ಯಯವಷ್ಟೆ. ಶಿಕ್ಷಿತ ಬ್ರಾಹ್ಮಣರು ಈಗಾಗಲೆ ಅವುಗಳು ಕೆಲಸಕ್ಕೆ ಬಾರದವುಗಳೆಂದು ಅವುಗಳನ್ನು ತ್ಯಜಿಸುತ್ತಿರುವಾಗ ಮರಾಠರು ವೇದೋಕ್ತ ಆಚರಣೆಗಳ ಭಾರಿ ನೇಗಿಲನ್ನು ಹೊರುವುದರಲ್ಲಿ ಸಿಕ್ಕಿಹಾಕಿಕೊಳ್ಳುವುದರಿಂದ ಅವರು ಯಾವ ಲಾಭವನ್ನು ಪಡೆಯುವರು?".[14]

ಲೋಕಮಾನ್ಯ ತಿಲಕರು ಮತ್ತು ಇತರ ಚಿಂತಕರು ವೇದೋಕ್ತದ ಹಕ್ಕುಗಳು ಮಹತ್ವಹೀನವಾದುವು, ಅರ್ಥರಹಿತ ಮತ್ತು ಭಾರವಾದ ನೇಗಿಲುಗಳೆಂದು ಭಾವಿಸುವುದಾದರೆ ಮರಾಠರಿಗೆ ವೇದೋಕ್ತ ಹಕ್ಕುಗಳನ್ನು ನೀಡಲು ಬ್ರಾಹ್ಮಣರು ಏಕೆ ಕಟುವಾಗಿ ವಿರೋಧಿಸುತ್ತಾರೆ. ಸ್ವಯಂ ಪ್ರೇರಣೆಯಿಂದ ಭಾರವನ್ನು ಅಂಗೀಕರಿಸುವುದರಿಂದ ಮರಾಠರು ಹೆಚ್ಚು ತೊಂದರೆ ಅನುಭವಿಸುತ್ತಾರೆಯೆ ಹೊರತು ಬ್ರಾಹ್ಮಣರಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಬ್ರಾಹ್ಮಣರು ವೇದಗಳ ಪಠಣಕ್ಕೆ ಹೆಚ್ಚು ದಕ್ಷಿಣೆ (ಫೀಜು) ವಿಧಿಸುವುದರಿಂದ ಹೆಚ್ಚು ಲಾಭ ಗಳಿಸುತ್ತಾರೆ.

ಬ್ರಾಹ್ಮಣರ ಸಲಹೆಯು ಅವರ ಪ್ರಕಾರ ದ್ರೋಹವಾಗುತ್ತದೆ. ಶಾಹು ಮಹಾರಾಜರು ಕೂಡ ವೇದೋಕ್ತ ಹಕ್ಕುಗಳು ಮರಾಠರನ್ನು ಮಹಾಶಯರನ್ನಾಗಿ ಮಾಡುವುದಿಲ್ಲವೆಂದು ತಿಳಿದಿದ್ದರು. ಆದರೆ ಪ್ರಶ್ನೆಯು ಪುರಾತನ ಮಂತ್ರಗಳನ್ನು ಪಠಿಸುವಷ್ಟು ಅಲ್ಪ(ಸುಲಭ)ವಾಗಿರಲಿಲ್ಲ. ಇದು ಒಂದು ವಿಶಾಲವಾದ ಸಾಮಾಜಿಕ ವಾತಾವರಣ(ಪರಿಸರ) ಮತ್ತು ಸಾಮಾಜಿಕ ಹಕ್ಕುಗಳನ್ನು ಒಳಗೊಂಡಿದೆ. ಧಾರ್ಮಿಕ ಏಕಸ್ವಾಮ್ಯತೆಯನ್ನು ಪಡೆದಿರುವ ಬ್ರಾಹ್ಮಣರು ಕ್ಷತ್ರಿಯ ವರ್ಣ ನಶಿಸಿಹೋಗಿದೆಯೆಂದು ಘೋಷಿಸಿ ಇಡೀ ಮರಾಠ ಸಮುದಾಯವನ್ನು ಶೂದ್ರ ವರ್ಣಕ್ಕೆ ತಳ್ಳಿ, ಅವರಿಗೆ ಹಿಂದು ಧರ್ಮ ನೀಡಿದ ವೇದೋಕ್ತದ ಹಕ್ಕನ್ನು ಮರಳಿ ಪಡೆಯುವ ಸಲುವಾಗಿ ಮರಾಠರು ಒತ್ತಾಯಿಸಿದರು. ಇದು ಜನರ ಘನತೆ ಮತ್ತು ಆತ್ಮಗೌರವವನ್ನು ಪುನರ್ ಸ್ಥಾನ ಪಡೆಯುವ ಹೋರಾಟವಾಗಿದೆ. ಹಕ್ಕುಗಳ ನಿರಾಕರಣೆಯು ಎಲ್ಲಾ ಬ್ರಾಹ್ಮಣೇತರರ ವಿರುದ್ಧದ ರೋಗಗ್ರಸ್ಥ ಜನಾಂಗೀಯ ಮೇಲರಿಮೆಯ ಸಂಕೀರ್ಣತೆಯ ಪ್ರಕಟಣೆ ಮತ್ತು ತಮ್ಮ ವ್ಯಾಪಕವಾದ ಧಾರ್ಮಿಕ ಮತ್ತು ಸಾಮಾಜಿಕ ಏಕಸ್ವಾಮ್ಯತೆಯನ್ನು ಕ್ರೋಡೀಕರಿಸಿಕೊಳ್ಳುವ ದುರುದ್ದೇಶವಾಗಿದೆ. ಮರಾಠರಿಗೆ ವೇದೋಕ್ತ ಹಕ್ಕನ್ನು ನೀಡುವುದರ ಅರ್ಥ ಅವರ ಕ್ಷತ್ರಿಯ ಸ್ಥಾನಮಾನವನ್ನು ಒಪ್ಪಿಕೊಂಡತೆಯೆ. ಚಾತುರ್ವರ್ಣ್ಯದ ನೀಲನಕ್ಷೆಯ ಪ್ರಕಾರ ಕ್ಷತ್ರಿಯ ಸ್ಥಾನಮಾನವು ಬ್ರಾಹ್ಮಣ ವರ್ಣಕ್ಕೆ ಸರಿಸಮಾನ ಅಥವಾ ಕೆಲವು ಸಂದರ್ಭಗಳಲ್ಲಿ ಅದು ಬ್ರಾಹ್ಮಣ ವರ್ಣಕ್ಕಿಂತ ಉತ್ತಮವಾಗಿರುತ್ತದೆ. ಮರಾಠರು ಧಾರ್ಮಿಕ ಮತ್ತು ಸಾಮಾಜಿಕ ವ್ಯವಹಾರಗಳಲ್ಲಿ ಬ್ರಾಹ್ಮಣರಿಗೆ ಸ್ಥಾನಮಾನದಲ್ಲಿ ಸಮಾನರಿಗೆ ಭುಜಕ್ಕೆ ಭುಜ ತಗುಲಿಸಬಹುದು. ಬ್ರಾಹ್ಮಣರು ಇದಕ್ಕೆ ಬಗ್ಗಲು ಸಿದ್ಧರಾಗಿರಲಿಲ್ಲ. ಮರಾಠರ ಚಳುವಳಿಯು ಸಾಮಾಜಿಕ ಹಕ್ಕುಗಳನ್ನು ಸ್ಥಾಪಿಸಲು ಮತ್ತು ಸಾಮಾಜಿಕ ನ್ಯಾಯವನ್ನು ಗೆಲ್ಲಲು ಒಂದು ವಿಶಾಲವಾದ ದೃಷ್ಟಿಕೋನವನ್ನು ಹೊಂದಿತ್ತು.

ಪ್ರಗತಿಪರ ರಾಜ ಮತ್ತು 'ಜನರ ರಾಜ' ಎಂಬ ಹೆಸರುವಾಸಿ ಬಿರುದನ್ನು ಪಡೆಯುವುದಕ್ಕೆ ಮೊದಲು ಶಾಹು ಅವರ ಜೀವನ ವಿಕಾಸಾತ್ಮಕ ಹಂತಗಳಿಂದ ಹಾದು ಬಂದದ್ದು ಛತ್ರಪತಿ ಶಾಹು ಅವರ ಜೀವನ ಮೊದಲ ಘಟ್ಟವೇ ವೇದೋಕ್ತದ ಪ್ರಕರಣವಾಗಿದೆ. ಮೊದಲ ನೋಟಕ್ಕೆ ಇದು ಸಂಕುಚಿತ

ಉದ್ದೇಶಗಳ ಹೋರಾಟವೆಂದು ತೋರುತ್ತದೆ. ಹಿಂದು ಸಮಾಜದ ಮೇಲೆ ಕಪಿಮುಷ್ಟಿಯಿದ್ದ ಚಾತುರ್ವರ್ಣ್ಯ ಪದ್ಧತಿಯ ಚೌಕಟ್ಟಿನಲ್ಲಿಯೇ ಶಾಹು ಅವರು ಕೆಲಸಮಾಡಲು ಒಪ್ಪಿಕೊಂಡಿದ್ದರೆಂಬುದನ್ನು ನಾವು ಸಮ್ಮತಿಸಬೇಕಾಗಿದೆ. ಜೀವನದ ಆ ಹಂತದಲ್ಲಿ ಅವರು ನಾಲ್ಕು ವರ್ಣಗಳ ಪದ್ಧತಿಯನ್ನು ನಿರಾಕರಿಸಿರಲಿಲ್ಲ. ೧೯೧೦ರ ನಂತರವೇ ಶಾಹು ಅವರು ತಮ್ಮ ದೃಷ್ಟಿಪಟಲವನ್ನು ವಿಸ್ತರಿಸಿಕೊಂಡು ಜಾತಿಪದ್ಧತಿಯ ಪರಮಾಧಿಪತ್ಯ, ಜಾತಿ ಆಧಾರಿತ ತಾರತಮ್ಯತೆಯ ವಿರುದ್ಧ ಮತ್ತು ಅಸ್ಪೃಶ್ಯತೆಯ ವಿರುದ್ಧ ಯುದ್ಧ ಹೂಡಿದರು. ನಿಜವಾಗಿ, ೧೯೧೫-೧೬ ನಂತರ ಅವರ ಪ್ರಗತಿಪರ ಜೀವನದ ಮುಂದಿನ ಹಂತ ರೂಪಗೊಂಡಿತು. ಒಂದು ದಶಕದ ನಂತರ ಬ್ರಾಹ್ಮಣೇತರರ ಸಮುದಾಯಗಳ, ದಲಿತರ ಮತ್ತು ಇತರೆ ದಮನಿತ ವರ್ಗಗಳ ಏಳಿಗೆಯ ನಾಯಕನಾಗುವನೆಂದು ಶಾಹು ಅವರು ಪೂರ್ಣವಾಗಿ ಕಲ್ಪನೆ ಮಾಡಿಕೊಳ್ಳದಿರುವಾಗ ೧೯೦೧-೦೨ರಲ್ಲಿ ಅವರ ಚಟುವಟಿಕೆ ಮತ್ತು ಚಿಂತನೆಗಳಿಗೆ ಈ ಮುಂದಿನ ಹಂತದ ಅಳತೆಗೋಲನ್ನು ಅನ್ವಯಿಸುವುದು ತಪ್ಪಾದೀತು. ಹೂವಿನ ಮೊಗ್ಗು ನಿಧಾನವಾಗಿ ಅರಳಿ ಸುವಾಸನೆಯ ಹೂವಾಗುವಂತೆ ಅವರ ಸಾರ್ವಜನಿಕ ಜೀವನ ವಿಕಾಸಗೊಂಡಿತು ಮತ್ತು ನಿಧಾನವಾಗಿ ಶ್ರೀಮಂತವಾಯಿತು. ಶಾಹು ಅವರ ಜೀವನದ ವೇದೋಕ್ತದ ಹಂತದಲ್ಲಿ ಮೊಗ್ಗು ಅರಳುವುದಕ್ಕೆ ಪ್ರಾರಂಭಿಸಿತು.

ಬ್ರಾಹ್ಮಣರ ಸಾಮಾಜಿಕ ಪರಮಾಧಿಕಾರ ಮತ್ತು ಏಕಸ್ವಾಮ್ಯತೆಯನ್ನು ಸಫಲವಾಗಿ ಪ್ರಶ್ನಿಸುವುದು ಸಾಮಾನ್ಯ ವಿಷಯವೇನು ಅಲ್ಲ. ಈ ಹೋರಾಟ ಶಾಹು ಅವರಿಗೆ ಕೆಟ್ಟ ಬ್ರಾಹ್ಮಣತ್ವದ ಸ್ವಭಾವದ ಬಗ್ಗೆ ಒಳನೋಟವನ್ನು ನೀಡಿತು ಮತ್ತು ಅದರ ವಿರುದ್ಧ ಹೋರಾಡಲು ಅವರಿಗೆ ಕೆಲವು ತಂತ್ರಗಳನ್ನು (ವಿಧಾನ) ಗಳಿಸಿಕೊಟ್ಟಿತು. ಈ 'ಆತ್ಮ-ಮನವರಿಕೆ' ಮತ್ತು ಹೊಸ ವಿಧಾನ (ತಂತ್ರ)ಗಳು ಅವರನ್ನು ಇಡೀ ಜೀವನದ ಉದ್ದಕ್ಕೂ ಮಾರ್ಗದರ್ಶನ ಮಾಡಿದವು. ಹೊಸ ಅನುಭವವು ಹಿಂದುಗಳಿಗೆ ವೇದದ ಬಾಗಿಲುಗಳನ್ನು ತೆರೆದ ಆರ್ಯ ಸಮಾಜದ ಕಡೆಗೆ ತಿರುಗುವಂತೆ ಮಾಡಿತು. ಅದು ಬ್ರಾಹ್ಮಣ ಏಕಸ್ವಾಮ್ಯತೆಯ ವಿರುದ್ಧ ಸಮರ ಸಾರಿದ ಸತ್ಯಶೋಧಕ ಸಮಾಜದ ಕಡೆಗೆ ಸೆಳೆಯಿತು. ಇದು ವೇದೋಕ್ತ ಪ್ರಕರಣದ ಮಹತ್ತರವಾದ ಫಲಿತಾಂಶವಾಗಿತ್ತು.

ರಾಜರ್ಷಿ ಶಾಹು ಅವರ ಸಮಕಾಲೀನವಾದ ನಿಯತಕಾಲಿಕೆ 'ಜಾಗೃತಿ'ಯ ಸಂಪಾದಕ ಭಗವಂತರಾವ್ ಪಾಲೇಕರ್ ಅವರು ವೇದೋಕ್ತದ ಬಿರುಗಾಳಿಯು ನಿದ್ರಾವಸ್ಥೆಯಲ್ಲಿದ್ದ ಮರಾಠ ಸಮುದಾಯಕ್ಕೆ ಭಾರೀ ಹೊಡೆತವನ್ನು ನೀಡಿದ್ದಲ್ಲದೆ, ಬಹು ಸಂಖ್ಯಾತರಾದ ಇಡೀ ಬ್ರಾಹ್ಮಣೇತರರನ್ನು ಜಾಗೃತಿಗೊಳಿಸಿತೆಂದು ಭಾವಿಸುತ್ತಾರೆ. ಪಾಲೇಕರರು ಹೇಳುತ್ತಾರೆ: "ಕೊಲ್ಹಾಪುರದ ವೇದೋಕ್ತ ಪ್ರಕರಣವು ಹಿಂದುಳಿದ ಜಾತಿಗಳ ಸಾಮಾಜಿಕ ಮತ್ತು ರಾಜಕೀಯದ ಚಲನಶೀಲ ಆಂದೋಲನಕ್ಕೆ ನೀಡಿದ ಮೊದಲ ಕಹಳೆಯ ಧ್ವನಿಯ ಕರೆ ಎಂದು ಕರೆದರೆ ತಪ್ಪಾಗಲಾರದು. ಚಳುವಳಿಯ ಸ್ವರೂಪದ ಬಗ್ಗೆ ಭಿನ್ನ-ಭಿನ್ನ ಅಭಿಪ್ರಾಯಗಳಿರಬಹುದು. ಆದರೂ ಅದು ಬ್ರಾಹ್ಮಣೇತರ ಆತ್ಮ-ಗೌರವವನ್ನು ಹೊಡೆದೆಬ್ಬಿಸಿತು ಮತ್ತು ಧಾರ್ಮಿಕ ಸುಧಾರಣೆಗಳ ಕಡೆಗೆ ಅವರ ಗಮನವನ್ನು ತಿರುಗಿಸಿತೆಂಬುದನ್ನು ನಿರಾಕರಿಸುವಂತಿಲ್ಲ. ಛತ್ರಪತಿ ಶಾಹು ಅವರು ಈ ಚಳುವಳಿಗೆ ನೀಡಿದ ಆಶ್ರಯ ಒಂದು ಗಾಂಭೀರ್ಯವನ್ನು ತಂದುಕೊಟ್ಟಿತು ಮತ್ತು ಅದು ಹರಡುವುದಕ್ಕೆ ಸಹಕರಿಸಿದರು".[15]

ಛತ್ರಪತಿ ಶಾಹು ಅವರ ಮೊದಲ ಜೀವನ ಚರಿತ್ರೆಕಾರ ಪ್ರೊ. ಅಣ್ಣಾ ಸಾಹೇಬ ಲಠ್ಠೆ ಅವರು ವೇದೋಕ್ತ ಹೋರಾಟದಲ್ಲಿನ ಜನವು ಬ್ರಾಹ್ಮಣೇತರರಲ್ಲಿ ಒಂದು ಹೊಸ ಚಲನಶೀಲ ಹುರುಪು ತುಂಬಿತು

ಮತ್ತು ನಿಜವಾಗಿ ಮಹಾರಾಷ್ಟ್ರದ ಬ್ರಾಹ್ಮಣೇತರರ ಐತಿಹಾಸಿಕ ಚಳುವಳಿಯ ಆರಂಭವಾಗಿತ್ತೆಂದು ಭಾವಿಸುತ್ತಾರೆ. ಪ್ರೊ. ಲಠ್ಠೆ ಅವರು ಹೇಳುತ್ತಾರೆ: "ಛತ್ರಪತಿಯವರ ಜಯವು ವೇದೋಕ್ತ ಪ್ರಕರಣದ ಬಗ್ಗೆಯಿದ್ದ ಮರಾಠ ಸಮುದಾಯದ ಸಾಮಾನ್ಯ ಉದಾಸೀನತೆ ಕೊನೆಗೊಳಿಸಿತು ಮತ್ತು ಒಂದು ಹೊಸಶಕ್ತಿ ಮತ್ತು ಓಜಸ್ಸಿನಿಂದ ಮೂಡಿಬಂತು. ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳಲ್ಲಿ ಮತ್ತು ಬ್ರಾಹ್ಮಣೇತರರ ಎಲ್ಲಾ ಯುವಜನರಲ್ಲಿ ಮತ್ತು ಕೊಲ್ಹಾಪುರದ ಜನರಲ್ಲಿ ಉತ್ಸಾಹದ ಅಲೆಯು ಆವರಿಸಿಕೊಂಡಿತು. ಬ್ರಾಹ್ಮಣೇತರರ ಜಾಗೃತಿಯ ಹೊಸ ಕೇಂದ್ರಗಳು ತನ್ನಷ್ಟಕ್ಕೆ ತಾನೇ ಎಲ್ಲೆಲ್ಲಿ ಕೊಲ್ಹಾಪುರ ಸಂಸ್ಥಾನದ ಜನರು ಹೋದ ಕಡೆಗಳಲ್ಲಿ ಹುಟ್ಟಿಕೊಂಡವು. ಈ ಕೇಂದ್ರಗಳ ಮೂಲಕ ಕೆಲವೇ ವರ್ಷಗಳಲ್ಲಿ ಬ್ರಾಹ್ಮಣೇತರರ ಚಳುವಳಿಯು ಬೆಳೆಯಿತು.

ಸಂಕ್ಷಿಪ್ತವಾಗಿ, ವೇದೋಕ್ತ ಹೋರಾಟವು ಶಾಹು ಛತ್ರಪತಿಯವರನ್ನು ಒಬ್ಬ ಬಂಡಾಯದ ಸಾಮಾಜಿಕ ಸುಧಾರಕ ಹಾಗೂ ಎಲ್ಲಾ ಬ್ರಾಹ್ಮಣೇತರರಿಗೆ ಒಬ್ಬ ಭಾವೀ ನಾಯಕನಾಗಿ ರೂಪಾಂತರಿಸಿತು.

---

೫

# ಶಿವಾಜಿ ಕ್ಲಬ್ ಮತ್ತು ಹೋರಾಟಗಾರರು

**ವೇ**ದೋಕ್ತ ಸಂಘರ್ಷ ನಡೆಯುತ್ತಿರುವಾಗ ಶಾಹು ಬಹಳ ಕ್ಲಿಷ್ಟಕರ ಮತ್ತು ದೀರ್ಘಕಾಲಿಕವಾದ ಮತ್ತೊಂದು ಸವಾಲನ್ನು ಎದುರಿಸಬೇಕಾಯಿತು. ಅದು ಬ್ರಾಹ್ಮಣರ ಉಗ್ರಗಾಮಿಗಳ ಆಕ್ರಮಣಕಾರಿ ಚಟುವಟಿಕೆಗಳು ಒಡ್ಡಿದ ಸವಾಲಾಗಿತ್ತು. ಕೊಲ್ಹಾಪುರದಲ್ಲಿ ೧೮೯೩ರಲ್ಲಿ ಸದಸ್ಯರಿಂದ ರೂಪಗೊಂಡ ಶಿವಾಜಿ ಕ್ಲಬ್ ಕಾರ್ಯನಿರತವಾಯಿತು. ಈ ಕ್ಲಬ್ ಮೂಲತಃ ಯುವಕರಿಗೆ ಪರಾಕ್ರಮದ ಆಟಗಳಲ್ಲಿ ಮತ್ತು ಯುವಕರ ಆಸಕ್ತಿಗೆ ಅನುಗುಣವಾದ ತರಬೇತಿ ನೀಡಲು ಕೊಲ್ಹಾಪುರದಲ್ಲಿ ಮತ್ತು ಗಣೇಶೋತ್ಸವ ಮತ್ತು ಶಿವಾಜಿ ಜಯಂತಿಯ ಹಬ್ಬಗಳ ಆಚರಣೆಗಳನ್ನು ಸಾರ್ವಜನಿಕವಾಗಿ ಬೆಳೆಸಲು ಸ್ಥಾಪಿಸಲಾಯಿತು. ಆದರೆ ಅದು ನಿಧಾನವಾಗಿ ಆಕ್ರಮಣಕಾರಿ ಹೋರಾಟದ ಸಂಘಟನೆಯಾಗಿ ಪರಿವರ್ತಿತವಾಯಿತು. ಅದರ ಚಟುವಟಿಕೆಗಳು ಸಾರ್ವಭೌಮ ಬ್ರಿಟಿಷ್ ಸರಕಾರದ ವಿರುದ್ಧ ನಿರ್ದೇಶಿತವಾದವು. ಶಾಹು ಅವರು ಬ್ರಿಟಿಷರ ಪರಮಾಧಿಕಾರದ ಸಾಮಂತ ಸಂಸ್ಥಾನದ ಮುಖ್ಯಸ್ಥರಾಗಿ ಈ ಚಟುವಟಿಕೆಗಳ ಬಗ್ಗೆ ಲಕ್ಷ್ಯ ಕೊಡಬೇಕಾಯಿತು ಮತ್ತು ಈ ಆಕ್ರಮಣಶೀಲತೆಯನ್ನು ತುಳಿಯಲು ಕ್ರಮ ಕೈಗೊಳ್ಳಬೇಕಾಯಿತು. ತತ್ಪರಿಣಾಮವಾಗಿ ಈ ಸಂಘಟನೆಯು ಶಾಹು ವಿರುದ್ಧವಾಯಿತು.

### ಶಿವಾಜಿ ಕ್ಲಬ್ಬಿನ ಉಗಮ

ಕೊಲ್ಹಾಪುರದ ಶಿಕ್ಷಿತ ಯುವ ಬ್ರಾಹ್ಮಣರಿಂದ ಪ್ರಾರಂಭವಾದ ಶಿವಾಜಿ ಕ್ಲಬ್ಬಿನಲ್ಲಿ ಅನೇಕ ಬ್ರಾಹ್ಮಣೇತರರು ಸದಸ್ಯರಾಗಿದ್ದರು. ಕೊಲ್ಹಾಪುರ ದರಬಾರಿನ ಉನ್ನತ ಹುದ್ದೆಗಳಲ್ಲಿರುವ ಅಧಿಕಾರಿಗಳ ಹತ್ತಿರದ ಆತ್ಮೀಯ ಬಂಧುಗಳೇ ಈ ಸಂಸ್ಥೆಯಲ್ಲಿ ತೊಡಗಿಸಿಕೊಂಡಿದ್ದರು. ಶಿವಾಜಿ ಮಹಾಶಯನನ್ನು ಸ್ಮರಿಸುವ ಚಟುವಟಿಕೆಗಳಿಂದ ಹಿಡಿದು ರಚನಾತ್ಮಕ ಮತ್ತು ದೇಶಭಕ್ತಿಯ ಚಟುವಟಿಕೆಗಳನ್ನು ನಡೆಸುತ್ತಿದ್ದ ಈ ಕ್ಲಬ್ಬಿನ ಬಗ್ಗೆ ಶಾಹು ಅವರು ಖುದ್ದಾಗಿ ಸಹಾನುಭೂತಿ ತೋರಿಸುತ್ತಿದ್ದರು. ದರ್ಬಾರು ಅದರ ಸದಸ್ಯರಿಗೆ ಪರಾಕ್ರಮದ ಕ್ರೀಡೆಗಳನ್ನು ಪ್ರೋತ್ಸಾಹಿಸಲು ಕುದುರೆಗಳನ್ನು ಮತ್ತು ಆಯುಧಗಳನ್ನು ನೀಡುವ ಮೂಲಕ ಸದಸ್ಯರಿಗೆ ಸಹಾಯ ಮಾಡುತ್ತಿತ್ತು. ಈ ಮಧ್ಯೆ ೧೮೯೫ ಆಗಸ್ಟ್‌ನಲ್ಲಿ ಲೋಕಮಾನ್ಯ ತಿಲಕರ ನಾಯಕತ್ವದ ಒಂದು ನಿಯೋಗ ರಾಯಗಢ ಕೋಟೆಯಲ್ಲಿರುವ ಶಿಥಿಲಗೊಂಡ ಶಿವಾಜಿಯ ಸಮಾಧಿಯ ಜೀರ್ಣೋದ್ಧಾರ ಸಂಬಂಧದಲ್ಲಿ ಶಾಹು ಮಹಾರಾಜರನ್ನು ಭೇಟಿ ಮಾಡಿತು. ತನ್ನ ಪೂರ್ವಿಕರ ಬಗ್ಗೆಯಿದ್ದ ಅಪಾರ ಗೌರವದ ಭಾವನೆಯಿಂದ ಸಾಕಷ್ಟು ನೆರವು ನೀಡಲು ಶಾಹು ಅವರು ನಿಯೋಗಕ್ಕೆ ಭರವಸೆ ನೀಡಿದರು. ಹಾಗಿರುವಾಗ, ಶಿವಾಜಿ ಮಹಾಶಯರ ಹೆಸರಿನಲ್ಲಿ ಕೈಗೊಳ್ಳುವ ರಚನಾತ್ಮಕ ಕಾರ್ಯಗಳಿಗೆ ಅಂತಹ ನೆರವು ನೀಡುವುದು ಶಾಹು ಅವರಿಗೆ ಸಹಜವಾಗಿತ್ತು. ಪ್ರಾರಂಭದಲ್ಲಿ ಬ್ರಿಟಿಷ್ ಅಧಿಕಾರಿಗಳು ಸಹ ಈ ಚಳುವಳಿಯ ವಿರುದ್ಧ ಇರಲಿಲ್ಲ.

ಆದರೆ ಈ ಆವರಣ ಬಹಳ ಕಾಲ ಉಳಿಯಲಿಲ್ಲ. ತಿಲಕರ ಅಗ್ರಗಾಮಿತ್ವದಲ್ಲಿ ಪ್ರಾರಂಭವಾದ ಶಿವಾಜಿ ಚಳುವಳಿಯು ರಾಜಕೀಯ ಸ್ವರೂಪವನ್ನು ಪಡೆದುಕೊಂಡಿತು. ಅದು ಸಹಜವಾಗಿತ್ತು ಕೂಡ. ಆದರೆ ತತ್ಪರಿಣಾಮವಾಗಿ ಸಂಸ್ಥಾನ ನಿಧಾನವಾಗಿ ಈ ಚಳುವಳಿಯ ವಿರೋಧಿಯಾಯಿತು. ಕೊಲ್ಹಾಪುರದಲ್ಲಿ ಶಿವಾಜಿ ಕ್ಲಬ್ಬಿನ ಕೆಲವು ಸದಸ್ಯರು ಮದ್ದು ಮತ್ತು ಗುಂಡು ಹಾಗೂ ಆಯುಧಗಳನ್ನು ಸಂಗ್ರಹಿಸತೊಡಗಿದರು. ಪೊಲೀಸರು ಸದಸ್ಯರ ವಿರುದ್ಧ ಕೇಸುಗಳನ್ನು ಹಾಕಿದರು ಮತ್ತು ಅವರಿಗೆ ಶಿಕ್ಷೆ ನೀಡಲಾಯಿತು. ಈ ಘಟನೆ ಶಾಹು ಅವರನ್ನು ಎಚ್ಚರಿಸಿತು. ಆದರೂ ಕೂಡ ಶಿವಾಜಿ ಕ್ಲಬ್ಬಿನ ಚಟುವಟಿಕೆಗಳನ್ನು ತಡೆಯಿಲ್ಲದೆ ಮುಂದುವರಿದವು. ಅವರು ೧೮೯೮ರ ಏಪ್ರಿಲ್‌ನಲ್ಲಿ ಬೀಡ್‌ನ ಬಂಡಾಯದಲ್ಲಿ ಭಾಗವಹಿಸಿದರು ಮತ್ತು ಕ್ರಾಂತಿಕಾರಿಗಳಿಗೆ ಆರ್ಥಿಕವಾಗಿ ಸಹಾಯ ಮಾಡಿದರು.

ಇದರ ಜೊತೆಗೆ, ೧೯೦೦ರ ಜನವರಿಯಲ್ಲಿ ಪ್ಲೇಗ್ ಕೊಲ್ಹಾಪುರದಲ್ಲಿ ಪ್ರಾರಂಭವಾದಾಗ ಮುಚ್ಚಿದ ಮನೆಗಳಲ್ಲಿ ಅವರು ದರೋಡೆ ಮಾಡಿದರು. ಈ ದರೋಡೆಗಳನ್ನು ಆಯುಧಗಳನ್ನು ಖರೀದಿ ಮಾಡುವ ಸಲುವಾಗಿ ಹಣ ದೋಚಲು ಮಾಡಿದರು. ಭಾಗವಹಿಸಿದವರಲ್ಲಿ ಕೆಲವರನ್ನು ಹಿಡಿದು ಶಿಕ್ಷಿಸಲಾಯಿತು. ಈ ಕಾಲದಲ್ಲಿಯೆ ಕೊಲ್ಹಾಪುರದ ರಾಜಕೀಯ ಏಜೆಂಟ್, ಫ್ರೆ ಅವರು ತನ್ನನ್ನು ಕೊಲ್ಲಲು ಶಾಹು ಅವರು ವಿಷಹಾಕಿದ್ದಾರೆಂದು ದೂರಿದ್ದರು. ಕೊಲ್ಹಾಪುರದ ಕೆಲವು ದುಷ್ಟಶಕ್ತಿಗಳು ಬ್ರಿಟಿಷ್ ಸರಕಾರ ಶಾಹು ಅವರ ಬಗ್ಗೆಯಿದ್ದ ಮನಸ್ಸನ್ನು ಕೆಡಿಸುವ ಸಲುವಾಗಿ ಶಾಹು ಅವರ ಕಿರಿಯ ಸಹೋದರ ಬಾಪು ಸಹೋದರರು ಶಿವಾಜಿ ಕ್ಲಬ್ಬಿನ ಕಾನೂನು ಬಾಹಿರ ಸ್ಫೋಟಕಾರಿ ಚಟುವಟಿಕೆಗಳ ಹಿಂದೆಯಿರುವ ಭಾರೀ ಬುದ್ಧಿವಂತ ಎಂದು ಸುಳ್ಳು ಸುದ್ದಿಗಳನ್ನು ಹರಡಲಾಯಿತು. ಇದರ ಪರಿಣಾಮವಾಗಿ ಬ್ರಿಟಿಷ್ ಸರಕಾರ ಶಾಹು ಅವರ ಹಲವು ಉದ್ದೇಶಗಳ ಬಗ್ಗೆ ಅನುಮಾನಪಟ್ಟಿತು. ಈ ದಿನಗಳು ಸಹ ವೇದೋಕ್ತ ಸಂಘರ್ಷದ ಉತ್ತುಂಗ ದಿನಗಳಾಗಿದ್ದವು. ಶಿವಾಜಿ ಕ್ಲಬ್ಬಿನ ಬಹುಮಟ್ಟಿನ ಸದಸ್ಯರು ಬ್ರಾಹ್ಮಣರಾಗಿದ್ದರು. ಈ ವರ್ಗವೇ ವೇದೋಕ್ತದ ಭುಗಿಲು ಹರಡುವುದಕ್ಕೆ ಮುಖ್ಯ ಕಾರಣಕರ್ತರಾಗಿದ್ದರು. ದರಬಾರಿನ ಯಾವ ಅಧಿಕಾರಿ ಅಥವಾ ಅವರ ಸಂಬಂಧಿಕರು ಶಿವಾಜಿ ಕ್ಲಬ್ಬಿನೊಂದಿಗೆ ಯಾವುದೇ ರೀತಿಯ ಸಂಬಂಧ ಸಂಪರ್ಕವಿಟ್ಟುಕೊಳ್ಳಬಾರದೆಂಬ ಆಜ್ಞೆಯ ಅಧಿಸೂಚನೆಯನ್ನು ಹೊರಡಿಸಲು ಈ ಎಲ್ಲಾ ಅಂಶಗಳು ಶಾಹು ಅವರನ್ನು ಒತ್ತಾಯಗೊಳಿಸಿದವು. ಈ ಆಜ್ಞೆಯ ಪ್ರಕಾರ ಎಲ್ಲಾ ಬ್ರಾಹ್ಮಣೇತರ ಸದಸ್ಯರು ಶಿವಾಜಿ ಕ್ಲಬ್ಬಿನಿಂದ ಸಂಬಂಧ ಕಡಿದುಕೊಂಡರು ಮತ್ತು ೧೯೦೦ರ ಮುಂದಕ್ಕೆ ಶಿವಾಜಿ ಕ್ಲಬ್ಬು ಉಗ್ರಗಾಮಿ ಬ್ರಾಹ್ಮಣರ ಗುಂಪೆಂದು ಮುಂಚೂಣಿಗೆ ಬಂತು.

## ಲೋಕಮಾನ್ಯರ ನಿಲುವು

ಈ ಹೋರಾಟಗಾರರ ಬಗ್ಗೆ ಇರುವ ಲೋಕಮಾನ್ಯ ತಿಲಕರ ಮನೋಭಾವವನ್ನು ಗಮನಿಸುವುದು ಅತಿಮುಖ್ಯ. ಈ ಸಂದರ್ಭದಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನೊಳಗೆ ತೀವ್ರಗಾಮಿ ರಾಜಕೀಯ ಸಿದ್ಧಾಂತದ ಅಗ್ರಗಾಮಿಗಳೆಂದು ಅವರನ್ನು ಹೊಗಳಲಾಯಿತು. ಲಾರ್ಡ್ ಕರ್ಜನರ ಸರ್ವಾಧಿಕಾರಿ ಆಡಳಿತ ಮತ್ತು ಅವರ ದಮನಕಾರಿ ಸಾಮ್ರಾಜ್ಯಶಾಹಿ ಧೋರಣೆಗಳು ತುತ್ತತುದಿಗೇರಿದ್ದವು. ಕರ್ಜನರ ಸರ್ವಾಧಿಕಾರಿ ಆಡಳಿತವನ್ನು ವಿರೋಧಿಸಲು ಸಶಸ್ತ್ರ ಗುಪ್ತದಳದ ಗುಂಪುಗಳು ಇಡೀ ದೇಶದಲ್ಲಿ ನಾಯಿಕೊಡೆಗಳಂತೆ, ವಿಶೇಷವಾಗಿ ಮಹಾರಾಷ್ಟ್ರದ ಪುಣೆ, ನಾಸಿಕ, ಸತಾರ, ಕೊಲ್ಹಾಪುರ, ಬೆಳಗಾವಿ ಮೊದಲಾದ ಕಡೆಗಳಲ್ಲಿ ತಲೆದೋರಿದವು ಮತ್ತು ಚಟುವಟಿಕೆಗಳ ಕೇಂದ್ರಗಳಾದವು. ಈ ಗುಂಪುಗಳ ಸದಸ್ಯರೆಲ್ಲ ತಿಲಕರ ನಿಷ್ಠಾವಂತ ಅನುಯಾಯಿಗಳಾಗಿದ್ದರು. ಆದರೆ ಅವರು ಈ ಹೋರಾಟಗಾರರ ಬಗ್ಗೆ ಸಹಾನುಭೂತಿಪರರಾಗಿದ್ದು,

ಸಮಯ ಬಂದಾಗ ಅವರಿಗೆಲ್ಲಾ ಭೌತಿಕವಾಗಿ ಸಹಾಯಮಾಡಿದರೂ ಅವರು ಎಂದಿಗೂ ಅವರನ್ನು ಬಹಿರಂಗವಾಗಿ ತಿಲಕರು ಬೆಂಬಲಿಸಲಿಲ್ಲ. 'ಮಾತೃಭೂಮಿಯ ಸೇವೆಗೆ ನಮ್ಮ ಹೊಣೆ' ಎಂಬ ಘೋಷಣೆಯನ್ನು ನೀಡಿದ್ದ ತಿಲಕರು ಹೋರಾಟಗಾರರಿಗೆ ನೆರವು ನೀಡುವುದು ಅಗತ್ಯವಾಗಿದ್ದರೂ ತಿಲಕರು ಹೋರಾಟಗಾರರಿಗೆ ಕಾನೂನುಬದ್ಧವಾಗಿ ಅಥವಾ ವಿರುದ್ಧವಾಗಿ ಅಂತಹ ನೆರವನ್ನು ನೀಡದೆ ಇರುವುದರ ಬಗ್ಗೆ ಸಾಕಷ್ಟು ಎಚ್ಚರಿಕೆಯನ್ನು ವಹಿಸಿದ್ದರು. ಆದರೂ ಸಹ ತಮ್ಮ ಕೇಸರಿ ಪತ್ರಿಕೆಯಲ್ಲಿ ಭಯೋತ್ಪಾದಕರ ಚಟುವಟಿಕೆಗಳನ್ನು ಹುಚ್ಚು ಮನುಷ್ಯರ ಅಮಾನವೀಯ ಕೃತ್ಯಗಳೆಂದು ಖಂಡಿಸಿದ್ದರು, ಮತ್ತೊಂದು ಕಡೆಗೆ ಬ್ರಿಟಿಷರ ದಮನಕಾರಿ ಮತ್ತು ಭಯೋತ್ಪಾದಕ ಸಾಮ್ರಾಜ್ಯಶಾಹಿಯ ಧೋರಣೆಗಳೇ ನಿರಸ್ತ್ರ ಭಾರತೀಯರಿಂದ ಅಂತಹ ಹುಚ್ಚುತನಕ್ಕೆ ಪ್ರಮುಖ ಕಾರಣವೆಂದು ಕಟುವಾಗಿ ಸಮರ್ಥಿಸಿಕೊಂಡರು.

ಬ್ರಿಟಿಷರ ವಿರುದ್ಧ ಸಮಾಜದ ಜನರಲ್ಲಿ ಹೊಗೆಯಾಡುತ್ತಿರುವ ಅತೃಪ್ತಿಯ ಸಹಜವಾದ ಅಭಿವ್ಯಕ್ತಿಯೇ ಸಶಸ್ತ್ರ ಕ್ರಾಂತಿಕಾರಿಗಳ ನಿರ್ಭಯ ಚಟುವಟಿಕೆಗಳಾಗಿವೆಯೆಂದು ನಂಬಿದ್ದ ತಿಲಕರು ಸದಾ ಸಶಸ್ತ್ರ ಕ್ರಾಂತಿಕಾರಿಗಳ ಹಿಂದೆ ಇದ್ದಾರೆ. ಮಹಾನ್‌ಕ್ರಾಂತಿಕಾರಿಯಾದ ವೀರ ಸಾವರ್‌ಕರರ ಪ್ರಕಾರ ಕ್ರಾಂತಿಕಾರರು ಕತ್ತಿಯ ಬ್ಲೇಡ್ ಆಗಿದ್ದರೆ ತಿಲಕರು ಅದೇ ಕತ್ತಿಯ ಹಿಡಿಯಾಗಿದ್ದರು. ಅವರ ಸಲಹೆಯ ಮೇರೆಗೆ ಎಲ್ಲಾ ಹೋರಾಟದ ಚಟುವಟಿಕೆಗಳು ನಡೆಯುತ್ತಿದ್ದವು ಎಂದು ಅರ್ಥವಲ್ಲ. ಆದರೆ ಅವರು ಅವರ ಪರವಾಗಿ ನಿಂತಿದ್ದರು ಮತ್ತು ಅಗತ್ಯ ಬಿದ್ದರೆ ಅವರಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಸಾಧ್ಯವಾದ ಮೂಲಗಳಿಂದ ನೆರವನ್ನು ಕಲ್ಪಿಸಿಕೊಡುತ್ತಿದ್ದರು ಮತ್ತು ಅವರಿಗೆ ಹೆಚ್ಚು ವಾಸ್ತವಿಕ ಮತ್ತು ಜಾಗೃತರಾಗಿರಲು ಎಚ್ಚರಿಕೆ ಕೊಡುತ್ತಿದ್ದರು.

ಕೊಲ್ಹಾಪುರದ ಸಂಸ್ಥಾನದಲ್ಲಿ ವೇದೋಕ್ತ ಸಂಘರ್ಷದ ಕಾಲದಲ್ಲಿ ಬ್ರಾಹ್ಮಣರ ದುಷ್ಟಕೂಟಕ್ಕೆ ಬೆಂಬಲ ನೀಡಿದ ರೀತಿಯಲ್ಲಿಯೇ ಬ್ರಾಹ್ಮಣ ಉಗ್ರಗಾಮಿಗಳಿಗೆ ಬೆಂಬಲ ನೀಡುತ್ತಿದ್ದರು. ೧೯೦೭ರ ಜೂನ್ ತಿಂಗಳಲ್ಲಿ ಶಾಹು ಅವರು ಉಗ್ರಗಾಮಿಗಳ ಚಟುವಟಿಕೆಗಳನ್ನು ತಡೆಯಲು ಸಾರ್ವಜನಿಕರ ಸಭೆಗಳನ್ನು ನಿಷೇಧಿಸುವ ರಾಜಾಜ್ಞೆಯನ್ನು ಹೊರಡಿಸಿದರು. ಈ ಕ್ರಮವನ್ನು ಖಂಡಿಸುತ್ತಾ ತಿಲಕರು ತಮ್ಮ ಕೇಸರಿ ಪತ್ರಿಕೆಯಲ್ಲಿ ಬರೆಯುತ್ತಾರೆ: "ಪಂಜಾಬ್ ಮತ್ತು ಪೂರ್ವ ಬಂಗಾಲದ ಪ್ರಾಂತ್ಯಗಳಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರ ಪೂರ್ವಾನುಮತಿಯಿಲ್ಲದೆ ಸಾರ್ವಜನಿಕ ಸಭೆಗಳನ್ನು ನಿಷೇಧಿಸಿದ್ದಂತೆಯೇ ಶಿವಾಜಿ ಮಹಾಶಯರ ವಂಶಸ್ಥರಾದ ಛತ್ರಪತಿಯವರು ಯಥೋಚಿತವಾಗಿ ಒಪ್ಪುವಂತಹ ಹಾಗೂ ಕ್ರೂರಿಯಾದ ಬ್ರಿಟಿಷ್ ಸರಕಾರದ ತತ್ವಗಳಿಗೆ ಅನುಗುಣವಾದ ಆಜ್ಞೆಗಳನ್ನು ಹೊರಡಿಸುತ್ತಿರುವುದು ಅಸಹ್ಯಕರವಾದದ್ದು. ಕೊಲ್ಹಾಪುರ ಸಂಸ್ಥಾನದಲ್ಲಿ ಅಂತಹ ಯೋಜನೆ(ಸಂಚು)ಗಳನ್ನು ರೂಪಿಸಲಾಗಿದೆಯೆ ಅಥವಾ ರಾಜನ ವಿರುದ್ಧ ಹೂಡಲಾಗಿರುವ ಅಂತಹ ಸಂಚುಗಳನ್ನು ಬ್ರಿಟಿಷರ ಹೇಳಿಕೆಯ ಕಾನೂನು ಮತ್ತು ಧೋರಣೆಗಳನ್ನು ಅನುಕರಿಸದೆ ಬಗ್ಗುಬಡಿಯುವುದಕ್ಕೆ ಆಗುವುದಿಲ್ಲವೆ? ಘಟನೆಗಳು ಮಾತ್ರವೇ ಮಹಾರಾಜರು ನಮ್ಮ ಶತ್ರುಗಳೆಂಬುದು ಅಥವಾ ನಾವು ಅವರ ಶತ್ರುಗಳೆಂಬುದು ನಿರ್ಧರಿಸುತ್ತವೆ".[1]

## ಕೊಲ್ಹಾಪುರದಲ್ಲಿ ಹೋರಾಟಗಾರರ ಚಟುವಟಿಕೆಗಳು

ಕೊಲ್ಹಾಪುರದ ಹೋರಾಟಗಾರರ ಚಟುವಟಿಕೆಗಳು ವೇದೋಕ್ತ ಪ್ರಕರಣದ ಮೂಲಕ ಮುಂದುವರಿದಿದ್ದವು. ಈ ಪ್ರಕರಣದಲ್ಲಿ ಅಂತಿಮವಾಗಿ ಸೋಲುಂಡು ನಂತರ ಬ್ರಾಹ್ಮಣರು ಈ

ಚಟುವಟಿಕೆಗಳನ್ನು ತೀವ್ರಗೊಳಿಸಿದರು. ಸಂಸ್ಥಾನದ ಮುಖ್ಯಸ್ಥರಾಗಿ, ಸಾಧ್ಯವಾದ ಎಲ್ಲಾ ವಿಧಾನಗಳ ಮೂಲಕ ಈ ಚಟುವಟಿಕೆಗಳನ್ನು ತಡೆಯುವುದು ಶಾಹು ಅವರ ಕರ್ತವ್ಯವಾಗಿತ್ತು. ಈ ಕರ್ತವ್ಯದ ನಿರ್ವಹಣೆಗಾಗಿ ಈ ಬಗ್ಗೆ ಬ್ರಿಟಿಷರ ನೆರವು ಕೇಳುವುದು ಮತ್ತು ಅವರಿಗೆ ಸಹಾಯ ಮಾಡುವುದು ಅನಿವಾರ್ಯವಾಗಿತ್ತು. ಕೊಲ್ಹಾಪುರದ ಹೋರಾಟಗಾರರಿಗೂ ಮತ್ತು ದೇಶದ ಬೇರೆ ಕಡೆಯ ಹೋರಾಟಗಾರರ ನಡುವೆ ಅಜಗಜಾಂತರ ವ್ಯತ್ಯಾಸವಿತ್ತು. ಕೊಲ್ಹಾಪುರದ ಹೋರಾಟಗಾರರು ವೇದೋಕ್ತದ ಸಂಘರ್ಷದ ಹಿನ್ನೆಲೆಯಲ್ಲಿ ಕೆಲಸಮಾಡುತ್ತಿದ್ದರು. ಹಾಗಿರುವಾಗ, ಅವರ ಹೋರಾಟವು ಧಾರ್ಮಿಕ ಅಸಹನೆಯ ಬಣ್ಣವನ್ನು ಧರಿಸಿತ್ತು. ಬ್ರಾಹ್ಮಣರು ಶಾಹು ವಿರುದ್ಧ ಈ ಅಸಹನೆಯ ಮನೋಭಾವವನ್ನು ತಾಳಿದ್ದರು. ಶಾಹು ಮತ್ತು ಬ್ರಾಹ್ಮಣರ ನಡುವಿನ ಸಂಬಂಧಗಳು ದ್ವೇಷಪೂರಿತವಾಗಿದ್ದವು. ಆದ್ದರಿಂದ ಬ್ರಾಹ್ಮಣರು ರಾಜನನ್ನು ತೊಂದರೆಗಳ ಇಕ್ಕಟ್ಟಿಗೆ ಸಿಗಿಸಲು ಬೇರೆ ವಿಧಾನಗಳನ್ನು ಕಂಡುಕೊಂಡರು.

ಚಾರಿತ್ರ್ಯವಧೆ ಅಂತಹ ವಿಧಾನಗಳಲ್ಲಿ ಒಂದು. ಕೊಲ್ಹಾಪುರದಲ್ಲಿ ಕೆಲವು ದುಷ್ಟಶಕ್ತಿಗಳು ಬಾಂಬೆ ಸರಕಾರಕ್ಕೆ ಬೇನಾಮಿಗಳ ಹೆಸರುಗಳಲ್ಲಿ ಸಹಿಮಾಡಿ ಅಥವಾ ಸಹಿಮಾಡದೆ ಅರ್ಜಿಗಳನ್ನು ಗುಜರಾಯಿಸಿದರು. ಈ ಅರ್ಜಿಗಳಲ್ಲಿ ಶಾಹು ಮಹಾರಾಜರು ಕೊಲ್ಹಾಪುರದಲ್ಲಿ ಮೂವರು ಯುವತಿಯರ ಮಾನಭಂಗ ಮಾಡಿದ್ದಾರೆ ಎಂದು ದೂರಿದ್ದರು. ಶಾಹು ಮಹಾರಾಜರು ಈ ಸವಾಲನ್ನು ಉತ್ತಮ ರೀತಿಯಲ್ಲಿ ಸ್ವೀಕರಿಸಿದರು. ಶಾಹುರವರ ಚಾರಿತ್ರ್ಯವಧೆಯ ಪ್ರಯತ್ನಗಳನ್ನು ನಂತರ ವಿವರವಾಗಿ ಚರ್ಚಿಸಲಾಗುವುದು. ಸದ್ಯಕ್ಕೆ ಬ್ರಾಹ್ಮಣರ ಮತ್ತು ಶಾಹುರವರ ನಡುವಣ ಕಿತ್ತಾಟದಲ್ಲಿ ಬ್ರಾಹ್ಮಣರು ಯಾವುದೇ ರೀತಿಯ ಕೀಳುಮಟ್ಟಕ್ಕಾದರೂ ಇಳಿದಿದ್ದರೆಂಬುದನ್ನು ಗಮನಿಸಬೇಕು. ತಿಲಕರು ಅಂತಹ ಕೀಳುಮಟ್ಟದ ಕೆಲಸಗಳಿಗೆ ಬೆಂಬಲ ನೀಡಲಿಲ್ಲವೆಂಬುದನ್ನು ಗಮನಿಸಬೇಕು.

ಶಾಹು ಮತ್ತು ಬ್ರಾಹ್ಮಣ ಉಗ್ರವಾದಿಗಳ ನಡುವೆ ನಡೆಯುತ್ತಿದ್ದ ಹೋರಾಟದಲ್ಲಿ ಬ್ರಾಹ್ಮಣ ಉಗ್ರವಾದಿಗಳು ಛತ್ರಪತಿಯನ್ನು ಮುಗಿಸಲು ಪ್ರಯತ್ನಿಸಿದರು. ಅಲ್ಲಿಂದ ಮುಂದಕ್ಕೆ ಶಾಹುರವರನ್ನು ನಾಶಪಡಿಸುವುದೇ ಅವರಿಗೆ ಪ್ರಮುಖ ಗುರಿಯಾಗಿತ್ತು. ೧೯೦೮ರ ಮಾರ್ಚ್ ೨೧ರಂದು ಶಾಹುರವರ ಮಗಳಾದ ಅಕ್ಕಸಾಹೇಬ ಮಹಾರಾಜರ ಮದುವೆಯಿತ್ತು. ಮದುವೆ ಮಾಡಲು ಭವ್ಯವಾದ ತಯಾರಿ ಮಾಡಲಾಗಿತ್ತು. ಬಾಂಬೆಯ ಗೌರ್ನರ್ ಸರ್ ಜಾರ್ಜ್ ಕ್ಲಾರ್ಕ್ ಮತ್ತು ಹಲವು ಬ್ರಿಟಿಷರ ಸಹವರ್ತಿಗಳು, ರಾಜಕೀಯ ಏಜೆಂಟ್ ಫೆರಿಸ್, ಭಾವನಗರ ಮತ್ತು ಮುಧೋಳದ ಮಹಾರಾಜರು ಮತ್ತು ಇತರೆ ಸಂಸ್ಥಾನದ ಮಹಾರಾಜರು ಈ ಸಂದರ್ಭದಲ್ಲಿ ಹಾಜರಿದ್ದರು. ಹೋರಾಟಗಾರರಾದ ದಾಮುಜೋಷಿ, ಗಣಪತಿರಾವ್ ಮಧೋರ ಮೊದಲಾದವರು ಈ ದಿನ ಈ ಗಣ್ಯರಿಗೆ ಬಾಂಬ್ ಹಾಕಲು ಯೋಜಿಸಿದ್ದರು. ಅದೃಷ್ಟವಶಾತ್ ಪುಣೆಯಿಂದ ತರಿಸಿದ ಬಾಂಬ್ ಸಕಾಲಕ್ಕೆ ಕೊಲ್ಹಾಪುರಕ್ಕೆ ತಲುಪಲಿಲ್ಲ ಮತ್ತು ದುರಂತ ತಪ್ಪಿತು. ಛತ್ರಪತಿ ಮತ್ತು ಗೌರ್ನರರ ಜೊತೆಯಲ್ಲಿದ್ದ ನವದಂಪತಿಗಳನ್ನು ಕೊಲ್ಹಾಪುರದಲ್ಲಿ ಬಾಂಬ್ ಹಾಕಿ ಸಿಡಿಸುವುದರಿಂದ ಕೊಲ್ಹಾಪುರದ ಬ್ರಾಹ್ಮಣರ ಮೇಲೆ ಆಗುತ್ತಿದ್ದ ಪರಿಣಾಮಗಳ ಬಗ್ಗೆ ಬುದ್ಧಿಗೇಡಿ ಹೋರಾಟಗಾರರು ಚಿಂತಿಸಲಿಲ್ಲ. ಶಾಹು ಸಮೇತ ಕರ್ನಲ್ ಫೆರಿಸರು ಭಯೋತ್ಪಾದಕರ ಕೊಲ್ಲುವ ಪಟ್ಟಿಯಲ್ಲಿದ್ದರು. ಫೆರಿಸರು ವೇದೋಕ್ತ ಸಂಘರ್ಷದಲ್ಲಿ ಶಾಹು ಅವರಿಗೆ ಸಹಾಯಮಾಡಿದ್ದರಿಂದ ಅವರು ಕಡುವೈರಿಗಳಾಗಿದ್ದರು. ಅವರು ನಿವೃತ್ತರಾದ ಬಳಿಕ ರೈಲಿನಲ್ಲಿ ವಾಪಸ್ಸು ಬರುವಾಗ ದಾರಿಯಲ್ಲಿ ಅವರನ್ನು ಕೊಲ್ಲುವ ಸಂಚನ್ನು ಹೂಡಲಾಗಿತ್ತು. ೧೯೦೮ ಏಪ್ರಿಲ್ ೧೬ರಂದು ದಾಮುಜೋಷಿ ಅವರು ಅವರಿಗೆ ರೈಲ್ವೆ ಬೋಗಿಯಲ್ಲಿ

ಗುಂಡು ಹಾರಿಸಿದರು. ಫೆರಿಸರು ಅದೃಷ್ಟವಶಾತ್, ದಾಮು ಅವರ ದುರಾದೃಷ್ಟ ಗುಂಡು ಹಾರಲಿಲ್ಲ. ಫೆರಿಸರು ಬದುಕಿದರು.

ಮೂರು ತಿಂಗಳುಗಳ್ಳೊಗೆ ಶಾಹು ಅವರಿಗೆ ಬಾಂಬ್ ಇಟ್ಟು ಸಿಡಿಸುವ ಪ್ರಯತ್ನ ನಡೆಯಿತು. ತಮ್ಮ ಹಿತೈಷಿ ಸರ್ ಕ್ಲಾಡ್‌ಹಿಲ್ ಅವರಿಗೆ ಈ ಪ್ರಯತ್ನದ ಬಗ್ಗೆ ಒಂದು ಪತ್ರ ಬರೆಯುತ್ತಾರೆ: "ಕೊಲ್ಹಾಪುರದಲ್ಲಿ ಈ ದಿನಗಳಲ್ಲಿ ಭಯೋತ್ಪಾದಕ ಚಟುವಟಿಕೆಗಳು ತೀವ್ರಗೊಂಡಿವೆ. ನನ್ನ ಬಗ್ಗೆ ಬ್ರಾಹ್ಮಣರಿಗಿರುವ ದ್ವೇಷ ಪರಾಕಾಷ್ಠೆಯನ್ನು ಮುಟ್ಟಿದೆ. ನಾನು ಪುಣೆಯಿಂದ ಕೊಲ್ಹಾಪುರಕ್ಕೆ ವಾಪಸ್ಸು ಬರುವುದನ್ನು ಸ್ಥಿರಪಡಿಸಿಕೊಂಡು ಅವರು ರೈಲ್ವೆ ಸ್ಟೇಷನ್ನಿನಿಂದ ಅರಮನೆಗೆ ಬರುವ ದಾರಿಯಲ್ಲಿ ಬಾಂಬನ್ನು ಇಟ್ಟಿದ್ದರು. ಆದರೆ ನಾನು ಮುಂದಿನ ರೈಲನ್ನು ತೆಗೆದುಕೊಳ್ಳಬೇಕಾಯಿತು. ಏಕೆಂದರೆ ನಾನು ರೋಗಿಯ ಸಂಬಂಧಿಯನ್ನು ನೋಡಬೇಕಾಗಿತ್ತು. ಕೊಲ್ಹಾಪುರದಲ್ಲಿ ಸಂಪ್ರದಾಯ ಪ್ರಕಾರ ವಾಹನ ಓಡಾಟಕ್ಕೆ ರಸ್ತೆಯನ್ನು ಮುಚ್ಚಲಾಗಿತ್ತು. ಆದರೆ ನಾನು ಸೂಚಿತ ಸಮಯಕ್ಕೆ ಬಾರದಿದ್ದರಿಂದ ವಾಹನಗಳ ಸಂಚಾರಕ್ಕೆ ರಸ್ತೆಯನ್ನು ಮತ್ತೆ ತೆರೆಯಲಾಯಿತು. ಕುದುರೆಗಾಡಿಯು ಹೋಗುತ್ತಿರುವಾಗ ಬಾಂಬ್ ಸ್ಫೋಟಗೊಂಡಿತು, ಕುದುರೆಗೆ ಗಾಯವಾಯಿತು. ನಾನು ಅದೃಷ್ಟದಿಂದ ಬದುಕಿ ಉಳಿದೆನು. ನನಗೆ ಬಾಂಬೆಯಿಂದ ಬೆದರಿಕೆಯ ಪತ್ರಗಳು ಬಂದಿದ್ದವು. ನಾನು ತಿಲಕರನ್ನು ಜಗದ್ಗುರುವನ್ನು ಅವಮಾನಿಸಿರುವುದರಿಂದ ನನ್ನನ್ನು ಒಂದು ತಿಂಗಳೊಳಗೆ ಕೊಲ್ಲುವ ಬೆದರಿಕೆ ಪತ್ರಗಳು ಬಂದವು. ನನ್ನನ್ನು ಬ್ರಿಟಿಷ್ ಸರಕಾರವು ಉಳಿಸಲಾರದು ಎಂದು ಅವರು ಜಂಬಪಟ್ಟುಕೊಂಡಿದ್ದರು. ಕೊಲ್ಹಾಪುರವು ಭಯೋತ್ಪಾದಕ ಕೇಂದ್ರವಾಗಿರುವುದನ್ನು ಹೇಳಲು ನನಗೆ ನಾಚಿಕೆಯಾಗುತ್ತದೆ.[2] ಸಂಸ್ಥಾನಗಳನ್ನು ಒಳಗೊಂಡಿರುವ ದಕ್ಷಿಣ ಮರಾಠ ಸಂಸ್ಥಾನಗಳಲ್ಲಿ ಕೊಲ್ಹಾಪುರದ ಮತ್ತು ಮುಧೋಳದ ಮಹಾರಾಜರು ಮರಾಠರಾಗಿದ್ದಾರೆ. ಉಳಿದ ಸಂಸ್ಥಾನಗಳು ಬ್ರಾಹ್ಮಣರ ಸಂಸ್ಥಾನಗಳಾಗಿವೆ. ಸಹಜವಾಗಿ, ಈ ಪ್ರದೇಶದ ದಕ್ಷಿಣದ ಮರಾಠ ದೇಶದಲ್ಲಿ ಬ್ರಾಹ್ಮಣರ ಪ್ರಾಬಲ್ಯವಿತ್ತು". (೧೮ ಜುಲೈ ೧೯೦೮).[3]

ದಿನಗಳು ಕಳೆದಂತೆ ಛತ್ರಪತಿಯನ್ನು ಕೊನೆಗಾಣಿಸಲು ಹಲವಾರು ಸಂಚುಗಳನ್ನು ಹೂಡಲಾಯಿತು. ಅಂತಹ ಒಂದು ಸಂಚನ್ನು ತಿಳಿಸುತ್ತಾ ಅವರ ಗುರು ಫ್ರೆಜರ್ ಬರೆಯುತ್ತಾರೆ: "ನಿಮ್ಮನ್ನು ಕೊಲ್ಲಲು ಜನರು ಪ್ರವೃತ್ತರಾಗಿದ್ದಾರೆಂಬ ಸಂದರ್ಭ ದುರಾದೃಷ್ಟವಶಾತ್ ಸತ್ಯವಾಗಿ ಪರಿಣಮಿಸಿದೆ. ಈ ಸಂಚಿನ ಸುಳಿವುಗಳನ್ನು ಪತ್ತೆಹಚ್ಚಲಾಗಿದೆ. ಬಾಂಬೆ ಸರಕಾರವು ನಿಮ್ಮ ರಕ್ಷಣೆಯ ವ್ಯವಸ್ಥೆಯನ್ನು ಮಾಡಿದೆ (೫ ಏಪ್ರಿಲ್ ೧೯೧೦)".[4] ಭಯೋತ್ಪಾದಕರು ಶಾಹು ಅವರ ಜೀವನ ಮುಗಿಯುವವರೆಗೆ ಅವರನ್ನು ಹಿಂಬಾಲಿಸಿದರು. ಶಾಹು ಅವರ ಹಿತೈಷಿಯಾದ ಪುಣೆಯ ಬಾಲಚಂದ್ರ ಶೇಖ್‌ದಾರ್ ಅವರು ಬರೆದ ಒಂದು ಪತ್ರ ಸಿಕ್ಕಿದೆ. ಅವರು ಬರೆಯುತ್ತಾರೆ: "ಹುಜೂರರ (ಮಾನ್ಯ ಮಹಾರಾಜರ) ವ್ಯಕ್ತಿಯನ್ನು ಘಾಸಿಗೊಳಿಸಲು ಕೆಲವು ಜನರು ಬಯಸುತ್ತಿದ್ದಾರೆಂದು ನಾನು ಕೇಳಿರುವುದರಿಂದ ನಾನು ಈ ಪತ್ರ ಬರೆಯಲು ಕಾರಣವಾಗಿದೆ. ಹುಜೂರರ ಮೇಲೆ ಸ್ಫೋಟಕಗಳನ್ನು ಎಸೆದು ಅವರ ಪ್ರಾಣ ತೆಗೆಯಲು ಪ್ರಯತ್ನಿಸುವರೆಂದು ಕಾಣುತ್ತದೆ. ಈ ಸಂಗತಿಯನ್ನು ನಾನು ಅವರ ಸಂಭಾಷಣೆ ಕೇಳಿ ತಿಳಿದುಕೊಂಡೆ. ವಿಷದ ನೀರನ್ನು ಕುಡಿಸುವ ಮೂಲಕ ಹುಜೂರರ ಪ್ರಾಣ ತೆಗೆಯುವ ಸಾಧ್ಯತೆಯಿದೆ. ನನ್ನನ್ನು ಅವರು ನೋಡಿದ ಮೇಲೆ ತಮ್ಮ ಸಂಭಾಷಣೆಯನ್ನು ಸೋರಿಕೆ (ತಿಳಿಸಿದರೆ) ಮಾಡಿದರೆ ನನ್ನ ಪ್ರಾಣ ತೆಗೆಯುವ ಬೆದರಿಕೆಯನ್ನು ಹಾಕಿದರು. ಆದರೆ ನಾನು ಹುಜೂರರ ನಿಷ್ಠಾವಂತ ಪ್ರಜೆ, ಹುಜೂರರ ದಯೆಯಿಂದ ನನ್ನ ಕುಟುಂಬ ಚೆನ್ನಾಗಿದೆ, ಆ ಸಂಭಾಷಣೆಯನ್ನು ತಿಳಿಸುವುದು ನನ್ನ ಕರ್ತವ್ಯ. ನಾನು ಅದನ್ನು ಮಾಡಿದ್ದೇನೆ".[5]

ಶಾಹು ಅವರ ಶತ್ರುಗಳು ಅವರ ಪ್ರಾಣವನ್ನು ತೆಗೆಯುವುದಕ್ಕೆ ಸುಳಿದಾಡುತ್ತಿರುವಂತೆಯೇ ಅವರ ಹಿತೈಷಿಗಳು ಸಮಾಜದಲ್ಲಿ ಛತ್ರಪತಿಯನ್ನು ರಕ್ಷಿಸಲು ಎಚ್ಚರಿಕೆಯಿಂದ ಇದ್ದಾರೆ. ಅವರಿಗೆ ಅವರ ಜೀವ ಅತಿಮುಖ್ಯವೆಂಬುದು ಮೇಲಿನ ಪತ್ರದಿಂದ ಸ್ಪಷ್ಟವಾಗುತ್ತದೆ.

ದಕ್ಷಿಣದ ಮಹಾರಾಷ್ಟ್ರದಲ್ಲಿ ಕೊಲ್ಹಾಪುರ ಮಾತ್ರ ಮರಾಠ ಸಂಸ್ಥಾನವಾಗಿದೆ. ಇತರೆ ಸಂಸ್ಥಾನಗಳಾದ ಸಾಂಗ್ಲಿ, ಇಚಲಕರಂಜಿ, ಔಂಧ, ಭೋರ್ ಮೊದಲಾದವುಗಳು ಬ್ರಾಹ್ಮಣರ ಸಂಸ್ಥಾನಗಳನ್ನು ಬಿಟ್ಟರು ಮತ್ತು ಪುಣೆಯ ನಂತರ ಕೊಲ್ಹಾಪುರವು ಎರಡನೆಯ ಮುಖ್ಯ ಕೇಂದ್ರವನ್ನಾಗಿ ತಮ್ಮ ಚಟುವಟಿಕೆಗಳಿಗೆ ಮಾಡಿಕೊಂಡರು. ಇದನ್ನು ಬ್ರಾಹ್ಮಣರೇ ಸಂಪೂರ್ಣವಾಗಿ ರೂಪಿಸಿದ ಸಂಚೆಂದು ಶಾಹು ಅವರಿಗೆ ಮನವರಿಕೆಯಾಯಿತು. ಹೋರಾಟಗಾರರು ಬ್ರಿಟಿಷರೊಂದಿಗೆ ಹೋರಾಟವನ್ನು ಮುಂದುವರಿಸಿದರು ಮತ್ತು ಅದೇ ಸಮಯದಲ್ಲಿ ಶಾಹುವನ್ನು ಇಕ್ಕಟ್ಟಿಗೆ ಸಿಗಿಸುತ್ತಿದ್ದರು. ಹೋರಾಟಗಾರರಿಗೆ ಒಂದೇ ಕಲ್ಲಿನಿಂದ ಎರಡು ಪಕ್ಷಿಗಳನ್ನು ಹೊಡೆದು ಉರುಳಿಸಬೇಕಾಗಿತ್ತು. ಅವರು ಬ್ರಿಟಿಷರನ್ನು ಶತ್ರುಗಳೆಂದು ಭಾವಿಸಿದರು. ವಿದೇಶಿಯರನ್ನು ದ್ವೇಷಿಸಿದ ರೀತಿಯಲ್ಲಿ ಶಾಹು ಅವರನ್ನು ಅವರು ದ್ವೇಷಿಸಿದರು. ಆದರೆ ಶಾಹು ಅವರ ಬಗೆಗಿನ ದ್ವೇಷವು ಬ್ರಾಹ್ಮಣಿಕೆಯ ಮೇಲರಿಮೆಯ ಸಂಕೀರ್ಣತೆಯ ಶ್ರೇಷ್ಠತೆ ಮತ್ತು ದೊಡ್ಡಸ್ತಿಕೆಯ ಪ್ರಜ್ಞೆಯಿಂದ ಮೂಡಿಬಂದಿದೆ. ಸಾವರ್‌ಕರ್ ಅಂತಹ ಇತರೆ ದೊಡ್ಡ ಮನುಷ್ಯರ ಕೃತಿಗಳಲ್ಲಿ ಬ್ರಾಹ್ಮಣರ ಸೊಕ್ಕನ್ನು ನೋಡಲಾರೆವು. ಅವರ ಹೋರಾಟದ ಚಟುವಟಿಕೆಗಳು ತಮ್ಮ ಮಾತೃಭೂಮಿಯ ಬಗೆಗಿನ ತಮ್ಮ ಪ್ರೀತಿಯ ಮೇಲೆ ಮಾತ್ರ ಆಧಾರಿತವಾಗಿವೆ.

### ಕ್ರಾಂತಿಕಾರಿ ಚಳುವಳಿಗಳಿಗೆ ಶಾಹು ಅವರ ಸಹಾಯ

ಶಾಹು ಅವರು ಖಂಡಿತವಾಗಿ ದೇಶದ ರಾಜಕೀಯ ಸ್ವಾತಂತ್ರ್ಯವನ್ನು ಹಂಬಲಿಸಿದರು ಮತ್ತು ಸ್ವಾತಂತ್ರ್ಯ ಹೋರಾಟಗಾರರಾದ ತಿಲಕರಂಥವರ ಬಗ್ಗೆ ಸೂಕ್ತ ಗೌರವವಿತ್ತು. ಆದರೆ ಅವರು ಬ್ರಿಟಿಷ್ ಸರಕಾರಕ್ಕೆ ಒಬ್ಬ ಸಾಮಂತನಾಗಿ ಕಟ್ಟಿಹಾಕಿಕೊಂಡಿದ್ದರಿಂದ ಭಾರತದ ಸ್ವಾತಂತ್ರ್ಯ ಅಥವಾ ರಾಷ್ಟ್ರೀಯ ನಾಯಕರ ಬಗ್ಗೆ ತಮ್ಮ ಮನೋಭಾವಗಳನ್ನು ಬಹಿರಂಗವಾಗಿ ವ್ಯಕ್ತಪಡಿಸಲಿಲ್ಲ. ತಮ್ಮ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತ ಮಹಾನ್ ಕ್ರಾಂತಿಕಾರಿಗಳ ಬಗ್ಗೆ ಅವರು ಎಂದಿಗೂ ದ್ವೇಷಿಸಲಿಲ್ಲ. ಮಿಗಿಲಾಗಿ ತಮ್ಮ ಅಂತರಂಗದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಪ್ರೀತಿ ಮತ್ತು ಗೌರವಗಳಿದ್ದವು. ಕೆಲವು ಉಲ್ಲೇಖಗಳು ಈ ಅಂಶವನ್ನು ತಿಳಿಸುತ್ತವೆ.

ನೇಪಾಲದ ಬಂದೂಕಗಳ ಪ್ರಕರಣಕ್ಕೆ ಮೊದಲ ಉಲ್ಲೇಖ ಸಂಬಂಧಿಸಿದೆ. ೧೯೦೨ ಮತ್ತು ೧೯೦೮ರ ನಡುವೆ ತಿಲಕರ ಸಹಾಯಕರಲ್ಲಿ ಒಬ್ಬರಾದ ಕಾಕಾ ಸಾಹೇಬ ಖಾಡಿಲ್ಕರ್ ಅವರು ನೇಪಾಲದಲ್ಲಿ ಬಂದೂಕಗಳ ತಯಾರಿಕೆ ಕಾರ್ಖಾನೆಯನ್ನು ಜರ್ಮನ್ ತಂತ್ರಜ್ಞರ ಸಹಾಯದಿಂದ ಸ್ಥಾಪಿಸಲು ಪ್ರಯತ್ನಿಸುತ್ತಿದ್ದ. ಈ ಸಾಹಸದ ಹಿಂದೆ ತಿಲಕರ ಸ್ಫೂರ್ತಿಯಿತ್ತು. ಅವರು ತಮ್ಮ ಸಹವರ್ತಿಗಳಾದ ವಾಸುಕಾಕ ಜೋಷಿ, ಖಾಪರ್ಡೆ ಮೊದಲಾದವರು ಇದನ್ನು ಪೂರೈಸಲು ಬೇಕಾಗಿದ್ದ ಸಾವಿರಾರು ರೂಪಾಯಿಗಳನ್ನು ಬಹಳ ಗುಟ್ಟಾಗಿ ಎತ್ತುವ ಹೊಣೆಗಾರಿಕೆ ತೆಗೆದುಕೊಂಡಿದ್ದರು. ಶಾಹು ಮಹಾರಾಜರು ಗುಟ್ಟಾಗಿ ತನ್ನ ಕಾಣಿಕೆ ೫೦೦೦ ರೂ. ಗಳನ್ನು ತಿಲಕರ 'ಗನ್–ಫಂಡ್'ಗೆ ಕಳುಹಿಸಿದ್ದಕ್ಕೆ ಸಾಕ್ಷ್ಯವಿದೆ. ಕೊಲ್ಹಾಪುರದ ಶಿವಾಜಿ ಕ್ಲಬ್ಬಿನ ಸಂಘಟಕರಲ್ಲಿ ಒಬ್ಬರಾದ ಗೋಪಾಲರಾವ್ ಪಾಲ್‌ಸುಲೆಯವರು ಈ ಅಂಶವನ್ನು ತಿಳಿಸಿದ್ದಾರೆ.[7]

ತಿಲಕರ ಮೊಮ್ಮಗ ಜಯವಂತರಾವ್ ಅವರು ೧೯೭೪ರಲ್ಲಿ ಶಾಹು ಅವರ ಜನ್ಮಶತಾಬ್ಧಿ ಜಯಂತಿಯ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ ಈ ಮೊತ್ತವನ್ನು ಶಾಹು ಮಹಾರಾಜರು ಮೀರಜ್‌ನ ರಾಜಾಸಾಹೇಬರ ಮೂಲಕ ಕೊಟ್ಟಿದ್ದರು ಎಂಬುದಕ್ಕೆ ಸಾಕ್ಷ್ಯವಿದೆಯೆಂದು ದೃಢೀಕರಿಸಿದ್ದಾರೆ.[8]

ಬಾಬು ಅರವಿಂದ ಘೋಷ್ ಅವರಿಗೆ ಸಹಾಯಧನ ಕಳುಹಿಸಿದ್ದಕ್ಕೆ ಎರಡನೇ ನಿದರ್ಶನ ಸಂಬಂಧಿಸಿದೆ. ನಂತರ ಖುದಿರಾಮ್‌ಬೋಸ್ ಮತ್ತು ಪ್ರಫುಲ್ಲಚಾಕಿ ಅವರು ಮುಜಾಫರ್‌ಪುರದಲ್ಲಿ ಏಪ್ರಿಲ್ ೩೦, ೧೯೦೮ರಲ್ಲಿ ಒಂದು ಬಾಂಬನ್ನು ಸಿಡಿಸಿದರು. ಭಾರತದಲ್ಲಿ ಕ್ರಾಂತಿಕಾರಿಗಳನ್ನು ಮುಗಿಸಿಬಿಡಲು ಬ್ರಿಟಿಷ್ ಸರಕಾರ ಪ್ರಯತ್ನ ಮಾಡಿತು. ಬೆಂಗಾಲಿ ಕ್ರಾಂತಿಕಾರಿಗಳ ನಾಯಕನಾದ ಅರವಿಂದ ಘೋಷರನ್ನು ಹಿಡಿದರು ಮತ್ತು ಅವರು ಒಂದು ಪೊಲೀಸ್ ಠಾಣೆಯಲ್ಲಿ ಸಾಮಾನ್ಯ ಅಪರಾಧಿಯಂತೆ ಅವರನ್ನು ಸ್ಥಾನಬದ್ಧತೆಯಲ್ಲಿಟ್ಟಿದ್ದರು. ಅವರ ಸಹೋದರಿ ಮನವಿಮಾಡಿ ಅವರ ಬಿಡುಗಡೆಗಾಗಿ ಸಾರ್ವಜನಿಕರಿಂದ ಹಣವನ್ನು (ನಿಧಿ) ಸಂಗ್ರಹಿಸಿದರು. ಶಾಹು ಅವರು ಮಹಾಕ್ರಾಂತಿಕಾರಿಗಳಾದ ಅರವಿಂದರಂತಹರನ್ನು ಹೆಚ್ಚು ತೊಂದರೆಯಲ್ಲಿರುವುದಕ್ಕೆ ಬಹಳ ಪರಿತಪಿಸಿದರು ಮತ್ತು ತಮ್ಮ ಬರೋಡಾದ ಸ್ನೇಹಿತ ಖಾಸೆರಾವ್ ಜಾಧವ ಅವರ ಸಹೋದರ ಕ್ಯಾಪ್ಟನ್ ಮಾಧವರಾವ್ ಅವರ ಮೂಲಕ ಗೌಪ್ಯವಾಗಿ ೫೦೦೦ ರೂ.ಗಳನ್ನು ತಮ್ಮ ಕಾಣಿಕೆಯಿಂದ ಈ ನಿಧಿಗೆ ಕಳುಹಿಸಿಕೊಟ್ಟರು. ಶಾಹು ಅವರ ನಿಕಟ ಸಹವರ್ತಿಗಳಲ್ಲಿ ಒಬ್ಬರಾದ ವಿ. ಡಿ. ತೋಫ್‌ಖಾನೆ ಅವರು ತಮ್ಮ ಆತ್ಮಚರಿತ್ರೆಯಲ್ಲಿ ಈ ಅಂಶವನ್ನು ತನಗೆ ಶಾಹು ಅವರೇ ಹೇಳಿದ್ದರೆಂದು ಸಮರ್ಥಿಸಿದ್ದಾರೆ.[9]

ತಿಲಕರ ಒಡನಾಡಿ ಮತ್ತು ಶಾಹು ಅವರ ಕಟ್ಟಾ ವಿರೋಧಿ ಎನ್. ಸಿ. ಕೇಲ್ಕರ್ ಅವರು ಮಹಾರಾಜ ಸಯ್ಯಾಜಿರಾವ್ ಮತ್ತು ಮಹಾರಾಜ ಶಾಹು ಅವರು "ಸಾಧ್ಯವಾದಾಗಲೆಲ್ಲ ಕ್ರಾಂತಿಕಾರಿಗಳಿಗೆ ಸಹಾಯ ಮಾಡಿದ್ದಾರೆ" ಎಂದು ಹೇಳಿದ್ದಾರೆ.[10]

ಬೆಳಗಾಮಿನ ತಿಲಕರ ನಿಷ್ಠಾವಂತ ಭಕ್ತ ಮತ್ತು ಸಶಸ್ತ್ರ ಹೋರಾಟದ ಕಾರ್ಯಕರ್ತ ಗಣಪತ್‌ರಾವ್ ಜಂಬೋಟ್ಕರ್ ಅವರು ಕೇಸರಿಗೆ ನೀಡಿದ ಸಂದರ್ಶನ ಮತ್ತು ಲೇಖನದಲ್ಲಿ ಮತ್ತೊಂದು ಉಲ್ಲೇಖ ಸಿಗುತ್ತದೆ. ಅವರು ಬರೆಯುತ್ತಾರೆ: "ಲೋಕಮಾನ್ಯ ತಿಲಕರು ಸ್ವಾತಂತ್ರ್ಯಕ್ಕಾಗಿ ಅಪಾಯ ತರುವಂತಹ ಸಶಸ್ತ್ರ ಹೋರಾಟಕ್ಕೆ ಸಹಾಯಮಾಡುವ ಸಲುವಾಗಿ ೧೯೦೩ ಮತ್ತು ೧೯೦೮ರ ನಡುವೆ ಒಂದು ಗೌಪ್ಯ ಸಮಾಜವನ್ನು ಸಂಘಟಿಸಿ, ಅದನ್ನು ಅವರು ಜಾಣ್ಮೆಯಿಂದ ನಡೆಸುತ್ತಿದ್ದರು. ಶಾಹು ಮಹಾರಾಜರು ಪ್ರತಿ ವರ್ಷ ೫೦೦ ರೂ.ಗಳನ್ನು ಈ ಸಮಾಜಕ್ಕೆ ಕಳುಹಿಸಿಕೊಡುತ್ತಿದ್ದರು".[11]

ಶಾಹು ಮಹಾರಾಜರ ಜೀವನ ಚರಿತ್ರೆಗಾರ ಕೆ. ಜಿ. ಸೂರ್ಯವಂಶಿ ಅವರು ರಾವ್ ಬಹದ್ದೂರ್ ವಿಚಾರೆ ಅವರ ಕಛೇರಿಯ ಸಾಕ್ಷ್ಯದ ಬಗ್ಗೆ ಹೇಳುತ್ತಾರೆ: ಶಾಹು ಮಹಾರಾಜರು ತಿಲಕರಿಗೆ ತಮ್ಮ ನಂಬಿಕಸ್ಥ ಅಧಿಕಾರಿ ಅಮೃತರಾವ್ ವಿಚಾರೆಯವರ ಮೂಲಕ ದೊಡ್ಡ ಮೊತ್ತದ ಹಣವನ್ನು ಕಳುಹಿಸಿಕೊಡುತ್ತಿದ್ದರು".[12]

ಶಾಹು ಮಹಾರಾಜರು ಕ್ರಾಂತಿಕಾರಿ ಚಳುವಳಿಗೆ ಸಹಾಯ ಮಾಡಿದ್ದರ ಬಗ್ಗೆ ದಾಖಲೆಯ ಸಾಕ್ಷ್ಯಾಧಾರಗಳು ಸಿಗುತ್ತವೆಯೆಂದು ಕೆಲವು ವಿದ್ವಾಂಸರು ಪ್ರಶ್ನೆ ಎತ್ತುವರು. ಈ ಪ್ರಶ್ನೆಗೆ ಒಂದೇ ಒಂದು ಉತ್ತರ. ಅಂತಹ ಸಹಾಯವನ್ನು ಗೌಪ್ಯವಾಗಿ ಕಲ್ಪಿಸಲಾಗಿದೆ. ಆ ಬಗ್ಗೆ ಯಾವುದೇ ದಾಖಲೆ ಇಡುವುದು

ಅಸಾಧ್ಯ. ಅಂತಹ ಸಹಾಯಕ್ಕೆ ಯಾವುದೇ ದಾಖಲೆಯ ಸಾಕ್ಷ್ಯಾಧಾರವಿಡುವುದು ಆತ್ಮ-ವಿನಾಶ ಮತ್ತು ಸದುದ್ದೇಶದ ನಾಶವಾಗುತ್ತದೆ. ಶಾಹು ಅವರು ಮಾತ್ರವಲ್ಲದೆ, ತಿಲಕರು ಸಹ ತಾನು ಕ್ರಾಂತಿಕಾರಿಗಳಿಗೆ ನೀಡಿದ ಸಹಾಯದ ಒಂದೇ ಒಂದು ಮೂರ್ತವಾದ ಸಾಕ್ಷ್ಯಾಧಾರ ಸರಕಾರದ ಕೈಗೆ ಸಿಗದಂತೆ ಕಟ್ಟೆಚ್ಚರಿಕೆಯನ್ನು ಸದಾ ವಹಿಸಿದ್ದರು. ರ್‍ಯಾಂಡರ ಕಗ್ಗೊಲೆಯ ಪ್ರಕರಣದಲ್ಲಿ ಛಾಪೆಕರ್ ಸಹೋದರರಿಗೆ ವಿವಿಧ ಸ್ಥಳಗಳಲ್ಲಿ ಅವರಿಗೆ ವಸತಿ ಸೌಕರ್ಯ ಒದಗಿಸುವಾಗ ತಿಲಕರು ಸಹಾಯಮಾಡಿದ ಘಟನೆಯನ್ನು ಪ್ರಸಿದ್ಧ ಸಂಶೋಧಕ ವಿದ್ವಾಂಸ ವೈ. ಡಿ. ಫದಕೆ ತಿಳಿಸುತ್ತಾರೆ. ಅವರು ಈ ಮಾಹಿತಿಯನ್ನು ಸ್ವಾತಂತ್ರ್ಯದ ನಂತರ ಪ್ರಕಟಿಸಿದ ವಿವಿಧ ಆತ್ಮಚರಿತ್ರೆ ಮತ್ತು ಜೀವನಚರಿತ್ರೆಗಳಲ್ಲಿ ಸಂಗ್ರಹಿಸಿದರು. ಈ ಮಾಹಿತಿಯ ಆಧಾರದ ಮೇರೆಗೆ ತಮ್ಮ ಮುಕ್ತಾಯದಲ್ಲಿ ಹೀಗೆ ಹೇಳುತ್ತಾರೆ: "ಸ್ವಾತಂತ್ರ್ಯದ ನಂತರ ಸಂಗ್ರಹಿಸಿದ ಮಾಹಿತಿಯ ಪ್ರಕಾರ ರ್‍ಯಾಂಡ್ ಮತ್ತು ಆಯರೆಸ್ಟ್‌ರ ಕೊಲೆಗಡುಕರು ತಿಲಕರಿಗೆ ಗೊತ್ತಿದ್ದರು. ಬಿಳಿ ಅಧಿಕಾರಿಗಳನ್ನು ಕೊಲೆಮಾಡಿದ ಛಾಪೆಕರ್ ಸಹೋದರರ ವಸತಿಯನ್ನು ತಿಲಕರು ವ್ಯವಸ್ಥೆಗೊಳಿಸಿದ್ದರು ಎಂದು ಊಹಿಸಬಹುದು.

ಇದೇ ಅಳತೆಗೋಲನ್ನು ಶಾಹು ಅವರ ಜೀವನಕ್ಕೆ ಅನ್ವಯಿಸಿದರೆ, ದೇಶದ ಸ್ವಾತಂತ್ರ್ಯದ ಬಗ್ಗೆ ಅವರಿಗಿದ್ದ ಅಪಾರ ಪ್ರೀತಿಯ ಬಗ್ಗೆ ಸಂಪುಟಗಟ್ಟಲೆ ಹೇಳುವುದು ಬೆಳಕಿಗೆ ಬರುತ್ತದೆ. ಶಾಹು ಅವರು ತಿಲಕ್ ಮತ್ತು ಬಾಬು ಅರವಿಂದ ಘೋಷರಂತಹ ಕ್ರಾಂತಿಕಾರಿಗಳಿಗೆ ಅಪಾರವಾದ ಸಹಾಯವನ್ನು ಕಳುಹಿಸಿ, ಅವರ ಸಶಸ್ತ್ರ ಹೋರಾಟ ಸಫಲವಾಗಲೆಂದು ಹಾರೈಸುತ್ತಿರುವಾಗಲೆ ಅವರು ತನ್ನ ಸಂಸ್ಥಾನದಲ್ಲಿ ಹೋರಾಟಗಾರರನ್ನು ಹಿಡಿಯಲು ಬಹಳ ಪ್ರಯತ್ನಪಡುತ್ತಿದ್ದರು. ಇಲ್ಲಿ ಅವರು ಹೋರಾಟಗಾರರನ್ನು ವರ್ಗಗಳನ್ನಾಗಿ ವಿಂಗಡಿಸಿದ್ದಾರೆ. ಕೊಲ್ಹಾಪುರದ ಹೋರಾಟಗಾರರು ಬ್ರಾಹ್ಮಣಿಕೆ, ಗೊಡ್ಡು ಸಿದ್ಧಾಂತಗಳನ್ನು ಕರಗತಮಾಡಿಕೊಂಡು ತಾವೇ ಶ್ರೇಷ್ಠರೆಂದು ಪರಿಗಣಿಸಿದ್ದರು ಮತ್ತು ತಮ್ಮ ಕಡು ವೈರಿಯೆಂದು ಶಾಹು ಅವರ ರಕ್ತ ಕುಡಿಯಲು ಹಾತೊರೆಯುತ್ತಿದ್ದರು. ಶಾಹು ಅವರು ಕೊಲ್ಹಾಪುರ ಸಂಸ್ಥಾನದ ಮುಖ್ಯಸ್ಥರಾಗಿ ಸಂಸ್ಥಾನದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಸ್ಥಾಪಿಸುವುದು ತಮ್ಮ ಕರ್ತವ್ಯವೆಂದು ಬಗೆದು ಅಂತಹ ವಿರೋಧಿ ಶಕ್ತಿಗಳನ್ನು ನಿರ್ಮೂಲನೆ ಮಾಡುವುದು ಸರಿಯೆಂದು ಭಾವಿಸಿದರು. ಆದರೆ ಅವರು ರಾಷ್ಟ್ರಮಟ್ಟದಲ್ಲಿ ಮಹಾಕ್ರಾಂತಿಕಾರಿಗಳು ನಡೆಸುವ ಸಶಸ್ತ್ರ ಹೋರಾಟದೊಂದಿಗೆ ಸಂಸ್ಥಾನದಲ್ಲಿ ನಡೆಸುವ ಹೋರಾಟಗಾರರ ಸಶಸ್ತ್ರಹೋರಾಟದ ಬಗ್ಗೆ ಗೊಂದಲಗೊಳ್ಳಲಿಲ್ಲ. ಭಾರತ ಮಾತೆಯ ಪುತ್ರನಾಗಿ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರಮಟ್ಟದಲ್ಲಿ ಕ್ರಾಂತಿಕಾರರ ಸಶಸ್ತ್ರ ಹೋರಾಟಕ್ಕೆ ನೆರವು ನೀಡುವುದು ರಾಷ್ಟ್ರೀಯ ಕರ್ತವ್ಯವೆಂದು ಶಾಹು ಬಗೆದರು. ಲೋಕಮಾನ್ಯ ತಿಲಕ ಮತ್ತು ಬಾಬು ಅರವಿಂದ ಘೋಷರಂತಹವರಿಗೆ ಅವರು ನೀಡಿದ ಸಹಾಯವನ್ನು ಮತ್ತೊಂದು ಅರ್ಥದಲ್ಲಿ ಅರ್ಥೈಸಬಾರದು; ಆದರೆ ಇದೇ ಸರಿ.

---

೬

# ಶಾಹು ಮತ್ತು ಲೋಕಮಾನ್ಯ

**ಮ**ಹಾರಾಷ್ಟ್ರ ೨೦ನೇ ಶತಮಾನದ ಮೊದಲ ೨ ದಶಕಗಳಲ್ಲಿ ರಾಜರ್ಷಿ ಶಾಹು ಮಹಾರಾಜರ ಮತ್ತು ಲೋಕಮಾನ್ಯ ತಿಲಕರ ಆಶೀರ್ವಾದಗಳನ್ನು ಗಳಿಸಿತ್ತು. ಶಾಹು ಅವರು ಮಹಾರಾಷ್ಟ್ರದ ಸಾಮಾಜಿಕ ರಂಗವನ್ನು ಮುನ್ನಡೆಸಿದರು, ತಿಲಕರು ಮಹಾರಾಷ್ಟ್ರದ ರಾಜಕೀಯ ರಂಗವನ್ನಲ್ಲದೆ ಇಡೀ ಭಾರತದ ರಾಜಕೀಯ ಚಳುವಳಿಯ ಮುಂಚೂಣಿಯಲ್ಲಿದ್ದರು. ಒಬ್ಬರು (ಶಾಹು) ರಾಜಕೀಯ ಸ್ವಾತಂತ್ರ್ಯ ಗೌಣ ಮತ್ತು ಸಾಮಾಜಿಕ ಸ್ವಾತಂತ್ರ್ಯ ಮುಖ್ಯವೆಂದು, ಅದು ಕೊನೆಗೂ ಮಾನವನನ್ನೇ ವಿಮೋಚನೆಗೊಳಿಸುತ್ತದೆಯೆಂದು ಅದಕ್ಕೆ ಒತ್ತಡ ಹೇರಿದರೆ, ಮತ್ತೊಬ್ಬರು (ತಿಲಕರು) ಸಾಮಾಜಿಕ ಸುಧಾರಣೆಗಳು ಗೌಣ ಮತ್ತು ರಾಜಕೀಯ ಸ್ವಾತಂತ್ರ್ಯ ಹೆಚ್ಚು ಮುಖ್ಯ ಮತ್ತು ಅದು ತಕ್ಷಣದ ಗುರಿಯೆಂದು ಪ್ರತಿಪಾದಿಸಿದರು. ವಾಸ್ತವಿಕವಾಗಿ, ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯಗಳು ಪರಸ್ಪರ ಪೂರಕವಾದವುಗಳು ಮತ್ತು ಈ ಇಬ್ಬರು ಮಹಾಶಯರಲ್ಲಿ ಪ್ರತಿಯೊಬ್ಬರು ಇದನ್ನು ಚೆನ್ನಾಗಿ ಬಲ್ಲವರು. ಅಂತಹ ಸಂದರ್ಭಗಳಲ್ಲಿ ಮೊದಲೇ ಹೇಳಿದ ಸ್ವಾತಂತ್ರ್ಯಗಳನ್ನು ಸಾಧಿಸಲು ಮಹಾರಾಷ್ಟ್ರದಲ್ಲಿ ಈ ಎರಡು ವಿಶಿಷ್ಟ ಚಳುವಳಿಗಳ ನಡುವೆ ಸರಿಯಾದ ಸಮನ್ವಯವಿರಬೇಕು. ಈ ಇಬ್ಬರು ನಾಯಕರು ಕೈ ಕೈ ಮಿಲಾಯಿಸಿ ಪ್ರಯತ್ನ ಮಾಡಬೇಕಾಗಿತ್ತು. ದುರಾದೃಷ್ಟವಶಾತ್ ಮಹಾರಾಷ್ಟ್ರದಲ್ಲಿ ಇದು ಸಾಧ್ಯವಾಗಲಿಲ್ಲ.

## ಪರಸ್ಪರ ಭಾವನೆಗಳು: ಮೊದಲಿನ ಹಂತ

ನಿಜವಾಗಿ ಛತ್ರಪತಿಯ ಕೊಲ್ಹಾಪುರದ ಸಿಂಹಾಸನಕ್ಕೆ (ಸ್ಥಾನ) ತಿಲಕರು ಹೆಚ್ಚು ಗೌರವ ಕೊಟ್ಟಿದ್ದರು. ಈ ಗೌರವದ ಭಾವನೆಯಿಂದಲೆ ತಿಲಕರು ಮತ್ತು ಆಗರ್‌ಕರ್ ಅವರು 'ಕೇಸರಿ' ಪತ್ರಿಕೆಯ ಮೂಲಕ ಶಿವಾಜಿ–೪ ಅವರ ಮೇಲೆ ಎಸಗಿದ ಕ್ರೌರ್ಯಗಳ ವಿರುದ್ಧ ಹೋರಾಡಿದರು ಮತ್ತು ದಿವಾನರಾದ ಬಾರ್ವೆಯವರು ಇವರಿಬ್ಬರ ವಿರುದ್ಧ ತಿರುಗಿಬಿದ್ದರು.

ಈ ವಿಷಯ ಕೊನೆಗೆ ಈರ್ವರನ್ನು ಜೈಲಿಗೆ ಹಟ್ಟುವ ಮೂಲಕ ಕೊನೆಗೊಂಡಿತು. ಈ ಪ್ರಕರಣದಲ್ಲಿಯೇ ಆಬ ಸಾಹೇಬ ಘಾಟ್ಗೆ ಅವರು ತಿಲಕ್–ಆಗರ್‌ಕರ್ ಅವರ ಡೆಕ್ಕನ್ ಎಜುಕೇಶನಲ್ ಸೊಸೈಟಿಗೆ ಸಾಕಷ್ಟು ಹಣಕಾಸಿನ ನೆರವನ್ನು ಒದಗಿಸಿದರು ಮತ್ತು ಸೊಸೈಟಿಯ ಗೌರವ ಪೀಠವನ್ನು ಕೊಲ್ಹಾಪುರದ ಛತ್ರಪತಿಯವರಿಗೆ ನೀಡಿದರು. ನಂತರ, ಶಾಹುರವರು ಪಟ್ಟಾಭಿಷೇಕದ ನಂತರ ಸಿಂಹಾಸನವೇರಿದಾಗ ತಿಲಕರು ಅವರಿಗೆ ಶುಭಾಶಯಗಳನ್ನು ಹೇಳಿದರು. ಇದಾದ ನಂತರ 'ಶಿವಸಮಾಧಿ'ಯ ಪುನರುಜ್ಜೀವನಕ್ಕಾಗಿ ತಿಲಕರ ನೇತೃತ್ವದಲ್ಲಿ ಬಂದ ನಿಯೋಗಕ್ಕೆ ಶಾಹು ತನ್ನ ದರಬಾರಿನಲ್ಲಿ ಹೃತ್ಪೂರ್ವಕವಾದ ಆಹ್ವಾನ ನೀಡಿದರು. ಸಾರಾಂಶದಲ್ಲಿ ಹೇಳುವುದಾದರೆ, ೧೯೦೦ರವರೆಗೆ ಶಾಹು ಮತ್ತು ತಿಲಕರು ಆತ್ಮೀಯವಾದ ಸಂಬಂಧ ಹೊಂದಿದ್ದರು.

ಶಾಹು ತಮ್ಮ ಸ್ನೇಹಿತ ತೋಫ್‌ಖಾನೆ ಅವರಿಗೆ ಒಮ್ಮೆ ಹೇಳಿದ ತಮ್ಮ ನೆನಪಿನಲ್ಲಿ ತಮ್ಮ ಸಂಬಂಧದಲ್ಲಿದ್ದ ಸೌಹಾರ್ದತೆ ಅಥವಾ ನಂಬಿಕೆಗಳ ತೀವ್ರತೆ ಸ್ಪಷ್ಟವಾಗುತ್ತದೆ. ಶಾಹು ಹೇಳುತ್ತಾರೆ: " 'ಪಾಂಡವಪಂಚಮಿ' ದಿವಸ ಮಕ್ಕಳು ಮಣ್ಣಿನಿಂದ ಕಟ್ಟಿದ ದೇವಸ್ಥಾನದ ಗೇಟು ಬಾಗಿಲನ್ನು ಮಾರನೇ ದಿನ ಅದನ್ನು ಮುರಿದ ಹಾಗೆ ಮನಸ್ಸಿಗೆ ಬಂದಾಗ ಕೊಲ್ಹಾಪುರದ ಸಂಸ್ಥಾನವನ್ನು ಬ್ರಿಟಿಷ್ ಸರಕಾರ ಮುಟ್ಟುಗೋಲು ಹಾಕಿಕೊಳ್ಳಬಹುದೆಂಬ ಚಿಂತೆಯಿಂದ ಹಗಲುರಾತ್ರಿ ಯಮಯಾತನೆಪಟ್ಟೆನು. ಇಟಲಿಯಿಂದ ಭಾರತಕ್ಕೆ ಬರುವಾಗ ರಾಜರಾಮ ಛತ್ರಪತಿಯನ್ನು ಮುಗಿಸಿದ ಹಾಗೆ ಇದು. ಶಿವಾಜಿ-೪ ಅವರು ಆತ್ಮ-ಗೌರವದ ತೀವ್ರ ಪ್ರಜ್ಞೆಯುಳ್ಳವರು ಮತ್ತು ಯಾರ ಮುಂದೆ ಬಾಗಿದವರಲ್ಲ, ಅಂಥವರನ್ನು ಅಸಹ್ಯಕರವಾದ ವಿಧಾನಗಳ ಮೂಲಕ ಕ್ರೂರ ಸಾವಿಗೆ ಒಳಪಡಿಸಲಾಯಿತು. ಈ ಸರಕಾರ ಅಂತಹದ್ದೇ ಯೋಜನೆಗಳನ್ನು ನನ್ನ ಬಗ್ಗೆ ಹೊಂದಿ ಕಾರ್ಯನಿರತವಾಗಿದೆ. ವಿಷಹಾಕಿ ಕೊಲ್ಲುವ ಆಪಾದನೆಯನ್ನು ನನ್ನ ಮೇಲೆ ಹೊರಿಸಲು ಬಯಸಿದ್ದರು. ಅವರ ಯೋಜನೆಗಳು ಸಾಕಾರಗೊಂಡಿದ್ದರೆ ನನ್ನನ್ನು ಉಸಿರು ಕಟ್ಟುವ ಕತ್ತಲೆ ಕೋಣೆಯಲ್ಲಿ ಕೂಡಿಹಾಕಿ ಕೊಲ್ಲಬಹುದಾಗಿತ್ತು ಮತ್ತು ಕೊಲ್ಲಾಪುರದ ರಾಜವಂಶ ಆಳಲು ಅಯೋಗ್ಯವಾಗಿದೆಯೆಂದು ಘೋಷಿಸಿ ಕೊಲ್ಲಾಪುರ ಸಂಸ್ಥಾನವನ್ನು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿತ್ತು. ನಾನು ಈ ಎಲ್ಲ ಸಂಗತಿಗಳನ್ನು ತಿಲಕರೊಂದಿಗೆ ಚರ್ಚಿಸಬೇಕೆಂದು ಬಯಸಿದ್ದೆ. ಆದರೆ ಅವರು ಹೆಚ್ಚು ಹೆಚ್ಚು ಹಗಲು-ರಾತ್ರಿ ಆಳವಾದ ರಾಜಕೀಯದ ನೀರಿನಲ್ಲಿ ಮುಳುಗಿಹೋಗಿದ್ದರು. ಅವರನ್ನು ಹೇಗೆ ಭೇಟಿಯಾಗುವುದೆಂದು ಚಿಂತಿತನಾಗಿದ್ದೆ. ಬ್ರಿಟಿಷರ ಕಪಿಮುಷ್ಟಿಗೆ ಸಿಕ್ಕಿಬೀಳದಂತೆ ನಾನು ಬಹಳ ಎಚ್ಚರಿಕೆವಹಿಸಿದ್ದೆ; ಸಿಕ್ಕಿಬಿದ್ದರೆ ಅವರು ಸಂಪೂರ್ಣವಾಗಿ ನನ್ನನ್ನು ನಾಶಮಾಡಿಬಿಡುತ್ತಿದ್ದರು. ಇಷ್ಟಾದರೂ ನಾನು ತಿಲಕರಿಗೆ ಶಾಬ್ದಿಕ ಸಂದೇಶವನ್ನು ಕಳುಹಿಸಿದ್ದೆ. ಆದರೆ ಸಂದೇಶಕಾರನು ನಾನು ಬರವಣಿಗೆಯಲ್ಲಿ ತಿಳಿಸಬೇಕೆಂದು ಹೇಳಿದನು. ನಾನು ಅದನ್ನು ನಂಬಲಿಲ್ಲ. ಮಧ್ಯಸ್ಥಗಾರ ಏನೋ ಕುತಂತ್ರ ಮಾಡುತ್ತಿರುವನೆಂದು ಚಿಂತಿಸಿ ನಾನು ಸಂದೇಶವನ್ನು ವಾಪಸ್ಸು ಪಡೆದೆ".[1] ಶಾಹು ಅವರು ತಿಲಕರು ಒಬ್ಬ ರಕ್ಷಕನೆಂದು ಯೋಚಿಸಿ ಅವರು ವಿಕೋಪದಂತಹ ವಿಪತ್ತಿನಿಂದ ಪಾರುಮಾಡಿದಂತೆ ವಿಷವಿಕ್ಕಿ ಕೊಲ್ಲುವ ಪ್ರಯತ್ನದ ಆಪಾದನೆಯಿಂದ ಪಾರುಮಾಡಬಹುದೆಂದು ಎಣಿಸಿದ್ದೆ. ಅದು ಮೇಲಿನ ಲೆಕ್ಕಾಚಾರದಿಂದ ಸ್ಪಷ್ಟವಾಯಿತು. ಆದರೆ ಅವರು ಮಧ್ಯಸ್ಥಗಾರರ ಉದ್ದೇಶಗಳು ಏನೆಂಬುದು ಖಚಿತವಾಗದಿದ್ದರಿಂದ ಅವರು ತಿಲಕರನ್ನು ಮತ್ತೆ ಸಂಪರ್ಕಿಸಲಿಲ್ಲ.

## ಏನು ತಪ್ಪು ನಡೆಯಿತು?

ವೇದೋಕ್ತ ಸಮಸ್ಯೆ ಉಲ್ಬಣಿಸಿದ ಕೂಡಲೇ ಈ ಸಲ ಸಹ ತಿಲಕರು ನನ್ನ ಪರವಹಿಸುವರು ಮತ್ತು ಪರಿಹಾರ ಸೂಚಿಸುವರೆಂದು ಶಾಹು ಯೋಚಿಸಿದ್ದರು. ಶಾಹು ಹೇಳುತ್ತಾರೆ: "ನಂತರ ವೇದೋಕ್ತದ ವಿಷಯದಲ್ಲಿ ಸಂಘರ್ಷ ಪ್ರಾರಂಭವಾಯಿತು. ಕೊಲ್ಹಾಪುರದ ರಾಜವಂಶದ ಮೂಲ ಶೂದ್ರದ್ದು ಮತ್ತು ಕ್ಷತ್ರಿಯ ಜಾತಿಗೆ ಸೇರಿಲ್ಲ ಎಂಬ ಗುಸುಗುಸು ಪಟ್ಟಣದಲ್ಲೆಲ್ಲ ಹರಡಿಬಿಟ್ಟಿತು. ನಮ್ಮ ಪರವಾಗಿ ತಿಲಕರು ಒಂದು ಪರಿಹಾರವನ್ನು ಖಂಡಿತವಾಗಿ ಸೂಚಿಸುವರೆಂದು ನಾನು ಭಾವಿಸಿದ್ದೆ. ಅವರು ಉದಾಸೀನವಾಗಿರುವುದಿಲ್ಲವೆಂದು ನಾನು ವಿಶ್ವಾಸ ಹೊಂದಿದ್ದೆ. ನನ್ನ ಪರವಾಗಿ ಹೋರಾಡುತ್ತಿರುವರೆಂಬುದನ್ನು ನಾನು ಕೇಳಲೇ ಇಲ್ಲ. ಮಿಗಿಲಾಗಿ, ತಿಲಕರು ಬ್ರಾಹ್ಮಣರ ಪರ ವಹಿಸಿದ್ದಾರೆಂಬ ಸುದ್ದಿ ಗಾಳಿಯಲ್ಲಿ ಹರಡಿತು. ನನ್ನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ನಾನು ಸಂಪೂರ್ಣವಾಗಿ ಗೊಂದಲಕ್ಕೊಳಗಾದೆ."

"ನಾನು ನಿರೀಕ್ಷಿಸಿದ ರೀತಿಯಲ್ಲಿ ತಿಲಕರು ವೇದೋಕ್ತದ ಸಂಘರ್ಷದಲ್ಲಿ ಭಾಗವಹಿಸಿದ್ದರೆ ಪ್ರತಿಯೊಂದನ್ನು ಸ್ನೇಹಪರವಾಗಿ ಬಗೆಹರಿಸಬಹುದಾಗಿತ್ತು ಮತ್ತು ವೇದೋಕ್ತದ ಪ್ರಶ್ನೆ ರೋಗಗ್ರಸ್ತವಾಗುವುದನ್ನು ತಪ್ಪಿಸಬಹುದಾಗಿತ್ತು. ಜೊತೆಗೆ ಭಾಗವಹಿಸಿದ್ದರೆ ನಾನು ಅವರೊಡನೆ ತೆರೆದ ಮನಸ್ಸಿನಿಂದ ಎಲ್ಲಾ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಿದ್ದೆನು ಮತ್ತು ಇದರಿಂದ ಬ್ರಿಟಿಷರಿಗೆ ಸ್ವಲ್ಪ ಅನುಮಾನ ಬರುತ್ತಿರಲಿಲ್ಲ, ಇದರಿಂದ ನನಗೆ ಬಹಳ ಅನುಕೂಲವಾಗುತ್ತಿತ್ತು. ತಿಲಕರು ಕಾರ್ಯ ನಿರ್ವಹಿಸಬಹುದಾಗಿತ್ತು. ಅವರು ಕಾರ್ಯ ನಿರ್ವಹಿಸಲಿಲ್ಲ. ಇದು ಅವರ ತಪ್ಪು. ಇಲ್ಲಿ ಅವರು ತಪ್ಪಾಗಿ ನಡೆದುಕೊಂಡರು. ನಾವು ತಪ್ಪೇ ಮಾಡಿಲ್ಲವೆಂದು ಹೇಳುವುದಿಲ್ಲ. ಅಂಥ ಹೇಳಿಕೆ ಬಹಳ ದಿನ ಉಳಿಯುವುದಿಲ್ಲ. ಆದರೆ ತಿಲಕರು ಬದಲಾಗಿ ನಡೆದುಕೊಂಡಿದ್ದರೆ ನಾವು ಬಯಸಿದ ರೀತಿಯಲ್ಲಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದಾಗಿತ್ತು. ತದನಂತರ ಸಮಾಜಕ್ಕೆ ಹಾನಿ ಉಂಟುಮಾಡಿದ ಒಡಕು ಮತ್ತು ಅಸಾಮರಸ್ಯಗಳನ್ನು ತಡೆಯಬಹುದಾಗಿತ್ತು. ನಾವಿಬ್ಬರು ಒಟ್ಟಿಗೆ ಕೆಲಸ ಮಾಡಬೇಕೆಂಬ ಅಪೇಕ್ಷೆ ವ್ಯರ್ಥವಾಗಿ ಹೋಗುತ್ತಿರಲಿಲ್ಲ. ಪರಸ್ಪರ ಕೆಸರು ಎರಚಿಕೊಳ್ಳುವ ಕ್ರಿಯೆ ನಡೆಯುತ್ತಿರಲಿಲ್ಲ".[2]

ವೇದೋಕ್ತದ ಸಮಸ್ಯೆಯಲ್ಲಿ ತಿಲಕರು ಶಾಹು ಪರವಾಗಿ ನಿಲ್ಲದೆ ಗೊಡ್ಡು ಸಂಪ್ರದಾಯದ ಬ್ರಾಹ್ಮಣರ ಪರವಾಗಿ ನಿಂತಿದ್ದು ಅವರು ಮಾಡಿದ ಮಹಾತಪ್ಪೆಂದು ಶಾಹು ಹೇಳಿದ ಧಾಟಿಯಲ್ಲೇ ವೇದೋಕ್ತದ ಸಮಸ್ಯೆಯ ಬಗ್ಗೆ ಕೆಲಸಮಾಡಿದ ಎಲ್ಲಾ ವಿದ್ವಾಂಸರು ಗಮನಿಸಿದ್ದಾರೆ. ಯಾರು ಸಹ ಈ ವಾಸ್ತವತೆಯನ್ನು ನಿರಾಕರಿಸುವಂತಿಲ್ಲ. ಆದರೆ ಶಾಹು ಮಹಾರಾಜರು ವೈಯಕ್ತಿಕವಾಗಿ ತಾಯ್ ಮಹಾರಾಜರ ಪ್ರಕರಣದಲ್ಲಿ ತಿಲಕರ ವಿರುದ್ಧ ನಿಂತಿದ್ದರ ಪರಿಣಾಮವಾಗಿ ತಿಲಕರು ಕೊಲ್ಹಾಪುರದ ಬ್ರಾಹ್ಮಣರ ದುಷ್ಟಕೂಟದ ನಾಯಕತ್ವವನ್ನು ಬಹಿರಂಗವಾಗಿ ಒಪ್ಪಿಕೊಂಡಿದ್ದು ಅವರ ನಿರ್ದಾಕ್ಷಿಣ್ಯ ನಿಲುವು ಎಂಬುದು ಸುಸ್ಪಷ್ಟ. ಅದಾದ ಮೇಲೆ ಕೊಲ್ಹಾಪುರದಲ್ಲಿ ಬ್ರಾಹ್ಮಣ ಉಗ್ರವಾದಿಗಳ ಚಟುವಟಿಕೆಗಳು, ಚಿರೋಲೆ ಹಗರಣ, ಕುಲಕರ್ಣಿ ವತನದ ವಿಷಯಗಳು ಮೊದಲಾದ ಸಮಸ್ಯೆಗಳು ಸಾಲು ಸಾಲಾಗಿ ಬೆಳೆದು ಬಂದವು. ಎರಡು ಕಡೆಯವರು ದಾಳಿ ಮಾಡಿದರು ಮತ್ತು ಪರಸ್ಪರ ದಾಳಿ ಮಾಡಿದರು. ಇಂಥ ಯುದ್ಧದಂತಹ ಸನ್ನಿವೇಶ ಇಬ್ಬರು ನಾಯಕರ ಜೀವನದ ಉದ್ದಕ್ಕೂ ಮುಂದುವರಿಯಿತು. ತಾಯ್ ಮಹಾರಾಜ, ಉಗ್ರವಾದಿಗಳ ಮತ್ತು ಚಿರೋಲೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಬ್ರಿಟಿಷ್ ಸರಕಾರ ಮತ್ತು ತನ್ನ ಬ್ರಿಟಿಷ್ ಅಧಿಕಾರಿ ಸ್ನೇಹಿತರೊಡನೆ ಮಾಡಿದ ಶಾಹು ಅವರ ಪತ್ರ ವ್ಯವಹಾರವು ತಿಲಕರು ಬದ್ಧ ವೈರಿಗಳೆಂದು ಅವರನ್ನು ನಿರ್ದಾಕ್ಷಿಣ್ಯವಾಗಿ ಸೇಡಿನಿಂದ ಮುಗಿಸಿಬಿಡಬೇಕೆಂದು ಶಾಹು ಅವರು ಒತ್ತಾಯಪಡಿಸಿದರೆಂಬುದು ಅವರಿಗೆ, ವಿದ್ವಾಂಸರಿಗೆ ವಿಶ್ವಾಸದ್ರೋಹ ಮಾಡಬಹುದು. ವೇದೋಕ್ತದ ಘಟನೆ ನಡೆದಾಗಿನಿಂದ ಅವರ ಪರಸ್ಪರ ವಿರೋಧವು ತೀವ್ರಗೊಂಡಿತು. ಶಾಹು ಅವರು ತಮ್ಮ ಸಹಿಸಲಾಗದ ಭಾರಿ ವಿರೋಧಿಯನ್ನು ಅಷ್ಟೇ ಪ್ರಮಾಣದ ಶಕ್ತಿಯುತ ವಿಧಾನದಲ್ಲೆ ವಿರೋಧಿಸಿದ್ದಾರೆಂದು ತೋರುತ್ತಾರೆ. ಬ್ರಿಟಿಷ್ ಸರಕಾರ ಶಾಹು ಮಹಾರಾಜರಿಗೆ ತಾಯ್-ಮಹಾರಾಜರ ಪ್ರಕರಣ ಮತ್ತು ಚಿರೋಲೆ ಹಗರಣಗಳಲ್ಲಿ ತಿಲಕರನ್ನು ವಿರೋಧಿಸಿ ಎಂದು ಒತ್ತಡ ಹೇರಿದ್ದರೂ ಕೂಡ ಹಾಗೆ ಮಾಡುವುದರಲ್ಲಿ ಅವರ ಭಾವೋದ್ವೇಗ ಮಿತಿಮೀರಿತ್ತು. ಆದರೆ ಅತಿಯಾಗಿ ಪ್ರೀತಿಸುವುದು ಅಥವಾ ಅತಿಯಾಗಿ ದ್ವೇಷಿಸುವುದು ಅವರ ವ್ಯಕ್ತಿತ್ವದ ವಿಚಿತ್ರ ಲಕ್ಷಣವಾಗಿತ್ತು. ಅವರು ತಮ್ಮ ಹೃದಯದ ಅಂತರಾಳದಿಂದ ಪ್ರೀತಿಸುತ್ತಿದ್ದರು ಮತ್ತು ತಮ್ಮ ಜೀವ ಅಪಾಯಕ್ಕೆ ಗುರಿಯಾಗಿದೆಯೆಂದು ವಿರೋಧಿಸುತ್ತಿದ್ದರು. ಅವರು ದಲಿತರ (ಹಿಂದುಳಿದ ವರ್ಗಗಳ) ಬಗ್ಗೆ ತೋರಿಸಿದ

ಪ್ರೀತಿ ಮತ್ತು ಮಮಕಾರಗಳ ಬಗ್ಗೆ ಯಾವುದೇ ಮಿತಿಯಿರಲಿಲ್ಲವೆಂಬುದು ಉಜ್ವಲ ದರ್ಶವಾಗಿದೆ. ಅವರು ಸಹ ತಮ್ಮ ವಿರೋಧಿಗಳನ್ನು ಅತಿಯಾಗಿ ದ್ವೇಷಿಸಿದ್ದರು. ಆದ್ದರಿಂದ ಅವರು ಯಾವಾಗಲು ಲೋಕಮಾನ್ಯ ತಿಲಕರನ್ನು ಕೇವಲ ವಿರೋಧಿಯೆಂದು ಭಾವಿಸದೆ ತಮ್ಮ ಕಡು 'ಶತ್ರು'ವೆಂದೇ ಅರಿತಿದ್ದರು.[3]

ತಿಲಕರು ಮತ್ತು ಅವರ ಸಹವರ್ತಿಗಳು ಸಹ ಶಾಹು ಅವರನ್ನು ಟೀಕೆ ಮಾಡುವುದರಲ್ಲಿ ಸಂಯಮವನ್ನೇ ತೋರಿಸಲಿಲ್ಲ. ೧೯೧೮ರಲ್ಲಿ ಶಾಹು ಅವರು ರಾಜಕೀಯ ಪ್ರವೇಶ ಮಾಡಿ, ಮಹಾರಾಷ್ಟ್ರದ ಬ್ರಾಹ್ಮಣೇತರರ ಪಕ್ಷದ ನಾಯಕತ್ವವನ್ನು ವಹಿಸಿಕೊಂಡ ನಂತರ ವಿಶೇಷವಾಗಿ ಅವರ ವಿರೋಧ ತೀವ್ರವಾಗಿ ಬೆಳೆಯಿತು. ಸಾರ್ವಜನಿಕರ ಜನಾಭಿಪ್ರಾಯದ ಮೇಲೆ ಅದ್ಭುತವಾದ ಪ್ರಭಾವ ಬೀರುವ ಶಕ್ತಿಯುಳ್ಳ ತಿಲಕರ ಕೇಸರಿ ಪತ್ರಿಕೆ ಮಹಾರಾಷ್ಟ್ರದಲ್ಲಿ ಬಲಿಷ್ಠವಾದ ಸಾಧನ ಸದಾ ಅವರ ಕೈಯಲ್ಲಿತ್ತು. ಕೇಸರಿ ಪತ್ರಿಕೆಯನ್ನು ಮತ್ತು ಇತರೆ ಬ್ರಾಹ್ಮಣಿಕೆಯ ಪತ್ರಿಕೆಗಳನ್ನು ಪ್ರತಿಯಾಗಿ ಎದುರಿಸಲು ಶಾಹು ಅವರು ಬ್ರಾಹ್ಮಣೇತರರ ಹಲವು ಪತ್ರಿಕೆಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಿದರು. ಅವರು ಈ ಸಾಹಸೋದ್ಯಮಗಳನ್ನು ಸಾಧ್ಯವಾದ ರೀತಿಯಲ್ಲಿ ಸಹಾಯಮಾಡಿದರು. ತತ್ಪರಿಣಾಮವಾಗಿ ಬ್ರಾಹ್ಮಣ–ಬ್ರಾಹ್ಮಣೇತರ ವಿವಾದಗಳು ಮಹಾರಾಷ್ಟ್ರದಲ್ಲಿ ಉತ್ತುಂಗ ಶಿಖರವನ್ನು ಮುಟ್ಟಿದವು. ಜತೆಜತೆಯಲ್ಲಿಯೇ ತಿಲಕರ ಮತ್ತು ಶಾಹು ಅವರ ನಡುವಣ ವೈರತ್ವವು ಉತ್ತುಂಗ ಶಿಖರವನ್ನು ಮುಟ್ಟಿತು. ಅದು ಎಲ್ಲಾ ಸಂಯಮಗಳನ್ನು ಕಳೆದುಕೊಂಡು ತೀವ್ರವಾಗಿ ಬೆಳೆಯಿತು. ೧೯೧೮ರಲ್ಲಿ ಹೋಮ್‌ರೂಲ್‌ನ ರಾಜಕೀಯ ಸಮಸ್ಯೆಯನ್ನು ಚರ್ಚಿಸಲು ಅವಕಾಶ ನೀಡದಿದ್ದಾಗ ತಿಲಕರು ಗೌರ್ನರರು ಕರೆದಿದ್ದ ಯುದ್ಧ ಪರಿಷತ್ತಿನ ಸಭೆಯಿಂದ ಹೊರಹೋದರು. ತಿಲಕರ ಕ್ರಮವನ್ನು ಟೀಕಿಸುತ್ತಾ ಶಾಹುರವರು ಬ್ರಿಟಿಷ್ ಅಧಿಕಾರಿ ಕ್ಯಾಡೆಲ್ ಅವರಿಗೆ ಹೀಗೆ ಬರೆಯುತ್ತಾರೆ: "ಅವರಂತಹ ಮನುಷ್ಯನನ್ನು ಜರ್ಮನಿಯಲ್ಲಿ ನೇರವಾಗಿ ಗುಂಡು ಇಟ್ಟು ಹೊಡೆಯುತ್ತಿದ್ದರು".[4]

ತಿಲಕರು ತಮ್ಮ ಕೋಪೋದ್ರಿಕ್ತ ಭಾವನೆಗಳನ್ನು ತೀವ್ರವಾಗಿಯೇ ವ್ಯಕ್ತಪಡಿಸಿದರು. ೧೯೨೦ರ ಮೇ–ಜೂನ್ ಸುಮಾರಿನಲ್ಲಿ ಅವರು ಸಾಯುವುದಕ್ಕೆ ಕೆಲವು ದಿನಗಳ ಮೊದಲು ಇಬ್ಬರ ನಡುವಣ ವೈರತ್ವವು ಪರಾಕಾಷ್ಠತೆಗೆ ಮುಟ್ಟಿತು. ತನ್ನನ್ನು ಸಿಂಹಗಢ ಕೋಟೆಯಲ್ಲಿ ನೋಡಲು ಬಂದಿದ್ದ ತೋಫ್‌ಖಾನೆಯವರ ಮೂಲಕ ಹೀಗೆ ಬೆದರಿಕೆ ಹಾಕಿದ್ದರು: ಯೂರೋಪಿಯನ್ನರನ್ನು ಸಂತುಷ್ಟಿಗೊಳಿಸುವ ಹಾಗೂ ಬ್ರಾಹ್ಮಣೇತರರು ತಮ್ಮ ಹಕ್ಕು ಮತ್ತು ಸ್ಥಾನಮಾನದ ಸುಧಾರಣೆಯನ್ನು ಕೇಳುವುದಕ್ಕೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವೆ ದ್ವೇಷವನ್ನು ಪ್ರಚೋದಿಸುವ ಎರಡು ಧೋರಣೆಗಳನ್ನು ಶಾಹು ಬಿಡದಿದ್ದರೆ ರ್‍ಯಾಂಡ್ ಮತ್ತು ಜಾಕ್ಸನ್‌ರಿಗೆ ಆದ ಗತಿಯೇ ಇವರಿಗೂ ಆಗುವುದು".[5]

## ಪರಸ್ಪರ ಸೌಹಾರ್ದತೆ

ಕೋಪ–ತಾಪದ ಭಾವೋದ್ವೇಗಗಳು ಸ್ಫೋಟಗಳ ನಿದರ್ಶನಗಳು ಆಗಾಗ ಕಂಡುಬಂದರೂ ಇವುಗಳು ಅವರ ನಡುವೆ ಇರುವ ಕಹಿಯ ಸೂಚಕಗಳಾಗಿವೆ. ಇವುಗಳಿದ್ದರೂ ಸಹ, ತಮ್ಮ ಹೃದಯದ ಅಂತರಾಳದಲ್ಲಿ ತಿಲಕರು ಶಾಹು ಬಗ್ಗೆ ವಿಶ್ವಾಸ ಮತ್ತು ಗೌರವಗಳಿದ್ದವು ಮತ್ತು ಶಾಹು ಮಹಾರಾಜರು ಸಹ ತಮ್ಮ ಹೃದಯದಲ್ಲಿ ತಿಲಕರ ಬಗ್ಗೆ ವಿಶೇಷ ಮಮಕಾರ ಹೊಂದಿದ್ದರು. ಇತಿಹಾಸ ಹಲವಲ್ಲದಿದ್ದರೂ ಕೆಲವು ನಿದರ್ಶನಗಳನ್ನು ನೀಡುತ್ತದೆ. ಒಂದು ನಿದರ್ಶನ ಹೀಗಿದೆ: "ಮಂಡಲೆ ಜೈಲಿನಿಂದ ತಿಲಕರು ಬಿಡುಗಡೆ ಹೊಂದಿದ ಮೇಲೆ ಬಾಂಬೆಯ ಸರಕಾರವು ಅವರು ಜೈಲಿನಲ್ಲಿ ಬರೆದ 'ಗೀತಾರಹಸ್ಯ' (ಭಗವದ್ಗೀತೆಯ

ಬಗ್ಗೆ ಬರೆದ ವ್ಯಾಖ್ಯಾನ) ಬಗ್ಗೆ ವಿಶೇಷ ಕುತೂಹಲವನ್ನು ತೋರಿಸಿತು. ಸರಕಾರವು ಅದನ್ನು ಓದುವ ಸಲುವಾಗಿ ಅದರ ಹಸ್ತಪ್ರತಿಯನ್ನು ಒಂದು ವಾರ ಅಥವಾ ಎರಡು ವಾರಗಳ ಮಟ್ಟಿಗೆ ಪಡೆಯಲು ಶಾಹು ಮಹಾರಾಜರಿಗೆ ವಹಿಸಿತು. ಅವರು ತಿಲಕರನ್ನು ಗಾಯಕವಾಡದಲ್ಲಿ ಭೇಟಿಯಾದರು. ತಿಲಕರು ವಾಪಸ್ಸು ಬಂದಾಗ ದಿವಾನಖಾನೆ (ಭೇಟಿಯ ಕೊಠಡಿ) ಯಲ್ಲಿ ಸೇರಿದ್ದ ಜನರು ಆಶ್ಚರ್ಯಚಕಿತರಾಗಿ ಹೇಳಿದರು, 'ಏನು ಮಾಡಿದಿರಿ, ಸ್ವಾಮಿ? ತಾವು ಹಸ್ತಪ್ರತಿಯನ್ನು ಮತ್ತೆ ಪಡೆಯುವಿರಾ? ಮೊಸಳೆ ಮಣಿ(ರೂಬಿ)ಯನ್ನು ನುಂಗಿಬಿಟ್ಟಿತು. ಇಲ್ಲ! ಇಲ್ಲ! ತಾವು ಮಹಾ ತಪ್ಪುಮಾಡಿದಿರಿ, ಸರ್! ಅವರೆಲ್ಲರು ಚಿಂತಿತರಾಗಿದ್ದರು. ಆದರೆ ತಿಲಕರು ಶಾಂತರಾಗಿದ್ದರು. ಒಂದು ಚೂರು ಅಡಿಕೆಯನ್ನು ಬಾಯಲ್ಲಿ ಹಾಕಿಕೊಂಡು ಅವರು ಹೇಳಿದರು: 'ಛತ್ರಪತಿಯವರೆ ಖುದ್ದಾಗಿ ಬಂದು ಪುಸ್ತಕವನ್ನು ಕೇಳಿದರು. ಪುಸ್ತಕ ಕೊಡಲು ನಿರಾಕರಿಸಿದ್ದರೆ, ಛತ್ರಪತಿ ಶಿವಾಜಿ ಮಹಾರಾಜರ ಸಿಂಹಾಸನವನ್ನು ಅವಮಾನಗೊಳಿಸಿದಂತಾಗುತ್ತಿತ್ತು. ಅದನ್ನು ನಾನು ಎಂದಿಗೂ ಮಾಡಲಾರೆ. ಛತ್ರಪತಿ ಮತ್ತು ನನ್ನ ನಡುವೆ ಹಲವು ಭಿನ್ನಾಭಿಪ್ರಾಯಗಳಿರಬಹುದು, ಆದರೆ ನಾನು ಅವರನ್ನು ಗೌರವಿಸುತ್ತೇನೆ. ಅವರ ಮಾತುಗಳು ನನಗೆ ಗೌರವ ಪೂರ್ವಕವಾದವು.'

"ಅದು ಎಲ್ಲಿಗೆ ಹೋಗುವುದು? ಪುಸ್ತಕ ಹೊರಟುಹೋದರೂ ಹುರುಳು (ವಸ್ತು) ನನ್ನ ತಲೆಯಲ್ಲಿದೆ. ನಾನು ಅದನ್ನು ಪದಶಃ ಬರೆದಿಡುವೆನು. ಜೊತೆಗೆ, ಶಾಹು ಮಹಾರಾಜರು ಕೆಲವು ವಾರಗಳಲ್ಲಿ ಪುಸ್ತಕವನ್ನು ಹಿಂದಿರುಗಿಸಲು ಭರವಸೆ ನೀಡಿದ್ದಾರೆ. ಇದು ಛತ್ರಪತಿಯವರ ಮಾತು. ಅವರು ಖಂಡಿತವಾಗಿ ಮಾತಿಗೆ ಬದ್ಧರು. ನಾನು ಪೂರಾ ನಂಬಿಕೆ ಇಟ್ಟಿದ್ದೇನೆ" ಎಂದು ತಿಲಕರು ಹೇಳಿದರು.

ಕಟ್ಟಕಡೆಗೆ, ತಿಲಕರೆ ಸರಿ ಎಂದು ಸಾಧಿತರಾದರು. ಛತ್ರಪತಿ ಗೌರ್ನರ್ ಕೈಗೆ ಪುಸ್ತಕಗಳನ್ನು ನೀಡಿದರು. ಹೇಳಿದ ಅವಧಿಯಲ್ಲಿ ಅವುಗಳನ್ನು ವಾಪಸ್ಸು ಪಡೆದು, ತಿಲಕರಿಗೆ ನೀಡಿದರು.[6]

ಶಾಹು ಅವರನ್ನು ಕುರಿತಂತೆ, ತಿಲಕರ ಮಿಷನ್ನಿಗೆ ಆರ್ಥಿಕ ನೆರವು ನೀಡಿದ್ದನ್ನು ಹಲವು ಸಂದರ್ಭಗಳಲ್ಲಿ ಮೊದಲೇ ಚರ್ಚಿಸಿದ್ದೇವೆ. ನಿಧಿಗಳ ಸಾಗಾಣಿಕೆ ಅಥವಾ ಗೌಪ್ಯ ಸಂದೇಶಗಳ ರವಾನೆಯಲ್ಲಿ ಸಹಾಯ ಮಾಡಿದವರಲ್ಲಿ ಸರದಾರ ಬಾಳಾ ಸಾಹೇಬ ಗಾಯಕವಾಡರೊಬ್ಬರು. ಅವರು ಶಾಹು ಅವರ ಆಪ್ತ ವಲಯದಲ್ಲಿ ಸಲಹೆಗಾರರಾಗಿದ್ದರು. ಪ್ರಸಿದ್ಧ ಸಾಹಿತಿ ಜಿ. ಟಿ. ಮಡ್‌ಖೋಲ್ಕರ್ ಹೇಳುತ್ತಾರೆ: "ಅವರ ಶತ್ರುತ್ವವು ಕಹಿಯಾಗಿದ್ದಾಗಲೂ ಶಾಹು ಅವರು ತನ್ನದೇ ಆದ ರೀತಿಯಲ್ಲಿ ತಿಲಕರಿಗೆ ಸಹಾಯ ಅಥವಾ ಎಚ್ಚರಿಕೆ ನೀಡಲು ಗೌಪ್ಯವಾಗಿ ಪ್ರಯತ್ನಿಸಿದರು. ಬಾಳಾ ಸಾಹೇಬ ಗಾಯಕವಾಡರು ಈ ಕೆಲಸದಲ್ಲಿ ಮಹಾರಾಜರ ನಂಬಿಕಸ್ಥ ಮಧ್ಯಸ್ಥಗಾರರಾಗಿದ್ದರು".[7]

ಪ್ರಭೋಧಂಕರ್ ಅಲಿಯಾಸ್ ಕೇಶವರಾವ್ ಥ್ಯಾಕರೆಯವರ ಒಂದು ಸವಿ ನೆನಪು ಶಾಹು ಅವರು ಗೌಪ್ಯ ರೀತಿಯಲ್ಲಿ ತಿಲಕರಿಗೆ ಸಹಾಯ ಮಾಡಿದರೆಂದು ಹೇಳುತ್ತದೆ. ತಿಲಕರ ವಿರುದ್ಧ ಚಿರೋಲೆ ಪ್ರಕರಣದಲ್ಲಿ ಶಾಹು ಅವರು ಗಂಭೀರವಾಗಿ ತೊಡಗಿಕೊಂಡಿದ್ದರೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಅವರು ಈ ವಿಚಾರದಲ್ಲಿ ಬ್ರಿಟಿಷ್ ಸರಕಾರಕ್ಕೆ ಎಲ್ಲಾ ರೀತಿಗಳಲ್ಲಿ ಸಹಾಯ ಮಾಡಲು ತುಂಬ ಉತ್ಸುಕರಾಗಿದ್ದರು. ಅವರು ಪ್ರೊಫೆಸರ್ ಡೊಂಗ್ರೆಯವರನ್ನು ಚಿರೋಲೆಯವರ 'ಇಂಡಿಯನ್ ಅನ್‌ರೆಸ್ಟ್' ಎಂಬ ಪುಸ್ತಕವನ್ನು ಮರಾಠಿ ಭಾಷೆಗೆ ಅನುವಾದ ಮಾಡಲು ಕೋರಿದ್ದರು. ನಂತರ ಅದನ್ನು ಪ್ರಕಟಿಸಿದರು. ಬಾಂಬೆ ಸರಕಾರವು ಎರಡು ಗೌಪ್ಯ ಪತ್ರಗಳ ಮೂಲಕ ಅವರಿಗೆ ಅಗತ್ಯವಾದ ಯಾವುದೇ ಇಲಾಖೆಯ ಎಲ್ಲಾ ದಾಖಲೆ ಮತ್ತು

ಮಾಹಿತಿಗಳನ್ನು ಶಾಹು ಅವರು ಗೌಪ್ಯವಾಗಿ ಚಿರೋಲೆಯವರಿಗೆ ಒದಗಿಸಬೇಕೆಂದು ತಿಳಿಸಿತ್ತು. ಬಾಂಬೆ ಸರಕಾರದ ಕಾರ್ಯದರ್ಶಿಗಳು ಸಹಿಮಾಡಿದ ಕಾಗದಗಳನ್ನು ಕಳುಹಿಸಿಕೊಡಲಾಗಿತ್ತು. ಕೋರ್ಟಿನಲ್ಲಿ ಅಂತಿಮವಾಗಿ ಪ್ರಕ್ರಿಯೆಗಳು ಪ್ರಾರಂಭವಾದಾಗ ಕೋರ್ಟಿನ ಮುಂದೆ ಹಾಜರಾಗಲು ರಾಬರ್ಟ್‌ಸನ್ ಅವರನ್ನು ಕರೆಸಲಾಗಿತ್ತು. ಅವರನ್ನು ಅಡ್ಡ–ಪರೀಕ್ಷೆಮಾಡುವಾಗ ತಿಲಕರ ಅಟರ್ನಿ(ವಕೀಲರು) ದಾದಾ ಸಾಹೇಬ್ ಕರಂಡಿಕರ್ ಅವರು ಮತ್ತೆ ಮತ್ತೆ ಬಾಂಬೆ ಸರಕಾರ ಗೌಪ್ಯ ಪತ್ರಗಳನ್ನು ಕಳುಹಿಸುತ್ತೊ ಇಲ್ಲವೊ ಎಂದು ಕೇಳಿದರು. ರಾಬರ್ಟ್‌ಸನ್ ಅವರು ಇಲ್ಲ, ಇಲ್ಲ ಎಂದು ಹೇಳತೊಡಗಿದರು. ಅಂತಿಮವಾಗಿ ಕರಂಡಿಕರ್ ಅವರು ಫೈಲಿನಲ್ಲಿದ್ದ ಅದೇ ಎರಡು ಪ್ರತಿಗಳನ್ನು ಹೊರತೆಗೆದರು. (ಅವು ಮೂಲಪ್ರತಿಗಳ ನಕಲು ಪ್ರತಿಗಳು) ಮತ್ತು ಕೋರ್ಟಿನ ಮುಂದೆ ಮಂಡಿಸಿದರು. ರಾಬರ್ಟ್‌ಸನ್ ಅವರು ಪೂರ್ಣವಾಗಿ ಕಕ್ಕಾಬಿಕ್ಕಿಯಾದರು. ಬಾಂಬೆ ಸರಕಾರವು ಚಿರೋಲೆ ಅವರ ಬಗ್ಗೆ ಪಕ್ಷಪಾತವಾಗಿದ್ದದ್ದು ರುಜುವಾತಾಯಿತು ಮತ್ತು ತಿಲಕರ ಕೇಸು ಬಲಗೊಂಡಿತು. ಶಾಹು ಅವರ ಹದ್ದುಗಣ್ಣಿನ ಪತ್ರಗಳು ಶಾಹು ಸ್ವತಃ ತನ್ನ ಮಾತಿನ ಮೂಲಕ ತಿಲಕರ ಬಳಿಗೆ ಕಳುಹಿಸಿಕೊಟ್ಟಿದ್ದರು. ನಂತರ ಥ್ಯಾಕರೆ ಶಾಹು ಅವರನ್ನು ಈ ಬಗ್ಗೆ ಕೇಳಿದಾಗ ಅವರು ಭಾವೋದ್ರೇಕದಿಂದ ಹೇಳಿದರು: "ಏನಾಯಿತು? ಆ ಪತ್ರಗಳನ್ನು ತಡೆಹಿಡಿಯುವುದರಿಂದ ತಿಲಕರನ್ನು ಕಷ್ಟಕ್ಕೆ ಸಿಕ್ಕಿಸಬೇಕಾಗಿತ್ತೆ? ಅವರು ರಾಷ್ಟ್ರಕ್ಕಾಗಿ ಹೆಣಗಾಡುತ್ತಿದ್ದಾರೆ. ನಮ್ಮ ವೇದೋಕ್ತ ಶತ್ರುತ್ವವನ್ನು ರಾಜಕಾರಣದಲ್ಲಿ ಮುಂದುವರಿಸಬೇಕೆ? ವಿವಾದಗಳು ಮಿತಿಗಳಲ್ಲಿರಬೇಕು".[8]

ಮಾಂಡಲೆ ಜೈಲಿನಿಂದ ತಿಲಕರು ಬಿಡುಗಡೆಗೊಂಡ ನಂತರ ೧೯೧೪ರಲ್ಲಿ ಸರಕಾರವು ಒಂದು ಸುತ್ತೋಲೆಯನ್ನು ಹೊರಡಿಸಿ, ಸಮಾಜದ ಗಣ್ಯ ವ್ಯಕ್ತಿಗಳಾದ ಜಾಗೀರದಾರರು, ವತನದಾರರು, ರಾವ್–ಸಾಹೇಬರು, ರಾವ್–ಬಹಾದೂರರು ಮೊದಲಾದವರಲ್ಲಿ ಯಾರಾದರು "ಸರಕಾರಕ್ಕೆ ಸಂಬಂಧಪಟ್ಟವರು ತಿಲಕರನ್ನು ಭೇಟಿಮಾಡಿದರೆ, ಅದನ್ನು ಅಪರಾಧವೆಂದು ಪರಿಗಣಿಸಿ, ಕಾನೂನಿನ ಪ್ರಕಾರ ಶಿಕ್ಷಿಸಲಾಗುವುದು" ಎಂದು ಹೇಳಿತ್ತು. ಬಾಂಬೆ ಸರಕಾರದ ಒತ್ತಡದಡಿಯಲ್ಲಿ ಕೊಲ್ಹಾಪುರ ಸಂಸ್ಥಾನ ಸೇರಿದಂತೆ ಎಲ್ಲಾ ರಾಜ ಸಂಸ್ಥಾನಗಳ ಮುಖ್ಯಸ್ಥರು ಅಂತಹ ಸುತ್ತೋಲೆಗಳನ್ನು ಹೊರಡಿಸಿದ್ದರು.[9] ಇದರ ಪ್ರಕಾರ ಶಾಹು ಅವರು ಗೌಪ್ಯವಾಗಿ ತಿಲಕರಿಗೆ ಸಹಾಯ ಮಾಡಿ ತನ್ನ ಮೇಲೆ ಆಪತ್ತನ್ನು ಎಳೆದುಕೊಂಡಂತೆಯೆ.

ಶಾಹು–ತಿಲಕರ ಸಂಬಂಧಗಳ ಕೆಲವು ನಿದರ್ಶನಗಳು ಹೃದಯ ಸ್ಪರ್ಶಿಯಾಗಿವೆ. ೧೯೨೦ರ ಜುಲೈನಲ್ಲಿ ತಿಲಕರು ಬಾಂಬೆಯಲ್ಲಿ ತಂಗಿದ್ದಾರೆ. ಮತ್ತು ಅವರ ಆರೋಗ್ಯ ಹದಗೆಡುತ್ತಿದೆಯೆಂದು ತಿಳಿದ ಕೂಡಲೇ ಶಾಹು ಅವರು ತಿಲಕರ ಮಗ ಶ್ರೀಧರಪಂತ ಅವರಿಗೆ ಹೀಗೆ ಪತ್ರ ಬರೆದರು: "ಲೋಕಮಾನ್ಯ ತಿಲಕರ ಆರೋಗ್ಯ ಸರಿಯಿಲ್ಲವೆಂದು ಕೇಳಿ ನನಗೆ ಬಹಳ ದುಃಖವಾಯಿತು. ಪ್ರತಿ ದಿನ ಅವರ ಆರೋಗ್ಯವನ್ನು ತಂತಿಯ ಮೂಲಕ ತಿಳಿಸುತ್ತಾ ಇರಿ. ಅವರು ಉತ್ತಮ ವಾತಾವರಣದಲ್ಲಿ ತಂಗಿದರೆ ಉತ್ತಮ. ಅವರು ಮೀರಜ್‌ನಲ್ಲಿರುವ ನನ್ನ ಬಂಗಲೆಗೆ ಬಂದರೆ ಉತ್ತಮ. ಅಲ್ಲಿ ಅವರು ನುರಿತ ಡಾ. ವೈಲ್ ಮತ್ತು ಡಾ. ವೇನ್‌ಲೆಸ್ ಅವರ ಸೇವೆಯನ್ನು ಪಡೆಯಬಹುದು. ಅವರ ಆರೋಗ್ಯ ಸುಧಾರಿಸುವುದೆಂದು ನನ್ನ ಭಾವನೆ. ನಾನು ತೋಫ್‌ಖಾನೆ, ವಿಚಾರೆ ಮತ್ತು ಪೋಂಕ್ಷೆ ಅವರನ್ನು ನಿಮ್ಮ ಬಳಿಗೆ ಕಳುಹಿಸಿದ್ದೇನೆ. ನಾನು ಮತ್ತೆ ಏನು ಮಾಡಲಿ? ಬರೆಯುತ್ತಾ ಇರಿ".[10]

ಇಬ್ಬರ ನಡುವಿನ ಶತ್ರುತ್ವ ಅತಿ ಕಹಿಯಾಗಿದ್ದಾಗ (ಜುಲೈ ೧೯೨೦) ಮತ್ತು ರ್‍ಯಾಂಡ್ ಮತ್ತು ಜಾಕ್ಸನ್ ಅವರಿಗೆ ಆದ ಗತಿಯೇ ನಿಮಗೂ ಆಗುವುದೆಂದು ತಿಲಕರು ಶಾಹು ಅವರಿಗೆ ಸಂದೇಶ

ಕಳುಹಿಸಿದಾಗ ಮೇಲಿನ ಪತ್ರ ಬರೆಯಲಾಗಿತ್ತು ಎಂದು ಪರಿಗಣಿಸಿದಾಗ ಯಾರಾದರೂ ಆಶ್ಚರ್ಯಪಡಲೇಬೇಕು. ಶಾಹು ಅವರ ನಂಬಿಗಸ್ಥ ತೋಫ್‌ಖಾನೆ ಆಶ್ಚರ್ಯಪಟ್ಟರು. ಅವರು ತನ್ನ ಆತ್ಮಚರಿತ್ರೆ ಬರೆಯುತ್ತಾ "......ಇಬ್ಬರ ನಡುವೆಯಿರುವ ವೈರತ್ವವನ್ನು ನಾನು ಬಲ್ಲೆ. ನಾನು ನಿರ್ಭಯವಾಗಿ, 'ಮಾನ್ಯ ಮಹಾರಾಜರು ಮತ್ತು ತಿಲಕರು ಶತೃತ್ವದ ಭಾವನೆಯ ಸಮಪಾಲುದಾರರು. ಮಾನ್ಯ ಮಹಾರಾಜರೇ, ನೀವು ಅವರು ಪನ್‌ಹಾಲದಲ್ಲಿ ತಂಗಬೇಕೆಂದು ಹೇಗೆ ಪ್ರಸ್ತಾಪಿಸಿದಿರಿ, ಎಷ್ಟರ ಮಟ್ಟಿಗೆ ನಿಜ?' ಎಂದು ಹೇಳಿದರು. ಇದಕ್ಕೆ ತನ್ನ ಉತ್ತರದಲ್ಲಿ ಪೃಥ್ವಿರಾಜ ಮತ್ತು ತನ್ನ ಚಿಕ್ಕಪ್ಪರಲ್ಲಿ ಒಬ್ಬರ ನಡುವೆ ನಡೆದ ಯುದ್ಧದ ಉದಾಹರಣೆಯನ್ನು ಉಲ್ಲೇಖಿಸಿದರು. ತಮ್ಮ ಚಿಕ್ಕಪ್ಪ ಭಾರೀ ಗಾಯಗಳಿಂದ ಸಾವಿನ ಹಾಸಿಗೆಯಲ್ಲಿರುವುದನ್ನು ತಿಳಿದು ರಾತ್ರಿ ಉಡುಪಾದ ಮಸ್ಲಿನ್ ಬಟ್ಟೆಗಳನ್ನು ಧರಿಸಿ ಅವರನ್ನು ನೋಡಲು ಪೃಥ್ವಿರಾಜರು ಹೋದರು. ಚಿಕ್ಕಪ್ಪನ ಕೊನೇ ಆಸೆ ಒಂದೇ ತಟ್ಟೆಯಲ್ಲಿ ಇಬ್ಬರು ಊಟ ಮಾಡುವ ಆಸೆಯನ್ನು ನೆರವೇರಿಸಿದರೆಂಬ ಈ ಕತೆಯನ್ನು ರಸವತ್ತಾದ ಮಾತುಗಳಲ್ಲಿ ಹೇಳಿದರು. ಆಗ ರಾಜರ್ಷಿ ಹೇಳಿದರು. ಈ ರೀತಿಯ ಶತೃತ್ವವಿರುವ ಪರಂಪರೆಯ ಭಾರತದಲ್ಲಿ ನಾವು ಹುಟ್ಟಿದ್ದೇವೆ ಮತ್ತು ವಿಶ್ವದಲ್ಲಿ ಅತ್ಯಂತ ಶ್ರೇಷ್ಠ ಧರ್ಮವಾದ ಆರ್ಯಧರ್ಮಕ್ಕೆ ಶತ್ರುತ್ವಕ್ಕೆ ಎಷ್ಟು ಪ್ರಾಮುಖ್ಯತೆ ಕೊಡಬೇಕೆಂಬುದು ಗೊತ್ತು. ತಿಲಕರ ಸ್ಥಾನದಲ್ಲಿ ನಾನೇ ರೋಗಿಯಾಗಿದ್ದರೆ ಏನಾಗುತ್ತಿತ್ತು. ಅವರು ನಾನು ಆರೋಗ್ಯವಂತವಾಗಿರಬೇಕೆಂದು ಬಯಸುತ್ತಿರಲಿಲ್ಲವೇ ಮತ್ತು ನನ್ನ ಕ್ಷೇಮಕ್ಕೆ ಅವರು ವ್ಯವಸ್ಥೆ ಮಾಡುತ್ತಿರಲಿಲ್ಲವೇ? ನೀನು ಹೇಳಬೇಕಾದದ್ದು ಏನು? ಯಾರಾದರೂ ಅದನ್ನೇ ಹೇಳುವುದಾದರೆ ಅದು ಸಂಪೂರ್ಣ ಸುಳ್ಳು, ಆಧಾರರಹಿತ. ಅದನ್ನೇ ನಾನು ಸಾವಿನ ದವಡೆಯಲ್ಲಿದ್ದರೂ ಕೂಗಿ ಹೇಳುವೆ. ತಿಲಕರ ಶ್ರೇಷ್ಠತ್ವ ನನಗೆ ಗೊತ್ತು ತೋಫ್‌ಖಾನೆಯವರೇ."[11]

ಶಾಹು ಅವರ ಸಂದೇಶಕಾರರು ತಿಲಕರ ಬಳಿಗೆ ಹೋಗುತ್ತಿರುವಾಗ ಅವರ ಸಾವಿನ ಸುದ್ದಿ ತಿಳಿಯಿತು. ಅವರು ರಾಯಬಾಗಿನಲ್ಲಿ ತಂಗಿದ್ದರು. ಸುದ್ದಿ ಕೇಳಿ ದಿಗ್ಭ್ರಾಂತಗೊಂಡರು. ಮಾಧವರಾವ್ ಬಾಗಲ್ " ಮಹಾರಾಜರು ರಾಯಬಾಗ್‌ನಲ್ಲಿ ತಂಗಿರುವಾಗ ಬೆಳಿಗ್ಗೆ ೮ ಗಂಟೆಗೆ ತಿಲಕರು ತೀರಿಕೊಂಡರೆಂಬ ತಂತಿಯನ್ನು ಕೊಲ್ಲಾಪುರದಿಂದ ಪಡೆದರು. ತಂತಿಯನ್ನು ಸ್ವೀಕರಿಸಿದ ಕೂಡಲೇ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು. ಅವರು ಕಣ್ಣು ತೆರೆದಂತೆ ಕಣ್ಣೀರು ಸುರಿಯಲಾರಂಭಿಸಿತು. ಭಾವನೆಗಳ ಭಾವಕಟ್ಟೆ ಒಡೆದ ಕೂಡಲೇ ಅವರು ಉದ್ಗರಿಸಿದರು:

"ನನ್ನ ಪರಮಶತ್ರು ಹೊರಟುಹೋದರು, ಈಗ ನಾನು ಯಾರ ಜೊತೆಯಲ್ಲಿ ಕಾದಾಡಲಿ? ನಾನು ಅವರೊಂದಿಗೆ ಜಗಳವಾಡುತ್ತಿದ್ದರೂ ಅವರ ಸೇವೆ ರಾಷ್ಟ್ರಕ್ಕೆ ಅಪಾರವಾದದ್ದು."

"ಚಿರತೆಯ ಬೇಟೆಗೆ ರಾಯಬಾಗಿನಲ್ಲಿ ಎಲ್ಲಾ ವ್ಯವಸ್ಥೆಗಳನ್ನು ಮಾಡಲಾಗಿತ್ತು, ಜಿಂಕೆ ಬಲಿಪಶು ಸ್ಥಳದಲ್ಲಿತ್ತು, ಯೋಜಿತ ಸ್ಥಳಗಳಿಗೆ ಕುದುರೆಗಳು ಹೋಗಿದ್ದವು; ಚಿರತೆಯ ಸಹಿತ ಕಾರಿನಲ್ಲಿ ಬೇಟೆಗಾಗಿ ಹೋಗಲು ಸಿದ್ಧವಾಗಿದ್ದರು. ಬೇಟೆಯ ಆಟವನ್ನು ರದ್ದುಗೊಳಿಸಲಾಯಿತು, ಕುದುರೆಗಳನ್ನು ಹಿಂದಕ್ಕೆ ಕರೆಸಿಕೊಳ್ಳಲಾಯಿತು, ಆ ದಿನ ಊಟದಲ್ಲಿ ಮಾಂಸ ನೀಡುವುದನ್ನು ನಿಷೇಧಿಸಲಾಗಿತ್ತು. ಚಿರತೆಗಳಿಗೂ ಹಾಲನ್ನು ಕುಡಿಸಲಾಯಿತು. ರಾಜರು ತಿಲಕರ ಬಗ್ಗೆ ಇಡೀ ದಿನ ಸೌಹಾರ್ದಯುತವಾಗಿ ಮಾತನಾಡಿದರು, ಅವರನ್ನು ಪ್ರಶಂಸೆಮಾಡಿದರು. ಮತ್ಯಾವ ವಿಷಯವೂ ಇರಲಿಲ್ಲ."[12]

## ಬಿಡಿಸಲಾರದ ಒಗಟು

ತಿಲಕರ ಬಗೆಗಿನ ಶಾಹು ಅವರ ಸೌಹಾರ್ದತೆಯ ದೃಷ್ಟಿಯನ್ನು ನೋಡಿ ಇಬ್ಬರ ನಡುವಣ ಸಂಬಂಧವು ಒಂದು ಬಿಡಿಸಲಾರದ ಒಗಟೆಂದು ಹಲವು ವಿದ್ವಾಂಸರು ಭಾವಿಸುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಪ್ರಭೋಧಂಕರ್ ಥ್ಯಾಕರೆಯವರು ಶಾಹು ಅವರೊಂದಿಗೆ ಹಲವಾರು ಸಲ ಭೇಟಿ ಮಾಡಿದ್ದರು. ಅವರು ಬರೆಯುತ್ತಾರೆ: " ಮಹಾರಾಷ್ಟ್ರದ ಈ ಇಬ್ಬರು ಮಹಾನರ ನಡುವೆ ಕೆಮಿಸ್ಟ್ರಿ ಯಾವ ವಿಧದಲ್ಲಿ ಕೆಲಸ ಮಾಡಿತೆಂಬುದೇ ಇನ್ನೂ ಒಗಟಾಗಿದೆ. ಸಂಕುಚಿತ ಭಾವದಿಂದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಮರಾಠರೆಂದು ತಿಲಕರು ಮತ್ತು ಶಾಹು ಅವರನ್ನು ನೋಡುವವರು ಇನ್ನೂ ಉತ್ತರವನ್ನು ಕಂಡುಕೊಂಡಿಲ್ಲ. ಇಬ್ಬರಲ್ಲಿ ಯಾರೊಬ್ಬರೂ ತಮ್ಮ ಆಪ್ತರಿಗೆ ಈ ಗುಟ್ಟನ್ನು ಬಿಟ್ಟುಕೊಟ್ಟಿಲ್ಲ. ಶಾಹು ಅವರ ರಹಸ್ಯದ ಬಗ್ಗೆ ಹುಡುಕಿದವರು ಕೇವಲ ಜಾರಿಕೆಯಾದರೆ ಕುತೂಹಲಕಾರಿಯಾದ ಬೋಧನೆಗಳನ್ನು ನೀಡಿದ್ದಾರಷ್ಟೇ."[13]

ಈ ಒಗಟಿನ ವಿದ್ಯಮಾನದ ಬಗ್ಗೆ ಹಿನ್ನೋಟ ಬೀರಿದಾಗ ಮಹಾರಾಷ್ಟ್ರದ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಸಾರ್ವಜನಿಕ ವಿಷಯಗಳ ಬಗ್ಗೆ ಈ ಇಬ್ಬರು ತೆಗೆದುಕೊಂಡ ಬಗ್ಗದ ವಿರೋಧಿ ನಿಲುವುಗಳು, ವೈಯಕ್ತಿಕವಾಗದೇ ಅವರವರ ಸೈದ್ಧಾಂತಿಕ ದೃಷ್ಟಿಕೋನದ ಮೇಲೆ ಆಧಾರಿತವಾಗಿದ್ದವು. ಕಾಲ ಸರಿದಂತೆ, ಈ ವಿರೋಧವು ತೀವ್ರವಾಗಿ ಬೆಳೆದು 'ಶತ್ರುತ್ವಕ್ಕೆ' ತಿರುಗಿತು. ಆದರೆ ಅವರ ಹೃದಯಗಳಲ್ಲಿದ್ದ ಪರಸ್ಪರ ಗೌರವ ಮತ್ತು ಮಮತೆಯ ಸುಂದರವಾದ ಎಳೆಗಳು ಸದೃಢವಾಗಿ ನೆಲೆಸಿದ್ದವು. ಅವರ ನಡುವೆ ಇದ್ದ ಮಮತೆ ಮತ್ತು ಶತ್ರುತ್ವ ವಾಸ್ತವ. ಅವರೀರ್ವರಲ್ಲಿ ನಟನೆಯೆಂಬುದೇ ಇರಲಿಲ್ಲ. ಶಾಹು ಬಗ್ಗೆ ಹೇಳುವುದಾದರೆ, ಅವರು ತಿಲಕರ ಬಗ್ಗೆ ಎರಡು ಚಿತ್ರಗಳನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಂಡಿದ್ದರು. ಮೊದಲನೇ ಚಿತ್ರ, ತಿಲಕರು 'ಬ್ರಾಹ್ಮಣತ್ವ'ವನ್ನು ಬೆಂಬಲಿಸಿದ 'ಸಂಪ್ರದಾಯವಾದಿ'. ಎರಡನೇ ಚಿತ್ರ 'ದೇಶಭಕ್ತ', ಅವರು ದೇಶದ ಸ್ವಾತಂತ್ರ್ಯಕ್ಕಾಗಿ ಹಲವು ಕಷ್ಟಗಳನ್ನು ಅನುಭವಿಸಿದರು. ಅವರು ಈ ಎರಡು ಚಿತ್ರಗಳನ್ನು ಕಲಬೆರಕೆ ಮಾಡಲಿಲ್ಲ. ಶಾಹು ಅವರು ಬ್ರಿಟಿಷ್ ಸರಕಾರದ ಸಾರ್ವಭೌಮತ್ವದ ಸಾಮಂತನಾಗಿ, ಯಾವ ಪರ್ಯಾಯವಿಲ್ಲದೆ ತಿಲಕರನ್ನು ವಿರೋಧಿಸಿದರು. ಆದರೆ ತಿಲಕರನ್ನು ವಿರೋಧಿಸುತ್ತಿರುವಾಗ ಅವರು ಸ್ವಾತಂತ್ರ್ಯ ಆಂದೋಲನಕ್ಕೆ ನೀಡಿದ ಅದ್ಭುತ ಕೊಡುಗೆ ಮತ್ತು ಅವರ ನಿಷ್ಕಳಂಕ ದೇಶಪ್ರೇಮಗಳ ಬಗ್ಗೆ ಪರಿಪೂರ್ಣ ಅರಿವನ್ನು ಹೊಂದಿದ್ದರು. ದೇಶಕ್ಕಾಗಿ ಸಾಯಲು ಸಿದ್ಧವಿದ್ದ ತಿಲಕರಿಗೆ ದೀರ್ಘಾಯುಷ್ಯ ಮತ್ತು ಉತ್ತಮ ಆರೋಗ್ಯ ಸಿಗಬೇಕೆಂದು ಬಯಸಿದ್ದರು. ಈ ಭಾವನೆಯಿಂದಲೇ ಬ್ರಿಟಿಷರು ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಗಮನಿಸದೇ ತಿಲಕರನ್ನು ಔಷಧೋಪಚಾರಕ್ಕಾಗಿ ತಮ್ಮಲ್ಲಿ ಬರಲು ಆಹ್ವಾನಿಸುತ್ತಾರೆ. ಇದರ ಜೊತೆಗೆ ತಮ್ಮ ನಿಷ್ಠಾವಂತ ಸಹವರ್ತಿಗಳನ್ನು ಅವರ ಆರೋಗ್ಯವನ್ನು ಮತ್ತು ಪರಿಸ್ಥಿತಿಯನ್ನು ವಿಚಾರಿಸುವುದಕ್ಕೆ ಕಳುಹಿಸಿಕೊಡುತ್ತಾರೆ. ಅವರ ಕ್ರಮ-ಕ್ರಿಯೆಗಳಲ್ಲಿ ಔಪಚಾರಿಕತೆಯಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ತಿಲಕರಿಗೆ ತೋರಿಸುವ ಮಮತೆಯು ಬ್ರಿಟಿಷರ ದೃಷ್ಟಿಗೆ ದೇಶದ್ರೋಹ(ಸ್ವಾಮಿದ್ರೋಹ)ವಾಗಿ ಕಾಣಬಹುದು. ಆದರೆ 'ದೇಶಭಕ್ತ'ನಾದ ತಿಲಕರಿಗಾಗಿ ಅವರು ಮುಂದೊದಗುವ ತೊಂದರೆಗಳ ಪರಿಣಾಮಗಳನ್ನು ಲೆಕ್ಕಕ್ಕೇ ತೆಗೆದುಕೊಳ್ಳಲಿಲ್ಲ. ತಿಲಕರ ಸಾವಿನ ಸುದ್ದಿಯನ್ನು ಕೇಳಿದ ಕೂಡಲೇ ಆತ್ಮೀಯ ಸಂಬಂಧಿಕರು ಸತ್ತರು ಎನ್ನುವಂತೆ ಅವರ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿದವು. ಈ ಕಣ್ಣೀರು ಒಬ್ಬ ಶ್ರೇಷ್ಠ ವ್ಯಕ್ತಿ ಮತ್ತೊಬ್ಬ ಶ್ರೇಷ್ಠ ವ್ಯಕ್ತಿಗೆ ಸಲ್ಲಿಸಿದ ಗೌರವದ ನಮನವಾಗಿತ್ತು.

---

೭

# ೧೯೦೨ರ ಕ್ರಾಂತಿಕಾರಿ ಮ್ಯಾನಿಫೆಸ್ಟೊ

**ವೇ**ದೋಕ್ತದ ಪ್ರಕರಣ ಉತ್ತುಂಗ ಶಿಖರದಲ್ಲಿರುವಾಗ ಶಾಹು ಮಹಾರಾಜರು ಹೊರಡಿಸಿದ ರಾಜಾಜ್ಞೆಗಳಲ್ಲಿ ಒಂದಾದ ಈ ಆಜ್ಞೆಯು ವಿರೋಧಿಗಳಿಗೆ ಬಲವಾದ ಹೊಡೆತವನ್ನು ನೀಡಿತು. ಇದನ್ನು ಜುಲೈ ೨೬, ೧೯೦೨ರಂದು ಸಾರ್ವಜನಿಕವಾಗಿ ಪ್ರಕಟಿಸಲಾಯಿತು. ಆಗ ಶಾಹು ಮಹಾರಾಜರು ಯೂರೋಪಿನಲ್ಲಿದ್ದರು.

## ಮ್ಯಾನಿಫೆಸ್ಟೊ

ಈ ಕೆಳಕಂಡ ವಿಶೇಷ ಮ್ಯಾನಿಫೆಸ್ಟೊವನ್ನು ತನ್ನ ಆಜ್ಞೆಯ ಮೂಲಕ ಕೊಲ್ಹಾಪುರ ರಾಜ್ಯಪತ್ರದಲ್ಲಿ (ಗೆಜೆಟ್) ಪ್ರಕಟಿಸಲಾಗಿದೆ.

"ಕೊಲ್ಹಾಪುರ ಸಂಸ್ಥಾನದ ನಾಗರಿಕ ಪ್ರಜೆಗಳ ಎಲ್ಲ ವರ್ಗಗಳ ಶಿಕ್ಷಣಕ್ಕೆ ಅನುಕೂಲ ಕಲ್ಪಿಸಲು ಮತ್ತು ಉತ್ತೇಜನ ಕೊಡಲು ಇತ್ತೀಚಿನ ವರ್ಷಗಳಲ್ಲಿ ಮಾಡಿದ ಪ್ರಯತ್ನಗಳು ಹೆಚ್ಚಿನ ಹಿಂದುಳಿದ ವರ್ಗಗಳಿಗೆ ಪರಿಣಾಮಕಾರಿಯಾಗಿ ಮುಟ್ಟಿಲ್ಲವೆಂದು ಮಾನ್ಯ ಮಹಾರಾಜರು ವಿಷಾದಿಸುತ್ತಾರೆ. ಈ ವಿಚಾರವು ಮಹಾರಾಜರ ಹೆಚ್ಚಿನ ಎಚ್ಚರಿಕೆಯ ಪರಿಗಣನೆಯಲ್ಲಿದೆ ಮತ್ತು ಉನ್ನತ ಶಿಕ್ಷಣದ ಪ್ರತಿಫಲಗಳನ್ನು ಸಾಕಷ್ಟು ವಿಸ್ತೃತವಾಗಿ ಹಂಚಿಕೆಯಾಗದ ಕಾರಣದಿಂದ ಈ ವಿಫಲತೆ ಎಂಬ ತೀರ್ಮಾನಕ್ಕೆ ಮಹಾರಾಜರು ಬಂದಿದ್ದಾರೆ. ಇದನ್ನು ಸ್ವಲ್ಪಮಟ್ಟಿಗೆ ಪರಿಹರಿಸಲು ಮತ್ತು ಸಂಸ್ಥಾನದೊಳಗೆ ಮಹಾರಾಜರ ಪ್ರಜೆಗಳ ಹಿಂದುಳಿದ ವರ್ಗಗಳು ಉನ್ನತ ಶಿಕ್ಷಣದವರೆಗೆ ಅಧ್ಯಯನ ಮಾಡಲು ಉತ್ತೇಜನ ಕ್ರಮಗಳನ್ನು ಸ್ಥಾಪಿಸಲಾಗುವುದು. ಮಹಾರಾಜರು ಈಗಿರುವುದಕ್ಕಿಂತ ಹೆಚ್ಚಿಗೆ ಸಂಸ್ಥಾನದ ಸೇವೆಯಲ್ಲಿ ಉದ್ಯೋಗದ ಹೆಚ್ಚಿನ ಪಾಲನ್ನು ಆ ಹಿಂದುಳಿದ ವರ್ಗಗಳಿಗೆ ನೀಡುವುದು ಅಪೇಕ್ಷಣೀಯವೆಂದು ನಿರ್ಧರಿಸಿದ್ದಾರೆ".

ಈ ನೀತಿ–ಧೋರಣೆಯ ಅನುಗುಣವಾಗಿ ಮಾನ್ಯ ಮಹಾರಾಜರು ಈ ಆಜ್ಞೆಯ ದಿನಾಂಕದಿಂದ ಖಾಲಿಬೀಳುವ ಹುದ್ದೆಗಳಲ್ಲಿ ಶೇಕಡ ೫೦ರಷ್ಟು ಹುದ್ದೆಗಳಲ್ಲಿ ಹಿಂದುಳಿದ ವರ್ಗಗಳನ್ನು ನೇಮಕಮಾಡಲು ನಿರ್ದೇಶನ ನೀಡಲು ಹರ್ಷಿಸುತ್ತಾರೆ. ಎಲ್ಲಾ ಕಛೇರಿಗಳಲ್ಲಿ ಸದ್ಯಕ್ಕೆ ಹಿಂದುಳಿದ ವರ್ಗಗಳ ಅನುಪಾತವು ಶೇಕಡ ೫೦ಕ್ಕಿಂತ ಕಡಿಮೆಯಿದ್ದರೆ, ಮುಂದಿನ ನೇಮಕಗಳನ್ನು (ಹುದ್ದೆ) ಈ ವರ್ಗಗಳ ಸದಸ್ಯರಿಗೆ ನೀಡಬೇಕು.

"ಈ ಆಜ್ಞೆ ಪ್ರಕಟವಾದ ನಂತರ ನೇಮಕಗಳ ತ್ರೈಮಾಸಿಕ ಲೆಕ್ಕಪತ್ರವನ್ನು ಇಲಾಖೆಗಳ ಎಲ್ಲಾ ಮುಖ್ಯಸ್ಥರು ಸಲ್ಲಿಸಬೇಕು."

"ಈ ಆಜ್ಞೆಗಳ ಉದ್ದೇಶಕ್ಕಾಗಿ ಹಿಂದುಳಿದ ವರ್ಗಗಳು ಎಂದರೆ ಬ್ರಾಹ್ಮಣರು, ಪ್ರಭುಗಳು, ಪಾರ್ಸಿಗಳು, ಶೆನ್ವಿಗಳು ಮತ್ತು ಇತರೆ ಮುಂದುವರಿದ ವರ್ಗಗಳನ್ನು ಬಿಟ್ಟು ಎಲ್ಲಾ ಜಾತಿಗಳೆಂದು ತಿಳಿಯಬೇಕು".[1]

## ಬ್ರಾಹ್ಮಣರಿಗೆ ಬಾಂಬಿನ ಸ್ಫೋಟ

ಭಾರತದ ಯಾವ ಆಡಳಿತಗಾರರು (ರಾಜರು) ತನ್ನ ಪ್ರಜೆಗಳಿಗೆ ಎಂದಿಗೂ ಇಂತಹ ಸುಂದರವಾದ ಕೊಡುಗೆಗಳನ್ನು ಕೊಟ್ಟು ಆಶೀರ್ವಾದ ಮಾಡಿರಲಿಲ್ಲ. ಜೀವನಚರಿತ್ರೆಕಾರ ಕೀರ್ (ಧನಂಜಯ) ಅವರು ಶಾಹು ಅವರನ್ನು ಒಂದು ಹೊಸಯುಗದ ಉದಯದ ಮುಖ್ಯ ಘೋಷಣೆಕಾರ' ಎಂದು ಸರಿಯಾಗಿ ವಿವರಿಸಿದ್ದಾರೆ.[2] ಆದರೆ ಹೊಸಯುಗದ ಮುನ್ಸೂಚಕರು ಮಹಾರಾಷ್ಟ್ರದ ವಿಶೇಷವಾಗಿ ಕೊಲ್ಹಾಪುರದ ಬ್ರಾಹ್ಮಣರಿಗೆ ಒಂದು ಬಾಂಬಿನ ಸ್ಫೋಟವಾಗಿ ಕಾಣಿಸುತ್ತಾರೆ. ಕೊಲ್ಹಾಪುರ ಸಂಸ್ಥಾನದಲ್ಲಿ ಆಡಳಿತ ಮತ್ತು ಧಾರ್ಮಿಕ ವ್ಯವಹಾರಗಳಲ್ಲಿ ಅವರು ಹೊಂದಿದ್ದ ಪ್ರಾಬಲ್ಯದ ವ್ಯಾಪ್ತಿಯನ್ನು ಈಗಾಗಲೇ ಚರ್ಚಿಸಲಾಗಿದೆ. ಈಗ ಅವರ ಧಾರ್ಮಿಕ ಪ್ರಾಬಲ್ಯದ ಜೊತೆಗೆ, ಪ್ರಾಪಂಚಿಕ ವಿಷಯಗಳಲ್ಲಿರುವ ಅವರ ಪ್ರಾಬಲ್ಯವನ್ನು ತಡೆಯಲು ಶಾಹು ಅವರು ಈಗ ನಿರ್ಧರಿಸಿದ್ದಾರೆ. ಆದ್ದರಿಂದ ಅವರ ಮ್ಯಾನಿಫೆಸ್ಟೊ ಶೈಕ್ಷಣಿಕವಾಗಿ ಹಿಂದುಳಿದವರಿಗೆ ಸಿದ್ಧೌಷದಿಯಾದರೆ ಕೊಲ್ಹಾಪುರದ ಬ್ರಾಹ್ಮಣರಿಗೆ ಸಾವಿನ ಗಂಟೆಯಾಗಿರುವುದರಲ್ಲಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ.

ಬ್ರಾಹ್ಮಣರ ದುಷ್ಟಕೂಟದ ಗುರುವಾದ ಪ್ರೊ. ವಿಜ್‌ಪೂರ್‌ಕರ್ ಅವರು ಘೋಷಣೆಯನ್ನು ಓದುತ್ತಲೇ ಕೋಪದಿಂದ ಹುಚ್ಚರಾಗಿಬಿಟ್ಟರು. ತನ್ನ ನಿಯತಕಾಲಿಕೆ 'ಸಮರ್ಥ'ದಲ್ಲಿ ಅವರು ಬರೆಯುತ್ತಾರೆ: "ಮರಣ (ಸತ್ತ) ಸುದ್ದಿಗಳನ್ನು ಸಾಮಾನ್ಯವಾಗಿ ಬರೆಯುವಂತೆಯೆ ನಾವು ಈ ಮ್ಯಾನಿಫೆಸ್ಟೋದ ಘೋಷಣೆಯನ್ನು ಕಪ್ಪುಬಣ್ಣದ ಅಂಚುಗಳು ಸುತ್ತಲು ಆವರಿಸಿಕೊಳ್ಳುವ ರೀತಿಯಲ್ಲಿ ಪ್ರಕಟಿಸಬೇಕೆಂದು ನಿರ್ಧರಿಸಿದ್ದೆವು. ಆದರೆ ನಾವು ವಿಚಾರವನ್ನು ಕೈಬಿಡಲು ಹೆಚ್ಚು ಸಂಯಮವನ್ನು ತೋರಿಸಿದೆವು." ತನ್ನ ಖಂಡನೆಗಳನ್ನು ವ್ಯಕ್ತಪಡಿಸುತ್ತಾ ಅವರು ಹೇಳುತ್ತಾರೆ: "ಕೊಲ್ಹಾಪುರದ ಬ್ರಾಹ್ಮಣರ ನ್ಯಾಯಬದ್ಧ ಆಕಾಂಕ್ಷೆಗಳನ್ನು ಹೂಳಲಾಯಿತು; ಈ ಅದ್ಭುತವಾದ ಘೋಷಣೆಯನ್ನು ಒಂದು ಮೃತ್ಯು ಸುದ್ದಿಯೆಂದು ಗೌರವಿಸಬಹುದು." ಕೊನೆಯದಾಗಿ ಅವರು ಶಪಿಸಿದರು: " ದೇವರು ಭಯಂಕರವಾದ ರೀತಿಯಲ್ಲಿ ಪ್ರತಿಕ್ರಿಯಿಸದಿರಲಿ ಎಂದು ಭಾವಿಸೋಣ."[3]

ಈ ಅಚಾತುರ್ಯದ (ಬುದ್ಧಿಗೇಡಿ) ಕ್ರಮದಿಂದ ನೊಂದ ತಿಲಕರು ಶಾಹುಗೆ 'ಮತಿಗೆಟ್ಟಿದೆ' ಎಂದು ಹೇಳಿದರು. ಅವರು ಹೇಳಿದರು: "ಇಲ್ಲಿಂದ ಮುಂದಕ್ಕೆ ಕೊಲ್ಹಾಪುರ ಸಂಸ್ಥಾನದ ಅರ್ಧದಷ್ಟು ಖಾಲಿ ಬೀಳುವ ಹುದ್ದೆಗಳನ್ನು ಹಿಂದುಳಿದ ಜಾತಿಗಳ ಜನರಿಂದ ಮತ್ತು ಉಳಿದರ್ಧದ ಖಾಸಗಿ ಸ್ಥಾನಗಳನ್ನು ಮುಂದುವರಿದ ಸಮುದಾಯಗಳಾದ ಬ್ರಾಹ್ಮಣ, ಪ್ರಭು, ಶೆಣ್ವಿ, ಪಾರ್ಸಿ ಮೊದಲಾದವುಗಳಿಂದ ತುಂಬಿಸಲಾಗುವುದೆಂದು ಕೊಲ್ಹಾಪುರದ ಮಹಾರಾಜರು ಘೋಷಿಸಿದ್ದಾರೆ. ಇದು ಭ್ರಾಂತಿಕಾರಕ ಮತ್ತು ಅಪಾಯಕಾರಿ ಕ್ರಮವಾಗಿದೆ ಮತ್ತು ಈ ಕ್ರಮವು ಬ್ರಾಹ್ಮಣರಿಗೆ ಮಾತ್ರವಲ್ಲ ಸಂಸ್ಥಾನಕ್ಕೆ ಹೆಚ್ಚು ತೊಂದರೆಯಾಗುವುದು. ಹಿಂದುಳಿದ ಜಾತಿಗಳ ಅಭ್ಯರ್ಥಿಗಳಿಂದ ಹುದ್ದೆಗಳನ್ನು ತುಂಬುವಾಗ ಅವರ ಸಾಮರ್ಥ್ಯವನ್ನು ನೋಡಬೇಕೋ ಅಥವಾ ಇಲ್ಲವೋ? ..... ಹಿಂದುಳಿದ ಮತ್ತು ಮುಂದುವರಿದ ಸಮುದಾಯಗಳ ನಡುವಣ ಈ ರೀತಿಯ ತಾರತಮ್ಯತೆ ಸಂಸ್ಥಾನದ ಕಲ್ಯಾಣದ ಕಡೆಗೆ ಕೊಂಡೊಯ್ಯುತ್ತದೆ ಎಂಬುದೇ ಅಚಾತುರ್ಯ ಮತ್ತು ಬುದ್ಧಿಗೇಡಿತನದ್ದು. ಎಲ್ಲಕ್ಕಿಂತ ಮಿಗಿಲಾಗಿ ಅವರು ಮಾನಸಿಕ

ಬುದ್ಧಿಭ್ರಮಣೆಯಿಂದ ನರಳುತ್ತಿದ್ದಾರೆಂಬುದಕ್ಕೆ ಇದು ಸಂಕೇತ".[4] ಅದೇ ಧಾಟಿಯಲ್ಲಿ 'ಸಮರ್ಥ' ಮತ್ತು 'ಕೇಸರಿ' ಹಾಗು ಇತರೆ ಬ್ರಾಹ್ಮಣ ದಿನಪತ್ರಿಕೆಗಳಾದ 'ನೇಟಿವ್ ಒಪಿನಿಯನ್', 'ಕಲ್ಪತರು', 'ಪ್ರೇಕ್ಷಕ' ಮೊದಲಾದವುಗಳು ಮೀಸಲಾತಿಯ ಧೋರಣೆಯ ಮೇಲೆ ಭಯಂಕರವಾಗಿ ದಾಳಿ ನಡೆಸಿದವು.

'ಕೇಸರಿ' ಗುಂಪಿನ 'ಮರಹಟ್ಟ' ಎಂಬ ಇಂಗ್ಲೀಷಿನ ನಿಯತಕಾಲಿಕೆಯು ಬೈಗುಳದ ಸುರಿಮಳೆಗರೆಯಿತು. ಹಿಂದುಳಿದ ವರ್ಗಗಳಿಗೆ ಶೇಕಡ ೫೦ರಷ್ಟು ಮೀಸಲಾತಿಯು ತನ್ನ ಜಾತಿಯ ಮರಾಠ ಸದಸ್ಯರನ್ನು ಆಡಳಿತದಲ್ಲಿ ತುಂಬುವ ಶಾಹು ಅವರ ಸಂಚು ಎಂದು ಬಹಿರಂಗವಾಗಿ ಟೀಕಿಸಲಾಯಿತು. ಸಂಸ್ಥಾನದ ವ್ಯವಹಾರಗಳಲ್ಲಿ ಜಾತಿಯ ಸಮಸ್ಯೆಯನ್ನು ಬೆರೆಸಿದ ಶಾಹು ಅವರನ್ನು ಖಂಡಿಸುತ್ತಾ 'ಮರಹಟ್ಟ' ಪತ್ರಿಕೆ ಬರೆಯುತ್ತದೆ: "ಮರಾಠ ಮಹಾರಾಜರು ತಮ್ಮ ಜಾತಿಯ ಸಹೋದರರನ್ನು ಶಿಕ್ಷಿತರನ್ನಾಗಿ ಮಾಡಲು ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿದರೆ ನಿಯತಕಾಲಿಕ 'ಮರಹಟ್ಟ'ದ ಆಕ್ಷೇಪಣೆಯಿಲ್ಲ. ಆದರೆ ಒಂದು ವಿಶಿಷ್ಟ ಜಾತಿಯ ಅಭಿವೃದ್ಧಿಗೆ ಪ್ರಯತ್ನಿಸುವುದನ್ನು ನಾವು ಆಕ್ಷೇಪಿಸುತ್ತೇವೆ.

**ವಾಸ್ತವತೆ ಏನು?**

ವಾಸ್ತವಿಕವಾಗಿ, ಕೊಲ್ಹಾಪುರದ ಸಂಸ್ಥಾನದಲ್ಲಿ ಮರಾಠ ಜಾತಿ ಬಹುಸಂಖ್ಯಾತವಾಗಿದ್ದರೂ ಬೇರೆ ಜಾತಿಗಳ ಜನರಾದ ಜೈನರು, ಲಿಂಗಾಯತರು, ಮುಸ್ಲಿಮರು ಮೊದಲಾದವರು ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಸಮುದಾಯಗಳ ಶಿಕ್ಷಣದ ವ್ಯಾಪ್ತಿಯು ಬಹುಮಟ್ಟಿಗೆ ಮರಾಠರಲ್ಲಿರುವಷ್ಟೇ ಇದೆ. ಇಂಥ ಪರಿಸ್ಥಿತಿಯಲ್ಲಿ ಮೀಸಲಾತಿಯ ಈ ಘೋಷಣೆ (ಮ್ಯಾನಿಫೆಸ್ಟೊ) ಸಮಾನವಾಗಿ ಬ್ರಾಹ್ಮಣೇತರರಿಗೆ ಪ್ರಯೋಜನವಾಗುತ್ತದೆ. ಆದರೆ ಬ್ರಾಹ್ಮಣ ಪತ್ರಿಕೆಗಳು ಮೀಸಲಾತಿಯ ಘೋಷಣೆಯ ಪ್ರಯೋಜನಗಳು ಕೇವಲ ಮರಾಠ ಜಾತಿಗೆ ಸಿಗುತ್ತವೆಯೆಂದು ಶಾಹು ಅವರು ಪಕ್ಷಪಾತ ತೋರಿಸಿದ್ದಾರೆಂದು ತೆಗಳಿದವು. ಕೊಲ್ಹಾಪುರ ಸಂಸ್ಥಾನದ ಜನಸಂಖ್ಯೆಯಲ್ಲಿ ಕೇವಲ ಶೇಕಡ ೫೦ರಷ್ಟು ಮೀಸಲಾತಿಯಿರುವುದನ್ನು ಮತ್ತು ಉಳಿದ ಮೀಸಲಾತಿಯನ್ನು ಶೇಕಡ ೯೦ರಷ್ಟು ಜನಸಂಖ್ಯೆಯನ್ನು ಹೊಂದಿರುವ ಹಿಂದುಳಿದ ಜಾತಿಗಳಿಗೆ ಮೀಸಲಿಡಲಾಗಿದೆ ಎಂಬ ಘೋಷಣೆಯನ್ನು ಈ ಪತ್ರಿಕೆಗಳು ಕಡೆಗಣಿಸಿವೆ. ಈ ಕ್ರಮವು ಆಡಳಿತದಲ್ಲಿರುವ ಬ್ರಾಹ್ಮಣರ ಅನಿರ್ಬಂಧಿತ ಏಕಸ್ವಾಮ್ಯತೆಯನ್ನು ತಡೆಯುವುದೆಂದು ಮತ್ತು ಇಲ್ಲಿಯವರೆಗೆ ಅನುಭವಿಸಿರುವ ತಮ್ಮ ಆನುಷಂಗಿಕ ಆಧಿಪತ್ಯಕ್ಕೆ (ಪ್ರಾಬಲ್ಯಕ್ಕೆ) ಭಂಗವಾಗುವುದೆಂಬುದು ಬ್ರಾಹ್ಮಣರ ನಿಜವಾದ ಆತಂಕವಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ದೊಡ್ಡ ಆಪತ್ತು ಮುಂದೆ ಇತ್ತು. ಬ್ರಿಟಿಷ್ ಸರಕಾರವು ಬ್ರಾಹ್ಮಣರನ್ನು ನಿರ್ಬಂಧಿಸುವ ಮತ್ತು ಬ್ರಾಹ್ಮಣೇತರರನ್ನು ತುಷ್ಟಿಗೊಳಿಸುವ ಮೀಸಲಾತಿಯಂತಹ ಅದೇ ರೀತಿಯ ಧೋರಣೆಯನ್ನು ಅನುಸರಿಸಿದರೆ ಏನು ಮಾಡುವುದು? ರಾಜಕೀಯವಾಗಿ ಸಕ್ರಿಯವಾಗಿರುವ ಬ್ರಾಹ್ಮಣ ಸಮುದಾಯವನ್ನು ತಮ್ಮ ಶತ್ರುವೆಂದು ಬ್ರಿಟಿಷ್ ಸರಕಾರ ಕಂಡುಕೊಂಡಿತ್ತು ಮತ್ತು ರಾಜಕಾರಣದ ನಿಯಮದ ಒಂದು ಪ್ರಮುಖ ತತ್ವ ಶತ್ರುಗಳ ಶತ್ರುವೆ ಸ್ನೇಹಿತ ಎಂಬ ಅಂಥ ಧೋರಣೆಯನ್ನು ಬ್ರಿಟಿಷರು ಅಂಗೀಕರಿಸುವುದನ್ನು ನಿರಾಕರಿಸುವಂತಿಲ್ಲ.

ಕೊಲ್ಹಾಪುರ ಸಂಸ್ಥಾನದ ಆಡಳಿತದಲ್ಲಿ ಬ್ರಾಹ್ಮಣೇತರ ಜಾತಿಗಳ ಪ್ರಾತಿನಿಧ್ಯವು ತೀರಾ ಕಡಿಮೆ (ನಗಣ್ಯ). ಆ ಕಾಲದಲ್ಲಿ ಒಬ್ಬ ಬ್ರಾಹ್ಮಣೇತರ ವ್ಯಕ್ತಿ ಮೆಟ್ರಿಕ್ಯುಲೇಷನ್ (ಎಸ್.ಎಸ್.ಎಲ್.ಸಿ.) ಪಾಸಾಗುವುದು ಆಶ್ಚರ್ಯದ ಸಂಗತಿ. ಆದರೆ ಬ್ರಾಹ್ಮಣ ನೌಕರಶಾಹಿಯು ಅಂಥ ಸುಶಿಕ್ಷಿತ ವ್ಯಕ್ತಿಯನ್ನು ಮೂಲೆಗೆ ತಳ್ಳುತ್ತಿತ್ತು.

ಭಾಸ್ಕರರಾವ್ ಜಾಧವ ಅವರು ತಮ್ಮ ಒಂದು ಲೇಖನದಲ್ಲಿ ಇದನ್ನು ಪ್ರಸ್ತಾಪಿಸಿದ್ದಾರೆ. ಅವರು ಬರೆಯುತ್ತಾರೆ: "ಮರಾಠರ ಮತ್ತು ಶೇಕಡ ೯೫ರಷ್ಟು ಶೈಕ್ಷಣಿಕವಾಗಿ ಹಿಂದುಳಿದ ಜನರ ಹೀನ ಮನಸ್ಥಿತಿಯನ್ನು ಮೊಟ್ಟಮೊದಲಿಗೆ ಶಾಹು ಮಹಾರಾಜರು ಅರ್ಥಮಾಡಿಕೊಂಡು ಹಲವು ವರ್ಷಗಳ ಹಿಂದೆಯೇ ಪ್ರೌಢಶಾಲೆ ಮತ್ತು ಕಾಲೇಜುಗಳನ್ನು ಕೊಲ್ಹಾಪುರದಲ್ಲಿ ಸ್ಥಾಪಿಸಿದರು. ಆದರೆ ಬ್ರಾಹ್ಮಣೇತರರು ಶಿಕ್ಷಣದ ಈ ವಿಧಾನಗಳನ್ನು ಬಳಸಿಕೊಳ್ಳಲಿಲ್ಲ. ಇಬ್ಬರು ಮರಾಠರು ಮೆಟ್ರಿಕ್ಯುಲೇಶನ್ ಪರೀಕ್ಷೆಯನ್ನು ಪಾಸು ಮಾಡಿದರು. ಅವರಲ್ಲಿ ಒಬ್ಬನನ್ನು ಪ್ರೌಢಶಾಲೆಗೆ ನೇಮಕಮಾಡಲಾಯಿತು. ಆದರೆ ಅವನನ್ನು ಅಧ್ಯಾಪಕನಾಗಿ ನೇಮಕಮಾಡದೆ ಪುಸ್ತಕಭಂಡಾರಕ್ಕೆ ಕಳುಹಿಸಲಾಯಿತು. ಇನ್ನೊಬ್ಬನು ಪರಿಚಾರಕನ ಹುದ್ದೆಗಾಗಿ ಭೂಮಿಯನ್ನು ಸಂಭಾವನೆಯೆಂದು ಅನುದಾನದ ರೂಪದಲ್ಲಿ ಪಡೆದಿದ್ದರಿಂದ ಅವನನ್ನು ಪರಿಚಾರಕನ ಸೇವೆಯಲ್ಲಿಯೆ ಮುಂದುವರಿಯುವಂತೆ ಮಾಡಲಾಯಿತು. ಕಡಿಮೆ ವಿದ್ಯಾಭ್ಯಾಸ ಪಡೆದ ಮರಾಠರನ್ನು ಸರಕಾರಿ ಸೇವೆಯಲ್ಲಿ ಸೇರಿಸಿಕೊಳ್ಳದಿರುವುದಕ್ಕೆ ಆಶ್ಚರ್ಯಪಡಬೇಕಾಗಿಲ್ಲ. ಅನೇಕ ಬ್ರಾಹ್ಮಣ ಅಧಿಕಾರಿಗಳು ಪರೀಕ್ಷೆಗೆ ಎಂದೆಂದಿಗೂ ಕುಳಿತಿರಲಿಲ್ಲ. ರಾಜಾರಾಮ ಕಾಲೇಜು ಅಥವಾ ರಾಜಾರಾಮ್ ಪ್ರೌಢಶಾಲೆಯ ಶಿಕ್ಷಣ ಪಡೆದವರನ್ನು ಸಂಸ್ಥಾನದ ಸರಕಾರಿ ಸೇವೆಗಳಿಗೆ ಸೇರಿಸಿಕೊಳ್ಳಬೇಕೆಂಬ ಮೊದಲಿನ ಛತ್ರಪತಿಗಳ ಆಡಳಿತಾವಧಿಯಲ್ಲಿ ಹೊರಡಿಸಿದ ಆಜ್ಞೆಯನ್ನು ಜಾರಿಗೊಳಿಸಲಾಗುತ್ತಿತ್ತು. ಈ ಆಜ್ಞೆಯು ಬ್ರಾಹ್ಮಣ ಸಮುದಾಯಕ್ಕೆ ಹೆಚ್ಚು ಪ್ರಯೋಜನಕಾರಿಯಾಗಿದ್ದರಿಂದ ಅದರ ಬಗ್ಗೆ ಜಾಗೃತರಾಗಿ ಅದನ್ನು ಉಲ್ಲಂಘಿಸದಂತೆ ನೋಡಿಕೊಳ್ಳುತ್ತಿದ್ದರು".[6]

ಭಾಸ್ಕರರಾವ್ ಅವರು ಶಾಹು ಮಹಾರಾಜರ ಆಡಳಿತದ ಮೊದಲಿನ ವರ್ಷಗಳಲ್ಲಿದ್ದ ಕೊಲ್ಹಾಪುರ ಸಂಸ್ಥಾನದ ಸರಕಾರದ ಪರಿಸ್ಥಿತಿಯನ್ನು ವಿವರಿಸಿದ್ದಾರೆ. ಶಾಹು ಅವರು ಭಾಸ್ಕರರಾವ್, ವಿಚಾರೆ ಮೊದಲಾದವರನ್ನು ಅಧಿಕಾರಿಗಳನ್ನಾಗಿ ನೇಮಿಸುವ ಮೂಲಕ ಈ ಪರಿಸ್ಥಿತಿಯನ್ನು ಬದಲಾಯಿಸಲು ಪ್ರಾರಂಭ ಮಾಡಿದರು. ಶಾಹು ಮಹಾರಾಜರ ಪ್ರಕಾರ ಹಿಂದುಳಿದ ಜಾತಿಗಳಲ್ಲಿ ಉನ್ನತ ಶಿಕ್ಷಣ ಪಡೆದ ಸದಸ್ಯರಿಗೆ ಸೂಕ್ತ ಸರಕಾರಿ ಸೇವೆಗಳ ರೂಪದಲ್ಲಿ "ಉನ್ನತ ಶಿಕ್ಷಣಕ್ಕೆ ತಕ್ಕ ಬಹುಮಾನ" ನೀಡದಿದ್ದರೆ, ಉನ್ನತ ಶಿಕ್ಷಣ ಗಳಿಸುವ ಆಕಾಂಕ್ಷೆ ಮತ್ತು ಉತ್ಸಾಹ (ಡ್ರೈವ್) ವನ್ನೇ ಕಳೆದುಕೊಳ್ಳುತ್ತಾರೆ. ಅವರಿಗೆ ಶೈಕ್ಷಣಿಕ ಅನುಕೂಲಗಳನ್ನು ಒದಗಿಸಿಕೊಡುವುದು ಮಾತ್ರವಲ್ಲದೆ ಸಾಮಾಜಿಕ ಸಮಾನತೆಯ ತತ್ವದಂತೆ ಶಿಕ್ಷಣ ಪಡೆದ ನಂತರ ಸಮಾನ ಅವಕಾಶಗಳನ್ನು ಒದಗಿಸಬೇಕಾಗುತ್ತದೆ. ಆಡಳಿತದಲ್ಲಿ ಸೇವೆಯ ಹಕ್ಕು ಒಂದು ರೀತಿಯಲ್ಲಿ ರಾಜಕೀಯ ಅಧಿಕಾರದ ಅನುಭೋಗದಲ್ಲಿ ಒಂದು ಪಾಲು ಇದ್ದಂತೆ. ಇಲ್ಲಿಯವರೆಗೆ ಸಮಾಜದಲ್ಲಿ ಮೇಲುವರ್ಗಗಳಿಗೆ ಸೇರಿದ ಜನರು ಮಾತ್ರ ಈ ಹಕ್ಕು ಅನುಭವಿಸುತ್ತಿದ್ದರು. ಶಾಹು ಮಹಾರಾಜರು ಸಾಮಾನ್ಯ ಜನರಿಗೆ ರಾಜಕೀಯ ಅಧಿಕಾರದಲ್ಲಿ ಅವರ ನ್ಯಾಯಬದ್ಧ ಪಾಲನ್ನು ಕೊಡಲು ನಿರ್ಧರಿಸಿದರು.

---

೮

# ವಿದಾರ್ಥಿ ನಿಲಯಗಳ ಆಂದೋಲನ

ಮಹಾರಾಜರ ೧೯೦೨ರ ಮೀಸಲಾತಿ ಘೋಷಣೆಯನ್ನು ಟೀಕಿಸುತ್ತಾ ತಿಲಕರು 'ಕೇಸರಿ' ಪತ್ರಿಕೆಯಲ್ಲಿ ಹೇಳಿದರು:" ಈ ಘೋಷಣೆಯು ಬ್ರಾಹ್ಮಣರಿಗೆ ಮಾತ್ರ ಆಘಾತಕಾರಿಯಲ್ಲ, ಕೊಲ್ಹಾಪುರ ಸಂಸ್ಥಾನದ ಎಲ್ಲಾ ಹಿತೈಷಿಗಳಿಗೂ ಆಘಾತಕಾರಿಯಾದದ್ದು. ಇದರ ಜೊತೆಗೆ ಈ ಮೊದಲು ಮಹಾರಾಜರು ತೆಲಿಗಳ, ತಂಬೋಲಿಗಳ, ಮುಸ್ಲಿಮರ, ಲಿಂಗಾಯಿತರು ಮೊದಲಾದವರನ್ನು ಶಿಕ್ಷಿತಗೊಳಿಸಲು ಪ್ರಯತ್ನ ಮಾಡಿದ್ದು ನಾವು ಕೇಳಲೇ ಇಲ್ಲ."[1]

ಹಿಂದುಳಿದ ಜಾತಿಗಳಿಗೆ ಆಡಳಿತದಲ್ಲಿ ಶೇ. ೫೦ರಷ್ಟು ಮೀಸಲಾತಿಯನ್ನಿಟ್ಟ ಶಾಹು ಮಹಾರಾಜರು ಈ ವರ್ಗಗಳ ಶಿಕ್ಷಣಕ್ಕೆ ಏನೂ ಮಾಡಲಿಲ್ಲ ಎಂದು ತಿಲಕರು ಮಾತಿನಲ್ಲಿ ತಿವಿದರು. ಆದರೆ ಈ ಮಹಾರಾಜರು ತಮ್ಮ ಇಡೀ ಜೀವನವನ್ನು ಇನ್ನು ಮುಂದೆ ದಮನಿತ ವರ್ಗಗಳ ಉನ್ನತಿಗಾಗಿ ಕಳೆಯುವರೆಂಬುದನ್ನು ತಿಲಕರು ತಿಳಿದಿರಲಿಲ್ಲ.

ಹಿಂದುಳಿದ ಜಾತಿಗಳಲ್ಲಿ ಸಾಮಾನ್ಯವಾಗಿ ಶಿಕ್ಷಣದ ಬಗ್ಗೆ ಹೇಳುವುದೇ ಬೇಡ. ಒಂದು ವೇಳೆ ಹಿಂದುಳಿದ ವರ್ಗಗಳ ಯುವಕರು ಉನ್ನತ ಶಿಕ್ಷಣ ಪಡೆದರೂ ಬ್ರಾಹ್ಮಣ–ನೌಕರಶಾಹಿ ಆಡಳಿತದಲ್ಲಿ ಅವರಿಗೆ ಅವಕಾಶವೇ ಕೊಡುವುದಿಲ್ಲ. ಹೀಗಿರುವಾಗ ಉನ್ನತ ಶಿಕ್ಷಣವು ಈ ಸಮುದಾಯಗಳ ಸದಸ್ಯರಿಗೆ ಅಷ್ಟು ಪ್ರಯೋಜನವಾಗುತ್ತಿರಲಿಲ್ಲ. ಈ ಸಂಗತಿ ಅವರಿಗೆ ಆಶಾದಾಯಕವಾಗಿರಲಿಲ್ಲ. ಈ ವಾಸ್ತವವನ್ನು ಅರಿತ ಶಾಹು ಮಹಾರಾಜರು ಮೊಟ್ಟಮೊದಲಿಗೆ ತಮ್ಮ ಸಂಸ್ಥಾನದ ಸರ್ಕಾರಿ ಹುದ್ದೆಗಳಲ್ಲಿ ಶೇ. ೫೦ರಷ್ಟು ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿಕೊಟ್ಟರು. ಅಂತಹ ಕೊಡುಗೆಗಳು ಅವರ ಉನ್ನತ ಶಿಕ್ಷಣದ ಉತ್ತೇಜನಕ್ಕೆ ಖಾತರಿಯೆಂದು ಶಾಹು ಮಹಾರಾಜರು ಪರಿಭಾವಿಸಿದರು. ತನ್ನ ಸುತ್ತಮುತ್ತಲಿನ ಸಮಾಜದ ಅವಲೋಕನದಿಂದ ಆಧಾರಿತ ತನ್ನ ಭವಿಷ್ಯವಾಣಿ ಸುಳ್ಳಾಗಲಿಲ್ಲ.

## ವಿದ್ಯಾರ್ಥಿನಿಲಯಗಳ ಅವಶ್ಯಕತೆ

ಹಿಂದುಳಿದ ವರ್ಗಗಳಲ್ಲಿ ಉನ್ನತ ಶಿಕ್ಷಣಕ್ಕಾಗಿ ಆಸಕ್ತಿಯನ್ನು ಮೂಡಿಸುವುದಕ್ಕೆ ಮತ್ತೊಂದು ದಾರಿಯಿದೆ. ಉನ್ನತ ಶಿಕ್ಷಣ ಆಶಿಸುವ ಬಡ ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಯ ವಿದ್ಯಾರ್ಥಿ ನಿಲಯಗಳನ್ನು ಕಲ್ಪಿಸಿಕೊಡುವುದು. ಮಹಾರಾಜರು ಮೀಸಲಾತಿ ಘೋಷಣೆಯನ್ನು ಪ್ರಕಟಿಸುವುದಕ್ಕೆ ಮೊದಲೇ ಈ ವಿಚಾರವನ್ನು ಜಾರಿಗೊಳಿಸುವುದಕ್ಕೆ ಕ್ರಮ ಕೈಗೊಂಡಿದ್ದರು. ಈ ಅಂಶಗಳನ್ನು ಗಮನಿಸಿದಾಗ ಶಾಹು ಅವರು ಏಕಕಾಲದಲ್ಲಿ ಹಲವಾರು ಯೋಜನೆಗಳನ್ನು ಚಿಂತಿಸಿದ್ದರೆಂಬುದು ತಿಳಿಯುತ್ತದೆ.

ನಿಜವಾಗಿ ೧೮೯೬ರಲ್ಲಿಯೇ ಉನ್ನತ ಶಿಕ್ಷಣಕ್ಕೆ ಕೊಲ್ಹಾಪುರಕ್ಕೆ ಬರುವ ವಿದ್ಯಾರ್ಥಿಗಳ ವಿದ್ಯಾರ್ಥಿನಿಲಯದ ಸ್ಥಾಪನೆಗೆ ದರ್ಬಾರು ಹಣಕಾಸಿನ ನೆರವನ್ನು ನೀಡಿತ್ತು. ಸಹಾಯಕ ನ್ಯಾಯಮೂರ್ತಿ ವಿ. ಬಿ. ಗೋಖಲೆ ಅವರು ಇದರ ಅಧ್ಯಕ್ಷರಾಗಿದ್ದರು. ಈ ವಿದ್ಯಾರ್ಥಿನಿಲಯದ ವ್ಯವಸ್ಥಾಪನೆ ಬ್ರಾಹ್ಮಣರ ಅಧೀನದಲ್ಲಿತ್ತು, ಈ ವಿದ್ಯಾರ್ಥಿನಿಲಯದಲ್ಲಿ ಬ್ರಾಹ್ಮಣೇತರರ ಒಬ್ಬ ವಿದ್ಯಾರ್ಥಿಯೂ ಇರಲಿಲ್ಲ. ಬ್ರಾಹ್ಮಣ ವರ್ಗ, ಶಿಕ್ಷಣ ಕ್ಷೇತ್ರದಲ್ಲಿ ತಮಗೆ ಅನಿರ್ಬಂಧಿತ ಏಕಸ್ವಾಮ್ಯತೆಯ ಹಕ್ಕಿದೆಯೆಂದು ನಂಬಿ ಶೈಕ್ಷಣಿಕ ಸವಲತ್ತುಗಳ ವಿಶೇಷ ಹಕ್ಕನ್ನು ಅನುಭವಿಸಿದರು.

ಕೊಲ್ಹಾಪುರ ಸಂಸ್ಥಾನದಲ್ಲಿ ಮರಾಠ ಸಮುದಾಯ ಬಹುಸಂಖ್ಯಾತರಾಗಿದ್ದರಿಂದ ಅದನ್ನು ಮರಾಠ ಸಂಸ್ಥಾನವೆಂದು ನೋಡಲಾಗುತ್ತಿತ್ತು. ಆದರೆ ಮರಾಠರು ಇತರೆ ಸಮುದಾಯಗಳ ಹಾಗೆ ಶೈಕ್ಷಣಿಕವಾಗಿ ಹಿಂದುಳಿದಿದ್ದರು. ಒಂದು ಸಾಧಾರಣವಾದ ಹಳ್ಳಿಯಲ್ಲಿ ಪರಂಪರೆಯ ಪಾಟೀಲರು ಅಥವಾ ಹಳ್ಳಿಯ ಮುಖ್ಯಸ್ಥರ ಕೆಲವು ಶ್ರೀಮಂತ ಮರಾಠ ಕುಟುಂಬಗಳಿದ್ದವು. ಅಂತಹ ಕುಟುಂಬಗಳು ಒಮ್ಮೊಮ್ಮೆ ಶಿಕ್ಷಣದ ಬಗ್ಗೆ ಆಸಕ್ತಿ ತೋರಿಸಿದ್ದವು. ಮರಾಠ ತಂದೆತಾಯಿಗಳು ತಮ್ಮ ಮಕ್ಕಳನ್ನು ಉನ್ನತ ಶಿಕ್ಷಣಕ್ಕೆ ಕೊಲ್ಹಾಪುರಕ್ಕೆ ಕಳುಹಿಸಬೇಕೆಂದು ಭಾವಿಸಲೇ ಇಲ್ಲ. ಈ ಮನೋಭಾವದ ಹಿಂದೆ ಇದ್ದ ಪ್ರಮುಖ ಕಾರಣ ಕೊಲ್ಹಾಪುರದಲ್ಲಿ ಊಟ ಮತ್ತು ವಸತಿಯ ಸಮಸ್ಯೆಯಾಗಿತ್ತು. ಇಂದು ನಗರ ಮತ್ತು ಪಟ್ಟಣಗಳಲ್ಲಿ ವಿದ್ಯಾರ್ಥಿನಿಲಯಗಳು ತುಂಬಿತುಳುಕುತ್ತಿರುವುದರಿಂದ ಅಂದಿನ ದಿನಗಳ ಈ ಸಮಸ್ಯೆಯನ್ನು ನಾವು ಗಂಭೀರವಾಗಿ ಪರಿಗಣಿಸುವುದಿಲ್ಲ. ಒಂದು ಶತಮಾನದ ಹಿಂದೆಯಿದ್ದ ಸಮಸ್ಯೆಗಳ ಬಗ್ಗೆ ನಾವು ಯೋಚಿಸಿದರೆ ಅವುಗಳನ್ನು ಅರ್ಥಮಾಡಿಕೊಳ್ಳಲು ಸುಲಭವಾಗುತ್ತದೆ.

೧೮೯೯ರ ಘಟನೆಯು ಇದನ್ನು ಚೆನ್ನಾಗಿ ತಿಳಿಸುತ್ತದೆ. ವಡಗಾವ್‌ನ ಚಿಮ್‌ನಾಜಿ ಪಾಟೀಲನ ಮಗ ಪಾಂಡುರಂಗ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನ ಪಾಸು ಮಾಡಿದನೆಂಬ ಸುದ್ದಿಯನ್ನು ಶಾಹು ಮಹಾರಾಜರು ದಿನಪತ್ರಿಕೆಯಲ್ಲಿ ಓದಿದರು. ಅಂದಿನ ದಿನಗಳಲ್ಲಿ ಬ್ರಾಹ್ಮಣೇತರರು ಮೆಟ್ರಿಕ್ಯುಲೇಷನ್ ಪಾಸು ಮಾಡಿದನೆಂಬುದೇ ಒಂದು ಭಾರಿ ಉದ್ರೇಕಕಾರಿಯಾದ ಸುದ್ದಿಯಾಗಿತ್ತು. ಶಾಹು ಅವರು ಆ ಸುದ್ದಿಯಿಂದ ಪುಳಕಿತರಾದರು. ಅವರು ಕೂಡಲೇ ತನ್ನ ದೂತನನ್ನು ಕಳುಹಿಸಿ ಆ ಯುವಕ ಕೂಡಲೇ (ಪಿ. ಸಿ. ಪಾಟೀಲ) ಪನ್‌ಹಾಲ ಕೋಟೆಗೆ ಬರುವಂತೆ ಹೇಳಿಕಳುಹಿಸಿದರು. ಅವರು ಆ ಹುಡುಗನಿಗೆ ಅಭಿನಂದನೆಗಳನ್ನು ಹೇಳಿದರು ಮತ್ತು ಅವನನ್ನು ಹೊಗಳಿ ಕೊಂಡಾಡಿದರು ಮತ್ತು ಅವನಿಗೆ ಕೊಲ್ಹಾಪುರದಲ್ಲಿ ವಸತಿ ಮತ್ತು ಊಟದ ಸೌಕರ್ಯವಿದಯೇ ಎಂದು ವಿಚಾರಿಸಿದರು. ಪಾಟೀಲ ಉತ್ತರಿಸಿದನು, "ಮರಾಠರಿಗೆ ನಗರದಲ್ಲಿ ಯಾವುದೇ ವಸತಿಗೃಹ(ಛತ್ರ)ವಿಲ್ಲವೆಂದು, ಬ್ರಾಹ್ಮಣರು ಮಾತ್ರ ಅಂತಹ ಸೌಕರ್ಯಗಳನ್ನು ಹೊಂದಿದ್ದಾರೆಂದು ಹೇಳಿದನು. ಬ್ರಾಹ್ಮಣ ವಸತಿಗೃಹಗಳ ತಿಂಗಳ ಬಾಡಿಗೆ ೫ ರೂ. ಜೊತೆಗೆ ಮರಾಠರು ಅವರು ಊಟ ಮಾಡಿದ ನಂತರ ತಾವು ಮಾಡಬೇಕಾಗುತ್ತದೆ. ನಾನು ಅಂತಹ ಬ್ರಾಹ್ಮಣ ವಸತಿಗೃಹಗಳನ್ನು ತೊರೆದುಬಿಟ್ಟೆನು. ಪರಿಚಿತ ಮರಾಠ ಮನೆಯಲ್ಲಿ ತಿಂಗಳಿಗೆ ೩ ರೂ. ಕೊಟ್ಟು ಊಟಮಾಡುತ್ತಿದ್ದೇನೆ."

'ಓದುವುದಕ್ಕೆ ಕನಿಷ್ಠ ಒಂದು ಜಾಗವಿದೆಯೇ?' ಈ ಪ್ರಶ್ನೆಗೆ ಪಾಟೀಲ ಉತ್ತರಿಸಿದನು, "ಅವರ ಮನೆಯಲ್ಲಿ ಸಿಕ್ಕಿರುವ ಜಾಗ ಸಾಕಷ್ಟು ಇಲ್ಲ. ಪ್ರೌಢಶಾಲೆಯ ಸಮೀಪ ಸರಕಾರದ ತಾಲೀಮುಶಾಲೆ (ಗರಡಿಮನೆ) ಇದೆ. ಅದರಲ್ಲಿ ಮಾಮಜಾಧವ ಬಾಲಿಬಾ ಪಾಟೀಲ್, ಹರಿಬಪಾಟೀಲ್, ಹಿಂದುರಾವ್‌ಘಾಟ್ಗೆ ಮೊದಲಾದ ಐದಾರು ಹುಡುಗರಿದ್ದಾರೆ. ಅವರ ಅನುಮತಿಯಿಂದ ರಾತ್ರಿತಂಗಲು ವ್ಯವಸ್ಥೆಯಿದೆ. ನಾನು ಅವರ ಜೊತೆಯಲ್ಲಿದ್ದೇನೆ."[2]

ಹಳ್ಳಿಯ ಮುಖ್ಯಸ್ಥನಾದ ಪಾಟೀಲ ಕುಟುಂಬದ ಮರಾಠ ಯುವಕನ ಸ್ಥಿತಿಯೇ ಹೀಗಾದರೆ, ಬೇರೆ ಹಿಂದುಳಿದ ಜಾತಿಗಳ ಯುವಕರ ಗತಿ ಏನೆಂಬುದನ್ನು ನೀವೇ ಊಹಿಸಿಕೊಳ್ಳಿ. ಈ ಬಗ್ಗೆ ಶಾಹು ಮಹಾರಾಜರು ಪ್ರಾಮಾಣಿಕವಾಗಿ ಯೋಚಿಸತೊಡಗಿದರು. ಪಿ. ಸಿ. ಪಾಟೀಲರ ಮುಂದಿನ ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡುವೆನೆಂದು ಆಶ್ವಾಸನೆ ಕೊಟ್ಟರು. ಕತೆ ಇಲ್ಲಿಗೆ ಮುಗಿಯಲಿಲ್ಲ. ಪಾಟೀಲರ ಪ್ರಕಾರ ಮಾರನೇ ದಿನವೇ ಶಾಹು ಅವರು ಮರಾಠ ಅಧಿಕಾರಿಗಳಾದ ರಾವ್‌ಸಾಹೇಬ್ ದಾಜಿರಾವ್ ವಿಚಾರೆ, ಕಾರ್ಯ ನಿರ್ವಾಹಕ ಎಂಜಿನಿಯರ್ ಮತ್ತು ರಾವ್‌ಸಾಹೇಬ್ ಭಾಸ್ಕರರಾವ್ ಜಾಧವ್, ಸಹಾಯಕ ಸರ್‌ಸುಭಾ ಅವರನ್ನು ಕರೆದರು ಮತ್ತು ಮರಾಠಾ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯ ಸ್ಥಾಪಿಸುವುದಕ್ಕೆ ಚರ್ಚೆ ಪ್ರಾರಂಭಿಸಿದರು.[3]

## ವಿಕ್ಟೋರಿಯಾ ಮರಾಠ ವಿದ್ಯಾರ್ಥಿ ನಿಲಯ

ಶಾಹು ಮಹಾರಾಜರು ಅಂತಹ ವಿದ್ಯಾರ್ಥಿ ನಿಲಯಗಳ ಸ್ಥಾಪನೆ ಬಗ್ಗೆ ನ್ಯಾಯಮೂರ್ತಿ ರಾನಡೆ ಮತ್ತು ನಾಮದಾರ್ ಗೊಖಲೆಯವರೊಡನೆ ಇಬ್ಬರು ಪೂನಾದ ಉದಾರಿ ನಾಯಕರನ್ನು ಸಮಾಲೋಚಿಸಿದರು ಮತ್ತು ಈ ಇಬ್ಬರು ಈ ವಿಚಾರಕ್ಕೆ ಬೆಂಬಲ ನೀಡಿದರು. ಶಾಹು ಅವರು ಈ ವಿಷಯದ ಬಗ್ಗೆ ಬಾಂಬೆ ಪ್ರೆಸಿಡೆನ್ಸಿಯ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಗಿಲ್ಸ್ ಅವರೊಡನೆ ಪತ್ರ ವ್ಯವಹಾರ ನಡೆಸಿದರು ಮತ್ತು ಅವರ ಅಭಿಪ್ರಾಯವನ್ನೂ ಪರಿಶೀಲಿಸಿದರು. ಶ್ರೀಮಾನ್ ಗಿಲ್ಸ್ ಅವರು ಒಂದು ಪತ್ರದಲ್ಲಿ ಶಾಹು ಅವರಿಗೆ ಹೀಗೆ ಬರೆದರು, “ಮಹಾರಾಜರ ಪತ್ರವನ್ನು ಸ್ವೀಕರಿಸುವುದಕ್ಕೆ ನನಗೆ ಮಹದಾನಂದವಾಗುತ್ತದೆ. ಮರಾಠ ವಿದ್ಯಾರ್ಥಿಗಳಿಗಾಗಿ ಊಟ ಮತ್ತು ವಸತಿಯ ಪರಿಪೂರ್ಣವಾದ ಪ್ರೌಢಶಾಲೆಯ ವಿಷಯದ ಬಗ್ಗೆ ಚರ್ಚಿಸಲು ನನಗೆ ತುಂಬಾ ಸಂತೋಷವಾಗುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಮರಾಠರ ಪ್ರಗತಿಗಾಗಿ ಅಂಥ ವಿಶೇಷ ಪ್ರಯತ್ನ ಅತ್ಯಗತ್ಯ. ಈ ವಿಷಯದ ಬಗ್ಗೆ ನಾನು ನಿಮ್ಮನ್ನು ಒಪ್ಪುತ್ತೇನೆ. ಮರಾಠ ರೂಢಿಗಳು ಮತ್ತು ದೃಷ್ಟಿಕೋನಗಳು ಉನ್ನತ ಶಿಕ್ಷಣ ಗಳಿಸಲು ವಿರುದ್ಧವಾಗಿವೆ. ಬ್ರಾಹ್ಮಣರಿಗೆ ಹೋಲಿಸಿದಾಗ ಅವರು ವಿದ್ಯೆಕಲಿಕೆಯಲ್ಲಿ ಬಹಳ ಹಿಂದುಳಿದಿದ್ದಾರೆ. ನಾನು ಕೊಲ್ಹಾಪುರಕ್ಕೆ ಭೇಟಿ ನೀಡಿದಾಗ, ಶಿಕ್ಷಣ ಇಲಾಖೆಯ ಹುದ್ದೆಗಳಿಗೆ ಮರಾಠರಿಂದ ಬಂದ ಅರ್ಜಿಗಳು ಬಹಳ ಕಡಿಮೆಯೆಂದು ನಾನು ವೀಕ್ಷಿಸಿದಾಗ ಗೊತ್ತಾಯಿತು. ಬೇರೆ ಇಲಾಖೆಗಳಲ್ಲೂ ಇದೇ ಸ್ಥಿತಿಯಿದೆ.” (೧೦ ಆಗಸ್ಟ್, ೧೯೦೦)[4]

ಸಮಾಜದ ಬುದ್ಧಿಜೀವಿಗಳೊಡನೆ ಸಮಾಲೋಚಿಸುತ್ತಾ ಶಾಹು ಅವರು ತನ್ನ ರಾಜಧನ (Privy-Purse)ದಿಂದ ಏಕಕಾಲದಲ್ಲಿಯೇ ಪಿ. ಸಿ. ಪಾಟೀಲರ ಊಟ ಮತ್ತು ವಸತಿಯನ್ನ ಮತ್ತು ಪನ್‌ಹಾಲದ ಸ್ವಾಮಿ ದತ್ತದೇವಸ್ಥಾನದಲ್ಲಿ ೪ ಇತರೆ ಕಾಲೇಜಿನ ವಿದ್ಯಾರ್ಥಿಗಳಿಗೆ ವ್ಯವಸ್ಥೆ ಮಾಡಿದರು ಮತ್ತು ಒಂದು ‘ಮರಾಠ ವಿದ್ಯಾರ್ಥಿ ನಿಲಯ’ವನ್ನು ಪ್ರಾರಂಭಿಸಿದರು. ನಂತರ ಅದನ್ನು ಕೊಲ್ಹಾಪುರಕ್ಕೆ ಸ್ಥಳಾಂತರಿಸಲಾಯಿತು. ಶಾಹು ಅವರ ಚಿಕ್ಕಪ್ಪ ದತ್ತಾಜಿರಾವ್ ಘಾಟ್ಗೆ ಅವರ ಅಧ್ಯಕ್ಷತೆಯಲ್ಲಿ ಮರಾಠರ ಮುಖ್ಯವ್ಯಕ್ತಿಗಳಾದ ಮಾಮಸಾಹೇಬ ಖಾನ್‌ವಿಲ್ಕರ್, ಅಪ್ಪಾಸಾಹೇಬ ಮಹಾಯಿಸಲ್ಕರ್, ಭಾಸ್ಕರರಾವ್ ಜಾಧವ್, ದಾಜಿರಾವ್ ವಿಚಾರೆ, ಜಿವಾಜಿರಾವ್ ಸಾವಂತ ಅವರ ಸಹಕಾರದಿಂದ ಏಪ್ರಿಲ್ ೧೮, ೧೯೦೧ರಲ್ಲಿ ನಡೆದ ಸಭೆಯಲ್ಲಿ ವಿಕ್ಟೋರಿಯ ಮರಾಠ ಬೋರ್ಡಿಂಗ್ (ವಿದ್ಯಾರ್ಥಿನಿಲಯ) ಎಂಬ ಮೊದಲನೇ ವಿದ್ಯಾರ್ಥಿನಿಲಯವನ್ನು ಕೊಲ್ಹಾಪುರದಲ್ಲಿ ಪ್ರಾರಂಭಿಸಲಾಯಿತು. ಮೂವರು ಮರಾಠ ಯುವಕರಾದ ಜಾಧವ, ವಿಚಾರೆ ಮತ್ತು ಸಾವಂತ ಅವರು ವಿಶೇಷವಾಗಿ ಮುಂಚೂಣಿಯಲ್ಲಿದ್ದರು. ಪಿ. ಸಿ. ಪಾಟೀಲರು ಈ ಮೊದಲ

ವಿದ್ಯಾರ್ಥಿನಿಲಯದ ಮೊದಲ ವಿದ್ಯಾರ್ಥಿಯಾಗಿದ್ದರು. ನಂತರ ಅವರು ಪುಣೆ ಕೃಷಿ ಕಾಲೇಜಿನ ಪ್ರಾಂಶುಪಾಲರಾಗಿದ್ದರು. ಅವರು ಅಮೇರಿಕಾದಿಂದ ಎಂ.ಎಸ್.ಸಿ. ಮತ್ತು ಬಾಂಬೆ ವಿಶ್ವವಿದ್ಯಾಲಯದಿಂದ ಡಿ.ಎಸ್.ಸಿ. ಎಂಬ ಹೆಸರಾಂತ ಪದವಿಗಳನ್ನು ಪಡೆದಿದ್ದರು ಮತ್ತು ಕೃಷಿ ವಿಜ್ಞಾನದಲ್ಲಿ ಅಧಿಕೃತ ಪಾಂಡಿತ್ಯ ಪಡೆದು ರಾಷ್ಟ್ರದ ಘನತೆಯನ್ನು ಸಂಪಾದಿಸಿದ್ದರು. ವಿದ್ಯಾರ್ಥಿ ನಿಲಯವು 'ಮರಾಠ' ಎಂಬ ಹೆಸರನ್ನು ಹೊಂದಿದ್ದರೂ ಮುಸ್ಲಿಮ್, ಸಿಂಪಿ, ಕೋಲಿ, ಮಾಲಿ, ಗವಳಿ ಮೊದಲಾದ ಜಾತಿಗಳ ವಿದ್ಯಾರ್ಥಿಗಳು ವಿದ್ಯಾರ್ಥಿನಿಲಯದಲ್ಲಿ ಮೊದಲಿನಿಂದಲೂ ಇದ್ದರು. ಇದು ಮರಾಠರ ಔದಾರ್ಯತೆಯನ್ನು ತೋರಿಸುತ್ತದೆ. ಈ ರೀತಿಯ ವಿದ್ಯಾರ್ಥಿ ನಿಲಯದ ವಿಚಾರವು ಆ ದಿನಗಳ ನಾವೀನ್ಯತೆಯಾಗಿತ್ತು ಮತ್ತು ವಿಶೇಷವಾಗಿ ಇದು ಶಾಹುರವರ ಮೆದುಳಿನ ಶಿಶುವಾಗಿತ್ತು. ಡಾ. ಪಿ. ಸಿ. ಪಾಟೀಲರು ತಮ್ಮ ಸ್ಮರಣೆಯಲ್ಲಿ ಹೇಳುತ್ತಾರೆ: "ಸ್ವತಂತ್ರ ಮರಾಠ ವಿದ್ಯಾರ್ಥಿ ನಿಲಯ (ವಿಕ್ಟೋರಿಯಾ ಮರಾಠ ಬೋರ್ಡಿಂಗ್) ಅಧಿಕೃತವಾಗಿ ಸ್ಥಾಪನೆಯಾಗುವುದಕ್ಕೆ ಮೊದಲು ಬಾಂಬೆ ಪ್ರೆಸಿಡೆನ್ಸಿಗೆ ಅಫಿಲಿಯೇಟ್ ಆದ ದೊಡ್ಡ ಕಾಲೇಜುಗಳ ಕ್ಲಬ್ಬುಗಳು (ಹಾಸ್ಟಲುಗಳು) ಮಾತ್ರ ಇದ್ದವು. ಮಹಾರಾಷ್ಟ್ರದಲ್ಲಿ ಜಾತಿ ಅಥವಾ ಧಾರ್ಮಿಕ ಪಂಥದ ಯಾವ ವಿದ್ಯಾರ್ಥಿ ನಿಲಯವೂ ಇರಲಿಲ್ಲ. ಆ ದಿನಗಳಲ್ಲಿ ಪೂನಾದಲ್ಲಿ ಅಸ್ತಿತ್ವದಲ್ಲಿದ್ದ ಒಂದೋ ಎರಡೋ ಅನಾಥಾಲಯಗಳಿದ್ದಂತೆ ಯಾವುದೇ ಅನಾಥಾಲಯಗಳಿರಲಿಲ್ಲ. ಈ ಹಿನ್ನೆಲೆಯಲ್ಲಿ ವಿವಿಧ ಜಾತಿಗಳು ತಮ್ಮ ಹೊಣೆಯೆಂದು ಭಾವಿಸಿ ತಮ್ಮ ಜಾತಿಗಳ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವ ಅಭೂತವಾದ ವಿಚಾರ ಬಂದಿದ್ದೇ ಶಾಹು ಅವರಿಂದ ಎಂಬುದು ಸುಸ್ಪಷ್ಟ."[5] ಸ್ವಲ್ಪ ಕಾಲವಾದ ನಂತರ ಶಾಹು ಅವರು ವಾರ್ಷಿಕ ಅನುದಾನ ರೂಪಾಯಿ ೫೫೦, ಭೂಮಿ ಮತ್ತು ಆಸ್ತಿಗಳಿಂದ ಉತ್ಪತ್ತಿಯಾದ ವಾರ್ಷಿಕ ಒಟ್ಟು ಆದಾಯ ರೂಪಾಯಿ ೨೦೦೦, ಮತ್ತು ಶಾಶ್ವತವಾಗಿ ನೀಡಿದ ದಾನ ರೂ. ೪೭,೦೦೦, ಇವೆಲ್ಲವುಗಳನ್ನು ನೀಡುವ ಮೂಲಕ ಅವರು ವಿದ್ಯಾರ್ಥಿನಿಲಯದ ಬುನಾದಿಯನ್ನು ಗಟ್ಟಿಗೊಳಿಸಿದರು.[6]

ಅದೇ ವರ್ಷದಲ್ಲಿ ಅಂದರೆ ೧೯೦೧ರಲ್ಲಿ ಒಂದು ಜೈನರ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲಾಯಿತು. ತದನಂತರ ವಿವಿಧ ಜಾತಿಗಳ ಮತ್ತು ಸಮುದಾಯಗಳಾದ ಲಿಂಗಾಯತ, ಮುಸ್ಲಿಮ್, ಅಸ್ಪೃಶ್ಯರು, ಸೋನಾರ್, ಸಿಂಪಿ, ಪಾಂಚಾಲಿ, ಗೌಡಸಾರಸ್ವತ, ಇಂಡಿಯನ್ ಕ್ರಿಶ್ಚಿಯನ್ನರ, ಚಂದ್ರಸೇನೀಯ ಕಾಯಸ್ಥಪ್ರಭು, ವೈಶ್ಯ, ದೋರ್-ಚಂಬರ್, ಸುತಾರ್, ನಾಭೀಕ್ ಸೋಮವಂಶೀಯ, ಆರ್ಯಕ್ಷತ್ರಿಯ, ಕೋಷ್ಟಿ ಮೊದಲಾದ ಇಪ್ಪತ್ತು ವಿದ್ಯಾರ್ಥಿ ನಿಲಯಗಳನ್ನು ಮಹಾರಾಜರ ಸ್ಫೂರ್ತಿ ಮತ್ತು ಮಾರ್ಗದರ್ಶನದಲ್ಲಿ ಸ್ಥಾಪಿಸಲಾಯಿತು. ಕಟ್ಟಡ, ತೆರೆದ ಜಾಗ, ಆದಾಯದ ಶಾಶ್ವತ ಮೂಲಗಳು, ಹಿಂದುಳಿದ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿಗೆ ಸೂಕ್ತ ವ್ಯವಸ್ಥೆಗಳನ್ನು ಪ್ರತಿಯೊಂದು ವಿದ್ಯಾರ್ಥಿ ನಿಲಯಕ್ಕೆ ಮಾಡಲಾಯಿತು.

## ವಿದ್ಯಾರ್ಥಿ ನಿಲಯಗಳ ಆಂದೋಲನದಲ್ಲಿ ವಿಧಾನ ಮತ್ತು ಪ್ರಯೋಗ

ವಿದ್ಯಾರ್ಥಿ ನಿಲಯಗಳ ಸ್ಥಾಪನೆ ರಾಜರ್ಷಿ ಶಾಹು ಅವರ ನೂತನ ಸಾಮಾಜಿಕ ಆಂದೋಲನದ ಪ್ರಯೋಗವಾಗಿತ್ತು. ಈ ವಿಚಾರದಲ್ಲಿ ಅವರದೇ ಆದ ವಿಧಾನವನ್ನು ಅವರು ಅಭಿವೃದ್ಧಿಪಡಿಸಿದ್ದರು. ಅಧಿಕಾರಿಗಳು ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕೆಂದು ಶಾಹು ಅವರು ಮನಸ್ಸಿಗೆ ಬಂದಂತೆ ಖಯಾಲಿ ಆಜ್ಞೆಗಳನ್ನು ಹೊರಡಿಸುತ್ತಿರಲಿಲ್ಲ. ಯಾವ ಸಮುದಾಯಕ್ಕೆ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಬೇಕೆಂದು ಯೋಜಿಸಿದ್ದರೋ, ಆ ಸಮುದಾಯದ ನಾಯಕರೊಂದಿಗೆ ಮೊದಲು ಸಂಧಾನ-ಚರ್ಚೆಗಳನ್ನು ಮಾಡುವುದು

ಅವರ ವಿಧಾನವಾಗಿತ್ತು. ಶಾಹುರವರ ವ್ಯಕ್ತಿತ್ವ, ಅವರ ಪ್ರತಿಮೆ, ಸಂವಹನದಲ್ಲಿನ ಸೌಹಾರ್ದತೆ ಇವೆಲ್ಲವೂ ಪರಿಣಾಮಕಾರಿಯಾಗಿದ್ದರಿಂದ ಈ ಸಮುದಾಯದ ನಾಯಕರು ತಮ್ಮ ಸಮುದಾಯಕ್ಕೆ ಏನಾದರೂ ರಚನಾತ್ಮಕವಾಗಿ ಮಾಡಬೇಕೆಂದು ಅವರೇ ಸ್ವತಃ ಅಪೇಕ್ಷೆಪಡುತ್ತಿದ್ದರು. ಯಾವಾಗ ಸೂಕ್ತ ವಾತಾವರಣ (ಪರಿಸ್ಥಿತಿ) ನಿರ್ಮಾಣವಾದ ಕೂಡಲೇ ಅವರ ಸಮುದಾಯದ ವಿದ್ಯಾರ್ಥಿಗಳಿಗೆ ಒಂದು ವಿದ್ಯಾರ್ಥಿ ನಿಲಯ ಬೇಕೆಂಬ ವಿಚಾರವನ್ನು ಹರಿಬಿಡುತ್ತಿದ್ದರು. ಶಾಹು ಅವರು ನೇರ ಉಪಕ್ರಮ ಮತ್ತು ನಾಯಕತ್ವ ತೆಗೆದುಕೊಳ್ಳುತ್ತಿರಲಿಲ್ಲ. ಪ್ರತಿಯೊಂದು ಜಾತಿಯು ತನ್ನದೇ ಆದ ರೀತಿಯಲ್ಲಿ ಬೆಳೆಯುವಂತೆ ನೋಡುತ್ತಿದ್ದರು. ತಮಗೆ ವಿದ್ಯಾರ್ಥಿ ನಿಲಯ ಬೇಕೆಂದು ತಮ್ಮ ಬಳಿಗೆ ಬಂದವರಿಗೆ ಅವರು ಪ್ರೋತ್ಸಾಹ ನೀಡಿ ಎಲ್ಲಾ ಸಹಾಯವನ್ನು ಒದಗಿಸಿಕೊಡುತ್ತಿದ್ದರು. ಅವರಿಗೆ ಜನರ ಉಪಕ್ರಮ ಮತ್ತು ತೊಡಗಿಸಿಕೊಳ್ಳುವಿಕೆ ಬಹಳ ಮುಖ್ಯವಾಗುತ್ತಿತ್ತು. ಅಂಥದ್ದು ಅವರ ವಿವೇಚನೆ, ತಮ್ಮ ಜಾತಿಗೆ ಸಕಾರಾತ್ಮಕವಾದದ್ದನ್ನು ಮಾಡುತ್ತಿದ್ದೇವೆ ಮತ್ತು ಅದರಿಂದ ಅವರು ಸಂತೃಪ್ತಿಯನ್ನು ಪಡೆಯುತ್ತಿದ್ದರು. ಮತ್ತು ಈ ವಿಧಾನ ಬಹಳ ಪರಿಣಾಮಕಾರಿಯೆಂದು ಜನರು ಭಾವಿಸುತ್ತಿದ್ದರು. ಹೀಗೆ ಶಾಹು ಮಹಾರಾಜರು ವಿದ್ಯಾರ್ಥಿ ನಿಲಯದ ಆಂದೋಲನವನ್ನು ಮೇಲಿನಿಂದ ಹೇರುತ್ತಿರಲಿಲ್ಲ. ಇದು ಒಂದು ಜನಪ್ರಿಯ ಆಂದೋಲನವೆಂದು ಶಾಹು ಖಾತರಿಪಡಿಸಿದರು. ಅದು ಪ್ರಮುಖ ಜನಾಂದೋಲನ ವಾಯಿತು. ನಂತರ ಕೊಲ್ಹಾಪುರದ ಮೂಲಕ ಇಡೀ ಮಹಾರಾಷ್ಟ್ರದಲ್ಲಿ ಹರಡಿಕೊಂಡಿತು.

'ಅಸ್ಪೃಶ್ಯರಿಗೆ' ಸಂಬಂಧಿಸಿದಂತೆ ಬೇರೆ ವಿಧಾನವನ್ನೇ ಶಾಹು ಅನುಸರಿಸಿದರು. ಈ ಸಮುದಾಯ ತೀರಾ ಅಲಕ್ಷ್ಯಕ್ಕೆ ಗುರಿಯಾಗಿತ್ತು. ಸಾಮೂಹಿಕ ವಿಮೋಚನೆಗಾಗಿ ಶಿಕ್ಷಣ ಮತ್ತು ಆಕಾಂಕ್ಷೆಯ ಉತ್ಸಾಹಸಹಿತ ನಾಯಕರು ಅವರಲ್ಲಿ ಸಿಗುವುದು ಅಸಾಧ್ಯವಾಗಿತ್ತು. ಏಕೆಂದರೆ ಅವರು ತೀರಾ ಪ್ರತ್ಯೇಕಗೊಂಡಿದ್ದರು. ಶಾಹು ಅವರು ಅಸ್ಪೃಶ್ಯರಲ್ಲಿ ಶಿಕ್ಷಣದ ಬಗ್ಗೆ ಅರಿವು ಮೂಡಿಸಲು ಮರಾಠ ಕಾರ್ಯಕರ್ತರಾದ ಭಾಸ್ಕರರಾವ್ ಜಾಧವ್, ಮಹದೇವ ದೊಂಗ್ರಿ, ಶ್ರೀಪತ್‌ರಾವ್ ಶಿಂಧೆ, ಖಂಡೇರಾವ್ ಬಾಗಲ್ ಮತ್ತು ಗಣಪತ್‌ರಾವ್ ಕದಮ್ ಅವರನ್ನು ಉತ್ತೇಜಿಸಿದರು. ಶಾಹು ಅವರಿಂದ ಉತ್ತೇಜಿತರಾದ ಈ ಗುಂಪು ೧೯೦೮ರಲ್ಲಿ ಕೊಲ್ಹಾಪುರದಲ್ಲಿ 'ಅಸ್ಪೃಶ್ಯರಿಗಾಗಿಯೇ' ಮಿಸ್ ಕ್ಲಾರ್ಕ್ ಹಾಸ್ಟೆಲನ್ನು ಪ್ರತ್ಯೇಕವಾಗಿ ಸ್ಥಾಪಿಸಿದರು.

ಬಾಂಬೆಯ ಗವರ್ನರ್ ಸರ್ ಜಾರ್ಜ್ ಕ್ಲಾರ್ಕ್ ಅವರ ಪುತ್ರಿ ಮಿಸ್ ವಯೊಲೆಟ್ ಕ್ಲಾರ್ಕ್. ವಯೊಲೆಟ್ ಅವರು ಸಹಾನುಭೂತಿಯುಳ್ಳ ಒಬ್ಬ ಮಹಿಳೆ. ಆಕೆ ತನ್ನ ವಿಶೇಷ ನೃತ್ಯ ಚಾರಿಟಿಯ ಕಾರ್ಯಕ್ರಮಗಳನ್ನು ಸಂಘಟಿಸಿ ಅದರಿಂದ ಬಂದ ೫೦೦೦ ರೂ.ಗಳನ್ನು ಶಾಹು ಯೋಜಿತ ಸಮುದಾಯದ ವಿದ್ಯಾರ್ಥಿ ನಿಲಯಕ್ಕೆ ದಾನ ಮಾಡಿದರು. ಹೀಗೆ ವಿದ್ಯಾರ್ಥಿ ನಿಲಯಕ್ಕೆ ಅವರ ಹೆಸರಿಡಲಾಯಿತು.[7]

ಮುಸ್ಲಿಂ ಸಮುದಾಯಕ್ಕೆ ಬೇರೊಂದು ವಿಧಾನವೇ ಬೇಕಾಯಿತು. ಮಹಾರಾಜರಿಗೆ ಮುಸ್ಲಿಂ ಸಮುದಾಯದ ಬಗ್ಗೆ ಅಪಾರವಾದ ಮಮತೆಯಿತ್ತು. ಮುಸ್ಲಿಮರು ಶಿಕ್ಷಣದ ಬಗ್ಗೆ ತುಂಬಾ ಉದಾಸೀನರು. ೧೯೦೨ರಿಂದ ಶಾಹು ಅವರು ಮುಸ್ಲಿಮರ ಪ್ರತ್ಯೇಕ ವಿದ್ಯಾರ್ಥಿ ನಿಲಯಕ್ಕೆ ಮಾಡಿದ ಪ್ರಯತ್ನ ವ್ಯರ್ಥವಾಯಿತು. ಮುಸ್ಲಿಂ ವಿದ್ಯಾರ್ಥಿಗಳಿಗೆ ಮರಾಠ ಬೋರ್ಡಿಂಗ್‌ನಲ್ಲಿ ವ್ಯವಸ್ಥೆಗೊಳಿಸಲಾಯಿತು. ಕೊನೆಗೆ ೧೯೦೬ರಲ್ಲಿ ಶಾಹು ಅವರೇ ಸ್ವತಃ ಆಸಕ್ತಿವಹಿಸಿ ನಗರದ ಪ್ರಮುಖ ಮುಸ್ಲಿಮರ ಸಭೆಯನ್ನು ಕರೆದರು. ನಿಯತಕಾಲಿಕೆಯಾದ 'ಇಂದು ಪ್ರಕಾಶ' ಈ ಸಭೆಯ ನಡಾವಳಿಗಳನ್ನು ತಿಳಿಸುತ್ತದೆ: "ಮುಸ್ಲಿಮರು ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸುವುದಕ್ಕೆ ೩೦೦೦ ರೂ.ಗಳನ್ನು ಸಂಗ್ರಹಿಸಿದ್ದಾರೆ. ಶಾಹು ಮಹಾರಾಜರು ಅಷ್ಟೇ ಪ್ರಮಾಣದ

ಹಣವನ್ನು ಕೊಡುವರೆಂದು ಮಹಾರಾಜರ ಕಾರ್ಯದರ್ಶಿಗಳಿಂದ ಘೋಷಿಸಿದರು. ಸ್ಥಳದಲ್ಲೇ ೪೦೦೦ ರೂ.ಗಳನ್ನು ಸಂಗ್ರಹಿಸಲಾಯಿತು. ಮಾನ್ಯ ಮಹಾರಾಜರು ಸಭೆಯ ಉತ್ಸಾಹವನ್ನು ನೋಡಿ ಹರ್ಷಿತರಾದರು ಮತ್ತು ತನ್ನ ವತಿಯಿಂದ ೧೦೦೦ ರೂ.ಗಳನ್ನು ನೀಡಿದರು. ಜೊತೆಗೆ ಸಂಸ್ಥಾನದಲ್ಲಿರುವ ದರ್ಗಾ, ಮಸೀದಿ ಮೊದಲಾದ ಧಾರ್ಮಿಕ ಮತಮಾನ್ಯಗಳಿಂದ ಸಂಚಿತವಾದ ಆದಾಯದಲ್ಲಿ ಸಂಧಾನಕಾರರು ಹಂಚಿದ ಧಾರ್ಮಿಕ ಬಾಬ್ತುಗಳ ಬಗೆಗಿನ ಖರ್ಚುಗಳನ್ನು ಕಳೆದ ಮೇಲೆ ಉಳಿದ ಹಣದಲ್ಲಿ ಮುಸ್ಲಿಮರು ಒಪ್ಪಿದಲ್ಲಿ, ಮುಸ್ಲಿಮರಲ್ಲಿ ಬಡವರ, ಅನಾಥರ, ಪ್ರತಿಭಾವಂತ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಖರ್ಚುವೆಚ್ಚಗಳಿಗಾಗಿ ಸಮುದಾಯದ ವಿದ್ಯಾರ್ಥಿ ನಿಲಯದ ನಿಧಿಗೆ ವರ್ಗಾಯಿಸುವ ವ್ಯವಸ್ಥೆ ಮಾಡಲಾಗುವುದು ಎಂದು ಶಾಹು ಮಹಾರಾಜರು ಹೇಳಿದರು. ಮುಸ್ಲಿಮರ ಸಭೆಯು ಕೃತಜ್ಞತಾಪೂರ್ವಕವಾಗಿ ಸರ್ವಾನುಮತದಿಂದ ತಮ್ಮ ಸಮ್ಮತಿಯನ್ನು ಘೋಷಿಸಿದರು."[8]

ಮತ್ತೆ, ಅದೇ ಸಭೆಯಲ್ಲಿ ಮಹಮ್ಮಡನ್ ಶಿಕ್ಷಣ ಸಮಾಜವನ್ನು ಸ್ಥಾಪಿಸಲಾಯಿತು ಮತ್ತು ಮುಸ್ಲಿಂ ವಿದ್ಯಾರ್ಥಿನಿಲಯದ ಪ್ರಸ್ತಾವನೆಯನ್ನು ಅನುಮೋದಿಸಲಾಯಿತು. ಶಾಹು ಅವರು ಅಲ್ಲಿಗೇ ನಿಂತುಬಿಡಲಿಲ್ಲ. ಅವರು ಸಮಾಜದ ಪದನಿಮಿತ್ತ ಅಧ್ಯಕ್ಷಸ್ಥಾನವನ್ನು ಅಂಗೀಕರಿಸಿದರು, ಸಂಸ್ಥಾನದ ದಿವಾನರನ್ನು (ಪ್ರಧಾನ ಮಂತ್ರಿ) ಉಪಾಧ್ಯಕ್ಷರನ್ನಾಗಿ ನೇಮಿಸಿದರು. ಈ ರೀತಿಯಲ್ಲಿ ಕೊಲ್ಲಾಪುರದ ರಾಜಾಸ್ಥಾನ ಉದಾರ ಉಪಕೃತಿಗಳನ್ನು ಮುಸ್ಲಿಂ ಸಮುದಾಯಕ್ಕೆ ನೀಡಿತು. ಆಸ್ಥಾನದ ಉದಾರವಾದ ಕೊಡುಗೆಯ ಜೊತೆಗೆ ಶಾಹು ಮಹಾರಾಜರು ಸಹ ವಿದ್ಯಾರ್ಥಿ ನಿಲಯದ ಖರ್ಚುವೆಚ್ಚಗಳಿಗೆ ಮಸೀದಿ ಮತ್ತು ದರ್ಗಾಗಳ ಮೂಲಕ ಆದಾಯ ಹರಿದುಬರುವಂತೆ ವ್ಯವಸ್ಥೆ ಮಾಡಿದರು. ೧೯೨೦ರಲ್ಲಿ ಶಾಹು ಅವರ ಗುರು ಫ್ರೆಜರ್ ಅವರು ಎರಡು ಅಂತಸ್ತುಗಳ ಮುಸ್ಲಿಮರ ವಿದ್ಯಾರ್ಥಿ ನಿಲಯದ ಕಟ್ಟಡಕ್ಕೆ ಬುನಾದಿ ಕಲ್ಲು ನೆಡುವ ಸಮಾರಂಭದ ಕಾರ್ಯಕ್ರಮಕ್ಕೆ ರಾಜಾಸ್ಥಾನಕ್ಕೆ ಹಾಜರಾಗಲು ಭೇಟಿ ನೀಡಿದ್ದರು. ಶಾಹು ಮಹಾರಾಜರು ಕಟ್ಟಡಕ್ಕೆ ತೇಗದ ಮರಮುಟ್ಟುಗಳನ್ನು ಸಂಸ್ಥಾನದ ಅರಣ್ಯಗಳಿಂದ ಒದಗಿಸುವುದರ ಜೊತೆಗೆ ೫೫೦೦ ರೂ.ಗಳನ್ನು ದಾನವಾಗಿ ನೀಡಿದ್ದರು.[9]

ಇದೇ ಸಮಯಕ್ಕೆ ಶಾಹು ಅವರಿಂದ ಸ್ಫೂರ್ತಿಗೊಂಡು ಹಲವಾರು ಸಾಮಾಜಿಕ ಕಾರ್ಯಕರ್ತರು ಕೊಲ್ಹಾಪುರದಲ್ಲಿ ವಿದ್ಯಾರ್ಥಿ ನಿಲಯಗಳ ಆಂದೋಲನದಲ್ಲಿ ನವೀನ ಪ್ರಯೋಗವನ್ನು ಮಾಡಿದರು. ಮರಾಠ ಸಮುದಾಯದಲ್ಲಿ ಅತ್ಯಂತ ಕಡುಬಡ ವಿದ್ಯಾರ್ಥಿಗಳಿಗೆ ಶ್ರೀ ಪ್ರಿನ್ಸ್ ಶಿವಾಜಿ ಮರಾಠ ಫ್ರೀ ಬೋರ್ಡಿಂಗ್ ಹೌಸ್ (ಶ್ರೀ ಮಹಾರಾಜ ಶಿವಾಜಿ ಮರಾಠ ಉಚಿತ ವಿದ್ಯಾರ್ಥಿ ನಿಲಯ) ಅನ್ನು ಸ್ಥಾಪಿಸಲಾಯಿತು. ಸಾಮಾಜಿಕ ಕಾರ್ಯಕರ್ತ ಬಾಪುರಾವ್ ಶಿಂಧೆ ಅವರು ಪೂನಾದಲ್ಲಿ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿ ನಿಲಯವನ್ನು ನಡೆಸುತ್ತಿದ್ದರು. ಈ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳು ಮಧುಕರಿಯನ್ನು ಬಡ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಸಿದ್ಧಗೊಳಿಸಿದ ಆಹಾರವನ್ನು ಭಿಕ್ಷೆಯಾಗಿ ನೀಡುವುದೇ ಮಧುಕರಿ; ಬೇಡಲು ಹೊರಟರು. ಭಿಕ್ಷೆ ನೀಡಿದ ಆಹಾರವನ್ನು ಸಂಗ್ರಹಿಸಿ ವಿದ್ಯಾರ್ಥಿನಿಲಯಗಳಿಗೆ ತಂದು ಎಲ್ಲರೂ ಒಟ್ಟಿಗೆ ಸೇರಿ ಊಟ ಮಾಡುವುದು. ನಿಯತಕಾಲಿಕೆ 'ವಿಜಯಿ' ಮರಾಠ ಪತ್ರಿಕೆಯ ಸ್ಥಾಪಕ ಶ್ರೀಪತ್‌ರಾವ್ ಶಿಂಧೆ, ಶಾಹು ಅವರು ಪುಣೆಗೆ ಬಂದಾಗ ಈ ವಿದ್ಯಾರ್ಥಿ ನಿಲಯದ ಕತೆಯನ್ನು ಹೇಳಿದರು. ಬಡಬ್ರಾಹ್ಮಣ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸ ಮಾಡುವಾಗ ತಮ್ಮ ಘನತೆಯನ್ನು ರಾಜಿ ಮಾಡಿಕೊಳ್ಳದೆ ಮನೆ–ಮನೆಗೆ ಹೋಗಿ ಆಹಾರವನ್ನು ಭಿಕ್ಷೆ ಬೇಡುವ 'ಮಧುಕರಿ' ಪರಂಪರೆಯನ್ನು ಕಟ್ಟುನಿಟ್ಟಾಗಿ ಪರಿಪಾಲಿಸಿದ

ರೆಂಬ ಸಂಗತಿಯನ್ನು ಶಾಹು ತಿಳಿದುಕೊಂಡರು. ಮರಾಠ ವಿದ್ಯಾರ್ಥಿಗಳು ಸ್ಫೂರ್ತಿಗೊಂಡು ಈ ಪದ್ಧತಿಯನ್ನು ಅನುಸರಿಸಿದರು ಮತ್ತು ತಮ್ಮನ್ನು ತಾವೇ ವಿದ್ಯಾವಂತರನ್ನಾಗಿ ಮಾಡಿಕೊಳ್ಳಲು ನಿರ್ಧರಿಸಿದರೆಂಬುದನ್ನು ಕೇಳಿ ಪ್ರಭಾವಿತಗೊಂಡರು. ಶಾಹು ಅವರು ವಿದ್ಯಾರ್ಥಿ ನಿಲಯಕ್ಕೆ ದಿಢೀರನೇ ಭೇಟಿನೀಡಿ ಬಟ್ಟೆಬರೆಯಿಲ್ಲದ ಬಡವಿದ್ಯಾರ್ಥಿಗಳು, ಸಂಗ್ರಹಿಸಿದ ಆಹಾರವನ್ನು ಅದರ ಗುಣಕ್ಕೆ ಅನುಗುಣವಾಗಿ ವ್ಯವಸ್ಥೆಗೊಳಿಸುತ್ತಿದ್ದುದನ್ನು ನೋಡಿ ಆಶ್ಚರ್ಯಪಟ್ಟರು. ಶ್ರೀಪತ್‌ರಾವ್ ಅವರ ಜೀವನಚರಿತ್ರೆಗಾರ ಬರೆಯುತ್ತಾರೆ: "ಶಾಹು ಮಹಾರಾಜರು ಶ್ರೀಪತ್‌ರಾವ್ ಅವರ ಭುಜ ತಟ್ಟಿ ಹೇಳಿದರು, ಶ್ರೀಪತ್‌ರಾವ್ ಅವರೇ ಬಡಬ್ರಾಹ್ಮಣ ವಿದ್ಯಾರ್ಥಿಗಳಿಗೆ ಭಿಕ್ಷೆಯಲ್ಲಿ ಸಿದ್ಧಪಡಿಸಿದ ಆಹಾರವನ್ನು ಕೊಡುವ ಸಂಪ್ರದಾಯ, ತಾವು ಶಿಕ್ಷಣ ಪಡೆಯಲು ಮರಾಠ ಹುಡುಗರು ಭಿಕ್ಷೆ ಬೇಡುವುದನ್ನು ನೋಡಿ ನನಗೆ ಸಂತೋಷವಾಯಿತು." ಭಾರವಾದ ಹೃದಯದಿಂದ ಮತ್ತು ಕಣ್ಣೀರು ಸುರಿಸುತ್ತಾ ಶಾಹು ಹೇಳಿದರು, 'ನನ್ನ ಸಮುದಾಯ ಇನ್ನುಮೇಲೆ ಉದಾಸೀನದಿಂದ ಧೂಳಿನಲ್ಲಿ ಮಲಗುವುದಿಲ್ಲ.'[10]

ಶಾಹು ಅವರಿಗೆ ಹತ್ತಿರವಾಗಿದ್ದ ಯುವ ಕಾರ್ಯಕರ್ತರು ಈ ಪ್ರಯೋಗವನ್ನು ಕೊಲ್ಹಾಪುರದಲ್ಲಿ ಮಾಡಲು ನಿರ್ಧರಿಸಿದರು. ಶ್ರೀಪತ್‌ರಾವ್ ಶಿಂಧೆ, ಮಾಮಸಾಹೇಬ ಮಿಂಚೇಕರ್, ಖಂಡೇರಾವ್ ಬಾಗಲ್, ಬಾಬುರಾವ್ ಯಾದವ್, ರಾಮಚಂದ್ರರಾವ್ ಬಾಬಾಜಿ ಜಾಧವ್ (ದಸ್‌ರಾಮ್) ಮೊದಲಾದವರು ಪ್ರಾರಂಭಕ್ಕೆ ಸೇರಿ ೧೦ ಬಡ ಮರಾಠ ಹುಡುಗರನ್ನು ಗುರುತಿಸಿ ಅವರನ್ನು ಶ್ರೀಮಂತ ಕುಟುಂಬಗಳಿಗೆ ವಹಿಸಿ, ನಿರ್ಧರಿಸಿದ ದಿನಗಳಂದು ಆ ಮನೆಗಳಲ್ಲಿ ಭಿಕ್ಷೆ ಬೇಡಬೇಕು. ಬಡ ಹುಡುಗರು ಗೊತ್ತುಪಡಿಸಿದ ಮನೆಗಳಿಗೆ ಹೋಗಿ ಊಟ ಮಾಡುತ್ತಿದ್ದರು. ಶಿಕ್ಷಣದ ಬಗ್ಗೆ ಪ್ರಜ್ಞೆಯುಳ್ಳ ಹಲವಾರು ಕುಟುಂಬಗಳು ಸ್ವಯಂಪ್ರೇರಣೆಯಿಂದ ಈ ವ್ಯವಸ್ಥೆಯನ್ನು (ಪದ್ಧತಿ) ಬೆಂಬಲಿಸಿದವು. ಸಮಾಜದ ಸಹಭಾಗಿತ್ವ ಬಹಳ ಮುಖ್ಯ. ಈ ಪ್ರಯೋಗದ ಮೂಲಕ ಶಿಕ್ಷಣದ ಬಗ್ಗೆ ವಿಸ್ತೃತವಾದ ಜಾಗೃತಿ ಬೆಳೆಯಿತು. ವಿದ್ಯಾರ್ಥಿಗಳ ಸಂಖ್ಯೆ ನಿಧಾನವಾಗಿ ಬೆಳೆಯಿತು ಮತ್ತು ಆಂದೋಲನಕಾರರು ಕಷ್ಟಪಟ್ಟು ಆ ವಿದ್ಯಾರ್ಥಿಗಳಿಗೆ ಊಟದ (ಆಹಾರದ) ವ್ಯವಸ್ಥೆಯನ್ನು ಮಾಡುತ್ತಿದ್ದರು. ಶಾಹು ಅವರು ಈ ಪ್ರಯೋಗವನ್ನು ಆಸಕ್ತಿಯಿಂದ ಗಮನಿಸುತ್ತಿದ್ದರು. ಶಾಹು ಅವರಿಗೆ ೧೦೦ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಯನ್ನು ಮಾಡುವುದು ಕಷ್ಟವೇನಲ್ಲ. ಜಾಗೃತಿಯನ್ನು ಕೃತಕವಾಗಿ ಮೂಡಿಸುವುದರಿಂದ ಅವರು ಹಿಂತೆಗೆದರು; ಹಿಂದುಳಿದ ಜಾತಿಗಳ ಹುಡುಗರು ಶಿಕ್ಷಣಕ್ಕಾಗಿ ಕಷ್ಟದ ಹಾದಿಯನ್ನು ತುಳಿಯಬೇಕೆಂಬುದು ಮುಖ್ಯ ಎಂಬ ಸಂಗತಿಯ ಬಗ್ಗೆ ಅವರು ನಂಬಿದ್ದರು. ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳು ತಡವರಿಸುತ್ತಾ ತಮ್ಮ ಕಾಲುಗಳ ಮೇಲೆ ನಿಲ್ಲಲು ಬಹಳ ಪ್ರಯತ್ನಪಡುವುದು; ಸಾಮಾಜಿಕ ಜಾಗೃತಿಯನ್ನು ಮೂಡಿಸುವುದಕ್ಕೆ ಇದೇ ದಾರಿಯಾಗಿದೆ. ಹೀಗಿರುವಾಗ ಈ ಪ್ರಯೋಗಕ್ಕೆ ಸ್ವಲ್ಪ ಸಮಯ ನೀಡುವುದು ಉತ್ತಮವೆಂದು ಅವರು ತಿಳಿದರು. ಸ್ವಲ್ಪ ಸಮಯದ ನಂತರ ತೊಡಗಿಕೊಂಡಿದ್ದ ಸಾಮಾಜಿಕ ಕಾರ್ಯಕರ್ತರಿಗೆ ಕಷ್ಟವೆನಿಸಿದಾಗ ಅವರು ಮುಂದೆ ಬಂದರು. ಅವರು ತಮ್ಮ ಉದಾರತನದಿಂದ ಈ ವಿದ್ಯಾರ್ಥಿ ನಿಲಯಕ್ಕೆ ದೊಡ್ಡ ಕಟ್ಟಡವನ್ನು ದಾನ ನೀಡಿ ಅದಕ್ಕೆ ಕೋಠಿ ಶಾಲಾ ಎಂದು ಹೆಸರಿಟ್ಟು, ಅದರ ಖರ್ಚುವೆಚ್ಚಗಳಿಗೆ ಖಜಾನೆಯಲ್ಲಿ ೭,೦೦೦ ರೂ.ಗಳನ್ನು ಠೇವಣಿಯಿಟ್ಟರು. ಆ ವಿದ್ಯಾರ್ಥಿ ನಿಲಯಕ್ಕೆ ೭ ಎಕರೆ ಭೂಮಿಯನ್ನು ನೀಡಿದರು. ಈ ಭೂಮಿಯಲ್ಲೆಲ್ಲಾ ವಿದ್ಯಾರ್ಥಿ ನಿಲಯಗಳ ಕಟ್ಟಡಗಳು ಮೂಡಿಬಂದವು. ಗಢಿಂಗ್ಲಾಜ್ ತಾಲೂಕಿನ ನೂರ್ ಹಳ್ಳಿಯಲ್ಲಿರುವ ರಾಮನಾಥಗಿರಿ ಮಠಕ್ಕೆ ಸೇರಿದ ೧೦೦ ಎಕರೆ ಜಮೀನಿನಲ್ಲಿ ಬರುವ ಹುಟ್ಟುವಳಿಯಿಂದ ಸಂಚಿತವಾಗುವ

ಆದಾಯವನ್ನು ಈ ವಿದ್ಯಾರ್ಥಿ ನಿಲಯಕ್ಕೆ ನಿರಂತರವಾಗಿ ವರ್ಗವಾಗುವಂತೆ ವ್ಯವಸ್ಥೆ ಮಾಡಿದರು. ಈ ವಿದ್ಯಾರ್ಥಿ ನಿಲಯದ ಪ್ರತಿಯೊಂದು ವಿದ್ಯಾರ್ಥಿಗೆ ಸಂಸ್ಥಾನದಲ್ಲಿರುವ ಎಲ್ಲ ವಿದ್ಯಾ ಸಂಸ್ಥೆಗಳೂ ಉಚಿತವಾಗಿ ತರಬೇತಿಯ ಶಿಕ್ಷಣವನ್ನು ನೀಡುವುದು ಕಡ್ಡಾಯ ಎಂದು ಸಾರುವ ಆಜ್ಞೆಯನ್ನು ಹೊರಡಿಸಿದರು.[11] ಕೊಲ್ಹಾಪುರದ ಎರಡು ಮರಾಠ ವಿದ್ಯಾರ್ಥಿ ನಿಲಯಗಳಲ್ಲಿ ಒಂದು ಎದ್ದು ಕಾಣುವ ವೈಶಿಷ್ಟ್ಯವಿತ್ತು: ಅಲ್ಲಿ ಮರಾಠ ವಿದ್ಯಾರ್ಥಿಗಳ ಜೊತೆಗೆ ಎಲ್ಲಾ ಹಿಂದುಳಿದ ಜಾತಿಗಳ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುತ್ತಿತ್ತು. ಅತಿ ಬಡಕುಟುಂಬಗಳಿಂದ ಬಂದ ವಿದ್ಯಾರ್ಥಿಗಳಿಗೆ ಈ ವಿದ್ಯಾರ್ಥಿ ನಿಲಯಗಳಲ್ಲಿ ಉಚಿತವಾಗಿ ನೋಡಿಕೊಳ್ಳಲಾಗುತ್ತಿತ್ತು.

ಶಾಹು ಅವರು ತನ್ನ ವಿದ್ಯಾರ್ಥಿ ನಿಲಯಗಳ ಆಂದೋಲನದ ಬಗ್ಗೆ ಹೆಮ್ಮೆಪಡುತ್ತಾರೆ. ಈ ಆಂದೋಲನ ತನ್ನಿಂದಲೇ ಸ್ಫೂರ್ತಿ ಪಡೆದು, ಉಪಕ್ರಮಿಸಿ ಮತ್ತು ಆಶ್ರಯ ಪಡೆದರೂ ಅವರು ಪ್ರಾಮಾಣಿಕವಾಗಿ ತನ್ನ ಸಂಸ್ಥಾನದ ಶಿಕ್ಷಣದ ಬಗ್ಗೆ ಪ್ರಜ್ಞೆಯಿದ್ದ ಜನರಿಗೆ ಈ ಯಶಸ್ಸು ಸಿಗಬೇಕೆಂದು ಹಾರೈಸುತ್ತಾರೆ. ೧೯೨೦ರಲ್ಲಿ ನಾಸಿಕ್‌ನಲ್ಲಿ ಶ್ರೀ ಉದಾಜಿ ಮರಾಠ ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯದ ಅಸ್ತಿವಾರದ ಸಮಾರಂಭದಲ್ಲಿ ಭಾಷಣ ಮಾಡುತ್ತಾ ಅವರು ಹೇಳುತ್ತಾರೆ: "ನನ್ನ ಪುಟ್ಟ ಸಂಸ್ಥಾನದ ಜನರು ಕನಿಷ್ಠಪಕ್ಷ ಒಂದು ಕ್ಷೇತ್ರದಲ್ಲಿ ವಿಶೇಷ ಕೀರ್ತಿಯನ್ನು ಪಡೆದಿರುವುದಕ್ಕೆ ನಾನು ಹೆಮ್ಮೆ ಪಡುತ್ತೇನೆ. ಅವರ ನಿದರ್ಶನಗಳನ್ನು ವಿವಿಧ ಸ್ಥಳಗಳಲ್ಲಿ ಅನುಸರಿಸುತ್ತಿದ್ದಾರೆ. ಬ್ರಿಟಿಷರು ಮತ್ತು ಇತರೆ ಜನರು ಹೆಮ್ಮೆಯಿಂದ ಬ್ರಿಟಿಷ್ ಪಾರ್ಲಿಮೆಂಟ್ ಎಲ್ಲಾ ಪಾರ್ಲಿಮೆಂಟುಗಳ ತಾಯಿ ಎಂದು ಕರೆಯುತ್ತಾರೆ. ಅದೇ ರೀತಿಯಲ್ಲಿ ಕೊಲ್ಹಾಪುರವು ವಿದ್ಯಾರ್ಥಿ ನಿಲಯಗಳ ಮಾತೃ ಎಂದು ಹೆಸರು ಗಳಿಸಲು ಯೋಗ್ಯವಾಗಿದೆ:"[12]

ಶಾಹು ಅವರು ವಿಸ್ತರಿಸಿದ ರಾಜರ ಬೆಂಬಲವು ಕೇವಲ ಸಂಸ್ಥಾನಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವರು ಮಹಾರಾಷ್ಟ್ರದ ಪುಣೆ, ಅಹಮದ್‌ನಗರ, ನಾಸಿಕ ಮತ್ತು ನಾಗಪುರಗಳಲ್ಲಿ ಹಲವು ವಿದ್ಯಾರ್ಥಿ ನಿಲಯಗಳಿಗೆ ಉದಾರವಾಗಿ ಮತ್ತು ಮುಕ್ತ ಕೈಗಳಿಂದ ಆರ್ಥಿಕ ಅನುದಾನವನ್ನು ನೀಡಿದರು. ಅವರು ತನ್ನ ಆಡಳಿತ ಮುಗಿಯುವವರೆಗೆ ಹಿಂದುಳಿದ ಜಾತಿಗಳ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲು ಹಲವು ಸ್ಥಳಗಳಲ್ಲಿ ಸಾಮಾಜಿಕ ಕಾರ್ಯಕರ್ತರಿಗೆ ಆರ್ಥಿಕ ಸಹಾಯ ನೀಡುವುದನ್ನು ಮುಂದುವರಿಸಿದ್ದರು. ಅವರು ಒಮ್ಮೆ ಲಂಡನ್ನಿನಲ್ಲಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸುವುದಕ್ಕೆ ಗಂಭೀರವಾಗಿ ಯೋಚಿಸಿದ್ದರು.[13]

## ವಿದ್ಯಾರ್ಥಿ ನಿಲಯದ ಆಂದೋಲನದಲ್ಲಿ ಜಾತಿ ಸಮಸ್ಯೆ

ಜಾತಿವಾರು ವಿದ್ಯಾರ್ಥಿ ನಿಲಯಗಳನ್ನು ಬೆಳೆಸಬೇಕೆಂಬ ಶಾಹು ಅವರ ವಿಚಾರವು ಜಾತಿಭೇದ ನಿವಾರಣೆಯ ಸಿದ್ಧಾಂತಕ್ಕೆ ವಿರೋಧವಾಗಿದೆಯೆಂದು ಅವರ ಟೀಕಾಕಾರರು ಅವರಲ್ಲಿ ತಪ್ಪು ಹುಡುಕಲು ಪ್ರಾರಂಭಿಸಿದರು. ಮೇಲುನೋಟಕ್ಕೆ ಈ ವಾದವು ತರ್ಕಬದ್ಧವೆಂದು ತೋರುತ್ತದೆ. ಆದರೆ ಶಾಹು ಅವರು ಅಸ್ಪೃಶ್ಯತೆಯ ಪದ್ಧತಿಯನ್ನು ಮತ್ತು ಜಾತಿಭೇದದ ವಿರುದ್ಧ ಕಠೋರವಾಗಿ ಹೋರಾಡಿದ ಶಾಹು ಮಹಾರಾಜರು ಜಾತಿ ಆಧಾರಿತ ವಿದ್ಯಾರ್ಥಿ ನಿಲಯಗಳನ್ನು ಏಕೆ ಕಟ್ಟಿದರೆಂಬುದನ್ನು ಸೂಕ್ಷ್ಮವಾಗಿ ಪರಿಶಿಲಿಸಿದಾಗ ಕಾಲದ ವಾತಾವರಣದ ಅನುಗುಣವಾಗಿ ಅವರ ನೀತಿ–ಧೋರಣೆಯಿದೆಯೆಂಬುದು ಮನವರಿಕೆಯಾಗುತ್ತದೆ. ಸಾವಿರಾರು ವರ್ಷಗಳಿಂದ ಬಲಿಷ್ಠವಾಗಿರುವ ಜಾತಿಯ ಬುನಾದಿಯನ್ನು ಒಂದು ದಿನದಲ್ಲಿ ನಾಶಮಾಡಲು ಅವರಿಗೆ ಸಾಧ್ಯವಾಗುವುದಿಲ್ಲ. ಪ್ರತಿಯೊಂದು ಜಾತಿಯೂ ಮತ್ತೊಂದು ಜಾತಿಯನ್ನು ಕೀಳುಭಾವನೆ ಮತ್ತು ಅಸಡ್ಡೆ

ಭಾವನೆಯಿಂದ ನೋಡುತ್ತದೆ; ಅದು ತನ್ನನ್ನೇ ಪ್ರತ್ಯೇಕವಾಗಿ ಇರಿಸಿಕೊಳ್ಳುತ್ತದೆ ಮತ್ತು ಸಣ್ಣ ವಲಯದಲ್ಲಯೇ ಪರಿಣತಿಯನ್ನು ಪಡೆದಿರುತ್ತದೆ; ಅದು ತನ್ನ ಸ್ವಾತಂತ್ರ್ಯವನ್ನು ರಾಜಿಮಾಡಿಕೊಳ್ಳದೇ ತನ್ನನ್ನು ತಾನೇ ಸಂರಕ್ಷಿಸಿಕೊಳ್ಳುತ್ತದೆ. ಅಂತಹ ಸನ್ನಿವೇಶದಲ್ಲಿ ಶಾಹು ಮಹಾರಾಜರು ಎಲ್ಲ ವಿದ್ಯಾರ್ಥಿಗಳನ್ನು ಒಳಗೊಳ್ಳುವ ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರೆ ಜಾತಿಪ್ರಜ್ಞೆಯುಳ್ಳ ತಂದೆತಾಯಿಗಳು ತಮ್ಮ ಜಾತಿಯನ್ನು ಕಳೆದುಕೊಳ್ಳುವೆವು ಎಂಬ ಭಯದಿಂದ ತಮ್ಮ ಮಕ್ಕಳನ್ನು ಅಂತಹ ವಿದ್ಯಾರ್ಥಿ ನಿಲಯಕ್ಕೆ ಕಳುಹಿಸುವುದಿಲ್ಲ. ಇದಕ್ಕೆ ವಿರುದ್ಧವಾಗಿ ತಂದೆತಾಯಿಗಳು ಕೊಲ್ಹಾಪುರದಲ್ಲಿ ಪ್ರತ್ಯೇಕವಾಗಿ ತಮ್ಮ ಜಾತಿಗಳಿಗೆ ಸೀಮಿತವಾದ ವಿದ್ಯಾರ್ಥಿ ನಿಲಯಗಳಿಗೆ ತಮ್ಮ ಮಕ್ಕಳನ್ನು ಕಳುಹಿಸತೊಡಗಿದರು; ತಮ್ಮ ಮಕ್ಕಳು ಆಧುನಿಕ ಶಿಕ್ಷಣ ಪಡೆದರೂ ಜಾತಿಯು ಗಟ್ಟಿಯಾಗಿಯೇ ಉಳಿಯುವುದೆಂದು ಅವರು ಭಾವಿಸತೊಡಗಿದರು. ಹೀಗಿರುವಾಗ ವಿಶೇಷವಾಗಿ ಹಿಂದುಳಿದ ಜಾತಿಗಳಿಗೆ ಸೇರಿದ ವಿವಿಧ ಜಾತಿಯ ಮಕ್ಕಳು ವಿದ್ಯಾಭ್ಯಾಸ ಕಲಿಯತೊಡಗಿದರು. ವಿದ್ಯಾರ್ಥಿ ನಿಲಯಗಳಲ್ಲಿ ನೆಲೆಸಿದ ವಿದ್ಯಾರ್ಥಿಗಳು ಸಂಕುಚಿತವಾಗಿ ತಮ್ಮ ಜಾತಿಗೆ ಅಂಟಿಕೊಂಡಿದ್ದರೂ ಅವರು ಶಿಕ್ಷಣವನ್ನು ಮತ್ತು ಜ್ಞಾನವನ್ನು ಕಲಿಯತೊಡಗಿದರು. ಶಾಹು ನಂಬಿದ್ದು ಮೊದಲ ಆದ್ಯತೆಯಾಗಿತ್ತು. ಒಮ್ಮೆ ಈ ಮಕ್ಕಳು ಶಿಕ್ಷಿತರಾದರೆ ಜಾತಿಯ ಮುಳ್ಳನ್ನು ಮನವರಿಕೆ ಮಾಡಿಕೊಳ್ಳುವರೆಂದು ಶಾಹು ಭಾವಿಸಿದ್ದರು. ಕುಟುಂಬಕ್ಕಿಂತ ಜಾತಿಯೇ ಮಹತ್ತರವಾದದ್ದು ಮತ್ತು ಜಾತಿಗಿಂತ ಸಮಾಜ ಮಹತ್ತರವಾದದ್ದು, ಜ್ಞಾನದ ಪ್ರಸರಣವು ಬಹುಮುಖ್ಯ ಎಂಬ ಜಾಗೃತಿಯನ್ನು ಬೆಳೆಸಬೇಕಾಗಿದೆ.

ಒಂದು ನಿದರ್ಶನವು ಈ ವಿಷಯವನ್ನು ಸ್ಪಷ್ಟಗೊಳಿಸುವುದು. ಶಾಹು ಮಹಾರಾಜರು ಅಸ್ಪೃಶ್ಯರಿಗೆ ಮಿಸ್ ಕ್ಲಾರ್ಕ್ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದ್ದು ನಾವು ನೋಡಿದ್ದೇವೆ. ಅಲ್ಲಿ ಸಹ ಪ್ರತಿಯೊಬ್ಬರ ಜಾತಿಯ ಹುಡುಗರಲ್ಲಿ ಪರಸ್ಪರ ತಿರಸ್ಕಾರ ಭಾವನೆಯಿತ್ತು. ಎಲ್ಲಾ ಅಸ್ಪೃಶ್ಯ ವಿದ್ಯಾರ್ಥಿಗಳು ಒಟ್ಟಿಗೆ ತಂಗಿರಲಾರೆಂದು ಶಾಹು ಅವರು ಅರಿತುಕೊಂಡು ಅವರು ಧೋರ್ ಎಂಬ ಅಸ್ಪೃಶ್ಯ ಜಾತಿಯವರಿಗೆ, ಚಂಭಾರ (ಚರ್ಮದ ಕೆಲಸ ಮಾಡುವವರು) ರಿಗೆ ಪ್ರತ್ಯೇಕ ವಿದ್ಯಾರ್ಥಿ ನಿಲಯಗಳನ್ನು ೧೯೧೯ರಲ್ಲಿ ಸ್ಥಾಪಿಸಿದರು. ಇದರ ಅರ್ಥ ತಮ್ಮ ಜಾತಿಯ ಬಗ್ಗೆ ಮಿತಿಮೀರಿ ಹೆಮ್ಮೆಪಡುವುದು ಮೇಲು ಜಾತಿಗಳ ವಿಶಿಷ್ಟ ಲಕ್ಷಣವೇನು ಅಲ್ಲ. ಈ ಹೆಮ್ಮೆಪಡುವುದು ಎಲ್ಲಾ ಜಾತಿಗಳಲ್ಲಿ ಸಮಾನವಾಗಿದೆ. ಇಂತಹ ಸಂದರ್ಭದಲ್ಲಿ ಶಾಹು ಅವರಿಗೆ ಬೇರೆ ಬೇರೆ ಜಾತಿಗಳಿಗೆ ಬೇರೆ ಬೇರೆಯಾದ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸದೆ ಬೇರೆಯ ದಾರಿಯೇ ಇರಲಿಲ್ಲ. ಅವರು ಪ್ರತಿಯೊಂದು ಜಾತಿಯ ಹೆಮ್ಮೆಯನ್ನು ವಿದ್ಯಾರ್ಥಿ ನಿಲಯದ ಆಂದೋಲನವನ್ನು ಬೆಳೆಸಲು ರಚನಾತ್ಮಕ ರೀತಿಯಲ್ಲಿ ಬಳಸಿಕೊಂಡರು. ೧೯೦೧ರಲ್ಲಿ ಮರಾಠ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸುವಾಗ ಜೈನರ ವಿದ್ಯಾರ್ಥಿ ನಿಲಯದ ಬಗ್ಗೆ ಯೋಚಿಸುತ್ತಿದ್ದರು. ಆ ಸಮಯದಲ್ಲಿ ನಿಪ್ಪಾಣಿಯ ಸಮೀಪದ 'ಸ್ಥಾವ್‌ನಿಧಿ' ಎಂಬ ಯಾತ್ರಾಸ್ಥಳದಲ್ಲಿ ಒಂದು ಧಾರ್ಮಿಕ ಸಮ್ಮೇಳನ ಪ್ರಗತಿಯಲ್ಲಿತ್ತು. ಶಾಹು ಈ ಅವಕಾಶವನ್ನು ಬಳಸಿಕೊಂಡು ಜೈನ ಸಮುದಾಯವು ಜೈನರ ಮಕ್ಕಳ ಪ್ರಗತಿಯನ್ನು ಸುಗಮಗೊಳಿಸಲು ಕೊಲ್ಹಾಪುರದಲ್ಲಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲು ಜೈನ ಸಮುದಾಯ ಮುಂದೆ ಬಂದರೆ ಸಮುದಾಯದ ಅಂತಹ ಪ್ರಯತ್ನಗಳನ್ನು ದರ್ಬಾರು ಸಹಾನುಭೂತಿಯಿಂದ ಮತ್ತು ಸಕ್ರಿಯ ಬೆಂಬಲದಿಂದ ಸಹಾಯ ಮಾಡುವುದೆಂದು ಒಂದು ಸಂದೇಶವನ್ನು ಕಳುಹಿಸಿಕೊಟ್ಟರು. ಈ ಸಂದೇಶ ದಿಂದ ಸ್ಫೂರ್ತಿಗೊಂಡ ಜೈನರು ಮುಂದೆ ಬಂದು ಕೊಲ್ಹಾಪುರದಲ್ಲಿ 'ದಿಗಂಬರ ಜೈನ ವಿದ್ಯಾರ್ಥಿ ನಿಲಯ'ವನ್ನು ಮರಾಠ ಹಾಸ್ಟೆಲ್ ಪ್ರಾರಂಭಗೊಂಡ ಒಂದು ತಿಂಗಳ ನಂತರ ಸ್ಥಾಪಿಸಲಾಯಿತು. ಲಿಂಗಾಯತ

ಸಮುದಾಯಕ್ಕೆ ಸಂಬಂಧಿಸಿದಂತೆ ಶಾಹು ಮಹಾರಾಜರೇ ಅವರ ನಾಯಕರ ಒಂದು ಸಭೆಯನ್ನು ಕರೆದರು ಮತ್ತು ಸಭೆಯಲ್ಲಿ ಅವರ ಮಕ್ಕಳಿಗೂ ಒಂದು ವಿದ್ಯಾರ್ಥಿ ನಿಲಯ ಸ್ಥಾಪಿಸಲು ಕಳಕಳಿಯ ಮನವಿಯನ್ನು ಮಾಡಿದರು.[14]

ಶಾಹು ಮಹಾರಾಜರು ಬಹಳ ಬುದ್ಧಿವಂತಿಕೆಯಿಂದ ಪ್ರತಿಯೊಂದು ಜಾತಿಯ ಆತ್ಮಗೌರವವನ್ನು ಶಿಕ್ಷಣ ಪ್ರಸಾರವೆಂಬ ರಚನಾತ್ಮಕ ಕೆಲಸಕ್ಕೆ ಕ್ರೋಢೀಕರಿಸಿದರು. ಪ್ರತಿಯೊಂದು ಜಾತಿಯು ಸಾಮಾಜಿಕ ಒಳಿತಿಗಾಗಿ ತನ್ನದೇ ಆದ ಗೌರವಾನ್ವಿತ ಮತ್ತು ಶ್ರೀಮಂತ ಜನರ ಭಾಗವನ್ನು ಹೊಂದಿದೆ. ಅವರು ತಮ್ಮ ಜಾತಿಗಾಗಿ ರಚನಾತ್ಮಕವಾಗಿ ಏನಾದರು ಮಾಡುವ ಆಶೆಯನ್ನು ಹೊಂದಿದ್ದಾರೆ. ಈ ಪ್ರವೃತ್ತಿಯನ್ನು ಅರಿತ ಶಾಹು ಅವರು ಅವರ ಮನೋಭಾವಗಳಿಗೆ ಕರೆಕೊಟ್ಟು ಕೆಲಸಗಳನ್ನು ಮಾಡಿಸುತ್ತಿದ್ದರು. ಪ್ರತಿಯೊಂದು ಜಾತಿಯ ಜನರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಹಂಬಲಿಸುವಂತೆ ಮಾಡಬೇಕು ಮತ್ತು ಆ ಹಂಬಲವು ಸಾಮೂಹಿಕವಾಗಿ ವಿದ್ಯಾರ್ಥಿನಿಲಯ ಮೂಲಧನದ ಸಂಗ್ರಹಕ್ಕೆ ಪ್ರಯತ್ನಿಸಬೇಕು. ವಿದ್ಯಾರ್ಥಿ ನಿಲಯಗಳ ಸ್ಥಾಪನೆಯ ಪ್ರಕ್ರಿಯೆಯಲ್ಲಿ ಜಾತಿಗಳ ಸಕ್ರಿಯ ಸಹಭಾಗಿತ್ವ ಅತಿ ಮುಖ್ಯವೆಂದು ಅವರು ಭಾವಿಸಿದ್ದರು. ನಿಜವಾಗಿ ಶಾಹು ಅವರು ಅನುಸರಿಸಿದ ನೀತಿ–ಧೋರಣೆಗಳು ಮತ್ತು ವಿಧಾನಗಳು ಉನ್ನತವಾಗಿದ್ದರಿಂದ ಜನರ ಸಹಭಾಗಿತ್ವವು ವಿದ್ಯಾರ್ಥಿ ನಿಲಯಗಳ ಆಂದೋಲನ ಆಶಾದಾಯಕವಾಗಿತ್ತು.

**ಪರಿಣಾಮಗಳು**

ಆಧುನಿಕ ಮಹಾರಾಷ್ಟ್ರವನ್ನು ರೂಪಿಸುವ ಮತ್ತು ಕಟ್ಟುವ ಕಾರ್ಯ ನಿರ್ವಹಿಸಿದ ಸಾವಿರಾರು ಮಹಾನುಭಾವರನ್ನು (ಅವರು ಶಿಕ್ಷಣವನ್ನು ಪಡೆಯಲು, ಆಂದೋಲನವು ಕಲ್ಪಿಸಿದ ವಿಧ್ಯಾರ್ಥಿ ನಿಲಯಗಳ ಅನುಕೂಲಗಳಿಗೆ ಧನ್ಯವಾದಗಳು) ಶಾಹು ಮಹಾರಾಜರ ವಿದ್ಯಾರ್ಥಿ ನಿಲಯಗಳ ಆಂದೋಲನ ನಿರ್ಮಿಸಿತು. ಕೃಷಿ ತಜ್ಞ ಡಾ. ಪಿ. ಸಿ. ಪಾಟೀಲರಿಂದ ಪಂಜಾಬಿನ ರಾಜ್ಯಪಾಲ ರ್‍ಯಾಂಗ್ಲರು ಡಿ. ಸಿ. ಪಾವಟೆ, ಸಾಹಿತಿ ಜಿ. ಎಲ್. ಥೋಕಲ್‌ರಿಂದ ಅಂತರ್‌ರಾಷ್ಟ್ರೀಯವಾಗಿ ಪ್ರಸಿದ್ಧಿ ಪಡೆದ ಶಿಕ್ಷಣ ತಜ್ಞ ಜೆ. ಪಿ. ನಾಯ್ಕ, ಜನನಾಯಕರಾದ ಬಾಳಾಸಾಹೇಬ ದೇಸಾಯಿಯಿಂದ ಕಮ್ಯುನಿಸ್ಟ್ ನಾಯಕ ಕಾಮ್ರೇಡ್ ಮಿರಜ್‌ಕರ್ ಮತ್ತು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರಸಿದ್ಧಿ ಪಡೆದ ಇತರೆ ಹಲವಾರು ಕೊಲ್ಹಾಪುರದಲ್ಲಿನ ಶಾಹುರವರ ಆಂದೋಲನದಿಂದ ಮೂಡಿ ಬಂದ ಘಟಾನುಘಟಿಗಳು. ಮಹಾರಾಷ್ಟ್ರದ ೨೦ನೇ ಶತಮಾನದ ೩/೪ ಭಾಗದ ಅವಧಿಯಲ್ಲಿ ರಾಜಕಾರಣ, ಶಿಕ್ಷಣ, ಅರ್ಥವ್ಯವಸ್ಥೆ, ಕಲೆಗಳು ಮತ್ತು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿಪರ ಆಂದೋಲನಗಳನ್ನು ನಡೆಸಿದ ಹಲವರು ಕೊಲ್ಹಾಪುರ ವಿದ್ಯಾರ್ಥಿ ನಿಲಯಗಳಿಂದ ಮೂಡಿಬಂದ ಶಿಲ್ಪಿಗಳಾಗಿದ್ದಾರೆ. ಈ ವಿದ್ಯಾರ್ಥಿ ನಿಲಯಗಳಿಂದಾಗಿ ಮುಂಬೈ ಮತ್ತು ಪುಣೆಗಳ ನಂತರ ಕೊಲ್ಹಾಪುರವು ಏಕೈಕ ವಿದ್ಯಾ ಕೇಂದ್ರವಾಗಿ ರೂಪುಗೊಂಡಿದೆ. ಹಿಂದುಳಿದ ಸಮುದಾಯಗಳು ಮುಂಬಯಿ–ಠಾಣೆಯಿಂದ ಬೆಳಗಾಮ್–ಧಾರವಾಡದವರೆಗೆ ಹರಡಿರುವ ವಿಶಾಲವಾದ ಹಿಂದುಳಿದ ಸಮುದಾಯಗಳ ಈ ವಿದ್ಯಾರ್ಥಿ ನಿಲಯಗಳು ತಮ್ಮ ಮಕ್ಕಳ ಸಮೃದ್ಧಿಯನ್ನು ತರುವವೆಂದು ನೋಡುತ್ತಿವೆ. ತತ್ಪರಿಣಾಮವಾಗಿ ಸಾವಿರಾರು ಯುವಕರು ಮಹಾರಾಷ್ಟ್ರದ ಮೂಲೆ–ಮೂಲೆಗಳಿಂದಲೂ ಕೊಲ್ಹಾಪುರದ ಕಡೆಗೆ ಆಕರ್ಷಿತರಾಗುತ್ತಿದ್ದಾರೆ. ಮಹಾರಾಷ್ಟ್ರದ ಬ್ರಾಹ್ಮಣೇತರರ ಮೊದಲ ತಲೆಮಾರನ್ನು ಉನ್ನತ ಶಿಕ್ಷಣ ಪಡೆಯುವಲ್ಲಿ ಈ ವಿದ್ಯಾರ್ಥಿ ನಿಲಯಗಳು ಪ್ರಮುಖ ಪಾತ್ರ ವಹಿಸಿರುವುದು ಮಾತ್ರವಲ್ಲದೆ, ಶಾಹು ಅವರಿಗೆ ಸಮಕಾಲೀನ ತಲೆಮಾರನ್ನು

ರೂಪಿಸಿದ್ದು ಮಾತ್ರವಲ್ಲದೆ, ತದನಂತರ ಮೂರು ತಲೆಮಾರುಗಳನ್ನು ರೂಪಿಸಿದೆ. ಶಾಹು ಮಹಾರಾಜರು ವಿದ್ಯಾರ್ಥಿ ನಿಲಯಗಳಿಗೆ ಹಾಕಿದ ಬುನಾದಿಯ ಪರಿಣಾಮವಾಗಿ ಇಂದು ಪಶ್ಚಿಮ ಮಹಾರಾಷ್ಟ್ರದ ಸಮಕಾಲೀನ ಹಿಂದುಳಿದ ಸಮುದಾಯಗಳ ಪ್ರಗತಿಯನ್ನು ಕಾಣುತ್ತಿದ್ದೇವೆ. ಅಜ್ಞಾನದ ಕತ್ತಲಿನಿಂದ ಹಿಂದುಳಿದ ಜಾತಿಗಳನ್ನು ಮೇಲಕ್ಕೆತ್ತಲು ಬಳಸಿದ ಪರಿಣಾಮಕಾರಿ (ವಿಧಾನ)ಗಳಲ್ಲಿ ವಿದ್ಯಾರ್ಥಿ ನಿಲಯಗಳ ಆಂದೋಲನವೊಂದಾಗಿತ್ತು. ವಿದ್ಯಾರ್ಥಿ ನಿಲಯಗಳ ಸೌಲಭ್ಯ ಸಿಕ್ಕಿರುವುದರಿಂದ ೭೫ ವರ್ಷಗಳಿಂದಲೂ ಬಹುಜನ ಸಮಾಜದ ಸಾವಿರಾರು ವಿದ್ಯಾರ್ಥಿಗಳು ಸ್ವತಃ ಶಿಕ್ಷಣ ಪಡೆದಿದ್ದಾರೆ ಮತ್ತು ಈಗ ಜೀವನದಲ್ಲಿ ಮತ್ತು ಸಮಾಜದಲ್ಲಿ ಅಭಿವೃದ್ಧಿ ಹೊಂದಿದ್ದಾರೆ. ಈ ವಿದ್ಯಾರ್ಥಿ ನಿಲಯಗಳಿಲ್ಲದಿದ್ದಲ್ಲಿ ಈ ಜನಗಳ ಪುರುಷರು ಮತ್ತು ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುತ್ತಿದ್ದರು.

ಆಂದೋಲನದ ಮತ್ತೊಂದು ಫಲಿತಾಂಶವನ್ನು ನಾವು ನೋಡಬೇಕಾಗಿದೆ. ಈ ಆಂದೋಲನದಿಂದ ಸ್ಫೂರ್ತಿಗೊಂಡ ಹಲವು ಸಾಮಾಜಿಕ ಕಾರ್ಯಕರ್ತರು ಹಿಂದುಳಿದ ವರ್ಗಗಳಿಂದಾಗಿ ವಿದ್ಯಾರ್ಥಿ ನಿಲಯಗಳನ್ನು ಮಹಾರಾಷ್ಟ್ರದಲ್ಲಿ ಸ್ಥಾಪಿಸಿದರು. ಅವರಲ್ಲಿ ಪ್ರಮುಖರಾದವರು ಕರ್ಮವೀರ ಭಾವುರಾವ್ ಪಾಟೀಲರು ತಮ್ಮನ್ನೇ ಶಾಹು ಅವರ ಶಿಷ್ಯರೆಂದು ಕರೆದುಕೊಂಡಿರುವುದು ಅತ್ಯಂತ ಘನತೆಯ ನಿದರ್ಶನವಾಗಿದೆ. ಭಾವುರಾವ್ ಅವರು ಸ್ವತಃ ವಿದ್ಯಾರ್ಥಿ ನಿಲಯದ ಆಂದೋಲನದ ಶಿಶು. ಅವರು ರಾಯಲ್ ಶಿಕ್ಷಣ ಸಂಸ್ಥೆಯನ್ನು ಕಟ್ಟಿ ಮಹಾರಾಷ್ಟ್ರದ ಹಳ್ಳಿ ಮತ್ತು ದೂರದ ಕೊಂಪೆಗಳಿಗೆ ಜ್ಞಾನದ ಅಮೃತವನ್ನು ಕೊಂಡೊಯ್ದದ್ದು ಮಾತ್ರವಲ್ಲದೆ ಅವರು ಶಾಲಾಕಾಲೇಜುಗಳ ಸಮೇತ ವಿದ್ಯಾರ್ಥಿನಿಲಯಗಳನ್ನು ಬಡಮಕ್ಕಳಿಗೆ ಸ್ಥಾಪಿಸಿದರು. ಕರ್ಮವೀರರು ತಮ್ಮ ಗುರುವಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ, ಸ್ವಾವಲಂಬಿ ಜೀವನದ ಮಂತ್ರ 'ಗಳಿಸಿ ಮತ್ತು ಕಲಿಯಿರಿ' ಎಂಬ ಘೋಷಣೆಯನ್ನು ಕೊಟ್ಟಿದ್ದಾರೆ. ಛತ್ರಪತಿ ಶಾಹುರವರ ವಿದ್ಯಾರ್ಥಿ ನಿಲಯದ ಆಂದೋಲನಕ್ಕೆ ನೇರವಾಗಿ ಅವರ ಕೆಲಸ ಕಳ್ಳುಬಳ್ಳಿಯ ನಂಟನ್ನು ಹೊಂದಿದೆ ಎಂಬುದನ್ನು ನಾವು ಗಮನಿಸಬೇಕು.

---

೬

# ಅಸ್ಪೃಶ್ಯರಿಗೆ ಮೋಕ್ಷ: ಶಿಕ್ಷಣ

ರಾಜರ್ಷಿ ಶಾಹು ಅವರನ್ನು ಕುರಿತು ಚರ್ಚಿಸುವಾಗ ಮಹರ್ಷಿ ವಿಠಲರಾಮ್‌ಜಿ ಶಿಂಧೆ ಅವರ ಮಹಾಬುದ್ಧಿಶಕ್ತಿ ರೂಪುಗೊಂಡು ನಿರಂತರವಾಗಿ ಅರಳಿದ ಬಗೆಯನ್ನು ನಾವು ಈ ಮೊದಲೇ ವಿವರಿಸಿದ್ದೇವೆ. ಅದೇ ಲೇಖನದಲ್ಲಿ ಅವರು ಬರೆಯುತ್ತಾರೆ: "ಭಾರತೀಯ ನಿರಾಶ್ರಿತ ಸಹಾಯಕರ ಮಂಡಳಿಯ (ಇಂಡಿಯನ್ ಡೆಸೋಲೇಟ್ ಹೆಲ್ಪರ್ಸ್ ಅಸೋಸಿಯೇಷನ್, ೧೯೦೬–೧೯೧೯) ಸಕ್ರಿಯ ವರ್ಷಗಳ ನಮ್ಮ ಸಭೆಗಳಿಂದ ಅದು ಸ್ಥಾಪನೆಗೊಂಡ ನಂತರ ಅಸ್ಪೃಶ್ಯರ ಬಗ್ಗೆಯಿದ್ದ ಅವರ ಸಹಾನುಭೂತಿ ರೂಪುಗೊಳ್ಳುತ್ತಿತ್ತು ಎಂದು ನಾನು ಸ್ಪಷ್ಟವಾಗಿ ಗುರುತಿಸುತ್ತೇನೆ. ತಮ್ಮ ಎಳೆಯ ವಯಸ್ಸಿನಲ್ಲಿ ಅಸ್ಪೃಶ್ಯರ ಬಗ್ಗೆ ಅವರಿಗಿದ್ದ ದ್ವೇಷ ಸಹಜ ಸ್ವಭಾವದ್ದಲ್ಲ. ಆದರೂ ಸಹ ದ್ವೇಷ ಮತ್ತು ಪ್ರೀತಿಗಳು ಮೂಡುವ ಎರಡು ಸ್ಥಿತಿಗಳು ಸ್ವರ್ಗ ಮತ್ತು ಭೂಮಿಗಳ ಅಂತರದಲ್ಲಿದ್ದವು. ಈ ದೂರವನ್ನು ನಿಧಾನವಾಗಿ ಪ್ರಯಾಣಿಸಿದರು."[1]

## ಪ್ರಾರಂಭದಲ್ಲಿ ಮಡಿವಂತಿಕೆ

ಶಾಹು ಅವರು ವಿದ್ಯಾರ್ಥಿಯಾಗಿದ್ದಾಗ ಅವರ ಗುರು ಫ್ರೆಜರ್ ಅವರು ಅವರಲ್ಲಿ ಭೌತಿಕ ಪಾಶ್ಚಿಮಾತ್ಯ ಸಂಸ್ಕೃತಿಯ ಮೌಲ್ಯಗಳನ್ನು ರಕ್ತಗತಗೊಳಿಸಿದರು. ಅವರು ಅವರಲ್ಲಿ ಹಿಂದು ಸಂಸ್ಕೃತಿಯನ್ನು ಬೋಧಿಸಲು ಸನ್ನದ್ಧರಾಗಿರಲಿಲ್ಲ. ಅವು ಅರಮನೆಯಲ್ಲಿನ ಸಂಪ್ರದಾಯವಾದಿ ಸನ್ನಿವೇಶಗಳಿಂದ ಮತ್ತು ಸಮಾಜದ ಮಡಿವಂತಿಕೆ ಪರಿಸ್ಥಿತಿಗಳಿಂದ ಕಳಂಕಿತಗೊಂಡಿದ್ದವು. ತತ್ಪರಿಣಾಮವಾಗಿ ಅವರ ಮನಸ್ಸು ಸಹ ಮಡಿವಂತಿಕೆಯಾಗಿ ರೂಪುಗೊಂಡಿದ್ದು ಆಶ್ಚರ್ಯವಲ್ಲ. ಅವರೇ ಸ್ವತಃ ಮನಃಪೂರ್ವಕವಾಗಿ ಬರೆಯುತ್ತಾರೆ: "ಅಸ್ಪೃಶ್ಯರು ಮುಟ್ಟದಿದ್ದರೂ ಅಂತಹದ್ದು ಸಂಭವಿಸಿದರೆ ಶುದ್ಧೀಕರಣ ಸ್ನಾನ ಮಾಡಬೇಕೆಂಬ ಮನಸ್ಥಿತಿ ಆ ಸಮುದಾಯದಲ್ಲಿತ್ತೆಂದು ಮಹಾರಾಜರೇ ಖುದ್ದು ಯೋಚಿಸುತ್ತಿದ್ದರೆಂದು ಹೇಳುತ್ತಾರೆ."[2] ಅಂಥ ಮಡಿವಂತಿಕೆಯ ಮೌಲ್ಯಗಳಿಂದ ಶಾಹು ಮಹಾರಾಜರು ಮುಂದೆ ಜಾತಿಯ ತಾರತಮ್ಯತೆ ಮತ್ತು ಅಸ್ಪೃಶ್ಯತೆಯ ವಿರುದ್ಧ ನಿಷ್ಠುರವಾಗಿ ಹೋರಾಡುತ್ತಾರೆ. ಈ ಬದಲಾವಣೆಯು ಇದ್ದಕ್ಕಿದ್ದ ಹಾಗೆ ಸಂಭವಿಸಲಿಲ್ಲ ಅಥವಾ ಒಂದು ಅಥವಾ ಎರಡು ವರ್ಷಗಳಲ್ಲಿ ಸಂಭವಿಸಲಿಲ್ಲ. ಇದು ಉಂಟಾಗಲು ಪಂಚಗಂಗಾ ನದಿಯಲ್ಲಿ ಸಾಕಷ್ಟು ನೀರು ಹರಿಯಬೇಕಾಯಿತು.

ಶಾಹು ಅವರು ಸ್ವತಃ ವೇದೋಕ್ತ ಸಂಘರ್ಷದಲ್ಲಿ ಜಾತಿಯ ಶ್ರೇಷ್ಠತೆಯ ಪ್ರತಿಪಾದಕರಾದರೂ ಅವಮಾನದ ಬೆಂಕಿಯಲ್ಲಿ ಬೆಂದು ನೋವನ್ನು ಅನುಭವಿಸಿದರು. ತನ್ನ ಸಂಸ್ಥಾನದಲ್ಲಿಯೇ ಗಣ್ಯ ವ್ಯಕ್ತಿಗಳಿಂದ ತಾನು ಶೂದ್ರವರ್ಣಕ್ಕೆ ಸೇರಿದವನೆಂದು ಅವಮಾನಕ್ಕೆ ಗುರಿಯಾದರು. ಈ ವರ್ಗ ಶಾಹು ಅವರು ಕ್ಷತ್ರಿಯ ವರ್ಣದವರೆಂದು ಒಪ್ಪಿಕೊಂಡರೂ ಅವರ ವಿರುದ್ಧ ವಿರೋಧಿ ಭಾವನೆಯು ನಿಷ್ಕರುಣೆಯ ಬ್ರಾಹ್ಮಣರಲ್ಲಿ

ಒಳಗೊಳಗೇ ಕುದಿಯುತ್ತಿತ್ತು. ಬಹುಬೇಗನೇ ಈ ಭಾವನೆಯು ಆಕ್ರಮಣಶೀಲ ಮನೋಭಾವನೆ ತಳೆಯಿತು. ೧೯೦೬ರಿಂದ ಮುಂದಕ್ಕೆ ಬ್ರಾಹ್ಮಣ ಹೋರಾಟಗಾರರು ಹೆಚ್ಚು ಆಕ್ರಮಣಶೀಲರು ಮತ್ತು ದ್ವೇಷಿಗಳಾದರು. ಚಾರಿತ್ರ್ಯವಧೆಯಿಂದ ಹಿಡಿದು ಅವರನ್ನು ದೈಹಿಕವಾಗಿ ಮುಗಿಸುವವರೆಗಿನ ಯಾವ ತಳಮಳವಿಲ್ಲದೆ ಎಲ್ಲಾ ಕಾನೂನುಬಾಹಿರ ಮತ್ತು ಹೇಯವಾದ ವಿಧಾನಗಳನ್ನು ಬಳಸಿದರು. ಈ ಅನಿಷ್ಟ ಕುತಂತ್ರಗಳ ಸಕಾರಾತ್ಮಕ ಪರಿಣಾಮ ಜಾತಿಯ ಶ್ರೇಷ್ಠತ್ವ ಮತ್ತು ಜಾತಿಯ ತಾರತಮ್ಯತೆಯ ವಿರುದ್ಧ ಶಾಹು ಅವರ ಹೋರಾಡುವ ಇಚ್ಛಾಶಕ್ತಿ ಗಟ್ಟಿಗೊಂಡದ್ದು. ಅವರ ನೀತಿ-ಧೋರಣೆಗಳು ನೈತಿಕ ಮತ್ತು ತತ್ವಬದ್ಧ ಬುನಾದಿಯನ್ನು ಹೊಂದಿವೆ. ಛತ್ರಪತಿ ಶಿವಾಜಿಯನ್ನು ಶೂದ್ರನೆಂದು ಕರೆಯುವ ಸಾಹಸವನ್ನು ತೋರಿದ ಜಾತಿವಾದಿಗಳು ಲಕ್ಷಾಂತರ ದಲಿತಜನರನ್ನು ಹೀನವಾಗಿ ಪರಿಗಣಿಸಿ ಪಶುಗಳಿಗಿಂತ ಹೀನ ಜೀವನ ನಡೆಸಿ ನೋವನ್ನು ಅನುಭವಿಸುತ್ತಿರುವ ಅವರ ನೋವನ್ನು ಅವರು ಅರ್ಥಮಾಡಿಕೊಂಡರು. ಬ್ರಾಹ್ಮಣರ ವಿರುದ್ಧ ಸೆಣಸುತ್ತಿರುವ ಹೋರಾಟದಲ್ಲಿ ಶೂದ್ರರಾದ ಹಿಂದುಳಿದ ವರ್ಗಗಳನ್ನು ಮಾನಸಿಕ ಮತ್ತು ಸಾಮಾಜಿಕ ಗುಲಾಮಿತನದಿಂದ ಮೊದಲು ವಿಮೋಚನೆಗೊಳಿಸಬೇಕೆಂಬುದು ಅವರಿಗೆ ಮನವರಿಕೆಯಾಯಿತು. ಈ ಮನವರಿಕೆಯನ್ನೇ ಮಹರ್ಷಿ ಶಿಂಧೆಯವರು ಶಾಹು ಅವರ ಹೃದಯದಲ್ಲಿ 'ಅಸ್ಪೃಶ್ಯರಿಗೆ ಮಿಡಿದ ಪ್ರೀತಿ' ಎಂದು ಕರೆದಿದ್ದಾರೆ. ಈ ಮಿಡಿತ(ತುಡಿತ)ವು ೨೦ನೇ ಶತಮಾನದ ಮೊದಲ ದಶಕದಲ್ಲಿ ನಿದ್ರಾವಸ್ಥೆಯಲ್ಲಿತ್ತು. ಅದು ಕ್ರಮೇಣ ಎರಡನೇ ದಶಕದಲ್ಲಿ ಮೇಲ್ಮಟ್ಟಕ್ಕೆ ಬಂತು ಮತ್ತು ಅದರಿಂದ ಹರಿದುಬಂದ ಅಮೃತವು ಅಸ್ಪೃಶ್ಯರ ಶತಮಾನಗಳ ಹಳೆಯ ಬಾಯಾರಿಕೆಯನ್ನು ತಣಿಸಿತು.

## ಶಿಕ್ಷಣದ ಪ್ರಸಾರಕ್ಕೆ ವಿಶೇಷ ಉಪಕ್ರಮಗಳು

ರಾಜರ್ಷಿ ಶಾಹು ಮಹಾರಾಜರು ತನ್ನ ಸಂಸ್ಥಾನದಲ್ಲಿ ಎಲ್ಲಾ ಹಿಂದುಳಿದ ಜಾತಿಗಳ ಏಳಿಗೆಗಾಗಿ ಶಿಕ್ಷಣವನ್ನು ಒಂದು ಸಾಧನವಾಗಿ ಬಳಸುವ ಧೋರಣೆಯನ್ನು ಅನುಸರಿಸಿದರು. ಅದರ ಪ್ರಕಾರ ಕೊಲ್ಹಾಪುರದಲ್ಲಿ ವಿವಿಧ ಹಿಂದುಳಿದ ಜಾತಿಗಳ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಯಿತು. ಶಾಹು ಮಹಾರಾಜರು ೧೯೦೮ಕ್ಕಿಂತ ಮುಂಚಿತವಾಗಿ ತಮ್ಮ ಸಹವರ್ತಿಗಳಾದ ಭಾಸ್ಕರರಾವ್ ಜಾಧವ್, ಮಹಾದೇವ ಧೋಂಗ್ರೆ, ಖಂಡೇರಾವ್ ಬಾಗಲ್ ಮತ್ತು ಶ್ರೀಪತ್‌ರಾವ್ ಶಿಂಧೆಯವರ ಮುಖಂಡತ್ವದಲ್ಲಿ ಅಸ್ಪೃಶ್ಯರಿಗೆ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಿದ್ದನ್ನು ಈಗಾಗಲೇ ವಿವರಿಸಲಾಗಿದೆ. ಈ ಉದ್ದೇಶವನ್ನು ಮತ್ತೆ ಮುಂದಕ್ಕೆ ಕೊಂಡೊಯ್ಯಲು 'ಅಸ್ಪೃಶ್ಯ ಜಾತಿಗಳ ಶಿಕ್ಷಣ ಪ್ರಸಾರದ ಸಂಘ'ವನ್ನು ರಚಿಸಲಾಯಿತು. ಈ ಸಂಸ್ಥೆಯು ಅಸ್ಪೃಶ್ಯರ ಶಾಲಾಮಟ್ಟದ ಬೋಧನೆಯ ಮಟ್ಟವನ್ನು ಸುಧಾರಿಸುವುದಕ್ಕಾಗಿ ವಿದ್ಯಾರ್ಥಿ ನಿಲಯಗಳಿಗೆ ವಿದ್ಯಾರ್ಥಿಗಳನ್ನು ಹುಡುಕಲು ತೀವ್ರವಾಗಿ ಶ್ರಮಿಸಿತು. ಆದರೆ ಅಸ್ಪೃಶ್ಯರಲ್ಲಿ ಶಿಕ್ಷಣದ ಬಗ್ಗೆ ಬಹಳ ಅಸಡ್ಡೆಯಿತ್ತು; ಅವರಿಗೇ ಮನಸ್ಸಿಲ್ಲದಿದ್ದರೆ ಹೇಗೆ ಶಿಕ್ಷಣ ನೀಡುವುದು? ಶಾಹು ಅವರು ಈ ಕಷ್ಟಗಳನ್ನು ಪರಿಹರಿಸಲು ಪ್ರಾಮಾಣಿಕವಾಗಿ ಪ್ರಯತ್ನಮಾಡಿದರು.

ಆ ದಿನಗಳಲ್ಲಿ ಸ್ಪೃಶ್ಯರಿಗೆ ಮತ್ತು 'ಅಸ್ಪೃಶ್ಯರಿಗೆ' ಪ್ರತ್ಯೇಕ ಶಾಲೆಗಳಿದ್ದವು. ಒಬ್ಬ ಮೇಲುಜಾತಿಯ ಹುಡುಗ ಕೆಳಜಾತಿಯ ಹುಡುಗನಿಗೆ ತನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಸ್ಥಳ ನೀಡದಿರುವುದು ಒಂದು ಊಹಿಸಲಾಗದ ತೀವ್ರವಾದ ಅಸ್ಪೃಶ್ಯತೆಯ ಪದ್ಧತಿಯಾಗಿತ್ತು. ಈ ಅನಿಷ್ಟ ಪದ್ಧತಿಯನ್ನು ಕಾನೂನಿನ ಮೂಲಕ ನಿರ್ಮೂಲನೆ ಮಾಡಲು ಪರಿಸ್ಥಿತಿಗಳು ಆಶಾದಾಯಕವಾಗಿರಲಿಲ್ಲ. ಅಂತಹ ವಾತಾವರಣವನ್ನು ನಿರ್ಮಿಸುವುದಕ್ಕೆ ಸಾಮಾಜಿಕ ಅರಿವು ಅಗತ್ಯವಾಗಿತ್ತು. ಸ್ವಲ್ಪ ಸಮಯದ ನಂತರ ಸನ್ನಿವೇಶಗಳು ಬದಲಾದಾಗ

ಶಾಹು ಅವರು ಸೂಕ್ತಕ್ರಮಗಳನ್ನು ಚೆನ್ನಾಗಿಯೇ ಕೈಗೊಂಡರು. ಆದರೆ ಸಮಕಾಲೀನ ಸಾಮಾಜಿಕ ಪರಿಸ್ಥಿತಿಗಳಲ್ಲಿ ಅಸ್ಪೃಶ್ಯರಲ್ಲಿಯೇ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸುವುದು ಮತ್ತು ಅವರ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸುವ ವಿಷಯ ಬಿಟ್ಟರೆ ಮತ್ತ್ಯಾವ ಉಪಾಯವೂ ಅವರಿಗೆ ಇರಲಿಲ್ಲ. ಅವರ ಪಟ್ಟಾಭಿಷೇಕದ ಸಮಯದಲ್ಲಿ (೧೮೯೪) ಸಂಸ್ಥಾನದಲ್ಲಿ ೧೬೮ ಸ್ಪೃಶ್ಯ ವಿದಾರ್ಥಿಗಳಿರುವ ಮತ್ತು ೫ ಅಸ್ಪೃಶ್ಯ ವಿದ್ಯಾರ್ಥಿಗಳಿರುವ ಶಾಲೆಗಳಿದ್ದವು. ೧೯೦೭-೦೮ರಲ್ಲಿ ಈ ಸಂಖ್ಯೆಯು ಕ್ರಮವಾಗಿ ೪೧೬ ಮತ್ತು ೧೬ಕ್ಕೇರಿತು. ಶಾಹು ಅವರ ನಿರಂತರ ಪ್ರಯತ್ನದ ಫಲವಾಗಿ ನಿಧಾನವಾಗಿ ಶಾಲೆಗಳ ಸಂಖ್ಯೆ ಹೆಚ್ಚಾದವು. ನಾಲ್ಕು ವರ್ಷಗಳ ಅವಧಿಯಲ್ಲಿ ಶಾಲೆಗಳ ಸಂಖ್ಯೆ ೨೭ ಆಯಿತು ಮತ್ತು ವಿದ್ಯಾರ್ಥಿಗಳ ಸಂಖ್ಯೆ ೬೩೬ ಕ್ಕೇರಿತು. ಮಹರ್, ಮಾಂಗ್, ಚಂಬಾರ್, ಢೋರ್ ಜಾತಿಗಳು ಮುಖ್ಯವಾದ ಅಸ್ಪೃಶ್ಯ ಜಾತಿಗಳಾಗಿದ್ದವು. ಅವರ ಒಟ್ಟು ಸಮಗ್ರ ಜನಸಂಖ್ಯೆ ಸಂಸ್ಥಾನದಲ್ಲಿ, ೨೦ನೇ ಶತಮಾನದ ಪ್ರಾರಂಭದಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚಿತ್ತು. ಅವರ ಜನಸಂಖ್ಯೆಯ ಅಂಕಿಅಂಶಗಳನ್ನು ಜನಸಂಖ್ಯೆಯ ಜೊತೆಗಿಟ್ಟು ನೋಡಿದರೆ ಶಿಕ್ಷಣದ ಪ್ರಮಾಣ ಬಹಳ ಕಡಿಮೆ. ಆದರೆ ಐತಿಹಾಸಿಕ ಸಾಮಾಜಿಕ ಪರಿಸ್ಥಿತಿಗಳಲ್ಲಿ ಈ ಜಾತಿಗಳು ಯಾವುದೇ ಜ್ಞಾನ ಗಳಿಸಲು ಬಿಡದೇ ಇರುವುದನ್ನು ಪರಿಗಣಿಸಿದಾಗ ಅವರು ತೋರಿದ ಶೈಕ್ಷಣಿಕ ಪ್ರಗತಿ ಪರಿಪೂರ್ಣವಾಗಿ ತುಂಬಾ ನಿಧಾನವಾದದ್ದು. ಅಸ್ಪೃಶ್ಯರ ಬಗ್ಗೆ ಶಾಹು ಅವರು ತಾಳಿದ ಉದಾರ ಶಿಕ್ಷಣಧೋರಣೆಯಿಂದ ಈ ಪ್ರಗತಿಯ ಯಶಸ್ಸು ಸಾಧ್ಯವಾಯಿತು. ೧೯೧೨-೧೩ನೇ ಸಾಲಿನ ಆಡಳಿತದ ವರದಿ ಹೇಳುತ್ತದೆ: ". . . . ಛತ್ರಪತಿ ಮಹಾರಾಜರು ದಮನಿತ ಜಾತಿಗಳಿಗೆ ಮತ್ತು ಸಮುದಾಯಗಳಿಗೆ ವಿಶೇಷ ಸೌಕರ್ಯಗಳನ್ನು ಒದಗಿಸಿದ ಪರಿಣಾಮವಾಗಿ ಹಾಗೂ ಅಸ್ಪೃಶ್ಯರಲ್ಲಿಯೇ ಶಿಕ್ಷಣದ ಪ್ರಸಾರಕ್ಕಾಗಿ ಸ್ಥಳಿಯ ಸಂಘಟನೆಗಳು ಕೈಗೊಂಡ ತೀವ್ರಪ್ರಯತ್ನಗಳ ಫಲವಾಗಿ ಸಾಕಷ್ಟು ಪ್ರಗತಿಯಾಯಿತು. ಚಿಕ್ಕ ಪ್ರಮಾಣವಾದರೂ ಮೇಲುಜಾತಿಗಳ ಕೆಲವರು ಧಾರ್ಮಿಕವಾಗಿ ಬಹಿಷ್ಕೃತಗೊಂಡ ಸಹೋದರರ ನೆರವಿಗೆ ಬಂದು ತಮ್ಮ ಸಹಕಾರದ ಹಸ್ತ, ಸಹಾನುಭೂತಿಯನ್ನು ಆ ನತದೃಷ್ಟರಿಗೆ ನೀಡಿದರು. ಕೊಲ್ಲಾಪುರ ಸರಕಾರದ ಬುದ್ಧಿವಂತಿಕೆಯ ಮತ್ತು ಉದಾರಿ ಧೋರಣೆಯ ಪರಿಣಾಮವಾಗಿ ಮೇಲುಜಾತಿಗಳ ಮನಸ್ಸಿನಲ್ಲಿರುವ ತಪ್ಪುಗ್ರಹಿಕೆಯ ತರ್ಕಜಾಲದ ವಿಸರ್ಜನೆಗೆ ಇದು ಸೂಚಕವಾಗಿದೆ."[3]

ಮೇಲುಜಾತಿಯ ಶಾಲೆಗಳ ಮತ್ತು ಅಸ್ಪೃಶ್ಯರ ಶಾಲೆಗಳ ಪಠ್ಯಕ್ರಮದ ಗುಣಮಟ್ಟ ಭಿನ್ನವಾಗಿತ್ತು. ನಾಲ್ಕನೇ ತರಗತಿ ಪಾಸುಮಾಡಿದ ಅಸ್ಪೃಶ್ಯ ವಿದ್ಯಾರ್ಥಿ ೫ನೇ ತರಗತಿ-ಪ್ರೌಢಶಾಲೆ-ಸೇರಲು ನಿಜವಾಗಿ ಸನ್ನದ್ಧ(ಅರ್ಹ)ನಾಗಿರಲಿಲ್ಲ, ಆದ್ದರಿಂದ ಅಸ್ಪೃಶ್ಯರ ಶಾಲೆಗಳ ಗುಣಮಟ್ಟ ಕಡಿಮೆಯಿತ್ತು. ಹಾಗಿರುವಾಗ, ಅಸ್ಪೃಶ್ಯ ವಿದ್ಯಾರ್ಥಿಗೆ ಪ್ರೌಢಶಾಲೆಗೆ ಪ್ರವೇಶ ಸಿಗುತ್ತಿರಲಿಲ್ಲ. ಈ ಅಡಚಣೆಯನ್ನು ಮೀರುವುದಕ್ಕಾಗಿ ಶಾಹು ಮಹಾರಾಜರು ನಾಲ್ಕನೇ ತರಗತಿ ಪಾಸು ಮಾಡಿದ ಅಸ್ಪೃಶ್ಯ ವಿದ್ಯಾರ್ಥಿಗಳ ಗುಣಮಟ್ಟವನ್ನು ಸುಧಾರಿಸಲು (ಏರಿಸಲು) ವಿಶೇಷ ಪಾಠದ ತರಗತಿಗಳನ್ನು ಪ್ರಾರಂಭಿಸಿದರು. ಜನರಿಗೆ ಸದಾ ನೆರವು ನೀಡಲು ಸಿದ್ಧರಾಗಿದ್ದ ಶ್ರೀಪತ್‌ರಾವ್ ಶಿಂಧೆ ಈ ಹೊಣೆಯನ್ನು ನಿಭಾಯಿಸಲು ಮುಂದೆ ಬಂದರು. ಭಾಸ್ಕರರಾವ್ ಜಾಧವ್ ಅವರು ಬರೆಯುತ್ತಾರೆ: ". . . ರಾಜರ್ಷಿ ಶಾಹು ಅವರ ಪ್ರೋತ್ಸಾಹದಿಂದ ಅಸ್ಪೃಶ್ಯರಲ್ಲಿ ಉನ್ನತ ಶಿಕ್ಷಣ ಹರಡುವ ಸಲುವಾಗಿ ಒಂದು ತಂಡವನ್ನು ಕಟ್ಟಿದರು. ಮಹರ್ ಅಧ್ಯಾಪಕರ ತಂಡ ಮತ್ತು ಚಂಬಾಲ್ ಅಧ್ಯಾಪಕರ ತಂಡಗಳು ಈಗಾಗಲೇ ಅಸ್ತಿತ್ವದಲ್ಲಿದ್ದವು. ಆದರೆ ಈ ಶಾಲೆಗಳ ವಿದ್ಯಾರ್ಥಿಗಳಲ್ಲಿ ಯಾರು ನಾಲ್ಕನೇ ತರಗತಿಯನ್ನೇ ಪಾಸು ಮಾಡಿರಲಿಲ್ಲ. ಅವರಿಗೆ ಇಂಗ್ಲೀಷು ಕಲಿಸುವುದು ತುಂಬಾ ಕಷ್ಟವಾಗಿತ್ತು.

ಅವರ ನಾಲ್ಕನೇ ತರಗತಿಯು ಒಂದು ಹಂತದ ಗುಣಮಟ್ಟವನ್ನು ಮುಟ್ಟದಿರುವುದರಿಂದ ಅವರು ಉನ್ನತ ಕಲಿಕೆಯನ್ನು ಗ್ರಹಿಸುವುದು ಸಾಧ್ಯವಾಗುತ್ತಿರಲಿಲ್ಲ. ಈ ಅಡಚಣೆಯನ್ನು ಮೀರಲು ಅವರಿಗೆ ವಿಶೇಷ ತರಗತಿ (ಕೋರ್ಸ್) ನಡೆಸಲು ನಿರ್ಧರಿಲಾಯಿತು. ಈ ಕೋರ್ಸ್‌ಗೆ ನಾವು ಪಡೆದ ಮೊದಲ ಅಧ್ಯಾಪಕರು ಬಹಳ ಕಾಳಜಿಯಿದ್ದವರು, ಕರ್ತವ್ಯನಿಷ್ಠರು ಮತ್ತು ಉತ್ಸಾಹಶೀಲರಾಗಿದ್ದರು. ಅವರು ತಮ್ಮ ಸಾಮಾಜಿಕ ಸೇವೆಯನ್ನು ಅಸ್ಪೃಶ್ಯರ ಶಿಕ್ಷಣದ ಉದ್ದೇಶಕ್ಕೆ ನೀಡಿದರು. ಈ ವ್ಯಕ್ತಿಯು ನಮ್ಮ ಶ್ರೀಪತ್‌ರಾವ್ ಶಿಂಧೆಯವರ ಉತ್ತಮ ಸ್ನೇಹಿತರಾಗಿದ್ದರು. ಅವರ ಕೈಯಲ್ಲಿ ತರಬೇತಿ ಹೊಂದಿದ ಮಕ್ಕಳು ನಂತರ ಇಂಗ್ಲೀಷಿನಲ್ಲಿ ಪ್ರವೀಣರಾದರು. ಮತ್ತು ಕೆಲವರು ತರಗತಿಯಲ್ಲಿ ಅತ್ಯುತ್ತಮರಾದರು. ಯಾವುದೇ ಶಿಕ್ಷಣದಲ್ಲಿ ಬುನಾದಿ ಬಲವಾಗಿರದಿದ್ದರೆ ಮೇಲುಕಟ್ಟಡವನ್ನು ಕಟ್ಟುವುದರಲ್ಲಿ ಪ್ರಯೋಜನವಿಲ್ಲ."[4]

## ಕೆಲವು ವಿಶಿಷ್ಟ ಆಜ್ಞೆಗಳು

ಛತ್ರಪತಿ ಶಾಹು ಅವರು ಈ ಅವಧಿಯಲ್ಲಿ 'ಅಸ್ಪೃಶ್ಯರ' ಶಿಕ್ಷಣಪ್ರಸಾರಕ್ಕೆ ಮಾಡಿದ ವಿಶೇಷ ಪ್ರಯತ್ನಗಳ ನಿದರ್ಶನಗಳು ಸಿಗುತ್ತವೆ. ೧೯೦೬ರ ಆಜ್ಞೆಗಳಲ್ಲಿ ಒಂದು ಆಜ್ಞೆಯು ಕೊಲ್ಹಾಪುರದಲ್ಲಿ ಮಹಾರರು, ಚಂಬಾರರು, ಮೊದಲಾದವರಿಗೆ ಒಂದು ರಾತ್ರಿ ಶಾಲೆಯಿತ್ತೆಂದು ಹೇಳುತ್ತದೆ. ೧೯೦೬ರ ನವೆಂಬರ್ ೨೮ರ ಆಜ್ಞೆಯಲ್ಲಿ ಶಾಹು ಅವರು ಅದನ್ನು ಶಾಶ್ವತ ಶಾಲೆಯನ್ನಾಗಿ ಪರಿವರ್ತಿಸಿದರು.[5] ೧೯೦೭ರ ಅಕ್ಟೋಬರ್ ೪ರ ಆಜ್ಞೆಯಲ್ಲಿ ಚಂಬಾರ್ ಮತ್ತು ಧೋರ್ ಜಾತಿಗಳ ಹೆಣ್ಣುಮಕ್ಕಳಿಗೆ ಒಂದು ಶಾಲೆಯನ್ನು ನೀಡುತ್ತಾರೆ. ಸಂಸ್ಥಾನದ ಆಯ-ವ್ಯಯ ಪತ್ರದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಖರ್ಚಿನಲ್ಲಿ ಆ ಶಾಲೆಗೆ ೯೬ ರೂ.ಗಳನ್ನು ವರ್ಷಕ್ಕೆ ವ್ಯವಸ್ಥೆಗೊಳಿಸಿದ್ದರು.[6] ೧೯೦೯ನೇ ಸಾಲಿನಲ್ಲಿ ಭಾಸ್ಕರರಾವ್ ಮತ್ತು ಅವರ ಸಹವರ್ತಿಗಳು ಸ್ಥಾಪಿಸಿದ ಅಸ್ಪೃಶ್ಯರ ವಿದ್ಯಾರ್ಥಿ ನಿಲಯಕ್ಕೆ ಭೂಮಿ ದೊರೆಯುವಂತೆ ಮಾಡಿದರು. ಇದರ ಜಾರಿಗಾಗಿ ಪ್ರಕಟಿಸಿದ ಆಜ್ಞೆಯಲ್ಲಿ ಮಹಾರಾಜರು ಹೇಳುತ್ತಾರೆ: "ಹಿಂದುಳಿದ ಜಾತಿಗಳಲ್ಲಿ ಅಸ್ಪೃಶ್ಯರಂತೆ ದುರಾದೃಷ್ಟವಂತ ಯಾವುದೇ ಜಾತಿಗಳಿಲ್ಲ ಮತ್ತು ಅವರ ಪರಿಸ್ಥಿತಿಗಳನ್ನು ಬದಲಾಯಿಸಲು ಶಿಕ್ಷಣದಂತಹ ಸಮರ್ಥವಾದ ವಿಧಾನ ಯಾವುದೂ ಇಲ್ಲ. ಈ ಜಾತಿಯ ಜನರು ಕಲಿಕೆಯಲ್ಲಿ ಸಾಕಷ್ಟು ಸಮರ್ಥರೆಂಬುದು ಕಳೆದ ಒಂದು ವರ್ಷದ ಅನುಭವದಲ್ಲಿ ರುಜುವಾತು ಆಗಿದೆ. ಆದರೂ ಕೂಡ ಭೌತಿಕ ಪರಿಸ್ಥಿತಿಗಳು ತುಂಬಾ ಹದಗೆಟ್ಟಿವೆ. ಅವರ ಒಂದು ವಿದ್ಯಾರ್ಥಿನಿಲಯವು ಅವರಿಗೆ ಸಾಕಷ್ಟು ಸಹಾಯ ಮಾಡುವುದು. 'ಅಸ್ಪೃಶ್ಯರ ಜಾತಿಗಳ ಶಿಕ್ಷಣ ಪ್ರಸಾರದ ಸಂಘ'ದ ಮುಖ್ಯಸ್ಥ ಭಾಸ್ಕರರಾವ್ ಜಾಧವ್ ಅವರು ದಿನಾಂಕ ೫-೩-೧೯೦೯ರಂದು ಕರವೀರದಲ್ಲಿ (ಕೊಲ್ಹಾಪುರ) ಚಂಬಾರ್ ಶಾಲೆಯ ಕಟ್ಟಡವನ್ನು ಅನುಗ್ರಹಿಸುವಂತೆ ಬೇಡಿ ಸಲ್ಲಿಸಲಾದ ಅರ್ಜಿಯಂತೆ ಮತ್ತು ಪೌಳಿಯ ಒಳಗಡೆಯಿರುವ ಭೂಮಿಯನ್ನು ಮಾನ್ಯರಾದ ಮಹಾರಾಜರು ಅನುಮೋದಿಸಿದ್ದಾರೆ. (೦೫-೦೩-೧೯೧೦)[7]

೧೯೧೧ರ ನವೆಂಬರ್ ೨೪ರಂದು ಅತಿ ಮುಖ್ಯವಾದ ಒಂದು ಆಜ್ಞೆಯನ್ನು ಹೊರಡಿಸಿದ್ದಾರೆ. ಈ ಆಜ್ಞೆಯ ಮೂಲಕ ಸಂಸ್ಥಾನದಲ್ಲಿ ಎಲ್ಲಾ ಅಸ್ಪೃಶ್ಯರಿಗೆ ಸಂಪೂರ್ಣವಾಗಿ ಶಿಕ್ಷಣವು ಉಚಿತ ಮತ್ತು ಕಡ್ಡಾಯಗೊಳಿಸಲಾಗಿದೆ.[8] ಇದರ ಜೊತೆಗೆ ಪ್ರತಿಭಾವಂತ ಅಸ್ಪೃಶ್ಯ ವಿದಾರ್ಥಿಗಳಿಗೆ ಕಾಲಕಾಲಕ್ಕೆ ವಿದ್ಯಾರ್ಥಿವೇತನಗಳನ್ನು ನೀಡಲಾಗುವುದು.[9] ಅಂತಹ ಒಂದು ಆಜ್ಞೆಯನ್ನು ೧೯೧೧ರ ಏಪ್ರಿಲ್ ೭ರಂದು ಅಸ್ಪೃಶ್ಯ ಸಮುದಾಯದ ದುಸ್ತರವಾದ ಪರಿಸ್ಥಿತಿಗಳನ್ನು ಪರಿಗಣಿಸಿ ಮತ್ತು ಅವರ ಕಲಿಕೆಯನ್ನು ಪ್ರೋತ್ಸಾಹಿಸಲು

ಪುಸ್ತಕಗಳು, ಸ್ಲೇಟುಗಳು ಮತ್ತು ಸೀಸದ ಕಡ್ಡಿಗಳನ್ನು ಅಸ್ಪೃಶ್ಯರ ಮಕ್ಕಳಿಗೆ ಉಚಿತವಾಗಿ ಹಂಚಲು ೨೫೦೦ ರೂ.ಗಳನ್ನು ನಿಗದಿಗೊಳಿಸಲಾಗಿದೆಯೆಂದು ಹೇಳಲಾಗಿದೆ.[10] ಅದೇ ತಿಂಗಳಲ್ಲಿ ಶಾಹು ಅವರು ಪ್ರಾರಂಭಿಸಿದ 'ತಲಾಠಿ' ಕೋರ್ಸ್‌ಗೆ ಸೇರಿದ ಅಸ್ಪೃಶ್ಯವಿದ್ಯಾರ್ಥಿಗಳಿಗೆ ತಿಂಗಳಿಗೆ ೭ರೂ ಅಂತೆ ವಿಶೇಷ ವಿದ್ಯಾರ್ಥಿವೇತನ ನೀಡಲಾಗುವುದೆಂದು ಘೋಷಿಸಲಾಗಿದೆ.[11]

## ಗ್ರಾಮದ ಸ್ಟೈಪೆಂಡರಿ ಲೆಕ್ಕಿಗ ಮತ್ತು ರಿಜಿಸ್ಟ್ರಾರ್

ಈ ಅವಧಿಯಲ್ಲಿ (೧೯೧೮–೧೯೧೯) ಶಾಹು ಅವರು ಸಂಸ್ಥಾನದಲ್ಲಿ ಅಸ್ಪೃಶ್ಯತೆಯನ್ನು ರದ್ದುಗೊಳಿಸಲು ಆಜ್ಞೆಗಳನ್ನು ನೀಡಲು ಪ್ರಾರಂಭಿಸಿದರು. ಶಿಕ್ಷಣಕ್ಷೇತ್ರದಲ್ಲಿ ಅವರ ನಿರ್ಧಾರದ ಪರಿಣಾಮಗಳು ಸ್ಪಷ್ಟವಾಗಿವೆ. ಸೆಪ್ಟಂಬರ್ ೨೮, ೧೯೧೯ರಂದು ಅಸ್ಪೃಶ್ಯರಿಗೆ ಪ್ರತ್ಯೇಕವಾಗಿದ್ದ ಶಾಲೆಗಳನ್ನು ಮುಚ್ಚುವ ಆಜ್ಞೆಯನ್ನು ಹೊರಡಿಸಿದರು. ಆ ಆಜ್ಞೆಯಲ್ಲಿ ಅವರು ಹೇಳುತ್ತಾರೆ: "ಕರವೀರದ ಪ್ರದೇಶದಲ್ಲಿ (ಜಹಗೀರು ಪ್ರದೇಶಗಳನ್ನು ಬಿಟ್ಟು) ಅಸ್ಪೃಶ್ಯರಿಗೆ ಪ್ರತ್ಯೇಕ ಶಾಲೆಗಳಿದ್ದವು. ಬರುವ ದಸರಾ ಹಬ್ಬದಿಂದ ಅವುಗಳನ್ನು ಮುಚ್ಚಬೇಕು ಮತ್ತು ಸರಕಾರಿ ಶಾಲೆಗಳಲ್ಲಿ ಸವರ್ಣಜಾತಿಯ ಹುಡುಗರೊಂದಿಗೆ ಅಸ್ಪೃಶ್ಯ ಹುಡುಗರನ್ನು ಸೇರಿಸಿಕೊಳ್ಳಬೇಕು. ಸರಕಾರಿ ಶಾಲೆಗಳ ಸ್ಪರ್ಶ–ನಿಷಿದ್ಧ (Touch-Taboo) ಎಂಬ ಆಚರಣೆಯನ್ನು ಇನ್ನು ಮೇಲೆ ಆಚರಿಸುವಂತಿಲ್ಲ, ಎಲ್ಲಾ ಜಾತಿಯ ಮತ್ತು ಧರ್ಮದ ಮಕ್ಕಳು ಒಟ್ಟಿಗೆ ಕುಳಿತುಕೊಳ್ಳಬೇಕು."[12]

ಈ ಆದೇಶದ ನಂತರ ಶಾಹು ಮಹಾರಾಜರು ಅಸ್ಪೃಶ್ಯ ಸಮುದಾಯದ ವಿದ್ಯಾರ್ಥಿಗಳಿಗೆ ಯಥೇಚ್ಛವಾದ ಆರ್ಥಿಕ ಸಹಾಯವನ್ನು ಒದಗಿಸಿಕೊಡುವುದನ್ನು ಮುಂದುವರಿಸಿದರು. ೧೯೨೦ರಲ್ಲಿ ದುರ್ಘಟನೆಯಲ್ಲಿ ಮಡಿದ ತನ್ನ ಕಿರಿಯ ಮಗ ರಾಜಕುಮಾರ ಶಿವಾಜಿಯ ನೆನಪಿನಲ್ಲಿ ಶಾಹುಮಹಾರಾಜರು ಅಸ್ಪೃಶ್ಯರ ಕಲಿಕೆಯನ್ನು ಪ್ರೋತ್ಸಾಹಿಸುವ ಸಲುವಾಗಿ ೧೦,೦೦೦ ರೂ.ಗಳ ಪ್ರಾಮಿಸರಿ ನೋಟುಗಳನ್ನು ಬಿಡುಗಡೆ ಮಾಡಿ ಅದರಿಂದ ಸಂಚಿತವಾಗುವ ಬಡ್ಡಿಯಲ್ಲಿ ಮಾಸಿಕ ೫ ರೂ.ಗಳ ಎಂಟು ವಿದ್ಯಾರ್ಥಿ ವೇತನಗಳನ್ನು ನೀಡಲು ಪ್ರಾರಂಭಿಸಿದರು. ಈ ಎಂಟು ವಿದ್ಯಾರ್ಥಿ ವೇತನಗಳಲ್ಲಿ ವಿಶೇಷವಾಗಿ ಮೂವರು ಅಸ್ಪೃಶ್ಯ ಹುಡುಗಿಯರಿಗಾಗಿ ತೆಗೆದಿಡಲಾಗಿತ್ತು ಎಂಬ ಸಂಗತಿಯನ್ನು ಪರಿಗಣಿಸಬೇಕು. ಒಂದು ವೇಳೆ ಅಂತಹ ಯೋಗ್ಯ ಹುಡುಗಿಯರು ಸಿಗದಿದ್ದರೆ ವಿದ್ಯಾರ್ಥಿ ವೇತನಗಳನ್ನು ಸಂಸ್ಥಾನದ ಹೊರಗಿನ ಯೋಗ್ಯ ಹುಡುಗಿಯರಿಗೆ ನೀಡಬೇಕೆಂದು ಮಹಾರಾಜರು ಆದೇಶದಲ್ಲಿ ತಿಳಿಸಿದ್ದರು.[14] ಅಸ್ಪೃಶ್ಯರ ಬಗೆಗಿದ್ದ ಅವರ ಕಾಳಜಿ ಯಾವುದೇ ಸೀಮೆಗೆ ಸೀಮಿತವಾಗಿರಲಿಲ್ಲ. ಸಂಸ್ಥಾನದ ಹೊರಗಿನ ಸ್ಥಳಗಳಾದ ನಾಸಿಕ, ನಾಗಪುರ ಮೊದಲಾದ ಸ್ಥಳಗಳ ಹಲವಾರು ಅಸ್ಪೃಶ್ಯರ ವಿದ್ಯಾರ್ಥಿ ನಿಲಯಗಳಿಗೆ ಅವರ ಉದಾರ ಕೊಡುಗೆಯ ನಿದರ್ಶನಗಳು ಸಾಕಷ್ಟಿವೆ.[15]

ಅಸ್ಪೃಶ್ಯರನ್ನು ಮೇಲುಜಾತಿಗಳ ಸಮಕ್ಕೆ ವಿದ್ಯಾಕ್ಷೇತ್ರದಲ್ಲಿ ತರುವುದಕ್ಕೆ ಶಾಹು ಮಹಾರಾಜರು ಹೇಗೆ ದಿಟ್ಟ ಮತ್ತು ಕ್ರಾಂತಿಕಾರಿ ಕ್ರಮಗಳನ್ನು ಕೈಗೊಂಡಿದ್ದರೆಂಬುದಕ್ಕೆ ಭಾಸ್ಕರರಾವ್ ಜಾಧವ್ ಅವರ ಲೇಖನದಿಂದ ಮಾಹಿತಿಯನ್ನು ಸಂಗ್ರಹಿಸಬಹುದು. ಅವರು ಬರೆಯುತ್ತಾರೆ: ". . . . . ಶಾಹು ಮಹಾರಾಜರು ಅಸ್ಪೃಶ್ಯರ ಮಕ್ಕಳಿಗೆ ಸೂಕ್ತವಾದ ಧಾರ್ಮಿಕ ಶಿಕ್ಷಣ ನೀಡುವುದಕ್ಕೆ ಯೋಜನಾಬದ್ಧವಾಗಿ ಚಿಂತಿಸಿದ್ದರು. ಈ ಉದ್ದೇಶ ಸಾಧನೆಗಾಗಿ ಆರ್ಯಸಮಾಜದ ಬೋಧಕರನ್ನು ಬಳಸಿಕೊಂಡಿದ್ದರು. ಅವರ ಆಚರಣೆಯ ಪ್ರಕಾರ, ಈ ಅಸ್ಪೃಶ್ಯ ಮಕ್ಕಳನ್ನು ಆರ್ಯಸಮಾಜದ ಸುಪರ್ದಿಗೆ ತೆಗೆದುಕೊಂದು ಉಪನಯನದ ವಿಧಿಯನ್ನು ಆಚರಿಸಿದರು

ಮತ್ತು ಮೊದಲ ಬಾರಿಗೆ ಅವರಿಗೆ ವೇದಗಳನ್ನು ಬೋಧಿಸಿದರು. ಈ ಕ್ರಮವು ಆ ಮಕ್ಕಳಲ್ಲಿ ಅಚ್ಚೊತ್ತಿದ್ದ ಕೀಳರಿಮೆಯ ಭಾವನೆಯನ್ನು ಅಳಿಸಿಹಾಕಲು ಸಹಕಾರಿಯಾಗಿತ್ತು ಮತ್ತು ಅವರಲ್ಲಿ ಹೊಸ ಆತ್ಮವಿಶ್ವಾಸವನ್ನು ಮತ್ತು ಸಮಾನತೆಯ ಪ್ರಜ್ಞೆಯನ್ನು ತುಂಬಲಾಯಿತು. ತತ್ಪರಿಣಾಮವಾಗಿ ಅವರು ಇತರೆ ಮಕ್ಕಳೊಂದಿಗೆ ತಾವು ಸಮಾನರೆಂದು ವರ್ತಿಸಿದರು ಮತ್ತು ಇತರರು ಅವರನ್ನು ತಮ್ಮ ಸಮಾನರೆಂದು ಪರಿಗಣಿಸಿದರು. ತತ್ಪರಿಣಮವಾಗಿ ಅಸ್ಪೃಶ್ಯತೆ ಪ್ರೌಢಶಾಲೆಗಳಲ್ಲಿ ನಶಿಸಿಹೋಯಿತು.[16]

ಭಾರತದ ಇತಿಹಾಸದಲ್ಲಿ ಶಾಹು ಮಹಾರಾಜರು ಅಸ್ಪೃಶ್ಯ ಹುಡುಗರಿಗೆ ಉಪನಯನ ಪದ್ಧತಿಯನ್ನು ಯೋಚಿಸಿದ, ವೇದಗಳ ಅಧ್ಯಯನಕ್ಕೆ ಅವರನ್ನು ಪರಿಚಯಿಸಿದ ಮತ್ತು ಅವರ ಯಥಾಕಥಿತ ಬ್ರಾಹ್ಮಣರ ಮಟ್ಟಕ್ಕೆ ಏರಿಸಿದ ಮೊಟ್ಟಮೊದಲ ರಾಜ ಅವರಾಗಿದ್ದರು.

---

## ೧೦

# ಅಸ್ಪೃಶ್ಯ ವಿಮೋಚನೆ: ಮ್ಯಾನಿಫೆಸ್ಟೋಗಳು

೧೯೧೮ರ ಮುಂದಕ್ಕೆ ಛತ್ರಪತಿ ಶಾಹು ಅವರ ಚಟುವಟಿಕೆಗಳು ಸತ್ಯಶೋಧಕ ಆಂದೋಲನ, ಬ್ರಾಹ್ಮಣೇತರರ ಪಕ್ಷದ ಆಂದೋಲನ, ಅಸ್ಪೃಶ್ಯರ ವಿಮೋಚನೆ, ಜಾತಿತಾರತಮ್ಯ ರದ್ಧತಿ ಮೊದಲಾದ ಕ್ಷೇತ್ರಗಳಲ್ಲಿ ರಭಸ ಪಡೆದುಕೊಂಡವೆಂದು ತೋರುತ್ತದೆ. ವಿಶೇಷವಾಗಿ ಅಸ್ಪೃಶ್ಯರ ವಿಮೋಚನೆಯ ಆಂದೋಲನದಲ್ಲಿ ಹಲವಾರು ಶತಮಾನಗಳಿಂದ ಘನೀಭೂತವಾಗಿದ್ದ ಜೀತಗಾರಿಕೆಗೊಳಗಾಗಿದ್ದ ಅಸ್ಪೃಶ್ಯ ಸಮುದಾಯಗಳನ್ನು ಮುಕ್ತಗೊಳಿಸಲು ನಿರಂತರವಾದ ಪ್ರಯತ್ನಗಳನ್ನು ಅವರು ಮುಂದುವರಿಸಿ ಒಂದಾದ ಮೇಲೊಂದು ಕ್ರಾಂತಿಕಾರಿ ಕ್ರಮಗಳನ್ನು ಕೈಗೊಂಡರು. ಅವರು ಹೊಂದಿದ್ದ 'ಅಸ್ಪೃಶ್ಯರ' ಬಗೆಗಿನ ಅನುಭೂತಿಯಲ್ಲದೆ, ತನ್ನ ಗುರಿಗಳನ್ನು ಸಾಧಿಸಲು ಅವರಲ್ಲಿ ಅದಮ್ಯವಾದ ಚೇತನವಿತ್ತು. ನಿಯತಿ (Destiny) ಎಸಗಿದ ಅವರ ಮೇಲಿನ ಕ್ರೂರ ಆಕ್ರಮಣವು ಅವರ ಮನಸ್ಥಿತಿಯನ್ನು ಹರಿತಗೊಳಿಸಿತು.

೧೯೧೮ರ ಜೂನ್ ೧೨ ಅವರ ಜೀವನದ ಅತಿ ದುರದೃಷ್ಟಕರ ದಿನವಾಗಿದೆ. ಆ ದಿನ ಅವರ ಕಿರಿಯ ಮಗ ರಾಜಕುಮಾರ ಶಿವಾಜಿ ಕಾಡುಕರಡಿಯನ್ನು ಬೇಟೆಯಾಡುತ್ತಿರುವಾಗ ಓಡುತ್ತಿದ್ದ ಕುದುರೆ ಯಿಂದ ಬಿದ್ದು ಪ್ರಾಣ ಬಿಟ್ಟನು. ಬುದ್ಧಿವಂತ ಮತ್ತು ಚೂಟಿಯಾದ ೨೦ನೇ ವಯಸ್ಸಿನ ರಾಜಕುಮಾರ ತಂದೆ ಮತ್ತು ತಾಯಿಯರನ್ನು ದುಃಖದಲ್ಲಿ ಮುಳುಗಿಸಿ ಅಗಲಿ ಹೋದನು. ರಾಜನ ಸೊಸೆ ಇಂದುಮತಿದೇವಿ ಕೇವಲ ೧೨ ವರ್ಷ ವಯಸ್ಸಿನವಳಾಗಿದ್ದಳು. ಮುಗ್ಧೆಯಾದ ಸೊಸೆಯ ಬಿಳಿ ಹಣೆಯು ಅವರ ದುಃಖವನ್ನು ಮತ್ತಷ್ಟು ಹೆಚ್ಚಿಸಿತು.

### ಇದು, ನನ್ನ ಶ್ರದ್ಧೆಯ ಕರ್ತವ್ಯ

ಕ್ರೂರವಿಧಿಯ ಹೊಡೆತವು ಶಾಹು ಅವರ ಜೀವನವನ್ನೇ ಬದಲಾಯಿಸಿತು. ಅವರು ರಾಜರ ಶ್ರೀಮಂತಿಕೆ ಮತ್ತು ಅರಮನೆಯ ಸುಖವೈಭವಗಳನ್ನು ತ್ಯಜಿಸಿ, ಒಬ್ಬ ನಿಸ್ಸಂಗಿಯಾಗಿ ಕೊಲ್ಹಾಪುರದಿಂದ ಬಹಳ ದೂರವಿಲ್ಲದ ಜ್ಯೋತಿಬಾ ಗುಡ್ಡದಡಿಯ ರಾಜಪುತವಾಡಿ ಕ್ಯಾಂಪಿನಲ್ಲಿ ಸನ್ಯಾಸಿ ಜೀವನ ನಡೆಸತೊಡಗಿದರು. ಅವರ ಭೌತಿಕ ಜೀವನದಲ್ಲಿ ಎಲ್ಲಾ ಆಸಕ್ತಿಗಳನ್ನು ಕಳೆದುಕೊಂಡು ಸನ್ಯಾಸಿಯಾಗಿಬಿಟ್ಟರು. ಅವರನ್ನು 'ನಾನು ಇತರರ ಕಲ್ಯಾಣಕ್ಕಾಗಿ ಬದುಕುತ್ತಿದ್ದೇನೆ ಎಂಬ ಭಾವನೆಯು ಬಿಗಿಯಾಗಿ ಹಿಡಿದು ಅಪ್ಪಿಕೊಂಡುಬಿಟ್ಟಿತು' ಮತ್ತು ತನ್ನ ಜೀವನದ ಉಳಿದ ದಿನಗಳನ್ನು ಹಿಂದುಳಿದ ಮತ್ತು ದಮನಿತರ ಏಳಿಗೆಗಾಗಿ ಬಳಸುವೆನೆಂದು ಮನಸ್ಸಿನಲ್ಲಿ ನಿರ್ಧರಿಸಿಬಿಟ್ಟರು. ೧೯೧೯ರ ಜೂನ್ ತಿಂಗಳಲ್ಲಿ ಬಾಂಬೆಯ ಗವರ್ನರ್‌ರಿಗೆ ಒಂದು ಪತ್ರವನ್ನು ಬರೆಯುತ್ತಾರೆ: "ನನ್ನ ಮಗನ ಮರಣಾನಂತರ ವಿಶೇಷವಾಗಿ ಮಹದಾಶೆಯು ನನ್ನ ಆವರಿಸಿಕೊಂಡಿದೆ. ಅದು ನನ್ನನ್ನು ಬಡವರ ಮತ್ತು ಅನಾಥರ ಏಳಿಗೆಗಾಗಿ ಪರಿಣಾಮಕಾರಿ

ಕ್ರಮಗಳನ್ನು ಕೂಡಲೇ ಕೈಗೊಳ್ಳಬೇಕೆಂದು ಪ್ರಚೋದಿಸುತ್ತಿದೆ. ನನ್ನ ಪುಟ್ಟ ಸಂಸ್ಥಾನದಲ್ಲಿ ಈ ಆಕಾಂಕ್ಷೆಯನ್ನು ನೆರವೇರಿಸಲು ಸಾಧ್ಯವಾದ ವಿಧಾನಗಳನ್ನು ಬಳಸಲು ಪ್ರಯತ್ನಿಸುತ್ತಿರುವೆನು. ಬಡವರಿಗೆ ಸಹಾಯ ಮಾಡಲು ನನ್ನ ಅಂತರಾತ್ಮ ನನಗೆ ಮಾರ್ಗದರ್ಶನ ನೀಡುತ್ತಿದೆ ಮತ್ತು ನನ್ನನ್ನು ಉತ್ಸಾಹಿಸುತ್ತಿದೆ. ನಾನು ಈ ಉದ್ದೇಶದಿಂದ ಅಂಶತಃ ಸಫಲನಾದರೆ ನನ್ನ ಜೀವನ ಸಾರ್ಥಕವೆಂದು ಭಾವಿಸುವೆನು. . . . ."

" . . . . . ಹಿಂದುಳಿದ ವರ್ಗಗಳನ್ನು ಬಡತನ ಮತ್ತು ನೋವುಗಳ ಕೊಚ್ಚೆಯಿಂದ ಹೊರತೆಗೆಯುವುದೇ ನನ್ನ ನಮ್ರ ಕರ್ತವ್ಯವಾಗಿದೆ. ಇಡೀ ಹಿಂದುಳಿದ ವರ್ಗಗಳ ನನ್ನ ಸೇವೆಯೇ ಮಾನವತೆಯ ಸೇವೆಯೆಂದು ನಾನು ನಂಬಿರುವೆ. ಅದೇ ನನ್ನ ಕರ್ತವ್ಯ. . . ."[1]

## ಹಾಜರಿ ಮತ್ತು ಬಲವಂತದ ದುಡಿಮೆಗಳ ಮುಕ್ತಾಯ

ಶಾಹು ಮಹಾರಾಜರು ಹಿಂದುಳಿದ ಮತ್ತು ದಮನಿತರ ಸೇವೆಯೇ ನಿಜವಾದ ಮಾನವೀಯತೆಯ ಸೇವೆ ಎಂಬ ಒಂದು ಉದಾತ್ತವಾದ ಮಾನವೀಯತೆಯ ದೃಷ್ಟಿಕೋನವುಳ್ಳವರಾಗಿದ್ದರು. ಅವರು ಅಂದಿನಿಂದ ಈ ನಂಬಿಕೆಯಿಂದಲೇ ಅಸ್ಪೃಶ್ಯರ ವಿಮೋಚನೆಯ ಹೋರಾಟವನ್ನು ನಡೆಸುತ್ತಿದ್ದರು. ಅಸ್ಪೃಶ್ಯರ ವಿಮೋಚನೆಯ ಮೊದಲ ಆಜ್ಞೆಯನ್ನು ಜುಲೈ ೨೭, ೧೯೧೮ರಂದು ಹೊರಡಿಸಿದರು ಮತ್ತು ಆಗಸ್ಟ್ ೩, ೧೯೧೮ರಂದು ಕೊಲ್ಲಾಪುರದ ರಾಜ್ಯಪತ್ರದಲ್ಲಿ ಪ್ರಕಟಿಸಿದರು. ಆ ಆಜ್ಞೆಯು ಅಸ್ಪೃಶ್ಯರ ಮೇಲೆ ಬಲಾತ್ಕಾರವಾಗಿ ಹೇರಿದ್ದ ಕಡ್ಡಾಯ 'ಹಾಜರಿ' ಪದ್ಧತಿಯನ್ನು ರದ್ದುಗೊಳಿಸಿತು. ಅದು ಹೇಳುತ್ತದೆ: "ನಮ್ಮ ಪ್ರದೇಶದಲ್ಲಿ ಅಪರಾಧಿ ಜಾತಿಗಳ ಜನರು ಪ್ರತಿ ದಿನ ಪೊಲೀಸ್ ಪಾಟೀಲರ ಕಛೇರಿಗೆ ಕಡ್ಡಾಯವಾಗಿ ಹಾಜರಾತಿ ಹಾಕಬೇಕಿತ್ತು. ಕೆಲವು ಜಾತಿಗಳಿಗೆ ಈ ಹಾಜರಾತಿಯಿಂದ ವಿನಾಯಿತಿ ನೀಡಲಾಗಿತ್ತು. ಆದರೆ ಕೆಲವು ಸ್ಥಳಗಳಲ್ಲಿ ಈ ಜಾತಿಗಳು ಕಡ್ಡಾಯವಾಗಿ ಹಾಜರಾಗುವಂತೆ ಬಲವಂತಗೊಳಿಸಲಾಗುತ್ತಿತ್ತು. ಈ ಪದ್ಧತಿಯು ಈ ಜಾತಿಗಳ ಜನರಿಗೆ ಸಾಕಷ್ಟು ತೊಂದರೆ ನೀಡುತ್ತಿತ್ತು ಮತ್ತು ಅವರು ಗೌರವಯುತವಾದ ಜೀವನ ನಡೆಸುವುದಕ್ಕೆ ಅಡ್ಡಿಯಾಗುತ್ತಿತ್ತು. ಈ ಅಡ್ಡಿ-ತೊಂದರೆಯನ್ನು ನಾಶಮಾಡಬೇಕಾಗಿತ್ತು. ಅಂತಹ ನಿವಾರಣೆಗಾಗಿ ನಾವು ನಾಲ್ಕು ಜಾತಿಗಳಾದ ಮಾಂಗ್, ಮಹರ್, ರಾಮೋಶಿ ಮತ್ತು ಬೇರದ್‌ಗಳನ್ನು ಕಡ್ಡಾಯ ಹಾಜರಾತಿಯಿಂದ ಮುಕ್ತಗೊಳಿಸಿದ್ದೇವೆ. ಆದರೆ ಈ ಜಾತಿಗಳಲ್ಲಿ ಯಾರು ಅಪರಾಧಗಳನ್ನು ಎಸಗಿ ಶಿಕ್ಷೆಗೆ ಗುರಿಯಾಗಿದ್ದಾರೆ, ಅಂತಹವರಿಗೆ ಈ ಆಜ್ಞೆ ಅನ್ವಯಿಸುವುದಿಲ್ಲ ಮತ್ತು ಈ ಕಡ್ಡಾಯ ಹಾಜರಾತಿ ಅವರಿಗೆ ಮುಂದುವರಿಯುವುದು. ಈ ಆಜ್ಞೆ ಈಗಿನಿಂದಲೇ ಜಾರಿಗೆ ಬರುತ್ತದೆ."[2]

ಶಾಹು ಮಹಾರಾಜರು ಸೆಪ್ಟಂಬರ್ ೨೯, ೧೯೧೮ರಂದು ಹೊರಡಿಸಿದ ಮತ್ತೊಂದು ಆಜ್ಞೆಯು 'ಗಟ್ಟಿಚೋರ್' ಎಂಬ ಅಪರಾಧಿ ಜಾತಿಯನ್ನು ಕಡ್ಡಾಯ ಹಾಜರಿ ಪದ್ಧತಿಯಿಂದ ವಿಮುಕ್ತಿಗೊಳಿಸಿತು. ಇದರ ಜೊತೆಗೆ, ಶಿಕ್ಷೆಗೊಳಗಾದ ವ್ಯಕ್ತಿ ತನ್ನ ಶಿಕ್ಷಿತ ಅವಧಿಯ ನಂತರ ಐದು ವರ್ಷಗಳಲ್ಲಿ ಸದ್ವರ್ತನೆ ತೋರಿಸಿದ್ದರೆ ಅವನನ್ನು ಬಿಡುಗಡೆಮಾಡಲು ಅವಕಾಶವನ್ನು ಮಾಡಿಕೊಟ್ಟಿದ್ದರು.[3]

ನಂತರ, ಮನ್‌ಗಾವ್ ಸಮ್ಮೇಳನದಲ್ಲಿ ಅವರು ಹಾಜರಿ ಪದ್ಧತಿಯಲ್ಲಿ ಅಪರಾಧಿ ಪಂಗಡ (Tribe)ದಲ್ಲಿ ಗುಮಾನಿಗೊಳಪಟ್ಟವರು ಹತ್ತಿರದ ಪೊಲೀಸ್ ಠಾಣೆ ಅಥವಾ ಸರಕಾರಿ ಕಛೇರಿಗಳಲ್ಲಿ ತಮ್ಮ ಹಾಜರಾತಿಯನ್ನು ನಮೂದಿಸಬೇಕಾಗಿತ್ತು. ಆದ್ದರಿಂದ ನಾನು ಈ ಪದ್ಧತಿಯನ್ನು ಕೊನೆಗೊಳಿಸಿದೆನೆಂದು ಚರ್ಚಿಸಿದರು. ಅವರು ಹೇಳುತ್ತಾರೆ: "ಈ ಪದ್ಧತಿಯ ಕಾರಣದಿಂದ ಈ ಬಡಜನರು ಹಳ್ಳಿಯ ಕೆಲಸಗಾರರಿಂದ ಮತ್ತು

ಅಧಿಕಾರಿಗಳಿಂದ ಸಾಕಷ್ಟು ಬಾಧೆಗಳನ್ನು ಅನುಭವಿಸಬೇಕಾಗಿತ್ತು. ಹಳ್ಳಿಗಳಲ್ಲಿ ದಿನಕ್ಕೆ ೧೨ ಆಣೆ ಕೂಲಿ ಕೊಡುತ್ತಿರುವಾಗ ಹೆದರಿಸಿ ಅವರಿಗೆ ಕೂಲಿ ಕೊಡದೆ ಬಿಟ್ಟಿಚಾಕರಿಯನ್ನು ಈ ಅಧಿಕಾರಿಗಳು ಮಾಡಿಸಿಕೊಳ್ಳುತ್ತಿದ್ದರು. ಹೆಚ್ಚೆಂದರೆ ಈ ಬಡವರಿಗೆ ಅಗ್ಗದ ತಿನಿಸುಗಳನ್ನು ಪರಿಹಾರರೂಪದಲ್ಲಿ ಕೊಡುತ್ತಿದ್ದರು. ಹಳೆಯ ಗುಲಾಮಿ ಪದ್ಧತಿಗೆ ಬದಲಾಗಿ ಈ ಇಪ್ಪತ್ತನೇ ಶತಮಾನದ ಹೊಸ ಗುಲಾಮಿ ಪದ್ಧತಿಯನ್ನು ಆಚರಿಸಲಾಗುತ್ತಿತ್ತು. ತುರ್ತುಕಾಲಗಳಲ್ಲಿ ಸಹ ಹಾಜರಿ ಪದ್ಧತಿಯಲ್ಲಿದ್ದ ಜನರು ತಮ್ಮ ಸಂಬಂಧಿಕರನ್ನು ಭೇಟಿಮಾಡಲು ಅವಕಾಶವಿರಲಿಲ್ಲ. ಅನೇಕ ಸಂದರ್ಭಗಳಲ್ಲಿ ನರಳುತ್ತಿದ್ದ ರೋಗಿಗಳು ತಮ್ಮ ಸಂಬಂಧಿಕರನ್ನು ಕೊನೆಯ ಸಲವೂ ಭೇಟಿಯಾಗದೆ ಸತ್ತು ಹೋಗುತ್ತಿದ್ದರು. ರೋಗದಿಂದ ನರಳುತ್ತಿದ್ದ ಮಕ್ಕಳಿಂದ ತಂದೆತಾಯಿಗಳನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋಗಿ ಕೆಲಸಕ್ಕೆ ಹಚ್ಚುತ್ತಿದ್ದರು. ಅವರ ಮಕ್ಕಳು ತಮ್ಮ ಅನುಪಸ್ಥಿತಿಯಲ್ಲಿ ನೋಡಿಕೊಳ್ಳುವವರು ಇಲ್ಲದೇ ಮಕ್ಕಳು ಸತ್ತಾಗ ತಂದೆತಾಯಿಗಳು ಸತ್ತ ಮಕ್ಕಳನ್ನು ನೋಡಲು ಅವರು ವಾಪಸ್ಸು ಬಂದಿದ್ದನ್ನು ನಾನು ಅನೇಕ ಸಲ ಖುದ್ದಾಗಿ ನೋಡಿದ್ದೇನೆ. ಇಂಥ ಕ್ರೌರ್ಯಕ್ಕಿಂತ ಮತ್ತೊಂದು ಏನಿದೆ?. . . . ಹಳ್ಳಿಯಲ್ಲಿ ಕಳ್ಳತನ ನಡೆದರೆ ಈ ಜನರ ಹಾಜರಿಯ ಜೀವನ ಬಹಳ ಶೋಚನೀಯವಾಗುತ್ತದೆ. ಸಮುದಾಯದ ಒಳ್ಳೆಯ ಮತ್ತು ಕೆಟ್ಟವರ ಜೀವನಕ್ಕೆ ಆತಂಕವಾಗುತ್ತದೆ ಮತ್ತು ಅವರನ್ನು ಕ್ರೌರ್ಯ ಮತ್ತು ಕಿರುಕುಳಕ್ಕೆ ಗುರಿಪಡಿಸಲಾಗುತ್ತದೆ. ಅಪರಾಧದ ದರವು ಹಾಜರಿಗೆ ಒಳಗಾದವರಿಗಿಂತ ಹಾಜರಿಗೆ ಒಳಗಾಗದವರಲ್ಲಿ ಹೆಚ್ಚಿಗಿರುತ್ತದೆಂದು ನನ್ನ ಅನುಭವದಿಂದ ನಾನು ಹೇಳುತ್ತೇನೆ. ಒಂದು ವೇಳೆ ಹಾಜರಿ-ರಹಿತ ಗುಂಪನ್ನು ಹಾಜರಿಗೆ ಬಲವಂತವಾಗಿ ಒಳಪಡಿಸಿದರೆ ಅವರು ನಾಚಿಕೆಹೀನರಾಗಿ ಅಪರಾಧ ಎಸಗಲು ತೊಡಗುತ್ತಾರೆ. ಈ ಪದ್ಧತಿಯಿಂದ ಇದು ಉಪಯೋಗವಾಗುತ್ತದೆ. ಅವರನ್ನು ಘನತೆ ಮತ್ತು ಗೌರವದಿಂದ ಪರಿಗಣಿಸದಿದ್ದರೆ ಅವರನ್ನು ಒಳ್ಳೆಯವರನ್ನಾಗಿ ಬದಲಾಯಿಸಲು ಸಾಧ್ಯವಿಲ್ಲ. ಯಾವುದೇ ಸಂದರ್ಭದಲ್ಲಿ 'ಹಾಜರಿ' ಕಡ್ಡಾಯ ಮಾಡಿದರೆ, ಅವಮಾನವು ನಿರಂತರವಾಗುತ್ತದೆ; ಏಕೆ ಪ್ರಾಮಾಣಿಕರಾಗಿರಬೇಕು? ಅವರ ಮನಸ್ಸುಗಳಲ್ಲಿ 'ಹಾಜರಿ'ಯ ಪರಿಣಾಮವಿತ್ತು. ಈ ಪದ್ಧತಿಯ ರದ್ಧತಿಯಿಂದ ಅಪರಾಧದ ದರ ಕುಗ್ಗಿದೆ. ಆದ್ದರಿಂದ ಪ್ರತಿಯೊಬ್ಬರೂ ಘನತೆಯಿಂದ ಬದುಕಬಯಸುತ್ತಾರೆ."[4]

'ವೇತ್‌ವರ್ಲ'* ಎಂಬ ಮತ್ತೊಂದು ಅಮಾನವೀಯ ಪದ್ಧತಿಯನ್ನು ವಿಶೇಷವಾಗಿ ಮಹರ್ ಸಮುದಾಯದ ಅಸ್ಪೃಶ್ಯರ* ಮೇಲೆ ಹೇರಲಾಗಿತ್ತು. ಈ ಪದ್ಧತಿಯಡಿಯಲ್ಲಿ ಒಬ್ಬ ಮಹರ್‌ನು ಹಳ್ಳಿಯ ಪಾಟೀಲ-ಕುಲಕರ್ಣಿಯ ಅಥವಾ ಇತರೆ ಅಧಿಕಾರಿಗಳಿಗೆ ಸಣ್ಣಪುಟ್ಟ ಸೇವೆಗಳನ್ನು ಮಾಡಬೇಕಾಗಿತ್ತು. ವಾಸ್ತವಿಕವಾಗಿ ಸ್ವಾವಲಂಬಿ-ಹಳ್ಳಿಯ ಪದ್ಧತಿಯಲ್ಲಿ ಒಬ್ಬ ಮಹರನು ಮುಖ್ಯ ವತನದಾರನಾಗಿದ್ದನು. ಆದರೆ ಅವನ ವತನವು ಪಾಟೀಲ-ಕುಲಕರ್ಣಿ ಅಥವಾ ದೇಶಮುಖ, ದೇಶಪಾಂಡೆಯಂತಹ ಪ್ರತಿಷ್ಠಿತ ಹುದ್ದೆಯಾಗಿರಲಿಲ್ಲ. ಪ್ರತಿಯೊಬ್ಬ ವತನದಾರನು** (ವತನಹೊಂದಿದವನು) ಸರಕಾರ ಮತ್ತು ಗ್ರಾಮದ ಹುದ್ದೆ ಮತ್ತು** ಅದಕ್ಕಾಗಿ ಅವನು ಹಕ್ಕು ಮತ್ತು ಬಾಧ್ಯತೆಗಳನ್ನು ಹೊಂದಿದ್ದನು. ಮಹರನು ಕೂಡ ತನ್ನ ಹಕ್ಕು ಮತ್ತು ಬಾಧ್ಯತೆಗಳನ್ನು ತನ್ನ ಕೆಲಸಕ್ಕಾಗಿ ಹೊಂದಿದ್ದನು. ಆದರೆ ಅವೆಲ್ಲವೂ ಕ್ಷುಲ್ಲಕ ಸ್ವರೂಪದವು.

---

* ಸರಕಾರಕ್ಕೆ ಅಥವಾ ಸರಕಾರಿ ಅಧಿಕಾರಿಗೆ ವೇತನರಹಿತವಾಗಿ ದುಡಿಮೆಮಾಡುವುದು.

** ಎಸ್ಟೇಟು ಅಥವಾ ಅಧಿಕಾರವನ್ನು ವಂಶಪಾರಂಪರ್ಯವಾಗಿ ಹೊಂದಿರುವುದು.

ಹಳ್ಳಿಯ ಇತರೆ ಕೆಲಸಗಳೊಂದಿಗೆ ಮಹರನ ಕೆಲಸ ವೇತ್‌ವರ್ಲ (ಬಲಾತ್ಕಾರದ ಕೆಲಸ) ಪದ್ಧತಿಯನ್ನು ಒಳಗೊಂಡಿತ್ತು. ಅವರು ಈ ಪದ್ಧತಿಗೆ ಹಲವು ಶತಮಾನಗಳಿಂದ ವತನದೊಂದಿಗೆ ಹಲವು ತಲೆಮಾರುಗಳವರೆಗೆ ಬಂಧಿತರಾಗಿದ್ದರು. ಮಹರರು ತಮ್ಮ ವತನವನ್ನು ಮತ್ತು ಹಳ್ಳಿಯನ್ನು ಬಿಡುವ ಹಾಗಿರಲಿಲ್ಲ. ಹಾಗಿರುವಾಗ, ಅವರು ಬಲಾತ್ಕಾರದ ದುಡಿಮೆಯಿಂದ ಮುಕ್ತಿ ಪಡೆಯಲಿಲ್ಲ. ಒಂದು ರೀತಿಯಲ್ಲಿ ಈ ಮಹರ್ಕಿಯ ವತನವು ಸಾಮಾಜಿಕ ಗುಲಾಮಿತನವಾಗಿತ್ತು. ಈ ವತನವನ್ನು ರದ್ದುಗೊಳಿಸುವ ತನ್ನ ಪ್ರಸ್ತಾವನೆಯ ಬಗ್ಗೆ ಚರ್ಚಿಸಿದ ನಂತರ ಶಾಹು ಅವರು ಜೂನ್ ೨೬, ೧೯೧೮ರಲ್ಲಿ ಈ ಗುಲಾಮಿತನದಿಂದ ಈ ಸಮುದಾಯವನ್ನು ಮುಕ್ತಗೊಳಿಸುವ ಒಂದು ಸುಗ್ರೀವಾಜ್ಞೆಯನ್ನು ಪಾಸುಮಾಡುತ್ತಾ "ಬಲೂತೆ ಖಾತೆಯಿಂದ ಗ್ರಾಮ ಹಕ್ಕುದಾರರ ಖಾತೆಗೆ ಮಹರ್ ಸಮುದಾಯದ ಆದಾಯವನ್ನು ವರ್ಗಾಯಿಸಲಾಗಿದೆ" ಎಂದು ಲಭ್ಯ ದಾಖಲೆಗಳಿಂದ ತಿಳಿದುಬರುತ್ತದೆ.[5] ಈ ಸುಗ್ರೀವಾಜ್ಞೆಯ ಪ್ರಕಾರ ಮಹರರ ವತನದ ಭೂಮಿಗಳು ರೈತವಾರಿ ಭೂಮಿಗಳಾಗುತ್ತವೆ.*** ಸಾಮಾನ್ಯ ಜನರು ತನ್ನ ಭೂ-ಕಂದಾಯ ಕಟ್ಟುವಂತೆಯೇ ಮಹರರು ಕೂಡ ತಮ್ಮ ಭೂ-ಕಂದಾಯ ಕಟ್ಟಬಹುದು. ಆದರೆ ವತನ ಭೂ ಪದ್ಧತಿಯ ರದ್ಧತಿಯಿಂದ ಬಲತ್ಕಾರದ ದುಡಿಮೆ ಪದ್ಧತಿಯು ರದ್ದುಗೊಂಡಂತೆಯೆ.

ಈ ಸುಗ್ರೀವಾಜ್ಞೆಯನ್ನು ಜಾರಿಗೆ ತಂದಂತೆ ಕಾಣಲಿಲ್ಲ. ಶಾಹು ಮಹಾರಾಜರು ಈ ಗುರಿಯ ಕಡೆಗೆ ಮಹರರನ್ನು ಬರುವಂತೆ ಕಡ್ಡಾಯಗೊಳಿಸಲಿಲ್ಲ. ಬದಲಿಗೆ ಅವರು ಸ್ವತಃ ಸುಧಾರಣೆಗೊಂಡು ವತನ ಭೂಮಿಗಳನ್ನು ಬಿಟ್ಟುಕೊಡುವರೆಂದು ನಿರೀಕ್ಷಿಸಿದ್ದರು. ದಿನಾಂಕ ೧ ಆಗಸ್ಟ್ ೧೯೧೮ರಂದು ಹೊರಡಿಸಿದ ಆಜ್ಞೆಯಲ್ಲಿ ಶಾಹು ಮಹಾರಾಜರು ಹೇಳುತ್ತಾರೆ: "...... ಮಹರರು ತಮ್ಮ ವತನ್ ಭೂಮಿಗಳನ್ನು ರೈತವಾರಿ ಭೂಮಿಗಳನ್ನಾಗಿ ಸೇರಿಸಲು ಅರ್ಜಿ ಸಲ್ಲಿಸಿದರೆ ಅವರು ಅರ್ಜಿ ಸಲ್ಲಿಸಿದ ದಿನಾಂಕದಿಂದ ವೇತವರ್ಲದಡಿಯಲ್ಲಿ ಕೆಲಸಮಾಡಬೇಕಾಗಿಲ್ಲ. ಯಾವ ಅಧಿಕಾರಿಯೇ ಆಗಲಿ ವೇತ್‌ವರ್ಲದಡಿಯಲ್ಲಿ ಈ ಜನರು ಕೆಲಸಮಾಡುವಂತೆ ಬಲಪ್ರಯೋಗ ಮಾಡಿದರೆ ಆ ಅಧಿಕಾರಿಗೆ ಸೂಕ್ತ ನಿವೃತ್ತಿ ವೇತನ ಕೊಡದೆ ಅಧಿಕಾರದಿಂದ ವಜಾಮಾಡಲಾಗುವುದು. ಅಂತಹ ವ್ಯಕ್ತಿ ವತನದಾರನಾಗಿದ್ದರೆ, ಅವನನ್ನು ವತನದಿಂದ ಕಿತ್ತುಹಾಕಲಾಗುವುದು ಮತ್ತು ಇದನ್ನು ಗ್ರಾಮದ ಕೆಲಸಗಾರರಿಗೆ ಸೂಕ್ತವಾಗಿ ತಿಳಿಸಲಾಗುವುದು. ಎಲ್ಲಾ ಅಗತ್ಯಗಳನ್ನು ಕ್ರಮಬದ್ಧವಾಗಿ ಮಾಡಲಾಗುವುದು".[6] ಮೊದಲಿನ ಸುಗ್ರೀವಾಜ್ಞೆಯಂತೆ ಸಂಸ್ಥಾನದ ಮಹರರ ವತನಗಳನ್ನು ಒಟ್ಟಾಗಿ ರದ್ದುಗೊಳಿಸಿರಲಿಲ್ಲವೆಂಬುದು ಈ ಆಜ್ಞೆಯಿಂದ ಸ್ಪಷ್ಟವಾಗುತ್ತದೆ.

ನಂತರ ಮನ್‌ಗಾವ್ ಸಮ್ಮೇಳನದಲ್ಲಿ ಅವರು ಮಹರ್ ವತನಗಳ ಬಗೆಗಿನ ತಮ್ಮ ಅಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಅವರು ಹೇಳುತ್ತಾರೆ: "....... ಈ ಜನರು ವತನಗಳ ಹಿಂದೆ ಇದ್ದುದರಿಂದ ನಾನು ವೇತ್‌ವರ್ಲವನ್ನು ತಡೆಯಲಾಗಲಿಲ್ಲ. ಆ ಸಮಯದಲ್ಲಿ ವತನ ಎಷ್ಟಿತ್ತು. ಭೂಮಿಯ ಎರಡು ಚಿಕ್ಕ ಘಟಕಗಳು (ಆರೆಗಳು) ಅಥವಾ ಒಂದು ಬುಟ್ಟಿಯ ದವಸ-ಧಾನ್ಯ. ಅದರಿಂದ ಉಣ್ಣಲು ಒಬ್ಬನಿಗೂ ಸಾಕಾಗುತ್ತಿರಲಿಲ್ಲ. ವತನದ ಬಗ್ಗೆ ಅವರಿಗೆ ಮೋಹವಿದ್ದದ್ದರಿಂದ ಅದರಿಂದ ಅವರಿಗೆ ಪ್ರತಿಷ್ಠೆ ಮತ್ತು ಸ್ಥಾನಮಾನಗಳು ಹಳ್ಳಿಯಲ್ಲಿ ಸಿಗುವುದೆಂದು ಅವರು ಭಾವಿಸಿದ್ದರು ಮತ್ತು ತಮ್ಮ ಜೀವನಕ್ಕೆ ಅವರು ಅಪರಾಧಗಳನ್ನು ಮಾಡುವುದಕ್ಕೆ ನಿರತರಾಗಬೇಕಾಗಿತ್ತು. ಆದ್ದರಿಂದ ಈ ಎಲ್ಲಾ ಮಹರ್ ಬಲೂತೆದಾರರನ್ನು

*** ಸರಕಾರಕ್ಕೆ ಒಬ್ಬ ಗೇಣಿದಾರನು ಕಟ್ಟುವ ಕಂದಾಯದ ಒಂದು ಭಾಗ.

ಮತ್ತು ವತನದಾರರನ್ನು ಈ ಕಿಮ್ಮತ್ತಿನ ವತನಗಳಿಗಾಗಿ ಕೊರಗಬಾರದೆಂದು ನಾನು ಕೇಳಿಕೊಳ್ಳುತ್ತೇನೆ. ಅವುಗಳನ್ನು ತೊರೆದುಬಿಡಿ. ಮಹರರು ಹಳ್ಳಿಯ ಮಹರ್ಕಿ ಭೂಮಿಯನ್ನು ೧೦ ಎಕರೆ ಭಾಗಗಳಾಗಿ ವಿಭಾಗಿಸಿ ಅದನ್ನು ಅವರು ಉಳುಮೆಮಾಡಬೇಕೆಂದು ನಾನು ಸೂಚಿಸುತ್ತೇನೆ. ನಿಮ್ಮಲ್ಲಿ ಹಿರಿಯರೊಬ್ಬರಿಗೆ ಉತ್ಪನ್ನಗಳನ್ನು ವಹಿಸಿ, ಅದನ್ನು ಪಾಟೀಲರು ಅಥವಾ ಕಮೀಷನ್ಡ್ ಶೀಲೆದಾರರು ಬಳಸುವಂತೆ ಉಪಯೋಗಿಸಿ. ಒಂದು ಹಳ್ಳಿಗೆ ಕೇವಲ ೮ ಮಹರ್ ಶೀಲೆದಾರರನ್ನು ಅಥವಾ ಕಮೀಷನ್ಡ್ ಶೀಲೆದಾರರನ್ನು ನೇಮಿಸಿ. ಅದು ಗುಲಾಮತನವನ್ನು ಕೊನೆಗೊಳಿಸುತ್ತದೆ ಮತ್ತು ನಾನು ಸಂತೋಷವಾಗಿ ಹೊಸದಳ್ಳಾಳಿ ಸಿಗುವಂತೆ ವ್ಯವಸ್ಥೆ ಮಾಡುವೆನು. ಇದನ್ನು ಮಾಡಿದರೆ ಬೇರೆ ಮಹರ್ ಜನರು ಹಳ್ಳಿಯಲ್ಲಿ ಅಥವಾ ಬೇರೆ ಕಡೆಯಲ್ಲಿ ವ್ಯವಹಾರವನ್ನು (ವ್ಯಾಪಾರ) ಮುಕ್ತವಾಗಿ ಮಾಡುವರು. ಈಗಿರುವ ಪದ್ಧತಿಯಲ್ಲಿ ನೀವು ಅನುಭವಿಸುತ್ತಿರುವ ಉಪವಾಸದ ಕಷ್ಟ ನಿವಾರಣೆಗೊಳ್ಳುವುದು. ಕರವೀರದ ಮಹರರು ನನ್ನ ಸಲಹೆಯನ್ನು ಒಪ್ಪಿಕೊಂಡಿದ್ದಾರೆ ಮತ್ತು ಉಳಿದವರು ಅನುಸರಿಸುವರು, ಇದು ಖಂಡಿತ. ನನ್ನ ಪ್ರೀತಿಯ ಸ್ನೇಹಿತ ಶ್ರೀಮಾನ್ ಅಂಬೇಡ್ಕರರು ಈ ಗುರಿಯನ್ನು ಸಾಧಿಸಲು ಸಹಕರಿಸುವರೆಂಬ ಭರವಸೆ ನನಗಿದೆ”.[7]

ಮನ್‌ಗಾವ್‌ನ ಸಮ್ಮೇಳನದ ಒಂದು ತಿಂಗಳಲ್ಲಿಯೇ ಶಾಹು ಅವರು ಅನ್ಯಾಯದ ವೇತ್‌ವರ್ಲ ಪದ್ಧತಿಯನ್ನು ಕಾನೂನುಬದ್ಧವಾಗಿ ರದ್ದುಗೊಳಿಸಿದರು. ಅದನ್ನು ಜಾರಿಗೊಳಿಸಲು ಪ್ರಕಟಿಸಿದ ಆಜ್ಞೆಯಲ್ಲಿ ಮಹಾರಾಜರು ಹೇಳುತ್ತಾರೆ: “ರಾಜರ ಕುಟುಂಬ ಮತ್ತು ಸಂಸ್ಥಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಬಿಟ್ಟು ಬೇರೆ ಯಾರು ಅಸ್ಪೃಶ್ಯರಾದ ಮಹರರು ಮತ್ತು ಮಾಂಗರು ಮೊದಲಾದವರಿಂದ ಬಲತ್ಕಾರದ ದುಡಿಮೆಗಳನ್ನು ಮಾಡಿಸುವಂತಿಲ್ಲ. ಹೀಗಿರುವಾಗ, ಮೊದಲೆ ಹೇಳಿದ ಕೆಲಸಗಳ ನೆರವೇರಿಕೆಯನ್ನು ಬಿಟ್ಟು ರಾಜಪ್ರತಿನಿಧಿ ಅಥವಾ ಆಡಳಿತಾಧಿಕಾರಿಯಿಂದ ಹಿಡಿದು ರಾವ್‌ಬಹದೂರ್ ದಿವಾನ್ ಸಾಹೇಬರಾಗಲಿ ಮೇಲೆ ಹೇಳಿದ ಜನರಿಂದ ಒತ್ತಾಯಪೂರ್ವಕವಾಗಿ ಕೆಲಸಮಾಡಿಸುವಂತಿಲ್ಲ. ಒಂದು ವೇಳೆ ಪಾಟೀಲನು ಮಹರ್‌ನನ್ನು ಬೇಗಾರ್ (ಬಿಟ್ಟು) ಕೆಲಸಕ್ಕೆ ನೇಮಿಸಿದರೆ ಅವನನ್ನು ವತನದಿಂದ ಬಿಡಿಸಲಾಗುವುದು. ಈ ಪದ್ಧತಿಯ ಕೆಳಗೆ ಯಾರಾದರು ಮಹರ್‌ನನ್ನು ದೋಅರ್–ನದಾದಂತಹ ಕೆಲಸಗಳಿಗೆ ಹಚ್ಚಿದರೆ ಅವರಿಗೆ ಕಠಿಣ ಶಿಕ್ಷೆ ವಿಧಿಸಲಾಗುವುದು”.[8]

ಇದೇ ಸಮಯದಲ್ಲಿ ಮನ್‌ಗಾವ್ ಸಮ್ಮೇಳನದಲ್ಲಿ (ಮೇ ೩, ೧೯೨೦) ಶಾಹು ಹೇಳಿದಂತೆ, ಮಹರ್ಕಿಯ ಎಲ್ಲಾ ಭೂಮಿಯನ್ನು ಅವರ ಸಮುದಾಯದ ಹಿರಿಯರಿಗೆ ೮ ರಿಂದ ೧೦ ಎಕರೆಗಳಷ್ಟು ಭೂಭಾಗಗಳನ್ನು ಹಂಚಲಾಯಿತು. ಅವರನ್ನು ಸರಕಾರಿ ಕೆಲಸಕ್ಕೆ ನೇಮಿಸಲಾಯಿತು ಮತ್ತು ನೇಮಕದ ‘ಸನದ’ನ್ನು ಹಂಚಲಾಯಿತು. ಲಭ್ಯವಿರುವ ಒಂದು ‘ಸನದು’ ಹೇಳುತ್ತದೆ: “ನೇಮಕ ಮಾಡಿದ ೧೬ ಜನರು ಸರಕಾರದ ಸೇವೆಯನ್ನು ಮಾಡಬೇಕಾಗಿತ್ತು. ಅವರೆಲ್ಲರೂ ಮಾನ್ಯ ಮಹಾರಾಜರ ಮಹಾರಾಣಿಯವರ ಮತ್ತು ರಾಜಕುಮಾರರ ಸೇವೆಯಲ್ಲಿರಬೇಕಾಗಿತ್ತು. ಅಗತ್ಯಬಿದ್ದರೆ, ಅವರೆಲ್ಲ ಶ್ರೀ ಮಹಾಲಕ್ಷ್ಮಿ ಕರವೀರ ನಿವಾಸಿನಿಯ** ಸೇವೆಯನ್ನು ಮಾಡಬೇಕಾಗಿತ್ತು. ಅವರು ಸರಕಾರದ ಅಂಚೆ ಮತ್ತು ಸಂದೇಶಗಳ ಸಾಗಣೆದಾರ (ವಾಹಕ)ರಾಗಿ ಸೇವೆ ಸಲ್ಲಿಸಬೇಕಾಗಿತ್ತು”.[9] ಶಾಹು ಅವರು ಮಹರರನ್ನು ಮಹಾರಾಜ,

---

** ಕೊಲ್ಲಾಪುರದ ಮುಖ್ಯದೇವತೆ

ಮಹಾರಾಣಿ ಮತ್ತು ರಾಜಕುಮಾರರ ಸೇವೆಗೆ ತೆಗೆದುಕೊಂಡಿದ್ದು ಈ ಸನದಿನ ಮುಖ್ಯ ಲಕ್ಷಣವಾಗಿತ್ತು. ಅಗತ್ಯ ಕಂಡುಬಂದಲ್ಲಿ ಮಹಾಲಕ್ಷ್ಮಿದೇವತೆಯ ಸೇವೆಯನ್ನು ಮಾಡಬೇಕಾಗಿತ್ತು.

## ಮಹರರ ವತನದ ಮುಟ್ಟುಗೋಲು

ಸಂಸ್ಥಾನದಲ್ಲಿರುವ ಎಲ್ಲಾ ಹಳ್ಳಿಗಳ ಎಲ್ಲಾ ಮಹರರನ್ನು ಸರಕಾರಿ ಕೆಲಸಕ್ಕೆ ಸೇರಿಸುವುದು ಅಸಾಧ್ಯವಾದದ್ದು ಎಂಬುದು ಸುಸ್ಪಷ್ಟ. ಇದರ ಜೊತೆಗೆ, ಯಾರು ಭೂಮಿಯನ್ನು ಕೊಂಡರೊ ಅವರು ಅತೃಪ್ತರಾಗಿದ್ದರು. ಎಲ್ಲಾ ಮಹರರ ಮಹರ್ ವತನವನ್ನು ಸಾಮೂಹಿಕವಾಗಿ ಮುಟ್ಟುಗೋಲು ಹಾಕಿಕೊಂಡು ಅವರ ಭೂಮಿಗಳನ್ನು ರೈತವಾರಿ ಭೂಮಿಗಳನ್ನಾಗಿ ಅವರ ಹೆಸರಿಗೆ ಪರಿವರ್ತಿಸಿ ಒಮ್ಮೆಗೆ ಅವರನ್ನು ವತನ್ ಬಾಧ್ಯತೆಯಿಂದ ಮುಕ್ತಗೊಳಿಸುವುದೇ ಪರಿಹಾರವಾಗುತ್ತದೆ. ಶಾಹು ಅವರು ತಕ್ಷಣವೇ ಈ ನಿರ್ಣಯವನ್ನು ಜಾರಿಗೆ ತಂದರು. ಪ್ರತಿಯೊಂದು ಹಳ್ಳಿಯಿಂದ ಮಹರರು ತುಂಬಿದ ಅರ್ಜಿಗಳನ್ನು ಅವರು ಪಡೆದರು ಮತ್ತು ಆ ಹಳ್ಳಿಯ ಮಹರ್ ವತನವನ್ನು ಕೂಡಲೇ ಮುಟ್ಟುಗೋಲು ಹಾಕಿಕೊಂಡರು (ಮೇ ೧೯೨೧).[10] ಈ ಅರ್ಜಿಯು ಗಂಗಾರಾಮ್ ಕಾಂಬ್ಳೆಯ ದಾಖಲೆಗಳಲ್ಲಿ ಸಿಕ್ಕಿತು. ಅದು ಹೇಳುತ್ತದೆ: "ಹಿಂದು ಸಮುದಾಯದ ಮತಾಚರಣೆಗಳಿಂದ ಮತ್ತು ವಾಡಿಕೆಗಳಿಂದ, ದುಷ್ಟ ಪದ್ಧತಿಗಳಿಂದ ಮತ್ತು ಆಚರಣೆಗಳಿಂದ ಹಾಗೂ ಬಂಧನಗಳಿಂದ ಬಹಿಷ್ಕೃತರಾಗಿ ಮತ್ತು ವಾಸಸ್ಥಳಗಳ ಹೊರಭಾಗಗಳಿಂದ ಅಸ್ಪೃಶ್ಯರು ಜೀವಿಸುವಂತೆ ಮಾಡಲಾಗಿದೆ. ನಾವು ಎಲ್ಲಾ ರೀತಿಯಿಂದಲೂ ವಂಚಿತರಾಗುವಂತೆ ಅದು ಮಾಡಿದೆ. ಇತರೆ ಎಲ್ಲಾ ಸಮುದಾಯಗಳು ನಾನಾ ರೀತಿಗಳಲ್ಲಿ ಜ್ಞಾನವನ್ನು ಪಡೆಯುತ್ತಿವೆ. ಅವರೆಲ್ಲರೂ ಈಗ ಪ್ರಗತಿಯ ಪಥದಲ್ಲಿದ್ದಾರೆ. ಆದರೆ ನಾವು ಯಾವುದೇ ಅಭಿವೃದ್ಧಿ ಮತ್ತು ಸಂತೋಷದಿಂದ ದೂರ ಉಳಿದಿದ್ದೇವೆ. ನಾವು ಮನುಷ್ಯರಾಗಿ ಉಳಿದಿಲ್ಲ. ನಾವು ತುಂಬಾ ಹೀನಸ್ಥಿತಿಗೆ ಇಳಿದುಬಿಟ್ಟಿದ್ದೇವೆ.

"ಮಾನ್ಯ ಮಹಾರಾಜ ಛತ್ರಪತಿಯವರು ಹಲವು ದಿಕ್ಕುಗಳಿಂದ ನಮ್ಮ ಕಲ್ಯಾಣ ಮತ್ತು ಏಳಿಗೆಗಾಗಿ (ಸುಧಾರಣೆಗಾಗಿ) ಪ್ರಯತ್ನಪಡುತ್ತಿದ್ದಾರೆ. ಅವರು ಹಲವಾರು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದ್ದಾರೆ. ಜ್ಞಾನದೇಗುಲಗಳ ಬಾಗಿಲುಗಳನ್ನು ತೆರೆದಿದ್ದಾರೆ, ಹಲವರಿಗೆ ಉದ್ಯೋಗ ಒದಗಿಸಿಕೊಟ್ಟಿದ್ದಾರೆ. ಕಾನೂನು ವೃತ್ತಿಯ ಪ್ರವೇಶಕ್ಕೆ ಅನುಕೂಲ ಕಲ್ಪಿಸಿಕೊಟ್ಟಿದ್ದಾರೆ. ಸ್ಪರ್ಶ ಮತ್ತು ಸಂಪರ್ಕಗಳ ನಿಷೇಧವನ್ನು ಪಕ್ಕಕ್ಕೆ ತಳ್ಳಿ ನಮ್ಮನ್ನು ತಮ್ಮ ಮಕ್ಕಳೆಂದು ಮಮತೆಯಿಂದ ಕಾಣುತ್ತಿದ್ದಾರೆ. ಈ ಎಲ್ಲ ಕೆಲಸಗಳಿಗಾಗಿ ನಮ್ಮ ಸಮುದಾಯವು ಅವರನ್ನು ದೇವರೆಂದು ಪೂಜಿಸುತ್ತದೆ, ನಮ್ಮ ತಲೆಮಾರುಗಳು ಅವರ ಔದಾರ್ಯಕ್ಕೆ ಚಿರಋಣಿಯಾಗಿದೆ."

"ಇಷ್ಟಾದರೂ ನಮ್ಮ ಸಮುದಾಯದ ಜನರನ್ನು ನೋಡಿದರೆ ನಮಗೆ ನಿರಾಶೆಯಗುತ್ತದೆ. ನಾವೇನು ಮಾಡಬೇಕೆಂಬುದೇ ನಮಗೆ ಅರ್ಥವಾಗುವುದಿಲ್ಲ. ಈ ಸುಧಾರಣೆಯಾಗಿರುವುದು ಸಾಕಾಗುವುದಿಲ್ಲ ಎಂದು ನಮಗೆ ಅನಿಸತೊಡಗಿದೆ."

"ಹಿಂದು ಸಮುದಾಯದಲ್ಲಿ ವತನಿಗೆ ಹೆಚ್ಚು ಮಮಕಾರವಿದೆ. ಆದರೆ ವತನಗಳು ಹಾಗೂ ನಮ್ಮ ವತನಗಳ ಸೇವೆಯ ಬಗ್ಗೆ ಹೆಮ್ಮೆಪಡುವಂಥದ್ದು ಏನು ಇಲ್ಲ. ಆದರೆ ಕುರುಡು ನಂಬಿಕೆಯಿಂದ ವತನು ಅತ್ಯಂತ ಪ್ರಿಯವಾದುದೆಂದು ನಾವು ಭಾವಿಸುತ್ತಿದ್ದೇವೆ. ಕ್ಷುಲ್ಲಕ ವತನದ ಉದ್ಯೋಗದಿಂದ ಮುಕ್ತಗೊಳಿಸಲು ಮಾನ್ಯ ಮಹಾರಾಜರು ಸುಗ್ರೀವಾಜ್ಞೆಯನ್ನು ಹೊರಡಿಸಿದ್ದಾರೆ. ೧೦ ಎಕರೆ ಭೂಮಿಗೆ ಒಬ್ಬ ಮಹರರನ್ನು

ಉದ್ಯೋಗಕ್ಕೆ ಇರಿಸಿಕೊಂಡು ಉದ್ಯೋಗದಿಂದ ಇತರರನ್ನು ಕಿತ್ತುಹಾಕಲು ಸರಕಾರ ನಿರ್ಧರಿಸಿದೆ. ಏನೇ ಆದರೂ ಈ ಸುಗ್ರೀವಾಜ್ಞೆಯ ಉದ್ದೇಶವನ್ನು ಈಡೇರಿಸಿಲ್ಲ. ಏಕೆಂದರೆ, ಇತರೆ ಮಹರರು ಹೊಂದಿರುವ ಭೂಮಿಯನ್ನು ಕಳೆದುಕೊಳ್ಳುವರು ಮತ್ತು ಅವರು ನಿರಾಶರಾಗಿ ಅತೃಪ್ತರಾಗುವರು.

ಎರಡನೆಯದಾಗಿ, ಕೆಲವೇ ಕೆಲವು ಮಹರರಲ್ಲಿ ವತನದ ಸೇವೆಯ ನೊಗ ಅವರ ಕತ್ತುಗಳಲ್ಲಿ ಹಾಗೆಯೇ ಮುಂದುವರಿಯುತ್ತದೆ. ಆಸೆಬುರುಕುತನದ ವತನದ ಸೇವೆ ನಮ್ಮ ಕತ್ತಿಗೆ ನೇತುಹಾಕಿ ಕೊಂಡಿರುವವರೆಗೆ ನಮ್ಮ ಪರಿಸ್ಥಿತಿಗಳು ಸುಧಾರಿಸುವುದಿಲ್ಲ. ಆದ್ದರಿಂದ ವತನ ಸೇವೆಯನ್ನೇ ರದ್ದುಗೊಳಿಸಬೇಕೆಂದು ನಾವು ಬಯಸುತ್ತೇವೆ."

"ಸರಕಾರಕ್ಕೆ ನಮ್ಮ ನಮ್ರ ಸಲಹೆ ಈ ಕೆಳಗಿನಂತಿದೆ: "ಈ ದಿನಾಂಕದವರೆಗೆ ಭೂ ಹಂಚಿಕೆಯ ವಿಧಾನ ಇನ್ನೂ ಮುಂದುವರಿಯುತ್ತಿದೆ. ದಯವಿಟ್ಟು ಒಡೆತನವನ್ನು ಗೊಂದಲಗೊಳಿಸಬೇಡಿ ಅಥವಾ ಬದಲಾಯಿಸಿ, ಸಂಖ್ಯೆ ೯ ಇನಾಮುಗಳ ಪ್ರರೂಪಗಳಿಂದ ಎಲ್ಲಾ ಮಹರ್ಕಿಯ ವತನುಗಳನ್ನು ಕಿತ್ತುಹಾಕಿ ಮತ್ತು ಸಂಖ್ಯೆ ೫ ರೈತವಾರಿ ಪ್ರರೂಪಗಳನ್ನು ವರ್ಗಾಯಿಸಿ. ಎರಡನೆಯದಾಗಿ, ಎಲ್ಲಾ ಮಹರರನ್ನು ವತನ ಸೇವೆಯಿಂದ ಮುಕ್ತಗೊಳಿಸಿ. ಸರಕಾರ ಅಥವಾ ಸಾರ್ವಜನಿಕರಿಗೆ ಸಂಬಂಧಿಸಿದಂತೆ ವತನ ಸೇವೆಯ ಯಾವುದೇ ಕಟ್ಟುಪಾಡುಗಳನ್ನು ಉಳಿಸಿಕೊಳ್ಳಿ, ನಾವು ಇತರೆ ವ್ಯವಹಾರಗಳಲ್ಲಿ ತೊಡಗಿಸಿಕೊಳ್ಳಲು ಸ್ವಾತಂತ್ರ್ಯ ಮತ್ತು ಸಮಯವನ್ನು ನಮಗೆ ನೀಡಬೇಕು. ಈ ವ್ಯವಸ್ಥೆಯಲ್ಲಿ ಯಾರು ಏನನ್ನೂ ಕಳೆದುಕೊಳ್ಳುವುದಿಲ್ಲ, ಯಾರು ಅಸಂತೋಷಪಡುವುದು ಇಲ್ಲ. ವತನದ ಸೇವೆಯು ಹಳ್ಳಿಯ ಬಲಾತ್ಕಾರದ ದುಡಿಮೆಗೆ ಸಮನಾದುದು. ಅದು ಹಳ್ಳಿಯಲ್ಲಿ ಸೌದೆ ಸೀಳುವುದು (ಹೊಡೆಯುವುದು), ಸತ್ತ ಪ್ರಾಣಿಗಳನ್ನು ಎತ್ತಿಹಾಕುವುದು ಮತ್ತು ಮಲಹೊರುವ-ಬಾಚುವ ಕೆಲಸಗಳಿಗೆ ಸಮನಾದುದು. ಈ ಕೆಲಸಗಳನ್ನು ನಮ್ಮ ಮೇಲೆ ವತನದ ಸೇವೆಯ ನೆಪದಲ್ಲಿ ಬಲತ್ಕಾರವಾಗಿ ಹೇರುತ್ತಿರುವವರೆಗೆ ನಾವು ಜಿಪುಣ (ಆಸೆಬುರುಕ)ರಾಗಿ ಉಳಿಯಬೇಕಾಗುತ್ತದೆ. ಒಮ್ಮೆ ಈ ಸೇವೆ ಹೊರಟುಹೋದರೆ ನಾವು ವೃತ್ತಿಯ ಸ್ವಾತಂತ್ರ್ಯವನ್ನು ಹೊಂದುವೆವು ಮತ್ತು ಜೀವನೋಪಾಯದ ಇತರೆ ಕೆಲಸಗಳನ್ನು ಕಂಡುಕೊಳ್ಳಲು ಸಮರ್ಥರಾಗುವೆವು ಮತ್ತು ನಾವು ಹೊತ್ತುಕೊಂಡಿರುವ ಕೀಳುತನ ಮತ್ತು ಅಸ್ಪೃಶ್ಯತೆಯ ಕಳಂಕವು ನಿಧಾನವಾಗಿ ಮಾಯವಾಗುವುದು.

"ಸರಕಾರಿ ಸೇವೆಯೆಂಬ ಪ್ರಶ್ನೆ ಉಳಿಯುವುದು ಈಗ. ಈ ಸಮಸ್ಯೆಗೆ ಪರಿಹಾರ ಸುಲಭವಾದುದು. ನಮ್ಮ ಭೂಮಿಗಳು ರೈತವಾರಿ ಭೂಮಿಗಳಾಗುವವು. ಭೂಕಂದಾಯದ ಸ್ವಲ್ಪ ಭಾಗವು ಸರಕಾರದಲ್ಲಿ ಸಂಚಯವಾಗುವುದು. ಈ ಆದಾಯದಿಂದ ಅಗತ್ಯವಿರುವ ಉದ್ಯೋಗಿಗಳನ್ನು ಸರಕಾರ ನೇಮಿಸುತ್ತದೆ. ಸಂಭಾವನೆಯಿಂದ ಆ ಕೆಲಸಗಳನ್ನು ಮಾಡಿಸಬಹುದು. ಹೀಗಿರುವಾಗ, ಮಹರ್ಕಿಯು ನಮ್ಮೆಲ್ಲಾ ವತನಗಳ ಇನಾಮುಗಳನ್ನು ಕಿತ್ತುಹಾಕಲು ಮತ್ತು ರೈತವಾರಿಯನ್ನಾಗಿ ಪರಿವರ್ತಿಸಲು ಮತ್ತು ಎಲ್ಲಾ ಮಹರರನ್ನು ವತನ ಸೇವೆಗಳಿಂದ ಮುಕ್ತಗೊಳಿಸಲು ನಾವು ಸರಕಾರವನ್ನು ಕೋರುವೆವು".[11]

ಈ ಭಾಗವು ಸಮಕಾಲೀನದ ಸಾಮಾಜಿಕ ಇತಿಹಾಸದ ಒಂದು ಮುಖ್ಯ ದಾಖಲೆಯಾಗಿದೆ. ಇದರ ಹುರುಳು (ವಸ್ತು) ಕೊಲ್ಹಾಪುರ ಸಂಸ್ಥಾನದ ಜಾಗೃತಗೊಂಡ ಮಹರ್ ಸಮುದಾಯದ ಹಂಬಲವಾಗಿದೆ. ಈ ರೀತಿಯಾಗಿ ಮುಟ್ಟುಗೋಲು ಹಾಕಿಕೊಂಡ ಪ್ರತಿಯೊಂದು ಹಳ್ಳಿಯ ಮಹರ್ ವತನದ ನಂತರ, ಶಾಹುರವರು ಮಹರರನ್ನು ಬಲತ್ಕಾರದ ದುಡಿಮೆಗೆ ಒತ್ತಯಪೂರ್ವಕವಾಗಿ ದೂಕುವ ಎಲ್ಲಾ ಗ್ರಾಮಗಳ ಮುಖ್ಯಸ್ಥರು ಮತ್ತು ಸರಕಾರಿ ಅಧಿಕಾರಿಗಳಿಗೆ ಹಾಗೂ ಅವರು ಒಂದು ವೇಳೆ ನಿರ್ಬಂಧಕ್ಕೆ ಒಳಗಾಗದಿದ್ದರೆ

ಘೋರ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂಬ ಎಚ್ಚರಿಕೆಯ ಆಜ್ಞೆಯನ್ನು ಪ್ರಕಟಿಸಿದರು (೧೫ ಜುಲೈ ೧೯೨೧).[12]

ಮಹರರ ಭೂಮಿಗಳನ್ನು ವಶಪಡಿಸಿಕೊಳ್ಳುವುದು ಸರಕಾರದ ಖಜಾನೆಗೆ ಪರಿಶ್ರಮದ ಕೆಲಸವೆಂದು ಸ್ಪಷ್ಟವಾಯಿತು. ಮಹರರು ಸರಕಾರಕ್ಕೆ ಮಾಡಬೇಕಾಗಿದ್ದ ಸೇವೆಗಳ ನಿರ್ಬಂಧವನ್ನು ಅದು ಮುಕ್ತಗೊಳಿಸಿದರೆ ತಮ್ಮ ಕೆಲಸಗಳನ್ನು ಮಾಡಲು ವೇತನಕೊಟ್ಟ ಉದ್ಯೋಗಿಗಳ ಅವಶ್ಯಕತೆಯುಂಟಾಗುವುದು. ಸರಕಾರಿ ಅಧಿಕಾರಿಗಳು ಈ ಅಪಾಯವನ್ನು ಶಾಹುರವರ ಗಮನಕ್ಕೆ ತಂದಾಗ ಅವರ ಸಲಹೆಯನ್ನು ಮೀರಿ ಅವರು ಹೀಗೆ ಹೇಳುತ್ತಾರೆ: "ಈ ಉದ್ದೇಶದ ಸಾಕಾರಕ್ಕೆ ನನ್ನ ಖಜಾನೆ ಬರಿದಾದರೂ ಪರವಾಗಿಲ್ಲ, ಆದರೆ ಮಾನವೀಯತೆಯಿಂದ ಮಾನವನನ್ನು ವಂಚಿತಗೊಳಿಸುವ ಈ ಆಚರಣೆಯನ್ನು ಮುಕ್ತಾಯಗೊಳಿಸಲು ನಾನು ಬಯಸುತ್ತೇನೆ".[13]

ಶಾಹು ಮಹಾರಾಜರು ವತನುಗಳನ್ನು ರದ್ದುಗೊಳಿಸಿದರು ಮತ್ತು ವತನ್-ಹಿಡುವಳಿಗಳನ್ನು ಮಹರರ ಸ್ವಾಧೀನಕ್ಕೆ ೧೯೧೮ನೇ ವರ್ಷದಲ್ಲಿಯೇ ವರ್ಗಾವಣೆ ಮಾಡಿದರೆಂದು ಶಾಹುರವರ ಹಲವು ಜೀವನಚರಿತ್ರೆಗಾರರು ಮಹರ್ ವತನ ಕುರಿತು ಹೇಳಿದ್ದಾರೆ.[14] ಆದರೂ ಕೂಡ ಈ ವಿಷಯದ ಬಗ್ಗೆ ಸಮುದಾಯ ಕ್ರಮಬದ್ಧವಾಗಿ ಅರಿವು ಮೂಡಿಸುತ್ತಾ ಶಾಹುರವರು ವಶಪಡಿಸಿಕೊಳ್ಳುವ ಕೆಲಸವನ್ನು ಪೂರೈಸಿದರೆಂಬ ಸಂಗತಿಯನ್ನು ಸಮಕಾಲೀನ ದಾಖಲೆಗಳ ಕರಾರುವಾಕ್ಕಿನ ಒಂದು ಅಧ್ಯಯನ ತಿಳಿಸುತ್ತದೆ. ಈ ಪ್ರಕ್ರಿಯೆ ೧೯೧೮ರಲ್ಲಿ ಪ್ರಾರಂಭವಾಯಿತು ಮತ್ತು ೧೯೨೧ರ ಮಧ್ಯಭಾಗದಲ್ಲಿ ಪೂರ್ಣಗೊಂಡಿತೆಂಬುದನ್ನು ನಿರ್ಣಯಿಸಬೇಕು. ಮತ್ತೊಂದು ಅಂಶವನ್ನು ಇಲ್ಲಿ ಗಮನಿಸಬೇಕು. ಮಹರರ ವತನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಈ ವಿಷಯದಲ್ಲಿ ಶಾಹುರವರು ಡಾ. ಬಾಬಾಸಾಹೇಬ ಅಂಬೇಡ್ಕರರೊಡನೆ ಸಮಾಲೋಚನೆ ನಡೆಸಿದ್ದರು. ಮಾತ್ರವಲ್ಲದೆ ಅವರು ಅನುಕೂಲಕರವಾಗಿ ಸಲಹೆ ನೀಡಿರುವುದಲ್ಲದೆ, ಅವರು ಯೋಜನೆಯನ್ನು ಜಾರಿಗೊಳಿಸಬೇಕೆಂದು ಒತ್ತಾಯಪಡಿಸಿದ್ದರು. ಅವರು ವತನುಗಳನ್ನು ರದ್ದುಗೊಳಿಸದ ಹೊರತು ಸಾಮಾಜಿಕ ಗುಲಾಮಿತನದ ಮಹರರ ಬಂಧನಗಳನ್ನು (ಬೇಡಿಗಳನ್ನು) ಕಿತ್ತುಹಾಕಲು ಸಾಧ್ಯವಿಲ್ಲವೆಂದು ಅವರು ಭಾವಿಸಿದ್ದರು. ನಂತರ ಬಾಬಾಸಾಹೇಬ ಅಂಬೇಡ್ಕರರು ಮಹರರ ವತನುಗಳನ್ನು ವಶಪಡಿಸಿಕೊಳ್ಳುವುದಕ್ಕೆ ಬೆಂಬಲ ನೀಡುವ ಸಲುವಾಗಿ ತಮ್ಮ ಅಭಿಪ್ರಾಯ-ನಿಲುವುಗಳನ್ನು ಮಂಡಿಸಿದರು. ಈ ವತನುಗಳನ್ನು ವಶಪಡಿಸಿಕೊಳ್ಳುವುದಕ್ಕೆ ಬ್ರಿಟಿಷ್ ಸರಕಾರವನ್ನು ಮನವೊಲಿಸಲು ಅವರು ೧೯೨೮ ಮತ್ತು ೧೯೪೦ರ ನಡುವೆ ಬಾಂಬೆಯ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಮೂರು ಬಾರಿ ಅವರು ಉದ್ದೇಶಪೂರ್ವಕವಾಗಿ ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನಗಳು ಫಲ ನೀಡಲಿಲ್ಲ. ಬಿ. ಜಿ. ಖೇರರ ಸರಕಾರ ಕೂಡ ಮುಟ್ಟುಗೋಲು ಹಾಕಿಕೊಳ್ಳುವುದನ್ನು ಜಾರಿಗೊಳಿಸಲಿಲ್ಲ. ಮೊರಾರ್ಜಿ ದೇಸಾಯಿ ಸರಕಾರ ಅಂತಹ ಕ್ರಮ ಕೈಗೊಳ್ಳುತ್ತದೆಯೆಂದು ನಿರೀಕ್ಷಿಸಿರಲಿಲ್ಲ. ಈ ಮಧ್ಯೆ, ಶಾಹು ಮಹಾರಾಜ ಬಾಬಾ ಸಾಹೇಬ ಅಂಬೇಡ್ಕರ್ ಅವರು ಹಾಕಿಕೊಟ್ಟ ಪರಂಪರೆಗಳ ನಿಷ್ಠಾವಂತ ಅನುಚರರಾದ ಯಶವಂತರಾವ್ ಛವಾಣರು ಮಹರರ ವತನಗಳನ್ನು ಪ್ರತ್ಯೇಕಗೊಳಿಸಿದರು ಮತ್ತು ಮಹರರನ್ನು ಸಾಮಾಜಿಕ ಬಂಧನಗಳಿಂದ ಮುಕ್ತಗೊಳಿಸಿದರು.[15]

## ಅಸ್ಪೃಶ್ಯತೆಯ ರದ್ದತಿ

ತನ್ನ ಸಂಸ್ಥಾನದಲ್ಲಿ ಇಡೀ ಮಾನವತೆಗೆ ಕಳಂಕಪ್ರಾಯವಾದ ಅಸ್ಪೃಶ್ಯತೆಯ ಅನಿಷ್ಟ ಸಂಪ್ರದಾಯದ ನಿವಾರಣೆಗೆ ಶಾಹುರವರು ಕೈಗೊಂಡ ಭಿನ್ನ-ಭಿನ್ನವಾದ ಕ್ರಮಗಳ ಕಡೆಗೆ ಈಗ ಗಮನ ಹರಿಸೋಣ. ಅಸ್ಪೃಶ್ಯತೆಯನ್ನು ಬುಡಸಹಿತ ತನ್ನ ಸಂಸ್ಥಾನದಲ್ಲಿ ಕಿತ್ತುಹಾಕುವ ಸಲುವಾಗಿ ಶಾಹುರವರು ಜನವರಿ ೧, ೧೯೧೯ರಲ್ಲಿ ಎರಡು ಘೋಷಣೆಗಳನ್ನು ಹೊರಡಿಸಿದರು. ಮೊದಲನೆಯ ಘೋಷಣೆ ಇಲಾಖೆಗಳಾದ ಕಂದಾಯ, ನ್ಯಾಯಕ್ಕೆ ಸಂಬಂಧಿಸಿದ್ದು. ಅದು ಹೇಳುತ್ತದೆ: "ಕೊಲ್ಹಾಪುರ ಸಂಸ್ಥಾನದಲ್ಲಿ ಕಂದಾಯ ನ್ಯಾಯಾಂಗ ಮತ್ತು ಇತರೆ ಇಲಾಖೆಗಳ ಅಧಿಕಾರಿಗಳು ಅಸ್ಪೃಶ್ಯ ನೌಕರರನ್ನು ಪ್ರೀತಿ ಮತ್ತು ಸಮಾನತೆಗಳಿಂದ ಕಾಣಬೇಕು, ಉಪಚರಿಸಬೇಕು. ಒಂದು ವೇಳೆ ಯಾವುದೇ ಅಧಿಕಾರಿ ಮೇಲೆ ಹೇಳಿದ ರೀತಿಯಲ್ಲಿ ಅಸ್ಪೃಶ್ಯ ಉದ್ಯೋಗಿಗಳನ್ನು ಸತ್ಕರಿಸದಿದ್ದರೆ, ಅವನು ಈ ಆಜ್ಞೆಯ ಸ್ವೀಕೃತಿಯನ್ನು ಪಡೆದ ಆರು ವಾರಗಳಲ್ಲಿ ಸೂಕ್ತ ತಿಳುವಳಿಕೆಯ ಪತ್ರವನ್ನು ನೀಡಿ ರಾಜೀನಾಮೆ ನೀಡಬೇಕು. ಅವನಿಗೆ ನಿವೃತ್ತಿ ವೇತನ ನೀಡಲಾಗುವುದಿಲ್ಲ. ನಮ್ಮ ಸಂಸ್ಥಾನದಲ್ಲಿ ಯಾವ ಒಬ್ಬ ವ್ಯಕ್ತಿಯನ್ನು ಪ್ರಾಣಿಯೆಂದು ಪರಿಗಣಿಸದೆ, ಪ್ರತಿಯೊಬ್ಬನನ್ನೂ ಒಬ್ಬ ಮನುಷ್ಯನೆಂದು ಪರಿಗಣಿಸಿ ಕಾಣಬೇಕೆಂಬುದು ನಮ್ಮ ಪವಿತ್ರ ಆಶಯ. ನಮ್ಮ ಅಧಿಕಾರಿಗಳು ಮಿಷನರಿಗಳ, ಆರ್ಯ ಸಮಾಜದವರ, ರೈಲ್ವೆ ಮತ್ತು (ಬ್ರಿಟಿಷ್) ಸರಕಾರದ ಅಧಿಕಾರಿಗಳನ್ನು ಈ ವಿಷಯದಲ್ಲಿ ಅನುಕರಿಸಬೇಕು".[16]

ಅದೇ ದಿನ ಸಂಸ್ಥಾನದ ಆರೋಗ್ಯ ಇಲಾಖೆ ಅದೇ ರೀತಿಯ ಒಂದು ಘೋಷಣೆಯನ್ನು ಅನುಮೋದಿಸಿತು. ಹದಿನಾರು ದಿನಗಳೊಳಗೇ ಈ ಘೋಷಣೆಯ ನಂತರ, ಶಿಕ್ಷಣ ಇಲಾಖೆಯಲ್ಲಿ ಅಸ್ಪೃಶ್ಯತೆಯನ್ನು ರದ್ದುಗೊಳಿಸುವ ಒಂದು ಘೋಷಣೆಯನ್ನು ಬಿಡುಗಡೆಮಾಡಲಾಯಿತು. ಏನೇ ಆದರೂ ಈ ಘೋಷಣೆಗಳ ಪರಿಣಾಮ (ಪ್ರಭಾವ) ಅತ್ಯಂತ ಶಕ್ತಿಯುತವಾದುದೆಂದು ಚಿಂತಿಸಿ ಅಧಿಕಾರಿಗಳು ಅವುಗಳನ್ನು ಜನ ಪತ್ರದಲ್ಲಿ ಪ್ರಕಟಿಸಲು ಧೈರ್ಯ ಮಾಡಲಿಲ್ಲ. ಈ ಬಗ್ಗೆ ಶಾಹು ಅವರಿಗೆ ಗೊತ್ತಾದಾಗ ಅವರು ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡರು ಮತ್ತು ರಾಜ್ಯಪತ್ರದಲ್ಲಿ ಈ ಘೋಷಣೆಗಳನ್ನು ಪ್ರಕಟಿಸುವಂತೆ ಒತ್ತಾಯಿಸಿದರು. ಈ ಘೋಷಣೆಗಳನ್ನು ಸವಿವರವಾಗಿ ಓದಲು ಯೋಗ್ಯವಾಗಿದೆ. ಅವುಗಳನ್ನು ಸವಿವರವಾಗಿ ಓದದ ಹೊರತು ಶಾಹುರವರ ಅಸ್ಪೃಶ್ಯತೆಯ ನಿವಾರಣೆಯ ಅಪೇಕ್ಷತೆಯ ತೀವ್ರತೆಯನ್ನು ಅರ್ಥಮಾಡಿಕೊಳ್ಳಲಾರಿರಿ. ಆರೋಗ್ಯ ಇಲಾಖೆಯ ಘೋಷಣೆ ಹೇಳುತ್ತದೆ: "ದತ್ತಿ ಆಸ್ಪತ್ರೆಗಳಲ್ಲಿ ಸ್ಪೃಶ್ಯ ಮತ್ತು ಅಸ್ಪೃಶ್ಯರಿಗೆ ಪ್ರತ್ಯೇಕ ಚಿಕಿತ್ಸೆ ನೀಡಲಾಗುತ್ತಿದೆ ಎಂಬುದು ಮತ್ತು ಅಸ್ಪೃಶ್ಯರನ್ನು ಆಸ್ಪತ್ರೆಯ ಒಳಕ್ಕೆ ಬಿಟ್ಟುಕೊಳ್ಳುತ್ತಿಲ್ಲ ಎಂಬ ಸಂಗತಿ ಮಾನ್ಯ ಮಹಾರಾಜರ ಗಮನಕ್ಕೆ ಬಂದಿದೆ. ಸರಕಾರಿ ಕಟ್ಟಡಗಳನ್ನು ಬೇರೆಯವರಿಗೆ ಆರೋಗ್ಯಧಾಮಗಳನ್ನು ಬಿಟ್ಟುಕೊಟ್ಟಂತೆ ಬಿಟ್ಟುಕೊಟ್ಟಿಲ್ಲ; ಅಸ್ಪೃಶ್ಯರನ್ನು ತಿರಸ್ಕಾರ ಭಾವನೆಯಿಂದ ಚಿಕಿತ್ಸೆ ನೀಡುವ ಹಕ್ಕು ಯಾರಿಗೂ ಇಲ್ಲ. ಮಿಗಿಲಾಗಿ ಅಸ್ಪೃಶ್ಯರನ್ನು ಬಹು ಎಚ್ಚರಿಕೆ ಮತ್ತು ಗೌರವದಿಂದ ಉಪಚರಿಸಬೇಕು. ದತ್ತಿ ಆಸ್ಪತ್ರೆಗಳಿರುವುದೇ ಬಡವರಿಗಾಗಿ ಮತ್ತು ಬಡವರಲ್ಲಿಯೇ ಅತಿಬಡವರಾದ ಅಸ್ಪೃಶ್ಯರನ್ನು ಸಮಾನವಾಗಿ ಉಪಚರಿಸಬೇಕು. ಸಂಸ್ಥಾನದ ವೈದ್ಯಾಧಿಕಾರಿಗಳು ಪಾಶ್ಚಿಮಾತ್ಯರ ನಿದರ್ಶನಗಳನ್ನು ವಿಶೇಷವಾಗಿ ಮೀರಜ್‌ನ ಅಮೇರಿಕನ್ ಮಿಷನ್ನನ್ನು ಅನುಸರಿಸಬೇಕೆಂದು ಮಾನ್ಯ ಮಹಾರಾಜರು ಪ್ರಾಮಾಣಿಕವಾಗಿ ಬಯಸುತ್ತಾರೆ. ಸ್ಪೃಶ್ಯ ಅಥವಾ ಅಸ್ಪೃಶ್ಯ ರೋಗಿ ಒಳಕ್ಕೆ ಬಂದಾಗ ಅವನನ್ನು ಗೌರವದಿಂದ ಪರೀಕ್ಷಿಸಿ ಚಿಕಿತ್ಸೆ ನೀಡಬೇಕು. ಅದರ ಬದಲಿಗೆ ದನಗಳನ್ನು ಅಟ್ಟಿದಂತೆ ಅಟ್ಟದೆ, ಅವರನ್ನು ಆಸ್ಪತ್ರೆಯೊಳಕ್ಕೆ

ಚಿಕಿತ್ಸೆಗೆ ಕಳುಹಿಸಿಕೊಡಬೇಕು. ಯಾವುದೇ ಅಧಿಕಾರಿಗೆ ಈ ನಡವಳಿಕೆಗೆ ಆಕ್ಷೇಪಣೆಯಿದ್ದರೆ ಈ ಆಜ್ಞೆ ಮುಟ್ಟಿದ ಆರು ವಾರಗಳಲ್ಲಿ ತಮ್ಮ ರಾಜೀನಾಮೆಯನ್ನು ಕೊಡುವುದು ಉತ್ತಮ. ಆದರೆ ಆ ಅಧಿಕಾರಿಗೆ ನಿವೃತ್ತಿ ವೇತನವಿಲ್ಲ. ಏನೇ ಆದರು ಅಧಿಕಾರಿಯು ಆಯಾಸಗೊಂಡಿರಬಹುದು, ಅವನು ಒಬ್ಬ ಹೊಸರೋಗಿಯನ್ನು ನೋಡಿಕೊಳ್ಳಲೇಬೇಕು; ಈ ನಿಯಮ ಪ್ರತಿಯೊಬ್ಬರಿಗೂ ಅನ್ವಯಿಸುತ್ತೆ; ಇದು ಮೇಲಾಧಿಕಾರಿಯಿಂದ ಹಿಡಿದು ಬ್ಯಾಂಡೇಜ್ ಬಟ್ಟೆ ಕಟ್ಟುವವನಿಗೂ ಮತ್ತು ನರ್ಸ್‌ನಿಂದ ಹಿಡಿದು ವೈದ್ಯಕೀಯ ಇಲಾಖೆಗೂ ಅನ್ವಯಿಸುತ್ತದೆ. ಈ ಆಜ್ಞೆಯ ಒಂದು ಪ್ರತಿಯನ್ನು ಪ್ರತಿಯೊಬ್ಬರಿಗೆ ಮತ್ತು ಈಗ ಹಾಲಿಯಿರುವ ಮತ್ತು ಮುಂದೆ ಬರುವ ವೈದ್ಯಕೀಯ ಇಲಾಖೆಯ ಉದ್ಯೋಗಿಗಳಿಗೆ ಕೊಡಲಾಗುವುದು ಮತ್ತು ಒಂದು ಪ್ರತಿಯನ್ನು ನಿತ್ಯದ ಉಪಯೋಗಕ್ಕಾಗಿ ಆಸ್ಪತ್ರೆಯ ಕಛೇರಿಯಲ್ಲಿ ನೇತುಹಾಕಲಾಗುವುದು".[17]

ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಘೋಷಣೆಯಲ್ಲಿ ಶಾಹು ಅವರು ಹೇಳುತ್ತಾರೆ: "ಶಿಕ್ಷಣ ಇಲಾಖೆಯಲ್ಲಿ ಸ್ಪೃಶ್ಯರನ್ನು ಮತ್ತು ಅಸ್ಪೃಶ್ಯರನ್ನು ವಿಭಿನ್ನವಾಗಿ ಉಪಚರಿಸಲಾಗುವುದೆಂದು ಮತ್ತು ಈ ಇಲಾಖೆಯ ಕಾಂಪೌಂಡಿನೊಳಕ್ಕೆ ಅಸ್ಪೃಶ್ಯರನ್ನು ಒಳಬರಿಸುತ್ತಿಲ್ಲ ಎಂಬುದನ್ನು ಶಾಹುರವರು ಅರ್ಥಮಾಡಿಕೊಂಡಿದ್ದಾರೆ. ಸರಕಾರಿ ಕಟ್ಟಡಗಳನ್ನು ಖಾಸಗಿ ಉದ್ಯಮಗಳಿಗೆ ಕೊಟ್ಟಿಲ್ಲವಾದ್ದರಿಂದ ಅಸ್ಪೃಶ್ಯರನ್ನು ತಿರಸ್ಕಾರ ಭಾವನೆಯಿಂದ ನೋಡುವ ಹಕ್ಕು ಯಾರಿಗೂ ಇಲ್ಲ. ಮಿಗಿಲಾಗಿ ಅವರ ಬಗ್ಗೆ ಸಾಧ್ಯವಾದ ಎಲ್ಲಾ ರೀತಿಗಳಲ್ಲಿ ಪಾಲನೆ ಕೈಗೊಳ್ಳಬೇಕು. ಶೈಕ್ಷಣಿಕ ಸಂಸ್ಥೆಗಳು ಬಡವರಿಗಾಗಿಯೇ ಇವೆ ಮತ್ತು ಬಡವರಲ್ಲಿಯೇ ಬಡವರಾದ ಅಸ್ಪೃಶ್ಯರನ್ನು ಸಮಾನವಾಗಿ ಕಾಣುವುದು ಅತ್ಯಂತ ಸೂಕ್ತ. ಅವರು ತೆರಿಗೆಗಳನ್ನು ನೀಡುವಾಗ ಅವರನ್ನು ಏಕೆ ಕೆಟ್ಟ ರೀತಿಯಲ್ಲಿ ಉಪಚರಿಸಬೇಕು. ಶಾಲಾಇಲಾಖೆಯ ಖಾಸಗಿ ಮತ್ತು ಸರಕಾರಿ ವಿದ್ಯಾ ಸಂಸ್ಥೆಗಳು ಮತ್ತು ಅನುದಾನ ಪಡೆದ ಅಥವಾ ಸಹಾಯ ಸ್ವೀಕರಿಸಿದ ಯಾವುದೇ ರೂಪದ ಕಟ್ಟಡವಾಗಲಿ ಅಥವಾ ಆಟದ ಮೈದಾನವಾಗಲಿ ಅಸ್ಪೃಶ್ಯರನ್ನು ಹೆಚ್ಚು ಗೌರವ ಮತ್ತು ಮಮತೆಯಿಂದ, ಸ್ಪೃಶ್ಯರಿಗಿಂತ ಮಿಗಿಲಾಗಿ ನೋಡಿಕೊಳ್ಳಬೇಕು. ಹೀಗೆ ಇದನ್ನು ಮಾಡಬೇಕು. ಏಕೆಂದರೆ ಸ್ಪೃಶ್ಯರು ಶಿಕ್ಷಣವನ್ನು ಇತರೆ ಮೂಲಗಳಿಂದ ಗಳಿಸಿಕೊಳ್ಳಬಹುದು. ಯಾವುದೇ ವಿಧಾನದ ಮೂಲಗಳು ಅಸ್ಪೃಶ್ಯರಿಗೆ ಎಟುಕುತ್ತಿಲ್ಲ. ಅಸ್ಪೃಶ್ಯರನ್ನು ಸಮಾನತೆಯಿಂದ ಕಾಣದಿದ್ದರೆ ಅಧ್ಯಾಪಕರು, ಅವರು ಪ್ರಾಂಶುಪಾಲರಾಗಿರಲಿ ಅಥವಾ ಕೆಳಶ್ರೇಣಿಯ ಅಧ್ಯಾಪಕರಾಗಿರಲಿ, ಹೊಣೆಗಾರರಾಗುತ್ತಾರೆ. ಮತ್ತು ಖಾಸಗಿ ಸಂಸ್ಥೆಗಳಿಗೆ ನೀಡುವ ನೆರವನ್ನು ರದ್ದುಗೊಳಿಸಲಾಗುವುದು."

ಶಿಕ್ಷಣ ಇಲಾಖೆಯು ಸ್ಪೃಶ್ಯರು ಮತ್ತು ಅಸ್ಪೃಶ್ಯರ ನಡುವೆ ತಾರತಮ್ಯತೆ ಎಸಗಬಾರದು, ಮೀರಜ್‌ನಲ್ಲಿರುವ ಅಮೇರಿಕನ್ ಮಿಷನ್, ಸೇಂಟ್ ಜ್ಞೇವಿಯರ್ ಕಾಲೇಜು ಮತ್ತು ವಿಲ್ಸನ್ ಕಾಲೇಜು, ಬೆಂಗಳೂರು ಮತ್ತು ಪಂಚಗಣಿಗಳಲ್ಲಿರುವ ಮಿಷನ್ ಶಾಲೆಗಳು ಅಥವಾ ಜಾತಿಭೇದ ಎಣಿಸದ ಆರ್ಯ ಸಮಾಜದ ಶಾಲೆಗಳು, ಕಾಲೇಜುಗಳು ಮತ್ತು ಗುರುಕುಲಗಳನ್ನು ಅನುಸರಿಸಬೇಕೆಂದು ಮಾನ್ಯ ಮಹಾರಾಜರ ಹೆಬ್ಬಯಕೆಯಾಗಿದೆ. ಸರಕಾರಿ ಅನುದಾನವನ್ನು ಪಡೆಯುತ್ತಿರುವ ಯಾವುದೇ ಶಾಲೆಗೆ ಅಸ್ಪೃಶ್ಯ ವಿದ್ಯಾರ್ಥಿ ಬಂದರೆ ಅವನನ್ನು ಇತರೆ ವಿದ್ಯಾರ್ಥಿಗಳನ್ನು ಕಾಣುವಂತೆಯೇ ಗೌರವದಿಂದ ಕಾಣಬೇಕು ಮತ್ತು ಶಾಲೆಗೆ ಸೇರಿಸಿಕೊಳ್ಳಬೇಕು. ಒಂದು ವೇಳೆ ಯಾವ ಉದ್ಯೋಗಿ ಈ ರೀತಿಯಲ್ಲಿ ನಡೆದುಕೊಳ್ಳಲು ಬಯಸದಿದ್ದರೆ, ಅವರು ಈ ಆಜ್ಞೆ ತಲುಪಿದ ಆರುವಾರಗಳಲ್ಲಿ ರಾಜೀನಾಮೆಯನ್ನು ಸಲ್ಲಿಸಬೇಕು. ಅಂತಹ ವ್ಯಕ್ತಿಗೆ ನಿವೃತ್ತಿ ವೇತನ ನೀಡಲಾಗುವುದಿಲ್ಲ. ನೆರವನ್ನು ಪಡೆಯುವ ವಿದ್ಯಾ ಸಂಸ್ಥೆ ಯಾವುದೇ ಆಕ್ಷೇಪಣೆಯಿದ್ದರೆ, ಅದಕ್ಕೆ ನೀಡುವ

ಅನುದಾನ ಮತ್ತು ನೆರವನ್ನು ದರ್ಬಾರು ರದ್ದುಗೊಳಿಸುವುದು. ಸಂಸ್ಥಾನವು ಅಂತಹ ಸಂಸ್ಥೆಗಳಿಗೆ ಕಟ್ಟಡಗಳನ್ನು, ಆಟದ ಮೈದಾನಗಳನ್ನು ಅಥವಾ ಇತರೆ ಚರ ಮತ್ತು ಸ್ಥಿರ ಆಸ್ತಿಗಳನ್ನು ಹಂಚಿದ್ದರೆ ಅವುಗಳ ಮೇಲೆ ಹೆಚ್ಚಿನ ತೆರಿಗೆಯನ್ನು ವಿಧಿಸಲಾಗುವುದು......... ರಾವ್ ಬಹದೂರ್ ದೋಗ್ರೆ ಅವರು ಈ ಆಜ್ಞೆಯ ಒಂದು ಪ್ರತಿಯನ್ನು ಸರಕಾರದ ಮತ್ತು ಅನುದಾನಿತ ಸಂಸ್ಥೆಗಳ ಎಲ್ಲಾ ಅಧ್ಯಾಪಕರಿಗೆ ಕಳುಹಿಸಿಕೊಡುವರು". (೨೩ ಆಗಸ್ಟ್ ೧೯೧೯).[18]

ಈ ಆಜ್ಞೆಗಳನ್ನು ಕಳುಹಿಸಿದ ತಿಂಗಳ ನಂತರ ಶಾಹು ಮಹಾರಾಜರು ಸಾಮಾನ್ಯ ಜನರಿಗಾಗಿ ಅಸ್ಪೃಶ್ಯತಾ ನಿವಾರಣೆಯ ಒಂದು ಘೋಷಣೆಯನ್ನು ಪ್ರಕಟಿಸಿದರು: "ಎಲ್ಲಾ ಸಾರ್ವಜನಿಕ ಕಟ್ಟಡಗಳು, ಧರ್ಮದತ್ತಿಯ ಅತಿಥಿಗೃಹಗಳು, ದತ್ತಿಯ ಆಹಾರ ವಿತರಣೆಗಾಗಿರುವ ಸರಕಾರಿ ಕಟ್ಟಡಗಳು, ಸರ್ಕ್ಯೂಟ್‌ಗೃಹ, ಮೊದಲಾದವುಗಳು ಮತ್ತು ನದಿಗಳು ಹಾಗೂ ಸಾರ್ವಜನಿಕ ಬಾವಿಗಳ ಸಮೀಪ ಮಾನವರನ್ನು ಒಳಗೊಂಡ ಯಾವುದೇ ಜಾತಿ ದೂಷಣೆಯ ಪದ್ಧತಿಗಳು ಅಥವಾ ಸ್ಪರ್ಶ-ನಿಷೇಧಗಳನ್ನು ಆಚರಿಸುವಂತಿಲ್ಲ". (೬ ಸೆಪ್ಟೆಂಬರ್ ೧೯೧೯).[19]

ಒಮ್ಮೆ ಈ ಘೋಷಣೆಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದರೆ ಜನರಲ್ಲಿ ಅತೃಪ್ತಿ ಮತ್ತು ಅಸಮಾಧಾನ ಸ್ಫೋಟಗೊಳ್ಳುವ ಆತಂಕವನ್ನು ಅಧಿಕಾರಿಗಳು ಹೊಂದಿದ್ದರು. ಆದರೆ ಶಾಹು ಮಹಾರಾಜರು ಜನರ ನಾಡಿಮಿಡಿತವನ್ನು ಅರಿತಿದ್ದರು. ಅಸ್ಪೃಶ್ಯತೆಯ ರದ್ಧತಿಯ ವಿಷಯದಲ್ಲಿ ತನ್ನ ಕೃತಿ ಮತ್ತು ಚಿಂತನೆಗಳು ತನ್ನ ಜನರನ್ನು ಸಾಕಷ್ಟು ಜಾಗೃತಿಗೊಳಿಸಿವೆಯೆಂದು ಶಾಹು ಅವರು ಭರವಸೆ ಹೊಂದಿದ್ದರು ಮತ್ತು ಅನಿಷ್ಟಕಾರಿಯಾದ ಅಸ್ಪೃಶ್ಯತೆಯ ಪದ್ಧತಿಯ ನಿರ್ನಾಮಕ್ಕೆ ಅವರು ಘೋಷಣೆಗಳ ಮಿಸೈಲು(ಕ್ಷಿಪಣೆ)ಗಳನ್ನು ಹಾರಿಸಿಬಿಟ್ಟಿದ್ದರು.

## ಅಸ್ಪೃಶ್ಯತೆಯ ಬಗ್ಗೆ ದೃಷ್ಟಿಕೋನಗಳು

ಕೊಲ್ಹಾಪುರ ಸಂಸ್ಥಾನವು ಅಸಹ್ಯಕರವಾದ ಸಾಮಾಜಿಕ ಪಿಡುಗಾದ ಅಸ್ಪೃಶ್ಯತೆಯ ನಿವಾರಣೆ ವಿರುದ್ಧ ಹಲವಾರು ಕ್ರಮಗಳಿಂದ, ತಂತ್ರಗಳಿಂದ, ಕಾನೂನುಗಳಿಂದ ಮತ್ತು ನಿಬಂಧನೆಗಳ ಗುಂಡಿನ ಸುರಿಮಳೆಯಿಂದ ಸೆಣೆಸಿದ ಸಮಯದಲ್ಲಿ ರಾಷ್ಟ್ರೀಯ ಸಂಸ್ಥೆಗಳ ಮತ್ತು ನಾಯಕರ ಅಭಿಪ್ರಾಯಗಳನ್ನು ಗಮನಿಸುವುದು ಬೆಳಕು ಚೆಲ್ಲುವಂಥದ್ದು. ದೇಶದಲ್ಲಿನ ಸಾಮಾನ್ಯ ಮನೋಭಾವನೆಗಳ ಪ್ರತ್ಯೇಕತೆಯಲ್ಲಿಯೇ ಛತ್ರಪತಿ ಶಾಹುರವರ ಕೊಡುಗೆಯ ಮಹತ್ವವನ್ನು ನಾವು ನ್ಯಾಯಬದ್ಧವಾಗಿ ಮೌಲ್ಯಮಾಪನವನ್ನು ಮಾಡಲಾರೆವು. ಸಮಕಾಲೀನದ ಕೆಲವು ಸಾಮಾಜಿಕ ಘಟನೆಗಳು ಯಾವ ರೀತಿಯಲ್ಲಿ ಗಾಳಿ ಬೀಸಿತೆಂಬ ವಿಷಯವನ್ನು ನೀಡಬಲ್ಲವು.

ಸೆಂಟ್ರಲ್ ಪ್ರಾವಿನ್ಸ್-ಬೆರಾರ್ ಕ್ಷೇತ್ರದಿಂದ ಕೇಂದ್ರೀಯ ಶಾಸನ ಪರಿಷತ್ತಿಗೆ ಆಯ್ಕೆಯಾದ ಮಂದಗಾಮಿ ಮಾನೆಕ್‌ಜಿ ದಾದಾಭಾಯ್ ಅವರು ಮಾರ್ಚ್ ೧೯೧೬ರಲ್ಲಿ ಅಸ್ಪೃಶ್ಯರ ವಿಮೋಚನೆಯನ್ನು ಕೋರುವ ನಿರ್ಣಯವನ್ನು ಸದನದಲ್ಲಿ ಮಂಡಿಸಿದ್ದು ಮೊದಲನೆಯ ಘಟನೆಯಾಗಿದೆ. ತನ್ನ ನಿರ್ಣಯದ ಬಗ್ಗೆ ಮಾಡಿದ ಭಾಷಣದಲ್ಲಿ ದಾದಾಭಾಯ್ ಹೇಳಿದರು: "ಅಸ್ಪೃಶ್ಯರ ಕಲ್ಯಾಣದ ಬಗ್ಗೆ ನಿರಂತರವಾಗಿ ಹೋರಾಟ ಮಾಡುವುದು ಸರಕಾರದ ಮತ್ತು ಹಿಂದುಜನರ ನೈತಿಕ ಹೊಣೆಗಾರಿಕೆಯಾಗಿದೆ. ತಮ್ಮ ಕರ್ತವ್ಯವನ್ನು ನೆರವೇರಿಸಲು ಮುಂದೆ ಬಾರದಿರುವುದು ಅವರ ಪಾಲಿಗೆ ಕಳಂಕವಾಗುತ್ತದೆ." ಅವರು

ಅಸ್ಪೃಶ್ಯರ ಏಳಿಗೆಗಾಗಿ ಹಲವಾರು ವಿಧಾನಗಳನ್ನು ಸೂಚಿಸಿದರು. ಆ ಸಮಯದಲ್ಲಿ ರಾಷ್ಟ್ರೀಯ ಮಹಾನಾಯಕರಾದ ಸುರೇಂದ್ರನಾಥ ಬ್ಯಾನರ್ಜಿ ಮತ್ತು ಪಂಡಿತ ಮದನ ಮೋಹನ ಮಾಳವೀಯರು ಕೌನ್ಸಿಲ್ಲಿನ ಸದಸ್ಯರಾಗಿದ್ದರು. ಅವರ ಪ್ರತಿಕ್ರಿಯೆ ತಣ್ಣಗಿತ್ತು. ಅವರು ಚರ್ಚೆಯಲ್ಲಿ ಭಾಗವಹಿಸುತ್ತಾ ಅಸ್ಪೃಶ್ಯತೆಯ ಸಮಸ್ಯೆಯು ಧಾರ್ಮಿಕ ಮತ್ತು ಸಾಮಾಜಿಕವಾದುದು ಮತ್ತು ಅದನ್ನು ಪರಿಹರಿಸುವಲ್ಲಿ ಹಿಂದುಗಳು ಮುಂಚೂಣಿಯಲ್ಲಿರಬೇಕು. ಆದರೆ ಹಿಂದುಗಳು ತಪ್ಪಿತಸ್ಥರೆಂದು ಹೇಳುವುದು ನ್ಯಾಯವಲ್ಲ. ಅಸ್ಪೃಶ್ಯತೆಯ ಬಗ್ಗೆ ಅನುಕೂಲಕರವಾದ ಸಾರ್ವಜನಿಕ ಅಭಿಪ್ರಾಯ ಬದಲಾದಾಗ ಅವರ ಸಮಸ್ಯೆಯನ್ನು ನಿಭಾಯಿಸಬಹುದು ಮತ್ತು ಅದಕ್ಕೆ ಸಮಯ ಹಿಡಿಸುತ್ತದೆಯೆಂದು ಅವರು ನಿರ್ಣಯದ ಬಗ್ಗೆ ಮಾತನಾಡುತ್ತಾ ಹೇಳಿದರು.[21] ಭಾರತೀಯರ ರಾಜಕೀಯ ಸ್ವಾತಂತ್ರ್ಯದ ಹಕ್ಕಿಗಾಗಿ ಹೋರಾಡಿದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ಗೆ ಸಂಬಂಧಿಸಿದ್ದು ಮತ್ತೊಂದು ಘಟನೆ. ಅದರ ನಾಯಕರು ತಾವು ಭಾರತೀಯರ ಅಭಿಪ್ರಾಯವನ್ನು ಅಭಿವ್ಯಕ್ತಿಗೊಳಿಸುವ ಅತ್ಯುತ್ತಮ ವೇದಿಕೆ ರಾಷ್ಟ್ರೀಯ ಕಾಂಗ್ರೆಸ್ಸೆಂದು ಅವರ ನಾಯಕರು ಹೇಳತೊಡಗಿದರು. ಮಹರ್ಷಿ ವಿಠಲ್‌ರಾಮ್‌ಜಿ ಶಿಂಧೆ ಅಸ್ಪೃಶ್ಯತೆಯ ಆಚರಣೆಯನ್ನು ಖಂಡಿಸಲು ಮತ್ತು ಆ ಅನಿಷ್ಟ ಪದ್ಧತಿಯನ್ನು ರದ್ದುಗೊಳಿಸಲು ಸತತವಾಗಿ ೧೦ ವರ್ಷಗಳಿಂದ ಪ್ರಯತ್ನಿಸುತ್ತಿದ್ದಾರೆ. ಆದರೆ ಪಕ್ಷದೊಳಗಿರುವ ಸವರ್ಣೀಯ ಜಾತಿಯ ಹಿಂದುಗಳ ಮನೋಭಾವಗಳಿಗೆ ಧಕ್ಕೆಯುಂಟಾಗುತ್ತದೆಯೆಂದು ಜ್ವಲಂತ ಸಾಮಾಜಿಕ ಸಮಸ್ಯೆಯ ಬಗ್ಗೆ ನಿರ್ಣಯವನ್ನು ಅಂಗೀಕರಿಸಲು ಕಾಂಗ್ರೆಸ್ ನಾಯಕರು ಸಿದ್ಧರಾಗಿರಲಿಲ್ಲ. ಅಂತಿಮವಾಗಿ, ೧೯೧೭ರ ಕಲಕತ್ತಾ ಅಧಿವೇಶನದಲ್ಲಿ ಮಹಾನ್ ಮಾನವತಾವಾದಿ ಡಾ. ಆನಿಬೆಸೆಂಟರ ಅಧ್ಯಕ್ಷತೆಯಲ್ಲಿ ನಿರ್ಣಯ ಅಂಗೀಕೃತವಾಯಿತು.[22] ಅದರ ಕೀರ್ತಿ ಸಮಾನವಾಗಿ ಆನಿಬೆಸೆಂಟ್ ಮತ್ತು ಶಿಂಧೆ ಅವರಿಗೆ ಸಲ್ಲಬೇಕು.

ಮೂರನೆಯ ಘಟನೆಯು ಮಾರ್ಚ್ ೧೯೧೮ರಲ್ಲಿ ಸಂಭವಿಸಿತು. ಮಹರ್ಷಿ ವಿಠಲ್ ಶಿಂಧೆ ಅವರು ಬಾಂಬೆಯಲ್ಲಿ 'ಮೊದಲ ಅಸ್ಪೃಶ್ಯತೆ ನಿವಾರಣಾ ಸಮ್ಮೇಳನವನ್ನು' ಸಂಘಟಿಸಿದರು ಮತ್ತು ಬರೋಡ ಮಹಾರಾಜ ಗಾಯಕವಾಡ ಅವರು ಅದರ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಮ್ಮೇಳನವು ಮಾಂಟ್‌ಫೋರ್ಡ್ ಸುಧಾರಣೆಗಳ ಹಿನ್ನೆಲೆಯಲ್ಲಿ ನಡೆಯಿತು. ಲೋಕಮಾನ್ಯ ತಿಲಕರು ಹಾಜರಿದ್ದರು. ನ್ಯಾಯಮೂರ್ತಿ ಸರ್ ನಾರಾಯಣರಾವ್ ಚಂದಾವರ್‌ಕರ್‌ರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು. ಹಾಜರಿದ್ದ ಗಣ್ಯವ್ಯಕ್ತಿಗಳಲ್ಲಿ ಬಿಪಿನ್‌ಪಾಲ್ ಚಂದ್ರಪಾಲ್, ವಿಠಲಭಾಯಿ ಪಟೇಲ್, ಸಿ. ವಿ. ಮೆಹತ, ಬ್ಯಾರಿಸ್ಟರ್ ಜಯಕರ್, ದಾದಾಸಾಹೇಬ ಖಾಪರ್ಡೆ, ಥಕ್ಕರ್ ಬಪ್ಪಾ ಮೊದಲಾದವರು. ಸಭೆಯನ್ನು ಕುರಿತು ಅವರಲ್ಲಿ ಕೆಲವರು ಭಾಷಣ ಮಾಡಿದರು. ಲೋಕಮಾನ್ಯರ ಭಾಷಣ ಪ್ರಸಿದ್ಧಿಯಾಯಿತು. ಅವರು ಹೇಳಿದರು: "ಅಸ್ಪೃಶ್ಯರ ಸಮಸ್ಯೆ ಬಹಳ ಮುಖ್ಯವಾದುದು. ಆದಷ್ಟು ಬೇಗನೆ ಅದನ್ನು ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಕೊನೆಗೊಳಿಸಬೇಕು. ಈ ಸಮಸ್ಯೆಯನ್ನು ಬಗೆಹರಿಸಲಾಗುವುದು...... ಒಬ್ಬ ಮನುಷ್ಯನನ್ನು ಮುಟ್ಟುವುದೇ ಪಾಪ ಮತ್ತು ಅವರ ನೆರಳು ಮಲಿನಕ್ಕೆ ಕಾರಣ ಎಂಬ ಪರಿಕಲ್ಪನೆಯನ್ನೇ ನಾಶಮಾಡಬೇಕು. ಇಂದು ಈ ತಾರತಮ್ಯತೆ ವಾಸ್ತವ; ಆದರೆ ಅದನ್ನು ಅಳಿಸಿಹಾಕುವಿಕೆಯನ್ನು ಪ್ರಾರಂಭಿಸಿದರೆ ಮತ್ತು ಕೊನೆಯದಾಗಿ ಈ ತಾರತಮ್ಯತೆಯ ರದ್ಧತಿಯು ಹೊಸಯುಗದ ಮುನ್ಸೂಚಕವಾಗುತ್ತದೆ. ಇದು ಬಹುಮುಖ್ಯವಾದ ಧಾರ್ಮಿಕ ಸುಧಾರಣೆಯಾಗುತ್ತದೆ.

.....ಇದು ಇಡೀ ದೇಶದ ಹೊಣೆಯಾಗಿದೆ. ಸವರ್ಣ ಹಿಂದುಗಳ ಮತ್ತು ಅಸ್ಪೃಶ್ಯರ, ಚಂಡಾಲರ, ಶೂದ್ರರ ನಡುವೆ ದೇವರ ಮುಂದೆ ಯಾವುದೇ ತಾರತಮ್ಯತೆಯಿಲ್ಲ. ಅವರನ್ನು ಆಲಂಗಿಸಿಕೊಳ್ಳುವುದು ದೇವರ ಅಪ್ಪಣೆಯ ಉಲ್ಲಂಘನೆಯಲ್ಲ. ನಾವು ರಾಷ್ಟ್ರೀಯ ಮತ್ತು ಸಾಮಾಜಿಕ ಮಿಷನ್ನುಗಳ ಜೊತೆಯಲ್ಲಿಯೇ

ಅಸ್ಪೃಶ್ಯರನ್ನು ಕೊಂಡೊಯ್ಯಬೇಕು. ಈ ಕೆಲಸ ಈಗ ಅನಿವಾರ್ಯ ಮತ್ತು ಕಡೆಗಣಿಸುವಂತಿಲ್ಲ. ನಾನು ಅಸ್ಪೃಶ್ಯರ ವಿರುದ್ಧವಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತೇನೆ. ನನ್ನ ಅಭಿಪ್ರಾಯದಲ್ಲಿ ಅಸ್ಪೃಶ್ಯತೆಯನ್ನು ಕೊನೆಗಾಣಿಸಲೇಬೇಕು. ಅದು ಅನಿಷ್ಟ ಪದ್ಧತಿ, ಅದನ್ನು ನಾಶ ಮಾಡಬೇಕು."[23]

ಆದರೆ ಶಿಂಧೆ ಅವರು ತಿಲಕರ ಸ್ಫೂರ್ತಿದಾಯಕ ಈ ಭಾಷಣವು ಸಾರ್ವಜನಿಕರ ಅನುಭೋಗಕ್ಕೆ ಹುರುಳಿಲ್ಲದ ಸಿಂಹದಧ್ವನಿಯಾಗಿತ್ತೆಂದು ಬೇಗನೆ ಅನುಭವಕ್ಕೆ ತಂದುಕೊಂಡರು. ಅಸ್ಪೃಶ್ಯತೆಯ ರದ್ಧತಿಗೆ ಸಮ್ಮೇಳನದ ಅನುಕೂಲಕರವಾದ ಮನೋಭಾವ ಪ್ರತಿಫಲನಗೊಂಡಿತೆಂಬುದಕ್ಕೆ ಸಭೆಯ ಕೊನೆಯಲ್ಲಿ ಎಲ್ಲಾ ನಾಯಕರು ನಿರ್ಣಯದ ಘೋಷಣೆಗೆ ಸಹಿ ಮಾಡಿದರು. ಶಿಂಧೆ ಅವರು ತಿಲಕರನ್ನು ಇದಕ್ಕೆ ಸಹಿ ಮಾಡಲು ಕೋರಿದಾಗ ತಿಲಕರು ಸಹಿ ಮಾಡಲು ನಿರಾಕರಿಸುತ್ತಾ ಹೀಗೆ ಹೇಳಿದರು: "ಇಂದು ನಾನು ಬೇರೆ ಕೆಲಸಗಳಲ್ಲಿ ಪೂರ್ಣವಾಗಿ ತೊಡಗಿಕೊಂಡಿರುವುದರಿಂದ ನಾನು ಈ ಮತ್ತೊಂದು ಅಧಿಕ ಹೊಣೆಯನ್ನು ತೆಗೆದುಕೊಳ್ಳಲಾರೆ."[24]

ಕರವೀರಪೀಠದ ಶಂಕರಾಚಾರ್ಯರು ಸಮ್ಮೇಳನಕ್ಕೆ ಕಳುಹಿಸಿದ ಸಂದೇಶದಲ್ಲಿ ಅಸ್ಪೃಶ್ಯತೆಯ ಸಮಸ್ಯೆಯ ಬಗ್ಗೆ ಹೇಳಿದರು: " ಪ್ರಾಚೀನ ಪವಿತ್ರಗ್ರಂಥಗಳ ಪಥ್ಯಗಳನ್ನು ಉಲ್ಲಂಘಿಸದೆ ಇತರೆ ಧಾರ್ಮಿಕ ಗುರುಪೀಠಗಳ ಮುಖ್ಯಸ್ಥರೊಂದಿಗೆ ಸಮಾಲೋಚಿಸಿ ದಾರಿಯನ್ನು ಕಂಡುಕೊಳ್ಳುವೆವು." ಆದರೆ ಅವರು ಬಳಸಿದ ಭಾಷೆ ಮಹತ್ವದ್ದೇನೂ ಅಲ್ಲ. ದ್ವಾರಕಾಪೀಠದ ಶಂಕರಾಚಾರ್ಯರು ಇತರೆ ಧಾರ್ಮಿಕ ಪೀಠಗಳ ಮುಖ್ಯಸ್ಥರೊಂದಿಗೆ ಸಮಾಲೋಚಿಸಿ ಸಮಸ್ಯೆಗೆ ಪರಿಹಾರಗಳನ್ನು ಕಂಡುಕೊಳ್ಳುವವರಿದ್ದರು. ಅವರು ಈ ಮೊದಲೇ ಸಮ್ಮೇಳನಕ್ಕೆ ಒಂದು ತಂತಿಯನ್ನು ಕಳುಹಿಸಿ ಅದರಲ್ಲಿ ಮಹಾರಾಜ ಸಯ್ಯಾಜಿರಾವ್ ಮತ್ತು ಶಿಂಧೆಯನ್ನು ಆಧುನಿಕ ಕಾಲದ ಸೈತಾನರೆಂದು ಖಂಡಿಸಿದ್ದರು.

ವಾಸ್ತವಿಕವಾಗಿ ಅಸ್ಪೃಶ್ಯತೆಯ ಸಮಸ್ಯೆಯ ಬಗ್ಗೆ ಇದ್ದ ಭಾರತೀಯ ನಾಯಕರ ನಿರ್ಲಕ್ಷ್ಯವೇ ಬ್ರಿಟಿಷ್ ಸರಕಾರ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಕಾನೂನುಗಳನ್ನು ಮಾಡದಿರುವುದಕ್ಕೆ ಕಾರಣವಾಗಿದೆ. ಕಾನೂನುಬದ್ಧವಾಗಿ ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡುವುದಕ್ಕೆ ದೇಶವು ದೇಶದ ಸ್ವಾತಂತ್ರ್ಯದವರೆಗೆ ಕಾಯಬೇಕಾಯಿತು. ಸ್ವಾತಂತ್ರ್ಯಾನಂತರ ಭಾರತದ ಸಂವಿಧಾನದ ೧೯೫೦ರಲ್ಲಿ ವಿಧಿ ೧೭ ಜಾರಿಗೆ ಬಂದು ಅಸ್ಪೃಶ್ಯತೆಯನ್ನು ನಿಷೇಧಿಸಿತು. ನಂತರ ೧೯೫೫ರಲ್ಲಿ ಪಾರ್ಲಿಮೆಂಟು ವಿಶೇಷ ಕಾಯಿದೆಯನ್ನು ಮಾಡಿ ಅಸ್ಪೃಶ್ಯತೆಯನ್ನು ನಿವಾರಿಸಿತು. ಶಾಹು ಅವರು ತಮ್ಮ ಸಂಸ್ಥಾನದ ೩ ದಶಕಗಳಿಗೆ ಮುಂಚಿತವಾಗಿಯೇ ಅದ್ಭುತ ಕಾರ್ಯವನ್ನು ಮಾಡಿ ಮುಗಿಸಿದ್ದರು. ದೇಶವು ಸ್ವಾತಂತ್ರ್ಯ ಬಂದ ನಂತರವೂ ದೀರ್ಘಕಾಲದವರೆಗೂ ಕಾಯಬೇಕಾಯಿತು.

---

೧೧

# ಅಸ್ಪೃಶ್ಯರ ವಿಮೋಚನೆ: ನೇರಕ್ರಮ

**ಶಾ**ಹುರವರ ಅಸ್ಪೃಶ್ಯರ ವಿಮೋಚನೆಯ ಮಿಷನ್ನಿನ ಒಂದು ಭಾಗವೇ ಅಸ್ಪೃಶ್ಯತೆಯ ನಿವಾರಣೆ. ಅದರ ಪರಿಣಾಮವಾಗಿ ಅವರು ಸೂಕ್ತ ಸುಗ್ರೀವಾಜ್ಞೆಗಳನ್ನು ಮತ್ತು ಘೋಷಣೆಗಳನ್ನು ಕಾಲಕಾಲಕ್ಕೆ ಪ್ರಕಟಿಸಿದ್ದಾರೆ. ಅಂತಹ ಘೋಷಣೆಗಳನ್ನು ಹೊರಡಿಸಿ ಸುಮ್ಮನೆ ಕುಳಿತುಕೊಳ್ಳುವ ಆಸಾಮಿ ಶಾಹು ಅವರಲ್ಲ. ಅವರೊಬ್ಬ ಸಕ್ರಿಯ ಸುಧಾರಕರು. ಅವರು ಘೋಷಣೆಯಲ್ಲಿದ್ದ ತತ್ವಗಳನ್ನು ಜಾರಿಯಲ್ಲಿ ಪರಿಪಾಲಿಸಿದರು ಮತ್ತು ತಮ್ಮ ಸರಕಾರಿ ಮತ್ತು ಖಾಸಗಿ ಸೇವೆಗಳ ಉದ್ಯೋಗಗಳಿಗೆ ಅಸ್ಪೃಶ್ಯರನ್ನು ನೇಮಕ ಮಾಡಿದರು; ಅಸ್ಪೃಶ್ಯತೆಯಿಂದ ಮುಕ್ತಿ ಪಡೆದರು ಮತ್ತು ಬೇರೆಯವರಿಗೆ ಒತ್ತಾಯಿಸಿ ತಮ್ಮ ದಾರಿಯನ್ನು ಅನುಸರಿಸುವಂತೆ ಮಾಡಿದರು. ಇದನ್ನು ಅವರು ಮಾಡುವಾಗ ಅವರು ಅವರಲ್ಲಿ ಆತ್ಮವಿಶ್ವಾಸ ಮತ್ತು ಆತ್ಮ-ಗೌರವ ಮೂಡುವಂತೆ ನೋಡಿಕೊಂಡರು.

### ಮಹರ್ ತಲಾಠಿ

ಸಂಸ್ಥಾನದ ಮಿಲಿಟರಿ (ಸೈನಿಕ) ಸೇವೆಗಳಲ್ಲಿ ಮರಾಠ ಮತ್ತು ಅದೇ ರೀತಿಯ ಜಾತಿಗಳಿಗೆ ಸೇರಿದ ಜನರು ಹೆಚ್ಚಿನ ಪ್ರಮಾಣದಲ್ಲಿದ್ದರು. ೧೯೧೭ರಲ್ಲಿ ಶಾಹು ಅವರು ತಮ್ಮ ಮಿಲಿಟರಿ ಇಲಾಖೆಯಲ್ಲಿ ನಾಲ್ಕು ಅಸ್ಪೃಶ್ಯರನ್ನು ಸೇರಿಸಿದರು. ಈ ನಾಲ್ವರಲ್ಲಿ ಇಬ್ಬರು ಮಹರ್ ಜಾತಿಗೆ ಮತ್ತು ಮತ್ತಿಬ್ಬರು ಮಾಂಗ್ ಜಾತಿಗೆ ಸೇರಿದವರಾಗಿದ್ದರು.[1] ಬೇರೆ ಇಲಾಖೆಗಳಲ್ಲಿ ಅಸ್ಪೃಶ್ಯರನ್ನು ಸೇರಿಸಲು ಶಾಹು ಅವರು ಒಂದು ವಿಶೇಷ ಆಜ್ಞೆಯನ್ನು ಆಗಸ್ಟ್ ೫, ೧೯೧೮ರಲ್ಲಿ ಹೊರಡಿಸಿದರು. ಅದು ಹೀಗಿದೆ: "...... ಅಸ್ಪೃಶ್ಯ ಜಾತಿಗಳಿಗೆ ಸೇರಿದ ಜನರನ್ನು ತಲಾಠಿ ಹುದ್ದೆಗಳಿಗೆ ನೇಮಕ ಮಾಡಬೇಕೆಂದು ಈ ಮೂಲಕ ಆಜ್ಞೆ ಮಾಡಲಾಗಿದೆ. ಹಾಗೆ ನೇಮಕಗೊಂಡವರಲ್ಲಿ ಯಾರು ವಿವೇಚನೆ ಮತ್ತು ಬುದ್ಧಿಮತ್ತೆಯನ್ನು ತೋರಿಸುತ್ತಾರೊ ಅವರನ್ನು ವಿಭಾಗದ ಗುಮಾಸ್ತರನ್ನಾಗಿ ಹಾಗೂ ಮುಖ್ಯ ಗುಮಾಸ್ತರನ್ನಾಗಿ ನೇಮಕ ಮಾಡಬೇಕು".[2]

ತಮ್ಮ ಸಂಸ್ಥಾನದಲ್ಲಿ ಶಾಹುರವರು ಕುಲಕರ್ಣಿ ವತನವನ್ನು ರದ್ದುಗೊಳಿಸಿದರು ಮತ್ತು ಬ್ರಿಟಿಷ್ ಭಾರತದಲ್ಲಿರುವಂತೆಯೇ ತಲಾಠಿಗಳನ್ನು ನೇಮಿಸಲು ಪ್ರಾರಂಭಿಸಿದರು. ಹಿಂದುಳಿದ ಜಾತಿಗಳ ಸದಸ್ಯರನ್ನು ವಿಶೇಷವಾಗಿ ಅಸ್ಪೃಶ್ಯರನ್ನು ಈ ಹುದ್ದೆಗಳಿಗೆ ನೇಮಕಮಾಡಲು, ಅವರು ತಲಾಠಿ ಕೆಲಸಗಳಿಗೆ ಅಸ್ಪೃಶ್ಯರನ್ನು ತರಬೇತುಗೊಳಿಸಲು ವಿಶೇಷ ಕೋಚಿಂಗ್ ತರಗತಿಗಳನ್ನು ಪ್ರಾರಂಭಿಸತೊಡಗಿದರು ಮತ್ತು ಅಂತಹ ಅಭ್ಯರ್ಥಿಗಳಿಗೆ ವಿಶೇಷ ವಿದ್ಯಾರ್ಥಿ ವೇತನಗಳನ್ನು ದಯಪಾಲಿಸಿದರು. ತರಬೇತಿ ಪಡೆದ ಅಸ್ಪೃಶ್ಯ ತಲಾಠಿಗಳಿಗೆ ಆದ್ಯತೆಯ ನೇಮಕಗಳನ್ನು ಸುಗಮಗೊಳಿಸಲು ಶಾಹುರವರು ಒಂದು ವಿಶೇಷ ಆಜ್ಞೆಯನ್ನು ಹೊರಡಿಸಿದರು. ಅದು ಹೀಗೆ ಹೇಳುತ್ತದೆ: "...... ಈ ದಿನಗಳಲ್ಲಿ ತಲಾಠಿಗಳನ್ನು ನೇಮಕ ಮಾಡಲಾಗುತ್ತಿದೆ. ಅಸ್ಪೃಶ್ಯ

ಜಾತಿಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೇಮಕಗಳಲ್ಲಿ ಆದ್ಯತೆ ನೀಡಿ. ಅದೇ ರೀತಿಯಲ್ಲಿ ಈ ಜನರಲ್ಲಿ ಯೋಗ್ಯರಿಗೆ ದರ್ಬಾರಿನಲ್ಲಿ ಯೋಗ್ಯ ಹುದ್ದೆಯನ್ನು ನೀಡಿ, ಅಂದರೆ ಕಂದಾಯ, ನ್ಯಾಯಾಂಗ, ಪೋಲೀಸ್ ಅಥವಾ ಸಾಮಾನ್ಯ ಇಲಾಖೆಗಳ ಮುಖ್ಯಸ್ಥರ ಹುದ್ದೆಯನ್ನು ನೀಡಬೇಕು. ಯಾವುದೇ ಸಂದರ್ಭದಲ್ಲಿ ಅಸ್ಪೃಶ್ಯರೆಂಬ ನೆಪ ಒಡ್ಡಬಾರದು" (೮ ಆಗಸ್ಟ್ ೧೯೧೮).[3] ಅದೇ ರೀತಿಯಲ್ಲಿ ಆಜ್ಞೆಯನ್ನು ಮುಂದಿನ ವರ್ಷ ಹೊರಡಿಸಿದರು. ಅದು ಹೀಗೆ ಹೇಳುತ್ತದೆ: "ಸಾಧ್ಯವಾದಷ್ಟು ಮಟ್ಟಿಗೆ ಯಾವ ಜಾತಿಯು ಬಹುಸಂಖ್ಯಾತರ ಜನರನ್ನು ಹೊಂದಿದೆಯೊ ಅವರ ಜಾತಿಯವರನ್ನು ತಲಾಠಿಗಳನ್ನಾಗಿ ನೇಮಕ ಮಾಡಬೇಕು. ಮಹರ್, ಮಾಂಗ್, ಚಾಂಬರ್ ಮೊದಲಾದ ಅಸ್ಪೃಶ್ಯ ಜಾತಿಗಳಿಗೆ ಸೇರಿದವರಿಗೆ ಹೆಚ್ಚಿನ ಮಟ್ಟಿಗೆ ಆದ್ಯತೆ ನೀಡಬೇಕು. ಒಂದು ಪೇಟೆಗೆ (ಪೇಠೆಗೆ) ಕನಿಷ್ಠಪಕ್ಷ ೫ ಜನ ಅಸ್ಪೃಶ್ಯರನ್ನು ಮತ್ತು ಒಂದು ಮಹಲ್‌ಗೆ ಕನಿಷ್ಠ ೩ ಜನ ಅಸ್ಪೃಶ್ಯರನ್ನು ನೇಮಕ ಮಾಡಬೇಕು.[4] (೨೪ ಆಗಸ್ಟ್ ೧೯೧೯) ಹಳ್ಳಿಯಲ್ಲಿ ಪಾಟೀಲರ ನಂತರ ಕುಲಕರ್ಣಿಯ ಹುದ್ದೆಯಿದೆ. ಈ ಕುಲಕರ್ಣಿಯ ಬದಲಿಗೆ ತಲಾಠಿ ಬರುತ್ತಾರೆ. ಅಸ್ಪೃಶ್ಯರನ್ನು ತಲಾಠಿಗಳನ್ನಾಗಿ ನೇಮಕಮಾಡಲಾಗುತ್ತಿದೆ. ಮಹರರ ಮುತ್ತಾತಂದಿರು ಹಳ್ಳಿಯ ಕಛೇರಿಯ ಮೆಟ್ಟಿಲುಗಳ ಮೇಲೆ ಕುಳಿತುಕೊಳ್ಳಲು ಧೈರ್ಯ ಮಾಡುತ್ತಿರಲಿಲ್ಲ. ಈಗ ಶಾಹುರವರ ದಯೆಯಿಂದ ಪಾಟೀಲರ ಜೊತೆಯಲ್ಲಿ ಕುಳಿತುಕೊಳ್ಳುವರು. ಮಹರ್ ತಲಾಠಿ ಇದುವರೆಗೆ "ಜೊಹರ್–ಮಾಯಿ ಬಾಪ್" (ಅರ್ಥ: ನಾನು ನನ್ನ ತಂದೆ–ತಾಯಿ ಮುಂದೆ ಬಾಗುತ್ತಿದ್ದೆನು) ಅಳುಕಿನಿಂದ ದೈನ್ಯವಾಗಿ ಬೇಡುತ್ತಿದ್ದನು; ಈಗ 'ರಾಮ್ ರಾಮ್' ಎಂದು ಸಂಬೋಧನೆಯ ಮೂಲಕ ಅವನನ್ನು ಗೌರವ ಮತ್ತು ಸಂಪ್ರದಾಯಬದ್ಧವಾಗಿ ಅಭಿನಂದಿಸುತ್ತಾರೆ. ಅವರಾರೂ ಅಲ್ಲ, ಮರಾಠ ಜನರು. ಶಾಹುರವರು ಏಳು ದಶಕಗಳ ಹಿಂದೆ ಘೋಷಿಸಿದ ಸಾಮಾಜಿಕ ಬದಲಾವಣೆಯು ಎಷ್ಟು ತೀವ್ರತರವಾದುದೆಂದು ಕಲ್ಪನೆ ಮಾಡಿಕೊಳ್ಳಲಾರೆವು. ಇದು ಕೇವಲ ಸಾಮಾಜಿಕ ಬದಲಾವಣೆಯಲ್ಲ. ಇದು ಒಂದು ಸಾಮಾಜಿಕ ಕ್ರಾಂತಿಯಾಗಿದೆ.

ಕೆಲವು ಪೋಲೀಸರನ್ನು ನೇಮಕ ಮಾಡುವಾಗ ಕಂದಾಯ ಇಲಾಖೆಯಲ್ಲಿ ಕೆಲವು ಅಸ್ಪೃಶ್ಯರನ್ನು 'ದಸ್ತರ್‌ಬಂದ್' ಎಂದು ನೇಮಕ ಮಾಡುವುದನ್ನು ಶಾಹುರವರು ನೋಡಿದರು. ೧೯೨೦ರಲ್ಲಿ ೧೬ ಮಹರರನ್ನು ನಗರದ ಪೋಲೀಸ್ ಗೇಟಿಗೆ ನೇಮಕಮಾಡುವಾಗ ತಾವು ಸಮಾಜದಲ್ಲಿ ಈ ಜನರ ಸ್ಥಾನಮಾನವನ್ನು ಉನ್ನತಗೊಳಿಸಲು ಇದನ್ನು ಮಾಡುತ್ತಿರುವೆನೆಂದು ಒತ್ತಿ ಹೇಳಿದರು.[5]

## ಮುನಿಸಿಪಾಲಿಟಿಯ ಅಧ್ಯಕ್ಷರು

ಮೊಟ್ಟ ಮೊದಲಿಗೆ ಕೊಲ್ಹಾಪುರ ಮುನಿಸಿಪಾಲಿಟಿಯ ಕಛೇರಿಗೆ ಒಬ್ಬ ಅಸ್ಪೃಶ್ಯನನ್ನು ನೇಮಕ ಮಾಡಲಾಯಿತು; ಇದು ಇಲ್ಲಿಗೆ ನಿಲ್ಲಲಿಲ್ಲ. ಶಾಹು ಅವರ ಉತ್ತೇಜನದಿಂದ ಅಸ್ಪೃಶ್ಯ ದತ್ತೋಬ ಪೊವಾರ್ ಅವರನ್ನು ಮುನಿಸಿಪಾಲಿಟಿಯ ಅಧ್ಯಕ್ಷನನ್ನಾಗಿ ನೇಮಿಸಲಾಯಿತು. ಮುನಿಸಿಪಲ್ ಸಂಸ್ಥೆಗೆ ಒಬ್ಬ ಮಹರನನ್ನು ಅಧ್ಯಕ್ಷನನ್ನಾಗಿ ನೇಮಕಮಾಡಿದ್ದು ಆ ಕಾಲಮಾನದ ಗುಣಮಟ್ಟದಲ್ಲಿ ಕೇವಲ ಪ್ರಸಿದ್ಧ ಘಟನೆಯಾಗಿರಲಿಲ್ಲ. ಇದು ಕೇಳದ, ಕಲ್ಪನಾತೀತವಾಗಿತ್ತು. ಆದರೆ ಬಹುಶಃ ಭಾರತದಲ್ಲಿ ಮೊಟ್ಟ ಮೊದಲಿಗೆ ವಿಚಿತ್ರವಾದ ಘಟನೆಯಾಗಿತ್ತು. ಶಾಹುರವರು ಸ್ವತಃ ಈ ಘಟನೆಯ ಸಂಭವದಿಂದ ಹೆಚ್ಚು ಹೆಮ್ಮೆಪಟ್ಟರು. ೧೯೨೧ರಲ್ಲಿ ಮಹರ್ಷಿ ಶಿಂಧೆಯವರಿಗೆ ಬರೆದ ಪತ್ರದಲ್ಲಿ ಶಾಹುರವರು ಬರೆಯುತ್ತಾರೆ: "ನಾನು ಕೊಲ್ಹಾಪುರದಲ್ಲಿರುವಾಗ ನೀವು ಬಂದಿರಬಹುದು. ಕೊಲ್ಹಾಪುರ ಮುನಿಸಿಪಾಲಿಟಿಯ ಪ್ರಸ್ತುತ ಅಧ್ಯಕ್ಷರು ಅಸ್ಪೃಶ್ಯಜಾತಿಯಿಂದ ಬಂದವರು. ವ್ಹಾಟಕಾರ್ ಎಂಬ ಗುಮಾಸ್ತ ೨೦ ರೂ.ಗಳಿಗೆ ಸಂಬಳಕ್ಕೆ ಮುನಿಸಿಪಾಲಿಟಿಯಲ್ಲಿ ಕೆಲಸಮಾಡುತ್ತಿದ್ದ.

ಅವನು ಅಸ್ಪೃಶ್ಯಜಾತಿಗೆ ಸೇರಿದವನು. ಅಸ್ಪೃಶ್ಯ ಮತ್ತು ಬ್ರಾಹ್ಮಣೇತರರು ಸಾಮುದಾಯಿಕ ಪ್ರಾತಿನಿಧ್ಯದಿಂದ ಅಂತಹ ಅವಕಾಶಗಳನ್ನು ಅವರಿಗೆ ನೀಡಲಾಗಿದೆ. ನೈರ್ಮಲ್ಯದ ಅಂಶದಿಂದ ಬ್ರಾಹ್ಮಣರು ಅಸ್ಪೃಶ್ಯರಿಗೆ ಕಿರುಕುಳ ಕೊಟ್ಟು ಅವರನ್ನು ಪ್ರತ್ಯೇಕವಾಗಿಟ್ಟಿದ್ದರು. ಅಂತಹ ಪರಿಸ್ಥಿತಿ ಈಗಿಲ್ಲ. ಆದ್ದರಿಂದ ನೀವು ಒಮ್ಮೆ ಭೇಟಿನೀಡಿ ಪರಿಸ್ಥಿತಿಯನ್ನು ನೋಡಬೇಕೆಂದು ನಾನು ಭಾವಿಸುತ್ತೇನೆ.[6]

* ದಸ್ತರ್‌ಬಂದ್ – ಒಬ್ಬ ಅಧೀನ ಅಧಿಕಾರಿ. ಆತನ ಕೆಲಸ (ಕರ್ತವ್ಯ) ಪ್ರತಿ ದಿನ ಕಛೇರಿಯ ದಾಖಲೆಗಳನ್ನು ಹೊರತೆಗೆಯುವುದು ಮತ್ತು ಅವುಗಳನ್ನು ಮತ್ತೆ ಒಳಗೆ ಇಡುವುದು ಮತ್ತು ಕಛೇರಿಯನ್ನು ತೆರೆಯುವುದು ಮತ್ತು ಮುಚ್ಚುವುದು.

ಶಾಹುರವರ ಆಡಳಿತದ ಕೊನೆಯ ಹೊತ್ತಿಗೆ, ಭಂಗಿ (ಕಕ್ಕಸು ಬಾಚುವನು) ಸಮುದಾಯ ಮುನಿಸಿಪಲ್ ಕಛೇರಿಯನ್ನು ಪ್ರವೇಶಿಸಿರುವುದನ್ನು ನೋಡಬಹುದು. ಶಾಹು ಅವರಿಂದ ಮುನಿಸಿಪಲ್ ಕಮಿಟಿಗೆ ಒಬ್ಬ ಹೀರಾಮಾದರರನ್ನು ನೇಮಕವಾಗಿರುವ ದಾಖಲೆ ಲಭ್ಯವಿರುವುದನ್ನು ನೀವು ನೋಡಬಹುದು.[7]

ಶಿಕ್ಷಣಪ್ರಸಾರ ಕೊರತೆಯಿಂದ ಅಸ್ಪೃಶ್ಯರಲ್ಲಿ ಶಿಕ್ಷಿತ ವ್ಯಕ್ತಿಗಳನ್ನು ಪಡೆಯುವುದು ಅಸಾಧ್ಯವಾಗಿದೆ. ಶಾಹು ಮಹಾರಾಜರು ಶಿಕ್ಷಣದ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ವಿವಿಧ ಇಲಾಖೆಗಳಲ್ಲಿ ಹಲವಾರು ಅಸ್ಪೃಶ್ಯರನ್ನು ಸೇರಿಸಿಕೊಂಡರು. ಅಸ್ಪೃಶ್ಯ ಜನರು ವಿವಿಧ ಇಲಾಖೆಗಳಾದ ಕುದುರೆ ಲಾಯಗಳು, ಆನೆಗಳ ಆರೈಕೆ, ಬೇಟೆ ಮತ್ತು ಅಂಚೆ ಮತ್ತು ತಂತಿ ಇಲಾಖೆ ಮೊದಲಾದವುಗಳಲ್ಲಿ ಸರಕಾರಿ ನೌಕರರಾಗಿ ಕೆಲಸ ಮಾಡತೊಡಗಿದರು. ಕೆಲವರನ್ನು ಮಾವುತರಾಗಿ, ಮತ್ತೆ ಕೆಲವರನ್ನು ಕೋಚ್‌ಮನ್ ಆಗಿ ಅಥವಾ ಮತ್ತೆ ಕೆಲವರನ್ನು ರಾಜಕುಟುಂಬದ ಚಾಲಕರಾಗಿ ನೇಮಕಗೊಳಿಸಿದರು. ೧೯೦೮ರಲ್ಲಿ ರಾಜಕುಮಾರ ಅಕ್ಕಸಾಹೇಬರ ಮದುವೆಯ ಮೆರವಣಿಗೆಯಲ್ಲಿ ಸುಂದರ ಮತ್ತು ಚುರುಕಾದ ಅಸ್ಪೃಶ್ಯ ಕೋಚ್‌ಮನ್ ತಮ್ಮ ಸೊಂಟಕ್ಕೆ ಖಡ್ಗಗಳನ್ನು ನೇತು ಹಾಕಿಕೊಂಡು ಕುದುರೆ ಮತ್ತು ಗಾಡಿಗಳನ್ನು ನಡೆಸಿದರು ಮತ್ತು ಮಾವುತರು ರಾಜರ ಆನೆಗಳನ್ನು ಅಲಂಕರಿಸಿ, ರಾಜಮನೆತನದ ದಿರಿಸುಗಳನ್ನು ಹಾಕಿಕೊಂಡು ಆನೆಗಳನ್ನು ನಡೆಸಿದ್ದು ಅಸ್ಪೃಶ್ಯ ಸಮುದಾಯಗಳ ಘನತೆ ಗಾಂಭೀರ್ಯಗಳು ಹೆಚ್ಚಿದವು. ಇದು ಸಾಮಾಜಿಕ ಕ್ರಾಂತಿಯಲ್ಲದೆ ಮತ್ತೇನು ಆಗಿರಲಿಲ್ಲ.

## ಒಂದು ಸಾಮಾಜಿಕ ಪ್ರಯೋಗಾಲಯ

ಶಾಹು ಮಹಾರಾಜರ ಸೋನ್‌ತಾಲಿ ಕ್ಯಾಂಪ್ (ರಾಜಪುತವಾಡಿ) ಅಂತಹ ನವೀನ ಸಾಮಾಜಿಕ ಪ್ರಯೋಗಗಳನ್ನು ನಡೆಸುವುದಕ್ಕೆ ಒಂದು ಪ್ರಯೋಗಶಾಲೆಯಾಗಿತ್ತು. ಈ ಕ್ಯಾಂಪಿನಲ್ಲಿ ತನ್ನ ಸೇವೆಗಾಗಿ ಅಸ್ಪೃಶ್ಯರನ್ನು ಉದ್ಯೋಗಕ್ಕೆ ನೇಮಿಸಿಕೊಳ್ಳುವ ಮೂಲಕ ಶಾಹುರವರು ಸಮಾಜದ ಮುಂದೆ ಅಸ್ಪೃಶ್ಯತೆಯ ನಿವಾರಣೆಯ ನಿದರ್ಶನಗಳನ್ನು ಮುಂದಿಟ್ಟರು. ಶಾಹುರವರ ದಿನಾಂಕವಿಲ್ಲದೆ ಹೇಳಿದ ಒಂದು ದಾಖಲೆ ಸಿಕ್ಕಿದೆ. ಅದು ಹೀಗೆ ಹೇಳುತ್ತದೆ: "...... ರಾಜಪುತವಾಡಿ ದಿನಾ ದೇವ ಮತ್ತು ದೇವತೆಗಳಾದ 'ಮಾರ್ಗೈ' ಮತ್ತು ಇತರೆ ೩೮ ದೇವತೆಗಳ ಪೂಜೆ ನಡೆಯುತ್ತಿತ್ತು. ಒಬ್ಬ ಮಹರನಾದ ಗುನು ಅವರು 'ಪೀರ್ಸ್' ಮತ್ತು ಗಜೇಂದ್ರಲಕ್ಷ್ಮಿಯನ್ನು ನೀಡುತ್ತಿದ್ದನು. ರಾಜನೂ ಸೇರಿದಂತೆ ಇತರರು ಕ್ಯಾಂಪಿನಲ್ಲಿ ಎಲ್ಲರೂ ಈ ದೇವತೆಗಳಿಗೆ ಪ್ರಾರ್ಥನೆಗಳನ್ನು ಮಾಡುತ್ತಿದ್ದರು. ಒಂದು ಮದುವೆ ನಡೆದರೆ ಮೆರವಣಿಗೆಗಳು ಈ ದೇವತೆಗಳ ಆಶೀರ್ವಾದ ಪಡೆಯುವುದಕ್ಕೆ ಅವುಗಳ ಬಳಿಗೆ ಹೋಗುತ್ತಿದ್ದವು. ನೀರಿನ ಕೊಳಕ್ಕೆ ಭಂಗಿಯನ್ನು ಹೊರತುಪಡಿಸಿ

ಎಲ್ಲರೂ ಹೋಗುತ್ತಿದ್ದರು. ಸ್ಪರ್ಶದ ನಿಷೇಧದ ಆಚರಣೆಯು ರೂಢಿಯಲ್ಲಿ ಪ್ರಚಲಿತವಾಗಿರಲಿಲ್ಲ ಮತ್ತು ಕ್ಯಾಂಪಿನಲ್ಲಿ ಎಲ್ಲಾ ಜನರು ಪ್ರೀತಿ ಮತ್ತು ಮಮತೆಯಿಂದ ಅಣ್ಣತಮ್ಮಂದಿರಂತೆ ಬದುಕುವುದೇ ತಮಾಷೆಯಾಗಿತ್ತು. ದಶರಥ ಎಂಬ ಮಾಂಗನನ್ನು ದಾಸ್ತಾನು ಕೊಠಡಿಯ ಚಾಬುಕ್‌ಸ್ವರ**ನನ್ನಾಗಿ ನೇಮಕ ಮಾಡಲಾಗಿತ್ತು. ಆಬ ಮಾಂಗ್ ಮತ್ತು ಚಂದ ಮಹರ್‌ನನ್ನು ಬೇಟೆಯ ಇಲಾಖೆಗೆ ಕಾಮದಾರರೆಂದು ನೇಮಕ ಮಾಡಲಾಗಿತ್ತು. ರಾಧನಗರಿಯ ನಿವಾಸಿಗಳಾದ ದಾದು ಮಹರ್ ಮತ್ತು ರಾಮು ಮಹರರು ಆನೆಗಳ ಮಾವುತರಾಗಿ ಶುಕ್ರವಾರ ದೇವತೆಯ ಅಂಬಾರಿಯ ಮೆರವಣಿಗೆಯ ಆನೆಗಳ ಸೇವೆ ಮಾಡುತ್ತಿದ್ದನು. ಈ ದೇವತೆಯ ಅಂಬಾರಿ ಮೆರವಣಿಗೆಯ ಪರಂಪರೆ ರಾಜಯುಗದ ಸ್ಥಾಪಕ ಶಿವಾಜಿ ಮಹಾಶಯನಿಂದ ಶಿವಾಜಿ–೪ವರೆಗೆ ಮುಂದುವರೆದಿತ್ತು. ಈ 'ಅಸ್ಪೃಶ್ಯ' ಉದ್ಯೋಗಿಗಳಿಗೆ ದೇವತೆಯ ಅಂಬಾರಿ ಮತ್ತು ಶಿವಾಜಿ ಮಹಾಶಯನ ಪಾದುಕೆಗಳನ್ನು* ಮುಟ್ಟುವುದಕ್ಕೆ ನಿಷೇಧವಿರಲಿಲ್ಲ.

ಅದೇ ರೀತಿಯಲ್ಲಿ ಹಲವು ಅಸ್ಪೃಶ್ಯ ಜನರು ವಿವಿಧ ಸೇನೆಗಳ ದರ್ಜೆಗಳಾದ ಗುಮಾಸ್ತ, ತಲಾಠಿ, ಪೊಲೀಸ್ ಮೊದಲಾದ ಹುದ್ದೆಗಳಲ್ಲಿದ್ದರು. ಸೂರ್ಯವಂಶಿ ಮತ್ತು ಸೋಮವಂಶಿ ಜನರಿಗಿದ್ದ 'ಹಾಜರಿ' ಪದ್ಧತಿಯನ್ನು (ಮಹರರ ಉಪ–ಜಾತಿಗಳು) ಒಂದು ಆಜ್ಞೆಯ ಮೂಲಕ ಕಿತ್ತುಹಾಕಲಾಯಿತು ಮತ್ತು ಮತ್ತೊಂದು ಆಜ್ಞೆಯ ಮೂಲಕ ಎಲ್ಲಾ ಉಚಿತ ಶಾಲೆಗಳ ಪ್ರವೇಶಕ್ಕೆ ಅನುವು ಮಾಡಿಕೊಡಲಾಯಿತು. ಮಾರುತಿ ದೇವಸ್ಥಾನಗಳಲ್ಲಿ ಶಾಲೆಗಳ ಸಭೆ ನಡೆದರೆ ಅವರ ಹಾಜರಾತಿ (ಪ್ರವೇಶ) ಕಡ್ಡಾಯಗೊಳಿಸಲಾಗಿತ್ತು. ಮಾನವನು ಹೇಗೆ ದೇವರನ್ನು ವಿಕಾರಗೊಳಿಸುತ್ತಾನೆ (ಮಲಿನಗೊಳಿಸುತ್ತಾನೆ). ಈ ಮನುಷ್ಯನು ಮಲಿನಗೊಳಿಸುತ್ತಾನೆ, ಈ ಮನುಷ್ಯ ಮಲಿನಗೊಳಿಸುವುದಿಲ್ಲ ಎಂದು ಹೇಗೆ ದೇವರು ಆಜ್ಞಾಪಿಸುತ್ತಾನೆ. ಯಲ್ಲಪ್ಪ ಬಾಲ ನಾಯ್ಕ ಮಾನ್ಯ ಮಹಾರಾಜರ ಕಾರಿನ ಚಾಲಕ ಮಹರ್ ಜಾತಿಯವನು, ಅವನ ಚಾಬುರ್‌ಸ್ವರ ದಶರಥ ಮತ್ತು ಕೆಲವು ಕೋಚ್‌ಮನ್‌ಗಳು ಸಹ ಮಹರರು. ಅವರು ಕೆಲವು ಸಲ ಪರಿಚಾರಕರಾಗಿ ಕೆಲಸ ಮಾಡುತ್ತಾರೆ. ಮತ್ತೇನು ಉಳಿದಿದೆ? ಬೇಟೆಗಳ ಸರದಿಗಳಲ್ಲಿ ಚಂದ, ಆಟ, ದಶರಥ ಅವರು ಸಹ ಎರಡು ಪರಿಚಾರಕರಾಗುತ್ತಾರೆ; ದಿನನಿತ್ಯದ ವ್ಯವಹಾರ, ಮತ್ತೇನು ಹೊಸದಾಗಿ ಇಲ್ಲ".[8]

## ಆತ್ಮವಿಶ್ವಾಸದ ಹೆಚ್ಚಳ

ಶಾಹು ಅವರಿಗೆ ಬೇಟೆ ಪ್ರಿಯವಾದ ಆಸಕ್ತಿ. ಬೇಟೆಯ ಗುಂಪಿನಲ್ಲಿ ಅವರು ಬಹಳಷ್ಟು ಅಸ್ಪೃಶ್ಯರನ್ನು ನೇಮಕ ಮಾಡಿಕೊಂಡಿದ್ದರು. ಅವರ ಬಳಿ ವಿದೇಶೀಯ ಮತ್ತು ದೇಶಿಯ ಭಯಾನಕವಾದ ಇನ್ನೂರು ಬೇಟೆ ನಾಯಿಗಳಿದ್ದವು. ವಿಶೇಷವಾಗಿ ಈ ಅಪಾರವಾದ ನಾಯಿಗಳ ಆರೈಕೆಗೆ ಮಾಂಗ್ ಸಮುದಾಯದಿಂದ ಯುವಕರನ್ನು ನೇಮಿಸಿಕೊಂಡಿದ್ದರು. ವಿಶೇಷ ಸಂದರ್ಭಗಳಲ್ಲಿ ಮಹಾರಾಜರೇ ಚಾಕಚಕ್ಯತೆಯಿಂದ ಈ ಅಸ್ಪೃಶ್ಯ ಉದ್ಯೋಗಿಗಳು ಹೊಂದಿದ್ದ ಕೌಶಲ್ಯ ಮತ್ತು ಸಾಮರ್ಥ್ಯಗಳನ್ನೇ ಪ್ರದರ್ಶಿಸುತ್ತಿದ್ದರು. ಭಾಸ್ಕರರಾವ್ ಜಾಧವ ಅವರು ಮಿಸ್ ಕ್ಲಾರ್ಕ್ ವಿದ್ಯಾರ್ಥಿ ನಿಲಯದಲ್ಲಿ ವ್ಯವಸ್ಥೆಗೊಳಿಸಿದ್ದ ಅಂಥ ಕಾರ್ಯಕ್ರಮವನ್ನು

---

** ಕುದುರೆಯನ್ನು ಪಳಗಿಸುವವನು; ಒರಟು ಕುದುರೆ ಸವಾರ.

* ಕಲ್ಲಿನ ಮೇಲೆ ಒಂದು ಪಾದದ ಮುದ್ರಿಕೆ, ಯಾವುದೋ ದೇವತೆ ಅಥವಾ ಪೂರ್ವಿಕರ ಗುರುತೆಂದು ಪೂಜಿಸುವುದು.

ವಿವರಿಸುತ್ತಾರೆ: "ಮಹಾರಾಜರು ರಾಜಕೀಯ ಏಜೆಂಟ್ ಅಧ್ಯಕ್ಷತೆ ವಹಿಸಿ ಒಂದು ಭವ್ಯ ಸಮಾರಂಭವನ್ನು ಮಿಸ್ ಕ್ಲಾರ್ಕ್ ವಿದ್ಯಾರ್ಥಿನಿಲಯದಲ್ಲಿ ಸಂಘಟಿಸಿದ್ದರು. ಸಮಾರಂಭವನ್ನು ಭವ್ಯರೀತಿಯಲ್ಲಿ ನಡೆಸಲಾಯಿತು. ನಾಲ್ಕು ಕುದುರೆಗಳು ಎಳೆದ ಗಾಡಿಯ ಕೋಚ್‌ನಲ್ಲಿದ್ದ ರಾಜಕೀಯ ಏಜೆಂಟರ ಬೆಂಗಾವಲುಗಾರ ರಾಜರೇ ಆಗಿದ್ದರು. ಎರಡು ಕುದುರೆಗಾಡಿಗಳ ಸವಾರರು ಮಹರರಾಗಿದ್ದರು. ಗಾಡಿಯ ಕುದುರೆಗಳನ್ನು ಹೊಡೆಯುವುದು ಒಂದು ಕೆಲಸ, ಅದಕ್ಕೆ ಹೆಚ್ಚು ಕೌಶಲ್ಯ ಬೇಕಾಗಿದೆ. ಅತಿಥಿಗಳನ್ನು ಸ್ವಾಗತಿಸಲು ಅರಮನೆಯ ಹೊರಗಡೆ ದೊಡ್ಡ ಪರಿಚರರಿದ್ದರು. ಅದರಲ್ಲಿ ಆನೆಗಳೂ, ಅವುಗಳ ಮಾವುತರು, ಗಡಕರಿಗಳು ಸೇರಿದ್ದರು. ಅವರೆಲ್ಲರೂ ಅಸ್ಪೃಶ್ಯರು. ಮಾಂಗ ಯುವಜನರು ಸಮವಸ್ತ್ರ ಧರಿಸಿ ಬೇಟೆನಾಯಿಗಳನ್ನು ಹಿಡಿದಿಟ್ಟುಕೊಂಡಿದ್ದರು. ಅಸ್ಪೃಶ್ಯರ ತಂಡ ಡೇಗೆಗಳನ್ನು ಹಿಡಿದುಕೊಂಡು ಸ್ವಾಗತ ತಂಡದಲ್ಲಿತ್ತು. ಅವರು ಚಿರತೆಗಳ ಗಾಡಿಗಳನ್ನು ನಡೆಸುತ್ತಿದ್ದರು. ಅಸ್ಪೃಶ್ಯ ಸಮುದಾಯಕ್ಕೆ ಸೇರಿದ ಪ್ರತಿಯೊಬ್ಬ ವ್ಯಕ್ತಿಯು ಇದು ತಮ್ಮ ಸಮಾರಂಭವೆಂದು ಭಾವಿಸುತ್ತಿದ್ದರು. ಅವರು ಮತ್ತು ಇತರರು ಸೂಕ್ತ ಅವಕಾಶ, ಸರಿಯಾದ ತರಬೇತಿ ಮತ್ತು ಪ್ರೋತ್ಸಾಹ ಲಭಿಸಿದರೆ ಅವರು ಸಣ್ಣದಾದ ಅಥವಾ ದೊಡ್ಡದಾದ ಹೊಣೆಗಳನ್ನು ನೆರವೇರಿಸುವ ಸಾಮರ್ಥ್ಯವಿದೆಯೆಂದು ಮನವರಿಕೆ ಮಾಡಿಕೊಂಡಿದ್ದರು. ಇದು ಅವರ ಆತ್ಮವಿಶ್ವಾಸವನ್ನು ಇಮ್ಮಡಿಸಿತು".[9]

ಕೆಲವರ ಹೆಸರುಗಳು ತಮ್ಮ 'ಅಸ್ಪೃಶ್ಯತೆ'ಯನ್ನು ಸ್ವಲ್ಪಮಟ್ಟಿಗೆ ಸೂಚಿಸುತ್ತಿದ್ದರೆ, 'ಅಸ್ಪೃಶ್ಯರ' ಕೆಲವು ಉಪನಾಮ (ಅಡ್ಡಹೆಸರು)ಗಳು ಅವರ ಜಾತಿಗಳನ್ನು ಸ್ಪಷ್ಟವಾಗಿ ಸೂಚಿಸುತ್ತಿದ್ದವು. ಇದು ಹಲವು ಸಂದರ್ಭಗಳಲ್ಲಿ ಅವರಿಗೆ ತೊಂದರೆಯನ್ನುಂಟು ಮಾಡಿತು. ಉದಾಹರಣೆಗೆ ಶಾಹುರವರ ಪ್ರೋತ್ಸಾಹದಿಂದ ಈ ಸಮುದಾಯದಿಂದ ಕೆಲವರು ಭರವಸೆ ಮೂಡಿಸುವ ಕುಸ್ತಿಪಟುಗಳು ಪ್ರವರ್ಧಮಾನಕ್ಕೆ ಬಂದರು. ಸಾಕಷ್ಟು ಸಲ ಸಂಸ್ಥಾನದ ಹೊರಗಿನಿಂದ ಕುಸ್ತಿಪಟುಗಳು ಕುಸ್ತಿ ಟೂರ್ನಮೆಂಟುಗಳಲ್ಲಿ ಭಾಗವಹಿಸುತ್ತಾರೆ. ಸರದಿಗಳು ಪ್ರಾರಂಭವಾಗುವುದಕ್ಕೆ ಮೊದಲು ಕುಸ್ತಿಪಟುಗಳ ಹೆಸರುಗಳನ್ನು ಘೋಷಿಸಲಾಗುತ್ತದೆ. ಕುಸ್ತಿಗಳ ಸ್ಪರ್ಧಾಳು ಮತ್ತು ಕ್ರೀಡಾಭಿಮಾನಿಗಳಿಂದ ಅಸ್ಪೃಶ್ಯ ಕುಸ್ತಿಪಟುಗಳ ಜಾತಿಗಳನ್ನು ಮರೆಮಾಚಲು ಶಾಹುರವರು ಒಂದು ನವೀನ ತಂತ್ರವನ್ನು ಹುಡುಕಿದ್ದರು. ಅಸ್ಪೃಶ್ಯರಾದ ಗಂಗಾರಾಮ್ ಕಾಬ್ಳೆ ಸ್ವತಃ ಈ ತಂತ್ರದ ಬಗ್ಗೆ ತಿಳಿಸುತ್ತಾರೆ: "..........ಮಹಾರಾಜರು ಅಸ್ಪೃಶ್ಯ ಸಮುದಾಯದ ಏಳಿಗೆಗಾಗಿ ಮತ್ತು ಅವರು ಬೆಳೆಸಿಕೊಂಡಿದ್ದ ಕೀಳರಿಮೆಯ ಭಾವನೆಗಳಿಂದ ಹೊರಬರಲು ಸಾಧ್ಯವಾದ ಎಲ್ಲಾ ವಿಧಾನಗಳನ್ನು ಬಳಸಿದ್ದರು. ಈ ಹೊಣೆಯಲ್ಲಿ ಅವರು ಹೇಗೆ ತೊಡಗಿಸಿಕೊಂಡಿದ್ದರು ಮತ್ತು ಪ್ರತಿಯೊಂದನ್ನು ಅವರು ಹೇಗೆ ಸೂಕ್ಷ್ಮವಾಗಿ ಚಿಂತಿಸಿದ್ದರೆಂಬುದನ್ನು ಈ ಕೆಳಗಿನ ಕತೆ ನಿರೂಪಿಸುತ್ತದೆ:

"ಭಂಗಿ, ಮಹರ್, ಚಂಭಾರ್ ಮೊದಲಾದ ಹೆಸರುಗಳು ಅಸ್ಪೃಶ್ಯತೆಯೊಂದಿಗೆ ಸೇರಿಕೊಂಡಿವೆ. ಈ ಕಳಂಕದಿಂದ ದೂರವಾಗಲು ಈ ಜಾತಿಗಳ ಕುಸ್ತಿಪಟುಗಳಿಗೆ ಶಾಹುರವರು ಹೊಸ ಹೆಸರುಗಳನ್ನು ಕೊಟ್ಟರು. ಸರದಿಗಾಗಿ ಮಹರ್ ಕುಸ್ತಿಪಟುಗಳು ಸಿದ್ಧವಾಗುವುದಕ್ಕೆ ಅಧಿಕಾರಿಗಳು 'ಜಾಟ್ ಕುಸ್ತಿಪಟುಗಳು' ಸಿದ್ಧವಾಗಿರಬೇಕೆಂದು ಜೋರಾಗಿ ಕೂಗಿ ಹೇಳಿದರು. ಹಾಗೆಯೇ ಚಂಭಾರವನ್ನು ಪಂಡಿತರೆಂದು ಕರೆದರೆ ಭಂಗಿಗಳನ್ನು ಸರದಾರರೆಂದು ಉಲ್ಲೇಖಿಸಿದರು. ಹೀಗಿರುವಾಗ ಬೇರೆ ಜಾತಿಯ ಕುಸ್ತಿಪಟು (ಸ್ಪರ್ಧಾಳು)ಗಳಿಗೆ ತಾವು ಮಹರ್, ಭಂಗಿ, ಚಂಭಾರರ ವಿರುದ್ಧ ಸ್ಪರ್ಧಿಸುತ್ತಿದ್ದೇವೆ ಎಂಬ ಸಣ್ಣ ಸುಳಿವು ಸಿಗಲಿಲ್ಲ. ಇಲ್ಲದಿದ್ದರೆ ಅಸ್ಪೃಶ್ಯರು ಕುಸ್ತಿ ಮಾಡುವುದಕ್ಕೆ ಬೇರೆ ಜಾತಿಯ ಸ್ಪರ್ಧಿಗಳು ಸಿಗುತ್ತಿರಲಿಲ್ಲ".[10]

ವಿದ್ಯೆ ಕಲಿಯಬೇಕೆಂದು ಆಸಕ್ತಿಯುಳ್ಳ ಅಸ್ಪೃಶ್ಯ ಜಾತಿಗಳ ಬಡಮಕ್ಕಳಿಗೆ ಶಾಹು ಅವರು ಎಲ್ಲ ಸವಲತ್ತುಗಳನ್ನು ನೀಡಿ ಅವರ ಬದುಕಿನಲ್ಲಿ ಬೆಳಕನ್ನು ಮೂಡಿಸಿದರು. ಇಸ್ಲಾಂಪುರದಲ್ಲಿ ಮಹರ್ ಜಾತಿಯ

ಒಬ್ಬ ಹುಡುಗ ಧ್ಯಾನ್‌ದೇವ ಧ್ರುವದೇವ್ ಘೋಲಪ್ ಜ್ಞಾನದ ಬಾಯಾರಿಕೆ ತಣಿಸಲು ಒಬ್ಬ ಬ್ರಾಹ್ಮಣ ಅಧ್ಯಾಪಕನ ತರಗತಿಯ ಹೊರಗಡೆ ಕುಳಿತಿದ್ದ ದೃಶ್ಯವನ್ನು ಕಂಡನು. ಸತ್ಯಶೋಧಕದ ಕಾರ್ಯಕರ್ತ ಭಾವುರಾವ್ ಪಾಟೀಲ ಅಧ್ಯಾಪಕನೊಡನೆ ಜಗಳವಾಡಿದನು ಮತ್ತು ಆ ಹುಡುಗನನ್ನು ಕರೆದುಕೊಂಡು ಕೊಲ್ಹಾಪುರದ ಶಾಹು ಮಹಾರಾಜರ ಬಳಿಗೆ ಬಂದನು. ಶಾಹು ಅವರು ಅವನ ಕಲಿಕೆಗೆ ವ್ಯವಸ್ಥೆಗೊಳಿಸಿದರು. ಹುಡುಗನು ಬುದ್ಧಿವಂತ, ಅವನು ಉನ್ನತ ವಿದ್ಯಾಭ್ಯಾಸವನ್ನು ಮುಗಿಸಿದನು. ತದನಂತರ ಅವನು ಅಸ್ಪೃಶ್ಯರ ಮೊದಲ ಪ್ರತಿನಿಧಿಯಾಗಿ ಬಾಂಬೆ ಪ್ರೆಸಿಡೆನ್ಸಿಯ ಶಾಸನ ಪರಿಷತ್ತಿಗೆ ಚುನಾಯಿತನಾದನು. ಈ ಧ್ಯಾನದೇವ ಘೋಲಪ್ ಬಾಬಾ ಸಾಹೇಬ್ ಅಂಬೇಡ್ಕರರ ಸಾರ್ವಜನಿಕ ಜೀವನದಲ್ಲಿನ ಸಹವರ್ತಿಗಳ ಮೊದಲ ಗುಂಪಿನಲ್ಲಿ ಒಬ್ಬನಾಗಿದ್ದನು.[11]

ಮತ್ತೊಂದು ನಿದರ್ಶನವು ಮಾಂಗ್ ಸಮುದಾಯಕ್ಕೆ ಸೇರಿದ ಕೃಷ್ಣಜಿ ಲಕ್ಷ್ಮಣ ಮೋರೆ ಹುಡುಗನಿಗೆ ಸಂಬಂಧಿಸಿದ್ದು. ಅವನಿಗೆ ಕಲಿಯಬೇಕೆಂಬ ತೀವ್ರವಾದ ತುರ್ತು ಒಂದು ದಿನ ಸೋನ್‌ತಲಿ ಕ್ಯಾಂಪಿನಲ್ಲಿ ಶಾಹು ಅವರನ್ನು ಭೇಟಿಯಾಗುವ ಧೈರ್ಯವನ್ನು ಪ್ರೇರೇಪಿಸಿತು ಮತ್ತು ಅವನು ಶಾಹು ಅವರ ಮುಂದೆ ಗೌರವಪೂರ್ವಕವಾಗಿ ತಲೆಬಾಗಿದನು. ಶಾಹುರವರು "ನೀನು ಯಾರು?" ಎಂದು ಗರ್ಜಿಸಿದರು. ಕೃಷ್ಣಜಿ ಎರಡು ಕೈಗಳನ್ನು ಜೋಡಿಸಿಕೊಂಡು ನಮ್ರವಾಗಿ ಹೇಳಿದನು. "ನಾನು ಮಾಂಗ, ನಾನು ಶಾಲೆಯಲ್ಲಿ ಕಲಿಯಬೇಕು" ಶಾಹು ಅವರು ಅವನ ಧೈರ್ಯಕ್ಕೆ ಮತ್ತು ಕಲಿಯುವ ಪ್ರೇಮಕ್ಕೆ ಮೆಚ್ಚಿದರು. 'ನಾಳೆ ಬಾ" ಎಂದು ಮತ್ತೆ ಗರ್ಜಿಸಿದರು. ಮಾರನೆಯ ದಿನ ಮಹಾರಾಜರು ಕೃಷ್ಣಜಿ ಅವರನ್ನು ಗಾಡಿಯಲ್ಲಿ ಕರೆದುಕೊಂಡು ಆರ್ಯ ಸಮಾಜದ ಗುರುಕುಲ ಶಾಲೆಗೆ ಹೋಗಿ ಅಲ್ಲಿ ಶಾಲೆಗೆ ಸೇರಿಸಿ ಊಟ ಮತ್ತು ವಸತಿ ವ್ಯವಸ್ಥೆಯನ್ನು ಮಾಡಿದರು. ನಂತರ ಅವನು ಸುಶಿಕ್ಷಿತನಾಗಿ ಲೋಕಸಭೆಗೆ ಎರಡು ಬಾರಿ ಸದಸ್ಯನಾದನು. ಕೃಷ್ಣಜಿ ಸ್ವತಃ ತನ್ನ ಅದ್ಭುತವಾದ ಕತೆಯನ್ನು ನಿರೂಪಿಸಿದ್ದಾರೆ[12]: ರಾಜರ್ಷಿ ಮುಂದೆ 'ನಾನು ಮಾಂಗ, ನಾನು ಶಾಲೆ ಕಲಿಯಬೇಕು' ಎಂಬುದು ಹೇಗೆ ಸಂಭವಿಸಿತು. ಮಹಾರಾಜರು 'ನಾಳೆ ಬಾ' ಎಂದು ಹೇಳಿದ ರೀತಿ, ಆ ನೆನಪು ನನ್ನನ್ನು ಈಗಲೂ ರೋಮಾಂಚನಗೊಳಿಸುತ್ತದೆ. ಇದು ಕನಿಷ್ಠವಾದರು ೨೪ ಗಂಟೆಗಳಲ್ಲಿ ಗುರುಕುಲದಲ್ಲಿ ಸೇರುವುದರೊಂದಿಗೆ ಕೊನೆಗೊಳ್ಳುತ್ತದೆ. ಮೇಲುನೋಟಕ್ಕೆ ಈ ಪ್ರಕರಣ ಸರಳವಾಗಿ ಕಾಣುತ್ತದೆ. ಮಹಾರಾಜರ ದೃಷ್ಟಿಯಲ್ಲಿ ಈ ಘಟನೆಯು ಸಮುದ್ರದ ನೀರಿನಲ್ಲಿ ಒಂದು ಹನಿ ಇದ್ದಂತೆ. ಏಕೆಂದರೆ ಅವರು ನನ್ನ ಜೀವನದಂತೆಯೇ ಅನೇಕರ ಜೀವನಗಳನ್ನು ರೂಪಿಸಿದ್ದಾರೆ. ಹೀಗಿರುವಾಗ ಅವರಿಗೆ ಸಾವಿರಾರು ವಿಷಯಗಳಲ್ಲಿ ಇದು ಸಾಮಾನ್ಯ ವಿಷಯ. ಬೇರೆಯವರಿಗೆ ಇದು ಅತಿ ಮಹತ್ವದ ವಿಷಯವಾಗಿರಲಾರದು".[13] ಜೀವನದಲ್ಲಿ ನೂರಾರು ಅಡ್ಡಿ-ಆತಂಕಗಳನ್ನು ನಿವಾರಿಸಿದರು ಮತ್ತು ಅವರ ಜೀವನದ ತೋಟ(ಉದ್ಯಾನವನ)ಗಳನ್ನು ಅರಳುವಂತೆ ಬೆಳೆಸಿದರು.

## ಡೈನಾಮೈಟಿನ ಸ್ಫೋಟ

ಆ ಕಾಲದಲ್ಲಿ ಅಸ್ಪೃಶ್ಯರು ಆಕಸ್ಮಿಕವಾಗಿ ಮುಟ್ಟಿದರೂ ಅದನ್ನು ವಿಟಲ*ವೆಂದು ಪರಿಗಣಿಸುತ್ತಿದ್ದರು. ಮಲಿನವಾದ ಮೇಲೆ ಶುದ್ಧೀಕರಣಕ್ಕಾಗಿ ಸ್ನಾನ ಮಾಡುವುದು ಮತ್ತು ಬಟ್ಟೆಗಳನ್ನು ಒಗೆಯುವ ಆಚರಣೆಗಳನ್ನು

---

* ಮಲಿನ ಜಾತಿಗಳು ಅಥವಾ ಮುಟ್ಟಾದಾಗ ಹೆಂಗಸರ ಸ್ಪರ್ಶವು ಸ್ಥಳೀಯ ಭಾಷೆಯಲ್ಲಿ ಮಲಿನ (ವಿಟಲ) ಎಂದು ಕರೆಯಲಾಗುತ್ತಿತ್ತು.

ಬ್ರಾಹ್ಮಣರು ಮಾತ್ರವಲ್ಲದೆ ಮರಾಠರು ಮತ್ತು ಇತರೆ ಜಾತಿಗಳವರು ಆಚರಿಸುತ್ತಿದ್ದರು. ಕಠಿಣವಾದ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳಿಂದ ಕೂಡಿದ ಮಡಿವಂತಿಕೆಯ ಸಮಾಜದಲ್ಲಿ ಅಸ್ಪೃಶ್ಯರ ಕೈಯಲ್ಲಿ ಸಾರ್ವಜನಿಕವಾಗಿ ಶಾಹುರವರು ಆಹಾರವನ್ನು ಸ್ವೀಕರಿಸುವುದು ಅಸ್ಪೃಶ್ಯತೆಯ ಬುನಾದಿಯನ್ನೇ ಡೈನಾಮೈಟ್ ಇಟ್ಟು ಸ್ಫೋಟಿಸುವಂಥದ್ದಾಗುತ್ತದೆ. ಮಾಂಗಾವಿನ ಸಮ್ಮೇಳನದಲ್ಲಿ ಅಸ್ಪೃಶ್ಯರನ್ನು ಸಂಬೋಧಿಸುತ್ತಾ ಅವರು ಸಾರ್ವಜನಿಕವಾಗಿ ಡಾ. ಅಂಬೇಡ್ಕರರನ್ನು ತಮ್ಮ ಜೊತೆಯಲ್ಲಿ ಊಟಮಾಡಲು ಆಹ್ವಾನಿಸಿದ್ದು ಮತ್ತು ಅದರ ಪ್ರಕಾರ ಅವರು ಸೊನ್‌ತಾಲಿ ಕ್ಯಾಂಪಿನಲ್ಲಿ ಅವರಿಗೆ ಭವ್ಯವಾದ ಸನ್ಮಾನ ಸಮಾರಂಭವನ್ನು ಮತ್ತು ಊಟದ ವ್ಯವಸ್ಥೆಯನ್ನು ಮಾಡಿಸಿದ್ದರು. ಹಲವರು ಬ್ರಾಹ್ಮಣೇತರ ಸಮುದಾಯದವರು ಮತ್ತು ಸತ್ಯಶೋಧಕದ ಕಾರ್ಯಕರ್ತರು ಕಾರ್ಯಕ್ರಮದಲ್ಲಿ ಹಾಜರಿದ್ದರು.[14] ಈ ಘಟನೆಯಿಂದ ಪ್ರಭಾವಿತರಾಗಿ ಅವರು ಏನೂ ಮಾಡಲಾಗಲಿಲ್ಲ. ನಂತರ ನಾಗಪುರದಲ್ಲಿ ಬಹಿಷ್ಕೃತಗೊಂಡ 'ಅಖಿಲಭಾರತ ಬಹಿಷ್ಕೃತರ ಸಮ್ಮೇಳನ' ನಡೆಯಿತು. ಈ ಸಮ್ಮೇಳನಕ್ಕೆ ಶಾಹು ಅವರು ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದಲ್ಲಿ ಉದ್ದೇಶಪೂರ್ವಕವಾಗಿ ಶಾಹುರವರು ಅಸ್ಪೃಶ್ಯರ ಕೈಗಳಿಂದ ಟೀಯನ್ನು ಬ್ರಾಹ್ಮಣ ಮತ್ತು ಇತರ ನಡುವೆ ಸ್ವೀಕರಿಸಿದರು.[15] ಅದರ ಮುಂದಿನ ತಿಂಗಳೇ ಅವರು ನಾಸಿಕದಲ್ಲಿ ತಮ್ಮ ಹಸ್ತದಿಂದಲೇ ಅಸ್ಪೃಶ್ಯರ ಕಟ್ಟಡದ ಅಸ್ತಿವಾರವನ್ನು ಹಾಕಿದರು. ಅದೇ ಕಾರ್ಯಕ್ರಮದಲ್ಲಿ ಸಾವಿರಾರು ಜನರ ಎದುರಿನಲ್ಲೆ ಅವರು ಅಸ್ಪೃಶ್ಯರ ಕೈಯಿಂದಲೇ ಚಹಾವನ್ನು ಸ್ವೀಕರಿಸಿದರು. ಅವರು ಈ ಕ್ರಮವನ್ನು ತತ್ಸಗಾವ್‌ನಲ್ಲಿ ಪುನರಾವರ್ತನೆಗೊಳಿಸಿದರು.[16]

ಶಾಹುರವರ ಕಾಲದಲ್ಲಿ ಗಂಗಾರಾಮ್ ಕಾಂಬ್ಳೆ ಅವರ ಕತೆ ಐತಿಹಾಸಿಕ ಹೆಸರನ್ನು ಗಳಿಸಿದೆ. ಗಂಗಾರಾಮರು ಸರಕಾರಿ ಕುದುರೆ ಲಾಯದಲ್ಲಿ ಕುದುರೆ ರಕ್ಷಕರಾಗಿದ್ದರು. ಒಂದು ದಿನ ಮರಾಠರಿಗೇ ಪ್ರತ್ಯೇಕವಾಗಿದ್ದ ಕಲ್ಯಾಣಿಯಲ್ಲಿ ನೀರನ್ನು ಮುಟ್ಟಿದರು. ಈ ಬಗ್ಗೆ ಮರಾಠರಿಗೆ ತಿಳಿಯಿತು ಮತ್ತು ಅವನನ್ನು ಅವರು ರಕ್ತ ಬರುವವರೆಗೆ ಹಿಗ್ಗಾಮುಗ್ಗಾ ಬಡಿದರು. ಆಗ ಶಾಹುರವರು ದೆಹಲಿಗೆ ಹೋಗಿದ್ದರು. ಅವರು ವಾಪಸ್ಸು ಬಂದ ಮೇಲೆ ಗಂಗಾರಾಮರು ತಮ್ಮ ಸಹೋದರರೊಂದಿಗೆ ಶಾಹುರವರ ದರ್ಶನ ಕೋರಿದರು. ಹೊಡೆತದಿಂದ ಉಂಟಾದ ರಕ್ತದ ಗಾಯಗಳನ್ನು ರಾಜರಿಗೆ ತೋರಿಸಿದನು. ಗಂಗಾರಾಮನ ಕತೆಯನ್ನು ಕೇಳಿದ ಮಹಾರಾಜರು ಸಿಟ್ಟುಗೊಂಡು ಮರಾಠ ಅಪರಾಧಿಗಳನ್ನು ಕರೆಸಿದರು ಮತ್ತು ಕುದುರೆ ಚಾಟಿಯಿಂದ ಅವರ ಬೆನ್ನಿಗೆ ಬಾರಿಸಿದರು. ತಮ್ಮ ಜಾತಿಯ ಸಹೋದರರೆಂದು ಅವರನ್ನು ಸುಮ್ಮನೆ ಬಿಡಲಿಲ್ಲ. ಅವರು ಗಂಗಾರಾಮ್‌ಗೆ ಹೇಳಿದರು "ನೀನು ಹೋಗು, ನಿನ್ನನ್ನು ಸೇವೆಯಿಂದ ತೆಗೆದು ಹಾಕಿದ್ದೇನೆ. ನಿನ್ನದೇ ಆದ ವ್ಯಾಪಾರವನ್ನು ಪ್ರಾರಂಭಿಸು, ನಿನಗೆ ಬೇಕಾದ ಸಹಾಯವನ್ನು ಕೇಳು ನಾನು ಕೊಡುತ್ತೇನೆ"ಂದು ಹೇಳಿದರು.[17]

ಅದೇ ಗಂಗಾರಾಮರು ಶಾಹುರವರ ಪ್ರೋತ್ಸಾಹದಿಂದ 'ಸತ್ಯ ಸುಧಾರಕ ಹೋಟೆಲ'ನ್ನು ಕೊಲ್ಹಾಪುರದ ಮುಖ್ಯರಸ್ತೆಯಲ್ಲಿ ಪ್ರಾರಂಭ ಮಾಡಿದರು. ಅವರು ಸವಾರಿ ಹೊರಟಾಗಲೆಲ್ಲ ಅವರ ಕುದುರೆ–ಗಾಡಿ ಗಂಗಾರಾಮರ ಹೋಟೆಲ್ ಮುಂದೆ ನಿಲ್ಲುತ್ತಿತ್ತು. ಅವರು ಗಾಡಿಯಲ್ಲಿಯೇ ಕುಳಿತು ಪ್ರತಿಧ್ವನಿಸುವ ಧ್ವನಿಯಲ್ಲಿ ಗಂಗಾರಾಮ್ ಹೋಟೆಲ್‌ಗೆ ಟೀ ಕೊಡಲು ಆರ್ಡರ್ ಮಾಡುತ್ತಿದ್ದರು. ಗಂಗಾರಾಮರು ತಟ್ಟೆಯಲ್ಲಿ ತಂದ ಟೀಯನ್ನು ಮಹಾರಾಜರು ಮಾತ್ರ ಗೌರವದಿಂದ ಕುಡಿಯುತ್ತಿರಲಿಲ್ಲ. ಗಾಡಿಯಲ್ಲಿದ್ದ ಬ್ರಾಹ್ಮಣರು ಮತ್ತು ಇತರೆ ಜಾತಿಯವರು ಟೀಯನ್ನು ಕುಡಿಯುತ್ತಿದ್ದರು. ಮಹಾರಾಜರೇ ನೀಡಿದ್ದ ಟೀಯನ್ನು ನಿರಾಕರಿಸುವುದಕ್ಕೆ ಯಾರಿಗೆ ಧೈರ್ಯ ಬರುತ್ತಿತ್ತು ಮತ್ತು ಅವರು ಸುಮ್ಮನೆ ಟೀಯನ್ನು ಕುಡಿಯುತ್ತಿದ್ದರು.[18]

ಶಾಹು ಅವರು ಗಂಗಾರಾಮರ ಜೀವನವನ್ನೇ ಕ್ರಾಂತಿಕಾರಿಯನ್ನಾಗಿ ಮಾಡಿಬಿಟ್ಟರು. ನಂತರ ಗಂಗಾರಾಮರು ಅಸ್ಪೃಶ್ಯರ ಸಮುದಾಯದಲ್ಲಿ ಗೌರವಾನ್ವಿತ ವ್ಯಕ್ತಿಯಾದರು ಮತ್ತು ಶಾಹು ಅವರಿಗೆ ಆತ್ಮೀಯ ಕಾರ್ಯಕರ್ತರಾದರು. ಮಹಾರಾಜರ ಮರಣಾನಂತರ ಅವರು ಡಾ. ಅಂಬೇಡ್ಕರರ ಅಸ್ಪೃಶ್ಯರ ವಿಮೋಚನಾ ಹೋರಾಟದ ಒಬ್ಬ ನಿಷ್ಠಾವಂತ ಅನುಚರರಾದರು ಮತ್ತು ಆ ವೇದಿಕೆಯಲ್ಲಿ ಅವರು ಕೊಲ್ಹಾಪುರದಲ್ಲಿ ಕೆಲಸ ಮಾಡಿದರು. ಗಂಗಾರಾಮರ ಮತ್ತೊಂದು ಸಾಧನೆಯನ್ನು ನಾವು ಗಮನಿಸಲೇಬೇಕು. ಮಹಾರಾಜರು ಸತ್ತ ಮೂರು ವರ್ಷಗಳ ನಂತರ ಶಾಹುರವರ ನೆನಪಿನಲ್ಲಿ ಒಂದು ಸ್ಮಾರಕವನ್ನು ನಿರ್ಮಿಸಲು ಮಹರ್ ಸಮುದಾಯದ ಒಂದು ತಂಡವನ್ನು ರಚಿಸಿ ೧೯೨೫ರಲ್ಲಿ ಕೊಲ್ಹಾಪುರದಲ್ಲಿ ಶಾಹು ಸ್ಮರಣೆಯ ಸ್ಮಾರಕವನ್ನು ಕಟ್ಟಿಸಿದರು.

ಇದು ಕೊಲ್ಹಾಪುರದಲ್ಲಿ ಶಾಹುರವರ ಮೊದಲ ಸ್ಮಾರಕವಾಗಿರಲಿಲ್ಲ. ಇಡೀ ಭಾರತಕ್ಕೆ ಸ್ಮಾರಕ ವಾಗಿತ್ತು. ಮತ್ತು ಅದು ಮಹರ್ ಸಮುದಾಯದಿಂದ ನಿರ್ಮಿತವಾದದ್ದು.[19] ಕೆಲವು ದಿನಗಳ ಹಿಂದೆ, ಕೊಲ್ಹಾಪುರದ ಜನರು ಸತ್ಯಸುಧಾರಕ ಹೋಟೆಲಿನ ಸ್ಥಳದಲ್ಲಿ ಗಂಗಾರಾಮರ ನೆನಪಿನಲ್ಲಿ ಒಂದು ಸ್ತಂಭವನ್ನು ಕಟ್ಟಿ ನಿಲ್ಲಿಸಿದರು.

ಶಾಹು ಮಹಾರಾಜರು ಅಸ್ಪೃಶ್ಯರ ಕೈಗಳಿಂದ ಸಾರ್ವಜನಿಕವಾಗಿ ಆಹಾರವನ್ನು ಸ್ವೀಕರಿಸುವ ಸಮಾರಂಭಗಳಲ್ಲಿ ತಮ್ಮ ರಾಜಕುಟುಂಬವನ್ನೂ ಸೇರಿಸಿಕೊಂಡಿದ್ದರು. ಗಂಗಾರಾಮ್ ಕಾಂಬ್ಳೆ ಅವರು ಅಂತಹ ಕಾರ್ಯಕ್ರಮದ ನೆನಪನ್ನು ಹೇಳಿದ್ದಾರೆ: "ಶಾಹು ಮಹಾರಾಜರು ಬೇಟೆಗೆ ಶಿರೋಲ್‌ಗೆ ಹೋಗಿದ್ದರು. ಅವರು ಶಿರೋಳಿನ ಮಹರರಿಗೆ ತಮ್ಮ ತಕ್ಯ*ದಲ್ಲಿ ಟೀ ವ್ಯವಸ್ಥೆ ಮಾಡಲು ಹೇಳಿದ್ದರು. ಅವರ ಮನೆಗಳಿಗೆ ಹೋಗಿ ಊಟ ಅಥವಾ ತಿನಿಸುಗಳನ್ನು ಸೇವಿಸುವುದು ತಮ್ಮ ಮನೆಗಳಿಗೆ ಬರಮಾಡಿಕೊಳ್ಳುವುದಕ್ಕಿಂತ ಒಂದು ದೊಡ್ಡ ಹೆಜ್ಜೆ ಇಟ್ಟಂತೆ. ಎಲ್ಲಕ್ಕಿಂತ ಮಿಗಿಲಾಗಿ ಅವರ ಮನೆಗಳಿಗೆ ತಾವೊಬ್ಬರೇ ಹೋಗುತ್ತಿರಲಿಲ್ಲ. ಆದರೆ ಅವರು ಅವರಿಗೆ 'ಹಳದಿ–ಕುಂಕುಮ' ಕಾರ್ಯಕ್ರಮವನ್ನು ಮಹಿಳೆಯರಿಗೆ ವ್ಯವಸ್ಥೆ ಮಾಡುವಂತೆ ಹೇಳುತ್ತಿದ್ದರು. ಅವರು ತಮ್ಮ ಜೊತೆಯಲ್ಲಿ ರಾಣಿಸಾಹೇಬ, ರಾಜಕುಮಾರಿ ಅಕ್ಕಸಾಹೇಬ ಮತ್ತು ಇಂದುಮತಿದೇವಿಯರನ್ನು ಮಹರ್ ನೆರೆಹೊರೆಗೆ ಕರೆದುಕೊಂಡು ಹೋಗುತ್ತಿದ್ದರು ಮತ್ತು ಮಹರ್ ಮಹಿಳೆಯರು ಅವರ ಹಣೆಗಳಿಗೆ ಕುಂಕುಮ ಹಚ್ಚುತ್ತಿದ್ದರು. ಮತ್ತು ಇಂದುಮತಿ ದೇವಿಗೆ ಕೆಲವು ಮಾತುಗಳನ್ನು ಈ ಸಂದರ್ಭದಲ್ಲಿ ಹೇಳಲು ಪ್ರೋತ್ಸಾಹಿಸುತ್ತಿದ್ದರು. ತಮ್ಮ ಜೊತೆಯಲ್ಲಿ ಬಂದ ಪ್ರತಿಯೊಬ್ಬನೂ ಅಸ್ಪೃಶ್ಯರಿಂದ ಟೀಯನ್ನು ಪಡೆದು ಕುಡಿಯಬೇಕಾಗಿತ್ತು. ಇಡೀ ಶಿರೋಳಹಳ್ಳಿ ಈ ಘಟನೆಯಿಂದ ಪ್ರಭಾವಗೊಂಡು ಶಾಹು ಅವರನ್ನು ಖುಷಿಗೊಳಿಸುವ ಸಲುವಾಗಿ ಅಸ್ಪೃಶ್ಯರ ಕೆಲವು ರಕ್ಷಕರು ಹುಟ್ಟಿಕೊಂಡರು. ಅಂಥ ಸ್ವಾರ್ಥ–ಪರ ನಟನೆಯು ಸಹ ಸಮಾಜಕ್ಕೆ ಉಪಯೋಗವಾಯಿತು".[20] ಕೊಲ್ಹಾಪುರದ ಇಡೀ ರಾಜಕುಟುಂಬ ಮಹರರ ಗುಡಿಸಿಲಿಗೆ ಹೋಗಿ ಅವರೊಂದಿಗೆ ಟೀ ಸ್ವೀಕರಿಸಿದರು. ಆ ಕಾಲದಲ್ಲಿ ಭಾರತದಲ್ಲಿ ಅತ್ಯುತ್ತಮವಾದ ಪ್ರತಿಮೆಯಾಗಿತ್ತು. ಇದು ಖಂಡಿತವಾಗಿ ಒಂದು ಮಹಾ ಘಟನೆಯೆ. ಈ ಬಗ್ಗೆ ದೇವರೇ ಅಸೂಯೆ ಪಡಬೇಕು.

---

* ಹಳ್ಳಿಯಲ್ಲಿ ಮಹರರು ಸಭೆ ಸೇರುವ ಸ್ಥಳ.

**ಧೇಡ್‌ಗಳ ಒಬ್ಬ ಮಹಾರಾಜ**

ವಿದರ್ಭದ ಅಸ್ಪೃಶ್ಯರ ನಾಯಕರಾದ ಅಕ್ಕಾಜಿಗವಾಯಿ ಅವರು ತಮ್ಮ ಜೀವನಚರಿತ್ರೆಯಲ್ಲಿ ಶಾಹುರವರು ವಿಶೇಷ ಕಾಳಜಿಯಿಂದ ಅಸ್ಪೃಶ್ಯ ಜನರನ್ನು ಮತ್ತು ಅವರ ನಾಯಕರನ್ನು ವಿಚಾರಿಸಲು ಅವರನ್ನು ಭೇಟಿಯಾಗುತ್ತಿದ್ದರೆಂದು ನಿರೂಪಿಸಿದ್ದಾರೆ. ಗವಾಯಿ ಅವರು ಶಾಹುರವರನ್ನು ನಾಗಪುರದಲ್ಲಿ ನಡೆಯುವ ಅಖಿಲ ಭಾರತೀಯ ಬಹಿಷ್ಕೃತ ಸಮಾಜದ ಸಮಾವೇಶಕ್ಕೆ ಆಹ್ವಾನಿಸಲು ಬಂದಿದ್ದರು. ಅವರು ವಿದ್ಯಾರ್ಥಿ ನಿಲಯದಲ್ಲಿ ತಂಗಿದ್ದರು. ಶಾಹುರವರು ಅವರು ಬಂದಿರುವುದನ್ನು ತಿಳಿದ ಕೂಡಲೇ ತಮ್ಮ ಅಧಿಕಾರಿಯನ್ನು ಅವರನ್ನು ಸರಕಾರಿ ಅತಿಥಿಗೃಹಕ್ಕೆ ಕರೆದುಕೊಂಡು ಬರಲು ಕಳುಹಿಸಿದ್ದರು. ಅವರು ಸತ್ಯಶೋಧಕ ಕಾರ್ಯಕರ್ತ ಗಣಪತ್‌ರಾವ್ ಕದಮ್ ಮತ್ತು ಬಾಬುರಾವ್ ಯಾದವ್ ಅವರನ್ನು ಊಟದಲ್ಲಿ ಸೇರುವುದಕ್ಕೆ ಕಳುಹಿಸಿದ್ದರು. ಒಂದು ದಿನ ಅವರನ್ನು ಸೋನ್‌ತಾಲಿ ಕ್ಯಾಂಪ್‌ಗೆ ಕರೆ ತಂದಿದ್ದರು ಮತ್ತು ತಮ್ಮದೇ ಆದ ಗುಂಪಿನಲ್ಲಿ ರಾಜಕೊಡುಗೆಯನ್ನು ನೀಡಿದ್ದರು. ಸಂಭಾಷಣೆಯಲ್ಲಿ ಸಮಾವೇಶದ ವಿಷಯವನ್ನು ಹೇಳಿದಾಗ ಅವರು "ಲೋಕಮಾನ್ಯ ತಿಲಕರನ್ನು ಏಕೆ ಕರೆಯಬಾರದು ನನ್ನ ಜಾಗಕ್ಕೆ?" ಎಂದು ಹೇಳಿದರು. ಗವಾಯಿಗಳು ಪ್ರತ್ಯುತ್ತರ ನೀಡಿದರು: "ಲೋಕಮಾನ್ಯ ತಿಲಕರಲ್ಲದೆ, ದೇವರ ಅವತಾರವೆಂದು ಭಾವಿಸಿರುವ ಹಿಂದುಗಳ ರಾಮಚಂದ್ರರವರನ್ನು ಕರೆಸಬಹುದು, ಅವರು ನಮ್ಮ ಅಸ್ಪೃಶ್ಯರ ಏಳಿಗೆಗೆ ವಿರುದ್ಧವಾಗಿದ್ದಾರೆ. ನಮ್ಮೊಂದಿಗೆ ಅವರು ವರ್ತಿಸುವ ರೀತಿಯನ್ನು ನೋಡಿದರೆ ನಮ್ಮ ನೀತಿ–ತತ್ವಗಳಿಗೆ ಅವರು ತದ್ವಿರುದ್ಧ. ನಾನು ಮುಚ್ಚು ಮರೆಯಿಲ್ಲದೆ ಮಾತನಾಡಿದ್ದಕ್ಕೆ ಕ್ಷಮಿಸಿ, ಆದ್ದರಿಂದಲೇ ನಾನು ನಿಮ್ಮನ್ನು ಭೇಟಿ ಮಾಡಿದ್ದು". ಸ್ಪಂದಿಸಿದ ಶಾಹು ಹೇಳಿದರು, "ನಾನು ತನ್ನ ರಾಜ್ಯವನ್ನು ಕಳೆದುಕೊಂಡರೂ ಪರವಾಗಿಲ್ಲ, ನಾನು ಖಂಡಿತವಾಗಿ ನನಗೆ ಸಾಧ್ಯವಾದದ್ದನ್ನು ನಿಮಗೆ ಮಾಡುತ್ತೇನೆ".[21]

ಗವಾಯಿ ಹೊರಟುಹೋದ ಮೇಲೆ ಶಾಹು ಪ್ರೀತಿಪೂರ್ವಕವಾಗಿ ಒಂದು ಪತ್ರ ಬರೆದರು. ಆ ಪತ್ರದಲ್ಲಿ ಅವರು ಹೇಳುತ್ತಾರೆ: "ತಾನು ಆಹ್ವಾನವಿಲ್ಲದೆ, ಇದು ತಮ್ಮ ಮನೆಯೆಂದು ಭಾವಿಸಿ ಕರವೀರಕ್ಕೆ ಬಂದಿದ್ದೀರಿ ಮತ್ತು ನಮ್ಮ ಭೇಟಿ ಮಾಡಿದ್ದೀರಿ. ಅಂತಹ ವರ್ತನೆ ಯಾರಿಗೂ ಸಾಧ್ಯವಿಲ್ಲ. ಆದರೆ ಅದು ನಿಜವಾದ ಒಬ್ಬ ಸದಾಶಯ ಬಯಸುವ ಒಬ್ಬ ಸ್ನೇಹಿತನಿಗೆ ಮಾತ್ರ ಸಾಧ್ಯ. ನಿಮ್ಮ ನಡವಳಿಕೆ–ವರ್ತನೆ ನನಗೆ ತುಂಬ ಹಿಡಿಸಿತು. ಆದ್ದರಿಂದ ನೀವು ನಿಮ್ಮ ಮನೆಯೆಂದು ಕರವೀರವನ್ನು ತಿಳಿದುಕೊಳ್ಳಿ. ಮತ್ತೆ ಮತ್ತೆ ಭೇಟಿಯಾಗುತ್ತಿರೋಣ. ನೀವು ಆ ರೀತಿ ಮಾಡಿದರೆ ನಾನು ಬಹಳ ಸಂತೋಷಪಡುವೆ".[22] ಶಾಹು ಅವರು ಅಸ್ಪೃಶ್ಯರನ್ನು ನಿಜವಾದ ಮಮಕಾರದಿಂದ ಸತ್ಕರಿಸಿದ್ದಾರೆ. ಶಾಹು ಅವರ ಬಗ್ಗೆಯಿರುವ ಕೃತಜ್ಞತೆಯ ಭಾವ ಆಕಾಶದಷ್ಟು ಉನ್ನತವಾದುದು.

ನಾಗಪುರಕ್ಕೆ ಮಹಾರಾಜರು ಆಗಮಿಸಿದಾಗ ಅಸ್ಪೃಶ್ಯರ ಸಮುದಾಯ ಭವ್ಯ ಸಾಗತವನ್ನು ಕೋರಿತು ಮತ್ತು ಭಾರಿ ಮೆರವಣಿಗೆಯಲ್ಲಿ ಬರಮಾಡಿಕೊಳ್ಳಲಾಯಿತು. ಜನರು ಅವರ ಮೇಲೆ ಹೂಮಳೆ ಸುರಿದರು ಮತ್ತು ಅವರ ವಿಜಯಕ್ಕೆ ಭಾರಿ ಘೋಷಣೆಗಳನ್ನು ಕೂಗಿದರು.

ಹಿಂದಿನ ದಿನ, ಜನಾಂಗೀಯ ಮೇಲರಿಮೆಯ ನಾಯಕಮಣಿಗಳು ಶಾಹುರವರನ್ನು ತೆಗಳಲು ಮತ್ತು ಖಂಡಿಸಲು ನಾಗಪುರದ ತುಂಬ ಧೇಡರ (ಮಹರರ) ರಾಜ ಶಾಹು ಎಂದು ವಿವರಿಸುವ ಭಿತ್ತಿ ಪತ್ರಗಳನ್ನು ಅಂಟಿಸಿದ್ದರು. ರಘುಜಿರಾವ್ ಭೋನ್ಸಲೆ ಅವರು ಸ್ವತಃ ಸಮ್ಮೇಳನದಲ್ಲಿ ಶಾಹು ಅವರು ಭಾಗವಹಿಸುವುದನ್ನು ಒಪ್ಪಿರಲಿಲ್ಲ. ಅವರು ಶಾಹು ಅವರನ್ನು ತೆಗಳಲು ನಾಗಪುರವನ್ನು ಬಿಟ್ಟು ಹೊರಗೆ

ಹೋಗಿದ್ದರು. ಜಾತಿವಾದಿಗಳು ತೋರಿಸಿದ ಅವಮಾನದಿಂದ ಅಸ್ಪೃಶ್ಯರು ಸಮಾಧಾನಗೊಳಿಸಲು ಶಾಹು ಹೇಳಿದರು: "......ನನ್ನನ್ನು ಧೇಡ್‌ಗಳ ರಾಜ ಎಂದು ಕರೆದು ನಗುವುದಕ್ಕೆ ಪ್ರಯತ್ನಿಸಿದರೂ ನಾನು ಇದನ್ನು ಅವಮಾನವೆಂದು ಭಾವಿಸುವುದೇ ಇಲ್ಲ. ಇದು ನನಗೆ ಒಂದು ವಿಶೇಷ ಗೌರವ".[23] ಡಾ.ಅಂಬೇಡ್ಕರರು ಈ ಸಮ್ಮೇಳನದಲ್ಲಿ ಹಾಜರಿದ್ದರು.

ಅಸ್ಪೃಶ್ಯರ ಸಭೆ-ಸಮಾರಂಭಗಳಲ್ಲಿ ಭಾಗವಹಿಸುವುದು ಅವರೊಂದಿಗೆ ಮುಕ್ತವಾಗಿ ಬೆರೆಯುವುದು ಮತ್ತು ಅವರ ಕೈಗಳಿಂದ ಅನ್ನ ಸ್ವೀಕರಿಸುವುದು ಇಂದು ಮಹತ್ವದ ವಿಷಯವಲ್ಲ. ಆದರೆ ಈ ಎಲ್ಲಾ ಕ್ರಿಯೆಗಳು ಅಂದು ಮಹಾ ದಿಟ್ಟಸಾಹಸದ ಕೆಲಸಗಳಾಗಿದ್ದವು. ಸಾಮಾಜಿಕ ಕಾರ್ಯಕರ್ತರಾದ ಅಪ್ಪಾ ಸಾಹೇಬ ದದಗೊಂಡ ಪಾಟೀಲರು ಸಂಘಟಿಸಿದ ಮನ್‌ಗಾವ್‌ನ ಸಮ್ಮೇಳನವನ್ನು ಅವರ ಮತಧರ್ಮದ ಜೈನರು ಬಹಿಷ್ಕರಿಸಿದ್ದು ಮಾತ್ರವಲ್ಲದೆ ಇಡೀ ಹಳ್ಳಿಯೇ ಬಹಿಷ್ಕರಿಸಿತ್ತು. ಹಳ್ಳಿಯ ಕ್ಷೌರಿಕರು ಮತ್ತು ಅಗಸರು ಸಹ ಅವರಿಗೆ ಬಹಿಷ್ಕಾರ ಹಾಕಿದ್ದರು. ಅಂತಿಮವಾಗಿ ವಿಷಯ ಶಾಹು ಅವರಿಗೆ ಮುಟ್ಟಿದಾಗ ಅವರು ಜೈಲು ಶಿಕ್ಷೆ ನೀಡುವುದಾಗಿ ಅವರು ಬೆದರಿಕೆ ಹಾಕಿದರು. ಆಗ ಅವರು ಹಿಂಜರಿದು ತಮ್ಮೊಂದಿಗೆ ಪಾಟೀಲರನ್ನು ಮತ್ತೆ ಸೇರಿಸಿಕೊಂಡರು.[24] ಅವರನ್ನು ಬಹಿಷ್ಕರಿಸಿದ ಮತ್ತು ಕಿರುಕುಳ ನೀಡಿದ ಜನರು ಮತ್ಯಾರು ಅಲ್ಲ, ಅವರೆಲ್ಲರೂ ಬ್ರಾಹ್ಮಣೇತರರು. ಅದು ಅಂದಿನ ದಿನಗಳಲ್ಲಿ ಅಸ್ಪೃಶ್ಯರ ಬಗ್ಗೆ ಸಾಮಾನ್ಯವಾಗಿದ್ದ ಸಮಾಜದ ಮನಸ್ಥಿತಿಯನ್ನು ಎತ್ತಿ ತೋರಿಸುತ್ತದೆ. ಶಾಹುರವರು ಎಲ್ಲೆಲ್ಲಿ ಅಗತ್ಯವಿತ್ತೋ ಅಲ್ಲಲ್ಲಿ ಬ್ರಾಹ್ಮಣೇತರರನ್ನು ಸುಮ್ಮನೆ ಬಿಡಲಿಲ್ಲ.

---

೧೨

# ಅಸ್ಪೃಶ್ಯರ ವಿಮೋಚನೆ – ಸಿದ್ಧಾಂತ ಮತ್ತು ಮಾರ್ಗದರ್ಶನ

**ನಾ**ವು ಈಗ ಛತ್ರಪತಿ ಶಾಹುರವರು ಅಸ್ಪೃಶ್ಯರ ವಿಮೋಚನೆ ಮತ್ತು ಈ ಸಮಸ್ಯೆಯ ಕುರಿತು ಅವರ ಚಿಂತನೆ ಮತ್ತು ಮಾರ್ಗದರ್ಶನದ ಕಡೆಗೆ ಬರೋಣ. ಅವರು ಕಾಲದಿಂದ ಕಾಲಕ್ಕೆ ವಿವಿಧ ಜನರೊಡನೆ ಮಾಡಿದ ಪತ್ರ ವ್ಯವಹಾರಗಳಲ್ಲಿ ಮತ್ತು ಹಲವಾರು ಸಭೆ ಮತ್ತು ಸಮಾರಂಭಗಳಲ್ಲಿ ಮಾಡಿದ ಭಾಷಣಗಳಲ್ಲಿ ಅವರ ಚಿಂತನೆ ವ್ಯಕ್ತವಾಗಿದೆ.

ಬಾಂಬೆಯ ಗೌರ್ನರ್ ಮತ್ತು ತಮ್ಮ ಆತ್ಮೀಯ ಸ್ನೇಹಿತರಾಗಿದ್ದ ಲಾರ್ಡ್ ಸಿಡೆನ್ ಹ್ಯಾಮ್ ಅವರಿಗೆ ಜೂನ್ ೧೯೧೮ರಲ್ಲಿ ಬರೆದ ಪತ್ರದಲ್ಲಿ ಶಾಹು ಹೇಳುತ್ತಾರೆ, "ನಿಜವಾಗಿ, ಲಕ್ಷಾಂತರ ಮೂಕಪ್ರಜೆಗಳ ಏಳಿಗೆಗಾಗಿ ಶ್ರಮಿಸುವುದು ನಿಷ್ಪ್ರಯೋಜನವಾದ ಕರ್ತವ್ಯವೆಂದು ತೋರಬಹುದು. ಆದಾಗ್ಯೂ ಹಲವಾರು ತ್ಯಾಗಗಳಿಂದ ಅದನ್ನು ಔದಾರ್ಯದಿಂದ ನೆರವೇರಿಸಬೇಕಾಗಿದೆ. ಇದನ್ನು ಮಾಡುವ ನನ್ನ ಏಕೈಕ ಉದ್ದೇಶ ಅಸಹಾಯಕರಿಗೆ, ಅನಾಥರಿಗೆ, ಮುಗ್ಧರಿಗೆ ಮತ್ತು ದಮನಿತರಿಗೆ ಸಹಾಯ ಮಾಡುವುದು".[1] ಡಾ. ಬಾಬಾಸಾಹೇಬ ಅಂಬೇಡ್ಕರರು ಅಸ್ಪೃಶ್ಯರ ನಾಯಕರೆಂದು ಸಾರ್ವಜನಿಕ ದೃಶ್ಯದಲ್ಲಿ ಇನ್ನೂ ಬರಬೇಕಾಗಿದೆ ಎಂಬುದನ್ನು ಇಲ್ಲಿ ನಾವು ಗಮನಿಸಬೇಕು. ಅಸ್ಪೃಶ್ಯರು ತಮ್ಮ ನೋವಿನ ಧ್ವನಿಯನ್ನು ಎತ್ತುವುದಕ್ಕೆ ತಮಗೆ ನಾಯಕನಿಲ್ಲ ಎಂಬುದರ ಬಗ್ಗೆ ಶಾಹುರವರು ತುಂಬಾ ಚಿಂತಿತ, ಅಸಂತುಷ್ಟರಾಗಿದ್ದರು. ಮೊದಲನೇ ಬಾರಿಗೆ ಹೆಚ್ಚು ವಿದ್ಯಾವಂತರಾದ ಡಾ. ಅಂಬೇಡ್ಕರರನ್ನು ನೋಡಿದಾಗ ಶಾಹುರವರು ಅಂತಿಮವಾಗಿ ಅಸ್ಪೃಶ್ಯರಿಗೆ ಸಹಜವಾದ ನಾಯಕ ಸಿಕ್ಕಿದನೆಂದು ಬಹಳ ಸಂತೋಷಪಟ್ಟರು.

## ಬ್ರಾಹ್ಮಣಶಾಹಿತ್ವ ಅಸ್ಪೃಶ್ಯರ ಆತ್ಮ–ಗೌರವವನ್ನು ಹಾಳುಮಾಡಿತು

ಕಟ್ಟಕಡೆಗೆ ಶಾಹು ಮತ್ತು ಡಾ. ಅಂಬೇಡ್ಕರರು ಅಸ್ಪೃಶ್ಯತೆಯ ಕಳಂಕವನ್ನು ತೊಡೆದುಹಾಕಲು ತಮ್ಮ ಅಂತರ್‌ಪ್ರಕ್ರಿಯೆ(Interactions)ಗಳನ್ನು ಹೆಚ್ಚಿಸಿಕೊಂಡರು, ಅವರು ಆಗಾಗ ಪತ್ರವ್ಯವಹಾರ ನಡೆಸಿದರು ಮತ್ತು ತಮ್ಮ ವಿಷನ್ನು (ಗುರಿ)ಗಳ ಬಗ್ಗೆ ಚರ್ಚಿಸಿದರು. .......೧೯೨೦ರಲ್ಲಿ ತಮ್ಮ ಪತ್ರಗಳ ಒಂದು ಪತ್ರದಲ್ಲಿ ಶಾಹುರವರು ಅಸ್ಪೃಶ್ಯ ಸಮುದಾಯ ಘನತೆ ಮತ್ತು ಆತ್ಮ–ಗೌರವವನ್ನು ಕಳೆದುಕೊಂಡಿದೆಯೆಂದು ಕೊರಗಿದರು. ಅವರು ಹೇಳುತ್ತಾರೆ, "ಈ ದಿನಗಳಲ್ಲಿ ಅಸ್ಪೃಶ್ಯರ ಸ್ಫೂರ್ತಿ ವಿಶೇಷವಾಗಿ ಮಹರರದು ಸರ್ವನಾಶವಾಗಿದೆ. ಅವರು ಆತ್ಮ–ಗೌರವದ ಯಾವುದೇ ಸಾದೃಶ್ಯವನ್ನು ಹೊಂದಿಲ್ಲ. ಅವರನ್ನು ಮಾನವರೆಂದೇ ಪರಿಗಣಿಸಿಲ್ಲ. ಮತ್ತು ಅವರ ಪರಿಸ್ಥಿತಿಗಳು ಪ್ರಾಣಿಗಳಿಗಿಂತ ತೀರಾ ಹದಗೆಟ್ಟಿದೆಯೆಂದ ಮನವರಿಕೆ ಅಂತಹ ದುಃಸ್ಥಿತಿಯಲ್ಲಿ ಅವರ ಮನಸ್ಸುಗಳನ್ನು ಹೇಗೆ ಬಾಧೆಪಡಿಸಲಾಗುವುದು? ಇದರ ಹಿಂದೆ ಇರುವ ಕಾರಣ ಯಾವುದು? ಅವರಿಗೆ ತಿಳುವಳಿಕೆ ನೀಡಲು ಯಾರು ಇಲ್ಲ ಎಂಬ ತೀರ್ಮಾನಕ್ಕೆ ನಾನು ಬಹಳ ಯೋಚಿಸಿದ ನಂತರ

ಬಂದಿದ್ದೇನೆ. ಯಾವುದೇ ಯೋಗ್ಯ ಹೆಸರು ಕಂಡುಬಂದರೂ ಅದನ್ನು ಒಪ್ಪಿಕೊಳ್ಳಲು ಮನಸ್ಸು ಬರುತ್ತಿಲ್ಲ. ಶಿರೋಲ್‌ನಲ್ಲಿ ನಾನು ತಂಗಿರುವಾಗ ನಾನು ಎಲ್ಲಾ ಮಹರರನ್ನು ನನ್ನ ಬಂಗ್ಲೆಗೆ ಕರೆದಿದ್ದೆ ಮತ್ತು ನನ್ನ ಕಾರಿನಲ್ಲಿ ಒಂದು ಸುತ್ತು ಹಾಕಲು ಕರೆದುಕೊಂಡು ಹೋಗಿದ್ದೆ. ಆದರೆ ಅವರು ಇದರ ಅರ್ಥವನ್ನೇ ತಿಳಿದುಕೊಂಡಿಲ್ಲ. "ಬೇಡ, ಬೇಡ, ಹತ್ತಿರ ಬರಬೇಡಿ" ಎಂದು ಹೇಳಿ ಗಲಿಬಿಲಿಗೊಂಡರು. ನಾನು ಅವರನ್ನು ಹತ್ತಿರ ಕರೆದದ್ದು ನಾನು ಮಹಾತಪ್ಪು ಮಾಡಿದ್ದೇನೆಂದು ಅವರು ಭಾವಿಸಿದರು. ಮತ್ತೆ ಇದಕ್ಕೆ ಕಾರಣವೇನು? ಇದಕ್ಕೆ ಮುಖ್ಯ ಕಾರಣ ಬ್ರಾಹ್ಮಣರ ಭಯಂಕರವಾದ ಸರ್ವಾಧಿಕಾರತ್ವದ ನೌಕರಶಾಹಿ ಮತ್ತು ಅವರ ಕಾನೂನುಗಳು.[2]

ದಮನಕಾರಿ ಬ್ರಾಹ್ಮಣತ್ವದ ಹಲವು ಶತಮಾನಗಳ ಅಧಿಪತ್ಯ (ಪ್ರಾಬಲ್ಯ) ಅಸ್ಪೃಶ್ಯರ ಘನತೆ, ಆತ್ಮ-ಗೌರವ ಮತ್ತು ಆತ್ಮ-ವಿಶ್ವಾಸಗಳೆಂಬ ಮೌಲ್ಯಗಳನ್ನೆ ಧ್ವಂಸಮಾಡಿದೆಯೆಂದು ಶಾಹು ಮಹಾರಾಜರು ಭಾವಿಸಿದ್ದರು. ಅವರು ಅವರನ್ನು ಸುಧಾರಿಸಲು ಮತ್ತು ಅವರಲ್ಲಿ ಈ ಮೌಲ್ಯಗಳನ್ನು ಪುನಃ ಮೂಡಿಸಲು ಪ್ರಯತ್ನಿಸುತ್ತಿದ್ದರು. ಅಸ್ಪೃಶ್ಯರು ಕಾನೂನು ವೃತ್ತಿ ಕೈಗೊಳ್ಳಲು ಅವರು ಅಸ್ಪೃಶ್ಯರಿಗೆ ಸನದುಗಳನ್ನು ನೀಡುವ ಪ್ರಯತ್ನ ಮಾಡಿದರು. ಈ ಸನದುಗಳ ಬಗ್ಗೆ ಬ್ರಾಹ್ಮಣರು ಗುಲ್ಲೆಬ್ಬಿಸಿದರು. ಅದೇ ಸನದುಗಳನ್ನು ಬ್ರಾಹ್ಮಣರಿಗೆ ಮತ್ತು ಇತರರಿಗೆ ನೀಡಿದಾಗ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ನಾಗಪುರದ ಸಮ್ಮೇಳನವನ್ನು ಕುರಿತ ಭಾಷಣದಲ್ಲಿ ಶಾಹು ಹೇಳುತ್ತಾರೆ, "ಮಹರರು ಮತ್ತು ಮಾಂಗರು ಮೆಟ್ರಿಕ್ಯುಲೇಷನ್ ಪಾಸು ಮಾಡಿದಾಗ ಅಥವಾ ಇಂಗ್ಲೀಷಿನಲ್ಲಿ ಒಳ್ಳೆಯ ತರಬೇತಿ ಪಡೆದಾಗ ಅವರನ್ನು ಉನ್ನತ ವೃತ್ತಿಗಳಿಗೆ ತಂದಾಗ ಬ್ರಾಹ್ಮಣ ಸಮುದಾಯ ಹೆಚ್ಚು ಆತಂಕಪಟ್ಟಿತು. ಈ ಮಹರರು ಮತ್ತು ಮಾಂಗರು ಕ್ರೈಸ್ತ ಮತಕ್ಕೆ ಪರಿವರ್ತಿತರಾದಾಗ ನನ್ನ ಕ್ರಮವನ್ನು ಟೀಕಿಸುತ್ತಿರಲಿಲ್ಲ. ವಿದ್ಯೆಯಲ್ಲಿ ಮತ್ತು ಬುದ್ಧಿವಂತಿಕೆಯಲ್ಲಿ ಅಸ್ಪೃಶ್ಯರಿಗಿಂತ ಕಳಪೆಯಾಗಿದ್ದ ಮೇಲು ಜಾತಿಗಳ ವ್ಯಕ್ತಿಗಳಿಗೆ ಭಾರತದ ಹಲವು ಸಂಸ್ಥಾನಗಳಲ್ಲಿ ಕಾನೂನು ವೃತ್ತಿ ಕೈಗೊಳ್ಳಲು ಪರವಾನಗಿ ನೀಡಲಾಗಿತ್ತು. ಈ ಪ್ರಕರಣಗಳಲ್ಲಿ ಸಮಾನ ಹೇಗೆ ಹೀನಾಯ ಮಟ್ಟಕ್ಕೆ ಬರಲಿಲ್ಲ. ಇಲ್ಲಿಯವರೆಗೆ ಅಸ್ಪೃಶ್ಯರಿಗೆ ಪದ್ಧತಿ-ಸಂಪ್ರದಾಯ, ಕಾನೂನು ಅಥವಾ ಹೆದರಿಸುವಿಕೆಗಳಿಂದ ಅವರಿಗೆ ನಿಷಿದ್ಧವಾಗಿದ್ದ ಹುದ್ದೆಗಳು (ವೃತ್ತಿಗಳು) ಅಸ್ಪೃಶ್ಯರಿಗೆ ಸಿಗಬೇಕೆಂಬ ಉದ್ದೇಶದಿಂದ ಸನದುಗಳನ್ನು ಅವರಿಗೆ ನೀಡಲಾಗಿತ್ತು. ಇದರಿಂದ ಅವರು ತಮ್ಮ ಪರಿಸ್ಥಿತಿಗಳನ್ನು ಸುಧಾರಿಸಿಕೊಂಡು ತಾವು ಬೇರೆಯವರಂತೆಯೇ ಒಳ್ಳೆಯವರೆಂಬ ಆತ್ಮವಿಶ್ವಾಸವನ್ನು ತುಂಬಿಕೊಂಡು ಮನವರಿಕೆ ಮಾಡಿಕೊಳ್ಳಲಿ ಎಂಬುದೇ ನನ್ನ ಉದ್ದೇಶ".[3]

ಅಸ್ಪೃಶ್ಯರ ಭೌತಿಕ ಗುಲಾಮಿತನದೊಂದಿಗೆ ಮಾನಸಿಕ ಗುಲಾಮಿತನವನ್ನು ನಾಶಪಡಿಸಬೇಕೆಂದು ಮತ್ತು ಅದು ಆಗಬೇಕಾಗಿದ್ದರೆ ಅವರಲ್ಲಿ ಆತ್ಮ-ವಿಶ್ವಾಸವನ್ನು ತುಂಬಬೇಕೆಂದು ರಾಜರ್ಷಿ ಭಾವಿಸಿದ್ದರು. ಅವರಲ್ಲಿ ಆತ್ಮ-ವಿಶ್ವಾಸವನ್ನು ತುಂಬಲು ಶಾಹುರವರು ಸಭೆ-ಸಮಾರಂಭಗಳಲ್ಲಿ ಹಲವಾರು ಭಾಷಣಗಳನ್ನು ಮಾಡುವ ಅವಕಾಶಗಳನ್ನು ಬಳಸಿಕೊಂಡರು. ನಾಗಪುರದ ಸಮ್ಮೇಳನದಲ್ಲಿ ಅಸ್ಪೃಶ್ಯರಲ್ಲಿ ಆತ್ಮ-ವಿಶ್ವಾಸ ಮತ್ತು ಆತ್ಮ-ಗೌರವವನ್ನು ಹೆಚ್ಚು ತೀವ್ರಗೊಳಿಸುವುದಕ್ಕೆ ಅವರು ಹೇಳುತ್ತಾರೆ, "......ಯಾರಿಗೆ ಆಗಲಿ 'ಅಸ್ಪೃಶ್ಯ' ಎಂಬ ಪದ ಮೊದಲಿಗೆ ಹಚ್ಚುವ ಅವಮಾನಗೊಳಿಸುವಂತಹದು. ನೀವು ಅಸ್ಪೃಶ್ಯರಲ್ಲ. ನೀವು ಈ ಭಾರತ ರಾಷ್ಟ್ರದ ಅವಿಭಾಜ್ಯ ಅಂಗವಾಗಿದ್ದೀರಿ. ನಿಮ್ಮನ್ನು ಅಸ್ಪೃಶ್ಯರೆಂದು ಕರೆಯುವ ಜನರಿಗಿಂತ ನೀವು ಹೆಚ್ಚು ಬುದ್ಧಿವಂತರು, ಸಾಹಸವಂತರು, ಚಿಂತನಾಶೀಲರು, ಹೆಚ್ಚು ತ್ಯಾಗಶೀಲರು, ನಾನು ನಿಮ್ಮನ್ನು

ಅಸ್ಪೃಶ್ಯರೆಂದು ಭಾವಿಸುವುದಿಲ್ಲ. ನಾವು ಸಮಾನ ಸಹೋದರರೆಂದು ಭಾವಿಸಿ ನೀವು ವ್ಯಾಪಾರ–ವ್ಯವಹಾರಗಳನ್ನು ಕೈಗೊಳ್ಳಿ. ಅಷ್ಟೆ ಅಲ್ಲದೆ, ನಮ್ಮ ಹಕ್ಕುಗಳು ಖಂಡಿತವಾಗಿ ಸಮಾನವಾಗಿವೆ".[4]

ನಾಸಿಕದ ಸಭೆಯಲ್ಲಿ ಶಾಹುರವರು ವಿಶ್ವದಲ್ಲಿ ಎಲ್ಲೂ ಇಲ್ಲದ ಜಾತಿ–ತಾರತಮ್ಯತೆಯ ಪದ್ಧತಿಯಿಂದ ಅಸ್ಪೃಶ್ಯತೆ ಹುಟ್ಟುಕೊಂಡಿದೆ, ಅದರ ಆಚರಣೆಯು ನಾಚಿಕೆ ತರಿಸುವಂತಹದ್ದು ಎಂದು ಹೇಳಿದರು. ಅವರು ಮತ್ತೆ ಹೇಳುತ್ತಾರೆ, "ನಮ್ಮ ಧರ್ಮದಲ್ಲಿ ಜನ್ಮಆಧಾರಿತ ತಾರತಮ್ಯತೆಯನ್ನು ಆಚರಿಸುವಂತೆ ವಿಶ್ವದ ಯಾವ ಧರ್ಮದಲ್ಲೂ ಆಚರಿಸುತ್ತಿಲ್ಲ!" ಅದು ಹುಟ್ಟಿನ ಆಧಾರದ ಮೇರೆಗೆ ಜನರನ್ನು ಉಚ್ಚ ಮತ್ತು ನೀಚ ಭೇದ ಮಾಡುತ್ತದೆ. ಬೇರೆ ಜಾತಿಗಳು ನಿಮ್ಮನ್ನು ಉಪಚರಿಸುವ ವಿಧಾನಗಳಲ್ಲಿ ಈ ಭೇದಗಳನ್ನು ಕಾಣಬಹುದು. ನಿಮ್ಮನ್ನು ಅಸ್ಪೃಶ್ಯ ಎಂದು ಕರೆಯುವುದು ಎಂಥ ನಾಚಿಕೆಗೇಡಿನ ಕೆಲಸ. ನೀವು ಸಹೋದರರಾಗಿರುವಾಗ ನಿಮ್ಮನ್ನು ಬೆಕ್ಕು, ಹಂದಿ ಮತ್ತು ನಾಯಿಗಳಿಗಿಂತ ಹೀನವಾಗಿ ಕಾಣುತ್ತಾರೆ".[5]

೧೯೧೮ರಲ್ಲಿ ಮಹರ್ಷಿ ಶಿಂಧೆಯವರು ಸಂಘಟಿಸಿದ ಸಮ್ಮೇಳನದಲ್ಲಿ ಮಾತನಾಡುತ್ತಾ ತಿಲಕರು ಹೇಳುತ್ತಾರೆ: "ಅಸ್ಪೃಶ್ಯರ ಸಮಸ್ಯೆಯನ್ನು ಆದಷ್ಟು ಬೇಗನೆ ಪರಿಹರಿಸಬೇಕಾಗಿದೆ. ಆದಗ್ಯೂ, ಕೆಲವೊಮ್ಮೆ ಈ ಸಮಸ್ಯೆ ಬೇರೆಯವರಿಗೆ ಹೆಚ್ಚು ತೀವ್ರವಾದ ಸಮಸ್ಯೆಗಳಿಗೆ ಅಡ್ಡಿಪಡಿಸುತ್ತದೆ. ಅದನ್ನು ತಪ್ಪಿಸಬೇಕಾಗುತ್ತದೆ".[6] ಲೋಕಮಾನ್ಯರು ಉಲ್ಲೇಖಿಸಿದ ತೀವ್ರವಾದ ಸಮಸ್ಯೆ ಸ್ವರಾಜ್ಯವಾಗಿತ್ತು. ಅಸ್ಪೃಶ್ಯರ ವಿಮೋಚನೆಯ ಚಳುವಳಿಯು ಸ್ವಾರಾಜ್ಯ ಆಂದೋಲನಕ್ಕೆ ಅಡ್ಡಿಯಾಗಬಾರದೆಂಬುದು ಅವರ ವಾದವಾಗಿತ್ತು. ರಾಜಕೀಯ ಸ್ವಾತಂತ್ರ್ಯಕ್ಕೆ ಹೋರಾಡುತ್ತಿರುವ ಮೇಲ್ವರ್ಗಗಳ ದೃಷ್ಟಿಯಲ್ಲಿ ಸಾಮಾಜಿಕ ಸಮಸ್ಯೆಗಳಾದ ಅಸ್ಪೃಶ್ಯತೆಯ ಸಮಸ್ಯೆ ಗೌಣವೆಂಬುದು ಮೇಲೆ ಹೇಳಿದ ತಿಲಕರ ಹೇಳಿಕೆಯಲ್ಲಿ ಸೂಚಿತವಾಗುತ್ತದೆ. ಶಾಹುರವರು ಅಂಥ ಮನೋಭಾವವನ್ನು ವಿರೋಧಿಸಿದರು. ಅವರು ಹೇಳುತ್ತಾರೆ: "ಯಾವ ರೀತಿಯಲ್ಲಿ ರಾಜಕಾರಣ ಅಸ್ಪೃಶ್ಯತೆಗೆ ಸಂಬಂಧಿಸುತ್ತದೆ ಎಂದು ಹಲವರು ಕೇಳುತ್ತಾರೆ. ಯಾವುದೇ ಸಂಬಂಧವಿಲ್ಲದಿದ್ದರೆ ನಾವು ಒಪ್ಪಿಕೊಳ್ಳೋಣ. ಆದರೆ ನಾನು ಹೇಳುವೆ, ನೀವು ಅಸ್ಪೃಶ್ಯರನ್ನು ಮಾನವರೆಂದು ಪರಿಗಣಿಸದಿದ್ದರೆ ನೀವು ಹೇಗೆ ರಾಜಕೀಯ ವ್ಯವಹಾರದಲ್ಲಿ ತೊಡಗುವಿರಿ? ಬೇರೆ ದೇಶಗಳಲ್ಲಿ ಮಾನವರನ್ನು ಮಾನವರೆಂದು ಪರಿಗಣಿಸುತ್ತಿರುವಂತೆಯೇ ರಾಜಕಾರಣವನ್ನು ಅನುಸರಿಸುತ್ತಿರುವವರು ಮಾನವರನ್ನು ಮಾನವರೆಂದೇ ಪರಿಗಣಿಸಬೇಕು. ಹಾಗೆ ಉಪಚರಿಸದ ಹೊರತು ನೀವು ದೇಶಕ್ಕೆ ಹೇಗೆ ಸೇವೆ ಸಲ್ಲಿಸುವಿರಿ? ಅಂತಹ ಉಪಚಾರ ನೀಡುವವರು ಮಾತ್ರ ದೇಶ ಸೇವೆ ಮಾಡಬಲ್ಲರು. ಮತ್ಯಾರು ಅಲ್ಲ".[7]

ಸಮಾಜವನ್ನು ಹೀನವಾಗಿ ಕಾಣುವ ಮತ್ತು ದ್ವೇಷವನ್ನು ಬೆಳೆಸುವ ಜಾತಿಯ ತಾರತಮ್ಯತೆ ಮತ್ತು ಅಸ್ಪೃಶ್ಯತೆಗಳನ್ನು ಬ್ರಾಹ್ಮಣರು ಬಿಟ್ಟುಬಿಡಬೇಕೆಂದು ಅವರನ್ನು ಪ್ರಾಮಾಣಿಕವಾಗಿ ಪ್ರಾರ್ಥಿಸುತ್ತಾ ಶಾಹು ಅವರು ಹೇಳುತ್ತಾರೆ: "ಪ್ರೀತಿಯಿಂದ ಪ್ರೀತಿ ಬೆಳೆಯುತ್ತದೆ ಮತ್ತು ದ್ವೇಷದಿಂದ ದ್ವೇಷ ಬೆಳೆಯುತ್ತದೆ. ನೀವು ಪ್ರಾಣಿಯನ್ನು ನೋಡಿದರೆ ಅದು ಪ್ರೀತಿಯನ್ನು ನಿಮಗೆ ಕೊಡುತ್ತದೆ. ನಾನು ಕ್ರೀಡಾಪಟು. ನಾನು ಆಫ್ರಿಕಾದಿಂದ ಒಂದು ಚಿರತೆಯನ್ನು ತಂದಿದ್ದೆ ಮತ್ತು ಕೊಲ್ಹಾಪುರದಿಂದ ೨೦೦ ಮೈಲಿಗಳ ದೂರದ ಕಾಡಿನಲ್ಲಿ ಬಿಟ್ಟುಬಿಟ್ಟೆ. ಅದು ತನ್ನ ಒಡೆಯನನ್ನು ಹುಡುಕಿಕೊಂಡು ಅಲ್ಲಿಂದ ಇಲ್ಲಿಗೆ ಬಂತು. ಅದೇ ಚಿರತೆಯನ್ನು ನಾವು ಕ್ರೂರವಾಗಿ ನೋಡಿಕೊಂಡಿದ್ದರೆ ಅದು ಓಡಿಹೋಗುತ್ತಿತ್ತು ಮತ್ತು ಜನರ ಮೇಲೆ ದಾಳಿ ಮಾಡುತ್ತಿತ್ತು. ನಮ್ಮ ನಾಯಕರು ಇದನ್ನು ಗ್ರಹಿಸುತ್ತಿಲ್ಲ. ಬೇರೆಯವರನ್ನು ಕೀಳು ಅಥವಾ ಅಸ್ಪೃಶ್ಯರು ಎಂದು ಕರೆಯುವವರು ಹೀಗೆ ಮಹಾನರಾಗುತ್ತಾರೆ?".[8]

## "ನಿಮ್ಮ ನಾಯಕ ನಿಮ್ಮ ಜಾತಿಗೆ ಸೇರಿದವರಾಗಿರಲಿ"

ಅಸ್ಪೃಶ್ಯ ವಿಮೋಚನಾ ಚಳುವಳಿಯಲ್ಲಿ ಅವರು ಮೇಲುಜಾತಿಗಳ ನಾಯಕರನ್ನು ತಮ್ಮ ನಾಯಕನೆಂದು ಅಂಗೀಕರಿಸುವ ಬದಲಿಗೆ ತಮ್ಮ ಜಾತಿಯಲ್ಲಿಯೇ ಒಬ್ಬ ನಾಯಕನನ್ನು ಮಾಡಿಕೊಳ್ಳಬೇಕು ಮತ್ತು ಸ್ವಾವಲಂಬನೆಯ ತತ್ವಕ್ಕೆ ಅನುಗುಣವಾಗಿ ತಮ್ಮ ಪ್ರಗತಿಯನ್ನು ಸಾಧಿಸಬೇಕೆಂದು ಶಾಹುರವರು ಹಲವು ಸಲ ತಮ್ಮ ಪತ್ರ–ವ್ಯವಹಾರ ಮತ್ತು ಭಾಷಣಗಳಲ್ಲಿ ಹೇಳಿದ್ದಾರೆ. ಅಸ್ಪೃಶ್ಯ ಸಕ್ರಿಯ ಕಾರ್ಯಕರ್ತ ಮತ್ತು ಡಾ. ಅಂಬೇಡ್ಕರರ ಸಹವರ್ತಿ ಸೀತಾರಾಮ್ ಶಿವ್‌ತಾರ್ಕರ್ ಅವರಿಗೆ ಬರೆದ ಪತ್ರದಲ್ಲಿ ಶಾಹುರವರು ಈ ಚಿಂತನೆಯನ್ನು ಚೊಕ್ಕವಾಗಿ ವಿವರಿಸಿದ್ದಾರೆ. ಅವರು ಬರೆಯುತ್ತಾರೆ: "......ಯಾರು ಮತ್ತೊಬ್ಬರ ಮೇಲೆ ಅವಲಂಬಿಸುತ್ತಾರೋ, ಖಂಡಿತವಾಗಿ ಅವರು ಮುಳುಗಿಹೋಗುತ್ತಾರೆ. ಯಾರು ತನ್ನದೇ ಆದ ರೀತಿಯಲ್ಲಿ ಹೋರಾಡುತ್ತಾರೆ ಅವರು ಉತ್ತಮವಾದದ್ದನ್ನು ಸಾಧಿಸುತ್ತಾರೆ. ಇವು ನನ್ನ ಅಭಿಪ್ರಾಯಗಳು. ನೀವು ಬರೋಡದ ಮಹಾರಾಜ ಅಥವಾ ಹೈದ್ರಾಬಾದಿನ ನೈಜಾಮ ಅಥವಾ ಚಂದಾವರ್‌ಕರ್ ಅಥವಾ ನನ್ನನ್ನು ಸೇರಿದಂತೆ ಶಿಂಧೆ ಅವರೊಡನೆ ಸಮಾಲೋಚಿಸಿ ಆದರೆ ಅವರನ್ನಾಗಲಿ (ನನ್ನನ್ನಾಗಲಿ) ನಿಮ್ಮ ನಾಯಕನೆಂದು ಭಾವಿಸಬೇಡಿ. ನಾಯಕನು ನಿಮ್ಮ ಸೋಮವಂಶ ಜಾತಿಗೆ ಸೇರಿದವನಾಗಿರಬೇಕು. ಬೇರೆಯವರನ್ನು ನೀವು ನಿಮ್ಮ ನಾಯಕನನ್ನಾಗಿ ಮಾಡಿಕೊಳ್ಳಬೇಡಿ. ಆದರೆ ಅವರನ್ನು ಸಲಹೆಗಾರನನ್ನಾಗಿ ಮಾಡಿಕೊಳ್ಳಿ. ಅಂತಹ ವ್ಯಕ್ತಿಗೆ ನೀವು ನಿಮ್ಮ ನಾಯಕತ್ವವನ್ನು ಕೊಟ್ಟ ತಕ್ಷಣವೇ ಅವನು ತನ್ನನ್ನು ತಾನೇ ನೋಡಿಕೊಳ್ಳುವನು. ನೀವು ಅವನನ್ನು ಅನುಸರಿಸದಿದ್ದರೆ ಅವನು ನಿಮ್ಮನ್ನು ಹೆದರಿಸುವನು, ಅವನು ನಿಮ್ಮೊಡನೆ ಸಂಬಂಧವಿಟ್ಟುಕೊಳ್ಳುವುದಿಲ್ಲ. ನಿಮ್ಮ ಪರವಾಗಿ ಪತ್ರ ಬರೆಯುವುದಿಲ್ಲ. ಶಾಸನ ಪರಿಷತ್ತಿನಲ್ಲಿ ನಿಮ್ಮ ಪರವಾಗಿ ಪ್ರಶ್ನೆಯನ್ನೇ ಎತ್ತುವುದಿಲ್ಲ. ನಿಮ್ಮ ಬಗ್ಗೆ ಸರಕಾರದೊಂದಿಗೆ ಮಾತು–ಕತೆ ನಡೆಸುವುದಿಲ್ಲ. ಅವನು ನಿಮ್ಮನ್ನು ಗುಲಾಮರನ್ನಾಗಿ ಮತ್ತೆ ಮಾಡುವನು. ಖಂಡಿತ. ಪ್ರಾಣಿಗಳು ಸಹ ತಮ್ಮ ಜಾತಿಯ ಪ್ರಾಣಿಗಳನ್ನು ಬಿಟ್ಟು ಬೇರೆ ಜಾತಿಯ ಪ್ರಾಣಿಗಳನ್ನು ತಮ್ಮ ನಾಯಕನನ್ನಾಗಿ ಮಾಡಿಕೊಳ್ಳುವುದಿಲ್ಲ. ನೀವು ಮನುಷ್ಯರಾದವರು ಏಕೆ ಮಾಡಬೇಕು? ಹಂದಿಗಳು ಜಿಂಕೆಗಳ ಗುಂಪನ್ನು ನಡೆಸುವುದಿಲ್ಲ ಅಥವಾ ಜಿಂಕೆಗಳು ಹಂದಿಗಳನ್ನು ಮುನ್ನಡೆಸುವುದಿಲ್ಲ. ಬಾತುಕೋಳಿಗಳು ಪಾರಿವಾಳಗಳಿಗೆ ಎಂದೆಂದಿಗೂ ನಾಯಕರಲ್ಲ. ಕಾಗೆಗಳು ಬಾತುಕೋಳಿಗಳ ಗುಂಪಿಗೆ ನಾಯಕರಲ್ಲ. ಹಾಗಾದರೆ ಬೇರೆ ಜಾತಿಯ ವ್ಯಕ್ತಿಯು ಬೇರೆ ಗುಂಪಿನ ಜನರನ್ನು ಏಕೆ ಮುನ್ನಡೆಸಬೇಕು? ಒಮ್ಮೆ ಅಂಥ ನಾಯಕತ್ವವನ್ನು ಒಪ್ಪಿಕೊಂಡರೆ ಜನರು ಕುರಿಗಳು ಅಥವಾ ದನಗಳಾಗಿ ಮಾರ್ಪಡುತ್ತಾರೆ. ಬಡಪಾಯಿ ಕುರಿಗಳ ನಾಯಕ ಧನಗರ (ಕುರಿಕಾಯುವವನು) ಅವುಗಳ ಗತಿ (ಹಣೆಬರಹ) ಏನು? ಅವು ತಮ್ಮ ಪ್ರಾಣಗಳನ್ನೇ ತಮ್ಮ ನಾಯಕನಿಗೆ ಕೊಡುತ್ತವೆ. ನಾಯಕತ್ವ ಬೇರೆ ಜಾತಿಗೆ ಸೇರಿದ್ದರೆ ಅಂತಹ ಗತಿ ಸಹಜವೆ. ಜಿಂಕೆಗೆ ಎಲ್ಲಿಂದ ಉತ್ಸಾಹ ಬರಬೇಕು. ಬ್ರಾಹ್ಮಣರು ನಾಯಕತ್ವ ವಹಿಸಿಕೊಳ್ಳಬೇಕೆಂದು ಬಯಸಿದರೆ ಅವರು ಮೊದಲಿಗೆ ಆಹಾರ, ಮದುವೆ ಮತ್ತು ನಿಷೇಧಗಳೊಂದಿಗೆ ಜಾತಿಯ ತಾರತಮ್ಯತೆಯನ್ನು ಬಿಟ್ಟುಬಿಡಬೇಕು. ಆಗ ಮಾತ್ರ ನಾವು ಅವರನ್ನು ನಾಯಕರೆಂದು ಒಪ್ಪಿಕೊಳ್ಳುವೆವು. ಇಲ್ಲದಿದ್ದರೆ, ನನ್ನಂತಹ ಜನರು ಸುಮ್ಮನೆ ಇರುವರು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ನಿಧಿ ಮತ್ತು ಸಲಹೆಗಳ ಸಹಾಯ ಮಾಡುವರು. ಯಾರು ಅಪೇಕ್ಷೆ ಪಟ್ಟು ನನ್ನನ್ನು ಸಂಪರ್ಕಿಸುವರೊ ಅವರಿಗೆ ನಾನು ಧನ ಮತ್ತು ಸಲಹೆಗಳನ್ನು ನೀಡುವೆನು. ಆದರೆ ಅವರು ತಾವು ಸರಿ ಅನಿಸಿದಂತೆ ಮಾಡುತ್ತಾರೆ. ದನ, ಕುರಿ, ಎತ್ತುಗಳ ಹಾಗೆ ಬೇರೆ ಜಾತಿಯವರ ಮೇಲೆ ಅವಲಂಬಿಸಿದವರೊಡನೆ ಯಾವುದೇ ಸಂಬಂಧಗಳನ್ನು ಇಟ್ಟುಕೊಳ್ಳುವುದಕ್ಕೆ ನಾನು ಸಮ್ಮತಿಸುವುದಿಲ್ಲ......" (ಸೆಪ್ಟೆಂಬರ್ ೧೯೧೯).[9]

ರಾಜರ್ಷಿಯರವರು ಅಸ್ಪೃಶ್ಯರ ವಿಮೋಚನೆಗೆ ಸಾಕಷ್ಟು ಪ್ರಯತ್ನಪಟ್ಟಿರುವಾಗ ಸಂಪೂರ್ಣವಾಗಿ ಅವರ ನಾಯಕತ್ವವನ್ನು ವಹಿಸಿಕೊಳ್ಳುವುದಕ್ಕೆ ಕಷ್ಟವಾಗುತ್ತಿರಲಿಲ್ಲ. ಆದಾಗ್ಯೂ, ಅವರ ಕಲ್ಯಾಣಕ್ಕಾಗಿ ನಿಸ್ವಾರ್ಥಿಗಳಾಗಿ ಏನು ಮಾಡಿದ್ದರೆಂಬುದು ಮೊದಲನೆಯ ವಿಷಯವಾದರೆ, ಎರಡನೆಯದಾಗಿ ಅವರು ಪ್ರಾಮಾಣಿಕವಾಗಿ ಅವರ ನಾಯಕತ್ವವನ್ನು ಅವರ ಜಾತಿಯವರೇ ವಹಿಸಿಕೊಳ್ಳಬೇಕೆಂದು ಭಾವಿಸಿದ್ದರು.

ಶಾಹು ಅವರು ಅಸ್ಪೃಶ್ಯರೊಂದಿಗೆ ಬ್ರಾಹ್ಮಣೇತರರ ಸಾಮಾನ್ಯ ಜನರ ವಿಮೋಚನೆ ಮಾಡುವುದೇ ತಮ್ಮ ಜೀವನದ ಪರಮ ಗುರಿಯೆಂದು ಭಾವಿಸಿದ್ದರು. ತಮ್ಮ ಜೀವನ ಕೊನೆಯ ಆರು ವರ್ಷಗಳಲ್ಲಿ ಸತ್ಯಶೋಧಕ ಮತ್ತು ಬ್ರಾಹ್ಮಣೇತರರ ಆಂದೋಲನವನ್ನು ನಿರ್ದಾಕ್ಷಿಣ್ಯವಾಗಿ ಬೆಂಬಲಿಸುವ ಮೂಲಕ ಮಹಾರಾಷ್ಟ್ರದಲ್ಲಿ ಭಾರೀ ಅಲ್ಲೋಲಕಲ್ಲೋಲವನ್ನು ಹುಟ್ಟು ಹಾಕಿದ್ದರು. ವಿಶೇಷವಾಗಿ ಸತ್ಯಶೋಧಕ ಜಲ್ಸಾ (ಫೋಕ್ ಥಿಯೇಟರ್) ಆಂದೋಲನವು ಅವರಿಂದ ಸ್ಫೂರ್ತಿ ಪಡೆದಿತ್ತು. ಅನೇಕ ಸ್ಥಳಗಳಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರ ನಡುವೆ ತೀಕ್ಷ್ಣ ಸಂಘರ್ಷದ ಸ್ವರೂಪ ಪಡೆಯಿತು. ಕೆಲವು ಸ್ಥಳಗಳಲ್ಲಿ ಬ್ರಾಹ್ಮಣ ಯುವಕರು ಜಲ್ಸಾಗಳ ಪ್ರದರ್ಶನವನ್ನು ತಡೆದಿದ್ದರಿಂದ ಸಾಮಾಜಿಕ ಬಿಕ್ಕಟ್ಟು ಉದ್ಭವಿಸಿತು. ಬ್ರಿಟಿಷ್ ಸರಕಾರ ಈ ಆಂದೋಲನವನ್ನು ಎಚ್ಚರಿಕೆಯಿಂದ ಗಮನಿಸುತ್ತಿತ್ತು. ತನ್ನ ಸಂಸ್ಥಾನದಲ್ಲಿ ಸಾಮಾನ್ಯ ಜನರ ವಿಮೋಚನೆಗಾಗಿ ತಾನು ಬಯಸಿದಂತೆ ಯಾವುದೇ ಮಟ್ಟಕ್ಕೆ ಕೊಂಡೊಯ್ದರೂ ಬ್ರಿಟಿಷರಿಗೆ ತಕರಾರು ಇರಲಿಲ್ಲ. ಆದರೆ ಅದನ್ನು ತನ್ನ ಪ್ರದೇಶ ಮೀರಿ ಬೇರೆ ಸಂಸ್ಥಾನಗಳಿಗೆ ಶಾಹು ಅವರು ಕೊಂಡೊಯ್ಯುವುದು ಬ್ರಿಟಿಷ್ ಸರಕಾರಕ್ಕೆ ಇಷ್ಟವಿರಲಿಲ್ಲ. ಛತ್ರಪತಿಯಂತೆ ಅವರು ಒಬ್ಬ ಸಾಮಂತ ರಾಜರಾಗಿದ್ದರು. ತನ್ನ ಸಂಸ್ಥಾನದ ಹೊರಗಿನ ಸಂಸ್ಥಾನಗಳಲ್ಲಿ ಸಭೆ, ಸಮಾರಂಭಗಳಲ್ಲಿ ಭಾಗವಹಿಸಬೇಕಾಗಿದ್ದರೆ ಬಾಂಬೆ ಸರಕಾರದ ಅನುಮತಿಯನ್ನು ಶಾಹುರವರು ಪಡೆಯಬೇಕಾಗಿತ್ತು. ಹಲವು ಸಲ ಸರಕಾರ ಹಿಂದು-ಮುಂದು ನೋಡಬೇಕಾಗುತ್ತಿತ್ತು. ಕೆಲವೊಮ್ಮೆ ಅದು ತನ್ನ ಅಸಂತೋಷವನ್ನು ವ್ಯಕ್ತಪಡಿಸಿತ್ತು. ಅಂತಹ ಅಸಂತೋಷ ಒಂದು ವಿಧದಲ್ಲಿ ಪರೋಕ್ಷವಾಗಿ ಅದೊಂದು ರೀತಿಯ ದಬಾವಣೆಯಾಗಿತ್ತು. ೧೯೨೨ರಲ್ಲಿ ಬ್ರಿಟಿಷ್ ಸರಕಾರದಿಂದ ಬಂದ ಬೆದರಿಕೆಯ ಪತ್ರಕ್ಕೆ ಶಾಹುರವರು ಕೊಟ್ಟ ತಕ್ಕ ಉತ್ತರವನ್ನು ಪ್ರಬೋಧಂಕರ್ ಥ್ಯಾಕರೆ ಅವರು ತಮ್ಮ ಸ್ಮರಣೆಯಲ್ಲಿ ಹೇಳುತ್ತಾರೆ. “ಮಹಾರಾಷ್ಟ್ರದಲ್ಲಿ ಅಸ್ಪೃಶ್ಯರು ಸೇರಿದಂತೆ ಎಲ್ಲಾ ಹಿಂದುಳಿದ ವರ್ಗಗಳ ವಿಮೋಚನೆ ನನ್ನ ಜೀವನದ ದಿವ್ಯಕರ್ತವ್ಯ. ಲಕ್ಷಾಂತರ ರೈತರ, ಕೃಷಿಕೂಲಿಗಳ ಮತ್ತು ಕಾರ್ಮಿಕ ಬಂಧುಗಳ ಧಾರ್ಮಿಕ ಮತ್ತು ಆರ್ಥಿಕ ಪರಿಸ್ಥಿತಿಗಳ ಸುಧಾರಣೆಯಾಗದೆ ಸರಕಾರವು ಹೇಗೆ ರಾಜಕೀಯ ಹಕ್ಕುಗಳ ಬಗ್ಗೆ ಮಾತನಾಡುತ್ತದೆ. ಯಾರಿಗೆ ಹಕ್ಕುಗಳನ್ನು ಕೊಡಬೇಕಾಗಿದೆ? ಅವುಗಳನ್ನು ಪಡೆಯುವವರು ಯಾರು? ಮುಗ್ಧರಾದ ಬ್ರಾಹ್ಮಣೇತರರು ಹಕ್ಕುಗಳನ್ನು ಏನು ಮಾಡುವರು? ಮತ್ತು ಅವುಗಳಿಂದ ಅವರಿಗೆ ಏನು ಪ್ರಯೋಜನ? ಸರಕಾರವನ್ನು ಕಿತ್ತೊಗೆಯುವ ಬೆದರಿಕೆಯನ್ನು ಹಾಕುವ ಬುದ್ಧಿವಂತಿಕೆ ಮತ್ತು ಪ್ರಚೋದನೆಯ ಹಿಂದೆ ಯಾರಿದ್ದಾರೆಂಬುದು ನನಗೆ ಚೆನ್ನಾಗಿ ಗೊತ್ತಿದೆ. ನೀವು ನನ್ನನ್ನು ಅಧಿಕಾರದಿಂದ ಇಳಿಸುವ ಮೊದಲೆ ನಾನೆ ಸಿಂಹಾಸನಕ್ಕೆ ರಾಜೀನಾಮೆ ನೀಡುವೆನು. ಶಾಹುರವರು ವಹಿಸಿಕೊಂಡಿರುವ ಬ್ರಾಹ್ಮಣೇತರರ ಆಂದೋಲನವನ್ನು ಎಂದಿಗೂ ಪ್ರಮಾಣಪೂರ್ವಕವಾಗಿ ಬಿಟ್ಟುಕೊಡುವುದಿಲ್ಲ.

### ಶಾಹು – ‘ನಮ್ಮ ಅಬ್ರಹಾಂ ಲಿಂಕನ್’

ಅಸ್ಪೃಶ್ಯರ ಬಗ್ಗೆ ನಿಜವಾದ ಕರುಣೆಯುಳ್ಳವರು ಮರಾಠರಲ್ಲಿ ಶಾಹು ಮತ್ತು ಮಹರ್ಷಿ ಶಿಂಧೆಯವರಿಬ್ಬರು ಮಾತ್ರ ಎಂದು ಡಾ. ವೈ. ಡಿ. ಫಡ್ಕೆ ಎಂದು ಒಂದು ಸ್ಥಳದಲ್ಲಿ ಹೇಳಿದ್ದಾರೆ.[11] ಅಸ್ಪೃಶ್ಯರ ಏಳಿಗೆಯ ಬಗ್ಗೆ

ಶಾಹುರವರು ಕೈಗೊಂಡ ಪ್ರಯತ್ನಗಳ ಬಗ್ಗೆ ಮಹರ್ಷಿ ಶಿಂಧೆಯವರೇ ಹೇಳಿದ್ದಾರೆ. ೧೯೨೧ರಲ್ಲಿ ಅವರು ಶಾಹು ಅವರಿಗೆ ಬರೆದ ಪತ್ರದಲ್ಲಿ ಹೀಗೆ ಬರೆದಿದ್ದಾರೆ: "ಮಾನ್ಯ ಮಹಾರಾಜರು ಅಸ್ಪೃಶ್ಯರ ಕಲ್ಯಾಣಕ್ಕಾಗಿ ನಂಬಲಾಗದ ಪ್ರಯತ್ನಗಳನ್ನು ಮಾಡುತ್ತಿರುವುದು ಸಾಮಾನ್ಯ ತಿಳುವಳಿಕೆಯಾಗಿದೆ. ಅವರ ಉದ್ದೇಶಕ್ಕೆ (ಮಿಷನ್) ಅಸ್ಪೃಶ್ಯರು ಕಟ್ಟುಬಿದ್ದಿರುವಂತೆಯೇ ನಾನು ಸಹ ಕಟ್ಟುಬಿದ್ದಿದ್ದೇನೆ. ಮತ್ತು ಎಲ್ಲಕ್ಕಿಂತ ಮಿಗಿಲಾಗಿ ನಾನು ಮಾನ್ಯ ಮಹಾರಾಜರಿಗೆ ಕಟ್ಟುಬಿದ್ದಿದ್ದೇನೆ. ನಿಮ್ಮ (ಮಾನ್ಯ ಮಹಾರಾಜರ) ಸಾಧನೆಗಳನ್ನು ಖುದ್ದು ನೋಡಲು ನನಗೆ ಬಹಳ ಸಂತೋಷವಾಗುತ್ತದೆ".[12]

ಅಸ್ಪೃಶ್ಯರ ವಿಮೋಚನೆಗಾಗಿ ಶಾಹುರವರು ಮಾಡಿದ ಕೆಲಸಗಳಿಗೆ ಅಸ್ಪೃಶ್ಯರು ಹೊಂದಿದ್ದ ಗೌರವಪೂರ್ವಕವಾದ ಮನೋಭಾವಗಳನ್ನು ವಿವರಿಸುತ್ತ ಧನಂಜಯ ಕೀರ್ ಅವರು ಹೇಳುತ್ತಾರೆ: "......ಅವರು ಅಸ್ಪೃಶ್ಯರು ಮತ್ತು ಹಿಂದುಳಿದ ವರ್ಗಗಳ ಬಗ್ಗೆ ತೋರಿಸಿದ ಪ್ರೀತಿ ಮತ್ತು ನಿಷ್ಠೆಗೆ ಆ ವರ್ಗಗಳು ಅವರನ್ನು ದೇವರೆಂದು ಭಾವಿಸಿದರು. ಅವರು ಗೌತಮಬುದ್ಧ, ಮಹಾತ್ಮ ಫುಲೆ ಮತ್ತು ಅಂಬೇಡ್ಕರರನ್ನು ಪೂಜಿಸಿದ ರೀತಿಯಲ್ಲಿಯೇ ಶಾಹು ಅವರನ್ನು ತಮ್ಮ ರಕ್ಷಕನೆಂದು ಪೂಜಿಸಿದರು".[13]

ಶಾಹುರವರು ಮರಣ ಹೊಂದಿದಾಗ ಗಣೇಶ ಅಕ್ಕಾಜಿ ಗವಾಯಿ ಅವರು 'ಬಹಿಷ್ಕೃತ ಭಾರತ'ದಲ್ಲಿ ಬರೆದ ಮೃತ್ಯು ಲೇಖನವು ಈ ಹೇಳಿಕೆಯು ಅತಿಶಯೋಕ್ತಿಯಲ್ಲವೆಂದು ರುಜುವಾತುಪಡಿಸುತ್ತದೆ. ಅವರು ಬರೆಯುತ್ತಾರೆ: "......ಭಗವಂತನು ನಮ್ಮ ಭಗವಾನ್ ಶಾಹು ಅವರಿಗೆ ಅಪಾರವಾದ ಶಕ್ತಿ–ಬಲ ನೀಡಿ ಆಶೀರ್ವಾದ ಮಾಡಿದ್ದಾರೆ. ಅದರ ಬಲದಿಂದ ನಮ್ಮ ದುರಾದೃಷ್ಟ ವರ್ಗಕ್ಕೆ ಅಂಟಿಕೊಂಡಿದ್ದ ಕಳಂಕವೆಂಬ ಶಾಪವನ್ನು ಅವರು (ಶಾಹು) ಪೂರ್ಣವಾಗಿ ತೊಡೆದುಹಾಕಿದ್ದಾರೆ. ಧರ್ಮದ ಹೆಸರಿನಲ್ಲಿ ಬಿಡಿಸಿಕೊಳ್ಳಲಾಗದ ಗುಲಾಮತ್ವದ ವ್ಯವಸ್ಥೆಯಲ್ಲಿ ಸಿಲುಕಿಕೊಂಡಿದ್ದ ವರ್ಗ ಸಮೂಹವು ಅಜ್ಞಾನದಿಂದ ಮಾನಸಿಕ ಗುಲಾಮತ್ವಕ್ಕೊಳಗಾಗಿ ಅಸ್ಪೃಶ್ಯತೆಯ ಕಾರಣದಿಂದ ಪ್ರಾಣಿಗಳಿಗಿಂತ ಕಡೆಯಾಗಿ ಕರುಣಾಜನಕ ಸ್ಥಿತಿಯನ್ನು ಅನುಭವಿಸುತ್ತಿದ್ದರು ಮತ್ತು ಸಾವಿರಾರು ವರ್ಷಗಳಿಂದ ಯಾವೊಬ್ಬ ಮಹಾನುಭಾವನಿಂದಲೂ ಆ ಸಮೂಹದ ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡಲು ಸಾಧ್ಯವಾಗದ ಸ್ಥಿತಿಯಲ್ಲಿದ್ದ ಅಸ್ಪೃಶ್ಯರನ್ನು ಭಗವಾನ್ ಶಾಹು ಛತ್ರಪತಿ ಹೊರತೆಗೆದು ಅವರನ್ನು ಮಾನವೀಯತೆಯ ಕಡೆಗೆ ದೂಡಿದರು".[14] ಅದೇ ಲೇಖನದಲ್ಲಿ ಅವರು ಶಾಹುರವರು ಅಸ್ಪೃಶ್ಯತೆಯ ನಿವಾರಣೆಗೆ ಮಾಡಿದ ಪ್ರಯತ್ನಗಳನ್ನು ಗೌರವಿಸುತ್ತಾ ಅವರನು ಕುರಿತು ಅವರು "ನಮ್ಮ ಅಬ್ರಾಹಂ ಲಿಂಕನ್" ಎಂದು ಹೇಳಿದರು.

ಮಹಾತ್ಮ ಫುಲೆ ಮತ್ತು ರಾಜರ್ಷಿ ಶಾಹು ಅವರು ತೆಗೆದುಕೊಂಡಿದ್ದ ಅಸ್ಪೃಶ್ಯರ ಕಲ್ಯಾಣದ ಮಿಷನ್ನನ್ನು ನಂತರ ಡಾ. ಬಾಬಾಸಾಹೇಬ ಅಂಬೇಡ್ಕರರು ವಹಿಸಿಕೊಂಡರು ಮತ್ತು ಅವರು ಇಡೀ ಭಾರತದ ಉದ್ದಕ್ಕೂ ಅಸ್ಪೃಶ್ಯರ ಮಹಾನ್ ನಾಯಕರಾದರು. ಶಾಹು ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಹೇಳುತ್ತಾ ಅಂಬೇಡ್ಕರರು ಹೇಳುತ್ತಾರೆ: "ಶಾಹು ಮಹಾರಾಜರಂತಹ ಸ್ನೇಹಿತನನ್ನು ಅಸ್ಪೃಶ್ಯ ಎಂದಿಗೂ ಹೊಂದಿರಲಿಲ್ಲ. ಅಂತಹ ಸ್ನೇಹಿತನನ್ನು ಮುಂದೆ ಹೊಂದುವ ಬಗ್ಗೆ ಅನುಮಾನವಿದೆ".[15]

ಶಾಹುರವರು ದಮನಿತರಿಗೆ ಸಲ್ಲಿಸಿದ ಸಾಮಾನ್ಯ ಸೇವೆಗಳಿಗೆ ಉಚಿತವಾದ ಯಾವ ಗೌರವವನ್ನು ಉಲ್ಲೇಖಿಸಲು ಸಾಧ್ಯ?

---

೧೩

# ಶಾಹು ಮತ್ತು ಅಂಬೇಡ್ಕರ್

ಶಾಹು ಮಹಾರಾಜ ಮತ್ತು ಡಾ. ಬಾಬಾಸಾಹೇಬ ಅಂಬೇಡ್ಕರರ ನಡುವಣ ಭೇಟಿ ಮತ್ತು ತದನಂತರ ಅವರ ಒಡನಾಟವು ಮಹಾರಾಷ್ಟ್ರದ ಆಧುನಿಕ ಇತಿಹಾಸದಲ್ಲಿ ಅಭೂತಪೂರ್ವ ಘಟನೆಯಾಗಿದೆ. ದುರಾದೃಷ್ಟವಶಾತ್ ಮಹಾರಾಷ್ಟ್ರ ಮತ್ತು ಭಾರತದ ಈ ಸಹಕಾರ ಬಹಳ ಕಾಲ ಉಳಿಯಲಿಲ್ಲ. ಅದು ಶಾಹು ಅವರ ಅಕಾಲಿಕ ಮೃತ್ಯುವಿನಿಂದ ಕೊನೆಗೊಂಡಿತು.

ಬರೋಡಾದ ಮಹಾರಾಜ ಸಯ್ಯಾಜಿರಾವ್ ಗಾಯಕವಾಡ (೧೯೧೩) ಅವರು ನೀಡಿದ ವಿದ್ಯಾರ್ಥಿವೇತನದ ಮೇರೆಗೆ ಅಂಬೇಡ್ಕರರು ಅಮೇರಿಕಾಗೆ ಹೋದರು. ಅವರು ಕೊಲಂಬಿಯಾ ವಿಶ್ವವಿದ್ಯಾಲಯದಿಂದ ಎಂ.ಎ. ಮತ್ತು ಪಿಎಚ್.ಡಿ. ಪದವಿಗಳನ್ನು ಪಡೆದರು ಮತ್ತು ಲಂಡನ್ನಿಗೆ ಎಂ.ಎಸ್‌ಸಿ. ಮತ್ತು ಬಾರ್ ಅಟ್ ಲಾ ಮಾಡಲು ಹೋದರು. ಆದಾಗ್ಯೂ ಬರೋಡ ಸರ್ಕಾರ ವಿದ್ಯಾರ್ಥಿ ವೇತನವನ್ನು ಮುಂದುವರಿಸಲು ನಿರಾಕರಿಸಿದ್ದರಿಂದ ಅವರು ವಾಪಸ್ಸು ಬರಬೇಕಾಯಿತು (೧೯೧೭). ಅವರು ಕೂಡಲೇ ವಿದ್ಯಾರ್ಥಿ ವೇತನದ ಷರತ್ತಿನ ಪ್ರಕಾರ ಬರೋಡಾಗೆ ಬಂದು, ಬರೋಡ ಸಂಸ್ಥಾನದ ಸೇವೆಗೆ ಸೇರಬೇಕಾಗಿತ್ತು. ಆದರೂ ಕೂಡ ಅಸ್ಪೃಶ್ಯತೆಯ ಕಳಂಕವು ಅವರಿಗೆ ಬರೋಡದಲ್ಲಿ ಮನೆ ಪಡೆಯಲು ಅಸಾಧ್ಯಗೊಳಿಸಿತು. ಒಬ್ಬ ಅಸ್ಪೃಶ್ಯನಾಗಿ ಕಛೇರಿಯಲ್ಲಿ ಅವರು ನಿರಂತರವಾಗಿ ಕುಗ್ಗಬೇಕಾಯಿತು. ಬಾಬಾಸಾಹೇಬರು ಅವಮಾನ ಮತ್ತು ಮಾನಸಿಕ ಕಿರುಕುಳ ನಡುವೆ ಸಿಕ್ಕಿಹಾಕಿಕೊಂಡದ್ದನ್ನು ಮಹಾರಾಜ ಸಯ್ಯಾಜಿರಾವ್ ಅವರು ಸಹ ಬಿಡಿಸಲು ಸಾಧ್ಯವಾಗಲಿಲ್ಲ. ತತ್ಪರಿಣಾಮವಾಗಿ ಅವರು ನಿಸ್ಸಹಾಯಕರಾಗಿ ಕೆಲಸ ಬಿಟ್ಟು ಮುಂಬಯಿಗೆ ವಾಪಸ್ಸು ಬರಬೇಕಾಯಿತು.[1]

## ಮೊದಲ ಸಭೆ

ಶಾಹು ಅವರು ೧೯೧೮ರ ಸುಮಾರಿನಲ್ಲಿ ಡಾ. ಅಂಬೇಡ್ಕರರ ಹೆಸರನ್ನು ಕೇಳಿರಬಹುದು. ಮಹರ್ ಸಮುದಾಯದ ಯುವಕ ವಿದೇಶದಿಂದ ಉತ್ತಮವಾದ ಶೈಕ್ಷಣಿಕ ಅರ್ಹತೆಗಳನ್ನು ಪಡೆದು ವಾಪಸ್ಸು ಬಂದ ಸಂಗತಿಯನ್ನು ತಿಳಿದು ಶಾಹುರವರು ಬಹಳ ಖುಷಿಪಟ್ಟಿದ್ದರು ಮತ್ತು ಅವರು ತೀವ್ರ ಕುತೂಹಲದಿಂದ ಆ ಯುವಕನನ್ನು ನೋಡಲು ಕಾತುರದಿಂದಿದ್ದರು. ಡಾ. ಅಂಬೇಡ್ಕರರ ಜೀವನ ಚರಿತ್ರೆಕಾರ ಚಂಗದೇವ್ ಖೈರ್‌ಮೋಡೆ ಕೊಲ್ಹಾಪುರದ ದಮನಿತ ವರ್ಗದ ವಿದ್ಯಾವಂತ ಸಕ್ರಿಯ ಕಾರ್ಯಕರ್ತ ಮತ್ತು ಅಂಬೇಡ್ಕರರ ಸ್ನೇಹಿತರಾಗಿದ್ದ ದತ್ತೋಬಾ ಪೊವಾರರು ಮೊದಲಿಗೆ ಅಂಬೇಡ್ಕರರ ಬಗ್ಗೆ ಹೇಳಿದ್ದರು.[2] ಖೈರ್‌ಮೋಡೆಯವರು ೧೯೨೦ ರಲ್ಲಿ ಇವರ ಭೇಟಿಯಾಯಿತೆಂದು ತಿಳಿಸಿದ್ದಾರೆ.

ಆದಾಗ್ಯೂ, ಇವರ ಮಿಲನವನ್ನು ವ್ಯವಸ್ಥೆಗೊಳಿಸಿದವರು ದತ್ತೋಬಾ ಪೊವಾರ್ ಅಲ್ಲ, ದತ್ತೋಬಾ ದಳವಿ ಎಂದು ತಮ್ಮ 'ನೆನಪು'ಗಳಲ್ಲಿ ಭಾಯಿ ಮಾಧವರಾವ್ ಬಾಗಲ್ ಅವರು ವಿವರಿಸಿದ್ದಾರೆ.[3] ಆದರೆ ದಳವಿಯವರು ಸ್ವತಃ ಈ ಮಿಲನ (ಭೇಟಿ) ದ ಬಗ್ಗೆ ಬಾಗಲ್ ಅವರಿಗೆ ಹೇಳಿದ್ದಾರೆ. ದಳವಿಯವರು ಶಾಹುರವರ ಉತ್ತಮ ಪುಸ್ತಕಗಳ ಹೆಸರಾಂತ ಕಲಾವಿದರು. ಶಾಹು ಅವರ ಸಲಹೆಯ ಪ್ರಕಾರ ಮಹಾರಾಜರು ತಮ್ಮನ್ನು ಭೇಟಿಯಾಗಲು ಆಸಕ್ತರಾಗಿದ್ದಾರೆ ಎಂದು ದಳವಿಯವರು ಬಾಬಾಸಾಹೇಬರಿಗೆ ಹೇಳಿದರು ಮತ್ತು ನಂತರ ಭಾಯಿ ಬಾಗಲರ ಪ್ರಕಾರ ಸೂಕ್ತ ಸಮಯದಲ್ಲಿ ಅವರ ಭೇಟಿ ನಡೆಯಿತು.[4] ಈ ಸಭೆಯು ೧೯೧೯ರಲ್ಲಿ ನಡೆದಿರಬಹುದು. ಆದರೆ ಖೈರ್ ಮೋಡಿ ಹೇಳಿದಂತೆ ೧೯೨೦ ಅಲ್ಲ. ಏಕೆಂದರೆ ಮೊದಲಿಗೆ ಶಾಹು ಮಹಾರಾಜರು ಧನಸಹಾಯ ಮಾಡಿದ್ದರಿಂದ ಅಂಬೇಡ್ಕರರ ಪಾಕ್ಷಿಕ ಪತ್ರಿಕೆ 'ಮೂಕನಾಯಕ' ೧೯೨೦ರ ಜನವರಿಯಲ್ಲಿ ಪ್ರಕಟವಾಯಿತು. ಇಬ್ಬರು ಮೊದಲೇ ಭೇಟಿಯಾಗಿದ್ದರು. 'ಅಸ್ಪೃಶ್ಯರ' ಆಂದೋಲನದ ಬಗ್ಗೆ ವಿಚಾರ ವಿನಿಮಯ ಮಾಡಿಕೊಂಡಿದ್ದರು. ಅದರ ಮುಂದುವರಿಕೆಗೆ ಒಂದು ಪತ್ರಿಕೆ ಮಾಡಿಕೊಂಡಿದ್ದರು. ಅದರ ಮುಂದುವರಿಕೆಗೆ ಒಂದು ಪತ್ರಿಕೆಯನ್ನು ಪ್ರಾರಂಭಮಾಡಬೇಕೆಂಬುದು ತರ್ಕಬದ್ಧ ಸಂಗತಿ. ಅಸ್ಪೃಶ್ಯತೆಯ ನಿವಾರಣೆಯ ಆಂದೋಲನಕ್ಕೆ ಅನುಕೂಲಕರವಾಗಿರುವ ಪ್ರಸ್ತಾಪಿತ ಪತ್ರಿಕೆಯ ಬಗ್ಗೆ ಚರ್ಚಿಸಲು ೧೯೧೯ರಲ್ಲಿ ಬಾಂಬೆಯಲ್ಲಿ ಶಾಹು ಅವರನ್ನು ಅಂಬೇಡ್ಕರರ ನೇತೃತ್ವದಲ್ಲಿ ಅಸ್ಪೃಶ್ಯರ ಸಕ್ರಿಯ ಕಾರ್ಯಕರ್ತರ ಒಂದು ನಿಯೋಗವು ಭೇಟಿಯಾಗಿತ್ತೆಂದು ಖೈರ್‌ಮೋಡೆಯವರೇ ಸ್ವತಃ ಹೇಳಿದ್ದರು.[5] ಇಬ್ಬರ ನಡುವಣ ಸಭೆಯು ಈ ನಿಯೋಗದ ಸಭೆಗಿಂತ ಮೊದಲೆ ನಡೆದಿರಬಹುದು. ಡಾ.ಗಂಗಾಧರ ಪಂತವಸೆ ಮತ್ತು ಪ್ರೊ. ಧಮ್ಮಪಾಲರತ್ನಾಕರರವರು ೧೯೧೯ನೇ ವರ್ಷವೆಂದು ಬಹುಮಟ್ಟಿಗೆ ಪರಿಗಣಿಸಿದ್ದಾರೆ.[6]

## ಮೂಕನಾಯಕ ಮತ್ತು ಮನ್‌ಗಾವ್ ಸಮ್ಮೇಳನ

ಹಲವಾರು ಶತಮಾನಗಳವರೆಗೆ ಮೂಕಗೊಂಡಿದ್ದ ಬಹಿಷ್ಕೃತ ಸಮಾಜದಲ್ಲಿ ಜಾಗೃತಿಯನ್ನು ಮೂಡಿಸಲು ಮತ್ತು ಅದರ ವಿಮೋಚನೆಯನ್ನು ಮುನ್ನಡೆಸಲು ಪತ್ರಿಕೆಯನ್ನು ತರುವ ಉದ್ದೇಶವನ್ನು ಅಂಬೇಡ್ಕರರು ಹೊಂದಿದ್ದರು. ಅವರು ಅದಕ್ಕೆ 'ಮೂಕನಾಯಕ' ಎಂಬ ಹೆಸರಿಟ್ಟಿದ್ದಾರೆ. ಆ ಹೆಸರೇ ಸಾಕಷ್ಟು ವಿಷಯವನ್ನು ತಿಳಿಸುತ್ತದೆ. ಅಧಿಕೃತವಾಗಿ ತಮ್ಮ ಸಹವರ್ತಿಗಳು ಒಬ್ಬರು ಅದರ ಸಂಪಾದಕರು; ಆದರೆ ಉತ್ತೇಜನಕಾರಿಯಾದ ಸ್ಫೂರ್ತಿ ಮತ್ತು ಸಂಪಾದಕೀಯದ ನಿಯಂತ್ರಣ ಅಂಬೇಡ್ಕರರದ್ದು. ಅವರು ಪ್ರಾರಂಭದಲ್ಲಿ ಸಂಪಾದಕೀಯಗಳನ್ನು ಬರೆಯುವರು. 'ಕೇಸರಿ'ಯ ಸಂಪಾದಕರು 'ಮೂಕನಾಯಕ' ಪತ್ರಿಕೆಯ ಮೊದಲ ಸಂಚಿಕೆಯ ಹಣ ಪಾವತಿಸಿದ ಜಾಹಿರಾತನ್ನು ಪ್ರಕಟಿಸಲು ನಿರಾಕರಿಸಿದರು.[7] ೧೯೧೮ರ ಮೊದಲು, ಲೋಕಮಾನ್ಯ ತಿಲಕರು ಆಶ್ಚರ್ಯಕರ ರೀತಿಯಲ್ಲಿ ಮುಂಬಯಿನಲ್ಲಿ ನಡೆದ ಮೊದಲ ಅಸ್ಪೃಶ್ಯರ ಸಮ್ಮೇಳನದಲ್ಲಿ ಅಸ್ಪೃಶ್ಯತೆಯ ಬಗ್ಗೆ ಪ್ರಗತಿಪರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರು. ಆದರೆ 'ಕೇಸರಿ' ಬಗ್ಗೆ ಒಂದು ಮಾತನ್ನು ಪ್ರಕಟಿಸಲಿಲ್ಲ.[8] ಹೀಗೆ ಅದು ಜಾಹಿರಾತಿನ ಮೂಲಕ 'ಮೂಕನಾಯಕ'ನನ್ನು ಸ್ವಾಗತಿಸಲು ನಿರಾಕರಿಸಿತು. ಈ ಹಿನ್ನೆಲೆಯಲ್ಲಿ ಶಾಹು ಮಹಾರಾಜರು 'ಮೂಕನಾಯಕ'ನಿಗೆ ನೀಡಿದ ಸಹಾಯಹಸ್ತ ಮೊದಲು ನೀಡಿದ್ದು ಸಹಜವಾದ ಪ್ರತಿಕ್ರಿಯೆಯಾಗಿತ್ತು. ಶಾಹು ಅವರಿಂದ ಕಾಲದಿಂದ ಕಾಲಕ್ಕೆ ಅಂತಹ ಸಹಾಯ ಸಿಕ್ಕಿದ್ದರ ದಾಖಲೆಯ ಆಧಾರಗಳು ಲಭ್ಯವಿವೆ.[9] ಶಾಹು ಅವರ ಉಪಕ್ರಮದಿಂದ ಕೊಲ್ಹಾಪುರ ಸಂಸ್ಥಾನದ ಮನ್‌ಗಾವ್‌ನಲ್ಲಿ ನಡೆದ ಸಮ್ಮೇಳನದಲ್ಲಿ ಅಂಬೇಡ್ಕರರು ಶಾಹು ಅವರ ನಿಕಟ ಸಂಪರ್ಕಕ್ಕೆ ಬಂದರು ಮತ್ತು ವಿಶೇಷವಾಗಿ

ಅಂಬೇಡ್ಕರರು ಅದರಲ್ಲಿ ಭಾಗಿಯಾಗಲು ಸಮಯವನ್ನು ಮಾಡಿಕೊಂಡಿದ್ದರು. ಅಂಬೇಡ್ಕರರು ಅಧ್ಯಕ್ಷರಾಗಿದ್ದರು. ಅಸ್ಪೃಶ್ಯರ ಸಮುದಾಯ ಬಾಬಾಸಾಹೇಬರಂತಹ ವ್ಯಕ್ತಿಯಲ್ಲಿ ಅತ್ಯುತ್ತಮ ನಾಯಕನನ್ನು ಪಡೆದಿದೆಯೆಂದು ರಾಜರ್ಷಿ ಅವರು ಬಹಳ ಸಂತೋಷಗೊಂಡರು. ಶಾಹು ಅವರು ತಮ್ಮ ಪರಮಾನಂದವನ್ನು ವ್ಯಕ್ತಪಡಿಸುತ್ತಾ ಶಾಹು ಹೇಳಿದರು: "ನೀವು ನಿಮ್ಮ ನಾಯಕನನ್ನು ಕಂಡುಹಿಡಿದಿದ್ದೀರಿ. ನಾನು ನಿಮ್ಮನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇನೆ. ಡಾ. ಅಂಬೇಡ್ಕರವರು ವಿಮೋಚನೆಯನ್ನು ಕೊಡಿಸುವುದರಲ್ಲಿ ಎಡವುದಿಲ್ಲ. ಅವರು ಇಡೀ ಇಂಡಿಯಾಗೆ ನಾಯಕರಾಗುವ ಕಾಲ ಬರುತ್ತದೆ. ನನ್ನ ಅಂತರಂಗದ ಧ್ವನಿ ಹೇಳುತ್ತದೆ".[10] ಶಾಹುರವರ ದೂರದೃಷ್ಟಿ ಮತ್ತು ಭವಿಷ್ಯವು ಸರಿಯಾಗಿದ್ದದ್ದು ರುಜುವಾತಾಗಿದೆ.

ತಮ್ಮ ಭಾಷಣದಲ್ಲಿ ಅಂಬೇಡ್ಕರರ ಪಾಂಡಿತ್ಯವನ್ನು ಹೊಗಳುತ್ತಾ ಶಾಹು ಹೇಳಿದರು: "....ಅವರಿಗೆ ಪಂಡಿತ ಎಂಬ ಬಿರುದು (ಗುಣವಾಚಕ) ಕೊಡುವುದರಲ್ಲಿ ಸಮಸ್ಯೆ ಏನಿದೆ? ಅವರು ವಿದ್ವಾಂಸರಲ್ಲಿ ಹೆಮ್ಮೆಯ ಸ್ಥಾನವನ್ನು ಪಡೆಯುತ್ತಾರೆ. ಆರ್ಯಸಮುದಾಯ, ಬೌದ್ಧಸಮುದಾಯ ಮತ್ತು ಕ್ರಿಶ್ಚಿಯನ್ನರು ತಮ್ಮ ಗುಂಪಿಗೆ ಸುಲಭವಾಗಿ, ಸಂತೋಷವಾಗಿ ವಿಲೀನಗೊಳಿಸಿಕೊಳ್ಳುತ್ತಾರೆ (ಸೇರಿಸಿಕೊಳ್ಳುತ್ತಾರೆ). ಆದರೆ ಅವರು ಅಲ್ಲಿಗೆ ಹೊಗುವುದಿಲ್ಲ. ಏಕೆಂದರೆ ಅವರು ನಿಮ್ಮ ಏಳಿಗೆಯನ್ನು ಅಪೇಕ್ಷಿಸುತ್ತಾರೆ. ಅದಕ್ಕಾಗಿ ನೀವು ಅವರಿಗೆ ಧನ್ಯವಾದಗಳನ್ನು ಹೇಳಬೇಕು ಮತ್ತು ನಾನು ಸಹ ಅವರಿಗೆ ಧನ್ಯವಾದಗಳನ್ನು ಹೇಳುತ್ತೇನೆ."[11] ತಮ್ಮ ಸಂಸ್ಥಾನದಲ್ಲಿ ಬಹಿಷ್ಕೃತರಿಗೆ ಸಮಾನ ಹಕ್ಕುಗಳ ನೀಡಿಕೆಯ ಕಾರ್ಯವನ್ನು ನಡೆಸುತ್ತಿರುವುದಕ್ಕೆ ಮತ್ತು ಅವರ ಸ್ಥಿತಿಗತಿಗಳನ್ನು ಸುಧಾರಿಸುತ್ತಿರುವುದಕ್ಕೆ ಈ ಸಮ್ಮೇಳನದಲ್ಲಿ ಅಂಬೇಡ್ಕರರು ಒಂದು ವಿಶೇಷ ಠರಾವನ್ನು ಅನುಮೋದಿಸಿದರು. ತಮ್ಮ ಕೃತಜ್ಞತೆಗಳನ್ನು ವ್ಯಕ್ತಪಡಿಸಲು ಮತ್ತು ಅಸ್ಪೃಶ್ಯರು ಶಾಹುರವರ ಹುಟ್ಟಿದ ಜಯಂತಿಯನ್ನು ಹಬ್ಬದಂತೆ ಆಚರಿಸಲು ಠರಾವು ಪ್ರಸ್ತಾಪಿಸುತ್ತದೆ.. ನಿರ್ಣಯವು ಅಂಗೀಕಾರವಾಯಿತು.[12]

ಜೊತೆಗೆ ಸಮ್ಮೇಳನದಲ್ಲಿ ಶಾಹುರವರು ಸಾರ್ವಜನಿಕವಾಗಿ ಊಟಕ್ಕೆ ಅಂಬೇಡ್ಕರರನ್ನು ಆಹ್ವಾನಿಸಿದರು. ಅದರಂತೆಯೇ ಅವರು ಸೊನ್‌ತಾಲಿ ಕ್ಯಾಂಪಿನಲ್ಲಿ ಭರ್ಜರಿ ಔತಣಕೂಟವನ್ನು ಏರ್ಪಡಿಸಿದರು. ಶಾಹುರವರು ಅಂಬೇಡ್ಕರರು ಭೇಟಿ ನೀಡಿದಾಗ ಅವರನ್ನು ತುಂಬುಗೌರವದಿಂದ ಉಪಚರಿಸಿದರು ಮತ್ತು ಅಂತಿಮವಾಗಿ ಅವರು ನಿರ್ಗಮಿಸುವಾಗ ಅವರಿಗೆ ಪ್ರೀತಿಪೂರ್ವಕವಾಗಿ ಪರಂಪರಾಗತವಾದ ಜರಿಪಟ್ಟಕವನ್ನು ಉಡುಗೊರೆಯಾಗಿ ನೀಡಿದರು. ಅಂಬೇಡ್ಕರರು ಅದನ್ನು ಸ್ವೀಕರಿಸಿ ಉತ್ಕಟವಾಗಿ ಹೇಳಿದರು: "ಛತ್ರಪತಿಯವರು ಗೌರವಪೂರ್ವಕವಾಗಿ ನೀಡಿರುವ ಜರಿಪಟ್ಟಕವನ್ನು ನಾನು ಜೀವನಪೂರ್ತಿ ಅದರ ಘನತೆಯನ್ನು ಕಾಪಾಡುವೆನು."[13]

ತಮ್ಮ ಜೀವನಪರ್ಯಂತ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಪ್ರಯತ್ನಿಸಿದ ಛತ್ರಪತಿಯವರ ಕೊಡುಗೆಯ ಗೌರವವನ್ನು ಸಂರಕ್ಷಿಸಿರುವುದನ್ನು ಮುಂದಿನ ಇತಿಹಾಸ ಒತ್ತಿಹೇಳುತ್ತದೆ. ವಾಸ್ತವಿಕವಾಗಿ ಮನ್‌ಗಾವ್‌ನ ಸಮ್ಮೇಳನದ ಆಧಾರ(ಪೀಠ)ವು ಅವರ ಸಾರ್ವಜನಿಕ ಜೀವನದ ನಿಜವಾದ ಆರಂಭವಾಗಿದೆ. ೧೯೪೦ರಲ್ಲಿ ಕೊಲ್ಲಾಪುರದಲ್ಲಿ ನಡೆದ ಒಂದು ಕಾರ್ಯಕ್ರಮದಲ್ಲಿ ಅಂಬೇಡ್ಕರರು ಸ್ವತಃ ಈ ಸಂಗತಿಯನ್ನು ಒಪ್ಪಿಕೊಂಡಿದ್ದಾರೆ.[14]

## ಸಹಕಾರದ ಹೆಚ್ಚಳ

ಮನ್‌ಗಾವ್‌ನ ಸಮ್ಮೇಳನದ ಎರಡು ತಿಂಗಳುಗಳ ನಂತರ ಶಾಹು ಮತ್ತು ಅಂಬೇಡ್ಕರರು ನಾಗಪುರದಲ್ಲಿ ನಡೆದ ಅಖಿಲಭಾರತ ಬಹಿಷ್ಕೃತ ಸಮಾಜದ ಸಮ್ಮೇಳನದಲ್ಲಿ (೩೦ ಮೇ ೧೯೨೦) ಪುನಃ ಭೇಟಿಯಾದರು. ಈ ಸಭೆಯಲ್ಲಿ ಇಬ್ಬರ ನಡುವಣ ಸ್ನೇಹ ಮತ್ತು ಮಮತೆಗಳ ಬಂಧನ ಮತ್ತಷ್ಟು ಗಟ್ಟಿಗೊಂಡಿತು. ಸಮ್ಮೇಳನದಲ್ಲಿ ಸಂಭವನೀಯ ರಾಜಕೀಯ ಸುಧಾರಣೆಗಳು ಮತ್ತು ಅಸ್ಪೃಶ್ಯರು ಶಾಸನ ಪರಿಷತ್ತಿನಲ್ಲಿ ಪಡೆಯುವ ಸಹವರ್ತಿ ಪ್ರಾತಿನಿಧ್ಯದಂತಹ ಜ್ವಲಂತ ವಿಷಯವನ್ನು ಚರ್ಚಿಸಲಾಯಿತು. ವಾಸ್ತವಿಕವಾಗಿ ಶಾಹು ಮಹಾರಾಜರ ಆಶ್ರಯದಲ್ಲಿ ಈ ವಿಷಯದ ಬಗ್ಗೆ ಸರಕಾರದ ನಿಲುವೇನು ಎಂಬುದನ್ನು ತಿಳಿಸಲು ಅಂಬೇಡ್ಕರರು ಈ ಸಮ್ಮೇಳನವನ್ನು ಸಂಘಟಿಸಿದರು. ಅಂಬೇಡ್ಕರರು ಮಹರ್ಷಿ ಶಿಂಧೆ ಅವರ ಈ ವಿಷಯದ ಬಗೆಗಿನ ನಿಲುವನ್ನು ಕಠೋರವಾಗಿ ಖಂಡಿಸಿದರು ಮತ್ತು ಇಡೀ ಸಮ್ಮೇಳನ ಅವರನ್ನು ಖಂಡಿಸುವುದರಲ್ಲಿ ಸಫಲವಾಯಿತು. ತತ್ಪರಿಣಾಮವಾಗಿ ಅಸ್ಪೃಶ್ಯರ ಆಂದೋಲನದ ನಿಯಂತ್ರಣವು ಆ ಸಮುದಾಯದಿಂದ ಮೂಡಿಬರುವ ನಾಯಕನ ಕೈಗೆ ಹೋಗುತ್ತಿದೆಯೆಂಬುದು ಈ ಸಮ್ಮೇಳನದಿಂದ ಸ್ಪಷ್ಟವಾಯಿತು. ಶಾಹು ಅವರು ಅದನ್ನೇ ಅಂಬೇಡ್ಕರರಿಂದ ನಿರೀಕ್ಷಿಸಿದ್ದು.

ಇಬ್ಬರ ನಡುವಿನ ಪತ್ರವ್ಯವಹಾರ ಮುಂದುವರಿಯಿತು. ಅಸ್ಪೃಶ್ಯರ ವಿಮೋಚನಾ ಆಂದೋಲನಕ್ಕೆ ನಿಧಿ ಸಂಗ್ರಹಿಸುವ ಒಂದು ಯೋಜನೆಯನ್ನು ಕೈಗೊಳ್ಳಬೇಕು ಮತ್ತು ಆ ಸಮಿತಿಯಲ್ಲಿ ಶಾಹು ಅವರು ಇರಬೇಕೆಂದು ಸೂಚಿಸುವ ಒಂದು ಪತ್ರವನ್ನು ಅಂಬೇಡ್ಕರರು ಶಾಹು ಅವರಿಗೆ ಕಳುಹಿಸಿದರು.. ಆ ಪತ್ರಕ್ಕೆ ಶಾಹು ಅವರು ಪ್ರತ್ಯುತ್ತರ ಬರೆಯುತ್ತಾರೆ: " ನೀವು ನಿಧಿಗಳನ್ನು ಸಂಗ್ರಹಿಸುವುದಕ್ಕೆ ಕಳುಹಿಸುವ ನಿಯೋಗದಲ್ಲಿ ನನ್ನ ಹೆಸರನ್ನು ಸೇರಿಸಲು ಸಂತೋಷದಿಂದ ನಾನು ಅನುಮತಿಯನ್ನು ನೀಡುತ್ತಿದ್ದೇನೆ. ಈ ಉದ್ದೇಶಕ್ಕಾಗಿ ತಾವು ರಚಿಸುವ ಸಂಸ್ಥೆಯಲ್ಲಿ ನಾನು ಉಪಾಧ್ಯಕ್ಷನಾಗಲು ಅಥವಾ ಸಹಾಯಕ ಕಾರ್ಯದರ್ಶಿಯಾಗಲು ನಾನು ಸಿದ್ಧನಾಗಿದ್ದೇನೆ. ನಾವು 'ಅಖಿಲಭಾರತ ದಮನಿತ ವರ್ಗಗಳ ಶಿಕ್ಷಣನಿಧಿ' ಎಂದು ಸಂಸ್ಥೆಗೆ ಹೆಸರು ನೀಡಿ ಅದನ್ನು ಸಂಘಟಿಸಬಹುದೆಂದು ಯೋಚಿಸಿದ್ದೇನೆ. ಅದರಲ್ಲಿ ಕೆಲಸ ಮಾಡಲು ಗೌರವಾನ್ವಿತ ಮತ್ತು ಬದ್ಧತೆಯ ಜನರನ್ನು ಆಯ್ಕೆಮಾಡಿ ಮತ್ತು ಈ ಸಂಘಟನೆಯ ಪರವಾಗಿ ನಿಯೋಗಗಳನ್ನು ಕಳುಹಿಸುತ್ತಾ ಇರಿ. ಅದು ನಿಧಿ ಸಂಗ್ರಹಿಸಲು ಸುಗಮಗೊಳಿಸುತ್ತದೆ. ನಾನು ಸಹಾಯ ಕಾರ್ಯದರ್ಶಿಯಾಗಿರಲು ಹೆಚ್ಚು ಆಸಕ್ತ ಮತ್ತು ನಾನು ಕೆಲಸವನ್ನು ಸಂತೋಷದಿಂದ ನಿರ್ವಹಿಸುತ್ತೇನೆ."[15](೭ ಜೂನ್ ೧೯೨೦). ಅಸ್ಪೃಶ್ಯರ ಯಾವುದೇ ಆಂದೋಲನವು ಅದೇ ಸಮುದಾಯದ ನಾಯಕರಿಂದ ನಡೆಯಬೇಕು ಮತ್ತು ತನ್ನ ಪಾತ್ರ ಈ ಆಂದೋಲನದಲ್ಲಿ ಸಹಾಯಕರಾಗಿರಬೇಕೆಂಬುದು ಅವರ ಪತ್ರಗಳಿಂದ ತಿಳಿಯುತ್ತದೆ.

ಶಾಹುರವರ ಜನ್ಮದಿನ ೨೬ ಜೂನ್. ಮೊದಲು ತಿಳಿಸಿದಂತೆ ಅಂಬೇಡ್ಕರರಿಂದ ಸ್ಫೂರ್ತಿಗೊಂಡ ನಿರ್ಣಯವನ್ನು ಮನ್‌ಗಾವ್ ಸಮ್ಮೇಳನದಲ್ಲಿ ಅಂಗೀಕರಿಸಿದಂತೆ ಶಾಹುರವರ ಜನ್ಮದಿನವನ್ನು ಅಸ್ಪೃಶ್ಯರ ಹಬ್ಬವನ್ನಾಗಿ ಆಚರಿಸಬೇಕೆಂದು ನಿರ್ಧರಿಸಲಾಗಿತ್ತು. ಅದೇ ರೀತಿಯ ನಿರ್ಣಯವನ್ನು ನಾಗಪುರದಲ್ಲಿ ಸಹ ಪಾಸು ಮಾಡಲಾಗಿತ್ತು. ಅದರ ಪ್ರಕಾರ ಅಂಬೇಡ್ಕರರು 'ಮೂಕನಾಯಕ'ದ ಒಂದು ವಿಶೇಷ ಸಂಚಿಕೆಯನ್ನು ಹೊರತರಲು ನಿರ್ಧರಿಸಿದ್ದರು. ಅವರು ಶಾಹುರವರಿಗೆ ೧೩ ಜೂನ್ ೧೯೨೦ರಂದು ಒಂದು ಪತ್ರ ಬರೆದು ತಾವು ಕೊಲ್ಹಾಪುರಕ್ಕೆ ವಿಶೇಷ ಸಂಚಿಕೆಗಾಗಿ ತಮ್ಮ ಆಡಳಿತದ ಸಂಪೂರ್ಣ ಮಾಹಿತಿ ಬೇಕಾಗಿರುವುದರಿಂದ ತಾನು ಬರುತ್ತಿರುವುದಾಗಿ ತಿಳಿಸಿದ್ದು ಈ ಸಂದರ್ಭದಲ್ಲಿ ಸಿಗುತ್ತದೆ.[16] ಆದಾಗ್ಯೂ

ಬಾಬಾಸಾಹೇಬರು ಕೊಲ್ಹಾಪುರಕ್ಕೆ ಬಂದದ್ದು ಮತ್ತು 'ಮೂಕನಾಯಕ'ದ ವಿಶೇಷ ಸಂಚಿಕೆ ಪ್ರಕಟವಾದದ್ದು ಮಾತ್ರ ಗೊತ್ತಾಗುವುದಿಲ್ಲ. ಆ ಸಂಚಿಕೆಯ ಮೂಕನಾಯಕ ಇಂದು ಸಿಗುತ್ತಿಲ್ಲ. ಅದು ಸಿಕ್ಕಿದ್ದೇ ಆದರೆ ಶಾಹು ಅವರ ಜೀವನಚರಿತ್ರೆಯ ಸಾಹಿತ್ಯಕ್ಕೆ ಮಹತ್ತರವಾದ ಸೇರ್ಪಡೆಯಾಗುತ್ತದೆ.

ಈ ಅವಧಿಯಲ್ಲಿ ಅಂಬೇಡ್ಕರರು ಸಿಡೆನ್‌ಹ್ಯಾಮ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಜೀವನಕ್ಕಾಗಿ ಕೆಲಸ ಮಾಡಿದರು. ಆದರೆ ಬಾಕಿ ಉಳಿದಿದ್ದ ಶಿಕ್ಷಣವನ್ನು ಮುಂದುವರಿಸಲು ಅವರು ಆಸಕ್ತರಾಗಿದ್ದರು. ಅವರು ನಿಗದಿಗೊಳಿಸಿದ ಅವಧಿಯಲ್ಲಿ ಡಾಕ್ಟರೇಟ್ ಪದವಿಯನ್ನು ಮುಗಿಸಬೇಕಾಗಿದ್ದುದರಿಂದ ಜುಲೈ ೨೦ರಂದು ಲಂಡನ್ನಿಗೆ ಹೊರಟುಹೋದರು. ಶಾಹುರವರು ಅವರ ಉನ್ನತ ಶಿಕ್ಷಣದ ಖರ್ಚುವೆಚ್ಚಗಳಿಗಾಗಿ ಹಣಕಾಸಿನ ನೆರವು ನೀಡಿದ್ದು ಮಾತ್ರವಲ್ಲದೆ ಪರೇಲಿನಲ್ಲಿದ್ದ ಸಿಮೆಂಟಿನ ಛಾಳಿಗೆ ವೈಯಕ್ತಿಕವಾಗಿ ಭೇಟಿ ನೀಡಿದ್ದರು. ಅವರು ಅಂಬೇಡ್ಕರರಿಗೆ ಆತ್ಮೀಯತೆಯಿಂದ ಹೇಳಿದರು, "ರಮಾಬಾಯಿ (ಅಂಬೇಡ್ಕರರ ಪತ್ನಿ) ನನಗೆ ತಂಗಿ ಇದ್ದಂತೆ, ನೀನು ಬರುವವರೆಗೆ ಆಕೆಯನ್ನು ತೌರುಮನೆಗೆ ಕರೆದುಕೊಂಡುಹೋಗುತ್ತೇನೆ." ಅಂಬೇಡ್ಕರರ ಬಗ್ಗೆ ಶಾಹು ಅವರಿಗಿದ್ದ ಭಾವನಾತ್ಮಕ ಪ್ರೀತಿಯನ್ನು ನಾವು ಕಲ್ಪಿಸಿಕೊಳ್ಳಬಹುದು. ಛತ್ರಪತಿಯವರು ಹೃದಯಪೂರ್ವಕ ಕಾಳಜಿ ತೋರಿಸಿದ್ದಕ್ಕೆ ಕೃತಜ್ಞತೆಗಳನ್ನು ಹೇಳಿದರು ಮತ್ತು ಆತ್ಮೀಯವಾಗಿ ಅಂಬೇಡ್ಕರರು ಹೇಳಿದರು, " ನನ್ನ ಶಕ್ತ್ಯಾನುಸಾರವಾಗಿ ಬಾಂಬೆಯಲ್ಲಿ ಕುಟುಂಬಕ್ಕೆ ವ್ಯವಸ್ಥೆ ಮಾಡಿದ್ದೇನೆ. ಮಾನ್ಯ ಮಹಾರಾಜರೇ ನೀವು ತೊಂದರೆ ತೆಗೆದುಕೊಳ್ಳಬೇಡಿ."[17] ಇದು ಅವರ ಕೊನೆಯ ಸಂದರ್ಶನವಾಗುತ್ತದೆ. (ಮೇ ೧೯೨೦).[18]

ಶಾಹುರವರು ಲಂಡನ್ನಿನಲ್ಲಿರುವ ತಮ್ಮ ಸ್ನೇಹಿತ ಸರ್ ಆಲ್ಫ್ರೆಡ್ ಪೀಜ್ ಅವರಿಗೆ ಬರೆದ ಪತ್ರವನ್ನು ಅಂಬೇಡ್ಕರರಿಗೆ ಕೊಟ್ಟರು. ಭಾರತದಲ್ಲಿರುವ ಬ್ರಾಹ್ಮಣೇತರರ ನ್ಯಾಯಬದ್ಧ ಹಕ್ಕುಗಳ ಬಗ್ಗೆ ಬ್ರಿಟಿಷ್ ರಾಜಕೀಯ ಪ್ರಭುಗಳ ಔದಾಸೀನ್ಯದ ವಿರುದ್ಧ ಸಾರ್ವಜನಿಕ ಅಭಿಪ್ರಾಯ ಮೂಡಿಸುವಾಗ ಬರುವ ಸಾಮಾಜಿಕ ಸುಧಾರಣೆಗಳ ಸಂದರ್ಭದಲ್ಲಿ ಸರ್ ಫೀಜರು ಅಂಬೇಡ್ಕರರಿಗೆ ಸಹಾಯ ಮಾಡಬೇಕೆಂದು ಕೋರಿದ್ದರು.[19]

ಶಾಹು ಅವರು ನಿರೀಕ್ಷಿಸಿದಂತೆ ಅಂಬೇಡ್ಕರರು ಬ್ರಾಹ್ಮಣೇತರರ ಪ್ರಕರಣವನ್ನು ಇಂಗ್ಲೆಂಡಿನಲ್ಲಿರುವ ರಾಜಕೀಯ ನಾಯಕರನ್ನು ಭೇಟಿಯಾಗಿ ತಿಳಿಸುವುದನ್ನು ಮುಂದುವರಿಸಿದ್ದರು. ಅವರು ಸಹ ದಿನಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದರು. ಅವರು ಇಂಡಿಯಾದ ಸ್ಟೇಟ್ ಸೆಕ್ರೆಟರಿಯಾದ ಮಾಂಟೆಗು ಅವರನ್ನು ಭೇಟಿಯಾಗಿದ್ದರು. ೩ ಫೆಬ್ರವರಿ ೧೯೨೧ರಂದು ಶಾಹು ಅವರಿಗೆ ಬರೆದ ಪತ್ರದಲ್ಲಿ "ಮಾಂಟೆಗು ಅವರು ಮಂದಗಾಮಿ ನಾಯಕರ ಸಲಹೆ-ಸೂಚನೆಗಳನ್ನು ಅನುಸರಿಸುತ್ತಾರೆ. ಇಲ್ಲಿಂದ ಮುಂದಕ್ಕೆ ಅವರು ಬ್ರಾಹ್ಮಣೇತರರ ಚಳುವಳಿಯ ಬಗ್ಗೆ ತಿರಸ್ಕಾರ ಭಾವನೆಯಿಂದ ಮಾತನಾಡುವುದಿಲ್ಲವೆಂದು ನನಗೆ ಖಾತ್ರಿಯಾಗಿದೆ. ವಾಸ್ತವಿಕವಾಗಿ ಯಾರು ಇಲ್ಲಿ ಬ್ರಾಹ್ಮಣೇತರರ ಚಳುವಳಿಯ ಬಗ್ಗೆ ಮಾತನಾಡಲು ತಲೆಕೆಡಿಸಿಕೊಳ್ಳುತ್ತಿಲ್ಲ. ಸುಧಾರಣೆಗಳ ಮಸೂದೆಯನ್ನು ತಯಾರುಮಾಡುವಾಗ ಬ್ರಾಹ್ಮಣೇತರರ ಚಳುವಳಿಯ ಮಹತ್ವ ಕುರಿತು ಹೇಳುವುದಕ್ಕೆ ಒಬ್ಬ ಪ್ರಬಲ ವಕೀಲನು ಇರಲಿಲ್ಲ ಎಂಬುದೇ ವಿಷಾದದ ಸಂಗತಿಯಾಗಿದೆ. ಚಳುವಳಿಯು ಬ್ರಾಹ್ಮಣ ವಿರೋಧಿ ಎಂದು ಪ್ರಚಾರ ಮಾಡುವುದಕ್ಕೆ ವಿರೋಧಿಗಳಿಗೆ ಅನುಕೂಲ ಮಾಡಿಕೊಡಲಾಗಿದೆ. ಆಂದೋಲನದ ಜನತಾಂತ್ರಿಕ ಮಗ್ಗುಲನ್ನು ಬೇಕೆಂದೇ ಜಾಣತನದಿಂದ

ಮುಚ್ಚಿಡಲಾಗಿದೆ ಮತ್ತು ಆಂದೋಲನದ ಬಗ್ಗೆ ಅಪಪ್ರಚಾರ ಮಾಡಲಾಗಿದೆ. ಸಾಮಾನ್ಯ ಇಂಗ್ಲಿಷರ ಮನಸ್ಸನ್ನು ತಿರುಚಲಾಗಿದೆ. ......ರಾಜಕೀಯ ಸುಧಾರಣೆಗಳ ಮಸೂದೆಯ ಕರಡನ್ನು ಅಂತಿಮಗೊಳಿಸಲಾಗಿದೆ. ಭಾರತದಲ್ಲಿ ಅಸ್ತಿತ್ವದಲ್ಲಿರುವ ಭೇದಗಳನ್ನು ಮತ್ತು ಸಾಮಾಜಿಕ ತಾರತಮ್ಯತೆಗಳನ್ನು ಅರ್ಥಮಾಡಿಕೊಳ್ಳಲು ಯಾರೂ ಶ್ರಮಪಡುತ್ತಿಲ್ಲ. ಆದರೆ, ಆ ಕಾಲ ಬರುವುದಕ್ಕೆ ನಾವು ಈಗ ಸಿದ್ಧತೆಗಳನ್ನು ಮಾಡಿಕೊಳ್ಳಲು ಪ್ರಾರಂಭಿಸಬೇಕಾಗಿದೆ. ಹಾಗಿರುವಾಗ ಭಾರತದಲ್ಲಿ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳು ಪರಸ್ಪರ ಒಂದಕ್ಕೊಂದು ಬೆರೆತಿರುವುದರ ಬಗ್ಗೆ ನಾನು ಸಾಕಷ್ಟು ವಿವರಗಳನ್ನು ಸಾಧ್ಯವಾದ ಮಟ್ಟಿಗೆ ಕೊಡುತ್ತಿದ್ದೇನೆ. ನನ್ನ ಪ್ರಯತ್ನ ತುಂಬಾ ತಡವಾಗಿರಬಹುದು. ಈ ಪ್ರಯತ್ನ ಪ್ರಯೋಜನಕಾರಿ ಅಥವಾ ನಿಷ್ಪ್ರಯೋಜಕಾರಿಯೆಂದು ಕಾಲವೇ ಹೇಳುವುದು.

ಅಂಬೇಡ್ಕರರು ತಮ್ಮ ಉನ್ನತ ಶಿಕ್ಷಣವನ್ನು ನಿರ್ವಹಿಸುತ್ತಾ ಅವರು ಇಂಗ್ಲೆಂಡಿನಲ್ಲಿ ಬ್ರಾಹ್ಮಣೇತರರ ಹಕ್ಕುಗಳ ಬಗ್ಗೆ ಸಾರ್ವಜನಿಕ ಅಭಿಪ್ರಾಯದ ಶಿಕ್ಷಣವನ್ನು ನೀಡುವ ಆಂದೋಲನವನ್ನು ಮುನ್ನಡೆಸಿದರು. ಭಾರತದಲ್ಲಿ ಶಾಹು ಸೇರಿದಂತೆ ಹಿಂದುಳಿದ ವರ್ಗದ ಜನರು ಅವರು ವಾಪಸ್ಸು ಬರುವುದನ್ನೇ ಕಾತುರವಾಗಿ ಕಾಯುತ್ತಿದ್ದರು. ಅಂಬೇಡ್ಕರರ ಪ್ರತಿಷ್ಠೆ ಮತ್ತು ಖ್ಯಾತಿ ಬೆಳೆಯುವ ಬಗ್ಗೆ ಶಾಹು ಅಂಬೇಡ್ಕರರ ಅನುಪಸ್ಥಿತಿಯಲ್ಲಿ ಲಕ್ಷ್ಯ ತೆಗೆದುಕೊಂಡಿದ್ದರು. ಫೆಬ್ರವರಿ ೧೯೨೨ರಲ್ಲಿ ದೆಹಲಿಯಲ್ಲಿ ಅಸ್ಪೃಶ್ಯರ ಅಖಿಲ ಭಾರತ ಸಮ್ಮೇಳನ ನಡೆಯಿತು. ಶಾಹು ಮುಖ್ಯ ಅತಿಥಿಗಳಾಗಿದ್ದರು. ತಮ್ಮ ಭಾಷಣದ ಪ್ರಾರಂಭದಲ್ಲಿಯೇ ಅಂಬೇಡ್ಕರರನ್ನು ಹೊಗಳುತ್ತಾ ಹೇಳಿದರು: "ಇಂದಿನ ದಿನದ ಗೌರವ ನಮ್ಮ ಉತ್ಸಾಹಿ ಮತ್ತು ಸುಶಿಕ್ಷಿತ ಅಂಬೇಡ್ಕರರಿಗೆ ಸಲ್ಲಬೇಕಾಗಿತ್ತು. ಅವರು ನನಗಿಂತ ಹೆಚ್ಚು ಶಿಕ್ಷಣ ಪಡೆದವರು. ಅವರು ನಿಮ್ಮ ಕಲ್ಯಾಣದ ನಿರಂತರವಾದ ಪ್ರಯತ್ನ ಮಾಡುತ್ತಿದ್ದಾರೆ. ಆದಾಗ್ಯೂ ಅವರು ವಿದೇಶಕ್ಕೆ ಹೋಗಿರುವುದರಿಂದ ಅವರು ನಮ್ಮ ಮುಂದೆ ಇರಲು ಸಾಧ್ಯವಾಗಿಲ್ಲ. ಅವರು ತಮ್ಮ ಹೃದಯದಲ್ಲಿ ನಿಮ್ಮ ಹಿತಾಸಕ್ತಿಯನ್ನು ಇಟ್ಟುಕೊಂಡು ಅವರು ಇತರೆ ಕೆಲಸಗಳನ್ನು ಮಾಡುತ್ತಿದ್ದಾರೆಂಬುದರಲ್ಲಿ ಸ್ವಲ್ಪವೂ ಅನುಮಾನವಿಲ್ಲ".[21]

## ಸಾಮಾಜಿಕ ಜನತಂತ್ರದ ಸ್ತಂಭ

ಅವರು ಇಂಗ್ಲೆಂಡಿನಲ್ಲಿದ್ದರೂ ಅಂಬೇಡ್ಕರರ ಮತ್ತು ಶಾಹುರವರ ಪತ್ರವ್ಯವಹಾರ ಮುಂದುವರಿಯಿತು. ಶಾಹು ಅವರಿಗೆ ೪ ಸೆಪ್ಟೆಂಬರ್ ೧೯೨೧ರಲ್ಲಿ ಬರೆದ ಪತ್ರದಲ್ಲಿ ಅಂಬೇಡ್ಕರರು ಇಂಗ್ಲೆಂಡಿನಲ್ಲಿ ಪೌಂಡಿನ ಬೆಲೆ ಕುಸಿತಗೊಂಡ ಕಾರಣದಿಂದ ತನಗೆ ಹಣದ ಕೊರತೆಯಾಗಿದೆಯೆಂದು ೨೦೦ ಪೌಂಡುಗಳನ್ನು ಕಳುಹಿಸುವಂತೆ ಪತ್ರದಲ್ಲಿ ಕೋರಿದ್ದರು. ಪತ್ರದ ಕೊನೆಯಲ್ಲಿ ಅವರು ಬರೆದಿದ್ದರು: "ಮಾನ್ಯ ಮಹಾರಾಜರು ಕ್ಷೇಮವಾಗಿರುವರೆಂದು ನಾನು ಭಾವಿಸುವೆ. ಭಾರತದಲ್ಲಿ ಮುನ್ನಡೆಯುತ್ತಿರುವ ಸಾಮಾಜಿಕ ಜನತಂತ್ರದ ಆಂದೋಲನಕ್ಕೆ ಆಧಾರ ಸ್ತಂಭವಾಗಿರುವ ತಾವು ನಮಗೆ ಅತ್ಯಗತ್ಯ".[22] ಮಹಾತ್ಮ ಫುಲೆಯಿಂದ ಹಿಡಿದು ಶಾಹುರವರೆಗೆ ಮುಂದುವರಿದ ಸಾಮಾಜಿಕ ವಿಮೋಚನೆ ಮತ್ತೇನು ಅಲ್ಲ, ಅದು ಸಾಮಾಜಿಕ ಜನತಂತ್ರವನ್ನು ಸ್ಥಾಪಿಸುವ ಆಂದೋಲನವಾಗಿದೆ. ಶಾಹು ಮಹಾರಾಜರು ಆಂದೋಲನದ ಆಧಾರ ಸ್ತಂಭ ಎಂಬ ಅವರ ಮೌಲ್ಯಮಾಪನ ಅವರ ಕೊಡುಗೆಗೆ ಸೂಕ್ತವಾಗಿದೆ.

ಜನತಾಂತ್ರಿಕ ಆಂದೋಲನದ ಈ ಸ್ತಂಭ ಮತ್ತು ಅಸ್ಪೃಶ್ಯರ ಆತ್ಮೀಯ ಸ್ನೇಹಿತ ಈ. ಪ್ರಪಂಚದ ಪ್ರಯಾಣ ಮುಗಿಸಿ ಮತ್ತೊಂದು ಲೋಕಕ್ಕೆ ಹೊರಟಿದ್ದಾರೆ ಎಂಬ ಸುದ್ದಿಯನ್ನು ಅಂಬೇಡ್ಕರರು ಇಂಗ್ಲೆಂಡಿನ

ಪತ್ರಿಕೆಗಳಲ್ಲಿ ಓದಿ ದುಃಖದಿಂದ ದಿಗ್ಭ್ರಾಂತರಾದರು. ರಾಜರ್ಷಿಯವರ ಹಿರಿಯ ಮಗ ಹೊಸ ಛತ್ರಪತಿ ರಾಜಾರಾಮ್ ಅವರಿಗೆ ಬರೆದ ಶ್ರದ್ಧಾಂಜಲಿಯ ಪತ್ರದಲ್ಲಿ ಅವರು ಹೇಳುತ್ತಾರೆ: "ಪತ್ರಿಕೆಗಳಲ್ಲಿ ಓದಿದ ಮಾನ್ಯ ಮಹಾರಾಜರ ಸಾವಿನ ಸುದ್ದಿಯಿಂದ ನಾನು ಆಘಾತಗೊಂಡೆ. ಈ ದುರಂತಮಯವಾದ ಘಟನೆಯಿಂದ ನಾನು ಬಹಳ ದುಃಖಿತನಾದೆ. ಅವರ ಸಾವಿನಿಂದ ನಾನು ನನ್ನ ಆತ್ಮೀಯ ಸ್ನೇಹಿತನನ್ನು ಕಳೆದುಕೊಂಡೆ, ಹಿಂದುಳಿದ ವರ್ಗಗಳು ಒಬ್ಬ ಮಹಾನುಭಾವ ದಾನಚಿಂತಾಮಣಿಯನ್ನು ಮತ್ತು ತಮ್ಮ ಘನೋದ್ದೇಶಗಳ ಮಹಾನ್ ನಾಯಕನನ್ನು ಕಳೆದುಕೊಂಡವು".[23]

ಶಾಹು ಸತ್ತ ನಂತರವೂ ಅಂಬೇಡ್ಕರರು ಹಲವು ಸಂದರ್ಭಗಳಲ್ಲಿ ಮಹಾಗೌರವವನ್ನು ತೋರಿಸಿದ್ದಾರೆ. ೧೯೪೦ರಲ್ಲಿ ದಲಿತ ಜನರ ಸಮ್ಮೇಳನಕ್ಕೆ ಅವರು ಕೊಲ್ಹಾಪುರಕ್ಕೆ ಬಂದಿದ್ದರು. ತಮ್ಮ ಭಾಷಣದಲ್ಲಿ ಅವರು ಹೇಳಿದರು: "ಕೊಲ್ಹಾಪುರದ ಬಗ್ಗೆ ಒಂದು ಸಂಗತಿ ಖಚಿತ ಮತ್ತು ಅದಕ್ಕೆ ನಾನು ಮತ್ತು ಎಲ್ಲಾ ಅಸ್ಪೃಶ್ಯರು ಕೊಲ್ಹಾಪುರದ ಬಗ್ಗೆ ಹೆಮ್ಮೆಪಡುತ್ತೇವೆ. ಶಾಹು ಮಹಾರಾಜರು ಕೊಲ್ಹಾಪುರದಲ್ಲೇ ನಿಜವಾದ ಜನತಂತ್ರಕ್ಕೆ ಅಸ್ತಿವಾರವನ್ನು ಹಾಕಿದ್ದರು. ಗೋವುಗಳ ಮತ್ತು ಬ್ರಾಹ್ಮಣರ ಆಶ್ರಯದಾತನಾಗಿದ್ದ ಛತ್ರಪತಿ ಶಿವಾಜಿ ಮಹಾರಾಜರ ಜನ್ಮದಿನಾಚರಣೆಯನ್ನು ನಾವು ಆಚರಿಸುತ್ತೇವೆ. ಆದಾಗ್ಯೂ, ಅವರು ಬ್ರಾಹ್ಮಣ ವಾದವನ್ನು ನಾಶಮಾಡಲಾಗಲಿಲ್ಲ. ಅವರು ಚಿನ್ನ ಕೊಟ್ಟು ಕಾಶಿಯಿಂದ ತಮ್ಮ ಪಟ್ಟಾಭಿಷೇಕಕ್ಕೆ ಗಂಗಾಭಟ್ಟರನ್ನು ಕರೆಸಿದ್ದರು. ಬ್ರಾಹ್ಮಣತ್ವದ ವಿಷದ ಮುಳ್ಳಿನ ಸರ್ವನಾಶದ ಕೀರ್ತಿ ಶಾಹು ಮಹಾರಾಜರಿಗೆ ಸಲ್ಲುತ್ತದೆ. ಆದ್ದರಿಂದ ಶಿವಾಜಿ ಮಹಾಶಯರಿಗಿಂತ ಶಾಹು ಛತ್ರಪತಿ ಹೆಚ್ಚು ದೊಡ್ಡವರೆಂದು ಹೇಳಲೇಬೇಕಾಗುತ್ತದೆ".[24]

ಅಂಬೇಡ್ಕರ್ ಮತ್ತು ಶಾಹು ಅವರ ನಡುವಿನ ಸಂಬಂಧ ಸಾಮಾಜಿಕ ಆಂದೋಲನಕ್ಕೆ ಸೀಮಿತವಾಗಿರಲಿಲ್ಲ. ಆದರೆ ಅದು ವೈಯಕ್ತಿಕ ಮಮತೆಯ ಬಣ್ಣವನ್ನು ಪಡೆದಿದ್ದು. ಶಾಹುರವರು ರಮಾಬಾಯಿ ಅವರನ್ನು ತಮ್ಮ ತಂಗಿಯೆಂದು ಕರೆದದ್ದು ಮತ್ತು ಕೊಲ್ಹಾಪುರವನ್ನು ಆಕೆಯ ತಾಯಿಮನೆ ಎಂದು ಕರೆದದ್ದನ್ನು ನಾವು ನೋಡಿದ್ದೇವೆ. ಹಾಗೆಯೇ ಮಹಾರಾಜರ ಮಗ ರಾಜಾರಾಮ ಛತ್ರಪತಿ ಮತ್ತು ಮಗಳು ಅಕ್ಕಾಸಾಹೇಬ ಅವರು ಅಂಬೇಡ್ಕರರನ್ನು ಮಾಮ ಎಂದು ಭಾವಿಸಿದ್ದರು.[25] ಈ ಘಟನೆಗಳನ್ನು ಇಬ್ಬರೂ ತಮ್ಮ ನಡುವೆ ಹಂಚಿಕೊಂಡಿದ್ದ ಸಂಬಂಧಗಳ ಮಮತೆಗಳ ಸೂಚಕಗಳೆಂದು ಪರಿಗಣಿಸ ಬೇಕು.

ಈ ಸಂಬಂಧದ ಮತ್ತೊಂದು ಲಕ್ಷಣವಿದೆ. ಅದು ಅವರ ಪರಸ್ಪರ ಗೌರವ. ಶಾಹು ಒಬ್ಬ ಮಹಾರಾಜರು. ಅವರು ಬಾಬಾಸಾಹೇಬರಿಗಿಂತ ದೊಡ್ಡವರು. ಅವರು ಮಹಾರಾಷ್ಟ್ರದ ಬ್ರಾಹ್ಮಣೇತರರ, ಸಾಮಾನ್ಯ ಜನತೆಯ ರಕ್ಷಕನೆಂದು ಖ್ಯಾತಿಗಳಿಸಿದ್ದರು. ಇಷ್ಟಾದರೂ ಅವರು ತಮ್ಮ ವ್ಯಕ್ತಿತ್ವದ ದೊಡ್ಡಸ್ತಿಕೆಯನ್ನು ತಮ್ಮ ವರ್ತನೆಯಲ್ಲಿ, ನಡವಳಿಕೆಗಳಲ್ಲಿ ಮತ್ತು ಪತ್ರವ್ಯವಹಾರಗಳಲ್ಲಿ ಮತ್ತು ಅಂಬೇಡ್ಕರರೊಡನೆ ನಡೆದ ಸಂಭಾಷಣೆಗಳಲ್ಲಿ ಎಂದಿಗೂ ತೋರಿಸಿಕೊಳ್ಳಲಿಲ್ಲ. ಅವರು ಅಂಬೇಡ್ಕರರನ್ನು ಸಮಾನರೆಂದು ಅಥವಾ ಹೆಚ್ಚಾಗಿ ಸುಶಿಕ್ಷಿತ ಮತ್ತು ಹೆಚ್ಚು ಗೌರವಾನ್ವಿತ ಸ್ನೇಹಿತ ಎಂದು ಗೌರವಿಸಿದರು. ಅಂಬೇಡ್ಕರರು ಅಷ್ಟೇ ನಮ್ರವಾಗಿ ಶಾಹುರವರನ್ನು ಪ್ರತಿಕ್ರಿಯಿಸುತ್ತಿದ್ದರು. ಅವರು ಮಹಾರಾಜರ ಬಗ್ಗೆ ಅಪಾರ ಗೌರವ ಹೊಂದಿದ್ದನ್ನು ತಮ್ಮ ಹಲವಾರು ನುಡಿಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಅಂಬೇಡ್ಕರರಿಗೆ ಶಾಹು ಬರೆದ ಪತ್ರದಲ್ಲಿ ಮಹಾರರ ಕುಗ್ಗುತ್ತಿರುವ ಸ್ಫೂರ್ತಿಯನ್ನು ಉಲ್ಲೇಖಿಸಿದ್ದನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಕಾಗದದ ಸಂಬೋಧನೆ

ಮಹತ್ವವಾದುದು. ಶಾಹು ಆ ಪತ್ರದಲ್ಲಿ ಅಂಬೇಡ್ಕರರನ್ನು "ರಾಜಮಾನ್ಯ* ಲೋಕಮಾನ್ಯ ಅಂಬೇಡ್ಕರ್" ಎಂದು ಸಂಬೋಧಿಸುತ್ತಾರೆ. ಈ ಪತ್ರವು ಸುಮಾರು ೧೯೨೦ರದ್ದು ಮತ್ತು ಅದರ ಸಂಬೋಧನೆಯ ರೀತಿ ಅಂಬೇಡ್ಕರರಿಗೆ ಭವ್ಯ ಭವಿಷ್ಯವಿದೆಯೆಂಬುದನ್ನು ಶಾಹು ಅವರು ತಮ್ಮ ಮನಸ್ಸಿನಲ್ಲಿ ಅಂದುಕೊಂಡದ್ದನ್ನು ಹೇಳುತ್ತದೆ. ಬಿರುದು 'ಲೋಕಮಾನ್ಯ' (ಜನರಿಂದ ಒಪ್ಪಿತರಾದವರು) ಎಂಬ ಪದವನ್ನು ಆ ದಿನಗಳಲ್ಲಿ ತಿಲಕರಿಗೆ ಮಾತ್ರ ಹಚ್ಚಲಾಗಿತ್ತು. ಅಂಬೇಡ್ಕರರಿಗೆ ಇದನ್ನು ಹಚ್ಚುವ ಮೂಲಕ ಶಾಹು ಅವರು ಒಂದು ದಿನ ಎಲ್ಲಾ ಹಿಂದುಳಿದ ವರ್ಗಗಳಿಗೆ ಲೋಕಮಾನ್ಯ ನಾಯಕರಾಗುವರೆಂದು ಸೂಚಿಸಿದ್ದರು. ಇದು ಕೇವಲ ಅವರ ಮನಸ್ಸಿನ ದೊಡ್ಡಸ್ತಿಕೆಯನ್ನು ಮಾತ್ರ ಹೇಳುವುದಲ್ಲದೆ ಇತಿಹಾಸ ಭವಿಷ್ಯದಲ್ಲಿ ಪಡೆಯುವ ಹಾದಿಯನ್ನು ತೀರ್ಮಾನಿಸುವ ಸಾಮರ್ಥ್ಯವನ್ನು ಅವರು ಹೊಂದಿದ್ದರು. ಇತಿಹಾಸ ಶಾಹು ಅವರ ಭವಿಷ್ಯವನ್ನು ರುಜುವಾತುಪಡಿಸಿತು. ಅಂಬೇಡ್ಕರರು ಲೋಕಮಾನ್ಯ ತಿಲಕರಂತೆ ರಾಷ್ಟ್ರೀಯ ಮಟ್ಟದಲ್ಲಿ ಅಪಾರವಾದ ಗೌರವ ಮತ್ತು ಜನಪ್ರಿಯತೆಯನ್ನು ಪಡೆದರು.

---

* ರಾಜಮಾನ್ಯ – ರಾಜರಿಂದ ಒಪ್ಪಿತನಾದವನು.

೧೪

# ಅಲೆಮಾರಿ ಪಂಗಡಗಳ ವಿಮೋಚನೆ

**ಶಾ**ಹು ಮಹಾರಾಜರು ಅಸ್ಪೃಶ್ಯರ ವಿಮೋಚನೆಗಾಗಿ ನಾನಾ ರೀತಿಯ ಕ್ರಮಗಳನ್ನು ಜಾರಿಗೊಳಿಸಿದ್ದನ್ನು ನಾವು ನೋಡಿದ್ದೇವೆ. ಅಸ್ಪೃಶ್ಯರಿಗಿಂತ ಭಿನ್ನವಾದ, ತೀರಾ ನಿರ್ಲಕ್ಷ್ಯಕ್ಕೊಳಗಾದ ಮತ್ತೊಂದು ಸಮುದಾಯ ಅಲೆಮಾರಿ ಪಂಗಡಗಳು. ಈ ಸಮುದಾಯವನ್ನು ಕಡೆಗೆ ಗಮನಿಸುವುದರಲ್ಲಿ ಶಾಹುರವರ ಕರುಣೆ ವಿಫಲವಾಗಲಿಲ್ಲ. ಇದನ್ನು ಬಹಿಷ್ಕೃತರಿಗೆ ಮಾಡಿಕೊಟ್ಟ ಮಹಾಕಾರ್ಯದ ವಿಶೇಷ ವೈಶಿಷ್ಟ್ಯವೆಂದು ಪರಿಗಣಿಸಬೇಕು.

### ಅಲೆಮಾರಿ ಪಂಗಡಗಳು: ಹಳ್ಳಿ ವ್ಯವಸ್ಥೆಯಿಂದ ಹೊರಗೆ

ಅಸ್ಪೃಶ್ಯ ಜಾತಿಗಳಾದ ಚಂಭಾರ್, ಧೋರ್, ಮಹಾರ್, ಮಾಂಗ್ ಮೊದಲಾದವು ಏನೇ ಆಗಿದ್ದರೂ ಜುಗ್ಗುತನದಿಂದ ಬಹಿಷ್ಕೃತಕ್ಕೊಳಗಾಗಿ ಮತ್ತು ಒತ್ತಾಯಪೂರ್ವಕವಾಗಿ ಹಳ್ಳಿಯ ಆಚೆ ನೆಲಸಿದರೂ ಅವರು ಹಳ್ಳಿ ವ್ಯವಸ್ಥೆಯ ಪ್ರತ್ಯೇಕಗೊಳ್ಳದ ಭಾಗವಾಗಿದ್ದವು. ಅವರಿಗೆ ಹಳ್ಳಿಯ ಕಾರ್ಯನಿರ್ವಹಣೆಯಲ್ಲಿ ಒಂದು ಸ್ಥಾನ ನೀಡಲಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅವರಿಲ್ಲದೆ ವ್ಯವಸ್ಥೆ ಸುಗಮವಾಗಿ ನಡೆಯುತ್ತಿರಲಿಲ್ಲ. ಉದಾಹರಣೆಗೆ: ರೈತನು ಧೋರನಿಲ್ಲದೆ ತಮ್ಮ ಹೊಲಗಳಿಗೆ ನೀರು ಹಾಯಿಸಲು ಚರ್ಮ ಸಿಗುತ್ತಿರಲಿಲ್ಲ. ಚಂಭಾರನಿಲ್ಲದೆ ಚಪ್ಪಲಿಗಳು ದೊರೆಯುತ್ತಿರಲಿಲ್ಲ; ಮಾಂಗ ಇಲ್ಲದೆ ಹಗ್ಗ ಸಿಗುತ್ತಿರಲಿಲ್ಲ; ಮಹಾರರಿಲ್ಲದೆ ಹಳ್ಳಿಯ ಬಿಗಾರಿ* ಕೆಲಸ ನಡೆಯುತ್ತಿರಲಿಲ್ಲ. ಹೀಗಿರುವಾಗ ವ್ಯವಸ್ಥೆಯು ಅವರ ಜೀವನಕ್ಕಾಗಿ ಒಂದಲ್ಲ ಒಂದು ರೀತಿಯಲ್ಲಿ ವ್ಯವಸ್ಥೆ ಮಾಡಲಾಗುತ್ತಿತ್ತು. ಸ್ಥಾನಮಾನದಲ್ಲಿ ಕ್ಷುಲ್ಲಕವಾಗಿದ್ದರೂ ಅವರಿಗೆ ಬಲೂತ ಹಕ್ಕುಗಳನ್ನು ನೀಡಲಾಗಿತ್ತು. ಒಂದು ಅಥವಾ ಎರಡು ಕೊಠಡಿಗಳಿರುವ ಒಂದು ಚಿಕ್ಕ ಮನೆಯನ್ನು ಅವರಿಗೆ ಕೊಡಲಾಗುತ್ತಿತ್ತು. ಅಸ್ಪೃಶ್ಯ ಜಾತಿಯ ಮಹರರು ವತನದಾರರಾಗಿರುತ್ತಿದ್ದರು. ಮತ್ತು ಪ್ರತಿಯೊಬ್ಬ ಮಹರನು ಹೆಚ್ಚಲ್ಲದಿದ್ದರೂ ನಾಲ್ಕು ಆರೆಯ ಜಮೀನನ್ನು ಹೊಂದಿರುತ್ತಿದ್ದನು. ಸ್ಪೃಶ್ಯ ಜಾತಿಯ ಜನರು ಅಸ್ಪೃಶ್ಯ ಜಾತಿಯ ಜನರನ್ನು ಹತ್ತುಮಾರು ದೂರದಲ್ಲಿಡುತ್ತಿದ್ದರೂ ಸಹ ಅವರ ಅಸ್ತಿತ್ವವನ್ನು ಒಪ್ಪಿಕೊಂಡಿದ್ದರು ಮತ್ತು ಅವರ ಒಡನಾಟ ಅನಿವಾರ್ಯವೆನಿಸಿತ್ತೆ ವಿನಹ ಮತ್ತೇನು ಆಗಿರಲಿಲ್ಲ.

ಅಲೆಮಾರಿ ಪಂಗಡಗಳು ಇಂಥ ಯಾವುದನ್ನೂ ಅವರು ಪಡೆದಿರಲಿಲ್ಲ. ಈ ಪಂಗಡಗಳು ಹಳ್ಳಿಪದ್ಧತಿಯ ಭಾಗವಾಗಿರಲಿಲ್ಲ. ಅಷ್ಟೇ ಅಲ್ಲ ಅವರು ತಮ್ಮದೇ ಆದ ಯಾವ ಹಳ್ಳಿಯನ್ನು ಹೊಂದಿರಲಿಲ್ಲ. ಆದ್ದರಿಂದ

---

* ಬಿಗಾರಿ = ಅಧಿಕಾರದಲ್ಲಿರುವ ಸರಕಾರ ಅಥವಾ ವ್ಯಕ್ತಿ ಯಾವುದೇ ಸಂಭಾವನೆ ಕೊಡದೆ ಶ್ರಮ ಅಥವಾ ಸೇವೆಯನ್ನು ಪಡೆಯುವುದು.

ವ್ಯವಸ್ಥೆಯಲ್ಲಿ ಅವರ ಪ್ರವೇಶದ ಪ್ರಶ್ನೆಯೇ ಇಲ್ಲ. ಈ ಪಂಗಡಗಳು ತಮ್ಮ ಇಡೀ ಜೀವಮಾನವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವುದೇ ಆಗಿತ್ತು. ಅದೇ ಅವರ ಪ್ರಪಂಚವಾಗಿತ್ತು. ಏನೇ ಆಗಿದ್ದರೂ ಅವರು ಹಳ್ಳಿ ವ್ಯವಸ್ಥೆಯೊಂದಿಗೆ ಮಾಡುವುದು ಏನೂ ಇರಲಿಲ್ಲ. ಅವರು ಪಂಗಡಗಳ ಆದಿಕಾಲದ ಕುರುಹುಗಳಾಗಿ ಅಸ್ತಿತ್ವದಲ್ಲಿದ್ದರು. ವಿದ್ವಾಂಸರು ಅವರನ್ನು ಒಂದು ವಿಧದ ಸಣ್ಣ ರಾಷ್ಟ್ರಗಳೆಂದು ಭಾವಿಸಿದ್ದಾರೆ. ಯಾವುದೇ ಸಾರ್ವಭೌಮ ರಾಷ್ಟ್ರ ಹೊಂದಿರುವಂತೆಯೇ ಅವು ಸಹ ತಮ್ಮದೇ ಆದ ಕಾನೂನು ಮತ್ತು ನಿಬಂಧನೆಗಳನ್ನು ಹೊಂದಿವೆ. ಅದರಂತೆಯೇ ನ್ಯಾಯಪಾಲನೆಯು ಕೂಡ ಭಿನ್ನವಾಗಿರಬಹುದು. ಅವರ ಜಾತ್ ಪಂಚಾಯಿತಿಗಳು (ನ್ಯಾಯಪಾಲನೆಯ ಸಮಿತಿಗಳು) ಸ್ವತಂತ್ರವಾಗಿ ನ್ಯಾಯದ ಉಸ್ತುವಾರಿಯನ್ನು ಮಾಡುತ್ತವೆ. ಈಗಿರುವ ಕಾನೂನು ಮತ್ತು ನಿಬಂಧನೆಗಳು ಅಥವಾ ಅವು ಯಾವುದೇ ಸಂಬಂಧವನ್ನು ಹೊಂದಿಲ್ಲ (ಇಂದು ಸಹ ಅವರು ಹೆಚ್ಚು ಹೊಂದಿಲ್ಲ).

## ಅಲೆಮಾರಿ ಪಂಗಡಗಳು ಅಪರಾಧಿಗಳಾದದ್ದು

ಅಂತಹ ವ್ಯವಸ್ಥೆಗೊಳಪಟ್ಟ ಅಲೆಮಾರಿ ಪಂಗಡಗಳನ್ನು ಹಳ್ಳಿಯ ವ್ಯವಸ್ಥೆಯ ಭಾಗವಾಗಿ ಮಾಡುವುದು ಅಸಾಧ್ಯ. ಏಕೆಂದರೆ, ಅನಾದಿ ಕಾಲದಿಂದಲೂ ಅವರು ಅಲೆಮಾರಿಗಳ ಜೀವನ ನಡೆಸಿದ್ದಾರೆ. ಕೆಲವರು ನಾಗರಿಕ ಜಗತ್ತಿನ ಅಂಚುಗಳಲ್ಲಿ ತಿರುಗಾಡಿದರೆ ಮತ್ತೆ ಕೆಲವರು ಕಾಡುಗಳನ್ನೇ ಮನೆಮಾಡಿಕೊಂಡರು. ಅವರು ತಮ್ಮ ಸಹಜವಾದ ಕೌಶಲ್ಯ ಮತ್ತು ಕಲೆಗಳನ್ನು ಪ್ರದರ್ಶಿಸುತ್ತ ಬದುಕಿದರು. ಮತ್ತೆ ಕೆಲವರು ಸಮಕಾಲೀನ ರಾಜಕೀಯ ಮತ್ತು ಮಿಲಿಟರಿ ಸಂಘಟನೆಗಳೊಂದಿಗೆ ಶಿಥಿಲ ಸಂಪರ್ಕವಿಟ್ಟುಕೊಂಡು ತಿರುಗಾಡುತ್ತಿದ್ದರು. ಅವರು ಒಂದಲ್ಲ ಒಂದು ವಿಧದಲ್ಲಿ ಜೀವನ ನಿರ್ವಹಣೆ ಮಾಡುತ್ತಿದ್ದರು. ಅವರು ಪ್ರಾರಂಭದಲ್ಲಿ ಕಳ್ಳತನ ಅಥವಾ ಡಕಾಯಿತಿಗಳನ್ನು ಮಾಡುತ್ತಿರಲಿಲ್ಲ. ನಂತರ ದೇಶದಲ್ಲಿ ರಾಜಕೀಯ ಬದಲಾವಣೆಗಳುಂಟಾದುವು. ಬ್ರಿಟಿಷರು ಅನೇಕ ದೇಶೀಯ ರಾಜ್ಯಗಳನ್ನು ನಾಶಮಾಡಿ ತಮ್ಮ ಸಾರ್ವಭೌಮತ್ವವನ್ನು ಇಂಡಿಯಾದಲ್ಲಿ ಸ್ಥಾಪಿಸಿದರು. ಹಲವಾರು ರಾಜಕೀಯ ಮತ್ತು ಸಾಮಾಜಿಕ ಬಂಡಾಯಗಳು ನಡೆದವು. ಈ ಪಲ್ಲಟಗಳ ಇಕ್ಕಟ್ಟಿನ ಪರಿಸ್ಥಿತಿಗಳಲ್ಲಿ ಅಲೆಮಾರಿಗಳ ಜೀವನ ಅಲ್ಲೋಲ ಕಲ್ಲೋಲವಾಯಿತು. ಅವರಲ್ಲಿ ಅನೇಕರು ತಮ್ಮ ಜೀವನೋಪಾಯವನ್ನೇ ಕಳೆದುಕೊಂಡರು. ಅವರಿಗೆ ಜೀವನಕ್ಕೆ ಬೇರೆ ಪರ್ಯಾಯವಿಲ್ಲದೆ ಅವರು ಅಪರಾಧಗಳಿಗೆ ಇಳಿದು ಜೀವನ ಸಾಗಿಸಬೇಕಾಗಿತ್ತು. ಉದಾಹರಣೆಗೆ ಛಪ್ಪರಬಂದ ಅಲೆಮಾರಿ ಪಂಗಡಗಳು ಮಿಲಿಟರಿಯವರಿಗೆ (ಸೈನಿಕರಿಗೆ) ಬಿಡಾರಗಳನ್ನು ಕಟ್ಟುತ್ತಿದ್ದರು ಮತ್ತು ಟಂಕಶಾಲೆಯಲ್ಲಿ ನಾಣ್ಯಗಳನ್ನು ಮುದ್ರಿಸುತ್ತಿದ್ದರೆ, ಬಂಜಾರ ಅಲೆಮಾರಿ ಪಂಗಡದವರು ಸೈನಿಕರಿಗೆ ತಮ್ಮ ದನ-ಕರುಗಳ ಬೆನ್ನಿನ ಮೇಲೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದರು. ಭಾರತದ ಸಂಸ್ಥಾನಗಳನ್ನು ವಿಸರ್ಜಿಸಿದಾಗ ಈ ಅಲೆಮಾರಿ ಜನಾಂಗ ಕೂಡ ಸ್ಥಾನಪಲ್ಲಟಗೊಂಡರು. ಅವರಲ್ಲಿ ಅನೇಕರು ಮೇಲೆ ಹೇಳಿದಂತೆ ಅಪರಾಧದ ಕೆಲಸಗಳಿಗೆ ಇಳಿದಿದ್ದಾರೆ. ಈ ಜಾತಿಗಳಿಗೆ ಸೇರಿದ ಜನರು ಕಳ್ಳತನ, ದರೋಡೆ, ಲೂಟಿ ಮೊದಲಾದ ಕೃತ್ಯಗಳಲ್ಲಿ ತೊಡಗಿದರು ಮತ್ತು ಬ್ರಿಟಿಷ್ ಸರಕಾರ ಇಡೀ ಅಲೆಮಾರಿ ಪಂಗಡವನ್ನು 'ಅಪರಾಧಿ ಜಾತಿಗಳೆಂದು' ಕರೆಯತೊಡಗಿದರು. ಮಹಾರಾಷ್ಟ್ರದಲ್ಲಿ ಅಂತಹ ೧೩ ಪಂಗಡಗಳನ್ನು ಹೆಸರಿಡಿದು ಗುರುತಿಸಿದ್ದಾರೆ. ಅವುಗಳು ಬಂಜಾರ, ಕೊರವಿ (ಕೈಕಡಿ), ತಕರಿಭಮ್ತು, ರಜಪೂತಭಮ್ತು, ಕಂಜಾರಭಟ್, ಬೆರದ (ರಾಮೋಷಿ), ಮಾಂಗ್-ಗರುಡಿ, ಫನ್ಸೆಪರಧಿ, ಛಪ್ಪರಬಂದ, ಕತ್ಬು, ವಡ್ಡ್ ಮೊದಲಾದ ಪಂಗಡಗಳನ್ನು ಅಪರಾಧಿಗಳೆಂದು ಘೋಷಿಸಲಾಗಿದೆ. ಸ್ವಾತಂತ್ರ್ಯದ

ನಂತರ ಈ ಪಂಗಡಗಳ ಮೇಲೆ ಒತ್ತಿದ್ದ 'ಅಪರಾಧ' ಎಂಬ ಮುದ್ರೆಯನ್ನು ಕಿತ್ತುಹಾಕಲಾಯಿತು. ಅವರನ್ನು ಈ ಸಂಕೋಲೆಗಳಿಂದ ಬಿಡಿಸಲಾಗಿದೆ. ಇಲ್ಲಿಂದ ಮುಂದಕ್ಕೆ ಅವರನ್ನು 'ಡಿ–ನೋಟಿಫೈಡ್ ಟ್ರೈಬ್ಸ್' ಎಂದು ಕರೆಯಲಾಯಿತು.[1]

ಬ್ರಿಟಿಷರು ಭಾರತದ ರಾಜಕೀಯ ಆಡಳಿತಗಾರರು. ಅವರು ತಮ್ಮ 'ನಾಗರಿಕತನದ ಸಂಕೀರ್ಣತೆಯ ಶ್ರೇಷ್ಠತ್ವ'ವನ್ನು ಪಡೆದಿದ್ದರು. ಅವರು ಎಲ್ಲಾ ಭಾರತೀಯರನ್ನು ಹಿಂದುಳಿದವರು ಮತ್ತು ಅನಾಗರಿಕರೆಂದು ಭಾವಿಸಿರುವಾಗ ಅಲೆಮಾರಿ ಪಂಗಡಗಳ ಬಗ್ಗೆ ಏನು ಭಾವಿಸಿರಬಹುದೆಂಬುದನ್ನು ನೀವೇ ಕಲ್ಪಿಸಿಕೊಳ್ಳಿ. ಅವರು ಭಾರತದ ರಾಜಕೀಯ ಪ್ರಭುಗಳಾಗಿರುವುದರಿಂದ ಭಾರತದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಕಾಪಾಡುವುದು ಮತ್ತು ಕಾನೂನುಬದ್ಧ ಆಡಳಿತವನ್ನು ಸ್ಥಾಪಿಸುವುದು ಅವರು ತಮ್ಮ ಪರಮಕರ್ತವ್ಯವೆಂದು ಪರಿಗಣಿಸಿದ್ದರು. ಈ ಮನೋಭಾವದಿಂದ ಅವರು ಠಕ್ಕರನ್ನು ಮತ್ತು ಫೆಂಡಾರಿಗಳನ್ನು ಹಿಡಿಯಬೇಕಾಗಿತ್ತು. ಹೀಗೆ ಮಾಡುವುದರಲ್ಲಿ ಅವರು ಸಾಕಷ್ಟು ಸಫಲರಾಗಿದ್ದರು. ದೇಶದ ತುಂಬ ಹರಡಿಕೊಂಡಿರುವ ಅಪರಾಧಿ ಅಲೆಮಾರಿ ಪಂಗಡಗಳನ್ನು ಒತ್ತೊಟ್ಟಿಗೆ ತರುವುದು ತಮ್ಮ ಕರ್ತವ್ಯವೆಂದು ಬ್ರಿಟಿಷರು ಯೋಚಿಸಿದರು. ೧೮೨೭ರಿಂದ ಜಾರಿಗೆ ಬರುವಂತೆ ಸರಕಾರಿ ಆಜ್ಞೆಗಳನ್ನು ಹೊರಡಿಸುವಂತೆ ಮಾಡಿದ್ದರು. ಆ ವರ್ಷ ಹೊರಡಿಸಿದ ಆಜ್ಞೆಯಂತೆ ಈ ಪಂಗಡಗಳ ರಾತ್ರಿಯ ಚಟುವಟಿಕೆಗಳನ್ನು ರದ್ದುಮಾಡಲಾಗಿತ್ತು. ಗ್ರಾಮದ ಪಾಟೀಲರಿಗೆ ಅವರ ಬಗ್ಗೆ ನಿಗಾ ಇಡುವ ಅಧಿಕಾರವನ್ನು (ಹೊಣೆ) ನೀಡಲಾಗಿತ್ತು.[2]

ನಂತರ ಕೆಲವು ಅಲೆಮಾರಿ ಪಂಗಡಗಳು ೧೮೫೭ರ ಸಿಪಾಯಿದಂಗೆಯಲ್ಲಿ ಭಾಗವಹಿಸಿದ್ದು ಕಂಡುಬಂತು ಮತ್ತು ಬ್ರಿಟಿಷರು ಹೆಚ್ಚು ಜಾಗೃತಗೊಂಡರು. ೧೮೭೧ರಲ್ಲಿ ಅಂತಹ ಅಲೆಮಾರಿ ಪಂಗಡಗಳನ್ನು ತಡೆಯಲು ಅವರು ವಿಶೇಷ 'ಅಪರಾಧ ಪಂಗಡಗಳ ಕಾಯ್ದೆ'ಯನ್ನು ಪಾಸುಮಾಡಿದರು. ಅಲ್ಲಿಂದ ಮುಂದಕ್ಕೆ ಈ ಪಂಗಡದ ಜನಗಳಿಗಾಗಿ ಬಯಲು ಜೈಲುಗಳನ್ನು ಇಡೀ ದೇಶದಲ್ಲಿ ತೆರೆದರು. ಕುರಿಮಂದೆಗಳನ್ನು ಒಟ್ಟುಗೂಡಿಸುವುದಕ್ಕೆ ಕಂಬಿಸುತ್ತಿದ್ದ ಪೌಳಿಗೋಡೆ ನಿರ್ಮಿಸಿದಂತೆಯೇ ಇವರಿಗೆ ಅಂಥದ್ದೆ ಪೌಳಿಗೋಡೆಗಳನ್ನು ಸುತ್ತಲು ಕಟ್ಟಿ ಅದರೊಳಗೆ ಇವರನ್ನು ಕೂಡಿಹಾಕಿದರು ಮತ್ತು ಅವರನ್ನು ಸುಧಾರಿಸಲು ಹಲವಾರು ಪ್ರಯೋಗಗಳನ್ನು ಮಾಡಲಾಯಿತು. ಆದರೆ ಅವರ ಮೇಲೆ ಶಿಸ್ತಿನ ಹೆಸರಿನಲ್ಲಿ ಹಲವು ಬಾರಿ ಕಿರುಕುಳಗಳನ್ನು ನೀಡಲಾಯಿತು. ಸುಧಾರಿಸಿದ ಜನರು ಬಿಡುಗಡೆಮಾಡಿ ಪಕ್ಕ 'ಮುಕ್ತ' ಕಾಲೋನಿಗಳಲ್ಲಿ ವಾಸಿಸಲು ಅನುಮತಿ ನೀಡಿದರು. ಅಷ್ಟೇ ಅಲ್ಲ, ಅವರು ಅಲ್ಲಿ ದಿನಕ್ಕೆ ಮೂರು ಬಾರಿ ಕಡ್ಡಾಯವಾಗಿ ಹಾಜರಾತಿಯನ್ನು ಕೊಡಬೇಕಾಗಿತ್ತು. ಅಂಥ ಕಾಲೋನಿಗಳು ಬಯಲು ಜೈಲುಗಳೊಂದಿಗೆ ಇದ್ದವು. ಅವುಗಳನ್ನು 'ಸೆಂಟ್ಲಮೆಂಟ್ಸ್' (ವಸಾಹತು, ನೆಲಸುನಾಡು) ಎಂದು ಕರೆಯಲಾಗುತ್ತದೆ.[3]

ವಿಶ್ವದಲ್ಲಿ ತುಂಬಾ ನಾಗರಿಕರೆಂದು ಕರೆಸಿಕೊಳ್ಳುತ್ತಿದ್ದ ಬ್ರಿಟಿಷರು ಅಂತಹ 'ನೆಲಸುನಾಡು' ಧೋರಣೆಯ ಹಿನ್ನೆಲೆಯಲ್ಲಿ ಕೊಲ್ಹಾಪುರದ ಮಹಾರಾಜರು ಅಂಗೀಕರಿಸಿದ ಮಾನವೀಯ ಧೋರಣೆಯು ನಿಜವಾಗಿ ಮಾನವೀಯತೆಯ ಮತ್ತು ವಿವೇಕದ ಧೋರಣೆಯಾಗಿ ಕಾಣುತ್ತಿತ್ತು. ರಾಜರ್ಷಿ ಶಾಹು ಅವರು ಬ್ರಿಟಿಷರ ಭೌತಿಕ ಧೋರಣೆಗಳನ್ನು ಅನುಸರಿಸಿದರೂ ಅವರ ಸೆಟ್ಲಮೆಂಟ್ಸ್ (ನೆಲಸುನಾಡು) ಧೋರಣೆಯನ್ನು ಕಣ್ಣುಮುಚ್ಚಿಕೊಂಡು ಅನುಸರಿಸಲು ಒಪ್ಪಲಿಲ್ಲ. ಈ ಯಥಾಕಥಿತ ಅಪರಾಧಿ ಪಂಗಡಗಳ ಬಗೆಗಿನ ದಾರಿಯನ್ನು ಭಿನ್ನವಾಗಿ ಅನುಸರಿಸಿದರು. ಅವರು ಕಾನೂನಿನ ಬಲಿಷ್ಠ ಬಲದ ದಾರಿಯನ್ನು ಅನುಸರಿಸದೆ ಅಂತರಂಗದ ಮಾನವೀಯ ಸಕ್ರಿಯತೆಯನ್ನು ಅನುಸರಿಸಿದರು. ಆದ್ದರಿಂದ ಅವರು ಕುಚಿಕೊರವಿ, ವಡ್ಡ, ದೊಂಬರಿ,

ರಾಜಪೂತ್, ಭಮ್ತ, ಘೆಂಡ್ಸೆ ಪರಥಿ ಮೊದಲಾದ ಅಪರಾಧಿ ಪಂಗಡಗಳೊಂದಿಗೆ ಶಾಹು ಅವರು ಮೈತ್ರಿ ಬೆಳೆಸಿಕೊಂಡು ಅವರನ್ನು ಪ್ರೀತಿಪೂರ್ವಕವಾಗಿ ಮುಖ್ಯವಾಹಿನಿಗೆ ತಂದರು. ಅವರು ಕತ್ಕೋಲ್ ಪ್ರದೇಶದಿಂದ ಘಂಡ್ಸೆ ಪರಥಿಗಳನ್ನು ಮುಖ್ಯವಾಹಿನಿಗೆ ತಂದರೆ, ಕೊರವಿಗಳನ್ನು ತೋರಗಲ್ ಕ್ಷೇತ್ರದಿಂದ ತಂದರು. ಇತರೆ ಪಂಗಡಗಳು ಕೊಲ್ಹಾಪುರ ಸಂಸ್ಥಾನದ ಮೂಲಕ ಅಲೆದಾಡುತ್ತಿದ್ದರು. ಈ ಪಂಗಡಗಳ ಜನರು ಕೆಲವು ಸಹಜವಾದ ಕೌಶಲ್ಯಗಳನ್ನು ಹೊಂದಿದ್ದರು. ಅವರನ್ನು ಅದೇ ಕಲೆಯ ರೂಪದಲ್ಲಿ ಕುಶಲಿಗಳನ್ನಾಗಿ ಮಾಡಲಾಯಿತು. ಅವರು ದೈಹಿಕವಾಗಿ ಗಟ್ಟಿಮುಟ್ಟಾದ ಮತ್ತು ಚಾಕಚಕ್ಯತೆಯುಳ್ಳವರು. ಅಂತರಂಗದಲ್ಲಿ ಅವರು ಮುಗ್ಧರು ಮತ್ತು ಪ್ರಾಮಾಣಿಕರು ಅವರ ಜೀವನೋಪಾಯದ ಮಾರ್ಗಗಳು ಬಹುವಿರಳ, ಕ್ಷುಲ್ಲಕ. ಉದಾಹರಣೆಗೆ, ದೊಂಬರಿಗಳು (ಕೊಲ್ಹಾಟಿ) ಮತ್ತು ಪಕ್ಷಿಗಳ ಗೂಡು (ಪಂಜರ) ಗಳನ್ನು ತಯಾರುಮಾಡುತ್ತಿದ್ದರು. ಇವುಗಳೆಲ್ಲವೂ ಅವರ ಹಸಿವನ್ನು ತಣಿಸಲು ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಅವರು ಹಗ್ಗದ ಮೇಲೆ ಹಲವಾರು ಆಟಗಳನ್ನು ಆಡುತ್ತಿದ್ದರು. ಜೊತೆಗೆ ಹಾಡು ಹಾಡಿ ನೃತ್ಯ ಮಾಡುತ್ತಿದ್ದರು. ಘಂಡ್ಸೆ ಪರಥಿ ಪಂಗಡವು ಕಾಡುಗಳಲ್ಲಿ ತಿರುಗುತ್ತಾ ಬೇಟೆಯಾಡಿ ತಮ್ಮ ಜೀವನ ನಡೆಸುತ್ತಿದ್ದರು. ಯಾರೇ ಆಗಲಿ ಕೇವಲ ಬೇಟೆಯಿಂದ ಬದುಕುವುದು ಹೇಗೆ? ಆದ್ದರಿಂದ ಅವರು ಯಾವ ಪರ್ಯಾಯವಿಲ್ಲದೆ ಕಳ್ಳತನ ಮತ್ತು ದರೋಡೆಗಳನ್ನು ಮಾಡುತ್ತಿದ್ದರು. ಕಳ್ಳತನ ಮತ್ತು ಅಪಹರಣಗಳು ಈ ಪಂಗಡದ ವೃತ್ತಿಗಳಾದವು. ತತ್ಪರಿಣಾಮವಾಗಿ ಅವರು ಅತ್ಯಂತ ಅಪಾಯಕಾರಿ ಅಪರಾಧಿ ಪಂಗಡವೆಂದು ಕರೆಯಲಾಯಿತು.

### ಶಾಹು ಅವರ ಹೊಸ ಸಮೀಕರಣ

ಅಪರಾಧಿ ಪಂಗಡದಲ್ಲಿ ಹುಟ್ಟಿದ ಒಬ್ಬ ಅಪರಾಧಿಯು ಯಾವುದೇ ಸುಧಾರಣೆಗೆ ಅಯೋಗ್ಯ ಎಂಬ ಬ್ರಿಟಿಷರ ಭಾವನೆಯನ್ನು ಶಾಹು ಅವರು ನಿರಾಕರಿಸಿದರು. ಎಲ್ಲಾ ಕಡೆಗಳಲ್ಲಿರುವ ಮನುಷ್ಯರೆಲ್ಲರೂ ಒಂದೆ ಎಂಬ ಅಭಿಪ್ರಾಯವನ್ನು ಶಾಹು ಹೊಂದಿದ್ದರು. ಮನುಷ್ಯ ತನ್ನ ಪರಿಸರದ ಪ್ರಭಾವದಿಂದ ಒಬ್ಬ ಸಂತ ಅಥವಾ ಒಬ್ಬ ಅಪರಾಧಿಯಾಗುತ್ತಾನೆ. ಒಂದು ಕಾಡುಪ್ರಾಣಿಯನ್ನು ಪ್ರೀತಿ ಮತ್ತು ಮಾನವೀಯತೆಯಿಂದ ಉಪಚರಿಸಿದರೆ ಅದು ಸಹ ಬದಲಾಗುತ್ತದೆ. ಹಾಗಾದರೆ ಈ ಜನರು ಏಕೆ ಬದಲಾಗುವುದಿಲ್ಲ? ಈ ಸಿದ್ಧಾಂತವನ್ನು ಅವರು ಮಂಡಿಸಿದ್ದು ಮಾತ್ರವಲ್ಲದೆ ಅದನ್ನು ಅವರು ಜಾರಿಗೆ ತರುತ್ತಾರೆ. ಅವರು ರಾಜಪೂತ ಭಮ್ತ ಮತ್ತು ವಡ್ಡರಿಗೆ ಮನೆಗಾಗಿ ಭೂಮಿ ಕೊಟ್ಟರು ಮತ್ತು ಮನೆ ಕಟ್ಟುವ ಕೆಲಸ ಮಾಡುವವರಿಗೆ ಭೌತಿಕವಾಗಿ ಅವರನ್ನು ಒಂದು ಕಡೆಗೆ ನೆಲಸುವಂತೆ ಮಾಡಬೇಕು. ಅವರು ಅವರಿಗೆ ಸ್ವಂತ ಮನೆಯಿರುವಂತೆ ಮಾಡಿ, ಅವರನ್ನು ಗೃಹಸ್ಥರನ್ನಗಿ ಮಾಡಿ, ಅವರನ್ನು ಸಮಾಜದೊಳಕ್ಕೆ ತರಲಾಯಿತು. ಅವರು ದೊಂಬರಿ ಜನರಿಗೆ ಭೂಮಿ ಕೊಟ್ಟು ಅವರು ಕಾಲೋನಿಯಲ್ಲಿ ನೆಲಸುವಂತೆ ಮಾಡಿದರು. ಅವರು ಕಲೆಯ ವಸ್ತುಗಳನ್ನು ತಯಾರು ಮಾಡುವಂತೆ ಪ್ರೋತ್ಸಾಹಿಸಿದರು. ಕುಚಿಕೊರವಿ ಜನರು ಬೇಟೆಯಾಡುವುದರಲ್ಲಿ ಅತಿ ಜಾಣರು. ಅವರನ್ನು ಬೇಟೆಯ ಇಲಾಖೆಯಲ್ಲಿ ಉದ್ಯೋಗಿಗಳನ್ನಾಗಿ ನೇಮಿಸಿಕೊಂಡರು. ರಾಜ ಬೇಟೆಯಾಡಲು ಹೋದಾಗಲೆಲ್ಲ ಅವರನ್ನು ಬೇಟೆಯ-ತಂಡದಲ್ಲಿ ಸೇರಿಸಿಕೊಳ್ಳುತ್ತಿದ್ದರು. ಶಾಹು ಅವರು ನಗರ ಸುತ್ತಾಕಬೇಕೆಂದು ಕುದುರೆಗಾಡಿಯಲ್ಲಿ ಹೊರಟಾಗ ತನ್ನ ಗಾಡಿಯಲ್ಲಿ ಕೊರವಿಗಳನ್ನು ಕರೆದುಕೊಂಡು ಹೋಗುತ್ತಿದ್ದರು. ಸದೃಢ ಬಲಿಷ್ಠ ಕೊರವಿ ಯುವಕ ರಾಮುನನ್ನು ಸಂಧಿಸಿದಾಗ ಶಾಹುರವರು ಅವನನ್ನು ಗುಡಿಸಲು ಮನೆಯಿಂದ ಅರಮನೆಯ ಕೆಂಪು ಅಖಾಡ (ಕುಸ್ತಿ ಮಾಡುವ ಪ್ರದೇಶ) ಕ್ಕೆ ಕರೆದುಕೊಂಡು ಹೋಗಿ,

ಕುಸ್ತಿಪಟುಗಳ ಆಹಾರವನ್ನು ತಿನ್ನಿಸಿ, ಖ್ಯಾತ ಮಲ್ಲನನ್ನಾಗಿ ಮಾಡಿಸುತ್ತಿದ್ದರು. ಈ ರಾಮು ಮುಂದೆ ಕುಸ್ತಿರಾಮ್ ಎಂಬ ಕೀರ್ತಿ ಪಡೆದ ಕುಸ್ತಿಪಟುವಾಗಿಬಿಟ್ಟ. ಈ ಒಂದು ಕ್ರಮದಿಂದ ಶಾಹುರವರು ಇಡೀ ಕೊರವಿ ಪಂಗಡಕ್ಕೆ ಸಾಮಾಜಿಕ ಪ್ರತಿಷ್ಠೆಯನ್ನು ಗಳಿಸಿಕೊಟ್ಟರು.[4]

ಫೆನ್ಸೆಪರಥಿಗಳನ್ನು ಎಲ್ಲಾ ಪಂಗಡಗಳಲ್ಲಿ ಅತ್ಯಂತ ಅಪಾಯಕಾರಿ ಅಪರಾಧಿಗಳೆಂದು ನೋಡಲಾಗುತ್ತಿತ್ತು. ತನ್ನ ಸಂಸ್ಥಾನದಲ್ಲಿ ಫೆನ್ಸೆಪರಥಿಗಳನ್ನು ಹಿಡಿದು ಬ್ರಿಟಿಷರು ಮಾಡಿದ ಹಾಗೆ ಅವರನ್ನು ತಂತಿಗಳಿಂದ ಮಾಡಿದ ಜೈಲುಗಳ ಸೆಟ್ಲಮೆಂಟು (ಕಾಲೋನಿ) ಗಳಲ್ಲಿ ಅವರು ಕೂಡಿಹಾಕುವುದು ಶಾಹು ಅವರಿಗೆ ಕಷ್ಟವೇನು ಆಗಿರಲಿಲ್ಲ. ಆದರೆ ಅವರು ಶಿಕ್ಷಿಸುವ ವಿಧಾನವನ್ನು ಅನುಸರಿಸದೆ ಅವರು ಪ್ರೀತಿಯ ಮಾರ್ಗವನ್ನು ಹಿಡಿದರು. ಅವರು ಏಕೆ ಕದಿಯುತ್ತಾರೆ ಮತ್ತು ಸುಲಿಗೆ ಮಾಡುತ್ತಾರೆ ಎಂಬ ಮೂಲಕಾರಣಗಳಿಗೆ ಹೋಗಿ, ಸಮಾಜವು ಅವರಿಗೆ ಯಾವುದೇ ಪರ್ಯಾಯವನ್ನು ಬಿಟ್ಟುಕೊಟ್ಟಿಲ್ಲ ಎಂಬುದನ್ನು ಕಂಡುಕೊಂಡರು. 'ನಿರುದ್ಯೋಗ ಮತ್ತು ಬಡತನಗಳೆರಡು ಅವರ ಪಾಪಕ್ಕೆ ಕಾರಣ. ಇವುಗಳನ್ನು ಪರಿಹರಿಸದ ಹೊರತು ಅವರನ್ನು ಶಿಕ್ಷಿಸುವುದು ಅಥವಾ ನೈತಿಕ ಪಾಠ ಹೇಳುವುದು ತಪ್ಪಾಗುತ್ತದೆ'.[5] ಒಮ್ಮೆ ಮಹಾರಾಜರು ತಮ್ಮ ಆಲೋಚನೆಯ ಬಗ್ಗೆ ದೃಢವಾಗಿಬಿಟ್ಟರೆ, ಅವರು ಫೆನ್ಸೆಪರಥಿ ಜನರೊಂದಿಗೆ ಪ್ರಯೋಗಮಾಡಲು ನಿರ್ಧರಿಸಿಬಿಟ್ಟರು. ತಮ್ಮ ನಿವಾಸವನ್ನು ರಕ್ಷಿಸುವ ಅಧಿಕಾರವನ್ನು ಈ ಪಂಗಡದ ಭಯಂಕರವೆಂದು ಅಪಾಯಕಾರಿಯೆಂದು ಗುರುತಿಸಿದ ಅಪರಾಧಿ ಮುಖ್ಯಸ್ಥರಿಗೆ ವಹಿಸಿಕೊಡಲು ಮಹಾರಾಜರು ನಿರ್ಧರಿಸಿದರು. ಗುರಿಯಿಟ್ಟು ಹೊಡೆಯುವುದರಲ್ಲಿ ಪರಿಣತರಾದ ಫೆನ್ಸೆಪರಥಿಗಳ ನಾಯಕರಾದ ಲಾಲ್ಯ ಮತ್ತು ಆರ್ವ್ಯ ಅವರಿಗೆ ಶಾಹುರವರ ಸೋನ್‌ತಾಲಿ ಕ್ಯಾಂಪಿನ ವಿಶೇಷ ಕಾವಲುಗಾರರಾಗಿ ನೇಮಕಮಾಡಿದರು.[6]

ಶಾಹು ಅವರು ಖಜಾನೆ ಬೀಗದ ಕೈಗಳನ್ನು ಕಳ್ಳರಿಗೆ ಕೊಟ್ಟಿದ್ದಾರೆಂದು ಜನರು ಭಾವಿಸತೊಡಗಿದರು. ಆದರೆ ಶಾಹುರವರು ಫೆನ್ಸೆಪರಥಿಯವರಲ್ಲಿ ಕಳ್ಳನನ್ನು ನೋಡದೆ ಮನುಷ್ಯನನ್ನು ನೋಡಲು ನಿರ್ಧರಿಸಿದರು. ಅವರ ಪ್ರಯೋಗದ ಮೂಲ ಕಲ್ಪನೆಯಲ್ಲಿ ಪ್ರೀತಿ ಪ್ರೀತಿಯಿಂದ ಹುಟ್ಟುತ್ತದೆ ಮತ್ತು ನಂಬಿಕೆಯಿಂದ ನಂಬಿಕೆ ಹುಟ್ಟುತ್ತದೆ ಎಂಬ ತತ್ವವಿದೆ. ಅವರು ಈ ಕಲ್ಪನೆಯ ತತ್ವವನ್ನು ತಮ್ಮ ವಿವಿಧ ವಿಧಾನಗಳ ಮೂಲಕ ಸಾಧಿಸಿ ತೋರಿಸಿದ್ದಾರೆ. ಒಮ್ಮೆ ಒಳಗೆ ಯಾರು ಬರಬಾರದೆಂದು ಆಜ್ಞೆ ಮಾಡಿದರು ಮತ್ತು ಲಾಲ್ಯ–ಆರ್ವ್ಯ ಅವರು ಆಜ್ಞೆಯನ್ನು ಅಕ್ಷರಶಃ ಶಿರಸಾವಹಿಸಿ, ಶಾಹುರವರ ಸಹೋದರ ಬಾಪು ಸಾಹೇಬರನ್ನು ಸಹ ಒಳಗೆ ಬಿಡಲಿಲ್ಲ. ಬಾಪು ಸಾಹೇಬರು ಕೋಪೋದ್ರಿಕ್ತರಾದರು ಆಗ ಅವರು ಹೇಳಿದರು, "ನಾವು ನಿಮ್ಮನ್ನು ಒಳಗೆ ಬಿಟ್ಟರೆ ಮಹಾರಾಜರ ಆಜ್ಞೆಯನ್ನು ಧಿಕ್ಕರಿಸಿದಂತಾಗುತ್ತದೆ. ಹಾಗಾದರೆ ತಾವು ಬಂದೂಕು ತೆಗೆದುಕೊಳ್ಳಿ, ನಮ್ಮನ್ನು ಗುರಿಯಿಟ್ಟು ಹೊಡೆಯಿರಿ ಮತ್ತು ಒಳಗೆ ಹೋಗಿ".[7] ಲಾಲ್ಯ ಮತ್ತು ಆರ್ವ್ಯ ಅವರು ಫೆನ್ಸೆಪರಥಿಗಳ ತತ್ವನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ತೋರಿಸಿದರು ಮತ್ತು ಶಾಹುರವರ ಪ್ರಯೋಗವನ್ನು ಯಶಸ್ವಿಗೊಳಿಸಿದರು.

ಶಾಹು ಅವರು ಕೆಲವು ಫೆನ್ಸೆಪರಥಿಗಳನ್ನು ಕಾವಲುಗಾರರಾಗಿ, ಕೆಲವರನ್ನು ಬೇಟೆ ಇಲಾಖೆಯಲ್ಲಿ ನಾಯಿಗಳ ಪ್ರಭುಗಳೆಂದು (ರಕ್ಷಕರು) ಮತ್ತೆ ಕೆಲವರನ್ನು ಪೊಲೀಸರನ್ನಾಗಿ ನೇಮಕಮಾಡಿದರು. ಬೇರೆಯವರಿಗೆ ತನ್ನ ಸಂಸ್ಥಾನದಲ್ಲಿ ಉದ್ಯೋಗದ ಬೇರೆ ಬೇರೆ ಕೆಲಸಗಳನ್ನು ಪ್ರಾರಂಭಿಸಿದರು. ಕೆಲವರನ್ನು ರಾಧಾನಗರಿ ಅಣೆಕಟ್ಟಿನ ನಿರ್ಮಾಣಕ್ಕೆ ಕಳುಹಿಸಿದರೆ, ಉಳಿದವರನ್ನು ಲೋಕೋಪಯೋಗಿ ಇಲಾಖೆಯ ರಸ್ತೆಗಳ ನಿರ್ಮಾಣ, ಬಾವಿಗಳ ನಿರ್ಮಾಣ, ಕಟ್ಟಡಗಳ ನಿರ್ಮಾಣದ ಕೆಲಸಗಳಲ್ಲಿ ಉದ್ಯೋಗ ನೀಡಿದರು.[8]

ಹಲವು ತಲೆಮಾರುಗಳಲ್ಲಿ ಅವರು ಅಂಥ ಕೆಲಸಗಳನ್ನು ಯಾರೂ ಮಾಡಿರಲಿಲ್ಲ. ನಾಗರಿಕ ಸಮಾಜ ಅನುಸರಿಸಿದ ಜೀವನದ ರೀತಿಯಲ್ಲಿಯೆ ಅವರು ಜೀವನ ರೂಪಿಸಿಕೊಳ್ಳುವ ವಿಧಾನಗಳನ್ನು ಕಲಿತುಕೊಳ್ಳಲು ಶಾಹು ಅವರು ಬಹಳ ಪ್ರಯತ್ನಪಡುತ್ತಿದ್ದರು ಮತ್ತು ಅವರು ಅದರಲ್ಲಿ ಸಫಲರಾದರು.

ಶಾಹು ಅವರು ಫೆನ್ಸೆಪರಥಿಗಳಿಗೆ ಸೋನ್‌ತಾಲಿ ಕ್ಯಾಂಪಿನಲ್ಲಿ ನಿರ್ಮಾಣದ ಯೋಜನೆಗಳನ್ನು ಪ್ರಾರಂಭಿಸಿದರು. ಅವರು ತಂದೆ–ತಾಯಂದಿರು ಕ್ಯಾಂಪಿನಲ್ಲಿ ಕೆಲಸ ಮಾಡುತ್ತಿರುವಾಗ ಅವರ ಮಕ್ಕಳ ಕಲಿಕೆಗೆ ವ್ಯವಸ್ಥೆ ಮಾಡಿದ್ದರು. ಬಡಕುಟುಂಬದಿಂದ ಶಾಲೆಗೆ ಹೋಗುವ ಪ್ರತಿಯೊಂದು ಮಗುವಿಗೂ ಎರಡು ಭಾಕ್ರಿಗಳನ್ನು (ಊಟ) ಅಡಿಗೆಮನೆ ನೀಡಬೇಕೆಂದು ಮಹಾರಾಜರು ಆಜ್ಞೆ ಮಾಡಿದ್ದರು. ಈ ಆಜ್ಞೆಯು ಫೆನ್ಸೆಪರಥಿಗಳ ಮಕ್ಕಳಿಗೂ ಅನ್ವಯಿಸುವಂತೆ ಮಾಡಿದ್ದರು. ಅವರಲ್ಲಿ ಭರವಸೆ ಮೂಡಿಸುವ (ಪ್ರತಿಭಾವಂತರು) ಮಕ್ಕಳನ್ನು ಆರ್ಯಸಮಾಜದ ಗುರುಕುಲಗಳಿಗೆ (ಶಾಲೆ) ಕಳುಹಿಸಿದರು. ಕಲಿಕೆಯು ನಾಗರಿಕ ಸಮಾಜದ ಮತ್ತೊಂದು ವಿಧಾನವಾಗಿತ್ತು. ಶಾಹು ಮಹಾರಾಜರ ದಯೆಯಿಂದ ಫೆನ್ಸೆಪರಥಿಗಳಿಗೆ ಕಲಿಕೆಯನ್ನು ಪರಿಚಯ ಮಾಡಿಕೊಡಲಾಯಿತು.[9]

೨೩ ಫೆನ್ಸೆಪರಥಿ ಕುಟುಂಬಗಳು ಕೊಲ್ಹಾಪುರದ ಕೋಟಿತೀರ್ಥ ಪ್ರದೇಶದಲ್ಲಿ ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ೧೨೦೦ ರೂ.ಗಳ ಅನುದಾನ ಮತ್ತು ಭೂಮಿಯನ್ನು ನೀಡಿದ್ದರ ಬಗ್ಗೆ ಶಾಹು ಮಹಾರಾಜರು ನವೆಂಬರ್ ೧೯೧೨ರಲ್ಲಿ ಹೊರಡಿಸಿದ ಆಜ್ಞೆಯು ಲಭ್ಯವಿದೆ.[10] ಅಲೆಮಾರಿ ಜೀವನಕ್ಕೆ ಒಗ್ಗಿಕೊಂಡಿದ್ದ ಜನರು ಒಂದು ಸ್ಥಳದಲ್ಲಿ ನೆಲೆಸಿದರು. ಶಾಹು ಮಹಾರಾಜರು ತಮ್ಮ ಸಂಸ್ಥಾನದ ಪ್ರದೇಶದಲ್ಲಿ ಫೆನ್ಸೆಪರಥಿ ಜನರ ಗುಂಪುಗಳು ಅನೇಕ ಸ್ಥಳಗಳಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟರು. ಶಾಹು ಅವರು ರಾಯಬಾಗಿನಲ್ಲಿ ಒಂದು ಬಂಗ್ಲೆಯನ್ನು ಹೊಂದಿದ್ದರು. ಮೂರು ಗುಂಪುಗಳ ಜನರನ್ನು ಈ ಬಂಗ್ಲೆಗೆ ಕಾವಲುಗಾರರನ್ನಾಗಿ ನೇಮಿಸಿದರು. ೧೯೧೭ರಲ್ಲಿ ಶಾಹು ಮಹಾರಾಜರು ಒಂದು ವಿಶೇಷ ಆಜ್ಞೆಯನ್ನು ಹೊರಡಿಸಿ, ಅದರಲ್ಲಿ ಈ ಮೂರು ಪಂಗಡಗಳಿಗೆ (ಗುಂಪು) ನೂರಾರು ಎಕರೆ ಜಮೀನನ್ನು ಅಜಲವಾಡಿ, ಖಂಡಾಳ್ ಮತ್ತು ಕಂಕನವಾಡಿಗಳಲ್ಲಿ ನೀಡಿದರು.[11] ಹಾಗೆಯೇ ಫೆನ್ಸೆಪರಥಿ ಮತ್ತು ಕಂಜರ್‌ಭಟ್ ಪಂಗಡಗಳಿಗೆ ಕೊಲ್ಹಾಪುರದ ಸ್ಥಳದಲ್ಲಿಯೇ ಭೂಮಿಯನ್ನು ನೀಡಿದರು.[12]

ಅಪರಾಧಿ ಅಲೆಮಾರಿ ಪಂಗಡದಲ್ಲಿ ಹೆಚ್ಚು ಹೇಸಿಗೆಯ ಪಂಗಡ ಫೆನ್ಸೆಪರಥಿಗಳೆಂದು ಭಾವಿಸಲಾಗಿತ್ತು. ಆದರೆ ಶಾಹು ಅವರು ಹೆಚ್ಚು ಪ್ರೀತಿಸಿದರು. ಅವರು ತಮ್ಮ ಸೇವೆಗೆ ಸೇರಿಸಿದರು. ಅವರಿಗೆ ಉದ್ಯೋಗ ಸಿಗುವಂತೆ ಮಾಡಿದರು. ಅವರ ಮಕ್ಕಳನ್ನು ಶಾಲೆಗೆ ಹಚ್ಚಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಅವರ ಮಕ್ಕಳು ಮರಿ ಮತ್ತು ಸಂಬಂಧಿಕರನ್ನು ರಾಜಕುಮಾರ ರಾಜಾರಾಮನ ಮದುವೆಗೆ ತಮ್ಮ ಜೊತೆಯಲ್ಲಿ ರೈಲಿನಲ್ಲಿ ಕರೆದುಕೊಂಡು ಹೋಗಿದ್ದರು.[13] ಒಬ್ಬ ಮಹಾರಾಜರ ಮದುವೆಯ ಸಮಾರಂಭದಲ್ಲಿ ಫೆನ್ಸೆಪರಥಿಗಳ ಪರಿವಾರ ಬರುವುದು ಭಾರತದ ಸಾಮಾಜಿಕ ಇತಿಹಾಸದಲ್ಲಿ ಮೊದಲನೇ (ಬಹುಶಃ ಕೊನೆಯ) ಘಟನೆಯಾಗಿದೆ. ಸಮಾಜವು ಫೆನ್ಸೆಪರಥಿಗಳನ್ನು ಅನಾಗರಿಕ ಅಸಭ್ಯವೆಂದು ನೋಡುತ್ತದೆ. ಅವರ ನಡವಳಿಕೆ ಮಾತ್ರವಲ್ಲ. ಅವರ ಜೀವನವು ಒರಟು ಮತ್ತು ಒಡ್ಡೊಡ್ಡಾಗಿರುತ್ತದೆ. ಅವರು ರಾಜನನ್ನು ಸಹ ಏಕವಚನದಲ್ಲಿ 'ಹೇ' ರಾಜ ಎಂದು ಸಂಬೋಧಿಸುತ್ತಿದ್ದರು. ಅವರು ಯಾವುದೇ ಗೌರವಯುತವಾದ ನಡವಳಿಕೆಯನ್ನು ಮರೆತುಬಿಡುತ್ತಿದ್ದರು. ಶಾಹುರವರು ಅಂಥ ಅನಾಗರಿಕ ಮತ್ತು ಅಸಂಸ್ಕೃತ ಜನರ ಬಗ್ಗೆ ಶಾಹುರವರು ಕರುಣೆ ಮತ್ತು ಪ್ರೀತಿಯುಳ್ಳವರಾಗಿದ್ದರು. ಅವರು ನುರಿತ ಭಟ್ಟಂಗಿವಾದಿಗಳ ಸಹವಾಸಕ್ಕಿಂತ ಇಂಥ ಜನರ

ಸಹವಾಸವನ್ನು ಶಾಹು ಹೆಚ್ಚು ಖುಷಿಪಡುತ್ತಿದ್ದರು. ಅವರು ಒಮ್ಮೆ ತೋಫಖಾನೆ ಅವರಿಗೆ ಹೇಳಿದ್ದರು: "ತೋಫ್‌ಖಾನೆ, ನಾನು ನನ್ನ ಫೆನ್ಸೆಪರಧಿಗಳನ್ನು ನಿಮ್ಮ ಬುದ್ಧಿವಂತರಿಗಿಂತ ಹೆಚ್ಚು ಇಷ್ಟಪಡುತ್ತೇನೆ, ಇವರು ತುಂಬಾ ನಂಬಿಕಾರ್ಹರು. ಅವರಿಗೆ ನಿಜವಾಗಿಯು ಮೋಸ ಮಾಡವುದು ಎಂದರೇನು ಎಂಬುದು ನಿಜವಾಗಿ ಗೊತ್ತಿಲ್ಲ. ನಾನು ಒಂದು ದಿನವೆಲ್ಲ ಅವರ ಜತೆಯಲ್ಲಿ ಕಳೆದರೆ ನನಗೆ ಹಸಿವು ಎಂಬುದು ಗೊತ್ತಾಗುವುದೇ ಇಲ್ಲ; ಬೇಜಾರು ಆಗುತ್ತದೆ ಎಂಬುದನ್ನು ಬಿಟ್ಟುಬಿಡಿ. ಅವರು ಮಾತನಾಡುವ ರೀತಿಯಿಂದ ಅವರು ಮೂರ್ಖರೆಂದು ತಿಳಿದುಬಂದರೂ ಅವರು ತಮ್ಮ ಕೆಲಸದಲ್ಲಿ ತುಂಬಾ ಚತುರರು ಮತ್ತು ಜೊತೆಗೆ ಚತುರರು ಕೂಡ".[14]

ಗಿರಿಜನ (ಪಂಗಡಗಳ) ಸಾಮಾಜಿಕ ಕಾರ್ಯಕರ್ತ ವ್ಯಂಕಪ್ಪ ಭೋಂಸ್ಲೆ ಹೇಳುತ್ತಾರೆ: "ಎಲ್ಲಾ ಅಲೆಮಾರಿ ಪಂಗಡಗಳ ಜನರನ್ನು ಅಪರಾಧಿಗಳೆಂದು ತಿರಸ್ಕಾರ ಭಾವದಿಂದ ನೋಡುವ ಕಾಲ ಸಂದರ್ಭದಲ್ಲಿ ಮತ್ತು ಅವರು ಕಾಡುಪ್ರಾಣಿಗಳಿಗಿಂತ ಕಡೆಯಾಗಿ ಜೀವನ ನಡೆಸುತ್ತಿರುವ ಅವರನ್ನು ಈ ದೇಶದ ಮಹಾರಾಜರಲ್ಲಿ ಒಬ್ಬ ಮಹಾರಾಜ ಅವರನ್ನು ನೋಡಿ, ಅವರು ಸಹ ಮಾನವರೆಂದು ಭಾವಿಸಿ, ಅವರನ್ನು ಸರಿಯಾಗಿ ಉಪಚರಿಸಿ, ಅವರನ್ನು ಸಮಾಜದ ಮುಖ್ಯವಾಹಿನಿಗೆ ತಂದದಕ್ಕೆ ಆ ಪಂಗಡದವರು ಅವರ ಬಗ್ಗೆ ಹೆಚ್ಚು ಹೆಮ್ಮೆಪಡುತ್ತಾರೆ".[15] ಮತ್ತೊಬ್ಬ ಸಾಮಾಜಿಕ ಕಾರ್ಯಕರ್ತ ಮತ್ತು ಪ್ರಸಿದ್ಧ ದಲಿತ ಲೇಖಕ ಲಕ್ಷ್ಮಣಮಾನೆ ಹೇಳುತ್ತಾರೆ: "ಶಾಹು ಮಹಾರಾಜರು ಹಲವು ಅಲೆಮಾರಿ ಮತ್ತು ಡಿನೋಟಿಫೈಡ್ ಪಂಗಡಗಳಾದ ಫೆನ್ಸೆಪರಧಿಗಳನ್ನು ತಾಯಿಪ್ರೀತಿಯಿಂದ ಮತ್ತು ತಂದೆಯ ಮಮಕಾರ ಭಾವದಿಂದ ಉಪಚರಿಸಿದರು. ತಾಯಿಯ ಪ್ರೀತಿ ಮತ್ತು ತಂದೆಯ ಮಮಕಾರಗಳು ದೇವರಾದ ಒಬ್ಬ ವ್ಯಕ್ತಿಯಲ್ಲಿ ಕೂಡುತ್ತವೆ. ಆದ್ದರಿಂದ ಸಮಾಜದಿಂದ ಅಸಡ್ಡೆಗೊಳಪಟ್ಟ ಈ ಜನರು ಶಾಹು ಮಹಾರಾಜರನ್ನು ಒಬ್ಬ ದೇವರೆಂದು ಗೌರವಿಸಿದರು. ಅವರು ತಂದ ಸಾಮಾಜಿಕ ಕ್ರಾಂತಿಯನ್ನು ಅಂತಹ ಜನರ ನಂಬಿಕೆಗಳಲ್ಲಿ ಮೂರ್ತರೂಪದಲ್ಲಿ ಕಾಣುತ್ತೇನೆ".[16]

ನಿಜವಾಗಿಯೂ ಈ ಅಲೆಮಾರಿ ಜನರು ಶಾಹುರವರನ್ನು ತಮ್ಮ ದೇವರೆಂದು ಭಾವಿಸಿದರು. ಅವರ ಬಗ್ಗೆ ಶ್ರದ್ಧೆ ಮತ್ತು ನಿಷ್ಠೆಗಳನ್ನು ಅವರು ಹೊಂದಿದ್ದರು. ಅವರ ಮರಣದ ನಂತರ ಅವರ ಪಾರ್ಥಿವ ಶರೀರವನ್ನು ಕೊಲ್ಹಾಪುರಕ್ಕೆ ತಂದಾಗ ಫೆನ್ಸೆಪರಧಿ ಜನಗಳು ಸಮಾಧಾನಪಡಿಸಲಾಗದ ರೀತಿಯಲ್ಲಿ ತಮ್ಮ ಕುಟುಂಬದ ಹತ್ತಿರದ ವ್ಯಕ್ತಿ ಸತ್ತುಬಿಟ್ಟ ಎನ್ನುವಂತೆ ಗೊಳೋ ಎಂದು ಅತ್ತುಬಿಟ್ಟರು.[17]

---

೧೫

# ಜಾತಿ-ಭೇದದ ವಿರುದ್ಧ ಹೋರಾಟ

**ಅ**ಸ್ಪೃಶ್ಯತೆಯು ಜಾತಿಭೇದದ ಘೋರರೂಪ. ಅಸ್ಪೃಶ್ಯತೆ ಮತ್ತು ಜಾತಿ ತಾರತಮ್ಯತೆಗಳು ಒಂದೇ ನಾಣ್ಯದ ಎರಡು ರೂಪಗಳು. ಎಲ್ಲೆಲ್ಲೂ ಮಾನವಕುಲ ಒಂದೇ ಎಂಬ ಮೂಲತತ್ವವಿರುವಾಗ ಅದು ಒಂದೇ ಜಾತಿ, ಅದೇ ಮಾನವೀಯತೆ ಎಂದು ಅಂಗೀಕೃತವಾಗಿದೆ. ಜಾತಿಭೇದ ಅಸ್ಪೃಶ್ಯತೆ ನಾಶವಾಗಿದೆ. ಈ ಪರಿಕಲ್ಪನೆಯು ಮಾನವೀಯತೆ, ಅದೇ ಸಮಾನತೆ. ಆಧುನಿಕ ಜಗತ್ತಿನಲ್ಲಿ ಈ ಪರಿಕಲ್ಪನೆ ಯೂರೋಪ್ ಮತ್ತು ಅಮೇರಿಕಾ ಮುಂತಾದ ಖಂಡಗಳಲ್ಲಿ ತೀವ್ರವಾಗಿ ಹಬ್ಬಿ ಸ್ಥಾನಮಾನಗಳ ಸಮಾನತೆಯ ಆಧಾರಿತ ಸಮಾಜವನ್ನು ಅಲ್ಲಿ ಸ್ಥಾಪಿಸಲಾಗುತ್ತಿದೆ. ಅಲ್ಲಿ ಧಾರ್ಮಿಕ ವ್ಯತ್ಯಾಸಗಳಾದ ಜ್ಯೂ-ಕ್ರಿಶ್ಚಿಯನ್, ಕ್ಯಾಥೋಲಿಕ್-ಪ್ರೊಟೆಸ್ಟೆಂಟ್ ಅಥವಾ ಜನಾಂಗೀಯ ಅಸಮಾನತೆಗಳಾದ ಕಪ್ಪು-ಬಿಳುಪಿನ ವ್ಯತ್ಯಾಸಗಳಿದ್ದರೂ ಭಾರತದಲ್ಲಿರುವಂತಹ ಜಿಗುಟಾದ ಜಾತಿಭೇದವಿಲ್ಲದಿರುವುದರಿಂದ ಇಂಥ ಸಾಮಾಜಿಕ ಬದಲಾವಣೆಗೆ ಕಾರಣವಾಗಿದೆ. ಜಾತಿಯ ಪರಿಕಲ್ಪನೆ ಮತ್ತು ಪ್ರತಿಜಾತಿಗೆ ನಿಗದಿಗೊಳಿಸಿರುವ ವೃತ್ತಿಗಳು ಪಾಶ್ಚಿಮಾತ್ಯ ಸಮಾಜಗಳಲ್ಲಿ ಇಲ್ಲ. ಸಮಾಜದ ನಿತ್ಯವ್ಯವಹಾರಗಳಲ್ಲಿ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರವೆಂಬ ಮೂರು ಮೌಲ್ಯಗಳೇ ಪ್ರಧಾನವಾಗಿದ್ದು ಮಾನವನ ಸಂಪೂರ್ಣ ಅಭಿವೃದ್ಧಿಗೆ ಪೂರಕವಾಗುತ್ತವೆ.

## ಜಾತಿವ್ಯವಸ್ಥೆಯ ಪಿರಮಿಡ್ಡು

ಭಾರತದಲ್ಲಿ ಜಾತಿಪದ್ಧತಿಯ ಕಪಿಮುಷ್ಠಿಯಿರುವುದರಿಂದ ಈ ಮೂರು ತತ್ವಗಳ ಆಧಾರದ ಮೇರೆಗೆ ಸಾಮಾಜಿಕ ಅಭಿವೃದ್ಧಿಗೆ ದೊಡ್ಡ ಅಡಚಣೆಯಾಗಿದೆ. ಈ ಅಡ್ಡಿಯನ್ನು ಕಿತ್ತುಹಾಕುವುದಕ್ಕೆ ಮತ್ತು ಸಾಮಾಜಿಕ ಪ್ರಗತಿಯನ್ನು ಅನುಸರಿಸುವುದು ಸುಲಭದ ಕೆಲಸವಲ್ಲ. ಜಾತಿಭೇದಗಳು ಹಿಂದುಧರ್ಮದ ಮತ್ತು ಹಿಂದು ಸಮಾಜದ ಪ್ರಮುಖ ಲಕ್ಷಣಗಳಾಗಿವೆ. ಹಿಂದು ಸಮಾಜ ಮೂಲಭೂತವಾಗಿ ಸಂರಚನೆಗೊಂಡಿರುವುದು ಉಚ್ಚ ಮತ್ತು ನೀಚ ಎಂಬ ಪರಿಕಲ್ಪನೆಗಳ ಆಧಾರದಿಂದ. ಡಾ. ಬಾಬಾಸಾಹೇಬ ಅಂಬೇಡ್ಕರರು ಬಹಳ ಸೂಕ್ಷ್ಮವಾಗಿ ಈ ಸಂರಚನೆಯನ್ನು ವಿಶ್ಲೇಷಿಸಿ, ಅದನ್ನು ಬಹುಮಹಡಿಗಳ ಪಿರಮಿಡ್ಡಿಗೆ ಸಮೀಕರಿಸಿದ್ದಾರೆ. 'ಮೂಕನಾಯಕ' ಪತ್ರಿಕೆಯ ಮೊದಲ ಸಂಚಿಕೆಯಲ್ಲಿಯೇ ಅವರು ಹೇಳುತ್ತಾರೆ: "ಹಿಂದು ಧರ್ಮದಲ್ಲಿರುವ ಜಾತಿಗಳೆಲ್ಲವೂ ಉಚ್ಚ ಮತ್ತು ನೀಚ (ಮೇಲು ಮತ್ತು ಕೀಳು) ಎಂಬ ಪರಿಕಲ್ಪನೆಗಳಿಂದ ಪ್ರಭಾವಗೊಂಡಿದೆ. ಹಿಂದು ಸಮಾಜ ಒಂದು ಪಿರಮಿಡ್ಡು ಮತ್ತು ಪ್ರತಿಯೊಂದು ಜಾತಿಯೂ ಒಂದು ಅಂತಸ್ತು (ಮಹಡಿ). ಈ ಪಿರಮಿಡ್ಡಿಗೆ ಮೆಟ್ಟಿಲುಗಳಿಲ್ಲ ಎಂಬುದನ್ನು ಗಮನಿಸಬೇಕು ಮತ್ತು ಹೀಗಿರುವಾಗ ಒಂದು ಅಂತಸ್ತಿನಿಂದ ಮತ್ತೊಂದು ಅಂತಸ್ತಿಗೆ ಹೋಗಲು ಯಾವ ವಿಧಾನಗಳೂ ಇಲ್ಲ. ಒಂದು ಅಂತಸ್ತಿನಲ್ಲಿ ಹುಟ್ಟಿದವನು ಅದೇ ಅಂತಸ್ತಿನಲ್ಲಿ ಸಾಯಬೇಕಾಗುತ್ತದೆ. ಕೆಳ ಅಂತಸ್ತಿನ ಮನುಷ್ಯ ಎಷ್ಟೇ ಸಮರ್ಥನಾಗಿದ್ದರೂ, ಅವನಿಗೆ

ಮೇಲಿನ ಅಂತಸ್ತಿಗೆ ಹೋಗಲು ಅವಕಾಶ ಕೊಡುವುದಿಲ್ಲ ಮತ್ತು ಮೇಲಿನ ಅಂತಸ್ತಿನಲ್ಲಿರುವವನು ಎಷ್ಟೇ ಅಯೋಗ್ಯ(ಮೂರ್ಖ)ನಾಗಿದ್ದರೂ ಅವನನ್ನು ಕೆಳ ಅಂತಸ್ತಿಗೆ ತಳ್ಳುವುದಿಲ್ಲ. ಮೇಲು ಮತ್ತು ಕೀಳು ಎಂಬ ಮನೋಭಾವಗಳು ಜಾತಿಗಳಲ್ಲಿ ಅಸ್ತಿತ್ವದಲ್ಲಿರುವುದಕ್ಕೆ ಯಾವುದೇ ಸೂಕ್ತ ಕಾರಣವಿಲ್ಲ ಎಂಬುದನ್ನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಮೇಲುಜಾತಿಯಲ್ಲಿ ಹುಟ್ಟಿದವನು ಪರಿಪೂರ್ಣವಾಗಿ ಅಯೋಗ್ಯನಾಗಿದ್ದರೂ ಅವನ ಮೇಲಿನ ಸ್ಥಾನ(ಅಂತಸ್ತು)ವನ್ನು ಗೌರವಿಸಬೇಕಾಗುತ್ತದೆ. ಹಾಗೆಯೇ ಕೆಳಜಾತಿಯಲ್ಲಿ ಹುಟ್ಟಿದವನು ಎಷ್ಟೇ ಪರಿಪೂರ್ಣವಾಗಿ ಪ್ರತಿಭಾವಂತನಾದರೂ ಸಹ ಅವನು ಅದೇ ಜಾತಿಯಲ್ಲಿಯೇ ಉಳಿಯಬೇಕಾಗುತ್ತದೆ."[1]

ಪ್ರತಿಯೊಂದು ಜಾತಿಯೂ ಹಿಂದು ಸಮಾಜದಲ್ಲಿ ಸ್ವತಂತ್ರವಾಗಿದೆ ಮತ್ತು ಅಂತರ್‌ಜಾತೀಯ ಊಟೋಪಚಾರ ಮತ್ತು ಮದುವೆಗಳು ನಿಷಿದ್ಧವಾಗಿವೆ. ಇದರ ಜೊತೆಗೆ ಜಾತಿಯೊಳಗೇ ಹಲವಾರು ಉಪಜಾತಿಗಳಿವೆ ಮತ್ತು ಪ್ರತಿಯೊಂದು ಉಪಜಾತಿಯು ಅಂತರ್‌ಜಾತೀಯ ಮದುವೆ ಮತ್ತು ಊಟೋಪಚಾರಗಳನ್ನು, ನಿರ್ಬಂಧಗಳನ್ನು ಚಾಚೂತಪ್ಪದೆ ಅನುಸರಿಸುತ್ತವೆ. ಅಂಬೇಡ್ಕರರ ಜೀವನ ಚರಿತ್ರೆಯಲ್ಲಿ ಒಂದು ನಿದರ್ಶನ(ಘಟನೆ)ವನ್ನು ಗಮನಿಸುವುದು ಮುಖ್ಯ. ೧೯೨೦ರ ಕೊನೆಯಲ್ಲಿ ನಾಗಪುರದಲ್ಲಿ ಬಹಿಷ್ಕೃತ ಜನರ ಒಂದು ಸಮ್ಮೇಳನ ನಡೆಯಿತು. ಅಂಬೇಡ್ಕರರ ಬಹಳ ಪ್ರಯತ್ನದಿಂದ ಮಹರರ ೧೮ ಉಪಜಾತಿಗಳಿಗೆ ಒಂದು ಸಾಮೂಹಿಕ ಊಟದ ವ್ಯವಸ್ಥೆಯನ್ನು ಸಂಘಟಿಸಿದ್ದರು.[2] ಮಹರರು ಜಾತಿಭೇದದಿಂದ ಬಹಳ ನರಳಿದರು. ಅಂಬೇಡ್ಕರರಂತಹ ದೊಡ್ಡಸ್ತಿಕೆಯುಳ್ಳ ವ್ಯಕ್ತಿಯು ೧೮ ಉಪಜಾತಿಗಳ ಜೊತೆಯಲ್ಲಿ ಊಟಮಾಡಿದರೆಂಬ ವಿಚಾರವನ್ನು ಪಕ್ಕಕ್ಕೆ ತಳ್ಳಲು ಮಹಾಪ್ರಯತ್ನಪಟ್ಟರೆಂಬುದನ್ನು ಮತ್ತು ಮಹಾತ್ಮ ಫುಲೆ, ಶಾಹು, ಅಂಬೇಡ್ಕರರು ಸ್ವತಃ ಇದರ ವಿರುದ್ಧ ಹೋರಾಡುವಾಗ ಅನುಭವಿಸಿದ ನೋವನ್ನು ನಾವು ಗಮನಿಸಬೇಕಾಗಿದೆ. ಪ್ರತಿಯೊಂದು ಜಾತಿಯೂ ಹಲವು ಉಪಜಾತಿಗಳಾಗಿ ವಿಭಾಗವಾಗಿದೆಯೆಂಬುದನ್ನು ಮಹರರ ಜಾತಿಗೆ ಸೀಮಿತವಾಗದೆ ಇಡೀ ಜಾತಿವ್ಯವಸ್ಥೆಯ ಬ್ರಾಹ್ಮಣ, ಮರಾಠ, ಸಾಲಿ, ಮಾಲಿ ಯಾವುದಕ್ಕೂ ವಿನಾಯಿತಿಯಿಲ್ಲದೆ ಪ್ರತಿಯೊಂದು ಜಾತಿಗೂ ಉಪಜಾತಿಗಳ ವಿಂಗಡಣೆ ಹಬ್ಬಿದೆ. ಜಾತಿವ್ಯವಸ್ಥೆಯ ತುತ್ತತುದಿಯ ಅಂತಸ್ತಿನಲ್ಲಿರುವುದು ಬ್ರಾಹ್ಮಣ ಜಾತಿಯವರೆಂದು ಅಂಬೇಡ್ಕರರು ವಿವರಿಸಿದ್ದಾರೆ. ಬ್ರಾಹ್ಮಣರ ಕೆಳಗೆ ಮರಾಠರು, ಮರಾಠರ ಕೆಳಗೆ ಇತರೆ ಜಾತಿಗಳು, ಅವರ ಕೆಳಗೆ ಇನ್ನೂ ಇರುವವರು, ಅಲೂತಗಳು–ಬಲೂತಾಗಳು ಮತ್ತು ಇತರೆ ಅಸ್ಪೃಶ್ಯರ ಜಾತಿಗಳು. ಪ್ರತಿಯೊಂದು ಜಾತಿಯೂ ತಮ್ಮ ಕೆಳಗಿರುವ ಜಾತಿಯು ಕೀಳುಜಾತಿಯೆಂದು ಬಗೆದವು. ಅಷ್ಟೇ ಅಲ್ಲ ಅಸ್ಪೃಶ್ಯರು ಸಹ ತಮ್ಮ ಕೆಳಗಿರುವ ಜಾತಿಗಳು ಕೀಳೆಂದು ತಿಳಿದವು. ಸಾವಿರಾರು ವರ್ಷಗಳಿಂದಲೂ ಅಸಮಾನತೆಯ ದೊಡ್ಡ ಬಂಡೆಯ ಮೇಲೆ ಭದ್ರವಾಗಿ ನಿಂತಿರುವ ಜಾತಿಪದ್ಧತಿಯ ಪಿರಮಿಡ್ಡನ್ನು ಒಡೆಯುವ ಹೊಣೆಯನ್ನು ನಿಭಾಯಿಸಲು ಮಹಾತ್ಮ ಫುಲೆಯವರು ಪ್ರಾರಂಭಿಸಿದರು. ಶಾಹು ಅವರು ಫುಲೆಯವರಿಗಿಂತ ಸನ್ನದ್ಧರಾಗಿದ್ದರು. ಅವರು ತಮ್ಮ ಅಧಿಕಾರ ಮತ್ತು ಇಚ್ಛಾಶಕ್ತಿಗಳೆರಡನ್ನು ಸಮಾಜದ ಏಳಿಗೆಗಾಗಿ ಬಳಸಿದರು. ಶಾಹುರವರು ತಮ್ಮ ಅಧಿಕಾರ ಮತ್ತು ಇಚ್ಛಾಶಕ್ತಿಗಳೆರಡನ್ನೂ ಜಾತಿಭೇದಗಳ ಅನಿಷ್ಟವನ್ನು ಅಳಿಸಿಹಾಕಲು ಪ್ರಯೋಗಿಸಿದರು.

### ಜಾತಿವಿನಾಶದ ಬಗೆಗಿನ ಶಾಹುರವರ ಚಿಂತನೆಗಳು

ಶಾಹುಛತ್ರಪತಿಯವರ ಜಾತಿ–ಭೇದದ ಸಮಸ್ಯೆಯ ಬಗ್ಗೆ ಇರುವ ಚಿಂತನೆಗಳನ್ನು ಅವರು ವಿವಿಧ ಸಮ್ಮೇಳನ ಮತ್ತು ಸಭೆಗಳಲ್ಲಿ ಮಾಡಿದ ಭಾಷಣಗಳಿಂದ ಹೆಕ್ಕಿ ತೆಗೆಯಬಹುದು. ಅವರ ಚಿಂತನೆ ನೇರ,

ದಿಟ್ಟ ಹಾಗೂ ವಾಸ್ತವತೆಗೆ ಹತ್ತಿರವಾದದ್ದು ಮತ್ತು ನಿರೂಪಣೆಯಲ್ಲಿ ಯಾವ ಅಸ್ಪಷ್ಟತೆಯೂ ಇಲ್ಲ. ಸಮಾಜದಲ್ಲಿ ಬೇರು ಬಿಟ್ಟುಕೊಂಡಿದ್ದ ಅಸಮಾನತೆ, ಅನ್ಯಾಯ ಮತ್ತು ಶೋಷಣೆಗಳ ಬಗ್ಗೆ ಪ್ರಾಮಾಣಿಕವಾಗಿ ಮಾತನಾಡಿದರು. ಅವರ ಪ್ರಕಾರ ಈ ಎಲ್ಲಾ ಅನಿಷ್ಟಗಳಿಗೆ ಮೂಲಕಾರಣ ಜಾತಿಬೇಧದ ಆಚರಣೆ ಯಾಗಿತ್ತು. ಭಾರತದ ಸಾವಿರಾರು ವರ್ಷಗಳ ದಾಸ್ಯಕ್ಕೆ ಹಿಂದೆಯಿದ್ದ ಕಾರಣ ಜಾತಿಭೇದಗಳು; ಜಾತಿಭೇದಗಳ ಕಾರಣದಿಂದ ಎಣಿಕೆಯಲ್ಲದ ಜಾತಿಗಳ ಉಪಜಾತಿಗಳು ವಿಭಾಗಗಳು. ಭಾರತೀಯರಲ್ಲಿ ಯಾವುದೇ ರೀತಿಯ ಐಕ್ಯತೆಗೆ ಸಾಧ್ಯವಾಗಲಿಲ್ಲ, ತತ್ಪರಿಣಾಮವಾಗಿ ಗುಲಾಮತ್ವ ಉಂಟಾಯಿತು. ದ್ವೇಷವಿಲ್ಲದೆ ಜಾತಿಭೇದದ ವ್ಯವಸ್ಥೆಯ ಮುಂದುವರಿಕೆ ಯಾರು ಪ್ರತಿಪಾದಿಸಿದರೆಂದು ಜನರನ್ನು ತರಾಟೆಗೆ ತೆಗೆದುಕೊಂಡು ಅವರು ಹೇಳುತ್ತಾರೆ: "ಅವರ ಈ ಪ್ರತಿಪಾದನೆ ಪ್ರಾಮಾಣಿಕವಾಗಿದ್ದರೆ ಅವರ ಅಜ್ಞಾನದ ಬಗ್ಗೆ ಕರುಣಿಸೋಣ, ಏಕೆಂದರೆ, ಈ ಜಾತಿ–ಭೇದವೇ ಜಾತಿದ್ವೇಷವಾಗಿದೆ. ನೀವು ಈ ಪರಿಣಾಮದಿಂದ ಮುಕ್ತಿ ಪಡೆಯಬೇಕಾದರೆ ಮೊದಲು ನೀವು ಮೂಲಕಾರಣದಿಂದ ಮುಕ್ತಿ ಪಡೆಯಿರಿ."[3] ಜಾತಿ–ಭೇದಗಳನ್ನು ಅಳಿಸಿಹಾಕುವುದಕ್ಕೆ ಜಾತಿದ್ವೇಷವನ್ನು ಮೂಲೋತ್ಪಾಟನೆ ಮಾಡುವುದೊಂದೇ ದಾರಿ ಎಂದು ಶಾಹು ಅವರು ಹೇಳುತ್ತಾರೆ; "ಜಾತಿದ್ವೇಷವು ಭಾರತದ ಒಂದು ಹಳೆಯ ರೋಗ, ಪರಶುರಾಮರು ಭೂಮಂಡಲದಲ್ಲಿ ಕ್ಷತ್ರಿಯರನ್ನು ಕೊಚ್ಚಿಹಾಕಿ ಸರ್ವನಾಶಮಾಡಿದರೆಂಬುದೇ ಒಂದು ಮಿಥ್ಯೆ. ಈ ಜಾತಿ–ದ್ವೇಷವನ್ನು ಪೂರ್ಣವಾಗಿ ಬಿಂಬಿಸುತ್ತದೆ. ಜಾತಿದ್ವೇಷದಿಂದ ಪೇಶ್ವೆಗಳು ಕತ್ತೆಗಳ ನೇಗಿಲುಗಳಿಂದ ಬ್ರಾಹ್ಮಣೇತರರ ಮನೆಗಳನ್ನು ಉರುಳಿಸಿದರು. ಬ್ರಾಹ್ಮಣರ ತಲೆಯ ಜುಟ್ಟುಗಳನ್ನು ಮತ್ತು ಪವಿತ್ರ ಜನಿವಾರಗಳನ್ನು ರಕ್ಷಿಸಿದರು. ಶಿವಾಜಿ ಮಹಾರಾಜರು ಮತ್ತು ಅಂಥ ಧೈರ್ಯಶಾಲಿ ಮರಾಠರನ್ನು ಈಗ ಶೂದ್ರರೆಂದು ಘೋಷಿಸಲಾಗಿದೆ. ಈ ಸೊಕ್ಕಿನ ಹಿಂದೆ ಯಾವ ಕಾರಣವಿದೆ? ಈ ಜಾತಿದ್ವೇಷಗಳನ್ನು ತ್ಯಜಿಸಬೇಕಾದರೆ ಜಾತಿಭೇದಗಳನ್ನು ಅನಿವಾರ್ಯವಾಗಿ ನಾಶಮಾಡಬೇಕಾಗಿದೆ. ನಾವೆಲ್ಲ ಜಾತಿಭೇದಗಳೆಲ್ಲವನ್ನು ಅಳಿಸಿಹಾಕಿ, ನಾವೆಲ್ಲ ಒಂದಾಗೋಣ."[4]

ಶಾಹುಮಹಾರಾಜರು ಜಾತಿವ್ಯವಸ್ಥೆಯನ್ನು ಮುಖ್ಯವಾಗಿ ಜೀವಶಾಸ್ತ್ರೀಯ ದೃಷ್ಟಿಕೋನದಿಂದ ಚಿಂತಿಸಿದರು. ಪ್ರಕೃತಿಯಲ್ಲಿ ಅಸ್ತಿತ್ವದಲ್ಲಿರುವ ಪ್ರಾಣಿಲೋಕದಲ್ಲಿ ಮನುಷ್ಯ ಒಬ್ಬನು. ಅವನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಪ್ರಕೃತಿಯಲ್ಲಿದ್ದಾನೆ, ಅವನೊಂದಿಗಿರುವ ವಿಶಿಷ್ಟಗುರುತುಗಳು (ಭೇದಗಳು) ಅಸಾಧ್ಯ, ವಿಶಿಷ್ಟ ಜೀವಿ ತನ್ನದೇ ಆದ ಜೀವಿಗೆ ಜನ್ಮ ನೀಡುತ್ತದೆ ಎಂದು ಶಾಹುರವರು ಪವಿತ್ರ ಗ್ರಂಥಗಳು ಜೀವಿಗಳ ಬಗ್ಗೆ ಹೇಳಿರುವುದನ್ನೇ ಹೇಳುತ್ತಾರೆ: "ಸತ್ವದಲ್ಲಿ, ಸಂರಚನೆಯಲ್ಲಿ ಮತ್ತು ಉಗಮದಲ್ಲಿ ಯಾರು ಸಾದೃಶ್ಯ ಪಡೆಯುವವರೋ ಅವರೆಲ್ಲ ಅದೇ ಜೀವಜಾತಿಗೆ ಸೇರಿದವರೆಂದು ಅರ್ಥಮಾಡಿಕೊಳ್ಳಬೇಕು 'ಮತ್ತೆ ಸಂರಚನೆಯಲ್ಲಿ ಹೋಲುವವರೇ ಜೀವಜಾತಿಯಲ್ಲಿ ಹೋಲುತ್ತಾರೆ' ಎಂಬ ವ್ಯಾಕರಣಬದ್ಧವಾದ ನಿರ್ವಚನವನ್ನು ನೀಡುತ್ತಾರೆ. ಉದಾಹರಣೆಗೆ ಮನುಷ್ಯರು, ಹಸುಗಳು, ಕುದುರೆಗಳು, ಆನೆಗಳು ಇತ್ಯಾದಿ."[5] ಜೀವಜಾತಿಯ ಈ ನಿರ್ವಚನವು ಹಿಂದುಧರ್ಮದ ಜಾತಿಪದ್ಧತಿಯ ಬುಡಕ್ಕೆ ಕೊಡಲಿ ಪೆಟ್ಟಾಗಿತ್ತು.

ಶಾಹುರವರು ಜಪಾನಿನ ಸಮುರಾಯ್ ಜನರ ಉದಾಹರಣೆಗಳನ್ನು ಹಲವು ಬಾರಿ ನೀಡುತ್ತಾರೆ. ಸಮುರಾಯಿಗಳು ತಮ್ಮನ್ನು ತಾವೇ ಶ್ರೇಷ್ಠರೆಂದು ಬಗೆದರು ಮತ್ತು ಇತರೆ ಜಪಾನಿ ಜನರು ಕೀಳೆಂದು ಬಗೆದರು. ಆದರೆ ಒಮ್ಮೆ ಜಪಾನ್‌ದೇಶವನ್ನು ಬಲಿಷ್ಠ ಮತ್ತು ಆಧುನಿಕ ರಾಷ್ಟ್ರವನ್ನಾಗಿ ಮಾಡಲು ನಿರ್ಧರಿಸಿ ಸ್ವಯಂಪ್ರೇರಣೆಯಿಂದ ತಮ್ಮ ಶ್ರೇಷ್ಠ ಸ್ಥಾನಮಾನವನ್ನು ಮತ್ತು ಹಕ್ಕುಗಳನ್ನು ತ್ಯಜಿಸಿಬಿಟ್ಟರು ಮತ್ತು ರಾಷ್ಟ್ರದ ಮುಖ್ಯವಾಹಿನಿಯಲ್ಲಿ ಬೆರೆತುಬಿಟ್ಟರು.[6] ಜಪಾನಿನಲ್ಲಿ ಸಮುರಾಯಿಗಳು ಮಾಡಿದಂತೆ ಈ ಬ್ರಾಹ್ಮಣರು

ಮತ್ತು ಕ್ಷತ್ರಿಯರು ಏಕೆ ಮಾಡಬಾರದು ಎಂದು ಶಾಹುರವರು ಕೇಳುತ್ತಾರೆ. ಜಾತಿ–ಭೇದಗಳನ್ನು ಅಳಿಸಿಹಾಕುವುದು ರಾಷ್ಟ್ರೀಯ ಹೊಣೆ ಮತ್ತು ಅದನ್ನು ಬ್ರಾಹ್ಮಣ ಮತ್ತು ಕ್ಷತ್ರಿಯರಿಂದ (ಮರಾಠ) ಪ್ರಾರಂಭವಾಗಬೇಕು. ಪ್ರಾಚೀನಕಾಲದಿಂದ ಅನುಭವಿಸುತ್ತಿರುವ ಶ್ರೇಷ್ಠತೆಯ ಹಕ್ಕುಗಳನ್ನು ಅವರು ಬಿಟ್ಟುಕೊಡಬೇಕು ಮತ್ತು ಅವರು ಬೇರೆಯವರಿಗೆ ಆದರ್ಶವಾಗಬೇಕು. ಈ ಸಂದರ್ಭದಲ್ಲಿ ಶಾಹು ಹೇಳುತ್ತಾರೆ: "ಒಂದು ವೇಳೆ ಜಾತಿ–ಭೇದಗಳನ್ನು ಅಳಿಸಿಹಾಕಲು ಕೆಳಜಾತಿಗಳಿಂದ ಪ್ರಾರಂಭವಾದರೆ, ಅದು ದುರಂತವಾಗುತ್ತದೆ. ಆದರೆ ಇದು ಮೇಲುಜಾತಿಗಳಿಂದ ಪ್ರಾರಂಭವಾದರೆ ಅದು ಬೇರೆ ಜಾತಿಗಳಿಗೆ ಸ್ವಾರ್ಥತ್ಯಾಗದ ವಿಚಾರ–ಪ್ರಚೋದಕ ನಿದರ್ಶನವಾಗುತ್ತದೆ. ಇದಾಗದ ಹೊರತು, ಪ್ರತಿಯೊಂದು ಜಾತಿಯೂ ಸದ್ಯದ ಪರಿಸ್ಥಿತಿಯನ್ನು ಒಡಕು ಹೆಚ್ಚಿಸಿಕೊಳ್ಳುವುದನ್ನು ಸದುಪಯೋಗಪಡಿಸಿಕೊಳ್ಳದೆ ತನ್ನ ಏಳಿಗೆಗೆ ಮತ್ತು ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಮತ್ತು ಮೇಲಿನ ಮೆಟ್ಟಿಲುಗಳನ್ನು ಏರುವುದಕ್ಕೆ ಶ್ರಮಪಡುತ್ತಿರುವಾಗಲೇ ಮೇಲುಜಾತಿಗಳು ಒಂದು ಮೆಟ್ಟಿಲು ಕೆಳಗೆ ಇಳಿದು ಅಗತ್ಯ ಬಿದ್ದರೆ ಕೆಳಗಿರುವವರಿಗೆ ಸಹಾಯಹಸ್ತ ನೀಡಲಿ. ಇದು ಸಂಭವಿಸಿದರೆ, ಜಾತಿಭೇದಗಳನ್ನು ಅಳಿಸಿಹಾಕುವ ಭಯಂಕರವಾದ ಹೊಣೆಯು ಶಾಂತಿಯುತವಾಗಿ ಸುಗಮಗೊಳ್ಳುವ ಸಾಧ್ಯತೆಯಿದೆ ಮತ್ತು ಒಗ್ಗೂಡಿಸಲು ಒತ್ತಾಯ ಪಡಿಸಬೇಕು."[7]

ಜಾತಿಭೇದಗಳನ್ನು ಸಂಪೂರ್ಣವಾಗಿ ಅಳಿಸಿಹೋಗುವವರೆಗೆ ಪ್ರತಿಯೊಂದು ಜಾತಿಯೂ ತನ್ನನ್ನು ತಾನೇ ಸುಧಾರಿಸಿಕೊಳ್ಳಲು ಮತ್ತು ಒಂದು ಉನ್ನತ ಸ್ಥಾನಮಾನ ಪಡೆಯಲು ಶ್ರಮಿಸಬೇಕೆಂದು ಮೇಲೆ ಹೇಳಿದ ತತ್ವವನ್ನು ಜಾತಿ ಆಧಾರಿತ ವಿದ್ಯಾರ್ಥಿ ನಿಲಯಗಳ ಸ್ಥಾಪನೆಯಲ್ಲಿ ತೊಡಗಿದ್ದರು. ಅವರು ಅದೇ ದೃಷ್ಟಿಯಿಂದ ಹಿಂದುಳಿದ ಜಾತಿಗಳ ವಿವಿಧ ಸಮ್ಮೇಳನವನ್ನು ಸಂಘಟಿಸಲು ಪ್ರೋತ್ಸಾಹಿಸಿದರು. ಹಲವು ಬಾರಿ ಅಂತಹ ಸಮ್ಮೇಳನಗಳ ಅಧ್ಯಕ್ಷತೆಯನ್ನು ವಹಿಸಿದ್ದರು. ಆದರೆ ಅಂತಹ ಪ್ರೋತ್ಸಾಹವು ಸಂಬಂಧಪಟ್ಟ ಜಾತಿಗಳಲ್ಲಿ ಜಾತಿಯ ಪೊಳ್ಳುತನಕ್ಕೆ ಎಡೆಕೊಡಬಹುದು ಮತ್ತು ಅಸ್ತಿತ್ವದಲ್ಲಿ ಒಡಕನ್ನು ಮತ್ತಷ್ಟು ತೀವ್ರಗೊಳಿಸಬಹುದೆಂಬ ಭಯವು ಅವರಲ್ಲಿತ್ತು. ಈ ಭಯದಿಂದ ಅವರು ಸಂಘಟಕರಿಗೆ ಎಚ್ಚರಿಕೆಯನ್ನು ನೀಡುತ್ತಾರೆ: "ಅಂತಹ ಸಮ್ಮೇಳನವನ್ನು ನಾನು ಉತ್ತೇಜಿಸಿದರೆ ಜಾತಿಭೇದವನ್ನು ತೀವ್ರಗೊಳಿಸುವ ಪಾಪ ಮಾಡುವೆನೆಂಬ ಭಯ ನನಗೆ ಇದೆ. ನೀವು ದೂರವಿರುವ ಭವಿಷ್ಯದ ಬಗ್ಗೆ ಗಮನವಿಡಿ ಎಂದು ನಾನು ಎಲ್ಲ ಜಾತಿಗಳ ನಾಯಕರಿಗೆ ಎಚ್ಚರಿಕೆ ನೀಡುವೆನು. ನೀವು ನಿಮ್ಮ ಪಾದಗಳನ್ನು ನೋಡಬೇಡಿ, ಜಾತಿಭೇದಗಳನ್ನು ಹೊಡೆದುಹಾಕುವುದು ಸರಿ. ಅದು ಅವಶ್ಯಕ. ಜಾತಿಭೇದವನ್ನು ಪಾಲನೆ ಮಾಡುವುದು ಪಾಪ, ಅದು ರಾಷ್ಟ್ರೀಯ ಅಭಿವೃದ್ಧಿಗೆ ಮಾರಕ. ನೀವು ಅದರಿಂದ ಹೊರಬರಲು ಪ್ರಯತ್ನಿಸಿ. ಈ ಎಚ್ಚರಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಸಾಧಿಸುವುದಕ್ಕಾಗಿ ನೀವು ಜಾತಿಸಮ್ಮೇಳನವನ್ನು ಸಂಘಟಿಸಿ. ಅಂತಹ ಜಾತಿಸಮ್ಮೇಳನಗಳು ಜಾತಿಯ ಸಂಬಂಧಗಳನ್ನು ಮತ್ತು ಜಾತಿ–ಭೇದವನ್ನು ತೀವ್ರಗೊಳಿಸದಿರಲಿ."[8]

ಶಾಹುರವರು ಮತ್ತೊಂದು ಸಂದರ್ಭದಲ್ಲಿ ಮೇಲೆ ಹೇಳಿದ ಅಂಶವನ್ನೇ ಸವಿವರವಾಗಿ ಹೇಳಿದ್ದಾರೆ. ೧೯೨೦ರಲ್ಲಿ 'ಆರ್ಯಕ್ಷತ್ರಿಯ ಸಮಾಜ' ಒಂದು ಸಮ್ಮೇಳನವನ್ನು ವ್ಯವಸ್ಥೆಗೊಳಿಸಿತ್ತು. ಶಾಹು ಅವರು ಹೇಳಿದರು: "ಜಾತಿಭೇದ ಭಾರತದ ಒಂದು ದೊಡ್ಡರೋಗವೆಂದು ನಾನು ಅನೇಕ ಸಲ ಹೇಳಿದ್ದೇನೆ ಮತ್ತು ಅಂತಹ ಭೇದಗಳನ್ನು ಅಳಿಸಿಹಾಕಲು ನಾನು ನಿರಂತರವಾಗಿ ಹೇಳುತ್ತಿದ್ದೇನೆ. ಇಷ್ಟು ಹೇಳಿದರೂ ಕೂಡ

ನಾನು ನಿಮ್ಮ ಜಾತಿ ಆಧಾರಿತ ಪ್ರಯತ್ನಗಳಿಗೆ ನಾನು ಸಹಾಯ ಮಾಡುತ್ತಿದ್ದೇನೆ. ನನ್ನ ಈ ಕ್ರಮ ನನ್ನ ಮಾತುಗಳಿಗೆ ವಿರುದ್ಧವಾಗಿದೆಯೆಂದು ಕೆಲವರು ಹೇಳಬಹುದು. ಈ ಸಂದರ್ಭದಲ್ಲಿ ನಾನು ಕೆಲವು ಮಾತುಗಳನ್ನು ಹೇಳುವುದು ಅಸೂಕ್ತವಾಗಲಾರದು. ಕೆಲವು ನಿಶ್ಚಿತಮಿತಿಗಳವರೆಗೆ, ಜಾತಿಯ ಹೆಮ್ಮೆ ಮತ್ತು ಗುರುತುಗಳನ್ನು ಬಿಡುವುದಕ್ಕೆ ಸಾಧ್ಯವಾಗುವುದಿಲ್ಲ. ಜನರು ತಮ್ಮ ಮಕ್ಕಳ ಬಗ್ಗೆ ವಿಶೇಷ ಪಾಲನೆಯನ್ನು ತೆಗೆದುಕೊಳ್ಳುವರು. ಈ ಬಗ್ಗೆ ಯಾರೂ ತಪ್ಪು ಎಂದು ಹೇಳುವುದಿಲ್ಲ. ಆದರೆ ಎಲ್ಲವನ್ನೂ ಮರೆತು ಕೇವಲ ತಮ್ಮ ಮಕ್ಕಳಿಗಾಗಿಯೇ ಇಡೀ ಜೀವನ ಸವೆಸುತ್ತಾರೆ ಅಂತಹವರ ಬಗ್ಗೆ ಪ್ರತಿಯೊಬ್ಬರೂ ಖಂಡಿಸುತ್ತಾರೆ. ತಾನು ಬೆಳೆಯುತ್ತಿರುವ ಸಮುದಾಯದ ಬೆಳವಣಿಗೆಗಾಗಿ ಶ್ರಮಿಸುವುದನ್ನು ಒಪ್ಪಿಕೊಳ್ಳಬಹುದು; ಆದರೆ ಪ್ರತಿಯೊಬ್ಬರೂ ತಮ್ಮ ಮನಸ್ಸಿನಲ್ಲಿ ಒಂದು ದೊಡ್ಡ ಸಮಾಜವಿದೆ ಎಂದು, ಅದಕ್ಕೂ ನಾವು ಸೇವೆ ಸಲ್ಲಿಸಬೇಕೆಂಬುದನ್ನು ಮನಸ್ಸಿನಲ್ಲಿಡಬೇಕು. ಹಾಗಿರುವಾಗ ಜಾತಿಯ ಹೆಮ್ಮೆ ಒಂದು ಮಿತಿಯಲ್ಲಿರಬೇಕು. ನಾವು ಭಾರತೀಯರು ಮತ್ತು ದೇಶದ ಅಭಿವೃದ್ಧಿಗಾಗಿ ನಮ್ಮ ಹೊಣೆಯಿದೆ ಎಂಬುದನ್ನು ನಾವು ಮರೆಯುವಂತಿಲ್ಲ. ಇದನ್ನೇ ಸಂಕ್ಷಿಪ್ತವಾಗಿ ಹೇಳುವುದಾದರೆ, ಜಾತಿಯ ಹೆಮ್ಮೆ ರಾಷ್ಟ್ರೀಯ ಅಭಿವೃದ್ಧಿಗೆ ಉತ್ತೇಜನಕಾರಿಯಾಗಬೇಕು ಮತ್ತು ಅದನ್ನ ಮರೆಯಬಾರದು."[9] ಜಾತಿಪದ್ಧತಿ ಮತ್ತು ಪ್ರತಿಯೊಂದು ಜಾತಿಯ ಟೊಳ್ಳು ಒಂದು ತಲೆಮಾರಿನಲ್ಲಿ, ಒಂದು ಅಥವಾ ಎರಡು ದಶಕಗಳಲ್ಲಿ ಮಾಯ ಮಾಡುವುದಕ್ಕೆ ಆಗದಷ್ಟು ಆಳದಲ್ಲಿ ಭದ್ರವಾಗಿ ಬೇರೂರಿಬಿಟ್ಟಿದೆ ಎಂಬ ಸಂಗತಿಯ ಬಗ್ಗೆ ಶಾಹುಮಹಾರಾಜರಿಗೆ ಚೆನ್ನಾಗಿ ಗೊತ್ತಿದೆ. ಆದ್ದರಿಂದ ಅವರು ಪ್ರತಿಯೊಂದು ಜಾತಿಗೂ ಜಾತಿಯ ಆತ್ಮ-ಪ್ರತಿಷ್ಠೆಯನ್ನು ಮಿತಿಯಲ್ಲಿಟ್ಟುಕೊಳ್ಳಿ ಮತ್ತು ತಮ್ಮ ಜಾತಿಯ ಹೊರಗಡೆ ದೊಡ್ಡ ಸಮಾಜ ಅಸ್ತಿತ್ವದಲ್ಲಿದೆ ಅದರ ಕಲ್ಯಾಣವನ್ನು ನಿರ್ಲಕ್ಷ್ಯ ಮಾಡಬೇಡಿ ಎಂದು ಮನವಿ ಮಾಡಿಕೊಳ್ಳುತ್ತಿದ್ದಾರೆ.

ಶಾಹುರವರು ಕೆಳಜಾತಿಗಳಲ್ಲಿ ಜಾತಿ-ದ್ವೇಷವನ್ನು ಕೆರಳಿಸುತ್ತಾ ಮತ್ತೊಂದು ಜಾತಿ-ಭೇದಗಳನ್ನು ಖಂಡಿಸುತ್ತಿದ್ದಾರೆಂದು ಅವರ ವಿರೋಧಿಗಳು ಅವರನ್ನು ಖಂಡಿಸುತ್ತಿದ್ದಾರೆ. ಶಾಹುರವರು ಈ ಖಂಡನೆಗಳಿಗೆ ಖಚಿತವಾದ ಮಾತುಗಳಲ್ಲಿ ಉತ್ತರಿಸಿದ್ದಾರೆ. ಅವರು ಹೇಳುತ್ತಾರೆ: "ನಾನು ಹಿಂದುಳಿದವರನ್ನು ಸಮಾನರೆಂದು ಭಾವಿಸುತ್ತೇನೆ ಮತ್ತು ಅವರ ಏಳಿಗೆಗಾಗಿ ಶ್ರಮಿಸುತ್ತಿದ್ದೇನೆ. ಅದನ್ನ ನಾನು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ. ಹಿಂದುಳಿದ ಜಾತಿಗಳ ಏಳಿಗೆಗಾಗಿ ಪ್ರಯತ್ನಪಡದಿದ್ದರೆ ಜಾತಿಭೇದದ ಜಂಭದ ಪ್ರತಿಪಾದಕರು ಅವರನ್ನು ತುಳಿಯುವುದರಲ್ಲಿ ನಿರ್ಬಂಧಿತರಾಗುತ್ತಿರಲಿಲ್ಲ. ಹೀಗಿರುವಾಗ ಹಿಂದುಳಿದ ವರ್ಗಗಳ ಏಳಿಗೆಗಾಗಿ ನಿರತನಾಗುವುದು ಜಾತಿವೈಷಮ್ಯವನ್ನು ಪ್ರೋತ್ಸಾಹಿಸಿದಂತೆ ಅಲ್ಲ ಎಂಬುದು ಸುಸ್ಪಷ್ಟ."[10] ಮತ್ತೊಂದು ಸಂದರ್ಭದಲ್ಲಿ ಅವರು ಈ ಸದುದ್ದೇಶಕ್ಕೆ ನಿರತನಾಗುವುದು ಒಬ್ಬ ವೈದ್ಯರು ಒಬ್ಬ ದುರ್ಬಲ ಮತ್ತು ಜರ್ಜರಿತವಾದ ಮಗುವಿಗೆ ಪೌಷ್ಟಿಕ ಆಹಾರ ಮತ್ತು ಔಷಧೋಪಚಾರವನ್ನು ನಿರ್ಧರಿಸುವುದಕ್ಕೆ ಮತ್ತು ಆ ಮಗುವನ್ನು ಆರೋಗ್ಯವಂತ ಮಕ್ಕಳ ಸಮಕ್ಕೆ ತರುವುದಕ್ಕೆ ಸಮಾನವಾಗಿದೆಯೆಂದು ಹೇಳಿದರು. ಅದು ಪಂಕ್ತಿ ಪ್ರಪಂಚವಲ್ಲ(ಜಾತಿ-ಪಕ್ಷಪಾತ) ಅಥವಾ ಜಾತಿವೈಷಮ್ಯವನ್ನು ಬೆಳೆಸುವುದಿಲ್ಲ.[11]

## ಕ್ರಮಗಳು ಮತ್ತು ನೇರಕ್ರಮ

ಶಾಹುರವರು ಜಾತಿಭೇದಗಳನ್ನು ನಿರ್ಮೂಲನೆ ಮಾಡಬೇಕೆಂದು ಪ್ರತಿಪಾದಿಸುವ ಚಿಂತನೆಗಳಿಗೆ ಕಾಯಲಿಲ್ಲ. ಅವರು ಆ ಗುರಿಯನ್ನು ತಲುಪಲು ಕ್ರಮಗಳನ್ನು ಅಂಗೀಕರಿಸಿದರು ಮತ್ತು ಮೂರ್ತಕ್ರಿಯೆಗಳನ್ನು

ಕೈಗೊಂಡರು. ಜಾತಿಪದ್ಧತಿಯ ಕೆಲವು ನಿಷಿದ್ಧಗಳು ಅಸ್ತಿತ್ವದಲ್ಲಿದ್ದವು. ಇದಕ್ಕೆ ಸಂಬಂಧಿಸಿದಂತೆ ಶಾಹುಮಹಾರಾಜರು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಮತ್ತು ಸಮಾರಂಭಗಳಲ್ಲಿ ಅಸ್ಪೃಶ್ಯರ ಕೈಗಳಿಂದಲೇ ಆಹಾರ ಸ್ವೀಕರಿಸುವ ಮೂಲಕ ಆಹಾರ-ನಿಷೇಧಗಳನ್ನು ಕಿತ್ತುಬಿಸಾಡಿದರು ಎಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ಆದರೆ ಅಂತರ್‌ಜಾತಿಯ ವಿವಾಹ ನಿಷೇಧವು ಆಹಾರ ನಿಷೇಧಕ್ಕಿಂತ ಹೆಚ್ಚು ತೀವ್ರವಾದದ್ದು. ಸಮಾಜ ಈ ನಿಷೇಧವನ್ನು ಆಚರಿಸುತ್ತಿರುವವರೆಗೂ ಜಾತಿಭೇದಗಳನ್ನು ನಾಶ ಮಾಡುವುದಕ್ಕೆ ಸಾಧ್ಯವಿಲ್ಲ ಎಂಬುದನ್ನು ಶಾಹು ಅವರು ಚೆನ್ನಾಗಿ ತಿಳಿದಿದ್ದರು. ಆ ಕಾಲದಲ್ಲಿ ಈ ನಿಷೇಧವನ್ನು ಮೀರಿ ನಡೆಯುವುದು ಮತ್ತು ಕ್ರಮಬದ್ಧವಾಗಿ ಕೈಗೊಳ್ಳುವುದು ಮಹಾಸಾಹಸವೇ ಆಗಿತ್ತು. ಶಾಹು ಅವರು ಅಂತಹ ಧೈರ್ಯವನ್ನು ಮೆರೆದಿದ್ದರು. ಅವರು ಅಂತರ್ಜಾತೀಯ ವಿವಾಹಗಳ ಕ್ರಮಬದ್ಧಗೊಳಿಸುವ ಮತ್ತು ಅವುಗಳಿಗೆ ಕಾನೂನು ಸ್ಥಾನ ನೀಡುವ ಕಾನೂನನ್ನು ತಮ್ಮ ಸಂಸ್ಥಾನದಲ್ಲಿ ಪಾಸುಮಾಡಿದರು.[12] ಮಡಿವಂತಿಕೆಯ ಜನರು ಈ ಕಾನೂನನ್ನು ಕೊಲ್ಹಾಪುರ ಸಂಸ್ಥಾನದಲ್ಲಿ ವಿರೋಧಿಸಿದ್ದು ಮಾತ್ರವಲ್ಲದೆ ಇಡೀ ದೇಶದಲ್ಲೆಲ್ಲಾ ವಿರೋಧಿಸಿದರು. ೧೯೧೭ರಲ್ಲಿ ಮೊದಲಿಗೆ ವಿಠಲಬಾಯಿ ಪಟೇಲರು ಅಂತರ್‌ಜಾತೀಯ ಮದುವೆಗೆ ಸಂಬಂಧಿಸಿದ ಮಸೂದೆಯನ್ನು ಕೇಂದ್ರೀಯ ಶಾಸನ ಪರಿಷತ್ತಿನಲ್ಲಿ ಮಂಡಿಸಿದರು. ಇದರ ವಿರುದ್ಧ ದೇಶದಲ್ಲಿ ಗದ್ದಲವೋ ಗದ್ದಲ ಎದ್ದಿತು. ಮಡಿವಂತಿಕೆ ನಾಯಕರಾದ ಲೋಕಮಾನ್ಯ ತಿಲಕರು, ಪುರಿಯ ಶಂಕರಾಚಾರ್ಯರು, ಕರವೀರದ ಶಂಕರಾಚಾರ್ಯರು ಪಟೇಲರ ಮಸೂದೆಯನ್ನು ಕಟುವಾಗಿ ವಿರೋಧಿಸಿದರು. ಅಂತಹ ಮಸೂದೆ ಪಾಸಾದರೆ 'ಧರ್ಮಕ್ಕೆ ಮಹಾಸೋಲಾಗುತ್ತದೆ ಮತ್ತು ಎಲ್ಲಕ್ಕೂ ಹಾನಿಯಾಗುತ್ತದೆ' (ನೈತಿಕತೆ, ನಿಷ್ಠೆ ಮತ್ತು ಗುರುತು (ಅಸ್ಮಿತೆ)ಗಳಿಗೆ ಮಹಾಸಂಕಟ) ಎಂದು ಅವರು ಭಯಭೀತರಾಗಿದ್ದರು. ಆದರೆ ಸುಧಾರಕರಾದ ತೇಜ್‌ಬಹಾದ್ದೂರ್, ಸಪ್ರು, ಲಾಲಾ ಲಜಪತರಾಯ್ ಮತ್ತು ಮಹಾರಾಜ ಶಾಹುರವರು ಸಮಾಜದ ಅಂತಹ ಸುತ್ತುಗೊಳ್ಳುವಿಕೆಯು ಅಭಿವೃದ್ಧಿಯ ಬೀಜಗಳನ್ನು ಸಮಾಜದಲ್ಲಿ ಬಿತ್ತುತ್ತದೆಯೆಂದು ಭಾವಿಸಿದರು. ಅವರೆಲ್ಲರೂ ಮಸೂದೆಯನ್ನು ಬಹಿರಂಗವಾಗಿಯೇ ಬೆಂಬಲಿಸಿದರು. "ಈ ದೇಶದ ಅಭಿವೃದ್ಧಿ ಬೇಗನೇ ಅಥವಾ ತಡವಾಗಿ ಆಗುತ್ತದೆಯೆಂಬುದು ಜಾತಿಭೇದಗಳು ಕೊನೆಗೊಳ್ಳುವುದರ ಮೇಲೆ ಅವಲಂಬಿಸಿದೆ" ಎಂದು ಹೇಳುತ್ತಾ ಶಾಹುರವರು ಮಸೂದೆಯನ್ನು ಬೆಂಬಲಿಸಿದರು. ಇದು ಆಗಬೇಕಾಗಿದ್ದರೆ ಬೇರೆಬೇರೆ ಜಾತಿಗಳ ಸದಸ್ಯರ ನಡುವೆ ಅಂತರ್‌ಜಾತೀಯ ವಿವಾಹಗಳನ್ನು ದೊಡ್ಡಪ್ರಮಾಣದಲ್ಲಿ ನಡೆಸುವುದು ಅಗತ್ಯ. ಯಾರೇ ವಿರೋಧಿಸಿದರೂ ಅಂತರ್‌ಭೋಜನ ಸಂಘಗಳು ಈಗ ದೊಡ್ಡ ಪ್ರಮಾಣದಲ್ಲಿ ಹೆಚ್ಚಾಗುತ್ತವೆ. ಆದರೆ ಅಂತರ್‌ಜಾತೀಯ ಮದುವೆಗಳು ಹಾಗಾಗುವುದಿಲ್ಲ. ಅಂತಹ ವಿವಾಹಗಳ ಬಗ್ಗೆ ಒಲವು ಮೂಡಿಸಬೇಕಾದರೆ ಮೊದಲಿಗೆ ಅದರ ದಾರಿಯಲ್ಲಿರುವ ಕಾನೂನಿನ ಅಡೆತಡೆಗಳನ್ನು ಕಿತ್ತುಹಾಕಬೇಕು. ಅಂತಹ ಮದುವೆಗಳಿಗೆ ಕಾನೂನಿನ ಸ್ಥಾನಮಾನವನ್ನು ನೀಡಬೇಕು ಮತ್ತು ಅಂತಹ ಮದುವೆಗಳಿಂದ ಹುಟ್ಟುವ ಮಕ್ಕಳಿಗೆ ಕಾನೂನುಬದ್ಧ ಮಕ್ಕಳ ಹಕ್ಕುಗಳನ್ನು ದೊರಕಿಸಿಕೊಡಬೇಕು."[14]

ಶಾಹುರವರು ಈ ಬಗ್ಗೆ ದಿಟ್ಟಕ್ರಮ ಕೈಗೊಳ್ಳುವ ಮೂಲಕ ಸಮಾಜದ ಮುಂದೆ ನಿದರ್ಶನವನ್ನು ಸ್ಥಾಪಿಸುವುದಕ್ಕೆ ನಿರ್ಧರಿಸಿದರು. ಅದರ ಪ್ರಕಾರ ತನ್ನ ಕುಟುಂಬದ ಕಾಗಲ್‌ಕರ್ ಘಾಟ್ಗೆಯ ಸೋದರಬಂಧುವಿನ ಚಂದ್ರಪ್ರಭ ಎಂಬ ವಧುವಿನೊಂದಿಗೆ ಕುರುಬಜಾತಿಯ (ಧನಗರ) ಇಂದೋರಿನ ತುಕ್ಕೋಜಿ ಹೋಳ್ಕರ್‌ನ ಮಗ ಯಶವಂತರಾವ್‌ನೊಂದಿಗೆ ಮದುವೆಯನ್ನು ಗೊತ್ತುಪಡಿಸಿದರು. ತನ್ನ ಆತ್ಮೀಯ ಮಿತ್ರ ಗುಂಡೋಪಂತ ಪಿಶ್ವಿಕರ್(ಧರ್ಮಾಧಿಕಾರಿ)ಗೆ ತುಕ್ಕೋಜಿಯು ಈ ಮದುವೆ ಪ್ರಸ್ತಾಪವನ್ನು ಒಪ್ಪುವಂತೆ ಮಾಡುವ

ಹೊಣೆಗಾರಿಕೆಯನ್ನು ಶಾಹು ಕೊಟ್ಟಿದ್ದರು. ಮತ್ತು ತಾವೇ ವಧುವಿನ ತಂದೆಯನ್ನು ಒಪ್ಪಿಸುವ ಹೊಣೆಗಾರಿಕೆಯನ್ನು ವಹಿಸಿಕೊಂಡಿದ್ದರು. ತನ್ನ ಹೆಗ್ಗುರಿ (ಮಿಷನ್ನು) ಸಫಲವಾದರೆ ಅವರು ಕೊಲ್ಹಾಪುರ ಮತ್ತು ಇಂದೋರ್ ಸಂಸ್ಥಾನಗಳ ನಡುವೆ ಒಂದುನೂರು ಮರಾಠ-ಧನಗರರ (ಮರಾಠ-ಕುರುಬರ) ಅಂತರ್‌ಜಾತೀಯ ಮದುವೆಗಳನ್ನು ನಡೆಸುವ ಒಂದು ಯೋಜನೆಯನ್ನು ರೂಪಿಸಿದ್ದರು. ಆ ಮದುವೆಗಳಿಗೆ ೬೦,೦೦೦ ರೂ. ಖರ್ಚಾಗುತ್ತಿತ್ತು. ಎರಡೂ ಸಂಸ್ಥಾನಗಳು ಪ್ರತಿಯೊಂದು ದಂಪತಿಗೆ ಸ್ವಲ್ಪ ಭೂಮಿ ಮತ್ತು ಸ್ವಲ್ಪ ಆಸ್ತಿಯನ್ನು ಬಹುಮಾನವನ್ನಾಗಿ ನೀಡಲಾಗುತ್ತಿತ್ತು ಮತ್ತು ಅವರ ಕಲಿಕೆ ಮತ್ತು ಉದ್ಯೋಗಗಳಿಗೆ ನೆರವು ನೀಡಲಾಗುತ್ತಿತ್ತು. ಈ ಯೋಜನೆಯ ಪ್ರಕಾರ ೨೫ ಮದುವೆಗಳನ್ನು ಮಾಡಲಾಯಿತು. ಆದರೆ ಉಳಿದ ಸಂಖ್ಯೆಯ ಮದುವೆಗಳನ್ನು ಶಾಹುರವರ ಅಕಾಲಿಕ ಮರಣದ ಕಾರಣದಿಂದ ನಿಲ್ಲಿಸಲಾಯಿತು.[15]

ಮಹಾರಾಜರು ವೃತ್ತಿಗೆ (ಕಸುಬು) ಸಂಬಂಧಿಸಿದ ಮೂರನೆಯ ಜಾತಿ-ನಿಷೇಧ(Caste-Taboo)ವನ್ನು ರದ್ದುಗೊಳಿಸಿದರು. ಈ ನಿಷೇಧದ ಪ್ರಕಾರ ಪ್ರತಿಯೊಂದು ಜಾತಿಯು ಸಂಪ್ರದಾಯ ಮತ್ತು ಪದ್ಧತಿ(Custom)ಗಳು ಹಂಚಿದ ವೃತ್ತಿ (ಕಸುಬು)ಯನ್ನೇ ಕಡ್ಡಾಯವಾಗಿ ಮಾಡಬೇಕಾಗಿತ್ತು. ಸಮಾಜವು ಒಬ್ಬ ಬಡಗಿ, ಒಬ್ಬ ಕಮ್ಮಾರ ಮತ್ತು ಒಬ್ಬ ಮಹರನ ಮುಂದೆ ಬಡಗಿ ಕೆಲಸ, ಕಮ್ಮಾರಿಕೆ ಮತ್ತು ಮಹರ್ಕಿಗಳನ್ನು ಜೀವನಕ್ಕೆ ಬಿಟ್ಟರೆ ಮತ್ಯಾವುದೇ ಪರ್ಯಾಯವನ್ನು ಒದಗಿಸಿರಲಿಲ್ಲ (ಇಟ್ಟಿರಲಿಲ್ಲ). ತನ್ನ ಜಾತಿಯ ಕಸುಬನ್ನು ಬಿಟ್ಟು ಬೇರೆ ಪರ್ಯಾಯ ಕಸುಬನ್ನು ಹುಡುಕಿಕೊಂಡರೆ ಅದು ಜಾತಿಗೆ ಮಾಡಿದ ಅಪರಾಧ ಮಾತ್ರವಲ್ಲ, ಇಡೀ ಸಂಸ್ಥಾನಕ್ಕೆ ಮಾಡಿದ ಅಪರಾಧವೆಂದು ಪರಿಗಣಿಸಲಾಗುತ್ತಿತ್ತು. ಅಂಥ ಸನ್ನಿವೇಶಗಳಲ್ಲಿ ಶಾಹುರವರು ಹಳ್ಳಿಯ ಹಿಂದುಳಿದ ಜಾತಿಗಳ ಬಲೂತೆದಾರರನ್ನು ತಮ್ಮ ಕಡ್ಡಾಯ ವೃತ್ತಿಗಳಿಂದ ವಿಮುಕ್ತಿಗೊಳಿಸಿದರು. ೨೨ ಫೆಬ್ರವರಿ ೧೯೧೮ರಲ್ಲಿ ಕೊಲ್ಹಾಪುರ ಸಂಸ್ಥಾನದ ಗೆಜೆಟ್ಟಿನಲ್ಲಿ (ರಾಜ್ಯಪತ್ರ) ಸಂಸ್ಥಾನದಲ್ಲಿರುವ ಬಲೂತೆದಾರಿ ಪದ್ಧತಿಯನ್ನು ರದ್ದುಗೊಳಿಸಲಾಗಿದೆ ಎಂದು ಒಂದು ಘೋಷಣೆಯನ್ನು ಪ್ರಕಟಿಸಲಾಯಿತು. ಅದರ ಪ್ರಕಾರ ಬಲೂತೆದಾರರು ತಮ್ಮ ಕಡ್ಡಾಯ ಕಸುಬುಗಳಿಂದ ಸ್ವತಂತ್ರರಾದರು. ಅವರು ತಮ್ಮ ಇಷ್ಟ ಬಂದ ಕಡೆ ವಾಸಿಸಲು, ತಾವು ಬಯಸಿದ ಕೆಲಸವನ್ನು ಮಾಡಲು ಅವರಿಗೆ ಅನುಮತಿ ನೀಡಲಾಯಿತು. ಅವರ ಇನಾಮು ಭೂಮಿಗಳನ್ನು ರೈತವಾರಿ ಭೂಮಿಗಳನ್ನಾಗಿ ಪರಿವರ್ತಿಸಲಾಯಿತು. ಎಲ್ಲಕ್ಕಿಂತ ಮಿಗಿಲಾಗಿ ಬಲೂತೆದಾರಿ ರದ್ದಾಗಿರುವುದರಿಂದ ರಾಯತ್(ರೈತರ ಸಂಘ)ನು ಬಲೂತೆದಾರರಿಗೆ ಬಲೂತೆಯನ್ನು ಒದಗಿಸುವ ಹೊಣೆಯಿಂದ ಮುಕ್ತನಾದನು.[16] ಈ ರೀತಿಯಲ್ಲಿ ಶಾಹು ಮಹಾರಾಜರು ಬಲೂತೆದಾರರಿಗೆ ವೃತ್ತಿಸ್ವಾತಂತ್ರ್ಯ, ತಿರುಗಾಡುವ ಸ್ವಾತಂತ್ರ್ಯ ಮತ್ತು ವಾಸಿಸುವ ಸ್ವಾತಂತ್ರ್ಯಗಳನ್ನು ನೀಡುವ ಮೂಲಕ ಹಿಂದುಳಿದ ಜಾತಿಗಳ ಬಲೂತೆದಾರರನ್ನು ಒಂದು ರೀತಿಯ ಸಾಮಾಜಿಕ ಗುಲಾಮಿತನದಿಂದ ಕೊನೆಗೊಳಿಸಿದರು.

ವರ್ಣಾಶ್ರಮ ಸಂಸ್ಥೆ, ಜಾತಿಪದ್ಧತಿ, ಪದ್ಧತಿಯಲ್ಲಿರುವ ಉಚ್ಚಜಾತಿಗಳ ಹಕ್ಕುಗಳ ಬಗೆಗಿನ ರಾಷ್ಟ್ರೀಯ ನಾಯಕರುಗಳಾದ ಲೋಕಮಾನ್ಯ ತಿಲಕರ ಮಡಿವಂತಿಕೆಯ ಅಭಿಪ್ರಾಯಗಳನ್ನು ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. ಭಾರತದ ಕ್ಷಿತಿಜದಲ್ಲಿ ಮೂಡಿದ ರಾಷ್ಟ್ರೀಯ ನಾಯಕ ಮಹಾತ್ಮ ಗಾಂಧಿಯವರು ಜಾತಿ ಪದ್ಧತಿಯಲ್ಲಿರುವ ಜಾತಿಗಳ ಮತ್ತು ವರ್ಣಾಶ್ರಮ ಪದ್ಧತಿಗಳ ಪರವಾಗಿ ಆ ಕಾಲಘಟ್ಟದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಬೆಚ್ಚಿಬೀಳಿಸದೆ ಇರುವುದಿಲ್ಲ. ಗಾಂಧಿ ಅವರು ಅಸ್ಪೃಶ್ಯತೆಯನ್ನು ಮಾನವೀಯತೆಯ ವಿರುದ್ಧ ಮಾಡಿದ ಮಹಾಪರಾಧ ಮತ್ತು ಹಿಂದುಧರ್ಮಕ್ಕೆ ಕಳಂಕ ಎಂದು ಬಗೆದಿದ್ದರು. ಅದೇ ಗಾಂಧಿ

ಇದೇ ಕಾಲಘಟ್ಟದಲ್ಲಿ 'ಹಿಂದುಸಮಾಜ ಜಾತಿಪದ್ಧತಿಯನ್ನು ಬಿಡಲಾರದು; ಜಾತಿಯೇ ಭಾರತದ ಬಲ ಮತ್ತು ಹಿಂದುಧರ್ಮದ ರಹಸ್ಯ'; 'ಪ್ರಾರಂಭದಲ್ಲಿ ಜಾತಿಪದ್ಧತಿಯ ಭೇದ-ಭಾವಗಳು ಪ್ರಯೋಜನಕಾರಿಯಾಗಿದ್ದವು ಮತ್ತು ಅದು ರಾಷ್ಟ್ರದ ಪ್ರಗತಿಗೆ ಸಹಕಾರಿಯಾಗುತ್ತಿತ್ತು; ನನ್ನ ಅಭಿಪ್ರಾಯದಲ್ಲಿ, ರಾಷ್ಟ್ರದ ಅಭಿವೃದ್ಧಿಗಾಗಿ ಅಂತರ್‌ಜಾತೀಯ ಭೋಜನ ಮತ್ತು ಅಂತರ್‌ಜಾತೀಯ ವಿವಾಹಗಳು ಪಾಶ್ಚಿಮಾತ್ಯ ದೇಶಗಳಿಂದ ಎರವಲು ಪಡೆದ ಒಂದು ದೇಶೀಯ ನಂಬಿಕೆ.' 'ಜಾತಿಪದ್ಧತಿಯನ್ನು ನಾಶಮಾಡಲು ಹೊರಟಿರುವ ಆಂದೋಲನವನ್ನು ನಾನು ವಿರೋಧಿಸುತ್ತೇನೆ'; ಎಂಬ ಹೇಳಿಕೆಯನ್ನು ನೀಡುವ ಗಾಂಧಿ ಕಾಣುತ್ತಾರೆ.[17] ಈ ಎಲ್ಲಾ ಹೇಳಿಕೆಗಳು ಹಿಂದು ಧರ್ಮವನ್ನು ಸುಧಾರಿಸುವ ವಿರುದ್ಧದ ಅಭಿಪ್ರಾಯಗಳಾಗಿವೆ. ದಕ್ಷಿಣ ಆಫ್ರಿಕಾದ ಬಿಳಿಯ ಸರ್ವಾಧಿಕಾರಿ ಜನಾಂಗೀಯ ಆಡಳಿತದ ವಿರುದ್ಧ ಹೋರಾಡಿದ ಗಾಂಧಿ ಭಾರತದಲ್ಲಿನ ಜಾತಿತಾರತಮ್ಯತೆಗಳ ಬಗ್ಗೆ ಮಡಿವಂತಿಕೆಯ ನಿಲುವನ್ನು ತಾಳುತ್ತಾರೆ. ಅವರ ಆ ಕಾಲಘಟ್ಟದಲ್ಲಿ ಅಸಮಾನತೆಯ ತೀವ್ರತೆ ಮತ್ತು ಜಾತಿವ್ಯವಸ್ಥೆ ಬೆಳೆಸಿದ ಭೀಕರತೆಗಳನ್ನು ಗ್ರಹಿಸುವುದರಲ್ಲಿ ಗಾಂಧಿ ವಿಫಲರಾಗಿದ್ದರೆಂಬುದು ಸುಸ್ಪಷ್ಟ. ಆದರೆ ತದನಂತರ ಅವರು ಸ್ವಾತಂತ್ರ್ಯದ ರಾಷ್ಟ್ರೀಯ ಆಂದೋಲನದಲ್ಲಿ ಉಚ್ಚನಾಯಕನ ಸ್ಥಾನ ಗಳಿಸಿದ ಅವರು ರಾಷ್ಟ್ರೀಯ ಸಮಗ್ರತೆ (ಐಕ್ಯತೆ) ಮತ್ತು ಸಾಮಾಜಿಕ ಸಮಾನತೆಯ ಸ್ಥಾಪನೆಯ ದಾರಿಯಲ್ಲಿ ಜಾತಿಪದ್ಧತಿ ದೊಡ್ಡ ತೊಡಕೆಂದು ಒಪ್ಪಿಕೊಂಡರು. ತತ್ಪರಿಣಾಮವಾಗಿ ಜಾತಿ ವ್ಯವಸ್ಥೆಯ ಬಗೆಗಿನ ಅವರ ಅಭಿಪ್ರಾಯಗಳು ಕಾಲಕಾಲಕ್ಕೆ ಬದಲಾಗುತ್ತಾ ಹೋದವು. ನಂತರ ವಿಶೇಷವಾಗಿ ೧೯೩೧ರ ಅವಧಿಯ ನಂತರ ಅವರು ಜಾತಿಪದ್ಧತಿ ಆಚರಣೆಗಳಾದ ಅಂತರ್‌ಜಾತೀಯ ಭೋಜನ ಮತ್ತು ಅಂತರ್‌ಜಾತೀಯ ವಿವಾಹಗಳ ನಿಷೇಧಗಳನ್ನು (Taboo) ಖಂಡಿಸಿದರು ಮತ್ತು ಜಾತಿಗಳನ್ನು ನಾಶಮಾಡಬೇಕೆಂಬ ಸೈದ್ಧಾಂತಿಕ ಬಿಂದುಗಳಿಗೆ ತಲುಪಿದರು.[18]

ಶಾಹುರವರ ಕಾಲಾವಧಿಯಲ್ಲಿ ಮಾನವರ ಸಮಾನತೆಯ ಮತ್ತು ಸ್ವಾತಂತ್ರ್ಯದ ದೊಡ್ಡಸ್ತಿಕೆಯನ್ನು ಹೊಂದಿದ್ದ ನಾಯಕರಾದ ಮಹಾತ್ಮ ಗಾಂಧಿಯವರೇ ಜಾತಿಭೇದದ ವಿರುದ್ಧದ ಆಂದೋಲನಗಳ ಬಗ್ಗೆ ಸಹಾನುಭೂತಿ ತೋರಿಸಲು ಸಿದ್ಧರಾಗದಿದ್ದಾಗ ಸಾಮಾನ್ಯ ಮನುಷ್ಯ ಅಂತಹ ಚಟುವಟಿಕೆಗಳನ್ನು ತೀವ್ರವಾಗಿ ವಿರೋಧಿಸಿದ ಬಗ್ಗೆ ಆಶ್ಚರ್ಯಪಡಬೇಕಾಗಿಲ್ಲ ಎಂಬ ಸತ್ಯವನ್ನು ಸಹ ನಾವು ಗಮನಿಸಬೇಕು. ಅವರ ಕಾಲದಲ್ಲಿ ಸ್ವಾತಂತ್ರ್ಯ ಆಂದೋಲನವನ್ನು ನಡೆಸಿದ ಮಹಾನಾಯಕರು ಪ್ರಾಮಾಣಿಕವಾಗಿ ಅಸ್ಪೃಶ್ಯತೆ ಮತ್ತು ಜಾತಿಪದ್ಧತಿಯ ಭೇದಭಾವಗಳೆಂಬ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಆಸಕ್ತಿ ಹೊಂದಿರಲಿಲ್ಲ. ಹಾಗಿರುವಾಗ ರಾಷ್ಟ್ರೀಯ ದೃಷ್ಟಿಕೋನ ಹೊಂದಿದ್ದ ಮಹರ್ಷಿ ಶಿಂಧೆಯವರು ರಾಷ್ಟ್ರೀಯ ಕಾಂಗ್ರೆಸ್ಸಿನ ವೇದಿಕೆಯಲ್ಲಿ ಅಸ್ಪೃಶ್ಯತೆಯನ್ನು ಖಂಡಿಸುವುದಕ್ಕೆ ನಿರಂತರವಾಗಿ ಠರಾವುಗಳನ್ನು ಮಂಡಿಸಲು ಪ್ರಯತ್ನಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಶಾಹುರವರು ಜಾತೀಯ ತಾರತಮ್ಯತೆಗಳ ನಿವಾರಣೆಗೆ ಪ್ರಯತ್ನಿಸುತ್ತಿದ್ದರೆಂಬುದನ್ನು ನಾವು ಗಮನಿಸಬೇಕು. ಜಾತಿಯ ಭೇದ-ಭಾವದ ವಿರುದ್ಧ ಅವರು ನಡೆಸಿದ ಹೋರಾಟ ಎಷ್ಟು ಕಷ್ಟಕರವಾಗಿತ್ತೆಂಬ ಖಚಿತ ವಿಚಾರ ನಮಗೆ ತಿಳಿಯುತ್ತದೆ.

---

೧೬

# ಮಹಿಳೆಯರ ರಕ್ಷಣೆಗೆ ಕಾನೂನುಗಳು

ಹಿಂದುಳಿದ ಸಮುದಾಯಗಳ ವಿಮೋಚನೆಯೇ ಶಾಹುರವರ ಜೀವನದ ಪ್ರಮುಖ ಉತ್ಸಾಹಭರಿತವಾದ ಕ್ರಿಯಾಶಕ್ತಿಯಾಗಿದೆ. ಆಗ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಮಹಿಳಾವರ್ಗಗಳು ಎಲ್ಲಾ ವಿಧದಲ್ಲಿ ತೀರಾ ನಿರ್ಲಕ್ಷ್ಯಕ್ಕೊಳಗಾಗಿದ್ದ ವರ್ಗವಾಗಿತ್ತು. ದೇಶದ ಪುರುಷಪ್ರಾಧಾನ್ಯ ಸಂಸ್ಕೃತಿಯಲ್ಲಿ ಮಹಿಳೆಯರ ಮೇಲೆ ಅನ್ಯಾಯ ಮತ್ತು ದಬ್ಬಾಳಿಕೆಗಳು ನಡೆಯುತ್ತಿದ್ದವು. ಬಾಲ್ಯವಿವಾಹ, ವಿಧವಾ ಪುನರ್‌ವಿವಾಹ, ಶಿಕ್ಷಣ ನಿರಾಕರಣೆ, ಪರದಾ ಆಚರಣೆ ಮೊದಲಾದ ರೂಢಿ–ರಿವಾಜುಗಳು ಮಹಿಳೆಯರನ್ನು ಸಂಪೂರ್ಣವಾಗಿ ಅಸಹಾಯಕ ಹಾಗೂ ಅವಲಂಬಿತರನ್ನಾಗಿ ಮಾಡಿದ್ದವು. ಮಹಾತ್ಮ ಫುಲೆಯವರಿಂದ ಹಿಡಿದು ಪ್ರಾಂಶುಪಾಲ ಆಗರ್‌ಕರ್‌ರವರೆಗೆ ಹಲವು ಸಮಾಜಸುಧಾರಕರು ಮಹಿಳೆಯರ ಮೇಲೆ ನಡೆಯುತ್ತಿದ್ದ ಅನ್ಯಾಯ ಮತ್ತು ದುಷ್ಕೃತ್ಯಗಳ ಬಗ್ಗೆ ಧೈರ್ಯವಾಗಿ ಧ್ವನಿ ಎತ್ತಿದರು. ಮೊದಲಿಗೆ ಮಹಾತ್ಮಫುಲೆ ಮತ್ತು ನಂತರ ಮಹರ್ಷಿಕರ್ವೆ ಅವರು ಮಹಿಳೆಯರ ಶಿಕ್ಷಣಕ್ಕಾಗಿ ತೆಗೆದುಕೊಂಡ ಕ್ರಮಗಳನ್ನು ಮಹಾರಾಷ್ಟ್ರದ ಇತಿಹಾಸದಲ್ಲಿ ನಮೂದಿಸಲು ಯೋಗ್ಯವಾದ ಸಂಗತಿಗಳಾಗಿವೆ. ನಿಜವಾಗಿ ಮಹಾತ್ಮ ಫುಲೆಯವರು ಮೊದಲಿಗೆ ಪ್ರಾರಂಭಿಸಿದ ಮಹಿಳಾ ಶಿಕ್ಷಣ ಆಂದೋಲನವು ಮಹಿಳಾ ವಿಮೋಚನಾ ಚಳುವಳಿಯಾಗಿತ್ತು. ತನ್ನ ಸಂಸ್ಥಾನದಲ್ಲಿ ಮಹಾರಾಜರು ಮಹಿಳೆಯರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ್ದು ಮಾತ್ರವಲ್ಲದೆ ಮಹಿಳೆಯರ ಪ್ರಕೃತಿದತ್ತ ಹಕ್ಕುಗಳ ಸಂರಕ್ಷಣೆಗೆ ಹಲವಾರು ಕಾಯ್ದೆಗಳನ್ನು ಜಾರಿಗೆ ತಂದರು ಮತ್ತು ಅವರ ಶೋಷಣೆಯನ್ನು ಸಮಾಜ ಮತ್ತು ಕುಟುಂಬದಿಂದ ತಡೆಯಲು ಪ್ರಯತ್ನಿಸಿದರು. ಒಂದು ರೀತಿಯಲ್ಲಿ ಇದು ಮಹಿಳೆಯರ ವಿಮೋಚನೆಗೆ ಅವರ ಕೊಡುಗೆಯಾಗಿದೆ.

### ವಿಧವಾ ಪುನರ್‌ವಿವಾಹ ಕಾಯ್ದೆ

ಜುಲೈ ೧೯೧೭ರಲ್ಲಿ ಒಬ್ಬರು ವಿಧವೆಯ ಪುನರ್‌ವಿವಾಹವನ್ನು ಕಾನೂನುಬದ್ಧಗೊಳಿಸಲು ಒಂದು ಪ್ರಾವಧಾನವನ್ನು (ಕಟ್ಟಳೆ) ರೂಪಿಸಿದರು. ಹಲವು ಹಿಂದುಜಾತಿಗಳಲ್ಲಿ ಅನುಸರಿಸಿದ ಸಂಪ್ರದಾಯದಂತೆಯೇ ಒಬ್ಬ ವಿಧವೆಯ ಪುನರ್‌ವಿವಾಹದಲ್ಲಿ ಒಂದು ಮದುವೆ ಮಾಡುವಾಗ ಆಚರಿಸುವ ಅದೇ ಆಚಾರಗಳನ್ನು ನೆರವೇರಿಸುವುದಿಲ್ಲ. ಈ ಕ್ರಮ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಟ್ಟಿದೆ. ಈ ಕಾಯ್ದೆಯು ಅಂಥಾ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿಬಿಟ್ಟಿದೆ. ಇದರ ಜೊತೆಗೆ ಈ ಕಾಯ್ದೆಯು ವಿವಾಹದ ಕಾನೂನಾತ್ಮಕ ನೋಂದಣಿಯನ್ನು ಜಾರಿಗೆ ತಂದಿದೆ. ಇದರ ಫಲವಾಗಿ ವಿವಾಹದ ಕಾನೂನುಬದ್ಧ ಸಾಕ್ಷ್ಯರೂಪದಲ್ಲಿ ಮಂಡಿಸಲು ಮುಂದೊದಗುವ ಸಮಸ್ಯೆಯ ವಿರುದ್ಧ ಹೋರಾಡಲು ಮಹಿಳೆಯರಿಗೆ ಇದು ಒಂದು ಅಸ್ತ್ರವಾಗಿದೆ.[1]

ಸಮಾಜದ ಒಳಿತಿಗಾಗಿ ವಿಧವಾ ಪುನರ್‌ವಿವಾಹಗಳನ್ನು ಕಾನೂನುಬದ್ಧವಾಗಿ ಸಮ್ಮತಿ ನೀಡುವುದು ಅತ್ಯಗತ್ಯವೆಂಬುದು ಶಾಹುರವರ ಅಭಿಪ್ರಾಯವಾಗಿತ್ತು. ೧೯೧೯ರಲ್ಲಿ ಕಾನ್ಪುರದಲ್ಲಿ ನಡೆದ ಕುರ್ಮಿ ಕ್ಷತ್ರಿಯರ ಸಮ್ಮೇಳನದಲ್ಲಿ ಮಾತನಾಡುತ್ತಾ ಹೇಳಿದರು: "ಕುರ್ಮಿ ಸಮಾಜದಲ್ಲಿ ವಿಧವೆಯ ಪುನರ್ವಿವಾಹ ರೂಢಿ(ವಾಡಿಕೆ)ಯಲ್ಲಿರುವುದು ನನಗೆ ಬಹಳ ಸಂತೋಷವಾಗುತ್ತದೆ. ನಿಮ್ಮ ಕ್ಷತ್ರಿಯಜಾತಿ ಹಾದರ, ಶಿಶುಹತ್ಯೆ ಎಂಬ ಪಾಪಗಳಿಂದ ಮುಕ್ತವಾಗಿದೆಯೆಂದು ನಾನು ನಂಬುತ್ತೇನೆ. ಇದು ಆಪತ್‌ಧರ್ಮ (ಇದು ಕಷ್ಟಕಾಲದ ಅನಿವಾರ್ಯ). ಇದು ಇರುವುದೇ ಮಾನವಸಮಾಜ ದೋಷರಹಿತವಾಗಿರುವುದಕ್ಕೆ. ವೇದಗಳು ಮೊದಲಾದ ಧರ್ಮ (ಪವಿತ್ರ) ಗ್ರಂಥಗಳು ಇದನ್ನು ಬೆಂಬಲಿಸಿವೆ. ನಮ್ಮ ಸರಕಾರವು ಸಹ ಒಂದು ಕಟ್ಟಲೆಯನ್ನು ಪಾಸುಮಾಡಿದೆ ಮತ್ತು ವಿಧವಾ ಪುನರ್‌ವಿವಾಹಕ್ಕೆ ಒಪ್ಪಿಗೆ ನೀಡಿದೆ. "ಈ ಆಪತ್‌ಧರ್ಮವನ್ನು ಪರಿಪಾಲಿಸದ ಜಾತಿಗಳಲ್ಲಿ ಶಿಶುಹತ್ಯೆ ವ್ಯಭಿಚಾರ ಮೊದಲಾದ ಪಾಪಗಳು ನಡೆಯುತ್ತಿವೆ ಮತ್ತು ಪ್ರತಿದಿನ ಸಾವಿರಾರು ಮಕ್ಕಳು ಸಾಯುತ್ತಿದ್ದಾರೆ. ಎಂಥಾ ಘೋರವಾದ ದುಃಖ."[2] ಇದೇ ಸಮ್ಮೇಳನದಲ್ಲಿ ಶಾಹುರವರು ಮಹಿಳೆಯರನ್ನು ಮನೆಯಲ್ಲಿ ಕೂಡಿಹಾಕುವ ಮತ್ತು ಅವರ ಸಹಜವಾದ ಕುಶಾಗ್ರಮತಿಯ ಬೆಳವಣಿಗೆಗೆ ಅವಕಾಶ ನೀಡದ ಪರದಾ ವ್ಯವಸ್ಥೆಯನ್ನು ಖಂಡಿಸಿದರು. ಅದೇ ಸಂದರ್ಭದಲ್ಲಿ ಅವರು ಹೇಳಿದರು: "ಭಾರತದ ಜನರು ಅಭಿವೃದ್ಧಿಗೆ ಮೂರು ಮಾರ್ಗಗಳಿವೆಯೆಂದು ತಿಳಿದಿದ್ದಾರೆ: ಮೊದಲನೆಯದು ಪರದಾ, ಎರಡನೆಯದು ವಿಧವಾ ಪುನರ್‌ವಿವಾಹದ ಖಂಡನೆ, ಮೂರನೆಯದು ಜನಸಾಮಾನ್ಯರೊಂದಿಗೆ ಕೂಡಿ ಊಟಮಾಡುವ ವ್ಯವಸ್ಥೆಯ ನಿಷೇಧ. ಎಂತಹ ಅದ್ಭುತ! ಕ್ಷತ್ರಿಯ ಮಹಿಳೆಯರಾದ ರಾಜಮಾತೆ ಜೀಜಾಬಾಯಿ, ಕೊಲ್ಹಾಪುರ ಸಂಸ್ಥಾನದ ಸಂಸ್ಥಾಪಕರಾದ ಮಹಾರಾಣಿ ತಾರಾಬಾಯಿ, ಮಹಾರಾಣಿ ಸತಿ ಅಹಲ್ಯಾಬಾಯಿ, ಮಹಾರಾಣಿ ಕಮಲಾಬಾಯಿ ಮೊದಲಾದವರು ತಮ್ಮತಮ್ಮ ಸಂಸ್ಥಾನಗಳನ್ನು ಆಳಿದ್ದಾರೆ ಮತ್ತು ಯುದ್ಧಭೂಮಿಯಲ್ಲಿ ಯುದ್ಧಗಳನ್ನು ಗೆದ್ದಿದ್ದಾರೆ. ಪರದಾ ಒಳಗೆ ಉಳಿಯುವುದು ಸಾಧ್ಯವೇ ಇಲ್ಲ. ಇಡೀ ದೇಶದುದ್ದಕ್ಕೂ ಪರದಾ ವ್ಯವಸ್ಥೆ ಇಲ್ಲವೇ ಇಲ್ಲ. ಇಂದು ಮಹಾರಾಷ್ಟ್ರ, ಮದ್ರಾಸು, ಗುಜರಾತು ಮೊದಲಾದ ಪ್ರಾಂತ್ಯಗಳಲ್ಲಿ ಪರದಾವ್ಯವಸ್ಥೆ ಇಲ್ಲವೇ ಇಲ್ಲ. ಇತರೆ ಕೆಲವು ಪ್ರಾಂತ್ಯಗಳಲ್ಲಿ ಈ ವ್ಯವಸ್ಥೆ ಕೆಲವು ಜಾತಿಗಳಲ್ಲಿ ಮಾತ್ರವಿದೆ. ಪರದಾವ್ಯವಸ್ಥೆಯಿಂದ ಮಹಿಳೆಯರಲ್ಲಿರುವ ಧೈರ್ಯಸಾಹಸ ಮೊದಲಾದ ಗುಣಗಳನ್ನು ಚಿವುಟಿಹಾಕಲಾಗಿದೆ.[3]

## ಅಂತರ್‌ಜಾತೀಯ ವಿವಾಹದ ಕಾಯ್ದೆ

ಕೊಲ್ಹಾಪುರ ಸಂಸ್ಥಾನದ ಅಂತರ್‌ಜಾತೀಯ ವಿವಾಹದ ಕಾಯ್ದೆಯನ್ನು ಪಾಸುಮಾಡಲಾಗಿದೆಯೆಂದು ಈಗಾಗಲೇ ಹೇಳಿಯಾಗಿದೆ. ಜುಲೈ ೧೯೧೯ರಲ್ಲಿ ಕೊಲ್ಹಾಪುರದ ಸಂಸ್ಥಾನದ ರಾಜ್ಯಪತ್ರದಲ್ಲಿ 'ಕೊಲ್ಹಾಪುರ ಪ್ರದೇಶದಲ್ಲಿ ವಿವಾಹಕ್ಕೆ ಸಂಬಂಧಿಸಿದ ಕಾನೂನು' ಎಂಬ ಹೆಸರಿನಲ್ಲಿ ಈ ಕಾಯ್ದೆಯನ್ನು ಪ್ರಕಟಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಸಂಸ್ಥಾನದಲ್ಲಿ ಪ್ರಮುಖವಾಗಿರುವ ಎರಡು ಧರ್ಮಗಳಿಗೆ ಸೇರಿದ ಜೈನರು ಮತ್ತು ಹಿಂದುಗಳು ತಮ್ಮ ಜಾತಿಯವರು ಬೇರೆ ಯಾವುದೇ ಜಾತಿಯ ಜನರೊಡನೆ ಅಂತರ್‌ಜಾತೀಯ ನಿಷೇಧವನ್ನು ಪರಿಗಣಿಸದೆ ವಿವಾಹವಾಗುವ ಹಕ್ಕನ್ನು ಪಡೆದಿದ್ದಾರೆ. ಅಂತಹ ಅಂತರ್‌ಜಾತೀಯ ವಿವಾಹಗಳನ್ನು ಕಾನೂನುಬದ್ಧ ಎಂದು ಘೋಷಿಸಲಾಗಿದೆ. ಈ ಕಾಯ್ದೆಯ ಒಂದು ವಿಧಿ (ಆರ್ಟಿಕಲ್) ಪ್ರಕಾರ ವಧುವಿಗೆ ೧೪ ವರ್ಷ ಮತ್ತು ವರನಿಗೆ ೧೮ ವರ್ಷ ತುಂಬಿರಬೇಕು. ಅಂದಿನ ಕಾಲದಲ್ಲಿ ಬಾಲ್ಯವಿವಾಹ ವಾಡಿಕೆಯಲ್ಲಿತ್ತು ಮತ್ತು ಹುಡುಗಿಗೆ ಸಾಮಾನ್ಯವಾಗಿ ೧೦ ವರ್ಷ ತುಂಬುವುದರೊಳಗೆ ಮದುವೆ ಮಾಡಲಾಗುತ್ತಿತ್ತು.

ಬ್ರಿಟಿಷ್ ಸರಕಾರವು ೧೮೯೧ರಲ್ಲಿ 'ವಿವಾಹದ ಒಪ್ಪಿಗೆ'ಯ ಕಾಯ್ದೆಯನ್ನು ಧೈರ್ಯವಾಗಿ ಪಾಸುಮಾಡಿತು ಮತ್ತು 'ಹುಡುಗಿಗೆ ಕನಿಷ್ಠ ೧೨ ವರ್ಷ ವಯಸ್ಸಾಗಿರಬೇಕೆಂದು ಕಾನೂನಿನ ಮೂಲಕ ಕಡ್ಡಾಯಗೊಳಿಸಲಾಯಿತು. ಆದರೆ ಸಂಪ್ರದಾಯವಾದಿಗಳಾದ ತಿಲಕರು ಮೊದಲಾದವರು ಈ ಕಾಯ್ದೆಯನ್ನು ಘೋರವಾಗಿ ವಿರೋಧಿಸಿದರು ಮತ್ತು ಹುಡುಗಿಯ ಮದುವೆಯ ವಯಸ್ಸನ್ನು ೧೨ ವರ್ಷದವರೆಗೆ ವಿಸ್ತರಿಸಿದ್ದು ಹಿಂದುಧಾರ್ಮಿಕ ಆಚರಣೆಗಳಲ್ಲಿ ಹಸ್ತಕ್ಷೇಪ ಮಾಡಿದೆಯೆಂದು ಹೇಳಿದರು.[4] ಈ ಹಿನ್ನೆಲೆಯಲ್ಲಿ ಕಾಯ್ದೆಯು ಮದುವೆಗೆ ೧೪ ವರ್ಷ ಆಗಬೇಕೆಂದು ಹೇಳಿರುವುದು ದಿಟ್ಟ ಮತ್ತು ಪ್ರಗತಿಪರ ಕಾನೂನಾಗಿದೆ. ಕಾಯ್ದೆಯ ಮುಂದಿನ ವಿಧಿ ೧೮ ವರ್ಷ ತುಂಬಿದ ವಧುವು ಮದುವೆಯಾಗಲು ತಂದೆ ಅಥವಾ ಪೋಷಕರ ಅನುಮತಿಯನ್ನು ಪಡೆಯಬೇಕಾಗಿಲ್ಲ ಎಂದು ಹೇಳುತ್ತದೆ. ಈ ವಿಧಿಯು ವಿಚಿತ್ರವಾಗಿದ್ದು ಅದು ಒಬ್ಬ ಮಹಿಳೆಯು ತನ್ನ ಜೀವನದಲ್ಲಿ ಖುದ್ದಾಗಿ ತನ್ನ ಸಂಗಾತಿಯನ್ನು ಹುಡುಕಿಕೊಳ್ಳುವ ಸ್ವಾತಂತ್ರ್ಯವನ್ನು ಅವಳಿಗೆ ನೀಡಿದೆ. ಇದರ ಜೊತೆಗೆ ಈ ಕಾಯ್ದೆಯ ಅಡಿಯಲ್ಲಿ ನಡೆದ ಮದುವೆಯನ್ನು ಅಧಿಕೃತ ಪ್ರಕ್ರಿಯೆಗಳ ಪ್ರಕಾರ ನೋಂದಣಿ ಮಾಡಬೇಕು. ಆ ಕಾಲದ ಇತಿಮಿತಿಗಳನ್ನು ಪರಿಗಣಿಸಿದಾಗ ಈ ಕಾಯ್ದೆಯು ಶಾಹುರವರು ಘೋಷಿಸುವ ಹೆಣ್ಣು ಮತ್ತು ಗಂಡುಗಳ ಸಾಮಾಜಿಕ ಸ್ವಾತಂತ್ರ್ಯದ ಘೋಷಣೆಗೆ ಇದು ಒಂದು ಕ್ರಾಂತಿಕಾರಿ ಕ್ರಮವಾಗಿದೆ.

## ಮಹಿಳಾಕ್ರೌರ್ಯ ತಡೆಗಟ್ಟಲು ಕಾಯ್ದೆ

೨ ಆಗಸ್ಟ್ ೧೯೧೯ರಲ್ಲಿ ಕೊಲ್ಹಾಪುರ ಸಂಸ್ಥಾನದ ರಾಜ್ಯಪತ್ರದಲ್ಲಿ ಮಹಿಳೆಯರನ್ನು ಸಂರಕ್ಷಿಸುವ ಎರಡು ಮುಖ್ಯ ಕಾಯ್ದೆಗಳನ್ನು ಪ್ರಕಟಿಸಲಾಯಿತು. ಮಹಿಳೆಯರನ್ನು ಕ್ರೌರ್ಯದಿಂದ ನೋಡಿಕೊಳ್ಳುವುದನ್ನು ಕೊನೆಗೊಳಿಸುವ ಅಥವಾ ಅಂತಹ ಕ್ರೌರ್ಯಗಳು ನಡೆಯದಂತೆ ತಡೆಗಟ್ಟುವ ಕಾನೂನು ಒಂದಾದರೆ ಮತ್ತೊಂದು ಕಾನೂನು ವಿವಾಹವಿಚ್ಛೇದನ ನಿಯಮಾವಳಿಗಳಾಗಿವೆ. ಹಲವು ಕುಟುಂಬಗಳಲ್ಲಿ ಮಹಿಳೆಯರಿಗೆ ಅವರ ಗಂಡ ಮತ್ತು ಅತ್ತೆಮಾವಂದಿರು ಕಿರುಕುಳ ಕೊಟ್ಟು ಹಿಂಸಿಸಲಾಗುವುದು. ಭಾರತೀಯ ದಂಡಸಂಹಿತೆಯ ಅಡಿಯಲ್ಲಿ ತಪ್ಪಿತಸ್ಥನನ್ನು ಹಿಡಿಯಲು ಸಾಧ್ಯವಾಗದಂತಹ ಕೆಲವು ಕಿರುಕುಳಗಳಿವೆ. ಇಂಥ ಮೂರ್ಖತನಗಳನ್ನು ಪರಿಗಣಿಸಿ ಶಾಹುರವರು ಕಾನೂನುಗಳ ಕೈಗಳಿಂದ ತಪ್ಪಿಸಿಕೊಳ್ಳಲಾಗದ ಯಾವುದೇ ರೀತಿಯ ಕಿರುಕುಳಗಳನ್ನು ಬಿಡದೆ ವ್ಯಾಪಕವಾದ ಕಾನೂನನ್ನು ರೂಪಿಸಿದ್ದಾರೆ. ಈ ಕಾನೂನು ಮಾಡುವುದಕ್ಕೆ ಇರುವ ಕಾರಣಗಳನ್ನು ಮತ್ತು ಗುರಿಗಳನ್ನು ಸ್ಪಷ್ಟಪಡಿಸಿ ಆಜ್ಞೆಯನ್ನು ಹೊರಡಿಸಿ ಅದು ಜಾರಿಗೆ ಬರುವುದಕ್ಕೆ ಮೊದಲು ಅದಕ್ಕೆ ಶಾಹುರವರೇ ಖುದ್ದು ಸಹಿ ಮಾಡಿದ್ದಾರೆ. ಮಹಿಳೆಯು ಕುಟುಂಬದಲ್ಲಿಯೇ ಅನುಭವಿಸುವ ದುಷ್ಕೃತ್ಯಗಳ ಬಗ್ಗೆ ಶಾಹು ಹೇಳುತ್ತಾರೆ: "ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಪ್ರಸಾರವು, ಅದು ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕೆ ಮಾಡಬೇಕಾದಷ್ಟು ರೀತಿಯಲ್ಲಿ ಆಗದೆ ಬಹಳ ನಿಧಾನಗತಿಯಲ್ಲಿದೆ. ಭಾರತದ ಕಾನೂನು ರಚನೆಕಾರರು ಅಗತ್ಯಬಿದ್ದಲ್ಲಿ ಮಹಿಳೆಯರನ್ನು ಸಣ್ಣಪ್ರಮಾಣದಲ್ಲಿ ದಂಡಿಸಲು ಕುಟುಂಬದ ಆಶ್ರಯದಾತರಿಗೆ ಅವಕಾಶ ನೀಡಿದ್ದಾರೆ; ಆದರೆ ಈ ಅನುಮತಿಯನ್ನು ಪುರುಷರು ಮಹಿಳೆಯರನ್ನು ಕಠೋರಾಗಿ ದಂಡಿಸಲು ಅಧಿಕೃತ ಅಧಿಕಾರವೆಂದು ತಿಳಿದು ತಮಗೆ ಇಷ್ಟಬಂದ ರೀತಿಯಲ್ಲಿ ದುರುಪಯೋಗಪಡಿಸಿಕೊಂಡಿದ್ದಾರೆ. ಹೀಗಿರುವಾಗ ಮಹಿಳೆಯರ ಮೇಲೆ ಪುರುಷರು ನಡೆಸುತ್ತಿದ್ದ ದುಷ್ಕೃತ್ಯಗಳನ್ನು ತಡೆಯಲು ಈ ಕಾನೂನನ್ನು ಪಾಸು ಮಾಡಲಾಯಿತು."

ಈ ಕಾನೂನಿನ ಉದ್ದೇಶಗಳನ್ನು ಸ್ಪಷ್ಟಪಡಿಸುತ್ತಾ ಶಾಹುರವರು ಮತ್ತೆ ಹೇಳುತ್ತಾರೆ: "ಯಾವ ನಡೆವಳಿಕೆ/ವರ್ತನೆಯು ದುಷ್ಕೃತ್ಯಕ್ಕೆ ಸಮವೆಂದು ನಿರ್ಧರಿಸಲು ಕೆಲವು ಸಂಗತಿಗಳನ್ನು ನಾವು ನಿರ್ದಿಷ್ಟಗೊಳಿಸಿದ್ದೇವೆ. ಇವುಗಳು ಹಿಂದುಳಿದ ಮತ್ತು ಅನಕ್ಷರಸ್ಥರಿಗೆ ಸಂಬಂಧಿಸಿದಂತೆ ತುಂಬ ಕಠೋರವೆಂದು ಅನಿಸಬಹುದು. ಆದರೆ ಶಿಕ್ಷಣದ ಸಕಾರಾತ್ಮಕ ಪರಿಣಾಮದ ಬಗ್ಗೆಯೇ ನಾವು ಅವಲಂಬಿಸಲು ಪ್ರಾರಂಭಿಸಿದರೆ ಮಹಿಳೆಯರ ಕಲ್ಯಾಣದ ಏಳಿಗೆಯು ತುಂಬ ನಿಧಾನಗತಿಯಲ್ಲಿ ಸಾಗಬಹುದು. ಶಿಕ್ಷಣದ ಪರಿಣಾಮಗಳು ಬೇಗನೆ ಸಾಕಾರಗೊಳ್ಳಲು ಭೀತಿಕಾರಕ ಕಾನೂನು ಪೂರಕವಾಗುವುದು ಅವಶ್ಯವೆಂದು ಭಾವಿಸಲಾಗಿದೆ. ಕೆಲವು ಸಂಗತಿಗಳು ನಿಧಾನವಾಗಿ ಸಹಜ ರೀತಿಯಲ್ಲಿ ಸಂಭವಿಸುತ್ತವೆ ಮತ್ತು ನಾವು ಅವುಗಳ ಮಧ್ಯೆ ಮೂಗು ತೂರಿಸಬಾರದೆಂಬ ತತ್ವವು ಉಚ್ಚ ಗುಣಮಟ್ಟದ ಶಿಕ್ಷಿತ ಸಮಾಜಕ್ಕೆ ಮಾತ್ರ ಅನ್ವಯಿಸುತ್ತದೆ. ಹಿಂದುಳಿದ ಜನರನ್ನು ಸುಧಾರಿಸುವ ಕೆಲಸವು ಕಾನೂನಿನ ನೆರಪಿಲ್ಲದೆ ಎಂದೆಂದಿಗೂ ನೆರವೇರಿಸುವುದಕ್ಕೆ ಆಗುವುದಿಲ್ಲ. ಮಹಿಳೆಯರ ಬಗ್ಗೆ ನಡೆಯುವ ಹಲವು ರೀತಿಯ ದುಷ್ಕೃತ್ಯಗಳು ಅಪರಾಧ ಎಂಬ ಪದದ ಮತ್ತು ಭಾರತೀಯ ದಂಡಸಂಹಿತೆಯ ವ್ಯಾಪ್ತಿಗೆ ನಿಲುಕುವುದಿಲ್ಲ. ಆದರೂ ಈ ರೀತಿಯ ದುಷ್ಕೃತ್ಯಗಳು ಕೆಲವೇ ದುಷ್ಕೃತ್ಯಗಳೇ ಆಗಿರುವುದರಿಂದ ಮಹಿಳೆಯು ತಮ್ಮ ಜೀವನ ಒಂದು ದೊಡ್ಡ ಬಾಧೆ ಮತ್ತು ಭೂಮಿಗೆ ತಾವು ಭಾರ ಎಂದು ಭಾವಿಸುತ್ತಾರೆ. ಈ ಎಲ್ಲಾ ಸಂಗತಿಗಳನ್ನು ಮನಸ್ಸಿಗೆ ತೆಗೆದುಕೊಂಡು ನಾವು ಈ ಕ್ರೌರ್ಯವನ್ನು ಅದರ ಯಾವುದೇ ರೀತಿಯ ಅರ್ಥವನ್ನು ಅದರ ವ್ಯಾಪ್ತಿಯಿಂದ ನುಣುಚಿಕೊಳ್ಳದ ರೀತಿಯಲ್ಲಿ ನಿರ್ವಚಿಸಲಾಗಿದೆ."

ಮೇಲ್ವರ್ಗಗಳಲ್ಲಿ ಕಿರುಕುಳ ಮತ್ತು ಆತಂಕಕಾರಿ ನಡೆವಳಿಕೆಗಳು ತೀವ್ರಸ್ವರೂಪವನ್ನು ಪಡೆದು ಅವು ವರದಿಯಾಗುವುದಿಲ್ಲ ಎಂಬುದನ್ನು ಗಮನಿಸಬೇಕು. ಅಂಥ ಮಹಿಳೆಯರು ಸಾರ್ವಜನಿಕವಾಗಿ ಹೊರಗೆ ಬರುವುದಿಲ್ಲ ಅಥವಾ ಅವುಗಳನ್ನು ತಿಳಿಸಲು ಪ್ರಯತ್ನಮಾಡುವುದಿಲ್ಲ. ಆದ್ದರಿಂದ ಈ ನಿರ್ವಚನದಡಿಯಲ್ಲಿ ಮೇಲ್ವರ್ಗಗಳಲ್ಲಿ ಎಸಗುತ್ತಿರುವ ದುಷ್ಕೃತ್ಯಗಳ ವಿವಿಧ ರೂಪಗಳನ್ನು ಸಾಮಾನ್ಯ ಅಳತೆಗೋಲಿನ ಅಡಿಯಲ್ಲಿ ನಿರೂಪಿಸಿದ್ದೇನೆ."[5] ಮಹಿಳೆಯ ವಿರುದ್ಧ ಎಸಗಿದ ದುಷ್ಕೃತ್ಯದ ಅಪರಾಧಿಗೆ ಆರುತಿಂಗಳು ಜೈಲು ಮತ್ತು ೨೦೦ರೂಗಳ ದಂಡದ ಶಿಕ್ಷೆಯನ್ನು ೧೧ ವಿಧಿಗಳ ಕಾಯ್ದೆಯು ವಿಧಿಸಿದೆ.

## ವಿವಾಹವಿಚ್ಛೇದನ ಮತ್ತು ಪರಂಪರೆಯ ಕಾಯ್ದೆ

ಮಹಿಳೆಯರ ಹಕ್ಕುಗಳ ಸಂರಕ್ಷಣೆ ಮತ್ತು ಅವರ ಜೀವನೋಪಾಯದ ಕಟ್ಟುಪಾಡನ್ನು ಪರಿಗಣನೆಗೆ ತೆಗೆದುಕೊಂಡು ವಿವಾಹವಿಚ್ಛೇದನಕ್ಕೆ ಸಂಬಂಧಿಸಿದ ಇತರೆ ಕಾಯ್ದೆಯ ವಿಧಿಗಳನ್ನು ರೂಪಿಸಲಾಗಿದೆ. ಮಗುವಿನ ವಿಷಯದಲ್ಲಿ ಕಾನೂನು ಕೂಡ ಅದರ ಸುಪರ್ದು, ಶಿಕ್ಷಣ ಮತ್ತು ಜೀವನಾಂಶಗಳನ್ನು ವ್ಯವಸ್ಥೆಗೊಳಿಸಿದೆ. ಈ ಕಾಯ್ದೆಗೆ ಸಂಬಂಧಿಸಿದ ಆಜ್ಞೆಯ ಪ್ರಕಟಣೆಯಲ್ಲಿ ಶಾಹುರವರು ತನ್ನ ಉದ್ದೇಶ ಗಳನ್ನು ವಿಸ್ತಾರವಾಗಿ ವಿವರಿಸಿದಾರೆ; "ವಿವಾಹ-ವಿಚ್ಛೇದನ ಕುರಿತಂತೆ ಹಲವು ಜಾತಿಗಳಲ್ಲಿ ದಿವ್ಯನಿರ್ಲಕ್ಷ್ಯ ವಿರುವುದನ್ನು ದರ್ಬಾರು ಗಮನಿಸಿದೆ ಮತ್ತು ಅದನ್ನು ಹಾಗೆ ಮುಂದುವರಿಯದಂತೆ ಬಿಟ್ಟುಬಿಟ್ಟರೆ ವಿವಾಹದ ಪಾವಿತ್ರ್ಯವನ್ನು ಯಾವುದೇ ನಾಗರಿಕ ಸಮಾಜದ ಬುನಾದಿಯನ್ನು ನಾಶಮಾಡಿ ಪರಿಪೂರ್ಣವಾಗಿ ಕಾಮುಕ ಸಮಾಜವನ್ನಾಗಿ ಮಾರ್ಪಡುವುದೆಂಬ ಅಭಿಪ್ರಾಯಕ್ಕೆ ನಾವು ಬಂದಿದ್ದೇವೆ. ಆದ್ದರಿಂದ ಅವರಿಗೆ (ಗಂಡ ಮತ್ತು ಹೆಂಡತಿ) ವಿವಾಹವಿಚ್ಛೇದನ ನೀಡುವ ಮೂಲಕ ಗಂಡ ಮತ್ತು ಹೆಂಡತಿಯರ ನಡುವೆಯಿರುವ

ಬಲಿಷ್ಠ ಬುನಾದಿಗಳಾದ ಭೌತಿಕ ಸಂಬಂಧಗಳನ್ನು ನಿಲ್ಲಿಸಲು ನಿರ್ಧರಿಸಲಾಗಿದೆ. ಇದರ ಜೊತೆಗೆ ಜಾತಿಯ ನ್ಯಾಯ ಪಂಚಾಯಿತಿದಾರರ ಮನಸೋ ಇಚ್ಛೆಗೆ ಬಿಡುವ ವಿವಾಹಬಂಧನವನ್ನು ಬೇರ್ಪಡಿಸುವ ಪದ್ಧತಿಯನ್ನು ರದ್ದುಗೊಳಿಸಲು ನಿರ್ಧರಿಸಲಾಗಿದೆ. ಮದುವೆಯ ಬಾಂಧವ್ಯವನ್ನು ಮುರಿದ ವ್ಯಕ್ತಿಯ ಮದುವೆಯನ್ನು ಕಾನೂನುಬದ್ಧಗೊಳಿಸುವ ಮತ್ತು ಅಂಥ ಮದುವೆ ಮುರಿದುಬೀಳುವುದಕ್ಕೆ ಮೊದಲು ಹುಟ್ಟಿದ ಮಗುವಿನ ಸಂರಕ್ಷಣೆಯ ಬಗ್ಗೆ ನಿಯಮಾವಳಿಗಳನ್ನು ರಚಿಸುವ ಯೋಜನೆಯನ್ನು ಮಾಡಲಾಗಿದೆ."[6] ಮಹಿಳೆಗೆ ಹೆಚ್ಚಿನ ಸಂದರ್ಭಗಳಲ್ಲಿ ಅನ್ಯಾಯವಾಗಿರುವ ಜಾತಿಪಂಚಾಯಿತಿ ಸಮಿತಿಯ ವಿವಾಹವಿಚ್ಛೇದನವನ್ನು ರದ್ದುಗೊಳಿಸಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಕಾನೂನಿನ ಬಲಿಷ್ಠ ಬುನಾದಿಯು ಮಹಿಳೆಯರಿಗೆ ಪ್ರಕೃತಿದತ್ತ ಹಕ್ಕುಗಳನ್ನು ನೀಡಿದೆ.

೧೭ ಜನವರಿ ೧೯೧೭ರಲ್ಲಿ ಕೊಲ್ಹಾಪುರ ಸಂಸ್ಥಾನದ ರಾಜ್ಯಪತ್ರದಲ್ಲಿ ಸಾಮಾಜಿಕ ಸುಧಾರಣೆಗೆ ಸಂಬಂಧಿಸಿದ 'ಆಸ್ತಿ–ಪಾಸ್ತಿ ಕಾಯ್ದೆಯ ಹಿಂದು ವಿಕೇಂದ್ರೀಕರಣದಲ್ಲಿನ ತಿದ್ದುಪಡಿಗಳ ಕಾಯ್ದೆ'(The Act of Corrections in the Hindu Devolution in Property Act) ಎಂಬ ಹೆಸರಿನ ಮುಖ್ಯ ಕಾನೂನನ್ನು ಪ್ರಕಟಿಸಲಾಯಿತು. ಈ ಕಾಯ್ದೆಯ ಕರಡನ್ನು ಇಂಗ್ಲೀಷು ಮತ್ತು ಮರಾಠಿ ಭಾಷೆಗಳಲ್ಲಿ ಬರೆಯಲಾಗಿತ್ತು. ಈ ಕಾಯ್ದೆಯ ಪ್ರಕಾರ ಶೂದ್ರ ಮತ್ತು ಉಚ್ಚವರ್ಣಗಳ ಬ್ರಾಹ್ಮಣರ, ಕ್ಷತ್ರಿಯರ ಮತ್ತು ವೈಶ್ಯರ ಕಾನೂನುಬಾಹಿರ ಸಂತಾನಗಳ ಹಕ್ಕುಗಳ ನಡುವೆಯಿರುವ ಭೇದಗಳನ್ನು ರದ್ದುಪಡಿಸಲಾಗಿತ್ತು. ಎಲ್ಲಾ ವರ್ಣಗಳ ಕಾನೂನುಬಾಹಿರ ಸಂತಾನಕ್ಕೆ (ಮಗುವಿಗೆ) ಖಾಸಾ ತಂದೆಯ ಆಸ್ತಿಯಲ್ಲಿ ಕಾನೂನುಬದ್ಧ ಹಕ್ಕನ್ನು ನೀಡಲಾಯಿತು. ಈ ಕಾಯ್ದೆಯ ಎರಡನೆಯ ವಿಧಿ 'ಜಾರಣಿ'(Fallen) ಮಹಿಳೆಯ ದೃಷ್ಟಿಯಲ್ಲಿ ಮಹತ್ತರವಾದುದು.

## ದೇವದಾಸಿ ಪದ್ಧತಿಯ ತಡೆ ಕಾಯ್ದೆ

ತೀರಾ ಇತ್ತೀಚಿನವರೆಗೆ ಕೆಳಜಾತಿಗಳಲ್ಲಿ ದೇವರ ಸೇವೆಗೆ ಹುಡುಗಿಯರನ್ನು ಸಮರ್ಪಿಸುವ ವಿಷವರ್ತುಲದ ಪದ್ಧತಿ ತುಂಬಾ ಪ್ರಚಲಿತವಾಗಿತ್ತು. (ಇಂದಿಗೂ ಇದನ್ನು ಸಂಪೂರ್ಣವಾಗಿ ತೊಡೆದು ಹಾಕಿಲ್ಲ.) ಈ ದೇವದಾಸಿ ಪದ್ಧತಿಯಿಂದ ಜಾರಿದ ಮಹಿಳೆಯರ ಒಂದು ವರ್ಗವಾದ ಜೋಗಿತಿಯರು, ಮರಳಿ, ದೇವದಾಸಿ, ಭಾವೀಯರು ಅಸ್ತಿತ್ವಕ್ಕೆ ಬಂದಿದ್ದಾರೆ. ಈ ಅನಿಷ್ಟಪದ್ಧತಿ ಸಮಾಜಕ್ಕೆ ಕಳಂಕವಾಗಿದೆ. ಶಾಹುರವರು ಅಂತಹ ಕಳಂಕವನ್ನು ನಿರ್ಮಿಸಿದ ಆಚರಣೆಯನ್ನು ಕಾನೂನಿನ ಮೂಲಕ ತಡೆಯಲು ಪ್ರಯತ್ನಿಸಿದರು.

ದೇವರ ಹೆಸರಿನಲ್ಲಿ ಬಿಟ್ಟ ಈ ಬಾಲೆಯರು ದೇವರ ಇಡೀ ಆಸ್ತಿಯಾದರು. ಅವರು ತಮ್ಮ ತಂದೆ–ತಾಯಂದಿರ ಕುಟುಂಬದೊಂದಿಗೆ ಯಾವುದೇ ರೀತಿಯ ಸಂಬಂಧವನ್ನಿಟ್ಟುಕೊಳ್ಳುವಂತಿಲ್ಲ. ಹಾಗೆಯೇ ಅವರು ತಮ್ಮ ಖಾಸಾ ತಂದೆಯ ಆದಾಯಕ್ಕೆ ಯಾವುದೇ ಕಾನೂನುಬದ್ಧ ಹಕ್ಕನ್ನು ಹೊಂದುವಂತಿಲ್ಲ. ಆದರೆ ಅವಳು ದೇವಸ್ಥಾನ ಸಂಸ್ಥೆಯಲ್ಲಿ ಸಂಪ್ರದಾಯದಿಂದ ನೀಡಿದಂತ ಹಕ್ಕುಗಳನ್ನು ಪಡೆಯುತ್ತಾಳೆ. ಕಾನೂನಿನ ದೃಷ್ಟಿಯಲ್ಲಿ ಒಂದು ನಿರ್ದಿಷ್ಟ ಸಾಮಾಜಿಕ ಸ್ಥಾನ ಪಡೆಯುತ್ತಾಳೆ. ಈ ಹಕ್ಕುಗಳು ಮತ್ತು ಸ್ಥಾನಮಾನಗಳು ಅತ್ಯಂತ ಕೀಳುಮಟ್ಟದವಾದರೂ ಅವು ಸಮಾಜ ಮತ್ತು ಸಂಪ್ರದಾಯಗಳ ಒಪ್ಪಿಗೆಯನ್ನು ಪಡೆದಿವೆ.

ಮೇಲೆ ಹೇಳಿದ ಕಾನೂನಿನ ಬಲದಿಂದ ಶಾಹುರವರು ಆ ಹಕ್ಕು ಮತ್ತು ಸ್ಥಾನಮಾನಗಳನ್ನು ಒಪ್ಪುವುದನ್ನು ನಿರಾಕರಿಸಿ ಆ ಮಹಿಳೆಯರಿಗೆ ತಮ್ಮ ಖಾಸಾ ತಂದೆ–ತಾಯಂದಿರ ಆಸ್ತಿ–ಪಾಸ್ತಿಗಳಲ್ಲಿ ಕಾನೂನುಬದ್ಧ ಹಕ್ಕುಗಳನ್ನು ಕೊಡಿಸಿದರು.[7] ಬೇರೆ ಮಾತುಗಳಲ್ಲಿ ಹೇಳುವುದಾದರೆ ಶಾಹುರವರು ಸಮಾಜದ ಮಹಿಳೆಯರು ಅನುಭವಿಸಿದ ಕಾನೂನು ಸ್ಥಾನಮಾನವನ್ನು ರದ್ದುಗೊಳಿಸುವ ಮೂಲಕ ಈ ಪದ್ಧತಿಯನ್ನು ಕೊನೆಗಾಣಿಸಲು ಪ್ರಯತ್ನಿಸಿದರು.

ಇಂಗ್ಲಿಷ್ ಅವತರಣಿಕೆಯ ಪೀಠಿಕೆಯಲ್ಲಿ ಈ ಕಾನೂನಿನ ಉದ್ದೇಶಗಳನ್ನು ಸ್ಪಷ್ಟಪಡಿಸುತ್ತಾ ಶಾಹು ಹೇಳುತ್ತಾರೆ: "ಓಬೀರಾಯನ ಕಾಲದ ಪದ್ಧತಿಯ ಪ್ರಕಾರ ದುರಾದೃಷ್ಟ ಹುಡುಗಿಯರ ಸ್ಥಿತಿಯನ್ನು ಆಗಾಗ ಧರ್ಮದ ವಿವಿಧ ರೂಪಗಳಲ್ಲಿ ತಮ್ಮ ಜೀವನದ ಮೊದಲ ಬಾಲ್ಯತನವನ್ನೇ ಸಾರ್ವಜನಿಕ ಅನೈತಿಕ ಜೀವನಕ್ಕೆ ಮುಡುಪಿಟ್ಟರೆಂಬುದನ್ನು ಹೇಳಬೇಕಾಗಿಲ್ಲ. ಅಂಥ ಆಚರಣೆ ಹಿಂದೂಕಾನೂನಿಗೆ ಒಂದು ಕಪ್ಪುಚುಕ್ಕೆಯೆಂದು ಪರಿಗಣಿಸಬೇಕಾಗಿತ್ತು. ಎಳೆಯ ವಯಸ್ಸಿನಲ್ಲಿಯೇ ಅವರನ್ನು ಬಹಿರಂಗವಾದ ಈ ನೀಚಜೀವನಕ್ಕೆ (ಹಾದರಕ್ಕೆ) ಬಲಾತ್ಕಾರವಾಗಿ ದೂಕಿದ್ದಕ್ಕೆ ಅವರ ವಯೋಸ್ಥಾನಮಾನಗಳ ಪ್ರಕಾರ ಪರಿಹಾರ(ರಿಯಾಯಿತಿ)ಗಳನ್ನು ನೀಡುವ ತೋರಿಕೆಯನ್ನಾದರೂ ಮಾಡಬೇಕಾಗಿತ್ತು. ಜೊತೆಗೆ ಇಂಥ ನೀಚ ನಾಚಿಕೆಗೇಡಿನ ಹಗರಣವನ್ನು ಸ್ಪಷ್ಟವಾಗಿ ಸಕ್ರಮಗೊಳಿಸಬೇಕಾಗಿತ್ತು. ಯಾವುದೇ ನಾಗರಿಕ ಸಂಸ್ಥಾನದ ಕಾನೂನಿನಿಂದ ಮಾನ್ಯತೆ ಪಡೆದ ಮತ್ತು ಸಮ್ಮತಿ ಪಡೆದ ಹಕ್ಕುಗಳನ್ನು ಮತ್ತು ಸ್ಥಾನಮಾನವನ್ನು ಅದಕ್ಕೆ ನೀಡಿರಲಿಲ್ಲ."[8]

ಶಾಹುರವರು ಮಹರರ ವತನಗಳನ್ನು ಮುಟ್ಟುಗೋಲು ಹಾಕಿಕೊಂಡ ದೃಷ್ಟಿಯಿಂದಲೇ ಮೇಲಿನ ಕಾನೂನನ್ನು ಮಾಡಿದರೆಂದು ಹೇಳಿದರೆ ಅಸೂಕ್ತವೆನಿಸುವುದಿಲ್ಲ. ಮಹರರ ವತನಗಳು ಸಮಾಜಕ್ಕೆ ಕೀಳುಕೆಲಸಗಳನ್ನು ಮಾಡುವಂತೆ ಮತ್ತು ಬಲಾತ್ಕಾರದ ದುಡಿಮೆಯ ನೆಪದಲ್ಲಿ ಸಾಮಾಜಿಕ ದಾಸ್ಯತ್ವವನ್ನು ಸಹಿಸುವಂತೆ ಮಹರರನ್ನು ಕಡ್ಡಾಯಗೊಳಿಸಿದವು. ಶಾಹುಮಹಾರಾಜರು ಮಹರರ ವತನಗಳನ್ನು ರದ್ದುಗೊಳಿಸಿದಂದಿನಿಂದ ಈ ಕೀಳುಕೆಲಸಗಳು ಮತ್ತು ಬಲವಂತದ ದುಡಿಮೆಗಳು ಈ ಕಾನೂನಿನಿಂದ ತನ್ನಷ್ಟಕ್ಕೇ ತಾನೇ ನಿಂತುಹೋದವು. ಇದರ ಪರಿಣಾಮವಾಗಿ ಮಹರ್‌ಸಮುದಾಯ ಸ್ವತಂತ್ರವಾಯಿತು ಮತ್ತು ಸಮಾಜ ಮುಖ್ಯವಾಹಿನಿಯಲ್ಲಿ ವಿಲೀನಗೊಳ್ಳುವ ಪ್ರಕ್ರಿಯೆ ಪ್ರಾರಂಭವಾಯಿತು. ಹಾಗೆಯೇ ಜೋಗಿತಿನಿಯರು, ಮುರಳಿಗಳು, ದೇವದಾಸಿಗಳು ಅನುಭವಿಸುತ್ತಿದ್ದ ದೇವಸ್ಥಾನದ ಆಸ್ತಿಯ ಹಕ್ಕುಗಳನ್ನು ರದ್ದುಗೊಳಿಸಿದ್ದರೆ ಮತ್ತು ಅವರ ದೇವಸ್ಥಾನ ಸಂಸ್ಥೆಯ ಕಾನೂನುಬದ್ಧ ಸ್ಥಾನಮಾನವನ್ನು ನಿರಾಕರಿಸಿದ್ದರೆ ಈ ಅನಿಷ್ಟ ಪದ್ಧತಿಯಿಂದ ಅವರನ್ನು ಮುಕ್ತಗೊಳಿಸಬಹುದಾಗಿತ್ತು ಮತ್ತು ಅವರು ಸ್ವತಂತ್ರ ಜೀವನವನ್ನು ಪ್ರಾರಂಭಿಸಬಹುದಾಗಿತ್ತೆಂದು ಶಾಹು ಭಾವಿಸುತ್ತಾರೆ.

ಶಾಹುರವರು ತನ್ನ ಆಡಳಿತಾವಧಿಯಲ್ಲಿ ಮಹಿಳೆಯ ಸಾಮಾಜಿಕ ಸ್ವಾತಂತ್ರ್ಯದ ಸಂರಕ್ಷಣೆಗಾಗಿ ರೂಪಿಸಿದ ಕಾನೂನುಗಳು ಒಂದು ರೀತಿಯಲ್ಲಿ ಅವರ ಆಡಳಿತವು ಪ್ರಗತಿಪರವಾಗಿತ್ತು ಮತ್ತು ಜನರ ಕಲ್ಯಾಣಕ್ಕಾಗಿ ಬದ್ಧವಾಗಿತ್ತೆಂಬುದಕ್ಕೆ ಪುರಾವೆಗಳಾಗಿವೆ. ಈ ಕಾನೂನುಗಳ ರಚನೆಯಿಂದ ಮಹಿಳೆಯರ ಶೋಷಣೆ ಅಥವಾ ಅವರ ಮೇಲೆ ನಡೆಯುವ ದುಷ್ಕೃತ್ಯಗಳನ್ನು ಸಂಪೂರ್ಣವಾಗಿ ನಿಲ್ಲಿಸಲಾಗಿದೆಯೆಂದು ನಾವು ಖಚಿತವಾಗಿ ಹೇಳಲಾರೆವು. ಆದರೆ ಶಾಹುರವರು ರೂಪಿಸಿದ ಶಾಸನಗಳ ಸಾಮಾಜಿಕ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಪ್ರಗತಿಪರ ಬ್ರಿಟಿಷ್ ಸರಕಾರದ ಸಾಮ್ರಾಜ್ಯದಲ್ಲಿ ಮಹಿಳೆಯರ ಹಕ್ಕುಗಳನ್ನು ಸಂರಕ್ಷಣೆ

ಮಾಡುವ ಕಾನೂನುಗಳು ಅಸ್ತಿತ್ವದಲ್ಲಿ ಇಲ್ಲದಿದ್ದ ಅಥವಾ ಅಂತಹ ಕಾನೂನುಗಳ ರಚಿಸಿ ಮಡಿವಂತಿಕೆ ಬ್ರಾಹ್ಮಣರ ಕೋಪವನ್ನು ಎದುರಿಸಲು ಸಿದ್ಧವಾಗಿರದಿದ್ದ ಕಾಲದಲ್ಲಿ ಶಾಹುರವರು ಈ ಕ್ರಾಂತಿಕಾರಿ ಕಾನೂನುಗಳನ್ನು ರಚಿಸಿದರು ಮತ್ತು ಜಾರಿಗೊಳಿಸಿದರೆಂಬ ಸಂಗತಿಯನ್ನು ಗಮನಿಸಬೇಕು. ಸ್ವಾತಂತ್ರ್ಯದ ನಂತರ ಕೌಟುಂಬಿಕ ಕ್ರೌರ್ಯ(ಹಿಂಸೆ)ದಿಂದ ಅಸಹಾಯಕರಾದ ಮಹಿಳೆಯರನ್ನು ವಿಮುಕ್ತಿಗೊಳಿಸುವ ಅಥವಾ ದೇವದಾಸಿ ಮೊದಲಾದ ಅನಿಷ್ಟ ಮತ್ತು ಪಾಶವಿಕ ಆಚರಣೆಗಳಿಂದ ಅವರನ್ನು ಸ್ವತಂತ್ರಗೊಳಿಸುವ ಉದ್ದೇಶದಿಂದ ಹಲವಾರು ಆಂದೋಲನಗಳು ಪ್ರಾರಂಭಗೊಂಡವು. ಈ ಹಿನ್ನೆಲೆಯಲ್ಲಿ ಮಹಾರಾಜರೆಂಬ ಒಂದು ವಿದ್ಯಮಾನವು ೯೦ ವರ್ಷಗಳ ಹಿಂದೆ ಮಹಿಳೆಯರ ವಿಮೋಚನೆಗಾಗಿ ಚಿಂತನೆ ಮಾಡಿದ್ದು ಮತ್ತು ಆ ವಿಚಾರದ ಸಾಕಾರಕ್ಕೆ ಕ್ರಿಯಾಶೀಲರಾಗಿದ್ದು ನಿಜವಾಗಿ ಒಂದು ಮಹತ್ತರವಾದ ಸಾಧನೆ.

---

೧೭

# ಶಿಕ್ಷಣ

ಬ್ರಾಹ್ಮಣೇತರರನ್ನು ವಿಮೋಚನೆಗೊಳಿಸಲು ಪಣ ತೊಟ್ಟಿದ್ದ ಮಹಾತ್ಮ ಫುಲೆಯಿಂದ ಹಿಡಿದು ಭಾವುರಾವ್ ಪಾಟೀಲರವರೆಗಿನ ಎಲ್ಲಾ ಸಮಾಜ ಸುಧಾರಕರು ಎಲ್ಲಾ ಸುಧಾರಣೆಗಳಿಗೆ ಶಿಕ್ಷಣವೇ ಪ್ರಧಾನ ಕೀಲಿಕೈಯೆಂದು ಪರಿಭಾವಿಸಿದ್ದರು. ಶಿಕ್ಷಣ ಎಂದರೆ ಜ್ಞಾನ, ಬ್ರಾಹ್ಮಣೇತರ ಜನಸಮೂಹವು ಶತಮಾನಗಳವರೆಗೆ ಶಿಕ್ಷಣವಿಲ್ಲದೆ ಉಳಿದುಬಿಟ್ಟರು ಹಾಗೂ ಅಜ್ಞಾನದ ಕತ್ತಲು ಮತ್ತು ದಟ್ಟ ದಾರಿದ್ರ್ಯದಲ್ಲಿ ಮುಳುಗಿ ಕೊಳೆತಿದ್ದರು. ಶಿಕ್ಷಣದ ಕೊರತೆ ಎಂದರೆ ಜ್ಞಾನದ ಕೊರತೆ. ಫುಲೆಯವರು ಸ್ಪಷ್ಟವಾಗಿ ಹೇಳಿದಂತೆಯೇ ಈ ಶಿಕ್ಷಣದ ಕೊರತೆಯು ಬ್ರಾಹ್ಮಣೇತರರ ಸಮಾಜದಲ್ಲಿ ಹಲವಾರು ರೋಗ–ರುಜಿನಗಳಿಗೆ ಎಡೆಮಾಡಿಕೊಟ್ಟಿತು. ಎಲ್ಲಾ ಅವ್ಯವಸ್ಥೆಗಳಿಗೆ ಮೂಲ ಅಜ್ಞಾನವಾಗಿದ್ದರೂ, ಈ ಅಜ್ಞಾನಕ್ಕೆ ಮೂಲ ಜಾತಿ–ಭೇದ ಮತ್ತು ಕೆಳಜಾತಿಗಳು ಶಿಕ್ಷಣ ಪಡೆಯಬಾರದೆಂದು ಮೇಲುಜಾತಿಗಳು ಹೇರಿದ ನಿಷೇಧ. ರಾಷ್ಟ್ರದ ಮಹಾಸೋಲಿಗೆ ಹಿಂದಿರುವ ಕಾರಣ ಶಿಕ್ಷಣದ ಮೇಲೆ ಹೇರಿದ ನಿಷೇಧವೆಂದು ಪ್ರಸ್ತಾಪಿಸುತ್ತಾ ಶಾಹು ಮಹಾರಾಜರು ಹೇಳುತ್ತಾರೆ: "ಶಿಕ್ಷಣವೊಂದೇ ನಮ್ಮ ರಕ್ಷಕ ಎಂಬುದೇ ನನ್ನ ದೃಢ ಅಭಿಪ್ರಾಯ. ಶಿಕ್ಷಣವಿಲ್ಲದೆ ಯಾವುದೇ ರಾಷ್ಟ್ರ ಮುಂದುವರಿಯದೆಂಬುದನ್ನು ಇತಿಹಾಸ ತೋರಿಸಿಕೊಟ್ಟಿದೆ. ಅಜ್ಞಾನದಲ್ಲಿ ಹೊರಳಾಡುತ್ತಿರುವ ರಾಷ್ಟ್ರವು ಮಹಾಶೂರರನ್ನು ಮತ್ತು ರಾಯಭಾರಿಗಳನ್ನು ನೀಡಲಾರದು. ಆದ್ದರಿಂದ ಭಾರತಕ್ಕೆ ಕಡ್ಡಾಯ ಮತ್ತು ಉಚಿತ ಶಿಕ್ಷಣ ಅತ್ಯಗತ್ಯ. ಈ ಸಂದರ್ಭದಲ್ಲಿ ನಮ್ಮ ಗತವು ಇತಿಹಾಸದಲ್ಲಿ ಒಂದು ದೀರ್ಘರಾತ್ರಿ. ಒಂದೇ ಒಂದು ಜಾತಿ ಶಿಕ್ಷಣದ ಏಕಸ್ವಾಮ್ಯತೆಯನ್ನು ಪಡೆದಿದೆ. ಮನು ಮತ್ತು ಶಾಸಕರು ಆ ಕಾಲದ ತುರ್ತುಗಳಿಗನುಗುಣವಾಗಿ ವಿವಿಧ ಜಾತಿಗಳ ಕಾರ್ಯನಿರ್ವಹಣೆಗಳ ಮೇಲೆ ನಿರ್ಬಂಧಗಳನ್ನು ಹೇರಿಕೆಗಳನ್ನು ಅನುಸರಿಸಿದರು ಮತ್ತು ಕೆಳಜಾತಿಗಳಿಗೆ ಶಿಕ್ಷಣದ (ಜ್ಞಾನ) ಬಾಗಿಲುಗಳನ್ನು ಮುಚ್ಚಲಾಯಿತು. ಅವರು ತಮ್ಮ ಧಾರ್ಮಿಕ ಶಾಸ್ತ್ರ ಗ್ರಂಥಗಳನ್ನು ಮತ್ತು ವೇದಗಳ ಅಧ್ಯಯನ ಮಾಡುವುದನ್ನು ನಿಷೇಧಿಸಿದರು. ಅಂತಹ ಕುರುಹು ಮತ್ತು ದುಃಖಕರವಾದ ಪರಿಸ್ಥಿತಿಗಳನ್ನು ಎಸಗುವುದರಲ್ಲಿ ಮತ್ತಾವ ಧರ್ಮ ತೊಡಗದಿದ್ದರೂ ಹಿಂದು ಧರ್ಮ ಅಂಥವರಲ್ಲಿ ಕುಪ್ರಸಿದ್ಧಿಯನ್ನು ಗಳಿಸಿದೆ.[1]

## ಬ್ರಿಟಿಷರ ಪ್ರಯತ್ನಗಳು ಮತ್ತು ನೀತಿ ಧೋರಣೆಗಳು

ಈ ದೇಶದಲ್ಲಿ ಶಿಕ್ಷಣದ ಕಲಿಕೆಯ ಮೇಲೆ ಹೇರಿದ್ದ ನಿಷೇಧವನ್ನು ರದ್ದುಗೊಳಿಸಿದ ಮೊದಲ ರಾಜಕೀಯ ಆಡಳಿತಗಾರರು ಬ್ರಿಟಿಷರು. ಭಾರತದ ಜನರಿಗೆ ಶಿಕ್ಷಣವನ್ನು ಕಲ್ಪಿಸುವ ಮೂಲಕ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಯೋಜನಗಳು ಭಾರತದ ಜನರಿಗೆ ಸಿಗುವಂತೆ ಬ್ರಿಟಿಷ್ ಆಡಳಿತಗಾರರು ಪವಿತ್ರವಾದ ಕರ್ತವ್ಯವನ್ನು ಮಾಡಿದ್ದಾರೆಂದು ೧೮೫೪ರಲ್ಲಿ ಸರ್ ಚಾರ್ಲ್ಸ್‌ವುಡ್ ಅವರು ತಮ್ಮ ಲಿಖಿತ ಸಮಾಚಾರ

ಪತ್ರಗಳಲ್ಲಿ ಬರೆದಿದ್ದಾರೆ. ಅದರಂತೆಯೆ ಭಾರತದಲ್ಲಿ ಶಿಕ್ಷಣದ ಬಾಗಿಲುಗಳು ಎಲ್ಲಾ ಜಾತಿಯ ಮತ್ತು ಮತ-ಧರ್ಮಗಳ ಜನರಿಗೆ ತೆರೆಯಲ್ಪಟ್ಟವು. ಹಲವು ಕಡೆಗಳಲ್ಲಿ ಶಾಲೆಗಳನ್ನು ಸ್ಥಾಪಿಸಲಾಯಿತು. ಕೆಲವು ಶಾಲೆಗಳನ್ನು ಸರಕಾರ, ಖಾಸಗಿ ಮತ್ತು ವ್ಯಕ್ತಿಗಳು ಸ್ಥಾಪಿಸಿದರು. ಮಿಷನ್ನುಗಳು ತಮ್ಮದೇ ಆದ ಕೆಲವು ಶಾಲೆಗಳನ್ನು ಹೊಂದಿದ್ದವು. ಆದರೆ ಈ ಶಾಲೆಗಳಲ್ಲಿ ಅಸ್ಪೃಶ್ಯ ಜಾತಿಗಳಿಗೆ ಸೇರಿದ ಮಹರ್, ಮಾಂಗ್ ಮೊದಲಾದವರನ್ನು ಸೇರಿಸಿಕೊಳ್ಳಲಿಲ್ಲ. ಮಿಷನರಿ ಶಾಲೆಗಳು ಅಸ್ಪೃಶ್ಯರ ಬಗ್ಗೆ ಭೇದ-ಭಾವ ತೋರಿಸಲಿಲ್ಲ. ಆದರೆ ಮೇಲ್‌ಜಾತಿಗಳ ಮಕ್ಕಳ ತಂದೆ-ತಾಯಂದಿರು ಇಂತಹ ಶಾಲೆಗಳಿಗೆ ಅವರು ಬರುವುದಕ್ಕೆ ತಡೆಯೊಡ್ಡಿದರು. ಎಲ್ಲರಿಗೂ ಶಿಕ್ಷಣ ಎಂಬ ತತ್ವವನ್ನು ಒಪ್ಪಿಕೊಂಡಿದ್ದರೂ ಸರಕಾರವು ಉಚ್ಚಜಾತಿಗಳ ವರ್ಣಪಾರಮ್ಯತೆಯ ಮುಂದೆ ಸರಕಾರ ಅಸಹಾಯಕವಾಗಿತ್ತು. ಆದ್ದರಿಂದ ಸರಕಾರ ಅಸ್ಪೃಶ್ಯರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆದಿತ್ತು. ಆದರೆ ಸರಕಾರದ ಈ ವ್ಯವಸ್ಥೆಯು ಜುಜುಬಿ ಸ್ವರೂಪದ್ದಾಗಿತ್ತು. ಸರಕಾರವು ಪ್ರತ್ಯೇಕ ಶಾಲೆಗಳನ್ನು ಕೇವಲ ಪಟ್ಟಣಗಳಲ್ಲಿ ತೆರೆದಿದೆ; ಪುಣೆಯಂತಹ ನಗರ ೫೦೦೦ಕ್ಕಿಂತ ಹೆಚ್ಚು ಅಸ್ಪೃಶ್ಯರ ಜನಸಂಖ್ಯೆಯನ್ನು ಹೊಂದಿದ್ದರೂ ಅವರಿಗೆ ಕೇವಲ ಒಂದು ಶಾಲೆಯನ್ನು ತೆರೆಯ ಲಾಗಿದೆ. ಈ ಶಾಲೆಯಲ್ಲಿ ಕೂಡ ಪ್ರತಿದಿನ ೩೦ಕ್ಕಿಂತ ಕಡಿಮೆ ಹುಡುಗರು ಹಾಜರಾಗುತ್ತಾರೆಂದು ಫುಲೆಯವರು ಹಂಟರ್ ಆಯೋಗಕ್ಕೆ ತಮ್ಮ ಅಹವಾಲನ್ನು ಮಂಡಿಸಿದ್ದಾರೆ.[2] ಬ್ರಾಹ್ಮಣರನ್ನು ಬಿಟ್ಟರೆ ಸಮಾಜದಲ್ಲಿನ ಬೇರೆ ಜಾತಿಯವರ ಶೈಕ್ಷಣಿಕ ಸ್ಥಿತಿಗತಿಗಳು ಅಸ್ಪೃಶ್ಯರಿಗಿಂತ ಭಿನ್ನವಾಗಿರಲಿಲ್ಲ. ಒಟ್ಟಾರೆಯಾಗಿ ಬ್ರಾಹ್ಮಣೇತರರ ಸಮಾಜದಲ್ಲಿ ಶಿಕ್ಷಣದ ಬಗ್ಗೆ ಅಲಕ್ಷ್ಯತೆ ಎದ್ದು ಕಾಣುತ್ತಿತ್ತು. ಈ ನಿರ್ಲಕ್ಷ್ಯತನ ಅಜ್ಞಾನ ಮತ್ತು ದಟ್ಟ ದಾರಿದ್ರ್ಯಗಳಿಂದ ಕೂಡಿತ್ತು. ಶಿಕ್ಷಣವು ತಮಗೆ ವಿಶೇಷವಾಗಿ ಸೇರಿದ ಏಕಸ್ವಾಮ್ಯತೆಯೆಂದು ಭಾವಿಸಿದ ಬ್ರಾಹ್ಮಣರ ಪರಮಶ್ರೇಷ್ಠತೆಯ ಅಹಂಕಾರ ಮತ್ತು ಬ್ರಾಹ್ಮಣೇತರರ ಸಮುದಾಯದ ಕೀಳರಿಮೆಯು ಶಿಕ್ಷಣ ತಮಗೆ ಎಟುಕಲಾರದ ವಸ್ತುವೆಂಬ ಚಿಂತನೆಯು ಕಲಿಕೆಯ ಬಗ್ಗೆ ಉದಾಸೀನತೆಯನ್ನು ಅವರಲ್ಲಿ ಬೆಳೆಸಿವೆ.

ಈ ಬಗೆಗಿನ ಬ್ರಿಟಿಷ್ ಸರಕಾರದ ನೀತಿ-ಧೋರಣೆಯು ಮೇಲುಜಾತಿಗಳ ಶಿಕ್ಷಣದ ಏಕಸ್ವಾಮ್ಯತೆಗೆ ಅನುಕೂಲಕರವಾಗಿತ್ತು. ದೇಶದಲ್ಲಿ ಶಿಕ್ಷಣ ಪ್ರಸಾರಕ್ಕೆ ಅವರು ಕೆಳಕ್ಕೆ ಹರಿದು ಬರುವಿಕೆಯ ಸಿದ್ಧಾಂತವನ್ನು ಪ್ರಸ್ತಾಪಿಸಿದ್ದರು. ಸ್ವಲ್ಪ ಸಮಯದಲ್ಲಿ ಮೇಲುಜಾತಿಗಳ ಜನರಿಗೆ ನೀಡಿದ ಶಿಕ್ಷಣ ಕೆಳಜಾತಿಗಳ ಜನರಿಗೆ ಹರಿದು ಬಂದು, ಅಲ್ಲಿಂದ ಮುಂದಕ್ಕೆ ಈ ಪ್ರಕ್ರಿಯೆಯಲ್ಲಿ ಇಡೀ ಸಮಾಜಕ್ಕೆ ವ್ಯಾಪಿಸುತ್ತದೆ ಎಂಬುದೇ ಈ ಧೋರಣೆಯ ಮುಖ್ಯ ಕಲ್ಪನೆಯಾಗಿತ್ತು. ಈ ಧೋರಣೆಯು ಮೇಲುಜಾತಿಗಳಿಗೆ ಪ್ರಯೋಜನಕಾರಿ ಯಾಗಿದ್ದದ್ದು ಮಾತ್ರವಲ್ಲದೆ ಅದು ಮೇಲುಜಾತಿಗಳು ಶಿಕ್ಷಣದಲ್ಲಿ ಏಕಸ್ವಾಮ್ಯತೆಯನ್ನು ಕಾಪಾಡಿಕೊಳ್ಳುವುದಕ್ಕೆ ಸಹಕಾರಿಯಾಗಿತ್ತು. ಏಕೆಂದರೆ ಮೇಲಿನಿಂದ ಹರಿದು (ಬೀಳುವ) ಬರುವ ಶಿಕ್ಷಣ ಕೆಳಕ್ಕೆ ಹರಿದು (ಬೀಳ) ಬರಬೇಕೆ ಅಥವಾ ಬೇಡವೆ ಎಂಬುದನ್ನು ನಿರ್ಧರಿಸುವುದು ಈ ಮೇಲುಜಾತಿಗಳೇ ಆಗಿದ್ದವು. ಈ ಧೋರಣೆಯು ಸರಕಾರಕ್ಕೆ ಪ್ರಯೋಜನಕಾರಿಯಾಗಿತ್ತು ಮತ್ತು ಜನಸಂಖ್ಯೆಯಲ್ಲಿ ಅಪಾರವಾಗಿರುವ ಬ್ರಾಹ್ಮಣೇತರ ಸಮಾಜಕ್ಕೆ ತರಬೇತಿ ನೀಡುವ ಹೊಣೆಗಾರಿಕೆಯಿಂದ ಸರಕಾರವನ್ನು ಮುಕ್ತಗೊಳಿಸಿತು. ಇದರ ಜೊತೆಗೆ ಮೇಲುಜಾತಿಗಳಿಗೆ ಕಲಿಸಿದ ತರಬೇತಿಯು ದೇಶದ ಆಡಳಿತಕ್ಕೆ ಸಾಕಷ್ಟು ಕಾರ್ಮಿಕಬಲವನ್ನು ಒದಗಿಸಿತು. ಹೀಗಿರುವಾಗ ಬ್ರಾಹ್ಮಣೇತರರ ಜನಸಮೂಹದ ಶಿಕ್ಷಣದ ಬಗ್ಗೆ ರಾಜಕೀಯ ಆಡಳಿತಗಾರರ ಉದಾಸೀನತೆಯಲ್ಲಿ ಹೊಸದೇನು ಇರಲಿಲ್ಲ. ಮತ್ತೊಂದು ರೀತಿಯಲ್ಲಿ ಮೇಲ್‌ಜಾತಿಗಳು ತಮ್ಮ ತಮ್ಮ

ಮಟ್ಟಗಳಲ್ಲಿ ಶಿಕ್ಷಣದ ನದಿ (ಕಲಿಕೆ) ಹರಿಯುವುದಕ್ಕೆ ಬಿಡದೆ ಅಲ್ಲಲ್ಲಿ ತಡೆಗಳನ್ನು ಕಟ್ಟಿದರು, ಸಹಜವಾಗಿ ನೀರು ಸೋರಿ ಕೆಳಕ್ಕೆ ಬರಲಿಲ್ಲ. ಕೆಳಜಾತಿಗಳು ಬಾಯಾರಿಕೆಯಿಂದ ಹಾಗೆಯೇ ಉಳಿದುಬಿಟ್ಟರು.

### ಕಡ್ಡಾಯ ಶಿಕ್ಷಣಕ್ಕೆ ಫುಲೆ-ಶಾಹುರವರ ಒತ್ತಾಯ

ಈ ಹಿನ್ನೆಲೆಯಲ್ಲಿ ಈ ಅನ್ಯಾಯದ ವಿರುದ್ಧ ಸಿಡಿದೆದ್ದ ಹಿಂದುಳಿದ ವರ್ಗಗಳ ಮೊದಲ ರಕ್ಷಕರು ಮಹಾತ್ಮ ಜೋತಿರಾವ್ ಫುಲೆಯವರು. ಶಿಕ್ಷಣವಿಲ್ಲದೆ ಕೆಳವರ್ಗಗಳನ್ನು ಅವರ ಮಾನಸಿಕ ಮತ್ತು ಭೌತಿಕ ಗುಲಾಮತ್ವಗಳಿಂದ ಮುಕ್ತಗೊಳಿಸಲು ಸಾಧ್ಯವಿಲ್ಲವೆಂಬ ಮನವರಿಕೆಯಿಂದ ಅವರು ಸಮಾಜದ ಶೂದ್ರ ಮತ್ತು ಅತಿಶೂದ್ರರ ಮಕ್ಕಳಿಗೆ ಶಾಲೆಗಳನ್ನು ಸ್ಥಾಪಿಸುವುದು ಮಾತ್ರವಲ್ಲದೆ ೧೮೮೦ರಿಂದ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಬೇಕೆಂದು ಸರಕಾರಕ್ಕೆ ನಿರಂತರವಾಗಿ ಮನವಿಗಳನ್ನು ಸಲ್ಲಿಸುತ್ತಿದ್ದರು. ನಂತರ ಅವರು ಹಂಟರ್ ಆಯೋಗಕ್ಕೆ ಮನವಿ ಪತ್ರಗಳನ್ನು ಸಲ್ಲಿಸಿ, ಅದರಲ್ಲಿ ೧೨ ವರ್ಷದವರೆಗೆ ಎಲ್ಲಾ ಮಕ್ಕಳಿಗೆ ಕಡ್ಡಾಯ ಮತ್ತು ಉಚಿತ ಶಿಕ್ಷಣವನ್ನು ನೀಡಬೇಕೆಂದು ಒತ್ತಾಯಪಡಿಸಿದ್ದರು.[3] ೧೯೧೦ರಲ್ಲಿ ಗೋಪಾಲಕೃಷ್ಣ ಗೋಖಲೆಯವರು ಕೇಂದ್ರೀಯ ಶಾಸನ ಪರಿಷತ್ತಿನಲ್ಲಿ ಶಿಕ್ಷಣದ ಬಗ್ಗೆ ಮಂಡಿಸಿದ ಠರಾವನ್ನು ಬಿಟ್ಟರೆ ಫುಲೆಯವರ ನಂತರ ಯಾರು ಇಂಥ ಬೇಡಿಕೆಯನ್ನು ಮಾಡಲಿಲ್ಲವೆಂದು ತೋರುತ್ತದೆ.[4] ನಿಜವಾಗಿ, ಈ ಅವಧಿಯ ಸುಧಾರಕರ ಪ್ರಯತ್ನಗಳು ಮುಖ್ಯವಾಗಿ ಮೇಲುಜಾತಿಗಳ ಸಮಸ್ಯೆಗಳಾದ ಮಹಿಳಾ ಶಿಕ್ಷಣ, ವಿಧವಾ ಪುನರ್‌ವಿವಾಹ, ಜರತ-ಕುಮಾರಿ ವಿವಾಹ (ಮುದಿ ವರ ಮತ್ತು ಬಾಲೆಯ ವಿವಾಹ) ಮಹಿಳಾ ವಿವಾಹ ವಯಸ್ಸಿನ ಒಪ್ಪಿಗೆ ಮೊದಲಾದವುಗಳಿಗೆ ಸಂಬಂಧಿಸಿದವು. ಮತ್ತೊಂದು ಕಡೆಗೆ ಸ್ವಾತಂತ್ರ್ಯ ಆಂದೋಲನದ ಮಹಾನಾಯಕರ ಪ್ರಯತ್ನಗಳು ಉಚ್ಚ ಶಿಕ್ಷಣ ಮತ್ತು ಐ.ಸಿ.ಎಸ್. ಪರೀಕ್ಷೆಗೆ ಸೀಮಿತಗೊಂಡಿದ್ದವು. ಹಿಂದುಳಿದ ವರ್ಗಗಳು ಪ್ರಾಥಮಿಕ ಶಿಕ್ಷಣ ಪಡೆಯಬೇಕೆಂಬ ಬಗ್ಗೆ ಈ ವ್ಯಕ್ತಿಗಳಿಗೆ ಕಾಳಜಿಯಿರಲಿಲ್ಲ. ಏಕೆಂದರೆ ಈ ಜನರು ಈ ಸಮುದಾಯಕ್ಕೆ ಸೇರಿದವರಲ್ಲ. ಫುಲೆಯವರು ಕೆಳವರ್ಗಗಳಿಗೆ ಸೇರಿದವರಾದ್ದರಿಂದ ಈ ವರ್ಗದ ವಿಮೋಚನೆಗೆ ಹಂಬಲಿಸುವುದು ಸಹಜವಾಗಿತ್ತು. ಆದ್ದರಿಂದಲೇ ಅವರು ಕಡ್ಡಾಯ ಮತ್ತು ಉಚಿತ ಶಿಕ್ಷಣವನ್ನು ಒತ್ತಾಯಪಡಿಸಿದ್ದು.

ಶಾಹುರವರು ಫುಲೆಯವರ ಆದರ್ಶಗಳನ್ನು ಮುಂದಕ್ಕೆ ಕೊಂಡೊಯ್ದರು. ಅವರು ಕಲಿಕೆಯು (ಶಿಕ್ಷಣ) ಎಲ್ಲಾ ಸಾಮಾಜಿಕ ಸುಧಾರಣೆ ಮತ್ತು ಪ್ರಗತಿಗಳ ತಾಯಿ ಎಂದು ಪರಿಗಣಿಸಿದರು. ಹಿಂದುಳಿದ ವರ್ಗಗಳ ಮಾನಸಿಕ ಗುಲಾಮತ್ವವನ್ನು ಮುಕ್ತಗೊಳಿಸಲು ಅವರು ಅವರಿಗೆ ಕನಿಷ್ಠ ಪ್ರಾಥಮಿಕ ಶಿಕ್ಷಣ ನೀಡಬೇಕೆಂದು ಪ್ರತಿಪಾದಿಸಿದರು. ಅವರು ನಾಸಿಕದಲ್ಲಿ ಮಾಡಿದ ಭಾಷಣದಲ್ಲಿ ಹೇಳುತ್ತಾರೆ: "ಬ್ರಾಹ್ಮಣೇತರರ ಬುದ್ಧಿಮತ್ತೆ ಮತ್ತು ಜ್ಞಾನದ ಮೇಲೆ ಹೇರಿರುವ ಭಾರಿ ಮತ್ತು ದಬ್ಬಾಳಿಕೆಯ ನೊಗವನ್ನು ಕಿತ್ತೆಸೆಯಲು ಬ್ರಾಹ್ಮಣೇತರರು ತಮ್ಮ ಶಕ್ತಿಯನ್ನು ಕ್ರೋಢೀಕರಿಸಲು ಅವರಿಗೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡುವುದು ಅತ್ಯಾವಶ್ಯಕ".[5]

೧೯೧೭ರಲ್ಲಿ ಖಾಮ್‌ಗಾವ್‌ನಲ್ಲಿ ನಡೆದ ಅಖಿಲ ಭಾರತ ಮರಾಠ ಶಿಕ್ಷಣ ಸಮ್ಮೇಳನದಲ್ಲಿ ನೀಡಿದ ಭಾಷಣದಲ್ಲಿ ಆಧುನಿಕ ಕಾಲದಲ್ಲಿ ಶಿಕ್ಷಣದ ಮಹತ್ವವನ್ನು ತನ್ನ ಜಾತಿಯ ಸಹೋದರರಿಗೆ ವಿವರಿಸುತ್ತಾ ಹೇಳುತ್ತಾರೆ: "...... ಹೇಗೆ ತಿನ್ನಬೇಕು, ಹೇಗೆ ಉಸಿರಾಡಬೇಕೆಂಬುದನ್ನು ಕಲಿಸುವ ಅವಶ್ಯಕತೆಯ ಬಗ್ಗೆ

ಹೇಳುವುದು ವಿಚಿತ್ರವೆನಿಸುತ್ತದೆ. ಅದನ್ನು ಮಾಡಲೇಬೇಕಾಗಿದೆ. ಇತ್ತೀಚಿನ ದಿನಗಳಲ್ಲಿ ಕೃಷಿಯು ಬಹಳ ಕ್ರಮಬದ್ಧವಾಗಿಬಿಟ್ಟಿದೆ. ಯಾರಾದರು ಅದರಲ್ಲಿ ಸಫಲರಾಗಬೇಕಾದರೆ, ಅವರು ಅದರ ಬಗ್ಗೆ ಬರೆದಿರುವ ನಾನಾ ಪುಸ್ತಕಗಳನ್ನು ಓದಬೇಕು ಮತ್ತು ಅರ್ಥಮಾಡಿಕೊಳ್ಳಬೇಕು. ಯುದ್ಧದ ಆಧುನಿಕ ವಿಧಾನಗಳನ್ನು ಅಗತ್ಯವಾಗಿ ಕಲಿಯಬೇಕು. ಪ್ರತಿಯೊಬ್ಬ ಯೋಧನು ಯುದ್ಧಹೋರಾಟದಲ್ಲಿ ವಿಜ್ಞಾನದ ಪುಸ್ತಕಗಳನ್ನು ಓದಲು ಸಮರ್ಥನಾಗಿರಬೇಕು. ಇಲ್ಲಿ ಸಹ ನಾವು ಕಲಿಕೆಯ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಮರಾಠರಿಗೆ ಶಿಕ್ಷಣ ಕಲಿಸಿದ್ದರೆ ಅವರು ಖಂಡಿತವಾಗಿ ಉತ್ತಮ ಸಿಪಾಯಿಗಳಾಗುತ್ತಾರೆ. ಯುದ್ಧದ ಇಂದಿನ ದಿನಗಳಲ್ಲಿ ಫಿರಂಗಿ ವಿಭಾಗದಲ್ಲಿರುವ ಜನರು ಗಣಿತಶಾಸ್ತ್ರವನ್ನು ಚೆನ್ನಾಗಿ ತಿಳಿದಿರಬೇಕು. ಆದ್ದರಿಂದ ಅದೇ ವಿಷಯವನ್ನು ಮತ್ತೆ ಮತ್ತೆ ಹೇಳಬೇಕಾಗುತ್ತದೆ ಮತ್ತು ಪರಿಸ್ಥಿತಿಯ ಬಗ್ಗೆ ಯೋಚಿಸಿದ ನಂತರ ಪ್ರತಿಯೊಬ್ಬ ಮರಾಠ ಸುಶಿಕ್ಷಿತನಾಗಬೇಕೆಂಬ ತೀರ್ಮಾನಕ್ಕೆ ಬರಬಹುದು".[6]

ಸಮಾಜ ಸಮೃದ್ಧಿ ಮತ್ತು ಬಲಿಷ್ಠವಾಗಿರಬೇಕಾದರೆ ಒಳ್ಳೆಯ ರೈತರು, ಒಳ್ಳೆಯ ಅಧ್ಯಾಪಕರು, ಒಳ್ಳೆಯ ವ್ಯಾಪಾರಗಾರರು, ಒಳ್ಳೆಯ ಸಾಹಸೋದ್ಯಮಿಗಳು ಮತ್ತು ಒಳ್ಳೆಯ ಸೈನಿಕರು, ಬ್ರಾಹ್ಮಣೇತರರ ಜನರಿಂದ ಬರಬೇಕು. ಅದು ಆಗಬೇಕಾಗಿದ್ದರೆ ಶಿಕ್ಷಣದ ಗಂಗೆಯ ಹೊನಲುಗಳನ್ನು ಹಳ್ಳಿಗಳ ಬಡವರ ಬಾಗಿಲುಗಳ ಬಳಿಗೆ ಹರಿಸಬೇಕಾಗಿದೆ ಎಂದು ಶಾಹುರವರು ಭಾವಿಸಿದ್ದರು. ಅವರು ಉಚ್ಚ ಶಿಕ್ಷಣವನ್ನು ವಿರೋಧಿಸಲಿಲ್ಲ. ಆದರೆ ಹಿಂದುಳಿದ ವರ್ಗಗಳ ಬಹುಸಂಖ್ಯಾತರು ಪ್ರಾಥಮಿಕ ಶಿಕ್ಷಣದ ಒಂದು ಹೊತ್ತಿನ ಊಟದಿಂದ ವಂಚಿತರಾಗಿರುವಾಗ ಕೇವಲ ಕೆಲವು ವ್ಯಕ್ತಿಗಳ ಉಚ್ಚಶಿಕ್ಷಣದ ವೈವಿಧ್ಯಮಯವಾದ ಹಲವು ತಿನಿಸುಗಳನ್ನು ನೀಡಲು ಅವರು ಆಸಕ್ತರಾಗಿರಲಿಲ್ಲ. ಸಾಮಾನ್ಯ ಜನರು ಕನಿಷ್ಠ ಪ್ರಾಥಮಿಕ ಶಿಕ್ಷಣ ಪಡೆದರೆ ಉಚ್ಚಶಿಕ್ಷಣವನ್ನು ನೀಡಲು ಸಮರ್ಥರಾದ ಮೇಲುಜಾತಿಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆಯಿಲ್ಲ. ಶಾಹುರವರು ಹೇಳುತ್ತಾರೆ: "ತೀವ್ರವಾದಿ ದಿನಪತ್ರಿಕೆಗಳಾದ ಕೇಸರಿ ಮೊದಲಾದ ಪತ್ರಿಕೆಗಳ ಪಿತೂರಿ ಮತ್ತು ಉದ್ದೇಶಗಳು ನಮಗೆ ಚೆನ್ನಾಗಿ ಗೊತ್ತಿವೆ. ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯ ಮಾಡುವುದಕ್ಕೆ ಮೊದಲು ಈಗ ಉಪಯೋಗಿಸುತ್ತಿರುವ ಶಾಲಾ ಕಟ್ಟಡಗಳನ್ನು ವಿಸ್ತರಿಸಬೇಕಾಗಿದೆ ಮತ್ತು ಅವುಗಳಲ್ಲಿ ಗಾಳಿ–ಬೆಳಕು ಬರುವಂತೆ ಅವುಗಳನ್ನು ಒಪ್ಪಮಾಡಬೇಕು. ಮತ್ತು ಇದಕ್ಕೋಸ್ಕರ ಹಣ ಖರ್ಚುಮಾಡುವುದು ಅತಿಮುಖ್ಯವೆಂದು ಅವು ಹೇಳುತ್ತಿವೆ. ಇಂಥ ಮನೋಭಾವವು ಸಾಮಾನ್ಯ ಬುದ್ಧಿವಂತ ಮನುಷ್ಯನಿಗೆ ಕೋಪವುಂಟುಮಾಡುತ್ತದೆ. 'ಎಲ್ಲರಿಗೂ ಅನ್ನ (ಬ್ರೆಡ್) ನೀಡುವವರೆಗೆ ಕೆಲವರಿಗೆ ಕೇಕ್ ಇಲ್ಲ' ಎಂಬುದು ಇಂಗ್ಲೆಂಡಿನ ಕಾರ್ಮಿಕ ಪಕ್ಷಕ ನೀತಿ–ಧೋರಣೆ. ಆದರೆ ಇಲ್ಲಿ ಶೇಕಡ ೯೦ರಷ್ಟು ಜನರು ಹಸಿವಿನಿಂದ ನರಳುತ್ತಿರುವಾಗ ಶೇಕಡ ೧೦ರಷ್ಟು ಮಂದಿ ಪೂರಣಪೋಲಿ*(ಹೋಳಿಗೆ) ತಿನ್ನುತ್ತಾರೆ. ಈ ಜನರು ಎಷ್ಟರಮಟ್ಟಿಗೆ ರಾಯತರನ್ನು (ರೈತರು) ನೋಡಿಕೊಳ್ಳುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ. ಅವರು (ಬ್ರಾಹ್ಮಣರು) ಹಸಿವಿನಿಂದ ನರಳುತ್ತಿರುವ ಜನರಿಗೆ ಒಂದು ಹೊತ್ತಿನ ಊಟದ ವ್ಯವಸ್ಥೆ ಮಾಡಲು ಚಿಂತೆಪಡುವುದಿಲ್ಲ. ಆದರೆ ಅವರ ರುಚಿಯಾದ ಹೋಳಿಗೆಯ ಮೇಲೆ ತುಪ್ಪ ಸುರಿಯುವುದಕ್ಕೆ ಹಾತೊರೆಯುತ್ತಾರೆ.[7]

---

* ಗೋಧಿಹಿಟ್ಟಿನಿಂದ ಮಾಡಿದ ಕಣಕದೊಳಕ್ಕೆ ಬೆಲ್ಲ ಬೆರೆತ ಬೇಳೆಯ ಹೂರಣವಿಟ್ಟು ಮಾಡಿದ ತಿನಿಸು.

## ಉಚಿತ ಮತ್ತು ಕಡ್ಡಾಯ ಶಿಕ್ಷಣದ ಕಾಯ್ದೆ

ಕೊಲ್ಹಾಪುರ ಸಂಸ್ಥಾನದ ಆಡಳಿತ ವರದಿಯು ಸಂಸ್ಥಾನದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಬೇಕೆಂಬ ವಿಚಾರ ಶಾಹುರವರಿಗೆ ೧೯೧೨-೧೩ರಲ್ಲಿ ಹೊಳೆಯಿತೆಂದು ತಿಳಿಸುತ್ತದೆ. ವರದಿ ಹೇಳುತ್ತದೆ: "ಶಿಕ್ಷಣದ ಇಲಾಖೆ ಹಿಂದಿನಂತೆಯೇ ಛತ್ರಪತಿ ಮಹಾರಾಜರ ವಿಶೇಷ ಗಮನವನ್ನು ಸೆಳೆಯಿತು". ಇತರೆ ಇಲಾಖೆಗಳಲ್ಲಿ ರಾಜರ ಈ ಮಟ್ಟದ ಔದಾರ್ಯವನ್ನು ಯಾರು ನೋಡಲಾರರು. ಹಿಂದುಳಿದ ವರ್ಗಗಳಲ್ಲಿ ಶಿಕ್ಷಣ ಪ್ರಸಾರಕ್ಕೆ ಮಾಡಿದ ಪ್ರಯತ್ನಗಳಿಂದ ಸಾಧಿಸಿದ ಪರಿಣಾಮಗಳ ಬಗ್ಗೆ ಮಹಾರಾಜರಿಗೆ ತೃಪ್ತಿ ತರಲಿಲ್ಲ. ಆದ್ದರಿಂದ ಇಂದಿನ ಪ್ರಗತಿಯ ವೇಗಕ್ಕೆ (ದರಕ್ಕೆ) ಹೆಚ್ಚು ಹುರುಪು ತುಂಬಲು ಅವರು ಶಿಕ್ಷಣವನ್ನು ಸಾರ್ವತ್ರೀಕರಣ ಮಾಡುವ ಮೂಲಕ ಕಲಿಕೆಯ ಬುನಾದಿಗಳನ್ನು ವಿಸ್ತೃತಗೊಳಿಸುವುದು ಅಗತ್ಯವೆಂದು ಯೋಚಿಸುತ್ತಿದ್ದರು".[8] ಸಾರ್ವತ್ರಿಕ ಶಿಕ್ಷಣದ ತತ್ವ ಜಾರಿಗೊಳಿಸುವುದಕ್ಕೆ ಒಂದು ಹೊಸ ಪ್ರಯೋಗವನ್ನು ಶಾಹು ನಡೆಸಿದರು. ಅವರು ಪ್ರತಿಯೊಂದು ಹಳ್ಳಿಯಲ್ಲಿ ಒಂದು ಶಾಲೆಯನ್ನು ಸ್ಥಾಪಿಸಲು ಮತ್ತು ಸಂಬಳ ಪಡೆಯುವ ಅಧ್ಯಾಪಕನ ಬದಲಿಗೆ ಆ ಹಳ್ಳಿಯ ಬಹುಸಂಖ್ಯಾತ ಸಮುದಾಯದಿಂದ ಒಬ್ಬ ವತನಿ ಅಧ್ಯಾಪಕ* ನೇಮಕಮಾಡಲು ಯೋಜಿಸಿದರು. ಈ ಯೋಜನೆಯನ್ನು ಜಾರಿಗೊಳಿಸಲು ಶಾಹುರವರ ಸಹೋದರ ಬಾಪುಸಾಹೇಬರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಈ ಪ್ರಯೋಗವು ಯಶಸ್ವಿಯಾಗಲಿಲ್ಲ.[9]

೧೯೧೭ರಲ್ಲಿ ಶಾಹುರವರು ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಒಂದು ನಿರ್ಧಾರ ಕ್ರಮವನ್ನು ಕೈಗೊಂಡರು. ಅದೇ ವರ್ಷ ಜುಲೈ ೨೪ರಂದು ಪ್ರಕಟಿಸಿದ ಘೋಷಣೆಯು ಹೇಳುತ್ತದೆ: "......ಗಣೇಶ ಹಬ್ಬ ಪ್ರಾರಂಭವಾದ ದಿನದಿಂದ (೩೦ ಸೆಪ್ಟೆಂಬರ್) ಪ್ರಾಥಮಿಕ ಶಿಕ್ಷಣವನ್ನು ಉಚಿತಗೊಳಿಸಲಾಗಿದೆ ಮತ್ತು ಕರವೀರ ಪ್ರದೇಶದಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯಗೊಳಿಸಲಾಗಿದೆ. ಈಗ ಪ್ರಾಥಮಿಕ ಶಾಲೆಗಳಲ್ಲಿ ವಿಧಿಸುತ್ತಿರುವ ಫೀಜನ್ನು ರದ್ದುಗೊಳಿಸಲಾಗಿದೆ".[10]

ಪ್ರಾಥಮಿಕ ಶಿಕ್ಷಣದ ಮಾದರಿ ಯೋಜನೆಯನ್ನು ರೂಪಿಸಲು ಕರ್‌ಮರ್‌ಕರ್, ಮರಾಠೆ ಮತ್ತು ಪ್ರೊ. ಪಂಡಿತರಾವ್ ಎಂಬ ಮೂವರು ಬ್ರಾಹ್ಮಣರ ಸಮಿತಿಯನ್ನು ನೇಮಿಸಲಾಯಿತು. ಶಿಕ್ಷಣ ನಿರೀಕ್ಷಕರು ಡೊಂಗ್ರೆ ಅವರಿಗೆ ಪಠ್ಯಕ್ರಮ ರಚಿಸುವ ಜವಾಬ್ದಾರಿಯನ್ನು ನೀಡಲಾಯಿತು. ಈ ಯೋಜನೆಗೆ ಒಂದು ಲಕ್ಷ ರೂ.ಗಳ ಆದಾಯ-ವೆಚ್ಚಗಳನ್ನು ಘೋಷಿಸಲಾಯಿತು. ದೇವಸ್ಥಾನ ನಿಧಿಯಿಂದ ೨೦ ಸಾವಿರ ರೂ.ಗಳನ್ನು ಒದಗಿಸಿದರೆ ಉಳಿದ ೮೦,೦೦೦ ರೂ.ಗಳನ್ನು ರಾಜ-ಖಜಾನೆ ನೀಡುತ್ತಿತ್ತು. ಖರ್ಚಾದ ಹಣದಲ್ಲಿ ಉಳಿದ ಹಣವನ್ನು ತರಬೇತಿ ಕಾಲೇಜು ನಿರ್ಮಾಣಕ್ಕೆ ಮತ್ತು ಶೈಕ್ಷಣಿಕ ಉಪಕರಣಗಳ ಖರೀದಿಗೆ ಬಳಸಬೇಕಾಗಿತ್ತು.[11]

ಅಲ್ಲಿಂದ ಮುಂದಕ್ಕೆ ಬೇಗನೆ ಪರಿಣತರ ಸಮಿತಿ ತಯಾರಿಸಿದ ನಿಬಂಧನೆಗಳ ಆಧಾರದ ಮೇರೆಗೆ ಕಡ್ಡಾಯ ಶಿಕ್ಷಣದ ಕಾಯ್ದೆ ಜಾರಿಗೆ ಬಂತು. ನಮ್ಮ ಇಡೀ ಜನಸಂಖ್ಯೆ ಓದುವ ಮತ್ತು ಬರೆಯುವ ಮತ್ತು

---

* ಒಬ್ಬ ಅಧ್ಯಾಪಕನು ಸಂಬಳಕ್ಕೆ ಬದಲಾಗಿ ವಂಶಪಾರಂಪರ್ಯದ ಎಸ್ಟೇಟು, ಭೂಮಿ, ಹಕ್ಕುಗಳು ಮೊದಲಾದವುಗಳನ್ನು ಪಡೆಯುವವನು.

ತನ್ನ ಸ್ಥಿತಿಗತಿಗಳನ್ನು ಮನವರಿಕೆ ಮಾಡಿಕೊಳ್ಳುವ ಮತ್ತು ಸುಧಾರಿಸಿಕೊಳ್ಳುವ ಉದ್ದೇಶವನ್ನು ಈ ಕಾನೂನು ಹೊಂದಿದೆ. ಪೋಷಕರು ತಮ್ಮ ಮಕ್ಕಳನ್ನು ಶಾಲೆಗೆ ಸೂಕ್ತ ವಯಸ್ಸಿನಲ್ಲಿ ಕಳುಹಿಸಿಕೊಡುವುದು ಕಡ್ಡಾಯ ಮಾಡಲಾಗಿದೆ. ಒಂದು ವೇಳೆ ಅವರು ತಮ್ಮ ಮಕ್ಕಳನ್ನು ಕಳುಹಿಸಿಕೊಡದಿದ್ದರೆ ತಿಂಗಳಿಗೆ ಒಬ್ಬ ಮಗುವಿಗೆ ೧ ರೂ.ನಂತೆ ಪ್ರತಿ ತಿಂಗಳು ದಂಡ ಕಟ್ಟಬೇಕು.[12]

**ಅನುಷ್ಠಾನ**

ಪ್ರತಿಯೊಂದು ಹಳ್ಳಿಯಲ್ಲಿ ೫೦೦ರಿಂದ ೧೦೦೦ ಜನಸಂಖ್ಯೆಗೆ ಒಂದು ಶಾಲೆಯನ್ನು ತೆರೆಯಲಾಯಿತು. ಒಂದು ಚಿಕ್ಕ ಹಳ್ಳಿಯಲ್ಲಿ ಕಟ್ಟಡ ಹೇಗೆ ಲಭ್ಯವಾಗುತ್ತದೆ? ಆದ್ದರಿಂದ ಹಳ್ಳಿ ಕಛೇರಿ, ದೇವಸ್ಥಾನಗಳು, ಧರ್ಮಶಾಲೆಗಳನ್ನು ಶಾಲಾ ಕಟ್ಟಡಗಳಿಗೆ ಉಪಯೋಗಿಸಲಾಯಿತು. ಅಂತಹ ಕಟ್ಟಡಗಳು ಸಿಗದ ಕಡೆಗಳಲ್ಲಿ ದೇವಸ್ಥಾನದ ನಿಧಿಯಿಂದ ದೇವತೆ ಕುಲಜಾ ಭವಾನಿಯ ದೇವಸ್ಥಾನದ ಕಟ್ಟಡ ಕಟ್ಟಿ ಅದರ ಒಂದು ಹಾಲಿನಲ್ಲಿ (ಹಾಲ್) ಶಾಲೆಯನ್ನು ಮತ್ತೊಂದು ಹಾಲಿನಲ್ಲಿ ಗ್ರಾಮಕಛೇರಿ ಪ್ರಾರಂಭಿಸುವಂತೆ ಆಜ್ಞೆ ಮಾಡಲಾಯಿತು.[13] ಕೆಲವು ಸ್ಥಳಗಳಲ್ಲಿ ಕಟ್ಟಡಗಳನ್ನು ಶಾಲೆಗೆ ವಿಶೇಷವಾಗಿ ಕಟ್ಟಲಾಯಿತು. ಒಂದು ವರ್ಷದಲ್ಲಿ ೯೬ ಹೊಸ ಶಾಲೆಗಳು ಸಂಸ್ಥಾನದ ಹಳ್ಳಿಗಳ ಬೇರೆ ಬೇರೆ ಕಡೆಗಳಲ್ಲಿ ಕಾರ್ಯಾರಂಭ ಮಾಡಲು ತೊಡಗಿದವು. ಈ ವಿಧದ ಮೊಟ್ಟಮೊದಲ ಪ್ರಾಥಮಿಕ ಶಾಲೆಯನ್ನು ಶಾಹು ಮಹಾರಾಜರು ಚಿಖ್ಲಿ ಎಂಬ ಕಡೆ ಉದ್ಘಾಟಿಸಿದರು. (ಮಾರ್ಚ್ ೪, ೧೯೧೮). ಶಾಹುರವರ ಜೀವನಚರಿತ್ರೆಕಾರ ಲಠ್ಠೆ ಅವರು ಮೊಟ್ಟಮೊದಲಿಗೆ ಸುಮಾರು ೭೫,೦೦೦ ಹಳ್ಳಿಗರಿಗೆ ಪ್ರಾಥಮಿಕ ಶಿಕ್ಷಣ ದೊರೆಯಿತು; ಅವರಲ್ಲಿ ೪೫,೦೦೦ ಮಕ್ಕಳು ಓದಲು ತೊಡಗಿದರು.[14]

ಒಂದು ಚಿಕ್ಕ ಸಂಸ್ಥಾನ ಕೊಲ್ಹಾಪುರ ಒಂದು ವರ್ಷಕ್ಕೆ ಒಂದು ಲಕ್ಷ ರೂ.ಗಳನ್ನು ಪ್ರತಿ ವರ್ಷ ಖರ್ಚು ಮಡುವುದು ಒಂದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಆ ಕಾಲದಲ್ಲಿ ಒಬ್ಬ ಅಧ್ಯಾಪಕನಿಗೆ ಪ್ರತಿ ತಿಂಗಳ ಸಂಬಳ ೧೨ ರೂ. ಆಗಿತ್ತು. ಒಟ್ಟು ವೆಚ್ಚ ಅಗಾಧವಾಗಿತ್ತು.[15]

ಮಹಾರಾಷ್ಟ್ರ, ಕರ್ನಾಟಕ, ಗುಜರಾತು ಮತ್ತು ಸಿಂಧ್ ಪ್ರದೇಶಗಳನ್ನು ಒಳಗೊಂಡ ಬಾಂಬೆ ಪ್ರೆಸಿಡೆನ್ಸಿಯ ಶಿಕ್ಷಣ ಬಡ್ಜೆಟ್ಟು ಒಂದು ಲಕ್ಷಕ್ಕಿಂತ ಕಡಿಮೆಯಿತ್ತು. ಅದು ೧೯೩೦ರಲ್ಲಿ ಒಂದು ಲಕ್ಷಕ್ಕೆ ಏರಿಸಿತು.[16] ಈ ಹಿನ್ನೆಲೆಯಲ್ಲಿ ಶಾಹುರವರು ತನ್ನ ಸಂಸ್ಥಾನದ ಆದಾಯದಿಂದ ಪ್ರಾಥಮಿಕ ಶಿಕ್ಷಣಕ್ಕೆ ಒಂದು ಲಕ್ಷ ಖರ್ಚು ಮಾಡುವುದು ಭಾರತದ ಶೈಕ್ಷಣಿಕ ಇತಿಹಾಸದಲ್ಲಿ ಅದ್ಭುತವಾದ ಸಂಗತಿಯಾಗಿದೆ. ಸಂಸ್ಥಾನ ಪ್ರತಿಯೊಂದು ಕುಟುಂಬಕ್ಕೆ ಒಂದು ರೂ ತೆರಿಗೆ ವಿಧಿಸಿ, ಪ್ರಾಥಮಿಕ ಶಿಕ್ಷಣದ ಆಯ–ವ್ಯಯವನ್ನು ಏರಿಸಿದರು.[17] ಒಂದು ರೂಪಾಯಿಯಿಂದ ಆ ಕುಟುಂಬದ ಎಲ್ಲಾ ಮಕ್ಕಳಿಗೂ ಉಚಿತ ಪ್ರಾಥಮಿಕ ಶಿಕ್ಷಣ ನೀಡಿದರು. ಸಮಾಜದಲ್ಲಿರುವ ಭಾರೀ ಕುಳಗಳಾದ ಇನಾಮದಾರರು, ಸರಂಜಾಮದಾರರನ್ನು ಈ ಸಾಮಾಜಿಕ ಕಾರ್ಯದಲ್ಲಿ ಸೇರಿಸಿದರು. ಅವರ ಆದಾಯದ ಮೇಲೆ ಶೇಕಡ ೧೦ರಿಂದ ೨೦ರಷ್ಟು ಶಿಕ್ಷಣದ ಶುಲ್ಕ (ಸೆಸ್) ವನ್ನು ವಿಧಿಸಲಾಯಿತು. ಈ ಬಗ್ಗೆ ಹೊರಡಿಸಿದ ಆಜ್ಞೆಯಲ್ಲಿ ಶಾಹು ಹೇಳುತ್ತಾರೆ: "ತಮ್ಮ ಪ್ರದೇಶದ ರಾಯತರ ಶಿಕ್ಷಣದ ಆರ್ಥಿಕ ಭಾರವನ್ನು ಈ ಜನರು ಸಂತೋಷವಾಗಿ ಹಂಚಿಕೊಳ್ಳುವರೆಂದು ಶಾಹುರವರು ಹೇಳುತ್ತಾರೆ.[18] ಅದಾದ ನಂತರ, ಸಂಸ್ಥಾನದಲ್ಲಿ ಲೇವಾದೇವಿದಾರರ, ವಕೀಲರ, ವೈದ್ಯರ ಮತ್ತು ಕೊಲ್ಹಾಪುರ ದರ್ಬಾರಿನ ಉನ್ನತ ದರ್ಜೆಯ ಅಧಿಕಾರಿಗಳ ಮೇಲೆ ಶಿಕ್ಷಣದ ಸೆಸ್ಸನ್ನು ಒಂದು ವಿಶೇಷ ಕಾಯ್ದೆಯ

(ಆಗಸ್ಟ್ ೧೬, ೧೯೧೮) ಮೂಲಕ ಹೇರಲಾಯಿತು.[19] ಹೀಗೆ ಪ್ರಾಥಮಿಕ ಶಿಕ್ಷಣದ ಯೋಜನೆಯನ್ನು ಆರ್ಥಿಕವಾಗಿ ಸಬಲಗೊಳಿಸಲಾಯಿತು. ರಾಜನು ತನ್ನ ಪ್ರಜೆಗಳ ಪಾಲನೆಯನ್ನು ನಿಜವಾಗಿ ಬಯಸಿದರೆ ಅವರಿಗೆ ರಾಜಕೀಯ ಇಚ್ಛಾಶಕ್ತಿಯಿದ್ದರೆ ಅವರು ಖಂಡಿತವಾಗಿ ವಿಫಲರಾಗುವುದಿಲ್ಲ. ಶಾಹು ಇದನ್ನು ತೋರಿಸಿಕೊಟ್ಟಿದ್ದಾರೆ.

ಪ್ರಾಯೋಗಿಕ ದೃಷ್ಟಿಯಿಂದ ಉಚಿತ ಮತ್ತು ಕಡ್ಡಾಯದ ಪ್ರಾಥಮಿಕ ಶಿಕ್ಷಣವು ಅಸಾಧ್ಯವೆಂದು ಶಾಸನ ಪರಿಷತ್ತಿನಲ್ಲಿ ಬಾಂಬೆ ಪ್ರೆಸಿಡೆನ್ಸಿಯ ಶಿಕ್ಷಣ ಸಚಿವ ಪ್ರಿನ್ಸ್ ಆರ್. ಪಿ. ಪರಂಜಪೆ ಅವರು ೧೯೨೩ರ ಸಮಯದಲ್ಲಿ ಹೇಳಿದ್ದನ್ನು ಗಮನಿಸಬೇಕಾಗಿದೆ.[20]

ಉಚ್ಚವರ್ಗಗಳ ಬುದ್ಧಿಜೀವಿಗಳು ಉಚಿತ ಪ್ರಾಥಮಿಕ ಶಿಕ್ಷಣದ ಈ ಯೋಜನೆಯನ್ನು ಹೆಚ್ಚಾಗಿ ಸ್ವಾಗತಿಸಲಿಲ್ಲ. ಪ್ರಾರಂಭದ ಹಂತದಲ್ಲಿಯೇ ನಿಯತಕಾಲಿಕೆಗಳಾದ 'ಸರ್ವೆಂಟಸ್ ಆಫ್ ಇಂಡಿಯಾ' ನಿರಾಶೆಯ ದೃಷ್ಟಿಕೋನವನ್ನು ತಳೆಯಿತು: "ದರ್ಬಾರು ನಿರೂಪಿಸಿದ ಪ್ರಾಥಮಿಕ ಶಿಕ್ಷಣದ ಯೋಜನೆಯು ಪರಿಕಲ್ಪನೆಯಲ್ಲಿ ದೋಷಪೂರಿತವಾಗಿದೆ ಮತ್ತು ಅದನ್ನು ಸಾಕಾರಗೊಳಿಸಬೇಕಾದರೆ ಹಲವಾರು ವರ್ಷಗಳು ಹಿಡಿಯಬಹುದು".[21] ಕಡ್ಡಾಯ ಪ್ರಾಥಮಿಕ ಶಿಕ್ಷಣಕ್ಕೆ ಖರ್ಚುಮಾಡುವ ಬದಲಿಗೆ ಹಾಲಿಯಿರುವ ಶಾಲೆಯ ಕಟ್ಟಡಗಳನ್ನು ದುರಸ್ತಿ (ಸುಧಾರಿಸುವುದಕ್ಕೆ) ಮಾಡುವುದಕ್ಕೆ ಬ್ರಿಟಿಷ್ ಸರಕಾರಕ್ಕೆ ಕೇಸರಿ ಪತ್ರಿಕೆಯ ಸಂಪಾದಕರು ಸಲಹೆ ನೀಡಿದ್ದನ್ನು ನಾವು ಈಗಾಗಲೆ ನೋಡಿದ್ದೇವೆ.

ಈ ಹಿನ್ನೆಲೆಯಲ್ಲಿ ಶಾಹುರವರು ತಮ್ಮ ಸಂಸ್ಥಾನದಲ್ಲಿ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಬಗ್ಗೆ ವಿಶೇಷ ಸ್ವತಂತ್ರ ಇಲಾಖೆಯನ್ನು ಸ್ಥಾಪಿಸಿದರು. ನಿರ್ದೇಶಕರು ಮತ್ತು ಶಾಲಾ ನಿರೀಕ್ಷಕರೆಂಬ ಇಬ್ಬರು ಹಿರಿಯ ಅಧಿಕಾರಿಗಳಿಗೆ ಇದರ ಅಧಿಕಾರ (ಹೊಣೆ) ವನ್ನು ನೀಡಿದರು. ಇದರ ಜೊತೆಗೆ, ಈ ಇಲಾಖೆ ತನ್ನ ನಿಗರಾಣಿಯಲ್ಲಿಯೆ ಇರುತ್ತದೆಯೆಂದು ಶಾಹು ಘೋಷಿಸಿದರು.[22] ಸಂಸ್ಥಾನದಲ್ಲಿರುವ ಮಾಮಲೆದಾರ್–ಮಹಲ್‌ಕಾರಿಯಿಂದ ಹಳ್ಳಿಯ ಪಾಟೀಲ್‌ವರೆಗಿನ ಎಲ್ಲಾ ಅಧಿಕಾರಿ ವರ್ಗವನ್ನು ಪ್ರಾಥಮಿಕ ಶಿಕ್ಷಣದ ಆಂದೋಲನದಲ್ಲಿ ಸೇರ್ಪಡೆ ಮಾಡಿದ್ದರು. ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಪ್ರೋತ್ಸಾಹಿಸುವ, ಆಜ್ಞೆಯನ್ನು ಪರಿಪಾಲಿಸದವರಿಗೆ ದಂಡ ವಿಧಿಸುವ, ಪ್ರತಿ ತಿಂಗಳೂ ಶಾಲೆಗಳನ್ನು ತನಿಖೆಮಾಡುವುದು, ವರದಿಗಳ ತಯಾರಿ ಮೊದಲಾದವುಗಳನ್ನು ಮಾಮಲೆದಾರ–ಮಹಲ್‌ಕರಿಯವರಿಗೆ ವಹಿಸಲಾಗಿತ್ತು. ಪ್ರತಿದಿನ ಶಾಲೆಗೆ ತನಿಖೆಗಾಗಿ ಹಳ್ಳಿಪಾಟೀಲ ಹೋಗಬೇಕು ಮತ್ತು ತನ್ನ ಸಂದರ್ಶನದ ನೋಟ್ ಪುಸ್ತಕದಲ್ಲಿ ಹಾಜರಾತಿಯನ್ನು ಗುರುತುಮಾಡಿಕೊಳ್ಳಬೇಕು ಮತ್ತು ಅದಕ್ಕೆ ತನ್ನ ಸಹಿಹಾಕಬೇಕು.[23]

ಅಂಥ ಕಡ್ಡಾಯಗಳನ್ನು ಮಾಡುವ ಮೂಲಕ ಪ್ರಾಥಮಿಕ ಶಾಲೆಗಳ ಯೋಜನೆಯನ್ನು ಕೇವಲ ಕಾಗದದ ಮೇಲೆ ಉಳಿಯದೆ ಅವುಗಳನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಜಾರಿಯಾಗಬೇಕೆಂದು ಶಾಹು ಉದ್ದೇಶಿಸಿದ್ದರು. ಈ ಶಾಲೆಗಳಿಗೆ ನೇಮಕಗೊಂಡ ಶಿಕ್ಷಕರು ಸ್ವಲ್ಪ ಇಂಗ್ಲೀಷನ್ನು ತಿಳಿದಿರಬೇಕೆಂದು ನಿರೀಕ್ಷಿಸಲಾಗಿತ್ತು. ಅವರು ಕೆಲಸಕ್ಕೆ ನೇಮಕಗೊಳ್ಳುವ ಮೊದಲು ಅವರು ಪರೀಕ್ಷೆಯಲ್ಲಿ ಪಾಸಾಗಬೇಕಾಗಿತ್ತು.[24]

ಪ್ರಾಥಮಿಕ ಶಿಕ್ಷಣದ ಸಂದರ್ಭದಲ್ಲಿ ಶಾಹುರವರ ನಿರ್ಧಾರಗಳು ಸಾಮಾಜಿಕವಾಗಿ ಮಹತ್ತರವಾಗಿದ್ದವು. ಮೊದಲನೆಯ ನಿರ್ಧಾರದ ಪ್ರಕಾರ ಅಸ್ಪೃಶ್ಯರ ಮಕ್ಕಳು ಸ್ಪೃಶ್ಯರೊಂದಿಗೆ ಶಾಲೆಗಳಲ್ಲಿ ಹಾಜರಾಗತೊಡಗಿದರು.[25] ಎರಡನೇ ನಿರ್ಧಾರ ರೈತರ ಮಕ್ಕಳಿಗೆ ಸಂಬಂಧಿಸಿದ್ದು. ಹಳ್ಳಿಯ ರೈತ ತನ್ನ ಮಕ್ಕಳನ್ನು ಶಾಲೆಗೆ ಕಳುಹಿಸಲು

ಇಷ್ಟಪಡುತ್ತಿರಲಿಲ್ಲ. ಅವರು ಹೊಲದಲ್ಲಿ ರೈತನಿಗೆ ಸಹಾಯ ಮಾಡುವರೆಂಬುದು. ರೈತನು ಸಂಪೂರ್ಣವಾಗಿ ಹೊಲದ ಮೇಲೆ ಅವಲಂಬಿಸಿದ್ದರಿಂದ ಅವನು ಶಾಲೆಗಿಂತ ವ್ಯವಸಾಯಕ್ಕೆ ಪ್ರಥಮ ಆದ್ಯತೆಯನ್ನು ನೀಡುತ್ತಿದ್ದ. ಈ ಅಡ್ಡಿ (ಆತಂಕ) ಯನ್ನು ಮೀರುವುದಕ್ಕೆ ಶಾಹುರವರು ಹಳ್ಳಿಯ ರೈತರ ಮಕ್ಕಳಿಗೆ ಬೆಳಿಗ್ಗೆ ಅಥವಾ ಸಂಜೆ ೨ ಗಂಟೆಗಳು ಮಾತ್ರ ಶಾಲೆಗೆ ಬರುವ ರಿಯಾಯಿತಿಯನ್ನು ನೀಡಿ, ಉಳಿದ ಸಮಯವನ್ನು ಅವರು ಹೊಲಗಳಲ್ಲಿ ಕಳೆಯಬಹುದಾಗಿತ್ತು. (ಜುಲೈ ೧೯೧೯).[26] ಮಹಾರಾಜರ ಶಿಕ್ಷಣ ನೀತಿ–ಧೋರಣೆ ಎಷ್ಟರಮಟ್ಟಿಗೆ ನಮ್ಯತೆ (ಸಾಧ್ಯ) ಮತ್ತು ವಾಸ್ತವಿಕವಾಗಿತ್ತೆಂಬುದನ್ನು ತಿಳಿಸುತ್ತದೆ.

ಉಚಿತ ಮತ್ತು ಕಡ್ಡಾಯ ಶಿಕ್ಷಣದ ಯೋಜನೆಯನ್ನು ಜಾರಿಗೊಳಿಸುವಾಗ ಶಾಹುರವರು ಬಡಮಕ್ಕಳಿಗೆ ಮೆಟ್ರಿಕ್ಯುಲೇಷನ್‌ವರೆಗೆ ಪ್ರೌಢ ಶಿಕ್ಷಣವನ್ನು ಉಚಿತಗೊಳಿಸಲು ಯೋಚಿಸಿದ್ದರು. ಅವರ ಆಜ್ಞೆಗಳನ್ನು ಒಂದು ಆಜ್ಞೆ ಇದನ್ನು ಕುರಿತು ಹೇಳಿದೆ. ಮಾರ್ಚ್ ೨೫, ೧೯೧೮ರ ಆಜ್ಞೆ ಪ್ರಾಥಮಿಕ ಶಿಕ್ಷಣದ ಮೇಲೆ ಖರ್ಚುಮಾಡಿ ಉಳಿದ ಹಣವನ್ನು ಮತ್ಯಾವುದೇ ಚಟುವಟಿಕೆಗೆ ಖರ್ಚು ಮಾಡದೆ: "ಉಳಿತಾಯಗಳನ್ನು ಸಕಾಲದಲ್ಲಿ ಎಲ್ಲಾ ಜಾತಿಗಳ ಬಡಮಕ್ಕಳ ಉಚಿತ ಪ್ರೌಢಶಿಕ್ಷಣಕ್ಕಾಗಿ ಬಳಸಬೇಕೆಂದು" ಹೇಳುತ್ತದೆ.[27] ಶಾಹುರವರು ಮತ್ತಷ್ಟು ವರ್ಷಗಳು ಬದುಕಿದ್ದರೆ ಅವರು ಖಂಡಿತವಾಗಿ ಪ್ರೌಢಶಿಕ್ಷಣವನ್ನು ಸಾರ್ವತ್ರಿಕವಾಗಿ ಉಚಿತ ಮಾಡುತ್ತಿದ್ದರು.

೧೯೧೭–೧೮ ರಲ್ಲಿ ಕಡ್ಡಾಯ ಶಿಕ್ಷಣ ಜಾರಿಗೊಳ್ಳಲು ಪ್ರಾರಂಭವಾದಾಗ ಅದು ೨೭ ಶಾಲೆಗಳಲ್ಲಿ ಮತ್ತು ೧೨೯೬ ಹುಡುಗರನ್ನು ಒಳಗೊಂಡಿತ್ತು. ೧೯೨೧–೨೨ ರವರೆಗೆ ಒಟ್ಟು ೫ ವರ್ಷಗಳಲ್ಲಿ ಕ್ರಮವಾಗಿ ೪೨೦ ಶಾಲೆಗಳಿಗೆ ಮತ್ತು ೨೨,೦೦೭ ವಿದ್ಯಾರ್ಥಿಗಳವರೆಗೆ ವ್ಯಾಪಿಸಿತ್ತು. ೧೯೨೨ ರವರೆಗೆ ಈ ಯೋಜನೆಯ ವೆಚ್ಚವು ಸಹ ಮೂರು ಲಕ್ಷ ರೂ.ಗಳವರೆಗೆ ವಿಸ್ತರಿಸಿತ್ತು.[28]

## ಮಹಿಳಾ ಶಿಕ್ಷಣ

ಶಿಕ್ಷಣದ ಯೋಜನೆಯಲ್ಲಿಯೇ ಶಾಹುರವರು ಮಹಿಳೆಯರ ಶಿಕ್ಷಣದ ಪ್ರೋತ್ಸಾಹಕ್ಕಾಗಿ ಕ್ರಮ ಕೈಗೊಂಡಿದ್ದರು. ಕೊಲ್ಹಾಪುರ ಸಂಸ್ಥಾನ ಮಹಿಳೆಯರ ಬಗ್ಗೆಯಿದ್ದ ಮನೋಭಾವವು ಮೂಲಭೂತವಾಗಿ ಕರ್ಮಠವಾಗಿರಲಿಲ್ಲ (ಅಕರ್ಮಠ) ಮತ್ತು ಆಧುನಿಕವಾಗಿತ್ತು. ಬ್ರಿಟಿಷ್ ಶಿಕ್ಷಣಾಧಿಕಾರಿಣಿಯಾದ ಮಿಸ್ ಲಿಟ್ಲ ಅವರು ಇಂಗ್ಲೆಂಡಿಗೆ ವಾಪಸ್ಸು ಹೋದ ಮೇಲೆ ಅವರ ಸ್ಥಾನಕ್ಕೆ ಕೊಲ್ಹಾಪುರ ಸಂಸ್ಥಾನದ ಹೆಣ್ಣುಮಕ್ಕಳ ತರಬೇತಿ ಶಾಲೆಯ ಶಿಕ್ಷಕಿಯಾಗಿದ್ದ ಬುದ್ಧಿವಂತಳಾದ ರಕ್ಮಬಾಯಿ ಕೆಲವಲ್‌ಕರ್ ಅವರನ್ನು ಶಾಹುರವರು ನೇಮಿಸಿದರು. ರಖ್ಮಬಾಯಿಯವರು ಸಂಸ್ಥಾನದಲ್ಲಿ ಮಹಿಳೆಯರ ಶಿಕ್ಷಣದ ಗತಿಯನ್ನು ತೀವ್ರಗೊಳಿಸುವುದಕ್ಕೆ ಮೆಚ್ಚಬಹುದಾದ ಕೆಲಸವನ್ನು ಮಾಡಿದರು. ಸಂಸ್ಥಾನದಲ್ಲಿ ಈಗಾಗಲೇ ಸಹ ಶಿಕ್ಷಣ ಶಾಲೆಗಳಿದ್ದವು. ಈಗ ಪ್ರತ್ಯೇಕ ಮಹಿಳಾಶಾಲೆಗಳನ್ನು ಸ್ಥಾಪಿಸಲಾಯಿತು. ವಿಶೇಷವಾಗಿ ಶಾಹುರವರ ಮೊದಲ ವರ್ಷಗಳ ಆಡಳಿತದಲ್ಲಿ ಸಹ್ಯಾದ್ರಿಬೆಟ್ಟಗಳ ಶ್ರೇಣಿಗೆ ಹೊಂದಿಕೊಂಡಿರುವ ಹಿಂದುಳಿದ ಪ್ರದೇಶಗಳಾದ ಭೂದರಗಡ್‌ನಲ್ಲಿ ಹುಡುಗಿಯರ ಶಾಲೆಗಳನ್ನು ತೆರೆಯಲಾಯಿತು.[29] ಪ್ರತ್ಯೇಕ ಹೆಣ್ಣುಮಕ್ಕಳ ಶಾಲೆಗಳು ಇಲ್ಲದಿರುವ ಕಡೆಗಳಲ್ಲಿ ಹುಡುಗರು ಮತ್ತು ಹುಡುಗಿಯರು ಒಟ್ಟಿಗೆ ಓದುತ್ತಿದ್ದರು. ಹುಡುಗಿಯರನ್ನು ಶಾಲೆಗಳಿಗೆ ಹೋಗುವಂತೆ ಮತ್ತು ಹುಡುಗರ ಜೊತೆಯಲ್ಲಿ ಓದುವಂತೆ ಪ್ರೋತ್ಸಾಹಿಸುತ್ತಿದ್ದರು. ಸಹ–ಶಿಕ್ಷಣ ಶಾಲೆಗಳಲ್ಲಿ ಅನುಪಾತಕ್ಕೆ ಅನುಗುಣವಾಗಿ ಪರೀಕ್ಷೆಯಲ್ಲಿ ಪಾಸಾಗುವಂತೆ ತರಬೇತಿ ನೀಡುವುದರಲ್ಲಿ ಆಸಕ್ತಿ ವಹಿಸಿದ ಶಿಕ್ಷಕರಿಗೆ ಬಹುಮಾನಗಳನ್ನು

ನೀಡಲಾಗುತ್ತಿತ್ತು.[30] ಶಾಹುರವರು ವಯಸ್ಕ ಮಹಿಳೆಯರ ಶಿಕ್ಷಣದ ಬಗ್ಗೆ ಕೂಡ ಆಸಕ್ತಿ ವಹಿಸಿದ್ದರು. ಹಿಂದುಳಿದ ಜಾತಿಗಳಲ್ಲಿ ಕಲಿಯಲು ಆಸಕ್ತಿ ತೋರಿಸಿದ ಮಹಿಳೆಯರ ಶಿಕ್ಷಣಕ್ಕಾಗಿ ಶಾಹುರವರು ವಿಶೇಷ ಆಜ್ಞೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದರು. ದರ್ಬಾರು ಅಂತಹ ಮಹಿಳೆಯರಿಗೆ ಉಚಿತವಾಗಿ ಊಟ ಮತ್ತು ವಸತಿಗಳನ್ನು ವ್ಯವಸ್ಥೆಗೊಳಿಸಿತ್ತು.[31] ಪ್ರತಿಭಾವಂತ ವಿದ್ಯಾರ್ಥಿನಿಯರ ಮುಂದಿನ ಓದಿಗಾಗಿ ವಿಶೇಷ ವಿದ್ಯಾರ್ಥಿವೇತನಗಳನ್ನು ಸ್ಥಾಪಿಸಿದ್ದರು. ಛತ್ರಪತಿಯವರು ರಾಜಕುಮಾರಿ ಅಕ್ಕಸಾಹೇಬರ ಮದುವೆಯಲ್ಲಿ ನಾಲ್ಕನೇ ತರಗತಿಯಲ್ಲಿ ವಾರ್ಷಿಕ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳಿಸಿದ ಹೆಣ್ಣುಮಕ್ಕಳಿಗೆ ೪೦ ರೂ.ಗಳ ಐದು ವಿದ್ಯಾರ್ಥಿವೇತನಗಳನ್ನು ಸ್ಥಾಪಿಸಿದರು.[32]

ಹೆಣ್ಣುಮಕ್ಕಳ ಉನ್ನತ ವಿದ್ಯಾಭ್ಯಾಸದ ಬಗ್ಗೆ ಶಾಹುರವರು ಉದಾರ ಮನೋಭಾವವನ್ನು ತಾಳಿದ್ದರು.[33] ಶಾಹುರವರು ರುಖ್ಮಬಾಯಿ ಕೇಲವಲ್‌ಕರ್ ಅವರ ಮಗಳಾದ ಕೃಷ್ಣಬಾಯಿ ಅವರನ್ನು ಮುಂಬಯಿಯಲ್ಲಿರುವ ಗ್ರಾಂಟ್ ಮೆಡಿಕಲ್‌ಕಾಲೇಜಿಗೆ ಕಳುಹಿಸಿದರು ಮತ್ತು ಅವಳನ್ನು ಡಾಕ್ಟರ್ ಮಾಡಿದರು ಮತ್ತು ಕೊಲ್ಹಾಪುರ ಎಡ್ವರ್ಡ್ ಮೆಮೋರಿಯಲ್ ಆಸ್ಪತ್ರೆಗೆ ಅವರನ್ನು ಹಿರಿಯ ವೈದ್ಯಾಧಿಕಾರಿಣಿಯಾಗಿ ನೇಮಕಮಾಡಿದರು. ಕೂಡಲೇ ಕೃಷ್ಣಬಾಯಿ ಅವರು ಶಾಹುರವರ ಪ್ರೋತ್ಸಾಹ ಮತ್ತು ಹಣಕಾಸಿನ ಸಹಾಯದಿಂದ ಇಂಗ್ಲೆಂಡಿನಲ್ಲಿ ಉನ್ನತ ಅಧ್ಯಯನಕ್ಕೆ ಹೋದರು. ಅವರು (ಆಕೆ) ಹೆಚ್ಚು ವಿದ್ಯಾರ್ಹತೆ ಪಡೆದು ವಾಪಸಾದರು. ಮತ್ತೆ ಸಂಸ್ಥಾನದ ಸೇವೆಗಳಿಗೆ ಸೇರಿದರು. ೧೮೯೫ರಲ್ಲಿ ಪುಣೆಯಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಶಾಹುರವರ ಸಲಹೆಯ ಮೇರೆಗೆ ಕೃಷ್ಣಬಾಯಿ ಮತ್ತು ಅವರ ತಂಗಿ ದ್ವಾರಕಾಬಾಯಿ ಅವರು ಸ್ವಯಂಸೇವಕರಾಗಿ ಹಾಜರಾಗಿದ್ದರೆಂಬ ಸಂಗತಿಯನ್ನು ಪ್ರಸ್ತಾಪಿಸುವುದು ಉಚಿತವಾಗಿದೆ.[34] ತಮ್ಮ ವಿಧವೆ ಸೊಸೆಯಾದ ಇಂದುಮತಿ ದೇವಿಯರ ಶಿಕ್ಷಣದ ಕಲಿಕೆಯ ಸಂದರ್ಭ ಬಂದಾಗ ಶಾಹುರವರ ಮಹಿಳೆಯರ ವ್ಯಕ್ತಿತ್ವದ ಬೆಳವಣಿಗೆ ಎಂಬ ಪರಿಕಲ್ಪನೆ ಘನೀಭೂತಗೊಂಡಿತು. ರಾಜಕುಟುಂಬವು ತಮ್ಮ ಸೊಸೆಯ ಶಿಕ್ಷಣದ ಬಗ್ಗೆ ಅತಿವಿರೋಧ ಬಂದಾಗ ಅವರಿಗೆ ಶಿಕ್ಷಣ ನೀಡುವ ಬಗ್ಗೆ ದಿಟ್ಟ ನಿರ್ಧಾರವನ್ನು ತಾವೇ ಕೈಗೊಂಡರು ಮತ್ತು ಸೋನ್‌ತಾಲಿ ಕ್ಯಾಂಪಿನಲ್ಲಿ ಅದನ್ನು ಜಾರಿಗೊಳಿಸಿದರು.[35] ಶಾಹುರವರು ಇಂದುಮತಿಯನ್ನು ಒಬ್ಬ ಪೂರ್ಣ, ಸುಸಂಸ್ಕೃತ ಮತ್ತು ಸ್ವಾವಲಂಬಿ ವ್ಯಕ್ತಿತ್ವಶೀಲರನ್ನಾಗಿ ಮಾಡಲು ತುಂಬಾ ಶ್ರಮಿಸಿದರು. ಅವರು ಆಕೆ ವಿದುಷಿಯಾಗಬೇಕು, ಉನ್ನತ ವೈದ್ಯಕೀಯ ಶಿಕ್ಷಣ ಪಡೆದು ವೈದ್ಯೆಯಾಗಿ ಸಂಸ್ಥಾನದ ಬಡರಾಯತರ ಸೇವೆಯನ್ನು ಮಾಡಬೇಕೆಂದು ಕನಸು ಕಂಡಿದ್ದರು. ಅವರ ಅಕಾಲಿಕ ಮರಣದಿಂದ ಅವರ ಕನಸು ನನಸಾಗಲಿಲ್ಲ.

೧೯೧೮ರಲ್ಲಿ ಶಾಹುರವರು ಕೊಲ್ಹಾಪುರದ ಪ್ರಸಿದ್ಧ ರಾಜಾರಾಮ ಕಾಲೇಜನ್ನು ಮುಚ್ಚುವ ನಿರ್ಧಾರವನ್ನು ತಕ್ಷಣ ಘೋಷಿಸುವ ಮೂಲಕ ಎಲ್ಲರಿಗೂ ಆಘಾತವನ್ನು ಮಾಡಿದರು. ತನ್ನ ಪ್ರಜೆಗಳಿಗೆ ಪ್ರಥಮ ಆದ್ಯತೆಯಾಗಿ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದು ಪ್ರತಿಯೊಂದು ಪ್ರಗತಿಪರ ಸರ್ಕಾರದ ಮುಖ್ಯ ಕರ್ತವ್ಯವಾಗಿದೆ ಹಾಗೂ ಈ ಕಾಲೇಜಿಗೆ ತಗಲುವ ಭಾರಿ ಖರ್ಚು ಪ್ರಾಥಮಿಕ ಶಿಕ್ಷಣಕ್ಕೆ ದೊಡ್ಡ ತೊಡಕಾಗಿದೆಯೆಂದು ತನ್ನ ನಿರ್ಧಾರದ ಹಿಂದಿರುವ ಕಾರಣಗಳನ್ನು ಸವಿವರವಾಗಿ ಅವರು ಹೇಳಿದರು. ನಿಜವಾಗಿ ಈ ಕಾಲೇಜಿನ ಖರ್ಚಿಗಾಗಿ ಒಂದು ನಿರ್ದಿಷ್ಟ ಮೊತ್ತವನ್ನು ಮೂವರು ಜಾಗೀರದಾರರಾದ ಈಚಲಕರಂಜಿಕರ, ವಿಶಾಲಗಡ್ಕರ ಮತ್ತು ಬಾವಡೆಕರ್ ಅವರು ಕೊಡುಗೆಯ ರೂಪದಲ್ಲಿ ಕೊಡಲು ನಿರ್ಧರಿಸಲಾಗಿತ್ತು. ಆದರೆ ಶಾಹುರವರು ಸಿಂಹಾಸನವೇರಿದಾಗಿನಿಂದ ಈ ಜಾಗೀರದಾರರು ಇದಕ್ಕೆ ನೀಡುವ ಹಣವನ್ನು ನಿಲ್ಲಿಸಿದರು. ಈ ಸನ್ನಿವೇಶದಲ್ಲಿ

ದರ್ಬಾರು ಒಂದೇ ಈ ಕಾಲೇಜೊಂದರ ಬಗ್ಗೆ ವಾರ್ಷಿಕ ೨೦,೦೦೦ ರೂ.ಗಳನ್ನು ಖರ್ಚು ಮಾಡಲು ಶಾಹುರವರು ಒಪ್ಪಲಿಲ್ಲ. ಈ ನಿರ್ಣಯವನ್ನು ಕೇಸರಿಯ ಸಂಪಾದಕರು ಮತ್ತು ಶಾಹುರವರ ಇತರೆ ವಿರೋಧಿಗಳು ವಿರೋಧಿಸಿದರು. ಬ್ರಿಟಿಷ್ ಸರಕಾರವು ಸಹ ತನ್ನ ಅಸಂತೋಷವನ್ನು ವ್ಯಕ್ತಪಡಿಸಿತು ಮತ್ತು ಬ್ರಿಟಿಷರೊಂದಿಗಿದ್ದ ಕೊಲ್ಹಾಪುರದ ಸಂಬಂಧಗಳು ಘಾಸಿಗೊಂಡವು. ರಾಜಾರಾಮ್ ಕಾಲೇಜು ದಕ್ಷಿಣ ಮಹಾರಾಷ್ಟ್ರದ ಬ್ರಾಹ್ಮಣೇತರರ ಪ್ರಮುಖ ಉನ್ನತ ಶಿಕ್ಷಣದ ಕೇಂದ್ರವಾಗಿತ್ತು. ಕೊಲ್ಹಾಪುರದಲ್ಲಿ ನಾನಾ ಜಾತಿಗಳ ವಿದ್ಯಾರ್ಥಿನಿಲಯಗಳ ಅಭಿವೃದ್ಧಿಗೆ ಅದು ಕಾರಣವಾಗಿತ್ತು. ಕಾಲೇಜಿನ ಮುಚ್ಚುವಿಕೆಯು ಇವರೆಲ್ಲರಿಗೂ ದುಷ್ಪರಿಣಾಮ ಬೀರುತ್ತಿತ್ತು. ಅದು ಮಹಾತಪ್ಪಾಗುತ್ತಿತ್ತು. ಅದೃಷ್ಟವಶಾತ್ ಈ ಎಲ್ಲಾ ಸಾಧ್ಯವಾದ ಪರಿಣಾಮಗಳನ್ನು ಪುನರ್‌ಪರಿಶೀಲಿಸಿದ್ದರಿಂದ ಶಾಹುರವರು ಬುದ್ಧಿವಂತಿಕೆಯಿಂದ ಹಿಂಜರಿದರು ಮತ್ತು ಸಂಯುಕ್ತ ಪ್ರದೇಶಗಳ ಆರ್ಯಸಮಾಜದ ಸಂಸ್ಥೆಯಾದ ಆರ್ಯ ಪ್ರತಿನಿಧಿ ಸಭೆಗೆ ರಾಜಾರಾಮ್ ಪ್ರೌಢಶಾಲೆ ಮತ್ತು ರಾಜಾರಾಮ್ ಕಾಲೇಜಿನ ವ್ಯವಸ್ಥಾಪಕ ಮಂಡಳಿಯನ್ನು ಹಸ್ತಾಂತರಿಸಲಾಯಿತು. ಮಿಗಿಲಾಗಿ ಅವರು ವಾರ್ಷಿಕ ೨೦,೦೦೦ ರೂ.ಗಳನ್ನು ಅನುದಾನ ಈ ಎರಡು ಸಂಸ್ಥೆಗಳಿಗೆ ನೀಡಲು ಒಪ್ಪಿಕೊಂಡರು. ನಂತರ ಶಾಹುರವರ ಪ್ರಯತ್ನಗಳ ಪರಿಣಾಮವಾಗಿ ರಾಜಾರಾಮ್ ಕಾಲೇಜು ಬಾಂಬೆ ವಿಶ್ವವಿದ್ಯಾಲಯದಿಂದ 'ಎ' ದರ್ಜೆಯ ಸ್ಥಾನವನ್ನು ಪಡೆಯಿತು.[36] ಶಾಹುರವರು ಆಕಸ್ಮಿಕವಾಗಿ ಮಾಡುತ್ತಿದ್ದ ಮಹಾ ಅಪರಾಧವನ್ನು ಸೂಕ್ತ ಸಮಯದಲ್ಲಿ ತಪ್ಪಿಸಿದ್ದರಿಂದ ಬ್ರಾಹ್ಮಣೇತರರಿಗೆ ಉನ್ನತ ಶಿಕ್ಷಣದ ಬಾಗಿಲುಗಳು ಹಾಗೆಯೆ ತೆರೆದುಕೊಂಡಿದ್ದವು.

### ಸಂಸ್ಕೃತ ಕಾಲೇಜು, ದೇಣಿಗೆಗಳು, ವಿದ್ಯಾರ್ಥಿ ವೇತನಗಳು...

೧೯೧೭ರಲ್ಲಿ ಶಾಹುರವರು ಕರವೀರದ ಶಂಕರಾಚಾರ್ಯರ ಮಾರ್ಗದರ್ಶನದಲ್ಲಿ ಒಂದು ಸುಸಂಸ್ಕೃತ ಕಾಲೇಜನ್ನು ಸ್ಥಾಪಿಸುವ ಒಂದು ವಿನೂತನ ಪ್ರಯೋಗವನ್ನು ಪ್ರಾರಂಭಿಸಿದರು. ಶಾಹುರವರು ಒಬ್ಬ ಪ್ರಸಿದ್ಧ ವಿದ್ವಾಂಸ ಮತ್ತು ಪಂಡಿತರಾದ ಡಾ. ಕುರ್ತುಕೋಟಿ ಅವರನ್ನು ಕರವೀರಮಠದ ಶಂಕರಾಚಾರ್ಯರನ್ನಾಗಿ ಜುಲೈನಲ್ಲಿ ನೇಮಕ ಮಾಡಿದರು. ಹೊಸ ಶಂಕರಾಚಾರ್ಯರ ದೃಷ್ಟಿಕೋನವು ಪ್ರಗತಿಪರ ಮತ್ತು ಅಸಂಪ್ರದಾಯಕ ಮತ್ತು ಆಧುನಿಕವಾಗಿದ್ದವು. ಅವರು ಅಸ್ಪೃಶ್ಯತೆಯನ್ನು ನಿರಾಕರಿಸಿದರು. ಶಾಹುರವರು ಹೊಸ ಶಂಕರಾಚಾರ್ಯರ ಬೆಂಬಲದಿಂದ ಸಾಮಾಜಿಕ ಸುಧಾರಣೆಗಳ ತನ್ನ ಮಿಷನ್ನನ್ನು ಮತ್ತಷ್ಟು ಬೆಳೆಸಲು ಆಶಿಸಿದರು. ಡಾ. ಕುರ್ತುಕೋಟಿಯವರು ಅಧಿಕಾರ ವಹಿಸಿಕೊಂಡ ಕೂಡಲೆ ಇಬ್ಬರು ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೆ ಸಂಸ್ಕೃತ ಕಾಲೇಜನ್ನು ಸ್ಥಾಪಿಸಲು ನಿರ್ಧರಿಸಿದರು. ಅದರ ಪ್ರಕಾರ ಜುಲೈನಿಂದ ಛತ್ರಪತಿ ಕಾಲೇಜು ಕಾರ್ಯ ನಿರ್ವಹಿಸತೊಡಗಿತು. ಶಾಹುರವರು ಹಿಂದಿನ ಕುಷ್ಠರೋಗಿಗಳ ಆಸ್ಪತ್ರೆಯ ಕಟ್ಟಡವನ್ನು ಮತ್ತು ಉಂಚಗಾವ್‌ನಲ್ಲಿ ಕಾಲೇಜಿನ ಮುಂದಿನ ವಿಸ್ತರಣೆಗಾಗಿ ಅದರ ಭೂಮಿಯನ್ನು ದಾನವಾಗಿ ಕೊಟ್ಟರು.[37] ಶಾಹುರವರ ವಿಚಾರ ಬ್ರಾಹ್ಮಣೇತರರ ಮಕ್ಕಳಿಗೆ ಸಂಸ್ಕೃತ ಶಿಕ್ಷಣವನ್ನು ಒದಗಿಸಿ ಕೊಡುವುದಾಗಿತ್ತು. ಶಂಕರಾಚಾರ್ಯ ಡಾ. ಕುರ್ತುಕೋಟಿಯವರು ತಮ್ಮ ನಿಜವಾದ ಬಣ್ಣ (ಹಲ್ಲುಗಳು) ತೋರಿಸಿದ್ದರಿಂದ ಕೂಡಲೆ ಪ್ರಯೋಗವು ವಿಫಲವಾಯಿತು. ತನ್ನ ಮೊದಲಿನ ಪ್ರಗತಿಪರ ವಿದ್ವಾಂಸರ ನಿಲುವಿಗೆ ವಿರುದ್ಧವಾಗಿ ಅಸ್ಪೃಶ್ಯತೆ, ವಿಧವಾ ಪುನರ್‌ವಿವಾಹ ಮೊದಲಾದ ಸಮಸ್ಯೆಗಳ ಕುರಿತಂತೆ ಅತಿ ಕರ್ಮಠ ಬ್ರಾಹ್ಮಣಿಕೆಯ ನಿಲುವುಗಳನ್ನು ತೆಗೆದುಕೊಳ್ಳತೊಡಗಿದರು ಮತ್ತು ಕುಲಕರ್ಣಿ ವತನ ವಿಷಯದಲ್ಲಿ ಶಾಹುರವರ ವಿರುದ್ಧವಾಗಿ ತಿಲಕರ ಪಕ್ಷಕ್ಕೆ ಕೈಜೋಡಿಸಿದರು. ಶಾಹುರವರು ಅವರಿಂದ

ತುಂಬಾ ನಿರಾಶೆಗೊಂಡರು ಮತ್ತು ಶಂಕರಾಚಾರ್ಯರ ಪೀಠವನ್ನು ಡಾ. ಕುರ್ತುಕೋಟಿರವರು ನವೆಂಬರ್‌ನಲ್ಲಿ ಬಿಟ್ಟುಬಿಡುವಂತೆ ಮಾಡಿದರು. ಅವರೊಂದಿಗೆ ಸಂಸ್ಕೃತ ಕಾಲೇಜಿನ ಯೋಜನೆಯನ್ನು ಕೈಬಿಡಲಾಯಿತು.

ದೇವಸ್ಥಾನ ಸಂಸ್ಥೆಗಳಿಂದ ಬಂದ ಆದಾಯದಲ್ಲಿ ೨೦,೦೦೦ ರೂ.ಗಳನ್ನು ಪ್ರಾಥಮಿಕ ಶಿಕ್ಷಣಕ್ಕೆ ಶಾಹುರವರು ಹಂಚಿದ್ದನ್ನು ನಾವು ಈಗಾಗಲೇ ನೋಡಿದ್ದೇವೆ. ಈ ಸಂದರ್ಭದಲ್ಲಿ ಪಂಥರಪುರದಲ್ಲಿ ಒಂದು ದತ್ತಿ ಆಹಾರ ವಿತರಣಾ ಕೇಂದ್ರವನ್ನು ಕುರಿತು ಹೊರಡಿಸಿದ ಆಜ್ಞೆಯು ತುಂಬ ಆಸಕ್ತಿದಾಯಕವಾಗಿದೆ. ಅದು ಹೇಳುತ್ತದೆ: "......ಪಂಥರಪುರದಲ್ಲಿ ಕರವೀರ ಸರಕಾರದ ದತ್ತಿ ಭೋಜನಶಾಲೆಯ ಮಾಸಿಕ ಖರ್ಚು ರೂ. ೧೧೨ ಮತ್ತು ೮ ಆಣೆಗಳು. ಹಿಂದಿನ ಒಪ್ಪಂದದ ಪ್ರಕಾರಕ್ಕೆ ಹಣವನ್ನು ಸರಿಯಾಗಿ ಖರ್ಚು ಮಾಡುತ್ತಿರಲಿಲ್ಲವೆಂದು ತೋರುತ್ತದೆ. ಜ್ಞಾನದ ದತ್ತಿ ಎಲ್ಲಾ ದಾನಗಳಿಗಿಂತ ಮಹತ್ತರವಾದದ್ದು. ಆ ಉದ್ದೇಶಕ್ಕಾಗಿಯೇ ಹಣವನ್ನು ಖರ್ಚುಮಾಡುವುದು ಅತ್ಯಾವಶ್ಯಕ. ಹೀಗಿರುವಾಗ ೧೯೨೦ರಿಂದ ಈ ಭೋಜನಾಲಯವನ್ನು ಮುಚ್ಚಿಬಿಡಬೇಕು ಮತ್ತು ೧೧೨ ರೂ.ಗಳು ಮತ್ತು ೮ ಆಣೆಗಳ ಹಣವನ್ನು ಪ್ರತಿ ತಿಂಗಳು 'ಮರಾಠ ವಿದ್ಯಾ ಪ್ರಸಾರಕ ಮಂಡಳಕ್ಕೆ ಕೊಡಬೇಕು ಮತ್ತು ಅವರು ವಿದ್ಯಾರ್ಥಿಗಳ ಮರಾಠ ಬೋರ್ಡಿಂಗನ್ನು ಸ್ಥಾಪಿಸಲು ಅದರಲ್ಲಿ ಸ್ವಲ್ಪ ಭಾಗವನ್ನು ಉಪಯೋಗಿಸಿಕೊಂಡು ಉಳಿದ ೩೦ ರೂ.ಗಳನ್ನು ಪ್ರತಿ ತಿಂಗಳು ಅಸ್ಪೃಶ್ಯರ ವಿದ್ಯಾರ್ಥಿ ನಿಲಯವನ್ನು ನಡೆಸಲು ಉಪಯೋಗಿಸಬೇಕು".[38]

ಕಳಪೆಯಾಗಿ ಭೋಜನಾಲಯಗಳನ್ನು ನಡೆಸುವುದಕ್ಕಿಂತ ಮರಾಠ ಮತ್ತು ಅಸ್ಪೃಶ್ಯ ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯಗಳನ್ನು ನಡೆಸುವುದು ಹೆಚ್ಚು ಪ್ರಗತಿಪರವಾದದ್ದು. ವಿರೋಧಿಗಳು ಈ ಬಗ್ಗೆ ಮೈಮೇಲೆ ಎರಗಿದಾಗ ಶಾಹುರವರು ಪ್ರತ್ಯುತ್ತರ ನೀಡಿದರು, "ಪಂಥರಪುರ ದೇವಸ್ಥಾನದ ಧಾರ್ಮಿಕ ದತ್ತಿಯನ್ನು ನಿಲ್ಲಿಸಿದ್ದೇನೆಂಬ ಆರೋಪ ಬರಿಸುಳ್ಳು. ಮೊದಲಿದ್ದಂತೆ ಆ ದಾನವನ್ನು ಮುಂದುವರಿಸಿದ್ದೇನೆ. ಆದರೆ ನಾನು ಸೋಮಾರಿ ಮತ್ತು ಆಲಸಿಗಳನ್ನು ಪೋಷಿಸುವ ಬದಲಿಗೆ ಆ ಹಣವನ್ನು ಶಿಕ್ಷಣದ ಪ್ರೋತ್ಸಾಹಕ್ಕೆ ಬಳಸುತ್ತಿದ್ದೇನೆ. ಏಕೆಂದರೆ ದಾನದ ಹಣವನ್ನು ಅಗತ್ಯವಿರುವ ಬಡವಿದ್ಯಾರ್ಥಿಗಳಿಗೆ ಉಪಯೋಗಿಸಲಾಗುತ್ತಿದೆ".[39]

ಬರೋಡದ ಮಹಾರಾಜ ಸಯ್ಯಾಜಿರಾವ್ ಗಾಯಕವಾಡರಂತೆ ಶಾಹು ಮಹಾರಾಜರು ಕೂಡ ಉನ್ನತ ಅಧ್ಯಯನಕ್ಕೆ ಹೋಗಬಯಸುವ ಬ್ರಾಹ್ಮಣೇತರ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ನೀಡುವ ಮೂಲಕ ಸಹಾಯ ಮಾಡಿದರು. ಡಾ. ಬಾಬಾಸಾಹೇಬ ಅಂಬೇಡ್ಕರ ಮತ್ತು ರಾವ್‌ಬಹಾದೂರ್, ಪಿ. ಸಿ. ಪಾಟೀಲರು ಈ ವಿಷಯದಲ್ಲಿ ಐತಿಹಾಸಿಕ ಹೆಸರನ್ನು ಗಳಿಸಿದ್ದಾರೆ. ಇದರ ಜೊತೆಗೆ, ಶಾಹುರವರು ಹಲವು ವಿದ್ಯಾರ್ಥಿಗಳಿಗೆ ಹಣಕಾಸಿನ ನೆರವನ್ನು ವಿಸ್ತರಿಸಿದ್ದಕ್ಕೆ ಸಂಬಂಧಪಟ್ಟ ಆಜ್ಞೆಗಳು ಸಿಗುತ್ತವೆ. ಅವುಗಳಲ್ಲಿ ಪ್ರಾಂಶುಪಾಲ ತಾವಡೆಯವರು ಅಮೇರಿಕಾದಲ್ಲಿ ಉನ್ನತ ಶಿಕ್ಷಣಕ್ಕಾಗಿ ಮತ್ತು ಕಲೆಗಳ ಜೆ. ಜೆ. ಶಾಲೆಯಲ್ಲಿ ತರಬೇತಿ ಪಡೆಯುವುದಕ್ಕೆ ಭಾಯಿಮಾಧೋರಾವ್ ಬಾಗಲ್ ಅವರು ಪಡೆದ ಹಣಕಾಸಿನ ನೆರವುಗಳನ್ನು ವಿಶೇಷವಾಗಿ ಗಮನಿಸಬೇಕಾಗಿದೆ. ತದನಂತರ ತಾವಡೆಯವರು ಪ್ರಸಿದ್ಧ ಶಿಕ್ಷಣ ತಜ್ಞರಾದರೆ, ಬಾಗಲ್ ಅವರು ಪ್ರಸಿದ್ಧ ಕಲಾಕಾರ, ಸಮಜಸುಧಾರಕ ಮತ್ತು ನಾಯಕರಾದರು.[40] ಜೊತೆಗೆ, ೧೯೧೪ರಲ್ಲಿ ಒಬ್ಬ ವಿದ್ಯಾರ್ಥಿ, ೧೯೨೦ರಲ್ಲಿ ಮೂವರು ವಿದ್ಯಾರ್ಥಿಗಳು ಅಮೇರಿಕಾದಲ್ಲಿ ಉನ್ನತ ಶಿಕ್ಷಣ ಪಡೆಯಲು ಶಾಹುರವರಿಂದ ನೆರವನ್ನು ಪಡೆದಿದ್ದಕ್ಕೆ ದಾಖಲೆಗಳಿವೆ.[41] ಕಲೆ, ಕಾನೂನು, ತಂತ್ರಜ್ಞಾನ ಮತ್ತು ಔಷಧೀಯ

ಶಾಸ್ತ್ರಗಳಲ್ಲಿ ಉಚ್ಚಶಿಕ್ಷಣಕ್ಕಾಗಿ ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತಿತ್ತು.[42] ಶಾಹುರವರು ತನ್ನ ಸಂಸ್ಥಾನದಲ್ಲಿ ಮಾತ್ರವಲ್ಲದೆ ಬೇರೆ ಸಂಸ್ಥಾನಗಳ ವಿದ್ಯಾರ್ಥಿ ಮತ್ತು ಸಂಸ್ಥೆಗಳಿಗೆ ಉದಾರವಾಗಿ ವಿದ್ಯಾರ್ಥಿ ವೇತನಗಳನ್ನು ಮತ್ತು ದೇಣಿಗೆಗಳನ್ನು ಕಲ್ಪಿಸಿಕೊಡುತ್ತಿದ್ದರು. ಉದಾಹರಣೆಗೆ ಮದ್ರಾಸಿನಲ್ಲಿ ಬ್ರಾಹ್ಮಣೇತರರ ಮಹಾನಾಯಕರಾದ ಡಾ. ನಾಯರ್ ನೆನಪಿನ ವಿದ್ಯಾರ್ಥಿವೇತನವನ್ನು ಸ್ಥಾಪಿಸಿದರು. ಸಂಸ್ಥಾನದ ಹೊರಗಡೆಗೆ ಶಾಹುರವರು ಧಾರಾಳವಾಗಿ ಡೆಕ್ಕನ್ ಎಜುಕೇಷನ್ ಸೊಸೈಟಿ, ಶ್ರೀ ಶಿವಾಜಿ ಮರಾಠ ಸೊಸೈಟಿ, ತಾರಾಬಾಯಿ ಮರಾಠ ಬೋರ್ಡಿಂಗ್ (ಪುಣೆ), ಶ್ರೀ ಉದಾಜಿ ಮರಾಠ ಬೋರ್ಡಿಂಗ್, ಸೋಮವಂಶಿಯ ಸಮಾಜ ಬೋರ್ಡಿಂಗ್ (ನಾಸಿಕ), ಚೋಖಮೇಳ ಬೋರ್ಡಿಂಗ್ (ನಾಗಪುರ), ಬನಾರಸ್ ಹಿಂದು ಯೂನಿವರ್ಸಿಟಿ (ಕಾಶಿ) ಮೊದಲಾದ ಸಂಸ್ಥೆಗಳಿಗೆ ಧನಸಹಾಯ ಮಾಡಿದ್ದಾರೆ.[43] ಸಂಕ್ಷಿಪ್ತವಾಗಿ ಶಾಹುರವರು ಉತ್ಸಾಹ ಮತ್ತು ಬದ್ಧತೆಯಿಂದ ಶಿಕ್ಷಣದ ರಾಷ್ಟ್ರೀಯ ಆಂದೋಲನಕ್ಕೆ ಸಾಧ್ಯವಾದ ರೀತಿಗಳಲ್ಲಿ ಸಹಾಯ ಮಾಡಲು ಪ್ರಯತ್ನಿಸಿದ್ದಾರೆ. ಶಾಹುರವರು ಪ್ರಾರಂಭಿಸಿದ ಅಸಂಪ್ರದಾಯಿಕ ಹಾಗೂ ಚಲನಶೀಲ ಶಿಕ್ಷಣದ ನೀತಿ–ಧೋರಣೆಯ ಫಲಿತಾಂಶಗಳು ಅವರ ಆಡಳಿತದಲ್ಲಿಯೆ ಫಲ ನೀಡಿದವು. ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ ಹೇಗೆ ಹೆಚ್ಚಾಯಿತೆಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ೧೮೯೪ರಲ್ಲಿ ಶಾಹುರವರ ಪಟ್ಟಾಭಿಷೇಕದ ಸಮಯದಲ್ಲಿ ಸಂಸ್ಥಾನದಲ್ಲಿ ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ ಬಿಟ್ಟು ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೧೦೮೪೪ ಇದ್ದದ್ದು ೧೯೨೨ ರಲ್ಲಿ ಅದು ೨೭,೮೩೦ ಕ್ಕೆ ಏರಿತು. ಅದೇ ಸಮಯದಲ್ಲಿ ಅಸ್ಪೃಶ್ಯ ವಿದ್ಯಾರ್ಥಿಗಳ ಸಂಖ್ಯೆ ೨೩೪ರಿಂದ ೨,೧೬೨ಕ್ಕೆ ಏರಿತು. ಅಸ್ಪೃಶ್ಯ ವಿದ್ಯಾರ್ಥಿಗಳ ಸಂಖ್ಯೆ ಒಂಭತ್ತು ಪಟ್ಟು ಹೆಚ್ಚಾಯಿತು. ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ ೭೯ರಿಂದ ೨೬೫ಕ್ಕೆ ಏರಿತು. ೧೮೯೪ರಲ್ಲಿ ೭೯ ವಿದ್ಯಾರ್ಥಿಗಳಲ್ಲಿ ಬ್ರಾಹ್ಮಣೇತರರ ವಿದ್ಯಾರ್ಥಿಗಳು ಕೇವಲ ಆರು ಮಾತ್ರ. ೧೯೨೨ರಲ್ಲಿ ಬ್ರಾಹ್ಮಣೇತರರು ೧೦೦ಕ್ಕೆ ಹೆಚ್ಚಾಯಿತು. ಈ ಅವಧಿಯಲ್ಲಿ ಕಾಲೇಜು ವಿದ್ಯಾರ್ಥಿಗಳನ್ನು ಬಿಟ್ಟು ಬ್ರಾಹ್ಮಣರ ಸಂಖ್ಯೆ ೨,೫೨೨ ರಿಂದ ೨,೭೨೨, ಅಂದರೆ ಕೇವಲ ೨೦೦ ಹೆಚ್ಚಾಯಿತು. ಶಾಹುರವರ ಜೀವನಚರಿತ್ರೆಕಾರ ಲಠ್ಠೆ ಅವರು ಹೇಳಿದ್ದಾರೆ, "ಇದರರ್ಥ, ಶಾಹುರವರು ಅಧಿಕಾರ ವಹಿಸಿಕೊಳ್ಳುವುದಕ್ಕೆ ಮೊದಲು ಅವರಲ್ಲಿ ಸಾಕ್ಷರತೆಯ ದರ ಹೆಚ್ಚಿದ್ದದ್ದು ೨೮ ವರ್ಷಗಳು ಕಳೆದರೂ ೨೦೦ಕ್ಕಿಂತ ಹೆಚ್ಚಿಗೆ ಬೆಳೆಯುವುದಕ್ಕೆ ಅವಕಾಶವಿರಲಿಲ್ಲ".[44]

ಶಾಹುರವರ ಶೈಕ್ಷಣಿಕ ನೀತಿ–ಧೋರಣೆಯ ಪರಿಣಾಮಗಳು ಕೊಲ್ಹಾಪುರ ಸಂಸ್ಥಾನಕ್ಕೆ ಸೀಮಿತವಾಗಿರಲಿಲ್ಲ. ಅವರ ಕೆಲಸದಿಂದ ಸ್ಫೂರ್ತಿಪಡೆದ ಅನೇಕ ಶೈಕ್ಷಣಿಕ ಪ್ರಚಾರಕರಾದ ಕರವೀರರಿಂದ ಭಾವುರಾವ್ ಪಾಟೀಲರಿಂದ ಡಾ. ಪಂಜಾಬರಾವ್ ದೇಶಮುಖರವರೆಗೆ ಅರ್ಧ ಶತಮಾನದಲ್ಲಿ ಮಹಾರಾಷ್ಟ್ರದಲ್ಲೆಲ್ಲ ಬ್ರಾಹ್ಮಣೇತರರ ಸಮುದಾಯದ ಸಬಲೀಕರಣದ ಆಂದೋಲನ ಮುಂದುವರಿಯಿತು. ಅವರು ನೂರಾರು ಪ್ರಾಥಮಿಕ ಶಾಲೆಗಳನ್ನು, ಪ್ರೌಢಶಾಲೆಗಳನ್ನು ಮತ್ತು ಕಾಲೇಜುಗಳನ್ನು ಸ್ಥಾಪಿಸಿದರು ಮತ್ತು ಜ್ಞಾನ ಗಂಗೆಯ ಕಾಲುವೆಗಳನ್ನು ನಿರ್ಮಾಣ ಮಾಡಿ ತೀರಾ ಹಿಂದುಳಿದ ರಾಯತರ ಗುಡಿಸಲುಗಳವರೆಗೆ ಹರಿಸಿದರು. ಫಲಿತಾಂಶವು ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರರ ಸಮಾಜದ ಅಭೂತಪೂರ್ವವಾದ ಅಭಿವೃದ್ಧಿ. ಮತ್ತೇನು, ಈ ವರ್ಗವು ಕೂಡ ಶಾಹುರವರ ಪ್ರಗತಿಪರ ಸಾಮಾಜಿಕ ಪ್ರವೃತ್ತಿಯನ್ನು ಗಳಿಸಿಕೊಂಡಿತು. ಎಲ್ಲಾ ಪ್ರಗತಿಯ ಮೂಲಗಳು ಅವರ ಚಿಂತನೆಗಳು ಮತ್ತು ಕೃತಿಗಳಲ್ಲಿವೆಯೆಂಬುದನ್ನು ಮರೆಯದೆ ನಾವು ಒಳ್ಳೆಯದನ್ನು ಮಾಡಬೇಕು.

---

.........ರಾಯತರು ಬಹುಭಾಗವನ್ನು ಅಜ್ಞಾನದಲ್ಲಿ ಉಳಿಯುವಂತೆ ಮಾಡಿದ್ದನ್ನು, ಕೇವಲ ಕೆಲವರು ಮಾತ್ರ ವಿದ್ಯೆಯನ್ನು ಗಳಿಸುವುದನ್ನು ಮತ್ತು ಹಕ್ಕುಗಳನ್ನು ಪಡೆದ ಜನರಲ್ಲಿ ಕೆಲವರು ಅವುಗಳನ್ನು ಬಾಚಿಕೊಂಡು ಒಂದು ದೇಶೀಯ ನೌಕರಶಾಹಿಯನ್ನು ನಿರ್ಮಿಸಿದ್ದನ್ನು ಖಂಡಿತವಾಗಿ ಮರೆಯುವುದಕ್ಕೆ ಸಾಧ್ಯವಿಲ್ಲ. ಈ ಸುಶಿಕ್ಷಿತ ನೌಕರಶಾಹಿಯ ಆಡಳಿತ ನಮಗೆ ಚೆನ್ನಾಗಿ ಗೊತ್ತಿದೆ. ನಾವು ಬಹಳ ದೂರ ಹೋಗಬೇಕಾಗಿಲ್ಲ. ಮರಾಠ ಇತಿಹಾಸವನ್ನು ನೋಡಿದರೆ ಸಾಕಾಗುತ್ತದೆ. ೧೮ನೇ ಶತಮಾನದ ಶಾಹುಗಳ* ತಪ್ಪು ಹೆಚ್ಚುಹೆಚ್ಚು ಅಧಿಕಾರ ಕಬಳಿಸಲು ಪೇಶ್ವೆಗಳಿಗೆ ಅವಕಾಶ ನೀಡಿತು. ಇದರ ಪರಿಣಾಮವಾಗಿ ಛತ್ರಪತಿಯವರು ಜೈಲುವಾಸ ಅನುಭವಿಸಿದರು. ಜಾತಿ–ಭೇದ–ಭಾವಗಳು ತೀವ್ರಗೊಂಡವು. ಜಾತಿ ವೈಷಮ್ಯಗಳು ಹೆಚ್ಚಾದವು ಮತ್ತು ಅಸ್ಪೃಶ್ಯರು ತಮ್ಮ ಕತ್ತುಗಳಿಗೆ ಮಡಿಕೆ ಕಟ್ಟಿಕೊಂಡು ಮತ್ತು ಸೊಂಟದ ಸುತ್ತಲು ಪರಕೆ ಕಡ್ಡಿಗಳನ್ನು ಕಟ್ಟಿಕೊಂಡು ತಿರುಗಾಡಬೇಕಾಗಿತ್ತು. ಈ ಪರಿಸ್ಥಿತಿಗಳು ಎಲ್ಲಿಯೇ ಆಗಲಿ ಮರುಕಳಿಸುವುದು ಬೇಡ. ಆದ್ದರಿಂದ ಈ ಹಕ್ಕುಗಳನ್ನು ಕೊಡುವುದಕ್ಕೆ ಮೊದಲು ಎಲ್ಲರನ್ನು (ಎಲ್ಲ ವರ್ಗ) ಶಿಕ್ಷಿತರನ್ನಾಗಿ ಮಾಡುವುದು ಅತ್ಯಗತ್ಯ".[2]

ದೇಶೀಯ ನೌಕರಶಾಹಿಯ ಕಾರ್ಯವೈಖರಿಯ ಬಗ್ಗೆ ಬೆಳಕು ಚೆಲ್ಲಲು ಶಾಹುರವರು ಸತಾರದ ಪ್ರತಾಪಸಿಂಗ್ ಮಹಾರಾಜರ ಆಡಳಿತವು ಪೇಶ್ವೆಗಳ ಆಡಳಿತಕ್ಕೆ ಮತ್ತೊಂದು ಉದಾಹರಣೆಯನ್ನು ಶಾಹುರವರು ನೀಡುತ್ತಾರೆ. ಪ್ರತಾಪಸಿಂಗ್ ಮಗುವಾಗಿರುವಾಗ ಅವನು ಓದು ಮತ್ತು ಬರಹ ಕಲಿಯುವುದನ್ನು ನಿಷೇಧಿಸಲಾಗಿತ್ತು. ಒಬ್ಬ ಬ್ರಾಹ್ಮಣ ಅಧ್ಯಾಪಕನನ್ನು ಕದ್ದುಮುಚ್ಚಿ ಮಧ್ಯರಾತ್ರಿಯಲ್ಲಿ ಬಂದು ತನ್ನ ಮಗನಿಗೆ ವಿದ್ಯೆ ಕಲಿಸಲು ಅವನ ತಾಯಿ ನೇಮಿಸಿದ್ದಳು. ನಂತರ ಪೇಶ್ವೆಗಳ ಆಡಳಿತ ಕೊನೆಗೊಂಡು ಬ್ರಿಟಿಷರ ಆಡಳಿತ ಪ್ರಾರಂಭವಾದಾಗ ಬ್ರಾಹ್ಮಣರು ಬಹಳ ನೊಂದರು. ಪ್ರತಾಪಸಿಂಗರು ತನ್ನ ಕ್ಷತ್ರಿಯ ಹಕ್ಕುಗಳನ್ನು ಮರಳಿ ಪಡೆಯಲು ಪ್ರಯತ್ನಿಸಿದರು ಮತ್ತು ಬ್ರಾಹ್ಮಣ ಗಳಿಸಿದ್ದ ಯಜಮಾನಿಕೆಯ ದೊಡ್ಡಸ್ತಿಕೆಯನ್ನು ಕಡಿಮೆಗೊಳಿಸಿದರು. ಅವರು ಅವನ ವಿರುದ್ಧ ಸಂಚು ಹೂಡಿದರು ಮತ್ತು ಬ್ರಿಟಿಷರ ಮನಸ್ಸಿನಲ್ಲಿ ತಪ್ಪುಗ್ರಹಿಕೆಗಳನ್ನುಂಟುಮಾಡಿದರು ಮತ್ತು ಅವನನ್ನು ಅಧಿಕಾರದಿಂದ ಕೆಳಗಿಳಿಸಿದರು. ಶಾಹುರವರು ಅದೇ ಧಾಟಿಯಲ್ಲಿ ಮುಂದುವರೆದಿದ್ದಾರೆ. "........ಇಂದು ಸಹ ಅದೇ ರೀತಿಯಲ್ಲಿ ನನ್ನನ್ನು ಹೆದರಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ದೇವರ ನ್ಯಾಯದ ಶ್ರದ್ಧೆಯಿಂದ ಬ್ರಿಟಿಷ್ ಸರಕಾರ ಮತ್ತು ದೇಶಪ್ರೇಮಿ ಸ್ನೇಹಿತರ ಸಹಾನುಭೂತಿಗಳೊಂದಿಗೆ ಶಾಂತನಾಗಿ ನನ್ನ ಕರ್ತವ್ಯಗಳನ್ನು ಮಾಡುವುದರಲ್ಲಿ ನಿರತನಾಗಿ ಮುಂದುವರೆಯುತ್ತಿದ್ದೇನೆ".[3] ಒಂದು ವೇಳೆ ಈ ನೌಕರಶಾಹಿಯು ತನ್ನ ಮೇಲೆ ಪ್ರಾಬಲ್ಯವನ್ನು ಸ್ಥಾಪಿಸಿದರೆ, ನಾನು ನನ್ನ ಬೆಳೆದ ಮಗನಿಗೆ ಸಂಸ್ಥಾನದ ವ್ಯವಹಾರಗಳನ್ನು ವಹಿಸುವೆನು ಮತ್ತು ತನ್ನ ಜೀವನವನ್ನು ಹಿಂದುಳಿದ ವರ್ಗಗಳ ಸೇವೆಯಲ್ಲಿ ಕಳೆಯುವೆನು ಮತ್ತು ಇದು ನನ್ನ ಪ್ರತಿಜ್ಞೆ ಎಂದು ಅವರು ಮತ್ತೊಂದು ಸ್ಥಳದಲ್ಲಿ ಹೇಳಿದ್ದರು.[4] ಈ ನೌಕರಶಾಹಿಯ ಕುತಂತ್ರಗಳ ಪರಿಣಾಮದಿಂದ ತನ್ನ ದಾರಿಯಲ್ಲಿ ಅದು ಬಂದದ್ದಾದರೆ ಜೇಲುವಾಸವನ್ನು ಅನುಭವಿಸಲು ಶಾಹುರವರು ಮಾನಸಿಕವಾಗಿ ಸಿದ್ಧರಾಗಿದ್ದರು.[5]

ಫುಲೆ ಮತ್ತು ಶಾಹುರವರ ಜೀವನಗಳ ಪರಿವೀಕ್ಷಣೆಗೆ ಈ ಇಬ್ಬರು ಮಹನೀಯರು ತಮ್ಮ ಇಡೀ ಜೀವನಪರ್ಯಂತ ಬ್ರಾಹ್ಮಣ ನೌಕರಶಾಹಿಯ ವಿರುದ್ಧ ಹೋರಾಡಿದರೆಂಬುದನ್ನು ತೋರಿಸುತ್ತದೆ. ಈ

---

* ಶಿವಾಜಿ ಮಹಾಶಯರ ಮೊಮ್ಮಗ ಶಾಹು–೧

ಹೋರಾಟದಲ್ಲಿ ಮಹಾತ್ಮ ಫುಲೆಯವರು ವಿರೋಧಪಕ್ಷವನ್ನು ಎದುರಿಸಲು ಸರ್ವಸಿದ್ಧರಾಗಿರಲಿಲ್ಲ. ಮತ್ತು ಅದನ್ನು ಮಣಿಸಲಾಗಲಿಲ್ಲ. ಆದರೆ ಒಂದು ತೀಕ್ಷ್ಣವಾದ ಮತ್ತು ಹರಿತವಾದ ಲೇಖನಿಯಾಗಿದ್ದರು. ಅವರೇ ಆಯುಧವಾಗಿದ್ದರು. ಬೇರೆ ವಿಧಾನಗಳಾದ ಜನರ ಜಾಗೃತಿಗೊಳಿಸುವುದು, ಶಿಕ್ಷಣ ಪ್ರಸಾರಗಳು ಅವರ ಪಕ್ಷದ ಬಲವನ್ನು ಮಾತ್ರ ಹೆಚ್ಚಿಸಬಹುದು. ಶಾಹುಗೆ ಸಂಬಂಧಿಸಿದಂತೆ ಅವು ಬೇರೆಯಾಗಿದ್ದವು. ಅವರು ರಾಜಕೀಯ ಅಧಿಕಾರವನ್ನು ಹೊಂದಿದ್ದರು ಮತ್ತು ಬ್ರಾಹ್ಮಣರ ನೌಕರಶಾಹಿಯನ್ನು ಮುರಿಯಲು ಸಾಕಷ್ಟು ವಿಧಾನಗಳನ್ನು ಪಡೆದಿದ್ದರು. ಈ ಬಲದ ಮೂಲಕವೇ ಅವರು ಬ್ರಾಹ್ಮಣರ ಶಿಕ್ಷಣದಲ್ಲಿ ಮತ್ತು ಸರಕಾರಿ ಸೇವೆಗಳಲ್ಲಿ ಹೊಂದಿದ್ದ ಏಕಸ್ವಾಮ್ಯತೆಯನ್ನು ನಾಶಮಾಡಬಲ್ಲವರಾಗಿದ್ದರು. ಅವರು ಹೊಂದಿದ್ದ ರಾಜಕೀಯ ಅಧಿಕಾರವೇ ಅವರಿಗೆ ಹಿಂದುಳಿದವರ್ಗಗಳಿಗೆ ಬ್ರಾಹ್ಮಣರಿಗೆ ಸಮಾನವಾಗಿ ಸಾಮಾಜಿಕ ಹಕ್ಕುಗಳನ್ನು ನೀಡಲು ಸಾಧ್ಯ ಮಾಡಿತು. ಶಾಹುರವರು ತನ್ನ ಸಂಸ್ಥಾನದ ಸೀಮಿತ ವಲಯದಲ್ಲಿ ಬ್ರಾಹ್ಮಣ ನೌಕರಶಾಹಿಯ ಯಜಮಾನಿಕೆಯನ್ನು ಸಂಪೂರ್ಣವಾಗಿ ನಾಶಮಾಡಲು ಸಫಲರಾದರು. ಈ ಉದ್ದೇಶ ಸಾಧನೆಗಾಗಿ ಅವರು ತೆಗೆದುಕೊಂಡ ಹಲವು ಕ್ರಮಗಳಲ್ಲಿ ಕುಲಕರ್ಣಿಗಳ ವತನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಕಾರ್ಯಕ್ರಮವು ಮಹಾರಾಷ್ಟ್ರದಲ್ಲಿ ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು.

## ಕುಲಕರ್ಣಿಗಳ ವತನದ ಮುಟ್ಟುಗೋಲು

ಪ್ರತಿಯೊಂದು ಹಳ್ಳಿಯ ವತನದಾರ ಕುಲಕರ್ಣಿಗಳು ಬ್ರಾಹ್ಮಣ ನೌಕರಶಾಹಿಯ ಕೋಟೆಯ ಭದ್ರ ನೆಲೆಗಳಾಗಿದ್ದರು. ಅವನೊಬ್ಬನೆ ಪ್ರತಿಯೊಂದು ಹಳ್ಳಿಯಲ್ಲಿ ಓದು-ಬರಹ ಬಲ್ಲವನಾಗಿದ್ದನು. ಪಾಟೀಲನ ಸಿದ್ಧಾಂತದಲ್ಲಿ ಹಳ್ಳಿಯ ಮಹಾರಾಜನೆಂದು ಪರಿಗಣಿತನಾಗಿದ್ದರೂ ಅವನು ಅನಕ್ಷರಸ್ಥ ಮತ್ತು ಅಜ್ಞಾನಿಯಾಗಿದ್ದರಿಂದ ಹಳ್ಳಿಯ ಎಲ್ಲ ವ್ಯವಹಾರವು ಕುಲಕರ್ಣಿಯ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿತ್ತು. ಅವನು ಹಳ್ಳಿಯ ಕಂದಾಯವನ್ನು, ಅದರ ದಾಖಲೆಗಳು, ಭೂಮಿಯ ನೋಂದಣಿಯ ದಾಖಲೆಗಳು, ಸರಕಾರದ ಮುಖ್ಯ ಕಛೇರಿ ಮೊದಲಾದವುಗಳೊಂದಿಗೆ ಪತ್ರವ್ಯವಹಾರ ಇತ್ಯಾದಿಗಳನ್ನು ನೋಡಿಕೊಳ್ಳುತ್ತಿದ್ದನು. ಹಳ್ಳಿಯಲ್ಲಿ ಅವನು ಸರಕಾರದ ಅಧಿಕೃತ ಪ್ರತಿನಿಧಿಯಾಗಿದ್ದರಿಂದ ರಾಯತರು ಸರಕಾರವು ಅವನ ಬಾಯಿಂದ ಮಾತನಾಡುತ್ತದೆಯೆಂದು ಭಾವಿಸುತ್ತಿದ್ದರು. ಇಡೀ ಹಳ್ಳಿಯಲ್ಲಿ ಅವನೊಬ್ಬನೇ ಓದು ಮತ್ತು ಬರಹ ಬಲ್ಲವನಾದ್ದರಿಂದ ಎಲ್ಲಾ ಹಳ್ಳಿಗರು ಅವನ ನೆರವಿನಿಂದ ತಮ್ಮ ಎಲ್ಲಾ ವ್ಯವಹಾರಗಳನ್ನು ನಡೆಸುತ್ತಿದ್ದರು. ಕೆಲವು ಸ್ಥಳಗಳಲ್ಲಿ ಕುಲಕರ್ಣಿ ಲೇವಾದೇವಿಗಾರನಾಗಿ ಹಣವನ್ನು ದ್ವಿಗುಣದಲ್ಲಿ ಗಳಿಸುತ್ತಿದ್ದನು. ಅಂತಹ ಪ್ರಕರಣಗಳಲ್ಲಿ ಅವನು ಬಡ ರಾಯತರನ್ನು ಅವರು ಸಂಪೂರ್ಣವಾಗಿ ನಾಶವಾಗುವವರೆಗೆ ತನ್ನ ಹಿಡಿತದಲ್ಲಿ ಹಿಂಡಿ ಹಿಪ್ಪೆ ಮಾಡುತ್ತಿದ್ದನು. ಈ ಅವಧಿಯಲ್ಲಿ ಸತ್ಯಶೋಧಕದ ಮಹಾನಾಯಕ ಮುಕುಂದರಾವ್ ಪಾಟೀಲರು 'ದಿನಮಿತ್ರ'ದ ಸಂಪಾದಕರಾಗಿ 'ಕುಲಕರ್ಣಿ ಲೀಲಾಮೂರ್ತ್' ಎಂಬ ವಿಡಂಬನೆಯ ಕಾವ್ಯವನ್ನು ಬರೆದಿದ್ದರು. ಅದರಲ್ಲಿ ಕುಲಕರ್ಣಿಯವರು ಹಲವು ಸಂಚಿನ ಚಟುವಟಿಕೆಗಳನ್ನು ಹೊರಗೆಡಹಿ, ಕುಲಕರ್ಣಿಯ ಕುಖ್ಯಾತಿಯನ್ನು ಚಿತ್ರಿಸಿದ್ದಾರೆ. ಸತ್ಯಶೋಧಕದ ಕಾರ್ಯಕರ್ತ ವಿಠ್ಠಲ್ ದೊನಾಮ್ ಅವರು ಇದರ ಪ್ರಕಟಣಕಾರರಾಗಿದ್ದರೆ. ಭಾಸ್ಕರರಾವ್ ಜಾಧವ್ ಅವರು ಮುನ್ನುಡಿಯನ್ನು ಬರೆದಿದ್ದಾರೆ. ಕಾವ್ಯರೂಪದಲ್ಲಿ ಸಾಮಾಜಿಕ ಕುಯುಕ್ತಿಗಳನ್ನು ಬಹಿರಂಗಗೊಳಿಸುವ ಈ ಸಾಧನವನ್ನು ಕೊಲ್ಹಾಪುರ ಸಂಸ್ಥಾನದ ದಿವಾನ ರಘುನಾಥರಾವ್ ಸಬ್ನೀಸ್ ಅವರಿಗೆ ಅರ್ಪಿಸಲಾಗಿದೆ ಮತ್ತು ಶಾಹುರವರು ಇಡೀ ಪ್ರಯತ್ನಕ್ಕೆ ಸ್ಫೂರ್ತಿದಾತರು ಮತ್ತು ಆರ್ಥಿಕ ನೆರವು ನೀಡಿದವರು.

'ಕುಲಕರ್ಣಿ ಲೀಲಾಮೃತ್' ವಿಡಂಬನೆಯಾದರೂ ಬ್ರಾಹ್ಮಣ ನೌಕರಶಾಹಿಯ ಕಟುಟೀಕೆಯಾಗಿದ್ದು, ಅದು ಅವರಿಗೆ ನೋವುಂಟುಮಾಡಿದೆ. ಈ ನೌಕರಶಾಹಿಯ ಮುಖ್ಯವಕ್ತಾರ ಎನ್. ಸಿ. ಕೇಲ್ಕರ್‌ರು ಎರಡು ಸಂಪಾದಕೀಯಗಳನ್ನು ಕೇಸರಿಯಲ್ಲಿ ಬರೆದರು. ಮೊದಲಿಗೆ ಪ್ರಾರಂಭದಲ್ಲಿ ಕಾವ್ಯದ ಗುಣಗಳನ್ನು, ವಿಚಾರ ಹರಿವು, ಸ್ಪಷ್ಟತೆ, ಭಾಷಾಶುದ್ಧಿಗಳನ್ನು ಹೊಗಳಿದರು ಮತ್ತು ಕೊನೆಗೆ ಈ ಪುಸ್ತಕ ಬರೆಯುವ ಉದ್ದೇಶದ ಹಿಂದಿರುವ ಪ್ರಚೋದನೆಯ ಮೇಲೆ ಸಿಕ್ಕಾಪಟ್ಟೆ ದಾಳಿಮಾಡಿದರು. ಅವರು ಬರೆಯುತ್ತಾರೆ: "ಈ ಕಾವ್ಯವು ಅಮೃತದ ರೂಪದಲ್ಲಿ ಬಂದ ವಿಷವಾಗಿದೆ, ಇದು ಇಲ್ಲಿ ಸೈತಾನರ ಚಟುವಟಿಕೆಗಳನ್ನು ನಡೆಸಲು ಬಂದಿದೆ. ಇದು ಸತ್ಯಶೋಧಕ ಸಮಾಜದ ಮದ್ಯದ ಕಾರ್ಖಾನೆಯಲ್ಲಿ ಕಳಿತ ಬ್ರಾಹ್ಮಣ ದ್ವೇಷದ ಸಿಹಿ ಮತ್ತು ರುಚಿಕರವಾದ ಮದ್ಯವಾಗಿದೆ ಮತ್ತು ಶಾಹು ಮಹಾರಾಜರ ಕೃಪಾಕಟಾಕ್ಷೆಯಿಂದ ಮೂರು ಆಣೆಯ ಒಂದು ಬಾಟಲಿಯಲ್ಲಿ ಸಿಗುತ್ತದೆ".[6] ನಿಜವಾಗಿ, ಪಾಟೀಲರು ಕುಲಕರ್ಣಿಯವರ ಚಟುವಟಿಕೆಗಳ ಬಗ್ಗೆ ಮಾಡಿದ ವಿವರಣೆಯು ಆ ಕಾಲಕ್ಕೆ ಸಾಕಷ್ಟು ವಾಸ್ತವಿಕವಾಗಿತ್ತು. ಭಾಸ್ಕರರಾವ್ ಜಾಧವ್ ಅವರು ತಮ್ಮ ಮುನ್ನುಡಿಯಲ್ಲಿ ಹೇಳಿದ್ದಾರೆ: "ಮುಕುಂದರಾವ್ ಪಾಟೀಲರು ಒಬ್ಬ ವತನದಾರರು. ಅವರಿಗೆ ಕುಲಕರ್ಣಿಯವರ ಸ್ತುತಿಗೀತೆಗಳ ಕಹಿ ಅನುಭವವಿದೆ. ಅವರಿಗೆ ಸೂಕ್ಷ್ಮಸಂವೇದನೆಯ ಗುಣವಿದೆ. ಬೇರೆ ಸ್ಥಳಗಳಲ್ಲಿ ಕೂಡ ಕುಲಕರ್ಣಿಯವರ ದೊಂಬರಾಟಗಳನ್ನು ಅವರು ಚೆನ್ನಾಗಿಬಲ್ಲವರು. ಈ ಸಂಗ್ರಹದಲ್ಲಿ ೧೦ ಅಧ್ಯಾಯಗಳಿವೆ. ಏಳು ಅಧ್ಯಾಯಗಳು ವಿವಿಧ ಪ್ರವಾಸಗಳ ವಿವರಣೆಯಿದೆ ಮತ್ತು ಯಾವುದೂ ಕಲ್ಪಿತವಲ್ಲ. ಮುಕುಂದರಾವ್ ಅವರದೇ ಆದ ಅನುಭವಗಳು ಕೆಲವಿವೆ. ಮತ್ತೆ ಕೆಲವು ಅನುಭವಗಳು ಅವರ ಸ್ನೇಹಿತರ ಮತ್ತು ಸಂಬಂಧಿಕರ ಅನುಭವಗಳಾಗಿವೆ".[7] ಹಳ್ಳಿಯ ಕುಲಕರ್ಣಿಯು ಬ್ರಾಹ್ಮಣ ನೌಕರಶಾಹಿಯನ್ನು ಕೆಳಗಿಳಿಸುವ ತನ್ನ ಪ್ರಯತ್ನದಲ್ಲಿ ಕುಲಕರ್ಣಿಯವರು ದೊಡ್ಡ ತೊಡಕೆಂಬುದು ರುಜುವಾತಾಗಿದೆ. ವಿಶೇಷವಾಗಿ ಹಿಂದುಳಿದ ವರ್ಗಗಳ ಕಲ್ಯಾಣದಲ್ಲಿ. ಬಾಂಬೆ ಸರಕಾರದ ಗೃಹಕಾರ್ಯದರ್ಶಿ ರಾಬರ್ಟ್‌ಸನ್ ಅವರಿಗೆ ಬರೆದ ಪತ್ರದಲ್ಲಿ ಶಾಹು ಹೀಗೆ ಹೇಳುತ್ತಾರೆ: "ಒಂದು ಹಳ್ಳಿಯಲ್ಲಿ ಕುಲಕರ್ಣಿ ಎಷ್ಟು ಅಧಿಕಾರ ಚಲಾಯಿಸುತ್ತಾನೆಂಬುದು ನಿಮಗೆ ತಿಳಿದಿದೆ ಮತ್ತು ಅವನು ಏಕೆ ಅಲ್ಪ ಹಣಕ್ಕಾಗಿ ಕೆಲಸಮಾಡಲು ಸಿದ್ಧನಾಗಿದ್ದಾನೆ. ಅವನು ತನ್ನ ಸಂಚುಗಳ ಮೂಲಕ ಸಾಕಷ್ಟು ಹಣಮಾಡುತ್ತಾನೆ ಮತ್ತು ಅವನು ಕೆಲವು ಕೆಟ್ಟಮಾರ್ಗಗಳಿಂದ ಹಣಮಾಡುತ್ತಾನೆ. ಅವನು ಹಳ್ಳಿಗರು ಗಮಾರರೆಂದು ಚೆನ್ನಾಗಿ ತಿಳಿದಿದ್ದಾನೆ ಮತ್ತು ಆದ್ದರಿಂದ ಅವರು ಸಂಪೂರ್ಣವಾಗಿ ತನ್ನ ಕರುಣೆಯ ಮೇಲೆ ಅವಲಂಬಿಸಿದ್ದಾರೆಂದು ಬಗೆದಿದ್ದಾನೆ. ಆದರೆ ಹಳ್ಳಿಗರಿಗೆ ಓದು ಮತ್ತು ಬರಹ ಕಲಿಸಿದರೆ ತನ್ನ ಎಲ್ಲಾ ಪ್ರಾಬಲ್ಯ ಕುಸಿದುಬೀಳುವುದು. ಆದ್ದರಿಂದ ಸಹಜವಾಗಿ ಅವನು ನಾನು ಪ್ರಾರಂಭಿಸಿದ ಕಡ್ಡಾಯ ಉಚಿತ ಪ್ರಾಥಮಿಕ ಶಿಕ್ಷಣದ ಯೋಜನೆ ಕಡುವಿರೋಧಿಯಾಗಿದ್ದಾನೆ. ಬ್ರಾಹ್ಮಣರ ಸಂಚುಗಳನ್ನು ನಿಲ್ಲಿಸಲು ನಾನು ಬ್ರಿಟಿಷ್ ಸರಕಾರಕ್ಕೆ ಸಹಾಯ ಮಾಡುತ್ತಿರುವುದು ಅವನಿಗೆ ಚೆನ್ನಾಗಿ ಗೊತ್ತಿದೆ".[8]

ಗೌರ್ನರ್ ಲಾರ್ಡ್ ಸಿಡೆನ್ ಹ್ಯಾಮ್ ಅವರಿಗೆ ಬರೆದ ಒಂದು ಪತ್ರದಲ್ಲಿ ಶಾಹುರವರು ಕುಲಕರ್ಣಿಯವರ ಕೌಶಲ್ಯಗಳನ್ನು ಬ್ರಿಟಿಷ್ ಸರಕಾರಕ್ಕೆ ಚೆನ್ನಾಗಿ ತಿಳಿದಿದೆಯೆಂದು ಹೇಳಿದರು. ತಿಲಕರ ಪಕ್ಷದ ಬಲವಾದ ಅಸ್ತಿವಾರ (ಬುನಾದಿ) ಕುಲಕರ್ಣಿಯಾಗಿದ್ದರು. ಕುಲಕರ್ಣಿಯವರ ವತನಗಳ ನಾಶವು ಹಳ್ಳಿಯಲ್ಲಿ ಬ್ರಾಹ್ಮಣ ಪ್ರಾಬಲ್ಯದ ಅಂತ್ಯವಾಗುತ್ತದೆ. ಆದ್ದರಿಂದಲೇ ತಿಲಕರ ಹೋಮ್‌ರೂಲ್ ಪಾರ್ಟಿಯು ಅವರನ್ನು (ಶಾಹು) ಕಠೋರವಾಗಿ ದಾಳಿಮಾಡುತ್ತದೆ.[9]

ಕುಲಕರ್ಣಿಗಳು ಬಡ ರಾಯತರಿಗೆ ತೊಂದರೆ ಕೊಡುವುದು ಮಾತ್ರವಲ್ಲದೆ ಕೊಲ್ಹಾಪುರ ಸಂಸ್ಥಾನ ಮತ್ತು ಬ್ರಿಟಿಷ್ ಸರಕಾರದ ವಿರುದ್ಧ ರಾಜದ್ರೋಹದ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆಂದು ಬಹಿರಂಗವಾಗಿ ಶಾಹುವನ್ನು ದೂಷಿಸಿದ್ದನ್ನು ನೋಡಬಹುದು. ಅವರು ಅಧಿಕೃತ ಪತ್ರದಲ್ಲಿ(ವರದಿ) ಕುಲಕರ್ಣಿಯ ವಿರುದ್ಧ ಹಲವರು ಆರೋಪಗಳನ್ನು ಮಾಡಿದರು. ಅವುಗಳಲ್ಲಿ ಕೆಲವು ಈ ರೀತಿಯಿವೆ: ಮತ್ತೆ ಮತ್ತೆ ಪ್ರಯತ್ನ ಮಾಡಿದ್ದು, ಹಳ್ಳಿಯಲ್ಲಿ ತನ್ನ ಹುದ್ದೆಯಿಂದ ಅಸೂಕ್ತವಾಗಿ ಪ್ರಯೋಜನ ಪಡೆದದ್ದು; ನನ್ನ ಮತ್ತು ಬ್ರಿಟಿಷ್ ಸರಕಾರದ ವಿರುದ್ಧ ರಾಯತರನ್ನು ಪ್ರೇರೇಪಿಸಿ ಎತ್ತಿಕಟ್ಟಿದ್ದು, ಹಳ್ಳಿಗಳ ಕಛೇರಿಗಳಲ್ಲಿ ಹಳ್ಳಿಗರಿಗೆ ದಿನಪತ್ರಿಕೆಗಳನ್ನು ಓದುವ ಮೂಲಕ ಬ್ರಿಟಿಷ್ ಭಾರತದಲ್ಲಿ ಪ್ರಚಲಿತವಿದ್ದ ಉಗ್ರವಾದವನ್ನು ಸಂಸ್ಥಾನದಲ್ಲಿ ಪ್ರಚಾರ ಮಾಡಿದ್ದು, ವಿಶ್ವಾಸದ್ರೋಹಿ ಉದ್ದೇಶಗಳನ್ನು ಪ್ರಕಟಿಸಲು ಮುಗ್ಧ ಹಳ್ಳಿಗರಿಂದ ನಿಧಿಸಂಗ್ರಹ ಮಾಡಿದ್ದು, ನನ್ನ ವಿರುದ್ಧ ಜನರ ಮನಸ್ಸನ್ನು ಕೆಡಿಸಲು, ಲೋಕ ಸಂಗ್ರಹ, ಲೋಕಶನಿ, ರಾಜಕಾರಣ, ಕೇಸರಿ ಮೊದಲಾದ ಪತ್ರಿಕೆಗಳಲ್ಲಿ ನನ್ನ ಮೇಲೆ ಕಟುವಾಗಿ ದಾಳಿ ಮಾಡಿದ್ದು.[10] ಹೀಗಿರುವಾಗ ಕುಲಕರ್ಣಿ ವತನವನ್ನು ರದ್ದುಗೊಳಿಸುವ ಹಿಂದೆಯಿದ್ದ ಪ್ರೇರಣೆ ಸಾಮಾಜಿಕ ಮತ್ತು ರಾಜಕೀಯವೆಂಬುದು ಸುಸ್ಪಷ್ಟ.

ಫೆಬ್ರವರಿ ೨೮ರಂದು ಕೊಲ್ಹಾಪುರ ಸಂಸ್ಥಾನದಲ್ಲಿ ಕುಲಕರ್ಣಿ ವತನದ ಮುಟ್ಟುಗೋಲುವಿನ ಘೋಷಣೆಯನ್ನು ಪ್ರಕಟಿಸಲಾಯಿತು. ಗ್ರಾಮಪಂಚಾಯಿತಿಗಳ ಸ್ಥಾಪನೆಯಲ್ಲಿ ಕುಲಕರ್ಣಿ ತೊಡಕಾಗಿದೆ ಎಂಬುದು ತಕ್ಷಣದ ಕಾರಣವೆಂದು ಶಾಹುರವರು ಹೇಳಿದರು. ಘೋಷಣೆಯ ಪಠ್ಯ ಹೀಗಿದೆ: "ರಾಯತರಲ್ಲಿ ಜ್ಞಾನವನ್ನು ಪ್ರಸರಿಸಲಾಗಿದೆ ಮತ್ತು ರಾಯತರಿಗೆ ಹೆಚ್ಚಿನ ಹಕ್ಕುಗಳನ್ನು ಕೊಡುವುದಕ್ಕೆ ಕಾಲ ಒದಗಿ ಬಂದಿದೆ. ಬಿಕನೇರ್ ಮತ್ತು ಟ್ರಾವಂಕೂರ್ ಮೊದಲಾದ ಸಂಸ್ಥಾನಗಳಲ್ಲಿ ಪ್ರಜೆಗಳಿಗೆ ಪಂಚಾಯಿತಿಗಳನ್ನು ಕೊಡಲಾಗಿದೆ. ಮಾನ್ಯ ಮಹಾರಾಜರು ತಮ್ಮ ಸಂಸ್ಥಾನದಲ್ಲಿ ಅದನ್ನೇ ಅನುಸರಿಸಲು ಯೋಚಿಸುತ್ತಿದ್ದಾರೆ. ಆದರೆ ಈ ದಾರಿಯಲ್ಲಿ ಕುಲಕರ್ಣಿ ವತನದಾರ ಒಂದು ಅಡ್ಡಿಯಾಗಿದೆ. ಸಮಾಜವು ಅಜ್ಞಾನದ ಸ್ಥಿತಿಯಲ್ಲಿದ್ದಾಗ ಕುಲಕರ್ಣಿ ವತನ ಅಗತ್ಯವಾಗಿತ್ತು. ಆದರೆ ಕಾಲ ಬದಲಾಗಿದೆ. ವತನ ಕುಲಕರ್ಣಿ ಅಧಿಕಾರದಲ್ಲಿದ್ದಾಗ ಗ್ರಾಮಪಂಚಾಯಿತಿಯನ್ನು ಸ್ಥಾಪಿಸಿದರೆ ಎಲ್ಲಾ ಅಧಿಕಾರ ಆ ವ್ಯಕ್ತಿಯಲ್ಲಿ ಮತ್ತು ಆ ವ್ಯಕ್ತಿಯ ಕೆಲವು ಸಹೋದರರಲ್ಲಿ ಕೇಂದ್ರೀಕೃತವಾಗುತ್ತದೆ ಮತ್ತು ಇದು ಹೆಚ್ಚು ರೈತರ ಹಿತಾಸಕ್ತಿಗಳಿಗೆ ಖಂಡಿತವಾಗಿ ಧಕ್ಕೆಯಾಗುತ್ತದೆ. ವತನದಾರ ಪಾಟೀಲರು ಈ ಕೃಷಿ ಸಮುದಾಯದ ಭಾಗವಾಗಿದ್ದಾರೆ, ಗ್ರಾಮಪಂಚಾಯಿತಿಗೆ ಅಪಾಯವುಂಟುಮಾಡುತ್ತಾರೆ. ಗ್ರಾಮಪಂಚಾಯಿತಿಗಳನ್ನು ಸಫಲವನ್ನಾಗಿ ಮಾಡಬೇಕಾದರೆ ವತನದಾರಿ ಕುಲಕರ್ಣಿ ಪದ್ಧತಿಯನ್ನು ಕಿತ್ತುಹಾಕಬೇಕಾಗಿದೆ. ಹೀಗಿರುವಾಗ ಇಲ್ಲಿಂದ ಮುಂದಕ್ಕೆ ಈ ವ್ಯವಸ್ಥೆಯನ್ನು ಮುಚ್ಚಿಹಾಕಬೇಕು ಮತ್ತು ತಲಾಠಿ*ಯನ್ನು ಕೂಲಿಯ ಆಧಾರದ ಮೇಲೆ ನೇಮಿಸಬೇಕು ಮತ್ತು ಹಳ್ಳಿಯ ವ್ಯವಹಾರವನ್ನು ಅವನಿಗೆ ಬಿಟ್ಟುಕೊಡಬೇಕು".

"ಇಂದು ಸಕ್ರಿಯವಾಗಿರುವ ಕುಲಕರ್ಣಿಗಳಲ್ಲಿ ಹೆಚ್ಚಿನವರು ಒಳ್ಳೆಯ ಹೆಸರನ್ನು ಪಡೆದಿಲ್ಲ. ಅವರೆಲ್ಲರೂ ಅನುಭೋಗದ ಹಕ್ಕಿನ ಪ್ರಕಾರ ಕೆಲಸ ಮಾಡುತ್ತಿದ್ದಾರೆ. ವತನದಾರರು ವತನಭೂಮಿಯ ಮೇಲೆ ಯಾವುದೇ ಹಕ್ಕನ್ನು ಹೊಂದಿಲ್ಲ. ಅವನು ಕೆಲಸದಲ್ಲಿರುವವರೆಗೆ ಅದನ್ನು ಅನುಭವಿಸುವ ಹಕ್ಕನ್ನು ಪಡೆದಿದ್ದಾನೆ. ಆದರೆ ಅವರ ಮಹಾರಾಜರು ಕುಲಕರ್ಣಿಯ ಸ್ವಾಧೀನದಲ್ಲಿರುವ ಭೂಮಿಗಳನ್ನು ಸ್ವಾಧೀನಪಡಿಸಿಕೊಳ್ಳದೆ

---

* ತಲಾಠಿಯು ಸರಕಾರದಿಂದ ದಿನಕೂಲಿಯ ಮೇರೆಗೆ ನೇಮಕಗೊಂಡ ಹಳ್ಳಿಯ ಕಂದಾಯ ಅಧಿಕಾರಿ.

ಉದಾರವಾಗಿ ಅವನೇ ಇಟ್ಟುಕೊಳ್ಳುವಂತೆ ಬಿಟ್ಟುಕೊಡಬಹುದು. ಇದರ ಜೊತೆಗೆ ಈಗಿಲ್ಲದಿರುವ ಭೂಮಿಯ ಸ್ವಾಮ್ಯತೆಯ ಹಕ್ಕನ್ನು ಸಂಪೂರ್ಣವಾಗಿ ಅವರಿಗೆ ಒಡೆತನದ ಹಕ್ಕನ್ನು ಕೊಡಬಹುದು. ಸದ್ಯದ ಪರಿಸ್ಥಿತಿಯಲ್ಲಿ ಅವರು ತಮ್ಮ ಭೂಮಿಯನ್ನು ಒತ್ತೆಯಿಡುವಂತಿಲ್ಲ ಅಥವಾ ಅದನ್ನು ಮಾರುವಂತಿಲ್ಲ ಅಥವಾ ದಾನ ಮಾಡುವಂತಿಲ್ಲ ಅಥವಾ ಉಯಿಲು ಮೂಲಕ ಬೇರೆಯವರಿಗೆ ಕೊಡುವಂತಿಲ್ಲ. ಆದರೆ ಅವರು ಒಮ್ಮೆ ರಾಯತವಾರಿ ಹಕ್ಕುಗಳನ್ನು ಪಡೆದ ಮೇಲೆ ಅವರಿಗೆ ಅಂತಹ ಎಲ್ಲಾ ವ್ಯವಹಾರಗಳನ್ನು ಮಾಡಲು ಅವಕಾಶವಿರುತ್ತದೆ. ಅಂತಹ ಹಕ್ಕುಗಳನ್ನು ಪಡೆಯುವುದು ಅವರಿಗೆ ಪ್ರಯೋಜನವಾಗುತ್ತದೆ".[11]

ಈ ವಿಧದಲ್ಲಿ ಹಳ್ಳಿಯಲ್ಲಿ ವತನದಾರ ಕುಲಕರ್ಣಿ ಪದ್ಧತಿಯ ಬದಲಿಗೆ ಕೂಲಿಯ ತಲಾಠಿ ಪದ್ಧತಿಯನ್ನು ತರಲು ಈ ಘೋಷಣೆ ಉದ್ದೇಶಿಸಿದೆ. ನಿಜವಾಗಿ ವತನ ಪದ್ಧತಿಯನ್ನು ಮುಟ್ಟುಗೋಲು ಹಾಕಿಕೊಂಡ ತಕ್ಷಣವೇ ವತನಿ ಭೂಮಿಗಳು ಸರಕಾರದಲ್ಲಿ ಸಂಚಿತವಾಗಬೇಕು. ಆದರೆ ಮಹಾರಾಜರು ಕುಲಕರ್ಣಿಯ ಬಗ್ಗೆ ಸೇಡಿನ ಮನೋಭಾವ ಹೊಂದದೆ ಔದಾರ್ಯದಿಂದ ಅದನ್ನು ರಾಯತ್ವ**ವನ್ನಾಗಿ ಪರಿವರ್ತಿಸುವ ಮೂಲಕ ಅವನನ್ನು ಭೂಮಿಯ ಮಾಲಿಕನನ್ನಾಗಿ ಮಾಡಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಅವನು ಹೊಂದಿರುವ ವಿಚಿತ್ರವಾದ 'ಉಡುಗೊರೆ'ಗಳನ್ನು ತ್ಯಜಿಸಿದ್ದಾನೆ. ಇಲ್ಲದಿದ್ದರೆ ಭೂಮಿಯ ಸ್ಥಾನಮಾನದ ಪರಿವರ್ತನೆಗಾಗಿ ಭೂಮಿಯ ಶುಲ್ಕಗಳನ್ನು ಕಟ್ಟಬೇಕಾಗಿತ್ತು.[12] ಆದರೆ ವತನವನ್ನು ಮುಟ್ಟುಗೋಲು ಹಾಕಿಕೊಂಡಿದ್ದರ ಬಗ್ಗೆ ಕುಲಕರ್ಣಿಗಳಲ್ಲಿ ಮತ್ತು ಅವರ ಬೆಂಬಲಿಗರಾದ ಬ್ರಾಹ್ಮಣರಲ್ಲಿರುವ ತೀವ್ರ ಬೇಗುದಿಯಿಂದ ಅವರೆಲ್ಲರೂ ಶಾಹುರವರ ಉದಾರತೆಯ ಬಗ್ಗೆ ಎಳ್ಳಷ್ಟೂ ಕೃತಜ್ಞತೆಯನ್ನು ವ್ಯಕ್ತಪಡಿಸಲಿಲ್ಲ.

ಈ ವಿಷಯದ ಬಗ್ಗೆ ಬ್ರಿಟಿಷ್ ಸರಕಾರದ ಮನೋಭಾವ ಏನೆಂದು ತಿಳಿಯಲು ಶಾಹುರವರು ಹೊರಡಿಸಿದ ಕುಲಕರ್ಣಿ ವತನಗಳ ಮುಟ್ಟುಗೋಲು ಆಜ್ಞೆಯನ್ನು ಸ್ವಲ್ಪ ಸಮಯಕ್ಕೆ ಅಮಾನತುಗೊಳಿಸಿದರು. ಅದನ್ನು ಕೊನೆಗೆ ಜುಲೈನಲ್ಲಿ ಜಾರಿಗೊಳಿಸಿದರು. ಈ ಮಧ್ಯೆ ಕರವೀರದ ಶಂಕರಾಚಾರ್ಯ ಡಾ. ಕುರ್ತುಕೋಟಿಯವರು ಈವರೆಗೆ ಶಾಹುರವರ ಬೆಂಬಲಿಗರಾಗಿದ್ದವರು ಬ್ರಾಹ್ಮಣ ನೌಕರಶಾಹಿಯ ಪ್ರಭಾವಕ್ಕೊಳಗಾಗಿ ಬಹಿರಂಗವಾಗಿ ಕುಲಕರ್ಣಿಗಳ ಪರವಾಗಿ ಬೆಂಬಲಿಸಿದರು. ತಮ್ಮ ಮಠದಲ್ಲಿ ನಡೆದ ವತನದಾರ ಕುಲಕರ್ಣಿಗಳ ಮೊದಲ ಸಭೆಯ ಅಧ್ಯಕ್ಷತೆಯನ್ನು ಶಂಕರಾಚಾರ್ಯರೇ ವಹಿಸಿದ್ದರು. ಅವರು ಕುಲಕರ್ಣಿಗಳ ಪರವಾಗಿ ಶಾಹುರೊಡನೆ ಪತ್ರವ್ಯವಹಾರ ನಡೆಸಿದರು.[13] ಶಾಹುರವರು ಅವರಿಗೆ ಪ್ರತ್ಯುತ್ತರ ನೀಡಿದ ಅವರ ಪತ್ರವು ಲಭ್ಯವಿದೆ. ಶಾಹುರವರು ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಬೌದ್ಧಿಕವಾದಗಳನ್ನು ಮಂಡಿಸಿದ್ದಾರೆ.

ಆ ವಾದದಲ್ಲಿ ಮುಖ್ಯ ಅಂಶಗಳು ಹೀಗಿವೆ. (೧) ಕುಲಕರ್ಣಿ ವತನಗೆ ಸಂಬಂಧಿಸಿದ ಆಜ್ಞೆ ಬ್ರಾಹ್ಮಣ-ಬ್ರಾಹ್ಮಣೇತರರಿಗೆ ಸಂಘರ್ಷಕ್ಕೆ ಸಂಬಂಧಿಸಿಯೇ ಇಲ್ಲ. ಈ ಸಂಘರ್ಷ ತುಂಬಾ ಹಳೆಯದು. (೨) ಕುಲಕರ್ಣಿ ವತನವನ್ನು ಮುಟ್ಟುಗೋಲು ಹಾಕಿಕೊಂಡಿದ್ದರೂ ಅವರ ಭೂಮಿಗಳನ್ನು ಹಾಗೆಯೆ ಉಳಿಸಿಕೊಳ್ಳಲಾಗಿದೆ. ಹೀಗಿರುವಾಗ ಅವರು ಆರ್ಥಿಕವಾಗಿ ಸಂಕಟಕ್ಕೆ ಒಳಗಾಗಿಲ್ಲ. (೩) ಮೊದಲಿಗೆ,

---

** ರೈತಾಪಿ ವರ್ಗದ ಮೇಲೆ ವಿಧಿಸಿದ ಭೂ-ಕಂದಾಯ.

ಕುಲಕರ್ಣಿಯವರು ತಪ್ಪು ಮಾಡಿದರೆ ಸರಕಾರ ಅವರ ಆದಾಯವನ್ನು ವಶಪಡಿಸಿಕೊಳ್ಳುವ ಅಪಾಯಕ್ಕೆ ಗುರಿಯಾಗಿದ್ದರು. ಈಗ ಅವರು ಅಂಥ ಯಾವ ಅಪಾಯಕ್ಕೆ ಗುರಿಯಾಗಿಲ್ಲ. ಇದು ಅವರಿಗೆ ಲಾಭವಾಗಿಲ್ಲವೆ? (೪) ವಾಸ್ತವಿಕವಾಗಿ, ಹಳ್ಳಿಯ ಲೆಕ್ಕಪತ್ರದ ಕೆಲಸವು ಗುಣಾತ್ಮಕವಾದ ಕೆಲಸವಲ್ಲ. ಹೆಚ್ಚು ಅರ್ಹತೆಯನ್ನು ಪಡೆದಿರುವ ಕುಲಕರ್ಣಿಯಂತಹ ಕೆಲಸಗಳು ಕಡಿಮೆ-ದರ್ಜೆಯ ಕೆಲಸಗಳಲ್ಲಿ ತೊಡಗಿಸುವುದು ಅವರಿಗೆ ಅಥವಾ ಸಮಾಜಕ್ಕೆ ಪ್ರಯೋಜನಕಾರಿಯಲ್ಲ. ಹೀಗಿರುವಾಗ, ಅವರು ತಮ್ಮ ಬುದ್ಧಿಮತ್ತೆಯನ್ನು ಸಮಾಜದ ಒಳಿತಿಗಾಗಿ ಇತರೆ ಕ್ಷೇತ್ರಗಳಲ್ಲಿ ಸದುಪಯೋಗಪಡಿಸಿಕೊಳ್ಳಲಿ. (೫) ಕುಲಕರ್ಣಿಯ ಕುಟುಂಬದ ಇತರೆ ಸದಸ್ಯರು ಈ ವತನ ಕೆಲಸದಲ್ಲಿ ಸೇರದಿದ್ದವರು ತಮ್ಮ ಸ್ವತಂತ್ರವಾದ ಸಾಮರ್ಥ್ಯಗಳಿಂದ ಸಮಾಜದಲ್ಲಿ ಉತ್ಕೃಷ್ಟರಾಗಿದ್ದಾರೆ. (೬) ಇದರ ಜೊತೆಗೆ, ಅಂಥ ಸಣ್ಣಪುಟ್ಟ ಕೆಲಸಗಳಲ್ಲಿ ತೊಡಗಿರುವ ಕುಲಕರ್ಣಿಗಳನ್ನು ಮುಕ್ತಗೊಳಿಸುವುದರಿಂದ ಅವರ ಬ್ರಾಹ್ಮಣತ್ವದ ತೇಜಸ್ಸು ಮಾತ್ರ ಹೆಚ್ಚುತ್ತದೆ. (೭) ವಾಸ್ತವಿಕವಾಗಿ, ಕುಲಕರ್ಣಿಗಳು ತಮ್ಮ ವತನುಗಳ ಅಥವಾ ಆರ್ಥಿಕ ನಷ್ಟಕ್ಕಾಗಿ ಅವರು ಕೊರಗುತ್ತಿಲ್ಲ, ತಮ್ಮ ಕೈಗಳಿಂದ ನೌಕರಶಾಹಿಯ ಅಧಿಕಾರ ಜಾರಿಹೋಗುತ್ತಿದೆಯೆಂದು ಸಂಕಟಪಡುತ್ತಿದ್ದಾರೆ. (೮) ಈಗಿನ ಕಾಲ ಅಂಥ ನೌಕರಶಾಹಿಯ ಎಲ್ಲ ವಿಧದ ಕೆಲಸಗಳನ್ನು ಅಳಿಸಿಹಾಕುತ್ತಿದೆ. ಬ್ರಾಹ್ಮಣರಲ್ಲದೆ ಮಹಾರಾಜರು ಮತ್ತು ಕುಲೀನರು (ಶ್ರೀಮಂತವರ್ಗ) ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವುದಕ್ಕಾಗಿ ತಮ್ಮ ಅಧಿಕಾರವನ್ನು ಬಿಟ್ಟುಕೊಡಲು ಸಿದ್ಧರಾಗಬೇಕಲ್ಲವೆ? (೯) ಬ್ರಿಟಿಷ್ ಸರಕಾರವು ತನ್ನ ನೌಕರಶಾಹಿಯ ಬಗ್ಗೆ ಗಮನಕೊಡದಿದ್ದರೂ ಭಾರತ ಜನರಿಗೆ ಹಕ್ಕುಗಳನ್ನು ಕೊಟ್ಟಿದೆ.[14]

ಪತ್ರದ ಕೊನೆಗೆ ಶಾಹುರವರು ಶಂಕರಾಚಾರ್ಯರನ್ನು ಪ್ರಾರ್ಥಿಸುವ ಒಂದು ಟಿಪ್ಪಣಿಯನ್ನು ಲಗತ್ತಿಸಿದ್ದರು. ಅದು ಸಾಮಾಜಿಕ ದೃಷ್ಟಿಯಿಂದ ಅತಿಮುಖ್ಯವಾದದ್ದು. ಅದು ಹೇಳುತ್ತದೆ: "ಸಾಮಾಜಿಕ ಸುಧಾರಣೆಗಳನ್ನು ಕಾರ್ಯಗತಗೊಳಿಸುವುದು ಸ್ವಾಮಿಗಳಿಗೆ (ಶಂಕರಾಚಾರ್ಯ) ಸೇರಿದ್ದು. ಸ್ವಾಮಿಗಳು ಅದನ್ನು ಜಾರಿಗೊಳಿಸಲು ಒಂದು ರೀತಿಯ ಆಂದೋಲನವನ್ನು ಪ್ರಾರಂಭಿಸಬೇಕು. ಬ್ರಾಹ್ಮಣ, ಮರಾಠ ಮೊದಲಾದ ನೌಕರಶಾಹಿಗಳು ಅಸ್ಪೃಶ್ಯರನ್ನು ನಾಯಿ, ಬೆಕ್ಕುಗಳಿಗಿಂತ ಕೀಳಾಗಿ ನೋಡುತ್ತಾರೆಂಬುದು ನೋವಿನ ಸಂಗತಿಯಾಗಿದೆ. ಆದ್ದರಿಂದ ಸ್ವಾಮಿಗಳು ಎಲ್ಲಾ ಮಾನವರು ಮನುಷ್ಯತ್ವ ಹೊಂದಿದ್ದಾರೆಂಬುದನ್ನು ಸ್ಥಾಪಿಸಬೇಕೆಂದು ನಾನು ಆಶಿಸುತ್ತೇನೆ".[15] ಶಂಕರಾಚಾರ್ಯರು ಮಾನವರಲ್ಲಿ ಮನುಷ್ಯತ್ವವನ್ನು ಬೋಧಿಸಲು ಪ್ರಯತ್ನಿಸಬೇಕೆಂದು ಶಾಹು ನಿರೀಕ್ಷಿಸಿದ್ದು ಮಾತ್ರವಲ್ಲದೆ ಅವರು ಬ್ರಾಹ್ಮಣ ನೌಕರಶಾಹಿಯೊಂದಿಗೆ ಮರಾಠ ನೌಕರಶಾಹಿಯನ್ನು ಸೇರಿಸಿದ್ದರು. ಬ್ರಾಹ್ಮಣ ನೌಕರಶಾಹಿಯಂತೆ ಮರಾಠ ನೌಕರಶಾಹಿಯು ಸಹ ಅಸ್ಪೃಶ್ಯರನ್ನು ಸಹ ಮನುಷ್ಯರೆಂದು ಪರಿಗಣಿಸುವುದಿಲ್ಲ ಎಂಬುದನ್ನು ಸಹ ಪ್ರಚಾರಗೊಳಿಸಿದರು.

ಶಾಹುರವರು ನೌಕರಶಾಹಿಯನ್ನು ಸೀಮಿತ ಅರ್ಥದಲ್ಲಿ ಬಳಸಿಲ್ಲ. ಶಾಹುರವರ ಪ್ರಕಾರ ಯಾವುದೇ ಸಾಮಾಜಿಕ ಪದ್ಧತಿಯು ತನ್ನ ಹಕ್ಕು ಮತ್ತು ಸವಲತ್ತುಗಳ ಪ್ರಯೋಜನಗಳನ್ನು ಬಳಸಿಕೊಂಡು ಏಕಸ್ವಾಮ್ಯತೆಯನ್ನು ನಿರ್ಮಿಸಿ, ತನ್ನ ಯಜಮಾನಿಕೆಯನ್ನು ಸ್ಥಾಪಿಸಿಕೊಂಡು ದುರ್ಬಲ ವರ್ಗಗಳನ್ನು ಶೋಷಿಸುವುದೇ ಆಡಳಿತಶಾಹಿ. ಪರಿಸ್ಥಿತಿಗಳಿಗೆ ಅನುಗುಣವಾಗಿ ಅದರ ರೂಪ ಸಾಮಾಜಿಕ, ಧಾರ್ಮಿಕ ಅಥವಾ ರಾಜಕೀಯವಾಗಿರಬಹುದು. ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳ ಯುಗದಲ್ಲಿ ಆಡಳಿತಶಾಹಿಯ ನಾಶ ಕಾಲಕ್ಕೆ ಅನುಗುಣವಾಗಿರುತ್ತದೆ. ಶಾಹುರವರು ತನ್ನ ರಾಜಪ್ರಭುತ್ವವನ್ನು ಅಪವಾದವನ್ನಾಗಿ ಮಾಡಲಿಲ್ಲ. ಸೂಕ್ತ ಸಮಯದಲ್ಲಿ ಬೇಗನೆ ಅಥವಾ ನಂತರ, ತನ್ನ ರಾಜಪ್ರಭುತ್ವ ನಾಶವಾಗುವುದೆಂದು

ಮತ್ತು ತಾನು ಜನತಾಂತ್ರಿಕ ಹಕ್ಕುಗಳನ್ನು ಜನರಿಗೆ ನೀಡಬೇಕಾಗಿದೆಯೆಂದು ಸಂಪೂರ್ಣವಾಗಿ ಅರಿತಿದ್ದರು. ಈ ವಿಷಯದ ಬಗ್ಗೆ ಅವರು ಸಾರ್ವಜನಿಕವಾಗಿ ಹೇಳಿಕೆಗಳನ್ನು ಕೊಟ್ಟಿದ್ದರೆಂದು ತೋರುತ್ತದೆ.[16]

## ಬ್ರಾಹ್ಮಣ ದ್ವೇಷ ಸುಳ್ಳು ಆರೋಪ

ಹಿಂದುಳಿದ ವರ್ಗಗಳ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳನ್ನು ಪಡೆಯುವ ಸಲುವಾಗಿ ಶಾಹುರವರು ಬ್ರಾಹ್ಮಣರ ನೌಕರಶಾಹಿಯ ವಿರುದ್ಧ ತಮ್ಮ ಇಡೀ ಜೀವನ ಕಳೆದರು. ಹೋರಾಟದ ಕಾಲದಲ್ಲಿ ಬ್ರಾಹ್ಮಣವರ್ಗ ಅವರ ವಿರುದ್ಧ ತಿರುಗಿಬಿದ್ದರು. ಫುಲೆಯವರ ಮೇಲೆ ತಿರುಗಿಬಿದ್ದಂತೆ ಮತ್ತು ಶಾಹು ಬ್ರಾಹ್ಮಣರ ವಿರುದ್ಧ ದ್ವೇಷ ಬೆಳೆಸುತ್ತಿದ್ದಾರೆಂದು ಆರೋಪಿಸಲಾಯಿತು. ಆದರೆ ಸಮಕಾಲೀನ ದಾಖಲೆಗಳ ಬಲದ ಮೇರೆಗೆ ಈ ಆರೋಪವು ಬರಿ ಸುಳ್ಳೆಂದು ಚರ್ಚಿಸುವುದಕ್ಕೆ ಸೂಕ್ತವೆನಿಸುತ್ತದೆ. ಹಲವು ವಿದ್ವಾಂಸರು ಇಲ್ಲಿಯವರೆಗೆ ಶಾಹುರವರು ಬ್ರಾಹ್ಮಣ ವಿರೋಧಿ ಅಲ್ಲ, ಅವರು ಬ್ರಾಹ್ಮಣತ್ವದ ವಿರೋಧಿ ಎಂದು ಹೇಳುತ್ತಾ ಬಂದಿದ್ದಾರೆ. ಈ ಅಭಿಪ್ರಾಯವನ್ನು ಬೆಂಬಲಿಸುವುದಕ್ಕೆ ಸಾಕಷ್ಟು ಸಮರ್ಥ ದೃಢೀಕರಿಸಲ್ಪಟ್ಟ ಸಾಕ್ಷ್ಯಗಳು ಸಿಕ್ಕಿವೆ. ಅವುಗಳನ್ನು ಅವರ ಭಾಷಣಗಳಲ್ಲಿ ಮತ್ತು ಪ್ರಕಟಿಸಿದ ಆಡಳಿತಾತ್ಮಕ ಆಜ್ಞೆಗಳಲ್ಲಿ ಪಡೆಯಬಹುದು.

ಶಾಹುರವರು ಉದಾರವಾದಿ, ಸುಧಾರಣಾವಾದಿ ಬ್ರಾಹ್ಮಣ ನಾಯಕರಾದ ನ್ಯಾಯಮೂರ್ತಿ ರಾನಡೆ, ಗೋಪಾಲಕೃಷ್ಣ ಗೋಖಲೆ, ಆಗರ್‌ಕರ್ ಅವರ ಬಗ್ಗೆ ಅಪಾರ ಗೌರವ ಭಾವನೆ ಹೊಂದಿದ್ದರು. ಹಲವಾರು ಸಂದರ್ಭಗಳಲ್ಲಿ ಶಾಹುರವರು ಸಾಮಾಜಿಕ ಸುಧಾರಣೆಗಳ ವಿಷಯಗಳ ಬಗ್ಗೆ ರಾನಡೆ ಮತ್ತು ಗೋಖಲೆಯವರೊಂದಿಗೆ ಚರ್ಚಿಸಿ, ಅವರ ಸಲಹೆಗಳನ್ನು ತೆಗೆದುಕೊಂಡ ಸಂಗತಿಗಳು ದಾಖಲೆಗಳಾಗಿವೆ. ಹುಬ್ಬಳ್ಳಿಯ ಬ್ರಾಹ್ಮಣೇತರರ ಸಾಮಾಜಿಕ ಸಮ್ಮೇಳನದಲ್ಲಿ ಅಧ್ಯಕ್ಷೀಯ ಭಾಷಣ ಮಾಡುತ್ತಾ ಈ ಬ್ರಾಹ್ಮಣ ನಾಯಕರ ಉದಾರವಾದವನ್ನು ಮೆಚ್ಚಿಕೊಳ್ಳುತ್ತಾ ಹೇಳುತ್ತಾರೆ: "ಅವರ ಕಲಿಕೆಯ ಸಂರಕ್ಷಣೆ ಮತ್ತು ಜ್ಞಾನದ ಜ್ಯೋತಿ ಆರದಂತೆ ಉಳಿಸಿದ್ದಕ್ಕೆ ಹಲವು ಬಾರಿ ನಾವು ಬ್ರಾಹ್ಮಣರಿಗೆ ಅಭಿನಂದನೆ ಮತ್ತು ಕೃತಜ್ಞತೆಗಳನ್ನು ಸಲ್ಲಿಸಬೇಕಾಗಿದೆ. ಆದರೆ ಉದಾರವಾದಿ ಬ್ರಾಹ್ಮಣರಾದ ರಾನಡೆ, ಗೋಖಲೆ ಮತ್ತು ಆಗರ್‌ಕರ್ ಅವರು ಒಂದು ವೇಳೆ ಆ ದಿನಗಳಲ್ಲಿ ಅಸ್ತಿತ್ವದಲ್ಲಿದ್ದಿದ್ದರೆ ಅವರು ಖಂಡಿತವಾಗಿ ಜ್ಞಾನವನ್ನು ಪ್ರಸರಿಸುತ್ತಿದ್ದರು. ವಿದ್ಯೆಯಿಂದ ಇತರರನ್ನು ವಂಚಿತಗೊಳಿಸಿ ಪ್ರತ್ಯೇಕವಾಗಿಡುವ ಸ್ವಾರ್ಥಪರ ಆಚರಣೆ (ಪದ್ಧತಿ) ಪ್ರಾರಂಭವಾಗಿದ್ದನ್ನು ಖಂಡಿತವಾಗಿ ತಪ್ಪಿಸುತ್ತಿದ್ದರು. ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಭೇದವು ಅಸ್ತಿತ್ವಕ್ಕೆ ಬರುತ್ತಿರಲಿಲ್ಲ ಮತ್ತು ಬ್ರಾಹ್ಮಣೇತರರ ಪ್ರತ್ಯೇಕ ಸಮ್ಮೇಳನ ಕರೆಯುವ ಸಂದರ್ಭವೇ ಒದಗುತ್ತಿರಲಿಲ್ಲ".[17] ಗೋಖಲೆಯವರು ೧೯೧೫ರಲ್ಲಿ ತೀರಿಕೊಂಡರು. ಶಾಹುರವರಿಗೆ ಗೋಖಲೆಯವರ ಸಾಮಾಜಿಕ ಸಾಧನೆಗಳ ಬಗ್ಗೆ ಅಪಾರ ಗೌರವವಿದ್ದುದರಿಂದ ಅವರು ಸತ್ತ ದಿನ ಇಡೀ ಕೊಲ್ಹಾಪುರ ಸಂಸ್ಥಾನದಲ್ಲಿ ಸಾರ್ವಜನಿಕ ಶೋಕಾಚರಣೆಯನ್ನು ಆಚರಿಸಲಾಯಿತು ಮತ್ತು ಸರಕಾರಿ ಕಛೇರಿ ಮತ್ತು ಶಾಲಾ ಕಾಲೇಜುಗಳಿಗೆ ರಜೆ ಘೋಷಿಸಿ ಗೌರವ ನಮನ ಸಲ್ಲಿಸಲಾಯಿತು.[18]

ಪುಣೆ ಬ್ರಾಹ್ಮಣ ಆಡಳಿತಶಾಹಿಗೆ ಮುಖ್ಯ ಕೇಂದ್ರವಾಗಿತ್ತು. ಬ್ರಾಹ್ಮಣವರ್ಗ ಅಲ್ಲಿ ಶಾಹು ಮಹಾರಾಜರು ಬ್ರಾಹ್ಮಣದ್ವೇಷಿಯೆಂದು ಪ್ರಚಾರ ಮಾಡಲಾಯಿತು. ಪುಣೆಯಲ್ಲಿದ್ದ ದಿನಪತ್ರಿಕೆಗಳು ಅವರು ಹಿಂದುಳಿದ ವರ್ಗಗಳ ಸಮ್ಮೇಳನದಲ್ಲಿ ಮಾಡಿದ ಭಾಷಣವನ್ನು ತಿರುಚಿದವು ಮತ್ತು ಬ್ರಾಹ್ಮಣಜಾತಿಯ ಪ್ರಗತಿಯನ್ನು ಹಾಳುಮಾಡಲು ಸಂಚುಹೂಡುತ್ತಿರುವ ಪ್ರಚಂಡ ಬುದ್ಧಿವಂತಶೀಲನೆಂದು ಕರೆದವು. ಈ ಆರೋಪಕ್ಕೆ

ಉತ್ತರಿಸುತ್ತ ಇಂದು ಸಭೆಯಲ್ಲಿ ಶಾಹು ಹೇಳಿದರು[16]: "ನಾನು ಜಾತಿಪಕ್ಷಪಾತ ಮಾಡುತ್ತಿದ್ದೇನೆಂದು ಪುಣೆಯ ನಗರದ ಹಲವರು ನನ್ನ ವಿರುದ್ಧ ಹಲವಾರು ಆರೋಪಗಳನ್ನು ಮಾಡಿ ನನ್ನ ಜಾತಿಯನ್ನು ಹೆಸರಿಸಿದ್ದಾರೆ. ನಾನು ಸ್ಪಷ್ಟವಾಗಿ ಇದನ್ನು ಸುಳ್ಳೆಂದು ನಿರಾಕರಿಸುತ್ತೇನೆ. ಶಿವಾಜಿ ಮಹಾಶಯನ ಹೆಸರಿಗೆ ಅಥವಾ ಸಿಂಹಾಸನಕ್ಕೆ ಅಪಕೀರ್ತಿ ತರುವಂತಹ ರೀತಿಯಲ್ಲಿ ನಾನು ವರ್ತಿಸುವುದು ಅಸಾಧ್ಯ. ನಾನು ಸಿಂಹಾಸನವೇರಿದ ನಂತರ ಹಿಂದುಳಿದ ವರ್ಗಗಳ ಕಲ್ಯಾಣಕ್ಕೆ ನಾನು ಹಲವಾರು ಕೆಲಸಗಳನ್ನು ಮಾಡಿದ್ದೇನೆ. ಆದರೆ ನಾನು ಬ್ರಾಹ್ಮಣರನ್ನು ದ್ವೇಷಿಸುತ್ತೇನೆಂದು ಅದರ ಅರ್ಥವಲ್ಲ. ಅನೇಕ ಬ್ರಾಹ್ಮಣರು ನನ್ನ ಆತ್ಮೀಯ ಸ್ನೇಹಿತರು, ಅಧಿಕಾರಿಗಳು ಮತ್ತು ಸಲಹೆಗಾರರಾಗಿದ್ದಾರೆ. ನಾನು ಬ್ರಾಹ್ಮಣರಿಗೆ ಅನೇಕ ಇನಾಮುಗಳನ್ನು ನೀಡಿದ್ದೇನೆ. ಮತ್ತು ಅವರ ಜಾತಿಯ ಕಲ್ಯಾಣವನ್ನು ಬಯಸಿದ್ದೇನೆ".[19]

ಶಾಹುರವರ ಆಡಳಿತಾವಧಿಯಲ್ಲಿ ಸಂಸ್ಥಾನದ ಉದ್ಯೋಗದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಪ್ರಮಾಣ (ಅನುಪಾತ) ಈ ಕೆಳಗಿನಂತಿದೆ: ೧೮೯೪ರಲ್ಲಿ ಅವರ ಪಟ್ಟಾಭಿಷೇಕದ ಸಮಯದಲ್ಲಿ ಆಡಳಿತದ ೭೧ ಉದ್ಯೋಗಿಗಳಲ್ಲಿ ೬೭ ಜನ ಬ್ರಾಹ್ಮಣರಿದ್ದರೆ ೪ ಜನ ಬ್ರಾಹ್ಮಣೇತರರಿದ್ದರು. ೧೯೨೨ರಲ್ಲಿ ಅವರ ಆಡಳಿತದ ಕೊನೆಯಲ್ಲಿ ೯೫ ಉದ್ಯೋಗಿಗಳಲ್ಲಿ ೩೬ ಜನ ಬ್ರಾಹ್ಮಣರಿದ್ದರೆ ೫೯ ಜನ ಉದ್ಯೋಗಿಗಳು ಬ್ರಾಹ್ಮಣೇತರರಿದ್ದರು. ೧೮೯೪ರಲ್ಲಿ ಅವರ ವೈಯಕ್ತಿಕ (ಖಾಸಗಿ) ಸಿಬ್ಬಂದಿಯಲ್ಲಿ ೪೬ ಬ್ರಾಹ್ಮಣರಿದ್ದರೆ ೭ ಜನ ಬ್ರಾಹ್ಮಣೇತರರಿದ್ದರು. ನಂತರ ತನ್ನ ವೈಯಕ್ತಿಕ (ಖಾಸಗಿ) ಸೇವಾ ಸಿಬ್ಬಂದಿಯಲ್ಲಿ ಬ್ರಾಹ್ಮಣೇತರರ ಸಂಖ್ಯೆ ಹೆಚ್ಚಾಯಿತು. ೧೯೨೨ರಲ್ಲಿ ೧೫೨ ಉದ್ಯೋಗಿಗಳಲ್ಲಿ ೪೩ ಜನ ಬ್ರಾಹ್ಮಣರಿದ್ದರೆ, ೧೦೯ ಜನ ಅಬ್ರಾಹ್ಮಣರಿದ್ದರು.[20] ಬ್ರಾಹ್ಮಣೇತರರ ಏಳಿಗೆಯೇ ಮಹಾರಾಜರ ಧೋರಣೆಯಾದ್ದರಿಂದ ಬ್ರಾಹ್ಮಣೇತರರ ಉದ್ಯೋಗದ ಸಂಖ್ಯೆಯಲ್ಲಿ ಏರಿಕೆಯಾದದ್ದು ಸಹಜವಾಗಿತ್ತು. ಆದರೂ ಬ್ರಾಹ್ಮಣರ ಕಾರ್ಮಿಕಬಲ (ಕೆಲಸಗಾರರ ಬಲ) ಸಾಕಷ್ಟು ಹೆಚ್ಚಾಗಿಯೇ ಇತ್ತು. ಅವರ ಸಂಖ್ಯೆಯನ್ನು ಅವರು ಹಾಗೆ ಮಾಡಲಿಲ್ಲ. ಮಿಗಿಲಾಗಿ ಅವರು ಆಡಳಿತದಲ್ಲಿ ಬ್ರಾಹ್ಮಣ ಅಧಿಕಾರಿಗಳನ್ನು ಹಲವು ಮುಖ್ಯ ಹುದ್ದೆಗಳಾದ ತಮ್ಮ ಆಪ್ತ ಕಾರ್ಯದರ್ಶಿ, ಪೋಲೀಸ್ ಮುಖ್ಯಸ್ಥ, ಮುಖ್ಯ ನ್ಯಾಯಾಧೀಶರು, ಕಿರಿಯ ನ್ಯಾಯಾಧೀಶರು, ಶಿಕ್ಷಣ ನಿರ್ದೇಶಕರು, ಮಹಿಳಾ ಶಿಕ್ಷಣಾಧಿಕಾರಿಣಿ, ತಾಂತ್ರಿಕ ಶಾಲೆಗಳ ಮುಖ್ಯಸ್ಥರು, ಜೇಲರು, ಸಂಸ್ಥಾನ ಪ್ಲೀಡರು ಮತ್ತು ದರ್ಬಾರಿನ ಸರ್ಜನ್ ಮೊದಲಾದವರನ್ನು ನೇಮಕ ಮಾಡಿದರು.[21] ವಿದ್ಯಾಪೀಠದ ಪ್ರೌಢಶಾಲೆಯ ಸಂಸ್ಥಾಪಕ ವಿ. ಡಿ. ತೋಫ್‌ಖಾನೆ ಮತ್ತು ಗುಂಡೋಪಂತ ಪಿಶ್ವಿಕರ್ ಅವರನ್ನು ಧರ್ಮಾಧಿಕಾರಿಯ ವಿಶೇಷ ಹುದ್ದೆಗೆ ನೇಮಿಸಲಾಯಿತು. ಇವರು ತಮ್ಮ ಆತ್ಮೀಯರಾದ ಬ್ರಾಹ್ಮಣರಾಗಿದ್ದರು. ಶಾಹುರವರು ಅವರ ಸಲಹೆಯನ್ನು ಹಲವು ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ತೆಗೆದುಕೊಂಡಿದ್ದರು. ಕೊಲ್ಹಾಪುರ ಸಂಸ್ಥಾನ ಮತ್ತು ಇಂದೋರ್ ಸಂಸ್ಥಾನ ನಡುವೆ ೧೦೦ ಅಂತರ್‌ಜಾತೀಯ ವಿವಾಹಗಳನ್ನು ವ್ಯವಸ್ಥೆಗೊಳಿಸುವ ಅಧಿಕಾರವನ್ನು ಪಿಶ್ವಿಕರ್ ಅವರಿಗೆ ವಹಿಸಿದ್ದರು.

ಶಾಹುರವರು ತೋಫ್‌ಖಾನೆ ಬಗ್ಗೆ ಹೆಚ್ಚು ಮಮಕಾರವನ್ನು ಹೊಂದಿದ್ದರು. ತನ್ನ ಆಪ್ತ ಕಾರ್ಯದರ್ಶಿ ಅವರ ಶಾಲೆಗೆ ಭೂನೀಡಿಕೆಯಲ್ಲಿ ತಡಮಾಡಿದಾಗ ಶಾಹುರವರು ಆಸಕ್ತಿ ವಹಿಸಿದರು ಮತ್ತು ಸೂರ್ಯನ ಉರಿಬಿಸಿಲಿನಲ್ಲಿ ಆರುಗಂಟೆಗಳ ಕಾಲ ನಿಂತುಕೊಂಡಿದ್ದರು. ತೋಫ್‌ಖಾನೆಯವರಿಗೆ ಭೂಮಿ ಲಭ್ಯ ವಾಗುವಂತೆ ಮಾಡಿದರು.[22] ತೋಫ್‌ಖಾನೆಯವರ ಗುಣಗಳು ಪ್ರಭು ಬಗ್ಗೆಯಿದ್ದ ನಿಷ್ಠೆ, ಕಲಿಕೆಯ ಪ್ರೀತಿ, ಪ್ರಾಮಾಣಿಕತೆ, ವಿನಯಶೀಲತೆ, ನಿಸ್ವಾರ್ಥ ಸ್ವಭಾವಗಳು ಮಹಾರಾಜರನ್ನು ಸಮ್ಮೋಹಗೊಳಿಸಿದವು. ತೋಫ್‌ಖಾನೆಯವರು ತಮ್ಮ ನಿಸ್ವಾರ್ಥ ಸ್ವಭಾವದಿಂದ ಸಾಲದಲ್ಲಿ ಮುಳುಗಿದ್ದಾರೆಂದು ಮಹಾರಾಜರಿಗೆ

ತಿಳಿದಾಗ ಮಹಾರಾಜರು ಒಂದು ಆಜ್ಞೆಯನ್ನು ಹೊರಡಿಸಿದರು. ಅದು ಹೇಳುತ್ತದೆ: "ತೋಫ್‌ಖಾನೆಯವರು ನಮ್ಮ ಸ್ನೇಹಿತರು ಮತ್ತು ಅವರು ಯಾರಿಗೂ ಮೋಸ ಮಾಡಿಲ್ಲ. ದಾನದ ಖಾತೆಯಿಂದ ಅವರಿಗೆ ೩,೦೦೦ ರೂ.ಗಳನ್ನು ನೀಡಲಾಗುತ್ತದೆ. ಗೋಖಲೆ ಮತ್ತು ಕರ್‌ಮಾರ್‌ಕರ್ ಹಾಗೆ ಅವರು ನಮ್ಮ ಪಾಲನೆ ಮಾಡುತ್ತಾರೆ. ಹಾಗಿರುವಾಗ ಅವರು ಸಾಲದಲ್ಲಿರುವುದು ನ್ಯಾಯವಲ್ಲ. ಆದ್ದರಿಂದ ಅವರಿಗೆ ೩,೦೦೦ ರೂ.ಗಳನ್ನು ನೀಡಿ."[23]

ಶಾಹುರವರ ಉದಾರ ಹಣಕಾಸಿನ ನೆರವುಗಳ ಅಸಂಖ್ಯಾತ ನಿದರ್ಶನಗಳನ್ನು ಮತ್ತು ಕಲೆ, ಸಮಾಜ, ಪತ್ರಿಕೋದ್ಯಮ, ಕೈಗಾರಿಕೆ ಮೊದಲಾದ ಕ್ಷೇತ್ರಗಳಲ್ಲಿ ಮಹತ್ತರವಾದ ಕೆಲಸಗಳನ್ನು ಮಾಡಲು ಬ್ರಾಹ್ಮಣರಿಗೆ ಪ್ರೋತ್ಸಾಹಿಸಿದ ನಿದರ್ಶನಗಳನ್ನು ಅವರ ಜೀವನದಿಂದ ಸಂಗ್ರಹಿಸಬಹುದು. ಬಾಲಗಂಧರ್ವ ಎಂದು ಹೆಸರುವಾಸಿಯಾಗಿರುವ ನಾರಾಯಣ ಶ್ರೀಪಾದ ಹಂಸರು ಮರಾಠಿ ರಂಗಭೂಮಿಯ ಹೆಮ್ಮೆ ಎಂದು ಸಾಧಿತರಾಗಿರುವ ಅವರನ್ನು ಶಾಹು ಅವರು ಕಲೆಯ ಮರಾಠಿ ಜಗತ್ತಿಗೆ ಕೊಡುಗೆಯಾಗಿ ನೀಡಿದ್ದಾರೆ. ಕಚ್ಚಾ ಕಬ್ಬಿಣವಿಲ್ಲದೆ ವಿಶ್ವಮಹಾಯುದ್ಧದ ಸಮಯದಲ್ಲಿ ಮುಚ್ಚುವ ಅಪಾಯ ಸ್ಥಿತಿಯನ್ನು ತಲುಪಿದ ಲಕ್ಷ್ಮಣರಾವ್ ಕಿರ್ಲೋಸ್ಕರ್ ಕೈಗಾರಿಕಾ ಘಟಕಕ್ಕೆ ಕೊಲ್ಲಾಪುರ ಸಂಸ್ಥಾನದ ಬಂದೂಕುಗಳನ್ನು ನೀಡುವುದರ ಮೂಲಕ ಅದರ ಸಮಸ್ಯೆಯನ್ನು ಬಗೆಹರಿಸಿದರು.[24] ಈ ಎಲ್ಲಾ ಉದಾಹರಣೆಗಳು ಮಹಾಬ್ರಾಹ್ಮಣರಿಗೆ ಸಂಬಂಧಿಸಿದವು. ಸಾಮಾನ್ಯ ಬ್ರಾಹ್ಮಣರ ಬಗ್ಗೆ ಶಾಹುರವರ ವರ್ತನೆ ಸಹ ಉದಾರ ಮತ್ತು ಸಮಾನತೆಯ ಮೇಲೆ ಆಧಾರವಾಗಿತ್ತು. ಉದಾಹರಣೆಗೆ ಅವರು ೧೯೧೮ರಲ್ಲಿ ಸರ್‌ಸಭಾಗೆ ಈ ಕೆಳಗಿನ ಆಜ್ಞೆಯನ್ನು ಹೊರಡಿಸಿದ್ದರು: "ತಲಾಠಿಗಳನ್ನು ನೇಮಕ ಮಾಡಲಾಗಿದೆ. ಬ್ರಾಹ್ಮಣರು ಅವರನ್ನು ಒಳಗೆ ಬಿಟ್ಟುಕೊಳ್ಳಲಿಲ್ಲ ಎಂಬ ದೂರನ್ನು ಸ್ವೀಕರಿಸಲಾಗಿದೆ. ಒಂದು ನಿರ್ದಿಷ್ಟ ಜಾತಿಯನ್ನು ಉದ್ಯೋಗಕ್ಕೆ ತೆಗೆದುಕೊಳ್ಳುವುದು ಅಯೋಗ್ಯ ಎನ್ನುವುದು ಅಥವಾ ಸರಕಾರದ ಉದ್ಯೋಗಕ್ಕೆ ತೆಗೆದುಕೊಳ್ಳಬಾರದೆಂದು ಹೇಳುವುದು ಅನ್ಯಾಯವಾಗುತ್ತದೆ. ಉದ್ಯೋಗವು ಸರ್ವರಿಗೂ ಮುಕ್ತವಾಗಿದೆ. ಗಮನಕ್ಕೆ ತೆಗೆದುಕೊಳ್ಳಿ ಮತ್ತು ಸಹಾಯ ಮಾಡಿ."[25]

ರಾಜರ ಕುದುರೆಲಾಯಗಳಲ್ಲಿ ಇಬ್ಬರು ಬ್ರಾಹ್ಮಣರು ಶೀಲೆದಾರರೆಂದು ಸೇವೆಯಲ್ಲಿದ್ದರು. ಅವರು ಕೆಲಸ ಮಾಡುವ ಸ್ಥಳದಲ್ಲಿ ಅಸಂತುಷ್ಟರಾಗಿದ್ದಾರೆಂದು ಶಾಹು ಗಮನಿಸಿದರು ಮತ್ತು ಅವರನ್ನು ಉದಾರವಾಗಿ ಆಡಳಿತದ ಇಲಾಖೆಗೆ ವರ್ಗಾಯಿಸಿದರು.

ತಮ್ಮ ಆಜ್ಞೆಯಲ್ಲಿ ಅವರು ಹೇಳುತ್ತಾರೆ: "ಶೀಲೆದಾರರಾದ ಮೋರೇಶ್ವರ ವಿಠ್ಠಲ ಲೋಖಂಡೆ ಮತ್ತು ಅನಂತ ದತ್ತರಾಯ ಪದಲ್ಕರ್ ಅವರು ಬ್ರಾಹ್ಮಣರು. ಒರಟು ಕೆಲಸಗಳನ್ನು ಮಾಡಬೇಕಾಗಿತ್ತು. ಅವರು ಕುದುರೆಗಳನ್ನು ಮಸಾಜು ಮಾಡಬೇಕಾಗಿತ್ತು, ಲದ್ದಿ ಬಾಚಬೇಕಾಗಿತ್ತು, ಅಗತ್ಯ ಬಿದ್ದರೆ ಬೇಟೆಯ ಮಾಂಸವನ್ನು ಸಾಗಿಸಬೇಕಾಗಿತ್ತು. ಇತರೆ ಶೀಲೆದಾರರು ಮರಾಠರು ಮತ್ತು ಮುಸ್ಲಿಮರಾಗಿದ್ದರು. ಈ ಇಬ್ಬರು ಆಹಾರ ಮತ್ತು ಮದ್ಯಗಳ ಸಮಸ್ಯೆಯನ್ನು ಎದುರಿಸುತ್ತಿದ್ದರು. ಹೀಗಿರುವಾಗ ಅವರ ಸೇವೆಗಳನ್ನು ಶೀಲೆದಾರರ ಪಟ್ಟಿಯಿಂದ ಗುಮಾಸ್ತರ ಪಟ್ಟಿಗೆ ವರ್ಗಾಯಿಸಲಾಯಿತು.[26]

ಬ್ರಾಹ್ಮಣ ಉದ್ಯೋಗಿಗಳು ಸತ್ತ ನಂತರ ಅವರ ದುಃಖಪೀಡಿತ ಕುಟುಂಬಗಳ ಯೋಗಕ್ಷೇಮವನ್ನು ಶಾಹುರವರು ನೋಡಿಕೊಂಡಿದ್ದರೆಂಬುದನ್ನು ಹಲವಾರು ದಾಖಲೆಗಳು ತಿಳಿಸುತ್ತವೆ. ಉದಾಹರಣೆಗೆ ಸಖಾರಾಮ್ ಬಾಜಿ ಕುಲಕರ್ಣಿ ಪ್ಲೇಗ್ ರೋಗಕ್ಕೆ ತುತ್ತಾಗಿ ಇದ್ದಕ್ಕಿದ್ದ ಹಾಗೆ ಸತ್ತರು. ಅವನ ಹೆಂಡತಿ

ಶಾಹುರವರಿಗೆ ಈ ರೀತಿ ಮೊರೆ ಹೇಳಿದಳು: "ಅಕಾಲಿಕ ಆಘಾತವು ನನ್ನನ್ನು ಸಂಪೂರ್ಣವಾಗಿ ಮತ್ತು ಆಶ್ರಯಹೀನಗೊಳಿಸಿದೆ. ನನಗೆ ಇಬ್ಬರು ಮಕ್ಕಳಿದ್ದಾರೆ ಮತ್ತು ಅವರ ರಕ್ಷಣೆಗೆ ಯಾವುದೇ ಜೀವನೋಪಾಯವಿಲ್ಲ. ನನ್ನ ಪತಿ ತಮ್ಮ ಘನತೆಯಿಂದ ಒಳ್ಳೆಯ ಶಿಕ್ಷಣ ಪಡೆದು ೧೪ರಿಂದ ೧೫ ವರ್ಷಗಳವರೆಗೆ ಸರಕಾರದಲ್ಲಿ ನಿಷ್ಠೆಯಿಂದ ಸೇವೆ ಮಾಡಿದ್ದಾರೆ. ಈ ಅಂಶಗಳನ್ನು ಪರಾಂಬರಿಸಿ ದಯವಿಟ್ಟು ಜೀವನೋಪಾಯವನ್ನು ಒದಗಿಸಿ." ಮಹಾರಾಜರು ಆಕೆಯ ಬಗ್ಗೆ ಕರುಣೆ ತೋರಿ ಆಕೆಗೆ ತಿಂಗಳಿಗೆ ೧೦ ರೂ.ಗಳನ್ನು ಮತ್ತು ಪ್ರತಿಯೊಂದು ಮಗುವಿಗೆ ತಿಂಗಳಿಗೆ ೩ ರೂ.ಗಳಂತೆ ಜೀವನಾಂಶವನ್ನು ನೀಡಿದರು.[27]

ಮತ್ತೊಂದು ನಿದರ್ಶನವು ಸಂಸ್ಥಾನದ ಪ್ಲೀಡರು ಮಲ್‌ಹರ್ ಬಲವಂತ ಗರ್ಡೆ ಅವರಿಗೆ ಸಂಬಂಧಿಸಿದ್ದು. ಅವನ ನಿಧನದ ನಂತರ ಅವನ ಕುಟುಂಬದ ಆರು ಸದಸ್ಯರು ಅನಾಥರಾದರು. ಅವರಿಗೆ ಪೂನಾದ ಫರ್ಗ್ಯುಸನ್ ಕಾಲೇಜಿನಲ್ಲಿ ಓದುವ ಮಗ ಮತ್ತು ಮದುವೆ ವಯಸ್ಸಿನ ಇಬ್ಬರು ಹೆಣ್ಣುಮಕ್ಕಳಿದ್ದರು. ಅಂತಹ ಪರಿಸ್ಥಿತಿಯಲ್ಲಿ ಕುಟುಂಬದ ಜೀವನ ನಿರ್ವಹಣೆ ತುಂಬಾ ಕಷ್ಟವಾಯಿತು. ಮೇಲೆ ಹೇಳಿದ ಲಾಯರು ಸರಕಾರದಲ್ಲಿ ನಿಸ್ವಾರ್ಥವಾಗಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಶಾಹುರವರು ಅವರ ಹೆಂಡತಿಗೆ ಮಾಸಿಕ ೧೦ ರೂ.ಗಳ ಪೆನ್ಶನ್ ಮತ್ತು ಮಗನಿಗೆ ತಿಂಗಳಿಗೆ ೩೦ ರೂ.ಗಳಂತೆ ೫ ವರ್ಷಗಳವರೆಗೆ ಕೊಡಲು ಪ್ರಾರಂಭಿಸಿದರು.[28]

ಆ ಕಾಲದಲ್ಲಿ ಇಂಥ ಹಣದ ಮೊತ್ತ ನೀಡುವ ವಿಚಾರ ಎಷ್ಟು ಚೆನ್ನಾಗಿತ್ತೆಂಬುದು ಅರಿವಾಗುತ್ತದೆ. ಆ ಕಾಲದಲ್ಲಿ ಒಬ್ಬ ಅಧ್ಯಾಪಕನ ಸಂಬಳ ತಿಂಗಳಿಗೆ ೧೦ರಿಂದ ೧೨ ರೂ. ಇತ್ತು.

ಆ ಕಾಲದ ದಿನಗಳಲ್ಲಿ ಶಾಹುರವರು ಬ್ರಾಹ್ಮಣರ ಕಟ್ಟಾವಿರೋಧಿ, ವಿಶೇಷವಾಗಿ ಕುಲಕರ್ಣಿಗಳ ವಿರೋಧಿ ಎಂದು ಚಿತ್ರಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಹೇಗೆ ಶಾಹುರವರು ಬ್ರಾಹ್ಮಣ ಕುಲಕರ್ಣಿ ಕುಟುಂಬದವರಿಗೆ ಕರುಣೆ ಮತ್ತು ಮಮತೆಯನ್ನು ತೋರಿಸಿದ್ದರೆಂಬುದಕ್ಕೆ ಕೊಲ್ಲಾಪುರದಲ್ಲಿ ಸಂಗವಾಡೇಕರ್ ಕುಲಕರ್ಣಿ ಕುಟುಂಬದ ಮುಖ್ಯಸ್ಥರಾದ ಮಹಾರಾಜ್ ಮತ್ತು ಅವರ ಸಹೋದರರು ಇಂದಿಗೂ ಸಾಕ್ಷಿಗಳಾಗಿದ್ದಾರೆ. ಇಂದೂ ಸಹ ಈ ಸಂಗವಾಡೇಕರ್ ಕುಟುಂಬ ಶಾಹುರವರನ್ನು ದೇವರೆಂದು ಕಾಣುತ್ತದೆ.

ಶಾಹುರವರು ಎಲ್ಲಾ ಜಾತಿಗಳ ಮತ್ತು ಧರ್ಮಗಳ ಜನರನ್ನು ತನ್ನ ಸಂಸ್ಥಾನದಲ್ಲಿ ಸಮಾನವಾಗಿ ಪರಿಗಣಿಸಿದ್ದರೆಂಬುದನ್ನು ತೋರಿಸಲು ಈ ನಿದರ್ಶನಗಳನ್ನು ವಿವರವಾಗಿ ಹೇಳಲಾಗಿದೆ. ಅವರು ಬ್ರಾಹ್ಮಣ ನೌಕರಶಾಹಿಯ ಜೊತೆಯಲ್ಲಿ ಹೋರಾಡಿದ್ದರಿಂದ ಅವು ಇಡೀ ಬ್ರಾಹ್ಮಣವರ್ಗಕ್ಕೆ ಕಟ್ಟಾವಿರೋಧಿಗಳಾಗಿರಲಿಲ್ಲ ಅಥವಾ ಅವರ ಬಗೆಗಿನ ತಮ್ಮ ಉಪಚಾರ ಪಕ್ಷಪಾತವಾಗಿರಲಿಲ್ಲ. ತಾವು ಮರಾಠಾ ಜಾತಿಯ ಆಡಳಿತಗಾರರಾಗಿದ್ದರೂ ಅವರು ಎಲ್ಲಾ ಪ್ರಜೆಗಳಿಗೆ ಸೇರಿದವರಾಗಿದ್ದರಿಂದ ಎಂದಿಗೂ ತಮ್ಮ ವಿವೇಕವನ್ನು ಕಳೆದುಕೊಳ್ಳಲಿಲ್ಲ. ಮಹಾ ಸಾಧನೆಗೈದ ಹಲವಾರು ಬ್ರಾಹ್ಮಣರಲ್ಲಿನ ಪ್ರಕಾಂಡ ವಿದ್ವಾಂಸರಾದ ರಾಜಾರಾಮಶಾಸ್ತ್ರಿ ಭಾಗವತ, ಸಾಂಗ್ಲಿಯ ಹೆಸರುವಾಸಿ ವಕೀಲ ಗಣೇಶ ರಘುನಾಥ ಅಭಯಂಕರ, ಕುರುಂದವಾಡದ ಬಾಳಾಸಾಹೇಬ ಪಟವರ್ಧಣ ಜಹಗೀರದಾರ ಅವರೆಲ್ಲರೂ ಶಾಹುಮಹಾರಾಜರ ನ್ಯಾಯಬದ್ಧ ವಿವೇಚನೆಯನ್ನು ಮೆಚ್ಚಿಕೊಂಡಿದ್ದರು.

---

೧೯

# ಆರ್ಯ ಸಮಾಜ

ಬ್ರಾಹ್ಮಣ ನೌಕರಶಾಹಿಯ ವಿರುದ್ಧ ತಮ್ಮ ಹೋರಾಟದಲ್ಲಿ ಶಾಹು ಛತ್ರಪತಿಯವರು ಹಲವಾರು ವಿಧಾನಗಳನ್ನು ಬಳಸಿದ್ದಾರೆ. ತಾವು ಛತ್ರಪತಿಗಳಾದ ಕಾರಣದಿಂದ ತಮ್ಮ ಬಳಿಯಿದ್ದ ರಾಜಕೀಯ ಅಧಿಕಾರ ಒಂದು ವಿಧಾನವಾಗಿತ್ತು. ಹಾಗೆಯೇ ಆರ್ಯ ಸಮಾಜ, ಸತ್ಯಶೋಧಕ ಸಮಾಜ ಮೊದಲಾದವುಗಳು ಧಾರ್ಮಿಕ ಸುಧಾರಣೆಗಳ ಆಂದೋಲನಗಳಿಗೆ ಬದ್ಧವಾದ ಸಂಘಟನೆಗಳು ತಮ್ಮ ಇತರ ವಿಧಾನಗಳಾಗಿದ್ದವು. ಈ ಎಲ್ಲಾ ಸಂಘಟನೆಗಳು ಸಮಾಜದಲ್ಲಿ ಬ್ರಾಹ್ಮಣರ ಪ್ರಾಬಲ್ಯವನ್ನು ಮತ್ತು ಧಾರ್ಮಿಕ ವಿಚಾರಗಳಲ್ಲಿ ಅವರ ಏಕಸ್ವಾಮ್ಯತೆಗಳಿಗೆ ಸವಾಲುಹಾಕಿದ್ದು ಸಹಜವಾಗಿ ಶಾಹುರವರು ಅವುಗಳ ಕಡೆಗೆ ಆಕರ್ಷಿತರಾದರು ಮತ್ತು ಅವುಗಳಿಗೆ ತಮ್ಮ ರಾಜಾಶ್ರಯ ನೀಡಿದರು.

### ಆರ್ಯ ಸಮಾಜದೊಂದಿಗೆ ಸಂಪರ್ಕ

ಶಾಹುರವರು ತಮ್ಮ ಜೀವನದಲ್ಲಿ ಬಹುಬೇಗನೆ ಆರ್ಯ ಸಮಾಜದ ಸಂಪರ್ಕಕ್ಕೆ ಬಂದರು. ಆಗ ಅವರು ವಿದ್ಯಾರ್ಥಿಯಾಗಿದ್ದರು. ತಮ್ಮ ಪಟ್ಟಾಭಿಷೇಕವಾಗುವುದಕ್ಕೆ ಮೊದಲು ೧೮೮೨ರಲ್ಲಿ ಉತ್ತರ ಭಾರತದಲ್ಲಿ ಅಧ್ಯಯನ ಪ್ರವಾಸದಲ್ಲಿದ್ದಾಗ ಮಥುರಾದ ಆರ್ಯ ಸಮಾಜ ಒಂದು ಗೌರವ ಫಲಕವನ್ನು ಅವರಿಗೆ ನೀಡಿತು.[1] ಆದರೆ ಅವರು ೧೯೦೨ರಲ್ಲಿ ನಿಜವಾಗಿ ಅದರ ಸಿದ್ಧಾಂತ ಮತ್ತು ಕಾರ್ಯನಿರ್ವಹಣೆಗೆ ಸುಪರಿಚಿತರಾದರು. ಆ ವರ್ಷ ಕಿಂಗ್ ಎಡ್ವರ್ಡ್–೭ ಅವರ ಅಧಿಕಾರ ಸ್ವೀಕಾರ ಸಮಾರಂಭಕ್ಕೆ ಹಾಜರಾಗುವುದಕ್ಕೆ ಇಂಗ್ಲೆಂಡಿಗೆ ಹೋಗುವ ದಾರಿಯಲ್ಲಿ ಐದರ್ ಸರ್ ಪ್ರತಾಪಸಿಂಗ್ ಮಹಾರಾಜರನ್ನು ಭೇಟಿ ಮಾಡಿದರು. ಸರ್ ಪ್ರತಾಪಸಿಂಗ್ ಅವರು ತಮ್ಮ ಮೂಲವಂಶ ಜೋಧಪುರದ ರಾಥೋಡರ ಮನೆಯ ಐದರ್‌ನಿಂದ ಸಿಂಹಾಸನವನ್ನೇರಿದರು. ಅವರು ಆರ್ಯಸಮಾಜವನ್ನು ಒಪ್ಪಿಕೊಂಡಿದ್ದರು. ಶಾಹು ಮತ್ತು ಪ್ರತಾಪಸಿಂಗರು ತಮ್ಮ ದೀರ್ಘ ಸಮುದ್ರ ಪ್ರಯಾಣದಲ್ಲಿ ಹಲವಾರು ವಿಷಯಗಳನ್ನು ಚರ್ಚಿಸಿದರು. ಅವರ ಚರ್ಚಿತ ವಿಷಯಗಳಲ್ಲಿ ಆರ್ಯಸಮಾಜ ಒಂದು ಮುಖ್ಯ ವಿಷಯವಾಗಿತ್ತು. ಅವರು ಬರೋಡದಲ್ಲಿ ಆರ್ಯ ಸಮಾಜದ ಪ್ರಚಾರಕ ಪಂಡಿತ ಆತ್ಮರಾಮರೊಡನೆ ಹಲವು ಸಭೆಗಳನ್ನು ನಡೆಸಿದ್ದರು. ಈ ಸಭೆಗಳ ಪರಿಣಾಮವಾಗಿ ಶಾಹುರವರು ಆರ್ಯ ಸಮಾಜದ ಕಡೆಗೆ ಹೆಚ್ಚು ಹೆಚ್ಚು ಆಕರ್ಷಿತರಾದರು ಮತ್ತು ಕೊನೆಗೆ ಅದು ಆರ್ಯ ಸಮಾಜವನ್ನು ಒಪ್ಪಿಕೊಳ್ಳುವುದರಲ್ಲಿ ಪರಿಣಮಿಸಿತು.[2]

೧೮೭೫ರಲ್ಲಿ ದಯಾನಂದ ಸರಸ್ವತಿಯವರು ಆರ್ಯ ಸಮಾಜವನ್ನು ಮುಂಬಯಿಯಲ್ಲಿ ಸ್ಥಾಪಿಸಿದರು. ಆರ್ಯ ಸಮಾಜ ವೇದದ ಗ್ರಂಥಗಳನ್ನು ಹಿಂದುಧರ್ಮದ ಅಧಿಕೃತ ಗ್ರಂಥಗಳೆಂದು ಮಾನ್ಯ ಮಾಡಿದೆ ಮತ್ತು ವೇದದ ತತ್ವಸಿದ್ಧಾಂತ ಮತ್ತು ವೇದದ ಸಂಸ್ಕೃತಿಯನ್ನು ತೀವ್ರವಾಗಿ ಸಮರ್ಥಿಸಿದೆ. ಇಷ್ಟಾದರೂ

ವೇದಗಳ ಹೆಮ್ಮೆಪಡುವ ಮಹಾರಾಷ್ಟ್ರದ ಬ್ರಾಹ್ಮಣರು ಆರ್ಯ ಸಮಾಜವನ್ನು ವಿರೋಧಿಸಿದ್ದರು. ಬ್ರಾಹ್ಮಣರು ವೇದಗಳ ಬಗ್ಗೆ ಏಕಸ್ವಾಮ್ಯತೆಯನ್ನು ಸ್ಥಾಪಿಸಿದ್ದನ್ನು ಆರ್ಯ ಸಮಾಜ ವಿರೋಧಿಸಿತ್ತು. ಮಹಿಳೆಯರು ಮತ್ತು ಶೂದ್ರರು ಸೇರಿದಂತೆ ಪ್ರತಿಯೊಬ್ಬರಿಗೂ ವೇದಗಳನ್ನು ಪಠಿಸುವ ಹಕ್ಕಿದೆಯೆಂದು ಆರ್ಯ ಸಮಾಜ ಪ್ರಸ್ತಾಪಿಸಿತು. ಎಲ್ಲಕ್ಕಿಂತ ಮಿಗಿಲಾಗಿ, ಅದು ಹುಟ್ಟು ಆಧಾರಿತ ಜಾತಿಭೇದ ಮತ್ತು ಅಸ್ಪೃಶ್ಯತೆಯ ಆಚರಣೆಯನ್ನು ಕಟುವಾಗಿ ಖಂಡಿಸಿತು ಮತ್ತು ಅದು ಮಹಿಳಾ ವಿದ್ಯಾಭ್ಯಾಸ ಮತ್ತು ಪುನರ್‌ವಿವಾಹ ಮೊದಲಾದ ಸುಧಾರಣೆಗಳನ್ನು ಪ್ರತಿಪಾದಿಸಿತು. ಮಹಾರಾಷ್ಟ್ರದ ಮಹಾಸುಧಾರಕರಾದ ಲೋಕಹಿತವಾದಿ, ನ್ಯಾಯಮೂರ್ತಿ ರಾನಡೆ ಮೊದಲಾದವರು ಆರ್ಯ ಸಮಾಜದ ಪ್ರಗತಿಪರ ಅಭಿಪ್ರಾಯಗಳಿಂದ ಪ್ರಭಾವಿತರಾಗಿದ್ದರು. ೧೮೭೫ರಲ್ಲಿ ಮಹರ್ಷಿ ದಯಾನಂದ ಸರಸ್ವತಿಯವರು ಪೂನದಲ್ಲಿ ತಂಗಿದ್ದಾಗ ಸುಧಾರಕರು ಅವರನ್ನು ಅಂಬಾರಿ ಆನೆ ಮೇಲೆ ಕೂರಿಸಿ ಮೆರವಣಿಗೆ ಮಾಡುವ ಮೂಲಕ ಸನ್ಮಾನಿಸಿದರು. ಮಹಾತ್ಮ ಜೋತಿರಾವ್ ಫುಲೆ ಅವರು ಸಹ ಈ ಮೆರವಣಿಗೆಯಲ್ಲಿ ಸೇರಿದರು. ಅದೇ ಸಮಯದಲ್ಲಿ ಪೂನಾದಲ್ಲಿ ಕರ್ಮಠ ಬ್ರಾಹ್ಮಣರು ಕತ್ತೆಗೆ ಅಲಂಕಾರ ಮಾಡಿ ಮೆರವಣಿಗೆಯಲ್ಲಿ ಕೊಂಡೊಯ್ದು ಸ್ವಾಮಿ ದಯಾನಂದ ಸರಸ್ವತಿಯವರನ್ನು ಅಪಹಾಸ್ಯ ಮಾಡಲು 'ಸ್ವಾಮಿ ಗಾರ್ದಭಾನಂದರು* ಚಿರಾಯುವಾಗಿ ಬಾಳಲಿ' ಎಂಬ ಘೋಷಣೆಗಳನ್ನು ಕೂಗಿದರು. ಸಂಪ್ರದಾಯವಾದಿಗಳ ನಾಯಕ ವಿಷ್ಣುಶಾಸ್ತ್ರಿ ಚಿಪ್ಲುಣ್‌ಕರ್ ದಯಾನಂದ ಅವರನ್ನು ಅಣಕಿಸುತ್ತಾ ಶೂದ್ರಜಾತಿಗಳಾದ ಮಹರ್, ಮಾಂಗ್ ಮೊದಲಾದವರ ಕಲ್ಯಾಣಕ್ಕಾಗಿ ಪ್ರಭಾವಳಿಯ ಸೂರ್ಯ ಅವತರಿಸಿದ್ದಾನೆಂದು ಹೇಳಿದರು ಮತ್ತು ತನ್ನ ಪತ್ರಿಕೆ 'ನಿಬಂಧಮಾಲಾ'ದಲ್ಲಿ ಬೈಗಳ ಸುರಿಮಳೆ ಕರೆದರು.[3]

**ಆರ್ಯ ಸಮಾಜ ಏಕೆ?**

ಶಾಹು ಅವರು ಆಗ ಮಗುವಾಗಿದ್ದರು. ನಂತರ ೧೮೮೩ರಲ್ಲಿ ಮಹರ್ಷಿ ದಯಾನಂದ ಸರಸ್ವತಿಯವರು ಮರಣ ಹೊಂದಿದ ನಂತರ ಆರ್ಯ ಸಮಾಜವು ಉತ್ತರ ಭಾರತದಲ್ಲಿ ವಿಶಾಲ ಪ್ರದೇಶಗಳಲ್ಲಿ ಹರಡಿತು. ಆರ್ಯ ಸಮಾಜವು ಹಲವಾರು ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ರಾಷ್ಟ್ರೀಯ ವಿಮೋಚನೆಗಾಗಿ ದೊಡ್ಡ ಆಂದೋಲನವನ್ನೇ ನಿರ್ಮಿಸಿತು. ಅದು ಹಲವಾರು ಧಾರ್ಮಿಕ ಸುಧಾರಣೆಗಳನ್ನು ಪ್ರತಿಪಾದಿಸಿತು. ಹಿಂದುಗಳ ಸಾಂಸ್ಕೃತಿಕ ಆತ್ಮವನ್ನು ಜಾಗೃತಗೊಳಿಸಿತು ಮತ್ತು ರಾಷ್ಟ್ರೀಯ ಪುನರುತ್ಥಾನಕ್ಕೆ ಸಹಾಯಮಾಡಿತು. ಸಾಮಾಜಿಕ ಸುಧಾರಣೆಗಳ ಕೆಲಸಕ್ಕೆ ಶಾಹುರವರು ಕೈಹಚ್ಚಿದ ಸಮಯದಲ್ಲಿ ಆರ್ಯ ಸಮಾಜವು ಆಗಲೇ ರಾಷ್ಟ್ರೀಯ ಸ್ವರೂಪದ ಒಂದು ಪ್ರಮುಖ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನವನ್ನು ಘನೀಕರಿಸಿತ್ತು. ೧೯೦೨ರಲ್ಲಿ ಸರ್ ಪ್ರತಾಪಸಿಂಗ್ ಅವರು ಶಾಹುರವರಿಗೆ ಆರ್ಯ ಸಮಾಜದ ತತ್ವಸಿದ್ಧಾಂತವನ್ನು ಪರಿಚಯಿಸಿದಾಗ ಕೊಲ್ಹಾಪುರದಲ್ಲಿ ವೇದೋಕ್ತ ಪ್ರಕರಣ ಆಗಲೇ ಮೇಲಕ್ಕೆ ಚಿಮ್ಮಿತ್ತು. ಕರ್ಮಠ ಬ್ರಾಹ್ಮಣವರ್ಗ ಕೊಲ್ಹಾಪುರದಲ್ಲಿ ಮಾತ್ರವಲ್ಲ, ಇಡೀ ಮಹಾರಾಷ್ಟ್ರದಲ್ಲಿ ಛತ್ರಪತಿಯವರು ಕ್ಷತ್ರಿಯರಲ್ಲ, ಶೂದ್ರರೆಂದು ಘೋಷಿಸಿತ್ತು. ಈ ಹಿನ್ನೆಲೆಯಲ್ಲಿ ಸಮಾಜದ ಪ್ರತಿಯೊಬ್ಬ ವ್ಯಕ್ತಿ ಹೆಂಗಸರಾಗಲಿ, ಶೂದ್ರರಾಗಲಿ, ಹಿಂದುಗಳೆಲ್ಲರೂ ವೇದಗಳ ಹಕ್ಕನ್ನು ಪಡೆದಿದ್ದಾರೆಂದು ಪ್ರತಿಪಾದಿಸಿದ

* ಸ್ವಾಮಿ ಗಾರ್ದಭಾನಂದ.

ಆರ್ಯ ಸಮಾಜದ ಬಗ್ಗೆ ಸ್ನೇಹ ತಳೆಯುವುದು ಶಾಹುರವರಿಗೆ ಸಹಜವಾಗಿತ್ತು. ಆದರೆ ಅವರು ಆರ್ಯ ಸಮಾಜವನ್ನು ಒಪ್ಪಲು ಆತುರಪಡಲಿಲ್ಲ. ಆರ್ಯ ಸಮಾಜದ ಬಗ್ಗೆ ಅವರಿಗಿದ್ದ ಮಮಕಾರ ಹಲವು ವರ್ಷಗಳವರೆಗೆ ನಿದ್ರಾವಸ್ಥೆಯಲ್ಲಿತ್ತೆಂದು ತೋರುತ್ತದೆ. ೧೯೧೬-೧೭ರ ನಂತರ ಬ್ರಾಹ್ಮಣ-ನೌಕರಶಾಹಿಯ ವಿರುದ್ಧ ನಿರ್ಣಾಯಕ ಕ್ರಮಗಳನ್ನು ಕೈಗೊಂಡಾಗ, ಬದಲಿಗೆ ಅವರ ವಿರುದ್ಧ ಬ್ರಾಹ್ಮಣ-ನೌಕರಶಾಹಿ ತಿರುಗಿಬಿದ್ದಾಗ ಅವರು ಆರ್ಯ ಸಮಾಜದ ಸದುದ್ದೇಶವನ್ನು ಪ್ರತಿಪಾದಿಸಿದರು ಮತ್ತು ತಮ್ಮ ಪ್ರೀತಿಯನ್ನು ಆರ್ಯ ಸಮಾಜಕ್ಕೆ ಸ್ಪಷ್ಟವಾಗಿ ತೋರಿಸಿದರು.

ತಮ್ಮ ಸ್ನೇಹಿತ ರಾಬರ್ಟ್‌ಸನ್ ಅವರಿಗೆ ಶಾಹು ಈ ಬಗ್ಗೆ ಬರೆದ ಪತ್ರ ಬಹಳ ಮುಖ್ಯವಾದದ್ದು. ಅವರು ಹೇಳುತ್ತಾರೆ: "ನಾನು ಮತ್ತೊಂದು ಕಾರಣಕ್ಕಾಗಿ ಸತ್ಯಶೋಧಕ ಸಮಾಜ ಮತ್ತು ಆರ್ಯ ಸಮಾಜವನ್ನು ಬೆಂಬಲಿಸುತ್ತಿದ್ದೇನೆ. ನಾನು ಹೃದಯಪೂರ್ವಕವಾಗಿ ಆರ್ಯ ಸಮಾಜದವನು. ನಾನು ಬಹಿರಂಗವಾಗಿ ಅದನ್ನು ಪರಿಪಾಲಿಸದಿದ್ದರೂ ಅವರ ತತ್ವಗಳನ್ನು ಪ್ರೀತಿಸುತ್ತೇನೆ. ಬ್ರಾಹ್ಮಣರು ನನ್ನನ್ನು ಕೀಳಾಗಿ ಕಂಡಿದ್ದಾರೆ ಮತ್ತು ವಿಶೇಷವಾಗಿ ಖಾಮ್‌ಗಾವ್ ಸಮ್ಮೇಳನದ ನನ್ನ ಭಾಷಣದ ನಂತರ (ಡಿಸೆಂಬರ್ ೨೭, ೧೯೧೭) ಅವರು ನನ್ನ ಬಗ್ಗೆ ಬಹಿರಂಗವಾಗಿ ವರ್ತಿಸಿದ ರೀತಿ ನನಗೆ ಆರ್ಯ ಸಮಾಜದ ತತ್ವಗಳ ಬಗ್ಗೆ ಪ್ರೀತಿ ಮೂಡಿ ಒಪ್ಪಿಕೊಳ್ಳುವುದಕ್ಕೆ ಒಂದು ಹೊಸ ಕಾರಣ ನೀಡಿತು. ಆರ್ಯ ಸಮಾಜ ನಮಗೆ ವೇದದ ಬಗ್ಗೆ ಬದ್ಧತೆಯಿಟ್ಟುಕೊಳ್ಳಲು ಕಲಿಸುತ್ತದೆಯೇ ವಿನಹ ಪುರಾಣಗಳ ಬಗ್ಗೆ ಅಲ್ಲ. ವೇದಗಳು ಗ್ರಂಥಸ್ಥಗೊಂಡ ನಂತರ ಬ್ರಾಹ್ಮಣರು ಕಾಲ್ಪನಿಕವಾಗಿ ಪುರಾಣಗಳನ್ನು ಬರೆದರು. ಐದರನ ಮಹಾರಾಜ ಸರ್ ಪ್ರತಾಪಸಿಂಗ್ ಮತ್ತು ನಾನು ಈ ತತ್ವಗಳ ಬಗ್ಗೆ ಹಲವು ಬಾರಿ ಪರಿಭಾವಿಸಿದ್ದೇವೆ ಮತ್ತು ಈ ಬಗ್ಗೆ ಒಂದೇ ರೀತಿಯ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದೇವೆ".[4] ಶಾಹುರವರು ಅದೇ ಪತ್ರದಲ್ಲಿ ಹೇಳುತ್ತಾರೆ: "ಆರ್ಯ ಸಮಾಜದ ತತ್ವಗಳು ಮನುಷ್ಯರ ಸಮಾನತೆಯನ್ನು ಹೇಳುತ್ತದೆ ಮತ್ತು ಬ್ರಾಹ್ಮಣರ ಧಾರ್ಮಿಕ ಏಕಸ್ವಾಮ್ಯತೆಯನ್ನು ಕಿತ್ತು ಎಸೆಯಿರಿ ಎಂದು ಹೇಳುತ್ತದೆ".[5]

ಆರ್ಯ ಸಮಾಜದ ಘೋಷಣೆ 'ಎಲ್ಲರಿಗಾಗಿ ವೇದಗಳು' ಎಂಬುದು ಮಾನವ ಜೀವಿಗಳ ಸಮಾನತೆಯ ಪರಮತತ್ವದ ಮೇಲೆ ಆಧಾರಿತವಾಗಿದೆ ಮತ್ತು ಶಾಹುರವರು ಆರ್ಯ ಸಮಾಜಕ್ಕೆ ಆಕರ್ಷಿತರಾಗಲು ಇದೇ ಮುಖ್ಯ ಕಾರಣವಾಗಿತ್ತು. ನವಸಾರಿಯಲ್ಲಿ ನಡೆದ ಆರ್ಯ ಸಮಾಜದ ಸಮ್ಮೇಳನದ ಅಧ್ಯಕ್ಷೀಯ ಭಾಷಣದಲ್ಲಿ ಶಾಹುರವರು ಹೇಳುತ್ತಾರೆ: "ಸ್ವಾಮಿ ದಯಾನಂದ ಜೀ ಅವರು ಪ್ರತಿಯೊಬ್ಬ ಮನುಷ್ಯನಿಗೂ ವೇದಗಳ ಹಕ್ಕಿದೆಯೆಂದು ಪ್ರಸ್ತಾಪಿಸಿದ್ದಾರೆ ಮತ್ತು ಅವರು ಉತ್ತರಭಾರತದ ವಿಶಾಲ ಪ್ರದೇಶಗಳಲ್ಲಿ ವೇದಜ್ಞಾನವನ್ನು ಹರಡಿದ್ದಾರೆ. ಲಕ್ಷಾಂತರ ಮಂದಿ ಆರ್ಯ ಸಮಾಜವನ್ನು ಸೇರಿದ್ದಾರೆ ಮತ್ತು ಅವರು ವಿದ್ಯಾಸಂಸ್ಥೆಗಳಾದ ಗುರುಕುಲಗಳು, ಪ್ರೌಢಶಾಲೆಗಳು ಮತ್ತು ಕಾಲೇಜುಗಳು ಮೊದಲಾದವುಗಳನ್ನು ಸ್ಥಾಪಿಸಿದ್ದಾರೆ. ಪ್ರತಿಯೊಬ್ಬರು ವೇದಗಳ ಹಕ್ಕುಗಳನ್ನು ಪಡೆದಿದ್ದಾರೆಂಬ ತಿಳುವಳಿಕೆಯು ಸಮಾನತೆಯ ಪ್ರಜ್ಞೆಯನ್ನು ಮತ್ತು ಜೀವನದ ಗುಣಮಟ್ಟವನ್ನು ಬೆಳೆಸಿದೆ. ಉತ್ತರಭಾರತದಲ್ಲಿ ದಯಾನಂದ ಸರಸ್ವತಿಯವರ ಬೋಧನೆಗಳು ಶೀಘ್ರಗತಿಯಲ್ಲಿ ಹಬ್ಬಿದವು. ಆದರೆ ನರ್ಮದೆಯ ದಕ್ಷಿಣ ಭಾಗದಲ್ಲಿ ಅವುಗಳಿಗೆ ಬಲವಾದ ವಿರೋಧ ಕಂಡುಬಂತು. ಇದಕ್ಕೆ ಮುಖ್ಯ ಕಾರಣ ಬ್ರಾಹ್ಮಣರ ಆಡಳಿತಶಾಹಿಯ ಬಲ. ಪುಣೆಯಲ್ಲಿ ಸ್ವಾಮಿ ದಯಾನಂದ ಸರಸ್ವತಿಯಲ್ಲಿ ವಿಚಾರಪ್ರಚೋದಕ ಭಾಷಣವನ್ನು ಬ್ರಾಹ್ಮಣ ನೌಕರಶಾಹಿ ಕೇಳಿದ ಸ್ವಲ್ಪ ಸಮಯದಲ್ಲಿಯೇ ಆರ್ಯ ಸಮಾಜದ ಅಭಿಪ್ರಾಯಗಳು ಅವರಿಗೆ ವಿಷವಾಗಿ

ಕಂಡಿತು ಮತ್ತು ಸ್ವಾಮಿಯ ಮೆರವಣಿಗೆಯನ್ನು ವಿರೋಧಿಸುವುದಕ್ಕಾಗಿ ಅವರ ತಲೆಗಳಲ್ಲಿ 'ಗಾರ್ದಭಾನಂದ ಸರಸ್ವತಿ' ಯನ್ನು ಪ್ರದರ್ಶಿಸುವ ಕೆಟ್ಟಯೋಚನೆ ಮೂಡಿತು".[6]

'ಮಾನವ ಸಮಾನತೆ' ಆರ್ಯಸಮಾಜದ ಘೋಷಿತ ತತ್ವವಾಗಿತ್ತು. ವೇದಗಳ ಸಂಸ್ಕೃತಿಯಲ್ಲಿ ಮತ್ತು ಸಾಮಾಜಿಕ ಪದ್ಧತಿಯಲ್ಲಿ ಜಾತಿಭೇದ ಮತ್ತು ಅಸ್ಪೃಶ್ಯತೆಗೆ ಎಡೆಯಿರಲಿಲ್ಲವೆಂಬುದು ಆರ್ಯಸಮಾಜದ ನಿಲುವಾಗಿತ್ತು. ಸಹಜವಾಗಿ, ಸುಧಾರಣಾವಾದಿಯಾದ ಮಹಾರಾಜ ಶಾಹುರವರಿಗೆ ಜಾತಿಭೇದ ಅಳಿಸಿಹಾಕಲು ಇದು ಒಂದು ಪ್ರಬಲ ಸಾಧನವೆಂದು ಭಾವಿಸಿದ್ದರು. ಮಾಂಟೆಗು ಅವರಿಗೆ ಬರೆದ ಪತ್ರದಲ್ಲಿ ಅವರು ಆರ್ಯ ಸಮಾಜದ ಧಾರ್ಮಿಕ ಬುನಾದಿಯಿದ್ದರೂ ಅದು ಸಾಮಾಜಿಕ ಸಮಾನತೆಯೊಂದಿಗೆ ತಳುಕುಹಾಕಿಕೊಂಡಿದೆ. ಆದ್ದರಿಂದ ಈ ಸಂಸ್ಥೆ ಬ್ರಾಹ್ಮಣ ನೌಕರಶಾಹಿಯನ್ನು ಪರಿಣಾಮಕಾರಿಯಾಗಿ ಎದುರಿಸಬಲ್ಲದು ಮತ್ತು ಮುಂಬರುವ ಜನತಂತ್ರಕ್ಕಾಗಿ ಬ್ರಾಹ್ಮಣೇತರರ ಸಾಮಾನ್ಯ ಸಮಾಜವನ್ನು ಸಿದ್ಧಗೊಳಿಸುತ್ತದೆ ಎಂಬ ಭರವಸೆಯಿಂದ ಅವರು ವ್ಯಕ್ತಪಡಿಸಿದ್ದಾರೆ.[7]

ಶಾಹುಮಹಾರಾಜರು ಬಹಿರಂಗವಾಗಿ ಆರ್ಯ ಸಮಾಜದೊಂದಿಗೆ ಸಂಬಂಧ ಬೆಳೆಸುವುದಕ್ಕೆ ಮೊದಲು ಅವರು ಇದನ್ನು ಕೊಲ್ಹಾಪುರದಲ್ಲಿ ಸ್ಥಾಪಿಸಿದರು. ಅವರು ಸತ್ಯಶೋಧಕ ಸಮಾಜಕ್ಕೆ ರಾಜಾಶ್ರಯವನ್ನು ವಿಸ್ತರಿಸಿ, ಅದನ್ನು ೧೯೧೧ರಲ್ಲಿ ಪುನರ್ ಸ್ಥಾಪಿಸಿದರು. ಇದರ ಪುನರ್‌ಸ್ಥಾಪನೆಯ ನಂತರ ಶಾಹು ಸ್ಫೂರ್ತಿಗೊಂಡರು ಮತ್ತು ಸತ್ಯಶೋಧಕ ಸಮಾಜ ಕೈಗೊಂಡ ಕೆಲಸಗಳಿಗೆ ವ್ಯಾಪಕವಾಗಿ ಕಾಣಿಕೆ ನೀಡಿದರು. ಅದರ ವಿವರಗಳನ್ನು ಮುಂದೆ ವಿವರಿಸಲಾಗುವುದು. ಸತ್ಯಶೋಧಕ ಸಮಾಜವೊಂದೇ ಬ್ರಾಹ್ಮಣ ನೌಕರಶಾಹಿಯ ದಬ್ಬಾಳಿಕೆಯ ವಿರುದ್ಧ ಏಕಾಂಗಿಯಾಗಿ ಹೋರಾಡುತ್ತಿದೆಯೆಂದು ತಿಳಿಯಬಾರದೆಂದು ಶಾಹುರವರು ಯೋಚಿಸಿದರು. ಅವರ ಪ್ರಕಾರ ಸತ್ಯ ಶೋಧಕ ಸಮಾಜವೂ ಬ್ರಾಹ್ಮಣರ ಸರ್ವಾಧಿಕಾರದ ಕಪ್ಪುಮುಖವನ್ನು ಬಹಿರಂಗಗೊಳಿಸುವುದರಲ್ಲಿ ಸಫಲವಾದರೂ ಅದರ ದಬ್ಬಾಳಿಕೆಯ ಆಡಳಿತವನ್ನು ಪತನಗೊಳಿಸುವುದರಲ್ಲಿ ವಿಫಲವಾಗಿದೆ. ಬ್ರಾಹ್ಮಣರ ದಬ್ಬಾಳಿಕೆಯ ವಿರುದ್ಧ ಹೋರಾಡಲು ಮತ್ತೊಂದು ಸಂಘಟನೆಯ ಬೆಂಬಲದ ಸಹಾಯ ಬೇಕಾಗುತ್ತದೆಯೆಂದು ಶಾಹು ಯೋಚಿಸಿದರು. ಅದು ಆರ್ಯ ಸಮಾಜವೆಂದು ಅವರು ಭಾವಿಸಿದರು. ಬ್ರಾಹ್ಮಣರ ಯಜಮಾನಿಕೆಯ ವಿರುದ್ಧ ಪ್ರಬಲವಾಗಿ ಹೋರಾಡಿದ ಆರ್ಯ ಸಮಾಜದಲ್ಲಿರುವ ಪ್ರಗತಿಪರರು ತನ್ನ ಮಿಷನ್ನಿಗೆ ಅತಿ ಉಪಯುಕ್ತವೆಂದು ಪರಿಭಾವಿಸಿದರು. ಬ್ರಿಟಿಷ್ ರೆಸಿಡೆಂಟ್ ವುಡ್ ಹೌಸ್ ಅವರಿಗೆ ಬರೆದ ಪತ್ರದಲ್ಲಿ ಶಾಹು ಹೇಳುತ್ತಾರೆ: "ಮುಸ್ಲಿಮರಲ್ಲಿ, ಆರ್ಯ ಸಮಾಜಗಳಲ್ಲಿ ಮತ್ತು ಬ್ರಾಹ್ಮಣರಲ್ಲಿ ಮತಾಂಧರಿದ್ದಾರೆ. ಆದರೆ ಬ್ರಾಹ್ಮಣರ ಧಾರ್ಮಿಕ ಕುಯುಕ್ತಿಗಳನ್ನು ಬಯಲಿಗೆಳೆಯಬೇಕೆಂಬುದು ನನ್ನ ಅಭಿಪ್ರಾಯ ಮತ್ತು ಅವರನ್ನು ತಡೆಯಲು ಕಡುವಿರೋಧಿಗಳು ಬೇಕೇ ಬೇಕು. ಆದ್ದರಿಂದ ನಾನು ಸ್ಪಷ್ಟವಾಗಿ ಮತ್ತು ಖಚಿತವಾಗಿ ಆರ್ಯ ಸಮಾಜವನ್ನು ಪ್ರೋತ್ಸಾಹಿಸುತ್ತಿದ್ದೇನೆ".[8] ಆ ದಿನಗಳಲ್ಲಿ ಮಹಾರಾಷ್ಟ್ರದಲ್ಲಿ ಬ್ರಹ್ಮ ಸಮಾಜ, ಪ್ರಾರ್ಥನಾ ಸಮಾಜ ಮೊದಲಾದವುಗಳು ಇದ್ದವು. ಆದರೆ ಅವುಗಳ ಜೊತೆಯಲ್ಲಿ ಸಹವರ್ತಿಗಳಾಗುವ ಬದಲಿಗೆ ಶಾಹುಮಹಾರಾಜರು ಆರ್ಯ ಸಮಾಜಕ್ಕೆ ರಾಜಾಶ್ರಯವನ್ನು ವಿಸ್ತರಿಸಿದರು. ಮಹರ್ಷಿ ಶಿಂಧೆ ಅವರು ಅವರ ಈ ಕ್ರಮವನ್ನು ಖಚಿತವಾಗಿ ವಿಶ್ಲೇಷಿಸಿದ್ದಾರೆ. ಬ್ರಹ್ಮ ಸಮಾಜ ಅಥವಾ ಪ್ರಾರ್ಥನಾ ಸಮಾಜಗಳಿಗಿಂತ ಮಿಗಿಲಾಗಿ ಆರ್ಯ ಸಮಾಜದ ಕಡೆಗೆ ಶಾಹುರವರು ವಾಲಲು ತಮಗೆ ಅವುಗಳ ನಡುವೆ ಭಿನ್ನಾಭಿಪ್ರಾಯಗಳಿವೆಯೆಂದಲ್ಲ, ಆದರೆ ಆರ್ಯ ಸಮಾಜದ ಕಾರ್ಯಕರ್ತ

(ಅನುಯಾಯಿಗಳು) ದೈಹಿಕ ಜಗಳದ ಮುಂದೆ ಹೆಚ್ಚು ಧೈರ್ಯವಂತರು ಮತ್ತು ಉತ್ತಮ ಜನಸಂಘಟಕರೆಂಬುದೇ ಪ್ರಮುಖ ಕಾರಣವೆಂದು ಅವರು ಹೇಳಿದ್ದರು.[9]

ಆರ್ಯಸಮಾಜದ ಅನುಯಾಯಿಗಳಲ್ಲಿ ಎರಡು ಗುಂಪುಗಳಿವೆ. ಮಹಾತ್ಮ ಹಂಸರಾಜ್, ಸರ್ ಪ್ರತಾಪಸಿಂಗ್ ಮೊದಲಾದವರ ಗುಂಪು ಬ್ರಿಟಿಷ್ ಸರಕಾರಕ್ಕೆ ನಿಷ್ಠರಾಗಿದ್ರೆ, ಲಾಲಾ ಲಜಪತರಾಯ್, ಸ್ವಾಮಿ ಶ್ರದ್ಧಾನಂದ ಮೊದಲಾದವರ ಮತ್ತೊಂದು ಗುಂಪು ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನದ ಭಾಗವಾಗಿತ್ತು.[10] ಈ ಗುಂಪಿನೊಂದಿಗೆ ಭಾಗವಹಿಸುವುದು ರಾಜಕೀಯ ಸಮಸ್ಯೆಗಳಿಗೆ ಕಾರಣವಾಗುತ್ತಿತ್ತು ಮತ್ತು ಶಾಹುರವರಿಗೆ ಕಿರಿಕಿರಿಯಾಗುತ್ತಿತ್ತು. ಸಹಜವಾಗಿಯೇ ಬ್ರಿಟಿಷ್ ಸರಕಾರಕ್ಕೆ ನಿಷ್ಠರಾಗಿರುವ ಗುಂಪಿಗೆ ಶಾಹು ಸಹಾಯ ಮಾಡುತ್ತಿದ್ದರು. ಸಾಮಂತರಾಗಿ, ಶಾಹುರವರು ತೆಗೆದುಕೊಂಡ ನಿಲುವು ಆ ಕಾಲದ ರಾಜಕೀಯಕ್ಕೆ ಅನುಗುಣವಾಗಿತ್ತು. ಆರ್ಯ ಸಮಾಜದ ನಾಯಕರಾದ ಸರ್ ಪ್ರತಾಪಸಿಂಗ್ ಅವರು ಬ್ರಿಟಿಷರ ಪರವಾಗಿದ್ದು ವಿಶ್ವದ ಮೊದಲ ಯುದ್ಧದಲ್ಲಿ ಹೋರಾಡುತ್ತಿದ್ದರು. ಅವರ ಉಲ್ಲೇಖವನ್ನು ತೆಗೆದುಕೊಂಡು ಶಾಹು ವುಡ್‌ಹೌಸ್ ಅವರಿಗೆ ಬರೆಯುತ್ತಾರೆ: "ಸತ್ಯ ಶೋಧಕ ಸಮಾಜ ಅದು ಏನೇ ಆಗಿರಲಿ, ಅದಕ್ಕೆ ಬುನಾದಿಯಿಲ್ಲ. ಆದರೆ ಆರ್ಯ ಸಮಾಜ ವೇದ ಗ್ರಂಥಗಳ ಆಧಾರದ ಮೇಲೆ ನಿಂತಿದೆ. ಬ್ರಾಹ್ಮಣರು ಇತರರಿಗೆ ವೇದಗಳನ್ನು ಕಲಿಸುವುದನ್ನು ಬಯಸುವುದಿಲ್ಲ. ಅದನ್ನು ನಾನು ಮಾಡಬೇಕೆಂದು ಯೋಚಿಸುತ್ತಿದ್ದೇನೆ. ಸರ್ ಪ್ರತಾಪಸಿಂಗ್‌ರಂತೆ ನಾನು ವೇದಗಳನ್ನು ಇಷ್ಟಪಡುತ್ತೇನೆ. ನಾನು ಆರ್ಯ ಸಮಾಜದ ತತ್ವಗಳ ಪ್ರಶಂಸಕ. ನಾನು ಸರ್ ಪ್ರತಾಪಸಿಂಗ್ ಯುದ್ಧಭೂಮಿಯಿಂದ ವಾಪಸ್ಸು ಬರುವುದನ್ನೇ ನಾನು ಕಾಯುತ್ತಿದ್ದೇನೆ. ಅವರು ವಾಪಸ್ಸು ಬಂದ ಕೂಡಲೇ ನಾನು ಅವರ ನೆರವನ್ನು ಕೇಳುವೆನು. ಆರ್ಯ ಸಮಾಜವು ರಾಜಕಾರಣದಲ್ಲಿ ಹಸ್ತಕ್ಷೇಪ ಮಾಡುತ್ತಿಲ್ಲವಾದ್ದರಿಂದ ಸರಕಾರ ಆರ್ಯ ಸಮಾಜಕ್ಕೆ ಬೆಂಬಲ ನೀಡಬಹುದು. ಆರ್ಯ ಸಮಾಜ ಒಂದು ಸಾಮಾಜಿಕ ಮತ್ತು ಧಾರ್ಮಿಕ ಸಂಘಟನೆಯಾಗಿದೆ. ಮತ್ತು ಸರಕಾರ ಅದನ್ನು ಭಯೋತ್ಪಾದಕರ ತಡೆಗಾಗಿ ಉಪಯೋಗಿಸಬಹುದು. ಆದ್ದರಿಂದ ಆರ್ಯ ಸಮಾಜದ ಜನರ ಅವಶ್ಯಕತೆ ಕೊಲ್ಹಾಪುರದಲ್ಲಿ ಬೇಕಾಗಿದೆ".[11] ಆರ್ಯ ಸಮಾಜ ಸರಕಾರಕ್ಕೆ ಸಹಾಯ ಮಾಡುತ್ತದೆಯೆಂದು ಶಾಹುರವರು ಸರ್ ಪ್ರತಾಪಸಿಂಗ್‌ರ ಗುಂಪನ್ನು ಸೇರಿಸಿಕೊಳ್ಳುವುದಕ್ಕೆ ಸೂಚಿಸುತ್ತಾರೆಂಬುದು ಸುಸ್ಪಷ್ಟ.

## ಕೊಲ್ಹಾಪುರದಲ್ಲಿ ಆರ್ಯ ಸಮಾಜ

೧೯೧೮ ಜನವರಿಯಲ್ಲಿ ಕೊಲ್ಹಾಪುರದಲ್ಲಿ ಶಾಹುರವರ ಆಶ್ರಯದಲ್ಲಿ ಆರ್ಯ ಸಮಾಜವನ್ನು ಸ್ಥಾಪಿಸಲಾಯಿತು. ಪಂಡಿತ ಆತ್ಮರಾಮ ಅವರು ಈ ವಿಷಯದಲ್ಲಿ ಅವರು ಸಹಾಯಮಾಡಿದರು.[12] ಆರ್ಯ ಸಮಾಜವು ಕೊಲ್ಹಾಪುರದಲ್ಲಿ ಈಗಾಗಲೇ ಆಗ್ರಾದಿಂದ ಬಂದಿದ್ದ ಸ್ವಾಮಿ ಪರಮಾನಂದರ ಮಾರ್ಗದರ್ಶನದಲ್ಲಿ ಕೆಲಸ ಪ್ರಾರಂಭಿಸಿತ್ತು. ಸ್ವಾಮಿ ಪರಮಾನಂದರು ಪ್ರಾಥಮಿಕ ಶಾಲೆಯನ್ನು ಮತ್ತು ಒಂದು ಗುರುಕುಲವನ್ನು ಕೇರ್ಳಿಗ್ರಾಮದಲ್ಲಿ ೧೯೧೭ರಲ್ಲಿ ಪ್ರಾರಂಭಿಸಿದ್ದರು. ಈ ಗುರುಕುಲದಲ್ಲಿ ೩೦ ವಿದ್ಯಾರ್ಥಿಗಳ ಊಟದ ಖರ್ಚಿಗಾಗಿ ೫೦೦೦ ರೂ. ಮೊತ್ತವನ್ನು ಅನುಮೋದಿಸುವ ಮಹಾರಾಜರ ಆಜ್ಞೆಯೊಂದು ಸಿಗುವುದು. ಆ ಆಜ್ಞೆಯಲ್ಲಿ ಅವರು ಹೇಳುತ್ತಾರೆ: "ವಿದ್ಯಾರ್ಥಿಗಳ ಆಹಾರ ಮತ್ತು ಉಡುಪುಗಳು ಸರಳವಾಗಿರಬೇಕು. ಒಳ್ಳೆಯ ಶಿಕ್ಷಣದೊಂದಿಗೆ ಉತ್ತಮ ನಾಗರಿಕರು ಈ ವಿದ್ಯಾರ್ಥಿ

ನಿಲಯದಿಂದ ಹೊರಬರುವವರೆಂದು ನಾವು ಭಾವಿಸುತ್ತೇವೆ".[13] ಬೇಗನೆ ಒಂದು ಉತ್ತಮ ದರ್ಜೆಯ ಆಂಗ್ಲ ಭಾಷೆಯ ಶಾಲೆಯನ್ನು ಮತ್ತು ಒಂದು ಗುರುಕುಲವನ್ನು ಅದರ ಪಕ್ಕದಲ್ಲಿ ಕೊಲ್ಹಾಪುರದಲ್ಲಿ ಆರ್ಯ ಸಮಾಜ ಪ್ರಾರಂಭಿಸುವುದೆಂದು ಶಾಹುರವರ ಆಜ್ಞೆ ತಿಳಿಸುತ್ತದೆ (೧೯೧೮). ಈ ಶಾಲೆಗಳಿಗೆ ಭೂಮಿ ಮತ್ತು ಕಟ್ಟಡಗಳನ್ನು ನೀಡಲಾಯಿತು. ಗುರುಕುಲದಲ್ಲಿ ಶಿಕ್ಷಣವನ್ನು ಉಚಿತಗೊಳಿಸಲಾಗಿತ್ತು. ಕೆರ್ಳಿಯಲ್ಲಿರುವ ಶಾಲೆ ಮತ್ತು ಗುರುಕುಲಗಳು ಈ ಸಂಸ್ಥೆಗೆ ಸೇರಿಸಲಾಯಿತು. ಸಂಯುಕ್ತ ಪ್ರಾಂತ್ಯಗಳ ಆರ್ಯ ಪ್ರತಿನಿಧಿ ಸಭೆಗೆ ಈ ಎಲ್ಲಾ ಕೆಲಸವನ್ನು ವಹಿಸಿಕೊಡಲಾಯಿತು.[14] ನಂತರ ರಾಜಾರಾಮ್ ಕಾಲೇಜು ಮತ್ತು ರಾಜಾರಾಮ್ ಪ್ರೌಢಶಾಲೆಗಳನ್ನು ಈ ಸಭೆಗೆ ವಹಿಸಿದ್ದನ್ನು ನಾವು ಈಗಾಗಲೇ ನೋಡಿದ್ದೇವೆ. ಆರ್ಯ ಸಮಾಜ ಗುರುಕುಲದ ಅಸ್ಪೃಶ್ಯರು ಸೇರಿದಂತೆ ಎಲ್ಲಾ ಜಾತಿಗಳ ವಿದ್ಯಾರ್ಥಿಗಳಿಗೆ ಅವಕಾಶ ನೀಡಲಾಗಿದೆ. ನಾವು ಈಗಾಗಲೇ ಹೇಳಿದಂತೆ, ಇತರೆ ವಿದ್ಯಾರ್ಥಿಗಳ ಜೊತೆಯಲ್ಲಿ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ವೇದದ ಸಾಹಿತ್ಯವನ್ನು ಕಲಿಸಿಕೊಡಲಾಗುವುದು. ಸ್ವಾಮಿ ದಯಾನಂದ ಸರಸ್ವತಿಯವರ ಮಹಾಕೃತಿ 'ಸತ್ಯಾರ್ಥ ಪ್ರಕಾಶ' ಗುರುಕುಲ ವಿದ್ಯಾರ್ಥಿಗಳಿಗೆ ಮಾತ್ರ ಕಡ್ಡಾಯ ಕಲಿಕೆ ಮಾತ್ರವಲ್ಲ, ಶಾಹುರವರು ಪ್ರಾರಂಭಿಸಿದ ತಲಾಠಿ ಮತ್ತು ಪಾಟೀಲರ ತರಬೇತಿ ಶಾಲೆಯಲ್ಲಿ ಇದನ್ನು ಕಡ್ಡಾಯವಾಗಿ ಓದಬೇಕಾಗಿತ್ತು. ಈ ಸಂದರ್ಭದಲ್ಲಿ ಶಾಹುರವರು ಹೇಳುತ್ತಾರೆ: "ತಲಾಠಿ ಮತ್ತು ಪಾಟೀಲರಿಗೆ ಪದ್ಮಲದಲ್ಲಿನ ಥಟ್ಟಿ ಕಟ್ಟಡದಲ್ಲಿ ನೀಡುವ ತರಬೇತಿಯ ತರಗತಿಗಳ ಜೊತೆಗೆ ಆರ್ಯ ಸಮಾಜದ 'ಸತ್ಯಾರ್ಥ ಪ್ರಕಾಶ' ಪುಸ್ತಕವನ್ನು ಪ್ರತಿ ದಿನ ಒಂದು ಗಂಟೆ ಕಾಲ ವಿದ್ಯಾರ್ಥಿಗಳಿಗೆ ಕಲಿಸಬೇಕು. ತಲಾಠಿ ಮತ್ತು ಪಾಟೀಲರ ಪರೀಕ್ಷೆಯ ಪಠ್ಯಕ್ರಮದಲ್ಲಿ ಸತ್ಯ ಪ್ರಕಾಶವನ್ನು ಸೇರಿಸಲಾಗಿದೆ ಮತ್ತು ಇತರೆ ವಿಷಯಗಳಲ್ಲಿ ಪಾಸಾಗುವಂತೆಯೇ ಈ ವಿಷಯದಲ್ಲಿ ಪಾಸಾಗುವುದು ಕಡ್ಡಾಯವಾಗಿತ್ತು".[15]

### ಆರ್ಯ ಸಮಾಜದಿಂದ ಶಾಹುರವರ ನಿರೀಕ್ಷೆ

ಶಾಹುರವರ ಚಿಂತನಾವಲಯದಲ್ಲಿ ಆರ್ಯ ಸಮಾಜ ಯಾವ ಸ್ಥಾನ ಪಡೆದಿತ್ತೆಂಬುದನ್ನು ನೋಡುವುದು ಸೂಕ್ತವೆನಿಸುತ್ತದೆ. ಆರ್ಯ ಸಮಾಜದ ಸಿದ್ಧಾಂತವು ವೇದ ಗ್ರಂಥಗಳ ದೃಢ ಬುನಾದಿಯ ಮೇಲೆ ನಿಂತಿದೆ ಮತ್ತು ಪ್ರತಿಯೊಬ್ಬರೂ ವೇದಗಳ ಬಗ್ಗೆ ತುಂಬ ಗೌರವ ಹೊಂದಿದ್ದರೆ ಮತ್ತು ಇಡೀ ದೇಶದಲ್ಲಿ ಆರ್ಯಧರ್ಮ ಹರಡುವುದರಲ್ಲಿ ಯಾವುದೇ ಅನುಮಾನವಿಲ್ಲವೆಂದು ಅವರು ಹೇಳಿದ್ದಾರೆ. ಭಾರತ ಒಂದು ರಾಷ್ಟ್ರವಾಗಿ ಮೂಡಿಬರುವ ಪ್ರಕ್ರಿಯೆಯಲ್ಲಿದೆ. ಈ ಪ್ರಕ್ರಿಯೆಯಲ್ಲಿ ಆರ್ಯ ಸಮಾಜ ಮುಖ್ಯ ಪಾತ್ರ ವಹಿಸುತ್ತಿದೆ. ಅವರು ಹೇಳುತ್ತಾರೆ " ಈ ದೇಶ ಆರ್ಯಾವರ್ತ ಮೊದಲಿಗೆ ಯಾವುದೇ ಸಮಯದಲ್ಲಿ ಒಂದು ರಾಷ್ಟ್ರವಾಗಿರಲಿಲ್ಲ. ಆದರೆ, ಈಗ ಬ್ರಿಟಿಷರು ಪ್ರತಿಯೊಂದು ಕಡೆಯಲ್ಲಿ ಸಾಮಾನ್ಯ ಆಡಳಿತಗಾರರಾಗಿದ್ದಾರೆ. ರಾಷ್ಟ್ರೀಯತೆ ಭಾವನೆ ಕ್ರಮೇಣ ರೂಪಪಡೆಯುತ್ತಿದೆ ಮತ್ತು ಅದು ನಿಧಾನವಾಗಿ ಹೆಚ್ಚಾಗುತ್ತಿದೆ. ಅಂತಹ ಭಾವನೆಯ ಬೆಳವಣಿಗೆಯಲ್ಲಿ ಆರ್ಯ ಸಮಾಜದ ಪಾತ್ರ ಪ್ರಶಂಸನೀಯವಾಗಿದೆ. ಆರ್ಯ ಸಮಾಜವು ಈ ದೇಶದ ಜಾತಿಮತ ಪಂಗಡ ಭೇದವಿಲ್ಲದೆ ಎಲ್ಲರನ್ನೂ ವಿಲೀನಗೊಳಿಸುತ್ತಿದೆ. ಎಲ್ಲಕ್ಕಿಂತ ಮಿಗಿಲಾಗಿ ಅನಾರ್ಯರಾದ ಜನರನ್ನು ಸಹ ತನ್ನ ಪರಿಧಿಯೊಳಗೆ ಸಮೀಕರಿಸಿಕೊಳ್ಳುತ್ತಿದೆ ಮತ್ತು ಒಬ್ಬ ಆರ್ಯರ ಎಲ್ಲಾ ಹಕ್ಕುಗಳನ್ನು, ಅಂತರ್‌ಜಾತೀಯ ವಿವಾಹ ಮತ್ತು ಅಂತರ್‌ಜಾತಿಯ ಭೋಜನ ಸೇರಿದಂತೆ ಎಲ್ಲಾ ಹಕ್ಕುಗಳನ್ನು ನೀಡುತ್ತಿದೆ".[16]

ಯೂರೋಪು ಮತ್ತು ಅಮೇರಿಕಾಗಳಲ್ಲಿ ಆರ್ಯ ಜನಾಂಗಕ್ಕೆ ಸೇರಿದ ಜನರು ಬಯಸಿದರೆ ಅವರನ್ನು ಮಿಳಿತ (ಸೇರಿಸಿ)ಗೊಳಿಸಲು ಆರ್ಯ ಸಮಾಜ ಪ್ರಯತ್ನಿಸಬೇಕೆಂದು ಶಾಹು ಹೀಗೆ ಹೇಳುತ್ತಾರೆ: “ಅವರು (ಆರ್ಯ ಸಮಾಜ) ಯೂರೋಪು ಮತ್ತು ಅಮೇರಿಕಾ ಖಂಡಗಳ ವಿದ್ವಾಂಸರು ಒಪ್ಪಿರುವಂತೆ ಟ್ಯುಟಾನಿಕ್ ಜನರು ಆರ್ಯ ಜನಾಂಗಕ್ಕೆ ಸೇರಿದವರು, ಅವರು ಒಪ್ಪಿದರೆ ಅವರನ್ನು ತಮ್ಮ ಪರಿಧಿಯೊಳಕ್ಕೆ ಸೇರಿಸಿಕೊಳ್ಳುವುದಕ್ಕೆ ಹಿಂದೆಗೆಯಬಾರದು. ಪ್ರಾಚೀನ ಕಾಲದಲ್ಲಿ ಎಲ್ಲಾ ಆರ್ಯ ಜನಾಂಗದ ಜನರು ಆರ್ಟಿಕ್ ಪ್ರದೇಶದಲ್ಲಿ ಒಟ್ಟಿಗೆ ತಂಗುತ್ತಿದ್ದರು. ನಂತರ ಆ ಪ್ರದೇಶವನ್ನು ಬಿಟ್ಟು ಹೊರಟರು. ಕೆಲವು ಪಂಗಡಗಳು ಪಶ್ಚಿಮದ ಕಡೆಗೆ ವಲಸೆ ಹೋದರು. ಮತ್ತೆ ಕೆಲವು ಪಂಗಡಗಳು ಪೂರ್ವದ ಕಡೆಗೆ ಹೋದರು. ಬಲಿಷ್ಠ ಯೂರೋಪಿನ ರಾಷ್ಟ್ರಗಳು ಆ ಪಂಗಡಗಳ ಮಕ್ಕಳಾಗಿ (ವಂಶಜರು) ಪಶ್ಚಿಮದ ಕಡೆಗೆ ವಲಸೆ ಹೋಗಿದ್ದರೆ, ಆರ್ಯಾವರ್ತದ ಜನರಾದ ನಾವು ಆರ್ಯರ ಮಕ್ಕಳಾಗಿ (ಸಂತಾನ) ಪೂರ್ವದ ಕಡೆಗೆ ವಲಸೆ ಹೋದೆವು. ಆದ್ದರಿಂದ ಯೂರೋಪಿಯನ್ನರು ಮತ್ತು ಅವರ ಸಂತಾನಗಳಾದ ಅಮೇರಿಕನ್ನರು ಯಾವ ವಿಧದಲ್ಲಿ ಅವರು ನಮಗೆ ವಿದೇಶಿಯರಲ್ಲ. ಪಶ್ಚಿಮದ ಮಹಾವೀರರಾದ ಲಾರ್ಡ್‌ಕಿಚ್ನರ್, ಜನರಲ್ ಫ್ರೆಂಚ್ ಮತ್ತು ಮಾರ್ಷಲ್‌ಫಾಕ್ ಮೊದಲಾದವರು ಯುದ್ಧಭೂಮಿಯಲ್ಲಿ ತನ್ನ ಕ್ಷಾತ್ರತೇಜವನ್ನು ಸಾಧಿಸಿ ತೋರಿಸಿದ್ದಾರೆ. ನಿಮ್ಮ ಪ್ರಕಾರ ಅವರು ಖಂಡವಾಗಿ ಕ್ಷತ್ರಿಯರು ಮತ್ತು ಅವರು ಬಯಸಿದರೆ ನೀವು ಖಂಡಿತವಾಗಿ ಆರ್ಯ ಧರ್ಮಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸಿ”.[17] ಆರ್ಯ ಧರ್ಮವು ಸಮಾನತೆಯ ತತ್ವದ ಮೇಲೆ ಆಧಾರಗೊಂಡಿರುವುದು ಮಾತ್ರವಲ್ಲದೆ, ಅದು ಭಾರತದ ರಾಷ್ಟ್ರೀಯ ಏಕಮಾತ್ರ ಧರ್ಮವಾಗಿದೆ ಎಂಬ ಚಿಂತನೆ ಶಾಹುರವರದ್ದಾಗಿದೆಯೆಂದು ಇದರ ಅರ್ಥ. ಎಲ್ಲಕ್ಕಿಂತ ಮಿಗಿಲಾಗಿ ಆರ್ಯ ಧರ್ಮದ ಮಾನವತಾವಾದಿ ತತ್ವಗಳು ಇಡೀ ವಿಶ್ವದಲ್ಲೆಲ್ಲ ಹರಡಿಸಿ, ಅದನ್ನು ವಿಶ್ವಧರ್ಮವನ್ನಾಗಿ ಮಾಡಬೇಕೆಂಬುದು ಶಾಹುರವರ ಆಶಯವಾಗಿತ್ತು.[18] ಇದು ಆಕ್ರಮಣಶೀಲವಾದ (ಜಗಳಗಂಟಿ) ಚಿಂತನೆಯಲ್ಲ. ಆರ್ಯ ಧರ್ಮ ಇತರೆ ಧರ್ಮಗಳನ್ನು ತುಳಿದು (ದಮನಮಾಡಿ) ತಮ್ಮ ಧರ್ಮದ ಯಜಮಾನಿಕೆಯನ್ನು ಸ್ಥಾಪಿಸುವುದು ಅಲ್ಲ ಎಂದು ನಮ್ಮ ಆಶೆಯನ್ನು ವ್ಯಕ್ತಪಡಿಸಿದ್ದಾರೆ. ಆರ್ಯ ಧರ್ಮ ಮಾನವತಾವಾದಿ ಧರ್ಮವಾಗಿರುವುದರಿಂದ ಅದು ವಿಶ್ವದ ಧರ್ಮವಾಗಬೇಕೆಂದು ಶಾಹು ಕನಸು ಕಾಣುತ್ತಿದ್ದರು. ಅದು ಪ್ರತಿಯೊಬ್ಬರಿಗೂ ತಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಸ್ವಾತಂತ್ರ್ಯವನ್ನು ನೀಡಿದೆ ಮತ್ತು ಅದು ಪ್ರತಿಯೊಬ್ಬರನ್ನು ಸಮಾನವಾಗಿ ಸಮಾನತೆ ದೃಷ್ಟಿಯಿಂದ ನೋಡುತ್ತದೆ.

---

# ೨೦

# ಸತ್ಯಶೋಧಕ ಸಮಾಜ

ಮಹಾತ್ಮ ಫುಲೆಯವರು ೧೮೭೩ರಲ್ಲಿ ಬ್ರಾಹ್ಮಣರ ದಬ್ಬಾಳಿಕೆಯ ಸಂಪೂರ್ಣ ಅಧಿಕಾರದ ವಿರುದ್ಧ ಹೋರಾಡಲು ಮತ್ತು ಶೂದ್ರರ ಮತ್ತು ಅತಿಶೂದ್ರರ ಸಾಮಾಜಿಕ ಮತ್ತು ಧಾರ್ಮಿಕ ಹಕ್ಕುಗಳನ್ನು ಪುನರ್‌ಸ್ಥಾಪಿಸಲು ಸತ್ಯಶೋಧಕ ಸಮಾಜವನ್ನು ಸ್ಥಾಪಿಸಿದರು. ಆದರೆ ಈ ಸಂಸ್ಥೆಯ ಕೆಲಸ ಅವರ ನಿಧನದ ನಂತರ ನಿಧಾನವಾಯಿತು. ಫುಲೆಯವರ ಸಹವರ್ತಿಗಳಲ್ಲಿ ಒಬ್ಬರಾದ ಮತ್ತು ಕಾರ್ಮಿಕ ವರ್ಗದ ಮೊದಲ ನಾಯಕರಾದ ನಾರಾಯಣ ಮೇಘಾಜಿ ಲೋಕಂಡೆಯವರು ತನ್ನ ಮಟ್ಟದಲ್ಲಿ ಸಾಮಾಜಿಕ ಕಾರ್ಯವನ್ನು ಮುಂದುವರಿಸಿದರು. ೧೮೯೭ರಲ್ಲಿ ಅವರ ನಿಧನದ ನಂತರ ಕೆಲಸವು ಪೂರ್ಣವಾಗಿ ಸ್ಥಗಿತಗೊಂಡಿತು. ಬಹಳದ ನಂತರ (ತಡವಾಗಿ) ವೇದೋಕ್ತ ವಿವಾದ ಇಡೀ ಮಹಾರಾಷ್ಟ್ರದಲ್ಲಿ ಪ್ರತಿಧ್ವನಿಗೊಂಡಾಗ ಬ್ರಾಹ್ಮಣೇತರರ ನಾಯಕರು ಮತ್ತು ಬುದ್ಧಿಜೀವಿಗಳು ಬ್ರಾಹ್ಮಣರ ದಬ್ಬಾಳಿಕೆಯ ಅಹಂಕಾರದ ವಿರುದ್ಧ ಹೋರಾಡಿದ ಸತ್ಯಶೋಧಕ ಸಮಾಜದ ಪುನರುತ್ಥಾನದ ಅಗತ್ಯವೆಂದು ಪರಿಭಾವಿಸಿದರು. ತತ್ಪರಿಣಾಮವಾಗಿ ೧೯೧೧ರಲ್ಲಿ ಪೂನಾದಲ್ಲಿ ಸತ್ಯಶೋಧಕ ಸಮಾಜದ ಸಮ್ಮೇಳನ ಸಂಘಟಿಸಲಾಯಿತು ಮತ್ತು ಅದರ ಅಧ್ಯಕ್ಷತೆಯನ್ನು ಫುಲೆಯವರ ಸಹವರ್ತಿ ರಾಮಯ್ಯ ಅಯ್ಯವರು ವಹಿಸಿದ್ದರು. ಪ್ರಮುಖ ಸತ್ಯಶೋಧಕ ನಾಯಕರಾದ ಡಾ. ಸಂತುಜಿ ಲಾಡ್, ಗಂಗಾಧರರಾವ್ ಬಾಗಡೆ, ಮಾರುತಿರಾವ್ ನವ್ಲೆ ಮತ್ತು ವಾಸುದೇವ ಬಿರ್ಜೆ ಅವರು ಸಮ್ಮೇಳನ ಸಫಲವಾಗುವುದಕ್ಕೆ ಸಾಕಷ್ಟು ಕೊಡುಗೆ ನೀಡಿದರು. ಈ ಸಮ್ಮೇಳನದಲ್ಲಿ ಫುಲೆಯವರು ಸಮರ್ಥಿಸಿದ ಸತ್ಯಶೋಧಕ ಸಮಾಜದ ತತ್ವಗಳ ಗುರಿ ಮತ್ತು ಉದ್ದೇಶಗಳನ್ನು ಘೋಷಿಸಲಾಯಿತು. ಅವುಗಳಲ್ಲಿ ಸತ್ಯಶೋಧಕ ಸಮಾಜದ ಪ್ರಮುಖ ತತ್ವವಾದ ಎಲ್ಲಾ ಜನರು ದೇವರ ಮಕ್ಕಳು ಮತ್ತು ಆದ್ದರಿಂದ ಅವನನ್ನು ಖುಷಿಪಡಿಸಲು ಯಾವ ಮಧ್ಯಸ್ಥಗಾರನ (ಪೂಜಾರಿಯ) ಅವಶ್ಯಕತೆಯಿಲ್ಲ ಎಂಬುದು. ಮುಂದಿನ ವರ್ಷದ ಸಮ್ಮೇಳನ ಡಾ. ಲಾಡರ ಆಶ್ರಯದಲ್ಲಿ ನಾಸಿಕದಲ್ಲಿ ನಡೆಯುವುದು.[1]

## ಕೊಲ್ಹಾಪುರದಲ್ಲಿ ಸತ್ಯಶೋಧಕ ಸಮಾಜ

ಸತ್ಯಶೋಧಕ ಸಮಾಜದ ಪುನರ್‌ಸ್ಥಾಪನೆಯಾದ ಗಾಳಿ ಮಹಾರಾಷ್ಟ್ರದಲ್ಲೆಲ್ಲ ರಭಸವಾಗಿ ಬೀಸತೊಡಗಿದಾಗ ಬ್ರಾಹ್ಮಣೇತರರ ಕೇಂದ್ರವಾದ ಕೊಲ್ಹಾಪುರದ ಚಟುವಟಿಕೆಗಳು ಅವಿರತವಾಗಿ ಮೂಕ ಪ್ರೇಕ್ಷಕನಾಗಿರುವುದು ಅಸಂಭವ. ಅದು ತನ್ನಲ್ಲಿಯೇ ಸಾಮರ್ಥ್ಯ (ಶಕ್ತಿ) ಪಡೆದು ಈ ಆಂದೋಲನಕ್ಕೆ ನಿಜವಾದ ಗತಿ(ಆವೇಗ)ಯನ್ನು ಒದಗಿಸಿಕೊಟ್ಟಿತು. ವೇದೋಕ್ತ ಸಂಘರ್ಷದ ಪರಿಣಾಮವಾಗಿ ಬ್ರಾಹ್ಮಣರ ದಬ್ಬಾಳಿಕೆಯನ್ನು ಎದುರಿಸಲು ಇಲ್ಲಿನ ಸಕ್ರಿಯ ಕಾರ್ಯಕರ್ತರು ಮಾನಸಿಕ ಧೈರ್ಯವನ್ನು ಬೆಳಸಿಕೊಂಡರು.

ಸತ್ಯಶೋಧಕ ಸಮಾಜದ ಬುದ್ಧಿಜೀವಿಗಳಾದ ಭಾಸ್ಕರರಾವ್ ಜಾಧವ್, ಅಣ್ಣಾಸಾಹೇಬ ಲಠ್ಠೆ ಮೊದಲಾದವರು ಮತ್ತು ಬ್ರಾಹ್ಮಣೇತರರ ಹಿತಚಿಂತಕ ಛತ್ರಪತಿ ಶಾಹು ಅವರ ಸ್ಥಾನ ಕೊಲ್ಹಾಪುರ ಸತ್ಯಶೋಧಕ ಚಳುವಳಿಯ ಪುನರ್‌ಸ್ಥಾಪನೆಗೆ ಅನುಕೂಲಕರವಾದ ಪ್ರಶಸ್ತವಾದ ಸ್ಥಳವಾಗಿತ್ತು. ಮಹಾರಾಷ್ಟ್ರದ ಯಾವ ಸ್ಥಳದಲ್ಲಿ ಇಂಥ ಸನ್ನಿವೇಶಗಳು ಪ್ರಚಲಿತವಾಗಿರಲಿಲ್ಲ.

ಜನವರಿ ೧೧, ೧೯೧೧ ರಲ್ಲಿ ಸತ್ಯಶೋಧಕರ ಸಕ್ರಿಯ ಕಾರ್ಯಕರ್ತರ ಒಂದು ಸಭೆಯನ್ನು ಕೊಲ್ಹಾಪುರದಲ್ಲಿ ಕರೆಯಲಾಯಿತು ಮತ್ತು 'ಶ್ರೀ ಶಾಹು ಸತ್ಯಶೋಧಕ ಸಮಾಜ'ವನ್ನು ಸ್ಥಾಪಿಸಲಾಯಿತು. ಸಭೆಯಲ್ಲಿ ಕ್ರಮವಾಗಿ ಭಾಸ್ಕರರಾವ್ ಜಾಧವ್, ಅಣ್ಣಾಸಾಹೇಬ ಲಠ್ಠೆ, ಮಾಧವರಾವ್ ಡೊಂಗ್ರೆ ಮತ್ತು ಹರಿಭಾವು ಚವಾಣ್ ಅವರನ್ನು ಅಧ್ಯಕ್ಷ, ಉಪಾಧ್ಯಕ್ಷ, ಮುಖ್ಯ ಅಧಿಕಾರಿ ಮತ್ತು ಕಾರ್ಯದರ್ಶಿಗಳಾಗಿ ಆಯ್ಕೆ ಮಾಡಲಾಯಿತು. ಕೊಲ್ಹಾಪುರ ಸಂಸ್ಥಾನದಲ್ಲಿ ಜಾಧವ, ಲಠ್ಠೆ ಮತ್ತು ಡೊಂಗ್ರೆಯವರು ಉದ್ಯೋಗದಲ್ಲಿ ಉನ್ನತ ಹುದ್ದೆಗಳನ್ನು ಪಡೆದಿದ್ದರು.[2] ಶಾಹುರವರ ಸಮ್ಮತಿಯಿಲ್ಲದೆ ಈ ಕೆಲಸ ಮಾಡುವುದಕ್ಕೆ ಆಗುತ್ತಿರಲಿಲ್ಲ. ಶಾಹುರವರು ಕೇವಲ ಸಮ್ಮತಿಯನ್ನು ನೀಡಿದ್ದು ಮಾತ್ರವಲ್ಲದೆ, ಈ ಕೆಲಸಕ್ಕೆ ಅವರು ಸಕ್ರಿಯ ಪ್ರೋತ್ಸಾಹವನ್ನು ನೀಡಿದ್ದರೆಂಬುದು ನಂತರ ಅವರು ಸತ್ಯಶೋಧಕ ಸಮಾಜಕ್ಕೆ ಬೆಂಬಲ ನೀಡಿದ್ದು ಸ್ಪಷ್ಟವಾಗುತ್ತದೆ. ಕೊಲ್ಹಾಪುರದ ಸತ್ಯಶೋಧಕ ಸಮಾಜದ ನಾಯಕರು ತಮ್ಮ ಸಂಘಟನೆಯನ್ನು 'ಶ್ರೀ ಶಾಹು ಸತ್ಯಶೋಧಕ ಸಮಾಜ' ಎಂದು ಕರೆದರು. ಹೀಗಿರುವಾಗ ಈ ಪ್ರಯತ್ನದ ಹಿಂದೆ ಶಾಹುರವರ ಸ್ಫೂರ್ತಿಯಿತ್ತೆಂಬುದು ಸುಸ್ಪಷ್ಟ. ಸತ್ಯಶೋಧಕ ಸಮಾಜದ ಹೆಸರಿನ ಮುಂದೆ ಶಾಹು ಎಂಬ ಹೆಸರಿದ್ದರೂ ಆಂದೋಲನಾ ನಂತರ 'ಸತ್ಯಶೋಧಕ' ಎಂಬ ಕೀರ್ತಿಯನ್ನೇ ಪಡೆಯಿತು.

## ಕೊಲ್ಹಾಪುರದಲ್ಲಿ ಸತ್ಯಶೋಧಕದ ಸಾಧನೆಗಳು

ಬಾಬುರಾವ್ ಯಾದವ್ ಅವರು ಕೊಲ್ಹಾಪುರದ ಕಡು ನಿಷ್ಠಾವಂತ ಸತ್ಯಶೋಧಕ ಕಾರ್ಯಕರ್ತರಾಗಿದ್ದರು. ಸತ್ಯಶೋಧಕತತ್ವದ ತೀವ್ರ ಪ್ರಚಾರಕರಾಗಿದ್ದರು. ಬ್ರಾಹ್ಮಣರ ಪೂಜಾರಿಯಿಲ್ಲದೆ ಧಾರ್ಮಿಕ ವಿಧಿ-ಆಚರಣೆಗಳನ್ನು ಆಚರಿಸಲು ನಿರ್ಧರಿಸಿದ ತತ್ವಕ್ಕೆ ಅನುಗುಣವಾಗಿ ಅವರು ಆಗಸ್ಟ್ ೨೧, ೧೯೧೨ರಂದು ತಮ್ಮ ಮನೆಯಲ್ಲಿ ಮೊದಲ ಶ್ರಾವಣಿ*ಯನ್ನು ಕೊಲ್ಹಾಪುರದ ಆಶ್ರಯದಲ್ಲಿ ಮರಾಠ ಪೂಜಾರಿ ವೇದೋಕ್ತದ ವಿಧಾನದಲ್ಲಿಯೇ ನಡೆಸಿದರು. ಈ ಘಟನೆಯು ಬ್ರಾಹ್ಮಣರಲ್ಲಿ ಸಾಕಷ್ಟು ಗೊಂದಲ (ಕೋಲಾಹಲ) ಉಂಟುಮಾಡಿತು. ಅದೇ ದಿನ ಬಾಬುರಾವ್ ಯಾದವ ಮತ್ತು ನಾನಾ ಸಾಹೇಬ್ ಮುಲಿಕ್ ಸೇರಿದಂತೆ ಸುಮಾರು ಮರಾಠ ಸಮುದಾಯದ ೧೫೦ ಬ್ರಾಹ್ಮಣೇತರ ಜನರು ಸಾರ್ವಜನಿಕ ಸ್ಥಳದಲ್ಲಿ ವಿಶೇಷ ಬ್ರಾಹ್ಮಣರ ವಿಧಿ-ವಿಧಾನದ ಆಚರಣೆಗಳನ್ನು ಆಚರಿಸಿದರು. ಈ ಆಚರಣೆಯ ಕೊನೆಯಲ್ಲಿ ಬ್ರಾಹ್ಮಣರ ಪುರೋಹಿತಶಾಹಿಯ ಯಜಮಾನಿಕೆಯ ಬಿಗಿಹಿಡಿತಗಳಿಂದ ಬ್ರಾಹ್ಮಣೇತರರ ಮನಸ್ಸುಗಳನ್ನು ಬಿಡುಗಡೆಗೊಳಿಸುವುದಕ್ಕೆ ದೇವರಲ್ಲಿ ಸಾರ್ವಜನಿಕ ಪ್ರಾರ್ಥನೆಯನ್ನು ಮಾಡಿದರು. ಈ ಕ್ರಿಯೆಯನ್ನೇ ಕೊಲ್ಹಾಪುರದ ನಾನಾಕಡೆಗಳಲ್ಲಿ ಜನರು ಮಾಡಲಾರಂಭಿಸಿದರು. ಜನರು ಧೈರ್ಯ ತಂದುಕೊಂಡು ತಮ್ಮ

---

* ಶ್ರಾವಣಿಯು ಬ್ರಾಹ್ಮಣರ ಒಂದು ವಿಚಿತ್ರ ಆಚರಣೆ. ಈ ಆಚರಣೆಯಿಂದ ಪವಿತ್ರ ಜನಿವಾರದ ಶಕ್ತಿ-ಸಾಮರ್ಥ್ಯಗಳನ್ನು ಪುನರುಜ್ಜೀವನಗೊಳಿಸಲಾಗುವುದು.

ಧಾರ್ಮಿಕ ಆಚರಣೆಗಳನ್ನು ಬ್ರಾಹ್ಮಣರ ಪೂಜಾರಿಯಿಲ್ಲದೆ ಮಾಡತೊಡಗಿದರು. ಮಹಾತ್ಮ ಫುಲೆಯವರು ಸತ್ಯಶೋಧಕ ಸಮಾಜವನ್ನು ಸ್ಥಾಪಿಸಿದ ಮೂಲದಿನ ಸೆಪ್ಟೆಂಬರ್ ೨೪ ವಾರ್ಷಿಕ ದಿನವಾಗಿತ್ತು. ಸತ್ಯ ಶೋಧಕ ಸಮಾಜದ ಸಕ್ರಿಯ ಕಾರ್ಯಕರ್ತರು ಒಂದು ಸಾರ್ವಜನಿಕ ಸಮಾವೇಶವನ್ನು ಸಂಘಟಿಸಿ, ಈ ಸಂದರ್ಭವನ್ನು ವೈಭವವಾಗಿ ಆಚರಿಸಲು ಈ ಅವಕಾಶವನ್ನು ಬಳಸಿಕೊಂಡರು. ರೋಮಿನ ಪೋಪರು ಸ್ವರ್ಗದ ಬೀಗದ ಕೈಗಳು ತನ್ನ ಕೈಯಲ್ಲಿವೆಯೆಂದು ಹೇಳಿದುದರ ವಿರುದ್ಧ ಪ್ರಾಟೆಸ್ಟೆಂಟರು ಬಂಡಾಯ ವೆದ್ದಂತೆಯೇ ಸ್ವರ್ಗದ ಬೀಗದ ಕೈಗಳು ತಮ್ಮಲ್ಲಿವೆಯೆಂದು ಸ್ವತಃ ಘೋಷಿಸಿಕೊಂಡಿರುವ ಬ್ರಾಹ್ಮಣ ಪುರೋಹಿತಶಾಹಿ ಮತ್ತು ಶಂಕರಾಚಾರ್ಯರ ವಿರುದ್ಧ ಹಿಂದುಗಳು ಬಂಡಾಯವೇಳಬೇಕೆಂದು ಈ ಸಮಾವೇಶದಲ್ಲಿ ಈ ಠರಾವನ್ನು ಪಾಸು ಮಾಡಲಾಗಿದೆಯೆಂದು ಹೇಳಲಾಯಿತು.[3]

ಈ ಘಟನೆಗಳು ಬ್ರಾಹ್ಮಣ ಮತ್ತು ಬ್ರಾಹ್ಮಣೇತರರಲ್ಲಿ ಸಾಕಷ್ಟು ಕೋಲಾಹಲಗಳನ್ನು ಉಂಟುಮಾಡಿದವು. ಅದನ್ನೇ ಸಕ್ರಿಯ ಕಾರ್ಯಕರ್ತರು ಬಯಸಿದ್ದು ಕೂಡ. ಅಂಥ ಗೊಂದಲಗಳು ಮಾತ್ರ ಅಜ್ಞಾನಿಗಳಾದ ಬ್ರಾಹ್ಮಣೇತರರ ಜನರನ್ನು ಜಾಗೃತಗೊಳಿಸುತ್ತವೆಯೆಂದು ಆ ಕಾರ್ಯಕರ್ತರು ಭಾವಿಸಿದರು. ಇದರಿಂದ ಹುರುಪುಗೊಂಡ ಸತ್ಯಶೋಧಕ ಕಾರ್ಯಕರ್ತರು ಬ್ರಾಹ್ಮಣರಿಲ್ಲದೆ ವಿವಾಹಗಳು ಸೇರಿದಂತೆ ಇತರೆ ಆಚರಣೆಗಳನ್ನು ಆಚರಿಸತೊಡಗಿದರು. ಕೊಲ್ಹಾಪುರವೊಂದರಲ್ಲೆ ೧೯೧೨, ೧೯೧೩ ಮತ್ತು ೧೯೧೪ ರಲ್ಲಿ ಕ್ರಮವಾಗಿ ೨೦೦, ೨೬೬ ಮತ್ತು ೨೯೯ ಮದುವೆಗಳನ್ನು ಸತ್ಯಶೋಧಕ ತತ್ವದ ಮಾರ್ಗದಲ್ಲಿ ನಡೆಸಲಾಯಿತು.[4] ಅಸಂಖ್ಯಾತ ಆಚರಣೆಗಳನ್ನು ಸತ್ಯಶೋಧಕ ಸಮಾಜದ ಕಾರ್ಯಕರ್ತರ ಮಾರ್ಗದರ್ಶನದಲ್ಲಿ ನಡೆಸಲಾಯಿತು. ಬ್ರಾಹ್ಮಣ ಪುರೋಹಿತರಿಲ್ಲದೆ ತಮ್ಮ ತಮ್ಮ ಜಾತಿಗಳ ಪುರೋಹಿತರಿಂದಲೇ ಕೊಲ್ಹಾಪುರದ ಮೂಲಕ ಧಾರ್ಮಿಕ ಆಚರಣೆಗಳನ್ನು ನಡೆಸುವ ಉಬ್ಬರ ಪ್ರಾರಂಭವಾಗಿ ಹಳ್ಳಿಗಳಿಗೆ ಹರಡಿತು. ಇದು ಮರಾಠ ಪುರೋಹಿತರಿಗೆ ತರಬೇತಿ ನೀಡುವ ವಿಚಾರವನ್ನು ಹುಟ್ಟುಹಾಕಿತು. ೧೯೧೩ರಲ್ಲಿ ಭಾಸ್ಕರರಾವ್ ಜಾಧವ್ ಅವರ ಮಾರ್ಗದರ್ಶನದಲ್ಲಿ ಸತ್ಯಶೋಧಕ ಶಾಲೆಯನ್ನು ಸ್ಥಾಪಿಸಲಾಯಿತು. ಈ ಎಲ್ಲಾ ಚಟುವಟಿಕೆಗಳಿಗೆ ಶಾಹುರವರ ಆಶೀರ್ವಾದ, ಬೆಂಬಲ ಇತ್ತೆಂಬುದರಲ್ಲಿ ಯಾವ ಸಂದೇಹವು ಇಲ್ಲ. ಅರಮನೆಯ ಉದ್ಯೋಗಿಯಾದ ವಿಠ್ಠಲರಾವ್ ದೊಸಾಯ್ ಅವರನ್ನು ಸತ್ಯಶೋಧಕ ಶಾಲೆಯ ಅಧ್ಯಾಪಕರನ್ನಾಗಿ ನೇಮಿಸಲಾಯಿತು. ಸತ್ಯಶೋಧಕ ಸಮಾಜದ ಕಾರ್ಯಕರ್ತರಾದ ಹರಿಭಾವು ಚವಾಣ್ ಮತ್ತು ಶ್ರೀಪತ್‌ರಾವ್ ಶಿಂಧೆಯವರು ಅವರಿಗೆ ವೇತನಗಳನ್ನು ಕೊಡುತ್ತಿದ್ದರು. ಅವರು ಭೂಮಿ ಮತ್ತು ಕಟ್ಟಡಗಳನ್ನು ಈ ಶಾಲೆಗೆ ನೀಡಿದರು. ಸಂಕ್ಷಿಪ್ತವಾಗಿ ಹೇಳುವುದಾದರೆ ಈ ಶಾಲೆ ಶಾಹುರವರ ಆಶ್ರಯ ಪಡೆಯಿತು. ಭಾಸ್ಕರರಾವ್ ಜಾಧವ್ ಅವರ ಮಾರ್ಗದರ್ಶನದಲ್ಲಿ ಶಾಲೆಯ ಪಠ್ಯಕ್ರಮವನ್ನು ತಯಾರಿಸಲಾಯಿತು. ಘರ್ಚ್ ಪುರೋಹಿತ (ಮನೆಯ ಪುರೋಹಿತ) ದಂತಹ ಪುಸ್ತಕ ಧಾರ್ಮಿಕ ಆಚರಣೆಗಳನ್ನು ಆಚರಿಸುವ ವಿಧಾನಗಳನ್ನು ತಿಳಿಸಿಕೊಡುತ್ತಿತ್ತು.

### ಕೋಲ್–ಟಾರ್ ಪ್ರಕರಣ

ಸತ್ಯಶೋಧಕ ಆಂದೋಲನದ ಪುನರುಜ್ಜೀವನ ಪ್ರಕ್ರಿಯೆ ವೇಗವನ್ನು ಕೊಲ್ಹಾಪುರ ಸಂಸ್ಥಾನದಲ್ಲಿ ಪಡೆಯುತ್ತಿರುವಾಗ ಟಾರ್ ಪ್ರಕರಣ ಸ್ಫೋಟಗೊಂಡು ಆ ವೇಗವನ್ನು ತಡೆಯುವಂತೆ ಮಾಡಿತು. ಇದು ರಾಜರ ಆಸ್ಥಾನದ ಒಂದು ಗುಂಪಿನ ಷಡ್ಯಂತ್ರವಾಗಿತ್ತು. ೧೯೧೦ರಿಂದ ಗುಂಪಿನ ಸಂಚುಗಾರರ

ಗುಸುಗುಸು ಕೇಳಿಬಂತು. ಖಂಡೇರಾವ್ ಅಲಿಯಾಸ್ ಬಾಲಾಸಾಹೇಬ್ ಗಾಯಕ್‌ವಾಡ್ ಒಂದು ಗುಂಪಿನ ನಾಯಕರಾಗಿದ್ದರೆ ಭಾಸ್ಕರರಾವ್ ಜಾಧವ್ ಅವರು ಮತ್ತೊಂದು ಗುಂಪಿನ ನಾಯಕರಾಗಿದ್ದರು. ಗಾಯಕ್‌ವಾಡ ಗುಂಪಿಗೆ ಸರದಾರರು, ವತನದಾರರು ಮತ್ತು ಶ್ರೀಮಂತ ಜೈನ ವ್ಯಾಪಾರಸ್ಥರಾದ ಕಲ್ಲಪ್ಪಣ್ಣ ನಿತ್ವೆ ಅವರು ಬೆಂಬಲಿಸಿದರೆ ಜಾಧವ ಗುಂಪು ಹಲವಾರು ಮಧ್ಯಮ ವರ್ಗಗಳ ಸತ್ಯಶೋಧಕ ಸಮಾಜದವರಾದ ಅಣ್ಣಾ ಸಾಹೇಬ ಲಠ್ಠೆ ಮತ್ತು ಮಾಧವರಾವ್ ಡೊಂಗ್ರೆ ಮೊದಲಾದವರು ಸೇರಿದ್ದರು. ಎರಡು ಗುಂಪುಗಳು ಪರಸ್ಪರ ಸಂಚು ಮತ್ತು ಕುಯುಕ್ತಿಗಳಲ್ಲಿ ಆಸ್ಥಾನದಲ್ಲಿ ಪ್ರಾಬಲ್ಯ ಪಡೆಯುವ ಸೆಣಸಾಟ ಹಲವು ಬಾರಿ ಶಾಹುರವರನ್ನು ವಿಚಿತ್ರ ಪರಿಸ್ಥಿತಿಗೆ ತಳ್ಳುತ್ತಿತ್ತು. ಶಾಹುರವರು ಯಾವುದೇ ಪಂಗಡದ ಪರ ವಹಿಸುತ್ತಿರಲಿಲ್ಲ. ಏಕೆಂದರೆ ಇಬ್ಬರು ತಮ್ಮ ಸಹವರ್ತಿಗಳಾಗಿದ್ದರು. ಈ ಹಿನ್ನೆಲೆಯಲ್ಲಿ ಕಿಂಗ್ ಎಡ್ವರ್ಡ್ ಮತ್ತು ಕ್ವೀನ್ ಅಲೆಕ್ಸಾಂಡ್ರರವರ ಮೂರ್ತಿಗಳಿಗೆ ಫೆಬ್ರವರಿ ೧೪, ೧೯೧೪ ರಲ್ಲಿ ಮಧ್ಯರಾತ್ರಿಯಲ್ಲಿ ಟಾರನ್ನು ಬಳಿಯಲಾಗಿತ್ತು. ಈ ಪುಂಡಾಟಿಕೆ ಕೊಲ್ಹಾಪುರ ಸಂಸ್ಥಾನವನ್ನು ಆಘಾತಗೊಳಿಸಿದ್ದು ಮಾತ್ರವಲ್ಲದೆ ಬಾಂಬೆ ಸರಕಾರವನ್ನು ಸಹ ಆಘಾತಗೊಳಿಸಿತು. ಇದು ಬ್ರಿಟಿಷ್ ಸಂಸತ್ತಿನಲ್ಲಿ ಸಹ ಪ್ರತಿಧ್ವನಿಗೊಂಡಿತು. ಬ್ರಿಟಿಷ್ ಸಾಮ್ರಾಜ್ಯದ ಸಾಮಂತನಾಗಿದ್ದ ಶಾಹುರವರ ಘನತೆ ಮತ್ತು ಸ್ಥಾನಮಾನಕ್ಕೆ ಭಾರೀ ಹೊಡೆತವಾಗಿತ್ತು. ಆಡಳಿತಗಾರನಾಗಿ ಅಪರಾಧಿಗಳನ್ನು ಹುಡುಕಿ ಶಿಕ್ಷಿಸುವುದು ಅವರ ಕರ್ತವ್ಯವಾಗಿತ್ತು. ಅವರು ಅಪರಾಧಿಗಳನ್ನು ತಿಳಿಸಿದವರಿಗೆ ೫೦೦೦ ರೂ.ಗಳ ಬಹುಮಾನವನ್ನು ಘೋಷಿಸಿದ್ದರು.

ಗಾಯಕವಾಡ-ನಿತ್ವೆ ಗುಂಪಿನವರು ತಮ್ಮ ಬೇಳೆ ಬೇಯಿಸಿಕೊಳ್ಳಲು ಈ ಅವಕಾಶವನ್ನು ಬಳಸಿಕೊಂಡರು. ಈ ಪ್ರಕರಣದಲ್ಲಿ ಜಾಧವ್‌ರವರ ಗುಂಪನ್ನು ಸಿಲುಕಿಸಲು ಸಂಚನ್ನು ಹೂಡಿದರು ಮತ್ತು ಅಣ್ಣಾ ಸಾಹೇಬ ಲಠ್ಠೆ ಅವರು ಪ್ರಮುಖ ಅಪರಾಧಿ ಎಂದು ಆರೋಪಿಸಿ, ಬ್ರಾಹ್ಮಣ ಪೋಲೀಸ್ ಅಧಿಕಾರಿಯ ಸಹಾಯದಿಂದ ಅವರಿಗೆ ಕಿರುಕುಳ ಕೊಡಲು ಪ್ರಾರಂಭಿಸಲಾಯಿತು. ಅವರಿಗೆ ಕೊಟ್ಟ ಕಿರುಕುಳ ತಡೆಯಲಾರದೆ ಅವರು ತಮ್ಮನ್ನು ಉಳಿಸಿಕೊಳ್ಳುವುದಕ್ಕಾಗಿ ಸಂಸ್ಥಾನ ಬಿಟ್ಟು ಬೆಳಗಾವಿಯ ಕಡೆಗೆ ತಪ್ಪಿಸಿಕೊಂಡು ಓಡಿಹೋದರು. ಭಾವುರಾವ್ ಪಾಟೀಲರು ನಂತರ ಅವರು ಮಹಾಕರ್ಮವೀರ ಎಂಬ ಹೆಸರನ್ನು ಗಳಿಸಿದವರು ಸತ್ಯಶೋಧಕದ ಕಾರ್ಯಕರ್ತರಾಗಿ ಜನರೊಡನೆ ಕೆಲಸಮಾಡುತ್ತಿದ್ದರು. ಕಲ್ಲಪ್ಪಣ್ಣ ನಿತ್ವೆ ಅವರನ್ನು ಕೊಲ್ಹಾಪುರಕ್ಕೆ ಕರೆಯಿಸಿ ಲಠ್ಠೆ ವಿರುದ್ಧ ಸುಳ್ಳು ಸಾಕ್ಷ್ಯ ನೀಡುವಂತೆ ಒತ್ತಾಯಿಸಿದರು. ಭಾವುರಾವ್ ಅವರು ನ್ಯಾಯವಂತರು, ಸುಳ್ಳು ಕೇಸಿನಲ್ಲಿ ಲಠ್ಠೆ ಅವರನ್ನು ಸಿಕ್ಕಿಸಲು ನಿರಾಕರಿಸಿದರು. ನಿತ್ವೆ ಅವರು ಅವರ ಬಗ್ಗೆ ಸುಳ್ಳು ಕೇಸು ಹಾಕಿ ಅವರನ್ನು ಜೈಲಿಗೆ ತಳ್ಳಿದರು. ಜೈಲಿನಲ್ಲಿ ಅವರಿಗೆ ಕ್ರೂರ ಹಿಂಸೆ ಕೊಡಲಾಯಿತು. ಟಾರು-ಪ್ರಕರಣದಲ್ಲಿ ಮೆರೆದ ಗಾಯಕವಾಡ-ನಿತ್ವೆ ಗುಂಪು ಜಾಧವ್ ಅವರ ಗುಂಪಿನ ಮೇಲೆ ಪ್ರಾಬಲ್ಯ ಪಡೆಯುವುದರಲ್ಲಿ ಸಫಲವಾಯಿತು. ಈ ಮಧ್ಯೆ ಸತ್ಯಶೋಧಕ ಸಮಾಜದ ಆಂದೋಲನದ ಪ್ರಕ್ರಿಯೆ ಕೆಟ್ಟ ಹೆಸರನ್ನು ಪಡೆಯಿತು. ಕೊಲ್ಹಾಪುರದಲ್ಲಿ ರಾಜಕೀಯ ವಾತಾವರಣವು ಈ ಪ್ರಕರಣದಿಂದ ಒಣಗಿಹೋಗಿದ್ದರಿಂದ ಭಾಸ್ಕರರಾವ್ ಜಾಧವ್, ಅಣ್ಣಾ ಸಾಹೇಬ ಲಠ್ಠೆ ಮತ್ತು ಮಹದೇವ ರಾವ್ ಡೊಂಗ್ರೆ ಅವರು ಸತ್ಯಶೋಧಕ ಸಮಾಜಕ್ಕೆ ರಾಜೀನಾಮೆ ಕೊಡಬೇಕಾಯಿತು. ಶಾಹುರವರಿಗೆ ಸತ್ಯಶೋಧಕ ಸಮಾಜದ ಬಗ್ಗೆ ಮೃದು ಧೋರಣೆಯಿದ್ದರೂ ಬಹಿರಂಗವಾಗಿ ರಾಜನಾಗಿ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಲು ಸಾಧ್ಯವಾಗಲಿಲ್ಲ. ಈ ಪ್ರಕರಣವು ಸ್ವಲ್ಪ ಸಮಯದವರೆಗೆ ಇದ್ದು ನಂತರ ತಪ್ಪಿತಸ್ಥರನ್ನು ಶಿಕ್ಷಿಸದೆ ನಶಿಸಿಹೋಯಿತು. ಆದರೂ ಆಸ್ಥಾನದ ಗುಂಪುಗಳ ಸಂಚುಗಳು ಸಾಮಾಜಿಕ ಆಂದೋಲನಕ್ಕೆ ಭಾರೀ ಆಘಾತವನ್ನು ನೀಡಿದವು. ಈ

ಹೊಡೆತದಿಂದ ಚೇತರಿಸಿಕೊಳ್ಳಲು ೩-೪ ವರ್ಷಗಳು ಹಿಡಿದವು. ೧೯೧೬ರಿಂದ ಮುಂದಕ್ಕೆ ಭಾಸ್ಕರರಾವ್ ಜಾಧವ್, ಲಠ್ಠೆ ಮತ್ತು ಡೊಂಗ್ರೆ ಮೊದಲಾದವರು ಸತ್ಯಶೋಧಕ ಸಮಾಜದ ಚಟುವಟಿಕೆಗಳಲ್ಲಿ ಮತ್ತೆ ಭಾಗವಹಿಸಲು ತೊಡಗಿದರು. ಶಾಹು ಸಹ ಈ ಆಂದೋಲನವನ್ನು ಬಹಿರಂಗವಾಗಿ ಬೆಂಬಲಿಸಲು ಪ್ರಾರಂಭಿಸಿದರು ಮತ್ತು ತಮ್ಮ ಆಡಳಿತ ಮುಗಿಯುವವರೆಗೆ ಮುಂದುವರೆಸಿದರು. ಹೊಸ ಮತ್ತು ಯುವ ನಾಯಕರಾದ ಮಹರ್ಷಿ ಶಿಂಧೆ, ಶ್ರೀಪತ್‌ರಾವ್ ಸಿಂಧೆ, ವಾಲ್‌ಚಂದ ಕೊಠಾರಿ, ಭಗವಂತರಾವ್ ಪಾಲೇಕರ್, ಮುಕುಂದರಾವ್ ಪಾಟೀಲ್ ಮೊದಲಾದವರು ಹುರುಪಿನಿಂದ ಸತ್ಯಶೋಧಕ ಸಮಾಜದ ಆಂದೋಲನದಲ್ಲಿ ಭಾಗವಹಿಸಿದರು. ಏತನ್ಮಧ್ಯೆ, ಶಾಹುರವರು ಈ ಆಂದೋಲನವನ್ನು ಬ್ರಾಹ್ಮಣೇತರರ ಆಂದೋಲನವನ್ನಾಗಿ ಪರಿವರ್ತಿಸಿದರು. ಆ ವಿಷಯವನ್ನು ನಂತರ ಚರ್ಚಿಸೋಣ.

## ಸತ್ಯಶೋಧಕ ಆಂದೋಲನಕ್ಕೆ ಶಾಹುರವರ ಆಶ್ರಯ

ಶಾಹು ಮಹಾರಾಜರು ಸತ್ಯಶೋಧಕ ಸಮಾಜಕ್ಕೆ ರಾಜಾಶ್ರಯವನ್ನು ನೀಡಿದರು. ಅವರು ಸಮಾಜದಲ್ಲಿ ಸತ್ಯಶೋಧಕ ತತ್ವಗಳ ಪ್ರಸಾರ ಸುಗಮಗೊಳಿಸುವ ಸಲುವಾಗಿ ನೇರ ಮತ್ತು ಅನೇರವಾದ ರೀತಿಗಳಲ್ಲಿ ಸಹಾಯವನ್ನು ಒದಗಿಸಿದರು. ಇದರ ಜಾರಿಯ ಬಗ್ಗೆ ಹಲವು ನಿದರ್ಶನಗಳು ಶಾಹುರವರ ಜೀವನಚರಿತ್ರೆಯ ಸಾಹಿತ್ಯದ ರಾಶಿಯಲ್ಲಿ ಸಿಗುತ್ತವೆ. ಅವುಗಳಲ್ಲಿ ಕೆಲವನ್ನು ತಿಳಿಸುವುದು ಸೂಕ್ತವಾಗಲಾರದು.

ಸತ್ಯಶೋಧಕ ಸಮಾಜದ ತತ್ವಗಳಲ್ಲಿ ಜಾತಿಭೇದವನ್ನು ಅಳಿಸುವುದು ಒಂದು ತತ್ವ. ಶಾಹುರವರು ಈ ತತ್ವವನ್ನು ಮಾತು ಮತ್ತು ಕೃತಿಗಳಲ್ಲಿ ಜಾರಿಗೆ ತಂದಿದ್ದಾರೆ. ೧೯೧೬ರಲ್ಲಿ ಸತ್ಯಶೋಧಕ ಸಮಾಜದ ತತ್ವಗಳ ಅನುಗುಣವಾಗಿ ಎಲ್ಲಾ ಜಾತಿ ಮತ್ತು ಧರ್ಮಗಳ ಜನರಿಗೆ ಒಂದು ಜನವಸತಿ ಅಥವಾ ಛತ್ರ ಪ್ರಾರಂಭಿಸಲು ಶಾಹು ನಿರ್ಧರಿಸಿದರು. ಈ ಹೊಣೆಯನ್ನು ತನ್ನ ಪರಿಚಾರಕರಲ್ಲಿ ಒಬ್ಬರಾದ ಕೇಶವರಾವ್ ಪಾಟೀಲರಿಗೆ ವಹಿಸಿದರು. ಈ ಉದ್ದೇಶಕ್ಕೆ ಬೇಕಾಗಿದ್ದ ಭೂಮಿ ಮತ್ತು ಕಟ್ಟಡವನ್ನು ಒದಗಿಸಿ ತಿಂಗಳಿಗೆ ೫೦೦ ರೂ.ಗಳಿಂದ ೬೦೦ ರೂ.ಗಳವರೆಗೆ ಮಾಸಿಕ ಖರ್ಚುಗಳಿಗೆ ವ್ಯವಸ್ಥೆಗೊಳಿಸಿದ್ದರು. ಆ ದಿನಗಳಲ್ಲಿ ಕೂಡ ಅಂತಹ ಛತ್ರವನ್ನು ಸ್ಥಾಪಿಸುವ ವಿಚಾರ ಸಾರ್ವಜನಿಕ ಅಪಕೀರ್ತಿಗೆ ಆಹ್ವಾನಿಸಿದಂತೆಯೆ. ಇದು ಸಾಮಾಜಿಕ ಸುಧಾರಣೆಗೆ ದಿಟ್ಟ ಕ್ರಮವಾಗಿತ್ತು. ಆ ಕಾಲದಲ್ಲಿ ಕಟ್ಟಾ ಸತ್ಯಶೋಧಕರು ಅಂತರ್ ಜಾತೀಯ ಭೋಜನ ಮಾಡುವ ಘಟ್ಟಕ್ಕೆ ತಲ್ಪಿರಲಿಲ್ಲವೆಂದು ಕೇಶವರಾವ್ ಹೇಳುತ್ತಾರೆ. ಈ ಹಂತದಲ್ಲಿ ಕೊಲ್ಹಾಪುರದಲ್ಲಿನ ಕಟ್ಟಾ ಸತ್ಯಶೋಧಕ ಬಾಬುರಾವ್ ಯಾದವ್ ಅವರ ನೆರವಿಗೆ ಬಂದರು. ಅವರು ಪಾಟೀಲರಿಗೆ ಛತ್ರವನ್ನು ಪ್ರಾರಂಭಿಸುವುದಕ್ಕೆ ಸಾಧ್ಯವಾದ ವಿಧಗಳಲ್ಲಿ ಸಹಾಯ ಮಾಡಿದರು. ಕೊಲ್ಹಾಪುರದಿಂದ ಬಹಳ ದೂರದ ಪ್ರದೇಶಗಳಿಂದ ಬಂದ ಸತ್ಯ ಶೋಧಕದ ಸಕ್ರಿಯಕಾರ್ಯಕರ್ತರು ಈ ಛತ್ರದಲ್ಲಿ ಉತ್ತಮ ಊಟವನ್ನು ಪಡೆಯತೊಡಗಿದರು.[7]

ಬಾಬುರಾವ್ ಯಾದವರವರು ರಾಜರ ಕುದುರೆ ಲಾಯದಲ್ಲಿ ಒಬ್ಬ ಉದ್ಯೋಗಿ ಕೊಲ್ಹಾಪುರದ ಸತ್ಯಶೋಧಕ ಸಮಾಜದ ಮಹಾ ಕಟ್ಟುಮಸ್ತಾದ ಆಳಾಗಿದ್ದರು. ತಾನು ಬೋಧಿಸಿದ್ದನ್ನು ಕಾರ್ಯತಃ ಮಾಡುತ್ತಿದ್ದರು. ಸತ್ಯಶೋಧಕ ಸಮಾಜದ ತತ್ವಗಳನ್ನು ಪ್ರಚಾರ ಮಾಡಲು ಕೊಲ್ಹಾಪುರದಲ್ಲಿ ಮತ್ತು ಹೊರಗೆ ಮಿಷನರಿ ಉತ್ಸಾಹದಿಂದ ಹಲವಾರು ಜನ-ಜಾಗೃತ ಅಭಿಯಾನಗಳನ್ನು ನಡೆಸುತ್ತಿದ್ದರು. ಅವರನ್ನು ಛತ್ರಪತಿಯ ಆತ್ಮೀಯರೆಂದು ಭಾವಿಸಲಾಗುತ್ತಿತ್ತು. ಶಾಹುರವರು ಸ್ವತಃ ಅವರಿಗೆ 'ಮಾತು ಮತ್ತು ಕೃತಿಗಳಲ್ಲಿ'

ದೃಢಚಿತ್ತರೆಂದು ಗೌರವಿಸಿದ್ದರು.[8] ಅವರು ಕಾಗದದ ಮೇಲೆ ಸಂಸ್ಥಾನ ಸರಕಾರಿ ನೌಕರರಾಗಿದ್ದರು. ಅವರು ಸತ್ಯಶೋಧಕ ಸಮಾಜದ ಪೂರ್ಣಕಾಲಿಕ ಕಾರ್ಯಕರ್ತರಾಗಿ ಕೆಲಸ ಮಾಡುತ್ತಿದ್ದರು. ಶಾಹುರವರು ಅವರಿಗೆ ಮಧ್ಯೆ ಮಧ್ಯೆ ಒಂದು ತಿಂಗಳು ಅಥವಾ ಎರಡು ತಿಂಗಳ ಸಾರಿಗೆ ಭತ್ತೆ ಸಮೇತ ರಜೆಯನ್ನು ಅನುಮೋದಿಸುತ್ತಿದ್ದರು. ೧೯೧೭ರಲ್ಲಿ ಒಂದು ಆಜ್ಞೆ ದೊರೆಯುತ್ತದೆ: ದಫೇದಾರರಾದ ಬಾಬುರಾವ್ ಹೈಬಾತ್ರರಾವ್ ಯಾದವ್ ಅವರಿಗೆ ಸತ್ಯಶೋಧಕ ಸಮಾಜ ಅವರ ಪಾಲಿಗೆ ಕೊಟ್ಟಿರುವ ಕೆಲಸಗಳನ್ನು ಪೂರೈಸಲು ಅವರಿಗೆ ಡಿಸೆಂಬರ್ ೧೭, ೧೯೧೭ರಿಂದ ರಜೆಯನ್ನು ಮಂಜೂರು ಮಾಡಲಾಗಿದೆ. ಅವರಿಗೆ ಸಾರಿಗೆ ಭತ್ತೆಗಳನ್ನು ಕೊಡಲಾಗಿದೆ."[9]

ಶಾಹುರವರು ಸತ್ಯಶೋಧಕ ಸಮಾಜಕ್ಕೆ ಆಗಾಗ ಉದಾರವಾಗಿ ಹಣಕಾಸಿನ ನೆರವನ್ನು ನೀಡಿದ್ದಾರೆ. ೧೯೨೦ರ ಆಗಸ್ಟ್ ೧೫ರ ಆಜ್ಞೆಯು ೧೫೦೦ ರೂ.ಗಳನ್ನು ಭಾಸ್ಕರರಾವ್ ಅವರಿಗೆ ನೀಡುವ ಮತ್ತು ಅನುಮೋದಿಸುವುದನ್ನು ದಾಖಲಿಸಿದೆ.[10] ಶಾಹುರವರ ಆತ್ಮೀಯ ಸಹವರ್ತಿ ಶಾಹಿರ್ ಲಹರಿ ಹೈದರ್ ಅವರಿಗೆ ಸಂಬಂಧಿಸಿದ ಕುತೂಹಲಕಾರಿಯಾದ ದಾಖಲೆ ಸಿಗುತ್ತದೆ. ಅವರು ನಗರವನ್ನು ಸುತ್ತು ಹಾಕಲು ಹೊರಟಾಗ ಅವರು ಶಾಹುರವರ ಪಕ್ಕದ ಸೀಟಿನಲ್ಲಿ ಕುದುರೆಗಾಡಿಯಲ್ಲಿ ಕುಳಿತು ಹೋಗುತ್ತಿದ್ದರು. ಹೈದರ್ ಮತ್ತು ಅವನ ಶಿಷ್ಯರು ಸಮಾಜದಲ್ಲಿ ಸತ್ಯಶೋಧಕ ಸಮಾಜದಲ್ಲಿ ಸಂದೇಶವನ್ನು ಕ್ಷುಲ್ಲಕ ಪ್ರವಾಸಗಳ ಮೂಲಕ ಸಾರುತ್ತಿದ್ದರು. ಅವರು ಸತ್ಯಶೋಧಕದ ಭಕ್ತಿಗೀತೆ (ಭಜನೆ) ಗಳನ್ನು ರಚಿಸಿದ್ದರು. ಮಹಾರಾಜರು ಒಮ್ಮೆ ಈ ಭಕ್ತಿಗೀತೆಗಳನ್ನು ಕೇಳಿದ ಮೇಲೆ ಈ ಭಜನೆಗಳನ್ನು ಒಂದು ಕಡೆ ಕುಳಿತು ಶಾಶ್ವತವಾಗಿ ಹಾಡುವುದಕ್ಕಾಗಿ ಒಂದು ಕಟ್ಟಡಕ್ಕೆ ಅವರಿಗೆ ಭೂಮಿ ಮತ್ತು ಕಟ್ಟಡದ ಸಾಮಗ್ರಿಗಳನ್ನು ಅನುದಾನದಲ್ಲಿ ನೀಡಿದರು (೧೯೨೧).[11]

೧೯೨೦ರಲ್ಲಿ ಶಾಹುರವರು ಸತ್ಯಶೋಧಕ ಸಮಾಜದ ಮಿಷನ್ನಿಗೆ (ಹೆಗ್ಗುರಿಗೆ) ಅನುಕೂಲವಾಗುವ ನಿರ್ಣಯಗಳನ್ನು ತೆಗೆದುಕೊಂಡರು. ತಮ್ಮ ಅರಮನೆಯಲ್ಲಿರುವ ದೇವತೆಗಳ ಮತ್ತು ಹಿರಿಯರ ಸಮಾಧಿಗಳನ್ನು ಪೂಜಿಸಿ ಆಚರಣೆಗಳನ್ನು ನಡೆಸುವುದಕ್ಕೆ ಬ್ರಾಹ್ಮಣರ ಪೂಜಾರಿಗಳ ಬದಲಿಗೆ ಮರಾಠ ಪೂಜಾರಿಗಳನ್ನು ನೇಮಿಸಿಕೊಳ್ಳುವ ಮೊದಲ ನಿರ್ಣಯದ ಆಜ್ಞೆಯನ್ನು ಜೂನ್‌ನಲ್ಲಿ ಹೊರಡಿಸಿದರು. ಆ ಆಜ್ಞೆಯಲ್ಲಿ ಅವರು ಹೇಳುತ್ತಾರೆ: "............ಬ್ರಾಹ್ಮಣ ಪೂಜಾರಿಗಳು ದೇವತೆಗಳು ಪೂಜಿಸುವ ಆಚರಣೆಗಳಿಂದಾಗಿ ಆ ದೇವತೆಗಳು ಮುಟ್ಟುವುದಕ್ಕೂ ಅಯೋಗ್ಯವಾಗಿವೆ ಎಂದೆನಿಸುತ್ತದೆ. ಅವರು ಒಮ್ಮೊಮ್ಮೆ ನಮ್ಮನ್ನು ಕ್ಷತ್ರಿಯರೆಂದು, ಶೂದ್ರರೆಂದು ಯೋಚಿಸುತ್ತಾರೆ. ಆದ್ದರಿಂದ ಇಲ್ಲಿಂದ ಮುಂದಕ್ಕೆ ನೂತನ ಅರಮನೆಯ ಎಲ್ಲಾ ಪೂಜೆಗಳು ಮತ್ತು ೧೬ ಸಂಸ್ಕಾರಗಳನ್ನು ಮರಾಠ ಪೂಜಾರಿಯೇ ಮಾಡಬೇಕು".[12] ಕ್ಷಾತ್ರ ಜಗದ್ಗುರು*ವಿನ ಪಂತಾಗಾವಿನ ಮತ್ತು ವಾಡಿ ರತ್ನಗಿರಿಯ ಜೋತಿಬಾ ದೇವಸ್ಥಾನ ಪೂಜಾರಿಗಳನ್ನು ಕಿತ್ತುಹಾಕುವ ಮತ್ತು ಅವರ ಸ್ಥಾನಗಳಲ್ಲಿ ಮರಾಠ ಪೂಜಾರಿಗಳನ್ನು ನೇಮಿಸುವ ಮತ್ತೊಂದು ಆಜ್ಞೆಯನ್ನು ಹೊರಡಿಸಿದರು (೩೦ ಡಿಸೆಂಬರ್ ೧೯೨೦).[13]

ಮರಾಠ ಪೂಜಾರಿಗಳಿಗೆ ವಿಶೇಷ ತರಬೇತಿ ನೀಡುವ ಶಾಲೆಯನ್ನು ತೆರೆಯಲು ಎರಡನೆಯ ನಿರ್ಣಯವನ್ನು ಶಾಹುರವರು ತೆಗೆದುಕೊಂಡರು. ರಾವ್‌ಬಹದೂರ್ ಮಹಾದೇವ್‌ರಾವ್ ಡೊಂಗ್ರೆ ಮತ್ತು

---

* ರೋಮನ್ ಕ್ಯಾಥೋಲಿಕ್ ಚರ್ಚ್/ಪೋಪ್‌ನಂತೆಯೆ ಕ್ಷತ್ರಿಯರ ಉನ್ನತ ಶ್ರೇಣಿಯ ಪೂಜಾರಿ.

ಮಾಮಸಾಹೇಬ್ ಖಾನ್‌ವಿಲ್ಕರ್ ಅವರಿಗೆ ಈ ಜವಾಬ್ದಾರಿಯನ್ನು ವಹಿಸಿದರು ಮತ್ತು ಅದರ ಅರ್ಥ ವೇದದ ಕಲಿಕೆಯ ಅಸ್ತಿತ್ವಕ್ಕೆ ವ್ಯವಸ್ಥೆ ಮಾಡುವುದು. ಪ್ರಾರಂಭದಲ್ಲಿ ವೇದದ ಕಲಿಕೆ ೧೪ಳ ವಿದ್ಯಾರ್ಥಿಗಳು ಸೇರಿದರು. ವರ್ಷದ ಕೊನೆಗೆ ವಿದ್ಯಾರ್ಥಿಗಳ ಸಂಖ್ಯೆ ೬೦ಕ್ಕೆ ಏರಿತು.[14] ಪಂತಗಾವ್‌ನಲ್ಲಿ ಮೌನಿ ಮಹಾರಾಜರ ಪೀಠದಲ್ಲಿ ಕ್ಷಾತ್ರ ಜಗದ್ಗುರುವನ್ನು ಪ್ರತಿಷ್ಠಾಪಿಸುವುದು ಮೂರನೆಯ ನಿರ್ಣಯವಾಗಿತ್ತು.**

ಈ ನಿರ್ಣಯವು ಸತ್ಯಶೋಧಕ ಸಮಾಜದ ತತ್ವಗಳಿಂದ ಬಹಳ ದೂರವಿರಲಿಲ್ಲವೆಂಬುದನ್ನು ಗಮನಿಸುವುದು ಸೂಕ್ತ.

ಸತ್ಯಶೋಧಕ ಸಮಾಜಕ್ಕೆ ಶಾಹುರವರ ಮಹತ್ತರವಾದ ಕೊಡುಗೆ ಸತ್ಯಶೋಧಕ ಜಲ್ಸಾ ಅಥವಾ ತಮಾಶಾ.*** ಈ ವಿಚಾರ ಸಂಪೂರ್ಣವಾಗಿ ಅವರಿಂದಲೇ ಸ್ಫೂರ್ತಿ ಪಡೆದದ್ದು. ಇದು ಹಳ್ಳಿಗಳಲ್ಲಿ ಸಾಮನ್ಯ ಮುಗ್ಧ ಜನರಿಗೆ ಜನಪ್ರಿಯ ಮನರಂಜನೆ ಮತ್ತು ಶಿಕ್ಷಣದ ಮಾಧ್ಯಮವಾಗಿದೆ. ಶಾಹುರವರಿಗೆ ಜನರ ನಾಡಿಮಿಡಿತ ಗೊತ್ತಿತ್ತು. ಆದ್ದರಿಂದ ಅವರು ಸತ್ಯ ಶೋಧಕ ಸಮಾಜದ ತತ್ವಗಳನ್ನು ಇದರ ಮೂಲಕ ಬೆಳೆಸುತ್ತಾ ಜಾನಪದ ರಂಗಭೂಮಿಗೆ ಸಾಮಾಜಿಕ ಸುಧಾರಣೆಗಳ ಗಟ್ಟಿಮುಟ್ಟಾದ ಬುನಾದಿಯನ್ನು ಹಾಕಿಕೊಟ್ಟರು. ಅಂತಹ ಜಲ್ಸಾಗಳನ್ನು ಆಡುವುದಕ್ಕೆ ಶಾಹುರವರು ಸತ್ಯಶೋಧಕ ಸಮಾಜದ ಸಕ್ರಿಯ ಕಾರ್ಯಕರ್ತರ ತಂಡಗಳಿಗೆ ಪ್ರೋತ್ಸಾಹ ನೀಡಿದರು. ಈ ತಂಡಗಳಲ್ಲಿ ಭೀಮರಾವ್ ಮಹಾಮುನಿ, ಭಾವುರಾವ್ ಪತೋಲೆ, ತಾತೋಬ ಯಾದವ, ಗಣಪತರಾವ್ ಮೋರೆ ಅವರು ಪ್ರಮುಖ ಆಟಗಾರರಾಗಿದ್ದರು. ಇವರೆಲ್ಲರೂ ಶಾಹಿರ್‌ರಾಗಿದ್ದರು (ಜಾನಪದ ಕವಿಗಳಾಗಿದ್ದರು). ಶಾಹುರವರು ಅವರ ಜಾನಪದ ಕವಿ ಪ್ರತಿಭೆಯನ್ನು ಸಾಮಾಜಿಕ ಜಾಗೃತಿಗಾಗಿ ಬಳಸಿಕೊಂಡರು. ಸೋನ್‌ತಾಲಿ ಕ್ಯಾಂಪಿನಲ್ಲಿ ಶಾಹುರವರ ಮುಂದೆಯೇ ಮೊದಲನೆಯ ಆಟದ ಜಲ್ಸಾವನ್ನು ಪ್ರದರ್ಶಿಸಲಾಯಿತು.

ಅವರು ಪ್ರದರ್ಶನದಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದರು ಮತ್ತು ಸಾಧ್ಯವಾದರೆ ಮಾರ್ಗದರ್ಶನ ಮಾಡುತ್ತಿದ್ದರು. ಆಮೇಲೆ ತಂಡಗಳ ಪ್ರವಾಸವನ್ನು ಯೋಜಿಸುತ್ತಿದ್ದರು. ಈ ಜಲ್ಸಾಗಳ ಪ್ರದರ್ಶನಗಳಲ್ಲಿ ಬ್ರಾಹ್ಮಣ ಪೂಜಾರಿಗಳ ವಂಚನೆಗಳು ಮತ್ತು ಮುಗ್ಧ ಜನರನ್ನು ಕೊಳ್ಳೆ ಹೊಡೆಯುವುದು, ಸಮಾಜದಲ್ಲಿನ ಮೂಢ ನಂಬಿಕೆಗಳು, ವಿಧವೆಯರ ತಲೆ ಬೋಳಿಸುವುದು, ಶ್ರೀಮಂತ ವರ್ತಕರು ಮತ್ತು ಸಾಹುಕಾರರು ಬಡಜನರನ್ನು ಶೋಷಣೆ ಮಾಡುವುದು, ಶಿಕ್ಷಣದ ಮಹತ್ವ, ಮದುವೆಗಳಲ್ಲಿ ಅನಗತ್ಯವಾದ ಖರ್ಚು ಮಾಡುವುದು, ಅಸ್ಪೃಶ್ಯತೆಯ ನಿವಾರಣೆ ಮೊದಲಾದ ವಿಷಯಗಳು ಇರುತ್ತಿದ್ದವು. ಜಲ್ಸಾಗಳು ಹೆಚ್ಚಿಗೆ ವಿಡಂಬನೆಗಳಿಂದ ಕೂಡಿರುತ್ತಿದ್ದವು. ಆದರೆ ಸಾಮಾಜಿಕ ಬೋಧನೆಗಳಿಗೆ ಪರಿಣಾಮಕಾರಿಯಾದ ಸಾಧನಗಳಾಗಿದ್ದವು. ಫುಲೆಯವರ ಮುಖ್ಯವಸ್ತು ದೇವರಿಗೆ ತನ್ನ ಮತ್ತು ಮನುಷ್ಯ (ಭಕ್ತ) ನಡುವೆ ಬ್ರಾಹ್ಮಣ ಪೂಜಾರಿಯ ಅವಶ್ಯಕತೆಯಿಲ್ಲ ಎಂಬುದನ್ನು ತಿಳಿಸುವುದು. ಈ ಪ್ರದರ್ಶನಗಳನ್ನು ಮತ್ತೆ ಮತ್ತೆ ತೋರಿಸುವ ಪರಿಣಾಮದಿಂದ "ಹಳ್ಳಿಗರು ಮಾಲಾರ್ಪಣೆಗಳ (ವರ ಮತ್ತು ವಧು ಪರಸ್ಪರ ಮಾಲೆಗಳನ್ನು ಹಾಕಿಕೊಳ್ಳುವುದು) ಮೂಲಕ ವಿವಾಹಗಳ ಆಚರಿಸತೊಡಗಿದರೆಂದು" ಸತ್ಯಶೋಧಕ ಸಮಾಜದ ಚಿಂತಕ

---

** ಮೌನಿ ಮಹಾರಾಜರನ್ನು ಸಹ ಮೌನಿಬುವಾ, ಅಲಿಯಾಸ್ ಮೌನಿಬಾಬ, ಮೌನಿ ಮಹಾರಾಜ, ಶಿವಾಜಿ ಮಹಾಶಯನ ಕಾಲದಲ್ಲಿ ಮರಾಠ ಸಂತರಾಗಿದ್ದರು. 'ಮಹಾರಾಜ' ಎಂಬ ಶಬ್ದ ಒಬ್ಬ ಸಂತನೆಂದು ತಿಳಿಸುವುದಕ್ಕೆ ಒತ್ತಾಯಿಸಿತು.

*** ಮರಾಠ ಜಾನಪದ.

ಮತ್ತು ಪತ್ರಿಕಾಕರ್ತ ಪ್ರಬೋಧಂಕರ್ ಥ್ಯಾಕರೆಯವರು ಹೇಳುತ್ತಾರೆ: " ಅದು ಯಾಚಕವರ್ಗ(ಬ್ರಾಹ್ಮಣ)ದಲ್ಲಿ ಕೋಲಾಹಲವೆಬ್ಬಿಸಿತು. ಅಂತಹ ಆಚರಣೆಗಳನ್ನು ಆಚರಿಸುವವರ ವಿರುದ್ಧ ಜೋಷಿವತನಗಳ ಬಲದಿಂದ ದೂರುಗಳನ್ನು ಎಲ್ಲಾಕಡೆ ದಾಖಲಿಸಿದರು. ಶಾಹುರವರು ಈ ಸುದ್ದಿಗಳನ್ನು ಓದಿದ ಕೂಡಲೇ ಬ್ರಾಹ್ಮಣೇತರರ ವಕೀಲರನ್ನು, ಅವರಿಗೆ ಖರ್ಚು–ವೆಚ್ಚಗಳನ್ನು ಕೊಟ್ಟು ಅಂಥ ಸ್ಥಳಗಳಿಗೆ ಕಾನೂನಿನ ಕೇಸುಗಳ ವಿರುದ್ಧ ಹೋರಾಡಲು ಕಳುಹಿಸಿಕೊಟ್ಟರು".[15]

ಸತಾರ ಜಿಲ್ಲೆಯ ಮೇಲೆ ಸತ್ಯಶೋಧಕ ಸಮಾಜದ ಬಲಿಷ್ಠ ಹಿಡಿತವಿತ್ತು. ೧೯೨೦ರಲ್ಲಿ ಕರಾಡಿನಲ್ಲಿ ಮುಕುಂದರಾವ್ ಪಾಟೀಲರ ಅಧ್ಯಕ್ಷತೆಯಲ್ಲಿ ಸತ್ಯಶೋಧಕ ಸಮಾಜದ ಸಮ್ಮೇಳನ ನಡೆಯಿತು. ಕರಾಡದ ಬ್ರಾಹ್ಮಣರು ಸಮ್ಮೇಳನವನ್ನು ರದ್ದುಗೊಳಿಸಲು ವಿಧಿ ೧೪೪ನ್ನು ಜಾರಿಗೊಳಿಸುವಂತೆ ಸ್ಥಳೀಯ ಬ್ರಾಹ್ಮಣ ಮಾಮಲೆದಾರರನ್ನು ಪುಸಲಾಯಿಸಿದರು. ಇದರ ವಿರುದ್ಧ ಹೋರಾಡಲು ಸತ್ಯಶೋಧಕ ಸಮಾಜವು ಸತಾರದ ಕಲೆಕ್ಟರ್ ಮೋಯ್ಸ ಅವರಿಗೆ ದೂರನ್ನು ಕೊಟ್ಟರು ಮತ್ತು ನಿಷೇಧವನ್ನು ರದ್ದುಗೊಳಿಸಲಾಯಿತು. ಸಮ್ಮೇಳನ ಜಯಪ್ರದವಾಗಿ ನಡೆಯಿತು. ಮೋಯ್ಸ ಅವರು ಸತ್ಯಶೋಧಕರ ಬಗ್ಗೆ ಸಹಾನುಭೂತಿ ಪರರಾಗಿದ್ದರು. ಸಮ್ಮೇಳನ ಸಫಲವಾಗುವುದಕ್ಕೆ ಶಾಹುರವರು ಡೇರೆ, ಕುರ್ಚಿ, ನೆಲದ ಹಾಸುಗಳು ಮೊದಲಾದ ಸಲಕರಣೆಗಳ ಮೂಲಕ ಸಹಾಯ ನೀಡಿದ್ದು ಕಾರಣವೆಂದು ದಿನಪತ್ರಿಕೆ 'ದಿನಮಿತ್ರ' ಬರೆದಿದೆ.[16] ಈ ಅವಧಿಯಲ್ಲಿ ಸತ್ಯಶೋಧಕದ ಕಾರ್ಯಕರ್ತರಾದ ಕೇಶವರಾವ್ ವಿಚಾರೆ ಮತ್ತು ಭಾವುರಾವ್ ಪಾಟೀಲರ ಚಟುವಟಿಕೆಗಳು ಸತಾರ ಜಿಲ್ಲೆಯಲ್ಲಿ ಅಲೆಗಳನ್ನು ಎಬ್ಬಿಸಿದವು. ವಿಶೇಷವಾಗಿ ಭಾವುರಾವ್ ಪಾಟೀಲರ ಸತ್ಯಶೋಧಕದ ಜಲ್ಸಾಗಳು ಗ್ರಾಮೀಣ ಪ್ರದೇಶಗಳಲ್ಲಿ ಬಿರುಗಾಳಿಯನ್ನೇ ಎಬ್ಬಿಸಿದವು ಮತ್ತು ಅತ್ಯಂತ ಜನಪ್ರಿಯವಾದವು.[17]

ಈ ರೀತಿಯಾಗಿ ಶಾಹುರವರ ಪ್ರೋತ್ಸಾಹ ಮತ್ತು ಸಹಾಯದಿಂದ ಸತ್ಯಶೋಧಕ ಚಳುವಳಿಯು ಪುನರುಜ್ಜೀವನಗೊಂಡು ಕೊಲ್ಹಾಪುರ ಮತ್ತು ಮಹಾರಾಷ್ಟ್ರದ ವಿವಿಧ ಪ್ರದೇಶಗಳಾದ ಪುಣೆ, ಅಹಮದ್‌ನಗರ, ಖಂದೇಶ್, ಬೆರಾರ್ ಮೊದಲಾದ ಕಡೆಗಳಲ್ಲಿ ವ್ಯಾಪಕವಾಗಿ ಹರಡಿತು. ಸತ್ಯಶೋಧಕ ಮತ್ತು ಬ್ರಾಹ್ಮಣೇತರರ ಚಳುವಳಿಗಳ ಸಕ್ರಿಯ ಕಾರ್ಯಕರ್ತರು ಶಾಹುರವರನ್ನು ತಮ್ಮ ಸ್ಫೂರ್ತಿ ಎಂದು ಈಗ ಬಗೆದಿದ್ದಾರೆ. ಅಮರಾವತಿಯ 'ಶುಬೋಧಮಾಲಾ' ಪತ್ರಿಕೆಯ ಸಂಪಾದಕರಾದ ಒಬ್ಬ ಬ್ರಾಹ್ಮಣೇತರರ ಕಾರ್ಯಕರ್ತನಾದ ಕಾಶಿನಾಥ ಬಾಪೂಜಿ ದೇಶಮುಖರವರು ಶಾಹುರವರಿಗೆ ಬರೆದ ಪತ್ರದ ಮೂಲಕ ಬೆರಾರ್ ಪ್ರದೇಶದಂತಹ ಮಹಾರಾಷ್ಟ್ರದ ಬಹುದೂರದ ಪ್ರದೇಶಗಳಲ್ಲಿ ಶಾಹುರವರ ಕೆಲಸ ಹೇಗೆ ಪ್ರಭಾವ ಬೀರಿತ್ತೆಂಬುದನ್ನು ಸಂಗ್ರಹಿಸಬಹುದು. ಅವರು ಬರೆಯುತ್ತಾರೆ: "ಮಾನ್ಯ ಮಹಾರಾಜರು ನನ್ನ ಪುಸ್ತಕ 'ವೇದೋಕ್ತ ಶ್ರಾವಣಿ ಮತ್ತು ಕ್ಷತ್ರಿಯರ ಶ್ರಾವಣಿ ಪುರಾಣ' ಎಂಬ ಪುಸ್ತಕವನ್ನು ಅವರಿಗೆ ಅರ್ಪಣೆ ಮಾಡಿರುವುದನ್ನು ಅವರು ಒಪ್ಪಿದ್ದಕ್ಕೆ ನಾನು ತುಂಬಾ ಕೃತಜ್ಞನಾಗಿದ್ದೇನೆ. ಈ ವರ್ಷದ ವಾರ್ಷಿಕ ಪದ್ಧತಿಯಂತೆ ಬೆರಾರಿನ ಸುಮಾರು ೪೦೦ರಿಂದ ೫೦೦ ಮರಾಠ ಕ್ಷತ್ರಿಯರು ಅಮರಾವತಿಯ 'ಶುಬೋಧಮಾಲ' ಕಛೇರಿಯಲ್ಲಿ ಸಭೆ ಸೇರಿ ಶ್ರಾವಣಿಯನ್ನು ಆಚರಿಸಲಾಯಿತು. ಕಾರ್ಯಕ್ರಮದಲ್ಲಿ ಪೂರ್ಣವಾಗಿ ಸಮರ್ಪಿಸಿದ ಶ್ರಾವಣಿ ಪುಸ್ತಕ ಮತ್ತು ಫೋಟೋಗಳನ್ನು ಮರಾಠ ಕ್ಷತ್ರಿಯರನ್ನು ಉತ್ತೇಜಿಸಲು ಎಲ್ಲರಿಗೂ ಹಂಚಲಾಯಿತು. ಮಹಾರಾಷ್ಟ್ರದ ನಾಗಪುರ, ಬೆರಾರ್ ಮೊದಲಾದ ಕಡೆಗಳಿಂದ ಈ ಪುಸ್ತಕಕ್ಕೆ ತುಂಬಾ ಬೇಡಿಕೆ ಬಂದಿದೆ ಮತ್ತು ಇಂದಿನ ದಿನಾಂಕದವರೆಗೆ ಸಾವಿರಾರು ಪುಸ್ತಕಗಳ ಬೇಡಿಕೆಗಳು ಬಂದಿವೆ.

ಈ ಪುಸ್ತಕದ ಪ್ರಕಾರ ಕ್ಷತ್ರಿಯ ಸಮುದಾಯದಲ್ಲಿ ಈ ದಿನಗಳಲ್ಲಿ ಶ್ರಾವಣಿ ಆಚರಣೆಯನ್ನು ಆಚರಿಸುತ್ತಿರುವ ಸುದ್ದಿಪ್ರವಾಹ ಯಥೇಚ್ಛವಾಗಿ ಪ್ರಕಟನೆಗಾಗಿ ಬರುತ್ತಿದೆ. ಅಮರಾವತಿಯಲ್ಲಿ ಸಾರ್ವಜನಿಕ ಶ್ರಾವಣಿಯ ಕಾರ್ಯಕ್ರಮದಲ್ಲಿ ಛತ್ರಪತಿ ಶಿವಾಜಿ ಮಹಾರಾಜರ ಮತ್ತು ಶ್ರೀ ಶಾಹು ಛತ್ರಪತಿ ಮಹಾರಾಜರ ಫೋಟೋಗಳನ್ನು ಮಧ್ಯದಲ್ಲಿ ಹಾಕಲಾಗಿತ್ತು. ಆಚರಣೆ ಆಚರಿಸಿದ ನಂತರ ಮಾನ್ಯ ಮಹಾರಾಜರು ನೆರವೇರಿಸಿದ ಮಹಾ ಕೆಲಸಗಳನ್ನು ಮತ್ತು ಬ್ರಾಹ್ಮಣೇತರ ಸಾಮಾನ್ಯ ಜನತೆಗೆ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯಗಳ ದತ್ತಿಯ ಮೂಲಕ ಅವರು ಕೈಗೊಂಡ ರಾಷ್ಟ್ರೀಯ ವಿಮೋಚನೆಯ ಹೆಬ್ಬಯಕೆಯ ಸಾಧನೆಗೆ ಅಸಂಖ್ಯಾತ ಕಷ್ಟಕಾರ್ಪಣ್ಯಗಳ ಮುಖಾಮುಖಿಯಲ್ಲಿ ಸಾಧಿಸುತ್ತಿರುವುದನ್ನು ವಿವರವಾಗಿ ಹೇಳಲಾಯಿತು. ಅಂತಿಮವಾಗಿ ಕ್ಷತ್ರಿಯ ಶ್ರಾವಣಿಯ ಪ್ರದರ್ಶನದ ಉತ್ತೇಜನಕ್ಕಾಗಿ ಮಾನ್ಯ ಮಹಾರಾಜರಿಂದ ಬಹುಮಾನಗಳನ್ನು ಪಡೆಯುವ ಸಾಧ್ಯತೆಯಿದೆಯೆಂಬ ಸೂಚನೆಯಿದೆ. ಕಳೆದ ೬ ವರ್ಷಗಳಿಂದ ಮಾನ್ಯ ಮಹಾರಾಜರ ಆಶೀರ್ವಾದದಿಂದ ಏನೇ ಕಷ್ಟವಿದ್ದರೂ ನಾನು ಬ್ರಾಹ್ಮಣೇತರರ ಪಕ್ಷದ ಮುಖವಾಣಿಯಾದ ‘ಸುಬೋಧಮಾಲಾ’ ಎಂಬ ಮಾಸಿಕ ಪತ್ರಿಕೆಯನ್ನು ನಿಯತವಾಗಿ ನಾನು ಪ್ರಕಟಿಸುತ್ತಿದ್ದೇನೆ. ನಾನು ‘ಶ್ರಾವಣಿಯ ವಿರುದ್ಧ ಬ್ರಾಹ್ಮಣ ಸಂತೋಷದ ಕೂಗು’ ಎಂಬ ಹೆಸರಿನಲ್ಲಿ ಕಟುವಾದ ಭಾಷೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದೇನೆ. ಅದಕ್ಕಾಗಿ ನನ್ನ ವಿರುದ್ಧ ೧೯೧೮ರಲ್ಲಿ ಅಪರಾಧದ ಕೇಸನ್ನು ಬ್ರಾಹ್ಮಣರು ಹಾಕಿದ್ದಾರೆ. ದೂರುದಾರರ (ಫಿರ್ಯಾದುದಾರರು) ಪರವಾಗಿ ೫೦–೬೦ ಲಾಯರುಗಳನ್ನು ನಿಲ್ಲಿಸಿದ್ದಾರೆ. ನನ್ನ ಪರವಾಗಿ ಕೇಸಿನಲ್ಲಿ ಒಬ್ಬನೇ ಒಬ್ಬ ಮರಾಠ ಲಾಯರು ಹೋರಾಡುತ್ತಿದ್ದಾನೆ. ಪ್ರಕ್ರಿಯೆಗಳು ಆರು ತಿಂಗಳುಗಳವರೆಗೆ ನಡೆದವು. ಅಂತಿಮವಾಗಿ ಅವರು ಕೇಸನ್ನು ಸೋತುಬಿಟ್ಟರು. ದೂರುದಾರರು ಯಾವ ಷರತ್ತು ಇಲ್ಲದೆ ಕೇಸನ್ನು ವಾಪಸ್ಸು ಪಡೆದರು ಮತ್ತು ನಮ್ಮ ಪಕ್ಷ (ಕಕ್ಷಿದಾರರು) ಮಾನ್ಯ ಮಹಾರಾಜರ ಆಶೀರ್ವಾದದಿಂದ ಗೆದ್ದಿತು. ಅಂದಿನಿಂದ ಶ್ರಾವಣಿ ಬಹಳ ಜನಪ್ರಿಯವಾಯಿತು. ಇಂದಿನ ದಿನಗಳಲ್ಲಿ ಶುಬೋಧಮಾಲಾ ಒಂದು ಸಾವಿರ ಚಂದಾದಾರರನ್ನು ಹೊಂದಿದೆ. ಬೇಗನೇ ‘ವಿಜಯದಶಮಿ’ ಸಂಚಿಕೆಯನ್ನು ಹೊರತರಲಾಗುವುದು. ಅದನ್ನು ಮಾನ್ಯ ಮಹಾರಾಜರ ಸೇವೆಯಲ್ಲಿ ನಾನು ಅರ್ಪಿಸುವೆನು. ನನ್ನ ಮಾಸಿಕ ಪತ್ರಿಕೆಗಾಗಿ ಒಂದು ಸಣ್ಣ ಕಾಲಿನಲ್ಲಿ ಒತ್ತುವ ಮುದ್ರಣ ಯಂತ್ರವಿದೆ, ಅದು ಸಾಕಾಗುತ್ತದೆ. ಬೆರಾರ್‌ನಲ್ಲಿ ಬ್ರಾಹ್ಮಣೇತರರ ಒಂದು ಬಲಿಷ್ಠ ದಿನಪತ್ರಿಕೆಯನ್ನು ಪ್ರಾರಂಭಿಸುವುದಾಗಿ ಮಾನ್ಯ ಮಹಾರಾಜರಿಗೆ ತುಂಬಾ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ”.[18]

ಮಹಾರಾಜರೇ ಸ್ವತಃ ನಿಯತವಾಗಿ ಶ್ರಾವಣಿಯನ್ನು ಆಚರಿಸುತ್ತಾರೆ.[19] ಮಹಾರಾಷ್ಟ್ರದಲ್ಲಿ ಅವರ ಅನೇಕ ಸಹೋದರ ಬಾಂಧವರು ಅವರನ್ನು ಅನುಕರಿಸುತ್ತಿದ್ದಾರೆ. ವೇದೋಕ್ತದ ವಿಧಾನದ ಮೂಲಕ ಶ್ರಾವಣಿಯ ಆಚರಣೆ ಸ್ವತಃ ಒಂದು ಮಹಾ ಸುಧಾರಣೆಯೇನು ಅಲ್ಲ, ಆದರೆ ಇದು ಪುರೋಹಿತಶಾಹಿಯ ಪ್ರಾಬಲ್ಯದ ವಿರುದ್ಧ ಬಂಡಾಯದ ಕ್ರಿಯೆ ಎಂಬುದಕ್ಕೆ ಸಾಂಕೇತಿಕ ಮಹತ್ವವಿದೆಯಷ್ಟೆ. ಅಂತಹ ಸಾಂಕೇತಿಕ ಕ್ರಿಯೆಗಳು ಸಾಮಾನ್ಯ ಜನರ ನಡುವೆ ಯಾವುದೇ ಆಂದೋಲನದ ಜನಪ್ರಿಯತೆಯನ್ನು ಹೆಚ್ಚಿಸುವುದಕ್ಕೆ ಅತ್ಯಾವಶ್ಯಕ. ಶ್ರಾವಣಿಯ ನೆಪದಲ್ಲಿ ಜನರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗುತ್ತಾರೆ. ಇಂಥ ಜಾಗೃತಿ ಕಡಿಮೆ ಸಾಧನೆಯೇನು ಅಲ್ಲ.

ಶಾಹುರವರು ಮೇ ೬, ೧೯೨೨ರಲ್ಲಿ ಬಾಂಬೆಯಲ್ಲಿ ನಿಧನಹೊಂದಿದರು. ಮೇ ೭, ೧೯೨೨ರಲ್ಲಿ ಅವರ ಅಂತಿಮ ಸಂಸ್ಕಾರಗಳು ಕೊಲ್ಹಾಪುರದ ಪಂಚಗಂಗಾ ನದಿಯ ದಡದಲ್ಲಿ ನಡೆದವು. ಇಲ್ಲಿಯವರೆ

ಬ್ರಾಹ್ಮಣ ಪುರೋಹಿತರು ಸಂಪ್ರದಾಯಿಕವಾಗಿ ಈ ಆಚರಣೆಗಳನ್ನು ಮಾಡಿದರು. ಮಹಾರಾಣಿ ಲಕ್ಷ್ಮೀಬಾಯಿ ಮತ್ತು ಹೊಸ ಛತ್ರಪತಿ ರಾಜಾರಾಮ ಮಹಾರಾಜರು ಧೈರ್ಯವಾಗಿ ಈ ಸಂಪ್ರದಾಯವನ್ನು ಮುರಿದರು ಮತ್ತು ಮಹಾರಾಜರು ತಮ್ಮ ಇಡೀ ಜೀವನವನ್ನು ಸಮರ್ಪಿಸಿದ ಸದುದ್ದೇಶಕ್ಕೆ ಅನುಗುಣವಾದ ರೀತಿಯಲ್ಲಿ ಶಿವಾಜಿ ವೇದಪಾಠಶಾಲೆಯ ವಿದ್ಯಾರ್ಥಿಗಳಿಂದ ವೇದಮಂತ್ರಗಳನ್ನು ಪಠಿಸುತ್ತಾ ಆಚರಣೆಗಳನ್ನು ಆಚರಿಸಿದರು.[20]

## ಆಂದೋಲನದ ತಾಯಿ ವ್ಯಕ್ತಿತ್ವ

ಸತ್ಯಶೋಧಕ ಆಂದೋಲನಕ್ಕೆ ದೊಡ್ಡ ಹೊಡೆತವಾಗಿತ್ತು. ಸತ್ಯಶೋಧಕದ ಮಹಾನಾಯಕ, 'ಜಾಗೃತಿ' ಪತ್ರಿಕೆಯ ಸಂಪಾದಕ ಭಾಗವಂತರಾವ್ ಪಾಲೇಕರ್ ಅವರು ತಮ್ಮ ದುಃಖವನ್ನು ವ್ಯಕ್ತಪಡಿಸುತ್ತಾ ಹೇಳಿದರು: "ಸತ್ಯಶೋಧಕ ಸಮಾಜದ ಆಂದೋಲನದ ಬಲಗೈ ಬಂಟರಾಗಿದ್ದ ಮತ್ತು ಅಸ್ಪೃಶ್ಯರ ನಾಯಕರಿಗೆ ಪ್ರೀತಿ ಮತ್ತು ಮಮಕಾರದ ಕೊಡೆ(ಛತ್ರಿ) ಯಾಗಿದ್ದವರು ಗತಿಸಿಹೋದರು."[21] ಶಾಹುರವರ ಮರಣದ ನಂತರ ಕೊಲ್ಹಾಪುರದ ಸಿಂಹಾಸನವನ್ನೇರಿದ ಹೊಸ ಛತ್ರಪತಿ ರಾಜಾರಾಮ ಅವರಿಗೆ ಗೌರವಾರ್ಥವಾಗಿ ನೀಡಿದ ಫಲಕ ಹೇಳುತ್ತದೆ: "ಕರವೀರದ ಮಹಾರಾಜ, ತನ್ನ ಪ್ರಜೆಗಳಿಗೆ ಮಹಾದಯಾನಿಧಿಯಾಗಿದ್ದ ಶ್ರೀಮಾನ್ ಮಹಾರಾಜ ಶಾಹು ಛತ್ರಪತಿಯವರ ಆಕಸ್ಮಿಕ ಮತ್ತು ಅಕಾಲಿಕ ಮರಣದಿಂದ ಸತ್ಯ ಶೋಧಕ ಸಮಾಜಕ್ಕೆ ಅಪಾರ ಹಾನಿಯಾಗಿದೆ. ಬ್ರಾಹ್ಮಣೇತರರ ಸಮಾಜವನ್ನು ಬ್ರಾಹ್ಮಣರ ಅನ್ಯಾಯದ ಪ್ರಾಬಲ್ಯದಿಂದ ಮುಕ್ತಗೊಳಿಸಲು ಸತ್ಯಶೋಧಕ ಸಮಾಜವೆಂಬ ಗಿಡವನ್ನು ಅವರು ನೆಟ್ಟಿದ್ದರು. ಆದರೆ ಅದು ಮರವಾಗಿ ಬೆಳೆಯುವುದಕ್ಕೆ ಮೊದಲೆ ಅವರು ನಿಧನರಾದರು. ಸುಧಾರಣೆಗಳ ಪರಿಣಾಮದಿಂದ ಅವರು ಸತ್ಯಶೋಧಕ ಸಮಾಜದ ಮೂಲಕ ಧಾರ್ಮಿಕ ಮತ್ತು ಸಾಮಾಜಿಕ ಸಾಧನೆಗಳಿಂದ ಇಡೀ ಭರತಖಂಡದಲ್ಲಿ ಕೀರ್ತಿಯನ್ನು ಗಳಿಸಿದರು. ದಿವಂಗತ ಶಾಹು ಮಹಾರಾಜರು ಸಾಧಿಸಿದ ಮಿಷನ್ನನ್ನು (ಹೆಬ್ಬಯಕೆ) ಯಾವ ಮಹಾರಾಜನಾಗಲಿ ಅಥವಾ ಯಾವ ಶ್ರೀಮಂತ ವರ್ಗದವನಾಗಲಿ ಬದುಕಿರುವಾಗ ಅಥವಾ ಮೊದಲು ಬದುಕಿದ್ದವರಲ್ಲಿ ಯಾರಾದರೂ ಇದನ್ನು ಸಾಧಿಸಿದ್ದರೆ ಮತ್ತು ಬ್ರಾಹ್ಮಣೇತರ ಪ್ರಜೆಗಳು ಮಹಾ ಸಂತೋಷ ಮತ್ತು ಗೌರವದಿಂದ ಅವರಿಗೆ ರಾಜರ್ಷಿ ಎಂಬ ಬಿರುದಿನಿಂದ ಅವರನ್ನು ಅತಿಶಯವಾಗಿ ಅಲಂಕರಿಸಿದ್ದಾರೆ. ಸತ್ಯಶೋಧಕ ಸಮಾಜದ ಆಂದೋಲನ ಹರಡಿ ಬ್ರಾಹ್ಮಣೇತರರ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಲು ಸಾಗುವುದೆಂದು ನಾವು ದೃಢವಾಗಿ ನಂಬಿದ್ದೇವೆ" (ಆಗಸ್ಟ್ ೨೮, ೧೯೨೨).[22] ನಂತರ ೧೯೨೭ರಲ್ಲಿ ಮಹಾತ್ಮ ಗಾಂಧಿಯವರಿಗೆ ಶಾಹುರವರ ನೆನಪಿನಲ್ಲಿ ಅರ್ಪಿಸಿದ ನೆನಪಿನ ಕೆತ್ತಿದ ಫಲಕದಲ್ಲಿ ಶಾಹುರವರು ಕೃಷಿಕ ಜನರು ತಮ್ಮ ಮಾನಸಿಕ ದಾಸ್ಯತ್ವದಿಂದ ಮುಕ್ತರಾಗಲು ಸತ್ಯಶೋಧಕ ಸಮಾಜವನ್ನು ಪ್ರೋತ್ಸಾಹಿಸಿದ್ದಕ್ಕೆ ಶಾಹು ಮಹಾರಾಜರಿಗೆ ಕೃತಜ್ಞತೆಗಳನ್ನು ಸಲ್ಲಿಸಲಾಗುತ್ತದೆ.[23]

೧೯೨೭ರಲ್ಲಿ ಸತ್ಯಶೋಧಕದ ಕಾರ್ಯಕರ್ತ ಪಂಡರಿನಾಥ ಪಾಟೀಲರು ಮಹಾತ್ಮ ಫುಲೆಯವರ ಬಗ್ಗೆ ಮೊಟ್ಟಮೊದಲ ಜೀವನ ಚರಿತ್ರೆಯನ್ನು ಮರಾಠಿಯಲ್ಲಿ ಬರೆದರು. ಈ ಜೀವನಚರಿತ್ರೆಯ ಪೀಠಿಕೆಯಲ್ಲಿ ಬೆರಾರ್ ಪ್ರದೇಶದ ನಾಯಕರಾದ ನಾರಾಯಣರಾವ್ ಅಮೃತಕರ್ ಅವರು ಬರೆಯುತ್ತಾರೆ: "ಛತ್ರಪತಿ ಶಾಹು ಮಹಾರಾಜರು ಸತ್ಯಶೋಧಕ ಸಮಾಜದ ತತ್ವಗಳೊಂದಿಗೆ ವಿವಾಹವಾಗಿದ್ದರಿಂದ ಅದು ಮಹಾರಾಷ್ಟ್ರದಲ್ಲಿ ಕಾಳ್ಗಿಚ್ಚಿನಂತೆ ಹರಡಿ ಬ್ರಾಹ್ಮಣತ್ವದ ಮೂಲಬೇರುಗಳಿಗೆ ಕೊಡಲಿಪೆಟ್ಟನ್ನು ನೀಡಿತು. ಸತ್ಯಶೋಧಕ ಸಮಾಜದ ಅಭಿಪ್ರಾಯಗಳನ್ನು ಮೈಗೂಡಿಸಿಕೊಂಡ ಪತ್ರಿಕೆಗಳು ಬೆಳೆಯಲು ಪ್ರಾರಂಭಿಸಿದವು. ನುರಿತ ಭಾಷಣಕಾರರು

ಅಲ್ಲಲ್ಲಿ ತಿರುಗಾಡಿ ಭಾಷಣಗಳ ಮೂಲಕ ಬೋಧಿಸಲು ಪ್ರಾರಂಭಿಸಿದರು ಮತ್ತು ಅಕ್ಷರಸ್ಥರು ಪರಿಹಾಸಮಾಡದಿದ್ದರೆ ಸತ್ಯಶೋಧಕ ಸಮಾಜದ ತತ್ವಗಳು ತನ್ನ ಸಿದ್ಧಾಂತದಲ್ಲಿ ಅಂತರ್‌ಗತವಾಗಿರುವ ಸತ್ಯದಿಂದ ಜನರನ್ನು ಸಮ್ಮೋಹನಗೊಳಿಸತೊಡಗಿದವು.[24] 'ಸಂದೇಶ' ಪತ್ರಿಕೆಯ ಸಂಪಾದಕ ಮತ್ತು ಬ್ರಾಹ್ಮಣರ ಚಿಂತಕರಾದ ಅಚ್ಯುತರಾವ್ ಕೊಲ್ಹಾಟಕರ್ ಅವರು ಶಾಹು ಮಹಾರಾಜರ ಪ್ರಶಂಸಕರಾಗಿದ್ದರು. ಸತ್ಯಶೋಧಕ ಸಮಾಜಕ್ಕೆ ಶಾಹುರವರ ಕೊಡುಗೆಯನ್ನು ಕುರಿತಂತೆ ಅವರು ಹೇಳುತ್ತಾರೆ: "........ಸತ್ಯ ಶೋಧಕ ಸಮಾಜವು ಮುದ್ದು ಮಾಡುವ ತಾಯಿಯಂತಹ ರಾಜರ್ಷಿ ಶಾಹುರವರನ್ನು ಹೊಂದಿರದಿದ್ದರೆ ಅಥವಾ ಅದು ರಾಜರ್ಷಿ ಶಾಹುರಲ್ಲಿರುವ ಧೈರ್ಯಶಾಲಿ ಚಾಣಾಕ್ಷತನವನ್ನು ಗಳಿಸಿಕೊಳ್ಳದೆ ಇದ್ದಿದ್ದರೆ ಅದು ಪ್ರಾರ್ಥನಾ ಸಭೆಯಂತೆ ಹೆಳವನಾಗಿರುತ್ತಿತ್ತು ಅಥವಾ ಮಹಾರಾಷ್ಟ್ರದಲ್ಲಿ ಮಂದಗಾಮಿ ಸುಧಾರಕರಂತೆ ಒಂಟಿಯಾಗಿರಬೇಕಾಗುತ್ತಿತ್ತು".[25]

ಶಾಹುರವರ ಸಹವರ್ತಿಗಳಲ್ಲಿ ಒಬ್ಬರಾದ ಮತ್ತು ಪ್ರಮುಖ ಸತ್ಯಶೋಧಕ ನಾಯಕರಾದ ಭಾಸ್ಕರರಾವ್ ಜಾಧವ, 'ಹಂಟರ್' ಪತ್ರಿಕೆಯ ಸಂಪಾದಕರಾದ ಖಂಡೇರಾವ್ ಬಾಗಲ್ ಮೊದಲಾದವರು ಸಹ ಸತ್ಯಶೋಧಕ ಸಮಾಜದ ಪುನರುಜ್ಜೀವನದ ಎಲ್ಲಾ ಶ್ರೇಯಸ್ಸನ್ನು ಶಾಹುರವರೊಬ್ಬರಿಗೆ ನೀಡಿದ್ದಾರೆ. ಶಾಹುರವರ ಜೀವತಾವಧಿಯಲ್ಲಿ ಜಾಧವ್ ಅವರು ಬರೆದಿದ್ದಾರೆ, "ಸತ್ಯಶೋಧಕ ಸಮಾಜದ ಸಕ್ರಿಯ ಕಾರ್ಯಕರ್ತರ ಸಫಲತೆಯ ಎಲ್ಲಾ ಕೀರ್ತಿ ಶಾಹು ಮಹಾರಾಜರವರಿಗೆ ಸಲ್ಲಬೇಕು".[26] ಬಾಗಲ್ ಬರೆಯುತ್ತಾರೆ: "ಶಾಹು ಮಹಾರಾಜರು ಮಹಾರಾಷ್ಟ್ರದಲ್ಲೆಲ್ಲಾ ಮಹಾತ್ಮ ಫುಲೆಯವರ ಸತ್ಯಶೋಧಕ ಸಮಾಜದ ಧ್ವಜವನ್ನು ಒಂದು ಕೈಯಲ್ಲಿ ಮತ್ತು ಮತ್ತೊಂದು ಕೈಯಲ್ಲಿ ಸಮಾನತೆಯನ್ನು ಹಿಡಿದುಕೊಂಡು ಅವರ ತತ್ವಗಳನ್ನು ಪ್ರಸಾರ ಮಾಡಿದರು".[27] ಶಾಹು ಮಹಾರಾಜರ ಸಮಕಾಲೀನರು ಮತ್ತು ಮುಂದಿನ ತಲೆಮಾರಿಗೆ ಸೇರುವವರು ಮಹಾರಾಜರನ್ನು ಸತ್ಯಶೋಧಕ ಸಮಾಜದ ಆಂದೋಲನದ ನಿಷ್ಠಾವಂತ ಪ್ರತಿಪಾದಕರೆಂದು ಏಕೆ ಕರೆಯುತ್ತಾರೆಂಬ ಸಮರ್ಥನೆಗಾಗಿ ಮೇಲೆ ಹೇಳಿದ ಸಾಕ್ಷ್ಯಗಳನ್ನು ಮುಂದಿಡಲಾಗಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವರೊಬ್ಬ 'ನಿಜವಾದ ಒಬ್ಬ ಸತ್ಯಶೋಧಕ' ಎಂದು ಪರಿಗಣಿಸಲಾಗಿದೆ. ಇದು ಶಾಹುರವರು ಆರ್ಯ ಸಮಾಜದ ಒಬ್ಬ ಪ್ರತಿಪಾದಕರೆ ಅಥವಾ ಸತ್ಯಶೋಧಕ ಸಮಾಜದ ಒಬ್ಬ ಪ್ರತಿಪಾದಕರೆ ಎಂಬ ಭಾವೋದ್ವೇಗದ ವಿವಾದ ಅವರ ಜೀವಿತಾವಧಿಯಲ್ಲಿ ಉದ್ಭವಿಸಿದ್ದಕ್ಕೆ ಒಂದು ಉಲ್ಲೇಖವಾಗಿದೆ.

---

೨೧

# ಸತ್ಯಶೋಧಕರೇ ಅಥವಾ ಆರ್ಯ ಸಮಾಜಿಗಳೇ?

ಒಬ್ಬ ಮಹಾನುಭಾವನ ಜೀವನ ಒಮ್ಮೊಮ್ಮೆ ವಿವಾದಗಳಿಂದ ಮುಕ್ತವಾಗಿರುತ್ತದೆ. ಆದರೆ ಶಾಹು ಮಹಾರಾಜರು ಅದಕ್ಕೆ ಅಪವಾದವಲ್ಲ. ಅವರ ಜೀವಿತಾವಧಿಯಲ್ಲಿಯೇ ಶಾಹುರವರ ಕೆಲವು ಕೃತ್ಯಗಳು ಭಯಂಕರವಾದ ವಿವಾದಗಳ ಬಿಸಿಬಿಸಿ ಚರ್ಚೆಗೆ ಎಡೆಮಾಡಿಕೊಟ್ಟಿವೆ. ಶಾಹುರವರ ಜೀವನಚರಿತ್ರೆಯ ವಿದ್ವಾಂಸರಲ್ಲಿ ಈ ಬಿಸಿಬಿಸಿ ಚರ್ಚೆಗಳನ್ನು ಗಮನಿಸಬಹುದು. ಅವರು ಒಬ್ಬ ಆರ್ಯಸಮಾಜದ ಪ್ರತಿಪಾದಕರೆ ಅಥವಾ ಒಬ್ಬ ಸತ್ಯಶೋಧಕರೇ ಎಂಬಂಥ ಒಂದು ಪ್ರಮುಖ ವಿವಾದವಿದೆ.

### ಶಾಹು: ಆರ್ಯ ಸಮಾಜದ ಪ್ರತಿಪಾದಕ

ಎಸ್. ಎಂ. ಗಾರ್ಗೆ ಮತ್ತು ಡಾ. ವೈ. ಡಿ. ಫಡ್ಕೆ ಅವರ ಒಂದು ಗುಂಪು ಶಾಹುರವರು ಮಾತು ಮತ್ತು ಕೃತಿಗಳಲ್ಲಿ ಸದಾ ಆರ್ಯ ಸಮಾಜಿಗಳಾಗಿದ್ದರು ಮತ್ತು ಎಂದೆಂದಿಗೂ ಸತ್ಯಶೋಧಕರಾಗಿರಲಿಲ್ಲ ಎಂದು ಪ್ರತಿಪಾದಿಸಿದರೆ, ಮತ್ತೊಂದು ಗುಂಪಿನ ವಿದ್ವಾಂಸರಾದ ಡಾ. ವಿ. ಬಿ, ಕೋಲ್ಟೆ ಮತ್ತು ಡಾ. ರಮೇಶ್ ಜಾಧವ ಅವರು ಶಾಹು ಮಹಾರಾಜರು ಒಬ್ಬ ಪರಿಪೂರ್ಣ ಸತ್ಯಶೋಧಕರಾಗಿದ್ದರು ಮತ್ತು ಮಹಾತ್ಮ ಫುಲೆಯವರ ಒಬ್ಬ ನಿಜವಾದ ಶಿಷ್ಯರಾಗಿದ್ದರೆಂದು ಹೇಳುತ್ತಾರೆ. ಎರಡೂ ಗುಂಪುಗಳಿಗೆ ಸೇರಿದ ವಿದ್ವಾಂಸರು ತಮ್ಮ ವಿಪುಲವಾದ ಸಾಕ್ಷ್ಯಾಧಾರಗಳಿಂದ ತಮ್ಮ ಅಭಿಪ್ರಾಯಗಳನ್ನು ಸಮರ್ಥಿಸಲು ಪ್ರಯತ್ನಿಸಿದ್ದಾರೆ. ಐತಿಹಾಸಿಕ ಸಂಶೋಧನೆಯ ಕ್ಷೇತ್ರದಲ್ಲಿನ ದಾಖಲೆಗೊಂಡ ಸಾಕ್ಷ್ಯಾಧಾರಗಳ ಮಹತ್ವವನ್ನು ಪರಿಗಣಿಸಿ ಶಾಹುರವರು ಒಬ್ಬ ಆರ್ಯ ಸಮಾಜಿ ಮತ್ತು ಯಾವುದೇ ರೀತಿಯಲ್ಲಿ ಒಬ್ಬ ಸತ್ಯಶೋಧಕನಲ್ಲ ಎಂದು ಸಾಧಿಸುವುದಕ್ಕೆ ಶ್ರಮಪಡಬೇಕಾಗಿಲ್ಲ. ಅವರು ಆರ್ಯ ಸಮಾಜದ ಸದುದ್ದೇಶವನ್ನು ಹೇಗೆ ಪ್ರತಿಪಾದಿಸಿದರೆಂಬುದನ್ನು ನಾವು ಈಗಾಗಲೇ ಚರ್ಚಿಸಿದ್ದೇವೆ ಮತ್ತು ಅವರ ಆ ಸಂಸ್ಥೆ ಬಗ್ಗೆ ತಾವು ಹೊಂದಿದ್ದ ಮಮಕಾರವನ್ನು ಸಾರ್ವಜನಿಕವಾಗಿ ಘೋಷಿಸಿದ್ದಾರೆ. ಶಾಹುರವರು ಸ್ವತಃ 'ನಾನು ಹೇಗೆ ಆರ್ಯಸಮಾಜಿಯಾಗಿ ಪರಿವರ್ತನೆಗೊಂಡೆ ಅಥವಾ ಹೇಗೆ ನಾನು ಹೃದಯಪೂರ್ವಕವಾಗಿ ಆರ್ಯಸಮಾಜಿಯಾಗಿದ್ದೇನೆ' ಎಂಬುದನ್ನು ಅವರು ತಮ್ಮ ನಾನಾ ಸಾರ್ವಜನಿಕ ಭಾಷಣಗಳಲ್ಲಿ ಮತ್ತು ತಮ್ಮ ವೈಯಕ್ತಿಕ ಪತ್ರ ವ್ಯವಹಾರಗಳಲ್ಲಿ ಚರ್ಚಿಸಿದ್ದಾರೆಂದು ಹೇಳಿದ್ದಾರೆಂಬುದಕ್ಕೆ ಇಷ್ಟು ಸಾಕು.[1] ಆದರೆ "ನಾನು ಒಬ್ಬ ಸತ್ಯಶೋಧಕನಲ್ಲ" ಎಂಬ ಅವರ ಸ್ಪಷ್ಟ ಘೋಷಣೆಗಳು ಸುಸ್ಪಷ್ಟವಾದ ಸಾಕ್ಷ್ಯಾಧಾರಗಳು ಲಭ್ಯವಾಗಿರುವುದೇ ಇದಕ್ಕಿಂತ ಮಿಗಿಲಾದ ಮುಖ್ಯ ಅಂಶವಾಗಿದೆ.

ಶಾಹುರವರು ೧೯೨೦ರಲ್ಲಿ ಒಂದು ಪತ್ರದಲ್ಲಿ ಬರೋಡದಿಂದ ತಮ್ಮ ಸ್ನೇಹಿತನಿಗೆ ಬರೆಯುತ್ತಾರೆ: "ನಾನು ಸತ್ಯಶೋಧಕ ಸಮಾಜಕ್ಕೆ ವಿರುದ್ಧವಾಗಿದ್ದೇನೆಂದು ನಾನು ನನ್ನ ಎಲ್ಲಾ ಸಾರ್ವಜನಿಕ ಭಾಷಣಗಳಲ್ಲಿ

ಸ್ಪಷ್ಟಪಡಿಸುತ್ತಿದ್ದೇನೆ. ನಾನು ಕೇಳಿದ ಕ್ರಿಶ್ಚಿಯನ್ನರು ಬೋಧಿಸಿದ ರೀತಿಯಲ್ಲಿಯೇ ಸತ್ಯಶೋಧಕರ ಜಲ್ಸಾಗಳ ಪ್ರದರ್ಶನಗಳನ್ನು ನಾನು ನೋಡಿದ್ದೇನೆ. ಆದರೆ ನಾನು ಅವರ ಅಭಿಪ್ರಾಯಗಳನ್ನು ಒಪ್ಪುವುದಿಲ್ಲ. ಕ್ರಿಶ್ಚಿಯನ್ನರ ಮತ್ತು ಮುಸ್ಲಿಮರ ಅಭಿಪ್ರಾಯಗಳನ್ನು ಒಪ್ಪಿದಂತೆಯೇ ಸತ್ಯಶೋಧಕರ ಕೆಲವು ಅಭಿಪ್ರಾಯಗಳನ್ನು ಒಪ್ಪುವೆನು. ಆದರೆ ನಾನು ಸತ್ಯಶೋಧಕನಾಗಿದ್ದೇನೆಂದು ಅದರ ಅರ್ಥವಲ್ಲ".[2] ಅದರ ಮುಂದಿನ ವರ್ಷ ಬರೋಡದ 'ಜಾಗೃತಿ' ಎಂಬ ಪತ್ರಿಕೆಯಲ್ಲಿ ಪ್ರಕಟಗೊಂಡ ಒಂದು ಪತ್ರದಲ್ಲಿ ಶಾಹು ಹೇಳುತ್ತಾರೆ: "ನಾನು ಎಂದೆಂದಿಗೂ ಒಬ್ಬ ಸತ್ಯ-ಸಮಾಜಿಯಾಗಲಾರೆ ಮತ್ತು ನಾನು ಅಲ್ಲವೇ ಅಲ್ಲ.... ಕೊಲ್ಹಾಪುರದಲ್ಲಿ ಆರ್ಯಸಮಾಜ, ಥಿಯೋಸಫಿ ಮೊದಲಾದ ಹಲವಾರು ಪಂಥಗಳಿವೆ. ಅವುಗಳಲ್ಲಿ ಸತ್ಯಸಮಾಜ ಒಂದು. ನಾನು ಸಂಪೂರ್ಣವಾಗಿ ವೇದಗಳನ್ನು ನಂಬಿರುವಾಗ ಮತ್ತು ನಾವು ಅವುಗಳಿಗೆ ಕಟ್ಟುನಿಟ್ಟಾಗಿ ಬದ್ಧನಾಗಿರುವಾಗ ನನ್ನ ಮೇಲೆ ಈ ದಾಳಿ ಏಕೆ"?.[3] ಈ ಹೇಳಿಕೆಗಳಿಗೆ ಆಧಾರವಾಗಿ ಶಾಹುರವರ ಇತರೆ ಪತ್ರಗಳಲ್ಲಿ ಸಾಕ್ಷ್ಯಗಳು ಸಿಕ್ಕಿವೆ. ಡಾ. ಫಡ್ಕೆ ಅವರು ಅಂಥ ಯಥೇಚ್ಛ ದಾಖಲೆಗಳ ಸಾಕ್ಷ್ಯಾಧಾರಗಳಿಂದ ಶಾಹುರವರು ಒಬ್ಬ ಸತ್ಯಶೋಧಕನಲ್ಲ, ಅವರೊಬ್ಬ ಆರ್ಯಸಮಾಜದ ಪ್ರತಿಪಾದಕ ಎಂಬ ತೀರ್ಮಾನಕ್ಕೆ ಬರುವುದರಲ್ಲಿ ಆಶ್ಚರ್ಯವಿಲ್ಲ.[4]

ಮತ್ತೊಬ್ಬ ವಿದ್ವಾಂಸರಾದ ಗಾರ್ಗೆಯವರು ಶಾಹು ಮಹಾರಾಜರು ಆರ್ಯಸಮಾಜದ ತತ್ವ ಮತ್ತು ಉದ್ದೇಶಗಳನ್ನು ಮೈಗೂಡಿಸಿಕೊಂಡಿದ್ದಾರೆಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಗಾರ್ಗೆ ಅವರು ಸತ್ಯಶೋಧಕ ಸಮಾಜದ ಬಗ್ಗೆ ಹೇಳುತ್ತಾರೆ: "ಶಾಹು ಮಹಾರಾಜರು ಮಾಡಿದ ಭಾಷಣಗಳನ್ನು ಮತ್ತು ಅವರ ಕೆಲಸಕಾರ್ಯಗಳನ್ನು ಪರಿಶೀಲಿಸಿದಾಗ ಸತ್ಯಶೋಧಕದ ದೃಷ್ಟಿಕೋನಕ್ಕೆ ಅನುಗುಣವಾಗಿ ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿಕೋನಗಳಿರಲಿಲ್ಲವೆಂದು ಊಹಿಸಬಹುದು. ವಿಶೇಷವಾಗಿ ಧಾರ್ಮಿಕ ಸುಧಾರಣೆಗಳ ಸಂದರ್ಭದಲ್ಲಿ ಅವರ ವಿರುದ್ಧವಾಗಿದ್ದವೆಂದು ಕಂಡುಬರುತ್ತವೆ. ಮಹಾತ್ಮ ಫುಲೆ ಅವರು ಬ್ರಾಹ್ಮಣರ ಯಜಮಾನಿಕೆಯ ಹೃದಯ ಭಾಗವನ್ನು ಒತ್ತಿ ಹೇಳುವುದರಲ್ಲಿ ಯಶಸ್ವಿಯಾಗಿದ್ದರೆಂದು ಶಾಹುರವರಿಗೆ ಸಕಾರಣವಾಗಿ ಚೆನ್ನಾಗಿ ತಿಳಿದಿತ್ತು. ಆದರೂ ಇವೆಲ್ಲವನ್ನೂ ಒಪ್ಪಿಕೊಂಡರೂ ಕೂಡ ಅವರು ಮಹಾತ್ಮ ಫುಲೆಯವರ ಶಿಷ್ಯರಾಗಿದ್ದರೆಂಬ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ. ಮಹಾರಾಜರು ಅದನ್ನು ಸೂಚಿಸಿದಂತೆ ತೋರುವುದಿಲ್ಲ ಅಥವಾ ಅವರ ನೀತಿ-ಧೋರಣೆಗಳು ಆ ರೀತಿಯ ಯಾವುವನ್ನೂ ತಿಳಿಸುವುದಿಲ್ಲ. ಸತ್ಯಶೋಧಕ ಸಮಾಜದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳ ವಿಚಾರಗಳನ್ನು ವಿಶೇಷವಾಗಿ ಪ್ರೋತ್ಸಾಹಿಸಿದ್ದನ್ನು ಎಲ್ಲಿಯೂ ಹೇಳಿಲ್ಲ. ಮಿಗಿಲಾಗಿ ಕೆಲವು ಸಲ ಸತ್ಯಶೋಧಕ ಸಮಾಜದ ಧಾರ್ಮಿಕ ಚಿಂತನೆಗಳ ಕೊರತೆಗಳನ್ನು ಸೂಚಿಸಿದ್ದಾರೆ"[5]

## ಶಾಹು: 'ಒಬ್ಬ ಪರಿಪೂರ್ಣ ಸತ್ಯಶೋಧಕ'

ವಿದ್ವಾಂಸರ ಮತ್ತೊಂದು ಗುಂಪು ಸಹ ಶಾಹುರವರು ಒಬ್ಬ ಸತ್ಯಶೋಧಕರೆಂಬುದಕ್ಕೆ ಹಲವು ದಾಖಲೆಗಳ ಸಾಕ್ಷ್ಯಾಧಾರಗಳನ್ನು ಮುಂದಿಡುತ್ತಾರೆ. ನಾವು ಈಗಾಗಲೇ ಈ ಪ್ರಯತ್ನಗಳನ್ನು ಮತ್ತು ಕೊಲ್ಹಾಪುರದಲ್ಲಿ ಸತ್ಯಶೋಧಕ ಸಮಾಜದ ಸ್ಥಾಪನೆಗೆ ಮತ್ತು ಮಹಾರಾಷ್ಟ್ರದಲ್ಲೆಲ್ಲ ಅದರ ವಿಸ್ತರಣೆಗಾಗಿ ನೆರವು ನೀಡಿರುವುದನ್ನು ನಾವು ಈಗಾಗಲೆ ಉಲ್ಲೇಖಿಸಿದ್ದೇವೆ. ಇದರ ಜೊತೆಗೆ ಸತ್ಯಶೋಧಕ ಸಮಾಜದ ಸ್ಥಾಪಕರಾದ ಫುಲೆಯವರ ಬಗೆಗಿರುವ ಮಹಾಗೌರವ ಮತ್ತು ತಮ್ಮ ಭಾಷಣಗಳಲ್ಲಿ ಫುಲೆಯವರ ತತ್ವಗಳಿಗೆ ಅನುಗುಣವಾಗಿರುವ ಹೇಳಿಕೆಗಳು ಕಂಡುಬರುತ್ತವೆ.

೧೯೧೪ರಲ್ಲಿ ಆರ್ಯಸಮಾಜದ ಸಮ್ಮೇಳನದಲ್ಲಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಫುಲೆಯವರ ಬಗ್ಗೆ ಗೌರವದ ಮಾತುಗಳನ್ನು ಹೇಳಿರುವುದು ಕಂಡುಬರುತ್ತದೆ. ಅವರು ಹೇಳಿದ್ದರು: "ಫುಲೆಯವರು ಒಳ್ಳೆಯ ಚಿಂತನೆ ಮತ್ತು ಪರಿವೀಕ್ಷಣೆಯಿಂದ ಬ್ರಾಹ್ಮಣರ ಕುಯುಕ್ತಿಯನ್ನು ಚೆನ್ನಾಗಿ ಮನವರಿಕೆಮಾಡಿಕೊಂಡಿದ್ದರು. ಅವರು ಬ್ರಾಹ್ಮಣ ಆಡಳಿತಶಾಹಿಯನ್ನು ಮುರಿಯಲು ಹಲವು ಪ್ರಯತ್ನಗಳನ್ನು ಮಾಡಿರುವುದನ್ನು ಅರ್ಥಮಾಡಿಕೊಂಡಿದ್ದರು. ಆದರೆ ನೇರ ದಾಳಿಯಿಂದ ಬ್ರಾಹ್ಮಣರ ಧಾರ್ಮಿಕ ಪ್ರಾಬಲ್ಯವನ್ನು ಕಿತ್ತುಹಾಕದ ಹೊರತು ಯಾವುದೇ ಪ್ರಯೋಜನವಿಲ್ಲ ಮತ್ತು ಬ್ರಾಹ್ಮಣೇತರರ ಅವಲಂಬನೆ ಮುಂದುವರೆಯುವುದು. ಈ ತಿಳುವಳಿಕೆಯಿಂದ ಅವರು ಬ್ರಾಹ್ಮಣರ ಪರಮ ಶ್ರೇಷ್ಠತ್ವದ ಹೃದಯಭಾಗವನ್ನು ಕೀಳಲು ಪ್ರಾರಂಭಿಸಿದರು. ದೇವರು ಮತ್ತು ಭಕ್ತನ ನಡುವೆ ಏಜೆಂಟರ (ಪೂಜಾರಿಯ) ಅವಶ್ಯಕತೆಯಿಲ್ಲ ಎಂಬುದೇ ಫುಲೆಯವರ ಸತ್ಯಶೋಧಕ ಸಮಾಜದ ಮುಖ್ಯ ಸಿದ್ಧಾಂತವಾಗಿತ್ತು. ಆದ್ದರಿಂದ ಬ್ರಾಹ್ಮಣ-ಪೂಜಾರಿಗಳ ಸೇವೆಯಿಲ್ಲದೆ ಪ್ರತಿಯೊಬ್ಬನೂ ಸ್ವತಃ ಧಾರ್ಮಿಕ ವಿಧಿ-ಆಚರಣೆಗಳನ್ನು ನೆರವೇರಿಸಬೇಕೆಂದು ಬೋಧಿಸಲು ಅವರು ಪ್ರಾರಂಭಿಸಿದರು. ಬ್ರಾಹ್ಮಣರು ಬ್ರಾಹ್ಮಣೇತರರ ಸಮಾಜವನ್ನು ಸಂಕೋಲೆಗಳಿಂದ ಬಂಧಿಸಿ ನಿಯಂತ್ರಣದಲ್ಲಿಟ್ಟುಕೊಂಡಿದ್ದು ಮತ್ತು ಅದು ಸಾವಿರಾರು ವರ್ಷಗಳಿಂದಲೂ ಅಜ್ಞಾನದಿಂದ ಹೂತುಕೊಂಡಿದ್ದರಿಂದ ಸತ್ಯಶೋಧಕರು ತಮ್ಮ ಹೊಣೆಗಾರಿಕೆಯಲ್ಲಿ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂತು. ಆದರೆ ಸುಧಾರಕನಿಗೆ ಬೇರೆ ದಾರಿಯೇ ಇಲ್ಲ, ಆದ್ದರಿಂದ ಅವನು ಸಮಸ್ಯೆಗಳ ಮೂಲಕವೇ ಹೋರಾಡಬೇಕಾಗಿತ್ತು".[6]

ಸ್ವಾಮಿ ದಯಾನಂದ ಸರಸ್ವತಿಯವರನ್ನು ಅಪಹಾಸ್ಯಮಾಡಲು ಪೂನಾದಲ್ಲಿ ಕರ್ಮಠ ಬ್ರಾಹ್ಮಣರು ವ್ಯವಸ್ಥೆಗೊಳಿಸಿದ್ದ ಮೆರವಣಿಗೆಯನ್ನು ಉಲ್ಲೇಖಿಸುತ್ತಾ ಶಾಹುರವರು ಅದೇ ಭಾಷಣದಲ್ಲಿ ಹೇಳುತ್ತಾರೆ: "ಹಿತೋಪದೇಶ(ಸಿಹಿಮಾತು) ಅಥವಾ ತರ್ಕಗಳು ಬ್ರಾಹ್ಮಣ ನೌಕರಶಾಹಿಗೆ ಪರಿಣಾಮ ಬೀರಲಾರವು ಎಂದು ಜೋತಿರಾವ್ ಫುಲೆ ಮತ್ತು ಅವರ ಅನುಯಾಯಿಗಳಿಗೆ ಅಲ್ಲಿ ಮನವರಿಕೆಯಾಯಿತು ಮತ್ತು ಅವರು ಬ್ರಾಹ್ಮಣರಿಗೆ 'ಮುಯ್ಯಿಗೆ ಮುಯ್ಯಿ' ಎಂಬ ನಾಣ್ಣುಡಿಯಂತೆ ಪಾಠ ಕಲಿಸಲು ಪ್ರಾರಂಭಿಸಿದರು. ನಿಜವಾದ ಧರ್ಮ ಮತ್ತು ಧಾರ್ಮಿಕ ಜ್ಞಾನ ದಕ್ಷಿಣ ಭಾಗದ ಭೂಮಿಗೆ ಪ್ರವೇಶಿಸಬೇಕಾದರೆ ಸತ್ಯಶೋಧಕ ಸಮಾಜ ವಹಿಸಿಕೊಂಡಿರುವ ಹೊಣೆಯನ್ನು ಈ ಭೂಮಿಭಾಗ ವಹಿಸಿಕೊಳ್ಳಲು ಸಿದ್ಧವಾಗಿರಬೇಕು. ಈ ರೀತಿಯಲ್ಲಿ ಒಮ್ಮೆ ಕಲ್ಲುಮುಳ್ಳು ಗಿಡಗಂಟಿಗಳನ್ನು ಕಿತ್ತು ಎಸೆದರೆ ಆರ್ಯ ಧರ್ಮದ ಬೀಜವನ್ನು ಆಳದಲ್ಲಿ ಬಿತ್ತಿದರೆ ಅದು ಬೆಳೆದು ಪ್ರತಿಯೊಬ್ಬರಿಗೂ ಸುಖ ನೀಡುತ್ತದೆ."[7]

೧೯೨೦ರಲ್ಲಿ ನಾಸಿಕದಲ್ಲಿ ಮರಾಠ ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯದ ಭವನದ ಅಸ್ತಿವಾರ ಸಮಾರಂಭದಲ್ಲಿ ಭಾಷಣ ಮಾಡಿದರು. ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯವನ್ನು ಆಡಳಿತ ಮಂಡಳಿ ತೆರೆದಿರುವ ಬಗ್ಗೆ ಅಭಿನಂದನೆಗಳನ್ನು ಸಲ್ಲಿಸುತ್ತಾ ತನ್ನ ಭಾಷಣದಲ್ಲಿ ಶಾಹು ಹೇಳಿದರು: "ಈ ವಿದ್ಯಾರ್ಥಿ ನಿಲಯದ ಧೋರಣೆಯು ಅನುಕರಣ ಯೋಗ್ಯವಾಗಿದೆ. ಮರಾಠ ಶಿಕ್ಷಣ ಸಮ್ಮೇಳನದ ಸಂದರ್ಭದಲ್ಲಿ ಮರಾಠರ ಔದಾರ್ಯದಿಂದ ಇದು ಸ್ಥಾಪನೆಗೊಂಡಿದ್ದರೂ ಆಡಳಿತ ಮಂಡಳಿಯು ಅದನ್ನು ಎಲ್ಲಾ ಜಾತಿಗಳಿಗೆ ತೆರೆದಿಡುವಲ್ಲಿ ಮನಸ್ಸಿನ ಉದಾರತೆಯನ್ನು ಮತ್ತು ದೇಶಭಕ್ತಿಯನ್ನು ತೋರಿಸಿದೆ. ಎಲ್ಲಾ ಜನರು ದೇವರ ಮಕ್ಕಳು, ಆದ್ದರಿಂದ ನಾವೆಲ್ಲಾ ಸಹೋದರರೆಂಬ ಸತ್ಯಶೋಧಕ ಸಮಾಜದ ತತ್ವವನ್ನು ಜಾರಿಗೆ ತರುವ ಮೂಲಕ ಅವರ ಸತ್ಯ ಮತ್ತು ಮನೋಬಲದ ಬದ್ಧತೆಯನ್ನು ಸಾರ್ವಜನಿಕವಾಗಿ

ತೋರಿಸಿದ್ದಾರೆ. ಈ ಕಾರ್ಯಕ್ಕೆ ಯಾವ ಪ್ರಶಂಸೆಯು ಸಾಕಾಗುವುದಿಲ್ಲ. ಈ ವಿಶ್ವಮಾನವ ಪ್ರೇಮದ ತತ್ವ (ಲೋಕಮಿತ್ರ) ಭಿನ್ನ-ಭಿನ್ನ ಸಂಸ್ಥೆಗಳಲ್ಲಿ ಹರಡಿದಂತೆ ಒಳ್ಳೆಯದು ಸಂಭವಿಸುತ್ತದೆ. ಅದು ಜಾತಿ-ಭೇದವನ್ನು ಶಿಥಿಲಗೊಳಿಸಿ, ಐಕ್ಯತೆ ಉದ್ದೇಶಕ್ಕೆ ಸಹಾಯಮಾಡುತ್ತದೆ".[8]

ತಮ್ಮ ಈ ಭಾಷಣದಲ್ಲಿ ಸತ್ಯಶೋಧಕ ತತ್ವವು ಪುರೋಹಿತಶಾಹಿಯನ್ನು ಜರ್ಜರಿತಗೊಳಿಸಬೇಕೆಂದು ಪ್ರತಿಪಾದಿಸಿದರು. ಶಾಹು ಹೇಳುತ್ತಾರೆ: "ಬ್ರಾಹ್ಮಣರ ಧಾರ್ಮಿಕ ನೌಕರಶಾಹಿಯನ್ನು ಕಿತ್ತುಹಾಕದ ಹೊರತು ರಾಷ್ಟ್ರವನ್ನು ವಿಮೋಚನೆಗೊಳಿಸಲು ಸಾಧ್ಯವಿಲ್ಲ. ಆದ್ದರಿಂದ ಬ್ರಾಹ್ಮಣ ಪುರೋಹಿತರಿಂದ ಅಥವಾ ಇತರೆ ಬ್ರಾಹ್ಮಣರಿಂದ ಧರ್ಮಬೋಧನೆಯನ್ನು ಮಾಡುವ ಪದ್ಧತಿಯನ್ನು ಕೈಬಿಡಬೇಕು".[9]

ಶಾಹುರವರು ಆಗಸ್ಟ್ ೨೦, ೧೯೨೦ರಂದು ಬಾಂಬೆಯ ಗೌರ್ನರ್ ಆಡಮ್ ಅವರಿಗೆ ಬ್ರಾಹ್ಮಣರ ಸಂಚಿನ ಚಟುವಟಿಕೆಗಳ ಬಗ್ಗೆ ಒಂದು ಪತ್ರ ಬರೆದರು. ಅದರಲ್ಲಿ ಸತ್ಯಶೋಧಕ ಜಲ್ಸಾಗಳ ಬಗ್ಗೆ ಅವರು ಹೇಳುತ್ತಾರೆ: "ಈ ಜಲ್ಸಾಗಳ ಪರಿಣಾಮದಿಂದ ಬ್ರಾಹ್ಮಣ ಸಮುದಾಯ ಮೊದಲಿಗಿಂತ ಹೆಚ್ಚಾಗಿ ನನ್ನನ್ನು ದ್ವೇಷಿಸಲು ಪ್ರಾರಂಭಿಸಿದ್ದಾರೆ. ಆದರೆ ನಾನೇನು ಸತ್ಯಶೋಧಕ ಜಲ್ಸಾಗಳ ಪ್ರದರ್ಶನಗಳಲ್ಲಿ ನೇರವಾಗಿ ಸೇರಿದವನಲ್ಲ. ಆದರೆ ನಾನು ಈ ಪ್ರದರ್ಶನಗಳಲ್ಲಿ ಅಡಗಿರುವ ಅಭಿಪ್ರಾಯ(ಸಂದೇಶ)ಗಳು ಎಲ್ಲಾ ಕಡೆಗೂ ಹಬ್ಬಬೇಕೆಂದು ಬಯಸುತ್ತೇನೆ. ಬ್ರಾಹ್ಮಣರೂ ಈ ಪ್ರದರ್ಶನಗಳನ್ನು ಅಶ್ಲೀಲ ಎಂದು ಭಾವಿಸುವುದಾದರೆ ಅವರು ಸಹ ಅದೇ ವಿಚಾರಗಳನ್ನು ಪ್ರತಿದಿನ ಧರ್ಮದ ಹೆಸರಿನಲ್ಲಿ ಪುರಾಣ ಅಥವಾ ಕೀರ್ತನೆಗಳ ಮೂಲಕ ಪ್ರಚಾರಮಾಡುತ್ತಾರೆ. ಅಂತಹ ಅಶ್ಲೀಲ ಕತೆಗಳನ್ನು ಒಂದು ಕೀರ್ತನೆಯಲ್ಲಿ ಹೇಳುವುದಾದರೆ ಅವರು ಜಲ್ಸಾಗಳ ಮೂಲಕ ಹೇಳುವುದನ್ನು ಏಕೆ ಆಕ್ಷೇಪಿಸುತ್ತಾರೆ. ಜಲ್ಸಾ ಪ್ರದರ್ಶಕರ ಬಗ್ಗೆ ನನಗೆ ಸಹಾನುಭೂತಿಯಿದೆಯೆಂದು ನಾನು ಒಪ್ಪುತ್ತೇನೆ. ಚುನಾವಣೆಗಳ ಸಮಯದಲ್ಲಿ ಜಲ್ಸಾವಾಲಗಳು ಬ್ರಾಹ್ಮಣೇತರರಿಗೆ ಸಹಾಯಮಾಡಿದರೆ, ಕೀರ್ತನಾಕಾರರು ಬ್ರಾಹ್ಮಣರಿಗೆ ಸಹಾಯಮಾಡುತ್ತಾರೆ".[10] ಇದೇ ಪತ್ರದಲ್ಲಿ ಈ ಜಲ್ಸಾಗಳ ತತ್ವಗಳು ಅಂದರೆ ಸತ್ಯಶೋಧಕ ಸಮಾಜದ ತತ್ವಗಳು ಎಲ್ಲಾ ಕಡೆಗೂ ಹರಡಬೇಕೆಂದು ಶಾಹುರವರು ಸ್ಪಷ್ಟವಾಗಿ ಹೇಳಿದ್ದಾರೆ.

ಡಾ. ವಿ. ಬಿ. ಕೋಲ್ಟೆ ಅವರು ಹೆಚ್ಚು ಸಾಕ್ಷ್ಯಾಧಾರಗಳನ್ನು ಮುಂದಿಡುತ್ತಾ ಒತ್ತಿ ಹೇಳುತ್ತಾರೆ: "ಇದು ಮತ್ತು ಬೇರೆ ಕಡೆಗಳಲ್ಲಿರುವ ಅಂತಹ ಹೇಳಿಕೆಗಳನ್ನು ಗಮನಕ್ಕೆ ತೆಗೆದುಕೊಂಡರೆ ತಾನು ಸಂಪೂರ್ಣವಾಗಿ ಒಬ್ಬ ಸತ್ಯಶೋಧಕನಾಗುತ್ತೇನೆ. 'ನಾನು ಎಂದೆಂದಿಗೂ ಸತ್ಯಶೋಧಕ ಸಮಾಜದಲ್ಲಿ (ಒಬ್ಬ ಸಹಭಾಗಿ) ಇರಲಿಲ್ಲ ಮತ್ತು ಸತ್ಯಶೋಧಕ ಸಮಾಜದ ಆಂದೋಲನದಲ್ಲಿ ಯಾವುದೇ ರೀತಿಯಲ್ಲಿ ಸಂಬಂಧವಿಟ್ಟು ಕೊಂಡವನಲ್ಲ' ಎಂದು ನಿರಾಕರಿಸುತ್ತೇನೆ ಎಂಬುದು ಅವರ ಮಾತುಗಳು ಅಥವಾ ರಾಜಕೀಯ ತುರ್ತು ಮಾರ್ಗದರ್ಶನದಿಂದ ಸತ್ಯಶೋಧಕ ಸಮಾಜ ನಿಸ್ಸಂದೇಹವಾಗಿ ಜಾತಿಯ ದ್ವೇಷಗಳನ್ನು ತೀವ್ರಗೊಳಿಸುವ ಸಾಧ್ಯತೆಯಿರುವುದರಿಂದ ಸತ್ಯಶೋಧಕ ಸಮಾಜದೊಂದಿಗೆ ಯಾವುದೇ ಸಂಬಂಧವಿಟ್ಟುಕೊಳ್ಳಲು ನಾನು ಬಯಸುವುದಿಲ್ಲ ಎಂಬ ಅವರ ಹೇಳಿಕೆಯೊಂದಿದೆ".[11]

ಶಾಹುರವರು ಸತ್ಯಶೋಧಕ ಸಮಾಜದ ಬಗ್ಗೆ ಮಾಡಿರುವ ಹೇಳಿಕೆಗಳಲ್ಲಿ ಕೆಲವು ಹೇಳಿಕೆಗಳನ್ನು ಸಾಂದರ್ಭಿಕ ಮತ್ತು ತೋರಿಕೆಯ ಮಹತ್ವದ್ದಾಗಿರುತ್ತದೆ. ಡಾ. ಕೋಲ್ಟೆಯವರು ಹೇಳುತ್ತಾರೆ: "ಭಾವನಗರದ 'ಆರ್ಯ ಸಮಾಜದ ಸಮ್ಮೇಳನದ ಸತ್ಯಶೋಧಕ ಸಮಾಜವು 'ಮುಯ್ಯಿಗೆ ಮುಯ್ಯಿ' ಎಂಬ ತತ್ವದ

ಮೇಲೆ ಕಾರ್ಯ ನಿರ್ವಹಿಸುವುದರಿಂದ ಗಮನಾರ್ಹವಾದುದನ್ನು ಸಾಧಿಸದಿದ್ದರೂ ಅದು ಕೆಲವು ಸುಧಾರಣೆಗಳನ್ನು ಸಾಧಿಸಿದೆ ಎಂದು ಶಾಹುರವರು ಹೇಳಿದ್ದಾರೆ. ಮುಯ್ಯಿಗೆ ಮುಯ್ಯಿ ಎಂಬ ಪದಗಳನ್ನು ಸಾಂದರ್ಭಿಕ ಮತ್ತು ತೋರ್ಕೆ ಎಂದು ಪರಿಗಣಿಸಬೇಕು. 'ನಾನು ಬ್ರಾಹ್ಮಣರ ಬಗ್ಗೆ ಪ್ರೀತಿ–ವಿಶ್ವಾಸದಿಂದಿದ್ದರೂ ಅವರು ನನ್ನನ್ನು ದ್ವೇಷಿಸಿದರೆ ಮತ್ತು ಕೀಳೆಂದು ಭಾವಿಸಿದರೆ ನಾನು ವಿಧಿಯಿಲ್ಲದೆ ಮುಯ್ಯಿಗೆ ಮುಯ್ಯಿ ಎಂಬ ಧೋರಣೆಯನ್ನು ಅನುಸರಿಸಬೇಕಾಗುತ್ತದೆ' ಎಂಬ ಈ ಹೇಳಿಕೆ ಅದೇ ತತ್ವವನ್ನು ಪ್ರತಿಧ್ವನಿಸುವುದಿಲ್ಲವೆ? ಬ್ರಾಹ್ಮಣರು ಇತರರನ್ನು ಶೂದ್ರರೆಂದು ತಿರಸ್ಕಾರದಿಂದ ಕಂಡಾಗ ಅವರನ್ನು ಮಟ್ಟಹಾಕಬೇಕೆಂದು ಹೇಳಿದಾಗ ಅವರು ಹೇಳುತ್ತಾರೆ "ಬ್ರಾಹ್ಮಣರು ಶೂದ್ರನಿಂದ ಹುಟ್ಟಿದ್ದಾರೆ. ಬ್ರಾಹ್ಮಣರನ್ನು ಬಿಟ್ಟು ಮೂರು ವರ್ಗಗಳು ಅಸ್ತಿತ್ವದಲ್ಲಿವೆ. ಅವರು (ಬ್ರಾಹ್ಮಣರು) ಸತ್ಯಶೋಧಕರ ಮನೋಭಾವವನ್ನೇ ಮಾರಕಾಸ್ತ್ರದಿಂದ ಹೊಡೆದು ಸೇಡು ತೀರಿಸಿಕೊಳ್ಳುತ್ತಿಲ್ಲವೆ? ಸಂಕ್ಷಿಪ್ತವಾಗಿ ಹೇಳುವುದಾದರೆ ಶಾಹುರವರ ಮಾತು ಮತ್ತು ಸ್ವಭಾವಗಳು ಅವರೊಬ್ಬ ಪರಿಪೂರ್ಣ ಸತ್ಯಶೋಧಕರಾಗಿದ್ದಾರೆಂಬುದನ್ನು ಸ್ಪಷ್ಟವಾಗಿ ಹೇಳುವುದಾದರೆ ಶಾಹುರವರ ಮಾತು ಮತ್ತು ಸ್ವಭಾವಗಳು ಅವರೊಬ್ಬ ಪರಿಪೂರ್ಣ ಸತ್ಯಶೋಧಕರಾಗಿದ್ದಾರೆಂಬುದನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ".[12]

ಅಂತಹ ಪ್ರವೃತ್ತಿಗಳಿಂದ ಕೂಡಿದ ಆರ್ಯಸಮಾಜವನ್ನು ಅವರು ಪ್ರಶಂಸಿಸುವುದಕ್ಕೆ ಇದ್ದ ಕಾರಣವನ್ನು ಡಾ. ಕೋಲ್ಪೆ ಅವರು ಬಣ್ಣಿಸಿದ್ದಾರೆ: ".......ನಂತರ ಕಾಲದಲ್ಲಿ ಅವರು ಆರ್ಯ ಸಮಾಜಕ್ಕೆ ಒಲಿದಿದ್ದು ನಿಜ. ಅವರು ಹೇಳಿದ್ದರು, 'ಧಾರ್ಮಿಕ ಪ್ರಚಾರಕರ ಪಾತ್ರವನ್ನು ವಹಿಸಿಕೊಂಡಿದ್ದ ಜಾತಿಗಳ ದಬ್ಬಾಳಿಕೆಯ ನೊಗವನ್ನು ಕಿತ್ತುಹಾಕುವುದಕ್ಕಾಗಿಯೆ ಹುಟ್ಟಿದ್ದು ಆರ್ಯ ಸಮಾಜ. ಇಂಥ ಕೃತಕವಾದ ದಬ್ಬಾಳಿಕೆಯ ನೊಗದಿಂದ ಮುಕ್ತಿಪಡೆಯುವುದು ತುರ್ತಿನ ಕೆಲಸವಾಗಿತ್ತು. ಆದ್ದರಿಂದ ನಾನು ಆರ್ಯಸಮಾಜವನ್ನು ಬಯಸಿದ್ದೆ.' ಸತ್ಯಶೋಧಕ ಸಮಾಜವು ಸಹ ಅದನ್ನೇ ಪ್ರತಿಪಾದಿಸಿತ್ತು. ಶಾಹುರವರು ಅಂತರಾಳದಲ್ಲಿ ತುಂಬಾ ಧಾರ್ಮಿಕರಾಗಿದ್ದರಿಂದ ಅವರಿಗೆ ಆರ್ಯಸಮಾಜ ವೇದದ ಬಗ್ಗೆ ಹೊಂದಿದ್ದ ಬದ್ಧತೆಯು ಹೆಚ್ಚು ತೃಪ್ತಿಯನ್ನು ನೀಡಿದೆ. ಆದರೂ ತಮ್ಮ ಆಡಳಿತದ ಪ್ರಾರಂಭದ ಹಲವು ಅನುಭವಗಳಿಂದ ಪಡೆದುಕೊಂಡ ತಮ್ಮ ಮನೋಭಾವವು ಸತ್ಯಶೋಧಕವಾಗಿತ್ತು".[13]

ಶಾಹು ಮಹಾರಾಜರು ಸತ್ಯಶೋಧಕ ಸಮಾಜದ ಉದ್ದೇಶವನ್ನು ಮತ್ತು ಅದರ ಕೆಲಸವನ್ನು ಮುನ್ನೂಕುವುದಕ್ಕೆ ಚೆನ್ನಾಗಿ ಪ್ರತಿಪಾದಿಸಿದ ಬಗ್ಗೆ ಡಾ. ರಮೇಶ ಜಾಧವ ಅವರು ಹೆಚ್ಚು ಬೆಳಕು ಬೀರುತ್ತಾರೆ: "ಫುಲೆಯವರು ತಮ್ಮ ಇಡೀ ಜೀವನದಲ್ಲಿ ಅರ್ಪಣಾ ಮನೋಭಾವದಿಂದ 'ಜನರ ಪ್ರಯೋಜನಕ್ಕಾಗಿ, ಜನರ ಸುಖಕ್ಕಾಗಿ ಎಂಬ ತತ್ವದಡಿಯಲ್ಲಿ ಅನುಸರಿಸಿದ ಹೊಣೆಯನ್ನು ಶಾಹು ಛತ್ರಪತಿಯವರು ವಹಿಸಿಕೊಂಡಿದ್ದರೆಂಬುದನ್ನು ಮತ್ತು ಫುಲೆಯವರು ಪ್ರಾರಂಭಿಸಿದ್ದ ಪರಂಪರೆಯನ್ನು ಸಫಲವಾಗಿ ಮುಂದಕ್ಕೆ ಕೊಂಡೊಯ್ದರೆಂಬುದನ್ನು ಶಾಹುರವರ ಜೀವನ ಮತ್ತು ಕೃತಿಗಳನ್ನು ವಿವರವಾಗಿ ನಾವು ಪರಿಶೀಲಿಸಿದಾಗ ನಾವು ಒಪ್ಪಬೇಕಾಗುತ್ತದೆ. ಲಭ್ಯವಿರುವ ಮೊದಲ ಮೂರು ವರ್ಷ ಸತ್ಯಶೋಧಕ ಸಮಾಜದ ವಾರ್ಷಿಕ ವರದಿಗಳಲ್ಲಿ ಸತ್ಯಶೋಧಕ ಸಮಾಜದ ಆಂದೋಲನ ಸಾಗಿದ್ದ ದಾರಿಯನ್ನು ಗಮನಿಸಬಹುದು. ರಾಜರ್ಷಿ ತಮ್ಮ ಇಡೀ ಜೀವನದಲ್ಲಿ ಅದೇ ದಾರಿ–ದಿಕ್ಕಿನಲ್ಲಿ ನಡೆದರು. ಆದ್ದರಿಂದ ಫುಲೆ ಮತ್ತು ಶಾಹುರವರು ಸರಿಯಾದ ಸಾಂಗತ್ಯ (ಸೌಹಾರ್ದತೆ) ದಲ್ಲಿದ್ದರು ಮತ್ತು ಅವರು ವೈಮನಸ್ಯದಲ್ಲಿರಲಿಲ್ಲ ಎಂಬುದನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ಇಬ್ಬರ ಕೃತಿಗಳನ್ನು ಅಧ್ಯಯನ ಮತ್ತು ವಿಶ್ಲೇಷಣೆ ಮಾಡಿದಾಗ

ಶಾಹುರವರು ಖಂಡಿತವಾಗಿ ಸತ್ಯಶೋಧಕ ತತ್ವ-ಸಿದ್ಧಾಂತಕ್ಕೆ ಬದ್ಧರಾಗಿದ್ದರೆಂಬುದು ಅರಿವಾಗುತ್ತದೆ".[14] ಅಂತಿಮವಾಗಿ ಜಾಧವ ಅವರು ತೀರ್ಮಾನಿಸುತ್ತಾರೆ: "ಸಂಕ್ಷಿಪ್ತವಾಗಿ, ಶಾಹುರವರ ಬಲಿಷ್ಠ ನಾಯಕತ್ವದಿಂದ ಮಹಾರಾಷ್ಟ್ರಾದ್ಯಂತ ತೀವ್ರವಾಗಿ ಫುಲೆಯವರ ಸತ್ಯಶೋಧಕ ಆಂದೋಲನ ಹರಡಿತು. ಫುಲೆ ಸತ್ತ ನಂತರ ಸ್ವಲ್ಪ ಸಮಯದವರೆಗೆ ಈ ಆಂದೋಲನ ಸಂಪೂರ್ಣವಾಗಿ ನಿಂತುಹೋಗಿತ್ತು. ಆದರೆ ಶಾಹುರವರು ಇದರ ನಾಯಕತ್ವ ವಹಿಸಿಕೊಂಡ ನಂತರ ಆಂದೋಲನ ಸಂಜೀವನಗೊಂಡಿತು. ಶಾಹುರವರು ಈ ಆಂದೋಲನಕ್ಕೆ ಜೀವ ತುಂಬಿದರು".[15]

## ಶಾಹುರವರು ಸತ್ಯಶೋಧಕರನ್ನು ಏಕೆ ಬಹಿರಂಗವಾಗಿ ಟೀಕಿಸುತ್ತಾರೆ?

ಹಾಗೇ ಆಗಿದ್ದರೂ ಕೂಡ, ಶಾಹುರವರು ಆಗಾಗ 'ನಾನು ಎಂದಿಗೂ ಸತ್ಯಶೋಧಕ ಸಮಾಜಿಯಾಗಿರಲಿಲ್ಲ ಅಥವಾ ನಾನು ಈ ಸತ್ಯಶೋಧಕ ಸಮಾಜಿಯಲ್ಲ ಅಥವಾ ಒಂದಕ್ಕಿಂತ ಹೆಚ್ಚು ಸಂದರ್ಭಗಳಲ್ಲಿ ಬಹಿರಂಗವಾಗಿ ಸತ್ಯಶೋಧಕರನ್ನು ವಿರೋಧಿಸಿದ್ದುಂಟು. ಇದು ಅನಿವಾರ್ಯವಾಗಿತ್ತು. ಶಾಹುರವರ ಉತ್ತೇಜನದಿಂದ ಸತ್ಯಶೋಧಕ ಜಲ್ಸಾ ತಂಡಗಳು ಅಸ್ತಿತ್ವಕ್ಕೆ ಬಂದು, ಹಲವು ಸಂದರ್ಭಗಳಲ್ಲಿ ಈ ಜಲ್ಸಾ ತಂಡಗಳ ಸಂಬಂಧಗಳಿಂದ ನುಣುಚಿಕೊಳ್ಳುತ್ತಾರೆ. ಇದರ ರಹಸ್ಯವೇನು? ೧೯೨೦ರ ನಂತರ ಸತ್ಯಶೋಧಕ ಆಂದೋಲನ ನಿಧಾನವಾಗಿ ಮಹಾರಾಷ್ಟ್ರದಲ್ಲಿ ಹರಡುತ್ತದೆ. ಸತ್ಯಶೋಧಕರು ವಿಶೇಷವಾಗಿ ಸತಾರ, ಗೋಲಾಪುರ, ನಾಗರ ಮೊದಲಾದ ಕಡೆಗಳಲ್ಲಿ ವಿಶೇಷವಾಗಿ ಸಕ್ರಿಯವಾಗಿ ಪ್ರಬಲಗೊಂಡಿತ್ತು. ಸತ್ಯಶೋಧಕ ಜಲ್ಸಾಗಳು ಬ್ರಾಹ್ಮಣರ ದಬ್ಬಾಳಿಕೆಯ ಮೋಸಗಳನ್ನು ಬಹಿರಂಗಗೊಳಿಸುವ, ಕಹಿಯಾದ ಘಟನೆಗಳನ್ನು ಪ್ರದರ್ಶಿಸುತ್ತಿದ್ದರು. ಅದು ಬ್ರಾಹ್ಮಣೇತರರ ಸಮಾಜದ ಮೇಲೆ ನೇರವಾದ ಪ್ರಭಾವವನ್ನು ಬೀರಿತು. ಹಳ್ಳಿಗಳು ಬ್ರಾಹ್ಮಣ ವಿರೋಧಿ ಮನೋಭಾವದಿಂದ ತಳಮಳಗೊಂಡಿದ್ದವು. ಸತಾರ ಜಿಲ್ಲೆಯ ಕೆಲವು ಸ್ಥಳಗಳಲ್ಲಿ ಬ್ರಾಹ್ಮಣರಿಗೆ ಬಹಿಷ್ಕಾರ ಹಾಕಲಾಗಿತ್ತು. ಬ್ರಾಹ್ಮಣ ಮಾಲಿಕತ್ವದ ಹೊಲಗಳನ್ನು ಉಳದಿರುವ ಬಹಿಷ್ಕಾರ, ಬ್ರಾಹ್ಮಣ ಪುರೋಹಿತರನ್ನು ಆಚರಣೆಗಳಿಗೆ ಕರೆಯದೆ ಸಂಪೂರ್ಣವಾಗಿ ಬಹಿಷ್ಕರಿಸುವುದು, ಬಲೂತಗಳ ನಿರಾಕರಣೆ – ಬ್ರಾಹ್ಮಣರಿಗಾಗಿ ಕಂಬಾರರು, ಕ್ಷೌರಿಕರು ಕೆಲಸ ಮಾಡದಿರುವುದು ಮೊದಲಾದವುಗಳು ವರದಿಯಾಗಿದ್ದವು. ಸತ್ಯಶೋಧಕ ಉತ್ಸಾಹಿಗಳು ಹಲವು ಸ್ಥಳಗಳಲ್ಲಿ ಆಕ್ರಮಣಕಾರಿ ನಿಲುವುಗಳನ್ನು ತಾಳಿದರು. ಪರ್ಲಿಯಲ್ಲಿ ದಶನವಮಿ ಹಬ್ಬದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರಿಗೆ ಬೇರೆ-ಬೇರೆ ಪಂಕ್ತಿಗಳಲ್ಲಿ ಊಟದ ವ್ಯವಸ್ಥೆ ಮಾಡಿದ್ದರು. ಈ ಅವಮಾನಕರವಾದ ಜಾತಿಭೇದವನ್ನು ಮುರಿಯಲು ನಿರ್ಧರಿಸಿ, ಸತ್ಯಶೋಧಕರು ಏಕಸಾಲಿನ ಊಟದ ವ್ಯವಸ್ಥೆಯನ್ನು ಬೇಡಿದರು. ಈ ಬೇಡಿಕೆಯನ್ನು ಬ್ರಾಹ್ಮಣರು ನಿರಾಕರಿಸಿದರು. ತತ್ಪರಿಣಾಮವಾಗಿ ಎರಡು ಗುಂಪುಗಳ ನಡುವೆ ಜಗಳ ಪ್ರಾರಂಭವಾಯಿತು. ಬ್ರಾಹ್ಮಣರು ಊಟಮಾಡದೆ ಹೊರಟುಹೋದರು. ಈ ಘಟನೆಗಳನ್ನು ದಿನಪತ್ರಿಕೆಗಳಲ್ಲಿ ಭಾವೋದ್ವೇಗದ 'ಸತ್ಯಶೋಧಕರ ದುಷ್ಕೃತ್ಯ' ಎಂಬ ತಲೆಬರಹಗಳ ಸುದ್ದಿಗಳನ್ನು ಪ್ರಕಟಿಸಲಾಯಿತು. ಬ್ರಾಹ್ಮಣ ಸಂರಕ್ಷಕ ಸಭೆ ಅಥವಾ 'ಬ್ರಾಹ್ಮಣವಾದದ ರಕ್ಷಣಾ ಸಮಾಜಗಳು' ವಿವಿಧ ಸ್ಥಳಗಳಲ್ಲಿ ಈ ಅತ್ಯಾಚಾರಗಳನ್ನು ತನಿಖೆ ನಡೆಸಲು ವಿಚಾರಣಾ ಸಮಿತಿಗಳನ್ನು ರಚಿಸಲಾಯಿತು. ಕೆಲವು ಸ್ಥಳಗಳಲ್ಲಿ ಎರಡು ಗುಂಪುಗಳು ದೈಹಿಕವಾಗಿ ಸಂಘರ್ಷಕ್ಕಿಳಿದವು ಮತ್ತು ಹಲವಾರು ಅಪರಾಧಿ ಕೇಸುಗಳನ್ನು ಅಥವಾ ಸುಳ್ಳು ಕೇಸುಗಳನ್ನು ಹೂಡಲಾಯಿತು. ಈ ರೀತಿಯ ಘಟನೆಗಳು ನಡೆದಾಗಲೆಲ್ಲ ಬ್ರಾಹ್ಮಣ ದಿನಪಪತ್ರಿಕೆಗಳು ಶಾಹು ಛತ್ರಪತಿಯ ಕಡೆಗೆ ಬೆರಳು ತೋರಿಸುತ್ತಿದ್ದವು ಮತ್ತು ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸುತ್ತಿದ್ದರು.[16] ಅವರು ಬ್ರಿಟಿಷ್

ಸರಕಾರವು ಶಾಹುರವರನ್ನು ತಹಬಂದಿಗೆ ತರಬೇಕೆಂದು ಒತ್ತಾಯಿಸುತ್ತಿದ್ದರು. ಬ್ರಾಹ್ಮಣರ ಮತ್ತು ಬ್ರಾಹ್ಮಣೇತರರ ನಡುವಿನ ಜಗಳಗಳಿಂದ ಬ್ರಿಟಿಷರು ಬೇಸತ್ತಿದ್ದರು ಮತ್ತು ವಿಚಾರಣೆಯ ಪತ್ರಗಳನ್ನು ಶಾಹುರವರಿಗೆ ಕಳುಹಿಸುತ್ತಿದ್ದರು.[17]

ಶಾಹುರವರು ತಮ್ಮ ಸಂಸ್ಥಾನದೊಳಗೆ ಸಂಘಟನೆಯನ್ನು ಮತ್ತು ಆಂದೋಲನವನ್ನು ನಿಯಂತ್ರಿಸಬಲ್ಲರು. ಆದರೆ ತಮ್ಮ ಕ್ಷೇತ್ರದ ಹೊರಗಡೆ ಅವುಗಳನ್ನು ನಿಯಂತ್ರಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಅಂತಹ ಪರಿಸ್ಥಿತಿಗಳಲ್ಲಿ ಸಾಮಂತರಾಜನಾಗಿ ಅವರು ಬ್ರಾಹ್ಮಣರೊಡನೆ ಸತ್ಯಶೋಧಕರು ಪ್ರಾರಂಭಿಸಿದ ಜಗಳಗಳ ಹೊಣೆಯನ್ನು ವಹಿಸಿಕೊಳ್ಳುವ ಸ್ಥಿತಿಯಲ್ಲಿ ಶಾಹು ಇರಲಿಲ್ಲ. ಬ್ರಿಟಿಷರ ಪ್ರದೇಶಗಳಲ್ಲಿ ಬ್ರಾಹ್ಮಣ–ಬ್ರಾಹ್ಮಣೇತರರ ಸಂಘರ್ಷಗಳು ಕಾನೂನು ಸುವ್ಯವಸ್ಥೆಯ ಸಮಸ್ಯೆಗಳ ನಿರ್ಮಾಣ ಮಾಡಿದ್ದವು. ಅಂತಹ ಪರಿಸ್ಥಿತಿಗಳಲ್ಲಿ ಶಾಹು ಮಹಾರಾಜರು ಸತ್ಯಶೋಧಕನಾಗಿ ಮಾಡಿದ ಘೋಷಣೆಯು ಇಡೀ ಮಹಾರಾಷ್ಟ್ರದಲ್ಲಿ ಸತ್ಯಶೋಧಕರ ಎಲ್ಲಾ ಚಟುವಟಿಕೆಗಳನ್ನು ನೈತಿಕ ಹೊಣೆಗಾರಿಕ್ಕೆಯನ್ನು ಒಪ್ಪಿಕೊಳ್ಳಬೇಕಾಗಿತ್ತು. ಆದರೆ ಸತ್ಯಶೋಧಕ ಆಂದೋಲನದ ಆಧಾರಸ್ತಂಭ ಶಾಹುರವರು ಎಂಬುದು ಸತ್ಯಸಂಗತಿಯಾಗಿತ್ತು. ಈ ಗೊಂದಲದಲ್ಲಿ ಸಿಕ್ಕಿಕೊಂಡ ಶಾಹು 'ನಾನು ಎಂದೆಂದಿಗೂ ಸತ್ಯಸಮಾಜಿಯಾಗಿರಲಿಲ್ಲ, ಅಥವಾ ನಾನು ಸತ್ಯಸಮಾಜಿ ಅಲ್ಲ' ಎಂದು ಹೇಳಿಕೆ ಕೊಡಬೇಕಾಗಿ ಬಂತು. ಅಸ್ತಿತ್ವದಲ್ಲಿದ್ದ ರಾಜಕೀಯ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ 'ರಾಜಕೀಯ ಸದುದ್ದೇಶದ ಮನೋಭಾವದಿಂದ ಮಾಡಿದ ತನ್ನ ತಂತ್ರಗಾರಿಕೆಯ ಹೇಳಿಕೆಗಳಾಗಿವೆ. ಸತ್ಯಶೋಧಕ ಕಾರ್ಯಕರ್ತರ ಕೃತ್ಯಗಳಿಗೆ ಅವರನ್ನು ಹೊಣೆಗಾರರನ್ನಾಗಿ ಮಾಡಿದಾಗಲೆಲ್ಲ ಶಾಹುರವರು ಇಂಥ ಹೇಳಿಕೆಗಳನ್ನು ಕೊಟ್ಟಿರುವುದನ್ನು ನೆನಪಿಸಿಕೊಳ್ಳಿ. ಹೀಗಿರುವಾಗ ಅವುಗಳನ್ನು ಅಕ್ಷರಶಃ ತೆಗೆದುಕೊಂಡಾಗ ಅವು ವಿದ್ವಾಂಸರನ್ನು ತಪ್ಪುದಾರಿಗೆ ಎಳೆಯುವ ಸಾಧ್ಯತೆ ಹೆಚ್ಚು.

## ಸತ್ಯಶೋಧಕದ ಬಗ್ಗೆ ಶಾಹುರವರ ಒಲವು

ತನ್ನ ಸಾಮಾಜಿಕ ಮಿಷನ್ನಿನ ಶಾಹುರವರ ಸಹವರ್ತಿಗಳು ಮತ್ತು ಸತ್ಯಶೋಧಕರ ಮುಂಚೂಣಿಗಳಾದ ಬಾಬುರಾವ್ ಯಾದವ, ಶ್ರೀಪತ್‌ರಾವ್ ಶಿಂಧೆ ಮತ್ತು ವಾಲಚಂದ ಕೊಠಾರಿಯವರು ೧೯೧೯ರಲ್ಲಿ ಬೆಳಗಾಮ್, ಧಾರವಾಡ ಮತ್ತು ಹುಬ್ಬಳ್ಳಿ ಪ್ರದೇಶಗಳಲ್ಲಿ ಪ್ರಚಾರಾಂದೋಲನದಲ್ಲಿ ಬ್ರಾಹ್ಮರು–ಬ್ರಾಹ್ಮಣೇತರರು ನಡೆಸಿದ ಕೆಲವು ಸಾರ್ವಜನಿಕ ಸಭೆಗಳಲ್ಲಿ ಜಗಳವಾಡಿದರು. ರಾಜಕೀಯ ಪ್ರತಿನಿಧಿ ಆಗ ಶಾಹುರವರು ಈ ಮೂರು ಕಾರ್ಯಕರ್ತರಿಗೆ ಆಜ್ಞೆ ಮಾಡಿದ್ದರೇ ಎಂಬುದನ್ನು ತನಿಖೆ ಮಾಡಿದನು. ಶಾಹುರವರು ಪ್ರತ್ಯುತ್ತರ ನೀಡಿದರು: " ನಾನು ಅವರನ್ನು ಪ್ರವಾಸಕ್ಕೆ ಕಳುಹಿಸಿರಲಿಲ್ಲ ಅಥವಾ ಅಂಥ ಪ್ರವಾಸಗಳನ್ನು ಕೈಗೊಳ್ಳುವುದಕ್ಕೆ ನನ್ನ ಆದೇಶಗಳು ಬೇಕಾಗಿಲ್ಲ. ಅವರು ತ್ಯಾಗಮನೋಭಾವದ ಬಲಿಷ್ಠ ನಾಯಕರು ಮತ್ತು ಅವರು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ತಮ್ಮ ಜೀವನಗಳನ್ನೇ ಸಮರ್ಪಿಸಿದ್ದಾರೆ."[18]

೧೯೨೦ರಲ್ಲಿ ತಿಲಕರ ಪಕ್ಷದ ಸದಸ್ಯರು ಪೂನಾದಲ್ಲಿ ಶಾಹುರವರ ಸಭೆಯನ್ನು ಭಂಗಗೊಳಿಸಿದರು ಮತ್ತು ತಾವೇ ಸ್ವತಃ ಶಾಹುರವರು ಪ್ರಚೋದನೆ ನೀಡಿದ್ದಾರೆಂದು ಅವರ ವಿರುದ್ಧ ದೂರೊಂದನ್ನು ದಾಖಲಿಸಿದರು. ನಂತರ ಖಾಸೆರಾವ್ ಅವರು ಶಾಹು ಮತ್ತು ತಿಲಕರ ಪಕ್ಷದೊಂದಿಗೆ ವಿಷಯವನ್ನು ಬಗೆಹರಿಸಲು ಸಂಧಾನ ನಡೆಸಿದರು. ತಿಲಕರ ಪಕ್ಷ ಒಂದು ವಂಚನೆಯ ಪ್ರಸ್ತಾಪವನ್ನು ಮುಂದಿಟ್ಟಿತು. ಶಾಹುರವರು ಮರಾಠ ಲೀಗ್ ಅಥವಾ ಸತ್ಯಶೋಧಕ ಸಮಾಜಕ್ಕೆ ನೀಡುವ ಬೆಂಬಲವನ್ನು ಹಿಂತೆಗೆದುಕೊಳ್ಳಲು

ಶಾಹು ಒಪ್ಪಿದರೆ ದೂರನ್ನು ವಾಪಸ್ ಪಡೆಯುವುದಕ್ಕೆ ಸಿದ್ಧವಾಗಿದ್ದೇವೆ ಎಂದು ಹೇಳಿದರು. ಶಾಹುರವರು ಬ್ರಿಟಿಷ್ ಸರಕಾರದ ಕಾರ್ಯದರ್ಶಿ ಮಾಂಟೆಗೊಮೆರಿಯವರಿಗೆ ಪತ್ರ ಬರೆದು ಅಂತಹ ಬೆಂಬಲವನ್ನು ವಿಸ್ತರಿಸುವುದಿಲ್ಲ ಎಂದು ಹೇಳುವುದು "ಅವರನ್ನು ದಮನಿತ ವರ್ಗಗಳ ವಿಮೋಚನೆಯ ಮಿಷನ್ನನ್ನು (ಹೆಗ್ಗುರಿಯನ್ನು) ಬಿಟ್ಟುಬಿಡಿ ಎಂದು ಕೇಳಿದಂತಾಗುತ್ತದೆ ಮತ್ತು ನಾನು ಎಂದಿಗೂ ಅಂಥ ಕೆಲಸ ಮಾಡುವುದಿಲ್ಲ" ಎಂದು ಹೇಳಿದರು.[19] ಶಾಹುರವರು ಖಾಸೆರಾವ್ ಅವರಿಗೆ ಪತ್ರ ಬರೆಯುತ್ತಾ ಹೇಳುತ್ತಾರೆ: "ನನ್ನೊಂದಿಗೆ ಸ್ನೇಹಿತರಾಗಿರುವವರ ಮತ್ತು ಜಾತಿಗಳ ಸಹವಾಸವನ್ನು ನಾನು ಕಡಿದುಕೊಳ್ಳುವುದಿಲ್ಲ. ನಾನು ನನ್ನ ಉದ್ದೇಶಕ್ಕೆ ವಿರುದ್ಧವಾಗಿ ನಡೆದುಕೊಳ್ಳುವುದಿಲ್ಲ. ನನ್ನ ನಿಷ್ಠೂರ ಮಾತುಗಳಿಂದಾಗಿ ನಾನು ನೋವು ಅನುಭವಿಸಲು ಸಿದ್ಧ. ನಾನು ನಿಮ್ಮ ಮಾತನ್ನು ಕೇಳುತ್ತೇನೆ. ಆದರೆ ನನ್ನ ಆದರ್ಶಗಳನ್ನು ನಾನು ಬಿಡಲು ನನ್ನನ್ನು ಬಲವಂತಪಡಿಸಬೇಡಿ. ನಾನು ನನ್ನ ತತ್ವಗಳ ವಿರುದ್ಧ ನಡೆದುಕೊಳ್ಳುವುದಿಲ್ಲ. ನನ್ನನ್ನು ಹೆದರಿಸಲು ಈ ಯೋಜನೆಯನ್ನು ಮಾಡಲಾಗಿದೆಯೆಂದು ನನಗೆ ಗೊತ್ತು. ಆದರೆ ನಾನು ಎಂದಿಗೂ ಬಗ್ಗುವುದಿಲ್ಲ".[20]

ಸತ್ಯಶೋಧಕ ಸಮಾಜದ ಬಗೆಗಿರುವ ಶಾಹುರವರ ಒಲವನ್ನು ಈ ಮನೋಭಾವಗಳಿಂದ ಸಂಗ್ರಹಿಸಬಹುದು. ವಾಸ್ತವಿಕವಾಗಿ ಅವರು ವೇದಗಳ ಬಗ್ಗೆ ಹೊಂದಿರುವ ಬದ್ಧತೆಯೊಂದನ್ನು ಬಿಟ್ಟರೆ, ಶಾಹುರವರು ತಮ್ಮ ಜೀವನದ ಮಿಷನ್ನಿನ ಹೊಣೆಯನ್ನು ಆಯ್ಕೆ ಮತ್ತು ಸತ್ಯಶೋಧಕ ಸಮಾಜದ ಮೂಲಕ ಸ್ಥಾಪಕನ ಹೊಣೆ-ಇವುಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲ. ಅವರು ತಮ್ಮ ರಾಜಕೀಯ ಶಕ್ತಿಸಾಮರ್ಥ್ಯವನ್ನು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿರುವ ಬ್ರಾಹ್ಮಣರ ಏಕಸ್ವಾಮ್ಯತೆಯನ್ನು ಮುರಿಯುವಿಕೆಯಲ್ಲಿ, ಜಾತಿಭೇದದ ನಿವಾರಣೆಯಲ್ಲಿ, ಅಸ್ಪೃಶ್ಯರ ವಿಮೋಚನೆಯಲ್ಲಿ ಮತ್ತು ಅಜ್ಞಾನಿ ಜನಗಳಲ್ಲಿ ಪ್ರಾಥಮಿಕ ಶಿಕ್ಷಣದ ಪ್ರಸಾರದಲ್ಲಿ ಬಳಸಿದರು. ಒಂದು ರೀತಿಯ ಈ ಕೆಲಸವು ಸತ್ಯಶೋಧಕರ ಕೆಲಸದಂತೆಯೇ ಇತ್ತು. ಆದ್ದರಿಂದ ಸತ್ಯಶೋಧಕ ಸಮಾಜದ ಅನುಚರರು ಅವರನ್ನು (ಶಾಹು) ಸತ್ಯಶೋಧಕರೆಂದೇ ಪರಿಭಾವಿಸಿ ಅವರು ವೇದದ ಗ್ರಂಥಗಳ ಬಗ್ಗೆ ಹೊಂದಿದ ನಿಷ್ಠೆಗೆ ಲಕ್ಷ್ಯ ಕೊಡಲಿಲ್ಲ. ಸತ್ಯಶೋಧಕ ಸಮಾಜದ ಅನುಯಾಯಿಗಳು ಮಾಡಿದ ತಪ್ಪು ವ್ಯಾಖ್ಯಾನ ಇದಲ್ಲ. ಆದರೆ ಎಲ್ಲಕ್ಕಿಂತ ಮಿಗಿಲಾಗಿ ಇದು ಅವರ ಕೆಲಸದ ಬಗ್ಗೆ ಮಾಡಿದ ವಸ್ತುನಿಷ್ಠ ವಿಮರ್ಶೆಯಾಗಿದೆ. ಇದರರ್ಥ ಶಾಹುರವರು ತಮ್ಮನ್ನು ಆರ್ಯಸಮಾಜಿ ಎಂದು ಘೋಷಿಸಿಕೊಂಡರೂ ಅವರು ವಾಸ್ತವದಲ್ಲಿ ಸತ್ಯಶೋಧಕದ ಕೆಲಸ-ಕಾರ್ಯಗಳನ್ನು ಮಾಡಿದ್ದಾರೆ. ಆದರೆ ಅವರು ಪ್ರಜ್ಞಾಪೂರ್ವಕವಾಗಿ ತಮ್ಮ ಕೆಲಸ ಸತ್ಯಶೋಧಕ ಸಮಾಜದ್ದೆಂಬ ಹಣೆಪಟ್ಟಿಯನ್ನು ತಪ್ಪಿಸಿದ್ದಾರೆ.

ಶಾಹು ಅವರು ತಮ್ಮನ್ನು ಸಾರ್ವಜನಿಕವಾಗಿ ಆರ್ಯಸಮಾಜಿ ಎಂದು ಕರೆದುಕೊಂಡಿದ್ದಾರೆ. ಆದರೆ ಅವರ ಎಲ್ಲಾ ಸಹವರ್ತಿಗಳೂ ತಮಗೆ ಆತ್ಮೀಯರಾಗಿದ್ದರು – ಜಾಧವ್, ಲಠ್ಠೆ, ಡೊಂಗ್ರೆ, ಶಿಂಧೆ, ಯಾದವ್, ಬಾಗಲ್ ಮೊದಲಾದವರು ಎಲ್ಲರೂ ಸತ್ಯಶೋಧಕರಾಗಿದ್ದರು ಮತ್ತು ಅವರು ಯಾರೂ ಆರ್ಯ ಸಮಾಜಿಗಳಾಗಿರಲಿಲ್ಲ. ಇವರಲ್ಲಿ ಯಾರು ಆರ್ಯ ಸಮಾಜಿಗಳಾಗಿರಲಿಲ್ಲ. ಇವರಲ್ಲಿ ಶಾಹು ಆಗಲಿ, ಮತ್ಯಾರೆ ಆಗಲಿ ಆರ್ಯಸಮಾಜದ ಸದಸ್ಯತ್ವವನ್ನು ಹೆಚ್ಚಿಸುವುದಕ್ಕೆ ಪ್ರಯತ್ನಮಾಡಲಿಲ್ಲ. ಆರ್ಯ ಸಮಾಜವು ಉತ್ತರಭಾರತದಲ್ಲಿ ಹರಡಿದಂತೆ ಮಹಾರಾಷ್ಟ್ರದಲ್ಲಿ ಹರಡಲಿಲ್ಲ. ಮಹಾರಾಷ್ಟ್ರದಲ್ಲಿ ಸಾಮಾಜಿಕ ಮೇಲ್‌ಸ್ತರದಲ್ಲಿ ಪ್ರಾರ್ಥನಾ ಸಭಾ ಇದ್ದರೆ, ಸಮಾಜದ ಕೆಳಸ್ತರದಲ್ಲಿ ಸತ್ಯಶೋಧಕದ ಸಹವರ್ತಿಗಳಿದ್ದರಿಂದ

ಆರ್ಯ ಸಮಾಜ ಮಹಾರಾಷ್ಟ್ರದಲ್ಲಿ ಹರಡಲಿಲ್ಲ. ಪ್ರಾರ್ಥನಾ ಸಮಾಜದಲ್ಲಿದ್ದಂತೆಯೇ ಆರ್ಯ ಸಮಾಜದ ಕೆಲಸದ ಆವರಣವು ಬುದ್ಧಿಜೀವಿ ವರ್ಗಗಳಿಗೆ ಸೀಮಿತವಾಗಿತ್ತು. ಸತ್ಯಶೋಧಕ ಸಮಾಜವು ಮಹಾರಾಷ್ಟ್ರದ ಜನತೆಯ ವಿಮೋಚನೆಯನ್ನು ಬಯಸಿತ್ತೆ ಹೊರತು ಆರ್ಯ ಸಮಾಜದಲ್ಲಿಲ್ಲವೆಂಬುದನ್ನು ಶಾಹುರವರು ಸ್ಪಷ್ಟವಾಗಿ ಅರ್ಥ ಮಾಡಿಕೊಂಡಿದ್ದರು.

ಸತ್ಯಶೋಧಕ ಸಮಾಜವು ಸಹಜವಾಗಿ ಈ ನೆಲದಲ್ಲಿ ಬೆಳೆಯಿತು. ಅದರ ಮೂಲ ಸ್ಥಾಪಕ ಹುಟ್ಟಿದ್ದು ಒಂದು ಶೂದ್ರ ಜಾತಿಯಲ್ಲಿ ಮತ್ತು ಸತ್ಯಶೋಧಕ ಸಮಾಜದ ಮೂಲಗುರಿ ಶೂದ್ರರ ಮತ್ತು ಅತಿಶೂದ್ರರನ್ನು ಬ್ರಾಹ್ಮಣರ ಪ್ರಾಬಲ್ಯದಿಂದ ಸ್ವತಂತ್ರಗೊಳಿಸುವುದು, ಬಹುಜನ ಸಮಾಜದ ಶಿಕ್ಷಿತ ಮತ್ತು ಜಾಗೃತಗೊಂಡ ಜನರು ತಮ್ಮ ಜನರಿಗೆ ಸಹಾಯ ಮಾಡುವ ಸಲುವಾಗಿ ಆರ್ಯ ಸಮಾಜಕ್ಕೆ ಬದಲಾಗಿ ಹೆಚ್ಚಿಗೆ ಸತ್ಯಶೋಧಕ ಸಮಾಜಕ್ಕೆ ವಾಲಿದರೆಂಬುದು ಸಹಜವಾಗಿತ್ತು.

**ಶಾಹುರವರ ಯಥಾಕಥಿತ ನಿಷ್ಠೆ ವೇದಗಳಿಗೆ**

ಆರ್ಯ ಸಮಾಜದ ಅನುಯಾಯಿಯಾಗಿದ್ದ ಶಾಹುರವರು ಕಟ್ಟುನಿಟ್ಟಾಗಿ ಆರ್ಯ ಸಮಾಜದ ತತ್ವಗಳಿಗೆ ಬದ್ಧರಾಗಿದ್ದರೆಂಬುದು ಕಂಡುಬರುವುದಿಲ್ಲ. ಆರ್ಯ ಸಮಾಜದ ಮೂರ್ತಿಪೂಜೆಗೆ ಅವಕಾಶವಿಲ್ಲ. ಶಾಹುರವರು ತಮ್ಮ ಅರಮನೆಯಲ್ಲಿ ಹಲವು ದೇವತೆಗಳ ಮೂರ್ತಿಪೂಜೆಯನ್ನು ತಮ್ಮ ಜೀವನಪರ್ಯಂತ ಮಾಡಿದರು. ಆರ್ಯ ಸಮಾಜ ಆಚರಿಸುತ್ತಿದ್ದ ಯಜ್ಞಯಾಗಾದಿಗಳಲ್ಲಿ ಶಾಹುರವರಿಗೆ ನಂಬಿಕೆಯಿರಲಿಲ್ಲ. ಹೀಗಿರುವಾಗ ಅವರು ವೇದಗಳ ಬಗ್ಗೆ ನಿಷ್ಠೆ ಹೊಂದಿದ್ದರೆಂಬ ಒಂದು ವಿಷಯ ಉಳಿಯುತ್ತದೆ. ಇಲ್ಲಿ ಅವರ ನೆನಪುಗಳಲ್ಲಿ ಒಂದನ್ನು ಹೇಳುವುದು ಸೂಕ್ತವಾಗಿದೆ.

ಶಾಹು ಮಹಾರಾಜರು ಸ್ಥಾಪಿಸಿದ ವೇದಪಾಠಶಾಲೆಯಲ್ಲಿ ಬ್ರಾಹ್ಮಣೇತರರ ವಿದ್ಯಾರ್ಥಿಗಳು (ಮಕ್ಕಳು) ವೇದದ ಆಚರಣೆಗಳ ಬಗ್ಗೆ ತರಬೇತಿ ಪಡೆಯುವರು. ಒಮ್ಮೆ ಅವರು ಶಾಲೆಗೆ ಬಂದರು ಮತ್ತು ನಿರ್ದೇಶಕರಿಗೆ ಹೇಳಿದರು, "ನಾಳೆ ತಮ್ಮ ತಂದೆಯ ಶ್ರಾದ್ಧ*ವಿದೆ. ನಾಳೆ ನಿಮ್ಮ ವಿದ್ಯಾರ್ಥಿಗಳು ನನಗಾಗಿ ಇದನ್ನು ಆಚರಿಸಬೇಕು". ನಿರ್ದೇಶಕರು ಗಾಬರಿಗೊಂಡರು. ಕೊಲ್ಹಾಪುರದಲ್ಲಿ ವೇದಬಲ್ಲ ಪರಿಣತ ಪುರೋಹಿತರ ಕೊರತೆಯಿತ್ತೆ? ಬ್ರಾಹ್ಮಣೇತರರ ಸಮಾಜದಿಂದ ನುರಿತ ಪುರೋಹಿತರನ್ನು ಬಯಸಿದ್ದರೆ ಸಾಕಷ್ಟು ಪುರೋಹಿತರನ್ನು ಪಡೆಯಬಹುದಾಗಿತ್ತು. ಶಾಹು ಮಹಾರಾಜರು ವಿದ್ಯಾರ್ಥಿಯನ್ನು ಪಡೆಯುವುದರ ಬಗ್ಗೆ ಒತ್ತಾಯಿಸಿದ್ದನ್ನು ನೋಡಿ ನಿರ್ದೇಶಕರು ಕಕ್ಕಾಬಿಕ್ಕಿಯಾದರು ಮತ್ತು ಬದಲಿಗೆ ಹೇಳಿದರು, "ಮಾನ್ಯ ಮಹಾರಾಜರೆ, ನುರಿತ ಅನುಭವಸ್ಥ ಪುರೋಹಿತರನ್ನು ನೋಡಿಕೊಳ್ಳಿ. ಅದಕ್ಕೆ ಶಾಹುರವರ ಪ್ರತಿಕ್ರಿಯೆ ಏನು? 'ಈ ಹುಡುಗರು ನನ್ನ ಹುಡುಗರು. ಈ ಹುಡುಗರೆಲ್ಲರೂ ಬ್ರಾಹ್ಮಣೇತರರ ಜನರ ಮಕ್ಕಳು. ಅವರು ಅಕ್ಷರಗಳನ್ನು ಉಚ್ಚರಿಸಿದರೆ ಸಾಕು, ಪರವಾಗಿಲ್ಲ. ನನಗೆ ಬ್ರಾಹ್ಮಣ ಪುರೋಹಿತ ಬೇಡ". ಶಾಹು ಥಟ್ಟನೆ ಹೇಳಿದರು.**

---

* ಬೆಂಕಿ ಮತ್ತು ನೀರನ್ನು ದೇವತೆಗಳಿಗೆ ಮತ್ತು ಕಾಣಿಕೆ ಮತ್ತು ಆಹಾರಗಳನ್ನು ಅಲ್ಲಿದ್ದ ಸಂಬಂಧಿಕರಿಗೆ ಮತ್ತು ಸಹಾಯ ಮಾಡುವ ಬ್ರಾಹ್ಮಣರಿಗೆ ನಿಗದಿಗೊಳಿಸಿದ ವಿವಿಧ ಕಾಲಗಳಲ್ಲಿ ಶ್ರಾದ್ಧವನ್ನು ಆಚರಿಸುವುದು.

** ೯೦ ವರ್ಷ ವಯಸ್ಸಿನ ವೇದಶಾಲೆಯ ವಿದ್ಯಾರ್ಥಿಯಾಗಿದ್ದ ಮತ್ತು ನಂತರ ಕೊಲ್ಹಾಪುರದಲ್ಲಿ ತುಳಜಾ ಭವಾನಿ ದೇವತೆಯ ದೇವಸ್ಥಾನದ ಪುರೋಹಿತನಾಗಿ ಕೆಲಸಮಾಡಿದ್ದ ಶ್ರೀ ದತ್ತಾತ್ರೇಯ ಕುಶಪ್ಪ ಜಿರಡೆ ಅವರು ಈ ಘಟನೆಯನ್ನು ಈ ಲೇಖಕನಿಗೆ ಹೇಳಿದರು.

ಈ ಕತೆಯು ನಿರರ್ಗಳವಾಗಿತ್ತು. ತಮ್ಮ ಜೀವನದಲ್ಲಿ ವೇದ ಮತ್ತು ಆರ್ಯ ಸಮಾಜದ ಮಹತ್ವದ ಬಗ್ಗೆ ಅವರಿಗಿದ್ದ ಬದ್ಧತೆಗಳ ಬಗ್ಗೆ ಯಾವುದೇ ವಿದ್ವಾಂಸ ಎರಡು ಬಾರಿ ಯೋಚಿಸಬೇಕಾಗುತ್ತದೆ. ಶಾಹುರವರು ವೇದಗಳ ಹಕ್ಕುಗಳ ಬಗ್ಗೆ ಒತ್ತಾಯಮಾಡಿದರು. ಆದರೆ ಅದು ವೇದಗಳ ಅಸ್ಪಷ್ಟ ವೇದಗಳ ಸಂಪ್ರದಾಯಗಳ ಪುನರುಜ್ಜೀವನಕ್ಕಾಗಿ ಅಲ್ಲ. ಅವರು ವೇದಾಧ್ಯಯನದ ಬಗ್ಗೆ ಇದ್ದ ಬ್ರಾಹ್ಮಣರ ಏಕಸ್ವಾಮ್ಯತೆಯನ್ನು ಮುರಿಯುವುದು ಎಂಬ ಅಂಶವನ್ನು ಗಮನಿಸಿ ಡಾ. ಅಂಬೇಡ್ಕರ್ ಸತ್ಯಾಗ್ರಹವಾದ ನಾಸಿಕದ ಕಾಲಾರಾಮ್ ಮಂದಿರಪ್ರವೇಶ ಮಾಡುವುದು ತಮ್ಮ ಧಾರ್ಮಿಕ ಭಕ್ತಿಯಲ್ಲ; ಆದರೆ ಒಬ್ಬ ಹಿಂದುವಾಗಿ ತಮ್ಮ ಹಕ್ಕನ್ನು ಪ್ರತಿಪಾದಿಸುವುದು. ರಾಮು ಕಪ್ಪೊ ಅಥವಾ ಬಿಳುಪೊ ಎಂಬುದು ಮುಖ್ಯವಲ್ಲ, ಮಂದಿರ ಪ್ರವೇಶಮಾಡುವುದರಲ್ಲಿ ಅಡಗಿರುವ ಸಾಮಾಜಿಕ ನ್ಯಾಯ ಎಂಬ ಅಂಶ ಮುಖ್ಯವಾದದ್ದು.

## ಶಾಹು ಯಾರ ಶಿಷ್ಯನೂ ಅಲ್ಲ

ಶಾಹುರವರು ಆರ್ಯ ಸಮಾಜ, ಸತ್ಯಶೋಧಕ ಸಮಾಜ, ಥಿಯೋಸಾಫಿಕಲ್ ಸೊಸೈಟಿ, ಕ್ರಿಶ್ಚಿಯನ್ ಮಿಷನ್ ಎಂಬ ಸಂಸ್ಥೆಗಳನ್ನು ಬಹುಜನ ಸಮಾಜದ ವಿಮೋಚನೆಯ ಏಕೈಕ ಉದ್ದೇಶಕ್ಕಾಗಿ ಬಳಸಿಕೊಂಡರು. ಮೊಘಲ್ ಚಕ್ರವರ್ತಿ ಅಕ್ಬರ್ ಎಲ್ಲಾ ಧರ್ಮಗಳೊಂದಿಗೆ ಸ್ನೇಹಿತನಾಗಿದ್ದ ಮತ್ತು ತನ್ನ ಧಾರ್ಮಿಕ ಅನ್ವೇಷಣೆಯ ತೃಪ್ತಿಗಾಗಿ ಎಲ್ಲಾ ಧರ್ಮಗಳಿಂದ ಉತ್ತಮವಾದ ಅಂಶಗಳನ್ನು ಸಂಗ್ರಹಿಸಿದಂತೆಯೇ ಶಾಹು ಮಹಾರಾಜರು ಮುಗ್ಧ ಜನರ ಕಲ್ಯಾಣಕ್ಕಾಗಿ ತನಗಿದ್ದ ಗೀಳಿನಿಂದ ಎಲ್ಲಾ ಸಾಮಾಜಿಕ ಸಂಘಟನೆಗಳೊಂದಿಗೆ ಸ್ನೇಹಿತನಾಗಿದ್ದು ಮತ್ತು ತನ್ನ ಉದ್ದೇಶಗಳಿಗೆ ಅವುಗಳ ಶಕ್ತಿಗಳನ್ನು ಶಾಹುರವರು ತನ್ನದೇ ಆದ ಯಾವ ಹೊಸ ಪಂಥವನ್ನೂ ಸ್ಥಾಪಿಸಲು ಪ್ರಯತ್ನಿಸಲಿಲ್ಲ.

ಮತ್ತೊಂದು ವಿಷಯವನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಹಲವಾರು ವಿದ್ವಾಂಸರು ಶಾಹುರವರನ್ನು ಮಹಾತ್ಮ ಫುಲೆಯವರ ಅನುಚರನೆಂದಾಗಲಿ ಅಥವಾ ಶಿಷ್ಯನೆಂದಾಗಲಿ ಪರಿಗಣಿಸಲೇ ಇಲ್ಲ. ಮಹಾನುಭಾವರೆಂಬ ಅಭಿಪ್ರಾಯವಿದೆ. ಅವರ ಘನತೆಯಷ್ಟೆ ಮಹಾನುಭಾವರಾದ ವ್ಯಕ್ತಿಗಳೆಲ್ಲರೂ ಸಾರ್ವಭೌಮರಾದರು. ಅವರು ಎಷ್ಟೆ ದೊಡ್ಡವರಾದರೂ ಅವರ ಶಿಷ್ಯರಾಗಲಿಲ್ಲ. ಅವರೆಲ್ಲರೂ ಹುಟ್ಟಿನಿಂದಲೇ ಪ್ರತಿಭಾವಂತರಾಗಿದ್ದರು. ಶಿವಾಜಿ ಮಹಾಶಯ ಯಾರ ಅನುಯಾಯಿಯಾಗಿರಲಿಲ್ಲ. ಮಹಾತ್ಮ ಫುಲೆ ಅವರು ಯಾರ ಶಿಷ್ಯನೂ ಆಗಿರಲಿಲ್ಲ. ಅವರಂತಹ ಮಹಾನುಭಾವರು ನಿಜವಾಗಿಯೂ ಸಾರ್ವಭೌಮರು. ಅವರ ಹೃದಯಗಳಲ್ಲಿರುವ ಸಹಜ ಮಾನವತೆಯ ಸ್ಫೂರ್ತಿಯೇ ಅವರು ಆಯ್ಕೆಗೊಂಡ ದಾರಿಯಲ್ಲಿ ಹೋಗುವಂತೆ ನೂಕುತ್ತದೆ. ಅವರು ತಮ್ಮ ಹೆಗ್ಗುರಿಗೆ (ಮಿಷನ್ನಿಗೆ) ಬೆಂಬಲವನ್ನು ಜನ ಮತ್ತು ಸಂಘಟನೆಗಳಿಂದ ಪಡೆಯಬಹುದು. ಮಹಾನುಭಾವರು ತಮ್ಮದೇ ಆದ ದಾರಿಯಲ್ಲಿ ಸಾಗುತ್ತಾರೆ. ಒಮ್ಮೆ ಇತಿಹಾಸಕಾರರು ಈ ಸಂದರ್ಭದಲ್ಲಿ ಶಾಹುರವರ ಜೀವನವನ್ನು ಅರ್ಥಮಾಡಿಕೊಂಡರೆ ಹಲವು ತೋರ್ಕೆಯ ಮತ್ತು ಒಗಟಿನಂತಹ ಪ್ರಶ್ನೆಗಳಾದ ಆರ್ಯಸಮಾಜಿಯಾದ ಶಾಹು ಮೂರ್ತಿಪೂಜೆಯಲ್ಲಿ ಹೇಗೆ ತೊಡಗುತ್ತಾರೆ ಅಥವಾ ಸತ್ಯಶೋಧಕರಾದ ಶಾಹು ಹೇಗೆ ಕ್ಷಾತ್ರಜಗದ್ಗುರುವಿನ ಪೀಠವನ್ನು ಸ್ಥಾಪಿಸುತ್ತಾರೆ ಎಂಬ ಪ್ರಶ್ನೆಗಳು ನಿರರ್ಥಕವಾಗುತ್ತವೆ.

---

## ೨೨

# ಕ್ಷಾತ್ರ ಜಗದ್ಗುರು

೧೯೨೦ರ ಸುಮಾರಿನ ವರ್ಷಗಳಲ್ಲಿ ಶಾಹುರವರ ಜೀವನಕ್ರಿಯೆಗಳ, ಚಿಂತನೆಗಳ, ಸುಧಾರಣಾಕೃತ್ಯಗಳ ಕಾಲವಾಗಿತ್ತು. ಈ ಕಾಲಾವಧಿಯಲ್ಲಿ ಜಾರಿಗೊಳಿಸಿದ ಹಲವು ಸಾಮಾಜಿಕ ಕ್ರಮಗಳು ಮತ್ತು ರೂಪಿಸಿದ ಕಾನೂನುಗಳು ಅನ್ಯಾಯದ ಪದ್ಧತಿ ಮತ್ತು ಸಂಪ್ರದಾಯಗಳಿಗೆ ಕೊಡಲಿಪೆಟ್ಟುಗಳಾಗಿದ್ದವು. ಕ್ಷಾತ್ರ ಜಗದ್ಗುರು ಪೀಠದ ಸ್ಥಾಪನೆಯು ಅಂಥ ಒಂದು ಕ್ರಮವಾಗಿತ್ತು. ಈ ಕ್ರಮವು ಜನಾಂಗೀಯ ಶ್ರೇಷ್ಠತ್ವದ ಅನುಚರರಿಗೆ ಆಘಾತವನ್ನುಂಟು ಮಾಡಿದ್ದಲ್ಲದೆ ಕಟ್ಟಾ ಸುಧಾರಣಾವಾದಿಗಳಾದ ಸತ್ಯಶೋಧಕರಿಗೂ ಗೊಂದಲವುಂಟು ಮಾಡಿತು. ಶಾಹುರವರ ಈ ಕ್ರಮವು ಸಮಕಾಲೀನ ಮಹಾರಾಷ್ಟ್ರದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತು ಮತ್ತು ನಂತರ ಶಾಹುರವರ ಜೀವನದ ವಿದ್ಯಾರ್ಥಿ ಮತ್ತು ವಿದ್ವಾಂಸರ ನಡುವೆ ಭಿನ್ನಾಭಿಪ್ರಾಯಗಳಿಗೆ ಮುಖ್ಯ ಕಾರಣವಾಯಿತು.

### ಹಿನ್ನೆಲೆ

ಕ್ಷಾತ್ರ ಜಗದ್ಗುರುವಿನ ಪೀಠದ ನಿರ್ಮಾಣವು ಶಾಹುರವರ ಜೀವನದಲ್ಲಿನ ಭಾಗದ ಖಯಾಲಿಯ ಪರಿಣಾಮವಾಗಿರಲಿಲ್ಲ. ಇದರ ಬೇರುಗಳು ವೇದೋಕ್ತ ಸಂಘರ್ಷದ ಕಾಲದಲ್ಲಿನ ಬ್ರಾಹ್ಮಣ ಪುರೋಹಿತಶಾಹಿಯ ವಿರುದ್ಧದ ಹೋರಾಟದಲ್ಲಿವೆ. ಈ ವಿವಾದ ಗರ್ವಿಷ್ಠ ಪುರೋಹಿತಶಾಹಿಯಿಂದ ನೋವುಂಡ ಶಾಹುರವರೇ ತಮ್ಮಷ್ಟಕ್ಕೆ ತಾವೇ ತಮ್ಮ ಜಾತಿಯನ್ನು ಇದರ ಹಿಡಿತದಿಂದ ಮುಕ್ತಗೊಳಿಸುವೆನೆಂದು ಮಾತು ಕೊಟ್ಟುಕೊಂಡಿದ್ದರು. ೧೯೦೪ರ ಫೆಬ್ರವರಿಯಲ್ಲಿ ತಮ್ಮ ಸ್ನೇಹಿತನೊಬ್ಬನಿಗೆ ಬರೆದ ಪತ್ರದಲ್ಲಿ ಹೀಗೆ ಹೇಳುತ್ತಾರೆ: "ದೈವಜ್ಞ ಸೋನಾರು*ಗಳಂತೆಯೇ ನಮ್ಮ ಜಾತಿಯವರು ಸಹ ಪುರೋಹಿತರನ್ನು ಹೊಂದಿರಬೇಕೆಂದು ನಾನು ಭಾವಿಸುತ್ತೇನೆ. ಶೆಣ್ವಿಗಳ** ಸಮುದಾಯ ಸಹ ಅಂತಹ ವ್ಯವಸ್ಥೆಯನ್ನು ಮಾಡಿಕೊಂಡಿದೆ ಮತ್ತು ಬ್ರಾಹ್ಮಣರ ಸಹಾಯವಿಲ್ಲದೆ ಅದು ಸಹ ಚೆನ್ನಾಗಿಯೇ ಕೆಲಸ ನಿರ್ವಹಿಸುತ್ತಿದೆ. ಆದರೆ ನಮ್ಮ ಧಾರ್ಮಿಕ ವಿಧಿ-ಆಚರಣೆಗಳನ್ನು ಆಚರಿಸಲು ಮತ್ತು ತನ್ಮೂಲಕ ಶಾಶ್ವತ ಮೈತ್ರಿಭಂಗವಾಗದಂತೆ ತಡೆಯಲು ನಾವು ಬ್ರಾಹ್ಮಣರನ್ನು ಮನವೊಲಿಸಬೇಕೆಂದು ನಮ್ಮಲ್ಲಿ ಕೆಲವರ ಅಭಿಪ್ರಾಯವಾಗಿದೆ. ಬ್ರಾಹ್ಮಣರ ನೊಗವನ್ನು ಕಿತ್ತೆಸೆದ ಸೋನಾರರು, ಜೈನರು ಮತ್ತು ಶೆಣ್ವಿಗಳಿರುವಂತೆಯೇ ಕೆಲವು ಉದಾಹರಣೆಗಳಿವೆ ಮತ್ತು ಅವರೆಲ್ಲರೂ ಸಮೃದ್ಧಿಯ ಸ್ಥಿತಿಯನ್ನು ಮುಟ್ಟಿದ್ದಾರೆ."[1]

---

* ಅಕ್ಕಸಾಲಿಗರ ಜಾತಿ-ವಿಶ್ವಕರ್ಮ ಜಾತಿ.

** ಪ್ರಭುಗಳಂತಹ ಉಚ್ಚಮಟ್ಟದ ಸಾಕ್ಷರಸ್ಥ ಜಾತಿ.

ಕಾಲ ಸರಿದಂತೆ ಪಂಚಗಂಗಾ ನದಿಯಲ್ಲಿ ಸಾಕಷ್ಟು ನೀರು ಹರಿದುಹೋಗಿದೆ. ಕರವೀರಪೀಠದ ಜಗದ್ಗುರು ಶಂಕರಾಚಾರ್ಯರೊಡನೆ ಆದ ಒಳ್ಳೆಯ ಮತ್ತು ಕೆಟ್ಟ ಅನುಭವಗಳು ಶಾಹುರವರಿಗಾದ ಜಾತಿಯ ಉಪದ್ರವದ ತೀವ್ರ ಪ್ರವೃತ್ತಿಯನ್ನು ಮತ್ತಷ್ಟು ತೀವ್ರಗೊಳಿಸಿತು. ಈ ಮಧ್ಯೆ ೧೯೧೭ರಲ್ಲಿ ಮಹಾವಿದ್ವಾಂಸರಾದ ಡಾ॥ ಕುರ್ತಕೋಟಿಯವರನ್ನು ಕರವೀರಪೀಠಕ್ಕೆ ಶಂಕರಾಚಾರ್ಯರನ್ನಾಗಿ ಸ್ಥಾಪಿಸಿದರು. ಶಾಹುರವರು ಅವರ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಸಂಸ್ಕೃತಿಗಳ ನಡುವಣ ಸಾಂಗತ್ಯ (ಸಾಮರಸ್ಯ) ಬಯಸುವ ಅವರ ಪ್ರಗತಿಪರ ಅಭಿಪ್ರಾಯ ಮತ್ತು ಸುಧಾರಣಾತ್ಮಕ ಚಿಂತನೆಗಳಿಂದ ತುಂಬಾ ಪ್ರಭಾವಿತರಾಗಿದ್ದರು. ಪೀಠವನ್ನು ಏರಿದ ನಂತರ ಅವರು ಸಾರ್ವಜನಿಕ ಭಾಷಣಗಳಲ್ಲಿ ಹಲವಾರು ಸುಧಾರಣೆಗಳನ್ನು ಪ್ರತಿಪಾದಿಸಿದರು ಮತ್ತು ಅಸ್ಪೃಶ್ಯತೆಯನ್ನು ಖಂಡಿಸಿದ್ದರು. ಆದರೆ ಅವರು ಒಂದು ವರ್ಷದಲ್ಲಿ ತಮ್ಮ ನಿಜವಾದ ಬಣ್ಣ ತೋರಿಸತೊಡಗಿದರು ಮತ್ತು ತಾನು ಸ್ವತಃ ಕಟ್ಟಾಕರ್ಮಠ ಚಿಂತನೆಯುಳ್ಳವರೆಂಬುದನ್ನು ತೋರಿಸಿಕೊಟ್ಟರು. ಇದು ನೇರವಾಗಿ ಪವಿತ್ರಮಠವನ್ನು ಸ್ಥಾಪಿಸುವ ಹಿಂದೆಯಿದ್ದ ಶಾಹುರವರ ಮೂಲ ಉದ್ದೇಶಕ್ಕೆ ವಿರುದ್ಧವಾಗಿದ್ದರಿಂದ ಕುರ್ತಕೋಟಿಯವರ ರಾಜೀನಾಮೆಯಿಂದ ಈ ಪ್ರಕರಣ (ಅಕ್ಟೋಬರ್–೧೯೧೮) ಕೊನೆಗೊಂಡಿತು. ಭ್ರಮನಿರಸನರಾದ ಶಾಹುರವರು ಸ್ವಾಮೀಜಿಗೆ ಹೇಳಿದರು: "ನಿಮ್ಮ ನೈತಿಕ ಮೌಲ್ಯಗಳಿಂದ, ನೈತಿಕ ಪ್ರಮಾಣಗಳಿಂದ, ಸಾಮಾಜಿಕ ನ್ಯಾಯ ಮತ್ತು ಮುಂತಾದವುಗಳಲ್ಲಿ ಪರವಶನಾಗಿ ವಂಚಿತನಾದೆ."[2] ಕುರ್ತಕೋಟಿಯ ನಂತರ ಆತ್ಮರಾಮಶಾಸ್ತ್ರಿ ಚಿತ್ರೆ ಅವರನ್ನು ಕರವೀರಪೀಠದ ಶಂಕರಾಚಾರ್ಯರನ್ನಾಗಿ ಒಪ್ಪಲಾಯಿತು.[3] ಪೀಠವು ಖಾಲಿಯಾಗಿರಲಿಲ್ಲ ಎಂಬುದು ನಿಜವಾದರೂ ಈ ಪೀಠದ ಮುಖ್ಯಸ್ಥರಿಂದ ಬ್ರಾಹ್ಮಣೇತರರ ಜನತೆಗೆ ನ್ಯಾಯ ಸಿಗುವುದೆಂಬ ಭರವಸೆ ಶಾಹುರವರಿಗೆ ಇರಲಿಲ್ಲ.

ಅವರು ತಮ್ಮ ಜಾತಿಯ ಪುರೋಹಿತರೇ ತಮ್ಮ ಜನರ ಧಾರ್ಮಿಕ ಕ್ರಿಯೆಗಳನ್ನು ಆಚರಿಸುವ ಮೂಲಕ ಒಮ್ಮೆಗೇ ಬ್ರಾಹ್ಮಣ ಪುರೋಹಿತರನ್ನು ಕಿತ್ತುಹಾಕುವ ಬಗ್ಗೆ ನಿರ್ಧಾರ ಕೈಗೊಂಡಿದ್ದರು. ಈ ಹಿನ್ನೆಲೆಯಲ್ಲಿ ಅವರು ಜುಲೈ ೧೯೨೦ರಲ್ಲಿ ಕೊಲ್ಹಾಪುರದಲ್ಲಿ ಮರಾಠ ಪುರೋಹಿತರನ್ನು ತರಬೇತಿಗೊಳಿಸಲು ಶ್ರೀ ಶಿವಾಜಿ ವೇದಪಾಠಶಾಲೆಯನ್ನು ಪ್ರಾರಂಭಿಸಿದರು.

ಈ ವೇಳೆಗಾಗಲೇ ಶಾಹುರವರು ತಮ್ಮ ಜಾತಿಗಾಗಿ ಒಬ್ಬ ಸ್ವತಂತ್ರ ಜಗದ್ಗುರುವನ್ನು ಸ್ಥಾಪಿಸುವ ನಿರ್ಧಾರಕ್ಕೆ ಬಂದಿದ್ದರು. ಇದೇ ಸಮಯದಲ್ಲಿ ಇಂದೋರಿನ ಮಹಾರಾಜರಿಗೆ ಬರೆದ ಪತ್ರದಲ್ಲಿ ಅವರು ಹೇಳುತ್ತಾರೆ: "ನೀವು ವೇದೋಕ್ತ ಮಾದರಿಯಲ್ಲಿ ಒಬ್ಬ ಕ್ಷತ್ರಿಯನಿಗೆ ಉಚಿತವಾದ ರೀತಿಯಲ್ಲಿ ಎಲ್ಲಾ ಧಾರ್ಮಿಕ ವಿಧಿ–ಆಚರಣೆಗಳನ್ನು ಪರಿಪಾಲಿಸಲು ತಾವು ಬಯಸುವಿರಿ ಎಂದು ನಾನು ತಿಳಿದುಕೊಳ್ಳುತ್ತೇನೆ. ಇಲ್ಲಿ ನಾವು ಯಾವ ಕ್ರಮಗಳನ್ನು ಕೈಗೊಂಡಿದ್ದೇವೆ ಎಂಬುದನ್ನು ತಾವು ಬಲ್ಲಿರಿ. ನಮ್ಮ ಗೊತ್ತುಗುರಿಗಳನ್ನು ಪರಿಪಾಟಿಸುವ ಸಲುವಾಗಿ ನಾವು ಶಿವಾಜಿ ಕ್ಷತ್ರಿಯ ಸಮಾಜ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದ್ದೇವೆ. ಮರಾಠರ ಆಶ್ರಯದಲ್ಲಿ ನಮ್ಮ ಎಲ್ಲಾ ಧಾರ್ಮಿಕ ವಿಧಿ–ಆಚರಣೆಗಳನ್ನು ಆಚರಿಸುವುದಕ್ಕೆ ನಾವು ವ್ಯವಸ್ಥೆ ಮಾಡಿದ್ದೇವೆ. ನಮ್ಮ ಸಂಸ್ಥೆಗೆ ಒಂದು ಶಾಶ್ವತವಾದ ಸ್ವರೂಪವನ್ನು ನೀಡುವ ಸಲುವಾಗಿ ಪತ್‌ಗಾವ್‌ನ ಪ್ರಸಿದ್ಧ ಮೌನಿಮಹಾರಾಜರ ಪೀಠವನ್ನು ಬಳಸಿಕೊಳ್ಳಲು ಬಯಸಿದ್ದೇವೆ. ಮೌನಿಬಾಬರವರು ಒಬ್ಬ ಕ್ಷತ್ರಿಯ ಸಂತರು ಮತ್ತು ಎಲ್ಲಾ ಮರಾಠರು ಅವರನ್ನು ಗೌರವದಿಂದ ಕಾಣುತ್ತಿದ್ದಾರೆ. ನಿಜವಾಗಿ ಅವರು ಒಬ್ಬ ಜಗದ್ಗುರುಗಳು ಮತ್ತು ಅವರು ವೇದೋಕ್ತ ವಿಧಾನದಿಂದ ಧಾರ್ಮಿಕ ಪೂಜೆ ಆಚರಣೆಗಳನ್ನು ಮಾಡುತ್ತಾರೆ. ನಾವು ಈ ಪೀಠದಲ್ಲಿ ಒಬ್ಬ ಮರಾಠನನ್ನು ಪ್ರತಿಷ್ಠಾಪಿಸುತ್ತೇವೆ ಮತ್ತು ಆತನು ಮರಾಠರ

ಜಗದ್ಗುರುವಾಗುವನು.... ನಮ್ಮ ಸಂಸ್ಥಾನದಲ್ಲಿ ಮರಾಠರ ಧಾರ್ಮಿಕ ಆಚರಣೆಗಳನ್ನು ವೇದೋಕ್ತ ಕ್ರಮದಿಂದ ಆಚರಿಸಲಾಗುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಮಾಡುವುದು ನಮ್ಮ ಕರ್ತವ್ಯವಾಗಿದೆ. ಮರಾಠರ ಧಾರ್ಮಿಕ ವಿಷಯಗಳಲ್ಲಿರುವ ಅಡ್ಡಿ ಆತಂಕಗಳನ್ನು ನಿವಾರಿಸುವುದು ನಮ್ಮ ಕರ್ತವ್ಯವಾಗಿದೆ. ನಮ್ಮ ಸೇವೆಗಳಿಗೆ ಬ್ರಾಹ್ಮಣ ಪುರೋಹಿತರ ಬದಲಿಗೆ ಸಮಾನರಾದ ಸಮರ್ಥ ಮರಾಠರ ಪುರೋಹಿತರನ್ನು ಹೊಂದುವುದು ಅತ್ಯಗತ್ಯ. ಈ ರೀತಿಯಾಗಿ ಬ್ರಾಹ್ಮಣರ ನೊಗವನ್ನು ಕಿತ್ತೆಸೆದು ಆ ಜಾತಿಯ ಕುಯುಕ್ತಿಯ ಧಾರ್ಮಿಕ ಪ್ರಭಾವದಿಂದ ನಮ್ಮನ್ನು ನಾವೇ ವಿಮೋಚನೆಗೊಳ್ಳಲು ನಿರ್ಧರಿಸಿದ್ದೇವೆ."[4]

ವೇದೋಕ್ತ ಪ್ರಕರಣದ ಕಾಲದಲ್ಲಿ ಅಸಹ್ಯವಾಗಿ ಬಹಿರಂಗಗೊಂಡ ಬ್ರಾಹ್ಮಣರ ಜನಾಂಗೀಯ ಪರಮ ಶ್ರೇಷ್ಠತ್ವದ ಮೇಲರಿಮೆ ಮತ್ತು ಯಜಮಾನಿಕೆಯ ಮನೋಭಾವದೊಂದಿಗೆ ನಡೆದ ಶಾಹುರವರ ಸಂಘರ್ಷವು ಕ್ಷಾತ್ರ ಜಗದ್ಗುರು ಪೀಠದ ಸ್ಥಾಪನೆಯಿಂದ ಕೊನೆಗೊಳ್ಳುವುದು ಇದರಿಂದ ಸುಸ್ಪಷ್ಟವಾಗುತ್ತದೆ. ಬ್ರಾಹ್ಮಣರಿಗೆ ಸಮಾನವಾದ ವೇದದ ಹಕ್ಕುಗಳನ್ನು ಗೆಲ್ಲುವುದರ ಮೂಲಕ ಈ ಸಂಘರ್ಷ ಸುಖಕರವಾಗಿ ಕೊನೆಗೊಳ್ಳುವುದಿಲ್ಲ. ಬ್ರಾಹ್ಮಣತ್ವದ ಧಾರ್ಮಿಕ ನೊಗವನ್ನು ಕಿತ್ತೆಸೆಯುವುದರಿಂದ ಅವರ ಧಾರ್ಮಿಕ ಪ್ರಭಾವವನ್ನು ನಾಶಪಡಿಸಿದ ನಂತರ ಮಾತ್ರ ವೇದೋಕ್ತ ಸಂಘರ್ಷದ ಗುರಿಯು ತಾರ್ಕಿಕ ಘಟ್ಟದ ಕೊನೆಗೆ ತಲುಪಬಹುದು. ಸಾರ್ವಜನಿಕ ಅಭಿಪ್ರಾಯವನ್ನು ಪಡೆಯುವ ಸಲುವಾಗಿ ಶಾಹು ಕ್ಷಾತ್ರ ಜಗದ್ಗುರು ಪೀಠದ ಸ್ಥಾಪನೆಯ ವಿಚಾರವನ್ನು ಸಾರ್ವಜನಿಕವಾಗಿ ಘೋಷಿಸುವ ಮೂಲಕ ಹರಿಯಬಿಟ್ಟರೆಂದು ಸಮಕಾಲೀನ ದಾಖಲೆಗಳಿಂದ ತಿಳಿದುಬರುತ್ತದೆ. ಬ್ರಾಹ್ಮಣೇತರರ ಕುಲೀನವರ್ಗ (ಎಲೈಟ್) ಈ ಪ್ರಸ್ತಾವನೆಯ ಸಾಧಕ-ಬಾಧಕಗಳನ್ನು ಚರ್ಚಿಸತೊಡಗಿದರು. ಹಲವಾರು ಮರಾಠ ಗಣ್ಯವ್ಯಕ್ತಿಗಳು ಈ ವಿಚಾರವನ್ನು ಬೆಂಬಲಿಸಿದರು ಮತ್ತು ತಮ್ಮ ಸಮ್ಮತಿಯ ಪತ್ರಗಳನ್ನು ಶಾಹುರವರಿಗೆ ಕಳುಹಿಸಿಕೊಟ್ಟರು. ಮಹರ್ಷಿ ಶಿಂಧೆ ಅವರು ಇದಕ್ಕೆ ವಿರುದ್ಧವಾಗಿ ಭಾವಿಸಿದ್ದರು. ಅವರು ಹೇಳಿದರು: "ಧಾರ್ಮಿಕ ವಿಷಯಗಳಲ್ಲಿ ಒಮ್ಮತವಿಲ್ಲದ ಪಕ್ಷದಲ್ಲಿ ಪಟ್ಟಾಭಿಷಿಕ್ತನಾದ ರಾಜನ ತೀರ್ಪು ಅಂತಿಮವೆಂದು ಶಾಹು-೧ ಅವರ ಕಾಲದಿಂದಲೂ ಪರಂಪರಾಗತವಾಗಿ ನಡೆದುಕೊಂಡು ಬಂದಿದೆಯೆಂದು ಇತಿಹಾಸ ತೋರಿಸುತ್ತದೆ. ಆದ್ದರಿಂದ ಛತ್ರಪತಿ ಶಾಹು ಸ್ವತಃ ಬೇರೆಯವರನ್ನು ಜಗದ್ಗುರುವಾಗಿ ನೇಮಿಸುವ ಬದಲಿಗೆ ತಾವೇ ಅಧಿಕಾರವನ್ನು ಚಲಾಯಿಸಲಿ."[5] ಈ ಅಭಿಪ್ರಾಯವು ತತ್ವಶಃ ಸರಿಯಾಗಿದ್ದರೂ ಛತ್ರಪತಿಯವರು ಧಾರ್ಮಿಕ ವಿಷಯಗಳಲ್ಲಿ ತಮ್ಮ ಅಧಿಕಾರವನ್ನು ಚಲಾಯಿಸುವುದು ಅಪಾಯಕಾರಿ ಮತ್ತು ಸಮಸ್ಯಾತ್ಮಕವಾಗಿ ಸಾಧಿತವಾಗಬಹುದು. ಜೊತೆಗೆ ಅಂತಹ ವ್ಯವಸ್ಥೆಯು ಕ್ಷಾತ್ರ ಜಗದ್ಗುರು ಪರಿಕಲ್ಪನೆಗೆ ಹೊಂದಿಕೊಳ್ಳಲಾರದು.

## ಕ್ಷಾತ್ರ ಜಗದ್ಗುರುವಿನ ಸ್ಥಾಪನೆ

ಶಾಹುರವರು ಅಕ್ಟೋಬರ್ ೨೦,೧೯೨೦ ರಂದು ಕ್ಷಾತ್ರ ಜಗದ್ಗುರುವಿನ ಪೀಠದ ಸ್ಥಾಪನೆಯನ್ನು ಘೋಷಿಸಿದರು. ಘೋಷಣೆಯಲ್ಲಿ ಅವರ ಈ ಪೀಠದ ಸ್ಥಾಪನೆಯ ಹಿಂದಿರುವ ತಾತ್ವಿಕ ನಿಲುವು ಮತ್ತು ಕಾರಣಗಳನ್ನು ವಿವರವಾಗಿ ಹೇಳಿದ್ದಾರೆ. ಘೋಷಣೆ ಹೇಳುತ್ತದೆ: "ಹಿಂದು ಸಮಾಜದೊಳಗೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರೆಂಬ ಎರಡು ಬಣಗಳು ಇಂದಿನ ದಿನಗಳಲ್ಲಿರುವುದು ಮತ್ತು ಅವುಗಳ ನಡುವೆ ಅನಧಿಕೃತವಾಗಿರುವ ತಪ್ಪುಗಳು ತುತ್ತತುದಿಯನ್ನು ಮುಟ್ಟಿರುವುದು ಸ್ಪಷ್ಟವಾಗಿದೆ. ಈ ಸನ್ನಿವೇಶವು ರಾಷ್ಟ್ರೀಯ ಹಿತಾಸಕ್ತಿಗಳಿಗೆ ಪೂರಕವಾಗಿಲ್ಲ. ಬ್ರಾಹ್ಮಣರು ಬ್ರಾಹ್ಮಣೇತರರನ್ನು ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ

ಅನುಗ್ರಹ ಬುದ್ಧಿಯಿಂದ ಪರಿಗಣಿಸುವುದು ಸ್ಪಷ್ಟವಾಗಿದೆ. ಹಿಂದು ಜನರ ಧರ್ಮ ವೈದಿಕ ಮತ್ತು ಎಲ್ಲವನ್ನೂ ಒಳಗೊಂಡಿರುವ ಅದು ಸಮಕಾಲೀನ ವಂಚನೆಯ ಬ್ರಾಹ್ಮಣಿಕೆಯ ಧರ್ಮವಾಗಿ ಕುಗ್ಗಿದೆ ಮತ್ತು ಮೂಲ (ಕ್ಲಾಸಿಕಲ್) ವೈದಿಕ ಸಿದ್ಧಾಂತವನ್ನು ಪುರುಷ ಪರಿಕಲ್ಪನೆಯೊಂದಿಗೆ ಪೌರಾಣಿಕ (ಪುರಾಣದ) ರೂಪದಲ್ಲಿ ಬೆರೆಸಿದೆ. ಹೀಗಿರುವಾಗ ಜನರು ನಿಜವಾದ ಮತ್ತು ಶ್ರೇಷ್ಠ ವೈದಿಕಧರ್ಮವನ್ನು ಮರೆತಿದ್ದಾರೆ. ಇದು ಒಂದು ದೊಡ್ಡ ದುರಂತ. ವೈದಿಕ ಪರಂಪರೆಯಲ್ಲಿ ನಿರೀಕ್ಷಿಸಿದ ಸಾಧ್ಯವಾದ ಸಂಸ್ಕೃತಿಯನ್ನು ನೀಡಲು ಯಾವ ವಿಧಾನಗಳೂ ಉಳಿದಿಲ್ಲ. ತನ್ಮೂಲಕ ವೈದಿಕ ಧರ್ಮದ ನಿಜವಾದ ರೂಪವನ್ನು ಅರಿಯಲು ಅಸಾಧ್ಯವನ್ನಾಗಿ ಮಾಡಿಬಿಟ್ಟಿದೆ. ಬ್ರಾಹ್ಮಣವರ್ಗ ಹಾಗೂ ಯಥಾಕಥಿತ ಅವರ ಜಗದ್ಗುರುಗಳು ಮೂಲ ವೈದಿಕ ಧರ್ಮವನ್ನು ಪ್ರತಿಬಿಂಬಿಸುತ್ತಿಲ್ಲ ಮತ್ತು ಇತರೆ ಜನರ ಧಾರ್ಮಿಕ ಶ್ರೀಮಂತಿಕೆಯನ್ನು ಬೆಳೆಸುವ ಸೂಚನೆ ಕಂಡುಬರುತ್ತಿಲ್ಲವೆಂದು ಬ್ರಾಹ್ಮಣೇತರರು ಭಾವಿಸುತ್ತಾರೆ. ಇದರ ಬಗ್ಗೆ ಮಾನ್ಯ ಮಹಾರಾಜರು ಹಲವಾರು ಪತ್ರಗಳನ್ನು ಜನರಿಂದ ಪಡೆದಿದ್ದಾರೆ. ಈ ಎಲ್ಲಾ ಪತ್ರಗಳನ್ನು ಮತ್ತು ಇತರೆ ಸಾಧಕ–ಬಾಧಕಗಳನ್ನು ಪರಿಗಣಿಸಿ ಮಾನ್ಯ ಮಹಾರಾಜರು ಮರಾಠರ ಮತ್ತು ಬ್ರಾಹ್ಮಣೇತರರ ಉದ್ದೇಶವು ಪ್ರಶಂಸನೀಯವೆಂದು ಮೌಲ್ಯಮಾಪನ ಮಾಡಿ ನಿರ್ಧರಿಸಿದ್ದಾರೆ. ನಾವು ಅದೇ ರಾಷ್ಟ್ರದ ನಿವಾಸಿಗಳಾಗಿ ಬ್ರಾಹ್ಮಣರೊಡನೆ ಆಗಾಗ ಧಾರ್ಮಿಕ ವಿಷಯಗಳ ಬಗ್ಗೆ ಹೊಡೆದಾಡುವುದು ರಾಷ್ಟ್ರೀಯ ಹಿತಾಸಕ್ತಿಗಳಿಗೆ ತೊಡಕಾಗುತ್ತದೆ. ಅಂತಹ ಕ್ಷುಲ್ಲಕ ಜಗಳಗಳನ್ನು ಬಿಟ್ಟು ಸಮಾಜದ ಏಳಿಗೆಗಾಗಿ ಶ್ರಮಿಸುವುದು ನಮ್ಮ ಕರ್ತವ್ಯವಾಗಿದೆ.

ಕರವೀರದ ಸಂಸ್ಥಾನದಲ್ಲಿ ಮರಾಠರ ನಿಜವಾದ ಜಗದ್ಗುರುಗಳ ಪೀಠವು ಸಾಕಷ್ಟು ಪ್ರಾಚೀನವಾದುದು. ಆದರೆ ಇದುವರೆಗೆ ಕ್ಷತ್ರಿಯ ಮರಾಠರಾದ ನಾವು ಈ ಸಂಗತಿಯನ್ನು ಮರೆತಿದ್ದೆವು. ಇದು ಪತ್‌ಗಾವ್‌ನ ಮೌನಿ ಮಹಾರಾಜರ ಪೀಠವಾಗಿದೆ. ಈ ಮೌನಿ ಮಹಾರಾಜರು ಶ್ರೀ ಶಿವಛತ್ರಪತಿ ಮಹಾರಾಜರಿಗೆ ಬೋಧನೆಯೊಂದಿಗೆ ಹರಸಿದ್ದರೆಂಬುದನ್ನು ಐತಿಹಾಸಿಕವಾಗಿ ಕೇಳಿಬರುತ್ತಿದೆ. ಕಷ್ಟಕಾಲದಲ್ಲಿ ಶಿವಛತ್ರಪತಿಗಳು ಮೌನಿ ಮಹಾರಾಜರ ಬಳಿಗೆ ಹೋಗಿ ಅವರ ಆಶೀರ್ವಾದ ಪಡೆಯುತ್ತಿದ್ದರು. ಹೀಗೆ ಅವರು ತಮ್ಮ ಯಾವುದೇ ಚಟುವಟಿಕೆಗಳಲ್ಲಿ ಅವರು ಎಂದಿಗೂ ವಿಫಲರಾಗಿರಲಿಲ್ಲ. ಶಿವಾಜಿ ಮಹಾರಾಜರಿಗೆ ರಾಮದಾಸ ಅಥವಾ ದಾದಾಜಿ ಕೊಂಡದೇವ ಅವರನ್ನು ಗುರುಗಳಾಗಿ ನೇಮಿಸುವುದರಲ್ಲಿ ಬ್ರಾಹ್ಮಣರ ಕುಯುಕ್ತಿಯಿತ್ತು. ಅಂತಹ ಸಂಗತಿಗಳನ್ನು ಸಮರ್ಥಿಸಿ ತೋರಿಸಲು ಯಾವುದೇ ಐತಿಹಾಸಿಕ ದಾಖಲೆಗಳ ಸಾಕ್ಷ್ಯಗಳಿಲ್ಲ. ಆದರೆ ಇದಕ್ಕೆ ವಿರುದ್ಧವಾಗಿ ಕೊಲ್ಹಾಪುರ ಮತ್ತು ಸತಾರಾಗಳ ಪೀಠದ ಬಗ್ಗೆ ಬಂಡಿಗಟ್ಟಲೆ ಸಾಕ್ಷ್ಯಾಧಾರಗಳು ಸಿಗುತ್ತವೆ. ಶಿವಾಜಿ ಮಹಾಶಯರ ನಂತರ ಕೊಲ್ಹಾಪುರವು ಒಂದು ಸ್ವತಂತ್ರ ಶಾಖೆಯಾಗಿ ಸ್ಥಾಪಿತವಾಗಿತ್ತು. ಕೊಲ್ಹಾಪುರದ ಮಹಾರಾಜರು ಅವರನ್ನು (ಮೌನಿ ಮಹಾರಾಜರು) ಒಬ್ಬ ಜಗದ್ಗುರುವೆಂದು ಗೌರವಿಸಲಾಯಿತು ಮತ್ತು ಅದರ ಏಳಿಗೆ ಮತ್ತು ಪ್ರಗತಿಗಾಗಿ ಹಳ್ಳಿಗಳನ್ನು ಇನಾಮಾಗಿ ಪತ್‌ಗಾವ್ ಗದ್ದುಗೆ ಅಥವಾ ಪೀಠಕ್ಕೆ ನೀಡಲಾಗಿತ್ತು. ಈ ಸ್ಥಾಪನೆಯು ಕೊಲ್ಹಾಪುರ ಮಹಾರಾಜರ ಅತಿಶಯವಾದ ಗೌರವವಾಗಿತ್ತೆಂಬುದನ್ನು ಯಾವ ಸಂದೇಹವಿಲ್ಲದೆ ರುಜುವಾತುಪಡಿಸುತ್ತದೆ. ಈ ಪೀಠ ವಿಶೇಷವಾಗಿ ಪ್ರತ್ಯೇಕವಾಗಿ ಮರಾಠಕ್ಷತ್ರಿಯರಿಗೆ ಸೇರುತ್ತದೆ. ಪರಂಪರೆಯ ಪ್ರಕಾರ ಗುರುಗಳಶಿಷ್ಯರ ಉತ್ತರಾಧಿಕಾರವನ್ನು ಉಳಿಸಿಕೊಂಡಂತಾಗುತ್ತದೆ. ಮಾನ್ಯ ಮಹಾರಾಜರು ಅಂತಹ ಪವಿತ್ರವಾದ ಪೀಠದಲ್ಲಿ ಮರಾಠ ಸಮುದಾಯದ ಸಂತನೊಬ್ಬನನ್ನು ಕುಳ್ಳಿರಿಸಲು ಮತ್ತು ಧಾರ್ಮಿಕ ವ್ಯವಹಾರಗಳಲ್ಲಿ ಕ್ಷತ್ರಿಯ ಮರಾಠರಿಗೆ ಸಹಕಾರಿಯಾಗುವಂತೆ ಮಾಡಲು

ಅದರ ಪ್ರತಿಷ್ಠೆಯನ್ನು ಎತ್ತರಿಸುವುದಕ್ಕೆ ಅದು ಜಗದ್ಗುರುಗಳ ಪೀಠವಾಗಬೇಕೆಂದು ಅವರು ಬಯಸಿದ್ದರು. ಸದ್ಯಕ್ಕೆ ಈ ಪವಿತ್ರ ಪೀಠವು ಶಿಷ್ಯರ ಕೊರತೆಯಿಂದ ಸರಕಾರದ ಆಶ್ರಯದಲ್ಲಿದೆ. ಮೊದಲಿನಂತೆಯೇ ಅದರ ಎಲ್ಲಾ ಆದಾಯಗಳನ್ನು ಅದಕ್ಕೆ ವರ್ಗಾವಣೆ ಮಾಡಲಾಗಿದೆ ಮತ್ತು ಅದರ ನಿರಂತರ ಸಮೃದ್ಧಿಗಾಗಿ ಈ ಕೆಳಕಂಡ ನಿಯಮಾವಳಿಗಳನ್ನು ರೂಪಿಸಲಾಗಿದೆ.

(೧) ಧಾರ್ಮಿಕ ವಿಷಯಗಳನ್ನು ತೀರ್ಮಾನಿಸಲು ಒಬ್ಬ ಧರ್ಮಾಧಿಕಾರಿ ಮತ್ತು ಒಂದು ಪಂಚಾಯಿತಿ ನ್ಯಾಯಾಲಯವಿರುವುದು.

(೨) ವೈದಿಕ ಧರ್ಮದಲ್ಲಿ ಶಿಕ್ಷಣ ನೀಡಲು ಒಂದು ಶಾಲೆಯಿರುವುದು.

(೩) ಮಾನ್ಯ ಮಹಾರಾಜರು ಈ ಪೀಠಕ್ಕೆ ಎರಡು ಮೋರ್‌ಚಾಲುಗಳನ್ನು* ಮತ್ತು ಸೂರ್ಯಪಾನ** ಗಳನ್ನು ಹೊಂದುವ ಹಕ್ಕನ್ನು ನೀಡುತ್ತಾರೆ.

(೪) ಈ ಪೀಠಕ್ಕೆ ಕ್ಷತ್ರಿಯ ಕುಲದಲ್ಲಿ ಜನಿಸಿದ ಬೆನದಿ ಸದಾಶಿವರಾವ್ ಲಕ್ಷ್ಮಣರಾವ್ ಪಾಟೀಲರನ್ನು ನಿವಾಸಿಯನ್ನಾಗಿ ನೇಮಕ ಮಾಡಲಾಗಿದೆ.... ಈ ಜಗದ್ಗುರುಗಳು ಮಾನವರನ್ನು ಭಾರಹೊರುವ ಪಶುಗಳೆಂದು ಪರಿಗಣಿಸಿ ಮತ್ತು ಅವರು ತಮ್ಮ ಭುಜಗಳಿಂದ ಹೊರುವ ಪಲ್ಲಕ್ಕಿಯಲ್ಲಿ ಪ್ರಯಾಣಮಾಡುವುದನ್ನು ನಿಷೇಧಿಸಲಾಗಿದೆ. ತಮ್ಮ ಪ್ರವಾಸಕ್ಕಾಗಿ ಅವರು ಮಠದ ಅಲಂಕಾರಕ್ಕಾಗಿರುವ ನಾಲ್ಕು ಕುದುರೆ ಮತ್ತು ಇತರೆ ಪ್ರಾಣಿಗಳನ್ನು ಬಳಸಬಹುದು."[6]

ಶಾಹುರವರು ಅದೇ ತಾರೀಕಿನ ಮತ್ತೊಂದು ಆಜ್ಞೆಯನ್ನು ಕೊಲ್ಹಾಪುರದ ರಾಜ್ಯಪತ್ರದಲ್ಲಿ ಪ್ರಕಟಿಸಿದರು. ಪೀಠಕ್ಕೆ ಏರುವ ಕ್ಷಾತ್ರ ಜಗದ್ಗುರುವು ಅವಿವಾಹಿತರಾಗಿರಬೇಕೆಂಬ ಪರಂಪರೆಯಿಂದ ಬಂದ ಆದೇಶವನ್ನು ರದ್ದುಗೊಳಿಸಲಾಯಿತು. ಈ ಪರಂಪರೆಯ ಪ್ರಕಾರ ಜಗದ್ಗುರು ಮದುವೆಯಾಗಲು ಬಯಸಿದರೆ ಅವರಿಗೆ ಮದುವೆಯಾಗಲು ಒಪ್ಪಿಗೆ ಕೊಡುತ್ತಿರಲಿಲ್ಲ.[7] ಅವರು ನವಯೌವ್ವನದಲ್ಲಿರುವ ಸದಾಶಿವರಾವ್ ಪಾಟೀಲರನ್ನು ತಮ್ಮ ಜೀವನಪೂರ್ತಿ ಮದುವೆಯಾಗದೆ ಇರಿ ಎಂದು ಒತ್ತಾಯಿಸುವುದು ಅಪ್ರಯೋಗಾತ್ಮಕ ಮತ್ತು ಅನ್ಯಾಯವೆಂದು ಯೋಚಿಸಿದರು.

## ಕ್ಷಾತ್ರ ಜಗದ್ಗುರುಗಳ ಪ್ರತಿಷ್ಠಾಪನೆ

ಸದಾಶಿವರಾವ್ ಲಕ್ಷ್ಮಣರಾವ್ ಪಾಟೀಲರು ಫರ್ಗ್ಯುಸನ್ ಕಾಲೇಜಿನ ಸಂಸ್ಕೃತ ಮತ್ತು ತತ್ವಜ್ಞಾನದ ಬುದ್ಧಿವಂತ ವಿದ್ಯಾರ್ಥಿಯಾಗಿದ್ದರು. ಶಾಹುರವರು ಪತ್ರಿಕೆಗಳಲ್ಲಿ ಪ್ರಕಟಗೊಂಡ ಕೆಲವು ಲೇಖನಗಳನ್ನು ಓದಿದ್ದರು. ಸದಾಶಿವರಾವ್ ಅವರಿಗಿರುವ ಸಾಮಾಜಿಕ ಕಳಕಳಿಯು ಕ್ಷಾತ್ರ ಜಗದ್ಗುರು ಸ್ಥಾನಕ್ಕೆ ಸೂಕ್ತವೆಂದು ಅವರಿಗೆ ದೃಢವಾಯಿತು. ೧೯೨೦ರ ನವೆಂಬರ್ ೨೦ರಂದು ಸದಾಶಿವರಾವ್ ಅವರು ಕ್ರಮಬದ್ಧವಾಗಿ

---

* ಮೂರ್ತಿ(ವಿಗ್ರಹ)ಗಳಿಗೆ ರಾಜ, ಪೂಜ್ಯಗುರುಗಳು ಮೊದಲಾದವರಿಗೆ ಗಾಳಿ ಬೀಸಲು ಇರುವ ಒಂದು ಅಲಂಕಾರಿಕ ಕುಚ್ಚು ಅಥವಾ ಬೀಸಣಿಗೆ.

** ಒಂದು ಅಲಂಕಾರಿಕ ಛತ್ರಿ ಅಥವಾ ಕೊಡೆ.

ಪತ್‌ಗಾವ್‌ನ ಮೌನಿಬಾಬರ ಮಠದಲ್ಲಿ ಪ್ರತಿಷ್ಠಾಪನೆಗೊಂಡರು ಮತ್ತು ವೇದಮಂತ್ರಗಳ ಪಠಣದೊಂದಿಗೆ ಕ್ಷಾತ್ರ ಜಗದ್ಗುರು ಪೀಠವನ್ನು ಆರೋಹಣ ಮಾಡಿದರು. ಈ ಸಂದರ್ಭದಲ್ಲಿ ಕರೆದ ವಿಶೇಷ ದರ್ಬಾರಿನಲ್ಲಿ ಶಾಹುಮಹಾರಾಜರು ಸ್ವತಃ ಹೊಸ ಕ್ಷಾತ್ರಜಗದ್ಗುರುಗಳಿಗೆ ಬಾಗಿ ಗೌರವನಮನಗಳನ್ನು ಸಲ್ಲಿಸಿದರು. ತಮ್ಮ ಎಲ್ಲಾ ಆಸ್ಥಾನದವರು, ಭಾಸ್ಕರರಾವ್ ಜಾಧವ್ ಅವರನ್ನು ಬಿಟ್ಟು, ಗೌರವ ನಮನ ಸಲ್ಲಿಸಿದರು. ಶಾಹುರವರು ಹೇಳಿದರೂ ಜಾಧವ್ ಅವರು ಗೌರವನಮನಗಳನ್ನು ಸಲ್ಲಿಸಲಿಲ್ಲ. ಕಟ್ಟಾ ಸತ್ಯಶೋಧಕರಾದ ಜಾಧವ ಅವರು ಕ್ಷಾತ್ರ ಜಗದ್ಗುರುವಿನ ಸ್ಥಾನವು ಮನುಷ್ಯ ಮತ್ತು ದೇವರ ನಡುವಣ ಮಧ್ಯಸ್ಥಗಾರ (ಪೂಜಾರಿ) ಎಂದು ಭಾವಿಸಿದ್ದರು. ತಮ್ಮ ತತ್ವಗಳಿಗಾಗಿ ತಮ್ಮ ವೃತ್ತಿಯನ್ನೇ ಆಸ್ಥಾನದಲ್ಲಿ ಪಣಕ್ಕೆ ಒಡ್ಡಿದರು. ಶಾಹುರವರು ಕೋಪಗೊಂಡು ಜಾಧವ ಅವರಿಗೆ ತಮ್ಮ ಆಸ್ಥಾನ ಬಿಟ್ಟುಹೋಗಲು ಹೇಳಿದರು. ಅವರು ಆಜ್ಞೆಯನ್ನು ಪರಿಪಾಲಿಸಿದರು. ದರ್ಬಾರು ಮುಕ್ತಾಯಗೊಂಡಿತು. ಜಾಧವ್ ಅವರಿಗೆ ಶಿಕ್ಷೆ ನೀಡಲಾಗುವುದೆಂದು ಎಲ್ಲಾ ಜನರು ನಿರೀಕ್ಷಿಸಿದ್ದರು. ಆದರೆ ಎಲ್ಲರನ್ನೂ ಬೆಚ್ಚಿಬೀಳಿಸಿದ ಸಂಗತಿಯೇನು? ಜಾಧವ ಅವರು ಅರಮನೆಗೆ ಕರೆತರಲು ಸಾರೋಟನ್ನು ಕಳುಹಿಸಿಕೊಟ್ಟರು ಮತ್ತು ಅವರು ತತ್ವಗಳಿಗೆ ಬದ್ಧರಾಗಿದ್ದನ್ನು ಶಾಹು ಮೆಚ್ಚಿಕೊಂಡರು, "ಜಾಧವರಾವ್, ನೀವು ಚೆನ್ನಾಗಿ ಮಾಡಿದಿರಿ! ತುಂಬಿದ ದರ್ಬಾರಿನಲ್ಲಿ ಮಹಾತ್ಮ ಫುಲೆಯವರ ನಿಜವಾದ ಮೌಲ್ಯಗಳಿಗೆ ನೀವು ಅಂಥ ಬದ್ಧತೆಯನ್ನು ತೋರಿಸಿದಿರಿ. ನಾನು ತುಂಬ ಸಂತೋಷಗೊಂಡೆ. ನನ್ನ ಸಂಸ್ಥಾನ ದಿಟ್ಟ, ನೇರ ಮತ್ತು ತತ್ವಬದ್ಧರಾದ ನಿಮ್ಮಂಥವರಿಗೆ ಆತಿಥೇಯವಾಗಿರುವುದು ನನಗೆ ಹೆಮ್ಮೆಯ ವಿಷಯವಾಗಿದೆ."[8]

ಶಂಕರಾಚಾರ್ಯರ ಮಠದಲ್ಲಿ ಬ್ರಾಹ್ಮಣ ಜಗದ್ಗುರುವಿಗೆ ಭಿನ್ನವಾಗಿ ತಮ್ಮ ಕ್ಷಾತ್ರ ಜಗದ್ಗುರು ಇರುವರೆಂದು ಶಾಹು ನಿರೀಕ್ಷಿಸಿದರು. ತಮ್ಮ ಜಗದ್ಗುರುಗಳು ಭಕ್ತಾದಿಗಳಿಂದ ಭಿಕ್ಷೆ ಅಥವಾ ಕಾಣಿಕೆಗಳ ರೂಪದಲ್ಲಿ ಸಂಪತ್ತನ್ನು ಪಡೆಯುವ, ಪಾದಪ್ರಕ್ಷಾಳನ, ಭಕ್ತಗಣ ಹೊರುವ ಪಲ್ಲಕ್ಕಿಯಲ್ಲಿ ಮೆರೆಯುವ ಅನಿಷ್ಟಗಳಿಂದ ದೂರವಿರುವರೆಂದು ಭಾವಿಸಿದ್ದರು. ಶಾಹುರವರು ೧೯೨೧ರಲ್ಲಿ ಜಗದ್ಗುರುಗಳಿಗೆ ಬರೆದ ಒಂದು ಪತ್ರ ಸಿಗುತ್ತದೆ. ಅದರಲ್ಲಿ ಅವರು ಬರೆಯುತ್ತಾರೆ. "…. ನೀವು ನಿಮ್ಮ ಕೆಲಸವನ್ನು ಬೇಗನೇ ಪ್ರಾರಂಭ ಮಾಡಿ. ನೀವು ತತ್ವಶಾಸ್ತ್ರವನ್ನು ಓದುತ್ತಾ ಇರಿ. ನೀವು ದೇವರ ಏಜೆಂಟ್ (ಪೂಜಾರಿ) ಎಂಬ ಗುರಿಯನ್ನಿಟ್ಟುಕೊಳ್ಳಬೇಡಿ. ಇತರೆ ಸ್ವಾಮಿಗಳಂತೆ ನಿಮ್ಮ ಗುರಿಯಾಗದಿರಲಿ. ನಿಮ್ಮ ಗುರಿಯು ರಾಷ್ಟ್ರ ಮತ್ತು ಜನರ ಸೇವೆ ಮಾಡುವುದಾಗಿರಲಿ. ನೀವು ಒಂದು ವೈದಿಕಶಾಲೆಯನ್ನು ಪ್ರಾರಂಭಿಸಿ ಮತ್ತು ಅದರ ಒಂದು ವಿಷಯ ಮಾರ್ಗಸೂಚಿಯನ್ನು ಕಳುಹಿಸಿಕೊಡಿ."[9] ಈ ಪತ್ರ ಬಹಳ ಚಿಕ್ಕದಾಗಿದ್ದು ಚೊಕ್ಕವಾಗಿತ್ತು. ಇದು ವಿಷಯಗರ್ಭಿತವಾಗಿತ್ತು. ಇದು ಶಾಹುರವರು ಕ್ಷಾತ್ರ ಜಗದ್ಗುರುಗಳಿಂದ ಬಯಸಿದ ನಿರೀಕ್ಷೆಗಳ ಸಂಪುಟವಾಗಿತ್ತು. ಶಾಹು ಸ್ವತಃ ಕ್ಷಾತ್ರ ಜಗದ್ಗುರುಗಳು ಮಾನವ ಮತ್ತು ದೇವರ ನಡುವಣ ಮಧ್ಯಸ್ಥಗಾರನೆಂದು ಭಾವಿಸಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಸಮಾಜದಲ್ಲಿ ಅಂತಹ ಏಜೆಂಟುಗಳು ಹುಟ್ಟಬಾರದೆಂಬುದನ್ನು ಖಾತ್ರಿಪಡಿಸಬೇಕೆಂದು ಶಾಹು ನಿರೀಕ್ಷಿಸಿದ್ದರು.

### ಪರಿಣಾಮಗಳು

ಶಾಹುರವರು ಕ್ಷಾತ್ರ ಜಗದ್ಗುರುವಿನ ಒಂದು ಹೊಸ ಪವಿತ್ರಪೀಠ ಸ್ಥಾಪನೆ ಮಾಡಿದ್ದರ ಬಗೆಗಿನ ಪ್ರತಿಕ್ರಿಯೆಗಳು ವಿಶೇಷವಾಗಿ ಸಾಮಾಜಿಕ ಸುಧಾರಣಾ ಆಂದೋಲನಗಳಲ್ಲಿನ ಅವರ ಸಹವರ್ತಿಗಳ ಮತ್ತು ಅವರ ವಿರೋಧಿಗಳಿಂದ ಕೇಳಿಬಂದವು. ಸತ್ಯಶೋಧಕ ಸಮಾಜದ ತತ್ವಗಳ ನಾಯಕರೂ ಮತ್ತು

ಬ್ರಾಹ್ಮಣೇತರರ ಬುದ್ಧಿಜೀವಿಗಳಾದ ಜಾಧವ, ಮಹರ್ಷಿಶಿಂಧೆ, ಪ್ರಬೋಧಂಕರ್ ಥ್ಯಾಕರೆ ಅವರು ತಮ್ಮ ಅತೃಪ್ತಿಯನ್ನು ಕಟುಶಬ್ದಗಳಲ್ಲಿ ವ್ಯಕ್ತಪಡಿಸಿದ್ದರು. "ಒಬ್ಬ ಪ್ರಾಮಾಣಿಕ ಸತ್ಯಶೋಧಕನಾಗಿ ಮತ್ತು ಮಹಾತ್ಮ ಜ್ಯೋತಿಬಾ ಫುಲೆಯವರ ನಿಷ್ಠ ಶಿಷ್ಯನಾಗಿ ಜಗದ್ಗುರು ಮತ್ತು ಅವರ ಪೀಠವೆಂಬ ಸಂಸ್ಥೆಗಳನ್ನು ಮಾನ್ಯಮಾಡುವುದನ್ನು ನಾನು ನಿರಾಕರಿಸುತ್ತೇನೆಂದು" ಜಾಧವ ಅವರು ತುಂಬಿದ ದರ್ಬಾರಿನಲ್ಲಿ ತಮ್ಮ ಕಡುವಿರೋಧವನ್ನು ಸಾರ್ವಜನಿಕವಾಗಿ ಪ್ರದರ್ಶಿಸಿ ಘೋಷಿಸಿದ್ದರು.[10] ಥ್ಯಾಕರೆಯವರು ಒಂದು ಲೇಖನದಲ್ಲಿ 'ಮಾನಸಿಕ ಗುಲಾಮತ್ವದ ಬಂಡಾಯ' ಎಂದು ಬಲವಾಗಿ ಖಂಡಿಸಿದರು. ಕ್ಷಾತ್ರ ಜಗದ್ಗುರುವಿನ ಪ್ರತಿಷ್ಠಾಪನೆಯು ಮಾನಸಿಕ ಗುಲಾಮತ್ವದ ಒಂದು ಸಂಕೇತವೆಂದು. ಬ್ರಾಹ್ಮಣ ಜಗದ್ಗುರುವಿನ ಗುಲಾಮತ್ವದಿಂದ ತಪ್ಪಿಸಿಕೊಳ್ಳಲು ಕ್ಷಾತ್ರ ಜಗದ್ಗುರುವಿನ ಪೀಠಸ್ಥಾಪನೆಯು ಹಳೆಯ ಗುಲಾಮಿ ವ್ಯವಸ್ಥೆಯ ಬದಲಿಗೆ ಹೊಸ ಗುಲಾಮಿ ವ್ಯವಸ್ಥೆಯನ್ನು ಒಪ್ಪಿಕೊಂಡಂತಾಗುತ್ತದೆ ಎಂದು ಹೇಳಿದರು. ಶಂಕರಾಚಾರ್ಯರ ಪೀಠದ ಪರಿಕಲ್ಪನೆಯು ಸಾಮಾಜಿಕ ಅಥವಾ ಧಾರ್ಮಿಕ ಅಭಿವೃದ್ಧಿಗೆ ಪೀಠಕ್ಕೆ ಒಬ್ಬ ಮುಖ್ಯಸ್ಥನಿರಬೇಕೆಂಬುದೇ ಗುಲಾಮಿತನದ ಮನೋಭಾವದ ಸೂಚಕವಾಗಿದೆ. ಗುಲಾಮತ್ವವನ್ನು ಗುಲಾಮತ್ವದಿಂದ ಅಳಿಸಿಹಾಕಲು ಸಾಧ್ಯವಿಲ್ಲ. ಇದರ ಜೊತೆಗೆ ವರ್ಣಾಶ್ರಮದೊಂದಿಗಿನ ಜಗದ್ಗುರುವಿನ ಆಶ್ರಯದಲ್ಲಿ ಮಾನಸಿಕ ಗುಲಾಮತ್ವವನ್ನು ಪೋಷಿಸುವ ಯಾಚಕರ ದಬ್ಬಾಳಿಕೆಯ ವ್ಯವಸ್ಥೆಯನ್ನು ನಾಶಮಾಡುವ ಸಲುವಾಗಿ ಅದೇ ತತ್ವಗಳಡಿಯಲ್ಲಿ ಕ್ಷಾತ್ರ ಜಗದ್ಗುರುವಿನ ಪೀಠವನ್ನು ಸ್ಥಾಪಿಸುವುದು ಹಾಸ್ಯಾಸ್ಪದವಾಗುತ್ತದೆ. ದೇವರು ಬೇಡಿಗಳಿಂದ ಕೂಡಿದ ನೊಗವನ್ನು ಹೊರುವುದಕ್ಕಾಗಿಯೇ ಕತ್ತನ್ನು ಕೊಟ್ಟಿದ್ದಾನೆಂಬ ದೃಢನಂಬಿಕೆಯಿಂದ ಇರುವ ಬಲಿಷ್ಠ ಎತ್ತಿನಂತಿದೆ ಇದು; ಆಗ ಎತ್ತು ಮನಃಪೂರ್ವಕವಾಗಿ ಒಂದು ನೊಗವನ್ನು ಮತ್ತೊಂದು ನೊಗಕ್ಕೆ ಬದಲಾಯಿಸಿಕೊಳ್ಳುತ್ತದೆ. ಆಗ ಅದು ಮೊದಲಿದ್ದಕ್ಕಿಂತ ಹೊಸದು ಮಧುರವಾಗಿದೆ ಮತ್ತು ಸುಖಕರವಾಗಿದೆ ಎಂದು ಪರಿಗಣಿಸುತ್ತದೆ. ಮಠಗಳೊಡನೆ ಮಠಗಳ ಮುಖ್ಯಸ್ಥರು ಬರುತ್ತಾರೆ; ಮಠಗಳ ಮುಖ್ಯಸ್ಥರಿಂದ ಒಂದು ಪಂಥ ಪ್ರಾರಂಭವಾಗುತ್ತದೆ. ಪಂಥೀಯ ಗುಲಾಮತ್ವದಿಂದ ಒಂದು ಪಂಥ ಸಿದ್ಧವಾಗುತ್ತದೆ.[11]

ಎಲ್ಲಾ ಸತ್ಯಶೋಧಕ ನಾಯಕರು ಮತ್ತು ಕಾರ್ಯಕರ್ತರು ಕ್ಷಾತ್ರ ಜಗದ್ಗುರುವೆಂಬ ಈ ಪರಿಕಲ್ಪನೆಯನ್ನು ಸರ್ವರೀತಿಗಳಲ್ಲಿ ವಿರೋಧಿಸಿದರು. ಸತ್ಯಶೋಧಕ ನಾಯಕ ಮತ್ತು 'ದಿನಮಿತ್ರ'ಪತ್ರಿಕೆಯ ಸಂಪಾದಕರಾದ ಮುಕುಂದರಾವ್ ಪಾಟೀಲರ ಬಿಸಿಬಿಸಿ ಚರ್ಚೆಗಳನ್ನು ಗಮನಿಸುವುದು ಸೂಕ್ತ. ಕರಾಡಿನಲ್ಲಿ ನಡೆದ ಸತ್ಯಶೋಧಕ ಸಮ್ಮೇಳನದ ಅಧ್ಯಕ್ಷೀಯ ಭಾಷಣದಲ್ಲಿ ಅವರು ಹೇಳುತ್ತಾರೆ: "ಸತ್ಯಶೋಧಕರು ಧಾರ್ಮಿಕ ಮುಖ್ಯಸ್ಥ ಅಥವಾ ಧಾರ್ಮಿಕ ಗುರು ಬೇಡ ಎಂದು ಬಯಸುವುದಿಲ್ಲ. ಸತ್ಯಶೋಧಕ ಸಮಾಜದ ಏಕೈಕ ಉದ್ದೇಶ ಯಾವುದೇ ಸಂಕೇತದಿಂದ ಧರ್ಮವನ್ನು ನಿರ್ಬಂಧಿಸುವುದು ಬೇಡ. ದೇವರು ಮತ್ತು ಭಕ್ತರ ನಡುವೆ ದೊಡ್ಡಗೋಡೆಯನ್ನು ನಿರ್ಮಿಸಿ ಲಾಭ ಪಡೆಯುವಂತಹ ಗುರುಗಳನ್ನು ಸತ್ಯಶೋಧಕ ಸಮಾಜ ಬಹಿಷ್ಕರಿಸುತ್ತದೆ. ಜೈನರು, ಲಿಂಗಾಯಿತರು, ಪಾರ್ಸಿಗಳು ಮತ್ತು ಮುಸ್ಲಿಮರು ಸ್ವತಂತ್ರ ಧಾರ್ಮಿಕ ನಾಯಕರನ್ನು ಹೊಂದಿದ್ದರೂ ಅವರು ಸಮಾಜಕ್ಕೆ ಪ್ರಯೋಜನಕಾರಿಗಳಾಗಿದ್ದಾರೆ."[12] 'ದಿನಮಿತ್ರ' ಪತ್ರಿಕೆಯ ಸಂಪಾದಕರ ಅಭಿಪ್ರಾಯಗಳು ಅಂಗೀಕಾರ ಅರ್ಹತೆಯನ್ನು ನೀಡಿದ್ದರೆ ಶಾಹುರವರು ತನ್ನ ಜಾತಿಯ ಧಾರ್ಮಿಕ ಮುಖ್ಯಸ್ಥನನ್ನು ನೇಮಿಸುವ ಕ್ರಿಯೆ ಸತ್ಯಶೋಧಕದ ತತ್ವದ ಹೊರಗಡೆಯದೆಂದು ಹೇಳಲು ಬರುವುದಿಲ್ಲ.

ಮತ್ತೊಬ್ಬ ಸತ್ಯಶೋಧಕದ ನಾಯಕ ಮತ್ತು ಶಾಹುರವರ ಜೀವನಚರಿತ್ರೆಕಾರ ಅಣ್ಣಾಸಾಹೇಬ ಲಠ್ಠೆ ಅವರು ಶಾಹು ಅವರ ಧಾರ್ಮಿಕ ಸುಧಾರಣಾ ಕೆಲಸಗಳನ್ನು ಪ್ರಾಟೆಸ್ಟೆಂಟ್ ಸುಧಾರಕರ ಕೆಲಸಗಳೊಂದಿಗೆ ಹೋಲಿಸುತ್ತಾ ಹೇಳುತ್ತಾರೆ: "ಲೂಥರ್‌ನಂತಹ ಸುಧಾರಕರು ರೋಮನ್ ಕ್ಯಾಥೋಲಿಕ್ ಧಾರ್ಮಿಕ ಮುಖ್ಯಸ್ಥರ ಕರ್ತವ್ಯಭ್ರಷ್ಟತೆಗಳಿಂದ ಕುಪಿತರಾಗಿ ಮತ್ತು ಪೋಪರ ಪ್ರತಿಭಟನೆಯನ್ನು ಮುರಿಯುವುದನ್ನು ಸಿದ್ಧಗೊಳಿಸಿದ್ದರು, ಧಾರ್ಮಿಕ ಸಂಸ್ಥೆಯನ್ನು ಅಳಿಸಿಹಾಕುವುದಕ್ಕೆ ಪ್ರತಿಪಾದಿಸಲಿಲ್ಲ. ಮಿಗಿಲಾಗಿ ಅವರು ದೋಷಗಳಿಲ್ಲದ ಹೊಸ ಧಾರ್ಮಿಕ ಸಂಸ್ಥೆಗಳನ್ನು ರೂಪಿಸಿದರು ಮತ್ತು ಹಳೆ ಸಂಸ್ಥೆಗಳಿರುವ ರೀತಿಯಲ್ಲಿಯೇ ಹೊಸ ಸಂಸ್ಥೆಗಳನ್ನು ಸುಧಾರಿಸಿದರು. ಶಾಹುರವರ ಮುಖ್ಯ ಉದ್ದೇಶವು ಕ್ಷಾತ್ರ ಜಗದ್ಗುರು ಸ್ಥಾಪನೆ ಮತ್ತು ಶಿವಾಜಿ ವೈದಿಕಶಾಲೆಯ ಸ್ಥಾಪನೆಯ ಉದ್ದೇಶವು ಈ ಪ್ರೊಟೆಸ್ಟೆಂಟ್ ಸುಧಾರಕರ ಉದ್ದೇಶದಂತೆಯೇ ಇತ್ತು.[13]

ಮತ್ತೊಬ್ಬ ಕಟ್ಟಾ ಸತ್ಯಶೋಧಕ, 'ರಾಷ್ಟ್ರವೀರ' ಪತ್ರಿಕೆಯ ಸಂಪಾದಕ ಶಾಮರಾವ್ ದೇಸಾಯಿ ಅವರು ಶಾಹುರವರ ಕ್ರಮವನ್ನು ಟರ್ಕಿಸ್ತಾನದ ಕೆಮಲ್ ಪಾಷಾ ಅವರ ಕಾರ್ಯದೊಂದಿಗೆ ಹೋಲಿಕೆ ಮಾಡಿ ಹೇಳುತ್ತಾರೆ: "ಬ್ರಾಹ್ಮಣೇತರರ ಆತ್ಮಗೌರವವನ್ನು ನಾಶಮಾಡಿದ್ದಲ್ಲದೆ ಇಡೀ ಮಾನವೀಯತೆಗೆ ಭಂಗ ತಂದ ಧಾರ್ಮಿಕಗುರು ಪೀಠಗಳಿಂದ ಮತ್ತು ಬ್ರಾಹ್ಮಣತ್ವದ ಪೂಜಾರಿಗಳಿಂದ ಶಾಹುರವರು ಸಂಬಂಧಗಳನ್ನು ಕಡಿದುಕೊಂಡಿದ್ದರು. ಸ್ವತಂತ್ರ ರಾಜ್ಯದ ಪ್ರಗತಿಯನ್ನು ತಡೆಯಲು ಪ್ರಾರಂಭಿಸಿದ ಖಿಲಾಫತನ್ನು ನೆಲಸಮ ಮಾಡಿದ ಮುಸ್ತಾಫ ಕೆಮಲ್ ಪಾಶಾರ ರೀತಿಯಲ್ಲೇ ಅವರ ಕ್ರಮ ಹೋಲುತ್ತದೆ. ಅವರು (ಶಾಹು) ಬ್ರಾಹ್ಮಣ ಜಗದ್ಗುರುಗಳನ್ನು ಮತ್ತು ಪುರೋಹಿತರನ್ನು ತಳ್ಳಿಹಾಕಿ ಅವರ ಸ್ಥಾನದಲ್ಲಿ ತಮ್ಮ ಜಾತಿಯ ಧಾರ್ಮಿಕ ಗುರುಗಳನ್ನು ಮತ್ತು ಪುರೋಹಿತರನ್ನು ಕೂಡ್ರಿಸಲಿಲ್ಲವೇ ಎಂದು ಕೆಲವರು ಆಕ್ಷೇಪಿಸುವುದಿಲ್ಲವೇ? ಆದರೆ ಇದು ಸೂಕ್ತ ಪ್ರಶ್ನೆಯಲ್ಲ. ಟರ್ಕಿದೇಶದ ಮುಸ್ತಫ ಕೆಮಲ್ ಪಾಷಾರಂತೆ ರಾಜರ್ಷಿ ಸರ್ವಾಧಿಕಾರಿಯಾಗಿದ್ದ ಪಕ್ಷದಲ್ಲಿ ಅವರು ಧಾರ್ಮಿಕ ಮುಖ್ಯಸ್ಥರ ಪೀಠಗಳನ್ನು ಕೆಡವಿ ಬಿಸಾಕುತ್ತಿದ್ದರು. ಆದರೆ ಅವರು ಅಂಥ ಅಪಾರವಾದ ಅಧಿಕಾರವನ್ನು ಹೊಂದಿಲ್ಲ. ಆದ್ದರಿಂದ ಅವರು ಧಾರ್ಮಿಕ ಅಧಿಕಾರದ ಸಾಂಪ್ರದಾಯಿಕ ಹಾಗೂ ಅನಿರ್ಬಂಧಿತ ಪ್ರತಿಷ್ಠೆಯನ್ನು ಕಿತ್ತುಹಾಕಿ ಜನರೇ ನಿಯಂತ್ರಿಸುವ ಜನಪರ ಸ್ನೇಹಿ ಮತ್ತೊಂದು ಧಾರ್ಮಿಕ ಪೀಠವನ್ನು ಪ್ರತಿಷ್ಠಾಪಿಸಿದರು. ಭವಿಷ್ಯದಲ್ಲಿ ಈ ಹೊಸ ಸಂಸ್ಥೆಗಳು ಎಷ್ಟರ ಮಟ್ಟಿಗೆ ಸುಸಂಗತವಾಗುತ್ತವೆಂಬುದು ಪ್ರಶ್ನಾರ್ಹವಾಗಿದ್ದರೂ ಮೊದಲ ಶಂಕರಾಚಾರ್ಯರ ಕಾಲದ ಗೌರವಾನ್ವಿತ ಧಾರ್ಮಿಕ ಪೀಠದೊಂದಿಗೆ ಸೆಣಸುವ ಒಂದು ಹೊಸ ಪವಿತ್ರ ಪೀಠ ಸ್ಥಾಪನೆ ಮಾಡುವ ಕೆಚ್ಚು ಸಾಮಾನ್ಯ ವಿಷಯವಲ್ಲ".[14]

ತೀರಾ ಇತ್ತೀಚೆಗೆ ಮಹಾರಾಷ್ಟ್ರದ ಈರ್ವರು ಬುದ್ಧಿಜೀವಿಗಳಾದ ವಿ. ಡಿ. ಘಾಟೆ ಮತ್ತು ಪ್ರೊ. ಎನ್. ಆರ್. ಫಾತಕ್ ಅವರು ಶಾಹುರವರ ಧಾರ್ಮಿಕ ಬಂಡಾಯದೊಂದಿಗೆ ರೋಮ್‌ನ ಪೋಪರ ಅಧಿಕಾರದ ವಿರುದ್ಧ ಇಂಗ್ಲೆಂಡಿನ ಹೆನ್ರಿ–೩ ಅವರ ಬಂಡಾಯವನ್ನು ಹೋಲಿಸಿದ್ದಾರೆ. ಪ್ರೊ. ಫಾತಕ್ ಅವರು ಹೇಳುತ್ತಾರೆ: "ಯೂರೋಪಿನ ಹಲವು ಮಹಾರಾಜರನ್ನು ಬೆರಳ ಮೇಲೆ ಕುಣಿಸುತ್ತಿದ್ದ ಮತ್ತು ಎಲ್ಲಾ ಅಧಿಕಾರವನ್ನು ತಾನೇ ಕಬಳಿಸಿದ್ದ ಪೋಪರ ಪ್ರಭಾವವನ್ನು ಹೆನ್ರಿ ಅವರು ಅಳಿಸಿಹಾಕಿಬಿಟ್ಟರು. ಶಾಹುರವರು ಹಿಂದು ಜಗದ್ಗುರುಗಳ ಪ್ರಭಾಮಂಡಲವನ್ನು ಅಳಿಸಿ, ಅವರ ಸ್ಥಾನದಲ್ಲಿ ಕ್ಷಾತ್ರ ಜಗದ್ಗುರುಗಳನ್ನು ಕುಳ್ಳಿರಿಸಿದರು".[15]

## ಒಂದು ನವೀನ ಪ್ರಯೋಗ

ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವೆ ಈಗಿರುವ ಸಂಘರ್ಷದ ಜೊತೆಗೆ ಶಾಹುರವರು ಮರಾಠ ಮತ್ತು ಮರಾಠೇತರರ ನಡುವೆ ಒಂದು ಹೊಸ ಬಿರುಕನ್ನು ತಮ್ಮ ಜಾತಿಯ ಜಗದ್ಗುರುವನ್ನು ಪ್ರತಿಷ್ಠಾಪನೆ ಮಾಡುವ ಮೂಲಕ ಮಾಡಿದ್ದಾರೆಂದು ಒಂದು ಗಂಭೀರ ಆಕ್ಷೇಪಣೆಯನ್ನು ಥ್ಯಾಕರೆಯವರು ಮಾಡಿದ್ದರು.[17] ಶಾಹುರವರ ಪ್ರಸಿದ್ಧ ಜೀವನಚರಿತ್ರೆಗಾರ ಧನಂಜಯ ಕೀರ್ ಅವರು ತಮ್ಮ ವಾದಮಂಡನೆಯಲ್ಲಿ ಹೀಗೆ ಹೇಳಿದ್ದಾರೆ: "ಜಾತಿಭೇದದಲ್ಲಿ ನಂಬಿಕೆಯಿಲ್ಲದ ಶಾಹು ಮಹಾರಾಜರು ಕ್ಷಾತ್ರ ಜಗದ್ಗುರುವಿನ ಪ್ರತಿಷ್ಠಾಪನೆಯಿಂದ ಪ್ರಗತಿಪರ ಸಾಮಾಜಿಕ ಚಳುವಳಿಯನ್ನು ಒಂದು ಹೆಜ್ಜೆ ಹಿಂದಕ್ಕೆ ಸರಿಸಿದರೆಂದು ಮತ್ತು ಒಂದು ಕ್ಷಣಕ್ಕೆ ಈ ಚಳುವಳಿಯ ಸೈದ್ಧಾಂತಿಕ ಗಮನವನ್ನು ಅಲುಗಾಡಿಸಿದರು".[18] ಆಗಿನ ಬ್ರಾಹ್ಮಣೇತರರ ಸುಧಾರಣಾವಾದಿಗಳ ಮತ್ತು ನಂತರದ ಶಾಹುರವರ ಜೀವನಚರಿತ್ರೆಗಾರರು ಕಂಡುಕೊಂಡ ಶಾಹುರವರ ಘೋಷಿತ ಉದ್ದೇಶ ಗುರಿಗಳು ಮತ್ತು ನೀತಿ–ಧೋರಣೆಗಳಿಗೆ ಶಾಹುರವರ ಕ್ರಮ ಒಗಟು ಅಥವಾ ತತ್ವ ವಿರುದ್ಧವಾಗಿದೆ ಎಂಬ ಸಂಗತಿಯು ವಿಚಿತ್ರವಾಗಿಯೇನು ಇಲ್ಲ. ಶಾಹುರವರೇ ಸ್ವತಃ ವರ್ಗ ಮತ್ತು ಜಾತಿ ಭೇದಗಳ ಬಗ್ಗೆ ಯುದ್ಧ ಸಾರಲಿಲ್ಲವೆ? ಆದರೂ ಶಾಹುರವರು ತಾನು ತೆಗೆದುಕೊಂಡ ಹೊಣೆಯ ಬಗೆಗಿನ ಕ್ರಮದ ಮಹತ್ವದ ಬಗ್ಗೆ ಅಥವಾ ಪರಿಣಾಮಗಳ ಬಗ್ಗೆ ಯೋಚಿಸಿರಲಿಲ್ಲ ಎಂದು ಹೇಳುವುದಕ್ಕೆ ಆಗುವುದಿಲ್ಲ. ಅವರು ಚತುರ ರಾಜಕಾರಣಿಯಾಗಿರುವಂತೆಯೇ ಅವರು ಸಮಾಜದ ಪ್ರಯೋಗಗಳನ್ನು ಮಾಡುತ್ತಿದ್ದರು. ಕ್ಷಾತ್ರ ಜಗದ್ಗುರುವಿನ ಪ್ರತಿಷ್ಠಾಪನೆಯು ಸಾಮಾಜಿಕ ಸಾಹಸ ಕ್ಷೇತ್ರದಲ್ಲಿನ ಒಂದು ನವೀನ ಪ್ರಯೋಗವಾಗಿತ್ತು. ಬ್ರಾಹ್ಮಣರಿಗೆ ಸಮಾನವಾದ ವೇದೋಕ್ತ ಹಕ್ಕುಗಳನ್ನು ಮರಾಠರಿಗೆ ಗಳಿಸಿಕೊಟ್ಟರೂ ಮರಾಠರ ಮೇಲಿರುವ ಬ್ರಾಹ್ಮಣ ಜಗದ್ಗುರು ಶಂಕರಾಚಾರ್ಯರ ಪ್ರಾಬಲ್ಯ ಕೊನೆಗೊಳ್ಳಲಿಲ್ಲ. ಇಷ್ಟಾದರೂ ಕೂಡ ಮರಾಠರು ವೈದಿಕ ಅಥವಾ ಹಿಂದು ಧರ್ಮದ ಮುಖ್ಯಸ್ಥರಾದ ಬ್ರಾಹ್ಮಣ ಜಗದ್ಗುರುಗಳಿಗೆ ಉಪಕೃತರಾಗಿದ್ದಾರೆ. ಅವರು ತಮ್ಮ ಪ್ರಭಾಮಂಡಲವನ್ನು ಕಳೆದುಕೊಂಡಿದ್ದರೂ ಅವರು ತಮ್ಮ ಅಧಿಕಾರವನ್ನು ಇನ್ನೂ ಇಟ್ಟುಕೊಂಡಿದ್ದಾರೆ. ಡಾ. ಕುರ್ತುಕೋಟಿಯವರ ವಿಚಾರದಲ್ಲಿ ಶಾಹುರವರು ತಮ್ಮ ಬೆರಳನ್ನು ಸುಟ್ಟುಕೊಂಡರು. ಅವರು ಬ್ರಾಹ್ಮಣ ಪುರೋಹಿತಶಾಹಿಯ ಸಂಬಂಧ ಕಳಚಿಕೊಳ್ಳುವುದು ಮಾತ್ರವಲ್ಲದೆ ಬ್ರಾಹ್ಮಣ ಜಗದ್ಗುರುಗಳಿಂದಲೂ ದೂರವಾಗಿ ಬ್ರಾಹ್ಮಣರ ಧಾರ್ಮಿಕ ಆಡಳಿತಶಾಹಿಯಿಂದ ಸಂಪೂರ್ಣವಾಗಿ ಸ್ವತಂತ್ರವಾಗಿರಲು ನಿರ್ಧರಿಸಿದರು. ಮರಾಠರ ಧಾರ್ಮಿಕ ಸ್ವಾತಂತ್ರ್ಯದ ಹೋರಾಟದಲ್ಲಿ ಬ್ರಾಹ್ಮಣರ ಪುರೋಹಿತರ ಸ್ಥಾನದಲ್ಲಿ ಮರಾಠ ಪುರೋಹಿತರನ್ನು ನೇಮಕ ಮಾಡುವುದು ಮೊದಲನೆಯ ಹೆಜ್ಜೆಯಾದರೆ ಬ್ರಾಹ್ಮಣರ ಜಗದ್ಗುರುವಿಗೆ ಬದಲಿಗೆ ಮರಾಠ ಜಗದ್ಗುರುವನ್ನು ಪ್ರತಿಷ್ಠಾಪಿಸುವುದು ಈ ಹೋರಾಟದಲ್ಲಿ ಎರಡನೆಯ ಹೆಜ್ಜೆಯಾಗಿದೆ. ಈ ದೀರ್ಘ ಹೋರಾಟದಲ್ಲಿ ಬ್ರಾಹ್ಮಣೇತರರ ಇಡೀ ಸಮಾಜಕ್ಕೆ ಬ್ರಾಹ್ಮಣೇತರರ ಜಗದ್ಗುರುವಿನ ಪ್ರತಿಷ್ಠಾಪನೆ ಮೂರನೇ ಹೆಜ್ಜೆ. ತಮ್ಮ ಟೀಕಾಕಾರರನ್ನು ಶಾಂತಗೊಳಿಸುವುದಕ್ಕೆ ಈ ಕ್ರಮ ತುಂಬಾ ತೀವ್ರತರವಾದುದು ಮತ್ತು ಥ್ಯಾಕರೆಯಂಥವರು ಪ್ರತಿಭಟಿಸುವುದಕ್ಕೆ ಯಾವುದೇ ಅವಕಾಶ ನೀಡುವುದಿಲ್ಲ. ನಮ್ಮ ಯಾವುದೇ ಮೂರ್ತವಾದ ಸಾಕ್ಷ್ಯಾಧಾರಗಳಿಲ್ಲದಿರುವುದರಿಂದ ಶಾಹುರವರ ಉದ್ದೇಶ ಮತ್ತು ಧೋರಣೆಗಳನ್ನು ನೋಡಿದರೆ ವಿಶೇಷವಾಗಿ ಶಾಹುರವರ ಯೋಜನೆಗಳಲ್ಲಿ ಅಂಥದ್ದು ಇದೆಯೆಂದು ಖಚಿತವಾಗಿ ಹೇಳಲು ಬರುವುದಿಲ್ಲ.

## ಫುಲೆಯ ತತ್ವಗಳಿಗೆ ವಿರುದ್ಧವಾದ ಕ್ರಮ?

ಅಂತಿಮವಾಗಿ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿದೆ. ಮಹಾರಾಷ್ಟ್ರದ ಹಲವು ಬುದ್ಧಿಜೀವಿಗಳು ಮರಾಠ ಪುರೋಹಿತಶಾಹಿಯ ರಚನೆ ಮತ್ತು ಮರಾಠ ಜಗದ್ಗುರುಗಳ ಪ್ರತಿಷ್ಠಾಪನೆ ಎಂಬ ಎರಡು ಪ್ರಮುಖ ನಿರ್ಣಯಗಳು ಮಹಾತ್ಮ ಫುಲೆಯವರ ತತ್ವ-ಸಿದ್ಧಾಂತಗಳಿಗೆ ತದ್ವಿರುದ್ಧವಾಗಿವೆಯೆಂದು ಆಕ್ಷೇಪಿಸಿದರು. ಲೇಖಕ ಮತ್ತು ಚಿಂತಕ ಪ್ರಭಾಕರ ವೈದ್ಯರು ಹೇಳುತ್ತಾರೆ: "ಶಾಹುರವರು ಒಂದೇ ಒಂದು ವಿಷಯದಲ್ಲಿ ಫುಲೆಯವರ ತತ್ವಗಳಿಗೆ ವಿರುದ್ಧವಾಗಿ ಅಪ್ರಜ್ಞಾಪೂರ್ವಕವಾಗಿ ಬಹುಶಃ ನಡೆದುಕೊಂಡರು! ಫುಲೆಯವರು ವೈವಾಹಿಕ ಆಚರಣೆಗಳಲ್ಲಿ ಏಜೆಂಟರು ಮತ್ತು ಪೂಜಾರಿಗಳನ್ನು ಸಂಪೂರ್ಣವಾಗಿ ಕಿತ್ತುಹಾಕಿದರು ಮತ್ತು ವರ ಮತ್ತು ವಧುಗಳಿಬ್ಬರು ಹಿರಿಯರು ಮತ್ತು ಹಿತೈಷಿಗಳ ಮುಂದೆ ಮರಾಠಿ ಭಾಷೆಯಲ್ಲಿ ಮದುವೆಯ ದೀಕ್ಷೆಯನ್ನು ತಾವೇ ತೆಗೆದುಕೊಳ್ಳುವ ಕ್ರಾಂತಿಕಾರಿ ಆಚರಣೆಯನ್ನು ರೂಢಿಗೆ ತಂದರು. ಅಂತಹ ಮದುವೆಗಳನ್ನು ಹಳ್ಳಿಗಳಲ್ಲಿ ಪ್ರಚಾರಮಾಡಲು ಅವರೇ ಉಪಕ್ರಮಿಸಿದರು ಮತ್ತು ಹಳ್ಳಿಗಳಲ್ಲಿ ನಿರಂತರವಾಗಿ ಅಭಿಯಾನ ನಡೆಸಿದರು. ಅವರು ಅಂತಹ ನೂರಾರು ಮದುವೆಗಳನ್ನು ಮಾಡಿಸಿದರು. ಮಡಿವಂತರು ಕಾನೂನುಬದ್ಧ ಆಕ್ಷೇಪಣೆಗಳನ್ನು ಮಾಡತೊಡಗಿದಾಗ ಅವರು ಪಟ್ಟುಹಿಡಿದು ಅವುಗಳನ್ನು ಎದುರಿಸಿದರು. ಆದರೆ ಶಾಹುರವರು ತನ್ನ ವೇದೋಕ್ತ ಹಕ್ಕುಗಳ ಸ್ಥಾಪನೆಯ ಹುರುಪಿನಲ್ಲಿ ಫುಲೆಯವರಿಗೆ ಆಸಕ್ತಿಯಿದ್ದ ವೈವಾಹಿಕ ಆಚರಣೆಗಳನ್ನು ಕಡೆಗಣಿಸಿದರು. ಜೊತೆಗೆ, ಶಾಹುರವರು ಪರಂಪರೆಯ ಮದುವೆಗಳನ್ನು ಎಲ್ಲಾ ವೇದೋಕ್ತ ಮತ್ತು ಪವಿತ್ರ ಗ್ರಂಥಗಳ ವಿವರಗಳನ್ನು ಪರಿಪಾಲಿಸುವ ಕಡೆಗೆ ಗಮನ ನೀಡಿ ಹಳ್ಳಿಗಳಲ್ಲಿ ಪ್ರಚಾರಾಂದೋಲನಗಳನ್ನು ನಡೆಸಿದರು. ಅವರು ಬ್ರಾಹ್ಮಣ ಪುರೋಹಿತರ ಬದಲಿಗೆ ಬ್ರಾಹ್ಮಣೇತರ ಪುರೋಹಿತರನ್ನು ನೇಮಿಸಿ ಮದುವೆ ಮಾಡಿಸಿದರು. ಒಟ್ಟಿನಲ್ಲಿ ಬ್ರಾಹ್ಮಣ ಭಟ್‌ಜಿಗಳಿಗಿಂತ ಭಿನ್ನವಾಗಿ ಏನು ಇರಲಿಲ್ಲ. ಒಟ್ಟಿನಲ್ಲಿ ಇದು ತಿರುಗು ಮುರುಗಿನ ವ್ಯವಹಾರವಾಗಿತ್ತು. ಇಲ್ಲಿ ಪರಂಪರಾಗತವಾದ ಆಚರಣೆಗಳನ್ನು (ಬ್ರಾಹ್ಮಣರು ರೂಪಿಸಿದ) ಅಗತ್ಯವಾದ ಮತ್ತು ಸಾಕಷ್ಟು ಪರಿಸ್ಥಿತಿಗಳಿಗೆ ಅನುಗುಣವಾಗಿ ಬ್ರಾಹ್ಮಣೇತರ ಪುರೋಹಿತರಿಂದ ನೆರವೇರಿಸಲಾಯಿತು. ಆ ದಿನಗಳ ವಿಶಿಷ್ಟ ಸಂದರ್ಭದಲ್ಲಿ ಒಂದು ಸುಧಾರಣೆಯಾಗಿದ್ದರೂ ಮಹಾತ್ಮ ಫುಲೆಯವರ ಬೋಧನೆಗಳಿಗೆ ವಿರುದ್ಧವಾಗಿತ್ತೆಂಬುದರಲ್ಲಿ ಯಾವ ಸಂದೇಹವು ಇಲ್ಲ".[19]

ಈ ಕ್ಷೇತ್ರದಲ್ಲಿನ ಮತ್ತೊಬ್ಬ ವಿದ್ವಾಂಸ ನಳಿನಿ ಪಂಡಿತರು ಒಪ್ಪುತ್ತಾರೆ. ಆಕೆ ಹೇಳುತ್ತಾಳೆ: "ಫುಲೆಯವರ ಧಾರ್ಮಿಕ ಪ್ರಚೋದನೆಯು ಪರಿಪೂರ್ಣ ನೈತಿಕ ಮೌಲ್ಯಗಳ ಮೇಲೆ ಆಧಾರಗೊಂಡಿತು. ಅವರು ಮಧ್ಯದಲ್ಲಿರುವ ಪೂಜೆ, ಪಠಣಗಳು, ಆಚರಣೆಗಳಿಂದ ಮುಕ್ತಿಪಡೆಯಲು ಮತ್ತು ವ್ಯಕ್ತಿಯ ಸಹಜ ಪ್ರವೃತ್ತಿಗಳನ್ನು ಕ್ರೋಢೀಕರಿಸಲು ಹಂಬಲಿಸಿದರು. ಶಾಹುರವರ ಪ್ರೋತ್ಸಾಹದಿಂದ ಬ್ರಾಹ್ಮಣೇತರರ ಆಂದೋಲನ ಹೆಚ್ಚು ಹೆಸರುವಾಸಿಯಾದರೂ ಅದು ಮಡಿವಂತಿಕೆಯ ಸಂಕೋಲೆಗಳಿಂದ ಬ್ರಾಹ್ಮಣೇತರರ ಜನರನ್ನು ವಿಮೋಚನೆಗೊಳಿಸುವ ಫುಲೆಯವರ ಉದ್ದೇಶ ಈಡೇರಲಿಲ್ಲ. ಕ್ಷಾತ್ರ ಜಗದ್ಗುರುವಿನ ಪ್ರತಿಷ್ಠಾಪನೆಯು ಮಠೀಯ ಸಂಸ್ಥೆಗಳ ಮಹತ್ವವನ್ನು ನಿರಂತರಗೊಳಿಸಿತು. ವೈದಿಕ ಮಂತ್ರಗಳ ಒತ್ತಾಯದಿಂದ ಹಳೇ ಆಚರಣೆಗಳ ಪ್ರಕ್ರಿಯೆಗಳನ್ನು ಪುನರ್‌ಸ್ಥಾಪಿಸಲಾಯಿತು ಮತ್ತು ಬ್ರಾಹ್ಮಣ ಪೂಜಾರಿಗಳು ಮಾಯವಾದರೂ ಪೂಜಾರಿಗಳು ಸ್ಥಿರವಾಗಿ ನಿಂತಿದ್ದರಿಂದ ಬ್ರಾಹ್ಮಣೇತರರ ಸಮಾಜದ ಧಾರ್ಮಿಕ ಮೌಢ್ಯ ಹಾಗೆಯೇ ಉಳಿದುಬಿಟ್ಟಿತು".[20] ಇಲ್ಲಿ ಈ ವಿದ್ವಾಂಸರು ಶಾಹುರವರು ಮಹಾತ್ಮ ಫುಲೆಯವರ ತತ್ವಗಳಿಗೆ ಬದ್ಧರಾಗಿದ್ದಾರೆಂದು ಭಾವಿಸಿಬಿಟ್ಟರು. ಶಾಹುರವರು ಅಂತಹ ಬದ್ಧತೆಯನ್ನು ಒಪ್ಪಿಕೊಂಡಿರಲಿಲ್ಲ ಎಂಬ ಅಂಶವನ್ನು ಇಲ್ಲಿ

ಗಮನಿಸಬೇಕಾಗಿದೆ. ಈ ದಾರಿಯಲ್ಲಿ ಅವರು ತಮ್ಮದೇ ಆದ ರೀತಿಯಲ್ಲಿ ಸಾಗಿದ್ದಾರೆ. ಅವರು ಹಲವಾರು ಪ್ರಯೋಗಗಳನ್ನು ಮಾಡಲು ಸ್ವತಂತ್ರರು. ಅಂತಹ ಹಲವಾರು ಪ್ರಯೋಗಗಳಲ್ಲಿ ಇದು ಒಂದು ಪ್ರಯೋಗವಷ್ಟೆ ಶಾಹುರವರ ಎರಡು ನಿರ್ಣಯಗಳು ಫುಲೆಯವರ ಅಭಿಪ್ರಾಯಗಳನ್ನು ವಾಸ್ತವಿಕವಾಗಿ ಉಲ್ಲಂಘಿಸಿಲ್ಲವೆಂದು ತೋರಿಸುವ ಸಾಕ್ಷ್ಯಾಧಾರಗಳು ಸಮಕಾಲೀನ ಮೂಲ ಸಾಮಗ್ರಿಗಳಲ್ಲಿ ಲಭ್ಯವಾಗಿವೆ. ಒಂದು ಕ್ಷಣಕ್ಕೆ ನಾವು ಅವರು ಸತ್ಯಶೋಧಕದ ತತ್ವಗಳ ಪ್ರಚಾರಕರಾಗಿದ್ದರೆಂದು ಭಾವಿಸಬಹುದು. ೧೯ನೇ ಶತಮಾನದಲ್ಲಿ ಅತಿ ಉತ್ಸಾಹದ ಸಾಮಾಜಿಕ ಕಾರ್ಯಕರ್ತರಾದ ಮಹದೇವರಾವ್ ರಾಘೋಗಿ ರೋಕ್ಡೆ (೧೮೪೫–೧೮೯೬) ಎಂಬುವರು ಮುಂಬಯಿಯಲ್ಲಿದ್ದರು. ಅವರ ಸ್ನೇಹಿತ, ಪ್ರಸಿದ್ಧ ಇತಿಹಾಸಕಾರ ಕೃಷ್ಣಜಿ ಅರ್ಜುನ ಕೇಲುಸ್ಕರ್ ಅವರು ರೋಕ್ಡೆ ಅವರ ಜೀವನಚರಿತ್ರೆಯನ್ನು ಬರೆದಿದ್ದಾರೆ. ಕೇಲುಸ್ಕರ್ ಅವರು ಫುಲೆಯವರ ಬಗ್ಗೆ ಒಂದು ಘಟನೆಯನ್ನು ವಿವರಿಸುತ್ತಾರೆ. ಅವರು ಬರೆಯುತ್ತಾರೆ: "ಸತ್ಯಶೋಧಕ ಸಮಾಜದ ಮೂಲ ಸ್ಥಾಪಕರಾದ ಜೋತಿರಾವ್ ಫುಲೆಯವರ ಉಪನ್ಯಾಸವನ್ನು ಬಾಂಬೆಯಲ್ಲಿ ಏರ್ಪಡಿಸಿದ್ದರು. ರಾವ್‌ಬಹದೂರ್ ಲೋಖಂಡೆ ಅವರು ಅಧ್ಯಕ್ಷತೆ ವಹಿಸಿದ್ದರು ಮತ್ತು ಪ್ರೇಕ್ಷಕರಿಂದ ಪ್ರಶ್ನೆಗಳನ್ನು ಆಹ್ವಾನಿಸಿದ್ದರು. ಮಾಧವರಾವ್ ಅವರು ತಮ್ಮ ಒಪ್ಪಿಗೆಯನ್ನು ತತ್ವ–ಸಿದ್ಧಾಂತದ ಬಗ್ಗೆ ವ್ಯಕ್ತಪಡಿಸಿದ್ದರು. ಆದರೆ ಅವರು ನಮ್ಮ ಪುರೋಹಿತರು ಬ್ರಾಹ್ಮಣ ಪುರೋಹಿತರ ಸ್ಥಾನವನ್ನು ವಹಿಸಿಕೊಳ್ಳಬೇಕೆಂಬ ಫುಲೆಯವರ ಪ್ರಸ್ತಾಪವನ್ನು ಒಪ್ಪಲಿಲ್ಲ. ಈ ಪುರೋಹಿತರ ಒಂದು ಹೊಸ ಜಾತಿಯನ್ನು ನಿರ್ಮಿಸುವುದಕ್ಕೆ ಸಮವಾಗಿರುತ್ತದೆ ಮತ್ತು ಈ ಹೊಸ ಪುರೋಹಿತರು ಬ್ರಾಹ್ಮಣರಂತೆಯೇ ಅಷ್ಟೇ ಹಠಮಾರಿ ಮತ್ತು ಏಕಸ್ವಾಮ್ಯವಾದಿಗಳಾಗುವ ಅಪಾಯವಿದೆ ಎಂದು ಹೇಳಿದರು. ಜೊತೆಗೆ ಜನರು 'ಸತ್ಯಶೋಧನ' ಸತ್ಯವನ್ನು ತಿಳಿಯುವ ಇತರೆ ದಾರಿಗಳನ್ನು ತಿಳಿದಿದ್ದರೆ ಉತ್ತಮ. ಇದನ್ನು ಜನರು ಸ್ಪಷ್ಟವಾಗಿ ತಿಳಿಯುವಂತೆ ಮಾಡದ ಹೊರತು ಸತ್ಯಶೋಧಕದ ತತ್ವ ಮತ್ತು ಸಿದ್ಧಾಂತ ಉದ್ದೇಶಗಳನ್ನು ಹರಡುವುದು ಕಷ್ಟಸಾಧ್ಯವಾಗುತ್ತದೆ. ಬ್ರಾಹ್ಮಣ ಪುರೋಹಿತರನ್ನು ತಿರಸ್ಕರಿಸಬೇಕೆಂದು ಪ್ರಚಾರ ಮಾಡುವ ಕ್ರಮವು ಅನಾವಶ್ಯಕವಾಗಿ ಎಲ್ಲಾ ಬ್ರಾಹ್ಮಣರನ್ನು ದ್ವೇಷಿಸುವುದರಲ್ಲಿ ಪರಿಣಮಿಸುತ್ತದೆ. ಈ ಮಾತುಗಳಲ್ಲಿ ಮಾಧವರಾವ್ ಅವರು ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ತಿಳಿಸಿದರು".[21]

ಬ್ರಾಹ್ಮಣ ಪುರೋಹಿತರನ್ನು ಅವಲಂಬಿಸುವ ಬದಲಿಗೆ ನಮ್ಮ ನಾನಾ ಜಾತಿಗಳ 'ನಮ್ಮ' ಜಾತಿಗಳ ಪುರೋಹಿತರನ್ನು ನೇಮಿಸಿಕೊಳ್ಳಬೇಕು ಎಂಬ ಇಲ್ಲಿ ಫುಲೆಯ ಪ್ರಸ್ತಾಪವನ್ನು ಹೇಳಲಾಯಿತು. ಫುಲೆಯವರು ಮಾನವೀಯತೆಯನ್ನೇ ಧರ್ಮವೆಂದು ನಂಬಿದ್ದರು. ಅವರಿಗೆ ಧಾರ್ಮಿಕ ವಿಧಿ–ಆಚರಣೆಗಳಲ್ಲಿ ನಂಬಿಕೆಯಿರಲಿಲ್ಲ. ಆದರೆ ಅವರ ಧರ್ಮ ಮತ್ತು ಧಾರ್ಮಿಕ ವಿಧಿ–ಆಚರಣೆಗಳಲ್ಲಿ ಬಲವಾಗಿ ನಂಬಿಕೆಯಿಟ್ಟು ಶೂದ್ರರು ಮತ್ತು ಅತಿಶೂದ್ರರು ಸುತ್ತ ಆವರಿಸಿಕೊಂಡಿದ್ದರು. ಆ ಸಮುದಾಯಗಳು ಬಲವಾಗಿ ಧರ್ಮ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಬಲವಾಗಿ ನಂಬಿದ್ದವು. ಆ ಸಮುದಾಯಗಳು ಕೂಡಲೆ ಈ ನಂಬಿಕೆಗಳನ್ನು ಬಿಟ್ಟುಬಿಡಬೇಕೆಂದು ಅವುಗಳಿಗೆ ಹೇಳಿದರೆ ಅದು ಆಗುವುದಿಲ್ಲ. ವಿವಾಹ, ವಾಸ್ತುಶಾಂತಿ (ಹೊಸಮನೆಯ ಶುದ್ಧೀಕರಣದ ಆಚರಣೆ), ದಶಪಿಂಡ (ಅಗಲಿದ ಆತ್ಮಗಳಿಗೆ ಅನ್ನಸಂತರ್ಪಣೆ) ಮೊದಲಾದ ಆಚರಣೆಗಳು ಸಮಾಜಕ್ಕೆ ಅನಿವಾರ್ಯ ಮತ್ತು ಸತ್ಯಶೋಧಕ ಸಮಾಜ ಅವುಗಳ ಆಚರಣೆಗೆ ವ್ಯವಸ್ಥೆ ಮಾಡಬೇಕಾಗುತ್ತದೆ. ಈ ಉದ್ದೇಶಕ್ಕಾಗಿಯೇ ಫುಲೆಯವರು ೧೮೮೭ರಲ್ಲಿ 'ಮಂಗಳಾಷ್ಟಕ' (ವಿವಾಹ ಮಂತ್ರಗಳು) ಸೇರಿದಂತೆ ಎಲ್ಲಾ ಪೂಜಾ ವಿಧಾನಗಳ ಒಂದು ಪುಸ್ತಕವನ್ನು ಪ್ರಕಟಿಸಿದ್ದರು.

ಸತ್ಯಶೋಧಕ ಸಮಾಜದ ತತ್ವಗಳ ಪ್ರಕಾರ ಮೇಲೆ ಹೇಳಿದ ಪೂಜೆಗಳ ಆಚರಣೆಗಳ ಮಂತ್ರಗಳನ್ನು ನೆರವೇರಿಸುವ ವಿಧಾನಗಳನ್ನು ಈ ಪುಸ್ತಕ ಒಳಗೊಂಡಿದೆ. ಮಂಗಳಾಷ್ಟಕಗಳ ಪ್ರತಿಯೊಬ್ಬ ವರ ಮತ್ತು ವಧುವಿಗೆ ಹೇಳಬೇಕಾಗಿದೆ. ಫುಲೆ ಅವರು ನಿಗದಿಗೊಳಿಸಿದ ಆಚರಣೆಗಳನ್ನು ಮತ್ತು ಪ್ರಕ್ರಿಯೆಗಳನ್ನು ತಿಳುವಳಿಕೆಯಿಲ್ಲದ ಮತ್ತು ಸಾಕ್ಷರರಲ್ಲದ ಶೂದ್ರ-ಅತಿಶೂದ್ರರು ಹೇಗೆ ನೆರವೇರಿಸುತ್ತಾರೆ? ಕಿರುಪುಸ್ತಕ ಸ್ಪಷ್ಟವಾಗಿ ಹೇಳುತ್ತದೆ: "ಮದುವೆಯಾಗುವ ಕೆಳಜಾತಿಗಳ ವರ ಮತ್ತು ವಧುಗಳನ್ನು ತಿರಸ್ಕಾರ ಭಾವನೆಯಿಂದ ನೋಡುವ ಮತ್ತು ಪ್ರತಿಯೊಬ್ಬರನ್ನು ತನ್ನ ಗುಲಾಮ ಮತ್ತು ಸೇವಕ ಎಂದು ಪರಿಗಣಿಸುವ ಮೋಸದ ಆರ್ಯಭಟ ಬ್ರಾಹ್ಮಣರ ನೆರಳು ಬೀಳುವಂತೆ ಅವಕಾಶ ಕೊಡಬಾರದು".[22] ದಮನಿತ ವರ್ಗಗಳ ಶಿಕ್ಷಿತ ಜನರು ಆಸಕ್ತಿ ತೆಗೆದುಕೊಂಡು ಸತ್ಯಶೋಧಕ ರೀತಿಯಲ್ಲಿ ಆಚರಣೆಗಳನ್ನು ಆಚರಿಸುವ ಆಯ್ಕೆಯನ್ನು ಮಾಡಿಕೊಳ್ಳಬೇಕು. ಫುಲೆಯವರು ಪ್ರತ್ಯೇಕ ಪುರೋಹಿತರನ್ನು ತಮ್ಮ ತಮ್ಮ ಜಾತಿಗಳಿಗೆ ಅನುಗುಣವಾಗಿ ಸೂಚಿಸಿದ್ದಾರೆ. ಈ ಪೂಜಾರಿ ಬ್ರಾಹ್ಮಣ ಪೂಜಾರಿಗಳಂತೆ ದೇವರು ಮತ್ತು ಭಕ್ತನ ನಡುವೆ ಮಧ್ಯಸ್ಥನಾಗಿರಬಾರದು. ಅವನು ಬ್ರಾಹ್ಮಣ ಬೋಧಕನಂತೆ ಏಜೆಂಟನಾಗಿ ಮುಗ್ಧ ಜನರನ್ನು ಧಾರ್ಮಿಕವಾಗಿ ಮತ್ತು ಆರ್ಥಿಕವಾಗಿ ಶೋಷಣೆ ಮಾಡಬಾರದು, ಆದರೆ ಅವನು ಹಿತೈಷಿಯಾಗಿ ಅವರಿಗೆ ಸಹಾಯ ಮತ್ತು ಮಾರ್ಗದರ್ಶನ ಮಾಡಬೇಕು. ಈ ದೃಷ್ಟಿಕೋನದಿಂದ ಶಾಹುರವರು ಮರಾಠ ಪೂಜಾರಿಗಳನ್ನು ಮತ್ತು ಜಗದ್ಗುರುಗಳನ್ನು ಫುಲೆಯವರ ಸತ್ಯಶೋಧಕ ಸಿದ್ಧಾಂತಕ್ಕೆ ಅನುಗುಣವಾಗಿ ಪ್ರತಿಷ್ಠಾಪಿಸಿದರೆಂದು ಊಹಿಸಬಹುದು.

ಜಗಳದ ಮತ್ತೊಂದು ವಿಷಯ ಹಾಗೆಯೆ ಉಳಿಯುತ್ತದೆ. ಬೇರೆ ಬೇರೆಯ ಆಚರಣೆಗಳು ಮತ್ತು ಪೂಜೆಗಳನ್ನು ನಡೆಸುವ ಸಲುವಾಗಿ ಸತ್ಯಶೋಧಕ ಸಮಾಜದ ತತ್ವಗಳಿಗೆ ಅನುಗುಣವಾಗಿ ತಮ್ಮದೇ ಆದ ನಿಯಮಾವಳಿ ಮತ್ತು ಮಂತ್ರಗಳನ್ನು ಫುಲೆಯವರು ರಚಿಸಿದ್ದಾರೆ. ಆದರೆ ಅವರು ವೈದಿಕ ಮಂತ್ರ ಘೋಷಣೆಗಳನ್ನು ಅಂಗೀಕರಿಸಿಲ್ಲ. ಆದರೆ ಶಾಹುರವರ ಪುರೋಹಿತರು ವೈದಿಕ ಮಂತ್ರಗಳನ್ನು ಅಂಗೀಕರಿಸಿರುವುದನ್ನು ಮತ್ತು ವೈದಿಕ ವಿಧಾನದಿಂದಲೇ ಧಾರ್ಮಿಕ ಆಚರಣೆಗಳನ್ನು ನಡೆಸಿರುವುದನ್ನು ನೋಡಬಹುದು. ಸಮಕಾಲೀನ ಸತ್ಯಶೋಧಕ ಕಾರ್ಯಕರ್ತರು ಈ ಕಾರ್ಯವನ್ನು ಬೆಂಬಲಿಸಿದ್ದಾರೆಂಬುದನ್ನು ಗಮನಿಸಬೇಕು. ಇದು ಒಂದು ವಿಧದ ಪ್ರಾಯೋಗಿಕ ಒಪ್ಪಂದವಾಗಿದೆ. ಸೈದ್ಧಾಂತಿಕ ಭಿನ್ನಾಭಿಪ್ರಾಯ, ಅದರ ಬೇರುಗಳು ಫುಲೆಯವರ ವೇದಗಳ ದ್ವೇಷದಲ್ಲಿರುವುದು ಮತ್ತು ಶಾಹುರವರ ವೇದಗಳ ಪ್ರತಿಪಾದನೆ, ಹೀಗೆ ಫುಲೆ ಮತ್ತು ಶಾಹುರವರ ವಿಧಾನಗಳು ಭಿನ್ನವಾಗಿವೆ. ಈ ಹಿನ್ನೆಲೆಯಲ್ಲಿ ಫುಲೆಯವರ ಅನುಚರರಾಗುವ ಬದಲಿಗೆ ಶಾಹುರವರನ್ನು ಸ್ವತಂತ್ರ ವ್ಯಕ್ತಿತ್ವ (ಗುರುತು) ಪರಿಗಣಿಸಿದರೆ ಹಲವು ಸಮಕಾಲೀನ ಘಟನೆಗಳನ್ನು ಹೆಚ್ಚು ವಸ್ತುನಿಷ್ಠವಾಗಿ ಪರಿಶೀಲಿಸಲು ಸಾಧ್ಯವಾಗುತ್ತದೆ.

---

೨೩

# ಬ್ರಾಹ್ಮಣೇತರರ ಆಂದೋಲನ

೧೯೧೭ರ ಸುಮಾರಿನಲ್ಲಿ ಮಹಾರಾಷ್ಟ್ರದ ಐತಿಹಾಸಿಕ ದೃಶ್ಯಪಟಲದಲ್ಲಿ ಬ್ರಾಹ್ಮಣೇತರರ ಆಂದೋಲನ ಮೂಡಿಬಂತು. ಮತ್ತು ಶಾಹುರವರನ್ನು ಅದರ ಅಗ್ರಗಾಮಿಯೆಂದು ಕಾಣಲಾಗುತ್ತದೆ. ಅದರ ಪ್ರಾರಂಭಿಕ ಪ್ರಕಟಣೆಯಲ್ಲೂ ಅದು ಬ್ರಾಹ್ಮಣೇತರರ ರಾಜಕೀಯ ಹಕ್ಕುಗಳಿಗೆ ಒತ್ತಾಯಿಸಿತು. ಅದರ ಬೀಜಗಳು ಸತ್ಯಶೋಧಕ ಆಂದೋಲನ ಮತ್ತು ಶಾಹುರವರ ವೇದೋಕ್ತ ಆಂದೋಲನದಲ್ಲಿ ಕಾಣಬಹುದು. ಸತ್ಯಶೋಧಕ ಆಂದೋಲನವು ಬ್ರಾಹ್ಮಣರ ಸರ್ವಾಧಿಕಾರ(ದಬ್ಬಾಳಿಕೆ)ದ ಏಕಪಕ್ಷೀಯ ಸರ್ವಾಧಿಕಾರದ ವಿರುದ್ಧದ ಹೋರಾಟವಾದರೆ ಮತ್ತು ಫುಲೆಯವರು ಪ್ರಾರಂಭಿಸಿದ್ದು ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರರ ಮೊದಲ ಆಂದೋಲನವಾಗಿತ್ತು. ಶಾಹುರವರು ಪ್ರಾರಂಭಿಸಿದ ವೇದೋಕ್ತ ಆಂದೋಲನ ಅದರ ನಂತರದ್ದು. ಶಾಹುರವರು ಸತ್ಯಶೋಧಕ ಸಮಾಜದ ಪುನರ್‌ರಚನೆಯ ಆಂದೋಲನ ಮತ್ತು ಏಕಕಾಲದಲ್ಲಿ ತಮ್ಮ ವೇದೋಕ್ತ ಆಂದೋಲನ ಪ್ರಾರಂಭ ೧೯೧೭ರಲ್ಲಿ ಮೂಡಿಬಂದ ಬ್ರಾಹ್ಮಣೇತರರ ಆಂದೋಲನವನ್ನು ಸಿದ್ಧಗೊಳಿಸಿತು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರರ ರಾಜಕೀಯ ಹಕ್ಕುಗಳ ಹೋರಾಟದ ಪ್ರತ್ಯೇಕ ಪ್ರವಾಹ ಮೊದಲ ಅವಧಿಯಲ್ಲಿನ ಸತ್ಯಶೋಧಕ ಮತ್ತು ವೇದೋಕ್ತ ಆಂದೋಲನಗಳ ಸಂಗಮದಲ್ಲಿ ಸೇರಿಕೊಂಡಿತು. ಈ ಮೂರು ಆಂದೋಲನಗಳು ಒಟ್ಟಿಗೆ ಸೇರಿ ಬ್ರಾಹ್ಮಣೇತರರ ಆಂದೋಲನವಾಗಿ ಬೆಳೆಯಿತು. ಸತ್ಯಶೋಧಕ ಮತ್ತು 'ವೇದೋಕ್ತ'ದ ಚಳುವಳಿಗಳನ್ನು ಒಂದು ರಾಜಕೀಯ ಬ್ರಾಹ್ಮಣೇತರರ ಆಂದೋಲನವಾಗಿ ಪರಿವರ್ತನೆ ಮಾಡಿದ ಶ್ರೇಯಸ್ಸು ಶಾಹುರವರಿಗೆ ಸಲ್ಲುತ್ತದೆ.

### ಬ್ರಾಹ್ಮಣೇತರರ ಆಂದೋಲನದ ಕೇಂದ್ರಗಳ ಉಗಮ

ಶಾಹುರವರ ಜೀವನಚರಿತ್ರೆಗಾರ ಪ್ರೊ. ಅಣ್ಣಾಸಾಹೇಬ ಲಠ್ಠೆ ಅವರು ಸ್ವತಃ ಒಬ್ಬ ನಿಷ್ಠಾವಂತ ಸತ್ಯಶೋಧಕರು ಮೇಲೆ ಹೇಳಿದ ಎರಡು ಆಂದೋಲನಗಳು ಹೇಗೆ ಬ್ರಾಹ್ಮಣೇತರರ ಆಂದೋಲನದ ಹಿನ್ನೆಲೆಯನ್ನು ಹೊಂದಿತ್ತು ಎಂಬುದನ್ನು ವಿವರಿಸುತ್ತಾರೆ. ಅವರು ಬರೆಯುತ್ತಾರೆ: "ಶಾಹುರವರ ವೇದೋಕ್ತ ಸಂಘರ್ಷದ ಅಂತಿಮ ವಿಜಯ ಗಳಿಸಿದ ನಂತರ ಇಡೀ ಮಹಾರಾಷ್ಟ್ರದಲ್ಲಿ ಮರಾಠ ಕುಲದವರು ಸಮಸ್ಯೆಯ ಬಗ್ಗೆ ತಮ್ಮ ಔದಾಸೀನ್ಯವನ್ನು ಕೊಡವಿಹಾಕಿದರು ಮತ್ತು ತಮ್ಮ ಅಭೂತಪೂರ್ವವಾದ ಶಕ್ತಿ-ಸಾಮರ್ಥ್ಯವನ್ನು ಕ್ರೋಡೀಕರಿಸಿಕೊಂಡರು. ಮರಾಠ ಮತ್ತು ಬ್ರಾಹ್ಮಣೇತರರ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳು ಮತ್ತು ಸಂಸ್ಥಾನದ ಜನರು, ಶಿಕ್ಷಣದ ಜೊತೆಯಲ್ಲಿ ಪ್ರೌಢರಾದರು ಮತ್ತು ಕೊಲ್ಹಾಪುರ ಪ್ರಗತಿಗಾಮಿಗಳ ವಾತಾವರಣದಲ್ಲಿ ತಮ್ಮ ಹಕ್ಕುಗಳ ಬಗ್ಗೆ ಸದಾ ಜಾಗೃತರಾಗಿ ನವೋಲ್ಲಾಸದಿಂದ ಪುಟಿದು ಕಾರ್ಯೋನ್ಮುಖರಾದರು. ಸಂಸ್ಥಾನದ ಹೊರಗಡೆ ಹೋದ ಕಡೆಗಳಲ್ಲಿ ಅವರು ಹೊಸ ಕೇಂದ್ರಗಳನ್ನು

ತೆರೆದರು. ಈ ಹೊಸ ಕೇಂದ್ರಗಳಿಂದ ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರರ ಆಂದೋಲನದ ಮುಖ್ಯವಾಹಿನಿ ಮೂಡಿತು".[1]

ಶಾಹುರವರ ಕೆಲಸ ಮಹಾರಾಷ್ಟ್ರದ ತುಂಬ ಬ್ರಾಹ್ಮಣೇತರರ ಜಾಗೃತಿಯ ಹಲವಾರು ಕೇಂದ್ರಗಳು ಬೆಳೆದು ಬಂದವು. ಈ ಕೇಂದ್ರಗಳು ಬ್ರಾಹ್ಮಣೇತರರ ಸಮುದಾಯಗಳಿಗೆ ಶಿಕ್ಷಣದ ಸಂಸ್ಥೆ ಮತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದವು. ಈ ಶೈಕ್ಷಣಿಕ ಚಟುವಟಿಕೆಗಳ ಜೊತೆಗೆ ಸಾಮಾಜಿಕ ಜಾಗೃತಿಯ ಹಲವು ಸತ್ಯಶೋಧಕ ಯೋಜನೆಗಳನ್ನು ಕೈಗೊಳ್ಳಲಾಯಿತು. ಈ ಯೋಜನೆಗಳಿಂದ ಕಾರ್ಯಕರ್ತರ ಒಂದು ತಲೆಮಾರನ್ನು ರೂಪಿಸಲಾಯಿತು. ನಾಸಿಕಿನ ಬ್ರಾಹ್ಮಣೇತರರ ಗುಂಪುಗಳು ಒಂದು ಉತ್ತಮ ನಿದರ್ಶನವಾಗಿದೆ. ಅಲ್ಲಿ ಯುವ ಸಾಮಾಜಿಕ (ಸತ್ಯಶೋಧಕ) ಕಾರ್ಯಕರ್ತರಾದ ಡಿ. ಆರ್. ಭೋಂಸಲೆ, ಗಣಪತರಾವ್ ಮೋರೆ, ರಾವ್ ಸಾಹೇಬ್ ಥ್ರೋಟ್, ಪಾಟೀಲ ಮೊದಲಾದವರು ಉದಾಜಿರಾವ್ ಪವಾರ ಮರಾಠ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು ಮತ್ತು ಶಾಹುರವರ ಕೆಲಸವನ್ನು ಅನುಸರಿಸಲು ಮುಂದುವರಿದರು. ಹಾಗೆಯೇ ಶಾಹುರವರ ಉತ್ತೇಜನದಿಂದ ಮಹಾರಾಷ್ಟ್ರದ ಅಹಮದ್‌ನಗರ, ಖಾನ್‌ದೇಶ, ಬೆರಾರ್‌ಗಳಲ್ಲಿ ಬ್ರಾಹ್ಮಣೇತರರ ಕೇಂದ್ರಗಳು ಸಹ ಮೂಡಿಬಂದವು. ಈ ಕೇಂದ್ರಗಳ ಕಾರ್ಯಕರ್ತರು ತಮ್ಮನ್ನು ತಾವೇ ಸತ್ಯಶೋಧಕರೆಂದು ಕರೆದುಕೊಂಡರು. ಶಾಹುರವರು ಈ ಎಲ್ಲಾ ಸತ್ಯಶೋಧಕರನ್ನು ಬ್ರಾಹ್ಮಣೇತರರ ಆಂದೋಲನದ ಮುಖ್ಯ ಪ್ರವಾಹದೊಂದಿಗೆ ಕೂಡಿಸಿದರು.

ಫುಲೆಯವರ ಕಾಲಾವಧಿಯಲ್ಲಿ ಸತ್ಯಶೋಧಕ ಕಾರ್ಯಕರ್ತರಲ್ಲಿ ಬಹುಸಂಖ್ಯೆಯ ಜನರು ಕೆಳಜಾತಿಗಳಿಗೆ ಸೇರಿದವರಾಗಿದ್ದರು. ಪುನರುಜ್ಜೀವನಗೊಳಿಸಿದ ಆಂದೋಲನದಲ್ಲಿ ಬಹುಮಟ್ಟಿಗೆ ಶಾಹುರವರ ಸ್ಫೂರ್ತಿಯಿಂದ ವಿವಿಧ ಜಾತಿಗಳಿಂದ ಮತ್ತು ಧರ್ಮಗಳಿಂದ ಶ್ರೀಮಂತ ಮರಾಠರು, ಬಹುಜನ ಸಮಾಜ ಮರಾಠರು, ಜೈನರು, ಲಿಂಗಾಯತರು, ಕಾಯಸ್ಥ ಪ್ರಭುಗಳು ಮೊದಲಾದ ಕಾರ್ಯಕರ್ತರು ಬಂದು ಸೇರಿದ್ದರು. ಸಹಜವಾಗಿ, ಈ ಜನರು ಸತ್ಯಶೋಧಕ ಆಂದೋಲನದ ಪ್ರವಾಹದ ಒಂದು ಭಾಗವಾಗಿ ಬ್ರಾಹ್ಮಣೇತರರ ಆಂದೋಲನಕ್ಕೆ ಪ್ರವೇಶಿಸಿದರು. 'ಎಲ್ಲಾ ಸತ್ಯಶೋಧಕರು ಬ್ರಾಹ್ಮಣೇತರರ ಆಂದೋಲನಕ್ಕೆ ಸೇರಿದರೂ, ಬ್ರಾಹ್ಮಣೇತರರ ಆಂದೋಲನಕ್ಕೆ ಸೇರಿದವರೆಲ್ಲರೂ ಸತ್ಯಶೋಧಕರಲ್ಲ' ಎಂಬ ಅಂಶವನ್ನು ಡಾ. ವೈ. ಡಿ. ಫಡ್ಕೆ ಎತ್ತಿದ್ದನ್ನು ಮನಸ್ಸಿನಲ್ಲಿಡಬೇಕಾದುದು ಅತ್ಯವಶ್ಯಕ".[2] ಆ ಅವಧಿಯಲ್ಲಿ ಬ್ರಾಹ್ಮಣೇತರರ ಆಂದೋಲನದ ಘಟಕಗಳೆಲ್ಲ ಸತ್ಯಶೋಧಕ ಸಿದ್ಧಾಂತದ ಅನುಯಾಯಿಗಳೆಂದು ಕೆಲವು ಸತ್ಯಶೋಧಕರು ಪರಿಗಣಿಸಿದರೂ ಆಂದೋಲನದಲ್ಲಿರುವ ಅನೇಕ ಭಾಗೀದಾರರು ಅಂಥ ಪರಿಗಣನೆಯನ್ನು ಸಮ್ಮತಿಸಲಿಲ್ಲ. ಅವರ ಪ್ರಕಾರ ಸತ್ಯಶೋಧಕ ಆಂದೋಲನವು ಧಾರ್ಮಿಕ ಸುಧಾರಣೆಯ ಒಂದು ಆಂದೋಲನವಾಗಿದ್ದರೆ ಬ್ರಾಹ್ಮಣೇತರರ ಆಂದೋಲನವು ರಾಜಕೀಯ ಹಕ್ಕುಗಳನ್ನು ಸಾಧಿಸುವುದಕ್ಕೆ ಇದ್ದ ಒಂದು ಆಂದೋಲನವಾಗಿತ್ತು.[3] ಅವರು ಹೇಳಿದ್ದರಲ್ಲಿ ತಿರುಳಿದ್ದರೂ ಬ್ರಾಹ್ಮಣೇತರರ ಆಂದೋಲನದ ಸಾಮಾಜಿಕ ಬದ್ಧತೆಯು ಅದರ ಪ್ರಮುಖ ನಾಯಕರಾದ ಭಾಸ್ಕರರಾವ್ ಜಾಧವ್, ಅಣ್ಣಾಸಾಹೇಬ್ ಲಠ್ಠೆ, ಮುಕುಂದರಾವ್ ಪಾಟೀಲ್ ಮೊದಲಾದವರು ಮೂಲತಃ ಸತ್ಯಶೋಧಕರಾಗಿದ್ದುದರಿಂದ ಸತ್ಯಶೋಧಕ ಆಂದೋಲನಕ್ಕೆ ಹೆಚ್ಚು ಹೋಲುತ್ತಿತ್ತು.

ಬಾಂಬೆ ಪ್ರೆಸಿಡೆನ್ಸಿಯಲ್ಲಿ ಬ್ರಾಹ್ಮಣೇತರರ ಆಂದೋಲನದ ಉಗಮದ ಅವಧಿಯಲ್ಲಿ ಅದೇ ರೀತಿಯ ಒಂದು ಬ್ರಾಹ್ಮಣೇತರರ ಆಂದೋಲನವು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ೧೯೧೫ರಲ್ಲಿ ಬೆಳೆದು ಬರುತ್ತಿತ್ತು.

ಬ್ರಾಹ್ಮಣೇತರರಾದ ಡಾ. ಮಾಧವನ್ ನಾಯರ್, ಸರ್. ಪಿ. ತ್ಯಾಗರಾಜ ಚೆಟ್ಟಿಯಾರ್, ಸಿ. ನಟೇಶ್ ಮೊದಲಿಯಾರ್, ರಾಮಸ್ವಾಮಿ ಮೊದಲಿಯಾರ್, ಪಾಂಗಲನ ರಾಜ ಮೊದಲಾದವರು ಈ ಆಂದೋಲನವನ್ನು ಮುನ್ನಡೆಸುತ್ತಿದ್ದರು. ಬ್ರಾಹ್ಮಣೇತರರು ತಮ್ಮ ನ್ಯಾಯಬದ್ಧ ಹಕ್ಕುಗಳನ್ನು ಮತ್ತು ಸಾಂಸ್ಕೃತಿಕ, ಸಾಮಾಜಿಕ, ಆಡಳಿತಾತ್ಮಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬ್ರಾಹ್ಮಣರ ಪ್ರಾಬಲ್ಯವನ್ನು ಕೊನೆಗೊಳಿಸುವ ಸಲುವಾಗಿ ಅವರು 'ದಕ್ಷಿಣಭಾರತದ ಜನರ ಸಂಘ' ಎಂಬ ಸಂಸ್ಥೆಯನ್ನು ೧೯೧೬ ರಲ್ಲಿ ಸ್ಥಾಪಿಸಿದರು. ಅವರು ತಮ್ಮ ಅಭಿಪ್ರಾಯಗಳ ಪ್ರಚಾರಕ್ಕಾಗಿ 'ಜಸ್ಟೀಸ್' ಎಂಬ ಹೆಸರಿನ ಒಂದು ದಿನಪತ್ರಿಕೆಯನ್ನು ಪ್ರಾರಂಭಿಸಿದರು. ಮಾಂಟೆಗು ಘೋಷಣೆಯ ನಂತರ, ಈ ನಾಯಕರು ತಮ್ಮ ರಾಜಕೀಯ ಹಕ್ಕುಗಳ ಬೇಡಿಕೆಯ ಉದ್ದೇಶದಿಂದ 'ದಕ್ಷಿಣ ಭಾರತದ ಲಿಬರಲ್ ಫೆಡರೇಶನ್' ಎಂಬ ಒಂದು ರಾಜಕೀಯ ಪಕ್ಷವನ್ನು ಪ್ರಾರಂಭಿಸಿದರು. ಈ ಪಕ್ಷವು ತಮ್ಮ ಮುಖ ಪತ್ರಿಕೆಯ ಜನಪ್ರಿಯತೆಯಿಂದ 'ಜಸ್ಟೀಸ್ ಪಾರ್ಟಿ' ಎಂಬ ಹೆಸರನ್ನು ಗಳಿಸಿತು. ಸ್ವಲ್ಪ ಸಮಯದಲ್ಲಿಯೇ 'ಜಸ್ಟೀಸ್' ಪತ್ರಿಕೆಯು ಬ್ರಾಹ್ಮಣ ಪತ್ರಿಕೆಯಾದ 'ದಿ ಹಿಂದು' ಪತ್ರಿಕೆಗೆ ದಕ್ಷಿಣದಲ್ಲಿ ಸವಾಲಾಗಿ ಪರಿಣಮಿಸಿತು.[4]

ಬಾಂಬೆ ಮತ್ತು ಮದ್ರಾಸು ಪ್ರೆಸಿಡೆನ್ಸಿಗಳಲ್ಲಿನ ಬ್ರಾಹ್ಮಣೇತರರ ಆಂದೋಲನಗಳ ಗುರಿ ಮತ್ತು ಉದ್ದೇಶಗಳು ಹೆಚ್ಚುಕಮ್ಮಿ ಒಂದೇ ಆಗಿದ್ದು ಮಾತ್ರವಲ್ಲದೆ, ಅವುಗಳು ಅದೇ ರೀತಿಯ ರಾಜಕೀಯ ಸನ್ನಿವೇಶಗಳಲ್ಲಿ ಬೆಳೆದು ಬಂದವು. ಮೊದಲ ವಿಶ್ವಮಹಾಯುದ್ಧ ೧೯೧೪ರಲ್ಲಿ ಪ್ರಾರಂಭಗೊಂಡಿತು. ಪ್ರಮುಖವಾದ ಭಾರತದ ರಾಜಕೀಯ ಪಕ್ಷವಾಗಿದ್ದ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಮಂದಗಾಮಿ (ಸೌಮ್ಯವಾದಿ) ಪ್ರಭಾವದ ಹಿಡಿತದಲ್ಲಿತ್ತು. ಉಗ್ರಗಾಮಿ (ತೀವ್ರಗಾಮಿಗಳು) ಗಳು ಕಾಂಗ್ರೆಸ್ ಕ್ಯಾಂಪಿನಿಂದ ಹೊರಗಿದ್ದರು. ಆದರೆ ಅದೇ ವರ್ಷ ಲೋಕಮಾನ್ಯ ತಿಲಕರ ಬಿಡುಗಡೆಯಾಯಿತು. ಮತ್ತು ಅವರಿಗೆ ಇಡೀ ಭಾರತದಲ್ಲಿ ಭವ್ಯ ಸ್ವಾಗತ ಸಿಕ್ಕಿತು. ಕಾಂಗ್ರೆಸ್ಸಿನ ಗೌರವಾನ್ವಿತ ನಾಯಕರಾದ ಡಾ. ಆನಿಬೇಸೆಂಟ್ ಪಕ್ಷದ ಉಗ್ರಗಾಮಿ ಮತ್ತು ಮಂದಗಾಮಿ ಗುಂಪುಗಳ ನಡುವೆ ಒಂದು ಸಮ್ಮತ ಒಪ್ಪಂದ ತರುವುದಕ್ಕೆ ಪ್ರಯತ್ನ ಪಡುತ್ತಿದ್ದರು. ಈ ಮಧ್ಯೆ ೧೯೧೫ರಲ್ಲಿ ಮಂದಗಾಮಿಗಳ ಅಗ್ರಗಾಮಿಗಳಾದ ಜಿ. ಕೆ. ಗೋಖಲೆ ಮತ್ತು ಫಿರೋಜ್ ಷಾ ಮೆಹ್ತಾ ಈ ಲೋಕ ತೊರೆದುಬಿಟ್ಟರು. ಅವರ ನಿಧನವು ಉಗ್ರಗಾಮಿಗಳ ನಾಯಕನಾದ ತಿಲಕರು ಕಾಂಗ್ರೆಸ್ ಪಕ್ಷ ಸೇರುವುದಕ್ಕೆ ಸುಗಮಗೊಳಿಸಿತು. ಅದೇ ವರ್ಷ ಕಾಂಗ್ರೆಸ್ ಪಕ್ಷ ತನ್ನ ಪಕ್ಷದ ಸಂವಿಧಾನಕ್ಕೆ ತಿದ್ದುಪಡಿ ತಂದು ತೀವ್ರಗಾಮಿಗಳನ್ನು ಕಾಂಗ್ರೆಸ್ ಪಕ್ಷಕ್ಕೆ ಸೇರಿಸಿಕೊಂಡಿತು.

ಮುಂದಿನ ವರ್ಷವೇ ಕಾಂಗ್ರೆಸ್ಸಿನಲ್ಲಿ ಉಗ್ರಗಾಮಿಗಳ ಪ್ರಾಬಲ್ಯ ಲಕ್ನೋ ಅಧಿವೇಶನದಲ್ಲಿ (೧೯೧೬) ಸ್ಪಷ್ಟವಾಗಿ ಗೋಚರಿಸಿತು. ತಿಲಕರು ಕಾಂಗ್ರೆಸ್ಸಿನ ನಾಯಕರಾದರು ಮತ್ತು ತಮ್ಮ ಪ್ರಯತ್ನಗಳ ಫಲದಿಂದ ಬ್ರಿಟಿಷ್ ಸಾಮ್ರಾಜ್ಯಶಾಹಿ ಸರಕಾರದ ವಿರುದ್ಧ ಹೋರಾಡಲು ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್ ನಡುವೆ ಒಂದು ಒಪ್ಪಂದಕ್ಕೆ ಸಹಿ ಮಾಡಲಾಯಿತು ಮತ್ತು ಮೈತ್ರಿಕೂಟದ ಎರಡು ಪಕ್ಷಗಳು ರಾಜಕೀಯ ಸುಧಾರಣೆಗಳನ್ನು ತರಲು ಒತ್ತಾಯಿಸಿದವು. ಈ ಮಧ್ಯೆ ವಿಶ್ವಯುದ್ಧ ಯೂರೋಪಿನ ನೆಲದಲ್ಲಿ ನಡೆಯುತ್ತಿದ್ದು ಅದನ್ನು ಜನತಂತ್ರ ಮತ್ತು ಸರ್ವಾಧಿಕಾರಗಳ ನಡುವಣ ಯುದ್ಧವೆಂದು ಇಂಗ್ಲೆಂಡು ಮತ್ತು ಫ್ರಾನ್ಸಿನ ಮೈತ್ರಿಕೂಟವು ಕರೆಯಿತು. ಮೈತ್ರಿಕೂಟವು ಇಡೀ ವಿಶ್ವದಲ್ಲಿ ಸ್ವಾತಂತ್ರ್ಯ ಮತ್ತು ಜನತಂತ್ರಕ್ಕಾಗಿ ಯುದ್ಧದಲ್ಲಿ ಹೋರಾಡುತ್ತಿರುವುದಾಗಿ ತಮ್ಮ ಪ್ರಚಾರವನ್ನು ಬಿರುಸು ಮಾಡಿತು. ಈ ಹಿನ್ನೆಲೆಯಲ್ಲಿ ಲಕ್ನೋ ಅಧಿವೇಶನಕ್ಕಿಂತ ಮೊದಲೆ ತಿಲಕರು ಮತ್ತು ಡಾ. ಆನಿಬೇಸೆಂಟರು ಬಾಂಬೆ ಮತ್ತು ಮದ್ರಾಸು ಪ್ರೆಸಿಡೆನ್ಸಿಗಳಲ್ಲಿ ಅನುಕ್ರಮವಾಗಿ

ಹೋಮ್‌ರೂಲ್ (ಸ್ವದೇಶಿ ಆಡಳಿತ) ಆಂದೋಲನವನ್ನು ಪ್ರಾರಂಭಿಸಿ, ಅದು ಅಖಿಲ ಭಾರತ ಸ್ವರೂಪ ಪಡೆದುಕೊಳ್ಳತೊಡಗಿತು. ೧೯೧೭ರಲ್ಲಿ ತಿಲಕರು ಮತ್ತು ಡಾ.ಆನಿಬೆಸೆಂಟರು ಜನಪ್ರಿಯತೆಯ ತುತ್ತತುದಿಗೇರಿದ್ದರು. ಹೋಮ್‌ರೂಲ್ ಆಂದೋಲನವು ಬ್ರಿಟಿಷ್ ಆಡಳಿತಗಾರರ ವಿರುದ್ಧ ಕೋಲಾಹಲದ ಅಶಾಂತಿಯನ್ನು ದೇಶದಲ್ಲಿ ಕದಡಿತ್ತು. ಒಂದು ಕಡೆ ಸರಕಾರವು ಚಳುವಳಿಯನ್ನು ದಮನ ಮಾಡುತ್ತಿತ್ತು. ಮತ್ತೊಂದು ಕಡೆಗೆ ಅಶಾಂತಿಯ ಹುರುಪನ್ನು ಕುಗ್ಗಿಸಲು ರಾಜಕೀಯ ಸುಧಾರಣೆಗಳ ಬಗ್ಗೆ ಮಾತನಾಡುತ್ತಿತ್ತು. ಈ ಸನ್ನಿವೇಶಗಳಲ್ಲಿ ಭಾರತದ ರಾಜ್ಯಕಾರ್ಯದರ್ಶಿಯಾದ ಇ. ಎಸ್. ಮಾಂಟೆಗು ಭಾರತದಲ್ಲಿ ರಾಜಕೀಯ ಸುಧಾರಣೆಗಳ ಘೋಷಣೆಯನ್ನು ಮಾಡಿದರು. ಒಂದು ರೀತಿಯಲ್ಲಿ ಇದು ಹೋಂರೂಲಿನ ಚಳುವಳಿಯು ನೇರ ಪ್ರಭಾವವಾಗಿತ್ತು. ಮಾಂಟೆಗು ಅವರು ತಮ್ಮ ಘೋಷಣೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯದೊಳಗೆ ಭಾರತವು ಒಂದು ಅವಿಭಾಜ್ಯ ಅಂಗವಾಗಿ ಒಂದು ಜವಾಬ್ದಾರಿ ಸ್ವಯಂ ಆಡಳಿತದ ಸರಕಾರವನ್ನು ಪಡೆಯುವುದೆಂದು ತಮ್ಮ ಘೋಷಣೆಯಲ್ಲಿ ಭರವಸೆ (ಮಾತು) ನೀಡಿದ್ದಾರೆ. ಬ್ರಿಟಿಷ್ ಸಾಮ್ರಾಜ್ಯದೊಳಗೆ ಸ್ವರಾಜ್ಯದ ಅಧಿಕಾರವನ್ನು ಹಂತ ಹಂತವಾಗಿ ಕೊಡಲಾಗುವುದು ಮತ್ತು ಅದರ ಪ್ರಕ್ರಿಯೆ ಬೇಗನೆ ಪ್ರಾರಂಭವಾಗುವುದು.

ಭಾರತದ ಸ್ವಾತಂತ್ರ್ಯದ ಕಡೆಗಿನ ದಾರಿಯಲ್ಲಿ ಇದು ಒಂದು ಪ್ರಮುಖವಾದ ಹೆಜ್ಜೆಯಾಗಿತ್ತು. ಮತ್ತು ಇದು ಭಾರತದ ರಾಜಕಾರಣದಲ್ಲಿ ಮೂಲಭೂತ ಮತ್ತು ಚಿರಕಾಲ ಬಾಳುವ ಪ್ರಭಾವವನ್ನುಂಟು ಮಾಡುವುದು. ಭಾರತದ ಸಾಮಾಜಿಕ ಸಾಹಸದ ವಲಯವು ಪ್ರಭಾವಕ್ಕೊಳಗಾಗುವುದು. ಸಾಮಾಜಿಕ ಚಳುವಳಿಗಳು ಮತ್ತು ರಾಜಕಾರಣಗಳು ಪರಸ್ಪರಾವಲಂಬಿ ಕ್ಷೇತ್ರಗಳು ಮತ್ತು ಪರಸ್ಪರ ಪ್ರತಿಯೊಂದು ಪ್ರಭಾವಕ್ಕೆ ಒಳಗಾಗುತ್ತವೆ. ರಾಜಕಾರಣದಲ್ಲಿ ಪ್ರಭಾವಶಾಲಿಯಾದ ಒಬ್ಬ ವ್ಯಕ್ತಿ ಸಮಾಜದಲ್ಲಿ ಪ್ರಭಾವ ಬೀರಬಲ್ಲ. ಸಾಮಾಜಿಕ ಪ್ರಯತ್ನ ಕೈಗೊಳ್ಳುವ ವ್ಯಕ್ತಿ ರಾಜಕಾರಣವನ್ನು ಉದಾಸೀನ ಮಾಡುವಂತಿಲ್ಲ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಇದೇ ಸಮಯದಲ್ಲಿ ದಕ್ಷಿಣ ಭಾರತದಲ್ಲಿ ಬ್ರಾಹ್ಮಣೇತರರ ಆಂದೋಲನಗಳು ಉದ್ಭವಿಸಿದವು.

ಪ್ರಮುಖ ರಾಜಕೀಯ ಪಕ್ಷವಾದ ಕಾಂಗ್ರೆಸ್ಸು ಪಕ್ಷ ಮಾಂಟೆಗು ಯೋಜನೆಯಿಂದ ಪ್ರಯೋಜನ ಪಡೆಯುವುದು ಸುಸ್ಪಷ್ಟ. ಕಾಂಗ್ರೆಸ್ ಪಕ್ಷ ಎಷ್ಟೇ ಆಗಲಿ ಅದು ಅದರ ನಾಯಕರ ಮತ್ತು ಕಾರ್ಯಕರ್ತರ ಮೊತ್ತವಾಗಿದೆ; ಅವರಲ್ಲಿ ಬಹುಮಟ್ಟಿಗೆ ಬಹುಸಂಖ್ಯಾತರು ಬ್ರಾಹ್ಮಣರೇ ಆಗಿದ್ದಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆ ಸಮಯದಲ್ಲಿ ಬ್ರಾಹ್ಮಣರ ಪ್ರಭಾವದಿಂದ ಕಾಂಗ್ರೆಸ್ ರಾಜಕೀಯ ಸ್ವಾತಂತ್ರ್ಯದ ಆಂದೋಲನವನ್ನು ಮುನ್ನಡೆಸಿದ ಸಂಸ್ಥೆಯಾಗಿತ್ತು. ಒಟ್ಟಿನಲ್ಲಿ ಮುಂಬರುವ ರಾಜಕೀಯ ಸುಧಾರಣೆಗಳು ಬ್ರಾಹ್ಮಣ ವರ್ಗದಲ್ಲಿ ಸಂಚಿತವಾಗುತ್ತವೆ ಮತ್ತು ಈ ಹಕ್ಕುಗಳ ಪ್ರಬಲ ಬ್ರಾಹ್ಮಣರ ದಬ್ಬಾಳಿಕೆ ಮತ್ತಷ್ಟು ಶಕ್ತಿಯುತವಾಗುವುದು. ಬ್ರಾಹ್ಮಣರ ನಿರಂಕುಶಾಧಿಕಾರ ಮೊದಲಿಗಿಂತ ಮತ್ತಷ್ಟು ಪ್ರಬಲಗೊಂಡು ಬ್ರಾಹ್ಮಣೇತರರ ದಾರಿಗೆ ದೊಡ್ಡ ತೊಡಕಾಗುವುದೆಂದು ಬ್ರಾಹ್ಮಣೇತರರು ಭಯಭೀತರಾದರು. ಬ್ರಾಹ್ಮಣೇತರರು ಬಹುಸಂಖ್ಯಾತರಾಗಿದ್ದರೂ ಶೈಕ್ಷಣಿಕ ಅಜ್ಞಾನದಿಂದ ಹಾಗೂ ಆರ್ಥಿಕ ಕಡುಬಡತನದಿಂದ ಮುಂಬರುವ ಸುಧಾರಣೆಗಳಿಂದ ವಂಚಿತರಾಗಿ ಉಳಿಯುವುದರಿಂದ ಬ್ರಾಹ್ಮಣೇತರರ ಸಮಾಜದ ಅಪಾಯವನ್ನು ಅವರು ಅರಿತುಕೊಂಡರು. ಅದು ಈ ಅಪಾಯಗಳಿಂದ ಪಾರಾಗಬೇಕಾದರೆ ರಾಜಕೀಯ ಹಕ್ಕುಗಳಿಗಾಗಿ ಹೋರಾಡಲು ಜಾಗೃತಗೊಳಿಸುವುದು ಮತ್ತು ತಯಾರು ಮಾಡುವ ಆಯ್ಕೆ ಮಾತ್ರ ಉಳಿದಿದೆ. ಈ ರಾಜಕೀಯ ಸಮೀಕರಣಗಳಿಂದಾಗಿ ದಕ್ಷಿಣ ಭಾರತದಲ್ಲಿ ೧೯೧೭ರಲ್ಲಿ ಬ್ರಾಹ್ಮಣೇತರರ ಆಂದೋಲನಗಳು ಮುಂಚೂಣಿಗೆ ಬಂದವು. ಮತ್ತು ಸಮಾಜದ ಸಾಹಸಗಳು ಮುಂಭಾಗದಲ್ಲಿ ಗೋಚರಿಸಿದವು.

## ಬ್ರಾಹ್ಮಣೇತರರ ಆಂದೋಲನದ ಉಗಮಕ್ಕೆ ಶಾಹುರವರ ಕೊಡುಗೆ

ಬ್ರಾಹ್ಮಣೇತರರ ಆಂದೋಲನ ಔಪಚಾರಿಕವಾಗಿ ಕಾಣಿಸಿಕೊಳ್ಳುವುದಕ್ಕೆ ಮೊದಲು ಭಾರತದಲ್ಲಿ ರಾಜಕಾರಣದ ಬದಲಾಗುತ್ತಿರುವ ಮೋಡಗಳನ್ನು ಮಹಾರಾಷ್ಟ್ರದ ಬ್ರಾಹ್ಮಣೇತರರ ನಾಯಕರು ವಾಸ್ತವಿಕವಾಗಿ ಅರಿತುಕೊಂಡರು. ನಾಯಕರಾದ ಪ್ರೊ. ಲಠ್ಠೆ, ಮುಕುಂದರಾವ್ ಪಾಟೀಲ್, ವಾಲಚಂದ ಕೊಠಾರಿ, ಸಿ. ಕೆ. ಬೊಲೆ ಮೊದಲಾದವರು 'ಡೆಕ್ಕನ್ ರಾಯತ್ ಅಸೋಸಿಯೇಷನ್' ಎಂಬ ಸಂಸ್ಥೆಯನ್ನು ದೃಶ್ಯದಲ್ಲಿ ಕಾಣಿಸುವುದಕ್ಕೆ ಒಂದು ವರ್ಷಕ್ಕಿಂತ ಮೊದಲು ಬ್ರಾಹ್ಮಣೇತರರ ಆಂದೋಲನ ೧೯೧೬ರಲ್ಲಿ ಕಾಣಿಸಿಕೊಂಡಿತು. ಹಿಂದುಳಿದ ಸಮುದಾಯಗಳ ಹಕ್ಕು ಮತ್ತು ಹಿತಾಸಕ್ತಿಗಳನ್ನು ಸಂರಕ್ಷಿಸುವ ಸಲುವಾಗಿ ಪ್ರಯತ್ನಿಸಲು ಮತ್ತು ತನ್ಮೂಲಕ ಬ್ರಿಟಿಷ್ ಸಿಂಹಾಸನಕ್ಕೆ ನಿಷ್ಠೆಯಾಗಿದ್ದುಕೊಂಡು ರಾಷ್ಟ್ರೀಯ ಆಸಕ್ತಿಗಳನ್ನು ಬೆಳೆಸುವುದು ಅದರ ಘೋಷಿತ ಗುರಿಯಾಗಿತ್ತು.[5] ಈ ಸಂಸ್ಥೆ ಸಹ 'ಡೆಕ್ಕನ್ ರಾಯತ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿತು.

ಇದಾದ ತಕ್ಷಣದಲ್ಲೆ ಭಾಸ್ಕರರಾವ್ ಜಾಧವ್, ಶ್ರೀಪತ್‌ರಾವ್ ಶಿಂಧೆ ಮತ್ತು ಇತರರು 'ಅಖಿಲ ಭಾರತ ಮರಾಠ ಲೀಗ್' ಎಂಬ ಮತ್ತೊಂದು ರಾಜಕೀಯ ಸಂಘಟನೆಯನ್ನು ಪ್ರಾರಂಭಿಸಿದರು. ಈ ಮಧ್ಯೆ, ಮಾಂಟೆಗು ಘೋಷಣೆಯ ನಂತರ ಜನರನ್ನು ಜಾಗೃತಗೊಳಿಸುವ ಆಂದೋಲನವನ್ನು ಭಾರತದ ಮುಂಬರುವ ಶಾಸನಗಳಲ್ಲಿನ ಬ್ರಾಹ್ಮಣ ಪ್ರಾಬಲ್ಯದ ಸಾಧ್ಯತೆಯನ್ನು ತಡೆಯುವ ಸಲುವಾಗಿ ಮತ್ತು ಬ್ರಾಹ್ಮಣರ ಜನಸಂಖ್ಯೆಗೆ ಅನುಗುಣವಾಗಿ ಬ್ರಾಹ್ಮಣೇತರರ ಸಮುದಾಯಗಳ ಪ್ರಮಾಣಕ್ಕೆ ಪ್ರಾತಿನಿಧ್ಯ ಪಡೆಯಲು ಪ್ರಾರಂಭಿಸಲಾಯಿತು. ಇದರಿಂದ ಬ್ರಾಹ್ಮಣೇತರರ ಜಾತಿಗಳಾದ ಮರಾಠ, ಜೈನ, ಲಿಂಗಾಯತ ಮತ್ತು ಮುಂತಾದ ಜಾತಿಗಳಿಗೆ ಪ್ರತ್ಯೇಕ ಪ್ರಾತಿನಿಧ್ಯದ ಬೇಡಿಕೆಯ ಕೂಗು ಎದ್ದಿತು.

ಬ್ರಿಟಿಷರ ಕುಯುಕ್ತಿಯಾದ 'ಒಡೆದು ಆಳುವ' ನೀತಿಗೆ ಬಲಿಯಾಗದೆ ಎಲ್ಲಾ ರಾಜಕೀಯ ಸಂಘಟನೆಗಳು ಮತ್ತು ಎಲ್ಲಾ ಜಾತಿ ಮತ್ತು ಧರ್ಮಗಳ ಜನರು ಒಗ್ಗಟ್ಟಾಗಿ ಎಲ್ಲರ ಮೆಚ್ಚಿಗೆಗೆ ಪಾತ್ರವಾಗಿರುವ ಸ್ವರಾಜ್ಯದ ಬೇಡಿಕೆಗಾಗಿ ಆಗ್ರಹಿಸಬೇಕೆಂಬುದು ತಿಲಕರ ರಾಷ್ಟ್ರೀಯ ನಿಲುವಾಗಿದೆ. ಅದರ ಪ್ರಕಾರ ತಿಲಕರು ಕಾಂಗ್ರೆಸ್ ಮತ್ತು ಮುಸ್ಲಿಮ್ ಲೀಗುಗಳನ್ನು ಒಂದೇ ವೇದಿಕೆಗೆ ತಂದಿದ್ದಾರೆ. ಮಹಾರಾಷ್ಟ್ರದಲ್ಲಿ ಪ್ರಾರಂಭದಲ್ಲಿ ಅವರು ಸಕಾರಾತ್ಮಕ ನಿಲುವನ್ನು ತಾಳಿದ್ದರಿಂದ ಬ್ರಾಹ್ಮಣೇತರರ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಪ್ರತ್ಯೇಕ ಚುನಾವಣಾ ಕ್ಷೇತ್ರಗಳನ್ನು ಬೇಡಿದ್ದನ್ನು ಬ್ರಾಹ್ಮಣರು ಒಂದು ವರ್ಗವಾಗಿ ಬ್ರಾಹ್ಮಣೇತರರು ರಾಷ್ಟ್ರೀಯ ಮುಖ್ಯವಾಹಿನಿಯಿಂದ ಹೊರಗೆ ಉಳಿಯಬಾರದೆಂದು ಬ್ರಾಹ್ಮಣರು ಸಂತೋಷವಾಗಿ ಮೌನ ಸಮ್ಮತಿಯನ್ನು ನೀಡಿದರು. ದುರಾದೃಷ್ಟವಶಾತ್ ಅವರು ತಮ್ಮ ನಿಲುವನ್ನು ಎರಡು ತಿಂಗಳುಗಳೊಳಗೆ ಬದಲಾಯಿಸಿದರು ಮತ್ತು ಬ್ರಾಹ್ಮಣೇತರರು ಶಾಸನ ಪರಿಷತ್ತುಗಳಲ್ಲಿ ಕೋಮುವಾರು ಪ್ರಾತಿನಿಧ್ಯ ಬೇಡಿದ್ದಕ್ಕೆ ಬ್ರಾಹ್ಮಣೇತರರ ಮೇಲೆ ದಾಳಿ ನಡೆಸಿದರು. ಅವರ ದಾಳಿಗಳು ತುಂಬ ಕಟುವಾಗಿದ್ದವು. ಅವರ ಬೇಡಿಕೆಗಳನ್ನು ತಿರಸ್ಕಾರ ಭಾವನೆಯಿಂದ ಚುಚ್ಚಿ ಕೇಳತೊಡಗಿದರು. 'ವಾಣಿ' (ತೂಕ ಮಾಡುವ ವ್ಯಾಪಾರಿ) ದವಸಧಾನ್ಯಗಳನ್ನು ತೂಕಮಾಡಲು ಅಥವಾ ಕುಂಬಾರರು ಶಾಸನ ಪರಿಷತ್ತಿನಲ್ಲಿ ಮಡಿಕೆಗಳಿಗೆ ರೂಪಕೊಡುವನೆ ಎಂದು ತಿರಸ್ಕಾರವಾಗಿ ಕೇಳಿದರು.[6]

ಮಹಾರಾಷ್ಟ್ರದಲ್ಲಿ ಸಹಜವಾಗಿ ಬ್ರಾಹ್ಮಣೇತರರು ಉದ್ರೇಕಿತರಾದರು; ಕಹಿಯಾಗಿದ್ದ ಬ್ರಾಹ್ಮಣ–

ಬ್ರಾಹ್ಮಣೇತರರ ವಿವಾದ ಮತ್ತಷ್ಟು ತೀಕ್ಷ್ಣಗೊಂಡಿತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವಣ ಒಪ್ಪಂದ ಐತಿಹಾಸಿಕ ಅವಕಾಶ ಎರಡನೇ ಬಾರಿಗೆ ಕಳೆದುಹೋಯಿತು; ಮೊದಲನೆಯ ಅಂತಹ ಅವಕಾಶ ವೇದೋಕ್ತದ ಸಂಘರ್ಷದ ಸಮಯದಲ್ಲಿ ಮಂಡಿಸಲಾಗಿತ್ತು ಮತ್ತು ಅದು ಹಾಗೆಯೇ ಕಳೆದುಹೋಯಿತು.

ಬ್ರಿಟಿಷರ ರಕ್ಷಣೆಯ ಆಶ್ರಯದಲ್ಲಿ ಸಾಮಂತ ರಾಜನಾಗಿ ಶಾಹುರವರು ನಿರ್ಬಂಧಗಳಡಿಯಲ್ಲಿದ್ದರು ಮತ್ತು ಬ್ರಿಟಿಷ್ ಇಂಡಿಯಾದಲ್ಲಿ ಬಹಿರಂಗವಾಗಿ ರಾಜಕಾರಣದಲ್ಲಿ ಭಾಗವಹಿಸುವಂತಿಲ್ಲ. ಆದರೆ ಬ್ರಾಹ್ಮಣೇತರರ ಸಮುದಾಯಗಳ ಕಲ್ಯಾಣಕ್ಕಾಗಿ ಪ್ರಯತ್ನಿಸಬೇಕೆಂದು ಆಂತರಿಕ ತುಡಿತ ಅವರನ್ನು ಸುಮ್ಮನಿರುವಂತೆ ಬಿಡಲಿಲ್ಲ. ಕೆಲವೊಮ್ಮೆ ಪರದೆಯ ಹಿಂದೆ ಇದ್ದು ಮತ್ತೆ ಮತ್ತೆ ಕೆಲವೊಮ್ಮೆ ಸಭೆ ಮತ್ತು ಸಮಾರಂಭಗಳನ್ನು ಭಾಗವಹಿಸುವ ಮೂಲ ಬ್ರಾಹ್ಮಣೇತರರ ಆಂದೋಲನಗಳ ಸೂತ್ರಗಳನ್ನು ಹಿಡಿತದಲ್ಲಿಟ್ಟುಕೊಂಡು ತಮ್ಮ ಆಡಳಿತದ ಕೊನೆಯವರೆಗೆ ಸುಮಾರು ನಾಲ್ಕು ವರ್ಷದವರೆಗೆ ನಿರಂತರವಾಗಿ ಅದರ ದಾರಿಯನ್ನು ನಿರ್ದೇಶಿಸುತ್ತಿದ್ದರು. ತನ್ನಂತಹ ಸಾಮಂತರಾಜ ಬ್ರಿಟಿಷ್ ಸಾಮ್ರಾಜ್ಯದ ಪ್ರದೇಶಗಳ ರಾಜಕೀಯ ಆಂದೋಲನಗಳಲ್ಲಿ ಭಾಗವಹಿಸುವುದು ಯಾವುದೇ ತಪ್ಪು ಅಲ್ಲ ಎಂದು ಪ್ರತಿಪಾದಿಸುತ್ತಾ ಅವರು ಹೇಳಿದರು: "ನಾನು ನನ್ನ ಪ್ರಜೆಗಳಿಗೆ ರಾಜನಾಗಿದ್ದರೂ ನಾನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಧೀನನು. ಮತ್ತು ಈ ದೃಷ್ಟಿಯಲ್ಲಿ ನನ್ನ ಹಕ್ಕು ಮತ್ತು ಹೊಣೆಗಾರಿಕೆಗಳು ಬ್ರಿಟಿಷ್ ಆಡಳಿತದಡಿಯಲ್ಲಿರುವ ಜನತೆಯಲ್ಲಿರುವಂತೆಯೇ ಇವೆ. ಆದ್ದರಿಂದ ಬ್ರಿಟಿಷ್ ಇಂಡಿಯಾದಲ್ಲಿ ರಾಜಕಾರಣದಲ್ಲಿ ಭಾಗವಹಿಸಬಹುದೆಂದು ನನ್ನ ಅಭಿಪ್ರಾಯವಾಗಿದೆ".[7] ಆದರೆ ಹಲವು ಬ್ರಿಟಿಷ್ ಅಧಿಕಾರಿಗಳಾದ ವುಡ್‌ಹೌಸ್ ಮತ್ತು ಫ್ರೆಜರ್ ಅವರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಪ್ರಾರಂಭದಲ್ಲಿ ಬಾಂಬೆ ಸರಕಾರ ಈ ವಿಷಯದಲ್ಲಿ ಮೌನವಾಗಿತ್ತು. ಆದರೆ ಅಕ್ಟೋಬರ್ ೧೯೨೦ರಲ್ಲಿ ಪೂನಾ ಶಾಹುರವರ ಸಾರ್ವಜನಿಕ ಸಭೆಯಲ್ಲಿ ವಿರೋಧಪಕ್ಷಗಳ ಗಲಭೆಗಳ ಬೆಂಕಿಗೆ ತುಪ್ಪ ಸುರಿದನಂತರ ಬ್ರಿಟಿಷ್ ಸರಕಾರ ಬ್ರಾಹ್ಮಣೇತರರ ರಾಜಕೀಯ ಸಭೆಗಳಲ್ಲಿ ಭಾಗವಹಿಸುವುದನ್ನು ನಿಷೇಧಿಸಲು ತೊಡಗಿತು.ಇಷ್ಟಾದರೂ ಸಹ ಮೊದಲಿನಂತೆಯೇ ಶಾಹುರವರ ಸಹಾಯ-ಸಹಕಾರ ಬ್ರಾಹ್ಮಣೇತರರ ಆಂದೋಲನಗಳಿಗೆ ಮುಂದುವರೆಯಿತು.

ಮಾಂಟೆಗೂ ಅವರು ನವೆಂಬರ್ ೧೯೧೭ರಲ್ಲಿ ಭಾರತಕ್ಕೆ ಭೇಟಿನೀಡಿ ತನ್ನ ಘೋಷಣೆಯ ಬಗೆಗಿನ ಪ್ರತಿಕ್ರಿಯೆಗಳ ಬಗ್ಗೆ ಸಮೀಕ್ಷೆ ಮತ್ತು ತಕ್ಷಣದ ಸುಧಾರಣೆಗಳ ಬಗ್ಗೆ ಚರ್ಚಿಸಲು ಬಂದಾಗ ಶಾಹುರವರು ಅವರನ್ನು ಭೇಟಿಮಾಡಿದ್ದರು. ಈ ಸಭೆಯಲ್ಲಿ ಅಸ್ಪೃಶ್ಯರು ಸೇರಿದಂತೆ ಇಡೀ ಬ್ರಾಹ್ಮಣೇತರರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳನ್ನು ನೀಡಬೇಕೆಂಬ ಬೇಡಿಕೆಯಿಟ್ಟಾಗ,[8] ಶಾಹು ಹೇಳಿದರು: "ಭಾರತದಲ್ಲಿ ಆದ್ಯತೆಯ ಮೇರೆಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡಬೇಕು. ಸ್ವರಾಜ್ಯವನ್ನು ಸಫಲಗೊಳಿಸಬೇಕಾದರೆ ಜಾತಿಭೇದ ತೊಲಗಬೇಕು, ಎಲ್ಲಕ್ಕಿಂತ ಮಿಗಿಲಾಗಿ ಅಂತರ್‌ಜಾತೀಯ ವಿವಾಹಗಳು ನಡೆಯಬೇಕು. ಇಲ್ಲದಿದ್ದರೆ ಸ್ವರಾಜ್ಯ ಕೇವಲ ಹಿಡಿಯಷ್ಟು ಮಂದಿಯ ಆಸ್ತಿಯಾಗುತ್ತದೆ."[9]

ಮಾಂಟೆಗೂ ಅವರ ಭಾರತದ ಭೇಟಿ ಭಾರತದ ರಾಜಕಾರಣವನ್ನು ಕಲಕಿಬಿಟ್ಟಿತು. ದೇಶದಲ್ಲಿರುವ ವಿವಿಧ ಸಂಸ್ಥೆಗಳು, ಸಂಘಟನೆಗಳು ಮತ್ತು ನಾಯಕರು ತಮ್ಮ ತಮ್ಮ ಬೇಡಿಕೆಗಳನ್ನು ಮುಂದಿಟ್ಟರು. ಮಹಾರಾಷ್ಟ್ರದ ಬ್ರಾಹ್ಮಣೇತರ ಸಮಾಜ ಕೂಡ ಇದಕ್ಕೆ ಭಾಗಿಯಾಗಿತ್ತು. ವಿಶೇಷವಾಗಿ ಶಾಹುರವರು ಅತ್ಯುತ್ಸಾಹದಿಂದ ತಮ್ಮ ಶ್ರಮ ಹಾಕಿದರು. ಅವರು ಭಾರತದ ರಾಜ್ಯ ಕಾರ್ಯದರ್ಶಿ, ಗವರ್ನರ್ ಜನರಲ್, ಗವರ್ನರರು ಮತ್ತು ಉನ್ನತ ದರ್ಜೆಯ ಇತರೆ ಬ್ರಿಟಿಷ್ ಅಧಿಕಾರಿಗಳಿಗೆ ಪತ್ರಗಳನ್ನು ಬರೆಯುತ್ತಾ

ಅಸ್ಪೃಶ್ಯರು ಸೇರಿದಂತೆ ಇಡೀ ಬ್ರಾಹ್ಮಣೇತರರ ಸಮಾಜಕ್ಕೆ ಪ್ರತ್ಯೇಕ ಚುನಾವಣಾಕ್ಷೇತ್ರಗಳನ್ನು ನೀಡಬೇಕೆಂದು ನಿರಂತರವಾಗಿ ಬೇಡಿಕೆಯನ್ನು ಇಡುತ್ತಿದ್ದರು. ಅದೇ ಸಮಯದಲ್ಲಿ ಅವರು ಸಾರ್ವಜನಿಕ ಸಭೆಗಳಲ್ಲಿ ಮತ್ತು ಸಮ್ಮೇಳನಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ಬೋಧಿಸುತ್ತಿದ್ದರು: "ಪ್ರಸ್ತುತವಿರುವ ಜಾತಿಪದ್ಧತಿ ಮುಂದುವರಿದರೆ ಇಂದು ನಾವು ಚಿಂತಿಸಿದ ಸ್ವರಾಜ್ಯವು ಇರುವುದೇ ಇಲ್ಲ, ಆದರೆ ಅದು ಕೆಲವೇ ಮಂದಿಯಲ್ಲಿ ಅಧಿಕಾರ ಕೇಂದ್ರೀಕರಣವಾಗುತ್ತದೆ! ಇದನ್ನು ಪರಿಗಣಿಸಲೇಬಾರದೆಂದು ನಾನು ಒತ್ತಿಹೇಳುತ್ತೇನೆ. ಇಂಥ ಸ್ವರಾಜ್ಯದ ವಿರುದ್ಧ ನಾನಿದ್ದೇನೆ. ಆದರೆ ಜಾತಿಭೇದದ ಅನಿಷ್ಟ ಪರಿಣಾಮಗಳನ್ನು ಕಿತ್ತುಹಾಕುವವರೆಗೆ ಪ್ರಸ್ತುತಸ್ಥಿತಿಯಲ್ಲಿ ಬ್ರಿಟಿಷ್ ಸರಕಾರದ ರಕ್ಷಣೆ ಮತ್ತು ಮಾರ್ಗದರ್ಶನ ನಮಗೆ ಬೇಕಾಗಿದೆ.

"ಸ್ವರಾಜ್ಯದಲ್ಲಿ ಮೇಲ್ವರ್ಗಗಳ ಕೈಯಲ್ಲಿ ಅಧಿಕಾರದ ಕೇಂದ್ರೀಕರಣವನ್ನು ತಡೆಯಲು ಕನಿಷ್ಠ ೧೦ ವರ್ಷಗಳವರೆಗೆ ಜಾತಿ ಆಧಾರಿತ ನಮ್ಮ ಪ್ರತಿನಿಧಿಗಳನ್ನು ಚುನಾಯಿಸುವ ಹಕ್ಕು ನಮಗಿರಬೇಕು. ಅದು ನಮ್ಮ ಹಕ್ಕುಗಳ ಬಗ್ಗೆ ನಮಗೆ ಶಿಕ್ಷಣ ನೀಡುತ್ತದೆ. ಒಮ್ಮೆ ನಮ್ಮ ಹಕ್ಕುಗಳ ಬಗ್ಗೆ ನಾವು ಅರಿತುಕೊಂಡರೆ ನಮಗೆ ಕೋಮುವಾರು ಪ್ರಾತಿನಿಧ್ಯ ಬೇಕಿಲ್ಲ."[10]

ಬ್ರಾಹ್ಮಣೇತರರ ಆಂದೋಲನಕ್ಕೆ ಅವರು ನೀಡಿದ ಮತ್ತೊಂದು ಮಹತ್ವದ ಕೊಡುಗೆ ಅವರು ಬ್ರಾಹ್ಮಣೇತರರ ಪತ್ರಿಕೆಗಳನ್ನು ಉತ್ತೇಜಿಸಿದ್ದು. ಇಲ್ಲಿಯವರೆಗೆ ವೃತ್ತಪತ್ರಿಕೆಗಳ ಕ್ಷೇತ್ರದಲ್ಲಿ ಬ್ರಾಹ್ಮಣರ ಏಕಸ್ವಾಮ್ಯತೆಯಿತ್ತು ಮತ್ತು ಪತ್ರಿಕೆಗಳಲ್ಲಿ ಹೆಚ್ಚಿನ ಸಂಖ್ಯೆ ಬ್ರಾಹ್ಮಣ ಹಿತಾಸಕ್ತಿಗಳನ್ನೇ ಪೂರೈಸಿದವು. ಇದರ ಜೊತೆಗೆ ಅವು ಕೊಲ್ಹಾಪುರ ಆಡಳಿತ(ದರ್ಬಾರು)ವನ್ನು ಟೀಕಿಸುವ ಪ್ರಬಲ ನೀತಿಯನ್ನು ಅನುಸರಿಸಿದವು. ಈ ಪತ್ರಿಕೆಗಳು ಸಾರ್ವಜನಿಕರ ಮೇಲೆ ಪ್ರಭಾವ ಬೀರುವ ದೃಷ್ಟಿಯಿಂದ ಶಾಹುರವರು ತನ್ನ ಅಭಿಪ್ರಾಯ ಮತ್ತು ಬ್ರಾಹ್ಮಣೇತರರ ಪಕ್ಷದ ನೀತಿ–ಧೋರಣೆಗಳನ್ನು ಪ್ರಚಾರಗೊಳಿಸುವ ಸಲುವಾಗಿ ಬ್ರಾಹ್ಮಣೇತರರ ಪತ್ರಿಕೆಗಳ ಅಗತ್ಯವಿದೆಯೆಂದು ಭಾವಿಸಿದರು. ೧೯೧೭ರವರೆಗೆ ಮುಕುಂದರಾವ್ ಪಾಟೀಲರ ಪತ್ರಿಕೆ 'ದಿನಮಿತ್ರ' ಬ್ರಾಹ್ಮಣೇತರರ ಪರವಾಗಿ ಹೋರಾಡುತ್ತಿತ್ತು. ಆ ವರ್ಷ ಪೂನಾದಿಂದ ವಾಲಚಂದರು 'ಜಾಗರೂಕ' ಪತ್ರಿಕೆಯನ್ನು, ಭಗವಂತರಾವ್ ಪಾಲೇಕರ್ ಅವರು ಬರೋಡದಿಂದ 'ಜಾಗೃತಿ' ಎಂಬ ಎರಡು ಬ್ರಾಹ್ಮಣೇತರರ ಪತ್ರಿಕೆಗಳನ್ನು ಪ್ರಾರಂಭಿಸಿದರು. ಮುಂದಿನ ಐದು ವರ್ಷಗಳಲ್ಲಿ ಹಲವು ಬ್ರಾಹ್ಮಣೇತರರ ಪತ್ರಿಕೆಗಳು ಶಾಹುರವರ ನೇರಸಹಾಯ ಅಥವಾ ಉತ್ತೇಜನದಿಂದ ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಕೆಲವು ಮುಖ್ಯವಾದ ಪತ್ರಿಕೆಗಳಾದ ಲಠ್ಠೆ ಮತ್ತು ಕೊಠಾರಿಯವರ 'ಡೆಕ್ಕನ್ ರಾಯತ' (ಇಂಗ್ಲಿಷ್), ಬಲವಂತರಾವ್ ಪಿಸಾಲ್ ಅವರ 'ವಿಶ್ವಬಂಧು', ದತ್ತಾಜಿರಾವ್ ಕುರ್ನೆ ಅವರ 'ಭಗವಾಜಿಂದಾ', ದಿನಕರರಾವ್ ಅವರ 'ತರುಣ್ ಮರಾಠಾ', ಬಾಬುರಾವ್ ಅವರ 'ಗರೀಬಂಚ ಕೈವಾರಿ', ಶ್ರೀಪತ್‌ರಾವ್ ಅವರ 'ವಿಜಯಿಮರಾಠ', ದತ್ತರಾಯ ರಣದಿವೆ ಅವರ 'ಸಂಜೀವನ', ಶಾಮರಾವ್ ದೇಸಾಯಿ ಅವರ 'ರಾಷ್ಟ್ರವೀರ', ಕೇಶವರಾವ್ ಬಾಗಡೆ ಮತ್ತು ಕೀರ್ತಿವನರಾವ್ ನಿಂಬಾಲ್ಕರ್ ಅವರ 'ಶಿವಛತ್ರಪತಿ', ಗಣೇಶರಾವ್ ಅಕಾಜಿ ಗವಾಯಿ ಅವರ 'ಬಹಿಷ್ಕೃತ ಭಾರತಿ', ಮತ್ತು ಡಾ. ಬಾಬಾಸಾಹೇಬ್ ಅಂಬೇಡ್ಕರರ 'ಮೂಕನಾಯಕ'.[11] ಶಾಹುರವರು ಈ ಪತ್ರಿಕೆಗಳಿಗೆ ಸಾಕಷ್ಟು ನೈತಿಕ ಮತ್ತು ಆರ್ಥಿಕ ಬೆಂಬಲ ನೀಡಿದ್ದಾರೆ. ಕೆಲವು ಸಲ ಈ ಪತ್ರಿಕೆಗಳು ಪರಸ್ಪರ ಹೊಡೆದಾಡಿಕೊಂಡವು ಮತ್ತು ಶಾಹುರವರು ಮಧ್ಯಸ್ಥಿಕೆ ವಹಿಸಿ ಸಮಸ್ಯೆಗಳನ್ನು ಬಗೆಹರಿಸಿದರು. ಅವರು ಕೆಲವು ಸಲ ಬ್ರಾಹ್ಮಣೇತರರ ಪತ್ರಿಕೆಗಳ ವಿವಾದಗಳನ್ನು ಬಗೆಹರಿಸುವ ಹೊಣೆಯಲ್ಲದೆ ಬ್ರಾಹ್ಮಣೇತರರ ನಾಯಕರ ಜಗಳಗಳನ್ನು ಬಗೆಹರಿಸಬೇಕಾಯಿತು.

ಬ್ರಾಹ್ಮಣೇತರರ ಚಳುವಳಿಗೆ ಶಾಹುರವರು ನೀಡಿದ ಕೊಡುಗೆಯು ದಕ್ಷಿಣಭಾರತದ 'ಜಸ್ಟೀಸ್' ಚಳುವಳಿಯ ಜೊತೆಯಲ್ಲಿ ಸಂವಹನ ನಡೆಸಿದ್ದು ಮತ್ತು ವಿಚಾರ ವಿನಿಮಯಕ್ಕೆ ಸಂಬಂಧಿಸಿದ್ದುದಾಗಿದೆ. ೧೯೧೯ರಿಂದ ೧೯೨೧ರ ನಡುವಿನ ವರ್ಷಗಳಲ್ಲಿ ಮಹಾರಾಜರು ಮದ್ರಾಸಿನ ಬ್ರಾಹ್ಮಣೇತರರ ನಾಯಕರಾದ ಡಾ. ಮಾಧವನ್ ನಾಯರ್, ಸರ್ ಪಿ. ತ್ಯಾಗರಾಜ ಚೆಟ್ಟಿಯಾರ್, ಸಿ. ನಟೇಶ್ ಮೊದಲಿಯಾರ್ ಮತ್ತು ಸರ್ ಶಂಕರನ್ ನಾಯರ್ ಅವರೊಂದಿಗೆ ಆಪ್ತಸಂಬಂಧಗಳನ್ನು ಸ್ಥಾಪಿಸಿದ್ದು. ಡಾ. ನಾಯರ್ ಅವರು ಭಾರತ ಮತ್ತು ಇಂಗ್ಲೆಂಡುಗಳಲ್ಲಿ ಇಡೀ ಬ್ರಾಹ್ಮಣೇತರರ ಮತ್ತು ದಮನರ ಹಕ್ಕುಗಳಿಗೆ ಹೋರಾಡಿದ ದಿಟ್ಟನಾಯಕರೆಂದು ಹೆಸರುವಾಸಿಯಾಗಿದ್ದರು. ಮಾಂಟೆಗೂ ಘೋಷಣೆಯ ನಂತರ ಅವರು ಇಂಗ್ಲೆಂಡಿಗೆ ಭೇಟಿ ನೀಡಿದ್ದರು ಮತ್ತು ಬ್ರಾಹ್ಮಣೇತರರ ಪರವಾಗಿ ಇಂಗ್ಲೆಂಡಿನಲ್ಲಿ ರಾಜಕೀಯ ಮತ್ತು ಸಾರ್ವಜನಿಕ ಜನಾಭಿಪ್ರಾಯದ ಮೇಲೆ ಪ್ರಭಾವ ಬೀರಿದರು. ಮಹಾರಾಷ್ಟ್ರದಲ್ಲಿ ಶಾಹು ಅವರಂತೆಯೇ ಡಾ. ನಾಯರ್ ಅವರು ಮದ್ರಾಸಿನಲ್ಲಿ ಬ್ರಾಹ್ಮಣೇತರರ ಚಳುವಳಿಯನ್ನು ಮುನ್ನಡೆಸಿದರು. ಧನಂಜಯ ಕೀರ್ ಅವರು ಈ ಇಬ್ಬರು ಮಹಾಶಯರನ್ನು "ಭಾರತದ ಸಾಮಾಜಿಕ ಜನತಂತ್ರ ಮತ್ತು ಸಮಾನತೆಯ ಸಮಾಜದ ಏಕಾಂಗಿ ಪೂರ್ವಗಾಮಿ"ಗಳೆಂದು ಗೌರವಿಸಿದ್ದಾರೆ.[12] ಜನವರಿ ೧೯೧೯ರಲ್ಲಿ ನಾಯರ್ ಅವರು ಇಂಗ್ಲೆಂಡಿನಿಂದ ವಾಪಸ್ ಬರುವಾಗ ಶಾಹುರವರು ಅವರನ್ನು ಬಾಂಬೆಯಲ್ಲಿ ಭೇಟಿಯಾದಾಗ ಮುಂಬರುವ ಸುಧಾರಣೆಗಳಲ್ಲಿ ಬ್ರಾಹ್ಮಣೇತರರ ಆಸಕ್ತಿಗಳನ್ನು ಸಂರಕ್ಷಿಸುವ ವಿಷಯದ ಬಗ್ಗೆ ಚರ್ಚಿಸಿದರು.[13] ಅದೇ ವರ್ಷ ಡಾ. ನಾಯರ್ ಅವರು ಮತ್ತೆ ಬ್ರಾಹ್ಮಣೇತರರ ಪಕ್ಷದ ನಿಯೋಗವನ್ನು ಇಂಗ್ಲೆಂಡಿಗೆ ಕೊಂಡೊಯ್ಯುವಾಗ ದುರದೃಷ್ಟಶಾತ್ ನಿಧನರಾದರು(ಜುಲೈ). ಮದ್ರಾಸಿನ ಮತ್ತು ಇಡೀ ಭಾರತದ ಬ್ರಾಹ್ಮಣೇತರರ ಆಂದೋಲನಕ್ಕೆ ದೊಡ್ಡ ಹಾನಿಯುಂಟಾಯಿತು.

ಶಾಹುರವರು ೧೯೨೦ರ ಜುಲೈನಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕರ್ನಾಟಕ ಬ್ರಾಹ್ಮಣೇತರರ ಸಾಮಾಜಿಕ ಸಮ್ಮೇಳನ ನಡೆದಾಗ ಮದ್ರಾಸಿನ ಬ್ರಾಹ್ಮಣೇತರ ಆಂದೋಲನದ ಮತ್ತೊಬ್ಬ ನಾಯಕರಾದ ಸರ್ ಪಿ. ತ್ಯಾಗರಾಜ ಚೆಟ್ಟಿಯಾರ್ ಅವರನ್ನು ಭೇಟಿಯಾದರು. ಈ ಅವಧಿಯು ಬ್ರಾಹ್ಮಣೇತರರ ಆಂದೋಲನದ ಮಹಾವಿರುಮುಖವನ್ನು ಮತ್ತು ಶಾಸನ ಪರಿಷತ್ತಿನ ಚುನಾವಣೆಯ ಪ್ರಚಾರದ ಅಬ್ಬರವನ್ನು ಕಂಡಿತು. ತನ್ನ ಅಧ್ಯಕ್ಷೀಯ ಭಾಷಣವನ್ನು ಸಮ್ಮೇಳನದಲ್ಲಿ ಮಾಡುತ್ತಾ ಸರ್ ಚೆಟ್ಟಿಯಾರ್ ಗೌರವದಲ್ಲಿ ಈ ರೀತಿ ದಾಖಲಿಸಿದ್ದಾರೆ: "ಈ ಸಂದರ್ಭವು ಇಂಥ ಮನುಷ್ಯನನ್ನು ನಾವು ಪಡೆಯಲು ಈ ಸಮ್ಮೇಳನ ನಮಗೆ ಸಹಾಯ ಮಾಡಿತು.[14] ಈ ಸಮ್ಮೇಳನವು ಇಬ್ಬರು ನಾಯಕರ ನಡುವೆ ವಿಚಾರ–ವಿನಿಮಯ ಮಾಡಿಕೊಳ್ಳಲು ಮತ್ತು ಇಬ್ಬರ ನಡುವೆ ಆತ್ಮೀಯ ಸಂಬಂಧ ಬೆಳೆಸಲು ಸಹಕಾರಿಯಾಯಿತು. ಅವರು ಈ ಪತ್ರವ್ಯವಹಾರವನ್ನು ತದನಂತರದ ವರ್ಷಗಳಲ್ಲಿ ಮುಂದುವರಿಸಿದರು.[15]

೧೯೨೧ರಲ್ಲಿ ಶಾಹುರವರು ತಂಜಾವೂರು ಕೇಸಿನ ಸಂದರ್ಭದಲ್ಲಿ ಮದ್ರಾಸಿಗೆ ಭೇಟಿ ನೀಡಿದ್ದರು. ಅಲ್ಲಿ ಅವರ ಆತ್ಮೀಯ ಸ್ನೇಹಿತ ಲಾರ್ಡ್ ವಿಲ್ಲಿಂಗ್ಟನ್ ಬರಮಾಡಿಕೊಂಡು ಆತಿಥ್ಯ ನೀಡಿದರು ತಮ್ಮ ಪ್ರವಾಸಕಾಲದಲ್ಲಿ ಅವರು ಜಸ್ಟೀಸ್ ಪಕ್ಷದ ಕಛೇರಿಗೆ ಭೇಟಿ ನೀಡಿದ್ದರು ಮತ್ತು ಬ್ರಾಹ್ಮಣೇತರರ ಪಕ್ಷದ ನಾಯಕರೊಂದಿಗೆ ಟಿಪ್ಪಣಿಗಳನ್ನು ವಿನಿಮಯ ಮಾಡಿಕೊಂಡರು. ಅವರು ಬ್ರಾಹ್ಮಣ–ಬ್ರಾಹ್ಮಣೇತರರ ವಿವಾದವು ಮಹಾರಾಷ್ಟ್ರಕ್ಕಿಂತ ಹೆಚ್ಚು ತೀವ್ರವಾಗಿ ಮದ್ರಾಸಿನಲ್ಲಿದೆಯೆಂದು ಮತ್ತು ಬ್ರಾಹ್ಮಣೇತರರು ಅಲ್ಲಿ ಬ್ರಾಹ್ಮಣರ ಪ್ರಾಬಲ್ಯವನ್ನು ಹೆಚ್ಚು ವಿರೋಧಿಸಲಾಗುತ್ತಿದೆಯೆಂದು ಮನವರಿಕೆ ಮಾಡಿಕೊಂಡರು. ಅಲ್ಲಿ

ಬ್ರಾಹ್ಮಣೇತರರ ಆಂದೋಲನ ಆರ್ಯ ಸಂಸ್ಕೃತಿಯನ್ನು ತಿರಸ್ಕರಿಸಲು ಮತ್ತು ಆರ್ಯೇತರರ ಸಂಸ್ಕೃತಿಯಲ್ಲಿ ಹೆಚ್ಚು ಆಸಕ್ತಿ ವಹಿಸುವಂತೆ ತನ್ನ ಜನರಿಗೆ ಕಲಿಸಿದೆ. ಈ ಸಂಗತಿ ಅವರ ವಿರೋಧಕ್ಕೆ ಶಕ್ತಿನೀಡಿದ ಬ್ರಾಹ್ಮಣರ ಪ್ರತಿಕ್ರಿಯೆ ತೀವ್ರವಾಗಿದೆ. ಅವರು ಒಬ್ಬ ಬ್ರಾಹ್ಮಣೇತರರ ನಾಯಕರಾಗಿರುವುದರಿಂದ ಮದ್ರಾಸಿನ ಎಲ್ಲಾ ಪತ್ರಿಕೆಗಳು ತಂಜಾವೂರ್ ಕೇಸಿನಲ್ಲಿ ಶಾಹುವಿರೋಧಿ ನಿಲುವನ್ನು ತಾಳಿದವು.[16] ಅವರು ಸಾಕಷ್ಟು ಹೆಚ್ಚಾಗಿ ಖರ್ಚುಮಾಡಿದ್ದರೂ ಬ್ರಾಹ್ಮಣರ ಪತ್ರಿಕೆಗಳ ನಕಾರಾತ್ಮಕ ಪ್ರಚಾರ ಮತ್ತು ನ್ಯಾಯಾಂಗದಲ್ಲಿ ಬ್ರಾಹ್ಮಣರ ಬಲವಾದ ಪ್ರಭಾವವಿರುವುದರಿಂದ ಶಾಹುರವರು ಈ ಕೇಸಿನಲ್ಲಿ ಸೋತುಬಿಟ್ಟರು.

ಶಾಹುರವರು ಮದ್ರಾಸಿನ ಬ್ರಾಹ್ಮಣೇತರರ ಆಂದೋಲನ ಮತ್ತು ನಾಯಕರ ಬಗ್ಗೆ ಹೆಚ್ಚು ಗೌರವವಿಟ್ಟಿದ್ದರು. ಅವರು ಮೇಲೆ ಹೇಳಿದ ಹುಬ್ಬಳ್ಳಿ ಸಮ್ಮೇಳನದ ಸಮಾರೋಪ ಭಾಷಣದಲ್ಲಿ ಪೂರ್ಣವಾಗಿ ವ್ಯಕ್ತಪಡಿಸಿದ್ದಾರೆ. ಆ ಸಂದರ್ಭದಲ್ಲಿ ಶಾಹು ಹೇಳಿದ್ದರು: " ನಾವು ಏನು ಮಾಡಬೇಕೆಂಬುದನ್ನು ನಾನು ಸಂಕ್ಷಿಪ್ತವಾಗಿ ಹೇಳುವೆನು. ಇಂತಹ ಬ್ರಾಹ್ಮಣೇತರ ಆಂದೋಲನವನ್ನು ಹೇಗೆ ಜಯಪ್ರದವಾಗಿ ನಡೆಸಬೇಕೆಂಬುದನ್ನು ಮದ್ರಾಸಿನಿಂದ ನಾವು ಕಲಿಯಬೇಕು. ಇದಕ್ಕಾಗಿ ಮದ್ರಾಸಿನಿಂದ ಭಾಷಣಕಾರರನ್ನು ಆಹ್ವಾನಿಸೋಣ, ಅವರ ಸಾಧನೆಗಳನ್ನು ಪೂನಾ ಮತ್ತು ಬಾಂಬೆಗಳಿಗೆ ಪರಿಚಯ ಮಾಡಿಕೊಡೋಣ. ಒಂದು ಬ್ರಾಹಣೇತರರ ಸಮ್ಮೇಳನವನ್ನು ವ್ಯವಸ್ಥೆಮಾಡೋಣ, ಬೇಗನೆ ಪೂನಾ, ಬಾಂಬೆ ಕಡೆಗಳಲ್ಲಿ ಸಮ್ಮೇಳನಗಳನ್ನು ವ್ಯವಸ್ಥೆ ಮಾಡೋಣ. ಮದ್ರಾಸಿನಲ್ಲಿರುವ ಬ್ರಾಹ್ಮಣೇತರರ ಆಂದೋಲನಗಳಿಗೆ ಹೋಲಿಸಿದಾಗ ಪೂನಾ ಮತ್ತು ಬಾಂಬೆಗಳ ಬ್ರಾಹ್ಮಣೇತರರ ಆಂದೋಲನಗಳ ದೃಢಸಂಕಲ್ಪ ಬಹಳ ಹಿಂದಿದೆ. ಅವರ ನಾಯಕರ ಕಲಿಕೆಯೊಂದಿಗೆ ನಮ್ಮ ನಾಯಕರ ಕಲಿಕೆಯನ್ನು ಹೋಲಿಸಿದರೆ ನಮ್ಮ ನಾಯಕರು ಇನ್ನೂ ಶಾಲೆಯ ಹುಡುಗರು."[17]

ಮದ್ರಾಸಿನ ಬ್ರಾಹ್ಮಣೇತರ ನಾಯಕರು ಕೂಡ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯಲ್ಲಿ ತುಂಬಾ ಪ್ರಜ್ಞಾವಂತರು. ಶಾಹುರವರು ಬಾಂಬೆ ಪ್ರೆಸಿಡೆನ್ಸಿಯ ಬ್ರಾಹ್ಮಣೇತರ ಜನರಲ್ಲಿ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಬೆಳೆಸಲು ಮತ್ತು ಅವರನ್ನು ಸಂಘಟಿಸಲು ಪ್ರಯತ್ನಿಸಿದರು. ಅವರು ಅವರ ಕೆಲಸದ ಗೌರವದ ಬಗ್ಗೆ ಮಾತನಾಡುತ್ತಾ ಅವರ ಮರಣಕ್ಕೆ ದುಃಖವನ್ನು ವ್ಯಕ್ತಪಡಿಸಿದರು. ಸರ್ ಪಿ. ತ್ಯಾಗರಾಜ ಚೆಟ್ಟಿಯಾರ್ ಹೇಳುತ್ತಾರೆ, "ಶಿವಾಜಿ ಮಹಾರಾಜರ ವಂಶಸ್ಥರಾದ ಶಾಹು ಛತ್ರಪತಿಯವರು ಜನತಾಂತ್ರಿಕರಲ್ಲಿ ಒಬ್ಬ ಜನತಾಂತ್ರಿಕರಾಗಿದ್ದರು ಮತ್ತು ಕೆಳಜಾತಿಗಳಿಗೆ ಒಬ್ಬ ಮಹೋಪಕಾರಿಯಾಗಿದ್ದರು. ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ಆಂದೋಲನಗಳಿಗೆ ಅವರೊಬ್ಬ ಶಕ್ತಿಯಾಗಿದ್ದು ಅವರ ಜೀವನ ತುಂಬಾ ಮಹತ್ತರವಾಗಿತ್ತು. ಇಡೀ ಭಾರತದಲ್ಲಿ ಬ್ರಾಹ್ಮಣೇತರರ ಆಂದೋಲನವನ್ನು ಹಬ್ಬಿಸಿ ಅದಕ್ಕೆ ಒಂದು ರಾಷ್ಟ್ರೀಯ ಸ್ವರೂಪ ಕೊಡುವುದು ಅವರ ಕನಸಾಗಿತ್ತು.[18] ಡಾ. ನಟೇಶ್ ಮೊದಲಿಯಾರ್ ಅದೇ ರೀತಿಯ ಗೌರವನಮನ ಸಲ್ಲಿಸುತ್ತಾ ಹೇಳುತ್ತಾರೆ: "ಶಾಹುಮಹಾರಾಜರ ವ್ಯಕ್ತಿತ್ವದ ದೇವರ ಪಿತೃವಿನ ಪ್ರೀತಿ ಮತ್ತು ಮಾನವೀಯತೆಯ ಸಹೋದರ ಪ್ರೀತಿಗಳು ಕೇಂದ್ರೀಕೃತವಾಗಿದ್ದವು ಮತ್ತು ಅವರು ಎರಡನ್ನೂ ಹೃತ್ಪೂರ್ವಕವಾಗಿ ಮಾನವರ ಸೇವೆಗೆ ಬಳಸಿದರು. ಅವರ ದೈಹಿಕ ಶರೀರ ನಮ್ಮಿಂದ ಹೊರಟುಹೋದರೂ ಅವರ ಆತ್ಮ ನಮ್ಮ ಸುತ್ತಲೂ ತಿರುಗುತ್ತಿದೆ. ಅಷ್ಟೇ ಅಲ್ಲ ಅದು ಇಡೀ ಭಾರತದ ಬ್ರಾಹ್ಮಣೇತರರ ನಡುವೆ ಸುತ್ತುತ್ತಿದೆ. ಬ್ರಾಹ್ಮಣೇತರರ ಆಂದೋಲನಕ್ಕೆ ಯಾರೇ ಆವೇಗವನ್ನು ನೀಡಿದ್ದರೆ ಅವರು ಯಾರೂ ಅಲ್ಲ, ಅವರು ಶಾಹುಮಹಾರಾಜರು ಮಾತ್ರ."[19]

ಮಹಾರಾಷ್ಟ್ರದಲ್ಲಿ ಹಲವು ನಾಯಕರಾದ ಭಾಸ್ಕರರಾವ್ ಜಾಧವ್, ಅಣ್ಣಾಸಾಹೇಬ್ ಲಠ್ಠೆ, ವಾಲಚಂದ್ ಕೊಠಾರಿ, ಮುಕುಂದರಾವ್ ಡೊಂಗ್ರೆ, ಸಿ. ಕೆ. ಬೋಲೆ, ಕೇಶವರಾವ್ ಬಾಗ್ಡೆ, ಕೆ. ಸಿ. ಥ್ಯಾಕರೆ ಅವರು ಆಂದೋಲನವನ್ನು ತಮ್ಮದೇ ಆದ ರೀತಿಯಲ್ಲಿ ಕೊಂಡೊಯ್ಯುತ್ತಿದ್ದರು ಮತ್ತು ಹಾಗೆ ಮಾಡುವಾಗ ಅವರಲ್ಲಿ ಆಗಾಗ ವಿವಾದಗಳು ತಲೆದೋರುತ್ತಿದ್ದವು. ಅಂತಹ ಸಂದರ್ಭದಲ್ಲಿ ಶಾಹುರವರು ಸಕಾಲದಲ್ಲಿ ಮಧ್ಯೆ ಪ್ರವೇಶಿಸಿ ಅವರಲ್ಲಿ ಒಂದು ಒಪ್ಪಂದವನ್ನು ರೂಪಿಸಿ ಜಗಳವಾಡುವ ಗುಂಪುಗಳನ್ನು ನಿಯಂತ್ರಿಸುತ್ತಿದ್ದರು. ಕೊಠಾರಿಯವರು ಒಪ್ಪದಿರುವಂತಹ ಒಂದೆರಡು ಅಪವಾದಗಳನ್ನು ಬಿಟ್ಟರೆ ಇತರೆ ಎಲ್ಲಾ ನಾಯಕರು ಆಂದೋಲನದಲ್ಲಿ ಶಾಹುರವರ ನಾಯಕತ್ವವನ್ನು ಒಪ್ಪಿಕೊಳ್ಳುತ್ತಿದ್ದರು. ತಮ್ಮ ಮಟ್ಟಿಗೆ, ಅವರು (ಶಾಹು) ವಿವೇಕದಿಂದ ಆಂದೋಲನದ ಚುಕ್ಕಾಣಿಯನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದರು. ಹಾಗೆ ಮಾಡುವಾಗ ಅವರು ತಮ್ಮನ್ನು ಆಂದೋಲನದ ನಾಯಕರನ್ನಾಗಿ ತೋರಿಸಿಕೊಳ್ಳಲು ಎಂದಿಗೂ ಮನಸ್ಸು ಮಾಡುತ್ತಿರಲಿಲ್ಲ. ಯದ್ವಾತದ್ವಾ (ಹಠಮಾರಿತನದ) ಒಲವುಗಳುಳ್ಳ ಬ್ರಾಹ್ಮಣೇತರರ ವಿವಿಧ ಗುಂಪುಗಳ ಸಾಮಾನ್ಯಶಕ್ತಿಯನ್ನು ಒಗ್ಗೂಡಿಸುವ ಕೌಶಲ್ಯ ಮತ್ತು ಅಧಿಕಾರ ಶಾಹುರವರಿಗಲ್ಲದೆ ಮತ್ಯಾರಿಗೂ ಇಲ್ಲವೆಂದು ನಾಯಕರಾದ ಜಾಧವ್, ಲಠ್ಠೆ ಮತ್ತು ಪಾಟೀಲ್ ಅವರಿಗೆ ಚೆನ್ನಾಗಿ ತಿಳಿದಿತ್ತು. ಈ ಬಗ್ಗೆ ಶಾಹುರವರಿಗೆ ಆಂದೋಲನದ ಉಚ್ಛ್ರಾಯ ಸಮಯದಲ್ಲಿ ಬರೆದ ಒಂದು ಪತ್ರದಲ್ಲಿನ ಹೇಳಿಕೆಯು ಪರಿಶೀಲನೆಗೆ ಯೋಗ್ಯವಾಗಿದೆ: "ಬ್ರಾಹ್ಮಣೇತರರ ಪರವಾಗಿ ಬ್ರಿಟಿಷ್ ಭಾರತದಲ್ಲಿ ಸಾಮಾಜಿಕ ಕೆಲಸಕಾರ್ಯಗಳಲ್ಲಿ ಭಾಗವಹಿಸುವುದು ಮಾನ್ಯಮಹಾರಾಜರಿಗೆ ಅತ್ಯವಶ್ಯಕವೆಂದು ಮರಾಠಾ ಮತ್ತು ಅಸ್ಪೃಶ್ಯರು ಮಾತ್ರವಲ್ಲದೆ ಎಲ್ಲಾ ಬ್ರಾಹ್ಮಣೇತರರ ಅಭಿಪ್ರಾಯವಾಗಿದೆ. ಬ್ರಾಹ್ಮಣರ ಕುಯುಕ್ತಿಗಳಿಂದ ಮಾನ್ಯ ಮಹಾರಾಜರ ನೆರವು ಬ್ರಾಹ್ಮಣೇತರರ ಆಂದೋಲನಕ್ಕೆ ತಪ್ಪದಂತೆ ನೋಡಿಕೊಳ್ಳುವ ವಿಚಾರದಲ್ಲಿ ನಾವು ಅತ್ಯಂತ ಜಾಗೃತಿ ವಹಿಸುತ್ತೇವೆಂದು ನಿಮಗೆ ಭರವಸೆ ನೀಡುತ್ತೇವೆ. ಮಾನ್ಯ ಮಹಾರಾಜರು ನಾಯಕತ್ವ ಬಯಸುವುದಿಲ್ಲವೆಂದು ನಾನು ಚೆನ್ನಾಗಿ ಬಲ್ಲೆನು. ಮಹಾರಾಷ್ಟ್ರದಲ್ಲಿ ಮಾನ್ಯಮಹಾರಾಜರಲ್ಲದೆ ಬ್ರಾಹ್ಮಣೇತರರ ಆಂದೋಲನವನ್ನ ಸಫಲವಾಗಿ ಯಾರೂ ನಡೆಸಲಾರರೆಂಬುದು ನಮಗೆ ಗೊತ್ತು.... ಜೂನ್ ೨೦, ೧೯೨೦."[20]

ಭಾಸ್ಕರರಾವ್ ಜಾಧವ್ ಅವರು ಅದೇ ರೀತಿಯ ಮನೋಭಾವಗಳನ್ನು ಒಂದು ಪತ್ರದಲ್ಲಿ ವ್ಯಕ್ತಪಡಿಸಿದ್ದಾರೆ: ".... ಬ್ರಾಹ್ಮಣೇತರರ ಪಕ್ಷವನ್ನು ಭದ್ರಬುನಾದಿಯೊಂದಿಗೆ ಸ್ಥಾಪಿಸಬೇಕೆಂಬ ಮಾನ್ಯಮಹಾರಾಜರ ಕಳಕಳಿ ಪ್ರತಿಯೊಬ್ಬರಿಗೂ ತಿಳಿದೇ ಇದೆ. ಬಾಂಬೆ ಪ್ರೆಸಿಡೆನ್ಸಿಯಲ್ಲಿ ಇದು ಆಂದೋಲನದ ರೂಪ ಕೂಡ ತೆಗೆದುಕೊಂಡಿದ್ದು ಮಾನ್ಯ ಮಹಾರಾಜರ ಕಳಕಳಿಯ ಪರಿಣಾಮದಿಂದ. ಬ್ರಾಹ್ಮಣೇತರರ ಆಂದೋಲನವು ಸತಾರ ಜಿಲ್ಲೆಯಲ್ಲಿ ವಿಶೇಷವಾಗಿ ಬಲಿಷ್ಠವಾಗಿದೆ ಮತ್ತು ಬ್ರಾಹ್ಮಣರು ಅದನ್ನು ಮುರಿಯಲು ಪ್ರಯತ್ನಿಸುತ್ತಿದ್ದಾರೆ..... ಮಾನ್ಯ ಮಹಾರಾಜರ ಆಶ್ರಯದಲ್ಲಿ ಆಂದೋಲನವು ಸತಾರ ಜಿಲ್ಲೆಯಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದೆ. ತಮ್ಮ ಆಶ್ರಯವನ್ನು ನಿಲ್ಲಿಸಿದರೆ ಆಂದೋಲನವು ಕುಂಠಿತಗೊಳ್ಳುವುದು ಮತ್ತು ಜೊತೆಗೆ ಬೇರೆ ಪ್ರದೇಶಗಳಲ್ಲಿ ಆಂದೋಲನಕ್ಕೆ ಭಂಗವುಂಟಾಗುವುದು ಎಂಬ ಸಂಗತಿ ತಮಗೂ ಚೆನ್ನಾಗಿ ಗೊತ್ತಿದೆ" (ಮಾರ್ಚ್ ೧೨, ೧೯೨೧).[21]

ಮಾಂಟೆಗೂ ಭಾರತಕ್ಕೆ ಭೇಟಿ ನೀಡಿದ ನಂತರ, ಅವರು ಪ್ರಸ್ತಾಪಿತ ಸುಧಾರಣೆಗಳನ್ನು ಸಂಸತ್ತಿನಲ್ಲಿ ಮಂಡಿಸುವುದಕ್ಕಾಗಿ ತಮ್ಮ ವರದಿಯನ್ನು ಮಂಡಿಸಿದರು. ಅದರ ಮೇಲೆ ಚರ್ಚೆ ಮಾಡಿದ ನಂತರ ಡಿಸೆಂಬರ್ ೧೯, ೧೯೧೯ರಲ್ಲಿ ಭಾರತ ಸರಕಾರದ ಕಾಯಿದೆಯನ್ನು ಪಾಸುಮಾಡಲಾಯಿತು. ಈ ಕಾಯ್ದೆ ನೀಡಿದ ಸುಧಾರಣೆಗಳು ಮಾಂಟೆಫೋರ್ಡ್ ಸುಧಾರಣೆಗಳೆಂದು ಚಿರಪರಿಚಿತವಾಗಿವೆ. ಮಾಂಟೆಗೂ

ಘೋಷಣೆ ನಮೂದಿಸಿದ ಬ್ರಾಹ್ಮಣೇತರ ವರ್ಗಗಳಿಗೆ ಪ್ರತ್ಯೇಕ ಚುನಾವಣಾ ಪ್ರಾತಿನಿಧ್ಯ ನೀಡುವ ವಿಚಾರವನ್ನು ಸರಕಾರ ವಿರೋಧಿಸಿದೆ. ಈ ಬ್ರಾಹ್ಮಣೇತರರನ್ನು ಸಮಾಧಾನಪಡಿಸಲು ಸರಕಾರವು ಅವರಿಗೆ ಕೆಲವು ಸ್ಥಾನಗಳನ್ನು ಪರಿಷತ್ತಿನಲ್ಲಿ ಮೀಸಲಿಡಲು ಒಪ್ಪಿಕೊಂಡಿದೆ. ಮದ್ರಾಸ್‌ಪ್ರಾಂತ್ಯದ ಬ್ರಾಹ್ಮಣೇತರ ಸಮಾಜ ಹೆಚ್ಚು ಪ್ರಯೋಜನ ಪಡೆಯಿತು. ಅದು ಒಟ್ಟು ಚುನಾಯಿತ ೯೮ ಸ್ಥಾನಗಳಲ್ಲಿ ೨೮ ಸ್ಥಾನಗಳನ್ನು ಪಡೆಯಿತು.[22] ಬಾಂಬೆಪ್ರಾಂತ್ಯದಲ್ಲಿ ಚುನಾಯಿತ ೮೬ ಸ್ಥಾನಗಳಲ್ಲಿ ಗ್ರಾಮೀಣಪ್ರದೇಶಗಳ ಪ್ರತಿನಿಧಿಗಳಿಗೆ ೩೫ ಸ್ಥಾನಗಳನ್ನು ನೀಡಲಾಗಿತ್ತು. ಈ ೩೫ ಸ್ಥಾನಗಳಲ್ಲಿ ೭ ಸ್ಥಾನಗಳನ್ನು ಬ್ರಾಹ್ಮಣೇತರರಿಗೆ (ಮರಾಠಾ ಮತ್ತು ಇತರೆ ಸಂಬಂಧಪಟ್ಟ ಜಾತಿಗಳಿಗೆ) ಮೀಸಲಿಡಲಾಗಿದೆ. ಅಸ್ಪೃಶ್ಯರಿಗೆ ೨ ಸ್ಥಾನಗಳು ಸಿಕ್ಕಿವೆ. ಈ ಸ್ಥಾನಗಳಿಗೆ ಗೌರ್ನರರು ನೇಮಕಮಾಡುವರು.[23] ಶಾಹುರವರು ಬೇಡಿದಂತೆ ಅಸ್ಪೃಶ್ಯರು, ಮರಾಠರು ಮತ್ತು ಇತರೆ ಸಂಬಂಧಪಟ್ಟ ಜಾತಿಗಳು ಪ್ರತ್ಯೇಕ ಚುನಾವಣಾ ಕ್ಷೇತ್ರ(ಚುನಾಯಕ ಸಮುದಾಯ)ಗಳು ಸಿಗಲಿಲ್ಲ. ಆದರೆ ಅವರು ಮೀಸಲು ಸ್ಥಾನಗಳನ್ನು ಪಡೆದರೂ ಕೂಡ ಬ್ರಾಹ್ಮಣೇತರರ ಪಕ್ಷ ತಮ್ಮ ಮೀಸಲು ಕ್ಷೇತ್ರಗಳಿಗೆ ಮತ್ತು ಸಾಮಾನ್ಯ ಕ್ಷೇತ್ರಗಳಿಗೆ ತಮ್ಮ ಅಭ್ಯರ್ಥಿಗಳನ್ನು ನಿಲ್ಲಿಸಿದರು. ೧೯೨೦ರ ನವೆಂಬರ್‌ನಲ್ಲಿ ಶಾಸನ ಪರಿಷತ್ತಿಗೆ ಚುನಾವಣೆಗಳು ನಡೆದವು. ಬ್ರಾಹ್ಮಣೇತರರಲ್ಲಿ ಸಿ. ಕೆ. ಬೋಲೆ, ಆನಂದರಾವ್ ಸುರ್ವೆ, ಪಾಂಡುರಂಗರಾವ್ ಜಾಧವ, ದಾಜಿರಾವ್ ವಿಚಾರೆ ಅವರು ಬಾಂಬೆ ಶಾಸನ ಪರಿಷತ್ತಿಗೆ ಚುನಾಯಿತರಾದರೆ, ಅಣ್ಣಾಸಾಹೇಬ್ ಲಠ್ಠೆ ಮತ್ತು ಕೇಶವರಾವ್ ಬಾಗಡೆ ಅವರು ಕೇಂದ್ರೀಯ ಶಾಸನ ಪರಿಷತ್ತಿಗೆ ಪ್ರವೇಶಿಸಿದರು.[24]

ಮಾಂಟೆಫೋರ್ಡ್ ಸುಧಾರಣೆಗಳ ಪ್ರಕಾರ ಶಾಸನ ಪರಿಷತ್ತುಗಳು ರಚನೆಯಾದ ನಂತರ ಬ್ರಾಹ್ಮಣೇತರರ ಆಂದೋಲನದ ಮೊದಲನೆಯ ಹಂತ ಮುಕ್ತಾಯಗೊಂಡಿತು. ಶಾಸನ ಪರಿಷತ್ತುಗಳಲ್ಲಿ ಬ್ರಾಹ್ಮಣೇತರ ಜನರ ಸಮಸ್ಯೆಗಳ ಬಗ್ಗೆ ಧ್ವನಿ ಎತ್ತುವುದನ್ನು ಶಾಹುಮಹಾರಾಜರು ನೋಡಬೇಕಾಗಿದೆ. ಇದಾದ ಕೂಡಲೇ ಅವರು ಬೇಗನೇ ಮರಣಹೊಂದಿದರು. ಅವರ ಸಾವು ಬ್ರಾಹ್ಮಣೇತರರ ಆಂದೋಲನಕ್ಕೆ ಭಾರೀ ಆಘಾತವನ್ನುಂಟುಮಾಡಿತು. ಅವರ ನಂತರದ ನಾಯಕರಾದ ಭಾಸ್ಕರರಾವ್ ಜಾಧವ್, ಲಠ್ಠೆ, ಮುಕುಂದ ರಾವ್ ಪಾಟೀಲ್, ಭಾವುರಾವ್ ಪಾಟೀಲ್, ಕೆ. ಸಿ. ಥ್ಯಾಕರೆ, ಜೆಡೆ ಸಹೋದರರು. ಶ್ರೀಪತ್‌ರಾವ್ ಶಿಂಧೆ ಮೊದಲಾದವರು ಆಂದೋಲನವನ್ನು ಮುಂದಕ್ಕೆ ಕೊಂಡೊಯ್ದರು; ಆದರೆ ಸಹಾಯ ಬೇಕಾದ ಕಾಲದಲ್ಲಿ ಸಹಾಯ ನೀಡುತ್ತಿದ್ದ ಮತ್ತು ಆಂದೋಲನ ಶಿಸ್ತು ಪರಿಪಾಲಿಸುವ ಸಮಯದಲ್ಲಿ ತಹಬಂದಿಗೆ ತರುತ್ತಿದ್ದ ನಾಯಕನಾದ ಶಾಹುರಂತಹ ಸಾಮರ್ಥ್ಯವುಳ್ಳ ನಾಯಕನನ್ನು ಮತ್ತೆ ಆಂದೋಲನ ಪಡೆಯಲಿಲ್ಲ. ಮಹಾರಾಷ್ಟ್ರದ ಸಾಮಾಜಿಕ ಪರಿಸರದಲ್ಲಿ ಅವರ ಸ್ಥಾನವನ್ನು ತುಂಬುವಂತಹ ಸಮಾನವಾದ ನಾಯಕನನ್ನು ಪಡೆಯುವುದು ತುಂಬಾ ಕಷ್ಟ. ಮತ್ತೊಂದು ಕಡೆಯಲ್ಲಿ ಕಾಂಗ್ರೆಸ್ಸು ಕೂಡ ಮೂಲಭೂತ ಬದಲಾವಣೆಗಳಿಗೆ ಒಳಗಾಗುತ್ತಿದೆ. ೧೯೨೦ರಲ್ಲಿ ತಿಲಕರ ಮರಣದ ನಂತರ, ಭಾರತದ ರಾಜಕಾರಣದ ನಕಾಶೆಯಲ್ಲಿ ಮಹಾತ್ಮ ಗಾಂಧಿ ಮೂಡಿಬಂದರು ಮತ್ತು ಗಾಂಧಿಯುಗ ಪ್ರಾರಂಭವಾಯಿತು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎಲ್ಲಾ ಜಾತಿಗಳ ಮತ್ತು ಧರ್ಮಗಳ ಸಾಮಾನ್ಯ ಜನರು ಭಾಗವಹಿಸಿದ್ದು ಅವರ ರಾಜಕಾರಣದ ಪ್ರಮುಖ ಲಕ್ಷಣವಾಗಿತ್ತು. ತತ್ಪರಿಣಾಮವಾಗಿ ೧೯೨೦ರ ನಂತರ ಕಾಂಗ್ರೆಸ್ ಮೇಲಿನ ಬ್ರಾಹ್ಮಣರ ಪ್ರಭಾವ ದಿನೇದಿನೇ ಕುಗ್ಗತೊಡಗಿತು. ಆದರೆ ಈ ಅವಧಿಯಲ್ಲಿ ಬಾಂಬೆ ಪ್ರಾಂತ್ಯದಲ್ಲಿ ಕಾಂಗ್ರೆಸ್ಸಿನ ಮೇಲೆ ಬ್ರಾಹ್ಮಣರ ಹಿಡಿತ ಮುಂದುವರಿಯಿತು. ಕೇಶವರಾವ್ ಜೇಧೆ ನಾಯಕತ್ವದಲ್ಲಿ ಒಂದು ದಶಕದಲ್ಲಿ ಬ್ರಾಹ್ಮಣೇತರರು ಬಹುಸಂಖ್ಯೆಯಲ್ಲಿ ಕಾಂಗ್ರೆಸ್ಸನ್ನು ಸೇರಿದರು ಮತ್ತು ಅದಾದ ನಂತರ ಬ್ರಾಹ್ಮಣೇತರರ ಆಂದೋಲನ ಬೇಗನೇ ಮಹಾರಾಷ್ಟ್ರದಲ್ಲಿ ಕಡಿಮೆಯಾಯಿತು.

---

# ಸ್ವಾತಂತ್ರ್ಯ ಚಳುವಳಿ

೧೯೨೦-೨೧ ಸುಮಾರಿನಲ್ಲಿ ಬ್ರಾಹ್ಮಣೇತರರ ಆಂದೋಲನ ಮಹಾರಾಷ್ಟ್ರದಲ್ಲಿ ತನ್ನ ಬಲವನ್ನು ಉಳಿಸಿಕೊಂಡಿತ್ತು. ಸತ್ಯಶೋಧಕರು ಹುರುಪಿನಿಂದ ತಮ್ಮ ಕೆಲಸಗಳನ್ನು ಮಾಡುತ್ತಿದ್ದರು. ತಮ್ಮ ಮೇಲೆ ನಡೆಸಿದ ಯಥಾಕಥಿತ ದಾಳಿಕತೆಗಳನ್ನು ಬ್ರಾಹ್ಮಣರ ಪತ್ರಿಕೆಗಳು ಕ್ರೋಧೋನ್ಮತ್ತ ತಲೆಬರಹಗಳೊಂದಿಗೆ ಪ್ರಕಟಿಸುತ್ತಿದ್ದರು. ತಿಲಕರ ಅನುಯಾಯಿಗಳಾದ ಕೇಲ್ಕರ್, ಖಪಾರ್ಡೆ, ಭೋಪತ್ಕರ್ ಮೊದಲಾದವರು ತಿಲಕರ ಮರಣಾನಂತರ ಸಹ ಶಾಹುರವರ ಬಗ್ಗೆ ವಿಷಕಾರಲು ದ್ವೇಷಾಗ್ನಿಯನ್ನು ಆರಲು ಬಿಟ್ಟಿರಲಿಲ್ಲ. ಮಿಗಿಲಾಗಿ ಶಾಹುರವರ ವಿರುದ್ಧ ದ್ವೇಷ ಸಾಧಿಸಲು ನಿರಂತರವಾಗಿ ಪ್ರಯತ್ನಿಸುತ್ತಿದ್ದರು ಮತ್ತು ಕುಲಕರ್ಣಿ ವತನಗಳಂತಹ ಭೂತಗಳನ್ನು ಎತ್ತಿನಿಲ್ಲಿಸುವ ಮೂಲಕ ಅವರ ವಿರುದ್ಧ ವಿರೋಧಿ ವಾತಾವರಣವನ್ನು ನಿರ್ಮಿಸುತ್ತಿದ್ದರು.

### ಕೇಸರಿಯ ಬಾಂಬ್‌ಷೆಲ್

ಮೇ ೧೮, ೧೯೨೧ರಲ್ಲಿ ತಸ್‌ಗಾವ್‌ನಲ್ಲಿ ದಾದಾಸಾಹೇಬ್ ಖಪಾರ್ಡೆ ಅಧ್ಯಕ್ಷತೆಯಲ್ಲಿ ತಿಲಕರ ಅನುಯಾಯಿಗಳು ಕುಲಕರ್ಣಿ ಸಮ್ಮೇಳನವನ್ನು ಅಂತಹ ಪ್ರಯತ್ನಗಳ ಭಾಗವಾಗಿ ನಡೆಸಿದರು. ಸಂಘಟಕರು ಶಾಹುರವರ ವಿರುದ್ಧ ಖಂಡನೆ ಮಾಡುವುದರಲ್ಲಿ ಅಥವಾ ಅವರ ವಿರುದ್ಧ ದ್ವೇಷಪೂರ್ಣ ಪ್ರಚಾರ ಮಾಡುವುದರಲ್ಲಿ ಸಂತೋಷಪಡಲಿಲ್ಲ. ಅವರು ಪತನವಾಗುವಂತಹ ಸ್ಫೋಟಕಾರಿ ಸನ್ನಿವೇಶವನ್ನು ಸೃಷ್ಟಿಮಾಡಲು ಬಯಸಿದ್ದರು. ಕೊಲ್ಹಾಪುರದಲ್ಲಿ ಮತ್ತು ಕೊಲ್ಹಾಪುರದ ಹೊರಗಡೆ ಹೋರಾಟಗಾರರ ಚಟುವಟಿಕೆಗಳನ್ನು ದಮನಮಾಡಲು ಶಾಹುರವರು ಒಂದು ದಶಕದ ಹಿಂದೆ ಹಿರಿಯ ಬ್ರಿಟಿಷ್ ಅಧಿಕಾರಿಗಳಿಗೆ ಬರೆದ ಗೌಪ್ಯ ಪತ್ರಗಳನ್ನು ಮತ್ತು ಕೆಲವು ವೈಯಕ್ತಿಕ ಪತ್ರಗಳನ್ನು ಕೇಸರಿ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಕೇಲ್ಕರ್‌ರವರು ಹೇಗೋ ಮಾಡಿ ಪ್ರಕಟಿಸಿದರು. ಈ ಪತ್ರಗಳ ಆಧಾರದ ಮೇರೆಗೆ ಕೇಲ್ಕರ್ ಅವರು 'ನಮ್ಮ ಛತ್ರಪತಿ – ಸ್ವಾತಂತ್ರ್ಯದ ಒಬ್ಬ ದ್ರೋಹಿ' ಎಂಬ ಶಿರೋನಾಮೆಯಲ್ಲಿ ಒಂದು ವಿಶೇಷ ಸಂಪಾದಕೀಯವನ್ನು ಬರೆದರು. ಅದರಲ್ಲಿ ಶಾಹುರವರನ್ನು ತಮಗೆ ಇಷ್ಟಬಂದ ಪದಗಳನ್ನು ಬಳಸಿ ಅವರೊಬ್ಬ ಕ್ರೂರಿ, ಸರ್ವಾಧಿಕಾರಿ, ಸ್ವಾತಂತ್ರ್ಯ ಅಧಿಕಾರವನ್ನು ಬುಡಮೇಲು ಮಾಡುತ್ತಿರುವ ಬ್ರಿಟಿಷರ ಪ್ರಚಾರದ 'ಒಬ್ಬ ಗುರು', ಸ್ವರಾಜ್ಯದ ಒಬ್ಬ ದೇಶದ್ರೋಹಿ ಮೊದಲಾಗಿ ವಿವರಿಸಿ ಬರೆದಿದ್ದರು. ಜನರಿಗೆ ದ್ರೋಹ ಎಸಗಿದ ಒಬ್ಬ ಛತ್ರಪತಿ ಎಂದು ಓದುಗರ ಮುಂದೆ ಚಿತ್ರಿಸಲಾಗಿತ್ತು.[1]

ಕೇಸರಿ ಬಾಂಬ್‌ಷೆಲ್ ಮಹಾರಾಷ್ಟ್ರದಲ್ಲಿ ರಾಜಕೀಯ ಮತ್ತು ಸಾಮಾಜಿಕ ಜೀವನದಲ್ಲಿ ಮಹತ್ತರವಾದ ಭಾವೋದ್ವೇಗಕ್ಕೆ ಕಾರಣವಾಯಿತು. ಇದು ಒಂದು ಕೇಸರಿಯ ಧಾಟಿಯಲ್ಲಿರುವಂತಹ ಪತ್ರಿಕೆಗಳಾದ ಮಹ್‌ರಟ್ಟ,

ಲೋಕಶಾಹಿ, ಲೋಕಸಂಘರ್ಷ, ರಾಜಕಾರಣ, ಲೋಕಮಾನ್ಯ ಮೊದಲಾದವುಗಳಿಗೆ ಶಾಹುರವರ ಮೇಲೆ ನಡೆಸಲು ಒಂದು ಮಹಾಅವಕಾಶ ಲಭಿಸಿತು. ಈ ಪತ್ರಿಕೆಗಳು ವಿವೇಚನೆಯಿಲ್ಲದ ಸುದ್ದಿ ಮತ್ತು ಲೇಖನಗಳನ್ನು ಪ್ರಕಟಿಸಿ ಶಾಹುರವರ ಮಾನಕಳೆಯಲು ಮಹಾಪ್ರಯತ್ನಪಟ್ಟವು. ಮತ್ತೆ ಕೆಲವು ಪತ್ರಿಕೆಗಳು ಅವರ ಚರ್ಮ ಕಪ್ಪಗಿರುವಂತೆಯೇ ಅವರ ಹೃದಯ (ಮನಸ್ಸು) ಕಪ್ಪಗಿದೆ ಎಂದು ಬರೆದರೆ, ಮತ್ತೆ ಕೆಲವರು ಉದ್ರೇಕವಾಗಿ ತಮ್ಮ ಪಾಪಗಳನ್ನು ತೊಳೆದುಕೊಳ್ಳಲು ಸಿಂಹಾಸನ (ಅಧಿಕಾರ) ಬಿಟ್ಟು ಕೆಳಗಿಳಿಯಬೇಕೆಂದು ಒತ್ತಾಯಿಸಿದವು. ಬ್ರಾಹ್ಮಣರ ವಲಯ ಮತ್ತೆಮತ್ತೆ ಈ ವಿಷಪೂರಿತ ಹೊಡೆತಗಳನ್ನೇ ನೀಡಿದರೆ, ಬ್ರಾಹ್ಮಣೇತರ ಪತ್ರಿಕೆಗಳಾದ ಜಾಗೃತಿ, ವಿಜಯಿ ಮರಾಠ, ರಾಷ್ಟ್ರವೀರ ಮೊದಲಾದವು ಅವರ ರಕ್ಷಣೆಗೆ ಧಾವಿಸಿದವು. ವಾಸ್ತವಿಕವಾಗಿ ಬ್ರಾಹ್ಮಣರೇ ತಮ್ಮ ಜನರಿಗೆ ಮತ್ತು ದೇಶದ ಸ್ವಾತಂತ್ರ್ಯಕ್ಕೆ ದೇಶದ್ರೋಹಿಗಳು ಎಂದು ಅವರು ತೆಗಳಿದರು. ಏಕೆಂದರೆ ಬ್ರಾಹ್ಮಣರೇ ತಮ್ಮ ಧರ್ಮದ ಬಹುಸಂಖ್ಯಾತರನ್ನು ಬೌದ್ಧಿಕವಾಗಿ ಮತ್ತು ಸಾಮಾಜಿಕವಾಗಿ ದಾಸ್ಯದಲ್ಲಿಟ್ಟಿದ್ದಾರೆಂದು ಅವರು ದೂಷಿಸಿದರು. ಏಕಕಾಲದಲ್ಲಿ ಮಹಾರಾಷ್ಟ್ರದ ಹಳ್ಳಿ ಮತ್ತು ಪಟ್ಟಣಗಳಲ್ಲಿ ಬ್ರಾಹ್ಮಣೇತರರ ತಮ್ಮ ಮಹಾರಾಜರ ಮೇಲೆ ವಿವೇಚನಾರಹಿತ ದಾಳಿಗಳನ್ನು ಖಂಡಿಸಲು ಸಭೆಗಳು ನಡೆದವು. ಮತ್ತು ರಾಜರ ಬಗ್ಗೆ ನಿಷ್ಠೆ ತೋರಿಸಿದರು. ಹೀಗೆ ಕೇಸರಿಯ ಬಾಂಬ್‌ಷೆಲ್ ಎರಡು ಗುಂಪುಗಳ ನಡುವಿನ ಕೆಟ್ಟದಾಳಿಗಳು ಮತ್ತು ಪ್ರತಿದಾಳಿಗಳಿಂದ ಮಹಾರಾಷ್ಟ್ರದ ಸಾಮಾಜಿಕ ವಾತಾವರಣ ಹದಗೆಟ್ಟುಹೋಯಿತು. ಬ್ರಾಹ್ಮಣರ ರಾಷ್ಟ್ರೀಯತೆಯ ಸಾಮಾಜಿಕ ಪ್ರಭಾವದಿಂದ ಪ್ರಭಾವಗೊಂಡ ಕಮ್ಯುನಿಸ್ಟ್ ನಾಯಕರಾದ ಶ್ರೀಪಾದ ಅಮೃತಡಾಂಗೆ ಅವರು ಸಹ ಸುಮ್ಮನೆ ಇರಲಾರದಷ್ಟರ ಮಟ್ಟಿಗೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ವಿವಾದ ಅತ್ಯಂತ ಕೆಳಮಟ್ಟಕ್ಕೆ ಇಳಿದುಹೋಗಿತ್ತು. ಯಂಗ್‌ಟರ್ಕ್‌ರಾದ ಡಾಂಗೆಯವರು ಕೇಸರಿಯ ಪತ್ರಗಳನ್ನು 'ನಮ್ಮ ದೇಶದ್ರೋಹಿ ಛತ್ರಪತಿ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪುನರ್‌ಮುದ್ರಿಸಿದರು ಮತ್ತು ಶಾಹುರವರ ದಮನಗಳ ಕಾರಣದಿಂದ ಆಕ್ರೋಶಗೊಂಡ ಜನತೆಯ ಕಿಚ್ಚು ಕೊಲ್ಹಾಪುರದ ರಾಜಕುಟುಂಬವನ್ನು ನಾಶಮಾಡದ ಹೊರತು ಆರುವುದಿಲ್ಲವೆಂಬ ಖಂಡನೆಯ ಒಂದು ಲೇಖನ ಬರೆದು ಶಾಹುರವರಿಗೆ ಶಾಪ ಹಾಕಿದರು.[2] ಬ್ರಾಹ್ಮಣ-ಬ್ರಾಹ್ಮಣೇತರರ ಸಂಘರ್ಷದ ಸಾಮಾಜಿಕ ಮಹತ್ವವನ್ನು ಸಮಕಾಲೀನ ಸಮಾಜದ ಸಾಹಸದ ಒಂದು ದುರಂತವೆಂದು ಕಮ್ಯುನಿಸ್ಟ್ ಕ್ರಾಂತಿಯ ಕನಸು ಕಂಡ ಡಾಂಗೆಯಂತಹ ಎತ್ತರದ ಮರಾಠಿ ಬುದ್ಧಿಜೀವಿ ಗ್ರಹಿಸಲಿಲ್ಲ.

ಬ್ರಿಟಿಷ್ ಅಧಿಕಾರಿಗೆ ಮಾಹಿತಿ ಒದಗಿಸುವ ಸಲುವಾಗಿ ಕೊಲ್ಹಾಪುರ ದರ್ಬಾರಿನ ಒಬ್ಬ ಅಧಿಕಾರಿಯಾದ ರಾವ್‌ಬಹದೂರ್ ಮಾಧವರಾವ್ ಡೊಂಗ್ರೆ ಅವರು ಶಾಹುರವರ ಸೂಚನೆಯ ಪ್ರಕಾರ ಈಗಾಗಲೇ ಶಾಹುರವರ ಈ ಎಲ್ಲಾ ಪತ್ರಗಳನ್ನು ಸುಮಾರು ೧೯೧೮ರಲ್ಲಿ ಕಿರುಪುಸ್ತಕ ರೂಪದಲ್ಲಿ ಪ್ರಕಟಿಸಿದ್ದರು ಮತ್ತು ಈ ಪುಸ್ತಕವನ್ನು ಚಿರೋಲೆ ಕೇಸಿನಲ್ಲಿ ಉಲ್ಲೇಖಿಸಲಾಗಿದೆ. ಆದರೆ ಈ ಪುಸ್ತಕವನ್ನು ಕೇವಲ ಹಿರಿಯ ಬ್ರಿಟಿಷ್ ಅಧಿಕಾರಿಗಳಿಗೆ ಮಾತ್ರ ಹಂಚಲಾಗಿತ್ತು. ಆ ರೀತಿಯಲ್ಲಿ ನಿರೀಕ್ಷಿಸಲಾಗಿತ್ತು. ಅವರು ನಿರೀಕ್ಷಿಸಿದಂತೆ ಸಂಗತಿಗಳು ನಡೆಯುವುದಿಲ್ಲ. ಈ ಸಮಯದಲ್ಲಿ ಕಾಂಗ್ರೆಸ್ಸಿನ ಅಸಹಕಾರ ಚಳುವಳಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಕರಪತ್ರದಲ್ಲಿ ವ್ಯಕ್ತಪಡಿಸಿದ್ದರು. ಅದು ಪ್ರಿಂಟಾದ ಮುದ್ರಣದಲ್ಲಿ ಸೋರಿಕೆಯಾಗಿತ್ತು. ಅದನ್ನು ಬಾಂಬೆ ಕ್ರಾನಿಕಲ್ ಎಂಬ ದಿನಪತ್ರಿಕೆ ಪಡೆದಿತ್ತು ಮತ್ತು ಅದು 'ಆಂದೋಲನವನ್ನು ಸದೆಬಡಿಯಿರಿ' ಎಂಬ ಬರಿ ಬೆಡಗಿನ ಹೆಸರಿನಲ್ಲಿ ಪ್ರಕಟಿಸಿತು. ಅದರ ಪರವಾಗಿ ಬ್ರಾಹ್ಮಣ ಪತ್ರಿಕೆಗಳು ಶಾಹು ಬಗ್ಗೆ ಬೃಹದಾಕಾರದ ಅಬ್ಬರದ ಟೀಕಾ ಪ್ರಹಾರಗಳನ್ನೇ ನಡೆಸಿದವು.[3] ಈ ಹಗರಣ ತಣ್ಣಗಾಗುವ ಮೊದಲೆ ಕೇಸರಿಯ ಸಂಪಾದಕರು ಮೊದಲು ಹೇಳಿದ ಬಾಂಬ್‌ಷೆಲ್ಲನ್ನು ಶಾಹು ವಿರುದ್ಧ ಎಸೆದರು.

## ಮಿಲಿಟೆಂಟುಗಳ ಬಗ್ಗೆ ಶಾಹು ಧೋರಣೆ

ಭಾರತದ ಸ್ವಾತಂತ್ರ್ಯ ಆಂದೋಲನದ ದೇಶದ್ರೋಹಿಯೆಂದು ಘೋಷಿಸಲು ಶಾಹು ವಿರೋಧಿಗಳು ಮಾಡಿದ ವಿಶ್ವಾಸಘಾತುಕತನವೇನು? ಈ ಪತ್ರಗಳು ಸಂಸ್ಥಾನದಲ್ಲಿ ಮಿಲಿಟೆಂಟರನ್ನು ಹಿಡಿದುಕೊಂಡದ್ದರ ಬಗ್ಗೆ ಮತ್ತು ಅದರಿಂದ ಹೊರಗಿದ್ದವರ ಬಗ್ಗೆ ಸಂಬಂಧಿಸಿವೆ. ಈ ಮೊದಲೆ ಈ ವಿಷಯದ ಬಗ್ಗೆ ಚರ್ಚಿಸಲಾಗಿದೆ ಮತ್ತು ಅದರ ಪುನರಾವೃತ್ತಿ ಬೇಕಾಗಿಲ್ಲ. ಆದರೆ ತನ್ನ ಸಂಸ್ಥಾನದಲ್ಲಿ ಆ ಸಮಯದಲ್ಲಿ ಶಾಹುರವರು ಮಿಲಿಟೆಂಟರ ಬಗ್ಗೆ ಕೈಗೊಂಡ ಕಟ್ಟುನಿಟ್ಟಿನ ಕ್ರಮಗಳ ಸಂದರ್ಭದಲ್ಲಿದ್ದ ರಾಜಕೀಯ ಸನ್ನಿವೇಶಗಳ ಬಗ್ಗೆ ಒಂದೆರಡು ಅಂಶಗಳನ್ನು ಪರಿಶೀಲನೆ ಮಾಡಬೇಕಾಗಿದೆ. ಅವುಗಳು ಈ ರೀತಿಯಿವೆ:

(೧) ಕೊಲ್ಹಾಪುರದ ಹೋರಾಟಗಾರರು (ಮಿಲಿಟೆಂಟ್ಸ್) ಪ್ರಾರಂಭದಲ್ಲಿ ಜಾತಿಗಳ ಭಿನ್ನ ಭಿನ್ನ ಗುಂಪುಗಳಾಗಿದ್ದವು. ವೇದೋಕ್ತ ಸಂಘರ್ಷ ಸ್ಫೋಟಗೊಂಡಾಗ ಅದು ಒಂದು ಗುಂಪಾಗಿ ಮಾರ್ಪಟ್ಟಿತು. ಮುಖ್ಯವಾಗಿ ಬ್ರಾಹ್ಮಣರು. ಈ ಪ್ರಕರಣದಲ್ಲಿ ಅವರಿಗೆ ಪರಾಭವವಾದರೂ ಕೂಡ ಬ್ರಾಹ್ಮಣರು ಶಾಹು ವಿರುದ್ಧ ವೈಮನಸ್ಯವನ್ನು ಮುಂದುವರಿಸಿದರು. ಪೂನಾದ ತಿಲಕರ ಪಕ್ಷ ಗುಪ್ತವಾಗಿ ಅವರಿಗೆ ಬೆಂಬಲ ನೀಡಿತು. ಕೊಲ್ಹಾಪುರದ ಮಿಲಿಟೆಂಟ್ ಆಂದೋಲನ ತೀವ್ರವಾದಿ ಬ್ರಾಹ್ಮಣತ್ವದ ಬಣ್ಣದಿಂದ ಕಲುಷಿತಗೊಂಡಿತ್ತು.

(೨) ದಕ್ಷಿಣದಲ್ಲಿ ಹಲವಾರು ಬ್ರಾಹ್ಮಣರ ಸಾಮಂತರಾಜರ ಸಂಸ್ಥಾನಗಳಿದ್ದವು. ಆದರೆ ಮಿಲಿಟೆಂಟರು ಈ ಸಂಸ್ಥಾನಗಳನ್ನು ಬಿಟ್ಟಿದ್ದರು ಮತ್ತು ಪೂನವನ್ನು ಬಿಟ್ಟರೆ ಕೊಲ್ಹಾಪುರ ಸಂಸ್ಥಾನ ಮಹಾರಾಷ್ಟ್ರದಲ್ಲಿ ಎರಡನೇ ಮಿಲಿಟೆನ್ಸಿಯ ಸಕ್ರಿಯ ಕೇಂದ್ರವಾಗಿತ್ತು. ತನ್ನನ್ನು ತೊಂದರೆಗೆ ಸಿಕ್ಕಿಸುವ ಸಲುವಾಗಿ ತನ್ನ ಸಂಸ್ಥಾನದಲ್ಲಿ ಉದ್ರಿಕ್ತ ಸ್ಥಿತಿಯನ್ನು ಉಂಟುಮಾಡಲು ಮಿಲಿಟೆಂಟರು ಬಯಸುತ್ತಿದ್ದಾರೆಂದು ಶಾಹುರವರಿಗೆ ಮನವರಿಕೆಯಾಗಿತ್ತು.

(೩) ಬ್ರಿಟಿಷರ ಬಗ್ಗೆ ದ್ವೇಷಿಸುವಂತೆಯೇ ಕೊಲ್ಹಾಪುರದ ಮಿಲಿಟೆಂಟ್ಸ್ ಶಾಹು ಬಗ್ಗೆ ದ್ವೇಷಿಸುತ್ತಿದ್ದರು. ಅವರು ಎಲ್ಲಾ ಮಿತಿಗಳನ್ನು ಮೀರಿದ್ದರು ಮತ್ತು ಕೊಲ್ಹಾಪುರದ ರಾಜಕುಮಾರಿಯ ಮದುವೆಯ ಸಮಾರಂಭದಲ್ಲಿ ಬಾಂಬ್ ಸ್ಫೋಟಿಸಿ ಎಲ್ಲರನ್ನು ಕೊಲ್ಲಲು ಯೋಜನೆ (ಸಂಚು) ರೂಪಿಸಿದ್ದರು. ಅವರು ರಾಜಕೀಯ ಏಜೆಂಟರಾದ ಕರ್ನಲ್ ಫೆರೀಸ್ ಅವರನ್ನು ಕೊಲ್ಲಲು ಸಹ ಪ್ರಯತ್ನಿಸಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಶಾಹುರವರನ್ನೇ ಮುಗಿಸಲು ಸಂಚು ಹೂಡಿದ್ದರು. ಈ ಪ್ರಯತ್ನಗಳು ಅವರ ಆಡಳಿತ ಮುಗಿಯುವವರೆಗೆ ಮುಂದುವರೆದಿದ್ದವು.

(೪) ಹೋರಾಟಗಾರರು ಶಾಹುಗೆ ಬದ್ಧವೈರಿಗಳಾದಾಗ ಶಾಹುರವರು ಅವರನ್ನು ಬಗ್ಗುಬಡಿಯಲು ಉಪಾಯವಾಗಿ ಬ್ರಿಟಿಷರ ಕಡೆಗೆ ವಾಲಿದರು. ಅವರು 'ಶತ್ರುವಿನ ಶತ್ರು ನನ್ನ ಸ್ನೇಹಿತ' ಎಂಬ ಸರಳ ತತ್ವವನ್ನು ಅನುಸರಿಸಿದರು.

(೫) ಶಾಹು ಬ್ರಿಟಿಷರ ಸಾಮಂತ ರಾಜನಾಗಿದ್ದದ್ದರಿಂದ ಸಾರ್ವಜನಿಕವಾಗಿ ಬ್ರಿಟಿಷರ ಶತ್ರು ತನ್ನ ಶತ್ರು ಎಂಬ ನಿಲುವನ್ನು ತಾಳಿದರು. ಇದರ ಜೊತೆಗೆ ಅವರು ರಾಜನಾಗಿದ್ದರಿಂದ ಸಂಸ್ಥಾನದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವುದು ಅವರ ಕರ್ತವ್ಯವಾಗಿತ್ತು. ಆದ್ದರಿಂದ

ಹೋರಾಟಗಾರರ ಹಠಮಾರಿತನದ ಬೆದರಿಕೆಯನ್ನು ಅಡಗಿಸಬೇಕಾಗಿತ್ತು. ಈ ಪರಿಸ್ಥಿತಿಗಳಲ್ಲಿ ಶಾಹುರವರು ಹೋರಾಟಗಾರರ ಪರವಾಗಿರಬೇಕೆಂದು ಅಥವಾ ಅವರನ್ನು ಹಿಡಿಯುವ ಬದಲಿಗೆ ಅವರು ಉದಾಸೀನವಾಗಿರಬೇಕೆಂದು ನಿರೀಕ್ಷಿಸುವುದು ಸರಿಯಲ್ಲ.

(೬) ರಾಷ್ಟ್ರೀಯ ಸ್ವಾತಂತ್ರ್ಯದ ಆಕಾಂಕ್ಷೆಯನ್ನು ಜೀವಂತವಾಗಿಡುವ ವಿಧಾನವೇ ರಾಷ್ಟ್ರೀಯ ಮಿಲಿಟೆನ್ಸಿಯಾಗಿತ್ತೆಂಬ ಸಮಕಾಲೀನ ರಾಜಕಾರಣದ ಸಂಗತಿಯನ್ನು ಶಾಹುರವರು ಮರೆತಿದ್ದರೆಂದು ಹೇಳುವುದು ಹಾಸ್ಯಾಸ್ಪದವಾಗುತ್ತದೆ. ಅವರು ಈ ಬಗ್ಗೆ ಚೆನ್ನಾಗಿ ಅರಿತಿದ್ದರು ಮತ್ತು ಗುಪ್ತವಾಗಿ ಮಹಾಕ್ರಾಂತಿಕಾರಿ ದೇಶಭಕ್ತ ಅರವಿಂದ ಘೋಷ್ ಅವರಿಗೆ ಸಹಾಯ ಮಾಡಿದ್ದರು. ರಾಷ್ಟ್ರೀಯ ಮಟ್ಟದಲ್ಲಿನ ಮಿಲಿಟೆಂಟ್ ಚಟುವಟಿಕೆಗಳ ಬಗ್ಗೆ ಅವರಿಗೆ ಸಹಾನುಭೂತಿಯಿತ್ತೆಂಬುದನ್ನು ಇದು ಗಮನಿಸುತ್ತದೆ. ಆದರೂ ಕೊಲ್ಹಾಪುರದ ಹೋರಾಟಗಾರರು ಮಹಾರಾಷ್ಟ್ರದ ಮಿಲಿಟೆಂಟರ ಸಹಾಯದಿಂದ ತಮ್ಮ ವಿರುದ್ಧ ಸಂಚು ಹೂಡುವುದನ್ನು ಮುಂದುವರೆಸಿದ್ದರಿಂದ ಅವರು ಅವರ ವಿರುದ್ಧ ದಿಟ್ಟಕ್ರಮಗಳನ್ನು ಕೈಗೊಂಡರು. ಅವರನ್ನು ಮಟ್ಟಹಾಕಲು ಅವರು ಬ್ರಿಟಿಷ್ ಸರಕಾರದೊಂದಿಗೆ ವ್ಯೂಹರಚನೆ ವ್ಯವಸ್ಥೆಗಳಿಗಾಗಿ ಮತ್ತೆ ಮತ್ತೆ ಪತ್ರವ್ಯವಹಾರ ನಡೆಸುತ್ತಿದ್ದರು.

ತಮ್ಮ ಸಂಸ್ಥಾನದಲ್ಲಿ ಮಿಲಿಟೆನ್ಸಿನ ಬಗೆಗಿನ ಶಾಹುರವರ ಧೋರಣೆಯನ್ನು ಈ ಕೆಳಗಿನ ಅಂಶಗಳ ಬೆಳಕಿನಡಿಯಲ್ಲಿ ಮೌಲ್ಯಮಾಪನ ಮಾಡಬೇಕಾಗಿದೆ. ಆದರೆ ಹೋರಾಟಗಾರರ ಚಟುವಟಿಕೆಗಳು ಸ್ವತಃ ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನದ ಭಾಗವಾಗಿರುವುದರಿಂದ ಈ ಬಗ್ಗೆ ಯಾವುದೇ ವಿರೋಧವಾದರೂ ಅದು ರಾಷ್ಟ್ರೀಯ ಸ್ವಾತಂತ್ರ್ಯದ ವಿರೋಧವಾಗುತ್ತದೆಯೆಂಬ ಸಮೀಕರಣಕ್ಕೆ ಶಾಹು ವಿರೋಧಿಗಳು ಗಂಟು ಬಿದ್ದಿದ್ದರು. ಈ ಮನೋಭಾವದಿಂದ ಕೂಡಿದ ಅವರು ಶಾಹುರವರು ಮಿಲಿಟೆಂಟರ ವಿರುದ್ಧ ಕೈಗೊಂಡ ಕ್ರಮಗಳನ್ನು ಸ್ವಾತಂತ್ರ್ಯಕ್ಕೆ ಎಸಗಿದ ದ್ರೋಹ ಎಂದು ಹಣೆಪಟ್ಟಿ ಹಚ್ಚತೊಡಗಿದರು. ಶಾಹುರವರು ಹೃದಯದ ಅಂತರಾಳದಲ್ಲಿ ಅವರೊಬ್ಬ ಮಣ್ಣಿನ ಮಗ ಮತ್ತು ದೇಶಭಕ್ತ, ಬ್ರಿಟಿಷ್ ವಸಾಹತುಶಾಹಿಗಳಿಗೆ ಕೊನೆಯಿಲ್ಲವೆಂದು ಕೋಪಗೊಂಡಿದ್ದರು ಮತ್ತು ಸಶಸ್ತ್ರ ಕ್ರಾಂತಿಕಾರಿಗಳ ಬಗ್ಗೆ ಬೆಚ್ಚನೆಯ ಮಮಕಾರವನ್ನು ಹೊಂದಿದ್ದರೆಂದು ಹಲವರು ಸಾಕ್ಷ್ಯಾಧಾರಗಳಿಂದ ಹೇಳುತ್ತಾರೆ. ಕೆಲವು ಬಾರಿ ತಮ್ಮ ಆತ್ಮೀಯರೊಡನೆ ಮಾತನಾಡಿದ ಸಂಭಾಷಣೆಗಳಲ್ಲಿ ಈ ಭಾವನೆಗಳು ಹೊರಬಂದಿದ್ದರೂ ಅವರು ಇವುಗಳನ್ನು ಬಹಿರಂಗವಾಗಿ ಹೇಳಿಲ್ಲ. ತೋಪಖಾನೆ ಅವರು ತಮ್ಮ ಆತ್ಮಚರಿತ್ರೆಯಲ್ಲಿ ಅಂತಹ ಘಟನೆಗಳನ್ನು ಹೇಳಿದ್ದಾರೆ. ಶಾಹುರವರ ವಿರುದ್ಧದ ದೇಶದ್ರೋಹದ ಆರೋಪದ ಬಗ್ಗೆ ಮಾತನಾಡುತ್ತಾ ಹೇಳುತ್ತಾರೆ: "ಬರೋಡದ ಖಾಸೆರಾವ್ ಜಾಧವ ಅವರ ಸಹೋದರ ಮಾಧವರಾವ್ ಅವರೊಡನೆ ಅರವಿಂದ ಘೋಷರಿಗೆ ೫,೦೦೦ ರೂಪಾಯಿಗಳನ್ನು ಕಳುಹಿಸಿಕೊಟ್ಟಿದ್ದರು ಮತ್ತು ಬ್ರಿಟಿಷ್ ಸರಕಾರ ಅವರ ಮೇಲೆ ರಾಜದ್ರೋಹ ಆರೋಪವನ್ನು ಹೊರಿಸಿದ್ದಾಗ ಅವಶ್ಯಕತೆಯಿದ್ದರೆ ಮತ್ತಷ್ಟು ಹಣ ಕಳುಹಿಸಲು ನಾನು ಸಿದ್ಧ ಎಂದು ಹೇಳಿ ಕಳುಹಿಸಿದ್ದರು. ಕೇಸರಿ ಲೇಖಕರು ಇದು ಹೇಗೆ ಸ್ವಾತಂತ್ರ್ಯಕ್ಕೆ ದ್ರೋಹ ಹೇಗಾಗುತ್ತದೆಯೆಂಬುದನ್ನು ವಿವರಿಸಲಿ? ......ಈ ಸಂಚು ಎಷ್ಟರಮಟ್ಟಿಗೆ ಜನರ ದೃಷ್ಟಿಯಲ್ಲಿ ನನ್ನನ್ನು ಕೀಳುಮಟ್ಟಕ್ಕೆ ಇಳಿಸುವುದರಲ್ಲಿ ಸಫಲವಾಗುತ್ತದೆ? ಯಾರಾದರು ನನ್ನನ್ನು ಧೈರ್ಯದಿಂದ ನಾನು ಸ್ವಾತಂತ್ರ್ಯದ ದ್ರೋಹಿ ಎಂದು ಕೂಗಿ ಹೇಳಿದರೂ ಜನರು ಇದನ್ನು ನಂಬುವುದಿಲ್ಲ. ಏಕೆಂದರೆ, ಸ್ವಾತಂತ್ರ್ಯದ ದ್ರೋಹವು ಜನರ ಭಾಗವಾಗಿರುವ ನನಗೆ ನಾನೇ ದ್ರೋಹ

ಮಾಡಿದಂತಾಗುತ್ತದೆ. ಯಾರಾದರು ಇದರ ಬಗ್ಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದರೆ ಈ ವಾದವು ಎದ್ದು ನಿಲ್ಲುವುದಿಲ್ಲ. ತನಗೆ ತಾನೇ ದ್ರೋಹ ಮಾಡಿಕೊಳ್ಳುವುದು ಹೇಗೆ ಸಾಧ್ಯ"?.[4]

## ಶಾಹು ಸ್ವರಾಜ್ಯದ ನಿಜವಾದ ಪ್ರಮುಖ ವ್ಯಕ್ತಿ

ಕೇಸರಿ ಪತ್ರಿಕೆಯ ಸಂಪಾದಕರು ಶಾಹು ವಿರುದ್ಧ ಮಾಡಿದ ಸ್ವಾತಂತ್ರ್ಯ ಆಂದೋಲನಕ್ಕೆ ಮಾಡಿದ ವಿಶ್ವಾಸದ್ರೋಹದ ಆರೋಪದ ಪರಿಣಾಮಗಳು ಶಾಹು ಸಾವಿನ ನಂತರವೂ ಮಹಾರಾಷ್ಟ್ರದ ಸಾಮಾಜಿಕ–ರಾಜಕೀಯ ವಲಯಗಳಲ್ಲಿ ಹರಿದಾಡುವಿಕೆಯು ಮುಂದುವರಿದಿತ್ತು. ಬ್ರಾಹ್ಮಣರು ತಯಾರುಮಾಡಿದ ಮಿಥ್ಯಾರೋಪಗಳನ್ನು ಬ್ರಾಹ್ಮಣೇತರರ ಪತ್ರಿಕೆಗಳಾದ ಜಾಗೃತಿ, ವಿಜಯಿ ಮರಾಠ, ರಾಷ್ಟ್ರವೀರ ಮೊದಲಾದವುಗಳು ಸಮರ್ಥವಾಗಿ ನಿರಾಕರಿಸಿದವು. ಮತ್ತು ತಪ್ಪೆಂದು ಸಾಧಿಸಿ ತೋರಿಸಿದವು. ಸ್ವರಾಜ್ಯದ ನಿಜವಾದ ಅರ್ಥವನ್ನು ತಿಳಿದುಕೊಂಡರೆ ಶಾಹುರವರು ನಿಜವಾದ ಸ್ವರಾಜ್ಯದ ಪರವಾಗಿದ್ದರು ಮತ್ತು ಯಾರು ಈ ಆರೋಪಗಳನ್ನು ಮಾಡಿದರು ಅವರು ನಿಜವಾಗಿ ಇದರ ನಿಜವಾದ ದ್ರೋಹಿಗಳೆಂದು ಅವುಗಳು ಸಮರ್ಥವಾದಗಳನ್ನು ಮಂಡಿಸಿದ್ದರು. 'ರಾಷ್ಟ್ರವೀರ' ಪತ್ರಿಕೆಯ ಸಂಪಾದಕ ಶ್ಯಾಮರಾವ್ ದೇಸಾಯಿ ಹೇಳುತ್ತಾರೆ: "ಕಲಿಕೆ (ವಿದ್ಯೆ) ಮತ್ತು ಆತ್ಮ–ಗೌರವಗಳ ಸಂಗಮವನ್ನು ಬಹುಮಟ್ಟಿಗೆ ಜನತಾಂತ್ರಿಕ ಸ್ವರಾಜ್ಯದ ಉಗಮವೆಂದು ಭಾವಿಸಲಾಗುತ್ತದೆ. ಯಾರಾದರು ಜನರಲ್ಲಿ ಶಿಕ್ಷಣವನ್ನು ಕಲಿಸಿ, ಅವರಲ್ಲಿ ಆತ್ಮ–ಗೌರವವನ್ನು ತುಂಬುವ ಮೂಲಕ ಅವರನ್ನು ಸಂಪದ್ಭರಿತರನ್ನಾಗಿ ಮಾಡಲು ಪ್ರಯತ್ನಿಸಿದರೆ ಅದನ್ನು ಸ್ವರಾಜ್ಯದ ಪೂಜೆಯೆಂದೆ ಕರೆಯಬೇಕು. ಅದು ಪ್ರಜ್ಞಾಪೂರ್ವಕವಾಗಿರಲಿ ಅಥವಾ ಅಪ್ರಜ್ಞಾಪೂರ್ವಕವಾಗಿರಲಿ ಇದರ ಬಗ್ಗೆ ಎರಡು ಮಾತಿಲ್ಲ. ರಾಜರ್ಷಿ ಅವರು ತನ್ನ ಪ್ರಜೆಗಳನ್ನು ಸಾಕ್ಷರಸ್ಥರನ್ನಾಗಿ ಮಾಡಲು ಮತ್ತು ಅವರಲ್ಲಿ ಆತ್ಮ–ಗೌರವ ಮೂಡಿಸಲು ವಿಶೇಷ ಕ್ರಮಗಳನ್ನು ಕೈಗೊಂಡಿದ್ದರೆ ದೇಶಭಕ್ತಿಯ ಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಜೋರಾಗಿ 'ಸ್ವರಾಜ್ಯ ನನ್ನ ಜನ್ಮಸಿದ್ಧಹಕ್ಕು' ಎಂದು ಕೂಗುವವರಿಗಿಂತ ಮಿಗಿಲಾಗಿ ಸ್ವರಾಜ್ಯದ ನಿಜವಾದ ಪೂಜಾರಿಗಳೆಂದು ನಾಗರಿಕ ಸಮಾಜ ಒಪ್ಪಬೇಕಾಗಿದೆ. ಇಂಥ ಸನ್ನಿವೇಶಗಳಲ್ಲಿ ಯಾರಾದರು ಶಾಹುರವರು ಜನತಂತ್ರದ ಪ್ರತಿಪಾದಕರಲ್ಲ ಎಂದು ಹೇಳಿ ಅಸ್ಪೃಶ್ಯತೆಯನ್ನು ಸಮರ್ಥಿಸಿಕೊಂಡವರು, ಜಾತಿ ತಾರತಮ್ಯತೆಯನ್ನು ಮುಂದುವರಿಸಬಯಸಿದವರು, ಕಡ್ಡಾಯ ಶಿಕ್ಷಣವನ್ನು ವಿರೋಧಿಸಿದವರು, ಮರಾಠ ಶಾಸನಪರಿಷತ್ತುಗಳ ಸದನಗಳಲ್ಲಿ ಉಳುಮೆಮಾಡಿ ಅಥವಾ ವಾಣಿ (ವೈಶ್ಯ) ಗಳು ದವಸ–ಧಾನ್ಯಗಳನ್ನು ತೂಕಮಾಡಲಿ ಎಂದು ಒಣಹರಟೆ ಮಾಡಿದವರು ಸಾರ್ವಜನಿಕ ಸೇವೆಗಳ ನೆಪದಲ್ಲಿ ಬ್ರಾಹ್ಮಣರಲ್ಲಿಯೇ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಅಧಿಕಾರಗಳಿರಬೇಕೆಂದು ಮೋಸಗಳನ್ನು ಮಾಡುವವರು ಮತ್ತು 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂದು ಘೋಷಣೆ ಕೂಗುವವರು......ಜನತಂತ್ರದ ನಾಯಕರಾಗುವುದಕ್ಕೆ ನಿಜವಾಗಿ ಅರ್ಹರಾಗುವರೆ"?.[5]

ಶಾಹುರವರ ಜೀವನಚರಿತ್ರೆಕಾರರಾದ ಲಠ್ಠೆ ಮತ್ತು ಕೀರ್ ಅವರು ಈ ಚಿಂತನೆಯ ನಿಲುವನ್ನು ಎತ್ತಿಹಿಡಿಯುತ್ತಾರೆ. ಕೀರ್ ಅವರು ಮತ್ತೆ ವ್ಯಾಖ್ಯಾನಿಸುತ್ತಾರೆ: "ಮಹಾರಾಷ್ಟ್ರದ ಶೇಕಡ ೯೫ ರಷ್ಟು ಜನರ ಆಸಕ್ತಿಗಳ ದೃಷ್ಟಿಯಿಂದ ಈ ಪ್ರಶ್ನೆಯನ್ನು ಪರಿಗಣಿಸಿದರೆ, ಶಾಹುರವರನ್ನು ಜನರ ಅಥವಾ ಸ್ವರಾಜ್ಯದ ದ್ರೋಹಿ ಎಂದಾಗಲಿ ದೂಷಿಸುವುದಕ್ಕೆ ಆಗುವುದಿಲ್ಲ. ಮಿಗಿಲಾಗಿ ಅಂಥ ಗುಣವಾಚಕಗಳು ನಲವತ್ತು ವರ್ಷಗಳಿಂದಲೂ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಗಳನ್ನು ಕಟುವಾಗಿ ವಿರೋಧಿಸುತ್ತಾ ಬಂದಿರುವ ಕೇಸರಿ ಪತ್ರಿಕೆಗೆ ಸೂಕ್ತವಾಗಿ ಹೊಂದುತ್ತವೆ".[6]

ರಾಷ್ಟ್ರೀಯ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರ ಬುದ್ಧಿಜೀವಿಗಳ ನಡುವೆ ಸ್ವರಾಜ್ಯ ಪರಿಕಲ್ಪನೆಯ ಪ್ರಮುಖ ಭಿನ್ನಾಭಿಪ್ರಾಯಗಳಿರುವುದು ಸುಸ್ಪಷ್ಟವೆಂದು ಮೇಲಿನ ಚರ್ಚೆಗಳಿಂದ ಸ್ಪಷ್ಟವಾಗುತ್ತದೆ. ಬ್ರಾಹ್ಮಣ ರಾಷ್ಟ್ರೀಯವಾದಿಗಳು ರಾಜಕೀಯ ಹಕ್ಕುಗಳೆ ಸ್ವರಾಜ್ಯವೆಂದು ಸಂಕುಚಿತವಾಗಿ ವ್ಯಾಖ್ಯಾನಮಾಡಿದರೆ, ಬ್ರಾಹ್ಮಣೇತರ ರಾಷ್ಟ್ರೀಯವಾದಿಗಳು ಕೇಳಿದ ಸ್ವರಾಜ್ಯದಲ್ಲಿ ಸಾಮಾಜಿಕ ಹಕ್ಕುಗಳ ಜೊತೆಗೆ ರಾಜಕೀಯ ಹಕ್ಕುಗಳಿರುತ್ತವೆ. ಅದು ಆಗಲ್ಲ, ಸಾಮಾಜಿಕ ಹಕ್ಕುಗಳು ರಾಜಕೀಯ ಹಕ್ಕುಗಳನ್ನು ಪಡೆಯುವುದಕ್ಕೆ ಮೊದಲು ಸಾಧಿತವಾಗಿರಬೇಕೆಂದು ಹೇಳುತ್ತಾರೆ. ಶಾಹು ಮಹಾರಾಜರು ಹಲವಾರು ಭಾಷಣಗಳಲ್ಲಿ ಸ್ವರಾಜ್ಯದ ಬಗ್ಗೆ ತಮ್ಮ ಚಿಂತನೆಗಳನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಬ್ರಾಹ್ಮಣೇತರರ ಸಮಾಜವು ಮೊದಲು ಸ್ವರಾಜ್ಯವನ್ನು ಅನುಭವಿಸಲು ಅರ್ಹವಾಗಿದೆ. ಅದು ಉಂಟಾಗಬೇಕಾದರೆ ಜಾತಿಭೇದ ಹೊರಟುಹೋಗಬೇಕು ಮತ್ತು ಕೆಳಜಾತಿಗಳ ಸ್ಥಾನಮಾನ ಸುಧಾರಿಸುವುದು. ಅವರು ಕನಿಷ್ಠಪಕ್ಷ ಪ್ರಾಥಮಿಕ ಶಿಕ್ಷಣವನ್ನು ಪಡೆಯಬೇಕು. ೧೯೧೭ರ ಖಾಮ್‌ಗಾವ್ ಸಮ್ಮೇಳನದಲ್ಲಿ ಅವರು ಹೇಳಿದ್ದಾರೆ: 'ಸ್ವರಾಜ್ಯದ ಹಂಬಲ ಎಲ್ಲಾ ಮೂಲೆಗಳಿಂದಲೂ ಕೇಳಿಬಂದಿದೆ. ನಾವು ಸ್ವರಾಜ್ಯಕ್ಕೆ ಪಾತ್ರರೊ ಅಥವಾ ಅಲ್ಲವೊ ಎಂಬುದೇ ಅತಿಮುಖ್ಯವಾದ ಪ್ರಶ್ನೆಯಲ್ಲ. ನಾವು ಖಂಡಿತವಾಗಿ ಸ್ವರಾಜ್ಯವನ್ನು ಬಯಸುತ್ತೇವೆ ಆದರೆ ನಮ್ಮ ಜಾತಿ ತಾರತಮ್ಯತೆಗಳು ಮತ್ತು ದ್ವೇಷಾಸೂಯೆಗಳು ಇರುವವರೆಗೆ ನಾವು ನಮ್ಮಲ್ಲೇ ಬಡಿದಾಡುತ್ತಿರುತ್ತೇವೆ ಮತ್ತು ನಮ್ಮ ಆಸಕ್ತಿಗಳಿಗೆ ಗಂಡಾಂತರ ತಂದುಕೊಳ್ಳುತ್ತೇವೆ. ನಮ್ಮ ಒಳಗಿರುವ ಜಗಳ ಕಿತ್ತಾಟಗಳಿಂದ ಮುಕ್ತಿ ಪಡೆಯಬೇಕು ಮತ್ತು ಸ್ವರಾಜ್ಯಕ್ಕೆ ನಾವು ಪಾತ್ರರಾಗಬೇಕಾದರೆ ನಮ್ಮಲ್ಲಿ ಅನಿಷ್ಟ ಬಿತ್ತುವ ಜಾತಿಪದ್ಧತಿಯನ್ನು ಕಿತ್ತೆಸೆಯಬೇಕು."[7]

ಶಾಹುರವರ ವಿರೋಧಿಗಳು ಅಂತಹ ಹೇಳಿಕೆಗಳನ್ನು ತಪ್ಪಾಗಿ ವ್ಯಾಖ್ಯಾನ ಮಾಡಿದ್ದಾರೆ ಮತ್ತು ಅವರು ತಮ್ಮ ಪ್ರಜೆಗಳಿಗೆ ಸ್ವರಾಜ್ಯದ ಹಕ್ಕುಗಳನ್ನು ಕೊಡಲು ವಿರುದ್ಧವಾಗಿದ್ದಾರೆಂದು ಬೊಬ್ಬೆಹಾಕುತ್ತಾರೆ. ಈ ಆಪಾದನೆಗಳನ್ನು ನಿರಾಕರಿಸುತ್ತಾ ಶಾಹುರವರು ೧೯೨೦ರ ತಮ್ಮ ಭಾಷಣದಲ್ಲಿ ಸ್ವರಾಜ್ಯದ ಬಗ್ಗೆ ತಮ್ಮ ಸ್ಪಷ್ಟ ನಿಲುವನ್ನು ಹೇಳಿದ್ದಾರೆ. ಅವರು ಹೇಳುತ್ತಾರೆ: "ನನ್ನ ಜನರಿಗೆ ಸ್ವರಾಜ್ಯ ನೀಡಲು ನಾನು ಸಿದ್ಧವಾಗಿಲ್ಲವೆಂದು ನನ್ನ ವಿರುದ್ಧ ಹಲವು ಪತ್ರಿಕೆಗಳ ಸಂಪಾದಕರು ಆಪಾದನೆಗಳನ್ನು ಮಾಡಿದ್ದಾರೆ. ನನ್ನ ಹೇಳಿಕೆಯನ್ನು ತಿರುಚಿ ತಪ್ಪುಗ್ರಹಿಕೆಯನ್ನು ಹರಡುವ ಸಲುವಾಗಿ ಮಾಡಿದ ಸುಳ್ಳು ಆಪಾದನೆಯಾಗಿದೆ. ಮತ್ತು ನಾನು ಈ ಬಗ್ಗೆ ವಿಷಾದಿಸುತ್ತೇನೆ. ಬ್ರಾಹ್ಮಣೇತರರ ಸಮಾಜದ ಶಿಕ್ಷಣಮಟ್ಟಗಳು ಸುಧಾರಿಸದ ಹೊರತು ಮತ್ತು ಮೇಲ್ವರ್ಗಗಳ ಮಟ್ಟಗಳವರೆಗೆ ಬರದ ಹೊರತು ನನ್ನ ಸಂಸ್ಥಾನದಲ್ಲಿ ಆಡಳಿತದಲ್ಲಿ ಜನರಿಗೆ ಹಕ್ಕುಗಳನ್ನು ನೀಡುವ ಸುಧಾರಣೆಗಳ ಬಗ್ಗೆ ನಾನು ಯಥಾಸ್ಥಿತಿಯನ್ನು ಬದಲಾಯಿಸುವುದಿಲ್ಲ ಎಂದು ಹೇಳಿದ ಭಾಷಣದ ಮೇರೆಗೆ ಈ ಆಪಾದನೆಯನ್ನು ಮಾಡುತ್ತಿದ್ದಾರೆ. ನನ್ನ ಹೇಳಿಕೆಯನ್ನು ಹೇಗೆ ತಿರುಚಿದ್ದಾರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮತದಾರ ಸಮುದಾಯ ತನ್ನ ಹಕ್ಕುಗಳನ್ನು ಅರಿತುಕೊಂಡು ಮತ್ತು ಅವುಗಳನ್ನು ಬಳಸಲು ಸಮರ್ಥರಾಗುವವರೆಗೆ ಮತ್ತು ಅತ್ಯಂತ ಕೆಳಜಾತಿಗಳು ವಿದ್ಯೆಯ ರುಚಿ ಪಡೆಯುವವರೆಗೆ ಸ್ವರಾಜ್ಯ ನೀಡುವುದು ಕ್ಷೇಮಕರವೆಂದು ನಾನು ಭಾವಿಸಿಲ್ಲ. ಅಂತಹ ಹಕ್ಕುಗಳನ್ನು ನೀಡಿದರೆ ಶೇಕಡ ೬೦ರಿಂದ ೭೦ರಷ್ಟು ಜನರು ಸಿದ್ಧವಾಗಿಲ್ಲ, ಅವು ಅಲ್ಪಸಂಖ್ಯಾತರಿಗೆ ದಕ್ಕುತ್ತವೆ ಮತ್ತು ನಮ್ಮ ದೇಶ ಜಾತಿ ತಾರತಮ್ಯತೆಯಿಂದ ಪೀಡಿತವಾಗಿದೆ. ಅವು ಒಂದು ಜಾತಿಗೆ ಇತರೆ ಜಾತಿಗಳನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಅವು ಸಂಚಿತಗೊಂಡು ಅವಕಾಶ ಕಲ್ಪಿಸಿಕೊಡುತ್ತವೆ. ಆರ್ಯರ ಮತ್ತು ಅನಾರ್ಯರ

ಪ್ರಾಚೀನ ಇತಿಹಾಸ ಮತ್ತು ಪೇಶ್ವೆಗಳ ತೀರಾ ಇತ್ತೀಚಿನ ಇತಿಹಾಸಗಳು ನನ್ನ ಸಮರ್ಥನೆಯ ಅಂಶವನ್ನು ರುಜುವಾತುಪಡಿಸುತ್ತವೆ. ಸ್ವ-ಪ್ರಗತಿಯ ವಿಧಾನಗಳ ನಿಯಂತ್ರಣದೊಳಗೆ ಒಳ್ಳೆಯ ಜನರು ಸಹ ಕೆಟ್ಟ ಕ್ರೂರಿಗಳಾಗಿ ಬದಲಾಗುತ್ತಾರೆ. ಹಲವಾರು ತಲೆಮಾರುಗಳವರೆಗೆ ಜನರನ್ನು ಗುಲಾಮತ್ವದಲ್ಲಿ ಕೊಳೆಯುವಂತೆ ಮಾಡುತ್ತಿರುವ ಅಧಿಕಾರಸ್ಥರ ಕೈಗೆ ಮತ್ತೆ ಅಧಿಕಾರ ಹೋಗದಂತೆ ತಡೆಯುವ ಎಚ್ಚರಿಕೆಯ ಅಗತ್ಯವಿದೆಯೆಂದು ನಾನು ವಿಸ್ತರಿಸಿ ಹೇಳಬೇಕಾಗಿಲ್ಲ ಮತ್ತು ಅವರು ಅದೇ ವರ್ತನೆಯಿಂದ ಮುಂದುವರಿಯುವ ಅಪೇಕ್ಷೆ ಸ್ಪಷ್ಟವಾಗಿ ಗೋಚರಿಸುತ್ತಿದೆ."[8]

ಶಾಹುರವರು ಅದೇ ಭಾಷಣದಲ್ಲಿ ತನ್ನ ಪ್ರಜೆಗಳಿಗೆ ಸ್ವರಾಜ್ಯದ ಹಕ್ಕುಗಳನ್ನು ನೀಡಲು ಬಯಸಿದ್ದರೆಂಬುದನ್ನು ವ್ಯಕ್ತಪಡಿಸಿದ್ದರು. ಅವರು ಹೇಳುತ್ತಾರೆ: "ನನ್ನ ಪ್ರಜೆಗಳಿಗೆ ಪ್ರಾಥಮಿಕ ಮತ್ತು ಉಚ್ಚಶಿಕ್ಷಣ ನೀಡುವ ಮತ್ತು ಹರಡುವ ಬಗ್ಗೆ ನಾನು ಮಾಡಿದ ಪ್ರಯತ್ನಗಳ ರೀತಿಯಲ್ಲಿ ನಾನು ನನ್ನ ಪ್ರಜೆಗಳಿಗೆ ಆದಷ್ಟು ಬೇಗನೇ ಸ್ವರಾಜ್ಯವನ್ನು ನೀಡುವ ನೀತಿಯನ್ನು ನೀವು ಖಂಡಿತವಾಗಿ ಕಂಡುಕೊಳ್ಳಬಹುದು. ನನ್ನ ಪ್ರಜೆಗಳು ಕನಿಷ್ಠ ಮೂರನೆಯ ತರಗತಿ ಪಾಸಾದರೆ ನಾನು ಖುಷಿಯಿಂದ ಆಡಳಿತ ನಡೆಸುವ ಹಕ್ಕುಗಳನ್ನು ನೀಡುತ್ತಿದ್ದೆ ಮತ್ತು ನಾನು ಇಂದೇ ವಿರಾಮಕ್ಕಾಗಿ ನಿವೃತ್ತಿ ಹೊಂದುತ್ತಿದ್ದೆ. ನನ್ನ ಮತ್ತು ನನ್ನ ಪೂರ್ವಿಕರು ವೈಯಕ್ತಿಕ ಖರ್ಚುಗಳಿಗೆ ತೆಗೆದುಕೊಳ್ಳುತ್ತಿದ್ದಷ್ಟೇ ಮೊತ್ತವನ್ನು ನಾನು ತೆಗೆದುಕೊಳ್ಳಲು ಮತ್ತು ಅವರ ಅಭಿವೃದ್ಧಿಗಾಗಿ ಜನತೆಯ ಪ್ರತಿನಿಧಿಗಳ ಮೂಲಕ ಖರ್ಚುಮಾಡಲು ನಾನು ಪ್ರಜೆಗಳನ್ನು ಕೇಳಿಕೊಳ್ಳಲು ನಿರ್ಧರಿಸಿದ್ದೆ.... ಇಂದು ನಾನು ಎಲ್ಲಾ ಆಡಳಿತದ ಕೆಲಸವನ್ನು ಮಾಡಬೇಕಾಗಿದೆ. ಜನರು ಕೇವಲ ತೆರಿಗೆಗಳನ್ನು ನೀಡುತ್ತಿದ್ದಾರೆ. ನಂತರ ಅವರು ತೆರಿಗೆ ನೀಡುವುದಕ್ಕೆ ಮತ್ತು ಅದನ್ನು ಖರ್ಚು ಮಾಡುವುದಕ್ಕೆ ಅವರೇ ಹೊಣೆಗಾರರಾಗುತ್ತಾರೆ. ಆದರೆ ನನ್ನ ಪ್ರಜೆಗಳು ಕನಿಷ್ಠಪಕ್ಷ ಭಾಗಶಃ ಈ ಹೊಣೆಯನ್ನು ನಿಭಾಯಿಸಲು ಸಾಕಷ್ಟು ಸಿದ್ಧರಾಗಿರಬೇಕು. ನನ್ನ ಪ್ರಜೆಗಳಲ್ಲಿ ಒಂದು ಭಾಗ ಪರಿಪೂರ್ಣ ವಿದ್ಯಾವಂತರಾಗುವ ಬದಲಿಗೆ ಇಡೀ ಜನಸಂಖ್ಯೆ ಪ್ರಾಥಮಿಕ ಶಿಕ್ಷಣವನ್ನು ಪಡೆಯಬೇಕೆಂಬುದು ನನ್ನ ಅಭಿಪ್ರಾಯ. ಹಕ್ಕುಗಳನ್ನು ಚಲಾಯಿಸುವುದಕ್ಕೆ ಶೇಕಡ ೭೦ರಿಂದ ೮೦ ಜನಸಂಖ್ಯೆ ಸಾಕಷ್ಟು ಸಿದ್ಧತೆಗಳನ್ನು ಮಾಡಿಕೊಳ್ಳದಿರುವಾಗ ವಿದ್ಯಾವಂತರಾದ ಅಲ್ಪಸಂಖ್ಯಾತರಲ್ಲಿ ಅಧಿಕಾರ ಕೇಂದ್ರೀಕೃತವಾಗಿ ಸ್ವದೇಶೀ ನೌಕರಶಾಹಿಯನ್ನು ನಿರ್ಮಾಣಮಾಡುತ್ತದೆ. ನಾವು ಈ ಸಾಕ್ಷರಸ್ಥ ಆಡಳಿತಶಾಹಿಯ ಅತಿರೇಕಗಳನ್ನು ಚೆನ್ನಾಗಿ ಬಲ್ಲೆವು."[9]

"..... ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳ ನಡುವಣ ಆದ್ಯತೆಯ ವಿವಾದವು ಒಂದು ಸುಸಂಬದ್ಧ ವಿವಾದವಲ್ಲ. ಈ ಎರಡು ಸುಧಾರಣೆಗಳು ಪ್ರತ್ಯೇಕವಲ್ಲ, ಅವು ಪರಸ್ಪರ ಒಂದೊಂದಕ್ಕೊಂದು ಸೇರಿಕೊಂಡಿವೆ. ಅವು ರಾಷ್ಟ್ರದ ಅಭಿವೃದ್ಧಿಯ ಬಂಡಿಯ ಎರಡು ಚಕ್ರಗಳಿದ್ದಂತೆ! ಒಂದು ಚಕ್ರದಿಂದ ಬಂಡಿಯನ್ನು ನಡೆಸುವುದಕ್ಕೆ ಸಾಧ್ಯವೇ? ಇದು ಸಾಮಾನ್ಯಪ್ರಜ್ಞೆ, ಪಾಶ್ಚಿಮಾತ್ಯ ದೇಶಗಳ ಅನುಭವವು ಇದನ್ನೇ ಹೇಳುತ್ತದೆ. ಯಾರಾದರೂ ರಾಜಕೀಯ ಹಕ್ಕುಗಳು ಮೊದಲು, ಸಾಮಾಜಿಕ ಹಕ್ಕುಗಳಿಗೆ ಆತುರಪಡುವ ಹಾಗಿಲ್ಲ ಎಂದು ಯಾರಾದರೂ ಹೇಳಿದರೆ ಅದರಲ್ಲಿ ಏನೋ ಗುಟ್ಟು ಅಡಗಿದೆ. ಅಂತಹ ಮಾತುಗಳು ಮೋಸದ ಕಾವ್ಯವಾಗುತ್ತದೆ. ವಾಸ್ತವಿಕವಾಗಿ ಬ್ರಿಟಿಷ್ ಸರಕಾರವು ನೇರವಾಗಿ ತನ್ನ ಅಧೀನಕ್ಕೆ ಶಿಕ್ಷಣವನ್ನು ತೆಗೆದುಕೊಂಡು ಅದನ್ನು ಸೂಕ್ತವಾಗಿ ಎಲ್ಲಾ ಕಡೆಗೂ ಪ್ರಸಾರಮಾಡಿದ ನಂತರ ಸ್ವರಾಜ್ಯದ ಹಕ್ಕುಗಳನ್ನು ನೀಡುವುದು ಸರಿ."[10]

ಬ್ರಿಟಿಷರು ಶಿಕ್ಷಣದ ಬಾಗಿಲುಗಳನ್ನು ತೆರೆದರು. ರಾಮ ಮತ್ತು ಕೃಷ್ಣರ ಕಾಲದಲ್ಲಿ ಸಿಗದಿದ್ದ ಜ್ಞಾನಾಮೃತ ಕುಡಿಯುವ ಅವಕಾಶ ಸಿಕ್ಕಿತು. ಆದರೆ ಯಾರು ಇದರ ಪ್ರಯೋಜನ ಪಡೆದರು? ಶಾಹುರವರು ಸ್ವರಾಜ್ಯದ ಹಕ್ಕುಗಳನ್ನು ನೀಡುವ ಅದೇ ವಿದ್ಯಮಾನವನ್ನು ಪುನರಾವೃತ್ತಿಗೊಳಿಸಲು ಭಯಪಟ್ಟರು.... ಅವರು ಹೇಳುತ್ತಾರೆ, " ವಿದ್ಯೆಯ(ಕಲಿಕೆ) ಅಮೃತವನ್ನು ಎಲ್ಲರಿಗೂ ಸಿಗುವಂತೆ ಮಾಡಿದರೆ, ಬ್ರಾಹ್ಮಣರ ಸುಪರ್ದಿನಲ್ಲಿ ಬಹುಮಟ್ಟಿಗೆ ಗ್ರಂಥಗಳು ಉಳಿದುಬಿಟ್ಟಿರುವುದರಿಂದ ಬ್ರಾಹ್ಮಣೇತರರಲ್ಲಿ ಕೆಲವೇ ವ್ಯಕ್ತಿಗಳಿಗೆ ಇದರಿಂದ ಪ್ರಯೋಜನ ವಾಗಬಹುದು. ಹೀಗಿರುವಾಗ, ಅವರು ಸ್ವರಾಜ್ಯದ ಹಕ್ಕಿಗಾಗಿ ತೀವ್ರವಾಗಿ ಹಂಬಲಿಸುತ್ತಿದ್ದಾರೆ ಮತ್ತು ಆ ಹಕ್ಕುಗಳನ್ನು ನೀಡಿದಾಗ ಅವುಗಳನ್ನು ಬಾಚಿಕೊಳ್ಳಲು ಯೋಜಿಸುತ್ತಿದ್ದಾರೆ. ಹಕ್ಕುಗಳ ಕೇಂದ್ರೀಕರಣವನ್ನು ತಡೆಯುವ ಮತ್ತು ಇತರೆ ಜಾತಿಗಳಿಗೆ ಅವರ ಪಾಲನ್ನು ಹಂಚುವ ಪ್ರಯತ್ನ ಮಾಡುತ್ತಿರುವವರು ಅವರ ಕಣ್ಣಿಗೆ ದೇಶದ್ರೋಹಿಗಳಾಗಿ ಕಾಣುತ್ತಿದ್ದಾರೆ. ಕೋಮುವಾರು ಪ್ರಾತಿನಿಧ್ಯ ಕೇಳುವವರು ಬೈಗುಳ ಮತ್ತು ಶಾಪಗಳ ರಾಶಿಯನ್ನು ಪಡೆದರು."[11]

## ಕೋಮುವಾರು ಪ್ರಾತಿನಿಧ್ಯದ ಬೇಡಿಕೆ

ಶಾಹುರವರು ಸ್ವರಾಜ್ಯಕ್ಕೆ ಮೊದಲು ಪ್ರಾಥಮಿಕ ಶಿಕ್ಷಣದ ಹಕ್ಕಿನ ಬೇಡಿಕೆಯನ್ನು ಒತ್ತಾಯಿಸುತ್ತಿದ್ದರೂ ದೇಶದಲ್ಲಿ ಭಿನ್ನ-ಭಿನ್ನ ಮೋಡಗಳು ಹರಿದಾಡುತ್ತಿದ್ದವು. ಹೋಮ್‌ರೂಲ್(ಸ್ವದೇಶೀ ಆಡಳಿತ) ಆಂದೋಲನದ ಬಲದಿಂದ, ಕಾಂಗ್ರೆಸ್-ಮುಸ್ಲಿಂ ಮೈತ್ರಿಕೂಟದ ಪ್ರದರ್ಶನದಿಂದ ಮತ್ತು ಬದಲಾದ ಅಂತಾರಾಷ್ಟ್ರೀಯ ದೃಶ್ಯದಿಂದ ಬ್ರಿಟಿಷರು ಯಾವುದೇ ಪರ್ಯಾಯವಿಲ್ಲದೇ ಸ್ವರಾಜ್ಯದ ಹಲವು ಹಕ್ಕುಗಳನ್ನು ಭಾರತೀಯರಿಗೆ ನೀಡಿದರು. ಶಾಹುರವರಿಗೆ ಈ ಪರಿಸ್ಥಿತಿ ಗೊತ್ತಿಲ್ಲವೆಂದಲ್ಲ. ಆದರೆ ಅವರು ಬ್ರಾಹ್ಮಣೇತರರಿಗೆ ಮತ್ತು ಅಸ್ಪೃಶ್ಯರಿಗೆ ಸ್ವರಾಜ್ಯದ ಹಕ್ಕುಗಳಲ್ಲಿ ಅವರ ಪಾಲನ್ನು ಕೊಡದಿದ್ದರೆ ನೀಡಿರುವ ಹಕ್ಕುಗಳೆಲ್ಲಾ ಬ್ರಾಹ್ಮಣರ, ಗಣ್ಯವರ್ಗದಲ್ಲಿ ಸಂಚಿತವಾಗುತ್ತವೆಯೆಂದು ತಮ್ಮ ಬಲವಾದ ನಿಲುವನ್ನು ಆಡಳಿತಗಾರರ (ಬ್ರಿಟಿಷರ) ಗಮನಕ್ಕೆ ತಂದರು. ಆದ್ದರಿಂದ ಅವರು ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ಬೇಡಿಕೆಯನ್ನು ಮುಂದಿಟ್ಟರು ಮತ್ತು ಬ್ರಾಹ್ಮಣೇತರರ ಆಂದೋಲನದ ಸಂಘಟನೆಯನ್ನು ಈ ಬೇಡಿಕೆಗಾಗಿ ರಚಿಸಿದರು. ಬ್ರಾಹ್ಮಣ ರಾಷ್ಟ್ರೀಯವಾದಿಗಳು ಈ ಬೇಡಿಕೆಯನ್ನು ಕಟುವಾಗಿ ವಿರೋಧಿಸಿದರು. ಅವರು ಈ ಬೇಡಿಕೆಯನ್ನು ಬ್ರಾಹ್ಮಣರ ದ್ವೇಷದಿಂದ ಮುಂದಿಟ್ಟಿದ್ದಾರೆಂದು ಗ್ರಹಿಸಿದರು. ಈ ಮನೋಭಾವದ ಬಗ್ಗೆ ಶಾಹುರವರು ವ್ಯಾಖ್ಯಾನ ಮಾಡುತ್ತಾ ಹೀಗೆ ಹೇಳಿದರು: "ಈ ದಿನಗಳಲ್ಲಿ ಬ್ರಾಹ್ಮಣರು ಈವರೆಗೆ ಮತ್ತು ಈಗಲೂ ಮುಂದಿದ್ದಾರೆಂದು ಕೆಲವು ರಾಜಕೀಯ ಬ್ರಾಹ್ಮಣರು ಹೇಳುತ್ತಿದ್ದಾರೆ. ಆದ್ದರಿಂದ ಅವರನ್ನು ಹಿಂದಕ್ಕೆ ಎಳೆಯಲು ಹೊಟ್ಟೆಕಿಚ್ಚಿನ ಬೇಡಿಕೆಗಳಾದ ಕೋಮುವಾರು ಪ್ರಾತಿನಿಧ್ಯಗಳನ್ನು ಕೇಳುತ್ತಿದ್ದಾರೆ. ಇದು ಸತ್ಯವಲ್ಲ. ಈ ದಾರಿಯಲ್ಲಿ ತಾವು ಬಹಳ ದೂರ ಮುಂದೆ ಹೋಗಿದ್ದೀರಿ ಎಂದು ನಾವು ಬ್ರಾಹ್ಮಣ ಸಹೋದರರನ್ನು ಕೇಳಿಕೊಳ್ಳುತ್ತಿದ್ದೇನೆ. ನಿಮಗೆ ಓಡುವುದಕ್ಕೆ ಬಲವಿದೆ. ನಾವು ಈಗ ದೇಕುತ್ತಿದ್ದೇವೆ, ನಿಂತುಕೊಳ್ಳಲು ಎದ್ದು ಬೀಳುತ್ತಿದ್ದೇವೆ. ನೀವು ನಮ್ಮ ಬಗ್ಗೆ ಇಟ್ಟಿರುವ ಪ್ರೀತಿಯಿಂದ ನಮ್ಮ ನೋವುಗಳನ್ನು ಉಳಿಸಲು (ತಗ್ಗಿಸಲು) ನೀವು ನಮ್ಮನ್ನು ನಿಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಲು ಸಿದ್ಧವಾಗಿದ್ದೀರಿ. ಆದರೆ ನಿಮ್ಮ ಪ್ರೀತಿ ಮತ್ತು ಕಳಕಳಿ ನಮಗೆ ನಷ್ಟವಾಗಿ ಪರಿಣಮಿಸಬಹುದು. ನೀವು ನಮ್ಮನ್ನು ದೇಕಿಕೊಂಡು ಹೋಗಲು ಬಿಡದಿದ್ದರೆ ಅಥವಾ ಎದ್ದುಬಿದ್ದು ಎದ್ದು ನಿಂತುಕೊಳ್ಳುವುದಕ್ಕೆ ಅವಕಾಶ ಕೊಡದಿದ್ದರೆ ನಾವು ಶಾಶ್ವತವಾಗಿ ಅಂಗವಿಕಲರಾಗಿ ಉಳಿದುಬಿಡುವೆವು. ಆದ್ದರಿಂದ ನೀವು ನಮ್ಮ ದೇಕುವಿಕೆಯನ್ನು ಮತ್ತು

ನಿಂತುಕೊಳ್ಳುವಿಕೆಯನ್ನು ಮೆಚ್ಚಿಕೊಳ್ಳಿ ಮತ್ತು ನಮಗೆ ಪ್ರೋತ್ಸಾಹ ನೀಡಿ. ನಮ್ಮನ್ನು ತಡೆಯಬೇಡಿ. ನಾವು ಸಬಲರಾಗುವುದಕ್ಕೆ ಹೆಣಗುತ್ತಿದ್ದೇವೆ. ನಾವು ನಿಮ್ಮ ದ್ವೇಷದಿಂದ ಹೀಗೆ ಮಾಡುತ್ತಿದ್ದೇವೆ ಎಂಬ ನಿಮ್ಮ ಗ್ರಹಿಕೆ ತಪ್ಪು. ನಮ್ಮ ನಾಯಕರೆಂದು ತಮ್ಮನ್ನು ತಾವೇ ಕರೆದುಕೊಳ್ಳುವವರಿಗೆ ಇದು ನನ್ನ ನಮ್ರ ಕೋರಿಕೆ."[12]

ಶಾಹುರವರು ಸ್ವರಾಜ್ಯವನ್ನು ವಿಸ್ತೃತ ದೃಷ್ಟಿಕೋನದಲ್ಲಿ ಹೇಳಿದಂತೆಯೇ ಕೋಮುವಾರು ಪ್ರಾತಿನಿಧ್ಯದ ಪರಿಕಲ್ಪನೆಯನ್ನು ವಿವರವಾಗಿ ಹೇಳಿದರು. ಅವರ ಪ್ರಕಾರ ಕೋಮುವಾರು ಪ್ರಾತಿನಿಧ್ಯದ ಪ್ರಾಮುಖ್ಯತೆ ಕೇವಲ ಶಾಸನಪರಿಷತ್ತಿನಲ್ಲಿ ಹಿಂದುಳಿದ ಜಾತಿಗಳಿಗೆ ಪ್ರಾತಿನಿಧ್ಯ ನೀಡುವುದು ಮಾತ್ರವಲ್ಲ. ಅವರು ಹೇಳುತ್ತಾರೆ: .... ಎಲ್ಲಾ ಜಾತಿಗಳ ಜನರು ಕೈಗಾರಿಕೆ, ಶಿಕ್ಷಣ, ಸರಕಾರಿ ಸೇವೆ ಮೊದಲಾದ ಕ್ಷೇತ್ರಗಳಲ್ಲಿ ತಮ್ಮ ಹೊಣೆಗಳನ್ನು ನಿಭಾಯಿಸಲು ಬಲವನ್ನು ಪಡೆಯುವುದು, ಅದನ್ನು ನಾನು ಕೋಮುವಾರು ಪ್ರಾತಿನಿಧ್ಯ ಎಂದು ಕರೆಯುತ್ತೇನೆ. ಯಾರು ಅತೀ ಹಿಂದೆ ಇರುವವರು ಮುಂದೆ ಬರಲು ನಾನು ಉತ್ತೇಜಿಸುತ್ತೇನೆ. ನಾನು ನನ್ನ ಪ್ರಜೆಗಳನ್ನು ಮತ್ತು ದಮನಿತರನ್ನು ಕೆಸರಿನಿಂದ ಮೇಲೆ ಎಳೆಯಲು ನಾನು ಹಸ್ತವನ್ನು ನೀಡುತ್ತೇನೆ. ತಂದೆತಾಯಿಗಳು ಈಗಾಗಲೇ ಬೆಳೆದು ನಿಂತ ಮಕ್ಕಳಿಗೆ ಗಮನ ನೀಡಬೇಕಾದ ಅವಶ್ಯಕತೆಯಿಲ್ಲ, ಅವರು ತಮ್ಮ ಸ್ವಂತ ರಕ್ಷಣೆಯನ್ನು ತೆಗೆದುಕೊಳ್ಳಬಲ್ಲರು. ಆದರೆ ತಂದೆತಾಯಿಗಳು ಕಿರಿಯರನ್ನು. ಮೌಢ್ಯರನ್ನು, ನಡೆಯಲಾಗದವರನ್ನು ಅಥವಾ ತಮ್ಮದೇ ಆದ ರೀತಿಯಲ್ಲಿ ನಿಂತುಕೊಳ್ಳಲಾಗದವರನ್ನು ನೋಡಿಕೊಳ್ಳಬೇಕಾಗುತ್ತದೆ. ಯಾರಾದರೂ ಅವರಿಗೆ ಸಹಾಯಹಸ್ತವನ್ನು ನೀಡಲೇಬೇಕಾಗುವುದು. ಮತ್ತೆ ಕೆಲವರನ್ನು ತೋಳುಗಳಿಂದ ಎತ್ತಿಕೊಂಡು ಹೋಗಬೇಕಾಗುತ್ತದೆ. ಪೋಷಕರು ಇವೆಲ್ಲವನ್ನೂ ತಮ್ಮ ಕರ್ತವ್ಯವೆಂದು ಮಾಡುತ್ತಾರೆ. ತಮ್ಮ ಎಲ್ಲಾ ಮಕ್ಕಳನ್ನು ಸಮಾನವಾಗಿ ನೋಡಿಕೊಳ್ಳುತ್ತಿಲ್ಲವಾದ್ದರಿಂದ ಅವರನ್ನು ಪಕ್ಷಪಾತಿಗಳೆಂದು ತೆಗಳಲಾಗುತ್ತದೆ. ಈ ಪರಿಗಣನೆಯಿಂದಲೇ ನಾನು ಅತ್ಯಂತ ಕೀಳುಸ್ಥಿತಿಯಲ್ಲಿರುವ ಜಾತಿಗಳನ್ನು ನಾನು ಪ್ರೋತ್ಸಾಹಿಸುತ್ತಿರುವುದು."[13]

ಶಾಹುರವರ ಚಿಂತನೆಗಳು ಅವರ ಸಾಮಾಜಿಕ ಧೋರಣೆಗಳಿಗೆ ಹೊಂದಿಕೊಳ್ಳುತ್ತವೆ ಮತ್ತು ಅವರ ಬೇಡಿಕೆಯಾದ ಕೋಮುವಾರು ಪ್ರಾತಿನಿಧ್ಯವು ಸಾಮಾಜಿಕ ನ್ಯಾಯದ ಹಿನ್ನೆಲೆಯ ಒಂದು ಸರ್ವೋತ್ಕೃಷ್ಟತೆಯಾಗಿದೆ.

---

೨೫

# ಬ್ರಿಟಿಷರಿಗೆ ನಿಷ್ಠೆ

ಬ್ರಿಟಿಷರ ಸಾರ್ವಭೌಮತ್ವವನ್ನು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ, ಇಡೀ ಇಂಡಿಯಾದಲ್ಲಿ ೧೯ನೇ ಶತಮಾನದ ಕೊನೆಯ ಹೊತ್ತಿಗೆ ಸ್ಥಾಪಿಸಲಾಗಿತ್ತು. ಬ್ರಿಟಿಷರು ಭಾರತದ ಅಧೀನತೆಯ ಕಾರ್ಯವನ್ನು ಲಾರ್ಡ್ ಡಾಲ್‌ಹೌಸಿಯವರೆಗೆ ಪರಿಪೂರ್ಣಗೊಳಿಸಲಾಗಿತ್ತು. ಕೆಲವು ಸಂಸ್ಥಾನಗಳನ್ನು ಗೆಲ್ಲಲಾಯಿತು ಮತ್ತು ಕೆಲವನ್ನು ಮುಟ್ಟುಗೋಲು ಹಾಕಿಕೊಂಡರೆ ಇನ್ನು ಕೆಲವನ್ನು ಸಾಮಂತ ಸಂಸ್ಥಾನಗಳನ್ನಾಗಿ ತಮ್ಮ ಸಾರ್ವಭೌಮತ್ವದೊಳಗೆ ತರಲಾಯಿತು. ಬ್ರಿಟಿಷರು ಒಂದಲ್ಲ ಒಂದು ನೆಪದಲ್ಲಿ ಸಾಮಂತ ಸಂಸ್ಥಾನಗಳನ್ನು ಉತ್ಸಾಹದ ಭರದಲ್ಲಿ ನುಂಗಿಹಾಕತೊಡಗಿದರು.

### ಸಾಮ್ರಾಜ್ಯಶಾಹಿಗಳ ಧೋರಣೆ

ಆದರೆ ೧೮೫೭ರ ದಂಗೆಯು ನಿರ್ಲಜ್ಜವಾದ ಸಾಮ್ರಾಜ್ಯಶಾಹಿಯ ಧೋರಣೆಗೆ ತಡೆಯನ್ನು ಒಡ್ಡಿತು ಮತ್ತು ಮುಂದಿನ ವರ್ಷದ ಮಹಾರಾಣಿಯವರ ಘೋಷಣೆಯು ರಾಜಸಂಸ್ಥಾನಗಳಿಗೆ ಒಂದು ರೀತಿಯ ಭದ್ರತೆಯನ್ನು ನೀಡಿತು. ಈ ಸಂಸ್ಥಾನಗಳೊಂದಿಗೆ ಈಸ್ಟ್ ಇಂಡಿಯಾ ಕಂಪನಿ ಮಾಡಿಕೊಂಡ ಒಪ್ಪಂದಗಳನ್ನು ವಿಧಿಬದ್ಧವಾಗಿ ಪಾಲಿಸುವ ಭರವಸೆಯನ್ನು ಮಹಾರಾಣಿಯವರು ನೀಡಿದರು. ಆದ್ದರಿಂದ ರಾಜಸಂಸ್ಥಾನಗಳನ್ನು ಸ್ವಾಧೀನಪಡಿಸಿಕೊಳ್ಳಲಿಲ್ಲ. ಆದರೆ ಕಾನೂನು ಮತ್ತು ಉತ್ತಮ ಆಡಳಿತದ ಕೊರತೆಯ ನೆಪದಲ್ಲಿ ಯಾವುದೇ ರಾಜನನ್ನು (ಆಡಳಿತಗಾರ) ಕೆಳಗಿಳಿಸುವ ಸಾಮ್ರಾಜ್ಯದ ಹಕ್ಕು ಸಾಮಂತ ರಾಜರ ಮೇಲೆ ತೂಗುಕತ್ತಿಯಂತೆ ತೂಗಾಡುತ್ತಿತ್ತು. ಬ್ರಿಟಿಷರು ಈ ಹಕ್ಕನ್ನು ಬರೋಡ ಸಂಸ್ಥಾನದಂತೆ ಕೆಲವು ಸಂಸ್ಥಾನಗಳ ಮೇಲೆ ಬಳಸಿದ್ದರು. ಹೀಗಿರುವಾಗ ಬಿರುದಾಂಕಿತ ಭಾರತೀಯ ಆಡಳಿತಗಾರರು (ರಾಜರು) ತಮ್ಮ ಅಧಿಕಾರದ ಮಿತಿಗಳನ್ನು ಮತ್ತು ಬ್ರಿಟಿಷ್ ಸಾಮ್ರಾಜ್ಯದ ಮಿತಿಯಿಲ್ಲದ ಪ್ರಭಾವವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅವರಿಗೆ ಆಂತರಿಕ ಆಡಳಿತದಲ್ಲಿ ಸ್ವಾತಂತ್ರ್ಯವನ್ನು ಕೊಟ್ಟಿದ್ದರೂ ಅವರು ಬ್ರಿಟಿಷ್ ಮಾರ್ಗದರ್ಶನದಲ್ಲಿ ಈ ಸ್ವಾತಂತ್ರ್ಯವನ್ನು ಅನುಭವಿಸಬೇಕಾಗಿತ್ತು. ಏಕೆಂದರೆ, ಕಾನೂನು ಮತ್ತು ಸುವ್ಯವಸ್ಥೆಯ ಅಂತಿಮ ಹೊಣೆಗಾರಿಗೆಯ ಅಂತಿಮ ಸಾರ್ವಭೌಮತ್ವದ ಅಧಿಕಾರ ತಮ್ಮಲ್ಲಿ ಅಡಗಿದೆ ಎಂದು ಬ್ರಿಟಿಷರು ನಂಬಿದ್ದರು. ಸಾರಾಂಶ ರೂಪದಲ್ಲಿ ಹೇಳುವುದಾದರೆ, ಬ್ರಿಟಿಷರು ನೀಡಿದ ಅಧಿಕಾರದ ಪರಿಮಿತಿಯಲ್ಲಿ ಸಾಮಂತರಾಜ ಆಡಳಿತ ನಡೆಸಬೇಕಾಗಿತ್ತು. ಬ್ರಿಟಿಷ್ ಚಕ್ರವರ್ತಿಗೆ ದೃಢನಿಷ್ಠೆ ತೋರುವುದೇ ಮೊದಲ ಅರ್ಹತೆ. ಕೊಲ್ಹಾಪುರ ಸಂಸ್ಥಾನ ಮತ್ತು ಅದರ ರಾಜ ಛತ್ರಪತಿ ಶಾಹು ಮಹಾರಾಜ ಈ ನಿಯಮಕ್ಕೆ ಅಪವಾದವಾಗಿರಲಿಲ್ಲ. ಅವರ ಮಿತಿಗಳನ್ನು ಬ್ರಿಟಿಷರು ಗುರುತಿಸಿದ್ದು ಮಾತ್ರವಲ್ಲದೆ ಇತರ ರಾಜರಿಗೆ ಹೋಲಿಸಿದಾಗ ಇವರ ಬಗ್ಗೆ ಕೂಡ ತುಂಬಾ ಜಾಗ್ರತ ಮತ್ತು ಎಚ್ಚರಿಕೆಯಿಂದ ಇದ್ದರು. ಏಕೆಂದರೆ ಈ

ಮಹಾರಾಜರು ದೇಶದಲ್ಲಿನ ಇತರೆ ಮಹಾರಾಜರಂತೆ ವೈಭವ ಸುಖಲೋಲುಪ್ತತೆಗಳಲ್ಲಿ ತಲ್ಲೀನರಾಗಿರಲಿಲ್ಲ. ಅವರು ತನ್ನ ಸಂಸ್ಥಾನದಲ್ಲಿರುವ ಬಹುಸಂಖ್ಯಾತರಾದ ಹಿಂದುಳಿದ ವರ್ಗಗಳ ಮತ್ತು ಬೆದರಿಕೆ ಮತ್ತು ದಬ್ಬಾಳಿಕೆಗೆ ಒಳಗಾಗಿರುವವರನ್ನು ಜಾಗೃತಗೊಳಿಸುವ ಕೆಲಸದಲ್ಲಿ, ಇಡೀ ದೇಶದಲ್ಲಿ ಕೈಗೊಂಡಿದ್ದರು. ತಮ್ಮನ್ನು ತಾವೇ ಜನತಂತ್ರ ಮತ್ತು ಮಾನವ ಸ್ವಾತಂತ್ರ್ಯದ ನಾಯಕಮಣಿಗಳೆಂದು ಕರೆಸಿಕೊಂಡಿರುವ ಬ್ರಿಟಿಷರು ಶಾಹುರವರು ಕೈಗೊಂಡ ಕೆಲಸಗಳನ್ನು ಬಹಿರಂಗವಾಗಿ ವಿರೋಧಿಸಲು ಆಗಲಿಲ್ಲ. ಆದರೆ ಮೌಢ್ಯ ಜನತೆಯನ್ನು ಜಾಗೃತಗೊಳಿಸುವ ಕಾರ್ಯವು ಭಾರತದಲ್ಲಿ ಸಾಮ್ರಾಜ್ಯಶಾಹಿ ಅಧಿಕಾರಕ್ಕೆ ಒಂದು ಗಂಡಾಂತರವೆಂಬ ಸಂಗತಿಯನ್ನು ಕಡೆಗಣಿಸುವ ಹಾಗಿರಲಿಲ್ಲ. ರಾಜಕೀಯ ಸ್ವಾತಂತ್ರ್ಯಕ್ಕಾಗಿ ತಿಲಕರ ಹೋರಾಟ ಮತ್ತು ಸಾಮಾಜಿಕ ವಿಮೋಚನೆಗಾಗಿ ಶಾಹುರವರ ಸಂಘರ್ಷಗಳೆರಡು ತನ್ಮೂಲಕ ರಾಷ್ಟ್ರೀಯ ಸ್ವಾತಂತ್ರ್ಯದ ಕಡೆಗೆ ಕೊಂಡೊಯ್ಯುತ್ತವೆ. ದುರದೃಷ್ಟವಶಾತ್ ಭಾರತೀಯರಿಗೆ ಮತ್ತು ಅದೃಷ್ಟವಶಾತ್ ಬ್ರಿಟಿಷರಿಗೆ ಈ ಎರಡು ಹೋರಾಟಗಳ ನಡುವೆ ಸಮನ್ವಯವಾಗಿ ಅಥವಾ ಸಾಂಗತ್ಯ(ಸೌಹಾರ್ದತೆ)ವಾಗಲಿ ಯಾವುದೂ ಇರಲಿಲ್ಲ. ಬ್ರಿಟಿಷರ ವಿರುದ್ಧ ರಾಜಕೀಯ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟವಾಗಲಿ, ಸಂಪ್ರದಾಯವಾದಿಗಳ ಕರ್ಮಠರ ವಿರುದ್ಧ ನಡೆದ ಸಾಮಾಜಿಕ ಸ್ವಾತಂತ್ರ್ಯದ ಸಂಘರ್ಷಗಳಲ್ಲಿ ಕೆಲವರು ರಾಜಕೀಯ ಹೋರಾಟಕ್ಕಾಗಿ ಮುನ್ನಡೆಸಿದರು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಒತ್ತಾಯಿಸಿದ ರಾಷ್ಟ್ರೀಯವಾದಿಗಳು (ಬಹುಸಂಖ್ಯಾತ ಬ್ರಾಹ್ಮಣರು) ತಮ್ಮ ಸಹೋದರರಿಗೆ ಸಾಮಾಜಿಕ ಸ್ವಾತಂತ್ರ್ಯವನ್ನು ನೀಡುವುದಕ್ಕೆ ಒಪ್ಪುತ್ತಿರಲಿಲ್ಲ. ಸಾಮಾಜಿಕ ಸ್ವಾತಂತ್ರ್ಯದ ಹೋರಾಟದ ನಾಯಕರು ತಮ್ಮ ಸಹೋದರರಿಗೆ ಸಾಮಾಜಿಕ ಸ್ವಾತಂತ್ರ್ಯಗಳನ್ನು ಕೊಡಲು ಒಪ್ಪದಿರುವ ಈ ನಾಯಕರು ರಾಜಕೀಯ ಸ್ವಾತಂತ್ರ್ಯಗಳನ್ನು ಕೇಳುವುದಕ್ಕೆ ಯಾವ ನೈತಿಕ ಹಕ್ಕಿದೆಯೆಂದು ಕೇಳಿದರು. ಈ ಪ್ರಶ್ನೆಯು ರಾಷ್ಟ್ರೀಯವಾದಿಗಳನ್ನು ಉಭಯಸಂಕಟಕ್ಕೆ ಸಿಕ್ಕಿಸಿತು. ಆದರೆ ಇದು ಬ್ರಿಟಿಷರಿಗೆ 'ಒಡೆದು ಆಳು' ನೀತಿಯನ್ನು ಅನ್ವಯಿಸಲು ಸಹಕಾರಿಯಾಗಿತ್ತು. ಸತ್ಯಶೋಧಕ ಸಮಾಜ ಮತ್ತು ಬ್ರಾಹ್ಮಣೇತರರ ಆಂದೋಲನಗಳಿಗೆ ಬ್ರಿಟಿಷರ ಸಹಾನುಭೂತಿ ಮತ್ತು ಸಾಂದರ್ಭಿಕ ನೆರವುಗಳು ಅವರ ಉದಾರವಾದಿ ನೀತಿಗಳ ಭಾಗವಾಗಿರಲಿಲ್ಲ. ಆದರೆ ಅವು ಕುಯುಕ್ತಿಯ ರಾಜಕಾರಣದ ಕೈಚಳಕಗಳಾಗಿದ್ದವು. ತ್ರಿಕೋನದ ಪ್ರತಿಯೊಂದು ಕೋನವು ಬ್ರಿಟಿಷ್ ಆಳರಸರಿಂದ ರೂಪಿತವಾದುದು. ಬ್ರಾಹ್ಮಣ ರಾಷ್ಟ್ರೀಯವಾದಿಗಳು ಮತ್ತು ಬ್ರಾಹ್ಮಣೇತರರ ಸಾಮಾಜಿಕ ಸುಧಾರಣಾವಾದಿಗಳು ಬೇರೆ ಎರಡರ ರಾಜಕಾರಣದ ಬಗ್ಗೆ ಚೆನ್ನಾಗಿ ತಿಳಿದಿರುವುದು ಮಾತ್ರವಲ್ಲದೆ ಅಗತ್ಯ ಬಿದ್ದಾಗ ಮೂರನೆಯದಕ್ಕೆ ಮಣಿಯಲು ಬೇರೆಯದಕ್ಕೆ ಸಹಾಯಮಾಡಿತು.

ಶಾಹು ಮತ್ತು ಬ್ರಿಟಿಷರ ಸರಕಾರದ ನಡುವಣ ಸಂಬಂಧವನ್ನು ಈ ದೃಷ್ಟಿಯಿಂದ ಅಧ್ಯಯನ ಮಾಡಬೇಕು. ಶಾಹುರವರು ಕೊಲ್ಹಾಪುರದಲ್ಲಿ ಅಧಿಕಾರ ವಹಿಸಿಕೊಳ್ಳುವುದಕ್ಕೆ ಮೊದಲು ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲ ಆಳಿದವರು ಒಬ್ಬರಾದ ಮೇಲೆ ಒಬ್ಬರು ಎಲ್ಲರು ಕಿರುವಯಸ್ಸಿನ ರಾಜರಾಗಿದ್ದರು. ಹಾಗಿರುವಾಗ, ಕೊಲ್ಹಾಪುರ ಸಂಸ್ಥಾನದ ಮೇಲಿದ್ದ ತಮ್ಮ ಹಿಡಿತವನ್ನು ಬಿಗಿಗೊಳಿಸಿದರು. ಶಾಹು ಮಹಾರಾಜರು ತಮ್ಮ ಸರಕಾರದ ಬಿಗಿಹಿಡಿತವನ್ನು ಸಡಿಲಗೊಳಿಸುವ ಮೂಲಕ ತಮ್ಮ ಸರಕಾರವನ್ನು ಸ್ವಾತಂತ್ರ್ಯವನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಆಪತ್ತುಗಳಾದ ಕರ್ನಲ್ ವ್ರೇ ಅವರಿಗೆ ವಿಷವುಣಿಸಿದ ಪ್ರಕರಣ ಹುಟ್ಟಿಕೊಂಡಿತು. ಆಗ ಅವರನ್ನು ಸೂಕ್ಷ್ಮ ಸ್ಥಿತಿಗೆ ತಳ್ಳಲಾಯಿತು. ಈ ಬಗ್ಗೆ ತೋಫಖಾನೆಯವರು ಹೇಳಿದ ನೆನಪನ್ನು ನಾವು ಈ ಹಿಂದೆಯೇ ಉಲ್ಲೇಖಿಸಿದ್ದೇವೆ. ಕರ್ನಲ್ ವ್ರೆ ಅವರ ಪ್ರಕರಣದಲ್ಲಿ ತಮ್ಮ

ದುಃಸ್ಥಿತಿಯನ್ನು ಹೇಳುವಾಗ ಶಾಹುರವರು ಹೇಳಿದ್ದರು: "ಬ್ರಿಟಿಷ್ ಸರಕಾರವು ನನ್ನನ್ನು ವಿಷವುಣ್ಣಿಸಿದ ಪ್ರಕರಣದಲ್ಲಿ ಸಿಕ್ಕಿಸಲು ಬಯಸಿತ್ತು. ಅದು ಸಫಲವಾಗಿದ್ದರೆ, ಅವರು ನನ್ನನ್ನು ಅಧಿಕಾರದಿಂದ ಕಿತ್ತುಹಾಕಿ ಯಾವುದೋ ಕತ್ತಲ ಕೋಣೆಯಲ್ಲಿ ಕೂಡಿಹಾಕಿ ಮುಗಿಸಿಬಿಡುತ್ತಿದ್ದರು ಮತ್ತು ಕೊಲ್ಹಾಪುರದ ರಾಜಕುಟುಂಬ ಆಳಲು ಅಯೋಗ್ಯವೆಂದು ಘೋಷಿಸಿ ಸಂಸ್ಥಾನವನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದರು. ಆದರೆ ನಾನು ಬಹಳ ಜಾಗೃತನಾಗಿ ಸರಕಾರದ ಕೈಗೆ ಯಾವುದು ಸಿಗದಂತೆ ಮತ್ತು ಅದು ಅವರಿಗೆ ಸಹಕಾರಿಯಾಗಿ ನನ್ನನ್ನು ನಾಶಮಾಡದಂತೆ ನಾನು ಎಚ್ಚರಿಕೆವಹಿಸಿದ್ದೆ".[1]

## ನಿಷ್ಠೆ ಅಥವಾ ವಿಶ್ವಾಸದ್ರೋಹ

ಅಂತಹ ಪರಿಸ್ಥಿತಿಗಳಲ್ಲಿ ಸಂಸ್ಥಾನದ ಆಡಳಿತ ನಡೆಸುವುದು ಮತ್ತು ಏಕಕಾಲದಲ್ಲಿ ಬ್ರಿಟಿಷ್ ಆಡಳಿತಗಾರರ ಮುತುವರ್ಜಿಯನ್ನು ಉಳಿಸಿಕೊಳ್ಳುವುದು ನೇರ ಹಗ್ಗದ ಮೇಲಿನ ನಡಿಗೆಯಾಗಿತ್ತು. ಹೀಗೆ ನಡಿಗೆಯನ್ನು ಸಾಗಿಸುತ್ತಾ ಬ್ರಿಟಿಷ್ ಸರಕಾರಕ್ಕೆ ತನ್ನ ನಿಷ್ಠೆಯನ್ನು ನಿರಂತರವಾಗಿ ತೋರಿಸುವುದು ಶಾಹುರವರ ರಾಜಕೀಯ ಬಾಧ್ಯತೆಯಾಗಿತ್ತು. ಆದುದರಿಂದ ಶಾಹುರವರು ಬ್ರಿಟಿಷ್ ಅಧಿಕಾರಿಗಳನ್ನು ಭೇಟಿಯಾದಾಗ, ಅವರೊಡನೆ ಪತ್ರವ್ಯವಹಾರ ನಡೆಸುವಾಗ ಹಾಗು ಸಾರ್ವಜನಿಕ ಸಭೆಗಳಲ್ಲಿ ಆಗಾಗ ತಮ್ಮ ರಾಜನಿಷ್ಠೆ ವ್ಯಕ್ತಪಡಿಸುತ್ತಿದ್ದರು. ಶಾಹುರವರ ಒತ್ತಾಯಗಳನ್ನು ಮತ್ತು ಅವರಿದ್ದ ವಿಚಿತ್ರ ಸನ್ನಿವೇಶಗಳನ್ನು ಪರಿಗಣಿಸದೆ ಒಬ್ಬ ವಿದ್ವಾಂಸರು ಅವರು ಬ್ರಿಟಿಷ್ ರಾಜನ ಬಗ್ಗೆ ವ್ಯಕ್ತಪಡಿಸಿದ ರಾಜನಿಷ್ಠೆಯನ್ನು ತೋರಿಕೆಗಾಗಿ ನೋಡಿದರೆ ಶಾಹುರವರು ಬ್ರಿಟಿಷರ ಪರವಾಗಿದ್ದರೆಂದು ಸುಲಭವಾಗಿ ಕಂಡುಕೊಳ್ಳಬಹುದು. ಆದರೆ ಅದು ಪರಿಸ್ಥಿತಿಗಳ ಕ್ರಮಬದ್ಧವಾದ ಮೌಲ್ಯಮಾಪನವಾಗುವುದಿಲ್ಲ. ಹಾಗಾದರೆ ಬ್ರಿಟಿಷರನ್ನು ಒಲಿಸಿಕೊಳ್ಳುವ ನೀತಿಯ ಆರೋಪವನ್ನು ಕಾಂಗ್ರೆಸ್ಸಿನ ಪಿತಾಮಹರಾದ ದಾದಾಭಾಯಿ ನವರೋಜಿ, ನ್ಯಾಯಮೂರ್ತಿ ರಾನಡೆ, ಲೋಕಮಾನ್ಯ ತಿಲಕ, ಮಹಾತ್ಮ ಗಾಂಧಿ ಮೊದಲಾದವರ ವಿರುದ್ಧ ಹೊರಿಸಬಹುದು. ಇವರೆಲ್ಲರೂ ಬಹಿರಂಗವಾಗಿ ನಿಷ್ಠಾವಂತರೆಂದು ತೋರಿಸಿಕೊಳ್ಳುತ್ತಾ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ನಿಷ್ಠೆಯ ಸ್ವೀಕಾರ ಮತ್ತು ಅದೇ ಸಮಯದಲ್ಲಿ ತಮ್ಮ ಹೋರಾಟ ನಡೆಸುವುದು ಆ ಕಾಲದ ಅಗತ್ಯಗಳಾಗಿದ್ದವು. ಈ ಸಂದರ್ಭದಲ್ಲಿ ೧೯೧೪ರಲ್ಲಿ ಮೊದಲನೇ ವಿಶ್ವದ ಮಹಾಯುದ್ಧ ಪ್ರಾರಂಭವಾದಾಗ ಬ್ರಿಟಿಷರಿಗೆ ತಮ್ಮ ನಿಷ್ಠೆಯಿದೆಯೆಂದು ಹಾಗು ಯುದ್ಧದಲ್ಲಿ ಬ್ರಿಟಿಷರಿಗೆ ಸಹಾಯಮಾಡುವುದಾಗಿ ಭರವಸೆ ನೀಡುವ ಘೋಷಣೆಯನ್ನು ತಿಲಕರು ಪ್ರಕಟಿಸಿದ್ದನ್ನು ಪರಿಗಣಿಸಲು ಯೋಗ್ಯವಾಗಿದೆ.

ಸಶಸ್ತ್ರ ಕ್ರಾಂತಿಗಳನ್ನು ಬಿಟ್ಟರೆ, ಯಾವುದೇ ರಾಜಕೀಯ ಪಕ್ಷದ ಯಾವ ನಾಯಕನೂ ಆ ಕಾಲದಲ್ಲಿ ತಾನು ನಿಷ್ಠಾರಹಿತನೆಂದು ಹೇಳಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಏಕೆಂದರೆ ಆ ಕಾಲದಲ್ಲಿ ನಿಷ್ಠಾವಂತ ನಾಗಿರದಿರುವುದು ವಿಶ್ವಾಸದ್ರೋಹವೆಂದು ಪರಿಗಣಿಸಲಾಗುತ್ತಿತ್ತು ಮತ್ತು ವಿಶ್ವಾಸದ್ರೋಹಿಗೆ ಯಾವುದೇ ರೀತಿಯ ರಾಜಕೀಯ ಅಥವಾ ಸಾಮಾಜಿಕ ಚಳುವಳಿ ನಡೆಸುವುದು ಅಸಾಧ್ಯವಾಗಿತ್ತು.

ಬ್ರಿಟಿಷ್ ಸರಕಾರ ಒಂದಕ್ಕಿಂತ ಹೆಚ್ಚು ಸಲ ತಿಲಕರನ್ನು ದೇಶದ್ರೋಹಿಯೆಂದು ಅವರು 'ಕೇಸರಿ' ಪತ್ರಿಕೆಯಲ್ಲಿ ಬ್ರಿಟಿಷ್ ಸರಕಾರವನ್ನು ಕಟುವಾಗಿ ಟೀಕಿಸಿದ್ದಕ್ಕೆ ಶಿಕ್ಷೆ ನೀಡಿ ಅವರನ್ನು ಜೈಲಿಗೆ ಹಾಕಲಾಗಿತ್ತು. ಸರಕಾರದ ಅನ್ಯಾಯಕರವಾದ ಮತ್ತು ಕ್ರೌರ್ಯದ ಚಟುವಟಿಕೆಗಳನ್ನು ಟೀಕಿಸುವುದು ದೇಶದ್ರೋಹವಲ್ಲವೆಂದು ಪ್ರತಿವಾದ ಮಾಡಲಾಗಿತ್ತು. ಅವರು ಹೇಳುತ್ತಾರೆ: "ದೂರುಗಳು ಮತ್ತು ಜನರ ಕುಂದುಕೊರತೆಗಳನ್ನು

ಸರಕಾರದ ಗಮನಕ್ಕೆ ತರುವುದು ಅಥವಾ ಸರಕಾರದ ತಪ್ಪುಗಳನ್ನು ಜನರಿಗೆ ತಿಳಿಸುವುದು ಮತ್ತು ಸರಕಾರ ಒಪ್ಪಲಿ ಅಥವಾ ಬಿಡಲಿ ಕಾನೂನಿನ ಪರಿಹಾರ ಕೋರಲು ಅವರಿಗೆ ನೆರವಾಗುವುದು ಏನೇ ಆಗಿರಲಿ ಅದು ದೇಶದ್ರೋಹವಲ್ಲ." ಎಲ್ಲಕ್ಕಿಂತ ಮಿಗಿಲಾಗಿ "ಅನ್ಯಾಯವಾಗಿರುವ ವಿಷಯಗಳನ್ನು ಜನರಿಗೆ ತಿಳಿಸುವುದು, ಅಂಥ ವಿಷಯದ ಬಗ್ಗೆ ಸಾರ್ವಜನಿಕ ಅಭಿಪ್ರಾಯಗಳನ್ನು ರೂಢಿಸುವುದು ಮತ್ತು ಕಾನೂನುಬದ್ಧ ಪರಿಹಾರವನ್ನು ಕೇಳುವಂತೆ ಜನರಿಗೆ ಹೇಳುವುದು ಪ್ರತಿಯೊಬ್ಬ ಪತ್ರಕರ್ತನ ಕರ್ತವ್ಯವಾಗಿದೆ. ಇದರಿಂದ ಪ್ರಭುತ್ವಕ್ಕೆ (ಸರಕಾರ) ಯಾವುದೇ ಹಾನಿಯಾಗುವುದಿಲ್ಲ. ಮಿಗಿಲಾಗಿ ಅನ್ಯಾಯವನ್ನು ಸರಿಪಡಿಸುವಿಕೆಯು ಜನರ ತೃಪ್ತಿಗೆ (ಸಂತೋಷ) ಎಡೆ ಮಾಡಿಕೊಡುತ್ತದೆ. ತನ್ಮೂಲಕ ಸರಕಾರ ಬಲಗೊಳ್ಳುತ್ತದೆ. ಅಂತಹ ಲೇಖನಗಳ ಲೇಖಕನನ್ನು ದೇಶದ್ರೋಹಿ ಎಂದು ಕರೆಯುವುದು ಒಬ್ಬ ವ್ಯಕ್ತಿ ಒಂದು ಮನೆಯಲ್ಲಿ ಒಂದು ವಿಶಿಷ್ಟ ದುರಸ್ತಿಗೆ ಸಲಹೆ ನೀಡಿದವನಿಗೆ ಮನೆಗೆ ಬೆಂಕಿ ಹಚ್ಚಿದನೆಂದ ಆರೋಪ ಹೊರಿಸಿದ್ದಕ್ಕೆ ಸಮವಾಗುತ್ತದೆ."[2] ಲೋಕಮಾನ್ಯರ ವಾದ ಮಂಡನೆ ದೋಷರಹಿತವಾಗಿತ್ತು. ಆದರೆ ಬ್ರಿಟಿಷರ ಅಧಿಕಾರದಲ್ಲಿ ವಿವೇಚನೆಗೆ ಮೌಲ್ಯ(ಜಾಗ)ವಿರಲಿಲ್ಲ.

ಮೇಲೆ ಹೇಳಿದ ೧೯೧೪ರ ಘೋಷಣೆಯಲ್ಲಿ ತಿಲಕರು ಹೇಳುತ್ತಾರೆ: "........ನನ್ನ ಪ್ರಯತ್ನಗಳು ಬ್ರಿಟಿಷ್ ಆಡಳಿತವನ್ನು ಕಿತ್ತೆಸೆಯುವುದಕ್ಕಲ್ಲ; ಮಿಲಿಟೆಂಟರ (ಹೋರಾಟಗಾರರ) ಘೋರ ಕೃತ್ಯಗಳು ನನ್ನ ಸ್ವಭಾವಕ್ಕೆ ವಿರುದ್ಧವಾದವು ಮತ್ತು ದಂಡನೀಯ." ಅವರ ಯುದ್ಧದ ಪ್ರಯತ್ನಗಳಲ್ಲಿ ಪ್ರತಿಯೊಬ್ಬ ಭಾರತದ ಪ್ರಜೆ ಬ್ರಿಟಿಷರಿಗೆ ತಮ್ಮ ಕೈಲಾದ ಮಟ್ಟಿಗೆ ಸಹಾಯಮಾಡುವುದು ತಮ್ಮ ಕರ್ತವ್ಯವೆಂದು ನನ್ನ ಅಭಿಪ್ರಾಯ. ಅಂತಿಮವಾಗಿ ಅವರು ಹೇಳುತ್ತಾರೆ: "ನಮ್ಮ ನಿಷ್ಠೆ ಬ್ರಿಟಿಷ್ ಸರಕಾರಕ್ಕೆ ಎಂದು ಇದು ಸಾಧಿತಮಾಡುತ್ತದೆ ಮತ್ತು ಅದಕ್ಕೆ ಸಹಾಯಮಾಡುವ ನಮ್ಮ ಆಸೆ ಸಹಜ ಮತ್ತು ಮಣಿಯದು. ಅಂಥ ಸನ್ನಿವೇಶಗಳಲ್ಲಿ ನಾವು ನಮ್ಮ ಕರ್ತವ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ನಿಷ್ಠೆಯಿಂದ ಮಾಡುತ್ತೇವೆ."[3] ಆದರೆ ತಿಲಕರು ಬ್ರಿಟಿಷ್ ಸರಕಾರಕ್ಕೆ ನಿಷ್ಠಾವಂತರಾಗಿದ್ದರೆಂದು ಮೇಲಿನ ಹೇಳಿಕೆಯ ಆಧಾರದ ಮೇರೆಗೆ ತೀರ್ಮಾನಕ್ಕೆ ಬರುವುದು ಸಂಪೂರ್ಣವಾಗಿ ಐತಿಹಾಸಿಕವಾಗುತ್ತದೆ. ಬ್ರಿಟಿಷ್ ಸರಕಾರದ ಬಗ್ಗೆ ತಿಲಕರ ನಿಷ್ಠೆಯ ಅಭಿವ್ಯಕ್ತಿಯನ್ನು ಪರಿಗಣಿಸಬೇಕು. ಆದರೆ ಅವರು ಆರಿಸಿಕೊಂಡ ರಾಜಕೀಯ ಕ್ಷೇತ್ರದ ರಾಜತಂತ್ರದ ಒಂದು ಭಾಗ ಅಥವಾ ವಿಚಿತ್ರವಾದ ಒಂದು ವ್ಯೂಹರಚನೆಯ ಕೈಚಳಕವಷ್ಟೆ ಬಹಳ ಬೇಗನೆ ಅವರು ಬ್ರಿಟಿಷರೊಂದಿಗಿನ ಸಹಕಾರವನ್ನು ಬದಲಾಯಿಸಿದರು ಮತ್ತು ಹೋರಾಟದ ಮನೋಭಾವಕ್ಕೆ ಇಳಿದರು. ಆದರೆ ಅವರು ರಾಜಕೀಯ ಸ್ವಾತಂತ್ರ್ಯಕ್ಕೆ ಹೋರಾಡುತ್ತಿರುವಾಗ ಅವರು ತಮ್ಮ ಯಥಾಕಥಿತ ನಿಷ್ಠೆಯನ್ನು ತಮ್ಮ ಮಿಷನ್ನಿಗೆ ತಡೆಯಾಗಿ ಮಾಡಲಿಲ್ಲ. ವಿಶ್ವದ ಪ್ರಥಮ ಯುದ್ಧದ ಪ್ರಾರಂಭದ ದಿನಗಳಲ್ಲಿ ಭಾರತೀಯರು ಬ್ರಿಟಿಷರಿಗೆ ಅವರ ಯುದ್ಧ ಕಾರ್ಯಗಳಲ್ಲಿ ಸಹಾಯಮಾಡಬೇಕು ಮತ್ತು ಬ್ರಿಟಿಷ್ ಸಾಮ್ರಾಜ್ಯವನ್ನು ರಕ್ಷಿಸಬೇಕೆಂದು ಭಾವಿಸಿದ್ದರು ಎಂಬುದನ್ನು ಗಮನಿಸಬೇಕು. ಅವರು ಅಭಿಪ್ರಾಯಪಟ್ಟಿದ್ದರು: "ಬ್ರಿಟಿಷ್ ಸಾಮ್ರಾಜ್ಯದ ರಕ್ಷಣೆಯಲ್ಲಿ ಭಾಗವಹಿಸುವುದೇ ಸ್ವರಾಜ್ಯಕ್ಕೆ ಸರಳ ಮತ್ತು ಸುಲಭದ ಮಾರ್ಗ."[4]

ವಾಸ್ತವಿಕವಾಗಿ ಭಾರತದ ನಾಯಕರಾದ ನ್ಯಾಯಮೂರ್ತಿ ರಾನಡೆ, ಲೋಕಮಾನ್ಯ ತಿಲಕ ಅಥವಾ ಶಾಹುರವರು ಇಂಗ್ಲೆಂಡಿನ ಚಕ್ರವರ್ತಿಗಳಿಗೆ ವ್ಯಕ್ತಪಡಿಸಿದ ನಿಷ್ಠೆಯನ್ನು ನಿಜವಾದ ನಿಷ್ಠೆಯೆಂದು ಪರಿಗಣಿಸಲಾಗದು. ಏಕೆಂದರೆ ನಿಜವಾದ ದೇಶಭಕ್ತ ವಿದೇಶಿ ಅಧಿಕಾರವು ತನ್ನ ಮಾತೃಭೂಮಿಯನ್ನು ನಿರಂತರವಾಗಿ ದಾಸ್ಯತ್ವದಲ್ಲಿಡುವುದನ್ನು ಎಂದಿಗೂ ಬಯಸುವುದಿಲ್ಲ. ವಿದೇಶಿ ಆಡಳಿತವು ನಮ್ಮ ಮುಗ್ಧ

ಸಹೋದರರಲ್ಲಿ ವಿವೇಚನೆ ತುಂಬುವುದಕ್ಕಾಗಿ ಬಹಳ ಕಾಲದವರೆಗೆ ಮುಂದುವರೆದಿರುವುದು ದೈವಸಂಕಲ್ಪ ವೆಂದು ಹಲವರು ತಿಳಿದರೆ; ಮತ್ತೆ ಕೆಲವರು ಗಣ್ಯವರ್ಗಗಳಿಂದ ಜನರ ಹಕ್ಕುಗಳನ್ನು ಕಾಪಾಡುವುದಕ್ಕೆ ವಿದೇಶಿ ಆಡಳಿತ ಅಗತ್ಯವೆಂದು ಭಾವಿಸಿದರೆ, ಮತ್ತೆ ಕೆಲವರು ವಿದೇಶಿ ಆಡಳಿತಗಾರರ ಈ ಸಂಚನ್ನು ಕೊನೆಗೊಳಿಸಿ, ಬೇಗನೇ ಸ್ವರಾಜ್ಯವನ್ನು ಸಾಧಿಸಬೇಕೆಂದು ಯೋಚಿಸಿದರು. ಇದೇ ಇವರಲ್ಲಿರುವ ವ್ಯತ್ಯಾಸ. ವಿದೇಶಿ ಆಡಳಿತ ಎಷ್ಟು ಕಾಲದವರೆಗೆ ಮುಂದುವರಿಯಬೇಕೆಂಬುದು ಪ್ರಶ್ನೆ. ಯಾರೂ ಸಹ ಇದು ಮುಂದುವರಿಯಬೇಕೆಂದು ಬಯಸಿರಲಿಲ್ಲ. ಈ ಪರಿಸ್ಥಿತಿಯ ಬಗ್ಗೆ ಆಲೋಚಿಸಿದ್ದರೆ ರಾಜಕೀಯ ಅಥವಾ ಸಾಮಾಜಿಕ ಕ್ಷೇತ್ರಗಳ ಗಣ್ಯ ನಾಯಕರ ನಿಷ್ಠೆಯನ್ನು ಖಚಿತವಾಗಿ ಮೌಲ್ಯಮಾಪನ ಮಾಡ ಬಹುದಾಗಿತ್ತು ಮತ್ತು ಶಾಹುರವರು ನಿಜವಾಗಿ ನಿಷ್ಠರಾಗಿದ್ದರೆ ಅಥವಾ ಇಲ್ಲವೆ ಎಂಬುದರ ಹುಡುಕಾಟ ಸಾಧ್ಯವಾಗುತ್ತಿತ್ತು.

ಶಾಹುರವರ ಜೀವನಚರಿತ್ರೆಯಲ್ಲಿ ಈ ವಿಷಯವನ್ನು ಚರ್ಚಿಸುತ್ತಾ ಡಾ. ರಮೇಶ್ ಜಾಧವ್ ಅವರು ಬ್ರಿಟಿಷರಿಗೆ ಘೋಷಿತ ಅವರ ನಿಷ್ಠೆಯು ಒಂದು ನಾಟಕವೆಂದು ಊಹಿಸಿದ್ದಾರೆ.[5] ಆದರೆ ಡಾ. ವೈ. ಡಿ. ಫಡ್ಕೆ ಅವರು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಜಾಗರೂಕತೆಯಿಂದ ಅಧ್ಯಯನ ಮಾಡಿದ್ದಾರೆ. ಈ ಊಹೆಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲವೆಂದು ಅವರು ಹೇಳುತ್ತಾ ಈ ವಾದವನ್ನೇ ಪ್ರಶ್ನಿಸಿದ್ದಾರೆ. ಶಾಹು ಮತ್ತು ಬ್ರಿಟಿಷರ ನಡುವೆ ಹೋರಾಟಗಾರರ ಮತ್ತು ಬ್ರಾಹ್ಮಣ ರಾಷ್ಟ್ರೀಯವಾದಿಗಳ ದಮನಕ್ಕೆ ಸಂಬಂಧಿಸಿದ ಪರಸ್ಪರ ನಡೆದ ಪತ್ರವ್ಯವಹಾರವನ್ನು ಗಂಭೀರವಾಗಿ ಅಧ್ಯಯನಮಾಡಿದ ಆಧಾರದ ಮೇರೆಗೆ ರೂಪಗೊಂಡಿದೆ ಫಡ್ಕೆಯವರ ಅಭಿಪ್ರಾಯ.[6] ಪತ್ರವ್ಯವಹಾರವನ್ನೇ ಸಾಕ್ಷ್ಯಾಧಾರವೆಂದು ಪರಿಗಣಿಸಿದರೆ (ಮತ್ತು ಅದು ಅಧಿಕೃತ ಮತ್ತು ಸಾಕಷ್ಟು ಪ್ರಮಾಣದಲ್ಲಿರುವಾಗ) ಡಾ. ಫಡ್ಕೆ ಅವರನ್ನು ಒಪ್ಪದಿರಲು ಯಾರಿಗೂ ಯಾವ ಕಾರಣವು ಇಲ್ಲವಲ್ಲ. ಆದರೆ ಮೊದಲಿನ ಪರಸ್ಪರರ ಪತ್ರಗಳಿಗೆ ವಿರುದ್ಧವೆನಿಸುವ ಇತರೆ ಸಾಕ್ಷ್ಯಾಧಾರಗಳನ್ನು ಕಡೆಗಣಿಸುವಂತಿಲ್ಲ. ಉದಾಹರಣೆಗೆ, ತೋಫ್‌ಖಾನೆ ಅವರು ತಮ್ಮ ಆತ್ಮಚರಿತ್ರೆಯಲ್ಲಿ ನಿರೂಪಿಸಿರುವ ಶಾಹುರವರು ಕ್ರಾಂತಿಕಾರಿ ಅರವಿಂದ ಘೋಷ್ ಅವರಿಗೆ ನೀಡಿದ ಸಹಾಯದ ಕತೆಯನ್ನು 'ಕೇಳಿಕೆಯ ಸಾಕ್ಷ್ಯ'ವೆಂದು ತಳ್ಳಿಹಾಕುವಂತಿಲ್ಲ. ಏಕೆಂದರೆ ತೋಫ್‌ಖಾನೆಯವರು ಶಾಹುರವರ ಆಪ್ತ ಸಹವರ್ತಿ ಮತ್ತು ಆತ್ಮೀಯ ಸ್ನೇಹಿತರಾಗಿದ್ದರು. ಅವರ ನಿರೂಪಣೆಯನ್ನು ಅಧಿಕೃತವೆಂದು ಪರಿಗಣಿಸಬೇಕು. ಡಾ. ಫಡ್ಕೆ ಅವರು ಬೇರೆ ಕಡೆಗಳಲ್ಲಿ ನಂತರದ ಕಾಲದಲ್ಲಿ ಬರೆದಂತಹ ನೆನಪುಗಳ ಕಥನವನ್ನು ಅಧಿಕೃತವೆಂದು ಪರಿಗಣಿಸಿದ್ದಾರೆ. ಉದಾಹರಣೆಗೆ ನಾವು ಈಗಾಗಲೆ ನೋಡಿರುವಂತೆ ಡಾ. ಫಡ್ಕೆ ಅವರು ತಿಲಕರು ಚಾಪೆಕರ್ ಸಹೋದರರಿಗೆ ರ್‍ಯಾಂಡ ಕೊಲೆಯ ಪ್ರಕರಣದಲ್ಲಿ ಒದಗಿಸಿದ ನೆರವಿನಿಂದ ಕೊಲೆಯಾಗುವುದಕ್ಕೆ ಮೊದಲು ತಿಲಕರಿಗೆ ಈ ಬಗ್ಗೆ ವಿಚಾರ ಗೊತ್ತಿತ್ತೆಂದು ಮತ್ತು ಅವರು ಕೊಲೆಯ ನಂತರ ಚಾಫೆಕರ್ ಅವರಿಗೆ ಗೌಪ್ಯ ಆಶ್ರಮ ವ್ಯವಸ್ಥೆಮಾಡಿದ್ದರೆಂದು ಊಹಿಸಿದ್ದರು. ಡಾ. ಫಡ್ಕೆಯವರ ಈ ತೀರ್ಮಾನವು ಜೀವನಚರಿತ್ರೆಗಳ, ನೆನಪುಗಳ, ನಂತರ ಕಾಲದಲ್ಲಿ ಬರೆದ ಆತ್ಮಚರಿತ್ರೆಗಳು ಆಧಾರವಾಗಿವೆ.[7] ತಿಲಕರಿಗೆ ಅನ್ವಯಿಸಿದ ನಿಯಮಗಳನ್ನೇ ಏಕೆ ಶಾಹುರವರಿಗೆ ಅನ್ವಯಿಸಬಾರದು? ಅವುಗಳನ್ನು ಅನ್ವಯಿಸಿದರೆ ಲಭ್ಯವಿರುವ ಎಲ್ಲಾ ಅಧಿಕೃತ ಸಾಕ್ಷ್ಯಾಧಾರಗಳ ಆಚೆಗಿರುವ ಇತಿಹಾಸದ ಮಸಕಾಗಿರುವ ಗಾಜಿನ ಚೌಕಳಿಗಳಿಂದ ಶಾಹುರವರ ರಾಷ್ಟ್ರೀಯ ಚಿತ್ರ ಹೊರಬರುವುದು. ಆಗ ಅವರ ನಿಷ್ಠೆಯ ಚಿತ್ರ ಹೆಚ್ಚು ಸ್ಪಷ್ಟವಾಗುವುದು.

## ವಿವಿಧ ಜನರ ದೃಷ್ಟಿಯಲ್ಲಿ ಶಾಹು

ಶಾಹು ಛತ್ರಪತಿಯವರ ನಿಷ್ಠೆಯನ್ನು ಚರ್ಚಿಸುತ್ತಾ ಡಾ. ಫಡ್ಕೆ ಅವರು ಮತ್ತೊಂದು ವಿಷಯವನ್ನು ಎತ್ತಿದ್ದಾರೆ. ತಿಲಕರು ಮತ್ತು ಬರೋಡದ ಮಹಾರಾಜ ಗಾಯಕವಾಡರು ಬ್ರಿಟಿಷ್ ಚಕ್ರವರ್ತಿಗೆ ತೋರಿಸಿದ ಅದಮ್ಯ ಚೈತನ್ಯದ 'ರಾಜನಿಷ್ಠೆ'ಯನ್ನು ಬ್ರಿಟಿಷರು ಅವರ ಉದ್ದೇಶಗಳ ಬಗ್ಗೆ ಸದಾ ಅನುಮಾನದಿಂದಿರುತ್ತಿದ್ದರು ಮತ್ತು ಅವರನ್ನು ಶತ್ರುಗಳೆಂದೇ ಪರಿಗಣಿಸಿದ್ದರು ಎಂದು ಅವರು ಹೇಳುತ್ತಾರೆ. ಡಾ. ಫಡ್ಕೆ ಅವರು ತಮ್ಮ ಅಭಿಪ್ರಾಯವನ್ನು ಚೆನ್ನಾಗಿ ಸ್ಪಷ್ಟಪಡಿಸಲು ಬ್ರಿಟಿಷರು ವರ್ಗೀಕೃತ ಮಾಡಿದ ಸಾಕ್ಷ್ಯಾಧಾರಗಳನ್ನು ಮುಂದಿಡುತ್ತಾರೆ ಮತ್ತು ಅವು ಈ ರೀತಿ ಹೇಳುತ್ತವೆ: "ದೇಶದ್ರೋಹವನ್ನು ದಮನಮಾಡುವ ಕಾರ್ಯದಲ್ಲಿ ಬ್ರಿಟಿಷರಿಗೆ ಸಹಾಯ ಮಾಡಿದ ಭಾರತದ ರಾಜ–ಮಹಾರಾಜರಲ್ಲಿ ಬರೋಡದ ಸಯ್ಯಾಜಿರಾವ್ ಮಹಾರಾಜರೊಬ್ಬರೇ. ರಾಜನಿಷ್ಠೆಯನ್ನು ತೋರಿಸುವುದಕ್ಕೆ ಅವರು ಮಾಡಿದ ಘೋಷಣೆಗಳೆಲ್ಲವೂ ಮನಸ್ಸಿಲ್ಲದೆ ಮಾಡಿದವುಗಳು." ಈ ರೂಪದಲ್ಲಿ ಪ್ರಕಟಿಸಿದ ಅಥವಾ ಪ್ರಕಟಿಸಿದ ಪತ್ರಗಳಲ್ಲಿ ಶಾಹುರವರನ್ನು ತೆಗಳುವ ಒಂದೇ ಒಂದು ಪತ್ರವು ಸಿಗದಿರುವುದರಿಂದ ಅವರ ನಿಷ್ಠೆ ತೋರ್ಕೆ ಎಂಬ ಊಹೆಯನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಮತ್ತೆ ಬ್ರಿಟಿಷರು ಸಯ್ಯಾಜಿರಾವ್ ಅವರನ್ನು 'ಶತ್ರು' ಎಂದೂ ಶಾಹುರವರನ್ನು 'ಪ್ರೀತಿಯ ಸ್ನೇಹಿತ' ಎಂದು ಪರಿಗಣಿಸಿತ್ತೆಂದು ಲಭ್ಯ ಸಾಕ್ಷ್ಯಾಧಾರಗಳು ಸ್ಪಷ್ಟಪಡಿಸುತ್ತವೆ".[8]

ಶಾಹುರವರು ಗೌಪ್ಯವಾಗಿ ಕ್ರಾಂತಿಕಾರಿ ಚಳುವಳಿಗಳಿಗೆ ನೀಡಿದ ನೆರವನ್ನು ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. ಡಾ. ಫಡ್ಕೆ ಅವರು ಈ ಸಾಕ್ಷ್ಯಗಳನ್ನು 'ಕೇಳಿಕೆಯ ಸಾಕ್ಷ್ಯ'ಗಳೆಂದು ಈ ಉಲ್ಲೇಖಗಳನ್ನು ತಳ್ಳಿಹಾಕಿದ್ದಾರೆ ಮತ್ತು ಅವರು ಮೇಲಿನ ಹೇಳಿಕೆಯನ್ನು ಸಮಕಾಲೀನ ನಿಜವಾದ ದಾಖಲೆಗಳ ಮತ್ತು ವರ್ಗೀಕೃತ ಬ್ರಿಟಿಷ್ ಪತ್ರವ್ಯವಹಾರ ಆಧಾರದ ಮೇರೆಗೆ ಮಾಡಿದ್ದಾರೆ. ಕ್ರಾಂತಿಕಾರಿಗಳಿಗೆ ಶಾಹು ನೀಡಿದ ನೆರವಿನ ಎಲ್ಲಾ ಸಾಕ್ಷ್ಯಗಳು ಖೋಟಾ ಎಂದು ಪರಿಗಣಿತವಾದರೆ ಫಡ್ಕೆಯವರ ಪ್ರಸ್ತಾವನೆ ಪರಿಪೂರ್ಣ ಸತ್ಯ ಎಂದು ಒಪ್ಪಿಕೊಳ್ಳುವುದರಲ್ಲಿ ಯಾವ ತಕರಾರು ಇಲ್ಲ. ಸ್ಪಷ್ಟ ವ್ಯಕ್ತಿತ್ವದ, ಬುದ್ಧಿ ಸೂಕ್ಷ್ಮತೆ ಮತ್ತು ಬುದ್ಧಿವಂತನಲ್ಲದ ಒಬ್ಬ ಸರಳ ಸ್ವಭಾವದವರಾದ ಶಾಹುರವರನ್ನು ನಾವು ಒಪ್ಪಬಹುದು. ಶಾಹುರವರು ಸಂಪೂರ್ಣವಾಗಿ ಭಿನ್ನ ವ್ಯಕ್ತಿ ಎಂಬುದು ಸತ್ಯ. ತೋಫ್‌ಖಾನೆ, ಥ್ಯಾಕರೆ, ಮಹರ್ಷಿ ಶಿಂಧೆ ಅವರೆಲ್ಲರೂ ಶಾಹುರವರ ನಿಕಟ ಸ್ನೇಹಿತರೆಂಬುದಕ್ಕೆ ಸಾಕ್ಷ್ಯಗಳಿವೆ ಮತ್ತು ಅವರೆಲ್ಲರೂ ಶಾಹುರೊಡನೆ ರಾಜಕಾರಣದಿಂದ ಹಿಡಿದು ಸಾಮಾಜಿಕ ಸಾಹಸಗಳವರೆಗೆ ಚರ್ಚಿಸುತ್ತಿದ್ದರೆಂಬುದು ಶಾಹುರವರು ಒತ್ತೊಟ್ಟಿಗೆ ವಿಭಿನ್ನವಾದ ವ್ಯಕ್ತಿಯಾಗಿದ್ದರು. ಥ್ಯಾಕರೆ ಹೇಳಿದ್ದರು: "ಮಹಾರಾಜರು ಮಹೋನ್ನತ ಮನುಷ್ಯ ಭಿನ್ನ ಭಿನ್ನ ವ್ಯಕ್ತಿಗಳು ಅವರನ್ನು ಭಿನ್ನ ಭಿನ್ನವಾಗಿ ಕಾಣುತ್ತಿದ್ದರು. ಭಿನ್ನ ಭಿನ್ನ ವ್ಯಕ್ತಿಗಳು ಅವರನ್ನು ಭಿನ್ನ ಭಿನ್ನ ದೃಷ್ಟಿಕೋನಗಳಿಂದ ನೋಡುತ್ತಿದ್ದರು. ಇಲ್ಲದಿದ್ದರೆ, ಅವರನ್ನು ಬಹು–ಆಯಾಮವುಳ್ಳ ವ್ಯಕ್ತಿತ್ವವುಳ್ಳ ಒಬ್ಬ ಮಹಾನುಭಾವನೆಂದು ಅಸ್ಪಷ್ಟವಾಗಿ ಕಾಣುತ್ತಿದ್ದರು. ಅವರು ಚಿತ್ಪಾವನರಿಗೆ ಶತ್ರುವಾಗಿ, ದೇಶಸ್ಥರಿಗೆ ಒಬ್ಬ ಧಾರ್ಮಿಕ ಬಂಡಾಯಗಾರರಾಗಿ ಕಾಣುತ್ತಿದ್ದರು. ಬಾಂಬೆ ಮತ್ತು ಭಾರತದ ಸರಕಾರಗಳಿಗೆ 'ಪ್ರಿಯಮಿತ್ರ'ನಾಗಿದ್ದರು. ಬ್ರಾಹ್ಮಣೇತರರಿಗೆ ಅವರು ಒಬ್ಬ ಪೋಷಕನಾಗಿ ಕಂಡರೆ, ಅಸ್ಪೃಶ್ಯರಿಗೆ ದೇವರ ಅವತಾರವಾಗಿ ಕಾಣುತ್ತಿದ್ದರು".[10] ಈ ರೀತಿಯಲ್ಲಿ ಭಿನ್ನ ಭಿನ್ನ ಜನರು ಅವರ ವ್ಯಕ್ತಿತ್ವದ ಭಿನ್ನ ಭಿನ್ನ ಮುಖಗಳನ್ನು ಕಂಡರು. ಬ್ರಿಟಿಷಿನವರಿಗೆ ಪ್ರಿಯ ಮಿತ್ರನಾಗಿ ಕಂಡರು. ಅದು ಖಂಡಿತವಾಗಿ ಸತ್ಯವಲ್ಲ ಮತ್ತು ಅದು ಕೇವಲ ಬಣ್ಣ. ಶಾಹುರವರು ಬಹು ಬಣ್ಣ ಛಾಯೆಗಳ ಪರಿಪೂರ್ಣ ವ್ಯಕ್ತಿ ಥ್ಯಾಕರೆ ಅವರ ಮಾತುಗಳಲ್ಲಿ ಅವರೊಬ್ಬ ದೃಢ ರಾಜಕಾರಣಿ

ಮತ್ತು ಅವರೊಬ್ಬ ಮುತ್ಸದ್ಧಿ.[10] ಸ್ಪಷ್ಟ ವ್ಯಕ್ತಿತ್ವವುಳ್ಳ ಮುತ್ಸದ್ದಿಯನ್ನು ಮತ್ತು ಅವರ ಚಾರಿತ್ರ್ಯಕ್ಕೆ ಆಯಾಮಗಳ ಬಾಹುಳ್ಯವಿಲ್ಲದಿರುವುದನ್ನು ನಿರೀಕ್ಷಿಸುವುದು ನಿಷ್ಕಪಟವಾಗುತ್ತದೆ.

ಮಹರ್ಷಿ ಶಿಂಧೆಯವರು ಶಾಹುರವರ ಸಂಕೀರ್ಣ ವ್ಯಕ್ತಿತ್ವವನ್ನು ಶೋಧಿಸಲು ಪ್ರಯತ್ನಿಸಿದರು. ಅವರು ಹೇಳುತ್ತಾರೆ: "ಮಹಾರಾಜ ಶಾಹುರವರು ಕೇವಲ ಒಬ್ಬ ಮರಾಠ ಅಥವಾ ಒಬ್ಬ ಬ್ರಾಹ್ಮಣೇತರನಲ್ಲ. ಅವರು ಹೊಸಯುಗದ ಒಬ್ಬ ರಾಷ್ಟ್ರೀಯವಾದಿಯ ಒಬ್ಬ ಪರಿಪೂರ್ಣ ಅವತಾರಪುರುಷ. ಅವರು ವಿದೇಶಿ ಆಡಳಿತಗಾರರ ತೀಕ್ಷ್ಣತೆ(ಕುಟುಕು)ಗಳನ್ನು ಚೆನ್ನಾಗಿ ಬಲ್ಲವರು. ಅವರು ಮರಾಠರಾಗಿರುವುದರಿಂದ ಅವರ ರಕ್ತದಲ್ಲಿಯೇ ಗೆರಿಲ್ಲಾ ಪಟ್ಟುಗಳಿವೆ. ಅವರ ನಡವಳಿಕೆಗಳಲ್ಲಿ ಅವುಗಳು ಕಂಡುಬರುತ್ತವೆ. ಅವರು ಈ ಉಪಾಯಗಳನ್ನು ಹೂಡದಿದ್ದರೆ ಮಹಾರಾಷ್ಟ್ರದ ಜನರನ್ನು ಜಾಗೃತಗೊಳಿಸುವ ಕಾರ್ಯವನ್ನು ಪೂರೈಸುತ್ತಿರಲಿಲ್ಲ ಮತ್ತು ಅವರನ್ನು ಸ್ವಾವಲಂಬಿಗಳನ್ನು ಮಾಡಲಾಗುತ್ತಿರಲಿಲ್ಲ. ತಿಲಕರ ಮತ್ತು ಬ್ರಾಹ್ಮಣ ಸೈನ್ಯದ ಹಾನಿಕಾರಕ ದಾಳಿಗಳು ಮುಖಾಮುಖಿಯ ಹೋರಾಟಕ್ಕೆ ನೇರ ಸವಾಲುಗಳಾಗಿದ್ದವು. ಶಾಹು ಅಂತಹ ನೇರ ಸಂಘರ್ಷಗಳಿಗೆ ಹಿಂಜರಿದರು. ಆದರೆ ರಾಷ್ಟ್ರದ ಈ ಸೇವಕ ಬ್ರಾಹ್ಮಣ ಸೇನೆಯ ಮತ್ತು ಬ್ರಿಟಿಷ್ ಆಡಳಿತಶಾಹಿ ಈ ಕೊಲ್ಹಾಪುರಿ ಒಗಟಿನ ಬಗ್ಗೆ ಯೋಚಿಸುವಂತೆ ಅವರ ಮೂಳೆಗಳನ್ನು ನಯವಾಗಿ ಮುರಿದರು ಮತ್ತು ಅವರು ಹೊಟ್ಟೆಕಿಚ್ಚಿನಿಂದ ಈ ಗುಣಗಳನ್ನು ಮೆಚ್ಚುವಂತೆ ಮಾಡಿದರು. ಈ ವರ್ಣನೆ ಲೆನಿನ್‌ರ ಹಾಗೆ ಶಾಹು ಒಬ್ಬ ಮಹಾನ್ ಕ್ರಾಂತಿಕಾರಿ ಎಂದು ಭಾವಿಸುವಂತೆ ಮಾಡುತ್ತದೆ. ಸರಿಯಾಗಿ ಹೇಳುವುದಾದರೆ ಅವರೊಬ್ಬ ಮಹಾರಾಷ್ಟ್ರದ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮೂಡಿಬಂದ ಸಹಜ ವ್ಯಕ್ತಿ".[11] ಬ್ರಿಟಿಷರೊಡನೆ ನಡೆಸಿದ ಶಾಹುರವರ ವ್ಯವಹಾರಗಳು ಅವರಲ್ಲಿ ಸಹಜವಾಗಿ ಮೂಡಿಬಂದ ಅವರ ಗೆರಿಲ್ಲಾ ಉಪಾಯಗಳ ಭಾಗವೆ ಎಂಬ ಬಗ್ಗೆ ಯೋಚಿಸುವಂತೆ ಶಿಂಧೆಯವರ ಅವಲೋಕನಗಳು ನಮಗೆ ಹಚ್ಚುತ್ತವೆ. ಶಾಹುರವರ ಒಗಟು ಸಮಕಾಲೀನ ಆಡಳಿತಶಾಹಿಗೆ ಅಪರಿಮೇಯ ಮತ್ತು ಬ್ರಾಹ್ಮಣತ್ವ ಮತ್ತಷ್ಟು ಕಗ್ಗಂಟು ಮತ್ತು ಮುಗಿಸಿಬಿಡುವಂತಹದು. ಡಾ. ಫಡ್ಕೆ ಅವರು ಶಿಂಧೆಯವರ ಹೇಳಿಕೆಯಿಂದ ಕೊಲ್ಹಾಪುರಿ ಒಗಟು ಎಂಬ ಪದವನ್ನು ಒಪ್ಪಿಕೊಂಡಂತೆ ಕಾಣುತ್ತಾರೆ. ಈ ಒಗಟನ್ನು ಬಿಡಿಸುವುದಕ್ಕೆ ಒಬ್ಬ ನಿಜವಾದ ಸಂಶೋಧಕ ಬೇಕಾಗಿದ್ದಾರೆಂದು ಡಾ. ಫಡ್ಕೆ ಹೇಳುತ್ತಾರೆ. ಅವರು ಹೇಳುತ್ತಾರೆ: "ನಾನು ಸೇರಿದಂತೆ ಹಲವರು ಈ ಕೊಲ್ಹಾಪುರಿ ಒಗಟನ್ನು ಶಾಹು ಛತ್ರಪತಿ ಬಿಡಿಸುವುದಕ್ಕೆ ಹಲವರು ಪ್ರಯತ್ನಿಸಿದರು. ಕೆಲವರು ಈ ಒಗಟನ್ನು ಬಿಡಿಸಿದ್ದೇವೆಯೆಂದು ಹೇಳಬಹುದು, ಯಾರು ಸಹ ಸರಿಯಾದ ಉತ್ತರವನ್ನು ಪಡೆದಿದ್ದೇವೆ ಎಂದು ಹೇಳುವುದಿಲ್ಲ. ಈ ಒಗಟನ್ನು ಬಿಡಿಸುವಾಗ, ಬೇರೆಯವರಿಗೆ ಹೋಲಿಸಿದಾಗ, ಅವರು ಕನಿಷ್ಠ ತಪ್ಪುಗಳನ್ನು ಮಾಡುವಂತೆ ಎಚ್ಚರಿಕೆ ವಹಿಸುವ ಒಂದು ಕೆಲಸ ಮಾಡಲು ಸಾಧ್ಯವಿದೆ".[12]

ಪ್ರಸ್ತುತ ಲೇಖಕ ಈ ಒಗಟನ್ನು ಬಿಡಿಸುವುದಕ್ಕೆ ಪ್ರಯತ್ನಿಸುತ್ತಿದ್ದಾರೆ, ಆದರೆ ಎಲ್ಲಿಯೂ ತಾನು ಸರಿಯಾದ ಉತ್ತರ ಪಡೆದಿದ್ದೇನೆಂದು ಹೇಳುತ್ತಿಲ್ಲ. ಖಂಡಿತವಾಗಿ ಅವರು ಡಾ. ಫಡ್ಕೆ ಹೇಳಿದಂತೆ ಕನಿಷ್ಠ ತಪ್ಪುಗಳನ್ನು ಮಾಡುವ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಿದ್ದಾರೆ.

### ಫುಲೆ ಮತ್ತು ಶಾಹು-ರಾಜ್‌ಗೆ ಕೃತಜ್ಞತೆಗಳು

ಹಲವು ರಾಷ್ಟ್ರೀಯ ನಾಯಕರಾದ ನ್ಯಾಯಮೂರ್ತಿ ರಾನಡೆ, ಫಿರೋಜ್ ಮೆಹ್ತಾ ಅವರು ಬ್ರಿಟಿಷರ ಆಡಳಿತ ಒಂದು ದೈವ ಸಂಕಲ್ಪವೆಂದು ಚಿಂತಿಸಿದರು. ಈ ಭಾವನೆಯನ್ನು ವ್ಯಕ್ತಪಡಿಸುತ್ತಾ ಅವರು

ಬ್ರಿಟಿಷ್ ಆಡಳಿತದ ಹಲವಾರು ಮುಖಗಳಾದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಈ ದೇಶದಲ್ಲಿ ಬ್ರಿಟಿಷರು ಸ್ಥಾಪಿಸಿದ್ದಾರೆ ಎಂದು ಭೌತಿಕ ಸುಧಾರಣೆಗಳಾದ ಶಿಕ್ಷಣ, ರೈಲ್ವೆಗಳು, ಅಂಚೆ ಮತ್ತು ತಂತಿ, ಕಾನೂನುಬದ್ಧ ಆಡಳಿತ, ಕಾನೂನಿನ ಮುಂದೆ ಸಮಾನತೆಯ ಮೌಲ್ಯಗಳ ಪರಿಚಯ, ವ್ಯಕ್ತಿ ಸ್ವಾತಂತ್ರ್ಯ, ಉದಾರವಾದ, ಜನತಂತ್ರ, ರಾಷ್ಟ್ರೀಯತೆ ಮೊದಲಾದವುಗಳೆಂದು ಅವರು ನಮೂದಿಸಿದ್ದಾರೆ. ತಮ್ಮ ದೇಶದ ಮೇಲೆ ಬ್ರಿಟಿಷರು ಗುಲಾಮತ್ವವನ್ನು ಹೇರಿದ್ದನ್ನು ನೋಡಲು ಅಸಮರ್ಥರಾಗಿದ್ದಾರೆಂದು ಅರ್ಥವಲ್ಲ. ಆದರೆ ಮೇಲೆ ಹೇಳಿದ ಪ್ರಯೋಜನಗಳನ್ನು ದೇಶದ ಪ್ರಯೋಜನಕ್ಕೆ ನೀಡಿದ್ದಕ್ಕಾಗಿ ಈ ದೇಶವು ಬ್ರಿಟಿಷರಿಗೆ ತುಂಬಾ ಋಣಿಯಾಗಿದೆಯೆಂಬುದನ್ನು ಅವರು ಚೆನ್ನಾಗಿ ಅರಿತುಕೊಂಡಿದ್ದಾರೆ. ದೇಶದ ಹಿತದೃಷ್ಟಿಯಿಂದ ನಾವು ಬ್ರಿಟಿಷರಿಗೆ ನಿಷ್ಠರಾಗಿರಬೇಕಾಗಿದೆ. ಹೀಗೆ ಕಾಂಗ್ರೆಸ್ ಇತಿಹಾಸದ ಮೊದಲ ಯುಗದಲ್ಲಿ ಯೂನಿಯನ್ ಜಾಕ್ ಧ್ವಜವನ್ನು ಕಾಂಗ್ರೆಸ್ ಅಧಿವೇಶನದಲ್ಲಿ ಹಾರಿಸಲಾಯಿತು ಮತ್ತು ಬ್ರಿಟಿಷ್ ರಾಷ್ಟ್ರೀಯ ಗೀತೆಯನ್ನು ಹಾಡಲಾಯಿತು.[13]

ಮಹಾತ್ಮ ಫುಲೆಯವರು ತಮ್ಮ ಬರವಣಿಗೆಗಳಲ್ಲಿ ಬ್ರಿಟಿಷ್ ಚಕ್ರವರ್ತಿಗೆ ಅಂಥದ್ದೇ ನಿಷ್ಠೆಯನ್ನು ಆಗಾಗ ವ್ಯಕ್ತಪಡಿಸಿರುವುದನ್ನು ನೋಡಬಹುದು. ಆದರೆ ಬ್ರಿಟಿಷರ ಮೌಲ್ಯಮಾಪನ ಮಾಡುವ ಬಗ್ಗೆ ಫುಲೆ ಮತ್ತು ಕಾಂಗ್ರೆಸ್ ನಾಯಕರಲ್ಲಿ ವ್ಯತ್ಯಾಸವಿದೆ. ರಾನಡೆ ಮತ್ತು ಮೆಹ್ತಾ ಅವರು ಭಾರತೀಯ ಜನರಿಗೆ ಬ್ರಿಟಿಷ್ ಆಳ್ವಿಕೆಯಿಂದ ಮೇಲೆ ಹೇಳಿದ ಪ್ರಯೋಜನಗಳು ದೊರೆತಿದ್ದರಿಂದ ತೃಪ್ತಿಪಟ್ಟುಕೊಂಡರೆ ಫುಲೆಯವರು ಈ ಆಳ್ವಿಕೆಯಿಂದ ಶೂದ್ರ-ಅತಿಶೂದ್ರ ಜನತೆಯ ಸಹೋದರರಿಗೆ, ಬ್ರಾಹ್ಮಣ ಸರ್ವಾಧಿಕಾರ ಮತ್ತು ಸರ್ವಾಧಿಕಾರಿ ಆಡಳಿತಗಾರರಿಂದ ಮುಕ್ತಿ ಸಿಕ್ಕಿದ್ದರೆ ಸಂತೋಷಪಡುತ್ತಿದ್ದರು. ಅವರು ಪುಸ್ತಕವಾದ 'ಇಷಾರ'ದಲ್ಲಿ ತಮ್ಮ ತೃಪ್ತಿಯನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ಹೇಳುತ್ತಾರೆ: "ಸರ್ವಶಕ್ತನಾದ ದೇವರು ಅಧಿಕಾರಸ್ಥರನ್ನು ಬಲವಂತವಾಗಿ ತಿರುಚಿ ಮತ್ತು ರಾಜಮಹಾರಾಜರ ಮತ್ತು ಸಹಜಾತಿಯ ಮನುಷ್ಯರ ಸರ್ವಾಧಿಕಾರಿಗಳು ತಮ್ಮ ಅಧಿಕಾರದಿಂದ ಪ್ರಜೆಗಳಿಗೆ ಕಿರುಕುಳ ನೀಡಿದ ಅವರನ್ನು ಅವರ ಅಪರಾಧಗಳಿಗೆ ಅನುಗುಣವಾಗಿ ಶಿಕ್ಷೆ ನೀಡಿ ಕರುಣಾಮಯಿಯಾದ ಅವರು(ದೇವರು) ನೋವುಂಡ ಶೂದ್ರ ಮತ್ತು ಅತಿಶೂದ್ರ ಪ್ರಜೆಗಳಿಗೆ ನ್ಯಾಯಬದ್ಧ, ಪ್ರಯೋಜನಕಾರಿ, ಸರಿಯಾದ ಮತ್ತು ಶಾಂತಿಯುತನಾದ ಬ್ರಿಟಿಷರ ಆಡಳಿತವನ್ನು ಕರುಣಿಸಿದರು. ಈ ಮಂದಿ ದೇವರಿಗೆ ಚಿರಋಣಿಗಳು ಮತ್ತು ದಿನ-ರಾತ್ರಿ ಪ್ರಾರ್ಥನೆ ಮಾಡಿದರು: "ಓ ದೇವರೇ, ಈ ಆಡಳಿತವು ನಮಗಾಗಿ ಹೀಗೆ ಮುಂದುವರಿಯಲಿ." ಈ ಆಡಳಿತಕ್ಕಾಗಿ ಈ ಮಂದಿ ಅಂತಿಮವಾಗಿ ಮೊದಲಿನ ಆಡಳಿತ (ಬ್ರಾಹ್ಮಣ ಸರ್ವಾಧಿಕಾರ)ದಲ್ಲಿ ಧಾರ್ಮಿಕ, ನೈತಿಕ, ರಾಜಕೀಯ ಹಾಗೂ ಇತರೆ ಹಲವು ವಲಯಗಳಲ್ಲಿ ತಮ್ಮ ಮೇಲೆ ಮುಂದುವರಿಸಿದ್ದ ಎಲ್ಲಾ ಕ್ರೌರ್ಯಗಳನ್ನು ಮನ್ನಿಸಿದ್ದೇವೆ."[14] ಇದೆಲ್ಲದರ ಅರ್ಥ ಫುಲೆಯವರು ಬ್ರಿಟಿಷರ ಭಟ್ಟಂಗಿಯಾಗಿದ್ದರು ಎಂದಲ್ಲ. ಮೌಢ್ಯ ಮತ್ತು ಕಡುಬಡತನಗಳಿಂದ ನರಳುತ್ತಿದ್ದ ಜನರನ್ನು ಕಡೆಗಣಿಸಿದ ಬ್ರಿಟಿಷ್ ಆಡಳಿತಗಾರರನ್ನು ತಮ್ಮ ಲೇಖನಿಯ ಹೊಡೆತಗಳಿಂದ ಉಳಿಸಿರಲಿಲ್ಲ ಎಂಬ ಸಂಗತಿಯನ್ನು ಗಮನಿಸಬೇಕು.[15]

ಬ್ರಿಟಿಷರ ಆಡಳಿತ ಒಂದು ದೈವಸಂಕಲ್ಪ ಎಂಬ ವಿಚಾರವನ್ನು ಒಪ್ಪುವ ದೇಶಭಕ್ತರ ಗುಂಪಿಗೆ ಶಾಹು ಸೇರುತ್ತಾರೆಂದು ಮತ್ತು ಅವರು ತಮ್ಮ ನಿಷ್ಠೆಯನ್ನು ಅದೇ ಧಾಟಿಯಲ್ಲಿ ಬ್ರಿಟಿಷರಿಗೆ ತೋರಿಸಿದರೆಂದು ತೋರುತ್ತದೆ. ಅವರು ಹೇಳುತ್ತಾರೆ: " ನಾವೆಲ್ಲ ಭಾರತದ ಕಲ್ಯಾಣಕ್ಕಾಗಿ ಬ್ರಿಟಿಷ್ ಸಾಮ್ರಾಜ್ಯದ ಭಾಗವಾಗಿದ್ದು ದೇವರ ಆಸಕ್ತಿಗಳೊಂದಿಗೆ ಕೂಡಿಬಂದವು."[16] ತಮ್ಮ ಕೃತಜ್ಞತೆಗಳನ್ನು ಸಲ್ಲಿಸಲು ಭಾರತೀಯರು ಬ್ರಿಟಿಷರಿಗೆ

ನಿಷ್ಠರಾಗಿರಬೇಕೆಂದು ಶಾಹು ಸಹ ಹೇಳಿದರು. ಈ ದೃಷ್ಟಿಯಲ್ಲಿನ ಅವರ ಚಿಂತನೆ ರಾಷ್ಟ್ರೀಯ ನಾಯಕರಾದ ರಾನಡೆ ಮತ್ತು ಫಿರೋಜ್ ಶಹಾ ಮೆಹ್ತಾ ಅವರ ಅಭಿಪ್ರಾಯಗಳು ಅಥವಾ ಕ್ರಾಂತಿಕಾರಿ ಸುಧಾರಕರಾದ ಫುಲೆಯವರು ಅಭಿವ್ಯಕ್ತಿಗೊಳಿಸಿದ ವಿಚಾರಗಳಲ್ಲಿ ಅಂತಹ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ಭಾರತದಲ್ಲಿ ಸಮಕಾಲೀನ ಅಭಿವೃದ್ಧಿ ಮತ್ತು ಜಾಗೃತಿಗೆ ಶಾಹುರವರು ಮುಂದಿಟ್ಟ ಮೂರು ಕಾರಣಗಳಲ್ಲಿ ಶಾಂತಿಯುತ ಬ್ರಿಟಿಷ್ ಸರಕಾರ ಮತ್ತು ಇಂಗ್ಲಿಷ್ ಶಿಕ್ಷಣ ಎಂಬ ಎರಡು ಕಾರಣಗಳು ಬ್ರಿಟಿಷ್ ಆಡಳಿತಕ್ಕೆ ಸಂಬಂಧಿಸಿದ್ದರೆ ಇಂಗ್ಲಿಷ್ ಶಿಕ್ಷಣದ ಬಗ್ಗೆ ಭಾರತೀಯ ಜನತೆ ಸಲ್ಲಿಸಬೇಕಾದ ಕೃತಜ್ಞತೆಯ ಭಾರ ಅಪಾರವಾದದ್ದು ಎಂದು ವಿವರಿಸುತ್ತಾ, ಶಾಹುರವರು ಹೇಳುತ್ತಾರೆ: "ಭಾರತೀಯರು ಇಂಗ್ಲೀಷಿನಿಂದ ಮೂರನೇ ಕಣ್ಣನ್ನು ಪಡೆದದ್ದು ಎಂತಹ ಅದ್ಭುತ ಪ್ರಯೋಜನ. ನಾವು ಯಾರು, ಹಿಂದೆ ನಮ್ಮ ಸ್ಥಿತಿ ಏನಿತ್ತು, ಈಗ ನಮ್ಮ ಸ್ಥಿತಿ ಏನು, ಮುಂದೆ ನಮ್ಮ ಸ್ಥಿತಿ ಹೇಗಿರಬೇಕು ಎಂಬುದನ್ನು ಕಾಣಲು ನಾವು ಪ್ರಾರಂಭಿಸಿದೆವು. ಈ ಎಚ್ಚರಿಕೆ ನಮಗೆ ಅಪಾರವಾದ ಸಂತೋಷವನ್ನು ನೀಡುತ್ತದೆ."[17] ನಮಗೆ ಇಂಗ್ಲಿಷ್ ವಿದ್ಯೆಯ ಅಮೃತ ನೀಡಿದವರು, ಮುಂದೆ ಒಂದು ದಿನ ಸ್ವಾತಂತ್ರ್ಯದ ಹಕ್ಕುಗಳನ್ನು ನೀಡುವರೆಂದು ತಮ್ಮ ಆಶಾವಾದವನ್ನು ಅವರು ವ್ಯಕ್ತಪಡಿಸಿದರು: "ಈ ಅಮೃತವನ್ನು ನೀಡಿದವರು ಒಂದು ದಿನ ಖಂಡಿತವಾಗಿ ಗುಲಾಮತ್ವದಿಂದ ನಮ್ಮನ್ನು ಮುಕ್ತಗೊಳಿಸುವರು. ನಿಮಗೆ ಬೇಕಾದದ್ದನ್ನು ಮಗು ತಂದೆತಾಯಿಗಳನ್ನು ಕೇಳಿದ ರೀತಿಯಲ್ಲೇ ಸರಕಾರವನ್ನು ಕೇಳಿ. ಪ್ರೀತಿಯಿಂದ ಸರಕಾರ ಖಂಡಿತವಾಗಿ ನೀಡುವುದು. ಪ್ರೀತಿಯಿಂದ ಸಂಭವಿಸಿದ ಸಂಗತಿಗಳು ಒತ್ತಾಯದ ರೀತಿಯಲ್ಲಿ ಖಂಡಿತವಾಗಿ ಎಂದಿಗೂ ಸಂಭವಿಸಿರುವುದಿಲ್ಲ ಎಂಬುದು ಖಚಿತವೆಂದು ನಾನು ನಂಬುತ್ತೇನೆ."[18] ರಾಜಕೀಯ ಆಡಳಿತದಲ್ಲಿ ಎಲ್ಲಾ ಜಾತಿ ಮತ್ತು ಧರ್ಮಗಳನ್ನು ಸಮಾನವಾಗಿ ಪರಿಗಣಿಸುವ ಬ್ರಿಟಿಷರ ಸಮಾನತೆಯ ತತ್ವವು ಭಾರತದ ಜನತೆಯನ್ನು ಸಂತೋಷಗೊಳಿಸಿದೆಯೆನ್ನಬಹುದು ಮತ್ತು ಅದಕ್ಕಾಗಿ ಜನರು ಸರಕಾರಕ್ಕೆ ನಿಷ್ಠರಾಗಿರಬೇಕೆಂದು ಶಾಹುರವರು ಸ್ಪಷ್ಟವಾಗಿ ಹೇಳಿದ್ದಾರೆ: "ಬ್ರಿಟಿಷರು ಮೊದಲ ಬಾರಿಗೆ ಸಮಾನತೆಯ ತತ್ವವನ್ನು ಆಡಳಿತಕ್ಕೆ ಅನ್ವಯಿಸಿದರು. ಎಲ್ಲಾ ಪ್ರಜೆಗಳು ಸಮಾನ ಹಕ್ಕುಗಳನ್ನು ಹೊಂದಿದ್ದಾರೆಂದು ಅವರು ಘೋಷಿಸಿದರು. ಅದೇ ರೀತಿಯ ಎಲ್ಲಾ ಕಾನೂನುಗಳನ್ನು ಎಲ್ಲರಿಗೂ ಅನ್ವಯಿಸಲಾಗುವುದು. ಜಾತಿ ಆಧಾರದ ಮೇಲೆ ಕಠಿಣ ಶಿಕ್ಷೆ ಅಥವಾ ಅಲ್ಪ ಶಿಕ್ಷೆ ವಿಧಿಸುವುದಕ್ಕೆ ಅನುಮತಿ ಕೊಡಬಾರದು. ಅವರು ಮಿಷನರಿಗಳು ಶಾಲೆಗಳನ್ನು ಸ್ಥಾಪಿಸುವುದರಲ್ಲಿ ಮತ್ತು ಪ್ರೀತಿಯಿಂದ ಅಸ್ಪೃಶ್ಯರನ್ನು ಕಾಣುವ ನಿದರ್ಶನಗಳನ್ನು ಹಾಕಿಕೊಟ್ಟವರಲ್ಲಿ ಮೊದಲಿಗರು. ಬೇರೆ ಯೂರೋಪಿನ ದೇಶಗಳಾದ ಹಾಲೆಂಡ್, ಬೆಲ್ಜಿಯಂ ದೇಶಗಳು ತಮ್ಮ ವಸಾಹತು ಪ್ರಜೆಗಳ ಶಿಕ್ಷಣವನ್ನು ಅಭಿವೃದ್ಧಿಪಡಿಸಿಲ್ಲ. ಆದರೆ ಬ್ರಿಟಿಷರು ಈ ವಿಷಯದಲ್ಲಿ ತುಂಬ ಒಳ್ಳೆಯವರು. ಎಲ್ಲಕ್ಕಿಂತ ಮಿಗಿಲಾಗಿ ನಮ್ಮಲ್ಲಿ ಅನೇಕರು ಸ್ವರಾಜ್ಯವನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಿರುವಾಗ ಅವರು ನಮಗೆ ಸ್ವರಾಜ್ಯ ನೀಡುತ್ತಿದ್ದಾರೆ. ಇದು ಅವರ ಮಹಾದೊಡ್ಡಗುಣ. ಬ್ರಿಟಿಷ್ ಸಾಮ್ರಾಜ್ಯ ಪ್ರತಿಯೊಬ್ಬರನ್ನು ಸಮಾನತೆಯಿಂದ ಸಮಾನವಾಗಿ ಕಾಣುತ್ತಿರುವಾಗ ನಾವು ಅವರಿಗೆ ನಿಷ್ಠರಾಗಿರಬೇಕೆಂದು ಮತ್ತೆ ಒತ್ತಿಹೇಳಬೇಕಾಗಿಲ್ಲ. ನಾವು ಅವರ ಅನೇಕ ಹಂಗಿಗೆ ಒಳಗಾಗಿದ್ದೇವೆ."[19]

ಬ್ರಿಟಿಷ್ ಆಡಳಿತಕ್ಕೆ ಕೃತಜ್ಞತೆಯನ್ನು ವ್ಯಕ್ತಪಡಿಸುವ ಶಾಹು ಮತ್ತು ಇತರೆ ಸಾಮಾಜಿಕ ಹಾಗೂ ರಾಜಕೀಯ ನಾಯಕರುಗಳ ನಡುವೆ ಮುಖ್ಯ ವ್ಯತ್ಯಾಸವಿದೆ. ರಾಜಕಾರಣಿಗಳು ಯಾವಾಗಲು ಮತ್ತು ಸುಧಾರಕರು ಆಗಾಗ ಸರಕಾರದ ಟೀಕೆಗೆ ಯೋಗ್ಯವಾದ ಧೋರಣೆ ಅಥವಾ ಕಾಯ್ದೆಗಳನ್ನು ಕಟುವಾಗಿ ಟೀಕಿಸುತ್ತಾರೆ. ಅವರು ಸಾಂದರ್ಭಿಕವಾಗಿ ಸರಕಾರವನ್ನು ಚಿಂದಿ-ಚಿಂದಿಯಾಗಿ ಹರಿದು ಬಿಸಾಕುತ್ತಾರೆ.

ಆದರೆ ಶಾಹುರವರು ಈ ಸ್ವಾತಂತ್ರ್ಯವನ್ನು ಪ್ರಯೋಗಿಸುವುದಿಲ್ಲ. ಹೆಚ್ಚಿಗೆ, ಹಿರಿಯ ಬ್ರಿಟಿಷ್ ಅಧಿಕಾರಿಗಳು ತಮ್ಮ ಸಂಸ್ಥಾನದ ಹೊರಗೆ ಸಾರ್ವಜನಿಕ ಸಮಾರಂಭಗಳಿಗೆ ಭಾಗವಹಿಸದಂತೆ ಮತ್ತು ಭಾಷಣಗಳನ್ನು ಮಾಡದಂತೆ ಸಲಹೆಗಳನ್ನು ನೀಡುತ್ತಿದ್ದರು. ನಿಜವಾಗಿ ಅವರ ಅಂತರಂಗದಲ್ಲಿ ಬ್ರಾಹ್ಮಣೇತರರನ್ನು ಸಾಮಾಜಿಕ ಕ್ಷೇತ್ರದಲ್ಲಿ ಮಾತ್ರವಲ್ಲದೆ ರಾಜಕೀಯ ಕ್ಷೇತ್ರದಲ್ಲಿ ಕೂಡ ಮುನ್ನಡೆಸಲು ಒತ್ತಾಸೆಯಿತ್ತು. ಬ್ರಾಹ್ಮಣೇತರರ ಆಸಕ್ತಿಗಳನ್ನು ಸಂರಕ್ಷಿಸಲು ೧೯೨೦ರಲ್ಲಿ ಶಾಸನ ಪರಿಷತ್ತುಗಳ ಚುನಾವಣೆಗಳನ್ನು ಎದುರಿಸಲು ಬ್ರಿಟಿಷರ ಅನುಮತಿಯನ್ನು ಬಯಸಿದ್ದರು. ಆದರೆ ಸರಕಾರ ಅವರ ಕೋರಿಕೆಯನ್ನು ನಿರಾಕರಿಸಿತು.[20] ಅವರು ಸಾಮಂತ ರಾಜನಾಗಿ ಹಲವು ರಾಜಕೀಯ ಇತಿಮಿತಿಗಳನ್ನು ಹೊಂದಿದ್ದರು. ಆದರೂ ಕೂಡ ಅವರು ತನ್ನ ಎಲ್ಲ ಇತಿಮಿತಿಗಳೊಳಗೇ ಬ್ರಾಹ್ಮಣೇತರರ ವಿಮೋಚನೆಯ ಹೊಣೆಯನ್ನು ಹೊತ್ತಿದ್ದರು.

ಶಾಹುರವರು ಪ್ರಸ್ತಾಪಿಸಿದ 'ಮರಾಠ ಯುದ್ಧ ಸ್ಮರಣೆ' ಮತ್ತು 'ಶಿವಾಜಿ ಸ್ಮರಣೆ'ಗಳಿಗೆ ಪೂನಾದಲ್ಲಿ ಬ್ರಿಟಿಷ್ ಚಕ್ರವರ್ತಿಯವರಿಂದ ಅಡಿಗಲ್ಲು ಹಾಕಿಸುವ ಮಟ್ಟಿಗೆ ಅವರ ಸಂಬಂಧ ಬ್ರಿಟಿಷರಲ್ಲಿ ಮಹತ್ವದ್ದಾಗಿತ್ತು. ಶಾಹುರವರು ಮಹಾಪ್ರಯತ್ನಪಟ್ಟು ಬ್ರಿಟಿಷ್ ಚಕ್ರವರ್ತಿ ಪೂನಾಗೆ ಭೇಟಿ ಕೊಡುವಂತೆ ಮಾಡಿದ್ದರು. ಶಾಹುರವರ ಗೌರವದಿಂದ ಸಾವಿರಾರು ಪಾಟೀಲರು ಮತ್ತು ರಾಯತರು ಮಹಾರಾಷ್ಟ್ರದಿಂದ ಪೂನಾ ಸಮಾರಂಭಕ್ಕೆ ಬಂದಿದ್ದರು. ಆ ಮಹಾ ಜನಸಾಗರವು ಶಾಹುರವರ ಬಗ್ಗೆ ಯುದ್ಧಗೌರವ ಮತ್ತು ಶಾಹುರವರು ಆ ಜನತೆಯ ಬಗ್ಗೆ ತಮ್ಮ ಅಂತರಾಳದ ಪ್ರೀತಿಯ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಿತು. ಬ್ರಿಟಿಷ್ ಚಕ್ರವರ್ತಿಗಳ ಭೇಟಿಯು ಒಂದು ರೀತಿಯಲ್ಲಿ ಶೌರ್ಯ ಪರಂಪರೆಯ ವೀರಕ್ಷಾತ್ರ ಮರಾಠರ ಗೌರವವಾಗಿತ್ತು. ಇದರ ಜೊತೆಗೆ, ಚಕ್ರವರ್ತಿಗಳು ಸಹ ಸಾರ್ವಜನಿಕವಾಗಿ ಶಿವಾಜಿ ಮಹಾಶಯರನ್ನು ಗೌರವಿಸಿ ಅವರನ್ನು ರಾಷ್ಟ್ರ–ರಾಜ್ಯದ ನಿರ್ಮಾಪಕ ಎಂದು ಕರೆದರು. ವಾಸ್ತವಿಕವಾಗಿ ಬ್ರಿಟಿಷ್ ಚಕ್ರವರ್ತಿ ಮಹಾರಾಷ್ಟ್ರೀಯ ವ್ಯಕ್ತಿ ಶಿವಾಜಿಗೆ ನೀಡಿದ ಮರ್ಯಾದೆಯಾಗಿತ್ತು. ಈ ಘಟನೆಗಳ ಮೂಲದಲ್ಲಿ ಶಾಹುರವರ ದೂರದೃಷ್ಟಿ ಸಂಘಟನೆಯಿತ್ತು. ಅವರ ಗುರಿ ಮರಾಠ ಘನತೆಯನ್ನು ಉಜ್ವಲಗೊಳಿಸುವುದಾಗಿತ್ತು ಮತ್ತು ಅವರ ವೈಭವದ ಶೌರ್ಯದ ಪರಂಪರೆ ಬಗ್ಗೆ ಹೆಮ್ಮೆಯನ್ನು ಅವರಲ್ಲಿ ಮೂಡಿಸುವುದಾಗಿತ್ತು. ಅದು ಬಹುಮಟ್ಟಿಗೆ ನಿಸ್ಸಂದೇಹವಾಗಿ ನೆರವೇರಿತು.

---

೨೬

# ಅಲ್ಪಸಂಖ್ಯಾತರು

**ಶಾ**ಹು ಮರಾಠಾ ರಾಜನಾಗಿದ್ದರೂ ಅವರು ಮರಾಠರಿಗೆ ಮಾತ್ರ ಮಹಾರಾಜನಾಗಿರಲಿಲ್ಲ. ಅವರ ಸಂಸ್ಥಾನದಲ್ಲಿ ಹಿಂದು, ಜೈನ, ಮುಸ್ಲಿಮ್, ಪಾರಸಿ, ಕ್ರಿಶ್ಚಿಯನ್ ಮೊದಲಾದವರಿಗೆಲ್ಲಾ ಮಹಾರಾಜರಾಗಿದ್ದರು. ಅವರು ಸ್ವತಃ ತಮ್ಮ ಹಾಗೆ ಕಂಡುಕೊಂಡಿದ್ದರು. ಅವರು ವಿಶೇಷವಾಗಿ ಮುಸ್ಲಿಂ ಸಮುದಾಯಕ್ಕೆ ಕಾಳಜಿ ತೋರಿಸಿದ್ದರು. ಅವರು ೧೮೯೪ರಲ್ಲಿ ಅಧಿಕಾರಕ್ಕೆ ಬಂದಾಗಿನಿಂದ ಈ ದೇಶದಲ್ಲಿ ಹಿಂದು ಮತ್ತು ಮುಸ್ಲಿಮರ ನಡುವೆ ಪರಸ್ಪರ ಗೌರವ ಮತ್ತು ನಂಬಿಕೆಯಿಂದ ಬಾಳಬೇಕೆಂಬುದು ಅವರ ಮನೋಭಾವವಾಗಿತ್ತು. ಹಿಂದು ಮತ್ತು ಮುಸ್ಲಿಮರ ನಡುವಣ ಕೋಮುಗಲಭೆಗಳು ೧೮೯೩ರಲ್ಲಿ ಮೊಟ್ಟಮೊದಲಿಗೆ ಬಾಂಬೆಯಲ್ಲಿ ನಡೆದವು ಮತ್ತು ಅದರ ಪರಿಣಾಮಗಳು ಪೂನಾದಲ್ಲಿ ಮುಂದಿನ ವರ್ಷದ ಗಣೇಶೋತ್ಸವದ ಸಂದರ್ಭದಲ್ಲಿ ಕಂಡುಬಂದವು. ಪೂನಾದಲ್ಲಿ ಕೋಮುಗಲಭೆಗಳು ತಲೆದೋರಿದವು ಮತ್ತು ಎರಡು ಕೋಮುಗಳ ನಡುವೆ ಸಂಬಂಧಗಳು ಮುರಿದುಬಿದ್ದವು. ತಿಲಕರು ಹಿಂದುಗಳ ಪರ ವಹಿಸಿದರು. ಸರಕಾರವು ತಿಲಕರ ಪಕ್ಷಪಾತಕ್ಕಾಗಿ ತಿಲಕರ ಮೇಲೆ ಕಾನೂನುಕ್ರಮ ಜರುಗಿಸಿತು.[1] ಈ ಹಿನ್ನೆಲೆಯಲ್ಲಿ ಪೂನಾದಲ್ಲಿ 'ಸಾರ್ವಜನಿಕ ಸಭೆ'ಯು ಹೊಸ ಛತ್ರಪತಿಗೆ ಒಂದು ಸನ್ಮಾನ ಸಮಾರಂಭ ವ್ಯವಸ್ಥೆಗೊಳಿಸಿತ್ತು. 'ಸಭೆ'ಯ ಪರವಾಗಿ ಗೋಪಾಲಕೃಷ್ಣ ಗೋಖಲೆಯವರು ಶಾಹುರವರಿಗೆ ನೀಡಿದ್ದ ಗೌರವಫಲಕವನ್ನು ಓದಿದರು. ತಮ್ಮ ಸಂಕ್ಷಿಪ್ತ ಪ್ರತ್ಯುತ್ತರದಲ್ಲಿ ಶಾಹುರವರು ಇತ್ತೀಚಿನ ಕೋಮುಗಲಭೆಗಳನ್ನು ಉಲ್ಲೇಖಿಸಿದರು ಮತ್ತು 'ಸಭಾ'ದ ಕಾರ್ಯಕರ್ತರಿಗೆ ಹಿಂದು ಮತ್ತು ಮುಸ್ಲಿಮರ ನಡುವೆ ಸೌಹಾರ್ದತೆ ತರಲು ಸಲಹೆ ನೀಡಿದರೆಂಬುದು ದಾಖಲೆಯಾಗಿದೆ.[2] ಸ್ಪಷ್ಟ ೧೯ನೇ ಶತಮಾನದ ಕೊನೆಯ ದಶಕದಿಂದಲೂ ರಾಷ್ಟ್ರದ ಏಳಿಗೆಗೆ ಹಿಂದು ಮತ್ತು ಮುಸ್ಲಿಮರ ನಡುವೆ ಕೋಮುಸೌಹಾರ್ದತೆ ಅತ್ಯಗತ್ಯವೆಂದು ಅರ್ಥಮಾಡಿಕೊಂಡಿದ್ದರು. ಈ ನಂಬಿಕೆಯು ಅವರ ಕೊನೆ ಕಾಲದವರೆಗೂ ನೆಲೆಸಿತ್ತು. ೧೯೨೦ರಲ್ಲಿ ಅವರು ಮಾಡಿದ ಭಾಷಣದಲ್ಲಿ ಹಿಂದು ಮತ್ತು ಮುಸ್ಲಿಮರು ಒಂದೇ ರಾಷ್ಟ್ರದ ಎರಡು ಭಾಗಗಳೆಂದು ಒತ್ತಿಹೇಳಿದ್ದರು.[3]

## ಮುಸ್ಲಿಮರ ಶಿಕ್ಷಣ

ಸಮಕಾಲೀನ ಸಮಾಜದಲ್ಲಿ ಬ್ರಾಹ್ಮಣರನ್ನು ಬಿಟ್ಟು ಮರಾಠರು, ಜೈನರು, ಲಿಂಗಾಯತರು ಮತ್ತು ಮುಸ್ಲಿಮರು ಸೇರಿದಂತೆ ಉಳಿದೆಲ್ಲ ಜಾತಿಗಳು ಶಿಕ್ಷಣದಲ್ಲಿ ಹಿಂದುಳಿದಿದ್ದರು. ಅವರು ಶಿಕ್ಷಣದ ಬಗ್ಗೆ ತಮ್ಮಲ್ಲಿ ಆಸಕ್ತಿ ಬೆಳೆಸಿಕೊಳ್ಳದಿದ್ದರೆ ಅವರು ಹಿಂದುಳಿಯುವರೆಂದು ಶಾಹು ಭಯಪಟ್ಟಿದ್ದರು. ಆದ್ದರಿಂದ ಅವರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಮೂಡಿಸುವುದಕ್ಕೆ ಪ್ರಯತ್ನಪಟ್ಟಿದ್ದರು. ಅವರು ಮುಸ್ಲಿಮರ ಸಮುದಾಯದ ಸಲುವಾಗಿ ಶಿಕ್ಷಣದ ಬಗ್ಗೆ ಮುಂದೆ ಬರಬೇಕೆಂದು ಬಯಸಿದ್ದರು. ೧೯೦೨ರಲ್ಲಿ ಕೊಲ್ಲಾಪುರದಲ್ಲಿ

ಮುಸ್ಲಿಮರು ಶಾಹುರವರು ಇಂಗ್ಲೆಂಡಿನಿಂದ ಸುಗಮ ಆಗಮನಕ್ಕೆ ಒಂದು ಸಮಾರಂಭವನ್ನು ವ್ಯವಸ್ಥೆಗೊಳಿಸಿದ್ದರು. ಶಾಹುರವರು ಈ ಅವಕಾಶವನ್ನು ಬಳಸಿಕೊಂಡು ಮುಸ್ಲಿಮ್ ನಾಯಕರು ತಮ್ಮ ಸಮುದಾಯದಲ್ಲಿ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಲು ಅಭಿಯಾನವನ್ನು ಪ್ರಾರಂಭಿಸಬೇಕೆಂದು ಮತ್ತು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಬೇಕೆಂದು ಮನವಿ ಮಾಡಿಕೊಂಡರು. ಈ ಉದ್ಯಮದಲ್ಲಿ (ಕೆಲಸದಲ್ಲಿ) ದರ್ಬಾರು ಸಂಪೂರ್ಣ ಬೆಂಬಲ ನೀಡುವುದೆಂದು ಭರವಸೆ ನೀಡಿದರು.[4] ಶಾಹುರವರು ಒದಗಿಸಿದ ಸುವರ್ಣ ಅವಕಾಶವನ್ನು ಹಿಡಿದುಕೊಳ್ಳಲಾರಷ್ಟು ನಿರ್ಲಕ್ಷ್ಯದಲ್ಲಿ ಮುಸ್ಲಿಮ್ ಸಮುದಾಯ ಮುಳುಗಿಹೋಗಿತ್ತು. ಮುಸ್ಲಿಂ ಸಮುದಾಯ ಜಡತ್ವದಲ್ಲಿ ಸಿಲುಕಿಕೊಂಡಿತ್ತು. ಆದರೆ ಶಾಹು ಜಡರಾಗಿರಲಿಲ್ಲ. ಶಾಹುರವರು ಇತ್ತೀಚೆಗೆ ಕೊಲ್ಹಾಪುರದಲ್ಲಿ ಪ್ರಾರಂಭವಾಗಿದ್ದ ವಿಕ್ಟೋರಿಯಾ ಮರಾಠಾ ಬೋರ್ಡಿಂಗ್‌ನಲ್ಲಿ ೧೦ ಮುಸ್ಲಿಂ ವಿದ್ಯಾರ್ಥಿಗಳನ್ನು ಶಿಕ್ಷಣಕ್ಕೆ ಸೇರಿಸಿದರು. ಅವರಲ್ಲಿ ಒಬ್ಬರಾದ ಶೇಕ್ ಮೊಹಮದ್ ಯೂನಸ್ ಅಬ್ದುಲ್ಲಾ ಎಂಬ ವಿದ್ಯಾರ್ಥಿ ಕರ್ನಾಟಕದ ಅಥಣಿಯ ಸಣ್ಣ ಊರಿನವನು. ನಂತರ ಅವನು ವಿದ್ಯಾಭ್ಯಾಸ ಮುಗಿಸಿದ ಮೇಲೆ ಶಾಹುರವರು ಮಾಮಲೆದಾರನಾಗಿ ಅವನನ್ನು ತನ್ನ ಸಂಸ್ಥಾನದಲ್ಲಿ ನೇಮಕ ಮಾಡಿಕೊಂಡರು. ಮುಸ್ಲಿಂ ಸಮುದಾಯದಲ್ಲಿ ಶಿಕ್ಷಣದ ಪ್ರೀತಿಯನ್ನು ಅವರು ಹರಡಿದರು.[5]

೧೯೦೬ರಲ್ಲಿ ಶಾಹುರವರು ಸ್ವತಃ ಆಸಕ್ತಿ ವಹಿಸಿದರು ಮತ್ತು ಮುಸ್ಲಿಮರಲ್ಲಿ ಗೌರವಾನ್ವಿತ ವ್ಯಕ್ತಿಗಳ ಒಂದು ಸಭೆಯನ್ನು ಕರೆದರು ಮತ್ತು ಮಹಮ್ಮದೀಯರ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದರು ಮತ್ತು ತಾವು ಅದರ ಅಧ್ಯಕ್ಷರಾದರು ಮತ್ತು ಯೂಸುಫ್ ಅಬ್ದುಲ್ಲಾರವರನ್ನು ಕಾರ್ಯದರ್ಶಿಗಳನ್ನಾಗಿ ಮಾಡಿದರು ಎಂಬ ವಿಚಾರವನ್ನು ಈಗಾಗಲೇ ತಿಳಿಸಲಾಗಿದೆ. ಶಾಹುರವರು ತನ್ನ ಸಂಸ್ಥಾನದಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲು ವಿವಿಧ ಜಾತಿಗಳ ಮತ್ತು ಧರ್ಮಗಳವರನ್ನು ಪ್ರೋತ್ಸಾಹಿಸಿ ನೆರವನ್ನು ನೀಡಿದರು. ಆದರೆ ಅವರು ಈ ವಿದ್ಯಾರ್ಥಿ ನಿಲಯಗಳ ಸಂಸ್ಥೆಗಳಲ್ಲಿ ಯಾವುದೇ ಹುದ್ದೆಯನ್ನು ವಹಿಸಿಕೊಳ್ಳಲಿಲ್ಲ. ಆದರೆ ಮುಸ್ಲಿಮ್ ಸಮುದಾಯಕ್ಕೆ ಅಪವಾದವಾಗಿದ್ದರು. ಅವರು ಅವರ ಸಂಸ್ಥೆಯಲ್ಲಿ ಪದನಿಮಿತ್ತ ಅಧ್ಯಕ್ಷರ ಹುದ್ದೆಯನ್ನು ವಹಿಸಿಕೊಂಡಿದ್ದರು. ಇದು ಆ ಸಮುದಾಯದ ಬಗ್ಗೆ ಅವರ ಕಾಳಜಿಯ ಸಂಕೇತವಾಗಿದೆ. ನಂತರ ಒಂದು ಮುಸ್ಲಿಂ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. ಮುಸ್ಲಿಮರ ಪವಿತ್ರ ಸ್ಥಳಗಳ ಆದಾಯವನ್ನು ಈ ವಿದ್ಯಾರ್ಥಿ ನಿಲಯಕ್ಕೆ ವಹಿಸಲಾಯಿತು. ಆದಾಯವನ್ನು ಅಂತಹದ್ದಕ್ಕೆ ವರ್ಗಾಯಿಸುವುದಕ್ಕೆ ಸಂಬಂಧಿಸಿದ ಒಂದು ಆಜ್ಞೆ ದೊರೆಯುತ್ತದೆ. ಆ ಆಜ್ಞೆಯಲ್ಲಿ ಅವರು ಹೇಳುತ್ತಾರೆ: "…. ಹಿಂದುಳಿದ ವರ್ಗಗಳ ಕೊಲ್ಹಾಪುರದ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಗಿದೆ. ಮುಸ್ಲಿಮರ ವಿದ್ಯಾರ್ಥಿ ನಿಲಯ ಬಿಟ್ಟು ಇತರೆ ವಿದ್ಯಾರ್ಥಿ ನಿಲಯಗಳು ಚೆನ್ನಾಗಿ ಕೆಲಸ ಮಾಡುತ್ತಿವೆ. ಇತರೆ ಜಾತಿಗಳ ಸಮುದಾಯಗಳಂತೆಯೇ ಮುಸ್ಲಿಮರು ಶಿಕ್ಷಿತರಾಗುವುದು ಅತ್ಯಾವಶ್ಯಕ. ಅವರ ವಿದ್ಯಾರ್ಥಿ ನಿಲಯದ ಹಣಕಾಸಿನ ಪರಿಸ್ಥಿತಿ ಸುಧಾರಿಸದ ಹೊರತು ಅವರು ಸುಧಾರಿಸುವುದಿಲ್ಲ. ಹೀಗಿರುವಾಗ ಕಸಬ ರೊಕ್ಡಿ, ಪೇಠ ಹಾತಕನಂಗಲೆಯಿಂದ ಸಂಗ್ರಹಿಸಿದ ಒಟ್ಟು ಹಣದಲ್ಲಿ ೫೦೦ ರೂಪಾಯಿಗಳನ್ನು ಹಜರತ್ ಪೀರ್‌ರ ಸಮಾರಂಭಗಳಿಗೆ ಮತ್ತು ಮಂದಿರ ಮೊದಲಾದವುಗಳಿಗೆ ದುರಸ್ತಿಗೆ ತೆಗೆದಿಟ್ಟು ಉಳಿದ ಹಣವನ್ನು ಪ್ರತಿ ವರ್ಷ ಮಹಾರಾಜ ಎಡ್ವರ್ಡ್ ಮೊಹಮಡನ್ ಶಿಕ್ಷಣ ಸಂಸ್ಥೆ, ಕೊಲ್ಹಾಪುರಕ್ಕೆ ಕಳುಹಿಸಲು ಸಮ್ಮತಿ ನೀಡಲಾಗಿದೆ. ಉದ್ದೇಶಿಸಿದ ಮೊತ್ತವನ್ನು ಸಮಾಜ ನಿಯಮಾನುಸಾರ ಖರ್ಚುಮಾಡಬೇಕು."[6] ಅದೇ ರೀತಿಯಲ್ಲಿ ಕೊಲ್ಹಾಪುರ ನಗರದ ಪವಿತ್ರಸ್ಥಳಗಳಾದ ನಿಹಾಲ್ ಮಸೀದಿ, ಘೋಡ್‌ಪೀರ್, ಬಾಬುಜಮಾಲ್ ಮತ್ತು ಬಾರಾ ಇಮಾಮರ

ಆದಾಯಗಳನ್ನು ಮುಸ್ಲಿಂ ವಿದ್ಯಾರ್ಥಿ ನಿಲಯಗಳಿಗೆ ವರ್ಗಾಯಿಸಬೇಕು. ಆದರೆ ಮೇಲೆ ಹೇಳಿದ ಮೊಹಮಡನ್ ಸಂಸ್ಥೆಯು ಈ ಪವಿತ್ರ ಮಸೀದಿಗಳ ಅತ್ಯಾವಶ್ಯಕವಾದ ಖರ್ಚುಗಳಿಗೆ ವ್ಯಯಮಾಡಬೇಕು.[7]

ಮರಾಠಾ ವಿದ್ಯಾರ್ಥಿ ನಿಲಯದ ಸಮೀಪವಿರುವ ೨೫ ಸಾವಿರ ಚದರಡಿಗಳ ಜಾಗವನ್ನು ಬೇಗನೇ ಮುಸ್ಲಿಮರ ವಿದ್ಯಾರ್ಥಿ ನಿಲಯಕ್ಕೆ ಹಂಚಲಾಗುವುದು. ಮಿಗಿಲಾಗಿ ೫,೫೦೦ ರೂ.ಗಳ ದೇಣಿಗೆಯನ್ನು ಮತ್ತು ಸಂಸ್ಥಾನದ ಅರಣ್ಯಗಳಿಂದ ತೇಗದ ಮರವನ್ನು ಯಾವ ಬೆಲೆ ತೆಗೆದುಕೊಳ್ಳದೆ ಉಚಿತವಾಗಿ ಕಟ್ಟಡಕ್ಕೆ ನೀಡಲಾಗುವುದು. ಶಾಹುರವರ ಗುರು ಫ್ರೆಜರ್ ಅವರ ಕೈಯಿಂದ ಕಟ್ಟಡ ಬುನಾದಿಯನ್ನು ವಿಧ್ಯುಕ್ತವಾಗಿ ಹಾಕಲಾಯಿತು. ಸೂಕ್ತ ಸಮಯದಲ್ಲಿ ಎರಡು ಅಂತಸ್ತು ಮೇಲಕ್ಕೆ ಎದ್ದಿತು. ಶಾಹುರವರು ವರ್ಷಕ್ಕೆ ೨೫೦ ರೂ.ಗಳ ಮತ್ತು ವರ್ಷಕ್ಕೆ ೬,೦೦೦ದಿಂದ ೭,೦೦೦ ರೂ.ಗಳ ಆದಾಯ ತಂದುಕೊಡುವ ಭೂಮಿಯನ್ನು ಅನುದಾನವಾಗಿ ಈ ಸಂಸ್ಥೆಗೆ ನೀಡಿದರು. ಮುಸ್ಲಿಂ ವಿದ್ಯಾರ್ಥಿಗಳ ವಿದ್ಯಾಭ್ಯಾಸ ಖಾತರಿಯಾಗಲೆಂದು ಈ ಭವ್ಯ ದೇಣಿಗೆಗಳನ್ನು ಖಾತರಿಗೊಳಿಸಿದರು. ಮರಾಠಾ ವಿದ್ಯಾರ್ಥಿ ನಿಲಯ ಸಹ ಇಷ್ಟು ಧಾರಾಳವಾದ ಹಣವನ್ನು ಪಡೆದಿರಲಿಲ್ಲ.[8] ಏಕೆಂದರೆ ಮರಾಠರೊಂದಿಗೆ ಮುಸ್ಲಿಮರನ್ನು ಹೋಲಿಸಿದರೆ ಮುಸ್ಲಿಮರು ಶಿಕ್ಷಣದ ಬಗ್ಗೆ ತುಂಬಾ ಉದಾಸೀನರಾಗಿದ್ದರು. ಆದ್ದರಿಂದ ಶಾಹುರವರು ಅವರ ಬಗ್ಗೆ ಹೆಚ್ಚು ಕಾಳಜಿ ತೆಗೆದುಕೊಳ್ಳಬೇಕೆಂದು ಭಾವಿಸಿದ್ದರು. ಬ್ರಾಹ್ಮಣೇತರರ ಹುಬ್ಬಳ್ಳಿ ಸಮ್ಮೇಳನದಲ್ಲಿ ಅವರು ಹೇಳಿದ್ದರು: "ಮುಸ್ಲಿಮರು ಮರಾಠರಂತೆ ಕ್ಷತ್ರಿಯರ ಕೆಲಸಗಳನ್ನು ಮಾಡುತ್ತಾರೆ. ಅವರ ಆಚರಣೆಗಳು, ಸಂಪ್ರದಾಯಗಳು ಬಹುಮಟ್ಟಿಗೆ ಮರಾಠ ಸಂಪ್ರದಾಯಗಳಂತಿವೆ. ಮುಸ್ಲಿಂ ಸೈನ್ಯದಲ್ಲಿ ಮರಾಠಾ ಸರದಾರರಿರುವಂತೆಯೇ ಮುಸ್ಲಿಂ ಸರದಾರರು ಮರಾಠ ಸೈನ್ಯದಲ್ಲಿದ್ದಾರೆ. ಇತ್ತೀಚೆಗೆ ಮರಾಠ ಮತ್ತು ಮುಸ್ಲಿಂ ಸೈನಿಕರು ಭುಜಕ್ಕೆ ಭುಜಕೊಟ್ಟು ಹೋರಾಡಿದ್ದಾರೆ."[9]

## ಹಿಂದು-ಮುಸ್ಲಿಂ ಐಕ್ಯತೆ

ತಮ್ಮ ಇಡೀ ಆಡಳಿತದ ಉದ್ದಕ್ಕೂ ಶಾಹುರವರು ಹಿಂದು ಮತ್ತು ಮುಸ್ಲಿಮರ ನಡುವಣ ಭಾವನಾತ್ಮಕ ಮತ್ತು ಸಾಮಾಜಿಕ ಐಕ್ಯತೆಯ ಬಗ್ಗೆ ಒತ್ತಾಯಪಡಿಸುತ್ತಿದ್ದರು. ಅವರು ಹಲವಾರು ಯೋಜನೆಗಳನ್ನು ರೂಪಿಸಿದರು ಮತ್ತು ಅವುಗಳ ಸಾಕಾರಕ್ಕೆ ಶ್ರಮಿಸಿದರು. ಅಂತಹ ಪ್ರಯೋಗಗಳಲ್ಲಿ ಒಂದು ವಿಶಿಷ್ಟವಾಗಿದೆ. ಅವರು ಒಂದು ಸಮುದಾಯದ ಪವಿತ್ರ ಮಂದಿರಗಳ ಆದಾಯವನ್ನು ಮತ್ತೊಂದು ಸಮುದಾಯದ ಪವಿತ್ರ ಮಂದಿರಗಳ ವೆಚ್ಚಗಳಿಗೆ ಖರ್ಚುಮಾಡುವಂತೆ ನಿರ್ದೇಶಿಸುವ ಒಂದು ಆಜ್ಞೆಯನ್ನು ಹೊರಡಿಸಿದ್ದರು. ಉದಾಹರಣೆಗೆ ಮೌನಿಬಾಬಾ ಪತ್‌ಗಾವ್ ಮಠದ ಆದಾಯವನ್ನು ಮಸೀದಿಯ ನಿರ್ಮಾಣಕ್ಕೆ ಖರ್ಚು ಮಾಡುವಂತೆ ನಿರ್ದೇಶಿಸುವ ಒಂದು ಆಜ್ಞೆ ಲಭ್ಯವಾಗುತ್ತದೆ. ಮಹಾರಾಜ ರಾಜಾರಾಮರು ಈ ಆಜ್ಞೆಗೆ ಸಹಿ ಮಾಡಿರುವುದನ್ನು ಗಮನಿಸಬೇಕು.[10] ಅಂಥದ್ದೇ ರೀತಿಯ ವ್ಯವಸ್ಥೆಯನ್ನು ರೊಕ್ಡಿ ಗ್ರಾಮದ ಒಂದು ಪವಿತ್ರ ಸ್ಥಳಕ್ಕೆ ಮಾಡಲಾಗಿತ್ತು. ರೊಕ್ಡಿಯ ಪೀರ್ ಪವಿತ್ರ ಸ್ಥಳದಲ್ಲಿ ಸಂಚಿತವಾಗಿದ್ದ ಆದಾಯದಲ್ಲಿ ಒಂದು ಭಾಗವನ್ನು ಅಂಬಾಬಾಯಿ ದೇವತೆಯ ದೇವಸ್ಥಾನದ ದೀಪಗಳನ್ನು ಬೆಳಗಿಸುವುದಕ್ಕೆ ಬಳಸಲಾಗುತ್ತಿತ್ತು.[11] ರಾಜಕುಮಾರಿ ಅಕ್ಕಾಸಾಹೇಬರ ವಿವಾಹದ ಸಮಾರಂಭದಲ್ಲಿ ಮತ್ತೊಂದು ಪ್ರಯೋಗವನ್ನು ಮಾಡಲಾಗಿತ್ತು. ಈ ಸಂದರ್ಭದಲ್ಲಿ ಹಲವಾರು ಮರಾಠ ಮದುವೆಗಳನ್ನು ಮಾಡಲಾಯಿತು. ಅದೇ ಸಮಯದಲ್ಲಿ ಹಲವಾರು ಮುಸ್ಲಿಂ ಮದುವೆಗಳನ್ನು ನಡೆಸಲಾಯಿತು. ಹೊಸದಾಗಿ ಮದುವೆಯಾದ ದಂಪತಿಗಳಿಗೆ ಜೀವನಪರ್ಯಂತ

ಭತ್ಯೆಗಳನ್ನು ವ್ಯವಸ್ಥೆ ಮಾಡಲಾಗಿತ್ತು. ಶಾಹುರವರಿಗೆ ಮರಾಠ ಸಮುದಾಯ ಪ್ರಿಯವಾಗಿರುವಷ್ಟೇ ಮುಸ್ಲಿಂ ಸಮುದಾಯವೂ ಆತ್ಮೀಯವಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಶಿವಾಜಿ ಮಹಾಶಯರಂತೆ ಶಾಹುರವರು ಎಂದಿಗೂ ಮುಸ್ಲಿಮರನ್ನು ವಿದೇಶಿ ಧರ್ಮಕ್ಕೆ ಸೇರಿದವರೆಂದು ದ್ವೇಷ ಕಾರುತ್ತಿರಲಿಲ್ಲ. ಮಿಗಿಲಾಗಿ ಇಸ್ಲಾಂ ಬಗ್ಗೆ ಅವರಿಗಿದ್ದ ಗೌರವವನ್ನು ಹಲವು ನಿದರ್ಶನಗಳು ಒತ್ತಿಹೇಳುತ್ತವೆ. ಕುರ್‌ಆನ್ ಪವಿತ್ರ ಗ್ರಂಥವನ್ನು ಅರೇಬಿಕ್ ಭಾಷೆಯಲ್ಲಿ ಬರೆದಿರುವುದರಿಂದ ಮುಸ್ಲಿಮರು ಅದನ್ನು ಓದಿ ಅರ್ಥಮಾಡಿಕೊಳ್ಳಲಾರರು. ಸಾಮಾನ್ಯನಾದ ಮುಸ್ಲಿಮನು ಧಾರ್ಮಿಕ ತತ್ವಗಳನ್ನು ಅರ್ಥಮಾಡಿಕೊಳ್ಳಬೇಕೆಂದು ಕುರ್‌ಆನ್ ಗ್ರಂಥವನ್ನು ಮರಾಠಿ ಭಾಷೆಯಲ್ಲಿ ಅನುವಾದ ಮಾಡುವ ಯೋಜನೆಯನ್ನು ಪ್ರಾರಂಭಿಸಿದ್ದರು. ಅವರು ಖಜಾನೆಯಿಂದ ೨೫ ಸಾವಿರ ರೂ.ಗಳನ್ನು ಖರ್ಚುಮಾಡಿದ್ದರು. ಆದರೆ ದುರದೃಷ್ಟವಶಾತ್ ಅವರ ಅಕಾಲಿಕ ಮರಣದಿಂದ ಆ ಯೋಜನೆ ಕಾರ್ಯಗತವಾಗದೆ ಉಳಿದುಬಿಟ್ಟಿತು.[13] ಈ ಬಗ್ಗೆ ವ್ಯಾಖ್ಯಾನ ಮಾಡುತ್ತಾ ಸತ್ಯಶೋಧಕ ಕಾರ್ಯಕರ್ತ ಹುಸೇನ್ ಜಾಮದಾರ್ ಹೇಳುತ್ತಾರೆ: "ಕುರ್‌ಆನಿನ ಅನುವಾದ ಸಕಾಲದಲ್ಲಿ ಮುಗಿಸಬೇಕಾಗಿದ್ದರೆ ಮುಸ್ಲಿಂ ಸುಧಾರಣಾವಾದಿ ಚಟುವಟಿಕೆಯ ಮೂಲಸೆಲೆ ಬಹಳ ಹಿಂದೆಯೇ ಕೊಲ್ಹಾಪುರದಲ್ಲಿ ಪ್ರಾರಂಭವಾಗಬೇಕಾಗಿತ್ತು. ಏಕೆಂದರೆ ಇಂದಿಗೂ ಮದರಸಗಳಲ್ಲಿ ಕುರ್‌ಆನ್ ಅನ್ನು ಕಂಠಪಾಠ ಮಾಡುವುದನ್ನು ಮಾತ್ರ ಕಲಿಸುತ್ತಾರೆ. ಅನುಯಾಯಿಗಳು ಧಾರ್ಮಿಕ ಗ್ರಂಥದ ಪಠ್ಯದ ನಿಜವಾದ ಅರ್ಥವನ್ನು ಅರ್ಥಮಾಡಿಕೊಂಡರೆ ಮೌಲ್ವಿ–ಮುಲ್ಲಾಗಳ ಏಕಸ್ವಾಮ್ಯತೆ ಕೊನೆಗೊಳ್ಳುತ್ತದೆ. ಮೂಢನಂಬಿಕೆಗಳು ಕಡಿಮೆಯಾಗುತ್ತಿದ್ದವು ಮತ್ತು ಸಮಾಜ ಜ್ಞಾನಮಯವಾಗುತ್ತಿತ್ತು. ಶಾಹುರವರು ಈ ಉದ್ದೇಶದಿಂದ ಮುಸ್ಲಿಂ ಸಮುದಾಯಕ್ಕೆ ಈ ರೀತಿಯ ಶಿಕ್ಷಣ ನೀಡುವುದಕ್ಕೆ ನಿರತರಾಗಿದ್ದರು."[14] ಶಾಹು ತನ್ನ ಆಡಳಿತದಲ್ಲಿ ಮಸೀದಿಗಳ ನಿರ್ಮಾಣಕ್ಕೆ ಆರ್ಥಿಕ ನೆರವು ಮತ್ತು ಬಯಲು ಭೂಮಿಯನ್ನು ನೀಡಿದ್ದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ಸಿಗುತ್ತವೆ. ಕೊಲ್ಹಾಪುರ ನಗರ ವಿಸ್ತರಿಸುತ್ತಿದೆ. ಹಲವಾರು ನೆಲಸುವಾಸಗಳನ್ನು ಸ್ಥಾಪಿಸಲಾಗಿದೆ. ಮುಸ್ಲಿಮರು ಅಂತಹ ಹೊಸ ಕಾಲೋನಿಗಳಲ್ಲಿ ನಮಾಜು ಮಾಡುವುದಕ್ಕೆ ಜಾಗದ ಕೊರತೆಯಿಂದ ಸಂಕಟಕ್ಕೆ ಒಳಗಾಗಿದ್ದರು. ಹೊಸದಾಗಿ ನಿರ್ಮಾಣಗೊಂಡ ಶಾಹು ಕಾಲೋನಿಯಲ್ಲಿ ಮಸೀದಿಯೇ ಇರಲಿಲ್ಲ. ಆ ಪ್ರದೇಶದಲ್ಲಿ ಮುಸ್ಲಿಮರ ಅಸೌಕರ್ಯವನ್ನು ತಪ್ಪಿಸಲು ಶಾಹುರವರು ಮಸೀದಿ ಕಟ್ಟಲು ಭೂಮಿಯನ್ನು ನೀಡಿದರು ಮತ್ತು ನಿರ್ಮಾಣಕ್ಕೆ ೧೦೦೦ ರೂ.ಗಳನ್ನು ನೀಡಿದರು.[15] ಪಠ್‌ಗಾವ್ ಮಸೀದಿಗೆ ಶಾಹು ನೀಡಿದ ನೆರವನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಕೊಲ್ಹಾಪುರದಲ್ಲಿ ಬೊಹ್ರಿಯವರು ಮುಸ್ಲಿಮರಲ್ಲಿ ಪ್ರಭಾವಿ ವ್ಯಾಪಾರಿ ಜಾತಿಗೆ ಸೇರಿದವರು. ಅವರು ನಮಾಜು ಮಾಡಲು ಅವರಿಗೆ ಪ್ರತ್ಯೇಕವಾದ ಮಸೀದಿಯಿರಲಿಲ್ಲ. ಹೀಗಿರುವಾಗ ಅವರ ನಾಯಕತ್ವದಲ್ಲಿ ಅವರು ಶಾಹುರವರನ್ನು ನೆರವಿಗಾಗಿ ಕೋರಿದರು. ಶಾಹುರವರು ನಗರದ ಮಧ್ಯಭಾಗದಲ್ಲಿ ೫೦೦೦ ಚದರಡಿಯ ಜಾಗವೊಂದನ್ನು ಕೊಟ್ಟರು.[16] ರಾಧಾನಗರಿಯನ್ನು ಸ್ಥಾಪಿಸುವಾಗ ಶಾಹುರವರು ಜನರ ಭೌತಿಕ ಅಗತ್ಯಗಳ ಜೊತೆಗೆ ನಿವಾಸಿಗಳ ಧಾರ್ಮಿಕ ಅಗತ್ಯಗಳನ್ನೂ ಪರಿಗಣಿಸಿದರು. ಅವರು ಹಿಂದುಗಳಿಗೆ ಎರಡು ದೇವಸ್ಥಾನಗಳನ್ನು ಮತ್ತು ಮುಸ್ಲಿಮರಿಗೆ ಹಜರತ್ ಪೀರ್ ಗಾಯಿಬಿ ಸಾಹೇಬ್ ಮತ್ತು ಶಾಹಜ್ ಮಹಲನ್ನು ನಿರ್ಮಿಸಿದರು. ಅವರು ಅವುಗಳಿಗೆ ಖರ್ಚನ್ನು ಒದಗಿಸಿಕೊಟ್ಟರು ಮತ್ತು ಮುಸ್ಲಿಂ ಪವಿತ್ರ ಸ್ಥಳಗಳಿಗೆ ವಿಶೇಷ ೭೫ ರೂ.ಗಳ ದೇಣಿಗೆಯನ್ನು ನೀಡಿದರು.[17] ಶಾಹುರವರು ಮುಸ್ಲಿಮರ ಐಹಿಕ ಅಭ್ಯುದಯದಂತಹ ಶಿಕ್ಷಣವನ್ನು ಒದಗಿಸಿದ್ದು ಮಾತ್ರವಲ್ಲದೆ ಅವರ ಆಧ್ಯಾತ್ಮಿಕ ಅಗತ್ಯವಾದ ಧಾರ್ಮಿಕತೆಯ

ಬಗ್ಗೆ ಕಾಳಜಿ ವಹಿಸಿದ್ದರು. ಹಿಂದು ಮಹಾರಾಜರು ಮುಸ್ಲಿಮರ ಪ್ರಾರ್ಥನೆಗಾಗಿ ಮಸೀದಿ, ದರ್ಗಾ ಮೊದಲಾದವುಗಳಿಗೆ ಭೂಮಿಯನ್ನು ದಾನವಾಗಿ ನೀಡಿದ್ದ ಉದಾಹರಣೆಗಳು ಸಾಕಷ್ಟಿವೆ. ಆದರೆ ಸಂಸ್ಥಾನದ ಖರ್ಚಿನಿಂದ ಮಸೀದಿ ಮತ್ತು ದರ್ಗಾಗಳನ್ನು ಕಟ್ಟಿಸಿಕೊಟ್ಟ ನಿದರ್ಶನಗಳು ಬಹು ವಿರಳ. ಶಾಹುರವರಿಗೆ ಮುಸ್ಲಿಮರ ಬಗ್ಗೆ ಅಪಾರ ಪ್ರೀತಿಯುಳ್ಳವರಾಗಿದ್ದರೆಂಬುದನ್ನು ನಾವು ಹೇಳಬೇಕಾಗಿಲ್ಲ.

### ವಿವಾಹ ನೋಂದಣಿ ಕಡ್ಡಾಯ

೧೯೧೭ರಲ್ಲಿ ಶಾಹುರವರು ಮುಸ್ಲಿಂ ಸಮುದಾಯದ ಹಿತಾಸಕ್ತಿಯ ಎರಡು ಆಜ್ಞೆಗಳನ್ನು ಹೊರಡಿಸಿದರು. ಅವರ ಮೊದಲನೇ ಆಜ್ಞೆ ಹೇಳುತ್ತದೆ:.....ಮುಸ್ಲಿಮರ ಆಚರಣೆಯ ಪ್ರಕಾರ ಯಾರೇ ಮದುವೆ ಮಾಡಿಕೊಂಡರೆ ಮತ್ತು ಖಾಜಿಯ ಅವಶ್ಯಕತೆಯಿಲ್ಲ. ಆದರೆ ಕೋರ್ಟಿನ ವಿವಾದದಲ್ಲಿ ಖಾಜಿ ಮದುವೆಯನ್ನು ಮಾಡಿಸದಿದ್ದರೆ ಆ ಮದುವೆಯನ್ನು ಕಾನೂನುಬದ್ಧ ಎಂದು ಪರಿಗಣಿಸಲಾಗುವುದಿಲ್ಲ. ಈ ಆಜ್ಞೆಯನ್ನು ಜನರ ತಿಳುವಳಿಕೆಗಾಗಿ ಎಲ್ಲಾ ಕಛೇರಿಗಳಿಗೆ ತಿಳಿಸಬೇಕು ಮತ್ತು ಇದನ್ನು ರಾಜ್ಯಪತ್ರದಲ್ಲಿ ಪ್ರಕಟಿಸಬೇಕು–ಜೂನ್ ೫, ೧೯೧೭."[18] ಖಾಜಿ ನಡೆಸಿದ ಮದುವೆಗಳಿಗೆ ಕಾನೂನಿನ ಸ್ವರೂಪವನ್ನು ನೀಡುವ ಸಲುವಾಗಿ ಶಾಹುರವರು ಶೀಘ್ರದಲ್ಲಿಯೇ ಎರಡನೇ ಆಜ್ಞೆಯಲ್ಲಿ ತಾನು ನಡೆಸಿದ ಮದುವೆಗಳನ್ನು ಒಂದು ನೋಂದಣಿ ಪುಸ್ತಕದಲ್ಲಿ ನಮೂದಿಸಿ ಇಟ್ಟುಕೊಳ್ಳಬೇಕೆಂದು ಕಡ್ಡಾಯ ಮಾಡಿದರು: ಖಾಜಿಯವರು, ಮಟ್ಕಾಪುರ, ಬಾವ್ಡಾ, ಕಾಗಲ್, ಕರವೀರ ಮತ್ತು ತೋರಗಲ್ ಮೊದಲಾದ ಕಡೆಗಳಲ್ಲಿ ತಮ್ಮ ವ್ಯಾಪ್ತಿಯ ಪ್ರದೇಶಗಳಲ್ಲಿ ಮದುವೆಗಳನ್ನು ಮಾಡಿಸುತ್ತಿದ್ದರು. ಅವರ ಮೂಲಕ ನಡೆದ ಎಲ್ಲಾ ಮದುವೆಗಳು ಅಧಿಕೃತ, ಕಾನೂನುಬದ್ಧ ಎಂದು ಪರಿಗಣಿಸಲಾಗುತ್ತಿತ್ತು. ಹಾಗೆಯೇ ಖಾಜಿ ಅವರು ನೀಡಿದ ಹಕ್ಕುಗಳ ಪ್ರಕಾರ ಮುಲ್ಲಾ ಮತ್ತು ಗುಮಾಸ್ತರು* ತಮ್ಮ ವ್ಯಾಪ್ತಿಯಲ್ಲಿ ನಡೆಸಿದ ಮದುವೆಗಳು ಕಾನೂನುಬದ್ಧವಾಗುತ್ತಿದ್ದವು. ಪ್ರತಿಯೊಬ್ಬ ಗುಮಾಸ್ತ ಅಥವಾ ಖಾಜಿ ಪ್ರತಿಯೊಂದು ಮದುವೆ ನೋಂದಣಿ ಅಥವಾ ದಾಖಲೆಯನ್ನು ಇಟ್ಟುಕೊಳ್ಳಬೇಕು. ಸಂಬಂಧಪಟ್ಟವರು ನಿರ್ಧರಿಸಿದ ಪ್ರರೂಪದಲ್ಲಿ ಒಂದು ನೋಂದಣಿ ಪುಸ್ತಕವನ್ನು ಇಟ್ಟುಕೊಳ್ಳಬೇಕು ಮತ್ತು ಅದಕ್ಕೆ ಹುಜೂರ್ ಕಛೇರಿಯಿಂದ ಸಹಿ ಮಾಡಿಸಿ ಸೀಲು ಒತ್ತಿಸಿ ಇಡಬೇಕು..... ನೋಂದಣಿ ಪುಸ್ತಕದಲ್ಲಿ ದಾಖಲಿಸಿದ ಪ್ರತಿಯೊಂದು ಮದುವೆಯನ್ನು ಕೋರ್ಟಿನಲ್ಲಿ ಮತ್ತು ಇತರೆ ವಿಷಯಗಳಲ್ಲಿ ಸಾಕ್ಷ್ಯವೆಂದು ಪರಿಗಣಿಸಲಾಗುವುದು. ಈ ಪ್ರಕ್ರಿಯೆಯನ್ನು ಅನುಸರಿಸದ ಮದುವೆಗಳನ್ನು ಕಾನೂನುಬದ್ಧ ಎಂದು ಪರಿಗಣಿಸಲಾಗುವುದಿಲ್ಲ. –ಜುಲೈ ೯, ೧೯೧೭"[19] ಶಾಹುರವರು ಮುಸ್ಲಿಂ ಧಾರ್ಮಿಕ ಪುರೋಹಿತರು ಮದುವೆ ಮಾಡಿಸುವ ಹಕ್ಕನ್ನು ಒಪ್ಪಿಕೊಂಡರು ಮತ್ತು ಅವರು ಇದರಲ್ಲಿ ಹಸ್ತಕ್ಷೇಪ ಮಾಡಲಿಲ್ಲ. ಆದರೆ ಅಂತಹ ಮದುವೆಗಳ ಅಧಿಕೃತ ನೋಂದಣಿಯನ್ನು ಕಡ್ಡಾಯ ಮಾಡಿದರು. ಇದು ಮುಸ್ಲಿಮರ ಹಿತಸಾಧನೆಗಾಗಿ, ವಿಶೇಷವಾಗಿ ಮುಸ್ಲಿಂ ಮಹಿಳೆಯರಿಗಾಗಿ ಇತ್ತು. ಸ್ವತಂತ್ರ ಭಾರತದಲ್ಲಿ ಇಂದಿಗೂ ಖಾಜಿಗಳು ಮಾಡಿಸಿದ ಮುಸ್ಲಿಂ ಮದುವೆಗಳನ್ನು ದಾಖಲೆ ಮಾಡಿ ನೋಂದಣಿ ಮಾಡಿಸಿ ಅದರ ಮೇಲೆ ಸರಕಾರದ ಮುದ್ರೆ ಒತ್ತುವುದಿಲ್ಲ. ಅದು ಅವಶ್ಯಕತೆಯಿಲ್ಲವೆಂದು ಭಾವಿಸಲಾಗಿದೆ. ಮಹಾರಾಷ್ಟ್ರದಲ್ಲಿ ಮುಸ್ಲಿಂ ಸತ್ಯಶೋಧಕ ಆಂದೋಲನ ಅಂತಹ ನೋಂದಣಿಯನ್ನು ಅಧಿಕೃತವನ್ನಾಗಿ ಮಾಡಬೇಕೆಂದು

---

* ಏಜೆಂಟ್ ಅಥವಾ ಒಬ್ಬ ಸಹಾಯಕ

ಒತ್ತಾಯಿಸುತ್ತದೆ.[20] ಇದಕ್ಕೆ ಹೋಲಿಸಿದರೆ, ಶಾಹುರವರ ಕ್ರಮವು ಆ ಕಾಲದಲ್ಲಿ ಎಷ್ಟು ದೂರ ಮುಂದುವರೆದಿತ್ತೆಂಬುದನ್ನು ತೋರಿಸುತ್ತದೆ.

## ಪ್ರತಿಭಾವಂತರಿಗೆ ರಾಜಾಶ್ರಯ

ಮುಸ್ಲಿಂ ಜನತೆಯ ಬಗ್ಗೆ ಮಮತೆಯನ್ನಿಟ್ಟುಕೊಂಡಿದ್ದ ಶಾಹುರವರು ಪ್ರತಿಭಾವಂತ ಮುಸ್ಲಿಮರಿಗೆ ಉದಾರವಾದ ರಾಜಾಶ್ರಯ ಕೊಡುವುದರ ಬಗ್ಗೆ ಆಶ್ಚರ್ಯಪಡಬೇಕಾಗಿಲ್ಲ. ಪ್ರತಿಭಾವಂತ ಅದೃಷ್ಟಶಾಲಿಗಳಲ್ಲಿ ಹೆಸರುವಾಸಿಯಾದ ಶಾಹಿರ್ ಹೈದರ್ ಅವರು ಚಿತ್ರಕಲೆಯ ಅಬಾಲಾಲ್ ರಹಿಮನ್‌ರ ಕ್ಷೇತ್ರದಲ್ಲಿ ಮಹಾ ಚಿತ್ರಕಾರರು. ಇಡೀ ಇಂಡಿಯಾದಲ್ಲಿ ತನ್ನ ಪ್ರಖ್ಯಾತ ಹಾಡುಗಾರಿಕೆಯಿಂದ ಕೀರ್ತಿಗಳಿಸಿದ್ದ ಪ್ರಸಿದ್ಧ ಹಾಡುಗಾರಿಕೆಯ ಅಲ್ಲಾಡಿಯ ಖಾನ್ ಸಾಹಿಬರು, ಕುಸ್ತಿಕಲೆಯನ್ನು ಶಾಹುರವರಿಗೆ ಕಲಿಸಿದ್ದ ಮುಷ್ಟಿಕಾಳಗದ ಮಲ್ಲ ಬಲೇಖಾನ್ ವಸ್ತಾದ್ ಅವರು ಪ್ರತಿಭಾವಂತರಾಗಿದ್ದರು. ಶಾಹಿರ್ ಲಹ್ರಿ ಹೈದರ್ ಶಾಹುರವರ ಕಣ್ಮಣಿಯಾಗಿದ್ದರು. ಅವರು ಶಾಹುರವರ ಐತಿಹಾಸಿಕ ಗಾಡಿಯಲ್ಲಿ ಬರುತ್ತಿದ್ದ ಸಹವರ್ತಿಗಳಲ್ಲಿ ಒಬ್ಬರಾಗಿದ್ದರು. ವಿಚಿತ್ರ ವರ್ತನೆಯ ಸಂತರಾದ ಅಬಾಲಾಲ್ ರಹಿಮನ್ ಅವರಿಗೆ ಆದರಪೂರ್ವಕ ಸತ್ಕಾರಗಳನ್ನು ಒದಗಿಸುತ್ತಿದ್ದರು. ಅಲ್ಲಾಡಿಯ ಖಾನ್‌ಸಾಹಿಬರಿಗೆ ಸಹೋದರ ಪ್ರೀತಿಯ ಸುರಿಮಳೆಗೈಯುತ್ತಿದ್ದರು ಮತ್ತು ಶಾಹುರವರು ಬಲೇಖಾನ್ ವಸ್ತಾದರಿಗೆ ಆಸ್ಥಾನದ ಗಣ್ಯವ್ಯಕ್ತಿಯನ್ನಾಗಿ ಮಾಡಿದ್ದರು. ಈ ಪ್ರತಿಭಾವಂತರು ರಾಜಾಶ್ರಯ ಪಡೆದಿದ್ದು ಮಾತ್ರವಲ್ಲದೆ, ಕೊಲ್ಹಾಪುರದ ಮಹಾರಾಜರು ಅಪಾರವಾದ ಪ್ರೀತಿಯನ್ನು ಕೊಟ್ಟಿದ್ದರು. ಅವರಿಗೆ ಇವರ ಪ್ರೀತಿ–ಮಮತೆಗಳ ಮುಂದೆ ವಿಶ್ವದ ಯಾವುದೇ ಸನ್ಮಾನ ನಗಣ್ಯವಾಗಿತ್ತು. ಭಾರತದ ಸಮಕಾಲೀನ ಹಾಡುಗಾರಿಕೆಯಲ್ಲಿ ಮಹಾನ್ ಕೀರ್ತಿಯನ್ನು ಗಳಿಸಿದ್ದ ಅಲ್ಲಾಡಿಯ ಖಾನ್ಸಾಹಿಬ್‌ರು ಈ ಸಣ್ಣ ಸಂಸ್ಥಾನವಾದ ಕೊಲ್ಹಾಪುರವನ್ನು ಕಡೆಗಣಿಸಲಿಲ್ಲ. ಅವರು ಶಾಹು ಮಹಾರಾಜರ ಸೇವೆಯಲ್ಲಿರುವುದು ತಮ್ಮ ಜೀವನದಲ್ಲಿ ಒಂದು ಮಹಾಗೌರವವೆಂದು ಭಾವಿಸಿದ್ದರು!

ಅಲ್ಲಾಡಿಯಾ ಖಾನ್‌ಸಾಹಿಬ್‌ರ ಮಗ ಭುರ್ಜಖಾನ್ ಅವರು ತಮ್ಮ ತಂದೆಯವರಿಂದ ಮಹಾ ಮಧುರ ಕಂಠಧ್ವನಿಯನ್ನು ಪಡೆದ ಬಗ್ಗೆ ಒಂದು ದಂತಕತೆಯಿದೆ. ಆದರೆ ತಮ್ಮ ತಂದೆಯವರಿಂದ ಸಂಗೀತ ಕಲಿಯುತ್ತಿರುವಾಗ ಅವರು ಮೋತಿಜ್ಹರ ಎಂಬ ಕಾಯಿಲೆಗೆ ಗುರಿಯಾದರು ಮತ್ತು ಅವರ ಕಂಠಧ್ವನಿ ನಾಶವಾಯಿತು. ಅದು ಯಾವುದೇ ಔಷಧೋಪಚಾರಕ್ಕೆ ಪ್ರತಿಸ್ಪಂದಿಸಲಿಲ್ಲ. ಖಾನ್ ಸಾಹಿಬರು ಎಲ್ಲಾ ಭರವಸೆಗಳನ್ನು ಕಳೆದುಕೊಂಡರು. ಅವರಿಗೆ ತರಬೇತಿ ಕೊಡುವುದನ್ನು ನಿಲ್ಲಿಸಿದರು. ಶಾಹುರವರಿಗೆ ಇದು ತಿಳಿದಾಗ ಅವರು ಭುರ್ಜಿಖಾನರನ್ನು ಕರೆದರು ಮತ್ತು ಮಹಾಲಕ್ಷ್ಮಿ ದೇವಸ್ಥಾನದಲ್ಲಿ ಒಂದು ಗಂಟೆ ಹಾಡುಗಾರಿಕೆಯ ಸೇವೆಗೆ ನೇಮಿಸಿದರು. ಶಾಹು ಆಜ್ಞೆ ಮಾಡಿದರು: "ನಿನಗೆ ಬಂದ ರೀತಿಯಲ್ಲಿ ಒಂದು ಗಂಟೆ ಹಾಡು, ಆದರೆ ನೀನು ಹಾಡುತ್ತಾ ಇರಬೇಕು." ಭುರ್ಜಿಖಾನ್ ದಿನಾ ಒಂದು ಗಂಟೆ ಹಾಡುವ ಆಚರಣೆಯಿಂದ ಅವರ ಕಂಠ ಚೇತರಿಸಿಕೊಳ್ಳತೊಡಗಿತು. ಒಂದು ದಿನ ಅಲ್ಲಾಡಿಯಾ ಖಾನ್‌ಸಾಹಿಬರು ದೇವಸ್ಥಾನದ ಬಳಿ ಜೋರಾಗಿ ನಡೆಯುತ್ತಿರುವಾಗ ಅವನ ಹಾಡುಗಾರಿಕೆಯನ್ನು ಕೇಳಿದರು ಮತ್ತು ಅಚ್ಚರಿಪಟ್ಟರು. ಅವರು ಭುರ್ಜಿಖಾನ್‌ನ ಕಂಠಧ್ವನಿ ಸುಧಾರಣೆಯ ಬಗ್ಗೆ ಎಲ್ಲಾ ಭರವಸೆಗಳನ್ನು ಬಿಟ್ಟುಬಿಟ್ಟಿದ್ದರು. ಇದೆಲ್ಲವೂ ಆದದ್ದು ಶಾಹುರವರ ಕೃಪೆಯಿಂದ. ಖಾನ್‌ಸಾಹಿಬರು ಭುರ್ಜಖಾನನನ್ನು ಹೃದಯಪೂರ್ವಕವಾಗಿ ಒಪ್ಪಿಕೊಂಡು ತಮ್ಮ ಪಾಠಗಳನ್ನು ಹೇಳಿಕೊಡಲು ಪುನರಾರಂಭಿಸಿದರು. ಭುರ್ಜಿಖಾನ್ ನಂತರ ತಮ್ಮ ಹಾಡುಗಾರಿಕೆಯ ಸೇವೆಯನ್ನು ದೇವಸ್ಥಾನದಲ್ಲಿ ಕೊನೆಯವರೆಗೂ ಮುಂದುವರಿಸಿದರು.[21] ಮಹಾಲಕ್ಷ್ಮಿ

ದೇವಸ್ಥಾನಕ್ಕೆ ಭುರ್ಜಿಖಾನರ ನೇಮಕ ಕಲಾಕ್ಷೇತ್ರದಲ್ಲಿ ಒಂದು ಪ್ರಯೋಗ ಮಾತ್ರವಲ್ಲದೆ ಶಾಹುರವರು ಸಾಮಾಜಿಕ ವಲಯದಲ್ಲಿ ಹಿಂದು-ಮುಸ್ಲಿಮರ ಭಾವೈಕ್ಯತೆಯನ್ನು ಪ್ರಜ್ಞಾಪೂರ್ವಕವಾಗಿ ಹೆಚ್ಚಿಸಲು ಕೈಗೊಂಡ ಕ್ರಮವಾಗಿತ್ತು.

### ಹಿಂದು-ಮುಸ್ಲಿಂ ಐಕ್ಯತೆಯ ಆದರ್ಶ ಪರಂಪರೆ

ಕಲೆಯ ಕ್ಷೇತ್ರದಲ್ಲಿ ಜಾತಿ ಮತ್ತು ಧರ್ಮಗಳು ಮುಖ್ಯವಲ್ಲ. ನಿಜವಾದ ಕಲಾಕಾರನು ಕಲೆಯೇ ಜಾತಿ ಎಂಬ ತತ್ವವನ್ನು ನಂಬುತ್ತಾನೆ ಮತ್ತು ಕಲೆಯ ಪೂಜೆಯೇ ಧರ್ಮ ಮತ್ತು ಅವನು ಅದರ ಪ್ರಕಾರ ನಡೆದುಕೊಳ್ಳುತ್ತಾನೆ. ಇದು ಮೇಲೆ ಹೇಳಿದ ಕಲಾಕಾರರ ತತ್ವವಾಗಿತ್ತು. ಅವರೆಲ್ಲರೂ ಶಾಹು ಅವರ ರಾಜಾಶ್ರಯದಲ್ಲಿದ್ದರು. ಅವರೆಲ್ಲರೂ ತಮ್ಮನ್ನು ಕಲಾಕಾರರೆಂದು ತಾವೇ ಭಾವಿಸಿಕೊಂಡಿದ್ದರು. ಮತ್ತು ಜನರು ಅವರನ್ನು ಕಲಾಕಾರರೆಂದು ಒಪ್ಪಿಕೊಂಡಿದ್ದರು ಮತ್ತು ಜಾತಿಧರ್ಮದ ಭೇದವಿಲ್ಲದೆ ಅವರನ್ನು ಗೌರವಿಸಿದ್ದರು. ನಿಜವಾಗಿ ಅವರು ಮತ್ತು ಅವರ ಮುಸ್ಲಿಂ ಸಮುದಾಯ ಕೊಲ್ಹಾಪುರದ ಬ್ರಾಹ್ಮಣೇತರರ ಒಂದು ಭಾಗವಾಗಿದ್ದರು. ಎರಡು ಸಮುದಾಯಗಳ ನಡುವಿನ ಪರಸ್ಪರ ಗೌರವವು ಭಾರತದ ಬೇರೆ ಕಡೆ ಅಪವಾದವಾಗಿತ್ತು. ಬಾಂಬೆ ಪ್ರೆಸಿಡೆನ್ಸಿ, ಬಾಂಬೆ ಮತ್ತು ಪೂನಾ ಕಡೆಗಳಲ್ಲಿ ಗೋಹತ್ಯೆಯ ನಿಷೇಧದ ಬಗ್ಗೆ ಚಳುವಳಿಗಳು ಮತ್ತು ಗಣೇಶ ಹಬ್ಬದ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಎರಡೂ ಸಮುದಾಯಗಳ ನಡುವೆ ಆಗಾಗ ಗಲಭೆಗಳಲ್ಲಿ ಕೊನೆಗೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ಗೋಹತ್ಯೆಯ ನಿಷೇಧದ ಕಾನೂನನ್ನು ಜಾರಿಗೊಳಿಸಲಾಗಿದೆ,[22] ಆದರೆ ಗಲಭೆಗಳನ್ನು ಬಿಟ್ಟುಬಿಡಿ, ಒಂದು ಗೋಣಗಾಟವೂ ಸಹ ಇರಲಿಲ್ಲ. ಮುಸ್ಲಿಮರ ಹಬ್ಬವಾದ ಮೊಹರಮ್ಮಿನಲ್ಲಿ ಹಿಂದುಗಳು ಸಹ ಅಧಿಕ ಸಂಖ್ಯೆಯಲ್ಲಿ ಉತ್ಸಾಹದಿಂದ ಭಾಗವಹಿಸಿದ್ದರು. ಏಕಕಾಲದಲ್ಲಿ ಗಣೇಶ ಹಬ್ಬ ಮತ್ತು ಮೊಹರಂ ಹಬ್ಬಗಳು ಬಂದಾಗ ಕೊಲ್ಹಾಪುರದ ಕುಸ್ತಿಕ್ಲಬ್ಬುಗಳು ಗಣೇಶ ವಿಗ್ರಹಗಳನ್ನು ಕೂಡ್ರಿಸಿದರು. ಮುಸ್ಲಿಮರ ಪಂಜಾ*ಗಳನ್ನು ಸಹ ಅದೇ ಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಇಂದು ಸಹ ಕೊಲ್ಹಾಪುರದಲ್ಲಿ ಈ ವೈಭವದ ಪರಂಪರೆಯನ್ನು ಅನುಸರಿಸಲಾಗುತ್ತಿದೆ. ಶಾಹು ಮಹಾರಾಜರು ನಿರ್ಮಿಸಿದ ಹಿಂದು-ಮುಸ್ಲಿಮ್ ಐಕ್ಯತೆಯ ಪರಂಪರೆಯನ್ನು ಕೊಲ್ಹಾಪುರದ ಜನತೆ ಹೆಮ್ಮೆಯಿಂದ ಅನುಸರಿಸುವುದನ್ನು ಮುಂದುವರಿಸಿದ್ದಾರೆ. ಸ್ವಾತಂತ್ರ್ಯದ ನಂತರ ಹಿಂದು-ಮುಸ್ಲಿಂ ಗಲಭೆಗಳು ಇಡೀ ದೇಶದ ತುಂಬ ಸ್ಫೋಟಗೊಂಡರೂ ಕೊಲ್ಹಾಪುರದಲ್ಲಿ ಹಿಂದು-ಮುಸ್ಲಿಂ ಸೌಹಾರ್ದತೆಯನ್ನು ಭಯಪಡದೆ ಜನರು ಕಾಪಾಡುತ್ತಿದ್ದಾರೆ. ಈ ಸಂದರ್ಭದಲ್ಲಿ ಕೆಲವು ವರ್ಷಗಳ ಹಿಂದೆ ಒಂದು ಘಟನೆ ಕೊಲ್ಹಾಪುರದಲ್ಲಿ ನಡೆಯಿತು. ಅದನ್ನು ಇಲ್ಲಿ ಹೇಳಬೇಕಾಗಿದೆ. ಕೆಲವು ಮೂಲಭೂತವಾದಿಗಳು ದೇವಳ ಕ್ಲಬ್ ಎದುರಿನಲ್ಲಿ ನಿಲ್ಲಿಸಿದ ಅಲ್ಲಾಡಿಯು ಖಾನ್ ಸಾಹೇಬರ ಪುತ್ಥಳಿಯನ್ನು ಯಾರೋ ಛಿದ್ರಗೊಳಿಸಿದರು. ಈ ಸುದ್ದಿಯನ್ನು ಕೇಳಿದ ಕೂಡಲೇ ಕಲಾಪ್ರೇಮಿಗಳಾದ ನಾಗರಿಕರು ಉದ್ರಿಕ್ತಗೊಂಡರು. ದುರಾಭಿಮಾನಿಗಳ ಕೃತ್ಯವನ್ನು ಖಂಡಿಸಿದ್ದು ಮಾತ್ರವಲ್ಲದೆ ಖಾನ್ ಸಾಹೇಬರ ಪುತ್ಥಳಿಯನ್ನು ಪುನರ್‌ಸ್ಥಾಪಿಸಿದರು. ರಾಜರ್ಷಿ ಶಾಹುರವರು ಹಾಕಿಕೊಟ್ಟ ಹಿಂದು ಮುಸ್ಲಿಮರ ಐಕ್ಯತೆ ಅವರ ಸತ್ತ ನಂತರವೂ ಮತ್ತೆ ಬದುಕಿದೆ ಎಂಬುದನ್ನು ಸಾಧಿಸಿ ತೋರಿಸಿಕೊಟ್ಟರು. ಇದು ಶಾಹುರವರ ಧರ್ಮನಿರಪೇಕ್ಷತೆ ಮತ್ತು ಕಲಾಪ್ರೇಮದ ಜಯವಾಗಿತ್ತು. ಇಂದು ಸಹ ದೇಶದ ಬೇರೆ-ಬೇರೆ ಕಡೆಗಳಲ್ಲಿ ಹಿಂದು-ಮುಸ್ಲಿಮರ ನಡುವೆ ಗಲಭೆಗಳು ತಲೆದೋರಿದರೂ ಕೊಲ್ಹಾಪುರದಲ್ಲಿ ಶಾಹುರವರ ಪರಂಪರೆಗೆ ಗೌರವ ತೋರಿಸಲು ಶಾಂತಿಯುತವಾಗಿರುತ್ತದೆ. ಇದು ಕೊಲ್ಹಾಪುರಕ್ಕೆ ಮಾತ್ರವಲ್ಲದೆ ಇಡೀ ಮಹಾರಾಷ್ಟ್ರಕ್ಕೆ ಗೌರವವಾಗಿರುತ್ತದೆ.

## ಜೈನರು, ಲಿಂಗಾಯತರು ಮತ್ತು ಥಿಯಾಸಫಿಕಲ್ ಸೊಸೈಟಿ

ಮುಸ್ಲಿಮರ ಜೊತೆಗೆ ಜೈನರು ಮತ್ತು ಲಿಂಗಾಯತರು ಕೊಲ್ಹಾಪುರದಲ್ಲಿ ಇತರೆ ಮುಖ್ಯ ಸಮುದಾಯಗಳಾಗಿದ್ದವು. ಶಾಹು ಮಹಾರಾಜರು ಈ ಎರಡು ಸಮುದಾಯಗಳ ಧಾರ್ಮಿಕ ಅವಶ್ಯಕತೆಗಳನ್ನು ಪೂರೈಸಲು ಅವರ ಮಠಗಳಿಗೆ ಮತ್ತು ದೇವಸ್ಥಾನಗಳಿಗೆ ಭೂಮಿಗಳನ್ನು ನೀಡಿದರು.[23] ಈ ಸಂಸ್ಥಾನದಲ್ಲಿ ಜೈನರು ೯ನೆಯ ತೀರ್ಥಂಕರ ಪುಷ್ಪದಂತಸ್ವಾಮಿಯ ನಿರ್ವಾಣೋತ್ಸವವನ್ನು ಜೈನಸಮುದಾಯ ಆಚರಿಸುವುದು. ೧೯೨೧ರಲ್ಲಿ ಈ ಸಮುದಾಯವು ಶಾಹುರವರನ್ನು ಈ ದಿನವನ್ನು ರಜಾದಿನವನ್ನಾಗಿ ಘೋಷಿಸಬೇಕೆಂದು ಕೇಳಿಕೊಂಡರು. ಅದಕ್ಕೆ ಒಪ್ಪಿಗೆ ನೀಡಲಾಯಿತು. ಆ ದಿನ ಪ್ರಾಣಿಗಳನ್ನು ಕೊಲ್ಲದಂತೆ ನಿರ್ಬಂಧಿಸಬೇಕೆಂದು ಕೇಳಿಕೊಂಡಿತು. ಈ ಕೋರಿಕೆಯ ಮೇರೆಗೆ ಶಾಹುರವರು ಆಜ್ಞೆ ಹೊರಡಿಸಿದ್ದರು: "ಎಲ್ಲಾ ಪ್ರಜೆಗಳು ಸಮಾನರು ಯಾರ ಆಹಾರವನ್ನು ನಿಷೇಧಿಸುವಂತೆ ಯಾವುದೇ ಕಾನೂನನ್ನು ಪಾಸುಮಾಡುವುದಿಲ್ಲ. ಆದರೆ ಒಂದುವೇಳೆ ಜೈನರು ಪ್ರಯತ್ನಿಸಿ ಮತ್ತು ಎಲ್ಲಾ ಜಾತಿಯ ಮತ್ತು ಧರ್ಮದ ಜನರನ್ನು ತಮ್ಮ ಉದ್ದೇಶಕ್ಕೆ ಪರಿವರ್ತಿಸಿದರೆ ಮತ್ತು ಪ್ರಜೆಗಳು ಜೈನರ ಅಪೇಕ್ಷೆಯ ಪರಿಗಣಿಸಿ ಸಾಧ್ಯವಾದಷ್ಟು ಮಟ್ಟಿಗೆ ಹಿಂಸೆಗೆ ಹಿಂದೆಗೆದರೆ ಮಾನ್ಯ ಮಹಾರಾಜರು ಸಂತೋಷಗೊಳ್ಳುವರು".[24]

ಲಿಂಗಾಯತರಿಗೆ ಸಂಬಂಧಿಸಿದಂತೆ ಎರಡು ಮುಖ್ಯ ಉಲ್ಲೇಖಗಳು ಸಿಗುತ್ತವೆ. ಶಾಹುರವರು ನೀಡಿದ ಮೊದಲನೆಯ ರೂಲಿಂಗಿನಲ್ಲಿ ಲಿಂಗಾಯತರು ಶೂದ್ರವರ್ಗಕ್ಕೆ ಸೇರಿದವರಲ್ಲ ಎಂಬ ಆಜ್ಞೆಯನ್ನು ಹೊರಡಿಸಿ, ಪಾಟೀಲ್ ವತನದ ವಿಷಯದ ಮೇಲೆ ತೀರ್ಮಾನಕ್ಕೆ ಬರುತ್ತಾರೆ. ಶಾಹುರವರು ಈ ಮೊದಲು ಬ್ರಾಹ್ಮಣ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಉಚ್ಚನ್ಯಾಯಾಲಯ ಲಿಂಗಾಯತರು ಶೂದ್ರ ಸಮುದಾಯಕ್ಕೆ ಸೇರಿದವರೆಂದು ನೀಡಿದ್ದ ತೀರ್ಪನ್ನು ರದ್ದುಗೊಳಿಸಿದರು.[25] ಎರಡನೆಯ ಉಲ್ಲೇಖವು ಮೈಸೂರು ಸಂಸ್ಥಾನದ ಲಿಂಗಾಯತರ ಚಿತ್ರದುರ್ಗ ಮಠದ ಸ್ವಾಮಿಗೆ ಸಂಬಂಧಿಸಿದೆ. ಸ್ವಾಮಿಯನ್ನು ಲಿಂಗಾಯತ ಸಮುದಾಯದ ಜಗದ್ಗುರುವೆಂದು ಶೃಂಗೇರಿಯ ಜಗದ್ಗುರು ಶಂಕರಾಚಾರ್ಯರಂತೆಯೇ ಪರಿಗಣಿಸಲಾಯಿತು ಮತ್ತು ಸ್ಥಾನದ ವಿಶಿಷ್ಟ ಚಿಹ್ನೆಗಳಾದ ಅಡ್ಡಪಲ್ಲಕ್ಕಿ, ಪಂಚಕಳಸ, ಶ್ವೇತಛತ್ರಿ ಮೊದಲಾದವುಗಳನ್ನು ಅನುಭವಿಸುವ ಸಂಪ್ರದಾಯದ ಹಕ್ಕುಗಳನ್ನು ಹೊಂದಿದ್ದರು. ಸ್ವಾಮಿಗಳು ಪ್ರಸಿದ್ಧ ಸಂಸ್ಕೃತದ ವಿದ್ವಾಂಸರಾಗಿದ್ದರು ಮತ್ತು ಹಿಂದುಳಿದ ಸಮುದಾಯಗಳಲ್ಲಿ ವಿದ್ಯಾಭ್ಯಾಸ ಹರಡಲು ಪ್ರಯತ್ನಿಸುತ್ತಿದ್ದರು. ಶಾಹು ಅವರಿಗೆ ಅವರ ಬಗ್ಗೆ ಬಹಳ ಅನುಕಂಪವಿತ್ತು. ೧೯೧೩ರಲ್ಲಿ ಅವರು ಶಾಹುರವರನ್ನು ಭೇಟಿ ಮಾಡಿದ್ದರು ಮತ್ತು ಅವರಿಗೆ ಮೈಸೂರಿನ ಮಹಾರಾಜರು ತಪ್ಪು ತಿಳುವಳಿಕೆಯಿಂದ ಸ್ಥಾನಮಾನದ ಚಿಹ್ನೆಗಳನ್ನು ಬಳಸಲು ನಿಷೇಧಿಸಿದ್ದಾರೆಂದು ಶಾಹುರವರಿಗೆ ಹೇಳಿದರು. ಶಾಹುರವರು ಒಂದು ವಿಶೇಷ ಪತ್ರವನ್ನು ಮೈಸೂರಿನ ದಿವಾನರಾದ ಸರ್ ಎಂ. ವಿಶ್ವೇಶ್ವರಯ್ಯ ಅವರಿಗೆ ಬರೆದು ಅನ್ಯಾಯವನ್ನು ಸರಿಪಡಿಸಲು ಮೈಸೂರಿನ ಮಹಾರಾಜರಿಗೆ ಕೇಳಿಕೊಂಡಿದ್ದರೆಂದು ತೋರುತ್ತದೆ.[26]

ಕೊಲ್ಹಾಪುರ ಸಂಸ್ಥಾನದಲ್ಲಿ ಆರ್ಯಸಮಾಜ ಮತ್ತು ಸತ್ಯಶೋಧಕ ಸಮಾಜದ ಆಂದೋಲನಗಳ ಸಂಘಟನೆಗಳಿಗೆ ಶಾಹುರವರು ರಾಜಾಶ್ರಯ ನೀಡಿದ್ದರೆಂದು ನಾವು ಈಗಾಗಲೆ ಚರ್ಚಿಸಿದ್ದೇವೆ. ಸ್ವಲ್ಪ ಸಮಯದವರೆಗೆ ಶಾಹುರವರು ಥಿಯಾಸಫಿಕಲ್ ಸೊಸೈಟಿಗೆ ಆಕರ್ಷಿತರಾಗಿದ್ದರು. ಆದರೆ ಥಿಯಾಸಫಿಕಲ್ ತತ್ವಸಿದ್ಧಾಂತವು ಅವರಿಗೆ ಸಂಪೂರ್ಣವಾಗಿ ತೃಪ್ತಿ ನೀಡಲಿಲ್ಲ. ಆದರೂ ಅವರು ಕೊಲ್ಹಾಪುರದ ಸೊಸೈಟಿಗೆ ಭೂಮಿಯನ್ನು ಹಂಚಿದ್ದರೆ ಹೊರತು ಅವರು ಅದರಲ್ಲಿ ನಿಕಟವಾಗಿ ತೊಡಗಿಸಿಕೊಳ್ಳಲಿಲ್ಲ.

ಸೊಸೈಟಿಯ ಕಾರ್ಯಕರ್ತರು ಸಕ್ರಿಯವಾಗಿ ರಾಷ್ಟ್ರೀಯ ರಾಜಕಾರಣದಲ್ಲಿ ವಿಶೇಷವಾಗಿ ಅಗ್ರಗಾಮಿ ಡಾ. ಆನಿಬೆಸೆಂಟರು ತೊಡಗಿಸಿಕೊಂಡದ್ದರಿಂದ ಸಂಪರ್ಕ ಹೆಚ್ಚಿಸಿಕೊಳ್ಳಲು ತೊಡಕಾಗಿರಬಹುದು. ಆದ್ದರಿಂದ ಕೊಲ್ಹಾಪುರದ ದರ್ಬಾರು ಸೊಸೈಟಿಗೆ ಭೂಮಿ ನೀಡುವಾಗ ಕೆಲವು ಷರತ್ತುಗಳನ್ನು ವಿಧಿಸಿದೆಯೆಂದು ತೋರುತ್ತದೆ. ಆ ಷರತ್ತುಗಳಲ್ಲಿ ಥಿಯಾಸಫಿಕಲ್ ಸೊಸೈಟಿ ಸದಾ ದರ್ಬಾರಿಗೆ ಮತ್ತು ಬ್ರಿಟಿಷ್ ಸರಕಾರಕ್ಕೆ ನಿಷ್ಠವಾಗಿರಬೇಕು ಎಂಬುದು ಪ್ರಮುಖ ಷರತ್ತಾಗಿತ್ತು. ಸೊಸೈಟಿ ತನ್ನ ಸಿದ್ಧಾಂತವನ್ನು ಹರಡಬಹುದು ಮತ್ತು ಕೊಲ್ಹಾಪುರ ಸಂಸ್ಥಾನದಲ್ಲಿ ರಾಜಕೀಯ ಚಟುವಟಿಕೆಗಳನ್ನು ನಿರ್ಬಂಧಗೊಳಿಸಬೇಕು. ಆದರೆ ಸೊಸೈಟಿಯು ಶಿಕ್ಷಣ, ಲೈಬ್ರರಿಗಳ ಸ್ಥಾಪನೆ ಮೊದಲಾದ ಚಟುವಟಿಕೆಗಳಿಗೆ ಅನುಕೂಲವಾಗಲೆಂದು ಭೂಮಿಯನ್ನು ನೀಡುವುದರ ಜೊತೆಗೆ ೩೦೦೦ ರೂಪಾಯಿಗಳ ದೇಣಿಗೆಯನ್ನು ದರ್ಬಾರು ನೀಡಿತು.[27]

## ಪ್ರಗತಿಪರ ಧಾರ್ಮಿಕ ಚಿಂತನೆ

ಧಾರ್ಮಿಕ ಕುತೂಹಲವು ಶಾಹುರವರ ಸ್ವಭಾವದ ಮಹತ್ವದ ಲಕ್ಷಣವಾಗಿತ್ತೆಂದು ಹೇಳುವುದು ಇಲ್ಲಿ ಅಸಮಂಜಸವಾಗಲಾರದು. ಈ ವಿಚಾರದಲ್ಲಿ ಮಧ್ಯಕಾಲೀನ ಭಾರತದ ಮೊಘಲ್ ಚಕ್ರವರ್ತಿ ಅಕ್ಬರ್ ಮಹಾಶಯರೊಂದಿಗೆ ಹೋಲಿಸಬಹುದು. ಅಕ್ಬರರ ಧಾರ್ಮಿಕ ಕುತೂಹಲ ತುಂಬಾ ತೀವ್ರವಾಗಿದ್ದರಿಂದ ಅವರು ತನ್ನ ಆಸ್ಥಾನದಲ್ಲಿ ವಿಶ್ವದ ಎಲ್ಲಾ ಧರ್ಮಗಳ ವಿದ್ವಾಂಸರಿಗೆ ರಾಜಾಶ್ರಯ ನೀಡಿದರು ಮತ್ತು ಅವರೊಂದಿಗೆ ಧಾರ್ಮಿಕ ತತ್ವಸಿದ್ಧಾಂತದ ಬಗ್ಗೆ ಚರ್ಚಿಸಿದರು. ಅವರು ಎಲ್ಲಾ ಧರ್ಮಗಳ ರಚನಾತ್ಮಕ ತತ್ವಗಳನ್ನು ಪ್ರತಿಯೊಂದು ಧರ್ಮದಿಂದ ಆಯ್ಕೆ ಮಾಡಿಕೊಂಡರು ಮತ್ತು ತಾವು ತಮ್ಮದೇ ಆದ ಧಾರ್ಮಿಕ ಪಂಥ 'ದಿನ್ ಇಲಾಹಿ'ಯನ್ನು ಸ್ಥಾಪಿಸಿದರು. ಅಕ್ಬರರ ಪಂಥ ಹೆಚ್ಚು ಅನುಚರರನ್ನು ಗೆಲ್ಲಲಿಲ್ಲ ಮತ್ತು ಅವರ ಆಡಳಿತದ ಕೊನೆಯೊಂದಿಗೆ ಅದು ಸಹ ಮರೆತುಹೋಯಿತು. ಇಷ್ಟಾದರೂ ಭಾರತದ ಇತಿಹಾಸದಲ್ಲಿ ಒಬ್ಬ ಪ್ರಬಲ ಚಕ್ರವರ್ತಿಯ ಒಂದು ನವೀನ ಧಾರ್ಮಿಕ–ಸಾಂಸ್ಕೃತಿಕ ಪ್ರಯೋಗದ ಮಹತ್ವ ಇನ್ನೂ ಉಳಿದುಕೊಂಡಿದೆ.

ಶಾಹುರವರು ತನ್ನ ಧಾರ್ಮಿಕ ಕುತೂಹಲದಿಂದ ಸಹ ಹಲವು ಧರ್ಮಗಳ ಪಂಥಗಳ ಮತ್ತು ಧಾರ್ಮಿಕ ಸುಧಾರಣೆಗಳ ಸಂಘಟನೆಗಳ ಸ್ನೇಹಿತರೊಂದಿಗೆ ಸ್ನೇಹ ಬೆಳೆಸಿದರು ಮತ್ತು ಅವರಿಗೆ ರಾಜಾಶ್ರಯ ನೀಡಿದರು. ಅವರು ಅವುಗಳ ತತ್ವಸಿದ್ಧಾಂತಗಳನ್ನು ಅರಿತುಕೊಂಡರು. ನಿಜವಾಗಿ ಶಾಹುರವರು ಧರ್ಮದ ಸಂಸ್ಥೆಯೊಂದಿಗೆ ಆಳವಾದ ಆಕರ್ಷಣೆ ಮತ್ತು ಕುತೂಹಲವನ್ನು ಹೊಂದಿದ್ದರು. ಅವರು ತಮ್ಮ ಧರ್ಮವನ್ನೇ ಸುಧಾರಿಸಲು ಹಂಬಲಿಸಿದರು ಮತ್ತು ಅದರಲ್ಲಿ ಸಮಾನತೆಯ ತತ್ವವನ್ನು ತುಂಬಲು ಹೆಣಗಿದರು. ಅವರು ಈ ಹಂಬಲದಿಂದಲೇ ಧಾರ್ಮಿಕ ಕ್ಷೇತ್ರದಲ್ಲಿ ವೈದಿಕಶಾಲೆ ಮತ್ತು ಕ್ಷಾತ್ರಜಗದ್ಗುರು ಎಂಬ ನವೀನ ಪ್ರಯೋಗಗಳನ್ನು ನಡೆಸಿದರು. ಧರ್ಮದ ಸಂಸ್ಥೆಯ ಬಗ್ಗೆ ಅವರು ತಮ್ಮದೇ ಆದ ಮೂಲ (ಸ್ವೋಪಜ್ಞತೆ) ವಿಚಾರಗಳನ್ನು ಹೊಂದಿದ್ದರು. ಶಾಹುರವರ ಗುರುಗಳಾದ ಸರ್ ಫ್ರೆಝರ್ ಅವರು ಶಾಹುರವರು ಅಕ್ಬರರು ಮಾಡಿದಂತೆಯೇ ಒಂದು ಹೊಸ ಧರ್ಮಸ್ಥಾಪನೆಯ ಸಾಧ್ಯತೆಯನ್ನು ಹುಡುಕಿದ್ದರೆಂದು ಹೇಳುತ್ತಾರೆ.[28] ಸರ್ ಫ್ರೆಝರ್ ಅವರ ಸಾಕ್ಷ್ಯದ ಮೇಲೆ ಧರ್ಮಕ್ಕೆ ಸಂಬಂಧಿಸಿದ ವಿಷಯದಲ್ಲಿ ಶಾಹುರವರ ಚಿಂತನೆಯ ದಿಕ್ಕಿನ ಬಗ್ಗೆ ನಾವು ಸ್ವಲ್ಪ ವಿಚಾರ ತಿಳಿಯಬಹುದು. ನಿಜ ಈ ವಿಚಾರಗಳು ಮುಂದುವರಿಯಲಿಲ್ಲ. ಹೊಸಧರ್ಮವನ್ನು ಸ್ಥಾಪಿಸುವುದರಿಂದ ಅಷ್ಟೇನು ಸಾಧಿಸಿದಂತಾಗುವುದಿಲ್ಲವೆಂಬುದು ಕಾರಣವಿರಬಹುದು. ಹಾಲಿಯಿರುವ ವಿಶ್ವದ ಧರ್ಮಗಳ ರಾಶಿಯಲ್ಲಿ ಇದು ಒಂದು

ಸೇರ್ಪಡೆಯಾಗಬಹುದೆಂದು ಅವರಿಗೆ ಅನಿಸಿರಬಹುದು. ಅಕ್ಬರರ ದಿನ್–ಇ–ಇಲಾಹಿಯಂತೆ ತನ್ನ ಧರ್ಮವು ತನ್ನ ನಂತರ ನಾಶವಾಗಬಹುದು. ಒಟ್ಟಿನಲ್ಲಿ ಅವರು ಒಂದು ಹೊಸಧರ್ಮದ ಕಡೆಗೆ ಹೋಗುವುದರ ಬದಲಿಗೆ ಹಾಲಿಯಿರುವ ಆರ್ಯಸಮಾಜ, ಸತ್ಯಶೋಧಕ ಸಮಾಜ ಮತ್ತು ಥಿಯಾಸಫಿಕಲ್ ಸೊಸೈಟಿ ಮೊದಲಾದವುಗಳ ಸುಧಾರಣಾವಾದಿ ಧಾರ್ಮಿಕ ಪಂಥಗಳಿಗೆ ರಾಜಾಶ್ರಯ ನೀಡುವುದು ಮತ್ತು ಸಮಾಜವನ್ನು ಸುಧಾರಿಸಲು ಅವುಗಳ ಒಳ್ಳೆಯ ತತ್ವಗಳೊಂದಿಗೆ ವಿವಾಹವಾಗಬೇಕೆಂದು ಬಯಸಿದರು ಮತ್ತು ಆರ್ಯ ಸಮಾಜವು ಭಾರತದಲ್ಲಿರುವ ಎಲ್ಲಾ ಜಾತಿ–ಉಪಜಾತಿಗಳು, ಪಂಥಗಳು ಮತ್ತು ತತ್ವಗಳನ್ನು ಅಪ್ಪಿಕೊಂಡಿದ್ದು ಮಾತ್ರವಲ್ಲದೆ ಆರ್ಯ ಜನಾಂಗಕ್ಕೆ ಸೇರದವರನ್ನು ಸಮಾನತೆಯ ತತ್ವದ ಮೇರೆಗೆ ಒಪ್ಪಿಕೊಂಡು ಮತ್ತು ಆಹಾರ ಮತ್ತು ವಿವಾಹದ ಎಲ್ಲಾ ಆರ್ಯರ ಹಕ್ಕುಗಳನ್ನು ಅವರಿಗೆ ನೀಡಲಾಯಿತು. ಆರ್ಯ ಸಮಾಜವು ಭಾರತಕ್ಕೆ ಮಾತ್ರ ಸೀಮಿತವಾಗದೆ ವಿಶ್ವದೃಷ್ಟಿಕೋನವನ್ನು ಅಳವಡಿಸಿಕೊಳ್ಳಬೇಕೆಂಬ ತಮ್ಮ ನಿರೀಕ್ಷೆಯನ್ನು ವ್ಯಕ್ತಪಡಿಸಿದ್ದರು. ಯೂರೋಪಿನ ಮತ್ತು ಅಮೇರಿಕಾ ಖಂಡಗಳ ಜನರು ಆರ್ಯ ಜನಾಂಗಕ್ಕೆ ಸೇರಿದವರಾಗಿದ್ದರಿಂದ ಅವರನ್ನು ಆರ್ಯಸಮಾಜದಲ್ಲಿ ಸಮೀಕರಿಸಿಕೊಳ್ಳಬೇಕೆಂಬ ಶಾಹುರವರ ವಾದವನ್ನು ನಾವು ಈಗಾಗಲೇ ನೋಡಿದ್ದೇವೆ. ಪ್ರಾಚೀನಕಾಲದಲ್ಲಿ ಅವರ ಪೂರ್ವಿಕರು ಇಂಡಿಯಾದಲ್ಲಿನ ಆರ್ಯರ ಪೂರ್ವಿಕರ ಜೊತೆಯಲ್ಲಿ ಒಟ್ಟಿಗೆ ಜೀವಿಸಿದ್ದರು. ಆದ್ದರಿಂದ ಅವರೆಲ್ಲರೂ ಒಂದೇ ಗುಂಪಿಗೆ ಸೇರಿದವರು. ಶಾಹು ಹೇಳುತ್ತಾರೆ: "..... ನಮ್ಮ ಮತ್ತು ಪಾಶ್ಚಿಮಾತ್ಯರ ಜೀವನಶೈಲಿ ಮತ್ತು ಚಿಂತನೆಯಲ್ಲಿ ಬಹಳ ವ್ಯತ್ಯಾಸವಿದೆ. ಏಕೆಂದರೆ ನಾವು ಬಹಳ ಸಮಯದವರೆಗೆ ಪ್ರತ್ಯೇಕವಾಗಿದ್ದೇವೆ. ಆದರೆ ನಮ್ಮ ಪ್ರಮುಖ ವಿಷಯಗಳು ಒಂದೇ ಆಗಿವೆ. ಅವರು ಜಾತಿಭೇದವನ್ನು ಅನುಸರಿಸುವುದಿಲ್ಲ. ನಮ್ಮ ನಿಜವಾದ ಧರ್ಮ ಸಹ ಇದನ್ನು ಸಮ್ಮತಿಸುವುದಿಲ್ಲ. ಬ್ರಾಹ್ಮಣ್ಯದ ಧರ್ಮ ಮಾತ್ರ ಸ್ಪರ್ಶ ನಿಷೇಧಗಳಿಗೆ ಪ್ರಾಮುಖ್ಯತೆ ಕೊಡುತ್ತದೆ ಮತ್ತು ಜೊತೆಗೆ ಜಾತಿ–ದ್ವೇಷಗಳನ್ನು ಸೇರಿಸುತ್ತದೆ. ಆದರೆ ಆರ್ಯರ ಧರ್ಮ ಮೂಲತಃ ಸಮೀಕೃತವಾದದ್ದು. ಅದು ವಿವಿಧ ಜಾತಿಗಳ, ತತ್ವಗಳ ಮತ್ತು ಧರ್ಮಗಳನ್ನು ಕೂಡಿಸುವುದಕ್ಕೆ ಸಹಾಯ ಮಾಡುತ್ತದೆ".[29]

ಶಾಹುರವರು ಯೂರೋಪಿನಿಂದ ಮತ್ತು ಅಮೇರಿಕಾದಿಂದ ಬಂದ ಆರ್ಯರು ಇಂಡಿಯಾದ ಧರ್ಮವನ್ನು ಒಪ್ಪಬೇಕೆಂದು ಒತ್ತಾಯಪಡಿಸುತ್ತಿರಲಿಲ್ಲ. ಮಿಗಿಲಾಗಿ ವಿವಿಧ ಪಂಥಗಳ ಅಥವಾ ಧರ್ಮಗಳ ಜನರು ಸೌಹಾರ್ದತೆ ಶಾಂತಿಯಿಂದ ಒಂದು ಕುಟುಂಬದಂತೆ ವರ್ತಿಸಿದರೆ ಆರ್ಯ ಸಮಾಜವು ಈಗಾಗಲೆ ಎಲ್ಲರಿಗೂ ಕೃತಿ ಮತ್ತು ಚಿಂತನೆಗಳಲ್ಲಿ ಸ್ವಾತಂತ್ರ್ಯವನ್ನು ನೀಡಿರುವುದರಿಂದ, ಅದು ಧರ್ಮಗಳ ಅಂತಹ ಆದರ್ಶ ಕುಟುಂಬವನ್ನು ಅನುಮೋದಿಸುತ್ತದೆ. ಅವರು ಹೇಳುತ್ತಾರೆ: "ಯೂರೋಪು, ಅಮೇರಿಕ ಮತ್ತು ಜಪಾನುಗಳಲ್ಲಿ ಸಮಾನತೆಯ ತತ್ವ ರೂಢಿಯಲ್ಲಿರುವುದರಿಂದ ಸಹೋದರರು ಮತ್ತು ಮದುವೆಯಾದ ದಂಪತಿಗಳು ಅದೇ ಕುಟುಂಬದಲ್ಲಿ ಭಿನ್ನವಾದ ಧರ್ಮಗಳನ್ನು ಪರಿಪಾಲಿಸುತ್ತಿರುವುದು ಕಂಡುಬಂದಿದೆ. ಅದೇ ರೀತಿಯಲ್ಲಿ ಆರ್ಯಸಮಾಜಿ ಗಂಡನು ಮತ್ತು ಬೇರೆ ಧರ್ಮಕ್ಕೆ ಸೇರಿದ ಹೆಂಡತಿಯ ಕುಟುಂಬ ಅಥವಾ ಹೆಂಡತಿ ಆರ್ಯಸಮಾಜಿಯಾಗಿ ಮತ್ತು ಗಂಡ ಬೇರೆ ತತ್ವವನ್ನು ಅನುಸರಿಸುತ್ತಿದ್ದರೆ ಅಸ್ತಿತ್ವದಲ್ಲಿರಲು ಸಾಧ್ಯವಾಗುತ್ತದೆ. ಕುಟುಂಬದಲ್ಲಿ ಅಣ್ಣತಮ್ಮಂದಿರು ಭಿನ್ನವಾದ ಧರ್ಮಗಳನ್ನು ಅನುಸರಿಸಬಹುದು. ಪ್ರತಿಯೊಬ್ಬರು ಕೃತಿ ಮತ್ತು ಚಿಂತನೆಗಳ ಸ್ವಾತಂತ್ರ್ಯವನ್ನು ಹೊಂದಿರಬಹುದು".[30]

ಇದೇ ಸಮಯದಲ್ಲಿ (೧೯೧೮) ಅಂತರ್‌ರಾಷ್ಟ್ರೀಯ ಶಾಂತಿ ಮತ್ತು ಸುವ್ಯವಸ್ಥೆಯ ರಾಷ್ಟ್ರಗಳ ಸಂಘದ ರಚನೆಗಾಗಿ ಎಲ್ಲಾ ರಾಷ್ಟ್ರಗಳು ಒಟ್ಟಿಗೆ ಸೇರಿ ಚರ್ಚಿಸುತ್ತಿದ್ದವು. ಅದೇ ರೀತಿಯಲ್ಲಿ ವಿಶ್ವದ ಎಲ್ಲಾ

ಧರ್ಮಗಳು ಒಟ್ಟಿಗೆ ಒಂದು ಕಡೆಗೆ ಬಂದು ಮತ್ತು ಧರ್ಮಗಳ ಒಂದು ಸೊಸೈಟಿಯನ್ನು (ಸಂಘ) ರಚಿಸಬೇಕು ಮತ್ತು ಆರ್ಯ ಸಮಾಜ ಅಂತಹ ಸ್ಥಾಪನೆಗಾಗಿ ಉಪಕ್ರಮ ಕೈಗೊಳ್ಳಬೇಕೆಂದು ಶಾಹುರವರ ಆ ವಿಚಾರವನ್ನು ಮುಂದಿಟ್ಟಿದ್ದರು. ಶಾಹುರವರ ಈ ಚಿಂತನೆಗಳು ಆರ್ಯ ಸಮಾಜ ತನ್ನ ಭವಿಷ್ಯದ ದಾರಿಯಲ್ಲಿ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ವಲಯಕ್ಕೆ ಅತ್ಯಮೂಲ್ಯವಾದ ಮಾರ್ಗದರ್ಶನವಾಗಬಹುದು. ಆರ್ಯ ಸಮಾಜದ ಪ್ರಮುಖ ಧಾರ್ಮಿಕ ಪಠ್ಯಗ್ರಂಥ 'ಸತ್ಯಾರ್ಥ ಪ್ರಕಾಶ'. ಬೌದ್ಧಧರ್ಮ, ಜೈನಧರ್ಮ, ಇಸ್ಲಾಂಧರ್ಮ ಮತ್ತು ಕ್ರಿಶ್ಚಿಯನ್ ಧರ್ಮಗಳ ಬಗ್ಗೆ ಕಟುವಾದ ವಿಮರ್ಶೆಯಾಗಿದೆ. ಆದರೆ ಶಾಹುರವರ ವಿಚಾರಗಳು ಆರ್ಯ ಸಮಾಜವನ್ನು ಹೆಚ್ಚು ಸಮೀಕೃತ, ಹೆಚ್ಚು ಸಮಾನತೆಯ ಕಡೆಗೆ ವಾಲುವ, ಹೆಚ್ಚು ಉದಾರವಾದಿ ಮತ್ತು ಹೆಚ್ಚು ಸಹನಶೀಲವಾದ ವಿಚಾರಗಳಾಗಿವೆ.

ಶಾಹುರವರ ಧಾರ್ಮಿಕ ವಿಚಾರಗಳು ಹೀಗೆ ರೂಪಗೊಂಡವೆಂದು ತೋರುತ್ತದೆ. ಪ್ರಾರಂಭದಲ್ಲಿ ಒಬ್ಬ ಕಟ್ಟಾ ಸಂಪ್ರದಾಯವಾದಿಯಾಗಿದ್ದ ಶಾಹುರವರು ವೇದೋಕ್ತದ ಪ್ರಕರಣದ ನಂತರ ಆರ್ಯ ಸಮಾಜದ ಕಡೆಗೆ ಆಕರ್ಷಿತರಾದರು ಮತ್ತು ವೈದಿಕ ಧರ್ಮದ ಕಟ್ಟಾ ಪ್ರತಿಪಾದಕರಾದರು. ಆದರೆ ಅವರ ಮೇಲಿನ ಚಿಂತನೆಗಳು ಈ ಹಂತವನ್ನು ಮೀರಿ ಬದಲಾಗಿರುವುದನ್ನು ಸ್ಪಷ್ಟಪಡಿಸುತ್ತವೆ. ಧರ್ಮವು ಒಂದು ವೈಯಕ್ತಿಕ ವಿಚಾರವೆಂದು ಮತ್ತು ರಾಷ್ಟ್ರದ ಆಸಕ್ತಿಗಳನ್ನು ಮೀರಿ ನಡೆದರೆ ಅವುಗಳನ್ನು ಪಕ್ಕಕ್ಕೆ ಇಡಬೇಕು. ಅವರು ಹೇಳುತ್ತಾರೆ: "ನಾವು ಹಿಂದಿ (ಭಾರತೀಯರು). ನಾವೆಲ್ಲ ಸಹೋದರರು. ಭಾರತೀಯರೆಲ್ಲರೂ ತಮ್ಮ ಬಣ್ಣ, ವರ್ಗ ಅಥವಾ ಧರ್ಮ ಬಿಟ್ಟು ನಾವೆಲ್ಲ ಹಿಂದಿಗಳು (ಭಾರತೀಯರು). ವ್ಯಕ್ತಿಗೆ ಧರ್ಮ ಮುಖ್ಯವಾಗಬಹುದು. ಆದರೆ ಅದು ರಾಷ್ಟ್ರದ ಹಿತಾಸಕ್ತಿಗಳಿಗೆ ಎಂದಿಗೂ ಅಡ್ಡ ಬರಬಾರದು. ಈ ಸಂದರ್ಭದಲ್ಲಿ ಧರ್ಮ ಅಂಥ ಮುಖ್ಯವಾದ ವಿಷಯವಲ್ಲ. ಏನೇ ಆದರು ಧರ್ಮ ಎಂದರೇನು. ಅವರು ಉತ್ತರಿಸುತ್ತಾರೆ: "ಸಾರ ರೂಪದಲ್ಲಿ, ಧರ್ಮ ಎಂಬ ಶಬ್ದವನ್ನು ದೇವರ ಬಳಿಗೆ ಹೋಗುವ ದಾರಿ ಎಂದು ನಿರ್ವಚಿಸಲಾಗಿದೆ. ಬಾಂಬೆ, ಲಂಡನ್, ಕಲಕತ್ತ ಮೊದಲಾದ ದೊಡ್ಡ ನಗರಗಳಿಗೆ ಎಲ್ಲಾ ಕಡೆಗಳಿಂದ ಬಂದು ಸೇರಬಹುದು. ಜನರು ಎಲ್ಲಾ ಕಡೆಗಳಿಂದ ಈ ನಗರಗಳಿಗೆ ಅತ್ಯಂತ ಕಡಿಮೆ ಸಮಯದಲ್ಲಿ ಮತ್ತು ಕನಿಷ್ಠ ಶ್ರಮದಿಂದ ಬಂದು ಸೇರಲು ಉದ್ದೇಶಿಸುತ್ತಾರೆ. ಅದೇ ರೀತಿಯಲ್ಲಿ ವಿಭಿನ್ನ ಪರಿಸ್ಥಿತಿಗಳಲ್ಲಿ ವಿಭಿನ್ನ ದೇಶಗಳಲ್ಲಿ ವಿಭಿನ್ನ ಧರ್ಮಗಳ ಉದ್ದೇಶಗಳು ಅಸ್ತಿತ್ವಕ್ಕೆ ಬಂದಿರುವುದು ಒಂದೇ ತೆರನಾಗಿದೆ. ಹೀಗಿರುವಾಗ ಪರಸ್ಪರ ದ್ವೇಷಿಸಲು ಅದೇ ನಗರವನ್ನು ತಲುಪಲು ಜನರು ವಿಭಿನ್ನ ಮಾರ್ಗಗಳನ್ನು ಅನುಸರಿಸುವುದಕ್ಕೆ ಯಾವುದೇ ಕಾರಣವಿಲ್ಲದಿದ್ದರೂ ಅದೇ ದೇವರನ್ನು ತಲುಪಲು ವಿಭಿನ್ನ ಮಾರ್ಗಗಳನ್ನು ಅನುಸರಿಸುವ ಜನರು ಏಕೆ ಪರಸ್ಪರ ದ್ವೇಷಿಸುತ್ತಾರೆ?, ಏನೇ ಪರಿಸ್ಥಿತಿಗಳಿರಲಿ ಈ ಧರ್ಮಗಳು ರೂಪಗೊಂಡಾಗ, ಇಂದು ಒಂದು ವಿಶಿಷ್ಟ ಧರ್ಮವನ್ನು ಪರಿಪಾಲಿಸುತ್ತಿರುವಾಗ ದೇವರನ್ನು ತಲ್ಪಿದ್ದು ಕನಿಷ್ಟಪಕ್ಷ ಯಾರು ನೋಡಿಲ್ಲ. ಮತ್ತು ತಮ್ಮದೇ ಒಂದು ಧರ್ಮವೆಂದು ಹೇಳಿ ಹೆಮ್ಮೆ ಕೊಟ್ಟುಕೊಳ್ಳುವುದಕ್ಕೆ ಮತ್ತು ಬೇರೆ ಧರ್ಮಗಳು ಹುಸಿ ಎಂದು ಹೇಳುವುದಕ್ಕೆ ಯಾರಿಗೂ ಹಕ್ಕಿಲ್ಲ".

ಕೊನೆಯದಾಗಿ, ಶಾಹುರವರು ನಿಜವಾದ ಧರ್ಮವಿರುವುದು ಸಹೋದರರ ಸೇವೆಯಲ್ಲಿ; ಪರೋಪಕಾರದಲ್ಲಿ ಮತ್ತು ಮನುಷ್ಯನಲ್ಲಿ ದೇವರನ್ನು ಹುಡುಕುವುದರಲ್ಲಿ ಎಂಬ ಅವರ ಧಾರ್ಮಿಕ

---

* ಮುಸ್ಲಿಮರನ್ನು ಪ್ರತಿನಿಧಿಸುವ ೫ ಪವಿತ್ರ ವ್ಯಕ್ತಿಗಳ (ಮೂರ್ತಿಗಳ) ಕಬ್ಬಿಣದ ಕೈಗಳು.

ಚಿಂತನೆಯ ಕೊನೆಯ ಹಂತವನ್ನು ತಲುಪಿದ್ದಾರೆ. ಅವರು ಹೇಳಿದ್ದಾರೆ: "ಕರುಣೆಯೇ ಧರ್ಮದ ಮೂಲ, ಪೊಳ್ಳುತನವೇ ನರಕಕ್ಕೆ ದಾರಿ. ಈ ತತ್ವದ ಪ್ರಕಾರ ದೇಶಸೇವೆ ಅಂದರೆ ದೇಶದ ಜನರ ಸೇವೆ ಮತ್ತು ಮನುಷ್ಯನಲ್ಲಿ ದೇವರನ್ನು ಹುಡುಕುವುದು ಮತ್ತು ಕಂಡುಹಿಡಿಯುವುದು ನಿಜವಾದ ಧರ್ಮವಾಗುತ್ತದೆ. ಇದು ಎಲ್ಲಾ ಧರ್ಮಗಳ ಅಭಿಪ್ರಾಯವಾಗಿದೆ. ಎಲ್ಲಾ ಧರ್ಮಗಳು, ದಾನವು ಒಂದು ಸದ್ಗುಣವೆಂದು ಮತ್ತು ಹಿಂಸಾನಂದವೇ ಪಾಪವೆಂದು ಬೋಧಿಸುತ್ತವೆ. ಈ ದೃಷ್ಟಿಯಿಂದ ನೋಡುವುದಾದರೆ ಧರ್ಮದ ನೆಪದಲ್ಲಿ ಪರಸ್ಪರ ಅಸೂಯೆಪಡುವುದು ಸಂಪೂರ್ಣವಾಗಿ ತಪ್ಪಾಗುತ್ತದೆ".[31] ಈ ದಿನಗಳಲ್ಲಿ ಧರ್ಮ ರಾಜಕಾರಣಕ್ಕಿಂತ ಮಿಗಿಲಾಗಿ ಹೆಚ್ಚು ಮುಖ್ಯವೆಂದು ಭಾವಿಸಿದಾಗ ಮತ್ತು ವಿಶ್ವದ ಅನೇಕ ಭಾಗಗಳಲ್ಲಿ ಸಮಾಜ ಒಂದು ಭಾಗವಾಗಿದೆ. ನಮ್ಮ ರಾಷ್ಟ್ರವು ಧಾರ್ಮಿಕ ಮೂಲಭೂತವಾದಿ(ಧರ್ಮಾಂಧರಿಂದ)ಗಳಿಂದ ಮಹಾವಿಪತ್ತನ್ನು ಎದುರಿಸುತ್ತಿದೆ. ಶಾಹುರವರ ಧಾರ್ಮಿಕ ಚಿಂತನೆಗಳು ಹೆಚ್ಚು ಸ್ಫೂರ್ತಿದಾಯಕ ಮತ್ತು ಮೌಲಿಕ ಎಂಬುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ.

---

೨೭

# ಕಾರ್ಮಿಕ ಆಂದೋಲನ

**ಯೂ**ರೋಪಿನಲ್ಲಿ ೧೯ನೇ ಶತಮಾನದ ಕೈಗಾರಿಕಾ ಕ್ರಾಂತಿಯ ಪ್ರಯುಕ್ತ ಸಂಖ್ಯೆಯಲ್ಲಿ ಅಧಿಕವಾಗಿದ್ದ ಕಾರ್ಮಿಕ ವರ್ಗದೊಂದಿಗೆ ಒಂದು ಶಕ್ತಿಯುತ ಬಂಡವಾಳವಾದಿ ವರ್ಗ ಹುಟ್ಟಿಕೊಂಡಿತು. ಇದೇ ಅವಧಿಯಲ್ಲಿ ವರ್ಗ ಹೋರಾಟದ ಸಿದ್ಧಾಂತ ಸಹ ಅಸ್ತಿತ್ವಕ್ಕೆ ಬಂತು. ಇಂಗ್ಲೆಂಡು ಮತ್ತು ಫ್ರಾನ್ಸ್ ಮೊದಲಾದ ದೇಶಗಳಲ್ಲಿ ಕಾರ್ಮಿಕರ ಕಲ್ಯಾಣಕ್ಕಾಗಿ ರಾಜಕೀಯ ಆಂದೋಲನಗಳನ್ನು ನಡೆಸಲಾಯಿತು. ತತ್ಪರಿಣಾಮವಾಗಿ ಇಂಗ್ಲೆಂಡಿನಲ್ಲಿ ಕಾರ್ಮಿಕ ವರ್ಗ ಒಂದು ಶಕ್ತಿಯುತ ಬಲವಾಗಿ ಮೂಡಿಬಂದಿದೆ.

## ಭಾರತದಲ್ಲಿ ಕಾರ್ಮಿಕ ವರ್ಗದ ಉಗಮ

ಸರಕಾರದಲ್ಲಿ ಕಾರ್ಮಿಕವರ್ಗದ ಭಾಗವಹಿಸುವಿಕೆಯು ಹೆಚ್ಚಾಯಿತು. ಭಾರತದಲ್ಲಿ ಕೂಡ ಕೈಗಾರಿಕಾ ಕ್ರಾಂತಿ ಕಾಣಿಸಿಕೊಂಡಿತು. ಬಾಂಬೆ ಮತ್ತು ಕಲಕತ್ತದ ದೊಡ್ಡ ನಗರಗಳಲ್ಲಿ ಬಟ್ಟೆ ಗಿರಣಿಗಳು ಮತ್ತು ಕಾರ್ಖಾನೆಗಳು ಸ್ಥಾಪನೆಗೊಂಡವು ಮತ್ತು ಈ ನಗರಗಳಲ್ಲಿ ದಿನಗೂಲಿಯ ಮೇರೆಗೆ ಕಾರ್ಮಿಕ ವರ್ಗವು ಅಸ್ತಿತ್ವಕ್ಕೆ ಬಂತು. ಬಟ್ಟೆ ಗಿರಣಿಗಳು ಬಾಂಬೆಯಲ್ಲಿ ಪ್ರವರ್ಧಮಾನಕ್ಕೆ ಬಂದವು. ಈ ಗಿರಣಿಗಳ ಮಾಲೀಕರು ಬ್ರಿಟಿಷರು, ಪಾರ್ಸಿಗಳ ಭಾಟಿಯಗಳು, ಖೋಜಾಗಳು ಬಂಡವಾಳಶಾಹಿಗಳಾಗಿದ್ದರು. ಅವರ ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಮಹಾರಾಷ್ಟ್ರದ ಕೃಷಿಕ ವರ್ಗವಾಗಿತ್ತು. ಅವರೆಲ್ಲರು ಮಹಾರಾಷ್ಟ್ರದ ಒಳಗಿನ ಮೂಲೆ–ಮೂಲೆಗಳಿಂದ ಬಂದಿದ್ದರು. ಬಾಂಬೆಯ ಕಾರ್ಖಾನೆಗಳ ಮಾಲೀಕರು ಕೂಡ ಬಂಡವಾಳಗಾರರ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು ಮತ್ತು ಕಾರ್ಮಿಕರನ್ನು ಅಮಾನವೀಯವಾಗಿ ಶೋಷಣೆ ಮಾಡುವುದರಲ್ಲಿ ಹಿಂದೆ ಬೀಳಲಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಅವರು ಯೂರೋಪಿನ ಬಂಡವಾಳಶಾಹಿಗಳ ಸಹೋದರರಾಗಿಯೇ ಕಾಣುತ್ತಿದ್ದರು. ಆದರೆ ಭಾರತದ ಕಾರ್ಮಿಕ ಮತ್ತು ಅದರ ಯೂರೋಪಿಯನ್ ವರ್ಗದ ನಡುವೆ ಹೋಲಿಕೆಯಿಲ್ಲ. ಏಕೆಂದರೆ ಭಾರತದ ಕಾರ್ಮಿಕರು ಯೂರೋಪಿಯನ್ನರ ಕಾರ್ಮಿಕರಂತೆ ಇನ್ನೂ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಜಾಗೃತ ಮತ್ತು ಸಂಘಟಿತರಾಗಿರಲಿಲ್ಲ.

ಶಾಹುರವರು ಯೂರೋಪಿನ ಕಾರ್ಮಿಕರ ವಿಶೇಷವಾಗಿ ಕಾರ್ಮಿಕರ ಹೋರಾಟದ ಅಂತರ್‌ರಾಷ್ಟ್ರೀಯದ ಪರಿಸ್ಥಿತಿಗಳನ್ನು ಚೆನ್ನಾಗಿ ಅರಿತಿದ್ದರು. ಅವರು ಯೂರೋಪಿನ ಕಾರ್ಮಿಕರು ಪಡೆದಿದ್ದ ಹಕ್ಕುಗಳ ಬಗ್ಗೆ ಚೆನ್ನಾಗಿ ಸುಪರಿಚಿತರಾಗಿದ್ದರು. ಅವರು ಭಾರತದ ಕಾರ್ಮಿಕರು ಸಂಘಟನೆಯಾಗದೆ ಮತ್ತು ಹೋರಾಟ ಮಾಡದ ಹೊರತು ಯೂರೋಪಿನ ಕಾರ್ಮಿಕರಂತೆ ಹಕ್ಕುಗಳನ್ನು ಪಡೆಯಲು ಸಾಧ್ಯವಿಲ್ಲವೆಂದು ಪರಿಭಾವಿಸಿದರು. ಕಾರ್ಮಿಕ ವರ್ಗವು ಸಾಮಾನ್ಯ ಜನರ ಅವಿಭಾಜ್ಯ ಅಂಗವಾಗಿದೆ.

ಅವರು ಈ ಸಾಮಾನ್ಯ ವರ್ಗದ ಮುಕ್ತಿಯ ಗುರಿಯನ್ನು ಇಟ್ಟುಕೊಂಡಿದ್ದಾರೆ. ಹೀಗಿರುವಾಗ ಕಾರ್ಮಿಕ ವರ್ಗವನ್ನು ಬಿಟ್ಟು ಸಾಮಾನ್ಯ ಜನರ ಏಳಿಗೆಗಾಗಿ ಆಂದೋಲನ ನಡೆಸುವುದು ಸೂಕ್ತವಾಗಲಾರದೆಂದು ಅವರು ಅರಿತುಕೊಂಡರು.

ಅದೃಷ್ಟವಶಾತ್, ಶಾಹುರವರು ಕಾರ್ಮಿಕ ವರ್ಗಗಳ ಕುರಿತು ಮಾಡಿದ ಎರಡು ಭಾಷಣಗಳ ದಾಖಲೆಗಳೂ ವಿದ್ವಾಂಸರಿಗೆ ಸಿಕ್ಕಿವೆ. ಈ ಭಾಷಣಗಳು ಅವರಿಗೆ ಕಾರ್ಮಿಕ ವರ್ಗಗಳ ಬಗ್ಗೆಯಿರುವ ನಿಜವಾದ ಕಾಳಜಿಯನ್ನು ಮತ್ತು ಅವರ ಸ್ಥಿತಿಗಳ ಬಗ್ಗೆ ಅವರು ಮಾಡಿದ ಅವಲೋಕನಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ಭಾಷಣಗಳನ್ನು ಮಾಡಿದುದು ಸುಮಾರು ನವೆಂಬರ್ ೧೯೧೮ರಲ್ಲಿ ಅಂದರೆ ಮೊದಲ ಮಹಾವಿಶ್ವ ಯುದ್ಧದ ಕೊನೆಯಲ್ಲಿ. ಈ ಅವಧಿಯಲ್ಲಿ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಬಹಳ ಪರಿಣಾಮ ಬೀರುವ ಮಹಾಘಟನೆಗಳು ನಡೆದವು. ಯೂರೋಪಿನ ದೇಶಗಳಾದ ರಷಿಯಾ, ಜರ್ಮನಿಗಳ ರಾಜ–ವ್ಯವಸ್ಥೆಗಳು ಸಂಪೂರ್ಣವಾಗಿ ಕೊನೆಗೊಂಡವು. ವಿಶೇಷವಾಗಿ ರಷಿಯಾದಲ್ಲಿ ಲೆನಿನರ ನಾಯಕತ್ವದಲ್ಲಿ ಕಾರ್ಮಿಕ ವರ್ಗ ಕಮ್ಯುನಿಸ್ಟ್ ಕ್ರಾಂತಿಯನ್ನು ಮಾಡಿತು ಮತ್ತು ಕಾರ್ಮಿಕ ಸರಕಾರ ನಡೆಸುವ ಪ್ರಯೋಗವನ್ನು ಪ್ರಾರಂಭಿಸಲಾಯಿತು. ಈ ಕಮ್ಯುನಿಸ್ಟ್ ಕ್ರಾಂತಿಯ ಭಯದಿಂದ ಬಂಡವಾಳಶಾಹಿ ದೇಶಗಳಾದ ಇಂಗ್ಲೆಂಡು ತನ್ನ ಕಾರ್ಮಿಕರನ್ನು ಸಂತೃಪ್ತಿಗೊಳಿಸಲು ಪ್ರಾರಂಭಿಸಿತು. ಈಗಾಗಲೇ ಕಾರ್ಮಿಕ ವರ್ಗದ ಪ್ರತಿನಿಧಿಗಳು ಶಾಸನಸಭೆಗಳಿಗೆ ಪ್ರವೇಶಿಸಿದರು ಮತ್ತು ತಮ್ಮ ಬಲವನ್ನು ಪ್ರದರ್ಶಿಸಿದರು. ಈ ಅಂತರ್‌ರಾಷ್ಟ್ರೀಯ ಘಟನೆಗಳನ್ನು ಗಮನದಲ್ಲಿಟ್ಟುಕೊಂಡು ಶಾಹುರವರು ಕಾರ್ಮಿಕರಿಗೆ ಮಾರ್ಗದರ್ಶನ ನೀಡಿದರೆಂಬುದನ್ನು ಗಮನಿಸಬೇಕು.

### 'ಭಾರತದ ಕಾರ್ಮಿಕರೆ, ಒಂದಾಗಿ'

ಮೊದಲಿನ ನಾಯಕರಾದ ರಾವ್ ಬಹಾದೂರ್ ನಾರಾಯಣ ಮೇಘಾಜಿ ಲೋಖಂಡೆಯವರು ಬಾಂಬೆಯ ಕಾರ್ಮಿಕರನ್ನು ಸಂಘಟಿಸಲು ಪ್ರಯತ್ನಿಸಿದರು. ಇದೆ ಸುಮಾರು ಅವಧಿಯಲ್ಲಿ ಕಾರ್ಮಿಕ ನಾಯಕರಾದ ಸಿ. ಕೆ. ಬೊಲೆ, ವಂಡೇಕರ್, ತಲ್ಚೆಕರ್ ಅವರು ಕಾರ್ಮಿಕ ಆಂದೋಲನದಲ್ಲಿ ಸಕ್ರಿಯರಾಗಿದ್ದರು.

೧೦ ನವೆಂಬರ್ ೧೯೧೮ರಲ್ಲಿ ಈ ನಾಯಕರು ಬಾಂಬೆಯ ಉಪ–ನಗರ ಪರೇಲ್‌ನಲ್ಲಿ ೧೦,೦೦೦ ಕಾರ್ಮಿಕರ ಒಂದು ಸಭೆಯನ್ನು ವ್ಯವಸ್ಥೆಗೊಳಿಸಿ ಅದರ ಅಧ್ಯಕ್ಷತೆಯನ್ನು ವಹಿಸಲು ಶಾಹುರವರನ್ನು ಕೋರಿದ್ದರು. ಶಾಹುರವರು ಅವರ ಮನವಿಯನ್ನು ಗೌರವಿಸಿದರು. ಬಡಕಾರ್ಮಿಕ ವರ್ಗಕ್ಕೆ ಸೇರಿದ ಜನರು ಶಾಹು ಛತ್ರಪತಿ ಮಹಾರಾಜರು ಖುದ್ದುಬರುವುದನ್ನು ತಿಳಿದು ಸಂತೋಷದಿಂದ ಪುಲಕಿತಗೊಂಡರು. ಶಾಹುರವರು ಈ ಮಾತುಗಳಿಂದ ತಮ್ಮ ಭಾಷಣವನ್ನು ಪ್ರಾರಂಭಿಸಿದರು: "ನಾನು ನಿಮ್ಮ ಭಾಗಕ್ಕೆ ಸೇರಿದವನು. ಆದ್ದರಿಂದ ನಾನು ವಿಶೇಷವಾಗಿ ಈ ಸಭೆಯ ಅಧ್ಯಕ್ಷತೆ ವಹಿಸುತ್ತಿದ್ದೇನೆ......". ಸಭೆ ಸೇರಿದ್ದ ಕಾರ್ಮಿಕರ ಹೃದಯ ಗೆದ್ದುಕೊಂಡಿದ್ದರಲ್ಲಿ ಆಶ್ಚರ್ಯವಿಲ್ಲ.

ಶಾಹುರವರು ಕಾರ್ಮಿಕರ ಸ್ಥಿತಿಗತಿಗಳ ವಿಷಯಕ್ಕೆ ನೇರವಾಗಿ ಬಂದರು. ಅವರು ಹೇಳಿದರು: "ಪಾಶ್ಚಿಮಾತ್ಯ ದೇಶಗಳಲ್ಲಿ ಬಂಡವಾಳವಾದಿಗಳು ಮತ್ತು ಕಾರ್ಮಿಕರು ಎಂಬ ವರ್ಗಗಳಿವೆ. ಅಲ್ಲಿ ಸಹ ಬಂಡವಾಳಗಾರರು ಕಾರ್ಮಿಕರ ಮೇಲೆ ಅನಿರ್ಬಂಧಿತವಾದ ಅಧಿಕಾರವನ್ನು ಚಲಾಯಿಸುತ್ತಾರೆ. ಆದರೆ ಈಗ ಕಾರ್ಮಿಕರು ತಮ್ಮ ಸಂಘಗಳನ್ನು ಕಟ್ಟಿಕೊಂಡಿದ್ದಾರೆ. ವಾಸ್ತವಿಕವಾಗಿ ಹುಲ್ಲುಕಡ್ಡಿ ಬೆಲೆಯಿಲ್ಲದ್ದು,

ಆದರೆ ಅಂಥ ಹಲವಾರು ಹುಲ್ಲುಕಡ್ಡಿಗಳಿಂದ ಹೊಸೆದ ಒಂದು ಹಗ್ಗವು ಸಾಕಷ್ಟು ಬಲವಾಗಿದ್ದು ಆನೆಯನ್ನು ಸಹ ಅದರಿಂದ ಬಂಧಿಸಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ ಕಾರ್ಮಿಕರು ತಮ್ಮ ಕೂಲಿಗಳನ್ನು ಹೆಚ್ಚಿಸಿ ಎಂಬ ಒಂದೇ ವಿಷಯದ ಬಗ್ಗೆ ಹೋರಾಡುತ್ತಾರೆ. ಆ ದೇಶಗಳು ಸಮಾಜಗಳಲ್ಲಿ ಯಾವುದೇ ದರ್ಜೆ ಅಥವಾ ವರ್ಗ ತಲುಪಲು ಜಾತಿವ್ಯವಸ್ಥೆಯ ಅಡ್ಡಿ–ಆತಂಕಗಳಿಲ್ಲ. ಹೀಗಿರುವಾಗ ಕಾರ್ಮಿಕರು ಸುಲಭವಾಗಿ ಉನ್ನತ ವರ್ಗಗಳೊಂದಿಗೆ ಸುಲಭವಾಗಿ ಬೆರೆಯುತ್ತಾರೆ. ನಮಗೆ ಅಂಥ ಪರಿಸ್ಥಿತಿಗಳು ಇಲ್ಲಿ ಇಲ್ಲ. ವಿದೇಶಿ ರಾಷ್ಟ್ರಗಳಲ್ಲಿ ಕಾರ್ಮಿಕರ ಸಂಘಗಳು ಮಹಾಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅವರ ಪ್ರತಿನಿಧಿಗಳು ಸಂಸತ್ತು ಮತ್ತು ಸಚಿವ ಸಂಪುಟ ಎಂಬ ಸಂಸ್ಥೆಗಳನ್ನು ಪ್ರವೇಶಿಸಿದ್ದಾರೆ ಹಾಗೂ ಅವರು ತಮ್ಮ ವರ್ಗದ ಆಸಕ್ತಿಗಳ ಬಗ್ಗೆ ಸೂಕ್ತ ಲಕ್ಷ್ಯ ವಹಿಸುತ್ತಾರೆ".[1] ಶಾಹುರವರು ಯೂರೋಪಿನ ಕಾರ್ಮಿಕರ ನಿದರ್ಶನವನ್ನು ಅನುಸರಿಸಲು ಭಾರತದ ಕಾರ್ಮಿಕರು ಒಗ್ಗಟ್ಟಾಗಬೇಕು ಹಾಗೂ ತಮ್ಮೊಂದಿಗೆ ಒಪ್ಪಂದಕ್ಕೆ ಬರಲು ಬಲಿಷ್ಠ ಬಂಡವಾಳಗಾರರನ್ನು ಬಗ್ಗಿಸಲು ಸಾಕಷ್ಟು ಬಲ ಗಳಿಸಿಕೊಳ್ಳಬೇಕೆಂದು ಮನವಿಮಾಡಿಕೊಂಡರು. ಸಂಸತ್ತಿನ ಸಚಿವಸಂಪುಟಗಳಲ್ಲಿರುವ ಕಾರ್ಮಿಕ ಪ್ರತಿನಿಧಿಗಳಿಗೆ ಪ್ರಭಾವ ಬೀರುವ ಶಾಹುರವರ ಪ್ರಾಸಂಗಿಕ ಪ್ರಸ್ತಾವನೆ ಸೂಚಿತವಾಗಿತ್ತು. ಕಾರ್ಮಿಕರ ಪ್ರತಿನಿಧಿಗಳು ಭವಿಷ್ಯದಲ್ಲಿ ಭಾರತದ ಸಂವಿಧಾನಿಕ ಜನತಂತ್ರದಲ್ಲಿ ಬಲವಾದ ಪ್ರಭಾವ ಬೀರಲು ಮತ್ತು ಕಾರ್ಮಿಕರ ಈ ಗುರಿಯನ್ನು ಸಾಧಿಸಲು ಎಚ್ಚರಗೊಳ್ಳಬೇಕು ಮತ್ತು ಕೂಡಲೆ ತಮ್ಮ ಪ್ರಯತ್ನಗಳನ್ನು ಪ್ರಾರಂಭಿಸಬೇಕೆಂದು ಸೂಚಿಸಲು ಶಾಹು ಬಯಸಿದ್ದರು. ಅಂತರ್‌ರಾಷ್ಟ್ರೀಯ ರಾಜಕಾರಣದಲ್ಲಿ ಕಾರ್ಮಿಕ ಶಕ್ತಿಯ ಪ್ರವರ್ಧಮಾನವು ಇಡೀ ವಿಶ್ವದಲ್ಲಿ ಜನತಾಂತ್ರಿಕ ಸರಕಾರಗಳು ಕಾರ್ಮಿಕ ವರ್ಗದ ಪ್ರಭಾವಕ್ಕೆ ಒಳಗಗುತ್ತಿರುವುದು ಮತ್ತು ಭಾರತದಲ್ಲಿ ಮುಂಬರುವ ಜನತಂತ್ರ ಈ ಪ್ರಭಾವದಿಂದ ಸುಮ್ಮನೆ ದೂರ ಉಳಿಯಲಾರದೆಂದು ಅವರು ಭಾವಿಸಿದ್ದರು.

ಈ ಸಭೆಯ ನಂತರ ಎರಡು ವಾರಗಳಲ್ಲಿ ಮತ್ತೊಂದು ಕಾರ್ಮಿಕರ ಸಭೆಯಲ್ಲಿ ತಮ್ಮ ಅಭಿಪ್ರಾಯವನ್ನು ಪ್ರಸ್ತಾಪಿಸುತ್ತಾ ಅವರು ಹೇಳುತ್ತಾರೆ: "ಪಶ್ಚಿಮದ ರಾಷ್ಟ್ರಗಳಲ್ಲಿ ಬಂಡವಾಳಗಾರರು ಮತ್ತು ಕಾರ್ಮಿಕರ ಎರಡು ಗುಂಪುಗಳ ನಡುವೆ ಜಗಳ ನಡೆಯುತ್ತಿತ್ತೆಂದು ನಾನು ಈಗಾಗಲೇ ಹೇಳಿದ್ದೇನೆ. ವಿಶ್ವಯುದ್ಧದ ಪರಿಣಾಮವಾಗಿ ಬಹಳಷ್ಟು ಸಂದರ್ಭಗಳಲ್ಲಿ ಆಡಳಿತವು ಕಾರ್ಮಿಕ ಪಕ್ಷಗಳ ಮೇಲೆ ಅವಲಂಬಿಸಿದೆ. ರಷಿಯಾ ಮತ್ತು ಜರ್ಮನಿಗಳು ಎರಡು ಪರಿಪೂರ್ಣ ರಾಜ–ಪ್ರಭುತ್ವದ ಅಧಿಕಾರಗಳು. ಇವುಗಳನ್ನು ಕಾರ್ಮಿಕ ಪಕ್ಷಗಳ ನೇತೃತ್ವದಲ್ಲಿ ಗಣರಾಜ್ಯಗಳನ್ನಾಗಿ ಮಾರ್ಪಡಿಸಲಾಗಿದೆ. ಇಂಗ್ಲೆಂಡಿನಲ್ಲಿ ಸಹ ಲೇಬರ್ ಪಕ್ಷವು(ಕಾರ್ಮಿಕ ಪಕ್ಷ) ಸಹ ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳುತ್ತಿದೆ. ತಟಸ್ಥ ದೇಶಗಳಾದ ಹಾಲೆಂಡ್ ಸಹ ಈ ಅಲೆಯಿಂದ ಪ್ರಭಾವಕ್ಕೊಳಗಾಗುತ್ತಿದೆ. ವಯಸ್ಕರ ಮತದಾನ ಒಟ್ಟರ್ಥದಲ್ಲಿ ಸಾಮಾನ್ಯ ಜನರ ಆಶೆ–ಆಕಾಂಕ್ಷೆಗಳಿಗೆ ಅನುಗುಣವಾಗಿ ಆಡಳಿತವನ್ನು ನಡೆಸಲಾಗುವುದು. ಅಲ್ಪಸಂಖ್ಯಾತರ ಅಧಿಕಾರವನ್ನು ಕಡಿಮೆಗೊಳಿಸಲಾಗುವುದು. ಇದು ಅನಿವಾರ್ಯ. ನಾವು ಸಹ ಅಂತಹ ಹಕ್ಕುಗಳಿಗೆ ಪ್ರಯತ್ನಿಸಬೇಕು. ಅದಕ್ಕಾಗಿ ನಾವು ದೃಢವಾಗಿ ಮತ್ತು ನಿಸ್ವಾರ್ಥರಾಗಿ ಪ್ರಯತ್ನಿಸಬೇಕಾಗಿದೆ".[2] ಈ ಹೇಳಿಕೆಯ ಬಗ್ಗೆ ವ್ಯಾಖ್ಯಾನ ಮಾಡುತ್ತಾ ಕಮ್ಯುನಿಸ್ಟ್ ಚಿಂತಕ ಕಾಮ್ರೇಡ್ ಪ್ರಭಾಕರ ವೈದ್ಯ ಅವರು ಹೇಳಿದ್ದಾರೆ: "ಶಾಹು, ರಷಿಯಾ ಮತ್ತು ಜರ್ಮನಿಗಳ ಬಗ್ಗೆ ಹೇಳುತ್ತಾ ಮತ್ತು ಕಾರ್ಮಿಕ ವರ್ಗ ಜ್ಹಾರ್ ಮತ್ತು ಕೈಸರ್‌ರ ದಬ್ಬಾಳಿಕೆಯನ್ನು ಕಿತ್ತುಹಾಕಿದ್ದ ಬಗ್ಗೆ ಹೇಳಿಕೆ ನೀಡಿ ಸ್ವಾಗತಿಸಿದ್ದಾರೆಂಬುದು ಬಹಳ ಮಹತ್ತರವಾದುದು. ಸಂಸ್ಥಾನದ ಮಹಾರಾಜರು ಅಂತಹ ಹೇಳಿಕೆ ನೀಡಿರುವುದು ವಿಶೇಷವಾಗಿ ಸ್ತುತ್ಯಾರ್ಹ.[3]

ಗರಿಷ್ಠ ಪ್ರಮಾಣದ ಕಾರ್ಮಿಕ ವರ್ಗವನ್ನು ಶೋಷಿಸುತ್ತಿರುವ ಯೂರೋಪಿನ ಬಂಡವಾಳವಾದದ ಪ್ರವೃತ್ತಿಯು ಭಾರತದ ಗಿರಣಿ ಮತ್ತು ಕಾರ್ಖಾನೆಗಳ ಒಳಹೊಕ್ಕು ಈಗಾಗಲೆ ಬಡವರಾಗಿರುವ ಕಾರ್ಮಿಕರನ್ನು ಮತ್ತಷ್ಟು ದುಸ್ಥಿತಿಗೆ ತಳ್ಳುತ್ತಿದೆಯೆಂದು ಶಾಹು ಹೇಳಿದರು. ಈ ಪರಿಸ್ಥಿತಿಯನ್ನು ಸುಧಾರಿಸಲು ಕಾರ್ಮಿಕರು ಒಗ್ಗಟ್ಟಾಗಿ ಪ್ರಬಲವಾದ ಮತ್ತು ನಿಸ್ವಾರ್ಥ ಪ್ರಯತ್ನಗಳನ್ನು ಮಾಡಬೇಕಾಗಿದೆ.[4] ಅದನ್ನು ಜಾರಿಗೊಳಿಸುವ ಸಲುವಾಗಿ ತಮ್ಮ ಒಳಿತಿಗಾಗಿ ಕಾರ್ಮಿಕರು ಬಲವಾದ ಸಂಘಟನೆಯನ್ನು ಕಟ್ಟಬೇಕು ಮತ್ತು ಸ್ವಾವಲಂಬಿ ಮಂತ್ರವನ್ನು ಅನುಸರಿಸಬೇಕೆಂದು ಅವರು ಸಲಹೆ ನೀಡಿದರು. ಅವರು ಹೇಳುತ್ತಾರೆ: "ಇಂಗ್ಲೆಂಡಿನಲ್ಲಿ ಕಾರ್ಮಿಕರು ಕಾರ್ಮಿಕ ಸಂಘಟನೆಗಳನ್ನು ಕಟ್ಟಿದರು ಮತ್ತು ತಮ್ಮ ಏಳಿಗೆಗಾಗಿ ಸ್ವಾವಲಂಬಿ ಮಾರ್ಗವನ್ನು ಅನುಸರಿಸಿದರು. ಹಾಗೆಯೇ ನಾವು ಸಹ ಸುಸಂಘಟಿತ ಕಾರ್ಮಿಕ ಸಂಘಟನೆಗಳನ್ನು ಕಟ್ಟಬೇಕು. ನಮ್ಮ ಮಕ್ಕಳಿಗೆ ಶಿಕ್ಷಣ ನೀಡುವ ಮೂಲಕ ನಾವು ಸ್ವತಃ ಸುಧಾರಿಸಬೇಕು ಮತ್ತು ನಮ್ಮ ಆರೋಗ್ಯ ಸುಸ್ಥಿರ ವಾಗಿರುವಂತೆ ಖಾತರಿಪಡಿಸಿಕೊಳ್ಳಬೇಕು. ಬೇರೆಯವರು ನಮ್ಮ ಕಲ್ಯಾಣಕ್ಕಾಗಿ ಪ್ರಯತ್ನ ಮಾಡುವವರೆಂದು ನಿರೀಕ್ಷಿಸುವುದು ಸ್ಪಷ್ಟವಾಗಿ ಕೀಳುಮಟ್ಟಕ್ಕೆ ಇಳಿಸಿಕೊಂಡಂತೆಯೆ. ವಿದೇಶಿ ಧರ್ಮದಿಂದ ನಮ್ಮ ಧರ್ಮವನ್ನು ಗಂಡಾಂತರಕ್ಕೆ ಗುರಿಯಾದಾಗ ಛತ್ರಪತಿ ಶಿವಾಜಿ ಮಹಾರಾಜರು ತಮ್ಮ ಜನತೆಯ ಸಹಾಯದಿಂದ ಅದನ್ನು ಕಿತ್ತು ಬಿಸಾಕಿದರು".[5] ಸ್ವಾವಲಂಬನೆ ಸ್ವ–ವಿಮೋಚನೆಗೆ ಎಡೆಮಾಡಿಕೊಡುತ್ತದೆಂಬುದನ್ನು ನಿದರ್ಶಿಸಲು ಇತಿಹಾಸದಿಂದ ಶಿವಾಜಿ ಮಹಾಶಯನ ಉದಾಹರಣೆಯನ್ನು ಅವರು ಉದ್ಧರಿಸಿದರು. ಮತ್ತೊಂದು ಸಂದರ್ಭದಲ್ಲಿ ಕಾರ್ಮಿಕರು ಐಕ್ಯತೆಯನ್ನು, ಪರಸ್ಪರ ಪ್ರೀತಿಯನ್ನು ಮತ್ತು ವಿಶ್ವಾಸವನ್ನು ಮತ್ತು ನಿರಂತರವಾದ ಪ್ರಯತ್ನಗಳನ್ನು ಮಾಡುತ್ತಿರಬೇಕು ಮತ್ತು ಇವೇ ಅಭಿವೃದ್ಧಿ ಕಡೆಗಿನ ಹೋರಾಟಕ್ಕೆ ಸಾಧನಗಳಾಗಿವೆ ಮತ್ತು ತಮ್ಮ ಪ್ರಗತಿಗೆ ಸಹಕಾರವೇ ಸಲಕರಣೆಯೆಂದು ಅವರು ಹೇಳಿದರು. 'ಮುಗ್ಧರು ಮತ್ತು ಅಶಿಕ್ಷಿತ' ಕಾರ್ಮಿಕ ಸಹಕಾರದಲ್ಲಿ ಕ್ರಮಬದ್ಧವಾಗಿ ಕೆಲಸಮಾಡುವುದನ್ನು ಕಲಿಯುತ್ತಾನೆ. ಆದ್ದರಿಂದ ಕಾರ್ಮಿಕರು ಪ್ರತಿಯೊಂದು ಕಾರ್ಖಾನೆಯಲ್ಲಿ 'ಸಹಕಾರಿ ಪ್ರಾಥಮಿಕ ಶಾಲೆಗಳಾದ ಸಹಕಾರಿ ಪತ್ತಿನ ಸಂಘಗಳನ್ನು ಸ್ಥಾಪಿಸಬೇಕು'.[6]

ಶಾಹುರವರು ಮೊದಲನೇ ಕಾರ್ಮಿಕ ಸಭೆಯಲ್ಲಿ ಕಾರ್ಮಿಕರು ಆಸಕ್ತಿವಹಿಸಿ ಕಾರ್ಮಿಕ ಸಂಘಗಳನ್ನು ಸ್ಥಾಪಿಸಲು ಮನವಿ ಮಾಡಿಕೊಂಡಿದ್ದರು. ತತ್ಪರಿಣಾಮವಾಗಿ ಸಿ. ಕೆ. ಬೋಲೆ ಮತ್ತು ಅವರ ಸಹವರ್ತಿಗಳು 'ಜನರ ಸಂಘ' ಎಂಬ ಸಂಘಟನೆಯನ್ನು ಬಾಂಬೆಯಲ್ಲಿ ಕಾರ್ಮಿಕರ ಸಂಘಟನೆಯನ್ನು ಸ್ಥಾಪಿಸಿದರು. ಶಾಹುರವರ ಎರಡನೇ ಕಾರ್ಮಿಕ ಸಭೆಯನ್ನು ಈ ಸಂಸ್ಥೆಯೇ ಸಂಘಟಿಸಿತ್ತು. ಕಾರ್ಮಿಕರ ಸಂಘವನ್ನು ಕಟ್ಟಿದ್ದರ ಬಗ್ಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾ ಶಾಹುರವರು ಹೇಳಿದರು: "ಇಂಗ್ಲೆಂಡಿನಲ್ಲಿ ಬಂಡವಾಳವಾದಿಗಳು ಮತ್ತು ಕಾರ್ಮಿಕರು ಎಂಬ ಎರಡು ಗುಂಪುಗಳು ಬಲಿಷ್ಠವಾಗಿವೆ. ಇಲ್ಲಿಯವರೆಗೆ, ಅವುಗಳ ಹಿತಾಸಕ್ತಿಗಳು ಪರಸ್ಪರ ವಿರೋಧಿಸುತ್ತಿವೆ. ವಾಸ್ತವಿಕವಾಗಿ, ಪ್ರತಿಯೊಂದು ಗುಂಪು ತಮ್ಮ ನ್ಯಾಯಬದ್ಧ ಹಕ್ಕುಗಳನ್ನು ವಿರೋಧಿಸುವಲ್ಲಿ ಹಿಂಜರಿಯುತ್ತಾರೆ. ಯಾವುದೇ ಕಿತ್ತಾಟಕ್ಕೆ ಅವಕಾಶವಿಲ್ಲ. ಉನ್ನತ ವರ್ಗಗಳು ಈ ಸಂಗತಿಯನ್ನು ಒಪ್ಪಿಕೊಂಡಾಗ ಮತ್ತು ದಮನಿತರು ಮುಂದುವರಿಯಲು ಅವಕಾಶ ಪಡೆದಾಗ ಆ ದಿನ ಶುಭದಿನವಾಗಿರುತ್ತದೆ. ಆ ದಿನ ಬೇಗನೆ ಬರುವುದೆಂದು ನಾನು ಭಾವಿಸುತ್ತೇನೆ".[7]

ಶಾಹುರವರು ಕಾರ್ಮಿಕ ವರ್ಗಗಳ ಬಗ್ಗೆ ವ್ಯಕ್ತಪಡಿಸಿದ ಎರಡು ಅಂಶಗಳ ಬಗ್ಗೆ ಪರಿಶೀಲಿಸುವುದು

ಅಗತ್ಯ. ಭಾರತದಲ್ಲಿ ಬಹಳ ಹಿಂದಿರುವ ವರ್ಗ ಕೃಷಿಕ ವರ್ಗ, ಕಾರ್ಮಿಕ ವರ್ಗ ಈ ರೈತಾಪಿ ವರ್ಗದಿಂದ ಭಿನ್ನವಾಗಿಲ್ಲ. ಕಾರ್ಖಾನೆಗಳಲ್ಲಿ ಕೆಲಸಮಾಡುತ್ತಿರುವ ಕಾರ್ಮಿಕನು ಮೂಲತಃ ಕೃಷಿಕನಾಗಿದ್ದನು. ಈ ಎರಡು ವರ್ಗಗಳ ಆಸಕ್ತಿಗಳನ್ನು ಒಂದು ಸಮಗ್ರವೆಂದು ಪರಿಗಣಿಸಬೇಕು.[8] ಗ್ರಾಮಾಂತರದ ಜನರು ತಮ್ಮ ಜೀವನೋಪಾಯಕ್ಕಾಗಿ ಕೆಲಸ ಹುಡುಕಿಕೊಂಡು ಹಳ್ಳಿಗಳಿಂದ ನಗರಗಳಿಗೆ ಹೋಗುವುದಕ್ಕೆ ಸಂಬಂಧಿಸಿದ್ದು ಶಾಹುರವರ ಎರಡನೆಯ ನಿರೀಕ್ಷಣೆ. ರೈತನು ತನ್ನ ಭೂಮಿಯಿಂದ ಉತ್ಪಾದಿಸಿದ್ದು ತನಗೇ ಸಾಕಾಗಿಲ್ಲದ್ದರಿಂದ ಅವನು ಹಳ್ಳಿಯಿಂದ ರೈತನಾಗಿ ಪಟ್ಟಣಕ್ಕೆ (ನಗರ) ಬಂದು ಕಾರ್ಮಿಕನಾಗುತ್ತಾನೆ. ಈ ಪರಿಸ್ಥಿತಿಯು ದೇಶದ ಅಭಿವೃದ್ಧಿಗೆ ಲಾಭದಾಯಕ ಮಾತ್ರವಲ್ಲ. ಆದರೆ ಇತರೆ ವಿಷಯಗಳಲ್ಲಿ ಅಪಾಯಕಾರಿಯೆಂದು ಶಾಹು ಭಾವಿಸುತ್ತಾರೆ. ಅವರು ಹೇಳುತ್ತಾರೆ: ಹಳ್ಳಿಗಳಲ್ಲಿ ಕೃಷಿಯ ಕೆಲಸವು ಹೆಚ್ಚು ಆಕರ್ಷಣೀಯವಾಗಿರಬೇಕು. ಅದು ಹಳ್ಳಿಯಲ್ಲಿ ಗರಿಷ್ಠ ಜನರಿಗೆ ಉದ್ಯೋಗವನ್ನು ಒದಗಿಸಬೇಕು ಮತ್ತು ಹಾಗೆ ಕೆಲಸ ಒದಗಿಸಿದ ನಂತರ ಬಿಟ್ಟುಹೋದ ಜನರಿಗೆ ಉದ್ಯೋಗವನ್ನು ನಗರ ಕೇಂದ್ರಗಳಲ್ಲಿ ಒದಗಿಸಬೇಕು. ಇದು ಸಂಭವಿಸಿದರೆ ಅದು ಹಳ್ಳಿಗಳ ಅಭಿವೃದ್ಧಿಯನ್ನು ಮಾಡುವುದಲ್ಲದೆ, ನಗರ ಕೇಂದ್ರಗಳ ಅಸಮತೋಲನ ಮತ್ತು ಅನಾರೋಗ್ಯದ ಸಾಧ್ಯತೆಯನ್ನು ನಿವಾರಣೆಮಾಡುತ್ತದೆ.[9]

ಶಾಹುರವರ ಚಿಂತನೆ ಆಶ್ಚರ್ಯಕರವಾಗಿ ಆಧುನಿಕ ಮತ್ತು ಮೂಲಭೂತವಾದ ಮಹತ್ವದ್ದು. ಕಾಲ ಬದಲಾಗಿದೆ ಮತ್ತು ಬಹುಶಃ ಇಂದು ನಾವು ಈ ಚಿಂತನೆಗಳಲ್ಲಿ ಅಂತಹ ನವೀನತೆಯನ್ನು ಕಾಣುತ್ತಿಲ್ಲ. ಆದರೆ ಶಾಹುರವರ ಯುಗದ ಸ್ಥಿತಿಗತಿಗಳ ಬಗ್ಗೆ ಯೋಚಿಸಿದಾಗ ಅವರ ಚಿಂತನೆಗಳು ಆ ಕಾಲಕ್ಕೆ ಬಹಳ ಮುಂದಿದ್ದವೆಂದು ಸ್ಪಷ್ಟವಾಗುತ್ತದೆ. ಆ ದಿನಗಳಲ್ಲಿ ಮಹಾರಾಷ್ಟ್ರದಲ್ಲಿನ ಕಾರ್ಮಿಕ ಸಂಘಟನೆಗಳು ಮಾತ್ರವಲ್ಲದೆ ಇಡೀ ದೇಶದಲ್ಲಿ ಭದ್ರವಾಗಿ ತಳ ಊರಬೇಕಾಗಿತ್ತು. ಮೊಟ್ಟಮೊದಲ ಅಖಿಲಭಾರತ ಕಾರ್ಮಿಕ ಸಂಘಟನೆಯನ್ನು ೧೯೨೦ರಲ್ಲಿ ಸ್ಥಾಪಿಸಲಾಯಿತು. ಮತ್ತು ಅದರ ಮೊದಲ ಅಧ್ಯಕ್ಷರಾಗಿ ಕಾಂಗ್ರೆಸ್ಸಿನ ಮಹಾನಾಯಕ ಲಾಲಾ ಲಜಪತರಾಯರನ್ನು ಆಯ್ಕೆ ಮಾಡಲಾಯಿತು. ಭಾರತದ ಕಮ್ಯುನಿಸ್ಟ್ ಪಕ್ಷ ೧೯೨೫ರಲ್ಲಿ ಸ್ಥಾಪನೆಗೊಂಡಿತು ಮತ್ತು ಇದೇ ಸುಮಾರಿಗೆ ಕಾಮ್ರೇಡ್ ಡಾಂಗೆ ಮತ್ತು ಕಾಮ್ರೇಡ್ ಮಿರಜ್‌ಕರ್ ಅವರು ಕಾರ್ಮಿಕ ನಾಯಕರಾಗಿ ಪ್ರಖ್ಯಾತಿಗೆ ಬಂದರು. ಈ ಘಟನೆಗಳು ನಡೆಯುವುದಕ್ಕೆ ಮೊದಲು ಶಾಹುರವರ ಈ ಚಿಂತನೆಗಳನ್ನು ಪರಿಗಣಿಸಿದಾಗ ಅವುಗಳ ಸೋಪಜ್ಞತೆ ಮತ್ತು ಕ್ರಾಂತಿಕಾರಿ ಸ್ವಭಾವ ಸ್ಪಷ್ಟವಾಗುತ್ತದೆ. ವಿಶೇಷವಾಗಿ ವರ್ಗಸಂಘರ್ಷದ ಅರ್ಥ ಮತ್ತು ಅವರೆಲ್ಲ ಒಗ್ಗಟ್ಟಾಗಬೇಕೆಂದು ಸಲಹೆ ಹೇಳಿದ ಭಾರತದ ಮೊದಲ ರಾಜ ಸಂಸ್ಥಾನದ ಅಪರೂಪದ ನಾಯಕರಾಗಿದ್ದರು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಒಬ್ಬ ಸಾಮಂತರಾಜರು ರಷಿಯಾ ಮತ್ತು ಜರ್ಮನಿಗಳ ಕಾರ್ಮಿಕರ ಕ್ರಾಂತಿಗಳ ಸಂದರ್ಭದಲ್ಲಿ ಕಾರ್ಮಿಕರ ಭವಿಷ್ಯದ ಜನತಂತ್ರದ ಕನಸನ್ನು ಭಾರತದ ಕಾರ್ಮಿಕರಿಗೆ ನೀಡುವುದು ಇಂಡಿಯಾದ ಇತಿಹಾಸದಲ್ಲಿ ಅಭೂತಪೂರ್ವವಾದ ಘಟನೆಯಾಗಿದೆ.

---

೨೮

# ಕೃಷಿ, ಕೈಗಾರಿಕೆ ಮತ್ತು ಸಹಕಾರ

ಇಂದು ಕೊಲ್ಹಾಪುರ ಮಹಾರಾಷ್ಟ್ರದಲ್ಲಿ ಕೃಷಿ ಉದ್ಯಮ, ಕೈಗಾರಿಕೆ ಮತ್ತು ಸಹಕಾರ ಪದ್ಧತಿಯಲ್ಲಿ ಒಂದು ಮುಂಚೂಣಿಯ ಜಿಲ್ಲೆಯಾಗಿದೆ. ಸ್ವಾತಂತ್ರ್ಯದ ನಂತರ ಇದರ ಅಭಿವೃದ್ಧಿಯ ಪ್ರಕ್ರಿಯೆ ಪ್ರಾರಂಭವಾಯಿತೆಂದಲ್ಲ. ಇದರ ಬುನಾದಿಯನ್ನು ಸ್ವಾತಂತ್ರ್ಯಪೂರ್ವ ಶಾಹುರವರ ಆಡಳಿತದಲ್ಲಿ ಹಾಕಲಾಗಿತ್ತು. ಆ ದಿನಗಳಲ್ಲಿ ಕೊಲ್ಹಾಪುರದ ಸಂಸ್ಥಾನದಲ್ಲಿ ಹಸಿರುಕ್ರಾಂತಿಯು ಪ್ರಾರಂಭವಾದದ್ದು ಮಹಾರಾಷ್ಟ್ರದಲ್ಲಿ ಅಂತಹ ಮೊದಲ ವಿದ್ಯಮಾನವಾಗಿತ್ತು. ಅದು ಶಾಹುರವರ ದೂರದೃಷ್ಟಿ ಮತ್ತು ಅವರ ಪ್ರಗತಿಪರ ಕಲ್ಯಾಣಕಾರಿ ನೀತಿಗಳ ಫಲವಾಗಿತ್ತು. ಕೊಲ್ಹಾಪುರ ಸಂಸ್ಥಾನದ ಜನಸಂಖ್ಯೆಯಲ್ಲಿ ಬಹುಸಂಖ್ಯಾತರು ಕೃಷಿಕರಾಗಿದ್ದರು. ಸಂಸ್ಥಾನದ ರೈತರು, ದೇಶದ ಬೇರೆ ಬೇರೆ ಕಡೆಗಳಲ್ಲಿರುವಂತೆಯೆ, ಮೌಢ್ಯ ಮತ್ತು ಬಡತನದ ನೋವು, ಬರಗಾಲ ಅಥವಾ ಪ್ಲೇಗ್, ನೈಸರ್ಗಿಕ ವಿಕೋಪ ಸಂಭವಿಸಿದಾಗ ಮತ್ತಷ್ಟು ತೀವ್ರವಾಗುತ್ತದೆ.

## ಭಾರೀ ನೀರಾವರಿ ಧೋರಣೆ

ತಮ್ಮ ಪಟ್ಟಾಭಿಷೇಕವಾದ ಕೂಡಲೆ ತಮ್ಮ ಆಡಳಿತದ ಮೊದಲ ಘಟ್ಟದಲ್ಲಿ ಈ ಪ್ರಕೃತಿ ವಿಕೋಪಗಳಿಂದ ತಮ್ಮ ಪ್ರಜೆಗಳು ನೋವುಂಡ ಅನುಭವವನ್ನು ಶಾಹು ಕಣ್ಣಾರೆ ಕಂಡಿದ್ದರು. ಜನರಿಗೆ ಆಹಾರ ಧಾನ್ಯಗಳನ್ನು ಮತ್ತು ದನಕರುಗಳಿಗೆ ಮೇವನ್ನು ಒದಗಿಸುವ ಮೂಲಕ ಜನರನ್ನು ಮತ್ತು ದನಕರುಗಳನ್ನು ಸಾವಿನ ದವಡೆಯಿಂದ ಪಾರುಮಾಡಲು ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳುವ ತಮ್ಮ ಕರ್ತವ್ಯಗಳು ಶಾಹು ಮಾಡಿದರು. ಆದರೆ ಅವರು ತೃಪ್ತರಾಗಿರಲಿಲ್ಲ. ಅವರು ಬರಗಾಲದ ವಿಕೋಪವನ್ನು ಶಾಶ್ವತವಾಗಿ ನಿವಾರಣೆಮಾಡಲು ಮೂಲಭೂತ ಕ್ರಮಗಳನ್ನು ಜಾರಿಗೊಳಿಸಲು ನಿರ್ಧರಿಸಿದರು. ಮತ್ತು ೧೯೦೨ರಲ್ಲಿ ತಮ್ಮ ಸಂಸ್ಥಾನಕ್ಕೆ ಅಭೂತಪೂರ್ವವಾದ 'ಭಾರಿ ನೀರಾವರಿ ಧೋರಣೆ'ಯನ್ನು ಘೋಷಿಸಿದರು. ಬೇಗನೇ ಪ್ರತ್ಯೇಕವಾದ ನೀರಾವರಿ ಇಲಾಖೆಯನ್ನು ಸ್ಥಾಪಿಸಿದರು ಮತ್ತು ಒಬ್ಬ ನೀರಾವರಿ ಅಧಿಕಾರಿಯನ್ನು ನೇಮಕಮಾಡಿದರು. ಈ ಇಲಾಖೆಯು ನೀರಾವರಿ ದೃಷ್ಟಿಯಿಂದ ಸಂಸ್ಥಾನದಲ್ಲಿ ಪ್ರತಿಯೊಂದು ಹಳ್ಳಿಯನ್ನು ವಿವರವಾಗಿ ಸರ್ವೆಮಾಡಿತು. ಹೊಸ ಮತ್ತು ಹಳೆಯ ಬಾವಿಗಳನ್ನು, ಚಿಕ್ಕ ಮತ್ತು ದೊಡ್ಡ ಕೆರೆಗಳನ್ನು, ಚಿಕ್ಕ ಮತ್ತು ದೊಡ್ಡ ಒಡ್ಡುಗಳನ್ನು ಪಟ್ಟಿಮಾಡಲಾಯಿತು ಮತ್ತು ಅವುಗಳ ಪುನರ್‌ನಿರ್ಮಾಣದ ಕೆಲಸಗಳನ್ನು ತೆಗೆದುಕೊಳ್ಳಲಾಯಿತು. ಹೊಸ ಬಾವಿಗಳ, ಹೊಸ ಕೆರೆಗಳ ಮತ್ತು ಚಿಕ್ಕ ಒಡ್ಡುಗಳ ಯೋಜನೆಗಳ ಜಾರಿಯ ಕೆಲಸಗಳನ್ನು ಸೂಕ್ತ ಆಸಕ್ತಿಯಿಂದ ಪ್ರಾರಂಭಿಸಲಾಯಿತು.[1] ಮಳೆಯ ನೀರಿನ ಪ್ರವಾಹವನ್ನು ನಿರ್ಬಂಧಿಸುವ ಮತ್ತು ಸಂಗ್ರಹಿಸುವ ಕೆಲಸವನ್ನು ಮಾಡಲಾಯಿತು ಮತ್ತು ಅಂತಿಮವಾಗಿ ಶಾಹುರವರು

ಇತರೆ ಯೋಜನೆಗಳಲ್ಲಿ ಕಣ್ಮಣಿಯಾದ ಹೆಮ್ಮೆಯ ಯೋಜನೆಯನ್ನು ತೆಗೆದುಕೊಂಡರು. ಕೊಲ್ಹಾಪುರದ ಪಶ್ಚಿಮದ ಸಹ್ಯಾದ್ರಿ ಶ್ರೇಣಿಯ ಪರ್ವತಗಳಲ್ಲಿರುವ ಭೋಗವತಿ ನದಿಯ ಹರಿವನ್ನು ತಡೆಯಲು ಒಂದು ಆಕಾಂಕ್ಷೆಯ ಯೋಜನೆಯನ್ನು ತೆಗೆದುಕೊಳ್ಳಲಾಯಿತು. ಈ ಯೋಜನೆಯು (ಅಣೆಕಟ್ಟು) ಕೊಲ್ಹಾಪುರದ ಜೀವನಾಡಿ ಯಾಗಿತ್ತು.

**ರಾಧಾನಗರಿ ಅಣೆಕಟ್ಟು**

೧೯೦೨ರಲ್ಲಿ ತಮ್ಮ ಯೂರೋಪಿನ ಪ್ರವಾಸದಲ್ಲಿ ಶಾಹುರವರು ಯೂರೋಪಿನಲ್ಲಿದ್ದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ಚೆನ್ನಾಗಿ ಪರಿವೀಕ್ಷಿಸಿದ್ದರು. ಯೂರೋಪಿನವರು ಲಭ್ಯವಿರುವ ಪ್ರತಿಯೊಂದು ನೈಸರ್ಗಿಕ ಸಂಪನ್ಮೂಲವನ್ನು ತಮ್ಮ ಭೌತಿಕ ಸುಧಾರಣೆಗಾಗಿ ಬಳಸಿದ್ದನ್ನು ಕಂಡು ಶಾಹು ತುಂಬಾ ಪ್ರಭಾವಿತರಾಗಿದ್ದರು. ಅದು ಭಾರತದಲ್ಲಿ ಏಕಾಗಬಾರದು? ನಾವೇಕೆ ಯೂರೋಪಿನ ಮಾದರಿಯನ್ನು ಅನುಸರಿಸಬಾರದು? ಶಾಹುರವರು ಈ ಚಿಂತನೆಗಳಿಂದ ತುಂಬಾ ಪರವಶಗೊಂಡರು.[2] ಸಹ್ಯಾದ್ರಿ ಬೆಟ್ಟಗಳ ಶಿಖರಗಳು ನೂರಾರು ಇಂಚುಗಳ ಮಳೆಯನ್ನು ಸ್ವೀಕರಿಸುತ್ತವೆ ಮತ್ತು ಅಲ್ಲಿಂದ ಹುಟ್ಟುವ ನದಿಗಳು ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ ಮತ್ತು ನೀರಿನ ಸಂಪತ್ತು ಸಮುದ್ರಕ್ಕೆ ಸೇರುತ್ತದೆ. ಮಾನಸೂನ್ (ಮುಂಗಾರು) ಮುಗಿದ ಕೂಡಲೆ ನದಿಗಳು ಒಣಗಿಹೋಗುತ್ತವೆ. ಸಹ್ಯಾದ್ರಿ ಪರ್ವತಗಳ ಶ್ರೇಣಿಯಲ್ಲಿ ಸುರಿಯುವ ಮಳೆಯ ನೀರನ್ನು ತಡೆದರೆ ಮತ್ತು ದಕ್ಷಿಣ ಪ್ರಸ್ಥಭೂಮಿಯ ಕಪ್ಪುನೆಲಕ್ಕೆ ನೀರು ಉಣಿಸಿದರೆ ಭೂಮಿ ಹಸಿರಾಗುವುದಿಲ್ಲವೆ ಮತ್ತು ನಿಜವಾದ ಅರ್ಥದಲ್ಲಿ ಸಂಪದ್ಭರಿತವಾಗುವುದಿಲ್ಲವೆ? ಮತ್ತೆ ಮತ್ತೆ ಸಂಭವಿಸುವ ಬರಗಾಲವನ್ನು ಎದುರಿಸಲು ಕೆಲವು ನದಿಗಳಿಗೆ ಭಾರಿ ಅಣೆಕಟ್ಟೆಗಳನ್ನು ಏಕೆ ಕಟ್ಟಬಾರದು? ದೃಢವಾದ ಇಚ್ಛಾಶಕ್ತಿಯಿದ್ದರೆ ಯಾವುದು ಅಸಾಧ್ಯವಾಗುವುದಿಲ್ಲ. ರಾಧಾನಗರಿಯ ಅಣೆಕಟ್ಟಿನ ಶಾಹುರವರ ಕನಸಿನ ಬೇರುಗಳು ಅಂತಹ ಆಲೋಚನೆಗಳಲ್ಲಿದ್ದವು.

ಅದು ಸಾಧಾರಣವಾದ ಕನಸಾಗಿರಲಿಲ್ಲ. ಇದು ಪುರಾಣದ ಶಿವಧನಸ್ಸು* ಕತೆಯಾಗಿತ್ತು. ಒಂದು ಚಿಕ್ಕ ಸಂಸ್ಥಾನವಾದ ಕೊಲ್ಹಾಪುರ ರಾಧಾನಗರಿಯಂಥ ದೊಡ್ಡ ಅಣೆಕಟ್ಟನ್ನು ತೆಗೆದುಕೊಳ್ಳುವುದು ಅಸಾಧ್ಯವಾದದ್ದು. ಇಂದಿನ ಒಂದು ಚಿಕ್ಕ ಜಿಲ್ಲೆ ಕೋಯ್ನಾದಂತಹ ಭಾರಿ ಯೋಜನೆಯನ್ನು ಕೈಗೊಳ್ಳುವಂತೆಯೆ (ಮಹಾರಾಷ್ಟ್ರದಲ್ಲಿ ಅತಿ ದೊಡ್ಡ ಅಣೆಕಟ್ಟೆ) ಶಾಹುರವರ ಯೋಜನೆಯು ಆ ದಿನಗಳಲ್ಲಿ ಅತಿ ದೊಡ್ಡ ಭಾರತದ ಅಣೆಕಟ್ಟೆಯಾಗಿತ್ತು. ಅಂತಹ ಭಾರಿ ಯೋಜನೆಯನ್ನು ಕೈಗೊಳ್ಳಲು ಶಾಹುರವರಿಗೆ ಸಿಂಹದಂತ ಹೃದಯವಿರಬೇಕಷ್ಟೆ. ಶಾಹು ಮಹಾಧೈರ್ಯ ಮತ್ತು ದೃಢವಾದ ಇಚ್ಛಾಶಕ್ತಿಯನ್ನು ಹೊಂದಿದ್ದರು. ಅದಕ್ಕೆ ಸಾರ್ವಜನಿಕ ಕಲ್ಯಾಣವೇ ಬೆನ್ನೆಲುಬಾಗಿತ್ತು. ಅವರು ಈ ಯೋಜನೆಯನ್ನು ತಮ್ಮ ಜೀವನದ ಮುಖ್ಯ ಹೊಣೆಯೆಂದು ಭಾವಿಸಿದರು. ತಮ್ಮ ಸ್ನೇಹಿತನಿಗೆ ಬರೆದ ಪತ್ರದಲ್ಲಿ ಅವರು ಹೀಗೆ ಹೇಳಿದ್ದಾರೆ: "ನಾನು ಈ ಯೋಜನೆಯನ್ನು ಪೂರೈಸಿದಾಗ ನನ್ನ ಜೀವನದ ಕೆಲಸ ಪೂರೈಸಿದಂತೆಯೆ". ತನ್ನ ಕನಸನ್ನು ಸಾಕಾರಗೊಳಿಸಲು ಶಾಹುರವರು ತನ್ನ ಎಲ್ಲಾ ಶಕ್ತಿ ಮತ್ತು ಸಂಪನ್ಮೂಲಗಳನ್ನು ಕ್ರೋಡೀಕರಿಸಿಕೊಂಡಿದ್ದರು. ಬ್ರಿಟಿಷ್ ಅಧಿಕಾರಿಯಾದ ಕರ್ನಲ್ ಫೆರಿಸ್ ಅವರು ನಿವೃತ್ತರಾಗಿ ಕೊಲ್ಹಾಪುರದಿಂದ ಇಂಗ್ಲೆಂಡಿಗೆ ಹೋದ

---

* ಇದು ಪುರಾಣಕತೆಯ ಶಿವಧನಸ್ಸು. ಅದನ್ನು ಮುರಿಯಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ.

ಸ್ನೇಹಿತನಿಗೆ ಒಂದು ಪತ್ರ ಬರೆದು ಹೀಗೆ ಹೇಳುತ್ತಾರೆ: "ನೀವು ನಮ್ಮನ್ನು ಬಿಟ್ಟು ಹೋದಾಗಿನಿಂದ ನಾನು ೨೦ ಕೆರೆಗಳನ್ನು ಕಟ್ಟಿಸಿದ್ದೇನೆ. ಆದರೆ ನನಗೆ ತೃಪ್ತಿಯಾಗಿಲ್ಲ. ಆದ್ದರಿಂದ ಈಗ ನಾನು ಒಂದು ದೊಡ್ಡ ನೀರಾವರಿ ಯೋಜನೆಯನ್ನು ಕೈಗೊಂಡಿದ್ದೇನೆ ಮತ್ತು ಆ ಕೆರೆ ಭಾರತದಲ್ಲಿಯೆ ಅತಿ ದೊಡ್ಡದಾಗಿದೆ. ನಾನು ನನ್ನ ಶಕ್ತಿಯನ್ನು ಅದಕ್ಕೆ ವಿನಿಯೋಗಿಸುತ್ತಿದ್ದೇನೆ. ಈಗ ಬಾಪುಸಾಹೇಬ ಮತ್ತು ನಾನೇ ನಿವೇಶನದ ಬಳಿ ಕೆಲಸ ಮಾಡುತ್ತಿದ್ದೇವೆ. ಅದು ಸಫಲವಾಗಬಹುದೆಂದು ನಾನು ಬಯಸುತ್ತಿದ್ದೇನೆ".[3]

ರಾಧಾನಗರಿಯ ಅಣೆಕಟ್ಟಿನ ಇತಿಹಾಸವು ಈ ಅಣೆಕಟ್ಟೆಯ ನಿರ್ಮಾಣಕ್ಕೆ ಶಾಹುರವರು ಅಪಾರವಾದ ಪ್ರಯತ್ನ ಮತ್ತು ಶಕ್ತಿಗಳನ್ನು ಹಾಕಿದ ಇತಿಹಾಸವಾಗಿದೆ; ಅವರ ದೂರದೃಷ್ಟಿಗೆ, ದೃಢಸಂಕಲ್ಪಕ್ಕೆ, ಹಂಬಲಕ್ಕೆ ಒಂದು ಸ್ಮಾರಕವಾಗಿದೆ ಮತ್ತು ನಿರ್ಮಾಣ ಮಾಡುವಾಗ ಭರವಸೆ ಮತ್ತು ನಿರಾಸೆಗಳ ಹಲವಾರು ಘಟನೆಗಳು ಸಂಭವಿಸಿವೆ. ಅಣೆಕಟ್ಟಿನ ನಿಜವಾದ ನಿರ್ಮಾಣ ಶುರುವಾದದ್ದು ೧೯೦೯ನೇ ವರ್ಷದಲ್ಲಿ. ೧೯೧೮ರ ಹೊತ್ತಿಗೆ ಅಣೆಕಟ್ಟೆಯ ಎತ್ತರ ४೦ ಅಡಿಗಳವರೆಗೆ ಬಂದಿತ್ತು. ಖರ್ಚು ೧೮ ಲಕ್ಷ ರೂಪಾಯಿ ಆಗಿತ್ತು. ನಂತರ ಹಣದ ಕೊರತೆಯಿಂದ ಅಣೆಕಟ್ಟೆಯ ಕೆಲಸ ನಿಂತಿತ್ತು. ಸುಮಾರು ೬೦೦ ದಶಲಕ್ಷ ಕ್ಯೂಬಿಕ್ ಅಡಿ ನೀರು ಅಣೆಕಟ್ಟೆಯಲ್ಲಿ ಸಂಗ್ರಹವಾಗಿ ಪ್ರತಿ ವರ್ಷ ಕೃಷಿಗೆ ನೀರು ಲಭ್ಯವಾಗುತ್ತಿತ್ತು. ಅವಶ್ಯಕತೆಗೆ ಅನುಗುಣವಾಗಿ ಈ ನೀರನ್ನು ನದಿಯ ಮೂಲಕ ಬಿಡಲಾಗುತ್ತಿತ್ತು. ಇದರ ಪರಿಣಾಮವಾಗಿ ಭೋಗವತಿ ನದಿಯ ಎರಡು ದಡಗಳು (ಅದೇ ನದಿ ನಂತರ ಪಂಚಗಂಗಾವಾಗುತ್ತದೆ) ಇಡೀ ವರ್ಷದ ಪೂರ್ತಿ ಹಚ್ಚಹಸಿರಾಗಿರುತ್ತಿದ್ದವು. ಶಾಹುರವರ ಹಸಿರುಕ್ರಾಂತಿ ಭಾಗಶಃ ಸಾಕಾರಗೊಂಡಿತು. (ಈ ಅಣೆಕಟ್ಟೆಯ ನಿರ್ಮಾಣದ ಕೆಲಸ ಬಹಳ ಕಾಲದವರೆಗೆ ಮುಂದುವರಿಯಿತು. ಇದು ಅಂತಿಮವಾಗಿ ೧೯೫೭ರಲ್ಲಿ ಪೂರ್ಣಗೊಂಡಿತು.)

## ಕೃಷಿಯ ಸಾಹಸೋದ್ಯಮ

ಸ್ವಾತಂತ್ರ್ಯದ ನಂತರ ಭಾರತದ ಸರಕಾರ ಕೃಷಿ ಮತ್ತು ಕೈಗಾರಿಕೆಯ ಕ್ಷೇತ್ರಗಳಲ್ಲಿ ಆಧುನೀಕರಣದ ಧೋರಣೆಯನ್ನು ಅಂಗೀಕರಿಸಿತು ಮತ್ತು ಹಲವಾರು ಯೋಜನೆಗಳನ್ನು ವೈಜ್ಞಾನಿಕ ಆಧಾರದ ಮೇಲೆ ಹಲವಾರು ಯೋಜನೆಗಳನ್ನು ಕೈಗೊಂಡಿತು. ಕೊಲ್ಹಾಪುರದ ಸಂಸ್ಥಾನದಲ್ಲಿ ಶಾಹುರವರು ತಮ್ಮ ಆಡಳಿತದ ಬಹಳ ಹಿಂದೆಯೇ ಆಧುನೀಕರಣದ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದರು. ಅವರು ಯೂರೋಪಿನಲ್ಲಿ ಕೃಷಿಯ ಉತ್ಪಾದನೆಯು ಭಾರತಕ್ಕಿಂತ ಹಲವು ಪಟ್ಟು ಹೆಚ್ಚಿಗಿರುವುದು ಅವರು ಸ್ವತಃ ಕಂಡಿದ್ದಾರೆ. ವೈಜ್ಞಾನಿಕ ಕೃಷಿಗೆ ತುಂಬಾ ಧನ್ಯವಾದಗಳು ತನ್ನ ಸಂಸ್ಥಾನದ ರೈತರಲ್ಲಿ ಆಧುನಿಕ ಜ್ಞಾನವನ್ನು ಹರಡುವುದಕ್ಕೆ ಹಲವು ಯೋಜನೆ ಕೈಗೊಂಡರು. ಮುಂದುವರಿದ ಕೃಷಿಯ ಜ್ಞಾನವನ್ನು ತನ್ನ ಸಂಸ್ಥಾನದಲ್ಲಿ ಪ್ರಸಾರ ಮಾಡಲು ಮಹಾರಾಜ ಎಡ್ವರ್ಡ್ ಕೃಷಿಸಂಸ್ಥೆಯನ್ನು ಕೊಲ್ಹಾಪುರದಲ್ಲಿ ೧೯೧೨ರಲ್ಲಿ ಸ್ಥಾಪಿಸಿದರು. ಅದರ ಪಕ್ಕದಲ್ಲಿಯೇ ಆಧುನಿಕ ಕೃಷಿ ಉಪಕರಣಗಳ ಒಂದು ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದರು. ರೈತರಿಗೆ ಆಧುನಿಕ ಕೃಷಿ ಉಪಕರಣಗಳ, ಬೀಜಗಳ, ರಸಾಯನಿಕ ಗೊಬ್ಬರಗಳ ಮತ್ತು ಕೃಷಿಯ ಆಧುನಿಕ ವಿಧಾನಗಳ ಬಗ್ಗೆ ಜ್ಞಾನ ಮತ್ತು ತರಬೇತಿಯನ್ನು ನೀಡಲು ವಿಶೇಷ ಕೃಷಿ ಅಧಿಕಾರಿಗಳನ್ನು ನೇಮಿಸಿದರು. ರೈತರಲ್ಲಿ ಆಧುನಿಕವಾಗಿ ಕೃಷಿ ಮಾಡುವ ರೂಢಿಯನ್ನು ಕಲಿಸಲು ಮಹಾಲಕ್ಷ್ಮಿ ರಥೋತ್ಸವ ಮತ್ತು ಜೋತಿಬಾ ಜಾತ್ರೆಯ ಸಂದರ್ಭಗಳಲ್ಲಿ ಕೃಷಿ ಪ್ರದರ್ಶನವನ್ನು ವ್ಯವಸ್ಥೆಗೊಳಿಸುತ್ತಿದ್ದರು. ಈ ಪ್ರದರ್ಶನಗಳಲ್ಲಿ ಆಧುನಿಕ ಕೃಷಿಯು ಉಪಕರಣಗಳನ್ನು, ಉನ್ನತ ಗುಣಮಟ್ಟದ ಧಾನ್ಯಗಳ ಮಾದರಿಗಳನ್ನು ಮತ್ತು ಮಾಹಿತಿ

ನೀಡುವ ಕರಪತ್ರಗಳನ್ನು ಪ್ರದರ್ಶಿಸುತ್ತಿದ್ದರು. ಇದಕ್ಕೆ ಸಮೀಪದಲ್ಲಿಯೇ ಉನ್ನತ ಮಟ್ಟದ ಪಶುತಳಿಗಳನ್ನು ಪ್ರದರ್ಶಿಸುತ್ತಿದ್ದರು. ಈ ಪ್ರದರ್ಶನ ಕಾಲದಲ್ಲಿಯೇ ವಿಜ್ಞಾನಮೇಳವನ್ನು ಸಹ ವ್ಯವಸ್ಥೆಗೊಳಿಸಲಾಗುತ್ತಿತ್ತು. ಶಾಹುರವರು ತನ್ನ ಪ್ರಜೆಗಳು ಆಧುನಿಕ ವಿಜ್ಞಾನದ ಬಯಕೆಯ ಅಭಿವೃದ್ಧಿಯನ್ನು ಬೆಳೆಸಿಕೊಳ್ಳಬೇಕೆಂದು ಇಷ್ಟಪಡುತ್ತಿದ್ದರು. ಜನರನ್ನು ಆಕರ್ಷಿಸಲು, ವಿಶೇಷವಾಗಿ ರೈತರನ್ನು ಆ ಪ್ರದರ್ಶನಗಳಲ್ಲಿ ಮನರಂಜನೆಯ ಅಂಶಗಳಾದ ಕುಸ್ತಿ, ಪೌರುಷ ಆಟಗಳು, ಆನೆಗಳ ಕಿತ್ತಾಟ ಮೊದಲಾದವನ್ನು ವ್ಯವಸ್ಥೆಗೊಳಿಸುತ್ತಿದ್ದರು.[4]

ಆಧುನಿಕತೆಯ ಮತ್ತೊಂದು ಮುಖ್ಯ ಭಾಗ ಪ್ರಯೋಗಿಕತೆ. ಶಾಹುರವರು ಕೃಷಿ ಕ್ಷೇತ್ರದಲ್ಲಿ ಪ್ರಾಯೋಗಿಕತೆಯ ಪ್ರದರ್ಶನ ಮೆಚ್ಚುವಂಥಾದ್ದು. ಸಂಸ್ಥಾನದಲ್ಲಿ ಪರಂಪರಾಗತವಾದ ಜೋಳ, ಕಬ್ಬು, ಭತ್ತ, ನೆಲಗಡಲೆ ಮತ್ತು ಬೇಳೆಕಾಳುಗಳು ಸಹಜವಾದ ಬೆಳೆಗಳಾಗಿದ್ದವು. ಆದರೆ ಇಲ್ಲಿಯವರೆಗೆ ಬೆಳೆಯದೇ ಇದ್ದ ಬೆಳೆಗಳಾದ ಟೀ, ಕಾಫಿ, ರಬ್ಬರ್, ಏಲಕ್ಕಿ, ಕೋಕೊ ಮೊದಲಾದವುಗಳನ್ನು ನಾಟಿಮಾಡಿದರೆ ಅದು ಸಂಸ್ಥಾನದಲ್ಲಿ ಕೃಷಿಯನ್ನೇ ಮಾರ್ಪಡಿಸುವುದೆಂದು ಶಾಹು ಭಾವಿಸಿದ್ದರು. ಆದ್ದರಿಂದ ಅವರು ಅಪಾರವಾದ ಮಳೆ ಬೀಳುತ್ತಿದ್ದ ಸಹ್ಯಾದ್ರಿ ಪರ್ವತದ ತಪ್ಪಲಿನ ಪಶ್ಚಿಮ ಘಟ್ಟಗಳ ಇಳಿಜಾರಿನಲ್ಲಿ ಟೀ, ಕಾಫಿ, ರಬ್ಬರ್ ತೋಟಗಳನ್ನು ಬೆಳೆಸಿದರು. ಇವುಗಳಲ್ಲಿ ಟೀ ತೋಟದ ಪ್ರಯೋಗವು ಸಫಲವಾಯಿತು. ಕೊಲ್ಹಾಪುರದ ಸಂಸ್ಥಾನದ ಉತ್ತಮ ಗುಣಮಟ್ಟದ ಟೀಯನ್ನು ಬೆಳೆಯಲಾಯಿತು. ಬಹುಬೇಗನೇ ವ್ಯಾಪಾರಿ ದೃಷ್ಟಿಯಿಂದ ಇದನ್ನು ಬೆಳೆದು 'ಪನ್ಹಾಲ ನಂ ನಾಲ್ಕು' ಎಂಬ ಹೆಸರಿನಲ್ಲಿ ಮಾರಾಟಕ್ಕೆ ಸಂಸ್ಥಾನದ ಹೊರಗೆ ಸಾಗಿಸಲಾಗುತ್ತಿತ್ತು. ಅಂದರೆ ವಿಶೇಷವಾಗಿ ಭಾರತದ ಮಹಾರಾಜರಿಗೆ ಕಳುಹಿಸಲಾಗುತ್ತಿತ್ತು. ಅದು ಬರೋಡ ಮಹಾರಾಜ ಸಯ್ಯಾಜಿರಾವ್ ಗಾಯಕವಾಡರ ಅಚ್ಚುಮೆಚ್ಚಿನ ಬ್ರಾಂಡ್ ಆಯಿತು. ಅವರು ಸಹ ತನ್ನ ಸಂಸ್ಥಾನದಲ್ಲಿ ಸಹ ಬೆಳೆಯುವ ಪ್ರಯೋಗದ ಸಾಹಸವನ್ನು ಮಾಡಲು ಬಯಸಿದರು.[5] ಶಾಹು ನಂತರ ಯಾರೂ ಟೀ ತೋಟಗಾರಿಕೆಯ ವ್ಯವಹಾರವನ್ನು ಗಮನಕ್ಕೆ ತೆಗೆದುಕೊಳ್ಳದಿದ್ದದ್ದು ದುಃಖದ ಸಂಗತಿಯಾಗಿದೆ. ಸ್ವಲ್ಪ ಸಮಯದಲ್ಲೆ ಕೊಲ್ಹಾಪುರದ ಪನ್ಹಾಲ ಟೀ ಇತಿಹಾಸವಾಯಿತು (ಪ್ರಸಿದ್ಧಿ).

## ವಾಣಿಜ್ಯ ಮತ್ತು ಕೈಗಾರಿಕೆಗೆ ತುಂಬ ಮುತುವರ್ಜಿ

ಕೃಷಿ ಮತ್ತು ಕೈಗಾರಿಕೆಗಳು ಮಾನವ ಇತಿಹಾಸದ ಪ್ರತಿಯೊಂದು ಹಂತದಲ್ಲಿ ಒಂದು ಸಮಾಜದ ಭೌತಿಕ ಪ್ರಗತಿಯ ಪ್ರಮುಖ ಎರಡು ಚಕ್ರಗಳಾಗಿವೆಯೆಂದು ಭಾವಿಸಬಹುದು. ಯೂರೋಪಿನ ಸಮಾಜವು ಈ ಎರಡು ಕ್ಷೇತ್ರಗಳ ಮುಂಚೂಣಿಯಲ್ಲಿತ್ತೆಂದು ಶಾಹು ಅರಿತಿದ್ದರು. ಭಾರತವು ವಿಶೇಷವಾಗಿ ವಾಣಿಜ್ಯ ಮತ್ತು ಕೈಗಾರಿಕೆಯಲ್ಲಿ ಹಿಂದುಳಿದಿರುವಿಕೆಯು ನಮ್ಮ ಆರ್ಥಿಕ ಶೋಷಣೆಗೆ ಎಡೆಮಾಡಿಕೊಟ್ಟು ನಮ್ಮ ಅವಲಂಬನೆಯನ್ನು ಮತ್ತಷ್ಟು ಸಂಕಟಕ್ಕೆ ಎಡೆಮಾಡಿಕೊಟ್ಟಿದೆಯೆಂದು ಪರಿಭಾವಿಸಿದರು. ಜನರು ವಿಶೇಷವಾಗಿ ಮಹಾರಾಷ್ಟ್ರದವರು ಕೈಗಾರಿಕೆ ಮತ್ತು ವಾಣಿಜ್ಯವನ್ನು ಕೈಗೊಳ್ಳಬೇಕು ಮತ್ತು ತಮ್ಮ ಪ್ರಗತಿಯೊಂದಿಗೆ ರಾಷ್ಟ್ರದ ಅಭಿವೃದ್ಧಿಗೆ ಕೊಡುಗೆ ನೀಡಬೇಕೆಂದು ಶಾಹು ಚಿಂತಿಸಿದರು. ೧೯೧೭ರಲ್ಲಿ ಖಾಮ್‌ಗಾವ್‌ನಲ್ಲಿ ನಡೆದ ಅಖಿಲ ಭಾರತ ಮರಾಠ ಶಿಕ್ಷಣದ ಸಮ್ಮೇಳನದಲ್ಲಿ ಅಧ್ಯಕ್ಷೀಯ ಭಾಷಣದಲ್ಲಿ ಅವರು ಹೇಳುತ್ತಾರೆ: "......ನಮ್ಮ ತೃಪ್ತಿಗಾಗಿ ರೈತರು ಅಥವಾ ಸೈನಿಕರಾಗಿರುವುದು ಬೇಡ. ನಾವು ಕೈಗಾರಿಕೆ, ವಾಣಿಜ್ಯ ಮತ್ತು ಇತರೆ ಉನ್ನತ ಮಟ್ಟದ ವೃತ್ತಿಗಳಲ್ಲಿ ತೊಡಗಬೇಕು. ಇಂದಿನ ದಿನಗಳಲ್ಲಿ ನಾವು ಕೈಗಾರಿಕೆ ಅಥವಾ ವಾಣಿಜ್ಯಗಳಲ್ಲಿ ನಾವು ತೊಡಗಿಲ್ಲ. ಇಪ್ಪತ್ತನೇ ಶತಮಾನದಲ್ಲಿ ರಾಷ್ಟ್ರದ ಅಭಿವೃದ್ಧಿಯು ವಾಣಿಜ್ಯ ಮತ್ತು

ಸಂಬಂಧಪಟ್ಟ ಚಟುವಟಿಕೆಗಳ ಮೇಲೆ ಅವಲಂಬಿಸಿದೆ. ವಾಸ್ತವಿಕವಾಗಿ, ವಾಣಿಜ್ಯವು ಪಶ್ಚಿಮ ರಾಷ್ಟ್ರಗಳ ಧರ್ಮವಾಗಿಬಿಟ್ಟಿದೆ. ಇಲ್ಲಿ ನಾನು ಧರ್ಮ ಎಂದರೆ ಬುದ್ಧಿವಂತಿಕೆಯ ಸ್ವಾರ್ಥ ಎಂದು ಅರ್ಥ ಮಾಡಿಕೊಂಡಿದ್ದೇನೆ. ನಾವು ವಾಣಿಜ್ಯ ಮತ್ತು ಕೈಗಾರಿಕೆಗಳ ಉದ್ಯಮಗಳಿಗೆ ಧುಮುಕದಿದ್ದರೆ, ನಮ್ಮ ಎಲ್ಲಾ ಉದ್ಯಮಗಳು ಮಂಕು ಮತ್ತು ನಿರುಪಯೋಗವಾಗುತ್ತವೆ. ವಾಣಿಜ್ಯದಲ್ಲಿ ನಂಬಿರುವಂತೆ ನಾನು ನನ್ನ ಇಬ್ಬರು ಮಕ್ಕಳನ್ನು ಮತ್ತು ಸಂಬಂಧಿಕರನ್ನು ವ್ಯಾಪಾರದಲ್ಲಿ ತೊಡಗಿಸಿದ್ದೇನೆ ಮತ್ತು ಅವರು ಸಂತೋಷಭರಿತರಾಗಿ ವ್ಯವಹಾರವನ್ನು ಒಪ್ಪಿಕೊಂಡಿದ್ದಾರೆ. ಅವರು ಹೆಚ್ಚು ಏಳಿಗೆ ಹೊಂದುತ್ತಿರುವ ಲಕ್ಷಣ ಕಂಡುಬರುತ್ತಿದೆ".[6]

ಶಾಹುರವರ ಆಡಳಿತದ ಪ್ರಾರಂಭದಲ್ಲಿ ಕೊಲ್ಹಾಪುರದಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪರಿಸ್ಥಿತಿ ತೃಪ್ತಿಕರವಾಗಿರಲಿಲ್ಲ. ಸಂಸ್ಥಾನದಲ್ಲಿ ಹೇಳಿಕೊಳ್ಳುವಂತಹ ಮಾರುಕಟ್ಟೆಯ ಸ್ಥಳವಿರಲಿಲ್ಲ. ಸಂಸ್ಥಾನದಲ್ಲಿ ಉತ್ಪಾದನೆಯಾಗುತ್ತಿದ್ದ ಉತ್ತಮ ಗುಣಮಟ್ಟದ ಬೆಲ್ಲವನ್ನು ಪಶ್ಚಿಮ ಘಟ್ಟಗಳಿಂದ ಕೊಂಕಣದ ರಾಜಾಪುರಕ್ಕೆ ಕಳುಹಿಸಲಾಗುತ್ತಿತ್ತು ಮತ್ತು ಅಲ್ಲಿಂದ ಅದು ಮುಂಬಯಿ ಮತ್ತು ಇತರೆ ಕಡೆಗಳಿಗೆ ಹೋಗುತ್ತಿತ್ತು. ಕೊಲ್ಹಾಪುರದಲ್ಲಿ ಉತ್ಪಾದನೆಯಾಗುತ್ತಿದ್ದ ಬೆಲ್ಲ 'ರಾಜಾಪುರಿಬೆಲ್ಲ' ಎಂಬ ಖ್ಯಾತಿಯನ್ನು ಪಡೆದಿತ್ತು. ಶಾಹುರವರು ಈ ಸ್ಥಿತಿಯನ್ನು ಬದಲಾಯಿಸಲು ನಿರ್ಧರಿಸಿದರು. ತಮ್ಮ ಪಟ್ಟಾಭಿಷೇಕವಾದ ಒಂದು ವರ್ಷದ ನಂತರ ರೈಲ್ವೆ ಸ್ಟೇಷನ್ನಿನ ಪಕ್ಕದಲ್ಲಿದ್ದ ಒಂದು ತುಂಡು ಜಮೀನಿನಲ್ಲಿ 'ಶಾಹುಪುರಿ' ಎಂಬ ಹೆಸರಿನ ಮಾರುಕಟ್ಟೆಯನ್ನು ಸ್ಥಾಪಿಸಿದರು. ಕೊಲ್ಹಾಪುರ ಕಾಗಲ್, ನಿಪ್ಪಾಣಿಗಳ ವ್ಯಾಪಾರಸ್ಥರ ಸಮುದಾಯಕ್ಕೆ ವಿಶೇಷ ರಿಯಾಯಿತಿಗಳನ್ನು ನೀಡಿದರು ಮತ್ತು ತಮ್ಮ ಅಂಗಡಿಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಿದರು. ಹೊಸ ಮಾರುಕಟ್ಟೆಯು ೫ ವರ್ಷಗಳಲ್ಲಿ ಅಭಿವೃದ್ಧಿಹೊಂದಿತು. ವ್ಯಾಪಾರಸ್ಥರ ಸಮುದಾಯ ಸಂಖ್ಯೆಯಲ್ಲಿ ಬೆಳೆಯಿತು ಮತ್ತು ಆರ್ಥಿಕ ವ್ಯವಹಾರಗಳು ಹೆಚ್ಚಾದವು. ಸಂಸ್ಥಾನದ ಕೃಷಿ ಉತ್ಪನ್ನಗಳಿಗೆ ಸಂಸ್ಥಾನದಲ್ಲಿ ಭರವಸೆಯ ಮಾರುಕಟ್ಟೆಯ ಲಭ್ಯ ಸಿಕ್ಕಿತು. ೧೯೦೨ರವರೆಗೆ ಮಾರುಕಟ್ಟೆ ಬೆಳೆಯಿತು. ಲಕ್ಷಾಂತರ ರೂಪಾಯಿಗಳ ವ್ಯವಹಾರ ದಿನವೂ ಸಾಮಾನ್ಯವಾಗಿ ಬಿಟ್ಟಿತು. ಶಾಹುರವರು ಸ್ವತಃ ತಮ್ಮ ಒಂದು ಪತ್ರದಲ್ಲಿ ಪ್ರತಿ ವರ್ಷ ೫೦ ಲಕ್ಷ ರೂಪಾಯಿಗಳ ಬೆಲ್ಲ ಮತ್ತು ೨೦ ಲಕ್ಷ ರೂಪಾಯಿಗಳ ನೆಲಗಡಲೆಕಾಯಿ ರಫ್ತಾಗುತ್ತಿತ್ತೆಂದು ಹೇಳಿದ್ದಾರೆ.[7] ಇಂದಿಗೂ ಕೊಲ್ಹಾಪುರ ದೇಶದಲ್ಲಿ ಅತಿದೊಡ್ಡ ಬೆಲ್ಲದ ಮಾರುಕಟ್ಟೆಯೆಂದು ಹೆಸರುವಾಸಿಯಾಗಿದೆ.

೧೯೧೭ರಲ್ಲಿ ಶಿರೋಳ್ ರೈಲ್ವೆ ಸ್ಟೇಷನ್ನಿನ ಸಮೀಪ ಒಂದು ಹೊಸ ಜೈಸಿಂಗಪುರ ಮಾರುಕಟ್ಟೆ ಎಂಬ ಹೆಸರಿನಲ್ಲಿ ತಮ್ಮ ಖಾಸಾ ತಂದೆ ಜೈಸಿಂಗರಾವ್ ಘಾಟ್ಗೆಯವರ ನೆನಪಿನಲ್ಲಿ ಕಟ್ಟಿಸಲಾಗಿದೆ.[8] ಶಾಹುರವರು ಕೊಲ್ಹಾಪುರದ ಪಶ್ಚಿಮದಲ್ಲಿರುವ ಭೋಗವತಿ ನದಿಯ ಅಣೆಕಟ್ಟೆಯ ಬುಡದಲ್ಲಿ ತನ್ನ ಒಬ್ಬಳೇ ಮಗಳಾದ ರಾಧಾಬಾಯಿ ಅಲಿಯಾಸ್ ಅಕ್ಕಾಸಾಹೇಬ ಅವರ ಹೆಸರಿನಲ್ಲಿ ರಾಧಾನಗರಿ ಎಂಬ ಕಾಲೋನಿಯನ್ನು ಸ್ಥಾಪಿಸಿದ್ದಾರೆ. ಶಾಹುರವರು ಈ ಕಾಲೋನಿಯನ್ನು ಸುತ್ತಮುತ್ತಲ ಬೆಟ್ಟಗುಡ್ಡಗಳ ಪ್ರದೇಶ ಮತ್ತು ಹಿಂದುಳಿದ ಪ್ರದೇಶಗಳಿಗೆ ಒಂದು ಮಾರುಕಟ್ಟೆಯಾಗಲೆಂದು ಶ್ರಮಿಸಿದರು. ವ್ಯಾಪಾರಿಗಳು ಅಲ್ಲಿಗೆ (ರಾಧಾನಗರಿಗೆ) ಹೋಗಿ ವ್ಯಾಪಾರ ಮಾಡಲು ಪ್ರೋತ್ಸಾಹಿಸುವುದಕ್ಕಾಗಿ ಖಜಾನೆಯಿಂದ ಸಾಲ ಕೊಡಿಸಿದರು.[9] ಅವರು ಬೇರೆ ಪ್ರದೇಶಗಳಲ್ಲಿ ವಾಪಾರ ಮತ್ತು ವಾಣಿಜ್ಯವನ್ನು ಪ್ರೋತ್ಸಾಹಿಸಲು ವಿಶೇಷ ಪ್ರಯತ್ನಗಳನ್ನು ಮಾಡಿದರು. ಉದಾಹರಣೆಗೆ ರಾಯಭಾಗವು ಕೊಲ್ಹಾಪುರ ಸಂಸ್ಥಾನದ ಗಡಿಪ್ರದೇಶಗಳಲ್ಲಿ

ನೆಲೆಸಿತ್ತು. ಅದು ಮೊದಲಿಗೆ ಬಟ್ಟೆ ನೇಯುವ ಕಲೆಯಲ್ಲಿ ಹೆಸರುವಾಸಿಯಾಗಿತ್ತು. ಆದರೆ ಮುಸ್ಲಿಮರು ಮತ್ತು ಲಿಂಗಾಯತ ನೇಯ್ಗೆಯವರ ಪರಸ್ಪರ ತಿಕ್ಕಾಟದಿಂದ ಅವರು ಪಟ್ಟಣವನ್ನೇ ಬಿಟ್ಟು ಹೊರಟುಹೋದರು. ಶಾಹುರವರಿಗೆ ಇದು ಗೊತ್ತಾದ ಕೂಡಲೆ ಅವರನ್ನು ಮತ್ತೆ ರಾಯಬಾಗ್‌ಗೆ ಕರೆತಂದರು. ಅವರು ಅವರಿಗಾಗಿ ನೇಯ್ಗೆಯವರ ಸಂಘಗಳನ್ನು ಸ್ಥಾಪಿಸಿದರು. ಆ ಸಂಘಗಳಿಗೆ ಬಡ್ಡಿಯಿಲ್ಲದೆ ೩೦೦೦ ರೂ.ಗಳನ್ನು ಮೂಲಧನ (ಬೀಜಧನ)ವನ್ನು ಒದಗಿಸಿಕೊಟ್ಟರು. ಮತ್ತೆ, ೪೦ ಕುಟುಂಬಗಳಿಗೆ ತಮ್ಮ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಬಂದವರಿಗೆ ಮತ್ತು ನೆಲೆಸಲು ಅವರಿಗೆ ಬಯಲು ಜಾಗವನ್ನು ಮನೆಗಾಗಿ ಕಲ್ಪಿಸಿಕೊಟ್ಟರು ಮತ್ತು ಪ್ರತಿಯೊಬ್ಬರಿಗೂ ೧೫೦ ರೂಪಾಯಿಗಳನ್ನು ತಮ್ಮ ಕಸುಬನ್ನು ಪ್ರಾರಂಭಿಸಲು ಹಂಚಿದರು.[10] ದರ್ಬಾರಿನಿಂದ ಉದಾರವಾದ ಆರ್ಥಿಕ ನೆರವು ಪಡೆದ ನಂತರ ನೇಯ್ಗೆಯ ಚಟುವಟಿಕೆ ಉತ್ತಮಗೊಂಡಿತೆಂಬುದರಲ್ಲಿ ಆಶ್ಚರ್ಯವಿಲ್ಲ. ಬಹುಬೇಗನೇ ರಾಯಬಾಗ ಮಹಾರಾಷ್ಟ್ರದಲ್ಲಿ ಧೋತಿ* ಬಟ್ಟೆಗಳಿಗೆ, ಸೀರೆಗೆ ಮತ್ತು ಖೋಲ್‌ಖಾನ್**ಗಳಿಗೆ ಹೆಸರುವಾಸಿಯಾಯಿತು.

## ಕೈಗಾರಿಕೆ ಮತ್ತು ವಾಣಿಜ್ಯದಲ್ಲಿ ಪ್ರಯೋಗ

ಶಾಹುರವರು ನೀರಾವರಿ ಯೋಜನೆಗಳಿಗೆ ನೀರಿನ ಸಂಪನ್ಮೂಲವನ್ನು ಪರಿಶೋಧಿಸಿದಂತೆಯೇ ನಾನಾ ವಿಧದ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕಾಗಿ ತನ್ನ ಸಂಸ್ಥಾನದಲ್ಲಿ ಕೈಗಾರಿಕಾ ಸರ್ವೆಯನ್ನು ಮಾಡಿಸಿದರು. ಈ ಸರ್ವೆಯ ಆಧಾರದಡಿಯಲ್ಲಿ ತಾವೇ (ಶಾಹು) ಕಾಲ್ಪನಿಕವಾಗಿ ನಾನಾ ವಿಧದ ಕೈಗಾರಿಕೆಗಳನ್ನು ಪ್ರಾರಂಭಿಸಿದರು ಮತ್ತು ಈ ಕ್ಷೇತ್ರಕ್ಕೆ ಕೆಲವರು ಪ್ರವೇಶಿಸಲು ಪ್ರೋತ್ಸಾಹ ನೀಡಿದರು. ಅದರ ಪ್ರಕಾರ ೧೯೦೫ರಲ್ಲಿ ಕೊಲ್ಹಾಪುರ ಅವಶ್ಯಕ ಎಣ್ಣೆ ಕೈಗಾರಿಕೆ, ಜೇನು ಸಾಕಾಣಿಕೆ ಕೈಗಾರಿಕೆ, ವುಡ್ ಡಿಸ್ಟಿಲೇಷನ್ ಕೈಗಾರಿಕೆ ಮತ್ತು ಕಾಟನ್ ಟೆಕ್ಸ್‌ಟೈಲ್ ಇಂಡಸ್ಟ್ರೀಗಳನ್ನು ಕೊಲ್ಹಾಪುರ ಸಂಸ್ಥಾನದಲ್ಲಿ ಸ್ಥಾಪಿಸಿದರು. ಶಾಹುರವರು ತಮ್ಮ ಸಂಸ್ಥಾನದಿಂದ ದೇಶದ ಬೇರೆ ಬೇರೆ ಭಾಗಗಳಿಗೆ ಈ ಕಸಬುಗಳಲ್ಲಿ ತರಬೇತಿ ನೀಡಲು ಜನರನ್ನು ಕಳುಹಿಸಿಕೊಟ್ಟರು ಅಥವಾ ಹೊರಗಡೆಯಿಂದ ತರಬೇತಿ ಪಡೆದ ನುರಿತ ಸಿಬ್ಬಂದಿಯನ್ನು ಪ್ರಧಾನ ಹುದ್ದೆಗಳಿಗೆ ನೇಮಿಸಿಕೊಂಡರು. ಅವರು ವಿದೇಶಿ ಅಧಿಕಾರಿಗಳು ತನ್ನ ಸಂಸ್ಥಾನದ ಜನರಿಗೆ ತರಬೇತಿ ನೀಡಬೇಕೆಂದು ಬಯಸಿದ್ದರು. ಇಂದು ಅಂತಹ ಸಾವಿರಾರು ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ ಮತ್ತು ಅವು ನಮ್ಮ ದೇಶದಲ್ಲಿ ಪ್ರಗತಿಯನ್ನು ಸಾಧಿಸುತ್ತಿವೆ. ಸಾವಿರಾರು ಆಧುನಿಕ ವಿವಿಧ ಕಾರ್ಖಾನೆಗಳು ದೇಶದ ಕೈಗಾರಿಕಾ ಉತ್ಪಾದನೆಗೆ ಕೊಡುಗೆಯನ್ನು ನೀಡುತ್ತಿವೆ. ಆದ್ದರಿಂದ ನಾವು ಶಾಹುರವರ ಕೈಗಾರಿಕಾ ನೀತಿಯನ್ನು ಪರಿಶೀಲಿಸಿದರೆ ಇಂದು ಆಧುನಿಕ ಸಾಧನೆಗಳಲ್ಲಿ ನಾವು ನಿಂತಿದ್ದೇವೆ. ಅದು ಅಸಾಧಾರಣವಾಗಿ ತೋರದಿರಬಹುದು. ಆದರೆ ಒಂದು ನೂರು ವರ್ಷಗಳ ಹಿಂದಿನ ಪರಿಸ್ಥಿತಿಗಳನ್ನು ಗಮನಿಸಿದಾಗ ಅಲ್ಲಲ್ಲಿ ಕೆಲವು ಕೈಗಾರಿಕೆಗಳು ಪ್ರಾರಂಭವಾಗಿದ್ದವು ಮತ್ತು ಕೇವಲ ಮೆಟ್ರೋ ನಗರಗಳಾದ ಬಾಂಬೆ ಮತ್ತು ಕಲಕತ್ತಾಗಳಲ್ಲಿ, ರಾಜಸಂಸ್ಥಾನ ಮತ್ತು ಬ್ರಿಟಿಷರ ಇತರೆ ಪ್ರದೇಶಗಳಲ್ಲಿ ಕೈಗಾರಿಕೆಗಳು ಅಪವಾದವಾಗಿದ್ದವು. ಆದರೆ ಶಾಹು ಒಂದು ನೂರು ವರ್ಷಗಳ ಹಿಂದೆ ತನ್ನ ಸಂಸ್ಥಾನದಲ್ಲಿ ಪ್ರಾರಂಭಿಸಿದ ಈ ಕೈಗಾರಿಕೆಗಳು ಭಾರತದ ಕೈಗಾರಿಕಾ ಇತಿಹಾಸದಲ್ಲಿ ಅಸಾಧಾರಣವಾದ ಯೋಜನೆಗಳಾಗಿವೆ. ಅವರು ಪ್ರಾರಂಭ ಮಾಡಿದ

---

* ಗಂಡಸರು ಸೊಂಟಕ್ಕೆ ಕಟ್ಟಿಕೊಳ್ಳುವ ಬಟ್ಟೆ.

** ಮಹಿಳೆಯ ಕುಪ್ಪಸ.

ಈ ಕೈಗಾರಿಕೆಗಳ ಪ್ರಾಯೋಗಿಕತೆಯ ಪ್ರದರ್ಶನವು ಆ ಕಾಲದ ಹಲವರಿಗೆ ಆಶ್ಚರ್ಯವುಂಟುಮಾಡಿತ್ತೆಂಬುದನ್ನು ಗಮನಿಸಬೇಕಾಗಿದೆ. ಈ ಹೇಳಿಕೆಗಳ ಕ್ರಮಬದ್ಧತೆಯನ್ನು ಕೆಲವು ನಿದರ್ಶನಗಳು ಸ್ಪಷ್ಟಪಡಿಸುತ್ತವೆ.

೧೯೦೪ರಲ್ಲಿ ಶಾಹುರವರು ಜಪಾನಿನಲ್ಲಿ ತರಬೇತಿ ಹೊಂದಿದ ರಾಸಾಯನಿಕ ಪರಿಣತರಾದ ಡಿ. ಎಸ್. ಶಾಲಿಗ್ರಾಮ ಎಂಬುವವರನ್ನು ತಮ್ಮ ಸಂಸ್ಥಾನದಲ್ಲಿ ಕೈಗಾರಿಕಾ ನಿರೀಕ್ಷಕರನ್ನಾಗಿ ನೇಮಕ ಮಾಡುತ್ತಾರೆ. ಅವರು ಅರಣ್ಯ ವಸ್ತುಗಳ ಆಧಾರಿತ ಕೆಲವು ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸಲು ಯೋಜನೆಯನ್ನು ರೂಪಿಸುತ್ತಾರೆ. ಅದರ ಪ್ರಕಾರ ಶಾಲಿಗ್ರಾಮರು ಆವಶ್ಯಕ ಎಣ್ಣೆ ಕೈಗಾರಿಕೆ ಮತ್ತು ವುಡ್ ಡಿಸ್ಟಿಲೇಷನ್ ಕೈಗಾರಿಕೆಗಳ ಉತ್ಪಾದನೆಯನ್ನು ಸಫಲವಾಗಿ ಈ ಪ್ರದೇಶದಲ್ಲಿ ಪ್ರಾರಂಭಿಸುತ್ತಾರೆ. ಕೊಲ್ಹಾಪುರ ಸಂಸ್ಥಾನದಲ್ಲಿ ಉತ್ಪಾದನೆ ಮಾಡಿದ ಮೂರು ಆವಶ್ಯಕ ಎಣ್ಣೆಗಳ ಮಾದರಿಗಳನ್ನು ಮುಂಬಯಿಯಲ್ಲಿ ನಡೆದ ಕೈಗಾರಿಕಾ ಪ್ರದರ್ಶನಕ್ಕೆ ಕಳುಹಿಸುತ್ತಾರೆ. ಪರಿಣತರು ಈ ಮೂರು ಎಣ್ಣೆಗಳ ಮಾದರಿಗಳನ್ನು ಮೆಚ್ಚಿದರು. ಸಂಸ್ಥಾನಕ್ಕೆ ಬೆಳ್ಳಿ ಪದಕದ ಪಾರಿತೋಷಕವನ್ನು ನೀಡಲಾಯಿತು. ಕೊಲ್ಹಾಪುರ ಸಂಸ್ಥಾನದ ೧೯೦೪-೧೯೦೫ರ ಆಡಳಿತ ವರದಿಯು ಪರಿಣತರು ಎಣ್ಣೆಯ ಉತ್ಪಾದನೆಯನ್ನು ಮೆಚ್ಚುತ್ತಾ ಅಧಿಕೃತ ಮಾರ್ಗದರ್ಶಕ ಪುಸ್ತಕದ ಷರಾವನ್ನು ಕುರಿತು ಹೀಗೆ ಹೇಳುತ್ತಾರೆ: "ಕೊಲ್ಹಾಪುರ ಸಂಸ್ಥಾನದ ಆವಶ್ಯಕ ಎಣ್ಣೆಗಳ ಕೈಗಾರಿಕೆಯು ಒಂದು ಹೊಸ ಮಾರ್ಗವಾಗಿದೆ ಮತ್ತು ಬೇರೆ ಯಾವುದೇ ದೇಶೀಯ ಸಂಸ್ಥಾನವು ಇದನ್ನು ಅನುಸರಿಸಿಲ್ಲ".[11] ಆ ಕಾಲದಲ್ಲಿ ನೂರಾರು ಸಣ್ಣ ಮತ್ತು ದೊಡ್ಡ ರಾಜಸಂಸ್ಥಾನಗಳಿದ್ದವು. ಆದರೆ ಯಾವ ಮಹಾರಾಜನೂ ಎಣ್ಣೆ ಕೈಗಾರಿಕೆಯಲ್ಲಿ ಅಂತಹ ಹೊಸ ಹುರುಪಿನ ಪ್ರಯೋಗವನ್ನು ಮಾಡಿರಲಿಲ್ಲ. ಸಹಜವಾಗಿ ಪರಿಣತರು ಇಂಥ ಪ್ರಯತ್ನವನ್ನು ಮೆಚ್ಚುವುದರಲ್ಲಿ ಹಿಂಜರಿಯಲಿಲ್ಲ.

ಜೊತೆಗೆ ಕೊಲ್ಹಾಪುರವು ವುಡ್ ಡಿಸ್ಟಿಲೇಷನ್ ಕೈಗಾರಿಕೆಯಲ್ಲಿ ಮೆಚ್ಚಬಹುದಾದ ಸಾಧನೆಯನ್ನು ಮಾಡಿತ್ತು. ಸಹ್ಯಾದ್ರಿ ಕಾಡುಗಳಲ್ಲಿ ದೊರೆತ ವಿಚಿತ್ರ ಗಿಡಗಳ ಕಟ್ಟಿಗೆಯನ್ನು ಶೋಧಿಸಿ ಲೋನಾರಿ ಎಂಬ ವಿಶಿಷ್ಟ ರೀತಿಯ ಕಲ್ಲಿದ್ದಲು, ಸುಗಂಧ ದ್ರವ್ಯ ಮತ್ತು ಕಲ್ಲಿದ್ದಲು ಟಾರುಗಳ ಉತ್ಪನ್ನಗಳನ್ನು ಫಲಪ್ರದವಾಗಿ ತಯಾರಿಸುತ್ತಿದ್ದರು. ಈ ಮಾದರಿಗಳನ್ನು ಬಾಂಬೆ ಕಲಕತ್ತಾದ ಛೇಂಬರ್ಸ್ ಆಫ್ ಕಾಮರ್ಸ್‌ಗೆ ಮಾತ್ರ ಕಳುಹಿಸದೆ ಅಮೇರಿಕಾ ಮತ್ತು ಜಪಾನಿನ (೧೯೦೫-೦೬) ಪ್ರಯೋಗ ಶಾಲೆಗಳಿಗೆ ಪರಿಣತರ ಪರೀಕ್ಷೆಗೆ ಕಳುಹಿಸಿಕೊಡಲಾಗುತ್ತಿತ್ತು. ಭಟ್ಟಿ ಇಳಿಸಿದ ಈ ಎಣ್ಣೆಗಳು ವಿವಿಧ ಬಣ್ಣಗಳ ಉತ್ಪಾದನೆಗೆ ಅಧಿಕ ಪ್ರಮಾಣದಲ್ಲಿ ಬೇಕಾಗುತ್ತಿತ್ತು. ಇದರ ವಾಣಿಜ್ಯ ಉತ್ಪಾದನೆ ಹೆಚ್ಚು ಲಾಭದಾಯಕವಾಗಿತ್ತು.[12] ವುಡ್ ಡೆಸ್ಟಿಲೇಷನ್ನಿನ ಪ್ರಯೋಗಗಳು ನಂತರವೂ ಹಲವಾರು ವರ್ಷಗಳವರೆಗೆ ಮುಂದುವರಿಯಿತು. ಮೈಸೂರಿನ ಕೈಗಾರಿಕಾ ಪ್ರದರ್ಶನದಲ್ಲಿ ಕೆಲವು ಮಾದರಿಗಳನ್ನು ಪ್ರದರ್ಶಿಸಲಾಯಿತು. ಅಲ್ಲಿಯೂ ಸಹ ಈ ಎಣ್ಣೆಗಳ ವೈಜ್ಞಾನಿಕ ಗುಣಮಟ್ಟವನ್ನು ಪರಿಣತರು ಶ್ಲಾಘಿಸಿದರು ಮತ್ತು ತಮ್ಮ ಉತ್ಪನ್ನಗಳಿಗೆ (೧೯೧೯) ಬೆಳ್ಳಿ ಪದಕವನ್ನು ಬಹುಮಾನವಾಗಿ ಕೊಲ್ಹಾಪುರ ಸಂಸ್ಥಾನಕ್ಕೆ ನೀಡಲಾಯಿತು.[13]

ಜೇನುಸಾಕಾಣಿಕೆ ಕೈಗಾರಿಕೆಯು ಮತ್ತೊಂದು ಹೊಸ ಪ್ರಯೋಗವಾಗಿತ್ತು. ಶಾಹುರವರ ಕಲ್ಪನೆ, ಪ್ರಾಯೋಗಿಕತೆ ಮತ್ತು ದೂರದೃಷ್ಟಿಗೆ ಉದಾಹರಣೆಯಾಗಿದೆ. ಸಂಸ್ಥಾನದ ಪಶ್ಚಿಮಕ್ಕಿರುವ ಸಹ್ಯಾದ್ರಿ ಪರ್ವತಗಳ ಅರಣ್ಯಪ್ರದೇಶವು ಸದಾ ಹಣ್ಣು ಮತ್ತು ಹೂಗಳೊಂದಿಗೆ ಇಡೀ ವರ್ಷ ಹಸಿರಿನಿಂದ ತುಂಬಿ ತುಳುಕುತ್ತದೆ. ಪ್ರಾಕೃತಿಕ ಸಂಪನ್ಮೂಲಗಳ ಈ ಹಿನ್ನೆಲೆಯಲ್ಲಿ ಜೇನುಸಾಕಾಣಿಕೆಯ ಕೈಗಾರಿಕೆಯನ್ನು ಪ್ರಾರಂಭಿಸಿದರೆ ಅದು ಖಂಡಿತವಾಗಿ ಒಳ್ಳೆಯದು. ಸಂಸ್ಥಾನದ ರೈತರಿಗೆ ಕೈಗೆ ಎಟುಕುವ ಸಹಾಯಕ ಕೈಗಾರಿಕೆಯಾಗುತ್ತದೆಯೆಂದು

ಶಾಹು ಆಲೋಚಿಸಿದರು. ಈ ವಿಚಾರ ತಮಗೆ ಹೊಳೆದಾಗ ಈ ಕೈಗಾರಿಕೆಗೆ ವೈಜ್ಞಾನಿಕ ತಾಂತ್ರಿಕತೆಯನ್ನು ಹುಡುಕತೊಡಗಿದರು. ಬಾಂಬೆ ಪ್ರೆಸಿಡೆನ್ಸಿಯಲ್ಲಿ ಎಲ್ಲಿಯೂ ಜೇನುಸಾಕಾಣಿಕೆ ನಡೆಯುತ್ತಿರಲಿಲ್ಲ. ಆದ್ದರಿಂದ ಮಹಾರಾಜರು ತಮ್ಮ ಅಧಿಕಾರಿಯಾದ ಚಿಟ್ನೀಸ್‌ರನ್ನು ಕಲಕತ್ತಾದ ಕೃಷಿನಿರ್ದೇಶಕರ ಬಳಿಗೆ ಕಳುಹಿಸಿಕೊಟ್ಟರು. ಅವರು ಸಹಾಯ ಮಾಡಿದರು. ಆದರೆ ಅವರು ಸಹ ಪರಿಣತಿಯನ್ನು ಹೊಂದಿರಲಿಲ್ಲ. ಶಾಹುರವರು ಬೇಗನೇ ವಾಣಿಜ್ಯದ ಆಧಾರದ ಮೇರೆಗೆ ದೇಶದಲ್ಲಿ ಎಲ್ಲಿಯೂ ಜೇನುಸಾಕಾಣಿಕೆ ಕೈಗಾರಿಕೆ ನಡೆಯುತ್ತಿಲ್ಲ ಅಥವಾ ಪ್ರಾಯೋಗಿಕ ತರಬೇತಿ ನೀಡುವ-ಅಥವಾ ಪ್ರಾಯೋಗಿಕ ಜ್ಞಾನವನ್ನು ಒದಗಿಸುವ ಸೌಲಭ್ಯ ಎಲ್ಲಿಯೂ ಸಿಗುವುದಿಲ್ಲವೆಂದು ಅವರಿಗೆ ಮನವರಿಕೆಯಾಯಿತು. ಶಾಹು ಮತ್ತು ಮುಂಬೈನಲ್ಲಿರುವ ಅವರ ಬ್ರಿಟಿಷ್ ಸ್ನೇಹಿತ ಮ್ಯಾಕ್‌ನೀಲ್ ಅವರ ನಡುವಣ ಪತ್ರವ್ಯವಹಾರ ಬಹಳ ರೋಚಕವಾಗಿದೆ. ಮ್ಯಾಕ್‌ನೀಲ್ ಅವರು ಶಾಹುರವರಿಗೆ ಪ್ರತ್ಯುತ್ತರ ನೀಡುತ್ತಾರೆ: "ಶ್ರೀಯುತ ಡಿ. ಎಚ್. ಚಿಟ್ನೀಸರು ಕಲಕತ್ತಾದಿಂದ ನನಗೆ ಈಗ ತಾನೇ ತಂತಿ ಕಳಹಿಸಿದ್ದಾರೆ. ಅವರು ಕೃಷಿನಿರ್ದೇಶಕ ಶ್ರೀಯುತ ವಾಟ್‌ರನ್ನು ನೋಡಿದ್ದಾರೆ. ಅದರೆ ಅವರಿಗೆ ಪ್ರಾಯೋಗಿಕ ಜ್ಞಾನ (ಮಾಹಿತಿ) ಸಿಕ್ಕಿಲ್ಲ. ತಂತಿ ಇಲಾಖೆಯ ಹವ್ಯಾಸಿ ಜೇನು ಸಾಕಾಣಿಕೆದಾರ ಡೊಗ್ಲಾಸ್ ಮತ್ತು ಏಜೆಂಟರು ಸತ್ತುಹೋಗಿದ್ದಾರೆ. ಚಿಟ್ನೀಸರು ಅಲ್ಲಿ ಉಳಿಯುವುದರಿಂದ ಅವರು ಏನನ್ನೂ ಒಳ್ಳೆಯದನ್ನು ಮಾಡುವುದಕ್ಕಾಗುವುದಿಲ್ಲ. ಅವರು ಒಳ್ಳೆಯ ಪುಸ್ತಕಗಳನ್ನು ಓದುವುದರಿಂದ ಮತ್ತು ಕೊಲ್ಹಾಪುರದಲ್ಲಿ ಜೇನುನೊಣಗಳ ಜೊತೆಯಲ್ಲಿ ಏನು ಮಾಡುವುದಕ್ಕೆ ಸಾಧ್ಯವೋ ಅದನ್ನು ಅವರು ಮಾಡಬಹುದು. ಅವರು ಬಹುಶಃ ತಪ್ಪುಗಳನ್ನು ಮಾಡಬಹುದು. ಆದರೆ ಅವರು ಜೇನುನೊಣಗಳಿಂದ ರಕ್ಷಿಸಿಕೊಳ್ಳುವುದಕ್ಕೆ ಒಳ್ಳೆಯ ಜೇನು ಉಡುಪುಗಳನ್ನು ಬಳಸಿದರೆ ಆತ್ಮವಿಶ್ವಾಸ ಗಳಿಸುವರು ಮತ್ತು ಜ್ಞಾನ ತಾನೇ ತಾನಾಗಿ ಅನುಸರಿಸುವುದು."[14]

ಶಾಹುರವರು ಮ್ಯಾಕ್‌ನೀಲ್ ಅವರಿಗೆ ಉತ್ತರಿಸುತ್ತಾ ಬರೆಯುತ್ತಾರೆ: " ಇಲ್ಲಿ ನಾವು ಜೇನುನೊಣಗಳನ್ನು ಬೆಳೆಸಲು ಸಾಕಷ್ಟು ಒಳ್ಳೆಯ ಪ್ರಯತ್ನ ಮಾಡಿದ್ದೇವೆ. ನಾವು ಮತ್ತಷ್ಟು ಸ್ವಲ್ಪ ಪ್ರಾಯೋಗಿಕ ಜ್ಞಾನದಿಂದ ಸಫಲರಾಗಬಹುದು ಮತ್ತು ಈ ದೃಷ್ಟಿಯಿಂದಲೇ ವಾಸ್ತವಿಕವಾಗಿ ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ನೋಡಿಕೊಂಡು ಬರಲು ಚಿಟ್ನೀಸರನ್ನು ಕಳುಹಿಸಿದ್ದು. ಆದರೆ ಭಾರತದಲ್ಲಿ ಎಲ್ಲಿಯೂ ಒಂದು ಸ್ಥಳದಲ್ಲಿ ಈ ಕೈಗಾರಿಕೆಯನ್ನು ಗಂಭೀರವಾಗಿ ಯಾರೂ ತೆಗೆದುಕೊಂಡಿಲ್ಲ. ನಾನು ಅವರು 'ಇಂಡಿಯನ್ ಅಗ್ರಿಕಲ್ಚರಿಸ್ಟ್'ನ ಸಂಪಾದಕರನ್ನು ನೋಡುವುದಕ್ಕೆ ಹೇಳಿದ್ದೇನೆ. ಅಲ್ಲಿಂದಲೂ ಅವರು ಮಾಹಿತಿಯನ್ನು ಪಡೆಯುವುದಕ್ಕೆ ಆಗದಿದ್ದರೆ ತಾವು ಹೇಳಿದಂತೆಯೇ ನಮ್ಮಷ್ಟಕ್ಕೆ ನಾವೇ ಮಾಹಿತಿಯನ್ನು ಹವಣಿಸಿಕೊಳ್ಳುತ್ತೇವೆ." (ಮಾರ್ಚ್ ೧೯೦೩)[15] ಜೇನುಸಾಕಾಣಿಕೆಗೆ ಪ್ರಾಯೋಗಿಕ ಜ್ಞಾನ ಸಿಗದಿದ್ದರೂ ಶಾಹುರವರು ಎದೆಗುಂದದೆ ಜೇನುಸಾಕಾಣಿಕೆ ಕೈಗಾರಿಕೆಯನ್ನು ದೃಢವಾಗಿ ಪ್ರಾರಂಭಿಸಿರು ಮತ್ತು ಈ ಕ್ಷೇತ್ರದಲ್ಲಿ ಕೊಲ್ಹಾಪುರವನ್ನು ಅಗ್ರಗಾಮಿಯನ್ನಾಗಿ ಮಾಡಲಾಯಿತು.

**ಶಾಹುಛತ್ರಪತಿ ಮಿಲ್ಲುಗಳು**

ಕೈಗಾರಿಕಾ ಕ್ಷೇತ್ರದಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ಕೈಗೊಂಡ ಅತ್ಯಂತ ದೊಡ್ಡ ಕೈಗಾರಿಕೆ ಬಟ್ಟೆಗಿರಣಿ. ಶಾಹುರವರು ಅದಕ್ಕೆ ಪ್ರೋತ್ಸಾಹ ಮತ್ತು ಆಶ್ರಯ ನೀಡಿದರು. ೧೯೦೬ರಲ್ಲಿ 'ದಿ ಶಾಹು ಛತ್ರಪತಿ ಸ್ಪಿನ್ನಿಂಗ್ ಅಂಡ್ ವೀವಿಂಗ್ ಮಿಲ್ಲ'ನ್ನು ಸ್ಥಾಪಿಸಿದರು. ಶಾಹುರವರು ದೊಡ್ಡ ಭೂಪ್ರದೇಶ, ಪಕ್ಕದಲ್ಲಿರುವ ನೀರಿನ

ಕೆರೆ ಮತ್ತು ೫೦,೦೦೦ ರೂಪಾಯಿಗಳ ಬಂಡವಾಳವನ್ನು ಈ ಮಿಲ್ಲಿನ ಸ್ಥಾಪನೆಗೆ ನೀಡಿದರು. ಅದು ಕೊಲ್ಹಾಪುರದಲ್ಲಿರುವ ನೂರಾರು ಜನರಿಗೆ ಉದ್ಯೋಗವನ್ನು ಒದಗಿಸಿಕೊಟ್ಟಿತು. ಎಲ್ಲಕ್ಕಿಂತ ಮಿಗಿಲಾಗಿ ಕೊಲ್ಹಾಪುರ ಭಾರತದ ಬಟ್ಟೆಗಿರಣಿಗಳ ನಕಾಶೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆಯಿತು. ಶಾಹುರವರು ೧೯೦೬ರ ಸೆಪ್ಟಂಬರ್ ೨೭ರಂದು ವಿಜಯದಶಮಿಯ ದಿನದಂದು ಉದ್ಘಾಟಿಸಿದರು ಮತ್ತು ತಾನು ಯೂರೋಪಿನ ಪ್ರವಾಸ ಕೈಗೊಂಡಾಗ ಕೈಗಾರಿಕೆ ಮತ್ತು ವಾಣಿಜ್ಯದ ಕಲೆಯಲ್ಲಿ ಯೂರೋಪಿಯನ್ನರ ಪ್ರಗತಿಯ ಬಗ್ಗೆ ತಾನು ಹೇಗೆ ಪ್ರಭಾವಗೊಂಡ ಬಗೆಯನ್ನು ಮತ್ತು ತನ್ನ ಸಂಸ್ಥಾನದಲ್ಲಿ ಹೇಗೆ ಯೂರೋಪಿನ ನಿದರ್ಶನವನ್ನು ಹೇಗೆ ಅನುಸರಿಸಬೇಕೆಂಬ ಬಗ್ಗೆ ತಾನು ಅವಿರತನಾದ ಬಗೆಯನ್ನು ವಿವರಿಸಿದ್ದಾರೆ. ಶ್ರೀಮಂತ ವರ್ಗ ಮತ್ತು ಸಂಪತ್ತುಳ್ಳ ಜನರು ಈ ಮಿಲ್ಲನ್ನು ಸ್ಥಾಪಿಸಿವ ಬಗ್ಗೆ ಉಪಕ್ರಮ ಕೈಗೊಂಡ ಬಗ್ಗೆ ಸಂತೋಷವನ್ನು ವ್ಯಕ್ತಪಡಿಸುತ್ತಾ ಶಾಹುರವರು ಹೇಳುತ್ತಾರೆ: "ಸಂಸ್ಥಾನದ ಈಗಾಗಲೇ ಹೆಚ್ಚು ಕೆಲಸ ಮಾಡಿದ ಯಂತ್ರಗಳ ಶಕ್ತಿಗಳನ್ನು ಅದರ ಸುಗಮ ಕಾರ್ಯನಿರ್ವಹಣೆಗೆ ವಿರುದ್ಧವಾದ ಉದ್ದೇಶಗಳಿಗೆ ತಿರುಗಿಸಿದ್ದನ್ನು ನಾನು ವೈಯಕ್ತಿಕವಾಗಿ ವಿರೋಧಿಸುತ್ತೇನೆ ಮತ್ತು ಗುರಿಯಿದ್ದದ್ದು ಮತ್ತು ಜನರೇ ಸ್ವತಃ ಸಹಕಾರಿ ತತ್ವದ ಮೇಲೆ ತಂದು ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವುದಾಗಿತ್ತು.... ಯೋಜನೆಯು ಸಫಲವಾಗಲು ಸಂಪೂರ್ಣ ಸಹಕಾರ ಮತ್ತು ನೆರವಿನ ಭರವಸೆ ನೀಡುತ್ತಾ ಮತ್ತೆ ಅವರು ಯಾವುದೇ ಸಂದರ್ಭದಲ್ಲಿ ಈ ಕೈಗಾರಿಕೆಯು ಭಾರಿ ಮಿಲ್ ಮಾಲಿಕರ ಅಥವಾ ಶ್ರೀಮಂತ ಬಂಡವಾಳವಾದಿಗಳ ಕೈಗೆ ಬೀಳದಂತೆ ಎಚ್ಚರಿಕೆ ವಹಿಸಬೇಕೆಂದು ಹೇಳಿದರು ಮತ್ತು ವಾಣಿಜ್ಯ ಸಿದ್ಧಾಂತದ ಪ್ರತಿಭೆಗಳು ಮುಂಬೈ ಏಕಸ್ವಾಮ್ಯವಲ್ಲ ಎಂಬುದನ್ನು ಇಡೀ ಜಗತ್ತು ಅರ್ಥಮಾಡಿಕೊಳ್ಳುವಂತೆ ಮಾಡಬೇಕೆಂದು ಹೇಳಿದರು. ಸಾಂಪ್ರದಾಯಿಕವಾಗಿ ಮರಾಠರು ಹೊಸ ಭೂಮಿಗಳನ್ನು ಖರೀದಿ ಮಾಡುವ ಅಭಿಯಾನಗಳನ್ನು ವಿಜಯದಶಮಿ ದಿನದಂದು ಪ್ರಾರಂಭ ಮಾಡುತ್ತಾರೆ. ಆಧುನಿಕ ಕಾಲದಲ್ಲಿ ಈ ದಿನದ ಮಹತ್ವವನ್ನು ವಿವರಿಸುತ್ತಾ ಅಂತಿಮವಾಗಿ ಶಾಹು ಹೇಳುತ್ತಾರೆ: "ಈ ದಿನ ಗಡಿಯನ್ನು ದಾಟಿದ್ದೇವೆ ಮತ್ತು ವಿಜಯವನ್ನು ಸಾಧಿಸಿದ್ದೇವೆ. ಈ ಸಂಪ್ರದಾಯವನ್ನು ಇನ್ನೂ ಇಟ್ಟುಕೊಂಡಿದ್ದೇವೆ. ಭೌತಿಕ ಕೀರ್ತಿಗಾಗಿ ಗಡಿಗಳನ್ನು ದಾಟದಿದ್ದರೆ ಕೈಗಾರಿಕಾ ಅಭಿವೃದ್ಧಿಯ ಗೌರವಾನ್ವಿತ ವೈಭವದ ಶೋಧಕ್ಕಾಗಿ ನಮ್ಮ ಮನಸ್ಸುಗಳು ಅವುಗಳನ್ನು ದಾಟಲಿ. ನಾವು ನೆನಪಿಡಬೇಕು, 'ಯುದ್ಧಕ್ಕಿಂತ ಮಿಗಿಲಾದ ಜಯಗಳ ಕೀರ್ತಿಗಾಗಿರಲಿ. ಇಂದಿನ ದಿನಗಳಲ್ಲಿ ಸೋಮಾರಿತನ, ಮೌಢ್ಯ ಮತ್ತು ಬಡತನಗಳ ಮೇಲೆ ಜಯ ಸಾಧಿಸಬೇಕಾಗಿದೆ. ಈ ಅನಿಷ್ಟದ ವಿರುದ್ಧ ದೃಢವಾಗಿ ಹೋರಾಡೋಣ. ಆ ಸಫಲತೆಯು ನಿಮ್ಮ ಎಲ್ಲಾ ಪ್ರಯತ್ನಗಳಿಗೆ ಕಿರೀಟವನ್ನು ತೊಡಿಸುವುದು. ಇದು ನನ್ನ ಸ್ನೇಹಪೂರ್ವಕ ಹಿತಾಶಯ."[16]

ಈ ಮಿಲ್ಲು ಅಲ್ಲದೆ ಸಂಸ್ಥಾನದಲ್ಲಿ ಶಿರೋಳ, ಇಚಲಕರಂಜಿ ಮತ್ತು ಗಧಿಂಗ್ಲಾಜ್ ಕಡೆಗಳಲ್ಲಿ ಹಲವಾರು ಜಿನ್ನಿಂಗ್ ಮಿಲ್ಲುಗಳನ್ನು ತೆರೆಯಲಾಯಿತು. ೧೯೧೨-೧೩ರ ಸುಮಾರಿಗೆ ಹಲವಾರು ಉದ್ಯಮಗಳಾದ ಎಣ್ಣೆ ಮಿಲ್ಲು, ಮೊದಲ ಮರದ ಮಿಲ್ಲು, ಮೊದಲ ಫೌಂಡ್ರಿ, ಮೊದಲ ಸಾರಿಗೆ ಕಂಪನಿ ಮತ್ತು ಮೊದಲ ಎಲೆಕ್ಟ್ರಿಕ್ ಕಂಪನಿಗಳು ಸಂಸ್ಥಾನದಲ್ಲಿ ಕಾರ್ಯಾರಂಭಿಸಿದವು.[17] ವಿವಿಧ ಕೈಗಾರಿಕೆಗಳಿಗೆ ತರಬೇತಿ ಪಡೆದ ಕಾರ್ಮಿಕರನ್ನು ಒದಗಿಸಲು ರಾಜಾರಾಮ್ ಕೈಗಾರಿಕಾ ಶಾಲೆಯನ್ನು ತೆರೆಯಲಾಯಿತು. ವ್ಯಾಪಾರಸ್ಥರಿಗೆ ಮತ್ತು ಉದ್ಯಮದಾರರಿಗೆ ಸಂಸ್ಥಾನದಲ್ಲಿ ಅಲ್ಪಾವಧಿಯ ಸಾಲಗಳನ್ನು ಒದಗಿಸಲು ಸರಕಾರ ಪ್ರಾರಂಭಿಸಿತು.[18] ಸಂಸ್ಥಾನದ ಹೊರಗಡೆಯ ಉದ್ಯಮಗಳಿಗೆ ಶಾಹುರವರ ನೆರವಿನ ನಿದರ್ಶನಗಳು ಸಹ

ಲಭ್ಯವಾಗುತ್ತವೆ. ಫಲಾನುಭವಿಗಳಲ್ಲಿ ಪ್ರಮುಖರಾದ ಮುಂಬೈನ ವಿಶ್ವನಾಥ ಸಲ್ವೇಕರ್, ಸರ್ದಾರ್ ಗೃಹದ ಮಾಲೀಕರು ಮತ್ತು ಕಿರ್ಲೋಸ್ಕರ್ ಕೈಗಾರಿಕೆಯ ಲಕ್ಷ್ಮಣರಾವ್ ಕಿರ್ಲೋಸ್ಕರ್.[19]

**ಶಾಹು – ಸಹಕಾರಿ ತತ್ವದ ಅಗ್ರಗಾಮಿ**

ಶಾಹುರವರು ಸಂಸ್ಥಾನದ ಒಳಗೆ ಮತ್ತು ಹೊರಗೆ ಕೈಗಾರಿಕೆ ಮತ್ತು ವಾಣಿಜ್ಯದ ಅಭಿವೃದ್ಧಿಯನ್ನು ತೀವ್ರಗೊಳಿಸುವುದಕ್ಕೆ ಸಹಕಾರಿ ತತ್ವವನ್ನು ಈ ವಲಯದಲ್ಲಿ ಬಳಸಬೇಕೆಂದು ಒತ್ತಿಹೇಳಿದರು. ಆ ಕಾಲದ ಮಹಾರಾಜರಿಗೆ ಸಂಬಂಧಿಸಿದಂತೆ ಇದು ಅಭೂತಪೂರ್ವವಾಗಿತ್ತು. ಶಾಹುರವರು ಈ ದೇಶದಲ್ಲಿ ಸಹಕಾರಿ ತತ್ವದ ಪ್ರತಿಪಾದಕರಲ್ಲಿ ಅಗ್ರಗಣ್ಯರೆಂಬುದು ಮಹಾರಾಷ್ಟ್ರದ ಹೆಮ್ಮೆ ಎಂಬುದರಲ್ಲಿ ಸಂದೇಹವಿಲ್ಲ. ೧೯೦೬ರಲ್ಲಿ ಕೊಲ್ಹಾಪುರದ ಬಟ್ಟೆಗಿರಣಿಯ ಉದ್ಘಾಟನಾ ಸಮಾರಂಭದಲ್ಲಿ ಶಾಹುರವರು ಹೊಸ ಉದ್ಯಮಗಳನ್ನು ಪ್ರಾರಂಭಿಸುವುದಕ್ಕೆ ಸಂಸ್ಥಾನದ ಯಂತ್ರದ ಮೇಲೆ ಅವಲಂಬಿಸುವುದರ ಬದಲಿಗೆ ಜನರು ಮುಂದೆ ಬಂದು ಸಹಕಾರಿ ತತ್ವದ ಮೇರೆಗೆ ಕೈಗಾರಿಕೆಗಳನ್ನು ಸ್ಥಾಪಿಸಬೇಕೆಂದು ಹೇಳಿದರು. ೧೯೧೮ರಲ್ಲಿ ಮುಂಬೈ ಕಾರ್ಮಿಕರ ಸಾರ್ವಜನಿಕ ಸಭೆಯಲ್ಲಿ ಪ್ರತಿಯೊಂದು ಛಾಳಿನಲ್ಲಿ ಮತ್ತು ಕಾರ್ಖಾನೆಯಲ್ಲಿ ಸಹಕಾರಿ ಪತ್ತಿನ ಸಂಘವನ್ನು ಸ್ಥಾಪಿಸಬೇಕೆಂಬ ಸಲಹೆ ನೀಡಿದ್ದನ್ನು ನಾವು ಗಮನಿಸಬೇಕು. ನಂತರ ೧೯೨೦ರಲ್ಲಿ ರಾಜಾರಾಮ್ ಕೈಗಾರಿಕಾ ಶಾಲೆ ಕೃಷಿ–ಕೈಗಾರಿಕೆ ವಸ್ತುಪ್ರದರ್ಶನ ವ್ಯವಸ್ಥೆಗೊಳಿಸಿತ್ತು. ಅದರಲ್ಲಿ ಈ ಕ್ಷೇತ್ರಕ್ಕೆ ಸಂಬಂಧಿಸಿದ ಆಧುನಿಕ ಕೃಷಿ ಸಲಕರಣೆಗಳನ್ನು ಪ್ರದರ್ಶಿಸಲಾಗಿತ್ತು. ಈ ಸಂಘದ ಜೊತೆಯಲ್ಲಿ ಕೊಲ್ಹಾಪುರದ ಕ್ಷತ್ರಿಯ ಸಮುದಾಯ (ಜಿಂಗರ್ ಸಮುದಾಯ) ತನ್ನ ಸಮ್ಮೇಳನವನ್ನು ವ್ಯವಸ್ಥೆಗೊಳಿಸಿತ್ತು. ಈ ಸಮುದಾಯವು ಕರಕುಶಲ ವಸ್ತುಗಳ ಸಾಮಗ್ರಿಗಳನ್ನು ತಯಾರುಮಾಡುವಲ್ಲಿ ನುರಿತ ಹಸ್ತವಾಗಿತ್ತು. ಶಾಹುರವರು ಈ ಸಮುದಾಯದ ಕುಶಲಕರ್ಮಿಗಳು ವಿವಿಧ ರೀತಿಯ ವ್ಯವಹಾರ(ವ್ಯಾಪಾರ)ಗಳನ್ನು ಮಾಡುವುದಕ್ಕೆ ಪ್ರೋತ್ಸಾಹಿಸಿದರು.

ಈ ಸಮುದಾಯದ ಕುಶಲಕರ್ಮಿಯಾದ ದತ್ತೋ ಬಾಬಾಜಿ ಕಂಜಗಾರ್ ಅವರಿಗೆ ಕೊಲ್ಹಾಪುರದಲ್ಲಿ ಮೊಟ್ಟಮೊದಲ ಫೌಂಡ್ರಿ ಸ್ಥಾಪಕರೆಂಬ ಬಿರುದು ಸಲ್ಲುತ್ತದೆ. ಕಂಜಗಾರ್ ಅವರು ಕೈಗಾರಿಕೆ ಶಾಲೆಯ ಮಾಸ್ಟರ್ (ನುರಿತ ಅಧ್ಯಾಪಕ) ಕಮ್ಮಾರರಾಗಿದ್ದರು. ಶಾಹುರವರು ಕಬ್ಬನ್ನು ಅರೆಯುವ ಕಬ್ಬಿಣದ ಯಂತ್ರವನ್ನು ತಯಾರುಮಾಡುವ ಮತ್ತು ಒಂದೇ ಒಂದು ಎತ್ತಿನಿಂದ ಎರಡು ಬಕೆಟ್ಟುಗಳ ನೀರನ್ನು ಎತ್ತಲು ಸಹಕಾರಿಯಾಗುವ ಉಪಕರಣದ ಸ್ಥಾಪನೆಯ ಕೆಲಸವನ್ನು ಅವರಿಗೆ ವಹಿಸಿದ್ದರು.[20] ಅಂತಹ ನುರಿತ ಕುಶಲಕರ್ಮಿಗಳನ್ನು ಕೊಂಡಾಡುತ್ತಾ ಆ ಸಮ್ಮೇಳನದಲ್ಲಿ ಶಾಹುರವರು ಹೇಳಿದರು: "ಕರಕುಶಲ ವಸ್ತುಗಳಲ್ಲಿ ನಿಮ್ಮ ಸಮುದಾಯ ಪಡೆದಿರುವ ಕುಶಲಕಲೆಯು ಹೆಸರುವಾಸಿಯಾಗಿದೆ. ಅಂತಹ ಕೌಶಲ್ಯ ಬೇಕಾದ ನಾನು ನಿಮ್ಮ ಜಾತಿಯ ಸಮುದಾಯದ ಕುಶಲಕರ್ಮಿಗಳನ್ನು ನೆನಪಿಸಿಕೊಳ್ಳುವೆ. ಪ್ರತಿದಿನ ನಾನು ಬಳಸುವ ಹಲವು ಸಲಕರಣೆಗಳಲ್ಲಿ ನಿಮ್ಮ ಕುಶಲಕರ್ಮಿಗಳ ಕುಶಲಹಸ್ತವಿದೆ ಎಂಬ ಬಗ್ಗೆ ನನಗೆ ಬಹಳ ಸಂತೋಷವಾಗುತ್ತದೆ. ನನ್ನ ಪ್ರಜೆಗಳಲ್ಲಿ ಅಂತಹ ಕುಶಲಕರ್ಮಿಗಳಿರುವುದು ನನಗೆ ಹೆಮ್ಮೆಯಾಗುತ್ತದೆ. ಕುಶಲವಸ್ತುಗಳ ನಿಮ್ಮ ವಸ್ತುಪ್ರದರ್ಶನ ಮಾದರಿಯಾದದ್ದು. ನೀವು ಯಾವುದರಲ್ಲಿ ಸಮರ್ಥರೆಂಬುದನ್ನು ನೀವು ತೋರಿಸಿದ್ದೀರಿ. ನಾವು 'ಸ್ವದೇಶಿ'ಯನ್ನು ಕಟ್ಟುನಿಟ್ಟಾಗಿ ಪಾಲಿಸಿದರೆ ನಮ್ಮ ದೇಶಭಕ್ತರು ಇವುಗಳನ್ನು ತಯಾರು ಮಾಡಿದ್ದರೆಂಬುದನ್ನು ತೋರಿಸಿದಂತಾಗುತ್ತದೆ. ದೇಶದಲ್ಲಿ ಕರಕುಶಲತೆ ಮತ್ತು ಕೌಶಲ್ಯಗಳನ್ನು

ಪ್ರೋತ್ಸಾಹಿಸುವುದಕ್ಕೆ ಅಂತಹ ಪ್ರದರ್ಶನಗಳು ಅತ್ಯವಶ್ಯಕ ಎಂಬುದನ್ನು ಪಾಶ್ಚಿಮಾತ್ಯ ದೇಶಗಳು ರುಜುವಾತುಪಡಿಸಿವೆ. ಅವರು ಪ್ರತಿಯೊಂದು ಉತ್ಸವ ಅಥವಾ ಸಮಾರಂಭದ ಸಂದರ್ಭದಲ್ಲಿ ಸದಾ ಒಂದು ರಾಷ್ಟ್ರೀಯ ವಸ್ತುಪ್ರದರ್ಶನ ಒಂದು ಹೆಮ್ಮೆಯ ವಿಷಯವಾಗಿದೆ ನಿಮಗೆ ಮತ್ತು ಬೆಳೆಯುತ್ತಿರುವ ಕಲಾವಿದರಿಗೆ ನೀತಿಬೋಧೆಯಾಗಿದೆ. ಗಿರಾಕಿಯು ತನಗೆ ಬೇಕಾದ ಉಪಕರಣವನ್ನು ಎಲ್ಲಿಂದ ಪಡೆಯಬಹುದೆಂಬುದನ್ನು ಕಲಿಯುವ ಪ್ರಯೋಜನ ಪಡೆಯುತ್ತಾನೆ. ದೇಶದ ಪ್ರಗತಿ ವಾಣಿಜ್ಯ ಮತ್ತು ಕೈಗಾರಿಕೆಯ ಅಭಿವೃದ್ಧಿಯ ಮೇಲೆ ನಿಂತಿದೆ ಎಂಬ ತತ್ವವನ್ನು ನಾವು ಒಪ್ಪಲೇಬೇಕಾದ ತತ್ವವಾಗಿದೆ. ನಾನು ಕೈಗಾರಿಕೆಯ ಅಭಿವೃದ್ಧಿಯ ಬಗ್ಗೆ ತುಂಬಾ ಆಸಕ್ತನು. ಮತ್ತು ಈ ದಿಸೆಯಲ್ಲಿ ನನ್ನ ಪ್ರಯತ್ನಗಳನ್ನು ನೀವು ನೋಡುವಿರಿ".[21]

ಮೊದಲಿಗೆ ಈ ಜಿಂಗಾರ್ ಜನರು ತಮ್ಮ ಕೌಶಲ್ಯಗಳನ್ನು ಮಹಾರಾಜರು ಮತ್ತು ಶ್ರೀಮಂತರ ಆಶ್ರಯದಲ್ಲಿ ಬೆಳಸಿಕೊಂಡಿದ್ದರು. ಆದರೆ ಈಗ ಕಾಲ ಬದಲಾಗಿದೆ. ಆಧುನಿಕ ಯುಗ ಘೋಷಿತವಾಗಿದೆ ಮತ್ತು ಸಮಾಜದ ಸಂರಚನೆ ಬದಲಾಗುತ್ತಿದೆ. ಸಾಮಾನ್ಯ ಜನರು ರಾಜಕೀಯ ಮತ್ತು ಸಾಮಾಜಿಕವಾಗಿ ಖಂಡಿತವಾಗಿ ಎಚ್ಚರಗೊಳ್ಳುವರು ಮತ್ತು ಭವಿಷ್ಯದಲ್ಲಿ ರಾಜಕೀಯ ಅಧಿಕಾರ ಹಿಡಿಯುವವರೆಂದು ಶಾಹುರವರು ಭರವಸೆ ಹೊಂದಿದ್ದರಲ್ಲಿ ಯಾವ ಸಂದೇಹವಿರಲಿಲ್ಲ. ಕಾಲ ಬದಲಾಗುತ್ತಿರುವ ಹಿನ್ನೆಲೆಯಲ್ಲಿ ಅವರು ತಮ್ಮ ಪರಂಪರಾಗತವಾಗಿ ಬಂದ ವೃತ್ತಿಗಳನ್ನು ಸಂರಕ್ಷಿಸಿಕೊಳ್ಳಲು ಸಹಕಾರಿ ಎಂಬ ಮಂತ್ರವನ್ನು ಈ ಯುಗದಲ್ಲಿ ಸ್ವೀಕರಿಸಬೇಕೆಂದು ಶಾಹುರವರು ಅವರಿಗೆ ಸಲಹೆ ನೀಡಿದರು. ಅವರು ಹೇಳುತ್ತಾರೆ: "ಆಧುನಿಕ ಯುಗದಲ್ಲಿ ರಾಜಕೀಯ ಅಧಿಕಾರ ಸಾಮಾನ್ಯರಲ್ಲಿ ಸಂಚಯವಾಗುತ್ತಿರುವಾಗ ನಮ್ಮ ಹಳೇ ವಿಧಾನಗಳು ಉಪಯೋಗವಿಲ್ಲ. ಇಂದಿನ ದಿನಗಳಲ್ಲಿ ರಾಜಾಶ್ರಯಕ್ಕಿಂತ ಸಾರ್ವಜನಿಕ ಆಶ್ರಯ ಬಹಳ ಉಪಯುಕ್ತವಾದುದು. ವೈಯಕ್ತಿಕ ಶ್ರಮದ ದಿನಗಳು ಹೊರಟುಹೋದವು. ಸಂಕ್ಷಿಪ್ತವಾಗಿ ಹೇಳುವುದಾದರೆ ಅವರು ಪರಸ್ಪರ ಸಹಕರಿಸಬೇಕು. ಹಿಂದೆ ಹೆಚ್ಚೆಂದರೆ ಕುಟುಂಬ ಒಂದು ಕಡೆ ಕೆಲಸ ಮಾಡುತ್ತಿತ್ತು. ಬಂದ ಲಾಭ ಕುಟುಂಬಕ್ಕೆ ಸಾಕಾಗುತ್ತಿತ್ತು. ಈಗ ನಾವು ಕುಟುಂಬದ ನಿರ್ವಚನವನ್ನು ವಿಸ್ತರಿಸಬೇಕಾಗಿದೆ. ೧೦/೨೦/೫೦ ಕುಟುಂಬಗಳು ಒಂದು ವ್ಯವಹಾರಕ್ಕೆ ಒಟ್ಟಿಗೆ ಸೇರಬೇಕಾಗುತ್ತದೆ. ಅವರು ತಮ್ಮ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಸಂಭಾವನೆ ಪಡೆಯುತ್ತಾರೆ. ಶೇಖರಣೆಯಾದ ಲಾಭವನ್ನು ಹಂಚಲಾಗುವುದು. ಆದ್ದರಿಂದ ಸಹಕಾರಿ ತತ್ವವನ್ನು ಕಲಿಯಿರಿ. ನಿಮ್ಮದೇ ಆದ ಸಹಕಾರಿ ಪತ್ತಿನ ಸಂಘವನ್ನು ಪ್ರಾರಂಭಿಸಿ".[22]

ಸಹಕಾರಿ ತತ್ವಕ್ಕೆ ಕಾನೂನಿನ ಸ್ವರೂಪ ಕೊಡಲು ಶಾಹುರವರು ೧೯೧೨ರಲ್ಲಿ ತಮ್ಮ ಸಂಸ್ಥಾನದಲ್ಲಿ ಸಹಕಾರಿ ಸಂಘಗಳ ಕಾಯ್ದೆಯನ್ನು ಪಾಸು ಮಾಡಿದರು. ಸಹಕಾರಿ ಸಂಘಗಳ ಕಾನೂನುಬದ್ಧ ನೋಂದಣಿಗಾಗಿ ಒಬ್ಬ ರಿಜಿಸ್ಟ್ರಾರರನ್ನು ನೇಮಿಸಲಾಯಿತು. ಮುಂದಿನ ವರ್ಷವೇ ಭಾಸ್ಕರರಾವ್ ಜಾಧವ ಅವರ ನೇತೃತ್ವದಲ್ಲಿ 'ದಿ ಕೊಲ್ಹಾಪುರ ಅರ್ಬನ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್' ಎಂಬ ಹೆಸರಿನ ಮೊಟ್ಟಮೊದಲ ಸಹಕಾರಿ ಸಂಸ್ಥೆಯನ್ನು ಸ್ಥಾಪಿಸಲಾಯಿತು. ೧೯೨೧ಕ್ಕೆ ಸಂಸ್ಥಾನದಲ್ಲಿ ಸಹಕಾರಿ ಸಂಘಗಳ ಸಂಖ್ಯೆ ೩೭ಕ್ಕೆ ಏರಿತು.[23] ಸಂಸ್ಥಾನದ ಸಹಕಾರಿ ಆಂದೋಲನ ಪ್ರಗತಿ ಕೇವಲ ಪ್ರಮಾಣಮಾತ್ರದಲ್ಲಿ ಪ್ರಗತಿ ಹೊಂದಿದ್ದು ಮಾತ್ರವಲ್ಲದೆ ಗುಣಾತ್ಮಕವಾಗಿ ಪ್ರಗತಿ ಹೊಂದಲು ಪ್ರಾರಂಭವಾಯಿತು.

ವಿವಿಧ ಕೈಗಾರಿಕೆಗಳು ಮತ್ತು ವ್ಯವಹಾರಗಳು ಸಹಕಾರಿ ತತ್ವದಡಿಯಲ್ಲಿ ನಡೆಯುತ್ತಿರುವುದರಿಂದ ಹಸಿರು ಮತ್ತು ಶ್ವೇತಕ್ರಾಂತಿಗಳಲ್ಲಿ ಇಂದು ಕೊಲ್ಹಾಪುರ ಜಿಲ್ಲೆ ಮುಂಚೂಣಿಯಲ್ಲಿದೆ. ಇಡೀ ಜಿಲ್ಲೆಯ

ಗ್ರಾಮಾಂತರ ಭಾಗದಲ್ಲಿ ಸಹಕಾರಿ ಸಂಘಗಳ ಜಾಲವನ್ನು ರೂಪಿಸಲಾಗಿದೆ. ವಿವಿಧ ಕಾರ್ಯಕಾರಿ ಸಹಕಾರಿ ಸಂಘಗಳು ಕೃಷಿಗೆ ಆರ್ಥಿಕ ನೆರವು ಮತ್ತು ಕೃಷಿ ಸಲಕರಣೆಗಳನ್ನು ಒದಗಿಸುತ್ತವೆ. ಸಹಕಾರಿ ಒಡ್ಡು ನೀರಾವರಿ ಸಂಘಗಳು ನೀರಾವರಿಗೆ ನೀರು ಒದಗಿಸುತ್ತವೆ; ಸಹಕಾರಿ ಹಾಲು ಸಂಘಗಳು ರೈತರಿಂದ ಸಾವಿರಾರು ಲೀಟರು ಹಾಲನ್ನು ಸಂಗ್ರಹಿಸುತ್ತವೆ. ರೈತರಲ್ಲಿ ಉಳಿತಾಯದ ರೂಢಿಯನ್ನು ಗ್ರಾಮೀಣ ಪತ್ತಿನ ಸಂಘಗಳು ಕಲಿಸುತ್ತವೆ ಮತ್ತು ಕಷ್ಟಕಾಲದಲ್ಲಿ ಅವುಗಳು ಅವರಿಗೆ ಸಾಲಗಳನ್ನು ಒದಗಿಸುತ್ತವೆ. ಈ ಎಲ್ಲಾ ಸಹಕಾರಿ ಸಂಘಗಳು ತಮ್ಮ ಸ್ವಂತ ಬಲದ ಮೇಲೆ ಸ್ವಂತ ಬಂಡವಾಳದ ಸ್ವಾವಲಂಬಿಗಳಾಗಿರುವುದು ಮಹತ್ವದ ಸಂಗತಿಯಾಗಿದೆ. ಜಿಲ್ಲೆಯಲ್ಲಿ ಪ್ರಮುಖ ಹಣಕಾಸಿನ ಸಂಸ್ಥೆ 'ದಿ ಕೊಲ್ಹಾಪುರ ಡಿಸ್ಟ್ರಿಕ್ಟ್ ಸೆಂಟ್ರಲ್ ಕೋ–ಆಪರೇಟಿವ್ ಬ್ಯಾಂಕ್' ಆಗಿದೆ. ಅದು ಇಂದು ಮಹಾರಾಷ್ಟ್ರ ಮತ್ತು ಭಾರತದಲ್ಲಿ ಸಾಲವಿತರಣೆಯಲ್ಲಿ ಮತ್ತು ಕೃಷಿ ಉತ್ಪನ್ನಗಳ ಮಾರಾಟದ ಮೂಲಕ ಸಾಲವಸೂಲಾತಿಯಲ್ಲಿ ಅತಿ ಶ್ರೀಮಂತ ಮತ್ತು ಸಕ್ರಿಯ ಸಹಕಾರಿ ಬ್ಯಾಂಕ್ ಆಗಿದೆ. ಕೊಲ್ಹಾಪುರ ಜಿಲ್ಲೆಯು ಕಳೆದ ಹಲವಾರು ದಶಕಗಳಿಂದಲೂ ಸಕ್ಕರೆ ಕೈಗಾರಿಕೆಯಲ್ಲಿ ನಾಯಕ ಸ್ಥಾನದಲ್ಲಿದೆ ಮತ್ತು ಇಡೀ ಮಹಾರಾಷ್ಟ್ರದಲ್ಲಿ ಗರಿಷ್ಠ ಇಳುವರಿಯ ದಾಖಲೆಯನ್ನು ಸ್ಥಾಪಿಸಿದೆ.

ಶಾಹುರವರ ಕಾಲದಿಂದಲೂ ಇಡೀ ದೇಶದಲ್ಲಿ ಕೊಲ್ಹಾಪುರ ಬೆಲ್ಲಕ್ಕೆ ಹೆಸರುವಾಸಿಯಾಗಿದೆ ಮತ್ತು ಇಂದು ಸಹ ಅದರ ಖ್ಯಾತಿ ಮುಂದುವರಿಯುತ್ತಿದೆ. ಕೊಲ್ಹಾಪುರವು ಮಧ್ಯಮ ಪ್ರಮಾಣದ ಸಹಕಾರಿ ಸಂಘಗಳ ಮೂಲಕ ಹಾಲು ಸಂಗ್ರಹದಲ್ಲಿ ನಾಯಕ ಸ್ಥಾನವನ್ನು ಮಹಾರಾಷ್ಟ್ರದಲ್ಲಿ ಮಾತ್ರವಲ್ಲದೆ ಭಾರತದಲ್ಲಿ ಪಡೆದಿದೆ. ಕೊಲ್ಹಾಪುರ ಜಿಲ್ಲಾ ಸಹಕಾರಿ ಹಾಲು ಸಂಘವು ಹಾಲು ಸಂಗ್ರಹದಲ್ಲಿ ರಾಷ್ಟ್ರೀಯ ದಾಖಲೆಯನ್ನು ನಿರ್ಮಿಸಿದೆ. ಮಹಾರಾಷ್ಟ್ರದಲ್ಲಿ ಹತ್ತಿಯನ್ನು ವಿದರ್ಭ ಮತ್ತು ಮರಾಠವಾಡ ಪ್ರದೇಶಗಳಲ್ಲಿ ಬೆಳೆಯಲಾಗುತ್ತದೆ. ಆದರೆ ಹೆಚ್ಚು ದಕ್ಷತೆಯ ಮತ್ತು ಆದರ್ಶ ಮಿಲ್ಲುಗಳು ಕೊಲ್ಹಾಪುರ ಜಿಲ್ಲೆಯಲ್ಲಿ ದಾರವನ್ನು ತಯಾರು ಮಾಡುತ್ತವೆ. ಹತ್ತಿಯನ್ನು ಉತ್ಪಾದನೆ ಮಾಡದ ಕೊಲ್ಹಾಪುರ ಜಿಲ್ಲೆಯ ಸಹಕಾರಿ ಬಟ್ಟೆ ಮಿಲ್ಲುಗಳು ಉತ್ತಮ ಗುಣಮಟ್ಟದ ದಾರವನ್ನು ತಯಾರುಮಾಡಿ ವಿದೇಶಗಳಿಗೆ ರಫ್ತು ಮಾಡುತ್ತವೆ. ಸಾರರೂಪದಲ್ಲಿ ಕೊಲ್ಹಾಪುರವು ಸಹಕಾರಿ ವಲಯದಲ್ಲಿ ಗಮನಾರ್ಹವಾದ ಪ್ರಗತಿಯನ್ನು ತೋರಿಸಿದೆ. ನೂರು ವರ್ಷಗಳ ಹಿಂದೆ ಶಾಹು ಮಹಾರಾಜರು ಅಂಗೀಕರಿಸಿದ ಕೃಷಿ–ಕೈಗಾರಿಕಾ ನೀತಿ ಮತ್ತು ಈ ನೀತಿಯ ಜಾರಿಗಾಗಿ ಅವರು ನೀಡಿದ ಉತ್ತೇಜನವೇ ಈ ಸಫಲತೆಯ ಮೂಲ ಎಂಬುದನ್ನು ನಾವು ಮರೆಯುವಂತಿಲ್ಲ.

---

೨೯

# ಕಲೆಗಳು ಮತ್ತು ಕಲೆಗಾರರು

**ಶಾ**ಹುರವರ ಆಡಳಿತಾವಧಿಯಲ್ಲಿ ಕೊಲ್ಹಾಪುರದಲ್ಲಿ ಅಸ್ತಿತ್ವಕ್ಕೆ ಬಂದ ಮತ್ತು ನಂತರ ಕಾಲದಲ್ಲಿ ಅಭಿವೃದ್ಧಿಗೊಂಡ ಕಲೆಗಳ ವಿವಿಧ ರೂಪಗಳ ಒಂದು ವಿಹಂಗಮ ನೋಟವಾಗಿದೆ. ವಾಸ್ತವಿಕವಾಗಿ ಕೆಳಗೆ ನಿರೂಪಿಸಲಾದ ಪ್ರತಿಯೊಂದು ಕಲೆಯ ರೂಪವು ಕೊಲ್ಹಾಪುರದಲ್ಲಿ ಬಹಳ ಶ್ರೀಮಂತವಾದುದು ಮತ್ತು ಅದರ ವಿಷಯಕ್ಕೆ ಒಬ್ಬ ಸ್ವತಂತ್ರ ವಿದ್ವಾಂಸರೇ ಬೇಕಾಗುತ್ತದೆ. ಶಾಹುರವರ ಕಾಲದಲ್ಲಿ ಕೊಲ್ಹಾಪುರವು ಬೇಟೆ, ಕುಸ್ತಿ, ಸಂಗೀತ, ನಾಟಕ, ಚಿತ್ರಕಲೆ ಮೊದಲಾದವುಗಳ ಕೇಂದ್ರಸ್ಥಳವಾಗಿತ್ತು.

### ಬೇಟೆಯ ಕಲೆ

ಮೃಗಯ (ಬೇಟೆಯಾಡುವುದು) ಪ್ರಾಚೀನ ಕಾಲದಲ್ಲಿ ಮಹಾರಾಜರ ಮತ್ತು ಶ್ರೀಮಂತ ವರ್ಗಗಳ ಒಂದು ಹವ್ಯಾಸವಾಗಿತ್ತು ಮತ್ತು ಅದು ಕೇವಲ ಒಂದು ಹವ್ಯಾಸ ಅಥವಾ ವಿನೋದದ ಒಂದು ರೂಪವಾಗಿರಲಿಲ್ಲ. ಅದು ಒಂದು ಕ್ರೀಡೆ ಮತ್ತು ಯಾವುದೇ ಕ್ರೀಡೆ ಒಂದು ಕಲೆಯಾಗಿ ಒಂದು ವಿಚಿತ್ರ ರೀತಿಯಲ್ಲಿ ರೂಪುಗೊಳ್ಳುತ್ತದೆ. ಈ ದೃಷ್ಟಿಯಿಂದ ಬೇಟೆಯಾಡುವುದು ಅಥವಾ ಕುಸ್ತಿ (ಮಲ್ಲಯುದ್ಧ) ಮಾಡುವುದು ಒಂದು ಕಲೆಯೆಂದು ಪರಿಗಣಿಸಬೇಕಾಗುತ್ತದೆ.

ಜೊತೆಗೆ ಕೊಲ್ಹಾಪುರದ ರಾಜಕುಟುಂಬದಲ್ಲಿ ಬೇಟೆಯ ಹವ್ಯಾಸವು ಸಾಂಪ್ರದಾಯಿಕವಾಗಿ ನಡೆಯುತ್ತಿತ್ತು. ಆದರೆ ಕಿರಿಯ ರಾಜಕುಮಾರರ (ಮಹಾರಾಜರ) ಮಧ್ಯದ ಅವಧಿಯಲ್ಲಿ ಬೇಟೆ ಸಂಪೂರ್ಣವಾಗಿ ಅರ್ಧ ಶತಮಾನದವರೆಗೆ ನಿಂತುಹೋಗಿತ್ತು. ಶಾಹು ತಮ್ಮ ಆಡಳಿತಾವಧಿಯಲ್ಲಿ ಈ ಕಲೆಯನ್ನು ಪುನರುಜ್ಜೀವನಗೊಳಿಸಿದರು ಮತ್ತು ಅದನ್ನು ಅದರ ಪರಮಾವಧಿಗೆ ಕೊಂಡೊಯ್ದರು. ಶಾಹುರವರ ಮೊಮ್ಮಗ ಶಹಾಜಿ ಛತ್ರಪತಿ ಮತ್ತು ಕೊಲ್ಹಾಪುರದ ಕೊನೆಯ ಪಟ್ಟಾಭಿಷಿಕ್ತನಾದ ಮಹಾರಾಜರು ಕಟ್ಟಾ ಬೇಟೆಗಾರರಾಗಿದ್ದರು. ಅವರು ತಮ್ಮ ತಾತನ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಅದರಲ್ಲಿ ಅವರು ಹೇಳುತ್ತಾರೆ "ಬೇಟೆಯ ಕ್ರೀಡೆಯ ಪುನರುಜ್ಜೀವನದ ಲಾಭ ನಮ್ಮ ತಾತ ಶಾಹು ಮಹಾರಾಜರಿಗೆ ಸಲ್ಲಬೇಕು. ಮಹಾರಾಜರು ಬಂದೂಕವನ್ನು ನಿರ್ವಹಿಸುವುದರಲ್ಲಿ ಪರಿಣತರಾಗಿದ್ದರು ಮತ್ತು ಒಂದು ಶಾಟ್‌ಗನ್ನನ್ನು ಬಳಸುವುದರಲ್ಲಿ ನಿಪುಣರಾಗಿದ್ದರು. ಆಗ ಅವರ ನಿಜವಾದ ಪ್ರೀತಿ ಚಿರತೆ, ಡೇಗೆ, ಕಾಡುಹಂದಿಗಳನ್ನು ದಕ್ಷಿಣದಲ್ಲಿ ಪ್ರಮುಖವಾಗಿ ಬೇಟೆಯಾಡುವುದಾಗಿತ್ತು. ಚಿರತೆಯ ಬೇಟೆ (ಅಂದರೆ ಚಿರತೆಗಳ ಸಹಾಯದಿಂದ ಜಿಂಕೆಗಳನ್ನು ಬೇಟೆಯಾಡುವುದು) ಕೊಲ್ಹಾಪುರದ ಛತ್ರಪತಿಯ ವಿಶೇಷತೆಯಾಗಿತ್ತು".[1]

ಶಾಹುರವರು ಚಿರತೆಯನ್ನು ಬೇಟೆಯಾಡುವ ವಿಧಾನ(ಕಲೆ)ವನ್ನು ಕೊಲ್ಹಾಪುರಕ್ಕೆ ತಂದರು ಮತ್ತು ಅದನ್ನು ಒಂದು ಉತ್ಕೃಷ್ಟ ಕಲೆಯನ್ನಾಗಿ ಬೆಳೆಸಿದರು. ಕೊಲ್ಹಾಪುರವು ಈ ಕ್ರೀಡೆಯಿಂದ ಇಡೀ ದೇಶದಲ್ಲಿ ಉತ್ತಮ ಹೆಸರು ಪಡೆಯಿತು. ಶಾಹುರವರು ತಾವು ಕಲಿತ ಎಲ್ಲ ಬೇಟೆಗಳಲ್ಲಿ ತುಂಬ ಪ್ರಿಯವಾದ ಬೇಟೆ ಚಿರತೆಯ ಬೇಟೆಯಾಗಿತ್ತು. ಪ್ರಕೃತಿಯಲ್ಲಿ ಸಿಗುವ ಎಲ್ಲ ಪ್ರಾಣಿಗಳಲ್ಲಿ ವೇಗವಾಗಿ ಓಡುವ ಪ್ರಾಣಿ ಚಿರತೆ. ಅದರ ವೇಗವನ್ನು ಕಣ್ಣುಗಳಲ್ಲಿ ಅಳೆಯಲು ಸಾಧ್ಯವಿಲ್ಲ. ಇದರ ಜತೆಗೆ ಅದು ಓಡುವ ಅದರ ಓಟ (Rhythm) ಮತ್ತು ನೆಗೆತಗಳು ವೈಜ್ಞಾನಿಕ ವಿಧಾನವನ್ನು ಹೊಂದಿವೆ. ಬೇಟೆಯಲ್ಲಿ ಈ ಎಲ್ಲಾ ವೈಚಿತ್ರ್ಯಗಳನ್ನು ಬಳಸಲಾಗಿದೆ. ಒಂದು ಚಿರತೆಯನ್ನು ಈ ಉದ್ದೇಶಕ್ಕಾಗಿಯೇ ತರಬೇತಿಗೊಳಿಸಬೇಕಾಗಿದೆ. ಶಾಹುರವರು ಅಂತಹ ಚಿರತೆಗಳನ್ನು ಸಾಕಿದ್ದರು ಮತ್ತು ವಿಶೇಷ ವಿಧಾನಗಳನ್ನು ಬಳಸಿ ಅವುಗಳಿಗೆ ತರಬೇತಿ ನೀಡಿದ್ದರು. ಚಿರತೆಯ ಬೇಟೆಗಾಗಿ ಸಂಸ್ಥಾನದ ಅನೇಕ ಕಡೆಗಳಲ್ಲಿ ಸಂರಕ್ಷಿತ ಅರಣ್ಯಗಳನ್ನು ನಿರ್ಮಿಸಲಾಗಿತ್ತು. ಜಿಂಕೆಗಳ ಗುಂಪಿನಲ್ಲಿರುವ ಎರಳೆ(ಹುಲ್ಲೆ–ಒಂದು ಜಾತಿಯ ಜಿಂಕೆ)ಯನ್ನು ಮಾತ್ರ ಬೇಟೆಯಾಡುವಂತೆ ಚಿರತೆಗೆ ತರಬೇತಿಯನ್ನು ಕೊಡಲಾಗುತ್ತದೆ. ಬೇಟೆಯ ದಿನ ಶಾಹುರವರೇ ಸ್ವತಃ ರೋಷಾವೇಶದಿಂದ ಚಿರತೆಯನ್ನು ಗಾಡಿಯಲ್ಲಿಟ್ಟುಕೊಂಡು ಗಾಡಿಯನ್ನು ಓಡಿಸುತ್ತಿದ್ದರು. ಅವರು ಬಹಳ ದೂರದ ದೆಹಲಿ ಮೊದಲಾದ ಕಡೆಗಳಿಗೆ ಚಿರತೆಗಳನ್ನು ಬೇಟೆಗೆ ಕೊಂಡೊಯ್ಯುತ್ತಿದ್ದರು. ಅವರು ವೈಯಕ್ತಿಕವಾಗಿ ಚಿರತೆಗಳನ್ನು ಕೊಂಡೊಯ್ಯುವ ಗಾಡಿಗಳನ್ನು ತಾವೇ ರೂಪಿಸುತ್ತಿದ್ದರು. ಸಂಸ್ಥಾನಕ್ಕೆ ಭೇಟಿ ನೀಡುತ್ತಿದ್ದ ಗಣ್ಯವ್ಯಕ್ತಿಗಳಾದ ವೈಸ್‌ರಾಯ್, ಗೌರ್ನರರು ಮೊದಲಾದ ಅತಿಥಿಗಳು ಬಂದಾಗ ಚಿರತೆಯ ಬೇಟೆಗಳನ್ನು ಸಂಘಟಿಸುತ್ತಿದ್ದರು.[2]

ಮಹಾರಾಜರಿಗೆ ಕಾಡುಹಂದಿಗಳನ್ನು ಬೇಟೆಯಾಡುವುದರಲ್ಲಿ ಮತ್ತೊಂದು ತೀವ್ರಾಸಕ್ತಿಯಾಗಿತ್ತು. ಲಠ್ಠೆಯವರ ಪ್ರಕಾರ ಶಾಹುರವರು ಅತಿಭಯಂಕರ ಕ್ರೀಡೆಯಾದ ಈ ಬೇಟೆಯಿಂದ ಶಾಹುರವರಿಗೆ ಅತಿ ಆನಂದ ಸಿಗುತ್ತಿತ್ತು. ಒಂದು ಕಾಡುಹಂದಿಯನ್ನು ಕುದುರೆ ಮೇಲೆ ಕುಳಿತುಕೊಂಡು ಅಟ್ಟಿಸಿಕೊಂಡು ಹೋಗಿ ಕುದುರೆಯ ತುತ್ತತುದಿಯಿಂದ ಭರ್ಜಿಯನ್ನು (ಈಟಿ) ಬೀಸಿ ಅದನ್ನು ಕೊಲ್ಲುವುದು. ಈ ರೀತಿಯ ಬೇಟೆಗೆ ರಭಸವಾಗಿ ಸವಾರಿಮಾಡುವ ಕೌಶಲ್ಯಗಳು, ಧೈರ್ಯ, ಶೀಘ್ರಗತಿ, ಬುದ್ಧಿಯ ಕಟ್ಟೆಚ್ಚರ, ತಾಳ್ಮೆ ಮತ್ತು ಬೇಟೆಗಾರನ ದೈಹಿಕ ಬಲಗಳು ಬೇಕಾಗುತ್ತವೆ. ಕಾಡುಹಂದಿಯನ್ನು ಅಟ್ಟಿಸಿಕೊಂಡು ಹೋಗುವಾಗ ಕುದುರೆ ಮುಗ್ಗರಿಸಿದರೆ ಅಥವಾ ಭರ್ಜಿಗಳು ಗುರಿ ತಪ್ಪಿದರೆ ಇಡೀ ಬೇಟೆ ಸಾವಿನ ಹೋರಾಟವಾಗುತ್ತದೆ. ಶಾಹುರವರ ಚಿಕ್ಕ ರಾಜಕುಮಾರ ಶಿವಾಜಿ ಕಾಡುಹಂದಿಯ ಬೇಟೆಯಲ್ಲಿ ಸತ್ತುಹೋದರು.

ಹಲವು ಸಮಕಾಲೀನ ಭಾರತೀಯ ರಾಜರು ಕಾಡುಪ್ರಾಣಿಗಳಾದ ಹುಲಿ, ಕರಡಿ ಮೊದಲಾದ ದುಷ್ಟ ಪ್ರಾಣಿಗಳನ್ನು ಸಂಹರಿಸಲು ಬೇಟೆಯಲ್ಲಿ ತೊಡಗುತ್ತಿದ್ದರು. ಬೇಟೆಯಾಡುವುದಕ್ಕೆ ಧೈರ್ಯ, ಬುದ್ಧಿಯ ಕಟ್ಟೆಚ್ಚರ, ತಾಳ್ಮೆ, ನಿರ್ದಿಷ್ಟ ಗುರಿಯ ಹೊಡೆತ ಮೊದಲಾದ ಸಾಮರ್ಥ್ಯಗಳು ಬೇಕಾಗುತ್ತವೆ. ಶಾಹುರವರು ಈ ಗುಣಗಳನ್ನು ಹೊಂದಿದ್ದರು. ಅವರು ಅನೇಕ ಹುಲಿ ಮತ್ತು ಕರಡಿಗಳನ್ನು ಬೇಟೆಯಾಡಿದ್ದಾರೆ. ೧೮೯೬ರಲ್ಲಿ ತಮ್ಮ ೨೨ನೇ ವಯಸ್ಸಿನಲ್ಲಿ ೬ ಅಡಿ ಉದ್ದವಿರುವ ಭಯಂಕರವಾದ ಹುಲಿಯನ್ನು ಬೇಟೆಯಾಡಿದ್ದರು. ಈ ಬೇಟೆಯ ಕಾಲದಲ್ಲಿ ತಮ್ಮ ಬುದ್ಧಿಯ ಕಟ್ಟೆಚ್ಚರದಿಂದ ಒಂದು ಕ್ಷಣದಲ್ಲಿ ಸಾವಿನಿಂದ ಪಾರಾದರು. ರಾಧಾನಗರಿ ಕಾಡುಗಳಲ್ಲಿ ಭಯಂಕರವಾದ ಹೆಣ್ಣು ಕರಡಿಯು ಅವರ ಮೇಲೆ ಎರಗಿದಾಗ ತಮ್ಮ ಧೈರ್ಯವನ್ನು ಪ್ರದರ್ಶಿಸಿದರು. ಆಗ ಅವರು ಆ ಪ್ರಾಣಿಯೊಂದಿಗೆ ಕುಸ್ತಿಪಂದ್ಯದಲ್ಲಿ ಹೋರಾಡಿ ಗೆದ್ದಂತೆಯೇ ಗೆದ್ದರು. ಮತ್ತೊಂದು ಸಂದರ್ಭದಲ್ಲಿ ಶಾಹುರವರು ಪನ್ಹಾಲ ಪ್ರದೇಶದಲ್ಲಿ ತೆಂಡವಾ ಜಾತಿಯ

ಹುಲಿಯು ಭಯವನ್ನುಂಟು ಮಾಡಿತ್ತು. ಈ ವಿಷಯದಲ್ಲಿ ಅವರೇ ಹುಲಿಯ ಮೇಲೆ ದಾಳಿ ಮಾಡಿದರು. ತಮ್ಮ ಒಂದು ಕೈಯನ್ನು ಪೇಟದಿಂದ ಸುತ್ತಿಕೊಂಡು ಅದರ ಬಾಯಿಗೆ ತುರುಕಿ ಮತ್ತೊಂದು ಕೈಯಿಂದ ಪೇಟದಿಂದ ಅದರ ಕುತ್ತಿಗೆಗೆ ಸುತ್ತಿ ಬಲವಾಗಿ ಅಮುಕಿದರು. ಈ ಘಟನೆಯನ್ನು ಬೇಟೆಯ ಇತಿಹಾಸದಲ್ಲಿ ವಿಚಿತ್ರವೆಂದು ಪರಿಗಣಿಸಲಾಗಿದೆ. ಶಾಹುರವರು ಹುಲಿಯ ಬೇಟೆಯಲ್ಲಿ ಮತ್ತೊಂದು ಸಾಹಸದ ಕೆಲಸವನ್ನು ಮಾಡಿದ್ದಾರೆ. ೧೯೧೦ರಲ್ಲಿ ಅವರು ವೈಯಕ್ತಿಕವಾಗಿ ಒಂದು ದೊಡ್ಡ ಹುಲಿಯನ್ನು ಬೆನ್ನಟ್ಟಿದರು ಮತ್ತು ತನ್ನ ಕಾಡುನಾಯಿಗಳ ಸಹಾಯದಿಂದ ಅದನ್ನು ಬೇಟೆಯಾಡಿದರು. ಬೇಟೆಯಲ್ಲಿ ಅದು ಅಭೂತಪೂರ್ವವಾದದ್ದು. ಶಾಹುರವರು ಈ ಸಾಹಸದ ಕತೆಯನ್ನು ತನ್ನ ಗುರುಗಳಾದ ಫ್ರೆಜರ್ ಅವರಿಗೆ ತಿಳಿಸಿದ್ದಾರೆ. ತನ್ನ ಶಿಷ್ಯನಿಗೆ ಅಭಿನಂದನೆಗಳನ್ನು ಸಲ್ಲಿಸುತ್ತಾ ಅವರು ಹೇಳುತ್ತಾರೆ: "ಬೇಟೆನಾಯಿಗಳ ಒಂದು ಗುಂಪು ಚೆನ್ನಾಗಿ ಬೆಳೆದಿರುವ ಹುಲಿಯನ್ನು ಬೇಟೆಯಾಡುವುದು ಮಹಾಧೈರ್ಯದ ಕೆಲಸವಾಗುತ್ತದೆ. ನಾನು ಅಂತಹ ಘಟನೆಯನ್ನು ಎಲ್ಲಿಯೂ ಓದಿಲ್ಲ. ಇಡೀ ಪ್ರಕರಣ ಮಹತ್ತರವಾದದ್ದು. ಬಾಂಬೆಯ ಪ್ರಾಕೃತಿಕ ಇತಿಹಾಸದ ಸೊಸೈಟಿಯ ಪತ್ರಿಕೆಗೆ ವಿವರಗಳನ್ನು ಕಳುಹಿಸುವಿರೆಂದು ನಾನು ಭಾವಿಸುತ್ತೇನೆ."[3]

ಶಾಹುರವರು ಡೇಗೆ (Falcon)ಯ ಜೊತೆಯಲ್ಲಿ ಬೇಟೆಯಾಡುವ ಕಲೆಯನ್ನು ಬೆಳೆಸಿಕೊಂಡರು. ಅವರು ಡೇಗೆಗಳನ್ನು ಸಾಕಿದರು ಮತ್ತು ವಿವಿಧ ಜಾತಿಗಳ ಡೇಗೆಗಳಿಗೆ ತರಬೇತಿ ನೀಡಿದರು. ಈ ಡೇಗೆಗಳ ಸಹಾಯದಿಂದ ಅವರು ಅತಿಬಿರುಸಿನ ವೇಗದ ಎರಲೆ ಮತ್ತು ಮಾಲ್ಢೋಕುಗಳನ್ನು ಬೇಟೆಯಾಡುತ್ತಿದ್ದರು.

ಅವರಿಗೆ ಬೇಟೆಯಾಡುವ ಪ್ರೀತಿಯಿದ್ದರೂ ಅವರು ಕಾಡುಪ್ರಾಣಿಗಳ ಬಗ್ಗೆ ಮಮತೆಯನ್ನು ಬೆಳೆಸಿಕೊಂಡಿದ್ದರು. ತಮ್ಮ ಸಂಸ್ಥಾನದಲ್ಲಿ ಕಾಡುಪ್ರಾಣಿಗಳ ಸಂರಕ್ಷಣೆ ಮತ್ತು ಉಳಿಸಿಕೊಳ್ಳುವ ಬಗ್ಗೆ ಅವರು ಶಿಸ್ತುಬದ್ಧರಾಗಿದ್ದರೆಂಬುದನ್ನು ಗಮನಿಸಬೇಕು. ಕೊಲ್ಹಾಪುರದ ಪೂರ್ವದ ಪಕ್ಕದಲ್ಲಿ ಅವರು ಹುಲ್ಲೆಗಳಿಗೆ, ಕಾಡುಹಂದಿಗಳಿಗೆ, ಮೊಲಗಳಿಗೆ, ಕಾಡುಹಕ್ಕಿಗಳಿಗೆ ಸಂರಕ್ಷಿತ ಪ್ರದೇಶಗಳನ್ನು ನಿರ್ಮಿಸಿದ್ದರೆ, ಪಶ್ಚಿಮದ ಸಹ್ಯಾದ್ರಿಯಲ್ಲಿ ಹಲವು ಕಾಡುಪ್ರಾಣಿಗಳ ಅಭಯಾರಣ್ಯಗಳನ್ನು ರಚಿಸಿದ್ದರು. ಈ ಅಭಯಾರಣ್ಯಗಳಲ್ಲಿ ನಾನಾ ರೀತಿಯ ಪ್ರಾಣಿಗಳಾದ ಹುಲಿಗಳು, ಚಿರತೆಗಳು, ಎಲ್ಕ್(ಸಾರಂಗ), ಕಾಡುಕೋಣಗಳು, ಕರಡಿಗಳು, ಕಾಡುಹಂದಿಗಳು ಮತ್ತು ಸ್ಥಳೀಯ ಪ್ರಾಣಿಗಳು ಹಾಗೂ ವಲಸೆ ಬಂದ ಪಕ್ಷಿಗಳು ನೆಮ್ಮದಿಯಿಂದ ಇರುತ್ತಿದ್ದವು. ಶಾಹುರವರು ಈ ಅಭಯಾರಣ್ಯಗಳಿಗೆ ಕಾಡು ಆನೆಗಳನ್ನು ಸಾಗಿಸಿದರು ಮತ್ತು ಸ್ಥಳೀಯವಾಗಿ ದಪ್ಪಚರ್ಮದ ಆನೆಗಳ ತಳಿಗಳನ್ನು ಉತ್ಪತ್ತಿ ಮಾಡುವ ಪ್ರಯೋಗದಲ್ಲಿ ಸಫಲರಾದರು.[4]

ಶಾಹುರವರು ತಮ್ಮ ಮೃಗಾಲಯದಲ್ಲಿ ಆನೆಗಳು, ಒಂಟೆಗಳು, ಕುದುರೆಗಳು, ಚಿರತೆಗಳು ಮೊದಲಾದವುಗಳನ್ನು ಸಾಕಿದ್ದರಿಂದ ರಾಜಧಾನಿಗೆ ಒಂದು ಮೆರುಗು ಬಂದಿತ್ತು. ಅವರು ಅತಿಯಾಗಿ ಆನೆ ಮತ್ತು ಕುದುರೆಗಳನ್ನು ಪ್ರೀತಿಸುತ್ತಿದ್ದರು. ರೊಚ್ಚಿಗೆದ್ದ ಆನೆಯನ್ನು ನಿಯಂತ್ರಣಗೊಳಿಸುವುದಕ್ಕೆ ಶಾಹುರವರು ತಮ್ಮ ಪ್ರಾಣವನ್ನು ಪಣಕ್ಕೊಡ್ಡಿ ಆನೆಯನ್ನು ತಹಬಂದಿಗೆ ತಂದ ಘಟನೆಗಳನ್ನು ಅವರ ಜೀವನಚರಿತ್ರೆ ಒಳಗೊಂಡಿದೆ. ಅವರು ಬರೋಡದಿಂದ ಕೊಲ್ಹಾಪುರಕ್ಕೆ 'ಸಾತಮಾರಿ' ಎಂಬ ಬೇಟೆಯನ್ನು ತಂದಿದ್ದರು. ಸಾತಮಾರಿ ಎಂದರೆ ಕುಡಿದು ಮತ್ತೇರಿದ ಆನೆಯನ್ನು ಪಳಗಿಸುವುದು. ಅಂಥ ಆನೆಯನ್ನು ಅವರು ತಮ್ಮದೇ ಆದ ರೀತಿಯಲ್ಲಿ ಬೆಳೆಸಿದ್ದರು. ಆದರೆ ಕೊಲ್ಹಾಪುರದಲ್ಲಿ ಆಡುತ್ತಿದ್ದ ಕ್ರೀಡೆ ಹೆಚ್ಚು ಅಪಾಯಕಾರಿಯನ್ನಾಗಿ ಮಾಡಲಾಗಿತ್ತು. ಮತ್ತು ಬರೋಡಕ್ಕಿಂತ ಹೆಚ್ಚು ಉದ್ರೇಕಿಸುವಂತಹದ್ದಾಗಿತ್ತು. ತಮ್ಮ ವಿಚಾರಗಳಿಗೆ ಅನುಗುಣವಾಗಿ ಅಖಾಡವನ್ನು ಸಿದ್ಧಪಡಿಸಲಾಗಿತ್ತು. ಕುದುರೆ ಮೇಲೆ ಕುಳಿತು ಸವಾರಿ ಮಾಡುತ್ತಾ ಆಟವಾಡಬಹುದಿತ್ತು.

ಶಾಹುರವರ ಪ್ರಾಣಿಗಳನ್ನು ಪಳಗಿಸುವ ಸೇವಕರು ಕಾಲುಗಳಿಂದ ಆನೆಯ ಮೇಲೆ ದಾಳಿ ಮಾಡುತ್ತಾರೆ ಮತ್ತು ಪ್ರಾಣಿಯು ಅದಕ್ಕೆ ಪ್ರತೀಕಾರ ಎಸಗಿದಾಗ ಅವರು ಅಖಾಡದ ಆವರಣದಲ್ಲಿ ಸುಭದ್ರ ನೆಲೆ ಏರಿ ಕುಳಿತುಕೊಳ್ಳುತ್ತಾರೆ. ಇವು ಪೀಡಕನ ಬುದ್ಧಿಯ ಕಟ್ಟೆಚ್ಚರ ಮತ್ತು ಚಾಣಾಕ್ಷತೆಯ ಗುಣಗಳ ಪರೀಕ್ಷೆಯಾಗುತ್ತದೆ. ಶಾಹು ಕೊಲ್ಹಾಪುರ, ವರ್ತುಲ, ಸೋನ್‌ತಾಲಿ, ರಾಧಾನಗರಿ, ಪನ್ಹಾಲ ಮತ್ತು ರೂಕ್ಡಿಗಳಲ್ಲಿ ಈ ಆಟದ ವರ್ತುಲಗಳನ್ನು ಕಟ್ಟಿಸಿದ್ದಾರೆ. ಕೊಲ್ಹಾಪುರದಲ್ಲಿ ಒಂದು ವರ್ತುಲಕ್ಕೆ ೪೦,೦೦೦ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. (೧೯೧೫) ಅವರು ಪರಿಣಿತರನ್ನು ಹೊರಗಡೆಯಿಂದ ಕರೆಸಿಕೊಂಡು ಈ ಆಟಕ್ಕೆ ತನ್ನ ಜನರಿಗೆ ತರಬೇತಿ ಕೊಡಿಸಿದ್ದಾರೆ. ಶಂಕರರಾವ್ ತಾಸ್ಯೆ ಎನ್ನುವವರು ಪ್ರಮುಖ ಆಟಗಾರರು.

ಆನೆಗೆ ಹಿಂಸೆ ಕೊಡುವ ಕ್ರೀಡೆಯು ಸಾವಿನೊಂದಿಗೆ ಸರಸವಾಡುವ ಕ್ರೀಡೆಯಾಗಿದೆ. ಶಾಹುರವರು ಕೊಲ್ಹಾಪುರಕ್ಕೆ ಅಂಥ ಸಾಹಸದ ಕ್ರೀಡೆಯನ್ನು ತಂದರು ಮತ್ತು ಅದು ಬೆಳೆಯುವಂತೆ ಮಾಡಿದರು. ಬರೋಡಗೆ ಸಮನಾಗುವಂತೆ ಈ ಕ್ರೀಡೆಯು ಕೊಲ್ಹಾಪುರದ ಪ್ರಮುಖ ಕೇಂದ್ರವಾಯಿತು. ಶಾಹುರವರು ಈ ಕ್ರೀಡೆಯ ಬಗ್ಗೆ ಹೆಚ್ಚು ಆಸಕ್ತರಾಗಿ ಅವರೇ ಖುದ್ದಾಗಿ ಆಟದಲ್ಲಿ ಉಪಯೋಗಿಸುವ ವಿಶಿಷ್ಟ ಪಟಕಾರು (ಇಕ್ಕುಳ) ಮೊದಲಾದ ಉಪಕರಣಗಳ ಆಕಾರಗಳ(ಸ್ವರೂಪ)ನ್ನು ರೂಪಿಸುತ್ತಿದ್ದರು ಮತ್ತು ಅಂತಹ ಇಕ್ಕುಳಗಳನ್ನು ತಾಂತ್ರಿಕಶಾಲೆಯಲ್ಲಿ ತಯಾರು ಮಾಡಿಸುತ್ತಿದ್ದರು. ಇಂದು ಸಹ ಈ ಉಪಕರಣ ಗಳನ್ನು ಹೊಸ ಕೊಲ್ಹಾಪುರ ಅರಮನೆಯ ಶ್ರೀ ಶಾಹಜಿ ಛತ್ರಪತಿ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಿಡಲಾಗಿದೆ.

'ಸಾತಮಾರಿ'ಯ ಜೊತೆಯಲ್ಲಿ ಶಾಹುರವರು ಕೊಲ್ಹಾಪುರದಲ್ಲಿ ಆನೆಗಳ ಜಗಳ ಎಂಬ ಒಂದು ಹೊಸ ಕ್ರೀಡೆಯನ್ನು ಪರಿಚಯ ಮಾಡಿದ್ದಾರೆ. ಮೊದಲಲ್ಲಿ ಈ ಕ್ರೀಡೆಯು ಹಳೆ ಅರಮನೆಯ ಚೌಕದಲ್ಲಿ ನಡೆಯುತ್ತಿತ್ತು. ನಂತರ 'ಸಾತಮಾರಿ' ವರ್ತುಲಕ್ಕೆ ಸ್ಥಳಾಂತರಿಸಲಾಯಿತು. ಆನೆ ಸಂಘರ್ಷದ ಸಮಯದಲ್ಲಿ ಸೊಂಡಿಲುಗಳಿಗೆ ಹಾನಿಯಾಗದಂತೆ ತಡೆಯಲು ಒಂದು ಹೊಸ ವಿಧಾನವನ್ನು ಅಂಗೀಕರಿಸಲಾಯಿತು. ಎರಡು ಆನೆಗಳ ನಡುವೆ ಆರು ಅಡಿಯ ಗೋಡೆಯನ್ನು ನಿರ್ಮಿಸಲಾಗುವುದು. ಹೀಗೆ ಆನೆಗಳ ಮೃದುವಾದ ಸೊಂಡಿಲು ಮತ್ತು ಸೂಕ್ಷ್ಮವಾದ ಗಂಡಸ್ಥಳ (Temple) ರಕ್ಷಿಸಲಾಗುತ್ತದೆ.[5]

ಶಾಹುರವರು ಅತ್ಯಂತ ಕ್ರೂರಿಯಾದ ಚಿರತೆಯನ್ನು ಹೆಚ್ಚು ಪ್ರೀತಿಸುತ್ತಿದ್ದರು. ಈ ಭಯಂಕರವಾದ ಪ್ರಾಣಿಗೆ ಪ್ರೀತಿ ತೋರಿಸಿದರೆ ಅದು ತನ್ನ ಸಹಜವಾದ ಕೋಮಲತೆಯನ್ನು ಹಂಚಿಕೊಳ್ಳುತ್ತದೆ ಮತ್ತು ಪ್ರೀತಿಯನ್ನು ವಾಪಸ್ ಕೊಡುತ್ತದೆಯೆಂದು ಶಾಹು ಭಾವಿಸಿದ್ದರು. ಅತ್ಯಂತ ಕ್ರೂರಿಯಾದ ಆಫ್ರಿಕಾದ ಚಿರತೆಯನ್ನು ತಂದು ಅವರು ಸಾಕಿದ್ದರು. ಅವರು ಅದನ್ನು ಅತ್ಯಂತ ಹೆಚ್ಚು ಪ್ರೀತಿಯಿಂದ ಸಾಕಿಸಲಹಿದ್ದರು ಮತ್ತು ಅವರು ಈ ಪ್ರಾಣಿಯು ಎಂದಿಗೂ ದ್ರೋಹ ಬಗೆಯುವುದಿಲ್ಲ ಎಂದು ಭಾವಿಸಿದ್ದರು. ಚಿರತೆಯ ಸಾಧುತನವನ್ನು ಪರೀಕ್ಷಿಸಲು ಅವರು ಅದರ ಕಣ್ಣುಗಳಿಗೆ ಬಟ್ಟೆಕಟ್ಟಿ ಕೊಲ್ಹಾಪುರದಿಂದ ದೂರವಿರುವ ಕಾಡುಗಳಲ್ಲಿ ಬಿಟ್ಟುಬಿಟ್ಟರು. ಆಶ್ಚರ್ಯಕರವಾಗಿ ಶಾಹುರವರನ್ನು ಹುಡುಕಿಕೊಂಡು ವಾಪಸ್ ಬಂತು! ಅವರು ತಮ್ಮ ಒಂದು ಭಾಷಣದಲ್ಲಿ ಪ್ರೀತಿ ಪ್ರೀತಿಯನ್ನು ಕೊಡುತ್ತದೆ ಎಂಬ ತತ್ವವನ್ನು ಹೇಳುವಾಗ ಈ ಘಟನೆಯನ್ನು ಹೇಳಿದ್ದರು. ಶಾಹುರವರ ವಾಸದ ಕೊಠಡಿಯಲ್ಲಿ ಎರಡು ಬೆಳೆದ ಚಿರತೆಗಳು ಸಾಕಿದ ನಾಯಿಗಳಂತೆ ಸುತ್ತ ಮುಕ್ತವಾಗಿ ತಿರುಗಾಡುತ್ತಿದ್ದವು. ಆಸ್ಥಾನದ ಭಟ್ಟಂಗಿಗಳ ಜತೆಗಿಂತ ಹೆಚ್ಚಿಗೆ ಶಾಹುರವರು ಹುಲಿ, ಆನೆ, ಕುದುರೆಗಳ ಜೊತೆಯಲ್ಲಿ ಅವುಗಳ ಸ್ನೇಹವನ್ನು ಅನುಭವಿಸುತ್ತಿದ್ದರು.

## ಮಲ್ಲಯುದ್ಧದ ಕಲೆ

ಬೇಟೆಯ ಕಲೆಯಂತೆಯೇ ಕೊಲ್ಹಾಪುರದಲ್ಲಿ ಕುಸ್ತಿಕಲೆಯು ಚೆನ್ನಾಗಿ ಬೆಳೆಯಿತು. ಶಾಹುರವರ ಆಡಳಿತಾವಧಿಯಲ್ಲಿ ಕೊಲ್ಹಾಪುರದಲ್ಲಿ ಉತ್ತುಂಗ ಶಿಖರಕ್ಕೆ ಬೆಳೆದು ಇಡೀ ದೇಶದಲ್ಲಿ ಕೊಲ್ಹಾಪುರ ಖ್ಯಾತಿಯನ್ನು ಪಡೆಯಿತು. ಸಾಮಂತ ಮಹಾರಾಜರ ಕಾಲದಲ್ಲಿನ ಒಬ್ಬ ವಿದ್ವಾಂಸ ಹಿಂದುರಾವ್ ಸಾಲುಂಖೆ ತನ್ನ ಲೇಖನ ಒಂದರಲ್ಲಿ ಹೇಳಿದ್ದಾರೆ: "ಭಾರತದಲ್ಲಿ ಪಟಿಯಾಲ ಕುಸ್ತಿ ಕಲೆಯ ಗಂಗೋತ್ರಿ-ಉಗಮಸ್ಥಾನ ಎಂದು ಭಾವಿಸಿದ್ದರೆ ಕೊಲ್ಹಾಪುರವು ಕುಸ್ತಿಕಲೆಯ ತೌರುಮನೆ (ಮಹರ್) ಎಂದು ಕರೆಸಿಕೊಂಡಿದೆ. ಅದೇ ಧಾಟಿಯಲ್ಲಿ ಪಾಟಿಯಾಲದ ಮಹಾರಾಜ ರಾಘವೇಂದ್ರ ಸಿಂಗ್‌ರವರು ಕುಸ್ತಿಯ ರಸಿಕನೆಂದು ಹೆಸರುವಾಸಿ ಪಡೆದರೆ ಶಾಹುರವರು ಕುಸ್ತಿಕಲೆಯ ಆಶ್ರಯದಾತ ಎಂಬ ಖ್ಯಾತಿ ಪಡೆದರು. ಮತ್ತು ಕುಸ್ತಿಪಟುಗಳ ಕುಸ್ತಿಪಟು ಎಂದು ಪರಿಗಣಿತರಾಗಿದ್ದಾರೆ."[6]

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಕುಸ್ತಿಯು ಮಹಾರಾಜರು ಮತ್ತು ಶ್ರೀಮಂತವರ್ಗದಿಂದ ಆಶ್ರಯಸ್ಥಾನವನ್ನು ಪಡೆಯುತ್ತಾ ಬಂದಿದೆ. ಶಾಹುರವರ ಕಾಲದಲ್ಲಿ ದೇಶದಲ್ಲಿ ಈ ಕ್ರೀಡೆಯನ್ನು ಪ್ರೀತಿಸಿದ ರಾಜ-ಮಹಾರಾಜರಿದ್ದರು. ಈ ಮಹಾರಾಜರ ಮತ್ತು ಕೊಲ್ಹಾಪುರದ ಮಹಾರಾಜರ ನಡುವೆ ಒಂದು ವ್ಯತ್ಯಾಸವಿದೆ. ಶಾಹುರವರು ಸ್ವತಃ ಕುಶಲಿ ಕುಸ್ತಿಪಟುವಾಗಿದ್ದರು. ಅವರು ಹುಡುಗನಾಗಿದ್ದಾಗಲೇ ಅವರನ್ನು ಕುಸ್ತಿವಿದ್ಯೆಗೆ ಸೇರಿಸಲಾಗಿತ್ತು. ಅವರನ್ನು ರಾಜಕೋಟ ಮತ್ತು ಧಾರವಾಡಕ್ಕೆ ವಿದ್ಯಾಭ್ಯಾಸಕ್ಕೆ ಕಳುಹಿಸಿದಾಗ ಅವರ ಜೊತೆಯಲ್ಲಿ ಇಬ್ಬರು ಕುಸ್ತಿಪಟುಗಳನ್ನು ಕಳುಹಿಸಲಾಗಿತ್ತು. ಅವರು ೧೮೯೪ರಲ್ಲಿ ಪಟ್ಟಾಭಿಷಿಕ್ತರಾದಾಗ ಅವರು ಈ ಕುಸ್ತಿಕ್ರೀಡೆಯನ್ನು ಸಂಸ್ಥಾನದಲ್ಲಿ ಪುನರುಜ್ಜೀವನಗೊಳಿಸಲು ನಿರ್ಧರಿಸಿದರು. ಅದೇ ವರ್ಷ ಮೊದಲ ಕುಸ್ತಿಪಂದ್ಯವನ್ನು ನಡೆಸಲಾಯಿತು. ಮುಂದಿನ ವರ್ಷ ಮೋತಿಬಾಗ್‌ನಲ್ಲಿ ಗರಡಿಮನೆ (ಕುಸ್ತಿಶಾಲೆ) ಯನ್ನು ಹಳೆ ಅರಮನೆಯ ಬಯಲುಪ್ರದೇಶದ ಪಕ್ಕದಲ್ಲಿ ತೆರೆಯಲಾಯಿತು. ಈ ಗರಡಿಮನೆಯಲ್ಲಿ ಬೇರೆಬೇರೆ ಕುಸ್ತಿಪಟುಗಳ ಜೊತೆಯಲ್ಲಿ ಮಹಾರಾಜರು ಖುದ್ದಾಗಿ ಕುಸ್ತಿ ಕಲಿಯಲು ಮುಂದಾದರು ಮತ್ತು ಅವರ ಗುರುಗಳು ದತ್ತೋಬ ಶಿಂಧೆ, ಪಂಡೋಬ ಭೋಂಸ್ಲೆ ಮತ್ತು ಬಲೇಖಾನ್ ಪಠಾಣರಾಗಿದ್ದರು. ೧೮೯೭ರಲ್ಲಿ ಶಾಹುರವರಿಗೆ ಒಂದು ಗಂಡುಮಗುವಾಯಿತು. ತನ್ನ ಮಗನ ಹುಟ್ಟಿದ ದಿನವನ್ನು ಭವ್ಯವಾಗಿ ಆಚರಿಸಲು ಕುಸ್ತಿಸ್ಪರ್ಧೆಯನ್ನು ವ್ಯವಸ್ಥೆಗೊಳಿಸಿದರು. ಉತ್ತರದಿಂದ ಹೆಸರುವಾಸಿಯಾದ ಕುಸ್ತಿಪಟುಗಳನ್ನು ಭಾಗವಹಿಸಲು ಆಹ್ವಾನಿಸಲಾಗಿತ್ತು. ಪಂಜಾಬಿನ ಅತಿಥಿ ಕುಸ್ತಿಪಟುಗಳು ಒಬ್ಬರಾದ ಮೇಲೆ ಒಬ್ಬರನ್ನು ಸೋಲಿಸುತ್ತಾ ಹೋದರು. ಶಾಹುರವರಿಗೆ ಈ ಪರಾಭವವನ್ನು ಕಂಡು ಆಘಾತವಾಯಿತು ಮತ್ತು ಒಂದು ದಿನ ಕೊಲ್ಹಾಪುರದ ಕುಸ್ತಿಪಟುಗಳು ಪಂಜಾಬಿನ ಕುಸ್ತಿಪಟುಗಳನ್ನು ನೆಲಕಚ್ಚುವಂತೆ ಮಾಡಲಾಗುವುದೆಂದು ನಿರ್ಧರಿಸಿದರು. ಈ ಪರಾಭವದಿಂದ ಕಲಿತ ಪಾಠಗಳಲ್ಲಿ ಹಲವು ರಾಷ್ಟ್ರೀಯ ಕುಸ್ತಿಪಂದ್ಯಗಳಲ್ಲಿ ವಿಜೇತರಾದ ಕೊಲ್ಹಾಪುರದ ಕುಸ್ತಿಪಟುಗಳ ಭವಿಷ್ಯದ ಮಹತ್ವದ ಬೀಜಗಳು ಅಡಗಿದ್ದವು.

ಕಾಲ ಉರುಳಿದಂತೆಲ್ಲಾ ಶಾಹುಮಹಾರಾಜರು ಮಲ್ಲಯುದ್ಧಕ್ಕೆ ಉದಾರವಾದ ಆಶ್ರಯ-ನೆರವನ್ನು ವಿಸ್ತರಿಸುತ್ತಾ ಬಂದರು. ಕೊಲ್ಹಾಪುರದ ಪ್ರತಿಯೊಂದು ವಾರ್ಡಿನಲ್ಲಿ ಹೊಸ ಅಖಾಡ(ಕುಸ್ತಿಶಾಲೆ)ಗಳನ್ನು ಸ್ಥಾಪಿಸಿದರು. ಹಳೆ ಗರಡಿಮನೆಗಳಿಗೆ ಅನುದಾನಗಳನ್ನು ನೀಡಲಾಯಿತು ಮತ್ತು ಅವು ಚುರುಕಾಗಿ ಕೆಲಸ ಮಾಡತೊಡಗಿದವು. ಪ್ರತಿಭಾವಂತ ಕುಸ್ತಿಪಟುಗಳನ್ನು ಗುರುತಿಸಲಾಯಿತು ಮತ್ತು ಅವರ ತರಬೇತಿ ಮತ್ತು ಪಥ್ಯದ ಆಹಾರಗಳನ್ನು ವ್ಯವಸ್ಥೆಮಾಡಲಾಯಿತು. ಬೆಳೆಯುತ್ತಿರುವ ಕುಸ್ತಿಪಟುಗಳಿಗೆ ತರಬೇತಿ ನೀಡಲು

ಅನುಭವಸ್ಥ ಮತ್ತು ನುರಿತ ಕೋಚು(ಗುರು)ಗಳನ್ನು ನೇಮಿಸಲಾಯಿತು. ಈ ಕೋಚುಗಳು ಪಂಜಾಬಿ ಕುಸ್ತಿಪಟುಗಳ ಕಲಾಕೌಶಲ್ಯಗಳನ್ನು(ವರಸೆಗಳನ್ನು)ಚೆನ್ನಾಗಿ ಅವಲೋಕಿಸಿದರು ಮತ್ತು ತಮ್ಮ ಶಿಷ್ಯರಿಗೆ ಅವುಗಳನ್ನು ಕಲಿಸಿದರು.

ಕೊಲ್ಹಾಪುರದ ಕುಸ್ತಿಪಟುಗಳು ಸ್ವಲ್ಪದರಲ್ಲಿಯೇ ಕಲೆಯನ್ನು ಕರಗತಮಾಡಿಕೊಂಡರು. ಶಾಹುರವರ ಉಪಕ್ರಮದಲ್ಲಿ ಕುಸ್ತಿಪಂದ್ಯಗಳನ್ನು ಕೊಲ್ಹಾಪುರದಲ್ಲಿ ಒಂದು ವಾರದಲ್ಲಿ ಎರಡು ಬಾರಿ ಹಳೆ ಅರಮನೆ, ಹೊಸ ಅರಮನೆ ಮತ್ತು ಚೌಫಲ ಕುರುಚಲು ಪ್ರದೇಶದ ಬಯಲಿನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಗೆದ್ದವರ ಜೊತೆಯಲ್ಲಿ ಸೋತವರಿಗೂ ಬಹುಮಾನಗಳ್ನು ನೀಡಲಾಯಿತು ಮತ್ತು ಅವರ ಘನತೆಯನ್ನು ಉಳಿಸಿಕೊಳ್ಳಲಾಯಿತು. ಕ್ರಮೇಣ ಸಂಸ್ಥಾನದ ಜನರು ಕುಸ್ತಿಯಲ್ಲಿ ಆಸಕ್ತಿ ಬೆಳೆಸಿಕೊಂಡರು. ಗರಡಿಮನೆಗಳ ಜತೆಯಲ್ಲಿ ವ್ಯಾಯಾಮದ ಶಾಲೆಗಳನ್ನು ಇಡೀ ಸಂಸ್ಥಾನದ ಹಳ್ಳಿಗಳಲ್ಲಿ ಸ್ಥಾಪಿಸಲಾಯಿತು. ಈ ಹಳ್ಳಿಗಳಿಂದ ಯುವಕರು ಕೊಲ್ಹಾಪುರಕ್ಕೆ ಕುಸ್ತಿಯಲ್ಲಿ ಉನ್ನತ ತರಬೇತಿಗಾಗಿ ಬರತೊಡಗಿದರು. ಸಂಸ್ಥಾನದ ಹೊರಗಡೆಯ ಪೋಷಕರು ತಮ್ಮ ಮಕ್ಕಳಿಗೆ ಕುಸ್ತಿಯಲ್ಲಿ ತರಬೇತಿ ಕೊಡಿಸಲು ಕೊಲ್ಹಾಪುರಕ್ಕೆ ಕಳುಹಿಸತೊಡಗಿದರು. ಈ ಮಧ್ಯೆ ಉತ್ತರದಿಂದ ಪಂಜಾಬಿ ಕುಸ್ತಿಪಟುಗಳ ಗುಂಪು ಕೊಲ್ಹಾಪುರದಲ್ಲಿ ಕೊಲ್ಹಾಪುರ ಮಹಾರಾಜರ ಉದಾರವಾದ ಆಶ್ರಯವನ್ನು ಪಡೆಯಲು ಸಾಲಾಗಿ ನಿಲ್ಲುವುದನ್ನು ಮುಂದುವರಿಸಿದರು. ದರ್ಬಾರು ಅವರ ಅಭ್ಯಾಸ (ವ್ಯಾಯಾಮ) ಮತ್ತು ಪಥ್ಯದ ಆಹಾರಕ್ಕೆ ವ್ಯವಸ್ಥೆ ಮಾಡಿತ್ತು. ಈ ರೀತಿಯಲ್ಲಿ ಶಾಹುರವರು ಸ್ವತಃ ಕುಸ್ತಿಪಟುವಾಗಿದ್ದು ಅವರ ಕೌಶಲ್ಯವನ್ನು ಕುಸ್ತಿಯ ಕಲೆಗೆ ಮೀಸಲಿಟ್ಟರು.

೧೯೦೨ರಲ್ಲಿ ಶಾಹುರವರು ಇಂಗ್ಲೆಂಡಿನ ಮಹಾರಾಜ ಎಡ್ವರ್ಡ್– ಅವರ ಪಟ್ಟಾಭಿಷೇಕದ ಸಮಾರಂಭದಲ್ಲಿ ಭಾಗವಹಿಸಲು ಇಂಗ್ಲೆಂಡಿಗೆ ಹೋದಾಗ ಅವರು ಯೂರೋಪಿಗೆ ಭೇಟಿ ನೀಡಲು ಈ ಅವಕಾಶವನ್ನು ಬಳಸಿಕೊಂಡರು. ಅವರು ರೋಮಿನ ಭವ್ಯ ಪರಂಪರೆಯನ್ನು ನೋಡುತ್ತಿರುವಾಗ, ಪ್ರಾಚೀನ ರೋಮನರು ಕಟ್ಟಿಸಿದ ಕುಸ್ತಿ ಮತ್ತು ಮಲ್ಲಯುದ್ಧದ ದೊಡ್ಡ ಮತ್ತು ವಿಶಾಲವಾದ ಮೈದಾನ(ಅಖಾಡ)ವನ್ನು ನೋಡಿದರು ಮತ್ತು ಅದರ ಭಾರೀ ಗಾತ್ರವನ್ನು ಕಂಡು ಪ್ರಭಾವಗೊಂಡರು. ಅವರು ತಮ್ಮ ರಾಜಧಾನಿಯಲ್ಲಿ ಅಂಥದ್ದೇ ಮೈದಾನವನ್ನು ಕಟ್ಟಲು ನಿರ್ಧರಿಸಿದರು. ನಂತರ ಅವರು ೧೯೦೭ರಲ್ಲಿ ಕುಸ್ತಿಯ ಕ್ರೀಡಾಂಗಣವನ್ನು ಕಟ್ಟಲು ಪ್ರಾರಂಭಿಸಿದರು ಮತ್ತು ಅದನ್ನು ೧೯೧೨ರಲ್ಲಿ ಪರಿಪೂರ್ಣಗೊಳಿಸಿದರು. ಅದೇ ವರ್ಷ ಹೊಸ ಕ್ರೀಡಾಂಗಣವನ್ನು ಇಮಾಮ್ ಬಕ್ಷ್ ಮತ್ತು ಗುಲಾಮ್ ಮೊಯಿನುದ್ದೀನ್ ನಡುವಣ ಕುಸ್ತಿ ಪಂದ್ಯದ ಮೂಲಕ ಉದ್ಘಾಟಿಸಲಾಯಿತು. ಈ ಇಬ್ಬರು ಭಾರತದ ಮಹಾನ್ ಕುಸ್ತಿಪಟುಗಳಾಗಿದ್ದರು. ಈ ಕ್ರೀಡಾಂಗಣವು ಶಾಹುರವರ ಖಾಸ್‌ಬಾಗ್ ಮೈದಾನವೆಂದು ಪ್ರಸಿದ್ಧಿ ಪಡೆಯಿತು ಮತ್ತು ಇದಕ್ಕೆ ಸಮನಾದ ಯಾವುದೇ ಕುಸ್ತಿಮೈದಾನ ಇಂಡಿಯಾದಲ್ಲಿ ಇರಲಿಲ್ಲ. ಅದರ ನಿರ್ಮಾಣದ ನಂತರ ಕುಸ್ತಿಸ್ಪರ್ಧೆಗಳು ಕೊಲ್ಹಾಪುರದಲ್ಲಿ ನಿಯತವಾಗಿ ನಡೆಯಲು ಪ್ರಾರಂಭಿಸಿದವು. ಇಡೀ ದೇಶದಲ್ಲಿ ವಿಶೇಷವಾಗಿ ಪಂಜಾಬ್ ಮತ್ತು ದೆಹಲಿಗಳಿಂದ ಕುಸ್ತಿಪಟುಗಳು ಆಕರ್ಷಿತರಾದರು. ಕೊಲ್ಹಾಪುರವು ಭಾರತದ ಕುಸ್ತಿಯ ವಿಶ್ವವಿದ್ಯಾಲಯವಾಯಿತು.

ಶಾಹುರವರು ನೀಡಿದ ರಾಜಾಶ್ರಯದ ಪರಿಣಾಮದಿಂದಾಗಿ ಕೊಲ್ಹಾಪುರದಲ್ಲಿ ಒಂದು ಬಲಿಷ್ಠ ಕುಸ್ತಿಪಟುಗಳ ತಲೆಮಾರು ಪ್ರವರ್ಧಮಾನಕ್ಕೆ ಬಂತು. ಅಂತಹ ನೂರಾರು ಕುಸ್ತಿಪಟುಗಳಿದ್ದರು. ಅವರಲ್ಲಿ ಕೃಷ್ಣ ಮರದಾನೆ, ಶಿವಪ್ಪ ಬೆರದ, ವ್ಯಂಕಪ್ಪ ಬುರುದ, ಗಣಪತ ಶಿಂಧೆ, ಗೋವಿಂದ ಕಸಬೇಕರ್, ಬಾಬು

ಬೀರೆ, ಗಾನು ಭೋಂಸ್ಲೆ, ದೇವಪ್ಪ ಧನಗರ್, ದೇವ ಹರಲಿಂಗಾಲೆ, ಗೋಪಾಲ ಪಾರೀತ್, ಧ್ಯಾನು ಮಾಣೆ ಮೊದಲಾದವರು ಪ್ರಮುಖರು. ಈ ಕುಸ್ತಿಪಟುಗಳು ಉತ್ತರದ ಕುಸ್ತಿಪಟುಗಳನ್ನು ಸೋಲಿಸಿದರು. ಹೀಗೆ ಪರಾಭವಗೊಂಡವರಲ್ಲಿ ಪ್ರಸಿದ್ಧ ಕುಸ್ತಿಪಟುಗಳಾದ ಹಮ್ದು ಕಾಕ, ಭೋಲಾ ಪಂಜಾಬಿ, ಅಕ್ರಮ್ ನವರಂಗ್ ಸಿಂಗ್, ಧರ್ಮಸಿಂಗ್ ಮೊದಲಾದವರು ಪ್ರಮುಖರು. ಅವರಿಗೆ ಪಂಚಗಂಗಾ ನೀರನ್ನು ಕುಡಿಸಲಾಯಿತು. ಉತ್ತರದ ಕುಸ್ತಿಪಟುಗಳ ಏಕಸ್ವಾಮ್ಯತೆಯನ್ನು ಮುರಿಯಲಾಯಿತು. ೧೯೬೦ರಲ್ಲಿ ಮಹಾರಾಜರು ಕಂಡ ಕನಸು ನನಸಾಯಿತು. ಶಾಹುಮಹಾರಾಜರು ತಮ್ಮ ಕುಸ್ತಿಪಟುಗಳನ್ನು ಮಮತೆಯಿಂದ ಉಪಚರಿಸಿದಂತೆಯೇ ಉತ್ತರದ ಕುಸ್ತಿಪಟುಗಳನ್ನು ಉಪಚರಿಸಿದರು. ಉತ್ತರಭಾರತದ ಪ್ರಸಿದ್ಧ ಕುಸ್ತಿಪಟುಗಳಾದ ಗುಲಾಮ್ ಮೊಯಿನುದ್ದೀನ್, ಗುತ್ತಾ ಸಿಂಗ್, ರಾಜಬ್ ಪೈಲ್ವಾನ್, ಇಮಾಮ್ ಬಕ್ಷ್, ಕಲ್ಲು ಗಾಮ, ಗುಲಾಮ್ ಹೈದರ್, ವಜೀರ್ ಪಂಜಾಬಿ, ಫಕೀರ ಪಂಜಾಬಿ, ಉಸ್ಮಾನ್ ಪೈಲ್ವಾನ್, ಖಿಂದು ಪೈಲ್ವಾನ್, ನತ್ಥಾ ಪೈಲ್ವಾನ್ ಅವರು ಮಹಾರಾಜರ ಆತಿಥ್ಯ ಸತ್ಕಾರವನ್ನು ಪಡೆದು ಕೊಲ್ಹಾಪುರದ ಕುಸ್ತಿ ಕ್ರೀಡಾಂಗಣದಲ್ಲಿ ಹಲವು ದಿನಗಳವರೆಗೆ ನೆಲೆಸಿದ್ದರು. ಕುಸ್ತಿಪಟುಗಳ ವಸತಿ ಮತ್ತು ಊಟಗಳಿಗಾಗಿ ವಾರ್ಷಿಕ ೩೦,೦೦೦ ರೂ.ಗಳನ್ನು ಖರ್ಚುಮಾಡಲಾಗುತ್ತಿತ್ತು. (ಆ ದಿನಗಳಲ್ಲಿ ಒಂದು ರೂಪಾಯಿಗೆ ೧೦-೧೨ ಸೇರು ಹಾಲು ಕೊಡಲಾಗುತ್ತಿತ್ತು). ಈ ಖರ್ಚುಗಳನ್ನು ಮಹಾರಾಜರ ರಾಜಧನದಿಂದ ಖರ್ಚುಮಾಡಲಾಗುತ್ತಿತ್ತು. ಇದನ್ನು ಸಂಸ್ಥಾನದ ಖಜಾನೆಯಿಂದ ಖರ್ಚುಮಾಡುತ್ತಿರಲಿಲ್ಲ.[7]

ಶಾಹುರವರಿಗೆ ಕುಸ್ತಿಪಟುಗಳ ಜಾತಿಗಳು ಅಥವಾ ಧರ್ಮಗಳಿಗೆ ಪ್ರೋತ್ಸಾಹಿಸುವುದು ಮಹತ್ವದ್ದಾಗಿರಲಿಲ್ಲ. ತಮ್ಮ ಸ್ಫೂರ್ತಿ ಮತ್ತು ಪ್ರಚೋದನೆಯಿಂದ ಹಿಂದುಳಿದ ಸಮುದಾಯಗಳ ಮಹರರು, ಭಂಗಿಗಳು, ಬೆರದಗಳು, ಬುರುದುಗಳು ಮುಂದಕ್ಕೆ ಬಂದರು. ಕೋತಿ ಕುಣಿಸುವವರ ಅಲೆಮಾರಿ ಪಂಗಡದಿಂದ ಕೆಲವರನ್ನು ಶಾಹುರವರು ಕುಸ್ತಿಪಟುಗಳನ್ನಾಗಿ ಮಾಡಿದ್ದಾರೆ. ಅವರು ಮಹರ್ ಮತ್ತು ಭಂಗಿ ಕುಸ್ತಿಪಟುಗಳನ್ನು ಜಾಲ್, ಪೈಲ್ವಾನ್ ಮತ್ತು ಪಂಡಿತ್ ಪೈಲ್ವಾನ್‌ರೆಂದು ಅವರನ್ನು ಗೌರವಪೂರ್ವಕವಾಗಿ ಕರೆದರು. ಉತ್ತರದ ಜಾತಿನಿಷ್ಠ ಕುಸ್ತಿಪಟುಗಳು ಇವರೊಡನೆ ಪಂದ್ಯಕ್ಕೆ ಇಳಿಯಲು ಹಿಂಜರಿಯಬಾರದೆಂದು ಈ ಜಾತಿಗಳ ಕುಸ್ತಿಪಟುಗಳಲ್ಲಿ ಇದು ಒಂದು ಹೊಸ ಆತ್ಮಗೌರವವನ್ನು ಮೂಡಿಸಿತು. ಶಾಹುರವರ ಈ ಸರಳ ಕ್ರಿಯೆಯು ಬಹಳ ಕಾಲ ಉಳಿಯುವ ಸಾಮಾಜಿಕ ಪ್ರಭಾವವನ್ನುಂಟುಮಾಡಿತು.

ಶಾಹುರವರು ಕುಸ್ತಿಪಟುಗಳಿಗೆ ಆಶ್ರಯ ನೀಡಿದ್ದು ಮಾತ್ರವಲ್ಲದೆ ಅವರನ್ನು ತಮ್ಮ ಮಕ್ಕಳೆಂದು ಪ್ರೀತಿಸತೊಡಗಿದರು. ಅವರು ಕುರುಬರ ಮಗನಾದ ದೇವಪ್ಪ ಅವರನ್ನು ಕೊಲ್ಹಾಪುರಕ್ಕೆ ತಂದರು ಮತ್ತು ಅವರನ್ನು ಒಬ್ಬ ಬಲಿಷ್ಠ ಕುಸ್ತಿಪಟುವನ್ನಾಗಿ ತಯಾರುಮಾಡಿದರು. ದೇವಪ್ಪ ಮೊದಲಿಗೆ ಮಹಾರಾಜರ ರಥದ ಹಿಂದೆ ಆಯಾಸಗೊಳ್ಳದೆ ಒಂದೇ ಸಮನೆ ಓಡುತ್ತಿದ್ದ. ಅವು ಕುಸ್ತಿಯಲ್ಲಿ ಪ್ರಗತಿಯನ್ನು ಸಾಧಿಸಿದ್ದನ್ನು ನೋಡಿ ಮಹಾರಾಜರು ಅವನು ಕುಸ್ತಿಯಲ್ಲಿ ಅತ್ಯುತ್ತಮ ಪ್ರಶಸ್ತಿಯನ್ನು (ರುಸ್ತುಂ-ಐ-ಹಿಂದ್) ತರುವನೆಂಬ ದೃಢವಿಶ್ವಾಸ ಮೂಡಿತ್ತು. ದುರಾದೃಷ್ಟವಶಾತ್ ದೇವಪ್ಪ ಕಾಲರಾ ರೋಗಕ್ಕೆ ತುತ್ತಾದನು. ಅವನನ್ನು ನೋಡಲು ಶಾಹುರವರು ಆಸ್ಪತ್ರೆಗೆ ಹೋದಾಗ ಅವನನ್ನು ನೋಡಿ ಕಣ್ಣೀರು ಸುರಿಸುತ್ತಾ ವೈದ್ಯರಿಗೆ ಹೇಳಿದರು: "ಡಾಕ್ಟರೇ, ನನ್ನ ದೇವಪ್ಪನನ್ನು ಉಳಿಸಿ, ನಾನು ಅವನು ತೂಗುವಷ್ಟು ಬಂಗಾರವನ್ನು ನಿಮಗೆ ಕೊಡುವೆನು."[8] ಒಬ್ಬ ಮಹಾರಾಜನು ಕುಸ್ತಿಪಟುವನ್ನು ಅಂತಹ ರೀತಿಯಲ್ಲಿ ಪ್ರೀತಿಸಿದ್ದು ಅಪವಾದವೆಂದು ಪರಿಗಣಿಸಬೇಕಾಗುತ್ತದೆ.

ಕುಸ್ತಿಪಟುಗಳು ಸಹ ಮರಳಿ ತಮ್ಮ ಪ್ರೀತಿಯನ್ನು ಅದೇ ರೀತಿಯಲ್ಲಿ ತೋರಿಸಿದ್ದರು. ದೆಹಲಿ ದರ್ಬಾರಿನ ಸಂದರ್ಭದಲ್ಲಿ ಬ್ರಿಟಿಷ್ ಅಧಿಕಾರಿಗಳು ೧೯೧೧ರಲ್ಲಿ ಸಂಘಟಿಸಿದ್ದ ಸ್ಪರ್ಧೆಗಳಲ್ಲಿ ಅವರ ಪ್ರೀತಿಯನ್ನು ನೋಡಬಹುದು. ಆಟದ ಸ್ಥಳದಲ್ಲಿ ಭಾರತದ ಮೂಲೆಗಳಿಂದ ಬಂದಿದ್ದ ಕುಸ್ತಿಪಟುಗಳನ್ನು ಮತ್ತು ಕ್ರೀಡಾಭಿಮಾನಿಗಳನ್ನು ನೋಡಬಹುದಾಗಿತ್ತು. ಗಣ್ಯರಲ್ಲಿ ಸ್ವತಃ ವೈಸ್‌ರಾಯ್, ವಿವಿಧ ಪ್ರಾಂತ್ಯಗಳ ಗೌರ್ನರರು ಮತ್ತು ಉನ್ನತ ದರ್ಜೆಯ ಬ್ರಿಟಿಷ್ ಅಧಿಕಾರಿಗಳು ಪಾಲುಗೊಂಡಿದ್ದರು. ಈ ಜನಜಂಗುಳಿಯ ಕ್ರೀಡಾಂಗಣದಲ್ಲಿ ಶಾಹುರವರು ಧರಿಸಿದ್ದ ಸಾಮಾನ್ಯ ಉಡುಪು ಸಾಮಾನ್ಯ ಜನರನ್ನು ಆಕರ್ಷಿಸಿತು. ವಿಶೇಷವಾಗಿ ಉತ್ತರದ ಕುಸ್ತಿಪಟುಗಳು ಸಾಲಾಗಿ ನಿಂತು ಶಾಹುರವರಿಗೆ ಗೌರವ ನಮನ ಸಲ್ಲಿಸಿದರು. ಭಾರತದ ಎಲ್ಲಾ ಮಹಾಕುಸ್ತಿಪಟುಗಳು ಶಾಹು ಮಹಾರಾಜರಿಗೆ ವ್ಯಕ್ತಪಡಿಸಿದ ಸಾರ್ವಜನಿಕ ಗೌರವ ನಮನವಾಗಿತ್ತು. ಪಂಜಾಬಿನ ಮಹಾ ಕುಸ್ತಿಪಟು ಚಂದನ್ ಮಹಾರಾಜರ ಆಸನವನ್ನು ಹೊತ್ತುಕೊಂಡು ಹೋಗಿ ಅಖಾಡದ ವರ್ತುಲದ ಪ್ರವೇಶದ ಬಳಿ ಇಟ್ಟರು. ಸ್ಪರ್ಧೆಗಳು ಪ್ರಾರಂಭವಾದಾಗ ಸ್ಪರ್ಧೆಯನ್ನು ಉದ್ಘಾಟಿಸಬೇಕಾಗಿದ್ದ ರಹೀಮ್‌ಬಕ್ಷ ಮತ್ತು ಗಾಮ ಎಂಬ ಈರ್ವ ಸ್ಪರ್ಧಾಳುಗಳು ಅನುಪಸ್ಥಿತರಾಗಿದ್ದರು ಮತ್ತು ಗಣ್ಯವ್ಯಕ್ತಿಗಳ ಗೌರವದ ವಿಷಯವಾಗಿತ್ತು. ಪರಿಸ್ಥಿತಿಯನ್ನು ನಿಭಾಯಿಸಲು ಶಾಹುರವರೆ ಸ್ವತಃ ಮುಂದೆ ಬಂದು ಸಮಯಪ್ರಜ್ಞೆಯನ್ನೂ ತೋರಿಸುತ್ತಾ ಕೊಲ್ಹಾಪುರದಲ್ಲಿ ವಾಸವಾಗಿರುವ ಪಂಜಾಬಿ ಮಹಾಕುಸ್ತಿಪಟುಗಳಾದ ಗುಟ್ಟಾಸಿಂಗ್ ಮತ್ತು ನತ್ಥ ಎಂಬುವರ ನಡುವೆ ಕುಸ್ತಿ ಪಂದ್ಯ ನಡೆಯುವುದೆಂದು ಘೋಷಿಸಿದರು ಮತ್ತು ಈ ಕಾಲದ ಮಹಾಶಯರಾದ ಇಮಾಮ್‌ಬಕ್ಷ ಮತ್ತು ಹಸನ್‌ಬಕ್ಷ ಅವರನ್ನು ಈ ಸ್ಪರ್ಧೆ ಮೊದಲ ಸುತ್ತನ್ನು ನಡೆಸಬೇಕೆಂದು ಮನವಿ ಮಾಡಿದರು. ಇಬ್ಬರು ಮಹಾಶಯರು ಶಾಹುರವರ ಮನವಿಗೆ ಗೌರವಕೊಟ್ಟು ಅಂಗಳಕ್ಕೆ ಪ್ರವೇಶಿಸಿದರು. ಪ್ರಚೋದನಾತ್ಮಕ ಪ್ರದರ್ಶನದಿಂದ ಪ್ರೇಕ್ಷಕರ ಮನಸ್ಸನ್ನು ಗೆದ್ದರು. ಜನಜಂಗುಳಿ ಸಂತೋಷದಿಂದ ಕುಣಿದು ಕುಪ್ಪಳಿಸಿತು. ಶಾಹುರವರು ತಮ್ಮ ಪೇಟವನ್ನು ತೆಗೆದು ಇಮಾಮ್‌ಬಕ್ಷರ ತಲೆಯ ಮೇಲಿಟ್ಟು ಗೌರವಿಸಿದರು. ಹಸನ್‌ಬಕ್ಷ ಸೋತರೂ ಅವರು ತಮ್ಮ ಪ್ರತಿಭೆಯ ಕೌಶಲ್ಯಗಳನ್ನು ಪ್ರದರ್ಶಿಸಿದರು ಮತ್ತು ಅವರಿಗೆ ಅದೇ ರೀತಿಯ ಪೇಟವನ್ನು ಅವರ ತಲೆಯ ಮೇಲಿಟ್ಟು ಗೌರವಿಸಿದರು.[9] ದೆಹಲಿಯ ಐತಿಹಾಸಿಕ ಸ್ಥಳದಲ್ಲಿನ ಈ ಘಟನೆಯು ಶಾಹುರವರ ಪ್ರತಿಷ್ಠೆ(ಪ್ರತಿಮೆ)ಯನ್ನು ಇಡೀ ದೇಶದಲ್ಲಿ ಕುಸ್ತಿಕಲೆಯ ಆಶ್ರಯದಾತನೆಂದು ಅಚ್ಚೊತ್ತಿಬಿಟ್ಟಿತು.

ಕುಸ್ತಿಪಟುಗಳ ಗುಣಗಳನ್ನು ಹೊಗಳುವುದರಲ್ಲಿ ಶಾಹುರವರು ಮಹಾ ಉದಾರಿಗಳು. ಅವರು ಹಲವಾರು ಕುಸ್ತಿಪಟುಗಳಿಗೆ ಬೆಳ್ಳಿಗದೆಗಳನ್ನು, ಬಂಗಾರದ ಕಡಗಗಳನ್ನು ಮತ್ತು ಮಣಿಕಟ್ಟಿನ ಆಭರಣಗಳನ್ನು ಮತ್ತು ಪದಕಗಳನ್ನು ನೀಡಿದರು. ಅವರು ಕೆಲವು ವಿಜೇತರನ್ನು ಆನೆಗಳ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸಿದರು. ಕೆಲವರನ್ನು ದರ್ಬಾರಿನ ಸೇವೆಗೆ ಸೇರಿಸಿಕೊಂಡರೆ, ಮತ್ತೆ ಕೆಲವರಿಗೆ ವಾಸದ ಮನೆಗಳನ್ನು ಮತ್ತು ಕೃಷಿಯ ಭೂಮಿಯನ್ನು ಇನಾಮಾಗಿ ನೀಡಿದರು. ಕೆಲವರಿಗೆ ನಿವೃತ್ತಿ ವೇತನಗಳನ್ನು ನೀಡಿದರು. ಇದಕ್ಕಾಗಿ ವಿಶೇಷ ನಿಧಿಗಳನ್ನು ಸ್ಥಾಪಿಸಲಾಯಿತು. ಈ ನಿಧಿಗಳಿಂದ ವೃದ್ಧಾಪ್ಯದಲ್ಲಿ ಕುಸ್ತಿಪಟುಗಳಿಗೆ ಆರೋಗ್ಯಪಾಲನೆ ಮತ್ತು ಆರ್ಥಿಕ ನೆರವನ್ನು ಕಲ್ಪಿಸಲಾಯಿತು.

ಇಂದಿಗೂ ಕೊಲ್ಹಾಪುರ ಕುಸ್ತಿಯಲ್ಲಿ ಮುಂಚೂಣಿಯಲ್ಲಿನ ಮತ್ತು ಶಾಹುಯುಗದ ವೈಭವ ಪರಂಪರೆಯನ್ನು ಇನ್ನೂ ಇಟ್ಟುಕೊಂಡಿದೆ. ಈ ನಗರವು ರಾಷ್ಟ್ರಮಟ್ಟದಲ್ಲಿ ನಾಲ್ಕು ಬಾರಿ ನೀಡಿದ 'ಹಿಂದ್ ಕೇಸರಿ' ಗೌರವಪ್ರಶಸ್ತಿಯನ್ನು ಪಡೆದುಕೊಂಡಿದೆ. ಮಹಾ ಕುಸ್ತಿಪಟುಗಳಾದ ಶ್ರೀಪತ್‌ರಾವ್ ಖಾನ್‌ಬನಾಲೆ,

ಗಣಪತರಾವ್ ಅಂಡಾಳ್ಕರ, ಹಜರತ್‌ಪಟೇಲ, ದಿನನಾಥಸಿಂಗ್ ಮತ್ತು ಜೌಗಲೆ ಅವರು ಉಪಾಧಿಗಳನ್ನು ಗಳಿಸಿದ್ದಾರೆ. ಹರಿಶ್ಚಂದ್ರ ಬಿರಜ್‌ದಾರ್, ದಾದು ಜೌಗುಲೆ ಅವರು ಸಮಾನವಾದ 'ರುಸ್ತುಂ-ಐ-ಹಿಂದ್' ಎಂಬ ಬಿರುದುಗಳನ್ನು ಗಳಿಸಿದ್ದಾರೆ. ಹಜರತ್‌ಪಟೇಲರನ್ನು ಬಿಟ್ಟು ಎಲ್ಲರೂ ಬದುಕಿದ್ದಾರೆ ಮತ್ತು ನಗರಕ್ಕೆ ಮೆರುಗು ನೀಡಲು ಇಲ್ಲಿಯೇ ವಾಸವಾಗಿದ್ದಾರೆ. ಶಾಹುರವರ ಅಗ್ರಗಾಮಿ ಕೆಲಸಕ್ಕಾಗಿ ಇವರೆಲ್ಲರು ಅವರಿಗೆ ಋಣಿಗಳಾಗಿದ್ದಾರೆ. ಹರಿಯಾಣದ ಮಹಾ ಕುಸ್ತಿಪಟು ಸತ್ಪಾಲರ ಸವಾಲನ್ನು ಸ್ವೀಕರಿಸಿ ಮತ್ತೊಬ್ಬ ರಾಷ್ಟ್ರೀಯ ಕುಸ್ತಿಪಟು ಯುವರಾಜ ಪಾಟೀಲ್ ಸತ್ಯಪಾಲರೊಡನೆ ಮೂರು ಬಾರಿ ಕುಸ್ತಿಪಂದ್ಯದಲ್ಲಿ ಸ್ಪರ್ಧಿಸಿ ಗೆದ್ದಿದ್ದಾರೆ. ೧೯೯೧ರಲ್ಲಿ ಕೊಲ್ಹಾಪುರದ ಜನರು ಸತ್ಪಾಲದ ಕೋಚು ಪದ್ಮಶ್ರೀ ಗುರುಹನುಮಾನರಿಗೆ ಶಾಹು ಪುರಸ್ಕಾರ ನೀಡಿ ಗೌರವಿಸಿದ್ದಾರೆ. ಶಾಹು ಬೆಳೆಸಿದ ಪರಂಪರೆಗೆ ಈ ಗೌರವ ಪುರಸ್ಕಾರ ನೀಡಿಕೆ ಸೂಕ್ತವಾಗಿದೆ.

## ಪೌರುಷದ ಕ್ರೀಡೆಗಳು (ಮರ್ದಾನಿಖೇಲ್)

ಶಾಹುರವರು ಕುಸ್ತಿ ಕ್ರೀಡೆಯಲ್ಲದೆ ಇತರೆ ಹಲವು ಪೌರುಷ ಕ್ರೀಡೆಗಳಾದ (ಮರ್ದಾನಿಖೇಲ್) ದಂಡಪಟ್ಟ, ಫರಿಗಡ್ಗ, ವೀಟ, ಜಂಬಿಯ, ಬಾಣಕ್ರೀಡೆಗಳು ಶಿವಾಜಿ ಮಹಾಶಯರ ಕಾಲದಿಂದಲೂ ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿದ್ದವುಗಳನ್ನು ಪುನರುಜ್ಜೀವನಗೊಳಿಸಿದರು. ಒಬ್ಬ ಮರಾಠ ಯುವಕನಿಗೆ ಈ ಎಲ್ಲಾ ಕ್ರೀಡೆಗಳ ಮೂಲಕ ಯುದ್ಧದ ಕಲೆಯಲ್ಲಿ ತರಬೇತಿ ನೀಡಲಾಗಿತ್ತು. ಶಿವಾಜಿಯ ಕಾಲದ ವೀರರಲ್ಲಿ (ಹೋರಾಟಗಾರರು) ಬಾಜಿಪಸಲ್ಕರ್, ಬಾಜಿ ಪ್ರಭುದೇಶಪಾಂಡೆ, ಸಂತಜಿ ಘೋರ್ಪಡೆಯವರು ಈ ಕ್ರೀಡೆಗಳಲ್ಲಿ ನಿಪುಣರಾಗಿದ್ದರು. ಈ ಪರಂಪರೆಗೆ ಶಾಹು ಹೊಸ ಪ್ರಾಣ ನೀಡಿದರು. ತಮ್ಮ ಕುಸ್ತಿ ಕೋಚು (ಗುರು) ವಸ್ತಾದ ಹಸನ್ ಬಲೆಖಾನರು ಆಯುಧಗಳಲ್ಲಿ ಪರಿಣತರಾಗಿದ್ದರು. ಅವರಲ್ಲದೆ ಹಲವರಾದ ದಾದುಮಾಲಿ, ಯಸ್ವ ಹುಜರೆ, ಯಶವಂತರಾವ್ ಸಾಲುಂಖೆ, ಗಣಪತರಾವ್ ಸಾಣೆ, ಬಾಲಾ ನಲವಡೆ ಮೊದಲಾದವರು ಈ ಕ್ರೀಡೆಗಳಲ್ಲಿ ಪರಿಣತರಾಗಿದ್ದರು. ಶಾಹು ಅವರನ್ನು ಪ್ರೋತ್ಸಾಹಿಸಿದರು ಮತ್ತು ಅವರ ಮಾರ್ಗದರ್ಶನದಲ್ಲಿ ಯುವ ಕ್ರೀಡಾಪಟುಗಳ ಒಂದು ತಲೆಮಾರನ್ನು ಬೆಳಕಿಗೆ ತಂದರು. ಪ್ರತಿಯೊಂದು ಗರಡಿಮನೆಯಲ್ಲಿ ಕುಸ್ತಿಯ ಜೊತೆಗೆ ಪೌರುಷ ಕ್ರೀಡೆಗಳಿಗೆ ತರಬೇತಿ ನೀಡಲಾಗುತ್ತಿತ್ತು ಮತ್ತು ಕುಸ್ತಿಪಟುಗಳ ಜೊತೆಯಲ್ಲಿ ಈ ಪೌರುಷದ ಕ್ರೀಡಾಪಟುಗಳು ಪೌರುಷದ ಕ್ರೀಡೆಗಳೊಂದಿಗೆ ತಮ್ಮ ಕೌಶಲ್ಯದಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದರು. ಕುಸ್ತಿಪಂದ್ಯಗಳ ಸ್ಪರ್ಧೆಗಳ ಸಮಯದ ಪ್ರಾರಂಭದಲ್ಲಿ ಈ ಕ್ರೀಡೆಗಳ ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸಲಾಗುತ್ತಿತ್ತು. ಸಂಸ್ಥಾನಕ್ಕೆ ವೈಸ್‌ರಾಯ್ ಮೊದಲಾದ ಗಣ್ಯವ್ಯಕ್ತಿಗಳು ಭೇಟಿ ನೀಡಿದಾಗ ಅವರ ಗೌರವಾರ್ಥ ಈ ಕ್ರೀಡೆಗಳ ವ್ಯವಸ್ಥೆ ಮಾಡಲಾಗುತ್ತಿತ್ತು.

'ವೀಟ' ಎಂಬ ಕ್ರೀಡೆಯಲ್ಲಿ ಕ್ರೀಡಾಪಟು ವೀಟ ಎಂಬ ಉಪಕರಣವನ್ನು ೧೫-೨೦ ಅಡಿ ಸುತ್ತಳತೆಯ ವರ್ತುಲದೊಳಕ್ಕೆ ಸುಮಾರು ೧೨ ಜನರು ತನ್ನ ಮೇಲೆ ದಾಳಿಮಾಡಲು ಅವಕಾಶ ಕೊಡದಂತೆ ಆಶ್ಚರ್ಯಕರವಾದ ರೀತಿಯಲ್ಲಿ ಅದನ್ನು ಉಪಯೋಗಿಸುತ್ತಾನೆ. ಬ್ರಿಟಿಷ್ ಅಧಿಕಾರಿಗಳು ಆಟಗಾರನ ಕೌಶಲ್ಯವನ್ನು ಮತ್ತು ವೇಗಗತಿಯನ್ನು ತುಂಬಾ ಮೆಚ್ಚಿಕೊಳ್ಳುತ್ತಾರೆ. ಶಿವಾಜಿಯ ಸ್ಮರಣೆಗೆ ಅಡಿಗಲ್ಲು ಹಾಕುವ ಸಮಾರಂಭಕ್ಕೆ ಪುಣೆಗೆ ವೇಲ್ಸ್‌ನ ರಾಜಕುಮಾರ ಬಂದಾಗ ಶಾಹುರವರ ಬಲೆಖಾನ್ ವಸ್ತಾದರಿಂದ ಪೌರುಷದ ಕ್ರೀಡೆಗಳ ಪ್ರದರ್ಶನ ವ್ಯವಸ್ಥೆಗೊಳಿಸಿದ್ದರು. ಬಲೆಖಾನರು ವೀಟವನ್ನು ಪ್ರದರ್ಶಿಸಿದರು ಮತ್ತು

ತಮ್ಮ ಕೌಶಲ್ಯದಿಂದ ಪ್ರೇಕ್ಷಕರನ್ನು ಬೆಚ್ಚಿಬೀಳಿಸಿದರು. ಮದ್ರಾಸಿನಲ್ಲಿ ಅಂಥದ್ದೆ ಪ್ರದರ್ಶನವನ್ನು ನಡೆಸಲಾಯಿತು. ಅಡಿಯಾರಿನ ಥಿಯಾಸಫಿಕಲ್ ಸೊಸೈಟಿಯ ಡಾ. ಅರುಂಡೇಲರು ಕೊಲ್ಹಾಪುರಕ್ಕೆ ಭೇಟಿ ನೀಡಿದಾಗ ಈ ಕ್ರೀಡೆಗಳಿಂದ ಖುಷಿಗೊಂಡ ಅವರು ಅಡಿಯಾರಕ್ಕೆ ಈ ಕ್ರೀಡೆಗಳ ಒಂದು ತಂಡವನ್ನು ಕಳುಹಿಸಿಕೊಡುವಂತೆ ಶಾಹುರವರನ್ನು ಕೇಳಿಕೊಂಡರು. ಈ ತಂಡವು ತನ್ನ ಪ್ರತಿಭೆಯನ್ನು ಮದ್ರಾಸು ಮತ್ತು ಅಡಿಯಾರು ಸೇರಿದಂತೆ ಹಲವು ಸ್ಥಳಗಳಲ್ಲಿ ಪ್ರದರ್ಶನಗಳನ್ನು ನಡೆಸಿಕೊಟ್ಟಿತು. ಮದ್ರಾಸಿನಲ್ಲಿ ಗೌರ್ನರರ ಮುಂದೆ ಈ ತಂಡ ಆಟಗಳನ್ನು ಆಡಿತು. ಗೌರ್ನರರು ಸೇರಿದಂತೆ ಪ್ರತಿಯೊಬ್ಬ ಆಟಗಾರರು ಪ್ರದರ್ಶಿಸಿದ ವಿವಿಧ ಆಟಗಳಾದ ದಂಡಪಟ್ಟ, ಫರಿಗಡ್ಗ, ವೀಟ, ಜಾಂಬಿಯಾ ಮೊದಲಾದ ಆಟಗಳ ಪರಿಣತಿಯನ್ನು ನೋಡಿದರು. ಗೌರ್ನರರು ಆಟಗಾರರಿಗೆ ಯಥೇಚ್ಛ ಬಹುಮಾನಗಳನ್ನು ನೀಡಿ ಗೌರವಿಸಿದರು. ಹೀಗೆ ಕೊಲ್ಹಾಪುರದ ಆಟಗಾರರು ತಮ್ಮ ಪೌರುಷದ ಕ್ರೀಡೆಗಳ ಪತಾಕೆಯನ್ನು ಮದ್ರಾಸಿನವರೆಗೆ ಕೊಂಡೊಯ್ದಿದ್ದರು.[10]

## ಸಂಗೀತ

ಲಲಿತಕಲೆಯ ಮುಖ್ಯವಾದ ಮೂರು ರೂಪಗಳಾದ ಸಂಗೀತ/ನಾಟಕ ಮತ್ತು ಚಿತ್ರಕಲೆಗಳು ಶಾಹುರವರ ಆಡಳಿತದಲ್ಲಿ ಅತ್ಯಂತ ಎತ್ತರಕ್ಕೆ ಬೆಳೆದು ಅವರ ಆಡಳಿತಕಾಲವನ್ನು ಮಹಾರಾಷ್ಟ್ರದಲ್ಲಿ ಈ ಕಲೆಗಳ ಸುವರ್ಣಯುಗವೆಂದು ಪರಿಗಣಿತವಾಗಿದೆ. ಸಂಗೀತಕ್ಕೆ ಸಂಬಂಧಿಸಿದಂತೆ ಶಾಹುರವರ ಯುಗಕ್ಕೆ ಮೊದಲು ಸಂಗೀತದ ಜನಪ್ರಿಯ ರೂಪಗಳಾದ ಕೀರ್ತನ್, ತಮಾಶಾ, ಲಾವಣಿ, ಸಕಿ, ದಿಂಡಿ, ಫಟ್ಕ, ಭಜನ್, ವಾಘ್ಯ ಮುರಳಿಯ ಹಾಡುಗಳು ಸಂಸ್ಥಾನದಲ್ಲಿ ರೂಢಿಯಲ್ಲಿದ್ದವು. ಶಾಸ್ತ್ರೀಯ ಸಂಗೀತದ ಪ್ರಕಾರಗಳಾದ ಧ್ರುಪದಧಾಮರ, ಥುಮುರಿ, ಗಜಲ್‌ಗಳ ಪೋಷಕರಲ್ಲಿ ಮಹಾರಾಜರು, ಶ್ರೀಮಂತವರ್ಗಗಳು, ಜಮೀನುದಾರರು ಮತ್ತು ಲೇವಾದೇವಿಗಾರರು ಪ್ರಮುಖರಾಗಿದ್ದರು. ವಿಶೇಷವಾಗಿ ದರ್ಬಾರಿನ ನವರಾತ್ರಿ ಹಬ್ಬದಲ್ಲಿ ಮತ್ತು ಪಂತ ಅಮಾತ್ಯ (ಸಂಸ್ಥಾನದ ಒಂದು ಶ್ರೀಮಂತ ಕುಟುಂಬ)ದ ರಾಮನವಮಿಯ ಹಬ್ಬದಲ್ಲಿ ಜಾನಪದ ಸಂಗೀತ ಮತ್ತು ಶಾಸ್ತ್ರೀಯ ಸಂಗೀತದ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲಾಗುತ್ತಿತ್ತು. ಸಂಸ್ಥಾನದ ಹೊರಗಡೆಯಿಂದ ಪ್ರಸಿದ್ಧ ಕಲಾಕಾರರನ್ನು ನವರಾತ್ರಿ ಹಬ್ಬದಲ್ಲಿ ಪ್ರದರ್ಶನ ನೀಡಲು ಆಹ್ವಾನಿಸಲಾಗುತ್ತಿತ್ತು. ಈ ಅವಧಿಯಲ್ಲಿ ಕೊಲ್ಹಾಪುರದ ನಗರವು ಸಂಗೀತದಿಂದ ತುಂಬಿತುಳುಕುತ್ತಿತ್ತು. ಶಾಹುರವರ ಖಾಸಾ (ಸ್ವಂತ) ತಂದೆ ಸ್ವತಃ ಒಬ್ಬ ಸಂಗೀತಕಲೆಯ ಅಭಿಮಾನಿಯಾಗಿದ್ದರು. ಶಾಹುರವರ ದತ್ತುಸ್ವೀಕಾರ ಸಮಾರಂಭ ಹಾಗು ಸಿಂಹಾಸನವೇರುವುದಕ್ಕೆ ಮೊದಲೆ ನಗರದಲ್ಲಿ ೧೮೮೩ರಲ್ಲಿ 'ಕೊಲ್ಹಾಪುರ ಗಾಯನ ಸಮಾಜ' ಎಂಬ ಸಂಸ್ಥೆಯನ್ನು ಸ್ಥಾಪಿಸಲಾಗಿತ್ತು. ಭಾರತದಲ್ಲಿ ಸಂಗೀತಕ್ಕೆ ಮುಡುಪಿಟ್ಟಿದ್ದ ಅದು ಮೊದಲ ಸಂಸ್ಥೆಯಾಗಿತ್ತು. ಸಂಗೀತದ ಬಗೆಗಿನ ಪ್ರೇಮದ ಪರಂಪರೆ ಈ ರೀತಿಯಲ್ಲಿ ಶಾಹುರವರಿಗೆ ಹರಿದುಬಂದಿತ್ತು. ೧೮೯೨ರಲ್ಲಿ ಶಾಹುರವರು ಕಟ್ಟಡದ ನಿರ್ಮಾಣಕ್ಕೆ ಭೂಮಿ ಮತ್ತು ಹಣದ ಅನುದಾನ ನೀಡಿದ ನೆರವಿನ ಪ್ರೋತ್ಸಾಹದಿಂದ ೧೮೯೨ರಲ್ಲಿ 'ದೇವುಳ ಕ್ಲಬ್' ಎಂಬ ಪ್ರಸಿದ್ಧ ಸಂಸ್ಥೆಯನ್ನು ಸ್ಥಾಪಿಸಲಾಯಿತು.[11] ಶಾಹುರವರ ಪ್ರೋತ್ಸಾಹ ಮತ್ತು ಆಶ್ರಯದಿಂದ ಈ ಸಂಸ್ಥೆಯು ನಂತರ ರಾಷ್ಟ್ರಾದ್ಯಂತ ಕೀರ್ತಿಯನ್ನು ಪಡೆಯಿತು. 'ಶಾಹುರವರ ಕಾಲದ ಕಲೆ ಮತ್ತು ನಾಟಕಗಳ' ಬಗ್ಗೆ ವ್ಯಾಖ್ಯಾನ ಮಾಡುತ್ತಾ ಪ್ರಸಿದ್ಧ ಸಂಗೀತತಜ್ಞ ಎಸ್. ಎ. ಕುಲಕರ್ಣಿ ಹೇಳುತ್ತಾರೆ, "... ಇಂದು ಸಂಗೀತದ ವಿಭಿನ್ನ ಘರಾನ(Schools)ಗಳಿಗೆ ಸೇರಿದ ಹಾಡುಗಾರಿಕೆದಾರರು ರಾಷ್ಟ್ರದಲ್ಲಿ ಕೀರ್ತಿಯನ್ನು ಗಳಿಸಿದ್ದಾರೆ. ಅವರ ಪರಂಪರೆಯನ್ನು ಕೊಲ್ಹಾಪುರ ನಗರದಲ್ಲಿ ಬೆಳೆಸಲಾಯಿತು ಮತ್ತು ಶಾಹು ಮಹಾರಾಜರು ಪ್ರಮುಖ

ಪ್ರೋತ್ಸಾಹಕರಾಗಿದ್ದರು. ನಂತರ ಶಾಹುರವರ ಕೃಪಾಕಟಾಕ್ಷ ತಪ್ಪಿದ ಮೇಲೆ ಕೊಲ್ಹಾಪುರದ ದೇವುಳ ಕ್ಲಬ್ ಪ್ರಸಿದ್ಧಿಯನ್ನು ಪಡೆಯಿತು ಮತ್ತು ದೇಶದ ಪ್ರತಿಯೊಬ್ಬ ಹಾಡುಗಾರರು ಹೆಣ್ಣಾಗಲೀ, ಗಂಡಾಗಲೀ ಈ ಕ್ಲಬ್‌ನಲ್ಲಿ ಪ್ರದರ್ಶನ ನೀಡಲು (ಹಾಡಲು) ಹಂಬಲಿಸುತ್ತಿದ್ದರು. ಅಲ್ಲಿ ಪ್ರದರ್ಶನ ನೀಡಿದ ಹಾಡುಗಾರರು ಅಥವಾ ವಾದ್ಯ ಸಂಗೀತಗಾರರು ದೇಶದಲ್ಲಿ ಕೀರ್ತಿಯ ಶಿಖರಕ್ಕೇರಿದ್ದರು."[12]

ದೇವುಳ ಕ್ಲಬ್ ಕೊಲ್ಹಾಪುರವನ್ನು ರಾಷ್ಟ್ರಮಟ್ಟದ ಒಂದು ಸಂಗೀತ ಕೇಂದ್ರವನ್ನಾಗಿ ಮಾಡುವುದರಲ್ಲಿ ಮೂಲಕರ್ತೃ(ಕಾರಣ)ವಾಗಿದೆ. ಸಂಗೀತ ಕ್ಷೇತ್ರದಲ್ಲಿ 'ಗೌರಿಶಂಕರ' ಎಂಬ ಖ್ಯಾತಿಯನ್ನು ಪಡೆದ ಕಲಾವಿದ ಅಂಥದ್ದೇ ಹೊಣೆಯನ್ನು ನಿಭಾಯಿಸಿದ್ದಾರೆ. ಆದರೆ 'ಗಾನಮಹರ್ಷಿ' ಅಲ್ಲಾಡಿಯ ಖಾನರು, ಶಾಹುರವರು ಅವರನ್ನು ತನ್ನ ದರ್ಬಾರಿಗೆ ಮಹಾಗೌರವದಿಂದ ಒಬ್ಬ ಹಾಡುಗಾರನೆಂದು ಬರಮಾಡಿಕೊಂಡರು. ಮಹಾರಾಷ್ಟ್ರ ಮತ್ತು ಕೊಲ್ಹಾಪುರದ ಸುಸಂಸ್ಕೃತ ಸಂರಕ್ಷಕರ ಮುಂದೆ ಮೊದಲ ಬಾರಿಗೆ ಜೈಪುರ ಘರಾನದ ಸಂಗೀತವನ್ನು ಪ್ರದರ್ಶಿಸಿದರು. ಅವರ ಸಹೋದರ ಹೈದರ್‌ಖಾನ್ ಮತ್ತು ಮೂವರು ಮಕ್ಕಳಾದ ಮಂಜಿಖಾನ್, ಭುರ್ಜಿಖಾನ್ ಮತ್ತು ನಾಸಿರುದ್ದೀನ್ ಖಾನ್ ಅವರ ಜೊತೆಯಲ್ಲಿ ಬಂದಿದ್ದರು. ಇದು ಒಂದು ರೀತಿಯಲ್ಲಿ ಕೊಲ್ಹಾಪುರದಲ್ಲಿ ಸಂಗೀತ ವಿಶ್ವವಿದ್ಯಾಲಯ ಬಂದಂತಿತ್ತು. ಈ ವಿಶ್ವವಿದ್ಯಾಲಯದಿಂದ ಅಲ್ಲಾಡಿಯಾ ಖಾನರ ಮಹಾಶಿಷ್ಯರಾದ ಪಂಡಿತ ಭಾಸ್ಕರ ಬುವ, ಬಖಾಲೆ, ಹೈದರ್‌ಖಾನ್, ಮಂಜಿಖಾನ್, ಕೇಸರ್‌ಭಾಯಿ ಕೇಲ್ಕರ್, ಮೊಗುಬಾಯಿ ಕುರ್ಡಿಕರ್, ಜಸ್‌ದಾನ್‌ವಾಲ ಜರಿವಾಲ, ಗೋವಿಂದ್‌ಬುವ ಶಾಲಿಗ್ರಾಮ್, ನಿವೃತ್ತಿ ಬುಆನ್ ಸರ್ ನಾಯ್ಕ– ಅವರೆಲ್ಲರೂ ನಂತರ ರಾಷ್ಟ್ರೀಯ ಖ್ಯಾತಿಯನ್ನ ಗಳಿಸಿದರು. ಕೇಸರ್‌ಭಾಯಿ ಮೂಲತಃ ಪ್ರಸಿದ್ಧ ಹಾಡುಗಾರ (ಗಾಯಕ) ಅಬ್ದುಲ್ ಕರೀಂಖಾನರ ಶಿಷ್ಯರಾಗಿದ್ದರು, ನಂತರ ಸಂಗೀತ ಕಛೇರಿಯಲ್ಲಿ ಆಕೆ ಅಲ್ಲಾಡಿಯಾ ಖಾನರ ಶೈಲಿಯನ್ನು ಕಲಿಯುವಲ್ಲಿ ತೀವ್ರಾಪೇಕ್ಷೆಯನ್ನು ತಿಳಿಸಿದಳು. ಶಾಹುರವರು ಖಾನ್‌ಸಾಹೇಬರನ್ನು ಕೇಳಿಕೊಂಡರು. ಅವರು ಒಪ್ಪಿಕೊಂಡರು ಮತ್ತು ಮುಕ್ತ ಮನಸ್ಸಿನಿಂದ ಕೇಸರ್‌ಬಾಯಿಯವರಿಗೆ ಕಲಿಸಿದರು. ಒಂದು ದಿನ ಕೇಸರ್‌ಬಾಯಿ ಅವರು ಶಾಹುರವರ ಮುಂದೆ ಅಲ್ಲಾಡಿಯಾನ್ ಖಾನರು ಕಲಿಸಿದ ಶಾಸ್ತ್ರೀಯ ರಾಗಗಳನ್ನು ಅವರ ಹೆಸರುವಾಸಿ ಶೈಲಿಯಲ್ಲಿಯೇ ಪರಿಪೂರ್ಣವಾಗಿ ಹಾಡಿದರು. ಶಾಹು ಹರ್ಷಿತರಾದರು ಮತ್ತು ಹೇಳಿದರು: "......ನನ್ನ ಪ್ರೀತಿಯ ಮಗುವೆ, ಖಾನ್‌ಸಾಹೇಬರ ಹಾಡುಗಾರಿಕೆಯ ಶೈಲಿಯ ಗಾಯನವನ್ನು ನೀವು ಕೊಂಡಾಡುವ ಒಂದು ದಿನ ಬರುವುದು".[13] ಕೇಸರಬಾಯಿ ಅವರು ತಮ್ಮ ಸಾಧನೆಗಳಿಂದ ಈ ಮಾತುಗಳನ್ನು ಸಾಕಾರಗೊಳಿಸಿದರು. ಆಕೆ ರಾಷ್ಟ್ರಮಟ್ಟದ ಗಾಯಕಿಯಾದರು. ಗುರುದೇವ ರವೀಂದ್ರನಾಥ ಠಾಗೂರರು ತಮ್ಮ ವಿಶ್ವಭಾರತಿಯ ಪರವಾಗಿ ಆಕೆಗೆ 'ಸುರಶ್ರೀ' ಎಂಬ ಬಿರುದನ್ನು ನೀಡಿದರು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆಕೆಗೆ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಲಾಯಿತು. ಇದು ಕೇಸರಿಬಾಯಿಯ ದಿವ್ಯಗಾಯನ ಮತ್ತು ಅಲ್ಲಾಡಿಯ ಖಾನರ ಮತ್ತು ಶಾಹುರವರ ಸಂಗೀತ ಕ್ಷೇತ್ರದಲ್ಲಿನ ಮಹಾಕಾರ್ಯಕ್ಕೆ ಸಂದ ಮಹಾಗೌರವವಾಗಿದೆ.[14] ಅಲ್ಲಾಡಿಯಖಾನರ ಮಹತ್ತರವಾದ ಕಾರ್ಯವನ್ನು ಗೌರವಿಸಿ ಮಾತನಾಡುತ್ತಾ ಸಂಗೀತ ತಜ್ಞ ಬಾಬುರಾವ್ ಜೋಷಿ ಹೇಳುತ್ತಾರೆ: "ಅಲ್ಲಾಡಿಯಖಾನರು ಸುಂದರವಾದ, ವಿಚಿತ್ರವಾದ, ಬೌದ್ಧಿಕವಾಗಿ ಮತ್ತು ಭಾವನಾತ್ಮಕವಾಗಿ ತೃಪ್ತಿಗೊಳಿಸುವ ಪ್ರತ್ಯೇಕವಾದ ಸಂಗೀತದ ಪರಂಪರೆಯನ್ನೇ ನಿರ್ಮಿಸಿದ್ದಾರೆ. ಅವರ ವ್ಯಕ್ತಿತ್ವದಲ್ಲಿ ಕೊಲ್ಹಾಪುರ ಒಂದು ಆಭರಣದ ಪ್ರಯೋಜನ ಪಡೆದಿದೆ. ಬೃಹದಾಕಾರದ ಪ್ರತಿಭೆಯ ವಾದ್ಯ ಸಂಗೀತಗಾರ ಮತ್ತು ಗಾಯಕನನ್ನು ಪಡೆದಿರುವುದು ಕೊಲ್ಹಾಪುರವೇ ಭಾಗ್ಯಶಾಲಿಯಾಗಿದೆ. ತಮ್ಮ

ಪೂರ್ವಜರ ಮಹಾಸಾಧನೆಯ ಪ್ರದರ್ಶನದಲ್ಲಿ ಹೆಮ್ಮೆಪಡುವ ಮಹಾಪೂರ್ವಿಕರ ವಂಶಸ್ಥರಂತೆಯೇ ಖಾನ್‌ಸಾಹೇಬರು ಸ್ಥಾಪಿಸಿದ ಪರಂಪರೆಗಳ ಆಧಾರದ ಮೇಲೆ ಇಂದು ಕೊಲ್ಹಾಪುರ ಕಲಾಜೀವನವನ್ನು ಸಾಗಿಸುತ್ತಿದೆ. ಕೊಲ್ಹಾಪುರವನ್ನು ಮಹಾನ್‌ಸಂಸ್ಥಾನವನ್ನಾಗಿ ಮಾಡಿದವರು ಅಥವಾ ಸಂಗೀತ ಕ್ಷೇತ್ರದಲ್ಲಿ ಇಡೀ ರಾಷ್ಟ್ರದಲ್ಲಿ ಕೊಲ್ಹಾಪುರವೇ ಏಕೆ ಪ್ರಸಿದ್ಧವಾಯಿತೆಂಬುದಕ್ಕೆ ಕಾರಣ ಅಲ್ಲಾಡಿಯಖಾನರು. ಆದ್ದರಿಂದ ಹಾಡುಗಾರಿಕೆಯ ಈ ಶೈಲಿಯನ್ನು ನಾನು ಯಾವಾಗಲು ಕೊಲ್ಹಾಪುರ ಘರಾನ ಎಂದು ಕರೆಯಲು ಉದ್ದೇಶಿಸಿದ್ದೇನೆ. ಈ ವಿಧದ ಮತ್ತೊಬ್ಬ ಕಲಾಕಾರ ವಿಶ್ವದಲ್ಲಿ ಸಿಗುವುದು ಬಹಳ ಅಪರೂಪ."[15]

ಅಲ್ಲಾಡಿಯಾನ್‌ಖಾನರ ಜೊತೆಗೆ ಶಾಹುರವರು ದೇವಾಸ್‌ನ ಪ್ರಸಿದ್ಧ ಗಾಯಕ ರಾಜಬ್ ಆಲಿಖಾನ್, ಅವರ ತಂದೆಯಾದ ಮೊಘಲೆಖಾನ್, ಕಿರಾನ ಘರಾನದ ಅಗ್ರಗಾಮಿ ಹೈದರ್ ಬಕ್ಷಖಾನ್, ಅಬ್ದುಲ್ ಕರಿಂಖಾನ್, ಅಲ್ಲಾಡಿಯಾನ್ ಖಾನರ ಸಹೋದರ ಹೈದರ್‌ಖಾನ್‌ರ ಮಗ ಭುರ್ಜಿಖಾನ್, ನತ್ಥನ್ ಖಾನ್ ಮತ್ತು ಅಂಜನಿಬಾಯಿ ಮಲ್ಪೆಕರ್ ಮೊದಲಾದ ಇತರೆಯವರಿಗೆ ರಾಜಾಶ್ರಯ ನೀಡಿದರು. ರಾಜಬ್ ಆಲಿಖಾನರು ಕೊಲ್ಹಾಪುರದಲ್ಲಿ ತಂಗಿರುವಾಗ ನಿವೃತ್ತಿ ಬುವಸರ್‌ನಾಯ್ಕ ಮತ್ತು ನೂತನ ಗಂಧರ್ವ ಅಪ್ಪಾಸಾಹೇಬ ದೇಶಪಾಂಡೆ ಅವರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡರು.

ಹೈದರ್‌ಬಕ್ಷ ಅವರು ಈ ತರಬೇತಿಯ ಆಧಾರದಿಂದ ಸಂಗೀತ ಕ್ಷೇತ್ರದಲ್ಲಿ ಶಾಶ್ವತ ಕೀರ್ತಿಯನ್ನು ಗಳಿಸಿದ್ದ ಪ್ರಸಿದ್ಧ ಗಾಯಕ ಅಬ್ದುಲ್ ಕರಿಂಖಾನ್‌ರಿಗೆ ಗಾಯನ ಕಲೆಯನ್ನು ಕಲಿಸಿದರು. ಮತ್ತೊಬ್ಬ ಮಹಾಗಾಯಕ ಅಂಜನಿಬಾಯಿ ಮಲ್ಪೆಕರ್ ಇಡೀ ಭಾರತದಲ್ಲಿ ಅಂಥದ್ದೇ ಕೀರ್ತಿಯನ್ನು ಸಾಧಿಸಿದ್ದರು. ಹಲವಾರು ಮಹಾರಾಜರು ಮತ್ತು ಶ್ರೀಮಂತರು ಅವರ ಸಂಗೀತವನ್ನು ಕೇಳಲು ಅವರ ಮನೆಗೆ ಹೋಗುತ್ತಿದ್ದರು. ರಾಜ ಮತ್ತು ಮಹಾರಾಜರು ತಮ್ಮ ಆಸ್ಥಾನಗಳಲ್ಲಿ ಆಕೆಯನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಕೊಲ್ಹಾಪುರದ ಮತ್ತೊಬ್ಬ ಪ್ರಸಿದ್ಧ ಗಾಯಕಿ ಇಂಡಿಯದಲ್ಲೆಲ್ಲ 'ಗಾನಚಂದ್ರಿಕೆ' ಎಂಬ ಖ್ಯಾತಿ ಗಳಿಸಿದ್ದವರು ಲಕ್ಷ್ಮೀಬಾಯಿ ಜಾಧವ್. ಆಕೆ ಅಲ್ಲಾಡಿಯಾನ್‌ಖಾನರ ಸಹೋದರ ಹೈದರ್‌ಖಾನರ ಶಿಷ್ಯೆಯಾಗಿದ್ದಳು. ತದನಂತರ ಆಕೆ ಬರೋಡ ಸಂಸ್ಥಾನದ ಸೇವೆಗಳಲ್ಲಿ ಗಾಯಕಿಯಾಗಿ ಆಸ್ಥಾನದಲ್ಲಿ ಸೇರಿಕೊಂಡರು. ಅಲ್ಲಾಡಿಯಾನ್‌ಖಾನರ ಬಗ್ಗೆ ಭುರ್ಜಿಖಾನರು ಅಜಂಬಾಯಿ ಶಾರದಬಾಯಿ, ಸಿ. ಬಾಲಾಜಿ ಅಪ್ಪಾ ಸಾಹೇಬ ದೇಶಪಾಂಡೆ ಮೊದಲಾದ ಕಲಾವಿದರಿಗೆ ಕಲಿಸಿದರು. ಸಂಗೀತದ ಕೇಂದ್ರವಾದ ಕೊಲ್ಹಾಪುರ ನಗರದಲ್ಲಿ ಪ್ರಸಿದ್ಧ ಗಾಯಕರ ತಂಡ ಮೂಡಿಬಂತು. ಶಾಹುರವರ ಸಕ್ರಿಯ ಪ್ರೋತ್ಸಾಹದಿಂದ ಅವರೆಲ್ಲರ ಸತತ ಶ್ರಮದಿಂದ ಸಂಗೀತದ ಕ್ಷೇತ್ರದಲ್ಲಿ ಉತ್ತುಂಗಸ್ಥಾನವನ್ನು ತಲ್ಪಿದರು ಮತ್ತು ಕೊಲ್ಹಾಪುರವನ್ನು ಚಿರಸ್ಥಾಯಿಗೊಳಿಸಿದರು.[16]

ಈ ರೀತಿಯಲ್ಲಿ ಶಾಹುರವರಲ್ಲಿದ್ದ ಶಾಸ್ತ್ರೀಯ ಸಂಗೀತದ ರಸಿಕತನ ಇಡೀ ಭಾರತದಲ್ಲಿನ ಸಂಗೀತದ ವಿವಿಧ ಘರಾನಗಳ ಮಹಾಸಂಗೀತಗಾರರನ್ನು ಸೆಳೆಯಿತು. ಶಾಹುರವರು ಕೊಲ್ಹಾಪುರದಲ್ಲಿ ಪ್ರದರ್ಶನದ (ಗಾಯನದ) ವಿವಿಧ ಶೈಲಿಗಳ ಮಂಗಳಕರವಾದ ಸಂಗಮವನ್ನೇ ಉಂಟುಮಾಡಿದರು ಮತ್ತು ಕೊಲ್ಹಾಪುರದ ಜೊತೆಯಲ್ಲಿಯೇ ಇಡೀ ಮಹಾರಾಷ್ಟ್ರದಲ್ಲಿ ಶಾಸ್ತ್ರೀಯ ಸಂಗೀತದ ರುಚಿಯನ್ನು (ಆಸಕ್ತಿ) ಮೂಡಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಅವರು ಮಹಾರಾಷ್ಟ್ರದ ಹಿರಿಯ ಗಾಯಕರ ಪರಂಪರೆಯನ್ನೇ ನಿರ್ಮಿಸಿದರು. ಸ್ವಾತಂತ್ರ್ಯ ಬಂದ ನಂತರವೂ ಕಲಾವಿದರಾದ ನಿವೃತ್ತಿ ಬುವಸರ್‌ನಾಯ್ಕ, ಶಂಕರರಾವ್ ಸರ್‌ನಾಯ್ಕ, ಜಗನ್ನಾಥಬುವ ಪುರೋಹಿತ, ವಿಶ್ವನಾಥ ಬುವ ಅನ್ ಜಾಧವ, ಆನಂದರಾವ್ ಮಯೆ, ಅಪ್ಪಾಸಾಹೇಬ

ದೇಶಪಾಂಡೆ ಅವರೆಲ್ಲರೂ ಶಾಹುರವರ ಕಾಲದಿಂದ ಹರಿದುಬಂದ ಸಂಗೀತ ಪರಂಪರೆಯನ್ನು ಸಂರಕ್ಷಿಸಿದ್ದಾರೆ.

ಶಾಹುರವರು ಶಾಸ್ತ್ರೀಯ ಸಂಗೀತದೊಂದಿಗೆ ಭಜನೆಗಳ ಹಾಡುಗಾರಿಕೆ(ಗಾಯನ)ಯನ್ನು ಪ್ರೋತ್ಸಾಹಿಸಿದರು. ಭಜನೆಗಳ ಹಾಡುಗಾರರಾದ ತುಕಾರಾಮ್‌ಬುವ ಸರ್‌ನಾಯ್ಕ, ಪಂಡಿತರಾವ್ ಕರಂಬಲೇಕಾರ್, ಕೃಷ್ಣ ಬಗ್ನಿಕರ್ ಮೊದಲಾದವರು ಶಾಹುರವರ ಕಾಲದಲ್ಲಿ ಮಹಾರಾಷ್ಟ್ರದ ತುಂಬಾ ಪ್ರಸಿದ್ಧರಾಗಿದ್ದರು. ಶಾಯರಿ*ಯನ್ನು ಗಾಯನ (ಹಾಡುಗಾರಿಕೆ) ಸಂಗೀತದ ಒಂದು ಪ್ರಕಾರವಾಗಿತ್ತು. ಶಾಹುರವರು ಈ ಪೌರುಷ ಕಲೆಯನ್ನು ಪ್ರೋತ್ಸಾಹಿಸಿದರು. ಶಾಹಿರ್** ವಿಠ್ಠದೋಣಿ, ಶಾಹಿರ್ ರಾಮಚಂದ್ರಮಾಲಿ, ಶಾಹಿರ್ ಈಶ್ವರಮಾಲಿ, ಶಾಹಿರ್ ಲಹರಿಹೈದರ್ ಅವರು ಆ ಕಾಲದ ಪ್ರಸಿದ್ಧ ಶಾಹಿರರಾಗಿದ್ದರು. ಶಾಹಿರರ ಹಲವು ತಂಡಗಳು 'ಕಲಗಿವಾಲೆ' ಮತ್ತು 'ತುರೆವಾಲೆ'ಗಳೆಂದು ಶಾಹುರವರ ಕಾಲದಲ್ಲಿ ಪ್ರಸಿದ್ಧವಾಗಿದ್ದವು. ಹಾಡುಗಾರರ(ಶಾಹಿರರ) ಅಂತರಂಗದಲ್ಲಿ ಅಡಗಿರುವ ತಾತ್ವಿಕ ಮತ್ತು ಆಧ್ಯಾತ್ಮಿಕ ಅರ್ಥಗಳ ಸ್ವಚ್ಛಂದ ಸಾಹಸಮಯವಾದ ಉಲ್ಲೇಖಗಳ ಸರಸೋಕ್ತಿಗಳಿಗೆ ಮತ್ತು ಕೆಲವು ಆಧ್ಯಾತ್ಮಿಕ ತಿಳುವಳಿಕೆಗಳಿಗೆ ಪ್ರತಿಭೆಯ ರೂಪ ಅವಶ್ಯಕ. ಅದನ್ನು ಸಂಗೀತದ ಪ್ರಶ್ನೋತ್ತರಗಳ ಸ್ಪರ್ಧೆಗಳು ಶಾಹಿರರ ಕೀರ್ತಿಯನ್ನು ಹೆಚ್ಚಿಸುತ್ತವೆ. ಶಾಹಿರರಾದ ಲಹ್ರಿ ಹೈದರರು ಮಹಾರಾಜರ ವೈಯಕ್ತಿಕ ವಲಯದಲ್ಲಿ ವಿಶೇಷ ಸ್ಥಾನಮಾನ ಗಳಿಸಿದ್ದರು.[17] ಸ್ವಾತಂತ್ರ್ಯದ ನಂತರ ಲಹ್ರಿ ಹೈದರ್ ಸೇರಿದಂತೆ ಪ್ರಮುಖ ಶಿಷ್ಯರಾದ ಶಾಹಿರ್ ವಿಶಾರದ ಪೀರಾಜಿರಾವ್ ಸರ್‌ನಾಯ್ಕ, ಶಾಹಿರ್ ಶಾರ್ದೂಲ ಭಾವು ಸಾಹೇಬ್ ಪಾಟೀಲ್, ಶಾಹಿರ್ ಶ್ರೀಪತ್‌ರಾವ್ ಲೋಖಂಡೆ ಕೊಲ್ಹಾಪುರದ ಶಾಹಿರಿಯನ್ನು ಪ್ರಸಿದ್ಧಿಗೊಳಿಸಿದರು. ಅವರು ಬುಲ್ಗಾನಿನ್ ಸೋವಿಯತ್ ಯೂನಿಯನ್ನಿನ ಅಧ್ಯಕ್ಷ ಭಾರತಕ್ಕೆ ಭೇಟಿ ನೀಡಿದಾಗ ೧೯೫೫ರಲ್ಲಿ ದೆಹಲಿಯಲ್ಲಿ ಸಂಘಟಿಸಿದ ಒಂದು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿದರು. ಅವರು ಬುಲ್ಗಾನಿನ್ ಮತ್ತು ಪಂಡಿತ ನೆಹ್ರು ಅವರಿಂದ ತಮ್ಮ ಪ್ರದರ್ಶನಕ್ಕೆ ಮೆಚ್ಚುಗೆಗಳನ್ನು ಪಡೆದರು.[18] ಈ ರೀತಿಯಲ್ಲಿ ಪೀರಾಜರಾವ್ ದೆಹಲಿಯಲ್ಲಿ ಕೊಲ್ಹಾಪುರಿ ಶಾಹಿರಿ ಕಲೆಯ ಪತಾಕೆಯನ್ನು ಉನ್ನತಮಟ್ಟದಲ್ಲಿ ಹಾರಿಸಿದರು.

## ನಾಟಕ ಕಲೆ

ಶಾಹುರವರು ಸಂಗೀತದ ಜೊತೆಯಲ್ಲಿ ನಾಟಕ ಕಲೆಯ ಬಗ್ಗೆ ಅಷ್ಟೇ ಆಸಕ್ತಿಯನ್ನು ತಾಳಿದ್ದರು ಮತ್ತು ಉದಾರವಾದ ಆಶ್ರಯಸ್ಥಾನ ನೀಡಿದ್ದರು. ಶಾಹುರವರ ತೊಡಗಿಸಿಕೊಳ್ಳುವಿಕೆಯಿಂದ ಬಹುಮಟ್ಟಿಗೆ ಕಲೆಯ ಎರಡು ರೂಪಗಳಾದ ಇವೆರಡು ಪ್ರಕಾರಗಳು ಒಟ್ಟಿಗೆ ಇಪ್ಪತ್ತನೇ ಶತಮಾನದ ಮೊದಲ ಅರ್ಧಶತಮಾನದಲ್ಲಿ ಕೊಲ್ಹಾಪುರ ಮತ್ತು ಮಹಾರಾಷ್ಟ್ರದಲ್ಲಿ ಸಾಂಸ್ಕೃತಿಕ ಜೀವನವನ್ನು ಶ್ರೀಮಂತಗೊಳಿಸಿದವು. ಕೊಲ್ಹಾಪುರವು ಬಾಲಗಂಧರ್ವ ಮತ್ತು ಕೇಶವರಾವ್ ಭೋಂಸ್ಲೆ ಎಂಬಂಥ ಕಲಾವಿದರನ್ನು ಈ ಕ್ಷೇತ್ರದಲ್ಲಿ ಕೊಲ್ಹಾಪುರದ ಮಹತ್ವವನ್ನು ಹೊರತರಲು ಮರಾಠಿ ನಾಟಕ ರಂಗಕ್ಕೆ ನೀಡಿದ್ದು ಸತ್ಯಸಂಗತಿ.

---

* ಕವಿ

** ಹಾಡುಗಾರ

ಇದೇ ಸಮಯದಲ್ಲಿ ೧೮೮೪ರಲ್ಲಿ ಶಾಹುರವರನ್ನು ದತ್ತುಸ್ವೀಕಾರ ಮಾಡಿದಾಗ ನಾಟಕ ಕಲೆಯು ಕೊಲ್ಹಾಪುರದಲ್ಲಿ ಆಗತಾನೇ ಪ್ರವೇಶಿಸಿತ್ತು. ವೃತ್ತಿ ರಂಗಭೂಮಿಯ ತಂಡವಾದ ನರಹರಬುವ ಕೊಲ್ಹಾಪುರಕರ್ ನಾಟಕ ಮಂಡಳಿ ಅಸ್ತಿತ್ವಕ್ಕೆ ಬಂದಿತ್ತು. ರಾಜಾರಾಮ್ ಕಾಲೇಜಿನ ಹವ್ಯಾಸಿ ಕಲಾವಿದರು 'ಪುಸ್ತಕದ' ನಾಟಕಗಳನ್ನು ಆಡುತ್ತಿದ್ದರು. ಮಗುವಾದ ಛತ್ರಪತಿ ಹತ್ತು ವರ್ಷದವನಾಗಿದ್ದಾಗ ದತ್ತುಸ್ವೀಕಾರದ ಸಮಾರಂಭದ ಸಂದರ್ಭದಲ್ಲಿ 'ಶಶಿಕಲಾ-ರತ್ನಪಾಲ' ಎಂಬ ನಾಟಕವನ್ನು ರಂಗದ ಮೇಲೆ ಪ್ರದರ್ಶಿಸಲಾಯಿತು. ಶಾಹುರವರು ನೋಡಿದ ನಾಟಕ ಅದಾಗಿತ್ತು. ಅವರು ಅದನ್ನು ಇಷ್ಟಪಟ್ಟರು. ಅರ್ಥಮಾಡಿಕೊಳ್ಳುವುದರ ಜೊತೆಗೆ ನಾಟಕಗಳ ಬಗ್ಗೆ ಅವರ ಆಸಕ್ತಿ ಬೆಳೆಯಿತು ಮತ್ತು ಅಂತಿಮವಾಗಿ ಪರಿಷ್ಕೃತ ಅಭಿರುಚಿ ಮತ್ತು ಶಾಸ್ತ್ರೀಯ ವಿಶೇಷಾಸಕ್ತಿ ಬೆಳೆಯಿತು. ಅದರ ಮುಂದಿನ ವರ್ಷವೇ ರಾಜಾರಾಮ್ ಕಾಲೇಜು ನಾಟಕ ಬರೆಯುವ ಸ್ಪರ್ಧೆಯನ್ನು ಘೋಷಿಸಿತು. ಇಬ್ಬರು ಯುವ ಲೇಖಕರಾದ ವಾಸುದೇವಶಾಸ್ತ್ರಿ ಖಾರೆ ಮತ್ತು ಗೋವಿಂದ ಬಲ್ಲಾಳ ದೇವಳ ಅವರು ತಮ್ಮ ಹಸ್ತಪ್ರತಿಗಳನ್ನು ಸ್ಪರ್ಧೆಗೆ ಕಳುಹಿಸಿಕೊಟ್ಟರು. ಈ ಎರಡು ನಾಟಕಗಳಲ್ಲಿ ಖಾರೆ ಶಾಸ್ತ್ರಿ ಬರೆದ 'ಗುಣೋತ್ಕರ್ಷ' ನಾಟಕವನ್ನು ಆಯ್ಕೆ ಮಾಡಲಾಯಿತು. ಈ ರೀತಿಯಲ್ಲಿ ಮರಾಠಿ ನಾಟಕ ಕಲೆಯ ಕ್ಷೇತ್ರದಲ್ಲಿನ ಮೊದಲ ಸ್ಪರ್ಧೆಯಲ್ಲಿ ಇಬ್ಬರು ಪ್ರತಿಭಾವಂತ ನಾಟಕಕಾರರನ್ನು ಗುರುತಿಸಲಾಯಿತು. ಶಾಹುರವರು 'ಗುಣೋತ್ಕರ್ಷ'ವನ್ನು ಸಹ ನೋಡಿದರು. ಈಗ ಅವರಿಗಾಗಿ ಹಳೇ ಅರಮನೆಯ ಬಯಲುಚೌಕದಲ್ಲಿ ವಿಶೇಷವಾಗಿ ಹಳೇ ನಾಟಕಗಳ ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸಲಾಯಿತು.[19] ಎಲ್ಲಕ್ಕಿಂತ ಮಿಗಿಲಾಗಿ ಶಾಹು ನಾಟಕಕಲೆಯ ಉತ್ಸಾಹ ಸಂರಕ್ಷಕ ಎಂಬ ಕೀರ್ತಿ ಹರಡಿ, ನಾಟಕ ಕಂಪನಿಗಳಾದ ಡೊಂಗ್ರೆ ಸಂಗೀತ ನಾಟಕಮಂಡಳಿ, ಕಿರ್ಲೋಸ್ಕರ ನಾಟಕ ಮಂಡಳಿಗಳು ಕೊಲ್ಹಾಪುರಕ್ಕೆ ಭೇಟಿನೀಡಲು ಮತ್ತು ಪ್ರದರ್ಶಿಸಲು ತೊಡಗಿದವು.

ಕೊಲ್ಹಾಪುರದ ಪ್ರಸಿದ್ಧ ಗಾಯಕ ಬಾಲಕೃಷ್ಣ ಬುವ ಇಚಲಕರಂಜಿಕರ್ ಅವರು ಡೊಂಗ್ರೆ ಕಂಪನಿಯ 'ಇಂದ್ರಸಭ' ಎಂಬ ಪ್ರಸಿದ್ಧ ನಾಟಕಕ್ಕೆ ಸಂಗೀತವನ್ನು ರಚಿಸಿದರು. ಬಾಲಕೃಷ್ಣ ಬುವ ಅವರು ಮರಾಠ ನಾಟಕಕಲೆಯ ಮೊದಲ ಸಂಗೀತ ನಿರ್ದೇಶಕರಾಗಿದ್ದರು. ಉತ್ತರಭಾರತದ ಸಂಗೀತವನ್ನು ಮಹಾರಾಷ್ಟ್ರಕ್ಕೆ ತಂದ ಕೀರ್ತಿ ಬಾಲಕೃಷ್ಣ ಬುವ ಅವರಿಗೆ ಸಲ್ಲುತ್ತದೆ. ೧೮೯೪ರಲ್ಲಿ ಶಾಹುರವರ ಪಟ್ಟಾಭಿಷೇಕದ ಸಂದರ್ಭದಲ್ಲಿ ಕಿರ್ಲೋಸ್ಕರ, ಶಾಹು ನಗರವಾಸಿ, ಸ್ವದೇಶ್, ಹಿತಚಿಂತಕ ಮೊದಲಾದವುಗಳು ಸೇರಿದಂತೆ ಹಲವು ನಾಟಕ ಕಂಪನಿಗಳು ಕೊಲ್ಹಾಪುರಕ್ಕೆ ಭೇಟಿ ನೀಡಿದವು.

ಅವುಗಳ ಪ್ರದರ್ಶನವನ್ನು ಹಳೇ ಅರಮನೆಯ ಲಕ್ಷ್ಮಿ ಪ್ರಸಾದ ರಂಗಮಂದಿರ ಜೀವಬನಾನವಾಡ ಮತ್ತು ಹಿಮ್ಮತ ಬಹದರ ಪಾಗಗಳಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಕೊಲ್ಹಾಪುರದ ದರ್ಬಾರು ಈ ಕಂಪನಿಗಳ ಬಗ್ಗೆ ಹೆಚ್ಚು ಲಕ್ಷ್ಯ ವಹಿಸಿತ್ತು. ಅಂಬೆಮೊಹರ್ ಅಕ್ಕಿಯಿಂದ ಸ್ನಾನದ ಸೋಪಿನವರೆಗೆ ಎಲ್ಲ ಪದಾರ್ಥಗಳನ್ನು ಕಂಪನಿಗೆ ಒದಗಿಸಲಾಗುತ್ತಿತ್ತು.[20] ಕಿರ್ಲೋಸ್ಕರ ಶಾಹು ನಗರವಾಸಿ ಕಂಪನಿಗಳು ವಿಶೇಷವಾಗಿ ಶಾಹುರವರ ಕೃಪಾಕಟಾಕ್ಷದಲ್ಲಿದ್ದವು. ಶಾಹು ನಗರವಾಸಿಯ ಗಣಪತ್‌ರಾವ್ ಜೋಷಿ ಅವರು ನಟಿಸಿದ ಹ್ಯಾಮ್‌ಲೆಟ್ ನಾಟಕವು ಶಾಹುರವರಿಗೆ ತುಂಬ ಹಿಡಿಸಿತು. ಗಣಪತರಾವ್ ಅವರು ಈ ಪಾತ್ರವನ್ನು ನಿರ್ವಹಿಸಿದ ರೀತಿ ರಂಗದ ಮೇಲೆ ಶಾಶ್ವತವಾಗಿ ಉಳಿಯುವುದಕ್ಕೆ ಯೋಗ್ಯವಾಗಿದೆ.[21]

ಗಣಪತ್‌ರಾವ್ ಜೋಷಿಯಂತೆ ಶಾಹುರವರ ಪ್ರೀತಿಗೆ ಪಾತ್ರರಾದವರು ಮತ್ತೊಬ್ಬ ಸಂಗೀತಗಾಯಕ/ಹಾಡುಗಾರ-ನಟ ದತ್ತೋಪಂತ ಹಾಲ್ಯಟ್ಕರ್. ಅವರು ಗೋವ ನಾಟಕಮಂಡಳಿ ಬಿಟ್ಟು ಕೊಲ್ಹಾಪುರಕ್ಕೆ

ಬಂದರು ಮತ್ತು ಶಾಹುರವರ ಬೆಂಬಲದೊಂದಿಗೆ ಮಹಾಲಕ್ಷ್ಮಿ ಪ್ರಸಾದಿಕ್ ಕಂಪನಿಯನ್ನು ಪ್ರಾರಂಭಿಸಿದರು. ಶಾಹುರವರು ರಾಜಕುಮಾರಿ ಅಕ್ಕಸಾಹೇಬರ ಮದುವೆಯ ಸಂದರ್ಭದಲ್ಲಿ ಹಲವು ನಾಟಕ ಕಂಪನಿಗಳನ್ನು ಆಹ್ವಾನಿಸಿದ್ದರು. ಈ ಸಂದರ್ಭದ ಅರಮನೆಯಲ್ಲಿ ದತ್ತೋಪಂತರ ಮೃಚ್ಛಕಟಿಕ ನಾಟಕ ಪ್ರದರ್ಶನವು ರಾಜಮನೆತನದ ಮಹಿಳೆಯರ ಹೃದಯಕ್ಕೆ ತಟ್ಟಿ ಅವರು ದುಃಖದಿಂದ ಬಿಕ್ಕಿ ಬಿಕ್ಕಿ ಅಳುವಂತೆ ಮಾಡಿತು. ಕೆಲವು ಸಂದರ್ಭಗಳಲ್ಲಿ ಶಾಹುರವರು ಅವರ ಹಾಡುಗಾರಿಕೆಯ ಪ್ರದರ್ಶನಗಳನ್ನು ಅರಮನೆಯಲ್ಲಿ ವ್ಯವಸ್ಥೆಗೊಳಿಸುತ್ತಿದ್ದರು ಮತ್ತು ನಂತರ ಅವರು ಅವರ ಜೊತೆಯಲ್ಲಿ ಊಟ ಮಾಡುತ್ತಿದ್ದರು. ಊಟದ ಟೇಬಲ್ಲಿನಲ್ಲಿ ಸಂಗೀತ ಮತ್ತು ಇತರೆ ವಿಷಯಗಳ ಬಗ್ಗೆ ಸಂವಾದ ಖಂಡಿತವಾಗಿ ನಡೆಯುತ್ತಿದ್ದವು.[22]

ಇದೇ ಅವಧಿಯ ಸುಮಾರಿಗೆ ಕೊಲ್ಹಾಪುರದಲ್ಲಿ ಹಲವು ನಾಟಕ ಕಂಪನಿಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಬಹಳ ಪ್ರಮುಖವಾದದ್ದು ಮಹಿಳೆಯರೇ ನಡೆಸಿದ ಒಂದು ನಾಟಕ ಕಂಪನಿ. ವೃತ್ತಿನಿರತ ವೇಶ್ಯಾವಾಟಿಕೆಯ ಕುಟುಂಬಕ್ಕೆ ಸೇರಿದ ಶೇಷಸಾನಿ ಅವರು ಶೇಷಸಾನಿ ಸ್ತ್ರೀ ಸಂಗೀತ ನಾಟಕಮಂಡಳಿಯನ್ನು ಪ್ರಾರಂಭಿಸಿದರು. ಅದು ನಾಟಕಕಲೆಯ ಇತಿಹಾಸದಲ್ಲಿ ಮಹಿಳೆಯ ಮೊಟ್ಟಮೊದಲ ನಾಟಕ ಕಂಪನಿಯಾಗಿತ್ತು. ಶೇಷಸಾನಿ ನಳದಮಯಂತಿ, ಸೌಭದ್ರ, ಶಕುಂತಲಾ ಮತ್ತು ಇತರೆ ನಾಟಕಗಳಲ್ಲಿ ನಟಿಸುತ್ತಿದ್ದಳು.[23]

ದತ್ತೋಪಂತ ಭೋಂಸ್ಲೆ ಅವರು ಪ್ರಸಿದ್ಧಗಾಯಕ ಕೇಶವರಾವ್ ಭೋಂಸ್ಲೆ ಅವರ ಹಿರಿಯ ಅಣ್ಣರಾಗಿದ್ದರು. ಅವರು ನಟರಾಗಿ ಪ್ರಾಮುಖ್ಯತೆಗೆ ಬಂದರು. ಅವರು ಕೇಶವರಾವ್ ಅವರು ನಾಲ್ಕು ವರ್ಷದ ಹುಡುಗನಾಗಿದ್ದಾಗ ಅವರೊಡನೆ ಮೊಟ್ಟಮೊದಲಿಗೆ ಸ್ವದೇಶ ಹಿತಚಿಂತಕ ಮಂಡಳಿಗೆ ಸೇರಿದರು. ಶಾಹುರವರ ಪ್ರೋತ್ಸಾಹದಿಂದ ಸ್ಥಾಪಿಸಿದ ಕೊಲ್ಹಾಪುರ ಸಂಗೀತ ನಾಟಕಮಂಡಳಿಯಲ್ಲಿ ಅವರು ವಿಷ್ಣುಪಂತ ಔಂಧಕರ, ಭಾವುರಾವ್ ಜಾಧವ್, ಭಾಗವತ್, ದಿನಕರ ಧೇರೆ, ವಿಷ್ಣುಪಂತ್ ಪಗ್ನೀಸ್ ಅವರೊಂದಿಗೆ ಸದಸ್ಯರಾದರು. ಆ ದಿನಗಳಲ್ಲಿ ಮೃಚ್ಛಕಟಿಕ ಮತ್ತು ಮಾನಾಪಮಾನ ನಾಟಕಗಳಲ್ಲಿ ನಿರ್ವಹಿಸಿದ ಪಾತ್ರಗಳಿಂದ ದತ್ತೋಪಂತರು ವ್ಯಾಪಕವಾದ ಮೆಚ್ಚುಗೆಯನ್ನು ಗಳಿಸಿದರು. ತದನಂತರದ ವರ್ಷಗಳಲ್ಲಿ ಅವರು ನಾಟಕಗಳನ್ನು ನಿರ್ದೇಶಿಸುವುದಕ್ಕೆ ತೊಡಗಿದರು.[24]

ಇದೇ ಕಾಲದಲ್ಲಿ ಗೋವಿಂದರಾವ್ ತೆಂಬೆ ಅವರು ಬಹುಮುಖಿ ಕಲಾಕಾರರಾಗಿದ್ದು ಮರಾಠಿ ರಂಗಭೂಮಿಯಲ್ಲಿ ಖ್ಯಾತಿ ಗಳಿಸತೊಡಗಿದರು. ಅವರೊಬ್ಬ ಪಳಗಿದ ನಟ, ನಾಟಕಕಾರ, ಕವಿ, ರಸತಜ್ಞ, ಸಂಗೀತ ತಜ್ಞ ಮತ್ತು ಆ ಕಾಲದಲ್ಲಿ ಹಾರ್ಮೋನಿಯಮ್ಮಿನ ಮಹಾವಾದಕರಾಗಿದ್ದರು. ಅವರು ಕಿರ್ಲೋಸ್ಕರ ನಾಟಕ ಕಂಪನಿಯಲ್ಲಿ ಅವರು ಚಾರುದತ್ತ ಮತ್ತು ಕಚಗಳ ಪಾತ್ರಗಳಲ್ಲಿ ಪ್ರತಿಭೆಯನ್ನು ಪ್ರದರ್ಶಿಸುತ್ತಿದ್ದರು. ಅವರು ಜೊತೆಗೆ ಸಾಕಷ್ಟು ಸಂಖ್ಯೆಯಲ್ಲಿ ನಾಟಕಗಳನ್ನು ಬರೆದಿದ್ದಾರೆ. ಅವರ 'ಸಿದ್ಧಸಂಸಾರ' ಮತ್ತು 'ಚಿತ್ರವಂಚನ'ಗಳು ಸೇರಿದಂತೆ ಅವರ ಹಲವಾರು ನಾಟಕಗಳನ್ನು ಪ್ರೇಕ್ಷಕರು ಮೆಚ್ಚಿಕೊಂಡಿದ್ದಾರೆ. ಅವರ ಹಲವಾರು ಸಂಗೀತನಾಟಕಗಳು ಸಹ ಜನಪ್ರಿಯವಾಗಿವೆ. ಮಹಾಗಾಯಕ ನಟರಾದ ನಾರಾಯಣರಾವ್ ರಾಜಹಂಸ ಅಲಿಯಾಸ್ ಬಾಲಗಂಧರ್ವ (ಮಹಾರಾಷ್ಟ್ರದ ಮಹಾ ಸಂಗೀತತಜ್ಞರಾಗಿ ಉಳಿದಿರುವರು) ಮತ್ತು ಮಹಾರಾಷ್ಟ್ರ ಕೋಕಿಲರಾದ ಶಂಕರರಾವ್ ಸರ್‌ನಾಯ್ಕ ಅವರಿಗೆ ಅವರು ಸಂಗೀತದಲ್ಲಿ ಮಾರ್ಗದರ್ಶನ ಮತ್ತು ತರಬೇತಿ ನೀಡಿದ್ದು ಅವರ ಮಹಾಕೊಡುಗೆಯಾಗಿದೆ. ವಿಶೇಷವಾಗಿ ಬಾಲಗಂಧರ್ವರು ಮಧುರವಾದ ಹಾಡುಗಳನ್ನು ಶಾಸ್ತ್ರೀಯ ಶೈಲಿಯ ಲೇಪನದಿಂದ ಹಾಡಿದಾಗ ಹಂಬಲ ಹೆಚ್ಚಾಯಿತು ಮತ್ತು ಭಾಗಶಃ

ಗೋವಿಂದರಾವ್ ಅವರ ಸಂಗೀತದಿಂದ ಮಹಾರಾಷ್ಟ್ರೀಯರ ಮಧ್ಯಮ ವರ್ಗಗಳ ಮನೆಗಳಿಗೆ ಸಂಗೀತ ತಲುಪಿತು.[25] ಸುಮಾರು ೧೯೧೫–೧೬ರಲ್ಲಿ ಗೋವಿಂದರಾವ್ ಅವರು ಶಾಹುರವರ ಆದೇಶದ ಮೇರೆಗೆ ಶಿವರಾಜ್ ಸಂಗೀತ ಮಂಡಳಿಯನ್ನು ಸ್ಥಾಪಿಸಿದರು. ಮಧುರ ಕಂಠದ ಕಲಾವಿದರಾದ ಸರ್‌ನಾಯ್ಕರು ಕಂಪನಿಯ ನಾಟಕದಲ್ಲಿ ನಾಯಕಿಯ ಪಾತ್ರವನ್ನು ಮಾಡುತ್ತಿದ್ದರು. ಶಾಹುರವರು ಕಂಪನಿಯನ್ನು ತನ್ನ ಅಧೀನಕ್ಕೆ ತೆಗೆದುಕೊಂಡು ದಿನನಿತ್ಯದ ದವಸ–ಧಾನ್ಯಗಳಿಂದ ಬಟ್ಟೆಗಳವರೆಗೆ ಪ್ರತಿಯೊಂದನ್ನು ಒದಗಿಸುತ್ತಿದ್ದರು. ಚಿತ್ರಕಾರರಾದ ಬಾಬುರಾವ್ ಅವರು ನಂತರ 'ಕಲಾಮಹರ್ಷಿ' ಎಂಬ ಬಿರುದನ್ನು ಪಡೆದವರು ಕಂಪನಿಯ ಪರದೆಗಳಲ್ಲಿ ತಮ್ಮ ಪ್ರತಿಭಾಕುಂಚದಿಂದ ಚಿತ್ರಕಲೆಯನ್ನು ಬಿಡಿಸುತ್ತಿದ್ದರು.[26] ಗೋವಿಂದರಾವ್ ಅವರು ತಮ್ಮ ಇಡೀ ಜೀವನವನ್ನು ಸಂಗೀತ ಮತ್ತು ನಾಟಕಕಲೆಗೆ ಮುಡುಪಿಟ್ಟರು. ಕಲಾವಿದರಲ್ಲಿ ಅವರು ಬಾಲಗಂಧರ್ವ ಮತ್ತು ಸರ್‌ನಾಯ್ಕರ ಜೊತೆಗೆ ಹಲವರನ್ನು ಬೆಳೆಸಿದರು. ಅವರಲ್ಲಿ ಹೀರಾಬಾಯಿ ಬಡೀಡಕರ್ ಒಬ್ಬರು. ಗೋವಿಂದರಾವ್ ಅವರು ಬಾಲಗಂಧರ್ವರ ಪ್ರದರ್ಶನಗಳ ಮೂಲಕ ಮರಾಠಿ ನಾಟಕಕಲೆಯ ಸಂಗೀತಕ್ಕೆ ಮೆಚ್ಚಬಹುದಾದ, ಸಮರ್ಥವಾದ, ಸೌಂದರ್ಯಾತ್ಮಕವಾದ ಮತ್ತು ಕ್ರಾಂತಿಕಾರಿ ಸ್ವರೂಪವನ್ನು ನೀಡಿದರು. ಸಂಗೀತಸಾಮ್ರಾಟ ಅಲ್ಲಾಡಿಯ ಖಾನರ ಗಾಯನದ (ಹಾಡುಗಾರಿಕೆಯು) ಶೈಲಿಯ ಮಹತ್ವವನ್ನು ಮಹಾರಾಷ್ಟ್ರಕ್ಕೆ ತಿಳಿಸಿಕೊಡುವುದರಲ್ಲಿ ಮುಖ್ಯ ಕಾರಣಕರ್ತರಾಗಿದ್ದರು.[27] ಭಜನೆಯ ರಾಜ ತುಕಾರಾಮ್ ಬುವ ಸರ್‌ನಾಯ್ಕರ ಮಗ ಶಂಕರರಾವ್ ಸರ್‌ನಾಯ್ಕರು ಕೊಲ್ಹಾಪುರ ಕಲಾಕಾರರ ಸೌರಮಂಡಲದಲ್ಲಿ ಬೆಳಗುವ ಮತ್ತೊಬ್ಬ ನಕ್ಷತ್ರ. ಹುಟ್ಟುತ್ತಲೆ ಕೋಗಿಲೆಯ ಮಧುರಕಂಠವನ್ನು ವರವಾಗಿ ಪಡೆದ ಈ ಕಲಾವಿದ ತನ್ನ ಹಾಡುಗಳಿಂದ ಇಡೀ ಮಹಾರಾಷ್ಟ್ರವನ್ನು ಹುಚ್ಚೆಬ್ಬಿಸಿದರು. ಮಹಾರಾಷ್ಟ್ರದ ಸಂಗೀತ ಸಂರಕ್ಷಕರು ಇವರಿಗೆ 'ಕೋಕಿಲಕಂಠ' ಎಂಬ ಉಪಾಧಿಯನ್ನು ನೀಡಿದ್ದಾರೆ. ಶಾಹುರವರ ಒತ್ತಾಯದ ಮೇರೆಗೆ ಅವರು ಗೋವಿಂದರಾವ್ ತೆಂಬೆಯವರ ಶಿವರಾಜ್ ನಾಟಕ ಕಂಪನಿಯನ್ನು ಸೇರಿದರು ಮತ್ತು ತಮ್ಮ ಮಧುರಕಂಠದಿಂದ ಮಹಾಗಾಯಕ–ನಟ ಎಂಬ ಕೀರ್ತಿಯನ್ನು ಪಡೆದರು. ನಂತರ ೧೯೧೯ರಲ್ಲಿ ಶಿವರಾಜ ನಾಟಕಕಂಪನಿಯನ್ನು ಬಿಟ್ಟು ತಮ್ಮದೇ ಆದ ಯಶವಂತ ಸಂಗೀತ ಮಂಡಳಿಯನ್ನು ಸ್ಥಾಪಿಸಿದರು. ಈ ಕಂಪನಿಯು ಇಂದೂರಿನ ಅರಸ ತುಕೋಜಿರಾವ್ ಹೋಳ್ಕರ್ ಅವರಿಂದ ರಾಜಾಶ್ರಯ ಪಡೆದರು. ಈ ಕಂಪನಿಯು ಪ್ರಸಿದ್ಧ ಗಾಯಕರಾದ ವಾಮನರಾವ್ ಸದೋಲಿಕರ್ ಮತ್ತು ಶಂಕರರಾವ್ ಅವರ ಸಹೋದರ ನಿವೃತ್ತಿಬುವ ಸರ್‌ನಾಯ್ಕರನ್ನು ಕಲಾಕಾರರನ್ನಾಗಿ ಪಡೆದಿತ್ತು. ಶಂಕರರಾವ್ ಅವರು ೧೯೩೪ರವರೆಗೆ ಕಂಪನಿಯನ್ನು ನಡೆಸಿದರು. ತದನಂತರ ತಮ್ಮ ಇಡೀ ಜೀವನವನ್ನು ಭಜನೆ ಹಾಡುಗಾರಿಕೆಗೆ ಮೀಸಲಿಟ್ಟರು.[28]

'ಬಾಲಗಂಧರ್ವ' ನಾರಾಯಣರಾವ್ ರಾಜಹಂಸ ಮತ್ತು 'ಸಂಗೀತಸೂರ್ಯ' ಕೇಶವರಾವ್ ಭೋಂಸ್ಲೆ ಅವರ ಹೆಸರುಗಳನ್ನು ಪ್ರಸ್ತಾಪಿಸದಿದ್ದರೆ ಕೊಲ್ಹಾಪುರವಲ್ಲದೆ ಮಹಾರಾಷ್ಟ್ರದ ನಾಟಕಕಲೆಯ ಇತಿಹಾಸ ಪೂರ್ಣವಾಗಲಾರದು. ಈ ಇಬ್ಬರು ಮಹಾಕಲಾವಿದರ ಕೊಲ್ಹಾಪುರದ ಅಮೂಲ್ಯ ಕೊಡುಗೆಗಳನ್ನು ಮರಾಠಿ ನಾಟಕಕಲೆಗೆ ನೀಡಲಾಗಿದೆ ಮತ್ತು ಈ ಕೊಡುಗೆಗಳ ಹಿಂದೆ ಶಾಹುರವರ ದೂರದೃಷ್ಟಿ, ಔದಾರ್ಯದ ಸ್ವಭಾವ ಮತ್ತು ನಾಟಕಕಲೆಯ ಬಗ್ಗೆ ಒಲವುಗಳು ಮುಖ್ಯ ಕಾರಣಗಳಾಗಿವೆ. ನಾರಾಯಣರಾವ್ ಅವರು ಬಾಲ್ಯದಲ್ಲಿ ಕೊಲ್ಹಾಪುರದಲ್ಲಿದ್ದಾಗ ಶಾಹುರವರು ಅವರ ನಟನೆ(ಪ್ರದರ್ಶನ)ಯ ಬಗ್ಗೆ ಕೇಳಿದ್ದರು. ಅವರು ರಾಯಣರಾವ್ ಅವರ ಕೌಶಲ್ಯವಾದ ಹಾಡುಗಾರಿಕೆ (ಗಾಯನ), ಅವರ ಮಧುರವಾದ ಕಂಠ ಮತ್ತು

ಸುಂದರವಾದ ದೇಹದ ಮೈಕಟ್ಟುಗಳನ್ನು ಮೆಚ್ಚಿ ಸರಿಯಾಗಿ ನಿರ್ಣಯಿಸಿ ಅವರನ್ನು ಮೀರಜ್‌ನಲ್ಲಿರುವ ಕಿರ್ಲೋಸ್ಕರ ನಾಟಕಕಂಪನಿಗೆ ಕಳುಹಿಸಿಕೊಟ್ಟರು. ನಾರಾಯಣರಾವ್ ಅವರಿಗೆ 'ಶಕುಂತಲಾ' ನಾಟಕದಲ್ಲಿ ಶಕುಂತಲೆಯ ಪಾತ್ರವನ್ನು ನೀಡಲಾಯಿತು. ಶಾಹುರವರು ಮೊದಲನೇ ಆಟಕ್ಕೆ ಹಾಜರಿದ್ದರು. ನಾರಾಯಣ ರಾವ್ ಅವರು ಅವರ ಆಶೀರ್ವಾದವನ್ನು ಪಡೆದು ತಮ್ಮ ಪ್ರವೇಶವನ್ನು ಮಾಡಿದರು ಮತ್ತು ಅದ್ಭುತವಾದ ನಟನೆಯಿಂದ ಪ್ರೇಕ್ಷಕರ ಮನಗೆದ್ದರು. ಶಾಹುರವರು ತಮ್ಮ ತೀರ್ಮಾನ ಸರಿ ಎಂದು ಸಾಧಿತವಾಯಿತೆಂದು ಸಂತೋಷಗೊಂಡರು.[29] ಅಂದಿನಿಂದ ನಾರಾಯಣರಾವ್ ಅವರು ಹಿಂದಕ್ಕೆ ತಿರುಗಲಿಲ್ಲ. ಅವರ ಗುಣಗಳಿಂದ ಸಂಪ್ರೀತರಾದ ತಿಲಕರು ಅವರಿಗೆ 'ಬಾಲಗಂಧರ್ವ' ಎಂಬ ಉಪಾಧಿಯನ್ನು ನೀಡಿದರು. ಕಲಾವಿದರಾಗಿ ಅತ್ಯುತ್ಕೃಷ್ಟರು. ಮರಾಠಿ ನಾಟಕಕಲೆಗೆ ಸ್ವರ್ಗದಿಂದಲೇ ಕಳುಹಿಸಿಕೊಡಲಾಗಿದೆ. ಮಹಿಳೆಯರ ಪಾತ್ರಗಳಲ್ಲಿ ಅವರ ಮೋಹಕ ನಟನೆ ಮತ್ತು ಅವರ ದಿವ್ಯಕಂಠದ ಸಾಮರ್ಥ್ಯಗಳಿಂದ ಮರಾಠಿಗರನ್ನು ಹಲವು ದಶಕಗಳವರೆಗೆ ಮಂತ್ರಮುಗ್ಧರನ್ನಾಗಿ ಮಾಡಿದರು.[30] ನಂತರ ಕಿರ್ಲೋಸ್ಕರ ನಾಟಕಕಂಪನಿ ಬಿಟ್ಟು ತಮ್ಮದೇ ಆದ ಗಂಧರ್ವ ಸಂಗೀತ ಮಂಡಳಿಯನ್ನು ಪ್ರಾರಂಭ ಮಾಡಿದರು. ಶಾಹುರವರು ಕೊನೆವರೆಗೆ ಆ ಕಂಪನಿಗೆ ಆಶೀರ್ವಾದ ಮಾಡಿದ್ದರು.

ಮರಾಠಿ ನಾಟಕ ಕಲೆಯು ಮತ್ತೊಬ್ಬ ಕಲಾವಿದ ಕೇಶವರಾವ್ ಅವರ ಕಲಾತ್ಮಕ ಗುಣಗಳನ್ನು ಪಡೆದಿತ್ತು. ಅವರು ತಮ್ಮ ಹಿರಿಯ ಅಣ್ಣನ ಜೊತೆಯಲ್ಲಿ ನಾಲ್ಕನೇ ವಯಸ್ಸಿನಲ್ಲಿ ಜಾನುಭಾವು ನಿಮ್‌ಕರ್‌ರ ಸ್ವದೇಶಿ ಹಿತಚಿಂತಕ ಮಂಡಳಿಯನ್ನು ಸೇರಿದರು ಮತ್ತು ಹತ್ತನೆಯ ವಯಸ್ಸಿನಲ್ಲಿ ತಾವು ಮಾಡಿದ ಶಾರದಾ ಪಾತ್ರದ ನಟನೆಯನ್ನು ನೋಡಿದ ಶಾಹುರವರು 'ಒನ್ಸ್ ಮೋರ್' ಎಂದು ಶ್ಲಾಘಿಸಿದರು.[31] ನಂತರ ೧೮ನೇ ವಯಸ್ಸಿನಲ್ಲಿ ಅವರು 'ಲಲಿತಕಲಾದರ್ಶ' ಮಂಡಳೀ (೧೯೦೮) ಎಂಬ ಕಂಪನಿಯನ್ನು ಸ್ಥಾಪಿಸಿದರು. ಈ ಕಂಪನಿಯು ಮರಾಠಿ ನಾಟಕ ಕಲೆಯ ಮಹಾನಾಟಕಕಾರರಾದ ವೀರ ವಾಮನರಾವ್ ಜೋಷಿ ಮತ್ತು ಬಿ. ವಿ. ವಾರೇಕಾರರನ್ನು ಪಡೆದಿತ್ತು. ಅದು ಕೊಲ್ಹಾಪುರ ಮತ್ತು ಮಹಾರಾಷ್ಟ್ರದ ಉಳಿದ ಕಡೆಗಳಲ್ಲಿ ತಮ್ಮ ನಾಟಕಗಳ ಪ್ರದರ್ಶನಗಳನ್ನು ಮಾಡಿತು. ಕೊಲ್ಹಾಪುರದಲ್ಲಿ ಅದು ಬಾಲಗಂಧರ್ವರ ಜೊತೆಯಲ್ಲಿ ಜಂಟಿ ಸಂಗೀತದ ಪ್ರದರ್ಶನಗಳನ್ನು ಮಾಡಿತು. ಅವರು ಬಾಂಬೆಯಲ್ಲಿ 'ಮಾನಾಪಮಾನ' ಪ್ರದರ್ಶನದ ನಂತರ ಜನಪ್ರಿಯತೆಯ ತುತ್ತತುದಿಗೇರಿದರು. ಅದು ಬಾಲಗಂಧರ್ವರ ಜೊತೆಯಲ್ಲಿ ೧೯೨೧ರಲ್ಲಿ ಜಂಟಿ ಪ್ರದರ್ಶನ ನೀಡಿತು. ಬಾಲಗಂಧರ್ವ ಮತ್ತು ಕೇಶವರಾವ್ ಅವರ ನಡುವಣ ಮರಾಠಿ ನಾಟಕಕಲೆಯ ಹೊಳೆಯುವ ಚಂದ್ರ ಮತ್ತು ಸೂರ್ಯರ ಐತಿಹಾಸಿಕ ಸ್ಪರ್ಧೆ ವೈಭವದ ಪ್ರದರ್ಶನವನ್ನು ಹೀಗೆ ವಿವರಿಸಲಾಗಿದೆ. ಮರಾಠಿಯ ಪ್ರಸಿದ್ಧ ಕಲಾಕಾರ ಮತ್ತು ಲೇಖಕ ಪಿ. ಎಲ್. ದೇಶಪಾಂಡೆ ಹೀಗೆ ಬರೆಯುತ್ತಾರೆ: "ಸಿ. ಕೆ. ನಾಯ್ಡು ಅವರು ಕ್ರಿಕೆಟ್‌ನ ಮೈದಾನದಲ್ಲಿ ಹನ್ನೊಂದು ಸಿಕ್ಸನ್ನು ಹೊಡೆದ ಅಭೂತಪೂರ್ವ ಆಟದಂತೆಯೇ ಮರಾಠಿ ನಾಟಕರಂಗದ ಮೇಲೆ ಕೇಶವ-ನಾರಾಯಣರ ಜಂಟಿ ಪ್ರದರ್ಶನವು ಅದ್ಭುತವಾಗಿ ಉಳಿದುಬಿಡುವುದು. ಈ ಪ್ರದರ್ಶನದಲ್ಲಿ ಕೇಶವರಾವ್ ಅವರು ಧೈರ್ಯಧರರಾಗಿದ್ದರೆ ನಾರಾಯಣರಾವ್ ಭಾಮಿನಿಯಾಗಿ ನಟಿಸಿದರು. ಕೇಶವರಾವ್ ಮತ್ತು ನಾರಾಯಣರಾವ್ ಅವರ ಹಾಡುಗಾರಿಕೆಯ ಪ್ರತಿಭೆಗಳನ್ನು ಹೇಗೆ ಹೋಲಿಸುವುದು? ಆದರೆ 'ಮಾನಾಪಮಾನ'ದ ಜಂಟಿ ನಟನೆ(ಪ್ರದರ್ಶನ)ಯಲ್ಲಿ ಕೇಶವರಾವ್ ಅವರನ್ನು ಪ್ರೇಕ್ಷಕರು ಹೆಚ್ಚು ಮೆಚ್ಚಿದ ಇತಿಹಾಸವಿದೆ."[32] ಆ ದಿನ ಕೇಶವರಾವ್ ಅವರು ಇಡೀ ಪ್ರದರ್ಶನವನ್ನೇ ಗೆದ್ದುಬಿಟ್ಟರು (ಆಕರ್ಷಿಸಿದರು). ಹಾಡುಗಾರಿಕೆಯಲ್ಲಿ ಕೆಚ್ಚು,

ಜೀವಂತಿಕೆ ಮತ್ತು ಪ್ರತಿಭೆಗಳು ಇಡೀ ಮಹಾರಾಷ್ಟ್ರವನ್ನೇ ಮಂತ್ರಮುಗ್ಧಗೊಳಿಸಿತು (ಬೆರಗುಗೊಳಿಸಿತು). ಅವರ ಗುಣಗಳಾದ ಸೂರ್ಯನ ತರ ಪ್ರಕಾಶಮಾನ ಸಂಗೀತ ಜಗತ್ತನ್ನೇ ಬೆಳಗಿಸಿತು. ಕಲಾಪೋಷಕರು ಅವರಿಗೆ ಸಂಗೀತಸೂರ್ಯ ಎಂಬ ಉಪಾಧಿ ನೀಡಿದರು. ಅವರು ದತ್ತೋಂತಪಂತ ಜಂಬೇಕರ ಮತ್ತು ರಾಮಕೃಷ್ಣ ಬುವವಾಜ್ ಅವರ ಬಳಿ ಪಡೆದ ತರಬೇತಿಯನ್ನು ತಮ್ಮ ಪ್ರತಿಭೆಯಿಂದ ಅತ್ಯಂತ ಉತ್ತಮ ರೀತಿಯಲ್ಲಿ ಬಳಸಿಕೊಂಡರು. ಕೇಶವರಾವ್ ಅವರ ಸಫಲತೆಯ ಹಿಂದೆ ಶಾಹುರವರ ಮಾತೃಸಮಾನ ಪ್ರೀತಿ ಪೋಷಕರ ಆತ್ಮೀಯತೆಯಿದೆ. ಬಿ. ವಿ. ವಾರೆಕರ್ ಅವರು ತಮ್ಮ ನಾಟಕ 'ಕುಂಜವಿಹಾರಿ'ಯನ್ನು ಶಾಹುಮಹಾರಾಜರಿಗೆ ಅರ್ಪಿಸಿದ್ದಾರೆ. ಆ ಸಂದರ್ಭದಲ್ಲಿ ಶಾಹು ಅವರು ಅವರಿಗೆ ಹೇಳಿದರು: "ಶ್ರೀ ವಾರೆಕರ್ ಅವರೇ, ನೀವು ಈ ನಾಟಕವನ್ನು ಅರ್ಪಿಸಿರುವುದು ನನಗೆ ಸಂದ ಗೌರವವಾಗಿದೆ. ಈಗ ನನ್ನ ಕೇಶ (ಕೇಶವರಾವ್) ತಮ್ಮ ಕಾಲ ಮೇಲೆ ನಿಂತಿದ್ದಾರೆ (ಸ್ವಾವಲಂಬಿ). ಅವರಿಗೆ ಒಂದು ನಾಟಕ ಬರೆದುಕೊಡಿ. ಆದರೆ ಕೇಶವನನ್ನು ಮರೆಯಬೇಡ. ಕೇಶ ಒಂದು ಹೊಳೆಯುವ ಕತ್ತಿ. ನೀವು ಅದನ್ನು ಪಡೆದರೆ ವಿಶ್ವವನ್ನು ಗೆಲ್ಲುವಿರಿ."[33] ಶಾಹುರವರು ಮಾತ್ರ ಸೂರ್ಯನ ಹೊಳಪಿನ ಪ್ರತಿಭೆಯುಳ್ಳ ಕೇಶವರಾವ್ ಅವರನ್ನು ಪ್ರೀತಿಯಿಂದ ಕೇಶ ಎಂದು ಕರೆಯುವ ಅಧಿಕಾರವಿದೆ.

ಕೇಶವರಾವ್ ಅವರು ೧೯೨೬ರಲ್ಲಿ ಕಂಪನಿಯೊಂದಿಗೆ ಕೊಲ್ಹಾಪುರಕ್ಕೆ ಭೇಟಿ ನೀಡಿದಾಗ ಶಾಹುರವರು ಅವರಿಗೆ ಸನ್ಮಾನ ಮಾಡಿದರು. ಶಾಹುರವರು ಒಬ್ಬ ಸಹೃದಯರು, ರಸಿಕರಾಗಿದ್ದರಿಂದ ಅವರು ಖಾಸಬಾಗಿನಲ್ಲಿ ೨೫,೦೦೦ ಜನರು ಹಿಡಿಸುವ ಸಾಮರ್ಥ್ಯದ ಒಂದು ಅರಮನೆಯ ರಂಗಮಂದಿರದಲ್ಲಿ ಒಂದು ಬಯಲು ರಂಗಮಂದಿರವನ್ನು ಕಟ್ಟಿಸಿದರು; ಅದರಲ್ಲಿ ತನ್ನ ಎಲ್ಲಾ ಪ್ರಜೆಗಳು ಕುಳಿತು ಮೃಚ್ಛಕಟಿಕವನ್ನು ನೋಡಬಹುದು. ಕೊಲ್ಹಾಪುರದಲ್ಲಿ ಕೇಶವರಾವ್ ಅವರು ತಂಗಿದ್ದ ಸಮಯದಲ್ಲಿ ಅವರು ತನ್ನ ನಾಟಕದ ಹಲವು ಪ್ರದರ್ಶನಗಳನ್ನು ನಡೆಸಿಕೊಟ್ಟರು. ಇಡೀ ರಾಜಧಾನಿ ಅವರ ಸಂಗೀತದಿಂದ ಬೆರಗುಗೊಂಡಿತು. ಶಾಹುಮಹಾರಾಜರು ಹಲವು ಪ್ರದರ್ಶನಗಳನ್ನು ದರ್ಬಾರಿಗಾಗಿ ಕಾಯ್ದಿರಿಸಿದ್ದರು. ಕೇಶವರಾವ್ ಅವರ ನಟನೆಗಳಿಂದ ಖುಷಿಗೊಂಡ ಶಾಹುರವರು ಸಂಭಾವನೆಯನ್ನು ಅವರಿಗೆ ನೀಡಿದರು. ಕೇಶವರಾವ್ ಅವರು ಮಹಾ ಉದಾರಿಯಾಗಿದ್ದರಿಂದ ಕೊಲ್ಹಾಪುರದಲ್ಲಿ ಗಳಿಸಿದ್ದ ಎಲ್ಲಾ ಹಣವನ್ನು ಧಾರ್ಮಿಕ ಕಾರ್ಯಗಳಿಗೆ ಮತ್ತು ದೇವುಳ ಕ್ಲಬ್‌ನಂತಹ ಸಂಸ್ಥೆಗಳಿಗೆ ನೀಡಿ ಸಹಾಯಮಾಡಿದರು. ಅಂತಹ ಗುಣವಂತ, ಕೀರ್ತಿವಂತ, ಪ್ರತಿಭಾವಂತ ಕಲಾವಿದರು ೩೨ನೇ ವಯಸ್ಸಿನಲ್ಲಿಯೇ ದೈವಾಧೀನರಾದರು. ಮರಾಠಿ ನಾಟಕರಂಗದ ಸಂಗೀತಸೂರ್ಯ ಅಸ್ತಂಗತನಾದನು.[34] ಮರಣದ ವಾರ್ತೆಯನ್ನು ಕೇಳಿದ ಕೂಡಲೇ ಶಾಹುರವರ ಪರ್ವತಾಕಾರದ ಬಲಿಷ್ಠ ವ್ಯಕ್ತಿ ಕಣ್ಣುಗಳಲ್ಲಿ ನೀರು ತುಂಬಿತು. ವಾರೆಕರ್ ಅವರು ಕೇಶವರಾವ್ ಅವರಿಗೆ ಈ ಮಾತುಗಳಲ್ಲಿ ಗೌರವ ನಮನ ಸಲ್ಲಿಸಿದರು: "....ಅವರು ಐದನೇ ವಯಸ್ಸಿನಲ್ಲಿ ನಾಟಕದ ವೇದಿಕೆಗೆ ಬಂದರು ಮತ್ತು ಕೇವಲ ೩೨ನೇ ವಯಸ್ಸಿನಲ್ಲಿ ಸ್ವರ್ಗಕ್ಕೆ ಪ್ರಯಾಣ ಬೆಳೆಸಿದರು. ಅವರು ಇಡೀ ಜೀವನವನ್ನು ನಾಟಕಕಲೆಯಲ್ಲಿಯೇ ಕಳೆದಿದ್ದರಿಂದ ಅವರು ಔಪಚಾರಿಕ ಶಿಕ್ಷಣವನ್ನು ಪಡೆಯಲೇ ಇಲ್ಲ. ಅವರು ಎಂತಹ ಮುನ್ನೋಟವನ್ನು ಹೊಂದಿದ್ದರು! ಅವರು ಮರಾಠಿ ನಾಟಕಕಲೆಯನ್ನು ಬೆಳಗಿಸಿದರು, ಅವರು ಹೊಸ ನಾಟಕಕಾರರನ್ನು, ಹೊಸನಟರನ್ನು, ಹೊಸ ತಾಂತ್ರಿಕರನ್ನು ಮತ್ತು ಹೊಸ ವಾಸ್ತುಶಿಲ್ಪಿಗಳನ್ನು ಮುಂಚೂಣಿಗೆ ತಂದರು ಮತ್ತು ಸಂಪೂರ್ಣವಾಗಿ ಮರಾಠಿ ನಾಟಕಕಲೆಯ ಸ್ವರೂಪವನ್ನೇ ಬದಲಾಯಿಸಿದರು. ಈ ಗಾಯಕನ ಪ್ರತಿಭಾಶಕ್ತಿಯು ಹಲವರಿಗೆ ಭಯ ಹುಟ್ಟಿಸುವಂತಾಗಿತ್ತು. ಅಷ್ಟೇ ಅಲ್ಲದೇ ಅವರು ಅಷ್ಟೇ ಸಮರ್ಥ ನಟರಾಗಿದ್ದರು.

ಭಾವುರಾವ್ ಕೊಲ್ಹಾತ್ಕರ್ ನಂತರ ಯಾವ ಇತರೆ ನಟನೂ ಕೇಶವರಾವ್ ಹಾಗೆ ಸಾಮರ್ಥ್ಯ ತೋರಿಸಿದವರು ಇಲ್ಲ. ಇಂದು ನಾಟಕಕಲೆಯ ಕ್ಷೇತ್ರದಲ್ಲಿ ಜೀವವಿಲ್ಲದಿರುವುದರಿಂದ ಜೀವ ತುಂಬಲು ದೇವರು ಕೇಶವರಾವ್ ಅವರನ್ನು ಮತ್ತೆ ಮಹಾರಾಷ್ಟ್ರಕ್ಕೆ ಕಳುಹಿಸಲಿ!"[35]

ಈ ಅವಧಿಯಲ್ಲಿ ಅರಮನೆ ನಾಟಕಕಲೆಯ ಬಗೆಗಿನ ಶಾಹುರವರ ನಿರಂತರವಾದ ಸಂಕೇತ ಪರಿಪೂರ್ಣವಾಯಿತು. ೧೯೦೨ರಲ್ಲಿ ಅವರು ಇಟಲಿಗೆ ಭೇಟಿ ನೀಡಿದ್ದಾಗ ಕುಸ್ತಿ ಅಖಾಡಗಳ ಜೊತೆಗೆ ಭಾರಿ ರಂಗಮಂದಿರಗಳನ್ನು ನೋಡಿದರು ಮತ್ತು ತಮ್ಮ ಸಂಸ್ಥಾನದಲ್ಲಿ ಅಂಥ ಕಟ್ಟಡಗಳನ್ನು ಕಟ್ಟಿಸಬೇಕೆಂದು ನಿರ್ಧರಿಸಿದರು. ಅದರ ಪ್ರಕಾರ ಕುಸ್ತಿ ಕ್ರೀಡಾಂಗಣವನ್ನು ಕಟ್ಟಿಸಲಾಯಿತು. ಈಗ ನಾಟಕದ, ರಂಗಮಂದಿರದ ಕನಸನ್ನು ನನಸುಗೊಳಿಸಲು ಪ್ರಾರಂಭಮಾಡಿದರು (೧೯೧೩). ಭವ್ಯವಾದ ರಂಗಮಂದಿರವನ್ನು ರೋಮಿನ ರಂಗಮಂದಿರದ ಪ್ರಕಾರ ಕಟ್ಟಿಸಲು ೧೯೧೩ರಲ್ಲಿ ಪ್ರಾರಂಭ ಮಾಡಿದರು. ಭವ್ಯ ರಂಗಮಂದಿರವನ್ನು ಮೂರು ವರ್ಷಗಳಲ್ಲಿ ಕಟ್ಟಿಸಿದರು. ೧೯೧೫ರಲ್ಲಿ ರಾಜ ರಾಜಾರಾಮ್ ಅವರು ಕೇಶವರಾವ್ ಭೋಂಸ್ಲೆ ಅವರ ಕಂಪನಿ ಲಲಿತಕಲಾದರ್ಶ ಮತ್ತು ಕಿರ್ಲೋಸ್ಕರ ಕಂಪನಿ ಕ್ರಮವಾಗಿ ಪ್ರದರ್ಶಿಸಿದ 'ಸೌಭದ್ರ' ಮತ್ತು 'ಮಾನಾಪಮಾನ' ಎಂಬ ನಾಟಕಗಳನ್ನು ಉದ್ಘಾಟಿಸಿದರು. ಈಗ ಮಹಾರಾಷ್ಟ್ರದ ವಿವಿಧ ಕಲಾವಿದರು ಮತ್ತು ನಾಟಕಕಂಪನಿಗಳು ತಮ್ಮ ಕಲೆಯನ್ನು ಪ್ರದರ್ಶಿಸಲು ತಮ್ಮ ಬಳಿ ನಾಟಕ ರಂಗಮಂದಿರವನ್ನು ಹೊಂದಿದ್ದರು. ಆ ದಿನಗಳಲ್ಲಿ ಭಾರತದಲ್ಲಿ ಅರಮನೆಯ ಭಾರಿ ಮತ್ತು ರಾಜರ ರಂಗಮಂದಿರದಷ್ಟು ದೊಡ್ಡದಾದ ಯಾವ ರಂಗಮಂದಿರವೂ ಇರಲಿಲ್ಲ. ಸ್ವಾತಂತ್ರ್ಯದ ನಂತರ ಮಹಾರಾಷ್ಟ್ರ ಸರ್ಕಾರ ಅದನ್ನು ಶಾಹುರವರ ಕಾಲದ ನಾಟಕದ ಮಹಾ ಕಲಾಕಾರರ ನೆನಪಿನಲ್ಲಿ 'ಕೇಶವರಾವ್ ಭೋಂಸ್ಲೆಯ ನಾಟ್ಯ ಗೃಹ' ಎಂದು ಪುನರ್ ನಾಮಕರಣ ಮಾಡಿತು. ಈ ಕ್ರಮವು ಕೊಲ್ಹಾಪುರದ ಪರಂಪರೆಗೆ ಸರಿ ಹೊಂದುತ್ತಿತ್ತು.

ನಗರ ಸಮಾಜ ನಾಟಕ ಕಲೆಯ ಬಗ್ಗೆ ಆಸಕ್ತಿ ಹೊಂದಿದ್ದರೆ ಗ್ರಾಮೀಣ ಪ್ರದೇಶದ ಮುಗ್ಧ ಮತ್ತು ಅಶಿಕ್ಷಿತ ಜನತೆ ನಿಜವಾದ ಜಾನಪದ ಪ್ರಕಾರವಾದ 'ತಮಾಶಾ' ಕಲೆಗೆ ಮಾರುಹೋಗಿದ್ದರು. ಸಾಮಾನ್ಯ ಜನರ ಮನರಂಜನೆಯ ಪ್ರಕಾರವಾಗಿ ಇದನ್ನು ಜಾನಪದ ರಂಗಕಲೆಯೆಂದು ಕರೆಯಲಾಗುತ್ತದೆ. ಈ ಕಲೆಯ ಪ್ರಕಾರಕ್ಕೆ ಶಾಹುರವರು ನೀಡಿದ ಪ್ರೋತ್ಸಾಹದ ನಿದರ್ಶನಗಳು ಸಿಗುತ್ತವೆ. ಶಾಹುರವರು ವಿಶೇಷವಾಗಿ ಆ ಕಾಲದ ಪ್ರಸಿದ್ಧ 'ತಮಾಶಾ' ಕಲಾಕಾರ ತಾತ್ಯ ಸಾವ್‌ಲಾಜ್‌ಕರ್ ಮತ್ತು ಪ್ರಸಿದ್ಧ ಲಾವಣಿಯ ಕವಿ ಪಟ್ಟೆ ಬಾಪುರಾವ್ ರೆಥಾರೆಕರ್ ಅವರನ್ನು ಸೋನ್‌ತಾಲಿ ಕ್ಯಾಂಪಿಗೆ ಬರಮಾಡಿಕೊಂಡು ಅವರ ಕಲೆಯನ್ನು ಶಾಹುಮಹಾರಾಜರು ಗೌರವಿಸಿದರು. ತಾತ್ಯರವರ ನಾಟಕ 'ಮೋಹನ-ಬತಾವ್' (ಮೋಹನ-ಹೇಳು) ಬಹಳ ಜನಪ್ರಿಯವಾಯಿತು. ಶಾಹುರವರು ಕಾಗಲ್ ಜಾತ್ರೆಗೆ ಹೋಗಿದ್ದಾಗ ಅವರು ಅದರ ಪ್ರದರ್ಶನವನ್ನು ನೋಡಿದರು. ತಾತ್ಯರವರ ಕಲಾತ್ಮಕ ಕೌಶಲ್ಯಗಳನ್ನು ಕಂಡು ಸಂತೋಷಪಟ್ಟು ಮಹಾರಾಜರು ಅವರಿಗೆ ಜರಿಪಟ್ಕ (ಜರಿಪೇಟ) ತೊಡಿಸಿ ಗೌರವಿಸಿ ೧೦೦೦ ರೂಪಾಯಿಗಳ ನಿಧಿಯನ್ನು ಸಮರ್ಪಿಸಿದರು.[36] ನಂತರ ಶಾಹುರವರು 'ತಮಾಶಾ'ದ ರೂಪ ಮತ್ತು ಉದ್ದೇಶವನ್ನು ಬದಲಾಯಿಸಿ ಅದರಿಂದ ಸತ್ಯಶೋಧಕ ಜಲ್ಸಾವನ್ನು ರಚಿಸಿದರು ಮತ್ತು ಅದನ್ನು ಸಾಮಾಜಿಕ ಸುಧಾರಣೆಯ ಶಕ್ತಿಯುತ ಮಾಧ್ಯಮವನ್ನಾಗಿ ರೂಪಿಸಿದರು. ಈ ವಿದ್ಯಮಾನವನ್ನು ನಾವು ಈಗಾಗಲೇ ಚರ್ಚಿಸಿದ್ದೇವೆ.

## ಸಿನೆಮಾ

ನಾಟಕ ಪ್ರಾಚೀನ ಪರಂಪರೆ. ಮಹಾರಾಷ್ಟ್ರದಲ್ಲಿ ೧೯ನೇ ಶತಮಾನದ ಕೊನೆಯ ಅರ್ಧ ಶತಮಾನದಲ್ಲಿ ಮರಾಠಿ ನಾಟಕಕಲೆ ಅಸ್ತಿತ್ವಕ್ಕೆ ಬಂತು. ಈ ಕಲೆಗಳಿಗೆ ಶಾಹು ಮಹಾರಾಜರು ಆಶ್ರಯ ನೀಡುವ ಮೂಲಕ ಸಂಗೀತ ಮತ್ತು ನಾಟಕಗಳ ಸುವರ್ಣಯುಗವನ್ನು ನಿರ್ಮಾಣ ಮಾಡುವುದರಲ್ಲಿ ಪ್ರಧಾನ ಪಾತ್ರ ವಹಿಸಿದರು. ಈ ಕಲೆಯ ಪ್ರಕಾರಗಳನ್ನು ಹೋಲಿಕೆ ಮಾಡಿದಾಗ ಸಿನೆಮಾದ ಉಗಮ (ಪ್ರಾರಂಭ) ಇತ್ತೀಚಿನ ಉಗಮವಾಗಿದೆ. ಅದು ನಟನಾ ಕಲೆಯ ಅಭಿವ್ಯಕ್ತಿಯಾದರೂ ಅದು ಆಧುನಿಕ ವಿಜ್ಞಾನ ಮತ್ತು ತಾಂತ್ರಿಕತೆಯ ಮೇಲೆ ಆಧಾರಗೊಂಡಿದೆ ಮತ್ತು ಅದರ ಅನ್ವೇಷಣೆಯು ಯೂರೋಪಿನಿಂದ ಇಂಡಿಯಾಗೆ ಬಂದಿದೆ. ಪ್ರಾರಂಭದ ಕಾಲದಲ್ಲಿ ಸಿನೆಮಾ ಕಲೆಯು ಮೌನವಿಧವಾಗಿತ್ತು. ನಂತರ ಅದು ಮೌಖಿಕ(ಶಾಬ್ದಿಕ)ವಾಯಿತು. ಅದು ಮೌನ (ಮೂಕಿ) ಸಿನೆಮಾವಾಗಿ ಬೆಳೆದಂತೆ ಅದನ್ನು ಮೌಖಿಕ (ಮಾತುಗಾರಿಕೆ)ವಾಗಿ ಪರಿವರ್ತಿಸಲಾಯಿತು. ಭಾರತದ ಮೂಕಿಸಿನೆಮಾಗಳ ಯುಗವು ಮಹಾರಾಷ್ಟ್ರದ ಇಬ್ಬರು ಯುವಕರಾದ ದಾದಾಸಾಹೇಬ ತೋರ್ನೆ ಮತ್ತು ದಾದಾಸಾಹೇಬ ಫಾಲ್ಕೆ ಅವರಿಂದ ಪ್ರಾರಂಭವಾಯಿತು. ಸಿನೆಮಾ-ಕಲಾವಿದ ಸೂರ್ಯಕಾಂತ ಮಾಂಡ್ರೆ ಅವರ ಇತ್ತೀಚಿನ ಸಂಶೋಧನೆಯ ಪ್ರಕಾರ ೧೯೧೨ರಲ್ಲಿ ತೋರ್ನೆ ಚಿತ್ರಿಸಿದ 'ಪುಂಡಲೀಕ' ಚಿತ್ರ ಭಾರತದಲ್ಲಿ ಮೊಟ್ಟಮೊದಲಿಗೆ ತಯಾರಿಸಿದ ಚಲನಚಿತ್ರವಾಗಿತ್ತು. ಅದರ ಮುಂದಿನ ವರ್ಷ ೧೯೧೩ರಲ್ಲಿ ಫಾಲ್ಕೆಯವರು ತಮ್ಮ ಚಿತ್ರ 'ರಾಜಾ ಹರಿಶ್ಚಂದ್ರ' ಚಿತ್ರವನ್ನು ಬಿಡುಗಡೆ ಮಾಡಿದರು.[37] ಇಂದು ಫಾಲ್ಕೆಯವರನ್ನು ಭಾರತದ ಚಲನಚಿತ್ರದ ಪಿತಾಮಹ ರೆಂದು ಭಾವಿಸಲಾಗಿದೆ. ಫಾಲ್ಕೆಯವರು ನಾಸಿಕದಲ್ಲಿ ಗೋದಾವರಿ ನದಿಯ ದಡದಲ್ಲಿ ಸ್ಟುಡಿಯೋವನ್ನು ನಿರ್ಮಿಸಿದರು. ಅದಕ್ಕೆ ಇಂಡಿಯಾ ಸಿನೆಮಾದ ಗಂಗೋತ್ರಿ ಎಂಬ ಗೌರವದಿಂದ ಕರೆದರೂ ಕೊಲ್ಹಾಪುರದ ಪಂಚಗಂಗಾದ ದಡದಲ್ಲಿ ನಿಜವಾದ ಅರ್ಥದಲ್ಲಿ ಈ ಕಲೆ ಬೀಡುಬಿಟ್ಟು ಪ್ರವರ್ಧಮಾನಕ್ಕೆ ಬಂತು. ಕೊಲ್ಹಾಪುರ ನಗರವು ಮರಾಠಿ ಚಿತ್ರೋದ್ಯಮದ ತವರುಮನೆಯಾಯಿತು. ಈ ಮಹಾಸಾಧನೆಯ ಶಿಲ್ಪಿ 'ಕಲಾಮಹರ್ಷಿ' ಬಾಬುರಾವ್ ಪೇಂಟರ್ ಅವರು. ಬಾಬುರಾವ್ ಅವರು ಕೊಲ್ಹಾಪುರದ ಒಬ್ಬ ಶಾಸ್ತ್ರೀಯ ಪ್ರತಿಭಾವಂತ ನಿರ್ಮಾತೃ. ಅವರೊಬ್ಬ ವಾಸ್ತುಶಿಲ್ಪಿ, ಒಬ್ಬ ತಂತ್ರಜ್ಞ ಮತ್ತು ಮುಖ್ಯವಾಗಿ ಅವರಿಗೆ ಕಲೆಯ ಬಗ್ಗೆ ದೃಢಸಂಕಲ್ಪವಿತ್ತು. ಈ ಅಸಾಮಾನ್ಯ ಹುಟ್ಟುಕಲಾವಿದರಾದ ಇವರಿಗೆ ಯಾವ ಗುರುವೂ ಇರಲಿಲ್ಲ. ಯಾರ ಬಳಿಯೂ ಅವರು ಯಾವ ವಿಧದ ಕಲಾಪ್ರಕಾರದ ತರಬೇತಿಯನ್ನು ಪಡೆಯಲಿಲ್ಲ. ಆದರೂ ಅವರು ಉತ್ತುಂಗ ಶಿಖರದ ಕಲೆಯ ನಿರ್ಮಾಪಕರಾಗಿದ್ದರು. ಅವರು ಸೃಜನಾತ್ಮಕ ಹಂಬಲವನ್ನು ಹೊಂದಿದ್ದರು ಮತ್ತು ಸತತವಾಗಿ ಪ್ರಯೋಗಶೀಲರಾಗಿರುತ್ತಿದ್ದರು. ಮೊದಲಿಗೆ ವಿದೇಶಿ ಚಲನಚಿತ್ರಗಳು ಭಾರತಕ್ಕೆ ಬಂದಾಗ ಫಾಲ್ಕೆಯಂಥವರು ಭಾರತದಲ್ಲಿ ಅವರ ಚಿತ್ರಗಳನ್ನು ಅನುಕರಿಸಿ ಚಿತ್ರಗಳನ್ನು ಮಾಡಲು ಪ್ರಾರಂಭಿಸಿದಾಗ ಬಾಬುರಾವ್ ಅವರು ಕಲೆಯ ಈ ಹೊಸ ಪ್ರಕಾರಕ್ಕೆ ಬಲವಾಗಿ ಆಕರ್ಷಿತರಾದರು. ಅವರು ತಮ್ಮ ಸಹೋದರ ಆನಂದರಾವ್ ಪೇಂಟರ್ ಅವರ ಬೆಂಬಲದೊಂದಿಗೆ ಈ ಕ್ಷೇತ್ರದಲ್ಲಿ ಪ್ರವೇಶಿಸಲು ನಿರ್ಧರಿಸಿದರು. ಆನಂದರಾವ್ ಅವರು ಸಹ ಬಹುಮುಖಿ ಕಲಾವಿದರಾಗಿದ್ದರು. ಈ ಸಹೋದರರು ೧೯೧೩ರಲ್ಲಿ ಕೊಲ್ಹಾಪುರದಲ್ಲಿ 'ಮಹಾರಾಷ್ಟ್ರ ಸಿನೆಮಾ' ಎಂಬ ಚಿತ್ರಮಂದಿರವನ್ನು ಪ್ರಾರಂಭಿಸಿದರು. ಅದನ್ನು ಸುಂದರವಾಗಿ ಅಲಂಕರಿಸಿದ್ದರು. ಈ ಸಹೋದರರು ಸೌಂದರ್ಯಾತ್ಮಕವಾಗಿ ಚಿತ್ರಮಂದಿರವನ್ನು ತಮ್ಮ ಬ್ರಷ್ಷುಗಳಿಂದಲೇ ನಾಲ್ಕು ಗೋಡೆಗಳಲ್ಲಿ ಚಿತ್ರಿಸಿದ್ದರು. ಅವರು ಪುರಾಣಗಳ ಕಥೆಗಳ ಆಧಾರದ ಚಿತ್ರಗಳನ್ನು ಚಿತ್ರಿಸಿದ್ದರು. ಶಾಹು ಮಹಾರಾಜರು ಚಿತ್ರಮಂದಿರವನ್ನು ಉದ್ಘಾಟಿಸಿದಾಗ ಈ ಸಹೋದರರು

ಚಿತ್ರಕಲೆಯಲ್ಲಿ ಹೊಂದಿದ್ದ ಪ್ರತಿಭಾ ಶಕ್ತಿಯನ್ನು ಕಂಡು ದಂಗಾದರು. "ಆನಂದರಾವ್ ಅವರೇ ನಿಮ್ಮ ಅಲಂಕಾರವನ್ನು ಯಾರು ನೋಡುವರು? ನಿಮ್ಮ ಸಿನೆಮಾ ಕತ್ತಲಲ್ಲಿ ನಡೆಯುವುದು. ಈ ಅಲಂಕಾರವನ್ನು ತೆರೆಯ ಮೇಲೆ ನೋಡಿದ್ದರೆ ಅದೇ ಬೇರೆ ರೀತಿಯಲ್ಲಿರುತ್ತಿತ್ತು.[38] ಶಾಹುರವರ ವಾಕ್ಯದ ಕೊನೆಯ ಮಾತುಗಳು ಈ ಪೇಂಟರ್ ಸಹೋದರರ ಆಲೋಚನಾ ಕ್ರಮವನ್ನೇ ಕ್ರಾಂತಿಕಾರಕವನ್ನಾಗಿ ಮಾಡಿಬಿಟ್ಟಿತು. ಭಾವೀ ಕೊಲ್ಹಾಪುರದ ಭವ್ಯ ಚಲನಚಿತ್ರದ ಪರಂಪರೆಯ ಬೀಜಗಳನ್ನು ಬಿತ್ತಲಾಯಿತು. ಅವರು ಈ ಕಲೆಯ ಹೊಸ ಪ್ರಕಾರವನ್ನು ಕರಗತ ಮಾಡಿಕೊಳ್ಳಲು ನಿರ್ಧರಿಸಿದರು ಮತ್ತು ಫಾಲ್ಕೆಯವರು ವಿದೇಶದಿಂದ ಆಮದು ಮಾಡಿಕೊಂಡಿದ್ದ ಕ್ಯಾಮರಾವನ್ನು ನೋಡಲು ನಾಸಿಕ್‌ಗೆ ಹೋದರು. ಫಾಲ್ಕೆ ಅವರು ಕೇಳಿದರು: "ತಾವು ಕ್ಯಾಮರಾವನ್ನು ಕೇವಲ ನೋಡುವುದರಿಂದ ಏನನ್ನು ಅರ್ಥಮಾಡಿಕೊಳ್ಳುವಿರಿ?" ಎಂದು ಅವರನ್ನು ವಾಪಸ್ ಕಳುಹಿಸಿಕೊಟ್ಟರು. ಸಹೋದರರು ಎದೆಗುಂದಲಿಲ್ಲ. ಅವರು ಸ್ವದೇಶಿಯವಾಗಿ ಚಲನಚಿತ್ರದ ಒಂದು ಕ್ಯಾಮರಾವನ್ನು ತಯಾರಿಸಲು ನಿರ್ಧರಿಸಿದರು ಮತ್ತು ೧೯೧೪ರಲ್ಲಿ ತಮ್ಮ ಕೆಲಸವನ್ನು ಪ್ರಾರಂಭಿಸಿದರು. ದುರದೃಷ್ಟವಶಾತ್ ಆನಂದರಾವ್ ಅವರು ಬೇಗನೇ ನಿಧನರಾದರು. ಬಾಬುರಾವ್ ಆಘಾತಗೊಂಡು ತಮ್ಮ ಸಂಶೋಧನೆಯನ್ನು ಮುಂದುವರಿಸಿದರು. ಅಂತಿಮವಾಗಿ, ೧೯೧೭ರ ಮಧ್ಯದಲ್ಲಿ ಅವರು ಭಾರತದಲ್ಲಿ ಪರಿಪೂರ್ಣವಾಗಿ ಮೊಟ್ಟಮೊದಲ ಸ್ವದೇಶಿ ಚಲನಚಿತ್ರದ ಕ್ಯಾಮರಾವನ್ನು ತಯಾರು ಮಾಡುವುದರಲ್ಲಿ ಸಫಲರಾದರು. ಆ ವರ್ಷದ ಕೊನೆಯ ಹೊತ್ತಿಗೆ ಬಾಬುರಾವ್ ಅವರು ಕೊಲ್ಹಾಪುರದಲ್ಲಿ ಮಹಾರಾಷ್ಟ್ರ ಫಿಲಂ ಕಂಪನಿ ಸ್ಥಾಪಿಸಿದರು. ನಂತರ ಶಾಹುರವರು ವಿಶೇಷ ಭೂಮಿಯನ್ನು ಕೊಲ್ಹಾಪುರದ ಮಂಗಳವಾರಪೇಟೆಯಲ್ಲಿ ಬಾಬುರಾವ್ ಅವರ ಕಂಪನಿಗೆ ದಾನ ಮಾಡಿದರು. ಫಿಲಂ ಕಂಪನಿಯು ಅಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತು.[39]

ಬಾಬುರಾವ್ ಅವರು ತಮ್ಮ ಕಂಪನಿಯ ಮೊದಲ ಚಿತ್ರ (ತಯಾರಿಕೆ) 'ಸೈರೇಂಧ್ರಿ' ಎಂಬ ಹೆಸರಿನ ಚಿತ್ರಕ್ಕೆ ಪ್ರಸಿದ್ಧ ನಾಟಕವಾದ 'ಕಿಚಕೌಢ್'ದ ಕತೆಯನ್ನು ಆರಿಸಿಕೊಂಡರು. ನಾಟ್ಯಾಚಾರ್ಯ ಕೃಷ್ಣಜಿ ಪ್ರಭಾಕರ ಖಾಡಿಲ್ಕರ್ ಅವರು ಚಿತ್ರಕತೆಯನ್ನು ಬರೆದರು. ಅವರು ಕೊಲ್ಹಾಪುರದಿಂದ ನಟ ಮತ್ತು ನಟಿಯರಾಗಿ ಬಾಬಾ ಸಾಹೇಬ ಯಾದವ, ದತ್ತೋಬ ಪವಾರ್, ಗುಲಾಬ್‌ಬಾಯಿ ಮತ್ತು ಅನುಸಾಬಾಯಿ ಅವರನ್ನು ಆಯ್ಕೆ ಮಾಡಿಕೊಂಡರು. ಇವರಾರೂ ಎಂದಿಗೂ ತಮ್ಮ ಮುಖಗಳಿಗೆ ಅಲಂಕಾರ ಮಾಡಿಕೊಂಡವರಲ್ಲ. ಬಾಬುರಾವ್ ಅವರು ಮೊಟ್ಟಮೊದಲಿಗೆ ಮಹಿಳೆಯರು ಮಾತ್ರ ಹೆಣ್ಣಿನ ಪಾತ್ರಗಳನ್ನು ಮಾಡಬೇಕೆಂದು ಒತ್ತಾಯಿಸಿದರು. (ಮೊದಲಿಗೆ ಚಲನಚಿತ್ರದ ಹೆಣ್ಣಿನ ಪಾತ್ರಗಳನ್ನು ಗಂಡಸರೆ ಮಾಡುತ್ತಿದ್ದರು). ಬಾಬುರಾವ್ ಅವರಿಗೆ ಶಿಷ್ಯಕೋಟಿ ಅಪಾರವಾಗಿತ್ತು. ತನ್ನ ಸಹವರ್ತಿಗಳಾದ ವಿಷ್ಣುಪಂತ ದಾಮ್ಲೆ ಎಸ್. ಫತ್ತೆಲಾಲ್, ಬಾಬಾ ಗಜಬಾರ್, ನಾನಾಸಾಹೇಬ ಸರಪೋತ್‌ದಾರ್, ಲಿಮಯೆ ಮತ್ತು ಧರ್ಮಾಧಿಕಾರಿಗಳೊಂದಿಗೆ ಅವರು ತಾವೇ ಮಾಡಿದ ಕ್ಯಾಮರ ಮತ್ತು ಪ್ರಿಂಟಿಂಗ್ ಮೆಷಿನ್‌ನಿಂದ ಚಿತ್ರೀಕರಣ ಪ್ರಾರಂಭಿಸಿದರು. ೧೯೨೦ರಲ್ಲಿ 'ಸೈರೇಂಧ್ರಿ'ಯನ್ನು ಪೂನಾದಲ್ಲಿ ಮೊದಲಿಗೆ ಬಿಡುಗಡೆ ಮಾಡಿದರು ಮತ್ತು ಅದನ್ನು ವ್ಯಾಪಕವಾಗಿ ಮೆಚ್ಚಲಾಯಿತು. 'ಕೇಸರಿ' ಹೀಗೆ ವ್ಯಾಖ್ಯಾನ ಮಾಡಿತು "......ಚಿತ್ರದಲ್ಲಿರುವ ದೃಶ್ಯಗಳು ಮತ್ತು ನಟರ ಉಡುಗೆ–ತೊಡುಗೆಗಳು ಪುರಾಣದಲ್ಲಿ ಚಿತ್ರಿತವಾಗಿರುವ ಪಠ್ಯಗಳಿಗೆ ಹೊಂದಿಕೆಯಾಗುತ್ತವೆ. ಇದೇ ಈ ಚಿತ್ರದ ವಿಶೇಷತೆ. ಪೌರಾಣಿಕ ಕಾಲದ ಸಾಮಾಜಿಕ ಸ್ಥಿತಿಗತಿಗಳ ಚಿತ್ರಣವನ್ನು ಜನರಿಗೆ ತಿಳಿಸುವ ಉದ್ದೇಶವನ್ನು ಮೆಚ್ಚುವಂಥದ್ದು. ಈ ಸಿನೆಮ ಜನರ ಅಭಿರುಚಿಗೆ ಅನುಕೂಲಕರವಾದ ದಿಕ್ಕನ್ನು ಖಂಡಿತವಾಗಿ

ನೀಡುತ್ತದೆ. ಕಂಪನಿಯ ಮಾಲಿಕರಾದ ಬಾಬುರಾವ್ ಪೇಂಟರ್ ಅವರು ಈ ಚಿತ್ರದಲ್ಲಿ ಇಂಡಿಯಾದಲ್ಲಿಯೇ ಸಂಪೂರ್ಣವಾಗಿ ತಯಾರಿಸಿದ ಕ್ಯಾಮರಾ, ಪ್ರಿಂಟಿಂಗ್‌ಮೆಷೀನ್ ಮತ್ತು ಇತರೆ ಸಲಕರಣೆಗಳನ್ನು ಬಳಸಿದ್ದಾರೆ. ಫೋಟೋಗ್ರಫಿ ಮತ್ತು ಉಳಿದವುಗಳನ್ನು ಯಾವುದನ್ನೂ ಅವರು ಬಿಟ್ಟಿಲ್ಲ. ಈ ಚಿತ್ರ ಅಮೇರಿಕ ಮತ್ತು ಯೂರೋಪಿನ ಚಲನಚಿತ್ರಗಳಿಗೆ ಸಮಾನವಾಗಿದೆ. ಅವರ ಭವ್ಯಸಾಧನೆಗೆ ನಾವು ಬಾಬುರಾವ್ ಮತ್ತು ಅವರ ಸಹವರ್ತಿಗಳನ್ನು ಅಭಿನಂದಿಸುತ್ತೇವೆ".[40] ತಿಲಕರು ಸ್ವತಃ ಚಲನಚಿತ್ರವನ್ನು ನೋಡಿದರು ಮತ್ತು ಸಾರ್ವಜನಿಕವಾಗಿ ಬಾಬುರಾವ್ ಅವರನ್ನು ಸನ್ಮಾನಿಸಿ ಒಂದು ಚಿನ್ನದಪದಕ ಹಾಗೂ 'ಸಿನೆಮಕೇಸರಿ' ಎಂಬ ಉಪಾಧಿಯನ್ನು ನೀಡಿದರು. ಬಾಬುರಾವ್ ಅವರ ಚಲನಚಿತ್ರಗಳು ವಾಸ್ತವತೆಯೊಂದಿಗೆ ಕಲಾತ್ಮಕತೆಯನ್ನು ಒಳಗೊಂಡಿರುವುದೆ ಹೆಗ್ಗುರುತಾಗಿದೆ. 'ಸೈರೇಂಧ್ರಿಯ' ಚಿತ್ರದಲ್ಲಿ ಖಳನಾಯಕ ಕೀಚಕನ ಕೊಲೆಯ ಚಿತ್ರೀಕರಣ ತುಂಬಾ ಪರಿಣಾಮಕಾರಿಯಾಗಿದ್ದು ಪ್ರೇಕ್ಷಕವೃಂದ ನೋಡುತ್ತಿರುವಾಗಲೆ ಕಿರುಚುತ್ತದೆ ಮತ್ತು ಕೂಗುತ್ತದೆ. ಮಹಿಳೆ ಮೂರ್ಛೆ ಬಂದು ಕೆಳಗೆಬೀಳುತ್ತಾಳೆ. ಬಾಬುರಾವ್ ಅವರು ಯಾವ ತಂತ್ರಗಾರಿಕೆಯ ಸೌಲಭ್ಯಗಳಿಲ್ಲದೆ ಈ ದೃಶ್ಯಗಳನ್ನು ಚಿತ್ರೀಕರಿಸಿದ್ದಾರೆ. ತೆರೆಯಮೇಲೆ ದೃಶ್ಯವನ್ನು ನೋಡಿದ ಬಾಂಬೆ ಪೋಲಿಸು ಬಾಬುರಾವ್ ಅವರಿಗೆ ನೋಟಿಸನ್ನು ಕಳುಹಿಸಿಕೊಡುತ್ತಾನೆ. ಅದು ಹೇಳುತ್ತದೆ: "ಸೈರೇಂಧ್ರಿ ಸಿನೇಮಾದಲ್ಲಿ ನೀವು ಒಬ್ಬ ಮನುಷ್ಯನನ್ನು ಕೊಂದಿದ್ದೀರಿ. ನಿಮ್ಮನ್ನು ಏಕೆ ಶಿಕ್ಷಿಸಬಾರದು?"[41]

ಅಂತಹ ಪ್ರತಿಭಾವಂತ ಕಲಾಕಾರನು ತನ್ನ ಆಡಳಿತಕಾಲದಲ್ಲಿ ಮತ್ತು ನಗರದಲ್ಲಿ ಜೀವಂತವಾಗಿದ್ದ ರೆಂಬುದೇ ಮಹಾರಾಜ ಮತ್ತು ಕೊಲ್ಹಾಪುರಕ್ಕೆ ಹೆಮ್ಮೆಯ ವಿಷಯವಾಗಿದೆ. ಶಾಹುರವರು ಅವರನ್ನು ವಿಶೇಷ ಸನ್ಮಾನಕ್ಕೆ ಆಹ್ವಾನಿಸಿದರು. 'ಸೈರೇಂಧ್ರಿ'ಯ ಪ್ರಚಂಡ ಜಯಭೇರಿ ಬಾಬುರಾವ್ ಮತ್ತು ಕೊಲ್ಹಾಪುರದ ಹೆಸರನ್ನು ಭಾರತ ಪ್ರತಿಮೂಲೆಗೂ ಹರಡಿತು. ಅವರು ತಮ್ಮ ಜೀವಿತಾವಧಿಯಲ್ಲಿ ಒಟ್ಟು ೩೩ ಚಿತ್ರಗಳನ್ನು ನಿರ್ದೇಶಿಸಿದರು. ತಮ್ಮ ಮಹಾರಾಷ್ಟ್ರ ಫಿಲ್ಮ್ ಕಂಪನಿಗೆ ೨೪ ಚಿತ್ರಗಳನ್ನು ಮತ್ತು ಇತರೆ ಕಂಪನಿಗಳಿಗೆ ೯ ಚಿತ್ರಗಳನ್ನು ನಿರ್ದೇಶಿಸಿದರು. ಅವರ ಕಂಪನಿಯು ಒಂದು ಪ್ರಾಚೀನಕಾಲದ ಋಷಿಯ ಆಶ್ರಮದಂತಿತ್ತು. ಅವರು ತಮ್ಮ ಕಲೆಯನ್ನು ಮತ್ತು ಜ್ಞಾನವನ್ನು ಬಯಸಿದ ಶಿಷ್ಯರಿಗೆ ಉದಾರವಾಗಿ ಕೊಡುಗೆಯಾಗಿ ಕೊಟ್ಟುಬಿಟ್ಟರು. ಹಲವಾರು ಸಾಧಕ ಕಲಾಕಾರರಾದ ಬಾಳಾಸಾಹೇಬ ಯಾದವ, ಜುಂಜಾರ್‌ರಾವ್ (ದತ್ತೋಬ) ಪವಾರ್, ಬಾಬುರಾವ್ ಪೆಂಢಾರ್‌ಕರ್, ಕೃಷ್ಣರಾವ್ ಬಾಕ್ರೆ, ಸ್ಟಂಟ್‌ಕಿಂಗ್ ಗಣಪತ್‌ರಾವ್ ಬಕ್ರೆ, ವಿ. ಶಾಂತರಾಮ್. ವಿಷ್ಣುಪಂತ್ ಪಾಗ್ನೀಸ್, ಮಾಸ್ಟರ್ ವಿಠ್ಠಲ್, ಬಾಲಗಜಬರ್, ಐ. ಟಿ. ನಿಂಬಾಲ್‌ಕರ್, ಬಿ. ನಂವ್ರೆಕರ್– ಇವರೆಲ್ಲರೂ ನಂತರ ಚಲನಚಿತ್ರ ಕೈಗಾರಿಕೆಗಳ ಪ್ರಖ್ಯಾತಿಗೆ ಬಂದವರು– ಇವರೆಲ್ಲರೂ ಬಾಬುರಾವ್ ಅವರ ಆಶ್ರಮದ ಶಿಷ್ಯರು. ನಂತರ ೧೯೨೯ರಲ್ಲಿ ಬಾಬುರಾವ್ ಅವರ ಶಿಷ್ಯರಾದ ವಿ. ಶಾಂತರಾಮ್ ದಾಮ್ಲೆ, ಎಸ್. ಫತ್ತೆಲಾಲ್ ಮತ್ತು ಕೇಶವರಾವ್ ಧೈಬಾರ್ ಅವರು ಮಹಾರಾಷ್ಟ್ರ ಫಿಲ್ಮ್ ಕಂಪನಿ ಬಿಟ್ಟರು ಮತ್ತು ಕೊಲ್ಹಾಪುರದಲ್ಲಿ ತಮ್ಮದೇ ಆದ ಸ್ವಂತ ಕಂಪನಿಯಾದ 'ಪ್ರಭಾತ್ ಫಿಲಂ ಕಂಪನಿ'ಯನ್ನು ಪ್ರಾರಂಭಿಸಿದರು. ಬಾಬುರಾವ್ ಅವರಿಗೆಲ್ಲ ಆಶೀರ್ವಾದ ಮಾಡಿದರು. ಈ ಕಂಪನಿಯು 'ಆಯೋಧ್ಯೇಚರಾಜ' ಎಂಬ ಮಾತಿನ ಚಲನಚಿತ್ರವನ್ನು ತಯಾರು ಮಾಡಿತು. ಭಾರತದಲ್ಲಿ ಮೊಟ್ಟಮೊದಲಿಗೆ ತಯಾರುಮಾಡಿದ ಮಾತಿನ ಚಿತ್ರ ಎಂಬ ಖ್ಯಾತಿಯು ಕೊಲ್ಹಾಪುರಕ್ಕೆ ಬಂತು (೧೯೩೨). ಈ ಸಂಧಿಕಾಲದಲ್ಲಿ ಭಾಲ್ಜಿ ಪೆಂಡಾರ್‌ಕರ್ ಅವರು ಫಿಲಂ ಕೈಗಾರಿಕೆಯ ತಪಸ್ವಿ ಎಂದು ಹೆಸರುಗಳಿಸಿದ ಅವರು ಮಹಾರಾಷ್ಟ್ರ ಫಿಲಂ ಕಂಪನಿಗೆ ನಿರ್ದೇಶಕರಾಗಿ ಸೇರಿದರು. ಭಾಲ್ಜಿ ಅವರು ಸ್ವತಂತ್ರ ವ್ಯಕ್ತಿತ್ವವುಳ್ಳವರು. ಬಾಬುರಾವ್

ಅವರು ಉದ್ದೇಶಪೂರ್ವಕವಾಗಿ ಕೊಲ್ಹಾಪುರದಲ್ಲಿ ರೂಪಿಸಿದ್ದ ಫಿಲಂ ಕೈಗಾರಿಕೆ ಸಾಂಸ್ಕೃತಿಕ ಮತ್ತು ತಾಂತ್ರಿಕ ಮೂಲ ಸೌಕರ್ಯಗಳನ್ನು ಭಾಲ್ಜಿ ಮತ್ತು ಪ್ರಭಾತ್ ಕಂಪನಿಗಳು ಪಡೆದಿದ್ದವು ಎಂಬುದನ್ನು ನಾವು ನೆನಪಿಡಬೇಕು. ಬಾಬುರಾವ್ ಅವರು ದೃಢವಾಗಿ ಅವುಗಳನ್ನು ಬೆಂಬಲಿಸಿದರು ಮತ್ತು ಅವರ ಹಿನ್ನೆಲೆಯಿಲ್ಲದಿದ್ದರೆ ಅವು ಗಳಿಸಿದ ಕೀರ್ತಿ ಮತ್ತು ವೈಭವಗಳು ಇರುತ್ತಿರಲಿಲ್ಲ.

ಗೋವಿಂದರಾವ್ ತೆಂಬೆ, ಜೈ ಶಂಕರ್ ದಾನ್ವೆ, ಗೋಪಾಲ ಮಾಂಡ್ರೆ (ಚಂದ್ರಕಾಂತ), ವಿಷ್ಣುಪಂತ ಔಂಧಕರ್, ಕೇಶವರಾವ್ ದಾತೆ, ದುರ್ಗಾಖೋಟೆ, ಹೀರಾಬಾಯಿ ಖಡೋಡೆಕರ್, ನಾನಾಸಾಹೇಬ ಫಾಟಕ್, ರಾಜಾಪರಂಜಪೆ, ಬಾಲಗಂಧರ್ವ ಹಂಸವಾಡ್‌ಕರ್, ಜೈರಾಮ್ ಶೀಲೆದಾರ್ ಅವರುಗಳನ್ನು ಬಾಬುರಾವ್ ಮಹಾರಾಷ್ಟ್ರ ಕಂಪನಿ ಬಿಟ್ಟ ಮೇಲೆ ಇತರೆ ಕಂಪನಿಗಳಿಗೆ ಹೋಗುವಂತೆ ನಿರ್ದೇಶಿಸಿದರೆಂಬ ವಿಚಾರವೇ ಅವರು ಮರಾಠಿ ಫಿಲಂ ಕೈಗಾರಿಕೆಯಲ್ಲಿ ಭವ್ಯ ಪರಂಪರೆಯ ವಿಷಯವನ್ನು ಕೊಡುತ್ತದೆ.

ಸ್ವಾತಂತ್ರ್ಯದ ನಂತರ ತಾತ್ಯ ಅಂಬಾಪ್‌ಕರ, ಬಾಲಗಜ್‌ಬಾರ್, ವಸಂತರಾವ್ ಶಿಂಧೆ, ದಿನಕರ ಡಿ. ಪಾಟೀಲ, ಅನಂತಮಾನೆ – ಇವರೆಲ್ಲ ಕೊಲ್ಹಾಪುರದವರು – ಭಾಲ್ಜಿ ಫೆಂಡಾರ್‌ಕರ್ ಮತ್ತು ಮಾಸ್ಟರ್ ವಿನಾಯಕ ಅವರ ಮಾರ್ಗದರ್ಶನವನ್ನು ಅನುಸರಿಸಿದ್ದರಿಂದ ಮರಾಠಿ ಸಿನೆಮಾದ ಪರಂಪರೆಯನ್ನು ಶ್ರೀಮಂತಗೊಳಿಸಿದರು. ಕೊಲ್ಹಾಪುರದ ಕಲಾವಿದರಾದ ನಟರಾದ ಚಂದ್ರಕಾಂತ, ಸೂರ್ಯಕಾಂತ, ಅರುಣ್ ಸರ್ ನಾಯ್ಕ, ರಮೇಶ್ ದೇವ್ ಮತ್ತು ನಟಿಯರಾದ ಸುಲೋಚನ ಲೀಲಾತಾಯಿ ಪೆಂಢಾರ್‌ಕರ್, ಬೇಬಿನಂದ, ಆಶಾಕಾಳೆ, ಪದ್ಮಚಾವಣ ಅವರು ಸಿನೆಮ ಪ್ರಪಂಚವನ್ನು ಭವ್ಯವಾಗಿ ಸೇವೆಮಾಡಿದರು. ಮಾಸ್ಟರ್ ವಿಠ್ಠಲ ಮತ್ತು ವಿ. ಶಾಂತಾರಾಮ್ ಅವರ ಅಪೇಕ್ಷೆಗಳು ಕೊಲ್ಹಾಪುರದ ಹೆಸರನ್ನು ರಾಷ್ಟ್ರೀಯ ಮಟ್ಟದಲ್ಲಿ ಬೆಳಗಿಸಿದರು. ಪ್ರಸಿದ್ಧ ಚಿತ್ರಕತೆಗಾರರಾದ ವಿಷ್ಣುಪಂತ ಔಂಧಕರ್, ಕವಿತಾ ಪ್ರತಿಭೆಯ ಜಿ. ಡಿ. ಮದ್ಗುಲ್ಕರ್ ಮತ್ತು ಮಹಾಗಾಯಕರಾದ ಸಂಗೀತಜ್ಞ ಸುಧೀರ್ ಫಡ್ಕೆ ಅವರು ಕೊಲ್ಹಾಪುರದ ಈ ನಗರದಲ್ಲಿ ತಮ್ಮ ಮೊದಲ ಅಭಿವ್ಯಕ್ತಿಗಳನ್ನು ಕಾಣಬಹುದು. ಮಿಗಿಲಾಗಿ 'ಸ್ವರಸಂಕೇತಗಳ ಸಾಮ್ರಾಜ್ಞಿ' ಎಂದು ಇಂದು ಕೀರ್ತಿಗಳಿಸಿರುವ ಲತಾಮಂಗೇಶ್ಕರ್ ಅವರು ಈ ಭೂಮಿ (ಕೊಲ್ಹಾಪುರ) ಯಿಂದಲೇ ಪ್ರಾರಂಭಿಸಿದ್ದರು.

## ಚಿತ್ರಕಲೆ

ಶಾಹು ಮಹಾರಾಜರ ಆಡಳಿತಾವಧಿಯಲ್ಲಿ ಚಿತ್ರಕಲೆಯಲ್ಲಿ ಕೊಲ್ಹಾಪುರ ಭಾರೀ ಮುನ್ನಡೆಯನ್ನು ಸಾಧಿಸಿತ್ತು. ಈ ಕ್ಷೇತ್ರದಲ್ಲಿ ಪ್ರಥಮಗೌರವ ಕಲಾತಪಸ್ವಿ ಆಬಾಲಾಲ್ ರಹಿಮರಿಗೆ ಸಲ್ಲುತ್ತದೆ. ರಾಜಪರಿಷತ್ತಿನ ಆಳ್ವಿಕೆಯಲ್ಲಿ ಬ್ರಿಟಿಷ್ ರೆಸಿಡೆಂಟರ ಶಿಫಾರಸಿನ ಮೇಲೆ ಕೊಲ್ಹಾಪುರ ದರ್ಬಾರು ವಿಶೇಷ ವಿದ್ಯಾರ್ಥಿವೇತನ ನೀಡಿ ಅವರನ್ನು ಬಾಂಬೆಯ ಜೆ. ಜೆ. ಕಲಾಶಾಲೆಗೆ ಅವರನ್ನು ಕಳುಹಿಸಿಕೊಟ್ಟಿತು. ಅಲ್ಲಿ ಆಬಾಲಾಲರು ತಮ್ಮ ಕಲಾಪ್ರತಿಭೆಯಿಂದ ಇತಿಹಾಸವನ್ನೇ ನಿರ್ಮಿಸಿದರು.

ಅವರು ತಮ್ಮ ಚಿತ್ರಕಲೆಗಳ ಸರಣಿಗಳ ಒಂದರಲ್ಲಿ ತಮ್ಮ ಅಸಾಧಾರಣವಾದ ಪ್ರತಿಭೆಯನ್ನು ಮೆರೆದಿದ್ದಕ್ಕೆ ವೈಸ್‌ರಾಯ್‌ರವರ ಪದಕವನ್ನು ನೀಡಲಾಯಿತು (೧೮೮೬). ಪ್ರಸಿದ್ಧ ವಿದೇಶಿ ಚಿತ್ರಕಾರರು ಈ ಸಂಸ್ಥೆಗೆ ಭೇಟಿನೀಡಿ ಅವರ ಚಿತ್ರಕಲೆಗಳು ಅಂತರ್‌ರಾಷ್ಟ್ರೀಯ ಗುಣಮಟ್ಟವನ್ನು ಹೊಂದಿವೆಯೆಂದು ಒಪ್ಪಿಕೊಂಡಿದ್ದರು. ಅಸಾಮಾನ್ಯ ಪ್ರತಿಭಾವಂತ ಕಲಾಕಾರ ಸ್ವಭಾವತಃ ಋಷಿಯಾಗಿದ್ದರು. ಅವರು ಕೊಲ್ಹಾಪುರಕ್ಕೆ ವಾಪಸ್ಸು

ಬಂದ ಮೇಲೆ ಅವರು ಕೋಟಿತೀರ್ಥದ ದೃಶ್ಯಮಯವಾದ ಅರಣ್ಯಪ್ರದೇಶವನ್ನು ತಮ್ಮ ನಿವಾಸವನ್ನಾಗಿ ಮಾಡಿಕೊಂಡರು. ಅವರು ಅಲ್ಲಿ ಪ್ರಾಚೀನ ಋಷಿಯಂತೆ ಬದುಕಿದರು ಮತ್ತು ತಮ್ಮ ಇಡೀ ಬದುಕನ್ನು ಚಿತ್ರಕಲೆಗೆ ಸಮರ್ಪಿಸಿದರು. ಅವರು ಪ್ರಕೃತಿಯೊಂದಿಗೆ ಸಂವಾದ ನಡೆಸಿದರು ಮತ್ತು ತಮ್ಮ ಕುಂಚದಿಂದ ಅದರ ನಾನಾಭಂಗಿ(ರೂಪ)ಗಳನ್ನು ಅಭಿವ್ಯಕ್ತಗೊಳಿಸಿದರು.[42]

ಅವರ ಈ ನಿಸ್ಸಂಗ ಈ ಕಲಾಕರನ ಕೀರ್ತಿಯನ್ನು ಕೇಳಿದ ಶಾಹು ಮಹಾರಾಜರು ದರ್ಬಾರಿಗೆ ಬರಮಾಡಿಕೊಂಡು ಗೌರವಿಸಿದರು. ಅವರನ್ನು ಸಂಬಳದೊಂದಿಗೆ ದರ್ಬಾರಿನ ಚಿತ್ರಕಾರರೆಂದು ನೇಮಕಮಾಡಿಕೊಂಡರು. ಆದರೆ ರಾಜಾಶ್ರಯವು ಆಬಾಲಾಲರ ಸ್ವಚ್ಛಂದ ಪ್ರವೃತ್ತಿಯನ್ನು ಬದಲಾಯಿಸಲಿಲ್ಲ. ಅವರ ಪ್ರತಿಭೆಯನ್ನು ಅರಿತಿದ್ದ ಶಾಹುರವರು ಯಾವ ನಿರ್ಬಂಧಗಳನ್ನು ಹೇರದೆ ಅವರನ್ನು ಸಮಾನಗೌರವದಿಂದ ಸತ್ಕರಿಸಿದರು.

ಆಬಾಲಾಲರ ಬಗೆಗಿನ ಒಂದು ನೆನಪು ಕುತೂಹಲಕಾರಿಯಾಗಿದೆ...... "ಶಾಹುರವರು ಒಬ್ಬರೇ ಹಲವು ಬಾರಿ ಈ ಮಹಾಕಲಾಕಾರರನ್ನು ಭೇಟಿಯಾಗುತ್ತಿದ್ದರು. ಆಬಾಲಾಲರದು ಥಟ್ಟನೆ ಹೊಮ್ಮುವ ಪ್ರತಿಭೆಯಾಗಿತ್ತು. ರಾಜರು ಬರುವ ಸುದ್ದಿಯನ್ನು ಕೇಳಿ ಅವರು ಸಾಮಾನ್ಯವಾಗಿ ಹೊರಬಂದು ರಾಜರನ್ನು ನಮಸ್ಕಾರದೊಂದಿಗೆ ಅಭಿನಂದಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಬೇರೆ ಆಲೋಚನೆಯಲ್ಲಿ ಮಗ್ನರಾಗಿರುತ್ತಿದ್ದರು. ಶಾಹು ಮಹಾರಾಜರು ಬಂದರೂ ಅವರು ಹೊರಬರುತ್ತಿರಲಿಲ್ಲ. ಶಾಹು ಎಂದಿಗೂ ಕಸಿವಿಸಿಗೊಂಡವರಲ್ಲ. ಅಂತಹ ಸಂದರ್ಭದಲ್ಲಿ ಅವರೇ ಕಲಾಶಾಲೆಗೆ ಪ್ರವೇಶಿಸಿ ಹಿರಿಯ ಕಲಾವಿದನನ್ನು ಅಭಿನಂದಿಸುತ್ತಿದ್ದರು."[43] ಈ ರಾಜರು ನಿಜವಾಗಿ ಪ್ರತಿಭಾಶಕ್ತಿಯನ್ನು ಕಾಣುವ ದೃಷ್ಟಿಯನ್ನು ಹೊಂದಿದ್ದರು. ಅವರು ಕೇವಲ ಒಬ್ಬ ಹವ್ಯಾಸಿಯಾಗಿರದೆ ಒಬ್ಬ ನಿಜವಾದ ಕಲಾರಸಭಿಜ್ಞರಾಗಿದ್ದರು (ಕಲಾವಿಮರ್ಶಕರಾಗಿದ್ದರು). ಸಹಜವಾಗಿ ಅವರು ಎಂದಿಗೂ ಸಂಕುಚಿತರಾಗಿರಲಿಲ್ಲ ಮತ್ತು ಕಲಾಕಾರರ ವಿಚಿತ್ರ ಭಾವನೆಗಳನ್ನು ಮನ್ನಿಸುವ ಹೃದಯ ವೈಶಾಲ್ಯವನ್ನು ಹೊಂದಿದ್ದರು. ಆಬಾಲಾಲ್ ಅದಕ್ಕೆ ಅಪವಾದವಲ್ಲ. ಅವರು ಎಲ್ಲಾ ತರಹೆಯ ಕಲಾವಿದರನ್ನು ಪೂಜ್ಯ ಗೌರವದಿಂದ ಕಾಣುತ್ತಿದ್ದರು.

ಒಮ್ಮೊಮ್ಮೆ ಶಾಹುರವರು ಆಬಾಲಾಲರನ್ನು ಬೇಟೆಯಾಡಲಿಕ್ಕೆ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಮತ್ತು ಆಗ ಆಬಾಲಾಲರು ಕುದುರೆಗಳ, ಪಕ್ಷಿಗಳ, ಕಾಡುಪ್ರಾಣಿಗಳ ಮತ್ತು ಬೇಟೆಯ ಚಿತ್ರಗಳನ್ನು ಬರೆಯುವುದರಲ್ಲಿ (ಚಿತ್ರಿಸುವುದರಲ್ಲಿ) ತಲ್ಲೀನರಾಗಿರುತ್ತಿದ್ದರು. ಅವರು ರಾಜಕುಟುಂಬಕ್ಕೆ ಸೇರಿದ ಪುರುಷ ಮತ್ತು ಸ್ತ್ರೀಯರ ಮತ್ತು ಭೇಟಿಯಾಗುತ್ತಿದ್ದ ವಿದೇಶೀ ಗಣ್ಯರ ಚಿತ್ರಗಳನ್ನು ತಮ್ಮ ಕುಂಚದಿಂದ ಚಿತ್ರಿಸುತ್ತಿದ್ದರು. ಜೊತೆಗೆ ಅವರು ಐತಿಹಾಸಿಕ ಮತ್ತು ಪೌರಾಣಿಕ ಘಟನಾವಳಿಗಳನ್ನು ಸಹ ಚಿತ್ರಿಸುತ್ತಿದ್ದರು. ಅವರ ಚಿತ್ರಗಳ ಸಂಖ್ಯೆ ೧೫,೦೦೦ ದಿಂದ ೨೦,೦೦೦ ಆಗುತ್ತದೆ. (ದುರದೃಷ್ಟವಶಾತ್ ಕೇವಲ ಕೆಲವೇ ಚಿತ್ರಗಳು ಇಂದು ಲಭ್ಯವಾಗಿವೆ).[44]

ಆಬಾಲಾಲರ ಕಲಾತ್ಮಕ ಗುಣಗಳನ್ನು ಪರಿಪೂರ್ಣವಾಗಿ ಮೌಲ್ಯಮಾಪನ ಮಾಡುತ್ತಾ ಪ್ರಸಿದ್ಧ ಕಲಾವಿಮರ್ಶಕ ಬಾಬುರಾವ್ ಸದ್‌ವೇಲ್ಕರ್ ಅವರು ಹೇಳುತ್ತಾರೆ: .... ನಿಜವಾಗಿಯೂ ಇತರೆ ಚಿತ್ರಗಾರರೊಂದಿಗೆ ಹೋಲಿಕೆ ಮಾಡಿ ಆಬಾಲಾಲರ ಗುಣಗಳ ಮಹತ್ವವನ್ನು ಬೆಳಕಿಗೆ ತರುವುದಕ್ಕೆ

ಯಾವುದೇ ಕಾರಣವಿಲ್ಲ. 'ರಾವಣೇಶ್ವರ'ನ ೫" x ೭" ನ ಗಾತ್ರದ ಏಕೈಕ ಒಂದು ಭಿನ್ನ ಚಿತ್ರಕಲೆಯ ಸಿಸೆಲ್ಸ್‌ರ ರೊಮಾಂಟಿಸಿಜಂನ, ಟರ್ನರರ ಆಕಾಶ (ಅವಕಾಶ)ದ ನೋಟದ, ಕೋರೋ ಅವರು ಅನುಭವಿಸಿದ ತಂಗಾಳಿಯ ಸೌಮ್ಯ ಅಲೆದಾಟ (ಚಲನೆ) ಮತ್ತು ಕಾಂಸ್ಟೇಬಲರು ಸಾಧಿಸಿದ ಸಂರಚನೆಯ ಸಾಂಗತ್ಯಗಳ ಪರಿಪೂರ್ಣ ಅನುಭವವನ್ನು ಕೊಡುತ್ತದೆ. ಕುಂಚ ಪ್ರತಿಯೊಂದು ಗೆರೆಯು ತನ್ನೊಳಗಿನ ಆಳದಲ್ಲಿ ಎಲ್ಲಿಯೋ ಒಂದು ಕಡೆಗೆ ಪಡಿಯಚ್ಚು ಮೂಡಿಸುತ್ತದೆ. ಮತ್ತು ಅದರಿಂದ ಒಂದು ಸಾಮರಸ್ಯ ಉಗಮಗೊಳ್ಳುತ್ತದೆ, ದೇಹದ ಪ್ರತಿಯೊಂದು ಭಾಗದಲ್ಲಿ ಪರಮಾನಂದದ ನೊವುಗಳ ಸಮೇತ ಜೀವಂತಿಕೆಗಳನ್ನು (ಕಂಪನ) ನಿರ್ಮಿಸುತ್ತಾ ದೇಹದ ಸುತ್ತ ಸಮಾಧಾನಗೊಳಿಸುವ ತಂಪಿನ ಪ್ರಾರಂಭ ಸಹಿಸಲು ಅಸಾಧ್ಯವಾಗಿ ಮನಸ್ಸು ಸ್ಥಾಯಿಯಾಗುವುದನ್ನು ನಿರಾಕರಿಸುತ್ತದೆ."[45] ಆಬಾಲಾಲರನ್ನು ಭಾರತದ ಮಹಾಚಾಷಣ ಚಿತ್ರಕಲಾಕಾರರೊಂದಿಗೆ ಮಾತ್ರವಲ್ಲದೆ ವಿಶ್ವದ ಚಿತ್ರಕಾರರೊಂದಿಗೆ ಹೋಲಿಸುತ್ತಾ ಸದ್‌ವೇಲ್ಕರರು ಹೇಳುತ್ತಾರೆ: "ಆಬಾಲಾಲರ ಮಹತ್ತರವಾದ ಗುಣಗಳನ್ನು ಅನುಭವಿಸಬೇಕಾದರೆ ಅವರು ೧೮೮೫–೮೬ರಲ್ಲಿ ಚಿತ್ರಿಸಿದ ಅವರ ಮೂಲಚಿತ್ರಗಳನ್ನು ನೋಡಬೇಕಾಗಿದೆ. ವಿಶೇಷವಾಗಿ ಕೆಂಪು ಸೀಮೆಸುಣ್ಣದಿಂದ ಬರೆದ ಋಷಿಯ ಚಿತ್ರ. ಅದು ಲಿಯೊನಾರ್ಡ್ ಡಾವಿಂಚಿ ಮತ್ತು ರಾಫೆಲರ ಚಿತ್ರಗಳನ್ನು ನೆನಪಿಸುತ್ತದೆ. ಈ ಚಿತ್ರವನ್ನು ಒಬ್ಬ ಪ್ರಸಿದ್ಧ ವಿಶ್ವ ಕಲಾವಿದನು ಚಿತ್ರಿಸಿದ್ದಾನೆಂದು ಹೇಳಿದರೆ ಅದರ ಗುಣಗಳಿಂದ ಅದನ್ನ ನಂಬಲೇಬೇಕಾಗುತ್ತದೆ. ಸಾಮಾನ್ಯವಾಗಿ ಒಂದು ತಲೆಮಾರು ಮುಗಿಸಬಹುದಾದ ಕೆಲಸವನ್ನು ಆಬಾಲಾಲರೊಬ್ಬರೇ ಮಾಡಿ ಮುಗಿಸಿದ್ದಾರೆ.... ಅವರ ಪ್ರಕೃತಿಚಿತ್ರಗಳ ಚಿತ್ರಣದಲ್ಲಿರುವ ಹೊಸತನ ಮತ್ತು ವರ್ಣಗಳ (ಬಣ್ಣ) ತೂಕ ಇನ್ನೂ ಅಚ್ಚಳಿಯದೇ ಉಳಿಸಿದೆ. ವಾಸ್ತವಿಕವಾಗಿ ಆಬಾಲಾಲರು ತಂತ್ರ ಮತ್ತು ಕುಸುರಿ ಕೆಲಸದ ಕೌಶಲ್ಯದ ಜ್ಞಾನದ ಮಹತ್ವವನ್ನು ಹೊಂದಿದ್ದರು. ಏಕೆಂದರೆ ಅವರ ಚಿತ್ರಗಳು ೪೦ ರಿಂದ ೫೦ ವರ್ಷಗಳು ಹಳೆಯವಾದರೂ ಅವುಗಳು ತಮ್ಮ ಕಾಂತಿಯನ್ನು ಕಳೆದುಕೊಂಡಿಲ್ಲ. (ಅವುಗಳನ್ನು ಸರಿಯಾಗಿ ಸಂರಕ್ಷಿಸದಿದ್ದರೂ). ಇಂದಿಗೂ ಅವು ರಸಾಭಿಜ್ಞತೆಯನ್ನು ಪರವಶಗೊಳಿಸಲು ಆಕರ್ಷಿಸುತ್ತವೆ."[46] ಶಾಹುರವರ ಕಾಲದಲ್ಲಿ ಕೊಲ್ಹಾಪುರದಲ್ಲಿ ಅಂಥ ಕಲಾವಿದ ಅಸ್ತಿತ್ವದಲ್ಲಿದ್ದುದು ಭಲೇ ಅದೃಷ್ಟವೇ ಅದೃಷ್ಟ!

ಇದೇ ಕಾಲದಲ್ಲಿ ಕೊಲ್ಹಾಪುರವು ಆನಂದರಾವ್ ಮತ್ತು ಬಾಬುರಾವ್ ಪೇಂಟರ್ ಎಂಬ ಇಬ್ಬರು ಸ್ವಚ್ಛಂದ ಪ್ರವೃತ್ತಿಯ ಕಲಾವಿದರಿಗೆ ಮನೆಯಾಗಿತ್ತು. ಆನಂದರಾವ್ ಅವರು ಪ್ರತಿಭೆಯ, ಬುದ್ಧಿವಂತ ಮತ್ತು ದೃಢಸಂಕಲ್ಪದ ಕಲಾವಿದರಾಗಿದ್ದರು. ಅವರು ಕೇಶವರಾವ್ ಬೋಂಸ್ಲೆ ಅವರ ಲಲಿತಕಲಾದರ್ಶ ಕಂಪನಿಯ ಪರದೆಗಳ ಪಟಗಳ ಮೇಲೆ ವಾಸ್ತವಿಕತೆಯ ಸೌಂದರ್ಯ ಮತ್ತು ಭ್ರಮೆಗಳನ್ನು ಕಲಾಚಾತುರ್ಯ ದಿಂದ ಚಿತ್ರಿಸಿದ ಚಿತ್ರಗಳು ರಂಗಮಂದಿರದಲ್ಲಿ ಇತಿಹಾಸವನ್ನೇ ನಿರ್ಮಿಸಿಬಿಟ್ಟಿವೆ. ಆನಂದರಾವ್ ಅವರ ಪರದೆಗಳು ಬಾಲಗಂಧರ್ವ ಅಥವಾ ಕೇಶವರಾವ್ ಅವರ ಹಾಡುಗಾರಿಕೆ ಗಳಿಸಿದಷ್ಟು ಮೆಚ್ಚುಗೆಯನ್ನೇ ಗಳಿಸುತ್ತವೆ.[47] ಇಂದಿಗೂ ಸಹ ಅವರ ಪರದೆಗಳ ಲಭ್ಯವಿರುವ ಫೋಟೋಗ್ರಾಫ್‌ಗಳನ್ನು ನೋಡಿದರೆ ಅವರ ಆಶ್ಚರ್ಯಚಕಿತ ಕಲೆಯಿಂದ ಯಾರಾದರೂ ಬೆಚ್ಚಿಬೀಳುತ್ತಾರೆ.[48] ನಂತರ ಆನಂದರಾವ್ ಅವರು ಗೋವಿಂದರಾವ್ ತೆಂಬೆಯವರ ಶಿವರಾಜ್ ನಾಟಕಮಂಡಳಿಗೆ ಮತ್ತು ಬಾಲಗಂಧರ್ವರ ಗಂಧರ್ವ ನಾಟಕಮಂಡಳಿಗಳಿಗೆ ಚಿತ್ರಿಸಿದ ಪರದೆಗಳ ಬಗ್ಗೆ ನಾವು ಈಗಾಗಲೇ ಗಮನಿಸಿದ್ದೇವೆ.[49] ಆನಂದರಾವ್ ಅವರ ಅಕಾಲಿಕ ದುರದೃಷ್ಟ ಸಾವು ಕೊಲ್ಹಾಪುರ ಮತ್ತು ಭಾರತದ ಕಲಾಪ್ರಪಂಚಕ್ಕೆ ತುಂಬಲಾರದ ನಷ್ಟವೇ ಸರಿ.

ಹಿಂದೆ ಮೊದಲೇ ಹೇಳಿದಂತೆ ಬಾಬುರಾವ್ ಅವರು ಯಾವುದೇ ಕಲಾಶಾಲೆಯಲ್ಲಿ ಔಪಚಾರಿಕ ತರಬೇತಿ ಪಡೆಯದಿದ್ದರೂ ಅವರ ಕಲೆಯಗುಣ (ವಿಶೇಷತೆ) ಅಂತಹ ಶಾಲೆಗಳಲ್ಲಿ ತರಬೇತಿ ಪಡೆದ ಪ್ರಖ್ಯಾತ ಚಿತ್ರಕಾರರನ್ನು ಆಶ್ಚರ್ಯಗೊಳಿಸುತ್ತದೆ. ಬಾಬುರಾವ್ ಅವರ ಫೊಟೋ ಚಿತ್ರಗಳು ಗೋಡೆಗಳಲ್ಲಿ ಬಾಂಬೆ ನಗರದಲ್ಲೆಲ್ಲಾ ರಾರಾಜಿಸಿದಾಗ ಅವರ ಕೀರ್ತಿ ಮುಸರ್. ಜೆ. ಜೆ. ಕಲಾಶಾಲೆಯ ನಿರ್ದೇಶಕರಾದ ಸರ್ ಗ್ಲಾಡ್‌ಸ್ಟೋನ್ ಸೋಲೋಮನ್ ಅವರಿಗೆ ಮುಟ್ಟಿತು. ಅವರು ಈ ಚಿತ್ರಗಳ ಕಲಾತ್ಮಕ ಗುಣಗಳಿಂದ ಪ್ರಭಾವಿತರಾಗಿ ಬಾಬುರಾವ್ ಅವರನ್ನು ತಮ್ಮ ಸಂಸ್ಥೆಗೆ ಬರಮಾಡಿಕೊಂಡು ಸನ್ಮಾನಿಸುತ್ತಾರೆ.[50] ಬಾಬುರಾವ್ ಅವರು ತಮ್ಮ ಜೀವಿತಾವಧಿಯಲ್ಲಿ ನೈಸರ್ಗಿಕ ಚಿತ್ರಗಳು, ಪೌರಾಣಿಕ ವತ್ರಗಳನ್ನು ಮತ್ತು ವರ್ಣಚಿತ್ರಗಳನ್ನು ಚಿತ್ರಿಸಿದ್ದಾರೆ. ಅವರು ಬಣ್ಣಗಳ ಪರಿಶುದ್ಧತೆ ಮತ್ತು ಅವುಗಳ ಮಿಶ್ರಣವನ್ನು ಮಾಡುವ ಬಗ್ಗೆ ಖಚಿತವಾದ ಮತ್ತು ಪರಿಪೂರ್ಣವಾದ ಜ್ಞಾನವನ್ನು ಹೊಂದಿದ್ದರು. ಅವರ ಚಿತ್ರದ ಕುಂಚದ ಗೆರೆಗಳು ಬಣ್ಣಗಳ ಬದುಕುವಿಕೆಯನ್ನು ಅಭಿವ್ಯಕ್ತಿಗೊಳಿಸಿದ್ದವು. ಅದರ ಎಲ್ಲಾ ವಿವರಗಳನ್ನು ಬರೆಯಲು ಇದು ಸೂಕ್ತಸ್ಥಳವಲ್ಲ. ಆದರೆ ಚಿತ್ರಕಲೆಯ ಕ್ಷೇತ್ರದಲ್ಲಿ ಅವರ ಶೈಲಿಯೇ ಒಂದು ಹೊಸ ಪಂಥ (School) ನಿರ್ಮಿಸಿತ್ತು ಎಂಬುದನ್ನು ಗಮನಿಸಿದರೆ ಸಾಕು. ಈ ಪಂಥದ ಪ್ರಭಾವವು ಬಾಬಾಗಜಬಾರ್, ಗಣಪತರಾವ್ ವದಂಗೇಕರ್, ಚಂದ್ರಕಾಂತ ಮಾಂಡ್ರೆ, ಬಾಲಗಜಬರ್ ಮೊದಲದ ಪ್ರಸಿದ್ಧ ಕಲಾವಿದರನ್ನು ಆ ಕಾಲದ ಕೊಲ್ಹಾಪುರದಲ್ಲಿ ಬೆಳಕಿಗೆ ತಂದಿತ್ತು.[51] ಬಾಬುರಾವ್ ಅವರು ಪ್ರತಿಭಾವಂತ ಶಿಲ್ಪಿಗಳಾಗಿದ್ದರು. ಅವರ ಶಿಲ್ಪಗಳ ವ್ಯಾಪ್ತಿ ಕೋಮಲವಾದ ಆನೆದಂತಗಳಿಂದ ಹಿಡಿದು ಭಾರೀ ಲೋಹಗಳ ಪ್ರತಿಮೆಗಳವರೆಗೆ ವ್ಯಾಪಿಸಿದೆ. ಅವುಗಳು ಇಲ್ಲಿಯವರೆಗೆ ಕೊಲ್ಹಾಪುರದ ಸೌಂದರ್ಯವನ್ನು ಹೆಚ್ಚಿಸಿವೆ.

ಈ ಅವಧಿಯಲ್ಲಿ ಬಾಂಬೆಯಲ್ಲಿ ರಾವ್‌ಬಹಾದ್ದೂರ್ ಮಾಧವರಾವ್ ಧುರಂದರ ಮತ್ತು ಮಾಧವರಾವ್ ಪರಂದೇಕರ್ ಎಂಬ ಇಬ್ಬರು ಚಿತ್ರಕಾರರು ತುತ್ತತುದಿಗೆ ಏರಿದ್ದರು. ಈ ಇಬ್ಬರು ಮೂಲತಃ ಕೊಲ್ಹಾಪುರದವರು ಬಾಂಬೆಯಲ್ಲಿ ನೆಲೆಸಿ ರಾಷ್ಟ್ರೀಯ ಗೌರವವನ್ನು ಗಳಿಸಿದ್ದರು. ಕೊಲ್ಹಾಪುರವು ವಿನಾಯಕ ಮಾಸೋಜಿ ಎಂಬ ಕಲಾವಿದನನ್ನು ನೀಡಿದೆ. ಅವರು ಕಲೆಯನ್ನು ರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದರು. ಮಾಸೋಜಿ ಅವರು ತಮ್ಮ ಕಲಾಶಿಕ್ಷಣವನ್ನು ಗುರುದೇವ ರವೀಂದ್ರನಾಥ ಠಾಗೋರರ ಶಾಂತಿನಿಕೇತನದಲ್ಲಿ ಮುಗಿಸಿ ಅವರು ಅಲ್ಲಿ ಕವಿ ರವೀಂದ್ರರ ಅಚ್ಚುಮೆಚ್ಚಿನ ಸಹವರ್ತಿಯಾದರು. ಅವರೊಬ್ಬರೇ ಮರಾಠಿ ಕಲಾವಿದರಾಗಿ ಬೆಂಗಾಲಿ ಶೈಲಿಯಲ್ಲಿ ಕೆಲಸ ಮಾಡಿದರು.[52]

ಮೂವರು ಕಲಾವಿದರಾದ ಬಾಬಾಗಜಬಾರ್, ದತ್ತೊಬ ದಳವಿ ಮತ್ತು ಮಹದೇವರಾವ್ ಬಾಗಲ್ ಅವರು ಪ್ರಸಿದ್ಧ ಕಲಾಕಾರರಾಗಿ ಶಾಹು ಮಹಾರಾಜರಿಂದ ನೇರವಾಗಿ ಪ್ರೋತ್ಸಾಹವನ್ನು ಪಡೆದರು. ದಳವಿ ಯವರು ನಂತರ ದಳವಿ ಕಲಾಶಾಲೆಯನ್ನು ಪ್ರಾರಂಭಿಸಿದರು. ಇದು ಕೊಲ್ಹಾಪುರದಲ್ಲಿ ಕಲೆಯಲ್ಲಿ ತರಬೇತಿ ನೀಡುತ್ತಿದ್ದರೆ ಮಾಧವರಾವ್ ಅವರು ರಾಜಕಾರಣ ಮತ್ತು ಸಾಮಾಜಿಕ ಸಾಹಸದಲ್ಲಿ ತಲ್ಲೀನರಾದರು. ಅದು ಅವರ ಕಲೆಯ ಸೃಜನಾತ್ಮಕತೆಯನ್ನೇ ಸೀಮಿತಗೊಳಿಸಿತು. ಆದರೂ ಅವರ ಕಲಾಕೃತಿಗಳು ಅವರ ಕಲೆಗಾರನ ಸ್ವಾಭಾವಿಕ ಗುಣಗಳ ಅನುಭವವನ್ನು ಅಭಿವ್ಯಕ್ತಿಗೊಳಿಸುವುದರಲ್ಲಿ ವಿಫಲವಾಗಲಿಲ್ಲ. ಶಾಹುರವರ ಆಡಳಿತದ ನಂತರದ ಕಾಲದಲ್ಲಿ ದಳವಿ, ಬಾಗಲ್, ಚಂದ್ರಕಾಂತ ಮಂದಾರೆ, ಗಣಪತ್‌ರಾವ್ ವಾಡಂಗೇರ್, ಕಲಾವಿದರಾದ ಜಯಸಿಂಗರಾವ್ ದಳವಿ (ದತ್ತೋಬ ದಳವಿಯವರ ಮಗ), ಶಮಾಕಾಂತ ಜಾಧವ್, ಗಣಪತ್‌ರಾಬ್ ಮಜಗಾವಂಕರ್, ಎಂ. ಆರ್. ದೇಶಮುಖ, ಶಿವಾಜಿ ಶರ್ಮಾ ಅವರು ಕೊಲ್ಹಾಪುರದ

ಕಲಾಪರಂಪರೆಯನ್ನು ಶ್ರೀಮಂತಗೊಳಿಸುವಲ್ಲಿ ಕೊಡುಗೆಯನ್ನು ನೀಡಿದ್ದಾರೆ. ಶಿಲ್ಪಕ್ಷೇತ್ರದಲ್ಲಿ ಬಾಲ ಚವ್ಹಾಣ್, ಶಾಮರಾವ್ ದೊಂಗೆರ್‌ಸಾನೆ, ಅವರ ಮಕ್ಕಳಾದ ಚಂದ್ರಕಾಂತ ಮತ್ತು ಶ್ರೀಕಾಂತ, ರವೀಂದ್ರ ಮಿಸ್ತ್ರಿ (ಬಾಬುರಾವ್ ಪೇಂಟರ್ ಮಗ) ಅವರು ಪರಂಪರೆಯನ್ನು ಸಮರ್ಥವಾಗಿ ಮುಂದಕ್ಕೆ ಕೊಂಡೊಯ್ದರು. ಪ್ರಭಾಕರ ಡೊಂಗೆರ್‌ಸಾನೆ ಮತ್ತು ಸಂಜಯ ತಡಸರ್‌ಕಾರ್ ಅವರು ಇಂದು ಕೊಲ್ಹಾಪುರದಲ್ಲಿ ಬೆಳೆಯುತ್ತಿರುವ (ಅರಳುತ್ತಿರುವ) ಶಿಲ್ಪಿಗಳಾಗಿದ್ದಾರೆ.

ಶಾಹುರವರಿಗಿಂತ ಮೊದಲು ಮಹಾಲಕ್ಷ್ಮಿ ದೇವತೆಯ ನಿವಾಸ ಸ್ಥಾನಕ್ಕೆ ಕೊಲ್ಹಾಪುರವು ಭಾರತದಲ್ಲಿ ಪ್ರಸಿದ್ಧಿಯಾಗಿತ್ತು. ಶಾಹುರವರ ಆಡಳಿತಕಾಲದಲ್ಲಿ ವಿವಿಧ ಕಲೆಗಳ ಶ್ರೀಮಂತಿಕೆಗೆ ಹೆಸರುವಾಸಿಯಾಯಿತು. ಇದೇ ಕಾಲಾವಧಿಯಲ್ಲಿ ಕೊಲ್ಹಾಪುರ 'ಕಲಾಪುರ'ಕ್ಕೆ ಪ್ರಸಿದ್ಧಿ (ಕಲೆಗಳ ಬೀಡು ಅಥವಾ ಕಲೆಗಳ ನಗರ) ಪಡೆಯಿತು. ಮಹಾರಾಷ್ಟ್ರದ ಈ ಭಾಗದ ಸಾಂಸ್ಕೃತಿಕ ಜೀವನದಲ್ಲಿ ಇದು ಪ್ರಮುಖ ಘಟನೆಯಾಗಿತ್ತು. ಮತ್ತು ಇದಕ್ಕೆ ಪ್ರೇರಕ ಶಕ್ತಿಯ ಬುಗ್ಗೆಯಾಗಿದ್ದವರು ಮತ್ಯಾರೂ ಅಲ್ಲ, ಅವರೇ ಕಲಾರಸಿಕ, ಬಹುಮುಖಿ, ಪ್ರಜ್ಞಾವಂತ, ಮಹಾ ಉದಾರಿ ಮತ್ತು ಕಲೆಗಳ ಜ್ಞಾನದಾಯಕ ಪ್ರೇಮಿ, ಕೊಲ್ಹಾಪುರ ಸಂಸ್ಥಾನದ ಶಾಹು ಮಹಾರಾಜ. 'ರಾಜಕಾಲಸ್ಯ ಕಾರಣಮ್' ಎಂಬ ನುಡಿ ಘೋಷಣೆಯಾಗಿದೆ. ರಾಜನು ತನ್ನ ಕಾಲಕ್ಕೆ ಹೊಣೆಗಾರನು.

---

# ೩೦

# ಬ್ರಾಹ್ಮಣೇತರರ ಪತ್ರಿಕೆಗಳು

**ಶಾ**ಹುರವರ ಆಡಳಿತಾವಧಿಯ ಮೊದಲು ಕೊಲ್ಹಾಪುರದಲ್ಲಿ ಕೆಲವು ದಿನಪತ್ರಿಕೆಗಳು/ ನಿಯತಕಾಲಿಕೆಗಳಿದ್ದವು. ದೊರೆತ ದಾಖಲೆಗಳ ಪ್ರಕಾರ ನಾನಾ ಮೊರೋಜಿ ತ್ರಿಲೋಕೆಕರ್ ಅವರು ೧೮೫೩ರಲ್ಲಿ ಮಾಸಿಕ ಪತ್ರಿಕೆಯ ರೂಪದಲ್ಲಿ 'ಜ್ಞಾನಸಂಗ್ರಹ' ಪತ್ರಿಕೆ ಸಂಸ್ಥಾನದಲ್ಲಿ ಪ್ರಾರಂಭವಾಗಿತ್ತು. ಆಮೇಲೆ ನಿಯತಕಾಲಿಕೆ 'ವರ್ತಮಾನ ಸಂಗ್ರಹ'ವನ್ನು ಸಂಸ್ಥಾನದ ರಾಜಕೀಯ ಏಜೆಂಟ್ ಕರ್ನಲ್ ಆಂಡರ್‌ಸನ್ ಅವರು ೧೮೬೪ರಲ್ಲಿ ಕೊಲ್ಹಾಪುರ ದರ್ಬಾರಿನ ಕೆಲಸವನ್ನು ಜನರಿಗೆ ತಿಳಿಸುವ ಉದ್ದೇಶದಿಂದ ಪ್ರಾರಂಭಿಸಿದರು. ತದನಂತರ 'ಜ್ಞಾನಸಾಗರ', 'ಶುಭವರ್ತಮಾನದರ್ಶಕ', 'ವಿದ್ಯಾವಿಲಾಸ' ಮೊದಲಾದ ಪತ್ರಿಕೆಗಳು ಅಸ್ತಿತ್ವ ತಳೆದವು. ಶಂಕರಶಾಸ್ತ್ರಿ ಗೋಖಲೆಯವರ 'ವಿದ್ಯಾವಿಲಾಸ' ಪ್ರಾರಂಭದಲ್ಲಿ ಮಾಸಿಕ ವಾಗಿದ್ದು ಎರಡು ವರ್ಷಗಳ ನಂತರ ಅದು ಸಾಪ್ತಾಹಿಕವಾಯಿತು. ನಂತರ ಬಹಳಕಾಲದ ನಂತರ ಅದು ದಿನಪತ್ರಿಕೆಯಾಗಿ ಗೌರವಸ್ಥಾನ 'ವಿದ್ಯಾವಿಲಾಸ'ಕ್ಕೆ ಲಭಿಸಿತು.[1] ಈ ಪತ್ರಿಕೆ 'ವಿದ್ಯಾವಿಲಾಸ'ದ ಸಂಪಾದಕರ ಧೋರಣೆ ಸ್ವಾತಂತ್ರ್ಯ ಆಂದೋಲನ ಪ್ರಚಾರವಾಗಿದ್ದರೂ ಶಾಹುರವರ ಯುಗದಲ್ಲಿ ಸಾಮಾಜಿಕ ಸುಧಾರಣೆಗಳನ್ನು ವಿರೋಧಿಸುವ ನಿಲುವನ್ನು ತೆಗೆದುಕೊಂಡು ದರ್ಬಾರಿನೊಡನೆ ಹೊಡೆದಾಡುತ್ತಿತ್ತು.

## ಶಾಹುರವರ ಕಾಲದಲ್ಲಿ ಮೊದಲಿದ್ದ ಪತ್ರಿಕೆಗಳು

ಪ್ರೊಫೆಸರ್ ವಿಷ್ಣು ವಿಜ್‌ಪೂರ್‌ಕರ್ ಅವರು ಶಾಹುಯುಗದ ಮೊದಲ ದಿನಪತ್ರಿಕೆಯ ಮನುಷ್ಯರಾಗಿದ್ದರು. ಶಾಹುರವರ ಪಟ್ಟಾಭಿಷೇಕದ ಸಂದರ್ಭದಲ್ಲಿ ಹೊಸ ಛತ್ರಪತಿಯವರ ಅಪಾರ ಆರ್ಥಿಕ ಬೆಂಬಲದೊಂದಿಗೆ ಪ್ರಸಿದ್ಧ ಮಾಸಿಕ 'ಗ್ರಂಥಮಾಲಾ'ವನ್ನು ಅವರು ಪ್ರಾರಂಭಿಸಿದರು. ಅವರು ತಮ್ಮ ದೇಶದ ಧರ್ಮ ಮತ್ತು ಭಾಷೆಯ ಬಗ್ಗೆ ವಿವಿಧ ಲೇಖನಗಳ ಮತ್ತು ಪುಸ್ತಕಗಳಿಗೆ ಸಂಬಂಧಿಸಿದ ವಿಷಯಗಳಾದ ಇತಿಹಾಸ, ರಾಜ್ಯಶಾಸ್ತ್ರ, ಔಷಧಿಶಾಸ್ತ್ರ, ಕೃಷಿ, ಭೌತವಿಜ್ಞಾನ ಮೊದಲಾದ ವಿಷಯಗಳ ಬಗ್ಗೆ ವಿವಿಧ ಲೇಖನಗಳನ್ನು ಪ್ರಕಟಿಸುವ ಮೂಲಕ ಮರಾಠಿ ಓದುಗರಲ್ಲಿ ಆಸಕ್ತಿ ಮತ್ತು ಜಾಗೃತಿಯನ್ನು ಮೂಡಿಸುತ್ತಿದ್ದರು. ಆದರೆ ವೇದೋಕ್ತ ಸಂದರ್ಭದಲ್ಲಿ ತಮ್ಮ ಕರ್ಮಠ ಹಿನ್ನೆಲೆ ಮತ್ತು ಮನೋಸ್ಥಿತಿ ಯಿಂದ ಅವರು ವೇದೋಕ್ತದ ಸಂಘರ್ಷದಲ್ಲಿ ಕರ್ಮಠ ಬ್ರಾಹ್ಮಣರ ಪಕ್ಷ ವಹಿಸುತ್ತಾರೆ. ೧೮೯೮ರಲ್ಲಿ ಅವರು 'ಸಮರ್ಥ' ವಾರಪತ್ರಿಕೆಯನ್ನು ರಾಷ್ಟ್ರೀಯ ಶಿಕ್ಷಣದ ನಿಷ್ಠೆಯಲ್ಲಿ ಪ್ರಾರಂಭಿಸುತ್ತಾರೆ. ವೇದೋಕ್ತದ ಸಂಘರ್ಷದ ಕಾಲದಲ್ಲಿ ಅವರು ತಮ್ಮ ಎರಡು ಪತ್ರಿಕೆಗಳಾದ 'ಗ್ರಂಥಮಾಲ' ಮತ್ತು 'ಸಮರ್ಥ'ಗಳಲ್ಲಿ ಶಾಹುರವರ ವಿರುದ್ಧ ಅತ್ಯಂತ ಕೆಟ್ಟರೀತಿಯಲ್ಲಿ ದಾಳಿ ಮಾಡುತ್ತಾರೆ. ತತ್ಪರಿಣಾಮವಾಗಿ ಅವರು ರಾಜಾಶ್ರಯವನ್ನು ಕಳೆದುಕೊಂಡದ್ದು ಮಾತ್ರವಲ್ಲದೆ ದರ್ಬಾರಿನ ಕೋಪವನ್ನು ಎದುರಿಸಬೇಕಾಯಿತು.

ಆದರೂ ಕೂಡ ಅವರು ಬ್ರಾಹ್ಮಣರ ಸಮುದಾಯದಲ್ಲಿ ಹೆಚ್ಚು ಜನಪ್ರಿಯರಾದರು ಮತ್ತು ಅವರ ಪತ್ರಿಕಾಧರ್ಮವನ್ನು ಬ್ರಾಹ್ಮಣರು ಮೆಚ್ಚಿಕೊಂಡರು. ದರ್ಬಾರು ೧೯೦೧ರಲ್ಲಿ 'ಗ್ರಂಥಮಾಲ'ಕ್ಕೆ ಅನುದಾನ ವನ್ನು ರದ್ದುಮಾಡಿತು. 'ಗ್ರಂಥಮಾಲ' ೧೯೦೬ರವರೆಗೆ ಹೇಗೊ ಬದುಕಿತು. ನಂತರ ೧೯೦೯ರಲ್ಲಿ 'ಸಮರ್ಥ'ದಿಂದ ಗ್ಯಾರಂಟಿಯನ್ನು ದರ್ಬಾರು ಕೇಳಿತು. ವಿಜ್‌ಪೂರ್‌ಕರ್ ನಿರಾಕರಿಸಿದರು ಮತ್ತು 'ಸಮರ್ಥ'ವನ್ನು ಮುಚ್ಚಿದರು.[2]

ಈ ಮಧ್ಯೆ ವಿಜ್‌ಪೂರ್‌ಕರ್ ಅವರು 'ವಿಶ್ವವೃತ್ತ' ಎಂಬ ಮತ್ತೊಂದು ಮಾಸಿಕವನ್ನು ೧೯೦೬ರಲ್ಲಿ ಪ್ರಾರಂಭಿಸಿದರು. ೧೯೦೮ರ ವರ್ಷದ ಅದರ ಒಂದು ಸಂಚಿಕೆಯಲ್ಲಿ ಪಂಡಿತ ಎಸ್. ಡಿ. ಸತ್ವಲೇಕರ್ ಅವರು 'ವೇದದ ಪ್ರಾರ್ಥನೆಯ ಬೆಳಕು' ಎಂಬ ಹೆಸರಿನಲ್ಲಿ ಪ್ರಚೋದಕವಾದ ಲೇಖನವನ್ನು ಬರೆದರು. ಈ ಲೇಖನದಲ್ಲಿ ಒಂದು ಹೇಳಿಕೆಯಲ್ಲಿ ಶಾಹುರವರನ್ನು ನೇರವಾಗಿ ಟೀಕೆಮಾಡಿ ಹೇಳಿದ್ದರು, "ವಿಶ್ವದಲ್ಲಿರುವ ಶತ್ರುಸೈನ್ಯ ಮತ್ತು ದಾಸ್ಯವನ್ನು ನಾಶಮಾಡದ ರಾಜತ್ವ ಮತ್ತು ಕ್ಷತ್ರಿಯರ ಪರಾಕ್ರಮದಿಂದ ರಾಷ್ಟ್ರಕ್ಕೆ ಏನು ಪ್ರಯೋಜನ?". ಇಡೀ ಲೇಖನ ಶಾಹು ಮಹಾರಾಜರ ಮಾನಹಾನಿಯ ಲೇಖನವಾಗಿದೆ. ಆದ್ದರಿಂದ ಇದು ರಾಜದ್ರೋಹವಾಗುತ್ತದೆಯೆಂದು ಕೊಲ್ಹಾಪುರದ ದರ್ಬಾರು ಖಂಡಿಸಿತು. ವಿಜ್‌ಪೂರ್‌ಕರ್ ಅವರ ಮೇಲೆ ದಾವೆಯನ್ನು ಹೂಡಲಾಯಿತು. ನ್ಯಾಯಾಲಯದಲ್ಲಿ ಅವರಿಗೆ ೩ ವರ್ಷಗಳ ಸಾದಾ ಶಿಕ್ಷೆ ವಿಧಿಸಲಾಯಿತು.[3] ಹೀಗೆ ಶಾಹುರವರ ಬ್ರಾಹ್ಮಣಿಕೆಯ ಪತ್ರಿಕೆಗಳ ವಿರುದ್ಧ ಹೋರಾಟ ಪ್ರಾರಂಭವಾಯಿತು. ಅದು ತಮ್ಮ ಆಡಳಿತದ ಕೊನೆಯವರೆಗೆ ಮುಂದುವರಿಯಿತು.

೧೯೧೨–೧೩ರವರೆಗಿನ ಶಾಹುರವರ ಆಡಳಿತದಲ್ಲಿ ಕೊಲ್ಹಾಪುರದಲ್ಲಿ ಹಲವು ರೀತಿಯ ಪತ್ರಿಕೆಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಹಲವು ಪತ್ರಿಕೆಗಳು ಧಾರ್ಮಿಕ ದೃಷ್ಟಿಕೋನದಿಂದ ಪ್ರಾರಂಭವಾದವು. ಅವುಗಳಲ್ಲಿ ಮುಖ್ಯವಾದ ಪತ್ರಿಕೆಗಳಲ್ಲಿ ಜೈನರ 'ಮಹಾಪುರಾಣ' ಮತ್ತು 'ಜೈನಬೋಧಕ' ಗಳು, ಲಿಂಗಾಯತರ 'ವೀರಶೈವ ಮತ', ಕ್ರಿಶ್ಚಿಯನ್ನರ 'ಪ್ರಕಾಶಕ' ಮತ್ತು ವೈದಿಕರ 'ಧರ್ಮವಿಚಾರ' ಇವುಗಳ ಜೊತೆಗೆ, ಶಿಕ್ಷಣ ಮತ್ತು ಮನರಂಜನೆಯ ಉದ್ದೇಶದಿಂದ ವಿವಿಧ ಪತ್ರಿಕೆಗಳಾದ 'ಜ್ಞಾನವಿಲಾಸಕಾಲ', 'ಆರ್ಯಮಿತ್ರ', 'ಮನೋವಿನೋದ', 'ಕೃಷಿಕರ್ಮ' ಮೊದಲಾದವುಗಳನ್ನು ಈ ಅವಧಿಯಲ್ಲಿ ಪ್ರಕಟಿಸಲಾಯಿತು. ನಂತರ ಜನರಲ್ಲಿ ಸತ್ಯಶೋಧಕದ ಅಭಿಪ್ರಾಯಗಳನ್ನು ತಿಳಿಸಲು ಕೆಲವು ಪತ್ರಿಕೆಗಳನ್ನು ಪ್ರಾರಂಭಿಸಿದರು. ಉದಾಹರಣೆಗೆ ಸತ್ಯಶೋಧಕ ಸಿದ್ಧಾಂತದ ಕೆಲವು ಮುಖ್ಯ ಪತ್ರಿಕೆಗಳಾದ ಭಾಸ್ಕರರಾವ್ ಜಾಧವ್ ಅವರ 'ಮರಾಠ ದೀನಬಂಧು' ಬಾಬುರಾವ್ ಯಾದವ್ ಅವರ 'ಗರೀಬಂಚಕೈವಾರಿ'. ಭುಜಂಗರಾವ್ ಗಾಯಕವಾಡರ 'ವಿಜಯಿಮರಾಠ'.[4] ಇವರೆಲ್ಲರು ಸಾಮಾಜಿಕ ಕಾರ್ಯದಲ್ಲಿ ಶಾಹುರವರ ಸಹವರ್ತಿಗಳು. ಅವರೆಲ್ಲರೂ ಶಾಹುರವರಿಂದ ಅವಶ್ಯಕವಾದ ಸಹಾಯ ಮತ್ತು ಪ್ರೋತ್ಸಾಹ ಪಡೆದಿರುವುದು ಸುಸ್ಪಷ್ಟ.

## ಬ್ರಾಹ್ಮಣೇತರರ ಪತ್ರಿಕೆಗಳಿಗೆ ಶಾಹುರವರ ಪ್ರೋತ್ಸಾಹ

೧೯೧೫–೧೬ ನಂತರ ಶಾಹುರವರು ನಿಜವಾದ ಅರ್ಥದಲ್ಲಿ ಪತ್ರಿಕಾರಂಗಕ್ಕೆ ತಿರುಗಿದರು. ಈ ಅವಧಿಯಲ್ಲಿ ಸತ್ಯಶೋಧಕ ಸಮಾಜ ಮತ್ತು ಬ್ರಾಹ್ಮಣೇತರರ ಆಂದೋಲನಗಳಿಗೆ ರಾಜಾಶ್ರಯ ನೀಡಿದ್ದರಿಂದ ಮತ್ತು ಬ್ರಾಹ್ಮಣ ಆಡಳಿತಶಾಹಿಗೆ ಭಾರೀ ಹೊಡೆತ ನೀಡುವ ಕುಲಕರ್ಣಿ ವತನ ರದ್ದುಗೊಳಿಸಿದ್ದರಿಂದ ಇಡೀ ಮಹಾರಾಷ್ಟ್ರದಲ್ಲಿ ಅಲ್ಲದೆ ಕೊಲ್ಹಾಪುರದಲ್ಲಿ ಮಡಿವಂತಿಕೆಯ ಬ್ರಾಹ್ಮಣವರ್ಗ ಶಾಹು ವಿರುದ್ಧ ಎದ್ದು

ನಿಂತಿತು. ಶಾಹುರವರು ತಿಲಕರ ಹೋಮ್‌ರೂಲ್ ಆಂದೋಲನವನ್ನು ಶಾಹುರವರು ವಿರೋಧಿಸಿದಾಗ ಮಾಂಟೆಫೋರ್ಡ್ ಸುಧಾರಣೆಗಳ ಅಡಿಯಲ್ಲಿ ಶಾಸನ ಪರಿಷತ್ತುಗಳಲ್ಲಿ ಹಿಂದುಳಿದ ವರ್ಗಗಳಿಗೆ ಪ್ರಾತಿನಿಧ್ಯ ಕೇಳಿದಾಗ ಈ ವಿರೋಧವು ಬಲಿಷ್ಠ ಮತ್ತು ತೀವ್ರವಾಯಿತು. ಬ್ರಾಹ್ಮಣೇತರರನ್ನು ಜಾಗೃತಗೊಳಿಸಲು ಶಾಹುರವರು ಹಿಂದುಳಿದ ವರ್ಗಗಳ ಮತ್ತು ಸಮುದಾಯಗಳ ಸಮ್ಮೇಳನಗಳಲ್ಲಿ ಭಾಗವಹಿಸಲು ಪ್ರಾರಂಭ ಮಾಡಿದ್ದರು. ಬ್ರಾಹ್ಮಣಿಕೆಯ ಪತ್ರಿಕೆಗಳು ಮಹಾರಾಷ್ಟ್ರದಲ್ಲಿ ಶಾಹುರವರ ಸಾಮಾಜಿಕ ಮತ್ತು ರಾಜಕೀಯ ಅಭಿಪ್ರಾಯಗಳನ್ನು ಅವರ ಸಂಸ್ಥಾನದ ಆಡಳಿತ ಮತ್ತು ಅವರು ರಾಜಾಶ್ರಯ ನೀಡಿದ ಸತ್ಯಶೋಧಕ ಸಮಾಜ ಮತ್ತು ಬ್ರಾಹ್ಮಣೇತರರ ಆಂದೋಲನಗಳನ್ನು ಟೀಕಿಸಲು ಪ್ರಾರಂಭಿಸಿದರು. ಮಿಗಿಲಾಗಿ ಕೆಲವು ಬ್ರಾಹ್ಮಣಿಕೆಯ ಪತ್ರಿಕೆಗಳು ಶಾಹುರವರ ಚಾರಿತ್ರ್ಯದ ಹರಣ ಮತ್ತು ರಾಜಕುಟುಂಬದ ಸದಸ್ಯರ ಬಗ್ಗೆ ನಿಂದನೆಯ ಅಭಿಯಾನವನ್ನೇ ಪ್ರಾರಂಭಿಸಿದರು. ಈ ಹಿನ್ನೆಲೆಯಲ್ಲಿ ಬ್ರಾಹ್ಮಣೇತರರ ಸಮಾಜದ ಏಳಿಗೆಗಾಗಿ ಮತ್ತು ಬ್ರಾಹ್ಮಣಶಾಹಿಯ (ಆಡಳಿತವರ್ಗದ) ವಿರುದ್ಧ ಜನಜಾಗೃತಿಯನ್ನು ಬೆಳೆಸುವ ಸಲುವಾಗಿ ಬ್ರಾಹ್ಮಣೇತರರ ಪತ್ರಿಕೆಗಳ ಅಗತ್ಯವಿದೆಯೆಂದು ಶಾಹು ಪರಿಭಾವಿಸುತ್ತಾರೆ. ಪತ್ರಿಕೆಗಳು ಸಾಮಾಜಿಕ ಮತ್ತು ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ಒಂದು ಶಕ್ತಿಯುತ ಮಾಧ್ಯಮವೆಂದು ಚೆನ್ನಾಗಿ ತಿಳಿದಿದ್ದರು. ಬ್ರಾಹ್ಮಣಿಕೆಯ ಪತ್ರಿಕೆಗಳ ಟೀಕೆಗಳ ದಾಳಿಗಳನ್ನು ಹಿಮ್ಮೆಟ್ಟಿಸಲು ಬ್ರಾಹ್ಮಣೇತರರ ಪತ್ರಿಕೆಗಳು ಒಂದು ಬಲವಾದ ಅಸ್ತ್ರ ಬೇಕೆಂಬ ತೀರ್ಮಾನಕ್ಕೆ ಶಾಹು ಬಂದರು. ಅವರು ಹೀಗಿರುವಾಗ ಬ್ರಾಹ್ಮಣೇತರರಲ್ಲಿ ಹಲವು ಜನರನ್ನು ಪತ್ರಿಕೆಗಳನ್ನು ಪ್ರಾರಂಭಿಸಲು ಹುರಿದುಂಬಿಸಿದರು. ಈಗಾಗಲೇ ಪತ್ರಿಕೆಗಳನ್ನು ಪ್ರಾರಂಭಿಸಿದವರಿಗೆ ಧಾರಾಳವಾಗಿ ಸಹಾಯ, ಬೆಂಬಲ ನೀಡಿದರು ಮತ್ತು ಈಗಾಗಲೇ ಪ್ರಾರಂಭಿಸಿದ ಹಿಂದೆ ಉಳಿದಿದ್ದ ಪತ್ರಿಕೆಗಳಿಗೆ ಬಲವಾಗಿ ನಿಂತು ಸಹಾಯಮಾಡಿದರು.

ವಾಸ್ತವಿಕವಾಗಿ ಶಾಹುರವರು ತಮ್ಮ ಸಂಸ್ಥಾನದಲ್ಲಿ ಶಿಕ್ಷಿತ ಬ್ರಾಹ್ಮಣೇತರರು ೧೯೧೧ರಿಂದಲೇ ಪತ್ರಿಕೆಗಳನ್ನು ಪ್ರಾರಂಭಿಸುವುದಕ್ಕೆ ಉತ್ತೇಜನ ನೀಡಲು ತೊಡಗಿದರು. ಅದೇ ವರ್ಷ ಬಲವಂತ ಕೃಷ್ಣಪಿಸಾಲ್ ಅವರು ಶಾಹುರವರ ಪ್ರೋತ್ಸಾಹದಿಂದ 'ವಿಶ್ವಬಂಧು' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. 'ವಿಶ್ವಬಂಧು' ಪತ್ರಿಕೆಯು ಬ್ರಾಹ್ಮಣರ ಏಕಸ್ವಾಮ್ಯತೆಯನ್ನು ಮತ್ತು ತಿಲಕರ ಪಕ್ಷದ ಸ್ವಾರ್ಥಪರ ರಾಜಕಾರಣವನ್ನು ಕಟುವಾಗಿ ಟೀಕಿಸತೊಡಗಿತು. ಅದು ಬ್ರಾಹ್ಮಣ ಆಳರಸರನ್ನು ಟೀಕಿಸಿದ್ದರಿಂದ ಅದು ಸಹಜವಾಗಿ ಬ್ರಾಹ್ಮಣರ ಕೋಪ-ಸಿಟ್ಟನ್ನು ಮೈಮೇಲೆ ಎಳೆದುಕೊಂಡಿತು.[5] ೧೯೨೧ರಲ್ಲಿ ಶಾಹುರವರು ಈ ಪತ್ರಿಕೆಯ ಒಂದು ಸಂಚಿಕೆಯನ್ನು ಬಾಂಬೆಯ ಸರಕಾರದ ಗೃಹಕಾರ್ಯದರ್ಶಿ ರಾಬರ್ಟ್‌ಸನ್ ಅವರಿಗೆ ಕಳುಹಿಸಿ, ಅದರ ಒಂದು ಪತ್ರವನ್ನು ಲಗತ್ತಿಸಿ ಅದರಲ್ಲಿ ಅವರು ಹೀಗೆ ಹೇಳಿದ್ದಾರೆ: "......ಈ ಪತ್ರಿಕೆಯ ಸಂಪಾದಕ ಒಬ್ಬ ಸಾಮಾನ್ಯ ಮನುಷ್ಯ. ಆದರೆ ಈ ವ್ಯಕ್ತಿ ಯಾವಾಗಲು ತಿಲಕರನ್ನು ವಿರೋಧಿಸಿದ್ದಾರೆ. ಹಾಗಿರುವಾಗ ಅವರ ಪತ್ರಿಕೆ ಉತ್ತಮಸ್ಥಿತಿಯಲ್ಲಿ ಇಲ್ಲ. ನಾನು ಅವರಿಗೆ ಸಹಾಯಮಾಡುತ್ತಿದ್ದೇನೆ".[6]

ಇದೇ ಅವಧಿಯಲ್ಲಿ ಪುಣೆಯಿಂದ ಒಬ್ಬ ಪತ್ರಿಕಾಕರ್ತ ಬಂದಿದ್ದರು. ಅವರು ಬಲವಂತ ಕೃಷ್ಣಪಿಸಾಲ್ ಅವರಿಗಿಂತ ಬಹು ಕಟುವಾಗಿ ಬರೆಯುತ್ತಿದ್ದರು. ಅವರೇ ದಿನಕರರಾವ್ ಜವಲ್ಕರ್. ಕೇಶವರಾವ್ ಜೆಧೆ ಮತ್ತು ದಿನಕರರಾವ್ ಜವಲ್ಕರ್ ಈ ಇಬ್ಬರು ಯುವ ಪತ್ರಿಕಾಕರ್ತರು ಬ್ರಾಹ್ಮಣೇತರರ ಪಕ್ಷದ ಪರವಾಗಿ ಪುಣೆಯಲ್ಲಿ ಲೋಕಮಾನ್ಯ ತಿಲಕರ ನಾಯಕತ್ವಕ್ಕೆ ಸವಾಲು ಎಸೆದರು. ಅವರು ಪುಣೆಯ ಬ್ರಾಹ್ಮಣರ ದುಷ್ಟಕೂಟದ ವಿರುದ್ಧ ಧೈರ್ಯದಿಂದ ಕಟುವಾಗಿ ಟೀಕೆಯ ದಾಳಿಗಳನ್ನು ಮಾಡಿದರು. ವಿಠ್ಠಲ್‌ಭಾಯಿ

ಪಟೇಲರು ಅಂತರ್‌ಜಾತಿಯ ವಿವಾಹವನ್ನು ಪ್ರತಿಪಾದಿಸುವ ಕ್ರಾಂತಿಕಾರಿ ಮಸೂದೆಯ ಪರವಾಗಿ ವಿಶೇಷವಾಗಿ ಜವಲ್ಕರ್ ಅವರು 'ಪ್ರಣಯ ಪ್ರಭಾವ' ಎಂಬ ಕಟಕಿಯ ನಾಟಕವನ್ನು ಬರೆದಿದ್ದರು ಮತ್ತು ಅದು ಪ್ರಚೋದನಕಾರಿ ವಸ್ತುವನ್ನು ಒಳಗೊಂಡಿದೆಯೆಂದು ಸರಕಾರ ಅದರ ಮೊದಲನೇ ಪ್ರದರ್ಶನವನ್ನು ಪ್ರದರ್ಶಿಸುವುದಕ್ಕೆ ಅವಕಾಶ ನೀಡಲಿಲ್ಲ. ಅಂತಹ ಯುವ ಜವಲ್ಕರವರು ಮಹಾರಾಷ್ಟ್ರದಲ್ಲೆಲ್ಲ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದ್ದರು. ಶಾಹುರವರು ಅಂತಹ ನಿರ್ಭಯ ನುರಿತ ಪತ್ರಿಕಾಕರ್ತರನ್ನು ಹುಡುಕುತ್ತಿದ್ದರು. ಅವರು ಜವಲ್ಕರರನ್ನು ಗುರುತಿಸಿದರು. ಅವರು ಜವಲ್ಕರರನ್ನು ಕೊಲ್ಹಾಪುರಕ್ಕೆ ತಂದು ಸ್ವತಂತ್ರವಾದ ಪತ್ರಿಕೆಯನ್ನು ಪ್ರಾರಂಭಿಸುವುದಕ್ಕೆ ಎಲ್ಲ ವಿಧವಾದ ನೆರವು ಮತ್ತು ಪ್ರೋತ್ಸಾಹವನ್ನು ನೀಡಿದರು. ಜವಲ್ಕರರು ೧೯೧೯ರಲ್ಲಿ ಶಾಹುರವರ ಆಶ್ರಯದಲ್ಲಿ 'ತರುಣ ಮರಾಠ' ಪತ್ರಿಕೆಯನ್ನು ಪ್ರಾರಂಭಿಸಿದರು. ಒಮ್ಮೆ ಪತ್ರಿಕೆಯಂತಹ ಆಯುಧ ಸಿಕ್ಕಮೇಲೆ ಜವಲ್ಕರರು ತಿಲಕರ ಪಕ್ಷದ ಮೇಲೆ ಕಟುವಾದ 'ಟೀಕಾಪ್ರಹಾರ' ಮಾಡಲು ತೊಡಗಿದರು. ಅಷ್ಟೆ ಅಲ್ಲ ಬ್ರಾಹ್ಮಣ ಆಡಳಿತಗಾರರನ್ನು ಸಹ ಬಿಡಲಿಲ್ಲ. ಔಂಧದ ಆಳುವವರ ಮೇಲೆ ಪ್ರಚೋದನಕಾರಿ ವಿಷಯವನ್ನು ಜವಲ್ಕರರು ಪ್ರಕಟಿಸಿದ ಕೂಡಲೇ ಬ್ರಿಟಿಷ್ ರೆಸಿಡೆಂಟರ ಬಳಿ ಬಂದು ದೂರನ್ನು ಸಲ್ಲಿಸಲಾಯಿತು. ಅವರು ಅದನ್ನು ಗಂಭೀರವಾಗಿ ಗಮನಿಸಿ ಜವಲ್ಕರರಿಗೆ ಆಶ್ರಯ ನೀಡಿದ್ದ ಶಾಹುರವರಿಗೆ ವಿವರಣೆ ನೀಡಲು ಒತ್ತಾಯಿಸಿದರು. ಜವಲ್ಕರರ ಲೇಖನಿಯು ಅತಿಕಹಿಯಾಗಿತ್ತು ಮತ್ತು ಆ ಸಮಯದಲ್ಲಿ ಅವರ ನಿರ್ದಿಷ್ಟ ಬಲಿಪಶು (ಗುರಿಯಿಟ್ಟ ವ್ಯಕ್ತಿಗಳಿಗೆ)ಗಳಿಗೆ ಅತ್ಯಂತ ಅಪಾಯಕಾರಿಯಾಗಿದ್ದರಿಂದ ಶಾಹುರವರು ಅವರನ್ನು ಮನ್ನಿಸಲು ಸಾಧ್ಯವಾಗದಿದ್ದರಿಂದ ಅವರು ಪರ್ಯಾಯವಿಲ್ಲದೆ ಅನಿವಾರ್ಯವಾಗಿ ಏಪ್ರಿಲ್ ೧೯೨೧ರಲ್ಲಿ ಕೊಲ್ಹಾಪುರವನ್ನು ಬಿಟ್ಟು ಹೊರಹೋಗಬೇಕಾಗಿ ಬಂತು.[7]

ಶಾಹುರವರು ಸಂಸ್ಥಾನದೊಳಗೆ ಮತ್ತು ಹೊರಗೆ ಪತ್ರಿಕೆಗಳನ್ನು ಸ್ಥಾಪಿಸುವುದಕ್ಕೆ ಹಲವರಿಗೆ ನೇರವಾಗಿ ನೆರವು ಮತ್ತು ಪ್ರೋತ್ಸಾಹ ನೀಡಿದ ಹಲವಾರು ನಿದರ್ಶನಗಳಿವೆ. ೧೯೨೧ರಲ್ಲಿ ಕೇಶವರಾವ್ ಬಾಗ್ಡೆ ಮತ್ತು ಕೀರ್ತಿವನರಾವ್ ನಿಂಬಾಲ್ಕರ್ ಅವರು ಶಾಹುರವರ ಪ್ರೋತ್ಸಾಹದಿಂದ 'ಶಿವಛತ್ರಪತಿ' ಪತ್ರಿಕೆಯನ್ನು ಪ್ರಾರಂಭ ಮಾಡಿದರು.[8] ಶಾಹುರವರು ಆರ್ಥಿಕ ಬೆಂಬಲವನ್ನು 'ಜಾಗರೂಕ', 'ವಿಜಯಿಮರಾಠ', 'ದಿನಮಿತ್ರ', 'ಮೂಕನಾಯಕ' ಮತ್ತು ರಾಷ್ಟ್ರವೀರ' ಪತ್ರಿಕೆಗಳಿಗೆ ನೀಡಿದರು.

ಸತ್ಯಶೋಧಕ ಸಮಾಜದ ತತ್ವಗಳ ನಿಷ್ಠಾವಂತ ಪ್ರತಿಪಾದಕ ಮತ್ತು ಬ್ರಾಹ್ಮಣೇತರರ ಪಕ್ಷದ ಚಲನಶೀಲ ನಾಯಕ ವಾಲ್‌ಚಂದಕೊಠಾರಿಯವರು ದೃಢಸಂಕಲ್ಪದಿಂದ ತಿಲಕರ 'ಕೇಸರಿ' ಪತ್ರಿಕೆಗೆ ಸವಾಲಾಗಿ ಪುಣೆಯಲ್ಲಿ 'ಜಾಗರೂಕ' ಪತ್ರಿಕೆಯನ್ನು ಪ್ರಾರಂಭಿಸಿದರು. ಶಾಹುರವರು ಕೊಠಾರಿಯವರ ಪ್ರಯತ್ನಗಳನ್ನು ಕೊಂಡಾಡಿದರು. ಅವರು (ಶಾಹು) ಕೊಠಾರಿಯವರಿಗೆ ನೀಡಿದ ೩,೦೦೦ ರೂ.ಗಳ ನೆರವು ನೀಡಿದ ದಾಖಲೆ ಕೊಲ್ಹಾಪುರದ ಆರ್ಕೈವ್‌ನಲ್ಲಿ ಸಿಕ್ಕಿದೆ.[9] ಆದರೆ ಕೊಠಾರಿಯವರು ತಮ್ಮ ಪತ್ರಿಕೆಯನ್ನು ಸ್ವತಂತ್ರವಾಗಿ ನಿರ್ವಹಿಸುತ್ತಿದ್ದರು. ಬ್ರಿಟಿಷ್ ಸರಕಾರ ಹಿಂದುಳಿದ ಜಾತಿಗಳಿಗೆ ಪ್ರತ್ಯೇಕ ಚುನಾವಣಾ ಪದ್ಧತಿಯನ್ನು ಅಲಕ್ಷಿಸಿದಾಗ ಸರಕಾರವನ್ನು ಕಟುವಾಗಿ ಟೀಕಿಸಲು ಅವರು ತೊಡಗಿದರು. ಶಾಹುರವರು ಇದನ್ನು ಇಷ್ಟಪಡಲಿಲ್ಲ. ಅವರು ಕಾಂಗ್ರೆಸ್ ಪಕ್ಷದಿಂದ ಮತ್ತು ಮಂದಗಾಮಿಗಳಾದ ಬ್ರಾಹ್ಮಣರನ್ನು ಮತ್ತು ಬೇರೆ ಕಡೆಯ ಬ್ರಾಹ್ಮಣೇತರರ ಚಳುವಳಿಗಳಿಂದ ಉದಾರಿ ಬ್ರಾಹ್ಮಣ ಬುದ್ಧಿಜೀವಿಗಳನ್ನು ಸೇರಿಸಿಕೊಳ್ಳುವ ಶಾಹುರವರ ಪ್ರಯತ್ನಗಳನ್ನು ಭಾಸ್ಕರರಾವ್ ಜಾಧವ್, ಲಠ್ಠೆ ಮತ್ತು ಬ್ರಾಹ್ಮಣೇತರರ ಪಕ್ಷದ ಇತರರು

ಒಪ್ಪಿಕೊಳ್ಳಲಿಲ್ಲ. ಆದರೆ ಕೊಠಾರಿಯವರು ಬೇರೆಯವರ ಇಷ್ಟಾನಿಷ್ಟಗಳ ಬಗ್ಗೆ ಗಮನ ಕೊಡುವಂಥ ವ್ಯಕ್ತಿಯಾಗಿರಲಿಲ್ಲ. ಆದರೂ ಶಾಹುರವರ ಮಾತನ್ನು ಗೌರವಿಸುವ ಪ್ರಜ್ಞೆ ಮತ್ತು ವಿವೇಕವನ್ನು ಹೊಂದಿದ್ದರು.[10]

## ಶ್ರೀಪತ್‌ರಾವ್ ಶಿಂಧೆಯವರ 'ವಿಜಯಿಮರಾಠ'

ಈ ಅವಧಿಯಲ್ಲಿ ಬ್ರಾಹ್ಮಣೇತರರ ಚಳುವಳಿಗೆ ತತ್ವನಿಷ್ಠ ಮತ್ತು ನಿರ್ಭೀತ ಪತ್ರಿಕಾಕರ್ತರಾದ ಶ್ರೀಪತ್‌ರಾವ್ ಶಿಂಧೆಯವರ ಸೇವೆಗಳನ್ನು ಪಡೆಯುವ ಅದೃಷ್ಟ ಸಿಕ್ಕಿತು. ಕೊಲ್ಹಾಪುರದ ಸತ್ಯಶೋಧಕ ಸಮಾಜದ ನಿಷ್ಠಾವಂತ ಕಾರ್ಯಕರ್ತರಾದ ಅವರು ಶಾಹುರವರ ಆಶ್ರಯದಲ್ಲಿ ಬೆಳೆದು ಅವರು ಬ್ರಾಹ್ಮಣೇತರರ ಬಗ್ಗೆಯಿದ್ದ ತಮ್ಮ ಕಾಳಜಿಯಿಂದ ಒಂದು ಪತ್ರಿಕೆಯನ್ನು ಪ್ರಾರಂಭಿಸಲು ನಿರ್ಧರಿಸಿದರು ಮತ್ತು ಅವರು ಪೋಲಿಸ್ ಸಬ್-ಇನ್‌ಸ್ಪೆಕ್ಟರ್ ಹುದ್ದೆಗೆ ರಾಜೀನಾಮೆ ನೀಡಿ ತಮ್ಮ ಇಚ್ಛೆಯಂತೆ ಪತ್ರಿಕೋದ್ಯಮದ ಅಪಾಯಕಾರಿ ನೀರಿನಲ್ಲಿ ಈಜಲು ಧುಮುಕಿದರು. ಕುಟುಂಬಸ್ಥನಾದ ಶ್ರೀಪತ್‌ರಾವ್ ಶಿಂಧೆಯಂಥವರು ಉತ್ತಮ ಹುದ್ದೆಯನ್ನು ಬಿಟ್ಟು ಅಪಾಯಕಾರಿಯಾದ ಪತ್ರಿಕೋದ್ಯಮಕ್ಕೆ ಇಳಿಯುವುದನ್ನು ಶಾಹುರವರು ವಿರೋಧಿಸಿದ್ದರು. ಶಿಂಧೆಯವರು ಶಾಹುರವರ ಆಶೀರ್ವಾದವನ್ನು ಪಡೆಯಲು ಹೋದಾಗ ಶಾಹುರವರು ಗುಡುಗಿದರು: "ಶ್ರೀಪತ್‌ರಾವ್ ಅವರೆ, ಒಳ್ಳೆಯ ಹುದ್ದೆಯನ್ನು ಬಿಟ್ಟುಬಿಡುವ ಅಪಾಯಕಾರಿಯಾದ ವಿಷಯ ಹಾಗೂ ಪತ್ರಿಕೆಯನ್ನು ಸ್ಥಾಪಿಸುವ ವಿಷಯ ನಿಮ್ಮ ತಲೆಗೆ ಹೇಗೆ ಬಂತು? ಪತ್ರಿಕೆ ಪ್ರಾರಂಭಿಸುವುದಕ್ಕೆ ನಾನು ಸಹಾಯಮಾಡುವೆನು ಎಂಬ ಭ್ರಮೆಯಲ್ಲಿ ನೀವಿದ್ದೀರಿ! ನಾನು ನಿಮಗೆ ಒಂದು ಬಿಡಿಕಾಸನ್ನು ಸಹಾಯ ಮಾಡುವುದಿಲ್ಲ. ನೀವು ಕೂಡಲೆ ಇಂದಾಪುರಕ್ಕೆ ಹೋಗಿ (ಅವರಿದ್ದ ಹುದ್ದೆಯ ಊರು) ಮತ್ತು ರಾಜೀನಾಮೆಯನ್ನು ಮರೆತುಬಿಡಿ".[11] ಶ್ರೀಪತ್‌ರಾವ್ ಅವರ ಕುಟುಂಬ ಸಂಕಟಪಡಬಾರದೆಂಬ ಕಾಳಜಿಯಿಂದ ಈ ಮಾತುಗಳು ಶಾಹುರವರ ಬಾಯಿಂದ ಹೊರಬಂದವು. ಆದರೆ ಶ್ರೀಪತ್‌ರಾವ್ ಅವರು ತಮ್ಮ ದೃಢನಿರ್ಧಾರದಿಂದ ಉರಿಯುತ್ತಿದ್ದರು. ಅವರು ಶಾಹುರವರ ಬೆದರಿಕೆ ಮತ್ತು ಸಲಹೆಯನ್ನು ಕಡೆಗಣಿಸಿದರು ಮತ್ತು ಅಗತ್ಯವಿರುವ ಹಣವನ್ನು ಶ್ರೀಪತ್‌ರಾವ್ ಅವರು ದೇಣಿಗೆ ಮತ್ತು ಸಾಲಗಳ ಮೂಲಕ ಎತ್ತಿದರು. ಪುಣೆಯ ಜೇಧೆ ಸಹೋದರರು ಮುಂದೆ ಬಂದು ಅವರಿಗೆ ಸಹಾಯಮಾಡಿದರು. ಡಿಸೆಂಬರ್ ೧, ೧೯೧೯ರಲ್ಲಿ ಶ್ರೀಪತ್‌ರಾವ್ ಅವರು ತಮ್ಮ ಪತ್ರಿಕೆ 'ವಿಜಯಿಮರಾಠ'ದ ಮೊದಲ ಸಂಚಿಕೆಯನ್ನು ಪುಣೆಯಲ್ಲಿ ಪ್ರಕಟಿಸಿದರು. ಶಾಹುರವರು ಹೃದಯಪೂರ್ವಕವಾಗಿ ಯುವಕ ಶ್ರೀಪತ್‌ರಾವ್ ಅವರ ದೃಢಸಂಕಲ್ಪವನ್ನು ಮೆಚ್ಚಿಕೊಂಡರು. 'ವಿಜಯಿಮರಾಠ' ಪುಣೆಯ ಬ್ರಾಹ್ಮಣರ ಹಾವಳಿಯಲ್ಲಿ ಸದೃಢವಾಗಿ ನಿಂತಿದ್ದನ್ನು ಕಂಡ ಶಾಹುರವರು ಶ್ರೀಪತ್‌ರಾವ್ ಅವರನ್ನು ಕರೆದು ಅಭಿನಂದಿಸಿದರು ಮತ್ತು ಅವರ ಪತ್ರಿಕೆಗೆ ಹಣಕಾಸಿನ ನೆರವು ನೀಡಲು ಪ್ರಾರಂಭಿಸಿದರು.[12]

'ವಿಜಯಿಮರಾಠ' ಬೆಳೆದ ಕಾಲ ತಿಲಕರ ರಾಜಕೀಯ ಪ್ರಯಾಣದ ಉನ್ನತ ಅವಧಿಯಲ್ಲಿತ್ತು. ಅವರ ಹೆಸರು ದೇಶದಲ್ಲೆಲ್ಲ ಬಿಸಿಬಿಸಿಯಾಗಿತ್ತು. ಅವರ ರಾಷ್ಟ್ರೀಯ ಚಳುವಳಿಯ ಬಿಡುವಿಲ್ಲದ ಕೆಲಸವು ಅವರ ಸುತ್ತ ಒಂದು ಪ್ರಭಾವಳಿಯಾಗಿ ಆವರಿಸಿತ್ತು. ಈ ಸ್ಥಿತಿಯಲ್ಲಿ ರಾವ್ ಅವರು ತಿಲಕರ ಮುಂದೆ ಸವಾಲು ಎಸೆಯುವ ಕೆಚ್ಚೆದೆಯಿತ್ತು ಮತ್ತು ಅವರ 'ಕೇಸರಿ'ಯು ಬ್ರಾಹ್ಮಣಿಕೆಯ ದುಷ್ಟಕೂಟಕ್ಕೆ ಸೇರಿತ್ತು.

ಅವರು ತಮ್ಮ ಪತ್ರಿಕೆಯನ್ನು ಸತ್ಯಶೋಧಕ ಸಮಾಜದ ಆಂದೋಲನ ಮತ್ತು ಬ್ರಾಹ್ಮಣೇತರರ ಪಕ್ಷದ ಮುಖವಾಣಿಯನ್ನಾಗಿ ಮಾಡಿದ್ದರು. ಅವರು ಬ್ರಾಹ್ಮಣೇತರರ ಜನರಲ್ಲಿ ಹಲವಾರು ಸಾಮಾಜಿಕ ಮತ್ತು ರಾಜಕೀಯ ವಿಷಯಗಳ ಬಗ್ಗೆ ಸಾಮಾಜಿಕ ಜಾಗೃತಿಯನ್ನು ಮೂಡಿಸಿದರು ಮತ್ತು ಸಾಮಾಜಿಕ ಸುಧಾರಕರ ಪಾತ್ರವನ್ನು ನಿಭಾಯಿಸಿದರು. ಮರಾಠಿ ವೃತ್ತಪತ್ರಾಂಚ ಇತಿಹಾಸ (ಮರಾಠಿ ಪತ್ರಿಕೆಗಳ ಇತಿಹಾಸ) ಎಂಬ ಪುಸ್ತಕದ ಲೇಖಕರು ಶ್ರೀಪತ್‌ರಾವ್ ಅವರ ಕೃತಿಯನ್ನು ಮೌಲ್ಯಮಾಪನ ಮಾಡುತ್ತಾ ಹೇಳುತ್ತಾರೆ: "ಶ್ರೀಪತ್‌ರಾವ್ ಶಿಂಧೆಯವರ ಮಾತುಗಾರಿಕೆ ಪ್ರಬಲವಾಗಿತ್ತು. ಆದರೆ ಅದು ಅವರ ಲೇಖನಿಗಿಂತ ಕಡಿಮೆ ಪ್ರಭಾವಶಾಲಿಯಾಗಿರಲಿಲ್ಲ. ಅವರ ಬರವಣಿಗೆಗಳು ಸರಳ ಭಾಷೆಯಲ್ಲಿದ್ದವು. ಅವರ ಶೈಲಿಯು ಅರ್ಥವಾಗುತ್ತಿತ್ತು ಮತ್ತು ಎಲ್ಲ ಓದುಗರು ಮೆಚ್ಚಿಕೊಳ್ಳುತ್ತಿದ್ದರು. ಅದರಲ್ಲಿ ವಿದ್ವತ್ತಿನ ಕೊರತೆಯಿದ್ದರೂ ಅದು ಪ್ರಾಯೋಗಿಕ ಮನೋಭಾವವನ್ನು ಹೊಂದಿತ್ತು ಮತ್ತು ತುಂಬ ಕಳಕಳಿಯಿತ್ತು. ಆದರೆ ತತ್ವಗಳ ಬಗ್ಗೆ ಇದ್ದ ಅವರ ನಿಷ್ಠೆ ತುಂಬ ಶಕ್ತಿಯುತವಾಗಿತ್ತು. ಆದ್ದರಿಂದ ಅವರ ಬರವಣಿಗೆಗಳು ಭಾರೀ ಉತ್ಸಾಹಭರಿತವಾಗಿದ್ದವು. ಶ್ರೀಪತ್‌ರಾವ್ ಅವರು ತಿಲಕರಂತಹ ದಿಗ್ಗಜ ನಾಯಕರೊಡನೆ ಸಮಾನತೆ ಮತ್ತು ಸಾಮಾಜಿಕ ಸುಧಾರಣೆಗಳ ವಿಷಯಗಳ ಕುರಿತು ವಾಗ್ವಾದ ನಡೆಸಿದ್ದರು. ಅಂತರ್‌ಜಾತಿಯ ವಿವಾಹ, ಮಹಿಳೆಯರ ಶಿಕ್ಷಣ, ಜ್ಯೋತಿ ಬಾ (ಫುಲೆ) ಯವರ ಪ್ರತಿಮೆ ಮೊದಲಾದ ವಿಷಯಗಳ ಬಗ್ಗೆ ಅವರ ನಿಲುವು ಸಕಾರಣವಾಗಿದ್ದವು. ಕೇಸರಿಯವರ ನಿಲುವು ಸರಿಯಾಗಿರಲಿಲ್ಲ. ಶ್ರೀಪತ್‌ರಾವ್ ಅವರು ಜನತೆಯ ಹಿತಾಸಕ್ತಿಗಳ ಗುಂಗಿನಲ್ಲಿದ್ದ ತತ್ವನಿಷ್ಠ ಸಂಪಾದಕರಾಗಿದ್ದರು ಮತ್ತು ಕೊನೆಯವರೆಗೆ ಹೋರಾಡುತ್ತಿದ್ದರು. ಮರಾಠ ಪತ್ರಿಕೋದ್ಯಮದಲ್ಲಿನ ಇತಿಹಾಸದಲ್ಲಿ 'ವಿಜಯಿಮರಾಠ' ಪತ್ರಿಕೆ ಮತ್ತು ಸಂಪಾದಕ ಶ್ರೀಪತ್‌ರಾವ್ ಶಿಂಧೆಯವರ ಪತ್ರಿಕೆ ಕೊಡುಗೆ ಮರೆಯಲಾರದ್ದು ಮತ್ತು ಈ ಕ್ಷೇತ್ರದಲ್ಲಿ ವಿಭಿನ್ನ ಮಾರ್ಗವನ್ನು ನಿದರ್ಶಿಸುತ್ತದೆ'.[13] ಶ್ರೀಪತ್‌ರಾವ್ ಸಾಧನೆಯು ಶಾಹುರವರು ಎರಡು ದಶಕಗಳಲ್ಲಿ ಸಾಮಾನ್ಯ ಜನತೆಯ ವಿಮೋಚನೆಗೆ ಕೈಗೊಂಡ ಪ್ರಯತ್ನಗಳ ಸಿಹಿಯಾದ ಫಲವಾಗಿದೆ. ಶ್ರೀಪತ್‌ರಾವ್ ಅವರು ಮಹಾತ್ಮ ಫುಲೆಯವರ ಮತ್ತು ಶಾಹುರವರ ಚಿಂತನೆಗಳನ್ನು ಪ್ರಸಾರಮಾಡುವ ಮಹಾಕೆಲಸವನ್ನು ಬ್ರಾಹ್ಮಣೇತರ ಜನರಲ್ಲಿ ಮಾಡಿದರು.

## ಮುಕುಂದರಾವ್ ಅವರ 'ದಿನಮಿತ್ರ'

ಸತ್ಯಶೋಧಕ ಆಂದೋಲನದ ಸಕ್ರಿಯ ಕಾರ್ಯಕರ್ತ ಮತ್ತು ಪ್ರತಿಪಾದಕ ಮುಕುಂದರಾವ್ ಪಾಟೀಲರ 'ದಿನಮಿತ್ರ' ಪತ್ರಿಕೆಗೆ ಶಾಹುರವರು ಅಂಥದ್ದೇ ಬೆಂಬಲವನ್ನು ನೀಡಿದರು. ಮಹಾತ್ಮ ಫುಲೆಯವರ ಸಹವರ್ತಿಯಾದ ಮತ್ತು ತಮ್ಮ ಖಾಸಾ ತಂದೆಯಾದ ಕೃಷ್ಣಜಿ ಪಾಂಡುರಂಗ ಭಾಲೇಕರ್ ಅವರಿಂದ ಮುಕುಂದರಾವ್ ಮತ್ತು ಅವರ ಸತ್ಯಶೋಧಕದ ಪತ್ರಿಕೆ 'ದೀನಬಂಧು' ಆಶೀರ್ವಾದವನ್ನು ಪಡೆದರು. ಆದರೆ ಮುಕುಂದರಾವ್ ಅವರು ತಮ್ಮ ಪತ್ರಿಕೆ 'ದಿನಮಿತ್ರ'ವನ್ನು ಅಹಮದ್‌ನಗರ ಜಿಲ್ಲೆಯ ಒಂದು ಚಿಕ್ಕಹಳ್ಳಿ ಸೋಮಠಾಣೆಯಲ್ಲಿ ಕಷ್ಟದ ಪರಿಸ್ಥಿತಿಗಳಲ್ಲಿ ಪ್ರಕಟಿಸಲು ಒಪ್ಪಿದರು. ಮುಕುಂದರಾವ್ ಅವರು ಕರ್ಮಠ ಬ್ರಾಹ್ಮಣರು ರೂಪಿಸಿದ ಹಲವಾರು ಗುಪ್ತ ಸಂಚುಗಳನ್ನು ಮತ್ತು ಬ್ರಾಹ್ಮಣ ಆಡಳಿತಶಾಹಿಯನ್ನು ಎದುರಿಸಬೇಕಾಯಿತು. ೧೯೧೦ರಿಂದ ಅವರು ಏಕಾಂಗಿ ಯೋಧನಾಗಿ 'ದಿನಮಿತ್ರ'ದ ಕೋಟೆಯಿಂದ ಸಾಲಗಾರರ ಕೋಟಲೆ, ಮುಟ್ಟುಗೋಲು ಹಾಕಿಕೊಳ್ಳುವ ಸರಕಾರಿ ವಾರೆಂಟುಗಳು ಮತ್ತು ತಮ್ಮ ಶತ್ರುಗಳ ಭಯೋತ್ಪಾದಕ ಚಟುವಟಿಕೆಗಳನ್ನು ಎದುರಿಸುತ್ತಿದ್ದರು. ೧೯೨೦ರಲ್ಲಿ ತಮ್ಮ ಭದ್ರಕೋಟೆಯ ತೀರಾ ಸಮೀಪದ ನಾಶದ ಪರಿಸ್ಥಿತಿಗಳನ್ನು ಎದುರಿಸಬೇಕಾಯಿತು. ಇಂಥ ಸಂದಿಗ್ಧ ಸ್ಥಿತಿಯಲ್ಲಿ ಶಾಹುರವರು

ಸಹಾಯಕ್ಕೆ ಬಂದರು. ಅವರ ಸಹಾಯ 'ದಿನಮಿತ್ರ'ನಿಗೆ ಹೊಸ ಪ್ರಾಣ ನೀಡಿತು. ಅದೇ ಅಹಮದನಗರ ಜಿಲ್ಲೆಯಲ್ಲಿ ಸೋಮಠಾಣೆಯಿಂದ ಪತ್ರಿಕೆಯನ್ನು ತಾರವಾಡೆ ಹಳ್ಳಿಗೆ ಬದಲಾಯಿಸಲಾಯಿತು.[14] ಈ ಬಗ್ಗೆ ೧೯೨೨ರಲ್ಲಿ 'ವಿಜಯಿಮರಾಠ' ಮಾಡಿದ ವ್ಯಾಖ್ಯಾನ ಗಮನಿಸಲು ಯೋಗ್ಯವಾಗಿದೆ: "'ದಿನಮಿತ್ರ' ಪತ್ರಿಕೆಯ ಮುದ್ರಣ ಶಾಲೆಯನ್ನು ಅಡವಿಟ್ಟಾಗ ಮತ್ತು 'ದಿನಮಿತ್ರ' ಸಾಯುವ ಸ್ಥಿತಿಯಲ್ಲಿರುವಾಗ, ಬಾಬುರಾವ್ ಯಾದವ ಅವರು ಶಾಹುಮಹಾರಾಜರಿಂದ ಬೇಕಾಗಿದ್ದ ಹಣವನ್ನು ಒದಗಿಸಿಕೊಟ್ಟರು ಮತ್ತು ಅದನ್ನು ಸೋಮಠಾಣೆಯ ಮರಳುದಿಣ್ಣೆಗಳ ಮೇಲೆ ನೆಲೆಸಿದ್ದ ಪತ್ರಿಕೆಯನ್ನು ಬದಲಾಯಿಸಿ ತಾವರೆವಾಡೆಯ ಕಲ್ಲುಬಂಡೆಗಳ ಮೇಲೆ ನೆಲೆಸುವಂತೆ ಮಾಡಲಾಯಿತು".[15]

ಸಂದಿಗ್ಧ ಸ್ಥಿತಿಯಲ್ಲಿ ಶಾಹುರವರು ನೀಡಿದ ಆರ್ಥಿಕ ನೆರವಿಗೆ ಮುಕುಂದರಾವ್ ಅವರು ತುಂಬ ಋಣಿಯಾಗಿದ್ದರು. ಅದರೆ ಅವರು ಏರುತ್ತಿದ್ದ ಸಾಲಬಾಧೆಗಳ ಒತ್ತಡದಲ್ಲಿಯು ತಮ್ಮ ತತ್ವಗಳನ್ನು ಬಿಡಲಿಲ್ಲ. ಕಟ್ಟಾ ಪತ್ರಿಕೋದ್ಯಮಿಯಾದ ನಿಷ್ಠಾವಂತ ತನ್ನ ತತ್ವಗಳನ್ನು ಭದ್ರವಾಗಿ ನಂಬಿದ್ದರು. ಆದ್ದರಿಂದ ಮಹಾರಾಜರು ಸಾರ್ವಜನಿಕವಾಗಿ ತಾನು ಸತ್ಯಶೋಧಕನಲ್ಲ ಎಂದು ಘೋಷಿಸಿದಾಗ ಮತ್ತು ನಂತರ 'ಕ್ಷಾತ್ರ ಜಗದ್ಗುರು' ಪೀಠವನ್ನು ಸ್ಥಾಪಿಸಿದಾಗ ತತ್ವನಿಷ್ಠ ಪತ್ರಿಕಾಕರ್ತನು ಮುಕುಂದರಾವ್‌ರಲ್ಲಿ ಸಕ್ರಿಯನಾಗಿ ತನ್ನ ಲೇಖನಿ ಅಲ್ಲಾಡದೆ, ಶಾಹುರವರನ್ನು ಕಟುವಾಗಿ ಟೀಕೆ ಮಾಡಿದರು. ಅವರು ಬ್ರಾಹ್ಮಣವರ್ಗವನ್ನು ತಮ್ಮ ತೀಕ್ಷ್ಣ ಬರವಣಿಗೆಗಳಿಂದ ದಾಳಿಮಾಡಿದರು. ಆದರೆ ಮರಾಠ ಸರದಾರರ ಹುಚ್ಚಾಟಗಳನ್ನು ಆಗಾಗ ಟೀಕಿಸದೆ ಬಿಟ್ಟುಬಿಡುತ್ತಿದ್ದರು. ಅವರು ಸಹ ಅವರ ಲೇಖನಿಯ ದಾಳಿಯನ್ನು ಸಹಿಸಿಕೊಳ್ಳಬೇಕಾಗುತ್ತಿತ್ತು. ಅವರ ಸರಿಯಾದ ಪತ್ರಿಕೋದ್ಯಮವನ್ನು ಗೌರವಿಸುತ್ತಾ 'ಪ್ರಾರ್ಥನಾ ಸಮಾಜದ ಸುಬೋಧ' ಹೀಗೆ ಹೇಳಿತ್ತು: "...ಒಂದು ಹಳ್ಳಿಯಿಂದ ಸಕಾಲದಲ್ಲಿ ಪತ್ರಿಕೆಯನ್ನು ಹೊರತರುವುದು, ಕೆಲಸ-ಕಾರ್ಯಗಳನ್ನು ಮಾಡುವ ಸಿಬ್ಬಂದಿಯನ್ನು ಕಟ್ಟುವುದು ಮತ್ತು ಹುಡುಗಾಟಿಕೆಯ ವಿಷಯಗಳನ್ನು ತುಂಬದೆ ಪತ್ರಿಕೆಯ ಸ್ವರೂಪವನ್ನು ಕಾಪಾಡುವುದು ಸುಲಭದ ಕೆಲಸವಲ್ಲ. ಸ್ಥಳೀಯ ಅಧಿಕಾರಿಗಳ ಪೋಷಿತನಾಗುವ ವಿಚಾರವನ್ನು ಹಳ್ಳಿಯ ಮುಕುಂದರಾವ್ ಅವರನ್ನು ತಟ್ಟಲಿಲ್ಲ. ಅವರು ಎಂದಿಗೂ ತಮ್ಮ ಚಿಂತನೆಯ ಸ್ವಾತಂತ್ರ್ಯವನ್ನು ಮಾರಿಕೊಳ್ಳಲಿಲ್ಲ. ಮತ್ತು ತಮ್ಮ ಹತ್ತಿರದ ಜನರ ವಿರುದ್ಧ ಸತ್ಯಪರವಶವಾಗಿ ತಮ್ಮ ಲೇಖನಿಯನ್ನು ಬಳಸಿದರು".[16]

ಮುಕುಂದರಾವ್ ಅವರು ಹೆಚ್ಚು ವಿದ್ಯೆಪಡೆದ ವಿದ್ವಾಂಸರಲ್ಲ. ವಾಸ್ತವಿಕವಾಗಿ, ಅವರ ಔಪಚಾರಿಕ ಶಿಕ್ಷಣ ಪ್ರಾಥಮಿಕ ಶಿಕ್ಷಣದ ಎರಡನೇ ತರಗತಿ ಮೀರಿಲ್ಲ. ಆದರೆ ಅವರು ಅಪರೂಪದ ಸಾಹಿತ್ಯಕ ಪ್ರತಿಭಾವಂತರು. ಸಾರ್ವಜನಿಕ ಒಳಿತಿಗಾಗಿ ಹಂಬಲಿಸುವ ಮತ್ತು ಅನ್ಯಾಯದ ವಿರುದ್ಧ ಹೋರಾಟ ಮಾಡುವ ಗುಣಗಳನ್ನು ಹುಟ್ಟುಗುಣಗಳಾಗಿ ಪಡೆದಿದ್ದರು. ತಿಲಕ ಪಂಥದ ಮಹಾಪ್ರತಿಪಾದಕರಾದ ಸಾಹಿತ್ಯ ಸಾಮ್ರಾಟ ಸಿ. ಕೆ. ಕೇಲ್ಕರ್ ಅವರು ಮುಕುಂದರಾವ್ ಅವರ 'ಕುಲಕರ್ಣಿಯವರ ಲೀಲಾಮೃತ' ಕೃತಿಯನ್ನು ಓದಿದ ಕೂಡಲೇ ಕ್ರುದ್ಧರಾಗಿಬಿಟ್ಟರು. ಮುಕುಂದರಾವ್ ಅವರ ಬರವಣಿಗೆಗಳ ಸಾಹಿತ್ಯಕ ಗುಣಗಳಿಗೆ ಸಂಬಂಧಿಸಿದಂತೆ ಕೇಲ್ಕರ್ ಅವರು ಮೆಚ್ಚಿರಲಿಲ್ಲ. ಆದರೆ ಅವರ ಬಗ್ಗೆ ಹೆಚ್ಚು ಮೆಚ್ಚುಗೆಯಿತ್ತು.

ಅಹಮದನಗರದಲ್ಲಿದ್ದ ಮುಕುಂದರಾವ್ ಅವರಿಗೆ ಸಹಾಯ ಮಾಡುತ್ತಿರುವಾಗಲೇ ಶಾಹುರವರು ಏಕಕಾಲದಲ್ಲಿ ಶಾಮರಾವ್ ಭೋಂಸ್ಲೆ ಮತ್ತು ಮಹಾರಾಷ್ಟ್ರದ ದಕ್ಷಿಣದ ತುದಿಯಲ್ಲಿರುವ ಬೆಳಗಾವಿಯ ಶಾಮರಾವ್ ದೇಸಾಯಿ ಎಂಬ ಇಬ್ಬರು ಯುವಕರಿಗೆ ಸತ್ಯಶೋಧಕ ತತ್ವಗಳನ್ನು ಪ್ರಚಾರಮಾಡುವ ಸಲುವಾಗಿ ಪತ್ರಿಕೆಗಳನ್ನು ತೆರೆಯಲು ಸಹಾಯಮಾಡಿದರು. ಶಾಹುರವರ ಪ್ರೋತ್ಸಾಹದಿಂದ ಈ ಇಬ್ಬರು

ಯುವಕರು 'ರಾಷ್ಟ್ರವೀರ' ಎಂಬ ಪತ್ರಿಕೆಯನ್ನು ಮೇ ೧೯೨೧ರಂದು ಪ್ರಾರಂಭ ಮಾಡಿದರು. ಮಹಾರಾಷ್ಟ್ರದಲ್ಲಿ ಬೆಳಗಾಂ ಸಾಮಾಜಿಕ ಜಾಗೃತಿಗೆ ಮುಖ್ಯ ಕೇಂದ್ರವಾಗಿ ನಿಂತಿತ್ತು. ಬೆಳಗಾವಿಯಲ್ಲಿ ಸತ್ಯಶೋಧಕದ ಆಂದೋಲನವನ್ನು ಬಲಪಡಿಸುವ ಮತ್ತು ಜನರಲ್ಲಿ ಪ್ರಜ್ಞೆ ಮೂಡಿಸುವ ಕೆಲಸದಲ್ಲಿ 'ರಾಷ್ಟ್ರವೀರ' ಚೆನ್ನಾಗಿ ನಿರ್ವಹಿಸಿತು. ಶಾಮರಾವ್ ದೇಸಾಯಿ ಅವರು ಬಹಳ ದಿನಗಳವರೆಗೆ 'ರಾಷ್ಟ್ರವೀರ'ದ ಸಂಪಾದಕತ್ವದ ಹೊಣೆಗಾರಿಗೆಯನ್ನು ಬಹಳ ಸಮರ್ಥವಾಗಿ ನಿರ್ವಹಿಸಿದರು. ತಮ್ಮ ಇಡೀ ಜೀವಮಾನವನ್ನು ಬ್ರಾಹ್ಮಣೇತರ ಪತ್ರಿಕೋದ್ಯಮಿಗಳಲ್ಲಿ ಸಾಮಾಜಿಕ ಜಾಗೃತಿಗಾಗಿ ಜೀವತೇಯ್ದ ತತ್ವನಿಷ್ಠರಲ್ಲಿ ಆಯ್ಕೆಗೊಂಡವರಲ್ಲಿ ಇವರೊಬ್ಬರು 'ರಾಷ್ಟ್ರವೀರ' ಮಾಧ್ಯಮದ ಮೂಲಕ ಮೂರು ದಶಕಗಳಿಗಿಂತಲು ಹೆಚ್ಚು ಕಾಲ ದಕ್ಷಿಣ ಮಹಾರಾಷ್ಟ್ರದಲ್ಲಿ ಫುಲೆ ಮತ್ತು ಶಾಹುರವರ ವಿಚಾರಗಳನ್ನು ಪ್ರಚಾರ ಮಾಡಿದರು.

## ಮೂಕನಾಯಕ, ಡೆಕ್ಕನ್ ರಾಯತ್ ಮೊದಲಾದವುಗಳು

ಈ ಅವಧಿಯಲ್ಲಿ ಮರಾಠಿ ಪತ್ರಿಕೋದ್ಯಮದಲ್ಲಿ ಒಂದು ಮುಖ್ಯಘಟನೆ ನಡೆಯಿತು. ಹಿಂದುಳಿದ ವರ್ಗಗಳ ಹಕ್ಕುಗಳಿಗೆ ಹೋರಾಡಿದ 'ಮೂಕನಾಯಕ' ಪತ್ರಿಕೆಯನ್ನು ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರ ಮಾರ್ಗದರ್ಶನದಲ್ಲಿ ಪ್ರಾರಂಭಿಸಲಾಯಿತು. ಅದಕ್ಕೆ ಮೊದಲು ೧೯೧೯ರಲ್ಲಿ ಶಾಹು ಮತ್ತು ಅಂಬೇಡ್ಕರರ ನಡುವೆ ಒಂದು ಸಭೆ ನಡೆಯಿತು. ಅಸ್ಪೃಶ್ಯರಲ್ಲಿ ಅತಿ ಹೆಚ್ಚು ವಿದ್ಯಾಭ್ಯಾಸ ಪಡೆದ ನಾಯಕನು ಹೊರಮೂಡುತ್ತಿದ್ದ ಬಗ್ಗೆ ಶಾಹು ಬಹಳ ಸಂತೋಷಪಟ್ಟರು ಮತ್ತು ಬಾಬಾಸಾಹೇಬರು ಮತ್ತು ಅವರ ಸಹವರ್ತಿಗಳು ಅಸ್ಪೃಶ್ಯ ಸಮುದಾಯದ ಏಳಿಗೆಗಾಗಿಯೇ ಸಂಪೂರ್ಣವಾಗಿ ಮೀಸಲಿಟ್ಟ ಒಂದು ಪತ್ರಿಕೆಯನ್ನು ಪ್ರಾರಂಭಿಸುವ ಪ್ರಸ್ತಾವನೆಯನ್ನು ಶಾಹುರವರ ಮುಂದೆಯಿಟ್ಟಾಗ ಅವರಿಗೆ ಶಾಹುರವರು ೨,೫೦೦ ರೂ.ಗಳನ್ನು ಒದಗಿಸಿಕೊಟ್ಟರು. ಇದರಿಂದ ಪ್ರೋತ್ಸಾಹಗೊಂಡ ಡಾ. ಅಂಬೇಡ್ಕರರು ಜನವರಿ ೩೧, ೧೯೨೦ರಂದು 'ಮೂಕನಾಯಕ'ದ ಮೊದಲ ಸಂಚಿಕೆಯನ್ನು ಪ್ರಕಟಿಸಿದರು. 'ಮೂಕನಾಯಕ' ಪತ್ರಿಕೆಯು ಮೇಲುಜಾತಿಗಳ ದಮನದ ವಿರುದ್ಧ ಹಲವಾರು ಶತಮಾನಗಳವರೆಗೆ ಮೂಕರಾಗಿದ್ದ ಅಸ್ಪೃಶ್ಯರ ನೋವುಗಳ ದನಿಯಾಗಲು ಮತ್ತು ಅವರನ್ನು ಮುನ್ನಡೆಸುವುದು 'ಮೂಕನಾಯಕ'ದ ಉದ್ದೇಶವಾಗಿತ್ತು. ಮೊದಲ ಸಂಚಿಕೆಯಲ್ಲಿ ಡಾ. ಅಂಬೇಡ್ಕರರು ಹೀಗೆ ಬರೆದಿದ್ದರು: "........ನಮ್ಮ ಬಹಿಷ್ಕೃತ ಜನರು ಅನುಭವಿಸುತ್ತಿರುವ ಅನ್ಯಾಯಗಳ ವಿರುದ್ಧ ಕ್ರಮಗಳನ್ನು ಕೈಗೊಳ್ಳಲು ಬೇರೆ ಕ್ರಮಗಳಿಲ್ಲದೆ ಪತ್ರಿಕೆಯೊಂದು ಸಾಧನವಾಗಿದೆ ಮತ್ತು ಅವರು ಮುಂದೆಯು ಬಾಧೆಪಡುವರು ಮತ್ತು ಅವರ ಏಳಿಗೆಯನ್ನು ಚರ್ಚಿಸಲು ಮತ್ತು ಅದನ್ನು ಸಾಧಿಸಲು ....... ಬಹಿಷ್ಕೃತ ಸಮುದಾಯ ಎದುರಿಸುತ್ತಿರುವ ಸಮಸ್ಯೆಗಳನ್ನು ನಿಯತವಾಗಿ 'ದಿನಮಿತ್ರ', 'ಜಾಗರೂಕ', ಡೆಕ್ಕನ್ ರಾಯತ್', ವಿಜಯಿ ಮರಾಠ', ಜ್ಞಾನಪ್ರಕಾಶ', 'ಸುಬೋಧ ಪತ್ರಿಕಾ' ಮೊದಲಾದವುಗಳಲ್ಲಿ ಚರ್ಚಿಸಲಾಗಿದೆ. ಆದರೆ ಬ್ರಾಹ್ಮಣೇತರರ ಜಾತಿಗಳ ವಿಶಾಲವಾದ ಛತ್ರದಡಿಯಲ್ಲಿ ಜಾತಿಗಳ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಆದರೆ ಬಹಿಷ್ಕೃತ ಜಾತಿಗಳ ಸಮಸ್ಯೆಗಳನ್ನು ವಿವರವಾಗಿ ಚರ್ಚಿಸಲು ಸ್ಥಳ ಸಿಗುವುದು ಕಷ್ಟದ ವಿಷಯವಾಗಿದೆ. ಅವರು ಅತಿವಿಶಿಷ್ಟವಾದ ಪರಿಸ್ಥಿತಿಗಳನ್ನು ಮತ್ತು ಸಂಬಂಧಪಟ್ಟ ಸಮಸ್ಯೆಗಳ ಬಗ್ಗೆ ಚರ್ಚಿಸಲು ಪ್ರತ್ಯೇಕವಾದ ಪತ್ರಿಕೆ ಅತ್ಯವಶ್ಯಕ ಎಂಬುದನ್ನು ಯಾರಾದರೂ ಒಪ್ಪುವರು. ಈ ಅಂತರ (ಶೂನ್ಯ)ವನ್ನು ತುಂಬಲು ಈ ಪತ್ರಿಕೆ ಹುಟ್ಟಿಕೊಂಡಿದೆ. ಆದರೆ ಡಾ. ಅಂಬೇಡ್ಕರ್ ಅವರು ತಮ್ಮ ಉನ್ನತ ವಿದ್ಯಾಭ್ಯಾಸವನ್ನು ಪೂರೈಸಲು ಬೇಗನೆ ಇಂಗ್ಲೆಂಡಿಗೆ ಹೊರಡಬೇಕಾಗಿದೆ. ಅವರ ಮಾರ್ಗದರ್ಶನವಿಲ್ಲದಿದ್ದರೆ 'ಮೂಕನಾಯಕ' ಬಹಳ ಕಾಲದವರೆಗೆ ಬದುಕುಳಿಯಲಾರದು.

ಬ್ರಾಹ್ಮಣೇತರರ ಪಕ್ಷದ ನಾಯಕರು ತಮ್ಮ ನಿಲುವನ್ನು ಶಿಕ್ಷಿತ ಸಮಾಜದ ಮತ್ತು ಸರಕಾರದ ಮುಂದಿಡಲು ೧೯೧೮ರಲ್ಲಿ 'ಡೆಕ್ಕನ್ ರಾಯತ್' ಎಂಬ ಇಂಗ್ಲಿಷ್ ಪತ್ರಿಕೆಯನ್ನು ಪ್ರಾರಂಭಿಸಿದರು. ಅದರ ನಿರ್ದೇಶಕರ ಮಂಡಳಿಯಲ್ಲಿ ಲಠ್ಠೆ ಮತ್ತು ಕೊಠಾರಿ ಅವರಿದ್ದರು. ಅವರು ಆಂದೋಲನದಲ್ಲಿ ಸಕ್ರಿಯ ರಾಗಿದ್ದರು. ಡೆಕ್ಕನ್ ರಾಯತ್ ಶಾಹುರವರಿಂದ ನೆರವನ್ನು ಪಡೆಯುವುದು. ಆದರೆ ಅದನ್ನು ನಡೆಸಲು ಸಮಸ್ಯೆಯಾದ್ದರಿಂದ ಅದನ್ನು ಮುಚ್ಚಲು ೧೯೨೦ರಲ್ಲಿ ನಿರ್ಧರಿಸಿದರು. ಶಾಹುರವರಿಗೆ ಜೂನ್ ೨೦, ೧೯೨೦ರಲ್ಲಿ ಬರೆದ ಪತ್ರದಲ್ಲಿ ಲಠ್ಠೆ ಬರೆಯುತ್ತಾರೆ: "......'ಡೆಕ್ಕನ್‌ರಾಯತ್' ಮುಚ್ಚಿದ್ದರಿಂದ ಇಂಗ್ಲಿಷ್ ಬಲ್ಲವರ ಮುಂದೆ ನಮ್ಮ ನಿಲುವನ್ನು ಮಂಡಿಸಲು ಕಷ್ಟವಾಗುತ್ತಿದೆ. ಇದು ನಮ್ಮ ಕೆಲಸಕ್ಕೆ ದೊಡ್ಡಸೋಲು. ಆದರೆ ವಿರೋಧಿ ಇಂಗ್ಲಿಷ್ ವಾರಪತ್ರಿಕೆಯಾದ ಮರ್‍ರಾಠ ಸಹ ತನ್ನ ಕಾಲಿನ ಮೇಲೆ ನಿಂತುಕೊಳ್ಳುವುದಕ್ಕೆ ಆಗುತ್ತಿಲ್ಲ. ನಮ್ಮ ಅಭಿಪ್ರಾಯಗಳನ್ನು ತಿಳಿದುಕೊಳ್ಳುತ್ತಿದ್ದ ಚಂದಾದಾರರು ೫೦ಕ್ಕೂ ಹೆಚ್ಚು ಇಲ್ಲವೆ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ಡೆಕ್ಕನ್‌ರಾಯತ್‌ನ ಎಲ್ಲಾ ಖರ್ಚು ನಮ್ಮ ಮೇಲೆ ಬೀಳುವುದು. ಈ ಎಲ್ಲಾ ಖರ್ಚನ್ನು ನಾನೊಬ್ಬನೆ ಹೊರುವುದಕ್ಕೆ ನನಗೆ ಸಾಧ್ಯವಾಗುವುದಿಲ್ಲ. ಮತ್ತು ಮಾನ್ಯ ಮಹಾರಾಜರ ಉದಾರಕೊಡುಗೆಯನ್ನು ಶಾಶ್ವತವಾಗಿ ಕೋರುವುದು ಸೂಕ್ತವಲ್ಲ".[18] ಆದರೆ ಶಾಹುರವರು ಪತ್ರಿಕೆಯನ್ನು ಮುಚ್ಚುವುದನ್ನು ಇಷ್ಟಪಡುವುದಿಲ್ಲ. ಅವರು ೪,೦೦೦ ರೂಗಳ ಚೆಕ್ಕನ್ನು ಲಠ್ಠೆಯವರಿಗೆ ಕಳುಹಿಸಿಕೊಟ್ಟಿದ್ದಾರೆ. ಅದರ ಬೆಂಬಲದ ಮೇಲೆ ಡೆಕ್ಕನ್‌ರಾಯತ್ ಸ್ವಲ್ಪ ಸಮಯದವರೆಗೆ ಬದುಕುವುದು. ಆದರೆ ಮುಂದೆಯಾದರೂ ಅದನ್ನು ಮುಚ್ಚಲೇಬೇಕಾಗುತ್ತದೆ.[19]

ಶಾಹುಯುಗದಲ್ಲಿ ಕೊಲ್ಹಾಪುರವು ಬ್ರಾಹ್ಮಣೇತರರ ಆಂದೋಲನದ ಕೇಂದ್ರವಾಗಿತ್ತು. ಅಲ್ಲಿಂದ ಶಾಹುರವರು ಮಹಾರಾಷ್ಟ್ರದಲ್ಲೆಲ್ಲ ಹರಡಿಕೊಂಡಿರುವ ಹಲವಾರು ಸಕ್ರಿಯ ಕಾರ್ಯಕರ್ತರ ಮತ್ತು ಬ್ರಾಹ್ಮಣೇತರರ ಸಂಪರ್ಕದಲ್ಲಿ ಶಾಹುರವರು ಇರುವರು. ಅವರಲ್ಲಿ ಬ್ರಾಹ್ಮಣೇತರರಾದ ಪತ್ರಿಕಾಕರ್ತ ಬರೋಡದ ಜಾಗೃತಿಯ ಸಂಪಾದಕ ಭಗವಂತರಾವ್ ಪಾಲೇಕಾರರಿಂದ ಅಮರಾವತಿಯ 'ಸುಬೋಧಮಾಲಾ' ಸಂಪಾದಕರಾದ ಕೇಶವರಾವ್ ದೇಶಮುಖ ಅವರು ಇರುವರು. ದೇಶಮುಖರು ಸತ್ಯಶೋಧಕದ ಸಕ್ರಿಯ ಕಾರ್ಯಕರ್ತರು. ಅವರು ಬಹಳ ಉತ್ಸಾಹದಿಂದ ಸತ್ಯಶೋಧಕ ಕಾರ್ಯಕ್ರಮಗಳಾದ ವೇದೋಕ್ತ ಶ್ರಾವಣಿಯನ್ನು ವಿದರ್ಭ ಪ್ರದೇಶದಲ್ಲಿ ಕೈಗೊಳ್ಳುವರು. ಆಗಸ್ಟ್ ೨೪, ೧೯೨೧ರಲ್ಲಿ ಅವರು ಮಹಾರಾಜರನ್ನು ಕೇಳಿಕೊಳ್ಳುತ್ತಾರೆ: "ನಾನು ಕಾಲಲ್ಲಿ ತುಳಿಯುವ ಒಂದು ಚಿಕ್ಕ ಮುದ್ರಣಯಂತ್ರವನ್ನು ಮಾಸಿಕ ಪತ್ರಿಕೆಗಾಗಿ ಹೊಂದಿದ್ದೇನೆ. ವರಹಾಡ್‌ನಲ್ಲಿ ಬ್ರಾಹ್ಮಣೇತರರ ಪಕ್ಷ ಒಂದು ದೊಡ್ಡ ದಿನಪತ್ರಿಕೆಯನ್ನು ಹೊಂದುವ ಅವರ ಆಸೆಯನ್ನು ನೆರವೇರಿಸಲು ನಾವು ಅವಶ್ಯಕವಾದ ಹಣಕಾಸನ್ನು ಒದಗಿಸುವೆವು' ಎಂದು ಮಹಾರಾಜರು ತಿಳಿಸಿದ ಸುದ್ದಿ ಕೇಳಿದ್ದಕ್ಕೆ ನಾನು ತುಂಬ ಕೃತಜ್ಞನಾಗಿದ್ದೇನೆ. ನಾನು ಸಹ ಅದನ್ನೇ ಬಯಸುತ್ತೇನೆ. ನನ್ನ ಬಳಿ ಪ್ರಕಟಿಸುವುದಕ್ಕೆ ದೊಡ್ಡ ಮುದ್ರಣಯಂತ್ರವಿಲ್ಲ. ಆದ್ದರಿಂದ ನಾನು ಪತ್ರಿಕೆಯನ್ನು ನಿಯತವಾಗಿ ನಡೆಸುವುದಕ್ಕೆ ಸಾಧ್ಯವಾಗುತ್ತಿಲ್ಲ. ಉತ್ಸಾಹಹೀನವಾಗಿ ಪತ್ರಿಕೆಯನ್ನು ನಡೆಸವುದು ಸೂಕ್ತವಲ್ಲವೆಂದು ನನ್ನ ಭಾವನೆ. ಮುದ್ರಣಯಂತ್ರವನ್ನು ಖರೀದಿಮಾಡುವುದಕ್ಕೆ ನನ್ನ ಬಳಿ ಹಣವಿಲ್ಲ. ಆದರೆ ನಾನು ವಿವರಗಳ ಬಗ್ಗೆ ಚರ್ಚಿಸುವೆನು ಮತ್ತು ಮಹಾರಾಜರ ಪರಿಗಣನೆಗಾಗಿ ನನ್ನ ಯೋಜನೆಯನ್ನು ಅವರ ಮುಂದೆ ಇಡುವೆನು".[20]

**ಬ್ರಾಹ್ಮಣರ ಪತ್ರಿಕೆಗಳಿಗೆ ಶಾಹುರವರ ಸಹಾಯ**

ಶಾಹುಮಹಾರಾಜರು ಬ್ರಾಹ್ಮಣೇತರರ ಪತ್ರಿಕೆಗಳಿಗೆ ಸಹಾಯ ಮಾಡಿದಂತೆಯೇ ಆಗಾಗ ಬ್ರಾಹ್ಮಣರ ಪತ್ರಿಕೆಗಳಿಗೆ ಸಹಾಯ ಮಾಡಿದರು. ಆಗರ್‌ಕರರ 'ಸುಧಾರಕ' ಮತ್ತು ಅಚ್ಯುತರಾವ್ ಕೊಲ್ಹಾಟ್ಕರ್ ಅವರ 'ಸಂದೇಶ' ಎಂಬ ಎರಡು ಮುಖ್ಯ ಪತ್ರಿಕೆಗಳು. ಆಗರ್‌ಕರರ ಬೆಂಬಲಿಗರು ದೃಢಸಂಕಲ್ಪದಿಂದ ೧೮೯೫ರಲ್ಲಿ ಆಗರ್‌ಕರ್ ನಿಧನದ ನಂತರ 'ಸುಧಾರಕ'ದ ಜೊತೆಯಲ್ಲಿ ಮುಂದುವರೆದರು. ಆದರೆ ಸ್ವಲ್ಪ ಸಮಯದ ನಂತರ ಅದು ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡಿತು. ೧೯೦೬ರಲ್ಲಿ ಅದು ಸಾವಿನ ಅಂಚಿಗೆ ಬಂದಿತು. ಶಾಹುರವರು ಇತರೆ ಉದಾರಿ ಬ್ರಾಹ್ಮಣ ನಾಯಕರಾದ ನ್ಯಾಯಮೂರ್ತಿ ರಾನಡೆ ಮತ್ತು ಗೋಪಾಲಕೃಷ್ಣ ಗೋಖಲೆಯವರ ಬಗ್ಗೆ ತುಂಬ ಗೌರವವಿಟ್ಟುಕೊಂಡಂತೆಯೇ ಆಗರ್‌ಕರರ ಬಗ್ಗೆ ಸಮಾನವಾಗಿ ಗೌರವವಿಟ್ಟಿದ್ದರು. ವಿಶೇಷವಾಗಿ 'ಸುಧಾರಕ'ವು ಏಕಾಂಗಿಯಾಗಿ ಕರ್ಮಠ ಬ್ರಾಹ್ಮಣವರ್ಗದ ವಿರುದ್ಧ ಹೋರಾಡಿದ್ದನ್ನು ಮರೆಯುವಂತಿಲ್ಲ. 'ಸುಧಾರಕ' ಆರ್ಥಿಕ ಸಂಕಷ್ಟದಲ್ಲಿದೆ ಎಂಬುದು ಶಾಹುರವರಿಗೆ ಗೊತ್ತಾದಾಗ ಅವರು ಆಗ ಸಂಪಾದಕರಾಗಿದ್ದ ವಿನಾಯಕ ರಾಮಚಂದ್ರ ಜೋಷಿಯವರಿಗೆ ಸಹಾಯವನ್ನು ಕಳುಹಿಸಿಕೊಡುತ್ತಾರೆ.[21]

ಅಚ್ಯುತರಾವ್ ಕೊಲ್ಹಾಟ್ಕರ್ ಅವರ 'ಸಂದೇಶ' ಪತ್ರಿಕೆ ಆರ್ಥಿಕ ಸಂಕಷ್ಟದಲ್ಲಿದ್ದಾಗ ಶಾಹುರವರು ಅಂಥದ್ದೇ ಸಹಾಯ ನೀಡಿದ್ದನ್ನು ಸಾಕ್ಷ್ಯ ಹೇಳುತ್ತದೆ. ಕೊಲ್ಹಾಟ್ಕರ್ ಅವರು ನಿಜವಾಗಿಯೂ ತಿಲಕರ ಭಕ್ತ. ಆದರೆ ೧೯೧೯–೨೦ರಲ್ಲಿ ತಿಲಕರ ನಿಧಿಯ ಬಗ್ಗೆ 'ಸಂದೇಶ'ದಲ್ಲಿ ತಿಲಕರನ್ನು ಟೀಕೆ ಮಾಡುವ ಧೈರ್ಯವನ್ನು ತೋರಿಸಿದ್ದರು. ತತ್ಪರಿಣಾಮವಾಗಿ ತಿಲಕರ ಭಕ್ತರ ವಿರೋಧವನ್ನು ಕಟ್ಟಿಕೊಳ್ಳುವುದರ ಜೊತೆಗೆ 'ಸಂದೇಶ'ದ ಜನಪ್ರಿಯತೆ ಕುಗ್ಗಿತು ಮತ್ತು ಅದರ ಮಾರಾಟದ ಕುಸಿತದಿಂದ ಆರ್ಥಿಕ ಮುಗ್ಗಟ್ಟಿನ ಸುಳಿಗೆ ಸಿಕ್ಕಿಕೊಂಡಿತು. ತಿಲಕನಿಧಿಯ ಸುದ್ದಿ ನಿಯಮಿತವಾಗಿ ಶಾಹುರವರಿಗೆ ತಲುಪುತ್ತಿತ್ತು. ಅವರ ಪ್ರಕಾರ 'ಸಂದೇಶ' ಬೆಳಕಿಗೆ ತಂದ ಈ ಹಗರಣವು ಸಾರ್ವಜನಿಕ ಹಣಕ್ಕೆ ಸಂಬಂಧಿಸಿತ್ತು ಮತ್ತು ಹಾಗಿರುವಾಗ ಈ ಪತ್ರಿಕೆಯು ಮೆಚ್ಚಬಹುದಾದ ಕೆಲಸವನ್ನು ಮಾಡಿತ್ತು.[22] ತಿಲಕರ ಪಕ್ಷದ ವಿರುದ್ಧ ನಿಂತ ಪತ್ರಿಕಾಕರ್ತನ ಧೈರ್ಯ ಮೆಚ್ಚಿ ಅಂಥವನಿಗೆ ಬೆಂಬಲ ನೀಡುವುದು ಅವಶ್ಯಕವೆಂದು ಶಾಹು ಭಾವಿಸಿದರು ಮತ್ತು ಒಬ್ಬ ಮಧ್ಯಸ್ಥಗಾರನ ಮೂಲಕ ೪,೦೦೦ ರೂ.ಗಳನ್ನು ಕೊಲ್ಹಾಟ್ಕರರಿಗೆ ಕಳುಹಿಸಿಕೊಟ್ಟರು. ಮಹಾರಾಜರು ಸ್ಪಷ್ಟವಾಗಿ ಈ ಸಾಲವು ಕೆಟ್ಟ (ವಾಪಸ್ ಬಾರದ)ಸಾಲವೆಂದು ಪರಿಗಣಿಸಿದ್ದರು. ಈ ಸಲ ಕೊಲ್ಹಾಟ್ಕರ್ ಸಕಾರಾತ್ಮಕವಾಗಿ ಸ್ಪಂದಿಸಿ, ತಾನು ಶಾಹುರವರ ಪರ ಮತ್ತು ದರ್ಬಾರು ಕಳುಹಿಸಿದ ವಿಷಯವನ್ನು ಪ್ರಕಟಿಸುವೆನೆಂದು ಹೇಳಿದರು.[23]

ಶಾಹುರವರು 'ಸಂದೇಶ'ದ ತೊಂದರೆಗಳ ದುರುಪಯೋಗ ಮಾಡಿಕೊಳ್ಳಲಿಲ್ಲ. ಮಿಗಿಲಾಗಿ ಕೊಲ್ಹಾಟ್ಕರರು ಶಾಹುರವರ ಮತ್ತು ಬ್ರಾಹ್ಮಣೇತರರ ಪಕ್ಷದ ನ್ಯಾಯಬದ್ಧ ನಿಲುವನ್ನು ಬ್ರಾಹ್ಮಣರ ದುಷ್ಟಕೂಟ ಹೇಗೆ ಪ್ರತಿಕ್ರಿಯಿಸುತ್ತದೆಂಬುದನ್ನು ಕೇರ್ ಮಾಡದೆ ಮುಂದಿಡುತ್ತಾರೆ. ಶಾಹು ಅವರಿಗೆ ಬರೆಯುತ್ತಾರೆ: "ನಿಮ್ಮ ಸಮಾಚಾರ ಪತ್ರಿಕೆಯಲ್ಲಿ ನೀವು ನನ್ನ ನಿಲುವನ್ನು ಸಮರ್ಥಿಸುತ್ತಿದ್ದೀರಿ. ಹೀಗೆ ಮಾಡುವುದರಿಂದ ನೀವು ನಿಮ್ಮ ಜನರಲ್ಲಿ ಅಪ್ರಿಯರಾಗುವಿರಿ. ಹಾಗಿರುವಾಗ ನೀವು ಇನ್ನು ಮುಂದೆ ನನ್ನನ್ನು ಸಮರ್ಥಿಸಿ ಲೇಖನಗಳನ್ನು ಬರೆಯದೇ ಇದ್ದರೆ ನಿಮ್ಮ ಜನಪ್ರಿಯತೆಗೆ ಒಳ್ಳೆಯದಾಗುತ್ತದೆ" (೩ ಜೂನ್ ೧೯೨೧).[24] ಕೆಲವು ದಿನಗಳ ನಂತರ ಶಾಹುರವರು ಹಣ ಕಳುಹಿಸಿದ್ದ ಮಧ್ಯಸ್ಥನ ಮೂಲಕ ಒಂದು ಸಂದೇಶವನ್ನು

ಕೊಲ್ಹಾಟ್ಕರ್ ಅವರಿಗೆ ಕಳುಹಿಸಿಕೊಟ್ಟಿದ್ದರು. ಈ ಬಗ್ಗೆ 'ಸಂದೇಶ'ವು ಶಾಹುರವರನ್ನು ಟೀಕಿಸಲು ಪ್ರಾರಂಭ ಮಾಡಿತು. " ....ನಿಮ್ಮ ಬಳಿಯಿರುವ ಪ್ರಾಮಿಸರಿ ನೋಟನ್ನು ನಾಶ ಮಾಡಿ. ಇಲ್ಲದಿದ್ದರೆ ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ನಾವು ಈ ಪ್ರಾಮಿಸರಿ ನೋಟು ವಿರುದ್ಧ ಪಾವತಿ ಮಾಡಬೇಕೆಂದು ನಾವು ಬಯಸಬಹುದು. ನಮ್ಮ ಮನಸ್ಸಿನಲ್ಲಿ ಅಂತಹ ಕೆಟ್ಟ ಯೋಚನೆ ಮೂಡುವ ಸಾಧ್ಯತೆಯಿರುವುದರಿಂದ ಅದನ್ನು ನಾಶ ಮಾಡಬೇಕು."[25] ಶಾಹುರವರ ಈ ಮಾತುಗಳು ಯಾವುದೇ ನಿರೀಕ್ಷೆಯಿಲ್ಲದೆ 'ಸಂದೇಶ'ಕ್ಕೆ ಮಾಡಿದ ಸಹಾಯ ಅವರ ಮಹಾ ಔದಾರ್ಯ ಮತ್ತು ಇಚ್ಛೆಯನ್ನು ಎತ್ತಿ ತೋರಿಸುತ್ತವೆ.

## ಶಾಹುರವರ ಮೇಲೆ ದಾಳಿ

ಮೇಲೆ ಹೇಳಿದ ಒಂದು ಪತ್ರಿಕೆಯನ್ನು ಬಿಟ್ಟು ಎಲ್ಲಾ ಬ್ರಾಹ್ಮಣರ ಪತ್ರಿಕೆಗಳು ಮಹಾರಾಷ್ಟ್ರದಲ್ಲಿ ಶಾಹುರವರ ವಿರುದ್ಧವಿದ್ದವು. ಅವು ಕೊಲ್ಹಾಪುರ ಸಂಸ್ಥಾನದ ಆಡಳಿತವನ್ನು ಮತ್ತು ಶಾಹು ನಡೆಸಿದ ಸತ್ಯಶೋಧಕ/ಬ್ರಾಹ್ಮಣೇತರರ ಆಂದೋಲನಗಳನ್ನು ಟೀಕಿಸಿದರು. ಒಂದು ವೇಳೆ ಒಂದು ಸಾಮಾಜಿಕ ಚಳುವಳಿಯನ್ನು ನಡೆಸಿದರೆ/ಸಂಘಟಿಸಿದರೆ ಅಂತಹ ಹೊಡೆತ/ದಾಳಿಗಳು ಅನಿವಾರ್ಯವೆಂದು ತಿಳಿದುಕೊಳ್ಳುವಷ್ಟರ ಮಟ್ಟಿಗೆ ಶಾಹುರವರು ಪ್ರೌಢರಾಗಿದ್ದರು/ಪರಿಪಕ್ವವಾಗಿದ್ದರು. ಆದರೆ ಟೀಕೆ/ವಿಮರ್ಶೆ ತತ್ವ ಮತ್ತು ಚಿಂತನೆಗಳ ಸಂದರ್ಭದಲ್ಲಿರಬೇಕೆಂದು, ಅವು ವೈಯಕ್ತಿಕ ನೆಲೆಯಲ್ಲಿರಬಾರದೆಂದು ಅವರು ನಿರೀಕ್ಷಿಸಿದ್ದರು. ಆದರೆ ಕೆಲವು ಬ್ರಾಹ್ಮಣ ಪತ್ರಿಕೆಗಳು ಪತ್ರಿಕಾಧರ್ಮದ ನೈತಿಕತೆಯನ್ನು ಮೀರಿ ಶಾಹು ರವರನ್ನು ಉಗ್ರವಾಗಿ ಖಂಡಿಸಿದ್ದು ಮಾತ್ರವಲ್ಲದೆ, ರಾಜಕುಟುಂಬದ ಮಹಿಳೆಯರನ್ನೂ ಅತಿ ವಿಷಪೂರಿತ ಮತ್ತು ದುರ್ಭಾಷೆಯಲ್ಲಿ ಬೈದಿದ್ದಾರೆ. ಅಂತಹ ಪತ್ರಿಕೆಗಳಲ್ಲಿ ವಿ. ವಿ. ಹಡಪ್ ಅವರ 'ಲೋಕಶಾಹಿ' ಮತ್ತು ರಾಮಕೃಷ್ಣ ಪರಡ್ಕರ್ ಅವರ 'ಲೋಕಸಂಗ್ರಹ', ಸೀತಾರಾಮ್ ದಾಮ್ಲೆ ಅವರ 'ರಾಜಕರಣ' ಪತ್ರಿಕೆಗಳು ಪ್ರಮುಖವಾಗಿವೆ.[26]

ಕುಲಕರ್ಣಿಯವರ ವತನ್‌ಗಳ ಮುಟ್ಟುಗೋಲು ಹಾಕಿಕೊಂಡ ನಂತರ ಮಹಾರಾಷ್ಟ್ರದಲ್ಲಿ ಇಡೀ ಬ್ರಾಹ್ಮಣ ವರ್ಗ ಶಾಹು ವಿರುದ್ಧ ಎದ್ದು ನಿಂತಿತು. ಇದರ ಜೊತೆಗೆ ಸತ್ಯಶೋಧಕ ಮತ್ತು ಬ್ರಾಹ್ಮಣೇತರರ ಚಳುವಳಿಗಳಿಗೆ ಶಾಹುರವರ ಬೆಂಬಲ ಮತ್ತು ಅವರು ಹಿಂದೆ ನಿಂತು ಈ ಚಳುವಳಿಗಳನ್ನು ನಡೆಸಿದ್ದು ತಮ್ಮ ಬಗ್ಗೆ ತೀವ್ರಗೊಂಡ ಬ್ರಾಹ್ಮಣರ ದ್ವೇಷದ ಬೆಂಕಿಗೆ ತುಪ್ಪ ಸುರಿದಂತಾಯಿತು. ಶಾಹು ಸಂಯಮದಿಂದ ಈ ಬಿಸಿಯಿಂದ ಬಾಧೆಗೊಳಗಾದರು. ರಾಜಕುಟುಂಬವನ್ನು ಹೀನವಾಗಿ ಖಂಡಿಸಿದ್ದು ಅವರಿಗೆ ಅತಿ ನೋವಾಯಿತು. ಅವರು ಸಮಾಜ ಸೇವೆ ಮಾಡಿದ್ದಕ್ಕೆ ತೆತ್ತ ಬೆಲೆ ಇದಾಗಿತ್ತು.

ಡಿಸೆಂಬರ್ ೨೧, ೧೯೨೦ರಲ್ಲಿ ತನ್ನ ರಾಣಿಗೆ ಬರೆದ ಒಂದು ಪತ್ರದಲ್ಲಿ ಅವರು ಹೀಗೆ ಹೇಳುತ್ತಾರೆ: " 'ಲೋಕಸಂಗ್ರಹ' ಸಂಚಿಕೆ ದಿನಾಂಕ ೨೦ ಡಿಸೆಂಬರ್‌ನಲ್ಲಿ ಕೊಲ್ಹಾಪುರದ 'ಮುಸುಕು ಹಾಕಿಕೊಂಡ ಕ್ಷತ್ರಿಯ ಮಹಿಳೆಯರು' ಎಂಬ ಹೆಸರಿನ ಲೇಖನ ಪ್ರಕಟಿಸಿದ್ದಾರೆ. ಕೆಲವು ವರ್ಷಗಳ ಹಿಂದೆ ಅಕ್ಕಾಸಾಹೇಬ ಬಗ್ಗೆ ಡಾ. ಕುರ್ತಕೋಟಿ ಅಂಥದ್ದೇ ವಿಷಪೂರಿತ ದಾಳಿಯನ್ನು ಮಾಡಿದ್ದು ನಿನಗೆ ಗೊತ್ತಿರಬಹುದು. ಬ್ರಾಹ್ಮಣಿಕೆಯ ದಿನಪತ್ರಿಕೆಗಳು ನಮ್ಮ ವಂಶವನ್ನು ಅಪಕೀರ್ತಿಗೊಳಿಸುವುದರಲ್ಲಿ ಮಿತಿಗಳನ್ನು ತಲುಪಿದ್ದಾರೆ. ನೀನು ನನ್ನ ನಿಷ್ಠಾವಂತೆಯಾದ ನನ್ನ ಪತ್ನಿ, ನೀನು ಮತ್ತು ಕ್ಷತ್ರಿಯ ಪೂಜಾರಿಗಳಿಂದ ನಿನ್ನ ಧಾರ್ಮಿಕ ಆಚರಣೆಗಳನ್ನು ನಡೆಸು. ಈ ನಿರ್ಣಯದ ಬಗ್ಗೆ ನೀನು ಸ್ವಲ್ಪವೂ ತಪ್ಪಬೇಡ."[27]

ಬ್ರಾಹ್ಮಣೇತರರ ಪತ್ರಿಕೆಗಳು ಬ್ರಿಟಿಷರ ಪ್ರದೇಶಗಳಿಂದ ಶಾಹುರವರ ಮೇಲೆ ಗುರಿಯಿಟ್ಟು ಮಾಡುವ ಎಲ್ಲಾ ಟೀಕೆ/ಖಂಡನೆಗಳನ್ನು ಕಟುವಾಗಿ ಹಿಮ್ಮೆಟ್ಟಿಸಲು ತೊಡಗಿದರು. ಬ್ರಿಟಿಷ್ ಸರಕಾರವು ತಮಗೆ ಅನುಕೂಲವಾಗುವ ಹಾಗೆ ತಟಸ್ಥ ಧೋರಣೆಯನ್ನು ಅನುಸರಿಸಿತು. ಚಾರಿತ್ರ್ಯಹರಣದಲ್ಲಿ ತೊಡಗಿದ ದಿನಪತ್ರಿಕೆಗಳಿಂದ ಭಾರತದ ಸಂಸ್ಥಾನದ ರಾಜರನ್ನು ರಕ್ಷಿಸುವುದು ಸಾರ್ವಭೌಮ ಸರಕಾರದ ಕರ್ತವ್ಯವೆಂದು ಶಾಹು ಭಾವಿಸಿದ್ದರು. ಬ್ರಾಹ್ಮಣೇತರರ ದಿನಪತ್ರಿಕೆಗಳು ಬ್ರಾಹ್ಮಣರ ದಿನಪತ್ರಿಕೆಗಳ ವಿರುದ್ಧ ಮಾಡಿದ ದಾಳಿ ಸರಕಾರವನ್ನು ವಿಚಲಿತಗೊಳಿಸಿದ್ದು ಹಾಸ್ಯಾಸ್ಪದವಾಗಿತ್ತು. ಆಗ ಮಾತ್ರ ಅದರ ನ್ಯಾಯದ ಪ್ರಜ್ಞೆ ಎಚ್ಚರಗೊಳ್ಳುವುದು.[28] ಒಬ್ಬ ರಾಜ ಇಡೀ ಹಗರಣದಲ್ಲಿ ಹೇಗೆ ಬಾಧೆಗೊಳಗಾಗುತ್ತಾನೆ ಎಂಬುದನ್ನು ವಿವರಿಸುವ ಪತ್ರವನ್ನು ತನ್ನ ಮಿತ್ರನಿಗೆ ಬರೆದ ಪತ್ರದಲ್ಲಿ ಶಾಹು ಬರೆಯುತ್ತಾರೆ: "ಭಾರತದಲ್ಲಿ ರೂಢಿಯಲ್ಲಿರುವ ಪತ್ರಿಕೆಗಳ ನಿಯಂತ್ರಣಗಳ ಗುರಿ ಬ್ರಿಟಿಷ್ ಪ್ರದೇಶಗಳಲ್ಲಿರುವ ಪ್ರಜೆಗಳನ್ನು ರಕ್ಷಿಸುವುದು. ಆದರೆ ನಿಯಂತ್ರಣಗಳು ಅತಿಯಾಗಿ ನಿಷ್ಠರಾಗಿರುವ ಮಹಾರಾಜ ಅಥವಾ ಇಂಗ್ಲಿಷ್ ಅಧಿಕಾರಿಗಳಿಗೆ ಯಾವುದೇ ರಕ್ಷಣೆ ನೀಡುವುದಿಲ್ಲ ಎಂಬುದು ಪತ್ರಿಕಾ ಸಂಪಾದಕರಿಗೆ ತಿಳಿದಿತ್ತು. ಅವರು ತಮಗೆ ಇಷ್ಟ ಬಂದಂತೆ ಮಹಾರಾಜರನ್ನು ಟೀಕಿಸುತ್ತಿದ್ದರು. ಈ ಅಪರಾಧವು ಕೈವರ್ತನೀಯವಾಗಿರಲಿಲ್ಲ (Non-Extraditable). ಹಾಗಾಗಿ ಮಹಾರಾಜರು ಅಸಹಾಯಕರಾಗಿದ್ದರು. ಒಂದು ವೇಳೆ ಕೇಸನ್ನು ಬ್ರಿಟಿಷ್ ಕೋರ್ಟುಗಳಲ್ಲಿ ಹಾಕಿದರೆ ಅದು ತುಂಬ ತೊಡಕಿನದಾಗಿತ್ತು ಮತ್ತು ಅಧಿಕಾರಿಗಳನ್ನು ಕಳುಹಿಸುವುದು ದುಬಾರಿಯಾಗಿತ್ತು ಮತ್ತು ಸಾಕ್ಷಿಗಳು ಬ್ರಿಟಿಷ್ ಪ್ರದೇಶದ ಒಳಗಿನವರೇ ಆಗಬೇಕಾಗಿತ್ತು. ಆದರೆ ನಂತರ ಮಹಾರಾಜನು ಬ್ರಿಟಿಷ್ ಪ್ರದೇಶಗಳ ಪ್ರಕ್ರಿಯೆಗಳನ್ನು ಅನುಭವಿಸಬಹುದು, ಆದರೆ ನಾನು ಸಂಸ್ಥಾನವನ್ನು ಬಹಳ ಕಾಲದವರೆಗೆ ಬಿಟ್ಟಿರಲು ಸಾಧ್ಯವಿಲ್ಲ. ನಾನು ಈ ಬಗ್ಗೆ ಚಿಂತೆ ಮಾಡದಿದ್ದರೂ ಸಹ. ಆದರೆ ಕೊಳೆ ತೊಳೆದರೂ ಎಲ್ಲೋ ಒಂದು ಕಡೆ ಅದು ದೇಹಕ್ಕೆ ಅಂಟಿಕೊಂಡಿರುತ್ತದೆ. ಈ ಗೋಜಲಿನಿಂದ ಹೊರಬರಲು ರೆಸಿಡೆನ್ಸಿ ಕೋರ್ಟುಗಳಲ್ಲಿ ಹೋರಾಡಲು ಅನುಮತಿ ಬೇಕಾಗುತ್ತದೆ."[29] ಬ್ರಿಟಿಷ್ ಇಂಡಿಯಾದಿಂದ ಅಪರಾಧಿಗಳ ವಿರುದ್ಧ ರೆಸಿಡೆನ್ಸಿ ಕೋರ್ಟುಗಳಲ್ಲಿ ಕೇಸು ಹಾಕಲು ಅನುಕೂಲ ಲಭ್ಯವಾಗುವಂತೆ ಮಾಡಿದರೆ ಭಾರತದ ಮಹಾರಾಜರ ಬಗ್ಗೆ ನ್ಯಾಯ ಮತ್ತು ಸಹಕಾರಿಯಾತ್ತದೆಯೆಂಬುದು ಶಾಹುರವರ ನಿಲುವಾಗಿತ್ತು. ಆದರೆ, ಈ ರೀತಿಯಲ್ಲಿ ಭಾರತದ ಆಳರಸರನ್ನು ಬಲಿ ಹಾಕಿದರೆ ವಿದೇಶಿ ಸಾರ್ವಭೌಮ ಸರಕಾರ ಏಕೆ ಬಾಧೆಪಡಬೇಕು?

ಪತ್ರಿಕೆಗಳು ರಾಜಕಾರಣದಲ್ಲಿ ಮತ್ತು ಸಾಮಾಜಿಕ ಸಾಹಸೋದ್ಯಮಗಳಲ್ಲಿ ಅಧಿಕಾರ ಚಲಾಯಿಸುವುದನ್ನು ಶಾಹುರವರು ಚೆನ್ನಾಗಿ ತಿಳಿದಿದ್ದರು. ಆದ್ದರಿಂದ ಅವರು ಮರಾಠಿ ಮತ್ತು ಇಂಗ್ಲಿಷಿನ ಎಲ್ಲಾ ಪತ್ರಿಕೆಗಳನ್ನು ತರಿಸುತ್ತಿದ್ದರು. ಅವರು ತಮ್ಮ ಕೊಲ್ಹಾಪುರ ಆಡಳಿತ ಮತ್ತು ರಾಷ್ಟ್ರೀಯ ಚಳುವಳಿಯ ಬಗೆಗಿನ ಸುದ್ದಿ ಮತ್ತು ಲೇಖನಗಳ ಬಗ್ಗೆ ಸದಾ ಎಚ್ಚರಿಕೆಯಿಂದ ಓದುತ್ತಿದ್ದರು. ಸಮಂಜಸವಾದ ವಿಷಯಗಳನ್ನು ದಿನಾ ಕಟ್ ಮಾಡಿ ಫೈಲು ಮಾಡಿಸುತ್ತಿದ್ದರು. ಫೈಲನ್ನು ದಿವಾನ್ ಸಬ್ನೀಸ್ ಅವರ ಪರಿಗಣನೆಗೆ ಕಳುಹಿಸಲಾಗುತ್ತಿತ್ತು. ಈ ಕಡತಗಳನ್ನು ಅರಮನೆಯ ಗ್ರಂಥಭಂಡಾರದಲ್ಲಿ ಪರಾಮರ್ಶೆಗಾಗಿ ಇಡಲಾಗುತ್ತಿತ್ತು. ಮಹಾರಾಜರು ರಾವ್ ಬಹಾದ್ದೂರ್ ಮಹದೇವರಾವ್ ಡೊಂಗ್ರೆ ಅವರನ್ನು ದಿನಪತ್ರಿಕೆಗಳ ನಿರೀಕ್ಷಕರನ್ನಾಗಿ ಈ ಕೆಲಸಕ್ಕೆ ನೇಮಕ ಮಾಡಿದ್ದರು (೭ ಜೂನ್, ೧೯೨೦).[30]

ಶಾಹುರವರು ನೆರವು ಮತ್ತು ಅವರ ಸೈದ್ಧಾಂತಿಕ ಬೆಂಬಲ ನೀಡಿದ್ದರೂ ಹಲವು ಬ್ರಾಹ್ಮಣೇತರರ ದಿನಪತ್ರಿಕೆಗಳು ಮತ್ತು ಅವುಗಳ ಮಾಲಿಕರು ತಮ್ಮ ಪೂರ್ಣವಾದ ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟಿರಲಿಲ್ಲ

ಎಂಬ ಸಂಗತಿಯನ್ನು ಗಮನಿಸಬೇಕಾಗಿದೆ. ಈ ಪತ್ರಿಕೆಗಳಲ್ಲಿ 'ವಿಶ್ವಬಂಧು', 'ದಿನಮಿತ್ರ', 'ಜಾಗೃತಿ', 'ಜಾಗರೂಕ', 'ವಿಜಯಿಮರಾಠ', ಮತ್ತು 'ಪ್ರಬೋಧನ'ಗಳು ಶಾಹುರವರ ಧೋರಣೆಗಳನ್ನು ಲಘುವಾಗಿ ಅಥವಾ ಗಂಭೀರ(ಕಟು)ವಾಗಿ ಆಗಾಗ ಸನ್ನಿವೇಶಗಳು ಬಯಸಿದಾಗ ಟೀಕೆ ಮಾಡಿವೆ. ಅಕ್ಟೋಬರ್ ೧೯೨೦ರಲ್ಲಿ ಅತಿ ಉತ್ಸಾಹಶಾಲಿ ಸತ್ಯಶೋಧಕರು ಕೊಲ್ಹಾಪುರದಲ್ಲಿ 'ಅಂಬಾಬಾಯಿ' ದೇವತೆಯನ್ನು ದೇವಸ್ಥಾನದಲ್ಲಿ ಪೂಜೆ ಮಾಡಿದ್ದಕ್ಕೆ ಬಲಾತ್ಕಾರವಾಗಿ ದೊಡ್ಡ ಗದ್ದಲವನ್ನೇ ಎಬ್ಬಿಸಿದ್ದರು. ಶಾಹುಮಹಾರಾಜರು ಅವರನ್ನು ಹಿಡಿದು ಜೈಲಿನಲ್ಲಿಟ್ಟಿದ್ದರು. ಪ್ರಬೋಧಂಕರ್ ಥ್ಯಾಕರೆ ಅವರಿಗೆ ಸುದ್ದಿ ಮುಟ್ಟಿದಾಗ, ಅವರು ಶಾಹುಮಹಾರಾಜರನ್ನು ತಮ್ಮ ಪತ್ರಿಕೆ 'ಪ್ರಬೋಧನ'ನಲ್ಲಿ 'ಅಂಬಾಯಿಯವರ ಹುಳುಕಡ್ಡಿ' (ಗಜಕರ್ಣ) ಎಂದು ಟೀಕಿಸಲಾಗಿತ್ತು. ಥ್ಯಾಕರೆಯವರು ತಮ್ಮ ಜೀವನಚರಿತ್ರೆಯಲ್ಲಿ ಬರೆಯುತ್ತಾರೆ: "ಮಹಾರಾಜ ಶಾಹುರವರು ಇನ್ನು ಮುಂದಕ್ಕೆ ನನ್ನನ್ನು ಕರೆಯುವುದಿಲ್ಲ ಅಥವಾ ಭೇಟಿ ಆಗುವುದಿಲ್ಲ ಎಂದು ಹಲವರು ಭಾವಿಸಿದ್ದರು. ಆದರೆ ಎಂಥ ಆಶ್ಚರ್ಯ! ಮುಂದಿನ ವಾರ ಮಾನ್ಯ ಮಹಾರಾಜರು ಮಲಬಾರ್ ಹಿಲ್‌ನ ಶಿರಿರಸ್ತೆಯ ಕೆಳಗೆ ಕಾರಿನಲ್ಲಿ ನಾನು ಕಛೇರಿಯಿಂದ ಬರುವುದನ್ನೇ ಕಾಯುತ್ತಿದ್ದರು. ಕಾರಿನ ಚಾಲಕ ನನ್ನನ್ನು ಗುರುತಿಸಿ ಕಾರಿನ ಬಳಿಗೆ ಕರೆದುಕೊಂಡು ಹೋಗುತ್ತಾ ಹೇಳಿದನು. 'ಮಹಾರಾಜರು ನಿಮ್ಮನ್ನು ನೋಡಬೇಕೆಂದು'. ಮಹಾರಾಜರು, 'ಬನ್ನಿ, ಕಾರಿನಲ್ಲಿ ಕುಳಿತುಕೊಳ್ಳಿ' ಎಂದು ಆಜ್ಞೆ ಮಾಡಿದರು. ನಾನು ಕಾರಿನೊಳಕ್ಕೆ ಹೋದೆ, ನಾವು ಪನ್ಹಾಲ ವಸತಿಗೆ ತಲುಪಿದೆವು. ಮಹಾರಾಜರು ಆಜ್ಞೆ ಮಾಡಿದರು. ಒಳಗೆ ಯಾರೂ ಬರಕೂಡದೆಂದು. ನಾವು ಕುಳಿತಕೊಂಡೆವು, ಮಹಾರಾಜರು ಮೊದಲನೇ ಪ್ರಶ್ನೆಯನ್ನು ಕೇಳಿದರು. 'ಒಳ್ಳೆಯದು, ಮುದುಕ, ನೀನು ಎಷ್ಟು ತುಂಟನಾದೆ'?. ನಾನು ಕೇಳಿದೆ 'ಹೇಗೆ'? ಆ ಲೇಖನದ ಬಗ್ಗೆ ದೊಡ್ಡ ಚರ್ಚೆಯೇ ಆಯಿತು. ಅವರು ಹೇಳಿದರು 'ಇದ್ದಕ್ಕಿದ್ದ ಹಾಗೆಯೇ ಪ್ರತಿಯೊಂದನ್ನು ಸಾಧಿಸುವುದಕ್ಕೆ ಆಗುವುದಿಲ್ಲ. ನಾನು ಪ್ರತಿಯೊಂದರ ಬಗ್ಗೆ ಲಕ್ಷ್ಯ ವಹಿಸುತ್ತಿದ್ದೇನೆ. ಆದರೆ ನಿಧಾನವಾಗಿ.' ಅವರು ಮತ್ತೇನನ್ನೂ ಹೇಳಲಿಲ್ಲ. ಅವರು ಟೀಕೆಯನ್ನು ಮನಸ್ಸಿಗೆ ಹಚ್ಚಿಕೊಂಡಿಲ್ಲವೆಂದು ಸ್ಪಷ್ಟಪಡಿಸಿದರು."[31]

ಶಾಹುರವರು ಉನ್ನತ ಮಟ್ಟದ ತಾಳ್ಮೆಯನ್ನು ಹೊಂದಿದ್ದರು ಮತ್ತು ತನ್ನ ಜನರಿಂದ ಟೀಕೆ ಬಂದರೆ ಅದನ್ನು ಅವರು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. 'ರಾಷ್ಟ್ರವೀರ' ಪತ್ರಿಕೆಯ ಸಂಪಾದಕರಾದ ಶಾಮರಾವ್ ದೇಸಾಯಿ ಹೇಳುತ್ತಾರೆ: ".... ಮಹಾರಾಜರು ಬ್ರಾಹ್ಮಣೇತರರ ದಿನಪತ್ರಿಕೆಗಳ ಪ್ರಾರಂಭಕ್ಕಾಗಿ ಆರ್ಥಿಕ ನೆರವನ್ನು ಒದಗಿಸುತ್ತಿದ್ದರು. ಆದರೆ ಅವು ಕೆಲಸ ಮಾಡುವಾಗ ಅವರು ಯಾವುದೇ ಧೋರಣೆಯನ್ನು ಈ ಪತ್ರಿಕೆಯ ಮೇಲೆ ಹೇರಲಿಲ್ಲ. ಮಿಗಿಲಾಗಿ, ಶಾಹುರವರ ಮಹಾಔದಾರ್ಯದಿಂದ ಹುಟ್ಟಿದ 'ರಾಷ್ಟ್ರವೀರ' ಪತ್ರಿಕೆ ಅವರನ್ನೇ ಟೀಕಿಸಿತ್ತು. ಆದರೂ ಶಾಹುರವರು ಒಮ್ಮೆಯೂ ತಮ್ಮ ಅಸಮಾಧಾನವನ್ನು ತೋರಿಸಲಿಲ್ಲ. ಅವರು ದುಡ್ಡಿಗಾಗಿ ಸಂಪಾದಕರ ವಿವೇಚನೆಯನ್ನು ಒತ್ತೆಯಿಟ್ಟುಕೊಂಡಿರಲಿಲ್ಲ. ಅವರು ತಮ್ಮ ಪೋಷಕತ್ವದಲ್ಲಿ ಪತ್ರಿಕೆಗಳ ಟೀಕೆಯನ್ನು ಸಂತೋಷವಾಗಿ ಸ್ವೀಕರಿಸುತ್ತಿದ್ದರು.[32]

## ಪತ್ರಿಕಾಕರ್ತರ ಸ್ವಾತಂತ್ರ್ಯದ ಮನ್ನಣೆ

ಶಾಹು ಪತ್ರಿಕಾಕರ್ತರ ಸ್ವಾತಂತ್ರ್ಯವನ್ನು ಗೌರವಿಸಿದರು; ಜೊತೆಗೆ ತಮ್ಮ ಚಿಂತನಾ ಸ್ವಾತಂತ್ರ್ಯವನ್ನೂ ರಕ್ಷಿಸಿಕೊಂಡರು. ೧೯೨೦ರಲ್ಲಿ 'ಜಾಗರೂಕ'ದ ಸಂಪಾದಕರಾದ ಕೊಠಾರಿ ಅವರಿಗೆ ಶಾಹು ಒಂದು ಪತ್ರವನ್ನು ಪ್ರಕಟಣೆಗಾಗಿ ಕಳುಹಿಸಿಕೊಟ್ಟರು. ಅದರಲ್ಲಿ ಅವರು ಹೀಗೆ ಹೇಳಿದ್ದರು: "ನಾನು ಅನೇಕ

ಪತ್ರಿಕೆಗಳಿಗೆ ಸಹಾಯ ಮಾಡಿದ್ದೇನೆ. ಆದರೆ ಪ್ರಕಟಗೊಂಡ ಲೇಖನಗಳಿಗೆ ಮತ್ತು ಈ ಪತ್ರಿಕೆಗಳಲ್ಲಿ ಅಭಿವ್ಯಕ್ತಿಗೊಳಿಸಿದ ಅಭಿಪ್ರಾಯಗಳಿಗೆ ನಾನು ಜವಾಬ್ದಾರನಲ್ಲ. ಈ ಪತ್ರಿಕೆಗಳು ನನ್ನ ವಿರುದ್ಧ ಬರೆಯದಿದ್ದರೆ, ಅವು ನನ್ನ ಮೇಲಿಟ್ಟಿರುವ ಉಪಕಾರ. ನಾನು ನನ್ನದೇ ಆದ ಪತ್ರಿಕೆಯನ್ನು ಪ್ರಾರಂಭ ಮಾಡಿದಾಗ ಲೇಖನಗಳು ಅಭಿವ್ಯಕ್ತಿಗೊಳಿಸಿದ ಅಭಿಪ್ರಾಯಗಳ ಜವಾಬ್ದಾರಿ ನನ್ನದಾಗುತ್ತದೆ. ಸಾಮಾನ್ಯವಾಗಿ ಎಷ್ಟು ಜನರಿದ್ದಾರೋ ಅಷ್ಟು ಅಭಿಪ್ರಾಯಗಳಿರುತ್ತವೆ. ಅದೇ ರೀತಿಯಲ್ಲಿ ಜನರ ಮುಂದೆ ವ್ಯಕ್ತಪಡಿಸಲಾರದ ಈ ಅಭಿಪ್ರಾಯವನ್ನು ನಾನು ಹೊಂದಿರಬಹುದು. ಏಕೆಂದರೆ, ಅನುಭವವಿಲ್ಲದೆ ಅಭಿಪ್ರಾಯ ವ್ಯಕ್ತಪಡಿಸುವುದು ಸರಿ ಅಲ್ಲ. ನನ್ನ ಸ್ವತಂತ್ರ ಅಭಿಪ್ರಾಯಗಳನ್ನು ಬಲ್ಲವರು, ಅವು ನನ್ನದಾಗಿರುವುದರಿಂದ ಅವರು ಅವುಗಳನ್ನು ಅನುಸರಿಸಲಾರರು. ಆದರೆ ಅವರು ಈ ಅಭಿಪ್ರಾಯಗಳನ್ನು ಅವು ತಮ್ಮದೇ ಅಭಿಪ್ರಾಯಗಳೆಂದು ಭಾವಿಸಿದರೆ ಅವರು ಅವುಗಳನ್ನು ಅನುಸರಿಸಲು ಸ್ವತಂತ್ರರು. ಇದು ನನ್ನ ಪ್ರಾರ್ಥನೆ ಎಲ್ಲರಿಗೂ."[33]

ಹೀಗೆ ಶಾಹುರವರು ಪ್ರತಿಯೊಬ್ಬ ವ್ಯಕ್ತಿ ತನ್ನದೇ ಆದ ಅಭಿಪ್ರಾಯಕ್ಕೆ ಅರ್ಹನಾಗಿರುತ್ತಾನೆ ಎಂಬ ತತ್ವವನ್ನು ಗೌರವಿಸಿದರು. ಆದರೆ ಬ್ರಾಹ್ಮಣೇತರರ ನಡುವಿನ ಭಿನ್ನಾಭಿಪ್ರಾಯಗಳು ಮಿತಿಯನ್ನು ಮೀರಬಾರದು, ಮಿತಿ ಮೀರಿದರೆ ಅವರು ಕೈಗೊಂಡ ಸಾಮಾಜಿಕ ಚಳುವಳಿಗಳಿಗೆ ಧಕ್ಕೆಯುಂಟಾಗುತ್ತದೆ ಎಂಬುದು ಅವರ ಪ್ರಾಮಾಣಿಕ ಅನಿಸಿಕೆಯಾಗಿತ್ತು. ಆದ್ದರಿಂದ ೧೯೧೯–೨೦ರಲ್ಲಿ 'ಜಾಗರೂಕ' ಮತ್ತು 'ವಿಜಯಿಮರಾಠ'ಗಳ ನಡುವೆ ಬ್ರಾಹ್ಮಣೇತರರು ಮಂದಗಾಮಿ ಬ್ರಾಹ್ಮಣರ ನೆರವನ್ನು ಪಡೆಯಬೇಕೆ ಅಥವಾ ಬೇಡವೇ ಎಂಬ ಬಗ್ಗೆ ಭಯಂಕರ ಚರ್ಚೆ ಪ್ರಾರಂಭವಾಗಿತ್ತು. ಆಗ ಶಾಹುರವರು ಅದು ಬ್ರಾಹ್ಮಣೇತರರ ಉದ್ದೇಶಕ್ಕೆ ಹಾನಿಯುಂಟುಮಾಡುತ್ತದೆಯೆಂದು ಭಾವಿಸಿದ್ದರು. ಶಾಹು ಮಧ್ಯೆ ಪ್ರವೇಶಿಸಿದರು ಮತ್ತು ಜಗಳವಾಡುತ್ತಿದ್ದ ಎರಡು ಪಕ್ಷಗಳಿಗೆ ಜಗಳ ನಿಲ್ಲಿಸುವಂತೆ ಹೇಳಿದರು. ಜಗಳಪ್ರವೃತ್ತಿಯ ಪತ್ರಿಕೆಗಳ ಎರಡೂ ಪಕ್ಷಗಳು ಶಾಹುರವರ ಮಾತುಗಳಿಗೆ ಗೌರವ ಕೊಟ್ಟಿತು. ಲಠ್ಠೆಯವರಿಗೆ ಬರೆದ ಪತ್ರದಲ್ಲಿ ಶಾಹು ಹೇಳುತ್ತಾರೆ: "ಜಾಗರೂಕ ಮತ್ತು ವಿಜಯಿಮರಾಠಗಳ ನಡುವಿನ ಜಗಳ ಯಾವ ರೂಪ ತಾಳುತ್ತದೆ ಎಂಬ ಬಗ್ಗೆ ನಾನು ಕಳವಳಗೊಂಡಿದ್ದೆ. ಅವರ ನಡುವಣ ಅಸಮ್ಮತಿಯನ್ನು ಕೊನೆಗಾಣಿಸುವುದಕ್ಕೆ ನಾನು ಪ್ರಯತ್ನ ಮಾಡತೊಡಗಿದೆ ಮತ್ತು ಎರಡು ಪತ್ರಿಕೆಗಳು ತಮ್ಮ ನಡುವಣ ವೈಮನಸ್ಸನ್ನು ಕೊನೆಗಾಣಿಸಲು ನಿರ್ಧರಿಸಿರುವುದು ಸಂತೋಷದ ವಿಷಯವಾಗಿದೆ.... ನಮ್ಮ ಎಲ್ಲಾ ಪತ್ರಿಕೆಗಳು ಸಾಮಾನ್ಯ ಉದ್ದೇಶಕ್ಕಾಗಿ ಪರಸ್ಪರ ಒಗ್ಗಟ್ಟಿನಿಂದ ಕೆಲಸ ಮಾಡಬೇಕೆಂದು ನಾನು ಒತ್ತಾಯಪೂರ್ವಕವಾಗಿ ಕೇಳಿಕೊಳ್ಳುತ್ತೇನೆ (೨೫ ಸೆಪ್ಟಂಬರ್ ೧೯೨೦).[34]

## ಬ್ರಾಹ್ಮಣೇತರರ ಪತ್ರಿಕೆಗಳಿಗೆ ಸಲಹೆ

ಬ್ರಾಹ್ಮಣೇತರರ ಪತ್ರಿಕೆಗಳು ಪರಸ್ಪರ ತಮ್ಮತಮ್ಮಲ್ಲೇ ಕಚ್ಚಾಡುವುದನ್ನು ಬಿಟ್ಟು ಬ್ರಾಹ್ಮಣೇತರರ ಸಮುದಾಯಗಳ ವಿಮೋಚನೆಯ, ಆಂದೋಲನದ ಮುಖ್ಯ ಹಿತಾಸಕ್ತಿಗಳನ್ನು ಸಂರಕ್ಷಿಸಿಕೊಳ್ಳುವುದಕ್ಕೆ ತಮ್ಮ ಶಕ್ತಿಯನ್ನು ಉಳಿಸಬೇಕೆಂದು ಶಾಹುಮಹಾರಾಜರು ಭಾವಿಸಿದರು. ಅಂತಹ ಅಂತಃಕಲಹವು ಶತ್ರುಗಳಿಗೆ ಒಂದು ಆಯುಧವಾಗುತ್ತದೆಯೆಂದು ಅವರು ಚಿಂತಿಸಿದರು. ಈ ಅಭಿಪ್ರಾಯವನ್ನು ವಿವರವಾಗಿ ವಿವರಿಸುತ್ತಾ ಶಾಹುರವರು 'ಜಾಗೃತಿ'ಯ ಸಂಪಾದಕ ಭಗವಂತರಾವ್ ಪಾಲೇಕರ್ ಅವರಿಗೆ ಬರೆಯುತ್ತಾರೆ: 'ತಾವು ಕೊಲ್ಹಾಪುರಕ್ಕೆ ಬಂದಾಗ ಬರೋಡ ಸಂಸ್ಥಾನದ ಪ್ರತಿಯೊಂದು ಇಲಾಖೆಯ ಬಗ್ಗೆ ಬರೆಯುವ ಯೋಜನೆಯಿದೆಯೆಂದು ಹೇಳಿದ್ದೀರಿ. ಅದು ಬರೋಡ ಸಂಸ್ಥಾನ, ಮರಾಠಜಾತಿ ಮತ್ತು ಮರಾಠ ಪಕ್ಷಕ್ಕೆ

ಹಾನಿಗೆ ಕಾರಣವಾಗಬಹುದೆಂದು ನಾನು ನಿಮಗೆ ವಿವರಿಸಬೇಕಾಗಿದೆ. ಎನ್. ಸಿ. ಕೇಲ್ಕರ್ ಲಿಬರಲ್ ಪಕ್ಷಕ್ಕೆ ಸೇರಿದ್ದ ಮತ್ತು ತಿಲಕರು ಕರ್ಮಠರು, ಕೇಸರಿ ಎಂದಿಗೂ ತಿಲಕರ ವಿರುದ್ಧ ಬರೆಯಲಿಲ್ಲ. ಬ್ರಾಹ್ಮಣ ಪತ್ರಿಕೆಗಳಾದ 'ಲೋಕಸಂಗ್ರಹ', 'ರಾಜಸಂಗ್ರಹ', 'ಕೇಸರಿ' ಎಂದಿಗೂ ಬ್ರಾಹ್ಮಣ ಆಳರಸರ ವಿರುದ್ಧ ಬರೆಯಲಿಲ್ಲ. ಹಾಗಾದರೆ ಏಕೆ ಪತ್ರಿಕೆಗಳಾದ 'ಜಾಗೃತಿ', 'ವಿಜಯಿ ಮರಾಠ' ಗಾಯಕವಾಡ ಅಥವಾ ಮರಾಠರಾಜರ ವಿರುದ್ಧ ಬರೆಯುತ್ತಾರೆ? ಮರಾಠ ಪತ್ರಿಕೆಗಳು ನಮ್ಮ ಪಕ್ಷದ ವಿರುದ್ಧ ಬರೆದರೆ ಅವರು ವಿರೋಧಪಕ್ಷದಲ್ಲಿರುತ್ತಾರೆ. ಪಕ್ಷವು ಹೇಗೆ ಪತ್ರಿಕೆಗಳಿಗೆ ಸಹಾನುಭೂತಿ ಅಥವಾ ನೆರವು ನೀಡುತ್ತದೆ? ಎರಡನೆಯದಾಗಿ, ಒಂದು ಇಲಾಖೆಯ ವಿರುದ್ಧ ಬರೆಯುವುದಾದರೆ ಆ ವ್ಯಕ್ತಿಯು ಇಲಾಖೆಯ ಬಗ್ಗೆ ಪರಿಣಿತನಾಗಿರಬೇಕು. ಉದಾಹರಣೆಗೆ, ಒಬ್ಬ ನುರಿತ ಅನುಭವಿ ಇಂಜಿನಿಯರು ಇಂಜಿನಿಯರಿಂಗ್ ಇಲಾಖೆಯ ಬಗ್ಗೆ ಬರೆಯುವುದು ಅತ್ಯಾವಶ್ಯಕವಾದರೆ ಒಬ್ಬ ನೈರ್ಮಲ್ಯ ಅಧಿಕಾರಿ ನೈರ್ಮಲ್ಯ ಇಲಾಖೆಯ ಬಗ್ಗೆ ಬರೆಯಲು ಅವಶ್ಯಕ. ನಮ್ಮ ಟೀಕೆ/ವಿಮರ್ಶೆಯು ಮತ್ತೆ ಟೀಕೆ/ವಿಮರ್ಶೆ ಮಾಡಲಿಕ್ಕೆ ಇರಬಾರದು. ಅಂತಹ ಪರಿಣತರು ಇದ್ದಾರೆಯೇ? 'ಜಾಗೃತಿ' ಸಂಪಾದಕರು ಅಂತಹವರಲ್ಲಿ ಎಲ್ಲಿಂದ ಹಿಡಿಯುವರು? ತಮ್ಮ ಒಡೆಯ ಅಥವಾ ಪಕ್ಷದ ವಿರುದ್ಧ ಬರೆಯುವುದು ಎಂದಿಗೂ ಶೋಭಕರವಲ್ಲ. ಅಂಥ ಸಂದರ್ಭದಲ್ಲಿ ನಾನು, ಖಾಸೆರಾವ್, ಸಂಪತ್‌ರಾವ್, ನಿಂಬಾಲ್ಕರ್, ಶಿರಗಾವಕರ್ ಮತ್ತು ವಾಣಿಕರ್ ಅವರು 'ಜಾಗೃತಿ'ಗೆ ಸಹಾಯಮಾಡುವೆವು, ಆದರೆ ನಾವೆಲ್ಲ ಗಾಯಕವಾಡರಿಗೆ ಶತ್ರುಗಳಾಗುತ್ತೇವೆ. ಪ್ರೀತಿಯಿಂದ ಸಾಧಿಸಿದ್ದನ್ನು ಬೈಗುಳದಿಂದ ಸಾಧಿಸಲಾರೆವು. ಸ್ನೇಹಪರ ಹಕ್ಕುಗಳನ್ನು ಒತ್ತಿಹೇಳುವುದರಿಂದ ಸಾಧಿಸಿದ್ದನ್ನು ಸುಮ್ಮನೆ ಇರುವುದರಿಂದ ಸಾಧಿಸುವುದಕ್ಕೆ ಸಾಧ್ಯವಿಲ್ಲ. ಬರೋಡ ಮಹಾರಾಜರ ಇಲಾಖೆಗಳನ್ನು ವಿಮರ್ಶಿಸುವುದು ನಮ್ಮ ಘನತೆಗೆ ಅಥವಾ ಕೀರ್ತಿಯನ್ನು ಕಳೆಯುವುದು ಉಚಿತವಲ್ಲ; ಅವರ ಮೇಲೆ ಬೈಗುಳಗಳ ಸುರಿಮಳೆಗರೆಯುವುದು ಅಥವಾ ಹೆಸರಿಡಿದು ಕರೆಯುವುದು ನಮ್ಮ ಪ್ರೀತಿಯ ಗುರಿಯಾದ ಸುಧಾರಣೆಗಳನ್ನು ಬೆಳೆಸುವುದಿಲ್ಲ. ನಿಮ್ಮ ಪ್ರಭುವಾದ ಬರೋಡದ ಮಹಾರಾಜರು ಅಥವಾ ನಿಮ್ಮ ಪಕ್ಷ ತಪ್ಪು ಮಾಡಿದರೆ ನೀವು ಅವರನ್ನು ವ್ಯಕ್ತಿಗತವಾಗಿ ಭೇಟಿಯಾಗಿ ಅಥವಾ ಪತ್ರದ ಮೂಲಕ ದಂಡಿಸಬಹುದು. ನೀವು ಅವರ ಬಳಿ ವಾದ ಮಾಡಿ ಮತ್ತು ನಿಮ್ಮ ಅಭಿಪ್ರಾಯಗಳನ್ನು ತಿಳಿಸಿ, ಇವೆಲ್ಲವೂ ನಿಮ್ಮ ಪ್ರೀತಿಯ ಸಂಕೇತಗಳು. ನಿಮ್ಮ ಗುರಿಯು ನೆರವೇರುವುದು. ಆದರೆ ನಿಮ್ಮ ಪ್ರಭುವಿನ ಮತ್ತು ಪಕ್ಷದ ನಕಾರಾತ್ಮಕ ಮುಖಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸುವುದು ಶತ್ರುವಿಗೆ ಒಂದು ಆಯುಧವನ್ನು ಕೊಟ್ಟಂತೆಯೇ ಮತ್ತು ಅದು ಒಂದು ಹೇಸಿಗೆಯ ಕೃತ್ಯವಾಗುತ್ತದೆ.... ಪಾಶ್ಚಿಮಾತ್ಯ ದೇಶಗಳಲ್ಲಿ ದಿನಪತ್ರಿಕೆಗಳನ್ನು ಮಹಾರಾಜ ಮತ್ತು ರಾಷ್ಟ್ರವನ್ನು ಸುಧಾರಿಸುವ ಶಕ್ತಿಯುತ ಆಯುಧಗಳೆಂದು ಪರಿಗಣಿತವಾಗಿವೆ. ಆದರೆ ಇದು ಭಾರತಕ್ಕೆ ಸಂಬಂಧಿಸಿಲ್ಲ. ಏಕೆಂದರೆ ಭಾರತದಲ್ಲಿ ಸ್ವಯಂ ಆಡಳಿತ–ಸರಕಾರವಿಲ್ಲ. ಹಾಗಿರುವಾಗ ಪತ್ರಿಕೆಗಳು ಪಾಶ್ಚಿಮಾತ್ಯ ಪತ್ರಿಕೆಗಳನ್ನು ಅನುಕರಿಸುವುದು ಬೇಡ. ಭಾರತದಲ್ಲಿ ಮಹಾರಾಜರು ಬ್ರಿಟಿಷ್ ಸರಕಾರಕ್ಕೆ ಒಳ್ಳೆಯ ಆಡಳಿತ ನೀಡುವುದಕ್ಕೆ ಹೊಣೆಯಾಗಿದ್ದಾರೆ. ಅವರು ಹಲವಾರು ಜಾತಿಗಳು, ಧರ್ಮಗಳಿರುವಾಗ ಯಾವುದೇ ಪಕ್ಷವನ್ನು ಸಂತೈಸಲಾರರು. ಅವರು ಹೇಗೆ ಯಾವುದೇ ಒಂದು ಪಕ್ಷವನ್ನು ಖುಷಿಗೊಳಿಸುವುದು ಸಾಧ್ಯ? ನಮ್ಮ ಪತ್ರಿಕಾಕರ್ತರು ಈ ಎಲ್ಲಾ ಸನ್ನಿವೇಶಗಳನ್ನು ಪರಿಗಣಿಸಿ ಲೇಖನಗಳನ್ನು ಬರೆಯಬೇಕು" (ಫೆಬ್ರವರಿ ೫, ೧೯೨೨).[35]

ಬ್ರಾಹ್ಮಣೇತರರ ಪತ್ರಿಕೆಗಳು ತಮ್ಮ ಜನರನ್ನೇ ಸಾರ್ವಜನಿಕವಾಗಿ ಟೀಕೆ ಮಾಡುವ ಮೂಲಕ ತಮ್ಮ ಪಕ್ಷದವರ ಕಾಲುಗಳನ್ನು ಎಳೆಯಬಾರದೆಂದು ಶಾಹುರವರು ಅವರಿಗೆ ಸಲಹೆ ನೀಡಿದರು. ಅವರ ಪ್ರಸ್ತಾವನೆಯು ಪತ್ರಿಕೋದ್ಯಮದ ಪ್ರಮುಖ ತತ್ವಗಳಾದ ಅನುರೂಪತೆ (ಸಮಾನತೆ) ಮತ್ತು ನಿಷ್ಪಕ್ಷಪಾತತೆಗೆ ಅನುಗುಣವಾಗಿಲ್ಲದಿದ್ದರೂ ಆಂದೋಲನದ ಹಿತಾಸಕ್ತಿಗೆ ಪ್ರಾಯೋಗಿಕವಾಗಿ ಹೆಚ್ಚು ಪ್ರಯೋಜನಕಾರಿಯಾಗಿದೆ. ಮೂಲತಃ ಶಾಹುರವರು ಬ್ರಾಹ್ಮಣೇತರರ ಪಕ್ಷವನ್ನು ಬಲಪಡಿಸಲು ಬ್ರಾಹ್ಮಣೇತರರ ಪತ್ರಿಕೆಗಳನ್ನು ಬೆಳೆಸಿದರು. ಈ ಎಲ್ಲಾ ಸಂಕೀರ್ಣತೆಗಳನ್ನು ಪರಿಗಣಿಸಿದಾಗ ಶಾಹುರವರ ಪ್ರಸ್ತಾವನೆಯು ಆಂದೋಲನ ಸಂಘಟನಾತ್ಮಕ ಶಿಸ್ತಿನ ನಿಯಮವಾಗುತ್ತದೆ. ಅವರು ಆಂದೋಲನದ ಸಫಲತೆಗಾಗಿ ಇದನ್ನು ಅನುಸರಿಸಬೇಕೆಂದು ಬಯಸಿದ್ದರು. ಶಾಹುರವರನ್ನು ಬಿಟ್ಟರೆ ಮಹಾರಾಷ್ಟ್ರದಲ್ಲಿ ಯಾರಿಗೂ ಬ್ರಾಹ್ಮಣೇತರರ ಪತ್ರಿಕೆಗಳು ಅಂಥ ನಿಯಮಗಳನ್ನು ಪಾಲಿಸಬೇಕೆಂದು ಹೇಳುವ ನೈತಿಕ ಹಕ್ಕು ಇಲ್ಲ. ಬಹುಮಟ್ಟಿಗೆ ಬ್ರಾಹ್ಮಣೇತರರ ಪತ್ರಿಕೋದ್ಯಮಿಗಳೆಲ್ಲರೂ ಅವರ ಒಮ್ಮತದ ಹಕ್ಕನ್ನು ಒಪ್ಪಿಕೊಂಡಿದ್ದರು. ಈ ರೀತಿಯಲ್ಲಿ ೨೦ನೇ ಶತಮಾನದ ಆದಿಭಾಗದಲ್ಲಿದ್ದ ಬ್ರಾಹ್ಮಣರ ಪತ್ರಿಕೋದ್ಯಮದ ಏಕಸ್ವಾಮ್ಯತೆ ಶಾಹುರವರ ಆಡಳಿತದ ಕೊನೆಗೆ ಮುರಿದುಬಿತ್ತು ಮತ್ತು ಸಣ್ಣ-ಪುಟ್ಟ ಮತ್ತು ದೊಡ್ಡ ಬ್ರಾಹ್ಮಣೇತರರ ಪತ್ರಿಕೆಗಳು ಬಹುಜನರಿಗೆ ಧ್ವನಿ ನೀಡಿ ಮಹಾರಾಷ್ಟ್ರದಲ್ಲೆಲ್ಲ ಪ್ರದರ್ಶನ ನೀಡಲು ಪ್ರಾರಂಭಿಸಿದವು. ಐತಿಹಾಸಿಕವಾಗಿ, ಪತ್ರಿಕೋದ್ಯಮದಲ್ಲಿ ಸಮಾಜ-ಪರ ಬದಲಾವಣೆಯ ಕೀರ್ತಿಯನ್ನು ಬೇರಾರಿಗೂ ಅಲ್ಲದೆ ಶಾಹುಮಹಾರಾಜರಿಗೆ ನೀಡುವುದು ಔಚಿತ್ಯಪೂರ್ಣವಾಗಿದೆ.

---

೩೧

# ಸಂಚುಗಳು

**ಭಾ**ರತದಲ್ಲಿ ಸಾಮಾಜಿಕ ಸುಧಾರಣೆಯು ಒಂದು ಮಿಷನ್ನು ಅಥವಾ ಭಾರತದ ರೂಢಿಯ ಮಾತಿನಲ್ಲಿ ಅದು ಒಂದು ತಪಸ್ಸು, ಅದು ಪ್ರಾಯಶ್ಚಿತ್ತಕ್ಕಿಂತ ಬಹುಕಠಿಣವಾದದ್ದು, ಅದು ಕತ್ತಿಯ ಮೊನೆಯ ಮೇಲೆ ನಡೆಯುವುದಕ್ಕಿಂತ ಕಠಿಣವಾದದ್ದು. ಈ ತಪಸ್ಸನ್ನು ಕೈಗೊಂಡಿದ್ದು ಕೇವಲ ಆತ್ಮ-ಸಂತೃಪ್ತಿಗಾಗಿ ಅಲ್ಲ ಅಥವಾ ಹೆಸರು ಗಳಿಕೆಗಾಗಿ ಅಲ್ಲ. ಇಡೀ ಸಮಾಜದ ಕಲ್ಯಾಣಕ್ಕಾಗಿ ಕೈಗೊಂಡ ಸ್ವಾರ್ಥರಹಿತ ಮಿಷನ್ನು. ಸಾಮಾಜಿಕ ಸುಧಾರಕನ ಹಾದಿ ದುರ್ಗಮವಾದದ್ದು. ಅವರ ಇಡೀ ಪ್ರಯತ್ನ ಸ್ಥಾಪಿತ ಸಂಪ್ರದಾಯವಾದಿ ನಿಯಮ ಆಚರಣೆಗಳ ವಿರುದ್ಧವಾದುದು ಮತ್ತು ಈ ಪ್ರಯತ್ನವು ಸಮಾಜದ ದುರ್ಬಲ ವರ್ಗಗಳನ್ನು ಆಳಿದ ಮತ್ತು ಶೋಷಣೆ ಮಾಡಿದ ಸ್ಥಾಪಿತ ವರ್ಗಗಳ ಸದಸ್ಯರನ್ನು ಬಾಧಿಸುತ್ತದೆ. ಬಹಳ ಸಲ ಸುಧಾರಕನು ಈ ಜನರ ಶತ್ರುತ್ವದಿಂದ ಹಿಂಜರಿಯಬೇಕಾಗುತ್ತದೆ. ಮತ್ತು ಮತ್ತೆ ಮುಂದುವರಿಯಬೇಕಾಗುತ್ತದೆ. ಮಹಾರಾಷ್ಟ್ರದ ನೂರಾರು ವರ್ಷಗಳ ಗತ ಇತಿಹಾಸವು ಮತ್ತು ಮಹಾರಾಷ್ಟ್ರದ ಮಹಾಸುಧಾರಕರ ಜೀವನಗಳು ಈ ಮುಖ್ಯ ಮತ್ತು ಕಹಿಯ ಐತಿಹಾಸಿಕ ಸಂಗತಿಗಳ ಸಾಕ್ಷ್ಯಗಳಾಗಿವೆ. ಕೆಳಜಾತಿಯ ಮಹಾತ್ಮ ಫುಲೆಯವರಾಗಲಿ ಅಥವಾ ಮೇಲುವರ್ಗಕ್ಕೆ ಸೇರಿದ ಪ್ರಾಂಶುಪಾಲ ಆಗರ್‌ಕರ್ ಆಗಲಿ ಯಾವ ಸುಧಾರಕನೂ ಇದಕ್ಕೆ ಅಪವಾದವಾಗಿಲ್ಲ. ಅವರೆಲ್ಲರೂ ತಮ್ಮ ಜೀವನದಲ್ಲಿ ಪೋಷಿಸಿಕೊಂಡು ಬಂದಿದ್ದ ಮೌಲ್ಯಗಳನ್ನು ತಮ್ಮ ಶತ್ರುಗಳು ಶವಸಂಸ್ಕಾರದ ಮೆರವಣಿಗೆಯಲ್ಲಿ ಕೊಂಡೊಯ್ದುದನ್ನು ಕಣ್ಣಾರೆ ಕಂಡರು. ಎಲ್ಲಕ್ಕಿಂತ ಮಿಗಿಲಾಗಿ ಅವರು ಸಂಪ್ರದಾಯವಾದಿಗಳ ಕಠೋರದಾಳಿಗಳನ್ನು ಸಹಿಸಬೇಕಾಯಿತು. ಕೆಲವು ಸುಧಾರಕರು ಅತ್ಯಂತ ನೀಚ ಮತ್ತು ಕ್ರೂರವಾದ ಹೊಡೆತಗಳನ್ನು ಸಹಿಸಿಕೊಳ್ಳಬೇಕಾಯಿತು. ಈ ದಾಳಿಗಳು ಅತ್ಯಂತ ನೀಚಮಟ್ಟದ ನಿಂದೆಗಳಾದಾಗ ಸುಧಾರಕರಿಗೆ ಮಿಷನ್ನು ಹೆಚ್ಚು ಒತ್ತಾಯವಾಗುತ್ತದೆ. ಅದು ತಲೆಯ ಮೇಲೆ ಕೆಂಡಗಳನ್ನು ಹೊತ್ತಂತಾಗುತ್ತದೆ.

## ಮೊದಲನೆಯ ದಾಳಿ

ಶಾಹು ಮಹಾರಾಜರು ಧರ್ಮಕ್ಕೆ ವಿರುದ್ಧವಾದ ಹಲವಾರು ದಾಳಿಗಳನ್ನು ಎದುರಿಸಬೇಕಾಯಿತು. ಮೊದಲನೆಯ ಘಟನೆ ೧೯೦೧ರ ಸುಮಾರಿಗೆ ಸಂಬಂಧಿಸಿದ್ದು. ವೇದೋಕ್ತದ ಬಿರುಗಾಳಿಯ ಸಮಯದಲ್ಲಿ ಅವರು ತನ್ನ ಅರಮನೆಯಲ್ಲಿ ಒಳ್ಳೆಯ ಮತ್ತು ಶ್ರೀಮಂತ ಜೇರ್ಗೆ ಕುಟುಂಬದ ಸುಂದರ ಹುಡುಗಿಯ ಮೇಲೆ ಅತ್ಯಾಚಾರ ಎಸಗಿದ್ದಾರೆಂಬ ಆರೋಪಕ್ಕೊಳಗಾದರು. ಶಾಹುರವರ ಶತ್ರುಗಳು ಅಂತಹ ಒಂದು ಕೂಗನ್ನು ನಿರ್ಮಿಸಿದರು ಮತ್ತು ಹುಡುಗಿಯ ತಂದೆ ಆತ್ಮಹತ್ಯೆ ಮಾಡಿಕೊಂಡರು. ಈ ವಿಷಯ ಹೆಚ್ಚು ಸಂಕ್ಲಿಷ್ಟಗೊಂಡಿತು ಮತ್ತು ಅವರ ಶತ್ರುಗಳು ಇದನ್ನು ತಂತ್ರಗಾರಿಕೆಯಿಂದ ಬಳಸಿಕೊಂಡರು. ಅವರಿಗೆ

ಈಗ ಹರಡಲು ಮಸಾಲೆಯ ಕತೆ ಸಿಕ್ಕಿತು ಮತ್ತು ಶಾಹುರವರ ಚಾರಿತ್ರ್ಯವಧೆಮಾಡಲು ಒಂದು ಆಯುಧ ಸಿಕ್ಕಿತು. ಬ್ರಿಟಿಷ್ ಸರಕಾರ ಆರೋಪದ ಮಹತ್ವವನ್ನು ಅರಿತು ತನಿಖೆಮಾಡಲು ಒಪ್ಪಿತು. ಸರಕಾರಕ್ಕೆ ಆರೋಪವು ಹುರುಳು ಇಲ್ಲದ್ದೆಂದು ಗೊತ್ತಾಯಿತು. ಈ ಘಟನೆ ನಡೆದಾಗ ಶಾಹು ಮಹಾರಾಜರು ವಾಸ್ತವಿಕವಾಗಿ ಕೊಲ್ಹಾಪುರದಲ್ಲಿ ಇರದೆ ಹೊರಗಡೆ ಅವರು ಸೊನ್‌ತಾಲಿ (ರಾಜಪೂತ ವಾಡಿಕ್ಯಾಂಪ್) ಯಲ್ಲಿದ್ದರು. ಶತ್ರುಗಳಿಗೆ ಆ ಬಗ್ಗೆ ಕಾಳಜಿಯಿಲ್ಲ. ಶಾಹುರವರ ಹಾಜರಿ ಕೊಲ್ಹಾಪುರದ ಹೊಸ ಅರಮನೆಯಲ್ಲಿದ್ದರೆಂಬುದನ್ನು ಅವರು ಭಾವಿಸಿಬಿಟ್ಟು ಕತೆ ಕಟ್ಟಿದ್ದರು.[1]

ಇತಿಹಾಸ ಕೆಲವೊಮ್ಮೆ ಪವಾಡದಲ್ಲಿ ಮರುಕಳಿಸುತ್ತದೆ. ಪುನರಾವರ್ತನೆಯು ಒಮ್ಮೊಮ್ಮೆ ಘಟನೆ ಅಥವಾ ವ್ಯಕ್ತಿಯ ರೂಪದಲ್ಲಿರುವುದಿಲ್ಲ. ಆದರೆ ಅದು ಸತ್ವ ಅಥವಾ ಮನೋಭಾವದ ರೂಪದಲ್ಲಿರುತ್ತದೆ. ಅಂತಹದ್ದೇ ಸಂಚು ೨೨೫ ವರ್ಷಗಳ ಹಿಂದೆಯೇ ಶಾಹು ಸೇರಿದ ವಂಶದ ಸ್ಥಾಪಕ ಶಿವಾಜಿ ಮಹಾಶಯನ ಮಗ ಚಕ್ರವರ್ತಿ ಸಂಭಾಜಿಯ ಹೆಸರನ್ನು ಕೆಡಿಸಲು ಪ್ರಯತ್ನಮಾಡಲಾಗಿತ್ತು. ಇಲ್ಲಿ ಮತ್ತೆ ಸಂಭಾಜಿಯ ಶತ್ರುಗಳು ಅವನ ಹೆಸರು ಕೆಡಿಸಲು ಒಂದು ಸಂಚನ್ನು ಹೂಡಿದರು ಮತ್ತು ಹೀಗೆ ಅವನು ಸಿಂಹಾಸನ ಏರುವ ಹಕ್ಕನ್ನು ನಿರಾಕರಿಸಿದರು. ಶತ್ರುಗಳು ಪ್ರೇಮಹಗರಣದ ಕತೆಯನ್ನು ಹೆಣೆದರು. ಸಂಭಾಜಿ ಪ್ರತಿ ರಾತ್ರಿ ಬ್ರಾಹ್ಮಣಮಂತ್ರಿಯ ಮಗಳನ್ನು ಭೇಟಿಮಾಡಲು ಹೋಗುತ್ತಿದ್ದನು. ಅವರು ಈ ಪ್ರೇಮದಿಂದ ಹೊರಬರದಿದ್ದರೆ ಅವನನ್ನು ಪರ್ವತದ ಶಿಖರದ ತುದಿಯಿಂದ ಕೆಳಕ್ಕೆ ಎಸೆಯಲಾಗುವುದೆಂದು ಕತೆಯನ್ನು ಹೆಣೆದಿದ್ದರು. ಈ ಆರೋಪವು ಬ್ರಿಟಿಷ್ ಸರಕಾರಕ್ಕೆ ತಲುಪಿತು.

ಸಂಭಾಜಿಯ ಚಾರಿತ್ರ್ಯವಧೆಯು ಅವನ ಸತ್ತನಂತರವೂ ಹೆಚ್ಚು ಆರೋಪಗಳ ಹೆಣೆಯುವಿಕೆಯು ಮುಂದುವರೆದಿತ್ತು. ಅವರು ಸತ್ತು ೧೨೫ ವರ್ಷಗಳಾದರೂ ಹುಟ್ಟುಹಾಕಿದ ಒಂದು ಕತೆಯು ಹೆಚ್ಚು ನಿಂದಾತ್ಮಕವಾದ ಆರೋಪವಾಗಿದೆ. ರಾಯಗಢ ಕೋಟೆಯಲ್ಲಿ ಶಿತ್ಲಗೌರಿ ಮಹಿಳೆಯರ ಕುಂಕುಮದ ಸಮಾರಂಭದಲ್ಲಿ ಸಂಭಾಜಿಯವರು ಸುಂದರವಾದ ಒಬ್ಬ ಬ್ರಾಹ್ಮಣ ಹುಡುಗಿಯನ್ನು ಬಲಾತ್ಕಾರವಾಗಿ ಹೊತ್ತುಕೊಂಡು ಹೋಗಿ ಒಂದು ಕೊಠಡಿಯಲ್ಲಿ ಅತ್ಯಾಚಾರ ಎಸಗಿದರು ಎಂದು ಆರೋಪಮಾಡಲಾಯಿತು. ಶಿವಾಜಿ ಮಹಾರಾಜರಿಗೆ ಇದು ಗೊತ್ತಾದಾಗ ಅವರು ಕ್ರುದ್ಧರಾದರು ಮತ್ತು ಈ ಕೋಪದ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಸಂಭಾಜಿಯು ಓಡಿಹೋಗಿ ಶತ್ರುವಾದ ದಿಲೇರಖಾನ ಪಕ್ಷವನ್ನು ಸೇರಿದನು. ವಾಸ್ತವಿಕವಾಗಿ ಈ ಆರೋಪಿತವಾದ ಸಂಚಿನ ಘಟನೆ ನಡೆದಾಗ ಸಂಭಾಜಿ ಕೊಂಕಣದ ದಕ್ಷಿಣ ಭಾಗವಾದ ಸಂಗಮೇಶ್ವರದಲ್ಲಿದ್ದರು ಮತ್ತು ರಾಯಗಢದಲ್ಲಿರಲಿಲ್ಲ. ಅವರು ದಿಲೇರಖಾನನನ್ನು ಸಜ್ಜನಗಢದಲ್ಲಿ ಸೇರಿದರೆ ಹೊರತು ರಾಯಘಡದಿಂದಲ್ಲ. ಆದರೆ ಈ ಹೆಣಿಕೆಗಾರರಿಗೆ ವಾಸ್ತವಿಕ ಇತಿಹಾಸದಿಂದ ಆಗಬೇಕಾದದ್ದು ಏನೂ ಇರಲಿಲ್ಲ. ಅವರ ಏಕೈಕ ಉದ್ದೇಶ ರಾಜಕುಮಾರನ ಹೆಸರನ್ನು ಕೆಡಿಸುವುದಾಗಿತ್ತು.[2] ಛತ್ರಪತಿ ಸಂಭಾಜಿಯ ಚಾರಿತ್ರ್ಯಹರಣವು ಅವರು ಬದುಕಿದ್ದಾಗ ಮತ್ತು ಸತ್ತನಂತರವೂ ನಡೆಯುತ್ತಿತ್ತು. ಇದು ಶಾಹುಮಹಾರಾಜ ಶಾಹುರವರ ವಂಶಸ್ಥರ ಹಣೆಬರಹವಾಗಿದ್ದರೆ, ಅವರ ಶತ್ರುಗಳು ಅವರಿರುವಾಗ ಮತ್ತು ಆಡಳಿತದ ನಂತರ ಹೆಸರು ಕೆಡಿಸಲು ಶತ್ರುಗಳು ಹಂಚಿಕೆ ಹೂಡಿದರು. ಸಂಭಾಜಿಯವರ ಕಿರೀಟ ಧರಿಸಿದ ರಾಜನಾಗಿ ನಂತರ ಸ್ವತಂತ್ರ ಮರಾಠಿ ರಾಷ್ಟ್ರದ ಛತ್ರಪತಿಗಳಾದರೆ ಶಾಹು ಛತ್ರಪತಿಗಳು ಬ್ರಿಟಿಷರ ಅಧೀನದಲ್ಲಿ ಸಾಮಂತರಾಗಿ ಹಲವಾರು ರಾಜಕೀಯ ನಿರ್ಬಂಧಗಳಿಗೆ ಒಳಗಾಗಿದ್ದರೆಂಬುದೇ ಅವರ ನಡುವಣ ವ್ಯತ್ಯಾಸವಾಗಿತ್ತು. ಆದರೆ ಅವರಿಬ್ಬರು ಸಮಾಜದ ಕ್ರೂರಿಗಳ ಬಲೆಗೆ ಗುರಿಯಾಗಿದ್ದರು.

ಅವರಿಬ್ಬರು ಉತ್ತಮ ಕೆಲಸಗಳನ್ನು ಮಾಡಲು ತೊಡಗಿದ್ದರಿಂದ ಅವರಿಬ್ಬರು ಮಾನಸಿಕ ಹಿಂಸೆಗೆ ಗುರಿಯಾಗಬೇಕಾಯಿತು.

**ಎರಡನೆಯ ದಾಳಿ**

ಶಾಹುರವರ ಶತ್ರುಗಳು ಅವರನ್ನು ೧೯೦೬ರಲ್ಲಿ ಎರಡನೆಯ ಬಾರಿಗೆ ದಾಳಿಮಾಡಿದರು. ವೇದೋಕ್ತ ಪ್ರಕರಣದಲ್ಲಿ ಅಸಹನೀಯವಾದ ಸೋಲನ್ನು ಅನುಭವಿಸಿದ ಕೊಲ್ಹಾಪುರದ ಬ್ರಾಹ್ಮಣರ ದುಷ್ಟಕೂಟ, ಬ್ರಾಹ್ಮಣ ಭಯೋತ್ಪಾದಕ ಹಿಂಸಾತ್ಮಕ ಚಟುವಟಿಕೆಗಳು ಮತ್ತು ಶಾಹುರವರು ತನ್ನ ಸಂಸ್ಥಾನದಲ್ಲಿ ಭಯೋತ್ಪಾದನೆಯನ್ನು ಮಟ್ಟಹಾಕಲು ಕೈಗೊಂಡ ಉಗ್ರಕ್ರಮಗಳು – ಇವುಗಳ ಸಮ್ಮಿಶ್ರ ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ಈ ದಾಳಿಯನ್ನು ಮಾಡಲಾಯಿತು. ೧೯೦೬ರ ಮಧ್ಯದ ಹೊತ್ತಿಗೆ ಕೊಲ್ಹಾಪುರದಲ್ಲಿದ್ದ ಶಾಹು ಶತ್ರುಗಳು ಶಾಹುರವರು ಮೂರು ಮಹಿಳೆಯರ ಮೇಲೆ ಬಲಾತ್ಕಾರವಾಗಿ ಅತ್ಯಾಚಾರ ಎಸಗಿದ್ದಾರೆಂಬ ಆರೋಪದ ಬಗ್ಗೆ ತನಿಖೆ ನಡೆಸಲು ಬಾಂಬೆಯ ಸರಕಾರಕ್ಕೆ ಪತ್ರಗಳನ್ನು ಬರೆದರು. ಈ ಪತ್ರಗಳಲ್ಲಿ ಕೆಲವು ಪತ್ರಗಳು ಮೂಗರ್ಜಿಗಳಾಗಿದ್ದರೆ ಮತ್ತೆ ಕೆಲವು ನಕಲಿ ಪತ್ರಗಳಾಗಿದ್ದವು. ಹಾಗೆಯೇ ಅರ್ಜಿ ಮತ್ತು ಪತ್ರದ ಒಂದು ಪತ್ರವನ್ನು ಕಲಕತ್ತಾದ ವೈಸ್‌ರಾಯ್ ಅವರ ಹೆಂಡತಿಯಾದ ಶ್ರೀಮತಿ ಮಿಂಟೊ ಅವರಿಗೆ ಕೊಲ್ಹಾಪುರದ ಬ್ರಾಹ್ಮಣ ಮಹಿಳೆಯ ಹೆಸರಿನಲ್ಲಿ ಕಳುಹಿಸಲಾಯಿತು. ಭಾರತದ ಸಂಸ್ಥಾನದಲ್ಲಿ ಒಬ್ಬ ಮಹಾರಾಜನು ಹೆಣ್ಣಿನ ಮಾನವನ್ನು ಕಳೆದಿದ್ದಾನೆ ಮತ್ತು ಅವನನ್ನು ಅಧಿಕಾರದಿಂದ ಇಳಿಸಬೇಕೆಂಬ ದೃಷ್ಟಿಯಿಂದ ಮಹಿಳೆಯಾದ ಶ್ರೀಮತಿ ಮಿಂಟೊ ಅವರ ಸಹಾನುಭೂತಿಯನ್ನು ಗಳಿಸಲು ಸೃಷ್ಟಿಸಿ ಕಳುಹಿಸಿದ್ದು. ಈ ವಿಷಯ ಬಾಂಬೆ ಸರಕಾರಕ್ಕೆ ತಲುಪಿದ್ದು ಮಾತ್ರವಲ್ಲದೆ ವೈಸ್‌ರಾಯ್ ಆಸ್ಥಾನ(ಕೋರ್ಟ್)ಕ್ಕೆ ತಲುಪಿದ್ದರಿಂದ ಬ್ರಿಟಿಷ್ ಸರಕಾರ ಇದನ್ನು ಗಮನಿಸಿ ತನಿಖೆಗೆ ಒಳಪಡಿಸಿತು. ಕೊಲ್ಹಾಪುರದಲ್ಲಿರುವ ಬ್ರಿಟಿಷ್ ಸರಕಾರದ ರಾಜಕೀಯ ಪ್ರತಿನಿಧಿಯಾದ ಕರ್ನಲ್ ಫೆರಿಸ್ ಅವರು ಇದರ ತನಿಖೆಮಾಡುವಂತೆ ಫೆರಿಸ್‌ರಿಗೆ ಆಜ್ಞೆಮಾಡಲಾಯಿತು. ಕರ್ನಲ್ ಫೆರಿಸ್‌ರು ಶಾಹುರವರನ್ನು ಭೇಟಿಮಾಡಿ ಆರೋಪದ ಬಗ್ಗೆ ವಿವರಣೆಯನ್ನು ಲಿಖಿತ ರೂಪದಲ್ಲಿ ಕಳುಹಿಸಿದರು. ಅವರ ನೈತಿಕ ನಿಲುವನ್ನು ಅರ್ಥಮಾಡಿಕೊಳ್ಳಲು ಮುಖ್ಯವಾಗಿರುವುದರಿಂದ ಈ ಪತ್ರವನ್ನು ಅದರ ಮುಖ್ಯವಾದ ಭಾಗವನ್ನು ಅಗತ್ಯವೆಂದು ಅದನ್ನು ಯಥಾವತ್ತಾಗಿ ಇಲ್ಲಿ ಕೊಡಲಾಗಿದೆ.

ಕೊಲ್ಹಾಪುರ
೭ ಆಗಸ್ಟ್, ೧೯೦೬

ನನ್ನ ಪ್ರೀತಿಯ ಕರ್ನಲ್ ಫೆರಿಸ್ ಅವರೇ,

ನಾವು ಮೂವರು ಮಹಿಳೆಯರ ಬಗ್ಗೆ ಮಾತನಾಡಿದ ವಿಚಾರದ ಬಗ್ಗೆ, ಪತ್ರವು ಅನಾಮಧೇಯವಾಗಿರುವುದರಿಂದ ತಾವು ವಿಷಯದ ಮೂಲಕ್ಕೆ ಹೋಗುವುದು ಉತ್ತಮ. ಇದು ನನ್ನ ಶತ್ರುಗಳ ಕೈವಾಡ ಎಂಬುದರಲ್ಲಿ ಸಂಶಯವಿಲ್ಲ. ಅಂತಹ ಪತ್ರಗಳು ಯಾವಾಗಲು ಸರಕಾರಕ್ಕೆ ಹೋಗುತ್ತವೆ. ಅವರು ಎಂದಿಗೂ ಪ್ರಶ್ನೆಯನ್ನು ಕೇಳುವುದಿಲ್ಲ ಮತ್ತು ಯಾವುದರ ಬಗ್ಗೆ ಗಂಭೀರವಾಗಿರುವುದಿಲ್ಲ. ಹಾಗೆಯೇ ಈ ಬಾರಿಯು ಕೂಡ. ಕಾಕಾಮಾಸ್ತರರು ತಾವೇ ಸಹಿಮಾಡಿ ಸರಕಾರಕ್ಕೆ ಅದೇ ರೀತಿಯ ಆರೋಪಮಾಡಿ ಅರ್ಜಿ ಕಳುಹಿಸಿದರೂ, ಸರಕಾರ ಆ ಬಗ್ಗೆ ಹೆಚ್ಚು

ಗಂಭೀರವಾಗಿ ತೆಗೆದುಕೊಂಡಿಲ್ಲ. ಆದರೆ ಈಗ ಅವರಿಗೆ ಕತೆ ನಿಜವಿರಬಹುದೆಂದು ಅನುಮಾನವಿರುವುದರಿಂದ ಅವರು ಈಗ ಕೇಳಿದ್ದಾರೆ. ಹಾಗೆ ಇರಬಹುದೆಂದು ನಾನು ಬಯಸುವುದಿಲ್ಲ. ಆದ್ದರಿಂದ ನಾನು ಈ ವಿಷಯದ ಬಗ್ಗೆ ಕೂಲಂಕಷವಾಗಿ ವಿಚಾರಣೆಮಾಡಿ ಎಂದು ನಾನು ಕೋರುತ್ತೇನೆ. ಅಂತಹ ತನಿಖೆಯು ನನ್ನ ಮರ್ಯಾದೆ ತೆಗೆಯುತ್ತದೆಯೆಂದು ನಾನು ಭಾವಿಸುವುದಿಲ್ಲ. ಪ್ರೊ. ವಿಜ್‌ಪೂರ್‌ಕರ್, ರಾಷಿಂಗ್‌ಕರ್, ತಿಲಕರು ಮತ್ತು ದೇಶೀಯ ಪತ್ರಿಕೆಗಳ ಸಂಪಾದಕರು ನನ್ನ ಶತ್ರುಗಳೆಂಬುದು ನಿಮಗೆ ಗೊತ್ತು. ಮತ್ತು ಅವರೆಲ್ಲರೂ ತನಿಖೆಗೆ ಅವಕಾಶಮಾಡಿಕೊಟ್ಟರೂ ನಾನು ಅನ್ಯಥಾ ಭಾವಿಸುವುದಿಲ್ಲ. ನಿಮಗೆ ತನಿಖೆ ಮಾಡುವುದು ಇಷ್ಟವಿಲ್ಲದಿದ್ದರೆ, ನೀವು ಅವರನ್ನು ಖಾಸಗಿಯಾಗಿ ಸತ್ಯವನ್ನು ಕೇಳಬಹುದು. ನೀವು ಸಾರ್ವಜನಿಕವಾಗಿ ಅಥವಾ ಖಾಸಗಿಯಾಗಿ ಮಹಿಳೆಯರ ಪೋಷಕರನ್ನು ಕೇಳಬಹುದು. ......ಇದಕ್ಕೆ ಸಂಬಂಧಪಟ್ಟವರೆಲ್ಲರ ಚರಿತ್ರೆಗಳನ್ನು ಸ್ಪಷ್ಟಗೊಳಿಸುವುದು ಅಪೇಕ್ಷಣೀಯ. ಮತ್ತು ಪ್ರಸ್ತುತ ಕೇಸಿನ ತನಿಖೆಯಲ್ಲಿ ಮಾಡಿದ ಆರೋಪಗಳ ವಿಚಾರಣೆಯಲ್ಲಿ ಜೀವ ತುಂಬುವುದು ಮುಖ್ಯ. ನನ್ನ ಶತ್ರುಗಳಾದ ತಿಲಕರು ಮತ್ತು ಅವರ ಪಕ್ಷ ನನ್ನ ಹಾಜರಿ ಬೇಕಾಗಿಲ್ಲ ಎಂದು ಹೇಳಿದರೆ ನಾನು ಸ್ವಲ್ಪ ಸಮಯಕ್ಕೆ ಪ್ರವಾಸದ ಮೇಲೆ ಹೋಗುವೆನು. ಎಲ್ಲಾ ತನಿಖೆಗಳಾದ ನಂತರ ಆರೋಪಗಳು ಹುರುಳಿಲ್ಲವೆಂದು ಕಂಡುಬಂದರೆ ತಿಲಕರ ಪಕ್ಷದಲ್ಲಿ ಆರೋಪಮಾಡಿದವರಿಗೆ ಅವರ ತಪ್ಪುಗಳ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಬೇಕು.

ಮೇಲೆ ಹೇಳಿದ ಜನರು ಈ ಆರೋಪಗಳ ಮೂಲದಲ್ಲಿರುವವರು ಈ ಮೂರು ಕೇಸುಗಳಲ್ಲದೆ ನಾನು ಹುಟ್ಟಿದ ದಿನದಿಂದ ಇಂದಿನ ದಿನದವರೆಗೆ ಯಾವುದೇ ಪ್ರಕರಣವನ್ನು ಆಯ್ಕೆಮಾಡಿಕೊಂಡರೂ ನಾನು ಅವುಗಳನ್ನು ಎದುರಿಸುತ್ತೇನೆ.

ತಮ್ಮ ವಿಶ್ವಾಸಿ
ಸಹಿ
**ಶಾಹು ಛತ್ರಪತಿ**

ದಯವಿಟ್ಟು ನೋಡಿ: ಈ ವಿಷಯದ ಬಗ್ಗೆ ನಾನು ಹೇಳಬೇಕೆಂದು ಬಯಸಿದ ಎಲ್ಲಾ ವಿಚಾರಗಳನ್ನು ಈ ಪತ್ರವು ಒಳಗೊಂಡಿದೆಯೆಂದು ನಂಬುತ್ತೇನೆ. ಈ ಪತ್ರವನ್ನು ಕಡತಕ್ಕೆ ಸೇರಿಸಿದರೆ ನಾನೇನು ಅನ್ಯಥಾಭಾವಿಸುವುದಿಲ್ಲ.........[3]

ಮೇಲೆ ಹೇಳಿದ ಪತ್ರದಲ್ಲಿ ಶಾಹುರವರು ತಮ್ಮ ನಿಲುವನ್ನು ಮಂಡಿಸುತ್ತಾ ಈ ಕೆಳಕಂಡ ಅಂಶಗಳ ಬಗ್ಗೆ ಸ್ಪಷ್ಟೀಕರಣ ನೀಡಿದ್ದಾರೆ:

೧. ಶತ್ರುಗಳು ಅನಾಮಧೇಯ ಪತ್ರಗಳನ್ನು ಬರೆದಿದ್ದರೂ ಆರೋಪಗಳ ಬಗ್ಗೆ ಸೂಕ್ತ ತನಿಖೆಯಾಗಬೇಕು.

೨. ಅವರು ಅಂಥ ತನಿಖೆಯಿಂದ ತಮ್ಮ ಘನತೆಗೆ ಹಾನಿಯಾಗುವುದೆಂದು ಅವರು ಯೋಚಿಸುವುದಿಲ್ಲ.

೩. ವಿರೋಧ ಪಕ್ಷದ ಸದಸ್ಯರು ಸಹಾಯಕರಾದ ವಿಜ್‌ಪೂರ್‌ಕರ್, ರಾಷಿಂಗ್ಕರ್, ತಿಲಕ ಮೊದಲಾದರವನ್ನು ತೆಗೆದುಕೊಂಡರು. ಅವರು ಆಕ್ಷೇಪಿಸುವುದಿಲ್ಲ; ಒಂದುವೇಳೆ ಸರಕಾರ

ಅಂತಹ ತನಿಖೆಯ ಬಗ್ಗೆ ಆಸಕ್ತಿವಹಿಸದಿದ್ದರೆ ಅವರನ್ನು ಖಾಸಗಿಯಾಗಿ ವಿಷಯಗಳನ್ನು ತಿಳಿದುಕೊಳ್ಳಬಹುದು.

೪. ಮೂವರು ಮಹಿಳೆಯರ ಪೋಷಕರನ್ನು ಸಂಬಂಧಪಟ್ಟ ಆರೋಪಗಳ ಬಗ್ಗೆ ಖಾಸಗಿ ಅಥವಾ ಸಾರ್ವಜನಿಕವಾಗಿ ಕೇಳಬಹುದು.

೫. ತಿಲಕರು ಮತ್ತು ಅವರ ಪಕ್ಷದವರು ತಮ್ಮ ಹಾಜರಿ ಅಗತ್ಯವಿಲ್ಲವೆಂದು ಭಾವಿಸಿದರೆ ತನಿಖೆಯ ಸಮಯದಲ್ಲಿ ಅದಕ್ಕೂ ನಾನು ಸಿದ್ಧನಾಗಿದ್ದೇನೆ.

೬. ತನಿಖೆಯ ನಂತರ ಆರೋಪಗಳು ಸುಳ್ಳೆಂದು ಸಾಧಿತವಾದರೆ ತಿಲಕರ ಪಕ್ಷದ ಸದಸ್ಯರಿಗೆ, ಯಾರು ಆರೋಪಗಳನ್ನು ಮಾಡಿದ್ದಾರೋ ಅವರಿಗೆ ಶಿಕ್ಷೆಯಾಗಬೇಕು.

೭ ಅಂತಿಮವಾಗಿ, ಈ ಆರೋಪಗಳನ್ನು ಸಾಬೀತುಗೊಳಿಸಿದವರು ಇವುಗಳಲ್ಲದೆ ನಾನು ನನ್ನ ಜೀವನದಲ್ಲಿ ಎಸಗಿದ ಅಂತಹ ಕೃತ್ಯಗಳನ್ನು ಎಸಗಿದ ಬಗ್ಗೆಯು ಪ್ರಶ್ನಿಸಬಹುದೆಂದು ಸವಾಲುಹಾಕಿದರು.

ಶಾಹುರವರು ಪತ್ರವನ್ನು ಸ್ಪಷ್ಟವಾಗಿ, ಪಾರದರ್ಶಕವಾಗಿ ಮತ್ತು ಶಕ್ತಿಯುತವಾಗಿ ಬರೆದಿರುವುದರಿಂದ ಅದಕ್ಕೆ ವ್ಯಾಖ್ಯಾನದ ಅವಶ್ಯಕತೆಯಿಲ್ಲ. ಪತ್ರದ ಭಾಷೆ ಸಂಯಮದಿಂದಿರುವುದರಿಂದ ಅದು ನೇರ ಮತ್ತು ಸವಾಲಿನಂತಿದೆ. ಪತ್ರದಲ್ಲಿ ಸತ್ಯ ಮತ್ತು ನ್ಯಾಯಗಳ ತತ್ವಗಳು ಶಾಹು ಪರವಾಗಿರುವುದರಿಂದ ಅವುಗಳನ್ನು ಪರಿಪೂರ್ಣವಾಗಿ ವ್ಯಕ್ತಗೊಳಿಸಲಾಗಿದೆ.

ಶಾಹುರವರು ಪತ್ರದಲ್ಲಿ ತಿಲಕರನ್ನು ಒಬ್ಬ ಶತ್ರುವೆಂದು ಉಲ್ಲೇಖಿಸಿದರೂ ಅವರ ಪ್ರಸ್ತಾಪದ ಸೂಚನೆಯು ಕೊಲ್ಹಾಪುರದಲ್ಲಿನ ತಿಲಕರ ಪಕ್ಷದ ಸದಸ್ಯರನ್ನು ಕುರಿತಾದ್ದಾಗಿದೆ. ವೇದೋಕ್ತ ಮತ್ತು ತಾಯ್ ಮಹಾರಾಜರ ಪ್ರಕರಣಗಳು ಪರಿಣಾಮವಾಗಿ ತಿಲಕರ ಮತ್ತು ಶಾಹುರವರ ಸಂಬಂಧಗಳು ನಿರ್ಬಂಧಕ್ಕೊಳಗಾಗಿದ್ದು ಮಾತ್ರವಲ್ಲದೆ ಬಹಿರಂಗದ ಶತ್ರುಗಳಾದರು. ತಿಲಕರು ಕೊಲ್ಹಾಪುರದ ಬ್ರಾಹ್ಮಣರ ದುಷ್ಟಕೂಟ ಮತ್ತು ಬ್ರಾಹ್ಮಣ ಭಯೋತ್ಪಾದಕರನ್ನು ಬೆಂಬಲಿಸಿದ್ದು ನಿಜ. ವಿಶೇಷವಾಗಿ ಮಾರ್ಚ್ ತಿಂಗಳಿನ ಇದೇ ವರ್ಷ (೧೯೦೬) ಅವರು ಕೊಲ್ಹಾಪುರಕ್ಕೆ ಭೇಟಿ ನೀಡಿದರು ಮತ್ತು ಸಂಸ್ಥಾನದ ಆಡಳಿತದಲ್ಲಿ ತಮ್ಮ ಭಾಗವಹಿಸುವಿಕೆಯನ್ನು ಒತ್ತಾಯಿಸುವ ಆಂದೋಲನವನ್ನು ಪ್ರಾರಂಭಿಸಲು ಜನರಿಗೆ ಸಲಹೆ ನೀಡಿದರು. ಅದರ ಪ್ರಕಾರ ಬ್ರಾಹ್ಮಣ ನಾಯಕರು ಕೊಲ್ಹಾಪುರದಲ್ಲಿ 'ಪ್ರತಿನಿಧಿ ಸಭೆ' ಜನಪ್ರತಿನಿಧಿಗಳ ಸಭೆಯನ್ನು ಸ್ಥಾಪಿಸಲು ಪ್ರಯತ್ನಗಳನ್ನು ಮಾಡಿದರು. ಈ ರೀತಿಯಲ್ಲಿ ಜನತಂತ್ರದ ಹೆಸರಿನಲ್ಲಿ ಶಾಹು ವಿರುದ್ಧ ಒಂದು ಹೊಸ ವೇದಿಕೆ (ರಂಗ) ಸ್ಥಾಪಿಸಲು ಬ್ರಾಹ್ಮಣರು ಯೋಜನೆ ರೂಪಿಸಿದರು. ಆದರೆ ಕೊಲ್ಹಾಪುರದಲ್ಲಿರುವ ಶಾಹುರವರ ಎಲ್ಲಾ ಶತ್ರುಗಳು ತಿಲಕರ ಸಲಹೆಯ ಮೇರೆಗೆ ನಿರ್ಧಾರ ತೆಗೆದುಕೊಂಡಿದ್ದರು ಎಂಬ ಅರ್ಥವಲ್ಲ. ತಿಲಕರ ಚಿತಾವಣೆಯಿಂದ ಶಾಹುರವರನ್ನು ದೂಷಿಸುವ ಜನರು ಈ ಕೆಲಸ ಮಾಡಿದ್ದಾರೆಂದು ಅನಿಸುವುದಿಲ್ಲ. ಏಕೆಂದರೆ ಅವರಂತಹ ಮಹಾನಾಯಕರು ಇಂಥ ಹೀನಕೃತ್ಯ ಮಾಡುವುದು ಅಸಾಧ್ಯ. ಅವರು ಶಾಹುರವರೊಡನೆ ಜಗಳಕಾಯುವರು, ಆದರೆ ಅವರು ವಿಚಾರಗಳ ಮಟ್ಟದಲ್ಲಿ ಜಗಳಕಾಯುತ್ತಾರೆಯೆ ವಿನಹ ವೈಯಕ್ತಿಕ ಮಟ್ಟದಲ್ಲಿ ಅಲ್ಲ. ಇಬ್ಬರ ನಡುವಣ ಸಂಘರ್ಷವು ಬಹಿರಂಗದ ಸವಾಲುಗಳು ಮತ್ತು ಪ್ರತಿ ಸವಾಲುಗಳಾಗಿದ್ದವು. ಮರ್ಯಾದೆ ಮೀರಿದ ಜಗಳಕ್ಕೆ ಅವಕಾಶವಿರಲಿಲ್ಲ.

## ತಿಲಕರನ್ನು ಬಿಡಲಿಲ್ಲ

ತಾಯಿ ಮಹಾರಾಜರ ಪ್ರಕರಣದ ನಡಾವಳಿಗಳು ನಡೆಯುವಾಗ ತಿಲಕರ ಜೀವನದಲ್ಲಿ ಕೂಡ ಚಾರಿತ್ರ್ಯ ಹರಣದ ಘಟನೆ ನಡೆಯಿತು. "ತಿಲಕರು ಔರಂಗಬಾದಿನಲ್ಲಿ ತಂಗಿರುವಾಗ ತಾಯಿ ಮಹಾರಾಜರ ಮೇಲೆ ಅತ್ಯಾಚಾರ ನಡೆಸಿದರೆಂದು" ಅವರ ವಿರುದ್ಧ ಅವರ ಶತ್ರುಗಳು ಗಂಭೀರವಾದ ಆರೋಪವನ್ನು ಕೋರ್ಟಿನಲ್ಲಿ ಮಂಡಿಸಿದರು. ಮಿಗಿಲಾಗಿ ಸುಸಂಸ್ಕೃತ ಮಹಿಳೆಯಾದ ತಾಯಿ ಮಹಾರಾಜರು ಅವರ ಪರವಾಗಿ ಕೋರ್ಟಿನಲ್ಲಿ ನಿಂತುಕೊಳ್ಳುವಂತೆ ಮಾಡಿ ಆರೋಪ ಹೊರಿಸಿದ್ದರು. ತಿಲಕರ ಜೀವನಚರಿತ್ರೆಕಾರ ಕೇಲ್ಕರ್ ಹೇಳುತ್ತಾರೆ: "ಕೋರ್ಟಿನಲ್ಲಿ ಹಾಜರಾಗಿ ವಾಪಸ್ಸು ಮನೆಗೆ ಬಂದಾಗ ತಿಲಕರು ಕೋಪಗೊಂಡು ತಳಮಳಕ್ಕೊಳಗಾಗಿದ್ದರು. ಈ ಮೊದಲು ಅವರು ಅಷ್ಟು ಕೋಪಗೊಂಡದ್ದನ್ನು ಯಾರೂ ನೋಡಿರಲಿಲ್ಲ. ಒಬ್ಬ ಸೂಳೆಯೂ ತನ್ನ ಒಪ್ಪಿಗೆಯಿಂದ ಆದ ತನ್ನ ಘನತೆಯ ಭಂಗವನ್ನು ಸಹ ಸಹಿಸಿಕೊಳ್ಳುವುದಿಲ್ಲ; ಆಕೆ ಅದನ್ನು ಮುಚ್ಚಿಕೊಳ್ಳಲು ಆಕೆ ಪ್ರಯತ್ನಿಸುತ್ತಾಳೆ. ಆದರೆ ಗೌರವ ಮನೆತನದ ಒಬ್ಬ ಮಹಿಳೆ ಕಾರಣ ವಿಲ್ಲದೆ ತನ್ನ ಮರ್ಯಾದೆಗೆ ಆದ ಗಾಯವನ್ನು ತಪ್ಪಾಗಿ ಒಪ್ಪಿಕೊಳ್ಳುತ್ತಾಳೆ. ಆಕೆ ವ್ಯಸನಪಡಲಿ ಬಿಡು".[4] ನ್ಯಾಯವಂತರಾದ ತಿಲಕರಂತಹವರ ಚಾರಿತ್ರ್ಯಹರಣದಿಂದಾದ ನೋವನ್ನು ನಾವು ಮಾತ್ರ ಕಲ್ಪಿಸಿಕೊಳ್ಳಬಹುದಷ್ಟೆ ಶಾಹು ಸಹ ಅದೇ ಸಂಕಟವನ್ನು ಅನುಭವಿಸಿದರು. ಲೋಕಮಾನ್ಯರು ಅಂತಹ ವಿಷಕಾರಿಯಾದ ಚುಚ್ಚುಮಾತುಗಳನ್ನು ಎದುರಿಸಬೇಕಾಯಿತು. ಆದರೆ ಶಾಹುರವರ ಶತ್ರುಗಳು ರೂಪಿಸಿದ ಅಂತಹ ಹಲವಾರು ಕತೆಗಳನ್ನು ಎದುರಿಸಿದರು. ಅವರ ಶತ್ರುಗಳು ಅವರ ಜೀವನದ ಕೊನೆಯವರೆಗೆ ಚಾರಿತ್ರ್ಯಹರಣ ಮಾಡುವ ಕೃತ್ಯಗಳನ್ನು ಮಾಡುತ್ತಲೇ ಇದ್ದರು.

ತಿಲಕರ ಶತ್ರುಗಳು ತನ್ನ ಊರಾದ ಪುಣೆಯಿಂದಲೇ ಅವರ ಹೆಸರನ್ನು ಕೆಡಿಸಲು ಮತ್ತು ಸಾರ್ವಜನಿಕ ಜೀವನದಿಂದ ಅವರನ್ನು ಕೆಳಗಿಳಿಸಲು ಉದ್ದೇಶಿಸಿದರು. ತಿಲಕರು ಅವರನ್ನು ಪಜಿಪಂಚಕರೆಂದು (ಐದು ಜನ ದುರುಳರು) ಕರೆದರು. ಅವರು ತಾಯಿ ಮಹಾರಾಜ ಮತ್ತು ನಾಗಪುರ್ಕರ್ (ಆಕೆಯ ನಂಬಿಕಸ್ಥ) ಮತ್ತು ಕುಯುಕ್ತಿಯ ಬ್ರಿಟಿಷ್ ಅಧಿಕಾರಿಯಾದ ಆಸ್ಟನ್ ಜತೆಯಲ್ಲಿ ಮಾನಹಾನಿಯ ಸಂಚನ್ನು ಹೂಡಿದರು. ಈ ಪ್ರಕರಣದ ಬಗ್ಗೆ ಕೇಸರಿಯಲ್ಲಿ ಸಂಪಾದಕೀಯವನ್ನು ತಿಲಕ ಬರೆದರು: "ತಾಯಿ ಮಹಾರಾಜ ಆಸ್ಟನರ ಕೈಯಲ್ಲಿ ಸಿಕ್ಕಿಹಾಕಿಕೊಂಡ ಆಸ್ಟನರು ಸರಕಾರದ ಕೈಯಲ್ಲಿದ್ದಾಗ, ವಿಷಯವು ತಾಯಿ ಮಹಾರಾಜ ಮತ್ತು ನಾಗಪುರ್ಕರ್ ಅವರ ಕೈಗಳಲ್ಲಿರಲಿಲ್ಲ. ಅವರು ಬೇರೆಯದನ್ನು ಮಾಡಲು ಪ್ರಯತ್ನಿಸಿದರು ಆದರೆ ಆದದ್ದು ಬೇರೆಯೇ ಆಗಿತ್ತು. ಸರಕಾರವು ಸಿದ್ಧಮಾಡಿತು ಮತ್ತು ತಪ್ಪಿನ (ಸುಳ್ಳಿನ) ಮದ್ದನ್ನು ತುಂಬಿದ್ದರು. ಅವರು ಅನಿವಾರ್ಯವಾಗಿ ಫಿರಂಗಿಗಳಿಗೆ ಬೆಂಕಿಹಚ್ಚುವ ಕೆಲಸವನ್ನು ಮಾಡಿದರು".[5] ಕೆಳಗಿನ ಕೋರ್ಟು ತಾಯಿ ಮಹಾರಾಜರ ಪ್ರಕರಣದಲ್ಲಿ ತಿಲಕರಿಗೆ ಶಿಕ್ಷೆ ನೀಡಿದರೂ ಉಚ್ಚನ್ಯಾಯಾಲಯದಲ್ಲಿ ತಿಲಕರನ್ನು ಖುಲಾಸೆ ಮಾಡಿತು. ಇದು ತಿಲಕರ ಜೀವನದಲ್ಲಿ ಕಷ್ಟದ ಸಮಯವಾಗಿತ್ತು. ಆದರೆ ಅವರು ಬೆಂಕಿಯಿಂದ ಹೊರಬಂದ ಚಿನ್ನವಾದರು. ಅವರ ಬಲಿಷ್ಠ ನೈತಿಕ ಚಾರಿತ್ರ್ಯ ನಿರಂತರವಾಗಿ ಬೆಳಗಿತು. ತಿಲಕರು ಆಶ್ಚರ್ಯಕರವಾಗಿ ಹೇಳಿದರು: "ಕತ್ತಿಗಿಂತ ಸತ್ಯ ಬಲಿಷ್ಠಬುನಾದಿ".[6] ಶಾಹುರವರು ಸತ್ಯದ ಬಗ್ಗೆ ಶ್ರದ್ಧೆಯಿಟ್ಟಿದ್ದರು. ಸಾರ್ವಜನಿಕ ತನಿಖೆಯನ್ನು ಎದುರಿಸುವ ಈ ದೃಢನಂಬಿಕೆಯಿಂದ ಸಾರ್ವಜನಿಕವಾಗಿ ತನಿಖೆಯನ್ನು ನೈತಿಕ ಧೈರ್ಯದಿಂದ ಎದುರಿಸಿ ಈ ದೋಷಾರೋಪದಿಂದ ಹೊರಬಂದರು. ಶಾಹುರವರನ್ನು ದೋಷಾರೋಪ ಮಾಡುವ ಪತ್ರಗಳು ಅನಾಮಧೇಯವಾಗಿದ್ದರಿಂದ ಬ್ರಿಟಿಷ್ ಸರಕಾರ ಸಾರ್ವಜನಿಕ ತನಿಖೆಯನ್ನು ನಡೆಸಲು ಧೈರ್ಯ

ಮಾಡಲಿಲ್ಲ. ಆದರೆ ಕೊಲ್ಹಾಪುರದಲ್ಲಿದ್ದ ರಾಜಕೀಯ ಏಜೆಂಟ್ ಅವರು ತನಿಖೆ ನಡೆಸಿ ವರದಿಯನ್ನು ಬಾಂಬೆಗೆ ಕಳುಹಿಸಬೇಕೆಂದು ಅವರಿಗೆ ಆಜ್ಞಾಪಿಸಲಾಗಿತ್ತು. ವರದಿಯು ಅತಿಗೌಪ್ಯವಾಗಿತ್ತು. ಅದರಲ್ಲಿ ಕರ್ನಲ್ ಫೆರಿಸ್ ಅವರು ಸ್ಪಷ್ಟವಾಗಿ ನಮೂದಿಸಿದ್ದರು. "ಮಾನ್ಯ ಮಹಾರಾಜರು ಒಂದು ಶುದ್ಧಜೀವನ ನಡೆಸಿದ್ದಾರೆ ಎಂಬುದರಲ್ಲಿ ಸತ್ಯವಿದೆಯೆಂದು ನಾನು ಖಂಡಿತವಾಗಿ ಭಾವಿಸುತ್ತೇನೆ. ಅವರಿಗೆ ಕಳೆದ ವರ್ಷದವರೆಗೆ ಒಬ್ಬ ಅಧಿಕಾರಿಣಿ ಇದ್ದು, ಆಕೆ ಸತ್ತುಹೋದಳೆಂದು ನಾನು ನಂಬುತ್ತೇನೆ. ಅವರು ಎಂದಿಗೂ ವ್ಯಭಿಚಾರಿಗಳಲ್ಲ".[7] ಕರ್ನಲ್ ಅವರ ವರದಿಯು ಶಾಹುರವರು ಶುದ್ಧಚಾರಿತ್ರ್ಯವುಳ್ಳ ಮತ್ತು ಅವರು ಎಂದಿಗೂ ಅನಿರ್ಬಂಧಿತ ಲಂಪಟ ಜೀವನ ನಡೆಸಿದವರಲ್ಲ ಎಂದು ನಿರೂಪಿಸುವ ದೃಢೀಕರಿಸಿದ ವರದಿಯನ್ನು ಮೊದಲಿಗೆ ಬಾಂಬೆ ಸರಕಾರಕ್ಕೆ ಕಳುಹಿಸಿದ ನಂತರ ಕಲಕತ್ತಾದ ವೈಸ್‌ರಾಯ್ ಅವರಿಗೆ ಅಂತಿಮವಾಗಿ ಇಂಗ್ಲೆಂಡಿನಲ್ಲಿರುವ ಭಾರತದ ರಾಜ್ಯ ಕಾರ್ಯದರ್ಶಿಗೆ ಕಳುಹಿಸಿಕೊಟ್ಟರು. ಸರಕಾರ ಅದನ್ನು ಒಪ್ಪಿಕೊಂಡಿತು ಮತ್ತು ಮುಂದೆ ತನಿಖೆ ಮುಂದುವರಿಸಲಿಲ್ಲ. ಲೋಕಮಾನ್ಯರ ವಿರುದ್ಧ ನಡಾವಳಿಗಳನ್ನು ಸಾರ್ವಜನಿಕವಾಗಿ ನಡೆಸಿದರು ಮತ್ತು ಅವರನ್ನು ಸಾರ್ವಜನಿಕವಾಗಿಯೇ ಖುಲಾಸೆ ಮಾಡಿದರು (ಬಿಡುಗಡೆ). ಶಾಹುರವರಿಗೆ ಸಾರ್ವಜನಿಕ ತನಿಖೆಯ ಪ್ರಯೋಜನವಿರಲಿಲ್ಲ. ಅವರ ಮುಗ್ಧತೆಯ ರಹಸ್ಯ ಸರಕಾರಿ ದಾಖಲೆಗಳ ಕಡತದಲ್ಲಿಯೇ ಉಳಿದುಹೋಯಿತು. ಅವರು ಹೊಡೆತಗಳನ್ನು ಮೌನವಾಗಿ ಸಹಿಸಿಕೊಂಡರು. ಇದು ಅವರ ಭಾರತದ ಸಾಮಂತರಾಜರ ಅಸಹಾಯಕ ಸ್ಥಿತಿ.

### ಬೆಲ್ವಿಯವರ ಬೇಜವಾಬ್ದಾರಿ ದಾಳಿ

ಈ ಮಧ್ಯೆ ಮೊದಲು ಉಲ್ಲೇಖಿಸಿದ 'ಲೋಕಪ್ರತಿನಿಧಿ ಸಭೆ'ಯು ಅಸ್ತಿತ್ವಕ್ಕೆ ಬಂದಿತ್ತು. ಇದರಲ್ಲಿ ಪ್ರೊಫೆಸರ್ ವಿಜ್‌ಪೂರ್‌ಕರ್, ರಾಷಿಂಗ್‌ಕರ್, ಆಲ್ವೇಕರ್, ಅಭಯಂಕರ್, ಗೋಖಲೆ ಮೊದಲಾದವರು ಬಹುತೇಕ ಬ್ರಾಹ್ಮಣರು ಸದಸ್ಯರಾಗಿದ್ದರು. ಮೊದಲ ಮತ್ತು ಕೊನೆಯ ಸಭೆ ೧೯೦೬ರ ಅಕ್ಟೋಬರ್‌ನಲ್ಲಿ ನಡೆಯಿತು. ಸಭೆಯ ಸದಸ್ಯರಲ್ಲಿ ಒಬ್ಬರು ಹೇಳಿದರು, "ಕೊಲ್ಹಾಪುರದ ಪ್ರತಿಯೊಬ್ಬ ಗಂಡು ಮತ್ತು ಹೆಣ್ಣಿನ ಆಸ್ತಿಯ, ಪ್ರಾಣ ಮತ್ತು ನೈಜ ಹಕ್ಕುಗಳ ಭದ್ರತೆಯ ಬಗ್ಗೆ ಕಾಳಜಿ ವಹಿಸಬೇಕಾಗಿದೆ".[8] ಈ ರೀತಿಯ ಪ್ರಚಾರ ಬ್ರಾಹ್ಮಣರ ಪತ್ರಿಕೆಗಳಲ್ಲಿ ಪ್ರಕಟವಾಗಲು ಶುರುವಾಯಿತು. ಮಹಾರಾಷ್ಟ್ರದಲ್ಲಿ ಶಾಹುರವರ ಹೆಸರು ಕೆಡಿಸಲು ಒಂದು ಕ್ರಮಬದ್ಧವಾದ ಅಭಿಯಾನ ರೂಢಿಯಲ್ಲಿತ್ತು. ಶಾಹುರವರ ಜೀವನಚರಿತ್ರೆಕಾರ ಧನಂಜಯ ಕೀರ್ ಹೇಳುತ್ತಾರೆ: "ಕೊಲ್ಹಾಪುರದಲ್ಲಿರುವ ಪ್ರತಿಯೊಬ್ಬ ಪುರುಷ ಮತ್ತು ಮಹಿಳೆ ತನ್ನ ಅಥವಾ ಅವಳ ಭದ್ರತೆಯ ಬಗ್ಗೆ ಕಳವಳಗೊಂಡಿದ್ದಾರೆಂಬ ಪ್ರಚಾರಮಾಡಿ ಹರಡಲಾಯಿತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ವರ್ಗ ಶಾಹುರವರ ಚಾರಿತ್ರ್ಯವಧೆಯ ದುಷ್ಟ ಪ್ರಚಾರ ಆಂದೋಲನದ ಬಗ್ಗೆ ಮೌನವಹಿಸಿತ್ತು. ನಿಜವಾಗಿ ಇದು ಬ್ರಾಹ್ಮಣರ ಚಳುವಳಿಯಾಗಿತ್ತು. ಅದರ ಗುರಿ ಕೊಲ್ಹಾಪುರ ಮತ್ತು ಕಾಗಲ್‌ಗಳಾಗಿದ್ದವು".[9]

ತಿಲಕರ ಪಕ್ಷ ಮತ್ತು ಬ್ರಾಹ್ಮಣ ಪತ್ರಿಕೆಗಳು ಶಾಹುರವರ ಹೆಸರು ಕೆಡಿಸುವ ಕೆಲಸವನ್ನು ಮಧ್ಯೆ ಮಧ್ಯೆ, ಕೊನೆಯವರೆಗೆ ಮುಂದುವರಿಸಿದ್ದರು. ಶಾಹುರವರು ೧೯೧೮ರಲ್ಲಿ ಕುಲಕರ್ಣಿ ವತನಗಳನ್ನು ಮುಟ್ಟುಗೋಲು ಹಾಕಿಕೊಂಡ ನಂತರ ಬ್ರಾಹ್ಮಣರ ಬ್ರಿಗೇಡಿನ ಸದಸ್ಯರು ಹುಚ್ಚರಾಗಿ ಭಾವೋದ್ರೇಕಗೊಂಡರು. ಬ್ರಾಹ್ಮಣರು ಶಾಹು ತಮ್ಮ ಹುಟ್ಟುಶತ್ರುವೆಂದು ಬಗೆದರು. ಶಾಹುರವರನ್ನು ಖಂಡಿಸಲು ಸಭೆಗಳನ್ನು ವ್ಯವಸ್ಥೆಗೊಳಿಸಲಾಯಿತು ಮತ್ತು ಬ್ರಾಹ್ಮಣ ಪತ್ರಿಕೆಗಳಲ್ಲಿ ಬ್ರಾಹ್ಮಣ ಬ್ರಿಗೇಡು ಶಾಹುರವರ ಮತ್ತು ಅವರು ಕುಟುಂಬದ ಮೇಲೆ ಬಹಿರಂಗ ವಿಷಕಾರಿ ದಾಳಿಗಳನ್ನು ಮಾಡಿತು. ಸುಳ್ಳುಕತೆಗಳು, ಗಾಳಿ ಮಾತುಗಳು

ಮತ್ತು ವದಂತಿಗಳು ಸದೃಢವಾಗಿ ನಿರಂತರವಾಗಿ ಹರಡುತ್ತಾ ಕೊಲ್ಹಾಪುರದ ಯಾರ ಜೀವನ, ಘನತೆ ಪ್ರಾಣ ಸುಭದ್ರವಾಗಿಲ್ಲ ಎಂದು ಮಹಾರಾಷ್ಟ್ರದ ಜನ ತಿಳಿದುಕೊಳ್ಳುವಂತೆ ಪ್ರಚಾರಮಾಡಲಾಯಿತು. ಬಾಂಬೆಯ ಸರಕಾರ ೧೯೨೦ರ ಪ್ರಾರಂಭದಲ್ಲಿ ಕುಲಕರ್ಣಿಗಳ ಅರ್ಜಿಯನ್ನು ರದ್ದುಗೊಳಿಸಿದ್ದರಿಂದ ಅವರು ನೊಂದರು. ಈ ಹಿನ್ನೆಲೆಯಲ್ಲಿ ಬೆಳಗಾವಿಯ ತಿಲಕರ ಪಕ್ಷದ ನಾಯಕ ದತ್ತೋಪಂತ ಬೆಳ್ವಿ ಅವರು ಸಂಕೇಶ್ವರದಲ್ಲಿ ೧೯೨೦ರಲ್ಲಿ ನಡೆದ ಕುಲಕರ್ಣಿಗಳ ಸಮಾವೇಶದಲ್ಲಿ ಮಾತನಾಡುತ್ತಾ ಹೇಳುತ್ತಾರೆ: "ಕೊಲ್ಹಾಪುರದಲ್ಲಿ ಯಾರ ಹೆಂಡತಿ ಅಥವಾ ಯಾರ ಜೀವನ (ಪ್ರಾಣ) ಅಥವಾ ಆಸ್ತಿ ಕ್ಷೇಮವಾಗಿಲ್ಲ".[10] ಬೆಳ್ವಿಯವರ ನೀಚಮಾತುಗಳನ್ನು ಸಾರ್ವಜನಿಕ ಸಭೆಗಳಲ್ಲಿ ಬ್ರಾಹ್ಮಣೇತರರನ್ನು ಮಹಾರಾಷ್ಟ್ರದಲ್ಲಿ ಖಂಡಿಸಿದರು. ಬ್ರಾಹ್ಮಣೇತರರ ಪತ್ರಿಕೆಗಳು ತಿಲಕರ ಪಕ್ಷದವರು ಮಾಡಿದ ದಾಳಿಗಳ ವಿರುದ್ಧ ಪ್ರತಿದಾಳಿಗಳನ್ನು ಪ್ರಾರಂಭಿಸಿದವು. ಮತ್ತೆ ಬಾಂಬೆಯ ಮಂದಗಾಮಿ ಪತ್ರಿಕೆಯಾದ 'ಇಂದುಪ್ರಕಾಶ' ತನ್ನ ಪ್ರತಿಭಟನೆಯನ್ನು ಸಹ ಪ್ರದರ್ಶಿಸಿ ಹೇಳಿತು: "ಬೆಳ್ವಿಯವರ ಪ್ರಚೋದನಕಾರಿ ಭಾಷಣವು ಮಹಾರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯನ್ನು ನೋಯಿಸಿತು ಮತ್ತು ಬಾಧೆಯನ್ನುಂಟುಮಾಡಿತು. ಇಲ್ಲಿಯವರೆಗೆ ಅನೇಕರು ಕೊಲ್ಹಾಪುರಕ್ಕೆ ಕಳಂಕ ತಂದಿದ್ದಾರೆ, ಬೆಳ್ವಿಯವರಷ್ಟು ವಿವೇಚನೆಯಿಲ್ಲದೆ ದಾಳಿಮಾಡಿದವರು ಯಾರು ಇಲ್ಲ. ಬೆಳ್ವಿಯವರು ದರ್ಬಾರಿನ ಮೇಲೆ ಎಸೆದಿರುವ ಕಳಂಕದ ಗುರುತುಗಳು ಕೇವಲ ಕೇಳಿಕೆಯ ಮಾಹಿತಿಯಾಗಿದೆ. ಅವು ಸುಳ್ಳಾಗಿರುವುದು ಮಾತ್ರವಲ್ಲದೆ ನೀಚತನದವು. ಅವರು ಸತ್ಯವನ್ನು ತಿರುಚಿದ್ದಾರೆ. ಅವರು ಈ ರೀತಿಯಲ್ಲಿ ಕೊಲ್ಹಾಪುರದ ದರ್ಬಾರಿನ ಮೇಲೆ ಆರೋಪ ಹೊರಿಸಿರುವುದು ತನಗೆ ತಾನೇ ಕಳಂಕ ಹಚ್ಚಿಕೊಂಡಿದ್ದಾರೆ".[11]

ಬೆಳ್ವಿಯವರ ಪ್ರಕರಣದಿಂದ ಭಾವೋದ್ವೇಗದ ಹುಚ್ಚಾಟದಲ್ಲಿ ಮುಳುಗಿದ್ದ ಮಹಾರಾಷ್ಟ್ರದ ಆ ಸಮಯದಲ್ಲಿ ಶಾಹುರವರ ಪ್ರತಿಕ್ರಿಯೆ ಏನಾಗಿತ್ತು? ರಾಜಕೀಯ ಏಜೆಂಟ್ ವುಡ್‌ಹೌಸ್ ಅವರಿಗೆ ಬರೆದ ಪತ್ರದಲ್ಲಿ ಶಾಹು ಹೇಳುತ್ತಾರೆ: "...... ಹಿಂದುಳಿದ ವರ್ಗಗಳ ಕಲ್ಯಾಣವೇ ನನ್ನ ಗುರಿ, ಅವರು ಬ್ರಾಹ್ಮಣರ ಸೊಕ್ಕಿನ ನೊಗವನ್ನು ಕಿತ್ತೆಸೆಯಬೇಕೆಂಬ ಹಾಗೂ ಅವರು ಸ್ವತಃ ಮಾನಸಿಕ ಗುಲಾಮತ್ವದಿಂದ ಬಿಡುಗಡೆಯಾಗಬೇಕೆಂಬುದೇ ನನ್ನ ಪ್ರಸ್ತಾವನೆ. ಅಧಿಕಾರ ನ್ಯಾಯಬದ್ಧವಾಗಿರಬೇಕು. ಆದ್ದರಿಂದ ನನ್ನ ಮೇಲೆ ಸೇಡು ತೀರಿಸಿಕೊಳ್ಳಲು, ನನ್ನ ಸಾಯಿಸಲು ಜನರನ್ನು ಉತ್ತೇಜಿಸುವುದು, ಬ್ರಾಹ್ಮಣರ ಕಾರ್ಯಕರ್ತರು ನನ್ನ ಮೇಲೆ ಕ್ರೂರವಾಗಿ ಎರಗಿಬೀಳುತ್ತಿದ್ದಾರೆ. ಅವರು ನನ್ನ ವಿರುದ್ಧ ಯದ್ವಾತದ್ವಾ ಪತ್ರಿಕೆಗಳಲ್ಲಿ ಬರೆಯುತ್ತಿದ್ದಾರೆ ಮತ್ತು ಮಾತನಾಡುತ್ತಿದ್ದಾರೆ, ಜೊತೆಗೆ ಸಂಸ್ಥಾನದಲ್ಲಿ ಜನರ ಮನಸ್ಸಿನಲ್ಲಿ ದ್ವೇಷ ಬಿತ್ತುತ್ತಿದ್ದಾರೆ ಮತ್ತು ಅರಾಜಕತೆಯನ್ನು ನಿರ್ಮಾಣ ಮಾಡುತ್ತಿದ್ದಾರೆ".[12]

ಶಾಹುರವರ ಸಾವಿನೊಂದಿಗೆ ಪ್ರಚಾರ ನಿಲ್ಲಲಿಲ್ಲ. ಅವರ ಶತ್ರುಗಳು ಮಾನಹಾನಿಯ ಕತೆಗಳಿಗೆ ಮಸಾಲೆ ಹಚ್ಚಿ ಸಮಾಜದಲ್ಲಿ ಅವುಗಳನ್ನು ಹಂಚುತ್ತಿದ್ದಾರೆ. ತಿಲಕರ ಪಕ್ಷದವರು ಮುಂಚೂಣಿಯಲ್ಲಿದ್ದಾರೆ. ಲೋಕಮಾನ್ಯರು ಸುಧಾರಕರನ್ನು ಮತ್ತು ಸುಧಾರಣೆಗಳನ್ನು ವಿರೋಧಿಸಿದರು. ಆದರೆ ಅವರ ಪಕ್ಷದಲ್ಲಿರುವ ತೀವ್ರವಾದಿಗಳು ಸುಧಾರಕರ ವಿರುದ್ಧವಿದ್ದಾರೆ. ಫ್ರೆಂಚ್‌ನ ಮಹಾಕ್ರಾಂತಿಯ ನಂತರ ಜನತಾಂತ್ರಿಕ ಮೌಲ್ಯಗಳು ಬೆಳೆಯಲು ಪ್ರಾರಂಭ ಮತ್ತು ಹರಡಿದಾಗ ಮತ್ತು ಸರ್ವಾಧಿಕಾರಿ ರಾಜಪ್ರಭುತ್ವಗಳನ್ನು ಪ್ರಶ್ನಿಸಿದಾಗ ಪತನಗೊಳ್ಳುತ್ತಿರುವ ಯೂರೋಪಿನ ರಾಜಪ್ರಭುತ್ವಗಳು ಆಕ್ರಮಣಕಾರಿ ನಿಲುವನ್ನು ತಳೆದದ್ದನ್ನು ಅದು ನಮಗೆ ನೆನಪಿಸುತ್ತದೆ. ಆ ಕಾಲದಲ್ಲಿ ಉದ್ಭವಿಸಿದ ಒಂದು ವರ್ಗ ರಾಜಪ್ರಭುತ್ವವನ್ನು ಪರಿಪಾಲಿಸಿತು ಮತ್ತು ರಾಜನು ತನಗೇ ನಿಷ್ಠನಾಗಿರುವುದಕ್ಕಿಂತ ಹೆಚ್ಚಿಗೆ ಅದು ರಾಜನಿಗೆ ನಿಷ್ಠವೆಂದು ಹೇಳಿಕೊಂಡಿತ್ತು.

ಅದೇ ರೀತಿಯಲ್ಲಿ ಮಹಾರಾಷ್ಟ್ರದಲ್ಲಿ ತಿಲಕರು ಬದುಕಿರುವಾಗ ಹಾಗೂ ಸತ್ತನಂತರ ಒಂದು ವರ್ಗ ಹುಟ್ಟಿಬಂದಿದೆ. ಈ ವರ್ಗವು ತಿಲಕರ ಮಡಿವಂತಿಕೆಯ ವಿಚಾರಗಳನ್ನು ಮಾತ್ರ ಪರಿಭಾವಿಸಿ ಮಹಾತ್ಮಫುಲೆ, ರಾಜರ್ಷಿ ಶಾಹು ಛತ್ರಪತಿ ಮತ್ತು ಅವರ ಪ್ರಗತಿಪರ ಚಿಂತನೆಗಳಿಗೆ ವಿರೋಧಿಗಳಾಗಿದ್ದರು ಮತ್ತು ತಿಲಕರಿಗಿಂತ ಹೆಚ್ಚು ತಿಲಕರವಾದಿಗಳೆಂದು ನಟನೆಮಾಡತೊಡಗಿದರು. ಯೂರೋಪಿನಲ್ಲಿ ನಿಷ್ಠಾವಂತರು ರಾಜಪ್ರಭುತ್ವಗಳಿಗೆ ತೊಂದರೆಗಳನ್ನು ತಂದೊಡ್ಡಿ ರಾಜಪ್ರಭುತ್ವಗಳನ್ನು ಪತನಗೊಳಿಸಿದ ಹಾಗೆಯೇ ಈ ತಿಲಕ ನಿಷ್ಠಾವಂತರು ತಿಲಕರ ಜೀವನಾವಧಿಯಲ್ಲಿಯೇ ಲೋಕಮಾನ್ಯರಿಗೆ ಹಲವು ಬಾರಿ ಸಂಕಟಗಳನ್ನು ತಂದೊಡ್ಡಿ ಅವರ ನಿಧನಾನಂತರ ತಿಲಕರ ಪಕ್ಷವನ್ನು ಅಂತಿಮವಾಗಿ ಪತನಗೊಳಿಸಿದರು.

## ಫುಲೆಯವರ ಮೇಲೆ ತಿಲಕವಾದಿಗಳ ದಾಳಿ

೧೯೨೫ರಲ್ಲಿ ಪುಣೆಯ ಮುನಿಸಿಪಾಲಿಟಿಯಲ್ಲಿ ಮಹಾತ್ಮಫುಲೆಯವರ ಪುತ್ಥಳಿಗೆ ಒದಗಿದ ದುರದೃಷ್ಟಕರವಾದ ಘಟನೆಯನ್ನು ಇಲ್ಲಿ ವಿವರಿಸಲಾಗಿದೆ. ಪುಣೆಯಲ್ಲಿ ಬ್ರಾಹ್ಮಣ-ಅಬ್ರಾಹ್ಮಣರ ವಿರೋಧವು ಅತ್ಯಂತ ಭಯಂಕರ ರೂಪತಾಳಿದ್ದ ಕಾಲವದು. ಕೇಶವರಾವ್ ಜೇಧೆ ಮತ್ತು ದಿನಕರ್‌ರಾವ್ ಜವಳ್ಕರ್ ಅವರು ಬ್ರಾಹ್ಮಣೇತರರ ಯುವಕದ್ವಯರು ದೇಶಾಚೆ ದುಷ್ಮನ್ (ದೇಶದ ಶತ್ರುಗಳು) ಎಂಬ ಒಂದು ಸ್ಫೋಟಕ ಪುಸ್ತಕವನ್ನು ತಿಲಕ ಪಕ್ಷದ ದೇವತೆಗಳಾದ ತಿಲಕ ಮತ್ತು ಚಿಪ್ಲುಣ್‌ಕರ್ ಗುರಿಯಿಟ್ಟು ಬರೆದ ಪುಸ್ತಕವು ಕೋಲಾಹಲವನ್ನುಂಟು ಮಾಡಿತು. ಈ ಪುಸ್ತಕಕ್ಕೆ ಉತ್ತರರೂಪದಲ್ಲಿ ಸತ್ಯಶೋಧಕ ಕ್ರೈಸ್ತಸೇವಕ್ (ಸತ್ಯಶೋಧಕ ಅಥವಾ ಕ್ರೈಸ್ತರ ಸೇವಕ) ಎಂಬ ಕಿರುಪುಸ್ತಕವನ್ನು ತಿಲಕವಾದಿ ಗಣಪತರಾವ್ ನಲವಾಡೆಯವರು ಬರೆದರು. ಅದನ್ನು ತಿಲಕ ಪಕ್ಷದವರು ಪ್ರಕಟಿಸಿದರು. ತಿಲಕ ಪಕ್ಷದವರು ಬ್ರಾಹ್ಮಣೇತರರ ಸಮುದಾಯಗಳ ಕೆಲವು ಸದಸ್ಯರನ್ನು ತಮ್ಮ ಪಕ್ಷದ ಕಡೆಗೆ ಸೆಳೆದುಕೊಂಡು ತಮ್ಮ ನಿಲುವಿಗೆ ನೈತಿಕ ಬಲವನ್ನು ಪಡೆದುಕೊಂಡರು. ಅವರಲ್ಲಿ ಗಣಪತರಾವ್ ನಲವಾಡೆ, ವಿಶ್ವನಾಥರಾವ್ ಫುಲೆ ಮತ್ತು ಬಾಬುರಾವ್ ಫುಲೆ (ಈ ಇಬ್ಬರು ಜೋತಿಬಾ ಅವರ ತಂದೆಯ ಸೋದರ ಸಂಬಂಧಿಯ ಮೊಮ್ಮಕ್ಕಳು) ಪ್ರಮುಖರು. ತಿಲಕರ ಪಕ್ಷದ ಸದಸ್ಯರು ಬ್ರಾಹ್ಮಣೇತರರ ಜನರ ಜೊತೆಯಲ್ಲಿ ಸ್ನೇಹಿತರಾಗಿರುವುದು ಮಾತ್ರವಲ್ಲದೆ ಜೋತಿಬಾ ಫುಲೆಯವರ ರಕ್ತಸಂಬಂಧಿಗಳೊಂದಿಗೆ ಸ್ನೇಹಿತರಾಗುವ ಕುಯುಕ್ತಿಯ ನೀತಿಯನ್ನು ಅನುಸರಿಸಿ ಶತ್ರುಕಡೆಯವರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುತ್ತಿದ್ದರು. ಪುತ್ಥಳಿಯ ವಿಷಯದಲ್ಲಿ ಪುಣೆಯ ಮುನಿಸಿಪಾಲಿಟಿಯಲ್ಲಿನ ಹಲವು ಬ್ರಾಹ್ಮಣೇತರರನ್ನು ತಮ್ಮ ಕಡೆಗೆ ಸಫಲವಾಗಿ ಸೆಳೆದುಕೊಂಡರು.

ತಮ್ಮ ಕಿರುಪುಸ್ತಕದಲ್ಲಿ ಗಣಪತ್‌ರಾವ್ ನಲವಾಡೆಯವರು ಹಿಂದು ಧರ್ಮದ ವಿರುದ್ಧ ಫುಲೆಯವರು ಕ್ರಿಶ್ಚಿಯನ್ನರಿಂದ ದುಡ್ಡು ಪಡೆದುಕೊಂಡ ಒಬ್ಬ ಮತಪ್ರಚಾರಕ ಎಂದು ಸುಳ್ಳು ಆರೋಪಮಾಡಿ ಮಹಾತ್ಮಫುಲೆಯವರ ಪರಿಶುದ್ಧ ಚಾರಿತ್ರ್ಯಕ್ಕೆ ಮಸಿ ಬಳಿಯುವ ಧಾರ್ಷ್ಟ್ಯವನ್ನು ತೋರಿಸಿದ್ದರು. ಕೇಶವರಾವ್ ಜೇಧೆ ಅವರು ಮಹಾತ್ಮ ಫುಲೆ ಅವರ ಗೌರವಾರ್ಥ ಅವರ ಪುತ್ಥಳಿಯನ್ನು ಎತ್ತರಿಸುವ ಬಗೆಗಿನ ಠರಾವಿನ ಬಗ್ಗೆ ಚರ್ಚಿಸಲು ಕರೆದಿದ್ದ ಸಭೆಯಲ್ಲಿ ಈ ಕಿರುಪುಸ್ತಕವನ್ನು ಹಂಚಿದರು. ಬ್ರಾಹ್ಮಣರನ್ನು ಸೇರಿಸಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಠರಾವನ್ನು ವಿರೋಧಿಸಿ ಅದನ್ನು ಎಸೆದುಬಿಟ್ಟರು. ಈ ಸಮಯದಲ್ಲಿ ರಂಗೋಬಲಡ್‌ಕಟ್ ಎಂಬ ವ್ಯಕ್ತಿ ಹೇಳಿದರು, "ತಿಲಕರು ಬ್ರಾಹ್ಮಣೇತರರನ್ನು ಚೆನ್ನಾಗಿಯೇ ಪ್ರೀತಿಸಿದ್ದರು. ಫುಲೆ ಅವರಿಗೆ ಸರಿಸಮಾನರೇ ಅಲ್ಲ". ಬಾಬುರಾವ್ ಫುಲೆ ವಿಷಾದಿಸಿದರು, 'ಫುಲೆ ಕುಟುಂಬದಲ್ಲಿ

ಅಂತಹ ಒಬ್ಬ ಮತಭ್ರಷ್ಟರು ಹುಟ್ಟಿದ್ದೇ ನಮಗೆ ನಾಚಿಕೆಯಾಗಬೇಕು". ಬ್ರಾಹ್ಮಣೇತರ ಸದಸ್ಯರ ಸಹಾಯದಿಂದ ಠರಾವನ್ನು ಎಸೆದಿದ್ದರಿಂದ ತಿಲಕ ಪಕ್ಷ ತೃಪ್ತಿಪಟ್ಟುಕೊಂಡಿತು.[13] ಇದು ಸಮಯದ ವಿರುದ್ಧ ಯುದ್ಧವಾಗಿತ್ತು. ತಿಲಕವಾದಿಗಳು ಒಂದು ಯುದ್ಧವನ್ನು ಗೆದ್ದರೂ ಇತಿಹಾಸ ಸಾಕ್ಷ್ಯವಿದ್ದಂತೆ ಅವರು ಅಂತಿಮವಾಗಿ ಹಲವು ಯುದ್ಧಗಳ ಒಟ್ಟು ಮೊತ್ತದ ಯುದ್ಧದಲ್ಲಿ ಸೋತಿದ್ದರು.

ಶಾಹುರವರ ಹೆಸರನ್ನು ಕೆಡಿಸಲು ಅವರ ಶತ್ರುಗಳು ರಚಿಸಿದ್ದ ವಿಷಮಯವಾದ ಸಂಚುಗಳನ್ನು ಚರ್ಚಿಸುತ್ತಿರುವಾಗ ಮಹಾಪುರುಷರು ಅಂತಹ ಕುಯುಕ್ತಿಗಳನ್ನು ಎದುರಿಸಬೇಕಾಗುತ್ತದೆಯೆಂಬುದಕ್ಕೆ ಉದ್ದೇಶಪೂರ್ವಕವಾಗಿ ಇಲ್ಲಿ ತಿಲಕರ ಮತ್ತು ಫುಲೆಯವರ ಜೀವನದಲ್ಲಿನ ಸಮಾನಾಂತರ ನಿದರ್ಶನಗಳನ್ನು ನೀಡಲಾಗಿದೆ. ಫುಲೆಯವರ ವಿಷಯದಲ್ಲಿ ಅವರು ಸತ್ತು ದಶಕಗಳೇ ಕಳೆದರೂ ಅವರ ಬಗೆಗಿನ ಸೇಡಿನ ಮನೋಭಾವದ ಬೆಂಕಿ ಇನ್ನೂ ನಂದಿಲ್ಲ. ಶಾಹುರವರ ಭವಿಷ್ಯವಾಣಿ ಅಪವಾದವೇನಲ್ಲ. ಅದು ಹಾಗೇ ಆಗಿದ್ದರೂ ಕೂಡ, ಅವರು ತನ್ನ ಚಾರಿತ್ರ್ಯದ ಬಗ್ಗೆ ಶತ್ರುಗಳು ಹರಡಿದ ಅಪನಿಂದೆಗಳ ವದಂತಿಗಳಿಂದ ಮಾನಸಿಕ ಸಂಕಟದ ಮೂಲಕ ಹಾದುಹೋಗಬೇಕಾಗುತ್ತದೆ. ಶತ್ರುಗಳು ತನ್ನ ಕುಟುಂಬವನ್ನು ಗುರಿಯಿಟ್ಟು ಟೀಕಿಸ ತೊಡಗಿದಾಗ ಸಂಕಟವು ಕಿರುಕುಳವಾಗುತ್ತದೆ. ಶಾಹುರವರು ತಾವು ಕೈಗೊಂಡ ಮಹಾಹೆಗ್ಗುರಿ(ಮಿಷನ್ನು)ಯ ಸಂಕಟ ಮತ್ತು ಕಿರುಕುಳಗಳನ್ನು ಸಹಿಸಿಕೊಳ್ಳುತ್ತಾರೆ. ಇದು ಸ್ಪಷ್ಟವಾದಾಗ ತನಗಾಗಿಯೇ ಗೌರವವನ್ನು ಪರಿಭಾವಿಸಿದಾಗ ಅದು ಹಲವು ಪಟ್ಟು ಹೆಚ್ಚಾಗುತ್ತದೆ.

## ಶಾಹುರವರ ಖಾಸಗಿ ಜೀವನ

ಶಾಹುರವರ ಖಾಸಗಿ ಜೀವನದ ಬಗ್ಗೆ ಸ್ವಲ್ಪ ವಿವರಿಸುವುದು/ಬರೆಯುವುದು ಅನೌಚಿತ್ಯವಾಗುವುದಿಲ್ಲ. ಜೀವನಚರಿತ್ರೆಗಾರರಾದ ಡಾ. ವೈ. ಡಿ. ಫಡ್ಕೆ ಅವರು ಮಹಾರಾಜರ ಲೈಂಗಿಕ ಜೀವನವನ್ನು ತಮ್ಮ ಕೃತಿಗಳಲ್ಲಿ ಚರ್ಚಿಸಿದ್ದಾರೆ ಮತ್ತು ಎಲ್ಲಾ ಸಂಗತಿಗಳ ವಾಸ್ತವಿಕ ಚಿತ್ರಗಳನ್ನು ಮಂಡಿಸಿದ್ದಾರೆ.

ಶಾಹುರವರು ೧೮ ವರ್ಷದ ಯುವಕನಾಗಿದ್ದಾಗ ಅವರ ಹೆಂಡತಿ ರಾಣಿಯವರಿಗೆ ೧೨ ವರ್ಷ ವಯಸ್ಸಾಗಿದ್ದಾಗ 'ಗರ್ಭದಾನ'ದ ಆಚರಣೆಯನ್ನು ಆಚರಿಸುವಾಗ ಅವರ ಗುರುಗಳಾದ ಫ್ರೇಜರ್ ಅವರಿಗೆ ಗೊತ್ತಾದಾಗ ಅವರು ತಮ್ಮ ಶಿಷ್ಯನಿಗೆ ಎಚ್ಚರವಾಗಿರುವಂತೆ ಸಲಹೆ ನೀಡುತ್ತಾರೆ. ಅವರ ವೈವಾಹಿಕ ಜೀವನ ಮತ್ತು ಸಂತಾನದ ಆರೋಗ್ಯ ಸುಸ್ಥಿರವಾಗಿರುವ ದೃಷ್ಟಿಯಿಂದ ಫ್ರೇಜರ್ ಅವರು ಶಾಹುರವರು ರಾಣಿಯವರು ವಯಸ್ಸಿಗೆ ಬರುವವರೆಗೆ ವೈವಾಹಿಕ ಜೀವನವನ್ನು ಅನುಭವಿಸಬೇಡವೆಂದು ಹೇಳಿದ್ದರು. ಈ ಪ್ರಕರಣವನ್ನು ಈ ಮೊದಲೆ ಉಲ್ಲೇಖಿಸಲಾಗಿದೆ. ಶಾಹುರವರು ನಿರ್ಬಂಧವನ್ನು ಅನುಸರಿಸಿದರು ಮತ್ತು ಅವರು ಆತ್ಮ-ಸಂಯಮಕ್ಕೆ ಸಾಕ್ಷ್ಯವನ್ನು ನೀಡಿದ್ದಾರೆ. ಸಂಸ್ಥಾನದ ಆಡಳಿತದ ಪರಿಷತ್ತು ಅವರ ಆತ್ಮಸಂಯಮ ಮತ್ತು ಆತ್ಮ-ನಿರಾಕರಣೆಯನ್ನು ಮೆಚ್ಚಿಕೊಳ್ಳುತ್ತಾ ಅದರ ಜಾರಿಗಾಗಿ ವಿಶೇಷ ಠರಾವು ಪಾಸುಮಾಡಿರುವುದನ್ನು ವಿಶೇಷವಾಗಿ ಗಮನಿಸಬೇಕಾಗಿದೆ.[14] ಕೊನೆಗೆ ಅವರು (ದಂಪತಿಗಳು) ೪ ಮಕ್ಕಳನ್ನು ಪಡೆದಿದ್ದಾರೆ. ಆಗಲೆ ಹದಗೆಟ್ಟಿದ್ದ ರಾಣಿಯವರ ಆರೋಗ್ಯ ಮಕ್ಕಳ ಹುಟ್ಟಿನಿಂದ ಮತ್ತೆ ಹದಗೆಟ್ಟಿತ್ತು. ಶಾಹುರವರು ಆಕೆಯಿಂದ ತೃಪ್ತಿಪಡೆಯಲಿಲ್ಲ. ಶಾಹುರವರ ಹತ್ತಿರದವರು ಅವರು ಮತ್ತೊಂದು ಮದುವೆ ಮಾಡಿಕೊಳ್ಳಬೇಕೆಂದು ಒತ್ತಾಯಿಸಿದರು. ಶಾಹುರವರು ಅಂತಹ ಎರಡನೇ ಮದುವೆಗಳು ಪರಸ್ಪರ ಹೊಟ್ಟೆಕಿಚ್ಚು ಮತ್ತು ಅಧಿಕಾರದ ಕಚ್ಚಾಟಗಳಿಂದ ಕೌಟುಂಬಿಕ ಶಾಂತಿ ಮತ್ತು ಏಳಿಗೆಯನ್ನೇ ಹಾಳುಮಾಡುತ್ತದೆ ಎಂಬುದನ್ನು ಚೆನ್ನಾಗಿ

ಅರಿತಿದ್ದ ಶಾಹುರವರು ಆ ವಿಚಾರವನ್ನು ಸಾರಾಸಗಟಾಗಿ ನಿರಾಕರಿಸುತ್ತಾರೆ. ರಾಣಿಯವರ ಉತ್ತಮ ಆರೋಗ್ಯವನ್ನು ಖಾತ್ರಿಪಡಿಸಬೇಕಾಗಿದ್ದರೆ ಶಾಹುರವರು ಮಿಂಡತಿಯನ್ನು ಒಪ್ಪಬೇಕೆಂದು ಕೌಟುಂಬಿಕ ವೈದ್ಯರಾದ ತೆಂಗ್‌ಷೆ ಸಲಹೆ ನೀಡಿದರು. ಈ ವಿಷಯವನ್ನು ಅರಮನೆಯಲ್ಲಿ ಚರ್ಚೆಯಾದಾಗ, ಯಾರೋ ಒಬ್ಬ ಸುಂದರವಾದ ಬಡಮನೆತನದ ಯುವತಿಯನ್ನು ತಂದು ನಿಲ್ಲಿಸಿದರು ಮತ್ತು ಆ ಹುಡುಗಿಯು ಅವರ ಮಿಂಡತಿಯಾಗಲು ಒಪ್ಪುತ್ತಿದ್ದರು. ಆ ಹುಡುಗಿಯು ವಯಸ್ಸನ್ನು ನೋಡಿ ಸ್ಪಂದಿಸಿದರು ಮತ್ತು ಆಕೆಯನ್ನು ಒಡತಿಯಾಗಿ ಒಪ್ಪಿಕೊಳ್ಳುವ ಬದಲಿಗೆ ತಮ್ಮ ಯುವ ಅಧಿಕಾರಿಗಳಲ್ಲಿ ಒಬ್ಬರಿಗೆ ಕೊಟ್ಟು ಮದುವೆಮಾಡಿಸಿದರು.[15] ನಂತರ ದೈಹಿಕ ಅಗತ್ಯಗಳಿಗಾಗಿ ವೇಶ್ಯೆಯರ ಕುಟುಂಬದ ಹಿರಿಯ ಹೆಂಗಸನ್ನೇ ಒಡತಿಯಾಗಿ ಆಯ್ಕೆಮಾಡಿಕೊಂಡರು. ಸುಮಾರು ೫ ರಿಂದ ೬ ಹಿರಿಯ ಮಹಿಳೆಯರು ಒಬ್ಬರಾದ ಮೇಲೆ ಮತ್ತೊಬ್ಬರಂತೆ ಒಡತಿಯರಾಗಿ ಜೀವನದಲ್ಲಿ ಬಂದು ಹೋದರೆಂದು ಅವರ ಜೀವನಚರಿತ್ರೆಗಾರರು ಹೇಳುತ್ತಾರೆ. ಶಾಹುರವರ ವೈಯಕ್ತಿಕ ಜೀವನ ಬಲ್ಲವರು ಯಾರು ಅವರನ್ನು ವಿಷಯಲಂಪಟನೆಂದು ಆರೋಪ ಹೊರಿಸಲಾರರು. ಶಾಹುರವರ ಸಮಕಾಲೀನ ಭಾರತೀಯ ರಾಜರು ನೂರಾರು ಸೌಂದರ್ಯವತಿ ಮಹಿಳೆಯರನ್ನು ವೇಶ್ಯೆಯರನ್ನಾಗಿಟ್ಟುಕೊಂಡಿದ್ದರು. ಬಹಳಷ್ಟು ಶ್ರೀಮಂತರು, ಅಷ್ಟೇ ಅಲ್ಲ ದೇಶಮುಖರು ಮತ್ತು ಗ್ರಾಮಗಳ ಪಾಟೀಲರು ತಮ್ಮ ಆರ್ಥಿಕ ಸಮೃದ್ಧಿಗೆ ಅನುಗುಣವಾಗಿ ಒಬ್ಬರಿಗಿಂತ ಹೆಚ್ಚು ಹೆಂಡತಿಯರನ್ನು ಮತ್ತು ಹಲವಾರು ಒಡತಿಯರನ್ನು ಹೊಂದಿದ್ದರು. ಮಿಗಿಲಾಗಿ ಇಂಥ ರೂಢಿಯು ಒಂದು ಪ್ರತಿಷ್ಠೆಯ ಸಂಗತಿಯೆಂದು ಪರಿಗಣಿಸಲಾಗುತ್ತಿತ್ತು. ಇಂಥ ವಾತಾವರಣದಲ್ಲಿ ಒಬ್ಬ ರಾಜನಾದ ಶಾಹುರವರು ಏಕೈಕ ಪತ್ನಿಯಿಂದ ಮತ್ತು ದೈಹಿಕ ಅನಿವಾರ್ಯತೆಗಾಗಿ ಒಬ್ಬ ಅಥವಾ ಇಬ್ಬರು ಮಿಂಡತಿಯರನ್ನು(Mistress) ಹೊಂದಿದ್ದರು ಎಂದರೆ ಇದನ್ನು ಅನೈತಿಕ (Decreptitude) ಎಂದು ಪರಿಗಣಿಸುವುದಕ್ಕೆ ಯಾವುದೇ ಕಾರಣವಿಲ್ಲ. ಆದರೆ ಶತ್ರುಗಳು ಹುತ್ತವನ್ನು ಬೆಟ್ಟವನ್ನಾಗಿ ಮಾಡಿದರು ಮತ್ತು ಮಾನಹಾನಿಗಾಗಿ ನಾನಾ ಕತೆಗಳನ್ನು ಕಟ್ಟಿದರು.

ಶಾಹುರವರ ಜೀವನವನ್ನು ಅಧ್ಯಯನ ಮಾಡುವಾಗ ಅವರೊಬ್ಬ ರಕ್ತ ಮತ್ತು ಮಾಂಸವುಳ್ಳ ಒಬ್ಬ ವ್ಯಕ್ತಿ ಮತ್ತು ಅವರು ಒಬ್ಬ ಸನ್ಯಾಸಿ ಅಲ್ಲ ಎಂಬ ವಾಸ್ತವಿಕ ಮತ್ತು ಪ್ರಾಯೋಗಿಕ ದೃಷ್ಟಿಕೋನವನ್ನು ಅಂಗೀಕರಿಸಬೇಕಾಗುತ್ತದೆ. ಮಹಾರಾಷ್ಟ್ರ ಅಥವಾ ದೇಶದ ಸಾಮಾಜಿಕ ಪರಿಸ್ಥಿತಿಯಲ್ಲಿ ಅವರ ಕೊಡುಗೆಯನ್ನು ಮೌಲ್ಯಮಾಪನಮಾಡಲು ಅಥವಾ ಅವರ ಮಹತ್ವವನ್ನು ಅರ್ಥಮಾಡಿಕೊಳ್ಳಲು ಅವರ ವೈಯಕ್ತಿಕ ಜೀವನವನ್ನು ಒಂದು ಮಾನದಂಡವಾಗಿ ನಿರ್ಧರಿಸುವುದು ಅವಶ್ಯಕವಲ್ಲ. ಡಾ. ಫಡ್ಕೆ ಅವರು ಈ ವಿಷಯದ ಬಗ್ಗೆ ರಚನಾತ್ಮಕ ವ್ಯಾಖ್ಯಾನವನ್ನು ಮಾಡಿದ್ದಾರೆ. ಅವರು ಹೇಳುತ್ತಾರೆ, "...... ವಾಸ್ತವಿಕವಾಗಿ, ಒಬ್ಬ ಮಹಿಳೆಗಿಂತ ಹೆಚ್ಚಿನ ಮಹಿಳೆಯರಲ್ಲಿ ಲೈಂಗಿಕ ಸುಖ ಪಡೆಯುವುದು ಒಬ್ಬರ ಘನತೆಗೆ ಅಥವಾ ಅವರ ಸಾಧನೆಗಳಿಗೆ ಕಳಂಕ ಎಂಬ ಸಂಪ್ರದಾಯಿಕ ಪರಿಕಲ್ಪನೆಯು ಮೂಲಭೂತವಾಗಿ ಒಂದು ತಪ್ಪುಗ್ರಹಿಕೆಯಾಗಿದೆ. ಇತಿಹಾಸವನ್ನು ನಿರ್ಮಿಸಿದ ಮಹಾನುಭಾವರು ಸಹ ರಕ್ತಮಾಂಸಗಳಿಂದ ಕೂಡಿದ ಮನುಷ್ಯರೇ ಆಗಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯು ಮಹಾನುಭಾವನು ನಿಸ್ಸಂಗಿಯಾದ ಋಷಿಯಾಗಿರಬೇಕೆಂದು ನಿರೀಕ್ಷಿಸುವುದು ಲೈಂಗಿಕ ಸಂತೋಷಗಳಿಗೆ ಸಂಬಂಧಿಸಿದ್ದಲ್ಲ ಎಂಬುದೇ ಮೂಲತಃ ತಪ್ಪು ಎಂಬುದನ್ನು ಅನೇಕರು ಮರೆತಿದ್ದಾರೆ. ಇಂತಹ ಪರಿಸ್ಥಿತಿಗಳಲ್ಲಿ ಭಾರತದ ಆಳರಸರ ಶತ್ರುಗಳು ಮತ್ತು ಇತರೆ ಗೌರವಾನ್ವಿತರರು ಇಂತಹ ವ್ಯಕ್ತಿಗಳ ಬಗ್ಗೆ ಲೈಂಗಿಕ ಆಸಕ್ತಿಕರವಾದ ಕತೆಗಳನ್ನು ಹೆಣೆಯುತ್ತಾರೆ. ವಿರೋಧಿಗಳು ಯಾವಾಗಲು ಗೌರವಾನ್ವಿತ

ವ್ಯಕ್ತಿಗಳ ಘನತೆ–ಗೌರವವನ್ನು ಸಾರ್ವಜನಿಕವಾಗಿ ಕಳೆಯಲು ಚಾರಿತ್ರ್ಯವಧೆಯ ಆಟವನ್ನು ಆಡುತ್ತಾರೆ".[16] ಡಾ. ಫಡ್ಕೆಯವರ ವ್ಯಾಖ್ಯಾನವು ಈ ವಿಷಯದ ಕೊನೆಯನ್ನು ಗಮನಿಸಬೇಕು. ಮಹಾರಾಷ್ಟ್ರದ ಬಹುಜನರ ಗೌರವಕ್ಕೆ ಪಾತ್ರರಾಗಿದ್ದ ಶಾಹುರವರ ಚಾರಿತ್ರ್ಯವಧೆಗಾಗಿ ಕಟ್ಟಿದ ಕಳಂಕಮಯವಾದ ಕತೆ ಎಂಬ ತೀರ್ಮಾನಕ್ಕೆ ಈ ದೃಷ್ಟಿಯಿಂದ ಬರಲಾಗಿದೆ. ಬಹು ದಮನಿತರ ಉದ್ಧಾರಕರಾದ ಶಾಹು ಅವರ ಸಾವು ಹಲವು ಪರಸ್ಪರ ವಿರೋಧದ ಪ್ರತಿಕ್ರಿಯೆಗಳಿಗೆ ಎಡೆಮಾಡಿಕೊಡುವುದರಲ್ಲಿ ಯಾವ ಆಶ್ಚರ್ಯ ಪಡಬೇಕಾಗಿಲ್ಲ. ಬಹುಜನ ಸಮೂಹವು ಅವರ ಗೌರವಾರ್ಥ ರಕ್ತದ ಕಣ್ಣೀರು ಹರಿಸಿದರೆ ಬಾಂಬೆ, ಸತಾರ ಮತ್ತು ವಾಸಯ್ ನಗರಗಳಲ್ಲಿ ಅವರ ಶತ್ರುಗಳು ತಮ್ಮ ಅಂತರಂಗದಲ್ಲಿರುವ ವಿಷವನ್ನು ಕಾರಲು ಉತ್ಸಾಹಭರಿತರಾಗಿ ಸತ್ಯನಾರಾಯಣನ ಪೂಜೆಮಾಡಿ ಸಿಹಿಹಂಚಿ ಸಂತೋಷಪಟ್ಟರು.[17]

---

೩೨

# ಯುಗಾಂತ

**ಶಾ**ಹು ಮಹಾರಾಜರು ಮೇರುವ್ಯಕ್ತಿತ್ವದ ಮತ್ತು ಮಹಾಧೈರ್ಯಶಾಲಿಯಾದ ಪ್ರತಿಭಾವಂತ ಕನಸುಗಾರರಾಗಿದ್ದರು. ಅವರು ತಮ್ಮ ದೈಹಿಕ ಮತ್ತು ಸಾಹಸಮಯವಾದ ಕಾರ್ಯಗಳನ್ನು ಮಾಡಲು ಅವರು ಅದ್ಭುತವಾದ ಆರೋಗ್ಯ ಮತ್ತು ಶಕ್ತಿಗಳನ್ನು ಪಡೆದಿದ್ದರು. ಆದರೆ ಕಾಲಾನುಕ್ರಮದಲ್ಲಿ ಅವರು ಪ್ರಜ್ಞಾವಂತ ಆಡಳಿತಗಾರ(ರಾಜ)ನಾಗಿ ಒಂದು ಕಡೆಗೆ ಬ್ರಿಟಿಷ್ ಅಧಿಕಾರಿಗಳೊಡನೆ ಹೋರಾಡುತ್ತಾ ಮತ್ತು ಮತ್ತೊಂದು ಕಡೆಗೆ ಬೇರೂರಿದ ಸಾಮಾಜಿಕ ಕರ್ಮಠದೊಂದಿಗೆ ಯುದ್ಧ ಮಾಡುತ್ತಿರುವಾಗ ಅವರ ಆರೋಗ್ಯ ಜರ್ಜರಿತವಾಯಿತು. ಅವರು ಹೃದಯರೋಗ ಮತ್ತು ಮಧುಮೇಹದಿಂದ ನರಳುತ್ತಿದ್ದರು. ತಮ್ಮ ಪ್ರೀತಿಪಾತ್ರನಾದ ಚಿಕ್ಕಮಗ ರಾಜಕುಮಾರ ಶಿವಾಜಿಯ ೧೯೧೮ರಲ್ಲಿ ನಡೆದ ದುರ್ಮರಣವು ಅವರಿಗೆ ಮಾನಸಿಕ ಆಘಾತವನ್ನುಂಟು ಮಾಡಿತು. ಶಿವಾಜಿ ಒಬ್ಬ ಸುಂದರ ಮತ್ತು ಚತುರನಾದ ಪ್ರತಿಭಾವಂತನಾಗಿದ್ದನು. ಅವನು ಸತ್ತಾಗ ಅವನಿಗೆ ೧೨ ವರ್ಷ ಇಂದುಮತಿ ಎಂಬ ಹೆಂಡತಿಯಿದ್ದಳು. ಮಹಾರಾಜರ ಹೃದಯವು ತನ್ನ ವಿಧವೆಯಾದ ಸೊಸೆಗಾಗಿ ಚೀರಿತು. ಸಾವಿನ ಆಘಾತವು ಮಾನಸಿಕವಾದ್ದರಿಂದ ಶಾಹುರವರು ಭೌತಿಕ ವಿಷಯಗಳಲ್ಲಿ ಆಸಕ್ತಿ ಕಳೆದುಕೊಳ್ಳಲು ಪ್ರಾರಂಭಿಸಿದರು. ಅವರು ತಮ್ಮ ಅರಮನೆಯನ್ನು ತೊರೆದು ಪಂಚಗಂಗಾನದಿಯ ತೀರದಲ್ಲಿರುವ ಸೋನಾಲಿ ಕ್ಯಾಂಪಿನಲ್ಲಿ ಆಶ್ರಮದ ಜೀವನ ನಡೆಸಲು ಪ್ರಾರಂಭಿಸಿದರು. ಅವರು ಈಗ ಸಂಪೂರ್ಣವಾಗಿ ತಮ್ಮ ಜೀವನವನ್ನು ದಮನಿತರ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಮುಡುಪಿಟ್ಟರು.

## ಬ್ರಾಹ್ಮಣ ಅಧಿಕಾರವರ್ಗದ ವಿಷಪೂರಿತ ದಾಳಿಗಳು

ಶಾಹು ಮಹಾರಾಜರು ತಮ್ಮ ಕೊನೆಯ ವರ್ಷಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳ ಏಳಿಗೆಗಾಗಿ ಸ್ಫೂರ್ತಿದಾಯಕ ಹಾಗೂ ಆಡಳಿತಾತ್ಮಕ ಕ್ರಮಗಳನ್ನು ಬದಲಾಯಿಸಿದಾಗ, ವಿಶೇಷವಾಗಿ ಅವರು ೧೯೧೮ರಲ್ಲಿ ಕುಲಕರ್ಣಿ ವತನನ್ನು ರದ್ದುಗೊಳಿಸಿದ್ದು ಕರ್ಮಠ ಬ್ರಾಹ್ಮಣ ಆಡಳಿತವರ್ಗವನ್ನು ಮತ್ತಷ್ಟು ಅಸಮಾಧಾನಗೊಳಿಸಿತು. ಅವರು ತಮ್ಮ ವಿಷಪೂರಿತ ದಾಳಿಗಳನ್ನು ಶಾಹುರವರ ಮೇಲೆ ದ್ವಿಗುಣಗೊಳಿಸಿದರು.

ಶಾಹುರವರು ಬ್ರಿಟಿಷ್ ಇಂಡಿಯಾದಲ್ಲಿರುವ ಎಲ್ಲಾ ಬ್ರಾಹ್ಮಣ ಪತ್ರಿಕೆಗಳನ್ನು ಕಟುವಾಗಿ ಟೀಕಿಸಿದರು. ಕೇಸರಿ ಪತ್ರಿಕೆ ಆಡಳಿತ ಮತ್ತು ಧೋರಣೆಗಳ ಮೇಲೆ ಮಾಡಿದ ದಾಳಿಗಳು ಸಾರ್ವಜನಿಕ ನೈತಿಕ ಚೌಕಟ್ಟಿನೊಳಗೆ ಇದ್ದದ್ದು ನಿಜ. ಆದರೆ ಕೆಲವು ಪತ್ರಿಕೆಗಳು ಮಹಾರಾಜರನ್ನು ನಿಂದಿಸುವ ಜೊತೆಗೆ ಅವರ ರಾಜಕುಟುಂಬದವರನ್ನು ದೂಷಿಸತೊಡಗಿದವು. ಪತ್ರಿಕೆಗಳು ಬ್ರಿಟಿಷ್ ಇಂಡಿಯಾದಲ್ಲಿದ್ದುದರಿಂದ ಶಾಹು

ಮತ್ತು ಇತರೆ ಮಹಾರಾಜರು ಅಸಹಾಯಕರಾಗಿದ್ದರು. ಈ ಪತ್ರಿಕೆಗಳ ಬಗ್ಗೆ ಬ್ರಿಟಿಷ್ ಸರಕಾರ ಮಾತ್ರ ಕ್ರಮ ಜರುಗಿಸಬಹುದಾಗಿತ್ತು. ದೇಶೀಯ ಪತ್ರಿಕೆಗಳು ಮಾಡುತ್ತಿದ್ದ ದೋಷಾರೋಪಣೆಗಳ ಬಗ್ಗೆ ಕ್ರಮ ಜರುಗಿಸಬೇಕೆಂದು ಹಾಗೂ ಹಲವು ಮಹಾರಾಜರು ಅವುಗಳಿಂದ ರಕ್ಷಣೆ ಒದಗಿಸಬೇಕೆಂದು ಬ್ರಿಟಿಷ್ ಸರಕಾರವನ್ನು ಒತ್ತಾಯಿಸುತ್ತಿದ್ದರು.

ಶಾಹು ಮಹಾರಾಜರು ಸಿಂಹ್ಲಾದಲ್ಲಿ ಈ ವಿಷಯದ ಬಗ್ಗೆ ಚರ್ಚಿಸಲು ವೈಸ್‌ರಾಯ್ ಲಾರ್ಡ್ ರೀಡಿಂಗರನ್ನು ಭೇಟಿ ಮಾಡಿದ್ದರು. ಸಭೆಯಲ್ಲಿ ಶಾಹು ಮಹಾರಾಜರು ತಮ್ಮ ಕಳವಳವನ್ನು ವ್ಯಕ್ತಪಡಿಸುತ್ತಾ ಹೇಳುತ್ತಾರೆ: "ಪತ್ರಿಕೆಗಳಲ್ಲಿರುವ ಟೀಕೆಗಳು ಸಭ್ಯತೆಯನ್ನು ಕಳೆದುಕೊಂಡಿರುವುದು ಮಾತ್ರವಲ್ಲದೆ ಅನ್ಯಾಯ ಎಸಗುತ್ತಿವೆ. ಅದು ಪರಿಶುದ್ಧವಾದ ಒಂದು ಟೀಕೆಯಲ್ಲ, ಅದು ಕಳಂಕಮಯವಾದುದು. ಅಂತಹ ಪರಿಸ್ಥಿತಿಯಲ್ಲಿ ಮಹಾರಾಜರು ಬ್ರಿಟಿಷ್ ಇಂಡಿಯಾದ ನ್ಯಾಯಾಲಯಗಳಿಗೆ ಹೋಗಲಾರರು. ಏಕೆಂದರೆ ಆತ್ಮ-ಗೌರವವುಳ್ಳ ಯಾವ ಮಹಾರಾಜನು ಈ ನ್ಯಾಯಾಲಯಗಳ ಕಟಕಟೆಯಲ್ಲಿ ಸಾಕ್ಷಿಯ ರೂಪದಲ್ಲಿ ನಿಲ್ಲಲು ಇಷ್ಟಪಡುವುದಿಲ್ಲ".[1] ಮಹಾರಾಜರು ಕರ್ಣಕಠೋರವಾದ ನಿವೇದನೆಗಳನ್ನು ಮಾಡಿದರೂ ಬ್ರಿಟಿಷ್ ಸರಕಾರ ಅವರ ನಿವೇದನೆಗಳ ಬಗ್ಗೆ ಗಮನವೇ ನೀಡದಿರುವುದು ಮಹಾರಾಜರ ದುರಾದೃಷ್ಟ. ಅದರಲ್ಲೂ ಶಾಹು ರವರದು.

ಬಾಹ್ಯದಲ್ಲಿ ಈ ರೀತಿಯ ಕ್ರೂರ ಹೊಡೆತಗಳನ್ನು ಎದುರಿಸುತ್ತಿರುವ ಶಾಹುರವರು ದೈಹಿಕ ರೋಗಗಳ ಜೊತೆಗೆ ಹೆಣಗಾಡುತ್ತಿದ್ದರು. ಮಾನಸಿಕ ಮತ್ತು ದೈಹಿಕ ಆರೋಗ್ಯ ಹದಗೆಡುತ್ತಿರುವಾಗ ಶಾಹುರವರು ಜೀವನದಲ್ಲಿ ಆಸಕ್ತಿಯನ್ನೇ ಕಳೆದುಕೊಳ್ಳುತ್ತಿದ್ದರು. ೧೯೨೦ರಲ್ಲಿ ಅವರು ತಮ್ಮ ಸ್ನೇಹಿತನೊಬ್ಬನಿಗೆ ಪತ್ರಬರೆದು. ತಾವು ೫ ಅಥವಾ ೬ ವರ್ಷಗಳಿಗಿಂತ ಹೆಚ್ಚುಕಾಲ ಬದುಕಲಾರೆ ಎಂದು ತಮ್ಮ ಭಾವನೆಗಳನ್ನು ಹೇಳಿಕೊಂಡಿದ್ದರು.[2] ವಿಧಿ (ನಿಯತಿ) ಹೆಚ್ಚು ಬೇಗ ಬರುತ್ತಿದೆ. ಅದು ಅವರನ್ನು ಬಹಳ ಬೇಗನೆ ೧೯೨೨ರಲ್ಲಿ ಸೆಳೆದುಕೊಂಡುಬಿಟ್ಟಿತು.

## ಕೊನೆಯ ಮಹತ್ವ ಘಟನೆಗಳ ದಿನಗಳು

೧೯೨೨ರ ವರ್ಷವು ನರಳುತ್ತಿದ್ದ ಶಾಹುರವರಿಗೆ ಮಹತ್ವದ ವರ್ಷವಾಗಿತ್ತು. ಜನವರಿಯಲ್ಲಿ ತನ್ನ ಸ್ನೇಹಿತ ಗೌರ್ನರ್ ಲಾರ್ಡ್ ವಿಲ್ಲಿಂಗ್ಟನ್ ಅವರನ್ನು ಮದ್ರಾಸಿನಲ್ಲಿ ಭೇಟಿಮಾಡಿದರು. ಅವರು ದೆಹಲಿಯಲ್ಲಿ ಫೆಬ್ರವರಿಯಲ್ಲಿ ನಡೆದ ಮಹಾರಾಜರ ಚೇಂಬರಿನ ಉದ್ಘಾಟನಾ ಸಮಾರಂಭದಲ್ಲಿ ಹಾಜರಾಗಿ ಮತ್ತು ಅದರ ನಡಾವಳಿಗಳಲ್ಲಿ ಭಾಗವಹಿಸಿದ್ದರು. ನಂತರ ವಿಶ್ವದ ಮೊದಲ ಮಹಾಯುದ್ಧದಲ್ಲಿ ಮಡಿದ ಮರಾಠ ಸೈನಿಕರ ನೆನಪಿನಲ್ಲಿ ವೇಲ್ಸ್‌ನ ರಾಜಕುಮಾರರು ಪುಣೆಯಲ್ಲಿ ನವೆಂಬರ್‌ನಲ್ಲಿ ಶಿವಾಜಿ ಸ್ಮಾರಕಕ್ಕೆ ಅಡಿಗಲ್ಲು ಹಾಕುವುದನ್ನು ಎದುರು ನೋಡುತ್ತಿದ್ದರು. ಶಿವಾಜಿಯ ಹೆಸರಿನಲ್ಲಿ ಸ್ಮಾರಕವನ್ನು ಸ್ಥಾಪಿಸುವುದು ಮಹಾರಾಜರ ವಿಚಾರವಾಗಿತ್ತು. ಮಹಾರಾಷ್ಟ್ರವಲ್ಲದೆ ಭಾರತದ ಸಮಾಜದ ಎಲ್ಲಾ ವಿಭಾಗಗಳ ಜನರು ಒಪ್ಪಿದ ಭಾರತದ ಸ್ವಾತಂತ್ರ್ಯವೀರನ ಹೆಸರಿನಲ್ಲಿ ಅಸಾಧಾರಣವಾದ ಸ್ಮಾರಕಕ್ಕೆ ಬ್ರಿಟಿಷ್ ರಾಜಕುಮಾರನ ಅಮೃತ ಹಸ್ತದಿಂದ ಅಡಿಗಲ್ಲು ಹಾಕಿಸುವ ಮೂಲಕ ಅವರು ಸಕಾರಾತ್ಮಕವಾದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಉದ್ದೇಶಗಳನ್ನು ಸಾಧಿಸಿದಂತಾಗುತ್ತದೆ.

ಶಾಹು ಮಹಾರಾಜರು ಒಬ್ಬರಾದ ಮೇಲೆ ಒಬ್ಬರಂತೆ ಬ್ರಿಟಿಷ್ ಅಧಿಕಾರಿಗಳನ್ನು ಶಿವಾಜಿ ಸ್ಮಾರಕದ

ಪ್ರಸ್ತಾವನೆಯನ್ನು ಚರ್ಚಿಸಲು ಭೇಟಿಯಾದರು ಮತ್ತು ಆಗಸ್ಟ್‌ನಲ್ಲಿ ಬಾಂಬೆಯ ಗೌರ್ನರನ್ನು ಈ ವಿಷಯದ ಬಗ್ಗೆ ಒತ್ತಾಯಮಾಡಲು ಭೇಟಿಯಾಗಿದ್ದರು. ಅವರು ಸೆಪ್ಟೆಂಬರ್‌ನಲ್ಲಿ ಸಿಂಪ್ಲಾಗೆ ಹೋಗಿ ವೈಸ್‌ರಾಯ್ ಅವರನ್ನು ಭೇಟಿಯಾಗಿ ಮಹಾಸ್ವಾತಂತ್ರ್ಯ ಹೋರಾಟಗಾರರನ್ನು ಗೌರವಿಸುವ ಮೂಲಕ ಜನರ ಭಾವನೆಗಳನ್ನು ಹೇಗೆ ಸಮಾಧಾನಗೊಳಿಸಬಹುದೆಂಬುದನ್ನು ಮನವರಿಕೆ ಮಾಡಿಕೊಟ್ಟರು. ವಾಪಸ್ಸು ಬರುವಾಗ ದೆಹಲಿಯಲ್ಲಿ ಮಹಾರಾಜರ ಚೇಂಬರಿನ ಸಭೆಯಲ್ಲಿ ಭಾಗವಹಿಸಿ ಮತ್ತೆ ವೈಸ್‌ರಾಯ್‌ರೊಂದಿಗೆ ಇದೇ ವಿಷಯವನ್ನು ಚರ್ಚೆಮಾಡಿದರು. ಒಂದು ಘಟ್ಟದಲ್ಲಿ ಸ್ಮಾರಕದ ಶಂಕುಸ್ಥಾಪನೆಯ ಸಮಾರಂಭವನ್ನು ಕೈಬಿಡಲಾಗಿತ್ತು. ಬಹುಮಟ್ಟಿಗೆ ಶಾಹುರವರ ಲಾಬಿಯಿಂದ ಮತ್ತು ಬ್ರಿಟಿಷ್ ಸರಕಾರದ ಹಿತದೃಷ್ಟಿಯಿಂದ ವೈಸ್‌ರಾಯ್ ಅವರು ಇದಕ್ಕೆ ಒಪ್ಪಿದರು. ವೇಲ್ಸ್‌ನ ರಾಜಕುಮಾರರು ಶಂಕುಸ್ಥಾಪನೆಯ ಸಮಾರಂಭದಲ್ಲಿ ಭಾಗವಹಿಸದಿದ್ದರೆ ಶಾಹುರವರು ವೇಲ್ಸ್‌ನ ರಾಜಕುಮಾರರ ಸ್ವಾಗತ ಸಮಿತಿಗೆ ರಾಜೀನಾಮೆ ನೀಡುವುದಾಗಿ ಬೆದರಿಕೆಯೊಡ್ಡಿದರು. ಅಂತಿಮವಾಗಿ ವೈಸ್‌ರಾಯ್ ಅವರು ಒಪ್ಪಿಗೆ ನೀಡಿದರು.[3]

ಶಿವಾಜಿ ಸ್ಮಾರಕದ ಶಂಕುಸ್ಥಾಪನೆಯ ನಂತರ ಮಹಾರಾಷ್ಟ್ರದಲ್ಲಿ ಪಾಟೀಲರ ಮಹಾ ಸಮ್ಮೇಳನ ನಡೆಸಲು ಯೋಜಿಸಿದ್ದರು.

ನವೆಂಬರ್ ೧೯, ೧೯೨೧ರಲ್ಲಿ ಪುಣೆಯಲ್ಲಿ ಶಿವಾಜಿ ಸ್ಮಾರಕ ಶಂಕುಸ್ಥಾಪನೆಯ ಸಮಾರಂಭಕ್ಕೆ ಪೇಟ ಧರಿಸಿದ ಸಾವಿರಾರು ವತನದಾರ ಪಾಟೀಲರು ವರ್ಣರಂಜಿತ ಮೆರಗನ್ನು ನೀಡಿದರು. ರಾಜಕುಮಾರರು ಶಿವಾಜಿ ಸ್ಮಾರಕಕ್ಕೆ ಶಂಕುಸ್ಥಾಪನೆ ಮಾಡಿದರು. ರಾಜಕುಮಾರರು ಶಿವಾಜಿ ನೆನಪಿನಲ್ಲಿ ಭವ್ಯ ಗೌರವ ಸಲ್ಲಿಸಿದರು. ಶಾಹುರವರು ತಮ್ಮ ಜೊತೆಯಲ್ಲಿ ನೆರದ ಜನಜಂಗುಳಿಯನ್ನು ಒಂದು ಸುತ್ತು ಹಾಕಿದರು. ಜನರು ರಾಜಕುಮಾರರನ್ನು ಮತ್ತು ಶಾಹುರವರನ್ನು ಕಣ್ಣುತುಂಬ ನೋಡಿದರು ಮತ್ತು ಎದ್ದು ನಿಂತು ಭವ್ಯ ಗೌರವ ತೋರಿದರು. ಸಮಾರಂಭವು ಹಾಜರಾತಿ ಮತ್ತು ಅದರ ಉದ್ದೇಶಗಳೆರಡರಲ್ಲೂ ಸಫಲವಾಯಿತು. ಗೌರ್ನರರು ಸೇರಿದಂತೆ ಪ್ರತಿಯೊಬ್ಬರೂ ಶಾಹುರವರಿಗೆ ಅದರ ಸಫಲತೆಯ ಕೀರ್ತಿಯನ್ನು ಕೊಟ್ಟರು ಮತ್ತು ಅವರು ದೇಶದ ಜನರಿಗೆ ಮಾಡಿದ ಸೇವೆಯನ್ನು ಮೆಚ್ಚಿಕೊಂಡರು.

ದೇಶದ ಸುತ್ತ ತಿರುಗಾಟ, ಬಿರುಸಿನ ಸಂಧಾನಗಳು ಮುಗಿದ ಎರಡು ಘಟನೆಗಳ ಸಂಘಟನೆ ಮತ್ತು ಅವುಗಳ ಕಾರ್ಯನಿರ್ವಹಣೆಗೆ ತೊಡಗಿಸಿಕೊಂಡದ್ದರಿಂದ ಉಂಟಾದ ಆಯಾಸಗಳೆಲ್ಲವೂ ಅವರ ಆರೋಗ್ಯ ಕುಸಿಯುವಂತೆ ಮಾಡಿದವು. ಅವರಿಗೆ ಅವರ ಸ್ನೇಹಿತ, ಪ್ರಸಿದ್ಧ ವೈದ್ಯರಾದ ಡಾ. ವೇನ್‌ಲೆಸ್ ಅವರು ವೈದ್ಯೋಪಚಾರ ಮಾಡುತ್ತಿದ್ದರು. ಆದರೆ ಆರೋಗ್ಯ ಸುಧಾರಿಸಲಿಲ್ಲ. ಅವರ ಪ್ರಯಾಣಗಳು, ಭೇಟಿಗಳು ಮತ್ತು ಸಭೆಗಳು ಯಥಾಪ್ರಕಾರ ಸಾಗುತ್ತಿದ್ದವು.

ಬಾಪು ಸಾಹೇಬರು ಮುರುಗೋಡ್‌ನ ತಮ್ಮ ಜಹಗೀರಿನಲ್ಲಿ ನಿರ್ಮಿಸಿದ ಕೆರೆಯ ಉದ್ಘಾಟನೆಯನ್ನು ಶಾಹುರವರು ಫೆಬ್ರವರಿ ೬, ೧೯೨೨ರಲ್ಲಿ ಉದ್ಘಾಟನೆಮಾಡಿದರು. ಇಲ್ಲಿ ಬೇಗನೆ ಒಂದು ಸಕ್ಕರೆ ಕಾರ್ಖಾನೆ ಕಟ್ಟಲಾಗುವುದೆಂದು ಭವಿಷ್ಯ ನುಡಿದಿದ್ದರು.[4] ಶಾಹು ಭವಿಷ್ಯ ನುಡಿದಂತೆಯೇ ಇಲ್ಲಿ ಒಂದು ಸಕ್ಕರೆ ಕಾರ್ಖಾನೆ ನಿರ್ಮಾಣಗೊಂಡಿತು. ಬಿಡುವಿಲ್ಲದ ಪ್ರವಾಸಗಳು ಮುಂದುವರಿದವು. ಅವರು ದೆಹಲಿಗೆ ಹೋದ ನಂತರವೆ ಬಾಪು ಸಾಹೇಬರ ಜೊತೆಯಲ್ಲಿ ವೇಲ್ಸ್‌ನ ರಾಜಕುಮಾರರವರ ಸನ್ಮಾನ ಸಮಾರಂಭಕ್ಕೆ ಹೋಗಬೇಕಾಯಿತು. ದೆಹಲಿಯಲ್ಲಿರುವಾಗಲೇ ತಮ್ಮ ನಾದಿನಿಯಾದ ಬಾಪುಸಾಹೇಬರ ಹೆಂಡತಿಯ

ಸಾವಿನ ಸುದ್ದಿ ತಿಳಿಯಿತು. ಸನ್ಮಾನ ಸಮಾರಂಭದಲ್ಲಿ ಸಿಕ್ಕಿಹಾಕಿಕೊಂಡ ಕಾರಣದಿಂದ ಅವರು ಕೊಲ್ಹಾಪುರಕ್ಕೆ ಅಂತಿಮ ಸಂಸ್ಕಾರಕ್ಕೆ ಬರಲು ಸಾಧ್ಯವಾಗಲಿಲ್ಲ. ವೈಸ್‌ರಾಯ್ ಅವರ ಕಾರ್ಯದರ್ಶಿ ಶ್ರೀ ಥಾಮ್ಸನ್ ಅವರಿಗೆ ಫೆಬ್ರವರಿ ೧೧ ರಂದು ಬರೆದ ಪತ್ರದಲ್ಲಿ ಶಾಹುರವರು ವೇಲ್ಸ್‌ನ ರಾಜಕುಮಾರರಿಗೆ ಗೌರವ ಸಲ್ಲಿಸುವುದು ಅನಿವಾರ್ಯವಾದ ಕರ್ತವ್ಯದ ಕರೆಯಾಗದೆ ಇದ್ದಿದ್ದರೆ ನಾನು ಒಂದು ನಿಮಿಷವು ದೆಹಲಿಯಲ್ಲಿ ನಿಲ್ಲುತ್ತಿರಲಿಲ್ಲ. ಏಕೆಂದರೆ ನನ್ನ ತಾಯಿಗಿಂತ ಹೆಚ್ಚು ಪ್ರೀತಿಪಾತ್ರರಾದ ನನ್ನ ನಾದಿನಿ ತೀರಿಹೋಗಿದ್ದರೆಂದು ತನ್ನ ವಿಷಾದವನ್ನು ವ್ಯಕ್ತಪಡಿಸಿದರು. ಅವರು ಮತ್ತೆ ಬರೆಯುತ್ತಾರೆ: "ಈ ಕಾರ್ಯವು ನನ್ನ ಜೀವನದಲ್ಲಿ ಕೊನೆಯ ಕರ್ತವ್ಯವಾಗಿತ್ತು. ನಾನು ಬಹಳ ದಿನ ಬದುಕಿರುತ್ತೇನೆಂದು ನನಗೆ ಖಾತ್ರಿಯಿಲ್ಲ".[5]

ಹೀಗೆ ಶಾಹುರವರು ತಮಗೆ ಬರುವ ಸಾವಿನ ಪೂರ್ವಸೂಚನೆಯಿತ್ತು. ಆದರೆ ಇದು ಅವರ ಉತ್ಸಾಹಭರಿತವಾದ ಕಲ್ಯಾಣಕಾರಿ ಕಾರ್ಯಕ್ರಮಗಳನ್ನು ಮಂಕುಗೊಳಿಸಲಿಲ್ಲ. ತನ್ನ ಜನರಿಗಾಗಿ ತನ್ನ ಜೀವನವನ್ನು ಕೊನೆಯವರೆಗೂ ಕಳೆಯಲು ಮುಡುಪಾಗಿಟ್ಟಿದ್ದರು. ಶಾಹು ಮಹಾರಾಜರು ತನ್ನ ಪ್ರಜೆಗಳು ಕಾನೂನಿನ ಮುಂದೆ ಎಲ್ಲರೂ ಸರಿಸಮಾನರು ಎಂಬ ಮುಖ್ಯ ತತ್ವವಾದ ಸಮಾನತೆಯ ಅಡಿಯಲ್ಲಿ ಹಿಂದೂಕೋಡ್ ಅನ್ನು ಕ್ರೋಡೀಕರಿಸುವುದಕ್ಕಾಗಿ ದೆಹಲಿಯಲ್ಲಿ ಪ್ರಖ್ಯಾತರಾದ ನ್ಯಾಯತಜ್ಞ ಫ್ರಾಂಕ್‌ಬೀಮನ್ ಅವರ ಚರ್ಚೆಗಾಗಿ ಒಂದು ಸಭೆಯನ್ನು ನಡೆಸಿದ್ದರು. ಸಂಹಿತೆ(ಕೋಡ್)ಯನ್ನು ರಚಿಸುವ ಹೊಣೆಗಾರಿಕೆಯನ್ನು ಶಾಹುರವರು ಅವರಿಗೆ ವಹಿಸಿಕೊಟ್ಟರು. ಶಾಹುರವರು ದೆಹಲಿಯಲ್ಲಿ ತಂಗಿರುವಾಗ ಸುಮಾರು ೩೦,೦೦೦ ಅಸ್ಪೃಶ್ಯರು ಭಾಗವಹಿಸುವ ಅಖಿಲಭಾರತ ಅಸ್ಪೃಶ್ಯರ ಮಹಾಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಲು ಶಾಹು ಒಪ್ಪಿಕೊಂಡಿದ್ದರು. ಶಾಹು ಮಹಾರಾಜರು ಸಮ್ಮೇಳನದಲ್ಲಿ ಆಗ ಲಂಡನ್‌ನಲ್ಲಿದ್ದ ಡಾ. ಅಂಬೇಡ್ಕರರ ಅಸ್ಪೃಶ್ಯರ ಸಹಜ ನಾಯಕರೆಂದೂ ಅವರನ್ನು ಎಲ್ಲಾ ಅಸ್ಪೃಶ್ಯರು ಅನುಸರಿಸಬೇಕೆಂದು ಕರೆಕೊಟ್ಟರು (ಫೆಬ್ರವರಿ ೧೬, ೧೯೨೨).

ಫೆಬ್ರವರಿ ಕೊನೆಗೆ ಶಾಹುರವರು ವೈಸ್‌ರಾಯ್ ಜೊತೆಯಲ್ಲಿ ಸಭೆ ನಡೆಸಿದರು ಮತ್ತು ಇಚಲಕರಂಜಿ ಜಹಗೀರ್‌ಗೆ ಒಬ್ಬ ವಾರಸುದಾರರನ್ನು ದತ್ತು ತೆಗೆದುಕೊಳ್ಳುವ ವಿಷಯವನ್ನು ಚರ್ಚಿಸಿದರು. ಬೇಟೆಯಾಡುವುದಕ್ಕೆ ಕುರುಕ್ಷೇತ್ರಕ್ಕೆ ಪ್ರಯಾಣ ಮಾಡಿದರು ಮತ್ತು ಅಲ್ಲಿ ಮಹಾತ್ಮ ಗಾಂಧಿಯವರನ್ನು ಭೇಟಿ ಮಾಡಿದರು.[7] ಈ ಎರಡು ಉನ್ನತ ವ್ಯಕ್ತಿತ್ವಗಳು ರಾಜಕಾರಣಕ್ಕಿಂತ ಮಿಗಿಲಾಗಿ ಸಾಮಾಜಿಕಕ ವಿಷಯಗಳ ಬಗ್ಗಡ ಚರ್ಚಿಸಿರಬಹುದು.

ಶಾಹುರವರು ಕೊನೆದಿನಗಳಲ್ಲಿ ಥಾಮ್ಸನ್ ಅವರಿಗೆ ಬರೆದ ಪತ್ರದಲ್ಲಿ ಬ್ರಾಹ್ಮಣ ಪತ್ರಿಕೆಗಳು ತಮ್ಮ ಮತ್ತು ಕುಟುಂಬದವರ ಮೇಲೆ ಮಾಡಿದ ದಾಳಿಗಳಿಂದ ತುಂಬಾ ನೊಂದಿದ್ದರೆಂಬ ಸಂಗತಿ ತಿಳಿದು ಬರುತ್ತದೆ. ಅವರು ಬರೆಯುತ್ತಾರೆ: "ಮಹಾರಾಷ್ಟ್ರದಲ್ಲಿರುವ ಚಿತ್ಪಾವನ್ ಬ್ರಾಹ್ಮಣ ಆಂದೋಲನವು ನನ್ನ ಬಗ್ಗೆ ದ್ವೇಷವಲ್ಲದೆ ಮತ್ತೇನು ಇಲ್ಲ. ಈಗ ನಾನು ಮಹಾರಾಷ್ಟ್ರದಲ್ಲಿ ಶಾಂತಿಯಿಂದ ಇರುವ ಹಾಗೆ ಇಲ್ಲ." ಭಾರತದ ಮಹಾರಾಜರನ್ನು ಅಂತಹ ಮಾನಹಾನಿಕಾರಕವಾದ ದಾಳಿಗಳಿಂದ ಸಂರಕ್ಷಿಸುವ ಯೋಜನೆಯನ್ನು ರೂಪಿಸುವ ಉಪಕ್ರಮವನ್ನು ವೈಸ್‌ರಾಯ್ ಅವರು ತೆಗೆದುಕೊಳ್ಳಬೇಕೆಂದು ಶಾಹು ಅವರಿಗೆ ಸೂಚಿಸಿದರು.[8]

ದಕ್ಷಿಣ ಮಹಾರಾಷ್ಟ್ರದಲ್ಲಿ ಕೊಲ್ಹಾಪುರದ ರಾಜಾರಾಮ್ ಕಾಲೇಜು ಪ್ರಸಿದ್ಧ ಶಿಕ್ಷಣ ಸಂಸ್ಥೆಯಾಗಿತ್ತು. ಅದು ಬಾಂಬೆ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿದೆ. ಆದರೆ ಅದು ವಿಶ್ವವಿದ್ಯಾಲಯದಿಂದ ಶಾಶ್ವತವಾದ

ಮಾನ್ಯತೆಯನ್ನು ಪಡೆದಿಲ್ಲ. ಆದ್ದರಿಂದ ಶಾಹುರವರು ದೆಹಲಿಯಿಂದ ವಾಪಸ್ಸು ಬರುವಾಗ ಬಾಂಬೆಯಲ್ಲಿ ತಂಗಿದರು ಮತ್ತು ಸರ್ ಚಿಮನ್‌ಲಾಲ್ ಸೆತಲ್‌ವಾಡ್ ಮತ್ತು ಸಯ್ಯಾಜಿರಾವ್ ಗಾಯಕವಾಡರ ನಡುವೆ ಮಧ್ಯಸ್ಥಿಕೆಯನ್ನು ವಹಿಸುವ ಪ್ರಯತ್ನಮಾಡಿದರು. ಮಹಾರಾಜರಿಗೆ ಬರೆದ ಒಂದು ಪತ್ರದಲ್ಲಿ ಮಹಾರಾಷ್ಟ್ರದಲ್ಲಿ ರಾಜಾರಾಮ್ ಕಾಲೇಜು ಒಂದೇ ಮರಾಠರು ಮತ್ತು ಹಿಂದುಳಿದ ವರ್ಗಗಳು ಉನ್ನತ ಶಿಕ್ಷಣ ಪಡೆಯಲು ಅವಕಾಶಗಳನ್ನು ಒದಗಿಸುತ್ತಿತ್ತೆಂದು ಶಾಹು ಹೇಳುತ್ತಾರೆ. ಅವರು ತಮ್ಮ ಪ್ರಯತ್ನದಲ್ಲಿ ಕೂಡಲೇ ಸಫಲರಾಗಲಿಲ್ಲ. ಕೊಲ್ಲಾಪುರಕ್ಕೆ ಬಂದ ನಂತರ ಅವರು ಮತ್ತೆ ಬಾಂಬೆಗೆ ವಾಪಸ್ಸು ಹೋದರು ಮತ್ತು ಮತ್ತೆ ಪ್ರಯತ್ನಗಳನ್ನು ಮುಂದುವರೆಸಿದಾಗ, ಈ ಬಾರಿ ಅವರು ರಾಜಾರಾಮ್ ಕಾಲೇಜಿಗೆ ವಿಶ್ವವಿದ್ಯಾಲಯದ ಶಾಶ್ವತ ಮಾನ್ಯತೆ ಪಡೆಯುವುದರಲ್ಲಿ ಸಫಲರಾದರು ಮತ್ತು ಆನರ್ಸ್ ಶಿಕ್ಷಣವನ್ನು ಪ್ರಾರಂಭಿಸಲು ಸಹ ಅನುಮತಿ ಪಡೆದರು.[9] ಇದು ಶಾಹುರವರು ಹಿಂದುಳಿದ ವರ್ಗಗಳ ಏಳಿಗೆಗೆ ನೀಡಿದ ಕೊನೆಯ ಸದುದ್ದೇಶವಾಗಿತ್ತು.

**ಅಂತಿಮ ಪಯಣ**

ಏಪ್ರಿಲ್ ೩೦, ೧೯೨೨ರಂದು ಮಹಾರಾಜ ಸಯ್ಯಾಜಿರಾವ್ ಗಾಯಕವಾಡರ ಮೊಮ್ಮಗಳು ಲಕ್ಷ್ಮೀದೇವಿ (ರಾಜ ಫತೇಸಿಂಗರಾವ್ ಮತ್ತು ರಾಣಿ ಪದ್ಮಾವತಿಯವರ ಮಗಳು) ಅವರ ಮದುವೆ ಸಾವಂತವಾಡಿಯವರೊಂದಿಗೆ ಬರೋಡದಲ್ಲಿ ನಡೆಯಿತು. ಲಕ್ಷ್ಮೀದೇವಿ ತಂದೆ-ತಾಯಿಯಿಲ್ಲದ ಮಗು ವಾಗಿದ್ದಳು ಮತ್ತು ಶಾಹುಮಹಾರಾಜರು ವಧುವಿನ ತಾಯಿಗೆ ಸಾವಿನ ಹಾಸಿಗೆಯಲ್ಲಿ ಅವಳನ್ನು ಸಾಕಿ ಸಲಹುವೆವೆಂದು ಅವಳ ತಾಯಿಗೆ ಮಾತು ಕೊಟ್ಟಿದ್ದರಿಂದ ಅವರು ವೈದ್ಯರ ಸಲಹೆಯನ್ನು ಕಡೆಗಣಿಸಿ ಮದುವೆಗೆ ಹಾಜರಾಗಿದ್ದರು ಮತ್ತು ಏಪ್ರಿಲ್ ೨೦ರಂದು ಕೊಲ್ಹಾಪುರ ಬಿಟ್ಟು ಬರೋಡಗೆ ಸಾವಂತವಾಡಿಯ ವಧುವಿನೊಂದಿಗೆ ಬಂದರು. ಇದು ಮಹಾರಾಜರಿಗೆ ಕೊಲ್ಹಾಪುರದ ಕೊನೆಯ ಬೀಳ್ಕೊಡುಗೆಯಾಗಿತ್ತು. ಯಾರೂ ಸಹ ಇದನ್ನು ಪರಿಭಾವಿಸಿರಲಿಲ್ಲ. ರಾಜಕುಮಾರಿ ಲಕ್ಷ್ಮೀದೇವಿಯರ ಮದುವೆ ಬಹಳ ರಾಜವೈಭವದಿಂದ ಅದ್ದೂರಿಯಾಗಿ ನಡೆಯಿತು. ಶಾಹುಮಹಾರಾಜರು ಮದುವೆ ಅನೇಕ ರೀತಿ-ರಿವಾಜು ಗಳಲ್ಲಿ ಭಾಗವಹಿಸಿದ್ದರಿಂದ ಆಯಾಸಗೊಂಡಿದ್ದರು. ಅದು ಈಗಾಗಲೇ ಕುಸಿತಗೊಂಡಿದ್ದ ಆರೋಗ್ಯದ ಮೇಲೆ ಮತ್ತಷ್ಟು ದುಷ್ಪರಿಣಾಮ ಬೀರಿತು. ಮದುವೆಯ ನಂತರದ ದಿನ ಆನೆಯ ಕ್ರೀಡೆ (ಸಾತಮರಿ) ಯನ್ನು ವ್ಯವಸ್ಥೆಗೊಳಿಸಲಾಗಿತ್ತು ಮತ್ತು ಅದರಲ್ಲಿ ಅವರು ಭಾಗವಹಿಸಿದ್ದರು. ಉದ್ರೇಕಗೊಂಡ ಆನೆಯು ಕ್ರೀಡೆ ಪ್ರಗತಿಯಲ್ಲಿದ್ದಾಗ ಶಾಹುರವರು ನಿಂತ ಕಡೆಗೆ ಧಾವಿಸಿ ಬಂತು. ಅವರ ಪ್ರಾಣಕ್ಕೆ ಬೆದರಿಕೆಯಾಗಿತ್ತು. ಆದರೆ ಸಾತಮಾರ ಅಸಾಧಾರಣವಾದ ಕೌಶಲ್ಯದಿಂದ ಉದ್ರೇಕಗೊಂಡ ಆನೆಯನ್ನು ನಿಯಂತ್ರಿಸಿದನು. ಶಾಹುರವರು ಬಹಳ ಖುಷಿಪಟ್ಟು ಅವನ ಪರಾಕ್ರಮಕ್ಕೆ ಮೆಚ್ಚಿ ೧,೦೦೦ ರೂ.ಗಳ ಬಹುಮಾನವನ್ನು ಘೋಷಿಸಿದರು (ಮೇ, ೧).

ಮಾರನೇ ದಿವಸ ತಮ್ಮ ಅಚ್ಚುಮೆಚ್ಚಿನ ಚಿರತೆ ಬೇಟೆಗಾಗಿ ಬರೋಡಕ್ಕೆ ಹೊರಟರು. ಅವರ ಪ್ರಯಾಣವು ಮತ್ತಷ್ಟು ಆಯಾಸಗೊಳಿಸಿತು. ಪರಿಪೂರ್ಣವಾಗಿ ಆಯಾಸಗೊಂಡಿದ್ದರು (ಬಳಲಿದ್ದರು). ಮತ್ತು ಎದೆನೋವಿನಿಂದ ನರಳುತ್ತಿರುವಾಗಲೇ ಅವರು ಮೇ ೩ರಂದು ಬರೋಡ ಬಿಟ್ಟು ಬಾಂಬೆಯ ತಮ್ಮ ವಸತಿಯಾದ ಪನ್ಹಾಲ ವಸತಿಗೆ ಮಾರನೆಯ ದಿನ ತಲುಪಿದರು. ಅವರ ಹೃದಯದ ಬೇನೆ ಮತ್ತಷ್ಟು ತೀವ್ರಗೊಂಡಿತು. ಬಾಂಬೆಯಿಂದ ಪ್ರಸಿದ್ಧ ವೈದ್ಯರನ್ನು ಕರೆಸಿದರು. ಅವರು ಅವರ ಕುಸಿಯುತ್ತಿದ್ದ

ಆರೋಗ್ಯವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನ ಮಾಡಿದರು. ಪರಿಸ್ಥಿತಿ ತುಂಬಾ ಹದಗೆಟ್ಟಿತು, ಅಪಾರವಾದ ಎದೆನೋವು ಅವರನ್ನು ತಲ್ಲಣಗೊಳಿಸಿತು ಮತ್ತು ಅವರು ಸಾವು ಸಮೀಪಿಸುತ್ತಿರುವುದನ್ನು ಕಂಡುಕೊಂಡರು.

ಇಂತಹ ಪರಿಸ್ಥಿತಿಯಲ್ಲಿ ಅವರು ಪ್ರಸಿದ್ಧ ಬ್ರಾಹ್ಮಣೇತರರಾದ ಪತ್ರಿಕಾಕರ್ತರನ್ನು ಮತ್ತು ಚಿಂತಕ ಕೇಶವರಾವ್ ಥ್ಯಾಕರೆಯವರನ್ನು ಚರ್ಚೆಗಾಗಿ ಕರೆಸಿದ್ದರು. ಮೇ ೫ ಸಾಯಂಕಾಲ ಬ್ರಾಹ್ಮಣ ನೌಕರಶಾಹಿಯ ಬಲಿಪಶುವಾದ ಸತಾರಾದ ಪ್ರತಾಪಸಿಂಗ ಮಹಾರಾಜರ ಜೀವನಚರಿತ್ರೆ ಬರೆಯುವ ವಚನವನ್ನು ಥ್ಯಾಕರೆಯವರಿಂದ ಪಡೆದರು. ಕೊಲ್ಹಾಪುರದವರಾದ ಬಾಪು ಸಾಹೇಬ, ಅಪ್ಪಾಸಾಹೇಬ ಕಾಗಲ್ಕರ್ ಮತ್ತು ಇಂದುಮತಿ ಮಹಾರಾಣಿ ಸಾಹೇಬ ಮೊದಲಾದ ಆಪ್ತಜನರು ಶಾಹುರವರನ್ನು ಸುತ್ತುವರಿದಿದ್ದರು. ನೋವು ಹೆಚ್ಚಾಯಿತು ಮತ್ತು ಅವರ ಉಸಿರಾಟವು ಸುಲಭವಾಗಿರಲಿಲ್ಲ.

ಮೇ ೬, ೧೯೨೨ರಂದು ಹಿಂದುಳಿದ ವರ್ಗಗಳ ಸಂರಕ್ಷಕ ಮತ್ತು ಮಹಾರಾಷ್ಟ್ರದ ಮಹಾನ್ ವ್ಯಕ್ತಿ ಸ್ವರ್ಗವಾಸಿಯಾದರು. ಮಹಾರಾಜರು ಸಾವನ್ನು ನಿರೀಕ್ಷಿಸುತ್ತಿದ್ದರು, ಅದು ಬಂದಾಗ ನಿರ್ಭಯವಾಗಿ ಅದನ್ನು ಆಲಂಗಿಸಿಕೊಂಡರು.

ಅವರ ಪಾರ್ಥಿವ ಶರೀರವನ್ನು ಪೂನಾ ಮತ್ತು ಸತಾರಗಳ ಮೂಲಕ ಕೊಲ್ಹಾಪುರಕ್ಕೆ ತರಲಾಯಿತು. ದಾರಿಯುದ್ದಕ್ಕೂ ಗೋಳಾಡುತ್ತಿದ್ದ ಜನರು ಮಹಾರಾಜರಿಗೆ ಕಣ್ಣೀರಿನ ನಮನವನ್ನು ಸಲ್ಲಿಸಿದರು. ಅವರ ಅಂತಿಮ ಸಂಸ್ಕಾರವು ಮೇ ೭ರಂದು ಮಧ್ಯರಾತ್ರಿ ರಾಜಮರ್ಯಾದೆಯೊಂದಿಗೆ ಪ್ರಾರಂಭವಾಯಿತು. ಇದೆಲ್ಲವೂ ಅವರ ಮಗ ರಾಜಾರಾಮ್ ಅವರು ಕೊಲ್ಹಾಪುರದಲ್ಲಿ ಸಿಂಹಾಸನವೇರುವುದಕ್ಕೆ ಮೊದಲು ಇದೆಲ್ಲವನ್ನೂ ಮಾಡಲಾಯಿತು. ಮೇ ೭ರಂದು ಬೆಳಿಗ್ಗೆ ಪಂಚಗಂಗಾ ನದಿಯ ದಡದಲ್ಲಿರುವ ರಾಜರಮನೆ(ಅರಮನೆ)ಯ ಸ್ಮಶಾನಕ್ಕೆ ಅಂತಿಮಯಾತ್ರೆ ಬಂದು ತಲುಪಿತು. ಶಾಹುರವರೇ ಸ್ಥಾಪಿಸಿದ ಶಿವಾಜಿ ವೈದಿಕಶಾಲೆಯ ವಿದ್ಯಾರ್ಥಿಗಳೇ ವೈದಿಕ ಪರಂಪರೆಯಲ್ಲಿ ಅಂತಿಮ ಸಂಸ್ಕಾರಗಳನ್ನು ವಿಧಿವತ್ತಾಗಿ ನೆರವೇರಿಸಿದರು. ಮಹಾರಾಜರಿಗೆ ಅಂತಿಮ ಗೌರವ ಸಲ್ಲಿಸುವುದಕ್ಕಾಗಿ ೪೮ ಸುತ್ತುಗಳ ಕಂಡ ಮಾಸುಗಳನ್ನು ಬಂದೂಕುಗಳಿಂದ ಹಾರಿಸುವುದರ ಮೂಲಕ ದುಃಖಪೂರ್ಣವಾದ ನಮನವನ್ನು ಸಲ್ಲಿಸಲಾಯಿತು.[10]

## ರಾಜರ್ಷಿಯವರಿಗೆ ಶ್ರದ್ಧಾಂಜಲಿ

೧೭ನೇ ಶತಮಾನದ ಶಿವಾಜಿ ಮಹಾರಾಜರ ನಂತರದಿಂದ ಮಹಾರಾಷ್ಟ್ರವು ಒಬ್ಬ ಮಹಾಸಾಧಕ, ಧೈರ್ಯವಂತ, ದ್ರಷ್ಟಾರ ಮತ್ತು ಪರಾಕ್ರಮಿ ಮಹಾರಾಜನನ್ನು ನೋಡಿರಲಿಲ್ಲ. ಅವರು ೧೮ನೇ ಶತಮಾನದಲ್ಲಿ ಜನಿಸಿದ್ದಿದ್ದರೆ ಮಹಾರಾಷ್ಟ್ರವಲ್ಲದೇ ಇಡೀ ಉಪಖಂಡದಲ್ಲಿ ಉದ್ದಗಲಕ್ಕೂ ಸ್ವಾತಂತ್ರ್ಯದ ಬೆಳಕನ್ನು ಹರಡುತ್ತಿದ್ದರು. ಅವರಲ್ಲಿ ಅಂತ ಮಹಾಶಕ್ತಿಯಿತ್ತು, ಅವರು ಖಂಡಿತವಾಗಿ ಶಿವಾಜಿಯ ಕನಸಾದ ಮರಾಠ ಸಾಮ್ರಾಜ್ಯ ನನಸು ಮಾಡುತ್ತಿದ್ದರು.

ಶಾಹುರವರ ಆಕಸ್ಮಿಕ ಸಾವಿನ ಸುದ್ದಿಯನ್ನು ಕೇಳಿದ ಮಹಾರಾಷ್ಟ್ರದ ಮತ್ತು ಹೊರಗಿನ ಹಿಂದುಳಿದ ವರ್ಗಗಳ ನಾಯಕರೆಲ್ಲರೂ ಆಘಾತಗೊಂಡರು. ಮಹಾಶಯನಾದ ಶಾಹು ಮಹಾರಾಜರಿಗೆ ಗೌರವನಮನವನ್ನು ಇಡೀ ದೇಶದಲ್ಲಿ ಸಲ್ಲಿಸಲಾಯಿತು ಮತ್ತು ಹಲವಾರು ಶ್ರದ್ಧಾಂಜಲಿ ಸಭೆಗಳನ್ನು

ನಡೆಸಲಾಯಿತು. ವಿಶೇಷ ಲೇಖನಗಳನ್ನು ಮತ್ತು ಸಂಪಾದಕೀಯಗಳನ್ನು ಅವರ ಬಗ್ಗೆ ಬರೆಯಲಾಯಿತು ಮತ್ತು ಅವರು ಹಿಂದುಳಿದ ವರ್ಗಗಳಿಗೆ ಮತ್ತು ಅಸ್ಪೃಶ್ಯರ ಬಗ್ಗೆ ಮಾಡಿದ ಸಾಮಾನ್ಯಸೇವೆಯನ್ನು ಪತ್ರಿಕೆಗಳಲ್ಲಿ ಬರೆದು ಹೊಗಳಲಾಯಿತು. ಶಾಹುರವರು ನೇರವಾಗಿ ಶಿವಾಜಿ ವಂಶಸ್ಥರು, ಅವರು ಹಿಂದುಳಿದ ವರ್ಗಗಳನ್ನು ಪ್ರೀತಿಸಿದ ಜನತಾಂತ್ರಿಕವಾದಿಗಳಲ್ಲಿ ಅಪ್ಪಟ ಜನತಂತ್ರವಾದಿಯಾಗಿದ್ದರೆಂದು ಮದ್ರಾಸ್ ಪ್ರೆಸಿಡೆನ್ಸಿಯ ಬ್ರಾಹ್ಮಣೇತರರ ಆಂದೋಲನದ ನಾಯಕರಾದ ಸರ್.ತ್ಯಾಗರಾಜ ಚೆಟ್ಟಿಯಾರ್ ಅವರು ಹೇಳಿದ್ದಾರೆ. ಅವರು ಮತ್ತೆ ಮುಂದುವರಿದು ಶಾಹುರವರು ಬ್ರಾಹ್ಮಣೇತರರ ಆಂದೋಲನಕ್ಕೆ ಮತ್ತು ಭಾರತದ ಹಿಂದುಳಿದ ವರ್ಗಗಳಿಗೆ ಸ್ಫೂರ್ತಿದಾತ ಹಾಗೂ ಅವರ ಉದ್ದೇಶವು ಬ್ರಾಹ್ಮಣೇತರರ ಆಂದೋಲನವನ್ನು ರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ಯುವುದಾಗಿತ್ತೆಂದು ಅವರು ಹೇಳಿದರು.[11]

ಮದ್ರಾಸಿನಲ್ಲಿ ಬ್ರಾಹ್ಮಣೇತರರ ಆಂದೋಲನದ ಮುಖವಾಣಿಯಾದ[12] 'ಜಸ್ಟೀಸ್' ಪತ್ರಿಕೆಯು ಭವ್ಯಗೌರವವನ್ನು ಸಲ್ಲಿಸಿತು: "ಶಾಹುವರು ಜನರಲ್ಲಿ ಒಬ್ಬ ಮಹಾರಾಜರಾಗಿದ್ದರು ಮತ್ತು ರಾಜರಲ್ಲಿ ಒಬ್ಬ ಮನುಷ್ಯರಾಗಿದ್ದರು. ಅವರ ಆಕರ್ಷಕ ವ್ಯಕ್ತಿತ್ವ, ಅವರ ಕಡು ಆಶಾವಾದ, ದೃಢಮನಸ್ಸಿನ ರಾಜರಾಗಿದ್ದ ಅವರು ಕರುಣೆಯ ಮತ್ತು ಉದಾರ ಮನೋಭಾವದವರಾಗಿದ್ದರು ಮತ್ತು ಮರಾಠದ ಅತ್ಯುತ್ತಮ ಮತ್ತು ಒಳ್ಳೆಯ ರೀತಿಯವರಾಗಿದ್ದರು. ಮತ್ತೊಂದು ಯುಗದಲ್ಲಿ ಅವರು ಹುಟ್ಟಿದ್ದರೆ ಅವರು ಸಾಮ್ರಾಜ್ಯವನ್ನು ಸ್ಥಾಪಿಸಿ ಒಂದು ಒಕ್ಕೂಟವನ್ನು ನಿರ್ಮಿಸಿಬಿಡುತ್ತಿದ್ದರು."[13]

ಶಾಹುರವರ ಸಿದ್ಧಾಂತವನ್ನು ಯಾವಾಗಲೂ ಖಂಡಿಸುತ್ತಿದ್ದ ತಿಲಕರ ಪಕ್ಷದ ಮುಖವಾಣಿಯಾದ 'ಕೇಸರಿ' ಪತ್ರಿಕೆ ಹೀಗೆ ಹೇಳಿತು: "ಭೌತಿಕ ಬಲದಲ್ಲಿ ಶಾಹುರವರು ದೇವರಿಂದ ವಿಶೇಷ ವರದಾನ ಪಡೆದಿದ್ದರು. ಈ ವಿಧದಲ್ಲಿ ಹೋಲಿಕೆ ಮಾಡುವುದಕ್ಕೆ ಇಡೀ ಭಾರತದಲ್ಲಿ ಬಹುಶಃ ಯಾವ ರಾಜನೂ ಇರಲಿಲ್ಲ. ಅವರ ಬುದ್ಧಿಮತ್ತೆಯ ಶಕ್ತಿಯು ಹಾಗೆಯೇ ಮಹತ್ತಾಗಿತ್ತು. ಅವರು ಪ್ರಾಚೀನಕಾಲದಲ್ಲಿ ಹುಟ್ಟಿದ್ದರೆ ಅವರ ಬುದ್ಧಿಮತ್ತೆಗೆ ಅನುಗುಣವಾದ ಅವರ ಸಂಘಟನಾ ಶಕ್ತಿಗೆ ಅವರಿಗೆ ಸಲ್ಲಬೇಕಾಗಿದ್ದ ಐತಿಹಾಸಿಕ ಕೀರ್ತಿಯನ್ನು ಖಂಡಿತವಾಗಿ ಸಾಧಿಸಿಬಿಡುತ್ತಿದ್ದರು." ಶಾಹುರವರು ತನ್ನಲ್ಲಿದ್ದ ಅಧಿಕಾರವನ್ನು ತನ್ನ ಪ್ರಚಂಡ ಬುದ್ಧಿಮತ್ತೆಯಿಂದ ಧರ್ಮ, ರಾಜಕಾರಣ ಮತ್ತು ಸಮಾಜಶಾಸ್ತ್ರಗಳಲ್ಲಿ ಬಳಸಿದಂತೆ ಇಂದಿನ ಕಾಲದಲ್ಲಿ ಮತ್ಯಾರೂ ಬಳಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ.[14] "ಪ್ರಚಂಡ ಬುದ್ಧಿಮತ್ತೆಯ ನೇಗಿಲು" ಎಂಬ ಪದವು ಶಾಹು ಸತ್ತ ನಂತರವೂ ತಿಲಕವಾದಿಗಳು ಶತ್ರುತ್ವದ ಮನೋಭಾವವನ್ನು ಬಿಟ್ಟುಬಿಡಲು ಸಿದ್ಧರಾಗಿರಲಿಲ್ಲ.

ಹಿಂದುಳಿದ ವರ್ಗಗಳ ನಾಯಕ ಡಾ. ಬಿ. ಆರ್. ಅಂಬೇಡ್ಕರರು ಕಳುಹಿಸಿದ್ದ ಶ್ರದ್ಧಾಂಜಲಿಯ ಪತ್ರವನ್ನು ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. ಮತ್ತೊಬ್ಬ ನಾಯಕ ಗಣೇಶ ಅಕಾಜಿ ಗವಾಯಿ ಅವರು ಶಾಹುರವರನ್ನು 'ಅಸ್ಪೃಶ್ಯರ ದೇವರೆಂದು' ಹಾಗೂ 'ನಮ್ಮ ಅಬ್ರಹಾಂ ಲಿಂಕನ್' ಎಂದು ವರ್ಣಿಸಿದ್ದಾರೆ. ಸತ್ಯಶೋಧಕ ಪತ್ರಕರ್ತರಾದ 'ಜಾಗೃತಿಕಾರ' ಭಗವಂತರಾವ್ ಪಾಲೇಕರ್, 'ವಿಜಯಿಮರಾಠಕಾರ' ಶ್ರೀಪತ್‌ರಾವ್ ಶಿಂಧೆ, 'ಪ್ರಬೋಧಂಕಾರ' ಕೇಶವರಾವ್ ಥ್ಯಾಕರೆ, 'ರಾಷ್ಟ್ರವೀರಕರ್' ಶ್ಯಾಮರಾವ್ ದೇಸಾಯಿ ಅವರು ತಮ್ಮ ಸಂಪಾದಕೀಯಗಳಲ್ಲಿ ಅವರ ಸಾಮಾಜಿಕ ಕಾರ್ಯವನ್ನು ಪ್ರಶಂಸಿಸಿದ್ದಾರೆ.

ಬ್ರಿಟಿಷರ ವಲಯದಲ್ಲಿ ವೈಸ್‌ರಾಯ್‌ರಿಂದ ರೆಸಿಡೆಂಟರವರೆಗಿನ ಹಲವಾರು ಬ್ರಿಟಿಷ್ ಅಧಿಕಾರಿಗಳು ಮತ್ತು ಮಹಾರಾಜರ ಸ್ನೇಹಿತರು ಅವರ ಮರಣದ ಬಗ್ಗೆ ತಮ್ಮ ಸಂತಾಪವನ್ನು ಸೂಚಿಸಿದರು ಮತ್ತು

ಅವರ ನೆನಪಿನಲ್ಲಿ ಅಪಾರ ಗೌರವವನ್ನು ವ್ಯಕ್ತಪಡಿಸಿದರು. ಅವರ ಗುರುವಾದ, ಸ್ನೇಹಿತರಾದ ಫ್ರೇಜರ್ ಅವರು ಮುಖ್ಯನಮನವನ್ನು ಸಲ್ಲಿಸಿದರು. ತಮ್ಮ ಶ್ರದ್ಧಾಂಜಲಿಯ ಪತ್ರದಲ್ಲಿ ಹೊಸ ಛತ್ರಪತಿ ರಾಜಾರಾಮ್ ಅವರಿಗೆ ಹೀಗೆ ಬರೆದಿದ್ದಾರೆ: "ನೀವು ಹೆಚ್ಚುಕಾಲ ಬದುಕಿದರೆ, ನಿಮ್ಮ ತಂದೆಯ ಅಪರೂಪವಾದ ಚಾರಿತ್ರ್ಯವನ್ನು ಮೆಚ್ಚುವಿರಿ. ತಮ್ಮ ಆಡಳಿತಾವಧಿಯಲ್ಲಿ ಮಾನ್ಯ ಮಹಾರಾಜರು ಹಲವಾರು ಸಂಕಷ್ಟಗಳನ್ನು ಧೈರ್ಯ ಮತ್ತು ತತ್ವಬದ್ಧತೆಯಿಂದ ಎದುರಿಸಿ ಎಂದಿಗೂ ವಿಫಲರಾಗಲಿಲ್ಲ. ಅವರು ಜನರಿಗೆ ಅಪಾರವಾದ ಪ್ರೀತಿಯನ್ನು ತೋರಿಸಿದರು ಮತ್ತು ತಮ್ಮ ಇಡೀ ಜೀವನದ ಉದ್ದಕ್ಕೂ ಯಾವುದೇ ಬೆಲೆಯನ್ನಾದರೂ ತೆತ್ತು ದುರ್ಬಲರ ಏಳಿಗೆಗೆ ಶ್ರಮಿಸಿದರು. ಅವರು ಸತ್ಯವಂತರು ಮತ್ತು ಬಲಿಷ್ಠರು, ಆದರೆ ನೊಂದವರಿಗೆ ಕೋಮಲ ಹೃದಯದವರಾಗಿದ್ದರು. ಮತ್ತು ಕೊಲ್ಲಾಪುರದಂತಹ ಸಂಸ್ಥಾನವನ್ನು ಆಳಲು ಅವರ ಮುಂದೆ ಯೋಗ್ಯನಾದ ಯಾವ ಪುತ್ರನೂ ನಿದರ್ಶನನಾಗಿ ಇಲ್ಲ."

ಫ್ರೇಜರರ ಮುನ್ಸೂಚನೆಯು ಇಂದು ನಿಜವಾಗಿದೆ. ಒಂಭತ್ತು ದಶಕಗಳ ನಂತರವೂ ಶಾಹು ಛತ್ರಪತಿ ಅವರು ಇಡೀ ದೇಶದ ಅಸ್ಪೃಶ್ಯರ ಮತ್ತು ಹಿಂದುಳಿದ ವರ್ಗಗಳ ಸಂರಕ್ಷಕರಾಗಿ ಸ್ಫೂರ್ತಿದಾತರಾಗಿದ್ದಾರೆ. ಶಾಹು ಛತ್ರಪತಿಯವರು ಭಾರತದ ಒಬ್ಬ ಮಹಾನ್ ಸಾಮಾಜಿಕ ಕ್ರಾಂತಿಕಾರಿಯಾಗಿ ಹೆಸರುವಾಸಿಯಾಗಿದ್ದಾರೆ.

---

೩೩

# ವ್ಯಕ್ತಿತ್ವ ಮತ್ತು ಸಾಧನೆಗಳು

ಶಾಹುರವರ ಜೀವನಚರಿತ್ರೆಕಾರರು ಸಾವಿರಾರು ವ್ಯಕ್ತಿಗಳಲ್ಲಿ ಅವರು ಒಂದು ಭವ್ಯ ಮತ್ತು ಉಜ್ವಲವಾದ ವ್ಯಕ್ತಿತ್ವವುಳ್ಳ ಅಪರೂಪದ ವ್ಯಕ್ತಿಯೆಂದು ಚಿತ್ರಿಸಿದ್ದಾರೆ.[1] ವಾಸ್ತವಿಕವಾಗಿ ಲಕ್ಷಾಂತರ ಮಂದಿಯಲ್ಲಿ ಅವರು ಮಹತ್ವದ ವ್ಯಕ್ತಿಯೊಬ್ಬರಾಗಿದ್ದರೆಂದರೆ ಅತಿಶಯೋಕ್ತಿಯಲ್ಲ. ಸಮಕಾಲೀನ ಹಲವಾರು ಮಹಾಲೇಖಕರು ಮತ್ತು ಕವಿಗಳು ತಾವು ಕಂಡ ಶಾಹು ಮಹಾರಾಜರನ್ನು ತಮ್ಮ ನೆನಪುಗಳಲ್ಲಿ ವಿವರಿಸಿದ್ದಾರೆ.

### ಮಹಾಪರಾಕ್ರಮಶಾಲಿ

ಪ್ರಸಿದ್ಧ ಲೇಖಕ ಮತ್ತು ಪತ್ರಿಕಾಕರ್ತ ಜಿ. ಟಿ. ಮದ್‌ಖೋಲ್ಕರರು ಶಾಹುರವರನ್ನು ಹಲವುಬಾರಿ ನೋಡಿದ್ದರು. ಅವರು ಹೇಳುತ್ತಾರೆ: "ನಮ್ಮ ಪುರಾಣ ಪುಸ್ತಕಗಳಲ್ಲಿ ವಿವರಿಸಿರುವ ತೇಜೋ ಮತ್ತು ಶಕ್ತಿಯುತವಾದ ಪುರುಷನನ್ನು ನಾನು ನೋಡಿರಲಿಲ್ಲ".[2] ಮಹಾರಾಜರನ್ನು ಬಹಳ ಹತ್ತಿರದಿಂದ ನೋಡಿದ ಮತ್ತೊಬ್ಬ ವ್ಯಕ್ತಿ ನಟ ಬಾಬುರಾವ್ ಪೆಂಢಾರ್ಕರ್. ಅವರ ತಂದೆ ಪನ್ಹಾಲದಲ್ಲಿ ಒಬ್ಬ ಸರಕಾರಿ ವೈದ್ಯರಾಗಿ ಕೆಲಸಮಾಡಿದ್ದರು. ಮತ್ತು ಶಾಹು ಜೊತೆಯಲ್ಲಿ ಅನ್ಯೋನ್ಯವಾಗಿದ್ದರು. ಬಾಬುರಾವ್ ಅವರು ಅರಮನೆಯ ಸುತ್ತಮುತ್ತಲಿನಲ್ಲಿಯೇ ಬೆಳೆದರು. ಅವರು ತಮ್ಮ ಜೀವನಚರಿತ್ರೆಯಲ್ಲಿ ಅವರು ಶಾಹುರವರನ್ನು ಸಚಿತ್ರ ಮಾತುಗಳಲ್ಲಿ ಅವರ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಅವರು ಹೇಳುತ್ತಾರೆ: "......ಮಹಾರಾಜರು ನೋಟದಲ್ಲಿ ಒರಟಾಗಿ ಕಂಡರೂ ದೈಹಿಕವಾಗಿ ಮತ್ತು ಮಾನಸಿಕವಾಗಿ ದೃಢವಾಗಿದ್ದರು. ಅವರು ಆರು ಅಡಿ ಮೂರು ಇಂಚು ಎತ್ತರವಾಗಿದ್ದರು. ಅದಕ್ಕೆ ಅನುಗುಣವಾಗಿ ವಿಶಾಲವಾಗಿದ್ದರು. ಅವರು ಮಾಂಸಲವಾದ ದೇಹವನ್ನು ಹೊಂದಿದ್ದರು ಮತ್ತು ಅವರ ಮನಸ್ಸು ಕರುಣೆ ಮತ್ತು ಔದಾರ್ಯದಿಂದ ಕೂಡಿತ್ತು. ಅವರು ಕೀಟಲೆ ಮತ್ತು ಸಿಡುಕುತನದ ಒಬ್ಬ ಮಿತಭಾಷಿಯಾಗಿದ್ದರು. ಅವರ ಕಪ್ಪುಬಣ್ಣದಿಂದ ಭಾರಿ ಗಾತ್ರದ ಶರೀರವನ್ನು ಹೊಂದಿ, ಹೊಳೆಯುವ ಕಣ್ಣುಗಳನ್ನು ಹೊಂದಿ ಅವರ ವ್ಯಕ್ತಿತ್ವ ಸಾವಿರಾರು ಜನರಿಗಿಂತ ಭಿನ್ನವಾಗಿತ್ತು. ಅಪರಿಚಿತರು ಅವರ ಹತ್ತಿರ ಹೋಗುವುದಕ್ಕೆ ಹಿಂಜರಿಯುತ್ತಾರೆ. ಅವರ ಧ್ವನಿ ಗುಡುಗಿನಂತೆ ಬಹಳ ಗಡುಸಾಗಿತ್ತು. ಅವರಿಗೆ ಬೇಟೆ ಮತ್ತು ಕುಸ್ತಿಗಳು ಅತಿಪ್ರಿಯವಾದವು. ಅವರ ದೇಹದಲ್ಲಿ ಅಪಾರವಾದ ಶಕ್ತಿಯಿತ್ತು. ಅವರಿಗೆ ಬೇಟೆ ಮತ್ತು ಕುದುರೆ ಸವಾರಿಯಲ್ಲಿ ಮಿಗಿಲಾದವರು ಯಾರು ಇರಲಿಲ್ಲ. ನಾಲ್ಕು ಎತ್ತುಗಳು ಎಳೆಯುವಂಥಾದ್ದನ್ನು ತಾವೇ ಎಳೆಯುತ್ತಿದ್ದರು. ಅವರು ಪ್ರಾಣಿಗಳನ್ನು ದೈಹಿಕವಾಗಿ ಒಂದೊಂದಾಗಿ ಬೇಟೆಯಾಡುತ್ತಿದ್ದರು. ಅವರು ಗೊತ್ತಿಲ್ಲದೆ ಯಾವ ಪ್ರಾಣಿಯನ್ನೂ ಹೊಡೆಯುತ್ತಿರಲಿಲ್ಲ. ಅವರು ಷೂಟಿಂಗ್‌ನಲ್ಲಿ ಪರಿಣತರಾದಂತೆಯೇ ಭರ್ಜಿ ಎಸೆಯುವುದರಲ್ಲಿ ನುರಿತವರಾಗಿದ್ದರು. ಆದ್ದರಿಂದ ಅವರು ಸಂದರ್ಭಕ್ಕನುಗುಣವಾಗಿ ಬಂದೂಕು ಅಥವಾ ಈಟಿಯಿಂದ ಬೇಟೆಯಾಡುತ್ತಿದ್ದರು. ಅವರು ನಿಯಮವೆಂಬಂತೆ

ರೈತಾಪಿವರ್ಗ ಮತ್ತು ಕಾರ್ಮಿಕವರ್ಗದಲ್ಲಿ ಬೆರೆಯುತ್ತಿದ್ದರು. ಅವರು ಯುವಕರೊಂದಿಗೆ ಸೇರಿ ತಮ್ಮ ರೊಟ್ಟಿಗಳನ್ನು ತಿನ್ನುತ್ತಿದ್ದರು ಮತ್ತು ಅಖಾಡದಲ್ಲಿ ಯುವಕರನ್ನು ಸೇರಿಸಿ ಅವರೊಡನೆ ಕುಸ್ತಿಸ್ಪರ್ಧೆಗಳನ್ನು ಆಡಿಸುತ್ತಿದ್ದರು. ಅವರು ಪ್ರಜ್ಞಾಪೂರ್ವಕವಾಗಿ ಬ್ರಿಟಿಷ್ ಆಟ–ಪಾಟ, ಕ್ರೀಡೆ ಮತ್ತು ಅವರ ರೀತಿ–ರಿವಾಜುಗಳಿಂದ ದೂರವಿರುತ್ತಿದ್ದರು. ಅವರ ಜೀವನ ಸರಳವಾಗಿತ್ತು. ಅವರು ಮಸ್ಲಿನಿನ ಸಡಿಲವಾದ ಷರ್ಟು, ಒಂದು ಸರಳವಾದ ಷರಾಯಿ ಅಥವಾ ಲುಂಗಿಯನ್ನು ಧರಿಸುತ್ತಿದ್ದರು. ಮತ್ತು ಹಳದಿಯ ಪೇಟವನ್ನು ಧರಿಸಿಕೊಂಡು ಸರಳವಾದ ಕುದುರೆ ಗಾಡಿಯಾದ 'ಖಡ್‌ಖಡ'ದಲ್ಲಿ ಹೋಗುತ್ತಿದ್ದರು. ಅವರ ಆಹಾರ ಸರಳ. ಋತುವಿನ ಬೆಳ್ಳುಳ್ಳಿ ಅವರ ರುಚಿಕರವಾದ ಆಹಾರವಾಗಿ ಬದಲಾಗುತ್ತಿತ್ತು. ಅವರು ಜೋಳದ ರೊಟ್ಟಿಗಳನ್ನು ಈರುಳ್ಳಿ ಸಮೇತ ಜುಣಕದೊಂದಿಗೆ ಮೆಲ್ಲುತ್ತಿದ್ದರು. ಬಹಳ ವಿರಳವಾಗಿ ಮಾಂಸಾಹಾರವನ್ನು ಸೇವಿಸುತ್ತಿದ್ದರು. ಅವರು ಎಂದೂ ಮದ್ಯಪಾನವನ್ನು ಸೇವಿಸುತ್ತಿರಲಿಲ್ಲ".[3]

ಪ್ರಕೃತಿದತ್ತ ಅಪಾರ ಶಕ್ತಿ ಸಾಮರ್ಥ್ಯಗಳುಳ್ಳ ವ್ಯಕ್ತಿಗಳಲ್ಲಿ ಶಾಹು ಒಬ್ಬರಾಗಿದ್ದರು. ಇಂದಿಗೂ ಕೊಲ್ಹಾಪುರದ ನೆರೆಹೊರೆಗಳಲ್ಲಿ ಶಾಹುರವರ ಬಾಹುಬಲಗಳ ದೈತ್ಯಶಕ್ತಿಯ ಬಗ್ಗೆ ಮಾತನಾಡುತ್ತಿದ್ದಾರೆ. ಕೆಲವರು ಅವರ ಜೀವನಚರಿತ್ರೆಗಳಲ್ಲಿ ದಾಖಲಿಸಿದ್ದಾರೆ. ತಮ್ಮ ಯೌವನಕಾಲದಲ್ಲಿ ಕುದುರೆಯ ಮೇಲೆ ಸವಾರಿಮಾಡುತ್ತಾ ಎಲ್ಲೂ ನಿಲ್ಲದೆ ಕೊಲ್ಹಾಪುರದಿಂದ ಮಹಾಬಲೇಶ್ವರದವರೆಗೆ ಹೋಗುತ್ತಿದ್ದರು. ತನ್ನ ಕೈಗಳಲ್ಲಿ ಮೋಟಾರಿನ ಕವಾಟವನ್ನು ಮುಚ್ಚುತ್ತಿದ್ದರು. ಉರಿಯುತ್ತಿದ್ದ ಲಾಯದಿಂದ ಸುರಕ್ಷಿತ ಸ್ಥಳಕ್ಕೆ ಕುದುರೆಗಳನ್ನು ಹೊತ್ತು ಸಾಗಿಸುತ್ತಿದ್ದರು. ಬರಿಗೈಗಳಿಂದ ಭಯಂಕರವಾದ ಹುಲಿಯೊಂದಿಗೆ ಹೋರಾಡುತ್ತಿದ್ದರು ಮತ್ತು ತನ್ನ ಕೈಗಳಿಂದಲೇ ಅದರ ಕುತ್ತಿಗೆಯನ್ನು ಸಾಯುವವರೆಗೆ ಹಿಸುಕುತ್ತಿದ್ದರು. ತನ್ನ ಲಾಂಗ್‌ನಿಂದ ಒರಟು ಕುಸ್ತಿಪಟುಗಳನ್ನು ಸುಲಭವಾಗಿ ಎತ್ತಿಬಿಡುತ್ತಿದ್ದರು. ಮರೆವು ಬರಿಸುವ ಔಷಧಿಯಿಲ್ಲದೆ ಗಲಗ್ರಂಥಿ (ಟಾನ್ಸಿಲ್)ಗಳ ಶಸ್ತ್ರಚಿಕಿತ್ಸೆಯನ್ನು ಮಾಡಿಸಿಕೊಳ್ಳುತ್ತಿದ್ದರೆಂಬ ಕತೆಗಳು ಚಿತ್ರಿತವಾಗಿವೆ. ಈ ಎಲ್ಲಾ ಕತೆಗಳು ಅವರ ರಹಸ್ಯಮಯವಾದ ದೈಹಿಕಬಲವನ್ನು ಹೇಳುತ್ತವೆ.[4] ಅವರ ಸಮಕಾಲೀನರು ಅವರ ದೈಹಿಕಪರಾಕ್ರಮ ನೋಡಿ ಆಶ್ಚರ್ಯಪಡುತ್ತಿದ್ದರು.

## ಅಸಾಧಾರಣವಾದ ಧೈರ್ಯ

ಅಸಾಧಾರಣವಾದ ದೈಹಿಕ ಬಲದೊಂದಿಗೆ ಅವರು ಅಸಾಧಾರಣವಾದ ಕೆಚ್ಚು ಸಹ ಹೊಂದಿದ್ದರು. ಶಿವಾಜಿ ಮಹಾಶಯನ ಮಗನಾದ ಛತ್ರಪತಿ ಸಂಭಾಜಿಯ ಸಾಧನೆಗಳ ವ್ಯಾಖ್ಯಾನಮಾಡುತ್ತಾ ಪ್ರಸಿದ್ಧ ಇತಿಹಾಸಕಾರ ಸೇತುಮಾಧವರಾವ್ ಪಗಡಿ ಅವರು ಹೇಳುತ್ತಾರೆ: "......ಮನುಷ್ಯನಲ್ಲಿರುವ ಎಲ್ಲಾ ಗುಣಗಳು ಧೈರ್ಯದ ನೆರಳಿನಲ್ಲಿರುತ್ತವೆ. ಮನುಷ್ಯನಲ್ಲಿ ಕೆಚ್ಚಿಲ್ಲದಿದ್ದರೆ ಇತರೆ ಗುಣಗಳಿಗೆ ಬೆಲೆಯಿಲ್ಲ".[5] ಸಂಭಾಜಿ ಹಲವಾರು ಯುದ್ಧಗಳನ್ನು ಮಾಡಿದ್ದಾರೆ ಮತ್ತು ಈ ಕೆಚ್ಚನ್ನು ರುಜುವಾತುಪಡಿಸಿದ್ದಾರೆ. ಶಾಹುರವರ ಕಾಲಮಾನವೇ ಭಿನ್ನವಾಗಿತ್ತು ಮತ್ತು ಯುದ್ಧದ ಕಲೆಗಳೇ ಬದಲಾಗಿದ್ದವು. ಆದರೂ ತಮ್ಮ ಜೀವನದಲ್ಲಿ ಬೇಟೆಯ ಪ್ರಸಂಗಗಳು, ಪೌರುಷ ಕ್ರೀಡೆಗಳಾದ ಸಾತಮಾರಿ ಅವರ ಅಸಾಧಾರಣವಾದ ಬಲವನ್ನು ಪ್ರದರ್ಶಿಸುವುದರಲ್ಲಿ ವಿಫಲವಾಗಲಿಲ್ಲ. ಅವರು ಹಲವಾರು ಕಾಡುಹಂದಿ ಮತ್ತು ಹುಲಿಗಳ ಬೇಟೆಯನ್ನು ಕೆಚ್ಚೆದೆಯಿಂದ ಆಡಿದ್ದಾರೆ. ಅವರು ಹಲವುಬಾರಿ ಕಾಡುಪ್ರಾಣಿಗಳನ್ನು ಅವುಗಳಿಗೆ ತೊಂದರೆಪಡಿಸದೆ ಆಯುಧಗಳಿಲ್ಲದೆ ಏಕಾಂಗಿಯಾಗಿ ಹೋರಾಡಿದ್ದಾರೆ. ರಾಧಾನಗರಿಯ ಕಾಡಿನಲ್ಲಿ ಹೆಣ್ಣು–ಕರಡಿಯೊಂದು ಅವರ ಮೇಲೆ ಭಯಂಕರವಾಗಿ ದಾಳಿಮಾಡಿದಾಗ ಅವರು ಅದರ ವಿರುದ್ಧ ಹೋರಾಡಿದ್ದನ್ನು ನೆರೆಹೊರೆಯವರು

ಸಚಿತ್ರವಾಗಿ ವಿವರಿಸುತ್ತಾರೆ. ಬರೋಡದ ಸಾತಮಾರಿ ಅಂಗಳದಲ್ಲಿ ಸಾತಮಾರರನ್ನು (ಹೋರಾಡುವವು) ಆನೆಯು ಇನ್ನೇನು ತನ್ನ ಕಾಲಿನಿಂದ ಹೊಸಕಿಹಾಕಬೇಕಾಗಿತ್ತು ಎನ್ನುವಾಗ ಕುಳಿತಿದ್ದ ಶಾಹುರವರು ತಕ್ಷಣ ಅಂಗಳಕ್ಕೆ ಕುಪ್ಪಳಿಸಿ ಆನೆಯ ಮುಂದೆ ಭಯಂಕರವಾದ ಶಬ್ದಮಾಡಿದರು. ಕೂಡಲೇ ಸಾತಮಾರನು ಬದುಕಿಬಿಟ್ಟನು. ಅಂತಹ ನಿಜವಾದ ಕತೆಗಳು ಅವರ ಜೀವನಚರಿತ್ರೆಗಳಲ್ಲಿ ಸಿಗುತ್ತವೆ.[6]

ಅವರ ಧೈರ್ಯ ಕೇವಲ ಬೇಟೆಯಾಡುವುದರಲ್ಲಿ ಮಾತ್ರ ಪ್ರದರ್ಶಿತವಾಗಿಲ್ಲ. ಅವರ ಕೆಚ್ಚೆದೆಯು ಶತ್ರುಗಳಾದ ಗರ್ವಿಷ್ಠ ಬ್ರಾಹ್ಮಣಿಕೆ ತಮ್ಮ ರಕ್ತಪಿಪಾಸುಗಳಾದ ತೀವ್ರಗಾಮಿಗಳಾಗಿರಬಹುದು ಅಥವಾ ಕುಯುಕ್ತಿಯಲ್ಲಿ ನಿಷ್ಣಾತರಾದ ಸಾಮ್ರಾಜ್ಯಶಾಹಿಗಳಾದ ಬ್ರಿಟಿಷರ ವಿರುದ್ಧ ಹೋರಾಡುವುದರಲ್ಲಿ ತಮ್ಮ ಜೀವನದುದ್ದಕ್ಕೂ ತೋರಿಸಿದ್ದಾರೆ. ಅವರು ರೂಪಿಸಿದ ಬಹುಜನರ ಏಳಿಗೆಯ ಆಂದೋಲನವು ಜಾತಿಯ ಶ್ರೇಷ್ಠತ್ವದ ಬ್ರಾಹ್ಮಣರ ಮತ್ತು ಬ್ರಿಟಿಷರ ಪರಮಾಧಿಪತ್ಯವನ್ನು ಪ್ರತಿನಿಧಿಸುವ ಬ್ರಿಟಿಷ್ ಆಡಳಿತ ವರ್ಗಗಳ ನಡುವೆ ಸಿಕ್ಕಿಹಾಕಿಕೊಂಡಿದ್ದು ಶಾಹುರವರ ಜಾಗೃತಿ, ದೂರಾಲೋಚನೆ, ರಾಯಭಾರಿತನಗಳಲ್ಲದೆ ಅವರ ಧೈರ್ಯವೂ ಸೇರಿಕೊಂಡಿತ್ತು. ಶಾಹುರವರು ಈ ಶಕ್ತಿಯನ್ನು ಯಥೇಚ್ಛವಾಗಿ ಪಡೆದಿದ್ದರು.

## ಶಿಕ್ಷಣ, ಮೂಢನಂಬಿಕೆ ಮತ್ತು ಮರಾಠಿಗಳ ಬಗ್ಗೆ ಅವರ ಅಭಿಪ್ರಾಯಗಳು

ಶಾಹುರವರು ಜನಸಾಮಾನ್ಯರ ನಡುವೆ ಬದುಕಲು ಬಯಸಿದರು. ತನ್ಮೂಲಕ ಅವರು ಅವರ ಕಲ್ಯಾಣ ಸಾಧಿಸಲು ಅಪೇಕ್ಷಿಸಿದ್ದರು. ಈ ಕೆಲಸದಲ್ಲಿ ಅವರಿಗೆ ಅವರಿಟ್ಟ ದೇವರು ಮತ್ತು ಧರ್ಮದ ಬಗ್ಗೆಯಿಟ್ಟ ನಿಷ್ಠೆ ಸಹಾಯಮಾಡಿತು. ಅವರು ಆರ್ಯ ಸಮಾಜವನ್ನು ಬಹಿರಂಗವಾಗಿ ಮೆಚ್ಚಿಕೊಂಡಿದ್ದರೂ ಅವರು ಮೂರ್ತಿಪೂಜೆಯನ್ನು ಬಿಡಲಿಲ್ಲ. ಅವರು ತಮ್ಮ ಸಂಸ್ಥಾನಗಳ ದೇವತೆಗಳ ಆಶೀರ್ವಾದವನ್ನು ಬೇಡಿದ್ದರು. ಅವರು ಮುಸ್ಲಿಮರ ದರ್ಗಾಗಳಿಗೆ ಮತ್ತು ಹಿಂದುಗಳ ದೇವಸ್ಥಾನಗಳಿಗೆ ಹೋಗುತ್ತಿದ್ದರು. ತನ್ನ ಕೈಮೇಲೆ ಹಚ್ಚೆ ಹೊಯ್ಸಿಕೊಂಡಿದ್ದ ಶಿವನಿಗೆ ಪೂಜೆಮಾಡುತ್ತಿದ್ದರು. ಅರಮನೆಯ ಮತ್ತು ಸಂಸ್ಥಾನದ ಪರಂಪರೆಯಿಂದ ಬಂದಿದ್ದ ದೇವತೆಗಳ ಪೂಜೆಯನ್ನು ಅವರು ಮಾಡುತ್ತಿದ್ದರು. ತಮ್ಮ ಸಂಸ್ಥಾನದಲ್ಲಿ ಮಹಾಲಕ್ಷ್ಮಿ, ತುಲಜಾ ಭವಾನಿ, ತೆಂಬಲಾಯಿ ಜೋತಿಬಾ ಮೊದಲಾದ ದೇವತೆಗಳ ಜಾತ್ರೆಗಳನ್ನು ರಾಜವೈಭವದಿಂದ ನಡೆಸುತ್ತಿದ್ದರು. ರಾಜನಾಗಿ ಪ್ರಜೆಗಳಿಗಾಗಿ ಅಂಥ ಕಾರ್ಯಗಳನ್ನು ಮಾಡುವುದು ರಾಜನ ಕರ್ತವ್ಯವೆಂದು ಅವರು ಭಾವಿಸುತ್ತಿದ್ದರು. ಅವುಗಳ ನಿರ್ವಹಣೆಯಲ್ಲಿ ಅವರು ತಪ್ಪುತ್ತಿರಲಿಲ್ಲ. ಶಾಹುರವರು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಸಹ ಮೆಚ್ಚಿ ಗೌರವಿಸುತ್ತಿದ್ದರು. ಭಾರತೀಯರು ಪಾಶ್ಚಿಮಾತ್ಯ ಜನರ ಹಲವಾರು ಗುಣಗಳನ್ನು ಅನುಸರಿಸಬೇಕೆಂದು ಅವರು ಅಭಿಪ್ರಾಯಪಟ್ಟಿದ್ದರು. ಆದರೆ ಅವರು ಖಂಡಿತವಾಗಿ ಭಾರತದ ಸಾಂಸ್ಕೃತಿಕ ಪರಂಪರೆಯನ್ನು ತ್ಯಜಿಸಿ ಕುರುಡಾಗಿ ಪಾಶ್ಚಿಮಾತ್ಯರ ಮಾರ್ಗ ಹಿಡಿಯುವ ಪ್ರವೃತ್ತಿಯ ವಿರುದ್ಧವಿದ್ದರು. ಆ ದಿನಗಳಲ್ಲಿ ರಾಜರ ಮಕ್ಕಳ ಶಿಕ್ಷಣವನ್ನು ನೋಡಿಕೊಳ್ಳಲು ಯೂರೋಪಿನ ಗೃಹಶಿಕ್ಷಕಿಯನ್ನು ನೇಮಿಸಿಕೊಳ್ಳುವ ಪರಿಪಾಠವಿತ್ತು. ಗೃಹಶಿಕ್ಷಕಿಯು ರಾಜಕುಮಾರರಿಗೆ ಮತ್ತು ರಾಜಕುಮಾರಿಯರಿಗೆ ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯಲ್ಲಿ ತರಬೇತಿ ನೀಡುತ್ತಿದ್ದರು. ಏಕಕಾಲದಲ್ಲಿಯೇ ಭಾರತೀಯ ಶಿಕ್ಷಣ ಮತ್ತು ಸಂಸ್ಕೃತಿಯಲ್ಲಿ ತರಬೇತಿ ನೀಡದಿದ್ದರೆ, ಮಕ್ಕಳು ಬೆಳೆದ ಮೇಲೆ ಅವರು ತಮ್ಮ ಸ್ವಂತ ಸಂಸ್ಕೃತಿ, ಧರ್ಮ ಹಾಗೂ ದೇಶದ ಜನರನ್ನೇ ಪರಿಹಾಸ್ಯಮಾಡುವರೆಂದು, ಇದು ಪಾಶ್ಚಿಮಾತ್ಯ ಸಂಸ್ಕೃತಿಯು ಹೆಚ್ಚು ಅಪಾಯಕಾರಿಯಾಗುವುದೆಂದು ಅವರು ಪರಿಭಾವಿಸಿದ್ದರು.

ಶಾಹುರವರು ಎರಡೂ ಸಂಸ್ಕೃತಿಗಳಲ್ಲಿ ತರಬೇತಿಯನ್ನು ಪಡೆದಿದ್ದರು ಮತ್ತು ಇದು ಎಷ್ಟರಮಟ್ಟಿಗೆ ಫಲಕಾರಿ ಎಂಬ ಅನುಭವವನ್ನು ಅವರು ಪಟ್ಟಿದ್ದರು. ಅಂತಹ ಎರಡು ಪದ್ಧತಿಗಳ ತರಬೇತಿಯು ರಾಜಕುಮಾರರಿಗೆ ಮಾತ್ರವಲ್ಲ ರಾಜಕುಮಾರಿಯರಿಗೆ ನೀಡಬೇಕು. ಅದರಲ್ಲೂ ರಾಜಕುಮಾರಿಯರಿಗೆ ಅತಿ ಅವಶ್ಯಕವೆಂದು ಅವರು ಭಾವಿಸಿದ್ದರು. ಶಾಹುರವರ ಸೋದರ ಮಗಳ ಮದುವೆಯನ್ನು ಅಕ್ಕಲಕೋಟೆಯ ಮಹಾರಾಜನ ಮಗನಿಗೆ ಕೊಟ್ಟು ಮದುವೆಮಾಡಲು ಸೋಲಾಪುರದ ಕಲೆಕ್ಟರರಾದ ಬೋನಸ್ ಅವರು ಮಧ್ಯಸ್ಥಿಕೆ ವಹಿಸಿದಾಗ ಶಾಹುರವರು ಬರೆದ ತಮ್ಮ ಪತ್ರದಲ್ಲಿ ವಧುವಿನ ಶಿಕ್ಷಣದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಅವರು ಹೇಳುತ್ತಾರೆ: "ನಮ್ಮ ಹುಡುಗಿಯರಿಗೆ ಸುರಕ್ಷಿತವಾದ ಶಿಕ್ಷಣದ ಬಗ್ಗೆ ನನ್ನ ವಿಷಯ(ವಿಚಾರ)ಗಳನ್ನು ತಿಳಿಸುವ ಬಗ್ಗೆ ನನ್ನನ್ನು ದಯವಿಟ್ಟು ಕ್ಷಮಿಸಿ. ಹುಡುಗಿಯರು ತಮ್ಮ ಹಿರಿಯರೊಡನೆ, ಸಮಾನರೊಡನೆ ಅಥವಾ ತಮ್ಮ ಕಿರಿಯರೊಡನೆ ಮತ್ತು ವಿಶೇಷವಾಗಿ ಜಂಟಿ ಕುಟುಂಬದವರೊಡನೆ ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಯೂರೋಪಿನ ಗೃಹಶಿಕ್ಷಕಿಯರು ಶಿಕ್ಷಣ ನೀಡಲಾರರು. ನಮ್ಮ ಎಲ್ಲಾ ಧಾರ್ಮಿಕ ಕಾಳಜಿಗಳನ್ನು ಕುಟುಂಬದ ಮಹಿಳೆಯರಿಗೆ ಸಂಪೂರ್ಣವಾಗಿ ಬಿಟ್ಟುಕೊಟ್ಟಿದ್ದೇವೆ. ಮತ್ತು ಅಂತಹ ವಿಷಯಗಳ ಬಗೆಗಿನ ಅವರ ನಿರ್ಲಕ್ಷ್ಯದಿಂದ ಆ ಶಿಕ್ಷಣವನ್ನು ಅವರು ಬಯಸದೆ ಇರಬಹುದು. ಇಂಗ್ಲಿಷ್ ಜೊತೆಗೆ ನಮ್ಮ ದೇಶೀಯ ಶಿಕ್ಷಣವನ್ನು ಗೃಹಶಿಕ್ಷಕಿಯರ ಸಹಾಯದಿಂದ ಕೆಲವು ಗಂಟೆಗಳ ಕಾಲ ನೀಡುವುದು ಉತ್ತಮವೆಂದು ನಾನು ಭಾವಿಸುವೆ. ಶಿಕ್ಷಣದ ದೇಶಿಪದ್ಧತಿ ಮತ್ತು ಬಾಲ್ಯವಿವಾಹ ಪದ್ಧತಿಗಳು ನಮ್ಮ ಹುಡುಗಿಯರ ಮನಸ್ಸನ್ನು ಅವರ ಗಂಡಂದಿರ ಬಯಕೆಗಳಂತೆಯೇ ರೂಪಗೊಳ್ಳುತ್ತದೆ. ಬರೋಡದ ರಾಣಿಯರು, ಗೊಂಡಾಳ್ ಮೊದಲಾದವರ ನಿದರ್ಶನಗಳು ಇದನ್ನು ಸಾಧಿಸಿ ತೋರಿಸಿವೆ. ನನ್ನ ಸೋದರ ಮಗಳ ಶಿಕ್ಷಣವು ಒಂದು ವೇಳೆ ಆಕಸ್ಮಿಕ ದುರ್ಘಟನೆಯಿಂದ ಗಂಡ ಸತ್ತರೆ ಅವಳು ಒಂದು ಕರ್ಮಠ ಕುಟುಂಬ ಅಥವಾ ಸುಧಾರಿತ ಕುಟುಂಬದಲ್ಲಿ ಮದುವೆಯಾಗುವ ಮನಸ್ಥಿತಿಯನ್ನು ರೂಪಿಸುವಂತಹ ಶಿಕ್ಷಣವನ್ನು ಅವಳು ಪಡೆದಿರಬೇಕು".[7] ತನ್ನ ಕುಟುಂಬದ ಹೆಣ್ಣು ಬೇರೆ ಕುಟುಂಬಗಳಲ್ಲಿ ಮದುವೆಯಾದ ನಂತರ, ಅವಳು ಹೊಸ ಅತ್ತೆ–ಮಾವಂದಿರಿಗೆ ಅವರು ಕಂದಾಚಾರಿಗಳಾಗಿರಲಿ ಅಥವಾ ಆಧುನಿಕರಾಗಿರಲಿ, ಆ ಕುಟುಂಬದ ಸಂಪ್ರದಾಯಗಳು, ವಿಧಿ–ಆಚರಣೆಗಳು ಮತ್ತು ಪರಂಪರೆಗಳ ಬಗ್ಗೆ ಮೂಲಭೂತ ಜ್ಞಾನವಿರಬೇಕು. ಈ ಎಲ್ಲಾ ಅವಲೋಕನಗಳು ಶಾಹುರವರ ಪ್ರಾಯೋಗಿಕ ಬುದ್ಧಿಮತ್ತೆಯನ್ನು ತಿಳಿಸುತ್ತವೆ.

ಶಾಹುರವರು ಧರ್ಮದಲ್ಲಿ ನಂಬಿಕೆಯಿಟ್ಟಿದ್ದರೂ ಅವರು ಮೂಢನಂಬಿಕೆಯ ದಾಸರಾಗಿರಲಿಲ್ಲ. ಮಿಗಿಲಾಗಿ ಅವರು ಧರ್ಮದ ಸಕಾರಾತ್ಮಕ ತತ್ವ ಮತ್ತು ಮೌಲ್ಯಗಳನ್ನು ನಂಬುತ್ತಿದ್ದರು. ಭಾರತದ ಸಮುದಾಯಗಳ ಒಂದು ಕುಲೀನವರ್ಗವು ಒಬ್ಬ ಮನುಷ್ಯನು ಸಮುದ್ರ ದಾಟಿ ಹೊರಗೆ ಹೋದರೆ ಅವನು ತನ್ನ ಧರ್ಮವನ್ನು ಕಳೆದುಕೊಳ್ಳುತ್ತಾನೆ ಎಂಬ ಒಂದು ಬಲವಾದ ಮೂಢನಂಬಿಕೆಯನ್ನಿಟ್ಟುಕೊಂಡಿದೆ. ಬಿಳಿಯ ಜನರು ಸಾವಿರಾರು ಮೈಲಿಗಳ ಸಮುದ್ರವನ್ನು ದಾಟಿ ಬಂದು ಭಾರತ ಮತ್ತು ಭಾರತೀಯರಾದ ನಮಗೆ ಸಂಕೋಲೆಗಳನ್ನು ತೊಡಿಸಿ ನಮ್ಮನ್ನು ದಾಸ್ಯದಲ್ಲಿಟ್ಟಿರುವ ಸತ್ಯಸಂಗತಿ ಭಾರತೀಯರನ್ನು ಅವರ ನಂಬಿಕೆಯ ಪೊಳ್ಳುತನವನ್ನು ಗ್ರಹಿಸಿಕೊಳ್ಳಲು ನಿಷ್ಪ್ರಯೋಜನಕಾರಿಯನ್ನಾಗಿ ಮಾಡಿದೆ. ಶಾಹುರವರು ಇಂಗ್ಲೆಂಡಿನಿಂದ ೧೯೦೨ರಲ್ಲಿ ವಾಪಸ್ಸು ಬಂದಾಗ ಕರ್ಮಠ ಬ್ರಾಹ್ಮಣರು ಶಾಹುರವರು ಶುದ್ಧೀಕರಣ ಮಾಡಿಕೊಳ್ಳಬೇಕೆಂದು ಒಂದು ನಿರೂಪವನ್ನು ಹೊರಡಿಸಿದರು. ಅದರ ಪ್ರಕಾರ ಮಹಾಲಕ್ಷ್ಮಿಯ ದರ್ಶನವನ್ನು ಪಡೆಯಬೇಕಾದರೆ ಅವರು ಸಮುದ್ರ(ಸಿಂಧು)ವನ್ನು ದಾಟಿ ಪ್ರಯಾಣಿಸಿರುವುದು ಸಮುದ್ರ ಪ್ರಯಾಣ

ನಿಷೇಧವನ್ನು ಮುರಿದಿರುವುದರಿಂದ ಅವರು ಶುದ್ಧೀಕರಣಕ್ಕೆ ಒಳಗಾಗಬೇಕೆಂದು ಆಜ್ಞೆಮಾಡಿದ್ದರು. ಮರಾಠ ಸಮುದಾಯದಲ್ಲಿದ್ದ ಸಂಪ್ರದಾಯವಾದಿಗಳು ಆ ಬ್ರಾಹ್ಮಣರ ನಿರೂಪವನ್ನು ಬೆಂಬಲಿಸಿದರು. ಆದರೆ ಮರಾಠರ ಬಹುಸಂಖ್ಯಾತರು ಶಾಹು ಪರವಾಗಿ ನಿಂತರು. ಶಾಹು ಅವರು ಬ್ರಾಹ್ಮಣರ ನಿರೂಪವನ್ನು ನಿರಾಕರಿಸಿದರು ಮತ್ತು ಮಹಾಲಕ್ಷ್ಮಿಯ ದರ್ಶನವನ್ನು ಪಡೆದರು. ಆಗ ಇದು ಸಾಮಾನ್ಯವಾದ ಕೆಲಸ ವಾಗಿರಲಿಲ್ಲ. ಆ ದಿನಗಳಲ್ಲಿ ಪ್ರಭಾವವಿಲ್ಲದ ಹಲವು ಜನರು ಬ್ರಾಹ್ಮಣರ ನಿರೂಪಗಳನ್ನು(ಆಜ್ಞೆ) ಪರಿಪಾಲಿಸಬೇಕಾಗಿತ್ತು. ಬರೋಡ ಮಹಾರಾಜರನ್ನು ಮತ್ತು ಲೋಕಮಾನ್ಯ ತಿಲಕರನ್ನು ಸಹ ಆ ಬ್ರಾಹ್ಮಣರು ಮನ್ನಿಸಲಿಲ್ಲ.[8] ಈ ಬ್ರಾಹ್ಮಣರ ಮಡಿವಂತಿಕೆಯ ವಾತಾವರಣದಲ್ಲಿ ಶಾಹುರವರು ಆಜ್ಞೆಯನ್ನು ನಿರಾಕರಿಸಿದ್ದು ಎಂಟೆದೆಯ ಕೆಲಸವಾಗಿತ್ತೆಂದು ಪರಿಗಣಿಸಲಾಗಿದೆ.

ಇಂಗ್ಲೆಂಡಿಗೆ ತಲುಪಿದ ೮ ದಿನಗಳಲ್ಲಿಯೇ ಶಾಹುರವರಿಗೆ ಅಂತರ್‌ರಾಷ್ಟ್ರೀಯವಾಗಿ ಮೆಚ್ಚುಗೆಪಡೆದ ಕೇಂಬ್ರಿಡ್ಜ್ ವಿಶ್ವವಿದ್ಯಾಲಯವು ಎಲ್.ಎಲ್.ಡಿ. ಎಂಬ ಡಿಗ್ರಿಯನ್ನು ಅವರು ಶಿಕ್ಷಣ ಮತ್ತು ಸಂಸ್ಕೃತಿಯ ಬಗ್ಗೆ ಅವರಿಗೆ ವಿಶೇಷವಾಗಿದ್ದ ಕಾಳಜಿಯನ್ನು ಕಂಡು ವಿಶೇಷ ಸಮಾರಂಭದಲ್ಲಿ ನೀಡಿ ಗೌರವಿಸಿತು.[9] ಎರಡು ದಿನಗಳ ನಂತರ ಅವರು ಘಟಾನುಘಟಿಗಳಾದ ಗ್ವಾಲಿಯರ್‌ನ ಮಹಾರಾಜ, ಆಗಾಖಾನ್ ಮತ್ತು ಸರ್ ಜಮ್‌ಜೆಟ್‌ಜೀ ಜೀಜಾಭಾಯ್ ಅವರೊಡನೆ ವಿನ್‌ಚೆಸ್ಟರ್ ಎಂಬ ಪ್ರಾಚೀನ ಪಟ್ಟಣಕ್ಕೆ ಭೇಟಿ ನೀಡಿದರು. ವಿನ್‌ಚೆಸ್ಟರ್ ಇತಿಹಾಸದಲ್ಲಿ ಸ್ಯಾಕ್ಸನ್ನರ ರಾಜಧಾನಿಯೆಂದು ಖ್ಯಾತಿಪಡೆದಿದೆ. ಭಾರತದ ಈ ಅಪೂರ್ವ ಅತಿಥಿಗಳನ್ನು ಬರಮಾಡಿಕೊಳ್ಳಲು ವಿನ್‌ಚೆಸ್ಟರ್ ಕಾಲೇಜಿನಲ್ಲಿ ಒಂದು ಭವ್ಯ ಸಮಾರಂಭವನ್ನು ವ್ಯವಸ್ಥೆಗೊಳಿಸಿದ್ದರು. ಸ್ವಾಗತಭಾಷಣವನ್ನು ಇಂಗ್ಲೀಷಿನಲ್ಲಿ ಮಾಡದೆ ಲ್ಯಾಟೀನ್ ಭಾಷೆಯಲ್ಲಿ ಮಾಡಲಾಯಿತು. ಒಂದು ರೀತಿಯಲ್ಲಿ ವಿನ್‌ಚೆಸ್ಟರ್ ಜನರು ತಮ್ಮ ಹೆಮ್ಮೆಯನ್ನು ತಮ್ಮ ಪ್ರಾಚೀನ ಭಾಷೆ ಮತ್ತು ಸಂಸ್ಕೃತಿಗಳ ಮೂಲಕ ತೋರಿಸಿದರು. ಈ ದೃಷ್ಟಿಕೋನವನ್ನು ಅರಿತ ಶಾಹುರವರು ಇಂಗ್ಲಿಷ್ ಭಾಷೆಯ ಮೇಲೆ ಹಿಡಿತವಿದ್ದರೂ ಅವರು ಮರಾಠಿ ಭಾಷೆಯಲ್ಲಿ ಮಾತನಾಡಿದರು. ಶಾಹುರವರ ಸ್ನೇಹಿತ ವಿಲಿಯಂ ಲೀ-ವರ್ನರ್ ಆ ಗುಂಪಿನಲ್ಲಿದ್ದರು. ಅವರಿಗೆ ಮರಾಠಿ ಭಾಷೆ ಚೆನ್ನಾಗಿ ಬರುತ್ತಿದ್ದರಿಂದ ಅವರು ಶಾಹುರವರ ಭಾಷಣವನ್ನು ಪ್ರೇಕ್ಷಕರಿಗಾಗಿ ಇಂಗ್ಲೀಷಿಗೆ ಅನುವಾದಮಾಡಿದರು.[10] ಇಂಗ್ಲೀಷಿನವರು ತಮ್ಮ ಪ್ರಾಚೀನಭಾಷೆಗೆ ಗೌರವ ವ್ಯಕ್ತಪಡಿಸಿದರೆ, ಸ್ಯಾಕ್ಸನ್ನರ ಉತ್ತರಾಧಿಕಾರಿಗಳಿಗೆ ತಮ್ಮ ಮಾತೃಭಾಷೆಗೆ ಇರುವ ತಮ್ಮ ಹೆಮ್ಮೆಯನ್ನು ಜ್ಞಾನದೇವ ಮತ್ತು ತುಕಾರಾಮರ ಭಾಷೆಯಲ್ಲಿ ಶಾಹುರವರು ವ್ಯಕ್ತಪಡಿಸಿದರು.

## ಪ್ಲೇಟೊ ಅವರ ಕಲ್ಪನೆಯ ತತ್ವಜ್ಞಾನಿ ರಾಜ

ಶಾಹುರವರಿಗೆ ಶಿಕ್ಷಣ ಕಲಿಸಿದ ಗೋಖಲೆ, ಸಬ್ನೀಸ್ ಮತ್ತು ಫ್ರೆಜರ್ ಅವರು ಗುರುಗಳಲ್ಲದೆ ಅವರು ಸಾಧಕ ವಿದ್ವಾಂಸರಾಗಿದ್ದರು. ಹಾಗಿರುವಾಗ, ಅವರ ಕಲಿಕೆಯ ಬುನಾದಿ ಸುಭದ್ರವಾಗಿತ್ತು. ಅವರಿಗೆ ಇಂಗ್ಲಿಷ್ ಸಾಹಿತ್ಯ, ಸಾಮಾಜಿಕ ವಿಜ್ಞಾನಗಳು ಮತ್ತು ತತ್ವಜ್ಞಾನಗಳಲ್ಲದೆ ಇತರೆ ವಿಷಯಗಳ ಬಗ್ಗೆ ವಿದ್ವತ್ತಿನ ಅಪೇಕ್ಷೆಯಿತ್ತು. ಆಕಸ್ಮಿಕವಾಗಿ ಭೇಟಿಮಾಡುವ ವ್ಯಕ್ತಿ ಶಾಹು ದಡ್ಡ ಮತ್ತು ಅನಕ್ಷರಸ್ಥ ಎಂದು ತಿಳಿದುಕೊಳ್ಳಬಹುದು. ಬಿಳಿ ಕಾಲರಿನ ಜನರು ತಮ್ಮ ಕಲಿಕೆಯನ್ನು ಪ್ರದರ್ಶಿಸಲು ಶಾಹು ಬಳಿಗೆ ಬಂದರೆ ಅವರು ಗಮಾರನಾಗಿ, ಅನಕ್ಷರಸ್ಥನಾಗಿ ನಡೆದುಕೊಂಡು ಒರಟು ಭಾಷೆಯಲ್ಲಿ ಮಾತನಾಡುತ್ತಿದ್ದರೆಂದು ಪ್ರಬೋಧಂಕರ್ ಥ್ಯಾಕರೆಯವರು ಹೇಳುತ್ತಾರೆ. ಬೌದ್ಧಿಕ ಮತ್ತು ತಾತ್ವಿಕ ಚರ್ಚೆಗಳಲ್ಲಿ ಅದರಲ್ಲಿ ತೊಡಗಿದ

ಬುದ್ಧಿಜೀವಿಗಳು ವಿದ್ವಾಂಸರು ತಮ್ಮ ವಿದ್ವತ್ತನ್ನು ಹೊರಭಾಗದಲ್ಲಿ ಬಚ್ಚಿಟ್ಟ ರೀತಿಯಲ್ಲಿಯೇ ಅವರ ವಿದ್ವತ್ತನ್ನು ಅನುಭವಿಸುತ್ತಾರೆ. ಪ್ರಬೋಧಂಕರರು ಅಂತಹ ಒಬ್ಬ ವಿದ್ವಾಂಸರು ಮತ್ತು ಪತ್ರಿಕಾಕರ್ತರಾಗಿದ್ದರು. ಅವರು ಶಾಹು ಮಹಾರಾಜರನ್ನು ಭೇಟಿಮಾಡಿದ ಸಭೆಗಳಲ್ಲಿನ ಒಂದು ಭೇಟಿಯ ಪ್ರಸಂಗವನ್ನು ಉದಾಹರಿಸಲು ಇಷ್ಟಪಡುತ್ತಾರೆ. ಅವರು ಹೇಳುತ್ತಾರೆ: "......ನಾನು ಏನು ಬರೆಯುತ್ತಿದ್ದೇನೆಂದು ಅವರು ನನ್ನನ್ನು ಕೇಳಿದರು. ಆಗ ನಾನು ಹೇಳಿದೆ, 'ಭಿಕ್ಷುಕ್ಷ ಹಿಚೆ ಬಂದ್' ಭಿಕ್ಷುಗಳ ಬಂಡಾಯ ಎಂದು ಹೇಳಿದೆ. ಅವರು ನನ್ನನ್ನು ಕೇಳಿದರು ಆಧಾರ ಗ್ರಂಥಗಳ ಸೂಚಿ ಯಾವುದು, ನಾನು ಅವರಿಗೆ ಹೇಳಿದೆ: ಶಾಹು: ಸೇವಲ್‌ರ 'ಪುರೋಹಿತಶಾಹಿ' ಮತ್ತು 'ರಾಜಶಾಹಿ'ಯ ಪುಸ್ತಕಗಳಿಲ್ಲವೆ? ಅವುಗಳನ್ನು ಮೊದಲು ಓದಬೇಕಾಗುತ್ತದೆ. ಪುರೋಹಿತಶಾಹಿಯಂತೆಯೇ ರಾಜಶಾಹಿಯೂ ಮಾನವಜನಾಂಗಕ್ಕೆ ಅನಿಷ್ಟಕಾರಿಯೆಂದು ಸಾಧಿತ ವಾಗಿದೆ.

**ನಾನು:** ನೀವು ಅದೇ ಸಾಲಿನಲ್ಲಿ ಬರುತ್ತೀರಲ್ಲ!

**ಶಾಹು:** ಹೌದು, ನಾನು ಬರುತ್ತೇನೆ. ಇಂದಿನ ರಾಜಪ್ರಭುತ್ವಗಳು ಶಾಶ್ವತವೆಂದು ನೀವು ಭಾವಿಸುವಿರಾ? ಹೀಗಿರುವಂತೆಯೇ ನಾವು ಬ್ರಿಟಿಷರ ದಯೆಯಿಂದ ಬದುಕುತ್ತಿದ್ದೇವೆ. ಬ್ರಿಟಿಷರು ಇಂದು ಅಥವಾ ನಾಳೆ ಅವರು ಹೊರಟುಹೋಗಲೇಬೇಕಾಗುತ್ತದೆ. ಏನೇ ಆಗಲಿ ಇಂದು ಒಂದು ಕೆಲಸಮಾಡಿ. ಅಮೇರಿಕಾದ ಆರ್.ಪಿ.ಎ. ಶ್ರೇಣಿಯ ಪುಸ್ತಕಗಳನ್ನು ಸಂಪೂರ್ಣವಾಗಿ ಓದಿ. ಇಂಗರ್‌ಸೋಲರ ಬರವಣಿಗೆಗಳು ಮತ್ತು ಭಾಷಣಗಳನ್ನು ಪ್ರತಿಯೊಬ್ಬರೂ ಓದಲೇಬೇಕು. ಇಂಗರ್‌ಸೋಲರ ಪುಸ್ತಕಗಳನ್ನು ಓದದೆ ಸಾಮಾಜಿಕ ಸುಧಾರಣೆಗಳ ಬಗ್ಗೆ ಯಾರೂ ಮಾತನಾಡಬಾರದು.

ಶಾಹುರವರು ಹಲವಾರು ಆಧಾರಗ್ರಂಥಗಳನ್ನು ಸೂಚಿಸುತ್ತಾ ಹೋದರು ಮತ್ತು ಅವುಗಳಲ್ಲಿರುವ ಹುರುಳಿನ ಬಗ್ಗೆ ತಿಳುವಳಿಕೆ ನೀಡುತ್ತಾ ಹೋದರು. ಮೊದಲನೆ ಸಲಕ್ಕೆ ಅವರು ಪಡೆದಿದ್ದ ಜ್ಞಾನರಾಶಿಯ ಬಗ್ಗೆ ಚೆನ್ನಾಗಿ ಅರಿತುಕೊಂಡೆ. ಎಲ್ಲಕ್ಕಿಂತ ಮಿಗಿಲಾದುದು, ಅವರು ನನ್ನ ಮುಂದೆ ಅವರ ನೆನಪಿನಲ್ಲಿದ್ದ ಒಂದು ಪುಸ್ತಕದ ಒಂದು ಪ್ಯಾರಾವನ್ನೇ ನೆನಪಿನಲ್ಲಿದ್ದದ್ದನ್ನು ಹೇಳಿದರು. ಮೊದಲ ನೋಟಕ್ಕೆ ಶಾಹು ಅವರು ಗಮಾರ ಮತ್ತು ಅನಕ್ಷರಸ್ಥನೆಂದುಕೊಂಡರೂ ಜನರು ಸಾಮಾನ್ಯವಾಗಿ ಅವರ ಅಂತರಂಗವನ್ನು ವಿಶೇಷವಾಗಿ ಅವರ ಗ್ರಹಿಕೆಯ ಜ್ಞಾನ ಅರ್ಥಮಾಡಿಕೊಳ್ಳಲಾರರು. ನಾನು ಇಂದು ಇದನ್ನು ಅರ್ಥಮಾಡಿಕೊಂಡೆ ಮತ್ತು ನಾನು ಗಲಿಬಿಲಿಗೊಂಡೆ. ಅವರು ಸುಮಾರು ಅರ್ಧಗಂಟೆ ಕಾಲ ತಲ್ಲೀನರಾಗಿ ಮಾತನಾಡಿದರು. ನಾನೂ ಸಹ ಅಷ್ಟೇ ತಲ್ಲೀನನಾಗಿ ಕೇಳಿಸಿಕೊಂಡೆ".[11]

ಶಾಹುರವರಲ್ಲಿರುವ ಆಳವಾದ ವಿದ್ವಾಂಸನನ್ನು ಹುಡುಕುತ್ತಾ ಅಂಥದ್ದೇ ಅನುಭವವನ್ನು ತೋಫ್‌ಖಾನೆಯವರು ಹೇಳಿದ್ದಾರೆ. ಗಾಂಧಿಯ ಆಶ್ರಮದಲ್ಲಿ ಅವರ ಒಡನಾಡಿಗಳಲ್ಲಿ ಪ್ರೊಫೆಸರ್ ಅಠಾಳೆಯವರು ಒಬ್ಬರು. ಅವರು ಸಂಸ್ಕೃತದ ಗೂಢ ವಿದ್ವಾಂಸರು. ಅವರು ಕೊಲ್ಹಾಪುರಕ್ಕೆ ಭೇಟಿ ನೀಡಿದಾಗ ತೋಫ್‌ಖಾನೆಯವರು ಶಾಹು ಜೊತೆಯಲ್ಲಿ ಅವರ ಭೇಟಿಯ ವ್ಯವಸ್ಥೆಗೊಳಿಸಿದ್ದರು. ಆ ಸಭೆಯು ದೀರ್ಘಕಾಲಿಕವಾಗಿದ್ದು ಇಬ್ಬರು ಚರ್ಚೆಯಲ್ಲಿ ಗಂಭೀರ ವಿಷಯಗಳ ಬಗ್ಗೆ ತೊಡಗಿದ್ದರು. ಪ್ರೊ. ಅಠಾವಳೆಯವರು ಚರ್ಚೆಯಲ್ಲಿ ಪ್ರಕಟಗೊಂಡ ಶಾಹುರವರ ಚರ್ಚೆ ಮತ್ತು ಅಧ್ಯಯನದ ಸ್ವಭಾವಗಳಿಂದ

ಬಹಳ ಪ್ರಭಾವಿತರಾದರು. ವಾರ್ಧಾಗೆ ವಾಪಸ್ಸು ಬಂದಮೇಲೆ ಅಠಾವಳೆಯವರು ತೋಫ್‌ಖಾನೆಯವರಿಗೆ ಒಂದು ಪತ್ರವನ್ನು ಬರೆದರು. ಅವರು ಹೇಳುತ್ತಾರೆ: "ನಿಮ್ಮ ಮೂಲಕ ನನಗೆ ಶಾಹು ಮಹಾರಾಜರ ಸಂಪರ್ಕವುಂಟಾಯಿತು. ಅವರು ಪ್ರತಿಯೊಂದು ಅರ್ಥದಲ್ಲಿ ಬಿರುದಿಗೆ ಅರ್ಹರು. ಅವರು ನಿಜವಾದ ಮಹಾರಾಜರೆ. 'ಪ್ಲೇಟೋ ಅವರ ಕಲ್ಪನೆಯ ತತ್ವಜ್ಞಾನ ಮಹಾರಾಜ' ಎಂಬ ಪರೀಕ್ಷೆಯಲ್ಲಿ ಯಾರು ನಿಲ್ಲುತ್ತಾರೆ".[12] ಮಹಾತ್ಮ ಗಾಂಧಿಯವರ ನಿಕಟವರ್ತಿಗಳಾದ ವಿದ್ವಾಂಸರೊಬ್ಬರು ಶಾಹುರವರ ವ್ಯಕ್ತಿತ್ವದಲ್ಲಿ ಪ್ಲೇಟೋರವರ ಕಲ್ಪನೆಯ ತತ್ವಜ್ಞಾನಿ ಮಹಾರಾಜರನ್ನು ಕಂಡುಕೊಳ್ಳುವುದಕ್ಕಿಂತ ಮಿಗಿಲಾದ ಗೌರವ ವಿದ್ಯಾಕ್ಷೇತ್ರದಲ್ಲಿ ಮತ್ಯಾವುದು ಮಹಾರಾಜರಿಗಿದೆ?

## ಪ್ರಾಯೋಗಿಕತೆಯ ಚೈತನ್ಯ

ನಾನಾ ವಿಷಯಗಳ ವೈವಿಧ್ಯಮಯ ಪಾಂಡಿತ್ಯದೊಂದಿಗೆ ಶಾಹುರವರು ಪರಿಶೋಧನೆಯ ತೃಪ್ತಿಪಡಿಸಲಾರದ ಚೈತನ್ಯವನ್ನು ಹೊಂದಿದ್ದರು. ಪ್ರಾಯೋಗಿಕತೆಯ ಚೈತನ್ಯ ಅದನ್ನು ಬೆಂಬಲಿಸಿತು. ಹೋಮಿಯೋಪಥಿ ವಿಜ್ಞಾನ ಎಂದರೇನು ಎಂಬ ಬಗ್ಗೆ ಶಾಹುರವರೇ ತಿಳಿದುಕೊಂಡಿದ್ದು ಮಾತ್ರವಲ್ಲದೆ ಭಾರತದಲ್ಲಿ ಮೊಟ್ಟಮೊದಲಿಗೆ ಕೊಲ್ಹಾಪುರದಲ್ಲಿ ಸಾರ್ವಜನಿಕ (ಸರಕಾರಿ) ಹೋಮಿಯೋಪಥಿ ಆಸ್ಪತ್ರೆಯನ್ನು ಶಾಹುರವರು ಸ್ಥಾಪಿಸಿದರು. ಶಾಹುರವರು ಯೂರೋಪಿನ ಪ್ರವಾಸ ಮಾಡುವಾಗ ರೋಮಿನಲ್ಲಿದ್ದ ಕುಸ್ತಿಯ ಕ್ರೀಡಾಂಗಣ ಮತ್ತು ರಂಗಭೂಮಿಯನ್ನು ಕೇವಲ ಪ್ರವಾಸಿಗನಾಗಿ ನೋಡಿದ್ದು ಮಾತ್ರವಲ್ಲದೆ ಅವುಗಳ ತದ್ರೂಪಗಳನ್ನು ಕೊಲ್ಹಾಪುರದಲ್ಲಿ ಕಟ್ಟಿಸುತ್ತಾರೆ. ಯೂರೋಪಿನಲ್ಲಿರುವಂತೆ ಅಣೆಕಟ್ಟುಗಳನ್ನು ನೋಡಿ ಅವರು ಕೊಲ್ಹಾಪುರದಲ್ಲಿ ರಾಧಾನಗರಿಯಲ್ಲಿ ರಾಧಾನಗರಿ ಎಂಬ ಅಣೆಕಟ್ಟೆಯನ್ನು ಕಟ್ಟಿಸುತ್ತಾರೆ. ಅವರು ಹೊಸ ಸಾಹಸ ಉದ್ಯಮಗಳನ್ನು ಕೃಷಿ, ವಾಣಿಜ್ಯ, ಕೈಗಾರಿಕೆ ಮೊದಲಾದವುಗಳನ್ನು ಪ್ರಾರಂಭಿಸುತ್ತಾರೆ. ಸಂಸ್ಥಾನದ ಅರಣ್ಯಪ್ರದೇಶಗಳಲ್ಲಿ ಆನೆಗಳ ತಳಿ ಉತ್ಪಾದನೆ, ಬೆಟ್ಟದ ಇಳಿಜಾರು ಪ್ರದೇಶಗಳಲ್ಲಿ ಟೀ–ಕಾಫಿತೋಟ ಮತ್ತು ರಬ್ಬರ್ ತೋಟಗಳನ್ನು ಬೆಳೆಸುತ್ತಾರೆ. ಜೇನುಸಾಕಾಣಿಕೆ, ವಿವಿಧ ಸುಗಂಧದ್ರವ್ಯಗಳ ಉತ್ಪಾದನೆ ಮೊದಲಾದ ಸಾಹಸ ಉದ್ಯಮಗಳನ್ನು ಕೈಗೊಳ್ಳುತ್ತಾರೆ. ಸಾಕುಪ್ರಾಣಿಗಳ ವಿವಿಧ ತಳಿಗಳನ್ನು ಕ್ರಾಸ್‌ಮಾಡುವ ಮೂಲಕ ಹೈಬ್ರಿಡ್ ತಳಿಗಳ ಉತ್ಪಾದನೆಯ ಪ್ರಯೋಗವನ್ನು ನಡೆಸಿದರು. ವತನಿ ಉಪಾಧ್ಯಾಯರ ನೇಮಕ, ವಿವಿಧ ಜಾತಿಗಳಿಗೆ ವಿದ್ಯಾರ್ಥಿ ನಿಲಯಗಳ ಸ್ಥಾಪನೆ, ಮರಾಠ ಪುರೋಹಿತರ ನಿರ್ಮಾಣ, ಮತ್ತು ಧರ್ಮಕ್ಷೇತ್ರದಲ್ಲಿ ಕ್ಷಾತ್ರಜಗದ್ಗುರುಗಳ ಸ್ಥಾಪನೆ ಮೊದಲಾದವುಗಳು ಅವರ ಪ್ರಾಯೋಗಿಕತೆಗೆ ಮಾದರಿಗಳಾಗಿವೆ.

ಶಾಹುರವರು ಕಾಡುಪ್ರಾಣಿಗಳು ಮಾಡಿದ ಪ್ರಯೋಗಗಳನ್ನು ವಿಶೇಷವಾಗಿ ಗಮನಿಸಬೇಕಾಗಿದೆ. ತಮ್ಮ ಒಂದು ಭಾಷಣದಲ್ಲಿ ಹೇಳಿದ್ದಾರೆ: "........ಪ್ರೀತಿ ಪ್ರೀತಿಯನ್ನು ಹುಟ್ಟಿಸುತ್ತದೆ ಮತ್ತು ದ್ವೇಷ ದ್ವೇಷವನ್ನು ಹುಟ್ಟಿಸುತ್ತದೆ. ಪ್ರಾಣಿಗಳಿಗೆ ಪ್ರೀತಿಯನ್ನು ತೋರಿಸಿದರೆ ಅವು ಒಡೆಯನಿಗೆ ಪ್ರೀತಿಯನ್ನು ಹಿಂದಿರುಗಿಸುತ್ತವೆ".[13] ಶಾಹುರವರ ಈ ಮಾತುಗಳು ಖಾಲಿ ಬೋಧನೆಗಳಲ್ಲ. ಆದರೆ ಅವರ ವಿಶ್ವದ ನೇರ ಅನುಭವದಿಂದ ಮೂಡಿಬಂದಿದೆ. ಅವರು ದೆಹಲಿಯಲ್ಲಿದ್ದಾಗ ಸರ್ಕಸ್ಸಿಗೆ ಹೋಗಿದ್ದರು. ಒಂದು ಹೆಣ್ಣು ಹುಲಿ ಸಿಟ್ಟುಗೊಂಡು ತನ್ನ ರಕ್ಷಕನನ್ನೇ ಕೊಂದುಬಿಟ್ಟಿತು. ಅವರು ಹೆಣ್ಣುಹುಲಿಯನ್ನು ಅದರ ಒಡೆಯನಿಂದ ಪಡೆದು ಕೊಲ್ಹಾಪುರಕ್ಕೆ ತಂದರು. ಅವರು ಅದನ್ನು ಸಾಕಲು ಪ್ರಯೋಗವನ್ನು ಪ್ರಾರಂಭಿಸಿದರು. ಅವರ ಪ್ರಯೋಗಗಳು ಸಫಲವಾದವು.

ಆ ಹೆಣ್ಣುಹುಲಿ ಶಾಹುರವರ ಒಡನಾಟಕ್ಕೆ ಹೊಂದಿಕೊಂಡುಬಿಟ್ಟಿತು. ಅವರ ಸ್ನೇಹಿತ ಅವರನ್ನು ಕೇಳಿದರು: ಹೇಗೆ ನೀವು ಇದನ್ನು ಸಾಧಿಸಿದಿರಿ? ಆಗ ಅವರು ಹೇಳಿದರು, "ಸರ್ಕಸ್ಸಿನಲ್ಲಿರುವ ಜನರು ಅದನ್ನು ಭಯದಿಂದ ನಿಯಂತ್ರಿಸಲು ಪ್ರಯತ್ನಿಸಿದ್ದರು. ನಾನು ಅದರೊಂದಿಗೆ ಸ್ನೇಹದಿಂದ ವರ್ತಿಸಿದೆ. ನಾನು ಅದರ ಕ್ರೌರ್ಯವನ್ನು ಪ್ರೀತಿಯಿಂದ ಗೆದ್ದೆ" ಎಂದರು.[14] ಶಾಹು ಅವರು ಈಗಾಗಲೇ ಇಂಥ ಪ್ರಯೋಗವನ್ನು ಆಫ್ರಿಕಾದ ಚಿರತೆಗಳ ಬಗ್ಗೆ ಮಾಡಿರುವುದನ್ನು ಹೇಳಲಾಗಿದೆ. ಅವರ ಬೇಟೆಯಲ್ಲಿ ನಾಯಿಗಳು ಮಾತ್ರ ಇರುವುದಿಲ್ಲ. ಅವುಗಳ ಜೊತೆಗೆ ಎರಡು-ಮೂರು ಚಿರತೆಗಳು ಅವರೊಂದಿಗೆ ನಾಯಿಗಳಂತೆಯೇ ತಿರುಗಾಡುತ್ತವೆ. ಅದನ್ನು ನೋಡುವುದೇ ಒಂದು ಮಹಾದೃಶ್ಯವಾಗುತ್ತದೆ. ಶಾಹುರವರನ್ನು ನೋಡಲು ಬರುತ್ತಿದ್ದವರಲ್ಲಿ ಹಲವರು ಈ ದೃಶ್ಯಗಳನ್ನು ತಮ್ಮ ನೆನಪುಗಳಲ್ಲಿ ವಿವರಿಸಿದ್ದಾರೆ.

### ಪ್ರತಿಭಾವಂತ ಮಾನವ

ಶಾಹುರವರು ಸರಳಜೀವನ ನಡೆಸಿದರು. ಅವರಿಗೆ ರಾಜರ ಉಡುಗೆ-ತೊಡುಗೆಗಳು ಮತ್ತು ಆಭರಣಗಳ ಬಗ್ಗೆ ಅಪೇಕ್ಷೆಯಿರಲಿಲ್ಲ. ಕೆಲವು ರಾಜರ ಸಮಾರಂಭಗಳನ್ನು ಬಿಟ್ಟರೆ ಅವರ ಲಭ್ಯವಿರುವ ಕೆಲವು ವರ್ಣಚಿತ್ರಗಳು ಮತ್ತು ಫೋಟೋಗ್ರಾಫ್‌ಗಳು ಅವರ ಸರಳಜೀವನದ ಶೈಲಿಯನ್ನು ನೀಡುತ್ತವೆ. ರಾಜ-ಮಹಾರಾಜರ ಸಂತೋಷಕೂಟಗಳಲ್ಲಿ ಅವರ ಗಟ್ಟಿಮುಟ್ಟಾದ ದೇಹ ಸರಳವಾದ ಉಡುಪುಗಳನ್ನೇ ಧರಿಸಿತ್ತು. ೧೯೧೮ರಲ್ಲಿ ತಮ್ಮ ಮಗ ಶಿವಾಜಿ ರಾಜಕುಮಾರನ ದುರ್ಘಟನೆಯ ಸಾವನ್ನು ನೋಡಬೇಕಾಯಿತು. ಅಲ್ಲಿಂದ ಮುಂದಕ್ಕೆ ಅವರು ಅರಮನೆಯ ಮತ್ತು ರಾಜವೈಭೋಗವನ್ನು ತ್ಯಜಿಸಿಬಿಟ್ಟರು ಮತ್ತು ಕೊಲ್ಹಾಪುರದ ಹೊರಗಿರುವ ಸೋನ್‌ತಾಲಿ ಕ್ಯಾಂಪಿನಲ್ಲಿ ನೆಲೆಸಿಬಿಟ್ಟರು. ಈ ಕ್ಯಾಂಪು ಒಂದು ರೀತಿಯಲ್ಲಿ ಆಶ್ರಮವಾಗಿಬಿಟ್ಟಿತು. ಅವರು ಅಲ್ಲಿ ನಿರ್ಮೋಹ ಸನ್ಯಾಸಿಯಂತೆ ಜೀವನ ನಡೆಸತೊಡಗಿದರು. ಅವರ ಉಡುಗೆ-ತೊಡುಗೆಗಳು ಅಪ್ಪಟ ಮಹಾರಾಷ್ಟ್ರದವುಗಳಾದವು. ಅವರು ಕೆಂಪುಪಟ್ಟಗ (ಪೇಟ), ಹಳದಿ ಷರ್ಟು, ಒಂದು ಲುಂಗಿ ಅಥವಾ ಒಂದು ಧೋತ್ರ ಮತ್ತು ದಪ್ಪದ ಕೊಲ್ಹಾಪುರಿ ಚಪ್ಪಲಿಗಳನ್ನು ಧರಿಸುತ್ತಿದ್ದರು. ಅವರಲ್ಲಿ ಕುಳಿತುಕೊಳ್ಳುವ ಆಸನ ವ್ಯವಸ್ಥೆಯು ಮೂರು ಅಥವಾ ನಾಲ್ಕು ಹಗ್ಗದಿಂದ ಮಾಡಿದ ಮಂಚಗಳಾಗಿದ್ದವು. ಅವುಗಳ ಮೇಲೆ ಏಳು ಅಥವಾ ಎಂಟು ಜಿಂಕೆಚರ್ಮಗಳನ್ನು ಹಾಸಲಾಗಿತ್ತು. ಒಂದು ಮಂಚದ ಮೇಲೆ ಅವರು ಕುಳಿತುಕೊಳ್ಳುತ್ತಿದ್ದರು. ಉಳಿದ ಮಂಚಗಳ ಮೇಲೆ ಅವರ ಪ್ರೀತಿಪಾತ್ರವಾದ ಚಿರತೆಗಳು ಹರಡಿಕೊಂಡು ಮಲಗುತ್ತಿದ್ದವು. ಸಂದರ್ಶಕರಿಗೆ ತಮ್ಮ ಎದುರಿನಲ್ಲಿ ಒಂದು ಸೋಫ ಮತ್ತು ಕೆಲವು ಕುರ್ಚಿಗಳನ್ನಿಟ್ಟಿದ್ದರು. ಮಳೆಕಾಲವನ್ನು ಬಿಟ್ಟರೆ ಉಳಿದ ಋತುಮಾನದಲ್ಲಿ ಅವರು ವಿಶಾಲವಾದ ಆಕಾಶದ ಕೆಳಗೆ ಬಯಲುಪ್ರದೇಶದಲ್ಲಿ ಮಲಗುತ್ತಿದ್ದರು. ಅವರು ಬೆಳಿಗ್ಗೆ ೫ ಗಂಟೆಗೆ ಎದ್ದು ತಣ್ಣೀರುಸ್ನಾನ ಮಾಡಿದ ನಂತರ ತಮ್ಮ ದಿನನಿತ್ಯದ ಕೆಲಸದಲ್ಲಿ ತೊಡಗುತ್ತಿದ್ದರು.[15]

ಒಮ್ಮೆ ಚಳಿಗಾಲದಲ್ಲಿ ಶಾಹುರವರು ಬಳ್ಳಾರಿಯ ಘೊಂಗಡಿ(ಕಂಬಳಿ)ಯನ್ನು ಹೊದ್ದುಕೊಂಡು ಕುಳಿತಿದ್ದರು. ಕ್ಷಾತ್ರ ಜಗದ್ಗುರು ಅವರನ್ನು ಭೇಟಿಮಾಡಲು ಬಂದರು. ಅವರು ಮಹಾರಾಜರು ಒರಟು ಕಂಬಳಿಯನ್ನು ಹೊದ್ದು ಕುಳಿತಿರುವುದನ್ನು ನೋಡಿ ನಗು ತಡೆಯಲಾರದೆ ನಕ್ಕುಬಿಟ್ಟರು. ಶಾಹು ಹೇಳಿದರು: "ಇದರಲ್ಲಿ ನಗುವಂತಹ ತಮಾಷೆ ಏನು ಇಲ್ಲ. ಇದು ಒಂದು ಮಹಾವಸ್ತ್ರ - ನಮ್ಮ ಮರಾಠರಿಗೆ ಇದು ರಾಜವಸ್ತ್ರ! ಇಂದು ರಾಯ್‌ಗಢ, ನಾಳೆ ಪನ್ಹಾಲ ರಂಗಣದಿನದ ನಂತರ ...... ಶಿವಾಜಿ ಮಹಾರಾಜರು

ದಿನಾ ಉದ್ದಿಷ್ಟ ಸ್ಥಳಗಳನ್ನು ಬದಲಾಯಿಸುತ್ತಿದ್ದರು. ಅವರು ಪ್ರತಿಯೊಂದು ಕೋಟೆಯಲ್ಲಿ ವೈಭೋಗದ ಸೋಫವನ್ನು ಅವರು ಹೊಂದಿದ್ದರೆ? ಒಂದು ಮಂಚ ಮತ್ತು ಅದರ ಮೇಲೆ ಒಂದು ಹೊದಿಕೆಯೇ ಅವರ ಸಿಂಹಾಸನವಾಗುತ್ತಿತ್ತು! ಛತ್ರಪತಿಯ ಸಿಂಹಾಸನವನ್ನು ನಿಜವಾಗಿ ಯಾರು ಮಾಡಿದ್ದಾರೆ? ಮರಾಠ ರೈತಾಪಿವರ್ಗವು ಹೊದಿಕೆಗಳನ್ನು ಸುತ್ತಿಕೊಂಡಿಲ್ಲವೆ, ಉದಾಹರಣೆಗೆ ಮಾವಳದ ರೈತರು ಇದನ್ನು ಸಾಧ್ಯಗೊಳಿಸಿಲ್ಲವೆ? ಹಾಗಾದರೆ ನಾವು ಕಂಬಳಿ ಹೊದ್ದುಕೊಂಡಿದ್ದಕ್ಕೆ ಏಕೆ ನಗಬೇಕು?"[16] ಅವರ ಸರಳಜೀವನದ ಹಿಂದೆ ಅಡಗಿರುವ ತತ್ವಜ್ಞಾನವನ್ನು ಈ ನೆನಪು ಸಾಕಷ್ಟು ಹೇಳುತ್ತದೆ.

ಶಾಹುರವರು ಜಂಬ ಕೊಚ್ಚಿಕೊಳ್ಳುವ ಮಹಾರಾಜರಲ್ಲ. ಅವಶ್ಯಕತೆ ಬಿದ್ದಾಗ ಮನುಷ್ಯನು ಯಾವುದೇ ಕೆಲಸಮಾಡಲು ಸಿದ್ಧನಾಗಿರಬೇಕೆಂದು ಶಾಹು ಪರಿಭಾವಿಸಿದ್ದರು. ಈ ಬಗ್ಗೆ ಗಂಗಾರಾಮ್ ಕಾಂಬ್ಳೆ ಅವರು ಹೇಳಿದ ಕತೆಯನ್ನು ಉದಾಹರಿಸಬಹುದು: "ಮಹಾರಾಜರ ಒಂದು ಆನೆ ಸತ್ತುಹೋಯಿತು. ಎಲ್ಲಾ ಖೈದಿಗಳನ್ನು ಕರೆಸಿ ಇದನ್ನು ಹೊತ್ತು ಸಾಗಿಸಬೇಕೆಂದು ಹೇಳಲಾಯಿತು. ಅದನ್ನು ಹಳೆ ಅರಮನೆಯಿಂದ ರವಿವಾರದ ಸ್ಥಳಕ್ಕೆ ಎಳೆದುತರಲಾಯಿತು. ಮಹಾರಾಜರು ತಮ್ಮ ರಥದಲ್ಲಿ ಕುಳಿತು ಹೋಗುವವರು ಅಲ್ಲಿಗೆ ಬಂದರು. ಅವರು ಇಂಥ ಕಠಿಣವಾದ ಕೆಲಸವನ್ನು ನೋಡಿದ ಕೂಡಲೇ ಅವರು ರಥದಿಂದ ಇಳಿದು, ಹಗ್ಗವನ್ನು ಕಟ್ಟಿದರು ಮತ್ತು ಆನೆಯನ್ನು ಎಳೆಯುವುದಕ್ಕೆ ಸಹಾಯಮಾಡಿದರು".[17] ಈ ಮಹಾರಾಜರು ಯಾವುದೇ ಕೆಲಸ ಕೀಳು ಅಲ್ಲ ಎಂಬುದನ್ನು ಮಾಡಿ ತೋರಿಸಿದರು. ನಾವು ನಮ್ಮ ಯೋಚನೆಯಲ್ಲಿ ಆ ರೀತಿ ಯೋಚನೆಮಾಡುವುದರಿಂದ ಆ ರೀತಿಯ ಫಲಿತಾಂಶ ಸಿಗುತ್ತದೆ. ಅದು ಶಾಹುರವರ ಸ್ವಭಾವ, ಮಹಾರಾಜರ ಸ್ವಭಾವ. ಅವರೊಬ್ಬ ವಿಭಿನ್ನವಾದ ಮಹಾರಾಜರು, ಮಹತ್ವದ ಮನುಷ್ಯರಾಗಿದ್ದರು.

### ಶಾಹು: ಜನರ ರಾಜ

ಈ ಮಹಾನುಭಾವ ಮಹಾರಾಜರು ರೈತರ, ಕಾರ್ಮಿಕರ ಮತ್ತು ದಮನಿತರ ಸಮ್ಮೇಳನದಲ್ಲಿದ್ದಾಗ ಹೇಳುತ್ತಾರೆ: "ನಾನು ನಿಮ್ಮೆಲ್ಲರಲ್ಲಿ ಒಬ್ಬನಾಗಿದ್ದೇನೆ. ನೀವು ನನ್ನನ್ನು ಒಬ್ಬ ಕಾರ್ಮಿಕ ಅಥವಾ ಒಬ್ಬ ರೈತನೆಂದು ಪರಿಗಣಿಸಿ. ನಾನು ಈ ಸಭೆಯ ಮನಸ್ಸನ್ನು ಗೆಲ್ಲಲು ಹೇಳುತ್ತಿಲ್ಲ".[18] ಈ ಎಲ್ಲಾ ಮಾತುಗಳು ಅವರ ಅಂತರಂಗದಿಂದ ಬಂದ ಪ್ರಾಮಾಣಿಕ ಮಾತುಗಳು. ಎಲ್ಲಾ ಮಾನವರ ಸಮಾನತೆಯನ್ನು ನಂಬಿದ್ದ ಮನುಷ್ಯನಿಂದ ಬಂದ ಮಾತುಗಳು. ಮುಂಬಯಿಯಲ್ಲಿ ಕಾರ್ಮಿಕರ ಸಮ್ಮೇಳನದಲ್ಲಿ ಅವರು ಹೇಳುತ್ತಾರೆ, "ನಾನು ಕೊಲ್ಹಾಪುರದ ಮಹಾರಾಜನಾಗಿದ್ದರೂ ನಾನು ಒಬ್ಬ ಸೈನಿಕ, ರೈತ ಅಥವಾ ಕಾರ್ಮಿಕನೆಂದು ಕರೆದುಕೊಳ್ಳುವುದಕ್ಕೆ ಹೆಮ್ಮೆಯಾಗುತ್ತದೆ. ನನ್ನ ಖಾಸಾತಾಯಿ ಮುಧೋಳ್ಕರ್ ಘೋರ್ಪಡೆ ಕುಟುಂಬಕ್ಕೆ. ನನ್ನ ಸಾಕುತಾಯಿ ಶಿರ್ಕೆ ಕುಟುಂಬಕ್ಕೆ. ಸಾಕುತಂದೆ ಭೋಂಸ್ಲೆ ವಂಶಕ್ಕೆ ಮತ್ತು ಈ ಎಲ್ಲಾ ಕುಟುಂಬಗಳು ಮೊದಲಿಗೆ ಕೃಷಿಸಂಪ್ರದಾಯಕ್ಕೆ ಸೇರುತ್ತವೆ. ಹಲವರು ಕೆಳಜಾತಿಯ ಮತ್ತು ಅನಕ್ಷರಸ್ಥರಲ್ಲಿ ಒಡನಾಟ ಬೆಳೆಸುವುದು ಬುದ್ಧಿವಂತಿಕೆಯಲ್ಲ ಎಂದು ಭಾವಿಸುತ್ತಾರೆ. ನನಗೂ ಆ ರೀತಿಯ ಬೋಧನೆಯನ್ನು ಕೊಡಲಾಗಿದೆ. ಆದರೆ ನಾನು ಹುಟ್ಟಿನಿಂದಲೇ ನನಗೆ ಆತ್ಮೀಯತೆ ಮತ್ತು ಮಮತೆ ರೈತರು ಮತ್ತು ಕಾರ್ಮಿಕರ ಬಗ್ಗೆ ಇರುವುದರಿಂದ ಮತ್ತು ಅವುಗಳಿಂದಲೇ ನನ್ನ ಕುಟುಂಬ ಸಮೃದ್ಧವಾಗಿರುವುದರಿಂದ ಅದರ ಪರಿಣಾಮ ನನ್ನ ಮೇಲೆ ಬೀರಿಲ್ಲ. ನನ್ನ ನರ-ನಾಡಿಗಳಲ್ಲಿ ಸೈನಿಕರ ಮತ್ತು ರೈತರ ರಕ್ತ ಹರಿಯುತ್ತಿದೆ. ಆದ್ದರಿಂದ ನಿಮ್ಮೊಡನೆ ಬೆರೆಯುವುದರಿಂದ ನನಗೆ ಸಂತೋಷವಾಗುತ್ತದೆ. 'ಸದ್ಗುಣಗಳು ಅರಮನೆಗಿಂತ

ಹೆಚ್ಚು ಗುಡಿಸಲುಗಳ ಬಡಜನರಲ್ಲಿ ಲಭ್ಯವಾಗುತ್ತದೆ' ಎಂದು ಒಬ್ಬ ಮಹಾನುಭಾವ ಸಂತನಾದ ಬ್ರಿಟಿಷ್ ಮನುಷ್ಯ ಹೇಳಿದ್ದಾನೆ. ನನ್ನ ಅನುಭವವೂ ಅದೇ ಆಗಿದೆ. ನಾನು ನಿಮ್ಮಲ್ಲಿ ನಿಷ್ಠೆ, ಭ್ರಾತೃತ್ವ, ದೇಶಭಕ್ತಿ, ರಾಜನಿಷ್ಠೆ, ದ್ವೇಷದ ಕೊರತೆ ಮೊದಲಾದ ಅನೇಕ ಸದ್ಗುಣಗಳನ್ನು ಕಾಣುತ್ತೇನೆ. ಆದ್ದರಿಂದ ನನಗೆ ನಿಮ್ಮ ಬಗ್ಗೆ ಹೆಚ್ಚು ಗೌರವವಿದೆ. ನೀವು ನನ್ನನ್ನು ನಿಮ್ಮಲ್ಲಿ ಒಬ್ಬನೆಂದು ಪರಿಗಣಿಸಬೇಕೆಂದು ನನ್ನ ನಮ್ರ ವಿನಂತಿ."[19] ಹೀಗೆ ಛತ್ರಪತಿಯವರು ತಮ್ಮನ್ನು ಒಬ್ಬ ಕಾರ್ಮಿಕ ಅಥವಾ ಒಬ್ಬ ರೈತನೆಂದು ಕರೆದುಕೊಳ್ಳುವುದು ಸಾಮಾನ್ಯ ವಿಷಯವಲ್ಲ. ಬೇರೆ ಯಾವ ರಾಜನೂ ಈ ಮೊದಲು ಹೀಗೆ ಹೇಳಿಲ್ಲ ಅಥವಾ ಯಾರೂ ಹೀಗೆ ನಡೆದುಕೊಂಡಿಲ್ಲ. ಶಾಹುರವರು ಹೆಮ್ಮೆಯಿಂದ ಒಮ್ಮೆ ಹೇಳಿದ್ದರು, "ನಾನು ಬಡವರೊಂದಿಗೆ ಬೆರೆತಂತೆ ಯಾವ ರಾಜನೂ ಮಾಡಿಲ್ಲ." ಈ ಮಾತುಗಳು ಒಬ್ಬನನ್ನೇ ಹೊಗಳುವುದಕ್ಕೆ ಸೀಮಿತವಾಗಿಲ್ಲ. ಆದರೆ ಈ ಮಾತುಗಳು ಸತ್ಯದ ಸ್ಪಷ್ಟ ಹೇಳಿಕೆಯಾಗಿದೆ.[20] ಈ ಐತಿಹಾಸಿಕ ಸಂಗತಿಯು ಅವರ ಘನತೆಯನ್ನು ಲೋಕರಾಜರನ್ನಾಗಿ ಮಾಡಿದೆ. 'ಜನರ ರಾಜ', 'ಅಂಬಿಲ್ ಕನ್ಯ' (ಅಂಬ್ಲಿ ಕುಡಿಯುವ ರಾಜ) ತಿನ್ನುವ ರಾಜನನ್ನು ಕರೆಯುವುದಕ್ಕೆ ಈ ಪ್ರತಿಮೆ(ಜನರ ರಾಜ)ಯನ್ನು ಬಳಸಲಾಗಿದೆ. ಈ ಪದಾರ್ಥವನ್ನು ಕಾಡಿನಲ್ಲಿರುವ ಗುಡಿಸಲಿನ ಕುರುಬರು ಭುಂಜಿಸುತ್ತಾರೆ. ಮಹಾರಾಜರು ಚಟ್ನಿ–ಭಾಕರ್ ಅನ್ನು(ಚಟ್ನಿಯ ಜೊತೆಗೆ ಜೋಳದ ರೊಟ್ಟಿ) ರೈತರ ಜೊತೆಯಲ್ಲಿ ಗುಡಿಸಲಿನಲ್ಲಿ ಅಥವಾ ಬೆರದರ (ಯಥಾಕಥಿತ ಅಪರಾಧಿ ಪಂಗಡ) ಜೊತೆಯಲ್ಲಿ ಅವರು ನೆಲಸುವಾಸದಲ್ಲಿ ತಿನ್ನುತ್ತಿದ್ದರು. ಮಹಾರಾಜರು ಅಸ್ಪೃಶ್ಯರಾದ ಮಹರ್ ಮತ್ತು ಮಾಂಗರ ಜೊತೆಯಲ್ಲಿ ಕುದುರೆಗಾಡಿಯಲ್ಲಿ ಎಲ್ಲಾ ಕಡೆ ತಿರುಗಾಡುತ್ತಿದ್ದರು. ಮತ್ತು ಮಹಾರಾಜರು ಫನ್ಸೆ ಪರಥಿಗಳ (ಮತ್ತೊಂದು ಅಪರಾಧಿ ಪಂಗಡ) ಜೊತೆಯಲ್ಲಿ ಹಬ್ಬದೂಟವನ್ನು ಸವಿಯುತ್ತಿದ್ದರು. ಅಂತಹ ಹಲವಾರು ಪ್ರತಿಮೆಗಳು ಶಾಹು ಅವರ ಜೀವನಚರಿತ್ರೆಗಳಲ್ಲಿ ಸಿಗುತ್ತವೆ. ಅವರು ಅರಮನೆಗಿಂತ ತನ್ನ ಜನರೊಡನೆ ಬಹಳ ಸುಖವಾಗಿದ್ದರು.

ಒಬ್ಬ ಲೋಕರಾಜ (ಜನರರಾಜ) ತನ್ನ ಎಲ್ಲಾ ಪ್ರಜೆಗಳನ್ನು ತನ್ನ ಮಕ್ಕಳೆಂದೇ ಪರಿಗಣಿಸುತ್ತಿದ್ದರು. ಮಹಾರಾಜರು ಅವರ ಕಲ್ಯಾಣಕ್ಕಾಗಿ ಹಗಲು–ರಾತ್ರಿ ಶ್ರಮಿಸುತಿದ್ದರು; ವಿಶೇಷವಾಗಿ ಅವರು ದುರ್ಬಲರನ್ನು, ಮತ್ತು ದಮನಿತರನ್ನು ಬೆಂಬಲಿಸುತ್ತಿದ್ದರು ಹಾಗೂ ಅವರಲ್ಲಿ ಜೀವನಕ್ಕಾಗಿ ಶಕ್ತಿ–ಉತ್ಸಾಹಗಳನ್ನು ತುಂಬುತ್ತಿದ್ದರು. ಶಾಹು ಮಹಾರಾಜರು ಲೋಕರಾಜರ ವಿಶಿಷ್ಟ ಗುಣಗಳನ್ನು, ಲಕ್ಷಣಗಳನ್ನು ಹೊಂದಿದ್ದರು. ಮುಧೋಲ್ಕರರು ಅವರನ್ನು ಶಿವಾಜಿಯೊಂದಿಗೆ ಹೋಲಿಸುತ್ತಾ ಹೇಳುತ್ತಾರೆ: "ಸಮಕಾಲೀನ ಶಾಹಿರ್ ತಮ್ಮ ಪೋವಡಾದಲ್ಲಿ ಛತ್ರಪತಿ ಶಿವಾಜಿ ಮಹಾರಾಜರ ಬಗ್ಗೆ ಹೀಗೆ ಹೇಳಿದ್ದಾರೆ: ಶಿವಾಜಿಯವರ ಕೊಳದಿಂದ ಪ್ರತಿಯೊಬ್ಬರೂ ನೀರನ್ನು ಕುಡಿಯುತ್ತಿದ್ದನು; ಯಾವುದೇ ರೀತಿಯ ತಾರತಮ್ಯತೆಯಿರಲಿಲ್ಲ! ಅವರ ವಂಶದಲ್ಲಿ ಸಮರ್ಥನಾದ ಯಾವ ರಾಜನಿದ್ದರೂ ಅವನು ಮೆಚ್ಚುಗೆಗೆ ಅರ್ಹನು. ಅವರೇ ಶಾಹು ಮಹಾರಾಜರು!"[21]

ಒಬ್ಬ ಬೆಂಗಾಲಿ ಕವಿಯಾದ ದೇವೇಂದ್ರನಾಥ ಸೇನ್ ತಮ್ಮ ಕವಿತೆಯಲ್ಲಿ ಅದೇ ರೀತಿಯ ಮನೋಭಾವವನ್ನು ವ್ಯಕ್ತಪಡಿಸಿದ್ದಾರೆ:

"ಓ ಮಹಾರಾಜರೇ! ಶ್ರೀಮಂತ ಬಲಿಷ್ಠ ಹೃದಯವು,
ವ್ಯತ್ಯಾಸವಿಲ್ಲದೆ ಭಾವಿಸುತಿದೆ,
ಶ್ರೀಮಂತ ಮತ್ತು ಬಡವನನ್ನು, ಶ್ರೇಷ್ಠಕುಲದ ಜನರ ಪ್ರಭುಗಳನ್ನು,
ಮತ್ತು ಕೆಳಜಾತಿಯ ಶೂದ್ರರನ್ನು, ತಗ್ಗುಪ್ರದೇಶದಲ್ಲಿ ಹುಟ್ಟಿದವರನ್ನು

ಸಾಮಾಜಿಕ ಪ್ರತ್ಯೇಕತೆಯ. . . . .
ಹಿಂದುಗಳು ಮತ್ತು ಅಹಿಂದುಗಳು, ಜೈನರು ಮತ್ತು ಎಲ್ಲರೂ
ದೊಡ್ಡ ಆತ್ಮದ ಪ್ರಾಂಗಣಗಳಲ್ಲಿ ಜಾಗ ಪಡೆಯುವರು. . . [22]

**ಶಾಹು ರಾಜರ್ಷಿ**

ಶಾಹು ಕಾಲದ ಮತ್ತು ತದನಂತರದ ಹಲವು ವಿದ್ವಾಂಸರು ಶಿವಾಜಿ ಮಹಾಶಯನೊಂದಿಗೆ ಹೋಲಿಕೆ ಮಾಡಿದ್ದಾರೆ. ಹಲವರು ಶಿವಾಜಿಯ ಹಲವು ಮಹಾಗುಣಗಳು ಶಾಹುರವರು ಮಾಡಿದ ಕೆಲಸಗಳಲ್ಲಿ ಪ್ರತಿಬಿಂಬಿತವಾಗಿದೆಯೆಂದು ಹೊಗಳಿದ್ದಾರೆ.[23]

ಶಿವಾಜಿಯವರು ಕ್ರೂರ ಸಾಮಾಜಿಕ ಪದ್ಧತಿಯ ಬುನಾದಿಯನ್ನು ಅಲ್ಲಾಡಿಸುವ ಬಗ್ಗೆ ಯೋಚನೆಯನ್ನೇ ಮಾಡಿರಲಿಲ್ಲವೆಂದು ವಿಷಾದಿಸುತ್ತಾರೆ.[24] ವಿದ್ವಾಂಸರಾದ ಕೆ. ಎಸ್. ಥ್ಯಾಕರೆಯವರು ಹೇಳುತ್ತಾರೆ: "ಸ್ವರಾಜ್ಯದ ಸ್ಥಾಪಕರಾದ ಶಿವಾಜಿ ದೇವರಂತಿದ್ದರೂ ಶತಮಾನಗಳಿಂದಲೂ ಹಿಂದೂ ಸಮಾಜದಲ್ಲಿ ಕಾಡುತ್ತಿದ್ದ ಅಸಮಾನತೆಯ ಪ್ಲೇಗನ್ನು ಹರಡುತ್ತಿದ್ದ ಭಟ್‌ರ (ಬ್ರಾಹ್ಮಣ ಪೂಜಾರಿಗಳ) ಧಾರ್ಮಿಕ ಮತ್ತು ಸಾಮಾಜಿಕ ಕುಯುಕ್ತಿಗಳ ಮಾಟದಿಂದ ಮುಕ್ತರಾಗಿರಲಿಲ್ಲ".[25] ವಾಸ್ತವಿಕವಾಗಿ, ಶಿವಾಜಿಯುಗದ ಮತ್ತು ಶಾಹುರವರ ಕಾಲದ ಸಾಮಾಜಿಕ–ರಾಜಕೀಯ ಸಂದರ್ಭಗಳು ಭಿನ್ನವಾಗಿದ್ದವು. ಶಿವಾಜಿಯ ಹೋರಾಟವು ರಾಜಕೀಯ ಸ್ವಾತಂತ್ರ್ಯದ ಹೋರಾಟವಾಗಿದ್ದರೆ ಶಾಹುರವರ ಹೋರಾಟವು ಸಾಮಾಜಿಕ ವಿಮೋಚನೆಯದಾಗಿತ್ತು. ಶಿವಾಜಿ ಪಾಶ್ಚಿಮಾತ್ಯರ ಶಿಕ್ಷಣ ಮತ್ತು ಸಾಮಾಜಿಕ ಜಾಗೃತಿಗಳ ಹಿನ್ನೆಲೆಯ ಪ್ರಯೋಜನವನ್ನು ಪಡೆಯಲಿಲ್ಲ; ಶಾಹುರವರ ವಿಚಾರಗಳು ಮತ್ತು ಅನುಷ್ಠಾನಗಳು ರಾಜಾರಾಮ್ ಮೋಹನರಾಯ ಅವರ ಕಾಲದಿಂದ ಸಾಮಾಜಿಕ ಜಾಗೃತಿ ಮತ್ತು ವ್ಯಾಪಕವಾದ ಭಾರತೀಯ ಜ್ಞಾನೋದಯ(ಪುನರುತ್ಥಾನ)ದ ಸದೃಢ ಹಿನ್ನೆಲೆಯನ್ನು ಪಡೆದಿದ್ದರು. ಈ ಇಬ್ಬರು ಮಹಾಶಯರ ಕೃತಿಗಳು ಮತ್ತು ಅವರು ಹೊಂದಿದ್ದ ವಿಧಾನಗಳಲ್ಲಿರುವ ವ್ಯತ್ಯಾಸಗಳನ್ನು ವಿಶ್ಲೇಷಣೆ ಮಾಡುವಾಗ ಈ ಮತ್ತು ಇತರೆ ಅಂಶಗಳನ್ನು ಗಮನದಲ್ಲಿಡಬೇಕಾಗುತ್ತದೆ. ೧೯ ಮತ್ತು ೨೦ನೇ ಶತಮಾನಗಳ ಸಾಮಾಜಿಕ ಸುಧಾರಣೆಗಳ ಚಳುವಳಿಗಳ ಬಗ್ಗೆ ಸಂಶೋಧನೆ ಮಾಡುವಾಗ ಶಿವಾಜಿಯ ಕಾಲದ ಹಿಂದಿನ ಇತಿಹಾಸವನ್ನು ಗಮನಕ್ಕೆ ತೆಗೆದುಕೊಳ್ಳುತ್ತಿಲ್ಲ.

ಶಾಹುರವರು ಶಿವಾಜಿ ಮಹಾಶಯರ ಒಬ್ಬ ನೇರ ವಂಶಸ್ಥ. ಅವರ ಮೊದಲ ನೋಟದಲ್ಲಿ ಸಾಮಾನ್ಯ ಜನರಿಗೆ ಶಿವಾಜಿಯನ್ನು ನೆನಪಿಸಿರುವುದು ಮತ್ತು ಅವರ ಹೃದಯಗಳಲ್ಲಿ ಅವರ ಬಗೆಗಿನ ಗೌರವ ತುಂಬುವುದು ಸಹಜವಾಗಿತ್ತು. ಮರಾಠ ಮಹಾರಾಜರಾದ ಹೋಳ್ಕರರಿಂದ ಹೊಲದ ರೈತ ಮತ್ತು ಕೈಗಾರಿಕೆಯ ಕಾರ್ಮಿಕರು ಶಾಹುರವರ ಬಗ್ಗೆ ಗೌರವ ಹೊಂದಿದ್ದರು. ಹಾಗಿರುವಾಗ ಶಾಹುರವರನ್ನೇ ಮಹಾರಾಷ್ಟ್ರದ ನಾಯಕರೆಂದು ಕಾಣಲಾಯಿತು. ಅವರು ತಮ್ಮ ಸಹಜ ನಾಯಕತ್ವವನ್ನು ತಮ್ಮ ಪ್ರಾಂತೀಯ ಹಿತಾಸಕ್ತಿಗಳ ಬೆಳವಣಿಗೆಗಾಗಿ ಬಳಸಿರಲಿಲ್ಲ; ಆದರೆ ಎಲ್ಲಕ್ಕಿಂತ ಮಿಗಿಲಾಗಿ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಶ್ರಮಿಸಿದರೆಂಬ ಸಂಗತಿಯನ್ನು ಅವರ ಕೃತಿಯ ಮಹತ್ವದ ಆಯಾಮವೆಂದು ಪರಿಗಣಿಸಬೇಕಾಗಿದೆ. ಅವರ ಹಲವಾರು ಸಮಕಾಲೀನರು ಶಾಹುರವರ ಕೊಡುಗೆಗಳ ಮೌಲ್ಯಮಾಪನ ಮಾಡಿದ್ದಾರೆ. ಆದರೆ ಕೊಲ್ಹಾಪುರದಿಂದ ನೂರಾರು ಮೈಲಿಗಳ ದೂರದಲ್ಲಿರುವ ಉತ್ತರಪ್ರದೇಶದ ಕುರ್ಮಿ ಸಮುದಾಯ

ಮಾಡಿರುವ ಸುಸಂಬದ್ಧ ಮತ್ತು ಅಡಕವಾದ ಮೌಲ್ಯಮಾಪನದಂತೆ ಯಾವ ವಿದ್ವಾಂಸನೂ ಮಾಡಿಲ್ಲ. ಅದು ಶಾಹುರವರ ಕೃತಿಯ ಯುಗ ನಿರ್ಮಾಣ ಮಾಡುವ ಸ್ವಭಾವವನ್ನು ಸರಿಯಾಗಿ ಮೆಚ್ಚಿ ಮತ್ತು ಅವರಿಗೆ ತನ್ನ ಸಮ್ಮೇಳನದಲ್ಲಿ ಈ ಮರಾಠರಾಜರಿಗೆ 'ರಾಜರ್ಷಿ' ಎಂಬ ಉಪಾಧಿಯನ್ನು ನೀಡಲಾಗಿದೆ. 'ರಾಜರ್ಷಿ' ಎಂದರೆ ಯಾವ ಮಹಾರಾಜನು ಋಷಿಯಾಗಿದ್ದಾನೆ, ಅವನು ರಾಜರ್ಷಿ, ಒಳ್ಳೆಯ ಋಷಿ, ರಾಮಾಯಣ ಮತ್ತು ಮಹಾಭಾರತದ ಕಾಲಗಳಲ್ಲಿ ಹಲವು ರಾಜರ್ಷಿಗಳಾದ ಜನಕ, ಶ್ರೀಕೃಷ್ಣ, ಭೀಷ್ಮ ಮೊದಲಾದವರಿದ್ದರು. ಹಲವಾರು ಲಕ್ಷಾಂತರ ವರ್ಷಗಳ ನಂತರ ಕೊಲ್ಹಾಪುರದ ಏಕೈಕ ಮಹಾರಾಜರಾದ ಶಾಹು ಮಹಾರಾಜರು ಈ ಉಪಾಧಿಯನ್ನು ಗಳಿಸಿದ್ದಾರೆ. ಕ್ಷತ್ರಿಯರಾಗಿದ್ದರೂ ಅವರು ಜ್ಞಾನಿ ಮತ್ತು ವಿದ್ವಾಂಸರಾಗಿ ರಾಜರ್ಷಿಯಾಗಿದ್ದಾರೆ. ಅವರು ತಮ್ಮ ಕೃತಿ ಮತ್ತು ಚಿಂತನೆಗಳಿಂದ ಸಮಾಜದ ಮುಂದೆ ಆದರ್ಶರಾಗಿದ್ದಾರೆ ಮತ್ತು ಅವರ ದಾರಿಯನ್ನೇ ಬದಲಾಯಿಸಿದ್ದಾರೆ. ಒಂದು ರೀತಿಯಲ್ಲಿ ಅವರು ಯುಗದ ಮುನ್ಸೂಚಕರು, ಪ್ರವಾದಿ. ಉತ್ತರಪ್ರದೇಶದ ಕುರ್ಮಿಗಳು ಶಾಹುರವರಿಗೆ ನೀಡಿದ ಉಪಾಧಿಯು ಅವರ ಪ್ರೌಢಿಮೆ ಮಾತ್ರವಲ್ಲದೆ ಅವರ ಸಾಮಾಜಿಕ ಅರಿವಿನ ಪ್ರಕಾಂಡತೆಯನ್ನು ಎತ್ತಿ ತೋರಿಸುತ್ತದೆ. ಆ ಕಾಲದ ಭಾರತದ ಹಿಂದುಳಿದ ಸಮುದಾಯಗಳು ಹೇಗೆ ಕೊಲ್ಹಾಪುರದ ಶಾಹುಮಹಾರಾಜರನ್ನು ನಿರೀಕ್ಷೆಯಿಂದ ನೋಡುತ್ತಿತ್ತೆಂಬುದನ್ನು ಸೂಚಿಸುತ್ತದೆ.

### ನಾನು ಬಾಗುವುದಿಲ್ಲ, ಆದರೆ ಅದನ್ನು ಮುರಿಯುವೆನು

ತಮ್ಮ ಅರ್ಧ ಜೀವನ ಕಳೆದ ನಂತರ ಶಾಹುರವರು ತಮ್ಮ ಜೀವನದ ಮುಖ್ಯಗುರಿಯಾದ (ಮಿಷನ್ನು) ಹಿಂದುಳಿದ ವರ್ಗಗಳ ಮತ್ತು ಅಸ್ಪೃಶ್ಯರ ಏಳಿಗೆಗಾಗಿ ದುಡಿದರು. ತಮ್ಮ ಸದುದ್ದೇಶದ ಸಾಧನೆಗಾಗಿ ಅವರು ಬ್ರಾಹ್ಮಣ ಮತ್ತು ಬ್ರಿಟಿಷರ ಆಡಳಿತ ವರ್ಗದ ವಿರುದ್ಧ ಹೋರಾಡಬೇಕಾಯಿತು. ಬಾಂಬೆ ಸರಕಾರವು ಅವರನ್ನು ಭೇದಿಸುವುದಕ್ಕಾಗಿ ಸಂಸ್ಥಾನದ ಹೊರಗಿನ ಬ್ರಾಹ್ಮಣೇತರರ ಚಳುವಳಿಗಳೊಡನೆ ಸಂಪರ್ಕ ಹೊಂದಬಾರದೆಂಬ ಒಂದು ನಿರ್ದೇಶನವನ್ನು ಅವರಿಗೆ ಕಳುಹಿಸಿತು. ಶಾಹುರವರು ಅದಕ್ಕೆ ನೀಡಿದ ಉತ್ತರವು ಅವರ ಜೀವನದ ಗುರಿಯು ದೃಢಸಂಕಲ್ಪವನ್ನು ಎತ್ತಿತೋರಿಸುತ್ತದೆ. ಅವರು ತಮ್ಮ ಪ್ರತ್ಯುತ್ತರದಲ್ಲಿ, "..... ಮಹಾರಾಷ್ಟ್ರದಲ್ಲಿ ಅಸ್ಪೃಶ್ಯರು ಸೇರಿದಂತೆ ಎಲ್ಲಾ ಹಿಂದುಳಿದ ವರ್ಗಗಳ ವಿಮೋಚನೆಯು ನನ್ನ ಜೀವನ ಮಿಷನ್ನು (ಹೆಗ್ಗುರಿ). ಲಕ್ಷಾಂತರ ರೈತರು, ಕಾರ್ಮಿಕರು, ಕೂಲಿಕಾರರು, ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ಆರ್ಥಿಕವಾಗಿ ಸುಧಾರಿಸದ ಹೊರತು ಬ್ರಿಟಿಷ್ ಸರಕಾರ ಏಕೆ ರಾಜಕೀಯ ಹಕ್ಕುಗಳ ಬಗ್ಗೆ ಮಾತನಾಡುತ್ತದೆ? ಯಾರಿಗೋಸ್ಕರ ಈ ಹಕ್ಕುಗಳನ್ನು ಕೊಡಬೇಕಾಗಿದೆ? ಅಜ್ಞಾನಿಗಳಾದ ಬ್ರಾಹ್ಮಣೇತರರು ಇದನ್ನು ಹೇಗೆ ಅರ್ಥ ಮಾಡಿಕೊಳ್ಳುವರು ಮತ್ತು ಇದರಿಂದ ಅವರು ಏನು ಪ್ರಯೋಜನ ಪಡೆಯುವರು? ನನ್ನನ್ನು ಮುಸುಕಿನಲ್ಲಿ ಬೆದರಿಸುವ ಸರಕಾರದ ಮನೋಭಾವದ ಹಿಂದಿರುವ ಪ್ರಳಯಾಂತಕ ಬುದ್ಧಿಯನ್ನು ನಾನು ಬಲ್ಲೆನು. ತಾವು ನನ್ನನ್ನು ಅಧಿಕಾರದಿಂದ ಇಳಿಸುವ ಮೊದಲೇ ನಾನು ಸಿಂಹಾಸನಕ್ಕೆ ರಾಜೀನಾಮೆ ನೀಡುವೆನು. ಆದರೆ ಈ ಶಾಹು ಸಾಯುವವರೆಗೂ ತಾನು ಕೈಗೊಂಡ ಬ್ರಾಹ್ಮಣೇತರರ ಚಳುವಳಿಯನ್ನು ಕೈ ಬಿಡುವುದಿಲ್ಲ."[26]

ಶಾಹುರವರ ಸಕ್ರಿಯ ಬೆಂಬಲದಿಂದ ಮಹಾರಾಷ್ಟ್ರದಲ್ಲೆಲ್ಲಾ ಬ್ರಾಹ್ಮಣೇತರರ ಚಳುವಳಿ ಹರಡಿದಂತೆ ಅವರ ಮತ್ತು ಕುಟುಂಬದ ಮೇಲಿನ ದಾಳಿಗಳು ಹೆಚ್ಚಾದವು. ಶಾಹು ಸಾಕಷ್ಟು ನೋವು ಅನುಭವಿಸಿದರು.

ಶಾಹುರವರ ಕೆಲವು ಆತ್ಮೀಯ ಸ್ನೇಹಿತರು ಶಾಹುರವರೇ ಸ್ವತಃ ಈ ಆಪತ್ತನ್ನು ತಮ್ಮ ಮೈಮೇಲೆ ಎಳೆದುಕೊಳ್ಳುತ್ತಿದ್ದಾರೆಂದು ಪರಿಭಾವಿಸಿದರು. ಶಾಹುರವರು ಕೇವಲ ತಮ್ಮ ಬಗ್ಗೆಯೇ ಮತ್ತು ತಮ್ಮ ಸಂಸ್ಥಾನದ ಆಡಳಿತದ ಬಗ್ಗೆಯೇ ಹೆಚ್ಚು ಗಮನ ನೀಡಿದ್ದರೆ ಅವರ ಮೇಲೆ ಸೇಡು ತೀರಿಸಿಕೊಳ್ಳಲು ಅವರ ಶತ್ರುಗಳು ಅವರ ಮೇಲೆ ದಾಳಿ ಮಾಡಲು ಮತ್ತು ಎರಗಿ ಬೀಳಲು ಯಾವ ಕಾರಣವೂ ಇರುತ್ತಿರಲಿಲ್ಲವೆಂದು ಅವರ ಹಿತೈಷಿಗಳು ಬಯಸಿದರು. ಏಕೆಂದರೆ ಭಾರತದ ಬಹುಮಟ್ಟಿನ ಸಾಮಂತರಾಜರು ಆ ತರಹದ ಅನುಕೂಲಕರವಾದ ಧೋರಣೆಯನ್ನು ಅನುಸರಿಸಿದ್ದರು. ತನ್ನ ಜನರ ಒಂದು ವಿಭಾಗದವರ ಪ್ರತೀಕಾರದ ದಾಳಿಗಳಿಗೆ ಮತ್ತು ಅದೇ ಸಮಯದಲ್ಲಿ ಬ್ರಿಟಿಷ್ ಸರಕಾರದ ಅವಕೃಪೆಗೆ ಗುರಿಯಾಗಬೇಕಾಯಿತು. ಅವರು ತಮ್ಮ ಗುರಿಯನ್ನು ಸಾಕಾರಗೊಳಿಸುವುದಕ್ಕೆ ನಿರತರಾದ್ದರಿಂದ ಇವೆಲ್ಲವನ್ನು ಅನುಭವಿಸಬೇಕಾಗಿತ್ತು. ಬರೋಡದ ರಾವ್‌ಬಹಾದ್ದೂರ್ ಬಾಬಾಸಾಹೇಬ್ ಗಾಯಕವಾಡರು ಶಾಹುರವರ ಹಿತೈಷಿಗಳಲ್ಲಿ ಒಬ್ಬರು. ಅವರು ಶಾಹುರವರಿಗೆ ಈ ಮನೋಭಾವಗಳನ್ನು ವ್ಯಕ್ತಪಡಿಸುತ್ತಾ ಒಂದು ಪತ್ರವನ್ನು ಬರೆಯುತ್ತಾರೆ: ಶಾಹುರವರ ಪ್ರತ್ಯುತ್ತರ, ತಮ್ಮ ದೃಢನಿರ್ಧಾರದೊಂದಿಗೆ ತುಂಬು ಗೌರವದ ಅಭಿವ್ಯಕ್ತಿ, ಅವರ ಸದುದ್ದೇಶದ ಬಗೆಗಿನ ತೀವ್ರಭಕ್ತಿ ಮತ್ತು ಅತ್ಯುತ್ತಮ ಆತ್ಮ–ವಿಶ್ವಾಸ, ಇವುಗಳೆಲ್ಲವು ಅವರ ಚಾರಿತ್ರ್ಯವನ್ನು ಬೆಳಗಿಸುತ್ತವೆ. ಅವರು ಹೇಳುತ್ತಾರೆ: "......ನಿಮ್ಮ ಬೋಧನೆ ಗೌರವಾರ್ಹ. ನಾನು ಅದನ್ನು ಶಿರಸಾವಹಿಸುತ್ತೇನೆ. ಆದರೆ ಒಬ್ಬ ಕ್ಷತ್ರಿಯನಿಗೆ ಯೋಗ್ಯವಾಗಿರದದ್ದನ್ನು ನಾನು ಮಾಡುವುದಿಲ್ಲ. ನನ್ನನ್ನು ಜೈಲಿಗೆ ಕಳುಹಿಸಿದರೂ ಅಲ್ಲಿಯೂ ಸಹ ನಾನು ನನ್ನ ದೇಶದ ಹಿತಕ್ಕಾಗಿ ಪ್ರಾರ್ಥನೆಮಾಡುವೆನು. ಸರಕಾರದ ಆಜ್ಞೆಯಿಂದ ನನ್ನನ್ನು ಬಗ್ಗಿಸುವುದು ಮತ್ತು ನನ್ನ ಕ್ಷೇತ್ರದಿಂದ ಹಿಂಜರಿಯುವುದು ನನ್ನ ಚಾರಿತ್ರ್ಯಕ್ಕೆ ಕಳಂಕವಾಗುತ್ತದೆ. ನಾನು ಬದುಕಿರುವವರೆಗೆ ನನ್ನ ಚಾರಿತ್ರ್ಯಕ್ಕಾಗಲಿ ಅಥವಾ ನನ್ನ ತಂದೆ–ತಾಯಿಗಳಿಗಾಗಲಿ ಕಳಂಕ ತಟ್ಟುವಂತೆ ಮಾಡುವುದಿಲ್ಲ. ನಾನು ನಿಮ್ಮ ಬೋಧನೆಯನ್ನು ಒಪ್ಪುವೆನು. ನಾನು ಅದನ್ನು ಸಂತೋಷದಿಂದ ನನ್ನ ತಲೆಯ ಮೇಲೆ ಧರಿಸುವೆನು. ಆದರೆ ಅದನ್ನು ಅನುಸರಿಸುವುದು ಅಸಾಧ್ಯ. ಏಕೆಂದರೆ ಅದು ನನ್ನ ಚಾರಿತ್ರ್ಯವನ್ನು ಮಲಿನಗೊಳಿಸುತ್ತದೆ. ಒಂದು ವೇಳೆ ಬ್ರಹ್ಮದೇವರು ಅಥವಾ ಸಾವುಗಳು ದಬಾವಣೆಯಿಂದ ನನ್ನನ್ನು ಶರಣಾಗತಗೊಳಿಸಿದರೆ ಲಾರ್ಡ್ ರೀಡಿಂಗರು, ನನ್ನ ಪೂರ್ವಿಕರು ಮತ್ತು ದೇವತೆಗಳು ನಗಲಿ ಅಥವಾ ಅಳಲಿ ನನಗೆ ಸಾವು ಮತ್ತು ಸೋಲುಗಳು ಕೇವಲ ಎಂದು ನಾನು ಭಾವಿಸುವೆನು. ಒಬ್ಬರ ಮನೋಭಾವವನ್ನು ಹೇಗೆ ಬದಲಾಯಿಸಲು ಸಾಧ್ಯ? ...... ನಾನು ನನ್ನ ಹೊಣೆಗಳನ್ನು ಒಂದೊಂದಾಗಿ ಹೇಗೆ ಬಿಡಲಿ. ಕೇವಲ ನನ್ನ ಪ್ರಾಣ ಉಳಿಸಿಕೊಳ್ಳುವುದಕ್ಕಾಗಿಯೇ ನನ್ನ ಶತ್ರುಗಳ ಕಾಲುಗಳ ಮುಂದೆ ಶರಣಾಗಲಾರೆ. ನಾನು ಹೋರಾಡುವವನೇ ಹೊರತು ಬಾಗುವುದಿಲ್ಲ. ಸರಕಾರ ನನ್ನ ಕಾರ್ಯವನ್ನು ಒಪ್ಪದಿರಬಹುದು. ಅದು ತನ್ನ ಕೆಲಸವನ್ನು ತಾನು ಸಂತೋಷವಾಗಿ ಮಾಡಲಿ. ನಾನು ನೋವು ಅನುಭವಿಸುವೆನು. ನಾನು ನಿರ್ಭಾಗ್ಯರಿಗೆ ಸಹಾಯಮಾಡಿದ್ದಕ್ಕಾಗಿ, ಅಸ್ಪೃಶ್ಯರೊಡನೆ ಸ್ನೇಹಿತನಾಗಿದ್ದಕ್ಕೆ ಮತ್ತು ಮರಾಠರ ಕಲ್ಯಾಣಕ್ಕಾಗಿ ಹೊಡೆದಾಡಿದ್ದಕ್ಕೆ ದೇವರ ನ್ಯಾಯಾಲಯದಲ್ಲಿ ನನಗೆ ನ್ಯಾಯ ಸಿಗುವುದು. ನಾನು ಕ್ಷತ್ರಿಯರಿಗೆ ಮತ್ತು ಶಿವಾಜಿ ವಂಶಸ್ಥರಿಗೆ ಯೋಗ್ಯವಲ್ಲದ ಯಾವುದನ್ನೂ ಮಾಡುವುದಿಲ್ಲವೆಂದು ನನ್ನ ಪೂರ್ವಿಕರ ಮೇಲೆ ಆಣೆಯಿಟ್ಟು ಪ್ರಮಾಣಮಾಡುತ್ತೇನೆ. ನನ್ನ ತಾಯಿಗೆ ಕಳಂಕ ತರುವಂಥದ್ದನ್ನು ಏನನ್ನೂ ಮಾಡುವುದಿಲ್ಲ. ನಾನು ನಿಮ್ಮ ಧೋರಣೆಗಳನ್ನು ಒಪ್ಪುವುದಿಲ್ಲ".[27]

ಬ್ರಿಟಿಷ್ ಸರಕಾರ ಒಂದಲ್ಲ ಒಂದು ಕಾರಣದಿಂದ ಶಾಹುರವರನ್ನು ಭ್ರಮಾವೇಶದಿಂದ ಜೈಲಿನಲ್ಲಿಡಲು ಪ್ರಯತ್ನಿಸುತ್ತಿದೆಯೆಂಬ ವದಂತಿಯನ್ನು ಪತ್ರವು ಸೂಚಿಸುತ್ತಿತ್ತು. ಶಾಹುರವರು ಆತ್ಮಗೌರವದಿಂದ ಒಂದು

ಇಂಚು ಕುಗ್ಗದೆ ದೃಢವಾಗಿ ಪ್ರತಿಕ್ರಿಯಿಸಿದರು. ಪೇಶ್ವ ರಘುನಾಥರಾವ್ ಅವರು ತಾವಿರುವ ಜೈಲಿನಿಂದ ಬಿಡುಗಡೆ ಹೊಂದಲು ಸೂರ್ಯದೇವನನ್ನು ಸಂತೃಪ್ತಗೊಳಿಸುವ ಸಲುವಾಗಿ ಮತ್ತು ತಮ್ಮ ರಾಜಾಧಿಕಾರ ಮತ್ತು ಅದರಿಂದ ಬರುವ ವೈಭೋಗಗಳನ್ನು ಅನುಭೋಗಿಸುವುದಕ್ಕಾಗಿ ಬಿರುಸಿನಿಂದ ತಾಂತ್ರಿಕ ಆಚರಣೆ ಮತ್ತು ಯಜ್ಞಗಳನ್ನು ನಡೆಸುತ್ತಿದ್ದ ಅರಸನೆಂಬುದು ಮಹಾರಾಷ್ಟ್ರಕ್ಕೆ ಚೆನ್ನಾಗಿ ಗೊತ್ತಿತ್ತು. ತನ್ನ ಮಿಷನ್ನಿನ ಈಡೇರಿಕೆಗಾಗಿ ಜೇಲಿಗೆ ಹೋಗಲು ಸಿದ್ಧನಾಗಿರುವ ಮತ್ತು ತನ್ನ ದೇಶದ ಏಳಿಗೆಗಾಗಿ ದೇವತೆಗಳನ್ನು ಸಾಂತ್ವನಗೊಳಿಸಲು ತಯಾರಾಗಿರುವ ಮಹಾರಾಜನು ಮಹಾರಾಷ್ಟ್ರಕ್ಕೆ ಹೊಸಬನಾಗುತ್ತಾನೆ. ಬ್ರಿಟಿಷ್ ಭಾರತದಲ್ಲಿ ಈ ರೀತಿಯ ಮನೋಭಾವವಿರುವ, ಇಚ್ಛಾಶಕ್ತಿಯುಳ್ಳ ಮತ್ತು ನೈತಿಕ ಬಲವುಳ್ಳ ಸಾಮಂತ ಮಹಾರಾಜರು ಸಿಗುವುದು ದುರ್ಲಭ.

## ತನ್ನ ಕಾಲಕ್ಕಿಂತ ಮುಂದಿರುವ ಪ್ರವಾದಿ

ರಾಷ್ಟ್ರೀಯ ಭಾವನೆ, ರಾಷ್ಟ್ರ ಮತ್ತು ರಾಷ್ಟ್ರೀಯತೆಯ ಪರಿಕಲ್ಪನೆಗಳ ಲಕ್ಷ್ಯ, ರಾಷ್ಟ್ರದ ಬಗೆಗೆ ಕರ್ತವ್ಯ, ರಾಷ್ಟ್ರದ ಸ್ವರೂಪ, ಧರ್ಮನಿರಪೇಕ್ಷತೆ ಮೊದಲಾದವುಗಳಿಗೆ ಗೌರವ ಕೊಟ್ಟ ಇಪ್ಪತ್ತನೇ ಶತಮಾನದ ಮೊದಲ ಎರಡು ದಶಕಗಳ ಭಾರತದ ನಾಯಕರಲ್ಲಿ ಶಾಹುರವರನ್ನು ಸೇರಿಸಬೇಕಾಗಿದೆ. ನಮ್ಮ ರಾಷ್ಟ್ರವನ್ನು ರೂಪಿಸುವ ಎಲ್ಲಾ ಕೀರ್ತಿ ಈ ಶಿಲ್ಪಿಗಳಿಗೆ ಸಲ್ಲಬೇಕು. ಈ ನಾಯಕ ಮಣಿಗಳಿಂದಲೇ ನಾವೆಲ್ಲ ಭಾರತರಾಷ್ಟ್ರದ ವಿಭಜಿಸಲಾಗದ ಭಾಗಗಳೆಂಬ ಭಾವನೆ ಬೇರುಬಿಟ್ಟಿದ್ದು ಮತ್ತು ಅರಳಿದ್ದು. ಈ ಮನೋಭಾವವು ಸ್ಪಷ್ಟವಾಗಿ ಮತ್ತು ಆಗಾಗ ಶಾಹುರವರ ಮಾತು ಮತ್ತು ಕೃತಿಗಳಲ್ಲಿ ಪ್ರಕಟಗೊಂಡಿದೆ. ಬಹಿಷ್ಕೃತ ಸಮುದಾಯಗಳ ನಾಗಪುರದ ಸಮ್ಮೇಳನದಲ್ಲಿ ಅವರು ಸಾರ್ವಜನಿಕವಾಗಿ ಅಸ್ಪೃಶ್ಯರೆಂದು ಕರೆಸಿಕೊಳ್ಳುವ ಜನರು ಭಾರತರಾಷ್ಟ್ರದ ಭಾಗಗಳು ಮತ್ತು ಸಮಾನಹಕ್ಕುಗಳನ್ನು ಪಡೆದಿರುವ ಸಹೋದರರು ಎಂದು ಹೇಳುತ್ತಾ ತಮ್ಮ ಅಂತರಂಗದ ಭಾವನೆಗಳನ್ನು ವ್ಯಕ್ತಪಡಿಸಿದ್ದರು.

ಅದೇ ಸಮ್ಮೇಳನದಲ್ಲಿ ಶಾಹುರವರು ಹೇಳಿದ್ದರು, "...... ನಾವೆಲ್ಲ ಭಾರತೀಯರು. ನಾವೆಲ್ಲ ಸಹೋದರರು. ಭಾರತರಾಷ್ಟ್ರದ ಪ್ರಜೆಗಳೆಲ್ಲರೂ ತಮ್ಮ ವರ್ಣ ಅಥವಾ ಧರ್ಮಭೇದವಿಲ್ಲದೆ ಎಲ್ಲರೂ ಭಾರತೀಯರು. ಧರ್ಮ ವೈಯಕ್ತಿಕ ಸ್ತರದಲ್ಲಿ ಮುಖ್ಯವಾಗಬಹುದು. ಆದರೆ ಅದು ರಾಷ್ಟ್ರದ ಹಿತಾಸಕ್ತಿಯನ್ನು ಹಾಳುಮಾಡಲೇಬಾರದು". ಶಾಹು ಮತ್ತೆ ಮುಂದುವರಿಯುತ್ತಾ ಹೇಳುತ್ತಾರೆ: "ನಿಜವಾದ ಧರ್ಮ ರಾಷ್ಟ್ರದ ಸೇವೆಯಾಗಿದೆ. ಸಾರಸತ್ವದಲ್ಲಿ ಅಣ್ಣ-ತಮ್ಮಂದಿರ ಸೇವೆಯಾಗಿದೆ; ಜನರಲ್ಲಿ ದೇವರನ್ನು ಹುಡುಕುವುದಾಗಿದೆ".[28]

ಒಂದು ರಾಷ್ಟ್ರವನ್ನು ಕಟ್ಟುವುದಷ್ಟೇ ಸಾಕಾಗುವುದಿಲ್ಲ. ರಾಷ್ಟ್ರದ ಜನರು ಅದಕ್ಕೆ ರಾಷ್ಟ್ರೀಯ ಸ್ವರೂಪವನ್ನು ಕೊಡಬೇಕು. ಈ ಅಭಿಪ್ರಾಯವನ್ನು ಅವರು ಸ್ಪಷ್ಟಪಡಿಸುತ್ತಾ ಹೇಳುತ್ತಾರೆ: "......ಸಮಾಜದ ನೈತಿಕತೆಯನ್ನು ಹೆಚ್ಚಿಸುವುದು ಸಾಮಾಜಿಕ ಸುಧಾರಣೆಗೆ ಅತಿಮುಖ್ಯ. ಹಾನಿಕಾರಕವಾದ ಆಚರಣೆಗಳು ಮತ್ತು ಧಾರ್ಮಿಕ ಮೂಢನಂಬಿಕೆಗಳು ನಮ್ಮ ಮೇಲೆ ಹಾನಿಕಾರಕವಾದ ಆಚರಣೆಗಳಾದ ಮದ್ಯಪಾನ ಸೇವನೆ, ಬಾಲ್ಯವಿವಾಹ, ಬಲಾತ್ಕಾರದ ವಿಧವಾಪದ್ಧತಿ, ದೇವತೆಗಳಿಗೆ ಹುಡುಗಿಯರನ್ನು ಅರ್ಪಿಸುವುದು ಮೊದಲಾದವುಗಳನ್ನು ಹೇರಲಾಗಿದೆ. ಅವು ಭೌತಿಕ, ಭಾವನಾತ್ಮಕ ಮತ್ತು ಬೌದ್ಧಿಕ ಅಧೋಗತಿಯ ಕಡೆಗೆ ಕೊಂಡೊಯ್ದಿವೆ. ನೀವು ಪರಿಸ್ಥಿತಿಗಳನ್ನು ಸುಧಾರಿಸುವುದಕ್ಕೆ ಕ್ರಮಗಳನ್ನು ಕೈಗೊಳ್ಳಬೇಕು. ಈ ಬಗೆಗಿನ ಮೊದಲ ಕರ್ತವ್ಯ ಚಾರಿತ್ರ್ಯ

ನಿರ್ಮಾಣವಾಗಿದೆ. ಜನರ ಚಾರಿತ್ರ್ಯವಿಲ್ಲದೆ ಒಂದು ಸಂಪತ್‌ಭರಿತ ರಾಷ್ಟ್ರ ನಿರ್ಮಾಣ ಮಾಡುವುದು ಅಸಾಧ್ಯ. ನಾವು ದೈಹಿಕ ಸದೃಢತೆಯ ಬಗ್ಗೆ ಗಮನ ಹರಿಸಬೇಕು. ಆದರೆ ನೈತಿಕ ಅಧಃಪತನದಿಂದ ಬಲಿಷ್ಠ ರೋಮನ್ ಸಾಮ್ರಾಜ್ಯವು ದೈಹಿಕವಾಗಿ ಪರಾಕ್ರಮ ಮತ್ತು ಶೌರ್ಯದಿಂದಿದ್ದರೂ ಕೂಡ ಹಾಳಾಯಿತೆಂಬುದನ್ನು ಮರೆಯುವಂತಿಲ್ಲ."[29]

## ಇದು ಶಾಹುರವರ ರಾಷ್ಟ್ರದ ಪರಿಕಲ್ಪನೆ

ರಾಷ್ಟ್ರೀಯತೆ ಮತ್ತು ರಾಷ್ಟ್ರದ ಚಾರಿತ್ರ್ಯವಾಗಿತ್ತು. ಶಾಹುರವರು ಸ್ವಾತಂತ್ರ್ಯಕ್ಕಿಂತ ಮೊದಲೇ ಒಂದು ರಾಷ್ಟ್ರೀಯ ಕನಸನ್ನು ಕಂಡಿದ್ದರು. ಅದರ ಪ್ರಕಾರ ಭಾರತದ ಸಾಮಂತರಾಜರ ಸಂಸ್ಥಾನಗಳನ್ನು ಒಮ್ಮೆಗೆ ವಿಸರ್ಜಿಸಿ ಸ್ವಲ್ಪಕಾಲದಲ್ಲಿಯೇ ದೇಶವನ್ನು ಸಾರ್ವಭೌಮವಾಗಿ ಆಳಲು ಜನತಂತ್ರವನ್ನು ಸ್ಥಾಪಿಸಬೇಕು. ಅಂಥ ಸಂಭವನೀಯವಾದ ಘಟನೆ ಕಾಲದ ಅಗತ್ಯವಾಗಿದೆ ಮತ್ತು ಅಂಥ ಘಟನೆಯಲ್ಲಿ ಭಾರತದ ಸಹೋದರರ ಕಲ್ಯಾಣ ಅಡಗಿದೆ. ಅಂತಹ ಭವ್ಯವಾದ ಕನಸನ್ನು ಕಂಡ ಜನರು ಆ ಕಾಲದಲ್ಲಿ ಹುಟ್ಟಿದ್ದು ಈ ದೇಶದ ಅದೃಷ್ಟ ಪ್ರವಾದಿಗಳು ತಮ್ಮ ಕಾಲಗಳಿಗಿಂತ ಮುಂದಿದ್ದರೆಂಬುದನ್ನು ಮತ್ತೆ ಮತ್ತೆ ಹೇಳಬೇಕಾಗುತ್ತದೆ. ಈ ಸೂತ್ರವನ್ನು ಶಾಹುರವರಿಗೆ ಅನ್ವಯಿಸಬಾರದೆಂಬುದಕ್ಕೆ ಯಾವ ಕಾರಣವೂ ಇಲ್ಲ.

## ಸಾಮಾಜಿಕ ಜನತಂತ್ರದ ಸ್ತಂಭ

ಶಾಹುರವರು ಕಂಡ ಭಾರತದ ಜನತಾಂತ್ರಿಕ ಸಂವಿಧಾನದ ಕನಸು ಒಂದು ಪ್ರಾದೇಶಿಕ ಸಂಕುಚಿತದ ಸಾಧನವಾಗಿರಲಿಲ್ಲ. ಅವರ ಕನಸಿನ ಸ್ವರಾಜ್ಯದಲ್ಲಿ ರೈತರು, ಕಾರ್ಮಿಕರು ಸೇರಿದಂತೆ ಎಲ್ಲಾ ಹಿಂದುಳಿದ ವರ್ಗಗಳ ಮತ್ತು ಅವರ ಆಸೆ-ಆಕಾಂಕ್ಷೆಗಳ ಈಡೇರಿಕೆಯನ್ನು ನಿರೀಕ್ಷಿಸಲಾಗಿತ್ತು. ಆದರೆ ಕಂತುಗಳ ಮೂಲಕ ನೀಡಿದ ರಾಜಕೀಯ ಹಕ್ಕುಗಳ ಪರಿಣಾಮದಿಂದ ದೇಶೀಯ ಆಡಳಿತ ವರ್ಗ ಉಗಮಗೊಳ್ಳುವ ಅಪಾಯವನ್ನು ಅವರು ಸ್ಪಷ್ಟವಾಗಿ ಕಂಡಿದ್ದರು. ಆ ಹಕ್ಕುಗಳು ಉನ್ನತ ವರ್ಗಗಳ ಕೈಗೆ ಎಟುಕಿ, ತನ್ಮೂಲಕ ಹಿಂದುಳಿದ ವರ್ಗಗಳನ್ನು ಎಂದಿನಂತೆ ಕಡೆಗಣಿಸಲಾಗುವುದು. ಆದ್ದರಿಂದ ಅವರು ತಿಲಕರ ಪಕ್ಷದ ಸ್ವರಾಜ್ಯ ಆಂದೋಲನವನ್ನು ವಿರೋಧಿಸಿದರು. ವಿರೋಧಿಗಳು ಅವರ ವಿಚಾರಗಳನ್ನು ತಿರುಚಿ ಗುಲ್ಲೆಬ್ಬಿಸಿದರು ಮತ್ತು ಅವರು ಸ್ವರಾಜ್ಯದ ವಿಚಾರವನ್ನು ವಿರೋಧಿಸುತ್ತಿದ್ದಾರೆಂದು ಆರೋಪಿಸಿದರು. ಅವರು ಅವರನ್ನು ಸ್ವರಾಜ್ಯದ ದ್ರೋಹಿ ಎಂದು ಘೋಷಿಸಿದರು. ಶಾಹುರವರ ಪಕ್ಷವು ಸ್ವರಾಜ್ಯದ ದ್ರೋಹವು ಎಂದರೆ ತಮ್ಮ ಜನರಿಗೆ ದ್ರೋಹ ಮಾಡುವುದೇ ಎಂದು ಹೇಳಿದರು ಮತ್ತು ತಮ್ಮ ಸಹೋದರರಿಗೆ ಸಮಾನ ಹಕ್ಕುಗಳನ್ನು ನೀಡದೆ ಮತ್ತು ಸಾಮಾಜಿಕ ಸ್ವಾತಂತ್ರ್ಯಗಳ ಅವರ ಬೇಡಿಕೆಯನ್ನು ತುಳಿದುಹಾಕುವ ಮೂಲಕ ತಿಲಕರ ಪಕ್ಷವು ಸ್ವರಾಜ್ಯಕ್ಕೆ ದ್ರೋಹ ಮಾಡುತ್ತಿದೆಯೆಂದು ಅವರು ಖಂಡಿಸಿದರು. ಬ್ರಿಟಿಷ್ ಪ್ರಭುಗಳಿಂದ ರಾಜಕೀಯ ಸ್ವಾತಂತ್ರ್ಯವನ್ನು ಕೇಳಬಯಸಿದವರು ತಮ್ಮ ಸಹೋದರ ಪ್ರಜೆಗಳಿಗೆ ಸಾಮಾಜಿಕ ಸ್ವಾತಂತ್ರ್ಯವನ್ನು ನೀಡಲು ಸಿದ್ಧರಾಗಿರಲಿಲ್ಲ. ಅಂಥವರು ಶಾಹುರವರನ್ನು ತಮ್ಮ ಶತ್ರುವೆಂದು ಪರಿಗಣಿಸಿದರು. ಇದು ಅವರ ಇತಿಹಾಸದ ತರ್ಕವಾಗಿತ್ತು.

ಆದ್ದರಿಂದ ಶಾಹುರವರಿಗೆ ರಾಜಕೀಯ ಸ್ವಾತಂತ್ರ್ಯಕ್ಕಿಂತ ಸಾಮಾಜಿಕ ಸ್ವಾತಂತ್ರ್ಯ ಪ್ರಮುಖ ಆದ್ಯತೆಯಾಗಿತ್ತು. ಅಂತಹ ಸಾಮಾಜಿಕ ಜನತಂತ್ರದ ನಿರ್ಮಾಣದ ಹೊರತು ರಾಜಕೀಯ ಜನತಂತ್ರವು ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ಅದು ಮಹತ್ವದ ವಿಷಯವಾಗಿರಲಿಲ್ಲ. ಆದ್ದರಿಂದ ಮುಂಬರುವ

ಹಿಂದುಳಿದ ವರ್ಗಗಳ ನಾಯಕ ವಿಶೇಷವಾಗಿ ಡಾ. ಬಾಬಾಸಾಹೇಬ ಅಂಬೇಡ್ಕರರು ಶಾಹುರವರನ್ನು ಗೌರವಿಸುತ್ತಾ ಅವರಿಗೆ 'ಸಾಮಾಜಿಕ ಜನತಂತ್ರದ ಸ್ತಂಭ' ಎಂಬ ಉಪಾಧಿಯನ್ನು ನೀಡಿದರು. ಮದ್ರಾಸಿನ ಬ್ರಾಹ್ಮಣೇತರರ ಆಂದೋಲನದ ನಾಯಕರಾದ ಸರ್ ತ್ಯಾಗರಾಜ ಚೆಟ್ಟಿಯಾರ್ ಅವರು ಸಾಮಾಜಿಕ ಸಮಾನತೆ ಮತ್ತು ನ್ಯಾಯಗಳ ಆಧಾರಿತ ಸಾಮಾಜಿಕ ಜನತಂತ್ರದ ಸದುದ್ದೇಶದ ನಾಯಕರಾದ ಶಾಹುಮಹಾರಾಜರು ಜನತಂತ್ರದ ನಿಜವಾದ ಒಬ್ಬ ಪ್ರತಿಪಾದಕರೆಂದು ಕರೆದಿದ್ದಾರೆ. ಶಾಹುರವರ ನಿಧನದ ನಂತರ ಅವರ ಕೆಲಸವನ್ನು ಪ್ರಶಂಸಿಸುತ್ತಾ ಸರ್ ತ್ಯಾಗರಾಜ ಚೆಟ್ಟಿಯಾರ್ ಅವರು ಶಾಹುರವರನ್ನು 'ಜನತಾಂತ್ರಿಕರಲ್ಲಿ ಒಬ್ಬ ಜನತಾಂತ್ರಿಕ'ರೆಂದು ಸೂಕ್ತವಾಗಿ ಕರೆದಿದ್ದಾರೆ.[30]

## ಫ್ರೇಜರರ ಭವಿಷ್ಯ

ಒಂದು ಭಾರೀ ಗಾತ್ರದ ಆಲದಮರದಡಿಯಲ್ಲಿ ಅದರ ಆಶ್ರಯಕ್ಕಾಗಿ ನಿಂತ ವ್ಯಕ್ತಿ ಅದರ ಭವ್ಯ ಮಹಾ–ಔದಾರ್ಯವನ್ನು ಪರಿಭಾವಿಸುತ್ತಾನೆ. ಆದರೆ ಒಂದು ಮಟ್ಟದ ದೂರದಿಂದ ನಿಂತು ಅದನ್ನು ನೋಡಿದಾಗ ಅದರ ನಿಜವಾದ ವೈಭವ ಮತ್ತು ವೈಶಾಲ್ಯವನ್ನು ಅನುಭವಿಸಿ ಅರ್ಥ ಮಾಡಿಕೊಳ್ಳಲಾಗುತ್ತದೆ. ಮಹಾಜನರ ಕೃತಿಗಳ ಬಗ್ಗೆ ಅದನ್ನೇ ಹೇಳಬೇಕಾಗುತ್ತದೆ. ಅವರ ಸಾಧನೆಗಳ ಅಪಾರತೆಯು ಅವರ ಕಾಲದಲ್ಲಿ ಸರಿಯಾಗಿ ಮೌಲ್ಯಮಾಪನವಾಗಿರುವುದಿಲ್ಲ. ಶಾಹು ಮಹಾರಾಜರು ನಿಧನ ಹೊಂದಿದ ಎರಡು ವರ್ಷಗಳಲ್ಲಿ ಅವರ ಗುರುಗಳಾದ ಫ್ರೇಜರ್ ಅವರು ಖಚಿತವಾಗಿ ಅದೇ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರು ಹೇಳುತ್ತಾರೆ: "ಅವರ ಕೆಲಸ–ಕಾರ್ಯಗಳನ್ನು ಸರಿಯಾದ ಪರಿಪ್ರೇಕ್ಷ್ಯದಲ್ಲಿ ನೋಡುವುದಕ್ಕೆ ನಾವು ಅವರ ಕಾಲದ ಹತ್ತಿರದಲ್ಲಿ ಬದುಕಿದ್ದೇವೆ. ಆದರೆ ಅವರ ಕಾರ್ಯಗಳಾದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯವಾದ ಸುಧಾರಣಾ ಚಳುವಳಿಗಳಲ್ಲಿ ಹೊಂದಾಣಿಕೆಯಿದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಬೇಕಾಗಿದೆ. ಈ ಎಲ್ಲಾ ಚಳುವಳಿಗಳ ನಾಯಕ ಕೊನೆಯ ಶಾಹು ಮಹಾರಾಜರಾಗಿದ್ದರು. ನಮ್ಮ ಕಣ್ಣುಮುಂದೆಯೇ ಬೆಳೆಯುತ್ತಿರುವ ಭಾರತದ ಇತಿಹಾಸಕಾರನು ಶಾಹುರವರ ಜೀವನದಲ್ಲಿರುವ ಮಾಹಿತಿಗಳನ್ನು, ಅವುಗಳನ್ನು ಸಮರ್ಥಿಸಲು ಕ್ಷೇಮಕರವಾಗಿದ್ದರು, ಕಡೆಗಣಿಸಲಾರ; ವಿವಾದಗಳ ಸುಳಿಯಲ್ಲಿ ತಮ್ಮ ಪಾತ್ರ ಶ್ರಮವಹಿಸಿ ನಿರ್ವಹಿಸುವಾಗ, ಅದು ಕ್ರಮೇಣ ತಣ್ಣಗಾದರೂ ಪ್ರತಿಯೊಂದು ವರ್ಗದ ಭಾರತೀಯನ ರಾಷ್ಟ್ರೀಯ ಆಸ್ತಿಯೆಂದು ನಿಜವಾದ ಮಹಾನುಭಾವರಾದ ಸರ್ ಶಾಹುರವರ ನೆನಪನ್ನು ಹೆಮ್ಮೆಯಿಂದ ನಿಧಿಯೆಂದು ಭಾವಿಸುತ್ತಾರೆ."[31] ಸ್ವತಂತ್ರ ಭಾರತದಲ್ಲಿ ಇಂದು ಶಾಹುರವರಿಗೆ ನೀಡಿರುವ ಅಸೂಯಾಜನಕವಾದ ಗೌರವದ ಸ್ಥಾನವು ಫ್ರೇಜರರವರು ಹೇಳಿದ ಭವಿಷ್ಯದಲ್ಲಿ ಸಾಕಾರಗೊಂಡಿದೆ.

ಮಹಾತ್ಮ ಗಾಂಧಿಯವರ ಅಹಿಂಸಾ ಸಿದ್ಧಾಂತ ಮತ್ತು ಪಂಡಿತ ನೆಹ್ರುರವರ ಶಾಂತಿಮಂತ್ರವಾದ ಪಂಚಶೀಲವನ್ನು ಅವರ ಕಾಲದಲ್ಲಿ ವಿರೋಧಿಗಳು ಅದರ ವಿರುದ್ಧ ದಾಳಿ ಮಾಡಲಿಲ್ಲವೆಂದು ಅರ್ಥವಲ್ಲ. ಅವರ ಸಿದ್ಧಾಂತಗಳನ್ನು ದುರ್ಬಲವೆಂದು ತೆಗಳಲಾಯಿತು. ಆದರೆ ಒಂದು ಶತಮಾನ ಕಳೆದ ಮೇಲೆ ಮತ್ತು ಕ್ಷೋಭೆ, ಹಿಂಸೆ ಮತ್ತು ಸಂಕಟಗಳನ್ನು ಅನುಭವಿಸಿದ ನಂತರ ಜನರು ಅಂತಿಮವಾಗಿ ಹಿಂಸೆ ಅಥವಾ ಯುದ್ಧವು ಮಾನವ ಜನಾಂಗ ಸುಖ–ಸಂತೋಷದ ಮಾರ್ಗವಲ್ಲವೆಂದು ಮನವರಿಕೆ ಮಾಡಿಕೊಂಡಿದ್ದಾರೆ. ಇಂದು ವಿಶ್ವವು ಅಂತಿಮವಾಗಿ ಬೇರೆ ಪರ್ಯಾಯವಿಲ್ಲದೆ ಭೂಮಿಯ ಮೇಲೆ ಮಾನವ ಜನಾಂಗದ ಸಂತೋಷದ ಅಸ್ತಿತ್ವಕ್ಕೆ ಗಾಂಧಿ ಮಾರ್ಗವನ್ನು ಅನುಸರಿಸಿದೆ. ನೆಹ್ರುರವರ ಪಂಚಶೀಲ

ಸಿದ್ಧಾಂತವೂ ಸಹ ಅದೇ ಸತ್ಯವಾಗಿದೆ. ಇದೇ ಸಿದ್ಧಾಂತದ ಮೇಲೆ ಆಧರಿತ ಸ್ವತಂತ್ರ ಭಾರತದ ವಿದೇಶಿ ನೀತಿಯು ಹಲವು ಬೇರೆಬೇರೆ ಪಕ್ಷಗಳ ಆಡಳಿತದಲ್ಲಿ ಹಾಗೆಯೇ ಉಳಿದುಕೊಂಡಿದೆ. ಗಾಂಧಿ ಅಥವಾ ನೆಹ್ರುರವರಲ್ಲಿ ಅವರ ಸಿದ್ಧಾಂತಗಳು ಕಾಲದ ಪರೀಕ್ಷೆಯಲ್ಲಿ ನಿಂತಿರುವುದು ಅವುಗಳು ಇಡೀ ಮಾನವಜನಾಂಗದ ಕಲ್ಯಾಣವನ್ನು ಕುರಿತಿರುವುದರಿಂದ.

ಸಾಮಾಜಿಕ ಕ್ರಾಂತಿಯ ಶಾಹುರವರ ವಿಚಾರಗಳು ಕಾಲದ ಅಳತೆಗೋಲಿನಿಂದ ಸತ್ಯಸಂಗತಿಗಳಾಗಿ ಪರಿಣಮಿಸಿವೆ. ಅವರ ಕಾಲಾವಧಿಯಲ್ಲಿ ಮೇಲ್ವರ್ಗಗಳು ಅವರ ವಿಚಾರಗಳನ್ನು ಗೇಲಿ ಮಾಡಿದವು, ಯಥಾಕಥಿತ ಬುದ್ಧಿಜೀವಿಗಳು ಅವುಗಳನ್ನು ಕಡೆಗಣಿಸಿದರು. ಮಿಗಿಲಾಗಿ ಈ ಬುದ್ಧಿಜೀವಿಗಳು ಸಾಮಾಜಿಕ ಸ್ವಾತಂತ್ರ್ಯದ ತತ್ವವನ್ನು ಪ್ರಸ್ತಾಪಿಸಿದ ಅವರನ್ನು ಸ್ವರಾಜ್ಯದ ವಿಶ್ವಾಸದ್ರೋಹಿ ಮತ್ತು ತನ್ನ ಜನರ ವಿಶ್ವಾಸ ದ್ರೋಹಿಯೆಂದು ಆರೋಪಿಸಿದರು. ಆ ದಿನಗಳಲ್ಲಿ ರಾಜಕೀಯ ಸ್ವಾತಂತ್ರ್ಯದ ಆಂದೋಲನವನ್ನು ನಡೆಸಿದ ಮಹಾಪುರುಷರು ಸಾಮಾಜಿಕ ಸ್ವಾತಂತ್ರ್ಯದ ಆಂದೋಲನವು ರಾಷ್ಟ್ರೀಯ ಸ್ವಾತಂತ್ರ್ಯದಲ್ಲಿ ಒಂದು ಮುಖ್ಯ ಅಂಶವೆಂದು ಚಿಂತಿಸಲಿಲ್ಲ. ಈ ಮನೋಭಾವದಿಂದ ರಾಷ್ಟ್ರೀಯ ಕಾಂಗ್ರೆಸ್ಸಿನ ಹಲವಾರು ವರ್ಷಗಳ ಸಮ್ಮೇಳನಗಳಲ್ಲಿ ಅಸ್ಪೃಶ್ಯತೆಯ ಆಚರಣೆ ಕೆಟ್ಟದೆಂದು ವಿಷಾದ ವ್ಯಕ್ತಪಡಿಸಿರುವ ಒಂದು ಠರಾವನ್ನು ಪಾಸು ಮಾಡಲು ಸಾಧ್ಯವಾಗಿರಲಿಲ್ಲ. ನಮ್ಮ ದೇಶದ ರಾಜಕೀಯ ಸ್ವಾತಂತ್ರ್ಯವನ್ನು ಬಯಸಿದ ಜನರು ತಮ್ಮ ಸಹೋದರರು ಸಾಮಾಜಿಕ ಗುಲಾಮತ್ವದಿಂದ ಮುಕ್ತರಾಗುವುದಕ್ಕೆ ಮೊದಲು ಸ್ವಾತಂತ್ರ್ಯದ ಶುಭಸಂದರ್ಭಕ್ಕಾಗಿ ಕಾಯಲು ಸಿದ್ಧರಾಗಿದ್ದರು. ಈ ಹಿನ್ನೆಲೆಯಲ್ಲಿ ಶಾಹುರವರ ಚಿಂತನೆಗಳನ್ನು ಕಡೆಗಣಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಆದರೆ ಸ್ವಾತಂತ್ರ್ಯ ಬಂದು ೬೦ ವರ್ಷಗಳಾದರೂ ಇಂದಿಗೂ ಈ ವಿಚಾರಗಳನ್ನು ಯಾವ ರೀತಿಯಲ್ಲಿ ಆದರ್ಶಕರವಾಗಿ ಅನುಷ್ಠಾನಗೊಳಿಸಬೇಕಾಗಿತ್ತೋ, ಅದೇ ರೀತಿಯಲ್ಲಿ ಅನುಷ್ಠಾನ ಮಾಡದಿರುವುದು ಒಂದು ವಾಸ್ತವಿಕ ದುರಂತವಾಗಿದೆ. ಅದರರ್ಥ ಶಾಹುರವರ ವಿಚಾರಗಳು ಮತ್ತು ಚಿಂತನೆಗಳು ೬೦ ವರ್ಷಗಳ ಹಿಂದೆ ಎಷ್ಟು ಸತ್ಯವೋ ಮತ್ತು ಅವಶ್ಯಕವೋ ಇವತ್ತಿಗೂ ಅಷ್ಟೇ ಸತ್ಯ ಮತ್ತು ಅವಶ್ಯಕವಾಗಿವೆ. ಮಹಿಳೆಯರ, ಭೂಹೀನರ, ರೈತಾಪಿ ವರ್ಗಗಳ, ಕಾರ್ಮಿಕರ ಮತ್ತು ದಲಿತ ಸಮುದಾಯಗಳು ಗ್ರಾಮೀಣ ಪ್ರದೇಶಗಳಲ್ಲಿ ಜೀವಿಸುತ್ತಿರುವ ಅವರ ಸ್ಥಿತಿಗತಿಗಳನ್ನು ನೋಡಿದಾಗ ಈ ಚಿಂತನೆಗಳು ಹಲವಾರು ಹೋರಾಟಗಳನ್ನು ಮಾಡಬೇಕಾಗುತ್ತದೆ. ಈ ಯುದ್ಧವನ್ನು ಗೆಲ್ಲದ ಹೊರತು, ಶಾಹುರವರ ವಿಚಾರಗಳು ದೀಪದಂತೆ ಸ್ಫೂರ್ತಿದಾಯಕ ಮತ್ತು ಸಹಾಯಕಾರಿಯಾಗುತ್ತವೆ.

**ಸಾಮಾಜಿಕ ಇತಿಹಾಸದ ಒಂದು ಪವಾಡ**

ಮಹಾತ್ಮ ಫುಲೆ, ರಾಜರ್ಷಿ ಶಾಹುಮಹಾರಾಜ ಮತ್ತು ಡಾ. ಬಾಬಾಸಾಹೇಬ ಅಂಬೇಡ್ಕರರ ಅಭಿಪ್ರಾಯಗಳು ಅವರ ಕಾಲಗಳಲ್ಲಿ ಮತ್ತು ವಿವಿಧ ರೀತಿಯಲ್ಲಿ ವ್ಯಕ್ತಗೊಂಡರೂ ಅವೆಲ್ಲವೂ ಸತ್ವದಲ್ಲಿ ಒಂದೇ ಆಗಿದ್ದವು. ಈ ಎಲ್ಲ ಮಹಾಸಾಮಾಜಿಕ ಕ್ರಾಂತಿಕಾರರ ವಿಚಾರಪ್ರಣಾಳಿ ಒಂದೇ ಆಗಿತ್ತು ಮತ್ತು ಚಿಂತನೆಯ ಕಾರ್ಯಕ್ರಮವೂ ಒಂದೇ ಆಗಿತ್ತು. ಕಾಲ, ಸ್ಥಳ ಮತ್ತು ಪರಿಸ್ಥಿತಿಗಳು ಬೇರೆಬೇರೆಯಾಗಿದ್ದರಿಂದ ಒಂದೇ ವಿಷಯವಾದರೂ ಕಾರ್ಯಕ್ರಮಗಳು ಏಕರೀತಿಯಾಗಿದ್ದವು. ಅವರ ಉದ್ದೇಶವು (ಬುನಾದಿ) ನ್ಯಾಯ ಮತ್ತು ಸಮಾನತೆಯ ಶೋಷಣೆರಹಿತವಾದ ಸಮಾಜ ನಿರ್ಮಾಣ ಮಾಡುವುದು. ಮೇಲ್ವರ್ಗಗಳ ಮತ್ತು ಶಕ್ತಿಶಾಲಿ ವರ್ಗಗಳ ಕಪಿಮುಷ್ಟಿಯಿಂದ ಹಿಂದುಳಿದ ವರ್ಗಗಳ ಮಾನಸಿಕ ಮತ್ತು ಭಾವನಾತ್ಮಕ

ದಾಸ್ಯದಿಂದ ಸ್ವಾತಂತ್ರ್ಯ ಪಡೆಯುವುದು ಮತ್ತು ತಮ್ಮ ಉದ್ದೇಶ ಸಾಧನೆಗಳಿಗಾಗಿ ಹಿಂದುಳಿದ ವರ್ಗಗಳ ಹೋರಾಟಗಳನ್ನು ಹುರಿದುಂಬಿಸುವುದು.

ಫುಲೆ, ವಿ. ಆರ್. ಶಿಂಧೆ, ಅಂಬೇಡ್ಕರ್ ಮತ್ತು ಭಾವುರಾವ್ ಪಾಟೀಲ್ ಅವರೆಲ್ಲರೂ ಒಂದು ಸಾಮಾನ್ಯ ಕಾರ್ಯಸೂಚಿಯನ್ನಿಟ್ಟುಕೊಂಡಿದ್ದರು. ಅವರೆಲ್ಲರೂ ಹಿಂದುಳಿದ ವರ್ಗಗಳ ಪ್ರತಿನಿಧಿಗಳು. ರಾಜಕುಟುಂಬದಲ್ಲಿ ಹುಟ್ಟಿಬೆಳೆದ ರಾಜನು ಅದೇ ರೀತಿಯ ಕಾರ್ಯಸೂಚಿಯನ್ನು ಹೊಂದಿದ್ದು ಮಹಾರಾಷ್ಟ್ರದ ಆಧುನಿಕ ಸಾಮಾಜಿಕ ಇತಿಹಾಸದಲ್ಲಿ ಒಂದು ಪವಾಡವೇ ಸರಿ. ಗೇಲ್ ಒಂವೆಡ್ತ ಅವರು ತಮ್ಮ ಲೇಖನದ ಪ್ರಾರಂಭದಲ್ಲಿ ಅಮೆರಿಕಾದ ಇತಿಹಾಸಕಾರನ ಮಾತುಗಳನ್ನು ಉದ್ಧರಿಸುತ್ತಾಳೆ. ಆಕೆ ಹೇಳುತ್ತಾಳೆ, "ಜಮೀನುದಾರಿ ಮತ್ತು ಉತ್ತರಭಾರತದ ಮಹಾರಾಜರ ಪರಿಚಯವಿರುವ ಪ್ರಸಿದ್ಧ ಫುಲೆಯಂಥವರನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆನು, ಆದರೆ ಒಬ್ಬ ಆಳುವ ರಾಜನಲ್ಲಿ ಅಂತಹ ಸಾಮಾಜಿಕ ಕ್ರಾಂತಿಕಾರಿತ್ವವನ್ನು ನೋಡುವುದು–ಇದು ಸಂಪೂರ್ಣವಾಗಿ ಆಶ್ಚರ್ಯಚಕಿತವಾದುದು."[32]

ತನ್ನ ಬಾಲ್ಯದಿಂದಲೇ ರಾಜವೈಭವಗಳಲ್ಲಿ ಬೆಳೆದು ಬಂದ, ನಂತರ ಛತ್ರಪತಿಯ ಸಿಂಹಾಸನವನ್ನೇರಿದ ಮಹಾರಾಜನಿಗೆ ಸಾಮಾಜಿಕ ಕ್ರಾಂತಿಯ ಧ್ವಜವನ್ನು ತನ್ನ ಹೆಗಲ ಮೇಲಿಟ್ಟುಕೊಂಡು ಹೋಗುವ ಅವಶ್ಯಕತೆ ಏಕೆ ಬಂತು? ನಿಜ, ತನ್ನ ಜೀವನದಲ್ಲಿ ವೇದೋಕ್ತ ಪ್ರಕರಣದ ನಂತರ ಅನ್ಯಾಯಗಳ ವಿರುದ್ಧ ಬಂಡಾಯ ಏಳಲು ಅವರಲ್ಲಿ ಮಲಗಿದ್ದ ಒಲವುಗಳು (ಪ್ರವೃತ್ತಿಗಳು) ಜಾಗೃತಗೊಂಡವು. ಆದರೆ ಅವರ ಜಯಪ್ರದತೆ ಮತ್ತು ವೇದೋಕ್ತ ಪ್ರಕರಣಕ್ಕೆ ಮೂಲಕಾರಣರಾದ ಬ್ರಾಹ್ಮಣರ ಸಭೆಯೇ ಶರಣಾಗತವಾದಾಗ ಅವರ ಕಾರ್ಯಸೂಚಿಯು ಮುಕ್ತಾಯಗೊಳ್ಳಬೇಕಾಗಿತ್ತು. ಆದರೆ ಅದು ಆ ರೀತಿಯಲ್ಲಿ ಸಂಭವಿಸಲಿಲ್ಲ. ಮಿಗಿಲಾಗಿ ಅವರ ಕ್ರಾಂತಿಕಾರಿ ಯೋಜನಾ ಪಟ್ಟಿಯಲ್ಲಿ ಹಿಂದುಳಿದ ವರ್ಗಗಳ ಮೀಸಲಾತಿಯಿಂದ ಅಸ್ಪೃಶ್ಯತೆಯ ನಿವಾರಣೆ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣದಿಂದ ಕ್ಷಾತ್ರಜಗದ್ಗುರುಗಳ ಸ್ಥಾಪನೆ ಎಂಬ ಹಲವಾರು ವಿಷಯಗಳು ಸೇರಿಕೊಂಡವು. ವೇದೋಕ್ತ ಪ್ರಕರಣದ ಸಂದರ್ಭದಲ್ಲಿ ಹಿಡಿದ ಸಾಮಾಜಿಕ ಕ್ರಾಂತಿಯ ಧ್ವಜವನ್ನು ಅವರು ಸಾಯುವತನಕ ಕೆಳಗೆ ಇಳಿಸಲಿಲ್ಲ.

### ಅವರ ಇತಿಮಿತಿಗಳು ಮತ್ತು ಮಿಪನ್ನು

ಮಹಾನುಭಾವರು ಎಲ್ಲ ಕಾಲಗಳಲ್ಲೂ ತಮ್ಮ ಕಾಲ, ದೇಶ ಮತ್ತು ಪರಿಸ್ಥಿತಿಗಳ ಇತಿಮಿತಿಗಳಿಗೆ ಬದ್ಧರಾಗಿರುತ್ತಾರೆ. ಒಬ್ಬ ಮಹಾಶಯನು ನಿರಾಶಾದಾಯಕವಾದ ಪರಿಸ್ಥಿತಿಗಳಲ್ಲೂ ಸಮಾಜವನ್ನು ಮುಂದೊಯ್ಯಲು ಪ್ರಯತ್ನಿಸುತ್ತಾನೆ. ಆದರೆ ಪ್ರತಿಯೊಬ್ಬರ ಇತಿ, ಮಿತಿಗಳು ಒಂದೇ ತೆರನಾಗಿರುವುದಿಲ್ಲ. ಅವು ಫುಲೆ ಮತ್ತು ಶಾಹುರವರಲ್ಲಿ ಭಿನ್ನಭಿನ್ನವಾಗಿದ್ದವು. ಮಹಾತ್ಮ ಫುಲೆಯವರು ಒಬ್ಬ ಹಿಂದುಳಿದವನಾಗಿ ಹುಟ್ಟಿದರೆ ಶಾಹುರವರು ಒಂದು ಕ್ಷತ್ರಿಯವರ್ಣದಲ್ಲಿ ಮತ್ತು ಒಂದು ರಾಜಕುಟುಂಬದಲ್ಲಿ ಹುಟ್ಟಿ ಬೆಳೆದಿದ್ದಾರೆ. ಫುಲೆಯವರು ಆ ಕಾಲದಲ್ಲಿ ಆಹಾರವಿಲ್ಲದೆ ಉಪವಾಸವಿದ್ದರೂ ಅವರು ಸುಧಾರಣಾ ಆಂದೋಲನ ದೊಂದಿಗಿದ್ದರೆ, ಶಾಹುರವರು ಪ್ರಭುತ್ವದ ಸಂಪತ್ತಿನ ಅಧಿಕಾರವನ್ನು ಆಂದೋಲನವನ್ನು ಮುಂದುವರಿಸಲು ಬಳಸಿದರು. ಇದರ ಎದುರಿನಲ್ಲಿ ಫುಲೆಯವರ ಸ್ಥಿತಿಗತಿಗಳ ಮತ್ತು ಸಾಧನಗಳ ಇತಿಮಿತಿಗಳು ಮಂಕಾಗಿ ಕಾಣುತ್ತವೆ. ಆದರೆ ಶಾಹುರವರು ತಮ್ಮ ಸಿಂಹಾಸನದ ಬಲದಿಂದ ಎಲ್ಲಾ ರೀತಿಯ ಸಾಧನಗಳಿಂದ

ಸುಸಜ್ಜಿತನಾಗಿದ್ದರೂ ಅದು ಒಂದು ಅವರಿಗೆ ಮಿತಿಯಾಗಿತ್ತು. ಅವರಿಗೆ ನೋವುಂಟುಮಾಡುವ ಬಂಧನಗಳಿದ್ದವು.

ಫ್ರೆಜರ್ ಅವರು ಈ ಬಂಧನವನ್ನು ಸೂಕ್ತವಾಗಿ ಗುರುತಿಸಿದ್ದಾರೆ. ಅವರು ಹೇಳುತ್ತಾರೆ, "…. ತಮ್ಮ ಧೋರಣೆಯನ್ನು ಜಾರಿಗೊಳಿಸುವುದಕ್ಕೆ ಶಾಹುರವರು ಆಳುವ ರಾಜನಾಗಿ ಅಧಿಕ ಸಂಪನ್ಮೂಲಗಳನ್ನು ಹೊಂದಿದ್ದರು ಎಂಬುದು ನಿಜ. ಆದರೆ ತಮ್ಮ ಸ್ಥಾನಮಾನದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದ್ದರೂ ತಾವಿದ್ದ ವಾತಾವರಣದ ಅಡ್ಡಿ–ಆತಂಕಗಳನ್ನು ಭೇದಿಸಲು ಅವು ಬಲಿಷ್ಠವಾಗಿದ್ದವು ಮತ್ತು ಅವರು ತಮ್ಮ ಸದುದ್ದೇಶದ ಹೋರಾಟದಲ್ಲಿ ಹೆಚ್ಚು ನೊಂದರೆಂಬುದನ್ನು ನಾವು ಮರೆಯುವಂತಿಲ್ಲ.

ಫುಲೆ ಸಂಪತ್ತು ಮತ್ತು ಅಧಿಕಾರಗಳಿಂದ ವಂಚಿತರಾಗಿದ್ದರೂ ಅವರು ಬ್ರಿಟಿಷ್ ಭಾರತದ ಸ್ವತಂತ್ರ ಪ್ರಜೆಯಾಗಿದ್ದರು. ಅಗತ್ಯ ಬಿದ್ದರೆ ಅವರು ತಮ್ಮ ಲೇಖನಿಯಿಂದ ಬ್ರಿಟಿಷ್ ಸರಕಾರದ ಮೇಲೆ ದಾಳಿ ನಡೆಸಬಲ್ಲವರಾಗಿದ್ದರು. ಮತ್ತು ಅವರು ಅದರ ಧೋರಣೆಗಳನ್ನು, ತಪ್ಪುಗಳನ್ನು ಮತ್ತು ಕೆಟ್ಟ ಕೆಲಸಗಳನ್ನು ಟೀಕಿಸಬಹುದಾಗಿತ್ತು. ಬ್ರಿಟಿಷರ ಸಾರ್ವಭೌಮತ್ವದಲ್ಲಿರುವ ಶಾಹುಮಹಾರಾಜರ ಸ್ಥಾನಮಾನವು ಅಂತಹದನ್ನು ಮಾಡಲು ಅವಕಾಶವಿರಲಿಲ್ಲ. ಬ್ರಿಟಿಷ್ ಸರಕಾರದ ಒಬ್ಬ ಸಾಮಂತರಾಜ ಮುಖ್ಯಸ್ಥನಾಗಿ ತಮ್ಮ ಮತ್ತು ಬ್ರಿಟಿಷರ ನಡುವಣ ಸಂಬಂಧಗಳಿಗೆ ಒಂದಿಷ್ಟು ಕುಂದುಬರದಂತೆ ಚಾಕಚಕ್ಯತೆಯಿಂದ ತಮ್ಮ ಬಂಧನಗಳ ಇತಿಮಿತಿಗಳಲ್ಲೇ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ತಮ್ಮ ಐಹಿಕ (ಭೌತಿಕ) ಅಧಿಕಾರಗಳನ್ನು ಬಳಸಬೇಕಾಗಿತ್ತು. ಇದು ಕತ್ತಿಯ ಅಲಗಿನ ಮೇಲಿನ ನಡಿಗೆಯಾಗಿತ್ತು. ಆ ಕಾಲದಲ್ಲಿ ನೂರಾರು ರಾಜ–ಮಹಾರಾಜರು ತಮ್ಮ ಸಾಮಂತ ಸ್ಥಾನಮಾನಗಳಿಂದ ವೈಭೋಗದ ಜೀವನ ನಡೆಸುತ್ತಿದ್ದರೆ ಈ ಮರಾಠ ಮಹಾರಾಜ ಶಾಹುರವರು ತಮ್ಮ ಕತ್ತಿನಲ್ಲಿ ಕವಡೆಗಳ ಹಾರ ಧರಿಸಿಕೊಂಡು ದಮನಿತರ ಕಲ್ಯಾಣಕ್ಕಾಗಿಯೇ ತಮ್ಮ ಜೀವನವನ್ನು ಹಗ್ಗದ ಮೇಲಿನ ನಡಿಗೆಯಂತೆ ನಡೆಸುತ್ತಿದ್ದರು. ಈ ರೀತಿಯ ತಾಲೀಮು ನಡೆಸುವುದಕ್ಕೆ ಅವರ ಮೇಲೆ ಯಾರೂ ಈ ದಾರಿಯನ್ನು ಅನುಸರಿಸಬೇಕೆಂದು ಒತ್ತಾಯಪಡಿಸಿಲ್ಲ. ಅವರೇ ಸ್ವತಃ ಈ ವ್ರತವನ್ನು, ಮಿಷನ್ನನ್ನು ಕೈಗೊಂಡಿದ್ದರು.

ಶಾಹುರವರ ಜೀವನವನ್ನು ಅಧ್ಯಯನ ಮಾಡುವಾಗ ಹಲವಾರು ಸಮಕಾಲೀನದ ಮತ್ತು ನಂತರದ ವಿದ್ವಾಂಸರು, ಬುದ್ಧಿಜೀವಿಗಳು ಮತ್ತು ಅಕಾಡೆಮಿಯ ಸದಸ್ಯರು ಮಹಾತ್ಮ ಗೌತಮಬುದ್ಧನನ್ನು ನೆನಪಿಸಿಕೊಂಡಿದ್ದಾರೆ.[34] ಧನಂಜಯ ಕೀರ್ ಅವರು ಹೇಳುತ್ತಾರೆ: "ಬುದ್ಧನ ನಂತರ ಶಾಹು ಮಹಾರಾಜರೊಬ್ಬರೇ ಪ್ರೀತಿಯಿಂದ ನಿರ್ಭಯವಾಗಿ ಮತ್ತು ಬಹಿರಂಗವಾಗಿ ಹರಿಜನ (ಅಸ್ಪೃಶ್ಯರ) ಮತ್ತು ಗಿರಿಜನರ (ಪಂಗಡದ) ಸಂಗಡ ಊಟಮಾಡಿದರು."[35] ಮಾನವ ಜನಾಂಗದ ಬಗೆಗಿನ ಭ್ರಾತೃತ್ವದ ಭಾವನೆಗಳು ರಾಜರ್ಷಿ ಶಾಹುರವರ ಚಿಂತನೆ ಮತ್ತು ಕೃತಿಗಳಲ್ಲಿ ಅಭಿವ್ಯಕ್ತಿಗೊಂಡಿವೆ–ಎಂಬುದನ್ನು ಅವರ ಮಿಷನ್ನಿನ ವೈಚಿತ್ರ್ಯವೆಂದು ಪರಿಗಣಿತವಾಗಿದೆ.

### ಪಸಾಯದಾನ

ಕುರ್ಮಿ ಕ್ಷತ್ರಿಯರ ಸಮ್ಮೇಳನದಲ್ಲಿ ಶಾಹುರವರು ಮಾಡಿದ ಭಾಷಣವು ಸಮಾಜಶಾಸ್ತ್ರದ ಅವರ ಅಧ್ಯಯನವನ್ನು ಸ್ಪಷ್ಟವಾಗಿ ಬೆಳಕಿಗೆ ತರುತ್ತದೆ. ಅವರು ತಮ್ಮ ಭಾಷಣದ ಕೊನೆಯಲ್ಲಿ ಪಠಿಸಿದ ಪ್ರಾರ್ಥನೆ ಹೆಚ್ಚು ಮುಖ್ಯವಾದದ್ದು. ಅವರು ತಮ್ಮ ಅಂತರಂಗದಲ್ಲಿಟ್ಟುಕೊಂಡಿದ್ದ ಸಾರ್ವತ್ರಿಕ ಸಹೋದರ ಭಾವನೆ

ಮತ್ತು ಅಪಾರವಾದ ಮಹಾಕರುಣೆ(ಮೈತ್ರಿಭಾವ)ಯ ಸಂಕೇತವಾಗಿದೆ. ಅವರು ದೇವರಲ್ಲಿ ಕೇಳಿಕೊಳ್ಳುತ್ತಾರೆ: " ಓ ದೇವರೇ! ನಮ್ಮ ಜನರಿಗೆ ವಿವೇಕ ನೀಡು ಮತ್ತು ಅವರ ಹೃದಯಗಳನ್ನು ಜ್ಞಾನದಿಂದ ಬೆಳಗಿಸು. ಇದರಿಂದ ನಾವೆಲ್ಲ ಜನರು ನಿಮ್ಮ ಒಳ್ಳೆಯ ಮಕ್ಕಳಾಗಿ ಅಣ್ಣ–ತಮ್ಮಂದಿರಾಗಿ ಜೀವನ ನಡೆಸುವೆವು. ನಾವೆಲ್ಲರೂ ಭೌತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಸುಧಾರಣೆಗಾಗಿ ಮತ್ತು ಈ ಜಗತ್ತನ್ನು ಸ್ವರ್ಗವನ್ನಾಗಿ ಮಾಡಲು ಒಟ್ಟಿಗೆ ಶ್ರಮಿಸುವೆವು."[36] ಮಹಾರಾಜರ ಈ ಪ್ರಾರ್ಥನೆ ಮಹಾಸಂತ ಜ್ಞಾನೇಶ್ವರರ 'ಪಸಾಯದಾನ'ವನ್ನು ನೆನಪಿಸುತ್ತದೆ. ಮೇಲೆ ಹೇಳಿದ ಪ್ರಾರ್ಥನೆಯಲ್ಲಿ ವ್ಯಕ್ತಗೊಂಡಿರುವ ಹಂಬಲವು 'ಪಸಾಯದಾನ' ಪದ್ಯದಲ್ಲಿ ಎತ್ತಿಹಿಡಿದ ಸಾರ್ವತ್ರಿಕ ಸಹೋದರಭಾವದ ಸಂದೇಶಕ್ಕೆ ಸಂಬಂಧಿಸಿದೆ. ಅದು ಹೇಳುತ್ತದೆ.

> **"ದುರುಳರು ಕೆಟ್ಟ ದಾರಿಗಳನ್ನು ಬಿಡಲಿ,**
> **ಅವರು ಒಳ್ಳೆಯ ಕೆಲಸಗಳಲ್ಲಿ ಸಫಲವಾಗಲಿ**
> **ಎಲ್ಲರೂ ಭ್ರಾತೃತ್ವದಲ್ಲಿ ಒಂದಾಗಲಿ"**

ಇದು ಸಾಧಾರಣವಾದ ಆದರ್ಶವಲ್ಲ. ಅದರೊಳಗೆ ಇಡೀ ಮಾನವಜನಾಂಗದ ಸಂತೋಷ ಮತ್ತು ಕಲ್ಯಾಣ ಗೌಪ್ಯವಾಗಿ ಅಡಗಿದೆ. ಒಬ್ಬ ಮಹಾತ್ಮನು ಕೂಡ ಒಬ್ಬ ಮಾನವಜೀವಿ ಮತ್ತು ಅವನೊಬ್ಬ ದೇವರಲ್ಲ ಎಂಬುದನ್ನು ಸಮಾಜ ತಿಳಿದಿರಬೇಕು. ಆದರೆ ಸಾಮಾನ್ಯವಾಗಿ ಹಾಗೆ ಆಗುವುದಿಲ್ಲ; ನಾವು ಶಿವಾಜಿ ಮಹಾರಾಜರನ್ನು ಶಿವನ ಅವತಾರವೆಂದು ಮಾಡುವೆವು, ಅವರಲ್ಲಿರುವ ಮಾನವ ಅಂಶವನ್ನು ಅಳಿಸಿಹಾಕುತ್ತೇವೆ. ಒಬ್ಬ ಮಹಾನುಭಾವನನ್ನು ಪವಿತ್ರಗೊಳಿಸಿ ದೈವತ್ವಕ್ಕೇರಿಸುವುದು ಬಹು ಸುಲಭ. ಆ ಮನುಷ್ಯನ ಜನ್ಮಶತಾಬ್ಧಿ ಮತ್ತು ಮರಣಶತಾಬ್ಧಿಗಳ ಆಚರಣೆ ಮತ್ತು ಪುತ್ಥಳಿಗಳ ಸ್ಥಾಪನೆ, ಛತ್ರಪತಿ ಶಿವಾಜಿ, ಮಹಾತ್ಮ ಫುಲೆ, ರಾಜರ್ಷಿ ಶಾಹು ಅಥವಾ ಡಾ. ಅಂಬೇಡ್ಕರ್ ಯಾರೇ ಆಗಿರಲಿ ಅವರ ಭರಾಟೆಯಿಂದ ಅವರ ಉತ್ಸವಗಳನ್ನು ಆಚರಿಸುವುದು ಉಳಿಯುತ್ತದೆ. ನಮ್ಮ ಹಾಗೆ ಅವರು ಸಹ ರಕ್ತ ಮತ್ತು ಮಾಂಸವುಳ್ಳ ನರಮಾನವರೆಂಬ ವೈಜ್ಞಾನಿಕ ಮನೋಭಾವವನ್ನು ನಾವು ಒಪ್ಪುವುದಿಲ್ಲ. ಹಾಗಿದ್ದರೂ ಕೂಡ ಅವರು ಪರಲೋಕದ ದೇವತೆಗಳು ಮಾಡಲಾರದ ಜನಕಲ್ಯಾಣ ಕೆಲಸಗಳನ್ನು ಮಾಡಿದ್ದಾರೆ. ಏಕೆಂದರೆ ನಾವು ಈ ಮನೋಭಾವವನ್ನು ಒಪ್ಪಿಕೊಂಡರೆ ಈ ಮಹಾನುಭಾವರು ಎತ್ತಿಹಿಡಿದ ಆದರ್ಶಗಳನ್ನು ಅನುಸರಿಸುವುದು ಮತ್ತು ಜಾರಿಗೊಳಿಸುವುದು ನಮ್ಮ ನೈತಿಕ ಹೊಣೆಯಾಗಿರುತ್ತದೆ. ಪ್ರತಿಯೊಬ್ಬರೂ ಮಹಾಶಯರಾಗುವುದು ಕಷ್ಟ; ಇದು ನಿಜ, ಆದರೆ ಪ್ರತಿಯೊಬ್ಬರೂ ಮಹಾತ್ಮ ಫುಲೆಗಳಲ್ಲ ಅಥವಾ ರಾಜರ್ಷಿ ಶಾಹುವಲ್ಲ. ನಿಜ, ಅವರ ಆದರ್ಶಗಳನ್ನು ಪರಿಪೂರ್ಣವಾಗಿ ಜಾರಿಗೊಳಿಸಲು ಸಾಧ್ಯವಿಲ್ಲ. ನಿಜವಾದ ಅನುಯಾಯಿ ತಮ್ಮ ಶಕ್ತ್ಯಾನುಸಾರ ಆ ಆದರ್ಶಗಳನ್ನು ಅನುಸರಿಸಬಹುದು. ಜ್ಞಾನೇಶ್ವರರು ಜ್ಞಾನೇಶ್ವರಿಗಳ ಸಾವಿರಾರು ಓವಿ ಅಥವಾ ಸರ್ಗಗಳಲ್ಲಿ ವಿಶ್ವದ ಮಹತ್ತ್ವವಾದ ಸಿದ್ಧಾಂತಗಳನ್ನು ವಿವರಿಸಿದ್ದಾರೆ; ಅವರು ಮಾನವ ಅಸ್ತಿತ್ವದ ಅರ್ಥವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ; ಅತ್ಯುತ್ತಮ ಕೆಲಸಗಳನ್ನು ಮಾಡುವ ಅತ್ಯುತ್ತಮ ದಾರಿಗಳನ್ನು ತೋರಿಸಿದ್ದಾರೆ ಮತ್ತು ಸೂಕ್ತವಾಗಿ ವರ್ತಿಸುವಂತೆ ಸಹೋದರರಿಗೆ ಬೋಧಿಸಿದ್ದಾರೆ.

ಆದರೆ ಜ್ಞಾನಿಯಾದ, ಸಂತರಾದ ನಾಮದೇವರು ಅಕ್ಷರಶಃ ಮಾರ್ಗವನ್ನು ಅನುಸರಿಸುವುದು ಸಾಧ್ಯವಾಗುವುದಿಲ್ಲವೆಂದು ಬಲ್ಲವರಾಗಿದ್ದರು. ಆದ್ದರಿಂದ ಇತ್ತೀಚಿನ ಪೀಳಿಗೆಗೆ ಅವರು ಹೀಗೆ ಬೋಧಿಸಿದರು: "ಜ್ಞಾನೇಶ್ವರಿ ಮಹಾಗ್ರಂಥವೆಂದು ನಾಮದೇವರು ಹೇಳುತ್ತಾರೆ. ಓಹ್! ಒಂದು ಸರ್ಗವನ್ನು ಅರಿತು

ಅನುಭವಿಸುವುದು ಸಾಕು. ನಾಮದೇವರ ಬೋಧನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನೀನು, ನಾನು ಮತ್ತು ನಾವೆಲ್ಲರೂ ಫುಲೆ ಮತ್ತು ಶಾಹುರವರನ್ನು ಗೌರವಿಸುವವರು ಕನಿಷ್ಠಪಕ್ಷ ಅವರ ಬೋಧನೆಗಳಲ್ಲಿ ಒಂದನ್ನಾದರೂ ಅನುಸರಿಸಿದರೆ ಸಾಕು. ಈ ನಿರೀಕ್ಷೆಯು ಸ್ವಲ್ಪಮಟ್ಟಿಗಾದರೂ ನೆರವೇರಿದರೆ ನಮ್ಮ ಶಕ್ತ್ಯಾನುಸಾರ ನಾವು ಶಾಹುರವರ ಜೀವನದ ಸಂಶೋಧನೆಯನ್ನು ಮಾಡಿದ್ದಕ್ಕೆ ನಮಗೆ ತೃಪ್ತಿಯಾದಂತಾಗುತ್ತದೆ. ಅದಕ್ಕೆ ತಕ್ಕ ಫಲ ಸಿಕ್ಕಿತೆಂದು ನಾವು ಭಾವಿಸುತ್ತೇವೆ. ಮಹಾತ್ಮರು ನಿಸ್ವಾರ್ಥವಾಗಿ ಜಗತ್ತಿನ ಕಲ್ಯಾಣಕ್ಕಾಗಿ ಬದುಕಿದ್ದಾರೆ. ಸಾಧಾರಣವಾದ ಮಾನವಜೀವಿಗಳಾದ ನಾವು ಐಹಿಕ ಲೋಕದ ಬಗ್ಗೆ ಮೋಹವಿಟ್ಟುಕೊಂಡಿದ್ದೇವೆ. ಶಾಹುರಂತಹ ಮಹಾನುಭಾವರ ಜೀವನ ಮತ್ತು ಮಿಷನ್ನು ಅವರ ಒಂದು ಆದರ್ಶವನ್ನಾದರೂ ನಮ್ಮದೇ ಆದ ರೀತಿಯಲ್ಲಿ ಅನುಸರಿಸಲು ನಮಗೆ ಸ್ಫೂರ್ತಿ ನೀಡಲಿ. ರಾಜರ್ಷಿ ಶಾಹು ಛತ್ರಪತಿ ಶಾಹುರವರ ನೆನಪಿನಲ್ಲಿ ಈ ಪ್ರಾರ್ಥನೆ ಮಾಡುತ್ತಾ ಮತ್ತು ನಮ್ರ ನಮಸ್ಕಾರ ಸಲ್ಲಿಸುತ್ತಾ ಪೂರ್ಣವಿರಾಮವಿಲ್ಲದೆ, ಅರ್ಧವಿರಾಮದೊಂದಿಗೆ ಹಾಲಿ ಲೇಖಕ ಈ ಪ್ರಯತ್ನವನ್ನು ಮುಕ್ತಾಯಗೊಳಿಸುತ್ತಾರೆ.

---

# REFERENCES

## (NB. For long forms see the Bibliography)


**BACKGROUND**

1. AB, p. 121
2. GRAND, p. 46
3. BPIR, pp. 70-72
4. VSM.Vol. I, pp. 31-32
5. Ibid, p. 33
6. MFG, p. 103
7. MFSV, p. 253
8. VSM, Vol. I, p. 68
9. BRAC, Vol. I, p. 160
10. Ibid, p. 162
11. VSM, Vol, I, pp. 38-39
12. MFG, p. 99
13. MSU, p. 26-39
14. VSM, Vol. I, p. 103-105
15. KR, p. 660
16. Ibid, p. 664
17. RSC, P. 43

**2. BEGINNING OF NEW ERA**

1. RSCP, Vol. I, p. 264
2. Ibid, pp. 76,87
3. Ibid, pp. 159-163
4. Ibid, p. 168
5. Ibid, p. 174
6. Ibid, pp. 207-217
7. Ibid, pp. 244-263
8. Ibid.
9. Ibid, p. 219
10. RSGG, p. 23
11. Ibid, pp. 25-26
12. SSC, pp. 96-97
13. RSCG, p. 29
14. RSCP, Vol. II, pp. 4-5
15. CSMP, pp. 156-158
16. CSH, p. 90
17. Ibid, p. 94
18. RV, pp. 8-9
19. Ibid, pp. 12-13
20. RSC, p. 71
21. RSRM, p. 112
22. RSCP, Vol. II, p. 37
23. SSC, p. 77

**3. MAKING OF CHARACTER**

1. RSGG, p. 18
2. RSCP, p. 23
3. RSGG, pp. 9-25, 31

4. RSC, p. 32
5. RSMB, p. 65
6. ARMC, pp. 52-69
7. RSSJ, p. 857
8. SSC, p. 120
9. RSGG, p. 250
10. RSSG, p. 819
11. DGT, p. 658
12. RSCP, Vol. I, p. 218
13. Ibid, pp. 242-243
14. RSGG, p. 227
15. SCNA, Vol. II, p. 29
16. RSMB, p. 188
17. RSMG, p. 332
18. RSMB, Apendix-2, p. 7
19. RSGG, pp. 453-454
20. Ibid, p. 571
21. SSC, Apendix-2, p. 6
22. RSMB, p. 22
23. RSSG, p. 761-762
24. DGT, p. 464

**4. THE VEDOKTA STORM**

1. RSC, p. 83
2. MJF-PA, p. 8
3. BSK, Vol. VI, p. 733
4. RSRM, p. 224
5. BSK, Vol. VI, p. 738
6. SD, Dashak-5, Samas-1, pp. 156-158
7. RSRM, p. 226
8. RSC, p. 94
9. RSCP, Vol. III, pp. 345-351
10. Ibid, p. 358
11. Ibid, p. 367
12. RSC, pp. 113, 130, 134, 154; SCL, pp. 66-67; RSCP, Vol. III, p. 19
13. RSCP, Vol. III, p. 349
14. Ibid, pp. 359-360
15. RSMG, p. 715
16. SSQ, p. 220

**5. SHIVAJI CLUB AND MILITANTS**

1. VSM, Vol. I, pp. 103-105, 241-242
2. RSRM, p. 362
3. Ibid, p. 546
4. Ibid, p. 547
5. RV, p. 534
6. VSM, Vol. I, p. 259
7. RSCV, p. 61
8. RSPG, p. 209
9. RSCA, p. 17
10. RSPG, p. 346
11. RSCV, p. 62
12. RSRM, p. 548
13. VSM, Vol. I, pp. 104-105

**6. SHAHU AND LOKMANYA**

1. RSPG, p. 295
2. Ibid.
3. RSRR, p. 357
4. RSQ, p. 339

5. Ibid, p. 437
6. RSGG, p. 527
7. Ibid, p. 346
8. PTSV, Vol. I, pp. 216-217
9. VSM, Vol. II, pp. 30-31
10. Courtesy, Shri Jayvantrao Tilak
11. RSCA, pp. 41-42
12. RSSG, p. 753
13. PTSV, Vol. I, p. 216
14. RSSE, p. 538

**7. REVOLUTIONARY MANIFESTO OF 1902**

1. KSG, Vol. I, 2, AG.1902
2. RSC, p. 122
3. VSM, Vol. I, p. 213
4. Ibid, pp. 213-214
5. RSC, p. 127
6. RSSG, p. 311

**8. HOSTEL MOVEMENT**

1. RSC, p. 127
2. RSGG, p. 588
3. Ibid, p. 587-588
4. RSC, p. 106
5. RSGG, p. 589
6. RSCP, Vol. V, Intro., p. 10
7. RSGG, p. 70-71
8. RSRM, p. 145
9. RSGG, p. 69-70
10. VMSS, p. 29
11. RSRM, pp. 158-159; The Interview of Shri D. A. Shinde of Nool
12. RSMB, p. 70
13. RSC, p. 124
14. RSRM, pp. 140, 146

**9. SALVATION OF UNTOUCHABLES: EDUCATION**

1. DJT, p. 465
2. RSMB, Apendix-2, p. 7
3. RSRM, p. 376
4. RSSG, p. 311
5. SCNA, Part-1, p. 41
6. Ibid, p. 45
7. Ibid, pp. 61-62
8. RSCP, Vol. VI, Intro., p. 5
9. SCNA, Part-1, p. 107, Part-2, p. 52
10. Ibid, Part-2, p. 37
11. Ibid, p. 38
12. Ibid, p. 61
13. Ibid, pp. 66,132
14. RV, pp. 67-68
15. RSC, p. 456
16. RSSG, p. 312

**10. SALVATION OF UNTOUCHABLES: MANIFESTOS**

1. RSC, p. 389
2. KSG, Yr.1918, Part-1, p. 116
3. RSK, p. 36

4. RSMB, pp. 57-58
5. KSG, Yr.1918, Part-1, p. 139
6. RV, p. 49
7. RSMB, pp. 58-59
8. SCNA, Part-2, p. 84
9. RV, pp. 85-86
10. SCNA, Part-2, pp. 120-121
11. Gangaram Kamble- Corrospondence, Unpublished
12. SCNA, Part-2, pp. 129
13. RSGG, p. 509
14. RSC, p. 222; LSC, p. 222
15. RSD, p. 25
16. RSMB, Apendix-2, pp. 5-6
17. Ibid, pp. 6-7
18. Ibid, pp. 4-5
19. Ibid, p. 7
20. VSM, Vol. II, p. 296
21. BRAC, Vol. II, pp. 204-205
22. BAP, Preface, pp. 12-13
23. BRAC, Vol. I, pp. 217-220
24. Ibid, p. 224
25. VSM, Vol. II, p. 308

**11. SALVATION OF UNTOUCHABLES: DIRECT ACTION**

1. SCNA, Part-1, p. 137
2. Ibid, Part-2, p. 20
3. Ibid, p. 21
4. Ibid, pp. 54-55
5. Ibid, p. 92
6. DJT, p. 660
7. SCNA, Part-2, p. 154
8. RSMB, INDEX-2, pp. 7-9
9. RSSG, p. 312
10. Ibid, p. 746
11. RSGG, p. 325
12. Ibid, pp. 486-491
13. Ibid, p. 490
14. Ibid, pp. 497-498
15. SSC, p. 425
16. RSC, pp. 430-431
17. RSSG, p. 737
18. RSGG, p. 505
19. Gangaram Kamble Corrospondence, Unpublished
20. RSSG, p. 753
21. GVK, pp. 39-40
22. Ibid, p. 122
23. RSGG, pp. 494-495
24. RCL, pp. 258-259

**12. SALVATION OF UNTOUCHABLES: IDEOLOGY & GUIDANCE**

1. RSQ, p. 346
2. From personal collection of Vijay Surwade, Mumbai
3. RSMB, p. 95
4. Ibid, p. 87
5. Ibid, p. 80
6. BRAC, Vol. I, p. 219
7. RSMB, p. 62

8. Ibid, pp. 68-69
9. RV, pp. 137-138
10. RSSG, p. 762
11. SCL, p. 298
12. RV, p. 221
13. RSC, p. 431
14. RSSG, pp. 712-713
15. BRAC, Vol. II, p. 238

**13. SHAHU AND AMBEDKAR**

1. BRAC, Vol. I, pp. 65, 67, 84, 85
2. Ibid, p. 235
3. RSC, p. 420
4. RSSG, p. 750
5. BRAC, Vol. I, p. 235
6. RSSG, pp. 540, 547
7. BBM, 20 MAY 1927
8. BRAC, Vol. I, p. 221
9. RV, p. 114
10. Janta-special edition, April 1933
11. RSMB, p. 62
12. BBM, 10 APRIL 1920, p. 379
13. RSGG, p. 498
14. RSMG, p. 557
15. RV, p. 141
16. RSSG, p. 552
17. BRAC, Vol. I, pp. 265-266
18. Ibid, Vol. II p. 12
19. Ibid, pp. 13-14
20. RSC, pp. 488-489
21. RSMB, p. 131
22. RSC, p. 506
23. Ibid, p. 528
24. RSSG, p. 557
25. BRAC, Vol. II, p. 12

**14. LIBERATION OF NOMADIC TRIBES**

1. An interview with Dr. T. S. Patil, a scholar of nomadic tribes, 26 April 1998
2. RSMG, p. 502
3. Ibid, p. 503
4. Ibid, p. 507-512
5. Ibid, p. 748-749
6. Ibid.
7. Ibid, p. 512
8. RSGG, p. 165
9. Ibid, pp. 162-163
10. SCNA, Part-1, pp. 83-84
11. Ibid, pp. 130-132
12. RSSG, p. 504
13. RSGG, p. 166
14. RSCA, p. 6
15. RSSG, p. 507
16. Ibid, p. 505
17. Ibid, p. 749

**15. STRUGGLE AGAINST CASTE DISCRIMINATION**

1. BRAC, Vol. I, p. 258
2. BA, p. 47
3. RSMB, pp. 65-66

4. Ibid.
5. Ibid, p. 45
6. Ibid, p. 67
7. Ibid, pp. 96-97
8. Ibid, p. 65
9. Ibid, pp. 121-122
10. Ibid, p. 66-67
11. Ibid, p. 83
12. KSG, 12 JULY, 1919, pp. 15-29
13. RSMG, p. 702
14. RSMB, pp. 91-92
15. RSMG, p. 703; RV, p. 182
16. RSK, pp. 39-40
17. RSC, p. 422
18. GANDHI, pp. 188-193

## 16. LAWS FOR PROTECTION OF WOMEN

1. SSQ, p. 450; RSC, p. 302
2. RSMB, p. 48
3. Ibid, p. 48-49
4. VSM, Vol. I, pp. 38-39
5. KSG, Part-4, 2 Aug.1919, pp. 42-43
6. RSK, pp. 49-50
7. KSG, PART-4,17 Jan.1920, p. 3
8. Ibid, pp. 4-5

## 17. EDUCATION

1. RSMB, p. 2-3
2. MFSY, p. 237
3. Ibid.
4. RSGG, p. 318
5. RSMB, p. 74
6. Ibid, p. 8
7. Ibid, p. 73
8. SSC, p. 321
9. Ibid.
10. RV, p. 41
11. Ibid.
12. RSK, pp. 150-157
13. RSGG, p. 87
14. SSC, p. 398
15. SSNA, Part-2, pp. 7-8
16. RSMG, pp. 389-390
17. SCNA, Part-1, p. 179
18. Ibid, Part-2, pp. 5-6
19. RSK, pp. 141-149
20. RSC, p. 353
21. RSGG, p. 96
22. SCNA, Part-1, p. 175
23. Ibid, Part-2, pp. 146-147
24. Ibid, p. 4
25. Ibid, p. 27
26. Ibid, p. 51-52
27. Ibid, p. 6
28. RSGG, pp. 90-91
29. SSC, pp. 91,94
30. SCNA, Part-1, p. 139
31. Ibid, Part-2, p. 63
32. Ibid, Part-1, 1913, p. 79
33. RSGG, p. 93

34. RSMG, pp. 615-617
35. Ibid, pp. 618-619
36. SSC, pp. 400-401; RSC, pp. 334-336
37. SCNA, Part-1, p. 144; RV, p. 37
38. RV, p. 83
39. RSC, p. 479
40. SCNA, Part-2, pp. 97,141
41. Ibid, Part-1, p. 92; PART-2, p. 89
42. Ibid, Part-1, pp. 63-64,79; Part-2, pp. 117-118
43. RSGG, pp. 97-98
44. SSC, p. 399

**18. BRAHMIN BUREAUCRACY**

1. MFSY, p. 72
2. RSMB, pp. 73-74,75
3. Ibid, p. 113
4. Ibid, pp. 99-100
5. RSMG, p. 741
6. RSC, p. 245
7. MPASV, p. 71
8. RSC, p. 344
9. Ibid.
10. Ibid, p. 343
11. RSK, pp. 54-55
12. SCNA, Part-2, p. 35
13. RSRM, p. 283
14. RV, p. 134
15. Ibid.
16. RSMB, pp. 84-85
17. Ibid, p. 102
18. SCNA, Part-1, p. 103
19. RSMB, pp. 81-84
20. RSC, p. 324
21. Ibid.
22. RSMG, p. 298
23. SCNA, Part-2, p. 108
24. RSC, p. 269
25. SCNA, Part-2, p. 20
26. Ibid, pp. 81-82
27. Ibid, Part-1, p. 34-35
28. Ibid, p. 173

**19. ARYA SAMAJ**

1. SSC, pp. 67
2. RSMB, pp. 20-21
3. BRAC, Vol. I, pp. 154-158
4. RSC, p. 320
5. Ibid.
6. RSMB, p. 33
7. RSC, p. 381
8. Ibid, p. 378
9. RSGG, p. 254
10. SCL, p. 118
11. Ibid.
12. RSC, p. 323
13. SCNA, Part-1, p. 176
14. Ibid, Part-2, pp. 14-15
15. SMB, p. 13
16. Ibid, p. 34
17. Ibid, p. 34-35
18. Ibid, p. 54

**20. SATYASHODHAK SAMAJ**

1. RSC, pp. 218, 219, 225, 232
2. Ibid, p. 219
3. SSC, pp. 333-334
4. Ibid, pp. 335-337
5. RSC, pp. 242-243
6. Ibid, pp. 224, 251-252, 255-256
7. RSSG, pp. 744-745
8. RSC, p. 455
9. SCNA, Part-1, p. 98
10. Ibid, Part-2, p. 174
11. RV, p. 111
12. RSC, pp. 451
13. RV, p. 108
14. SSC, p. 434
15. RSGG, p. 145
16. SCL, p. 261
17. VSM, Vol. II, p. 294
18. RV, pp. 224-225
19. CL, p. 281
20. RSC, p. 525
21. RSSG, p. 445
22. RSCV, pp. 108-109
23. Ibid, pp. 110-111
24. MJF-P, Preface, p. 2
25. RSCV, p. 31
26. RSC, p. 309
27. KGBL, p. 57
28. RSC, pp. 219-220

**21. ARYA SAMAJIST OR SATYASHODHAK?**

1. RSMB, pp. 20-21; RSC, p. 320
2. SCL, p. 187
3. Ibid, p. 186
4. Ibid, p. 187
5. RSGG, pp. 419-426
6. RSMB, pp. 31-33
7. Ibid, pp. 33-34
8. Ibid, p. 64
9. Ibid, p. 68
10. RSC, pp. 463-464; Shahu Maharaja's letter to Adam, Kolhapur Archives, No. R-12314, Unpublished
11. RSGG, pp. 384-385
12. Ibid, pp. 385-386
13. Ibid, p. 386
14. RSSG, pp. 443-444
15. Ibid, p. 447
16. SCL, pp. 288-299
17. RSC, p. 380
18. Ibid.
19. Ibid, p. 477
20. Ibid, p. 479

**22. THE KSHATRAJAGADGURU**

1. SSC, p. 219
2. RSRM, p. 286
3. VSM, Vol. II, p. 276
4. RSC, p. 454
5. RSRM, p. 324

6. SCNA, Vol. II, pp. 105-107
7. Ibid, p. 104
8. PTSV, Vol.I, p. 210
9. RV, p. 65
10. PTSV, Void, p. 210
11. Ibid, p. 211
12. SSC, p. 434
13. Ibid, pp. 433-434
14. RSSG, pp. 323-324
15. RSGG, p. 268
16. RSSG, p. 481
17. PTSV, p. 211
18. RSC, p. 474
19. RSGG, pp. 303-304
20. RSCV, p. 33
21. MRSC, p. 33-34
22. MFSC, p. 416

**23. NON-BRAHMIN MOVEMENT**

1. SSC, p. 220
2. VSM, Vol.II, p. 254
3. SCL, pp. 192-193
4. Ibid, pp. 231-233
5. SSC, p. 446
6. VSM, Vol. II, pp. 277-279
7. Ibid, p. 291
8. SSC, p. 452
9. RSRM, p. 518
10. RSMB, p. 6-7
11. SCL, pp. 233-234
12. RSC, p. 410
13. Ibid, p. 373
14. RSMB, p. 102
15. RSC, p. 488
16. Ibid, p. 486-487
17. RSMB, pp. 113-114
18. RSSG, p. 725
19. Ibid, pp. 725-726
20. RV, p. 212
21. Ibid, p. 217
22. RSC, p. 400
23. GIA; pp. 204; VSM, Vol.II, p. 314; BRSI, p. 146; RSRM, p. 525
24. VSM, Vol. II, p. 295

**24. FREEDOM MOVEMENT**

1. RSC, pp. 498-499
2. Ibid, pp. 500-502,509
3. Ibid, p. 493
4. RSCA, pp. 17-18
5. RSSG, pp. 322-325
6. RSC, p. 502
7. RSMB, pp. 3-4
8. Ibid, pp. 72-73
9. Ibid, pp. 74-75
10. Ibid, p. 76
11. Ibid, p. 70
12. Ibid, pp. 71-72
13. Ibid, p. 71

**25. LOYALTY TO THE BRITISH**

1. RSCA, pp. 14-15

2. LTL, pp. 90-91
3. SKV, Vol.II, pp. 454-457
4. LSC, P. 290
5. LSC, P. 188
6. Ibid, Intro., ppp. 16-17
7. VSM, Vol.1, pp. 104-105
8. LSC, Intro., pp. 104-105
9. Ibid, p. 11
10. Ibid.
11. RSGG, p. 253
12. LSC, p. 13
13. MJF, p. 250
14. MFSV, pp. 388-389
15. MFVV, p. 175
16. RSMB, p. 91
17. Ibid, p. 41
18. Ibid, p. 39
19. Ibid, pp. 90-91
20. RSC, pp. 441,4499-450; p. 456

**26. MINORITIES**

1. VSM, Vol. I, pp. 94-96
2. RSC, pp. 48-49
3. RSMB, p. 97
4. SSC, p. 135-136
5. RSSG, p. 499
6. RV, p. 60
7. SCNA, part-2, p. 76
8. RSSG, p. 499
9. RSMB, p. 107
10. SCNA, Part-2, p. 58
11. RSC, p. 401
12. Ibid, p. 194
13. RSSG, p. 500
14. Ibid.
15. SCNA, Part-1, p. 22
16. Ibid, pp. 81-82
17. Ibid, p. 68
18. Ibid, p. 140
19. Ibid, pp. 147-148
20. Interview of Shri Hussain Jamadar, Leader of Muslim Satyashodhak Movement, Kolhapur
21. Reminiscence of Aziz Uddin Khan. The Grandson of Khansaheb
22. SCNA, Part-1, p. 134; Part-2, p. 53
23. RSC, Vol.VI, pp. 130,141
24. SCNA, Part-2, p. 131-132
25. RSC,Vol.VI, pp. 4-5
26. Ibid, pp. 321-322
27. SCNA, Part-2, pp. 113-114
28. MSCM, Vol. I, Intro. p. VII
29. RSMB, pp. 34-35
30. Ibid, p. 35
31. Ibid, pp. 88-89

**27. LABOUR MOVEMENT**

1. RSMB, p. 14
2. IBID, p. 26
3. RSGG, p. 305
4. RSMB, p. 305
5. Ibid, p. 15

6. Ibid, p. 26
7. Ibid, pp. 19-20
8. Ibid, p. 14
9. Ibid, p. 120

**28. AGRICULTURE, INDUSTRY & CO-OPERATION**

1. RSCP, Volvo, Intro.p. 5
2. Ibid, Vol. V, p. 72
3. RSSG, p. 695
4. RSCP, Vol. VI, Intro. Pp. 24-25; SCNA, Part-1, pp. 85-86
5. RSCP, Volvo, Intro.p. 6-7
6. RSMB, p. 7
7. SSC, p. 281
8. SCNA, Part-1, p. 143
9. Ibid, p. 66
10. Ibid, pp. 57-59
11. RSCP, Volvo, Intro, p. 10
12. Ibid, pp. 11-12
13. SCA, p. 72
14. RSCP. Vol. IV, Intro, p. 10
15. Ibid, p. 125
16. Ibid, Olav, Preface, pp. 72-73
17. Ibid, Vol.VI, Preface, pp. 26-27
18. RV, pp. 21-25
19. RSC, pp. 249-279; Part-2, p. 16
20. RSCP, pp. 249-279; SCNA, Part-2, p. 16
21. RSCP, Vol.VI, p. 341
22. Ibid, p. 122
23. SCA, p. 41

**29. ARTS AND ARTISTS**

1. RSSG, p. 642
2. Ibid, pp. 643-644
3. Ibid, p. 646
4. Ibid, p. 648
5. CSS, p. 55-56
6. RSSG, p. 631
7. RSGG, pp. 39-42; Part-1, pp. 3, 5, 107-108; Part-2, p. 88
8. RSSG, p. 639
9. RSGG, pp. 43-44
10. Ibid, pp. 52-54, SCNA, Part-2, p. 15
11. RSGG, pp. 109-110, 116
12. RSSG, p. 652
13. RSRM, p. 623-624
14. Ibid, p. 622-624
15. KD, pp. 167-168
16. Ibid, p. 166; RSSG, pp. 650-651; RSGG, p. 106
17. RSGG, P. 133
18. SPSP, pp. 130-131
19. RSRM, pp. 608-609
20. KD, pp. 182-183
21. RSRM, pp. 611
22. KD, p. 184
23. RSGG, p. 125
24. KD, pp. 184-185
25. KD, p. 187
26. RSRM, pp. 618-620
27. KD, pp. 170-171
28. Ibid, p. 189; RSGG, p. 127

29. RSRM, pp. 611-612
30. KD, p. 187
31. KBJV, pp. 9,1P
32. Ibid, P. 13
33. RSGG, P. 114
34. Ibid, P. 126
35. SHATSUTRA, p. 37
36. RSGG, p. 144; RSGG, p. 653
37. VISHWAKARMA, pp. 191-192
38. RSSG, p. 674
39. Ibid, pp. 674-675; VISHWAKARMA, pp. 16, 32, 37
40. VISHWAKARMA, p. 53
41. Ibid, pp. 52, 54-55
42. RSSG, pp. 663-665
43. An Interview of Balasaheb Madhavarao Walavalkar, Kolhapur
44. RSSG, p. 665
45. Ibid.
46. Ibid, pp. 665-666
47. CC, p. 25
48. KBJV, pp. 116, 118
49. MJ, pp. 185-186; VISHWAKARMA, p. 186
50. BMSS, p. 53
51. Ibid, p. 54; VISHWAKARMA, p. 178
52. TAPASVI, pp. 6-7

**30. NON-BRAHMIN JOURNALS**

1. RSSG, pp. 678-679
2. Ibid, pp. 469-470
3. MVI, p. 630
4. RSSG, pp. 680-681
5. MVI, p. 631; RSC, pp. 330,496
6. VSM Vol. II, p. 264
7. MVI, pp. 790-791; RSC, p. 496
8. MVI, p. 799
9. SCNA, Part-2, pp. 67-68
10. MVI, p. 799
11. VMSS, p. 15
12. Ibid, p. 19; VSM Part-2, p. 266
13. MVI, pp. 577-578
14. Ibid, pp. 512-517
15. VSI, Vol. II, p. 263
16. MVI, p. 518
17. BBM, p. 347
18. RV, p. 211
19. VSM, Vol. II, p. 265
20. RV, p. 226
21. SSC, pp. 228-229
22. Ibid, p. 470
23. RSC, p. 413
24. RV, p. 155
25. Ibid, p. 470
26. SCL, p. 286
27. RSC, p. 483
28. Ibid, p. 497
29. SSC, pp. 305-306
30. SCNA, Part-2, pp. 89-90
31. PTSV, Vol. I, p. 209
32. RSSG, p. 321

33. RV, p. 160
34. VSM, Vol. II, p. 270
35. RV, pp. 157-159

**31. THE CONSPIRACIES**

1. RSRM, pp. 359-360; SCL, p. 149; SCRR, p. 162
2. SCSG, Intro., pp. 18, 23, 33-36
3. RSCP, Vol. V, p. 57-58
4. LTC, Valhi, Part-3, pp. 60-61
5. Ibid, p. 68
6. Ibid, p. 69
7. SCRR, p. 161
8. RSC, p. 176
9. Ibid, pp. 176-177
10. JS, p. 69
11. RSC, p. 439
12. Ibid, p. 440
13. DJSV, pp. 17-19
14. RSRM, pp. 113-114
15. RSC, p. 173
16. SCL,. pp. 150-151
17. Ibid, pp. 300-301, RSSG, p. 723

**32. END OF AN ERA**

1. RSC, p. 507
2. Ibid, p. 442
3. Ibid, p. 508
4. RSMB, p. 129
5. RSC, p. 517
6. Ibid, p. 133
7. Ibid, p. 519
8. Ibid, p. 520
9. RSCP, Vol. IX, pp. 538-556
10. RSCP, p. 523
11. Ibid, p. 524
12. RSSG, p. 725
13. RSC, p. 527
14. RSSG, pp. 729-730
15. Ibid, pp. 712-734
16. RSC, pp. 527-528

**33. PERSONOLITY AND ACHIEVEMENTS**

1. RSGG, p. 32
2. Ibid, p. 342
3. Ibid, pp. 549-550
4. SSC, p. 303; RSSG, pp. 753-754, 760; RSC, p. 144
5. CSSG, p. 108
6. RSSG, p. 752
7. RSCP, Olav, Intro.p. 45
8. RSC, p. 129, 409
9. SSC, p. 194
10. RSC, p. 119
11. PTSV, Vol.I, p. 202
12. RSCA, p. 109
13. RSMB, p. 68
14. SSC, p. 223
15. RSCA, pp. 110-111
16. SSC, Appendix-2, p. 8
17. RSSG, p. 748

18. RSMB, p. 38
19. Ibid, p. 27
20. RSC, p. 374
21. RSGG, p. 342
22. SPSD, p. 1
23. RSMB, Intro, p. 8
24. RSSG, p. 730
25. SRSC, p. 41.
26. RSSG, p. 762
27. RV, pp. 154-155
28. RSMB, p. 88-89
29. Ibid, p. 106
30. RSSG, p. 725
31. Ibid, p. 290
32. Ibid, p. 470
33. Ibid, p. 289
34. Ibid, 582, 716; RSGG, p. 273
35. RSC, Intro, p. 8
36. RSMB, p. 50

---

# BIBLIOGRAPHY

## MARATHI


1. AB – **AphonicBharat** (Modern India)– S.D. Javdekar, third edition, Pune, 1986
2. BA – **Dr. Babasahwb Ambedkar** (A Biography)– Dhananjaya Keer, Seventh edition, Mumbai, 1990
3. BAAP – **Bharatiya Asprushyatecha Prashna**(Problem of Untouchability in India) – V.R Shinde, Mumbai, 1976
4. BAP – **Babasaheb Ambedkaranchi Patre** (Letters of Dr. Babasaheb Ambedkar)–Editor: Shankarrao Kharat, Pune,1990
5. BBM – **Dr. Babasaheb Ambedkar's Bahiskrit Bharat and Muknayak**(journals)– Editor: Vasant Moon, Mumbai,1990
6. BMSS – **Akhil Bharatiya Marathi Sahitya Sammelan: 65th**: (All India Marathi Literary Convention), Kolhapur,1992: Jaripatka- Editor: Pratapsinh G. Jadhav, Kolhapur,1992
7. BRAC – **Dr. Bhimrao Ramji Ambedkar Charitra** (Life of Dr. Bhimrao Ramji Ambedkar) – Vol. I – C. B. Khairmode, Fourth edition, Pune,1992, Vol. II, Second edition, Pune,1991
8. BRSI – **Bharatiya Rajyaghatanecha Sopapattik Itihas** (History of Indian Constitution) –R. V. Oturkar and P. S. Ghare, Second edition, Pune, 1968
9. BSK – **Bharatiya Sanskriti Kosh** (Cultural Encyclopaedia of India) – Vol. VI, Editor: Pandit Mahadevashastri Joshi, First edition, Pune,1970
10. CC – **Chitra and Chaitra-** Baburao Pendharkar, First edition, Pune, 1961

11. CSMG - **Chhatrapati Sambhaji Smarak Granth** (Chhatrapati Sambhaji Memorial Volume) – Editor: Jaysinghrao Pawar, First edition, Kolhapur,1990
12. CSMP – **Chhatrapati Shivaji Maharajanchi Patre**; (the Letters of Chhatrapati Shivaji)–Editor: P. N. Deshpande, First edition, Dhule, 1983
13. CSS – **Chhatrapati Shahu Smritidarshan** (Reminiscences of Shahu Chhatrapati) – Hindurao Salunke, First edition, Kolhapur
14. DJSV – **Dinkarrao Javalkar Samagra Vangmaya** (The Complete Literature of Dinkarrao Javalkar) – Editor: Y. D. Phadke, First edition, Pune,1984
15. DJT – **Dharma, Jeeva Va Tatvadyan** (Religion, Life and Philosophy)- V. R. Shinde, Mumbai,1979
16. GANDHI – **Gandhi-** Nalini Pandit, First edition, Pune,1983
17. GRAND – **James Cunningham Grant Duff-** A. R. Kulkarni, First edition, Pune,1969
18. GVK – **Shri Gavai Vyakti aani Karya** (Gavai: Life and Work)- Amaravati-1963
19. JA – **Junya Athavani** (Old Reminscences) – V. R. Kothari, Pune,1973
20. JANTA – **Janta**: (A Journal) special issue, April,1933
21. KBJV – **Keshavarao Bhonsle Janmashabdi Visheshak**, (Keshavarao Birth-Centenary special issue): Maharashtra Times – Editor: Govind Talwalkar, Mumbai, 1990
22. KD – **Kolhapur Darshan** (A Portrait of Kolhapur)- Editors: G. R. Bhide, P. L. Deshpande, First edition, Pune, 1971
23. KGBl – **Khanderao Gopal Rao Bagal Yanche Nivadak Lekh** (Select Articles of Khanderao Bagal)– Editor: Madhavarao Bagal, Kolhapur, 1974
24. KR – **Karveer Riyasat,** (History of Kolhapur)– S.M. Garge, Second edition, Pune, 1980

25. KSG – **Kolhapur State Gazette**

26. LSC – **Lokraja Shahu Chhatrapati** (Shahu Chhatrapati- A King of the People)- Ramesh Jadhav, First edition, Pune 1997

27. LTC – **Lokmanya Tilak Yanche Charitra** (Life of Lokmanya Tilak)- Vol. II, N. C. Kelkar, Pune 1928

28. LTL- **Lokmanya Tilak Lekhasangraha** (Collection of Articles of Lokmanya) –Ed., Lakshmanashastri Joshi, New Delhi,1969

29. MFG – **Mahatma Phule Gaurav Granth** (Mahatma Phule Commemoration Volume) – Editor: P. B. Salunke, Mumbai,1982

30. MFSV – **Mahatma Phule Samagra Vangmay** – (Mahatma Phule's Complete Literature) –Editor: Y. D. Phadke, Fourth edition, Mumbai,1991

31. MFVV – **Mahatma Phule: Vyaktitva Aani Vicha**r (Mahatma Phule- Man and Mission)– G. B. Sardar, First edition, Mumbai,1981

32. MJ – **Mazza Jeevanvihar** (My Life)- Govendrao Tembe, Kolhapur,1948

33. MJF – **Mahatma Jotirao Phule: Aamchya Samajkranteeche Janak** (Life of Jyotirao Phule- Father of Our Social Revolution)– Dhananjaya Keer – (reprint), Mumbai,1990

34. MJF-P – **Mahatma Jyotirao Phule – P. S. Patil**, Second edition, Mumbai, 1989

35. MPSV – **Satyashodhak Dinmitrakar Mukunrao Patil yaanche Samagra Vangmaya** (A complete Literature of Mukundrao Patil), First edition, Mumbai,1990

36. MRSC – **Madhavarao Raghoji Rokde yaanche Sankshipta Charitra** (A Short Life of Madhavarao Rokde)- K. A. Keluskar, Mumbai,1927

37. MSU – **Ingraji Satteviruddha Maharashtraateel Sashastra Uthav** (Armes Rising against the English Power in Maharashtra) – V. G. Khoberkar, Mumbai,1959

38. MVI - **Marathi Vrittapatrancha Itihas** – (History of Marathi Journals) – R. K. Lele, Pune,1984

39. PTSV – **Prabhodankar Thackeray Samagra Vangmaya**, Vol. 1L Mazzi Jeevangatha. (The Complete Literature of Prabhodankar Thackeray, Vol.1: The Saga of My Life) – Prabhodankar K. S. Thackeray, First edition, (reprint), Mumbai,1997

40. RSC – **Rajarshi Shahu Chhatrapati- Ek Samajkrantikarak Raja** (Rajarshi Shahu – A Royal Revolutionary), Dhanjaya Keer, First edition, Mumbai 1979

41. RSD – **Rajarshi Shahu: Ek Drishtikshep** (Rajarshi Shahu at Glance)- Jaysinghrao Pawar, Kolhapur, 1989

42. RSCA – **Rajarshi Shri Shahu Chhatrapati Yanche Antarang** (Inside the Life of Shahu Chhatrapati) V. D. Topkhane, First edition, Kolhapur,1963

43. RSCV – **Rajarshi Shahu Chhatrapati: Vaad Ani Vastav** (Shahu Chhatrapati: Controversies and Truth)- Ramesh Jadhav, first edition, Kolhapur,1992

44. RSGG – **Rajarshi Shahu Gaurav Granth** (Rajarshi Shahu Commemoration Volume) Ed. P. B. Salunkhe, Mumbai,1976

45. RSK – **Chhatrapati Shahu Maharaja Ani Kayadekanoo** (Chhatrapati Shahu and His Laws) – D. R. Bagade, First edition, Kolhapur,1982

46. RSMB –**Rajarshi Shri Shahu Maharajanchi Bhashane** (Speeches of Shahu Maharaja) Ed., B. B. Jadhav, First edition, Kolhapur,1971

47. RSRM – **Rajarshi Shahu: Raja Va Manoos** (Shahu- A Prince and a Man) – K. G. Suryavanshi, first edition, Pune,1984

48. RSSG – **Rajarshi Shahu Smarak Granth** (Shahu Chhatrapati Commemoration Volume) – Jaysinghrao Pawar, First edition, Kolhapur, 2001

49. RV – **Rajarshi-Ek Vyaktidarshan** (Rajarshi- A Portrait)- Shyam Yedekar, Kolhapur

50. SCA – **Shri Shahu Chhatrapatinche Arthakaran** (Economics of Shahu Chhatrapati) – Meena Kulkarni and B. S. Kulkarni, First edition, Kolhapur

51. SCL – **Shahu Chhatrapati aani Lokmanya**– Y. D. Phadke, Pune,1982

52. SCNA – **Shahu Chhatrapatinche Nivadak Aadesh** (Select Edicts of Shahu Chhatrapati) – Ed., Shamrao Patil and Bhaskar Dhatavkar, Part-1 Mumbai,1988; Part-2-Editor: A. P. Jambhedkar, Mumbai,1989

53. SD – **Sarth Shri Dasbodh** (Dasbodha of Saint Ramdas) – Ed.M. Pangarkar, 5th edition, 18th reprint, Mumbai,1993

54. SHATSURYA – **Shatsyrya** – Ed., Rajabhau Phadnis, Pune,1990

55. SKV – **Samagra Kelkar Vangmay** –2 (Complete Literature of Kelkar-2), Publisher: Manohar Mahadev Kelkar,1938

56. SPSP – **Karveer Durbar Shahir Pirajirao Saranaik yaanche Povade** (Historical Balladas of Karveer Darbar)- -P. R. Sarnaik, Kolhapur,1983

57. SRSC – **Satyavadi: Rajarshi Shahu Chhatrapati** (Special Issue on Shahu Chhatrapati)- Ed., Balasaheb Patil, Kolhapur,1974

58. SSC – **Shrimat Chhatrapati Shahu Maharaj yaanche Charitra** (Life of Shau Chhatrapati)-A. B. Latthe, Belgaum, 1925

59. TAPASVI – **Tapasvi-** Abalal Rehman and Vinayak Masoji, Jagtik Marathi Parishad Prakashan, Mumbai

60. VISHWAKARMA – **Vishwakarma** (Baburao Painter's Biography)-Suryakant Mandre, Pune, 1995

61. VMSS – **Vijayi Marathakar Shripatrao Shinde** (Life of Shripatrao Shide) – Madhavarao Shinde, Kolhapur, 1973

62. VSM – **Visavya Shatakateel Maharashtra** (Maharashtra in 20th Century): Vol. I – Y. D. Phadke, First edition, Pune, 1989; Vol. II, Pune, 1989

## ENGISH

63. BPIR – **The History and Culture of Indian People: British Paramountcy and Indian Resistance**, Part-1. (Ed) R. C. Majumdar, Second edition, Mumbai,1924

64. GIA – **The Govt. of India Act**,1919, Rules There under and Govt. Reports, 1920- H. N. Mitra, Calcutta,1921

65. MSCM – **Memoirs of His Highness Shri Shahu Chhatrapati Maharaja of Kolhapur**, Vol. I, A. B. Latthe, Mumbai,1924

66. RSCP – **Rajarshi Shahu Chhatrapati Papers**, Vol. I (Ed) A. G. Pawar, Kolhapur, 1978; Vol. II (Ed) Vilas Sangave and B. D. Khane, Kolhapur,1983; Vol. III (Ed) Sangave and Khane, Kolhapur,1985; Vol. IV (Ed) Sangave and Khane,1988, Vol. V (Ed) Sangave, Kolhapur, 1922; Vol. VI (Ed) Sangave, Kolhapur,1994

67. SCRR – **Shahu Chhatrapati: A Royal Revolutionary** – Dhananjaya Keer, Mumbai, 1976

68. SPSD – **Chhatrapati Shahu – The Pillar of Social Democracy**–(Ed.) P. B. Salunkhe, Kolhapur,1994.

---

# ಪೀಠಿಕೆ

ಇದು ರಾಜರ್ಷಿ ಶಾಹು ಛತ್ರಪತಿ ಮಹಾರಾಜರ ಜೀವನ ಮತ್ತು ಅವರ ಕೃತಿಗಳ ಬಗ್ಗೆ ಆಯ್ಕೆ ಮಾಡಿದ ೨೫ ಲೇಖನಗಳ ಸಂಗ್ರಹವಾಗಿದೆ. ಶಾಹುರವರ ಕಾಲದಲ್ಲಿದ್ದ ಅವರ ನಿಕಟ ಸಹವಂದಿಗರು ಅಥವಾ ಪ್ರಸಿದ್ಧ ಬ್ರಾಹ್ಮಣೇತರರ ಪತ್ರಿಕಾಕರ್ತರು ಮತ್ತು ಸಾಮಾಜಿಕ ಕಾರ್ಯಕರ್ತರು ಬರೆದಿರುವ ಒಂಭತ್ತು ಲೇಖನಗಳು ಈ ಸಂಕಲನದಲ್ಲಿವೆ. ಉಳಿದೆಲ್ಲ ಲೇಖನಗಳನ್ನು ಗತ ಸ್ವಾತಂತ್ರ್ಯಯುಗಕ್ಕೆ ಸೇರಿದ ಲೇಖಕರು ಬರೆದಿದ್ದಾರೆ. ಸಮಕಾಲೀನ ಲೇಖಕರು ಶಾಹುರವರ ಆಡಳಿತವನ್ನು ಖುದ್ದು ನೋಡಿದ್ದಾರೆ. ಆದ್ದರಿಂದ ಅವರ ಬರವಣಿಗೆಗಳು, ಶಾಹುರವರ ಆಡಳಿತಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ವಿವರಗಳಾಗಿ ಹೆಚ್ಚು ಐತಿಹಾಸಿಕ ಮೌಲ್ಯಗಳನ್ನು ಹೊಂದಿವೆ.

ಲೇಖಕರಾದ ಸರ್ ಫ್ರೆಜರ್, ತೋಫ್‌ಖಾನೆ, ಭಾಸ್ಕರರಾವ್ ಜಾಧವ್, ಡಾ. ಅಂಬೇಡ್ಕರ್ ಮತ್ತು ಪ್ರೊ. ಲಠ್ಠೆ ಅವರು ಸಮಕಾಲೀನ ಲೇಖಕರಲ್ಲಿ ಪ್ರಮುಖರಾಗಿದ್ದಾರೆ. ಬ್ರಿಟಿಷರ ನಾಗರಿಕ ಅಧಿಕಾರಿಗಳಾದ ಸರ್ ಫ್ರೆಜರ್ ಅವರು ಶಾಹುರವರಿಗೆ ಸ್ನೇಹಿತ, ತತ್ವಚಿಂತಕ ಮತ್ತು ಮಾರ್ಗದರ್ಶಕರಾಗಿ ಅವರ ಇಡೀ ಜೀವನದಲ್ಲಿದ್ದರು. ಅವರು ಶಾಹುರವರು ತನ್ನ ಕಾಲದ ಮಹಾ ಔದಾರ್ಯದ ಮಾನವೀಯ ರಾಜನಾಗಿ ಅವರ ವ್ಯಕ್ತಿತ್ವವನ್ನು ರೂಪಿಸಿದರು. ಅವರು ಶಾಹುರವರ ಬಗ್ಗೆ ಬರೆದ ಲೇಖನವು ಇಂಡಿಯಾದ ಇತಿಹಾಸದಲ್ಲಿ ಅವರ ಸ್ಥಾನ ಮತ್ತು ಕೃತಿಗಳ ಬಗ್ಗೆ ಸಾಕಷ್ಟು ಹೇಳುತ್ತದೆ.

ಆಧುನಿಕ ಭಾರತದ ನಿರ್ಮಾಣದಲ್ಲಿ ಶಾಹುರವರ ಕೊಡುಗೆಯ ಬಗ್ಗೆ ವ್ಯಾಖ್ಯಾನಿಸುತ್ತಾ ಫ್ರೆಜರ್ ಅವರು ಹೇಳುತ್ತಾರೆ: "ಅವರ ಕೆಲಸ–ಕಾರ್ಯಗಳನ್ನು ಸರಿಯಾದ ಪರಿಪ್ರೇಕ್ಷ್ಯದಲ್ಲಿ ಪರಿಶೀಲಿಸುವುದಕ್ಕೆ ನಾವು ಅವರ ಕಾಲದ ಅತಿ ಸಮೀಪದಲ್ಲಿ ಬದುಕಿದ್ದೇವೆ...... ನಮ್ಮ ಕಣ್ಣು ಮುಂದೆಯೇ ಬೆಳೆಯುತ್ತಿರುವ ಭಾರತದ ಇತಿಹಾಸಕಾರನು ಶಾಹುರವರ ಜೀವನದ ಮಾಹಿತಿಗಳು ಕ್ಷೇಮಕರವಾಗಿದ್ದರೂ ಅವುಗಳನ್ನು ಸಮರ್ಥಿಸಲು ಕಡೆಗಣಿಸಲಾರನು, ಅವರು ವಿವಾದಗಳಲ್ಲಿ ಸಿಕ್ಕಿಕೊಂಡರೂ, ಅವರು ತಮ್ಮ ಪಾತ್ರವನ್ನು ಸಮರ್ಥವಾಗಿ ನಿಭಾಯಿಸಿದರು. ಅವು ಕ್ರಮೇಣ ತಣ್ಣಗಾದ ಮೇಲೆ ಪ್ರತಿಯೊಂದು ವರ್ಗದ ಭಾರತೀಯನು ಅವರು ರಾಷ್ಟ್ರೀಯ ಆಸ್ತಿಯೆಂದು, ಅವರ ನೆನಪು ನಿಜವಾದ ಹೆಮ್ಮೆಯ ನಿಧಿಯೆಂದು ಭಾವಿಸುತ್ತಾನೆ."

ಸರ್ ಫ್ರೆಜರ್ ಅವರು ಇದನ್ನು ಶಾಹು ಸತ್ತ ಒಂದು ವರ್ಷದ ನಂತರ ಬರೆದರು. ಅವರ ಮಾತುಗಳು ನಿಜಗೊಂಡವೆಂದು ಇತಿಹಾಸ ತೋರಿಸುತ್ತದೆ. ಇತಿಹಾಸದ ಎಂಥ ಉಜ್ವಲವಾದ ತೀರ್ಪು.

ಶಾಹುರವರ ನಿಕಟವರ್ತಿ ಮತ್ತು ಥಿಯೋಸಫಿಯ ಕಾರ್ಯಕರ್ತ ಸಮಕಾಲೀನರು ವಾಸುದೇವ್ ತೋಫ್‌ಖಾನೆಯವರು. ಅವರ ಲೇಖನವು ವೇದೋಕ್ತ ವಿವಾದ ಮತ್ತು ಶಾಹು–ತಿಲಕರ ಸಂಬಂಧಗಳ ವಿರೋಧಿ ಪ್ರವೃತ್ತಿಗಳ ಮೇಲೆ ಬೆಳಕು ಬೀರುತ್ತದೆ. ತೋಫ್‌ಖಾನೆಯವರು ಶಾಹುರವರ ಆಡಳಿತದ

ಹಲವಾರು ನೆನಪುಗಳನ್ನು ನೀಡುತ್ತಾರೆ. ಅವುಗಳಲ್ಲಿ ಒಂದು ನೆನಪು ಮಹಾತ್ಮ ಗಾಂಧಿಯವರ ಆಶ್ರಮದ ಪ್ರೊ.ಅಠಾವಳೆ ಶಾಹುರವರನ್ನು ಭೇಟಿಮಾಡಿದ್ದು ಮತ್ತು ಒಂದು ದೀರ್ಘಕಾಲದ ತಾತ್ವಿಕ ಚರ್ಚೆ ನಡೆದದ್ದನ್ನು ಹೇಳುತ್ತದೆ. ಶಾಹುರವರ ವಿವೇಕ ಮತ್ತು ಉಚ್ಚಮಟ್ಟದ ಚಿಂತನೆಯಿಂದ ಪ್ರಭಾವಿತರಾದ ಅವರು ವಾಪಸ್ಸು ಬಂದು ಅವರು ಒಂದು ಪತ್ರ ಬರೆಯುತ್ತಾರೆ. ಅವರು ಆ ಪತ್ರದಲ್ಲಿ "ಪ್ಲೇಟೋರವರ ತತ್ವಚಿಂತಕ ಮಹಾರಾಜ ಎಂಬ ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲಿ ಮಹಾರಾಜ ಶಾಹುರವರೆಂದು, ಅಂಥವರ ಸಂಪರ್ಕ ತಮ್ಮ ಮೂಲಕವಾಯಿತೆಂದು ಅವರು ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ." ಶಾಹುರವರ ಮೊದಲ ಜೀವನಚರಿತ್ರೆಗಾರ ಸತ್ಯಶೋಧಕ ಕಾರ್ಯಕರ್ತ ಮತ್ತು ಮಹಾರಾಷ್ಟ್ರದ ಬ್ರಾಹ್ಮಣೇತರರ ಪಕ್ಷದ ನಾಯಕ ಪ್ರೊ.ಎ.ಬಿ. ಲಠ್ಠೆ ಅವರು ಮೂರನೇ ಸಮಕಾಲೀನವರು. ಅವರು ಶಾಹುರವರ ಆಡಳಿತದ ಹಲವಾರು ರಾಜಕೀಯ ಮತ್ತು ಸಾಮಾಜಿಕ ಬಂಡಾಯಗಳಿಗೆ ಸಾಕ್ಷೀಭೂತರಾಗಿದ್ದರು. ಅವರು ನಂತರ ಕೊಲ್ಹಾಪುರ ಸಂಸ್ಥಾನದ ದಿವಾನರಾದರು. ಅವರು ಕೊಲ್ಹಾಪುರ ದರ್ಬಾರು ಒದಗಿಸಿದ ಮೂಲ ಸಾಮಗ್ರಿಯನ್ನು ಆಧಾರವಾಗಿಟ್ಟುಕೊಂಡು ಶಾಹುರವರ ಜೀವನಚರಿತ್ರೆಯನ್ನು ಇಂಗ್ಲೀಷು ಮತ್ತು ಮರಾಠಿ ಭಾಷೆಗಳಲ್ಲಿ ಬರೆದಿದ್ದಾರೆ. ಆದ್ದರಿಂದ ಅವರ ಕೃತಿಯನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಶಾಹುರವರ ಮಹತ್ವವನ್ನು ಮೌಲ್ಯಮಾಪನ ಮಾಡುತ್ತಾ ಅವರು ಶಾಹುರವರನ್ನು "ಕೊಲ್ಹಾಪುರ ಸಿಂಹಾಸನದ ಮೇಲೆ ಎಂದೆಂದಿಗೂ ರಾರಾಜಿಸುವ ಘನ ಮಹಾರಾಜರು ಮತ್ತು ದೇಶದ ದೀರ್ಘ ಮತ್ತು ಭವ್ಯ ಇತಿಹಾಸದಲ್ಲಿ ಬೆಳೆಸಲಾಗದಿದ್ದಂತಹ ಶಕ್ತಿವಂತರಲ್ಲಿ ಇವರು ಮಹಾಶಕ್ತಿವಂತರಾಗಿದ್ದರೆಂದು" ವರ್ಣಿಸಿದ್ದಾರೆ.

ಪ್ರೊ. ಲಠ್ಠೆಯವರ ಹಿರಿಯ ಸಹೋದ್ಯೋಗಿ ಭಾಸ್ಕರರಾವ್ ಜಾಧವ್ ಅವರು ಉನ್ನತ ವಿದ್ಯಾಭ್ಯಾಸ ಮಾಡಿದ ಮರಾಠ ಯುವಕರಾಗಿದ್ದರಿಂದ ಅವರನ್ನು ೧೮೯೫ರಲ್ಲಿ ಶಾಹು ಅವರು ಕೊಲ್ಹಾಪುರ ಸಂಸ್ಥಾನಕ್ಕೆ ಸಹಾಯ ಸರ್‌ಸಭೆಯಾಗಿ ನೇಮಕಮಾಡುತ್ತಾರೆ. ಅಂತಹ ಉನ್ನತ ಹುದ್ದೆಗೆ ಅವರನ್ನು ಮೊಟ್ಟಮೊದಲಿಗೆ ಮರಾಠರನ್ನು ನೇಮಕ ಮಾಡಲಾಯಿತು. ಸತ್ಯಶೋಧಕ ಸಮಾಜ ಮತ್ತು ಅದರ ಸಿದ್ಧಾಂತ ಮೈಗೂಡಿಸಿಕೊಂಡಿದ್ದ ಭಾಸ್ಕರರಾವ್ ಜಾಧವ್ ಅವರು ಮೊಟ್ಟಮೊದಲಿಗೆ ಶಾಹುರವರಿಗೆ ಪರಿಚಿತರಾದರು. ನಂತರ ಅವರು ಬಾಂಬೆ ಪ್ರಾಂತ್ಯದ ಶಿಕ್ಷಣ ಸಚಿವ ಮತ್ತು ಕೇಂದ್ರೀಯ ಶಾಸನಪರಿಷತ್ತಿನ ಸದಸ್ಯರಾಗಿದ್ದರು. ಅವರು ಸತ್ಯಶೋಧಕ ಸಮಾಜ ಮತ್ತು ಬ್ರಾಹ್ಮಣೇತರರ ಪಕ್ಷದ ಹಿರಿಯ ನಾಯಕರಲ್ಲಿ ಒಬ್ಬರಾಗಿದ್ದರು.

ತಮ್ಮ ಲೇಖನದಲ್ಲಿ ಶಾಹು ಛತ್ರಪತಿ ಶಾಹುರವರನ್ನು ಶ್ರೇಷ್ಠಮಟ್ಟದ ತತ್ವನಿಷ್ಠರಲ್ಲಿ ಅತ್ಯುತ್ತಮರೆಂದು ಹೊಗಳುತ್ತಾ ಹೇಳುತ್ತಾರೆ: "ಇಡೀ ರಾಷ್ಟ್ರದ ಪ್ರಗತಿಯನ್ನು ಸಾಧಿಸುವುದೇ ಅವರ ಗುರಿಯಾಗಿತ್ತು. ಆದರೆ ಅವರು ಹಿಂದುಳಿದ ವರ್ಗಗಳ ಬಹುಸಂಖ್ಯಾತರ ಅಭಿವೃದ್ಧಿಯಾಗದ ಹೊರತು ರಾಷ್ಟ್ರದ ಅಭಿವೃದ್ಧಿ ಸಾಧ್ಯವಿಲ್ಲವೆಂಬುದು ಅವರಿಗೆ ಚೆನ್ನಾಗಿ ಮನವರಿಕೆಯಾಗಿತ್ತು. ಇಡೀ ಮಾನವಜನಾಂಗ ಒಂದು ಮತ್ತು ಅವರೆಲ್ಲರೂ ದೇವರ ಮಕ್ಕಳೆಂಬುದು ಅವರ ದೃಢನಂಬಿಕೆಯಾಗಿತ್ತು. ಆದ್ದರಿಂದ ಅವರು ಶಿಕ್ಷಣವನ್ನು ಪ್ರೋತ್ಸಾಹಿಸಿದರು ಮತ್ತು ತಮ್ಮ ಆದರ್ಶವನ್ನು ಬೆಳೆಸುವ ಸಲುವಾಗಿ ಅವರು ಸತ್ಯಶೋಧಕ ಸಿದ್ಧಾಂತವನ್ನು ಪ್ರಚಾರಮಾಡಿದರು."

೧೯೨೦ರಲ್ಲಿ ಮನ್‌ಗಾವ್‌ನಲ್ಲಿ ಅಸ್ಪೃಶ್ಯರ ಮೊದಲ ಸಮ್ಮೇಳನವನ್ನು ಸಂಘಟಿಸಿದ ಡಾ. ಬಾಬಾಸಾಹೇಬ ಅಂಬೇಡ್ಕರರು ಅವರ ಸಮಕಾಲೀನರಲ್ಲಿ ಮಹಾನುಭಾವರಾಗಿದ್ದರು. ಶಾಹು ಛತ್ರಪತಿಯವರನ್ನು ಆ

ಸಮ್ಮೇಳನಕ್ಕೆ ಮುಖ್ಯ ಅತಿಥಿಯಾಗಿ ಆಹ್ವಾನಿಸಲಾಗಿತ್ತು ಮತ್ತು ಅವರು ಆ ಸಮ್ಮೇಳನದಲ್ಲಿ ಡಾ. ಅಂಬೇಡ್ಕರರನ್ನು ತಮ್ಮ ನಾಯಕನನ್ನಾಗಿ ಆಯ್ಕೆಮಾಡಿಕೊಂಡಿದ್ದಕ್ಕೆ ಅವರು ಅಸ್ಪೃಶ್ಯರನ್ನು ಅಭಿನಂದಿಸಿದರು. ಶಾಹುರವರು ಪ್ರೇಕ್ಷಕರನ್ನು ಕುರಿತು ಡಾ. ಅಂಬೇಡ್ಕರರು ಒಂದು ದಿನ ಭಾರತದ ಎಲ್ಲಾ ಹಿಂದುಳಿದ ವರ್ಗಗಳ ರಾಷ್ಟ್ರೀಯ ನಾಯಕನಾಗುವನೆಂದು ಭವಿಷ್ಯ ನುಡಿದಿದ್ದರು.

ಮನ್‌ಗಾವ್ ಸಮ್ಮೇಳನದ ನಂತರ ಡಾ. ಅಂಬೇಡ್ಕರರು ತಮ್ಮ 'ಮೂಕನಾಯಕ' ಪತ್ರಿಕೆಯಲ್ಲಿ ಶಾಹುರವರ ಬಗ್ಗೆ ಮತ್ತು ಅವರ ವಿರೋಧಿಗಳ ಬಗ್ಗೆ ಒಂದು ಲೇಖನ ಬರೆದರು. ಅದರಲ್ಲಿ ಶಾಹುರವರ ವಿರೋಧಿಗಳ ಅನ್ಯಾಯವಾದ ಮತ್ತು ಕುಯುಕ್ತಿಯ ಧೋರಣೆಗಳನ್ನು ಟೀಕಿಸಿದರು ಮತ್ತು ಬ್ರಾಹ್ಮಣರ ಆಕ್ಷೇಪಣೆಗಳನ್ನು ಗಮನಿಸದೆ ಅಸ್ಪೃಶ್ಯ ಸಮುದಾಯದ ಸದುದ್ದೇಶವನ್ನು ಎತ್ತಿಹಿಡಿಯಬೇಕೆಂದು ಒತ್ತಾಯಿಸಿದರು. ದುರಾದೃಷ್ಟವಶಾತ್ ಇದೊಂದು ಶಾಹು ಬಗೆಗಿನ ಡಾ. ಅಂಬೇಡ್ಕರರ ಲೇಖನ ಲಭ್ಯವಾಗುತ್ತಿದೆ. ಶಾಹುರವರು ಒಬ್ಬ ನಿಜವಾದ ಕ್ಷತ್ರಿಯರೆಂದು ವರ್ಣಿಸುತ್ತಾ ಅವರು ಹೇಳುತ್ತಾರೆ: "ಕ್ಷತ್ರಿಯವಂಶದ ನಿಜವಾದ ವಾರಸುದಾರರಾದ ಛತ್ರಪತಿ ಶಾಹು ಮಹಾರಾಜರು ತಮ್ಮ ಘನ ಆತ್ಮದಿಂದ ಹೊಳೆವ ಬೆಳಕಿನಿಂದ ಶತಮಾನಗಳಿಂದಲೂ ಯಥಾಕಥಿತ ಮೇಲುಜಾತಿಗಳ ಜನರನ್ನು ಅಸ್ಪೃಶ್ಯರನ್ನಾಗಿ ಮತ್ತು ಜೀವಶವಗಳನ್ನಾಗಿರಿಸಿದ್ದ ಜನರಿಗೆ ಆತ್ಮಗೌರವದ ಜ್ಯೋತಿಯ ಹಚ್ಚಿ ಬೆಳಗಿಸಿದರು.

ಉಳಿದ ನಾಲ್ಕು ಸಮಕಾಲೀನರು ಶಾಮರಾವ್ ದೇಸಾಯಿ, ಗಣೇಶ್ ಅಕಾಜಿಗವಾಯಿ, ಭಾಗವಂತರಾವ್ ಪಾಲೇಕರ್ ಮತ್ತು ಶ್ರೀಪತ್‌ರಾವ್ ಶಿಂಧೆ ಅವರೆಲ್ಲರೂ ಬ್ರಾಹ್ಮಣೇತರರ ಪತ್ರಿಕಾಕರ್ತರು ಮತ್ತು ಸಾಮಾಜಿಕ ಕಾರ್ಯಕರ್ತರು ಮತ್ತು ೧೯೨೨ರಲ್ಲಿ ಶಾಹುರವರ ಅಕಾಲಿಕ ಮರಣದ ಕೂಡಲೇ ಈ ಲೇಖನಗಳನ್ನು ಬರೆದರು. ಅವರು ಶಾಹುರವರ ಆಡಳಿತವನ್ನು ಅನುಭವಿಸಿದ್ದು ಮಾತ್ರವಲ್ಲದೆ ತಮ್ಮ ಕಷ್ಟಕಾಲದಲ್ಲಿ ಅವರಿಂದ ಸಹಾಯಹಸ್ತವನ್ನು ಪಡೆದಿದ್ದರು. ದೇಸಾಯಿ ಮತ್ತು ಶಿಂಧೆ ಅವರು ಶಾಹುರವರ ಅನುಯಾಯಿಗಳಾಗಿದ್ದರು ಮತ್ತು ತಮ್ಮದೇ ಆದ ರೀತಿಯಲ್ಲಿ ಪತ್ರಿಕೆಗಳನ್ನು ಪ್ರಾರಂಭಿಸಲು ಅವರಿಂದ ಸ್ಫೂರ್ತಿಪಡೆದಿದ್ದರು. ಈ ಎಲ್ಲ ಸಮಕಾಲದವರು ಶಾಹುರವರನ್ನು ಹಿಂದುಳಿದ ವರ್ಗಗಳ ನಾಯಕ ಮತ್ತು ಅಸ್ಪೃಶ್ಯ ಜನಾಂಗದ ಸಂರಕ್ಷಕರೆಂದು ಹೊಗಳಿದ್ದಾರೆ. ಗವಾಯಿ ಅವರು ಒಂದು ಹೆಜ್ಜೆ ಮುಂದೆ ಹೋಗಿ ಅವರನ್ನು 'ಅಸ್ಪೃಶ್ಯರ ದೇವರು ಮತ್ತು ಅವರ ಅಬ್ರಾಹಂಲಿಂಕನ್' ಎಂದು ಕರೆದಿದ್ದಾರೆ.

ಇತರೆ ಬರಹಗಾರರು ಸ್ವಾತಂತ್ರ್ಯೋತ್ತರ ಕಾಲದವರು. ಅವರೆಲ್ಲರೂ ಸಾಮಾಜಿಕ ಕಾರ್ಯ, ಶಿಕ್ಷಣ, ನ್ಯಾಯಾಂಗ, ಸಾಹಿತ್ಯ, ಇತಿಹಾಸ ಮೊದಲಾದ ಭಿನ್ನ ಭಿನ್ನ ಕ್ಷೇತ್ರಗಳಿಂದ ಬಂದವರು. ಅವರಲ್ಲಿ ಕೆಲವರು ಶಾಹುರವರ ಜೀವನ ಮತ್ತು ಕಾರ್ಯಗಳನ್ನು ಅಧ್ಯಯನಮಾಡಿದ್ದಾರೆ. ಮತ್ತು ಅವರ ಬಗ್ಗೆ ಹೆಚ್ಚು ಗೌರವ ಮತ್ತು ಪ್ರೀತಿಯಿದೆ. ಅವರಲ್ಲಿ ಶಾಹುರವರ ಜೀವನಚರಿತ್ರೆಗಾರ ಧನಂಜಯ ಕೀರ್ ಅವರೊಬ್ಬರು ಮತ್ತು ಅವರನ್ನು ಸೂಕ್ತವಾಗಿ ಒಬ್ಬ ಸಾಮಾಜಿಕ ಕ್ರಾಂತಿಕಾರಿ ರಾಜ ಎಂದು ಚಿತ್ರಿಸಿದ್ದಾರೆ. ಅವರು ಈ ಮಾತುಗಳಿಂದ ತಮ್ಮ ಬರವಣಿಗೆಯನ್ನು ಮುಕ್ತಾಯಗೊಳಿಸುತ್ತಾರೆ: "ತಮ್ಮ ಅದಮ್ಯವಾದ, ನಿಸ್ವಾರ್ಥ ಮತ್ತು ಋಷಿಯ ಆತ್ಮದಿಂದ ರಾಜರ್ಷಿ ಶಾಹು ಛತ್ರಪತಿ ಶಿವಾಜಿ ಮಹಾಶಯರ ಕಾಲದಿಂದ ಮಹಾರಾಷ್ಟ್ರದಲ್ಲಿ ಮಹಾ ಆಡಳಿತಗಾರರೆಂದು ಸಾಧಿಸಿ ತೋರಿಸಿದ್ದಾರೆ. ಅವರು ನಿಜವಾಗಿ ಒಬ್ಬ ಮಹಾ ಸಾಮಾಜಿಕ ಮನುಷ್ಯ, ಒಬ್ಬ ರಾಜರ ಕ್ರಾಂತಿಕಾರಿ, ಜನತಾಂತ್ರಿಕ ಪತ್ರಿಕೋದ್ಯಮದ ಒಬ್ಬ ಬೆಂಬಲಿಗ, ಭಾರತೀಯ ಸಂಗೀತದ ಒಬ್ಬ ಪೋಷಕ, ಮರಾಠಿ ರಂಗಭೂಮಿಯ ಒಬ್ಬ ನಿರ್ಮಾಪಕ, ಕುಸ್ತಿಕಲೆಯ ಒಬ್ಬ ಆಶ್ರಯದಾತ, ಆಧುನಿಕ

ಮಹಾರಾಷ್ಟ್ರದ ಒಬ್ಬ ನಿರ್ಮಾಪಕ, ಹಸಿರು ಕ್ರಾಂತಿಯ ಪಿತಾಮಹ ಮತ್ತು ಭಾರತದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಜನತಂತ್ರದ ಸ್ಥಾಪಕರಲ್ಲಿ ಒಬ್ಬರು."

ಪ್ರಾಚೀನ ಭಾರತೀಯ ಸಾಹಿತ್ಯ ಮತ್ತು ತಾತ್ವಿಕ ಸಿದ್ಧಾಂತದ ಮಹಾವಿದ್ವಾಂಸರಲ್ಲಿ ಒಬ್ಬರಾದ ಡಾ. ಎ. ಎಚ್. ಸಾಲುಂಖೆ ಅವರು ಶಾಹು ಛತ್ರಪತಿಯನ್ನು "ಜನತೆಯ ಒಬ್ಬ ದೇವರು" ಎಂದು ಕರೆದಿದ್ದಾರೆ. ಅವರು ಬರೆಯುತ್ತಾರೆ: "ನಾವು ದಿವ್ಯದೇವರನ್ನು ನೋಡಿಲ್ಲ. ಶಾಹುರಾಜರು ಯಾವ ಅನುಮಾನವಿಲ್ಲದೆ ನಮ್ಮ ದೇವರು. ಅವರು ಜನರಿಂದ ಪ್ರತಿಷ್ಠಾಪಿಸಲ್ಪಟ್ಟ ದೇವರು; ಅವರು ಜನರ ಕಷ್ಟ-ದುಃಖಗಳು ತಮ್ಮ ಕಷ್ಟ-ದುಃಖಗಳೆಂದು ಭಾವಿಸಿದ್ದರು. ಅವರು ಸಾಮಾಜಿಕ ಕೆಸರಿನಲ್ಲಿ ಸಿಕ್ಕಿ ಒದ್ದಾಡುತ್ತಿದ್ದ ಜನರಿಗೆ ಸಹಾಯಹಸ್ತ ನೀಡಿದರು ಮತ್ತು ದೇವರಿಂದ ನಿರೀಕ್ಷಿಸಿದ್ದ ವಿಷಯಗಳನ್ನು ಆ ದೇವರು ನೆರವೇರಿಸಿಕೊಟ್ಟರು."

ಇಂಗ್ಲಿಷ್ ಸಾಹಿತ್ಯದ ಮತ್ತೊಬ್ಬ ವಿದ್ವಾಂಸ ಮತ್ತು ಪ್ರಸಿದ್ಧ ಶಿಕ್ಷಣತಜ್ಞ ಡಾ. ಜನಾರ್ಧನ ವಾಘ್ಮಾರೆ ಅವರು ಷೆಲ್ಲಿಯವರ 'ಪಶ್ಚಿಮ ಪ್ರಗಾಥ' ಎಂಬ ಪದ್ಯವನ್ನು ನಮಗೆ ನೆನಪಿಸುತ್ತದೆ ಮತ್ತು ಶಾಹುರವರ ಜೀವನದಿಂದ ಸ್ಫೂರ್ತಿ ಪಡೆಯುವಂತೆ ಮತ್ತು ಒಂದು ಹೊಸ ಸಮಾಜವನ್ನು ಕಟ್ಟುವ ಅವರ ಅಪರಿಪೂರ್ಣವಾದ ಕೆಲಸವನ್ನು ಪೂರ್ಣಗೊಳಿಸಲು ತೀವ್ರವಾಗಿ ಒತ್ತಾಯಿಸುತ್ತದೆ. ಅವರ ಮನವಿಯು ಈ ರೀತಿಯಿದೆ –

"ರಾಜರ್ಷಿಯವರ ಕನಸು ನನಸಾಗದ ಇಂದು ಇತಿಹಾಸದ ಪುಟಗಳಲ್ಲಿ ಸಿಕ್ಕಿಹಾಕಿಕೊಂಡಂತಿದೆ. ಅದನ್ನು ಮುಂದುವರಿಸಲು ವಿಧಿಯು ನಮಗೆ ಸನ್ನೆಮಾಡುತ್ತಿದೆ.

"ಷೆಲ್ಲಿಯವರ ಆಶಾವಾದವನ್ನು ಪಶ್ಚಿಮದ ಮಾರುತ ಹುರಿದುಂಬಿಸಿತು. ಅವರು ಹೇಳುತ್ತಾರೆ, 'ಓ ಮಾರುತವೆ ಚಳಿಗಾಲ ಬಂದರೆ ಬಹಳ ಹಿಂದಿನವರೆಗೆ ನೆಗೆಯಬಹುದು!' ಶಾಹುರವರ ಕ್ರಾಂತಿಕಾರಿ ಸ್ವಭಾವವು ಅದೇ ರೀತಿಯಲ್ಲಿ ಸಾಮಾನ್ಯ ಜನರ ಆಶಾವಾದವನ್ನು ಹುರಿದುಂಬಿಸಿತು. ಆದರೆ, ಆ ಪ್ರೇರಣೆ ಬಹಳ ಹಿಂದೆಯೇ ಉಳಿದುಬಿಟ್ಟಿತು; ಬಹಳ ಹಿಂದೆಯೇ ಉಳಿದುಬಿಟ್ಟಿತು."

ನಾವು ಈ ಮನುಷ್ಯನ ಬೆಳಕಿನಲ್ಲಿ ಸ್ಫೂರ್ತಿ ಪಡೆದರೆ, ನಮ್ಮ ಮಕ್ಕಳಿಗಾಗಿ ಯೋಗ್ಯವಾದ ಸಮಾಜ ಕಟ್ಟಲು, ನಾವು ಅಪವಿತ್ರವಾದ ತಾರತಮ್ಯತೆ ಮತ್ತು ವಿಭಜನೆಯನ್ನು ಜಯಿಸಬಲ್ಲೆವೆಂಬ ವಿಶ್ವಾಸ ನನಗಿದೆ. ಅವರ ಕೆಲಸವನ್ನು ಮುಂದಕ್ಕೊಯ್ಯುವುದು ನಮ್ಮ ಕರ್ತವ್ಯ.

ಈ ಸಂಪುಟದಲ್ಲಿರುವ ಪ್ರತಿಯೊಂದು ಲೇಖನವನ್ನು ಪರಿಶೀಲಿಸುವುದಕ್ಕೆ ಇಲ್ಲಿ ಜಾಗದ ಅವಕಾಶವಿಲ್ಲ. ಆದ್ದರಿಂದ ಈ ಲೇಖನಗಳು ತಮ್ಮದೇ ಆದ ಪ್ರಾಮುಖ್ಯತೆ ಮತ್ತು ಸ್ಥಾನವನ್ನು ಈ ಸಂಗ್ರಹದಲ್ಲಿ ಹೊಂದಿವೆಯೆಂಬುದನ್ನು ಗಮನಿಸಿದರೆ ಸಾಕು. ಈ ಎಲ್ಲಾ ಲೇಖನಗಳು ಜನರ ವಿಶೇಷವಾಗಿ ರೈತರ, ಹಿಂದುಳಿದ ವರ್ಗಗಳ ಮತ್ತು ದಮನಿತ ಸಮುದಾಯಗಳ ಕಲ್ಯಾಣಕ್ಕಾಗಿ ಶಾಹು ಛತ್ರಪತಿಯವರ ಯುಗ ನಿರ್ಮಾಣದ ಧೋರಣೆ ಮತ್ತು ಕೃತಿ (ಕಾರ್ಯ) ಬಗ್ಗೆ ವಿವರಗಳನ್ನು ಮಂಡಿಸುತ್ತವೆ ಮತ್ತು ವಿಶ್ಲೇಷಣೆ ಮಾಡುತ್ತವೆ. ಆ ಕಾಲದಲ್ಲಿ ಮಹಾರಾಜರಲ್ಲಿ ಅವರೊಬ್ಬರೇ 'ರಾಜರ್ಷಿ' ಎಂಬ ಉಪಾಧಿಯನ್ನು ಪಡೆದವರಾಗಿದ್ದರು. ಗೊತ್ತಿರುವ ಭಾರತದ ಇತಿಹಾಸದಲ್ಲಿ ಇದು ನಿಜವಾಗಿಯೂ ಅಸಾಮಾನ್ಯವಾದುದು.

---

# ಪರಿವಿಡಿ

೧

# ಸರ್ ಶಾಹು ಛತ್ರಪತಿ ಮಹಾರಾಜ– ಒಬ್ಬ ನಿಜವಾದ ಮಹಾನುಭಾವ

**– ಸರ್. ಎಸ್. ಎಂ. ಫ್ರೆಜರ್, ಕೆ.ಸಿ.ಎಸ್.ಐ.,**

*ಶಾಹುರವರಿಗೆ ಗೆಳೆಯ,*

*ತತ್ವಚಿಂತಕ ಮತ್ತು ಮಾರ್ಗದರ್ಶಕ*

**ಕೊ**ಲ್ಹಾಪುರ ಸಂಸ್ಥಾನವು ಒಂದು ಪ್ರತ್ಯೇಕ ಅಸ್ತಿತ್ವ ಪಡೆದ ದಿನಗಳಿಂದಲೂ ಮಾನ್ಯ ಮಹಾರಾಜರಾದ ಸರ್ ಶಾಹು ಛತ್ರಪತಿ ಮಹಾರಾಜರು ತಮ್ಮದೇ ಆದ ಸಾಲಿನಲ್ಲಿ ಒಬ್ಬ ಮಹಾ ಆಡಳಿತಗಾರನೆಂದು ಅವರ ಜನರೇ ಅವರನ್ನು ಸರಿಯಾಗಿ ಗೌರವಿಸಿದ್ದಾರೆ ಮತ್ತು ಸ್ಥಳೀಯ ಅಭಿಪ್ರಾಯದ ದೃಷ್ಟಿಯಿಂದ ಅವರ ಜೀವನದ ದಾಖಲೆಯನ್ನು ಸಂರಕ್ಷಿಸುವುದು ಉತ್ತಮ.

ಮಾನ್ಯ ಮಹಾರಾಜರು ತಮ್ಮ ಬಗ್ಗೆ ತಾವೇ ಪ್ರಚಾರ ಮಾಡಿಕೊಳ್ಳುವ ಬಗ್ಗೆ ನಿರಾಸಕ್ತಿ ಹೊಂದಿದ್ದರಿಂದ ಭಾರತದಲ್ಲಿ ಮಾತ್ರವಲ್ಲದೆ ಇಂಗ್ಲೆಂಡಿನಲ್ಲೂ ಇತರೆ ಆಳುವ ಮಹಾರಾಜರಿಗಿಂತ ಹೆಚ್ಚಿಗೆ ಅಪರಿಚಿತರಾಗಿದ್ದರು, ಆದರೆ ಅವರ ಜೀವನ ಮತ್ತು ಕಾರ್ಯಗಳನ್ನು ಬಲ್ಲವರು, ಬ್ರಿಟಿಷ್ ಇಂಡಿಯಾ ಮತ್ತು ದೇಶೀಯ ಸಂಸ್ಥಾನಗಳಲ್ಲಿ ತಮ್ಮ ಸಹೋದರ ದೇಶಬಾಂಧವರಿಗೆ. ಅವರು ಯಾವುದೇ ಪದವಿ ಪಡೆದಿದ್ದು ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಿಗಾಗಿ ಹೆಚ್ಚು ಧೈರ್ಯದಿಂದ, ಹೆಚ್ಚು ಪ್ರಾಯೋಗಿಕವಾಗಿ ಮತ್ತು ಹೆಚ್ಚು ಸ್ಫೂರ್ತಿದಾಯಕವಾಗಿ ಕೊಡುಗೆ ನೀಡಿದವರು, ಅವರಲ್ಲದೆ ಬೇರೆಯವರು ಇಲ್ಲವೆಂದೇ ಒಪ್ಪುವರು.

ಸುಧಾರಣೆಗಳ ಬೋಧಕರು ಕಾಲದಿಂದ ಕಾಲಕ್ಕೆ ಹಲವಾರು ವಿಧಗಳಲ್ಲಿ ಕಾಣಿಸಿಕೊಂಡಿದ್ದಾರೆ; ವಿದ್ವಾಂಸರು, ಅಕ್ಷರವರ್ಗಗಳ ತತ್ವಚಿಂತಕರು, ಸಂತರು, ಕವಿಗಳು, ತಮ್ಮ ಸಹಮಾನವರನ್ನು ಪ್ರೀತಿಸುವವರು– ಇವರೆಲ್ಲರೂ ವಿವಿಧ ಜಾತಿಗಳಿಂದ ಮೂಡಿಬಂದಿದ್ದಾರೆ. ತಮ್ಮ ಮುಗ್ಧ ಸಹಮಾನವ ಬಾಂಧವರ ಕಲ್ಯಾಣಕ್ಕಾಗಿ ಸಾಮಾಜಿಕ ಮತ್ತು ಧಾರ್ಮಿಕ ಸಂಕೀರ್ಣ ವ್ಯವಸ್ಥೆಯಲ್ಲಿ ಭದ್ರವಾಗಿ ಬೇರೂರಿದ ಅನಿಷ್ಟಗಳ ವಿರುದ್ಧ ಮಾಡಿದ ದೀರ್ಘಕಾಲದ ಹೋರಾಟದಲ್ಲಿ ತಮ್ಮ ಇಡೀ ಮನುಷ್ಯಜೀವನದಲ್ಲಿ ನೊಂದ ಆಳುವ ಮಹಾರಾಜನೊಬ್ಬನ ಅಂತಹ ನಿದರ್ಶನಗಳನ್ನು ದಾಖಲಿಸಿರುವುದು ಅನುಮಾನಕ್ಕೆ ಎಡೆಮಾಡಿಕೊಡುತ್ತದೆ.

ಹೆಸರಾಂತ ಕುಟುಂಬದ ಒಬ್ಬ ಕ್ಷತ್ರಿಯನಾದ ಶಾಹು ಮಹಾರಾಜರು ಬಾಂಬೆ ಪ್ರೆಸಿಡೆನ್ಸಿಯ ಸಾಮಂತ ಸಂಸ್ಥಾನದ ಅರಸರಾಗಿ (ಆಡಳಿತಗಾರನಾಗಿ) ದ್ದರು. ಅವರು ಕೆಳಜಾತಿಗೆ ಸೇರದಿದ್ದರೂ ಸ್ವತಃ ದುಸ್ಥಿತಿಗೆ ಮತ್ತು ದಮನಕ್ಕೊಳಗಾಗಿದ್ದರು. ಅವರು ಒಬ್ಬ ಜಾಗರೂಕ ಸನ್ಯಾಸಿಯಾಗದಿದ್ದರೂ ಒಬ್ಬ ಸದೃಢ ವ್ಯಕ್ತಿಯಾಗಿದ್ದರು. ಅವರು ಒಬ್ಬ ಹೆಂಡತಿ ಮತ್ತು ಮಕ್ಕಳನ್ನು ಪಡೆದ ಅದೃಷ್ಟಶಾಲಿ ಮತ್ತು ಅವರು ತಮ್ಮ ಗುಣ ವಿಶೇಷಗಳಿಂದ ಮಾನವೀಯರಾಗಿದ್ದರು. ಆದರೆ ಅವರು ಒಬ್ಬ ಮುಕ್ತಚಿಂತಕರಾಗಿರಲಿಲ್ಲ, ಅವರು

ತಮ್ಮ ಮನಸ್ಸಾಕ್ಷಿಗೆ ಅನುಗುಣವಾಗಿ ತಮ್ಮ ವೈಯಕ್ತಿಕ ಆಚರಣೆಗಳಲ್ಲಿ ಮೂಢನಂಬಿಕೆಯಲ್ಲಿದ್ದರು, ಅವರು ಪಾಶ್ಚಿಮಾತ್ಯ ಗಣತಂತ್ರವಾದಿ ವಿಚಾರಗಳಿಗೆ ಪ್ರಭಾವಿತರಾಗದೆ ಬ್ರಿಟಿಷ್ ಚಕ್ರವರ್ತಿಗೆ ನಿಷ್ಠರಾಗಿದ್ದರು, ಅವರು ಒಬ್ಬ ಪರಿಪೂರ್ಣ ಕ್ರೀಡಾಪಟುವಾಗಿದ್ದರು, ಅವರಿಗೆ ಕುದುರೆಸವಾರಿ ಮತ್ತು ಬೇಟೆಯಾಡುವುದು ಅಚ್ಚುಮೆಚ್ಚು, ಇಡೀ ವಿಶ್ವವು ಸುಖಕರ ಜೀವನ ನಡೆಸುವುದಕ್ಕೆ, ವಾಸಕ್ಕೆ ಇರುವುದೆಂದು ಪರಿಭಾವಿಸಿದ ಇಂಥ ಮಹಾರಾಜರಲ್ಲಿ ಇವರು ಅವುಗಳಿರುವ ಸ್ಥಿತಿಯಲ್ಲಿ ವಸ್ತುಗಳನ್ನು ಅತ್ಯುತ್ತಮವಾಗಿ ಬಳಸಬೇಕೆಂದು ಮತ್ತು ಪ್ರಚೋದಕ ವಿರೋಧಿಗಳಿಂದ ದೂರವಿರಬೇಕೆಂದು ಬಯಸಿದ್ದರು. ಅಂತಹ ಸಾಂಪ್ರದಾಯಿಕ ಮನೋಭಾವವು ಛತ್ರಪತಿ ಮಹಾರಾಜರಿಗೆ ಹೋರಾಟ ಪ್ರಜ್ಞೆಯನ್ನಾಗಲೀ ಅಥವಾ ತಮ್ಮ ಹುದ್ದೆಗೆ (ಅಂತಸ್ತಿಗೆ) ಇರುವ ಕಟ್ಟುಪಾಡುಗಳ ಆದರ್ಶವಾಗಲೀ ನೀಡಿರಲಿಲ್ಲ. ಅವರ ನಾನಾ ತರಹೆಯ ಲಕ್ಷಣಗಳು ತಮ್ಮ ಸದುದ್ದೇಶಗಳಲ್ಲಿ ಅತ್ಯಂತ ನಿಸ್ವಾರ್ಥಿಗಳಲ್ಲಿ ಒಂದಕ್ಕೆ ಜೀವನದುದ್ದಕ್ಕೂ ಹೋರಾಡುವ ಆಸಕ್ತಿಯನ್ನು ತುಂಬಿದವು.

ತಮ್ಮ ಇಪ್ಪತ್ತಾರು ವರ್ಷಗಳ ಆಡಳಿತದ ಪ್ರಾರಂಭದಿಂದಲೇ ಮಹಾರಾಜರು ಜಾತಿಪದ್ಧತಿಯ ಪ್ರಾಬಲ್ಯದಿಂದ ಎಲ್ಲಾ ವರ್ಗಗಳನ್ನು ವಿಮೋಚನೆಗೊಳಿಸಿ ಅವರ ಕಲ್ಯಾಣಕ್ಕಾಗಿ ದುಡಿಯುವುದೊಂದೇ ತಮ್ಮ ಮಿಷನ್ನಾಗಿ ಮಾಡಿಕೊಂಡರು. ಒಬ್ಬ ಹಿಂದುವಿನ ಸಾಮಾಜಿಕ ಮತ್ತು ಧಾರ್ಮಿಕ ಸ್ಥಾನಮಾನವು ಸಮಾಜದ ಜಾತಿ ಅಥವಾ ಒಂದು ವಿಶಿಷ್ಟ ಅನ್ಯೋನ್ಯ ಸಂಬಂಧ ಅಥವಾ ಪ್ರಭಾವಕ್ಕೆ ಅವಕಾಶವೇ ಇಲ್ಲದಂಥವರ ಮೇಲೆ ಅವಲಂಬಿಸಿರುತ್ತದೆಯೆಂಬುದು ಸರ್ವೇಸಾಮಾನ್ಯ. ಈ ವ್ಯವಸ್ಥೆಯಲ್ಲಿ ಅವನು ಹುಟ್ಟಿ ಅಲ್ಲಿಯೇ ಬದುಕಿ ಸಾಯಬೇಕಾಗುತ್ತದೆ. ಆದ್ದರಿಂದ ಮಾನ್ಯ ಮಹಾರಾಜರು ಈ ವಿಷಯದಲ್ಲಿ ಸಂಪ್ರದಾಯದಿಂದ ಗೌರವಿಸಲ್ಪಟ್ಟ ಮತ್ತು ಧರ್ಮಾಧಾರಿತ ಈ ಜಾತಿವ್ಯವಸ್ಥೆಯ ವಿರುದ್ಧ ಹೋರಾಡುವ ಮಹಾ ಜವಾಬ್ದಾರಿಯನ್ನು ವಹಿಸಿಕೊಂಡರು. ಈ ಹೋರಾಟದಲ್ಲಿದ್ದ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳೊಂದಿಗೆ ನಂತರ ರಾಜಕೀಯ ಸುಧಾರಣೆಯ ಸಮಸ್ಯೆ ತಳುಕು ಹಾಕಿಕೊಂಡಿತು.

ಶಾಹುಮಹಾರಾಜರ ಹಲವಾರು ಚಟುವಟಿಕೆಗಳನ್ನು ಅವರ ಸಂಬಂಧಪಟ್ಟ ಎರಡು ಉದ್ದೇಶಗಳಿಗೆ ವರ್ಗೀಕರಿಸಬಹುದು–ಜನರಿಗೆ ಶಿಕ್ಷಣ ನೀಡುವುದು ಮತ್ತು ಜಾತಿ ನಿರ್ಮಿಸಿದ ಮನುಷ್ಯ ಮನುಷ್ಯರ ನಡುವಣ ಅಡೆತಡೆಗಳನ್ನು ಕಿತ್ತುಹಾಕುವುದು.

ಭಾರತದಲ್ಲಿ ಎಲ್ಲಾ ಜಾತಿ–ಪಂಥಗಳ ಜನರಿಗೆ ಶಾಲೆಗಳನ್ನು ತೆರೆದು ಶಿಕ್ಷಣ ನೀಡುವುದು ಬ್ರಿಟನ್ನಿನ ಪ್ರಮುಖ ಕರ್ತವ್ಯವೆಂದು ಬ್ರಿಟಿಷ್ ಸರಕಾರ ೧೮೫೪ರಲ್ಲಿ ಪ್ರಮುಖ ನಿರ್ಧಾರ ಕೈಗೊಂಡಿತು. ಅಂದಿನಿಂದ ಇಂಡಿಯಾದ ಶಿಕ್ಷಣದಲ್ಲಿದ್ದ ಬ್ರಾಹ್ಮಣ ಏಕಸ್ವಾಮ್ಯತೆ ನಿಂತುಹೋಯಿತೆಂಬುದನ್ನು ನೆನಪಿಸಿಕೊಳ್ಳಬೇಕು. ಭಾರತೀಯರಲ್ಲೇ ನೆಲೆಯೂರಿದ ಪಕ್ಷಪಾತಗಳಿಂದಾಗಿ ಬ್ರಿಟಿಷ್ ಸರಕಾರವು ಧಾರ್ಮಿಕ ತಟಸ್ಥತೆಯನ್ನು ಅನುಸರಿಸಿದ್ದರೂ ಅಲ್ಲಿಂದ ಮುಂದಕ್ಕೆ ತಳಮಟ್ಟದವರಿಗೆ ಶಿಕ್ಷಣವನ್ನು ವಿಸ್ತರಿಸಲು ಪ್ರಗತಿಪರ ಕ್ರಮ ಕೈಗೊಂಡಿತು. ಆದರೂ ಲಕ್ಷಾಂತರ ಮಂದಿ ಅಜ್ಞಾನದಲ್ಲಿ ಮುಳುಗಿದ್ದರೂ ಮಹಾರಾಜರು ಬ್ರಾಹ್ಮಣೇತರರ ಉನ್ನತಿಗಾಗಿ ಬ್ರಾಹ್ಮಣೇತರರ ಮೊಟ್ಟಮೊದಲ ವೇದಿಕೆಯನ್ನು ಕಟ್ಟಿ, ಹಿಂದುಳಿದ ವರ್ಗಗಳಿಗೆ ಉಚಿತ ಕಡ್ಡಾಯ ಶಿಕ್ಷಣ ನೀಡಲು ತಮ್ಮ ಎಲ್ಲಾ ಶಕ್ತಿಗಳನ್ನು ಸಮರ್ಪಿಸಿದರು.

ತಮ್ಮ ಜೀವನದ ಕೊನೆಗೆ ಅವರು ಶಾಲೆಗಳನ್ನು ಸ್ಥಾಪಿಸುವುದನ್ನು ಮತ್ತು ಹೊಸ ಶಾಲೆಗಳಿಗೆ ದತ್ತಿಕೊಡುವುದನ್ನು ಎಲ್ಲಕ್ಕಿಂತ ಮುಖ್ಯವಾಗಿ ಇದುವರೆಗೂ ಉಚ್ಚಶಿಕ್ಷಣ ಅಥವಾ ಅಧಿಕಾರದ ರುಚಿಯ

ಗಂಧಗಾಳಿಯನ್ನೇ ಕಾಣದಿದ್ದ ಹಿಂದುಳಿದ ವರ್ಗಗಳಿಗೆ ಉನ್ನತ ಶಿಕ್ಷಣದ ಪ್ರಯೋಜನಗಳನ್ನು ಲಭಿಸುವಂತೆ ಮಾಡಲು ವಿದ್ಯಾರ್ಥಿನಿಲಯಗಳನ್ನು ತೆಗೆದರು. ಭಾರತದಲ್ಲಿ ಎಲ್ಲಾ ಶಿಕ್ಷಣದ ಅಧಿಕಾರಿಗಳು ಈಗ ಅಂಥ ವಿದ್ಯಾರ್ಥಿ ನಿಲಯಗಳ ಮಹತ್ವವನ್ನು ಕಂಡಿಕೊಂಡಿವೆ, ಆದರೆ ಕೊಲ್ಹಾಪುರದಲ್ಲಿರುವಂತೆ ಯಾವುದೇ ನಗರವು ಇಡೀ ಭರತಖಂಡದಲ್ಲಿ ಅಂಥ ಸೌಲಭ್ಯದ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿಲ್ಲ ಅಥವಾ ಶಾಲೆಗಳಲ್ಲಿ ಧಾರ್ಮಿಕ ಬೋಧನೆ ಪೂರಕಗೊಳಿಸುವುದರಲ್ಲಿ ಸಫಲತೆ ಪಡೆದಿಲ್ಲ. ೧೯೨೦ರ ಹೊತ್ತಿಗೆ ಮಹಾರಾಜರು ಭಾರತೀಯ ಕ್ರಿಶ್ಚಿಯನ್ ಮತ್ತು ಅಸ್ಪೃಶ್ಯ ಜನಾಂಗಗಳು ಸೇರಿದಂತೆ ಬೇರೆಬೇರೆ ಜಾತಿಸಮುದಾಯಗಳ ೧೧ ವಿದ್ಯಾರ್ಥಿನಿ ಲಯಗಳನ್ನು ತಮ್ಮ ಪುಟ್ಟ ರಾಜಧಾನಿಯಲ್ಲಿ ಪ್ರಾರಂಭಿಸಿದರು. ಅವರು ತಮ್ಮ ಮಹಾ ಔದಾರ್ಯವನ್ನು ಕೇವಲ ತಮ್ಮ ಪ್ರಜೆಗಳಿಗೆ ಮಾತ್ರ ಸೀಮಿತಗೊಳಿಸಲಿಲ್ಲ. ತಮ್ಮ ಎಲ್ಲಾ ಸುಧಾರಣೆಗಳ ಕಾರ್ಯಗಳಲ್ಲಿ ತಮ್ಮ ಹೆಗ್ಗುರಿ (ಮಿಷನ್ನು) ಯನ್ನು ಕೊಲ್ಹಾಪುರದಾಚೆಗೂ ವಿಸ್ತರಿಸಿದರು ಮತ್ತು ಜಾತಿ ಲೆಕ್ಕಾಚಾರದಲ್ಲಿ ತಮ್ಮ ಮರಾಠ ಜಾತಿಗೆ ಸೀಮಿತವಾಗಿರದೆ ಮಹಾರಾಷ್ಟ್ರದ ಎಲ್ಲ ಜನರಿಗೂ ಅವುಗಳನ್ನು ವಿಸ್ತರಿಸಿದರು.

ಅವರ ಸುಧಾರಣೆಗಳ ಧಾರ್ಮಿಕ ಆಯಾಮವು ವೇದೋಕ್ತ ವಿವಾದದಿಂದ ಮೊಟ್ಟಮೊದಲ ಚಾಲಕಶಕ್ತಿಯನ್ನು ಪಡೆಯಿತು. ಈ ವೇದೋಕ್ತ ಸಮಸ್ಯೆಯು ಕೇವಲ ಅದೊಂದು ಸಮಸ್ಯೆಯಾಗಿರದೆ, ಅದೊಂದು ಮಹಾ ವ್ಯವಹಾರವಾಗಿತ್ತು. ಅದು ಭೋಂಸ್ಲೆ ಮತ್ತು ಘಾಟ್ಗೆ ಕುಟುಂಬ ಕ್ಷತ್ರಿಯ ಸ್ಥಾನಮಾನ ಪಡೆಯುವುದು ಅಥವಾ ಶೂದ್ರವರ್ಗಕ್ಕೆ ಕ್ಷತ್ರಿಯ ಸ್ಥಾನಮಾನದ ದರ್ಜೆಯನ್ನು ನೀಡುವುದಾಗಿತ್ತು. ಪ್ರೊಫೆಸರ್ ಲಠ್ಠೆಯವರು ಡೆಕ್ಕನ್ ಪ್ರಸ್ಥಭೂಮಿಯಲ್ಲಿ ಶಿವಾಜಿ ಕಾಲದಿಂದಲೂ ಕ್ಷತ್ರಿಯ ವರ್ಗದ ಆಕಾಂಕ್ಷೆಯಾದ ತಮ್ಮ ಸಾಮಾಜಿಕ ಹಕ್ಕುಗಳನ್ನು ಒತ್ತಾಯಿಸಿದಾಗ ಬ್ರಾಹ್ಮಣರು ವಿರೋಧಿಸಿದ್ದನ್ನು ಇವರ ನಡುವಣ ಈ ಹಳೇ ಹೋರಾಟದ ಐತಿಹಾಸಿಕ ಮಜಲುಗಳನ್ನು ಚೆನ್ನಾಗಿ ಗುರುತಿಸಿದ್ದಾರೆ.

ಆ ದಿನಗಳಲ್ಲಿ ಇದ್ದಂತೆಯೇ ಮತ್ತೆ ಈ ಶತಮಾನದಲ್ಲಿ ಮರಾಠರ ರಾಜಕೀಯ ದ್ವೇಷವು ಒಂದು ವರ್ಗದ ಗುರಿಯಾಗಿ, ೧೯೦೧ರ ಮುಂದಕ್ಕೆ ಕೊಲ್ಹಾಪುರದ ಆಡಳಿತಗಾರ (ರಾಜ) ಮತ್ತು ಬ್ರಾಹ್ಮಣಿಕೆಯ ವ್ಯವಸ್ಥೆಯ ನಡುವೆ ಬಲಾಬಲದ ಪ್ರದರ್ಶನವಾಗಿ ಮಾರ್ಪಟ್ಟು ಈ ಸಮಸ್ಯೆಗೆ ಧಾರ್ಮಿಕ ಬಣ್ಣ ಹಚ್ಚಲಾಯಿತು. ಮಧ್ಯಕಾಲೀನ ಇತಿಹಾಸದ ಒಂದು ಕುತೂಹಲದ ಮುಂದೆ ಪೋಪ್‌ಗುರು ವಿಧಿಸಿದ್ದ ಬಹಿಷ್ಕಾರದ ನೋವು ಮತ್ತು ದಂಡಗಳು ಇಂದಿನ ಯೂರೋಪಿನವನಿಗೆ ಏನೇನೂ ಅಲ್ಲ. ಮಹಾರಾಜರಿಗೆ ವಿರುದ್ಧವಾಗಿ ಮುಂದೊಡ್ಡಿದ ಅಡ್ಡಿ–ಆತಂಕಗಳ ಬಗ್ಗೆ ಹಾಗು ಹಿಂದು ಕರ್ಮಠರು ಬ್ರಾಹ್ಮಣರು, ದೈವ ಮುಖವಾಣಿಗಳು ಅವರ ಮೇಲೆ ಹೇರಿದ್ದ ಧಾರ್ಮಿಕ ನಿಷೇಧಗಳಿಗೆ ಅವರು ತೆತ್ತ ಬೆಲೆಯನ್ನು ಅವರು (ಯೂರೋಪಿನವನು) ಮನವರಿಕೆಮಾಡಿಕೊಳ್ಳಲಾರರು ಮತ್ತು ದೈವಾನುಗ್ರಹ ವಿತರಕರು ತಮ್ಮನ್ನು ಗೌರವಿಸುವುದಕ್ಕಾಗಿಯೇ ರಾಜನನ್ನು ಬೆಳೆಸಿದ್ದೇವೆಯೆಂದು ಭಾವಿಸುತ್ತಾರೆ.

ಅವರ (ಶಾಹು) ಸ್ವಂತ ವಂಶಪರಂಪರೆಯ ಪುರೋಹಿತ, ಜಗದ್ಗುರು ಸ್ವಾಮಿ ಅಥವಾ ಶಂಕರಾಚಾರ್ಯ ಮಠದ ಮುಖ್ಯ ಪುರೋಹಿತ ಮತ್ತು ಇದುವರೆಗೆ ತಮಗೆ ನಿಷ್ಠರಾಗಿದ್ದ ಸಾವಿರಾರು ಪ್ರಜೆಗಳು ಸೇರಿದಂತೆ ಡೆಕ್ಕನ್ನಿನ ಬ್ರಾಹ್ಮಣರ ನಿಕಟ ಸಮುದಾಯದ ನಿಗಮ (ಕಾರ್ಪೋರೇಶನ್)ವನ್ನು ಮಹಾರಾಜರ ವಿರುದ್ಧ ಒಟ್ಟಾಗಿ ತಿರುಗಿಬೀಳುವಂತೆ ಪುಸಲಾಯಿಸಲಾಯಿತು. ಮಹಾರಾಜರಿಗೆ ಸಂಬಂಧಿಸಿದಂತೆ ಈ ವಿಷಯದ ಬಗ್ಗೆ ಅವರು ಒಪ್ಪಂದ (ಹೊಂದಾಣಿಕೆ) ಮಾಡಿಕೊಂಡು ತಮ್ಮ ಕ್ಷತ್ರಿಯತ್ವದ ಸ್ಥಾನಮಾನವನ್ನು ಆಳುವ

ರಾಜನಾಗಿ ಪಡೆಯಬಹುದಾಗಿತ್ತು. ಒಬ್ಬ ದುರ್ಬಲ ಮನುಷ್ಯ ಈ ಆಮಿಷಕ್ಕೆ ಒಳಗಾಗಬಹುದಾಗಿತ್ತು. ಆದರೆ ಮತಾಂಧರ ಕಿರುಕುಳದ ಅನ್ಯಾಯವನ್ನು ಅವರು ಸಹಿಸಬೇಕಾಗಿತ್ತು. ಆದರೆ ಅವರು ಬೇಗನೆ ತಮ್ಮ ಸಹಾನುಭೂತಿಯನ್ನು ತಮ್ಮ ಏಳಿಗೆಯನ್ನು ತಾವೇ ಮಾಡಿಕೊಳ್ಳಲಾರದ ಸ್ಥಿತಿಯಲ್ಲಿದ್ದ ಜನರಿಗೆ ತೋರಿಸಿದರು. ಕೆಲವು ವರ್ಷಗಳು ಕಳೆದ ಮೇಲೆ ಅವರು ಅಂತಿಮವಾಗಿ ತಮ್ಮ ಹೋರಾಟವನ್ನು ಗೆದ್ದರು. ತಮ್ಮ ನಿರ್ಧಾರ ನಿಶ್ಚಿತವಾಯಿತು. ಅಲ್ಲಿಂದ ಮುಂದಕ್ಕೆ ಕ್ಷತ್ರಿಯರು ಮಾತ್ರವಲ್ಲದೆ ಇತರೆ ಜಾತಿಯವರು ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಬ್ರಾಹ್ಮಣ ಪುರೋಹಿತಶಾಹಿಯನ್ನು ಅವಲಂಬಿಸದೆ ಸ್ವತಂತ್ರವಾಗಿ ನಿಂತರು.

ಇಂತಹ ನಿರ್ಧಾರದ ಪರಿಣಾಮಗಳು ದೂರಗಾಮಿಯಾಗಿರುತ್ತವೆ. ಕ್ಷತ್ರಿಯರಿಗೆ ಪೂಜೆಮಾಡುವ ವಿಧಾನವು ವೇದಗಳ ರೂಪದಲ್ಲಿಲ್ಲದಿದ್ದರೆ ಬ್ರಾಹ್ಮಣರ ಪಾರಮ್ಯವನ್ನು ಒಪ್ಪಿಕೊಳ್ಳಲು ಸಾಧ್ಯವೆಂದೂ ಮಹಾರಾಜರು ಜೈನರು ಮತ್ತು ಲಿಂಗಾಯತರ ಸಾದೃಶ್ಯದಂತೆಯೇ ತಮ್ಮದೇ ಆದ ಜಾತಿಗೆ ಒಬ್ಬ ಪುರೋಹಿತನನ್ನು ಪ್ರತ್ಯೇಕವಾಗಿ ನೇಮಿಸಿಕೊಳ್ಳುವುದಕ್ಕೆ ಯೋಚಿಸಿದರು. ಮೊದಲಿಗೆ ಮಾನ್ಯ ಮಹಾರಾಜರು ಅಕ್ಷರರಂತೆಯೇ ಹಿಂದುಧರ್ಮದ ನಾನಾಬಗೆಯ ಸುಧಾರಣೆಗಳ ಆಂದೋಲನಗಳಾದ ಡೆಕ್ಕನ್‌ನಲ್ಲಿದ್ದ ಸತ್ಯಶೋಧಕ ಸಮಾಜ, ಬ್ರಹ್ಮೋವಾದ, ಥಿಯೋಸಫಿ ಮತ್ತು ಆರ್ಯ ಸಮಾಜಗಳನ್ನು ಸಂಶೋಧನೆ ಮಾಡಿ ಬ್ರಾಹ್ಮಣೇತರರ ಆಧ್ಯಾತ್ಮಿಕ ಮತ್ತು ಸಾಮಾಜಿಕ ಅಗತ್ಯಗಳನ್ನು ಪೂರೈಸುವುದು ಯಾವುದೆಂದು ಕಂಡುಕೊಂಡರು.

ಇತ್ತೀಚಿನವರೆಗೆ ಪರಸ್ಪರ ವಿರೋಧಿ ಧಾರ್ಮಿಕ ಪಂಥಗಳ ವಿವಾದಗಳಲ್ಲಿ ಸಾಮಾನ್ಯ ಮನುಷ್ಯಪ್ರಜ್ಞೆಯ ಅಂಶ ತೀರಾ ಗಮನಾರ್ಹವಾಗಿರಲಿಲ್ಲ. ಮತ್ತು ಹಿಂದು ಸಮಾಜದಲ್ಲಿ ಬ್ರಾಹ್ಮಣ ಪುರೋಹಿತರು ಅಧಿಕೃತವಾಗಿ ಪೂಜಾಕಾರ್ಯಗಳನ್ನು ನೆರವೇರಿಸುತ್ತಿದ್ದರು ಮತ್ತು ಅವರದೇ ಮೇಲುಗೈಯಾಗಿತ್ತು. ಇದರಲ್ಲಿ ಯಾವ ಪ್ರಶ್ನೆಯೂ ಇರಲಿಲ್ಲ. ಒಂದು ಹೊಸ ಹುರುಪು ಪ್ರಚೋದನೆಗೊಂಡಿತು ಮತ್ತು ಬ್ರಾಹ್ಮಣರ ಮತಾಂಧತೆಯ ಹೊಸ ಅಭಿವ್ಯಕ್ತಿಗಳು ಹಿಂದುಧರ್ಮವನ್ನು ಶುದ್ಧೀಕರಿಸುವ ಆಶೆಯನ್ನು ಜನಸಾಮಾನ್ಯರಲ್ಲಿ ಜಾಗೃತಗೊಳಿಸಿದವು. ದೇವರು ಮತ್ತು ಮನುಷ್ಯನ ನಡುವೆಯಿರುವ ಅನಿವಾರ್ಯವಾದ ಮಧ್ಯಸ್ಥನಾದ ಪುರೋಹಿತಶಾಹಿಯನ್ನು ಬೇರುಸಹಿತ ಕಿತ್ತುಹಾಕುವ ಹಂಬಲ ಜನರಲ್ಲಿ ಮೂಡಿತು.

ಸತ್ಯಶೋಧಕದ ನಾಯಕರು ಯೂರೋಪಿನಲ್ಲಿ ಲೂಥರನ ನಾಯಕತ್ವದಲ್ಲಿ ಪ್ರಾಟೆಸ್ಟೆಂಟರು ತಪ್ಪೇ ಮಾಡದಂತಹ ಪೋಪ್ ಗುರುವಿನ ವಿರುದ್ಧ ಬಂಡಾಯವೆದ್ದಂತೆಯೇ ಬ್ರಾಹ್ಮಣೇತರರು ಬ್ರಾಹ್ಮಣರ ಪುರೋಹಿತಶಾಹಿ ಮತ್ತು ಸ್ವರ್ಗದ ಬೀಗದ ಕೈಗಳನ್ನು ಪಡೆದಿರುವ ಅದರ ಮುಖ್ಯ ಮಠಾಧೀಶ ಶಂಕರಾಚಾರ್ಯರ ವಿರುದ್ಧ ಬಂಡಾಯವೇಳಬೇಕೆಂದು ಪಟ್ಟುಹಿಡಿದರು. ಇದು ಮತ್ತು ಇದೇ ತರಹೆಯ ಆಂದೋಲನಗಳು ಹಿಂದುಧರ್ಮದ ವಿಕಾಸದಲ್ಲಿ ಮಹತ್ತರವಾದುವು ಎಂದು ರುಜುವಾತುಪಡಿಸುತ್ತವೆ. ಕಾಲವೊಂದೇ ಅವುಗಳ (ಆಂದೋಲನಗಳ) ಬೆಳವಣಿಗೆ ಮುಂದುವರಿಯುವ ಅಥವಾ ಹೊಸ ಹುರುಪು ಜನರನ್ನು ಮುನ್ನೂಕಿದರೆ ಮುಂದೆ ಸೋಲುತ್ತದೆ ಎಂಬುದನ್ನು ತೋರಿಸುವುದು ಎಂಬ ಸಂಗತಿಯು ನಾನು ನಂಬಿದಂತೆಯೇ ಆಗಬೇಕು. ಆದರೆ ಅದು ಹೊರಕ್ಕೆ ಹೋಗಿ, ಕೊಲ್ಹಾಪುರ ಮತ್ತು ಅದರ ಸುತ್ತಮುತ್ತಲಿನ ಜಿಲ್ಲೆಗಳಲ್ಲಿ ಸತ್ಯಶೋಧಕವು ಒಳಕ್ಕೆ ಬರಬಹುದು. ಮಹಾರಾಜರು ೧೯೧೩ರಲ್ಲಿ ಒಂದು ಸತ್ಯಶೋಧಕ ಶಾಲೆಯನ್ನು ಸ್ಥಾಪಿಸಿದರು ಮತ್ತು ಪಟ್ಟಣಗಳಿಂದ ಹಳ್ಳಿಗಳಿಗೆ ಸ್ವಾಮಿಯ ಅಧಿಕಾರದ

ವಿರುದ್ಧ ಬಂಡಾಯವನ್ನು ಹರಡಿದರು ಮತ್ತು ಮರಾಠರೇ ಮರಾಠರ ನೂರಾರು ಮದುವೆ ಮತ್ತು ಇತರ ಸಮಾರಂಭಗಳನ್ನು ನೆರವೇರಿಸಿದರು.

ತದನಂತರ ಮಾನ್ಯ ಮಹಾರಾಜರು ವೇದಗಳ ಬುನಾದಿಯ ಮೇಲೆ ಆಧಾರಿತ ಆರ್ಯಸಮಾಜದ ಸಿದ್ಧಾಂತಗಳನ್ನು ಹೆಚ್ಚು ಸಹನಶೀಲತೆಯಿಂದ ಧಾರ್ಮಿಕ ಪುನರ್‌ರಚನೆಯ ಮಹತ್ವದ ಭರವಸೆಗಳಿಗೆ ಅವಕಾಶಮಾಡಿಕೊಟ್ಟರು. ಈ ಧಾರ್ಮಿಕ ಪುನರ್‌ರಚನೆ ಹಿಂದುಗಳಿಗೆ ಹೆಚ್ಚು ಅಂಗೀಕೃತವಾಯಿತು ಮತ್ತು ಅವರಿಗೆ ಬ್ರಾಹ್ಮಣಿಕೆಯ ಸರ್ವಾಧಿಕಾರವನ್ನು ಬಗ್ಗುಬಡಿಯಲು ಒಂದು ಬಲಿಷ್ಠ ಸಾಧನವಾಯಿತು. ೧೯೨೦ರಲ್ಲಿ ಅವರು (ಶಾಹು) "ವೈದಿಕ ಧರ್ಮದಲ್ಲಿ ಬೆರತಿರುವ ಮೂಢನಂಬಿಕೆಗಳನ್ನು ಬೇರುಸಮೇತ ಕಿತ್ತುಹಾಕಲು ಮತ್ತು ವೈದಿಕ ಪದ್ಧತಿಯ ಪಾವಿತ್ರ್ಯ (ಶುದ್ಧಿ) ವನ್ನು ಪುನರ್‌ಸ್ಥಾಪಿಸಲು" ಮರಾಠರಿಗಾಗಿ ಶಿವಾಜಿ ಕ್ಷತ್ರಿಯ ವೈದಿಕಶಾಲೆಯನ್ನು ಸಂಸ್ಥಾಪಿಸಿದರು. ಪತ್‌ಗಾವ್ ಮಠದ ಮರಾಠ ಜಗದ್ಗುರುಗಳನ್ನು ನೇಮಕಮಾಡಿದಾಗ ಅವರು ಒಂದು ದಿಟ್ಟ ನವೀನ ನಿರ್ದೇಶನಗಳನ್ನು ನೀಡಿದರು: "ನಿಮ್ಮ ಆದರ್ಶವು ದೇವರು ಮತ್ತು ಮನುಷ್ಯ(ಭಕ್ತ)ನ ನಡುವೆಯಿರುವ ಮಧ್ಯಸ್ಥಗಾರ(ಪೂಜಾರಿ)ನನ್ನು ತೆಗೆದುಹಾಕುವುದು." ಅವರು ತಮ್ಮ ಅರಮನೆಯಲ್ಲಿಯ ದೇವರುಗಳ ಪೂಜೆಯನ್ನು ಬ್ರಾಹ್ಮಣರ ಬದಲಿಗೆ ಮರಾಠರೇ ನೆರವೇರಿಸಬೇಕು ಎಂಬ ಆದೇಶವನ್ನು ಹೊರಡಿಸಿದ್ದರು.

ಅವರ ಬೋಧನೆ ಮತ್ತು ಆಚರಣೆಗಳ ನಡುವೆ ಯಾವುದೇ ಅನಿಶ್ಚಿತತೆ ತಲೆದೋರಲಿಲ್ಲ. ಸರ್ ಶಾಹು ಛತ್ರಪತಿಯವರು ತಾನು ಮಾಡುವುದಕ್ಕೆ ಸಿದ್ಧರಿಲ್ಲದವರನ್ನು ಎಂದಿಗೂ ಇದು ಮಾಡಬೇಕೆಂದು ಕೇಳಲಿಲ್ಲ. ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಹಲವು ಚಿಂತಕರಲ್ಲಿ ಪ್ರೌಢ ಚಿಂತಕನೊಬ್ಬ ತಮ್ಮ ಜೀವಿತ ಕೊನೆಕಾಲ ಬಂತೆಂದು ಪರಿಭಾವಿಸಿ ತಮ್ಮ ಹಳೆ ಶ್ರದ್ಧೆ ಮತ್ತು ತಮ್ಮ ಬಾಲ್ಯದ ಆಚರಣೆಗಳಿಗೆ ಮತ್ತೆ ಮರಳಬಹುದು. ಆದರೆ ಇದು ಈ ವ್ಯಕ್ತಿಯಲ್ಲಿ ಸಾಧ್ಯವಿಲ್ಲ. ನಾವು ಹೇಳಿದಂತೆ ಅವರ ಕೊನೆ ಮಾತುಗಳು ಹೀಗಿವೆ: "ನಾನು ಹೋಗಲು ಸಿದ್ಧ, ನನಗೆ ಭಯವಿಲ್ಲ." ಅವರ ವಂಶದಲ್ಲಿ ಇತಿಹಾಸದಲ್ಲಿ ಮೊಟ್ಟಮೊದಲಿಗೆ ಛತ್ರಪತಿ ಮಹಾರಾಜರ ಶವಸಂಸ್ಕಾರದ ಆಚರಣೆಯು ಅವರ ಅಪೇಕ್ಷೆಯ ಮೇರೆಗೆ ಬ್ರಾಹ್ಮಣ ಪೂಜಾರಿಗಳಲ್ಲದ ಅವರ ಜಾತಿಯ ಮರಾಠ ಪೂಜಾರಿಗಳೇ ನಡೆಸಿದರು.

ಇಬ್ಬರು ಮಹಾನ್ ವ್ಯಕ್ತಿಗಳಲ್ಲಿ ಶಾಹು ಮಹಾರಾಜರು ಅನಿವಾರ್ಯವಾಗಿ ತಿಲಕರು ಮತ್ತು ಅವರ ಸ್ವದೇಶಿ ಆಂದೋಲನದೊಂದಿಗೆ ಸಂಘರ್ಷ ನಡೆಸಬೇಕಾಗಿ ಬಂತು. ತಿಲಕರ ಸ್ವದೇಶಿ ಆಂದೋಲನವು ಸಾಮಾಜಿಕವಾಗಿ ಪ್ರತಿಗಾಮಿ(ಪ್ರಗತಿವಿರೋಧಿ) ಯಾಗಿದ್ದರೆ ಅದು ರಾಜಕೀಯವಾಗಿ ಬ್ರಿಟಿಷ್ ವಿರೋಧಿಯಾಗಿತ್ತು. ರಾಜದ್ರೋಹ ಮತ್ತು ಅರಾಜಕತೆಯ ಅಲೆಯು ಈ ಶತಮಾನದ (೨೦ನೇ ಶತಮಾನ) ಪ್ರಾರಂಭದ ವರ್ಷಗಳಲ್ಲಿ ಇಡೀ ಭಾರತದಲ್ಲಿ ರಭಸವಾಗಿ ಬೀಸುತ್ತಿತ್ತು. ಆದರೆ ಬೇರೆ ದೇಶೀಯ ಸಂಸ್ಥಾನಗಳಿಗಿಂತ ಪ್ರಬಲವಾಗಿ ಕೊಲ್ಹಾಪುರದಲ್ಲಿತ್ತು. ರೆಸಿಡೆಂಟ್ ಕರ್ನಲ್ ಫೆರೀಸ್ ಅವರ ಕೊಲೆಯ ಪ್ರಯತ್ನ ನಡೆಯಿತು ಮತ್ತು ಹಲವಾರು ಕಿರುಕುಳ-ಹಿಂಸಾಚಾರಗಳು ನಡೆದವು. ಮಾನ್ಯ ಮಹಾರಾಜರು ಪರಿಪೂರ್ಣವಾಗಿ ರಾಜದ್ರೋಹ ವಿರೋಧಿ ಆಂದೋಲನದಲ್ಲಿ ಸಾಮಾನ್ಯ ಉತ್ಸಾಹದಿಂದ ತೊಡಗಿಸಿಕೊಂಡರು. ತಮ್ಮ ಪ್ರದೇಶದಲ್ಲಿ (ಪ್ರಾಂತ್ಯ) ಈ ಅನಿಷ್ಟವನ್ನು ನಿಭಾಯಿಸುವುದರಲ್ಲಿ ಸಂತೃಪ್ತರಾಗದೆ, ಬಾಂಬೆ ಪ್ರೆಸಿಡೆನ್ಸಿಯಲ್ಲಿ ಸಂಚುಗಳನ್ನು ಭೇದಿಸುವುದರಲ್ಲಿ ಅವರ ಸಫಲತೆಯು ಬ್ರಿಟಿಷ್ ಸರಕಾರಕ್ಕೆ ಅತ್ಯಮೂಲ್ಯವಾಗಿತ್ತು.

ಬ್ರಿಟಿಷ್ ಸರಕಾರವು ಆಗಸ್ಟ್ ೨೦, ೧೯೧೭ರಲ್ಲಿ ಮಹತ್ವಪೂರ್ಣವಾದ ಒಂದು ಘೋಷಣೆಯನ್ನು

ಮಾಡಿತು. ಅದರ ಪ್ರಕಾರ ಭಾರತದ ಒಂದು ಸಂವಿಧಾನಾತ್ಮಕ ಧೋರಣೆಯಾಗಿದ್ದು, ಅದು ಜವಾಬ್ದಾರಿ ಪ್ರಗತಿಪರ ಸರಕಾರವನ್ನು ನೀಡಲು ಜನತೆಗೆ ಭರವಸೆ ನೀಡಿತು ಮತ್ತು ಅದು ಬ್ರಾಹ್ಮಣೇತರರ ಆಂದೋಲನಕ್ಕೆ ಒಂದು ಹೊಸ ರಾಜಕೀಯ ತಿರುವನ್ನು ನೀಡಿತು ಮತ್ತು ಮಾನ್ಯ ಮಹಾರಾಜರು ಒಂದು ಹೊಸ ಅಭಿಯಾನ ನಡೆಸಲು ಅನುವುಮಾಡಿಕೊಟ್ಟಿತು. ಬ್ರಿಟಿಷ್ ಇಂಡಿಯಾದಲ್ಲಿ ಸಂವಿಧಾನದ ಬದಲಾವಣೆಗಳು ಪ್ರತಿಯೊಂದು ಭಾರತೀಯ ಮಹಾರಾಜನ (ಸಾಮಂತನು) ಪ್ರಾಂತ್ಯಗಳ ಪ್ರತಿಕ್ರಿಯೆ ಬೀರುವುದೆಂದು ಮತ್ತು ಬ್ರಿಟಿಷ್ ಸರಕಾರಕ್ಕೆ ಸಂಬಂಧಿಸಿದಂತೆ ಅವರಿಗೆ ಹೊಸ ಸಮಸ್ಯೆಗಳು ಉದ್ಭವಿಸುತ್ತವೆಯೆಂದು ಅವರು (ಶಾಹು) ಮನವರಿಕೆ ಮಾಡಿಕೊಂಡರು. ಆದರೆ ಅವರು ತನ್ನ ಆಜ್ಞೆ ಎಂಬ ದೃಷ್ಟಿಕೋನದಿಂದ ಸಮಸ್ಯೆಯನ್ನು ನೋಡದೆ, ಬ್ರಾಹ್ಮಣೇತರರ ವರ್ಗಗಳ ಒಬ್ಬ ನಾಯಕನಂತೆ ನೋಡಿ, ಅವರು ಅನೇಕ ವೇದಿಕೆಗಳಲ್ಲಿ ಸ್ವದೇಶಿ ಆಡಳಿತಕ್ಕಾಗಿ (ಹೋಂ ರೂಲ್) ಈ ಭರತಖಂಡವನ್ನು ಯೋಗ್ಯವನ್ನಾಗಿ ಮಾಡಬೇಕಾದರೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು ಮತ್ತು ಆ ಆಡಳಿತದ ಮೇಲೆ ಸ್ವಲ್ಪ ಜನಾಧಿಪತ್ಯವನ್ನು ಜನರ ನೊಗದ ಮೇಲೆ ಹೇರುವುದರ ಬದಲಿಗೆ ಜನತಾಂತ್ರಿಕ ಸಿದ್ಧಾಂತದ ಮೇಲೆ ಆಡಳಿತವನ್ನು ಬೆಳಸಬೇಕಾಗಿದೆ, ಈಗ ಶಿಕ್ಷಣದ ವಿಷಯದಲ್ಲಿ ಹಿಂದುಳಿದ ವರ್ಗಗಳನ್ನು ಎತ್ತರಿಸುವುದು ಮತ್ತು ಅವರಿಗೆ ನಾಗರಿಕ ಹಕ್ಕುಗಳನ್ನು ಕಲಿಸುವುದು ಅತ್ಯಗತ್ಯ ಮತ್ತು ಜಾತಿಯ ಪ್ರತ್ಯೇಕತೆಯ ಕಾಠಿಣ್ಯದ ಸಹನಶೀಲತೆಯ ಚೈತನ್ಯಕ್ಕೆ ಬದಲಿ ವ್ಯವಸ್ಥೆಯನ್ನು ರೂಪಿಸಬೇಕಾಗಿದೆ.

ನಾವು ನೋಡಿದಂತೆ ಇವೆಲ್ಲವೂ ಇದ್ದವು. ಆದರೆ ಅವರು ಅಧಿಕಾರಕ್ಕೆ ಬಂದಾಗಿನಿಂದಲೂ ಈ ಗುರಿಗಳನ್ನು ಸಾಕಾರಗೊಳಿಸಲು ಸ್ಥಿರವಾಗಿ ಪ್ರಯತ್ನಿಸುತ್ತಿದ್ದಾರೆ. ಆದರೆ ಜನರಿಂದ ಆಯ್ಕೆಗೊಂಡ ಭಾರತೀಯರು ರಾಷ್ಟ್ರದ ಧೋರಣೆಯ ಭವಿಷ್ಯವನ್ನು ನಿಯಂತ್ರಿಸುತ್ತಾರೆ. ಆದ್ದರಿಂದ ಅವರು ಈಗ ವಿಶೇಷವಾಗಿ ಅಸ್ಪೃಶ್ಯ ಜನರ ಸ್ಥಾನಮಾನಗಳನ್ನು ಸುಧಾರಿಸಲು ತಮ್ಮ ಪ್ರಯತ್ನಗಳನ್ನು ದ್ವಿಗುಣಗೊಳಿಸಿದರು.

ಅವರ ಪಥ್ಯ ಹೀಗೆ ಹೇಳುತ್ತದೆ: "ರಾಜಕಾರಣದಲ್ಲಿ ಭಾಗವಹಿಸುವವರೆಲ್ಲರೂ ಮನುಷ್ಯರನ್ನು ಮನುಷ್ಯರೆಂದು ಪರಿಗಣಿಸಬೇಕು." ಈ ಮಾತು ಕ್ರೂರವಾಗಿ ಕೀಳುಮಾಡುವಿಕೆಯನ್ನು ಮನವರಿಕೆ ಮಾಡಿಕೊಳ್ಳುವವರಿಗೆ ಚರ್ವಿತಚರ್ವಣದ ಮಾತಾಗಿದೆ. ಅಂಥವರಿಗೆ ಅಸ್ಪೃಶ್ಯತೆಯ ನಿಷೇಧವು ಹಿಂದು ಸಮುದಾಯದ ಲಕ್ಷಾಂತರ ಮಂದಿಯ ಖಂಡನೆಯಾಗುತ್ತದೆ. ಮಾನ್ಯ ಮಹಾರಾಜರಿಗೆ ದಮನಿತರ ಕೆಲವು ಅಗಾಧವಾದುದು ಮತ್ತು ಅವರು ತಮ್ಮ ಸ್ಥಾನವನ್ನು ಹಲವು ಉಪಕಾರಿ ಚಟುವಟಿಕೆಗಳಲ್ಲಿ ಕಂಡುಕೊಳ್ಳುತ್ತಾರೆ. ಜಪಾನಿನಲ್ಲಿ ಸಮುರಾಯ್ ಅವರು ಮಾಡಿದಂತೆಯೇ ಮೇಲುಜಾತಿಗಳಲ್ಲಿ ಹುಟ್ಟಿದ ವರ್ಗಗಳು ತಮ್ಮ ವಂಶಪಾರಂಪರಿಕ ಸವಲತ್ತುಗಳನ್ನು ಬಿಟ್ಟುಕೊಡಬೇಕೆಂದು ಒತ್ತಿಹೇಳಿದರು. ಕೊಲ್ಹಾಪುರ ಸಂಸ್ಥಾನದ ಮೇಲುಜಾತಿಯ ಆಳರಸರು ಈ ಮೊದಲು ಯಾವ ಕ್ಷತ್ರಿಯ ರಾಜನು ಮಾಡದಿದ್ದ ನಿದರ್ಶನವನ್ನು ಸ್ಥಾಪಿಸಿದ್ದಾರೆ ಮತ್ತು ಅವರು ವಾಸ್ತವಿಕವಾಗಿ ಅಸ್ಪೃಶ್ಯಜಾತಿಗಳು ಕೈಯಿಂದ ನೀಡಿದ ಊಟವನ್ನು ಸಾರ್ವಜನಿಕವಾಗಿ ಊಟಮಾಡಿದ್ದಾರೆ. ಮತ್ತೆ ಅವರ ಸ್ಥಾನಮಾನಗಳನ್ನು ಹೆಚ್ಚಿಸಲು ತಮ್ಮ ಆಪ್ತ ಇಲಾಖೆಯಲ್ಲಿ ನೇಮಕ ಮಾಡಿಕೊಂಡಿದ್ದರು. ಅಸ್ಪೃಶ್ಯರು ಅನುಭವಿಸಿದ ಸಂಕಟ-ನೋವುಗಳನ್ನು ನಿವಾರಿಸಲು ಅವರು ಶಾಸನದ ಮೂಲಕ ತಮ್ಮ ಸಂಸ್ಥಾನದ ಪ್ರತಿಯೊಂದು ಇಲಾಖೆಯಲ್ಲಿ ಸೇವೆಗೆ ಅವರನ್ನು ನೇಮಕಮಾಡಿಕೊಂಡರು. ಮತ್ತೆ ಮಾನ್ಯ ಮಹಾರಾಜರು ತಮ್ಮ ಪ್ರಯತ್ನಗಳನ್ನು ತಮ್ಮ ಪ್ರದೇಶಕ್ಕೆ

ಸೀಮಿತಗೊಳಿಸಿಕೊಳ್ಳಲಿಲ್ಲ. ಅವರು ಯಾವಾಗಲೂ ದೇಶೀಯ ಸಂಸ್ಥಾನಗಳು ಮತ್ತು ಬ್ರಿಟಿಷ್ ಪ್ರಾಂತ್ಯಗಳು ಭಾರತ ಸಾಮ್ರಾಜ್ಯದಲ್ಲಿ ಪರಸ್ಪರ ಹೆಣೆದುಕೊಂಡ ಭಾಗಗಳೆಂದು ಅವರು ಮನಸ್ಸಿನಲ್ಲಿ ಚೆನ್ನಾಗಿ ಅರಿತುಕೊಂಡಿದ್ದರು. ಅವರು ತಮ್ಮ ದರ್ಜೆಯನ್ನು (ಸ್ಥಾನಮಾನವನ್ನು) ತಾವು ಒಬ್ಬ ಆಳುವ ರಾಜ ಎಂಬ ಭಾವನೆಗೆ ಅವಕಾಶಕೊಡದೆ ಬಾಂಬೆ ಪ್ರೆಸಿಡೆನ್ಸಿಯಲ್ಲಿ ಮತ್ತು ಆಚೆಗಿರುವ ಹಿಂದುಳಿದ ವರ್ಗಗಳ ಮತ್ತು ದಮನಿತರ ವರ್ಗಗಳ ಹಲವಾರು ಸಮ್ಮೇಳನಗಳ ಅಧ್ಯಕ್ಷತೆಯನ್ನು ವಹಿಸಿದ್ದರು.

ಸರ್ ಶಾಹು ಛತ್ರಪತಿಯವರ ಜೀವನ-ಕಾರ್ಯವು ರಾಜಿಮಾಡಿಕೊಳ್ಳದ ಧೈರ್ಯದೊಂದಿಗಿರುವ ಅವರ ವಿಶಾಲವಾದ ಮಾನವೀಯತೆಯು ಅವರ ವೈಶಿಷ್ಟ್ಯವಾಗಿತ್ತು. ಅವರ ಕೆಚ್ಚು ಅವರು ನುಡಿದಂತೆಯೇ ನಡೆದುಕೊಂಡರು. ಅವರು ಸ್ವತಂತ್ರ ಖಾಸಗಿ ವ್ಯಕ್ತಿಯಾಗಿರದಿದ್ದರೂ, ಸಾರ್ವಜನಿಕ ವ್ಯಕ್ತಿಯಾಗಿ ತಮಗೆ ನಿರ್ಬಂಧಗಳಿದ್ದರೂ ಅವರು ಯಾವ ಅನುಮಾನವಿಲ್ಲದೆ ತಮ್ಮ ವಿವೇಚನೆಗೆ ಅನುಗುಣವಾಗಿ ನಡೆದುಕೊಂಡರು. ಉದಾರವಾದಿ ವಿಚಾರಗಳು ಹರಡುತ್ತಿದ್ದವು ಮತ್ತು ಮಾನ್ಯ ಮಹಾರಾಜರು ಹಿಂದು ಧರ್ಮ ಸಾಮಾಜಿಕ ಅನಿಷ್ಟಗಳನ್ನು ಖಂಡಿಸುವುದರಲ್ಲಿ ಅವರೇನು ಮೊದಲ ಹಿಂದುವಲ್ಲ ಮತ್ತು ಅವರು ಅದರ ಸುಧಾರಣೆಯನ್ನು ಪ್ರತಿಪಾದಿಸಿದರೂ ಪಾಶ್ಚಿಮಾತ್ಯ ತತ್ವಗಳನ್ನು ಅವರು ಮಾನವ ಸಮಾನತೆಯನ್ನು ಒತ್ತಿಹೇಳಲಿಲ್ಲ. ಆದರೆ ತನಗಿರುವ ಸ್ವಾತಂತ್ರ್ಯದಂತೆಯೇ ಕಡುಬಡವನಿಗೆ ಮತ್ತು ದೀನವ್ಯಕ್ತಿಗೆ ಸಮಾನ ಹಕ್ಕುಗಳಿರಬೇಕು ಮತ್ತು ಉಪಚರಿಸುವ ಸಮಾನತೆಯು ಪರಿಪೂರ್ಣವಾಗಿರಬೇಕೆಂದು ಪ್ರತಿಪಾದಿಸಿದರು.

ಇಲ್ಲಿಯವರೆಗೆ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳ ಕ್ಷೇತ್ರಗಳಲ್ಲಿ ಮಾತು ಮತ್ತು ಕೃತಿಗಳ ನಡುವೆ ಅಗಾಧವಾದ ಪ್ರತ್ಯೇಕ ಅಂತರವಿದೆ. ಆದರೆ ಅವರ ಸ್ವಾರ್ಥತ್ಯಾಗದ ಕೆಚ್ಚೆದೆಯ ಕಾರ್ಯಗಳು ನಾವು ಅವರನ್ನು ಮೆಚ್ಚುವಂತೆ ಮಾಡಿವೆ. ಅವರ ಸ್ವಭಾವವು ನಿಲ್ಲುವಂಥದ್ದಲ್ಲ ಮತ್ತು ಹೆದರುವಂಥದಲ್ಲ. ಅವರು ಪರಿಣಾಮಗಳ ಹೆದರಿಕೆಯಿಲ್ಲದ ಆಂದೋಲನದಲ್ಲಿ ಧುಮುಕಿ, ಅದರಲ್ಲಿ ಈಜಾಡುವರು. ಅವರು ಆಡಳಿತ ನಡೆಸುವ ರಾಜನಾಗಿದ್ದವರಿಂದ ಅವರ ಬಳಿ ಸಾಕಷ್ಟು ಸಂಪನ್ಮೂಲಗಳು ಇದ್ದು ತಮ್ಮ ನೀತಿ-ಧೋರಣೆಗಳಿಗೆ ಬಳಸಿದ್ದು ನಿಜವಾದರೂ ಸಹ ಅವರು ಹೆಚ್ಚು ಉನ್ನತ ಸ್ಥಾನಮಾನದಲ್ಲಿದ್ದರು. ಅವರು ಹೊಂದಿದ್ದ ಪರಿಸರ ಅಡೆ-ತಡೆಗಳಿಂದ ಕೂಡಿತ್ತು. ಅವರು ಅವುಗಳನ್ನು ಭೇದಿಸಿಕೊಂಡು ಬರಬೇಕಾಗಿತ್ತು ಮತ್ತು ಅವರು ತಮ್ಮ ಸದುದ್ದೇಶದ ಕಾರಣದ ಹೋರಾಟದಲ್ಲಿ ಹೆಚ್ಚು ನೊಂದಿದ್ದರೆಂಬುದನ್ನು ಮರೆಯಬಾರದು. ಮಾನ್ಯ ಮಹಾರಾಜರು ತಾವು ಸ್ವಭಾವತಃ ಹೋರಾಡುವ ವ್ಯಕ್ತಿ ಎಂಬುದನ್ನು ನಿರಾಕರಿಸುವುದಿಲ್ಲ. ಅವರು ಒಳ್ಳೆಯ ಕ್ರೀಡಾಪಟುವಾಗಿದ್ದರಿಂದ ಅವರು ಒಳ್ಳೆಯ ಮನೋಭಾವದಿಂದ ಪೆಟ್ಟುಗಳನ್ನು ಸಹಿಸಿಕೊಂಡರು.

ಅವರು ಬ್ರಾಹ್ಮಣರ ವಿರುದ್ಧ ಖುಷಿಗಾಗಿ ಹೋರಾಡಿದರೆಂಬುದು ಅಥವಾ ತಮ್ಮ ಮತ್ತು ತಮ್ಮ ಕುಟುಂಬವನ್ನು ಗುರಿಯಾಗಿಟ್ಟುಕೊಂಡು ಹಲವಾರು ವರ್ಷಗಳವರೆಗೆ ಕೆಸರು-ಎರಚುವುದರ ಬಗ್ಗೆ ಯಾವ ರೀತಿಯಲ್ಲಿಯೂ ತೀವ್ರವಾಗಿ ಪರಿಭಾವಿಸಲಿಲ್ಲವೆಂಬುದು ಸಂಪೂರ್ಣವಾಗಿ ಸರಿಯಲ್ಲ. ಅವರು ಉದಾರಿ-ಮನೋಭಾವದ ಬ್ರಾಹ್ಮಣರಾದ ರಾನಡೆ, ಆಗರ್‌ಕರ್ ಮತ್ತು ಗೋಖಲೆ ಅವರಿಗೆ ತಾವು ಚಿರಋಣಿ ಎಂದು ಹೇಳುವುದರಲ್ಲಿ ಎಂದಿಗೂ ಅವರು ಹಿಂಜರಿಯಲಿಲ್ಲ ಮತ್ತು ಅವರು ಅಂತಹ ಸ್ನೇಹಿತವರ್ಗವನ್ನು ತಮ್ಮ ಇಡೀ ಜೀವನದಲ್ಲಿ ಉಳಿಸಿಕೊಂಡಿದ್ದರು. ಒಂದೇ ಮಾತಿನಲ್ಲಿ ಹೇಳುವುದಾದರೆ, ಅವರು ಬ್ರಾಹ್ಮಣೇತರರನ್ನು ಪ್ರೀತಿಸುತ್ತಿದ್ದರಿಂದ, ಯಾವುದೇ ಒಂದು ದೇಶದಲ್ಲಿ ಅನ್ಯಾಯ ಕಂಡುಬಂದರೆ ಕೇವಲ ಬೌದ್ಧಿಕ ಅಸಮ್ಮತಿಗಾಗಿಯಲ್ಲದೆ, ಹೃತ್ಪೂರ್ವಕ ಕಟ್ಟಕ್ಕರೆಯಿಂದ ಅದನ್ನು ಕಿತ್ತುಹಾಕಿ, ಆಗಿದ್ದ ತಪ್ಪನ್ನು ಸರಿಪಡಿಸುವುದಕ್ಕಾಗಿ

ಅವರು ಅಸಾಮಾನ್ಯ ಮನುಷ್ಯರಾಗಿದ್ದರಿಂದ ಬ್ರಾಹ್ಮಣಿಕೆಯ ವ್ಯವಸ್ಥೆಯನ್ನು ದ್ವೇಷಿಸಿದರೇ ಹೊರತು ಬ್ರಾಹ್ಮಣರನ್ನಲ್ಲ.

ನಿಜವಾದ ಪರಿಪ್ರೇಕ್ಷ್ಯದಲ್ಲಿ ಅವರ ಕೃತಿಗಳನ್ನು ನೋಡುವುದಕ್ಕೆ ನಾನು ಅವರ ಕಾಲಕ್ಕೆ ತೀರಾ ಸಮೀಪದಲ್ಲಿದ್ದೇನೆ. ಕೊನೆಯ ಮಹಾರಾಜರ ನಾಯಕತ್ವದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಸುಧಾರಣೆಯ ಆಂದೋಲನಗಳನ್ನು ಮೌಲ್ಯಮಾಪನ ಮಾಡುವ ಬಗ್ಗೆ ಆಲೋಚಿಸಬೇಕಾಗಿದೆ. ನಮ್ಮ ಕಣ್ಣು ಮುಂದೆ ಬೆಳೆಯುತ್ತಿರುವ ನವಭಾರತದ ಯಾವ ಇತಿಹಾಸಕಾರನೂ ಅವರ ಜೀವನದ ದಾಖಲೆಗಳಲ್ಲಿರುವ ವಿಷಯಗಳನ್ನು ಕಡೆಗಣಿಸುವಂತಿಲ್ಲ. ಕಹಿಯಾದ ವಿವಾದಗಳಲ್ಲಿ ಅವರು ಶ್ರಮಪಟ್ಟು ನಿರ್ವಹಿಸಿದ ಪಾತ್ರವು ಮರೆಯಾದರೂ ಒಂದು ರಾಷ್ಟ್ರೀಯ ಆಸ್ತಿಯೆಂದು ಭಾರತದ ಪ್ರತಿಯೊಂದು ವರ್ಗವು ಹೆಮ್ಮೆಯ ಖನಿ ಎಂದು ಭಾವಿಸುವುದು. ಸರ್ ಶಾಹು ಛತ್ರಪತಿ ಮಹಾರಾಜರ ನೆನಪು, ನಿಜವಾಗಿಯು ಅವರೊಬ್ಬ ಮಹಾಶಯ!

*– (ಕ್ರೈಸ್ಟ್ ಚರ್ಚ್, ಸೆಪ್ಟೆಂಬರ್ ೧೯೨೩)*

**(ಈ ಲೇಖನವು ದಿವಾನ್ ಬಹಾದ್ದೂರ್ ಅಣ್ಣಾಸಾಹೇಬ ಲಠ್ಠೆ ಅವರು ಬರೆದು ೧೯೨೪ರಲ್ಲಿ ಪ್ರಕಟಿಸಿದ ಶಾಹುರವರ ಜೀವನಚರಿತ್ರೆಗೆ ಬರೆದಿದ್ದ ಪೀಠಿಕೆಯಾಗಿದೆ.)**

---

೨

# ಶಾಹು ಛತ್ರಪತಿ: ಪ್ಲೇಟೋ ಕಲ್ಪನೆಯ ಒಬ್ಬ ತತ್ವಜ್ಞಾನಿ ರಾಜ

**– ವಾಸುದೇವ. ಡಿ. ತೋಫ್‌ಖಾನೆ**

*ಥಿಯೋಸೊಫಿಸ್ಟ್ ಮತ್ತು ಶಾಹುರವರ ನಿಕಟ ಸಹವರ್ತಿ*

## ವೇದೋಕ್ತ ಅಪರಾಧಿ ಯಾರು?

ನನ್ನ ತಂದೆಯು ಮಾನ್ಯ ಮಹಾರಾಜ ಶ್ರೀಶಾಹು ಛತ್ರಪತಿಯವರ ನಿಕಟ ಸಂಪರ್ಕದಲ್ಲಿದ್ದರು. ಅವರು ರಾಜಕುಟುಂಬದ ಅತ್ಯಾರ ಕಾರ್ಖಾನೆಯ ಸಂಪೂರ್ಣ ಹೊಣೆಯನ್ನು ವಹಿಸಿಕೊಂಡಿದ್ದರು. ಅವರು ಪ್ರತಿದಿನ ಮಹಾರಾಜರನ್ನು ಭೇಟಿಮಾಡಿ ನಡೆದ ವಿಚಾರಗಳನ್ನು ವರದಿ ಮಾಡುತ್ತಿದ್ದರು ಮತ್ತು ಮಹಾರಾಜರು ಸಹಿಮಾಡಿದ ಆಜ್ಞೆಗಳನ್ನು ಕ್ರಮವಾಗಿ ತೆಗೆದುಕೊಳ್ಳುತ್ತಿದ್ದರು. ನಮ್ಮ ತಂದೆಯು ಸಹ ಕೆಲಸದ ಆಳುಗಳ ಜೊತೆಯಲ್ಲಿ ನಿಕಟವಾಗಿರುತ್ತಿದ್ದರು. ಅವರೆಲ್ಲರು ದಿನಾ ನಮ್ಮ ಮನೆಗೆ ಬಂದು ತಮ್ಮ ನಾನಾ ರೀತಿಯ ದೂರುಗಳನ್ನು ಮತ್ತು ಸಮಸ್ಯೆಗಳನ್ನು ಹೇಳುತ್ತಿದ್ದರು. ಈ ಜನರಿಂದ ನಾನು ಮಹಾರಾಜರ ಬಗ್ಗೆ ಬಹಳ ತಿಳಿದುಕೊಂಡೆನು. ಅವರು ಮಹಾರಾಜರು ಬಡವರು ಮತ್ತು ದಮನಿತರ ಬಗ್ಗೆ ತೋರುತ್ತಿದ್ದ ದೊಡ್ಡತನ ಮತ್ತು ಕರುಣೆಯ ಬಗ್ಗೆ ಹಾಗೂ ಅವರು ಅವರ ಏಳಿಗೆಯ ಬಗ್ಗೆ ನೀಡುತ್ತಿದ್ದ ಆಜ್ಞೆಗಳ ಬಗ್ಗೆ ಮಾತನಾಡುತ್ತಿದ್ದರು ಮತ್ತು ನೀಡುತ್ತಿದ್ದ ಆಜ್ಞೆಗಳ ಬಗ್ಗೆ ಮಾತನಾಡುತ್ತಿದ್ದರು ಮತ್ತು ಚರ್ಚಿಸುತ್ತಿದ್ದರು. ನಾನು ಪ್ರತಿದಿನ ಮಹಾರಾಜರ ಬಗ್ಗೆ ಕೇಳುತ್ತಿದ್ದ ಕತೆಗಳಿಂದ ನನ್ನಲ್ಲಿ ಅವರ ಬಗ್ಗೆ ಹೆಚ್ಚು ಗೌರವ ಬೆಳೆಯುತ್ತಿತ್ತು.

ನಂತರ ವೇದೋಕ್ತ ಪ್ರಕರಣ ಮೇಲ್ಮೈಗೆ ಬಂತು. ಇದರಲ್ಲಿ ತೊಡಗಿಸಿಕೊಂಡಿದ್ದ ಜನರು ಮತ್ತು ನಮ್ಮ ತಂದೆಯಲ್ಲಿ ವಿಶ್ವಾಸವಿಟ್ಟಿದ್ದ ಬ್ರಾಹ್ಮಣರು ನಮ್ಮ ತಂದೆಯ ಸಲಹೆ ಕೇಳಲು ಬರುತ್ತಿದ್ದರು. ಈ ಎಲ್ಲಾ ಚರ್ಚೆಗಳು ಸಂಜೆಯ ಕೊನೆಯವರೆಗೂ ನಡೆಯುತ್ತಿದ್ದವು. ಜಗದಾಂಬೆ ದೇವತೆಯ ಕೊನೆಯ ಪೂಜೆಗಾಗಿ ನಗಾರಿ (ಡ್ರಮ್ಮು) ಬಾರಿಸಿದಾಗ ಬ್ರಾಹ್ಮಣರು ಎದ್ದು ಹೋಗುತ್ತಿದ್ದರು.

ನನ್ನ ಮನಸ್ಸಿನಲ್ಲಿ ಶಾಹುರವರ ಬಗ್ಗೆ ಗೌರವ ಬೆಳೆಯಿತು ಮತ್ತು ನನ್ನ ತಂದೆ ಮತ್ತು ವೈದಿಕ ಬ್ರಾಹ್ಮಣರ ನಡುವಣ ಚರ್ಚೆಗಳನ್ನು ಕೇಳಿದ ನಂತರ ಅವರ ಮಹತ್ವದ ಪ್ರಭಾವ ನನ್ನಲ್ಲಿ ಹೆಚ್ಚುತ್ತಾ ಹೋಯಿತು. ಆ ಚರ್ಚೆಗಳಲ್ಲಿ ನನ್ನ ತಂದೆಯು ಶಾಹುರವರ ವಿಶಿಷ್ಟ ಮಹತ್ವ ಮತ್ತು ಕರುಣೆಯನ್ನು ಜನರಿಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಿದ್ದರು ಮತ್ತು ಆದ್ಯ ಶಂಕರಾಚಾರ್ಯರ ಪವಿತ್ರ ಗ್ರಂಥ 'ವಿವೇಕಚೂಡಾಮಣಿ'ಯ ಪ್ರಕಾರವೇ ದೈನಿಕ ಜೀವನದಲ್ಲಿ ದಾನದ ಮತ್ತು ಆಧ್ಯಾತ್ಮಿಕ ಕ್ರಿಯೆಗಳನ್ನು

ಪರಿಪಾಲಿಸುತ್ತಿದ್ದರೆಂಬುದನ್ನು ಅವರಿಗೆ ಹೇಳುತ್ತಿದ್ದರು. ಇದು ಪರಿಣಾಮಕಾರಿಯಾಗಿ ಬ್ರಾಹ್ಮಣರನ್ನು ಮೌನಗೊಳಿಸುತ್ತಿತ್ತು. ಮಹಾರಾಜರು ಎಂದಿಗೂ ಹರಟೆ ಅಥವಾ ಬೆನ್ನು ಹಿಂದೆ ಮಾತನಾಡುತ್ತಿರಲಿಲ್ಲ ಎಂಬುದಕ್ಕೆ ನಮ್ಮ ತಂದೆ ಬ್ರಾಹ್ಮಣರಿಗೆ ಹೇಳಿದ್ದೆ ಸುಸ್ಪಷ್ಟವಾಗಿತ್ತು. ನಂತರ ಮಾನ್ಯ ಮಹಾರಾಜರೊಂದಿಗೆ ನನಗುಂಟಾದ ವೈಯಕ್ತಿಕ ಅನುಭವವೇ ಅವರ ಬಗ್ಗೆ ಗೌರವ ಇಮ್ಮಡಿಗೊಳ್ಳಲು ಸಹಕಾರಿಯಾಯಿತು.

ಆ ಸಮಯದಲ್ಲಿ ಕಾಶಿಯ ಕೆಲವು ಬ್ರಾಹ್ಮಣರು ಅತಿಥಿಗಳಂತೆ ನಮ್ಮ ಸ್ಥಳದಲ್ಲಿ ವಾಸವಾಗಿದ್ದರು. ಅವರು ನಮ್ಮ ತಂದೆಯೊಡನೆ ವೇದೋಕ್ತ ಪ್ರಕರಣದ ಬಗ್ಗೆ ಚರ್ಚೆಗಳು ನಡೆಸಿದ ನಂತರ ಕೆಲವೇ ದಿನಗಳಲ್ಲಿ ಅವರು ಹೊರಟುಹೋದರು. ಈ ಚರ್ಚೆಗಳಿಂದ ಮನವರಿಕೆ ಮಾಡಿಕೊಂಡ ಕಾಶಿಯ ಬ್ರಾಹ್ಮಣರು ಕೊಲ್ಹಾಪುರದ ವೈದಿಕ ಬ್ರಾಹ್ಮಣರು ಈ ವಿಷಯ (ಸಮಸ್ಯೆ)ದ ಬಗ್ಗೆ ಹಠವಾದಿಗಳಾಗಬಾರದಿತ್ತೆಂದು ಹೇಳಿ ಅವರು ಹೊರಟುಹೋದರು. ಅವರು ಅಪ್ಪಾ ಸಾಹೇಬ ರಾಜೋಪಾಧ್ಯೆ ಅವರಿಗೆ ಕ್ಷಮೆ ಹೇಳಿದರು. ಅಂತಹ ವಿದ್ವಾಂಸ ಬುದ್ಧಿವಂತನಾದ ಮನುಷ್ಯ ತಮ್ಮ ಇಡೀ ಕುಟುಂಬ ನಾಶವಾಗುವಂತಹ ಅಸಂತೋಷದಾಯಕ ಕ್ರಮವನ್ನು ಹೇಗೆ ತೆಗೆದುಕೊಂಡರೆಂಬುದು ಅವರಿಗೂ ಅರ್ಥವಾಗಲಿಲ್ಲ. ಈ ವಿಷಯದ ಬಗ್ಗೆ ಅವರು ಆಳವಾಗಿ ಪರಿಶೋಧಿಸಿದಾಗ ನಮ್ಮ ತಂದೆಯವರು ಅವರ ಹುಡುಕಾಟಕ್ಕೆ ತುಲಸಿದಾಸ ಅಥವಾ ಕಬೀರರ ಒಂದು ಪದ್ಯವನ್ನು ಪಠಿಸಿದರು. ಈ ಎಲ್ಲಾ ಮಾತುಕತೆಗಳು ಹಿಂದಿಯಲ್ಲಿ ನಡೆಯುತ್ತಿದ್ದರಿಂದ ನನಗೆ ಅರ್ಥವಾಗುತ್ತಿರಲಿಲ್ಲ. ಇಡೀ ವೇದೋಕ್ತ ಪ್ರಕರಣಕ್ಕೆ ಕೊಲ್ಹಾಪುರ ಬ್ರಾಹ್ಮಣರು ಮಾಡಿದ ತಪ್ಪೆಂದು ನಾನು ಗ್ರಹಿಸಿಕೊಂಡೆ. ಈ ಚರ್ಚೆಗಳ ಒಟ್ಟು ಪರಿಣಾಮ ನನ್ನಲ್ಲಿ ಬ್ರಾಹ್ಮಣರ ಬಗ್ಗೆ ನಕಾರಾತ್ಮಕ ಭಾವನೆ ಮತ್ತು ಶಾಹು ಮಹಾರಾಜರ ಬಗ್ಗೆ ಪೂಜ್ಯ ಭಾವನೆ ಬೆಳೆಯಿತು.

### ಅವರು ಏಕೆ ಕಿರಿಯ ಸಹೋದರರನ್ನು ಉದಾಸೀನ ಮಾಡಿದರು?

ಕೊಲ್ಹಾಪುರವು ಪವಿತ್ರ ನಗರವೆಂದು ಪರಿಗಣಿತವಾಗಿದೆ. ಉತ್ತರದಲ್ಲಿ ಕಾಶಿಗೆ ಕೊಟ್ಟಿರುವ ಪ್ರಾಮುಖ್ಯತೆಯನ್ನು ಇಲ್ಲಿ ಕೊಲ್ಹಾಪುರಕ್ಕೆ ನೀಡಲಾಗಿದೆ. ಕರವೀರ ಪಟ್ಟಣವು ದಕ್ಷಿಣದ ಪ್ರಯಾಗವೆಂದು ಪರಿಗಣಿಸಲಾಗಿದೆ. ಅಲಹಾಬಾದಿನಲ್ಲಿರುವ ಪ್ರಯಾಗವು ಕಾಶಿಯಿಂದ ಬಹಳ ದೂರದಲ್ಲಿದೆ; ಆದರೆ ದಕ್ಷಿಣದ ಪ್ರಯಾಗ ಕೊಲ್ಹಾಪುರದಿಂದ ಕೇವಲ ಮೂರು ಮೈಲಿಗಳ ದೂರದಲ್ಲಿದೆ. ಎಲ್ಲಾ ಕಡೆಗಳಿಂದಲೂ ಜನರು ಪವಿತ್ರಸ್ನಾನಕ್ಕಾಗಿ ಒಂದು ತಿಂಗಳು ಈ ಪಟ್ಟಣಕ್ಕೆ ಬರುತ್ತಾರೆ (ಜನವರಿ ೧೪ರಿಂದ ಫೆಬ್ರವರಿಯ ಮೊದಲ ಹುಣ್ಣಿಮೆವರೆಗೆ). ಸೂರ್ಯೋದಯಕ್ಕೆ ಮೊದಲೇ ಹೆಂಗಸರು ಮತ್ತು ಗಂಡಸರು ಕರವೀರದ ಕಡೆಗೆ ಹೋಗುತ್ತಾರೆ. ಶಾಹು ಮಹಾರಾಜರು ಸಹ ಈ ತಿಂಗಳಲ್ಲಿ ಪವಿತ್ರ ಸ್ನಾನಕ್ಕೆ ಹೋಗುತ್ತಿದ್ದರು ಮತ್ತು ಸ್ನಾನ ಮತ್ತು ಇತರೆ ಆಚರಣೆಗಳನ್ನು ಮುಗಿಸಿಕೊಂಡು ತಮ್ಮ ದಿನನಿತ್ಯದ ಪೂಜೆಗಾಗಿ ಸರಿಯಾಗಿ ಬೆಳಿಗ್ಗೆ ೫ ಗಂಟೆಗೆ ಮನೆಯಲ್ಲಿರುತ್ತಿದ್ದರು.

ಒಂದು ದಿನ, ಮಹಾರಾಜರಿಗೆ ಪವಿತ್ರಸ್ನಾನ ಮಾಡಿಸುವ ಮತ್ತು ಔಪಚಾರಿಕ ವೇದೋಚ್ಚಾರಣೆ ಘೋಷಿಸುವ ಬ್ರಾಹ್ಮಣನಾದ ಪ್ರಸಿದ್ಧ ವೈದಿಕ ವಿದ್ವಾಂಸ ರಾಜಾರಾಮ್‌ಶಾಸ್ತ್ರೀ ಭಾಗವತರೊಂದಿಗೆ ಮಹಾರಾಜರು ಸ್ನಾನದ ಘಾಟ್‌ಗೆ ಹೋದರು. ಪುರೋಹಿತನು ಪುರಾಣದ ಮಂತ್ರಗಳನ್ನು ಪಠಿಸುತ್ತಿದ್ದನು ಮತ್ತು ಅವನು ಪವಿತ್ರಸ್ನಾನದ ಆಚರಣೆ ನಡೆಸುತ್ತಿದ್ದದ್ದು ವೇದಶಾಸ್ತ್ರಗಳ ಪ್ರಕಾರ ಇರದೆ, ಅದು ಪುರಾಣದ ಆಚರಣೆಗಳ ಪ್ರಕಾರವಾಗಿತ್ತು. ರಾಜಾರಾಮಶಾಸ್ತ್ರಿಗಳು 'ವೇದಗಳ ಪ್ರಕಾರ ಏಕೆ ಇಲ್ಲ?' ಎಂದು ಪ್ರಶ್ನೆ ಮಾಡಿದರು:

"ಹಲವಾರು ವರ್ಷಗಳಿಂದಲೂ ಇದೇ ರೀತಿಯಲ್ಲಿ ನಡೆಯುತ್ತಿದೆ ಮತ್ತು ರಾಜರ ಅರಮನೆಯಲ್ಲಿ ಯಾವುದೇ ಧಾರ್ಮಿಕ ಆಚರಣೆಯು ವೇದಗಳ ಪ್ರಕಾರ ನಡೆಸಲಾಗುತ್ತಿಲ್ಲ." ಎಂದು ಬ್ರಾಹ್ಮಣ ಪುರೋಹಿತನು ಪ್ರತ್ಯುತ್ತರ ನೀಡಿದನು. ಮಾನ್ಯ ಮಹಾರಾಜರು ಉತ್ತರದಲ್ಲಿ ಅಡಗಿದ್ದ ತೀವ್ರ ಅವಮಾನವನ್ನು ಅರ್ಥಮಾಡಿಕೊಂಡರು. ಅವರು ಅನಾರೋಗ್ಯದ ನೆಪಹೇಳಿ ಪವಿತ್ರಸ್ನಾನದ ಆಚರಣೆಯನ್ನು ರದ್ದುಗೊಳಿಸಿದರು ಮತ್ತು ಪುರೋಹಿತರಿಗೆ ಹೊರಟುಹೋಗುವಂತೆ ಗೌರವಪೂರ್ವಕವಾಗಿ ಹೇಳಿದರು.

ಮಾನ್ಯ ಮಹಾರಾಜರು ಕೋಪದಿಂದ ಉರಿಯುತ್ತಿದ್ದದನ್ನು ನಂತರ ನನಗೆ ಹೇಳಿದರು. ಅವರು ಮತ್ತೆ ಹೇಳಿದರು: "ಮಹಾಸಂತ ತುಕಾರಾಮರು ಅಂತಹ ಅವಮಾನಗಳನ್ನು ಎದುರಿಸಬೇಕಾಗಿತ್ತು ಮತ್ತು ಅವರು ನಾನು ಒಂದು ಕೆಳಜಾತಿಯಲ್ಲಿ ಹುಟ್ಟಿದ್ದೇನೆ. ದೇವರೆ, ನಾನು ಯಾರಿಗೆ ದೂರು ಕೊಡಲಿ, ನೀವೆ ಹೇಳಿ ಎಂದು ದೇವರಿಗೆ ಹೇಳುತ್ತಾರೆ." ಅವರು ತುಕಾರಾಮರ ಕಾವ್ಯದಿಂದ ಒಂದು ಪದ್ಯವನ್ನು ಪಠಿಸುತ್ತಾರೆ. ಅದರ ಅರ್ಥ ಹೀಗಿದೆ: "ಕೆಳಜಾತಿಯ ರೈತನಾಗಿ ಹುಟ್ಟಿಸಿದ್ದಕ್ಕೆ, ದೇವರೆ, ನಿಮಗೆ ನನ್ನ ಕೃತಜ್ಞತೆಗಳು. ಇಲ್ಲದಿದ್ದರೆ ನಾನು ಒಬ್ಬ ಆಷಾಡಭೂತಿಯಾಗಿ ಸಾಯಬೇಕಾಗಿತ್ತು. ನನ್ನ ಜ್ಞಾನವೆಲ್ಲ ವ್ಯರ್ಥವಾಗುತ್ತಿತ್ತು. ಆದ್ದರಿಂದ, ಅಹಂ ನನ್ನನ್ನು ನರಕಕ್ಕೆ ತಳ್ಳುತ್ತಿತ್ತೆಂದು ನಾನು ಹೇಳುವೆನು.".

ಮಾನ್ಯ ಮಹಾರಾಜರು ಅದೇ ಪದ್ಯವನ್ನು ರಾಜರಾಮ್‌ಶಾಸ್ತ್ರಿಗೂ ಸಹ ಪಠಿಸಿ ಹೇಳಿದರು. ಈ ಘಟನೆಯು ನನ್ನನ್ನು ಮಹಾಸಂತ ತುಕಾರಾಮರ ಕಾವ್ಯದ ಕಡೆಗೆ ಎಳೆದೊಯ್ಯಿತು ಎಂದು ನನಗೆ ಹೇಳಿದರು ಮತ್ತು ಕೆಲವು ಪದ್ಯಗಳನ್ನು ಪಠಿಸಿದರು. ಅವರು "ಜೆ ಕ ರಂಜಲೆ ಗಂಜಲೆ" ('ಬಡವನನ್ನು ಒಪ್ಪಿ ಸಹಾಯ ಮಾಡುವವನೆ ದೇವರು' ಮಾನವ ಎಂಬ ಪದ್ಯವನ್ನು ಹೇಳಿ ಪ್ರಶಾಂತತೆಯನ್ನು ಪಡೆದರು. ಮಾನ್ಯ ಮಹಾರಾಜರು ಭಾವನಾತ್ಮಕವಾದರು ಮತ್ತು ತಕ್ಷಣ ಮಾತು ನಿಲ್ಲಿಸಿದರು). ಅವರ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಅವರು ಮುಖ ತಿರುಗಿಸಿಕೊಂಡರು. ಕಣ್ಣಿನ ರೆಪ್ಪೆ ಮೇಲಿದ್ದ ಚಿಕ್ಕಹನಿಗಳು ಅವರ ದುಃಖವನ್ನು ಹೇಳುತ್ತಿದ್ದವು.

ಆ ದಿನ ಮಹಾರಾಜರು ನಿರಂತರವಾಗಿ ಎರಡುವರೆ ಗಂಟೆಗಳ ಕಾಲ ಮಾತನಾಡಿದರು. ಅವರ ದುಃಖ ಅವರನ್ನು ಒಳಗೊಳಗೆ ಕುಗ್ಗಿಸಿಬಿಟ್ಟಿತ್ತೆಂದು ನಾನು ಭಾವಿಸಿದೆ. ನಾನು ಅವರಿಗೆ ವಯಸ್ಸಾಗುತ್ತಿದೆಯೆಂದು ಭಾವಿಸಿದೆ. ಇದು ನನ್ನನ್ನು ಕೂಡ ಕ್ಷೋಭೆಗೊಳಿಸಿತು. ಅವರನ್ನು ಸಮಾಧಾನಪಡಿಸಲು ನನ್ನಲ್ಲಿ ಶಕ್ತಿಯಿರಲಿಲ್ಲ. ಆದರೆ ನಾನು ಸುಮ್ಮನಿರದೆ ಹೇಳಿದೆ, "ದುಃಖಪಡುವುದರಲ್ಲಿ ಏನು ಅರ್ಥವಿಲ್ಲ. ಮೂರ್ಖ ಮೂರ್ಖರ ಹಾಗೆ ವರ್ತಿಸುತ್ತಾರೆ ಏಕೆ?" "ನೀನು ಹೇಳುವುದು ಖಂಡಿತ ಸರಿ, ಆದರೆ ನೀವು ಹೇಳಿದಂತೆ ಈ ಜನರು ಮೂರ್ಖರಲ್ಲ" ಎಂದು ಮಹಾರಾಜರು ಹೇಳಿದರು. ಅವರು ವೇದಗಳ ಹತ್ತು ಪುಸ್ತಕಗಳ ಜ್ಞಾನ ಹೊಂದಿದ್ದಾರೆ (ದಶಗ್ರಂಥಿ) ಮತ್ತು ಧಾರ್ಮಿಕ ವಿಧಿ (ಕಾನೂನು) ಗಳಲ್ಲಿ ಪಾರಂಗತರು ಮತ್ತು 'ಬ್ರಹ್ಮವೃಂದ' ಎಂದು ಹೆಸರುವಾಸಿಯಾಗಿದ್ದಾರೆ. ವಿಶ್ವದ ಜೀವನ ಮತ್ತು ಮರಣಗಳು ಸೇರಿದಂತೆ ಎಲ್ಲಾ ಧಾರ್ಮಿಕ ಸುಖ-ಸಂತೋಷಗಳಿಗಾಗಿ ಅವರ ಮೇಲೆ ಸಂಪೂರ್ಣವಾಗಿ ಅವಲಂಬಿಸಿದ ತಮ್ಮ ಕಿರಿಯ ಸಹೋದರರೆಂದು ನಮ್ಮನ್ನು ಭಾವಿಸಿ ಅವರು ಏಕೆ ನಮ್ಮ ಮೇಲೆ ಕಾರುತ್ತಾರೆ? ಈ ಪ್ರಶ್ನೆಗಳು ನನ್ನನ್ನು ನಿರಂತರವಾಗಿ ಕಾಡುತ್ತವೆ ಮತ್ತು ನಾನು ದುಃಖಿತನಾಗಿ ಪ್ರತಿಯೊಂದರ ಬಗ್ಗೆ ಉತ್ಸಾಹವನ್ನು ಕಳೆದುಕೊಳ್ಳುತ್ತೇನೆ. ಇದಕ್ಕೆ ಪರಿಹಾರವೇನು, ಶ್ರೀ ತೋಫ್‌ಖಾನೆಯವರೆ, ನೀವೆ ಹೇಳಿ? ಎಂದು ಕೇಳಿದರು.

"ಮಾನ್ಯ ಮಹಾರಾಜರೆ, ಇದಕ್ಕೆ ಒಂದೇ ಒಂದು ಸೂಕ್ತ ಪರಿಹಾರವಿದೆ" ಎಂದು ನಾನು ಹೇಳಿದೆ. "ದೇವರಿಗೆ ಸಮೀಪ ಮಾತ್ರ ದೇವರನ್ನು ಬ್ರಹ್ಮನನ್ನು ಅರ್ಥಮಾಡಿಕೊಳ್ಳುವನೊ ಅವನು ಬ್ರಾಹ್ಮಣ. ಇವರೆಲ್ಲರೂ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ್ದರಿಂದ ಮಾತ್ರ ಇವರನ್ನು ಬ್ರಾಹ್ಮಣರೆಂದು ಕರೆಯಲಾಗುತ್ತದೆ. ಬ್ರಹ್ಮನನ್ನು ಅರ್ಥಮಾಡಿಕೊಳ್ಳುವುದನ್ನು ಬಿಡಿ, ಅವರು ತಮ್ಮ ಸಹಬಾಂಧವರನ್ನು ಅರ್ಥಮಾಡಿಕೊಂಡರೆ ಸಾಕು. ತಾವು ನೀಡಿದ ಗೌರವಯುತ ಬಿರುದುಗಳ ಪ್ರಕಾರ ಕೊಲ್ಹಾಪುರದಲ್ಲಿರುವ ಒಬ್ಬ ಬ್ರಾಹ್ಮಣನು ಕೂಡ ಸರಿಯಾಗಿ ನಡೆದುಕೊಳ್ಳುವುದಿಲ್ಲ ಎಂಬುದು ಸತ್ಯಸಂಗತಿ. ಅವರು ಪಂಡಿತರಲ್ಲ. ಅವರ ವರ್ತನೆ ಬಗ್ಗೆ ಮಾತನಾಡದಿರುವುದೇ ಉತ್ತಮ. ಮಹಾರಾಜರು ಪ್ರಯಾಗದ ವಿಧ್ಯುಕ್ತ ಆಚರಣೆಗಾಗಿ ಬ್ರಾಹ್ಮಣರನ್ನು ಕರೆದುಕೊಂಡು ಬರಲು ಗಾಡಿಯಲ್ಲಿ ಹೋಗುತ್ತಿದ್ದಾರೆಂಬ ಸಂಗತಿ ಇಡೀ ಕೊಲ್ಹಾಪುರ ನಗರಕ್ಕೆ ಗೊತ್ತಿದೆ. ಅವರೆಲ್ಲರು ಈ ಬಿರುದುಗಳಿಗೆ ಅನರ್ಹರು. ಅವರು ಹಣಗಳಿಸಲು ಏನನ್ನಾದರೂ ಮಾಡಬಲ್ಲರು. ಅಂತಹ ಯೋಗ್ಯ ಬ್ರಾಹ್ಮಣರನ್ನು ಪವಿತ್ರ ಗಂಗಾ, ನರ್ಮದಾ ಮೊದಲಾದ ನದಿಗಳ ದಡಗಳಲ್ಲಿ ಪಡೆಯಬಹುದು; ಆದರೆ ಇಲ್ಲಿ ಅಲ್ಲ."

### ತಿಲಕರ ಮಹತ್ವ ನನಗೆ ಗೊತ್ತು

ಇತ್ತೀಚೆಗೆ (ಕ್ರಿ.ಶ. ೧೯೧೮ರಲ್ಲಿ) ಪುಣೆಯಲ್ಲಿ ನಾನು ಲೋಕಮಾನ್ಯ ತಿಲಕರನ್ನು ಭೇಟಿಯಾದ ವಿಚಾರವನ್ನು ಸೋನ್‌ತಾಲಿಯಲ್ಲಿ ಮಾನ್ಯ ಮಹಾರಾಜರಿಗೆ ತಿಳಿಸಿದ್ದೇನೆ. ನಾನು ಹೇಳಿದ್ದನ್ನು ಕೇಳಿದ ನಂತರ ಮಾನ್ಯ ಮಹಾರಾಜರು ಹೇಳಿದರು: "ತಿಲಕರ ಪ್ರಾಮುಖ್ಯತೆ ಮತ್ತು ಅವರ ಘನತ್ವ ನನಗೆ ಗೊತ್ತು, ಶ್ರೀ ತೋಪ್‌ಖಾನೆಯವರೆ." ಅವರ ಅಂತರಾಳದಿಂದ ಬಂದ ಒಂದು ಸಾಲು (ಮಾತು) ಲೋಕಮಾನ್ಯ ತಿಲಕರ ಬಗ್ಗೆಯಿದ್ದ ಅನುಮಾನವನ್ನು ದೂರಮಾಡಿತು. ನಾನು ಪುಣೆಯಲ್ಲಿ ತಿಲಕರನ್ನು ಭೇಟಿಯಾದ ಸಮಯದಿಂದಲೂ ಅವರ ವ್ಯಕ್ತಿತ್ವ ನನ್ನನ್ನು ಮಂತ್ರಮುಗ್ಧಗೊಳಿಸಿತ್ತು. ಅವರ ಮಾತುಗಳಿಂದ (ತಿಲಕರ ಬಗ್ಗೆ) ನಾನು ಅತಿಸಂತೋಷಗೊಂಡೆ. ಅಂತಹ ಮಹಾಪುರುಷನ ಬಗ್ಗೆ ತಪ್ಪು ತಿಳಿದುಕೊಳ್ಳಬಾರದಿತ್ತು ಎಂದು ನನಗೆ ಅನಿಸಿತು, ಆದರೆ ತಪ್ಪಾಗಿಬಿಟ್ಟಿದೆ ಎಂಬುದರಲ್ಲಿ ಸಂಶಯವಿಲ್ಲ. ಮಾನ್ಯ ಮಹಾರಾಜರು ಲೋಕಮಾನ್ಯರ ಬಗ್ಗೆ ನೀಡಿದ ಅಭಿಪ್ರಾಯಗಳನ್ನು ಕೇಳಿ ನನಗೆ ಸಂತೋಷವಾಯಿತು. ಮಾನ್ಯ ಮಹಾರಾಜರು ನನಗೆ ಗೊತ್ತಿರದ ವಿಚಾರ(ಘಟನೆ) ದ ಬಗ್ಗೆ ಹೇಳಿದರು. ಛತ್ರಪತಿಯವರು ತಮ್ಮ ದಿವಾನರು ನೀಡಿದ ಕಿರುಕುಳ-ಹಿಂಸೆಗಳನ್ನು ಅನುಭವಿಸಿದ ವಿಷಯವನ್ನು ಮೊಟ್ಟಮೊದಲಿಗೆ ಬೆಳಕಿಗೆ ತಂದವರು, ಲೋಕಮಾನ್ಯ ತಿಲಕರು ಮತ್ತು ಅದಕ್ಕಾಗಿ ಅವರು ಜೇಲುಶಿಕ್ಷೆ ಅನುಭವಿಸಬೇಕಾಯಿತು. ಇದಕ್ಕಾಗಿ ಕೊಲ್ಹಾಪುರದ ರಾಜಕುಟುಂಬ ಲೋಕಮಾನ್ಯ ತಿಲಕರಿಗೆ ತುಂಬಾ ಚಿರಋಣಿಯಾಗಿದೆ."

### ಮಾನ್ಯ ಮಹಾರಾಜರು ನನಗೆ ಹೇಳಿದ್ದು

"ನಾನು ಈ ಸಂದರ್ಭವನ್ನು ಮೊದಲೆ ನಿಮಗೆ ಹೇಳಿದ್ದೇನೆ. ನಾವಿಬ್ಬರು (ಶಾಹು ಮತ್ತು ತಿಲಕರು) ಒಟ್ಟೊಟ್ಟಿಗೆ ಕೆಲಸಮಾಡುವ ಸಮಯ ಬರುತ್ತದೆ ಎಂದು ಹೇಳುವ ವಿಷಯವನ್ನು ನಾನು ನಿಮಗೆ ತಿಳಿಸುತ್ತೇನೆ. ನಾನಾಗಲಿ ಅಥವಾ ತಿಲಕರಾಗಲೀ ನಮ್ಮಲ್ಲಿ ಯಾರದು ತಪ್ಪೆಂದು ಯಾರು ನಿಮಗೆ ಹೇಳಲಿಲ್ಲ. ಆದರೆ ನಿಜವಾಗಿ ಏನು ಸಂಭವಿಸಿತು. ನಾನು ಅದನ್ನು ಇಂದು ನಿನಗೆ ಹೇಳುವೆನು. ನಾನು ಯಾವಾಗಲೂ ಒಂದು ವಿಷಯದ ಬಗ್ಗೆ ಚಿಂತಿತನಾಗಿದ್ದೆ. ಚಿಕ್ಕ ಮಕ್ಕಳು ಮರಳಿನಲ್ಲಿ ಒಂದು ಮನೆಯನ್ನು ಕಟ್ಟುವರು,

ಮಾರನೆಯ ದಿನ ಅದನ್ನು ಬೀಳಿಸಿದಂತೆಯೇ ಬ್ರಿಟಿಷರು ತಾವು ಬಯಸಿದಂತೆ ಯಾವಾಗಲಾದರೂ ನಮ್ಮ ಸಂಸ್ಥಾನವನ್ನು ಉರುಳಿಸಬಹುದು. ಬ್ರಿಟಿಷರು ಇಟಲಿಗೆ ಹೋಗುವ ದಾರಿಯಲ್ಲಿ ದಿವಂಗತ ಶ್ರೀ ರಾಜಾರಾಮ್ ಮಹಾರಾಜರನ್ನು (ಮಹಾರಾಜರ ತಾತ) ಕೊಲೆ ಮಾಡಿಸಿದರು. ಶಿವಾಜಿ-೪ ಅವರು ಅಭಿಮಾನದ ವ್ಯಕ್ತಿ, ಅವರು ಯಾರ ಒತ್ತಡಕ್ಕೂ ಮಣಿಯುತ್ತಿರಲಿಲ್ಲ. ಅವರನ್ನು ಅಮಾನುಷವಾಗಿ ಕೊಲ್ಲಲಾಯಿತು. ನಾನು ಅವರಿಗೆ ಅಪವಾದವಲ್ಲ. ಅವರು (ಬ್ರಿಟಿಷ್ ಸರಕಾರ) ವಿಷಹಾಕಿದ ಪ್ರಕರಣದಲ್ಲಿ ನನ್ನನ್ನು ಅಪರಾಧಿಯನ್ನಾಗಿ ಸಾಧಿಸಲು ಬಯಸಿದ್ದರು. ಅವರು ಅದರಲ್ಲಿ ಸಫಲರಾಗಿದ್ದರೆ ನನ್ನನ್ನು ಅವರು ಜೈಲಿಗೆ ದೂಡಿ, ನನ್ನ ಸಂಸ್ಥಾನವನ್ನು ವಶಪಡಿಸಿಕೊಳ್ಳಬಹುದಿತ್ತು. ನಾನು ಈ ವಿಚಾರವನ್ನು ತಿಲಕರಲ್ಲಿ ಚರ್ಚಿಸಬೇಕಾಗಿತ್ತು. ಆದರೆ ಅವರು ರಾಜಕಾರಣದಲ್ಲಿ ಬಹಳ ಆಳವಾಗಿ ತೊಡಗಿಸಿಕೊಂಡಿದ್ದರು. ನಾನು ಅವರನ್ನು ವ್ಯಕ್ತಿಶಃ ಭೇಟಿಯಾಗುವುದು ಕಷ್ಟಕರವಾಗಿತ್ತು. ಸರಕಾರದ ಕೈಗೆ ಸಿಗದಂತೆ ನಾನು ಬಹಳ ಎಚ್ಚರಿಕೆ ವಹಿಸಿದ್ದೆ ಅಥವಾ ನನ್ನನ್ನು ಅವರು ಕಿತ್ತುಹಾಕದಂತೆ ಅವರಿಗೆ ಯಾವ ಅವಕಾಶವು ನೀಡದಂತೆ ಎಚ್ಚರಿಕೆ ವಹಿಸಿದ್ದೆ. ನಾನು ಒಬ್ಬ ದೂತನ ಮೂಲಕ ಬಾಯಿಮಾತಿನ ಸಂದೇಶ ಕಳುಹಿಸಿದ್ದೆ. ಅವರಿಂದ ನನಗೆ ಬರವಣಿಗೆಯಲ್ಲಿ ಸಂದೇಶ ತಿಳಿಸಬೇಕೆಂಬ ಸಂದೇಶ ಬಂತು. ಈ ಸಂದೇಶವನ್ನು ನಂಬಲಿಲ್ಲ ಮತ್ತು ನಾನು ಮತ್ತೆ ಈ ವಿಷಯದಲ್ಲಿ ತೊಡಗಿಕೊಳ್ಳುವುದಕ್ಕೆ ಇಷ್ಟಪಡಲಿಲ್ಲ. ಇದು ಮಧ್ಯಸ್ಥಗಾರರು ಮಾಡಿದ ಕಿಡಿಗೇಡಿ ಕೆಲಸವೆಂದು ನಾನು ನಂಬುತ್ತೇನೆ."

**ತಿಲಕರು ತಪ್ಪಿತಸ್ಥರು**

"ಮಹಾರಾಜರು ತಮ್ಮ ಮಾತುಗಳನ್ನು ಮತ್ತೆ ಮುಂದುವರಿಸಿದರು. ನಂತರ ವೇದೋಕ್ತ ವಿವಾದ ಪ್ರಾರಂಭವಾದಾಗ ಕೊಲ್ಹಾಪುರದ ರಾಜಕುಟುಂಬವು ಕ್ಷತ್ರಿಯವರ್ಣಕ್ಕೆ ಸೇರದೆ ಶೂದ್ರವರ್ಣಕ್ಕೆ ಸೇರಿದೆ ಎಂಬ ಗಾಳಿಮಾತು ದಟ್ಟವಾಗಿ ಹರಡಿತು. ತಿಲಕರು ಖಂಡಿತವಾಗಿ ನಮಗೆ ಸಹಾಯಮಾಡುವರು ಮತ್ತು ಒಂದಲ್ಲ ಒಂದು ಮಾರ್ಗ ತೋರಿಸುವರೆಂದು ನಾನು ಭಾವಿಸಿದ್ದೆ. ಆದರೆ ಅವರು ಯಾವುದೇ ರೀತಿಯ ಬೆಂಬಲ ನೀಡಲು ಮುಂದೆ ಬರಲಿಲ್ಲ. ಬದಲಿಗೆ ಅವರು ಈ ವಿಷಯದಲ್ಲಿ ಕೊಲ್ಹಾಪುರದ ಬ್ರಾಹ್ಮಣರಿಗೆ ಬೆಂಬಲ ನೀಡುತ್ತಿದ್ದಾರೆಂದು ನಾನು ಕೇಳಿದೆ. ನಾನು ಕುಗ್ಗಿಹೋದೆ ಮತ್ತು ಗೊಂದಲಗೊಂಡೆ. ಸಮಯ (ಕಾಲ) ನಮ್ಮ ಕಡೆಗಿಲ್ಲ ಎಂಬುದು ಸತ್ಯವಾಗಿತ್ತು. ನಿಮ್ಮ ತಂದೆ ಬದುಕಿದ್ದಿದ್ದರೆ ಎಲ್ಲಾ ಸಂಗತಿಗಳನ್ನು ವಿವರವಾಗಿ ನಿಮಗೆ ಹೇಳುತ್ತಿದ್ದರು. ಈ ವಿಷಯ ತನ್ನ ದಾರಿ ಕಂಡುಕೊಳ್ಳಲಿ ಎಂದು ನಾನು ಮೂರು ವಾರಗಳ ಕಾಲ ಕಾದೆ. ನಿಮ್ಮ ತಂದೆ ಕೊಲ್ಹಾಪುರದ ಬ್ರಾಹ್ಮಣರೊಂದಿಗೆ ಮಾತನಾಡಲು ಪ್ರಯತ್ನಿಸಿದರು ಮತ್ತು ಅವರಿಗೆ ಅರ್ಥಮಾಡಿಸಲು ಪ್ರಯತ್ನಿಸಿದರು ಮತ್ತು ತಾವು ಈ ವಿಷಯದಲ್ಲಿ ಸಫಲರಾಗುವರೆಂದು ಭಾವಿಸಿದ್ದರು. ಅವರೆಲ್ಲರೂ ಹೊರಗಿನ ನಿರ್ದೇಶನಕ್ಕೊಳಗಾಗಿದ್ದಾರೆಂದು ನಮಗೆ ಮನವರಿಕೆಯಾದ ಮೇಲೆ ನಾವು ಅದನ್ನು ಎದುರಿಸಲು ಒಂದು ಯೋಜನೆಯನ್ನು ರೂಪಿಸಿದೆವು ಮತ್ತು ಅದರ ಪ್ರಕಾರ ನಾವು ಕಾರ್ಯೋನ್ಮುಖರಾದೆವು."

"ನಾನು ನಿರೀಕ್ಷಿಸಿದಂತೆ ಲೋಕಮಾನ್ಯ ತಿಲಕರು ಈ ವಿಷಯದಲ್ಲಿ ತೊಡಗಿಸಿಕೊಂಡಿದ್ದರೆ ಹಲವಾರು ಕುರೂಪಿ ಸನ್ನಿವೇಶಗಳಿಂದ ನಮ್ಮನ್ನು ಪಾರುಮಾಡಬಹುದಾಗಿತ್ತು ಮತ್ತು 'ವೇದೋಕ್ತ'ವು ವಿಷಮತರ ತಿರುವನ್ನು ಪಡೆಯುತ್ತಿರಲಿಲ್ಲ. ಮಿಗಿಲಾಗಿ, ತಿಲಕರು ನನ್ನ ಕಡೆಗೆ ಇದ್ದಾರೆಂಬ ಪ್ರಯೋಜನ ಪಡೆಯುತ್ತಿದ್ದೆ ಮತ್ತು ಬ್ರಿಟಿಷರ ಗಮನಕ್ಕೆ ಬಾರದೆ ದುಸ್ತರವಾಗಿದ್ದ ಎಲ್ಲ ವಿಷಯಗಳನ್ನು ಸುಲಭವಾಗಿ

ಪರಿಹರಿಸಿಕೊಳ್ಳಬಹುದಾಗಿತ್ತು ಮತ್ತು ಈ ವಿಷಯದ ಬಗ್ಗೆ ನಾನು ಬಹಿರಂಗವಾಗಿ ಅವರೊಡನೆ ಸಂವಾದ ನಡೆಸಬಹುದಾಗಿತ್ತು. ತಿಲಕರು ಯಾವುದೇ ಕ್ರಮ ತೆಗೆದುಕೊಳ್ಳದೆ ಸುಮ್ಮನಿದ್ದದ್ದು ಅವರ ತಪ್ಪೆಂದು ನಾನು ಭಾವಿಸಿದೆನು. ನನ್ನದು ತಪ್ಪಿಲ್ಲವೆಂದು ನಾನು ಹೇಳಲಾರೆ. ಆ ಸಮಯದಲ್ಲಿ ಆಗಬಾರದ ಅಸಂತೋಷಕಾರಿ ಸಂಗತಿಗಳು ಆಗಿಹೋದವು ಮತ್ತು ಎಲ್ಲ ಸಂಗತಿಗಳನ್ನು ಸುಲಭವಾಗಿ ಪರಿಹರಿಸಬಹುದಾಗಿತ್ತು ಎಂಬುದು ನನ್ನ ಅರ್ಥ. ಆದರೆ ತಿಲಕರು ಈ ತಪ್ಪನ್ನು ಮಾಡಿದರೆಂದು ನಾನು ಹೇಳುವೆನು. ನಾವಿಬ್ಬರು ಕೂಡಿ ಕೆಲಸಮಾಡುವ ಕನಸು ನನಸಾಗುತ್ತಿತ್ತು. ಒಟ್ಟು ಪರಿಣಾಮವೇನಾಯಿತು. ಪರಸ್ಪರ ಬಯ್ದಾಟ, ದೋಷಾರೋಪಣೆ ಮತ್ತು ಪರಸ್ಪರ ಕೆಸರೆರಚಿಕೊಳ್ಳುವುದು ಸಾಮಾನ್ಯ ರೂಢಿಯಾಯಿತು. 'ದೇಶದ್ರೋಹಿ' ಎಂಬ ಪಟ್ಟ ಈ ದ್ವೇಷದಿಂದ ನನಗೆ ದೊರೆಯಿತು."

### ತನಗೆ ತಾನೇ ಯಾರು ದ್ರೋಹಮಾಡಿಕೊಳ್ಳಬಲ್ಲರು?

ಮಾನ್ಯ ಮಹಾರಾಜರು ವಿವರಗಳನ್ನು ತಿಳಿಸುವುದನ್ನು ಮುಂದುವರಿಸಿದರು: "ನನಗೆ ಕಿರೀಟಧಾರಣೆಯಾದ ಕೂಡಲೇ ನಾನು ಸೇವೆಯಲ್ಲಿದ್ದ ಯೂರೋಪಿಯನ್ನರನ್ನು ಕಳುಹಿಸಿಬಿಟ್ಟೆ. ಸರಿ, ಇದು ದೇಶದ್ರೋಹವೆ? ನಾನು ಕರ್ನಲ್ ವುಡ್‌ಹೌಸ್ ಮತ್ತು ಲಾರ್ಡ್ ವೆಲ್ಲಿಂಗ್‌ಟನ್ ಅವರ ಜೊತೆಯಲ್ಲಿ ಒಳ್ಳೆಯ ಸಂಬಂಧಗಳನ್ನು ಹೊಂದಿದ್ದೆನು. ಆದರೆ ಯಾರೇ ಯೂರೋಪಿಯನ್ನರು ನಮ್ಮ ಸಂಸ್ಥಾನಕ್ಕೆ ಭೇಟಿ ನೀಡಿದಾಗ ನಮ್ಮ ಕಾರುಗಳು ಅವರ ಸೇವೆಗೆ ಸಿದ್ಧವಾಗಿರುತ್ತಿದ್ದವು. ೧೯೧೩ರಲ್ಲಿ ಥಿಯಾಸಫಿಕಲ್ ಸೊಸೈಟಿಯ ಅಧ್ಯಕ್ಷರಾದ ಡಾ. ಅನಿಬೆಸೆಂಟರು ಬೇಸಿಗೆಯಲ್ಲಿ ಭೇಟಿ ನೀಡಲು ನಿರ್ಧರಿಸಿದಾಗ ನಾನು ವೈಯಕ್ತಿಕವಾಗಿ ಅವರಿಗಾಗಿ ವ್ಯವಸ್ಥೆಗಳನ್ನು ನೋಡಿಕೊಂಡೆನು. ೧೯೨೦ರ ಕೊನೆಯಲ್ಲಿ ಲಾರ್ಡ್ ವಿಲ್ಲಿಂಗ್‌ಟನ್ (ಮಹಾರಾಜರ ಸ್ನೇಹಿತ ಮತ್ತು ಮದ್ರಾಸಿನ ಗೌರ್ನರ್) ಅವರನ್ನು ಭೇಟಿಮಾಡಲು ಮದ್ರಾಸಿಗೆ ಹೋಗಿದ್ದೆ. ಅಲ್ಲಿಂದ ನಾನು ಅಡಿಯಾರ್‌ಗೆ ಹೋಗಿದ್ದೆ. ಅಲ್ಲಿ ನಾನು ಮತ್ತೆ ಆಕೆಯನ್ನು ಭೇಟಿಯಾದೆ ಮತ್ತು ಆಕೆ ಮಾಡಿದ ಕೆಲಸಕಾರ್ಯಗಳಿಂದ ನಾನು ಆಕರ್ಷಿತನಾದೆ ಮತ್ತು ಆಕೆಯ ಬಗ್ಗೆ ನನ್ನ ಗೌರವ ಇಮ್ಮಡಿಸಿತು."

"ಆಕೆ ಅಡಿಯಾರಿನಲ್ಲಿ ಅಸ್ಪೃಶ್ಯರ ಮಕ್ಕಳಿಗಾಗಿ ಪ್ರಾರಂಭಿಸಿದ ಶಾಲೆಗಳು ತಮ್ಮ ಇತರ ಕೆಲಸಗಳಂತೆಯೇ ಅಚ್ಚುಕಟ್ಟಾಗಿ ಮತ್ತು ಚೊಕ್ಕಟವಾಗಿದ್ದವು. ಹರಿಜನರನ್ನು (ಅಸ್ಪೃಶ್ಯರನ್ನು) ಉದಾಸೀನ ಮಾಡಿರಲಿಲ್ಲ. ಇವೆಲ್ಲವೂ ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿದವು ಮತ್ತು ಅವರ ಸಲಹೆಯ ಪ್ರಕಾರ ಶಿಕ್ಷಣದ ಮಾದರಿಯನ್ನು ಪುನರ್‌ವ್ಯವಸ್ಥೆ ಮಾಡಲು ಕೊಲ್ಹಾಪುರಕ್ಕೆ ಡಾ. ಬೆಸೆಂಟರನ್ನು ಆಹ್ವಾನಿಸಲು ನನ್ನ ಮನಸ್ಸು ನಿರ್ಧರಿಸಿತು. ರೋಲ್ಸ್ ರಾಯ್ಸ್‌ಗಳನ್ನು (ಕಾರು) ಹೊಂದಬೇಕೆಂದು ನೀನು ಹೇಳಿದಾಗ ನಾನು ಅದರ ವಿರೋಧಿಯಾಗಿದ್ದೆ. ಆದರೆ ಡಾ. ಬೇಸೆಂಟರನ್ನು ಆಹ್ವಾನಿಸಲು ನಾನು ಅದರ ಹಠವನ್ನು ಬಿಡುವೆನು. ಅವರನ್ನು ಕೊಲ್ಹಾಪುರಕ್ಕೆ ಬರಲು ಒಪ್ಪಿಸುವೆನು. ನಿನಗೆ ಇದೆಲ್ಲ ಗೊತ್ತು. ಇದರಲ್ಲಿ ನೀನು ರಾಜದ್ರೋಹವನ್ನು ಕಾಣುವೆಯಾ?"

"ರಾಜದ್ರೋಹದ ಕಾಯ್ದೆಯಡಿಯಲ್ಲಿ ಬಾಬು ಅರವಿಂದಘೋಷರನ್ನು ಅಪರಾಧಿಯೆಂದು ಘೋಷಿಸಿದಾಗ ಹಾಗೂ ಬ್ರಿಟಿಷ್ ಸರಕಾರ ವಿಚಾರಣೆ ನಡೆಸಿದಾಗ ನಾನು ಬರೋಡದ ಶ್ರೀ ಖಾಸೆರಾವ್ ಜಾಧವ್ ಅವರ ಸಹೋದರ ಕ್ಯಾಪ್ಟನ್ ಮಾಧವರಾವ್ ಅವರಿಂದ ಅವರಿಗೆ ೫,೦೦೦ ರೂ.ಗಳನ್ನು ಕಳುಹಿಸಿದ್ದೆ. ಇದು ರಾಜದ್ರೋಹವೆ? ಜನರ ದೃಷ್ಟಿಯಲ್ಲಿ ನನ್ನನ್ನು ಕಳಂಕಿತನನ್ನಾಗಿ ಮಾಡಲು ಮಾಡಿದ ಒಂದು ಯೋಜನೆಯ ಭಾಗವಾಗಿತ್ತು. ಆದರೆ ಅದು ಸಫಲವಾಗಲಿಲ್ಲ. ನೀವು ಮನೆ ಛಾವಣಿ ಮೇಲೆ

ನಿಂತು ಜೋರಾಗಿ ನಾನು ದೇಶದ್ರೋಹಿ ಎಂದು ಕೂಗಿ ಹೇಳಿದರೂ ಯಾರು ನಂಬುವುದಿಲ್ಲ ಎಂಬುದು ಸತ್ಯವಾಗಿತ್ತು. ದೇಶಕ್ಕೆ ದ್ರೋಹ ಬಗೆಯುವುದು ನಿನಗೆ ನೀನೆ ದ್ರೋಹ ಬಗೆದಂತೆ. ಇದನ್ನು ಯಾರು ಮಾಡುವರು. ಆದ್ದರಿಂದ ಜನರಿಗೆ ಮನವರಿಕೆ ಮಾಡಿಕೊಡಲು ಎಲ್ಲಾ ಕಲೆಗಳಿಂದ ಯಾರು ಪ್ರಯತ್ನ ಮಡಿದರೂ ಜನರು ನಂಬುವುದಿಲ್ಲ ಎಂಬುದು ಸತ್ಯಸಂಗತಿ."

### ತಿಲಕರನ್ನು ಪನ್ಹಾಲಕ್ಕೆ ಕರೆತನ್ನಿ

ನಾನು ಬಾಂಬೆಯಿಂದ ವಾಪಸ್ಸು ಬರುತ್ತಿರುವಾಗ ಗೌರವಾನ್ವಿತ ದಾಜಿ ಅಬಾಜಿಖಾರೆಯವರ ಬಂಗಲೆಯಲ್ಲಿ ನಡೆದ ಮೊದಲಿನ ಸಭೆಯಲ್ಲಿ ನಿರ್ಧರಿಸಿದಂತೆ ನಾನು ಪುಣೆಯಲ್ಲಿ ಇಳಿದು ಗಾಯಕವಾಡೆಯಲ್ಲಿ ತಿಲಕರನ್ನು ಅವರ ನಿರ್ದೇಶನದಂತೆ ಭೇಟಿಯಾಗಬೇಕಾಗಿತ್ತು. ಈ ಮೊದಲ ಭೇಟಿಯಲ್ಲಿ ವಿವರವಾಗಿ ಸ್ವಲ್ಪ ಕಾಲದಲ್ಲಿಯೇ ಮಾನ್ಯ ಮಹಾರಾಜರೊಡನೆ ನಮ್ಮ ಸಂಬಂಧ ಬಲವಾಗಿ ಬೆಳೆದ ಬಗೆಯನ್ನು ವಿವರಿಸಿ ಹೇಳಿದ್ದೆ. ಶಾಹು ಮತ್ತು ತಿಲಕರು ಒಟ್ಟಿಗೆ ಕೂಡಿ ಕೆಲಸ ಮಾಡಲು ಸಾಧ್ಯವಾಗಲಿಲ್ಲ ಎಂಬ ಅಸಂತೋಷ ಮಾನ್ಯ ಮಹಾರಾಜರು ತೋರಿಸಿದ್ದನ್ನು ಅವರಿಗೆ ನಾನು ಹೇಳಿದೆ. ಮಾನ್ಯ ಮಹಾರಾಜರಾಗಲೀ ಯಾರದು ತಪ್ಪು ಎಂಬುದನ್ನು ಹೇಳಲಿಲ್ಲ ಅಥವಾ ನಾನಾಗಲೀ ಅದನ್ನು ಎಂದಿಗೂ ಕೇಳಲಿಲ್ಲ ಎಂದು ಹೇಳಿದೆ. ಇದನ್ನು ಕೇಳಿದ ತಿಲಕರು ಹೇಳಿದರು, "ಮಹಾರಾಜ ನಿನಗೆ ಏನು ಹೇಳಿದರೂ ಅದು ಖಂಡಿತವಾಗಿ ಸರಿಯಾಗಿದೆ ಮತ್ತು ಏನನ್ನೂ ಮಾಡಲಾಗಲಿಲ್ಲ."

ಅವರು ಇಬ್ಬರ ನಡುವೆ ಇದ್ದ ಆಕರ್ಷಣೆ ಅಥವಾ ಅವರು ಖಾಯಿಲೆಯಿರುವಾಗ ಅವರಿಗೆ ಸಹಾಯ ಮಾಡಬೇಕೆಂಬ ಮಹಾರಾಜರ ತುರ್ತಿನಿಂದ ಮುಂಬೈನ ಸರ್ದಾರ್ ಗೃಹದಿಂದ ಅವರ ಒಡನಾಡಿಗಳ ಸಮೇತ ತಿಲಕರನ್ನು ಕರೆದುಕೊಂಡು ಬಾ ಎಂದು ಮಾನ್ಯ ಮಹಾರಾಜರು ನನಗೆ ಹೇಳಿದ್ದರು. ತಮ್ಮ ಪನ್ಹಾಲ ನಿವಾಸದಲ್ಲಿ ಇಡೀ ಗುಂಪಿಗೆ ಅವಶ್ಯಕವಿರುವ ಎಲ್ಲಾ ವ್ಯವಸ್ಥೆಗಳನ್ನು ಮಾಡಲು ಮಹಾರಾಜರು ಸಿದ್ಧವಾಗಿದ್ದರು. ಅದೇ ದಿನ ನಾನು ಮುಂಬೈಗೆ ಮೇಲ್‌ನಲ್ಲಿ ಹೋಗಲು ನಾನು ನಿರ್ಧರಿಸಿದ್ದೆ. ಅವರ ನಡುವೆ ಇದ್ದ ಪ್ರೀತಿ-ದ್ವೇಷದ ಸಂಬಂಧ ನನಗೆ ಚೆನ್ನಾಗಿ ಗೊತ್ತಿತ್ತು, "ನೀವಿಬ್ಬರೂ ಪರಸ್ಪರ ನಿಂದಿಸಲು ಮೊದಲ ಅವಕಾಶವನ್ನು ಹಿಡಿಯುತ್ತಿದ್ದಿರಿ. ಆದರೆ ಇಂದು ನೀವು ಅವರು ತಮ್ಮ ಖಾಯಿಲೆಯಿಂದ ಇಲ್ಲಿ ಇರಲು ಬಯಸುತ್ತೀರಿ, ಆದ್ದರಿಂದ ಯಾವುದು ನಿಜ? ಎಂದು ಕೇಳುವುದಕ್ಕೆ ನಾನು ಹಿಂಜರಿಯಲಿಲ್ಲ."

ಮಾನ್ಯ ಮಹಾರಾಜರು ಪೃಥ್ವಿರಾಜ ಚವಾಣ ಮತ್ತು ಅವರ ಚಿಕ್ಕಪ್ಪನವರ ನಡುವೆ ನಡೆದ ಯುದ್ಧದ ಸಮಯದಲ್ಲಿನ ಒಂದು ಭಾವನಾತ್ಮಕ ಘಟನೆಯ ಕಡೆಗೆ ನನ್ನ ಗಮನವನ್ನು ಸೆಳೆದರು. ಅವರು ಸಾಧಾರಣವಾದ ಉಡುಪನ್ನು ಧರಿಸಿ ಹಾಸಿಗೆ-ಪೀಡಿತ ತಮ್ಮ ಚಿಕ್ಕಪ್ಪನನ್ನು ಭೇಟಿ ಮಾಡಲು ಒಂದು ಸಂಜೆ ಹೋದರು. ಸಾಯುತ್ತಿರುವ ತಮ್ಮ ಚಿಕ್ಕಪ್ಪನ ಆಶಯದಂತೆ ಒಂದೇ ತಟ್ಟೆಯಲ್ಲಿ ಇಬ್ಬರೂ ಜೊತೆಯಲ್ಲಿ ಊಟ ಮಾಡಿದರು. ಇಂಥ ಹೃದಯಸ್ಪರ್ಶಿ ಘಟನೆಯನ್ನು ಹೇಳಿದ ನಂತರ ಮಾನ್ಯ ಮಹಾರಾಜರು ಮುಂದುವರಿಸಿದರು: "ನಾವಿಬ್ಬರೂ ಒಂದೇ ದೇಶದಲ್ಲಿ ಮತ್ತು ಮಹಾ ಆರ್ಯ ಪರಂಪರೆಯಲ್ಲಿ ಹುಟ್ಟಿದ್ದೇವೆ, ಇಲ್ಲಿ ಶತ್ರುತ್ವ ಶಾಶ್ವತವಲ್ಲ. ಎಲ್ಲಿ ನಿಲ್ಲಿಸಬೇಕೆಂಬುದು ನಮಗೆ ಗೊತ್ತು. ತಿಲಕರ ಬದಲಿಗೆ ನಾನು ಖಾಯಿಲೆ ಬಿದ್ದಿದ್ದರೆ ಅವರು ನನ್ನ ಬಗ್ಗೆ ಕಾಳಜಿ ತೋರಿಸುತ್ತಿರಲಿಲ್ಲವೆಂದು ನೀನು ಭಾವಿಸುವೆಯಾ? ಒಂದು ವೇಳೆ ಯಾರೇ ಹೇಳಿದ್ದರೂ ಅದು ನಿಜವಲ್ಲವೆಂದು ನಾನು ಹೇಳುತ್ತಿದ್ದೆ. ಶ್ರೀ ತೋಫ್‌ಖಾನೆಯವರೇ, ತಿಲಕರ ಸಾಮರ್ಥ್ಯ

ಏನು ಎಂಬುದು ನನಗೆ ಗೊತ್ತು. ಆದ್ದರಿಂದ ದಯವಿಟ್ಟು ಕೂಡಲೇ ಎದ್ದೇಳಿ ಮತ್ತು ಇಂದಿನ ಮೇಲಿನಲ್ಲಿ ಮುಂಬೈಗೆ ತೆರಳಿ ಮತ್ತು ಅವರನ್ನು ಇಲ್ಲಿಗೆ ಕರೆತನ್ನಿ. ನೀವು ಒಂದು ತಂತಿಯನ್ನು ಮಾತ್ರ ಶ್ರೀ ಕುಂಭೋಜಕರ್ ಅವರಿಗೆ ಕಳುಹಿಸಿ, ನಾನು ವಿಶೇಷ ರೈಲು ಮತ್ತು ಇತರೆ ವ್ಯವಸ್ಥೆಗಳನ್ನು ಮಾಡುವೆನು.''

ಮಹಾರಾಜರ ನಿರ್ಣಾಯಕ ಹೇಳಿಕೆಯನ್ನು ಕೇಳಿ ನಾನು ಕೂಡಲೇ ಮುಂಬೈಗೆ ಹೊರಟೆ. ಮಾರನೆಯ ದಿನ ಬೆಳಿಗ್ಗೆ ನಾನು ಪುಣೆ ತಲುಪಿದಾಗ ತಿಲಕರು ನಿಧನರಾದ ಸುದ್ದಿ ತಿಳಿಯಿತು ಮತ್ತು ತಿಲಕರಿಗೆ ಅಂತಿಮ ಗೌರವನಮನಗಳನ್ನು ಸಲ್ಲಿಸಲು ಮುಂಬೈಗೆ ಹೋಗಲು ಪುಣೆಯ ರೈಲ್ವೆ ನಿಲ್ದಾಣದಲ್ಲಿ ಜನರು ತುಂಬಿ ತುಳುಕುತ್ತಿದ್ದಾರೆ: ಜನರು ನಾನು ಮುಂಬೈಗೆ ಹೋಗಬೇಕೆಂದು ಒತ್ತಾಯಿಸುತ್ತಿದ್ದಾರೆ, ಆದರೆ ನಾನು ನಿರಾಕರಿಸಿದೆ ಮತ್ತು ಅದೇ ದಿನ ರಾತ್ರಿ ಕೊಲ್ಹಾಪುರಕ್ಕೆ ವಾಪಸ್ಸು ಬಂದೆ.....

**ಶಾಹುರವರ ಸರಳಜೀವನ**

ಶಿವಾಜಿ ಮಹಾಶಯರ ವಾರಸುದಾರರಾಗಿದ್ದ ಮಹಾರಾಜರು ಹೇಗೆ ತಪಸ್ಸಿನ ಜೀವನ ನಡೆಸಿದರೆಂಬುದು ನಂಬುವಂಥದಲ್ಲ ಮತ್ತು ನಾನು ದಿನ ೮ ರಿಂದ ೧೦ ಗಂಟೆಗಳ ಕಾಲ ಸುಮಾರು ಆರು ವರ್ಷಗಳ ಕಾಲ ಕೆಲಸ ಮಾಡಿದ್ದರೂ ಒಂದು ರಹಸ್ಯವನ್ನು ನಾನು ಭೇದಿಸಲಾರದೆ ಹೋದೆ. ಯಾರಾದರೂ ಅವರ ನಿವಾಸಕ್ಕೆ ಭೇಟಿ ನೀಡಿದಾಗ ವೈಭವಯುತವಾದ ಪೀಠೋಪಕರಣಗಳ ಮತ್ತು ಸುಸಜ್ಜಿತಗೊಳಿಸುವುದಕ್ಕೆ ಅಚ್ಚರಿಪಡುವುದೆಂದಲ್ಲ. ಮಹಾರಾಜರು ಬಳಸಿದ ಪೀಠೋಪಕರಣಗಳ ವಿಧವನ್ನು ನೋಡಿ ಹೊಸಬರು ಖಂಡಿತ ಆಘಾತಗೊಳ್ಳುವರು. ಮಾನ್ಯ ಮಹಾರಾಜರು ಹೊರಗೆ ಹೋಗದೆ ಇದ್ದರೆ ಸೂರ್ಯೋದಯವಾದ ಮೇಲೆ ಅವರು ಭವನದ ಪಶ್ಚಿಮಭಾಗದಲ್ಲಿ ಕುಳಿತುಕೊಳ್ಳುವರು. ಅವರ ಸುತ್ತವಿರುವ ಪೀಠೋಪಕರಣಗಳು ದಾರ ಹೊಸೆದ ಎರಡು ಮಂಚಗಳು ಮತ್ತು ಒಂದು ಮೆತ್ತೆ, ಜೊತೆಗೆ ಭೇಟಿ ನೀಡುವವರಿಗೆ ಕುರ್ಚಿಗಳಿರುತ್ತಿದ್ದವು. ಮಂಚಗಳಲ್ಲಿ ಒಂದು ಮಂಚದ ಮೇಲೆ ಹೊಳಪಿನ ಕಣ್ಣುಗಳ ಸಾಕಿದ ಎರಡು ಚಿರತೆಗಳು ಇರುತ್ತಿದ್ದವು ಮತ್ತು ಮಹಾರಾಜರು ಮತ್ತೊಂದು ಮಂಚದ ಮೇಲೆ ಕುಳಿತುಕೊಳ್ಳುತ್ತಿದ್ದರು. ಅವರ ಮಂಚದ ಮೇಲಿದ್ದ ಹಾಸಿಗೆಯ ಮೇಲಿದ್ದ ಮೆತ್ತೆಯ ಬಗ್ಗೆ ಇದ್ದ ನನ್ನ ಕುತೂಹಲವನ್ನು ಹೊರಳಿಸಿದೆ. ಅದನ್ನು ಕೆಲವು ಜಿಂಕೆಯ ಚರ್ಮಗಳಿಂದ ಹೊಲೆಯಲಾಗಿದ್ದನ್ನು ನಾನು ನೋಡಿ ಆಶ್ಚರ್ಯಪಟ್ಟಿದ್ದನ್ನು ನೀವು ಕಲ್ಪಿಸಿಕೊಳ್ಳಿ, ಮಾನ್ಯ ಮಹಾರಾಜರು ರಾತ್ರಿ ಕೂಡ ಹತ್ತಿಯ ಮೆತ್ತನೆಯ ಹಾಸಿಗೆಯ ಬದಲು ಅದೇ ರೀತಿಯ ಮೆತ್ತನೆ ಹಾಸಿಗೆಯನ್ನು ಬಯಸುತ್ತಿದ್ದರು. ಮಳೆಗಾಲವನ್ನು ಬಿಟ್ಟರೆ ಅವರು ಬಯಲುಪ್ರದೇಶದಲ್ಲಿ ಆಕಾಶದ ಕೆಳಗಡೆ ಮಲಗುತ್ತಿದ್ದರು. ಇದು ಅವರ ಪೀಠೋಪಕರಣದ ಕತೆ.

ಅವರು ಒಂದು ವಿಶಿಷ್ಟ ಮರದ ಚಕ್ಕೆಯ ಬಣ್ಣ ಹಾಕಿದ ಸಾಧಾರಣ ಬಟ್ಟೆಗಳನ್ನು ತೊಡುತ್ತಿದ್ದರು. ಅವರ ಜೀವನಶೈಲಿಯು ಅವರ ಪೀಠೋಪಕರಣ ಮತ್ತು ಬಟ್ಟೆಗಳಂತೆಯೇ ಸರಳವಾಗಿತ್ತು. ಅವರು ಸೂರ್ಯೋದಯಕ್ಕಿಂತ ಮುಂಚೆಯೇ ಎದ್ದು ತಣ್ಣೀರುಸ್ನಾನ ಮಾಡಿ ದೇವರ ಪೂಜೆ ಮಾಡಿದ ನಂತರವೇ ದಿನನಿತ್ಯದ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸುತ್ತಿದ್ದರು. ಅವರು ತಮ್ಮ ದಿನನಿತ್ಯದ ರೂಢಿಯನ್ನು ಬದಲಿಸಲಿಲ್ಲ. ದೆಹಲಿಯಲ್ಲಿ ಸಂಭವಿಸಿದ ಆಸಕ್ತಿಕರವಾದ ಒಂದು ಘಟನೆಯನ್ನು ಹೇಳುವುದು ಉಚಿತವಾಗಿದೆ. ದೆಹಲಿಯಲ್ಲಿ ಅತಿರೇಕದ ಹವಾಮಾನವಿರುತ್ತದೆ. ಬೇಸಿಗೆಯಲ್ಲಿ ಅದರ ಉಷ್ಣಾಂಶ ವಿಪರೀತವಾಗಿ ಏರುತ್ತದೆ ಮತ್ತು ಚಳಿಗಾಲದಲ್ಲಿ ಸಿಕ್ಕಾಪಟ್ಟೆ ಇಳಿಯುತ್ತದೆ. ಮಾನ್ಯ ಮಹಾರಾಜರು ದಿನಕ್ಕೆ ಮೂರು ಬಾರಿ ಸ್ನಾನ

ಮಾಡುವರು, ಮೊದಲನೇ ಸ್ನಾನ ಸೂರ್ಯೋದಯಕ್ಕೆ ಮೊದಲು, ಎರಡನೇ ಸ್ನಾನ ಮಧ್ಯಾಹ್ನದ ಊಟಕ್ಕೆ ಮೊದಲು ಮತ್ತು ಕೊನೆಯ ಸ್ನಾನ ಸಂಜೆ ಆರರಿಂದ ಏಳು ಗಂಟೆಯೊಳಗೆ; ಅದು ಬೇಸಿಗೆಯಾಗಿರಲಿ ಅಥವಾ ಚಳಿಗಾಲವಾಗಲಿ ಅವರು ಸ್ನಾನ ಮಾಡುತ್ತಿದ್ದರು. ಒಮ್ಮೆ ಮಾನ್ಯ ಮಹಾರಾಜರು ದೆಹಲಿಗೆ ಭೇಟಿ ನೀಡಿದಾಗ ಭಾವನಗರದ ಮಹಾರಾಜರು ದೆಹಲಿಯಲ್ಲಿದ್ದರು. ವಿಪರೀತ ಚಳಿಯಿದ್ದರೂ ಮಾನ್ಯ ಮಹಾರಾಜರು ಸೂರ್ಯೋದಯಕ್ಕೆ ಮೊದಲೇ ಎದ್ದು ತಮ್ಮ ದಿನನಿತ್ಯದ ರೂಢಿಯಾದ ತಣ್ಣೀರಿನ ಸ್ನಾನ ಮಾಡಿದರು. ಭಾವನಗರದ ಮಹಾರಾಜರು ಆ ಸಮಯದಲ್ಲಿ ತಮ್ಮ ಮಕ್ಕಳನ್ನು ಎಬ್ಬಿಸಿ ಇದನ್ನು ತೋರಿಸುತ್ತಿದ್ದರು ಮತ್ತು ಹೇಳುತಿದ್ದರು, 'ನಮ್ಮ ಮಹಾರಾಜರು ಈ ಬೆಳಗಿನ ಚಳಿಯಲ್ಲಿ ತಣ್ಣೀರಿನ ಸ್ನಾನ ಮಾಡಿದರು ಮತ್ತು ನಿಮಗೆ ಎಂಟು ಗಂಟೆಯಲ್ಲಿ ಸ್ನಾನಕ್ಕೆ ಬಿಸಿನೀರು ಬೇಕು..."

## ನಿಮ್ಮ ಮಹಾರಾಜರು ಒಂದು ಮುತ್ತು

ಒಮ್ಮೆ ದೆಹಲಿಯಲ್ಲಿ ಸಾಮಂತರಾಜರ ಮಂಡಳಿಯ ಸಭೆ (ಅಧಿವೇಶನ) ನಡೆಯಿತು. ವೈಸ್‌ರಾಯರ ಕಾರ್ಯದರ್ಶಿ ಸಾಂಗಲಿಯ ಮುಖ್ಯಸ್ಥರನ್ನು ಮಿಸ್ಟರ್ ಪಟವರ್ಧನ ಎಂದು ಸಂಬೋಧಿಸಿದರು. ಮಾನ್ಯ ಮಹಾರಾಜರು ಆಕ್ಷೇಪಿಸಿದರು ಮತ್ತು ಹೇಳಿದರು, "ಅವರು ಸಾಂಗಲಿಯ ರಾಜಾಸಾಹೇಬರು." ಇದಾದ ನಂತರ ಮುಧೋಳದ ರಾಜರು ಅವರನ್ನು ರಾಜ ಎಂದು ಸಂಬೋಧಿಸಿದರೆ ಅವರು ಏನೆಂದು ಕರೆಯಲಾಗುವುದು ಎಂದು ಪ್ರಶ್ನಿಸಿದರು. "ನಿಮ್ಮನ್ನೇ ಮಹಾರಾಜ ಎಂದು ಕರೆದುಕೊಳ್ಳಿ." ಮಹಾರಾಜರಿಂದ ಹೊಗಳಿಕೆ(ಬೆನ್ನುತಟ್ಟುವ)ಯ ಪ್ರತ್ಯುತ್ತರ ಬಂತು. "ಹಾಗಾದರೆ ನಿಮ್ಮನ್ನು ಏನೆಂದು (ಮಹಾರಾಜರನ್ನು) ಕರೆಯಬೇಕೆಂದು ಕೇಳಿದಾಗ ಮುಧೋಳದ ರಾಜರು ಮತ್ತೆ ಕೇಳಿದರು. "ನನ್ನನ್ನು ನಿಮ್ಮ ದ್ವಾರಪಾಲಕ ಎಂದು ಕರೆಯಿರಿ" ಎಂದು ಮಾನ್ಯ ಮಹಾರಾಜರು ಉತ್ತರ ನೀಡಿದರು. ಸಾಂಗಲಿಯ ರಾಜರು ಹಿಂದುಗಡೆ ಒಬ್ಬರೇ ಕುಳಿತಿದ್ದಾಗ ಮಾನ್ಯ ಮಹಾರಾಜರು ಅವರ ಪಕ್ಕದಲ್ಲಿ ಕುಳಿತುಕೊಂಡರು.

ಸಾಂಗಲಿಯ ರಾಜರ ಸಹೋದರರಾದ ಬಾಪು ಸಾಹೇಬರೇ ಸ್ವತಃ ಈ ಘಟನೆಯನ್ನು ವಿವರಿಸಿ ಹೇಳಿದಾಗ ಅದನ್ನು ಕೇಳಿ ನಾನು ಬಹಳ ಖುಷಿಪಟ್ಟೆ, "ತೋಫ್‌ಖಾನೆಯವರೇ, ನಿಜವಾಗಿಯೂ ನಿಮ್ಮ ಮಹಾರಾಜರು ಒಬ್ಬ ಮುತ್ತಿನಂಥ ಮನುಷ್ಯರು. ಈ ಭಾಗದಲ್ಲಿ ಹಲವರು ಮಾನ್ಯ ಮಹಾರಾಜರನ್ನು ತಪ್ಪಾಗಿ ತಿಳಿದುಕೊಂಡಿದ್ದರು ಮತ್ತು ಇತರರಾದ ಹಲವರು ಅವರನ್ನು ತಪ್ಪಾಗಿ ಪ್ರತಿನಿಧಿಸಿದ್ದರು. ನಮ್ಮಲ್ಲಿರುವ ಹುಚ್ಚುತನ ಮತ್ತು ಹೊಟ್ಟೆಕಿಚ್ಚಿಗೆ ನಾನು ಕ್ಷಮೆ ಕೋರುತ್ತೇನೆ" ಎಂದು ಅವರು ಮತ್ತೆ ಮುಂದುವರಿಸಿದರು.

## ಪ್ಲೇಟೋ ಕಲ್ಪನೆಯ ತತ್ವಜ್ಞಾನಿ ರಾಜ

ಒಮ್ಮೆ ಗಾಂಧೀಜಿ ಆಶ್ರಮದ ಪ್ರೊ. ಅಠಾವಳೆಯವರು ನಮ್ಮ ಸ್ಥಳಕ್ಕೆ ಅತಿಥಿಯಾಗಿ ಬಂದಿದ್ದರು. ಅವರು ಸಂಸ್ಕೃತದಲ್ಲಿ ಬಹು ಪಾಂಡಿತ್ಯ ಪಡೆದ ಒಬ್ಬ ಬಹುಶ್ರುತ ವಿದ್ವಾಂಸರು ಮತ್ತು ಬುದ್ಧಿವಂತರೂ, ವಿನಯಶೀಲರೂ ಆಗಿದ್ದರು. ನಾನು ಯಾವಾಗಲೂ ಅಂಥ ವ್ಯಕ್ತಿಗಳನ್ನು ಮಹಾರಾಜರ ಭೇಟಿಗಾಗಿ ಕರೆದುಕೊಂಡು ಹೋಗುತ್ತಿದ್ದೆ. ನಾನು ಅವರನ್ನು ಮಹಾರಾಜರ ಸೋನ್‌ತಾಲಿ ಕ್ಯಾಂಪ್‌ಗೆ ಕರೆದುಕೊಂಡು ಹೋದೆ.

ಮಾನ್ಯ ಮಹಾರಾಜರು ಪ್ರೊಫೆಸರ್ ಅವರೊಡನೆ ಮೂರು ಗಂಟೆಗಳ ಚರ್ಚೆಯ ನಂತರ ಅತಿ

ಸಂತೋಷಪಟ್ಟರು. ಮಾನ್ಯ ಮಹಾರಾಜರು ಸ್ವತಃ ನಮ್ಮನ್ನು ನಮ್ಮ ಶಾಲೆಯ ಬಳಿ ಬಿಟ್ಟರು ಮತ್ತು ಪ್ರೊ.ಅಠಾವಳೆಯವರು ಕೊಲ್ಹಾಪುರಕ್ಕೆ ಮತ್ತೊಮ್ಮೆ ವಿಶೇಷವಾಗಿ ಭೇಟಿ ಕೊಡುವಂತೆ ಕೇಳಿಕೊಂಡರು. ಮಾರನನೆಯ ದಿನ ಪ್ರೊ. ಅಠಾವಳೆಯವರು ಕುರುಂದವಾಡಕ್ಕೆ ಹೋದರು. ಪ್ರೊ. ಅಠಾವಳೆಯವರನ್ನು ನಾನು ಬೀಳ್ಕೊಟ್ಟ ಮೇಲೆ ನಮ್ಮ ಮನೆಯ ಬಳಿ ರಾಜರ ಗಾಡಿ ಕಾಯುತ್ತಿದ್ದದನ್ನು ನಾನು ನೋಡಿದೆ. "ದಯವಿಟ್ಟು ಪ್ರೊ. ಅಠಾವಳೆಯವರಿಗೆ ತಂತಿ ಕಳುಹಿಸಿ ಮತ್ತು ನಾನು ನಿನ್ನೆಯ ವಿಷಯದ ಬಗ್ಗೆ ಇನ್ನೂ ಹೆಚ್ಚಿಗೆ ಚರ್ಚೆ ಮಾಡಬೇಕಾಗಿದೆ. ನನಗೆ ತೃಪ್ತಿಯಾಗಿಲ್ಲ, ಅವರನ್ನು ಮತ್ತೆ ಬರುವಂತೆ ಕರೆಯಿರಿ. ಆ ಚರ್ಚೆ ಮುಗಿಸುವವರೆಗೆ ನನಗೆ ತೃಪ್ತಿಯಾಗುವುದಿಲ್ಲ" ಎಂದು ಮಾನ್ಯ ಮಹಾರಾಜರು ಹೇಳಿದರು.

ತಂತಿಯ ಪ್ರಕಾರ ಪ್ರೊಫೆಸರರು ವಾಪಸ್ಸು ಬಂದರು; ಕುರುಂದವಾಡ್‌ನಲ್ಲಿರುವ ಅವರ ಬಂಧುಗಳು ಮಾನ್ಯ ಮಹಾರಾಜರು ಪ್ರೊಫೆಸರ್ ಅವರನ್ನು ಹಾನಿಕಾರಕ ವಿಷಯಗಳಲ್ಲಿ ತೊಡಗಿಸುತ್ತಾರೆಂದು ಭಾವಿಸಿ, ಮಾನ್ಯ ಮಹಾರಾಜರನ್ನು ಭೇಟಿ ಮಾಡಬೇಡಿ ಎಂದು ಸೂಚಿಸಿದರು. ಆದರೆ ಪ್ರೊ. ಅಠಾವಳೆಯವರು "ಮಹಾರಾಜರು ನನ್ನನ್ನು ಕರೆದಿದ್ದಾರೆ, ನಾನು ಹೋಗಬೇಕಾಗಿದೆ" ಎಂದು ಹೇಳಿ ವಾಪಸ್ಸು ಬಂದರು. ಮತ್ತೆ ಇಬ್ಬರು ಅದೇ ವಿಷಯದ ಮೇಲೆ ಮಧ್ಯಾಹ್ನ ೩ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ ಚರ್ಚೆ ಮತ್ತು ಸಂವಾದವನ್ನು ನಡೆಸಿದರು. ಅದರ ನಂತರ ಪ್ರೊಫೆಸರರು ಮೇಲನ್ನು ಹಿಡಿಯಬೇಕಾಗಿದ್ದರಿಂದ ಸ್ವಲ್ಪ ವಿಚಲಿತರಾದರು ಮತ್ತು ಮಾನ್ಯ ಮಹಾರಾಜರು ಇದನ್ನು ಗಮನಿಸುವುದರಲ್ಲಿ ವಿಫಲರಾಗಲಿಲ್ಲ ಮತ್ತು ಹೇಳಿದರು, "ಚಿಂತಿಸಬೇಡಿ, ನನ್ನ ಆದೇಶವಿಲ್ಲದೆ, ನಿಮ್ಮನ್ನು ಬರಮಾಡಿಕೊಳ್ಳದೆ ರೈಲು ಕದಲುವುದಿಲ್ಲ. ಸ್ವಲ್ಪ ತಿಂಡಿ-ತಿನಿಸುಗಳನ್ನು ತೆಗೆದುಕೊಳ್ಳಿ, ಆಮೇಲೆ ಹೋಗೋಣ."

"ಪ್ರೊಫೆಸರರು ಈ ವಿಚಾರ ಕೇಳಿ ಬೆರಗಾದರು, ನಂತರ ರಾಜವೈಭೋಗದ ತಿಂಡಿ-ತಿನಿಸುಗಳನ್ನು ಭುಂಜಿಸಿದ ನಂತರ ಮಾನ್ಯ ಮಹಾರಾಜರೇ ಸ್ವತಃ ಅವರನ್ನು ಬೀಳ್ಕೊಡಲು ಹೋದರು. ಅವರು ವರ್ಧಾವರೆಗೆ ಒಂದು ಸೀಟನ್ನು ಅವರಿಗೆ ಕಾಯ್ದಿರಿಸಿದ್ದರು. ಈ ರಾಜಾತಿಥ್ಯದಿಂದ ಪ್ರೊಫೆಸರರು ಯಾವ ಪ್ರಭಾವವನ್ನು ಮನಸ್ಸಿನಲ್ಲಿ ಹೊತ್ತಿದ್ದರು ಮತ್ತು ಕುರುಂದವಾಡ್‌ನಲ್ಲಿದ್ದ ಬಂಧುಗಳಿಗೆ ಹೇಗೆ ವರದಿ ಮಾಡಿದರೆಂಬುದು ನಮಗೆ ಗೊತ್ತಿಲ್ಲ. ನಂತರ ಅವರು ನನಗೆ ಒಂದು ಪತ್ರ ಬರೆದಿದ್ದರು. ಅದರಲ್ಲಿ ಅವರು ಹೇಳುತ್ತಾರೆ: "ತಮ್ಮ ಮೂಲಕ ಒಬ್ಬ ಮಹಾರಾಜರ ಸಂಪರ್ಕ ಪಡೆದೆ. ಅವರು ಪ್ಲೇಟೋ ಕಲ್ಪನೆಯ ತತ್ವಜ್ಞಾನಿ ಎಂಬ ಪರೀಕ್ಷೆಯಲ್ಲಿ ಪಾಸಾಗಿ ನಿಂತ ಒಬ್ಬ ಮಹಾರಾಜರಾಗಿದ್ದಾರೆ."

*(ಟಿಪ್ಪಣಿ: ಈ ಲೇಖನವನ್ನು ಅಪರೂಪದ ಆತ್ಮಚರಿತ್ರೆಯ ಪುಸ್ತಕ ರಾಜರ್ಷಿ ಶಾಹು 'ಛತ್ರಪತಿಯಾಂಚೆ ಅಂತರಂಗ'ದಿಂದ ತೆಗೆದುಕೊಳ್ಳಲಾಗಿದೆ. ತೋಫ್‌ಖಾನೆಯವರ ತಂದೆ ಕೆಲವು ಬ್ರಾಹ್ಮಣರಲ್ಲಿ ಒಬ್ಬರು. ಅವರು ವೇದೋಕ್ತ ಪ್ರಕರಣದಲ್ಲಿ ಮಹಾರಾಜರು ತೆಗೆದುಕೊಂಡ ನಿಲುವನ್ನು ಬೆಂಬಲಿಸಿದರು. ನಂತರ ತೋಫ್‌ಖಾನೆಯವರು ಸ್ವತಃ ಮಹಾರಾಜರಿಗೆ ಒಬ್ಬ ನಿಷ್ಠಾವಂತ ಮತ್ತು ನಂಬಿಕೆಯ ಸಹವರ್ತಿಯಾದರು. ತೋಫ್‌ಖಾನೆಯವರು ತಮ್ಮ ಸ್ನೇಹಿತರೊಂದಿಗೆ ಭಕ್ತಿಸೇವಾಪೀಠವೆಂಬ ಒಂದು ಶಿಕ್ಷಣ ಸಂಸ್ಥೆಯನ್ನು ಮಹಾರಾಜರ ಸ್ಫೂರ್ತಿಯಿಂದ ಕೊಲ್ಹಾಪುರದಲ್ಲಿ ಪ್ರಾರಂಭಿಸಿದರು. ತೋಫ್‌ಖಾನೆಯವರು ಥಿಯೋಸಫಿಯ ಆಂದೋಲನದ ಅನುಚರರು. ಅವರ ಸಹವಾಸದಿಂದ ಮಹಾರಾಜರು ಡಾ. ಆನಿಬೆಸೆಂಟ್ ಮತ್ತು ಥಿಯೋಸಫಿಯ ಕೆಲಸಗಳಲ್ಲಿ ಆಸಕ್ತಿ ವಹಿಸಿದ್ದರು.)*

***(ಈ ಲೇಖನವನ್ನು ಕೃತಜ್ಞತೆಗಳೊಂದಿಗೆ 'ರಾಜರ್ಷಿ, ಶಾಹು ಛತ್ರಪತಿಯಾಂಚೆ ಅಂತರಂಗ' ಎಂಬ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ)***

---

೩

# ಶ್ರೀ ಶಾಹು ಛತ್ರಪತಿ– ಬ್ರಾಹ್ಮಣೇತರರ ನಾಯಕ

**ದಿವಾನ್ ಬಹಾದ್ದೂರ್ ಪ್ರೊ. ಎ. ಬಿ. ಲಠ್ಠೆ**

*ಸತ್ಯಶೋಧಕ ಚಿಂತಕ, ಬ್ರಾಹ್ಮಣೇತರರ ನಾಯಕ, ಕೊಲ್ಹಾಪುರ ಸಂಸ್ಥಾನದ ದಿವಾನರು,*
*ಬಾಂಬೆ ಪ್ರೆಸಿಡೆನ್ಸಿಯ ಹಣಕಾಸು ಸಚಿವರು ಮತ್ತು ಶಾಹುರವರ ಜೀವನಚರಿತ್ರೆಗಾರ*

ಮಾನ್ಯ ಮಹಾರಾಜರ ಭೀಮಕಾಯ ಬಲ್ಲವರು ಮತ್ತು ಹಲವು ವರ್ಷಗಳವರೆಗೆ ಅವರು ಹೊಂದಿದ್ದ ಅಭೂತಪೂರ್ವವಾದ ಶಕ್ತಿ ಮತ್ತು ಸಾಮರ್ಥ್ಯಗಳನ್ನು ತಿಳಿದವರು ೪೮ನೇ ವಯಸ್ಸಿನಲ್ಲಿ ಮರಣಕ್ಕೆ ತುತ್ತಾಗುತ್ತಾರೆಂದು ಯಾರೂ ಭಾವಿಸಿರಲಿಲ್ಲ. ಅವರ ಸ್ನೇಹಿತರು ಮತ್ತು ಸ್ವತಃ ಅವರೇ ಆರೋಗ್ಯ ಮತ್ತು ಬಲದ ಬಗ್ಗೆ ಎಲ್ಲರೂ ಆತ್ಮವಿಶ್ವಾಸವನ್ನು ಸಮರ್ಥಿಸಿಕೊಂಡಿದ್ದರು. ಈ ಆತ್ಮವಿಶ್ವಾಸದಲ್ಲೇ ಅಪಾಯದ ಬೀಜಗಳು ಕಳೆದ ಕೆಲವು ವರ್ಷಗಳಲ್ಲಿ ಅವರ ಜೀವಕ್ಕೆ ಬೆದರಿಕೆಯನ್ನು ಒಡ್ಡಿದ್ದವು. ಮೊದಲ ದಿನಗಳಲ್ಲಿ ಸ್ಥೂಲಕಾಯತೆಯ ಆನುವಂಶಿಕ ಪ್ರವೃತ್ತಿ ಕಾಣಿಸಿಕೊಂಡಿದ್ದು ಅವರ ಜೀವನದ ಆರೋಗ್ಯಭಾಗ್ಯವನ್ನು ಹಾಳುಗೆಡವಿತು. ಅವರ ಅನಿಯಮತೆ ಮತ್ತು ವೈದ್ಯರು ಹೇಳಿದ ನೈಸರ್ಗಿಕ ನಿಯಮಗಳ ಉಲ್ಲಂಘನೆಗಳು ಚಿಕ್ಕ ವಯಸ್ಸಿನಲ್ಲಿಯೇ ಕಾಯಿಲೆಯ ಕ್ರಿಮಿಗಳು ಅವರ ಸುಸಜ್ಜಿತ ದೇಹದಲ್ಲಿ ಪ್ರವೇಶ ಮಾಡುವುದಕ್ಕೆ ಅವರು ಅನುವು ಮಾಡಿಕೊಟ್ಟರು. . . ಯೂರೋಪಿನಲ್ಲಿ ವಿರಾಮ ಮತ್ತು ತಂಗುವಿಕೆಗಳಿಗೆ ಸ್ಥಾನಗಳನ್ನು ನಿಗದಿಗೊಳಿಸಲಾಗಿತ್ತು. ಆದರೆ ಅವರು ಕೊಲ್ಹಾಪುರದಲ್ಲಿ ಕೆಲಸಗಳಲ್ಲಿ ತಲ್ಲೀನರಾಗಿದ್ದರು ಮತ್ತು ತಾವು ಕೈಗೊಂಡ ಕೆಲಸಕಾರ್ಯಗಳಿಂದ ತಾತ್ಕಾಲಿಕವಾಗಿ ಹಿಂಜರಿಯಲು ಎಷ್ಟೇ ತಿಳುವಳಿಕೆ ನೀಡಿದರೂ ಅವರು ಕೇಳಲಿಲ್ಲ. ತಾವು ಮಾಡಲು ನಿರ್ಧರಿಸಿದ್ದ ಕೆಲಸದಿಂದ ಹಿಂಜರಿಯಲು ಅವರ ಸ್ವಭಾವ ಅವಕಾಶ ನೀಡಲಿಲ್ಲ.

ಕೆಲವು ವ್ಯಕ್ತಿಗಳು ಕೆಲಸಕ್ಕಾಗಿಯೇ ಬದುಕಿದ್ದಾರೆ ಮತ್ತು ಇತರರು– ಬಹುಮಟ್ಟಿಗೆ ಹೆಚ್ಚಿನ ಜನರಿಗೆ ಅವರು ಆಯ್ಕೆ ಮಾಡಿಕೊಂಡರೆ ಮಾತ್ರ ಕೆಲಸವಿರುತ್ತದೆ. ಮಾನ್ಯ ಮಹಾರಾಜರು ಮೊದಲನೇ ವರ್ಗಕ್ಕೆ ಸೇರಿದವರು. ಜೂಲಿಯಸ್ ಸೀಜರ್ ಅವರು ತನ್ನನ್ನು ಇರಿದು ಕೊಲ್ಲುವುದಕ್ಕೆ ಕೆಲವು ಕ್ಷಣಗಳ ಮುಂಚೆ ಯಾವ ಸೂಚನೆ ಕೊಡದ ಸಾವನ್ನು ತಾನು ಬಯಸುತ್ತೇನೆಂದು ಹೇಳಿದ್ದರು. ಸಾಯುವುದಕ್ಕೆ ಕೆಲವು ಗಂಟೆಗಳ ಮೊದಲು ರಾನಡೆಯವರು ತಮ್ಮ ಸ್ನೇಹಿತರಿಗೆ ಕೆಲಸ ಮಾಡುತ್ತಿರುವಾಗ ಸಾಯುವುದೇ ಉತ್ತಮ ಸಾವು ಎಂದು ಹೇಳಿದ್ದರು. ಮಾನ್ಯ ಮಹಾರಾಜರು ಕೆಲಸದ ಬಗ್ಗೆ ಇಟ್ಟ ಪ್ರೀತಿ ಎಷ್ಟು ಬಲಿಷ್ಠವಾಗಿತ್ತೆಂದರೆ ಅವರು ಅದರಿಂದ ದೂರ ಹೋಗಬೇಕೆಂದು ಬಯಸಿದರೂ ಅದನ್ನು ಅವರು ಬಿಡುವುದಕ್ಕೆ ಆಗುತ್ತಿರಲಿಲ್ಲ. ಅದು ನಿರಂತರವಾಗಿ ಮತ್ತು ತೀವ್ರವಾಗಿ ಶಕ್ತಿ ನೀಡುತ್ತಿದ್ದರಿಂದ ಅವರು ಅದರಲ್ಲಿ ತಮ್ಮ ವಿರಾಮ ಮತ್ತು ಶಾಂತಿಯನ್ನು ಕಂಡುಕೊಂಡರು. ಬೇಟೆಯಾಡುತ್ತಿರುವಾಗ ಅವರು ನಿಸರ್ಗದ ಅಂಶಗಳನ್ನು ಮತ್ತು

ಆರೋಗ್ಯದ ನಿಯಮಗಳನ್ನು ಉಲ್ಲಂಘಿಸಿ ಗಂಟೆ-ಗಂಟೆಗಳಗಟ್ಟಲೆ ತಿರುಗಾಡಿದ್ದೇ ತಿರುಗಾಡುತಿದ್ದರು, ಅವರು ತಮ್ಮ ಗುರಿಯನ್ನು ಸಾಧಿಸುವುದೇ ಉದ್ದೇಶವಾಗಿತ್ತು. ಜೀವನದ ಇತರೆ ವಲಯಗಳಲ್ಲಿ ಸಹ ಅವರು ತಮ್ಮ ಎಲ್ಲಾ ಶಕ್ತಿಯನ್ನು ಮತ್ತು ತಮ್ಮ ಎಲ್ಲಾ ಮನಸ್ಸನ್ನು ಆ ಕೆಲಸದಲ್ಲಿ ತೊಡಗಿಸುತ್ತಿದ್ದರು, ಅವರು ತಮ್ಮ ದಾರಿಯಲ್ಲಿ ಅಡ್ಡಬಂದ ಯಾವುದಕ್ಕೂ, ಯಾವುದೇ ಗಂಡಾಂತರಕ್ಕೂ, ಯಾವುದೇ ನಷ್ಟಕ್ಕೂ ಬಾಗುತ್ತಿರಲಿಲ್ಲ. ಅವರ ಸ್ವಭಾವ ಲಕ್ಷಣಗಳಲ್ಲಿ ಇದು ಮಹತ್ವದ್ದೂ ಆಗಿತ್ತು ಮತ್ತು ದೌರ್ಬಲ್ಯವೂ ಆಗಿತ್ತು. ಕೆಲವು ಬಾರಿ ಪ್ರತಿಭೆ(ಹುಟ್ಟುಗುಣ)ಯೆಂದು ನಿರ್ವಚಿಸಲಾಗಿದೆ.

ಕಾರ್ಯದ ಅಪಾರವಾದ ಸಾಮರ್ಥ್ಯವೇ ಪ್ರತಿಭಾಶಕ್ತಿಯೆಂದು ಕೆಲವೊಮ್ಮೆ ನಿರ್ವಚಿಸಲಾಗಿದೆ. ಬೇರೆಯವರು ಪ್ರತಿಭಾಶಕ್ತಿಯ ಮತ್ತೊಂದು ಮುಖವನ್ನು ಒತ್ತಿ ಹೇಳುತ್ತಾ ಅದು ವಿಚಿತ್ರವಾದ ಬುದ್ಧಿವಿಕಲ್ಪವನ್ನು ಒಳಗೊಂಡಿದೆಯೆಂದು ಹೇಳುತ್ತಾರೆ. ಎರಡು ನಿರ್ವಚನಗಳು ಮಾನವ ಮಹತ್ವದ ಒಂದೇ ರೀತಿಯ ಆವಶ್ಯಕ ಲಕ್ಷಣಗಳ ಮೇಲೆ ಆಧಾರಗೊಂಡಿವೆ. ಪ್ರಾಕೃತಿಕ ನಿಯಮಗಳ ಮತ್ತು ಸಾಮಾಜಿಕ ನಿಯಮಗಳ ಗುಲಾಮನಾಗಿ ಮನುಷ್ಯನು ಸ್ವಲ್ಪವೂ ಒಳ್ಳೆಯದನ್ನು ಮಾಡದೆ ಮತ್ತು ಬೇರೆಯವರಿಗೆ ಅತಿ ಕಡಿಮೆ ಅನಿಷ್ಟವನ್ನು ಮಾಡುವ ಮೂಲಕ ಸುಖ ಮತ್ತು ಶಾಂತಿಯಿಂದ ಜೀವನ ಸಾಗಿಸಬಹುದು-ಒಂದು ಮಾದರಿಯ ಸ್ನೇಹಪರ ಮಾನವೀಯತೆ ಸಾಗಬಹುದು. ಪ್ರತಿಭಾಶಕ್ತಿಯು ಮಾನವ ಜೀವನದ ಈ ಪರಿಚಿತ ಹಾದಿಯಿಂದ ಮಾರ್ಗ ಬದಲಾಯಿಸುವ ಶಕ್ತಿಯಲ್ಲಿಯೇ ಕಾಣಿಸಿಕೊಳ್ಳುತ್ತದೆ (ಪ್ರದರ್ಶಿತವಾಗುತ್ತದೆ). ಈ ಮಾರ್ಗಚ್ಯುತಿಯು ಒಂದು ಬದಿಯಲ್ಲಿ ಅಥವಾ ಮತ್ತೊಂದು ಬದಿಯಲ್ಲಿ ಆಗಬಹುದು. ಅದು ಸ್ಥಾಪಿತ ನೈತಿಕ ನಿಯಮಗಳನ್ನು ಹಾನಿಕಾರಕ ದಾಳಿಯನ್ನಾಗಿ ಮಾಡಬಹುದು ಅಥವಾ ಬೌದ್ಧಿಕ ಚಟುವಟಿಕೆಗಳ ಇಡೀ ಸಮತೋಲನವನ್ನು ನಾಶಮಾಡದೇ ಇರಬಹುದು. ದುರ್ಬಲ ಮಾನವತೆಯ, ಏರದ ಮತ್ತು ಏರಲಾರದ ಮಹಾನೈತಿಕ ಮತ್ತು ಬೌದ್ಧಿಕ ಮಟ್ಟಗಳಿಗೆ ಅದು ಕೆಲವೊಮ್ಮೆ ಏರಬಹುದು. ಪ್ರಶಂಸೆಯನ್ನು ಪ್ರಚೋದಿಸದ, ಮಾನವ ಸುಖ-ಸಂತೋಷದ ದಿನನಿತ್ಯದ ಜೀವನದಿಂದ ನಿರ್ಗಮಿಸುವುದೇ ಪ್ರತಿಭಾಶಕ್ತಿ, ಆದರೆ ಅದು ಒಂದು ಸುಖೀಜೀವನದಿಂದ ಹಂಚಿದ ಒಂದು ಭಾಗವಾಗಿದೆ. ಪ್ರತಿಭಾಶಕ್ತಿಯು ಯಾವಾಗಲೂ ಒಂದು ಜ್ವಾಲಾಮುಖಿಯಂತೆ ಮುನ್ನುಗ್ಗಿ ಪರ್ವತಗಳನ್ನು ಉರುಳಿಸುವ ಅಥವಾ ಭೂಖಂಡಗಳನ್ನು ಮುಳುಗಿಸುವುದು ಮತ್ತು ಫಲವತ್ತಾದ ದ್ವೀಪಗಳನ್ನು ನಿರ್ಮಿಸುವುದು ಮತ್ತು ಮಾನವ ಸಂತೋಷದ ಹೊಸ ಪ್ರವಾಹಗಳು ಹರಿಯುವುದಕ್ಕೆ ಪ್ರಯೋಜನಕಾರಿಯಾದ ಕಾಲುವೆಗಳನ್ನು ನಿರ್ಮಿಸುವುದು.

ಮಾನ್ಯ ಮಹಾರಾಜರ ಜೀವನಕ್ಕೆ ಅನ್ವಯಿಸುವ ಈ ಪರಿಗಣನೆಗಳಲ್ಲಿ ಮತ್ತು ಜೀವನದ ಹಲವಾರು, ದೂರಗಾಮಿ ಪರಿಣಾಮಗಳು ಮತ್ತು ಒಳನುಸುಳುವ ಎಲ್ಲಾ ಚಟುವಟಿಕೆಗಳನ್ನು ವಿವರಿಸಲಾಗಿದೆ. ಇಲ್ಲಿಯೂ ಸಹ ಅವರ ದೇಹವಿರಾಮ ಮತ್ತು ವೈದ್ಯೋಪಚಾರ ಬಯಸಿದರೂ ಅವರು ಯಾವುದನ್ನು ಸಹ ತೆಗೆದುಕೊಳ್ಳದೆ ತಮ್ಮ ಜೀವನದ ಎಲ್ಲಾ ಆಸಕ್ತಿಗಳಲ್ಲಿ ತನ್ಮಯರಾಗಿದ್ದರು....

ಬೇರೆ ಜನರಿಗೆ ನಿರ್ಣಾಯಕವೆಂದು ಪರಿಗಣಿತವಾಗಿದ್ದರೂ ಇಂತಹ ಬುದ್ಧಿ ತನ್ನ ಚಟುವಟಿಕೆಗಳ ತೊಡಕಿನಿಂದ ಬಿಡಿಸಿಕೊಳ್ಳುತ್ತಿರಲಿಲ್ಲ. ಹಲವಾರು ವರ್ಷಗಳಿಂದ ಅವರ ಸ್ನೇಹಿತರು ಮತ್ತು ವೈದ್ಯರು ನೀಡುತ್ತಿದ್ದ ಸಲಹೆಗಳನ್ನು ಉದಾಸೀನ ಮಾಡಲು ಇದು ಎಡೆ ಮಾಡಿಕೊಟ್ಟಿತು. ೧೯೧೯ರಿಂದ ಅವರಿಗೆ ತಮ್ಮ ಬಳಿ ದೀರ್ಘಕಾಲದ ಜೀವನವಿಲ್ಲವೆಂದು ಅವರಿಗೆ ತಿಳಿದಿತ್ತು. ಹೃದಯರೋಗವು

ಮರಣಾಂತಕವೆಂದು ಗೊತ್ತಿದ್ದರೂ ಅದು ಅಂತಿಮವಾಗಿ ಬೆಳೆಯುತ್ತಾ ಹೋಯಿತು. ಅವರ ದೇಹ ಎಲ್ಲಾ ದಿಕ್ಕುಗಳಿಂದಲೂ ಅವಕಾಶ ನೀಡತೊಡಗಿತು. ಆದರೆ ಅವರ ಚೈತನ್ಯ ಮತ್ತು ಅವರ ಆಸಕ್ತಿ ಅಜೇಯ ಮತ್ತು ಅದಮ್ಯವಾಗಿತ್ತು....

ಮಾನ್ಯ ಮಹಾರಾಜರು ತಮ್ಮ ಜೀವನದ ಕೊನೆಯವರೆಗೆ ಪರಿಪೂರ್ಣವಾಗಿ ಪ್ರಜ್ಞಾವಂತರಾಗಿದ್ದರು. ಆದರೆ ಅವರ ಹೃದಯದಲ್ಲಿ ತೀವ್ರ ನೋವು ಅತಿಯಾಗಿ ಹಿಂಡುತ್ತಿತ್ತು ಮತ್ತು ಅವರನ್ನು ವಿಚಲಿತಗೊಳಿಸಿತ್ತು. ಇಡೀ ರಾತ್ರಿ ಅವರು ತಲ್ಲಣ-ಚಿಂತನೆ ಮತ್ತು ನೋವುಗಳಲ್ಲಿ ಮುಳುಗಿದ್ದರು. ಬೆಳಿಗ್ಗೆ ಆರು ಗಂಟೆಗೆ ಮೊದಲು ಒಂದು ಕ್ಷಣಕ್ಕಾಗಿ ಕುಳಿತುಕೊಂಡರು. "ನಾನು ಹೋಗಲು ಸಿದ್ಧ, ನನಗೆ ಭಯವಿಲ್ಲ. ಎಲ್ಲರಿಗೂ ನಮಸ್ಕಾರಗಳು" ಎಂದು ಅವರು ಹೇಳಿದರು ಮತ್ತು ಮಲಗಿಕೊಂಡು ಕೊನೆಯ ಉಸಿರನ್ನು ಎಳೆದರು.

ದುಃಖದ ಸಮಾಚಾರವನ್ನು ತಂತಿ ಮೂಲಕ ಕೊಲ್ಹಾಪುರಕ್ಕೆ ಕಳುಹಿಸಿಕೊಡಲಾಯಿತು. ಅಲ್ಲಿಗೆ ಅದು ಮುಟ್ಟುವುದಕ್ಕೆ ಮಧ್ಯಾಹ್ನವಾಗಿತ್ತು. ದುಃಖದ ಛಾಯೆ ಇಡೀ ಸಂಸ್ಥಾನದಲ್ಲಿ ಹರಡಿತು. ಈ ಮಹಾಶಯನ ಕೊನೆಯ ದರ್ಶನವನ್ನು ಸಂಸ್ಥಾನದ ಜನತೆ ಪಡೆಯಬೇಕಾಗಿತ್ತು ಮತ್ತು ಜನತೆ ಕೊನೆಯ ಗೌರವ ನಮನ ಸಲ್ಲಿಸಬೇಕಾಗಿತ್ತು. ಪಾರ್ಥಿವ ಶರೀರವನ್ನು ಕೊಲ್ಹಾಪುರಕ್ಕೆ ಪುಣೆ ಮತ್ತು ಸತಾರಗಳ ಮೂಲಕ ಕೊಂಡೊಯ್ಯಲಾಯಿತು, ಮಾರ್ಗದ ಉದ್ದಕ್ಕೂ ಸಾವಿರಾರು ಜನರು ರಸ್ತೆಬದಿಯಲ್ಲಿ ನಿಂತು ತಮ್ಮ ಗೌರವನಮನಗಳನ್ನು ಮಹಾರಾಜರಿಗೆ ಸಲ್ಲಿಸಿದರು. ಪಾರ್ಥಿವ ಶರೀರವು ಕೊಲ್ಹಾಪುರಕ್ಕೆ ಮಧ್ಯರಾತ್ರಿಯಲ್ಲಿ ತಲುಪಿತು. ತಮ್ಮ ಪ್ರೀತಿಯ ತಂದೆ ಇದುವರೆಗೆ ಅಲಂಕರಿಸಿದ್ದ ಛತ್ರಪತಿಗಳ ಪ್ರಾಚೀನ ಸಿಂಹಾಸನವೇರುವ ವಿಧಿ-ವಿಧಾನಗಳನ್ನು ಮಹಾರಾಜರ ಮಗ ಮತ್ತು ವಾರಸುದಾರ ಆಚರಿಸುವುದನ್ನು ಘೋಷಿಸಿದರು. ಹೃದಯ ಬೀರುವ ಆಕ್ರಂದನಗಳ ನಡುವೆಯೇ ಯುವರಾಜನನ್ನು ಕೊಲ್ಹಾಪುರದ ಛತ್ರಪತಿ ಮಹಾರಾಜನೆಂದು ಘೋಷಿಸಲಾಯಿತು. ಮತ್ತು ಜನತೆಯ ಭಾರಿ ಸಮೂಹವು ಹೊಸ ರಾಜನನ್ನು ಸ್ವಾಗತಿಸಿತು ಮತ್ತು ಮಹಾರಾಜರ ಅಂತಿಮ ಸಂಸ್ಕಾರಗಳನ್ನು ನೆರವೇರಿಸಲು ದುಃಖದ ಭಾವದಿಂದ ಮುಂದುವರಿಯಿತು. ಪಾರ್ಥಿವ ಶರೀರವನ್ನು ಶಾಸ್ತ್ರೋಕ್ತವಾದ ಮೆರವಣಿಗೆಯಲ್ಲಿ ಸಕಲಗೌರವಗಳೊಂದಿಗೆ ಪವಿತ್ರಗೊಳಿಸಿದ ಮಹಾರಾಜರ ಮನೆಯಿಂದ ಕೊಂಡೊಯ್ಯಲಾಯಿತು. ಛತ್ರಪತಿ ಮಹಾರಾಜರ ಅಂತಿಮ ಸಂಸ್ಕಾರಗಳನ್ನು ನೆರವೇರಿಸಲು ಬ್ರಾಹ್ಮಣ ಪುರೋಹಿತರ ಬದಲಿಗೆ ಮಹ್‌ರಟ್ಟ ಸಮುದಾಯದ ಇತಿಹಾಸದಲ್ಲಿ ಮೊಟ್ಟಮೊದಲಿಗೆ ಶಿವಾಜಿ ವೈದಿಕಶಾಲೆಯ ಮಹ್‌ರಟ್ಟ ವಿದ್ಯಾರ್ಥಿಗಳನ್ನು ಕರೆಸಲಾಯಿತು.

ದುಃಖಪೀಡಿತ ಮನಸ್ಸುಗಳಿಗೆ ಮೂಢನಂಬಿಕೆಗಳು ಬಲವಾಗಿ ಹಿಡಿದುಕೊಳ್ಳುತ್ತವೆ ಮತ್ತು ಅವರಿಗೆ ಹೊಸದಾಗಿ ಯೋಚಿಸಲು ಅಸಾಧ್ಯ. ಕಿರಿಯ ಮಹಾರಾಜ ಮತ್ತು ಅವರ ವಿಧವೆ ತಾಯಿಯನ್ನು ಅವರ ಮೇಲೆ ಎರಗಿದ್ದ ದುಃಖದ ಛಾಯೆಯಲ್ಲಿ ಕರೆಸಿ, ನೀವು ಸಂಪ್ರದಾಯಕ್ಕೆ ಬದ್ಧರಾಗುವುದಾದರೆ ಬ್ರಾಹ್ಮಣರನ್ನು ಕರೆಸಬೇಕಾಗುತ್ತದೆ ಅಥವಾ ನಿಧನರಾದ ಮಹಾರಾಜರು ತೆಗೆದುಕೊಂಡಿದ್ದ ಪ್ರತಿಜ್ಞೆಯ ಪ್ರಕಾರ ನಡೆದುಕೊಳ್ಳಬೇಕಾಗುತ್ತದೆ. ನೀವು ಯಾವುದನ್ನು ಅನುಸರಿಸಬೇಕೆಂಬುದನ್ನು ತಿಳಿಸಿ ಎಂದು ಹೇಳಿದಾಗ ಅವರು ನಿರ್ಣಯವೆಂದರೆ ಒಂದೇ ನಿರ್ಣಯ. ಯೋಗ್ಯ ತಾಯಿ ಮತ್ತು ಯೋಗ್ಯ ಮಗ ತೆಗೆದುಕೊಳ್ಳುವ ನಿರ್ಣಯವೊಂದೇ ಎಂದು ಹೇಳಿದರು. "ಏನೇ ಬರಲಿ, ನಾನು ನನ್ನ ಪತಿಯ ಇಚ್ಛೆಗಳಿಗೆ ಬದ್ಧಳಾಗುತ್ತೇನೆ" ಎಂದು ವಿಧವೆ ಮಹಾರಾಣಿ ಹೇಳಿದರು. ಇಂತಹ ಸಂದರ್ಭದಲ್ಲಿ ಹಲವು ಹಿಂದು ಶಿಕ್ಷಿತ ಸಮಾಜಸುಧಾರಕರು

ಹಿಂಜರಿದರು. ಆದರೆ ಅವರು ಛತ್ರಪತಿ ರಾಜಾರಾಮ ಮಹಾರಾಜ ಮತ್ತು ರಾಣಿ ತಾಯಿಯಂತೆ ನಿಜವಾದ ಕ್ಷತ್ರಿಯರಲ್ಲ.

ಮಹಾರಾಜರು ನಿಧನ ಹೊಂದಿ ಮಹ್‌ರಟ್ಟ ರಾಷ್ಟ್ರವು ಸಂತಾಪ ಸೂಚಿಸುವಂತೆ ಮಾಡಿಬಿಟ್ಟರು. ಕೊಲ್ಹಾಪುರದ ಸಿಂಹಾಸನದಲ್ಲಿ ಎಂದಿಗೂ ಮಹಾಶಯರಾದ ಮಹಾರಾಜರು ಕೂತಿದ್ದರು. ದೀರ್ಘ ಮತ್ತು ಭವ್ಯ ಇತಿಹಾಸದಲ್ಲಿ ಅವರ ರಾಷ್ಟ್ರವು ಧೀರೋದಾತ್ತ ಮನುಷ್ಯರಲ್ಲಿ ಅಂಥ ಮನುಷ್ಯನನ್ನು ಹುಟ್ಟುಹಾಕಿರಲಿಲ್ಲ. ಇಡೀ ಮಹ್‌ರಟ್ಟ ದೇಶವು–ನನ್ನನ್ನೂ ಸೇರಿದಂತೆ ಎಲ್ಲಾ ಜನರು ಮತ್ತು ಯಾವುದೇ ವಿಶಿಷ್ಟ ಜಾತಿಯಿಲ್ಲದೆ– ಎಂದೆಂದಿಗೂ ಒಬ್ಬ ಮಹಾನುಭಾವ, ಒಬ್ಬ ದಿಟ್ಟ ಅಥವಾ ಒಬ್ಬ ಹೆಚ್ಚು ಸಂಪನ್ಮೂಲ ಬುದ್ಧಿವಂತನನ್ನು ಹುಟ್ಟುಹಾಕಿರಲಿಲ್ಲ. ಬ್ರಾಹ್ಮಣೇತರರ ಮಹ್‌ರಟ್ಟರವರು (ಅಸ್ಪೃಶ್ಯರು ಸೇರಿದಂತೆ) ಅವರನ್ನು ಹೊಗಳಿದರು. ಅವರು ಹೊಗಳುವುದರಲ್ಲಿ ಬ್ರಾಹ್ಮಣರೆಲ್ಲರೂ ಸೇರದಿದ್ದರೂ ಕೆಲವರು ಅವರನ್ನು ಪ್ರೀತಿಸಿದರು ಅಥವಾ ಗೌರವಿಸಿದರು. ಅವರು ಹಾಗೆ ಮಾಡದಿರುವುದಕ್ಕೆ ಆಶ್ಚರ್ಯಪಡಬೇಕಾಗಿಲ್ಲ. ಅವರು ಅವರ (ಬ್ರಾಹ್ಮಣರ) ವಿರುದ್ಧ ನಿರ್ದಾಕ್ಷಿಣ್ಯವಾಗಿ, ನಿರಂತರವಾಗಿ ಮತ್ತು ಮಣಿಯದೆ ಹೋರಾಡಿದರು. ಬೇರೆಯವರು ಪ್ರೀತಿಸಿದಷ್ಟೇ ಪ್ರಮಾಣದಲ್ಲಿ ಅವರು ಅವರನ್ನು ದ್ವೇಷಿಸಿದರು. ಅದು ಅದಲು ಬದಲಾಗಬಹುದು.... ಈ ಅಂಶಗಳ ಮೇಲೆ ಇತಿಹಾಸ ತೀರ್ಪು ಘೋಷಣೆ ಮಾಡಲು ತನ್ನ ಬಾರಿ ಬರುವವರೆಗೆ ಬ್ರಾಹ್ಮಣರು ಕ್ರೋಧಮಿಶ್ರಿತ ಹೊಗಳಿಕೆಯೊಂದಿಗೆ ಅವರ ಕೃತಿಗಳ ಪರಿಶೀಲನೆಯನ್ನು ಮುಂದುವರಿಸುವರು. ಮಹ್‌ರಟ್ಟ ದೇಶದ ಇತರೆ ಮಹಾನ್ ವ್ಯಕ್ತಿಗಳ ಸ್ಥಾನಮಾನಗಳ ಸಂದರ್ಭದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಮಹಾರಾಷ್ಟ್ರದ ಇತಿಹಾದಲ್ಲಿ ಅವರಿಗಿರುವ ಪ್ರಧಾನ ಸ್ಥಾನಮಾನವನ್ನು ನಿರಾಕರಿಸುವಂತಿಲ್ಲ....

ವೀಕ್ಷಕರು ಮಹಾರಾಜರ ಅಸಾಮಾನ್ಯ ವ್ಯಕ್ತಿತ್ವದ ಆಳವನ್ನು ಪರಿಶೋಧಿಸಲು ಪ್ರಯತ್ನಿಸಿದಾಗ ದಿಗ್ಭ್ರಮೆಗೊಂಡರು. ಸಾಮಾನ್ಯವಾಗಿ ಅವರು ಬಹಳ ಸರಳ ಮತ್ತು ದಯಾಮಯರು. ಅವರು ಅರಮನೆಗಳನ್ನು ಬಿಟ್ಟು ಸಣ್ಣ ಮತ್ತು ಒರಟು ಮನೆಗಳಲ್ಲಿ ಜೀವಿಸುತ್ತಿದ್ದರು. ಹಲಗೆಗಳ ವೇದಿಕೆಗಳ ಮೇಲೆ ಮಲಗುತ್ತಿದ್ದರು. ಸರಳವಾದ ಧೋತ್ರ, ಷರ್ಟು ಮತ್ತು ಪೇಟ ಧರಿಸುತ್ತಿದ್ದರು, ಇವನ್ನು ಬಿಟ್ಟು ಮತ್ತೇನು ಅವರು ಬಯಸುತ್ತಿರಲಿಲ್ಲ. ತಮ್ಮ ಹತ್ತಿರದ ಸೇವಕ ಅಥವಾ ಸ್ನೇಹಿತರೊಡನೆ ವ್ಯವಹರಿಸುತ್ತಿದ್ದರು, ಅವರು ಬಹಳ ದಯಾಳು ಮತ್ತು ತಪ್ಪಿತಸ್ಥ ಜನರನ್ನು ಕ್ಷಮಿಸಿಬಿಡುತ್ತಿದ್ದರು. ಅವರು ಕೆಳಜಾತಿ ಮತ್ತು ಒರಟು ಜನರೊಡನೆ ಮುಕ್ತವಾಗಿರುತ್ತಿದ್ದರು, ಎಲ್ಲಾ ಕಡೆಯವರ ಮಾತುಗಳನ್ನು ಕೇಳಲು ಇಷ್ಟಪಡುತ್ತಿದ್ದರು. ಅವರ ಅಭ್ಯಾಸಗಳು ಬಹಳ ಸರಳವಾಗಿದ್ದವು. ಇದು ನಿಜವಾಗಿ ಅವರ ಚಾಕಚಕ್ಯತೆಯ ವ್ಯಕ್ತಿತ್ವದ ಒಂದು ಮಹಾ ಗುಟ್ಟು. ಅವರಿಗೆ ಬಹಳ ಶತ್ರುಗಳಿದ್ದರು. ಅವರೆಲ್ಲರನ್ನೂ ತಮ್ಮ ಪ್ರಭಾವದ ಹಿಡಿತದಲ್ಲಿಟ್ಟುಕೊಂಡಿದ್ದರು. ಈ ಸಫಲತೆಯ ರಹಸ್ಯ ಅವರ ಚಾರಿತ್ರ್ಯದ ಈ ಲಕ್ಷಣದಲ್ಲಿ ಅಡಗಿತ್ತು. ಪ್ರಕೃತಿಯು ಅವರಿಗೆ ಅಪಾರವಾದ ಅಪರೂಪವಾದ ಸ್ನೇಹಪರ ಮನೋಭಾವವನ್ನು ನೀಡಿತ್ತು. ಅವರ ಪ್ರಾಣವಿರುವವರೆಗೆ ಅದನ್ನು ಯಾವುದೂ ಸಹ ಭಂಗಗೊಳಿಸಲಿಲ್ಲ.

ಮಾನ್ಯ ಮಹಾರಾಜರು ನಿಜವಾಗಿಯೂ ಒಬ್ಬ ಶತ್ರು, ಕೋಪೋದ್ರಿಕ್ತರು ಮತ್ತು ಹೊಡೆತ ನೀಡುವುದರಲ್ಲಿ ನಿಷ್ಕರುಣಿಗಳು. ಆದರೆ ಅವರು ದ್ವೇಷ ಮಾಡುವುದರಲ್ಲಿ ಬಹು ನಿಧಾನ ಮತ್ತು ಅವರು ದ್ವೇಷ ಮಾಡಿದರೂ ಶತ್ರುಗಳೊಂದಿಗೆ ಮಿತ್ರತ್ವಕ್ಕೂ ಸಿದ್ಧವಾಗಿರುತ್ತಿದ್ದರು. ಇತರರ ಬಗ್ಗೆ ತಾಳ್ಮೆಯಿಂದ ಇರುವುದು, ಮನುಷ್ಯರಲ್ಲಿರುವ

ದುರ್ಬಲತೆಗಳನ್ನು ಮನ್ನಿಸಲು ಒಪ್ಪುವುದು. ಅವರ ದೃಷ್ಟಿಯಲ್ಲಿ ಸದಾ ಒಂದು ಗುರಿಯಾಗಿರುತ್ತಿತ್ತು. ಭಾವೀ ಸ್ನೇಹತ್ವ ಸಾಧ್ಯವಾಗುವುದಾದರೆ ಹಿಂದೆ ಮಾಡಿದ ತಪ್ಪುಗಳನ್ನು ಮರೆಯುವುದಕ್ಕೆ ಆಶಾವಾದಿಗಳಾಗಿರುತ್ತಿದ್ದರು. ಅವರು ಬೇರೆಯವರನ್ನು ಪ್ರೀತಿಸುತ್ತಿದ್ದರಿಂದ ಇತರರು ಅವರನ್ನು ಬಹು ಸುಲಭವಾಗಿ ಪ್ರೀತಿಸುತ್ತಿದ್ದರು. ಶ್ರೀ ಕ್ಯಾಂಡಿ, ಶ್ರೀ ರಾಶಿಂಕರ್ ಮತ್ತು ಶ್ರೀ ತಿಲಕರ ನಿದರ್ಶನಗಳನ್ನು ಕೊಡಬಹುದು. ಶ್ರೀ ರಾಶೀಂಕರ್ ಅವರು ಕಾಯಿಲೆಯಲ್ಲಿ ಮಲಗಿದ್ದಾರೆಂದು ಕೇಳಿದ ಕೂಡಲೇ ಅವರು ಕೊಲ್ಹಾಪುರದ ಬ್ರಾಹ್ಮಣರ ವಿರೋಧಿನಾಯಕ ಎಂಬುದನ್ನು ಮರೆತು ೧೯೦೬-೦೭ರಲ್ಲಿ ಅವರನ್ನು ಕಾಯಿಲೆಯ ಹಾಸಿಗೆಯಲ್ಲಿ ನೋಡಿ, ಅವರಿಗೆ ಸಹಾಯ ಮಾಡಿ, ಅವರನ್ನು ನಗುವಂತೆ ಮಾಡಿದರು. ಅವರು ತಿಲಕರು ಹುಷಾರಿಲ್ಲವೆಂಬ ಸಂಗತಿಯನ್ನು ತಿಳಿದು ಅವರು ಅವರ ಮಗನಿಗೆ ಹೀಗೆ ಪತ್ರ ಬರೆದಿದ್ದರು:

"ಲೋಕಮಾನ್ಯರು ಸರಿಯಾಗಿ ಇಲ್ಲವೆಂದು ನನಗೆ ಬಹಳ ನೋವಾಗಿದೆ. ದಯವಿಟ್ಟು ಅವರು ಹೇಗೆ ಸುಧಾರಿಸಿಕೊಳ್ಳುತ್ತಿದ್ದಾರೆಂದು ತಿಳಿಸುವುದಕ್ಕೆ ನೀವು ದಿನಾ ನನಗೆ ತಂತಿ ಕಳುಹಿಸಿ. ಅವರನ್ನು ಸುಗಮವಾದ ವಾತಾವರಣದಲ್ಲಿಡುವುದು ಉತ್ತಮವೆಂದು ನನ್ನ ಭಾವನೆ. ಅವರು ಮೀರಜ್‌ನಲ್ಲಿ ನನ್ನ ಬಂಗಲೆಯಲ್ಲಿ ಬಂದು ಇರಲು ಬಯಸುತ್ತೇನೆಮತ್ತು ನುರಿತ ವೈದ್ಯೋಪಚಾರ ಕೊಡಿಸುವುದು ಉತ್ತಮ. ಆಗ ಅವರು ಸರಿಹೋಗಬಹುದು. ನಾನು ನಿಮ್ಮ ಬಳಿಗೆ ದೂತರನ್ನು ಕಳುಹಿಸಿಕೊಟ್ಟಿದ್ದೇನೆ..."

ತಿಲಕರು ಅವರ ಸ್ನೇಹಿತರು ಮತ್ತು ಅವರ ಅನುಯಾಯಿಗಳು ಸೇರಿದಂತೆ ಬ್ರಾಹ್ಮಣರ ಗುಂಪು ತಿಲಕರನ್ನು ದೇವರೆಂದು ಪೂಜ್ಯಭಾವದಿಂದ ಕಾಣುತ್ತಿತ್ತು. ಉಗ್ರಗಾಮಿ ಪಂಥಕ್ಕೆ ಸೇರಿದ ಬಾಂಬೆಯ ಒಂದು ಮರಾಠಿ ದಿನಪತ್ರಿಕೆಯು ತಿಲಕರ ವಶದಲ್ಲಿದ್ದ ಸಾರ್ವಜನಿಕ ನಿಧಿಗೆ ಸಂಬಂಧಿಸಿದಂತೆ ಕೆಲವು ಅನುಮಾನಕ್ಕೆ ಎಡೆಮಾಡಿಕೊಡುವ ಸಂಗತಿಗಳನ್ನು ಬಹಿರಂಗಗೊಳಿಸಿದ್ದರಿಂದ ಅದರ ಮಾರಾಟ ಸಂಖ್ಯೆ ಕಡಿಮೆಯಾಯಿತು ಮತ್ತು ಪತ್ರಿಕೆಯ ಅಸ್ತಿತ್ವಕ್ಕೆ ಧಕ್ಕೆಯುಂಟಾಯಿತು. ಈ ಪತ್ರಿಕೆಯ ಸಂಪಾದಕರ ಪ್ರಾಮಾಣಿಕತೆಯನ್ನು ಮೆಚ್ಚಿದ ಮಾನ್ಯ ಮಹಾರಾಜರು ಆ ಪತ್ರಿಕೆಗೆ ಸಾಮಾನ್ಯ ಸ್ನೇಹಿತನ ಮೂಲಕ ಸಾಲ ನೀಡಿದರು. ಆ ಪತ್ರಿಕೆಯು ಮಾನ್ಯ ಮಹಾರಾಜರ ಬ್ರಾಹ್ಮಣೇತರರ ಸದುದ್ದೇಶದ ಪರವಾಗಿ ಭಾಗಶಃ ಬೆಂಬಲ ನೀಡಿದ್ದಕ್ಕಾಗಿ ಅದರ ಜನಪ್ರಿಯತೆ ಕುಗ್ಗುತ್ತಿದೆಯೆಂಬ ಸಂಗತಿ ಮಹಾರಾಜರಿಗೆ ತಿಳಿಯಿತು. ಅವರು ಕೂಡಲೇ ಪತ್ರಿಕೆಯ ಸಂಪಾದಕರಿಗೆ ಅಂತಹ ಯಾವುದೇ ರೀತಿಯ ಬರವಣಿಗೆಯನ್ನು ಬರೆಯಬೇಡಿ ಮತ್ತು ಪತ್ರಿಕೆಯ ಜನಪ್ರಿಯತೆಗೆ ಧಕ್ಕೆ ಬರದಂತೆ ಮಾಡಿ ಎಂದು ಬರೆದರು. ಸ್ವಲ್ಪ ಸಮಯದ ನಂತರ ಅದೇ ಪತ್ರಿಕೆ ಮಾನ್ಯ ಮಹಾರಾಜರ ವಿರುದ್ಧ ಬರೆಯತೊಡಗಿತು. ಸಂಪಾದಕರೇ ಸ್ವತಃ ಬರೆದುಕೊಟ್ಟ ಪ್ರಾಮಿಸರಿ ನೋಟು ಮಹಾರಾಜರ ಕೈಯಲ್ಲಿತ್ತು; ಮಾನ್ಯ ಮಹಾರಾಜರು ಅದನ್ನು ಏನು ಮಾಡಿದರು? ಮಾನ್ಯ ಮಹಾರಾಜರು ಕೂಡಲೇ ತಮ್ಮ ಸಾಮಾನ್ಯ ಸ್ನೇಹಿತನಿಗೆ ಒಂದು ಪತ್ರ ಬರೆದರು. ಆ ಪ್ರಾಮಿಸರಿ ನೋಟು ಅವರ ಹೆಸರಿನಲ್ಲಿತ್ತು. ಅದನ್ನು ಕೂಡಲೇ ರದ್ದುಗೊಳಿಸಬೇಕೆಂದು ತಿಳಿಸಿದರು. "ಸೇಡಿನ ಮನೋಭಾವನೆಯಿಂದ ಒಂದಲ್ಲ ಒಂದು ದಿನ ನಾವು ಆ ಹಣವನ್ನು ಕೇಳಬೇಕೆಂಬ ಭಾವನೆ ಬರಬಹುದು. ನಮ್ಮ ಮನಸ್ಸಿನಲ್ಲಿ ಎಂದಿಗೂ ಅಂಥ ಸೇಡಿನ ಭಾವನೆ ಬರಲು ಅವಕಾಶ ಕೊಡಬಾರದು..."

ಎಲ್ಲಾ ತರಹೆಯ ಮುಗ್ಧ ಮತ್ತು ಒರಟು ಜನರು ಮಾನ್ಯ ಮಹಾರಾಜರಿಗೆ ಕೊನೆಯಿಲ್ಲದ ಗೊಂದಲ ಮತ್ತು ಸಂಕಟಗಳನ್ನು ತಂದೊಡ್ಡಿದರೂ ಅವರಲ್ಲಿದ್ದ ಕರುಣೆಯ ಭಾವನೆಯು ಅವುಗಳನ್ನು ಅನುಭವಿಸುವಂತೆ ಅನುವು ಮಾಡಿಕೊಟ್ಟಿತು. "ಮಾನ್ಯ ಮಹಾರಾಜರ ಸಂಪರ್ಕಕ್ಕೆ ಬಂದವರ ಮಾನವೀಯ ಮಗ್ಗುಲುಗಳನ್ನು ಆಳವಾಗಿ ಅನುಭವಿಸಿದ ಮತ್ತು ಹೆಚ್ಚು ಸಹಾನುಭೂತಿ ತೋರಿದ ಅವರ ಸ್ವಭಾವವು ಅವರ ಬಲವೂ ಮತ್ತು ಸೊಗಸೂ ಆಗಿದೆ" ಎಂದು ಸರ್ ಜಾರ್ಜ್ ಲಾಯ್ಡ್ ಅವರು ಹೇಳುತ್ತಾರೆ. ತನ್ನ ಹೆಂಡತಿಯ ಜೊತೆಯಲ್ಲಿ ಜಗಳವಾಡಿದ ಮನುಷ್ಯನು ಅಥವಾ ತಮ್ಮ ಮನೆಯಲ್ಲಿ ಇತರೆ ಹೆಂಗಸರು ಸಹ ಅವರ ಬಳಿಗೆ ಹೋಗಿ ತಮ್ಮ ಕತೆಯನ್ನು ಹೇಳುತ್ತಿದ್ದರು. ಮತ್ತೊಬ್ಬನು ಸ್ವಲ್ಪ ಸಮಯದ ಮೊದಲೇ ತನ್ನ ವಿರೋಧಿ ತನ್ನ ಬಗ್ಗೆ ದೂರು ಕೊಟ್ಟಿರಬಹುದೆಂದು ಅವರನ್ನು ಪೀಡಿಸುತ್ತಿದ್ದನು..... ಈ ರೀತಿಯಲ್ಲಿ ಅವರನ್ನು ಹತ್ತು-ಇಪ್ಪತ್ತು ಮಂದಿ ಬೆಳಗಿನಿಂದ ಸಂಜೆಯವರೆಗೆ ಮುತ್ತಿರುತ್ತಿದ್ದರು. ಅವರು ಅವರ ಮಾತುಗಳನ್ನು ಶಾಂತಚಿತ್ತದಿಂದ ಕೇಳುತ್ತಿದ್ದರು ಮತ್ತು ತಮ್ಮ ದೃಷ್ಟಿಯಲ್ಲಿ ಯಾವುದು ಸರಿ, ಅಗತ್ಯ ಎನಿಸುತ್ತಿತ್ತೋ ಅದನ್ನ ಅವರು ಮಾಡುತ್ತಿದ್ದರು. ಅವರಿಂದ ನೋವುಂಟು ಮಾಡುವ ಮಾತು ಹೊರಡುತ್ತಿರಲಿಲ್ಲ ಮತ್ತು ಹುಬ್ಬುಗಂಟಿಕ್ಕಿಕೊಂಡು ಯಾರನ್ನೂ ನೋಯಿಸುತ್ತಿರಲಿಲ್ಲ. ಹಲವಾರು ಪೂರ್ವಕಲ್ಪಿತ ಭಾವನೆಗಳಿದ್ದರೂ ಅವರು ಎಂದಿಗೂ ಸಣ್ಣದಾಗಲಿ ಅಥವಾ ದೊಡ್ಡದಾಗಲಿ ಕಡೆಗಣಿಸಲಿಲ್ಲ. ಅವರು ಹಲವರ ಕೋರಿಕೆಗಳನ್ನು ನಿರಾಕರಿಸಲು ನಿರ್ಧರಿಸಿದರೂ ಅವರ ಆಶ್ಚರ್ಯಕರವಾದ ಗಮನಿಸುವಿಕೆ ಮತ್ತು ಧಾರಕಗುಣವು ಹಲವಾರು ವರ್ಷಗಳ ನಂತರ ಯಾವುದೇ ಪರಿಣಾಮವನ್ನು ಮತ್ತು ಯಾರು ತಮ್ಮ ನಿಲುವನ್ನು ಬದಲಾಯಿಸಿದರು ಮತ್ತು ಯಾರು ಅದನ್ನು ಪಟ್ಟುಹಿಡಿದು ಸಾಧಿಸುತ್ತಿದ್ದರು ಎಂಬುದನ್ನು ನೆನಪಿಸಿಕೊಳ್ಳುವಂತೆ ಮಾಡುತ್ತಿದ್ದವು....

ಮಾನ್ಯ ಮಹಾರಾಜರು ತಮ್ಮ ಆಡಳಿತದ ಮೊದಲ ಹಂತದಲ್ಲಿ ಕೊಲ್ಲಾಪುರ ಸಂಸ್ಥಾನದ ಪುನಸ್ಥಾಪನೆ ಮತ್ತು ಅದರ ಮೂಲಕ ಮಹ್‌ರಟ್ಟದ ವೈಭವೀಕರಣವನ್ನು ಬದಲಾದ ರೂಪದಲ್ಲಿ ಸಾಧಿಸುವ ಕಾರ್ಯವನ್ನು ತಾವು ಹೊತ್ತಿದ್ದರು ಮತ್ತು ನಾವು ಮೂರು ದಶಕಗಳ ದೂರದಲ್ಲಿ ನಿಂತು ಅವರು ಎಷ್ಟರಮಟ್ಟಿಗೆ ಸಫಲರಾಗಿದ್ದರೆಂಬುದನ್ನು ಸುಲಭವಾಗಿ ನಿರ್ಧರಿಸಬಹುದು. ಅವರು ಪ್ರಾರಂಭದಿಂದಲೇ ತಮ್ಮ ಆಕಾಂಕ್ಷೆ ಬ್ರಿಟಿಷರ ಪರಿಮಿತಿಯಲ್ಲಿದೆಯೆಂಬುದನ್ನು ಮತ್ತು ಸಂಪೂರ್ಣವಾಗಿ ಬ್ರಿಟಿಷರಿಗೆ ನಿಷ್ಠರಾಗಿರಬೇಕೆಂಬುದನ್ನು ಮನವರಿಕೆ ಮಾಡಿಕೊಂಡರು. ಅವರು ಸಾಮಂತರಾಜರಾಗಿ ಪ್ರಾಮಾಣಿಕವಾಗಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ನಿಷ್ಠ ರಾಜರಾಗಿದ್ದರು, ಬ್ರಾಹ್ಮಣೇತರರಾಗಿ ತಮ್ಮನ್ನು ತಾವೇ ಸಮರ್ಥಿಸಿಕೊಂಡರು, ಅವರು ಹಲವಾರು ಪರಿಮಿತಿಗೊಳಪಟ್ಟಿದ್ದರು... ಮಾನ್ಯ ಮಹಾರಾಜರು ವಹಿಸಿಕೊಂಡಿದ್ದ ಹೊಣೆಯ ಸ್ವರೂಪ ಮತ್ತು ಪರಿಸ್ಥಿತಿಗಳಲ್ಲಿ ತಮ್ಮ ಗುರಿಯ ಸಾಧನೆಗಾಗಿ ದಾರಿ ಕಂಡುಕೊಳ್ಳಬೇಕಾಗಿತ್ತೆಂಬ ಸಂಗತಿಯನ್ನು ನಾವು ಕಲ್ಪಿಸಿಕೊಳ್ಳಬೇಕು.

ಅವರೇ ತಿಳಿಸಿದಂತೆ ಅವರು 'ಅಲ್ಪಸಂಖ್ಯಾತರ ತಾಯಿ' ಎಂದು ಕರೆಯುವ ಒಂದು ಸಂಸ್ಥಾನದಲ್ಲಿ ತಮ್ಮ ಸ್ಥಾನವನ್ನು ಮೊದಲಿಗೆ ಭದ್ರಪಡಿಸಿಕೊಳ್ಳಬೇಕಾಗಿತ್ತು. ತಮ್ಮ ಎಲ್ಲಾ ಅಧಿಕಾರಗಳನ್ನು ಬಳಸಲು ಅಡ್ಡಿಪಡಿಸುತ್ತಿದ್ದ ಹಲವಾರು ಶಕ್ತಿಗಳನ್ನು ಅವರು ಮಣಿಸಬೇಕಾಗಿತ್ತು. ಅವರು ಅಧಿಕಾರ ವಹಿಸಿಕೊಂಡಾಗ ಅವರ ಸಂಸ್ಥಾನದ ಘನತೆ ತುಂಬಾ ಹೀನಸ್ಥಿತಿಯಲ್ಲಿತ್ತು. ದೇಶದಲ್ಲಿರುವ ಸಣ್ಣಮಟ್ಟ ಸಾಮಂತರಾಜರಿಗಿಂತ ಭಾರತ ಸಂಸ್ಥಾನಗಳಲ್ಲಿ ತೀರಾ ಕೆಳಮಟ್ಟಕ್ಕೆ -ಮಹ್‌ರಟ್ಟದ ಮಹತ್ವ ಮತ್ತು ವೈಭವವನ್ನು- ಕೊಲ್ಹಾಪುರ

ಸಂಸ್ಥಾನವನ್ನು ಕೊಂಡೊಯ್ಯುವ ಎಲ್ಲಾ ರೀತಿಯ ಸಂಚುಗಳು ನಡೆದವು. ಅವರ ಅಧೀನ ಸಾಮಂತರು ಛತ್ರಪತಿಯ ಸಾರ್ವಭೌಮತ್ವದ ಅಧಿಕಾರಗಳನ್ನು ಪಡೆಯಲು ನಿರೀಕ್ಷಿಸಿದ್ದರು, ಅದು ಒಂದು ಭ್ರಮೆಯಾಗಿತ್ತು. ಅವರ ಅಧಿಕಾರಿಗಳು ಹೊಸ ರಾಜನನ್ನು ತಮ್ಮ ಕೈಗೊಂಬೆಯ ರಾಜನನ್ನಾಗಿ ಮಾಡಿಕೊಳ್ಳಲು ಭಾವಿಸಿದ್ದರು. ಪ್ರಭಾವವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವು ನಾನಾರೀತಿಯಲ್ಲಿ ಅಪಾರ್ಥ ಮಾಡಿಕೊಂಡದ್ದು ಉಂಟು. ಅವರ ವಿರುದ್ಧ ಮಾಡಿದ ಯಾವುದೇ ಆರೋಪ ಅಸಂಬದ್ಧ. ಅವರು ಮತ್ತು ಅವರ ಪ್ರಾಣಸ್ನೇಹಿತ ಬಾಪುಸಾಹೇಬರಿಬ್ಬರು ಶಿವಾಜಿ ಕ್ಲಬ್ಬಿನ ದೇಶದ್ರೋಹದ ಚಟುವಟುಕೆಗಳಲ್ಲಿ ಪಾತ್ರವಿದೆಯೆಂದು ಸೂಚಿಸಲಾಗಿತ್ತು. ಮಲ್‌ಹರ್‌ರಾವ್ ಗಾಯಕವಾಡ ಇತಿಹಾಸವು ಕೊಲ್ಹಾಪುರದಲ್ಲಿ ಪುನರಾವರ್ತಿಸುವಂತೆ ಮಾಡಲಾಯಿತು ಮತ್ತು ಮಾನ್ಯ ಮಹಾರಾಜರು, ಅವರ ಸಹೋದರ ಮತ್ತು ಅಧಿಕಾರಿಗಳು ಅವರ ರೆಸಿಡೆಂಟರಿಗೆ ವಿಷವಿಕ್ಕಿ ಕೊಲ್ಲುವ ಆರೋಪದಡಿಯಲ್ಲಿ ಬಂಧಿಸುವ ಮಟ್ಟಕ್ಕೆ ಹೋಗಿತ್ತು.

ತಮ್ಮ ಸೇವೆಯಲ್ಲಿ ಬ್ರಾಹ್ಮಣೇತರರನ್ನು ಸೇರಿಸಿಕೊಂಡ ಕ್ಷಣದಲ್ಲಿಯೇ ಅವರನ್ನು ಎಲ್ಲಾ ಕಡೆಗಳಿಂದಲೂ ತೆಗಳಿದರು ಮತ್ತು ಸಂಸ್ಥಾನದ ಮೊದಲ ಅಧಿಕಾರಿಯು ಅವರು ಅನುಸರಿಸುತ್ತಿರುವ ಹಾದಿಯು ಅವರನ್ನು ಹಲವಾರು ಮಹಾಸಂಕಟಗಳಿಗೆ ಗುರಿ ಮಾಡಬಹುದೆಂದು ಹೇಳಿದರು. ಅವರು ತಮ್ಮ ಯೂರೋಪಿನ ಅಧಿಕಾರಿಗಳನ್ನು ಇಷ್ಟಪಡುತ್ತಿಲ್ಲವೆಂದು ಅವರ ಆಪ್ತ ಸ್ನೇಹಿತರು ಹೇಳಿದರು. ಪ್ರಭಾವಶಾಲಿ ಬ್ರಾಹ್ಮಣ ಸಮುದಾಯ, ಅವರು ಸಾಮಾಜಿಕವಾಗಿ ಒಬ್ಬ ಜೀತಗಾರನಿಗಿಂತ ಮೇಲಲ್ಲವಾದ್ದರಿಂದ ಅವರಿಗೆ ಒಂದು ಕ್ಷತ್ರಿಯ ಸ್ಥಾನಮಾನ ನೀಡಲು ನಿರಾಕರಿಸಿತು. ಎಲ್ಲಾ ಕಡೆಗಳಿಂದಲೂ ಶೂದ್ರನೆಂದು ಉಪೇಕ್ಷೆಗೆ ಗುರಿಯಾಗಿರುವಾಗ ಅದೃಷ್ಟವಶಾತ್ ಅಧಿಕಾರದಲ್ಲಿದ್ದರೂ ಅವರು ಯಾರಿಂದ ತಾನೇ ಯಾವ ಬೆಂಬಲ ಮತ್ತು ನೈತಿಕ ಬೆಂಬಲ ನಿರೀಕ್ಷಿಸಲು ಸಾಧ್ಯ?

ಅವರ ಪ್ರಜೆಗಳು, ಮಹ್‌ರಟ್ಟ ದೇಶವು ಹೀನಸ್ಥಿತಿಯಲ್ಲಿತ್ತು. ಅವರು ಹುಡುಗನಾಗಿರುವಾಗ ಇತಿಹಾಸದ ಬಗ್ಗೆ ಆಸಕ್ತಿಯನ್ನು ಹೊಂದಿದ್ದರು, ಇತಿಹಾಸದಿಂದ ಅವರು ತಮ್ಮ ಪೂರ್ವಿಕರ ಮೇಲೆ ತಮ್ಮ ವ್ಯಕ್ತಿಗಳಿಂದಲೇ ನಡೆದಿದ್ದ ಸಂಚು ಮತ್ತು ದೇಶದ್ರೋಹಗಳಿಂದ ಪಾಠ ಕಲಿತಿದ್ದರು. ಅವರು ಬ್ರಾಹ್ಮಣೇತರ ರಾಜಮಹಾರಾಜರು, ಶಿವಾಜಿ ಮತ್ತು ರಾಜಾರಾಮ್‌ರಂತಹ ಮುತ್ಸದ್ದಿಗಳು ಬ್ರಾಹ್ಮಣರ ಕುಯುಕ್ತಿಗಳ ಬಿರುಗಾಳಿಯಲ್ಲಿ ತರಗೆಲೆಗಳಂತೆ ಹಾರಿ ಹೋದದ್ದನ್ನು ಸ್ಪಷ್ಟವಾಗಿ ಮನವರಿಕೆ ಮಾಡಿಕೊಂಡರು. ಛತ್ರಪತಿಗಳು ಜೇಲಿನಲ್ಲಿ ಕೊಳೆಯುವ ಹಣೆಬರಹ ಅವರ ಕಣ್ಣುಮುಂದೆ ನಿಂತುಬಿಟ್ಟಿತು ಮತ್ತು ಅವರ ಸ್ವಂತ ಪೂರ್ವಿಕರು ತಮ್ಮ ನಗರದ ನಾಲ್ಕು ಗೋಡೆಗಳೊಳಗೆ ಇರಬೇಕಾಯಿತು ಮತ್ತು ಅವರ ಪ್ರಾಣಗಳ ರಕ್ಷಣೆಗೆ ಬೆಟ್ಟದಂತಹ ಕೋಟೆಯಿತ್ತು ಅಷ್ಟೆ. ಅವರ ಆಸ್ಥಾನದ ಒಳಪಿತೂರಿಗಳು ಮತ್ತು ಗುಂಪುಗಳ ಬೆತ್ತಲೆಯ ಭೀಕರತೆಗಳು, ಛತ್ರಪತಿಗಳ ಅಧಿಕಾರ ಮತ್ತು ಘನತೆಗಳು ನೆರಳಾಗಿ ಅವರ ಕಣ್ಣ ಮುಂದೆ ಎದ್ದು ನಿಂತವು.

ಶಾಹು ಮಹಾರಾಜರು ಅತ್ಯಂತ ಕೆಳಗಿನ ಇಳಿಜಾರಿನ ಮೆಟ್ಟಿಲ ಮೇಲೆ ನಿಂತಿದ್ದಾರೆ, ಅವರ ದಾರಿಯಲ್ಲಿ ಅಡ್ಡಾದಿಡ್ಡಿಯಾಗಿ ಅಡಚಣೆಗಳು ಚೆಲ್ಲಿ ನಿಂತಿವೆ ಮತ್ತು ಪ್ರತಿ ಕ್ಷಣವೂ ಅವರ ನೆತ್ತಿಯ ಮೇಲೆ ಬಿರುಗಾಳಿಯ ಮೋಡಗಳು ಹರಿದಾಡುತ್ತಿವೆ.ಇಂತಹ ಸ್ಥಿತಿಯಲ್ಲಿ ಅವರು ಅತಿಪ್ರಯಾಸದಿಂದ ತಮ್ಮ ಪ್ರಯಾಣ ಸಾಗಿಸಬೇಕಾಗಿದೆ. ೧೯೨೨ರಲ್ಲಿ ನಿಯತಿಯು ಅಧಿಕಾರವನ್ನು ಬಿಟ್ಟುಕೊಡು ಎಂದು ನಿರ್ದೇಶಿಸುತ್ತಿರುವಾಗ ನಾವೇನು ಮಾಡಬೇಕು? ಸಂಸ್ಥಾನದ ಪ್ರತಿಷ್ಠೆಯನ್ನ ಸ್ವಲ್ಪಮಟ್ಟಿಗೆ ಪುನರ್‌ಸ್ಥಾಪಿಸಲಾಗಿತ್ತು. ತಮ್ಮ ಸಂಸ್ಥಾನದಲ್ಲಿ ಅವರೇ ತಮ್ಮ ವ್ಯವಹಾರಗಳಿಗೆ ಒಡೆಯರಾಗಿದ್ದರು. ಅವರು ಬಳಸಬೇಕಾಗಿದ್ದ

ಆಡಳಿತ ಯಂತ್ರವನ್ನು ಅವರು ಸಂಪೂರ್ಣವಾಗಿ ಪರಿವರ್ತನೆಗೊಳಿಸಿದ್ದರು. ಮೋಡಗಳು (ಅಡ್ಡಿ–ಆತಂಕಗಳು) ಬಹುಮಟ್ಟಿಗೆ ಚದುರಿಹೋಗಿದ್ದವು. ಊಳಿಗಮಾನ್ಯದ ಧಣಿಗಳು ಅವರನ್ನು ಪ್ರೀತಿಸಿದ್ದರು, ಜನತೆ ಅವರಿಗೆ ಪ್ರೀತಿ–ಗೌರವ ತೋರಿಸಿದ್ದರು, ಅವರ ವಿರೋಧಿಗಳು ಅವರಿಗೆ ಭಯಪಟ್ಟಿದ್ದರು, ತನ್ನ ದೇಶಬಾಂಧವರಿಗೆ ಕಣ್ಮಣಿಯಾಗಿದ್ದರು. ಅವರು ಪತಿತರಿಗೆ ಮತ್ತು ದಮನಿತರಿಗೆ ರಕ್ಷಕರಾಗಿದ್ದರು. ಅವರು ಒಬ್ಬ ಅಧಿಕಾರಸ್ಥರಾಗಿ, ಒಬ್ಬ ಆಡಳಿತಗಾರ(ರಾಜ)ನಾಗಿ, ಒಬ್ಬ ಶಕ್ತಿಯುತ ಸುಧಾರಕರಾಗಿ, ಬ್ರಾಹ್ಮಣೇತರರಿಗೆ ನಾಯಕನಾಗಿ ಸಾವನ್ನಪ್ಪಿದರು ಮತ್ತು ಡೆಕ್ಕನ್ ಪ್ರದೇಶಕ್ಕೆ ಜನತಂತ್ರದ ಬುನಾದಿಯನ್ನು ಹಾಕಿದರು.

ಮಹಾರಾಜರ ಕಾರ್ಯಗಳಲ್ಲಿದ್ದ ತಪ್ಪುಗಳನ್ನು ಒಂದು ಕ್ಷಣಕ್ಕೂ ನಾನು ಮರೆಯುವುದಿಲ್ಲ. ಆದರೆ ಅವೆಲ್ಲವೂ ಬಹುಮಟ್ಟಿಗೆ ತಪ್ಪಿಸಲಾರದ ದೋಷಗಳಾಗಿದ್ದವು. ವಿರೋಧಿಶಕ್ತಿಗಳನ್ನು ಎದುರಿಸುತ್ತಾ ಅವರು ತಪ್ಪುಗಳ ಸಮೇತ ಮಾಡಿದ ಕೆಲಸಗಳನ್ನು ಯಾರೂ ಮಾಡಲಾಗುತ್ತಿರಲಿಲ್ಲ. ತಮ್ಮ ಖಾಸಗಿ ಜೀವನದಲ್ಲಿ ಅವರು ಅವರಿಗೆ ಮೋಸ ಮಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದರು. ಅವರು ಕೊಟ್ಟ ವಿವರಣೆಗಳು (ಸಮಜಾಯಿಷಿ) ಸುಳ್ಳೆಂದು ಅವರಿಗೆ ಗೊತ್ತಿತ್ತು.... ಆದರೆ ಅವುಗಳ ಜೊತೆಗೆ ಅವರು ಸಂಸ್ಥಾನಕ್ಕಾಗಿ ಮತ್ತು ಬ್ರಾಹ್ಮಣೇತರರಿಗಾಗಿ ಸಾಧನೆಗಳನ್ನು ಮಾಡಿದರು. ಇವುಗಳನ್ನು ನೆರವೇರಿಸಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಮಹಾನುಭಾವರಿಂದ ಮಾತ್ರ ಸಾಧ್ಯ. ಅವರು ಬ್ರಿಟಿಷರ ಹೊಗಳುಭಟ್ಟರಾಗಿದ್ದರು, ಸ್ವರಾಜ್ಯದ ದ್ವೇಷಿಗಳಾಗಿದ್ದರು, ಅವರೊಬ್ಬ ನೀತಿ–ನಿಷ್ಠೆಗಳಿಲ್ಲದ ಮನುಷ್ಯನಾಗಿ ಎಲ್ಲವನ್ನೂ ತಾವೇ ಬಯಸುತ್ತಿದ್ದರು ಅಥವಾ ತಾವೇ ಮಹಾನುಭಾವನೆಂಬ ಭಾವನೆಯನ್ನು ಹೊಂದಿದ್ದರೆಂದು ಹೇಳಲಾಗುತ್ತಿದೆ. ನಾನು ಅವರ ಬಗ್ಗೆ ಬೇರೆಯವರು ಮಾಡಿರುವ ಆರೋಪಗಳ ಸಮರ್ಥನೆಗಳನ್ನು ಗಮನಿಸಿದ್ದೇನೆ ಮತ್ತು ಗುರುತಿಸಿದ್ದೇನೆ. ಹಲವು ಜನರು ಅವರನ್ನು ಇಷ್ಟಪಟ್ಟಿರುವುದಕ್ಕೆ ಮತ್ತು ತಪ್ಪಿಸುವುದಕ್ಕೆ ಬಳಸಿದ ಕಾರಣಗಳನ್ನೇ ಮಾನ್ಯ ಮಹಾರಾಜರು ಸಾಧನಗಳನ್ನಾಗಿ ಬಳಸಿಕೊಂಡಿದ್ದಾರೆ. ಕೊಲ್ಹಾಪುರದ ಇತಿಹಾಸ ಮತ್ತು ಮಹ್‌ರಟ್ಟದ ಜನತೆಯ ಇತಿಹಾಸವು ಮಾನ್ಯಮಹಾರಾಜರನ್ನು ಮಹಾನುಭಾವರು ಮತ್ತು ಉತ್ತಮರೆಂದು ನಿಸ್ಸಂದೇಹವಾಗಿ ತೀರ್ಮಾನಿಸುವರೆಂದು ನಾನು ಹೇಳುತ್ತೇನೆ.

ವಿಶ್ವದ ಇತಿಹಾಸದಲ್ಲಿ ಶುದ್ಧ ಸಂತತ್ವವು ದುರದೃಷ್ಟವಶಾತ್ ಅಪರೂಪವಾಗಿ ರಾಜಕೀಯ ವಿರೋಧಿಗಳನ್ನು ಗೆಲ್ಲಲು ಸಮರ್ಥವಾಗಿರುತ್ತದೆ. ಸತಾರದ ಶಾಹುರವರು ಒಳಸಂಚುಗಳ ಕಾಟದಿಂದ ನಿರ್ಬಲಗೊಂಡು ಶಾಹುವಂಶದ ಕೊನೆಯವರಾದ ಮಾನ್ಯ ಮಹಾರಾಜರನ್ನು ಅಧಿಕಾರದಿಂದ ಕೆಳಗಿಳಿಸಲು ಅಪವಿತ್ರವಾದ ಮೈತ್ರಿಕೂಟಕ್ಕೆ ಸೇರುತ್ತಾರೆ. ಆದರೆ ಮಾನ್ಯ ಮಹಾರಾಜರು ಯಾವ ತಪ್ಪನ್ನು ಮಾಡದಿದ್ದರೂ ಅವರು ಒಳ್ಳೆಯವರಾಗಿದ್ದರು ಮತ್ತು ತಮ್ಮನ್ನು ಸ್ವತಃ ಸಮರ್ಥನೆ ಮಾಡಿಕೊಳ್ಳುತ್ತಿದ್ದರು ಮತ್ತು ಅವರು ಒಂದು ಧೋರಣೆಯನ್ನು ಅನುಸರಿಸುತ್ತಿದ್ದರು. ಅದನ್ನು ಎಲ್ಲರೂ ಟೀಕೆ ಮಾಡುತ್ತಿದ್ದರು. ನಾನು ಪ್ರತಿಯೊಂದನ್ನೂ ಸಮರ್ಥಿಸಿಕೊಳ್ಳುವುದಕ್ಕೆ ಪ್ರಯತ್ನಿಸುವುದಿಲ್ಲ. ಅವರು ಮಹಾ ಉದ್ದೇಶದಿಂದ ಸ್ಫೂರ್ತಿಗೊಂಡು ಅವುಗಳನ್ನು ಮಾನವ ಜನಾಂಗದ ಕೆಲವರಿಗೆ ಪ್ರಯೋಜನವಾಗುವಂತೆ ಜಾರಿಗೊಳಿಸಿದರು.

ಅವರ ಸಫಲತೆಯು ಕೂಡ ಘನವಾದದ್ದೇ– ಅವರು ಜಯಿಸಿದ ಸಂಕಷ್ಟಗಳು, ಅವರು ಅಪಾಯಗಳಿಂದ ಪಾರಾದುದು ಮತ್ತು ಅವರು ಸೆಣಸಿದ ಸನ್ನಿವೇಶಗಳು ಸಹ ಮಹತ್ತರವಾದುವು.ಆ ಸಫಲತೆಯು ಖಂಡಿತವಾಗಿ ಪರಿಪೂರ್ಣದಿಂದ ದೂರವಿದ್ದರೂ ಅದು ಮಹತ್ತರವಾದುದೇ ಮತ್ತು ಅದು ಕೊಲ್ಹಾಪುರ ಸಂಸ್ಥಾನಕ್ಕೆ ಫಲಕಾರಿಯಾಗಿದೆ, ಅದಕ್ಕಾಗಿ ಸಂಸ್ಥಾನವು ಎಲ್ಲಾ ಕಾಲಕ್ಕೂ ಅವರಿಗೆ ಕೃತಜ್ಞವಾಗಿರಬೇಕು. ಪರಿಪೂರ್ಣತೆಯನ್ನು

ತಲುಪುವುದಕ್ಕೆ ಎಂದಿಗೂ ಸಾಧ್ಯವಿಲ್ಲ ಮತ್ತು ಅವರ ಉತ್ತರಾಧಿಕಾರಿ ತಮ್ಮ ತಂದೆ ಆಯ್ಕೆ ಮಾಡಿಕೊಂಡ ಹಾದಿಯಲ್ಲಿ ಸಾಕಷ್ಟು ಮಾಡುವುದಕ್ಕೆ ಕೆಲಸವಿದೆ. ಆದರೆ ದಿವಂಗತ ಮಾನ್ಯ ಮಹಾರಾಜರು ಸಂಸ್ಥಾನವನ್ನು ಬಹಳ, ಬಹಳ ದೂರಕ್ಕೆ ಕೊಂಡೊಯ್ದರು, ಮತ್ತು ಅದನ್ನು ಮಹಾಸಂಸ್ಥಾನವನ್ನಾಗಿ, ಬಲಿಷ್ಠ ಮತ್ತು ಹೆಚ್ಚು ಸಂಪದ್ಭರಿತ ಹಾಗೂ ಹಿಂದಿಗಿಂತ ಹೆಚ್ಚು ಭರವಸೆಯ ಸಂಸ್ಥಾನವನ್ನಾಗಿ ಮಾಡಿ ಬಿಟ್ಟುಹೋದರು.

*ಟಿಪ್ಪಣಿ: ಈ ಲೇಖನವು ಲಠ್ಠೆಯವರ "ಕೊಲ್ಹಾಪುರದ ಮಾನ್ಯ ಮಹಾರಾಜ ಶ್ರೀ ಶಾಹು ಛತ್ರಪತಿ ಮಹಾರಾಜರ ನೆನಪುಗಳು" ಕೃತಿಯಿಂದ ಆಯ್ದುಕೊಳ್ಳಲಾಗಿದೆ. ಲಠ್ಠೆ ಅವರು ಶಾಹುರವರ ನಿಕಟ ಸಹವರ್ತಿ ಮತ್ತು ಮೊಟ್ಟಮೊದಲ ಜೀವನಚರಿತ್ರೆಕಾರರು.*

***(ಕೊಲ್ಹಾಪುರದ ಮಾನ್ಯ ಮಹಾರಾಜ ಶ್ರೀ ಶಾಹು ಛತ್ರಪತಿ ಮಹಾರಾಜರ ನೆನಪುಗಳು ಎಂಬ ಗ್ರಂಥದಿಂದ ಈ ಲೇಖನವನ್ನು ಕೃತಜ್ಞತೆಗಳೊಂದಿಗೆ ತೆಗೆದುಕೊಳ್ಳಲಾಗಿದೆ.)***

---

೪

# ಶಾಹು ಮಹಾರಾಜರು: ತತ್ವಗಳ ಒಬ್ಬ ಶ್ರೇಷ್ಠ ಮನುಷ್ಯ

**ಭಾಸ್ಕರರಾವ್ ವಿಠೋಜಿರಾವ್ ಜಾಧವ**

*ಶಾಹುರವರ ನಿಕಟವರ್ತಿ, ಸತ್ಯಶೋಧಕ ಸಿದ್ಧಾಂತವಾದಿ,*

*ಬಾಂಬೆ ಪ್ರಾಂತ್ಯದ ಶಿಕ್ಷಣ ಸಚಿವ ಮತ್ತು ಕೇಂದ್ರೀಯ ಶಾಸನಪರಿಷತ್ತಿನ ಸದಸ್ಯ*

**ಶಾ**ಹು ಮಹಾರಾಜರು ೧೮೮೪ರಲ್ಲಿ ಕೊಲ್ಹಾಪುರ ಸಂಸ್ಥಾನದ ದತ್ತುಪುತ್ರನಾಗಿ (ವಾರಸುದಾರ) ಸಿಂಹಾಸನವನ್ನೇರಿದರು. ಅವರ ಖಾಸಾ ತಂದೆ ೧೮೮೬ರಲ್ಲಿ ನಿಧನರಾದರು. ಅವರು ೧೮೯೪ರಲ್ಲಿ ಆಡಳಿತದ ಸೂತ್ರವನ್ನು ವಹಿಸಿಕೊಂಡರು ಮತ್ತು ೧೯೨೨ರ ಮೇ ೬ರಂದು ಸ್ವರ್ಗಸ್ಥರಾದರು. ಈ ೨೮ ವರ್ಷಗಳ ಅವಧಿಯ ಆಡಳಿತದಲ್ಲಿ ಕೊಲ್ಹಾಪುರವು ಶ್ರೇಷ್ಠಗತಿಯಲ್ಲಿ ಮತ್ತು ಪ್ರತಿಯೊಂದು ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿತು. ಸಾಕ್ಷರತೆ ಹೆಚ್ಚಾಯಿತು, ಹಿಂದುಳಿದ ವರ್ಗಗಳು ಮುಂದೆ ಬಂದವು, ಅಸ್ಪೃಶ್ಯತೆಯನ್ನ ಅಳಿಸಿಹಾಕಲಾಯಿತು. ವಾಣಿಜ್ಯ ವ್ಯವಹಾರ ಮತ್ತು ಕೈಗಾರಿಕೆಗಳು ಬೆಳೆದವು ಮತ್ತು ಗಿರಣಿಗಳು ಪ್ರಾರಂಭವಾಗಿ ಕೆಲಸ ಮಾಡತೊಡಗಿದವು. ಅವರ ಅಲ್ಪಾವಧಿಯ ಕಾಲದಲ್ಲಿ ಸಂಸ್ಥಾನದಲ್ಲೆಲ್ಲ ಅಭಿವೃದ್ಧಿ ಕಾಣಿಸಿಕೊಂಡಿತು. ಈ ಅಭಿವೃದ್ಧಿ ಸಾಮಾನ್ಯ ಜನರ ಜೀವನವನ್ನು ಸುಧಾರಿಸಿತು.

ಮಹಾರಾಜರು ಮೂರುವರ್ಷದ ಮಗುವಾಗಿರುವಾಗ ಅವರ ತಾಯಿ ಸತ್ತುಹೋದರು. ಮತ್ತು ಅವರು ೧೧ ವರ್ಷದ ಹುಡುಗನಾಗಿದ್ದಾಗ ಅವರ ತಂದೆ ತೀರಿಹೋದರು. ಅವರು ಚಿಕ್ಕ ವಯಸ್ಸಿನಲ್ಲಿಯೇ ಅನಾಥರಾಗಿದ್ದರಿಂದ ಅವರು ಹೊಣೆಯರಿತ ವ್ಯಕ್ತಿಯಾದರು. ಅವರು ಚಿಕ್ಕವಯಸ್ಸಿನಲ್ಲಿಯೇ ಬೇರೆಯವರೊಡನೆ ಹೇಗೆ ವರ್ತಿಸಬೇಕೆಂಬುದನ್ನು ಕಲಿತುಕೊಂಡರು. ಅವರು ನಿರೂಪಿಸಿದ ತಮ್ಮ ಬಾಲ್ಯದ ಕೆಲವು ಘಟನೆಗಳಿಂದ ಅವರು ಚಿಕ್ಕವಯಸ್ಸಿನಲ್ಲಿಯೇ ಬಹಳ ಚುರುಕಾಗಿದ್ದನ್ನು ನಾವು ಮೆಚ್ಚಬೇಕು.

'ವೇಷ ಅಸನ ಬವಲಾ, ಪರಿ ಅಂತರಿ ನಾನಾಕಲಾ' (ಬಾಹ್ಯರೂಪ ಸರಳವಾಗಿರಲಿ, ಆದರೆ ಅಂತರಂಗದಲ್ಲಿ ಹಲವು ಪ್ರತಿಭೆ ಕೌಶಲಗಳಿರಲಿ)

ಶಿವಾಜಿ ಮಹಾಶಯರ ಸಮಕಾಲೀನರಾದ ಸಂತ ರಾಮದಾಸರು ತಮ್ಮ 'ದಾಸಬೋಧ' ಎಂಬ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ.

ಶಾಹುಮಹಾರಾಜರು 'ದಾಸಬೋಧ' ಪುಸ್ತಕವನ್ನು ಓದುವುದಕ್ಕೆ ಮೊದಲೇ ಈ ಬೋಧನೆಯನ್ನು ರಕ್ತಗತ ಮಾಡಿಕೊಂಡಿದ್ದರು. ಅವರು ಅದನ್ನು ಕಲಿತದ್ದು ಮಾತ್ರವಲ್ಲದೆ ಅದರಂತೆ ನಡೆದು ತೋರಿಸಿದರು. ಹಲವು ಗರ್ವಿಷ್ಠರು, ಅವರ ವಿಶಾಲಜ್ಞಾನದ ಬಗ್ಗೆ ಗೊತ್ತಿಲ್ಲದವರು ಅವರೊಡನೆ ಮಾತನಾಡುವಾಗ ಸ್ವತಃ ನಗೆಪಾಟಲಿಗೆ ಗುರಿಯಾಗುತ್ತಾರೆ. ಅವರ ಸರಳತೆ ಮತ್ತು ಮುಗ್ಧತೆಗಳು ಅವರನ್ನು ಮನದಟ್ಟು

ಮಾಡುವವರನ್ನು ಮೋಸಗೊಳಿಸುತ್ತವೆ. ಅವರು ತಮ್ಮ ಮುಖಗಳು ಜೋತುಬಿದ್ದ ಮೇಲೆ ಅವರು ಮನವರಿಕೆ ಮಾಡಿಕೊಳ್ಳುತ್ತಾರೆ.

ಅವರ ಮುನ್ನೋಟವು ಅವರ ದೊಡ್ಡ ಗುಣವಾಗಿತ್ತು. ಅವರು ಯಾವುದೇ ಕಾರ್ಯದ ಬಗ್ಗೆ ಚಿಂತನ-ಮಂಥನ ಮಾಡದೆ ಹೊರತು ಯಾವುದೇ ಕಾರ್ಯವನ್ನು ಕೈಗೊಳ್ಳುತ್ತಿರಲಿಲ್ಲ. ಒಮ್ಮ ಅವರು ಆ ಕೆಲಸವನ್ನು ಕೈಗೊಂಡರೆ ಅದನ್ನು ಸಹನೆಯಿಂದ ಮುಗಿಸದೆ ಬಿಡುತ್ತಿರಲಿಲ್ಲ. ಅವರು ಎದುರಿಸಬಹುದಾದ ಸಮಸ್ಯೆಗಳ ಬಗ್ಗೆ ಚಿರಪರಿಚಿತರಾಗುತ್ತಿದ್ದರು ಮತ್ತು ಅವರು ಅವು ಬರದಂತೆ ನೋಡಿಕೊಳ್ಳುತ್ತಿದ್ದರು. ಅಥವಾ ಮೊದಲೇ ಅವುಗಳಿಗೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಪ್ಯಾದೆ(=ಕೈಗೊಂಬೆ) ಆಟ ಮುಗಿದ ನಂತರ ಪರಿಸ್ಥಿತಿ (ಸೋಲು) ಅರ್ಥಮಾಡಿಕೊಳ್ಳುವರು. ಅಂತಿಮವಾಗಿ ಪ್ರತಿಯೊಬ್ಬರೂ ಅವರ ಪರಿಸ್ಥಿತಿಯನ್ನ ನಿಭಾಯಿಸುವ ಪರಿಣತಿಯನ್ನು ನೋಡಿ ದಂಗಾಗುವರು.

'ಜೆ ಕ ರಂಜಲೆ ಗಂಜಲೆ, ತ್ಯಾಂಸಿ ಮ್ಹಾನೆ ಜೊ ಅಪುಲೆ' (ಯಾರು ಬಡವರನ್ನು ಮತ್ತು ದಮನಿತರನ್ನು ಅಪ್ಪಿಕೊಳ್ಳುವರೋ ಅವರು ನಿಜವಾದ ಸಾಧು; ಅವರಲ್ಲಿ ದೇವರನ್ನು ಕಾಣು) ಎಂದು ಸಂತ ತುಕಾರಾಮರು ಹೇಳಿದ್ದಾರೆ. ಅದು ಮಹಾರಾಜರ ನೈಜಸ್ವಭಾವ. ನಿರ್ಗತಿಕ ವ್ಯಕ್ತಿಯು ಅವರಿಂದ ಸಹಾಯ ಪಡೆಯದೆ ಅವರನ್ನು ಎಂದಿಗೂ ಬಿಡುವುದಿಲ್ಲ.

ತನ್ನ ಪ್ರಜೆಗಳಲ್ಲಿ ಶೇಕಡ ೯೫ರಷ್ಟಿರುವ ಮರಾಠರು ಮತ್ತು ಅಶಿಕ್ಷಿತ ವರ್ಗಗಳು ಅತ್ಯಂತ ದುಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆಂದು ಮಹಾರಾಜರು ಬೇಗನೆ ಮನವರಿಕೆ ಮಾಡಿಕೊಂಡಿದ್ದರು. ಕೊಲ್ಲಾಪುರದಲ್ಲಿ ಬಹಳ ಹಿಂದೆಯೇ ಸ್ಥಾಪಿಸಿದ ಪ್ರೌಢಶಾಲೆ ಮತ್ತು ಕಾಲೇಜುಗಳನ್ನು ಪ್ರವೇಶಿಸಲು ಬ್ರಾಹ್ಮಣೇತರರು ಅಸಮರ್ಥರಾಗಿದ್ದರು. ಕೇವಲ ಇಬ್ಬರು ಮರಾಠ ಯುವಕರು ಮಾತ್ರ ಮೆಟ್ರಿಕ್ಯುಲೇಶನ್ (ಎಸ್.ಎಸ್.ಎಲ್.ಸಿ.) ಪಾಸಾದವರಿದ್ದರು. ಆದರೆ ಅವರಿಗೆ ಅವರ ಸಾಮರ್ಥ್ಯಕ್ಕೆ ಅನುಗುಣವಾಗಿ ಕೆಲಸಗಳನ್ನು ಕೊಡುತ್ತಿರಲಿಲ್ಲ. ಒಬ್ಬನನ್ನು ಶಾಲೆಯಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳಲಾಗಿತ್ತು. ಆದರೆ ಅವನಿಗೆ ಬೋಧನಾ ಕೆಲಸವನ್ನು ನೀಡದೆ ಗ್ರಂಥಭಂಡಾರದಲ್ಲಿ ಕೆಲಸ ನೀಡಲಾಗಿತ್ತು ಮತ್ತು ಮತ್ತೊಬ್ಬನಿಗೆ ಸ್ವಲ್ಪ ಭೂಮಿ ನೀಡಿದ್ದರಿಂದ ಅವನು ಅರಮನೆಯಲ್ಲಿ ಪರಿಚಾರಕನಾಗಿ ಕೆಲಸ ಮಾಡಬೇಕಾಗಿತ್ತು ಮತ್ತು ಅದಕ್ಕಿಂತ ಮೇಲಿನ ಕೆಲಸ ಮಾಡಲು ಅವನಿಗೆ ಬಿಡುತ್ತಿರಲಿಲ್ಲ.

ಒಂದೂ ಪರೀಕ್ಷೆಯನ್ನು ಪಾಸು ಮಾಡದ ಹಲವಾರು ಬ್ರಾಹಣರು ಉನ್ನತ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದರು. ವಾಸ್ತವಿಕವಾಗಿ ಒಂದು ಕಾಲದಲ್ಲಿ ರಾಜಾರಾಮ್ ಕಾಲೇಜಿನಿಂದ ಹೊರಬಂದವರು ಸರಕಾರಿ ಕೆಲಸಗಳನ್ನು ತೆಗೆದುಕೊಳ್ಳಲು ಅವಕಾಶ ನೀಡಲಾಗಿತ್ತು. ಇದು ಬಹುಮಟ್ಟಿಗೆ ನಿಯಮವೇ ಆಗಿಬಿಟ್ಟಿದ್ದರಿಂದ ಬ್ರಾಹ್ಮಣರಿಗೆ ಬಹಳ ಪ್ರಯೋಜನಕಾರಿಯಾಗಿತ್ತು ಮತ್ತು ಆ ನಿಯಮವನ್ನು ಕಿತ್ತುಹಾಕಲು ಅವರು ಪ್ರಯತ್ನವನ್ನೇ ಮಾಡಲಿಲ್ಲ.

ಎಲ್ಲಾ ವರ್ಗಗಳ ಜನರು ಒಟ್ಟಿಗೆ ಕೆಲಸ ಮಾಡಿದರೆ ಮಾತ್ರ ಒಂದು ಸಂಸ್ಥಾನವನ್ನು ಸರಿಯಾಗಿ ನಿರ್ವಹಿಸಬಹುದೆಂದು ಮಹಾರಾಜರು ಭಾವಿಸಿದ್ದರು. ಆದ್ದರಿಂದ ಅವರು ತಮಗೆ ಸಹಾಯ ಮಾಡಲೆಂದು ಹೊರಗಡೆಯಿಂದ ಶಿಕ್ಷಿತ ಬ್ರಾಹ್ಮಣೇತರರನ್ನು ಕರೆಸಿದರು. ಈ ಜನರು ಸಾಮಾನ್ಯ ಜನರಲ್ಲಿ ಶಿಕ್ಷಣ ಹರಡಲು ಮುನ್ನಡೆಸುವವರು. ಇದರ ನಂತರ ಅವರು 'ವಿಕ್ಟೋರಿಯ ಮರಾಠ ಬೋರ್ಡಿಂಗ್ ಹೌಸ್'

ಎಂಬ ಹೆಸರಿನ ಒಂದು ವಿದ್ಯಾರ್ಥಿ ನಿಲಯವನ್ನ ತೆರೆದರು. ಈ ವಿದ್ಯಾರ್ಥಿ ನಿಲಯ ಎಲ್ಲಾ ಜಾತಿಗಳ ವಿದ್ಯಾರ್ಥಿಗಳನ್ನು ಒಳಗೊಂಡಿತ್ತು. ಎಲ್ಲಾ ಜಾತಿಗಳಲ್ಲಿ ನಾಯಕರನ್ನು ಹೀಗೆ ತಯಾರುಮಾಡಿದ ನಂತರ ಅವರು ತಮ್ಮದೇ ಆದ ಸಮಾಜವನ್ನು ಅಭಿವೃದ್ಧಿಪಡಿಸಲು ಪ್ರೋತ್ಸಾಹ ನೀಡಿದರು.

ಅವರು ಅಸ್ಪೃಶ್ಯರ ಹೀನಸ್ಥಿತಿಯನ್ನು ಚೆನ್ನಾಗಿ ಬಲ್ಲವರಾಗಿದ್ದರು ಮತ್ತು ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಕಂಕಣಬದ್ಧರಾದರು. ಅಸ್ಪೃಶ್ಯರು ಎಲ್ಲಾ ವಿಧಗಳಲ್ಲಿ ಬಹಳ ಹಿಂದುಳಿದಿದ್ದರು. ಅವರನ್ನು ಹಳ್ಳಿಗಳಲ್ಲಿ ವಾಸ ಮಾಡಲು ಬಿಡುತ್ತಿರಲಿಲ್ಲ ಮತ್ತು ಅವರು ಯಾವುದೇ ವ್ಯವಹಾರ ಮಾಡಲು ಅವಕಾಶ ನೀಡುತ್ತಿರಲಿಲ್ಲ. ಇದರ ಪರಿಣಾಮವಾಗಿ ಅವರು ಸದಾ ಬಡವರಾಗಿಯೇ ಉಳಿಯಬೇಕಾಗಿತ್ತು. ತತ್ಪರಿಣಾಮವಾಗಿ ಅವರು ಕೊಳಕು ಮತ್ತು ಅನಕ್ಷರಿಗಳಿಗಾಗಿ ಉಳಿಯಬೇಕಾಗಿತ್ತು. ಶಾಹು ಮಹಾರಾಜರು ಅವರ ಸ್ಥಿತಿಯನ್ನು ಸುಧಾರಿಸುವ ಹೊಣೆಯನ್ನು ತೆಗೆದುಕೊಂಡರು.

ಈ ಜನರಲ್ಲಿ ಉನ್ನತ ಶಿಕ್ಷಣ ಹರಡಲು ಮಹಾರಾಜರು ಸಮಿತಿಗಳ ರಚನೆಯನ್ನು ಪ್ರೋತ್ಸಾಹಿಸಿದರು. ತಮ್ಮ ಮಕ್ಕಳಿಗಾಗಿ ಮಹರರು ಮತ್ತು ಚಂಭಾರರು ನಡೆಸುವ ಶಾಲೆಗಳಿದ್ದವು. ಆದರೆ ದೇಶೀಯ ನಾಲ್ಕನೇ ತರಗತಿಯ ನಂತರ ಅವರು ಶಾಲೆಯನ್ನು ಮುಂದುವರೆಸುತ್ತಿರಲಿಲ್ಲ. ತತ್ಪರಿಣಾಮವಾಗಿ ಅವರು ಉನ್ನತ ತರಗತಿಗಳಲ್ಲಿ ಇಂಗ್ಲೀಷನ್ನು ಗ್ರಹಿಸಲು ಸಾಧ್ಯವಾಗುತ್ತಿರಲಿಲ್ಲ. ಈ ಸಮಸ್ಯೆಯನ್ನ ಪರಿಹರಿಸಲು ವಿಶೇಷ ತರಗತಿಗಳನ್ನು ಪ್ರಾರಂಭಿಸಲಾಯಿತು. ಈ ಶಾಲೆಗೆ ನೇಮಕ ಮಾಡಿದ ಅಧ್ಯಾಪಕರ ಮೊದಲ ತಂಡವು ಉತ್ಸಾಹಭರಿತ ಮತ್ತು ಪ್ರಯತ್ನಶೀಲವಾಗಿತ್ತು. ಈ ಅಧ್ಯಾಪಕರು ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವ ಮೂಲಕ ತಮ್ಮ ಸಮಾಜಕಾರ್ಯ ಪ್ರಾರಂಭಿಸಿದರು. ಅವರಲ್ಲಿ ಶ್ರೀ ಶ್ರೀಪತ್‌ರಾವ್ ಶಿಂಧೆ ಒಬ್ಬರು. ಮುಂದೆ ಅವರು ಪುಣೆಯಲ್ಲಿ 'ವಿಜಯಿಮರಾಠ' ಎಂಬ ಬ್ರಾಹ್ಮಣೇತರರ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಮಾರ್ಗದರ್ಶನದಲ್ಲಿ ತರಬೇತಿ ಪಡೆದು ಬೆಳೆದ ಹಲವು ವಿದ್ಯಾರ್ಥಿಗಳು ಇಂಗ್ಲೀಷಿನಲ್ಲಿ ಲೀಲಾಜಾಲವಾಗಿ ಮಾತನಾಡುತ್ತಿದ್ದರು. ಮತ್ತು ಶಾಲೆಯಲ್ಲಿ ಪ್ರಥಮ ರ್‍ಯಾಂಕ್ ಪಡೆಯುತ್ತಿದ್ದರು. ಸರಿಯಾದ ಶಿಕ್ಷಣದ ತಳಪಾಯವಿಲ್ಲದೆ ಒಳ್ಳೆಯ ಉದ್ಯೋಗ ಪಡೆಯುವುದು ಅಸಾಧ್ಯ.

ಶಾಹು ಮಹಾರಾಜರು ಅಸ್ಪೃಶ್ಯ ಮಕ್ಕಳಿಗೆ ಉದ್ದೇಶಪೂರ್ವಕವಾಗಿ ಧಾರ್ಮಿಕ ಗ್ರಂಥಗಳ ಶಿಕ್ಷಣ ನೀಡಲು ಯೋಜಿಸಿದರು. ಅವರು ಆರ್ಯ ಸಮಾಜದ ಸ್ವಾಮಿಗಳನ್ನು ಈ ವಿಷಯದಲ್ಲಿ ಸಹಾಯ ಮಾಡಲು ಕೋರಿದರು. ಸ್ವಾಮಿಗಳು ತಮ್ಮ ಪದ್ಧತಿಯ ಪ್ರಕಾರ ಈ ಮಕ್ಕಳನ್ನು ಆರ್ಯಧರ್ಮಕ್ಕೆ ಸೇರಿಸಿಕೊಂಡರು ಮತ್ತು ಅವರಿಗೆ ಯಜ್ಞೋಪವೀತ (ಜನಿವಾರ) ಸಮಾರಂಭ ಮಾಡಿದ ನಂತರ ಅವರಿಗೆ ವೇದಗಳನ್ನು ಕಲಿಸತೊಡಗಿದರು. ಅದರ ಪರಿಣಾಮವಾಗಿ ಈ ಮಕ್ಕಳು ಆತ್ಮವಿಶ್ವಾಸವನ್ನು ಪಡೆದರು ಮತ್ತು ತಾವು ಕೆಳಜಾತಿಗೆ ಸೇರಿದವರೆಂಬ ಕೀಳರಿಮೆಯನ್ನು ಮರೆತು ಬೇಗನೆ ಪ್ರಗತಿ ಹೊಂದತೊಡಗಿದರು. ಅವರು ಶಾಲೆಯಲ್ಲಿ ಸರಿಯಾಗಿ ವರ್ತಿಸಿದರು ಮತ್ತು ಅವರನ್ನು ಶಾಲೆಯಲ್ಲಿ ಸಮಾನವಾಗಿ ಉಪಚರಿಸಲಾಯಿತು. ಹೀಗೆ ಕ್ರಮೇಣ ಶಾಲೆಯಲ್ಲಿ ಅಸ್ಪೃಶ್ಯತೆ ಸಂಪೂರ್ಣವಾಗಿ ಹೊರಟುಹೋಯಿತು.

ಶಿಕ್ಷಣವೊಂದೇ ಅಸ್ಪೃಶ್ಯರ ಹಣಕಾಸಿನ ಸ್ಥಿತಿಯನ್ನು ಸುಧಾರಿಸುತ್ತದೆಯೆಂದು ಮಹಾರಾಜರು ನಂಬಿರಲಿಲ್ಲ. ಅವರ ಶಿಕ್ಷಣವನ್ನು ಕಾರ್ಯರೂಪಕ್ಕೆ (ಬಳಸಲು) ತರಲು ಹುದ್ದೆಗಳು ಬೇಕಾಗಿದ್ದವು. ಆದ್ದರಿಂದ ಅವರು

ವಿವಿಧ ಇಲಾಖೆಗಳಲ್ಲಿ ಅವರಿಗೆ ನೇಮಕಗಳನ್ನು ಒದಗಿಸಿಕೊಟ್ಟರು. ಕೆಲವರಿಗೆ ಕುದುರೆ ಲಾಯಗಳಲ್ಲಿ ಕೆಲಸ ನೀಡಲಾಯಿತು ಮತ್ತು ಮುಂದೆ ಅವರನ್ನು ಕೋಚ್‌ಮೆನ್‌ಗಳಾಗಿ ಬಡ್ತಿ ನೀಡಲಾಯಿತು. ಕೆಲವರಿಗೆ ಕಾಡುಪ್ರಾಣಿಗಳಾದ ಚಿರತೆಗಳು, ನಾಯಿಗಳು ಮತ್ತು ಡೇಗೆಗಳನ್ನು ನೋಡಿಕೊಳ್ಳಲು ನೇಮಿಸಿಕೊಳ್ಳಲಾಯಿತು. ಇತರರಿಗೆ ಅಶ್ವಸೇನೆಗೆ ಸೇರಿಸಿಕೊಳ್ಳಲಾಯಿತು. ನಂತರ ಅವರನ್ನು ಸಂದೇಶಕಾರರನ್ನಾಗಿ ಮಾಡಲಾಯಿತು.

ಸರಕಾರದ ನೌಕರರಲ್ಲಿ ನಿಧಾನವಾಗಿ ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡಲಾಯಿತು. ಬುದ್ಧಿವಂತ ವಿದ್ಯಾರ್ಥಿಗಳನ್ನು ವಕೀಲರನ್ನಾಗಿ ತರಬೇತುಗೊಳಿಸಲಾಯಿತು. ಮತ್ತು ಅವರಿಗೆ ಸನದುಗಳನ್ನು ನೀಡಿ ವಕಾಲತ್ತು ನಡೆಸುವುದಕ್ಕೆ ಅನುಮತಿ ನೀಡಲಾಯಿತು. ಅವರು ನ್ಯಾಯಾಂಗಕ್ಕೆ ಸೇರ್ಪಡೆಯಾಗಿದ್ದರಿಂದ ನ್ಯಾಯಾಲಯಗಳು ಸಹ ಅಸ್ಪೃಶ್ಯತೆಯ ಆಚರಣೆಯನ್ನು ಬಿಟ್ಟುಬಿಟ್ಟವು. ಕೆಲವು ಯುವಕರಿಗೆ ಬೇರೆ ಬೇರೆ ಹಳ್ಳಿಗಳಲ್ಲಿ ಸಿಂಪಿಗ ಅಂಗಡಿಗಳನ್ನು ತೆರೆಯಲು ಪ್ರೋತ್ಸಾಹಿಸಲಾಯಿತು. ಹೀಗೆ ಮಡಿವಂತಿಕೆಯ ಮತ್ತು ಸಂಪ್ರದಾಯದ ಕೀಳುಜಾತಿಗಳು ತಮ್ಮ ಶುದ್ಧತೆ(ಮಡಿ)ಯನ್ನು ಕಾಪಾಡಿಕೊಳ್ಳುವ ಸಮಸ್ಯೆಯನ್ನು ಎದುರಿಸಬೇಕಾಯಿತು. ಆದರೆ ಮಹಾರಾಜರು ಈ ರೀತಿಯಲ್ಲಿ ಅವರಲ್ಲಿ ಅಡಗಿದ್ದ ಪ್ರತಿಭೆಯನ್ನು ಕಂಡುಹಿಡಿಯತೊಡಗಿದರು ಮತ್ತು ಅವರಲ್ಲಿ ಆತ್ಮವಿಶ್ವಾಸ ಮತ್ತು ಆತ್ಮಗೌರವ ಮೂಡಿಸಿದರು.

ಅಸ್ಪೃಶ್ಯರಿಗಾಗಿ ಸ್ಥಾಪಿಸಿದ ಮಿಸ್ ಕ್ಲಾರ್ಕ್ ಹಾಸ್ಟೆಲಿನಲ್ಲಿ ಒಂದು ಭವ್ಯ ಸಮಾರಂಭವನ್ನು ಮಹಾರಾಜರು ಒಮ್ಮೆ ವ್ಯವಸ್ಥೆಗೊಳಿಸಿದ್ದರು. ಸಂಸ್ಥಾನದ ರಾಜಕೀಯ ಏಜೆಂಟ್‌ರನ್ನು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಲು ಆಹ್ವಾನಿಸಿದ್ದರು. ಕಾರ್ಯಕ್ರಮವು ಒಂದು ಅದ್ಭುತ ಘಟನೆಯಾಗಿ ನಡೆಯಿತು. ಅಧ್ಯಕ್ಷರನ್ನು ಮಹಾರಾಜರು ನಾಲ್ಕು ಕುದುರೆಗಳ ಸಾರೋಟಿನಲ್ಲಿ ಕಾರ್ಯಕ್ರಮಕ್ಕೆ ಕರೆದುಕೊಂಡು ಬಂದರು. ಅವರನ್ನು ಬರಮಾಡಿಕೊಳ್ಳಲು ವಿದ್ಯಾರ್ಥಿಗಳು ಗೇಟಿನ ಬಳಿ ವಿವಿಧ ಪ್ರಾಣಿಗಳ ಸಮೇತ ನಿಂತಿದ್ದರು. ಎಲ್ಲಾ ವಿದ್ಯಾರ್ಥಿಗಳು ಮಾಂಗ್, ಮಹರ್ ಮತ್ತು ಇತರೆ ಜಾತಿಗಳಿಗೆ ಸೇರಿದ ಅಸ್ಪೃಶ್ಯರಾಗಿದ್ದರು ಮತ್ತು ಅವರೆಲ್ಲರೂ ಸಹ ಇದು ತಮ್ಮ ಕಾರ್ಯಕ್ರಮವೆಂದು ಭಾವಿಸಿದ್ದರು. ಸೂಕ್ತ ಶಿಕ್ಷಣ, ಪ್ರೋತ್ಸಾಹ ಮತ್ತು ಸಮಾನ ಅವಕಾಶಗಳನ್ನು ಈ ದಮನಿತ ಸಮುದಾಯಗಳಿಗೆ ನೀಡಿದರೆ ಅದ್ಭುತಗಳನ್ನು ಮಾಡಬಹುದೆಂದು ಎಲ್ಲಾ ವಿದ್ಯಾರ್ಥಿಗಳು ಮತ್ತು ಇತರರು ಮನವರಿಕೆ ಮಾಡಿಕೊಂಡರು. ಈ ಚಿಂತನೆಯು ಅವರ ಆತ್ಮವಿಶ್ವಾಸವನ್ನು ಮತ್ತಷ್ಟು ಹೆಚ್ಚಿಸಿತು. ಸಾಂಪ್ರದಾಯಿಕ ಸ್ವಾಗತಗೀತೆಗಳ ಬದಲಿಗೆ ವಿದ್ಯಾರ್ಥಿಗಳು ಗಂಭೀರವಾಗಿ ಸ್ಪಷ್ಟ ಪ್ರಭಾವ ಬೀರುವಂತೆ ವೇದಗಳನ್ನು ಪಠಿಸಿದರು.

ಶಾಹುರವರ ಕಾರ್ಯಶೈಲಿಯನ್ನು ಹೊಗಳಲಾಯಿತು. ಅಸ್ಪೃಶ್ಯರ ಕಲ್ಯಾಣಕ್ಕಾಗಿ ನೀಡಿದ ಸಾಕಷ್ಟು ನಿಧಿಗಳ ಅನುದಾನವನ್ನು ಸಾಮಾನ್ಯವಾಗಿ ಸಂಸ್ಥಾನದ ಅಧಿಕಾರಿಗಳಿಗೆ ನೀಡಲಿಲ್ಲ. ಬದಲಿಗೆ ಕಾರ್ಯಕ್ಕೆ ಬದ್ಧರಾಗಿದ್ದ ವ್ಯಕ್ತಿಗಳನ್ನು ಉದ್ದೇಶಪೂರ್ವಕವಾಗಿ ಹುಡುಕಿ ಆಯ್ಕೆ ಮಾಡಿದರು ಮತ್ತು ನಿಧಿಯ ಹಣವನ್ನು ಸೂಕ್ತವಾಗಿ ಬಳಸಿ ಕಲ್ಯಾಣ ಕಾರ್ಯಕ್ರಮದ ಯೋಜನೆಗಳನ್ನು ಜಾರಿಗೊಳಿಸಿದರು. ಅವರು ಅವರಿಗೆ ಹಣಕಾಸಿನ ಬೆಂಬಲ ನೀಡಿದರು ಅಥವಾ ಸಾಂದರ್ಭಿಕವಾಗಿ ಅವರ ಅಗತ್ಯಕ್ಕೆ ಅನುಗುಣವಾಗಿ ಕಟ್ಟಡವನ್ನೇ ದಾನ ಮಾಡಿದರು. ಅದೇ ಸಮಯದಲ್ಲಿ ಹಳ್ಳಿಗಳಲ್ಲಿ ಜಾಗೃತಿಯನ್ನು ಮೂಡಿಸಲು ಮತ್ತು ಈ ಸದುದ್ದೇಶಕ್ಕಾಗಿ ಸಹಾಯ ಮಾಡುವವರನ್ನು ಗುರುತಿಸುವಂತೆ ಅವರಿಂದ ಅದನ್ನು ಸಂಗ್ರಹಿಸಲು ಪ್ರೋತ್ಸಾಹಿಸಿದರು. ಇದು ಯಾವುದೇ ಚಳುವಳಿಗೆ ಬರುವ ಕಾರ್ಯಕರ್ತರಲ್ಲಿ ಹೊಸ ಹುರುಪು–ಜೀವಂತಿಕೆಯನ್ನು ತುಂಬಿ ಅದನ್ನು ಮುಂದಕ್ಕೆ ಕೊಂಡೊಯ್ಯುವಂತೆ ಮಾಡಿತು.

ಮಹಾರಾಜರಿಗೆ ಜನರ ಸ್ವಭಾವವನ್ನು ಅರ್ಥ ಮಾಡಿಕೊಳ್ಳುವ ಗುಣವನ್ನು ಹೊಂದಿದ್ದರು ಯಾರು ಅಸ್ಪೃಶ್ಯರಿಗೆ ನಿಜವಾಗಿ ಏನನ್ನಾದರೂ ಮಾಡಲು ಬಯಸುತ್ತಿದ್ದರೋ ಅಂಥವರನ್ನು ಅಂಥ ಯೋಜನೆಗಳಲ್ಲಿ ನೇಮಕ ಮಾಡಲು ಮಹಾರಾಜರು ನಿರ್ಧರಿಸುತ್ತಿದ್ದರು. ಕೆಲಸಕ್ಕೆ ನೇಮಿಸಿಕೊಳ್ಳುವ ಅಧಿಕಾರಿಗಳಿಗೆ ತಮ್ಮ ದೂರದೃಷ್ಟಿಯನ್ನು ನೆರವೇರಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ.

ವಾಸ್ತವಿಕವಾಗಿ ಪ್ರತಿಯೊಬ್ಬನೂ ಒಂದಲ್ಲ ಒಂದು ಮಾಡುವುದಕ್ಕೆ ಸಮರ್ಥನು. ಅವನ ಸಾಮರ್ಥ್ಯವನ್ನು ಅರ್ಥಮಾಡಿಕೊಂಡು ಅದರ ಪ್ರಕಾರ ಕೆಲಸ ನೀಡುವುದು ಬಹು ಮುಖ್ಯವಾದ ಹೊಣೆ. ಶಾಹು ಮಹಾರಾಜರು ತಾವು ತೆಗೆದುಕೊಳ್ಳುವ ಕಾರ್ಯಗಳು ಸಫಲವಾಗುವಂತಹ ಪರಿಪೂರ್ಣವಾದ ವ್ಯೂಹರಚನೆಗಳನ್ನು ಹೊಂದಿದ್ದರು. ಅವರು ತಮ್ಮ ಚಳುವಳಿಗಳಲ್ಲಿ ಎಲ್ಲ ಆಸಕ್ತ ಸ್ವಯಂಸೇವಕರನ್ನು ಸೇರಿಸಿಕೊಂಡು ಹಣ ಪೋಲು ಮಾಡದೆ ಅಭಿವೃದ್ಧಿಯನ್ನು ಖಾತರಿಪಡಿಸುತ್ತಿದ್ದರು. ಅವರು ಅಸ್ಪೃಶ್ಯರ ಶಕ್ತಿ–ಸಾಮರ್ಥ್ಯಗಳನ್ನು ಬೆಳೆಸಿದರು, ಅವರಿಗೆ ಪ್ರತಿಯೊಂದು ಕಡೆಯಲ್ಲೂ ಪ್ರವೇಶ ನೀಡಿದರು ಮತ್ತು ಅವರಲ್ಲಿ ಆತ್ಮವಿಶ್ವಾಸವನ್ನು ಬೆಳೆಸಿದರು; ಅವರು ಹೀಗೆ ಕ್ರಮಬದ್ಧವಾಗಿ ಮತ್ತು ಪರಿಶ್ರಮದಿಂದ ಅಸ್ಪೃಶ್ಯರ ಏಳಿಗೆಗಾಗಿ ಕೆಲಸ ಮಾಡಿದರು. ಅಪಾರವಾದ ಹಣ ಖರ್ಚು ಮಾಡಿದರೂ ಈ ಕ್ಷೇತ್ರದಲ್ಲಿ ಈ ಮಟ್ಟದ ಸಫಲತೆಯನ್ನು ಎಲ್ಲಿಯೂ ಸಾಧಿಸಲು ಸಾಧ್ಯವಾಗಿಲ್ಲ.

ಸಕಾರಣಕ್ಕಾಗಿ ಹೋರಾಟವನ್ನು ಮನೆಯಿಂದಲೇ ಪ್ರಾರಂಭಿಸಬೇಕೆಂಬ ಮಾತಿನಲ್ಲಿ ಮಹಾರಾಜರು ನಂಬಿಕೆಯಿಟ್ಟಿದ್ದರು. ಜನರಲ್ಲಿ ಪ್ರಜ್ಞೆಯನ್ನು ಮೂಡಿಸಿ, ತದನಂತರ ಜನರು ಸ್ವಯಂಪ್ರೇರಿತರಾಗಿ ಸದುದ್ದೇಶದ ಕಾರ್ಯಕ್ಕೆ ತೊಡಗಿಸುವುದು ಮಹಾರಾಜರ ಕಾರ್ಯವೈಖರಿಯಾಗಿತ್ತು. ಅವರ ಮಹಾರಾಣಿ ಲಕ್ಷ್ಮಿಬಾಯಿ ಸಾಹೇಬ, ಅವರ ಮಗಳು ಅಕ್ಕಸಾಹೇಬ ಮತ್ತು ಅವರ ಮಗ ರಾಜಾರಾಮ್ ಛತ್ರಪತಿ– ಎಲ್ಲರೂ ಅಸ್ಪೃಶ್ಯರ ಏಳಿಗೆಗಾಗಿ ತುಂಬಾ ಆಸಕ್ತಿಯನ್ನು ಹೊಂದಿದ್ದರು. ಈ ಆಸಕ್ತಿಯನ್ನು ಮಹಾರಾಜರು ಸ್ವತಃ ನಿದರ್ಶನಗಳ ವರ್ತನೆಗಳ ಮೂಲಕ ಬೆಳೆಸಿದ್ದರು. ಅವರ ಅಪರೂಪವಾಗಿ ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಬೋಧಿಸುತ್ತಾರೆ ಅಥವಾ ಪ್ರತಿಪಾದಿಸುತ್ತಾರೆ. ಆದರೆ ಅವರ ವರ್ತನೆಯು ಒಬ್ಬ ಮಡಿವಂತ ಬ್ರಾಹ್ಮಣನು ತನ್ನ ತಪ್ಪನ್ನು ಮನವರಿಕೆ ಮಾಡಿಕೊಳ್ಳುವಂತೆ ತಮ್ಮ ನಿದರ್ಶನವನ್ನು ಹಾಕಿಕೊಡುವರು. ಅವರು ನಿಯತವಾಗಿ ಮತ್ತು ಕ್ರಮಬದ್ಧವಾದ ಯೋಜನೆಯಿಂದ ಅಸ್ಪೃಶ್ಯತೆಯ ನಿವಾರಣೆಯನ್ನು ಮಾಡಿದರು. ಅವರು ಅಸ್ಪೃಶ್ಯತೆಯನ್ನು ಬಹುಮಟ್ಟಿಗೆ ನಿವಾರಣೆಯಾದ ಮೇಲೆ ಅವರು ಅದರ ವಿರುದ್ಧ ಕಾನೂನನ್ನು ಪಾಸು ಮಾಡಿದರು. ಹೀಗಾಗಿ ಅದರ ವಿರುದ್ಧ ಪ್ರತಿಭಟನೆಗಳಿರಲಿಲ್ಲ. ಏಕೆಂದರೆ ಅಷ್ಟೊತ್ತಿಗೆ ಜನರು ಅದರ ಬಗ್ಗೆ ಒಗ್ಗಿಕೊಂಡಿದ್ದರು.

ಶಾಹು ಮಹಾರಾಜರು ಕೈಗೊಂಡ ಹಲವಾರು ಮಿಷನ್ನು(ಹೆಗ್ಗುರಿ)ಗಳಲ್ಲಿ ಅಸ್ಪೃಶ್ಯತೆಯ ನಿವಾರಣೆಯೂ ಒಂದಾಗಿತ್ತು ಮತ್ತು ಅವರು ಹೇಗೆ ಇದನ್ನು ನಿವಾರಿಸಲು ಈ ಉದ್ದೇಶಕ್ಕಾಗಿಯೇ ಸಮರ್ಪಿಸಿಕೊಂಡ ಜನರನ್ನು ಹೇಗೆ ತೊಡಗಿಸಿದರು ಎಂಬುದನ್ನು ಈಗಾಗಲೇ ಚರ್ಚಿಸಿದ್ದೇವೆ. ಅವರು ಅದೇ ತರಹೆಯ ತಂತ್ರಗಳನ್ನು ಇತರ ಕ್ಷೇತ್ರಗಳಲ್ಲೂ ಕೂಡ ಬಳಸಿದರು.

ಮಹಾರಾಜರನ್ನು ಸಂದರ್ಶಿಸುವುದಕ್ಕೆ ಯಾರಿಗೂ ಯಾವ ಅಡ್ಡಿಯೂ ಇರಲಿಲ್ಲ; ವಿಶೇಷವಾಗಿ ಹೊರಗಡೆಯಿಂದ ಬರುತ್ತಿದ್ದ ಗಣ್ಯವ್ಯಕ್ತಿಗಳು ಸುಲಭವಾಗಿ ಅವರನ್ನು ಭೇಟಿ ಮಾಡುತ್ತಿದ್ದರು. ಮಹಾರಾಜರು

ಅಂತಹ ಜನರನ್ನು ಭೇಟಿ ಮಾಡಲು ಇಷ್ಟಪಡುತ್ತಿದ್ದರು ಮತ್ತು ಅವರ ಜೊತೆಯಲ್ಲಿ ದೀರ್ಘಸಮಾಲೋಚನೆ ಮಾಡುತ್ತಿದ್ದರು. ಹೆಚ್ಚು ಸಮಯ ತೆಗೆದುಕೊಳ್ಳದೆ ಅವರು ವ್ಯಕ್ತಿಯನ್ನು ನಿರ್ಣಯಿಸುತ್ತಿದ್ದರು, ಅವರ ಇಷ್ಟಾನಿಷ್ಟಗಳನ್ನು ಅರ್ಥಮಾಡಿಕೊಳ್ಳುತ್ತಿದ್ದರು ಮತ್ತು ಅವರ ಬುದ್ಧಿಮತ್ತೆ ಮತ್ತು ಶಕ್ತಿಸಾಮರ್ಥ್ಯಗಳನ್ನು ರಚನಾತ್ಮಕ ಕೆಲಸಗಳಿಗೆ ತೊಡಗಿಸುತ್ತಿದ್ದರು. ಉದಾಹರಣೆಗೆ ಶ್ರೀ ಮಾಣಿಕ್‌ಚಂದ್ ಅವರು ಜೈನರ ವಿದ್ಯಾರ್ಥಿ ನಿಲಯ ಕಟ್ಟಿದ್ದು. ಹಾಗೆಯೇ ಅವರು ನಾಯಕರ ಮತ್ತು ಸ್ವಯಂಸೇವಕರನ್ನು ವಿವಿಧ ಜಾತಿಗಳಿಂದ ತಯಾರು ಮಾಡಿದರು ಮತ್ತು ಅವರು ತಮ್ಮ ಸಮುದಾಯಗಳಿಗೆ ಸಂಘಟನೆಗಳನ್ನು ಪ್ರಾರಂಭಿಸುವುದಕ್ಕೆ ಪ್ರೋತ್ಸಾಹಿಸಿದರು. ಅವರು ಸಂಘಟನೆ ಮತ್ತು ಚಳುವಳಿಗಳಿಗೆ ಅವಶ್ಯಕತೆಯಿದ್ದಾಗ ನಿಧಿಗಳನ್ನು ದಾನ ಮಾಡುವ ಮೂಲಕ ಅವುಗಳು ಸ್ವ–ನಿರ್ಭರವಾಗುವಂತೆ (ಸ್ವಾವಲಂಬಿ) ಅವುಗಳನ್ನು ಪ್ರೋತ್ಸಾಹಿಸುತ್ತಿದ್ದರು.

ಮಹಾರಾಜರು ನಾಯಕತ್ವದ ಗುಣಗಳನ್ನು ಹೊಂದಿದ್ದ ಜನರನ್ನು ಗುರುತಿಸಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಅವರು ತಮ್ಮದೇ ಆದ ಓಟದಲ್ಲಿ ಆಂದೋಲನ ಮತ್ತು ಸಂಸ್ಥೆಗಳನ್ನು ನಡೆಸುತ್ತಿದ್ದರು. ಅವರು ಚಳುವಳಿಗಳು ಮತ್ತು ಸಂಸ್ಥೆಗಳಾದ ದಕ್ಷಿಣ ಮಹಾರಾಷ್ಟ್ರ ಜೈನ ಪರಿಷತ್, ಮರಾಠ ಶಿಕ್ಷಣ ಪರಿಷತ್, ಸತ್ಯಶೋಧಕ ಸಮಾಜ ಮತ್ತು ಬ್ರಾಹ್ಮಣೇತರರ ಚಳುವಳಿ ಮೊದಲಾದವುಗಳಿಗೆ ಆಡಳಿತ ವ್ಯವಸ್ಥೆಯ ಪರಿಣಾಮಕಾರಿ ಶೈಲಿಯನ್ನು ಅನ್ವಯಿಸುತ್ತಿದ್ದರು. ಇದು ಅವುಗಳು ಪರಿಣಾಮಕಾರಿಯಾಗಿ ಮತ್ತು ಬಹಳ ಕಾಲದವರೆಗೆ ಕೆಲಸ ಮಾಡುವಂತೆ ಮಾಡುತ್ತಿತ್ತು. ಅವರು ಈ ಆಂದೋಲನಗಳು ಬೆಳೆಯಬೇಕು ಮತ್ತು ತಮ್ಮ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಬೇಕು ಮತ್ತು ತಮ್ಮ ತಮ್ಮ ಉದ್ದೇಶಗಳ ಸಾಧನೆಗೆ ಹೆಚ್ಚು ಕೆಲಸ ಮಾಡಬೇಕೆಂದು ನಿರೀಕ್ಷಿಸಿದ್ದರು. ಹೀಗೆ ಅವರು ಸುಪರಿಚಿತ ಮಹಾ ಬುದ್ಧಿವಂತ ಸಂಘಟಕರಾದರು ಮತ್ತು ಅವರ ಕೀರ್ತಿ ಭಾರತದಲ್ಲೆಲ್ಲ ಮತ್ತು ಬ್ರಿಟಿಷ್ ವಲಯದಲ್ಲಿಯೂ ಹರಡಿತು.

ಶಾಹು ಛತ್ರಪತಿಯವರು ಒಬ್ಬ ಒಳ್ಳೆಯ ತತ್ವನಿಷ್ಠ ಮನುಷ್ಯರಾಗಿದ್ದರು. ಅವರ ಗುರಿಯು ಇಡೀ ಮಹಾರಾಷ್ಟ್ರದ ಪ್ರಗತಿಯನ್ನು ಸಾಧಿಸುವುದು. ಹಿಂದುಳಿದ ವರ್ಗಗಳ ಬಹುಜನರು ಅಭಿವೃದ್ಧಿಯಾಗದ ಹೊರತು ಒಂದು ರಾಷ್ಟ್ರದ ಪ್ರಗತಿ ಸಾಧ್ಯವಿಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ಇಡೀ ಮಾನವ ಜನಾಂಗ ಒಂದು, ಅವರೆಲ್ಲರೂ ದೇವರ ಮಕ್ಕಳೆಂಬುದು ಅವರ ದೃಢ ನಿಲುವಾಗಿತ್ತು. ಆದ್ದರಿಂದ ಅವರು ಶಿಕ್ಷಣವನ್ನು ಪ್ರೋತ್ಸಾಹಿಸಿದರು ಮತ್ತು ತಮ್ಮ ಆದರ್ಶವನ್ನು ಬೆಳೆಸುವ ಸಲುವಾಗಿ ಅವರು ಸತ್ಯಶೋಧಕ ಸಮಾಜದ ಸಿದ್ಧಾಂತವನ್ನು ಪ್ರಚಾರ ಮಾಡಿದರು. ಸಂಕುಚಿತ ಮನೋಭಾವದ ಯಾಚಕರು (ಬ್ರಾಹ್ಮಣ) ಅವರನ್ನು ಬ್ರಾಹ್ಮಣವಿರೋಧಿಯೆಂದು ಪರಿಗಣಿಸಿದರು ಮತ್ತು ಅವರನ್ನ ನಾನಾರೀತಿಗಳಲ್ಲಿ ನಿಂದಿಸತೊಡಗಿದರು. ಬಹಳಷ್ಟು ಬ್ರಾಹ್ಮಣ ಪತ್ರಿಕೆಗಳು ಅವರನ್ನು (ನಿಂದಕರನ್ನು) ಬೆಂಬಲಿಸತೊಡಗಿದವು. ಈ ದಾಳಿಗಳನ್ನು ಎದುರಿಸಲು ಅವರು ಬ್ರಾಹ್ಮಣೇತರ ಯುವಕರಿಗೆ ಕೆಲವು ಪತ್ರಿಕೆಗಳನ್ನು ಪ್ರಾರಂಭಿಸಲು ಪ್ರೋತ್ಸಾಹ ನೀಡಿದರು ಮತ್ತು ಹೀಗೆ ಅವರಿಗೆ ಉತ್ಸಾಹಭರಿತ ಹೋರಾಟ ನಡೆಸಲು ಕಲಿಸಿದರು.

ಅಂತಿಮವಾಗಿ ಇದು ಮಹಾರಾಜರ ರಾಜಕಾರಣವಾಗಿತ್ತು. ಈ ರಾಜಕಾರಣವು ರಾಷ್ಟ್ರಕ್ಕೆ ಪ್ರಯೋಜನಕಾರಿಯೆಂದು ಸಾಧಿತವಾಗುವುದು. ಪುರೋಹಿತ ವರ್ಗ ಮತ್ತು ಧಾರ್ಮಿಕ ಮಡಿವಂತಿಕೆ (ಕರ್ಮತತ್ವ) ಬಿತ್ತಿದ ಅಸಮಾನತೆಯ ಬೀಜ ಈಗ ಬೆಳೆದು ದೊಡ್ಡ ಮರವಾಗಿ ನಿಂತಿದೆ. ಭಾರತದ ಎಲ್ಲಾ ಪ್ರಗತಿಪರ ಚಿಂತಕರು ಈ ಪುರೋಹಿತವರ್ಗವನ್ನು ಸಂಪೂರ್ಣವಾಗಿ ಸೋಲಿಸದ ಹೊರತು ಸಮಾನತೆ ನೆಲೆಗೊಳ್ಳಲಾರದೆಂದು ಮನವರಿಕೆ ಮಾಡಿಕೊಂಡಿದ್ದಾರೆ. ನಾವು ಈಗ ಎಲ್ಲಾಕಡೆಯಲ್ಲೂ "ಪುರೋಹಿತವರ್ಗಕ್ಕೆ

ಧಿಕ್ಕಾರ'' ಎಂಬ ಕೂಗು ಕೇಳಿಬರುತ್ತಿದೆ. ಬ್ರಾಹ್ಮಣೇತರರು, ಅಸ್ಪೃಶ್ಯರು ಮತ್ತು ಮುಸ್ಲಿಮರು ಎಲ್ಲರೂ ಸಂಸ್ಥಾನದ ಆಡಳಿತದಲ್ಲಿ ಸಮಾನ ಅವಕಾಶವನ್ನು ಹೊಂದಬೇಕೆಂಬುದು ಮಹಾರಾಜರ ತತ್ವವಾಗಿತ್ತು. ಈಗ ಅದನ್ನು ಸಾರ್ವತ್ರಿಕವಾಗಿ ಒಪ್ಪಲಾಗಿದೆ. ಈಗ ಜನರು ಅವರ ನಿಜವಾದ ಯೋಗ್ಯತೆಯನ್ನು ಮನವರಿಕೆ ಮಾಡಿಕೊಂಡಿದ್ದಾರೆ ಮತ್ತು ಅವರ ಉದ್ದೇಶಗಳ ಬಗೆಗಿನ ತಪ್ಪು ತಿಳುವಳಿಕೆ ಅಳಿಸಿಹೋಗುತ್ತಿದೆ. ದಿನಗಳನ್ನು ಕಳೆದಂತೆ ಮತ್ತು ಜನರು ಅವರ ಮೂಲ ಉದ್ದೇಶ ಮತ್ತು ಕಾಣಿಕೆಗಳನ್ನು ಸರಿಯಾಗಿ ತಿಳಿದುಕೊಳ್ಳುವರು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಅವರು ಅವರ ಚಿಂತನೆಗಳಿಗೆ ಬೆಲೆಕೊಡುವರು. ಅವರು ನಮಗೆ ತಮ್ಮ ನಿದರ್ಶನವೇ ಸಮಾಜಕ್ಕೆ ಮತ್ತು ರಾಷ್ಟ್ರಕ್ಕೆ ಸಲ್ಲಿಸುವ ಸೇವೆಯ ಅರ್ಥವೆಂದು ನಮಗೆ ಪಾಠ ಕಲಿಸಿದ್ದಾರೆ. ಅವರ ಮರಣದ ವಾರ್ಷಿಕ ಸಮಾರಂಭದಲ್ಲಿ ಅವರ ಬೋಧನೆಗಳನ್ನು ನಮ್ಮ ಹೃದಯಪಟಲದಲ್ಲಿ ಕೆತ್ತಿಕೊಂಡರೆ, ನಾವು ಅವರಿಗೆ ಸಲ್ಲಿಸುವ ಗೌರವದ ಕಾಣಿಕೆಯಾಗುತ್ತದೆ.

*(ಭಾಸ್ಕರರಾವ್ ಜಾಧವ್ ಅವರು ಶಾಹು ಮಹಾರಾಜರ ಮರಣದ ೧೩ನೇ ವಾರ್ಷಿಕ ಸಂದರ್ಭದಲ್ಲಿ ಬರೆದ ಲೇಖನ. ಇದು ೧೯೩೫ರ 'ಜ್ಞಾನಮಂದಿರ' ದಲ್ಲಿ ಪ್ರಕಟವಾಗಿದೆ.)*

---

೫

# ರಾಜರ್ಷಿ ಶಾಹು ಮತ್ತು ಅವರ ವಿರೋಧಿಗಳ ಅಬ್ಬರ

– ಡಾ. ಬಾಬಾಸಾಹೇಬ ಅಂಬೇಡ್ಕರ್

*"ಕಾಯ್‌ಕರು ಆತಾ ಧರುಣೆಯ ಭೀಡ್,*
*ನಿಃಶಂಕ ಹೆ ತೊಂಡ್ ವಜವಿಲೆ;*
*ನವ್‌ಹೆಜಗೆ ಕೋಣೆ ಮೂಕಿಯಾಂಚ ಜನ ಸಾರ್ಥಕ್ ಲಜುನ್ ನವ್‌ಹೆ ಹೋತ್"*

*–ಸಂತ ತುಕಾರಾಮ*

*(ಮೌನವಾಗಿರುವುದರಿಂದ ಏನು ಪ್ರಯೋಜನ?*
*ಈಗ ನಾನು ನಾಚಿಕೆಯಿಲ್ಲದೆ ಕೂಗಬೇಕು,*
*ಅರ್ಥವಾಯಿತೇ, ವಿಶ್ವದಲ್ಲಿ ಯಾರೂ ನಿಲ್ಲುವುದಿಲ್ಲ ಮೂಕರ ಪರ.*
*ನಮ್ರತೆ ನನ್ನ ಹಿತಕ್ಕೆ ಪ್ರಯೋಜನಕಾರಿಯಲ್ಲ)*

ನಮ್ಮ ರಾಜಕೀಯ ಹಕ್ಕುಗಳ ಸ್ವಾತಂತ್ರ್ಯವನ್ನು ಕಬಳಿಸುವುದಕ್ಕೆ ಹೊಂಚುಹಾಕುತ್ತಿದ್ದ ಕುಯುಕ್ತಿಗಳ ಆಷಾಡಭೂತಿತನಗಳನ್ನು ಕಳೆದ ಸಂಚಿಕೆಯಲ್ಲಿ ಪರಿಚಯ ಮಾಡಿಕೊಡಲಾಗಿದೆ. ವಿಷಾದನೀಯವಾಗಿ, ನಾವು ಒಬ್ಬ ವ್ಯಕ್ತಿಯನ್ನು–ಅಭಿಪ್ರಾಯವನ್ನು–ಈ ಸಂಚಿಕೆಯಲ್ಲಿ ಪರಿಚಯ ಮಾಡಿಕೊಡುತ್ತಿದ್ದೇವೆ. ಈ ಇಪ್ಪತ್ತನೇ ಶತಮಾನದಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಆಗಮನದಿಂದ ನಮಗೆ ನೀಡಿರುವ ಕೆಲವೇ ಕೆಲವು ಅನುಕೂಲತೆಗಳ ಬಗ್ಗೆ ಕೆಲವು ಕುಯುಕ್ತಿಯ ಕಾಗೆಗಳು (ವ್ಯಕ್ತಿಗಳು) ಅನವಶ್ಯಕವಾದ ಗದ್ದಲಗಳನ್ನುಂಟು ಮಾಡಿದರೆಂಬ ಬಗ್ಗೆ ನಾವು ಸ್ಪಷ್ಟಪಡಿಸಬೇಕಾಗಿದೆ. ದಿನನಿತ್ಯದ ಜೀವನದಲ್ಲಿ ನಾಲ್ಕು ಮಕ್ಕಳ ತಾಯಿ ಕೆಲವು ಸಿಹಿತಿಂಡಿಗಳನ್ನು ತನ್ನ ಮಕ್ಕಳಿಗೆ ನೀಡುತ್ತಾಳೆ, ನಾಲ್ಕೂ ಮಕ್ಕಳು ಒಂದೇ ವಯಸ್ಸಿನ ಮತ್ತು ಬಲಶಾಲಿಗಳಾಗಿರುವುದಿಲ್ಲ. ಬಲಿಷ್ಠ ಮತ್ತು ದೊಡ್ಡ ಮಕ್ಕಳು ಎಲ್ಲಾ ಸಿಹಿತಿಂಡಿಗಳನ್ನು ತಿಂದುಬಿಡುತ್ತಾರೆ, ಕಿರಿಯಮಕ್ಕಳು ಸಿಹಿ ಅಥವಾ ಮತ್ಯಾವುದೋ ಅಸ್ತಿತ್ವದಲ್ಲಿದೆಯೆಂದು ಅರ್ಥಮಾಡಿಕೊಳ್ಳುವುದಕ್ಕೆ ಅವರು ಬಹಳ ಚಿಕ್ಕವರು ಮತ್ತು ಬಹಳ ಮುಗ್ಧರು. ಆದರೆ ಈ ಮಕ್ಕಳು ಬೆಳೆದಂತೆ ಮತ್ತು ತೆವಳುವುದಕ್ಕೆ ಪ್ರಾರಂಭಿಸಿದಾಗ ಮತ್ತು ತಾಯಿ ಯಾವುದೇ ಸಿಹಿತಿಂಡಿ ನೀಡಿದಾಗ ಕಿರಿಯ (ಎಳೆಯ) ಮಗು ತಮ್ಮ ಹಿರಿಯ ಸಹೋದರರನ್ನು ಅನುಕರಿಸಲು ಪ್ರಯತ್ನಿಸುತ್ತದೆ. ಅವು ಸಹ ಅದಕ್ಕಾಗಿ ಓಡುತ್ತವೆ. ಎಲ್ಲವೂ ತಮಗೇ ಬೇಕೆಂಬ ಚಾಳಿಗೆ ಬಿದ್ದಿರುವ ಹಿರಿಯ ಮಕ್ಕಳು ತಮ್ಮ ಕಿರಿಯರಿಗೆ ಸಮಾನ ಪಾಲು ಕೊಡಲು ಇಷ್ಟಪಡುವುದಿಲ್ಲ. ಕಿರಿಯ ಸಹೋದರರು ತಮ್ಮ ಸಮಪಾಲು ಮತ್ತು ನ್ಯಾಯಬದ್ಧ ಪಾಲು ಪಡೆಯಲು ಹೋರಾಡಲು ಪ್ರಯತ್ನಿಸುತ್ತವೆ. ಈ ಹಿರಿಯ ಸಹೋದರರು ಪಾಲನ್ನು ನೀಡಲು ನಿರಾಕರಿಸುವುದು ಮಾತ್ರವಲ್ಲದೆ ಈ ಬಗ್ಗೆ ಕೂಗಾಟ ರಂಪಾಟ ಎಬ್ಬಿಸುತ್ತಾರೆ. ಯಾವ ತಾಯಿಯೇ ಆಗಲಿ ಈ ವ್ಯರ್ಥವಾದ

ಕೂಗಾಟವನ್ನು, ಗದ್ದಲವನ್ನು ಕೇಳುತ್ತಾಳೆಯೇ ಮತ್ತು ತನ್ನ ಕಿರಿಯ ಮಕ್ಕಳನ್ನು ಬಿಟ್ಟುಬಿಡಲು ಉದಾಸೀನ ಮಾಡುತ್ತಾಳೆಯೇ? ಇಲ್ಲ, ಎಂದಿಗೂ ಇಲ್ಲ.

ಧಾರ್ಮಿಕ ಮತ್ತು ಸಾಮಾಜಿಕ ಕೆನೆಯಿಂದ ಕೊಬ್ಬಿದ ಒಂದು ನಿರ್ದಿಷ್ಟ ಸಮಾಜವು ಸಾಮಾಜಿಕವಾಗಿ ಹಿಂದುಳಿದ ಮತ್ತು ಮುಗ್ಧ ಅಥವಾ ಮಿಗಿಲಾಗಿ ಉದ್ದೇಶಪೂರ್ವಕವಾಗಿ ಮೌಢ್ಯಕ್ಕೊಳಪಡಿಸಿದ ವರ್ಗಗಳು ತಾವು ಮುಂದುವರೆಯಲು ಪ್ರಯತ್ನಿಸಿದಾಗ ಏಕೆ ಈ ಕೂಗಾಟ, ರಂಪಾಟ? ಬಹುಶಃ ಹೀಗಿರಬಹುದು, ಒಂದು ಬಂಡೆಯ ಕೆಳಗೆ ಮತ್ತೊಂದು ಕಲ್ಲು ಇರಕೂಡದು, ಇದ್ದರೆ ಅದು ತನ್ನ ಆಧಾರ ಕಳೆದುಕೊಂಡು ಜಾರಬಹುದು. ಆ ಬಂಡೆಯು ತನ್ನ ಕೆಳಗೆ ತನ್ನ ತೂಕವನ್ನು ಎಂದೆಂದಿಗೂ ಕೊಂಡೊಯ್ಯಬೇಕು. ಈ ಭೂದೇವತೆಗಳು (ಬ್ರಾಹ್ಮಣರು) ಈ ವಿಚಾರವನ್ನೇ ಹಾಗೆಯೇ ಬೆಳೆಸುತ್ತಾರೆ. ಬೇರೆ ಸಮಾಜಕ್ಕೂ ಸಹ ಆತ್ಮವಿದೆಯೆಂದು ಮತ್ತು ಅವರು ಸಹ ದೇವರ ಮಕ್ಕಳೆಂದು ಅವರೇಕೆ ಅರ್ಥಮಾಡಿಕೊಳ್ಳುವುದಿಲ್ಲ?

ಈ ವಂಚನೆಯ ಪ್ರಾಣಿಗಳು ಪ್ರತಿಯೊಂದು ಜೀವಿಯಲ್ಲೂ ದೇವರಿದ್ದಾನೆಂಬ ಸಂಗತಿಯನ್ನು ಮರೆತುಬಿಡುತ್ತವೆ ಮತ್ತು ಅವರು ಅವನ (ದೇವರ) ತಲೆಯ ಮೇಲೆ ಕಾಲಿಡುವುದಕ್ಕೂ ಹೇಸುವುದಿಲ್ಲ. ಆದರೆ ಎಲ್ಲಿಯವರೆಗೆ ಈ ವಿರೋಧಿವರ್ತನೆಯನ್ನು ಮುಂದುವರೆಸುವರು? ಬಹುಶಃ ಬೇರೆಯವರು ದೀರ್ಘನಿದ್ದೆಯಲ್ಲಿರುವವರೆಗೆ. ಪ್ರಸಿದ್ಧ ವಿಜ್ಞಾನಿ ಡಾ. ಸರ್ ಜಗದೀಶ ಚಂದ್ರಬೋಸ್ ಅವರು ಮಾನವಜೀವಿಗಳಂತೆಯೇ ಜೀವಂತ ಗಿಡಗಳಲ್ಲಿ ಆತ್ಮ ಮತ್ತು ಭಾವನೆಗಳಿವೆಯೆಂದು ವೈಜ್ಞಾನಿಕವಾಗಿ ಸಾಧಿಸಿ ತೋರಿಸಿರುವುದರಿಂದ ಇಡೀ ಜಗತ್ತೇ ಆಶ್ಚರ್ಯಪಟ್ಟಿದೆ. ಎಲ್ಲ ವರ್ಣಗಳಲ್ಲಿ ಉತ್ತಮ ವರ್ಣಕ್ಕೆ ಸೇರಿದ ಈ ಬ್ರಾಹ್ಮಣರು ಅಸ್ಪೃಶ್ಯರಾದ ನಮ್ಮನ್ನು ಬೆಕ್ಕು ಮತ್ತು ನಾಯಿಗಳಿಗಿಂತ ಕಡೆಯಾಗಿ ಪರಿಗಣಿಸಿದ್ದಾರೆಯೇ ಹೊರತು, ಅವರಲ್ಲಿ ಯಾರೂ ಸಹ ನಮ್ಮಲ್ಲಿ ಭಾವನೆಗಳು, ಮನೋಭಾವನೆಗಳಿವೆಯೆಂದು ಪರಿಗಣಿಸಿಲ್ಲ. ಅಥವಾ ಅವರು ನಾವು ಸಹ ಮನುಷ್ಯರೆಂದು ಪರಿಗಣಿಸಿದ್ದರೆ, ಅದನ್ನು ಜಗತ್ತಿಗೆ ಸಾರಿ ಹೇಳಲು ಅವರಲ್ಲಿ ಧೈರ್ಯವಿಲ್ಲ. ಅಂತಹ ಧೈರ್ಯವನ್ನು ಪ್ರದರ್ಶಿಸುವುದಕ್ಕೆ ನೈತಿಕವಾಗಿ ಪರಿಶುದ್ಧವಾದ ಎಂಟೆದೆಯ ಮನುಷ್ಯನಿಗೆ ಮಾತ್ರ ಸಾಧ್ಯ. ಅಂತಹ ಮನುಷ್ಯ ಕ್ಷತ್ರಿಯನಾಗಿರಲು ಸಾಧ್ಯ. ಅದರ ಪ್ರಕಾರ ಕ್ಷತ್ರಿಯವಂಶದ ಛತ್ರಪತಿ ಶಾಹು ಮಹಾರಾಜರು ನಿಜವಾದ ವಾರಸುದಾರರಾದ ಅವರು, ತಮ್ಮ ಆತ್ಮಜ್ಯೋತಿಯ ಬೆಳಕಿನ ಕುಡಿಯಿಂದ ಶತಶತಮಾನಗಳಿಂದ ಯಥಾಕಥಿತ ಮೇಲುಜಾತಿಗಳಾದ ಬ್ರಾಹ್ಮಣರು ಜೀವರಹಿತರಾಗಿ ಮೂಲೆಗುಂಪಾಗಿ ಮಾಡಿದ್ದ ಅಸ್ಪೃಶ್ಯರಲ್ಲಿ ಆತ್ಮಗೌರವವೆಂಬ ಜ್ಯೋತಿಯನ್ನ ಬೆಳಗಿಸಿದರು. ಆದರೆ ಎಲ್ಲಾ ಜೀವಂತ ಪ್ರಾಣಿಗಳು ಒಂದೇ ಆತ್ಮದಿಂದ ಉಗಮಗೊಂಡಿವೆಯೆಂದು ಬೋಧನೆಮಾಡುತ್ತಿರುವ ನಮ್ಮ ಬ್ರಾಹ್ಮಣ ಸಹೋದರರು ನಮ್ಮ ವಿಮೋಚನೆಯ ಆಂದೋಲನವನ್ನು ದಮನ ಮಾಡುತ್ತಿದ್ದಾರೆ. ಅದೇ ಉದ್ದೇಶದಿಂದ ಮಹಾರಾಜರು ಹೊರಡಿಸಿದ ಸುಗ್ರೀವಾಜ್ಞೆಗಳನ್ನು ಮತ್ತು ಅವರ ರಾಜಕೀಯ ಧೋರಣೆಗಳನ್ನು ಬ್ರಾಹ್ಮಣಸೇನೆ (ಬ್ರಿಗೇಡ್) ಖಡಾಖಂಡಿತವಾಗಿ ಖಂಡಿಸುತ್ತವೆ. ಬ್ರಾಹ್ಮಣೇತರರಲ್ಲಿನ ಮತ್ತು ಬಹಿಷ್ಕೃತ ಜನರಲ್ಲಿನ ಚಿಂತನಕಾರರು ಅಸಹ್ಯಪಡುತ್ತಿದ್ದಾರೆ. ಆದ್ದರಿಂದ ವಿಷವನ್ನು ಕಾರುವ ಕ್ಷುಲ್ಲಕ ಪತ್ರಿಕೆಯಾದ 'ವಿದ್ಯಾವಿಲಾಸ'ದ ಬಗ್ಗೆ ಹಾಗೂ ಕುಸಿಯುತ್ತಿರುವ ವರ್ಗದ ಯಜಮಾನಿಕೆಯ ಬಗ್ಗೆ ಬರೆಯುವುದು ಎಲ್ಲಿಲ್ಲದ ಪ್ರಾಮುಖ್ಯತೆಯನ್ನು ಕೊಟ್ಟಂತಾಗುತ್ತದೆ.

ಈ ತಿಂಗಳ ೧೬ನೇ ತಾರೀಖು ಈ ಪತ್ರಿಕೆಯು ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ವಿರುದ್ಧ ತಮ್ಮ ಸಂಪಾದಕೀಯದಲ್ಲಿ ಮತ್ಸರದ ಮತ್ತು ಕಿಡಿಗೇಡಿ ವಿಚಾರಗಳನ್ನು ಬರೆದು ಅತ್ಯಂತ ಕೀಳುಮಟ್ಟಕ್ಕೆ ಇಳಿದಿತ್ತು.

ಅದು ಹೇಳುತ್ತದೆ: "ಬೇರೆ ಧರ್ಮವನ್ನೇ ಅನುಸರಿಸುತ್ತಿರುವ ಬ್ರಿಟಿಷ್ ಸರಕಾರ ನಮ್ಮ ವ್ಯವಸ್ಥೆಯ ಸಾಮಾಜಿಕ ಮೌಲ್ಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿಲ್ಲ. ಆದರೆ ಸ್ವತಃ ಆರ್ಯಸಮಾಜಿಯಾದ ಮಹಾರಾಜ ಛತ್ರಪತಿ ಸಾರ್ವಜನಿಕ ಅಭಿಪ್ರಾಯ ಮತ್ತು ಯುಗಯುಗದ ಸಂಪ್ರದಾಯಗಳಿಗೆ ಬೆಲೆಕೊಡದೆ ಸಾಮಾಜಿಕ ಅಭಿವೃದ್ಧಿಗಳ ನೆಪದಲ್ಲಿ, ತಮ್ಮ ಅಧಿಕಾರದ ಧಿಮಾಕಿನಿಂದ ಸಮಾಜದಲ್ಲಿ ಸಂಘರ್ಷಗಳನ್ನು ಹುಟ್ಟುಹಾಕಲು ಪ್ರಯತ್ನಿಸುತ್ತಿದ್ದಾರೆ; ಆದರೆ ಅವರು ಈ ಪ್ರಯತ್ನದಲ್ಲಿ ಎಂದಿಗೂ ಸಫಲರಾಗಲಾರರು. ಇದು ಒಂದು ಸಾಮಾಜಿಕ ಸಮಸ್ಯೆ ಮತ್ತು ಯಾವುದೇ ಕಾನೂನು ಸಂಪ್ರದಾಯ ಜಾತಿಪದ್ಧತಿಯನ್ನು ಮುರಿಯಲು ಸಾಧ್ಯವಿಲ್ಲ... ಇದಕ್ಕೆ ಕಾನೂನಿನ ಅಗತ್ಯವಿಲ್ಲ ಮತ್ತು ಯಾವುದೇ ಒತ್ತಾಯವನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಮಹಾರಾಜರು ಈ ವಿವಾದದಿಂದ ದೂರವಿದ್ದರೆ ಉತ್ತಮ ಮತ್ತು ಜನರು ಇದನ್ನು ನಿರ್ಧರಿಸಲಿ."

ಈಗ ಇದು ಬ್ರಾಹ್ಮಣರ ವಿಚಿತ್ರವಾದ ಕುಯುಕ್ತಿಯಲ್ಲವೇ? ಮಹಾರಾಜರು ತನ್ನ ಪ್ರಜೆಗಳಲ್ಲಿ ಜಗಳ ಹಚ್ಚುತ್ತಿದ್ದರೆಂಬುದು ಆಘಾತಕಾರಿಯಾದ ದೋಷಾರೋಪಣೆ; ಇದು ಅವರ ನಿಷ್ಠೆಯೇ? 'ವಿದ್ಯಾವಿಲಾಸಕಾರರಿಗೆ' ಸತಿಸಹಗಮನ ಪದ್ಧತಿಯ ರದ್ಧತಿ ಮತ್ತು ವಿಧವಾ ಪುನರ್‌ವಿವಾಹದ ಬಗ್ಗೆ ಕಾನೂನುಗಳನ್ನು ಪಾಸು ಮಾಡಿದರೆ ಚಿಂತೆಯಿಲ್ಲ. ಬ್ರಾಹ್ಮಣರಲ್ಲಿದ್ದ ಯುವಕ ಬ್ರಾಹ್ಮಣ ಠಕ್ಕರಿಗೆ ತಮ್ಮ ಜಾತಿಗಳಲ್ಲಿ ವಧುಗಳು ಸಿಗುವುದು ಅಸಾಧ್ಯವಾಗಿತ್ತು ಮತ್ತು ಬೆಲೆ ಏರಿಕೆ ಮತ್ತು ಅವರ 'ಅಬ್ರಾಹ್ಮಣ್ಯ ವರ್ತನೆ' ಮತ್ತು ದುರಭ್ಯಾಸಗಳಿಂದ ಅವರಿಗೆ ಹೆಣ್ಣುಗಳೇ ಸಿಗದಿರುವಾಗ ಈ ಕಾನೂನುಗಳು ಅವರಿಗೆ ಹೆಚ್ಚು ಪ್ರಯೋಜನಕಾರಿಯಾಗಿದ್ದವು. ಈ ವಿಧವಾ ಪುನರ್‌ವಿವಾಹ ಕಾಯ್ದೆಯು ನೇರವಾಗಿ ಬ್ರಹ್ಮದೇವನ ಬಾಯಿಯಿಂದ ಜನಿಸಿದೆಯೆಂದು ಹೇಳಿಕೊಳ್ಳುವ ಈ ಪವಿತ್ರ ಬೀದಿಪುಂಡರ ಬ್ರಾಹ್ಮಣರಿಗೆ ಸಮಸ್ಯೆ ಪರಿಹಾರವಾಯಿತು. ಈ ಕನಿಷ್ಠ ಕಾರಣಕ್ಕಾಗಿ ಬ್ರಿಟಿಷ್ ಸರಕಾರ ಅವರಿಗೆ ಗೌರವವಾಗಿ ಕಂಡಿತು.

ವೇದೋಕ್ತ ಪ್ರಕರಣಕ್ಕೆ ಮೊದಲು ಮಹಾರಾಜರನ್ನು ಒಬ್ಬ ಶೂದ್ರನೆಂದು ಮುದ್ರೆ ಒತ್ತಲಾಗಿತ್ತು ಮತ್ತು ಮಹಾರಾಜರು ಅವರ ಮೇಲೆ ಚಾಟಿ ಬೀಸಿದ್ದರಿಂದ ಅವರು ಈಗ "ಆರ್ಯಕ್ಷತ್ರಿಯ ಮರಾಠ" ರಾಗಿಬಿಟ್ಟರು. ಆದರೆ ಅದೇ ಸಮಯದಲ್ಲಿ ಅವರು ನಾಚಿಕೆಯಿಲ್ಲದೆ ಅಚ್ಚುಕಟ್ಟಾಗಿ ಮಹಾರಾಜರು ಸಾಮಾಜಿಕ ವಿಷಯಗಳಲ್ಲಿ ನೇತೃತ್ವ ವಹಿಸಿಕೊಳ್ಳದೆ ಹಿಂದೆ ಸರಿಯಬೇಕೆಂದು ಅವರಿಗೆ ಸಲಹೆ ನೀಡುತ್ತಾರೆ. ಇವೆಲ್ಲದರ ಅರ್ಥವೇನು? ಇದು ಬಹಳ ಸರಳ. "ಆರ್ಯಕ್ಷತ್ರಿಯ" ಎಂಬ ಬಿರುದು ಮಹಾರಾಜರಿಗೆ ನೀಡಿರುವುದರಿಂದ ಅವರು ಖುಷಿಪಟ್ಟು ಆಂದೋಲನವನ್ನು ತಕ್ಷಣ ನಿಲ್ಲಿಸುವರೆಂದು ಅವರು ಯೋಚಿಸಿದ್ದರು!

ಮಹಾರಾಜರು ಈ ಸ್ಪರ್ಶ–ನಿಷೇಧ ಯಾಚಕ (ಬ್ರಾಹ್ಮಣ) ಮಾಫಿಯವನ್ನು ನಂಬುವಂಥವರಲ್ಲ ಎಂಬುದನ್ನು ಅವರು (ಬ್ರಾಹ್ಮಣರು) ಈಗ ಕಲಿಯಬೇಕಾಗಿದೆ. ಹಾಗೆಯೇ ಪುಣೆಯ ಮುನಿಸಿಪಾಲಿಟಿಯಲ್ಲಿ ಎಲ್ಲಾ ಹುಡುಗ ಮತ್ತು ಹುಡುಗಿಯರಿಗೆ ಕಡ್ಡಾಯ ಶಿಕ್ಷಣ ನೀಡಬೇಕೆಂಬ ಠರಾವಿನ ಬಗ್ಗೆ ತೆಗೆದುಕೊಂಡ ನಿಲುವನ್ನು ರಾಡಿಕಲ್ ಬ್ರಾಹ್ಮಣರ ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರೀತಿಯನ್ನು ಬಯಲು ಮಾಡಿತು. ಅಭಿವ್ಯಕ್ತಿ ಸ್ವಾತಂತ್ರ್ಯದ ಬಗೆಗಿನ ಗೊಡ್ಡುಹರಟೆಯನ್ನು ಯಾರು ನಂಬುತ್ತಾರೆ?

ಅವರು ಹೇಳುತ್ತಾರೆ: "ಬ್ರಾಹ್ಮಣೇತರರು ಶಾಂತವಾಗಿ ಮತ್ತು ಸದ್ವರ್ತನೆಯಿಂದ ಬಹಿರಂಗ ಬೇಡಿಕೆಗಳನ್ನು ಇಡುವರು. ಬಲಾತ್ಕಾರವಾಗಿ ಏನೂ ಆಗುವುದಿಲ್ಲ. ಒಂದು ವೇಳೆ ಅದು ಆದರೂ ಬಹಳ ಕಾಲ ಬಾಳುವುದಿಲ್ಲ. ಮತ್ತು ಪ್ರತಿಯೊಬ್ಬರಲ್ಲೂ ಭಿನ್ನಾಭಿಪ್ರಾಯವನ್ನುಂಟು ಮಾಡುತ್ತದೆ. ಇಂದು ಕೆಲವು ಜನರು ನಿಮಗೆ ಬೆಂಬಲ ನೀಡಬಹುದು, ಆದರೆ ನೀವು ಉಳಿದ ಸಮಾಜದೊಂದಿಗೆ ಬದುಕಬೇಕಾಗಿದೆ."

ಆದರೆ ಅಂತಹ ಬೆದರಿಕೆಗಳಿಂದ ಬ್ರಾಹ್ಮಣೇತರರನ್ನು ಮತ್ತು ದಮನಿತರನ್ನು ಹೆದರಿಸಿದ್ದು ಬಹಳ ಹಿಂದೆಯೇ ಗತಿಸಿಹೋಗಿದೆ ಎಂಬುದನ್ನು 'ವಿದ್ಯಾವಿಲಾಸಕಾರರು' ಮರೆತುಹೋಗಿದ್ದಾರೆ. ಪೇಶ್ವೆಗಳ ಆಡಳಿತಾವಧಿಯಲ್ಲಿ ನೀವು, ಮಹರರು ತಮ್ಮ ಕುತ್ತಿಗೆಗೆ ಮಡಿಕೆ ಕುಡಿಕೆಗಳನ್ನು ಕಟ್ಟಿಕೊಂಡು ತಿರುಗಾಡುವಂತೆ ಮಾಡಿದಾಗ ನಿಮ್ಮ ಸಹಜವಾದ ಮತ್ತು ಶಾಂತ(?) ಸ್ವಭಾವವನ್ನು ಬಹಿಷ್ಕೃತರು ಮರೆಯದೆ ಇನ್ನೂ ನೆನಪಿನಲ್ಲಿಟ್ಟುಕೊಂಡಿದ್ದಾರೆ. ಅವರು ಇದನ್ನು ಮರೆಯಬೇಕಾಗಿದ್ದರೆ, ನಿಮ್ಮ ಬೆದರಿಕೆಗಳಿಗೆ ಹೆದರಿ ನಿಮ್ಮ ಸಹಾಯಕ್ಕೆ ನಿಮ್ಮ ಬಳಿಗೆ ಬರುವರು. ಯಾರು ತಾನೆ ಒಬ್ಬ ಭಿಕ್ಷುಕನ ಬಳಿಗೆ ಬರುವರು? 'ಬನ್ನಿ, ನಮ್ಮ ಬಳಿಗೆ ಬಹಿರಂಗವಾಗಿ ಬಂದು ಕೇಳಿ' ಎಂದು ಹೇಳುವುದಕ್ಕೆ ಯಾವ ಹಕ್ಕಿದೆ? ನಮ್ಮ ಸಹಜ ಹಕ್ಕುಗಳಿಗೆ ಅವು ಹೇಗೆ ತಾನೆ ಮಾಲಿಕರಾಗಲು ಸಾಧ್ಯ? ನಾವು ಏಕೆ ನಿಮ್ಮ ಬಳಿಗೆ ಬಂದು ಬೇಡಬೇಕು? ಆ ದಿನಗಳು ಕಳೆದುಹೋದವು, ಮಿಗಿಲಾಗಿ ನೀವು ಅವುಗಳನ್ನು ಬದಲಾಯಿಸಿದಿರಿ ಮತ್ತು ಈಗ ನಿಮ್ಮ ಬಡಾಯಿಗೆ ಯಾರು ತಾನೆ ಲಕ್ಷ್ಯ ಕೊಡುವರು?

ಆ ಪತ್ರಿಕೆ ಹೇಳುತ್ತದೆ: "ಅಬ್ರಾಹ್ಮಣರ ಹೊಟೆಲುಗಳ ಮಾಲಿಕರು ತಮ್ಮ ಜಾತಿಯನ್ನು ಘೋಷಿಸುವ ಯಾವುದೇ ತೂಗುಹಾಕಿದ ಬೋರ್ಡ್ (ಫಲಕ) ಗಳನ್ನು ಹಾಕಿಲ್ಲ. ಜನರು ಅಲ್ಲಿ ತಿಂಡಿತೀರ್ಥಗಳನ್ನು ಸೇವಿಸುತ್ತಾರೆ. ಇದು ಮೋಸವಲ್ಲವೇ? ಜಾತಿ ಅಳಿಸುವುದಕ್ಕೆ ಮಾಡಿದ ಈ ವಂಚನೆಯು ನಿಮ್ಮ ಸಂಕುಚಿತ ಬುದ್ಧಿಯನ್ನು ತೋರಿಸುತ್ತದೆ."

ಬ್ರಾಹ್ಮಣೇತರರು ಬ್ರಾಹ್ಮಣರಂತೆ ನಾಚಿಕೆಗೇಡಿಗಳಾಗದಿರುವುದರಿಂದ ಇದು ಪರಿಪೂರ್ಣವಾಗಿ ಸರಿಯಾಗಿದೆ. ನಿಜವಾಗಿ ಅವರು ಸಂಪ್ರದಾಯಗಳಿಗೆ ಲಕ್ಷ್ಯ ಕೊಡುತ್ತಾರೆಯೇ? ಪವಿತ್ರ ಜನಿವಾರ ಹಾಕಿಕೊಂಡ ಯಾಚಕ (ಭಿಕ್ಷು) ಪುರೋಹಿತರ ಏಕಸ್ವಾಮ್ಯವಲ್ಲವೇ, ಅವರ ತಿಂಡಿ–ತಿನಿಸುಗಳ ಅಂಗಡಿ (ಹೋಟೆಲು) ಗಳಲ್ಲಿ ಜನಜಂಗುಳಿ ಕಡಿಮೆಯಾಗುತ್ತಿದೆ, ಅದರ ನಷ್ಟವನ್ನು ಸರಿಮಾಡಿಕೊಳ್ಳಲು ಅವರು ಚಪ್ಪಲಿ ಮಾರುವಂತಹ ವ್ಯವಹಾರ (ವ್ಯಾಪಾರ) ಮಾಡುತ್ತಿದ್ದಾರೆ! ಇದು ಸಂಪ್ರದಾಯವನ್ನು ಅನುಸರಿಸುವುದೇ? ಇದು ಸಂಪ್ರದಾಯವಾದರೆ, ಅವರು ಅಣ್ಣ ತಮ್ಮಂದಿರಿಗೆ ಗ್ರಾಂಟ್ ರಸ್ತೆಯಲ್ಲಿರುವ ಬೊಹರಾಗಳ, ಮುಸ್ಲಿಮರ ಹೋಟೆಲುಗಳಲ್ಲಿ (ಅಂಗಡಿ) ಮಾಂಸ ತಿನ್ನುವಂತೆ, ದಕ್ಷಿಣ ಬಾಂಬೆಯ ಹೋಟೆಲುಗಳಲ್ಲಿ ಫೋರ್ಕು ಮತ್ತು ಚಾಕುಗಳಿಂದ ತಿಂಡಿಗಳನ್ನು ತಿನ್ನುವಂತೆ, ಪುಣೆಯ ಇರಾನಿಯ ಹೋಟೆಲುಗಳಲ್ಲಿ ಭಾರತದ ಮತ್ತು ವಿದೇಶದ ಮದ್ಯಪಾನೀಯಗಳನ್ನು ಸೇವಿಸುವಂತೆ ಉಪದೇಶ (ಸಲಹೆ) ನೀಡಬೇಕು. ಇದು ಅವರ ನಿಂದನೆಯ ಮನೋಭಾವಗಳನ್ನು ತೋರಿಸುವುದಿಲ್ಲವೇ? ಅವರು ಬೇಜೆಂತರ, ಅರುಂಡೇಲರ, ಬಾಪ್ಟಿಸ್ಟ್ ಮೊದಲಾದವರ ಜೊತೆಯಲ್ಲಿ ಸಾಮಾಜಿಕ ಊಟೋಪಚಾರಗಳನ್ನು ಮಾಡುತ್ತಾರೆ. ವಿದೇಶಗಳಲ್ಲಿ ಅವರು ಕಾಲಿನಿಂದ ತುಳಿದು ಹದ ಮಾಡಿದ ಬ್ರೆಡ್ಡನ್ನು ಮತ್ತು ಇತರೆ ತಿನಿಸುಗಳನ್ನು ತಿನ್ನುತ್ತಾರೆ. ಆದರೆ ಅವರು ಸ್ವದೇಶಕ್ಕೆ ವಾಪಸ್ಸು ಬಂದ ನಂತರ ಹಸುವಿನ ಸಗಣಿ ತಿನ್ನುವ ಮೂಲಕ ತಮ್ಮನ್ನು ತಾವೇ ಪರಿಶುದ್ಧಗೊಳಿಸಿಕೊಳ್ಳುತ್ತಾರೆ. ಎಂಥ ಧೈರ್ಯ! ಇದನ್ನು ನೈತಿಕಧೈರ್ಯ ಎನ್ನಲಾಗುತ್ತದೆ!

ಅದೇ ಪತ್ರಿಕೆ ಮತ್ತೆ ಮುಂದುವರಿದು ಹೇಳುತ್ತದೆ, "ನೀನು ಸಂಪ್ರದಾಯಗಳನ್ನು ಮೆಟ್ಟ (ತುಳಿಯ) ಬಯಸುತ್ತೀಯ. ಪಂಢರಾಪುರದಲ್ಲಿ ಎಲ್ಲರನ್ನು ಬಿಟ್ಟು ಅಸ್ಪೃಶ್ಯರನ್ನು ಮಾತ್ರ ವಿಠೋಬನನ್ನು ಪೂಜಿಸಲು ಒಳಗೆ ಬಿಡುತ್ತಾರೆ (ಮಹಾರಾಷ್ಟ್ರದ ದೇವರು). ಆದರೆ ಕೊಲ್ಹಾಪುರದ ಮಹಾಲಕ್ಷ್ಮಿ ದೇವಸ್ಥಾನದಲ್ಲಿ ಹಾಗಾಗುವುದಿಲ್ಲ. ಆಕೆ (ಮಹಾಲಕ್ಷ್ಮಿ) ಕೇವಲ ಬ್ರಾಹ್ಮಣರಿಗೆ ಸೇರಿದವಳಲ್ಲ. ಎಲ್ಲ ಜಾತಿಯ ಜನರು

ಆಕೆಯನ್ನು ಆರಾಧಿಸಲು ಬರುತ್ತಾರೆ. ಈ ಭಕ್ತರ ಬಗ್ಗೆಯೂ ನೀವು ಯೋಚಿಸಬೇಕು, ನೀವು ಬಯಸಿದ್ದನ್ನು ಅವರು ಒಪ್ಪುತ್ತಾರೆಯೇ? ಮಹರರು ಮತ್ತು ಮರಾಠರು ಮುಸ್ಲಿಮರ ಮಸೀದಿಗಳಿಗೆ, ಜೈನರ ಬಸದಿಗಳಿಗೆ ಅಥವಾ ಲಿಂಗಾಯಿತರ ದೇವಸ್ಥಾನಗಳಿಗೆ ಭೇಟಿ ಕೊಡುವುದಿಲ್ಲ, ಏಕೆ ಮಹಾಲಕ್ಷ್ಮಿ ದೇವಸ್ಥಾನಕ್ಕೆ ಮಾತ್ರ ಹೋಗುತ್ತಾರೆ?"

ಏಕಾಗಬಾರದು? ಒಂದು ಕಡೆ ಮಹಾಲಕ್ಷ್ಮಿ ದೇವಸ್ಥಾನ ಬ್ರಾಹ್ಮಣರಿಗೆ ಮಾತ್ರ ಸೇರಿದ್ದಲ್ಲ ಎಂದು ಹೇಳಿ, ಮತ್ತೊಂದು ಕಡೆಗೆ ಅವರು ಮಹಾಲಕ್ಷ್ಮಿ ದೇವತೆಯನ್ನು ಪೂಜಿಸುವುದಕ್ಕೆ ಅಡ್ಡಿಪಡಿಸುತ್ತೀರಿ. ನೀವು ಜೈನರ ಮತ್ತು ಮುಸ್ಲಿಮರ ಪೂಜಾಸ್ಥಳಗಳಿಗೆ ಹೋಗುವಂತೆ ಮಾಡುತ್ತಿಲ್ಲವೇ? ನಿಮ್ಮ ಸಣ್ಣತನವನ್ನು ನಾವು ಅರ್ಥ ಮಾಡಿಕೊಳ್ಳಬಾರದಲ್ಲವೇ? ಏಕೆ ಈ ವಂಚನೆ? ಬ್ರಾಹ್ಮಣೇತರರರು ತಮ್ಮ ಸ್ವಂತದ (ಧರ್ಮದ) ದೇವಾನುದೇವತೆಗಳನ್ನು ಪೂಜೆ ಮಾಡುವುದಕ್ಕೆ ಅವಕಾಶ ನೀಡದೆ ಬೇರೆಯವರ ಧರ್ಮಗಳ ದೇವತೆಗಳ ಪೂಜೆ ಮಾಡಲು ಬಯಸುತ್ತೀರಿ. ಎಂಥ ಮಕೈವಲಿಯನ್ (ಸರ್ವಾಧಿಕಾರಿ) ಬುದ್ಧಿ!

ಅಂತಿಮವಾಗಿ, ಸರ್ ಜಗದೀಶಚಂದ್ರ ಅವರು ಪಶ್ಚಿಮದಿಂದ ಅಪಮಾನಕ್ಕೆ ಗುರಿಯಾದಂತೆಯೇ ಶಾಹು ಮಹಾರಾಜರು ಸಹ ದುರಹಂಕಾರಿ ಮತ್ತು ಸ್ವಾರ್ಥನಿಷ್ಠ ಬ್ರಾಹ್ಮಣ ದುಷ್ಟಕೂಟದ ಕಡೆಗಣ್ಣಿಗೆ ಗುರಿಯಾಗಬೇಕಾಯಿತು. ಆದರೆ ಸರ್ ಜಗದೀಶಚಂದ್ರ ಅವರು ತಮ್ಮ ಅದ್ಭುತ ಸಂಶೋಧನೆಯಿಂದ ಇಂಗ್ಲಿಷರ ವೈಭವಕಾರಿ ಪ್ರತಿಷ್ಠೆ (ಗರ್ವ)ಯ ಬಲೂನನ್ನು ಚುಚ್ಚಿ ಟುಸ್ ಎನಿಸಿದರು (ಗರ್ವಭಂಗ ಮಾಡಿದರು). ಮಹಾರಾಜರು ಸಹ ಹಿಡಿಯಷ್ಟು ಈ ಮಂದಿಯ ಕೂಗಾಟ-ಚೀರಾಟಕ್ಕೆ ಲಕ್ಷ್ಯ ಕೊಡದೆ ಮತ್ತು ಅವರು ಸತ್ಯ ಮತ್ತು ಸಮಾನ ಹಕ್ಕುಗಳ ಹೋರಾಟಕ್ಕೆ ಬದ್ಧರಾಗಬೇಕೆಂದು ನಾವು ನಮ್ರವಾಗಿ ನಿನಂತಿಸುತ್ತೇವೆ.

ಅವರು ನಮ್ಮ ಕೋರಿಕೆಯನ್ನು ಮನ್ನಿಸುವರೆಂದು ಭಾವಿಸಿ ನಾನು ಇಲ್ಲಿಗೆ ಮುಗಿಸುತ್ತೇನೆ.

*(ಡಾ. ಅಂಬೇಡ್ಕರರು ಶಾಹು ಮಹಾರಾಜರ ಬಗ್ಗೆ ಬರೆದ ಲೇಖನವು ಇದೊಂದೇ ಲಭ್ಯವಾಗಿರುವುದು. ಮಹಾರಾಜರು ಬೆಂಬಲಿಸಿದ 'ಮೂಕನಾಯಕ' ಪತ್ರಿಕೆಯಲ್ಲಿ ಪ್ರಕಟವಾಗಿದೆ.)*

*[ಕೃತಜ್ಞತೆಗಳೊಂದಿಗೆ ಮೂಕನಾಯಕ, ಜುಲೈ ೩೧, ೧೯೨೦ ಇದರಿಂದ ಈ ಲೇಖನವನ್ನು ತೆಗೆದುಕೊಳ್ಳಲಾಗಿದೆ.]*

---

೬

# ಕರ್ಮಯೋಗಿ ರಾಜರ್ಷಿ ಶಾಹು

**ಶಾಮರಾವ್ ಗೋವಿಂದರಾವ್ ದೇಸಾಯಿ**

*ಸತ್ಯಶೋಧಕ ಪತ್ರಿಕಾಕರ್ತ ಮತ್ತು ಬ್ರಾಹ್ಮಣೇತರರ ಸುಧಾರಕ ಮತ್ತು ಕಾರ್ಯಕರ್ತ*

## ರಾಜರ್ಷಿ ಶಾಹು: ನಿಜವಾದ ಕರ್ಮಯೋಗಿ

ಶಿವಾಜಿ ಮಹಾಶಯನ ರಂಪರೆಯ ವಾರಸುದಾರ ರಾಜರ್ಷಿ ಶಾಹುರವರನ್ನು ಅವರ ನಂತರವೂ ಹಿಂದುಳಿದ ವರ್ಗಗಳಲ್ಲಿ ಸ್ವಾತಂತ್ರ್ಯದ ಸ್ಫೂರ್ತಿಯನ್ನು ಹರಡಲಾಗುತ್ತಿದೆಯೆಂದು ನೆನಪು ಮಾಡಿಕೊಳ್ಳುತ್ತೇವೆ. ಅವರು ತಾವು ಶಿವಾಜಿಯ ನಿಜವಾದ ವಾರಸುದಾರರೆಂದು ರುಜುವಾತುಪಡಿಸಿದ್ದಾರೆ. ಬ್ರಾಹ್ಮಣರು ಯಾವಾಗಲೂ ರಾಜರ್ಷಿ ಶಾಹುರವರ ಸಿದ್ಧಾಂತಗಳನ್ನು ವಿರೋಧಿಸುತ್ತಿದ್ದರು. ಅವರು ಶಿವಾಜಿಯ ಪರಂಪರೆ (ವಾರಸುದಾರಿಕೆ) ಯನ್ನು ಶಾಹುರವರಿಗೆ ನೀಡುವುದರಿಂದ ಮರಾಠ ಸಂಸ್ಥಾನದ ಸಂಸ್ಥಾಪಕನ ಘನತೆಗೆ ಧಕ್ಕೆ ತರುವಂತಾಗುತ್ತದೆಯೆಂಬ ಭಾವನೆ ಅದರ ಹಿಂದೆ ಅಡಗಿತ್ತು. ಆದರೆ ಇವರೆಲ್ಲರೂ ಶಾಹುರವರಿಗೆ ಹೊಸ ಶತ್ರುಗಳಲ್ಲ! ಅವರೆಲ್ಲರೂ ಶಾಹುರವರ ಸನಾತನ (ಹಳೇಕಾಲದ) ಶತ್ರುಗಳಾಗಿದ್ದರು! ಈ ಶತ್ರುಗಳ ಪೂರ್ವಿಕರು ಶಿವಾಜಿಯನ್ನು ಒಬ್ಬ ಶೂದ್ರನೆಂದು ಹಣೆಪಟ್ಟಿ ಕಟ್ಟಲು ಪ್ರಯತ್ನಿಸಿದ್ದರು. ಇದೊಂದು ಮಾತ್ರವಲ್ಲ ಈ ಜನರು (ಬ್ರಾಹ್ಮಣರು) ಯಾವಾಗಲೂ ಮಹಾತ್ಮರಿಗೆ ಮತ್ತು ಅವರಂತಹವರಿಗೆ ಕಿರುಕುಳ ನೀಡಿದ್ದರು. ಅವರು ಗೌತಮ ಬುದ್ಧನನ್ನು ಮತ್ತು ಅವನ ಮಹಾಧರ್ಮವನ್ನು ತೆಗಳಿರಲಿಲ್ಲವೇ? ಬ್ರಾಹ್ಮಣರು ಕೆಟ್ಟವನೆಂದು ಟೀಕಿಸುತ್ತಿದ್ದ ವ್ಯಕ್ತಿಯನ್ನು ಬಹುಜನ ವರ್ಗವು ಕೆಟ್ಟವನೆಂದು ಎಂದಿಗೂ ಪರಿಗಣಿಸಲಿಲ್ಲ. ಒಂದು ವೇಳೆ ದುರದೃಷ್ಟವಶಾತ್ ಬ್ರಾಹ್ಮಣರನ್ನು ಅವರು ನಂಬಿದರೆ ಅವರು ಮುಳುಗಿದಂತೆಯೇ.....

ಬ್ರಾಹ್ಮಣರು ಎಲ್ಲ ವಲಯಗಳನ್ನು ಅಪಹರಿಸಿದಂತೆಯೇ ಸಾಹಿತ್ಯಕ ವಲಯವನ್ನು (ಜಗತ್ತು) ಅಪಹರಿಸಿಬಿಟ್ಟರು. ಆದ್ದರಿಂದ ಅವರ ಬಹುಪರಾಕುಗಳು ನಡೆಯುವುದಿಲ್ಲ. ಮತ್ತು ಬ್ರಾಹ್ಮಣರು ಶ್ರೀಮಂತರನ್ನು ಮತ್ತು ಅಧಿಕಾರಸ್ಥರನ್ನು ಹೊಗಳುವ ಒಂದು ಅವಕಾಶವನ್ನೂ ತಪ್ಪಿಸಿಕೊಳ್ಳುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಮಹಾರಾಷ್ಟ್ರದಲ್ಲಿರುವ ಬಹುತೇಕ ಮಹಾರಾಜರು ಬ್ರಾಹ್ಮಣರ ಬುಟ್ಟಿಗೆ ಬಿದ್ದರು ಮತ್ತು ಚಾಣಕ್ಯರ ನೀತಿಯಲ್ಲಿ ಮಗ್ನರಾದರು. ಆದರೆ ರಾಜರ್ಷಿ ಶಾಹು ಮಹಾರಾಜರು ರಾಜರಾದ ಕೆಲವು ವರ್ಷಗಳಲ್ಲೇ ಬ್ರಾಹ್ಮಣವಾದದ ಮೂಲಾಂಶಗಳ ಮೇಲೆ ದಾಳಿ ನಡೆಸಲು ಪ್ರಾರಂಭಿಸಿದರು. ಭಾರತದ ಇಡೀ ಬ್ರಾಹ್ಮಣಸಮೂಹವು ಆನೆಯ ಗಂಡಸ್ಥಳದ ಮೇಲೆ ಸಿಂಹವೊಂದು ಎರಗಿದಂತೆಯೇ ಹುಚ್ಚರಾಗಿ ಅವರ ಮೇಲೆ ಎರಗಿಬಿದ್ದಿತು.

ಬ್ರಾಹ್ಮಣರು ಧರ್ಮವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಮೇಲೆರಗಿದರೆ ಪರವಾಗಿಲ್ಲ, ಆದರೆ ಆ ಸಮಯದಲ್ಲಿ ಕೊಲ್ಹಾಪುರ ಸಂಸ್ಥಾನ ಅವರ ಹಿಡಿತದಲ್ಲಿತ್ತು. ಇಂಥ ಪರಿಸ್ಥಿತಿಯಲ್ಲಿ ಬ್ರಾಹ್ಮಣವಾದದ ಮೇಲೆ ದಾಳಿ ಮಾಡುವುದು ಎಂದರೆ ತಾವು ಪಡೆದಿದ್ದ ಎಲ್ಲವನ್ನೂ ಕಳೆದುಕೊಂಡಂತೆಯೇ. ಆದರೆ ಮಹಾರಾಜರು ತಮ್ಮ ಕಾರ್ಯವನ್ನು ಕೊನೆಯವರೆಗೂ ಮುಂದುವರಿಸಿದರು. ಭಾರತದಲ್ಲಿ ಬ್ರಾಹ್ಮಣರ ಮೇಲೆ ದಾಳಿ ಮಾಡುವುದಕ್ಕೆ ಯಾವ ವ್ಯಕ್ತಿಗೂ ಧೈರ್ಯವಿರಲಿಲ್ಲ.

ತಮ್ಮ ಸಂಸ್ಥಾನದ ಹೊರಗೂ ಹಿಂದುಳಿದ ವರ್ಗಗಳ ಏಳಿಗೆಗಾಗಿ ಕೆಲಸ ಮಾಡಿದ್ದು ಹೊಗಳಿಕೆಗೆ ಅರ್ಹವಾಗಿದೆ. ಅವರಲ್ಲಿ ತಮ್ಮ ರಾಜಕೀಯ ಹಕ್ಕುಗಳ ಬಗ್ಗೆ ಅರಿವು ಮೂಡಿಸಿದ್ದು ಸ್ತುತ್ಯಾರ್ಹ. ಸಂಸ್ಥಾನದ ಸಾಮಾನ್ಯ ಆಳರಸರಿಗೆ ರಾಜಕೀಯ ಅಧಿಕಾರದ ದಾಹವನ್ನು ಅರ್ಥಮಾಡಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ವಾಸ್ತವಿಕವಾಗಿ ಅವರಿಗೆ ಅಧಿಕಾರ ಸಂಪೂರ್ಣವಾಗಿರಬೇಕು ಮತ್ತು ಸರ್ವಾಧಿಕಾರವಾಗಿರಬೇಕೆಂದು ಅವರು ಯೋಚಿಸುವುದು ಸ್ವಾಭಾವಿಕ. ಹೀಗೆ, ಈ ಎಲ್ಲಾ ವಿರೋಧಗಳಿಂದಲೂ ರಾಜರ್ಷಿ ಶಾಹುರವರು ತಮ್ಮ ಸಂಸ್ಥಾನದ ನೆರೆಹೊರೆಯ ಪ್ರದೇಶಗಳ ಹಿಂದುಳಿದ ವರ್ಗಗಳಲ್ಲಿ ಜನರ ಅಧಿಕಾರದ ವಿಚಾರವನ್ನು ನೆಲೆಗೊಳಿಸಲು ಪ್ರಯತ್ನಿಸಿದ್ದು ಆಶ್ಚರ್ಯಕರವಾದ ಸಂಗತಿ ಮತ್ತು ಯೋಚಿಸಲು ಯೋಗ್ಯವಾದುದಾಗಿದೆ. ಅವರ ಹೃದಯ ವೈಶಾಲ್ಯವಿಲ್ಲದಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ. ಮಹಾರಾಜರ ಒಡೆಯರಾದ ಬ್ರಿಟಿಷ್ ಸರಕಾರದ ಹುಕುಮಿನಂತೆ ವಿಶಾಲ ಮಹಾರಾಷ್ಟ್ರದಲ್ಲಿನ ಉಗ್ರಗಾಮಿಗಳ ಆಂದೋಲನವನ್ನು ಮಟ್ಟಹಾಕಲು ಮಹಾರಾಜರು ಬಹುಜನವರ್ಗಗಳಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡಿದರೆಂದು ಕೆಲವರು ಆಪಾದಿಸುತ್ತಾರೆ. ಮೇಲುನೋಟಕ್ಕೆ ಈ ಆರೋಪವು ಸರಿಯೆಂದು ತೋರುತ್ತದೆ. ಆದರೆ ಹಿಂದುಳಿದ ವರ್ಗಗಳು ಮತ್ತು ಬ್ರಾಹ್ಮಣೇತರರು ತಾಳಕ್ಕೆ ತಕ್ಕಂತೆ ಕುಣಿಯುವ ಕೈಗೊಂಬೆಗಳಲ್ಲ! ಮಹಾರಾಷ್ಟ್ರದಲ್ಲಿಯೇ ಏಕೆ? ಬ್ರಿಟಿಷರಿಗೆ ಅಂತಹ ಕುಟಿಲ ಸಂಚಿದ್ದಿದ್ದರೆ ಅವರು ಅಂತಹ ಕೈಗೊಂಬೆ ಆಂದೋಲನಗಳನ್ನು ಇಡೀ ಭಾರತದಲ್ಲಿ ಹುಟ್ಟುಹಾಕಬಹುದಾಗಿತ್ತು. ಆರೋಪವು ಕೇವಲ ಹುರುಳಿಲ್ಲದ್ದು. ಅಸಹಕಾರ–ಆಂದೋಲನದ ಸಮಯದಲ್ಲಿ ಈ ಜನರು ಬಲಾತ್ಕಾರವಾಗಿ ಜನರನ್ನು ಸೇರಿಸಿಕೊಂಡಿದ್ದರೆ ಮೇಲಿನ ಹೇಳಿಕೆಗೆ ಒಂದು ನಿಲುವು ಸಿಗುತ್ತಿತ್ತೇನೋ; ಆದರೆ ರಾಜರ್ಷಿ ಅವರು ಮಾಡಿದ ಪ್ರಯತ್ನಗಳು ಮೂಲದಿಂದಲೇ ಈ ಜನರಲ್ಲಿ ರಾಜಕೀಯ ಜಾಗೃತಿ ಮತ್ತು ಅಧಿಕಾರದಾಹವನ್ನು ಬೆಳೆಸಲಾಗಿತ್ತು.

ರಾಜರ್ಷಿಯವರು ದಿನಪತ್ರಿಕೆಗಳನ್ನು ಪ್ರಕಟಿಸುವುದಕ್ಕೆ ಪ್ರಾತ್ಸಾಹ ನೀಡಿದರು. ಆದರೆ ಅವರು ಎಂದಿಗೂ ಒಂದು ನಿರ್ದಿಷ್ಟ ಸಿದ್ಧಾಂತವನ್ನು ರಾಜಕೀಯ ವಲಯದಲ್ಲಿ ಅನುಸರಿಸಬೇಕೆಂದು ಒತ್ತಾಯಪಡಿಸಲಿಲ್ಲ. ಅವರು 'ರಾಷ್ಟ್ರವೀರ' ಪತ್ರಿಕೆಗೆ ಬೆಂಬಲ ನೀಡಿದರು ಮತ್ತು ತಮ್ಮ ಆಡಳಿತಾವಧಿಯಲ್ಲಿ ಅವರು ಎಂದಿಗೂ ಯಾವುದೇ ಸಂತೋಷ ತೋರಿಸಲಿಲ್ಲ ಅಥವಾ ಕೆಲವೊಮ್ಮೆ ಪತ್ರಿಕೆಯು ನಿರ್ದಿಷ್ಟ ಕಾರಣಕ್ಕಾಗಿ ಅವರನ್ನು ಟೀಕಿಸಿದಾಗ ಯಾವುದೇ ರೀತಿಯ ಅಸಂತೋಷವನ್ನು ಅವರು ವ್ಯಕ್ತಪಡಿಸಲಿಲ್ಲ. ಇದರರ್ಥ ಅವರು ದಿನಪತ್ರಿಕೆಗಳನ್ನು ಪ್ರೋತ್ಸಾಹಿಸಿದರೂ ಅವರು ಎಂದಿಗೂ ಪತ್ರಿಕೆಗಳನ್ನು ಖರೀದಿ ಮಾಡಲಿಲ್ಲ. ವಾಸ್ತವಿಕವಾಗಿ ಅವರು ಪ್ರೋತ್ಸಾಹಿಸಿದ ಪತ್ರಿಕೆಗಳು ಅವರ ಬಗ್ಗೆ ಮಾಡಿದ ಟೀಕೆಗಳನ್ನು, ಇತರ ಪತ್ರಿಕೆಗಳು ಮಾಡಿದ ಟೀಕೆಗಳನ್ನು ಕಿವಿಗೊಟ್ಟು ಕೇಳಿದರು. ಈಗ ಅವರು ದಮನಿತರಲ್ಲಿ ರಾಜಕೀಯ ಜಾಗೃತಿಯನ್ನು ಬೆಳೆಸಲು ಪ್ರಯತ್ನಿಸಿದರು. ಒಂದು ವೇಳೆ ಬ್ರಿಟಿಷ್ ಸರಕಾರದ ಸ್ಫೂರ್ತಿಯ ಮೇರೆಗೆ ಆಗಿದ್ದರೆ, ದಿನಪತ್ರಿಕೆಗಳಾದ 'ರಾಷ್ಟ್ರವೀರ' ಮೊದಲಾದವುಗಳು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದುತ್ತಿರಲಿಲ್ಲ. ಮಹಾರಾಜರ ಮಧ್ಯಸ್ಥಿಕೆಯಲ್ಲಿ

ಬ್ರಿಟಿಷ್ ಸರಕಾರವು ಬ್ರಾಹ್ಮಣೇತರರ ಪಕ್ಷವನ್ನು ರಚಿಸಿದೆಯೆಂಬ ಸುಳ್ಳು ಪ್ರಚಾರ ಹಬ್ಬಿಸಲಾಯಿತು. ಅದಕ್ಕೂ ಯಾವ ಆಧಾರವೂ ಇಲ್ಲ ಅವರ ಮಧ್ಯಸ್ಥಿಕೆ ಇಲ್ಲದೆ ಮದ್ರಾಸು ಪ್ರದೇಶದಲ್ಲಿ ಒಂದು ಬ್ರಾಹ್ಮಣೇತರರ ಪಕ್ಷ ಹುಟ್ಟಿಕೊಂಡಿದ್ದು ಹೇಗೆ?

ಹೇಗೆ, ಹಿಂದುಳಿದ ವರ್ಗಗಳ ಮತ್ತು ಅಸ್ಪೃಶ್ಯರ ಏಳಿಗೆಯೇ ಶಾಹು ಮಹಾರಾಜರ ಮಿಷನ್ನಿನ ಹಿಂದಿದ್ದ ಸ್ಫೂರ್ತಿಯೇ ಅವರಲ್ಲಿ ರಾಜಕೀಯ ಜಾಗೃತಿಯನ್ನು ಮೂಡಿಸಿದ್ದು. ಶ್ರೀಮಾನ್ ತಿಲಕರು ಏಕೆ ಅಂತಹ ಪ್ರಯತ್ನ ಮಾಡಲಿಲ್ಲ? ಸಾಮಾಜಿಕ ಮತ್ತು ರಾಜಕೀಯ ಸುಧಾರಣೆಗಳು ಒಟ್ಟೊಟ್ಟಿಗೆ ಹೋಗಲಾರವು ಎಂಬ ನೆಪದಲ್ಲಿ ಅವರು ಸಾಮಾಜಿಕ ಸುಧಾರಣೆಗಳ ಹೊಣೆಯನ್ನು ನಿಭಾಯಿಸಲು ಹಿಂದೆ ಸರಿದರು. ಕಳೆದ ಮೂವತ್ತು ವರ್ಷ ಸ್ವಾತಂತ್ರ್ಯ ಆಂದೋಲನದಲ್ಲಿ ಹಿಂದುಳಿದ ವರ್ಗಗಳಲ್ಲಿ ರಾಜಕೀಯ ಹಕ್ಕುಗಳ ಹಸಿವನ್ನು ಎಷ್ಟರ ಮಟ್ಟಿಗೆ ಕಾಂಗ್ರೆಸ್ಸು ಹುಟ್ಟುಹಾಕಿತು? ಬಹುಜನ ಸಮಾಜ ತಿಲಕರ ರಥವನ್ನು ಹಲವು ಸಂದರ್ಭಗಳಲ್ಲಿ ಎಳೆಯುವುದರಿಂದ ಮತ್ತು 'ತಿಲಕ್ ಮಹಾರಾಜರಿಗೆ ಜೈ' ಎಂದು ಜಯಕಾರದ ಘೋಷಣೆಗಳನ್ನು ಕೂಗುವುದರಿಂದ ಆಚೆಗೆ ಎಷ್ಟು ದೂರ ಹೋಗಿದೆ? ತಿಲಕರು ಏನಾದರೂ ಪ್ರಯತ್ನ ಮಾಡಿದ್ದರೆ ಅದು ಅವರ ರಾಜಕೀಯ ಆಕಾಂಕ್ಷೆಯ ವಿಸ್ತರಣೆಯ ಲಾಭಕ್ಕಾಗಿ ಮಾತ್ರ. ಆದರೆ ಶಾಹು ಮಹಾರಾಜರು ತಮ್ಮ ಚಿಕ್ಕ ಸಂಸ್ಥಾನದಿಂದ ಬೆಳೆಯುವ ರಾಜಕೀಯ ಜಾಗೃತಿಯಿಂದ ಮತ್ತು ಈ ಜನರ ಆಕಾಂಕ್ಷೆಗಳಿಂದ ಅವರು ಪಡೆಯುವ ಲಾಭವಾದರೂ ಏನು?

ಮಹಾರಾಜರು ದಮನಿತರ ಏಳಿಗೆಗಾಗಿ ನಿಜವಾದ ಬದ್ಧತೆಯಿದ್ದುದರಿಂದಲೇ ಅವರು ಆಂದೋಲನಕ್ಕೆ ತಮ್ಮ ಹಣ ಮತ್ತು ಶಕ್ತಿ-ಸಾಮರ್ಥ್ಯವನ್ನು ಸುರಿದರೆಂಬುದು ಇದರಿಂದ ಸುಸ್ಪಷ್ಟವಾಗುತ್ತದೆ. ಆದ್ದರಿಂದಲೇ ನಾವೆಲ್ಲರೂ ಅವರನ್ನು ನಿಜವಾದ 'ಕರ್ಮಯೋಗಿ' ಎಂದು ಕರೆಯುತ್ತೇವೆ. ಅವರು ತಮ್ಮ ಸಂಸ್ಥಾನದಲ್ಲಿ ಶಾಂತ ಮತ್ತು ವೈಭವ ಜೀವನವನ್ನು ನಡೆಸಬಹುದಾಗಿತ್ತು. ಬ್ರಾಹ್ಮಣರ ಆಕ್ರಮಣದಿಂದ ತಮ್ಮ ಸಂಸ್ಥಾನವನ್ನು ಪಾರು ಮಾಡಿಕೊಂಡು ಬ್ರಾಹ್ಮಣೇತರರ ಪಕ್ಷವನ್ನು ಬೆಳೆಸಲು ಅವರು ಸಹಾಯ ಮಾಡಿದರು. ಅವರೊಬ್ಬ ನಿಜವಾದ ಕರ್ಮಯೋಗಿ. ಸಹಜವಾಗಿ ಶಾಹು ಛತ್ರಪತಿಯವರ ಹೆಸರು ಮತ್ತು ಕೀರ್ತಿ ಮಹಾರಾಷ್ಟ್ರದಲ್ಲಿ ಎಂದೆಂದಿಗೂ ಮರೆಯುವುದಿಲ್ಲ.

*– ಮೇ ೨೧, ೧೯೨೫*

---

## ರಾಜರ್ಷಿ ಶಾಹು ಮತ್ತು ಸ್ವರಾಜ್ಯ

ಬಹುಮಟ್ಟಿಗೆ ಹೇಳುವುದಾದರೆ, ಆತ್ಮ-ಗೌರವದಿಂದ ಕೂಡಿದ ಶಿಕ್ಷಣವು ಜನತಾಂತ್ರಿಕ ಸ್ವಾತಂತ್ರ್ಯಕ್ಕೆ ಬೀಜಗಳು. ಯಾರಾದರೂ ನಿಜವಾಗಿ ಶಿಕ್ಷಣದ ಮೂಲಕ ಜನರ ಏಳಿಗೆಯನ್ನು ಸಾಧಿಸಲು ಮತ್ತು ಆತ್ಮ-ಗೌರವವನ್ನು ಬೆಳೆಸಲು ಪ್ರಯತ್ನಿಸಿದರೆ ಆತನನ್ನು ಜನತಾಂತ್ರಿಕ ಸ್ವಾತಂತ್ರ್ಯದ ನಿಜವಾದ ನಾಯಕನೆಂದು ಪರಿಗಣಿಸಬೇಕು. ಹಾಗಾದರೆ 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂದು ದೇಶಭಕ್ತಿಯ ಬಾವುಟವನ್ನು ರಭಸವಾಗಿ ಬೀಸುತ್ತಾ ಜೋರಾಗಿ ಘೋಷಣೆ ಕೂಗುವವರಿಗಿಂತ ರಾಜರ್ಷಿ ಶಾಹುರವರನ್ನು ಭಾರತದ ಸ್ವಾತಂತ್ರ್ಯದ ಪ್ರಾಮಾಣಿಕ ನಾಯಕರೆಂದು ಹೇಳಬಹುದು. ಆದ್ದರಿಂದ ಅವರು ಅನಕ್ಷರಸ್ಥರನ್ನು ಶಿಕ್ಷಿತರನ್ನಾಗಿ

ಮಾಡಲು ಮತ್ತು ಅವರಲ್ಲಿ ಆತ್ಮ-ಗೌರವವನ್ನು ಮೂಡಿಸಲು ಖರ್ಚು ಮಾಡಿದರೆಂಬುದನ್ನು ಅಧ್ಯಯನ ಮಾಡುವುದು ಅತ್ಯಗತ್ಯ.

ಅವರು ರಾಜನಾಗಿರುವಾಗ ಪ್ರಾರಂಭದಲ್ಲಿ ಕೆಲವು ಪ್ರಾಥಮಿಕ ಶಾಲೆಗಳು ಮತ್ತು ಪ್ರೌಢಶಾಲೆಗಳನ್ನು ಬಿಟ್ಟರೆ ತಮ್ಮ ಪ್ರದೇಶದಲ್ಲಿ ಮತ್ತೇನು ವಿಶೇಷಗಳು ಇರಲಿಲ್ಲ. ಅವರ ವಿಶಿಷ್ಟ ಸಾಧನೆ ಎಲ್ಲಾ ಜಾತಿ ಮತ್ತು ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು. ಅಂಥ ಕೆಲಸವನ್ನು ಇಡೀ ಭಾರತದಲ್ಲಿ ಎಂದಿಗೂ ಮಾಡಿರಲಿಲ್ಲ. ಶಾಹುರವರ ಕೊಲ್ಲಾಪುರ ಸಂಸ್ಥಾನಕ್ಕಿಂತ ಮಿಗಿಲಾದ ದೊಡ್ಡ ಮತ್ತು ವಿಶಾಲವಾದ ಹಾಗೂ ಶ್ರೀಮಂತ ಸಾಮಂತ ಸಂಸ್ಥಾನಗಳು ಭಾರತದಲ್ಲಿದ್ದವು. ವಿವಿಧ ಜಾತಿಗಳಾದ ಮರಾಠ, ಜೈನ, ಲಿಂಗಾಯತ, ನಾಮದೇವ, ಸಾರಸ್ವತ, ಅಸ್ಪೃಶ್ಯರು, ಪ್ರಭುಗಳು, ಮುಸ್ಲಿಮರು ಮೊದಲಾದ ವಿದ್ಯಾರ್ಥಿ ನಿಲಯಗಳು ಯಾವುದೇ ಸಂಸ್ಥಾನದ ರಾಜಧಾನಿಯಲ್ಲಿದ್ದುದನ್ನು ನಾನು ಕಂಡಿಲ್ಲ.

ಕೆಲವರು ಅವುಗಳ ಪ್ರಯೋಜನಗಳೇನು ಎಂದು ಪ್ರಶ್ನಿಸುತ್ತಾರೆ ಮತ್ತು ಅವು ಕೇವಲ ಜಾತಿಪದ್ಧತಿಯನ್ನು ಬಲಿಷ್ಠಗೊಳಿಸಿವೆ ಮತ್ತು ರಕ್ಷಿಸಿವೆಯೆಂದು ಕೆಲವರು ವಾದಿಸುತ್ತಾರೆ. ಯಾರು ಈ ವಿದ್ಯಾರ್ಥಿ ನಿಲಯಗಳಿಂದ ಪ್ರಯೋಜನ ಪಡೆದಿದ್ದಾರೆ ಅವರು ಈ ಪ್ರಶ್ನೆಗಳಿಗೆ ಉತ್ತರಿಸಬೇಕು. ರಾಜರ್ಷಿ ಅವರು ಭಿನ್ನಭಿನ್ನ ಸಾಮಾಜಿಕ ಗುಂಪುಗಳಿಗೆ ಭಿನ್ನಭಿನ್ನ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದ್ದಾರೆ. ಮತ್ತು ಈ ವಿದ್ಯಾರ್ಥಿ ನಿಲಯಗಳ ಪ್ರಯೋಜನಗಳನ್ನು ಇನ್ನೂ ಆ ಸಾಮಾಜಿಕ ಗುಂಪುಗಳು ಪಡೆಯುತ್ತಿವೆ. ಆದರೆ ಬ್ರಿಟಿಷ್ ಭಾರತದಲ್ಲಿ ಈ ಸಾಮಾಜಿಕ ಗುಂಪುಗಳಿಂದ ವಿದ್ಯಾರ್ಥಿಗಳಿಗೆ (ಮಕ್ಕಳಿಗೆ) ಒಂದಲ್ಲ ಒಂದು ವಿಧದಲ್ಲಿ ಶಾಲೆಗಳಿಗೆ ಮತ್ತು ಕಾಲೇಜುಗಳಿಗೆ ಪ್ರವೇಶವನ್ನು ನಿರಾಕರಿಸಿರುವುದಕ್ಕೆ ನೂರಾರು ಸಾಕ್ಷ್ಯಗಳನ್ನು ನೀಡಬಹುದು. ಅವರು ಒಂದೇ ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದ್ದರೆ ಕೇವಲ ಮೇಲುಜಾತಿಗಳ ವರ್ಗಗಳು ಪ್ರಯೋಜನ ಪಡೆಯುತ್ತಿದ್ದವು. ಬ್ರಾಹ್ಮಣೇತರರಲ್ಲಿ ಈಗ ಶಿಕ್ಷಣ ಪಡೆಯಲು ಶಕ್ತಿಸಾಮರ್ಥ್ಯವುಳ್ಳವರು ಮುಂದಿನ ೨೫ ವರ್ಷಗಳವರೆಗೆ ಅಂತಹ ಸವಲತ್ತನ್ನು ಪಡೆಯುತ್ತಿರಲಿಲ್ಲ. ಇಂದು ಬ್ರಾಹ್ಮಣೇತರರ ನೂರಾರು ವಿದ್ವಾಂಸರು ಕೊಲ್ಹಾಪುರದ ವಿದ್ಯಾರ್ಥಿ ನಿಲಯಗಳಿಂದ ಪ್ರಯೋಜನ ಪಡೆದವರು ಸಿಗುತ್ತಾರೆ. ಈ ವಿದ್ಯಾರ್ಥಿ ನಿಲಯಗಳಿಂದ ಹೊರಬಂದವರಲ್ಲಿ ಯಾರೂ ಜಾತಿವಾದಿಗಳಲ್ಲ. ಪ್ರತಿಯಾಗಿ ಅವರಲ್ಲಿ ಬಹುಮಟ್ಟಿಗೆ ಎಲ್ಲರೂ ಸಮಾಜಸುಧಾರಕರಾಗಿ ಮಾರ್ಪಟ್ಟಿದ್ದಾರೆ. ಎಲ್ಲಾ ಜಾತಿಗಳ ವಿದ್ಯಾರ್ಥಿಗಳಿಗೆ ಒಂದೇ ವಿದ್ಯಾರ್ಥಿ ನಿಲಯವಿದ್ದಿದ್ದರೆ ಇಷ್ಟನ್ನು ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಒಂದು ವಿದ್ಯಾರ್ಥಿ ನಿಲಯದಲ್ಲಿ ಬಹುಸಂಖ್ಯಾತರಾದ ಮೇಲುಜಾತಿಯ ವಿದ್ಯಾರ್ಥಿಗಳು ಇತರರ ಮೇಲೆ ಪ್ರಭಾವ ಬೀರುತ್ತಿದ್ದರು ಮತ್ತು ಇಂದು ಬ್ರಾಹ್ಮಣೇತರ ಪದವೀಧರರು ಈ ಬ್ರಾಹ್ಮಣ ಚಾಣಕ್ಯರ ಅನುಯಾಯಿಗಳಾಗುತ್ತಿದ್ದರು.

ಬಹುಜನ ಸಮಾಜದಲ್ಲಿ ಶಿಕ್ಷಣವನ್ನು ಹರಡಿದ ಕೀರ್ತಿ ಸಂಪೂರ್ಣವಾಗಿ ರಾಜರ್ಷಿಯವರಿಗೆ ಸಲ್ಲುತ್ತದೆ. ಅವರ ಪ್ರೋತ್ಸಾಹದಿಂದ ಹಲವಾರು ದಿನಪತ್ರಿಕೆಗಳನ್ನು ಪ್ರಾರಂಭಿಸಲಾಯಿತು. ಮತ್ತು ಪೋಷಕತ್ವವು ಎಂದೆಂದಿಗೂ ಏನು ಬರೆಯಬೇಕು, ಏನು ಬರೆಯಬಾರದೆಂಬುದನ್ನು ಅವರು ನಿರ್ದೇಶಿಸಲೇ ಇಲ್ಲ. ಅವುಗಳಲ್ಲಿ ಕೆಲವು ಪತ್ರಿಕೆಗಳು ತೀವ್ರವಾಗಿ ಸ್ವಾತಂತ್ರ್ಯ ಆಂದೋಲನವನ್ನು ಬೆಂಬಲಿಸಿದವು. ರಾಜರ್ಷಿಯವರೇ ಸ್ವತಃ ಭಾರತದ ಸ್ವಾತಂತ್ರ್ಯಕ್ಕಾಗಿ ಆಸಕ್ತಿ ವಹಿಸಿದ್ದರಿಂದ ಅವುಗಳು ಬೆಂಬಲಿಸಿದವು.

ರಾಜರ್ಷಿಯವರು ಬಹುಜನ ಸಮಾಜದಲ್ಲಿ ಆತ್ಮ-ಗೌರವವೆಂಬ ಭಾವನೆಯನ್ನು ತುಂಬಿದ್ದರಿಂದ

ಅವರು ಮಹಾರಾಷ್ಟ್ರದ ಸಾಮಾಜಿಕ ಜೀವನಕ್ಕೆ ನೀಡಿದ ಅಭೂತಪೂರ್ವವಾದ ಕೊಡುಗೆಯಾಗಿದೆ. ಕೆಮಲ್‌ಪಾಶಾ ಅವರು ಖಿಲಾಫತ್ ಪ್ರಗತಿಗೆ ಅಡಚಣೆ ಎಂದು ಕಂಡ ಕೂಡಲೇ ಅವರು ಅದನ್ನು ರದ್ದುಗೊಳಿಸಿದರು. ಹಾಗೆಯೇ ರಾಜರ್ಷಿಯವರು ಬ್ರಾಹ್ಮಣ ಪ್ರಾಬಲ್ಯದ ಧಾರ್ಮಿಕ ಪೀಠಗಳಿಂದ ಗೆದ್ದಲು–ಹುಳುಗಳು ಬಹುಜನ ಸಮಾಜದ ಆತ್ಮ–ಗೌರವ ಮತ್ತು ಮಾನವೀಯತೆಯನ್ನು ಹಾಳು ಮಾಡುತ್ತಿರುವಾಗ ಅವರು ಅವುಗಳ ಸಂಬಂಧಗಳನ್ನು ಕಳಚಿಕೊಂಡರು. ಅವರು ಬ್ರಾಹ್ಮಣ ಜಗದ್ಗುರು ಮತ್ತು ಪುರೋಹಿತರನ್ನು ನಿರಾಕರಿಸಿ, ಅವರ ಬದಲಿಗೆ ತಮ್ಮ ಜಾತಿಯ ಕ್ಷಾತ್ರ–ಜಗದ್ಗುರು ಮತ್ತು ಪುರೋಹಿತರನ್ನು ನೇಮಿಸಿಕೊಂಡರು. ಈ ವಾದವು ಅಸಂಗತ. ಅವರು ಕೆಮಲ್‌ಪಾಶಾರಂತೆ ಒಬ್ಬ ಸಾರ್ವಭೌಮರಾಗಿದ್ದರೆ ಅವರು ಇಡೀ ಧರ್ಮಪೀಠ ವ್ಯವಸ್ಥೆಯನ್ನು ಕಿತ್ತುಹಾಕುತ್ತಿದ್ದರು.

ರಾಜರ್ಷಿ ಶಾಹುರವರನ್ನು ಪರಂಪರಾಗತವಾದ ಮತ್ತು ಅನಿಯಂತ್ರಿತ ಧರ್ಮಪೀಠಗಳ ಮತ್ತು ಪುರೋಹಿತರ ಯಾಜಮಾನ್ಯತನವನ್ನು ನಿರಾಕರಿಸಿ ಅವುಗಳ ಸ್ಥಾನದಲ್ಲಿ ಜನತೆಯ ಪೀಠ ಮತ್ತು ಪುರೋಹಿತರನ್ನು ಸಂಸ್ಥಾಪಿಸಿದರು. ಇದಕ್ಕೆ ಅಸಾಧಾರಣವಾದ ಕೆಚ್ಚೆದೆ ಬೇಕಾಗುತ್ತದೆ. ಅಂತಹ ದೃಢ ಕ್ರಮಗಳಿಂದ ಅವರು ಬಹುಜನ ಸಮಾಜಕ್ಕೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದರು. ಇದು ಅವರ ರಾಜಕೀಯ ಸ್ವಾತಂತ್ರ್ಯದ ದಾಹವನ್ನು ಹೆಚ್ಚಿಸಿತು. ಇದು ಅವರು ತಮ್ಮ ಪ್ರತಿನಿಧಿಗಳನ್ನು ಚುನಾಯಿತ ಸಂಸ್ಥೆಗಳಾದ ಗ್ರಾಮಪಂಚಾಯಿತಿಗಳಿಗೆ, ಮುನಿಸಿಪಾಲಿಟಿಗಳಿಗೆ, ಸ್ಥಳೀಯ ಸಂಸ್ಥೆಗಳಿಗೆ ಮತ್ತು ಶಾಸನಸಭೆಗಳಿಗೆ ಕಳುಹಿಸುವುದರಲ್ಲಿ ಪ್ರಕಟಗೊಂಡಿತು. ಇಂದು ಬಹುಜನ ಸಮಾಜವು ಮೇಲುಜಾತಿಗಳ ನಾಯಕತ್ವವನ್ನು ಒಪ್ಪಿಕೊಂಡರೆ ತಮ್ಮ ಪ್ರಗತಿಗೆ ಅಡ್ಡಿಯಾಗುತ್ತದೆಯೆಂದು ಅರಿತುಕೊಂಡು ಅವರ ನಾಯಕತ್ವವನ್ನು ಒಪ್ಪಿಕೊಳ್ಳಲು ಸಿದ್ಧರಾಗಿಲ್ಲ. ಹಾಗೆಯೇ ಅವರು ವಿದೇಶಿ ಆಡಳಿತದ ಬಗ್ಗೆ ಮನವರಿಕೆ ಮಾಡಿಕೊಂಡಾಗ ಅವರು ಈ ಆಡಳಿತವನ್ನು ಎಂದಿಗೂ ಮುಂದುವರಿಯುವುದಕ್ಕೆ ಬಿಡುವುದಿಲ್ಲ.

ರಾಜರ್ಷಿ ಜನರ ರಾಜಕೀಯ ಸ್ವಾತಂತ್ರ್ಯ ಮತ್ತು ಜನತಾಂತ್ರಿಕ ಹಕ್ಕುಗಳನ್ನು ಘೋಷಿಸಿದ್ದಕ್ಕೆ ಸಾಕಷ್ಟು ಪುರಾವೆಗಳು ಎತ್ತಿತೋರಿಸುತ್ತವೆ. ಅವರು ೧೯೧೭ರಲ್ಲಿ ಮರಾಠ ಶಿಕ್ಷಣ ಪರಿಷತ್ತನ್ನು ಕುರಿತು ಹೇಳಿದರು, "ನಾನು ನನ್ನನ್ನು ಒಬ್ಬ ಸೈನಿಕ, ಒಬ್ಬ ರೈತ ಅಥವಾ ಒಬ್ಬ ಕಾರ್ಮಿಕ ಎಂದು ಕರೆದುಕೊಳ್ಳಲು ನನಗೆ ಹೆಮ್ಮೆಯಾಗುತ್ತದೆ. ನನ್ನ ತಂದೆತಾಯಿಗಳು ರೈತರಾಗಿದ್ದರು. ಕೆಳಜಾತಿಗಳ ಮುಗ್ಧಜನರೊಂದಿಗೆ ಬೆರೆಯಕೂಡದೆಂದು ನನಗೆ ಹಲವರು ಸಲಹೆ ನೀಡಿದ್ದರು. ಆದರೆ ರೈತರ ಮತ್ತು ಕಾರ್ಮಿಕರ ಬಗೆಗಿನ ಪ್ರೀತಿ ನನ್ನ ರಕ್ತ–ನರ–ನಾಡಿಗಳಲ್ಲಿ ಹರಿಯುತ್ತಿದೆ. ನಾನು ಅವರ ನಡುವೆ ಹುಟ್ಟಿದ್ದೇನೆ." ಈ ಸುಂದರವಾದ ಮತ್ತು ಕಾಲರಹಿತ ಚಿಂತನೆಗಳು ಜನರ ಅಧಿಕಾರಕ್ಕಾಗಿ ರಾಜರ್ಷಿಗಳ ಪರಿಶುದ್ಧ ಪ್ರೀತಿಯಿಂದ ಹುಟ್ಟಿಬಂದಿವೆ. ಕೆಲ ಅನಿಷ್ಟ ಚಾಣಕ್ಯರು, ಅವರ ಈ ಚಿಂತನೆಗಳು ಜನತಂತ್ರದ ಪ್ರೀತಿಯನ್ನು ಪ್ರತಿಬಿಂಬಿಸುತ್ತವೆಯೇ ಎಂದು ಕೇಳಿದ ಕೂಡಲೇ ಕೇಳುವರು. ಶಾಂತವಾಗಿ ಮತ್ತು ವಸ್ತುನಿಷ್ಠವಾಗಿ ಯೋಚಿಸಿ. ಮತ್ತು ನೀವು ಅದನ್ನು ಕಂಡುಕೊಳ್ಳುವಿರಿ. ಅವರ ಹೃದಯದಲ್ಲಿ ಬೊಲ್ಷೆವಿಜಂನ ಬೀಜವಿತ್ತು. ಅಂದರೆ ಜನರಿಗೆ ಅಧಿಕಾರ ಎಂಬ ತತ್ವ, ರೈತರು ಮತ್ತು ಕಾರ್ಮಿಕರಿಗೆ ಇದಕ್ಕಿಂತ ಮಿಗಿಲಾದ ನಿಜವಾದ ಪ್ರೀತಿ ಮತ್ತ್ಯಾವುದಿದೆ?

ರಾಜರ್ಷಿ ಮತ್ತೆ ಮುಂದುವರಿಸಿದರು, "ದೇಶವು ಸ್ವಾತಂತ್ರ್ಯವನ್ನು ಪಡೆಯಲಿ ಎಂದು ನಾನು ಬಯಸುತ್ತೇನೆ. ಅದೇ ಸಮಯದಲ್ಲಿ ಸ್ವಾತಂತ್ರ್ಯವನ್ನು ನಿಜವಾದ ಅರ್ಥದಲ್ಲಿ ಅನುಭವಿಸಲು ಜಾತಿಪದ್ಧತಿಯ ಬೇಡಿಗಳನ್ನು ಮುರಿದುಹಾಕಲು ನಾವು ಏನನ್ನಾದರೂ ಮಾಡಬೇಕೆಂದು ನಾನು ಒತ್ತಾಯಪಡಿಸುತ್ತೇನೆ.

ಒಂದು ವೇಳೆ ಜಾತಿ–ಭೇದ ಉಳಿದರೆ ಸ್ವಾತಂತ್ರ್ಯವು ಕೆಲವರ ಕೈಗೆ ಅಧಿಕಾರವನ್ನು ಕೊಟ್ಟಂತಾಗುತ್ತದೆ. ಕೆಲವು ಜನರು ಅಸ್ಪೃಶ್ಯತೆ ಮತ್ತು ರಾಜಕೀಯದ ನಡುವಣದ ಸಂಬಂಧವನ್ನು ಪ್ರಶ್ನಿಸುತ್ತಾರೆ. ನಾವು ಅಸ್ಪೃಶ್ಯರನ್ನು ಸಾಮಾನ್ಯ ಮನುಷ್ಯರೆಂದು ಭಾವಿಸದಿದ್ದರೆ ರಾಜಕೀಯ ಎಂದರೇನು ಎಂದು ನಾನು ಕೇಳುವೆನು? ಪ್ರತಿಯೊಬ್ಬ ಮನುಷ್ಯನಿಗೆ ನಾವು ಮಾನವ ಹಕ್ಕುಗಳನ್ನು ಕೊಡದ ಹೊರತು ದೇಶಸೇವೆ ಎಂಬುದು ಅರ್ಥಹೀನ.''

ಮತ್ತೊಂದು ಸಂದರ್ಭದಲ್ಲಿ ರಾಜರ್ಷಿಯವರು ಹೇಳುತ್ತಾರೆ, "ಪ್ರಾಚೀನ ಕಾಲದಿಂದಲೂ ಆನುವಂಶಿಕ ಹಕ್ಕುಗಳನ್ನು ಅನುಭವಿಸುತ್ತಿರುವ ಮೇಲುಜಾತಿಗಳು ಸ್ವತಃ ಅವರು ಬಿಟ್ಟುಕೊಡಬೇಕು. ಅಂತಹ ಕಾರ್ಯಶುದ್ಧತೆಯು ಇತರರಿಗೆ ಮಾದರಿ ಹಾಕಿಕೊಟ್ಟಂತಾಗುತ್ತದೆ.'' ರಾಜರ್ಷಿ ಅವರು ಕೇವಲ ತಮ್ಮನ್ನು ಹೇಳುವುದರಲ್ಲಿ ತೃಪ್ತಿಪಟ್ಟುಕೊಳ್ಳದೆ, ಅವುಗಳನ್ನು ಕಾರ್ಯರೂಪಕ್ಕೆ ತರಲು ಬಹು ಕಷ್ಟಪಟ್ಟು ಪ್ರಯತ್ನಿಸಿದರು.

ರಾಜರ್ಷಿ ಶೇಕಡ ೫೦ರಷ್ಟು ಸರಕಾರಿ ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಮೀಸಲಿಟ್ಟರು. ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಎಲ್ಲಾ ಜಾತಿಗಳಿಗೆ ಪ್ರಾತಿನಿಧ್ಯ ದೊರೆಯುವಂತೆ ಖಾತರಿಪಡಿಸಿದರು. ಅಸ್ಪೃಶ್ಯತೆಯನ್ನು ರದ್ದುಗೊಳಿಸಿದರು. ಮಹರ್ ಮತ್ತು ಮಾಂಗ್‌ರಿಗೆ ಕಾನೂನುಗಳ ಸನದುಗಳನ್ನು ನೀಡಿದರು. ಈ ಎಲ್ಲಾ ಕ್ರಮಗಳು ಬಹುಜನ ಸಮಾಜವನ್ನು ಸ್ವಾತಂತ್ರ್ಯದ ಕಡೆಗೆ ಕೊಂಡೊಯ್ಯುವ ಉದ್ದೇಶವಾಗಿತ್ತು. ರಾಜರ್ಷಿ ಹೇಳಿದಂತೆ, ಈ ಸನದುಗಳನ್ನು ನೀಡುವ ಉದ್ದೇಶ ಮಡಿವಂತಿಕೆಯ ಪರಂಪರೆ ಅವರಿಗೆ ಮುಚ್ಚಿದ್ದ ವೃತ್ತಿಗಳ ಬಾಗಿಲುಗಳನ್ನು ಅವರಿಗೆ ತೆರೆಯುವುದಾಗಿತ್ತು. ಈ ಕ್ರಮವು ಅವರ ಅಂತಸ್ತನ್ನು ಹೆಚ್ಚಿಸುವುದು ಮತ್ತು ಅವರು ಸಮಾಜದಲ್ಲಿ ಇತರರಿಗೆ ಸರಿಸಮಾನರೆಂದು ಭಾವಿಸುವರೆಂಬುದು ರಾಜರ್ಷಿಗಳ ಭಾವನೆಯಾಗಿತ್ತು. ಹೀಗೆ ಎಲ್ಲಾ ಜಾತಿ ಮತ್ತು ಮತಗಳಲ್ಲಿ ಅವರು ಜನತಂತ್ರದ ಸತ್ವವನ್ನು ತುಂಬುತ್ತಿದ್ದರು. ಅವರು ಒಂದು ಭ್ರಮೆಗೊಳಗಾಗಿರಲಿಲ್ಲ. ಹಾಗಾದರೆ ಯಾರು ಜನತಾಂತ್ರಿಕರು? ಬ್ರಾಹ್ಮಣರೇ? ಬ್ರಾಹ್ಮಣರು ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯನ್ನು ಪೋಷಿಸಿದರು, ಅವರು ಕಡ್ಡಾಯ ಶಿಕ್ಷಣವನ್ನು ವಿರೋಧಿಸಿದರು; 'ಶಾಸನ ಸಭೆಗಳು ಉತ್ತುವ ಮತ್ತು ಬಿತ್ತುವ ಹೊಲಗಳಲ್ಲ', ವೈಶ್ಯವಾಣಿಗಳ ಕಿರಾಣಿ ಅಂಗಡಿಗಳಲ್ಲ; ಎಂದು ಹೇಳುವ ಮೂಲಕ ಶಾಸನಸಭೆಗಳಿಗೆ ಮರಾಠರು ಪ್ರವೇಶ ಮಾಡದಂತೆ ಗರ್ವದಿಂದ ವಿರೋಧಿಸಿದರು. ಅವರು ಸಾಮಾಜಿಕ ಮತ್ತು ಧಾರ್ಮಿಕ ಅಧಿಕಾರ ತಮ್ಮಲ್ಲಿಯೇ ಇಟ್ಟುಕೊಳ್ಳುವುದಕ್ಕೆ ಕುತಂತ್ರ ನಡೆಸಿದರು; ಅವರು ಕೇವಲ 'ಸ್ವರಾಜ್ಯ ನನ್ನ ಆಜನ್ಮಸಿದ್ಧ ಹಕ್ಕು' ಎಂಬ ಘೋಷಣೆ ಕೂಗಿದರು ಅಷ್ಟೇ.

ಮಹಾತ್ಮ ಗಾಂಧಿಯವರು ನಾವು ಅಸ್ಪೃಶ್ಯತೆಯನ್ನು ರದ್ದುಮಾಡದ ಹೊರತು ಮತ್ತು ಹಿಂದು–ಮುಸ್ಲಿಂ ಐಕ್ಯತೆ ಸಾಧಿಸದ ಹೊರತು ಸ್ವಾತಂತ್ರ್ಯವನ್ನು ಪಡೆಯಲಾರೆವೆಂದು ಹೇಳುತ್ತಾರೆ. ರಾಜರ್ಷಿ ೨೫ ವರ್ಷಗಳ ಹಿಂದೆಯೇ ಹೇಳಿದ್ದರು. ಈ ಈರ್ವರು ಮಹಾನುಭಾವರ ಬೋಧನೆಯು ಅಪ್ರಯೋಜನವಲ್ಲ ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಹೀಗೆ ನಾವು ಸ್ವಾತಂತ್ರ್ಯವನ್ನು ಬಯಸುವುದಾದರೆ ಭಾರತದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗೂ ನಾವು ಮೊದಲು ಮೂಲಭೂತವಾದ ಮಾನವಹಕ್ಕುಗಳನ್ನು ಅನುಭವಿಸಲು ಅವಕಾಶ ಮಾಡಿಕೊಡಲು ರಾಜರ್ಷಿ ಅವರ ಸಲಹೆಯನ್ನು ಅನುಸರಿಸಬೇಕೆಂದು ನಾವು ಇಡೀ ರಾಷ್ಟ್ರಕ್ಕೆ ಮನವಿ ಮಾಡುತ್ತೇವೆ. ಅಂತಹ ಮನುಷ್ಯನಾದ ಶಾಹುರವರನ್ನು ಸ್ವಾತಂತ್ರ್ಯದ ಒಬ್ಬ ದೇಶದ್ರೋಹಿ ಎಂದು ಕರೆಯುವವರನ್ನು ಮತ್ತು ಜನತಂತ್ರವನ್ನು ದ್ವೇಷಿಸಿ ಮತ್ತು ಮತ್ತೆ ತಾವೇ ದೇಶಭಕ್ತರೆಂದು

ಘೋಷಿಸಿಕೊಳ್ಳುವವರನ್ನು ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿದ ನಂತರವೇ ಸಾಮಾಜಿಕ ಸುಧಾರಣೆಗಳೆಂದು ಹೇಳುವವರನ್ನು ಸ್ವಾತಂತ್ರ್ಯದ ನಿಜವಾದ ಶತ್ರುಗಳೆಂದು ಕರೆಯಬೇಕಾಗುತ್ತದೆ. ನಮ್ಮ 'ಚಾಣಕ್ಯ' ದೇಶಭಕ್ತರು ಈ ಸಲಹೆಯನ್ನು ಸಹಿಸಲಾರರೆಂಬುದು ನಮಗೆ ಗೊತ್ತು. ತಮ್ಮ ಜಾತಿಗೆ ಮಾತ್ರ ಸ್ವರಾಜ್ಯ ಬೇಕೆಂದು ಅವರು ಬಯಸುತ್ತಾರೆ. ಅವರು ಕಳ್ಳನಂತೆಯೇ ಒಬ್ಬ ನಿಜವಾದ ಸ್ವಾತಂತ್ರ್ಯ ಸೇನಾನಿ ವಿರುದ್ಧ ಒಬ್ಬ ಕಳ್ಳ, ಕಳ್ಳ ಎಂದು ಕೂಗುತ್ತಾರೆ. ಅವರು ಮೂಕರನ್ನಾಗಿರಿಸಿದ್ದ ಜನಜಂಗುಳಿಯ ಹಿಂದೆ ಈಗ ರಾಜರ್ಷಿ ಧ್ವನಿಯಾಗಿ ನಿಂತಿರುವುದರಿಂದ ಅವರ ಪ್ರಯತ್ನಗಳು ಸಫಲವಾಗುವುದಿಲ್ಲ. ಆದ್ದರಿಂದ ಬಹುಜನ ಸಮಾಜ ಮತ್ತು ಭಾರತದ ರಾಜಕಾರಣವನ್ನು ಅರ್ಥ ಮಾಡಿಕೊಂಡಿರುವವರು ಸದಾ ರಾಜರ್ಷಿಯವರ ಜೀವನ ಮತ್ತು ಕೃತಿಗಳನ್ನು ಕೊಂಡಾಡುತ್ತಿರುವರು....

– *ಮೇ ೬, ೧೯೩೦*

---

**ಶಾಹು ಮತ್ತು ಬಹುಜನ ಸಮಾಜದ ಕಲ್ಯಾಣ**

ಬ್ರಾಹ್ಮಣಿಕೆಗೆ ವಿನಾಶಕಾರಿಯಾಗಿದ್ದ ಅದ್ಭುತ ವ್ಯಕ್ತಿತ್ವದ ರಾಜರ್ಷಿಯವರು ಬಹುಜನ ಸಮಾಜದ ಪೀಡೆಗಳಾದ ಮೌಢ್ಯ ಮತ್ತು ಬಡತನಗಳನ್ನು ವಾಸಿ ಮಾಡುವ ಮಾನವೀಯ ವೈದ್ಯರಾಗಿದ್ದರು. ಅವರ ರೋಗನಿದಾನ ಪರೀಕ್ಷೆ ಬಹಳ ತೀವ್ರ ಮತ್ತು ಖಚಿತವಾಗಿತ್ತು ಮತ್ತು ಅವರ ಔಷಧಿಗಳ ನಿಗದಿಯು ಸಂಪೂರ್ಣ ಗುಣಮುಖವಾಗಿತ್ತು.

ರಾಷ್ಟ್ರವು ಬಹುಜನಸಮಾಜದ ಏಳಿಗೆಯ ಸಮಸ್ಯೆಯನ್ನು ಎದುರಿಸುತ್ತಿದೆ. ಆದ್ದರಿಂದಲೇ ಭಾರತದ ನಾಯಕರು ಜಾತಿಪ್ರಾತಿನಿಧ್ಯದ ಸಮಸ್ಯೆಯನ್ನು ಇಂಗ್ಲೆಂಡಿನ ಪ್ರಧಾನಮಂತ್ರಿಗಳಿಗೆ ವಹಿಸಿಬಿಟ್ಟರು. ಏಕೆಂದರೆ ಭಾರತದ ಯಾವ ನಾಯಕನೂ ಇದರ ಪರಿಹಾರವನ್ನು ತಿಳಿದಿರಲಿಲ್ಲ. ಲಾರ್ಡ್ ಇರ್ವಿನ್ನರು ಭಾರತವನ್ನು ಚೆನ್ನಾಗಿ ಅರಿತಿದ್ದರು. ಕಾಂಗ್ರೆಸ್ ತನ್ನ ಹಕ್ಕುಗಳಿಗಾಗಿ ವಾದಿಸುತ್ತಿರುವಾಗ ಅದು ಭಾರತದ ವಿಶಾಲವಾದ ಸಾಮಾಜಿಕ ಗುಂಪುಗಳನ್ನು ಕಡೆಗಣಿಸಿದೆ ಎಂಬ ಸಂಗತಿಯೊಂದಿಗೆ ಇರ್ವಿನ್ನರು ಪ್ರಾಮಾಣಿಕವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಉನ್ನತ ಅಧಿಕಾರಿಯಾದ ಲಾರ್ಡ್ ಇರ್ವಿನ್ನರು ಕಾಂಗ್ರೆಸ್ ವ್ಯಕ್ತಪಡಿಸಿದ ಉದ್ದೇಶಗಳಲ್ಲಿ ನಿರ್ದಿಷ್ಟ ಆಕ್ಷೇಪಣೆಯನ್ನು ಸಾಮಾನ್ಯ ಜನರ ಸ್ಥಿತಿಗತಿಗಳ ಸುಧಾರಣೆಯಲ್ಲಿ ಕಾಂಗ್ರೆಸ್ಸಿಗಿಂತ ರಾಜರ್ಷಿ ಶಾಹುರವರ ಕೊಡುಗೆಯು ಮಹತ್ತರವಾದುದು. ಕಾಲಸರಿದಂತೆ ಬುದ್ಧಿವಂತ ಜನರು ರಾಜರ್ಷಿಯವರ ದೊಡ್ಡತನ ಸದಾ ಉಜ್ವಲವಾಗಿ ಬೆಳಗುವುದನ್ನು ಮನವರಿಕೆ ಮಾಡಿಕೊಳ್ಳುವರು.

ರಾಜರ್ಷಿ ಶಾಹು ಹಿಂದುಳಿದ ವರ್ಗಗಳ ಸಾಮಾಜಿಕ ಸ್ಥಾನಮಾನವು ಕೇವಲ ಶಿಕ್ಷಣದಿಂದ ಮಾತ್ರ ಹೆಚ್ಚಾಗುವುದಿಲ್ಲವೆಂದು ತಮ್ಮ ಹಿಂದಿನ ಮಿಷನ್ನಿನಿಂದ ಮನವರಿಕೆ ಮಾಡಿಕೊಂಡಿದ್ದರು. ೧೯೦೨ರಲ್ಲಿ ತಾವು ಯೂರೋಪಿನಲ್ಲಿರುವಾಗ ಒಂದು ಆಜ್ಞೆಯನ್ನು ಹೊರಡಿಸಿ, ಅದರಲ್ಲಿ ಅವರು ಸಂಸ್ಥಾನದ ಶೈಕ್ಷಣಿಕ ಪ್ರಯತ್ನಗಳಿಂದ ಹಿಂದುಳಿದ ವರ್ಗಗಳಿಗೆ ಹೆಚ್ಚಿನ ಪ್ರಯೋಜನವಾಗಿಲ್ಲ ಮತ್ತು ಉನ್ನತ ಶಿಕ್ಷಣದ ಫಲಗಳು ಎಲ್ಲ ವರ್ಗಗಳಲ್ಲಿ ಸಮವಾಗಿ ಹಂಚಿಕೆಯಾಗಿಲ್ಲವೆಂದು ಹೇಳಿದ್ದರು. ಪರಿಸ್ಥಿತಿಯನ್ನು ಬದಲಾಯಿಸಲು ಮತ್ತು ಎಲ್ಲಾ ಜನವಿಭಾಗಗಳನ್ನು ಪ್ರೋತ್ಸಾಹಿಸಲು ಮತ್ತು ಉನ್ನತ ಶಿಕ್ಷಣ ಪಡೆಯಲು ಅವರು ಈ ಆಜ್ಞೆ

ನಿಯಮದಂತೆ ಖಾಲಿ ಬೀಳುವ ಸ್ಥಾನ(ಹುದ್ದೆ)ಗಳಲ್ಲಿ ಶೇಕಡ ೫೦ರಷ್ಟನ್ನು ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮೀಸಲಿಡಲಾಗಿದೆ. ಈ ನಿರ್ಣಯವು ಬಹುಜನ ಸಮಾಜದ ಕಲ್ಯಾಣಕ್ಕೆ ಮುಖ್ಯವಾದುದು. ಈ ಬಗ್ಗೆ ಹೆಚ್ಚು ವಿವಾದವುಂಟಾಗಬಹುದು. ಆದರೆ ವಿಶ್ವದಲ್ಲಿರುವ ನುರಿತ ಪರಿಣತರು ಸಾಮಾಜಿಕ ಗುಂಪುಗಳ ಜನಸಂಖ್ಯೆಗೆ ಅನುಗುಣವಾಗಿ ಸಂಸ್ಥಾನದ ಆಡಳಿತದಲ್ಲಿ ಅವುಗಳು ಸಮನಾಗಿ ಪ್ರಾತಿನಿಧ್ಯ ಪಡೆಯದ ಹೊರತು ಸಮಾಜ ಸಮವಾಗಿ ಪ್ರಗತಿ ಹೊಂದಲಾರದೆಂದು ಮನವರಿಕೆ ಮಾಡಿಕೊಂಡಿದ್ದಾರೆ. ಆದ್ದರಿಂದ ಬ್ರಿಟಿಷ್ ಆಡಳಿತಗಾರರು ಭಾರತದಲ್ಲಿ ಸುರಕ್ಷತಾ ಕ್ರಮಗಳನ್ನು ತೆಗೆದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ರಾಜರ್ಷಿ ಅವರ ದೂರದೃಷ್ಟಿಯ ಮುಂದೆ ಯಾರೇ ಆಗಲೀ ನಮ್ರವಾಗಿ ತಲೆಬಾಗಬೇಕಾಗುತ್ತದೆ. ಮುಸ್ಲಿಮರು, ಅಸ್ಪೃಶ್ಯರು ಮತ್ತು ಬ್ರಾಹ್ಮಣೇತರರು ಇಂದು ಜಾತಿವಾರು ಪ್ರಾತಿನಿಧ್ಯ, ಪ್ರತ್ಯೇಕ ಮತದಾರ ಸಮುದಾಯಗಳು (ಎಲೆಕ್ಟೋರೇಟ್) ಅಥವಾ ಮೀಸಲು ಕ್ಷೇತ್ರಗಳನ್ನು ಕೇಳುತ್ತಿದ್ದಾರೆ. ಅವರ ಗುರಿಯು ಸಂಸ್ಥಾನದ ಆಡಳಿತದಲ್ಲಿ ಸೂಕ್ತ ಪಾಲನ್ನು ಪಡೆಯುವುದು.

ಇಂದಿನ ಸರಕಾರ ಈ ನಿಲುವನ್ನು ಸಕ್ರಿಯವಾಗಿ ಒಪ್ಪಿದೆ. ಬಾಂಬೆ ಪ್ರೆಸಿಡೆನ್ಸಿಯ ಮುಸ್ಲಿಮರು ಶಿಕ್ಷಣದಲ್ಲಿ ಮುಸ್ಲಿಮ್ ಹಿಂದುಳಿದಿರುವುದರಿಂದ ಅವರಿಗೆ ಮಂತ್ರಿಮಂಡಲದಲ್ಲಿ ಶಿಕ್ಷಣದ ಖಾತೆಯನ್ನು ನೀಡಬೇಕೆಂದು ಒತ್ತಾಯ ಮಾಡುತ್ತಿದ್ದಾರೆ. ಸರಕಾರವು ರಫಿಯುದ್ದೀನ್ ಮೊಹಮದ್ ಅವರನ್ನು ಶಿಕ್ಷಣಮಂತ್ರಿಗಳಾಗಿ ನೇಮಕ ಮಾಡುವ ಮೂಲಕ ಅವರ ನಿಲುವಿಗೆ (ಬೇಡಿಕೆಗೆ) ಬೆಂಬಲ ನೀಡಿದೆ. ಆಂಗ್ಲೋ–ಇಂಡಿಯನ್ ಗುಂಪು, ತನ್ನ ಹಿತಾಸಕ್ತಿಗಳನ್ನು ಸಂರಕ್ಷಿಸಿಕೊಳ್ಳುವುದರಲ್ಲಿ ಸಮರ್ಥವಾಗಿದ್ದರೂ ತನ್ನ ಹಕ್ಕುಗಳ ರಕ್ಷಣೆಯಲ್ಲಿ ಹೊಟ್ಟೆ ಉರಿದುಕೊಳ್ಳುತ್ತಿದೆ.

ಟರ್ಕಿ ದೇಶವು ಧರ್ಮನಿರಪೇಕ್ಷ ಪ್ರಗತಿಪರ ರಾಷ್ಟ್ರವಾಗಿದ್ದರೂ ವಿದೇಶಿ ಕಂಪನಿಗಳು ಶೇಕಡ ೩೦ರಷ್ಟು ಹುದ್ದೆಗಳನ್ನು ಉದ್ಯೋಗದಲ್ಲಿ ಟರ್ಕಿಯರಿಗೆ ಮೀಸಲಿಡಬೇಕೆಂದು ಒಂದು ನಿಯಮವನ್ನು ಮಾಡಿದೆ. ಇಂದಿನ ರಾಷ್ಟ್ರೀಯ ಕಾಂಗ್ರೆಸ್ಸು ೩೦ರಿಂದ ೩೫ ವರ್ಷಗಳ ಹಿಂದೆ ಸರಕಾರಿ ಸೇವೆಗಳನ್ನು ಭಾರತೀಯಗೊಳಿಸಬೇಕೆಂಬ ಬೇಡಿಕೆಯನ್ನಿಡುತ್ತಿತ್ತು. ಈಗ ಲಿಬರಲ್ ಫೆಡರೇಶನ್ ಮತ್ತು ಹಿಂದು ಮಹಾಸಭಾಗಳು ಅದನ್ನೇ ಮಾಡುತ್ತಿವೆ. ಕಾಂಗ್ರೆಸ್ ಪಕ್ಷ ಕಲಕತ್ತಾ ಮುನಿಸಿಪಲ್ ಕಾರ್ಪೊರೇಷನ್ನಿನಲ್ಲಿ ಜಯಭೇರಿ ಗಳಿಸಿದಾಗ ಅದರ ಕಮಿಷನರ್ ಆಗಿ ಸುಭಾಷ್‌ಚಂದ್ರ ಬೋಸರನ್ನು ನೇಮಕಮಾಡಿವೆ. ಸರಕಾರಿ ಉದ್ಯೋಗಗಳು ಕೇವಲ ಉದ್ಯೋಗಿಗಳ ಕುಟುಂಬಗಳ ಸಂರಕ್ಷಣೆಗಾಗಿ ಅಲ್ಲ ಎಂಬುದನ್ನು ಇವೆಲ್ಲ ತೋರಿಸುತ್ತವೆ. ಈ ಎಲ್ಲಾ ಕ್ರಮಗಳು ರಾಜಕೀಯ ಅಧಿಕಾರಗಳನ್ನು ಹಂಚಿಕೊಳ್ಳುವುದು. ಅಧಿಕಾರದ ಪಾಲನ್ನು ಅನುಭವಿಸುವುದು ಸಾಮಾಜಿಕ ಕಲ್ಯಾಣಕ್ಕೆ ಸಹಕಾರಿಯಾಗಿದೆ.

ಅಲ್ಪಸಂಖ್ಯಾತ ಸಮುದಾಯಗಳಾದ ಬ್ರಾಹ್ಮಣರು ಮತ್ತು ಬ್ರಾಹ್ಮಣರು ಸರಕಾರಿ ನೌಕರಿಗಳಲ್ಲಿ ಹೆಚ್ಚಿನ ಪಾಲು ಪಡೆದಿರುವುದರಿಂದ ಅವು ಇಂದು ಚೆನ್ನಾಗಿ ಸಂಸ್ಥಾಪನೆಗೊಂಡಿವೆ. ಸರಕಾರಿ ನೌಕರಿಯ ಬಗ್ಗೆ ರಾಜರ್ಷಿ ಅವರು ನೀಡಿರುವ ನಿರ್ವಚನವು ಎಷ್ಟು ಸೂಕ್ತವಾಗಿದೆ: ಉನ್ನತ ಶಿಕ್ಷಣದ ಬಹುಮಾನಗಳು. ಆದ್ದರಿಂದಲೇ ವಿವಿಧ ಹಿಂದುಳಿದ ವರ್ಗಗಳು ಸರಕಾರಿ ಹುದ್ದೆಗಳಿಗೆ ಉತ್ತೇಜನವಿಲ್ಲದಿದ್ದರೆ ಹೆಚ್ಚು ದುಬಾರಿಯಾದ ಉನ್ನತ ಶಿಕ್ಷಣ ಪಡೆಯಲು ಹೋಗುವುದಿಲ್ಲ. ಆದ್ದರಿಂದಲೇ ವಿವಿಧ ಹಿಂದುಳಿದ ವರ್ಗಗಳಿಗೆ ಸರಕಾರಿ ಹುದ್ದೆಗಳಲ್ಲಿ ಮೀಸಲಾತಿ ಕೊಡುವ ರಾಜರ್ಷಿಯವರ ನಿರ್ಧಾರವು ವಿಶಿಷ್ಟವಾಗಿದೆ. ಬಹುಜನ ಸಮಾಜದ ಪ್ರಗತಿಗೆ ಇದು ಹೆಚ್ಚು ಒತ್ತು, ಹುರುಪು ನೀಡಿದೆ.

ಸರಕಾರಿ ಸೇವೆಗಳಲ್ಲಿ ಜಾತಿವಾರು ಪ್ರಾತಿನಿಧ್ಯದ ತತ್ವವನ್ನು ಮೊಟ್ಟಮೊದಲಿಗೆ ಕೊಲ್ಹಾಪುರ ಸಂಸ್ಥಾನದಲ್ಲಿ ಅಂಗೀಕರಿಸಿ ಜಾರಿಗೊಳಿಸಲಾಯಿತು. ಮತ್ತು ಈ ತತ್ವವನ್ನು ನಂತರ ಬ್ರಿಟಿಷ್ ಇಂಡಿಯಾ ಅನುಮೋದಿಸಿತು. ರಾಜರ್ಷಿ ಶಾಹುರವರ ನಿದರ್ಶನವನ್ನು ಅನುಸರಿಸಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಬ್ರಾಹ್ಮಣೇತರರ ಪಕ್ಷಗಳು ಜಾತಿವಾರು ಪ್ರಾತಿನಿಧ್ಯ ಕೊಡಬೇಕೆಂದು ಒತ್ತಾಯಿಸಿದವು. ದುರದೃಷ್ಟವಶಾತ್ ಬ್ರಾಹ್ಮಣರ ವಿರೋಧದಿಂದಾಗಿ ಬ್ರಿಟಿಷ್ ಇಂಡಿಯಾದಲ್ಲಿ ಈ ತತ್ವವನ್ನು ಜಾರಿಗೊಳಿಸಲಿಲ್ಲ. ಬ್ರಾಹ್ಮಣರು ಈ ಧೋರಣೆಯನ್ನು ವಿಗತಿ (ಪ್ರತಿಗಾಮಿ) ಯೆಂದು ವಿರೋಧಿಸಿದರೂ ಕೂಡ ಪ್ರಸ್ತುತ ಪರಿಸ್ಥಿತಿಯಲ್ಲಿ ಸರಕಾರವು ಎಲ್ಲಾ ಜನವರ್ಗಗಳಲ್ಲಿ ಅಧಿಕಾರವನ್ನು ಸಮಾನವಾಗಿ ಹಂಚಲು ಈ ಕ್ರಮ ಪ್ರಾಯೋಗಿಕ ಮತ್ತು ಅನಿವಾರ್ಯವೆಂದು ಕ್ರಮ ತೆಗೆದುಕೊಳ್ಳಬಹುದಾಗಿತ್ತು.

ಇಂದು ಸರಕಾರದ ನೌಕರಿಗಳಲ್ಲಿ ಶೇಕಡ ೯೦ರಷ್ಟು ಹುದ್ದೆಗಳನ್ನು ಬ್ರಾಹ್ಮಣ ಮತ್ತು ಕಾಯಸ್ಥರು ತಮ್ಮ ಆಂತರಿಕ ಪ್ರತಿಭೆಯಿಂದ ಮಾತ್ರ ಪಡೆದಿದ್ದಾರೆಂದು ಯಾರಾದರೂ ಹೇಳಬಲ್ಲರೇ? ನಿಸ್ಸಂದೇಹವಾಗಿ, ಅವರಲ್ಲಿ ಅಧಿಕ ಸಂಖ್ಯೆಯಲ್ಲಿ ಜಾತಿಪರಿಗಣನೆ ಮತ್ತು ಸ್ವಜನಪಕ್ಷಪಾತದಿಂದ ಸೇವೆಯಲ್ಲಿ ಸೇರಿಕೊಂಡಿದ್ದಾರೆ. ಪ್ರತಿಭೆ ಎಂಬ ಅಂಶ ಅವನ್ನು ಒತ್ತಿಹೇಳುವುದರಲ್ಲಿ ಹುರುಳಿಲ್ಲ. ಮಹಾತ್ಮ ಗಾಂಧಿಯಂತಹ ಮಹಾನುಭಾವರು ಭಾರತದ ಸ್ವತಂತ್ರ ಸರಕಾರದ ಸೇವೆಯಲ್ಲಿ ಭಾರತೀಯರಿಗಿಂತ ಯೂರೋಪಿಯನ್ನರು ಬಹಳ ಪ್ರತಿಭಾವಂತರೆಂದು ಅವರನ್ನು ಸೇರಿಸಿಕೊಳ್ಳುವರೇ? ಬ್ರಾಹ್ಮಣರಿಗೆ ಪ್ರತಿಭೆ ಎಂಬುದು ಅನುಕೂಲವಾದ ಸಮರ್ಥನೆಯಾಗಿದೆ. ರಾಜರ್ಷಿಯವರು ಜಾತಿವಾರು ಮೀಸಲಾತಿಯ ಧೋರಣೆಯನ್ನು ಜಾರಿಗೊಳಿಸಿದ್ದರಿಂದ ಕೊಲ್ಹಾಪುರ ಸಂಸ್ಥಾನದ ಸರಕಾರದ ಆಡಳಿತ ಹಾಳಾಗಿದೆಯೆಂದು ಯಾರು ಹೇಳಬಲ್ಲರು? ತದ್ವಿರುದ್ಧವಾಗಿ, ರಾಜರ್ಷಿ ಶಾಹುರವರ ಧೋರಣೆ ಮತ್ತು ಹಾಲಿಯಿರುವ ಛತ್ರಪತಿ ರಾಜಾರಾಮ್ ಮಹಾರಾಜರ ಧೋರಣೆಗಳು ಈ ವಿಷಯದಲ್ಲಿ ಭಾರೀ ಸಫಲತೆಯನ್ನು ಕಂಡಿವೆ. ಕೊಲ್ಹಾಪುರ ಸಂಸ್ಥಾನದ ಚಿರಸ್ಥಾಪಕ ಟೀಕಾಕಾರಾದ, 'ಜ್ಞಾನಪ್ರಕಾಶ'ದ ಬ್ರಾಹ್ಮಣರ ಮಂದಗಾಮಿ ಸಂಪಾದಕರು ಹಾಲಿಯಿರುವ ಮಹಾರಾಜರ ಆಡಳಿತ ಕಾಲದಲ್ಲಿ ಕೊಲ್ಲಾಪುರ ಸಂಸ್ಥಾನವು ಶಾಂತಿ, ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಭೌತಿಕ ಅಭಿವೃದ್ಧಿ ಮತ್ತು ಜನರ ಜಾಗೃತಿಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದೆಯೆಂದು ಪ್ರಮಾಣೀಕರಿಸಿದ್ದಾರೆ.

ಇಲ್ಲಿಯವರೆಗೆ ಮೀಸಲಾತಿ ಧೋರಣೆಯ ಬಗ್ಗೆ ಮಾಡಿರುವ ಟೀಕೆ–ಟಿಪ್ಪಣಿ–ವಿಮರ್ಶೆಗಳು ಪಕ್ಷಪಾತದ ಫಲಿತಾಂಶಗಳಾಗಿವೆಯೆಂದು ರುಜುವಾತಾಗಿದೆ. ಮತ್ತು ಅವುಗಳಲ್ಲಿ ಯಾವುದೇ ಸಾಕ್ಷ್ಯವಿಲ್ಲ. ಭಾರತವು ಅಭಿವೃದ್ಧಿ ಹೊಂದಿದ ಮತ್ತು ಹಿಂದುಳಿದ ಎಂಬ ಎರಡು ರೀತಿಯ ವರ್ಗಗಳ ಜನರನ್ನು ಹೊಂದಿವೆ. ಇದರ ಜೊತೆಗೆ ಗಾಬರಿ ಹುಟ್ಟಿಸುವಂತಹ ಜಾತಿಭೇದಗಳಿವೆ. ಇಂತಹ ವಾತಾವರಣದಲ್ಲಿ ವರ್ಗವಾರು ಮೀಸಲಾತಿಗಳು ಸರ್ವತೋಮುಖವಾದ ಅಭಿವೃದ್ಧಿಗೆ ಅನಿವಾರ್ಯ. ಇಷ್ಟಾದರೂ ಕುಯುಕ್ತಿಯ ಬ್ರಾಹ್ಮಣರು ಈ ಧೋರಣೆಯನ್ನು ವಿರೋಧಿಸುತ್ತಿದ್ದಾರೆ. ಅವರ ಪ್ರತಿರೋಧವಿದ್ದರೂ ಶಾಹುಮಹಾರಾಜರು ಮೂವತ್ತು ವರ್ಷಗಳ ಹಿಂದೆಯೇ ಈ ಪ್ರಗತಿಪರ ಧೋರಣೆಯನ್ನ ಜಾರಿಗೊಳಿಸಿದರು. ಅದರ ಕೀರ್ತಿ ಅವರಿಗೆ ಸಲ್ಲಬೇಕು. ಆದ್ದರಿಂದ ಮಹಾರಾಜರನ್ನು ಬ್ರಾಹ್ಮಣೇತರರ ಮತ್ತು ಇಡೀ ಭಾರತದ ಹಿಂದುಳಿದ ವರ್ಗಗಳ ವಿಮೋಚಕರೆಂದು ಹೇಳಬಹುದು. ಅವರು ಅಸಮರ್ಥರನ್ನು (ಅಂಗವಿಕಲರು) ಮತ್ತು ಅಧಿಕಾರಹೀನರನ್ನು ತಮ್ಮ ಎದೆಗೆ ಆತ್ಮೀಯತೆಯಿಂದ ಬಿಗಿದಪ್ಪಿಕೊಂಡರು.

*– ಮೇ ೧೭, ೧೯೩೭*

---

***ಟಿಪ್ಪಣಿ:*** *ಶಾಮರಾವ್ ಗೋವಿಂದರಾವ್ ದೇಸಾಯಿ ಅವರು ಒಬ್ಬ ಪ್ರಸಿದ್ಧ ಬ್ರಾಹ್ಮಣೇತರ ಪತ್ರಿಕಾಕರ್ತ ಮತ್ತು ಒಬ್ಬ ಸಮರ್ಪಿತ ಸತ್ಯಶೋಧಕರು. ಅವರು ಮಹಾರಾಷ್ಟ್ರದ ದಕ್ಷಿಣ ಭಾಗಗಳಾದ ಬೆಳಗಾವಿ, ಆಜ್ರ ಮತ್ತು ಚಂದಗಢ ಮೊದಲಾದ ಕಡೆಗಳಲ್ಲಿ ಶಾಹುರವರ ಕಾರ್ಯಗಳನ್ನು ಪ್ರಚಾರ ಮಾಡಿದರು. ೧೯೨೧ರಲ್ಲಿ ಅವರು ಮಹಾರಾಜರ ಪ್ರೋತ್ಸಾಹದಿಂದ 'ರಾಷ್ಟ್ರವೀರ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರು ನಂತರ ೧೯೨೮ರಲ್ಲಿ ಅದರ ಸಂಪಾದಕರಾದರು ಮತ್ತು ೧೯೬೦ರ ವರೆಗೆ ಅದೇ ಹುದ್ದೆಯಲ್ಲಿ (ಸಂಪಾದಕ) ಮುಂದುವರೆದಿದ್ದರು. ಈ ಲೇಖನವು ಮಹಾರಾಜರ ಮರಣದ ವಾರ್ಷಿಕೋತ್ಸವದ ನೆನಪಿನಲ್ಲಿ ಅವರ ಪ್ರಮುಖ ಸಂಪಾದಕೀಯಗಳ ಸಂಗ್ರಹದಿಂದ ತೆಗೆದುಕೊಳ್ಳಲಾಗಿದೆ.*

***(ಕೃತಜ್ಞತೆಗಳೊಂದಿಗೆ, 'ರಾಷ್ಟ್ರವೀರ' ಪತ್ರಿಕೆಯಿಂದ)***

---

೭

# ರಾಜರ್ಷಿ ಶಾಹು– ಒಬ್ಬ ಕ್ರಾಂತಿಕಾರಿ ರಾಜ

**ಧನಂಜಯ ಕೀರ್**

*ಶಾಹುರವರ ಪ್ರಸಿದ್ಧ ಜೀವನಚರಿತ್ರೆಕಾರ*

**ಶಾ**ಹು ಮಹಾರಾಜರು ಎಲ್ಲೆಯಿಲ್ಲದ ಧೈರ್ಯದ, ಅದ್ಭುತ ಶಕ್ತಿ ಮತ್ತು ಬಲವುಳ್ಳ ಒಬ್ಬ ಮನುಷ್ಯ. ಎಲ್ಲಾ ವ್ಯವಹಾರಗಳಲ್ಲಿ ಅವರ ಮಾನವೀಯತೆ ಮತ್ತು ಶ್ರೇಷ್ಠ ಸ್ವಭಾವ ಎದ್ದು ಕಾಣುತ್ತಿತ್ತು. ಅವರು ಸಂತರು ಮತ್ತು ಪ್ರತಿಷ್ಠಿತ ವರ್ಗಗಳಿಗಿಂತ ಮಿಗಿಲಾಗಿ ಸಹಮಾನವತೆ ಮತ್ತು ಭ್ರಾತೃತ್ವವನ್ನು ಹೆಚ್ಚು ಪರಿಭಾವಿಸುತ್ತಿದ್ದರು. ಅವರಿಗೆ ಪದದಲಿತರ ಮತ್ತು ದಮನಿತರ ವಿಮೋಚನೆಯೇ ಕಾರ್ಯದ ಗುರಿಯಾಗಿತ್ತು. ತಮ್ಮ ಶಾಸನದ ಮುಖ್ಯ ಗುರಿ ಅವರಿಗೆ ಸಮಾನತೆ ಮತ್ತು ಸ್ವಾತಂತ್ರ್ಯದ ಪರಿಪೂರ್ಣ ಹಕ್ಕುಗಳನ್ನು ನೀಡುವುದಾಗಿತ್ತು. ತಮ್ಮ ಶ್ರೇಷ್ಠ ನಿರ್ಧಾರದಿಂದ ತಾವು ಹಿಂದೆ ಸರಿಯಲು ಬೆದರಿಕೆಗಳಾಗಲೀ ಅಥವಾ ಬಹಿರಂಗ ಶತ್ರುತ್ವಗಳಾಗಲೀ ಸಾಕಾಗಲಿಲ್ಲ. ನಿಸ್ಸಂದೇಹವಾಗಿ ಶಾಹುರವರು ತಮ್ಮ ಕಾಲದ ಭಾರತೀಯ ಸಾಮಾಜಿಕ ಸುಧಾರಕರಿಗಿಂತ ಹೆಚ್ಚು ಧೈರ್ಯಶಾಲಿಗಳಾಗಿದ್ದರು.

ಒಬ್ಬ ವ್ಯವಹಾರಿಕ ಮನುಷ್ಯನಾಗಿ ಶಾಹುರವರು ಜನರ ಮತ್ತು ವಿಷಯಗಳ ಬೆಲೆಯನ್ನು ಅರಿತಿದ್ದರು, ಮತ್ತು ಭಟ್ಟಂಗಿಗಳ ಭ್ರಷ್ಟತೆಗಳನ್ನು ಮತ್ತು ಸ್ನೇಹಿತರ ಹೊಗಳಿಕೆಯನ್ನು ಮತ್ತು ಶತ್ರುಗಳ ರಣತಂತ್ರವನ್ನು ಸುಲಭವಾಗಿ ಪತ್ತೆಹಚ್ಚುತ್ತಿದ್ದರು. ಅವರು ಮೂರ್ಖರನ್ನು ಸಹಿಸಿಕೊಂಡರು, ಆದರೆ ಹೊಗಳುಭಟ್ಟರು ಅವರೊಂದಿಗೆ ಹೆಚ್ಚು ಸಲಿಗೆಯಿಂದ ನಡೆದುಕೊಳ್ಳುವುದಕ್ಕೆ ತೊಡಗಿದಾಗ ಅವರು 'ಆನೆ ಮತ್ತು ಹುಂಜ' ಎಂಬ ಕತೆಯಲ್ಲಿ ಆನೆಯಂತೆ ಯಾವ ಮುಲಾಜಿಲ್ಲದೆ ಅವರನ್ನು ಹೆದರಿಸುತ್ತಿದ್ದರು. ಅವರು ದುಃಖದ ಅಂಚಿಗೆ ತಳ್ಳಲ್ಪಟ್ಟಾಗ ಮುಯ್ಯಿಗೆ ಮುಯ್ಯಿಯನ್ನು ತೀರಿಸುವ ಧೋರಣೆಯನ್ನು ತಳೆಯುತ್ತಿದ್ದರು. ಮತ್ತು ಸಂದರ್ಭಕ್ಕೆ ತಕ್ಕಂತೆ ಮಹಾ ಗಾಂಭೀರ್ಯದಿಂದ ನಡೆದುಕೊಳ್ಳುತ್ತಿದ್ದರು.

ಶಾಹುರವರ ವ್ಯಕ್ತಿತ್ವ ಭವ್ಯವಾದುದು. ಅವರ ಮುಖವು ಮಹಾತ್ಮ ಫುಲೆಯವರಂತೆಯೇ ಪರಿಪೂರ್ಣ ಮಾನವೀಯತೆಯ ಮುಖವಾಗಿತ್ತು. ಅವರ ಕಣ್ಣುಗಳು ಮಾನವೀಯತೆಯ ಪ್ರೀತಿಯಿಂದ ಕಂಗೊಳಿಸುತ್ತಿದ್ದವು. ಅಂತಹ ಕಣ್ಣುಗಳನ್ನು ದಮನಿತರಿಗೆ ಮತ್ತು ಬಡವರಿಗೆ ನಿರಾಕರಿಸಲಾಗುತ್ತದೆ. ಅವರ ಕೆಳಗಿನ ದಪ್ಪ ತುಟಿಯು ತಮ್ಮ ಯೌವನದಲ್ಲಿ ಅನುಭವಿಸಿದ ಕಾಮ ಮತ್ತು ಸುಖಗಳನ್ನು ಸೂಚಿಸುತ್ತಿತ್ತು. ಆದರೆ ಅವರ ಔದಾರ್ಯ, ವಿವೇಕ ಮತ್ತು ಘನೋದ್ದೇಶಗಳು ಕಾಮ, ಅಧಿಕಾರ ಮತ್ತು ಸಂಪತ್ತಿನ ಮೋಹವನ್ನು ಪರಾಭವಗೊಳಿಸಿದ್ದವು.

ಶಾಹುರವರು ಬಲ ಮತ್ತು ಅಧಿಕಾರಗಳಿಗಿಂತ ಹೆಚ್ಚಿಗೆ ಪ್ರೀತಿಯಲ್ಲಿ ನಂಬಿಕೆಯಿಟ್ಟಿದ್ದರು. ಆದ್ದರಿಂದಲೇ

ಅವರು ಅತ್ಯಂತ ಕ್ರೂರಪ್ರಾಣಿಗಳನ್ನ ಜಯಿಸುತ್ತಿದ್ದರು. ಫೆಬ್ರವರಿ ೨೨, ೧೯೨೨ರಲ್ಲಿ ದೆಹಲಿಯಲ್ಲಿ ಹೆಣ್ಣು ಹುಲಿಯು ಸರ್ಕಸ್ಸಿನ ಒಬ್ಬ ಮೇನೇಜರನನ್ನು ಕೊಂದುಹಾಕಿತು. ಆ ಸುದ್ದಿಯನ್ನು ಕೇಳಿದ ಶಾಹು ಅದನ್ನು ಖರೀದಿ ಮಾಡಿದರು ಮತ್ತು ತಮ್ಮ ಪ್ರೀತಿಯ ಮಂತ್ರಶಕ್ತಿಯಿಂದ ಅದನ್ನು ಸಾಧು ಪ್ರಾಣಿಯನ್ನಾಗಿ ಪಳಗಿಸಿದರು. ಶಾಹುರವರು ತಮ್ಮ ವಿರೋಧಿ ಗುಂಪಿನ ನಾಯಕರಾಗಿದ್ದ ರಾಶಿಂಗ್‌ಕರ್ ಅವರು ತಮ್ಮ ಸಾವಿನ ಹಾಸಿಗೆಯಲ್ಲಿರುವಾಗ ಶಾಹುರವರು ಅವರನ್ನು ನಗುವಂತೆ ಮಾಡಿ ಸಹಾಯ ಮಾಡಿದ್ದರೆಂಬ ಸಂಗತಿಯನ್ನು ನಾವು ಈಗಾಗಲೇ ವಿವರಿಸಿದ್ದೇವೆ. ತಿಲಕರು ಅವರಿಗೆ ಕೊಲೆಯ ಬೆದರಿಕೆಯನ್ನು ಹಾಕಿದ್ದರು. ಆದರೂ ಮೀರಜ್‌ನಲ್ಲಿ ಅವರ ವೈದ್ಯೋಪಚಾರಕ್ಕಾಗಿ ತಮ್ಮ ಕಡೆಯಿಂದ ಅವರನ್ನು ಕರೆದು ತರುವುದಕ್ಕಾಗಿ ತಮ್ಮ ಜನರನ್ನು ಅವರಲ್ಲಿಗೆ ಕಳುಹಿಸಿದ್ದರು. ತಿಲಕರೊಂದಿಗಿನ ತಮ್ಮ ಹೋರಾಟವು ಪೃಥ್ವಿರಾಜ್ ಚವಾಣ್ ಮತ್ತು ಅವರ ಚಿಕ್ಕಪ್ಪ ಅವರ ನಡುವಣ ಯುದ್ಧವಿದ್ದಂತೆ. ಅವರಿಬ್ಬರೂ ಹಗಲುಹೊತ್ತು ಯುದ್ಧಭೂಮಿಯಲ್ಲಿ ಪರಾಕ್ರಮದಿಂದ ಹೋರಾಡಿದರು ಮತ್ತು ಅದೇ ದಿನ ಸಂಜೆಯಲ್ಲಿ ಹಿರಿಯರ ಕೋರಿಕೆಯಂತೆ ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಿದ್ದರು. ಶಾಹುರವರು ತಮ್ಮ ಹೆಂಡತಿ ಮತ್ತು ಮಗನಿಗೆ ನಿಷ್ಠರಾಗಿದ್ದರು. ಶಾಹು ಅವರು ಮನೆಯ ಸುಖ ಸಂತೋಷವನ್ನು ಅನುಭವಿಸಿದರು. ಅವರು ತಮ್ಮ ಇಡೀ ಜೀವನದಲ್ಲಿ ನಡೆಸಿದ ಸಾಮಾಜಿಕ ಸಂಘರ್ಷಗಳಿಗೆ ಅದು ಅವರಿಗೆ ಶಕ್ತಿ–ಸಾಮರ್ಥ್ಯ ನೀಡಿತು.

ಶಾಹುರವರು ಮದ್ಯ ಮತ್ತು ಮಹಿಳೆಯರ ನಡುವೆ ಜೀವನ ನಡೆಸಲಿಲ್ಲ. ಅವರು ಮದ್ಯಪಾನೀಯವನ್ನು ಯಾವುದೇ ರೂಪದಲ್ಲಿ ಸೇವಿಸಲಿಲ್ಲ. ಅಷ್ಟೇ ಅಲ್ಲ. ಅವರು ಔಷಧಿಯ ರೂಪದಲ್ಲೂ ಸೇವಿಸಲಿಲ್ಲ. ಅವರು ಮದ್ಯಪಾನವನ್ನು ತ್ಯಜಿಸಿಬಿಟ್ಟಿಬಿದ್ದರು. ಅವರನ್ನು ಕುಡಿಯಲು ಪ್ರಚೋದಿಸಲಾಯಿತು. ಆದರೆ ಅವರು ಅದಕ್ಕೆ ಬಲಿಯಾಗಲಿಲ್ಲ. ಅತ್ಯುತ್ತಮ ಹೊಲವು ಕಳೆಯನ್ನು ಹೊಂದಿರುತ್ತದೆ. ಆ ವಿಷಯದಲ್ಲಿ ಅವರು ತಮ್ಮ ದೂಷಿಸುವ ನೀಚ ನಾಯಕರಿಗಿಂತ ಅವರು ಬಹಳ ಉತ್ತಮರು. ಚಾರಿತ್ರ್ಯದಲ್ಲಿ ತಿಲಕರಂತೆ ಶಾಹುರವರು ನಿಷ್ಕಳಂಕರಾಗಿದ್ದರೂ ಅವರು ಸುಳ್ಳು ಆಪಾದನೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಇಂಡಿಯಾದ ಬ್ರಿಟಿಷ್ ಆಡಳಿತಗಾರರು ಇರುವವರೆಗೂ ತಿಲಕರು ಸುಳ್ಳು ಆರೋಪದಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ ಮತ್ತು ಬ್ರಿಟಿಷ್ ಆಡಳಿತಗಾರರು ಅವರನ್ನು ಒಬ್ಬ ಪಾಮೆಲ್ ಆಗಿ ಮಾಡಲು ದ್ವೇಷದಿಂದ ಪ್ರಯತ್ನಿಸಿದರು. ಶಾಹುರವರ ನಿಜವಾದ ಅಪರಾಧವು ಅವರ ನೈತಿಕ ವರ್ತನೆಯಾಗಿರಲಿಲ್ಲ. ಪಟ್ಟಭದ್ರ ಹಿತಾಸಕ್ತಿಗಳು ನಾಯಕರು ಮತ್ತು ಪುರೋಹಿತರು ಅವರ ಪಾಪಕೃತ್ಯಗಳ ಬಗ್ಗೆ ದ್ವೇಷಿಸಲಿಲ್ಲ. ಆದರೆ ಅವರ ಮಿಷನ್ನಿನ ಸದ್ಗುಣಗಳ ಬಗ್ಗೆ ದ್ವೇಷಿಸಿದರು. ಅವರ ಮಿಷನ್ನಿನ ಗುರಿಗಳು ದಲಿತರ ಮತ್ತು ದಮನಿತರನ್ನು ಸಾಮಾಜಿಕ ಗುಲಾಮಿತನದಿಂದ ಮತ್ತು ಸಾಮಾಜಿಕ ಅಸಮಾನತೆಯಿಂದ ವಿಮೋಚನೆಗೊಳಿಸುವುದು ಮತ್ತು ಅವರ ಘನತೆ, ಸಮಾನ ಅವಕಾಶಗಳು ಮತ್ತು ಮಾನವ ಹಕ್ಕುಗಳ ಬಗ್ಗೆ ಹೋರಾಡುವುದು. ಭಾರತದ ಸಂವಿಧಾನದಲ್ಲಿ ನಿರೂಪಿಸಿರುವ ಮಾರ್ಗದರ್ಶಕ ತತ್ವಗಳಾದ ರಾಜಕೀಯ ಜನತಂತ್ರವನ್ನು ಸಾಮಾಜಿಕ ಮತ್ತು ಆರ್ಥಿಕ ಜನತಂತ್ರಗಳನ್ನಾಗಿ ಬದಲಾಯಿಸುವುದು. ಇದಕ್ಕಾಗಿಯೇ ಭಾರತದ ಗಣತಂತ್ರ ಹೋರಾಡುತ್ತಿದೆ. ಇದಕ್ಕಾಗಿಯೇ ಶಾಹು ಮಹಾರಾಜರು ಐವತ್ತು ವರ್ಷಗಳ ಹಿಂದೆಯೇ ಹೋರಾಡಿದ್ದರು.

ಶಾಹುರವರ ನಿಂದಕರು ಮತ್ತು ಟೀಕಾಕಾರರು ಬ್ರಾಹ್ಮಣ ವಕೀಲರಾಗಿದ್ದರು. ಅವರ ಭಾವಣಿಗೆಳೆಲ್ಲವೂ ಕಕ್ಷಿಗಳ ಚರ್ಮದಿಂದ (ಹಣ ಅಥವಾ ಶ್ರಮ) ಮುಚ್ಚಲ್ಪಟ್ಟಿವೆ. ಅವರಿಗೆ ಇಡೀ ವಿಶ್ವವನ್ನು ಸುಖಮಯಗೊಳಿಸುವ

ಸದಾಶಯವಿಲ್ಲ. ಸಮಾಜದ ಬಗೆಗಿನ ಅವರ ವಿಚಾರಗಳು ಮತ್ತು ಅವುಗಳ ವ್ಯಾಪ್ತಿ ತೀರಾ ಸಂಕುಚಿತ ಮತ್ತು ಸ್ವಾರ್ಥಪರವಾದವು. ಅವರು ವಿವೇಕ ಮತ್ತು ನೈತಿಕ ಪರಾಕ್ರಮವಿಲ್ಲದ ಜ್ಞಾನವನ್ನು ಹೊಂದಿದ್ದಾರೆ. ಅವರು ಪವಿತ್ರತೆಯ ತಪ್ಪುವಿಚಾರ ಮತ್ತು ಪವಿತ್ರಗ್ರಂಥಗಳ ಪ್ರತಿಷ್ಠೆಯಲ್ಲಿ ತನ್ಮಯರಾಗಿದ್ದಾರೆ. ಶಾಹುರವರು ಹೊಂದಿದ್ದ ಕುಂದು-ಕೊರತೆಗಳು ಕಾಲ ಮತ್ತು ಇತಿಹಾಸಗಳ ಕುಲುಮೆಯಲ್ಲಿ ಬೆಂದುಹೋಗಿ ಅವರ ಮಾನವೀಯತೆಯ ಪ್ರೀತಿಗಾಗಿ ಅವರನ್ನು ಗೌರವಿಸುವವು.

ಶಾಹುರವರು ವಿದ್ವಾಂಸರು, ಜ್ಞಾನವಂತರು ಮತ್ತು ತಮ್ಮ ಹಲವಾರು ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಯಾವಾಗಲೂ ತಮ್ಮ ತೀರ್ಮಾನ ಪ್ರತಿಭೆ ಮತ್ತು ದೃಢ ನಿಲುವುಗಳನ್ನು ತೋರಿಸಿದ್ದಾರೆ. ಒಬ್ಬ ಆಡಳಿತಗಾರರಾಗಿ ಅವರು ಸಮರ್ಥ ಮತ್ತು ದಕ್ಷ ಹಾಗೂ ಒಬ್ಬ ಉತ್ಸಾಹಿ ಸಹೋದ್ಯೋಗಿಯಾಗಿ ಕೆಲಸ ಮಾಡಿದ್ದಾರೆ. ಅವರು ದಾಖಲಿಸಲು ತಮ್ಮ ಆಜ್ಞೆಗಳನ್ನು ಜಾರಿಗೊಳಿಸಲು ಮತ್ತು ದೂರುಗಳನ್ನು, ಮನವಿ ಮತ್ತು ಯೋಜನೆಗಳನ್ನು ಖಲಾಸೆ ಮಾಡಲು ಒಬ್ಬ ಆಜ್ಞೆಗಳ ನಿರೀಕ್ಷಕರನ್ನು ನೇಮಕಮಾಡಿದ್ದರು. ಅವರು ಆಧುನಿಕ ಕೃಷಿ ಮತ್ತು ಆಧುನಿಕ ಕೈಗಾರಿಕಾ ಅಭಿವೃದ್ಧಿ ಮತ್ತು ನೀರಾವರಿಗಾಗಿ ಭಾರಿ ಅಣೆಕಟ್ಟು ನಿರ್ಮಾಣದಲ್ಲಿ ರೈತರು ಮತ್ತು ಕಾರ್ಮಿಕರಿಗೆ ಸಹಾಯ ಮಾಡುವುದಕ್ಕಾಗಿ ಸಹಕಾರಿ ಸಂಘಗಳ ಸ್ಥಾಪನೆಯಲ್ಲಿ ನಂಬಿಕೆಯಿಟ್ಟಿದ್ದರು. ಈ ಮಹತ್ತರವಾದ ಕೆಲಸಕ್ಕಾಗಿ ಅವರನ್ನು ಸೂಕ್ತವಾಗಿ ಭಾರತದಲ್ಲಿ ಹಸಿರುಕ್ರಾಂತಿಯ ಪಿತಾಮಹನೆಂದು ಕರೆಯಲಾಗಿದೆ. ಸಂಸ್ಥಾನದ ಅಧಿಕಾರಿಗಳ ಕಾರ್ಯ ನಿರ್ವಹಣೆಯ ಅವರ ಕಟ್ಟುನಿಟ್ಟಿನ ನಿಯಮಾವಳಿಗಳು, ಭ್ರಷ್ಟಾಚಾರ ಮತ್ತು ದುರಾಡಳಿತದ ನಿರ್ಮೂಲನೆಗಾಗಿ ರೂಪಿಸಿದ ಸೇವಾ ನಿಯಮಾವಳಿಗಳು ಮತ್ತು ದೇವಸ್ಥಾನಗಳ ಬಗೆಗಿನ ಉದಾರಿ ಮತ್ತು ಪ್ರಗತಿಪರ ಶಾಸನಗಳು, ವಾರಸುದಾರಿಕೆಯ ರದ್ಧತಿ, ಕಾನೂನಿನ ಮುಂದೆ ಎಲ್ಲಾ ಜನರ ಸಮಾನತೆ ಮತ್ತು ಹಿಂದು ಕಾನೂನಿನ ಸಂಹಿತೆ ಇವೆಲ್ಲವೂ ಅವರ ಕಾಲದಲ್ಲಿ ಶಾಹುರವರು ಒಬ್ಬ ಮಹಾನ್ ಮತ್ತು ಸಫಲ ಆಡಳಿತಗಾರ ಮತ್ತು ರಾಜನೆಂದು ರುಜುವಾತುಗೊಳಿಸುತ್ತವೆ.

ಹಿಂದುಳಿದ ಮತ್ತು ದಮನಿತ ವರ್ಗಗಳ ಉನ್ನತೀಕರಣವು ಭಾರತದ ಶಾಂತಿ, ಪ್ರಗತಿ ಮತ್ತು ಸಮೃದ್ಧಿಯ ಮೇಲೆ ಅವಲಂಬಿಸಿದೆಯೆಂಬುದು ಶಾಹುರವರ ನಂಬಿಕೆಯಾಗಿತ್ತು. ಅವರು ರಾಷ್ಟ್ರೀಯ ಆಸಕ್ತಿಗಳ ಸಮಗ್ರೀಕರಣ ಮತ್ತು ಕ್ರೋಡೀಕರಣದ ಬಗ್ಗೆ ಗುರಿಯನ್ನು ಹೊಂದಿದ್ದರು. ಈ ವರ್ಗಗಳನ್ನು ಅವರ ತೊಡಕುಗಳಿಂದ ಹೊರತೆಗೆಯುವುದು ತಮ್ಮ ಜೀವನದ ಮಿಷನ್ನು (ಹೆಗ್ಗುರಿ) ಎಂದು ಮತ್ತು ಮಾನವೀಯತೆಗೆ ಇದು ತನ್ನ ಪವಿತ್ರ ಕರ್ತವ್ಯವೆಂದು ಅವರು ಪರಿಗಣಿಸಿದ್ದರು. ಈ ಮಿಷನನ್ನು ನೆರವೇರಿಸಲು ಅವರಿಗೆ ಒಂದು ಆಧ್ಯಾತ್ಮಿಕ ಮನೋಭಾವವನ್ನು ಪ್ರಚೋದಿಸಲಾಗಿತ್ತೆಂದು ಅವರು ಅನುಭವಪಟ್ಟಿದ್ದರು.

ಶಾಹುರವರು ತಮ್ಮ ಅಂತಿಮ ಅಭಿಪ್ರಾಯವನ್ನು ಪ್ರಸಿದ್ಧ ಘೋಷಣೆಯಲ್ಲಿ ಹೀಗೆ ಹೇಳಿದ್ದಾರೆ: "ಭಾರತ ದೇಶವನ್ನು ಉನ್ನತೀಕರಿಸಬೇಕಾದರೆ ಬ್ರಾಹ್ಮಣವಾದವನ್ನು ಕೆಳಗಿಳಿಸಿ" ಈ ಬ್ರಾಹ್ಮಣವಾದವು ಸಮಾಜವನ್ನು ವಿಭಜಿಸಿದೆ ಮತ್ತು ಹುಟ್ಟಿನ ಆಧಾರದಲ್ಲಿ ಮೇಲು ಮತ್ತು ಕೀಳು ಮತ್ತು ಬಡತನಗಳನ್ನು ಬೆಳೆಸಿದೆ. ಆದ್ದರಿಂದ ಅವರು ಜಾತಿಪದ್ಧತಿಯನ್ನು ರದ್ದುಗೊಳಿಸಲು ಮತ್ತು ಕೆಳವರ್ಗಗಳನ್ನು ಮಾನಸಿಕ ಗುಲಾಮತ್ವ, ಸಾಮಾಜಿಕ ಕಳಂಕ ಮತ್ತು ಹೀನಸ್ಥಿತಿಗಳಿಂದ ಮುಕ್ತಗೊಳಿಸಲು ಸತತ ಪ್ರಯತ್ನ ಮಾಡಿದರು. ಅವರ ಪ್ರಕಾರ ಜಾತಿಯನ್ನು ವಿಸರ್ಜಿಸುವುದು ಅತ್ಯಗತ್ಯ ಮತ್ತು ಜಾತಿಯನ್ನು ಎತ್ತಿ ಹಿಡಿಯುವುದು ಮಹಾಪಾಪ. ಆದ್ದರಿಂದ ಅವರು ಕಾರ್ಪೊರೇಟ್ ಮತ್ತು ಸಹಕಾರಿ ತತ್ವವನ್ನು ಬೆಳೆಸುವುದು ಅತ್ಯಗತ್ಯವೆಂದು

ಬೋಧಿಸಿದರು. ದೇಶದಲ್ಲಿ ಯಾವುದೇ ಸಂಸ್ಥೆ, ಒಂದು ಮುನಿಸಿಪಾಲಿಟಿ ಅಥವಾ ಒಂದು ಗ್ರಾಮಪಂಚಾಯಿತಿ ಜಾತಿಯ ಪ್ರಭಾವದಿಂದ ಮುಕ್ತವಾಗದ ಹೊರತು ಅದು ಸಮರ್ಥವಾಗಿ ಕೆಲಸ ಮಾಡಲಾರದೆಂಬುದು ಅವರ ದೃಢ ನಿಲುವಾಗಿತ್ತು. ತನ್ನ ದೇಶದ ಜನರನ್ನು ಮತ್ತು ಸಹೋದರರನ್ನು ಸಗಣಿ ಮತ್ತು ಪ್ರಾಣಿಗಳಿಗಿಂತ ಕೀಳೆಂದು ಪರಿಗಣಿಸುವ ನಾಯಕನು ತನ್ನನ್ನು ತಾನೇ ನಾಯಕನೆಂದು ಕರೆದುಕೊಳ್ಳುವುದು ನಾಚಿಕೆಗೇಡೆಂದು ಅವರು ಹಲವಾರು ಸಮ್ಮೇಳನಗಳಲ್ಲಿ ಏರಿಸಿದ ಧ್ವನಿಯಲ್ಲಿ ಹೇಳಿದ್ದಾರೆ. "ರಾಜಕೀಯದಲ್ಲಿರುವವರು ಎಲ್ಲರನ್ನೂ ಸಮಾನವಾಗಿ ಕಾಣಬೇಕೆಂದು" ಅವರು ಗುಡುಗಿ ಹೇಳಿದರು.

ಶಾಹುರವರು ತಮ್ಮದೇ ಆದ ರೀತಿಯಲ್ಲಿ ಬುದ್ಧ ಮತ್ತು ಅಶೋಕರಂತೆ ಧರ್ಮವನ್ನು ಮಾನವೀಕರಿಸಲು ಪ್ರಯತ್ನಿಸಿದರು. ಶಾಹುರವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ರಾಷ್ಟ್ರಪತಿಗಳಾದ ವಿ. ವಿ. ಗಿರಿಯವರು ಬಾಂಬೆಯಲ್ಲಿ ಶಾಹುರವರು ದೇಶಕ್ಕೆ ಸಲ್ಲಿಸಿದ ಸೇವೆಯನ್ನು ಮೆಚ್ಚುತ್ತಾ 'ಶಾಹುರವರು ದಲಿತರ ಒಬ್ಬ ಮೊಟ್ಟಮೊದಲ ಮಹಾನ್ ವಿಮೋಚಕರು ಮತ್ತು ಒಬ್ಬ ನಿಜವಾದ ಸೇವಕರೆಂದು' ಕೊಂಡಾಡಿದರು. ನಮ್ಮ ಮಹಾನ್ ನಾಯಕರಾದ ಶಾಹುರವರು "ಜನರನ್ನು ಉನ್ನತೀಕರಿಸುವುದರಲ್ಲಿ ನಮ್ಮ ಏಳಿಗೆ ಅವಲಂಬಿಸಿದೆ" ಈ ಹೇಳಿಕೆಗೆ ಈ ವಿವರಣೆಯು ಸೂಕ್ತವಾಗಿದೆ.

ವಿಶೇಷ ಸವಲತ್ತು ಪಡೆದವರ ಮತ್ತು ವಿಶೇಷ ಸವಲತ್ತು ಪಡೆಯದ ಬಡವರ ನಡುವಣ ಅಸಮಾನತೆಯನ್ನು ಕಡಿಮೆಗೊಳಿಸುವ ಶಾಹುರವರ ಹೋರಾಟವನ್ನು ಪಟ್ಟಭದ್ರ ಹಿತಾಸಕ್ತಿಗಳ ನಾಯಕರು ಜಾತೀಯತೆ, ಅನೈಕ್ಯಮತ್ಯದ ಕೃತ್ಯ ಮತ್ತು ಮರ್ಯಾದೆಗೇಡೆಂದು ಕರೆದರು. ಒಂದು ವೇಳೆ ಒಬ್ಬ ಬ್ರಾಹ್ಮಣನು ಮಾನವ ಮತ್ತು ಮಾನವರ ನಡುವಣ ಅಸಮಾನತೆಯನ್ನು ನಿರ್ಮೂಲನೆ ಮಾಡಲು ಯೋಚಿಸಿದರೆ ಅವನನ್ನು ಒಬ್ಬ ಸಾಮಾಜಿಕ ಸುಧಾರಕನೆಂದು ಕರೆಯಲಾಗುತ್ತದೆ. ಆದರೆ ಒಬ್ಬ ಅಬ್ರಾಹ್ಮಣನು ಆ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಿದರೆ ಅವನನ್ನು ಸಮಾಜವನ್ನು ವಿಭಜನೆಯುಂಟುಮಾಡುವ ಒಬ್ಬ ಕೋಮುವಾದಿಯೆಂದು ತೆಗಳಲಾಗುತ್ತದೆ.

ಶಾಹುರವರು ರೆಸಿಡೆಂಟರ ಸಲಹೆ–ಸೂಚನೆಗಳ ಮೇರೆಗೆ ಒಮ್ಮೊಮ್ಮೆ ಕೆಲಸ ಮಾಡಬೇಕಾಗಿತ್ತು ಮತ್ತು ಅವರ ಸ್ವಂತ ಸಂತೋಷದಿಂದಲ್ಲ. ಅವರು ಒಬ್ಬ ದೃಢ ನಾಯಕರು. ಅವರು ಬ್ರಿಟಿಷ್ ಸರಕಾರದೊಂದಿಗೆ ವ್ಯವಹರಿಸುವಾಗ ಸದಾ ಒಬ್ಬ ಸರಳ ಮತ್ತು ಕೌಶಲ್ಯಹೀನನಾಗಿ ವರ್ತಿಸುತ್ತಿದ್ದರು. ಆದರೆ ಅವರ ಸರಳತೆ ಮತ್ತು ಕೌಶಲ್ಯಹೀನತೆಯಲ್ಲಿ ಉದಾರತೆ ಮತ್ತು ದೃಢತೆಯಿರುತ್ತಿತ್ತು. ಶಾಹುರವರು ಹೋಳ್ಕರ್ ಅವರಿಗೆ ಬರೆದದ್ದು ತಮ್ಮ ಜಾಣತನ ಮತ್ತು ಜಾಗೃತ ಸ್ವಭಾವದ ಸೂಚನೆಯಾಗಿದೆ.

ಬ್ರಿಟಿಷ್ ಸರಕಾರದೊಂದಿಗೆ ವ್ಯವಹರಿಸುವಾಗ ತಮ್ಮ ನೇರ ಮಾತುಗಾರಿಕೆ ಮತ್ತು ದಿಟ್ಟತನಗಳು ತಮ್ಮ ನಾಶಕ್ಕೆ ಕಾರಣವಾಗಬಲ್ಲವೆಂದು ಶಾಹುರವರು ಹೋಳ್ಕರರಿಗೆ ಸಲಹೆ ಮಾಡಿದರು ಮತ್ತು "ಈ ಪ್ರಪಂಚದಲ್ಲಿ ಸದ್ಗುಣವನ್ನು ಸದಾ ಯಾರೂ ಮೆಚ್ಚುವುದಿಲ್ಲ" ಎಂದು ಹೇಳಿದರು.

ಬ್ರಿಟಿಷ್ ರೆಸಿಡೆಂಟರು ಶಾಹುರವರ ಚಲನವಲನಗಳ ಮೇಲೆ ಸದಾ ಕಣ್ಣಿಡಲು ತಮ್ಮ ಗುಪ್ತಚರರನ್ನು ಛೂ ಬಿಟ್ಟಿದ್ದರು. ಮತ್ತು ಒಮ್ಮೊಮ್ಮೆ ಶಾಹುರವರು ಅವರನ್ನು ಮೀರಿಸುತ್ತಿದ್ದರು. ಅವರನ್ನು ಕಂಡುಕೊಂಡಾಗ ಅವರು ತನ್ನದೇ ಸರಿಯೆಂದು ಹೇಳುವ ಧ್ವನಿಯಲ್ಲಿ ಬರೆಯುತ್ತಿದ್ದರು, ಜೋರಾಗಿ ಮಾತನಾಡುತ್ತಾ ತನ್ನ ನಿಷ್ಠೆಯನ್ನು ಎತ್ತಿ ತೋರಿಸುತ್ತಿದ್ದರು. ಮತ್ತು ರಾಷ್ಟ್ರೀಯವಾದಿಗಳನ್ನು ಉಪೇಕ್ಷಿಸುತ್ತಿದ್ದರು ಮತ್ತು ಪರಿಸ್ಥಿತಿಯಿಂದ

ನುಣುಚಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದರು. ಆದರೆ ಶಾಹು ಸಹ ರೆಸಿಡೆಂಟರ ಚಲನವಲನಗಳನ್ನು ಗಮನಿಸಲು ತಮ್ಮ ಗುಪ್ತಚರರನ್ನು ನೇಮಿಸಿಕೊಂಡಿದ್ದರು ಮತ್ತು ಅವರ ಬಗ್ಗೆ ಗೌಪ್ಯ ಮಾಹಿತಿಯನ್ನು ಪಡೆಯುತ್ತಿದ್ದರು. ಬ್ರಿಟಿಷ್ ರೆಸಿಡೆಂಟರ ನಡುವೆ ಮಾತನಾಡುವಾಗ ಒಬ್ಬ ಉನ್ನತ ಅಧಿಕಾರಿ ಸೂಕ್ಷ್ಮ ಪ್ರಶ್ನೆಗಳನ್ನು ಕೇಳಿದಾಗ ರೆಸಿಡೆಂಟರು ಉತ್ತರಿಸಲು ತಡಬಡಾಯಿಸುತ್ತಿದ್ದರು. ಆ ಅಧಿಕಾರಿ ಶಾಹುರವರನ್ನು ಭೇಟಿ ಮಾಡಿದಾಗ, ರಾಜನು ಜಾಣತನದಿಂದ ಆ ಮಾತುಕತೆಯನ್ನು ಆ ಕಠಿಣ ಪ್ರಶ್ನೆಗಳೆಡೆಗೆ ತಿರುಗಿಸಿ, ಆ ಪ್ರಶ್ನೆಗಳಿಗೆ ಉತ್ತರ ನೀಡುತ್ತಿದ್ದರು. ಅತಿಥಿ ಅಧಿಕಾರಿ ಆಶ್ಚರ್ಯಪಡುತ್ತಿದ್ದರು.

ಶಾಹುರವರು ನಿರ್ಬಂಧಕ್ಕೊಳಗಾಗಿ ಮತ್ತು ಒಬ್ಬ ಸಾಮಂತರಾಜನಾಗಿ ಇತಿಮಿತಿಗಳೊಳಗೇ ಕೆಲಸ ನಿರ್ವಹಿಸಬೇಕಾಗಿತ್ತು. ಅವರು ಸ್ವರಾಜ್ಯವು ಭಾರತದ ಉದ್ದೇಶವೆಂದು ಧೈರ್ಯವಾಗಿ ಘೋಷಿಸಿದ್ದರೂ ಅವರು ಸ್ವಾತಂತ್ರ್ಯ ಆಂದೋಲನದಲ್ಲಿ ಸಕ್ರಿಯ ಪಾತ್ರ ವಹಿಸಲಿಲ್ಲ. ೧೯೨೦ರಲ್ಲಿ ಮಹಾತ್ಮ ಗಾಂಧಿಯವರು ಕೂಡ ಸ್ವರಾಜ್ಯವನ್ನು ಸಂಪೂರ್ಣ ಸ್ವಾತಂತ್ರ್ಯವೆಂದು ವಿವರಿಸಿರಲಿಲ್ಲ. ಸಾವರ್‌ಕರ್ ಅವರ ಪಕ್ಷವೊಂದನ್ನು ಬಿಟ್ಟು ಯಾವ ಪಕ್ಷವೂ ಸಂಪೂರ್ಣ ಸ್ವಾತಂತ್ರ್ಯವು ತಮ್ಮ ಉದ್ದೇಶವೆಂದು ಘೋಷಿಸಲಿಲ್ಲ. ಮಹಾತ್ಮ ಗಾಂಧಿಯವರು ೧೯೨೨ರ ಜನವರಿ ೩ರಂದು 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ " ಸ್ವಾತಂತ್ರ್ಯ ಕೇಳುವುದು ಪ್ರತೀಕಾರದ ಮತ್ತು ಸಿಡುಕಿನ ಸ್ವಭಾವವಾದ್ದರಿಂದ ಅದಕ್ಕಾಗಿ ಒತ್ತಾಯಿಸುವುದು ಧಾರ್ಮಿಕವಾಗಿ ಕಾನೂನುಬಾಹಿರವಾಗುತ್ತದೆಯೆಂದು" ಹೇಳಿದ್ದರು. ೧೯೨೧ರಲ್ಲಿ ಪಂಡಿತ ಜವಾಹರಲಾಲ್ ನೆಹರು ಅವರು ಅಹಮದಾಬಾದಿನ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಹಜರತ್ ಮೊಹಾನಿಯವರು ಭಾರತದ ಗುರಿ ಸಂಪೂರ್ಣ ಸ್ವಾತಂತ್ರ್ಯ ಎಂಬ ಘೋಷಣೆಯ ಠರಾವನ್ನು ಮಂಡಿಸಿದಾಗ ಅವರು ಅದರ ಭಾಗವಾಗಿರಲಿಲ್ಲ. ಗಾಂಧಿಯವರು ಈ ಠರಾವನ್ನು ವಿರೋಧಿಸಿದರು.

ಶಾಹುರವರ ಸ್ವರಾಜ್ಯದ ವಿಚಾರವು ಭೌಗೋಳಿಕ ಸ್ವರೂಪದ್ದಾಗಿರಲಿಲ್ಲ. ಆದರೆ ಅವರು ಅದನ್ನು ಜನತಂತ್ರದ ಬುನಾದಿಯನ್ನು ವಿಸ್ತರಿಸುವುದು ಮತ್ತು ಭಾರತದ ರಾಷ್ಟ್ರೀಯತೆಯ ಸ್ವರೂಪವನ್ನು ವಿಸ್ತರಿಸುವುದಾಗಿತ್ತು. ಹಿಂದುಳಿದ ವರ್ಗಗಳು ಮತ್ತು ದಮನಿತ ವರ್ಗಗಳ ಹಕ್ಕುಗಳ ಪ್ರತಿಪಾದಕರಾಗಿ ದಮನಿತರಿಗೆ ಆಡಳಿತದಲ್ಲಿ ಪಾಲು ಸಿಗಬೇಕೆಂಬ ಅವರ ಪ್ರತಿಪಾದನೆಯನ್ನು ಮಹಾರಾಷ್ಟ್ರದ ನಾಯಕರು ತಪ್ಪಾಗಿ ಭಾವಿಸಿದರು.

ಶಾಹುರವರು ಒಬ್ಬ ಒಳ್ಳೆಯ, ಬುದ್ಧಿವಂತ ಮತ್ತು ಜ್ಞಾನಿಯಾದ ಆಡಳಿತಗಾರ(ರಾಜ)ರಾಗಿದ್ದರು. ಎಲ್ಲಾ ಧರ್ಮಗಳ ಬಗ್ಗೆ ಸಹನಾಶೀಲರಾಗಿದ್ದರು. ನ್ಯಾಯಪಕ್ಷಪಾತಿಯಾದ ಒಬ್ಬ ಲೇಖಕರು ಹೇಳುತ್ತಾರೆ, "ಬೇರೆ ಯಾವುದೇ ದೇಶದಲ್ಲಾಗಿದ್ದರೆ, ಅವರು (ಶಾಹು) ಸಾಮಾಜಿಕ ಪ್ರಗತಿ, ರಾಜಕೀಯ ಪ್ರಗತಿಗೆ ಒಂದು ನ್ಯಾಯಬದ್ಧ ಕ್ರಮ(ಹೆಜ್ಜೆ)ವೆಂದು ಮಾನ್ಯ ಮಾಡುವವರೆಲ್ಲರಿಗೂ ಒಬ್ಬ ದೇವರು (ಮೂರ್ತಿ) ಆಗಿಬಿಡುತ್ತಿದ್ದರು", ಅವರ ಶೈಕ್ಷಣಿಕ ಧೋರಣೆಯು ಹಲವಾರು ಸಾಮಾಜಿಕ ಕಾರ್ಯಕರ್ತರಿಗೆ ಸ್ಫೂರ್ತಿಯಾಗಿತ್ತು; ಸಾಮಾಜಿಕ ವಿಷಯಗಳಲ್ಲಿನ ಅವರ ಸ್ವಾತಂತ್ರ್ಯವನ್ನು ಮತ್ತೆ ಒತ್ತಿ ಹೇಳಲಾಗಿದೆ. ಹಾಗೂ ಬಹಳ ಹಿಂದೆಯೇ ಮಹಾತ್ಮ ಫುಲೆಯವರು ಉದ್ಘಾಟಿಸಿದ ಹೊಸಯುಗವನ್ನು ಮತ್ತೆ ಪುನರ್‌ಸ್ಥಾಪಿಸಲಾಗಿದೆ.

ಮಾನವ ಜೀವನಕ್ಕೆ ಸಹಾನುಭೂತಿ ತೋರಿಸಬೇಕೆಂಬುದು ಶಾಹುರವರ ಸೂತ್ರದ ಮಾತು. ಅದು

ಒಂದು ಮಹಾನೈತಿಕ ಮತ್ತು ಉತ್ತೇಜನಕಾರಿ ಶಕ್ತಿಯಾಗಿದೆ. ವಾಸ್ತವಿಕವಾಗಿ ಅವರು ಜನರ ಜೀವನವನ್ನು ಉನ್ನತೀಕರಿಸಲು ಮತ್ತು ತನ್ನ ಪ್ರಜೆಗಳ ನೈತಿಕ ಮತ್ತು ಭೌತಿಕ ಕಲ್ಯಾಣಕ್ಕಾಗಿ ಅವರು ಸರಿಯಾದ ರೀತಿಯಲ್ಲೇ ಪ್ರಯತ್ನಿಸಿದಾಗ ತಮ್ಮ ಆಡಳಿತವನ್ನು ಅಪಾಯಕ್ಕೆ ಒಡ್ಡಿದ್ದರು. ಅವರ ಅಂತಿಮ ಗುರಿಯು ಬಹಳ ವ್ಯಾಪಕವಾಗಿತ್ತು. ಅವರೊಬ್ಬ ವಿವೇಕಶಾಲಿ, ಬುದ್ಧಿವಂತ ಮತ್ತು ಸಹಿಷ್ಣುತೆಯ ದೃಷ್ಟಿಕೋನವುಳ್ಳವರಾಗಿದ್ದರು. ಪ್ಲೆಖನೊವ್ ಅವರು "ಇತಿಹಾಸದಲ್ಲಿ ವ್ಯಕ್ತಿಯ ಪಾತ್ರ" ಎಂಬುದರಲ್ಲಿ ಅವರು ನೀಡಿದ ಒಬ್ಬ ಮಹಾನುಭಾವನ ನಿರ್ವಚನದ ಪ್ರಕಾರ ಶಾಹುರವರು ಒಬ್ಬ ಮಹಾಶಯ ಮಾನವರಾಗಿದ್ದರು. ಅಪವಾದದ ಮನುಷ್ಯ (ಅಸಾಮಾನ್ಯ ಮನುಷ್ಯ) ಇತಿಹಾಸದಲ್ಲಿ ನಿರ್ವಹಿಸುವ ಪಾತ್ರದ ಬಗ್ಗೆ ವಿವರಿಸುತ್ತಾ ಪ್ಲೆಖನೊವ್ ಅವರು ತಮ್ಮ ಪ್ರಬಂಧದಲ್ಲಿ "ಸಾಮಾನ್ಯ ಮತ್ತು ವಿಶಿಷ್ಟ ಕಾರಣಗಳ ಪರಿಣಾಮವಾಗಿ ಉಂಟಾಗುವ ತನ್ನ ಕಾಲದ ಅಗತ್ಯಗಳ ಮಹಾನ್ ಸಾಮಾಜಿಕ ಅಗತ್ಯಗಳನ್ನು ಪೂರೈಸಲು ಸಮರ್ಥರನ್ನಾಗಿ ಮಾಡುವ ಗುಣಗಳನ್ನು ಹೊಂದಿದವನೇ ಮಹಾನ್ ವ್ಯಕ್ತಿ, ಅಂಥ ಮಹಾನ್ ವ್ಯಕ್ತಿ ಪ್ರಾರಂಭದವನಾಗಿದ್ದು ಖಚಿತವಾಗಿ ಇತರರಿಗಿಂತ ಬಹಳ ದೂರ ನೋಡುತ್ತಾನೆ ಮತ್ತು ಇತರರಿಗಿಂತ ಹೆಚ್ಚು ಬಲಿಷ್ಠವಾಗಿ ಆಶಿಸುತ್ತಾನೆ.

ನಿಸ್ಸಂದೇಹವಾಗಿ, ಶಾಹುರವರು ತಮ್ಮ ಸಮಕಾಲದವರಿಗಿಂತ ಬಹಳ ದೂರಗಾಮಿಯಾಗಿದ್ದರು, ಇತರರಿಗಿಂತ ಮಿಗಿಲಾಗಿ ಕೆಳವರ್ಗಗಳ ಉನ್ನತೀಕರಣವನ್ನು ಬಯಸಿದ್ದರು. ಒಬ್ಬ ಮಹಾನ್ ಸಾಮಾಜಿಕ ವ್ಯಕ್ತಿಯಿಂದ ಇತಿಹಾಸ ರೂಪುಗೊಳ್ಳುತ್ತದೆ. ಶಾಹುನಂತಹ ಮಹಾನ್ ವ್ಯಕ್ತಿಯು ಸಾಮಾಜಿಕ ಶಕ್ತಿಗಳ ಉತ್ಪನ್ನವಾಗುತ್ತಾನೆ. ಅಂತಹ ಒಂದು ಹೊಸ ಸಾಮಾಜಿಕ ವ್ಯವಸ್ಥೆಗಾಗಿ ಅವುಗಳು ಒತ್ತಡ ಹಾಕುತ್ತವೆ. ಇಪ್ಪತ್ತನೇ ಶತಮಾನದ ಮೊದಲ ಕಾಲುಭಾಗದಲ್ಲಿ (೨೫ ವರ್ಷಗಳಲ್ಲಿ) ಅಶಾಂತಿಗೆ ಹೊಣೆಯಾಗಿದ್ದವರು ಭಾರತದಲ್ಲಿ ಶಾಹು ಮತ್ತು ಡಾ.ನಾಯರ್ ಅವರು. ಶಾಹುರವರಂತೆ ಭಾರತದಲ್ಲಿ ಯಾರು ಒಬ್ಬ ಮಹಾನ್ ಸಾಮಾಜಿಕ ಮತ್ತು ಸಾರ್ವಜನಿಕ ಗಣ್ಯವ್ಯಕ್ತಿಯಾಗಿದ್ದವರು ಭಾರತದ ಯಾವ ಮಹಾರಾಜನೂ ಆಗಿರಲಿಲ್ಲ. ಬಡವರಿಗಾಗಿ ಅವರ ಹೃದಯ ತಳಮಳಗೊಂಡಿತು ಮತ್ತು ಅವರ ಕಣ್ಣಲ್ಲಿ ನೀರು ಹರಿಯಿತು.

ಶಾಹುರವರ ಸಫಲತೆಯ ಗುಟ್ಟು ಅವರ ಉತ್ತಮ ಗುರಿ ಮತ್ತು ನಿಸ್ವಾರ್ಥ ಸೇವೆಯಾಗಿತ್ತು. ಸರಕಾರದ ನೈತಿಕ ಮತ್ತು ಭೌತಿಕ ಸಫಲತೆಯನ್ನು ಜನರಿಗೆ ಖಾತರಿಗೊಳಿಸುವ ಸಲುವಾಗಿ ವಾಸ್ತವಿಕವಾಗಿ ಮತ್ತು ಸರಿಯಾಗಿ ರಾಜ್ಯಭಾರ ಮಾಡುವುದಕ್ಕೆ ರಾಜನ ಪಟ್ಟವನ್ನು ಅಂಗೀಕರಿಸಬೇಕೆಂದು ಒಮ್ಮೆ ಅವರು ಹೇಳಿದ್ದರು ಮತ್ತು ಅವರು ಅದರ ಪ್ರಕಾರವಾಗಿ ನಡೆದುಕೊಂಡರು ಕೂಡ.

ಶಾಹುರವರು ಒಂದು ಹೊಸ ಸಮಾಜದ ಮತ್ತು ಒಂದು ಹೊಸ ಜಗತ್ತಿನ ನಿರ್ಮಾಣಕ್ಕಾಗಿ ಅವರು ಐತಿಹಾಸಿಕ ಪಾತ್ರವನ್ನು ಭವ್ಯವಾಗಿ ನಿರ್ವಹಿಸಿದರು. ಅಮಾನವೀಕರಿಸುವ ಶಕ್ತಿಗಳ ವಿರುದ್ಧ ಮಾನವೀಯತೆಯ ಬೆಳಗುವ ತತ್ವಗಳ ಪ್ರಚಂಡ ವಿಜಯದ ಕತ್ತಲಿನ ಬದಲಿಗೆ ಬೆಳಕನ್ನು ಸ್ಥಾಪಿಸುವುದಕ್ಕೆ ಇದೊಂದು ಉತ್ತಮ ನಾಟಕವಾಗಿತ್ತು. ಪ್ಲೇಟೋ ಅವರು ತತ್ವಜ್ಞಾನಿಗಳು ಮಹಾರಾಜರಾಗುತ್ತಾರೆಂಬ ಕಾಲದ ಕನಸು ಕಂಡಿದ್ದರು. ಮಹಾರಾಜರು ಸಾಮಾಜಿಕ ಕ್ರಾಂತಿಕಾರಿಗಳಾಗುವ ದಿನವನ್ನು ಕಂಡಿರಲಿಲ್ಲ.

ಶಾಹು ಮಹಾರಾಜರು ತರ್ಕದ ಆಧಾರದ ಮೇರೆಗೆ ಸಮಾನತೆ ಮತ್ತು ಸ್ವಾತಂತ್ರ್ಯದ ಒಂದು ಹೊಸ ಸಾಮಾಜಿಕ ವ್ಯವಸ್ಥೆಯ ಕನಸು ಕಂಡಿದ್ದರು. ಅದು ಭವಿಷ್ಯದ ಭಾರತೀಯ ಸಮಾಜವಾಗಿತ್ತು.

ಕಾರ್ಮಿಕರನ್ನು ಅಧಿಕಾರಕ್ಕೇರಿಸುವ ಅಸ್ಪೃಶ್ಯತೆಯ ಮೂಲ (ಬೇರು) ಮತ್ತು ಕೊಂಬೆಗಳನ್ನು ನಾಶಮಾಡುವ ಮತ್ತು ಸಾಮಾನ್ಯ ಮನುಷ್ಯನ ಸ್ಥಾನಮಾನ ಹೆಚ್ಚಿಸುವ ಅವರ ಸಿದ್ಧಾಂತವು ಭಾರತದ ಸಂವಿಧಾನದ ಮಾರ್ಗದರ್ಶಕ ತತ್ವಗಳ ನಿರೂಪಣೆಯಲ್ಲಿ ತಿಳಿಸಿರುವ ಸಾಮಾಜಿಕ ಮತ್ತು ಆರ್ಥಿಕ ಜನತಂತ್ರದ ಆದರ್ಶದಲ್ಲಿ ಸ್ವತಂತ್ರ ಭಾರತಕ್ಕೆ ಬಂದು ಸೇರಿಕೊಂಡಿದೆ.

ಶಾಹು ಮಹಾರಾಜರು ನಿಜವಾಗಿಯೂ ಒಬ್ಬ ಮಹಾತ್ಮ. ಸರಳ ಸ್ವಭಾವದ ಮಹಾನುಭಾವ ಮತ್ತು ಒಬ್ಬ ಜನರ ಸಾಮಾಜಿಕ ತತ್ವಜ್ಞಾನಿ. ಮಹಾತ್ಮ ಫುಲೆಯವರ ಮರಣಾನಂತರ ಅವರು ಲಕ್ಷಾಂತರ ಅಸ್ಪೃಶ್ಯ ಮತ್ತು ಹಿಂದುಳಿದ ವರ್ಗಗಳ ಜನರ ಹೃದಯಗಳಲ್ಲಿ ಆಶಾಕಿರಣವನ್ನು ಹಚ್ಚಿದ್ದಾರೆ. ಈ ಮಹಾ ಸಾಧನೆಯೊಂದೇ ಇಂಡಿಯಾದ ಇತಿಹಾಸದಲ್ಲಿ ಸ್ಥಾನ ಪಡೆಯಲು ಅರ್ಹರಾಗಿದ್ದಾರೆ. ಅವರು ಮಹಾರಾಜರಾಗಿದ್ದೂ ಭಾರತದ ಸರಕಾರವು ಕಾರ್ಮಿಕರ ಪರವಾಗಿ ಸರಕಾರವಾಗಬೇಕೆಂದು ಕನಸು ಕಂಡಿದ್ದರು. ಅವರು ಒಬ್ಬ ನಾಯಕರಾಗಿದ್ದೂ ಗಿರಣಿಗಳು ಮತ್ತು ಕೈಗಾರಿಕೆಗಳು ಬಂಡವಾಳವಾದಿ ಮತ್ತು ಲಕ್ಷಾಧಿಪತಿಗಳ ಕೈ ಸೇರದೆ ಅವುಗಳ ಜನರ ಕೈಯಲ್ಲಿರಬೇಕೆಂದು ಪ್ರತಿಪಾದಿಸಿದ್ದರು. ಅವರು ಒಬ್ಬ ಆಡಳಿತಗಾರರಾಗಿ ಶಿಕ್ಷಣದ ನಿರಂತರ ದೀಪವನ್ನು ಹಚ್ಚಿದ್ದರು. ಅದು ಮಹಾರಾಷ್ಟ್ರದಲ್ಲೆಲ್ಲ ಬೆಳಗುತ್ತಿದೆ. ಅವರು ಒಬ್ಬ ಮಹಾರಾಜರಾಗಿ ಶಾಂತಿಯು ಯುದ್ಧದ ಮೇಲೆ ಜಯಸಾಧಿಸುತ್ತದೆ ಎಂಬ ಸೂತ್ರದಲ್ಲಿ ನಂಬಿಕೆಯಿಟ್ಟಿದ್ದರು.

ಆದ್ದರಿಂದ ಭಾರತದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಜನತಂತ್ರ ಸಫಲತೆ ಹೆಚ್ಚಾಗುವ ಮೂಲಕ ಶಾಹುರವರ ವ್ಯಕ್ತಿತ್ವ ದಿವ್ಯವಾಗಿ ಬೆಳಗುತ್ತಿದೆ. ಅವರನ್ನು ಎಂದೆಂದಿಗೂ ಜನರು ಕೃತಜ್ಞತೆ ಮತ್ತು ಮಮತೆಯಿಂದ ನೆನಪಿಸಿಕೊಳ್ಳುತ್ತಾರೆ. ಭಾರತದ ಇತಿಹಾಸದಲ್ಲಿ ಅವರ ಹೆಸರನ್ನು ಸುವರ್ಣ ಅಕ್ಷರಗಳಲ್ಲಿ ಬರೆಯಲಾಗುವುದು. ಮನುಷ್ಯನು ತನ್ನ ಜೀವನದಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸುತ್ತಾನೆ.

ಶಿವಾಜಿ ಮಹಾಶಯನ ನಂತರದ ರಾಜರ್ಷಿ ಶಾಹು ಛತ್ರಪತಿಯವರು ತಮ್ಮ ಅದಮ್ಯ, ನಿಸ್ವಾರ್ಥ ಮತ್ತು ಸಾಧು ಸ್ವಭಾವದ ಮಹಾರಾಜರಾಗಿ ಮಹಾರಾಷ್ಟ್ರದಲ್ಲಿ ರುಜುವಾತಾಗಿದ್ದಾರೆ. ಅವರು ನಿಜವಾಗಿಯೂ ಒಬ್ಬ ಮಹಾನ್ ಸಾಮಾಜಿಕ ವ್ಯಕ್ತಿ, ಒಬ್ಬ ಕ್ರಾಂತಿಕಾರಿ ರಾಜ, ಜನತಾಂತ್ರಿಕ ಪತ್ರಿಕೋದ್ಯಮದ ಒಬ್ಬ ಬೆಂಬಲಿಗ, ಭಾರತೀಯ ಸಂಗೀತದ ಒಬ್ಬ ಉತ್ತೇಜಕ, ಮರಾಠಿ ರಂಗಭೂಮಿಯ ಒಬ್ಬ ನಿರ್ಮಾಪಕ, ಕುಸ್ತಿಕಲೆಯ ಒಬ್ಬ ಪೋಷಕ, ಆಧುನಿಕ ಮಹಾರಾಷ್ಟ್ರದ ಒಬ್ಬ ನಿರ್ಮಾಪಕ, ಭಾರತದಲ್ಲಿ ಹಸಿರು ಕ್ರಾಂತಿಯ ಒಬ್ಬ ಪಿತಾಮಹ, ಭಾರತದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಜನತಂತ್ರದ ಸ್ಥಾಪಕರಲ್ಲಿ ಒಬ್ಬ.

*(ಶಾಹು ಛತ್ರಪತಿ–ಒಬ್ಬ ಕ್ರಾಂತಿಕಾರಿ ರಾಜ ಎಂಬ ಗ್ರಂಥದಿಂದ ಕೃತಜ್ಞತೆಗಳೊಂದಿಗೆ ಸ್ವೀಕರಿಸಲಾಗಿದೆ)*

---

೮

# ಛತ್ರಪತಿ ಶಾಹು: ಒಬ್ಬ ಜನತೆಯ ದೇವರು

**ಡಾ. ಎ. ಎಚ್. ಸಾಲುಂಖೆ**
*ಸಂಸ್ಕೃತಿ, ಧರ್ಮ ಮತ್ತು ತತ್ವಜ್ಞಾನದ ವಿದ್ವಾಂಸರು*

## ಬಲಿರಾಜ ಮತ್ತು ಛತ್ರಪತಿ ಶಾಹು

**ಪ್ರಾ**ಚೀನ ಭಾರತದ ಚಾರ್ವಾಕದರ್ಶನ ನಾನು ಗಂಭೀರವಾಗಿ ಮಗ್ನವಾಗಿರುವ ತತ್ವಜ್ಞಾನದ ಸಂಪೂರ್ಣವಾಗಿ ಭಿನ್ನವಾಗಿರುವ ಒಂದು ಶಾಖೆ. ಈ ಪಂಥವು ದೈವಿಕ ಅಥವಾ ಅತಿಮಾನವರೂಪದ ದೇವರ ಅಸ್ತಿತ್ವವನ್ನು ನಿರಾಕರಿಸುತ್ತದೆ. ಯಾರಾದರೂ ದೇವರಲ್ಲಿನ ನಂಬಿಕೆಯನ್ನು ಒತ್ತಾಯಿಸಿದರೆ ಚಾರ್ವಾಕರು "ಜನರಿಂದ ಒಪ್ಪಿತನಾದವನೇ ದೇವರೆಂದು" ಪ್ರತಿಪಾದಿಸುತ್ತಾರೆ. ಯಾರಾದರೂ ಅಂತಹ ರಾಜನ ಹೆಸರನ್ನು ಹೇಳಿ ಎಂದು ಚಾರ್ವಾಕ ತತ್ವಜ್ಞಾನಿಯನ್ನು ಕೇಳಿದರೆ, ಅವನು ತಕ್ಷಣ ಬಲಿರಾಜ ಅಥವಾ ಅವರ ವಂಶದ ವಾರಸುದಾರರಲ್ಲಿ ಒಬ್ಬನನ್ನು ತಿಳಿಸುತ್ತಾರೆ. ನಾನು ಇದನ್ನು ಒಪ್ಪುವೆನು. ಆಧುನಿಕ ಯುಗದಲ್ಲಿ ಒಂದು ನಿದರ್ಶನವನ್ನು ಕೇಳಿದರೆ ನಾನು ಯಾವ ಸಂಕೋಚವಿಲ್ಲದೆ ಛತ್ರಪತಿ ಶಾಹುಮಹಾರಾಜರ ಹೆಸರನ್ನು ಹೇಳುವೆನು.

## ದೇವರು ನಿಷ್ಕರುಣಿ ಮತ್ತು ಪಕ್ಷಪಾತಿ

ಯಾರಿಗೆ ದೇವರ ಅಗತ್ಯವಿದೆ ಮತ್ತು ಏಕೆ? ಅಧಿಕಾರಸ್ಥ ಮತ್ತು ಶ್ರೀಮಂತರಿಗೆ ದೇವರ ಅಗತ್ಯವಿಲ್ಲ. ಅಸಹಾಯಕರು, ಅನಾಥರು ಮತ್ತು ದುರ್ಬಲರಿಗೆ ಜೀವನದಲ್ಲಿರುವ ಎಲ್ಲಾ ಕಷ್ಟಗಳನ್ನು ಪಾರುಮಾಡಲು ಒಬ್ಬ ಬಲಿಷ್ಠನ ಬೆಂಬಲ ಬೇಕಾಗುತ್ತದೆ. ದೇವರು ಬಡವರಿಗೆ ಅದನ್ನು ಮಾಡಲು ಶಕ್ತಿಯನ್ನು ನೀಡುವನು. ಅವರು ದೇವರನ್ನು ಪೂಜಿಸುತ್ತಾರೆ, ಅವನನ್ನು ಪ್ರಾರ್ಥಿಸುತ್ತಾರೆ, ಅವನ ಮುಂದೆ ತಮ್ಮ ಜೀವನವನ್ನೇ ಸಮರ್ಪಿಸುತ್ತಾರೆ.

ದೇವರಲ್ಲಿ ಅವರ ಶ್ರದ್ಧೆ ಎಷ್ಟೇ ಬಲವಾಗಿದ್ದರೂ, ಅವನ ಹೆಸರಿನಲ್ಲಿ ಏನೇ ಬಲಿದಾನ ಮಾಡಿದರೂ ಅವರ ಪ್ರಾರ್ಥನೆಗಳು ಎಷ್ಟು ಗಂಭೀರ ಮತ್ತು ಅನೇಕವಾಗಿದ್ದರೂ ಈ ಯಥಾಕಥಿತ ದೇವರು ಬಡವರಿಗೆ ಸಹಾಯ ಮಾಡಿದ್ದು ಕಂಡುಬರುವುದಿಲ್ಲ. ಅವರು ಬಡತನ, ಅಸಮಾನತೆ ಮತ್ತು ರೋಗರುಜಿನಗಳಿಂದ ನರಳುತ್ತಾರೆ; ಅವರು ನೈಸರ್ಗಿಕ ಮತ್ತು ಮಾನವ-ಕೃತ ದುರಂತಗಳಿಂದ ಚಿಂದಿ-ಚಿಂದಿಯಾಗುತ್ತಾರೆ; ಹಲವು ಸಂದರ್ಭಗಳಲ್ಲಿ ಸಂಪೂರ್ಣವಾಗಿ ನಾಶವಾಗಿಬಿಡುತ್ತಾರೆ. ಮತ್ತೊಂದು ಕಡೆಗೆ ಶ್ರೀಮಂತರು ಮತ್ತು ಅಧಿಕಾರಸ್ಥರು ಅನೈತಿಕತೆಯ ಕಗ್ಗತ್ತಲಿನಲ್ಲಿ ಮತ್ತು ನಿರಂತರಗೊಳಿಸುವ ಅನ್ಯಾಯದಲ್ಲಿ ಬದುಕುತ್ತಿದ್ದರೂ ಅವರು ಜೀವನದ ಸಂತೋಷಕರವಾದ ಎಲ್ಲಾ ಪ್ರಯೋಜನಗಳನ್ನು ಅನುಭವಿಸುವಂತೆ ಕಾಣುತ್ತಾರೆ.

ಈಗ ದೇವರಾದವನು ಇದನ್ನು ನೋಡಿ, ಸುಮ್ಮನೆ ಇರುತ್ತಾನೆ. ಆಗ ಖಂಡಿತವಾಗಿ ಅವನು ನಿಷ್ಕರುಣಿ ಮತ್ತು ಪಕ್ಷಪಾತಿಯಾಗುತ್ತಾನೆ. ಚಾರ್ವಾಕರು ಅಂತಹ ದೇವರು ನಮಗೆ ಬೇಕಾಗಿಲ್ಲ ಅಥವಾ ಅಂಥವನ ಅಸ್ತಿತ್ವವನ್ನು ಒಪ್ಪಬೇಕಾಗಿಲ್ಲ. ನಾವು ದೇವರನ್ನು ನಿರಾಕರಿಸಿದರೆ, ಸಾಮಾನ್ಯ ಜನರ ನೆಮ್ಮದಿಗಾಗಿ ಏನಾದರೂ ಬೇಕಾಗುತ್ತದೆ. ಆದ್ದರಿಂದ ವಾಸ್ತವಿಕ ಜೀವನದಲ್ಲಿ ಬಡವರ ಕಣ್ಣೀರನ್ನು ಒರೆಸುವವನು, ಅವರ ದಿನನಿತ್ಯದ ಊಟಕ್ಕಾಗಿ ಊಟವನ್ನು ವ್ಯವಸ್ಥೆಮಾಡುವವನು, ಶಿಕ್ಷಣ ಒದಗಿಸುವವನು, ಆರೋಗ್ಯಕರ ಜೀವನ ನಡೆಸುವುದಕ್ಕೆ ಅವರಿಗೆ ಬೆಳೆಸಿಕೊಳ್ಳಲು ಸಹಾಯ ಮಾಡುವವನು ತಮ್ಮ ವಿರುದ್ಧವಿರುವ ಅಸಮಾನತೆ ಮತ್ತು ಅನ್ಯಾಯವನ್ನು ಕೊನೆಗಾಣಿಸುವವನು ಎಲ್ಲಾ ಮಾನವಜೀವಿಗಳನ್ನು ಸರಿಸಮನಾಗಿ ಪರಿಗಣಿಸುವವನು ಅವನೇ ದೇವರು.

## ಛತ್ರಪತಿಯವರ ನೈತಿಕ ದೈವತ್ವ

ಖಚಿತವಾಗಿ ಶಾಹುರವರ ಜೀವನದ ಪ್ರತಿಯೊಂದು ಕ್ಷಣವೂ ಈ ಪರೀಕ್ಷೆಯನ್ನು ಪಾಸುಮಾಡುತ್ತದೆ. ಅವರ ದೈವತ್ವವು ಧಾರ್ಮಿಕ ಅಥವಾ ಆಧ್ಯಾತ್ಮಿಕವಾದುದಲ್ಲ. ಅದು ಪಾರಮಾರ್ಥಿಕ ಅಥವಾ ಅತಿಮಾನುಷವೂ ಅಲ್ಲ. ಅದು ಸಾಮಾಜಿಕ, ನೈತಿಕ ಮತ್ತು ಮಾನವಿಕ ಮಟ್ಟದಲ್ಲಿ ಪರಿಪೂರ್ಣವಾಗಿ ವಾಸ್ತವಿಕವಾಗಿದೆ. ಅದು ಗೌಪ್ಯವಾದ ಪವಾಡಗಳಲ್ಲಿ ನಿರತವಾಗಿಲ್ಲ. ಇತರರು ದೋಚಿಕೊಂಡಿರುವ ಪ್ರತಿಯೊಂದು ಮಾನವತೆಯನ್ನು ಅವರವರಿಗೆ ವಾಪಸ್ಸು ಕೊಡುವ ಮಾನವ ಘನತೆಯಾಗಿದೆ ದೈವತ್ವ.

ಪೂಜಾರಿವರ್ಗದ ಜೊತೆಯಲ್ಲಿ ಮೋಜಿನ ಜೀವನ ಕಳೆದ ರಾಜರು, ಮಹಾರಾಜರು, ಸರದಾರರು, ಜಹಗೀರುದಾರರಿಗೆ ಭಾರತದಲ್ಲಿ ಯಾವ ಕೊರತೆಯೂ ಇರಲಿಲ್ಲ. ಅಧಿಕಾರಸ್ಥರೊಂದಿಗೆ ದುರ್ಬಲರನ್ನು ಶೋಷಿಸುವುದು ಯಾವುದೇ ರೀತಿಯ ಒತ್ತಡ-ಬಿಗಿತಗಳಿಲ್ಲದ ಸುಖಜೀವನದ ದಾರಿಯಾಗಿದೆ. ಛತ್ರಪತಿ ಶಾಹುರವರು ಉದ್ದೇಶಪೂರ್ವಕವಾಗಿ ಈ ಮಾರ್ಗವನ್ನು ತುಳಿಯಲು ನಿರಾಕರಿಸಿದರು. ಅವರು ತನ್ನ ರಾಜ್ಯ(ಸಂಸ್ಥಾನ)ವನ್ನು ಕಾಪಾಡಿಕೊಳ್ಳಲು ಅಧಿಕಾರಸ್ಥರೊಂದಿಗೆ ಸೇರಲು ನಿರಾಕರಿಸಿದರು. ಉದ್ದೇಶಪೂರ್ವಕವಾಗಿ ಅವರು ಸಂಪ್ರದಾಯ ಅವರಿಗೆ ನೀಡಿದ್ದ ಮಹಾಪಟ್ಟವನ್ನು ನಿರಾಕರಿಸಿದರು ಮತ್ತು ಬಡವರ, ಅಧಿಕಾರಹೀನರ ಹೆಗಲಿಗೆ ಹೆಗಲು ಕೊಟ್ಟು ನಿಲ್ಲಲು ನಿರ್ಧರಿಸಿದರು. ಅದು ಭಾರತದ ಸಾಮಾಜಿಕ ಇತಿಹಾಸದಲ್ಲಿ ಅಪವಾದಾತ್ಮಕ ಮತ್ತು ಥಳಥಳಿಸುವ ಕ್ಷಣವಾಗಿದೆ. ಸಾಮಾಜಿಕ ನ್ಯಾಯದ ಜೀವನ ನಡೆಸಿರುವವರಿಗೆ ಈ ಬಗ್ಗೆ ಮಾತನಾಡುವ ಹಕ್ಕಿದೆಯೆಂದು ಶಾಹುರವರ ನಿರ್ಧಾರ ರುಜುವಾತುಗೊಳಿಸಿದೆ.

## ಮಾನವಶಕ್ತಿಯಲ್ಲಿ ಶ್ರದ್ಧೆ

ಗುಣವು ಹುಟ್ಟಿನ ವರ್ಣ, ಜಾತಿ, ಕುಟುಂಬ ಅಥವಾ ಘನತೆಯೊಂದಿಗೆ ಯಾವುದೇ ಸಂಬಂಧವನ್ನು ಹೊಂದಿಲ್ಲ. ಪ್ರತಿಭೆಯ (ಯೋಗ್ಯತೆ) ಅವಕಾಶಗಳನ್ನು ಒದಗಿಸಿದ್ದರ ಮೇಲೆ ಹೆಚ್ಚಿಗೆ ಅವಲಂಬಿಸಿರುತ್ತದೆ. ಹಲವಾರು ತಲೆಮಾರುಗಳವರೆಗೆ ಅಜ್ಞಾನಿ ಮತ್ತು ಬಡವರಾಗಿ ಉಳಿದವರಿಗೆ ಅವಕಾಶಗಳ ಬಾಗಿಲು ತೆರೆದುಕೊಂಡಾಗ ಅವರು ಬದಲಾಗುತ್ತಾರೆ. ಅವರ ಸೃಜನಾತ್ಮಕತೆ ಅರಳುತ್ತದೆ; ಹುಳು ಒಂದು ಚಿಟ್ಟೆಯಾಗಿ ಮಾರ್ಪಡುತ್ತದೆ; ಅಜ್ಞಾನಿ ಒಬ್ಬ ಪಂಡಿತನಾಗಬಹುದು; ಒಬ್ಬ ದಡ್ಡ ವಿದ್ವಾಂಸನಾಗಬಹುದು ಮತ್ತು ಒಬ್ಬ ಅಸಂಸ್ಕೃತನು ಸುಸಂಸ್ಕೃತನಾಗಬಹುದು. ಶಾಹುಮಹಾರಾಜರು ಕೇವಲ ತುಟಿ ಸಹಾನುಭೂತಿ ತೋರಿಸದೆ

ತನ್ನ ರಾಜನ ಅಧಿಕಾರಗಳನ್ನು ತನ್ನ ನಿಜಜೀವನದಲ್ಲಿ ನ್ಯಾಯಬದ್ಧವಾಗಿ ಬಳಸುವುದೇ ಶಾಹುರವರ ಸಿದ್ಧಾಂತದ ಈ ಹುರುಳು ಮತ್ತು ಸತ್ವವಾಗಿತ್ತು. ಶಾಹು ಮಹಾರಾಜರು ಜೀವನದುದ್ದಕ್ಕೂ ಜನರ ಜೀವನದ ಬಹು ಆಯಾಮದ ಅಭಿವೃದ್ಧಿಗಾಗಿ ಪ್ರಾಥಮಿಕ ಶಿಕ್ಷಣ, ಹುಡುಗಿಯರ ಶಿಕ್ಷಣ, ದಲಿತರ ಶಿಕ್ಷಣ, ಶಿಕ್ಷಣ ಮತ್ತು ಹುದ್ದೆಗಳಲ್ಲಿ ಮೀಸಲಾತಿ, ದಲಿತ ಮತ್ತು ಹಿಂದುಳಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯ ಸ್ಥಾಪನೆ, ಅಸ್ಪೃಶ್ಯತೆಯ ವಿರುದ್ಧ ಹೋರಾಟ, ಅಪರಾಧಿ ಪಂಗಡಗಳ ಜಾತಿಗಳ ಅಭಿವೃದ್ಧಿ, ವಾಣಿಜ್ಯ ಮತ್ತು ಕೈಗಾರಿಕೆಯ ಅಭಿವೃದ್ಧಿ, ಸಾಹಸೋದ್ಯಮ, ಕೃಷಿ, ನೀರಾವರಿ ಮೊದಲಾದವುಗಳನ್ನು ಜಾರಿಗೊಳಿಸುವ ಸಲುವಾಗಿ ಪ್ರಯತ್ನ ಮಾಡಿದರು.

ಶಾಹುರವರು ಮಾನವ ಸಾಮರ್ಥ್ಯಗಳ ಬಗ್ಗೆ ದೃಢವಾಗಿ ನಂಬಿದ್ದರು. ಮೂರ್ಖ, ಅದಕ್ಷ, ಅಸಮರ್ಥ ವ್ಯಕ್ತಿಯು ಅಪಾರವಾದ ಶಕ್ತಿ–ಸಾಮರ್ಥ್ಯವನ್ನು ಮತ್ತು ಉನ್ನತಮಟ್ಟದ ಪ್ರತಿಭೆ ಮತ್ತು ವಿಲಕ್ಷಣವಾದ ಶಕ್ತಿಯನ್ನು ಹೊಂದಿರುತ್ತಾನೆ. ಆದರೆ ಉನ್ನತ ಸ್ಥಾನಗಳಲ್ಲಿರುವ ಸಾಮಾಜಿಕ ನಾಯಕರು ಮತ್ತು ಜನರು ದೂರದೃಷ್ಟಿ ಮತ್ತು ಇಚ್ಛಾಶಕ್ತಿಯನ್ನು ಹೊಂದಿ ಅರ್ಥಮಾಡಿಕೊಂಡು ಆ ಪ್ರತಿಭೆಯನ್ನು ಪೋಷಿಸಬೇಕೆಂದು ಶಾಹು ಪರಿಭಾವಿಸಿದ್ದರು. ಶಾಹುರವರ ಜೀವನದ ಒಂದು ಘಟನೆಯು ದಮನಿತರಿಗೆ ಅವಕಾಶಗಳನ್ನು ಕಲ್ಪಿಸುವ ಅವರ ಮುನ್ನೋಟ ಮತ್ತು ದೃಢಸಂಕಲ್ಪವನ್ನು ತಿಳಿಸುವ ಅವಶ್ಯಕತೆಯನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ. ಶಾಹುರವರು ಉತ್ತಮ ಜಾತಿಯ ನ್ಯಾಯಾಧೀಶರ ಕಛೇರಿಯಲ್ಲಿ ಹಿಂದುಳಿದ ಜಾತಿಯ ವ್ಯಕ್ತಿಯನ್ನು ಒಬ್ಬ ಗುಮಾಸ್ತನನ್ನು ನೇಮಕ ಮಾಡಿದರು. ನ್ಯಾಯಾಧೀಶರಿಗೆ ಕಸಿವಿಸಿಯಾಯಿತು ಮತ್ತು ಗುಮಾಸ್ತನ ಅದಕ್ಷತೆಯ ಬಗ್ಗೆ ಗುರ್‌ಗುಟ್ಟಿಕೊಂಡು ನೋಡತೊಡಗಿದರು. ಅವರು ತಪ್ಪುಗಳನ್ನು ಹುಡುಕುವ, ದಂಡ ವಿಧಿಸುವ ಮತ್ತು ಅವನ ಸಂಬಳವನ್ನು ತಡೆಹಿಡಿಯುವ ಮೂಲಕ ಕಿರುಕುಳ ಕೊಡುತ್ತಿದ್ದರು. ಶಾಹುರವರು ವಿಚಾರಣೆ ಮಾಡಿದಾಗ ನ್ಯಾಯಾಧೀಶನು ಆ ವ್ಯಕ್ತಿಗೆ ಕಲಿಯಲು ಯಾವುದೇ ಸಾಮರ್ಥ್ಯವಿಲ್ಲವೆಂದು ಹೇಳಿದನು. ಶಾಹುರವರು ನ್ಯಾಯಾಧೀಶನು ಕೆಳದರ್ಜೆಯ ಗುಮಾಸ್ತನಿಗೆ ಕಲಿಸುವುದರಲ್ಲಿ ಅಸಮರ್ಥರಿದ್ದಾರೆಂಬ ಕಾರಣಕ್ಕಾಗಿ ನಿಮ್ಮ ಸಂಬಳವನ್ನು ತಡೆಹಿಡಿಯಲೇ ಎಂದು ಎಚ್ಚರಿಸಿದರು. ನ್ಯಾಯಾಧೀಶ ಅಂತಿಮವಾಗಿ ಪಟ್ಟು ಸಡಿಲಿಸಿದರು. ಯಾವುದೇ ವ್ಯಕ್ತಿಗೆ ಅವಕಾಶ ನೀಡಿದರೆ, ಸರಿಯಾಗಿ ಕಲಿಸಿದರೆ, ಆತ್ಮವಿಶ್ವಾಸ ತುಂಬುವುದಕ್ಕೆ ಪ್ರಯತ್ನಿಸಿದರೆ ಅವನು ಕಠಿಣವಾದ ಕೆಲಸವನ್ನು ಸಮರ್ಥವಾಗಿ ನಿಭಾಯಿಸುತ್ತಾನೆ ಎಂಬುದು ಶಾಹುರವರ ಮುಖ್ಯ ಅಂಶವಾಗಿತ್ತು.

### ಕಠಿಣ ಕೆಲಸ

ಸಂವೇದನಾಶೀಲರಾದ ವ್ಯಕ್ತಿಯಾದ ಶಾಹುರವರು ನ್ಯಾಯದ ಬಗ್ಗೆ ಪರಿಪಕ್ವವಾದ ಪ್ರಜ್ಞೆಯನ್ನು ಹೊಂದಿದ್ದರು. ಅವರು ಅನ್ಯಾಯ ಮತ್ತು ಶೋಷಣೆಗೊಳಗಾದ ಬಲಿಪಶುಗಳ ಬಗ್ಗೆ ಸಹಾನುಭೂತಿ ಹೊಂದಿದ್ದರು. ಅವರ ಏಳಿಗೆಗಾಗಿ ಅವರ ಹೃದಯ ತಳಮಳಿಸುತ್ತಿತ್ತು. ದಮನಿತರ ಏಳಿಗೆಗಾಗಿ ಅವರ ಭಾವನಾತ್ಮಕ ತೊಡಗಿಸಿಕೊಳ್ಳುವಿಕೆಯು ಅವರ ಇಚ್ಛಾಶಕ್ತಿಗೆ ಸಹಾಯ ಮಾಡುತ್ತಿತ್ತು. ಅವರು ಬಡವರ ಮತ್ತು ದಮನಿತರ ಏಳಿಗೆಗಾಗಿ ಅವಕಾಶಗಳನ್ನು ತೆರೆಯುವುದರಲ್ಲಿ ತಮ್ಮ ಅಧಿಕಾರವನ್ನು ಬಳಸಲು ತಮ್ಮ ಇಡೀ ಜೀವನದುದ್ದಕ್ಕೂ ಬಹಳ ಕಷ್ಟಪಟ್ಟು ದುಡಿದರು.... ಅವರು ಬಹುಜನ ಸಮಾಜಕ್ಕೆ ನ್ಯಾಯದಿಂದ ಬೆಳಗುವ ಒಂದು ಹೊಸ ಜಗತ್ತನ್ನು ನಿರ್ಮಿಸಿದರು. ಅವರು ಒಂದು ಹೊಸ ಸಮಾಜವನ್ನೇ ನಿರ್ಮಿಸಿದರು.

ಸಂವೇದನಾಶೀಲತೆ, ಸಹಾನುಭೂತಿ ಮತ್ತು ಕರುಣೆಗಳ ಒಂದು ಹೊಸ ಸಮಾಜವನ್ನು ನಿರ್ಮಿಸಲು ಸಾಕಾಗುವುದಿಲ್ಲ. ಶೋಷಿತ ವರ್ಗವು ಸಮಾಜದಲ್ಲಿ ತಮ್ಮ ಪ್ರಾಮುಖ್ಯತೆ ಕಡಿಮೆಯಾಯಿತೆಂದು ಅದು ಭಾವಿಸುತ್ತದೆ ಮತ್ತು ಬಡವರಿಗೆ ಪ್ರಗತಿಯ ಅವಕಾಶಗಳನ್ನು ನೀಡಿದರೆ ಬಹುಸಂಖ್ಯಾತರು ಸುಖಸೋತೋಪಷಗಳ ಒಂದು ಪಾಲನ್ನು ಕೊಡಿ ಎಂದು ಕೇಳುವರು. ಅದು (ಶೋಷಕ) ಕೆಳವರ್ಗಗಳು ಮೇಲೆ ಬರುವುದನ್ನು (ಅಭಿವೃದ್ಧಿ ಹೊಂದುವುದನ್ನು) ಮತ್ತೆಮತ್ತೆ ತುಳಿಯುತ್ತದೆ. ಮತ್ತು ಅದೇ ಸಮಯದಲ್ಲಿ ಕೆಳವರ್ಗಗಳು ಮೇಲೆ ಬರುವುದಕ್ಕೆ ಸಹಾಯ ಮಾಡುವವರನ್ನು ನಾಶಮಾಡಲು ಹೊಸ ಹೊಸ ತಂತ್ರಗಳನ್ನು ಹೂಡುತ್ತದೆ. ಬಡವರ ಪರವಾಗಿ ನಿಲ್ಲುವುದು ಬಡವರ ಬೆವರಿನಿಂದ ಶ್ರೀಮಂತರಾಗುವವರ ಶತ್ರುತ್ವವನ್ನು ಕಟ್ಟಿಕೊಂಡಂತೆಯೇ. ಈ ಶಕ್ತಿಯುತ ಶ್ರೀಮಂತ ಜನರು ಸಾಮಾಜಿಕ ಜೀವನದ ಮೇಲೆ ತಮ್ಮ ಕಪಿಮುಷ್ಠಿಯನ್ನು ಹೊಂದಿರುತ್ತಾರೆ. ಅವರು ಅಧಿಕಾರ, ಅಸಂವೇದನಾಶಿಲತೆ ಮತ್ತು ಯಾವುದೇ ನೈತಿಕ ವಿವೇಚನೆಯಿಲ್ಲದ ಕ್ರೌರ್ಯದಿಂದ ಮತ್ತರಾಗಿರುತ್ತಾರೆ. ಬಡವರ ಬಗ್ಗೆ ಸಹಾನುಭೂತಿ ಹೊಂದಿರುವವರು ಅವರ ಕೋಪದ ತಾಪವನ್ನು ಅನುಭವಿಸಬೇಕಾಗುತ್ತದೆ. ಶಾಹುರವರು ತಮ್ಮ ಹಾದಿಯಿಂದ ಸ್ವಲ್ಪವೂ ಕದಲದೆ ಹಾಗೆಯೇ ದೃಢವಾಗಿ ನಿಂತು ಈ ವರ್ಗಗಳ ಅವಮಾನ, ಮಾನನಷ್ಟಗಳನ್ನು ನುಂಗಿಕೊಂಡರು ಮತ್ತು ವಿಕೃತ ಪ್ರಚಾರದ ಅಪಶೃತಿಗಳನ್ನು ಶಾಹುರವರು ಎದುರಿಸಿ ನಿಂತದ್ದು ಅವರ ದೊಡ್ಡತನವಾಗಿದೆ. ಅವರ ಪ್ರಾಣ ತೆಗೆಯುವುದಕ್ಕೆ ಹಲವಾರು ಪ್ರಯತ್ನಗಳನ್ನು ನಡೆಸಲಾಯಿತು. ಹಲವರು ಅವರ ಸಾವನ್ನು ಸಂಭ್ರಮದಿಂದ ಆಚರಿಸಿದರು.

ಶಾಹುರವರು ತಮ್ಮ ನೈತಿಕಬಲ, ಸಮಾನತೆ ಬಗ್ಗೆ ಅವರಿಗಿದ್ದ ಅಗಾಧವಾದ ಬದ್ಧತೆ ಮತ್ತು ಪರಿಣಾಮಕಾರಿ ಕ್ರಿಯಾಶೀಲತೆಯಿಂದ ಮಾತುಗಳನ್ನು ಕಾರ್ಯರೂಪಕ್ಕಿಳಿಸುವ ಇಚ್ಛಾಶಕ್ತಿಗಳಿಂದ ಗಣ್ಯವ್ಯಕ್ತಿಗಳ (ಮೇಲುಜಾತಿಗಳ) ವಿಷಕಾರಿಯಾದ ಕೂಗಾಟ–ಅಬ್ಬರಗಳನ್ನು ನುಂಗಿ ಸಹನೆಯಿಂದಿದ್ದರು. ಅವರು ಈ ವಿಷವನ್ನು ನುಂಗುವುದರ ಮೂಲಕ ಅವರು ಬಡವರನ್ನು ಈ ಭಯಂಕರ ವಿಷದ ದಾಳಿಯಿಂದ ರಕ್ಷಿಸಿದರು. ಅವರು ಬಡವರ ಜೀವನದಲ್ಲಿ ಬೆಳಕನ್ನು ಹಚ್ಚಿದರು ಮತ್ತು ಅವರ ಜೀವನವನ್ನು ಸುಖಮಯಗೊಳಿಸಿದರು. ಅವರು ಬಡವರ ಹಾದಿಯಲ್ಲಿದ್ದ ಮುಳ್ಳುಗಳನ್ನು ತೆಗೆದುಹಾಕಿ ಹೂವುಗಳನ್ನು ಹರಡಿದರು. ಅವರ ಜೀವನದ ಗುಣಮಟ್ಟವೇ ಬದಲಾಯಿತು. ಅವರು ಕನಸು ಕಾಣುವ ಹಕ್ಕನ್ನು ಹೊಂದಿದ್ದಾರೆಂಬ ಜಾಗೃತಿಯನ್ನು ಅವರಲ್ಲಿ ಮೂಡಿಸಿದರು. ಇಂದು ದಮನಿತರ ಬಹುಸಂಖ್ಯಾತರ ಬಲಿಷ್ಠ ಪ್ರವಾಹವು ಮಹಾನದಿಯಂತೆ ಮಹಾವೇಗದಲ್ಲಿ ಹರಿಯುತ್ತಿದೆ. ಈ ಕೀರ್ತಿಯು ನಿಷ್ಕಪಟಿ, ಪರಿಶುದ್ಧ ಹೃದಯವಂತ, ಮಹಾ ಮಾನವಜೀವಿಯಾದ ಶಾಹು ಮಹಾರಾಜರಿಗೆ ಸಲ್ಲಬೇಕು. ನಮ್ಮ ತುಟಿಗಳ ಮೇಲಿರುವ ನಗು ಅವರು ನಿರ್ಮಿಸಿದ್ದು. ನಾನು ದಿವ್ಯ ದೇವರನ್ನು ಕಂಡಿಲ್ಲ. ಆದರೆ ಯಾವ ಅನುಮಾನವಿಲ್ಲದೆ, ಶಾಹುರವರೇ ನಮ್ಮ ದೇವರು. ಶಾಹುರವರು ಜನರ ಕಷ್ಟಗಳೇ ತಮ್ಮ ಕಷ್ಟಗಳೆಂದು ಬಗೆದು ಅವರು ಸಾಮಾಜಿಕ ಕೆಸರಿನಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದ ಜನರಿಗೆ ಕೈ ನೀಡಿ ಮೇಲಕ್ಕೆತ್ತಿದರು ಮತ್ತು ನಾವು ಯಥಾಕಥಿತ ದೇವರಿಂದ ನಿರೀಕ್ಷಿಸುವ ಅಪೇಕ್ಷೆಗಳ ಸಾಧನೆಯನ್ನು ಅವರು ಸಾಧಿಸಿಕೊಟ್ಟರು. ಅಂಥ ಶಾಹುರವರನ್ನೇ ಜನತೆ ಪವಿತ್ರಗೊಳಿಸಿ ದೇವರೆಂದು ಪ್ರತಿಷ್ಠಾಪಿಸಿದ್ದಾರೆ.

---

೯

# ರಾಜರ್ಷಿ ಶಾಹು: ಪೌರುಷ ಸದ್ಗುಣಗಳ ಒಂದು ದಾರಿದೀಪ

**– ಡಾ. ಜನಾರ್ಧನ ವಾಘ್‌ಮಾರೆ**

*ಸಾಹಿತಿ ಮತ್ತು ಸ್ವಾಮಿ ರಮಾನಂದತೀರ್ಥ ವಿಶ್ವವಿದ್ಯಾಲಯದ ಮಾಜಿ ಉಪ-ಕುಲಪತಿಗಳು*

ರಾಜರ್ಷಿ ಶಾಹುರವರ ಜೀವನವು ಶೆಲ್ಲಿಯವರ ಕವಿತೆ 'ಪಶ್ಚಿಮ ಮಾರುತದ ಪ್ರಗಾಥ'ದ ಕವನವನ್ನು ನೆನಪಿಸುತ್ತದೆ. ಈ ಕವಿತೆಯಲ್ಲಿ ಕವಿಯು ತನ್ನ ಚಿಂತನೆ ಮತ್ತು ಮನೋಭಾವಗಳನ್ನು ಗಹನವಾದ ಒಳದೃಷ್ಟಿ ಮತ್ತು ಸುಂದರವಾದ ಭಾಷೆಯಲ್ಲಿ ಪಶ್ಚಿಮದಿಂದ ರಭಸವಾಗಿ ಒಳನುಗ್ಗುವ ಮಾರುತಗಳನ್ನು ಕವಿಯು ವಿವರಿಸುತ್ತಾರೆ. ಶಾಹುರವರ ಬಿರುಗಾಳಿಯಂತಹ ಜೀವನ ಮತ್ತು ಪೌರುಷದ ಸ್ವಭಾವವು ಶೆಲ್ಲಿಯವರ ಕಾವ್ಯಾತ್ಮಕ ವಿವರಣೆಯ ಸರಿಯಾದ ಅಭಿವ್ಯಕ್ತಿಯಾಗಿದೆ. ಕವಿ ಬಳಸುವ ಪ್ರತಿಮೆಗಳಾದ ಪಶ್ಚಿಮದ ಮಾರುತದ ಅಪಾರವಾದ ಶಕ್ತಿಯನ್ನು ಕೊಂಡೊಯ್ಯುವುದನ್ನು ಶಾಹುರವರು ಕ್ರಾಂತಿಕಾರಿ ಜೀವನ ಮತ್ತು ಕೃತಿಗಳನ್ನು ವಿವರಿಸಲು ಪ್ರತಿಮೆಗಳನ್ನು ಬಳಸಲಾಗಿದೆ. ಈ ಕವಿತೆಯು ಸಾಮಾಜಿಕ ಕ್ರಾಂತಿಯನ್ನು ತೀವ್ರವಾಗಿ ಬಯಸುವ ಕವಿಯಿಂದ ರಚಿತವಾಗಿದೆ. ಕವಿಯು ಹಳೆಯ ಕಾಲದ ಹಣ್ಣೆಲೆಗಳನ್ನು ಉದುರಿಸುವ ಮತ್ತು ಭೂಮಿಯ ಮೇಲೆ ಹೊಸ ಜೀವನಕ್ಕಾಗಿ ಹೊಸದಾಗಿ ಬೀಜಗಳನ್ನು ಬಿತ್ತುವ ರಭಸವಾದ ಮಾರುತವನ್ನು ಆಹ್ವಾನಿಸುತ್ತಾನೆ. ಕವಿಯು ಮಾರುತವನ್ನು ನಾಳೆಯ ಮುಕ್ತವಿಶ್ವವನ್ನು ತರುವ ಸಂದೇಶವನ್ನು ವಿವರಿಸುತ್ತಾನೆ. ಅವರು ಅದನ್ನು 'ಭವಿಷ್ಯಕಥನ ಕಹಳೆ' ಎಂದು ಕರೆಯುತ್ತಾರೆ. ರಭಸವಾದ ಮಾರುತವು (ಗಾಳಿ) ಸರ್ವಾಂಗೀಣ ಕ್ರಾಂತಿಯ ಪ್ರತಿಮೆಯಾಗಿದೆ.

ಇತಿಹಾಸದಲ್ಲಿ, ಅಂತಹ ಬಿರುಗಾಳಿಗಳು ಮಾನವ ದೇಹದಲ್ಲಿ ಅವತಾರಗಳನ್ನು ತಾಳುತ್ತವೆ. ಕ್ರಾಂತಿಕಾರಿಗಳು ಒಮ್ಮೊಮ್ಮೆ ಆರ್ಭಟಿಸುವ ಬಿರುಗಾಳಿಗಳಂತೆ ಈ ವಿಶ್ವವನ್ನು ಅಲ್ಲಾಡಿಸಿಬಿಡುತ್ತಾರೆ. ರಾಜರ್ಷಿ ಶಾಹು ಸಹ ಅಂತಹ ಒಂದು ಮಹಾಬಿರುಗಾಳಿಯ ಮಾನವ ಅವತಾರಿಯಾಗಿದ್ದಾರೆ. ಶಾಹು ಮಹಾರಾಜರು ಮಹಾರಾಷ್ಟ್ರದಲ್ಲಿ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ಉನ್ನತ ಮೌಲ್ಯಗಳನ್ನು ನೆಲೆಗೊಳಿಸುವ ಸಲುವಾಗಿ ಜಿಗುಟಾದ ಮತ್ತು ಕೊಳೆತ ಕಂದಾಚಾರಗಳನ್ನು ಹೊಗಳುವ, ಈ ವರ್ಣಗಳ ಯಜಮಾನಿಕೆಯನ್ನು ಹೇರುವ ಮೂಲಕ ಸಾಮಾಜಿಕ ದಾಸ್ಯವನ್ನು ಮುಂದುವರೆಸುವ ಪ್ರವೃತ್ತಿಗಳನ್ನು ಹೊಡೆದಟ್ಟಿಸಿದ್ದರು. ಈ ಬಿರುಗಾಳಿಯ ಉದ್ರಿಕ್ತ ವಾತಾವರಣ ಮಹಾರಾಷ್ಟ್ರದ ಒರಟುಭೂಮಿಯಲ್ಲಿ ೨೮ ವರ್ಷಗಳವರೆಗಿತ್ತು. ಅದರ ಬೀಸು ಬೃಹದಾಕಾರ ಮತ್ತು ವೇಗ ಅತಿಶಯವಾಗಿತ್ತು. ಆಲ್ಬರ್ಟ್ ಕಾಮು ಒಂದು ಕ್ರಾಂತಿಯು ವಿಚಾರಲೋಕದಲ್ಲಿ ಜನ್ಮತಾಳುತ್ತದೆಯೆಂದು ಹೇಳಿದ್ದರು. ಪ್ರಗತಿಪರ ಚಿಂತನೆಗಳು ಹೊರಹೊಮ್ಮಿ ಹಳೇ ವಿಗತಿಕಾರಿ (ಪ್ರತಿಗಾಮಿ) ವಿಚಾರಗಳೊಂದಿಗೆ ಸಂಘರ್ಷಿಸಿದಾಗ ಅಲ್ಲಿ ಕ್ರಾಂತಿಯ ಕಿಡಿಗಳು ಅಡಗಿರುತ್ತವೆ.

ಸಾಮಾಜಿಕ ಕ್ರಾಂತಿಯ ಮೊದಲ ಕಿಡಿಯು ಮಹಾರಾಷ್ಟ್ರದಲ್ಲಿ ಮಹಾತ್ಮ ಫುಲೆಯವರ ಕ್ರಿಯಾಮೂಲಕ ಚಿಂತನೆಯಿಂದ ಹೊರಹೊಮ್ಮಿತು. ಅಂತಹ ಒಂದು ಕಿಡಿಯು ಒಂದು ಉರಿಯುವ ಜ್ವಾಲೆಯಾಗಿ ಮಾರ್ಪಟ್ಟಿತೆಂದು ಶಾಹು ಮಹಾರಾಜರು ಕರೆಯುತ್ತಾರೆ. ಅವರು ಸಾವಿರಾರು ವರ್ಷಗಳಿಂದಲೂ ಬ್ರಾಹ್ಮಣರು ಜನರ ಮನಸ್ಸುಗಳನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದನ್ನು ಮತ್ತು ಅವರು ಧರ್ಮದ ಹೆಸರಿನಲ್ಲಿ ಸಾಮಾಜಿಕ ಅಸಮಾನತೆಯನ್ನು ನಿರಂತರಗೊಳಿಸಿದ್ದನ್ನು ಬಲವಾಗಿ ಖಂಡಿಸಿದರು. ಅವರು ಧರ್ಮ ಮತ್ತು ಸಂಸ್ಕೃತಿಯ ಜೇಲಿನ ಗೋಡೆಗಳ ಕಲ್ಲುಗಳನ್ನು ಕಿತ್ತೆಸೆದರು ಮತ್ತು ಅವರು ತಮ್ಮ ಅಧಿಕಾರವನ್ನು ಈ ಜೈಲಿನಿಂದ ಜನರನ್ನು ಬಿಡುಗಡೆಮಾಡಲು ಬಳಸಿದರು. ಅವರ ಕೈ ಮತ್ತು ಕಾಲುಗಳಿಗೆ ಹಾಕಿದ್ದ ಸಾಂಸ್ಕೃತಿಕ ಬೇಡಿಗಳನ್ನು ಕಳಚಿಬಿಟ್ಟರು. ಶಾಹುರವರು ಪರಿಪೂರ್ಣವಾಗಿ ತಮ್ಮ ಕ್ಷತ್ರಿಯತನದ ಅಧಿಕಾರವನ್ನು ಬಳಸಿದರು ಮತ್ತು ಈ ಮಹಾಸಾಮಾಜಿಕ ಯುದ್ಧಮಾಡಲು ಕೌಶಲ್ಯಪೂರ್ಣವಾಗಿ ತಮ್ಮ ತಂತ್ರಗಳನ್ನು ಹೂಡಿದರು...

ಶಾಹುರವರ ವಿಚಾರಗಳು ಮತ್ತು ಚಿಂತನೆಗಳು ತಮ್ಮ ಇಂಗ್ಲಿಷ್ ಗುರುಗಳಾದ ಸರ್ ಎಸ್. ಎಂ. ಫ್ರೆಜರ್ ಅವರಿಂದ ರೂಪಿತಗೊಂಡವು. ಶಾಹುರವರನ್ನು 'ನಿಮಿತ್ತದ ಮನುಷ್ಯ' ಎಂದು ವಿವರಿಸಬಹುದು. ಶಾಹುರವರು ಸ್ವತಃ ತಮ್ಮ ಹಣೆಬರಹವನ್ನು ತಾವೇ ರೂಪಿಸಿಕೊಂಡ ಶಿಲ್ಪಿ. ಶಾಹುರವರ ಕೊಡುಗೆಯನ್ನು ನೆನಪಿಸಿಕೊಳ್ಳುತ್ತಾ ಫ್ರೆಜರ್ ಅವರು ಹೇಳುತ್ತಾರೆ: "ಕಗ್ಗತ್ತಲಲ್ಲಿದ್ದ ವಿಶ್ವವನ್ನು ಬೆಳಗಿಸಿದ ಆಶಾಕಿರಣ ಶಾಹು ಮಹಾರಾಜರು."

ಸಂಸ್ಥಾನದ ಅಧಿಕಾರದ ಚುಕ್ಕಾಣಿಯನ್ನು ಹಿಡಿದ ಶಾಹುಮಹಾರಾಜರು ಧಾರ್ಮಿಕ ಸ್ವಾತಂತ್ರ್ಯ, ಸಾಮಾಜಿಕ ಸಮಾನತೆ, ಆರ್ಥಿಕ ಸುಧಾರಣೆಗಳು, ಶೈಕ್ಷಣಿಕ ಅಭಿವೃದ್ಧಿಯ ಮೂಲಕ ಜ್ಞಾನದ ಬೆಳಕು ಮೊದಲಾದವುಗಳ ಕಡೆಗೆ ಸಂಸ್ಥಾನದ ರಥವನ್ನು ವೇಗವಾಗಿ ನಡೆಸಲು ತಮಗೆ ತಾವೇ ಸಿದ್ಧತೆಮಾಡಿಕೊಳ್ಳುತ್ತಾರೆ. ಮಹಾರಾಷ್ಟ್ರದ ಬಹುಜನ ಸಮಾಜ ತಗ್ಗು-ದಿಣ್ಣೆ ಗುಂಡಿಗಳಿಂದ ಕೂಡಿದ ರಸ್ತೆಯಲ್ಲಿ ಸಾಗಿ ಪ್ರಗತಿಹೊಂದುವುದಕ್ಕೆ ಸಾಧನಗಳಿರಲಿಲ್ಲ. ಹಾದಿಯು ಹಲವಾರು ತಲೆಮಾರುಗಳವರೆಗೆ ಕಗ್ಗತ್ತಲಿನಲ್ಲಿ ಮುಳುಗಿಹೋಗಿತ್ತು...

ಶಾಹುರವರು ಅಧಿಕಾರ ವಹಿಸಿಕೊಂಡಾಗ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಬ್ರಾಹ್ಮಣರಿಂದ ಖಂಡನೆಗೊಳಗಾಗಿದ್ದ ಶೂದ್ರ ಮತ್ತು ಅತಿಶೂದ್ರರನ್ನು ಕತ್ತಲಿನಿಂದ ಬೆಳಕಿನ ಕಡೆಗೆ ಹೇಗೆ ಕೊಂಡೊಯ್ಯುವುದು? ಅವರ ಸಾಮಾಜಿಕ ಮತ್ತು ಧಾರ್ಮಿಕ ಹಕ್ಕುಗಳನ್ನು ಹೇಗೆ ಪುನರ್ ಸ್ಥಾಪಿಸುವುದು? ಈ ಸಮಸ್ಯೆಗಳನ್ನು ಪರಿಹರಿಸದ ಹೊರತು ಸಂಸ್ಥಾನವು ಪ್ರಗತಿಹೊಂದುವುದಿಲ್ಲ ಎಂಬುದನ್ನು ಶಾಹುರವರು ಚೆನ್ನಾಗಿ ಮನನ ಮಾಡಿಕೊಂಡಿದ್ದರು. ನಿಯತಿಯು ತನ್ನನ್ನು ಛತ್ರಪತಿ ಶಿವಾಜಿಯ ಸಿಂಹಾಸನಕ್ಕೆ ವಾರಸುದಾರರನ್ನಾಗಿ ಮಾಡಿದೆ ಮತ್ತು ಸವಾಲಿಗೆ ಸಮನಾಗಿರಬೇಕೆಂಬ ಪ್ರಜ್ಞೆಯ ಬಗ್ಗೆ ಚಿಂತನೆ ಸದಾ ಅವರಲ್ಲಿತ್ತು. ಅವರು ಪರಿಪೂರ್ಣವಾಗಿ ಶಿವಾಜಿಯ ಆಡಳಿತದ ತಿರುಳು ಮತ್ತು ಅರ್ಥದ ಬಗ್ಗೆ ಅರಿವನ್ನು ಹೊಂದಿದ್ದರು ಮತ್ತು ಅದನ್ನೇ ಮೂರ್ತರೂಪದಲ್ಲಿ ಸಾಕಾರಗೊಳಿಸಬೇಕೆಂದು ಅವರು ನಿರ್ಧರಿಸಿದ್ದರು. "ಈ ಪೂರ್ವಯೋಜಿತ ಕಾರ್ಯವನ್ನು" ಮಾಡುವುದರಲ್ಲಿ ಅವರು ಎಲ್ಲಾ ಸಮಯದಲ್ಲಿ ಪ್ರಜ್ಞಾಪೂರ್ವಕವಾಗಿ ಆಡಳಿತ ನಡೆಸುತ್ತಿದ್ದರು.

ಅದು ಜನರ ಸಿಂಹಾಸನವಾಗಿತ್ತು ಮತ್ತು ರಾಜ್ಯದ ನಿಜವಾದ ಮಾಲಿಕರು ಪ್ರಜೆಗಳಾಗಿದ್ದರು. ಶಾಹುರವರು ಉದ್ದೇಶಪೂರ್ವಕವಾಗಿ ರಾಜ್ಯವನ್ನು ಪರಿಪಾಲಿಸುವುದು ಮತ್ತು ಅದರ ಸ್ಥಾನವನ್ನು ಹೆಚ್ಚಿಸುವುದು ಅವರ ಕರ್ತವ್ಯವಾಗಿತ್ತು. ತಮ್ಮ ನಿಯತಿಯ ಅರ್ಥ ಅದೆಂದು ಶಾಹು ಭಾವಿಸಿದ್ದರು. ಅವರ ೨೮

ವರ್ಷಗಳ ಆಡಳಿತವು "ಜನರ ಯುಗ" ವಾಗಿತ್ತು. ಶಿವಾಜಿ ಮಹಾರಾಜರ ಆಶೀರ್ವಾದವಿದೆಯೆಂದು ಅವರು ನಂಬಿದ್ದರು. ಶಾಹುರವರು ಶಿವಾಜಿಯ ಕೊಡುಗೆಯ ಬಗ್ಗೆ ಪರಿಪೂರ್ಣವಾಗಿ ತಿಳಿದುಕೊಂಡಿದ್ದರು ಮತ್ತು ಸಾಮಾಜಿಕ ಕ್ರಾಂತಿಗೆ ಸಂಬಂಧಿಸಿದಂತೆ ಅವರು ಶಿವಾಜಿಯನ್ನು ಮೀರಿಸಿದ್ದರು.

ಶಾಹುರವರು ಸಂವೇದನೆಯ ಸೂಕ್ಷ್ಮ ವಿಷಯಗಳನ್ನು ನಿಭಾಯಿಸುವಾಗ ಪುರೋಹಿತವರ್ಗ ಮತ್ತು ನೌಕರವರ್ಗ ಸಹಕಾರವನ್ನು ನೀಡದೆ ಶಾಹುರವರನ್ನು ತೀವ್ರವಾಗಿ ವಿರೋಧಿಸಿದವು. ಅವರ ಪ್ರಗತಿಪರ ಧೋರಣೆಗಳು ಆ ವರ್ಗಗಳ ಹಿತಾಸಕ್ತಿಗಳಿಗೆ ಧಕ್ಕೆಯನ್ನುಂಟುಮಾಡಿದವು. ಸಂಘರ್ಷ ಅನಿವಾರ್ಯವಾಯಿತು. ಪಂಚಗಂಗಾ ಪವಿತ್ರನದಿಯ ಘಾಟ್‌ಗಳು (ಸ್ನಾನದ ಘಟ್ಟಗಳು) ಬ್ರಾಹ್ಮಣರಿಗೆ ಮಾತ್ರ ಮೀಸಲಾದವು ಮತ್ತು ಇತರೆ ಜಾತಿಗಳನ್ನು ನಿಷೇಧಿಸಲಾಯಿತು. ಶಾಹು ೧೯೦೦ರಲ್ಲಿ ಘಾಟ್‌ಗಳನ್ನು ಎಲ್ಲರಿಗಾಗಿ ತೆರವುಗೊಳಿಸಿದರು. ವೇದಗಳ ಪ್ರಕಾರ ಬ್ರಾಹ್ಮಣೇತರರಿಗೆ ಆಚರಣೆಗಳ ಹಕ್ಕುಗಳಿರಲಿಲ್ಲ. ಶಾಹು ಮಹಾರಾಜರು ೧೯೦೧ರಲ್ಲಿ "ಶ್ರಾವಣಿ"ಯಲ್ಲಿ ಜನಿವಾರಗಳನ್ನು ಪವಿತ್ರಗೊಳಿಸುವ ವಾರ್ಷಿಕಾಚರಣೆಯನ್ನು ಸಂಘಟಿಸಿದರು. (ಮರಾಠರು ಕ್ಷತ್ರಿಯರಾಗಿರುವುದರಿಂದ ಜನಿವಾರಗಳನ್ನು ಧರಿಸುವುದು ತಮ್ಮ ಹಕ್ಕೆಂದು ಪ್ರತಿಪಾದಿಸಿದರು.)

ಬೇಗನೆ ವೇದೋಕ್ತದ ವಿವಾದ ಕಾಳ್ಗಿಚ್ಚಿನಂತೆ ಹರಡಿತು. ಪುರೋಹಿತವರ್ಗ ಶಾಹುರವರನ್ನು ಕ್ಷತ್ರಿಯರೆಂದು ಮಾನ್ಯ ಮಾಡಲಿಲ್ಲ ಮತ್ತು ಅವರನ್ನು ಒಬ್ಬ ಶೂದ್ರನೆಂದು ಪರಿಗಣಿಸಿತು. ತಿಲಕರು ಮಧ್ಯೆ ಪ್ರವೇಶಿಸಿ ವಿವಾದಕ್ಕೆ ಬೆಂಬಲ ನೀಡಿದರು. ಶಾಹು ಈ ಯುದ್ಧವನ್ನು ಆತ್ಮ-ಗೌರವದ್ದೆಂದು ಹೋರಾಡಿ ೧೯೦೫ರಲ್ಲಿ ಈ ವಿವಾದದಲ್ಲಿ ಗೆದ್ದರು. ಈ ವಿವಾದವು ಇಡೀ ಮಹಾರಾಷ್ಟ್ರದಲ್ಲಿ ಉದ್ರೇಕದ ಅಲೆಯನ್ನು ಹರಡಿತು ಮತ್ತು ಸತ್ಯಶೋಧಕ ಸಮಾಜದ ಆಂದೋಲನವು ಮತ್ತಷ್ಟು ತೀವ್ರಗೊಳಿಸಿತು. ಶಾಹುರವರು ಪುರೋಹಿತ ವತನುಗಳನ್ನು ರದ್ದುಗೊಳಿಸಿದರು ಮತ್ತು ಬ್ರಾಹ್ಮಣೇತರರನ್ನು ತಮ್ಮದೇ ಆದ ರೀತಿಯಲ್ಲಿ ಧಾರ್ಮಿಕ ಆಚರಣೆಗಳನ್ನು ನಡೆಸಲು ಉತ್ತೇಜಿಸಿದರು. ಇದು ಬ್ರಾಹ್ಮಣರ ಯಜಮಾನಿಕೆಗೆ ಮೃತ್ಯುವಾಯಿತು. ವರ್ಣದ ಏಕಸ್ವಾಮ್ಯತಾವಾದಿಗಳು ಅಂತಿಮವಾಗಿ ಶರಣಾಗತರಾದರು.

ವೇದೋಕ್ತ ವಿವಾದದ ನಂತರ ಶಾಹುರವರು ಶಿಕ್ಷಣವು ಸೇರಿದಂತೆ ಸಂಸ್ಥಾನದ ಸರ್ವಾಂಗೀಣ ಅಭಿವೃದ್ಧಿಗಾಗಿ ನಾನಾ ಯೋಜನೆಗಳನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಂಡರು. ಪಾಶ್ಚಿಮಾತ್ಯ ಮಾದರಿಯಲ್ಲಿ ಅಪೇಕ್ಷಿತ ಪ್ರಗತಿಯನ್ನು ಸಾಧಿಸುವ ಸಲುವಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೇಲಿರುವ ಹಿಡಿತವನ್ನು ಸಡಿಲಿಸಲು ಅವರು ನಿರ್ಧರಿಸಿದರು. ಅವರು ೧೯೦೮ರಲ್ಲಿ ಭೋಗವತಿ ನದಿಗೆ ಅಣೆಕಟ್ಟನ್ನು ಕಟ್ಟಿಸಿದರು. ಅದರಿಂದ ಸಂಸ್ಥಾನವು ಹಸಿರುಕ್ರಾಂತಿಯಲ್ಲಿ ಅಗ್ರಗಾಮಿ ಸಂಸ್ಥಾನವಾಗಲು ಸಾಧ್ಯವಾಯಿತು. ಅವರು ಕೃಷಿ ಉತ್ಪನ್ನಗಳಿಗೆ ಸಾಕಷ್ಟು ಬೆಲೆ ಸಿಗುವಂತೆ ಮಾಡಲು ಒಂದು ಹೊಸ ಮಾರುಕಟ್ಟೆ ಅಂಗಣವನ್ನು ಸ್ಥಾಪಿಸಿದರು. ಅವರು ವ್ಯಾಪಾರ ಮತ್ತು ಕೈಗಾರಿಕೆಗಳನ್ನು ಬೆಳೆಸುವ ಸಲುವಾಗಿ ಜಯಸಿಂಗಪುರ ಎಂಬ ಒಂದು ಹೊಸಪಟ್ಟಣವನ್ನೇ ಸ್ಥಾಪಿಸಿದರು ಮತ್ತು ಕೊಲ್ಹಾಪುರ ಸಂಸ್ಥಾನದ ಹೊರಗಿನ ಸಂಸ್ಥಾನದ ವ್ಯಾಪಾರಸ್ಥರನ್ನು ತಮ್ಮ ವ್ಯವಹಾರ ಸ್ಥಾಪಿಸಲು ಆಹ್ವಾನಿಸಲಾಯಿತು. ಸಂಸ್ಥಾನ ಕೃಷಿ ಉತ್ಪನ್ನಗಳನ್ನು ಸಂಸ್ಥಾನದ ಹೊರಗಿರುವ ಮಾರುಕಟ್ಟೆಗಳಿಗೆ ಸಾಗಿಸುವುದಕ್ಕಾಗಿ ಕೊಲ್ಹಾಪುರ ಮೀರಜ್ ರೈಲ್ವೆಯನ್ನು ನಿರ್ಮಿಸಲಾಯಿತು. ಶಾಹುರವರು ಸ್ವತಃ ತಮ್ಮನ್ನು ಒಬ್ಬ ಕೃಷಿಕ ಮತ್ತು ಒಬ್ಬ ಸೈನಿಕನೆಂದು ಕರೆದುಕೊಂಡರು ಮತ್ತು ಕೃಷಿ ಮತ್ತು ಕೈಗಾರಿಕೆಯ ಕಾರ್ಮಿಕರನ್ನು ಸರಿಯಾದ ರೀತಿಯಲ್ಲಿ ಮಾರ್ಗದರ್ಶನ ನೀಡಿದರು. ಅವರು ಹೊಸ ಸಂಶೋಧನೆಯ ಪ್ರಯೋಗಗಳಿಗೆ ಪ್ರೋತ್ಸಾಹ ನೀಡಿದರು ಮತ್ತು ಆಧುನಿಕ ಕೃಷಿಯನ್ನು ಬೆಳೆಸಿದರು. ಅವರು ತಮ್ಮ

ಮಗನನ್ನು ಅಲಹಾಬಾದ್ ಮತ್ತು ಇಂಗ್ಲೆಂಡುಗಳಿಗೆ ವಿಶೇಷವಾಗಿ ಕೃಷಿವಿಜ್ಞಾನ ಕಲಿಯಲು ಕಳುಹಿಸಿದ್ದರು. ಅವರು ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಬೆಳೆಸಿದ್ದು ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ.

ಅವರು ಶಿಕ್ಷಣ ಪ್ರಸಾರವನ್ನು ಒಂದು ಬೃಹದಾಕಾರದ ಅಭಿಯಾನವನ್ನಾಗಿ ಮಾಡಲು ಪ್ರಯತ್ನಿಸಿದರು. ಬಡತನ, ಮೌಢ್ಯ ಮತ್ತು ಮೂಢನಂಬಿಕೆಗಳ ಹರಡುವಿಕೆಯಿಂದಾಗಿ ರೈತವರ್ಗದ ಹಲವಾರು ತಲೆಮಾರುಗಳು ಶಿಕ್ಷಣದಿಂದ ಬಹಳ ದೂರ ಉಳಿದಿದ್ದವು ಎಂಬ ಸಂಗತಿ ಅವರಿಗೆ ಚೆನ್ನಾಗಿ ತಿಳಿದಿತ್ತು. ಬಹುಜನ ಸಮಾಜವನ್ನು ಶಿಕ್ಷಣ ಮತ್ತು ಜ್ಞಾನಗಳು ಎಟುಕದಂತೆ ವಂಚಿಸಿದ್ದರಿಂದ ಅವರು ತಮ್ಮ ವಿವೇಕ, ನೈತಿಕತೆ, ಚಲನಶೀಲತೆ ಮತ್ತು ಭೌತಿಕ ಕಲ್ಯಾಣವನ್ನು ಕಳೆದುಕೊಂಡವೆಂದು ಮಹಾತ್ಮ ಫುಲೆ ವಾದಿಸಿದ್ದರು. ಶಾಹುರವರು ಆದ್ಯತೆಯ ಮೇರೆಗೆ ಹಿಂದುಳಿದ ಜಾತಿಗಳ ಶಿಕ್ಷಣಕ್ಕೆ ಒತ್ತುನೀಡಿದರು. ಅವರು ವಿದ್ಯಾರ್ಥಿ ನಿಲಯಗಳನ್ನು ಎಲ್ಲಾ ಜಾತಿಗಳ ವಿದ್ಯಾರ್ಥಿಗಳಿಗಾಗಿ ಕಟ್ಟಿಸಿದರು ಮತ್ತು ತಮ್ಮ ಸಂಸ್ಥಾನದ ಹೊರಗೂ ಶಿಕ್ಷಣಸಂಸ್ಥೆಗಳಿಗೆ ಸಾಕಷ್ಟು ಹಣವನ್ನು ದಾನವಾಗಿ ನೀಡಿದರು. ಅವರು ಶಿಕ್ಷಣವು ಸಾಮಾಜಿಕ ಸುಧಾರಣೆಗೆ ಪ್ರಮುಖ ಸಾಧನವೆಂದು ಬಗೆದಿದ್ದರು ಮತ್ತು ಅದು ಸಾಮಾನ್ಯ ಜನರಿಗೆ ಘನತೆಯನ್ನು ನೀಡುತ್ತದೆಯೆಂದು ಭಾವಿಸಿದ್ದರು. ಶಾಹುರವರು ಇಲ್ಲದಿದ್ದರೆ, ಮಹಾರಾಷ್ಟ್ರದ ಗ್ರಾಮೀಣ ಪ್ರದೇಶದ ದೃಶ್ಯವೇ ಇಂದು ಬೇರೆಯಾಗಿ ಕಾಣುತ್ತಿತ್ತು.

ಶಾಹುರವರು ೧೯೧೭ರಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿದರು. ತಮ್ಮ ಆಜ್ಞೆಗಳನ್ನು ಎಚ್ಚರಿಕೆಯಿಂದ ಕಟ್ಟುನಿಟ್ಟಾಗಿ ಅನುಸರಿಸಬೇಕೆಂದು ಖಾತರಿಗೊಳಿಸಿದರು. ಇಂದು ಸಹ ನಾವು ಶಾಹುರವರನ್ನು ಅನುಸರಿಸಲಾರೆವು. ಅವರು ಶೇಕಡ ೫೦ರಷ್ಟು ಹುದ್ದೆಗಳನ್ನು ಕೊಲ್ಹಾಪುರ ಸಂಸ್ಥಾನದ ಆಡಳಿತದಲ್ಲಿ ಬ್ರಾಹ್ಮಣರು, ಪ್ರಭುಗಳು, ಶೆಣ್ವಿಗಳು ಮತ್ತು ಪಾರ್ಸಿಗಳನ್ನು ಬಿಟ್ಟು ಉಳಿದ ಹಿಂದುಳಿದ ಜಾತಿಗೆ ಮೀಸಲಿಡಬೇಕೆಂದು ಆಜ್ಞೆ ಹೊರಡಿಸಿದರು. ಶಿಕ್ಷಣದಂತೆಯೇ ಶಾಹುರವರು ಅಸ್ಪೃಶ್ಯತೆಯ ಶಾಪ ಮತ್ತು ಜಾತಿಯ ತಾರತಮ್ಯತೆಯನ್ನು ಬಲಾತ್ಕಾರವಾಗಿ ಕಿತ್ತುಹಾಕಲು ಹೆಣಗಿದರು. ಇವೆಲ್ಲವನ್ನು ಮಾಡಲು, ಅವರು ಶಿಕ್ಷಣ ಪ್ರಚಾರಮಾಡುವ ಸಂಸ್ಥೆಗಳು, ಸಂಘಟನೆಗಳು ಮತ್ತು ವ್ಯಕ್ತಿಗಳಿಗೆ ಸಕ್ರಿಯವಾಗಿ ಸಹಾಯಮಾಡುವ ಮೂಲಕ ಅವರು ಸಾಮಾಜಿಕ ಜಾಗೃತಿಯನ್ನು ಬೆಳೆಸಿದರು. ಅವರು ಸತ್ಯಶೋಧಕ ಸಮಾಜ, ಆರ್ಯಸಮಾಜ ಮತ್ತು ಥಿಯಾಸಾಫಿಕಲ್ ಸೊಸೈಟಿಗಳ ಆಂದೋಲನಗಳನ್ನು ಉತ್ತೇಜಿಸಿದರು. ಅವರ ಗುರಿಯು ಸಂಪೂರ್ಣಕ್ರಾಂತಿಯಾಗಿತ್ತು ಮತ್ತು ಅವರು ತಮ್ಮ ಶಕ್ತಿಗಳನ್ನು ಮತ್ತು ರಾಜಕೀಯ ಅಧಿಕಾರಗಳನ್ನು ಈ ಉದ್ದೇಶಕ್ಕಾಗಿ ಸಂಪೂರ್ಣವಾಗಿ ಬಳಸಿದರು. ಮಹರ್ಷಿ ವಿಠ್ಠಲ್‌ರಾಮ್‌ಜಿ ಶಿಂಧೆ ಅವರು ಶಾಹುರವರನ್ನು "ಮಹಾರಾಷ್ಟ್ರದ ಸ್ವಭಾವದ ಸಹಜ ಕಿರು ಅಲೆಯೆಂದು" ವರ್ಣಿಸಿದ್ದಾರೆ. ಆದರೆ 'ಕಿರು ಅಲೆ' ಎಂಬ ಪದವು ಸಾಕಾಗುವುದಿಲ್ಲ. ರಾಜರ್ಷಿ ಶಾಹು ಒಬ್ಬ ನೇರ ಬಿರುಗಾಳಿ.

ಶಾಹುರವರು ದಲಿತರನ್ನು ಸಬಲಗೊಳಿಸಲು ಕ್ರಾಂತಿಕಾರಿ ಆಜ್ಞೆಗಳನ್ನು ಹೊರಡಿಸಿದರು ಮತ್ತು ಅಸ್ಪೃಶ್ಯತೆಯನ್ನು ನಾಶಮಾಡಲು ಅವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಟ್ಟರು. ಅವರು ಕೃಷಿಯ ದಾಸ್ಯತ್ವ ಪದ್ಧತಿಯನ್ನು ರದ್ದುಗೊಳಿಸಿದರು. ಅವರ ಮೂರ್ತಿಭಂಜಕ ಆಸಕ್ತಿಯಿಂದ ಜಾತಿಪದ್ಧತಿಯನ್ನು ಹೊಡೆದು ಅಪ್ಪಳಿಸಿಬಿಟ್ಟರು ಮತ್ತು ದಲಿತರ ಸಮಸ್ಯೆಗಳು ಮತ್ತು ಸಂಕಟಗಳನ್ನು ಅಭಿವ್ಯಕ್ತಿಗೊಳಿಸಿದರು. ೧೯೧೮ರಲ್ಲಿ ಅವರು ಮಹರ್‌ಜಾತಿಯ ಬಲೂತ ವತನಪದ್ಧತಿಯನ್ನು ರದ್ದುಗೊಳಿಸಿದರು. ದಲಿತರನ್ನು ಮತ್ತು ನತದೃಷ್ಟ ಜಾತಿಗಳನ್ನು ಅಪರಾಧಿ ಜಾತಿಗಳೆಂದು ಕರೆಯುವ ಜಾತಿಗಳನ್ನು ಶೋಷಿಸುವವರಿಗೆ ಕಠಿಣಸಜೆಯನ್ನು ವಿಧಿಸಲು ಅವಕಾಶಕಲ್ಪಿಸಿದರು. ನಿಜವಾಗಿಯೂ ಶಾಹುರವರು 'ಸರ್ವೋಚ್ಚ ನ್ಯಾಯಾಲಯ'ವಾಗಿದ್ದರು ಮತ್ತು ದಲಿತರ 'ಸಂವಿಧಾನ'ವಾಗಿದ್ದರು. ಅವರು ಯುವನಾಯಕರಾದ

ಅಂಬೇಡ್ಕರರಿಗೆ ಅಸ್ಪೃಶ್ಯವಿಮೋಚನಾ ಚಳುವಳಿ ನಡೆಸಲು ಮನವಿ ಮಾಡಿಕೊಂಡಿದ್ದರು. ಶಾಹುರವರು ಇನ್ನಷ್ಟು ಕಾಲ ಬದುಕಿದ್ದರೆ ಅವರು ಅಸ್ಪೃಶ್ಯರ ಚಳುವಳಿಗೆ ಸಾಕಷ್ಟು ಕೊಡುಗೆ ನೀಡುತ್ತಿದ್ದರು.

೧೯೧೭ರ ಮುಂದಕ್ಕೆ ಶಾಹುರವರು ಸಾಮಾಜಿಕ ವಿಷಯಗಳ ಬಗ್ಗೆ ತಮ್ಮ ಮೂಲಭೂತ ಚಿಂತನೆಯನ್ನು ಸ್ನೇಹಪೂರ್ವಕ ಆಕ್ಷೇಪಣೆಗಳನ್ನು ಹೇಳಲು ಪ್ರಾರಂಭಿಸುತ್ತಿದ್ದರು. ಸಂಘರ್ಷಗಳು ಮನುಷ್ಯ ಚಾರಿತ್ರ್ಯವನ್ನು (ಸ್ವಭಾವ) ರೂಪಿಸುತ್ತದೆ, ಅನುಭವಗಳು ಅವನ ಚಿಂತನೆಗಳನ್ನು ಹರಿತಗೊಳಿಸುತ್ತವೆ ಮತ್ತು ಆಲೋಚನೆಯು ಅವನ ಆದರ್ಶಗಳ ತಿರುಳನ್ನು ಶ್ರೀಮಂತಗೊಳಿಸುತ್ತದೆ. ಶಾಹುರವರ ಕೃತಿ ಮತ್ತು ಆದರ್ಶಗಳು ಈ ಮಾತುಗಳಿಗೆ ಒಂದು ಪುರಾವೆಯಾಗಿದೆ. ಶಾಹುರವರ ವಾದಗಳ ಮತ್ತು ಆಲೋಚನಾಶಕ್ತಿಯು ಕಿವುಡನೂ ಅವರ ಸಂದೇಶವನ್ನು ಅರ್ಥಮಾಡಿಕೊಳ್ಳುವಷ್ಟು ಶಕ್ತಿಯುತವಾಗಿರುತ್ತಿತ್ತು. ಮಹಾನ್ ವ್ಯಕ್ತಿಗಳು ಪ್ರಕೃತಿ ಚಿತ್ರಿಸಿದ ಪವಿತ್ರ ಸುದರ್ಶನ ಚಕ್ರದ ಚಿಹ್ನೆಗಳನ್ನು ತಮ್ಮ ಅಂಗೈ ಮತ್ತು ಪಾದಗಳಲ್ಲಿ ಹೊಂದಿರುತ್ತಾರೆಂಬ ನಂಬಿಕೆ ಭಾರತೀಯರಲ್ಲಿದೆ. ಅವರು ಜಾತಿರಹಿತ ಸಮಾಜ ನಿರ್ಮಾಣಮಾಡುವ ಆದರ್ಶವನ್ನು ಹೊಂದಿದ್ದರು. ಎಂದೆಂದಿಗೂ ಸ್ವಾತಂತ್ರ್ಯದ ಆಂದೋಲನವನ್ನು ವಿರೋಧಿಸಲಿಲ್ಲ. ಅದರ ಸ್ವಾತಂತ್ರ್ಯದ ಆಂದೋಲನದ ನೆಪದಲ್ಲಿ (ಹೆಸರಿನಲ್ಲಿ) ಸಾಮಾಜಿಕ ಸುಧಾರಣೆಗಳನ್ನು ವಿರೋಧಿಸುವ ಸಂಕುಚಿತ ದೃಷ್ಟಿಕೋನದ ಚಟುವಟಿಕೆಗಳನ್ನು ಬಹಿರಂಗಗೊಳಿಸಿದರು. ಅವರ ಸಮಕಾಲೀನ ತೀವ್ರಗಾಮಿಗಳು ಸಾಮಾಜಿಕ ಸ್ವಾತಂತ್ರ್ಯವಿಲ್ಲದೆ, ರಾಜಕೀಯ ಸ್ವಾತಂತ್ರ್ಯ ಅರ್ಥಹೀನವೆಂಬ ಸಂಗತಿಯನ್ನೇ ಮರೆತುಬಿಟ್ಟಿದ್ದರು. ಅದು ಅವರನ್ನು ಸಾಮಾಜಿಕ ಸುಧಾರಣೆಗಳಿಗೆ ಬದ್ಧತೆಗೊಳಿಸಿತು. ಅವರು ೧೯೧೭ರಲ್ಲಿ ವಿಧವಾ ಪುನರ್‌ವಿವಾಹದ ಪರವಾಗಿ ಒಂದು ಕಾನೂನನ್ನು ಪಾಸುಮಾಡಿದರು. ೧೯೧೮ರಲ್ಲಿ ಮತ್ತೊಂದು ಅಂತರ್–ಜಾತೀಯ ವಿವಾಹ ಕಾಯ್ದೆಯನ್ನು ಹಾಗೂ ವಿವಾಹವಿಚ್ಛೇದನಕ್ಕೆ ಅನುವು ಮಾಡಿಕೊಡುವ ಇನ್ನೊಂದು ಕಾನೂನನ್ನು ರಚಿಸಿದರು. ಈ ಕಾನೂನುಗಳು ಒಟ್ಟಿಗೆ ಸೇರಿ ಮೂಲಭೂತವಾದ ಹಿಂದುಸಂಹಿತೆಯ ಮಸೂದೆಯಾಗಿ ಮಹಿಳೆಯರ ವ್ಯಕ್ತಿಸ್ವಾತಂತ್ರ್ಯವನ್ನು ಎತ್ತಿಹಿಡಿಯುತ್ತದೆ. ಕಲ್ಯಾಣದ ವಾತಾವರಣವನ್ನು ಸಾರುವಲ್ಲಿ ರಾಜರ್ಷಿ ಶಾಹುರವರು ತಮಗೆ ತಾಯಿಯ ಹೃದಯವಿದೆ ಎಂಬುದನ್ನು ತೋರಿಸಿಕೊಟ್ಟರು. ಪ್ಲೇಟೋರವರ ಪರಿಕಲ್ಪನೆಯಂತೆ ಅವರು ನಿಜವಾದ ಒಬ್ಬ ತತ್ವಜ್ಞಾನಿ ರಾಜರಾಗಿದ್ದರು.

ರಾಜರ್ಷಿಯವರ ಕನಸು ಇತಿಹಾಸದ ಪುಟಗಳಲ್ಲಿ ಸಿಲುಕಿರುವುದರಿಂದ ಅದು ಇಂದು ಸಾಕಾರಗೊಂಡಿಲ್ಲ. ನಿಯತಿಯು ಅದನ್ನು ಮುಂದಕ್ಕೆ ಕೊಂಡೊಯ್ಯಲು ನಮಗೆ ಸನ್ನೆಮಾಡುತ್ತಿದೆ.

ಪಶ್ಚಿಮದ ಮಾರುತವು ಶೆಲ್ಲಿಯವರ ಆಶಾವಾದವನ್ನು ಮತ್ತಷ್ಟು ಬಲಗೊಳಿಸಿತ್ತು. ಅವರು ಹೇಳುತ್ತಾರೆ: “ಓ ಮಾರುತವೆ, ಚಳಿಗಾಲ ಬಂದರೆ ವಸಂತಕಾಲವು ಬಹಳ ದೂರವಿದೆ.”

ದಾರಿದೀಪವಾಗಿರುವ ಈ ವ್ಯಕ್ತಿಯಿಂದ ನಾವು ಸ್ಫೂರ್ತಿಪಡೆದರೆ ನಾವು ತಾರತಮ್ಯತೆಯ ಅಪವಿತ್ರವಾದ ವಾತಾವರಣವನ್ನು ಮತ್ತು ನಮ್ಮ ಸಂತಾನ ಬದುಕುವುದಕ್ಕೆ ಯೋಗ್ಯವಾದ ಒಂದು ಹೊಸಸಮಾಜ ಕಟ್ಟುವುದಕ್ಕೆ ಅಡ್ಡಿಯಿರುವ ವಿಭಜನೆಯನ್ನು ಮೀರಿಸಬಲ್ಲವೆ. ಈ ಕೆಲಸವನ್ನು ಮುಂದುವರಿಸುವುದು ನಮ್ಮ ಕರ್ತವ್ಯ.

*(ಕೃತಜ್ಞತೆಗಳೊಂದಿಗೆ “ಹಾಕ್ ಆಣಿ ಆಕ್ರೋಶ್” ಎಂಬ ಲೇಖನದಿಂದ ತೆಗೆದುಕೊಳ್ಳಲಾಗಿದೆ.)*

---

೧೦

# ಶಾಹು-ಕ್ರಿಯಾಶೀಲ ಸತ್ಯಶೋಧಕ

**- ಎ. ಎ. ಶಿರ್ವಾಡ್ಕರ್ ಉರುಫ್ ಕುಸುಮಗ್ರಾಜ್**

*ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಹಿರಿಯ ಮರಾಠಿ ಕವಿ*

**ಮ**ಹಾತ್ಮ ಜೋತಿಬಾ ಫುಲೆ ಪ್ರಾರಂಭಿಸಿದ ಸತ್ಯಶೋಧಕ ಆಂದೋಲನವು ಆಧುನಿಕ ಮಹಾರಾಷ್ಟ್ರದ ಇತಿಹಾಸದಲ್ಲಿ ಒಂದು ಮಹಾಘಟನೆಯಾಗಿದೆ. ಇದು ಹಲವಾರು ಶತಮಾನಗಳಿಂದ ಅನ್ಯಾಯ ಮತ್ತು ತಾರತಮ್ಯತೆಗಳಿಂದ ಕೂಡಿದ್ದ ಸಮಾಜದ ಪರಿಪೂರ್ಣ ಮತ್ತು ಮೂಲಭೂತ ಸುಧಾರಣೆಗಾಗಿ ಮಾಡಿದ ಮೊದಲ ಪ್ರಯತ್ನವಾಗಿತ್ತು. ಅವರು ಸಾಮಾಜಿಕ ಜೀವನದಲ್ಲಿದ್ದ ಅಮಾನವೀಯ ಆಚರಣೆಗಳಾದ ಜಾತಿಯ ಭೇದ-ಭಾವ ಮತ್ತು ವಿಧವೆಯರ ತಲೆಬೋಳಿಸುವಿಕೆಗಳನ್ನು ಕಿತ್ತುಹಾಕಲು ಪ್ರಯತ್ನಿಸಿದರು. ಅವರು ತಮ್ಮ ಆಂದೋಲನಕ್ಕೆ ನೈತಿಕ ಸಮರ್ಥನೆಗಳನ್ನು ವಿಸ್ತೃತವಾಗಿ ಮಂಡಿಸಿದರು. ೧೮೯೦ರಲ್ಲಿ ಜೋತಿಬಾರ ನಿಧನದ ನಂತರ ಆಂದೋಲನವು ನಿಂತುಹೋಯಿತು. ಅವರು ಬದುಕಿರುವಾಗಲೇ ಸತ್ಯಶೋಧಕ ಆಂದೋಲನವು ಮಹಾರಾಷ್ಟ್ರದ ಮೂಲೆ ಮೂಲೆಗೂ ಹರಡಿರಲಿಲ್ಲ.

ಮಡಿವಂತಿಕೆಯ ಸಂಪ್ರದಾಯದ ಪ್ರಾಬಲ್ಯ ಪಡೆದಿದ್ದ ಪುಣೆಯು ಮಹಾರಾಷ್ಟ್ರದ ಸಾಂಸ್ಕೃತಿಕ ರಾಜಧಾನಿಯಾಗಿತ್ತು. ಸುಧಾರಣೆಗಳ ಬಗ್ಗೆ ವಾಸ್ತವಿಕ ನಿಲುವು ತೆಗೆದುಕೊಂಡಿದ್ದ ಲೋಕಹಿತವಾದಿ ಪ್ರಚೋದನಾತ್ಮಕವಾದ ತಮ್ಮ 'ಶತಪತ್ರ' ಪ್ರಬಂಧಗಳನ್ನು ಪ್ರಕಟಿಸಿದ್ದರು. ನ್ಯಾಯವಾದಿ ಎಂ. ಜಿ. ರಾನಡೆಯವರು ಅಧ್ಯಾತ್ಮವಾದ ಮತ್ತು ಮತ-ಧರ್ಮದ ಹಾದಿಯನ್ನು ಹಿಡಿದು ಬದಲಾವಣೆಯನ್ನು ಪ್ರಚಾರಮಾಡಿದ್ದರು. ಆದರೆ ಈ ಎಲ್ಲಾ ಸಂಘರ್ಷಗಳು ಸೈದ್ಧಾಂತಿಕವಾಗಿದ್ದವು. ಫುಲೆಯವರು ಬದಲಾವಣೆಯ ಸಿದ್ಧಾಂತಕ್ಕೆ ಕ್ರಿಯಾಶೀಲತೆಯ ಆಯಾಮವನ್ನು ನೀಡಿದ್ದು ಮತ್ತು ಹೋರಾಟವನ್ನು ಪ್ರಾಯೋಗಿಕ ನೆಲೆಕಟ್ಟಿಗೆ ತಂದದ್ದು ಅವರ ದೊಡ್ಡತನವಾಗಿದೆ. ಪುಣೆ ಈಸಂಘರ್ಷದ ಕೇಂದ್ರಸ್ಥಳವಾಗಿತ್ತು. ಜೋತಿಬಾ ಫುಲೆ ತಮ್ಮ ಇಡೀ ಜೀವನವನ್ನು ಮತ್ತು ತಮ್ಮ ನೈತಿಕ ಧೈರ್ಯವನ್ನು ಈ ಹೋರಾಟಕ್ಕೆ ಮುಡುಪಿಟ್ಟಿದ್ದರು. ಆದರೆ ಆಂದೋಲನವು ಪುಣೆ ಮತ್ತು ಮುಂಬೈ ನಗರಗಳಿಗೆ ಸೀಮಿತವಾಗಿತ್ತು. ಮತ್ತು ಪುಣೆ ಮತ್ತು ಮುಂಬೈ ನಗರಗಳ ಆಚೆಗಿನ ಸಾಮಾನ್ಯ ಜನರನ್ನು ಆಂದೋಲನದಲ್ಲಿ ತೊಡಗಿಸಲು ಸಾಧ್ಯವಾಗಲಿಲ್ಲ. ಜೋತಿಬಾ ಅವರ ನಿಧನದ ನಂತರ ಬದಲಾವಣೆಯ ಸಿದ್ಧಾಂತ ಮತ್ತು ಆಂದೋಲನ ದುರ್ಬಲಗೊಂಡಿತು.

ಈ ಆಂದೋಲನಕ್ಕೆ ಒಂದು ಹೊಸ ಚೈತನ್ಯ ಮತ್ತು ಬಲ ನೀಡಿದ್ದು ಶಾಹುರವರ ಐತಿಹಾಸಿಕ ಕೊಡುಗೆಯಾಗಿದೆ. ಶಾಹುರವರ ಸಕ್ರಿಯ ನಾಯಕತ್ವದಿಂದ ಸತ್ಯಶೋಧಕ ಸಿದ್ಧಾಂತ ಮತ್ತು ಕಾರ್ಯಚಟುವಟಿಕೆಗಳು ಮಹಾರಾಷ್ಟ್ರದ ಪ್ರಮುಖ ಭಾಗಗಳಿಗೆ ಮುಟ್ಟಲು ಸಾಧ್ಯವಾಯಿತು. ಅವರ ಕಾಲದಲ್ಲಿ ಹೋರಾಟವು ನಿಜವಾದ ಒಂದು ಆಂದೋಲನವಾಯಿತು. ಅವರು ಅರ್ಥಮಾಡಿಕೊಂಡ

ಸಾಮಾಜಿಕ ಬದಲಾವಣೆ ತುಂಬಾ ಗಂಭೀರವಾಗಿತ್ತು ಮತ್ತು ಅದಕ್ಕೆ ಅವರ ಬದ್ಧತೆ ಸದೃಢವಾಗಿತ್ತು. ರಾಜಕುಮಾರರಿಗಿದ್ದ ಶಾಲೆಯಲ್ಲಿ ಇಂಗ್ಲಿಷ್ ಅಧ್ಯಾಪಕರಿಂದ ಕಲಿತ ಅವರ ಇಂಗ್ಲಿಷ್ ಭಾಷೆ, ಆ ಭಾಷೆಯ ಮೇಲೆ ಅವರಿಗಿದ್ದ ಪ್ರಭುತ್ವ ಅದ್ಭುತವಾಗಿತ್ತು. ಅವರು ಸಾಮಾಜಿಕ ಸಿದ್ಧಾಂತಗಳ ಕುರಿತು ಅವರು ಇಂಗ್ಲಿಷ್ ಪುಸ್ತಕಗಳನ್ನು ಅಧ್ಯಯನ ಮಾಡಿದ್ದು, ಅವರ ಜ್ಞಾನ ಅಗಾಧ ಮತ್ತು ಬಹುಮುಖವಾಗಿತ್ತೆಂದು ಪ್ರಬೋಧಂಕರ್ (ಥ್ಯಾಕರೆ) ಅವರು ಹೇಳುತ್ತಾರೆ. ಅವರು ನಂತರದ ಅಧ್ಯಯನದಿಂದ ಕ್ರಾಂತಿಕಾರಿ ಕೆಲಸಕ್ಕೆ ಸ್ಫೂರ್ತಿ ಪಡೆದಿರಬಹುದು ಮತ್ತು ಅವರ ಪಾಂಡಿತ್ಯ ಅವರ ಆಲೋಚನಾ ಕ್ರಮವನ್ನು ಅಳವಡಿಸಲು ಸಹಾಯ ಮಾಡಿರಬಹುದು. ಆದರೆ ಶಾಹುರವರು ಸೈದ್ಧಾಂತಿಕ ಮಂಜಿನ ಮುಸುಕಿನಲ್ಲಿ ಸಿಕ್ಕಿಹಾಕಿಕೊಳ್ಳುತ್ತಿರಲಿಲ್ಲ ಅಥವಾ ಒಣ ಚರ್ಚೆಗಳನ್ನು ಮಾಡುತ್ತಿರಲಿಲ್ಲ. ಅವರು ಸ್ವಾಭಾವಿಕವಾಗಿ ಧೈರ್ಯವಂತರು ಮತ್ತು ಕ್ರಿಯಾಶೀಲರಾಗಿದ್ದರು.

ಶಾಹುರವರು ಅರಮನೆಯಲ್ಲಿದ್ದರೂ ಸದಾ ಸಾಮಾನ್ಯ ಜನರಿಂದ ಸುತ್ತುವರಿದಿದ್ದರು. ಅವರು ಬಡವರ ಗುಡಿಸಲುಗಳಲ್ಲಿ ಅವರ ಜೊತೆಯಲ್ಲಿ ಸಜ್ಜೆರೊಟ್ಟಿಯನ್ನು ಉಪ್ಪಿನೊಂದಿಗೆ ಸವಿಯುತ್ತಿದ್ದ ಬಗ್ಗೆ ಕೆಲವು ಕತೆಗಳೇ ಇವೆ. ಆ ಕತೆಗಳು ನಿಜವಿರಬಹುದು ಅಥವಾ ಅತಿಶಯವಾಗಿರಬಹುದು. ಆದರೆ ಆ ಕತೆಗಳಲ್ಲಿ ಸ್ವಲ್ಪವಾದರೂ ಸತ್ಯವಿದೆ. ಭೋಗ ವಿಲಾಸಜೀವನಕ್ಕೆ ತನ್ನನ್ನು ತಾನೇ ದಾಸನಾಗುವ ವಿಚಿತ್ರ ಭಾರತೀಯ ಮಹಾರಾಜರ ಗುಂಪಿಗೆ ಮಹಾರಾಜರು ಸೇರಿದವರಲ್ಲವೆಂದು ಶಾಹುರವರ ಕತೆ ಹೇಳುತ್ತದೆ. ಅವರು ಜನರ ನಿಜವಾದ ಒಬ್ಬ ನಾಯಕನಾಗಿ ಮಣ್ಣಿನ ಮಗನಾಗಿದ್ದರು. ಮತ್ತು ಜನರ ನಾಡಿಮಿಡಿತವನ್ನು ಚೆನ್ನಾಗಿ ಅರಿತಿದ್ದರು. ಸಮಾಜದ ಸ್ಥಿತಿಗತಿಗಳನ್ನು ಅರಿತುಕೊಂಡಿದ್ದರು, ಅದು ತನ್ನಿಂದ ಏನನ್ನು ನಿರೀಕ್ಷಿಸುತ್ತದೆ ಎಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ಅವರು ಜಾತಿಪದ್ಧತಿ ಮತ್ತು ಜಾತಿ–ಪ್ರಾಬಲ್ಯದ ಕಡುವಿರೋಧಿಗಳಾಗಿದ್ದರು. ಅವರು ಜಾತಿಯನ್ನು ಎಂದಿಗೂ ಸಂಪೂರ್ಣವಾಗಿ ದ್ವೇಷಿಸಿರಲಿಲ್ಲ ಎಂಬುದನ್ನು ಅವರ ಜೀವನ ತೋರಿಸುತ್ತದೆ. ಅವರು ಬ್ರಾಹ್ಮಣೇತರರ ಕುಸ್ತಿಪಟುಗಳನ್ನು ಪ್ರೋತ್ಸಾಹಿಸಿದರು ಮತ್ತು ಬರೀ ಬ್ರಾಹ್ಮಣರೇ ಸೇರಿಕೊಂಡಿದ್ದ ಕಿರ್ಲೋಸ್ಕರ ನಾಟಕ ಮಂಡಲಿಯ ಕಂಪನಿಯನ್ನು ಬೆಳೆಸಿದರು. ಬ್ರಾಹ್ಮಣ ಜಾತಿಗೆ ಸೇರಿದ ಬಾಲಗಂಧರ್ವರನ್ನು ತಾನೇ ಪೋಷಕನೆಂದು ಶಾಹು ಅವರನ್ನು ಬೆಳೆಸಿದರು. ಭಾರತದಲ್ಲಿ ಪ್ರಗತಿಪರ ಅಭಿಪ್ರಾಯವುಳ್ಳ ಮತ್ತು ಜನರ ಮಧ್ಯೆ ಜನಪ್ರಿಯರಾಗಿದ್ದ ಸಮಕಾಲೀನ ವಿದ್ವಾಂಸರಾದ ರಾಜರು ಇದ್ದರು. ಆದರೆ ಶಾಹು ಮಹಾರಾಜರು ಜನರಿಗೆ ಸಂಬಂಧಿಸಿದಂತೆ ಮುಕ್ತರು ಮತ್ತು ಸದಾ ಪರಸ್ಪರ ಸ್ಪಂದಿಸುತ್ತಿದ್ದರು.

ಜನರ ಬಗ್ಗೆ ಅವರಿಗಿದ್ದ ಪ್ರೀತಿ ಅವರನ್ನು ಸತ್ಯಶೋಧಕ ಆಂದೋಲನದ ಕಡೆಗೆ ಮತ್ತು ಸಂಪ್ರದಾಯದಿಂದ ಭದ್ರವಾಗಿ ಊರಿದ್ದ ಸಾಮಾಜಿಕ ಅನ್ಯಾಯದ ನಿರ್ಮೂಲನದ ಕಡೆಗೆ ಕೊಂಡೊಯ್ದಿತು. ಜ್ಯೋತಿಬಾ ನಂತರ ಆಂದೋಲನದ ನಾಯಕತ್ವವನ್ನು ಅವರು ವಹಿಸಿಕೊಂಡರು. ಆಂದೋಲನದ ಪ್ರಮುಖ ಗಮನ ತೀವ್ರ ಬಡತನದಲ್ಲಿ ನರಳುತ್ತಿರುವ ಸಾಮಾನ್ಯ ರೈತರಾದ ಬಹುಜನರು ಮತ್ತು ಹಳ್ಳಿಗಳ ಅಜ್ಞಾನದ ಕಗ್ಗತ್ತಲಿನ ವಿಶ್ವದಲ್ಲಿ ಮುಳುಗಿರುವ ಜನರ ಮೇಲೆ ಇತ್ತು. ಆಂದೋಲನದ ಸಂದೇಶವನ್ನು ತಿಳಿಸುವುದಕ್ಕೆ ಲಭ್ಯವಿದ್ದ ಏಕೈಕ ಸಾಧನ 'ತಮಾಷಾ' 'ಜಲಸಾ'ಗಳಂತಹ ಜನಪದ ನಾಟಕ. ಶಾಹುರವರು ಅಂತಹ ತಮಾಷಾ ಮತ್ತು ಜಲಸಾಗಳನ್ನು ಬೆಳೆಸಿದರು. ಅವುಗಳು ಸಾವಿರಾರು ಹಳ್ಳಿಗಳಿಗೆ ತಲುಪಿದವು. ಶಾಹುರವರು

ಸಾವಿರಾರು ವರ್ಷಗಳಿಂದ ದಾಸ್ಯದಲ್ಲಿ ಜೀವ ಸವೆದಿದ್ದ ಜನರಲ್ಲಿ ಒಂದು ಹೊಸ ಆತ್ಮವಿಶ್ವಾಸ, ಚಲನಶಿಲತೆ ಹಾಗೂ ಜಾಗೃತಿಯನ್ನು ಮೂಡಿಸಿದರು.

ಸಂಪ್ರದಾಯದಲ್ಲಿ ಬೇರುಬಿಟ್ಟಿದ್ದ ಮನಸ್ಥಿತಿಯನ್ನು ಶಿಕ್ಷಣದ ಮೂಲಕ ಬದಲಾಯಿಸಲಾಯಿತು. ಇದರಿಂದಾಗಿ ಜನರು ಜ್ಞಾನ ಮತ್ತು ವಿಜ್ಞಾನಗಳ ಯುಗಕ್ಕೆ ಪಾದಾರ್ಪಣ ಮಾಡಿದರು. ಶಹುರವರು ಉತ್ಸಾಹದಿಂದ ಶಿಕ್ಷಣವನ್ನು ಹರಡಿದರು. ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆದರು ಮತ್ತು ಪಟ್ಟಣಗಳಲ್ಲಿ ವಿದ್ಯಾರ್ಥಿ ನಿಲಯಗಳನ್ನು ಕಟ್ಟಿಸಿದರು. ತಮ್ಮ ಉದ್ದೇಶಗಳನ್ನು ಮತ್ತಷ್ಟು ಬೆಳೆಸಲು ಶಾಹುರವರು ಲಭ್ಯವಿದ್ದ ದಿನಪತ್ರಿಕೆಗಳು, ಪುಸ್ತಕ ಭಂಡಾರಗಳು, ಪುಸ್ತಕಗಳು, ಕಿರುಪುಸ್ತಕಗಳು, ಉಪನ್ಯಾಸಮಾಲೆಗಳು ಮತ್ತು ಮೊದಲಾದವುಗಳನ್ನು ಬಳಸಿಕೊಂಡರು. ಶಾಹುರವರು ಕೈಗೊಂಡ ವಿಸ್ತೃತ ಪ್ರಯತ್ನಗಳು ಸತ್ಯಶೋಧಕ ಸಿದ್ಧಾಂತವನ್ನು ಹಳ್ಳಿಗಳಿಗೆ ಕೊಂಡೊಯ್ಯಲು ಸಾಧ್ಯವಾಯಿತು. ಮಹಾರಾಷ್ಟ್ರದ ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ವರ್ಗ ಮತ್ತು ಜಾತಿಗಳಲ್ಲಿ (ವರ್ಣಾಶ್ರಮ) ಮಹತ್ತರವಾದ ಬದಲಾವಣೆ ಕೂಡಲೇ ಕಂಡುಬಂತು. ನಂತರ, ವಿಶೇಷವಾಗಿ ಸ್ವಾತಂತ್ರ್ಯದ ನಂತರ ಸಾಮಾಜಿಕ ಸಮಾನತೆಯ ಸಮಸ್ಯೆ ಮೂಲೆಗೆ ತಳ್ಳಲ್ಪಟ್ಟಿತು ಮತ್ತು ರಾಜಕೀಯ ಅಧಿಕಾರ ಸಾಮೀಪ್ಯದ ನೈತಿಕ ಸಮಸ್ಯೆ ಉದ್ಭವಿಸಿತು. ಫುಲೆ, ಶಾಹು ಮತ್ತು ಅಂಬೇಡ್ಕರರು ಸಾಮಾಜಿಕ ಬದಲಾವಣೆಗೆ ಬುನಾದಿಯನ್ನು ಹಾಕಿದರು. ಆ ಬುನಾದಿಯ ಆಧಾರದ ಮೇಲೆ ಒಂದು ಹೊಸ ವಿಸ್ತೃತ ಸಾಮಾಜಿಕ ಕ್ರಾಂತಿಗಾಗಿ ಸಮಾಜ ಕಾಯುತ್ತಿದೆ.

---

೧೧

# ಶಾಹು ರಾಜರ್ಷಿರವರ ಜೀವನ ಮತ್ತು ಕೊಡುಗೆ

**ನ್ಯಾಯಮೂರ್ತಿ ಪಿ. ಬಿ. ಸಾವಂತ**
*ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು*

## ಸಾಮಾಜಿಕ ಕ್ರಾಂತಿಕಾರಿಯಾದ ರಾಜ

ತನ್ನ ಸಂಸ್ಥಾನದೊಳಗಿನ ತನ್ನ ಶತ್ರುಗಳಿಂದ ಶಾಹುರವರು ಎದುರಿಸಿದ ಅತಿಯಾದ ಕಿರುಕುಳ ಮತ್ತು ಸಂಸ್ಥಾನದ ಹೊರಗಡೆ ಸಮಾಜದಲ್ಲಿ ಹುಟ್ಟಿಬಂದ ಕ್ಷುಲ್ಲಕ, ಸ್ವಾರ್ಥ ಮತ್ತು ಅನಿಷ್ಟಶಕ್ತಿಗಳು ಒಬ್ಬ ವ್ಯಕ್ತಿಗೆ ನೀಡಿದ ಮಾನಸಿಕ ಚಿತ್ರಹಿಂಸೆಯನ್ನು ನಿರೂಪಿಸಲಾಗಿದೆ. ಆಡಳಿತ, ಶಿಕ್ಷಣ, ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಲ್ಲಿನ ಶಾಹುರವರ ಪ್ರಗತಿಪರ ಕಾರ್ಯಕ್ರಮಗಳು ಬ್ರಾಹ್ಮಣರ ಮಡಿವಂತಿಕೆಯ ವಿರೋಧವನ್ನು ಎದುರಿಸಿದ್ದು ಹೇಗೆ ವಿದ್ಯಾವಂತ ವರ್ಗ ತಮ್ಮ ಹಿತಾಸಕ್ತಿಗಳಿಗೆ ಗಂಡಾಂತರ ಒದಗಿದಾಗ ಕೋಪದಿಂದ ಕೆರಳಿದ ಕಾಳಿಂಗ ಸರ್ಪದಂತೆ ಮೇಲೆ ಎರಗುತ್ತಾರೆಂಬುದನ್ನು ಸೂಚಿಸುತ್ತದೆ. ಕೇವಲ ಕೆಲವೇ ತಂಟೆಕೋರರು ಒಬ್ಬ ರಾಜನಿಗೆ ಕಳಂಕ ಹಚ್ಚಲು ಮತ್ತು ಅವರ ವಿರುದ್ಧ ಸಂಚುಹೂಡಲು ಬಹಳ ತುಚ್ಛ ವಿಧಾನಗಳನ್ನು ಬಳಸಿದ್ದ ವಿಚಿತ್ರ ಘಟನೆಗಳನ್ನು ಶಾಹು ಎದುರಿಸಬೇಕಾಯಿತು. ಒಬ್ಬ ರಾಜನಾಗಲೀ ಅಥವಾ ಜನರ ಪ್ರತಿನಿಧಿಯಾಗಲೀ ಆಡಳಿತದಲ್ಲಿ ತನ್ನ ಪ್ರಗತಿ ಪರಧೋರಣೆ ಮತ್ತು ಕಾರ್ಯಕ್ರಮಗಳ ಪರವಾಗಿ ಜನರಿದ್ದಾಗ ಅವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಬಹುದು ಎಂಬುದಕ್ಕೆ ಶಾಹುರವರ ಆಡಳಿತವು ಒಂದು ಉತ್ತಮ ಪಾಠವಾಗಿದೆ. ಶಾಹುರವರು ತಮ್ಮ ಕಾರ್ಯಗಳಲ್ಲಿ ನ್ಯಾಯಬದ್ಧತೆ, ಅನ್ಯಾಯದ ಬಗ್ಗೆ ಅವರ ತೀವ್ರ ಹೇಸಿಗೆ ಮತ್ತು ಕೆಲಸಗಳನ್ನು ಸಾಧಿಸುವುದರ ಬಗ್ಗೆ ಅವರಿಗಿದ್ದ ದೃಢಸಂಕಲ್ಪಗಳ ಬಗ್ಗೆ ಅವರಿಗಿದ್ದ ಅಪಾರ ನಂಬಿಕೆಯ ಕಾರಣದಿಂದ ಶಾಹುರವರು ಭಾರಿ ಅಡ್ಡಿ–ಆತಂಕಗಳನ್ನು ಜಯಪ್ರದವಾಗಿ ದಾಟಿ ತಮ್ಮ ಹಲವಾರು ಗುರಿಗಳನ್ನು ಸಾಧಿಸಿದರು. ಅವರ ಸಂಸ್ಥಾನದಲ್ಲಿ ಒಬ್ಬ ದುರ್ಬಲ ವ್ಯಕ್ತಿಯಿದ್ದಿದ್ದರೆ ಶಾಹು ಎದುರಿಸಿದ ದ್ವೇಷಪೂರಿತ ವಿನಾಶಕಾರಿ ಸಾಮಾಜಿಕ ವಿಶ್ವಾಸಘಾತುಕರನ್ನು ಸಮರ್ಥವಾಗಿ ನಿಭಾಯಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ.

ಒಬ್ಬ ಮಹಾರಾಜನು ಸಾಮಾಜಿಕ ಕ್ರಾಂತಿಯ ಪತಾಕೆಯನ್ನು ಹಿಡಿದಿದ್ದನ್ನು ಇತಿಹಾಸದಲ್ಲಿ ನೋಡುವುದು ಬಹು ಅಪರೂಪ. ಹಲವಾರು ಸಾಮಾಜಿಕ ಸುಧಾರಕ ರಾಜ ಮಹಾರಾಜರಿದ್ದಾರೆ. ಆದರೆ ಯಾವ ರಾಜನೂ ಒಬ್ಬ ಸಾಮಾಜಿಕ ಕ್ರಾಂತಿಕಾರಿ ರಾಜನಾಗಿ ಪರಿಗಣಿತವಾಗಿಲ್ಲ. ಶಾಹು ಮಹಾರಾಜರ ಈ ವಿಶಿಷ್ಟತೆ ಮತ್ತು ಅಪರೂಪದ ಕೊಡುಗೆಯೇ ಅವರನ್ನು ಬಹಳ ದಿನಗಳವರೆಗೆ ನೆನಪಿನಲ್ಲಿಡುವಂತೆ ಮಾಡಿದೆ.

## ಪುರೋಹಿತಶಾಹಿಯೊಡನೆ ಸಂಘರ್ಷ

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಈ ಪುರೋಹಿತವರ್ಗ ಆಡಳಿತ ನಡೆಸುವಲ್ಲಿ ಮತ್ತು ಇತರೆ ಎಲ್ಲಾ ಸಾಮಾಜಿಕ ಚಟುವಟಿಕೆಗಳಲ್ಲಿ ಅಧಿಪತ್ಯ ಹೊಂದಿತ್ತು. ದೇವರ ಮತ್ತು ಧರ್ಮದ ಹೆಸರಿನಲ್ಲಿ ಈ ಸಾಮಾಜಿಕ ಯಜಮಾನಿಕೆಯು ಬ್ರಾಹ್ಮಣರ ಅಧಿಕಾರದ ಮೂಲದಲ್ಲಿತ್ತು. ಬೇರೆ ಜಾತಿಗಳಿಗೆ ವಿದ್ಯೆ ಕಲಿಯುವ ಹಕ್ಕನ್ನು ನಿರಾಕರಿಸಿ ಬ್ರಾಹ್ಮಣರೇ ಜ್ಞಾನಕ್ಷೇತ್ರದ ಏಕಸ್ವಾಮ್ಯತೆಯನ್ನು ಪಡೆದಿದ್ದರು. ಈ ಬ್ರಾಹ್ಮಣ ಜಾತಿಯು ನಿರ್ಮಿಸಿದ ಅಳತೆಗೋಲುಗಳು ಧರ್ಮ, ಸಾಮಾಜಿಕ ಚಟುವಟಿಕೆಗಳು, ನೈತಿಕ ತತ್ವಗಳು, ರಾಜಕೀಯ, ಅರ್ಥಶಾಸ್ತ್ರ, ವಾಣಿಜ್ಯ, ಸಾಹಿತ್ಯ ಮತ್ತು ಇತರೆ ಕಲೆಗಳು ಸೇರಿದಂತೆ ಎಲ್ಲೆಲ್ಲೂ ಈ ಬ್ರಾಹ್ಮಣ ಜಾತಿಯೇ ಪ್ರಾಬಲ್ಯ ಪಡೆದಿತ್ತು. ಬ್ರಾಹ್ಮಣರ ಅಪ್ಪಣೆ-ಸಮ್ಮತಿಯಿಲ್ಲದೆ ಮರದಲ್ಲಿರುವ ಒಂದು ಎಲೆಯೂ ಅಲುಗಾಡುತ್ತಿರಲಿಲ್ಲ. ರಾಜನು ತಮ್ಮ ಆಡಳಿತದ ಪಾವಿತ್ರ್ಯಕ್ಕಾಗಿ ಸಮ್ಮತಿಯನ್ನು ಪಡೆಯುವುದಕ್ಕಾಗಿ ಅವರ ಸಮ್ಮತಿಯನ್ನು ಬೇಡಬೇಕಾಗಿತ್ತು. ಪುರೋಹಿತರ ಮತ್ತು ರಾಜರ ನಡುವಣ ಶ್ರೇಷ್ಠತೆಗಾಗಿ ವಿಶ್ವದಲ್ಲಿ ಪೈಪೋಟಿ ನಡೆಯುತ್ತಿತ್ತು. ಆದರೆ ಸಂಘಗಳು, ವ್ಯಕ್ತಿಗಳ ಅಥವಾ ಸಂಸ್ಥೆಗಳ ನಡುವೆಯೇ ನಡೆಯುತ್ತಿದ್ದವು. ಭಾರತದ ಸಾಮಾಜಿಕ ಸನ್ನಿವೇಶದಲ್ಲಿ ಪೈಪೋಟಿಯ ಪ್ರಶ್ನೆಯೇ ಇರಲಿಲ್ಲ. ಬ್ರಾಹ್ಮಣ ಪುರೋಹಿತನು ಯಾವಾಗಲೂ ಅವನು ಸಾಧಾರಣವಾಗಿದ್ದರೂ, ಅವನದೇ ಮೇಲುಗೈಯಾಗಿತ್ತು. ಪುರೋಹಿತನು ರಾಜನನ್ನು ತನ್ನ ಅಂಗೈಯಲ್ಲಿ ಕುಣಿಸುತ್ತಿದ್ದನು ಮತ್ತು ಅವನು ಹುಬ್ಬುಗಂಟು (ಕೋಪ)ಗಳಿಗೆ ರಾಜನು ತತ್ತರಿಸಿಹೋಗುತ್ತಿದ್ದನು. ಆಡಳಿತ ಹಾಗೆ ನಡೆಯುತ್ತಿತ್ತು.

ನಿಸ್ಸಂಶಯವಾಗಿ ಕೆಲವು ಅಪವಾದಗಳಿವೆ. ಭಾರತದಲ್ಲಿ ಇಂಗ್ಲೀಷರ ಆಡಳಿತ ಪ್ರಾರಂಭವಾಗಿ ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಪಾಶ್ಚಿಮಾತ್ಯ ತತ್ವಜ್ಞಾನ ಹರಡಿದ ನಂತರ ಪುರೋಹಿತಶಾಹಿಯ ಬಗ್ಗೆ ದಾಳಿ ನಡೆಯಿತು. ಆದರೆ ಅವರ ಹಠಮಾರಿತನದ ವರ್ಣದ ಪ್ರಾಬಲ್ಯ ಹಾಗೆಯೇ ಸದೃಢವಾಗಿ ಉಳಿದುಬಿಟ್ಟಿತು. ಕೆಳಜಾತಿಗಳ ಬಗ್ಗೆಯಿದ್ದ ಬ್ರಾಹ್ಮಣರ ತಿರಸ್ಕಾರ ಸ್ವಲ್ಪವೂ ಬದಲಾಗಲಿಲ್ಲ. ಬ್ರಾಹ್ಮಣರ ಈ ಕೆರಳಿಸುವ ಮನೋಭಾವದಿಂದ ಉಂಟಾಗುವ ಸಮಸ್ಯೆಗಳು ಫುಲೆ ಮೊದಲಾದವರಲ್ಲಿ ಸಾಮಾಜಿಕ ಕ್ರಾಂತಿಗೆ ಸ್ಫೂರ್ತಿ ನೀಡಿದವು. ಕಾಲವು ಶಾಹುರವರ ಹೆಗಲಿಗೆ ಸಾಮಾಜಿಕ ಕ್ರಾಂತಿಯ ಧ್ವಜವನ್ನು ತಂದುಕೊಟ್ಟಿತು. ಅವರು ರಾಜತ್ವದ ಎಲ್ಲಾ ಅಧಿಕಾರಗಳನ್ನು ಈ ಕ್ರಾಂತಿಯ ಮುಂದುವರಿಕೆಗೆ ಬಳಸಿದರು. ಪುರೋಹಿತ ಜಾತಿಗಳು ಮತ್ತು ಅವರ ಬೆಂಬಲಿಗರು ಶಾಹುರವರ ಈ 'ಅಪರಾಧ'ಕ್ಕಾಗಿ ಶಿಕ್ಷಿಸಲು ದೃಢಸಂಕಲ್ಪ ಮಾಡಿದರು. ಶಾಹುರವರು ತಮ್ಮ ಇಡೀ ಆಡಳಿತವನ್ನು ಈ ಪ್ರವೃತ್ತಿಯಿಂದ ಉದ್ಭವಿಸಿದ ಸಂಘರ್ಷಗಳನ್ನು ಎದುರಿಸಲು ಕಳೆದರು.

## ದ್ರಷ್ಟಾರ ಮತ್ತು ಸುಧಾರಕ

ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಜಾತಿಯ ತಾರತಮ್ಯತೆ, ಅಸ್ಪೃಶ್ಯತೆಯ ನಿರ್ಮೂಲನೆ, ದಲಿತರ ಕಲ್ಯಾಣಕ್ಕಾಗಿ ಶಾಹುರವರು ಹೆಣಗಿದರು. ಈ ಎಲ್ಲಾ ಪರಿಕಲ್ಪನೆಗಳು ಭಾರತದ ಸಂವಿಧಾನದಲ್ಲಿ ಹೆಮ್ಮೆಯ ಸ್ಥಾನವನ್ನು ಪಡೆದುಕೊಂಡಿವೆ. ಈ ಸದುದ್ದೇಶಗಳಿಗಾಗಿ, ಶಾಹುರವರು ಸ್ವಾತಂತ್ರ್ಯ ಆಂದೋಲನದ ಮತ್ತು ಅಷ್ಟೇ ಅಲ್ಲ ಸಾಮಾಜಿಕ ಸುಧಾರಣೆಗಳ ಮುಂಚೂಣಿಯಲ್ಲಿದ್ದ ನಾಯಕರ ವಿರುದ್ಧ ಸೆಣಸಾಡಬೇಕಾಯಿತು. ಇದು ಸ್ವಾತಂತ್ರ್ಯ, ಸಮಾಜ, ರಾಷ್ಟ್ರ ಮತ್ತು ಜನರ ಬಗೆಗಿನ ಅವರ ನಿರ್ವಚನಗಳು ಹೇಗೆ ಅತಿಸೂಕ್ಷ್ಮ ಮತ್ತು ಕಿರಿದಾಗಿದ್ದವೆಂಬುದನ್ನು ತೋರಿಸುತ್ತದೆ.

ಆರ್ಥಿಕ, ಶೈಕ್ಷಣಿಕ ಮತ್ತು ಸಮಾನತೆಯಿಲ್ಲದ ಸ್ವಾತಂತ್ರ್ಯವು ಕೆಲವೇ ಕೆಲವು ವ್ಯಕ್ತಿಗಳ ಯಜಮಾನಿಕೆ (ಕಪಿಮುಷ್ಟಿ) ಮತ್ತು ಬಹುಸಂಖ್ಯಾತರ ದಾಸ್ಯತ್ವದ ಮುಂದುವರಿಕೆಯೆಂದು ಶಾಹುರವರು ತಿಳಿದಿದ್ದರು. ಭಾರತವು ಒಂದು ಸ್ವತಂತ್ರ ದೇಶವಾಗಬೇಕೆಂಬುದು ಅವರ ಸುಸ್ಥಿರ ನಿಲುವಾಗಿತ್ತು. ಅದೇ ಆಶಯದಲ್ಲಿ ಭಾರತದಲ್ಲಿರುವ ಬಹುಸಂಖ್ಯಾತರು ಸ್ವಾತಂತ್ರ್ಯವನ್ನು ಅನುಭವಿಸಲು ಅವರನ್ನು ಸಮರ್ಥರನ್ನಾಗಿ ಮಾಡಬೇಕೆಂದು ಅವರು ಒತ್ತಾಯಪಡಿಸಿದರು. ಮನಸ್ಸಿನಲ್ಲಿ ಈ ಗುರಿಯನ್ನಿಟ್ಟುಕೊಂಡು ಅವರು ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಜನರ ಸರ್ವಾಂಗೀಣ ಅಭಿವೃದ್ಧಿಗಾಗಿ ಸತತವಾಗಿ ಶ್ರಮಿಸಿದರು–ಫುಲೆಯವರಂತೆಯೇ ಅವರು ಅಭಿವೃದ್ಧಿಗೆ ಶಿಕ್ಷಣವೇ ಕೀಲಿಕೈ ಎಂದು ಬಗೆದು ಅವರು ಶಿಕ್ಷಣದ ಪ್ರಸಾರಕ್ಕೆ ಪ್ರಥಮ ಆದ್ಯತೆ ನೀಡಿದರು. ಶಿಕ್ಷಣವೊಂದೇ ದಲಿತರ ಮತ್ತು ಹಿಂದುಳಿದವರ ಹಿಂದುಳಿದಿರುವಿಕೆಗೆ ದಿವ್ಯೌಷಧಿಯಾಗಿರಲಿಲ್ಲ. ಶಾಹುರವರು ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಎತ್ತರಿಸಲು ಅವರು ಆಡಳಿತದ ಅವಧಿಯಲ್ಲಿ ನೇಮಕಾತಿಯ ಅಭಿಯಾನವನ್ನೇ ಪ್ರಾರಂಭ ಮಾಡಿದರು. ಅವರು ಆಡಳಿತದ ಮೇಲೆ ಒಂದೇ ಜಾತಿಯ ಪ್ರಾಬಲ್ಯ ಎಂತಹ ಅಹಿತಕರವಾದ ಪ್ರಭಾವ ಬೀರುತ್ತದೆಯೆಂಬುದನ್ನು ನೋಡಿದ್ದರು. ಆದ್ದರಿಂದ ಅವರು ಆಡಳಿತದಲ್ಲಿ ಬ್ರಾಹ್ಮಣೇತರರಿಗೆ ನೌಕರಿಗಳನ್ನು ಮೀಸಲಿಟ್ಟರು; ಈ ತತ್ವವನ್ನೇ ನಂತರ ಭಾರತದ ಸಂವಿಧಾನ ಅಂಗೀಕರಿಸಿತು.

## ಅಪರೂಪದ ನಾಯಕತ್ವ

ಕೃಷಿ, ಸಹಕಾರಿ ತತ್ವ ಮತ್ತು ಕೈಗಾರಿಕೆಗಳಲ್ಲಿನ ಶಾಹುರವರ ಕೆಲಸವು ಅವರ ಪ್ರಗತಿಪರ ಚಿಂತನೆ ಮತ್ತು ಮುತ್ಸದ್ದಿತನವನ್ನು ಒತ್ತಿಹೇಳುತ್ತದೆ ಕೂಡ. ಅವರನ್ನು ಹಸಿರುಕ್ರಾಂತಿಯ ಪಿತಾಮಹ ಮತ್ತು ಸಹಕಾರಿ ಆಂದೋಲನದ ಅಗ್ರಗಾಮಿಯೆಂದು ಕರೆಯಲಾಗುತ್ತದೆ. ಆಡಳಿತದಲ್ಲಿ ಸುಧಾರಣೆಗಳನ್ನು ತಂದಂತೆಯೇ ಈ ಕ್ಷೇತ್ರಗಳಲ್ಲಿ ಅವರು ನೀಡಿರುವ ಕೊಡುಗೆಯು ಅವರ ಮಹತ್ವದ ವಿಶಿಷ್ಟತೆಯನ್ನು ತೋರಿಸುತ್ತದೆ; ಆದರೆ ಅವರ ಪ್ರತಿಯೊಂದು ಕೊಡುಗೆ ಅಥವಾ ಸುಧಾರಣೆಯು ಹಿಂದುಳಿದ ಜಾತಿಗಳ ಅಭಿವೃದ್ಧಿಗಾಗಿಯೇ ಉದ್ದೇಶಿಸಲಾಗಿತ್ತು. ಈ ಮನುಷ್ಯನ ಹೃದಯವು ಬಡವರಿಗಾಗಿ ತಳಮಳಗೊಂಡಿತ್ತು ಮತ್ತು ಈ ತಳಮಳವು ಅವರ ಪ್ರತಿಯೊಂದು ಬರವಣಿಗೆ ಮತ್ತು ನುಡಿಯ ಮಾತುಗಳಲ್ಲಿ ಮತ್ತು ಕೃತಿಗಳಲ್ಲಿ ಪ್ರತಿಫಲಿತವಾಗುತ್ತಿತ್ತು. ಅಸ್ಪೃಶ್ಯರ, ಕಾರ್ಮಿಕರ ಮತ್ತು ಬಡವರ ಸಭೆ–ಸಮಾರಂಭಗಳಲ್ಲಿ ಒಬ್ಬ ಮಹಾರಾಜ ಭಾಗವಹಿಸಿ ಅವರಿಗೆ ಮಾರ್ಗದರ್ಶನ ನೀಡುವುದು ಅಸಾಮಾನ್ಯವಾದ ವಿಷಯವಾಗಿತ್ತು. ದಮನಿತರ ಅನ್ಯಾಯಗಳು, ನೋವು, ದುಃಖ, ದುಮ್ಮಾನಗಳನ್ನು ತನ್ನವೆಂದು ಪರಿಭಾವಿಸಿ, ಅವರ ಏಳಿಗೆಗಾಗಿ ದೈಹಿಕ ಮತ್ತು ಮಾನಸಿಕ ಕಷ್ಟಗಳನ್ನು ಅನುಭವಿಸುವ ಅವರಂತಹ ನಾಯಕರು ಅಪರೂಪ. ತಾವು ಭೋಗ–ವಿಲಾಸಗಳಲ್ಲಿ ಮುಳುಗಿ ತೇಲಾಡುವ ಸಮಯದಲ್ಲಿ ಶಾಹುರವರು ಇವೆಲ್ಲವನ್ನು ಮಾಡಿದರು.

ಅವರು ತಮ್ಮ ಬೃಹತ್ ಕೊಡುಗೆಗಾಗಿ ಎಲ್ಲಿಂದ ಮತ್ತು ಹೇಗೆ ಸ್ಫೂರ್ತಿ ಪಡೆದರೆಂಬುದು ಸಂಶೋಧನೆಯ ವಿಷಯವಾಗಿದೆ. ತಾವು ಹುಟ್ಟಿದ ಕುಟುಂಬದಿಂದ ವಾಸ್ತವಿಕತೆಯನ್ನು ಕಲಿತರೇ, ತಮಗೆ ಕಲಿಸಿದ ಗುರುಗಳಿಂದ ಅರಿತರೇ, ತಮ್ಮ ಬಾಲ್ಯದ ಪರಿಸರದಿಂದ ಪ್ರಭಾವಿತರಾದರೇ ಅಥವಾ ತಮ್ಮ ಆತ್ಮಸಾಕ್ಷಿಯನ್ನು ಭೇದಿಸಿದ ಸಾಮಾಜಿಕ ವಾತಾವರಣದಿಂದ ಕಲಿತರೇ? ಅಥವಾ ಈ ಅನುಭವಗಳು ಅವರ ಸಹಜ ಪ್ರತಿಭೆಗೆ, ಪ್ರಾಯೋಗಿಕ ವಿವೇಚನೆಗೆ ಮತ್ತು ಸೂಕ್ಷ್ಮ ಅವಲೋಕನಕ್ಕೆ ಆಹಾರವನ್ನು ಒದಗಿಸಿದವೇ? ಅವರು ಬೆಳೆದ ಸನ್ನಿವೇಶಗಳಿಗೆ ಮತ್ತು ಅವರ ದೇಶೀಯ ಗುಣಗಳಿಗೆ, ಬಡವರ

ಬಗ್ಗೆಯಿದ್ದ ಅವರ ಸಹಾನುಭೂತಿಗೆ ಮತ್ತು ಅನ್ಯಾಯಗಳ ಬಗ್ಗೆ ಅವರಿಗಿದ್ದ ತೀವ್ರ ನಿರಾಸಕ್ತಿಗಳಿಗೆ ಸಮವಾದ ಒತ್ತನ್ನು ಸಂಶೋಧಕ ವಿದ್ಯಾರ್ಥಿಗಳಿಗೆ ನೀಡಬೇಕಾಗುತ್ತದೆ.

### ಇತಿಹಾಸಕ್ಕೆ ನ್ಯಾಯ

ಜಾತಿ ಮತ್ತು ಧಾರ್ಮಿಕ ಪ್ರತ್ಯೇಕತೆಗಳು ಈ ದೇಶದಲ್ಲಿ ಮೌಲ್ಯಮಾಪನದ ಪ್ರಕ್ರಿಯೆಗಳಿಗೆ ಅಡ್ಡಿ-ಆತಂಕಗಳಾಗಿವೆ.ಒಬ್ಬ ವ್ಯಕ್ತಿ ಅಥವಾ ಘಟನೆಯ ಬಗ್ಗೆ ವಸ್ತುನಿಷ್ಠ ಮೌಲ್ಯಮಾಪನ ಮಾಡುವುದು ಬಹು ಕಷ್ಟ. ಕಲುಷಿತಗೊಂಡ ಮನಸ್ಥಿತಿ ಈ ದೇಶದ ಇತಿಹಾಸಕ್ಕೆ ಮಸಿ ಬಳಿದಿದೆ. ನಿಜವಾದ (ವಸ್ತುನಿಷ್ಠ) ಇತಿಹಾಸವನ್ನು ಇನ್ನೂ ಬರೆಯಬೇಕಾಗಿದೆ. ಇತಿಹಾಸಕಾರರು ಹಲವಾರು ವ್ಯಕ್ತಿಗಳಿಗೆ ನ್ಯಾಯ ದೊರಕಿಸಿಕೊಟ್ಟಿಲ್ಲ ಮತ್ತು ಘಟನೆಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಕಾಲ ಸರಿದಂತೆ ನಿರ್ಲಕ್ಷ್ಯಕ್ಕೊಳಗಾಗಿದ್ದವರು ಇತಿಹಾಸದಲ್ಲಿ ತಮ್ಮ ಸ್ಥಾನಗಳನ್ನು ಪಡೆಯುತ್ತಿದ್ದಾರೆ. ಘಟನೆಗಳನ್ನು ವಾಸ್ತವಿಕತೆಯ ಬೆಳಕಿನಲ್ಲಿ ವ್ಯಾಖ್ಯಾನ ಮಾಡಲಾಗುತ್ತಿದೆ. ಜಾತಿಯ ಕುರುಡುತನದಿಂದ ಅನ್ಯಾಯಕ್ಕೊಳಗಾದವರು ಶಾಹು ಮಹಾರಾಜರೊಬ್ಬರು. ಧನಂಜಯ ಕೀರ್‌ನಂತಹ ಜೀವನಚರಿತ್ರೆಕಾರರು ಅವರ ಕೃತಿಗಳನ್ನು ಮೆಚ್ಚಿ ಬರೆದಿದ್ದಾರೆ. ಇತಿಹಾಸದಲ್ಲಿ ಕೀರ್ ಅಂತಹ ಹಲವು ಕೀರರು ಬರುವರೆಂಬ ಭರವಸೆಯಿದೆ. ಸಾಮಾಜಿಕವಾಗಿ ಮಹಾನ್ ನಾಯಕರಾದ ಶಾಹುರವರಿಗೆ ನ್ಯಾಯ ದೊರಕಿಸಿಕೊಡುವರಲ್ಲದೆ ಇತಿಹಾಸಕ್ಕೂ ನ್ಯಾಯ ದೊರಕಿಸಿಕೊಡುವರು. ಇದು ಸಂಭವಿಸಿದರೆ ಈ ದೇಶದ ಭವಿಷ್ಯ ಖಂಡಿತವಾಗಿ ಭವ್ಯವಾಗುವುದು. ಜಾತಿ ಮತಗಳ ಭೇದದಿಂದ ಕೂಡಿದ ಈ ಸಮಾಜ ನಿಜವಾದ ಭ್ರಾತೃತ್ವವನ್ನು ರೂಪಿಸುವುದಕ್ಕೆ ಒಂದಾಗುವುದು. ಆಗ ಈ ದೇಶ ಈ ದೃಢ ಬುನಾದಿಯ ಮೇಲೆ ನಿಜವಾಗಿ ಐಕ್ಯತೆಯಿಂದ ನಿಲ್ಲುವುದು.

---

೧೨

# ಇತಿಹಾಸ ನಿರ್ಮಿಸಿದ ಜನತೆಯ ರಾಜ

**– ಡಾ. ನಿರ್ಮಲಕುಮಾರ ಫಡ್ಕುಲೆ**

*ವಿಮರ್ಶಕ ಮತ್ತು ಲೇಖಕ*

**ಹ**ಲವಾರು ಪ್ರತಿಭೆಗಳು, ಸೃಜನಾತ್ಮಕ ಮನಸ್ಸುಗಳು ಮತ್ತು ಕ್ರಾಂತಿಕಾರಿಗಳು ಮಹಾರಾಷ್ಟ್ರದ ಚಾರಿತ್ರ್ಯ(ಸ್ವಭಾವ)ವನ್ನು ರೂಪಿಸಲು ತಮ್ಮ ಜೀವಗಳನ್ನು ಮತ್ತು ಶಕ್ತಿಗಳನ್ನು ತೆತ್ತಿದ್ದಾರೆ. 'ಮಹಾರಾಷ್ಟ್ರ' ಎಂಬ ಶಬ್ದದ ಅರ್ಥ ಮಹಾನ್ ಎಂದು. ಹಲವಾರು ವ್ಯಕ್ತಿಗಳು ಮಹಾರಾಷ್ಟ್ರವನ್ನು ಮಹಾನತೆಯ ಕಡೆಗೆ ಕೊಂಡೊಯ್ಯಲು ಬಹಳ ಶ್ರಮಪಟ್ಟಿದ್ದಾರೆ. ಅದು ವೀರರ, ಸಾಧುಗಳ, ಸಂತರ ಮತ್ತು ಸಾಮಾಜಿಕ ಸುಧಾರಕರ ದೇಶವೆಂದೇ ಸುಪರಿಚಿತವಾಗಿದೆ. ಅದು ವಿಶಿಷ್ಟ ಅಸ್ಮಿತೆ ಮತ್ತು ಭವ್ಯ ಇತಿಹಾಸವನ್ನು ಹೊಂದಿದೆ. ಚಕ್ರಧರ, ಜ್ಞಾನೇಶ್ವರ, ನಾಮದೇವ, ತುಕಾರಾಮ ಅವರು ಮಹಾರಾಷ್ಟ್ರಕ್ಕೆ ಧಾರ್ಮಿಕ ತಿಳುವಳಿಕೆಯನ್ನು ನೀಡಿದ್ದಾರೆ. ಛತ್ರಪತಿ ಶಿವಾಜಿ ಅದಕ್ಕೆ ಆತ್ಮಗೌರವ ಮತ್ತು ಸ್ವಾತಂತ್ರ್ಯವನ್ನು ತುಂಬಿದ್ದಾರೆ. ಲೋಕಹಿತವಾದಿ, ಫುಲೆ, ಆಗರ್ಕರ್, ಶಾಹು ಮಹಾರಾಜ, ಸಾವರ್ಕರ್ ಮತ್ತು ಅಂಬೇಡ್ಕರರು ಮಹಾರಾಷ್ಟ್ರಕ್ಕೆ ಕ್ರಾಂತಿಕಾರಿ ಚಿಂತನೆಗಳನ್ನು ನೀಡಿದ್ದಾರೆ.

### ಸ್ವಾರ್ಥರಹಿತ ಸ್ವಾಮಿ

ಶಾಹು ಮಹಾರಾಜರು ಮಹಾರಾಷ್ಟ್ರದ ಮಹಾನ್ ಕ್ರಾಂತಿಕಾರಿ ಪರಂಪರೆಯಲ್ಲಿ ಮುಖ್ಯ ಸ್ಥಾನವನ್ನು ಪಡೆದಿದ್ದಾರೆ. ಶಾಹುರವರು ಮಹಾರಾಷ್ಟ್ರದ ಸಾಮಾಜಿಕ ಇತಿಹಾಸದಲ್ಲಿ ಒಬ್ಬ ಬಿರುಗಾಳಿ ಮತ್ತು ಸೃಜನಾತ್ಮಕ ಶಕ್ತಿಯೆಂದು ಮೆಚ್ಚುಗೆ ಪಡೆದ ವ್ಯಕ್ತಿ. ಈ ಮಹಾರಾಜರು ತಮ್ಮ ಅಧಿಕಾರವನ್ನು ಜನರ ಕಲ್ಯಾಣಕ್ಕಾಗಿಯೇ ಬಳಸಿದರು. "ರಾಜಮ್ಹಾನಜೆ ಉಪಭೋಗ ಶೂನ್ಯ ಸ್ವಾಮಿ" ಎಂದು 'ರಾಜಸನ್ಯಾಸ್' ಎಂಬ ರಾಮಗಣೇಶ ಗಡ್ಕರಿಯವರ ನಾಟಕದಲ್ಲಿನ ಒಂದು ಪಾತ್ರ ಹೇಳುತ್ತದೆ. ಇದರರ್ಥ ತನ್ನ ಪ್ರಾಂತ್ಯದ ಸಂತೋಷವಿಲ್ಲದ ಮಾಲಿಕ. ತನ್ನ ಪ್ರಾಂತ್ಯವನ್ನು ನೋಡಿಕೊಳ್ಳುವ ಸಲುವಾಗಿ 'ಸನ್ಯಾಸಿ'ಯಾಗಿರುವ ಒಬ್ಬ ರಾಜ ಎಂದು ಇದರರ್ಥ. ಈ ಉದ್ಧರಣೆಯಲ್ಲಿ ಶಾಹುರವರ ಜೀವನ ಮತ್ತು ಕೊಡುಗೆಯನ್ನು ಸರಿಯಾಗಿ ತಿಳಿಸಲಾಗಿದೆ. ಅವರು ಎಂದಿಗೂ ವೈಯಕ್ತಿಕ ಭೋಗವಿಲಾಸದಲ್ಲಿ ಮುಳುಗಿ ತೇಲಾಡಲಿಲ್ಲ. ಸಾಮಾನ್ಯ ಮನುಷ್ಯನ ಪ್ರಗತಿ ಮತ್ತು ಸಂತೋಷವೇ ಅವರ ಕಾಳಜಿಯಾಗಿತ್ತು. ಅವರು ದಮನಿತರನ್ನು ಮತ್ತು ಶೋಷಿತರನ್ನು ಸಬಲಗೊಳಿಸುವ ಹಾಗೂ ಶಿಕ್ಷಿತರನ್ನಾಗಿ ಮಾಡುವ ಮೂಲಕ ಒಂದು ಹೊಸ ಇತಿಹಾಸವನ್ನು ನಿರ್ಮಿಸಿದರು. ಅವರ ದೃಷ್ಟಿಯಲ್ಲಿ 'ರಾಜಧರ್ಮ' ಎಂದರೆ ಜನರನ್ನು ಪಾಲನೆಪೋಷಣೆ ಮಾಡುವುದು ಮಾತ್ರವಲ್ಲ. ಸಾಮಾನ್ಯ ಜನರು ಶೋಷಣೆಗೊಳಗಾಗದೆ ಸುಖಜೀವನವನ್ನು ನಡೆಸಲು ಸಮರ್ಥರಾಗಬೇಕೆಂದು ಅವರು ಪರಿಗಣಿಸಿದ್ದರು. ಜನರ ಜೀವನದ ಪರಂಪರಾಗತ ದೃಷ್ಟಿಕೋನವನ್ನು ಉತ್ತಮ ಜೀವನಕ್ಕಾಗಿ ಬದಲಾಯಿಸುವುದು.

ಅಧಿಕಾರಸ್ಥರು (ರಾಜರು) ಜನರು ಭೌತಿಕವಾಗಿ ಸುಖ-ಸಂತೋಷದಿಂದಿರುವುದಕ್ಕೆ ಪ್ರಯತ್ನಿಸುವುದು ಮತ್ತು ಅಲ್ಲಿಗೆ ಅವರ ಕರ್ತವ್ಯ ಮುಗಿಯಿತೆಂದು ಭಾವಿಸುವರು. ರಾಜರು ಈ ಪರಿಕಲ್ಪನೆಯ ಆಚೆಗೂ ಹೋಗಿದ್ದಾರೆ. ಶಾಹುರವರಿಗೆ ಆರಾಧ್ಯದೇವರು (ಐಕಾನ್) ಛತ್ರಪತಿ ಶಿವಾಜಿ. ಜನರನ್ನು ಭೌತಿಕವಾಗಿ ಸುಖ-ಸಂತೋಷಗೊಳಿಸುವುದೇ ತಮ್ಮ ಕರ್ತವ್ಯವೆಂದು ಅವರು ಎಂದೆಂದಿಗೂ ಪರಿಭಾವಿಸಿರಲಿಲ್ಲ. ತಮ್ಮ ಸಮಕಾಲೀನ ರಾಜ ಮತ್ತು ಮಹಾರಾಜರು ವಿವೇಕಶೂನ್ಯ ಮತ್ತು ಬೇಜವಾಬ್ದಾರಿ ಆಡಳಿತಗಾರರಾಗಿ ಸುಖವೈಭೋಗದಲ್ಲಿ ಮುಳುಗಿದ್ದರು. ಲೌಕಿಕ ಸುಖಸಂತೋಷಗಳನ್ನು ಅನುಭವಿಸುವುದರಲ್ಲಿ ಸ್ವಾರ್ಥಪರರಾಗಿ ತಮ್ಮ ಕರ್ತವ್ಯಗಳನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದರು. ಈ ಸಾಮಂತ ರಾಜರು ಯಾವುದೇ ಘನತೆ-ಗೌರವವಿಲ್ಲದೆ ಕೇವಲ ತಮ್ಮ ಪ್ರಜೆಗಳನ್ನು ಶೋಷಣೆ ಮಾಡುವುದರಲ್ಲಿ ಮಾತ್ರ ನಿರತರಾಗಿದ್ದರು. ಅವರ ಮನೋಭಾವವು ಇಂಗ್ಲೀಷರು ಶಕ್ತಿಸಂಚಯಕ್ಕೆ ಸಹಕಾರಿಯಾಯಿತು. ಈ ಹಿನ್ನೆಲೆಯಲ್ಲಿ ಶಾಹುರವರ ಕೆಲಸ-ಕಾರ್ಯಗಳು ನಿಸ್ಸಂದೇಹವಾಗಿ, ನಿಜವಾಗಿಯೂ ಕ್ರಾಂತಿಕಾರಿ ಮತ್ತು ರಚನಾತ್ಮಕವಾದುದು.

## ಜನತೆಯ ರಾಜ

'ಕ್ರಾಂತಿಕಾರಿ' ಎಂಬ ಪದವನ್ನು ಇತ್ತೀಚಿನ ದಿನಗಳಲ್ಲಿ ಉಡಾಫೆಯಿಂದ ಬಳಸಿದರೂ ಆ ಶಬ್ದ ಶಾಹುರವರಿಗೆ ಬಹಳ ಯೋಗ್ಯವಾಗಿ ಅನ್ವಯವಾಗುತ್ತದೆ. ಸಾಮಾಜಿಕ ಸುಧಾರಕರು ಮತ್ತು ಕ್ರಾಂತಿಕಾರಿಗಳ ನಡುವೆ ಮುಖ್ಯವಾದ ವ್ಯತ್ಯಾಸವಿದೆ. ಸಕ್ರಿಯ ಚಿಂತಕ ಹಳೆಯ (ಕೆಲಸಕ್ಕೆ ಬಾರದ) ಚಿಂತನೆಗಳನ್ನು, ವಿಚಾರಗಳನ್ನು ಮತ್ತು ಸಾಮಾಜಿಕ ರೂಢಿಗಳನ್ನು ನಾಶಮಾಡಿ ಅವುಗಳ ಸ್ಥಾನದಲ್ಲಿ ಆಧುನಿಕ ಕಾಲಕ್ಕೆ ತಕ್ಕಂತೆ ವೈಚಾರಿಕ ಮೌಲ್ಯಗಳನ್ನು ನೆಲೆಗೊಳಿಸಬೇಕು ಮತ್ತು ಈ ಆದರ್ಶಕ್ಕಾಗಿ ಹೋರಾಡಬೇಕು; ಅಂತಹವರನ್ನು ಒಬ್ಬ ಕ್ರಾಂತಿಕಾರಿ ಎಂದು ವಿವರಿಸಲಾಗುತ್ತದೆ. ಕ್ರಾಂತಿಕಾರಿ ಮನೋಭಾವವು ತುಳಿದ ಹಾದಿಯನ್ನು ಹೇಸುತ್ತದೆ. ಹಲವಾರು ಶತಮಾನಗಳಿಂದ ಬೆಳೆದುಬಂದ ಸಂಪ್ರದಾಯವಾದಿ ಸಾಮಾಜಿಕ ಮನಸ್ಥಿತಿಯೊಂದಿಗೆ ಸಂಘರ್ಷ ನಡೆಸುವುದು ಅವನಿಗೆ ಅನಿವಾರ್ಯವಾಗುತ್ತದೆ. ಶಾಹುರವರು ಅಂತಹ ಹಲವಾರು ಸಂಘರ್ಷಗಳನ್ನು ಎದುರಿಸಿದರು. ಬಾಹ್ಯರೂಪದಲ್ಲಿ ಜನರನ್ನು ಖುಷಿಗೊಳಿಸಲು ಪ್ರಯತ್ನಿಸುವವರು ಜನಪ್ರಿಯರಾಗುತ್ತಾರೆ. ಆದರೆ ಶಾಹುರಂತಹ ಆಡಳಿತಗಾರರು ಜನರ ಜೀವನ ಮತ್ತು ಬುದ್ಧಿಯನ್ನು ರೂಪಿಸಲು ಪ್ರಯತ್ನಿಸುವವರು ವಿವಾದಗಳನ್ನು ಎದುರಿಸಬೇಕಾಗುತ್ತದೆ ಮತ್ತು ಅಪ್ರಿಯರಾಗಿಬಿಡುತ್ತಾರೆ. ಅವರು (ಶಾಹು) ಸಾಮಾಜಿಕ ಅಸಮಾನತೆ ಮತ್ತು ಮೌಢ್ಯತೆಯನ್ನು ದಿಟ್ಟತನದಿಂದ ಎದುರಿಸಿ, ಹೊಸ ಪ್ರಗತಿಪರ ವಿಚಾರಗಳಿಗೆ ರೂಪ ನೀಡಿದರು. ಅವರು ಮಹಾತ್ಮ ಫುಲೆಯವರ ಶಕ್ತಿಯುತ ವಿಚಾರಗಳಿಂದ ಸ್ಫೂರ್ತಿ ಪಡೆದು ಸಂತ ತುಕಾರಾಮ್ ಹೇಳುವಂತೆ ಅವರು ಏಕಾಂಗಿಯಾಗಿ ಮುನ್ನಡೆದರು. ತುಕಾರಾಮರು ಹೇಳುತ್ತಾರೆ:

*"ಸತ್ಯಸತ್ಯಷೀ ಮನಕೇಲೆ ಗ್ವಾಹಿ*
*ಮನಿಯೇಲೆ ನಾಹೀ ಬಹುಮತ"*

*(ಸತ್ಯ ಏನೆಂದು ಮನಸ್ಸು ಪರೀಕ್ಷಿಸುತ್ತದೆ. ಅದು ಬಹುಜನರ (ಬಹುಸಂಖ್ಯಾತರ) ಅಭಿಪ್ರಾಯವನ್ನು ನಿರಾಕರಿಸುತ್ತದೆ)*

ಅಂತಹ ಒಂದು ಸನ್ನಿವೇಶದಲ್ಲಿ 'ರಾತ್ರಂದಿನ ಆಮ್ಹ ಯುದ್ಧಾಚ ಪ್ರಸಂಗ'– ನಾವು ರಾತ್ರಿ–ಹಗಲು ಹೋರಾಡಲು ಬದ್ಧರಾಗಿದ್ದೇವೆ. ಶಾಹುರವರು ವೈಯಕ್ತಿಕವಾಗಿ ಈ ಅನುಭವದ ಮೂಲಕ ಹಾದುಬಂದರು. ಒಬ್ಬ ಕ್ರಾಂತಿಕಾರಿಯು ಮುಳ್ಳಿನ ಹಾದಿಯಲ್ಲಿ ಹಾದು ಬರಬೇಕಾಗಿದೆ ಮತ್ತು ಹಲವಾರು ಆತಂಕಗಳನ್ನು ಎದುರಿಸಬೇಕಾಗುತ್ತದೆ. ಅದೃಷ್ಟವಶಾತ್ ಶಾಹುರವರು ಒಬ್ಬ ರಾಜನಾಗಿದ್ದರಿಂದ ಇತರೆ ಕ್ರಾಂತಿಕಾರಿಗಳಿಗಿಂತ ಸುಲಭವಾಗಿ ಈ ಅಡ್ಡಿ–ಆತಂಕಗಳನ್ನು ಎದುರಿಸಿದ್ದರು. ತಮ್ಮ ಸಾಮಾಜಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಾಮಾನ್ಯ ಮನುಷ್ಯ ಸದಾ ಗಮನದಲ್ಲಿರುತ್ತಿದ್ದನು. ಆದ್ದರಿಂದ ಅವರು 'ಜನತೆಯ ರಾಜ' ಎಂಬ ಕೀರ್ತಿಗೆ ಭಾಜನರಾಗಿದ್ದರು.

## ಇತಿಹಾಸದ ಭವ್ಯ ಅಧ್ಯಾಯ

ಯಾವ ಕ್ರಾಂತಿಕಾರಿಯು ಸಂಪೂರ್ಣವಾಗಿ ಸ್ವಯಂ–ನಿರ್ಮಿತ ಮನುಷ್ಯನಲ್ಲ. ಅವನು ತನ್ನ ಕಾಲ ಮತ್ತು ಆಗಿದ್ದ ಪರಿಸ್ಥಿತಿಗಳಿಂದ ನಿರ್ಮಿತನಾದವನು. ಗತಕಾಲ ಮತ್ತು ಗತಚಿಂತಕರು ಅನಿವಾರ್ಯವಾಗಿ ಅವನ ಮನಸ್ಸಿನ ಮೇಲೆ ಪ್ರಭಾವ ಬೀರಿರುತ್ತಾರೆ. ಶಾಹುರವರು ಒಂದು ಹೊಸ ಸಮಾಜ ನಿರ್ಮಿಸಿದರು. ಆದರೆ ಅವರು ಸಹ ಗತಕಾಲದಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ. ಒಬ್ಬ ದ್ರಷ್ಟಾರ ಮತ್ತು ಸಾಮಾಜಿಕ ಬದ್ಧತೆಯ ಮಹಾರಾಜ ಮಹಾರಾಷ್ಟ್ರದಲ್ಲಿ ಹುಟ್ಟಿದ್ದು ಒಂದು ಆಕಸ್ಮಿಕವಲ್ಲ. ಮಹಾರಾಷ್ಟ್ರದ ಮಣ್ಣು ಈ ಹೊಳೆಯುವ ಕಿಡಿಯನ್ನು ನಿರ್ಮಿಸಿತು. ಮಹಾರಾಷ್ಟ್ರವು ಛತ್ರಪತಿ ಶಿವಾಜಿಯ ಕಾಲದಿಂದಲೂ ಶಾಹುರಂತಹ ಪ್ರತಿಭೆಯ ಮನುಷ್ಯನ ಕನಸು ಕಂಡಿತ್ತು.

ಒಬ್ಬ ವಿಮರ್ಶಕರು ಹೇಳುತ್ತಾನೆ: "ಕಲಾಕೃತಿಯು ತನ್ನ ಪರಿಸರದ ಒಂದು ಉತ್ಪನ್ನವಾಗಿದೆ ಮತ್ತು ಮತ್ತೆ ಅದು ಇನ್ನೇನೂ ಅಲ್ಲ." ಈ ಹೇಳಿಕೆಯು ಮಹಾನುಭಾವರಿಗೆ ಅನ್ವಯಿಸುತ್ತದೆ. ಆದರೆ ಕಾಲ ಮತ್ತು ಪರಿಸರಗಳಿಂದಲೇ ಶಾಹು ರೂಪುಗೊಂಡರೆಂದು ಹೇಳುವುದು ತಪ್ಪಾಗುತ್ತದೆ. ಕೆಲವು ಬೀಜಗಳು ಬೆಳೆಯುವ ಮತ್ತು ಅಭಿವೃದ್ಧಿ ಹೊಂದುವ ಪ್ರವರ್ಧಮಾನದ ಇಚ್ಛೆಯನ್ನು ಹೊಂದಿರುತ್ತವೆ. ಅದು ಜೀವಿಸಲು ಮತ್ತು ಬೆಳೆಯಲು ಪ್ರತಿಕೂಲಕರ ಸನ್ನಿವೇಶಗಳನ್ನು ಎದುರಿಸುತ್ತದೆ. ಅವರ ಚಲನಶೀಲ ವ್ಯಕ್ತಿತ್ವವು ಯಾವಾಗಲೂ ಬೆಳೆಯಲು ಮುಂದೆ ಬಂತು ಮತ್ತು ಅವಶ್ಯಕತೆ ಬಿದ್ದಾಗಲೆಲ್ಲ ಬದಲಾಯಿತು. ಅವರ ಬಂಡಾಯವು ಒಂದು ರಚನಾತ್ಮಕ ಹುರುಪನ್ನು ಹೊಂದಿತ್ತು. ಬೇರೆ ಕ್ರಾಂತಿಕಾರಿಗಳಂತೆಯೇ ಶಾಹುರವರು ಒಂದು ಹೊಸ ಸಮಾಜ ನಿರ್ಮಿಸುವ ಕನಸನ್ನು ಹೊತ್ತಿದ್ದರು. ಆದರೆ ಪರಿಸ್ಥಿತಿಗಳು ಹೆಚ್ಚು ಆಶಾದಾಯಕವಾಗಿರಲಿಲ್ಲ. ಬ್ರಿಟಿಷ್ ಆಡಳಿತಗಾರರು ಸಂಸ್ಥಾನಗಳ ಜನಪ್ರಿಯ ಆಡಳಿತಗಾರರನ್ನು ಒಪ್ಪಲಿಲ್ಲ. ತತ್ಪರಿಣಾಮವಾಗಿ, ಶಾಹುರವರು ಹಲವಾರು ತೊಂದರೆಗಳನ್ನು ಅನುಭವಿಸಬೇಕಾಯಿತು ಮತ್ತು ತಮ್ಮ ಪ್ರಗತಿಪರ ಆಂದೋಲನಗಳನ್ನು ಪ್ರಾರಂಭಿಸುವಾಗ ಅವರು ತಮ್ಮ ಹಾದಿಯನ್ನು ಹೆಚ್ಚು ಎಚ್ಚರಿಕೆಯಿಂದ ಸಂಧಾನ ನಡೆಸಿದರು. ಅವರು ಪ್ರತಿಗಾಮಿಗಳ ವಿರುದ್ಧ ದೃಢವಾಗಿ ನಿಂತರು ಮತ್ತು ಬ್ರಿಟಿಷ್ ಅಧಿಕಾರ ಸಮಾಜದ ಮುಖವನ್ನೇ ಬದಲಾಯಿಸಿತು. ಅವರ ಕೊಡುಗೆಯನ್ನು ಹೆಸರಿಸದಿದ್ದರೆ ಮಹಾರಾಷ್ಟ್ರದ ಇತಿಹಾಸ ಅಪೂರ್ಣಗೊಳ್ಳುತ್ತದೆ. ಶಾಹುರವರ ಕೆಲಸ–ಕಾರ್ಯವು ಮಹಾರಾಷ್ಟ್ರದ ಇತಿಹಾಸದ ಭವ್ಯವಾದ ಒಂದು ಅಧ್ಯಯನವಾಗಿದೆ.

## ಅಭೂತಪೂರ್ವವಾದ ಕೊಡುಗೆ

ಭಾರತದ ಸಮಾಜವು ಅಸಮಾನತೆಯ ಅವೈಜ್ಞಾನಿಕ ಮತ್ತು ಹುಟ್ಟಿನ ಅಂತಸ್ತಿನ ಮೇರೆಗೆ ನೂರಾರು ವಿಭಾಗಗಳಾಗಿ ವಿಭಜನೆಗೊಂಡು ಜಾತಿಗಳು ಮತ್ತು ಉಪಜಾತಿಗಳು ಸಾವಿರಾರಾಗಿ ವಿಭಜನೆಗೊಂಡಿರುವುದರಿಂದ ಸಮಾಜವು ಏಕರೂಪದ ಸ್ವರೂಪಹೊಂದಲು ಸಾಧ್ಯವೇ ಆಗಲಿಲ್ಲ. ಅಪವಾದ ರೀತಿಯಲ್ಲಿ ಶಿವಾಜಿಯಂತಹ ಮಹಾರಾಜರು ಸಮಾಜದಲ್ಲಿ ಸ್ವಾತಂತ್ರ್ಯ ಮತ್ತು ಆತ್ಮ-ಗೌರವ ಜ್ಯೋತಿಯನ್ನು ಬೆಳಗಿಸಲು ಜಾತಿಮತಗಳನ್ನು ಒಂದುಗೂಡಿಸಬಲ್ಲರು. ಆದರೆ ಶಿವಾಜಿಯ ನಂತರ ಒಂದುಗೂಡಿಸುವ ಉಬ್ಬರ ನಿಂತುಹೋಯಿತು. ಜಾತಿಯ ಒಡಕುಗಳು ಮತ್ತೆ ಹೆಚ್ಚಾದವು, ಗಟ್ಟಿಗೊಂಡವು. ಹುಟ್ಟಿನಿಂದ ಬಂದ ಮಾನವನ ಗುರುತನ್ನು ಜಾತಿಗೆ ನೀಡಲಾಯಿತು. ವಾಸ್ತವಿಕವಾಗಿ ಹಿಂದು ಅಥವಾ ಭಾರತೀಯ ಸಮಾಜ ಎಂಬುದಕ್ಕೆ ಅಸ್ತಿತ್ವವಿರಲಿಲ್ಲ. ಮೌಢ್ಯದ, ದುರ್ಬಲಗೊಂಡ ಮತ್ತು ವಿಧಿಯ ಸಮಾಜವು ಹಲವಾರು ಭಾಗಗಳಾಗಿ ಒಡೆದು ಗುಲಾಮತ್ವಕ್ಕೊಳಗಾಯಿತು. ವಾಸ್ತವಿಕವಾಗಿ ಜಾತಿಪದ್ಧತಿಯು ಭಾರತದ ಸಮಾಜ ಸುಧಾರಕರಿಗೆ ಒಂದು ಬಹುದೊಡ್ಡ ಸವಾಲಾಗಿ ಪರಿಣಮಿಸಿತು. ತುಚ್ಛ ತಾರತಮ್ಯತೆಯ ಮೇಲೆ ಆಧಾರಗೊಂಡ ಜಾತಿಗಳು ಪಟ್ಟಭದ್ರ ಹಿತಾಸಕ್ತಿಗಳ ಕೈಯಲ್ಲಿ ಶಕ್ತಿಯುತ ಅಸ್ತ್ರಗಳಾದವು. ಅವುಗಳಿಗೆ ಸ್ಮೃತಿಗಳು, ಶ್ರುತಿಗಳು ಮತ್ತು ಪುರಾಣಗಳು ಮನ್ನಣೆಯನ್ನು ನೀಡಿದವು. ಜನರು ಇದು ತಮ್ಮ ಧರ್ಮ(ಮತ)ವೆಂದು ನಂಬಿದರು ಮತ್ತು ಅವುಗಳ ಸಂಕುಚಿತ ಸಾಮಾಜಿಕ ಭಾಗಗಳಲ್ಲಿ ಜೀವಿಸತೊಡಗಿದರು. ಬುದ್ಧ, ಮಹಾವೀರ, ಬಸವೇಶ್ವರ, ಚಕ್ರಧರರು ಈ ಅಡ್ಡಗೋಡೆಗಳನ್ನು ವಿರೋಧಿಸಿದರು. ಆದರೆ ಅವರ ಪ್ರಯತ್ನಗಳು ಆಂಶಿಕವಾಗಿ ಸಫಲವಾದವು. ಮಹಾತ್ಮ ಜೋತಿಬಾ ಫುಲೆಯವರ ನೇರ ಆಕ್ರಮಣವು (ದಾಳಿ) ಈ ಗೋಡೆಗಳನ್ನು ಪರಿಣಾಮಕಾರಿಯಾಗಿ ಅಲುಗಾಡಿಸಿದವು.

ಫುಲೆಯವರಿಂದ ಸ್ಫೂರ್ತಿಗೊಂಡ ಶಾಹುರವರನ್ನು ತಮ್ಮ ಶಕ್ತ್ಯಾನುಸಾರವಾಗಿ ಈ ಭದ್ರಕೋಟೆ (ಗೋಡೆ)ಗೆ ಮುತ್ತಿಗೆ ಹಾಕಿದರು. ಬ್ರಾಹ್ಮಣವಾದವು ಶಾಹುರವರನ್ನೇ ಒಬ್ಬ 'ಶೂದ್ರ' ಎಂದು ಹಣೆಪಟ್ಟಿ ಕಟ್ಟಿದ್ದರಿಂದ ಅವರೇ ಜಾತಿಯ ತಾರತಮ್ಯತೆಯಿಂದ ನೋವಿಗೆ ಗುರಿಯಾದರು. ಶಾಹುರವರ ಹೋರಾಟವು ದ್ವಿಮುಖವಾಗಿತ್ತು. ಅವರು ಒಂದು ಕಡೆಗೆ ಜಾತಿಪದ್ಧತಿಯ ಮೇಲೆ ದಾಳಿ ಮಾಡಿದರೆ, ಮತ್ತೊಂದು ಕಡೆಗೆ ಮೇಲು-ಕೀಳುಗಳಿಲ್ಲದ ಸಮಾನತೆಯ ಸಮಾಜವನ್ನು ಪುನರ್‌ನಿರ್ಮಿಸುವುದಾಗಿತ್ತು. ಈ ಕ್ರಮವು ವಿಶಿಷ್ಟವಾಗಿತ್ತು ಮತ್ತು ಇಂಥ ಸಂಯೋಜನೆಯನ್ನು ಮೊದಲು ಯಾರೂ ಮಾಡಲು ಪ್ರಯತ್ನಿಸಿರಲಿಲ್ಲ. ಅವರು ಮಾನವಹಕ್ಕುಗಳಿಂದ ಚ್ಯುತರಾಗಿದ್ದ ಅಸ್ಪೃಶ್ಯರ ಪರವಾಗಿ ನಿಂತಿದ್ದರು. ಶಾಹು ಮಹಾರಾಜರು ಅಸ್ಪೃಶ್ಯರಾದ ಮಹರ್, ಮಾಂಗ್, ಚಂಬಾರ್, ಧೋರ್ ಮತ್ತು ಇತರರೊಡನೆ ಕೂಡಿ ಸಹಭೋಜನ ಸೇವಿಸಿದರು. ಅವರು ಅವರಿಗೆ ಸಾಮಾಜಿಕ ಘನತೆ-ಗೌರವ ನೀಡಿದರು ಮತ್ತು ಅವರು ವ್ಯಾಪಾರ ಮಾಡಲು ಅವಕಾಶಗಳನ್ನು ನೀಡಿ ಪ್ರೋತ್ಸಾಹಿಸಿದರು. ದಲಿತರಿಗೆ ಶಿಕ್ಷಣ ನೀಡುವ ಮತ್ತು ತಮ್ಮ ಸರಕಾರದಲ್ಲಿ ಅವರಿಗೆ ನೌಕರಿ ಕೊಡುವ ಪ್ರಯತ್ನಗಳು ಅಭೂತಪೂರ್ವವಾದುದು. ಅವರನ್ನು ಬ್ರಾಹ್ಮಣರು ಮಾತ್ರ ಟೀಕೆ ಮಾಡುವುದಲ್ಲದೆ ಬಹುಜನ ಸಮಾಜ ಕೂಡ 'ಪವಿತ್ರ ಸಂಪ್ರದಾಯ ಪಥ'ದಿಂದ ವಿಚಲಿತರಾಗಿದ್ದಾರೆಂದು ಟೀಕಿಸಿದರು. ಕೆಲವು ಗೌರವಾನ್ವಿತ ಪತ್ರಿಕೆಗಳು ಅವರ ಮೇಲೆ ಗೂಬೆ ಕೂರಿಸಿದವು. ಅದು ನಿರೀಕ್ಷಿತವೇ. ಏಕೆಂದರೆ ಮಡಿವಂತಿಕೆಯ ಸಂಪ್ರದಾಯದಿಂದ ಕುರುಡಾಗಿರುವವರು ಬೆಳಕಿನ ಹೊಸ ಕಿರಣಗಳಿಂದ ಹಿಂಜರಿಯುವುದು ಸಹಜ. ಶಾಹುರವರು ತಮ್ಮ ವಿರೋಧಿಗಳ ಒಣ ಘರ್ಜನೆಯ ಬಗ್ಗೆ ತಮಾಶೆ ಮಾಡಿದರು.

"ನಾನು ಬ್ರಾಹ್ಮಣರ ಪತ್ರಿಕೆಗಳ ಒಂದು ಒಳ್ಳೆಯ ಸಂದೇಶ ಮತ್ತು ಬಾಯ್‌ತುಂಬಿದ ಬೈಗುಳಗಳಿಗೆ ನಾನು ಒಗ್ಗಿಕೊಂಡಿದ್ದೇನೆ."

## ಪ್ರತಿಯೊಂದು ಅರ್ಥದಲ್ಲಿ ಅವರು ಮಾನವರು

ಮಾನವ ನಾಗರೀಕತೆಗೆ ಅಂಟಿರುವ ಅಸ್ಪೃಶ್ಯತೆಯ ಕಳಂಕವನ್ನು ತೆಗೆದುಹಾಕಲು ಪ್ರಯತ್ನಿಸಿದ ಫುಲೆಯ ನಂತರ ಶಾಹುರವರು ಒಬ್ಬ ಮಹಾನ್ ಕ್ರಾಂತಿಕಾರಿ. ಅವರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಿರುವಂತೆ ದಲಿತರನ್ನು ಎಚ್ಚರಗೊಳಿಸಿದರು. ಅವರ ಪ್ರಯತ್ನಗಳಿಂದ ಸಾಮಾಜಿಕ ಸುಧಾರಣೆಯ ಆಂದೋಲನ ಸಾಕಷ್ಟು ಬಲ ಪಡೆಯಿತು. ಶಾಹು ಒಮ್ಮೆ ಹೇಳಿದ್ದರು, "ಬೇರೆ ಜಾತಿಗಳು ನಿಮ್ಮನ್ನು (ದಲಿತರನ್ನು) ಉಪಚರಿಸುವ ರೀತಿಯಲ್ಲಿ ಜಾತಿಪದ್ಧತಿಯ ಕ್ರೂರರೂಪವನ್ನು ನೋಡಬಹುದು. ನೀವು ನಮ್ಮ ಅಣ್ಣ-ತಮ್ಮಂದಿರು. ಆದರೂ ಬೆಕ್ಕು, ನಾಯಿ ಮತ್ತು ಹಂದಿಗಳಿಗಿಂತ ಕೀಳೆಂದು ನಿಮ್ಮನ್ನು ನೋಡುತ್ತಾರೆ. ನಾನು ಹಿಂದುಳಿದ ಜಾತಿಗಳ ಸ್ಥಿತಿಗತಿಗಳನ್ನು ಸುಧಾರಿಸಲು ಪ್ರಯತ್ನಿಸುತ್ತಿರುವಾಗ ಸ್ವಯಂಘೋಷಿತ ಮೇಲುಜಾತಿಯ ಜನರು ನನ್ನ ಬಗ್ಗೆ ಕೋಪಗೊಂಡಿದ್ದಾರೆ. ಒಬ್ಬ ವೈದ್ಯನು ದುರ್ಬಲ ಮಗುವನ್ನು ಇತರರಂತೆ ಬಲಗೊಳ್ಳಲು ಹೆಚ್ಚು ಆರೈಕೆಯನ್ನು ಮಾಡುತ್ತಾರೆ. ಈ ಯಥಾಕಥಿತ ಅಸ್ಪೃಶ್ಯರನ್ನು ಇದೇ ಅರ್ಥದಲ್ಲಿ ಆರೈಕೆ ಮಾಡಬೇಕಾಗಿದೆ. ಅದರರ್ಥ ನಾನು ಬ್ರಾಹ್ಮಣರನ್ನು ದ್ವೇಷಿಸುತ್ತೇನೆಂದಲ್ಲ. ಅವರು ಅದೇ ಭಾಷಣದಲ್ಲಿ ಹೇಳಿದರು, "ಯಾರನ್ನಾಗಲೀ ಅಸ್ಪೃಶ್ಯನೆಂದು ಕರೆಯುವುದು ಭಯಾನಕವಾದುದು. ನೀವು ಅಸ್ಪೃಶ್ಯರಲ್ಲ. ನಾವು ಸಮಾನರು. ನಮಗೆ ಸಮಾನ ಹಕ್ಕುಗಳಿವೆ."

## ಅವರ ಪ್ರಮುಖ ಗಮನ ಮಾನವ

ಜಾತಿ, ಜನಾಂಗ ಮತ್ತು ಪಂಥಗಳ ಕೃತಕ ಬುನಾದಿಯ ಮೇಲೆ ಮಾನವ ಮತ್ತು ಮಾನವರ ನಡುವೆ ತಾರತಮ್ಯತೆ ಎಸಗುವ ಸಿದ್ಧಾಂತವು 'ಅಸ್ಪೃಶ್ಯರು' ಎಂಬ ಹಣೆಪಟ್ಟಿ ಕಟ್ಟುವ ಮೂಲಕ ಜನರ ಬಹುಭಾಗವನ್ನು ಸಮಾಜದ ಹೊರಭಾಗಗಳಲ್ಲಿ ಯಾವುದೇ ಅತಿ ಆಕ್ಷೇಪಣಾರ್ಹವಾದ ಮತ್ತು ನ್ಯಾಯಬದ್ಧವಲ್ಲದ ಸಿದ್ಧಾಂತವಾಗುತ್ತದೆ. ಅದರಲ್ಲಿ ಯಾವುದೇ ತರ್ಕವಾಗಲೀ ಅಥವಾ ಪರಾನುಭೂತಿಯಾಗಲೀ ಇರುವುದಿಲ್ಲ. ಶಾಹುರವರು ಈ ಸಿದ್ಧಾಂತವನ್ನು ಮಾನವೀಯತೆಗೆ ಸೇವೆ ಮಾಡಲು ನಿರಾಕರಿಸಿದರು. ಆದ್ದರಿಂದ ಎಲ್ಲಾ ಬ್ರಾಹ್ಮಣೇತರರನ್ನು 'ಶೂದ್ರರೆಂದು' ಪರಿಗಣಿಸಲಾಯಿತು ಮತ್ತು ಜ್ಞಾನದ ಶಕ್ತಿಯನ್ನು (ಅಧಿಕಾರ) ಬ್ರಾಹ್ಮಣರು ಏಕಸ್ವಾಮ್ಯವಾಗಿ ಮಾಡಿಕೊಂಡರು ಮತ್ತು ಬೇರೆಯವರನ್ನು ಜ್ಞಾನದಿಂದ ದೂರ ಇಡಲಾಯಿತು. ಈ ಕ್ರಮವು ಸಮಾಜದ ಮಾನಸಿಕ ಮತ್ತು ಬೌದ್ಧಿಕ ಬಲವನ್ನೇ ಹೊಸಕಿಹಾಕಿತು. ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಈ ತೊಡಕಿನಿಂದ ಪಾರುಮಾಡಿದ ಕೀರ್ತಿ ಫುಲೆ ಮತ್ತು ಶಾಹುರವರಿಗೆ ಸಲ್ಲುತ್ತದೆ. ದಲಿತರ ವಿಮೋಚನಾ ಚಳುವಳಿಯು ಇಡಿಯಾಗಿ ಮಾನವ ಸಮಾಜದ ವಿಮೋಚನೆಯ ಒಂದು ಬೃಹತ್ತಾದ ಆಯಾಮವನ್ನು ಹೊಂದಿದೆ. ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳು ಮಾನವನ ಸ್ವಾತಂತ್ರ್ಯವನ್ನೇ ದೋಚಿಬಿಟ್ಟಿವೆ. ಸ್ವತಂತ್ರನಾಗಿ ಹುಟ್ಟಿದ ಮನುಷ್ಯನ ಎಲ್ಲಾ ನೈಸರ್ಗಿಕ ಒತ್ತಾಸೆಗಳನ್ನು ತುಳಿದು ಮೆಟ್ಟಿವೆ. ವರ್ಣ ಮತ್ತು ಜಾತಿಪದ್ಧತಿಗಳ ಸಾಂಪ್ರದಾಯಿಕ ಅಧಿಕಾರ ಮಾನವನಿಗೆ ಅನೇಕ ಸಂಕೋಲೆಗಳನ್ನು ತೊಡಿಸಿವೆ. ಈ ವಿಶಾಲ ದೃಷ್ಟಿಕೋನದಿಂದ ಶಾಹುರವರು ಯಾವಾಗಲೂ ಮನುಷ್ಯನನ್ನು ತನ್ನ ಎಲ್ಲಾ ಧೋರಣೆ ಮತ್ತು ಕಾರ್ಯಕ್ರಮಗಳ ಕೇಂದ್ರದಲ್ಲಿ ನೋಡಿದ್ದಾರೆ. ಲೋಕಹಿತವಾದಿ (ಸ್ವತಃ ಬ್ರಾಹ್ಮಣರು)

ಮತ್ತು ಜೋತಿಬಾ ಫುಲೆಯವರನ್ನು ವಿಷ್ಣುಶಾಸ್ತ್ರಿ ಚಿಪುಣ್‌ಕರ್ ತೆಗಳಿದ ಮಾತುಗಳಲ್ಲಿಯೇ ನೊಂದ ಪಟ್ಟಭದ್ರ ಹಿತಾಸಕ್ತಿಯ ಬ್ರಾಹ್ಮಣರು ಶಾಹುರವರನ್ನು ಬ್ರಾಹ್ಮಣರ ದ್ವೇಷಿ ಎಂದು ತೆಗಳಿದ್ದಾರೆ. ಜನರನ್ನು ಈ ವಿಷಯದಲ್ಲಿ ತಪ್ಪುದಾರಿಗೆಳೆಯಲು ವಿರೋಧಿ ಪ್ರಚಾರವನ್ನು ಹೆಚ್ಚು ಮಾಡಲಾಯಿತು. ಈ ರೀತಿಯ ನಿರಂತರವಾದ ಪ್ರಚಾರವು ಪ್ರಭಾವ ಬೀರಬಹುದು. ಇಂದೂ ಸಹ ಫುಲೆ ಮತ್ತು ಶಾಹುರವರ ಬಗ್ಗೆ ಸುಳ್ಳುಸುದ್ದಿ ಹರಡುವವರು ಇದ್ದಾರೆ. ಆ ಇಬ್ಬರು ಮಹಾನುಭಾವರು ಅವರ ಸರ್ವಶ್ರೇಷ್ಠತೆಯ ಟೊಳ್ಳುತನವನ್ನು ಬಹಿರಂಗಗೊಳಿಸಿದ್ದಕ್ಕಾಗಿ ಇದನ್ನೆಲ್ಲ ಅವರು ಮಾಡಿದರು.

ಬ್ರಾಹ್ಮಣರನ್ನು ದ್ವೇಷಿಸುವ ಮೂಲಕ ಮರಾಠ ಮತ್ತು ದಲಿತರಿಗೆ ಶಾಹುರವರು ಅನ್ಯಾಯವಾಗಿ ಘನತೆ ಗೌರವ ನೀಡಿದರೆಂಬ ಆರೋಪದಲ್ಲಿ ಯಾವುದೇ ಹುರುಳಿಲ್ಲ. ಅವರು ರಾಜರಾಗಿ ಸಮಾಜದ ಎಲ್ಲಾ ವಿಭಾಗಗಳನ್ನು ಸಮಾನವಾಗಿ ನೋಡಿಕೊಳ್ಳುವ ಹೊಣೆಗಾರಿಕೆಯಿದೆ. ಒಂದು ವರ್ಗವು ಜ್ಞಾನದಾಯಕ ಮತ್ತು ಸಂಪದ್ಭರಿತವಾಗಿದ್ದು ಮತ್ತೊಂದು ವರ್ಗ ಬಡತನ ಮತ್ತು ಮೌಢ್ಯದಲ್ಲಿ ಬದುಕುತ್ತಿದ್ದರೆ ಸಮಾಜ ಸಮತೋಲನ ಕಳೆದುಕೊಳ್ಳುತ್ತದೆ. ಶಾಹು ಮಹಾರಾಜರು ಪ್ರತಿಯೊಬ್ಬ ಮನುಷ್ಯನು ಜ್ಞಾನಗಳಿಸುವ ಅಥವಾ ಯಾವುದೇ ಕ್ಷೇತ್ರದಲ್ಲಿ ಕೌಶಲ್ಯಗಳಿಸುವ ಉದಾರ ತತ್ವವನ್ನು ಪರಿಪೂರ್ಣವಾಗಿ ನಂಬಿದ್ದರು. ಈ ಸಿದ್ಧಾಂತದ ಪ್ರಭಾವ ಸ್ಪಷ್ಟವಾಗಿ ಅವರ ಸಂಸ್ಥಾನದಲ್ಲಿ ಮತ್ತು ಮಹಾರಾಷ್ಟ್ರದ ಹೊರಗಡೆ ಕಾಣಿಸುತ್ತಿತ್ತು. ಒಬ್ಬ ಸುಸಂಸ್ಕೃತ ಮನುಷ್ಯನಾಗಿ ಶಾಹುರವರು ದಲಿತರ ಕಲ್ಯಾಣಕ್ಕಾಗಿ ಆದ್ಯತೆ ನೀಡಿದ್ದರೂ ಅವರು ಗುಣವಂತ ಮನುಷ್ಯರ ಬಗ್ಗೆ ಪೂರ್ಣವಾದ ಮೆಚ್ಚುಗೆ ಮತ್ತು ಅವರ ಬಗ್ಗೆ ವಿಶೇಷ ಕಾಳಜಿಯಿತ್ತು. ಅವರು ತಮ್ಮ ಸಂಸ್ಥಾನದ ಕವಿಗಳಿಗೆ, ಲೇಖಕರಿಗೆ, ಹಾಡುಗಾರರಿಗೆ, ಚಿತ್ರಕಾರರಿಗೆ, ನಟನಟಿಯರಿಗೆ, ಕುಸ್ತಿಪಟುಗಳಿಗೆ, ಕುಶಲಿ ರೈತರಿಗೆ, ವಿದ್ವಾಂಸರಾದ ಅಧ್ಯಾಪಕರಿಗೆ ತಮ್ಮತಮ್ಮ ಕ್ಷೇತ್ರಗಳಲ್ಲಿ ವಿಶಿಷ್ಟ ಉನ್ನತ ಸ್ಥಾನಗಳಿಗೆ ಏರಲು ಪ್ರೋತ್ಸಾಹ ನೀಡುತ್ತಿದ್ದರು. ನಿಜವಾಗಿಯೂ ಅವರು ಕೊಲ್ಹಾಪುರ ಸಂಸ್ಥಾನವನ್ನು ಕಲೆ ಮತ್ತು ಸಂಸ್ಕೃತಿಯ ಬೀಡನ್ನಾಗಿ ಮಾಡಿದ್ದರು. ಅವರು ವಿಭಿನ್ನ ಜಾತಿಗಳಿಗೆ ಸೇರಿದ ಪುರುಷ ಮತ್ತು ಮಹಿಳೆಯರನ್ನು ಪ್ರೋತ್ಸಾಹಿಸಿದರು. ಮಾನವೀಯತೆ ಮತ್ತು ಗುಣಗಳ ಪ್ರಶಂಸಕನಾಗಿ ಅವರು ತಮ್ಮ ಸುಸಂಸ್ಕೃತ ಅಭಿರುಚಿಗಳು ಕಲಾಕಾರರು ಮತ್ತು ವಿದ್ವಾಂಸರ ನಡುವೆ ಎಂದಿಗೂ ಹುಟ್ಟಿನ ಆಧಾರದ ಮೇಲೆ ತಾರತಮ್ಯ ಎಸಗಲಿಲ್ಲ. ಒಬ್ಬ ಕಲಾಕಾರನು ಹಿಂದುವಾಗಿರಲಿ, ಒಬ್ಬ ಮುಸ್ಲಿಮನಾಗಿರಲಿ ಅಥವಾ ಯಥಾಕಥಿತ ಕೆಳಜಾತಿಯವನಾಗಿರಲಿ, ಅವರು ಸಮಾನವಾಗಿ ಶಾಸ್ತ್ರೀಯ ಸಂಗೀತದಿಂದ ರಸಾನುಭವವನ್ನು ಆಸ್ವಾದಿಸುತ್ತಿದ್ದರು. ಈ ಸುಸಂಸ್ಕೃತ ವಿಧಾನವು ಕೊಲ್ಹಾಪುರ ಸಂಸ್ಥಾನದ ಘನತೆ–ಗೌರವವನ್ನು ಬೆಳೆಸಿತು. ಮತ್ತು ಆ ಪರಂಪರೆ ಇಂದಿಗೂ ಮುಂದುವರಿಯುತ್ತಿದೆ. ಶಾಹುರವರ ಚಾರಿತ್ರ್ಯದ ಈ ಮುಖಗಳ (ಚಹರೆಗಳು) ಮಾನವನ ಸುಸಂಸ್ಕೃತ ಮತ್ತು ಮಾನವೀಯ ಸಂಬಂಧವನ್ನು (ವರ್ತನೆ) ತಿಳಿಸುತ್ತದೆ.

## ಶಿಕ್ಷಣವೇ ಏಕೈಕ ದಾರಿ

ಶಾಹುರವರ ಜೀವನದ ದೃಷ್ಟಿಕೋನವು ಪೌರುಷದಕ್ಕಿಂತ ಆರೋಗ್ಯಕರವಾದ, ಸ್ಪಷ್ಟವಾದ, ಬಿರುಸಾದದ್ದು. ಅವರು ತಮ್ಮ ಸಂಸ್ಥಾನದಲ್ಲಿ ಮಾತ್ರವಲ್ಲದೆ ಮಹಾರಾಷ್ಟ್ರದಲ್ಲೆಲ್ಲ ಶಿಕ್ಷಣವನ್ನು ಹರಡುವುದಕ್ಕೆ ಮಾಡಿದ ತೀವ್ರ ಪ್ರಯತ್ನಗಳು ನಿಜವಾಗಿಯೂ ಅದ್ಭುತವಾದವು. ಅವರು ಖಾಮ್‌ಗಾವ್‌ನಲ್ಲಿ ನಡೆದ ಅಖಿಲ ಭಾರತೀಯ ಮರಾಠ ಶಿಕ್ಷಣ ಪರಿಷತ್ತಿನ ಸಮ್ಮೇಳನದಲ್ಲಿ ಮಾಡಿದ ಭಾಷಣವು ಶಿಕ್ಷಣದ ಬಗ್ಗೆ ಅವರಿಗಿದ್ದ ವಿಶಾಲ ದೃಷ್ಟಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಅವರು ಹೇಳುತ್ತಾರೆ, "ಶಿಕ್ಷಣವೊಂದೇ ದಾರಿ. ಶಿಕ್ಷಣವಿಲ್ಲದೆ ಯಾವುದೇ

ದೇಶವು ಪ್ರಗತಿಯಾಗಿಲ್ಲವೆಂದು ಇತಿಹಾಸ ತೋರಿಸುತ್ತದೆ. ಅಜ್ಞಾನದ ದೇಶವು ಮುತ್ಸದ್ದಿಗಳನ್ನು ಅಥವಾ ಪರಾಕ್ರಮಶಾಲಿಗಳನ್ನು ಎಂದಿಗೂ ಹುಟ್ಟುಹಾಕುವುದಿಲ್ಲ. ಭಾರತಕ್ಕೆ ಕಡ್ಡಾಯ ಶಿಕ್ಷಣ ಮತ್ತು ಉಚಿತ ಶಿಕ್ಷಣ ಅತ್ಯಗತ್ಯ. ಈ ವಿಷಯದಲ್ಲಿ ನಮ್ಮ ಗತಕಾಲವು ಕಗ್ಗತ್ತಲಿನ ರಾತ್ರಿಯಾಗಿತ್ತು. ಕೇವಲ ಒಂದೇ ಒಂದು ಜಾತಿಯು ವಿದ್ಯೆಯನ್ನು (ಜ್ಞಾನವನ್ನು) ಏಕಸ್ವಾಮ್ಯವನ್ನಾಗಿ ಮಾಡಿಕೊಂಡಿದೆ. ಮನು ಮತ್ತು ಅವನ ಅನುಯಾಯಿಗಳು ಕೆಳಜಾತಿಗಳಿಗೆ ಜ್ಞಾನದ ಬಾಗಿಲನ್ನು ಮುಚ್ಚಿಬಿಟ್ಟರು. ನಾನು ವಿವಿಧ ಜಾತಿಗಳಿಗೆ ಶಿಕ್ಷಣವನ್ನು ಕೊಡುವ ಕಾರ್ಯಕ್ರಮವೊಂದನ್ನು ಕ್ರಮಬದ್ಧವಾಗಿ ಅನುಸರಿಸುತ್ತಿದ್ದೇನೆ ಮತ್ತು ನನ್ನ ಜೀವವಿರುವರೆಗೂ ನಾನು ಅದನ್ನು ಮುಂದುವರಿಸಲು ಬಯಸುವೆನು. ನಾವು ಜಾತಿಪದ್ಧತಿಯ ಸಂಕೋಲೆಗಳನ್ನು ಕಿತ್ತುಹಾಕಬೇಕಾಗಿದ್ದರೆ ಗತಕಾಲದ ರಾಮನು ಒಬ್ಬ ಕ್ಷತ್ರಿಯನಾಗಿದ್ದನು, ಪರಶುರಾಮನು ಒಬ್ಬ ಬ್ರಾಹ್ಮಣನಾಗಿದ್ದನು ಎಂಬ ಕಾಕಮ್ಮನ ಕಥೆಗಳನ್ನು ಮರೆಯುವುದು ಅಗತ್ಯ. ಹಾಲಿಯಿರುವ ಜಾತಿಪದ್ಧತಿ ಮುಂದುವರೆದರೆ ನಮ್ಮ ಸ್ವಾತಂತ್ರ್ಯದ ಅರ್ಥ ಕೆಲವೇ ಜನರ ಆಡಳಿತವಾಗುತ್ತದೆ."

## ಪ್ರಗತಿಪರ ಬೀಜಗಳ ಬಿತ್ತನೆ

ಇವೆಲ್ಲವೂ ಒಬ್ಬ ಜನಪ್ರಿಯ ಆಡಳಿತಗಾರನ, ಒಬ್ಬ ಆಸಕ್ತ ಆದರ್ಶವಾದಿಯ, ಶಿಕ್ಷಣ ಪ್ರೇಮಿಯ ಮತ್ತು ಸಮಾನತೆಯಲ್ಲಿ ನಂಬಿಕೆಯಿಟ್ಟ ವ್ಯಕ್ತಿಯ ಪರಿಪಕ್ವಗೊಂಡ ಚಿಂತನೆಗಳಾಗಿವೆ. ಭಾರತದ ದೇಶೀಯ ರಾಜರು ತಮ್ಮ ಪರಿಶ್ರಮದಿಂದ ಬದುಕುತ್ತಿದ್ದ ಕಾಲದಲ್ಲಿ ಜನತೆಯ ರಾಜನು ಜನರ ಪರವಾಗಿ ನಿಂತು, ತಮ್ಮ ತ್ಯಾಗ, ಕಠಿಣ ಪರಿಶ್ರಮ ಮತ್ತು ಮಮತೆಯಿಂದ ಸಾಮಾಜಿಕ ಜೀವನವನ್ನು ಶ್ರೀಮಂತಗೊಳಿಸಿದ ಒಬ್ಬ ರಾಜನಿದ್ದಾನೆ ಇಲ್ಲಿ. ಅವರು ತಮ್ಮ ಸಂಸ್ಥಾನದಲ್ಲಿ ಪ್ರಗತಿಪರ ಚಿಂತನೆಯ ಬೀಜಗಳನ್ನು ಬಿತ್ತಿದರು. ಅವರು ಒಬ್ಬ ಹೊಸ ಮನುಷ್ಯನನ್ನು ನಿರ್ಮಿಸಲು (ರೂಪಿಸಲು) ಪ್ರಯತ್ನಿಸುತ್ತಿದ್ದರು. ಇತಿಹಾಸಕಾರರು ಈ ಭವ್ಯವಾದ ಐತಿಹಾಸಿಕ ಅಭಿವೃದ್ಧಿಯ ಬಗ್ಗೆ ಸಾಕಷ್ಟು ಗಮನ (ಲಕ್ಷ್ಯ) ಹರಿಸಿಲ್ಲ. ಒಮ್ಮೊಮ್ಮೆ ನಮ್ಮ ಇತಿಹಾಸಕಾರರು, ಸಂಶೋಧಕರು, ಕಲಾವಿದರು, ಕವಿಗಳು ಮತ್ತು ಪತ್ರಿಕಾಕರ್ತರು ತಮ್ಮ ಹಮ್ಮು-ಬಿಮ್ಮು(ಪಕ್ಷಪಾತ) ಗಳಿಂದ ಕುರುಡರಾಗಿರುವುದನ್ನು ನಾವು ನೋಡುತ್ತೇವೆ. ಅವರು ಇತಿಹಾಸದ ಮೌಲ್ಯಮಾಪನವನ್ನು ಸಾಕಷ್ಟು ವಸ್ತುನಿಷ್ಠವಾಗಿ ಮಾಡಲಾರರು. ಶಾಹುರವರು ಬಡತನದಲ್ಲಿ ನರಳುತ್ತಿರುವ ಮನುಷ್ಯರಲ್ಲಿ ಆತ್ಮಗೌರವವನ್ನು ಜಾಗೃತಗೊಳಿಸಿದರು ಮತ್ತು ಅವರು ಘನತೆಗೌರವಗಳಿಂದ ಎದ್ದು ನಿಲ್ಲುವಂತೆ ಮಾಡಿದರು. ಮಹಾನುಭಾವರಾದ ಕರ್ಮವೀರ ಭಾವುರಾವ್ ಪಾಟೀಲ್, ಪಂಜಾಬ್‌ರಾವ್ ದೇಶ್‌ಮುಖ್, ಡಾ. ಭೀಮ್‌ರಾವ್ ಅಂಬೇಡ್ಕರ್, ಬಾಬುಸಾಹೇಬ್ ಹೀರೆ ಅವರು ಶಾಹುರವರಿಂದ ಸ್ಫೂರ್ತಿ ಪಡೆದರು ಮತ್ತು ಮಹಾರಾಷ್ಟ್ರದಲ್ಲಿ ಹಲವಾರು ಶಿಕ್ಷಣಸಂಸ್ಥೆಗಳನ್ನು ಸ್ಥಾಪಿಸಿದರು. ಫುಲೆ ಮತ್ತು ಶಾಹುರವರು ಮಾಡಿದ ಬೃಹದಾಕಾರದ ಕೆಲಸದ ಪರಿಣಾಮವಾಗಿ ಇಂದು ಮಹಾರಾಷ್ಟ್ರದಲ್ಲಿ ಶೈಕ್ಷಣಿಕ ಮತ್ತು ಸಾಮಾಜಿಕ ಅಭಿವೃದ್ಧಿಗಳಾಗಿವೆ. ಅದಕ್ಕೆ ಅದು (ಮಹಾರಾಷ್ಟ್ರ) ಫುಲೆ ಮತ್ತು ಶಾಹುರವರಿಗೆ ಚಿರಋಣಿಯಾಗಿದೆ. ಸ್ವಾತಂತ್ರ್ಯದ ನಂತರ ಮಹಾರಾಷ್ಟ್ರದಲ್ಲಿ ಮಹರ್ ವತನ್‌ಗಳನ್ನು ರದ್ದುಗೊಳಿಸಲಾಯಿತು. ಶಾಹುರವರು ಸ್ವಾತಂತ್ರ್ಯ ಬರುವುದಕ್ಕೆ ಮೊದಲೇ ಇದನ್ನು ಮಾಡಿ ಮುಗಿಸಿದ್ದರು. ಅದು ಈ ದೇಶದ ಸಾಮಾಜಿಕ ಇತಿಹಾಸದಲ್ಲಿ ಅಭೂತಪೂರ್ವವಾದ ಘಟನೆಯಾಗಿದೆ. ಇದು ಮಹಾರಾಷ್ಟ್ರದ ಹೆಮ್ಮೆಯ ಗೌರವದ ವಿಷಯವಾಗಿದೆ. ಇಂತಹ ವಿದ್ಯಮಾನಗಳ ಬಗ್ಗೆ ನಿಜವಾದ ಮೌಲ್ಯಮಾಪನ ಮಾಡುವುದು ಅತ್ಯಂತ ಸೂಕ್ತವಾದದ್ದು.

## ರಾಜಿಯಾಗದ ಮಿಷನ್ನು

ಒಬ್ಬ ಮಾನವಜೀವಿಯನ್ನು ದೈವೀಕರಿಸಬಾರದು. ಆದರೆ ಮಹಾನುಭಾವರು ಪ್ರಚೋದಿಸಿದ ಶಕ್ತಿ ಮತ್ತು ಸ್ಫೂರ್ತಿಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಮತ್ತು ಮೆಚ್ಚುವುದರಲ್ಲಿ ಯಾವುದೇ ತಪ್ಪು ಇಲ್ಲ. ಅವರ ನಾಯಕರ ಕೆಲಸಗಳನ್ನು ಮುಂದಕ್ಕೆ ಕೊಂಡೊಯ್ಯುವ ಅಂತಹ ಪ್ರೌಢ ಅನುಯಾಯಿಗಳನ್ನು ಕಂಡುಹಿಡಿಯುವುದು ಬಹಳ ಕಷ್ಟ. ಶಾಹುರವರ ವಿಷಯದಲ್ಲಿ ಎಗ್ಗಿಲ್ಲದ ದೈವೀಕರಣ ಮಾಡುವುದನ್ನು ಮತ್ತು ತಪ್ಪಾಗಿ ತಿಳಿದುಕೊಳ್ಳುವುದನ್ನು ತಪ್ಪಿಸುವುದು ಬಹು ಮುಖ್ಯ ಮತ್ತು ಅವರನ್ನು ವಸ್ತುನಿಷ್ಠನಾಗಿ ಮೌಲ್ಯಮಾಪನ ಮಾಡುವುದನ್ನು ಮತ್ತು ಪರಿಪಕ್ವವಾಗಿ ಅರ್ಥಮಾಡಿಕೊಳ್ಳುವುದನ್ನು ಅನುಸರಿಸುವುದು ಮಧ್ಯಮ ಮಾರ್ಗವಾಗಿದೆ. ನಾಯಕರನ್ನು ದೇವರನ್ನಾಗಿ ಮಾಡುವುದು, ಅವರ ತತ್ವಗಳನ್ನು ಅನುಸರಿಸುವ ಹೊಣೆಗಾರಿಕೆಯಿಂದ ನುಣುಚಿಕೊಂಡಂತೆಯೇ. ಭಾರತದ ಛತ್ರಪತಿ ಶಿವಾಜಿ, ಮಹಾತ್ಮ ಗಾಂಧಿ ಮತ್ತು ಡಾ. ಅಂಬೇಡ್ಕರ್ ಅಂತಹ ಮಹಾನ್ ವ್ಯಕ್ತಿಗಳ ಪಾಡು ಇದೇ ಆಗಿದೆ. ನಮಗೆ ಇತಿಹಾಸದ ವಿದ್ಯಾರ್ಥಿಗಳ ಮತ್ತು ಐತಿಹಾಸಿಕ ವ್ಯಕ್ತಿಗಳನ್ನೂ ಕುರುಡಾಗಿ ದೈವೀಕರಣ ಮಾಡುವುದಕ್ಕಿಂತ ಹೆಚ್ಚಿಗೆ ಇತಿಹಾಸದಿಂದ ಸ್ಫೂರ್ತಿ ಪಡೆಯುವ ಕಾರ್ಯಕರ್ತರ ಅವಶ್ಯಕತೆ ಹೆಚ್ಚಿಗಿದೆ. ಶಾಹುರವರ ಬಗ್ಗೆ ಹೆಮ್ಮೆಪಡೋಣ. ಆದರೆ ನಾನು ಶಾಹುರವರನ್ನು ಸ್ಫೂರ್ತಿಯ ಬುಗ್ಗೆಯಾಗಿರಲಿ, ಗಂಭೀರ ಅಧ್ಯಯನದ ವಿಷಯವಾಗಿರಲಿ ಮತ್ತು ಅನುಸರಿಸುವುದಕ್ಕೆ ಒಬ್ಬ ಯೋಗ್ಯ ನಾಯಕನಾಗಿರಲಿ ಎಂದು ನಾನು ಬಯಸುತ್ತೇನೆ. ಕವಿ ಭವಭೂತಿಯ ನಾಟಕ 'ಉತ್ತರರಾಮ ಚರಿತೆ'ಯಲ್ಲಿ ರಾಮ ಹೇಳುತ್ತಾನೆ,

*"ಸ್ನೇಹದಯಂ ಚ ಸೌಖ್ಯ ಚ ಯದಿ ಜಾನಕಮಪಿ,*
*ಅರಧನಾಯ ಲೋಕಾನಂ ಮುಂಚತೋ ನಾಸ್ತಿ ಮೆ ವ್ಯಥಾ"*

*(ನಾನು ಜನರ ಸೌಖ್ಯಕ್ಕಾಗಿ ಜೀವನದ ಎಲ್ಲಾ ಸುಖ-ಸಂತೋಷಗಳನ್ನು ತ್ಯಜಿಸುವೆನು. ಅಷ್ಟೇ ಅಲ್ಲ, ಸೀತೆಯನ್ನು ಬಿಟ್ಟುಬಿಡುವೆನು; ಅದು ನನಗೆ ನೋವಿನ ಸಂಗತಿಯಾಗಿದೆ.)*

ಛತ್ರಪತಿ ಶಾಹುರವರು ಸಹ ಕಷ್ಟದ ದಿನಗಳನ್ನು ಅನುಭವಿಸಿದರು. ಅವರ ಜನತಾ ಆಂದೋಲನಗಳಿಂದ ಇಂಗ್ಲಿಷ್ ಆಡಳಿತಗಾರರು ಅವರ ಸಂಸ್ಥಾನವನ್ನು ವಿಸರ್ಜಿಸುವುದಕ್ಕೆ (ರದ್ದು) ಪ್ರಯತ್ನಿಸುತ್ತಿದ್ದರು. ಅವರು ಈ ಆಂದೋಲನಗಳಿಂದ ದೂರ ಸರಿಸುವುದಕ್ಕೆ ಅವರ ಮೇಲೆ ನೇರವಾಗಿ ಅಥವಾ ಅನೇರವಾಗಿ ಒತ್ತಡ ಹಾಕಲಾಗುತ್ತಿತ್ತು ಅಥವಾ ಸಂಸ್ಥಾನದ ವಿಸರ್ಜನೆಯನ್ನು ಎದುರಿಸಬೇಕೆಂದು ಹೇಳಲಾಗುತ್ತಿತ್ತು. ಶಾಹುರವರು ಈ ಒತ್ತಡಗಳನ್ನು ಶಾಂತಚಿತ್ತದಿಂದ ಎದುರಿಸಿದರು.ಕೊನೆಗೆ ಅವರು ಸರಕಾರಕ್ಕೆ ಪತ್ರ ಬರೆದರು:

"ನನ್ನನ್ನು ಕಿತ್ತುಹಾಕುವ ಮಾತನ್ನು ಏಕೆ ಆಡುತ್ತಿದ್ದೀರಿ? ಆ ಮಟ್ಟಕ್ಕೆ ವಿಷಯ ಬಂದರೆ ನಾನೇ ರಾಜೀನಾಮೆ ನೀಡುವೆನು. ಆದರೆ ನನ್ನ ಸಾವು ಬರುವವರೆಗೂ ಪರೋಕ್ಷ ಬಹುಜನ ಸಮಾಜದ ಏಳಿಗೆಯ ಗುರಿಯನ್ನು ನಾನು ಎಂದೆಂದಿಗೂ ಬಿಡುವುದಿಲ್ಲ." ಶಾಹುರವರ ದೃಢಸಂಕಲ್ಪ, ತೀಕ್ಷ್ಣತೆ ಮತ್ತು ಸೈದ್ಧಾಂತಿಕ ಬದ್ಧತೆ ಈ ಮಾತುಗಳಲ್ಲಿ ಸ್ಪಷ್ಟವಾಗುತ್ತದೆ. ಅವರು ಸದಾ ತಮ್ಮ ಸಾಮಾಜಿಕ ಸುಧಾರಣೆಗಳ ಗುರಿಗಳಿಗೆ ಬದ್ಧರಾಗಿದ್ದರು. ಮತ್ತು ಅವರು ತಮ್ಮ ಅಧಿಕಾರ ಕಳೆದುಕೊಳ್ಳುವ ಅಪಾಯದಲ್ಲಿದ್ದರೂ ಅವರು ಎಂದಿಗೂ ತಮ್ಮ ಗುರಿಯಿಂದ ಹಿಂಜರಿಯಲಿಲ್ಲ. ಶಾಹುರವರು ಒಬ್ಬ ಎತ್ತರವಾದ, ಮಂಸಖಂಡಗಳಿಂದ ಕೂಡಿದ ಮತ್ತು ಬಲಿಷ್ಠನಾದ ವ್ಯಕ್ತಿಯಾಗಿದ್ದರು. ಇಂಥ ವ್ಯಕ್ತಿ ಒಮ್ಮೆ ಕೆಸರಿನ ಕಿಂಡಿಯಲ್ಲಿ ಸಿಕ್ಕಿಹಾಕಿಕೊಂಡಿದ್ದ

ಗಾಡಿಯನ್ನು ತಮ್ಮ ಬಲಿಷ್ಠ ತೋಳುಗಳಿಂದ ಎತ್ತಿ ರಸ್ತೆಯ ಮೇಲಿಟ್ಟ ಕತೆ ಶಾಹು ಬಗ್ಗೆ ಇತ್ತು. ಈ ಕತೆಗೆ ಮತ್ತೊಂದು ಆಯಾಮವಿದೆ. ಶಾಹುರವರು ಅಜ್ಞಾನ, ಅಸಮಾನತೆ ಮತ್ತು ಬಡತನದ ಕೆಸರಿನಲ್ಲಿ ಸಿಕ್ಕಿಹಾಕಿಕೊಂಡಿದ್ದ ಸಾಮಾಜಿಕ ಜೀವನದ ಗಾಡಿಯನ್ನು ತಮ್ಮ ಬಲಿಷ್ಠ ತೋಳುಗಳಿಂದ ಎತ್ತಿ ರಸ್ತೆಯಲ್ಲಿ ನಿಲ್ಲಿಸಿದ್ದರು. ತಮ್ಮ ಸ್ವಂತ ಬಲ ಮತ್ತು ಬದ್ಧತೆಯಿಂದ ಇತಿಹಾಸದ ಮಾರ್ಗವನ್ನೇ ಬದಲಾಯಿಸಿದ ಕೆಲವೇ ಕೆಲವು ಪ್ರಗತಿಪರ ಮತ್ತು ಕ್ರಾಂತಿಕಾರಿ ಆಡಳಿತಗಾರರಲ್ಲಿ ಶಾಹುರವರು ಒಬ್ಬರಾಗಿದ್ದಾರೆ.

**ಜನರ ಅಂತರಾಳದಲ್ಲಿ ಸ್ಥಾನಗಳಿಸಿದ ಶಾಹು**

ನಿಜವಾಗಿ ಜನತೆಯ ಮಹಾರಾಜರಾದ ಈ ಆಜಾನುಬಾಹು ಹೊಸ ಯುಗದ ಧ್ವಜವನ್ನು ಹಾರಿಸಿದರು. ಈ ಮಹಾನುಭಾವನಿಗೆ ಕೊಲ್ಹಾಪುರದ ಸಿಂಹಾಸನವು ಒಂದು ಸಣ್ಣ ವಿಷಯವಾಗಿರಬಹುದು. ರಾಜನು ಒಂದು ದೊಡ್ಡ ಸಿಂಹಾಸನದ ಮೇಲೆ ಕುಳಿತಿದ್ದರಿಂದ ರಾಜನು ಮಹತ್ವವನ್ನು ಗಳಿಸುವುದಿಲ್ಲ. ಜನರ ಹೃದಯಗಳಲ್ಲಿ ಸ್ಥಾನವನ್ನು ಸ್ಥಾಪಿಸಿಕೊಳ್ಳುವವರೇ ನಿಜವಾದ ಜನತೆಯ ದೊರೆಗಳಾಗುತ್ತಾರೆ. ಈ ಮಹಾರಾಜನು ಮಾನವತೆಯ ಧ್ವಜವನ್ನು ತಮ್ಮ ತೋಳುಗಳಲ್ಲಿ ಕೊಂಡೊಯ್ದರು. ಅವರು ಬಡವರಿಗಾಗಿ, ದಮನಿತರಿಗಾಗಿ ಮತ್ತು ದಲಿತರಿಗಾಗಿ ಹೋರಾಡಿದ್ದಕ್ಕಾಗಿಯೇ ಅವರೇ ನೊಂದರು. ಇತಿಹಾಸವು ಶಾಹುರವರು ತಮ್ಮ ಮಿಷನ್ನಿನಲ್ಲಿ ಎಲ್ಲಿಯವರೆಗೆ ಸಫಲರಾದರೆಂಬುದನ್ನು ನಮಗೆ ಹೇಳುವುದು. ಉನ್ನತ ಮಾನವೀಯ ಮೌಲ್ಯಗಳ ಅನುಸರಣೆಯಲ್ಲಿ ಅನುಭವಿಸಿದ ಒಂದು ಸೋಲು, ಒಂದು ಭವ್ಯ ಸೋಲಾಗುತ್ತದೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಈ ಜನತೆಯ ನಾಯಕರು ಮಹಾರಾಷ್ಟ್ರದ ದೂರದ ಹಳ್ಳಿಗಳಿಗೆ ಪ್ರಗತಿಪರ ಸಾಮಾಜಿಕ ಆಂದೋಲನವನ್ನು ಕೊಂಡೊಯ್ದದ್ದು ಒಂದು ಚಿಕ್ಕ ಸಫಲತೆಯೇನು ಅಲ್ಲ.

---

## ೧೩
# ಶಾಹು ಛತ್ರಪತಿ: ಪರಂಪರೆ ಮತ್ತು ಆಧುನಿಕತೆ

– ಡಾ. ಭಾಸ್ಕರ ಲಕ್ಷ್ಮಣ ಭೋಲೆ
*ರಾಜಕೀಯಶಾಸ್ತ್ರದ ವಿದ್ವಾಂಸರು*

ರಾಜರ್ಷಿ ಛತ್ರಪತಿ ಶಾಹುರವರು ಸತ್ತು ಸುಮಾರು ೭೫ ವರ್ಷಗಳಾದವು, ಆದರೆ ವಸ್ತುನಿಷ್ಠ ಮತ್ತು ನಿಷ್ಪಕ್ಷಪಾತವಾಗಿ ಅವರ ಚಟುವಟಿಕೆಗಳ ಬಗ್ಗೆ ಮೌಲ್ಯಮಾಪನ ನಡೆದಿಲ್ಲ. ತಮ್ಮ ಜೀವಿತಾವಧಿಯಲ್ಲಿ ಹಲವು ಕಾರಣಗಳಿಗಾಗಿ ಮೇಲುಜಾತಿಗಳ ಅನಗತ್ಯ ದ್ವೇಷಕ್ಕೆ ಗುರಿಯಾದರು. ಶಾಹುರವರು ಜೀವನದ ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ದಿಟ್ಟಕ್ರಮಗಳ ಜಾರಿಯ ಪರಿಣಾಮವಾಗಿ ಇದು ಸಹಜವಾಗಿ ಸಂಭವಿಸಿತು. ತಮ್ಮ ನಿರ್ಧಾರಗಳಿಂದ ಬಾಧೆಗೊಳಗಾದವರು ಸಂಸ್ಥಾನದಲ್ಲಿ ಭಾರಿ ಕುಳಗಳು ಮತ್ತು ಸಂಸ್ಥಾನದ ಹೊರಗಿನ ಅವರ ಬಂಧು-ಬಳಗ ಅವರ ವ್ಯಕ್ತಿತ್ವವನ್ನು ಮತ್ತು ಅವರು ಕೈಗೊಂಡ ಕಾರ್ಯವನ್ನು ವಿಕೃತವಾಗಿ ಚಿತ್ರಿಸಿದರು; ಇದರ ಸುತ್ತಲೂ ಹಲವಾರು ವದಂತಿಗಳು ಮತ್ತು ತಪ್ಪುಗ್ರಹಿಕೆಗಳು ಇಂದಿಗೂ ಇವೆ. ಬ್ರಾಹ್ಮಣೇತರರು ಆಂದೋಲನದ ಮೂಲಕ ಜಾತಿಯ ರಾಜಕಾರಣ ಮಾಡುವ ತಮ್ಮ ಸ್ವಯಂಘೋಷಿತ ಉತ್ತರಾಧಿಕಾರಿಗಳು ಮತ್ತು ತಮ್ಮ ಮೇಲುಜಾತಿಯ ಕಟ್ಟಾಭಿಮಾನಿ ವಿರೋಧಿಗಳು, ಈ ಎರಡು ಗುಂಪುಗಳು ಅವರ ವ್ಯಕ್ತಿತ್ವವನ್ನು ಸಮತೂಕವಿಲ್ಲದೆ ಅರ್ಥ ಮಾಡಿಕೊಂಡಿದ್ದವು.

ಶಾಹು ಛತ್ರಪತಿ ಸದಾ ಆರ್ಯಸಮಾಜದ ಭಾಗವಾಗಿದ್ದರು. ಅವರು ವೇದೋಕ್ತವನ್ನು ಒತ್ತಾಯಿಸಿದರು, ಕ್ಷಾತ್ರ ಜಗದ್ಗುರುವಿನ ಧಾರ್ಮಿಕ ಪೀಠ ಸ್ಥಾಪಿಸಿದರು, ಜಾತಿ ಆಧಾರದಲ್ಲಿ ವಿದ್ಯಾರ್ಥಿ ನಿಲಯಗಳನ್ನು ತೆರೆದರು, ಮೂರ್ತಿಪೂಜೆಯನ್ನು ಎಂದಿಗೂ ಬಿಟ್ಟುಕೊಡಲಿಲ್ಲ; ಆಚರಣೆಗೆ ಸಂಬಂಧಿಸಿದ ಕಲಾಪಗಳನ್ನು ನೆರವೇರಿಸಿದರು. ಬ್ರಾಹ್ಮಣರನ್ನು ಬಿಟ್ಟು ಬೇರೆ ಜಾತಿಗಳ ಪೂಜಾರಿಗಳನ್ನು ತಯಾರುಮಾಡುವ ಪಾಠಶಾಲೆಗಳನ್ನು ತೆರೆದರು. ಈ ಕ್ರಿಯೆಗಳನ್ನು ಉಲ್ಲೇಖಿಸಿ ಅವರ ವಿರೋಧಿಗಳು ಅವರನ್ನು ತಪ್ಪಾಗಿ ಸಂಪ್ರದಾಯವಾದಿ, ಪ್ರತ್ಯೇಕತಾವಾದಿ (ಸಂಕುಚಿತವಾದಿ), ಯಥಾಸ್ಥಿತಿವಾದಿ, ಪುನರುತ್ಥಾನವಾದಿ, ವರ್ಣಾಶ್ರಮದ ಬೆಂಬಲಿಗ, ಜಾತಿವಾದಿ ಮತ್ತು ಪುರೋಹಿತಶಾಹಿಯನ್ನು ಮುಂದುವರೆಸುವವರೆಂದು ಹಣೆಪಟ್ಟಿ ಕಟ್ಟಿದರು. ಅವರ ಬೆಂಬಲಿಗರು ಸಹ ಅದೇ ತಪ್ಪನ್ನು ಮಾಡಿದರು. ಮೇಲೆ ಹೇಳಿದ ಅಂಶಗಳನ್ನು ತಪ್ಪಾಗಿ ಗ್ರಹಿಸಿದ್ದೇ ಇವುಗಳಿಗೆ ಕಾರಣಗಳಾಗಿದ್ದವು.

ವಾಸ್ತವಿಕವಾಗಿ ಶಾಹುರವರು ಪ್ರತಿಗಾಮಿಗಳಾಗಲೀ, ಸ್ಥಗಿತರಾಗಲೀ ಆಗಿರಲಿಲ್ಲ. ಆಧುನಿಕ ಸುಧಾರಣೆಗಳಲ್ಲಿ ಅವರ ಕ್ರಿಯೆಗಳು (ಕ್ರಮಗಳು) ಅವರ ನಂಬಿಕೆಗಳಿಗೆ ವಿರುದ್ಧವಾಗಿರಲಿಲ್ಲ. ಅವರು ಪ್ರಯೋಗಶೀಲರು. ಅವರು ಎಂದಿಗೂ ತಮ್ಮ ತತ್ವಗಳೊಂದಿಗೆ ರಾಜಿ ಮಾಡಿಕೊಳ್ಳಲಿಲ್ಲ. ತಾವು ಒಂದು ರಾಜಕುಟುಂಬದಲ್ಲಿ ಜನಿಸಿದವರು, ಊಳಿಗಮಾನ್ಯ ಸನ್ನಿವೇಶದಲ್ಲಿ ಬೆಳೆದುಬಂದವರು ಮತ್ತು ಚಿಕ್ಕ

ವಯಸ್ಸಿನಲ್ಲಿಯೇ ರಾಜ್ಯಭಾರದ ಹೊಣೆಯನ್ನು ವಹಿಸಿಕೊಳ್ಳಬೇಕಾಯಿತೆಂದು, ತನಗೆ ಸಾಂಪ್ರದಾಯಿಕ ಮೌಲ್ಯಗಳನ್ನು ಬೋಧಿಸಲಾಯಿತು, ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಚಿಸಲಾಯಿತು ಮತ್ತು ಮಿತಿಗೊಳಿಸಲಾಯಿತೆಂದು ಅವರು ಸ್ವತಃ ಒಪ್ಪಿಕೊಂಡಿದ್ದರು. ತಾನು ಸ್ವತಂತ್ರ ಬುದ್ಧಿ ಮತ್ತು ವೈಚಾರಿಕತೆಯ ಸಹಾಯದಿಂದ ಅವುಗಳನ್ನು ಮೀರಿ ಬೆಳೆದಿದ್ದೇನೆಂದು ತಾವು ಹಲವಾರು ಸಲ ಹೇಳಿದ್ದರು. ಅವರು ಒಬ್ಬ ದೇವರಲ್ಲಿ ನಂಬಿಕೆಯಿಟ್ಟವರು. ಅವರು ಧರ್ಮವು ಸಮಾಜಶಾಸ್ತ್ರೀಯ ಮತ್ತು ಭೌತಿಕವೆಂದು ಚಿಂತಿಸಿದ್ದರು. ಪ್ರಾರಂಭದಲ್ಲಿ ಜಾತಿಪದ್ಧತಿಯಡಿಯಲ್ಲಿ ಕ್ಷತ್ರಿಯರಿಗೆ ವಿಶೇಷ ಸ್ಥಾನಮಾನ ನೀಡಿದ್ದರಿಂದ ಪ್ರಚೋದನೆಗೊಳಗಾಗಿದ್ದು ಅದನ್ನು ಬೆಂಬಲಿಸಿದ್ದರು, ತಮ್ಮ ಜೀವನದ ನಂತರದ ವರ್ಷಗಳಲ್ಲಿ ಅವರು ಚಾತುರ್ವರ್ಣ ಮತ್ತು ಜಾತಿಪದ್ಧತಿಯನ್ನು ರದ್ದುಗೊಳಿಸಬೇಕೆಂದು ಕಂಠೋಕ್ತವಾಗಿ ಹೇಳಿದ್ದರು. ಜಾತಿಪದ್ಧತಿಯ ವಿರುದ್ಧದ ಆಂದೋಲನ ಮತ್ತು ಸಂಸ್ಥೆಗಳಿಗೆ ಬೆಂಬಲ ನೀಡಿದ್ದರೂ ಪುನರ್‌ಪರಿಶೀಲನೆ ಮಾಡಿದಾಗ ಅವರ ನಿರ್ಧಾರಗಳು ಸಾಂಪ್ರದಾಯಿಕವೆಂದು ತೋರಿದರೂ ಅವುಗಳು ಅಂತರಂಗದಲ್ಲಿ ಆಧುನಿಕತೆಯ ತತ್ವವಿತ್ತು.

ಶಾಹುರವರು ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಣ ಅಂತರ್‌ಸಂಬಂಧಗಳ ಅರಿವನ್ನು ಚೆನ್ನಾಗಿ ಹೊಂದಿದ್ದರು. ಆ ಅರಿವು ಮಹಾತ್ಮ ಗಾಂಧಿಯವರು ಇವುಗಳ ಬಗ್ಗೆ ಹೊಂದಿದ್ದ ಅರಿವಿಗೆ ಸಮಾನವಾಗಿತ್ತು. ಅವರು ತಾವು ಮಾಡುವುದರ ಬಗ್ಗೆ ತುಂಬ ಶ್ರದ್ಧೆಯನ್ನು ಹೊಂದಿದ್ದರು. ಮಾನವ ಸಮಸ್ಯೆಗಳ ಬಗ್ಗೆ ಪರಿಪೂರ್ಣ ಅರಿವಿತ್ತು ಮತ್ತು ಸಾಮಾಜಿಕ ಸುಧಾರಣೆಗಳ ಚಲನಶೀಲತೆಯ ಬಗ್ಗೆ ಸರಿಯಾದ ಗ್ರಹಿಕೆಯಿತ್ತು. ಅವರು ಗ್ರಂಥಗಳನ್ನು ಅಧ್ಯಯನ ಮಾಡುವುದರಿಂದ ಮತ್ತು ವ್ಯಕ್ತಿ ಮತ್ತು ಘಟನೆಗಳನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕನ ಮಾಡುವುದರಿಂದ ಇವೆಲ್ಲವನ್ನು ಗಳಿಸಿದ್ದರು. ಆದ್ದರಿಂದಲೇ ಬೇರೆ ಸುಧಾರಕರಂತಲ್ಲದೆ ಇವರ ಚಿಂತನೆಗಳು ಎಂದಿಗೂ ಏಕಪಕ್ಷೀಯ, ಗಣ್ಯ ನಾಯಕತ್ವವಾದಿ ಅಥವಾ ಗ್ರಂಥೀಯವಾಗಿರಲಿಲ್ಲ. ಅವರು ಒಬ್ಬ ಮಹಾರಾಜನಾಗಿ ಒಂದು ಕಡೆ ಸಂಪ್ರದಾಯವನ್ನು ಮುಂದುವರಿಸಬೇಕಾಗಿತ್ತು ಮತ್ತು ಮತ್ತೊಂದು ಕಡೆಗೆ ಅವರು ತಮ್ಮ ಸಂಸ್ಥಾನದೊಳಗೆ ಆಧುನಿಕತೆಯ ಒಬ್ಬ ಮಹಾ ಬೆಂಬಲಿಗರಾಗಿದ್ದರು. ಬೇರೆ ಸುಧಾರಕರು ಸಾರ್ವಜನಿಕರ ಅಂತಃಸಾಕ್ಷಿಗೆ ಕರೆ ಕೊಡುವ ಮೂಲಕ ಪ್ರಯತ್ನಿಸುತ್ತಿದ್ದರೆ, ಛತ್ರಪತಿಗಳು ಸರಕಾರದ ಆಜ್ಞೆಗಳನ್ನು ಹೊರಡಿಸಿ ಜಾರಿಗೊಳಿಸಿದರು. ಆಗಾಗ ಸಂಪ್ರದಾಯವಾದಿಗಳು ಶಾಹುರವರನ್ನು ಟೀಕೆಗೆ ಗುರಿಪಡಿಸುವುದಕ್ಕೆ ಮತ್ತು ವಿರೋಧಿಸುವುದಕ್ಕೆ ಇದೇ ಕಾರಣವಾಗಿರಬಹುದು.

ಅವರು ಛತ್ರಪತಿಯಾಗಿದ್ದರಿಂದ ಅವರ ಪ್ರಗತಿಗಾಮಿತನ ನಿರ್ಬಂಧಕ್ಕೊಳಗಾಗಿತ್ತೆಂದು ಸಂಶೋಧಕರು ಸಮರ್ಥಿಸುತ್ತಾರೆ. ಆದರೆ ಈ ನಿರ್ಬಂಧಗಳು ಕೌಟುಂಬಿಕ ಸಂಪ್ರದಾಯ ಮತ್ತು ಆಚರಣೆಗಳನ್ನು ನೆರವೇರಿಸುವುದಕ್ಕೆ ಮಾತ್ರ ಇದ್ದವೆಂಬುದನ್ನು ಅವರು ಗಮನಿಸಬೇಕು. ಅವರು ಒಬ್ಬ ಮಹಾರಾಜರಾಗಿದ್ದರಿಂದ ತಮ್ಮ ಸಂಸ್ಥಾನದೊಳಗೆ ಆಧುನಿಕ ವಾತಾವರಣ ನಿರ್ಮಿಸುವುದಕ್ಕೆ ಅವರಿಗೆ ಈ ಅವಕಾಶವನ್ನು ನೀಡಲಾಗಿತ್ತು. ಮತ್ತು ಈ ಅಂಶವು ಯಥಾಕಥಿತ ನಿರ್ಬಂಧಗಳನ್ನು ಮೀರಿಸುತ್ತದೆ. ಅವರು ಮಹಾ ಆಡಳಿತಗಾರರಾಗಿದ್ದರಿಂದ ಅಧಿಕಾರ ದುರುಪಯೋಗವಾಗದಂತೆ ಹೆಜ್ಜೆಹೆಜ್ಜೆಗೂ ನಿಗಾ ವಹಿಸಿದ್ದರು. ಅಧಿಕಾರವೆಂದರೆ ಸಾಧನಗಳು–ಮಾರ್ಗಗಳು. ಅಧಿಕಾರವನ್ನು ಸಾಂಪ್ರದಾಯಿಕ ಅಸಮಾನತೆಗಳನ್ನು ನಾಶ ಮಾಡಲು ಮತ್ತು ಸಮಾನತೆ

ಆಧರಿಸಿದ ಒಂದು ಹೊಸ ಸಮಾಜ ನಿರ್ಮಾಣ ಮಾಡಲು ಒಂದು ಸಾಧನವನ್ನಾಗಿ ಬಳಸಬೇಕಾಗುತ್ತದೆ. ಅವರಿಗೆ ಈ ಬಗ್ಗೆ ಯಾವುದೇ ಅನುಮಾನ ಇರಲಿಲ್ಲ.

ರಾಜಕೀಯ ಅಧಿಕಾರವೇ ಮುಖ್ಯ ಗುರಿಯಾದರೆ ವ್ಯವಸ್ಥೆಯ ಪಟ್ಟಭದ್ರ ಹಿತಾಸಕ್ತಿಗಳನ್ನು ರಕ್ಷಿಸತೊಡಗುತ್ತದೆ ಎಂಬ ಬಗ್ಗೆ ಶಾಹು ಛತ್ರಪತಿಯವರಿಗೆ ಅರಿವಿತ್ತು. ಅವರು ತಮ್ಮ ಕಾಲದ ಕೆಲವು ಜನರಲ್ಲಿ ತಾವೂ ಒಬ್ಬರಾಗಿದ್ದರು. ಇತರೆ ರಾಜ ಮತ್ತು ಮಹಾರಾಜರು ಇದನ್ನು ಮನವರಿಕೆ ಮಾಡಿಕೊಳ್ಳಬೇಕು. ಗಾಂಧಿ-ಪೂರ್ವದ ರಾಜಕೀಯ ನಾಯಕರಲ್ಲಿ ಯಾರಿಗೂ ಸಹ ತೀವ್ರವಾಗಿ ಬದಲಾಗುತ್ತಿರುವ ಕಾಲದ ಬಗ್ಗೆ ಹೆಚ್ಚು ಅರಿವಿರಲಿಲ್ಲ. ಅವರು ಬದಲಾವಣೆಯ ಗಾಳಿಯನ್ನು ಅರಿಯುತ್ತಿದ್ದರು. ಆದರೆ 'ಈ ಗಾಳಿಯಿಂದ (ಮಾರುತ) ಭಾರತದ ಅಸ್ಮಿತೆ"(ಗುರುತು) ಹಾರಿಹೋಗುವುದನ್ನು ಬಯಸಿರಲಿಲ್ಲ. ಶಾಹು ಛತ್ರಪತಿಯವರಿಗೆ ಆಗರ್‌ಕರರು ಆದರ್ಶ ಸುಧಾರಕರಾಗಿದ್ದರು. ಅವರು ಭಾರತವನ್ನು 'ಭಾರತೀಯತೆಯನ್ನು ಕಳೆಯದೆ' ಸುಧಾರಿಸಿದರು.

ಶಾಹುರವರು ಒಬ್ಬ ದೇವರಲ್ಲಿ ನಂಬಿಕೆ ಇಟ್ಟವರಾಗಿದ್ದರೆಂಬುದನ್ನು ಈಗಾಗಲೇ ಹೇಳಿಯಾಗಿದೆ. ಅವರು ಪವಿತ್ರ ಸ್ನಾನಕ್ಕಾಗಿ ಪಂಚಗಂಗಾ ನದಿಗೆ ಹೋಗುತ್ತಿದ್ದರು. ಮತ್ತು ರಾಜಪುರೋಹಿತರ ಸಹಾಯದಿಂದ ಕೆಲವು ಆಚರಣೆಗಳ ಮೂಲಕ ನದಿಯಲ್ಲಿ ಸ್ನಾನ ಮಾಡುತ್ತಿದ್ದರು. ದುಸ್ಥಿತಿಯ ಕೆಲವು ವರ್ಷಗಳ ನಂತರ ಕೊಲ್ಹಾಪುರ ಸಂಸ್ಥಾನವು ಅವರಲ್ಲಿ ಒಬ್ಬ ನ್ಯಾಯವಂತ ಮತ್ತು ಸಮರ್ಥ ರಾಜನನ್ನು ನೋಡಿತು. ಧಾರ್ಮಿಕ ಸ್ವಾತಂತ್ರ್ಯದ ಆಂದೋಲನವನ್ನು ಬಲಪಡಿಸುತ್ತಾ ಶಾಹುರವರು ತಮ್ಮ ರಾಜರ ಕರ್ತವ್ಯಗಳನ್ನು, ಜವಾಬ್ದಾರಿ ಹೊಣೆಗಳನ್ನು ನೆರವೇರಿಸುತ್ತಿದ್ದರು. ಅವರು, ಧರ್ಮದ ಪ್ರಭಾವಕ್ಕೊಳಗಾಗಿ ಸಾಮಾಜಿಕ ಸುಧಾರಣೆಗಳ ತಮ್ಮ ಮನೋಭಾವಗಳನ್ನು ಎಂದಿಗೂ ಬಿಡಲಿಲ್ಲ. ಮಂದಗಾಮಿಗಳು ತೆಗೆದುಕೊಂಡ ಧರ್ಮದ ಬಗೆಗಿನ ತಟಸ್ಥ ನಿಲುವನ್ನು ಮತ್ತು ಸ್ವಾತಂತ್ರ್ಯ ಆಂದೋಲನಕ್ಕೆ ಹೆಚ್ಚು ಜನರನ್ನು ಸೇರಿಸಿಕೊಳ್ಳುವ ಉಗ್ರಗಾಮಿಗಳು ಧರ್ಮದ ಮೇಲೆ ಆಧಾರಗೊಂಡ ಬಲಿಷ್ಠ ರಾಷ್ಟ್ರೀಯ ಕಲ್ಪನೆಯ ಪ್ರಚಾರಗಳೆರಡನ್ನು ಬಿಟ್ಟು ಶಾಹುರವರು ಮಧ್ಯದ ದಾರಿಯನ್ನು ಕಂಡುಕೊಂಡರು. ಶಾಹುರವರು ಅನುಸರಿಸಿದ ಮಾರ್ಗವು ನಿಜವಾದ ಸುಧಾರಣೆಗಳಲ್ಲಿ ಹೆಚ್ಚು ಪರಿಣಾಮಕಾರಿಯಾಗಿತ್ತು.

ಧರ್ಮದಿಂದ ಆಧುನಿಕತೆಯ ಕಡೆಗೆ ಶಾಹುರವರ ಮನೋಭಾವದಲ್ಲಿ ಒಂದು ಸ್ಪಷ್ಟವಾದ ಬದಲಾವಣೆಯಿತ್ತು. ಅವರು ವೇದದ ಶ್ರದ್ಧೆ ಮತ್ತು ವೇದೋಕ್ತ ಆಚರಣೆಗಳ ಪ್ರಚಾರದ ಬಗ್ಗೆ ಹೆಚ್ಚು ಒಲವು ಹೊಂದಿದ್ದರು. ವೇದೋಕ್ತ ಹಕ್ಕುಗಳಿಗಾಗಿ ಹೋರಾಡುವಾಗ ಪ್ರಾರಂಭದಲ್ಲಿ ಅವರು ಸಾಮಾಜಿಕ ಸಮಾನತೆಗಾಗಿ ವೇದದ ಶ್ರದ್ಧೆ ಮತ್ತು ಎಲ್ಲಾ ಹಿಂದುಗಳಿಗೆ ವೇದೋಕ್ತದ ಹಕ್ಕುಗಳು ಎಟುಕಬೇಕೆಂಬ ಗುರಿಯನ್ನು ಆಧಾರವಾಗಿಟ್ಟುಕೊಂಡಿರಲಿಲ್ಲ. ಅವರು ಆ ಸಮಯದಲ್ಲಿ ಕನಿಷ್ಠಪಕ್ಷ ಶೂದ್ರ ಮತ್ತು ಅತಿಶೂದ್ರರಿಗೆ ಸಹ ವೇದೋಕ್ತದ ಹಕ್ಕುಗಳನ್ನು ಅನುಭವಿಸಬೇಕೆಂದು ವಾದಿಸಲೇ ಇಲ್ಲ. ನಂತರ ಮೇಲುಜಾತಿಗಳ ಕಟ್ಟಾಭಿಮಾನಿಗಳು ವಿರೋಧದ ನಿಲುವನ್ನು ತಾಳಿದಾಗ ಮತ್ತು ಈ ಸಮಸ್ಯೆಯನ್ನು ಬಗೆಹರಿಸಲು ಸತ್ಯಶೋಧಕ ಆಂದೋಲನದ ನಾಯಕತ್ವ ವಹಿಸಿಕೊಂಡಾಗ ವೇದೋಕ್ತವು ಸಾಮಾಜಿಕ ಸಮಾನತೆಯ ಆಂದೋಲನವಾಗಿ ಮಾರ್ಪಟ್ಟಿತು; ಅಲ್ಲಿಯವರೆಗೆ ಡಾ. ವೈ. ಡಿ. ಫಡ್ಕೆ ಹೇಳಿದಂತೆ ಅದು "ಚಾತುರ್ವರ್ಣ ವ್ಯವಸ್ಥೆಯಲ್ಲಿ ನಿಗದಿಗೊಳಿಸಿದ ಮತ್ತು ಬ್ರಾಹ್ಮಣರು ನಿರಾಕರಿಸಿದ ಕ್ಷತ್ರಿಯರ ಹಕ್ಕು ಮತ್ತು ಬಾಧ್ಯತೆಗಳನ್ನು ಪುನಃ ಪಡೆಯುವ ಗುರಿಯನ್ನು ಹೊಂದಿತ್ತು." ಮೊದಲಲ್ಲಿ ಕ್ಷತ್ರಿಯರಿಗೆ ಸೀಮಿತವಾಗಿದ್ದ ಈ ಗುರಿಯು ಅವರ

ನಂತರ ಜೀವನದ ಅವಧಿಯಲ್ಲಿ ಎಲ್ಲಾ ಕೆಳಜಾತಿಗಳಿಗೆ ಅನ್ವಯಿಸಲಾಯಿತು. ಮತ್ತು ಅವರು ಚಾತುರ್ವರ್ಣ ಮತ್ತು ಜಾತಿಪದ್ಧತಿಯನ್ನು ಅವರು ತೀಕ್ಷ್ಣವಾಗಿ ಟೀಕಿಸಿದರು. ಇದನ್ನು ಅವರ ಜೀವನದಲ್ಲಿ "ಸತ್ಯಶೋಧ"ದ ಹಂತ ಎಂದು ಕರೆಯಲಾಗಿದೆ.

ಶಾಹು ಛತ್ರಪತಿಯವರು ಎಂದಿಗೂ ಪೂರ್ಣವಾಗಿ ಸತ್ಯಶೋಧಕದ ಉಪದೇಶವನ್ನು ಪಾಲಿಸಲಿಲ್ಲ. ತಾವು ಒಬ್ಬ ಸತ್ಯಶೋಧಕರು ಎಂಬುದನ್ನು ಅವರು ಬಹಿರಂಗವಾಗಿ ನಿರಾಕರಿಸಿದ್ದು ಒಂದು ಸಾಮಾನ್ಯ ಸಂಗತಿಯಾಗಿದೆ. ಆದರೂ ಅವರು ಬ್ರಾಹ್ಮಣರನ್ನು ಬಿಟ್ಟು ಇತರೆ ಜಾತಿಗಳ ಪುರೋಹಿತರಿಗೆ ತರಬೇತಿ ನೀಡುವ ಪಾಠಶಾಲೆಗಳನ್ನು ನಡೆಸುವ ಸತ್ಯಶೋಧಕ ಸಮಾಜದ ಹಲವು ಯೋಜನೆಗಳಿಗೆ ಸಹಾಯ ಮಾಡಿದರು. ಸತ್ಯಶೋಧಕ ಆಂದೋಲನವು ತನ್ನ ವಿರೋಧಿಗಳನ್ನು ವಾದದಲ್ಲಿ ಸೋಲಿಸುವುದಕ್ಕೆ ಒಂದು ಒಳ್ಳೆಯ ಸಾಧನವಾಯಿತು. ಸತ್ಯಶೋಧಕದ ಅನುಯಾಯಿಗಳಾದ ಭಾಸ್ಕರರಾವ್ ಜಾಧವ್‌ರಂತಹವರು ವೇದೋಕ್ತ ಅಥವಾ ಒಬ್ಬ ಕ್ಷಾತ್ರ ಜಗದ್ಗುರು ಸ್ಥಾಪನೆಯಂತಹದ್ದು ಮಹತ್ವದ ವಿಷಯವಲ್ಲವೆಂದು ಮುಚ್ಚುಮರೆಯಿಲ್ಲದೆ ಬಹಿರಂಗವಾಗಿ ತಮ್ಮ ಅಭಿಪ್ರಾಯವನ್ನು ಹೇಳಿದ್ದರು.

ಆದರೆ ಪುನರವಲೋಕನ ಮಾಡಿದಾಗ, ಸಾಮಾಜಿಕ ಅಭಿಪ್ರಾಯವನ್ನು ರೂಪಿಸುವಾಗ ಮತ್ತು ಬದಲಾಯಿಸುವಾಗ ಶಾಹುರವರು ಅಂಗೀಕರಿಸಿದ ಮಾರ್ಗವು ಸತ್ಯಶೋಧಕರ ಆಂದೋಲನದ ವೈಚಾರಿಕತೆಗಿಂತ ಹೆಚ್ಚು ಪರಿಣಾಮಕಾರಿಯಾಗಿತ್ತು. ಸತ್ಯಶೋಧಕ ಅನುಯಾಯಿಗಳು ಸೈದ್ಧಾಂತಿಕವಾಗಿ ಬಹಿಷ್ಕರಿಸಿದ ಹಿಂದುಧರ್ಮವನ್ನು ಟೀಕೆ/ವಿಮರ್ಶೆ ಮಾಡಲಿಲ್ಲ ಅಥವಾ ವೇದದ ಪಾರಮ್ಯದಿಂದ ಆರ್ಯ ಸಮಾಜವನ್ನು ಒತ್ತಾಯಿಸಲಿಲ್ಲ. ಆದರೆ ಅವರು ತಾವು ನಿಜವಾಗಿ ಸುಧಾರಣೆಗಳನ್ನು ಕಾರ್ಯಗತ ಮಾಡಿದ್ದಲ್ಲಿ ಅವರ ಮಧ್ಯಮ ಮಾರ್ಗ ಪ್ರತಿಬಿಂಬಿತವಾಗುತ್ತದೆ. ತಮ್ಮ ಇಡೀ ಜೀವನದಲ್ಲಿನ ಈ ಪರಿಪೂರ್ಣ ಪ್ರಕರಣವು ದೃಢತೆ, ಪರಸ್ಪರ ಅವಲಂಬನೆ ಮತ್ತು ಸಂಪ್ರದಾಯ ಮತ್ತು ಆಧುನಿಕತೆಗಳ ತಾರ್ಕಿಕತೆಗಳನ್ನು ಎತ್ತಿ ತೋರಿಸುತ್ತದೆ. ವೇದೋಕ್ತದ ಬಗ್ಗೆ ಅವರ ವೈಯಕ್ತಿಕ ಅಭಿಪ್ರಾಯ ಏನೇ ಆಗಿರಲಿ, ಅವರ ವಿರೋಧಿಗಳು ಕ್ಷತ್ರಿಯರು ಮತ್ತು ಶೂದ್ರರ ನಡುವೆ ಬಿರುಕು ಉಂಟುಮಾಡುತ್ತಿದ್ದದನ್ನು ಅಥವಾ ಶೂದ್ರರನ್ನೂ ಕೂಡ "ಒಳ್ಳೆಯ ಶೂದ್ರರು" ಮತ್ತು "ಕೆಟ್ಟ ಶೂದ್ರರು" ಎಂದು ವಿಭಾಗ ಮಾಡುತ್ತಿದ್ದದನ್ನು ಅಥವಾ ಜಾತಿವ್ಯವಸ್ಥೆಯ ಸಂರಚನೆಯನ್ನು ಧ್ವಂಸ ಮಾಡುವುದನ್ನು ಪ್ರಚಾರ ಮಾಡುವುದು "ಸಮಾಜವನ್ನು ಅವ್ಯವಸ್ಥಿತ"ಗೊಳಿಸುವುದಕ್ಕೆ ಸಮಾನವಾದುದು ಎಂಬುದನ್ನು ಅವರು ಮನವರಿಕೆ ಮಾಡಿಕೊಂಡು ಬ್ರಾಹ್ಮಣರು ಕ್ಷತ್ರಿಯರ ವಿರುದ್ಧ ಮಾತ್ರವಲ್ಲದೆ ಸಾಮಾಜಿಕ ಸಮಾನತೆಯ ವಿರುದ್ಧವಿದ್ದಾರೆಂಬ ತೀರ್ಮಾನಕ್ಕೆ ಅವರು ಬಂದರು. ಒಮ್ಮೆ ಅವರು ಇದನ್ನು ಮನವರಿಕೆ ಮಾಡಿಕೊಂಡ ಮೇಲೆ ಅವರು ಈ ಸಂಘರ್ಷವನ್ನು ಒಟ್ಟಿಗೆ ಮುಗಿಸುವುದಕ್ಕಾಗಿ ಹೆಚ್ಚು ಹೆಚ್ಚು ಬಲಿಷ್ಠ ಸಾಧನಗಳನ್ನು ಆಯ್ಕೆ ಮಾಡಿಕೊಂಡರು.

ಬ್ರಿಟಿಷರ ಆಡಳಿತದಲ್ಲಿ ಶಂಕರಾಚಾರ್ಯರು ಮೊದಲಿಗೆ ಯಾವುದೇ ಸಾಮಾಜಿಕ ಅಥವಾ ರಾಜಕೀಯ ಸುಸಂಗತವನ್ನು ಎಂದಿಗೂ ಹೊಂದಿರಲಿಲ್ಲ ಅಥವಾ ಹಿಂದೂ ಧರ್ಮವನ್ನು ರಕ್ಷಿಸಲು ಅವರು ಎಂದಿಗೂ ಯಾವುದೇ ವಿರೋಧವನ್ನು ಇಸ್ಲಾಮಿನ ದಾಳಿಯ ಬಗ್ಗೆ ಪ್ರತಿಭಟನೆ ವ್ಯಕ್ತಪಡಿಸಿರಲಿಲ್ಲ, ಅಂಥವರು ಧಾರ್ಮಿಕ ಪೀಠದ ಮುಖ್ಯಸ್ಥರ ಪಾತ್ರವನ್ನು ನಿರ್ವಹಿಸಲು ಮತ್ತು ವಿವಾದಗಳನ್ನು ಬಗೆಹರಿಸಲು ತೊಡಗಿದರು. ಅವರ ಧಾರ್ಮಿಕ ಅಧಿಕಾರಗಳನ್ನು ತಡೆಯುವ ಸಲುವಾಗಿ ಶಾಹುರವರು ಒಬ್ಬ ಕ್ಷಾತ್ರ ಜಗದ್ಗುರುವನ್ನು ನೇಮಿಸಿದರು. ಇದು ಬದಲಾದ ಸನ್ನಿವೇಶಗಳಲ್ಲಿ ಧರ್ಮವನ್ನು ನಿರ್ವಚಿಸುವ ಮತ್ತು ಅದರ

ವಲಯವನ್ನು (ಕ್ಷೇತ್ರ) ನಿರ್ಧರಿಸುವ ಪ್ರಯತ್ನ ಮಾಡಲು ಶಾಹುರವರು ಒಬ್ಬ ಧಾರ್ಮಿಕ ಮುಖ್ಯಸ್ಥನನ್ನು ನೇಮಿಸುವ ಹಕ್ಕು ಒಬ್ಬ ರಾಜನಿಗಿದೆ ಮತ್ತು ರಾಜನ ಅಧಿಕಾರವು ಧಾರ್ಮಿಕ ಮುಖ್ಯಸ್ಥನಿಗಿಂತ ಮಿಗಿಲಾದುದು ಎಂದು ಸ್ಥಾಪಿಸುವುದಕ್ಕೆ ಬಯಸಿದ್ದರು. ಅವರು ಶಂಕರಾಚಾರ್ಯರ ಬೆಳೆಯುತ್ತಿರುವ ಪ್ರಾಮುಖ್ಯತೆಯನ್ನು ತಡೆಯಲು ಮತ್ತು ಬ್ರಾಹ್ಮಣೇತರರು ಆಚರಿಸುವ ಕೆಲವು ವಿಧಿ-ವಿಧಾನಗಳ ಬಗ್ಗೆ ವಿಧಿಸಿದ್ದ ನಿಷೇಧವನ್ನು ತೆರವುಗೊಳಿಸಲು ಬಯಸಿದ್ದರು.

ಕ್ಷಾತ್ರ ಜಗದ್ಗುರುವಿನ ನಡವಳಿಕೆಯನ್ನು ನಿಗದಿಗೊಳಿಸಿದ ನೀತಿಸಂಹಿತೆಯನ್ನು ಪರಿಶೀಲಿಸಿದಾಗ ಶಾಹುರವರು ನೇಮಿಸಿದ ಈ ಪೀಠದ ಮುಖ್ಯಸ್ಥರ ವಿಧಾನವು ಮುಖ್ಯವಾಗಿ ಸಾಂಪ್ರದಾಯಿಕ ಧಾರ್ಮಿಕ ಶ್ರದ್ಧೆಗಿಂತ ಹೆಚ್ಚು ಆಧುನಿಕ, ಭೌತಿಕ ಗುರಿಗಳನ್ನು ಒಳಗೊಂಡಿದೆಯೆಂಬುದು ಕಂಡುಬರುತ್ತದೆ. ಕ್ಷಾತ್ರ ಜಗದ್ಗುರು ಬಯಸಿದರೆ ಅವರು ಮದುವೆಯಾಗುವುದಕ್ಕೆ ಮುಕ್ತ ಅವಕಾಶವಿದೆ. ಆದರೆ ಅವರು ಯಾರಿಂದಲೂ ಪಾದಪೂಜೆ (ಪದ್ಯಪೂಜಾ) ಮಾಡಿಸಿಕೊಳ್ಳುವಂತಿಲ್ಲ. (ಸಾಂಪ್ರದಾಯಿಕವಾಗಿ ಗುರುಗಳ ಪಾದಗಳನ್ನು ತೊಳೆಯುವ ವಿಧಾನ). ಅವರು ಜೀವನದ ಗುರಿ ರಾಷ್ಟ್ರ ಮತ್ತು ಜನರಿಗೆ ಸೇವೆ ಮಾಡುವುದೆಂದು ನಿರೀಕ್ಷಿಸಲಾಗಿತ್ತು. ಕ್ಷಾತ್ರ ಜಗದ್ಗುರುಗಳ ಹುದ್ದೆಯು ಅನುವಂಶಿಕವಲ್ಲ ಮತ್ತು ಅವರ ಉತ್ತರಾಧಿಕಾರಿ ಅದನ್ನು ಹಕ್ಕೆಂದು ಕೇಳುವಂತಿಲ್ಲ. ಆದ್ದರಿಂದ ಧನಂಜಯ ಕೀರ್ ಅವರ ಮಾತುಗಳನ್ನು ಉದ್ಧರಿಸಿ ಹೇಳುವುದಾದರೆ, "ಇದು ಒಬ್ಬ ಧಾರ್ಮಿಕ ಆಡಳಿತಾಧಿಕಾರಿಯ ನೇಮಕವಷ್ಟೇ."[2] ಈ ಕ್ಷಾತ್ರ ಜಗದ್ಗುರುವನ್ನು ಎಂದೆಂದಿಗೂ ದೇವರು ಮತ್ತು ಭಕ್ತನ ನಡುವಣ ಒಬ್ಬ ಏಜೆಂಟ್ ಅಥವಾ ಒಬ್ಬ ಮಧ್ಯಸ್ಥಗಾರನೆಂದು ಪರಿಭಾವಿಸುವಂತಿಲ್ಲ. ಅಥವಾ ಪೋಪ್ ಅಥವಾ ಶಂಕರಾಚಾರ್ಯರಿಗೆ ನೀಡಿದ್ದ ಧಾರ್ಮಿಕ ಮಹಾಪ್ರತಿಷ್ಠೆಯನ್ನು ಅನುಭವಿಸುವಂತಿಲ್ಲ.

ಇದನ್ನು ಗಣನೆಗೆ ತೆಗೆದುಕೊಂಡು ಶಾಹುರವರ ಸಮಕಾಲೀನ ಸತ್ಯಶೋಧಕ ಬೆಂಬಲಿಗರು ಕ್ಷಾತ್ರ ಜಗದ್ಗುರುಗಳ ನೇಮಕದ ಬಗ್ಗೆ ಅನುಚಿತವಾಗಿ ಟೀಕಿಸಿದ್ದನ್ನು ಸುಲಭವಾಗಿ ಹೇಳುತ್ತಾರೆ. ಈ ಪ್ರಮಾದವನ್ನು ಇಂದೂ ಸಹ ಅವರ ನಿಂದಕರು ಮತ್ತೆ ಮತ್ತೆ ಎತ್ತಿ ತೋರಿಸುತ್ತಾರೆ. ಇದನ್ನು ಮಾಡುವ ಮೂಲಕ ಅವರು ಧಾರ್ಮಿಕ ಸ್ಥಾನಮಾನವನ್ನು ಕ್ರೋಡೀಕರಿಸಲಿಲ್ಲ. ಆದರೆ ಸಂಪ್ರದಾಯ ಮತ್ತು ಮೂಢನಂಬಿಕೆಗಳಿಗಿಂತ ಭೌತಿಕ ಅಧಿಕಾರ ಮತ್ತು ವೈಚಾರಿಕತೆ ಅತಿಮುಖ್ಯವೆಂದು ಸಾಧಿಸಿ ತೋರಿಸಿದರು. ಅವರ ಜೀವನ ಕೊನೆಯ ಘಟ್ಟದಲ್ಲಿ ಧರ್ಮದ ಬಗೆಗಿನ ಅವರ ಮನೋಭಾವ ಸ್ಫಟಿಕದಂತೆ ಸ್ಫುಟವಾಗಿತ್ತು. ೧೯೨೦ರಲ್ಲಿ ಅಖಿಲಭಾರತ ಹಿಂದುಳಿದ ವರ್ಗಗಳ ಮಿಷನ್ನಿನಲ್ಲಿ ಭಾಷಣ ಮಾಡುತ್ತಾ ಒಬ್ಬ ವ್ಯಕ್ತಿಯು ವೈಯಕ್ತಿಕವಾಗಿ ಧರ್ಮದ ಬಗ್ಗೆ ಸಂಬಂಧವನ್ನಿಟ್ಟುಕೊಳ್ಳಲಿ, ಆದರೆ ಆ ಸಂಬಂಧವು ರಾಷ್ಟ್ರದ ಪ್ರಾಮುಖ್ಯತೆಗೆ ಅಡ್ಡಿಯಾಗಬಾರದೆಂದು ಅವರು ಹೇಳಿದರು.[3] ಒಬ್ಬ ತರಬೇತಿ ಹೊಂದಿದ ಪುರೋಹಿತನು ಜಾತಿ, ಮತಭೇದವಿಲ್ಲದೆ ಆಚರಣೆಗಳನ್ನು ನೆರವೇರಿಸಿದರೆ ಸಂಪ್ರದಾಯದ ಮನಸ್ಥಿತಿಯನ್ನು ಬದಲಾಯಿಸಬಹುದು ಮತ್ತು ಬ್ರಾಹ್ಮಣ ಪುರೋಹಿತರ ಜಾತೀಯತೆಯು ಯಜಮಾನಿಕೆಯನ್ನು ಮುರಿಯಲೇಬೇಕೆಂಬುದು ಅವರ ನಂಬಿಕೆಯಾಗಿತ್ತು. ಈ ಗುರಿಯ ಉದ್ದೇಶದಿಂದಲೇ ಅವರು ಪುರೋಹಿತರನ್ನು ತರಬೇತಿಗೊಳಿಸುವ ಸತ್ಯಶೋಧಕ ಪಾಠಶಾಲೆಗಳಿಗೆ ಹಣಕಾಸಿನ ನೆರವನ್ನು ನೀಡಿದರು.

ಶಾಹು ಛತ್ರಪತಿಯವರು ಪುಸ್ತಕಗಳನ್ನು ತನ್ನ ಸುತ್ತಲೂ ಹರಡಿಕೊಂಡು ಕೂತ ಆರಾಮಕುರ್ಚಿಯ ಚಿಂತಕರಲ್ಲ. ಒಂದು ಔಪಚಾರಿಕ ಕಾಠಿಣ್ಯದ ವೈಚಾರಿಕ ಸ್ಥಾನಮಾನವನ್ನು ಮುಂದುವರಿಸುವುದಕ್ಕಿಂತ

ಮಿಗಿಲಾಗಿ ಅವರು ಸಾಮಾಜಿಕ ವಾಸ್ತವತೆಯನ್ನು ಬದಲಾಯಿಸುವ ಗುರಿಯನ್ನು ಹೊಂದಿದ್ದರು. ಸಾಮಾಜಿಕ ವಾಸ್ತವತೆಯು ಸಾಮಾಜಿಕ ಇತಿಹಾಸದ ಸಾವಿರಾರು ವರ್ಷಗಳ ಒಂದು ಉತ್ಪನ್ನವಾಗಿದೆ ಮತ್ತು ಅದು ಇಂದಿನ ಒಂದು ಸಂರಚನೆಯಲ್ಲ.

ಹಲವಾರು ತಲೆಮಾರುಗಳಿಂದ ಮಾಡಿದ ಬದಲಾವಣೆಗಳಿಂದ ಅದು ರೂಪಿತಗೊಂಡಿದೆ. ಅದನ್ನು ಒಂದು ಸುಂದರವಾದ, ತಾರ್ಕಿಕವಾದ, ಸೈದ್ಧಾಂತಿಕ ವಾದರಿಗಳಿಂದಾಗಲೀ ಅದನ್ನು ಸಾದರಪಡಿಸುವುದಕ್ಕಾಗುವುದಿಲ್ಲ. ಆಧುನಿಕತೆಯ ಸಿದ್ಧಾಂತಗಳು ಧರ್ಮ ಮತ್ತು ಸಾಮಾಜಿಕ ವಾಸ್ತವತೆಯ ಎರಡು ಪರಿಕಲ್ಪನೆಗಳನ್ನು ಸುಲಭವಾಗಿ ಪ್ರತ್ಯೇಕ ಮಾಡಲಾರರು. ಮತ್ತು ಸಾಮಾಜಿಕ ವಾಸ್ತವತೆಯ ಅವಿಭಾಜ್ಯ ಅಂಗವಾಗಿರುವವರು ಸಹ ಅದನ್ನು ಮಾಡಲಾರದು. ಶಾಹುರವರು ಜೀವನದ ಗುಣಮಟ್ಟವನ್ನು ಸುಧಾರಿಸಲು, ಸಮಾಜದಲ್ಲಿರುವ ಮೂಢನಂಬಿಕೆ, ಮೌಢ್ಯವನ್ನು ಸಂಪೂರ್ಣವಾಗಿ ನಾಶ ಮಾಡಲು ಕೃತಕ ಸಂಸ್ಥಾನದ ಕಡೆಗೆ ಸಮಾಜವನ್ನು ಕೊಂಡೊಯ್ಯಲು ಹೊಣೆಯಾಗಿರುವ ಶಕ್ತಿಗಳನ್ನು ತಟಸ್ಥಗೊಳಿಸಲು, ಶತಮಾನಗಳ ಸಾಂಪ್ರದಾಯಿಕ ಮನಸ್ಥಿತಿ, ಆಲಸ್ಯ ಮತ್ತು ಜಡತ್ವಗಳನ್ನು ಜಯಿಸಿ ಸಾಮಾಜಿಕ ಜೀವನವನ್ನು ಚಲನಶೀಲಗೊಳಿಸಲು ಬಯಸಿದ್ದರು.[4].... (ಪವಾಡವೆಂದರೆ ಕ್ರಾಂತಿಯ ಫಲಾನುಭವಿಗಳನ್ನು ಚಲನಶೀಲ ಸಾಮಾಜಿಕ ಜೀವನದೊಳಕ್ಕೆ ತರುವ ಪ್ರಕ್ರಿಯೆಯನ್ನು ಕಾರ್ಯಗತಗೊಳಿಸಿದ್ದು (ಪುಟ ೩೬೦).

ಸಮಾಜದಲ್ಲಿ ನೋವು–ದುಮ್ಮಾನಗಳಿಂದ ನರಳುತ್ತಿರುವ ಜನರ ಜೀವನವನ್ನು ಸಮಾಜದಲ್ಲಿರುವ ಇತರೆ ಜನರ ಜೀವನದ ಮಟ್ಟಕ್ಕೆ ತರಲು ಅವರಿಗೆ ವಿಶೇಷ ಸಹಾಯ ಮಾಡಬೇಕಾಗಿದೆ. ಆದ್ದರಿಂದಲೇ ಅವರಿಗೆ ಸೈದ್ಧಾಂತಿಕ ಪರಿಶುದ್ಧತೆಯನ್ನು ಸಂರಕ್ಷಿಸುವುದಕ್ಕಿಂತ ಮಿಗಿಲಾಗಿ ಸಮಾಜದೊಂದಿಗೆ ನಿರಂತರವಾದ ಒಂದು ಸಂವಾದ ನಡೆಸುವುದು ಅತಿಮುಖ್ಯವಾಗಿತ್ತು.

ಜನರನ್ನು ಹೊಸ ಸಮಾಜದ ಶಿಲ್ಪಿಗಳನ್ನಾಗಿ ಮಾಡುವುದಕ್ಕಾಗಿ ಶಾಹುರವರು ಅವರ ಮಧ್ಯೆ ಬದುಕಿದರು. ಅವರ ಆಸಕ್ತಿ ಮತ್ತು ಅನುಭವಗಳನ್ನು ಹಂಚಿಕೊಂಡರು. ಜನರ ಶ್ರದ್ಧೆಯನ್ನು ನಾಶ ಮಾಡದೆ ಅಥವಾ ಕಡೆಗಣಿಸದೆ, ಅವರ ನಂಬಿಕೆ –ಶ್ರದ್ಧೆಗಳಿಗೆ ಗೌರವ ತೋರಿಸುವ ಮೂಲಕ ಮತ್ತು ಅದನ್ನು ಮತ್ತಷ್ಟು ಉತ್ತಮ ಜೀವನಕ್ಕಾಗಿ ಬದಲಾಯಿಸುವ ಮೂಲಕ ಇದು ಸಾಧ್ಯವಾಯಿತು. ಧರ್ಮ ಮತ್ತು ಸಂಪ್ರದಾಯಗಳು ಸಾಮಾಜಿಕರ ಮನಸ್ಸಿನ ಮೇಲೆ ಸಾಕಷ್ಟು ಪ್ರಭಾವದ ಹಿಡಿತವನ್ನು ಹೊಂದಿದೆ ಮತ್ತು ಆಧುನಿಕತೆಯ ಬಗ್ಗೆ ತೆಗೆದುಕೊಂಡ ಯಾವುದೇ ಕ್ರಮ ಯಾವಾಗಲೂ ಧರ್ಮಕ್ಕೆ ಒಂದು ಅಪಾಯದ ಬೆದರಿಕೆ ಎಂದು ಭಾವಿಸಲಾಗುವುದು. ಜನರು ಧಾರ್ಮಿಕ ವಿಷಯಗಳ ಬಗ್ಗೆ ಬಹು ಸೂಕ್ಷ್ಮಮತಿಗಳಾಗಿರುತ್ತಾರೆ ಮತ್ತು ತಮ್ಮ ರಕ್ಷಣೆಯನ್ನು ಕಡೆಗಣಿಸಿ ಅವುಗಳನ್ನು ರಕ್ಷಿಸಲು ಎಲ್ಲಾ ಕಾಲದಲ್ಲೂ ಸಹಾ ಸಿದ್ಧರಾಗಿರುವ ಸಂಗತಿಗೆ ಇತಿಹಾಸವೇ ಸಾಕ್ಷಿಯಾಗಿದೆ. ಆದ್ದರಿಂದ ಸಾಮಾಜಿಕ ಬದಲಾವಣೆ ತರುವುದು ಮತ್ತು ಆಧುನಿಕತೆಗೆ ಜನರು ಹೆಚ್ಚು ಸ್ಪಂದಿಸುವಂತೆ ಮಾಡುವುದು ನಿಜವಾಗಿಯೂ ಒಂದು ದೊಡ್ಡ ಸವಾಲು. ಶಾಹು ಛತ್ರಪತಿಯವರು ಈ ಸವಾಲನ್ನು ಎದುರಿಸಿದರು. ಆದ್ದರಿಂದ ಅವರು ಮಂದಗಾಮಿಗಳಂತೆ ಸಂಪ್ರದಾಯವನ್ನು ತೊರೆಯಲಿಲ್ಲ ಅಥವಾ ಉಗ್ರಗಾಮಿಗಳಂತೆ ಆಧುನಿಕತೆಗೆ ಬೆನ್ನು ತಿರುಗಿಸಲಿಲ್ಲ. ಶಾಹು ಮಹಾರಾಜರು ಸಮಾಜದ ಜನವಿಭಾಗಗಳಿಗೆ ತಲುಪಿದರು ಮತ್ತು ಅವರನ್ನು ಆಧುನಿಕತೆಗೆ ಹೆಚ್ಚು ಸ್ಪಂದಿಸುವಂತೆ ಮಾಡಿದ್ದು ಅವರ ಮಹತ್ವಕ್ಕೆ ಉತ್ತಮ ನಿದರ್ಶನವಾಗಿದೆ. ಆಧುನಿಕತೆಯು ಕೇವಲ ಕೆಲವೇ ವರ್ಗಗಳಿಗೆ ಸೀಮಿತವಾಗಿದ್ದನ್ನು ಜನರ ಬಳಿಗೆ ಕೊಂಡೊಯ್ಯಲು ಅದರ ಸಾಮಾಜಿಕ ವ್ಯಾಪ್ತಿಯನ್ನು ವಿಸ್ತೃತಗೊಳಿಸುವ ಹೊಣೆಯನ್ನು ಅವರು ನೆರವೇರಿಸಿದರು.

ಶಾಹುರವರು ಶಿಕ್ಷಣ ಕ್ಷೇತ್ರದಲ್ಲಿ ಕೈಗೊಂಡ ಕೆಲವು ಕ್ರಮಗಳು ಅವರ ಆಧುನಿಕ ದೃಷ್ಟಿಕೋನದ ಪ್ರಮುಖ ಮುಖವಾಗಿದೆ. ಅವರು ಶಿಕ್ಷಣವನ್ನು 'ವೈಯಕ್ತಿಕ ಒಂದು ವಸ್ತು'ವನ್ನಾಗಿ ಬದಲಾಯಿಸಿದ್ದಕ್ಕೆ ಸಂಶೋಧಕರು ಮೆಚ್ಚುಗೆಯ ಸುರಿಮಳೆ ಸುರಿಸಿದ್ದಾರೆ[5]. ಅವರು ವಿಶೇಷವಾಗಿ ಬಡ ಹೆಣ್ಣುಮಕ್ಕಳ, ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ಮತ್ತು ಅಸ್ಪೃಶ್ಯರ ಮಕ್ಕಳಲ್ಲಿ ಸಾಕ್ಷರತೆ ಹರಡಲು ವಿಶೇಷ ಪ್ರಯತ್ನಗಳನ್ನು ಕೈಗೊಂಡರು. ಅನಕ್ಷರತೆಯಿಂದ ವಿಕಲಾಂಗರಾಗಿದ್ದ ಸಮಾಜದ ಆ ಜನವಿಭಾಗಗಳು ಇತರೆ ಜನವಿಭಾಗಗಳ ಮಟ್ಟಕ್ಕೆ ಬರುವಂತೆ ಮಾಡುವುದು ಅವರ ಗೀಳಾಗಿಬಿಟ್ಟಿತ್ತು. ಅವರು ಶಿಕ್ಷಣವು ಮಾನವ ಸಂಪನ್ಮೂಲದ ಅಭಿವೃದ್ಧಿಯ ಕ್ಷೇತ್ರದಲ್ಲಿ ಒಂದು ಹೂಡಿಕೆಯೆಂದೇ ಪರಿಗಣಿಸಿದ್ದರು.

ಶಾಹುರವರು ಶಿಕ್ಷಣದ ಮೂಲಕ ಕೃಷಿ ಮತ್ತು ಕೈಗಾರಿಕೆಗಳಲ್ಲಿ ಹೊಸ ವಿಧಾನಗಳನ್ನು (ತಂತ್ರ) ತಿಳಿಸುವ ಮೂಲಕ ಪಶ್ಚಿಮ ಮಹಾರಾಷ್ಟ್ರದಲ್ಲಿ ಸಾಮಾಜಿಕ–ಸಾಂಸ್ಕೃತಿಕ ಹಾಗೂ ಕೃಷಿ ಮತ್ತು ಕೈಗಾರಿಕಾ ಕ್ರಾಂತಿಯ ಬೀಜಗಳನ್ನು ಬಿತ್ತಿದರೆಂಬುದನ್ನು ನಿರೂಪಿಸಲಾಗಿದೆ. ಶಿಕ್ಷಣವು ಒಬ್ಬ ವ್ಯಕ್ತಿಯನ್ನು ಆನುವಂಶಿಕ ಕಸುಬಿನ ಬಗ್ಗೆ ಸಂಕೋಚವನ್ನಲ್ಲದೆ ಹೆಮ್ಮೆ ಮೂಡಿಸಬೇಕು. ಶಾಹು ಪ್ರತಿಯೊಂದು ಹಳ್ಳಿಯ ಶಾಲೆಯು ಒಂದು ತುಂಡುಭೂಮಿಯನ್ನು ಹೊಂದುವಂತೆ ಮಾಡಿದ್ದರು. ವಿದ್ಯಾರ್ಥಿಗಳು ಅದರಲ್ಲಿ ಕೆಲಸ ಮಾಡುತ್ತಿದ್ದರು ಮತ್ತು ಕೆಲಸದ ಘನತೆಯನ್ನು ಕಲಿಯುತ್ತಿದ್ದರು.[6] ವಿದ್ಯಾರ್ಥಿಗಳು ಶ್ರಮದ ಘನತೆಯನ್ನು ಅರಿಯದ ಹೊರತು ಅವರು ತಮ್ಮ ಕುಟುಂಬದ ಕಸುಬಿನ ಬಗ್ಗೆ ಹೆಮ್ಮೆಪಡಲಾರರು ಮತ್ತು ಅವರು ತಮ್ಮ ತಂದೆತಾಯಿಗಳಿಂದ ದೂರವಾಗುವರು ಎಂದು ಅವರ ನಂಬಿಕೆಯಾಗಿತ್ತು. ತನ್ನ ಸಂಸ್ಥಾನದ ಪ್ರಜೆಗಳಿಗೆ ಸವಲತ್ತನ್ನು ಒದಗಿಸುವ ಮೊದಲೇ ಶಾಹುರವರು ತೀಕ್ಷ್ಣವಾಗಿ ಸಾಮಾಜಿಕ ವಾಸ್ತವತೆಯನ್ನು ಅವಲೋಕನ ಮಾಡಿದ್ದರು.

ಇದು ಶಾಹುರವರ ಉನ್ನತ ಪ್ರಾಯೋಗಿಕ ಮನೋಭಾವದ ಬಗ್ಗೆ ಹೇಳುತ್ತದೆ. ಶಾಹುರವರು ವಿವಿಧ ವರ್ಗಗಳ ಮತ್ತು ಜಾತಿಗಳ ಹುಡುಗಿಯರ ಮತ್ತು ಹುಡುಗರ ವಿದ್ಯಾರ್ಥಿಗಳ ಸಂಖ್ಯೆಗಳ ಬಗ್ಗೆ ಜಾಗೃತವಾಗಿ ಪರಿಶೀಲಿಸಿ ಅವರ ಸಂಖ್ಯೆಗೆ ಅನುಗುಣವಾಗಿ ಯೋಜನೆಗಳನ್ನು ಪ್ರಸ್ತಾಪಿಸುತ್ತಿದ್ದರು. ಈ ಯೋಜನೆಗಳು (ಕಾರ್ಯಕ್ರಮಗಳು) ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣ, ವಿವಿಧ ಜಾತಿಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಪ್ರತ್ಯೇಕ ವಿದ್ಯಾರ್ಥಿ ನಿಲಯಗಳು, ವಿದ್ಯಾರ್ಥಿನಿಯರಿಗೆ ಮತ್ತು ಅಸ್ಪೃಶ್ಯ ಕುಟುಂಬಗಳಿಗೆ ವಿಶೇಷ ಶಾಲೆಗಳು ಇದರಲ್ಲಿ ಸೇರಿವೆ. ಇಡೀ ಭಾರತದಲ್ಲಿ ಕೊಲ್ಹಾಪುರ ಸಂಸ್ಥಾನವು ಒಂದು ವಿದ್ಯಾರ್ಥಿ ನಿಲಯಗಳ ನಗರ ಎಂಬ ಖ್ಯಾತಿಯನ್ನು ಪಡೆದಿತ್ತು.

ಅವರ ಸಮಕಾಲೀನರು ಶಾಹು ಛತ್ರಪತಿ ವಿವಿಧ ಜಾತಿಗಳಿಗೆ ಪ್ರತ್ಯೇಕ ವಿದ್ಯಾರ್ಥಿ ನಿಲಯಗಳನ್ನು ತೆರೆಯುವ ಮೂಲಕ ಜಾತಿಪದ್ಧತಿಯನ್ನು ಮತ್ತಷ್ಟು ಗಟ್ಟಿಗೊಳಿಸಿದ್ದಾರೆಂದು ಯಥಾಪ್ರಕಾರದ ಟೀಕೆಯನ್ನು ಅವರ ವಿರುದ್ಧ ಮಾಡಿದರು. ಅದೇ ಪ್ರತಿಧ್ವನಿಯ ಟೀಕೆಯನ್ನು ಇಂದು ಸಹ ಕೇಳುತ್ತಿದ್ದೇವೆ. ಈ ಕೆಳಗಿನ ಸಾಕ್ಷ್ಯ ತೋರಿಸುವಂತೆ ಈ ಆರೋಪ ಹುರುಳಿಲ್ಲದ್ದು. ಪ್ರಾರಂಭದಲ್ಲಿ ಶಾಹುರವರು ಎಲ್ಲಾ ಜಾತಿಗಳ ವಿದ್ಯಾರ್ಥಿಗಳ ಒಂದು ವಿದ್ಯಾರ್ಥಿ ನಿಲಯವನ್ನು ತೆರೆದರು. ಮತ್ತು ಅದರ ಉಸ್ತುವಾರಿಗಾಗಿ ಒಬ್ಬ ಬ್ರಾಹ್ಮಣ ಆಡಳಿತಗಾರನನ್ನು ನೇಮಿಸಿದರು. ಹತ್ತು ವರ್ಷಗಳ ನಂತರ ಬ್ರಾಹ್ಮಣ ವಿದ್ಯಾರ್ಥಿಗಳು ಮಾತ್ರ ವಿದ್ಯಾರ್ಥಿನಿಲಯದ ಸೌಲಭ್ಯವನ್ನು ಅನುಭವಿಸುತ್ತಿದ್ದಾರೆಂಬ ಸಂಗತಿ ಕಂಡುಬಂತು. ಅವರು ಅದನ್ನು ರದ್ದುಗೊಳಿಸಿದರು. ಆಗ ಅವರು ವಿವಿಧ ಜಾತಿಗಳಿಗೆ ಸೇರಿದ ಸಾಮಾಜಿಕ ಕಾರ್ಯಕರ್ತರನ್ನು ಸಂಪರ್ಕ

ಮಾಡಿದರು ಮತ್ತು ಜಾತಿ ಆಧಾರಿತ ವಿದ್ಯಾರ್ಥಿ ನಿಲಯಗಳನ್ನು ತೆರೆಯಲು ಮಾರ್ಗದರ್ಶನ ನೀಡಿದರು.[7] ಅವರು ಜಾತಿರಹಿತ ದೃಷ್ಟಿಕೋನವು ಒಂದು ಅನಿವಾರ್ಯ ಅನಿಷ್ಟವೆಂದು ಬಗೆದದ್ದು ಎಂಬ ಸಂಗತಿಗೆ ಇತಿಹಾಸವೇ ಸಾಕ್ಷಿಯಾಗಿದೆ.

ತಾವು ಒಂದು ಕಾಲಘಟ್ಟದಲ್ಲಿ ಸಾಂಪ್ರದಾಯಿಕ ಮತ್ತು ಯಥಾಸ್ಥಿತಿವಾದಿಯಾಗಿದ್ದರೆಂದು ಮತ್ತು ಜಾತಿಯ ಶ್ರೇಣಿಯ ವ್ಯವಸ್ಥೆಯಿರಬೇಕೆಂದು ಬಯಸಿದ್ದನ್ನು ಶಾಹು ಛತ್ರಪತಿಯವರು ಒಪ್ಪಿಕೊಂಡಿದ್ದಾರೆ. ಆದರೆ ಜಾತಿಯ ಶ್ರೇಣಿವ್ಯವಸ್ಥೆಯ ಬಗೆಗಿನ ತಮ್ಮ ಅಭಿಪ್ರಾಯಗಳು ಬದಲಾದವು ಎಂಬುದನ್ನು ಸಾಕಷ್ಟು ಸಾರಿ ಮತ್ತೆಮತ್ತೆ ಹೇಳಿದ್ದಾರೆ. ಅವರು ಜಾತಿಪದ್ಧತಿ ತೊಲಗಬೇಕೆಂಬ ನಿರ್ಧಾರಕ್ಕೆ ಬಂದುಬಿಟ್ಟರು. ಎಲ್ಲಿಯವರೆಗೆ ಜಾತಿಯ ಶ್ರೇಣೀಕರಣವಿರುವುದೋ ಅಲ್ಲಿಯವರೆಗೆ ಜಾತಿಯ ಸಂಘರ್ಷಗಳು ಮುಂದುವರಿಯುತ್ತವೆ ಮತ್ತು ಈ ಜಾತಿಯ ಸಂಘರ್ಷಗಳು ರಾಷ್ಟ್ರದ ಅಭಿವೃದ್ಧಿಯನ್ನು ತಡೆಯುತ್ತವೆ. ಜಾತಿಪದ್ಧತಿಯನ್ನು ಸಂಪೂರ್ಣವಾಗಿ ತೊಡೆದುಹಾಕಲು ಎಲ್ಲಾ ಹಿಂದುಳಿದ ವರ್ಗಗಳನ್ನು ಒಂದು ಜಾತಿಯೆಂದು ಪರಿಗಣಿಸುವುದು ಅತ್ಯವಶ್ಯವೆಂದು ಅವರು ಸಹ ಚಿಂತಿಸಿದ್ದರು. ಜಾತಿಯ ಅಡೆತಡೆಗಳನ್ನು ವಿಸರ್ಜಿಸಲು ಕ್ರಮಗಳನ್ನು ಕೈಗೊಳ್ಳುವಾಗ ನಾನಾ ಜಾತಿಗಳಲ್ಲಿಯೇ ಸಂಘರ್ಷಗಳನ್ನು ಪ್ರಾರಂಭಿಸಲು ಬಯಸಲಿಲ್ಲವೆಂದು ಅವರು ಘೋಷಿಸಿದ್ದಾರೆ. ಮೇಲುಜಾತಿಗಳಿಗೆ ಸೇರಿದ ಜನರು ಜಾತಿವ್ಯವಸ್ಥೆಯಲ್ಲಿ ತಮ್ಮ ಪಟ್ಟಭದ್ರ ಹಿತಾಸಕ್ತಿಗಳಿದ್ದುದರಿಂದ ಮತ್ತು ಜಾತಿಯ ಶ್ರೇಣೀಕರಣ ತಮ್ಮ ಸಾಮಾಜಿಕ ಪಾರಮ್ಯತೆ ಮತ್ತು ಘನತೆಗೌರವವನ್ನು ಕಾಪಾಡುವುದರಿಂದ ಅವರು ಜಾತಿವ್ಯವಸ್ಥೆಯನ್ನು ಬೆಂಬಲಿಸಿದರು. ಅವರಿಗೆ ಅದು ಸಾಮಾಜಿಕ ಸುಸ್ಥಿರತೆ ಮತ್ತು ಅಭಿವೃದ್ಧಿಯನ್ನು ಎತ್ತಿಹಿಡಿಯುವ ಸಹಜವಾದ ವಿಷಯ(ಸ್ಥಿತಿ)ವಾಗಿತ್ತು.

ಶಾಹುರವರು ಇದನ್ನು ಒಪ್ಪಲಿಲ್ಲ. ಭಾರತದಲ್ಲಲ್ಲದೆ ಜಾತಿಪದ್ಧತಿ ವಿಶ್ವದ ಯಾವ ಜಾಗದಲ್ಲೂ ಅಸ್ತಿತ್ವದಲ್ಲಿಲ್ಲ. ಆದ್ದರಿಂದ ಇದು 'ಸಹಜ ಸ್ಥಿತಿ' ಎಂದು ಹೇಳುವಂತಿಲ್ಲ. ಜಾತಿ ಆಧಾರದ ಮೇಲೆ ವಿದ್ಯಾರ್ಥಿ ನಿಲಯಗಳನ್ನು ತೆರೆಯುವುದು ಅಂತಿಮವಾಗಿ ಜಾತಿಯ ಅಡೆತಡೆಗಳನ್ನು ರದ್ದುಗೊಳಿಸುವುದಕ್ಕೆ ಕಾರಣವಾಗುತ್ತದೆ ಎಂದು ಅವರು ನಂಬಿದ್ದರು. ಪ್ರೊ. ಎನ್. ಆರ್. ಪಾಠಕ್ ಅವರ ಪ್ರಕಾರ ಜಾತಿಯ ಆಧಾರದ ಮೇಲೆ ವಿದ್ಯಾರ್ಥಿ ನಿಲಯಗಳನ್ನು ತೆರೆಯುವುದು ವೇದಾಂತದ ಚಿಂತನೆಗಳಿಗೆ ಹೊಂದಿಕೊಳ್ಳುತ್ತದೆ ಎಂದು ಶಾಹು ನಂಬಿದ್ದರು. ಆತ್ಮದ ಮನವರಿಕೆ ಮೊದಲು ಬರುತ್ತದೆ, ಆಮೇಲೆಯೇ ಮೋಕ್ಷ ಬರುವುದು; ಈ ನಂಬಿಕೆಯನ್ನೇ ವೇದಾಂತದ ತತ್ವವು ಒತ್ತಿಹೇಳುತ್ತದೆ. ಸಂತಕವಿ ತುಕಾರಾಮರು ಆತ್ಮ–ಮನವರಿಕೆಯು ಎಲ್ಲಾ ಸುಳ್ಳು–ತಾರತಮ್ಯತೆಗಳನ್ನು ಕೊನೆಗೊಳಿಸುತ್ತದೆಯೆಂದು ಹೇಳಿದ್ದಾರೆ. ಎಲ್ಲಾ ಜಾತಿಯ ಯುವಕರಲ್ಲಿ ವಿದ್ಯೆಯು ಜ್ಞಾನೋದಯವನ್ನು ಮೂಡಿಸುತ್ತದೆ, ಅದು ಅವರಿಗೆ ತಮ್ಮ ಗುರುತು ಕಂಡು ಸಹಾಯ ಮಾಡುತ್ತದೆ. ಮತ್ತು ಬದಲಿಗೆ ನಿಧಾನವಾಗಿ ಅವರ ಜಾತಿಗಳಲ್ಲಿರುವ ವಿಭಾಗಗಳನ್ನು ಕಡಿಮೆ ಮಾಡುತ್ತದೆ ಮತ್ತು ಅಂತಿಮವಾಗಿ ಏಕರೂಪದ ಸಾಮರಸ್ಯದ ಸಮಾಜ ಅಸ್ತಿತ್ವಕ್ಕೆ ಬರುವುದು ಎಂದು ಶಾಹು ನಂಬಿದ್ದರು.[8]

೧೯೨೦ರಲ್ಲಿ ನಾಸಿಕ್‌ನಲ್ಲಿ ಮರಾಠ ವಿದ್ಯಾರ್ಥಿನಿಲಯವನ್ನು ಉದ್ಘಾಟಿಸುತ್ತಾ ಶಾಹು ಮಹಾರಾಜರು ಮರಾಠರ ದೇಣಿಗೆಗಳಿಂದ ವಿದ್ಯಾರ್ಥಿನಿಲಯವನ್ನು ಕಟ್ಟಿದ್ದರೂ ಎಲ್ಲಾ ಜಾತಿಗಳ ವಿದ್ಯಾರ್ಥಿಗಳಿಗೆ ಇದರ ಬಾಗಿಲುಗಳನ್ನು ತೆರೆಯಲಾಗಿದೆ ಮತ್ತು ಇದರ ಸ್ಥಾಪಕರ ರಾಷ್ಟ್ರೀಯ ಮತ್ತು ಬಹಿರಂಗದ ದೃಷ್ಟಿಕೋನವನ್ನು ಈ ಸಂಗತಿ ಪ್ರತಿಬಿಂಬಿಸುತ್ತದೆ ಎಂದು ಹೇಳುತ್ತಾ ತಮ್ಮ ಸಂತೃಪ್ತಿಯನ್ನು ವ್ಯಕ್ತಪಡಿಸಿದ್ದರು. ಜಾತಿ ಆಧಾರಿತ ಜಾತಿ ಸಮ್ಮೇಳನಗಳನ್ನು ಸಂಘಟಿಸುವುದರಲ್ಲಿ ಯಾವ ಹಾನಿಯೂ ಇಲ್ಲ, ಆದರೆ ಅವರು ಜಾತಿರಹಿತ

ಸಮಾಜ ನಿರ್ಮಿಸಲು ಪ್ರಯತ್ನ ಬೇಕೆಂದು ಅವರು ಒತ್ತಿ ಹೇಳುತ್ತಿದ್ದರು. ಅವರು ಬಹುಬೇಗನೇ ಅಂತಹ ಜಾತಿ ಆಧಾರಿತ ಸಮ್ಮೇಳನಗಳ ಅಧ್ಯಕ್ಷ ಪದವಿಗಳನ್ನು ವಹಿಸಿಕೊಳ್ಳುವುದು ಜಾತೀಯತೆಯನ್ನು ಬಲಿಷ್ಠಗೊಳಿಸುತ್ತದೆಯೆಂದು ಮನವರಿಕೆಯಾದ ಕೂಡಲೇ ಅವರು ತಮ್ಮ ಜೀವನದ ಕೊನೆಯ ಘಟ್ಟದಲ್ಲಿ ಅಂತಹ ಸಮ್ಮೇಳನಗಳಿಂದ ಉದ್ದೇಶಪೂರ್ವಕವಾಗಿಯೇ ದೂರ ಉಳಿಯುತ್ತಿದ್ದರು.

ಹಲವಾರು ಜಾತಿಗಳ ಮುಂದುವರಿದ ಅಸ್ತಿತ್ವವು ಸಮಾಜದ ಪ್ರಗತಿಗೆ ಅಡ್ಡಿಯೆಂದು ಸ್ಪಷ್ಟವಾಗಿ ನಂಬಿದ್ದರಿಂದ ಜಾತಿಪದ್ಧತಿಯನ್ನು ರದ್ದುಗೊಳಿಸುವ ಪ್ರತಿಯೊಂದು ಪ್ರಯತ್ನಕ್ಕೂ ಶಾಹುರವರು ಸದಾ ಬೆಂಬಲ ನೀಡುತ್ತಿದ್ದರು. ಆದ್ದರಿಂದ ಜಾತಿಪದ್ಧತಿಯ ರದ್ದತಿಯು ರಾಷ್ಟ್ರದ ಸ್ವಾತಂತ್ರ್ಯಕ್ಕೆ ಪೂರ್ವ ಶರತ್ತಾಗಿತ್ತು.

ಜಾತಿಪದ್ಧತಿಯ ನಿವಾರಣೆಗೆ ಅವರ ಪ್ರಕಾರ ವಿಸ್ತೃತವಾದ ಅಂತರ್‌ಜಾತೀಯ ವಿವಾಹ ಪರಿಣಾಮಕಾರಿ ಮಾರ್ಗವಾಗಿತ್ತು.[9] ಶಾಹುರವರ ಪ್ರಕಾರ ಈ ಕಾಯ್ದೆ ಅಂತರ್‌ಜಾತೀಯ ವಿವಾಹವನ್ನು ಅಮಾನ್ಯಗೊಳಿಸುತ್ತದೆ ಮತ್ತು ಅಂತಹ ಮದುವೆಗಳಿಂದ ಹುಟ್ಟುವ ಮಕ್ಕಳು ತಮ್ಮ ಉತ್ತರಾಧಿಕಾರಿ ಹಕ್ಕುಗಳನ್ನು ಈ ಕಾಯಿದೆ ಕಿತ್ತುಕೊಳ್ಳುತ್ತದೆ. ವಿಠಲ್‌ಭಾಯಿ ಪಟೇಲರು ಕೇಂದ್ರೀಯ ಶಾಸನ ಪರಿಷತ್ತಿನಲ್ಲಿ ಅಂತರ್‌ಜಾತೀಯ ಮದುವೆಗಳನ್ನು ಕಾನೂನುಬದ್ಧಗೊಳಿಸುವ ಮಸೂದೆಯನ್ನು ಮಂಡಿಸಿದಾಗ ಶಾಹುರವರು ಸಾರ್ವಜನಿಕವಾಗಿ ಅದನ್ನು ಬೆಂಬಲಿಸಿದರು. ೧೯೧೭ರಲ್ಲಿ ಶಾಹುರವರು ಕೊಲ್ಹಾಪುರ ಸಂಸ್ಥಾನದೊಳಗೆ ಹಿಂದು-ಜೈನರ ಅಂತರಜಾತೀಯ ವಿವಾಹಗಳನ್ನು ಅಡ್ಡಿಪಡಿಸುವ ತಾಂತ್ರಿಕ ತೊಂದರೆಗಳನ್ನು ನಿವಾರಿಸಲು ಪುನರ್-ವಿವಾಹದ ಕಾಯ್ದೆಯನ್ನು ಪಾಸು ಮಾಡಿದರು. ಅವರು ಅಂತರಜಾತೀಯ ಮದುವೆಗಳನ್ನು ವ್ಯವಸ್ಥೆಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಮೇಲುಜಾತಿಗಳ ಜನರು ಜಾತಿಪದ್ಧತಿಯನ್ನು ನಿವಾರಿಸಲು ಮುಂಚೂಣಿಯ ಪಾತ್ರ ವಹಿಸಬೇಕು. ಹುಟ್ಟು ಆಧಾರಿತ ಜಾತಿಶ್ರೇಣೀಕರಣದ ವ್ಯವಸ್ಥೆಯಲ್ಲಿ ಮೇಲುಜಾತಿಗಳ ಜನರು ತಮ್ಮ ಪ್ರಮುಖ ಸ್ಥಾನಗಳನ್ನು ಬಿಟ್ಟುಕೊಟ್ಟರೆ ಜಾತಿಪದ್ಧತಿಯನ್ನು ರದ್ದುಗೊಳಿಸಬಹುದೆಂದು ಅವರು ಚಿಂತಿಸಿದ್ದರು.

ಶಾಹುರವರು ಅಸ್ಪೃಶ್ಯರ ಬಗೆಗಿನ ಧೋರಣೆಗಳ ನಿರ್ಧಾರಗಳು ಜಾತಿಪದ್ಧತಿಯನ್ನು ರದ್ದುಗೊಳಿಸುವ ಬಗ್ಗೆ ಹಾಗೂ ಸಾಮಾಜಿಕ ಅಂತರ್‌ಕ್ರಿಯೆಗಳ (ಒಡನಾಟ) ಬಗ್ಗೆ ಸಂಪುಟಗಟ್ಟಲೆ ಹೇಳುತ್ತವೆ. ಅವರು ಅಸ್ಪೃಶ್ಯರ ಕೆಳಅಂತಸ್ತನ್ನು ಸೂಚಿಸುವ ಸಂಪ್ರದಾಯದಿಂದ ಸ್ಥಾಪನೆಗೊಂಡಿದ್ದ ಕಠಿಣಸಂಹಿತೆಯನ್ನು ರದ್ದುಗೊಳಿಸಿದರು. ಅವರಿಗೆ ಎಲ್ಲಾ ಸಾರ್ವಜನಿಕ ಸ್ಥಳಗಳನ್ನು ತೆರೆಯಲಾಯಿತು. ಬಲೂತೆ ಪದ್ಧತಿಗೆ ಬದಲಾಗಿ ರೈತವಾರಿ ಪದ್ಧತಿಯ ಅಡಿಯಲ್ಲಿ ಅಸ್ಪೃಶ್ಯರಿಗೆ ಭೂಮಿಗಳನ್ನು ಅವರು ವರ್ಗಾಯಿಸಿದರು. ಅವಮಾನಗಳನ್ನು ಸುರಿಯುವ ಬದಲಿಗೆ ಅವರಿಗೆ ಮನುಷ್ಯರಿಗೆ ಸಹಜವಾಗಿರುವ ಎಲ್ಲಾ ಹಕ್ಕುಗಳನ್ನು ಪುನರ್‌ಸ್ಥಾಪಿಸಲಾಯಿತು. ಅವರಿಗೆ ಸಂಪ್ರದಾಯ ನಿರಾಕರಿಸಿದ್ದ ಕಸುಬುಗಳನ್ನು ಆಯ್ಕೆಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ನೀಡಲಾಯಿತು. ಅವರು ತಮ್ಮ ವ್ಯಾಪಾರ ಮತ್ತು ಕೈಗಾರಿಕೆಗಳನ್ನು ಸ್ಥಾಪಿಸಿಕೊಳ್ಳಲು ಸಹಾಯ ಮಾಡಲಾಯಿತು. ಅವರನ್ನು ಮಹರ್ ಮತ್ತು ವತನ ದಾಸ್ಯತ್ವದಿಂದ ಮುಕ್ತಗೊಳಿಸಲಾಯಿತು; (ಮಹರರು ಕೆಲವು ನಿರ್ದಿಷ್ಟ ಕೀಳುಕೆಲಸದ ಚಾಕರಿಗಳನ್ನು ಕಡ್ಡಾಯವಾಗಿ ಮತ್ತು ಅನುವಂಶಿಕವಾಗಿ ಮಾಡಬೇಕಾಗಿತ್ತು); ಅವರಲ್ಲಿ ಕೆಲವು ಅಸ್ಪೃಶ್ಯ ಯುವಕರನ್ನು ವಕೀಲರನ್ನಾಗಿ ಮತ್ತು ಕೆಲವರನ್ನು ಸರಕಾರಿ ಗುಮಾಸ್ತರನ್ನಾಗಿ ನೇಮಿಸಲಾಯಿತು. ಅವರಿಗೆ ಸರಕಾರಿ ಕೆಲಸಗಳಲ್ಲಿ ಶೇಕಡ ೫೦ರಷ್ಟು ಹುದ್ದೆಗಳನ್ನು ಮೀಸಲಿಡಲಾಯಿತು. ಅವರನ್ನು ಅಂಚೆಪೇದೆಗಳನ್ನಾಗಿ ನೇಮಕ ಮಾಡಲಾಯಿತು. ಅಸ್ಪೃಶ್ಯರು ಸ್ವತಃ ಕೀಳರಿಮೆಯನ್ನು ಬಿಡಬೇಕು, ಸಾಮಾಜಿಕ ಘನತೆ-ಗೌರವ ಗಳಿಸಬೇಕು, ಮತ್ತು ತಮ್ಮ ಹಕ್ಕುಗಳಿಗಾಗಿ

ಹೋರಾಡಲು ಸಮರ್ಥರಾಗಿರಬೇಕೆಂಬುದು ಶಾಹು ಅವರ ಕನಸಾಗಿತ್ತು. ಜೀವದ ಎಲ್ಲಾ ಮಾರ್ಗಗಳಲ್ಲಿ ಅವರಿಗೆ ಹುದ್ದೆಗಳನ್ನು ನೀಡುವ ಮೂಲಕ ಅವರು ಅಸ್ಪೃಶ್ಯರಲ್ಲಿ ಕೌಶಲ್ಯಗಳ್ನು ಹೆಚ್ಚಿಸುವುದು ಮತ್ತು ಸಾಮಾಜಿಕ ಸಾಮರಸ್ಯವನ್ನು ಸಾಧಿಸುವ ಎರಡು ಪ್ರಯೋಜನಗಳನ್ನು ನಿರೀಕ್ಷಿಸಿದ್ದರು. ಸಂಪ್ರದಾಯ ಅಸ್ಪೃಶ್ಯರಿಗೆ ನಿರಾಕರಿಸಿದ್ದ ಸಮಾರಂಭದ ಸಂದರ್ಭಗಳಲ್ಲಿ ಉಡುಪಿನ–ಕತ್ತಿಗಳನ್ನು ಧರಿಸುವ, ಕ್ಷತ್ರಿಯತ್ವದ ಚಿಹ್ನೆಯನ್ನು ಧರಿಸುವ ಹಕ್ಕನ್ನು ಅವರು ನೀಡಿದರು. ರಾಜಕುಮಾರರ ಮದುವೆಯ ಸಮಾರಂಭದಲ್ಲಿ ಬಂದ ಅತಿಥಿಗಳಿಗೆ ಊಟೋಪಚಾರ ನೀಡುವ ಅವಕಾಶವನ್ನು ಅಸ್ಪೃಶ್ಯರಿಗೆ ಶಾಹು ನೀಡಿದರು. ಅವರು ಅವರನ್ನು ತಮ್ಮ ವೈಯಕ್ತಿಕ ಕುದುರೆಗಾಡಿಗಳ ಕೋಚ್‌ಮನ್‌ಗಳನ್ನಾಗಿ ಮತ್ತು ಮಾವುತರನ್ನಾಗಿ ನೇಮಕ ಮಾಡಿಕೊಂಡರು. ಮುನಿಸಿಪಲ್ ಕಾರ್ಪೋರೇಶನ್ನಿನ ಸದಸ್ಯರಾಗುವುದಕ್ಕೆ ಅವಕಾಶ ಮಾಡಿಕೊಟ್ಟರು. ಈ ವರ್ಗಗಳ ಮಾನವ ಹಕ್ಕುಗಳನ್ನು ಉಲ್ಲಂಘಿಸಿದವರಿಗೆ ಕಠಿಣಶಿಕ್ಷೆ ನೀಡಲಾಯಿತು. ಅವರು ಈ ನೀತಿಯನ್ನು ಒಪ್ಪದಿದ್ದವರ ರಾಜೀನಾಮೆಗಳನ್ನು ಕೇಳಿದರು.

ಇಂಥದ್ದು ದೇಶದಲ್ಲಿ ಎಂದಿಗೂ ಮೊದಲು ಸಂಭವಿಸಿರಲಿಲ್ಲ. ಶಾಹು ಛತ್ರಪತಿಯವರು 'ಅಸ್ಪೃಶ್ಯರ ಏಳಿಗೆಯನ್ನು ಜಾರಿಗೊಳಿಸುವುದೇ ದೇಶಭಕ್ತಿ' ಎಂಬ ಒಳ್ನುಡಿಯನ್ನು ಬರೆಸಿದ ಏಕೈಕ ಸಾಮಂತರಾಜ ಶಾಹುರವರು. ಅವರು ಜಾಣತನದಿಂದ ಸಂಪ್ರದಾಯವನ್ನು ಆಧುನಿಕತೆಯನ್ನು ಹೇಗೆ ಬಳಸಿದ್ದರೆಂಬ ಒಂದು ನಿದರ್ಶನವನ್ನು ಈ ಕೆಳಗೆ ಕೊಡಲಾಗಿದೆ: ಅವರ ಕುದುರೆಲಾಯದಲ್ಲಿ ಮಹರ್‌ನವರಲ್ಲಿ ಒಬ್ಬನು ಭಜನೆಗಳನ್ನು ಹಾಡುತ್ತಿದ್ದನು. ಅವನನ್ನು ಅವರು ಅಸ್ಪೃಶ್ಯತೆಯನ್ನು ರದ್ದುಗೊಳಿಸುವ ಕೆಲಸಕ್ಕೆ ನಿಯಮಿಸಿದರು. ಸಾಮಾನ್ಯ ಕೆಲಸಗಳಿಂದ ಅವನನ್ನು ಮುಕ್ತಗೊಳಿಸಲಾಯಿತು. ಆದರೆ ಅವನ ಸಂಬಳ ಮುಂದುವರೆದಿತ್ತು. ಹೀಗೆ ಅವನ ಜೀವನದ ಎಲ್ಲಾ ಅವಶ್ಯಕತೆಗಳನ್ನು ಕೊರತೆಯಿಲ್ಲದಂತೆ ನೋಡಿಕೊಳ್ಳಲಾಗುತ್ತಿತ್ತು. ಅವನಿಗೆ ಎಲ್ಲರೂ ಹಾದುಹೋಗುವ ಒಂದು ರಸ್ತೆಯನ್ನು ನೀಡಲಾಯಿತು. ಈ ಸ್ಥಳವು ಗಾಂಜಾ ಸೇದುವ ಸ್ಥಳವಾಯಿತು. ಗಾಂಜಾ ಸೇದುವ ನಳಿಗೆ (ಪೈಪು) ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಹೋಗುತ್ತಿತ್ತು, ಅಸ್ಪೃಶ್ಯತೆಯ ಪರಿಕಲ್ಪನೆಗೆ ಭಾರಿ ಪೆಟ್ಟು ಬಿತ್ತು. ಶಾಹುಛತ್ರಪತಿಯವರು ಅಂತಹ ಜಾಣತನದ ಯೋಜನೆಗಳನ್ನು ಜಾರಿಗೊಳಿಸುತ್ತಿದ್ದರು.

ಶಾಹುರವರು ಅಂಥ ಯೋಜನೆಗಳ ಮಿತಿಯನ್ನು ಚೆನ್ನಾಗಿ ಅರಿತಿದ್ದರು. ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯನ್ನು ಅಳಿಸಿಹಾಕಲು ಕೊಲ್ಹಾಪುರದ ಸಾಮಂತ ಸಂಸ್ಥಾನವು ತೀವ್ರ ಮತ್ತು ವಿಸ್ತೃತ ಕೈಗಾರಿಕೀಕರಣಕ್ಕೆ ಒಳಗಾಗಬೇಕೆಂದು ಅವರು ಮನವರಿಕೆ ಮಾಡಿಕೊಂಡಿದ್ದರು. ವ್ಯಾಪಾರ ಮತ್ತು ವಾಣಿಜ್ಯ ಬೆಳೆಯಬೇಕು, ಆಧುನಿಕ ಮತ್ತು ಶೀಘ್ರಗತಿಯ ಸಾರಿಗೆಯನ್ನು ಬಳಸಬೇಕು, ಕೃಷಿಯ ಅಭಿವೃದ್ಧಿಯಾಗಬೇಕು ಮತ್ತು ಹಿಂದುಳಿದ ವರ್ಗಗಳು ಅಭಿವೃದ್ಧಿಹೊಂದಲು ಹೆಚ್ಚು ಅವಕಾಶಗಳು ಅವರಿಗೆ ಸಿಗಬೇಕು. ಇಂಗ್ಲೆಂಡಿನಲ್ಲಿ ಅವರು ಪ್ರವಾಸ ಮಾಡುವಾಗ ಅಲ್ಲಿ ನಡೆದಿದ್ದ ಕೈಗಾರಿಕಾ ಕ್ರಾಂತಿಯನ್ನು ನೋಡಿ ಹೆಚ್ಚು ಪ್ರಭಾವಿತರಾಗಿದ್ದರು ಮತ್ತು ಅವರು ಅದನ್ನು ತನ್ನ ಸಂಸ್ಥಾನದಲ್ಲಿ ತರಲು ಬಯಸಿದ್ದರು. ಆದರೆ ಅವರು ಇದಕ್ಕೂ ಮೊದಲು ಕೈಗಾರಿಕೀಕರಣದ ಮಹತ್ವವನ್ನು ಮನವರಿಕೆ ಮಾಡಿಕೊಂಡಿದ್ದರು. ಅವರು ಸಂಸ್ಥಾನದಲ್ಲಿ ಕೈಗಾರಿಕಾ ಸರ್ವೆಯನ್ನು ಮಾಡಿಸಿದ್ದರು. ಅವರ ಆಜ್ಞೆಯ ಮೇರೆಗೆ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿನ ಕೃಷಿ, ಶಿಕ್ಷಣ, ಸಾರಿಗೆ, ಸಣ್ಣ ಮತ್ತು ದೊಡ್ಡ ಕೈಗಾರಿಕೆಗಳು, ಗುಡಿಕೈಗಾರಿಕೆ, ಕೃಷಿ ಆಧಾರಿತ ಕೈಗಾರಿಕೆ ಮತ್ತು ಪ್ರಸ್ತುತ ಕೈಗಾರಿಕೆಯ ಸ್ಥಾನಮಾನದ ಬಗ್ಗೆ ಒಂದು ವರದಿ ತಯಾರು ಮಾಡಿ ಸಂಗ್ರಹಿಸಲಾಗಿತ್ತು. ಅವರ

ವಿದೇಶೀ ಪ್ರವಾಸದಲ್ಲಿನ ಅವಲೋಕನವು ಅವರಿಗೆ ಒಂದು ದೃಷ್ಟಿಕೋನವನ್ನು ನೀಡಿತು. ಸ್ಥಳೀಯ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಲು ಬಡರೈತರು ಮತ್ತು ಸಣ್ಣ ಪ್ರಮಾಣದ ಉತ್ಪಾದಕರು (ತಯಾರಕರು) ಬೆಳೆಯಲು ಉದ್ಯೋಗಗಳು ಹೆಚ್ಚಾಗಲು, ತೀವ್ರ ಕೈಗಾರಿಕೀಕರಣಕ್ಕಾಗಿ ಮೂಲಭೂತ ಸೌಕರ್ಯಗಳು ಲಭ್ಯವಾಗುವ ರೀತಿಯಲ್ಲಿ ಯೋಜನೆಯನ್ನು ಅವರು ರೂಪಿಸಿದ್ದರು. ಅವರು ಜಮೀನುದಾರರ ಪಿತ್ರಾರ್ಜಿತ ಆಸ್ತಿಗಳು ವಿಭಾಗ ಮಾಡುವಂತಹವಲ್ಲವೆಂದು ಭಾವಿಸಿದರು, ಮತ್ತು ಭೋಗಜೀವನದಿಂದ ಹೊರಬರುವಂತೆ, ಅವರನ್ನು ಕೈಗಾರಿಕೆಯ ಕಡೆಗೆ ತಿರುಗುವಂತೆ ಬಲವಂತಪಡಿಸಿದರು. ಬೇರೆ ಬೇರೆ ಸ್ಥಳಗಳಲ್ಲಿರುವ ಉತ್ಪಾದಕರಿಗೆ ಅವರು ಸಹಾಯ ಮಾಡಿದರು. ಅವರು ಕೊಲ್ಹಾಪುರದ ಸಂಸ್ಥಾನದ ಒಂದೇ ಸ್ಥಳದಲ್ಲಿ ಕೈಗಾರಿಕೆಗಳು ಸ್ಥಾಪನೆಗೊಳ್ಳದಂತೆ ಮತ್ತು ಅವುಗಳು ಸಂಸ್ಥಾನದ ಮೂಲೆ–ಮೂಲೆಗಳಿಗೆ ತಲುಪುವಂತೆ ನೋಡಿಕೊಂಡರು. ಶಾಹುಪುರಿ ಎಂಬ ಒಂದು ವಿಶೇಷ ಪಟ್ಟಣವನ್ನು ನಿರ್ಮಿಸಲಾಯಿತು. ಅದು ವ್ಯಾಪಾರಗಾರರಿಗೆ ವಿಶೇಷ ರಿಯಾಯಿತಿಗಳನ್ನು ನೀಡಿತು. ಇದರಿಂದ ಬೆಲ್ಲದ ವ್ಯಾಪಾರವು ಗಮನಾರ್ಹವಾಗಿ ಬೆಳೆಯಿತು.

ಛತ್ರಪತಿ ಶಾಹುರವರ ಪ್ರಕಾರ ಜನರ ಸಹಕಾರದಿಂದ ಮೂಡಿಬಂದ ಉಪಕ್ರಮವು ಸರಕಾರ ಕೈಗೊಂಡ ಕ್ರಮಗಳಿಗಿಂತ ಹೆಚ್ಚು ಮುಖ್ಯವಾದುದು. ಅವರು ಕೈಗಾರಿಕೀಕರಣದ ಹೆಚ್ಚಿನ ಹೊರೆಯನ್ನು ಸರಕಾರಿ ಯಂತ್ರಕ್ಕೆ ವಹಿಸಿ ಹೆಚ್ಚಿನ ಹೊರೆಯನ್ನಾಗಿ ಮಾಡಲು ಬಯಸುತ್ತಿರಲಿಲ್ಲ, ಆದರೆ ಅದೇ ಸಮಯದಲ್ಲಿ ಲಕ್ಷಾಧಿಪತಿಗಳ ಮತ್ತು ಬಂಡವಾಳಶಾಹಿಗಳ ಕೈಗೆ ಕೈಗಾರಿಕೀಕರಣ ಹೋಗದಂತೆ ಬಯಸಿದ್ದರು. ಅವರು ೧೯೨೧ರಲ್ಲಿ ಸಹಕಾರಿ ಕಾಯ್ದೆಯನ್ನು ಪಾಸು ಮಾಡಿದರು ಮತ್ತು ಸಹಕಾರಿ ಆಂದೋಲನಕ್ಕೆ ಉತ್ತೇಜನ ನೀಡಿದರು. ಭಾರತದ ಸಹಕಾರಿ ಆಂದೋಲನದಲ್ಲಿ ಕೊಲ್ಹಾಪುರವು ಇಂದೂ ಸಹ ನಾಯಕಸ್ಥಾನದಲ್ಲಿದೆ. ಶಾಹುಛತ್ರಪತಿಗಳಿಗೆ ತುಂಬಾ ಕೃತಜ್ಞತೆಗಳು. ಶಾಹುರವರ ಸಹಕಾರಿ ಧೋರಣೆಯು ಕೃಷಿಯಲ್ಲಿರುವ ಸ್ಥಗಿತತೆಯನ್ನು ನಿವಾರಿಸುವ ಮತ್ತು ಪಾಕ್ಷಿಕವಾಗಿ ಕನಿಷ್ಠಪಕ್ಷ ಗ್ರಾಮೀಣ ಬಡತನವನ್ನು ನಿರ್ಮೂಲನೆ ಮಾಡುವ ಗುರಿಯನ್ನು ಹೊಂದಿತ್ತು. ಇಂದಿನ ಹಸಿರುಕ್ರಾಂತಿಯ ಹಲವಾರು ಯೋಜನೆಗಳು ಅವರಿಂದ ಪ್ರಾರಂಭಿಸಿದವೇ ಆಗಿವೆ. ಇದು ಅವರ ಮುನ್ನೋಟದ ಬಗ್ಗೆ ಸಂಪುಟಗಟ್ಟಲೆ ಹೇಳುತ್ತದೆ.

ಶಾಹುರವರ ಸಮಾಜವಾದಿ ಒಲವುಗಳು ಅವರ ಕಾರ್ಮಿಕ ಧೋರಣೆಯಲ್ಲಿ ಪ್ರತಿಬಿಂಬಿತವಾಗಿವೆ. ಇಂಗ್ಲೆಂಡಿನಲ್ಲಿರುವಂತಹ ಕಾರ್ಮಿಕ ಸಂಘಟನೆಗಳನ್ನು ಭಾರತದಲ್ಲಿ ರಚನೆ ಮಾಡಬೇಕು ಮತ್ತು ಅವು ಕಾರ್ಮಿಕ ಹಕ್ಕುಗಳಿಗೆ ಹೋರಾಡಬೇಕು. ಬ್ರಾಹ್ಮಣ ಮತ್ತು ವೈಶ್ಯ ಜಾತಿಗಳ ಜನರಿಂದ ಸ್ಥಳೀಯ ಬಂಡವಾಳವಾದಿಗಳಾಗಿದ್ದರೆಂಬುದು ಅವರಿಗೆ ಖಾತರಿಯಾಗಿತ್ತು. ಅವರ ಮೇಲೆ ಅಡೆತಡೆಗಳನ್ನು ವಿಧಿಸದಿದ್ದರೆ ಕಾರ್ಮಿಕರ ಪ್ರಗತಿ ಸಾಧ್ಯವಿಲ್ಲ.[9] ಇಂಗ್ಲೆಂಡಿನಲ್ಲಿ ಲೇಬರ್(ಕಾರ್ಮಿಕ) ಪಕ್ಷ ಅಧಿಕಾರಕ್ಕೆ ಬಂದಾಗ ಅವರು ಸಂತೋಷಗೊಂಡಿದ್ದರು. ಕಾರ್ಮಿಕರ ಸಬಲೀಕರಣವು, ಕಾರ್ಮಿಕರು ರಾಜಕೀಯ ಅಧಿಕಾರಗಳನ್ನು ಪಡೆಯುವಂತೆ ಮಾಡುವುದು ಎಂಬ ಕನಸನ್ನು ಅವರು ಕಂಡಿದ್ದರು. ಅವರು ಕಾರ್ಮಿಕ ನಾಯಕ ಸಿ. ಕೆ. ಬೋಲೆಯವರು ಸ್ಥಾಪಿಸಿದ ಲೋಕಸಂಘ(ಜನರ ಸಂಘಗಳು)ಕ್ಕೆ ಬೆಂಬಲ ನೀಡಿದ್ದರು.

ಅನುವಂಶಿಕ ಜಾತಿಯ ಮಾನ್ಯತೆ ಪಡೆದ ಗುಂಪುಗಳಿಂದ ಹೆಚ್ಚಿಗೆ ಆಧುನಿಕ ವಿಷಯಗಳನ್ನು ಆಧರಿಸಿದ ಸಂಘಟನೆಗಳಿಗೆ ಶಾಹು ಛತ್ರಪತಿಯವರು ಯಾವಾಗಲೂ ಸಹಾಯ ಮಾಡುತ್ತಿದ್ದರು. ಬ್ರಿಟಿಷ್ ಆಡಳಿತವು ಭಾರತದಲ್ಲಿ ಪುನರುಜ್ಜೀವನ(ನವೋದಯ)ವನ್ನು ತಂದಿತು. ಅದರಿಂದಾಗಿ ಆಧುನಿಕ ಸಂಸ್ಥೆಗಳು

ಮತ್ತು ಸಂಘಟನೆಗಳು ರೂಪುಗೊಂಡವು ಎಂದು ಅವರು ಬ್ರಿಟಿಷ್ ಸರಕಾರಕ್ಕೆ ಕೃತಜ್ಞರಾಗಿದ್ದರು. ಸಂಪ್ರದಾಯದ ಕಟ್ಟಡದ ಮೇಲೆ ನಿಂತಿರುವ ಗುಂಪುಗಳು (ಸಮೂಹ) ತಮ್ಮ ಪರಂಪರೆ ಮತ್ತು ಗತದ ಬಗ್ಗೆ ಹೆಮ್ಮೆಪಡಬಹುದು, ಆದರೆ ಅವು ಯಾವುದೇ ಸಂದರ್ಭದಲ್ಲಿ ವರ್ತಮಾನ ಮತ್ತು ಭವಿಷ್ಯದ ದೃಷ್ಟಿಯನ್ನು ಕಳೆದುಕೊಳ್ಳಬಾರದು. ಕೊಲ್ಹಾಪುರದಲ್ಲಿ ಜೈನ ವಿದ್ಯಾರ್ಥಿ ನಿಲಯವನ್ನು ಉದ್ಘಾಟಿಸುತ್ತ ಅವರು ಆಧುನಿಕತೆಯ ಮೇಲೆ ಆಧರಿತಗೊಂಡ ಸಂಘಟನೆಗಳ ಮಹತ್ವವನ್ನು ಹೊಗಳಿದ್ದು ಮಾತ್ರವಲ್ಲದೆ, ಜೈನರ ಶ್ರೀಮಂತ ಪ್ರಾಚೀನ ಪರಂಪರೆಯನ್ನು ಅವರು ನೆನಪಿಸಿದರು.[10] ಮೇಲುಜಾತಿಯಲ್ಲಿ ಹುಟ್ಟಿದ್ದಾರೆ ಎಂಬುದಕ್ಕಿಂತ ಪ್ರತಿಭೆಯ ಆಧಾರದ ಮೇಲೆ ಸಾಮಾಜಿಕ ಅಂತಸ್ತು ಮತ್ತು ಸ್ಥಾನಮಾನವನ್ನು ಹಂಚುವುದಕ್ಕಾಗಿ ಸರಕಾರಿ ಆಡಳಿತದಲ್ಲಿ ಅವರು ಬದಲಾವಣೆ ಮಾಡಿದರು; ಹೀಗೆ ಅವರು ಆಧುನಿಕತೆಯ ತತ್ವವನ್ನು ಅಮಲಿನಲ್ಲಿ ತಂದರು. ಆಡಳಿತವು ಹೆಚ್ಚು ನೌಕರಶಾಹಿಯಾಗಬಾರದೆಂಬ ಅವರ ಒತ್ತಾಯ; ಅದು ಯಥಾಕಥಿತ ಮೇಲುಜಾತಿಗಳ ಪ್ರಾಬಲ್ಯ ಹೊಂದಿರಬಾರದು, ಆಡಳಿತವು ಸಾರ್ವಜನಿಕ ಅಭಿಪ್ರಾಯಕ್ಕೆ ಸ್ಪಂದಿಸಬೇಕು, ಮತ್ತು ಆಡಳಿತದ ಪಾವಿತ್ರ್ಯವನ್ನು ಎಲ್ಲಾ ದೃಷ್ಟಿಯಿಂದ ಎತ್ತಿಹಿಡಿಯಬೇಕು. ಇವೆಲ್ಲವೂ ಶಾಹುಛತ್ರಪತಿಯವರ ಆಧುನಿಕ ದೃಷ್ಟಿಕೋನವನ್ನು ಕುರಿತು ಹೇಳುತ್ತವೆ.

ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಪರಸ್ಪರ ಅವಲಂಬನೆ ಮತ್ತು ನಿರಂತರತೆಯ ಬಗ್ಗೆ ಅವರು ಜಾಗೃತರಾಗಿದ್ದರಿಂದ ಶಾಹುಛತ್ರಪತಿಯುವರು ಸಂಪ್ರದಾಯದ ಬಗ್ಗೆ ಎಂದಿಗೂ ತಿರಸ್ಕಾರಭಾವದಿಂದಿರಲಿಲ್ಲ. ಪ್ರತಿಯಾಗಿ ಸಂಪ್ರದಾಯದಲ್ಲಿ ನಿಹಿತವಾಗಿದ್ದ ಚಲನಶೀಲತೆಯನ್ನು ಗುರುತಿಸಿದರು ಮತ್ತು ಆಧುನಿಕತೆಯ ಸದುದ್ದೇಶಕ್ಕಾಗಿ ಅದನ್ನು ಬಳಸುವ ಗುರಿಯನ್ನು ಹೊಂದಿದ್ದರು. ಅವರು ಸತ್ಯಶೋಧಕ ಆಂದೋಲನವನ್ನು ರಾಜಕೀಯ ಕಾರಣಗಳಿಂದ ಬೆಂಬಲಿಸಿ ಅವರಿಗೆ ಹಣಕಾಸಿನ ಸಹಾಯ ನೀಡಿದರು. ಆದರೆ ಅದು ಮುಲಾಜಿಲ್ಲದೆ ಸಂಪ್ರದಾಯವನ್ನು ನಿರಾಕರಿಸಿ ಪ್ರಚಾರ ಮಾಡಿದ್ದರಿಂದ ಜನರು ಅದನ್ನು ಒಪ್ಪಲಿಲ್ಲವಾದ್ದರಿಂದ ಅಂತಹ ಆಂದೋಲನಗಳು ಜನಪ್ರಿಯ ಬೆಂಬಲದೊಂದಿಗೆ ಬೆಳೆಯಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವರು ತಾವು ಸತ್ಯಶೋಧಕರಲ್ಲ ಎಂದು ಘೋಷಿಸಿದರು. 'ಮುಯ್ಯಿಗೆ ಮುಯ್ಯಿ' ಎಂಬ ತತ್ವವು ಜ್ವಲಂತ ದ್ವೇಷವನ್ನು ಹುಟ್ಟುಹಾಕುತ್ತದೆ. ಆದರೆ ಸಮಾಜವು ಇಡಿಯಾಗಿ ತನ್ನ ಉದ್ದೇಶ ಸಾಧನೆಗೆ ಮುಂದೆ ಹೋಗಲು ಅಸಮರ್ಥವಾಗುತ್ತದೆ. ಅವರು ಇದನ್ನು ತಪ್ಪಿಸಲು ಬಯಸಿದ್ದರು. ಏಕೆಂದರೆ ಅವರು ಈ ಎರಡರ ವ್ಯತ್ಯಾಸವನ್ನು ಕಂಡುಕೊಳ್ಳುವುದರಲ್ಲಿ ಸಮರ್ಥರಾಗಿದ್ದರು. ಅವರು ಪ್ರತಿನಿಧಿಸಲು ಬಂದಿದ್ದರು. ನ್ಯಾಯಮೂರ್ತಿ ವೈದ್ಯರನ್ನು ಉದ್ಧರಿಸಿ ಹೇಳುವುದಾದರೆ: "ಅವರು ಇಡೀ ಆಧುನಿಕ ಭಾರತವನ್ನು ಪ್ರತಿನಿಧಿಸಲು ಬಂದಿದ್ದರು. ಅವರು ಬರೀ ಬ್ರಾಹ್ಮಣರನ್ನು, ಕ್ಷತ್ರಿಯರನ್ನು, ವೈಶ್ಯರನ್ನು, ಶೂದ್ರರನ್ನು ಅಥವಾ ಅತಿಶೂದ್ರರನ್ನು ಮೀರಿ ಆಚೆಗೆ ಹೋಗಿದ್ದರು. ಆದರೆ ಅವರು ಎಲ್ಲಾ ಭೌಗೋಳಿಕ ಘಟಕಗಳು, ಅದರ ಎಲ್ಲಾ ಜಾತಿಗಳು, ಪಂಥಗಳು, ಧರ್ಮಗಳು ಮತ್ತು ಸಣ್ಣ ಅಥವಾ ದೊಡ್ಡ ಎಲ್ಲಾ ಜನರ, ಇಡೀ ರಾಷ್ಟ್ರದ ಸಮಗ್ರ ಧ್ವನಿಯಾಗಿದ್ದರು.

---

## ಆಧಾರಗ್ರಂಥಗಳು


1. Y. D. Phadke: Shahu Chhatrapati and Lokamanya, Pune, 1986, p. 58.
2. Dhananjay Keer: Preshit Rajarshi Shahu Chhatrapati, Shri Shahu Lecture Series, Mar. 1970, Pub. by Shivaji University, Kolhapur 1970, p. 70.
3. Dr. Bhosale S. S: A Royal Philosopher Speaks, Kolhapur, 1975, p. 60.
4. Ibid., p. 40.
5. V. B. Ghuge: Chhatrapati Shahu, Socialist Economic Policies: 1984-1922, 1975, p. 79.
6. A Royal Philosopher Speaks, p. 22.
7. Preshit Rajarshi Shahu Chhatrapati, p. 15.
8. N. R. Pathak: Shri Shahu Chhatrapati Enlightenment on Social Reforms, Shri Shahu Lecture Series, 1972, Shivaji University, Publication 1973, p. 38.
9. Preshit Rajarshi Shahu Chhatrapati, p. 29.
10. A Royal Philosopher Speaks, p. 10.
11. G. N. Vaidya: Shahu Chhatrapati: A Ruler and A Revolutionary, Shahu Lecture Series, 1973, Shivaji University, Kolhapur, 1974, p. 53.


---

೧೪

# ಛತ್ರಪತಿ ಶಾಹು ಮತ್ತು ವೈಜ್ಞಾನಿಕ ಮನೋಭಾವ

– ಪ್ರೊ. ಕಮಲಾಕರ ದೀಕ್ಷಿತ
*ವಿಮರ್ಶಕ ಮತ್ತು ಸಿದ್ಧಾಂತಿ*

**ಶಾ**ಹುರವರು ೨೮ ವರ್ಷಗಳ ಕಾಲ ರಾಜ್ಯಭಾರ ಮಾಡಿದರು. ಈ ಕಾಲದಲ್ಲಿ ಅವರು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ವೈಯಕ್ತಿಕ ಸ್ವಭಾವದ ಜೊತೆಗೆ ಕುಟುಂಬಕ್ಕೆ ಸಂಬಂಧಿಸಿದಂತೆ ಹಲವಾರು ನಿರ್ಣಯಗಳನ್ನು ಮಾಡಿದ್ದಾರೆ. ಪ್ರಸ್ತುತ ಈ ಲೇಖನದಲ್ಲಿ ನಾನು ಅವರು ತೆಗೆದುಕೊಂಡ ನಿರ್ಧಾರಗಳ ಚೌಕಟ್ಟಿನ ಉಲ್ಲೇಖ (ಆಧಾರಗಳು)ಗಳನ್ನು ಮತ್ತು ಅವುಗಳ ವೈಜ್ಞಾನಿಕ ಮನೋಭಾವದ ಆಧಾರದ ಮೇಲೆ ರೂಪುಗೊಂಡಿವೆಯೆಂಬುದನ್ನು ಪರಿಶೀಲಿಸುವೆನು.

ಮೊದಲಿಗೆ ವೈಜ್ಞಾನಿಕ ಮನೋಭಾವವೆಂದರೇನು ಎಂಬುದನ್ನು ಪರಿಶೀಲಿಸೋಣ.

### ವೈಜ್ಞಾನಿಕ ಮನೋಭಾವ ಎಂದರೇನು?

ವಿಶ್ವದ ಇತಿಹಾಸವನ್ನು ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕವೆಂದು ಮೂರು ಯುಗಗಳಲ್ಲಿ ವಿಭಾಗ ಮಾಡಲಾಗಿದೆ. ಪ್ರಾಚೀನಕಾಲದಲ್ಲಿ ಮಾನವ ಜನಾಂಗದ ಪ್ರಗತಿಯು ಒಂದೇ ಗತಿಯಲ್ಲಿತ್ತು. ಆದರೆ ಆಧುನಿಕ ಕಾಲದಲ್ಲಿ ಅಭಿವೃದ್ಧಿಗತಿಯು ಶೀಘ್ರಗೊಂಡಿತು. ಆದರೆ ಕ್ರಿ. ಶ.೫೦೦ ರಿಂದ ಕ್ರಿ. ಶ. ೧೫೦೦ರವರೆಗಿನ ಒಂದು ಸಾವಿರ ವರ್ಷಗಳು ಇದಕ್ಕೆ ಹಿಡಿಸಿತು. ಮಧ್ಯಕಾಲೀನ ಅವಧಿಯಲ್ಲಿ ವಿಶ್ವದ ಅಭಿವೃದ್ಧಿಯು ಒಂದು ಸ್ಥಗಿತಕ್ಕೆ ಬಂದು ನಿಂತಿತು. ಅದಕ್ಕೆ ಕಾರಣಗಳೇನು ಎಂಬ ಸಂಗತಿಯು ಈ ಲೇಖನದ ವ್ಯಾಪ್ತಿಗೆ ಬರುವುದಿಲ್ಲ.

ಆಧುನಿಕ ಯುಗವು ಮಧ್ಯಕಾಲೀನ ಯುಗಗಳಿಗೆ ಉತ್ತರಾಧಿಕಾರಿ. ಜ್ಞಾನೋದಯದ ಹರವು ಮಧ್ಯಕಾಲೀನದ ಕಗ್ಗತ್ತಲನ್ನು ಹೊಡೆದೋಡಿಸಲು ಸುಮಾರು ೩೫೦ ವರ್ಷಗಳ ಹಿಂದೆ ಪ್ರಾರಂಭವಾಯಿತು. ಬೌದ್ಧಿಕ ಮತ್ತು ಭೌತಿಕ ಪ್ರಗತಿ ಈ ಕಾಲದಲ್ಲಿ ಗಳಿಸಿದ್ದು ಸ್ಪಷ್ಟವಾಗಿ ಕಾಣುತ್ತಿದೆ. ಇಂದಿಗೂ ಇರುವ ವೈಜ್ಞಾನಿಕ ಮನೋಭಾವದಿಂದ ಈ ಎಲ್ಲವನ್ನೂ ಸಾಧಿಸಲಾಯಿತು.

ಮೇಲೆ ಹೇಳಿದ ವೈಜ್ಞಾನಿಕ ಮನೋಭಾವವು ಮುಖ್ಯವಾಗಿ ಅರಿಸ್ಟಾಟಲರು (ಕ್ರಿ.ಪೂ. ೩೮೪ರಿಂದ ಕ್ರಿ.ಪೂ. ೩೨೨) ಮತ್ತು ಫ್ರಾನ್ಸಿಸ್ ಬೇಕನ್ (ಕ್ರಿ.ಶ. ೧೫೬೧–ಕ್ರಿ.ಶ.೧೬೨೮) ಅವರು ಪರಿಚಯಿಸಿದ ತರ್ಕದ ವಿಧಾನಗಳನ್ನು ಆಧರಿಸಿದೆ. ಗ್ರೀಕ್ ತತ್ವಜ್ಞಾನಿಯಾದ ಅರಿಸ್ಟಾಟಲರು ತರ್ಕದಲ್ಲಿ ನಿಗಮನದ (Deductive) ವಿಧಾನವನ್ನು ಕಂಡುಹಿಡಿದರೆ ಬ್ರಿಟಿಷ್ ಚಿಂತಕ ಫ್ರಾನ್ಸಿಸ್ ಬೇಕನ್‌ರು ವಿಶ್ವಕ್ಕೆ ಅನುಗಮನದ (Inductive) ತರ್ಕವನ್ನು ತೋರಿಸಿಕೊಟ್ಟರು.

ಅರಿಸ್ಟಾಟಲರು ನಿರೂಪಿಸಿದ ನಿಗಮನದ ತರ್ಕವು (ವಿಧಾನ) ಈಗಾಗಲೇ ಗೊತ್ತಿರುವ ಸುತ್ತಮುತ್ತಲಿನ ವಿಶ್ವವನ್ನು ವರ್ಗೀಕರಿಸುವುದಕ್ಕೆ ಉಪಯೋಗಕರವಾಗಿದೆ. ನಿಗಮನದ ತರ್ಕವನ್ನು ಒಂದು ನಿರ್ದಿಷ್ಟ ನಿದರ್ಶನಕ್ಕೆ ಅನ್ವಯಿಸಲು ಒಂದು ಸಾಮಾನ್ಯ ತತ್ವವನ್ನು (ನಿಯಮ) ಬಳಸಲಾಗುತ್ತದೆ. ಆದರೆ ಅರಿಸ್ಟಾಟಲರ ನಿಗಮನದ ತರ್ಕವು ಹೊಸ ಜ್ಞಾನವನ್ನು ಮನುಷ್ಯ ಗಳಿಸುವುದಕ್ಕೆ ಸಹಾಯ ಮಾಡಲಾರದು. ೧೬ನೇ ಶತಮಾನದಲ್ಲಿ ಫ್ರಾನ್ಸಿಸ್ ಬೇಕನ್‌ರು ಅನುಗಮನದ ತರ್ಕವನ್ನು ಪರಿಚಯಿಸಿ ಹಲವಾರು ಹೊಸ ಸಂಶೋಧನೆಗಳಿಗೆ ಅನುಕೂಲ ಕಲ್ಪಿಸಿಕೊಡುವವರೆಗೆ ಈ ಕೊರತೆ ಸುಮಾರು ಎರಡು ಸಾವಿರ ವರ್ಷಗಳವರೆಗೆ ಇದ್ದೇ ಇತ್ತು.

ಬೇಕನ್ನರ ತರ್ಕಕ್ಕೆ ಅವಲೋಕನ (ವೀಕ್ಷಣೆ), ಊಹೆ, ಪರೀಕ್ಷೆ ಮತ್ತು ಪ್ರಮೇಯೀಕರಣ ಎಂಬ ನಾಲ್ಕು ಹಂತಗಳಿವೆ. ಯಾರಾದರೂ ಒಂದು ಸಮಸ್ಯೆಯನ್ನು ಎದುರಿಸುವಾಗ ಪರಿಸ್ಥಿತಿಯನ್ನು ಅವಲೋಕಿಸಬೇಕು. ಅವಲೋಕನವು ಸಮಸ್ಯೆಗೆ ಇರಬಹುದಾದ ಕಾರಣಗಳನ್ನು ಗ್ರಹಿಸುತ್ತದೆ. ಅದು ಬದಲಿಗೆ ಊಹೆಗಳನ್ನು ರೂಪಿಸುವುದಕ್ಕೆ ಸಹಾಯ ಮಾಡುತ್ತದೆ. ಊಹೆಯನ್ನು ಪರೀಕ್ಷೆ (ತಾಳೆನೋಡು) ಮಾಡಬೇಕಾಗುತ್ತದೆ. ಊಹೆಯ ನಿಖರತೆ ಪ್ರಯೋಗಗಳಲ್ಲಿ ರುಜುವಾತಾದರೆ ಅದು ಒಂದು ಸಿದ್ಧಾಂತವಾಗುತ್ತದೆ. ಆದರೆ ಊಹೆಯ ನಿಖರತೆಯು ಸಾಧಿತವಾಗದಿದ್ದರೆ ಅದನ್ನು ಮಾರ್ಪಡಿಸಬೇಕಾಗುತ್ತದೆ ಅಥವಾ ಪುನರ್‌ರೂಪಿಸಬೇಕಾಗುತ್ತದೆ; ಅದರ ನಿಖರತೆಯನ್ನು ಮತ್ತೆ ರುಜುವಾತುಗೊಳಿಸಬೇಕಾಗುತ್ತದೆ. ಈ ಪ್ರಕ್ರಿಯೆಯು ಪ್ರಯೋಗಗಳ ಆಧಾರದ ಮೇರೆಗೆ ಊಹೆ ಸಾಧಿತವಾಗುವವರೆಗೆ ಮುದುವರಿಯುತ್ತದೆ. ಕೆಲವೊಮ್ಮೆ ಈ ಪ್ರಕ್ರಿಯೆ ಹಲವಾರು ವರ್ಷಗಳವರೆಗೆ ಸಾಗುತ್ತದೆ. ಚಾರ್ಲ್ಸ್ ಡಾರ್ವಿನ್ನರು, ವಿಕಾಸವಾದದ ಸಿದ್ಧಾಂತವನ್ನು ಕಂಡುಹಿಡಿಯುವವರೆಗೆ ೪೦ ವರ್ಷಗಳ ಕಾಲ ಸಂಶೋಧನೆಯನ್ನು ನಡೆಸುತ್ತಿದ್ದರು.[1]

ಕಳೆದ ಎರಡು ಶತಮಾನಗಳಲ್ಲಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಔಷಧಿ, ಮನಃಶಾಸ್ತ್ರ, ಜೀವಶಾಸ್ತ್ರ, ಸಸ್ಯಶಾಸ್ತ್ರ ಮೊದಲಾದ ಕ್ಷೇತ್ರಗಳಲ್ಲಿ ನಡೆದ ಹಲವಾರು ಮುಖ್ಯ ಶೋಧನೆಗಳನ್ನು ಈ ವೈಜ್ಞಾನಿಕ ಮನೋಭಾವಕ್ಕೆ ಸೇರಿದ್ದೆಂದು ಹೇಳಬಹುದು. ಆದರೆ ಸಾಮಾಜಿಕ ಮತ್ತು ವರ್ತನಾ ಶಾಸ್ತ್ರಗಳ ಕ್ಷೇತ್ರಗಳಲ್ಲಿ ಅಂತಹ ಸಂಶೋಧನೆಗಳು ನಡೆದಿಲ್ಲವೆಂಬುದನ್ನು ಗಮನಿಸಬೇಕಾಗಿದೆ.

ಭೌತಶಾಸ್ತ್ರದಲ್ಲಿ ಗುಣಾತ್ಮಕ ಮತ್ತು ಪ್ರಮಾಣಾತ್ಮಕ ಮಟ್ಟಗಳಲ್ಲಿ ಮಹಾ ಸಂಶೋಧನೆಗಳು ನಡೆದಿವೆ. ಭೌತಶಾಸ್ತ್ರವು ಭೌತಿಕ ಜಗತ್ತಿನ ಸ್ವಭಾವವನ್ನು ಅರಿಯಲು ಉದ್ದೇಶಿಸುತ್ತದೆ. ಈ ಉದ್ದೇಶದಿಂದಲೇ ಸಂಶೋಧನೆಗಳನ್ನು ನಡೆಸಲಾಗುವುದು; ಅಂಥ ಸಂಶೋಧನೆಗಳನ್ನು ಇನ್ನೂ ಅತಿ ಸೂಕ್ಷ್ಮ ಮತ್ತು ದೊಡ್ಡ ಪ್ರಮಾಣದ ಮಟ್ಟಗಳಲ್ಲಿ ಮಾಡಲಾಗುತ್ತಿದೆ. ಈ ಪರಿಣಾಮಗಳು ಟೈಕೋ ಬ್ರಾಹಿ, ಕ್ಯಾಪಲ್ಲರ್, ಗೆಲಿಲಿಯೋ, ನ್ಯೂಟನ್, ಐನ್‌ಸ್ಟೀನ್ ಮೊದಲಾದ ವಿಜ್ಞಾನಿಗಳು ಮಾಡಿದ ಶೋಧನೆಗಳಲ್ಲಿ ಪರಿಣಮಿಸಿವೆ.

ವೈಜ್ಞಾನಿಕ ಮನೋಭಾವವು ಭೌತಶಾಸ್ತ್ರದಲ್ಲಿ ಗಮನಾರ್ಹವಾದ ಪ್ರಗತಿ ಸಾಧಿಸಲು ಸಹಾಯ ಮಾಡಿದೆ. ಈ ವೈಜ್ಞಾನಿಕ ಮನೋಭಾವದ ಮುಖ್ಯ ಮೂರು ಗುಣಗಳನ್ನು ೧೮ನೇ ಶತಮಾನದಲ್ಲಿ ಹೇಳಿರುವುದನ್ನು ಈ ಕೆಳಗೆ ತಿಳಿಸಲಾಗಿದೆ:

(೧) ಸುತ್ತಮುತ್ತ ಇರುವ ಜಗತ್ತಿನ ಬಗೆಗಿನ ಹೇಳಿಕೆಗಳು ಅವಲೋಕನದ ಮೇಲೆ ಆಧಾರಿತವಾಗಿರಬೇಕು.

(೨) ಭೌತಿಕ ಜಗತ್ತು ಚಿಂತನಶೀಲ ಮತ್ತು ಸದಾ ಬದಲಾಗುತ್ತಿರುವುದು. ಭೌತಿಕ ಜಗತ್ತಿನಲ್ಲಿ ಸಂಭವಿಸುವ ಬದಲಾವಣೆಗಳು ನಿಸರ್ಗದ (ಪ್ರಕೃತಿ) ನಿಯಮಗಳನ್ನು ಅನುಸರಿಸುವುದು.

(೩) ಭೂಮಿಯು ಬ್ರಹ್ಮಾಂಡದ ಕೇಂದ್ರವಲ್ಲ ಮತ್ತು ಮನುಷ್ಯನು ಬ್ರಹ್ಮಾಂಡದ ಉದ್ದೇಶ (ಗುರಿ) ಅಲ್ಲ.

ಈ ಮೂರು ಸೂತ್ರಗಳಿಂದ ಆಧಾರಿತವಾದ ವೈಜ್ಞಾನಿಕ ಮನೋಭಾವವನ್ನು ಸಹ "ಯಾಂತ್ರಿಕ-ವೈಜ್ಞಾನಿಕ ಮನೋಭಾವ" ಎಂದು ಕರೆಯಲಾಗುತ್ತದೆ.

ಈ ಮನೋಭಾವ ಮತ್ತು ಹದಿನೆಂಟನೇ ಶತಮಾನದಲ್ಲಿ ಅದು ಹರಡಿದ್ದರಿಂದ ಮಾನವ ಜೀವನದ ಗುಣಮಟ್ಟವು ಸಾಕಷ್ಟು ಸುಧಾರಿಸಿತು. ರೈಲುಗಳು, ಹಡಗುಗಳು, ಕಾರುಗಳು, ವಿಮಾನಗಳು, ತಂತಿಗಳು, ದೂರವಾಣಿಗಳು, ರೇಡಿಯೋಗಳು, ದೂರದರ್ಶನಗಳು, ಕಂಪ್ಯೂಟರ್‌ಗಳು, ಸಿಂಥೆಟಿಕ್ ಉಡುಪುಗಳು, ಔಷಧಿಗಳು, ಶಸ್ತ್ರಚಿಕಿತ್ಸೆಗಳು ಮೊದಲಾದವುಗಳು ಮಾನವಜೀವನವನ್ನು ಸುಗಮಗೊಳಿಸಿದವು. ಅದೇ ಸಮಯದಲ್ಲಿ ಮದ್ದು-ಗುಂಡುಗಳು, ಮಿಸೈಲುಗಳು, ಅಣುಬಾಂಬುಗಳು, ಜೈವಿಕ ಶಸ್ತ್ರಾಸ್ತ್ರಗಳಿಂದಾಗಿ ಮಾನವಜೀವನವು ಗಂಡಾಂತರಕ್ಕೊಳಗಾಯಿತು. ಮನುಷ್ಯನು ಇಂದು ಈ ಎಲ್ಲಾ ವಸ್ತುಗಳನ್ನು ಅನುಭವಿಸುತ್ತಾನೆ ಮತ್ತು ಜನರು ಬಳಸುವ ಈ ಎಲ್ಲಾ ವಸ್ತುಗಳನ್ನು 'ಆಧುನಿಕ' ಎಂದು ಹೆಸರಿಸಲಾಗುತ್ತದೆ.

ಆದರೆ ಒಬ್ಬ ವ್ಯಕ್ತಿ ಅಥವಾ ಸಮಾಜ ಆಧುನಿಕ ತಂತ್ರಜ್ಞಾನದ ಎಲ್ಲಾ ಪ್ರಯೋಗಗಳನ್ನು ಅನುಭವಿಸಲು ಸಾಧ್ಯವಿರುತ್ತಿದ್ದರೂ ಅವರಿಗೆ ವೈಜ್ಞಾನಿಕ ಮನೋಭಾವವಿರುವುದಿಲ್ಲ. ಒಬ್ಬ ಮೂಢನಂಬಿಕೆಯ ವ್ಯಕ್ತಿ ವಿಮಾನದಲ್ಲಿ ಪ್ರಯಾಣ ಮಾಡಬಹುದು. ದೂರವಾಣಿಯನ್ನು ಬಳಸಬಹುದು, ಕಂಪ್ಯೂಟರ್ ಜೊತೆಯಲ್ಲಿ ಕೆಲಸ ಮಾಡಬಹುದು. ಇವೆಲ್ಲವೂ ಅವನನ್ನು ವಿಚಾರವಂತರನ್ನಾಗಿ ಮಾಡುವುದಿಲ್ಲ. ಕೊಲ್ಲಿ ದೇಶಗಳಲ್ಲಿರುವ ಸಮಾಜವು ಉದಾಹರಣೆಗೆ, ಈ ಅರ್ಥದಲ್ಲಿ ಆಧುನಿಕವಾಗಿರಬಹುದು, ಆದರೆ ಅದಕ್ಕೆ ವೈಜ್ಞಾನಿಕ ಮನೋಭಾವವಿಲ್ಲ. ಸಂಕ್ಷಿಪ್ತವಾಗಿ ವೈಜ್ಞಾನಿಕ ಮನೋಭಾವವು ಜನರ ಮನಸ್ಥಿತಿಗಳಿಗೆ ಸಂಬಂಧಿಸಿದೆ ಮತ್ತು ಅವರ ಜೀವನಸ್ತರಕ್ಕೆ ಸಂಬಂಧಿಸಿಲ್ಲ.

ಇಲ್ಲಿ ಪ್ರಸ್ತಾಪಿಸಿರುವ ವೈಜ್ಞಾನಿಕ ಮನೋಭಾವದಿಂದ ಗಮನಾರ್ಹವಾದ ಬದಲಾವಣೆಗಳು ಉಂಟಾಗಿವೆ. ಅವಲೋಕನವು ಆದ್ಯತೆ ಪಡೆದಿರುವಂತೆಯೇ ಎಲ್ಲಾ ಧಾರ್ಮಿಕ ಗ್ರಂಥಗಳಲ್ಲಿರುವ ಎಲ್ಲಾ ಜ್ಞಾನವು ಸಂದೇಹಕರವಾಗಿದೆ. ಶ್ರದ್ಧೆಯ ಕೆಲವು ಸಂಗತಿಗಳು ಈಗ ಮೂಢನಂಬಿಕೆಗಳಾಗಿ ಪರಿಣಮಿಸಿವೆ. ಮಧ್ಯಕಾಲೀನ ಯುಗಗಳಲ್ಲಿ ಸಾಮಾಜಿಕ ಮನಸ್ಥಿತಿಯನ್ನು ನಿರ್ವಚಿಸುವಲ್ಲಿ ಮೂಢನಂಬಿಕೆಗಳು ಪ್ರಮುಖ ಪಾತ್ರ ವಹಿಸಿದ್ದವು. ಶ್ರದ್ಧೆಯ ಕೆಲವು ವಿಷಯಗಳಿಗೆ ವೈಚಾರಿಕ ತಳಹದಿಯೇ ಇಲ್ಲ. ಉದಾಹರಣೆಗೆ ಮಾಯ-ಮಾಟ-ಮಂತ್ರ, ಒಳ್ಳೆಯ ಅಥವಾ ಕೆಟ್ಟ ಶಕುನಗಳು, ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ, ಜಾತಿ, ಬಣ್ಣ ಮತ್ತು ಮತದ ಆಧಾರದ ಮೇಲೆ ಸಮಾಜದಲ್ಲಿ ಹರಡಿರುವ ತಾರತಮ್ಯತೆ, ತರ್ಕಶಾಸ್ತ್ರದ ಸಂಸ್ಥಾಪಕರಾದ ಅರಿಸ್ಟಾಟಲ್ ಮತ್ತು ಫ್ರಾನ್ಸಿಸ್ ಬೇಕನ್ ಅವರು ಮೂಢನಂಬಿಕೆಗಳಿಂದ ಮುಕ್ತರಾಗಿಲ್ಲ. ಅರಿಸ್ಟಾಟಲರು ಮಹಿಳೆಯರು

ಪುರುಷರಿಗಿಂತ ಕಡಿಮೆ ಹಲ್ಲುಗಳನ್ನು ಹೊಂದಿದ್ದಾರೆಂದು ಚಿಂತಿಸಿದರೆ, ಫ್ರಾನ್ಸಿಸ್ ಬೇಕನರು ಮಾಯ-ಮಾಟದಲ್ಲಿ ನಂಬಿಕೆಯಿಟ್ಟಿದ್ದರು.

### ವೈಜ್ಞಾನಿಕ ಮನೋಭಾವದ ಮೇಲೆ ಆಧಾರಿತ ಶಾಹುರವರ ಕ್ರಮಗಳು

ಶಾಹುರವರ ವ್ಯಕ್ತಿತ್ವ ಎಷ್ಟರಮಟ್ಟಿಗೆ ವೈಜ್ಞಾನಿಕ ಮನೋಭಾವದಿಂದ ಪ್ರಭಾವಿತಗೊಂಡಿದೆ ಎಂದು ಪರೀಕ್ಷಿಸುವುದು ಕುತೂಹಲದ ವಿಷಯವಾಗಿದೆ. ಯಾವ ವ್ಯಕ್ತಿಯ ವ್ಯಕ್ತಿತ್ವವನ್ನು ವಿಶ್ಲೇಷಿಸುವಾಗ ಆ ವ್ಯಕ್ತಿಯ ಚಿಂತನೆಗಳು, ಕ್ರಿಯೆಗಳು ಮತ್ತು ಮಾತುಗಳನ್ನು ಪರೀಕ್ಷಿಸುವುದು ಸಾಧ್ಯವಾಗಿದೆ. ಆದರೆ ಕ್ರಿಯೆಗಳು (ಕೃತಿಗಳು) ಉಳಿದ ಎರಡು ವಿಷಯಗಳಿಗಿಂತ ಹೆಚ್ಚು ನಂಬಿಕಾರ್ಹವಾಗಿರುವುದರಿಂದ ಆದ್ದರಿಂದ ಶಾಹುರವರ ಕ್ರಿಯೆಗಳು ವಿಶ್ಲೇಷಣೆಗೆ ಹೆಚ್ಚು ಸೂಕ್ತವೆನಿಸುತ್ತವೆ.

ಶಾಹು ಹನ್ನೆರಡು ವರ್ಷದವನಾಗುತ್ತಿರುವಾಗಲೇ ಅವರ ತಂದೆ-ತಾಯಿಗಳು ತೀರಿಹೋದರು. ಶಾಹುರವರ ತಂದೆ ಪುನರ್‌ವಿವಾಹವಾದರು. ಸಹಜವಾಗಿಯೇ ಶಾಹುರವರು ಮಲತಾಯಿಯಿಂದ ನೊಂದರು. ಅವರ ತಂದೆ ಮದ್ಯಪಾನದ ವ್ಯಸನಿಗಳಾಗಿದ್ದರು. ಮದ್ಯ ಅವರ ಆರೋಗ್ಯವನ್ನು ಹಾಳುಮಾಡಿತು. ಶಾಹುರವರು ತಂದೆಯ ಪುನರ್‌ವಿವಾಹದ ಬಗ್ಗೆ ತಮ್ಮ ಅಸಂತೋಷವನ್ನು ಸೂಕ್ಷ್ಮವಾಗಿ ವ್ಯಕ್ತಪಡಿಸಿದರು. ಅವರ ತಂದೆ ಮಕ್ಕಳು ಚಿಕ್ಕವರಾಗಿದ್ದಾಗ ಮದ್ಯಪಾನದಲ್ಲಿ ಮುಳುಗಿದ್ದರು. ಮಹಾರಾಜರಾಗಿದ್ದರೂ ಶಾಹು ಎರಡನೇ ಹೆಂಡತಿಯನ್ನು ತಂದುಕೊಳ್ಳಲಿಲ್ಲ ಹಾಗೂ ಮದ್ಯವನ್ನು ಎಂದೂ ಮುಟ್ಟಲಿಲ್ಲ (ಸೇವಿಸಲಿಲ್ಲ). ಸಾಮಾನ್ಯವಾಗಿ ಮಗು ತಂದೆತಾಯಿಗಳ ಮೂಲಕ ಸಂಪ್ರದಾಯಗಳನ್ನು ಒಪ್ಪಲು ಕಲಿಯುತ್ತದೆ. ತಂದೆತಾಯಿಗಳು ಸಂಪ್ರದಾಯದ ಜ್ಞಾನಕ್ಕೆ ಮೊದಲ ಮೂಲವಾಗುತ್ತಾರೆ. ಈ ಹಿನ್ನೆಲೆಯಲ್ಲಿ ಶಾಹುರವರು ಸಂಪ್ರದಾಯದ ಮೌಲ್ಯಗಳ ಬಗ್ಗೆ ಸಂದೇಹಿಗಳಾದದ್ದು ಆಶ್ಚರ್ಯವೆನಿಸುತ್ತದೆ. ಸಂಕ್ಷೇಪದಲ್ಲಿ, ತಾಯಿಯ ಮರಣ ಮತ್ತು ತಂದೆಯ ಅಂಗೀಕಾರವಲ್ಲದ ವರ್ತನೆಯಿಂದ ಶಾಹುರವರು ಸಂಪ್ರದಾಯಗಳನ್ನು ಕಣ್ಣುಮುಚ್ಚಿಕೊಂಡು ಅನುಸರಿಸಬಾರದೆಂದು ನಿರ್ಧರಿಸಿರಬಹುದು, ಅಂತಹ ಒಂದು ಮನಸ್ಥಿತಿಯು ವೈಜ್ಞಾನಿಕ ಮನೋಭಾವ ಬೆಳೆಯುವುದಕ್ಕೆ ಸಹಾಯ ಮಾಡಿತು.

ಶಾಹುರವರು ಶಿಕ್ಷಣವನ್ನು ರಾಜಕೋಟ ಮತ್ತು ಧಾರವಾಡದಲ್ಲಿ ಕಲಿತರು. ಈ ಎಂಟು ವರ್ಷಗಳು ಶಾಹುರವರು ಯೂರೋಪಿನ ವಿದ್ವಾಂಸರಾದ ಪ್ರಾಂಶುಪಾಲ ಮ್ಯಾಕ್‌ನೊಕ್ಟನ್, ಸಿ. ಎ ಕ್ಯಾಂಡಿ, ಸ್ಟುವರ್ಟ್ ಮಿಟ್‌ಫೋರ್ಡ್ ಫ್ರೆಜರ್ ಅವರ ಗುರುಪರಂಪರೆಯಲ್ಲಿ ವಿದ್ಯಾಭ್ಯಾಸ ಮಾಡಿದರು.

ಐ.ಸಿ.ಎಸ್.ರಾಗಿದ್ದ ಅವರನ್ನು ಶಾಹುರವರ ಗುರು-ಪೋಷಕರನ್ನಾಗಿ ನೇಮಕ ಮಾಡಲಾಯಿತು. ವೈಜ್ಞಾನಿಕ ಮನೋಭಾವವು ಶಿಕ್ಷಿತ ಯೂರೋಪಿಯನ್ನರ ಮನಸ್ಥಿತಿಯ ಪ್ರಮುಖ ಭಾಗವಾಗಿತ್ತು. ಶಾಹುರವರು ಸಹಜವಾಗಿಯೇ ತಮ್ಮ ಗುರುಗಳಾದ ಫ್ರೆಜರರಿಂದ ಅದನ್ನು ಬಳುವಳಿಯಾಗಿ ಪಡೆದರು ಮತ್ತು ರಕ್ತಗತ ಮಾಡಿಕೊಂಡರು ಮತ್ತು ಅವರು ಶಾಹುರವರ ಶಿಕ್ಷಣಕ್ಕಾಗಿ ಒಂದು ಪಠ್ಯಕ್ರಮವನ್ನೇ ರೂಪಿಸಿದ್ದರು. ಇದು ಶಾಹುರವರ ಜೀವನ ರೂಪುಗೊಳ್ಳುವ ವಯಸ್ಸಾದ ೧೧ ಮತ್ತು ೧೮ನೇ ವರ್ಷಗಳ ನಡುವೆ ಸಂಭವಿಸಿತು. ಅದು ಶಾಹುರವರ ಮಾನಸಿಕ ಸ್ಥಿತಿ-ಗತಿಯ ಶಾಶ್ವತವಾದ ಒಂದು ವಿಶೇಷ ಲಕ್ಷಣವಾಗಿದ್ದರಲ್ಲಿ ಆಶ್ಚರ್ಯವಿಲ್ಲ.

ಎಂಟು ವರ್ಷಗಳ ಪಠ್ಯಕ್ರಮದಲ್ಲಿ ವಿಜ್ಞಾನ, ಕಾನೂನು, ಇತಿಹಾಸ, ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳು ಸೇರ್ಪಡೆಯಾಗಿದ್ದವು. ಈ ತಾತ್ವಿಕ ಸಂಬಂಧಪಟ್ಟ ವಿಷಯಗಳ ಭಾಗದ ಜೊತೆಗೆ ಫ್ರೆಜರ್ ಅವರು

ಮೂರು ಅಧ್ಯಯನದ ಪ್ರವಾಸಗಳನ್ನು ವ್ಯವಸ್ಥೆಗೊಳಿಸಿದ್ದರು; ಎರಡು ಪ್ರವಾಸಗಳು ಉತ್ತರಭಾರತಕ್ಕೆ ಸಂಬಂಧಿಸಿತ್ತು. ಈ ಅಧ್ಯಯನದ ಪ್ರವಾಸಗಳು ಶಾಹುರವರಿಗೆ ತಮ್ಮ ದೇಶವನ್ನು ಅವಲೋಕಿಸಲು ಮತ್ತು ಇದಕ್ಕಿಂತ ಮೊದಲು ಅವರೇ ಕೇಳಿದ್ದ ವಿವಿಧ ವಿಷಯಗಳ ಖಚಿತತೆಯನ್ನು ಪರೀಕ್ಷಿಸಲು ಶಾಹುರವರಿಗೆ ಉತ್ತಮ ಅವಕಾಶವನ್ನು ಒದಗಿಸಿತ್ತು.

ಶಾಹುರವರು ರಾಜಕೋಟೆ ಮತ್ತು ಧಾರವಾಡಗಳಲ್ಲಿ ಯೂರೋಪಿನ ಗುರುಗಳನ್ನು ಪಡೆದಿದ್ದರು. ಅವರ ಸಾಮೀಪ್ಯದಲ್ಲಿ ಅವರು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡಿದ್ದರೆಂಬುದು ನಿಜ, ಆದರೆ ಅವರು ಪಾಶ್ಚಿಮಾತ್ಯ ಜೀವನಶೈಲಿಯ ಮೆಚ್ಚಿಕೆಯನ್ನು ಬೆಳೆಸಿಕೊಂಡಿದ್ದರೆಂಬುದು ಸಾಧ್ಯತೆಯಿದೆ. ಅವರು ತಮ್ಮ ದೇಶದ ಮತ್ತು ತಮ್ಮ ಜನರ ಬಗ್ಗೆ ಅಂಗೀಕರಿಸುವ, ದಯೆತೋರಿಸುವ ಮನೋಭಾವವನ್ನು ಅವರು ಬೆಳೆಸಿಕೊಂಡಿರಬಹುದು, ಅವರು ಪಕ್ಷಪಾತಿಗಳಾಗಿರಬಹುದು, ವೈಜ್ಞಾನಿಕ ಮನೋಭಾವವು ಪಕ್ಷಪಾತ ಅಥವಾ ಹಮ್ಮು-ಬಿಮ್ಮಿನೊಂದಿಗೆ ಸರಿಹೊಂದಲಾರದು. ಮಹಾರಾಷ್ಟ್ರದವರಾದ ಕೃಷ್ಣಾಜಿ ಭಿಕಾಜಿ ಗೋಖಲೆಯವರು ಯಾವಾಗಲೂ ರಾಜಕೋಟೆ ಮತ್ತು ಧಾರವಾಡದಲ್ಲಿ ಶಾಹುರವರ ಜೊತೆಯಲ್ಲಿರುತ್ತಿದ್ದರು. ಗೋಖಲೆಯವರು ಶಾಹುರವರ ಮೇಲೆ ಅನುಚಿತವಾಗಿ ಆಗಬಹುದಾದ ಪ್ರಭಾವವನ್ನು ತಡೆದಿರಬಹುದು. ಗೋಖಲೆಯವರು ನಿವೃತ್ತಿ ಹೊಂದಿದ ನಂತರ ಮತ್ತೊಬ್ಬ ಮಹಾರಾಷ್ಟ್ರದವರಾದ ರಘುನಾಥ ವ್ಯಂಕಾಜಿ ಸಬ್ನೀಸ್ ಶಾಹುರವರಿಗೆ ನಿಕಟವರ್ತಿಯಾಗಿದ್ದರು. ಹೀಗೆ ಶಾಹುರವರು ಗೋಖಲೆ-ಸಬ್ನೀಸ್ ಅವರಿಂದ ಭಾರತದ ಸಂಸ್ಕೃತಿಯ ಅಂಶಗಳನ್ನು ಮತ್ತು ಮ್ಯಾಕ್‌ನೋಕ್ಟವ್ ಮತ್ತು ಫ್ರೆಜರ್ ಅವರು ನೀಡಿದ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದದ್ದರಿಂದ ಒಂದು ಸಮತೋಲನದ ದೃಷ್ಟಿಕೋನವನ್ನು ಬೆಳೆಸಿಕೊಂಡರು. ಇದು ಬಹುಶಃ ಅವರಿಗೆ ಪಕ್ಷಪಾತರಹಿತ ಮನೋಭಾವ ಬೆಳೆಸಿಕೊಳ್ಳಲು ಸಹಕಾರಿಯಾಯಿತು. ಜೊತೆಗೆ ಶಾಹುರವರು ಅಹಂವಾದಿಗಳಲ್ಲ. ಅಹಂ ವೈಜ್ಞಾನಿಕ ಮನೋಭಾವಕ್ಕೆ ವಿರುದ್ಧವಾದುದು. ತೆರೆದ ಮನಸ್ಸು, ದೃಢನಂಬಿಕೆಗಳ ನಮ್ರತೆ ಮತ್ತು ತೀಕ್ಷ್ಣ ಬುದ್ಧಿವಂತಿಕೆಗಳು, ಅವಲೋಕನ, ಊಹೆ, ಮತ್ತು ಪ್ರಯೋಗಗಳು (ಪರೀಕ್ಷೆಗಳು) ಸೇರಿದ ವೈಜ್ಞಾನಿಕ ಪ್ರಕ್ರಿಯೆಯನ್ನ ನಡೆಸಲು ಅತ್ಯವಶ್ಯಕ. ಈ ಪ್ರಯೋಗದ ಖಚಿತತೆಯನ್ನು ಮತ್ತು ಫಲಿತಾಂಶಗಳ ಆಧಾರದ ಮೇಲೆ ಒಂದು ಊಹೆಯನ್ನು ಸ್ವೀಕರಿಸಲಾಗುವುದು ಅಥವಾ ನಿರಾಕರಿಸಲಾಗುವುದು. ಶಾಹುರವರ ಜೀವನವನ್ನು ಅಧ್ಯಯನ ಮಾಡಿದರೆ ಅವರು ಮೇಲೆ ಹೇಳಿದ ಎಲ್ಲಾ ಮಾನಸಿಕ ಗುಣಗಳನ್ನು ಹೊಂದಿದ್ದರೆಂಬುದು ತಿಳಿಯುತ್ತದೆ.

ವೈಜ್ಞಾನಿಕ ಮನೋಭಾವದ ಬುನಾದಿಯ ಮೇಲೆ ಶಾಹುರವರ ಬದುಕಿನ ಕೆಲವು ಮುಖ್ಯ ಘಟನೆಗಳನ್ನು ಪರೀಕ್ಷಿಸುವುದು ಕುತೂಹಲದ ವಿಷಯವಾಗುತ್ತದೆ.

ಭಾರತದ ರಾಜ-ಮಹಾರಾಜರು ದೈನಂದಿನ ಕಾರ್ಯಕ್ರಮಗಳನ್ನು ನಡೆಸಲು ಸಂಸ್ಥಾನದ ಪ್ರಧಾನಮಂತ್ರಿಗಳಿಗೆ (ದಿವಾನರಿಗೆ) ವಹಿಸಿ ಕಾಲವನ್ನು ಜೀವನದ ಲೋಲುಪತೆಗಳಲ್ಲಿ ಕಳೆಯುವುದು ಪ್ರಾಚೀನ ರೂಢಿಯಾಗಿತ್ತು. ಶಾಹುರವರು ಇದನ್ನು ಅನುಸರಿಸಲಿಲ್ಲ. ಸಿಂಹಾಸನವನ್ನು ಏರುವುದಕ್ಕೆ ಮೊದಲು ಮತ್ತು ಅದರ ನಂತರ ಶಾಹುರವರು ವಾಸ್ತವಿಕ ಸಂದರ್ಭ ಮತ್ತು ಸನ್ನಿವೇಶಗಳನ್ನು ಅವಲೋಕಿಸಲು ವ್ಯಾಪಕವಾಗಿ ಭಾರತ ಮತ್ತು ವಿದೇಶಗಳ ಪ್ರವಾಸಗಳನ್ನು ಮಾಡಿದರು. ಸಹಜವಾಗಿ ಅವರ ನಿರ್ಧಾರಗಳು ಈ ಅವಲೋಕನಗಳ ಮೇಲೆ ಆಧಾರಗೊಂಡಿದ್ದವು. ಅವಲೋಕನವು ವೈಜ್ಞಾನಿಕ ಮನೋಭಾವದ ಕಡೆಗಿನ ಮೊದಲ ಹೆಜ್ಜೆ.

ಶಾಹುರವರು ಒಬ್ಬ ರಾಜನಾಗಿ ಅಧಿಕಾರವಹಿಸಿಕೊಂಡಾಗ ಕರ್‌ವೀರ್ (ಕೊಲ್ಹಾಪುರ) ಮುನಿಸಿಪಲ್ ಕೌನ್ಸಿಲ್ ಸಂಸ್ಥಾನ ನೇಮಕ ಮಾಡಿದ ಸದಸ್ಯರ ಅಧೀನದಲ್ಲಿತ್ತು. ಈ ಸದಸ್ಯರು ಯಾರಿಗೂ ನೇರವಾಗಿ ಹೊಣೆಗಾರರಾಗಿರಲಿಲ್ಲ. ಅವರು ತಮ್ಮ ಪ್ರತಿನಿಧಿಗಳನ್ನು ಕೌನ್ಸಿಲ್‌ನ ಸಭೆಗೆ ಕಳುಹಿಸಿದರು ಮತ್ತು ಭಾಸ್ಕರರಾವ್ ಅವರನ್ನು ಆಡಳಿತಗಾರರನ್ನಾಗಿ ನೇಮಕ ಮಾಡಿದರು. ೧೯೦೪ ಮತ್ತು ೧೯೨೦ರ ನಡುವಣ ೧೬ ವರ್ಷಗಳಲ್ಲಿ ಹೊಸ ಆಡಳಿತದ ವಿಧಾನಗಳನ್ನು ಜಾರಿಗೊಳಿಸಲಾಯಿತು. ಹೀಗೆ ಆಧುನಿಕ ಕೊಲ್ಹಾಪುರದ ನಾಗರೀಕ ಆಡಳಿತಕ್ಕಾಗಿ ಅಸ್ತಿವಾರವನ್ನು ಹಾಕಲಾಯಿತು. ೧೯೨೦ರಲ್ಲಿ ಚುನಾವಣೆಗಳನ್ನು ನಡೆಸಲಾಯಿತು ಮತ್ತು ಮುನಿಸಿಪಲ್ ಕೌನ್ಸಿಲ್ ಪುನಃ ಚುನಾಯಿತ ಪ್ರತಿನಿಧಿಗಳ ಕೈಸೇರಿತು. ಶಾಹುರವರ ಗುರಿ ಸಾಮಾಜಿಕ ಒಳಿತಾಗಿತ್ತು. ಆದ್ದರಿಂದ ಆಡಳಿತಗಾರರನ್ನು ನೇಮಕಮಾಡುವುದರಲ್ಲಿ ಅವರು ಯಾವುದೇ ತಪ್ಪನ್ನು ಕಾಣಲಿಲ್ಲ. ಅವರು ತಮ್ಮ ಪಾತ್ರ ನಿರ್ವಹಿಸಿದ ನಂತರ, ಚುನಾಯಿತ ಪ್ರತಿನಿಧಿಗಳು ಅಧಿಕಾರ ವಹಿಸಿಕೊಂಡರು. ಈ ಧೋರಣೆಯು ಖಂಡಿತವಾಗಿ ವೈಜ್ಞಾನಿಕವಾಗಿತ್ತು.

ಶಾಹುರವರ ಅನುಮೋದನೆಗಾಗಿ ಬಂದ ಮೊದಲ ಆಯ-ವ್ಯಯ ಪತ್ರವು ಖೋತಾ ಬಡ್ಜೆಟ್ ಆಗಿತ್ತು. ಅವರು ಅದನ್ನು ಅನುಮೋದಿಸಲಿಲ್ಲ. ಅವರು ಖೋತ ಆಯ-ವ್ಯಯ ಪತ್ರವನ್ನು ತೆಗೆದುಹಾಕಿ ಮತ್ತು ಒಂದು ಮಿಗತೆಯ (ಉಳಿತಾಯದ) ಆಯ-ವ್ಯಯ ಪತ್ರವನ್ನು ಮಂಡಿಸಿದಾಗ ಅವರು ಅದಕ್ಕೆ ಅನುಮೋದನೆ ನೀಡಿದರು. ಹೀಗೆ ಕೊಲ್ಹಾಪುರದ ಸಾಮಂತ ಸಂಸ್ಥಾನದ ಬುನಾದಿಯನ್ನು ಅರ್ಥಶಾಸ್ತ್ರದ ನಿಯಮಗಳ ಆಧಾರದ ಮೇಲೆ ಹಾಕಲಾಯಿತು.

ನಂತರ ಸಂಸ್ಥಾನ ಬರಗಾಲ ಮತ್ತು ಪ್ಲೇಗುಗಳಂತಹ ವಿಕೋಪಗಳನ್ನು ಎದುರಿಸಬೇಕಾಯಿತು. ಈ ವಿಕೋಪಗಳನ್ನು ಎದುರಿಸುತ್ತಿರುವಾಗ ಶಾಹುರವರು ತಮ್ಮ ವೈಜ್ಞಾನಿಕ ಮನೋಭಾವವನ್ನು ಹೇಳುವಂತಹ ಹಲವು ಅಸಾಧಾರಣವಾದ ಮತ್ತು ನವೀನವಾದ ನಿರ್ಧಾರಗಳನ್ನು ಕೈಗೊಂಡರು. ಬರಗಾಲದಲ್ಲಿ ಅವರು ಅಂಗವಿಕಲರು, ಮುದುಕರು ಮತ್ತು ಮಕ್ಕಳು ಅಷ್ಟೆ ಅಲ್ಲ, ದನಕರುಗಳು ಸೇರಿದಂತೆ ಇಡೀ ಜನಸಂಖ್ಯೆಯ ಪ್ರಾಣಗಳನ್ನು ಉಳಿಸಿದರು. ಹಸಿವಿನಿಂದ ಒಂದೇ ಒಂದು ಸಾವು ಸಂಭವಿಸಲಿಲ್ಲ. ಪ್ಲೇಗಿನ ಸಾಂಕ್ರಾಮಿಕ ರೋಗದಿಂದ ಸತ್ತವರ ಸಂಖ್ಯೆ ನಗಣ್ಯ. ಅವರು ಕ್ರಮಬದ್ಧವಾದ ಪರಿಹಾರ ಕೆಲಸವನ್ನು ನಿರ್ವಹಿಸಲು ಎರಡು ವಿಶೇಷ ಸೆಲ್ಲುಗಳನ್ನು ರಚಿಸಿದರು. ಪ್ಲೇಗಿನ ಸಾಂಕ್ರಾಮಿಕ ರೋಗವನ್ನು ನಿಯಂತ್ರಿಸಲು ತೆಗೆದುಕೊಂಡ ಎಲ್ಲಾ ಕ್ರಮಗಳು ಆಧುನಿಕ ಔಷಧಿಯ ಮೇಲೆ ಆಧಾರವಾಗಿತ್ತು.

ಶಾಹುರವರು ೧೮ನೇ ವಯಸ್ಸಿನಲ್ಲಿ ಮದುವೆಯಾದರು. ಅವರ ಹೆಂಡತಿ ಲಕ್ಷ್ಮೀಬಾಯಿಯವರಿಗೆ ಕೇವಲ ಹನ್ನೊಂದು ವರ್ಷ, ಆರು ತಿಂಗಳಾಗಿತ್ತು. ಲೀ ವರ್ನರ್, ವುಡ್‌ಹೌಸ್ ಮತ್ತು ಫ್ರೆಜರ್ ಅವರು ಶಾಹುರವರಿಗೆ ಆರೋಗ್ಯದ ದೃಷ್ಟಿಯಿಂದ ಸಂತಾನೋತ್ಪತ್ತಿಯ ನಿಷೇಕಪ್ರಸ್ತವನ್ನು ಮುಂದೂಡುವಂತೆ ಸಲಹೆ ನೀಡಿದರು. ಶಾಹುರವರು ಅವರ ಸಲಹೆಯ ಮೇರೆಗೆ ನಡೆದುಕೊಂಡರು ಮತ್ತು ವಿವಾಹದ ಪ್ರಸ್ತದ ಸಮಾರಂಭವನ್ನು ಶಾಹುರವರು ಮೂರು ವರ್ಷಗಳವರೆಗೆ ಮುಂದೂಡಿದರು.

ಚಹಾ ಮತ್ತು ಕಾಫಿಗಳ ವ್ಯವಸಾಯವು ಪನ್ಹಾಲದ ಇಳಿಜಾರುಗಳಲ್ಲಿ ಸಾಧ್ಯವೆಂದು ಶಾಹು ಮನವರಿಕೆ ಮಾಡಿಕೊಂಡರು. ಅನಿಯಮಿತ ಮಳೆಯಿಂದ ಟೀ ಅಥವಾ ಕಾಫಿಗಳ ವ್ಯವಸಾಯವು ನಿರ್ದಿಷ್ಟ ಅಪಾಯವನ್ನು ಒಳಗೊಂಡಿತ್ತು. ಆದರೆ ಶಾಹುರವರು ಪ್ರಯೋಗಮಾಡಲು ಸಿದ್ಧರಿದ್ದರು. ಶಾಹುರವರ ಅಪ್ಪಣೆಯ ಮೇರೆಗೆ

ಅರಣ್ಯ ಇಲಾಖೆಯು ಟೀ ಮತ್ತು ಕಾಫಿಯ ತೋಟಗಳನ್ನು ಬೆಳಸುವ ಕಾರ್ಯವನ್ನು ಕೈಗೊಂಡಿತು. ಅಂಥದ್ದೇ ಪ್ರಯೋಗಗಳನ್ನು ಭೂದರ್‌ಗಢ್ ಇಳಿಜಾರುಗಳಲ್ಲಿ ಕೈಗೊಳ್ಳಲಾಯಿತು. ಅಂಟುರಾಳ ತಯಾರಿಸುವ ಒಂದು ಘಟಕವನ್ನು ಪ್ರಾರಂಭಿಸಲಾಯಿತು. ಟೀ ಮತ್ತು ಕಾಫಿ ತೋಟಗಾರಿಕೆಯ ವ್ಯವಸಾಯದ ಪ್ರಯೋಗ ವಿಫಲವಾಯಿತು. ಆದರೆ ಪ್ರಯೋಗ ಮಾಡಬೇಕೆಂಬ ಒತ್ತಾಸೆಯು ಸಹಜವಾಗಿ ವೈಜ್ಞಾನಿಕವಾಗಿತ್ತು.

ಶಾಹುರವರು ಸೋನ್‌ತಾಲಿ ಕ್ಯಾಂಪಿನಲ್ಲಿ ಪ್ರಾಣಿಗಳನ್ನು ಬೆಳೆಸುವ (ಪ್ರಾಣಿ ಸಾಕಾಣಿಕೆ) ಒಂದು ದೊಡ್ಡ ಮಾಳಗಾಳ (ಹುಲ್ಲುಗಾವಲು) ಸ್ಥಾಪಿಸಿದ್ದರು. ಅವರು ಅಲ್ಲಿ ಅತ್ಯುತ್ತಮ ಜಾತಿಯ ತಳಿಗಳಾದ ವಿಶೇಷವಾಗಿ ನಾಯಿ, ಕುದುರೆಗಳನ್ನು ಬೆಳೆಸಿದ್ದರು. ಅವರು ಕುದುರೆ ಮತ್ತು ಕತ್ತೆಗಳ ಸಮಾಗಮದಿಂದ ಹೇಸರಗತ್ತೆಗಳ ಕೆಲವು ಹೊಸತಳಿಗಳನ್ನು ಅಭಿವೃದ್ಧಿಗೊಳಿಸಿದ್ದರು. ಅವರು ಪಕ್ಷಿಗಳ ಸಮಾಗಮದಿಂದ ಹೊಸತಳಿಗಳ ಪ್ರಯೋಗ ನಡೆಸಿದ್ದರು. ರಷಿಯಾದ ಪ್ರಾಣಿಶಾಸ್ತ್ರಜ್ಞ ಪಾವ್‌ಲೋವ್ ಅವರು ಆ ದಿನಗಳಲ್ಲಿನ ಪ್ರಯೋಗವನ್ನು ಸಫಲವಾಗಿ ನಡೆಸಿದರು. ಆ ಪ್ರಯೋಗಗಳಿಗೆ ಪಾವ್‌ಲೋವ್ ಅವರು ನೋಬಲ್ ಪ್ರಶಸ್ತಿ ಪಡೆದರು. ಶಾಹುರವರು ಕುದುರೆಗಳ ಮೇಲೆ ಪ್ರಯೋಗವನ್ನು ಯಶಸ್ವಿಯಾಗಿ ನಡೆಸಿದರು. ಸೋನ್‌ತಾಲಿಯಲ್ಲಿರುವ ಈ ಮಾಳಗಾಳವು ಒಂದು ರೀತಿಯಲ್ಲಿ "ಜೀವ–ತಾಂತ್ರಿಕ ಪ್ರಯೋಗಾಲಯ" ವಾಗಿದೆ.

ಶಾಹುರವರು ಪ್ರಾಣಿಗಳ ಮೇಲೆ ಪ್ರಯೋಗಮಾಡಿದ್ದು ಮಾತ್ರವಲ್ಲದೆ ಅವರು ಮಾನವ ಜೀವಿಗಳ ಮೇಲೆ ಸಹ ಪ್ರಯೋಗ ನಡೆಸಿದರು. ಪ್ರಾಣಿಗಳ ಮೇಲೆ ನಡೆಸಿದ ಪ್ರಯೋಗಗಳು ಜೈವಿಕ–ತಾಂತ್ರಿಕ ಸ್ವಭಾವದ್ದಾದರೆ ಮಾನವ ಜೀವಿಗಳ ಮೇಲೆ ನಡೆಸಿದ ಪ್ರಯೋಗವು "ಸಾಮಾಜಿಕ–ತಾಂತ್ರಿಕ ಸ್ವಭಾವದ್ದಾಗಿದ್ದವು". ಫಸೆಪರಧಿಗಳು ಒಂದು ಅಲೆಮಾರಿ ಪಂಗಡವಾಗಿತ್ತು. ಅದು ಅಪರಾಧಿ ಪ್ರವೃತ್ತಿಗಳನ್ನು ಮತ್ತು ಆಕ್ರಮಣಕಾರಿ ಒಲವುಗಳನ್ನು ಹೊಂದಿತ್ತು. ಮಾನವ ಸ್ವಭಾವದಲ್ಲಿರುವ ನಿರ್ದಿಷ್ಟ ಗುಣವೈಶಿಷ್ಟ್ಯಗಳು ತಮ್ಮ ಅಸ್ತಿತ್ವದ ತಳಿ ವಿಜ್ಞಾನಕ್ಕೆ ಋಣಿಯಾಗಿವೆ. ಉಳಿದೆಲ್ಲವೂ ಸುತ್ತಮುತ್ತಲಿನ ಪರಿಸರದ ಮೇಲೆ ಅವಲಂಬಿಸಿವೆ. ಪರಿಸರ ಬದಲಾದರೆ ಗುಣಲಕ್ಷಣಗಳು ಬದಲಾಗಲೇ ಬೇಕಾಗುತ್ತದೆಯೆಂದು ಮಾರ್ಕ್ಸ್‌ವಾದಿ ಚಿಂತನೆ ಕ್ಲೇಮು ಮಾಡುವುದಕ್ಕೆ ಮೊದಲೇ ಇದು ಇತ್ತು. ಶಾಹುರವರು ಫಸೆಪರಧಿಗಳಿಗೆ ನೆಲಸುವಾಸಗಳ ಜೀವನಶೈಲಿಯನ್ನು ಒದಗಿಸಲು ಪ್ರಯತ್ನಿಸಿದರು. ಅವರಿಗೆ ಸೊನ್‌ತಾಲಿ ಕ್ಯಾಂಪಿನಲ್ಲಿ ವಾಸಸ್ಥಾನಗಳನ್ನು ಒದಗಿಸಲಾಯಿತು. ಅವರ ಮಕ್ಕಳಿಗೆ ಶೈಕ್ಷಣಿಕ ಸವಲತ್ತುಗಳನ್ನು ಕಲ್ಪಿಸಲಾಯಿತು. ಅದೇ ರೀತಿಯ ನೆಲಸುವಾಸಗಳ ಜೀವನಶೈಲಿಯನ್ನು ದೊಂಬರಿ ಮತ್ತು ಮಕಡ್‌ವಾಲೆ ಪಂಗಡಗಳಿಗೆ ಒದಗಿಸಲಾಯಿತು. ಅವರಿಗೆ ನಗರಗಳಲ್ಲಿ ಮನೆಗಳನ್ನು ಮತ್ತು ಉದ್ಯೋಗಗಳನ್ನು ನೀಡಲಾಯಿತು.

ಸಮಾಜಶಾಸ್ತ್ರೀಯ ಲೋಕಗಳಲ್ಲಿ ಶಾಹುರವರ ಶೋಧನೆಯ ಸ್ಫೂರ್ತಿಯು ಅವರ ವೈಜ್ಞಾನಿಕ ಮನೋಭಾವವನ್ನು ಎತ್ತಿತೋರಿಸುತ್ತದೆ.

ಶಾಹುರವರ ಸೊಸೆ ಇಂದುಮತಿ ಹನ್ನೊಂದುವರೆ ವರ್ಷದಲ್ಲಿ ವಿಧವೆಯಾಗುತ್ತಾಳೆ. ಶಾಹುರವರು ಅವಳಿಗೆ ಶಿಕ್ಷಣ ನೀಡಲು ನಿರ್ಧರಿಸಿದರು. ಜನಾನವು ಈ ಕ್ರಾಂತಿಕಾರಿ ನಿರ್ಧಾರವನ್ನು ತೀವ್ರವಾಗಿ ವಿರೋಧಿಸಿತು. ಅದು ನಂತರ ಕುಟುಂಬದ ಕಲಹವೆಂದು ರೂಪತಳೆಯಿತು. ಜನಾನವು ರಾಜನ ಆಸ್ಥಾನವನ್ನೇ ಬಹಿಷ್ಕರಿಸಿತು. ಶಾಹುರವರು ತಮ್ಮ ಪಟ್ಟು ಬಿಟ್ಟುಕೊಡಲಿಲ್ಲ ಮತ್ತು ಸೊನ್‌ತಾಲಿ ಕ್ಯಾಂಪಿನಲ್ಲಿ ಇಂದುಮತಿಯ

ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡಿದರು. ತಮ್ಮ ಔಪಚಾರಿಕ ಮತ್ತು ಅನೌಪಚಾರಿಕ ತರಬೇತಿಯನ್ನು ಮುಗಿಸಿದ ಮೇಲೆ ಇಂದುಮತಿ ೧೮ನೇ ವಯಸ್ಸಿನಲ್ಲಿ ಮೆಟ್ರಿಕ್ಯುಲೇಷನ್ (ಎಸ್.ಎಸ್.ಎಲ್.ಸಿ.) ಪಾಸುಮಾಡಿದರು. ದೆಹಲಿಯ ಮೆಡಿಕಲ್ ಕಾಲೇಜಿನಲ್ಲಿ ಔಷಧಿಯ ಶಾಸ್ತ್ರದಲ್ಲಿ ಆಕೆ ಉನ್ನತ ವ್ಯಾಂಸಗವನ್ನು ಮುಂದುವರಿಸಬೇಕೆಂದು ಶಾಹು ಬಯಸಿದ್ದರು. ಅವರು ಆಕೆಯನ್ನು ಕರೆದುಕೊಂಡು ದೆಹಲಿಗೆ ಹೋಗಿದ್ದರು ಮತ್ತು ದೆಹಲಿ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಿಗೆ ಆಕೆಯನ್ನು ಪರಿಚಯ ಮಾಡಿಸಿದ್ದರು. ಓಬಿರಾಯನ ಕಾಲದ ಸಂಪ್ರದಾಯಗಳನ್ನು ರದ್ದುಪಡಿಸಿ ಹೊಸ ಸುಧಾರಣೆಗಳನ್ನು ತರಲು ಅವರು ಅದಕ್ಕೆ ದೊಡ್ಡ ಬೆಲೆತೆರಲು ಸಿದ್ಧರಾಗಿದ್ದರು ಎಂಬುದು ಅವರ ವೈಜ್ಞಾನಿಕ ಮನೋಭಾವಕ್ಕೆ ಇದು ಮತ್ತೊಂದು ಸಾಕ್ಷಿಯಾಗಿದೆ.

ಶಾಹುರವರು ರಾಧಾನಗರಿ ಬಳಿ ಒಂದು ಅಣೆಕಟ್ಟು ನಿರ್ಮಿಸಲು ನಿರ್ಧರಿಸಿದರು. ಒಂದು ಸರ್ವೆಮಾಡಲು ಲೋಕೋಪಯೋಗಿ ಇಲಾಖೆಗೆ ಹೇಳಿದರು ಮತ್ತು ಸರ್ ಎಂ. ವಿಶ್ವೇಶ್ವರಯ್ಯ ಅವರಂತಹ ಇಂಜಿನಿಯರೊಡನೆ ಸಮಾಲೋಚನೆ ನಡೆಸಿದರು. ಅಣೆಕಟ್ಟೆಯ ನಿರ್ಮಾಣದ ಕೆಲಸ ಎಂಟು ವರ್ಷಗಳವರೆಗೂ ಹೋಯಿತು. ಅದು ಹಲವು ಸಮಸ್ಯೆಗಳಿಗೆ ಸಿಕ್ಕಿಹಾಕಿಕೊಂಡಿತು. ಅವರು ಸಂಸ್ಥಾನದ ಖಜಾನೆಯಿಂದ ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡಿದರು. ವಿಶ್ವದ ಯುದ್ಧ ಪ್ರಾರಂಭವಾದ್ದರಿಂದ ಅಣೆಕಟ್ಟೆಯ ನಿರ್ಮಾಣದ ಕೆಲಸ ಮುಗಿಯಲಿಲ್ಲ. ನಂತರ ಛತ್ರಪತಿ ರಾಜಾರಾಮರು ಅದನ್ನು ಪೂರ್ಣಗೊಳಿಸಿದರು. ಈ ಅಣೆಕಟ್ಟು ಕೊಲ್ಹಾಪುರದ ಮುಖವನ್ನೇ ಬದಲಾಯಿಸಿಬಿಟ್ಟಿತು. ಮಹಾರಾಷ್ಟ್ರದಲ್ಲಿ ಹಸಿರುಕ್ರಾಂತಿಯ ಪ್ರಾರಂಭದ ಕುರುಹುಗಳನ್ನು ಶಾಹು ಮಹಾರಾಜರಿಂದ ಹುಡುಕಬಹುದು. ಶಾಹುರವರು ಶಿಕ್ಷಣ ಮತ್ತು ಕೃಷಿಗೆ ಕೈಗೊಂಡ ಕ್ರಮಗಳು ಆಧುನಿಕ ಕಾಲಕ್ಕೆ ಸರಿಯಾಗಿ ಇವೆ.

ಬ್ರಾಹ್ಮಣೇತರರು ಶಿಕ್ಷಣದಲ್ಲಿ ಬಹಳ ಹಿಂದಿದ್ದರು. ಶಾಹುರವರು ಇದಕ್ಕೆ ಪರಿಹಾರ ಬಯಸಿದ್ದರು. ಅವರು ವಿದ್ಯಾರ್ಥಿ ನಿಲಯಗಳನ್ನು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ತೆರೆದರು. ಸ್ವಲ್ಪ ಸಮಯದ ನಂತರ ಬ್ರಾಹ್ಮಣೇತರ ವಿದ್ಯಾರ್ಥಿಗಳು ಒಬ್ಬರಾದ ಮೇಲೆ ಒಬ್ಬ ಬಿಟ್ಟು ಹೊರಟುಹೋದರು. ಸಾಮಾನ್ಯ ವಿದ್ಯಾರ್ಥಿ ನಿಲಯಗಳ ಪ್ರಯೋಗವು ವಿಫಲವಾಯಿತು. ಶಾಹುರವರು ವಿದ್ಯಾರ್ಥಿ ನಿಲಯವನ್ನು ಕೆಲವು ವರ್ಷಗಳವರೆಗೆ ನಡೆಸಿದರು. ನಂತರ ಅವುಗಳನ್ನು ಮುಚ್ಚಿಬಿಟ್ಟರು. ಪ್ರತಿಭಾವಂತ ಮರಾಠ ವಿದ್ಯಾರ್ಥಿಗಳಿಗೆ ಅರಮನೆಯಲ್ಲಿ ಜಾಗ, ಊಟ, ವಸತಿ ಸವಲತ್ತುಗಳನ್ನು ಮತ್ತು ಅವರು ಅರಮನೆಯಿಂದ ಶಾಲೆಗೆ ಹೋಗಿ ಬರುವ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸುವ ಮತ್ತೊಂದು ಪ್ರಯೋಗವನ್ನು ಮಾಡಿದರು. ಒಮ್ಮೆ ಎಲ್ಲಾ ಅಡ್ಡಿಆತಂಕಗಳನ್ನು ಪರಿಹರಿಸಿದರೆ ವಿದ್ಯಾರ್ಥಿಗಳು ಅಧ್ಯಯನದಲ್ಲಿ ಗಮನವನ್ನು ಕೇಂದ್ರೀಕರಿಸುವರೆಂಬ ಕಲ್ಪನೆಯಿತ್ತು. ಈ ಪ್ರಯೋಗವನ್ನು ನಡೆಸಲಾಯಿತು ಮತ್ತು ಊಹೆಯನ್ನು ಪರೀಕ್ಷಿಸಲಾಯಿತು. ವಿದ್ಯಾರ್ಥಿಗಳು ಸವಲತ್ತುಗಳನ್ನು ಚೆನ್ನಾಗಿ ಅನುಭವಿಸಿದರು. ಆದರೆ ಅವರು ಅಧ್ಯಯನ ಮಾಡಲಿಲ್ಲ. ಈ ಪ್ರಯೋಗವು ಸಹ ವಿಫಲವಾಯಿತು. ಶಾಹುರವರು ಮತ್ತೆ ಅದನ್ನು ಅನುಸರಿಸಲಿಲ್ಲ. ಊಹೆಯನ್ನು ನಿರಾಕರಿಸುವ ಸಲುವಾಗಿ ಅದನ್ನು ವೈಜ್ಞಾನಿಕವಾಗಿ ರುಜುವಾತುಪಡಿಸಲಿಲ್ಲ. ಯಾರಾದರೂ ವೈಜ್ಞಾನಿಕ ಪ್ರಕ್ರಿಯೆಯಲ್ಲಿ ಸಂಪೂರ್ಣವಾದ ನಿಷ್ಠೆಯನ್ನು ಹೊಂದಿರಬೇಕಾಗುತ್ತದೆ. ಮೇಲೆ ವಿವರಿಸಿದ ನಿದರ್ಶನವನ್ನು ನೋಡುವುದದರೆ ಶಾಹುರವರು ವೈಜ್ಞಾನಿಕ ಪ್ರಕ್ರಿಯೆಯಲ್ಲಿ ಅಚಲವಾದ ನಿಷ್ಠೆಯನ್ನು ಹೊಂದಿದ್ದರು.

ವಿಫಲಗೊಂಡ ಈ ಎರಡು ತೀರ್ಮಾನಗಳಿಂದ ಶಾಹುರವರು ಮೂರನೆಯ ಪ್ರಯೋಗವನ್ನು

ಶಿಕ್ಷಣ ಕ್ಷೇತ್ರದಲ್ಲಿ ಕೈಗೊಂಡರು. ಗಾಡಿ ಎಳೆಯುವ ಕುದುರೆಯನ್ನು ಓಟದ ಕುದುರೆಯೊಂದಿಗೆ ಸ್ಪರ್ಧಿಸಲಿ ಎಂದು ನಿರೀಕ್ಷಿಸುವುದು ಅಸಹಜವಾದುದೆಂದು ಮೊದಲನೇ ಪ್ರಯೋಗವು ಅವರಿಗೆ ಹೇಳಿದರೆ ಎರಡನೇ ಪ್ರಯೋಗವು ವಿದ್ಯಾರ್ಥಿಗಳಿಗೆ ವೈಭವಕಾರಿ ಸವಲತ್ತುಗಳನ್ನು ಒದಗಿಸಿದರೆ ಅವರು ಸೋಮಾರಿಗಳಾಗುತ್ತಾರೆ ಎಂಬುದು ಸಾಧಿತ ಮಾಡಿತು. ಸಮಾಜದಲ್ಲಿರುವ ಜಾತಿ ತಾರತಮ್ಯತೆಯನ್ನು ಒಪ್ಪಿಕೊಳ್ಳುತ್ತಾ ಅವರು ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಮತ್ತು ಜಾತಿ ಆಧಾರಿತ ವಿದ್ಯಾರ್ಥಿ ನಿಲಯಗಳನ್ನು ತೆರೆಯಲು ಪ್ರೋತ್ಸಾಹಿಸುವ ಮೂರನೇ ಪ್ರಯೋಗವನ್ನು ಕೈಗೊಂಡರು. ಶಾಹುರವರ ಪ್ರೋತ್ಸಾಹದಡಿಯಲ್ಲಿ ಇಪ್ಪತ್ತೆರಡು ವಿದ್ಯಾರ್ಥಿನಿಲಯಗಳನ್ನು ೨೦ ವರ್ಷಗಳಲ್ಲಿ ತೆರೆಯಲಾಯಿತು. ಈ ವಿದ್ಯಾರ್ಥಿ ನಿಲಯಗಳಿಗೆ ಶಾಶ್ವತ ಅನುದಾನವನ್ನು ಒದಗಿಸಲಾಯಿತು. ಅವು ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳನ್ನು ಒದಗಿಸಿದವು. ಇದು ಇಡೀ ಭಾರತದಲ್ಲಿ ವಿಶಿಷ್ಟ ಸವಲತ್ತಾಗಿತ್ತು. ಇದು ಸಂಪೂರ್ಣವಾಗಿ ಸಫಲವಾಯಿತು. ಈ ವಿದ್ಯಾರ್ಥಿ ನಿಲಯಗಳಿಂದ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಪ್ರಯೋಜನವನ್ನು ಪಡೆದುಕೊಂಡರು ಮತ್ತು ಅವರಲ್ಲಿ ಹಲವರು ಈಗ ವಿವಿಧ ಕ್ಷೇತ್ರಗಳಲ್ಲಿ ಅತ್ಯುತ್ತಮ ಸ್ಥಾನಗಳಲ್ಲಿದ್ದಾರೆ.

ಶಾಹುರವರು ವತನಿ ಉಪಾಧ್ಯಾಯರನ್ನು ಹೊಂದುವ ಪ್ರಯೋಗವನ್ನು ಮಾಡಿದರು. ಒಬ್ಬ ವತನಿ ಅಧ್ಯಾಪಕನಿಗೆ ವೇತನದ ಮೊತ್ತದ ಬದಲಿಗೆ ಸ್ವಲ್ಪ ಭೂಮಿಯನ್ನು ಅನುದಾನವಾಗಿ ಕೊಡುವುದು. ಈ ಪದ್ಧತಿಯು ಅಸಫಲವಾಗಿದ್ದರಿಂದ ಮೂರು ವರ್ಷಗಳ ನಂತರ ಅವರು ಆ ಪದ್ಧತಿಯನ್ನು ಕೈಬಿಟ್ಟರು. ಶಾಹುರವರು ಪಾಟೀಲರಿಗೆ (ಗ್ರಾಮದ ಮುಖ್ಯಾಧಿಕಾರಿ) ಮತ್ತು ಅಬ್ರಾಹ್ಮಣ ಪುರೋಹಿತರಿಗೆ ತರಬೇತಿ ನೀಡುವ ಸತ್ಯಶೋಧಕ ಶಾಲೆಗಳನ್ನು ವ್ಯವಸ್ಥೆಗೊಳಿಸಿದರು. ಗ್ರಾಮದ ಮುಖ್ಯಾಧಿಕಾರಿಗಳ ತರಬೇತಿ ಶಾಲೆಗಳು ಏಳು ವರ್ಷಗಳವರೆಗೆ ನಡೆದರೆ ಸತ್ಯಶೋಧಕ ಶಾಲೆಗಳು ಹಲವು ವರ್ಷಗಳವರೆಗೆ ಕೆಲಸ ನಿರ್ವಹಿಸಿದವು. ಶಾಹುರವರ ಈ ಪ್ರಯೋಗಗಳು ಸಾಮಾಜಿಕ ಕ್ಷೇತ್ರದಲ್ಲಿನ ಅವರ ವೈಜ್ಞಾನಿಕ ಮನೋಭಾವವನ್ನು ಕುರಿತು ಹೇಳುತ್ತವೆ.

೧೯ನೇ ಶತಮಾನದ ಮಹಾರಾಷ್ಟ್ರದಲ್ಲಿ ಮೊದಲಿಗೆ ಸಾಮಾಜಿಕ ಸುಧಾರಣೆಗಳು ಅಥವಾ ರಾಜಕೀಯ ಸುಧಾರಣೆಗಳು ಬರಬೇಕೆಂಬ ಗಂಭೀರವಾದ ಭಿನ್ನಾಭಿಪ್ರಾಯವಿತ್ತು. ಸುಧಾರಣೆಗಳು ಆಗಬೇಕೆಂಬುದು ಎಲ್ಲರ ಅಭಿಪ್ರಾಯವಾಗಿತ್ತು. ಆದರೆ ಯಾವ ಸುಧಾರಣೆಗೆ ಮೊದಲ ಆದ್ಯತೆ ನೀಡಬೇಕೆಂಬ ಬಗ್ಗೆ ಚರ್ಚೆಯಿತ್ತು(ವಿವಾದ). ಲೋಕಮಾನ್ಯ ತಿಲಕರು ರಾಜಕೀಯ ಸುಧಾರಣೆಗಳ ಆದ್ಯತೆಯ ಬಗ್ಗೆ ವಾದ ಮಾಡಿದರೆ ಶಾಹುರವರು ಸಾಮಾಜಿಕ ಸುಧಾರಣೆಗಳಿಗೆ ಹೆಚ್ಚು ಒಲವು ತೋರಿಸಿದರು. ಇಬ್ಬರ ನಡುವೆ ಭಿನ್ನಾಭಿಪ್ರಾಯ ತಲೆದೋರಿತು. ಅವರಿಬ್ಬರ ಈ ನಿಲವುಗಳು ಸರಿಯಾಗಿದ್ದವು. ಮತ್ತು ಅವರಿಬ್ಬರೂ ತಮ್ಮ ನಿಲುವುಗಳಲ್ಲಿ ದೃಢವಾಗಿದ್ದರು. ಯಾರ ನಿಲುವು ಹೆಚ್ಚು ಸರಿಯಾಗಿದೆ ಎಂಬುದು ಸವಾಲಾಗಿತ್ತು. ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳು ಕಳೆದರೂ ಸಾಮಾಜಿಕ ಸುಧಾರಣೆಗಳ ಪ್ರಗತಿ ಆಶಾದಾಯಕವಾಗಿಲ್ಲ. ಸಾಮಾಜಿಕ ಸುಧಾರಣೆಗಳು ಏನೇ ಸಂಭವಿಸಿದರೂ ರಾಜಕೀಯ ಸ್ವಾತಂತ್ರ್ಯದಿಂದ ಮಾತ್ರ ಸಾಧ್ಯವೆಂಬುದನ್ನು ಎಲ್ಲರೂ ಗಮನಿಸಬೇಕಾಗಿದೆ. ಆದ್ದರಿಂದ ಶಾಹು ಮತ್ತು ತಿಲಕರಿಬ್ಬರ ನಿಲುವುಗಳು ಸರಿಯಾಗಿದ್ದವೆಂದು ಹೇಳಬೇಕಾಗುತ್ತದೆ.

ವೇದೋಕ್ತ ಪ್ರಕರಣವು ಶಾಹುರವರ ಜೀವನಚರಿತ್ರೆಯಲ್ಲಿ ಮುಖ್ಯ ಅಧ್ಯಾಯವಾಗಿರುವುದು ಮಾತ್ರವಲ್ಲದೆ. ಮಹಾರಾಷ್ಟ್ರದ ಸಾಮಾಜಿಕ ಜೀವನದಲ್ಲಿ ಕೂಡ ಮುಖ್ಯವಾಗಿದೆ. ಅದು ೧೮೯೯ರಲ್ಲಿ ಪ್ರಾರಂಭವಾಯಿತು

ಮತ್ತು ಅದು ೧೯೨೦ರಲ್ಲಿ ಕ್ಷಾತ್ರಜಗದ್ಗುರುವಿನ ನೇಮಕದೊಂದಿಗೆ ಕೊನೆಗೊಂಡಿತು. ಇಪ್ಪತ್ತು ವರ್ಷಗಳ ಪ್ರಚಲಿತ ವಿದ್ಯಮಾನ (ಪ್ರಕರಣ) ಮಹಾರಾಷ್ಟ್ರದ ಧಾರ್ಮಿಕ ಮತ್ತು ಸಾಮಾಜಿಕ ಜೀವನದಲ್ಲಿ ಅಲ್ಲೋಲ-ಕಲ್ಲೋಲವನ್ನುಂಟು ಮಾಡಿತು. ಅದು ಸಂಪೂರ್ಣವಾಗಿ ಜಾತಿತಾರತಮ್ಯತೆಯನ್ನು ಕೊನೆಗೊಳಿಸದಿದ್ದರೂ ಜಾತಿಪದ್ಧತಿಯು ಅನುಭವಿಸುತ್ತಿದ್ದ ಸಾಮಾಜಿಕ ಪಾವಿತ್ರ್ಯತೆಗೆ ಬಲವಾದ ಪೆಟ್ಟನ್ನು ನೀಡಿತು.

ಮಧ್ಯಕಾಲೀನ ಯುಗಗಳಲ್ಲಿ ರೋಮನ್ ಕ್ಯಾಥೋಲಿಕ್ ಚರ್ಚು ತನ್ನ ಮೂಲ ಉದ್ದೇಶಗಳಿಂದ ಚ್ಯುತವಾಯಿತು. ಪೋಪರು ಸ್ವತಃ ತಾವೇ ಪರಮಾಧಿಕಾರವೆಂದು ಪರಿಗಣಿಸಲು ತೊಡಗಿದರು. ಪೋಪರು ರಾಜಕೀಯ ಅಧಿಕಾರಕ್ಕಿಂತ ಧಾರ್ಮಿಕ ಅಧಿಕಾರ ಸರ್ವಶ್ರೇಷ್ಠವೆಂದು ಭಾವಿಸಿದರು. ಯಾರಾದರೂ ಬೈಬಲಿಗೆ ಸವಾಲು ಹಾಕಿದರೆ ಅವರು ಒಬ್ಬ ಪಾಷಂಡಿ, ಮತ್ತು ಅವನನ್ನು ಚರ್ಚಿನ ನ್ಯಾಯಾಸ್ಥಾನದಲ್ಲಿ ವಿಚಾರಣೆಯಿಂದ ಶಿಕ್ಷಿಸಲಾಗುವುದು, ಗೆಲಿಲಿಯೋ, ಭೂಮಿಯು ಸೂರ್ಯನ ಸುತ್ತಲೂ ತಿರುಗುತ್ತದೆಯೆಂದು ಹೇಳಿದ್ದಕ್ಕೆ ಅವನನ್ನು ಏಳು ವರ್ಷಗಳವರೆಗೆ ಜೈಲಿಗೆ ತಳ್ಳಲಾಯಿತು. ತತ್ವಜ್ಞಾನಿ ಬ್ರೂನೋನನ್ನು ಸುಡುಗಂಬಕ್ಕೆ ಕಟ್ಟಿ ಜೀವಸಹಿತ ಸುಡಲಾಯಿತು. ಕೊಲಂಬಸನು ಭೂಮಿಯು ಗುಂಡಾಗಿದೆಯೆಂದು ನಂಬಿದ್ದರಿಂದ ಅವನನ್ನು ಹುಚ್ಚನೆಂದು ಕರೆದು ಕಲ್ಲುಗಳಿಂದ ಹೊಡೆಯಲಾಯಿತು. ಅಂತಹ ಪ್ರತಿಕ್ರಿಯಾವಾದಿ ಕಾಲದಲ್ಲಿ ಒಬ್ಬ ಜರ್ಮನಿಯ ಪಾದ್ರಿ (ಪೂಜಾರಿ) ಮಾರ್ಟಿನ್ ಲೂಥರ್, ಪೋಪನ ವಿರುದ್ಧ ಪ್ರತಿಭಟಿಸಿದ ಮತ್ತು ಪ್ರೊಟೆಸ್ಟೆಂಟ್ ಎಂಬ ಪಂಥವನ್ನು ಸ್ಥಾಪಿಸಿದ, ಹೆಚ್ಚು ಮಾನವೀಯವಾಗಿರುವ ಹಲವಾರು ಧಾರ್ಮಿಕ ಸುಧಾರಣೆಗಳನ್ನು ಜಾರಿಗೆ ತಂದನು.

ವೇದೋಕ್ತ ಪ್ರಕರಣವು ಶಾಹುರವರ ಜೀವನದಲ್ಲಿ ಬಹುಮಟ್ಟಿಗೆ ಮಾರ್ಟಿನ್ ಲೂಥರ್‌ರ ಸುಧಾರಣೆಗಳಂತೆಯೇ ಇತ್ತು. ಶಾಹುರವರು ಧರ್ಮವನ್ನು ವಿಕೃತಗೊಳಿಸುವ ಮತ್ತು ಅನ್ಯಾಯವನ್ನು ಮುಂದುವರಿಸುವ ಪ್ರತಿಕ್ರಿಯಾವಾದಿ ಪ್ರವೃತ್ತಿಗಳ ವಿರುದ್ಧ ಹೋರಾಡಿದರು. ಮಾರ್ಟಿನ್ ಲೂಥರ್‌ರಂತೆಯೇ ಅವರು ಕ್ಷಾತ್ರಜಗದ್ಗುರುವೆಂಬ ಹೊಸ ಪೀಠವನ್ನು ಸ್ಥಾಪಿಸಿದರು. ಶಾಹುರವರು ಸಾಮಾಜಿಕ ಸುಧಾರಕರ ಜೊತೆಗೆ ಧಾರ್ಮಿಕ ಸುಧಾರಕರೂ ಆಗಿದ್ದರು. ಇದು ಅವರ ಸ್ವಭಾವದ ಬಹುಮುಖ್ಯವಾದ ಮಗ್ಗುಲಾಗಿದೆ. ವೈಜ್ಞಾನಿಕ ಮನೋಭಾವದಿಂದ ಉಗಮಗೊಂಡ ಅದೇ ರೀತಿಯ ವಿಶ್ಲೇಷಣಾತ್ಮಕ ಶಕ್ತಿಸಾಮರ್ಥ್ಯಗಳು ಶಾಹು ಮತ್ತು ಮಾರ್ಟಿನ್ ಲೂಥರರನ್ನು ಪ್ರಚೋದಿಸಿದವು.

ಒಬ್ಬ ವ್ಯಕ್ತಿಯು ವೈಜ್ಞಾನಿಕ ಒಲವುಗಳ ಬಗ್ಗೆ ಚರ್ಚಿಸುವಾಗ ದೇವರ ಅಸ್ತಿತ್ವದ ಬಗ್ಗೆ ಅವನ ಅಭಿಪ್ರಾಯಗಳನ್ನು ಪರಿಗಣಿಸಬೇಕಾಗುತ್ತದೆ. ದೇವರು ದೈಹಿಕವಾಗಿ ಇರುವುದಾದರೆ ಭೌತವಿಜ್ಞಾನದ ನಿಯಮಗಳು ದೇವರಿಗೂ ಅನ್ವಯಿಸುತ್ತದೆ. ಭೌತವಿಜ್ಞಾನವು ದೇವರ ಅಸ್ತಿತ್ವವನ್ನು ಸಾಧಿಸಿ ತೋರಿಸಲು ಸಾಧ್ಯವಿಲ್ಲ. ಆದ್ದರಿಂದ ಆಸ್ತಿಕನೊಬ್ಬನನ್ನು ವೈಜ್ಞಾನಿಕನು ಎಂದು ಕರೆಯುವುದಕ್ಕಾಗುವುದಿಲ್ಲ. ಆದರೆ ಅದೇ ಸಮಯದಲ್ಲಿ ಭೌತಶಾಸ್ತ್ರವು ದೇವರು ಅಸ್ತಿತ್ವದಲ್ಲಿಲ್ಲವೆಂದೂ ಸಹ ಸಾಧಿಸಿ ತೋರಿಸಿಲ್ಲ. ಆದ್ದರಿಂದ ನಾಸ್ತಿಕನೊಬ್ಬನನ್ನು ಸಹ ವೈಜ್ಞಾನಿಕ ಎಂದು ಹೆಸರಿಸುವುದಕ್ಕಾಗುವುದಿಲ್ಲ. ಆಸ್ತಿಕನು ನಾಸ್ತಿಕನಿಗಿಂತ ವೈಜ್ಞಾನಿಕನಲ್ಲ ಅಥವಾ ನಾಸ್ತಿಕನು ಆಸ್ತಿಕನಿಗಿಂತ ವೈಜ್ಞಾನಿಕನಲ್ಲ. ಇಂಥ ಸಂದರ್ಭದಲ್ಲಿ ಒಬ್ಬ ವೈಜ್ಞಾನಿಕ ಮನುಷ್ಯ ಯಾವ ನಿಲುವು ತಾಳಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ. ದೇವರು ಅಸ್ತಿತ್ವದಲ್ಲಿದ್ದಾನೆಯೇ ಎಂಬ ಪ್ರಶ್ನೆಗೆ ಭೌತಶಾಸ್ತ್ರಜ್ಞನ ಉತ್ತರವು "ನಮಗೆ ಗೊತ್ತಿಲ್ಲ". ಈ ಉತ್ತರವು ಅಜ್ಞೇಯತಾವಾದದ ಉಗಮಕ್ಕೆ ಎಡೆಮಾಡಿಕೊಟ್ಟಿತು. ದೇವರ ಅಸ್ತಿತ್ವದ ಬಗ್ಗೆ ಸಕಾರಾತ್ಮಕ ಅಥವಾ ನಕಾರಾತ್ಮಕ ಹೇಳಿಕೆಯನ್ನು ಕೊಡುವ ಹಾಗಿಲ್ಲ. ಆದ್ದರಿಂದ

ವೈಜ್ಞಾನಿಕ ಮನುಷ್ಯನು ತಟಸ್ಥ (Agnostic) ಅಥವಾ ಸಂದೇಹವಾದಿಯ (Sceptic) ನಿಲುವನ್ನು ತಾಳಬೇಕಾಗುತ್ತದೆ. ವೈಜ್ಞಾನಿಕ ವ್ಯಕ್ತಿಗಳಾದ ಪಂಡಿತ ನೆಹರು, ಬರ್ಟ್‌ರಾಂಡ್ ರಸೆಲ್, ಐನ್‌ಸ್ಟೀನ್ ಅವರು ಈ ನಿಲುವನ್ನು ತಾಳಿದರು.

ಯಾರಾದರೂ ಮನಶ್ಶಾಸ್ತ್ರೀಯ ದೃಷ್ಟಿಕೋನದಿಂದಲೂ ದೇವರ ಅಸ್ತಿತ್ವದ ಪ್ರಶ್ನೆಯ ಬಗ್ಗೆ ನೋಡಬಹುದು. ಈ ವಿಧಾನದಲ್ಲಿ ದೇವರು ಒಂದು ಭೌತಿಕ ಇರುವು ಎನ್ನುವುದಕ್ಕೆ ಬದಲಾಗಿ ದೇವರು ಒಂದು ಪರಿಕಲ್ಪನೆಯೆಂದು ಭಾವಿಸಬಹುದು. ಮಾನವನ ನಾಗರಿಕತೆಯ ವಿಕಾಸದ ಒಂದು ಹಂತದಲ್ಲಿ ಮಾನವನು ತನ್ನ ಅನುಕೂಲಕ್ಕಾಗಿ ದೇವರ ಪರಿಕಲ್ಪನೆಯನ್ನು ಅಂಗೀಕರಿಸಿರಬಹುದು. ಈ ಅರ್ಥದಲ್ಲಿಯೇ ಕವಿ ಕೇಶವಸುತರು ಬರೆದಿದ್ದಾರೆ: "ದೇವರು ಮತ್ತು ಭೂತ (ದೆವ್ವ) ಗಳಿವೆ, ಆದರೆ ಅವುಗಳನ್ನು ಮನುಷ್ಯನಿರ್ಮಿತ." ದೇವರಿದ್ದಾನೆಂದು ಭಾವಿಸಿಕೊಳ್ಳುವ ಮೂಲಕ ಮಾನವಜೀವನದಲ್ಲಿರುವ ಕೆಲವು ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವುದು ಸಾಧ್ಯವಿದೆ. ಜೀವನ ಸುಲಭವಾಗುತ್ತದೆ. ಈ ಭಾವನೆಯಿಲ್ಲದೆ ಮಾಡಲೂಬಹುದು, ಆದರೆ ಮಾನವ ಜೀವನದಲ್ಲಿರುವ ಕೆಲವು ಸಮಸ್ಯೆಗಳನ್ನು ವಿವರಿಸುವುದು ಕಷ್ಟವಾಗುತ್ತದೆ. ನಿರ್ದಿಷ್ಟ ಊಹೆಗಳನ್ನು (ಕಲ್ಪನೆ) ಮಾಡದ ಹೊರತು ಯೂಕ್ಲಿಡಿಯನ್ನಿನ ಇಡೀ ರೇಖಾಗಣಿತದ ರಚನೆಯು ಈ ಊಹೆಗಳ ಮೇಲೆ ಆಧಾರಗೊಂಡಿದೆ. ಈ ಸಂರಚನೆಯು ಜನರಿಗೆ ಉಪಯೋಗಕರವಾಗಿರುವುದರಿಂದ ಅವರು ಈ ಊಹೆಗಳನ್ನು ಅಂಗೀಕರಿಸುತ್ತಾರೆ. ಅದೇ ವಿಷಯವನ್ನು ದೇವರ ಅಸ್ತಿತ್ವಕ್ಕೂ ಹೇಳಬಹುದು. ಅಂತಹ ಪ್ರಯೋಜನಕಾರಿ ದೃಷ್ಟಿಯಿಂದ ದೇವರ ಅಸ್ತಿತ್ವದ ಊಹೆ(ಕಲ್ಪನೆ)ಯನ್ನು ಒಪ್ಪುವುದರಿಂದ ವ್ಯಕ್ತಿಯನ್ನು ಅವೈಜ್ಞಾನಿಕ ಎಂದು ಕರೆಯುವ ಪ್ರಶ್ನೆಯೇ ಇಲ್ಲ.

ಮಾನವಜೀವನಕ್ಕೆ ಉಪಯೋಗವಾಗುವುದರಿಂದ ಅಂತಹ ಕೆಲವು ಪರಿಕಲ್ಪನೆಗಳನ್ನು ಒಪ್ಪಿಕೊಳ್ಳಲಾಗಿದೆ. ಪರಿಕಲ್ಪನೆಗಳಾದ ಜನತಂತ್ರ, ಸಮಾಜವಾದ, ಧರ್ಮನಿರಪೇಕ್ಷತೆ, ಸಮಾನತೆ, ಸಹೋದರ ಭಾವನೆ, ಸ್ವಾತಂತ್ರ್ಯ ಮೊದಲಾದವುಗಳು ಮಾನವಜೀವನದ ಮುಖ್ಯ ಮೌಲ್ಯಗಳಾಗಿವೆ. ಇವುಗಳಲ್ಲಿ ಯಾವುದನ್ನು ವೈಜ್ಞಾನಿಕವಾಗಿ ಸಾಧಿಸಿ ತೋರಿಸಿಲ್ಲ. ಮೌಲ್ಯಗಳು ವಿಜ್ಞಾನದ ವ್ಯಾಪ್ತಿಯಿಂದ ಅತೀತವಾದವು. ದೇವರು ಸಹ ಒಂದು ಮೌಲ್ಯವೇ. ಜನರು ಈ ಅರ್ಥದಲ್ಲಿ ಒಪ್ಪಿಕೊಳ್ಳುವ ದೇವರನ್ನು ಅವೈಜ್ಞಾನಿಕ ಎಂದು ಕರೆಯುವಂತಿಲ್ಲ.

ಜಗತ್ತಿನಲ್ಲಿರುವ ಬಹುಸಂಖ್ಯಾತ ಜನರು ದೇವರ ಭೌತಿಕ ಇರುವಿಕೆ ಅಥವಾ ಪರಿಕಲ್ಪನೆಯನ್ನು ಒಪ್ಪಿಕೊಂಡಿದ್ದಾರೆ. ಮೇಲಿನ ಎರಡು ದೃಷ್ಟಿಗಳಿಂದ ಒಪ್ಪಿಕೊಳ್ಳುವ ಜನರ ಸಂಖ್ಯೆ ನಗಣ್ಯ. ಆಸ್ತಿಕ ಬಹುಸಂಖ್ಯಾತ ಜನರ ಒಬ್ಬ ಮಹಾರಾಜ, ಒಬ್ಬ ಪ್ರಧಾನಮಂತ್ರಿ, ಒಬ್ಬ ನಾಯಕನು ಒಬ್ಬ ನಾಸ್ತಿಕನಾಗಲು ಸಾಧ್ಯವಿಲ್ಲ. ದೇವರ ಅಸ್ತಿತ್ವದ ಬಗ್ಗೆ ಪಂಡಿತ ನೆಹರು ಅವರು ಅಪವಾದವಾಗಿ ತಟಸ್ಥ(ಅಗ್ನಾಸ್ಟಿಕ್)ರಾಗಿದ್ದಿದ್ದನ್ನು ಬಿಟ್ಟರೆ, ಭಾರತವು ಎಂದಿಗೂ ನಾಸ್ತಿಕ ನಾಯಕನನ್ನು ಪಡೆದಿರಲಿಲ್ಲ. ಭಾರತದ ಎಲ್ಲಾ ನಾಯಕರು ಮತ್ತು ಇಂದಿನ ನಾಯಕರು ಆಸ್ತಿಕರಾಗಿದ್ದರು ಮತ್ತು ಅವರೆಲ್ಲರೂ ದೇವಸ್ಥಾನಗಳಿಗೆ ಭೇಟಿ ನೀಡಿದ್ದರು. ಜನರು ಎಡಪಂಥೀಯ ಆರ್ಥಿಕ ಚಿಂತನೆಗೆ ಆಕರ್ಷಿತರಾಗುತ್ತಾರೆ, ಆದರೆ ಅವರು ಎಡಪಂಥೀಯ ನಾಸ್ತಿಕ ದೃಷ್ಟಿಕೋನವನ್ನು ಜೀರ್ಣಿಸಿಕೊಳ್ಳಲಾರರು. ಆದ್ದರಿಂದ ಎಡಪಕ್ಷಗಳು ಭಾರತದಲ್ಲಿ ಅಧಿಕಾರಕ್ಕೆ ಬರುವುದು ಕಷ್ಟಕರವಾಗಿದೆ.

ಈ ಹಿನ್ನೆಲೆಯಲ್ಲಿ ಪರಿಶೀಲನೆ ಮಾಡಿದಾಗ, ದೇವರ ಬಗೆಗಿನ ಶಾಹುರವರ ಮನೋಭಾವ

ವೈಜ್ಞಾನಿಕವಾಗಿತ್ತೆಂದು ಕಾಣಬಹುದು. ಪ್ರಾಕೃತಿಕ ವಿಜ್ಞಾನಗಳನ್ನು ವಿಜ್ಞಾನವೆಂದು ಸಮೀಕರಿಸುವುದಕ್ಕೆ ಆಗುವುದಿಲ್ಲ, ಅದರೊಂದಿಗೆ ಸಾಮಾಜಿಕ ವಿಜ್ಞಾನಗಳನ್ನು ಸೇರ್ಪಡೆ ಮಾಡಬೇಕಾಗುತ್ತದೆ. ದೇವರನ್ನು ಒಪ್ಪಿಕೊಂಡ ಆಧಾರದ ಮೇರೆಗೆ ಶಾಹುರವರು ಧರ್ಮ ಮತ್ತು ವೇದಗಳನ್ನು ಒಪ್ಪಿಕೊಳ್ಳುವರು. ವೇದಗಳ ರಚನೆಯ ಕಾಲದಲ್ಲಿ ಧರ್ಮದ ಸ್ವಭಾವವು ವಿಶಾಲವಾಗಿತ್ತು. ಅದು ಮಧ್ಯಕಾಲೀನ ಯುಗಗಳ ಪುರಾಣಗಳ ಕಾಲದಲ್ಲಿ ಸಂಕುಚಿತ ಮತ್ತು ಕರ್ಮಠವಾಯಿತು. ಈ ಕಾಲಘಟ್ಟದಲ್ಲಿ ಸಾಮಾಜಿಕ ಅಸಮಾನತೆಗಳು ಬೆಳೆದವು ಮತ್ತು ಜಾತಿಯ ತಾರತಮ್ಯತೆ ಹೆಪ್ಪುಗಟ್ಟಿತು. ಶಾಹುರವರು ಪುರಾಣೋಕ್ತವನ್ನು ನಿರಾಕರಿಸಿದರು ಮತ್ತು ವೇದೋಕ್ತವನ್ನು ಒಪ್ಪಿಕೊಂಡರು. ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಅಂಗೀಕರಿಸಲು ಇದು ಸರಿಯಾದ ನಿಲುವಾಗಿತ್ತು.

ಶಾಹುರವರು ಪಶ್ಚಿಮದಿಂದ ಬಂದ ಕೆಲವು ಪರಿಕಲ್ಪನೆಗಳನ್ನು ಒಪ್ಪಿಕೊಂಡರು, ಆದರೆ ಅವರು ಪ್ರತಿಯೊಂದನ್ನೂ ಕಣ್ಣು ಮುಚ್ಚಿಕೊಂಡು ಒಪ್ಪಿಕೊಳ್ಳಲಿಲ್ಲ. ಅವರು ಸಹ ಕೆಲವನ್ನು ನಿರಾಕರಿಸಿದರು, ಆದರೆ ಅವರು ಎಲ್ಲಾ ಭಾರತೀಯ ಸಂಪ್ರದಾಯಗಳನ್ನು ನಿರಾಕರಿಸಲಿಲ್ಲ. ಹಾಲಿಯಿರುವ ಪರಿಸ್ಥಿತಿಗಳಿಗೆ ಒಗ್ಗಿಕೊಳ್ಳುವ ಮತ್ತು ಪ್ರಯೋಜನಕಾರಿಯಾದವುಗಳನ್ನು ಎರಡು ಕಡೆಗಳಿಂದಲೂ ಅಂಗೀಕರಿಸಿದರು. ಅವರು ಜಾತಿಯ ತಾರತಮ್ಯತೆಯನ್ನು ನಿರಾಕರಿಸಿದರು. ಆದರೆ ಭಾರತದ ಸಂಸ್ಕೃತಿಯಿಂದ ಹದಿನಾರು ಸಂಸ್ಕಾರಗಳನ್ನು ಒಪ್ಪಿಕೊಂಡರು. ಅವರು ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಆಧುನಿಕತೆಯನ್ನು ಅಂಗೀಕರಿಸಿದರು. ಆದರೆ ದೈನಂದಿನ ಜೀವನಶೈಲಿಯನ್ನು ನಿರಾಕರಿಸಿದರು. ಅವರಿಗೆ ವೈಜ್ಞಾನಿಕ ಮನೋಭಾವವಿಲ್ಲದಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ.

ಶಾಹುರವರ ಎಲ್ಲಾ ಕ್ರಿಯೆಗಳು (ಕ್ರಮಗಳು) ಮತ್ತು ನಿರ್ಧಾರಗಳನ್ನು ಪ್ರಸ್ತುತ ಲೇಖನದಲ್ಲಿ ವಿಶ್ಲೇಷಣೆ ಮಾಡಿಲ್ಲ. ಆದರೆ ಅವರ ವೈಜ್ಞಾನಿಕ ಮನೋಭಾವವನ್ನು ಪ್ರಮುಖಗೊಳಿಸುವುದನ್ನು ಮಾತ್ರ ವಿಶ್ಲೇಷಿಸಲಾಗಿದೆ. ಮನಸ್ಥಿತಿ ಒಂದೇ ಆಗಿರುವುದರಿಂದ ಕ್ರಿಯೆಗಳು ಬದಲಾಗಬಹುದು; ಕ್ರಿಯೆಗಳ ಮತ್ತೊಂದು ಗುಂಪನ್ನು ವಿಶ್ಲೇಷಿಸಿದರೂ ತೀರ್ಮಾನಗಳು ಬದಲಾಗುವುದಿಲ್ಲ.

ಶಾಹುರವರು ತಮ್ಮ ಬಾಲ್ಯದಲ್ಲಿ ಪಡೆದಿದ್ದ ಅನುಭವಗಳು, ಪಾಶ್ಚಿಮಾತ್ಯ ಮತ್ತು ಭಾರತದ ಅಧ್ಯಾಪಕರು ಮತ್ತು ಮಾರ್ಗದರ್ಶಕರಲ್ಲಿ ಬೆಳೆದದ್ದು, ವೈಜ್ಞಾನಿಕ ಮನೋಭಾವದ ಅಭಿವೃದ್ಧಿಗೆ ಸಹಾಯಕವಾಯಿತು ಮತ್ತು ಪ್ರೋತ್ಸಾಹಕವಾಗಿತ್ತು. ಸಹಜವಾಗಿ ತಮ್ಮ ಆಡಳಿತಾವಧಿಯಲ್ಲಿ ಅವರು ತೆಗೆದುಕೊಂಡ ನಿರ್ಧಾರಗಳು ವೈಜ್ಞಾನಿಕ ಮನೋಭಾವದ ಆಧಾರದ ಮೇಲೆ ಇದ್ದವು. ಈ ವಿಷಯದಲ್ಲಿ ಭಾರತದ ಯಾವ ಮಹಾರಾಜನೂ ಶಾಹುರವರ ಹತ್ತಿರಕ್ಕೆ ಬರಲಾರನು.

---

## ಆಧಾರಗ್ರಂಥಗಳು


1. The Impact of Science on Society; Bertrand Russel, Blackie and Sons (India) Ltd, Bombay, 1952.
2. The Rise of Scientific Philosophy; Hans Reichenbach, University of California Press, London, 1951.
3. Effect of Science on Society (Translation) Kamalakar Dixit, Samaj Prabodhan Sanstha, Pune, 1964.
4. Rajarshi Shahu: The King and The Man; K. G. Suryavanshi, Thokal Prakashan, Pune, 1984.
5. Marathi Vishwakosha, Vol. ix, ed. Lakshman Shastri Joshi, Maharashtra Rajya Sahitya Samskruthi Mandal, Mumbai, 1980.

೧೫

# ಶಾಹುರವರ ಸಾಮಾಜಿಕ ಮತ್ತು ರಾಜಕೀಯ ವ್ಯೂಹರಚನೆ

– ಡಾ. ಅಶೋಕ ಚೌಸಲ್ಕರ್

*ರಾಜ್ಯಶಾಸ್ತ್ರದ ಮತ್ತು ಸಾಮಾಜಿಕ ಇತಿಹಾಸದ ಪ್ರಾಧ್ಯಾಪಕರು*

ರಾಜರ್ಷಿ ಶಾಹುರವರು ಆಧುನಿಕ ಮಹಾರಾಷ್ಟ್ರವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ೨೦ನೇ ಶತಮಾನದ ಮೊದಲ ದಶಕದಲ್ಲಿ ಅವರು ಹಿಂದುಳಿದ ವರ್ಗಗಳ ರೈತರ ಸುಧಾರಣಾ ಆಂದೋಲನದ ಜನತಾಂತ್ರಿಕ ಒಳಧ್ವನಿಗಳನ್ನು ಗುರುತಿಸಿದ್ದರು. ಈ ಅವಧಿಯ ರಾಜಕಾರಣಕ್ಕೆ ವಸಾಹತುಶಾಹಿಯ ಬಣ್ಣವನ್ನು ಹಚ್ಚಲಾಯಿತು. ಬ್ರಿಟಿಷ್ ಸರಕಾರದ ವಿವಿಧ ಧೋರಣೆಗಳು ದೇಶದ ವಿವಿಧ ಭಾಗಗಳಲ್ಲಿ ಭಿನ್ನ ಭಿನ್ನವಾದ ರಾಜಕೀಯ ಪ್ರಭಾವಗಳು ಸಂಭವಿಸಿದವು. ಬ್ರಿಟಿಷ್ ಸರಕಾರವು ರಾಜಕೀಯ ಗಡಿಗಳನ್ನು ಗುರುತಿಸಿ, ಜನರಿಗೆ ಮಿತವಾದ ಹಕ್ಕುಗಳನ್ನು ನೀಡಿತು ಮತ್ತು ಅವರು ಸ್ವಲ್ಪ ರಾಜಕೀಯ ಅಧಿಕಾರ ಚಲಾಯಿಸುವುದಕ್ಕೆ ಅವಕಾಶ ಮಾಡಿಕೊಟ್ಟಿತು. ಅವರ ವಿಚಾರದ ಉದ್ದೇಶವು ರಾಷ್ಟ್ರೀಯತೆಯ ಉಬ್ಬರವನ್ನು ಮಂದಗೊಳಿಸುವುದಾಗಿತ್ತು. ವಿವಿಧ ರಾಜಕೀಯ ಗುಂಪುಗಳಿಗೆ ಲಭ್ಯವಿರುವ ಕೆಲವೇ ಕೆಲವು ರಾಜಕೀಯ ಹುದ್ದೆಗಳಿಗೆ ಪೈಪೋಟಿ ನಡೆಸುವುದಕ್ಕೆ ಅನುಮತಿ ನೀಡಿತು. ಹೊಸದಾಗಿ ಶಿಕ್ಷಣ ಪಡೆದ ವರ್ಗವು ಅಧಿಕಾರ ಹೊಂದಲು ಮತ್ತು ವಸಾಹತುಶಾಹಿಯ ನಿಜವಾದ ಶೋಷಣೆಯನ್ನು ಜನರು ಅರ್ಥಮಾಡಿಕೊಳ್ಳುವುದನ್ನು ತಡೆಯಲು ಇದನ್ನು ಮಾಡಲಾಗಿತ್ತು. ಸರಕಾರವು ಸಮಾಜದ ಮೇಲೆ ತನ್ನ ಹಿಡಿತವನ್ನು ಹೊಂದುವುದೇ ಆಗಿತ್ತು. ಹಾಲಿಯಿರುವ ಅತೃಪ್ತಿಯ ಪರಿಸ್ಥಿತಿಯು ಕೈಮೀರಿ ಬೆಳೆದರೆ ಸಶಸ್ತ್ರ ವಿರೋಧವನ್ನು ಎದುರಿಸಬೇಕಾಗುತ್ತದೆಯೆಂದು ಬ್ರಿಟಿಷ್ ಸರಕಾರ ಹೆದರಿ, ಈ ಧೋರಣೆಗಳು ಭಾರತದ ಊಳಿಗಮಾನ್ಯ ಮತ್ತು ಜಾತಿಪದ್ಧತಿಗಳ ಮೇಲೆ ಪ್ರಭಾವ ಬೀರಿದ್ದವು.

ಹಾಲಿಯಿರುವ ಜಾತಿಪದ್ಧತಿಯಿಂದ, ಮೊದಲ ಅಭಿವೃದ್ಧಿಯ ಕ್ರಮಗಳು ಕೇವಲ ಬ್ರಾಹ್ಮಣ ವರ್ಗಕ್ಕೆ ಮಾತ್ರ ಪ್ರಯೋಜನಕಾರಿಯಾಗಿದ್ದವು. ಅವರಲ್ಲಿ ರಾಜಕೀಯ ಜಾಗೃತಿ ಬೆಳೆಯಿತು ಮತ್ತು ಸ್ವಾತಂತ್ರ್ಯದ ಆಂದೋಲನವನ್ನು ಪ್ರಾರಂಭಿಸಿದರು. ತೀವ್ರಗಾಮಿ ಬ್ರಾಹ್ಮಣ ನಾಯಕರು ರಾಜಕೀಯ ಅಧಿಕಾರದ ಪಾಲನ್ನು ಕೊಡಲು ಸಿದ್ಧವಾಗಿಲ್ಲದಿದ್ದಾಗ ಮಾತ್ರ ಹಿಂದುಳಿದ ವರ್ಗಗಳಲ್ಲಿ ಈ ರಾಜಕೀಯ ಜಾಗೃತಿ ಮೂಡಿತ್ತು. ಹಿಂದುಳಿದ ವರ್ಗಗಳು ಜನತಾಂತ್ರಿಕ ಹಕ್ಕುಗಳನ್ನು ಬಯಸಿದಾಗ ಮತ್ತು ಈ ಬಗ್ಗೆ ಕಾಂಗ್ರೆಸ್ ನಾಯಕತ್ವ ಅಸಡ್ಡೆ ತೋರಿಸಿದಾಗ ಹಿಂದುಳಿದ ವರ್ಗಗಳು ಕಾಂಗ್ರೆಸ್ ನಾಯಕರ ನಡುವೆ ಭಿನ್ನಾಭಿಪ್ರಾಯ ಮೂಡಿತು. ಭಾರತೀಯರ ಪ್ರಾತಿನಿಧ್ಯವುಳ್ಳ ಸಂಸ್ಥೆಯನ್ನು ಸ್ಥಾಪನೆ ಮಾಡಿದಾಗ, ಅದರಲ್ಲಿ ಪ್ರತಿಯೊಬ್ಬನೂ ಅಧಿಕಾರದ ಪಾಲನ್ನು ಪಡೆಯಬೇಕು ಮತ್ತು ಇದಕ್ಕಾಗಿ ಸಮುದಾಯದ ಪ್ರತಿಯೊಂದು ವಿಭಾಗವು

ಪ್ರಗತಿಪರವಾಗಿರಬೇಕೆಂಬುದು ಮಹಾತ್ಮ ಜೋತಿಬಾ ಫುಲೆಯವರ ಅಭಿಪ್ರಾಯವಾಗಿತ್ತು. ಅವರು ಬ್ರಿಟಿಷರ ಸಾರ್ವಭೌಮತೆಯನ್ನು ಒಪ್ಪಿಕೊಳ್ಳಬೇಕು ಮತ್ತು ಸಮುದಾಯದ ಪ್ರಗತಿಯ ಮಾರ್ಗದಲ್ಲಿ ಅಡ್ಡಬರುವವರನ್ನು ವಿರೋಧಿಸಬೇಕು. ತಮ್ಮ ಬೆಂಬಲಿಗರೊಂದಿಗೆ ಫುಲೆಯವರು ಬ್ರಿಟಿಷ್ ಸರಕಾರವನ್ನು ಬೆಂಬಲಿಸಿದ್ದರು. ಕಾಂಗ್ರೆಸ್ ಆಂದೋಲನವನ್ನು ಗಮನಾರ್ಹವಾಗಿ ವಿರೋಧಿಸಿದರು.[1]

ತೀವ್ರಗಾಮಿಗಳು ಕಾಂಗ್ರೆಸ್ಸಿನಲ್ಲಿ ಮೇಲುಗೈ ಸಾಧಿಸುತ್ತಿರುವ ಸಂದರ್ಭದಲ್ಲಿ ಶಾಹುರವರು ಸಾಮಾಜಿಕ ರಾಜಕೀಯ ಕ್ಷೇತ್ರಕ್ಕೆ ಪ್ರವೇಶಿಸಿದರು. ರಾಷ್ಟ್ರೀಯ ಕಾಂಗ್ರೆಸ್ ಹೆಚ್ಚು ಜಯಪ್ರಿಯವಾಗುತ್ತಿತ್ತು ಮತ್ತು ಮಹಾರಾಷ್ಟ್ರದಲ್ಲಿ ಶಿಕ್ಷಿತ ಬ್ರಾಹ್ಮಣವರ್ಗವು ಕಾಂಗ್ರೆಸ್ಸಿನ ನಾಯಕರಾದಾಗ ಜಮೀನುದಾರರು ಮತ್ತು ಗುತ್ತಿಗೆದಾರರು ಬ್ರಿಟಿಷ್ ಸರಕಾರದ ಪರವಾಗಿದ್ದರು. ಸ್ವದೇಶಿ ಶಕ್ತಿಯನ್ನು (ಅಲೆಯನ್ನು) ಮಟ್ಟಹಾಕಲು ಬ್ರಿಟಿಷ್ ಸರಕಾರವು ತೀವ್ರಗಾಮಿಗಳನ್ನು ದಮನಮಾಡತೊಡಗಿತು. ಅವರು ಶಿಕ್ಷಿತ ಬ್ರಾಹ್ಮಣ ವರ್ಗದ ಬೆಂಬಲ ಗಳಿಸಲು ತೀವ್ರಗಾಮಿ ಹಿಂದುಳಿದ ವರ್ಗಗಳಿಗೆ ಜನತಾಂತ್ರಿಕ ಹಕ್ಕುಗಳನ್ನು ನಿರಾಕರಿಸಿದರು. ವೇದೋಕ್ತದ ಸಮಸ್ಯೆಯಲ್ಲಿ ತಿಲಕರು ಸಂಕುಚಿತ ಮನೋಭಾವದ ಮತ್ತು ಸಮೀಪದೃಷ್ಟಿರೋಗದ ಬ್ರಾಹ್ಮಣರಿಗೆ ಬೆಂಬಲಿಸಿದರು ಮತ್ತು ಪ್ರೊ. ವಿಜ್‌ಪೂರ್‌ಕರ್ ಅವರು ಜಾತಿಪದ್ಧತಿಯನ್ನು ಹೊಗಳಿದರು. ಜಾತಿಪದ್ಧತಿಯನ್ನು ಎತ್ತಿಹಿಡಿದ ತಿಲಕ, ವಿಜಾಪೂರ್‌ಕರ್ ಮತ್ತು ರಾಜವಾಡೆರಂತಹವರನ್ನು ಹಿಂದುಳಿದ ವರ್ಗಗಳು ಬೆಂಬಲಿಸುವುದು ಅಸಾಧ್ಯವಾಯಿತು. ೧೮೮೫ ಮತ್ತು ೧೯೨೦ ನಡುವೆ ರಾಷ್ಟ್ರೀಯ ಆಂದೋಲನದ ಪ್ರಭಾವ ಮತ್ತು ಪ್ರಚಾರ ಬೆಳೆದಂತೆಯೇ ಹಿಂದುಳಿದ ವರ್ಗಗಳ ಆಶೋತ್ತರಗಳು ಬೆಳೆದವು; ಈ ಎರಡು ಆಂದೋಲನಗಳು ಮತ್ತು ಈ ಆಂದೋಲನಗಳ ಬಗ್ಗೆ ಬ್ರಿಟಿಷ್ ಸರಕಾರದ ಕುಯುಕ್ತಿಯ ಧೋರಣೆಗಳು ಮತ್ತು ಅವು ಹೇಗೆ ಶಾಹುರವರಿಗೆ ಕಾಲ ಮತ್ತು ಅವಕಾಶಗಳನ್ನು ತಮ್ಮನ್ನು ತಾವೇ ಸ್ಥಾಪಿಸಿಕೊಳ್ಳಲು ಒದಗಿಸಿಕೊಟ್ಟವು ಎಂಬ ಸಂದರ್ಭದಲ್ಲಿ ನಾವು ಅವುಗಳ ವ್ಯೂಹರಚನೆಗಳನ್ನು ಅಧ್ಯಯನ ಮಾಡಬೇಕಾಗಿದೆ.

ವೇದೋಕ್ತದ ಪ್ರಕರಣದ ನಂತರ ಶಾಹುರವರು ಯಾರ ಪಕ್ಷ ವಹಿಸಬೇಕೆಂಬ ಬಗ್ಗೆ ನಿರ್ಧರಿಸಲಾಗಲಿಲ್ಲ. ಅವರು ತಮ್ಮ ಇಡೀ ಜೀವನವನ್ನು ದಲಿತರ, ಶೋಷಿತರ ಮತ್ತು ಹಿಂದುಳಿದ ವರ್ಗಗಳ ಏಳಿಗೆಗಾಗಿ ಮುಡುಪಿಡಬೇಕೆಂದು ದೃಢಸಂಕಲ್ಪ ಮಾಡಿದರು. ಬಹುಮಟ್ಟಿಗೆ ಈ ಕೆಳಕಂಡ ಐದು ತತ್ವಗಳ ಆಧಾರದಲ್ಲಿ ಸ್ಥಾಪಿಸಿದ ಸಾಮಾಜಿಕ ಸಂಸ್ಥೆಗಳ ಮತ್ತು ಹಿಂದುಳಿದ ವರ್ಗಗಳ ಆಂದೋಲನಗಳನ್ನು ಶಾಹುರವರು ಜಾರಿಗೊಳಿಸಲು ಪ್ರಯತ್ನಿಸಿದರು.

(೧) ಧರ್ಮಕ್ಕೆ ಸಾಮಾಜಿಕ ನೈತಿಕತೆಯ ಅಸ್ತಿವಾರವನ್ನು ಹಾಕುವುದಕ್ಕೆ ವಿಸ್ತೃತ ಧಾರ್ಮಿಕ ಸುಧಾರಣೆಯನ್ನು ತರುವುದು ಮತ್ತು ಪುರೋಹಿತಶಾಹಿಯ ಪ್ರಾಬಲ್ಯವನ್ನು ಕೊನೆಗೊಳಿಸುವುದು.

(೨) ಶಿಕ್ಷಣ ಪ್ರಸಾರಗೊಳಿಸುವುದು ಮತ್ತು ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಒತ್ತಾಯಿಸುವುದು.

(೩) ಹಿಂದುಳಿದ ವರ್ಗಗಳ ಜಾತಿ–ವಾರು ಸಂಸ್ಥೆಗಳನ್ನು ಬೆಳೆಸಲು; ಕ್ಷತ್ರಿಯರಲ್ಲಿ ಕ್ಷತ್ರೀಯ ಚೇತನ(ಸತ್ವ)ವನ್ನು ತುಂಬುವ ಮೂಲಕ ಅವರಲ್ಲಿ ಜನತಾಂತ್ರಿಕ ಆಶೋತ್ತರಗಳನ್ನು ಜಾಗೃತಿಗೊಳಿಸಲು ಮತ್ತು ಅವರ ಆತ್ಮಗೌರವವನ್ನು ಹೆಚ್ಚಿಸುವುದು.

(೪) ಸ್ವತಂತ್ರ ಮೀಸಲು ಮತದಾರರ ಸಮುದಾಯ (ಕ್ಷೇತ್ರ) ಮತ್ತು ಮೀಸಲು ಸ್ಥಾನಗಳನ್ನು ಸ್ಥಾಪಿಸುವ ಮೂಲಕ ಮೇಲುಜಾತಿ ವರ್ಗಗಳ ಸಾಮಾಜಿಕ ಮತ್ತು ರಾಜಕೀಯ ಪ್ರಾಬಲ್ಯವನ್ನು ಕಡಿಮೆ ಮಾಡುವುದು.

(೫) ಸಾಮಾಜಿಕ ಏಳಿಗೆ ಮತ್ತು ಕೃಷಿಯ ಸುಧಾರಣೆಗಾಗಿ ಹಿಂದುಳಿದ ವರ್ಗಗಳ ಮತ್ತು ಬ್ರಾಹ್ಮಣೇತರರ ಪಕ್ಷಗಳ ಸ್ಥಾಪನೆಯನ್ನು ಬ್ರಿಟಿಷ್ ಸರಕಾರದ ನೆರವಿನಿಂದ ಬೆಳೆಸುವುದು.

ಇಪ್ಪತ್ತನೇ ಶತಮಾನದ ಮೊದಲ ಎರಡು ಅಥವಾ ಮೂರು ದಶಕಗಳಲ್ಲಿ ಚಳುವಳಿಗಳಾದ ಇವು ದಕ್ಷಿಣ ಮತ್ತು ಉತ್ತರಭಾರತದಲ್ಲಿ ಪ್ರಾರಂಭಗೊಂಡವು. ಶಾಹುರವರು ಈ ಆಂದೋಲನಗಳನ್ನು ಪ್ರೋತ್ಸಾಹಿಸಿದರು. ಶಾಹುರವರು ವಿಶಾಲದೃಷ್ಟಿಯಿಂದ ಒಬ್ಬ ಉದಾರಿ ಮತ್ತು ಸಹನಶೀಲ ವ್ಯಕ್ತಿಯಾಗಿದ್ದರು. ಅವರು ಒಬ್ಬ ಜಾಣ ರಣತಂತ್ರಜ್ಞರಾಗಿದ್ದರು. ಬ್ರಿಟಿಷರು ಶಿವಾಜಿಯ ವಂಶಸ್ಥನು ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸದಿರಲೆಂದು ಅವರ ಮೇಲೆ ಒಂದು ಕಣ್ಣಿಟ್ಟಿದ್ದರು. ಈ ಮೊದಲು ಸಹ ಬ್ರಿಟಿಷರು ಶಾಹುರವರ ಪೂರ್ವಿಕರ ಮೇಲೆ ಎಚ್ಚರ ವಹಿಸಿದ್ದರು ಮತ್ತು ಅವರಿಗೆ ತೊಂದರೆ ನೀಡಿದ್ದರು. ಈ ಬಗ್ಗೆ ಅರಿವಿದ್ದ ಶಾಹುರವರು ಬ್ರಿಟಿಷರೊಡನೆ ನಡೆಸಿದ ವ್ಯವಹಾರಗಳಲ್ಲಿ ಬಹಳ ಜಾಗರೂಕರಾಗಿದ್ದರು.[2]

೨

ವೇದೋಕ್ತ ವಿವಾದವು ಧಾರ್ಮಿಕ ಸುಧಾರಣೆಗಳನ್ನು ತೀವ್ರಗೊಳಿಸಲು ಪ್ರಚೋದಿಸಿತು. ಸ್ವಾಮಿ ದಯಾನಂದ, ಕೇಶವಚಂದ್ರ ಮತ್ತು ಜೋತಿಬಾ ಫುಲೆ ಅವರು ಮಾಡಿದ ಮಹಾ ಕೆಲಸವನ್ನು ಅವರು ಹೊಗಳಿದರು ಮತ್ತು ಸಂಘಟನೆಗಳಾದ ಬ್ರಹ್ಮೋಸಮಾಜ, ಆರ್ಯಸಮಾಜ ಮತ್ತು ಸತ್ಯಶೋಧಕ ಸಮಾಜಗಳು ಧಾರ್ಮಿಕ ಗುಲಾಮತ್ವದಿಂದ ಸಮಾಜವನ್ನು ವಿಮೋಚನೆಗೊಳಿಸಲು ಒತ್ತಾಯಪಡಿಸಿದರು. ಸಾಮಾಜಿಕ ಸುಧಾರಣೆಯ ಗುರಿಯು ಸಾರ್ವಜನಿಕ ನೀತಿಯ ಧ್ವಜವನ್ನು ಎತ್ತಿಹಿಡಿಯುವುದು, ಧರ್ಮದ ಹೆಸರಿನಲ್ಲಿ ಶೋಷಣೆಮಾಡುವುದನ್ನು ಶಾಹುರವರು ವಿರೋಧಿಸಿದರು. ಈ ಮಧ್ಯೆ ಜೋತಿಬಾ ಫುಲೆ ಮತ್ತು ಸ್ವಾಮಿ ದಯಾನಂದ ಅವರು ಹೊಸ ವಿಚಾರಗಳನ್ನು ಪ್ರಚಾರ ಮಾಡತೊಡಗಿದರು. ಫುಲೆಯವರು ಬ್ರಾಹ್ಮಣರ ಧಾರ್ಮಿಕ ಯಜಮಾನಿಕೆಯನ್ನು ಕಟುವಾಗಿ ಟೀಕಿಸಿದರು ಮತ್ತು ಅವರ ಧಾರ್ಮಿಕ ನಿಲುವು ದುರ್ಬಲ ಅಂಶವೆಂದು ಬಯಲುಗೊಳಿಸಿದರು. ಅವರ ಸತ್ಯಶೋಧಕ ಸಮಾಜವು ದೇವರು ಮತ್ತು ಭಕ್ತರ ನಡುವೆ ಯಾವ ಮಧ್ಯಸ್ಥಗಾರನೂ (ಪೂಜಾರಿ) ಇರಬಾರದೆಂದು ದೃಢವಾಗಿ ನಂಬಿತ್ತು. ಅವರು ಎಲ್ಲಾ ಮನುಷ್ಯರು ವೇದಗಳ ಹಕ್ಕನ್ನು ಹೊಂದಿದ್ದಾರೆಂದು ಹೇಳಿದರು; ಇಡೀ ಮಾನವ ಜನಾಂಗ ಸರಿಸಮಾನ. ಸ್ವಾಮಿ ದಯಾನಂದರ ಪ್ರಕಾರ ಜನರನ್ನು ಶೋಷಣೆ ಮಾಡುವ ಒಂದು ಧರ್ಮ ಸಮಾಜದಲ್ಲಿ ಅಸ್ತಿತ್ವದಲ್ಲಿರಬಾರದು. ಬ್ರಾಹ್ಮಣರಿಗೆ ಭಿಕ್ಷೆಗಳನ್ನು ನೀಡುವುದು, ಧರ್ಮದ ಆಚರಣೆಯು ಸ್ವಾರ್ಥದ ಒಂದು ದಾರಿ, ಈ ಆಚರಣೆಯನ್ನು ನಿರ್ಮೂಲನೆ ಮಾಡುವುದರಿಂದ ಈ ದೇಶವನ್ನು ಉಳಿಸಬಹುದೆಂದು ಶಾಹು ಹೇಳಿದರು.[3]

ಒಂದು ಹೊಸ ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸುವುದು ಧಾರ್ಮಿಕ ಸುಧಾರಣೆಗಳಿಗೆ ಅನಿವಾರ್ಯ. ಬ್ರಾಹ್ಮಣರ ಬಲಾಢ್ಯ ಯಜಮಾನಿಕೆಯನ್ನು ನೆಲಸಮ ಮಾಡುವ ಮನವರಿಕೆಯಿಂದ ಶಾಹುರವರು ಸತ್ಯಶೋಧಕ ಸಮಾಜವನ್ನು ಪ್ರೋತ್ಸಾಹಿಸಿದರು. ಸತ್ಯಶೋಧಕ ಸಮಾಜದ ತತ್ವಗಳಾದ ಸಮಾನತೆ ಮತ್ತು ಸಹೋದರ ಭಾವನೆಗಳೆರಡು ಅವರಿಗೆ ಆಪ್ಯಾಯಮಾನವಾದವು. ಜನವರಿ ೧೧, ೧೯೧೧ರಲ್ಲಿ ಶಾಹುರವರ

ಪ್ರೋತ್ಸಾಹದಿಂದ ಸತ್ಯಶೋಧಕ ಸಮಾಜವು ಕೊಲ್ಹಾಪುರದಲ್ಲಿ ಸ್ಥಾಪನೆಗೊಂಡಿತು.[4] ನಂತರ ಸತ್ಯಶೋಧಕದ ಜಲ್ಸಾಗಳ ದೂರುಗಳನ್ನು ಸಲ್ಲಿಸಲಾಯಿತು. ಆಗ ಶಾಹುರವರು "ನಾವು ಜಲ್ಸಾಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ; ಆದರೆ ಅವು ತಿಳಿಸುವ ಬೋಧನೆಯನ್ನು ಎಲ್ಲಾ ಕಡೆಗೂ ಹರಡಬೇಕೆಂದು ಹೇಳಿದರು."[5] ಶಾಹು ಕೂಡ ಥಿಯೋಸಫಿಯ ಕಡೆಗೆ ಆಕರ್ಷಿತರಾದರು. ಅವರ ಧಾರ್ಮಿಕ ಕುತೂಹಲ ಅದ್ಭುತವಾದುದು. ಮದ್ರಾಸಿಗೆ ಭೇಟಿ ನೀಡಿದಾಗ ಡಾ. ಬೆಸೆಂಟ್ ಮತ್ತು ಜಾರ್ಜ್ ಅರುಂಡಲೆಯವರೊಂದಿಗೆ ಧರ್ಮದ ಬಗ್ಗೆ ಚರ್ಚೆಗಳನ್ನು ನಡೆಸಿದ್ದರು. ಆದರೆ ಅವರ ವಿಚಾರಗಳಿಂದ ಶಾಹುರವರು ಹೆಚ್ಚು ಪ್ರಭಾವಿತರಾಗಲಿಲ್ಲ.[6]

ಶಾಹುರವರು ಸತ್ಯಶೋಧಕ ಸಮಾಜದ ಸಾಮಾಜಿಕ ತಾತ್ವಿಕತೆಯನ್ನು ಒಪ್ಪಿಕೊಂಡರು. ಫುಲೆಯವರ ಮಾರ್ಗವನ್ನು ಒಪ್ಪಿಕೊಂಡಾಗ ಮಾತ್ರ ಧಾರ್ಮಿಕ ಸ್ವಾತಂತ್ರ್ಯ ಪಡೆಯುವುದು ಸಾಧ್ಯವೆಂದು ಶಾಹುರವರು ಭಾವಿಸಿದರು. ಕೆಲವು ವರ್ಷಗಳ ನಂತರ ಉತ್ತರಭಾರತದಲ್ಲಿ ಆರ್ಯಸಮಾಜವು ಹಿಂದುಳಿದ ವರ್ಗಗಳಲ್ಲಿ ವೇದಗಳ ಬಗ್ಗೆ ತಿಳುವಳಿಕೆ ನೀಡಲು ಪ್ರಾರಂಭಿಸಿತು. ಮಹಾರಾಜ ಪ್ರತಾಪಸಿಂಹರ ಅಪ್ಪಣೆಯ ಮೇರೆಗೆ ಅವರು (ಶಾಹು) ಆರ್ಯಸಮಾಜದ ಪ್ರೋತ್ಸಾಹಕರಾದರು. ಅದೇ ಸಮಯದಲ್ಲಿ ಸ್ವಾಮಿ ದಯಾನಂದರು ಕೂಡ ಸಮಾಜ ಸುಧಾರಣೆಯ ಎಲ್ಲಾ ವಿಧಗಳನ್ನು ಬೆಂಬಲಿಸಿದರು. "ಸತ್ಯಶೋಧಕ ಸಮಾಜದಂತಹ ಸಂಘಟನೆಗಳೂ ಕೆಲವು ಸುಧಾರಣೆಗಳನ್ನು ಮಾಡಿವೆ, ಅವು 'ಕಣ್ಣಿಗೆ ಕಣ್ಣು' ಎಂಬ ಮನೋಭಾವದಿಂದ ಹೆಚ್ಚು ಸಫಲವಾಗಲಾರವು. ವೈದಿಕಧರ್ಮದ ಮೂಲಕವೇ ಜಾಗೃತಗೊಳಿಸುವುದು ದಿವ್ಯೌಷಧ(ರಾಮಬಾಣ) ವಾಗಿದೆ?! ಎಂದು ಘೋಷಿಸುವುದಕ್ಕೆ ಇದೇ ಕಾರಣವಾಗಿದೆ.[7] ಆರ್ಯಸಮಾಜವು ವೇದಗಳ ಬಗ್ಗೆ ಶ್ರದ್ಧೆಯನ್ನು ಹೊಂದಿತ್ತು ಮತ್ತು ಅದು ಸಂಪ್ರದಾಯದ ಎಲ್ಲಾ ಸಂಬಂಧಗಳನ್ನು ಮುರಿದುಹಾಕಿರಲಿಲ್ಲವೆಂದು ಶಾಹು ನಂಬಿದ್ದರು. ಹೀಗೆ ವೈದಿಕಧರ್ಮವು ಜ್ಞಾನ ಮತ್ತು ಪ್ರಗತಿಯ ಬೆಳವಣಿಗೆಗೆ ಸಹಾಯಕವಾಗುವುದರಿಂದ ಜಾತಿಯ ದ್ವೇಷವು ಕಡಿಮೆಯಾಗುವುದು.[8] ಅವರು ಆರ್ಯಸಮಾಜದ ಸಹಾಯದೊಂದಿಗೆ ಜಾತಿ ಭಿನ್ನತೆಗಳನ್ನು ನಾಶಮಾಡಬಹುದೆಂದು ಚಿಂತಿಸಿದರು. ಸತ್ಯಶೋಧಕರು ದೇವರನ್ನು ನಂಬದಿರುವುದಕ್ಕೆ ಮತ್ತು ಮೂರ್ತಿಪೂಜೆಯಲ್ಲಿ ತೊಡಗದಿರುವ ಹಕ್ಕನ್ನು ಹೊಂದಿದ್ದಾರೆ. ಆದರೆ ಅವರು ಬೇರೆಯವರ ಮೇಲೆ ತಮ್ಮ ಅಭಿಪ್ರಾಯಗಳನ್ನು ಹೇರುವ ಹಕ್ಕನ್ನು ಹೊಂದಿಲ್ಲ.[9]

ಧಾರ್ಮಿಕ ಸುಧಾರಣೆಗಳನ್ನು ಪ್ರಾರಂಭಿಸುವ ಪ್ರಕ್ರಿಯೆಯಲ್ಲಿ ಶಾಹುರವರು ಶಂಕರಾಚಾರ್ಯರ ಪೀಠವು ಅಧಿಕಾರ, ಸಂಪತ್ತು, ತನ್ನ ಜಾತಿಯಲ್ಲಿ ಒಣಪ್ರತಿಷ್ಠೆ ಮತ್ತು ಅಹಂಕಾರಿ ರಾಜಕಾರಣದ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದ್ದನ್ನು ಬಹಿರಂಗಗೊಳಿಸಿದರು. ಧರ್ಮದಲ್ಲಿ ಬ್ರಾಹ್ಮಣರ ಬಲಾಢ್ಯ ಯಜಮಾನಿಕೆಯನ್ನು ವಿರೋಧಿಸುವ ಸಲುವಾಗಿ, ಧಾರ್ಮಿಕ ಮಧ್ಯಸ್ಥಗಾರನನ್ನು ಮುಂದುವರಿಸುವ ಕ್ಷಾತ್ರಜಗದ್ಗುರು ಎಂಬ ಪೀಠ ಸಂಸ್ಥೆಯನ್ನು ಸ್ಥಾಪಿಸುವುದಕ್ಕೆ ತಮ್ಮ ಹಲವು ಹಿತೈಷಿಗಳು ವಿರೋಧವನ್ನು ವ್ಯಕ್ತಪಡಿಸಿದರೂ ಶಾಹುರವರು ಅದನ್ನು ಸ್ಥಾಪಿಸಿದರು. ಧಾರ್ಮಿ ಕಕ್ಷೇತ್ರದಲ್ಲಿ ಜಗದ್ಗುರುವನ್ನು ಆಡಳಿತಗಾರನನ್ನಾಗಿ ಮಾಡಲು ಮತ್ತು ದೇವರ ಪ್ರತಿನಿಧಿಯೆಂದು ಅಲ್ಲ ಎನ್ನುವುದಕ್ಕಾಗಿ ಬಯಸಿದ್ದರು.[10] ಈ ಕ್ರಮದಿಂದ ಆಕಸ್ಮಿಕವಾಗಿ ಹುಟ್ಟಿನಿಂದ ಬ್ರಾಹ್ಮಣರಿಗೆ ನೀಡಿದ್ದ ಪಾರಮ್ಯತೆಯನ್ನು ಸವಾಲುಹಾಕಲು ಮತ್ತು ನಾಶ ಮಾಡಲು ಶಾಹು ಅಪೇಕ್ಷಿಸಿದ್ದರು. ಅವರು ಜಗದ್ಗುರುವನ್ನು ಧಾರ್ಮಿಕ ಮತ್ತು ಸಾಮಾಜಿಕ ವ್ಯವಹಾರಗಳಲ್ಲಿ ಆಜ್ಞೆಗಳನ್ನು ಹೊರಡಿಸಲು ಬಳಸಿಕೊಳ್ಳಲಿಲ್ಲ. ಅವರು ಸಾಮಾಜಿಕ ಸುಧಾರಣೆಗಳಿಗೆ ಧಾರ್ಮಿಕ ಸಮ್ಮತಿ ಪಡೆಯಲು ಅದನ್ನು ಮಾಡಿದ್ದರೆ ಇತಿಹಾಸದಲ್ಲಿ ಯುಗ-ನಿರ್ಮಾಣದ ಘಟನೆಯಾಗಿರುತ್ತಿತ್ತು.

ಶಾಹುರವರು ತಮ್ಮ ಆತ್ಮಸಾಕ್ಷಿಗೆ ಒಪ್ಪುವಂತಹ ಅಂಶಗಳನ್ನು ಮಾತ್ರ ಪ್ರತಿಯೊಂದು ಧಾರ್ಮಿಕ ಸುಧಾರಣೆಯ ಆಂದೋಲನಗಳಿಂದ ಎಚ್ಚರಿಕೆಯಿಂದ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಮಾನವನಿಂದ ಧಾರ್ಮಿಕ ಗ್ರಂಥಗಳು ರಚಿತವಾಗಿವೆ ಮತ್ತು ಮೂರ್ತಿಪೂಜೆ ಸೂಕ್ತವಲ್ಲವೆಂದು ಅವರು ಪರಿಭಾವಿಸಿದ್ದರು. ಅವರು ದೇವರು ಮತ್ತು ಮನುಷ್ಯ(ಭಕ್ತ) ನ ನಡುವೆ ಮಧ್ಯಸ್ಥಗಾರನಿರಬಾರದೆಂದು ಬಯಸಿದ್ದರು. ಜಾತಿ ಮತ್ತು ವರ್ಣಗಳ ತಾರತಮ್ಯತೆ ತಪ್ಪು. ಮಾನವನ ಘನತೆಯು ಅವರ ಕೃತಿಗಳ ಮೇಲೆ ಅವಲಂಬಿಸಿದೆ ಮತ್ತು ಒಳ್ಳೆಯ ಕೆಲಸಗಳನ್ನು ಮಾಡುವ ವ್ಯಕ್ತಿಯೊಬ್ಬನನ್ನು ನಂಬಬೇಕೆಂದು ಅವರು ಹೇಳಿದ್ದರು. ಎಲ್ಲಾ ಧರ್ಮಗಳು ದೇವರ ಕಡೆಗೆ ಹೋಗುವ ಮಾರ್ಗಗಳನ್ನು ತೋರಿಸುತ್ತದೆ ಎಂದು ಅವರು ಮನಗಂಡಿದ್ದರು; ಆದ್ದರಿಂದ ಯಾವ ಧರ್ಮವೂ ಒಂದಕ್ಕಿಂತ ಮತ್ತೊಂದು ದೊಡ್ಡದಲ್ಲ.[11]

೩

ಜನರ ಬಡತನಕ್ಕೆ ಮುಖ್ಯಕಾರಣ ಶಿಕ್ಷಣದ ಕೊರತೆಯೆಂದು ತಿಳಿದು ಅವರು ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಪ್ರೋತ್ಸಾಹಿಸಿದರು. ಶಿಕ್ಷಣವು ಹಿಂದುಳಿದ ವರ್ಗಗಳಲ್ಲಿ ಒಂದು ಹೊಸ ಶಿಕ್ಷಿತವರ್ಗವನ್ನು ಬೆಳೆಸುತ್ತದೆ. ಈ ಶಿಕ್ಷಿತವರ್ಗವು ಸಾಮಾಜಿಕ ಮತ್ತು ರಾಜಕೀಯ ಸುಧಾರಣೆಗಳಲ್ಲಿ ತೊಡಗುವುದು ಮತ್ತು ಸಮಾಜದಲ್ಲಿ ಬ್ರಾಹ್ಮಣರ ಕಪಿಮುಷ್ಟಿಯನ್ನು ಕಿತ್ತೆಸೆಯುವುದು. ಅವರು ಜಾತಿಪದ್ಧತಿಯ ನಾಶಕ್ಕಾಗಿ ಹಲವಾರು ವಿದ್ಯಾರ್ಥಿ ನಿಲಯಗಳನ್ನು ತೆರೆದರು.

ಅವರ ಆಡಳಿತಾವಧಿಯಲ್ಲಿ ಹಿಂದುಳಿದ ವರ್ಗಗಳು ತಮ್ಮ ಸಮುದಾಯಗಳ ಪ್ರಗತಿಗಾಗಿ ಒಟ್ಟುಗೂಡಲು ಪ್ರಯತ್ನಿಸತೊಡಗಿದರು. ಯಾವುದೇ ರೀತಿಯ ಸಾಮಾಜಿಕ ಸುಧಾರಣೆಯನ್ನು ಕೈಗೊಳ್ಳಲು ಜನರನ್ನು ಒಗ್ಗೂಡಿಸಬೇಕಾದರೆ ಜಾತಿವಾರು ಐಕ್ಯತೆಯನ್ನು ಶಾಹು ಪ್ರೋತ್ಸಾಹಿಸಿದರು.[12] ತಮ್ಮ ನೈತಿಕ ಕರ್ತವ್ಯವೆಂದು ತಿಳಿದು ಅವರು ಪ್ರತ್ಯೇಕ ಜಾತಿವಾರು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಹಿಂದುಳಿದ ವರ್ಗಗಳು ಗುಲಾಮತ್ವದಿಂದ ಬಿಡುಗಡೆ ಹೊಂದಲು ಇದೊಂದೇ ಮಾರ್ಗ ಮತ್ತು ಪ್ರಗತಿಗೆ ಹಾದಿ ತೋರಿದರು. ಅವರಿಗೆ ಹಿಂದುಳಿದ ವರ್ಗಗಳ ಸದುದ್ದೇಶಕ್ಕೆ ಸ್ಪಂದಿಸುವುದು ಜಾತಿದ್ವೇಷವನ್ನು ಪ್ರೋತ್ಸಾಹಿಸುವುದು ಆಗಿರಲಿಲ್ಲ.[13] ಅವರು ಜಾತಿಯ ತಾರತಮ್ಯತೆಗಳ ನಾಶಕ್ಕಾಗಿ ಜಾತಿಸಮ್ಮೇಳನಗಳನ್ನು ನಡೆಸಲು ಸೂಚಿಸಿದರೇ ಹೊರತು ಈ ವ್ಯತ್ಯಾಸಗಳನ್ನು ಸಬಲಗೊಳಿಸುವುದಕ್ಕಾಗಿ ಅಲ್ಲ. ಜನರು ತೆರೆದ ಮನಸ್ಸು ತೋರಿಸಬೇಕು ಮತ್ತು ಒಂದು ಜಾತಿಗೆ ವಿದ್ಯಾರ್ಥಿನಿಲಯಗಳು ನಿಧಾನವಾಗಿ ಇತರೆ ಜಾತಿಗಳಿಗೂ ತೆರೆಯಬೇಕು. ಈ ಕ್ರಮವು ಭ್ರಾತೃತ್ವದ ವಿಶ್ವಬಂಧುತ್ವದ ಸತ್ವವನ್ನು ಪ್ರಚಾರಮಾಡುವುದು.[14]

ಹಿಂದುವಲಯದಲ್ಲಿ ತಮ್ಮ ಸ್ಥಾನಮಾನವನ್ನು ಹೆಚ್ಚಿಸುವ ಸಲುವಾಗಿ ಹಿಂದುಳಿದ ಜಾತಿಗಳು ಕ್ಷತ್ರಿಯ ಸಮುದಾಯದಲ್ಲಿ ಸೇರಿಸಬೇಕೆಂಬ ಬೇಡಿಕೆಯನ್ನಿಟ್ಟಿದ್ದರು. ಇದು ವೇದೋಕ್ತ ಪ್ರಕರಣದಲ್ಲಿ ಪ್ರಮುಖ ವಿಷಯವಾಗಿತ್ತು. ಕಲಿಯುಗದ ಕಾಲದಲ್ಲಿ ಕೂಡ ಸಂಸ್ಕಾರಗಳ ಲೋಪವನ್ನು ಬ್ರಾಹ್ಮಣರನ್ನು ಬಿಟ್ಟು ಎಲ್ಲಾ ಜಾತಿಗಳಿಗೂ ಅನ್ಯಾಯ ಮಾಡಲಾಗಿತ್ತು. ವಿಷಯ ಇದಾಗಿದ್ದರೆ ರೈತರು ಶೂದ್ರರಲ್ಲವೆಂದು ಅವರು ಒತ್ತಿಹೇಳಿದರು. ಆದರೆ ಕ್ಷತ್ರಿಯರಿಗೆ ವೇದಗಳನ್ನು ಅಧ್ಯಯನ ಮಾಡುವ ಹಕ್ಕಿದೆಯೆಂದು ಹೇಳಿದರು. ವೈದಿಕಕಾಲದಲ್ಲಿ ಚಕ್ರವರ್ತಿ, ರಾಜರು ಮತ್ತು ಮಂತ್ರಿಗಳು ಕೃಷಿ ಮಾಡುತ್ತಿದ್ದರು. ಇದರ ಸೂಚನೆಯ ಪ್ರಕಾರ ಎಲ್ಲಾ ರೈತರು ಕ್ಷತ್ರಿಯರಾಗಿದ್ದರು.[15]

ಜಾತಿಗಳಾದ ನಾಡರ್‌ಗಳು, ಕುರ್ಮಿಗಳು, ಯಾದವರು, ಜಾಟರು, ಇಳವರು ಮತ್ತು ರೆಡ್ಡಿಗಳು ತಮ್ಮನ್ನೇ ಕ್ಷತ್ರಿಯರೆಂದು ಪರಿಗಣಿಸಿದ್ದರು. ಕ್ಷತ್ರಿಯ ಸ್ಥಾನಮಾನದ ಈ ಬೇಡಿಕೆಯು ಸಂಸ್ಕೃತೀಕರಣದ ಒಂದು ಪ್ರಕ್ರಿಯೆಯಲ್ಲ. ಆದರೆ ಅವರ ಘನತೆಯ ಮತ್ತು ಆತ್ಮಗೌರವದ ಒಂದು ಪ್ರಶ್ನೆಯಾಗಿತ್ತು. ಪ್ರೊ. ರಾವ್ ಅವರು ಕ್ಷತ್ರಿಯತನದ ಬೇಡಿಕೆ, ಪವಿತ್ರ ಜನಿವಾರ ತೊಡುವಿಕೆ ಅಥವಾ ತಮ್ಮಲ್ಲಿಯೇ ಶ್ರಾವಣಿಯ ಆಚರಣೆಗಳ ನಿರ್ವಹಣೆಯು ಕ್ಷತ್ರಿಯರಿಗೆ ಹೆಚ್ಚು ಮಹತ್ವಕಾರಿಯಾಗಿರಲಿಲ್ಲ. ಆದರೆ ಇದನ್ನು ಬ್ರಾಹ್ಮಣತ್ವದ ಸವಾಲನ್ನು ಎದುರಿಸಲು ಮತ್ತು ಹೀಗಳೆಯುವುದಕ್ಕಾಗಿ ಮಾಡಲಾಯಿತು.[16] ಇದರ ಜೊತೆಗೆ ಕೆಲವು ಸಾಮಾಜಿಕ ಮತ್ತು ರಾಜಕೀಯ ಆಂದೋಲನಗಳನ್ನು ಪ್ರಾರಂಭಿಸಲು ಅವರಿಗೆ ಈ ಚಟುವಟಿಕೆಗಳು ಬಲ ನೀಡಿದವು. ಜಾತಿ ಸಮ್ಮೇಳನಗಳು ಮತ್ತು ಕ್ಷತ್ರಿಯತ್ವದ ಬೇಡಿಕೆಗಳು ಅಂತಿಮ ಗುರಿಯಾದ ಜಾತಿ ತಾರತಮ್ಯತೆಗಳ ನಿರ್ಮೂಲನೆ ಮಾಡುವುದನ್ನು ಮರೆಯಬಾರದೆಂದು ಶಾಹುರವರು ತಮ್ಮ ಜನರಿಗೆ ನೆನಪು ಮಾಡಿದ್ದರು.

ಶಾಹುರವರು ಹಿಂದುಳಿದ ಜಾತಿಗಳ ಆಂದೋಲನಗಳಿಗೆ ಹಣ ಮತ್ತು ಸಮಾಜದಲ್ಲಿರುವ ತಮ್ಮ ಸ್ಥಾನಮಾನದಿಂದ ಹೃತ್ಪೂರ್ವಕವಾಗಿ ಬೆಂಬಲ ಮತ್ತು ಸಹಾಯ ಮಾಡಿದರು. ಅವರು ದೇಶದಲ್ಲೆಲ್ಲಾ ಸುತ್ತಾಡಿ ಈ ಉದ್ದೇಶಕ್ಕಾಗಿ ಪ್ರಚಾರಮಾಡಿದರು ಮತ್ತು ಕುರ್ಮಿಕ್ಷತ್ರಿಯ ಸಭೆಗಳಲ್ಲಿ ಭಾಷಣ ಮಾಡಿದರು ಮತ್ತು ದಲಿತರ ಸಮ್ಮೇಳನಗಳನ್ನು ಮನ್‌ಗಾವ್ ಮತ್ತು ನಾಗಪುರಗಳಲ್ಲಿ ಉದ್ಘಾಟನೆ ಮಾಡಿದರು.[17] ಅಸ್ಪೃಶ್ಯರನ್ನು ಮಾನವರೆಂದು ಪರಿಗಣಿಸುವವರೆಗೆ ರಾಜಕಾರಣವೇ ಇಲ್ಲವೆಂದು ಅವರು ಘೋಷಿಸಿದರು. ಆದರೆ ಅವರು ಈ ಚಟುವಟಿಕೆಗಳು ಸಫಲವಾದ ರಾಜಕೀಯ ಆಂದೋಲನಗಳಾಗುವ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದರು.

೪

೧೯೧೪ರಲ್ಲಿ ತಿಲಕರು ಜೈಲಿನಿಂದ ಬಿಡುಗಡೆಯಾದ ಕೂಡಲೇ ದೇಶದಲ್ಲಿನ ರಾಜಕಾರಣವು ಒಂದು ಹೊಸ ತಿರುವನ್ನು ಪಡೆಯಿತು. ತಿಲಕರ ಪ್ರಮುಖ ವಿರೋಧಿ ಗೋಪಾಲಕೃಷ್ಣ ಗೋಖಲೆ ಮತ್ತು ಫಿರೋಜ್ ಮೆಹ್ತಾ ೧೯೧೫ರಲ್ಲಿ ನಿಧನರಾದರು. ಡಾ. ಆನಿಬೆಸೆಂಟ್ ಒಬ್ಬ ಪ್ರಮುಖ ನಾಯಕರಾಗಿ ಮೂಡಿಬಂದರು. ೧೯೧೬ರಲ್ಲಿ ಕಾಂಗ್ರೆಸ್ಸಿನ ತೀವ್ರಗಾಮಿಗಳು ಮತ್ತು ಮಂದಗಾಮಿಗಳು ಒಟ್ಟಾದರು. ತೀವ್ರಗಾಮಿಗಳು ತನ್ಮೂಲಕ ಪಕ್ಷದ ವ್ಯವಹಾರಗಳಲ್ಲಿ ಪ್ರಾಬಲ್ಯ ಪಡೆದರು. ತಿಲಕರು ಸ್ವರಾಜ್ಯದ ಬೇಡಿಕೆಯನ್ನು ಮುಂದಿಟ್ಟರು ಮತ್ತು ಡಾ. ಬೆಸೆಂಟರ ಸಹಾಯದಿಂದ ಹೋಮ್‌ರೂಲ್ (ಸ್ವದೇಶೀ ಆಡಳಿತ) ಆಂದೋಲನವನ್ನು ಪ್ರಾರಂಭಿಸಲಾಯಿತು. ಅವರು (ತಿಲಕರು) ಡಾ. ಬೆಸೆಂಟರ ಜೊತೆಯಲ್ಲಿ ದೀರ್ಘ ಪ್ರವಾಸಗಳನ್ನು ಕೈಗೊಂಡರು ಮತ್ತು ಆಂದೋಲನಕ್ಕಾಗಿ ಭಯಂಕರವಾದ ಬೆಂಬಲವನ್ನು ಕ್ರೋಡೀಕರಿಸಿದರು. ತಿಲಕರು "ಸ್ವರಾಜ್ಯ ನನ್ನ ಆಜನ್ಮಸಿದ್ಧ ಹಕ್ಕು ಮತ್ತು ನಾನು ಅದನ್ನು ಪಡೆದೇ ತೀರುತ್ತೇನೆ" ಎಂದು ಘೋಷಿಸಿದರು. ವಿಶ್ವಯುದ್ಧದ ನಂತರ ಸರಕಾರವು ಮಾಂಟೆಗ್ಯೂ ಆಯೋಗವನ್ನು ಸುಧಾರಣೆಗಳನ್ನು ಸೂಚಿಸಲು ಮತ್ತು ಭಾರತೀಯರಿಗೆ ಸ್ವಲ್ಪ ಅಧಿಕಾರವನ್ನು ಕೊಡಬೇಕೆಂಬ ಸ್ಪಷ್ಟ ಸೂಚನೆ ಕಂಡುಕೊಳ್ಳಲು ರಚಿಸಲಾಯಿತು. ಏಳುತ್ತಿರುವ ಸರಕಾರೀ ವಿರೋಧೀ ಭಾವನೆಯನ್ನು ನಿಲ್ಲಿಸಲು ಮತ್ತು ಕಾಂಗ್ರೆಸ್ ಪಕ್ಷದ ಹೆಚ್ಚುತ್ತಿರುವ ಪ್ರಭಾವವನ್ನು ತಡೆಯಲು ಸರಕಾರವು ಮದ್ರಾಸಿನಲ್ಲಿರುವ ಜಸ್ಟೀಸ್ ಪಕ್ಷವನ್ನು ಬೆಂಬಲಿಸಲು

ಪ್ರಾರಂಭಿಸಿತು. ಶಾಹುರವರು ಬ್ರಿಟಿಷರನ್ನು ಬೆಂಬಲಿಸಿದರು ಮತ್ತು ತಿಲಕ ಮತ್ತು ಅರವಿಂದ ಘೋಷ್ ಮೊದಲಾದ ದೇಶಭಕ್ತರಿಗೆ ಗೌಪ್ಯವಾಗಿ ಸಹಾಯ ಮಾಡುವುದನ್ನು ಅಸಡ್ಡೆಮಾಡಲಿಲ್ಲ.

ಶಾಹುರವರು ಸ್ವತಂತ್ರಭಾರತದ ಆಡಳಿತದಲ್ಲಿ ಹಿಂದುಳಿದ ವರ್ಗಗಳು ಮೀಸಲಾತಿ ಸ್ಥಾನಗಳನ್ನು ಪಡೆಯಬೇಕೆಂದು ಪ್ರತಿಪಾದಿಸಿದರು. ಅವರು ತಮ್ಮ ಸಾಮಂತ ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳು ಶೇಕಡ ೫೦ರಷ್ಟು ಮೀಸಲಾತಿಯನ್ನು ಘೋಷಿಸಿದರು. ಶಾಹುರವರು ಜನರಿಗೆ ಸ್ವಾತಂತ್ರ್ಯ ನೀಡಬೇಕೆಂಬ ಅಭಿಪ್ರಾಯದ ಪರವಾಗಿದ್ದರು. ಆದರೆ ಮೊದಲು ಜನರನ್ನು ಗುಲಾಮರನ್ನಾಗಿ ಮಾಡಿರುವ ಎಲ್ಲಾ ಕಾರಣಗಳನ್ನು ಕಿತ್ತುಹಾಕಬೇಕೆಂದು ಪರಿಭಾವಿಸಿದರು. ಸಂಪೂರ್ಣವಾಗಿ ಭಾರತದ ಜಾತಿಪದ್ಧತಿಯನ್ನು ನಾಶಮಾಡದ ಹೊರತು ನಿಜವಾದ ಸ್ವಾತಂತ್ರ್ಯವು ಬಹಳ ಕಾಲ ಬದುಕಲಾರದು. "ಸ್ವಾತಂತ್ರ್ಯದ ಅಂತಿಮಫಲವಾದ ಅಧಿಕಾರವು ಮೇಲುಜಾತಿಗಳ ಅಲ್ಪಸಂಖ್ಯಾತರ ಕೈಗೆ ಹೋಗಬೇಕೆಂದು ಅರ್ಥವಲ್ಲ. ಕನಿಷ್ಠಪಕ್ಷ ಹತ್ತು ವರ್ಷಗಳವರೆಗೆ ನಾವು ಜಾತಿವಾರು ಪ್ರತಿನಿಧಿಗಳನ್ನು ಆಯ್ಕೆಮಾಡುವ ಹಕ್ಕು ನಮಗೆ ಇರಬೇಕು. ನಾವು ಹೀಗೆ ನಮ್ಮ ಹಕ್ಕುಗಳ ಬಗ್ಗೆ ತಿಳುವಳಿಕೆಯನ್ನು ಪಡೆಯುವೆವು. ನಾವು ಮೀಸಲಾತಿಯನ್ನು ಪಡೆಯದಿದ್ದರೆ ಏನಾಗುತ್ತದೆಯೆಂಬುದಕ್ಕೆ ನಮ್ಮ ಮುನಿಸಿಪಾಲಿಟಿಯೇ ಕಣ್ಣಿಗೆ ಕುಕ್ಕುವ ಸ್ಪಷ್ಟ ನಿದರ್ಶನವಾಗಿದೆ."[18] ಅಧಿಕಾರವು ಬ್ರಾಹ್ಮಣರ ಸ್ವಲ್ಪ ಜನಾಧಿಪತ್ಯಕ್ಕೆ ಒಳಪಡದಂತೆ ಮಾಡಬೇಕಾದರೆ ಜನರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಿರಬೇಕೆಂದು ಅವರು ಒತ್ತಿಹೇಳಿದರು. "ಎಲ್ಲಾ ಜಾತಿಗಳ ಜನರಿಗೆ ಸಾಮಾಜಿಕ, ಕೈಗಾರಿಕೆಯ, ಶೈಕ್ಷಣಿಕ ಅಥವಾ ಸರಕಾರಿ ಹುದ್ದೆಗಳ ಕ್ಷೇತ್ರಗಳಲ್ಲಿ ಜವಾಬ್ದಾರರಾಗಿರುವುದಕ್ಕೆ ಅವಕಾಶಗಳನ್ನು ನೀಡಬೇಕು. ಇದನ್ನೇ ನಾನು ಜಾತಿವಾರು ಪ್ರಾತಿನಿಧ್ಯವೆಂದು ಹೆಸರಿಸುತ್ತೇನೆ. ಇಲ್ಲಿ ಯಾರಿಗೂ ಯಾವುದೇ ದ್ವೇಷವಿರುವುದಿಲ್ಲ; ಆದರೆ ಹಿಂದುಳಿದ ಜಾತಿಗಳ ಜನರು ಪ್ರಗತಿ ಹೊಂದಲು ಅವರಿಗೆ ಅವಕಾಶ ನೀಡುವ ಪ್ರಯತ್ನ ಮಾಡಬೇಕಾಗಿದೆ. ಅವರನ್ನು ನಿಮ್ಮ ಭುಜಗಳಿಂದ ಹೊರಬೇಡಿ, ಬದಲಿಗೆ ಅವರೇ ನಡೆಯಲು ಉತ್ತೇಜಿಸಿ. ಅವರ ಮುಂದೆ ಅಡೆ-ತಡೆಗಳನ್ನು ಇಡಬೇಡಿ. ಅವರಿಗೆ ಬಲ ನೀಡುವುದೇ ನಮ್ಮ ಪ್ರಯತ್ನವಾಗಿರಲಿ."[19]

ಆದ್ದರಿಂದ ಶಾಹುರವರು ಜಾತಿವಾರು ಪ್ರಾತಿನಿಧ್ಯವನ್ನು ಮತ್ತು ಮರಾಠರಿಗೆ ಪ್ರತ್ಯೇಕ ಮತದಾರ ಸಮುದಾಯ (ಕ್ಷೇತ್ರ) ಕೇಳಿದರು. ಅವರು ಮದ್ರಾಸಿನ ಜಸ್ಟೀಸ್ ಪಾರ್ಟಿಯ ರಾಜಕಾರಣವನ್ನು ಬಾಂಬೆ ಪ್ರೆಸಿಡೆನ್ಸಿಯಲ್ಲಿ ಪರಿಚಯಿಸಲು ಬಯಸಿದ್ದರು. ಅವರು ಅಧಿಕಾರದ ಸೂಕ್ತ ಹಂಚಿಕೆಯ ವಿಷಯವನ್ನು ಚರ್ಚಿಸಲು ಬ್ರಾಹ್ಮಣೇತರರ ಸಮ್ಮೇಳನವನ್ನು ನಡೆಸಲು ಒತ್ತಾಯಿಸಿದ್ದರು. ಲಾರ್ಡ್ ವಿಲ್ಲಿಂಗ್‌ಟನ್ ಅವರಿಗೆ ಬರೆದ ಪತ್ರದಲ್ಲಿ ಅವರು ಭಾರತದ ಹೊಸ ಸಂವಿಧಾನವು ಜನತಂತ್ರದ ಬುನಾದಿಯನ್ನು ವಿಸ್ತೃತಗೊಳಿಸುವುದಕ್ಕಾಗಿ ಹಿಂದುಳಿದ ವರ್ಗಗಳ ಎಲ್ಲಾ ಜಾತಿಗಳಿಗೂ ಪ್ರತ್ಯೇಕ ಚುನಾವಣಾ ಮತದಾರ ಕ್ಷೇತ್ರಗಳನ್ನು ಕಲ್ಪಿಸಬೇಕೆಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರು.[20]

ಬ್ರಾಹ್ಮಣೇತರರು ಮತ್ತು ದಲಿತರು ತಮ್ಮ ಹಕ್ಕುಗಳೆಂಬ ಜ್ಞಾನದ ಬುನಾದಿಯ ಮೇಲೆ ತಮ್ಮ ಜಾಗೃತಿಯು ನಿಂತಿರಬೇಕೆಂದು ಶಾಹುರವರು ಭಾವಿಸಿದ್ದರು. ಹಿಂದುಳಿದ ವರ್ಗಗಳು ಬದಲಾಗುತ್ತಿರುವ ಕಾಲವನ್ನು ಎದುರಿಸಲು ಶಿಕ್ಷಣದ ಪ್ರಯೋಜನಗಳನ್ನು ಪಡೆಯಬೇಕು. ತಮ್ಮ ಹಕ್ಕುಗಳಿಗಾಗಿ ಹೋರಾಡಲು ಕಾಂಗ್ರೆಸ್ಸಿನಿಂದ ಸ್ವತಂತ್ರವಾಗಿರುವ ತಮ್ಮ ಸ್ವಂತ ಪಕ್ಷವನ್ನು ಕಟ್ಟಬೇಕೆಂದು ಅವರು ಜನರಿಗೆ ಉತ್ತೇಜನ ನೀಡಿದರು. ೧೯೧೬ರಲ್ಲಿ ನಿಪ್ಪಾಣಿಯಲ್ಲಿ ಸತ್ಯಶೋಧಕ ಸಮ್ಮೇಳನದಲ್ಲಿ 'ಡೆಕ್ಕನ್ ರಾಯತ್ ಅಸೋಷಿಯೇಷನ್' ಎಂಬ ಸಂಘಟನೆಯನ್ನು ಪ್ರಾರಂಭಿಸಲಾಯಿತು. ೧೯೧೭ರಲ್ಲಿ ಇದರ ಕಾರ್ಯದರ್ಶಿ ವಾಲಚಂದ

ಕೊಠಾರಿಯವರು ಕೌನ್ಸಿಲ್ಲುಗಳಲ್ಲಿ ಜಾತಿವಾರು ಪ್ರತಿನಿಧ್ಯವನ್ನು ಕೇಳಿದರು. ಸರಕಾರವು ಬ್ರಾಹ್ಮಣೇತರರ ಈ ಬೇಡಿಕೆಯನ್ನು ವಜಾಮಾಡಿತು. ಆದರೆ ಬಾಂಬೆ ಕೌನ್ಸಿಲ್ಲಿನಲ್ಲಿ ಮರಾಠಿಗೆ ೭ ಸ್ಥಾನಗಳನ್ನು ಮೀಸಲಿಟ್ಟಿತು.[21]

ಮಾಂಟೆಗ್ಯು–ಛೆಲ್ಮಸ್‌ಫೋರ್ಡ್ ಸುಧಾರಣೆಗಳನ್ನು ೧೯೧೯ರಲ್ಲಿ ಘೋಷಿಸಲಾಯಿತು. ಈ ಸುಧಾರಣೆಗಳನ್ನು ಜಾರಿಗೊಳಿಸಬೇಕೆಂಬ ನಿರ್ಣಯವನ್ನು ಮಂದಗಾಮಿಗಳು ಮತ್ತು ಬ್ರಾಹ್ಮಣೇತರ ಗುಂಪುಗಳು ತೆಗೆದುಕೊಂಡವು. ಅದೇ ಸಮಯದಲ್ಲಿ ಲೋಕಮಾನ್ಯ ತಿಲಕರು ಸರಕಾರಕ್ಕೆ ಸೀಮಿತ ಸಹಕಾರವನ್ನು ವಿಸ್ತರಿಸುವ ನಿರ್ಣಯವನ್ನು ತೆಗೆದುಕೊಂಡರು ಮತ್ತು ಚುನಾವಣೆಗಾಗಿ ಸಿದ್ಧತೆಗಳನ್ನು ಮಾಡಲು ತೊಡಗಿದರು. ಶಾಹುರವರು ಈ ಸುಧಾರಣೆಗಳನ್ನು ಜಾರಿಗೊಳಿಸಬೇಕೆಂದು ಮತ್ತು ಜನರು ತಮ್ಮ ಸ್ವಾತಂತ್ರ್ಯದ ಹಕ್ಕನ್ನು ಚಲಾಯಿಸಲು ಸಮರ್ಥರಾಗಿರಬೇಕೆಂದು ಒತ್ತಾಯಿಸಿದರು.

ಶಾಹುರವರ ವಿರೋಧಿಗಳು ಬ್ರಾಹ್ಮಣೇತರರ ಪಕ್ಷದ ಮೂಲಕ ರಾಜಕಾರಣದಲ್ಲಿ ಅವರು ತೊಡಗಿಸಿಕೊಂಡಿದ್ದಾರೆಂದು ಅವರನ್ನು ಟೀಕಿಸತೊಡಗಿದರು. ವಾಸ್ತವಿಕವಾಗಿ ಅವರು ರಾಜಕಾರಣದಲ್ಲಿ ಧುಮುಕಲು ತೀವ್ರ ಆಶಯವನ್ನಿಟ್ಟುಕೊಂಡಿದ್ದರು ಮತ್ತು ಚುನಾವಣೆಯಲ್ಲಿ ಸ್ಪರ್ಧಿಸಲು ಸರಕಾರದ ಅನುಮತಿಯನ್ನು ಕೋರಿದ್ದರು. ಅವರಿಗೆ ಅನುಮತಿಯನ್ನು ನಿರಾಕರಿಸಲಾಯಿತು.[22] ಮರಾಠ ಲೀಗ್ ಮತ್ತು ಬ್ರಾಹ್ಮಣೇತರರ ಪಕ್ಷಗಳು ಚುನಾವಣೆಗಳಲ್ಲಿ ಭಾಗವಹಿಸಿದ್ದವು ಕೂಡ. ಬ್ರಾಹ್ಮಣೇತರ ಆಂದೋಲನವು ಮದ್ರಾಸಿನಲ್ಲಿ ಹೆಚ್ಚು ಐಕ್ಯತೆಯನ್ನು ಹೊಂದಿ ಶಿಕ್ಷಿತ ನಾಯಕರಾದ ಡಾ. ನಾಯರ್ ಅವರನ್ನು ಹೊಂದಿದ್ದರಿಂದ ಅದನ್ನು ಶಾಹುರವರು ತುಂಬ ಮೆಚ್ಚಿಕೊಂಡಿದ್ದರು. ಮಹಾರಾಷ್ಟ್ರದಲ್ಲಿ ಆಂದೋಲನವು ಈ ನಿದರ್ಶನವನ್ನು ಅನುಕರಿಸುವುದೆಂದು ಹಾರೈಸಿದರು.

ಮರಾಠ ಲೀಗು ಮತ್ತು ಬ್ರಾಹ್ಮಣೇತರರ ಪಕ್ಷವು ೧೯೨೦ರಲ್ಲಿ ಬಹಳ ಉತ್ಸಾಹದಿಂದ ವಿಧಾನಸಭೆಯ ಚುನಾವಣೆಗಳಲ್ಲಿ ಭಾಗವಹಿಸಿದವು. ಇದೇ ಸಮಯದಲ್ಲಿ ಮಹಾತ್ಮ–ಗಾಂಧಿಯವರು ರಾಷ್ಟ್ರೀಯ ರಾಜಕಾರಣದಲ್ಲಿ ಪ್ರವೇಶಿಸಿದರು. ೧೯೧೯ರ ಏಪ್ರಿಲ್‌ನಲ್ಲಿ ಜಲಿಯನ್‌ವಾಲಬಾಗಿನಲ್ಲಿ ಜನರ ಹತ್ಯಾಕಾಂಡ ನಡೆಯಿತು. ಗಾಂಧಿಯವರು ರವುಲಟ್ ಕಾಯ್ದೆ ವಿರುದ್ಧ ಸತ್ಯಾಗ್ರಹ ಪ್ರಾರಂಭಿಸಿದರು ಮತ್ತು ಜನರಿಂದ ಅವರು ಅದ್ಭುತವಾದ ಬೆಂಬಲವನ್ನು ಪಡೆದರು. ದೇಶದಲ್ಲಿ ವಾತಾವರಣವೇ ಬದಲಾಯಿತು ಮತ್ತು ಗಾಂಧಿಯವರು ಅಸಹಕಾರ ಆಂದೋಲನವನ್ನು ಪ್ರಾರಂಭಿಸಿದರು. ಎನ್. ಸಿ. ಕೇಳ್ಕರರು ಕಾಂಗ್ರೆಸ್ ಟಿಕೆಟ್ಟಿನ ಮೇಲೆ ಪುಣೆಯ ಸ್ಥಾನಕ್ಕೆ ಸ್ಪರ್ಧಿಸಿದರೆ ಮಹರ್ಷಿ ಶಿಂಧೆಯವರು ಈ ಸ್ಥಾನಕ್ಕೆ ರಾಷ್ಟ್ರೀಯ ಮರಾಠ ಲೀಗಿನ ಪರವಾಗಿ ಸ್ಪರ್ಧಿಸಿದರು. ಕಾಂಗ್ರೆಸ್ ಪಕ್ಷವು ಚುನಾವಣೆಯಿಂದ ಹಿಂದೆ ಸರಿಯಿತು. ಆದ್ದರಿಂದ ಒಟ್ಟು ಮತದಾರರಲ್ಲಿ ವಾಸ್ತವಿಕವಾಗಿ ಕೇವಲ ಶೇಕಡ ೨೦ರಷ್ಟು ಮತದಾರರು ಮಾತ್ರ ಮತದಾನದಲ್ಲಿ ಭಾಗವಹಿಸಿದರು. ಶಾಹುರವರು ಶಿಂಧೆಯವರ ರಾಜಕೀಯ ಅಭಿಪ್ರಾಯಗಳನ್ನು ಒಪ್ಪಲಿಲ್ಲ. ಅವರು ಸ್ವತಂತ್ರ ಅಭ್ಯರ್ಥಿ ಗುಪ್ತೆ ಅವರನ್ನು ಬೆಂಬಲಿಸಿದರು ಮತ್ತು ಮಹರ್ಷಿ ಶಿಂಧೆ ಅವರು ಪರಾಜಿತರಾದರು. ಈ ಸಮಯದಲ್ಲಿ ಮರಾಠ ಮತದಾರರ ಶೇಕಡವಾರು ಅವರ ನಿಜವಾದ ಜನಸಂಖ್ಯೆಗೆ ಹೋಲಿಸಿದಾಗ ಬಹಳ ಕಡಿಮೆಯಿತ್ತು. ಈ ಚುನಾವಣೆಗಳು ಮರಾಠರ ಮತ್ತು ಇತರೆ ಬ್ರಾಹ್ಮಣೇತರರ ಜಾತಿಗಳ ನಡುವೆ ಬಿರುಕಿಗೆ ಕಾರಣವಾದವು.[23]

ಶಾಹುರವರು ಗಾಂಧಿಯ ಅಸಹಕಾರ ಆಂದೋಲನವನ್ನು ತಿಲಕರ ರಾಜಕಾರಣಕ್ಕಿಂತ ಭಿನ್ನ ಮತ್ತು

ವಿಸ್ತೃತ ಎಂಬುದನ್ನು ಗ್ರಹಿಸಲಿಲ್ಲ. ಅಸಹಕಾರ ಆಂದೋಲನಕ್ಕೆ ಆ ಸಮಯದಲ್ಲಿ ಅವರ ವಿರೋಧವು ಒಂದು ವಿಧದಲ್ಲಿ ವಿವಾದಾತ್ಮಕವಾಗಿತ್ತು. ಆದರೆ ಶಾಹುರವರು ಮಹಾತ್ಮ ಗಾಂಧಿಯವರ ದೊಡ್ಡತನವನ್ನು ಚೆನ್ನಾಗಿ ತಿಳಿದಿದ್ದರು. ಖಾಸೆರಾವ್ ಜಾಧವ್ ಅವರು ಶಾಹುರವರಿಗೆ ಬರೆದ ಪತ್ರದಲ್ಲಿ ಹೇಳುತ್ತಾರೆ: ಗಾಂಧಿ ಭಾರತವನ್ನು ಸಮಗ್ರಗೊಳಿಸಲು ಬಯಸುತ್ತಾರೆ. ಅವರ ಅಸಹಕಾರ ಆಂದೋಲನದ ವಿಧಾನವು ಹೆಚ್ಚು ಹಿಡಿಸುವಂಥದ್ದು ಮತ್ತು ಮರಾಠರು ಮತ್ತು ಇತರೆ ಜಾತಿಗಳು ಗಾಂಧಿಯವರ ಧ್ವಜದಡಿಯಲ್ಲಿ ಒಗ್ಗೂಡಬಹುದು.[24] ಆ ಸಮಯದಲ್ಲಿ ಶಾಹುರವರ ಆರೋಗ್ಯ ಉತ್ತಮವಾಗಿರಲಿಲ್ಲ ಮತ್ತು ಅವರು ಇತರೆ ನೂರಾರು ಸಮಸ್ಯೆಗಳಲ್ಲಿ ಸಿಕ್ಕಿಹಾಕಿಕೊಂಡಿದ್ದರು.

ಈ ಮಧ್ಯೆ ಮದ್ರಾಸಿನಲ್ಲಿ ಜಸ್ಟೀಸ್ ಪಾರ್ಟಿಯು ಹಲವು ಸ್ಥಾನಗಳನ್ನು ಮತ್ತು ಸಾಕಷ್ಟು ಪ್ರಾತಿನಿಧ್ಯವನ್ನು ಗಳಿಸಿತ್ತು. ಶಾಹುರವರು ಮಹಾರಾಷ್ಟ್ರದಲ್ಲಿ ಕೂಡ ಬ್ರಾಹ್ಮಣೇತರ ಪಕ್ಷಗಳು ಅದೇ ರೀತಿಯ ಫಲಿತಾಂಶವನ್ನು ಬಯಸಿದ್ದರು. ಲಾರ್ಡ್ ವಿಲ್ಲಿಂಗ್‌ಟನ್ನರು ಈ ವಿಷಯದಲ್ಲಿ ಸಹಾಯಮಾಡುವರೆಂದು ಯೋಚಿಸಿದ್ದರು ಮತ್ತು ತನ್ನನ್ನು ಮದ್ರಾಸಿಗೆ ವರ್ಗಾವಣೆ ಮಾಡದಂತೆ ಸರಕಾರವನ್ನು ಒತ್ತಾಯಿಸಿದ್ದರು.

೫

ಹಿಂದುಳಿದ ವರ್ಗಗಳಿಗೆ ಸಹಾಯ ಮಾಡಲು ಶಾಹುರವರು ಕ್ರಮಗಳನ್ನು ಕೈಗೊಂಡಾಗ ಮತ್ತು ಸಾಮಾಜಿಕ ಸಮಾನತೆಯನ್ನು ಬಯಸಿದಾಗ ಅವರು ಮೇಲುಜಾತಿಗಳ ಕಡುವಿರೋಧವನ್ನು ಎದುರಿಸಬೇಕಾಯಿತು. ನೌಕರಶಾಹಿಯ ಕೆಳಹಂತದವರು ವಿರೋಧಿಸಿದ್ದು ಮಾತ್ರವಲ್ಲದೆ ಚೆನ್ನಾಗಿ ತಿಳಿದ ಜನರು ಮತ್ತು ಸುದ್ದಿಪತ್ರಿಕೆಗಳು ವಿರೋಧಿಸಿದವು. ಅವು ನಾಯಕರಾದ ಲೋಕಮಾನ್ಯ ತಿಲಕರಿಗೆ ಬೆಂಬಲಿಸಿದವು. ವೇದೋಕ್ತವನ್ನು ಅನುಸರಿಸಿದ್ದು ಮತ್ತು ಕುಲಕರ್ಣಿಗಳ ವತನಗಳನ್ನು ಮುಟ್ಟುಗೋಲು ಹಾಕಿಕೊಂಡಿದ್ದರಿಂದ ಶಾಹು ಮತ್ತು ತಿಲಕರ ನಡುವೆ ಭಿನ್ನಾಭಿಪ್ರಾಯಗಳು ತೀವ್ರಗೊಂಡವು. ಇದು ದುರಾದೃಷ್ಟಕಾರಿ ಸಮಸ್ಯೆಗಳಾದ 'ತಾಯ್ ಮಹಾರಾಜರ ಪ್ರಕರಣ'ಕ್ಕೆ ಎಡೆಮಾಡಿಕೊಟ್ಟಿತು. ಶಾಹುರವರು ತಮ್ಮ ಹಕ್ಕುಗಳನ್ನು ಸುಲಭವಾಗಿ ಪಡೆಯಲು ಸಾಧ್ಯವಿಲ್ಲ ಮತ್ತು ಸರಕಾರ ನೀಡಿದ ಸೀಮಿತ ಜನತಂತ್ರವು ಬಹುಮಟ್ಟಿಗೆ ಬ್ರಾಹ್ಮಣರಿಗೆ ಪ್ರಯೋಜನವಾಗುತ್ತದೆಯೆಂದು ಅರಿತಿದ್ದರು. ಅದರ ಪ್ರಕಾರವೇ ಅವರು ತಮ್ಮ ಕಾರ್ಯತಂತ್ರವನ್ನು ರೂಪಿಸಿದರು.

ಶಾಹುರವರ ಸಾಮಾಜಿಕ-ರಾಜಕೀಯ ವ್ಯೂಹರಚನೆಗಳನ್ನು ಈ ಕೆಳಗೆ ಸಂಗ್ರಹಿಸಿ ಕೊಡಲಾಗಿದೆ:

೧. ಹಿಂದುಳಿದ ವರ್ಗಗಳಲ್ಲಿ ಅವರ ಹಕ್ಕುಗಳ ಬಗ್ಗೆ ಜಾಗೃತಿಯನ್ನು ಮೂಡಿಸಬೇಕಾಗಿದೆ ಮತ್ತು ಶಿಕ್ಷಣ ಮತ್ತು ಅಭಿವೃದ್ಧಿಯ ಅವಕಾಶಗಳನ್ನು ಅವರಿಗೆ ಕಲ್ಪಿಸಬೇಕು.

೨. ಧರ್ಮದಲ್ಲಿರುವ ಕಪಟ ಬ್ರಾಹ್ಮಣರ ಪಾರಮ್ಯತೆಗೆ ಸವಾಲುಹಾಕಲು ಮತ್ತು ವೇದಗಳ ಪ್ರಕಾರ ಜನರೇ ಸ್ವತಃ ಧಾರ್ಮಿಕ ಆಚರಣೆಗಳ ಸಂಗತಿಗಳನ್ನು ನಡೆಸಲು ಪ್ರೋತ್ಸಾಹಬೇಕು.

೩. ಒಂದು ರಾಜಕೀಯ ಪಕ್ಷಕ್ಕಾಗಿ ಬ್ರಾಹ್ಮಣೇತರರನ್ನು ಒಟ್ಟಿಗೆ ಸೇರಿಸಬೇಕು ಮತ್ತು ಅಧಿಕಾರದಲ್ಲಿ ಅವರ ಸರಿಯಾದ ಪ್ರಾತಿನಿಧ್ಯವಿರುವಂತೆ ಖಾತರಿಪಡಿಸಬೇಕು.

ತಿಲಕರ ಪಕ್ಷ ಸ್ವಲ್ಪ ವಿವೇಚನೆ, ಅರ್ಥಮಾಡಿಕೊಳ್ಳುವಿಕೆ ಮತ್ತು ಸಹಕಾರವನ್ನು ತೋರಿಸಿದ್ದನ್ನು,

ಶಾಹುರವರು ತಮ್ಮ ಆಂದೋಲನ ಹೋರಾಡಲು ಅದು ಸುಲಭಗೊಳಿಸಿತೆಂದು ಕಂಡುಕೊಂಡರು. ಶಾಹುರವರು ತಮ್ಮ ಉದ್ದೇಶಗಳ ಈಡೇರಿಕೆಗಾಗಿ ಬ್ರಿಟಿಷ್ ಸರಕಾರದ ಸಹಾಯ ತೆಗೆದುಕೊಂಡಾಗ ವಿಷಯವು ತುಂಬಾ ಹದಗೆಟ್ಟಿತು. ನಿಜ, ಶಾಹುರವರು ಬ್ರಿಟಿಷ್ ಸರಕಾರಕ್ಕೆ ಬೆಂಬಲ ತೋರುವಲ್ಲಿ ಅತಿ ಹೆಚ್ಚು ಮಾಡಿದರು. ಬ್ರಾಹ್ಮಣರ ಅಹಂಕಾರ ಮತ್ತು ಸಣ್ಣತನಗಳು ಶಾಹುರವರು ಬ್ರಿಟಿಷರ ಸಹಾಯ ಪಡೆಯುವುದಕ್ಕೆ ಅವರನ್ನು ತಳ್ಳಿದವು ಎಂಬುದು ಕೂಡ ಸತ್ಯ. ಬ್ರಾಹ್ಮಣರು ಸಮಾಜದ ನಾಯಕರಂತೆ ಸಾಕಷ್ಟು ತೆರೆದ ಮನಸ್ಸನ್ನು ತೋರಿಸಲಿಲ್ಲ. ಅವರು ಕೂಡ ಸರಿಯಾಗಿ ಯೋಚನೆಮಾಡದೆ ಸಾಮಾಜಿಕ ಯೋಜನೆಗಳಿಗೆ ಬೆಂಬಲ ನೀಡಲಿಲ್ಲ, ಜಾತಿಯ ಪಕ್ಷಪಾತಗಳಿಂದ ಅವರನ್ನು ಹೀನವಾಗಿ ನಿರ್ಲಕ್ಷಿಸಿದರು.

ಹಿಂದುಳಿದ ವರ್ಗಗಳ ಆಂದೋಲನಗಳ ಬುನಾದಿಯೆಂದು ಸಹಜ (ಸ್ವಾಭಾವಿಕ) ಹಕ್ಕುಗಳನ್ನು ಒತ್ತಿಹೇಳುವ ಮೂಲಕ ಶಾಹುರವರು ಅವರಿಗೆ ಒಂದು ರಾಜಕೀಯ ಸ್ಥಾನವನ್ನು ಕಲ್ಪಿಸಿಕೊಡಲು ಸಹಾಯಮಾಡಿದರು. ಇದು ಕೂಡ ಬಾಂಬೆ ಮತ್ತು ಮದ್ರಾಸು ಪ್ರೆಸಿಡೆಂಸಿಗಳಲ್ಲಿ ರಾಷ್ಟ್ರೀಯ ಹೋರಾಟಕ್ಕೆ ಸಹಾಯಮಾಡಿತು. ಸತ್ಯಶೋಧಕರ ಮತ್ತು ಆರ್ಯಸಮಾಜಗಳ ಆದರ್ಶಗಳ ಬೆಂಬಲ ಪಡೆದ ಶಾಹುರವರ ಆಂದೋಲನಗಳು ಸಹಜವಾಗಿಯೇ ಆಕ್ರಮಣಕಾರಿಯಾಗಿದ್ದವು. ತಮ್ಮ ಆಂದೋಲನಗಳ ಆಕ್ರಮಣಶೀಲತೆಯು ಹಿಂಸೆಗೆ ತಿರುಗಬಾರದೆಂದು ಒತ್ತಿಹೇಳುತ್ತಿದ್ದರು. ಹಕ್ಕುಗಳನ್ನು ವಿವೇಚನೆ, ಪ್ರೀತಿ ಮತ್ತು ದೃಢಸಂಕಲ್ಪಗಳಿಂದ ಗೆಲ್ಲಬೇಕು. ಇಪ್ಪತ್ತನೇ ಶತಮಾನದಲ್ಲಿ ಪ್ರಗತಿಯ ಪಥದಲ್ಲಿ ಹಿಂಸೆಗೆ, ದೊಂಬಿಗೆ ಸ್ಥಾನವಿಲ್ಲ. ಅಭಿವೃದ್ಧಿಯನ್ನು ಶಾಂತಿಮಾರ್ಗದಿಂದಲೇ ಸಾಧಿಸಬೇಕು. ಅದು ಅವರ ಮುನ್ನೋಟವಾಗಿತ್ತು.[25]

ಶಿವಾಜಿಯ ವಂಶಸ್ಥರಲ್ಲಿ ಒಬ್ಬರಾಗಿದ್ದ ಸ್ವಾತಂತ್ರ್ಯದ ನಾಯಕರಾಗಿದ್ದ ಶಾಹುರವರಿಗೆ ಸ್ವಾತಂತ್ರ್ಯದ ಪ್ರಾಯೋಗಿಕ ಮಾರ್ಗದಲ್ಲಿ ಇಬ್ಬಗೆಯ ಮನಸ್ಸಿತ್ತು. ಅವರು ಬ್ರಿಟಿಷ್ ಸರಕಾರವನ್ನು ಬೆಂಬಲಿಸಲು ಒಪ್ಪಿದ್ದರೂ ಅವರು ಕೂಡ ಜನರ ರಾಜಕೀಯ ಹಕ್ಕುಗಳಿಗಾಗಿ ತುಂಬ ಆಸಕ್ತಿಯಿಂದ ಕೆಲಸಮಾಡಿದ್ದರು. ಅವರು ಸ್ವಾತಂತ್ರ್ಯದ ಆಂದೋಲನ ತೀವ್ರಗತಿಯಲ್ಲಿ ಸಾಗುತ್ತಿದ್ದನ್ನು ಅರಿತಿದ್ದರು. ಆದರೆ ತನ್ನ ಕಾಲದ ಐತಿಹಾಸಿಕ ವಸಾಹತುವಿನ ವಾಸ್ತವಿಕತೆ ನೀಡಿದ್ದ ಮತ್ತು ಅವರು ಸಾಮಾಜಿಕ ಶಕ್ತಿಗಳಿಗೆ ವಹಿಸಿದ ನಾಯಕತ್ವಗಳು ಯಾವುದೇ ನಿಲುವನ್ನು ತೆಗೆದುಕೊಳ್ಳುವುದಕ್ಕೆ ಕಷ್ಟದಾಯಕವಾಗುತ್ತಿತ್ತು. ೧೯೨೦-೨೧ರಲ್ಲಿ ಮಹಾತ್ಮ ಗಾಂಧಿ ರಾಜಕೀಯ ರಂಗ ಪ್ರವೇಶಿಸಿದ ನಂತರ ಅವರು ಬ್ರಿಟಿಷರಿಗೆ ನೀಡಿದ್ದ ಬೆಂಬಲವನ್ನು ನೀಡಬಾರದಾಗಿತ್ತು. ಈ ರಂಗದ ಬಗ್ಗೆ ಮೌನವಹಿಸುವ ಮೂಲಕ ಅವರು ತಮ್ಮ ಯೋಗ್ಯ ಉದ್ದೇಶಗಳಿಗೆ ಅನುಗುಣವಾಗಿ ಮತ್ತೇನನ್ನೋ ಮಾಡಬಹುದಾಗಿತ್ತು. ಇಷ್ಟಾದರೂ ಬ್ರಿಟಿಷರು ಶಾಹುರವರ ವಿಧೇಯತೆ ಮತ್ತು ಸಮಗ್ರತೆ (ಚಾರಿತ್ರ್ಯ) ಚೆನ್ನಾಗಿ ಬಲ್ಲವರಾಗಿದ್ದು ತಮಗೆ ಸಾರ್ವಜನಿಕವಾಗಿ ಬೆಂಬಲ ನೀಡಬೇಕೆಂದು ಅವರ ಮೇಲೆ ಬಲವಾದ ಒತ್ತಡ ಹೇರಿದ್ದರು. ಅವರು ಪತ್ರಿಕಾಕರ್ತ ಚಿರೋಲನನ್ನು ಬೆಂಬಲಿಸುವಂತೆ ಅವರನ್ನು ಬಲಾತ್ಕಾರಪಡಿಸಲಾಯಿತು. ಸಾರ್ವಜನಿಕ ಅಭಿಪ್ರಾಯವು ಸರಕಾರದ ಪರವಿತ್ತು. ಆದರೂ ಅವರ ಉತ್ತಮ ಪ್ರಯತ್ನಗಳಿಂದ ೧೯೨೦ರ ಚುನಾವಣೆಗಳಲ್ಲಿ ಕೇವಲ ಶೇಕಡ ೨೦ರಷ್ಟು ಮತದಾರರು ಭಾಗವಹಿಸಿದ್ದರು. ಇವರಲ್ಲಿ ಬಹುಜನರು ಬ್ರಾಹ್ಮಣೇತರರಾಗಿದ್ದರು. ಸಂಕ್ಷಿಪ್ತವಾಗಿ ಭಾರತದ ರಾಜಕೀಯ ದೃಶ್ಯವು ಒಂದು ಹೊಸ ದಿಕ್ಕನ್ನು ಪಡೆಯುತ್ತಿದ್ದನ್ನು ಸೂಚಿಸುವ ಸೂಚಕಗಳಾಗಿದ್ದವು.

ಶಾಹುರವರು ಖಂಡಿತವಾಗಿ ರಾಜಕೀಯದಲ್ಲಿ ಹೊಸ ಚಿಹ್ನೆಗಳನ್ನು ಗುರುತಿಸಿದರು ಮತ್ತು ಬಾಂಬೆಯಲ್ಲಿರುವ ಕಾರ್ಮಿಕರಿಗೆ ಕಾರ್ಮಿಕ ಸಂಘಟನೆಗಳನ್ನು ಕಟ್ಟಲು ಮತ್ತು ಅಧಿಕಾರವನ್ನು ತಮ್ಮ ಕೈಗೆ

ತೆಗೆದುಕೊಳ್ಳಲು ಪ್ರೋತ್ಸಾಹಿಸಿದರು. ಈ ಮಧ್ಯೆ ಜರ್ಮನಿ ಮತ್ತು ರಷಿಯಾದಲ್ಲಿ ಸರ್ವಾಧಿಕಾರಿ ನಿಯಮಗಳನ್ನು ನಾಶಪಡಿಸಲಾಯಿತು ಮತ್ತು ಅವುಗಳ ಅಧಿಕಾರ ಸ್ಥಾನದಲ್ಲಿ ಕಾರ್ಮಿಕರನ್ನು ಕೂಡ್ರಿಸಲಾಯಿತು. ಇಂಗ್ಲೆಂಡಿನಲ್ಲಿ ಸಹ ಕಾರ್ಮಿಕ ವರ್ಗ ಹೆಚ್ಚು ಪ್ರಭಾವಶಾಲಿಯಾಗುತ್ತಿತ್ತು. ಈ ನಿದರ್ಶನವನ್ನು ಉದ್ಧರಿಸುತ್ತಾ ಅವರು ಎಲ್ಲಾ ವಯಸ್ಕರು ಮತದಾನದ ಹಕ್ಕನ್ನು ಪಡೆದಿರಬೇಕೆಂದು ಘೋಷಿಸಿದರು. ಸರಕಾರವು ಜನತೆಯ ಆಶೋತ್ತರದ ಪ್ರಕಾರವೇ ಕಾರ್ಯನಿರ್ವಹಿಸಬೇಕು. ಇಡೀ ದೇಶದಲ್ಲೆಲ್ಲಾ ಕಾರ್ಮಿಕ ಸಂಘಟನೆಗಳು ಬೆಳೆಯಬೇಕು.[26] ಬೇರೆ ಮಾತುಗಳಲ್ಲಿ ಹೇಳುವುದಾದರೆ ಶಾಹುರವರು ಬದಲಾಗುತ್ತಿರುವ ವಿಶ್ವದನಾಡಿಯ ಮಿಡಿತ ಅರಿತಿದ್ದರು.

ಶಾಹುರವರು ಬೇರೆಯವರಿಗೆ ಏನನ್ನು ಬೋಧಿಸಿದ್ದರೋ ಅದನ್ನು ಅವರು ಮೊದಲಿಗೆ ತಮ್ಮ ಸಂಸ್ಥಾನದಲ್ಲಿ ಪ್ರಯೋಗ ಮಾಡುವುದೇ ಅವರ ಏಕೈಕ ಮುಖ್ಯ ಕಾರ್ಯತಂತ್ರವಾಗಿತ್ತು. ಅವುಗಳಲ್ಲಿ ಮೀಸಲಾತಿ, ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಮತ್ತು ಸೂಕ್ತ ಮತ್ತು ಅಧಿಕಾರದ ಸಮಾನ ಹಂಚಿಕೆಗಳಾಗಿದ್ದವು. ಜನರು ಅವರನ್ನು ನಂಬಿದ್ದರು ಮತ್ತು ಅವರನ್ನು ಜನರೇ ಉತ್ತರಭಾರತ ಮತ್ತು ಮದ್ರಾಸುಗಳಲ್ಲಿ ಮಾರ್ಗದರ್ಶನ ನೀಡುವಂತೆ ಅವರನ್ನು ಆಹ್ವಾನಿಸಿದ್ದರು. ಅವರು ಒಬ್ಬ ಸಕ್ರಿಯ ಸುಧಾರಕರಾಗಿ, ಅವರು ತಮ್ಮ ಸಾಮಾಜಿಕ ಮತ್ತು ರಾಜಕೀಯ ಧೋರಣೆಗಳಿಗೆ ಯಥೇಚ್ಛವಾಗಿ ಬೆಂಬಲ ಪಡೆದಿದ್ದರು.

ತಮ್ಮ ಧೋರಣೆಗಳ ಮೂಲಕ ಶಾಹುರವರು ಹಿಂದುಳಿದ ವರ್ಗಗಳಲ್ಲಿ ಅವರ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ಬಗ್ಗೆ ಅವರಲ್ಲಿ ಜಾಗೃತಿ ಮೂಡಿಸಿದ್ದರು. ಒಂದು ಚಿಕ್ಕ ಸಂಸ್ಥಾನದಲ್ಲಿ ಶಾಹುರವರ ಈ ಚಟುವಟಿಕೆಗಳು ಅತಿ ನಾಜೂಕಾದ ಜಾತಿಯ ಅಸಮಾನತೆ ಮತ್ತು ಅಸ್ಪೃಶ್ಯತೆಯ ಸಮಸ್ಯೆಗಳ ಬಗ್ಗೆ ರಾಷ್ಟ್ರೀಯ ಆಂದೋಲನವು ಗಮನ ಹರಿಸುವಂತೆ ಪ್ರಚೋದಿಸಿದ್ದು ಸಣ್ಣ ಕ್ರಮವೇನೂ ಅಲ್ಲ. ಅವರ ಆಂದೋಲನಗಳು ಬ್ರಿಟಿಷ್ ಆಡಳಿತಗಾರರ ಸಹಾಯ ಆಗಾಗ ತೆಗೆದುಕೊಂಡಿದ್ದರೂ ಶಾಹುರವರ ನಿಜವಾದ ಗುರಿಗಳು ಜನತಂತ್ರಪರ ಮತ್ತು ಪ್ರಗತಿಪರವಾಗಿದ್ದವು.

ರಾಜರ್ಷಿಯವರ ಸಾವಿನೊಂದಿಗೆ ಹಿಂದುಳಿದ ವರ್ಗಗಳ ಆಂದೋಲನದ ಮೊದಲ ಹಂತವು ಮುಕ್ತಾಯಗೊಂಡಿತು. ಎರಡನೇ ಹಂತವು ಮಹಾತ್ಮ ಗಾಂಧಿಯವರ ನಾಯಕತ್ವದಡಿಯಲ್ಲಿ ಪ್ರಾರಂಭವಾಯಿತು.

---

## ಆಧಾರಗ್ರಂಥಗಳು

1. Chausalkar, Ashok, *M. Phule Yanche Lokshahibabatche Vichar*, Navbharat, September 1982, pp. 29-34.

2. Tophkhane, V. D., *Rajarshi Shaahu Chatrapati Yanche Antarang,* Maharashtra Prakashan, Kolhapur, 1961, pp. 14-15.

3. Jadhav, B. B., *Rajarshi Shahu Maharajanchi Bhashane* (ed.), 1971, p. 37.

4. Keer, Dhananjay, *Rajarshi Shahu Chhatrapathi*, Popular, Mumbai, 1979, p. 218.

5. Ibid, pp. 464-65.
6. Op.cit, Tophkhane, pp. 39-40.
7. Op.cit, Jadhav, p. 54.
8. Op.cit. Keer, p. 323.
9. Yedekar, *Shyam, Rajarshi Shahu Vyaktidarshan, Kolhapur,* 1975, p. 125.
10. Op.cit, Keer, p. 474.
11. Op.cit, Keer, p. 475.
12. Rudolph and Rudolph, *Modernity of Tradition: Political Development in India,* Orient, Mumbai, 1969.
13. Op.cit, Jadhav, pp. 67.
14. Op.cit, Jadhav, pp. 64-65.
15. Op.cit, Jadhav, pp. 41 & 49.
16. Frankel France and Rao M.S.A. (ed.), *Dominance and State Power in India-Decline of Social Order*, Volume I, Oxford University Press, Mumbai 1989, p. 27.
17. Op.cit, Jadhav, p. 62.
18. Op.cit, Jadhav, pp. 71.
19. Op.cit, Jadhav, pp. 72-73.
20. Op.cit, Keer, pp. 317.
21. Vora, Rajendra, *Brahmanetar Chalval*, p. 169-70.
22. Op.cit, Keer, p. 450.
23. Op.cit, Vora, pp. 172-73.
24. Op.cit, Keer, p. 480.
25. Op.cit, Jadhav, pp. 132-33.
26. Op.cit, Jadhav, p. 26.

---

೧೬
# ಶಾಹು ಮತ್ತು ಮುಸ್ಲಿಮ್ ಸಮುದಾಯ

– ಹುಸೇನ್ ಜಾಮದಾರ್
*ಮುಸ್ಲಿಂ ಸತ್ಯಶೋಧಕದ ಸಕ್ರಿಯ ಕಾರ್ಯಕರ್ತ ಮತ್ತು ಲೇಖಕ*

## ರಾಜರ್ಷಿ ಒಬ್ಬ ಮಿಷನರಿ

ರಾಜರ್ಷಿ ಶಾಹು ಮಹಾರಾಜರ ಪ್ರಸಿದ್ಧ ಜೀವನ ಚರಿತ್ರೆಕಾರ ಧನಂಜಯಕೀರ್ ಅವರು ೧೯೭೦ರಲ್ಲಿ ಕೊಲ್ಹಾಪುರದ ಶಿವಾಜಿ ವಿಶ್ವವಿದ್ಯಾಲಯದಲ್ಲಿ ಮೂರು ಉಪನ್ಯಾಸಗಳನ್ನು ನೀಡಿದಾಗ ಅವರು ಶಾಹುರವರನ್ನು ಒಬ್ಬ ಪ್ರೇಷಿತ್, ಒಬ್ಬ ಪ್ರವಾದಿ ಎಂದು ಉಲ್ಲೇಖಿಸಿದ್ದಾರೆ. ರಾಷ್ಟ್ರೀಯ ಪ್ರತಿಷ್ಠೆ ಹೊಂದಿದ ಒಬ್ಬ ವಿದ್ವಾಂಸರು ಶಾಹುರವರಿಗೆ ಒಂದು ಸೂಕ್ತ ಬಿರುದನ್ನು ನೀಡಿದ್ದಾರೆ.

ಪ್ರೇಷಿತನು ಜಗತ್ತಿನ ಒಳಿತಿಗಾಗಿ, ಅನ್ಯಾಯ ಮತ್ತು ಅತ್ಯಾಚಾರಗಳನ್ನು ನಿರ್ಮೂಲನೆಮಾಡಲು ಭೂಮಿಗೆ ಭೇಟಿ ನೀಡುತ್ತಾನೆ. ಅವನು ಜಗತ್ತಿಗೆ ಒಂದು ಹೊಸಧರ್ಮ ಮತ್ತು ಒಂದು ಹೊಸಪಥ (ದಾರಿ) ನೀಡುತ್ತಾನೆ. ಅವರು ಮುಕ್ತಿಯ ದಾರಿಯ ಬಗ್ಗೆ ಅರಿವುಳ್ಳದ್ದು ಮಾತ್ರವಲ್ಲದೆ ಅವರು ನಮಗೆ ಮುಕ್ತಿಗೆ ದಾರಿಯನ್ನು ತೋರಿಸಲು ಪ್ರಯತ್ನಿಸುತ್ತಾರೆ. ರಾಜರ್ಷಿ ಅವರು ಬದುಕಿದ ಯುಗದಲ್ಲಿ ಒಂದು ಹೊಸ ಧರ್ಮಕ್ಕೆ ಸ್ಥಳವಿರಲಿಲ್ಲ. ಆದರೆ ಶಿಕ್ಷಣ ಮತ್ತು ವಿಜ್ಞಾನಗಳು ಮಾನವ ಜನಾಂಗದ ಕಲ್ಯಾಣಕ್ಕಾಗಿ ಮನುಷ್ಯನಿಗೆ ಮಾರ್ಗದ ಮನವರಿಕೆಯನ್ನು ಮಾಡಿಕೊಟ್ಟವು.

ಶಾಹುರವರ ಯುಗದಲ್ಲಿ ಕರ್ಮತತ್ವ ಮತ್ತು ಸ್ವಾರ್ಥದ ಬ್ರಾಹ್ಮಣಿಕೆಯು ಬಹುಸಂಖ್ಯಾತರನ್ನು ಶತಮಾನಗಳವರೆಗೆ ಶಿಕ್ಷಣದಿಂದ ವಂಚಿತಗೊಳಿಸಿ ಅವರನ್ನು ವಿಶೇಷವಾಗಿ ದಲಿತರನ್ನು ನಾಯಿ ಮತ್ತು ಬೆಕ್ಕುಗಳಿಗಿಂತ ಕಡೆಯಾಗಿ ದುಷ್ಟ ಜಾತಿಪದ್ಧತಿಯಡಿಯಲ್ಲಿ ನಿಕೃಷ್ಟವಾಗಿ ಕಂಡಿತು. ಪರಿಪೂರ್ಣವಾದ ಬ್ರಾಹ್ಮಣತ್ವದಡಿಯಲ್ಲಿ ಸಾಮಾಜಿಕ-ರಾಜಕೀಯ ಮತ್ತು ಆರ್ಥಿಕ ಸಂಪತ್ತಿನ ಕೆನೆಯನ್ನು ಬ್ರಾಹ್ಮಣರೆ ಕಬಳಿಸಿ ಇತರೆ ಜಾತಿಗಳಿಗೆ ಏನು ಇಲ್ಲದಂತೆ ಮಾಡಿದ್ದರು.

ಶಾಹುರವರು ದಮನಕಾರಿ ಬ್ರಾಹ್ಮಣತ್ವದ ಭೀಕರತೆಯನ್ನು ಸಹಜಗುಣದಿಂದಲೇ ಅರಿತಿದ್ದರು ಮತ್ತು ಅದರ ಯಜಮಾನಿಕೆಯನ್ನು ಕಿತ್ತೊಗೆಯಲು ತಮ್ಮ ಅಧಿಕಾರವನ್ನು ಪಣಕ್ಕೊಡ್ಡಿದರು. ಮುನ್ನೋಟವುಳ್ಳ ಬಡವರಿಗಾಗಿ ತಮ್ಮ ಜೀವನವನ್ನೇ ಬಡವರ ಮತ್ತು ದಮನಿತರ ಏಳಿಗೆಗಾಗಿ ಸಮರ್ಪಿಸಿದ ಒಬ್ಬ ಮಹಾರಾಜ ಅವರಿಗೆ ಒಂದು ಹೊಸ ದಾರಿಯನ್ನು ತೋರಿಸಿದರು. ಒಬ್ಬ ಪ್ರೇಷಿತ, ಮಹಾನುಭಾವ.

ಶಾಹುರವರ ಜೀವನದ ಹೆಗ್ಗುರಿ ಸಮಾಜದ ಪರಿಪೂರ್ಣ ಪ್ರಗತಿಯಾಗಿತ್ತು. ಈ ದೇಶದ ಮುಸ್ಲಿಮರು ಸಮಾಜದ ಅವಿಭಾಜ್ಯವೆಂದು ನಂಬಿದ್ದರು ಮತ್ತು ಅವರು ಸಹ ಪ್ರಗತಿಯ ಹಾದಿಯಲ್ಲಿ ನಡೆಯಬೇಕಾಗಿದೆ.

ಅವರಲ್ಲಿರುವ ಮೌಢ್ಯವನ್ನು ಅಳಿಸಿಹಾಕಬೇಕು. ಅವರು ತಮ್ಮ ಸಂಸ್ಥಾನವನ್ನು ಆಳುತ್ತಿರುವಾಗ ಈ ಧೋರಣೆಯನ್ನು ಮನಸ್ಸಿನಲ್ಲಿಟ್ಟುಕೊಂಡ ಆಧುನಿಕ ಭಾರತದ ಮೊದಲ ಆಡಳಿತಗಾರರಾಗಿದ್ದರು ಅವರು. ಮಹಾತ್ಮ ಜೋತಿಬಾ ಫುಲೆ ಅವರು ಹಾಕಿಕೊಟ್ಟ ಆದರ್ಶದ ಹಾದಿಯನ್ನು ಅವರು ಅನುಸರಿಸಿದರು. ಮಹಾತ್ಮ ಫುಲೆ ಹೇಳುತ್ತಾರೆ:

ಧರ್ಮ ಮತ್ತು ಪ್ರಭುತ್ವಗಳು
ಮನುಷ್ಯನ ಬಗ್ಗೆ ಭೇದಭಾವ ಮಾಡುವುದಿಲ್ಲ ।
ಸತ್ಯವಂತನಾಗಿರು ।
ದೇವರಿಗಾಗಿ ।
ಕ್ರಿಶ್ಚಿಯನ್ನರನ್ನು, ಮಹಮದೀಯರನ್ನು, ಮಾಂಗರನ್ನು ಮತ್ತು
ಬ್ರಾಹ್ಮಣರನ್ನು ।
ಅಪ್ಪಿಕೊ ಎಲ್ಲರನ್ನು । ಅವರೆಲ್ಲರೂ ಸಹೋದರರು ॥
ನಿಜ ಸೃಷ್ಟಿಕರ್ತ ಒಂದೇ ಒಂದು ಧರ್ಮ ನೀಡಿದ್ದಾನೆ ।
ಏಕೆ ಜಗಳ । ನನ್ನ ಸಹೋದರರೆ? ॥

### ಹಿಂದು-ಮುಸ್ಲಿಮರ ಸಾಮರಸ್ಯದ ಪ್ರವರ್ತಕ

ಯಾವ ಆಡಳಿತಗಾರ(ರಾಜ)ನಾಗಲಿ ತನ್ನ ಪ್ರಜೆಗಳನ್ನು ಎಲ್ಲಾ ಧರ್ಮಗಳಂತೆಯೇ, ಜಾತಿಗಳಂತೆಯೇ, ಸಮುದಾಯಗಳಂತೆಯೇ ಸಮಾನವಾಗಿ ಕಾಣಬೇಕು ಮತ್ತು ಹಾರೈಸಬೇಕು. ಆಗ ಮಾತ್ರ ಅವನು ತನ್ನ ಸಂಸ್ಥಾನದ ಆಡಳಿತವನ್ನು ಸರಿಯಾಗಿ ನಡೆಸುವನು. ಇದನ್ನು ತಿಳಿದು ಶಾಹು ಅವರು ಕೊಲ್ಹಾಪುರದ ಸಿಂಹಾಸನವನ್ನು ಏಪ್ರಿಲ್ ೨, ೧೮೯೪ರಲ್ಲಿ ಏರಿದಾಗ ಹಿಂದು-ಮುಸ್ಲಿ ಮರ ಸಾಮರಸ್ಯದ ಅಭಿಪ್ರಾಯವನ್ನು ವಿವರಿಸಿದರು.

ತಮ್ಮ ಪಟ್ಟಾಭಿಷೇಕದ ನಂತರ ಹಲವು ಸನ್ಮಾನ ಸಮಾರಂಭಗಳಲ್ಲಿ ಶಾಹುರವರು ಪುಣೆಯ ಹೀರಾಬಾಗಿನ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಾ ಪ್ರಸಿದ್ಧ ಮಂದಗಾಮಿ ನಾಯಕ ಗೋಪಾಲಕೃಷ್ಣ ಗೋಖಲೆಯವರ ಉದ್ಧರಣೆಯನ್ನು ಪಠಿಸಿದರು. ತಮ್ಮ ಪ್ರತ್ಯುತ್ತರದಲ್ಲಿ ಶಾಹುರವರು ಮೊದಲು ಮುಂಬಯಿ ಮತ್ತು ಪುಣೆಯಲ್ಲಿ ನಡೆದಿದ್ದ ಹಿಂದೂ-ಮುಸ್ಲಿಮ್ ಗಲಭೆಗಳನ್ನು ಉಲ್ಲೇಖಿಸುತ್ತಾ "ಸ್ನೇಹತ್ವ ಮತ್ತು ಶಾಂತಿಗಳು ಈ ಎರಡು ಸಮುದಾಯಗಳಲ್ಲಿ ನೆಲಸಬೇಕು. ಎರಡು ಸಮುದಾಯಗಳ ನಾಯಕರು ಈಗಾಗಲೇ ಈ ಕಡೆಗೆ ಕಾರ್ಯ ನಿರ್ವಹಿಸುತ್ತಿದ್ದಾರೆ. ಸಾರ್ವಜನಿಕ ಸಭಾದ ನಾಯಕರು ಸಹ ಅಂತಹ ಪ್ರಯತ್ನಗಳನ್ನು ಮಾಡಬೇಕು" ಎಂದು ಹೇಳಿದರು.

ಈ ಭಾಷಣವು ಮಹಾರಾಜರ ಪ್ರತ್ಯೇಕಗೊಂಡ ಉಕ್ತಿಯೇನು ಅಲ್ಲ. ತರುವಾಯ, ಹಲವು ಸಂದರ್ಭಗಳಲ್ಲಿ ಸಾಮಾಜಿಕ ಐಕ್ಯತೆ, ಧಾರ್ಮಿಕ ಸಹಿಷ್ಣುತೆ ಮತ್ತು ರಾಷ್ಟ್ರೀಯ ಭಾವೈಕ್ಯತೆಯ ಬಗ್ಗೆ ಅತ್ಯಾಸಕ್ತಿಯಿಂದ ಹೇಳಿದ್ದಾರೆ. ಈ ಭಾಷಣಗಳಲ್ಲಿ ಅವರು ಹಿಂದು-ಮುಸ್ಲಿಂ ಭಾವೈಕ್ಯತೆ ಮಾತ್ರವಲ್ಲದೆ ಎಲ್ಲಾ ಧರ್ಮಗಳ ಭಾವೈಕ್ಯತೆಯ ಬಗ್ಗೆ ಮಾತನಾಡಿದ್ದಾರೆ.

## ಎಲ್ಲಾ ಧರ್ಮಗಳು ಸರಿಸಮಾನ

ನಾಗಪುರದಲ್ಲಿ ಮೇ ೧೩, ೧೯೨೦ರಲ್ಲಿ ನಡೆದ ಅಖಿಲ ಭಾರತೀಯ ಬಹಿಷ್ಕೃತ ಸಮಾಜದ ಸಮ್ಮೇಳನದಲ್ಲಿ ಅಧ್ಯಕ್ಷೀಯ ಭಾಷಣ ಮಾಡುತ್ತಾ ಹೇಳುವರು. "ನಾವೆಲ್ಲರೂ ಭಾರತೀಯರು, ನಾವೆಲ್ಲರೂ ಯಾವುದೇ ಜಾತಿ, ಧರ್ಮಕ್ಕೆ ಸೇರಿದರೂ ಅಣ್ಣ-ತಮ್ಮಂದಿರು, ವೈಯಕ್ತಿಕ ದೃಷ್ಟಿಯಿಂದ ಧರ್ಮ ಮುಖ್ಯವೆನಿಸಬಹುದು. ಆದರೆ ಜೀವನದ ರಾಷ್ಟ್ರೀಯ ಹಾದಿಯಲ್ಲಿ ಅದು ಒಂದು ಅಡ್ಡಿಯಾಗಬಾರದು. ರಾಷ್ಟ್ರೀಯತೆಗೆ ಹೋಲಿಸಿದಾಗ ಧರ್ಮವು ಒಂದು ಬಹಳ ಚಿಕ್ಕ ವಿಷಯವಾಗುತ್ತದೆ. ಸಂಕ್ಷಿಪ್ತವಾಗಿ, ಧರ್ಮ ಎಂಬ ಶಬ್ದದ ಅರ್ಥ ದೇವರನ್ನು ತಲುಪುವ ದಾರಿ ಎಂದು ವಿವರಿಸಬಹುದು. ದೊಡ್ಡ ನಗರಗಳಾದ ಲಂಡನ್ನು, ಬಾಂಬೆ, ಕಲಕತ್ತಗಳಿಗೆ ರಸ್ತೆಗಳು ಎಲ್ಲಾ ಕಡೆಗಳಿಂದ ಬಂದು ಅಂತಿಮವಾಗಿ ಸೇರುತ್ತವೆ. ಪ್ರಯಾಣಿಕರು ಒಂದು ಗುರಿಯನ್ನು ಹೊಂದಿರುತ್ತಾರೆ – ಬೇಗನೆ ಕನಿಷ್ಠ ಪ್ರಯತ್ನದಿಂದ ಅಲ್ಲಿಗೆ ತಲುಪುವುದು. ಜನರು ವಿವಿಧ ಪಥಗಳನ್ನು ಅನುಸರಿಸುವುದರಿಂದ ಮತ್ತು ವಿವಿಧ ದಾರಿಗಳಿಂದ ದೇವರನ್ನು ತಲುಪುವುದರಿಂದ ಅವರು ಪರಸ್ಪರ ದ್ವೇಷಿಸುವ ಅವಶ್ಯಕತೆಯಿಲ್ಲ.

"ಭಿನ್ನ ಭಿನ್ನ ಧರ್ಮಗಳನ್ನು ಸ್ಥಾಪಿಸುವುದಕ್ಕೆ ಏನೇ ಸನ್ನಿವೇಶಗಳಿರಬಹುದು. ಇಂದು ಯಾವುದೇ ಒಂದು ಮತ (ಧರ್ಮ) ಒಬ್ಬ ಮನುಷ್ಯನನ್ನು ದೇವರ ಬಳಿಗೆ ಕೊಂಡೊಯ್ಯುತ್ತದೆಯೆಂದು ಹೇಳುವುದು ಸರಿಯಲ್ಲ. ಯಾವ ವ್ಯಕ್ತಿಯಾಗಲಿ ತನ್ನ ಮತ ಮಾತ್ರ ಒಳ್ಳೆಯದು ಮತ್ತು ಇತರರ ಮತಗಳು ಕೆಟ್ಟವು ಎಂದು ಹೇಳುವುದು ಒಣ (ತಪ್ಪು) ಹೆಮ್ಮೆಯಾಗುತ್ತದೆ."

ಇತಿಹಾಸದಲ್ಲಿ ಭೂಮಿಯನ್ನು ಗೆಲ್ಲುವನೆಂಬ ಮಹಾತ್ವಾಕಾಂಕ್ಷೆಯಿಂದ ಜನರು ಯುದ್ಧಮಾಡಲು ಹೋಗುತ್ತಿದ್ದರು. ಅಕ್ಬರ ಮತ್ತು ಶಿವಾಜಿಯರ ಕಾಲದಲ್ಲಿ ಯುದ್ಧಗಳನ್ನು ಜಾತಿ ಅಥವಾ ವರ್ಣ (ಬಣ್ಣ) ಕ್ಕಾಗಿ ಮಾಡುತ್ತಿರಲಿಲ್ಲ. ಅಕ್ಬರನ ಆಸ್ಥಾನದಲ್ಲಿ ಮರಾಠರು, ರಾಜಪೂತರು ಮತ್ತು ಇತರೆ ಹಿಂದು ಸರದಾರರು ಮತ್ತು ಸೈನಿಕರು ಯಥೇಚ್ಛವಾಗಿದ್ದರು. ಶಿವಾಜಿ ಮಹಾರಾಜ ಸೇನೆಯಲ್ಲಿ ಮುಸ್ಲಿಮ್ ಸೈನಿಕರ ಸಂಖ್ಯೆ ಹೆಚ್ಚಿತ್ತು ಮತ್ತು ಅಷ್ಟೆ ಅಲ್ಲ, ವಿಜಯನಗರ ಅರಸರ ಸೇನೆಯಲ್ಲಿ ಸಹ ಮುಸ್ಲಿಂ ಸೈನಿಕರಿದ್ದರು.

ಎಲ್ಲಾ ಮತಗಳು ಸಮಾನವಾಗಿ ಮುಖ್ಯ ಮತ್ತು ತನ್ನ ಮತದಿಂದ ಇತರರ ಮತಗಳನ್ನು ಕೀಳೆಂದು ಯಾರು ಸಹ ಭಾವಿಸಬಾರದೆಂದು ಸಹ-ನಾಗರಿಕರಿಗೆ ಶಾಹುರವರ ಬೋಧನೆಗಳು ಒತ್ತಿ ಹೇಳುತ್ತಿದ್ದವು. ಒಂದು ರಾಷ್ಟ್ರದ ನಿರ್ಮಾಣದಲ್ಲಿ ಮತವು (ಧರ್ಮ) ಅಡೆ-ತಡೆಯಾಗಬಾರದೆಂದು ಅವರು ಎಚ್ಚರಿಕೆ ನೀಡಿದ್ದರು.

ಜುಲೈ ೨೦, ೧೯೨೦ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕರ್ನಾಟಕ ಬ್ರಾಹ್ಮಣೇತರರ ಸಾಮಾಜಿಕ ಪರಿಷತ್ತಿನ ಅಧ್ಯಕ್ಷೀಯ ಭಾಷಣ ಮಾಡುತ್ತಾ ಶಾಹುರವರು ಹೇಳುತ್ತಾರೆ: "ಮುಸ್ಲಿಮರು ಮರಾಠರಂತೆ ಯುದ್ಧವೀರರು. ಅವರು ಅದೇ ರೀತಿಯ ಜೀವನಶೈಲಿಯನ್ನು ಹೊಂದಿದ್ದಾರೆ. ಹಲವು ಮುಸ್ಲಿಂ ಸರದಾರರು ಮರಾಠ ಸೇನೆಯಲ್ಲಿದ್ದಾರೆ. ಹಾಗೆಯೇ ಮರಾಠ ಸರದಾರರು ಮೊಘಲ್ ಸೇನೆಯಲ್ಲಿದ್ದರು. ಪ್ರಸ್ತುತ ಬ್ರಿಟಿಷ್ ಸರಕಾರದ ಸೇನೆಯಲ್ಲಿ ಮುಸ್ಲಿಮರು ಮತ್ತು ಮರಾಠರು ಜೊತೆಜೊತೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ." ಶಾಹುರವರು ಯಾವಾಗಲೂ ಮುಸ್ಲಿಮ್ ಸಮುದಾಯವು ಭಾರತದ ಸ್ವಾಭಾವಿಕ ಭಾಗವಾಗಿದೆ ಮತ್ತು ಅವರು ವಿದೇಶೀಯರಲ್ಲ ಎಂಬ ಅಭಿಪ್ರಾಯವನ್ನು ಜನತೆಯ ಮುಂದಿಡಲು ಪ್ರಯತ್ನಿಸುತ್ತಿದ್ದರು.

ಶಾಹು ಶಿವಾಜಿ ಛತ್ರಪತಿಯ ಬಗ್ಗೆ ಮಹಾಗೌರವವಿಟ್ಟುಕೊಂಡಿದ್ದರು ಮತ್ತು ತಾವು ಅವರ ವಂಶಸ್ಥರೆಂಬ ಅಭಿಮಾನ ಹೊಂದಿದ್ದರು. ಶಿವಾಜಿಯವರಿಗೆ ಧರ್ಮದ ಸಹಿಷ್ಣುತೆಯಿತ್ತೆಂಬುದಕ್ಕೆ ಒಂದು ನಿದರ್ಶನವನ್ನು ನೀಡಬಹುದು. ಶಿವಾಜಿಯವರು ಗೌರವಪೂರ್ವಕವಾಗಿ ಯುದ್ಧಭೂಮಿಯಲ್ಲಿ 'ಕುರಾನ್' ತೆಗೆದುಕೊಂಡರು ಮತ್ತು ಅದನ್ನು ಜೋಪಾನವಾಗಿ ಇಡುವುದಕ್ಕಾಗಿ ಒಬ್ಬ ಮುಸ್ಲಿಂ ಸೈನಿಕನಿಗೆ ನೀಡುತ್ತಾರೆ. ಶಿವಾಜಿಗಿಂತ ಮೊದಲು, ಚಕ್ರವರ್ತಿ ಅಕ್ಬರರು ಅಂಥದ್ದೇ ಸಹಿಷ್ಣುತೆಯನ್ನು ಮತ್ತು ಉದಾರತೆಯನ್ನು ಇತರೆ ಧರ್ಮಗಳ ಬಗ್ಗೆ ತೋರಿಸಿದ್ದರು. ತಮ್ಮ ಭಾಷಣದಲ್ಲಿ ಶಾಹುರವರು ಶಿವಾಜಿ ಮತ್ತು ಅಕ್ಬರರಿಬ್ಬರನ್ನು ಹೊಗಳಿದರು.

ನಾಸಿಕನಲ್ಲಿ ಉಧಾಜಿ ಮರಾಠ ವಿದ್ಯಾರ್ಥಿನಿಲಯಕ್ಕೆ ಅಸ್ತಿವಾರ ಹಾಕುವ ಸಮಾರಂಭದಲ್ಲಿ ಶಾಹುರವರು ಹೇಳಿದರು: "ನಮ್ಮ ನಿಜವಾದ ಮಹಾತ್ಮ ಚಕ್ರವರ್ತಿ ಅಕ್ಬರರು ಆಗಿದ್ದರು. ಅವರು ಹಿಂದು ಮತ್ತು ಮುಸ್ಲಿಮರಲ್ಲಿ ಸಾಮರಸ್ಯ ಮೂಡಿಸಿದ್ದರು. ಅವರು ಸ್ವತಃ ಒಬ್ಬ ರಜಪೂತ ಮಹಿಳೆ ಜೋಧಬಾಯಿ ಅವರನ್ನು ಮತವನ್ನು ಬದಲಾಯಿಸು ಎಂದು ಕೇಳದೆ ಮದುವೆಯಾಗಿದ್ದರು. ಈ ೨೦ನೇ ಶತಮಾನದಲ್ಲಿ ಅಸಾಧ್ಯವಾದದ್ದನ್ನು ೧೬ನೇ ಶತಮಾನದಲ್ಲಿ ಸುಲಭವಾಗಿ ಅಕ್ಬರರು ಮಾಡಿದ್ದರು."

### ದರ್ಗಾ ಮತ್ತು ಮಸೀದಿಗಳಿಗೆ ಸಹಾಯಧನ

ಹಿಂದು-ಮುಸ್ಲಿಮರ ಭಾವೈಕ್ಯದ ಶಾಹುರವರ ಬೋಧನೆಯು ಕ್ರಿಯೆ(ಕಾರ್ಯಕ್ರಮ)ಗಳಿಂದ ಕೂಡಿದ್ದವು. ತಮ್ಮ ಸಂಸ್ಥಾನದಲ್ಲಿ ಎರಡು ಮತಗಳನ್ನು ನ್ಯಾಯಬದ್ಧವಾಗಿ ಸಮಾನವಾಗಿ ನೋಡಿಕೊಳ್ಳಲಾಗುತ್ತಿತ್ತು. ಅವರು ಮುಸ್ಲಿಂ ಧಾರ್ಮಿಕ ಪವಿತ್ರಸ್ಥಾನಗಳಿಗೆ ಉದಾರವಾಗಿ ಕಾಣಿಕೆ ನೀಡಿದ್ದನ್ನು ಹಲವಾರು ನಿದರ್ಶನಗಳು ಸೂಚಿಸುತ್ತವೆ.

೧. ಪನ್ಹಾಳದಲ್ಲಿ ಹಜರತ್ ಪೀರ್ ಸಾಧು ಖತಲ್ ದರ್ಗಾದಲ್ಲಿ ಶಾಹುರವರು ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಿಸಿದ್ದರು.

೨. ಅವರು ಸೆಪ್ಟೆಂಬರ್ ೨, ೧೯೧೯ರಂದು ಪತ್‌ಗಾವ್ ಮಸೀದಿಗೆ ವಾರ್ಷಿಕ ಅನುದಾನ ೩೦೦ ರೂ.ಗಳನ್ನು ನೀಡುವಂತೆ ಆಜ್ಞೆ ಹೊರಡಿಸಿದ್ದರು.

೩. ಫೆಬ್ರವರಿ ೬, ೧೯೦೪ರಂದು ಮಹಾರಾಜರು ಕೊಲ್ಹಾಪುರದ ಶಾಹುಪುರಿ ಪ್ರದೇಶದಲ್ಲಿ ಸ್ಥಾವರ ಮಸೀದಿಯ ನಿರ್ಮಾಣಕ್ಕೆ ಭೂಮಿಯನ್ನು ಹಂಚಿದ್ದರು. ಜುಲೈ ೯, ೧೯೨೧ರಂದು ಅವರು ೧,೦೦೦ ರೂ.ಗಳನ್ನು ಮಸೀದಿಗೆ ದಾನಮಾಡಿದ್ದರು.

೪. ಕೊಲ್ಹಾಪುರದಲ್ಲಿ ಕಸಬಾ ಬಾವಡದ ಮುಸ್ಲಿಂ ಸಮುದಾಯವು ಒಂದು ಮಸೀದಿಗೆ ಭೂಮಿಯನ್ನು ಕೋರಿ ಒಂದು ಅರ್ಜಿಯನ್ನು ಹಾಕಿತ್ತು. ಈ ಮನವಿಗೆ ಅಕ್ಟೋಬರ್ ೧೦, ೧೯೧೭ರಂದು ಅನುಮೋದನೆ ನೀಡಲಾಯಿತು ಮತ್ತು ಸರಕಾರ ಯಾವ ಬೆಲೆಯನ್ನು ಅದಕ್ಕೆ ತೆಗೆದುಕೊಳ್ಳದೆ ಉಚಿತವಾಗಿ ಭೂಮಿಯನ್ನು ಮುಸ್ಲಿಂ ಸಮುದಾಯಕ್ಕೆ ಒಪ್ಪಿಸಿತು.

ಶಾಹುರವರ ಔದಾರ್ಯದ ಹಲವು ನಿದರ್ಶನಗಳು ಸಿಗುತ್ತವೆ. ಇವುಗಳಲ್ಲಿ ಪತ್‌ಗಾವ್‌ನಲ್ಲಿ ಮಸೀದಿಗೆ ಮೌನಿ ಮಹಾರಾಜ್ ಮಠದಿಂದ ಅನುದಾನ ಕೊಡಿಸಿದ್ದು ಅತಿಮಹತ್ವದ್ದು. ಒಂದು ಮುಸ್ಲಿಂ ಧಾರ್ಮಿಕ ಸಂಸ್ಥೆಗೆ ಒಂದು ಹಿಂದು ಧಾರ್ಮಿಕ ಸಂಸ್ಥೆಯಿಂದ ನಿಧಿಯನ್ನು ಕೊಡಿಸಿದ್ದು ತುಂಬ ಮಹತ್ವದ್ದಾಗಿದೆ.

ಇದನ್ನು ಉದ್ದೇಶಪೂರ್ವಕವಾಗಿ ಮಾಡದಿದ್ದರೂ ಹಿಂದು ಮತ್ತು ಮುಸ್ಲಿಂ ಸಮುದಾಯಗಳ ನಡುವೆ ಭಾವೈಕ್ಯತೆಯನ್ನು ನಿರ್ಮಾಣಮಾಡುವ ದಾರಿಯಲ್ಲಿ ಸಾಗಿದ್ದೇವೆಂಬುದರಲ್ಲಿ ಸಂದೇಹವಿಲ್ಲ.

## ಮುಸ್ಲಿಂ ಕವಿ ಮತ್ತು ಕಲಾವಿದರಿಗೆ ಆಶ್ರಯ

ಮಹಾರಾಜರು ಮುಸ್ಲಿಂ ಧಾರ್ಮಿಕ ಸಂಸ್ಥೆಗಳಿಗೆ ದಾನ-ಧರ್ಮಗಳನ್ನು ನೀಡಿದ್ದು ಮಾತ್ರವಲ್ಲದೆ, ಮುಸ್ಲಿಂ ಸಮುದಾಯದ ಕವಿಗಳಿಗೆ, ಕಲಾವಿದರಿಗೆ, ಗಾಯಕರಿಗೆ ಮತ್ತು ಕುಸ್ತಿ ಪಟುಗಳಿಗೆ ರಾಜಾಶ್ರಯವನ್ನು ನೀಡಿದ್ದರು.

ಕೊಲ್ಹಾಪುರದ ನಿವಾಸಿಯಾದ ಶಾಹಿರ್‌ಲಹರಿ ಹೈದರ್‌ರವರ ವಂಶಪರಂಪರೆಯ ಕಸಬು ಬ್ಲೇಡು (ಚಾಕು-ಚೂರಿಗಳನ್ನು) ಹರಿತಗೊಳಿಸುವುದಾಗಿದ್ದರೂ ಅವನೊಬ್ಬ ಲಾವಣಿ ಮತ್ತು ಜನಪದ ಗೀತೆಗಳ ಹಾಡುಗಾರನಾಗಿದ್ದನು. ಅವನ ಅಭಿವ್ಯಂಜಕ ಲಾವಣಿಗಳು ಐತಿಹಾಸಿಕ, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳನ್ನು ಒಳಗೊಂಡಿದ್ದವು. ಅವನಿಗೆ ಹಿಂದುಧರ್ಮ ಸುಪರಿಚಿತವಾಗಿತ್ತು ಮತ್ತು ಇತಿಹಾಸ ಹಾಗೂ ಶಿವಾಜಿ ಮಹಾರಾಜನ ಬಗೆಗಿನ ಅವನ ಲಾವಣಿಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದವು. ಅವನು ಮಹಾರಾಷ್ಟ್ರ ಶಾಹಿರ್ ಸಮ್ಮೇಳನದಲ್ಲಿ ಬಹುಮಾನವನ್ನು ಪಡೆದಿದ್ದನು. ಅವನ ಪ್ರಸಿದ್ಧವಾದ ರಚನೆಗಳಲ್ಲಿ ಒಂದು ಸಿಂಹಗಢ್‌ದ್ದು ಮತ್ತು ಮತ್ತೊಂದು ರಷಿಯಾ ಕ್ರಾಂತಿಯ ಬಗ್ಗೆ ಬರೆದದ್ದು. ಹೆಚ್ಚು ಹೆಸರುವಾಸಿಯಾಗಿದ್ದ ಶಾಹಿರ್ ಪೀರಾಜಿರಾವ್ ಸರ್‌ನಾಯ್ಕ ಅವರು ಶಾಹಿರ್ ಲಹರಿ ಹೈದರ್ ಅವರ ಶಿಷ್ಯರಾಗಿದ್ದರು. ಲಹರಿಯವರಿಗೆ ಯಾವುದೇ ನಿಯತಕಾಲಿಕ ಉದ್ಯೋಗವಿಲ್ಲದಿದ್ದರಿಂದ ಶಾಹು ಅವರಿಗೆ ಒಂದು ತಾಂತ್ರಿಕ ಶಾಲೆಯಲ್ಲಿ ಒಂದು ಹುದ್ದೆಯನ್ನು ನೀಡಿದ್ದರು. ಅವರ ಪ್ರತಿಭಾಶಕ್ತಿಗೆ ಮೆಚ್ಚಿ ಅವರಿಗೆ ವಾಸಕ್ಕೆ ಒಂದು ಮನೆಯನ್ನು ನೀಡಲಾಗಿತ್ತು. ನಂತರ ಅವರು ಶಾಲೆಯ ಅಧೀಕ್ಷಕರಾದರು. ಶಾಹಿರ್ ಲಹರಿಯವರು ನಂತರ ಶಾಹುರವರ ನಿಕಟವರ್ತಿಗಳಾದರು. ಮತ್ತು ಅವರಿಬ್ಬರು ನಗರದಲ್ಲಿ ರಾಜರ ಕುದುರೆಗಾಡಿಯಲ್ಲಿ ಸುತ್ತುಗಳನ್ನು ಹಾಕುತಿದ್ದನ್ನು ನೋಡಬಹುದಾಗಿತ್ತು. ಹೀಗೆ ನಗರವನ್ನು ಸುತ್ತುಹಾಕುವಾಗ ಶಾಹಿರರು ಶಾಹುರವರು ಹೇಳುವುದನ್ನು ಟಿಪ್ಪಣಿಮಾಡಿಕೊಳ್ಳುತ್ತಿದ್ದರು. ಅವರು ಮಹಾರಾಷ್ಟ್ರದ ಕಾವ್ಯದಲ್ಲಿ ತಮ್ಮನ್ನು ತಾವೇ ಅಳಿಸಲಾರದಂತಹ ಸ್ಥಾನವನ್ನು ಗಳಿಸಿದ್ದಾರೆ.

ಮಹಾಲಕ್ಷ್ಮಿ ದೇವಸ್ಥಾನದಲ್ಲಿ ನವರಾತ್ರಿ ಉತ್ಸವ ಸಮಾರಂಭದಲ್ಲಿ ಭಾಗವಹಿಸಲು ಮೊದಲ ಬಾರಿಗೆ ಕೊಲ್ಹಾಪುರಕ್ಕೆ ಬಂದಿದ್ದ ಪ್ರತಿಭಾವಂತ ಗಾಯಕ ಅಲ್ಲಾದಿಯ ಖಾನ್ ಅವರ ಮಧುರಕಂಠ, ಹಾಡುಗಾರಿಕೆಯ ವಿಶಿಷ್ಟ ದಕ್ಷಿಣ ಭಾರತದ ಶೈಲಿಯನ್ನು ಕೇಳಿ ಶಾಹುರವರು ಮಂತ್ರಮುಗ್ಧರಾಗಿಬಿಡುತ್ತಾರೆ. ಶಾಹುರವರು ಖಾನ್‌ಸಾಹೇಬರನ್ನು ತನ್ನ ಆಸ್ಥಾನದ ಒಬ್ಬ ಸದಸ್ಯರನ್ನಾಗಿ ನೇಮಿಸಿಕೊಳ್ಳುತ್ತಾರೆ. ಅವರಿಗೆ ಆಸ್ಥಾನ ಗಾಯಕ ಎಂಬ ಬಿರುದನ್ನು ಕೊಡಲಾಯಿತು. ನಂತರ ಮಹಾರಾಜರು ಖಾನ್‌ಸಾಹೇಬರನ್ನು ತಮ್ಮ ಸಹೋದರ ಎಂದು ಭಾವಿಸಿದರು. ಶಾಹುರವರ ಆಶ್ರಯದಲ್ಲಿ ಈ ಪ್ರತಿಭಾವಂತ ಕಲಾವಿದ ಅಖಿಲಭಾರತ ಖ್ಯಾತಿಯನ್ನು ಪಡೆದರು. ಅವರಿಗೆ 'ಗಾನಮಹರಿಷಿ' ಎಂಬ ಬಿರುದು ನೀಡಲಾಯಿತು. ಹಲವು ಪ್ರಸಿದ್ಧ ಗಾಯಕರು ಅವರ ಶಿಷ್ಯರಾದರು. ಕೇಸರಬಾಯಿ ಅವರು ತಮ್ಮ ಕೊನೆಯ ಪಾಠಗಳನ್ನು ಖಾನ್‌ಸಾಹೇಬರಿಂದ ಪಡೆದರು.

ಖಾನ್‌ಸಾಹೇಬರು ಆಗಾಗ ವಿಶೇಷ ಸಂದರ್ಭಗಳಲ್ಲಿ ಮಹಾರಾಜರ ಜೊತೆಯಲ್ಲಿ ಹೋಗುತ್ತಿದ್ದರು.

ಇವರಿಬ್ಬರು ಡಿಸೆಂಬರ್ ೧೨, ೧೯೧೨ರಂದು ಚಕ್ರವರ್ತಿ ಜಾರ್ಜ್-೫ ಅವರ ಪಟ್ಟಾಭಿಷೇಕೋತ್ಸವದಲ್ಲಿ ಭಾಗವಹಿಸಲು ದೆಹಲಿಗೆ ಹೋಗಿದ್ದರು.

ಅಲ್ಲಾದಿಯ ಖಾನ್ ಅವರು ಹಿಂದು-ಮುಸ್ಲಿಮರ ಭಾವೈಕ್ಯವನ್ನು ಬಲವಾಗಿ ನಂಬಿದ್ದರು. ತಮ್ಮ ರಚನೆಗಳಲ್ಲಿ ಕೆಲವನ್ನು ಹಿಂದು ದೇವತೆಗಳಿಗೆ ಅರ್ಪಿಸಲಾಗಿದೆ. ತಮ್ಮ ರಚನೆ ಆದ್ದತ(ಮಲ್ಕನರು) ದಲ್ಲಿ ಇಡೀ ವಿಶ್ವದೇವರಿಂದ ಉಗಮಗೊಂಡಿದೆಯೆಂದು ಹೇಳುವಾಗ ಭಗವದ್ಗೀತೆಯನ್ನು ಉಲ್ಲೇಖಿಸಿದ್ದಾರೆ.

ರಾಜರ್ಷಿ ನಿಧನದ ೨೦ ವರ್ಷಗಳ ನಂತರ ೧೯೪೨ರಲ್ಲಿ ಅಲ್ಲಾದಿಯ ಖಾನರು ಕೊಲ್ಹಾಪುರಕ್ಕೆ ಭೇಟಿನೀಡಿದಾಗ ಸಾರ್ವಜನಿಕರು ಅವರಿಗೆ ಅತ್ಯುತ್ಸಾಹದಿಂದ ರಾಜಮರ್ಯಾದೆಯನ್ನು ನೀಡಿದರು. ಮಹಾರಾಣಿ ತಾರಾಬಾಯಿ(ರಾಜಪ್ರತಿನಿಧಿ)ಯವರು ಒಂದು ಸಾವಿರ ರೂ. ನಿಧಿ ಮತ್ತು ನೆನಪಿನ ಫಲಕವನ್ನು ಅವರಿಗೆ ನೀಡಿದರು. ಅವರ ನಿಧನದ ನಂತರ ಅವರ ಪ್ರಶಂಸಕರು ಅವರ ಪುತ್ಥಳಿಯನ್ನು ನೆನಪಿಗಾಗಿ ಸ್ಥಾಪಿಸಿದ್ದಾರೆ.

ಇತ್ತೀಚೆಗೆ ಕೋಮುವಾರು ಸಂಘಟನೆಗಳ ಏಳಿಗೆ ಹೆಚ್ಚಾಗಿದೆ. ಅವುಗಳಲ್ಲಿ ಯಾವುದೊ ಒಂದು ಖಾನಸಾಹೇಬರ ಪುತ್ಥಳಿಯನ್ನು ಕೆಡವಿಹಾಕಿದರು. ಶಾಹು ಮಹಾರಾಜರವರ ಅನುಯಾಯಿಗಳು ಕೂಡಲೆ ಪುತ್ಥಳಿಯನ್ನು ಪುನರ್‌ಸ್ಥಾಪಿಸಿ ಶಾಹುರವರ ಹಿಂದು-ಮುಸ್ಲಿಂ ಭಾವೈಕ್ಯದ ತತ್ವ ಸೊರಗದಂತೆ ನೋಡಿಕೊಂಡರು.

ಮತ್ತೊಬ್ಬ ಪ್ರಸಿದ್ಧ ಮುಸ್ಲಿಂ ಕಲಾವಿದ ಅಬಲಾಲ್ ರಹಿಮನ್, ಅವರಿಗೆ ಶಾಹುರವರು 'ಕಲಾ ಮಹಾರಿಷಿ' ಎಂಬ ಬಿರುದನ್ನು ನೀಡಿದರು. ಅವರು ಓದಲು ಮುಂಬಯಿಗೆ ಹೋದರು ಮತ್ತು ಪರೀಕ್ಷೆಯಲ್ಲಿ ಮೊದಲನೆಯವನಾಗುವೆನೆಂಬ ನಿರೀಕ್ಷೆ ಮುರಿದುಬಿತ್ತು. ತಾವು ಭಾವಿಸಿದ ಫಲಿತಾಂಶವು ಒಂದು ಮಹಾ ಅನ್ಯಾಯವಾಗಿತ್ತು. ಅವರು ಮಾನಸಿಕ ಸಮತೋಲನವನ್ನು ಕಳೆದುಕೊಂಡರು.

ಮಹಾರಾಜರು ಬಹಳ ಸಹಾನುಭೂತಿ ಪರರಾಗಿದ್ದರು ಮತ್ತು ಅವಕಾಶ ದೊರೆತಾಗಲೆಲ್ಲ ಚಿತ್ರಕಾರನಿಗೆ ಚಿತ್ರ ಬರೆಯಲು ಪ್ರೋತ್ಸಾಹಿಸಿದರು. ಈ ಪ್ರೋತ್ಸಾಹಕ್ಕೆ ತುಂಬ ಧನ್ಯವಾದಗಳು, ಆಬಲಾಲ್ ರಹಿಮನ್ನರು ಹಲವು ಮಹಾಕೃತಿಗಳನ್ನು ರಚಿಸಿದರು. ಅವುಗಳಲ್ಲಿ ಹಲವು ಭೂದೃಶ್ಯ ಚಿತ್ರಗಳು ಇಂದಿಗೂ ಅಚ್ಚುಮೆಚ್ಚಾಗಿವೆ. ಅವರ ಅತ್ಯುತ್ಕೃಷ್ಟ ಕೃತಿ ಅವರಿಗೆ 'ರಂಗ್ ಸಾಮ್ರಾಟ್' ಎಂಬ ಬಿರುದು ತಂದುಕೊಟ್ಟಿದೆ.

ಮಹಾರಾಜರಿಗೆ ಕುಸ್ತಿಯು ಅಚ್ಚುಮೆಚ್ಚಿನದಾಗಿತ್ತು. ಅವರು ಹಲವು ಮುಸ್ಲಿಂ ಕುಸ್ತಿಪಟುಗಳನ್ನು ಪ್ರೋತ್ಸಾಹಿಸಿದರು. ಶಾಹುರವರ ಆಶ್ರಯಪಡೆದ ಇಮಾಮ್‌ಬಕ್ಷರ ಕುಸ್ತಿಯ ಪಂಜಾಬಿ ಕುಸ್ತಿಪಟುಗಳ ಪ್ರದರ್ಶನದ ಉಪಯೋಗವು ಮಹಾರಾಷ್ಟ್ರಕ್ಕೆ ಸುಪರಿಚಿತವಾಯಿತು. ಕೊಲ್ಹಾಪುರದ ಪ್ರಸಿದ್ಧ ಮುಸ್ಲಿಮ್ ಪಟುಗಳಲ್ಲಿ ಪ್ರಾಮುಖ್ಯತೆಗಳಿಸಿರುವವರು ಕಮರುದ್ದೀನ್, ಗುಲಾಂ ಮೋಹಿದ್ದೀನ್, ರಂಜಾನ್, ಖಲೀಲ್ ಪಂಜಾಬಿ, ಜಾನಿ ಪಂಜಾಬಿ, ಇಮಾಮ್ ಬಕ್ಷ, ರಹಿಂಬಕ್ಷ, ಹಸನ್‌ಬಕ್ಷ, ಗುಲಾಮ್ ಕಾದರ್, ರಜ್ಜಬ್ ಮುಲ್ತಾನಿ, ಮೊಹಮ್ಮದಿನ್ ಪಂಜಾಬಿ, ಕಾದರ್ ಬಕ್ಷ ಮತ್ತು ಮೊಹಮ್ಮದ್ ಬಕ್ಷ.

ಶಾಹು ಸ್ವತಃ ಒಬ್ಬ ಕುಸ್ತಿಪಟುವಾಗಿದ್ದರು ಬಲೆಖಾನ್ ವಸ್ತಾದ್ ಅವರು ಅವರ ಗುರುಗಳಾಗಿದ್ದರು. ಶಾಹು ರಾಜಕೋಟ ಮತ್ತು ಧಾರವಾಡಕ್ಕೆ ಅಧ್ಯಯನಮಾಡಲು ಹೋದಾಗ ಅವರ ಜೊತೆಯಲ್ಲಿ ಬಲೇಖಾನ್

ವಸ್ತಾದರು ಇದ್ದರು. ಶಾಹುರವರು ತಮ್ಮ ಗುರುಗಳಿಗೆ ೧೦ ಎಕರೆ ಜಮೀನು ಮತ್ತು ಒಂದು ಉಪ್ಪರಿಗೆಯ ಮನೆಯನ್ನು ಕೊಲ್ಹಾಪುರದಲ್ಲಿ ಬಳುವಳಿಯಾಗಿ ನೀಡಿದ್ದರು. ಅದರಲ್ಲಿ ಬಲೆಖಾನ್ ವಾಸವಾಗಿದ್ದರು. ಅದರ ಬಳಿಯೇ ಒಂದು ವ್ಯಾಯಾಮಶಾಲೆಯಿತ್ತು. ಅಲ್ಲಿಗೆ ರಾಜರ್ಷಿಯವರು ಸಂದರ್ಭೋಚಿತವಾಗಿ ಕುಸ್ತಿಯನ್ನು ತಮ್ಮ ಗುರುವಿನ ಜೊತೆಯಲ್ಲಿ ಅಭ್ಯಾಸಮಾಡಲು ಹೋಗುತ್ತಿದ್ದರು. ಬಲೆಖಾನರು ಗೌರವಧನವನ್ನು ಆಸ್ಥಾನದಿಂದ ಪಡೆಯುತ್ತಿದ್ದರು.

### ಮುಸ್ಲಿಂ ಸಮುದಾಯಕ್ಕೆ ಸಹಾಯಧನ

ಶಾಹುರವರು ಕೆಲವು ಸಾಮಾಜಿಕ ಸಂದರ್ಭಗಳಲ್ಲಿ ಮುಸ್ಲಿಂ ಸಮುದಾಯವು ತೊಡಗಿಸಿಕೊಳ್ಳುವಂತೆ ಮಾಡುವುದನ್ನು ಮುಖ್ಯವೆಂದು ಭಾವಿಸಿದ್ದರು. ಉದಾಹರಣೆಗೆ, ತನ್ನ ಮಗಳು ಅಕ್ಕಸಾಹೇಬರ ವಿವಾಹದ ಸಮಯದಲ್ಲಿ ಇತರೆ ಜೋಡಿಗಳ ವಿವಾಹಗಳಲ್ಲಿ ಸೇರುವಂತೆ ಮಾಡುತ್ತಿದ್ದರು. ಇದನ್ನು ವಿವಾಹಿತ ರಾಜ-ದಂಪತಿಗಳು ಜನರಿಂದ ಆಶೀರ್ವಾದ ಪಡೆಯುವುದಕ್ಕೆ ವ್ಯವಸ್ಥೆಗೊಳಿಸುತ್ತಿದ್ದರು. ಮಾರ್ಚ್ ೧೧, ೧೯೦೮ರಂದು ೧೮ ಮದುವೆಗಳು ನಡೆದವು. ಅವುಗಳಲ್ಲಿ ಕೆಲವು ಮುಸ್ಲಿಂ ದಂಪತಿಗಳು ಇದ್ದರು.

ರಾಯಬಾಗ್‌ನಲ್ಲಿ ನೇಕಾರರು ಶ್ರೀಶಾಹು ನೇಕಾರರ ಸಂಘ ಎಂಬ ಒಂದು ಸಂಘಟನೆಯನ್ನು ಸ್ಥಾಪಿಸಿದ್ದರು. ಈ ಸಂಸ್ಥೆಯಲ್ಲಿ ೪೦ ಹೊರ ಕುಟುಂಬಗಳಲ್ಲಿ ೨೦ ಕುಟುಂಬಗಳು ಮುಸ್ಲಿಮರು ಕೆಲಸಮಾಡಲು ಬಂದಿದ್ದರು. ಈ ಬಡಕುಟುಂಬಗಳ ವಸತಿವ್ಯವಸ್ಥೆಯನ್ನು ವ್ಯವಸ್ಥೆಮಾಡಿದ್ದು ಮಾತ್ರವಲ್ಲದೆ ಆಸ್ಥಾನದ ಮೂಲಕ ಅವರಿಗೆ ಭೂಮಿಯನ್ನು ಕೊಡಿಸಿದರು. ಇದರ ಜೊತೆಗೆ ಪ್ರತಿಯೊಂದು ಕುಟುಂಬಕ್ಕೆ ೧೫೦ರೂಗಳ ಅನುದಾನವನ್ನು ಕೊಡಿಸಿದರು.

ಮುಸ್ಲಿಮರ ಕಲ್ಯಾಣಕ್ಕಾಗಿ ಶಾಹುರವರು ಸಹ ನ್ಯಾಯಾಂಗಪದ್ಧತಿಯಲ್ಲಿ ಬದಲಾವಣೆಗಳನ್ನು ಮಾಡಲು ಪ್ರಯತ್ನಿಸಿದರು. ನ್ಯಾಯಾಂಗಪದ್ಧತಿಯಲ್ಲಿ ಮೇಲುಜಾತಿಗಳ ಪ್ರಾಬಲ್ಯವನ್ನು ಕೊನೆಗಾಣಿಸಲು ಶಾಹುರವರು ಕೆಳಜಾತಿಗಳ ಮತ್ತು ಮುಸ್ಲಿಮರ ಕೆಲವು ಯುವಕರಿಗೆ ವಕೀಲಿಯನ್ನು ಪ್ರಾರಂಭಿಸಲು ಸನದುಗಳನ್ನು ನೀಡಿದರು. ಆ ಕಾಲದ ಮುಸ್ಲಿಂ ಲಾಯರುಗಳಲ್ಲಿ ಶೇಕ್ ಆಲಿ ಮೊಹಮ್ಮದ್, ಮೊಹಮ್ಮದ್ ಹುಸ್ಸೇನ್, ಮೀರಾಸಾಹೇಬ್ ಚಿಕೋಡಿಕರ್ ಮತ್ತು ಹುಸೇನ್ ದಾದಾಭಾಯಿ ಜಾಮ್‌ದಾರ್ ಅವರು ಪ್ರಮುಖರಾಗಿದ್ದರು.

### ಮುಸ್ಲಿಮರಿಗೆ ವಿದ್ಯಾರ್ಥಿ ನಿಲಯಗಳ ಸ್ಥಾಪನೆ

ಶಾಹುರವರು ೧೯೦೨ರಲ್ಲಿ ವಿದೇಶದಿಂದ ವಾಪಸ್ಸು ಬಂದಾಗ ಕೊಲ್ಹಾಪುರದ ಮುಸ್ಲಿಮ್ ಸಮುದಾಯ ಸೇರಿದಂತೆ ಹಲವು ಸಂಸ್ಥೆಗಳು ಅವರಿಗೆ ಗೌರವ ಸನ್ಮಾನ ಸಮಾರಂಭ ವ್ಯವಸ್ಥೆಗೊಳಿಸಿದ್ದವು. ಅಲ್ಲಿ ಅವರು ಮುಸ್ಲಿಮರಿಗೆ ಶಿಕ್ಷಣದ ಅಗತ್ಯವನ್ನು ಒತ್ತಿಹೇಳಿದರು. ಅವರು ಮುಸ್ಲಿಮ್ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯದ ಕಟ್ಟಡಕ್ಕೆ ಹಣಕಾಸಿನ ನೆರವು ನೀಡುವ ಭರವಸೆಯನ್ನು ನೀಡಿದರು. ಆದರೆ ಮುಸ್ಲಿಮರು ಒಂದು ಸಮುದಾಯವಾಗಿ ಶಿಕ್ಷಣದ ಬಗ್ಗೆ ಅಸಡ್ಡೆಯಿಂದ ಏನು ಮಾಡಲಿಲ್ಲ. ಶಾಹುರವರು ಸ್ವತಃ ವಿದ್ಯಾರ್ಥಿಗಳಿಗೆ ವಿಕ್ಟೋರಿಯ ಮರಾಠ ವಿದ್ಯಾರ್ಥಿ ನಿಲಯದಲ್ಲಿ ೧೦ ಸ್ಥಾನಗಳನ್ನು ಮೀಸಲಿಟ್ಟರು. ಕರ್ನಾಟಕದ ಅಥಣಿಯಿಂದ ಶೇಕ್ ಮೊಹಮ್ಮದ್ ಯುಸುಫ್ ಅಬ್ದುಲ್ಲಾ ಎಂಬ ಮೊಟ್ಟಮೊದಲ ಒಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಲಯದಲ್ಲಿ ಸೇರುವವರೆಗೆ ಯಾವ ಮುಸ್ಲಿಮ್ ವಿದ್ಯಾರ್ಥಿಯು ಈ ವಿದ್ಯಾರ್ಥಿ

ನಿಲಯದ ಪ್ರಯೋಜನ ಪಡೆದಿರಲಿಲ್ಲ. ಅವನು ರಾಜಾರಾಮ್ ಕಾಲೇಜಿನಲ್ಲಿ ತನ್ನ ಅಧ್ಯಯನ ಮುಗಿಸಿದನು ಮತ್ತು ೧೯೧೦ಲರಲ್ಲಿ ಸ್ನಾತಕ ಪದವಿಯನ್ನು ಗಳಿಸಿದನು. ಶಾಹುರವರು ಅವನಿಗೆ ಜಿಲ್ಲೆಯ ಅಧಿಕಾರಿಯಾಗಿ ಕೆಲಸ ನೀಡಿದರು. ನಂತರ ಅವನು ಒಬ್ಬ ಡೆಪ್ಯುಟಿ ಕಲೆಕ್ಟರ್ ಮತ್ತು ಖಜಾನೆಯ ಅಧಿಕಾರಿಯಾದನು. ಶಾಹುರವರು ಮುಸ್ಲಿಮ್ ಸಮುದಾಯದಲ್ಲಿ ಶಿಕ್ಷಣವನ್ನು ಪ್ರಚಾರಮಾಡುವ ಕೆಲಸವನ್ನು (ಹುದ್ದೆ) ನೀಡಿದರು.

ರಾಜರ್ಷಿ ಅವರು ಆಡಳಿತದ ಉದ್ದಕ್ಕೂ ಮುಸ್ಲಿಮ್ ಸಮುದಾಯದಲ್ಲಿ ವಿದ್ಯಾಭ್ಯಾಸವನ್ನು ಪ್ರಸಾರಮಾಡುವ ತಮ್ಮ ಪ್ರಯತ್ನಗಳನ್ನು ಮುಂದುವರೆಸುತ್ತಲೇ ಇದ್ದರು. ಈ ಪ್ರಯತ್ನಗಳು ನವೆಂಬರ್ ೧೫, ೧೯೦೬ರಲ್ಲಿ ಕಿಂಗ್ ಎಡ್ವಾರ್ಡ್ ಮೊಹಮ್ಮಡನ್ ಎಜುಕೇಷನ್ ಸೊಸೈಟಿಯ ಸ್ಥಾಪನೆಯಲ್ಲಿ ತುತ್ತತುದಿಗೇರಿತು. ಈ ಸೊಸೈಟಿಯ ಮೂಲಕ ಮುಸ್ಲಿಮ್ ಹುಡುಗರಿಗೆ ವಿದ್ಯಾರ್ಥಿ ನಿಲಯ ಸ್ಥಾಪಿಸುವ ನಿರ್ಣಯ ತೆಗೆದುಕೊಳ್ಳಲಾಯಿತು. ಮುಸ್ಲಿಮ್ ಸಮುದಾಯ ಜನರು ೧,೧೩೪ ರೂ.ಗಳನ್ನು ಎಜುಕೇಷನ್ ಸೊಸೈಟಿಗೆ ಸಂಗ್ರಹಿಸಿದರು.

ಈ ವಿದ್ಯಮಾನದಿಂದ ಸಂತೋಷಗೊಂಡ ಶಾಹು ಅವರಿಗೆ ೨೫೦೦೦ ಚದರಡಿಯ ಭೂಮಿಯನ್ನು ಕೊಲ್ಹಾಪುರದಲ್ಲಿ ದಸರಾಚಾಕದಲ್ಲಿ ವಿದ್ಯಾರ್ಥಿ ನಿಲಯ ನಿರ್ಮಿಸಲು ನೀಡಿದರು. ಅವರು ಕಟ್ಟಡದ ನಿಧಿಗೆ ೫,೫೦೦ ರೂ.ಗಳನ್ನು ಮತ್ತು ರೂ. ೨೫೦ ಅನ್ನು ವಾರ್ಷಿಕ ಅನುದಾನವಾಗಿ ನೀಡಿದರು. ಸಂಘಟನೆಯ ಖರ್ಚುವೆಚ್ಚ ಸರಿದೂಗಿಸಲು ವಾರ್ಷಿಕ ಆದಾಯ ೬,೭೪೫ ರೂ.ಗಳನ್ನು ನೀಡುವ ಸ್ವಲ್ಪ ಭೂಮಿಯನ್ನು ನೀಡಿದರು. ವಿದ್ಯಾರ್ಥಿ ನಿಲಯದ ನಿರ್ಮಾಣಕ್ಕೆ ಅವಶ್ಯಕವಾಗಿರುವ ತೇಗದ ಮರ-ಮಟ್ಟುಗಳನ್ನು ಬೆಲೆಯಿಲ್ಲದೆ ತಮ್ಮ ಕಾಡುಗಳಿಂದ ನೀಡಲು ವ್ಯವಸ್ಥೆ ಮಾಡಿದರು. ತಮ್ಮ ವಿಕ್ಟೋರಿಯಾ ಬೋರ್ಡಿಂಗ್ ನೀಡಿರುವ ದೇಣಿಗೆಗಿಂತ ಮುಸ್ಲಿಮ್ ಬೋರ್ಡಿಂಗ್‌ನ ನಿರ್ಮಾಣಕ್ಕೆ ನೀಡಿರುವ ದೇಣಿಗೆ ಮೊತ್ತ ಅತಿಹೆಚ್ಚಿನದೆಂದು ಮಾಧವರಾವ್ ಬಾಗಲ್ ಅವರು ತಮ್ಮ ನೆನಪುಗಳಲ್ಲಿ ದಾಖಲಿಸಿರುವುದನ್ನು ಗಮನಿಸಬೇಕು.

ಶಾಹುರವರು ತಮ್ಮ ಪ್ರಜೆಗಳ ಬಗ್ಗೆ ಬಹಳ ಜಾಗೃತರಾಗಿದ್ದರು. ಅವರು ಮುಸ್ಲಿಂ ಸಮುದಾಯಕ್ಕೆ ಮುಸ್ಲಿಂ ವಕ್ಫ್ ಬೋರ್ಡನ್ನು ವಹಿಸುವಾಗ ಒಂದು ಷರತ್ತನ್ನು ವಿಧಿಸುತ್ತಿದ್ದರು. ವಕ್ಫ್ ಮಂಡಳಿಯಿಂದ ಬಂದ ಆದಾಯದಲ್ಲಿ ಅಗತ್ಯ ಖರ್ಚುಗಳನ್ನು ಮಾತ್ರ ಧರ್ಮದ ಹೆಸರಿನಲ್ಲಿ ಮಾಡಬೇಕು ಎಂಬುದು ಷರತ್ತಾಗಿತ್ತು. ಉಳಿದ ಹಣವನ್ನು ಮುಸ್ಲಿಂ ಸಮುದಾಯದ ಶಿಕ್ಷಣಕ್ಕೆ ಬಳಸಬೇಕಾಗಿತ್ತು. ಈ ಧೋರಣೆಯ ಪರಿಣಾಮವಾಗಿ ವಾರ್ಷಿಕ ೧೫,೦೦೦ ರೂ.ಗಳು ಮುಸ್ಲಿಮರ ಶಿಕ್ಷಣಕ್ಕೆ ಲಭ್ಯವಾಗುತ್ತಿತ್ತು.

ಹೊಸ ವಿದ್ಯಾರ್ಥಿ ನಿಲಯ ನೆರೆಹೊರೆಯ ಜಿಲ್ಲೆಗಳ ಮತ್ತು ಕರ್ನಾಟಕದಿಂದ ಕೂಡ ಮುಸ್ಲಿಮ್ ವಿದ್ಯಾರ್ಥಿಗಳನ್ನು ಶಿಕ್ಷಣಕ್ಕೆ ಪ್ರೋತ್ಸಾಹಿಸಿತು. ಇಂದು ಕೂಡ ಹಿಂದು ಮತ್ತು ಮುಸ್ಲಿಮ್ ವಿದ್ಯಾರ್ಥಿಗಳು ಈ ವಿದ್ಯಾರ್ಥಿ ನಿಲಯದಲ್ಲಿ ಒಟ್ಟಿಗೆ ಅಧ್ಯಯನ ಮಾಡುತ್ತಿದ್ದಾರೆ. ಈ ಸಂಸ್ಥೆ ಸಹ ಜವಾಹರಲಾಲ್ ನೆಹರು ಉರ್ದು-ಮರಾಠಿ ಪ್ರೌಢಶಾಲೆ ಮತ್ತು ಜ್ಯೂನಿಯರ್ ಕಾಲೇಜನ್ನು ನಡೆಸುತ್ತಿದೆ. ಒತ್ತಡಗಳ ಸನ್ನಿವೇಶದಿಂದ ಇಸ್ಲಾಂ ಮತಕ್ಕೆ ಮತಾಂತರಗೊಂಡ ಸ್ಥಳೀಯ ಭಾರತೀಯರು ಸೇರಿದಂತೆ ಮುಸ್ಲಿಂ ಸಮುದಾಯ ಇಲ್ಲಿದೆ. ಆದ್ದರಿಂದ ಅವರು ದಲಿತರು ಮತ್ತು ಅಲೆಮಾರಿ ಪಂಗಡಗಳ ಜೊತೆಗೆ ನಿಕಟ ಸಂಬಂಧವಿದೆ. ವಾಸ್ತವಿಕವಾಗಿ, ಮುಸ್ಲಿಂ ವಿದ್ಯಾರ್ಥಿ ನಿಲಯ ಮುಸ್ಲಿಂ ಓಬಿಸಿ ಸಂಸ್ಥೆ ಕಟ್ಟಲು ಪ್ರಮುಖ ಜವಾಬ್ದಾರಿ ವಹಿಸಿತ್ತು.

## ಮರಾಠಿ ಭಾಷೆಗೆ ಕುರ್–ಆನಿನ ಅನುವಾದ

ಯೂರೋಪಿನ ಧಾರ್ಮಿಕ ಸುಧಾರಕರು ಇಂಗ್ಲೀಷಿನ ಸುಧಾರಕನಾದ ವಿಕ್ಲಿಫೆ ಅವರ ಅನುವಾದ ಸೇರಿದಂತೆ ಲ್ಯಾಟಿನ್ ಭಾಷೆಯಿಂದ ಸ್ಥಳೀಯ ಭಾಷೆಗಳಿಗೆ ಬೈಬಲನ್ನು ಅನುವಾದಮಾಡಿಸಿದರು. ಸಾಮಾನ್ಯ ಮನುಷ್ಯನು ಸ್ವತಃ ಧರ್ಮ ಏನು ಹೇಳಿದೆಯೆಂಬುದನ್ನು ಓದಿ ತಿಳಿದುಕೊಳ್ಳಲು ಸ್ಫೂರ್ತಿ ನೀಡುವಂತೆ ಮಾಡಲು ಈ ಕೆಲಸವನ್ನು ಮಾಡಲಾಯಿತು. ಇದೇ ರೀತಿಯ ಮನೋಭಾವದಿಂದ ಶಾಹುರವರು ಕುರ್–ಆನ್‌ನನ್ನು ಮರಾಠಿಗೆ ಅನುವಾದ ಮಾಡುವ ೨೫,೦೦೦ ರೂ.ಗಳ ಯೋಜನೆಯನ್ನು ಪ್ರಾರಂಭಿಸಿದರು.

ಇದಕ್ಕಾಗಿ ಶಾಹುರವರು ಹಕೀಮ್ ಭೋರೆಖಾನ್, ಅಬ್ದುಲ್ ಇನಾಂದಾರ್, ಗುಲಾಮ್ ಅಹಮದ್ ಮಾಸ್ಟರ್ ಮತ್ತು ಒಬ್ಬ ಮೌಲವಿಯನ್ನು ಒಳಗೊಂಡ ಒಂದು ಸಮಿತಿಯನ್ನು ರಚಿಸಿದರು. ಅನುವಾದದ ಕುರ್–ಆನ್‌ನನ್ನು ಕಲ್ಲಪ್ಪ ಅಣ್ಣ ನಿತ್ವೆ ಅವರ ಮಾಲಿಕತ್ವದ ಜೈನೇಂದ್ರ ಮುದ್ರಣದಲ್ಲಿ ಅಚ್ಚುಮಾಡಿಸಲಾಯಿತು. ಆದರೆ ಶಾಹುರವರ ಅನಿರೀಕ್ಷಿತ ನಿಧನದಿಂದ ಈ ಕೆಲಸ ನಿಂತುಹೋಯಿತು ಮತ್ತು ಮಹ್‌ಮೂಲಾಲ್ ಹಕೀಮ್‌ರವರ ಪ್ರಕಾರ ಆಸ್ಥಾನದ ಒಬ್ಬ ಸದಸ್ಯನಿಂದ ಈ ಕೆಲಸ ಅಪೂರ್ಣವಾಗಿ ಹಾಗೆ ಉಳಿಯಿತು.

ಕುರ್–ಆನಿನ ಅನುವಾದದ ಕೆಲಸ ಸಕಾಲಕ್ಕೆ ಪರಿಪೂರ್ಣವಾಯಿತೆಂಬುದರಲ್ಲಿ ಸಂದೇಹವಿಲ್ಲ. ಕೊಲ್ಹಾಪುರದ ಸುಧಾರಣಾವಾದಿ ಮುಸ್ಲಿಂ ಆಂದೋಲನ ಈ ಕೆಲಸವನ್ನು ಇನ್ನೂ ಮೊದಲೆ ಪ್ರಾರಂಭಿಸಬಹುದಾಗಿತ್ತು. ಇಂದಿಗೂ ಸಹ ಮದರಸಗಳಲ್ಲಿ ಕುರ್–ಆನಿನ ಕಲಿಸುವಿಕೆಯು ಕಂಠಪಾಠ ಮಾಡುವುದನ್ನು ಬಿಟ್ಟರೆ ಅದರಾಚೆಗೆ ಹೋಗಿಲ್ಲ. ಶಾಹುರವರು ಮುಸ್ಲಿಮ್ ಜನರು ಧಾರ್ಮಿಕ ಗ್ರಂಥಗಳ ನಿಜವಾದ ಅರ್ಥವನ್ನು ಅರಿತುಕೊಂಡರೆ ಮುಲ್ಲಾ ಮತ್ತು ಮೌಲವಿಗಳ ಪ್ರಾಬಲ್ಯ ಕೊನೆಗೊಳ್ಳುವುದೆಂದು ಮನವರಿಕೆ ಮಾಡಿಕೊಂಡಿದ್ದ ಅವರು ಮುಸ್ಲಿಮರ ಶಿಕ್ಷಣದ ಪ್ರಸಾರದ ಉದ್ದೇಶವನ್ನು ಕೈಗೊಂಡರು. ಮೂಢನಂಬಿಕೆಗಳು ಸಹ ಕಡಿಮೆಯಾಗುತ್ತವೆ ಮತ್ತು ಇದು ಸಮುದಾಯದ ಪ್ರಗತಿಗೆ ಸಹಾಯಕವಾಗುತ್ತದೆ.

ತಮ್ಮ ಭಾಷಣಗಳಲ್ಲಿ ಶಾಹು ಆಗಾಗ ಉದಾರವಾಗಿ ಚಕ್ರವರ್ತಿ ಅಕ್ಬರರ ಧಾರ್ಮಿಕ ಸಹಿಷ್ಣುತೆಯ ಧೋರಣೆಯನ್ನು ಹೊಗಳುತ್ತಿದ್ದರು. ಚಕ್ರವರ್ತಿಅಕ್ಬರರ ಧೋರಣೆಯು ರಾಷ್ಟ್ರೀಯ ಭಾವೈಕ್ಯತೆ ಮತ್ತು ಧಾರ್ಮಿಕ ಸಮಾನತೆಯನ್ನು ಬೆಳೆಸಿದಂತೆಯೇ ಶಾಹುರವರ ಆಲೋಚನಾಕ್ರಮ ಮತ್ತು ಕ್ರಿಯೆಗಳು ರಾಷ್ಟ್ರದ ಕಲ್ಯಾಣವನ್ನು ಪೋಷಿಸಿದವು.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ದಿನಗಳಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿ ಹಿಂದು–ಮುಸ್ಲಿಮ್ ಗಲಭೆಗಳು ತಲೆದೋರಿದವು. ಆದರೆ ಕೊಲ್ಹಾಪುರದಲ್ಲಿ ಹಿಂದು–ಮುಸ್ಲಿಂ ಎರಡು ಸಮುದಾಯಗಳು ಶಾಂತಿ–ಸಹನೆಯಿಂದು ಬದುಕಿ ಬಾಳಿದವು ಎಂಬುದನ್ನು ಇತಿಹಾಸ ತೋರಿಸುತ್ತದೆ. ಇಂದು ಕೂಡ ಕೊಲ್ಹಾಪುರದಲ್ಲಿ ಭಾವೈಕ್ಯತೆ ಮತ್ತು ಸಹಿಷ್ಣುತೆಯನ್ನು ನೋಡಬಹುದು. ಇದರ ಕೀರ್ತಿ ಶಾಹು ಮಹಾರಾಜರ ಸುಧಾರಣಾವಾದಿ ಮತ್ತು ದೂರದೃಷ್ಟಿಯ ಧೋರಣೆಗಳಿಗೆ ಸಲ್ಲುತ್ತದೆ.

---

## ಆಧಾರ ಗ್ರಂಥಗಳು


1. Shri Shaahu Maharajancha Attvani - Bhai Madhavarao Bagal.
2. Rajarshi Shahu Maharajanchi Bhashane - Bhagawanrao Jadhav.
3. Rajarshi Shaahu: Raja Wa Manoos - G. K. Suryavanshi.
4. Shahu Chatrapatinche Nivadak Adesh, Part-1 - Dr. Bhaskar Datavkar.
5. Articles on Rajarshi Shahu Maharaja (The Pudhari-Kolhapur) - Dr. Ramesh Jadhav.


---

೧೭
# ಶಾಹು ಛತ್ರಪತಿ ಮತ್ತು ಅಪರಾಧಿ ಪಂಗಡಗಳು

**– ಲಕ್ಷ್ಮಣ ಮಾನೆ**
*ಅಲೆಮಾರಿ ಪಂಗಡಗಳ ಸಕ್ರಿಯ ಕಾರ್ಯಕರ್ತ*
*ಮತ್ತು ಪ್ರಸಿದ್ಧ ದಲಿತ ಲೇಖಕರು*

**ಪ್ರಾ**ಚೀನ ಭಾರತದ ಸಂಸ್ಕೃತಿಯು ಹಂತಗಳಲ್ಲಿ ರೂಪುಗೊಂಡಿತೆಂಬುದನ್ನು ನಮ್ಮ ಸಾಮಾಜಿಕ ಇತಿಹಾಸ ತೋರಿಸುತ್ತದೆ. ಬ್ರಿಟಿಷ್ ಆಡಳಿತ ಸ್ಥಾಪನೆಗೆ ಮೊದಲು ರಾಜಕೀಯವಾಗಿ ಈ ದೇಶವು ಹಲವು ರಾಜ್ಯಭಾರಗಳಲ್ಲಿ ವಿಭಜಿತಗೊಂಡಿತ್ತು. ಇದಕ್ಕೆ ಒಕ್ಕೂಟ ರಾಜ್ಯವ್ಯವಸ್ಥೆಯ ಸ್ವರೂಪವಿರಲಿಲ್ಲ. ನೂರಾರು ಚಿಕ್ಕ ಮತ್ತು ದೊಡ್ಡ ರಾಜ–ಮಹಾರಾಜರು ಈ ದೇಶವನ್ನು ಆಳಿದರು. ಬ್ರಿಟಿಷರ ಆಡಳಿತದಿಂದ ಸಾಮಾಜಿಕ ಸಂರಚನೆ ಮತ್ತು ಆಡಳಿತದ ವ್ಯವಸ್ಥೆಯಲ್ಲಿ ಹಲವು ಮೂಲಭೂತ ಬದಲಾವಣೆಗಳು ಜಾರಿಗೆ ಬಂದವು. ಆಡಳಿತದ ಸುವ್ಯವಸ್ಥೆಯನ್ನು ಸ್ಥಾಪಿಸಲು (ಕಾಪಾಡಲು) ನಾಗರಿಕ ಮತ್ತು ಅಪರಾಧಿ ಕಾನೂನುಗಳನ್ನು ಜಾರಿಗೊಳಿಸಿದರು. ಅವುಗಳು ಕಾನೂನು ಸಂಹಿತೆಗಳಾಗಿ ರೂಪಗೊಂಡವು. ಅವು ಒಂದು ನ್ಯಾಯಾಂಗ ಪದ್ಧತಿಯನ್ನು ಸ್ಥಾಪಿಸಿದವು. ಹೀಗೆ ಭಾರತದಲ್ಲಿ ಕಾನೂನುಬದ್ಧ ಆಡಳಿತ ಪ್ರಾರಂಭವಾಯಿತು.

ಇದರ ಎದುರಿನಲ್ಲಿ ಈ ಅವಧಿಯ ಕಾಲದಲ್ಲಿ ದೇಶದಲ್ಲಿ ಅಕ್ಕಪಕ್ಕದಲ್ಲಿಯೆ ಎರಡು ಅಧಿಕಾರಶಕ್ತಿಗಳು ಅಸ್ತಿತ್ವದಲ್ಲಿದ್ದವು: ಈಸ್ಟ್ ಇಂಡಿಯ ಕಂಪನಿ ಮತ್ತು ಭಾರತೀಯ ಸಂಸ್ಥಾನಗಳು. ಆದರೆ ಮತ್ತೊಂದು ಅಧಿಕ ಅಧಿಕಾರವಿತ್ತು. ಅದು ವಿವಿಧ ಗುಡ್ಡಗಾಡು ಪಂಗಡಗಳ ಸಮುದಾಯಗಳು. ವಿದ್ವಾಂಸರು ಇವುಗಳನ್ನು "ಗುಡ್ಡಗಾಡು ಪಂಗಡಗಳ ಸಮುದಾಯಗಳ ಭೂಪ್ರದೇಶಗಳು" ಎಂದು ಉಲ್ಲೇಖಿಸಿದ್ದಾರೆ. ಒಂದು ರೀತಿಯಲ್ಲಿ ಇವುಗಳು ಸಂಪೂರ್ಣವಾಗಿ ಸ್ವತಂತ್ರ ಅಸ್ತಿತ್ವ ಹೊಂದಿದ್ದರಿಂದ ಅವುಗಳನ್ನು "ರಾಷ್ಟ್ರೀಯಗಳು" ಎಂದು ಪರಿಗಣಿಸಲಾಗುತ್ತಿದ್ದವು. ಅವು ತಮ್ಮದೇ ಆದ ನ್ಯಾಯಾಂಗ ಪದ್ಧತಿಯನ್ನು ಹೊಂದಿದ್ದವು. ಅವರ ಪಂಚಾಯಿತಿಗಳು ನಾಗರಿಕ ಮತ್ತು ಅಪರಾಧಿ ಪ್ರಕರಣಗಳನ್ನು ನಿರ್ಧರಿಸುತ್ತಿದ್ದವು. ಈ ಪಂಗಡಗಳು ತಮ್ಮ ಪಂಚಾಯಿತಿಗಳನ್ನು ಬಿಟ್ಟು ಬೇರೆ ಯಾವುದೇ ಕಾನೂನಿಗೆ ಬದ್ಧರಾಗಲು ಸಿದ್ಧರಾಗುತ್ತಿರಲಿಲ್ಲ. (ಇಂದಿಗೂ ಗುಡ್ಡಗಾಡು ಪಂಗಡಗಳ ಹಲವಾರು ಸಮುದಾಯಗಳಲ್ಲಿ ಕಾನೂನುಗಳ ಸ್ವತಂತ್ರ ಸಂಹಿತೆಗಳ ಪರಂಪರೆ ಮುಂದುವರಿಯುತ್ತಿದೆ).

ಬ್ರಿಟಿಷರು ಭಾರತವನ್ನು ಹಂತಹಂತವಾಗಿ ಜಯಿಸಿದರು. ಅವರು ಹಲವು ಮಹಾರಾಜರನ್ನು ವಜಾಗೊಳಿಸಿದರು ಮತ್ತು ಅವರ ರಾಜ್ಯಭಾರಗಳನ್ನು (ರಾಜ್ಯಗಳನ್ನು) ತಮ್ಮ ಸಾಮ್ರಾಜ್ಯಕ್ಕೆ ಸೇರ್ಪಡೆ ಮಾಡಿಕೊಂಡರು. ಸಂಸ್ಥಾನಗಳಲ್ಲಿನ ಸಾವಿರಾರು ಸಿಪಾಯಿಗಳನ್ನು ಸೇರಿಸಿಕೊಂಡರು ಅಥವಾ ಬ್ರಿಟಿಷರ

ರಕ್ಷಣೆಯನ್ನು ಒಪ್ಪಿದ ರಾಜರಿಗೆ ಸೇವೆಯನ್ನು ಬ್ರಿಟಿಷ್ ಸರಕಾರ ಒದಗಿಸಿತು ಮತ್ತು ಅವರು ತಮ್ಮ ಕೆಲಸವನ್ನು ಕಳೆದುಕೊಂಡರು. ಸೈನಿಕರಲ್ಲಿ ಹಲವರು ನಿರುದ್ಯೋಗಿಗಳಾಗಿ ದೇಶದಲ್ಲೆಲ್ಲ ಗುಂಪುಗಳನ್ನು ಕಟ್ಟಿದರು ಮತ್ತು ಪೆಂಢಾರಿಗಳು ಅಥವಾ ಠಕ್ಕರು ಆಗಿ ಜೀವನೋಪಾಯಕ್ಕೆ ಅಪರಾಧಿ ಕೃತ್ಯಗಳಲ್ಲಿ ತೊಡಗಿದರು. ಈ ಗುಂಪುಗಳಲ್ಲಿ ಹಲವು ಗುಡ್ಡಗಾಡು ಪಂಗಡಗಳ ಸೈನಿಕರಿದ್ದರು.

ಬ್ರಿಟಿಷರು ತಾವು ಆಳುವ ಪ್ರದೇಶಗಳ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವುದು ತಮ್ಮ ಮುಖ್ಯ ಆದ್ಯತೆಯೆಂದು ಹೇಳತೊಡಗಿದರು. ಆದ್ದರಿಂದ ೧೮೬೩ರಲ್ಲಿ ತಮ್ಮ ಪ್ರದೇಶಗಳಲ್ಲಿ ಸುತ್ತಾಡುವ ಅಪರಾಧಿ ಗುಂಪುಗಳ ಮೇಲೆ ಅಧಿಕಾರಿಗಳು ಕಣ್ಣಿಡುವಂತೆ ನಿರ್ದೇಶಿಸುವ ಒಂದು ಕಾನೂನನ್ನು ಬ್ರಿಟಿಷ್ ಆಡಳಿತ ಜಾರಿಗೆ ತಂದಿತು. ಮರಾಠ ಆಡಳಿತವನ್ನು ಕೊನೆಗೊಳಿಸಿದ ನಂತರ ಮತ್ತು ಅಧಿಕಾರ ವಹಿಸಿಕೊಂಡ ಮೇಲೆ ಅವರು ಬಾಂಬೆ ಪ್ರೆಸಿಡೆನ್ಸಿಯಲ್ಲಿನ ಅವರ ಚಟುವಟಿಕೆಗಳನ್ನು ತಡೆಯಲು ಪ್ರಾರಂಭಿಸಿದರು. ೧೮೨೭ರಲ್ಲಿ ಅವರು ಅಪರಾಧಿ ಪಂಗಡಗಳು ರಾತ್ರಿ ಹೊತ್ತಿನಲ್ಲಿ ತಿರುಗಾಡುವುದನ್ನು ನಿಯಂತ್ರಿಸಲು ಆಡಳಿತ ಕ್ರಮಗಳನ್ನು ಕೈಗೊಳ್ಳಬೇಕೆಂದು ನಿರ್ದೇಶನ ನೀಡಿತು ಮತ್ತು ಗ್ರಾಮದ ಪಾಟೀಲರು ಅವರ ಮೇಲೆ ನಿಗಾ ಇಡುವಂತೆ ಹೇಳಲಾಯಿತು.

ಬಾಂಬೆಯ ಗೌರ್ನರ್ ಎಲ್ಫಿನ್ ಸ್ಟೋನ್ ಅವರು ತಮ್ಮ ಭಾರತದ ಇತಿಹಾಸ ಎಂಬ ಪುಸ್ತಕದಲ್ಲಿ ಅಪರಾಧಿ ಪಂಗಡಗಳ ಬಗ್ಗೆ ಕೈಗೊಂಡ ಬ್ರಿಟಿಷರ ವಿಧಾನವನ್ನು ಸ್ಪಷ್ಟ ಮಾತುಗಳಿಂದ ವಿವರಿಸಿದ್ದಾರೆ. ಅವರು ಹೇಳುತ್ತಾರೆ: "ಸಮಾಜವು ಅಪರಾಧಿ ಪಂಗಡಗಳ ಬಗ್ಗೆ ಯಾವುದೇ ರೀತಿಯ ಅನುಕಂಪವಿರಲಿಲ್ಲ. ಅಪರಾಧಿ ಪಂಗಡಗಳಿಗೆ ಬದುಕಿರುವಾಗಲೇ ಅವರಿಗೆ ಕಠಿಣ ಶಿಕ್ಷೆಯನ್ನು ನೀಡಬೇಕು ಮತ್ತು ಅವರು ಸತ್ತನಂತರವೂ ನೀಡಬೇಕೆಂದು ಜನರು ಯೋಚಿಸಿದ್ದರು." ಆ ಕಾಲದಲ್ಲಿ ಬ್ರಿಟಿಷರ ಮನೋಭಾವವು ಕೂಡ ಭಾರತದ ಸಮಾಜದಂತೆಯೇ ಇತ್ತು. ಅದು ಕಾಲದೊಂದಿಗೆ ಕಠಿಣವಾಗುತ್ತಾ ಹೋಯಿತು.

೧೮೩೬ ಮತ್ತು ೧೮೬೦ರಲ್ಲಿ ಬ್ರಿಟಿಷರು ಸಂಘಟಿತ ಡಕಾಯಿತಿ ಮತ್ತು ದರೋಡೆಗಾರರ ಬಗ್ಗೆ ಕಠಿಣ ಕ್ರಮ ಕೈಗೊಳ್ಳಲು ಆಜ್ಞೆಗಳನ್ನು ಹೊರಡಿಸಿತು. ೧೮೬೦ರಲ್ಲಿ ಪರಿಚಯಿಸಿದ ಭಾರತದ ದಂಡ ಸಂಹಿತೆಯು ಅಂತಹ ಅಪರಾಧಗಳಿಗೆ ಕಠಿಣ ಶಿಕ್ಷೆಯನ್ನು ಹೊಂದಿತ್ತು. ಆದರೆ ಈ ಗುಡ್ಡಗಾಡು ಪಂಗಡಗಳ ಜನರಲ್ಲಿ ಈ ಸಂಹಿತೆಯ ಪ್ರಾವಧಾನದ ಕಠಿಣ ಸಜೆಗಳು ಅವರಲ್ಲಿ ಅಪರಾಧಗಳನ್ನು ಕಡಿಮೆಗೊಳಿಸಲಿಲ್ಲ. ಕೆ. ಎಂ. ಮುನ್ಷಿಯವರ ವರದಿಯ ಪ್ರಕಾರ ೧೯ನೇ ಶತಮಾನದ ಕೊನೆಯಲ್ಲಿನ ಒಟ್ಟು ಖೈದಿಗಳಲ್ಲಿ ಮೂರಕ್ಕಿಂತ ಹೆಚ್ಚು ಭಾಗದ ಖೈದಿಗಳು ಈ ಗುಡ್ಡಗಾಡಿನ ಪಂಗಡದವರೇ ಆಗಿದ್ದರು. ಜೈಲುಗಳಲ್ಲಿನ ಕಿರುಕುಳ ಅಥವಾ ಸುಧಾರಣೆಯ ಪ್ರಯತ್ನಗಳು ಅವರ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ಇದಕ್ಕೆ ವಿರುದ್ಧವಾಗಿ, ಅವರು ನಾಚಿಕೆಗೇಡಿನವರಾದರು. ಆಗಾಗ ಈ ಪಂಗಡಗಳು ತಮ್ಮ ಪಂಗಡದ ನಾಯಕನನ್ನು ರಕ್ಷಿಸಿಕೊಳ್ಳಲು ಈ ಪಂಗಡಗಳು ತಮ್ಮವರಲ್ಲಿಯೇ ಒಬ್ಬ ಮುಗ್ಧ ಪಂಗಡದವನನ್ನು ಹಿಡಿದು ಪೊಲೀಸರಿಗೆ ಒಪ್ಪಿಸುತ್ತಿದ್ದರು.

೧೮೫೭ರಲ್ಲಿ ಬ್ರಿಟಿಷರ ಆಡಳಿತದ ವಿರುದ್ಧ ಬಂಡಾಯ ಬಂತು. ಈ ಬಂಡಾಯಕ್ಕೆ ಹಲವು ಕಾರಣಗಳಿವೆ. ಅವುಗಳಲ್ಲಿ ಬ್ರಿಟಿಷರು ಹಿಂದು ಕಾನೂನು, ಪರಂಪರೆ ಮತ್ತು ಧರ್ಮದಲ್ಲಿ ಹಸ್ತಕ್ಷೇಪ ಪ್ರಮುಖ ಕಾರಣವಾಗಿದ್ದರೆ, ಜೊತೆಗೆ ಪಂಗಡಗಳ ಸಮುದಾಯಗಳ ಆಂತರಿಕ ಆಡಳಿತವು ಕಾರಣವಾಗಿತ್ತು.

ಗುಡ್ಡಗಾಡಿನ ಪಂಗಡಗಳು ಸಹ ಮಹಾರಾಜರು ಮತ್ತು ಬಂಡಾಯಗಾರರಾದ ಸೈನಿಕರ ಜೊತೆಯಲ್ಲಿ ಭಾಗವಹಿಸಿದರು. ಯುದ್ಧಭೂಮಿಯಲ್ಲಿ ಸತ್ತ ಹಲವಾರು ಪಂಗಡಗಳ ಸಮುದಾಯದ ನಾಯಕರು ಸತ್ತರು ಅಥವಾ ಕೆಲವರನ್ನು ಬಂಡಾಯದ ನಂತರ ಗಲ್ಲಿಗೇರಿಸಿದರು ಎಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. (ಸತಾರದಲ್ಲಿ ಪ್ರತಾಪಸಿಂಹ ಮಹಾರಾಜರ ಪುತ್ಥಳಿಯ ಸಮೀಪವಿರುವ ೧೮೫೭ರ ಕಂಬದಲ್ಲಿ ಕೆತ್ತಿರುವ ಹುತಾತ್ಮರ ಪಟ್ಟಿಯನ್ನು ನೋಡಿ).

೧೮೫೭ರ ದಂಗೆಯನ್ನು ಅಡಗಿಸುವುದರಲ್ಲಿ ಸಫಲರಾದ ಮೇಲೆ ಬ್ರಿಟಿಷರು ಆಡಳಿತದಲ್ಲಿ ಬಹು ಎಚ್ಚರಿಕೆಯ ವಿಧಾನವನ್ನು ವಹಿಸುತ್ತಿದ್ದರು. ಅವರು ಭಾರತದ ಸಮಾಜದ ಆಂತರಿಕ ವಿಷಯಗಳಲ್ಲಿ ಹಸ್ತಕ್ಷೇಪ ಮಾಡಬಾರದೆಂಬ ಧೋರಣೆಯನ್ನು ನಿರ್ಧರಿಸಿದರು. ಅದರ ಜಾರಿಯ ಭರವಸೆಯನ್ನು ೧೮೫೮ರ ಬ್ರಿಟಿಷ್ ಮಹಾರಾಣಿಯವರ ಘೋಷಣೆಯಲ್ಲಿ ಸೇರ್ಪಡೆ ಮಾಡಲಾಯಿತು. ಬ್ರಿಟಿಷರು ಕೂಡ ಸಶಸ್ತ್ರ ಗುಡ್ಡಗಾಡು ಪಂಗಡಗಳ ಸಮುದಾಯದ ಅಪಾಯಕಾರಿ ಶಕ್ತಿಯನ್ನು ಮೌಲ್ಯಮಾಪನ ಮಡಿದರು ಮತ್ತು ೧೮೭೧ರಲ್ಲಿ ಅಪರಾಧಿ ಸಮುದಾಯಗಳ ಕಾಯ್ದೆಯನ್ನು ಹೊರಡಿಸಿದರು.

ಗುಡ್ಡಗಾಡು ಪಂಗಡಗಳ ಸಮುದಾಯದ ವಿದ್ವಾಂಸರಾದ ಟಿ. ವಿ. ಸ್ಟೀಫನ್ನರ ಮೂರು ಕಲ್ಪನೆಗಳ ಮೇಲೆ ಕಾನೂನು ಆಧಾರಿತವಾಗಿದೆ:

೧. ಒಬ್ಬ ವ್ಯಕ್ತಿಯು ಒಂದು ಅಪರಾಧಿ ಪಂಗಡದಲ್ಲಿ ಹುಟ್ಟಿದರೆ ಅವನು ಹುಟ್ಟಾ ಅಪರಾಧಿಯಾಗಿದ್ದಾನೆ. ಏಕೆಂದರೆ ಅವನು ತಂದೆಯ ಕಸಬನ್ನೇ ತೆಗೆದುಕೊಳ್ಳುತ್ತಾನೆ.

೨. ಇಡೀ ಜೀವನದಲ್ಲಿ ಅಂತಹ ಒಬ್ಬ ಹುಟ್ಟಿನಿಂದಲೇ ಅಪರಾಧಿಯಾಗಿರುವವನು ಅದು ನನ್ನ ಹಣೆಬರಹ ಮತ್ತು ಅದು ನನ್ನ ಧರ್ಮ (ಕರ್ತವ್ಯ) ಎಂದು ನಂಬಿರುವುದರಿಂದ ಅವನು ತನ್ನ ಇಡೀ ಜೀವನದಲ್ಲಿ ಒಬ್ಬ ಅಪರಾಧಿಯಾಗಿ ಮುಂದುವರಿಯುವನು.

೩. ಅಪರಾಧದಲ್ಲಿ ತೊಡಗಿದ ವ್ಯಕ್ತಿಯು ಬೇಗನೆ ಒಬ್ಬ ಕುಶಲಿ ಅಪರಾಧಿಯಾಗುತ್ತಾನೆ. ಜಾತಿಗಳು ಮತ್ತು ವೃತ್ತಿಗಳು ಭಾರತದಲ್ಲಿ ಒಂದಾಗಿ ವಿಲೀನವಾಗುವುದರಿಂದ ಧರ್ಮವು ಈ ಅಪರಾಧ ಮಾಡುವಂತೆ ನಮ್ಮನ್ನು ವಿಧಿಸಿದೆಯೆಂದು ಅಪರಾಧಿ ಪಂಗಡಗಳು ನಂಬುತ್ತವೆಯೆಂದು ಸ್ಟೀಫನ್ನರು ಹೇಳುತ್ತಾರೆ. ಅವರು ಇದರಲ್ಲಿ ಯಾವುದೇ ತಪ್ಪನ್ನು ಕಾಣುವುದಿಲ್ಲ.

೧೮೭೧ರ ಬ್ರಿಟಿಷರ ಕಾನೂನು ಸ್ಟೀಫನ್ನರ ಕಲ್ಪನೆಯ ಮೇಲೆ ಆಧಾರಿತವಾಗಿದೆ. ಈ ಕಾನೂನನ್ನು ರಚಿಸುವಾಗ ಗುಡ್ಡಗಾಡಿನ ಪಂಗಡದ ಜನರು ಅಲೆಮಾರಿ ಜೀವನ ನಡೆಸುತ್ತಿದ್ದಾರೆಂಬುದನ್ನು ಅವರು (ರಚಕರು) ಅರ್ಥಮಾಡಿಕೊಳ್ಳಲೇ ಇಲ್ಲ. ಇದಕ್ಕೆ ವಿರುದ್ಧವಾಗಿ, ಹುಟ್ಟುತ್ತಲೇ ಅಪರಾಧಿಗಳೆಂದು ಅವರಿಗೆ ಹಣೆಪಟ್ಟಿ ಕಟ್ಟಿ, ಈ ಪಂಗಡಗಳ ಸಾವಿರಾರು ಕುಟುಂಬಗಳನ್ನು ದೇಶದಲ್ಲೆಲ್ಲಾ ಬಯಲು ಜೈಲುಗಳಿಗೆ ತಳ್ಳಲಾಗಿದೆ. ಈ ಬಯಲು ಜೈಲುಗಳಿಗೆ ಮೂರುಪಟ್ಟು ತಿರುಚಿದ ತಂತಿಯ ಬೇಲಿಯನ್ನು ಹಾಕಲಾಗಿದೆ. ನುರಿತ ಅಪರಾಧಿಗಳೆಂದು ಭಾವಿಸಿದ ಖೈದಿಗಳನ್ನು ಜೇಲಿನ ಮಧ್ಯ ಭಾಗದ ಒಂದು ವರ್ತುಲಾಕಾರದ ಪೌಳಿಗೋಡೆಯ ಮಧ್ಯೆ ಇರಿಸಲಾಗುವುದು. ಅವರು ತಲೆಯ ಮೇಲೆ ಕೆಂಪುಟೋಪಿಯನ್ನು ಧರಿಸಿರಬೇಕು. ಮುಂದಿನ ವರ್ತುಲಾಕಾರದ ಪೌಳಿಗೋಡೆಯಲ್ಲಿ ಕಡಿಮೆ ಅಪಾಯದ ಅಪರಾಧಿಗಳಿಗೆ ವಸತಿ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಕನಿಷ್ಠ ಅಪಾಯದ ಅಪರಾಧಿ ಪಂಗಡಗಳನ್ನು ದನಗಳಂತೆ ಒಟ್ಟಿಗೆ ನೂಕಿರುತ್ತಾರೆ.

ಹೊರಹೋಗುವ ಕಡೆಗಳಲ್ಲಿ ಒಬ್ಬ ಕಾವಲುಗಾರನಿರುತ್ತಾನೆ. ಅವರ ಅನುಮತಿಯಿಲ್ಲದೆ ಯಾರು ಒಳಗೆ ಅಥವಾ ಹೊರಗೆ ಬರುವಂತಿಲ್ಲ–ಹೋಗುವಂತಿಲ್ಲ. ವ್ಯಕ್ತಿಯ ಅಥವಾ ಕುಟುಂಬದ ವರ್ತನೆಯು ಸುಧಾರಿಸಿದ್ದರೆ ಅವನನ್ನು ಅಥವಾ ಅವರನ್ನು ಪಕ್ಕದ ಮುಕ್ತ ಕಾಲೋನಿಯಲ್ಲಿ ವಾಸಮಾಡಲು ಬಿಡುವರು. ಆದರೆ ಅಲ್ಲಿ ಕೂಡ ಅವರು ದಿನಕ್ಕೆ ಮೂರು ಸಲ ಅಧಿಕಾರಿಗಳಿಗೆ ವರದಿ (ಹಾಜರಿ) ನೀಡಬೇಕು. ಬ್ರಿಟಿಷರು ದೇಶದಲ್ಲೆಲ್ಲಾ ಅಪರಾಧಿ ಪಂಗಡಗಳ ಜನರಿಗೆ ಅಂತಹ 'ನೆಲಸುನಾಡು' ಅಥವಾ 'ವಸಾಹತು'ಗಳನ್ನು ಸ್ಥಾಪಿಸಿದರು.

ನೆಲಸುನಾಡುಗಳಲ್ಲಿರುವ ಜನರು ಹಲವು ವಿಧಗಳಲ್ಲಿ ಕಿರುಕುಳವನ್ನು ಅನುಭವಿಸಬೇಕಾಗುತ್ತದೆ. ಹಲವು ಪುರುಷರು ಮತ್ತು ಮಹಿಳೆಯರು ಬಲಿಪಶುಗಳಾಗಿದ್ದಾರೆ. ಹಲವಾರು ಜನರನ್ನು ಮತಾಂತರಗೊಳಿಸುವುದಕ್ಕೆ ಒಪ್ಪಿಸಲು ಆಮಿಷ ಒಡ್ಡಲಾಯಿತು. ಹಾಜರಿ ಕರೆದಾಗ ಯಾರಾದರು ಅನುಪಸ್ಥಿತರಾಗಿದ್ದರೆ ಅವರು ದೈಹಿಕ ಚಿತ್ರಹಿಂಸೆಯನ್ನು ಅನುಭವಿಸಬೇಕು. ಒಮ್ಮೊಮ್ಮೆ ಇದು ಸಾವಿಗೆ ಎಡೆಮಾಡಿಕೊಡುತ್ತದೆ. ಬ್ರಿಟಿಷರು ಕಾನೂನನ್ನು ನಿರ್ದಯೆಯಿಂದ ಜಾರಿಗೊಳಿಸಿದರು. ಹಣೆಪಟ್ಟಿ ಹಚ್ಚಲ್ಪಟ್ಟ ಅಪರಾಧಿಗಳು ಯಾವ ಪ್ರಾಂತ್ಯದಿಂದ ಬಂದಿದ್ದಾರೆ. ಅವರನ್ನು ಆ ಪ್ರಾಂತ್ಯದಲ್ಲಿಡಬಾರದೆಂಬ ಧೋರಣೆಯನ್ನು ಅವರು ಅನುಸರಿಸಿದರು. ಅವರನ್ನು ಬೇರೆಯ ದೂರದ ಪ್ರಾಂತ್ಯಕ್ಕೆ ಕರೆದೊಯ್ದು ಪ್ರತ್ಯೇಕ ಸ್ಥಳದಲ್ಲಿ ಇರಿಸಲಾಯಿತು. ಉದಾಹರಣೆಗೆ, ಕೈಕಡಿ ಮತ್ತು ಕೊರ್ವಿ ಸಮುದಾಯಗಳನ್ನು ತಮಿಳುನಾಡಿನಿಂದ ಮಹಾರಾಷ್ಟ್ರಕ್ಕೆ ಬದಲಾಯಿಸಲಾಯಿತು. ಘಂಟಿಚೋರ್, ಉಚಲೆ, ಬಾಜಿಗರ್, ತಕರಿ ಮತ್ತು ಭಾಮ್ಟೆಗಳನ್ನು ತೆಲಂಗಾಣದಿಂದ ತರಲಾಯಿತು. ರಾಜಾಸ್ಥಾನದಿಂದ ಪರ್ಧಿಗಳು, ಒರಿಸ್ಸಾ ಮತ್ತು ಆಂಧ್ರದಿಂದ ವಡಾರಗಳು, ಪಂಜಾಬಿನಿಂದ ಕಂಜರ್‌ಭಾಟಗಳು, ಬೆರಡರು ಮತ್ತು ರಾಮೋಷಿಗಳನ್ನು ಮಹಾರಾಷ್ಟ್ರದಿಂದ, ಮಧ್ಯಪ್ರದೇಶ ಮತ್ತು ತಮಿಳುನಾಡು ನೆಲಸುನಾಡುಗಳಲ್ಲಿ ಮರಾಠಿ ಮಾತನಾಡುವ ಜನರು ಲಂಗೋಟಿಗಳನ್ನು ಪರ್ಧಿಗಳಂತೆ ಧರಿಸಿದ್ದನ್ನು ನಾನು ನೋಡಿದೆ.

ಗುಡ್ಡಗಾಡು ಪಂಗಡದ ಜನರು ದೇಶದಲ್ಲೆಲ್ಲಾ ಬಾಧೆಪಡುವ ಜೀವನ ನಡೆಸುತ್ತಿರುವಾಗ ಒಬ್ಬ ಮಹಾನುಭಾವರು ಜನಿಸಿದರು. ಅವರು ಒಬ್ಬ ಹುಟ್ಟುತ್ತಲೇ ಅಪರಾಧಿ ಅಥವಾ ಒಬ್ಬನು ತನ್ನ ಇಡೀ ಜೀವನದಲ್ಲಿ ಅಪರಾಧಿಯಾಗಿಯೇ ಉಳಿಯುತ್ತಾನೆ ಎಂಬ ವಿಚಾರವನ್ನೇ ಸಂಪೂರ್ಣವಾಗಿ ನಿರಾಕರಿಸಿದರು. ಅಂತಹ ತರ್ಕವೇ ಮಾನವೀಯತೆಗೆ ಒಂದು ಕಳಂಕವೆಂದು ಪರಿಭಾವಿಸಿದರು. ಇಡೀ ದೇಶವೇ ಅಪರಾಧಿ ಪಂಗಡಗಳ ಕಾನೂನೇ ಕಳಂಕಿತವಾದದ್ದೆಂದು ಒಪ್ಪಿಕೊಂಡಿರುವಾಗ, ಈ ಮಹಾನುಭಾವನು ಅದನ್ನು ತನ್ನ ಸಂಸ್ಥಾನದಲ್ಲಿ ಜಾರಿಗೊಳಿಸಲು ನಿರಾಕರಿಸಿದನು. ಅವರು ಈ ಅಪರಾಧಿ ಪಂಗಡಗಳಿಗೆ ಅಕ್ಕರೆಯ ಆಶ್ರಯವನ್ನು ನೀಡಿದರು. ಈ ಮಹಾನುಭಾವನಿಗೆ ಪ್ರೀತಿ ತೋರಿಸುವುದಕ್ಕೆ ಅವಕಾಶವು ಮಿತಿಯಾಗಿಲ್ಲದ ವ್ಯಕ್ತಿಯಾಗಿದ್ದರು, ಅವರೆ ರಾಜರ್ಷಿ ಶಾಹು ಛತ್ರಪತಿ ಮಹಾರಾಜರು. ಇಂದೂ ಸಹ ಪರ್ಧಿ ತಾಂಡಗಳು ಶಾಹುರವರನ್ನು ದೇವರೆಂದೇ ಭಾವಿಸುತ್ತಾರೆ. ಪರ್ಧಿಗಳ ಸಂಪೂರ್ಣ ಭಕ್ತಿಯು ಶಾಹುರವರಿಗೆ ಅವರ ಮುಗ್ಧತೆ ಮತ್ತು ನಿಷ್ಠೆಗಳು ನಿದರ್ಶೀಕೃತವಾಗಿವೆ. ಕೊಲ್ಹಾಪುರದ ಸಮೀಪವಿರುವ ಉಚ್‌ಗಾವಿನ ಅಣ್ಣಪ್ಪ ಚವಾಣರು ಹೇಳುತ್ತಾರೆ: "ನಮಗೆ ಇಂದು ಜನತಂತ್ರವಿದೆ. ಆದರೆ ಅದು ನಮ್ಮನ್ನು ಪ್ರೀತಿಸುತ್ತದೆಯೇ? ನಮ್ಮ ಬಗ್ಗೆ ಅಪಾರ ಪ್ರೀತಿಯನ್ನು ಹೊಂದಿರುವ ಮಹಾನುಭಾವರು ಶಾಹು ಮಹಾರಾಜರು. ಅವರು ನಮ್ಮನ್ನು ಮಾನವಜೀವಿಗಳೆಂದು ಒಪ್ಪಿಕೊಂಡರು. ಅವರು ನಮಗೆ ಮಾನವಜೀವಿಗಳಂತೆ ಬದುಕುವುದನ್ನು ಕಲಿಸಿಕೊಟ್ಟರು. ನಮಗೆ ಅವರು ದೇವರೇ ಆಗಿದ್ದಾರೆ."

ಒಮ್ಮೆ ಶಾಹುರವರು ಕಾತ್ಕೋಲ್‌ನಲ್ಲಿದ್ದರು. ಫಸೆಪರ್ಧಿಗಳು ಕಳ್ಳತನಗಳಿಂದ ಜನರನ್ನು ಗೋಳಾಡಿಸುವುದನ್ನು ತಿಳಿದುಕೊಂಡರು. ಅವರು ಕೂಡ ಫಸೆಪರ್ಧಿಗಳು ತಮ್ಮ ಕ್ಯಾಂಪ್‌ಗೆ ದಾಳಿಮಾಡಲು ಹೊಂಚುಹಾಕಿದ್ದನ್ನು ಕೇಳಿದ್ದರು. ತಮ್ಮ ಕ್ಯಾಂಪು ಬಲವಾದ ಕಾವಲನ್ನು ಪಡೆದಿದೆ. ಅವರು ತಮ್ಮ ಸಿಪಾಯಿಗಳನ್ನು ಕಳುಹಿಸಿದರು ಮತ್ತು ಫಸೆಪರ್ಧಿಗಳನ್ನು ದಸ್ತಗಿರಿ ಮಾಡಲಾಯಿತು ಮತ್ತು ಅವರನ್ನು ಜೇಲಿಗೆ ಹಾಕಲಾಯಿತು. ಆದರೆ ಅವರಿಗೆ ಯಾವುದೇ ರೀತಿಯಲ್ಲಿ ಕಿರುಕುಳ ಕೊಡಿಸಲಿಲ್ಲ. ಅವರಿಗೆ ಜೇಲಿನಲ್ಲಿ ಒಳ್ಳೆಒಳ್ಳೆಯ ವಸ್ತುಗಳನ್ನು ಒದಗಿಸಿಕೊಟ್ಟರು. ಅವರು ದಮನಿತರನ್ನು ನಿಭಾಯಿಸುವ ಮಾರ್ಗ ತಮ್ಮದೇ ಆದ ರೀತಿಯಲ್ಲಿಟ್ಟುಕೊಂಡಿದ್ದರು. ಮಾನವರು ಸಾಮಾನ್ಯವಾಗಿ ಬೇರೆಯವರನ್ನು ತೊಂದರೆಗೆ ಆಯ್ಕೆಮಾಡಿಕೊಳ್ಳುವುದಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. ಅವರು ಈ ಜನರು ಏಕೆ ಇಂತಹ ಜೀವನ ಆಯ್ಕೆಮಾಡಿಕೊಂಡರೆಂಬ ಬಗ್ಗೆ ಅವರು ಆಶ್ಚರ್ಯಪಟ್ಟರು. ಅಂಥ ಒಂದು ದಾರಿಯನ್ನು ಅವರು ಆಯ್ಕೆಮಾಡಿಕೊಳ್ಳಲು ಬಲವಂತಪಡಿಸಿದ ಕಾರಣ ಏನು. ಅವರು ಈ ಎಲ್ಲವನ್ನೂ ತಿಳಿಯಲು ಬಯಸಿದ್ದರು.

ಕೆಲವು ದಿನಗಳ ನಂತರ ಶಾಹುರವರು ಕೆವು ಫಸೆಪರ್ಧಿಗಳನ್ನು ಕರೆದರು ಮತ್ತು ಅವರನ್ನು ಕೇಳಿದರು:

"ನೀವು ಕಳ್ಳತನ ಮಾಡುವುದು ಏಕೆ? ನೀವು ಜೇಲಿಗೆ ಹೋಗುವುದನ್ನು ಇಷ್ಟಪಡುವಿರಾ?"

"ಜೈಲುಗಳನ್ನು ಯಾರು ಇಷ್ಟಪಡುತ್ತಾರೆ?" ಎಂದು ಉತ್ತರಿಸಿದರು.

"ಹಾಗಾದರೆ ನೀವೇಕೆ ಕದಿಯುತ್ತೀರಾ?"

"ಉಳಿವಿಗಾಗಿ"

"ನೀವೇಕೆ ಕೆಲಸ ಮಾಡುವುದಿಲ್ಲ?"

"ನಾವು ಪಕ್ಷಿಗಳನ್ನು ಹಿಡಿಯುತ್ತೇವೆ. ಆದರೆ ಅದು ಹೊಟ್ಟೆ ತುಂಬುವುದಕ್ಕೆ ನಮಗೆ ಸಾಕಾಗುವುದಿಲ್ಲ. ಅದನ್ನು ಬಿಟ್ಟು ನಾವೇನು ಮಾಡಲಾರೆವು. ನಮ್ಮ ಇತಿಹಾಸದಿಂದ ಯಾರೂ ನಮ್ಮನ್ನು ಹತ್ತಿರ ಬಿಟ್ಟುಕೊಳ್ಳುವುದಿಲ್ಲ. ನಮಗೆ ಯಾರು ಕೆಲಸ ಕೊಡುತ್ತಾರೆ? ಪಕ್ಷಿಗಳಿಗೆ ಬಲೆ ಹಾಕುವುದನ್ನು ಮತ್ತು ಬಿಲ್ಲುಗಾರಿಕೆಯನ್ನು ಬಿಟ್ಟರೆ ನಮಗೇನು ಗೊತ್ತಿಲ್ಲ".

"ಆದ್ದರಿಂದ ನೀವು ಮನೆಗಳಿಗೆ ಕನ್ನಹಾಕುವಿರಾ?"

"ಬದುಕುವುದಕ್ಕೆ ನಾವೇನು ಮಾಡಬಲ್ಲೆವು? ನಾವು ಬದುಕುವುದಕ್ಕೆ ಸಾಕಷ್ಟು ಸಿಕ್ಕರೆ, ನಾವೇಕೆ ಕದಿಯುವುದಕ್ಕೆ ಹೋಗುವೆವು. ಇದು ಒಳ್ಳೆಯದಲ್ಲ ಎಂಬುದು ನಮಗೆ ಗೊತ್ತು. ಆದರೆ ಹಸಿವು ನಮ್ಮ ತಲೆಗಳನ್ನು ತಿರುಗಿಸುತ್ತದೆ ಮತ್ತು ನಾವು ಬದುಕುವುದಕ್ಕೆ ಹೆಣಗಾಡುತ್ತೇವೆ."

ಶಾಹುರವರು ಗುಡ್ಡಗಾಡು ಪಂಗಡಗಳ ಅಪರಾಧಿ ಕೃತ್ಯಗಳ ಹಿಂದಿರುವ ಮೂಲಕಾರಣವನ್ನು ಕಂಡುಕೊಂಡರು. ಅವರು ಕರಗಿಹೋದರು. ನಾವು ಹಸಿವಿನ ಸಮಸ್ಯೆಯನ್ನು ಪರಿಹರಿಸದೆ ಹೋದರೆ ಜನರು ಕಡ್ಡಾಯವಾಗಿ ಅಪರಾಧಿ ಜೀವನ ನಡೆಸಬೇಕಾಗುತ್ತದೆ. ಅವರು ಫಸೆಪರ್ಧಿಗಳನ್ನು ಮತ್ತು ಅವರ

ಕುಟುಂಬಗಳನ್ನು ಸೋನ್‌ತಾಲಿ ಕ್ಯಾಂಪ್‌ಗೆ ಕೊಂಡೊಯ್ದರು ಮತ್ತು ಪ್ರತಿ ಕುಟುಂಬಕ್ಕೆ ಪಡಿತರವನ್ನು ವ್ಯವಸ್ಥೆಗೊಳಿಸಿದರು.

ಫಸೆಪರ್ಧಿಗಳು ಧೈರ್ಯಶಾಲಿಗಳು, ಕಷ್ಟಜೀವಿಗಳು ಮತ್ತು ನಂಬಲರ್ಹವಾದ ಸಮುದಾಯ. ತಮ್ಮ ಮಾತು ಉಳಿಸಿಕೊಳ್ಳುವುದಕ್ಕೆ ತಮ್ಮ ಜೀವನವನ್ನೇ ತ್ಯಾಗಮಾಡುತ್ತಾರೆ. ಶಾಹುರವರು ಅವರು ಸಾಮಾನ್ಯ ಜನರಂತೆ ಜೀವನ ನಡೆಸಲು ಸಹಾಯಮಾಡುವುದಕ್ಕೆ ದೃಢಸಂಕಲ್ಪ ತೊಟ್ಟರು. ಅವರ ಜೀವನವನ್ನು ಹಳಿಗಳ ಮೇಲೆ ತರುವುದು ಹೇಗೆ ಎಂದು ಸದಾ ಯೋಚಿಸುತ್ತಿದ್ದರು. ಕೊನೆಗೆ ಅವರಲ್ಲಿ ಕೆಲವರನ್ನು ತಮ್ಮ ಕ್ಯಾಂಪಿಗೇ ಕಾವಲುಗಾರರೆಂದು ನೇಮಿಸಿಕೊಳ್ಳುವ ನಿರ್ಧಾರ ಮಾಡಿದರು. ಇದು ಕಳ್ಳರನ್ನು ಕಾವಲುಗಾರನ್ನಾಗಿ ಮಾಡುವುದಾಗಿತ್ತು. ಆದರೆ ಶಾಹುರವರು ಅದನ್ನು ಮಾಡಿತೋರಿಸಿಯೇ ಬಿಟ್ಟರು. ಫಲಿತಾಂಶ ಫಸೆಪರ್ದಿಗಳು ಕ್ಯಾಂಪಿನ ಭದ್ರತೆಯ ಪದ್ಧತಿಯನ್ನು ಬಹುಮಟ್ಟಿಗೆ ಪರಿಪೂರ್ಣಗೊಳಿಸಿದರು.

ಶಾಹುರವರು ತಮ್ಮ ಉದ್ಯೋಗದ ವ್ಯಕ್ತಿಗಳಲ್ಲಿ ಅಂತಹ ಹಲವು ಸಮುದಾಯಗಳಲ್ಲಿ ಪರ್ದಿಗಳು, ಕಂಜಾರಭಟ್‌ಗಳು, ಕುಚ್‌ಕೊರವಿಗಳು, ಮಕಡ್‌ವಾಲೆ, ದೊಂಬರಿಗಳು ಮತ್ತು ಕೊಲಾಟಿಗಳಿದ್ದರು. ಅವರೆಲ್ಲರೂ ರಕ್ಷಾದಳದವರಾಗಿ ತಮ್ಮ ಬೇಟೆತಂಡದ ಸದಸ್ಯರಾಗಿ, ಅಥವಾ ಇಲಾಖೆಯ ಪರ್ಯಾಯ ವ್ಯವಸ್ಥೆಯಾಗಿ ಕೆಲಸ ಮಾಡಿದರು. ಈಗಿರುವ ಶಿವಾಜಿ ವಿಶ್ವವಿದ್ಯಾಲಯದ ಕ್ಯಾಂಪಸ್ ಬಳಿ ಇರುವ ಭೂಮಿಯನ್ನು (ಸುಮಾರು ೬೦೦ ಎಕರೆ) ಶಾಹುರವರು ಪರ್ದಿಗಳಿಗೆ ಮತ್ತು ಕಂಜಾರಭಟ್ ಸಮುದಾಯಗಳಿಗೆ ನೀಡಿದರು.

ಸ್ವಾತಂತ್ರ್ಯದ ನಂತರ ಸರಕಾರವು ಕಂಜಾರಭಟ್‌ಗಳಿಂದ ಭೂಮಿಯನ್ನು ಜನರ ವಿಶ್ವವಿದ್ಯಾಲಯದ ಶಿಕ್ಷಣದ ಸೌಕರ್ಯಗಳನ್ನು ಒದಗಿಸುವ ಸಲುವಾಗಿ ಬೇಕಾಗಿದ್ದರಿಂದ ವಶಪಡಿಸಿಕೊಂಡಿತು. ಆದರೆ ಈಗಲೂ ಕಂಜಾರಭಟ್‌ಗಳು ೩೦೦ ಎಕರೆ ಜಮೀನನ್ನು ಸ್ವಾಧೀನ ಪಡೆದಿದ್ದಾರೆ. ಕೊಲ್ಹಾಪುರದಲ್ಲಿ ಉದ್ಯಮನಗರದಲ್ಲಿನ ದೊಂಬರವಾಡದಲ್ಲಿರುವ ಭೂಮಿಯನ್ನು ಶಾಹುರವರೇ ನೀಡಿದ್ದರು. ಆದರೆ ಹೊರಗಿನವರ ಅತಿಕ್ರಮಣದಿಂದ ದೊಂಬರವಾಡಗಳು ಬಲವಂತವಾಗಿ ಕಡಿಮೆಯಾದರು. ಶಾಹುರವರು ಕವವಲಾ ನಾಕಾದಿಂದ ಮಕಡವಾಲೆಗಳಿಗೆ ಜಮೀನು ನೀಡಿದ್ದರು. ಈ ಭೂಮಿ ಸೋನ್‌ತಾಲಿ ಕ್ಯಾಂಪಿನಲ್ಲಿ ರಜಪೂತ್ ಭಮ್‌ಟಾಗಳಿಗೆ ನೀಡಿದ್ದ ಭೂಮಿಯಾಗಿತ್ತು. ಈ ಜನರು ಶಾಹುರವರು ತಮಗೆ ಭೂಮಿ ನೀಡಿದ್ದಲ್ಲದೆ ತಮ್ಮನ್ನು ಸಮಾಜ ಬಯಸದಿದ್ದಾಗ ಅವರು ತಮ್ಮನ್ನು ತಮ್ಮವರೆಂದೇ ಭಾವಿಸಿ ಬೆಂಬಲ ನೀಡಿದ್ದರಿಂದ ಅವರು ಅವರನ್ನು ತಮ್ಮ ದೇವರೆಂದೇ ಪರಿಗಣಿಸಿದರು. ಅವರು ಅವರನ್ನು ಮಾನವರೆಂದು ಕಂಡದ್ದರಿಂದ ಅವರನ್ನು ದೇವರೆಂದೇ ನಂಬಿದ್ದರು. ಶಾಹುರವರು ಚೆನ್ನಾಗಿ ಉಡುಪು ಧರಿಸಿ, ಪರಂಪರಾಗತವಾದ ನಯ–ನಾಜೂಕುಗಳನ್ನು ಪರಿಪಾಲಿಸುವ, ಚೆನ್ನಾಗಿ ಮಾತನಾಡುವ ಜನರನ್ನು ಸುತ್ತಮುತ್ತಲೂ ಕಂಡಿದ್ದರು, ಆದರೆ ಅವರೆಲ್ಲರೂ ಪಟ್ಟಭದ್ರ ಹಿತಾಸಕ್ತಿಗಳು. ತಮ್ಮ ಸ್ವಾರ್ಥಪರ ಉದ್ದೇಶಗಳನ್ನು ನೆರವೇರಿಸಿಕೊಳ್ಳಲು ಜಯ–ಪರಾಕು ಮಾತುಗಳನ್ನೇ ಆಡುತ್ತಿದ್ದರು. ಶಾಹುರವರು ಇಂಥ ಪ್ರವೃತ್ತಿಯ ಜನರನ್ನು ದ್ವೇಷಿಸುತ್ತಿದ್ದರು. ಅವರು ಅಂಥ ಜನರಿಗಿಂತ ಪ್ರಾಮಾಣಿಕ ಫಸೆಪರ್ದಿಗಳನ್ನು ಹೆಚ್ಚು ಬಯಸುತ್ತಿದ್ದರು. ಫಸೆಪರ್ದಿಗಳು ಒರಟು ಸ್ವಭಾವದವರು, ತಮ್ಮ ಮಾತುಕತೆಯಲ್ಲಿ ನಯ–ನಾಜೂಕು ಇಲ್ಲದವರು. ಅವರು ಹೆಸರಿಡಿದು ಅವರನ್ನು ನಾಗರಿಕ ಭಯಾನಕತೆಯಿಲ್ಲದೆ ಕರೆಯುತ್ತಿದ್ದರು. ಅವರ ಬಟ್ಟೆಗಳು ಹರಕಲು ಮತ್ತು ಕೊಳೆಯಾಗಿರುತ್ತಿದ್ದವು. ಆದರೆ ಕೊಳಕಿನ ಬಾಹ್ಯದ ಹಿಂದೆ ಅವರ ಅಂತರಂಗದ ಆತ್ಮಶುದ್ಧ ಮತ್ತು

ಭಯಂಕರವಾದ ನಿಷ್ಠೆಯಿತ್ತು. ಶಾಹುರವರು ಅದಕ್ಕೆ ಭೂಮಿಯಷ್ಟೇ ಬೆಲೆಯನ್ನು ನೀಡಿ ಗೌರವಿಸುತ್ತಿದ್ದರು.

ಶಾಹುರವರು ಒಮ್ಮೆ ಘಸೆಪರ್ದಿಗಳ ನಿಷ್ಠೆಯನ್ನು ಪರೀಕ್ಷಿಸಲು ನಿರ್ಧರಿಸಿದರು. ಅವರು ಮತ್ತೊಂದು ಉದ್ದೇಶವನ್ನು ಸಹ ಹೊಂದಿದ್ದರು. ಘಸೆಪರ್ದಿಗಳು ದೊಡ್ಡ ವ್ಯಕ್ತಿಗಳ ಒತ್ತಡಗಳಿಗೆ ಬಾಗುತ್ತಾರೆಯೆಂಬುದನ್ನು ಕಂಡುಕೊಳ್ಳಲು ಬಯಸಿದ್ದರು. ಅವರು ತಮ್ಮ ಸಹೋದರ ಬಾಪುಸಾಹೇಬರಿಗೆ ಕೂಡಲೇ ನೋಡುವುದಕ್ಕೆ ಸೋನ್‌ತಾಲಿ ಕ್ಯಾಂಪಿಗೆ ಬರಬೇಕೆಂದು ಸಂದೇಶವನ್ನು ಕಳುಹಿಸಿಕೊಟ್ಟಿದ್ದರು ಮತ್ತು ಘಸೆಪರ್ದಿಗಳ ಕಾವಲುಗಾರನಿಗೆ ಯಾರನ್ನೂ ಒಳಗೆ ಬಿಡಬೇಡ ಎಂದು ಮೌಖಿಕವಾಗಿ ಆಜ್ಞೆ ಮಾಡಿದ್ದರು. ಒಂದು ಘಂಟೆಯ ನಂತರ ಬಾಪುಸಾಹೇಬರು ಬಂದರು. ಘಸೆಪರ್ದಿಗಳು ಕರ್ತವ್ಯದ ಮೇಲಿದ್ದ ಗಾರ್ಡು ಅವರನ್ನು ತಡೆದನು. ಬಾಪುಸಾಹೇಬರು ತುಂಬಾ ಕೋಪಗೊಂಡರು. ಆದರೆ ಘಸೆಪರ್ದಿಗಳು ಒಂದೇ ವಿಚಾರವನ್ನು ಒತ್ತಿಹೇಳಿದನು: ಶಾಹುರವರು ನಮಗೆ ಹೇಳಿದ್ದಾರೆ, ಯಾರನ್ನೂ ಒಳಗೆ ಬಿಡಬೇಡಿಯೆಂದು. ಬಾಪುಸಾಹೇಬರು ತಾನು ಶಾಹುರವರ ಸಹೋದರ ಎಂದು ಹೇಳಿ ಅವರಿಗೆ ಸಮಾಧಾನಪಡಿಸಲು ಬಹಳ ಪ್ರಯತ್ನಿಸಿದರು. ಮಾಹಾರಾಜರು ತನ್ನನ್ನು ಕೂಡಲೇ ನೋಡಲು ಹೇಳಿಕಳುಹಿಸಿದ್ದರು. ಆದ್ದರಿಂದ ನಾನು ಸೋನ್‌ತಾಲಿ ಕ್ಯಾಂಪಿಗೆ ಓಡಿ ಬಂದಿದ್ದೇನೆ. ಆದರೆ ಕಾವಲುಗಾರನು ಕೇಳಲಿಲ್ಲ. ಬಾಪುಸಾಹೇಬರು ತನ್ನ ಮನಸ್ಥಿತಿಯನ್ನು ಕಳೆದುಕೊಂಡರು. ಕಾವಲುಗಾರನು ಹೇಳಿದನು: ನಾನು ರಾಜನ ಆಜ್ಞೆಯನ್ನು ಮೀರಲಾರೆ. ನಾನು ನಿಮ್ಮನ್ನು ಒಳಗೆ ಬಿಡುವುದಿಲ್ಲ. ನೀವು ಒಳಗೆ ಹೋಗಲೇಬೇಕಾದರೆ ಈ ಬಂದೂಕನ್ನು ತೆಗೆದುಕೊಳ್ಳಿ, ನನ್ನನ್ನು ಗುಂಡಿಕ್ಕಿ ಕೊಲ್ಲಿ ಮತ್ತು ಆಮೇಲೆ ನೀವು ಒಳಗೆ ಹೋಗಿ. ನೀವು ಮಹಾರಾಜರ ಸಹೋದರರಾಗಿರುವುದರಿಂದ ನಾನು ನಿಮಗೆ ಹೇಳುತ್ತಿದ್ದೇನೆ". ಶಾಹುರವರು ಈ ಎಲ್ಲವನ್ನೂ ನೋಡುತ್ತಿದ್ದವರು ಹೊರಗೆ ಬಂದರು ಮತ್ತು ಬಾಪುಸಾಹೇಬರನ್ನು ತಾವೇ ಒಳಗೆ ಕರೆದುಕೊಂಡು ಹೋದರು. ಶಾಹುರವರು ತಮ್ಮ ಎರಡು ತೋಳುಗಳಿಂದಲೂ ಕಾಡುಸಮುದಾಯದ ರಾಜನಿಷ್ಠೆಯನ್ನು ಆಹ್ವಾನಿಸಿದರು. ಅವರು ಈ ಮಾನವ ಬಹಿಷ್ಕೃತರನ್ನು ಸಾಮಾಜಿಕ ಮುಖ್ಯವಾಹಿನಿಗೆ ತರಲು ಎಲ್ಲಾ ಪ್ರಯತ್ನಗಳನ್ನು ಮಾಡಿದರು.

ಶಾಹುರವರು ಕೆಲವು ಘಸೆಪರ್ದಿಗಳನ್ನು ರಸ್ತೆನಿರ್ಮಾಣ ಮತ್ತು ಸಂರಕ್ಷಣೆ, ಅಣೆಕಟ್ಟುಗಳ ನಿರ್ಮಾಣ ಮತ್ತು ಬಾವಿಗಳ ಅಗೆತಗಳಲ್ಲಿ ಕೆಲಸಕ್ಕೆ ನೇಮಿಸಿದರು. ಮತ್ತೆ ಕೆಲವರನ್ನು ಇತರೆ ಸಂಸ್ಥಾನಗಳಿಗೆ ಪಕ್ಷಿಗಳನ್ನು ಮತ್ತು ಪ್ರಾಣಿಗಳನ್ನು ಹಿಡಿದು ತರಲು ಕಳುಹಿಸಿಕೊಟ್ಟರು. ಅವರಿಗೆ ತಮ್ಮ ದರ್ಬಾರಿನಿಂದ ಗುರುತಿನ ಚೀಟಿಗಳನ್ನು ಕೊಟ್ಟುಕಳುಹಿಸಿದರು. ಮತ್ತು ಇತರೆ ಸಂಸ್ಥಾನದವರಿಗೆ ಅವರೊಡನೆ ಸಹಕರಿಸಬೇಕೆಂದು ಕೋರಿ ಪತ್ರಗಳನ್ನು ಬರೆದಿದ್ದರು. ಸೋನ್‌ತಾಲಿ ಕ್ಯಾಂಪಿನಲ್ಲಿ ಕೂಡ ಒಂದು ಹೊಸ ಯೋಜನೆಯನ್ನು ಘಸೆಪರ್ದಿಗಳಿಗೆ ಪ್ರಾರಂಭಿಸಿದ್ದರು. ಅವರಿಗೆ ಶಾಹುರವರೇ ಸ್ವತಃ ಉದ್ಯೋಗವನ್ನು ಎಲ್ಲರಿಗೂ ನೀಡಲು ಸಾಧ್ಯವಾಗಲಿಲ್ಲ. ಆಗ ಅವರು ಗೃಹ ಯೋಜನೆಯನ್ನು ಪ್ರಾರಂಭಿಸಿದರು. ಅದರ ಹೆಸರು ನಿರ್ಮಿಸಿ ಮತ್ತು ಕೆಡವಿ ಯೋಜನೆಯಾಗಿತ್ತು. ಅವರು ಘಸೆಪರ್ದಿಗಳನ್ನು ಕಲ್ಲು ಮತ್ತು ಮಣ್ಣುಗಳಿಂದ ಮನೆ ಕಟ್ಟಲು ನೇಮಿಸಿದರು. ಮನೆಗಳು ಮಳೆಗಾಲದಲ್ಲಿ ನಿಲ್ಲುತ್ತಿರಲಿಲ್ಲ. ಮತ್ತೆ ಶಾಹುರವರು ಮತ್ತೆ ಮನೆಗಳನ್ನು ಕಟ್ಟಲು ಅವರಿಗೆ ಹೇಳುತ್ತಿದ್ದರು. ಈ ಪ್ರಕ್ರಿಯೆ ಮುಂದುವರಿಯಿತು. ಅವರಿಗೆ ಉಚಿತ ಪಡಿತರ ಕೊಡುವುದಕ್ಕಿಂತ ಮಿಗಿಲಾಗಿ ಅವರನ್ನು ಸೋಮಾರಿ ಅವಲಂಬಿತರನ್ನಾಗಿ ಮಾಡದೆ ಶಾಹುರವರ ಈ ಪ್ರಯೋಗ ಅವರಿಗೆ ಶ್ರಮದ ಗೌರವವನ್ನು ಕಲಿಸಿತು.

ದ್ವೇಷಿತ ಅಪರಾಧಿ ಬಹಿಷ್ಕೃತರನ್ನು ಮಾನವಜೀವಿಗಳೆಂದು ಪರಿಗಣಿಸುವ ಚಲನೆಯು ಸೋನ್‌ತಾಲಿ ಕ್ಯಾಂಪಿನ ಸಾಮಾಜಿಕ ಪ್ರಯೋಗಶಾಲೆಯಲ್ಲಿ ಒಂದು ಮಹಾನ್ ಮಾನವೀಯ ಪ್ರಯೋಗವನ್ನು ಪ್ರಾರಂಭಿಸಲಾಯಿತು. ಹಸಿವು, ಕ್ರೌರ್ಯ ಮತ್ತು ಅಪರಾಧಕ್ಕೆ ಮೂಲ ಎಂಬುದನ್ನು ಮಹಾರಾಜರು ಸರಿಯಾಗಿಯೇ ಮನವರಿಕೆ ಮಾಡಿಕೊಂಡರು. ಹಸಿದುಕೊಂಡವನಿಗೆ ನೀತಿಶಾಸ್ತ್ರ ಹೇಳುವ ಮೂಲಕ ಸರಿಯಾದ ದಾರಿಗೆ ತರಲು ಸಾಧ್ಯವಿಲ್ಲ ಅಥವಾ ಅವರ ಸಮಸ್ಯೆಗಳನ್ನು ಕಠಿಣಸಜೆಯಿಂದ ಬಗೆಹರಿಸಲು ಸಾಧ್ಯವಿಲ್ಲ. ಈ ಗುಡ್ಡಗಾಡು ಪಂಗಡಗಳ ಜನರ ಅಪರಾಧಿ ಪ್ರವೃತ್ತಿಗಳ ಮೂಲವನ್ನು ಪರೀಕ್ಷಿಸಬೇಕು ಮತ್ತು ಸಮಸ್ಯೆಯನ್ನು ಪರಿಹರಿಸಲು ಕಾರಣವನ್ನು ನಿರ್ಮೂಲನೆ ಮಾಡಬೇಕೆಂಬ ನಂಬಿಕೆಯ ನಿಲುವಿಗೆ ಶಾಹುಮಹಾರಾಜರು ಬಂದರು ಅವರು ಈ ನಿಲುವುಗಳ ಮೇಲೆ ಕಾರ್ಯನಿರತರಾದರು.

ಶಾಹುರವರು ಈ ಅಲೆಮಾರಿ ಪಂಗಡಗಳಿಗೆ ತಾಯಿ ಮತ್ತು ತಂದೆಯಾಗಿದ್ದರು. ತಾಯಿಪ್ರೀತಿ ಮತ್ತು ತಂದೆಯ ಮಮಕಾರಗಳು ದೇವರಲ್ಲಿ ಏಕೀಕೃತವಾಗುತ್ತವೆ; ಅವರ ಶ್ರದ್ಧೆಯಲ್ಲಿ ರಾಜರ್ಷಿ ಶಾಹು ಮಹಾರಾಜರು ತಂದ ಸಾಮಾಜಿಕ ಕ್ರಾಂತಿಯ ಮೂರ್ತ ಮುಖವನ್ನು ನೋಡಬಹುದು.

---

೧೮

# ಶಾಹು ಮತ್ತು ತಮ್ಮ ಗುರು ಸರ್ ಫ್ರೇಜರ್

**– ಪ್ರಾಂಶುಪಾಲ ಕಣ್‌ಬಾರ್‌ಕರ್**

*ಮಾಜಿ ಉಪ-ಕುಲಪತಿಗಳು, ಶಿವಾಜಿ ವಿಶ್ವವಿದ್ಯಾಲಯ, ಕೊಲ್ಹಾಪುರ*

**ಕಾ**ಗಲ್ ಒಂದು ಚಿಕ್ಕ ಜಹಗೀರ್‌ನಲ್ಲಿ ಹುಟ್ಟಿದ ಯಶವಂತರಾವ್ ಅವರನ್ನು ೧೦ನೇ ವಯಸ್ಸಿನಲ್ಲಿ ಶಾಹು ಛತ್ರಪತಿಯಾಗಿ ಕೊಲ್ಹಾಪುರ ಸಿಂಹಾಸನಕ್ಕೆ ದತ್ತುಪುತ್ರನಾಗಿ ತೆಗೆದುಕೊಳ್ಳಲಾಯಿತು. ೨೦ನೇ ವಯಸ್ಸಿನಲ್ಲಿ ಏಪ್ರಿಲ್ ೨, ೧೮೯೪ರಲ್ಲಿ ಶಾಹುರವರು ಛತ್ರಪತಿಯಾಗಿ ರಾಜನ ಕರ್ತವ್ಯಗಳನ್ನು ವಹಿಸಿಕೊಂಡರು. ಬೇರೆ ರಾಜಕುಮಾರರಂತಲ್ಲದೆ ಅವರು ಕನಿಷ್ಠ ವಿರೋಧದ ಪಥವನ್ನು ಅನುಸರಿಸಲಿಲ್ಲ. ಮುಂದಿನ ೨೮ ವರ್ಷಗಳಲ್ಲಿ ತನ್ನ ಜನರನ್ನೇ ವಿದೇಶಿಯರೆಂದು (ಪರಕೀಯರೆಂದು) ಬಗೆದು ಮನುಷ್ಯ ಮತ್ತು ಮನುಷ್ಯರ ನಡುವಣ ಅಂತರವನ್ನು ಕಡಿಮೆಮಾಡಲು ಸಾಮಾಜಿಕ ಸಮಾನತೆಯ ತತ್ವದ ಆಧಾರದ ಮೇಲೆ ಹೋರಾಟ ನಡೆಸಲು ಆಯ್ಕೆಮಾಡಿಕೊಂಡರು. ಅವರು ಸುಧಾರಕ ಎಂಬ ಪ್ರತಿಮೆಯನ್ನು ನಿರ್ಮಾಣ ಮಾಡಿಕೊಂಡು ದಲಿತರ ಏಳಿಗೆಗಾಗಿ ಸಮರ್ಥಿಸಿದರು ಮತ್ತು ಸಾಮಾನ್ಯ ಮನುಷ್ಯನ ಪ್ರವಾದಿಯಾದರು. ಯಾವುದೇ ರೀತಿಯ ಅಳುಕಿಲ್ಲದೆ ಒಬ್ಬ ಸಂತೃಪ್ತ ಜೀವಿಯಾಗಿ ಮರಣವನ್ನು ಅಪ್ಪಿಕೊಂಡರು. ಒಬ್ಬ ಮಹಾತ್ಮನಾಗಿ ಯೋಗ್ಯಜೀವನವನ್ನು ಅವರು ನಡೆಸಿದರು ಮತ್ತು ಒಂದು ಪರಿಪಕ್ವ ಮನಸ್ಸಿನಿಂದ ನಮ್ಮನ್ನು ಬೀಳ್ಕೊಟ್ಟರು. ಒಂದು ಭಿನ್ನ ರೀತಿಯಲ್ಲಿ ಈ ಮಹಾರಾಜನ ಪ್ರಚೋದನೆಗಳು ಮತ್ತು ಸ್ಫೂರ್ತಿಗಳ ಹಿಂದೆ ಇರುವ ಜೀವನ ಮತ್ತು ಕೃತಿಗಳನ್ನು ಹುಡುಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಶಿವಾಜಿಯ ಪರಂಪರೆ

ರೂಪಾಂತರದ ಉಗಮವನ್ನು ಎರಡು ಮೂಲಗಳಿಂದ ಹುಡುಕಬಹುದು. ಛತ್ರಪತಿ ಶಿವಾಜಿ ಸ್ಥಾಪಿಸಿದ ಪೀಠಕ್ಕೆ ಮುಖ್ಯಸ್ಥನೆಂದು ದತ್ತು ತೆಗೆದುಕೊಂಡ ನಂತರ ಶಾಹುರವರು ಎಂದಿಗೂ ಪೀಠದ ಘನತೆ-ಗೌರವವನ್ನು ಕಾಪಾಡಬೇಕೆಂಬುದನ್ನು ಮರೆತಿರಲಿಲ್ಲ. ಅವರು ಸದಾ ತಮ್ಮ ಅಂತರಂಗದಲ್ಲಿ ಶಿವಾಜಿಯನ್ನು ಒಬ್ಬ ದೇವರು, ಆಡಳಿತಕ್ಕೆ ಆದರ್ಶವೆಂದು ಬಗೆದಿದ್ದರು. ತಾವು ಅಧಿಕಾರ ವಹಿಸಿಕೊಂಡ ಕೂಡಲೆ ಅವರು ಸಂಕ್ಷಿಪ್ತ ಘೋಷಣೆಗಳನ್ನು ಹೊರಡಿಸಿದ್ದರು. ಅದರಲ್ಲಿ ಉಲ್ಲೇಖಿಸಿದ 'ಶಿವಶಕ'ವು ಅದು ಎಲ್ಲವನ್ನೂ ಹೇಳುತ್ತದೆ. ಛತ್ರಪತಿ ಶಿವಾಜಿ ತಮ್ಮ ಪಟ್ಟಾಭಿಷೇಕದ ಸಮಾರಂಭದಲ್ಲಿ ಪ್ರಾರಂಭಿಸಿದ 'ಶಕೆ' (ಕ್ಯಾಲೆಂಡರ್) ೧೦೪ ವರ್ಷಗಳವರೆಗೆ ಮುಂದುವರಿದಿದೆ. ೧೭೭೭ರಲ್ಲಿ ಶಾಹು-೨ ಅವರು ಸತಾರದಲ್ಲಿ ಅಧಿಕಾರ ವಹಿಸಿಕೊಂಡಾಗ ಪೇಶ್ವೆಗಳ ಆಡಳಿತಗಾರರು ಸಖರಾಮ್‌ಬಾಪು ಮತ್ತು ನಾನಾಫಡ್ನವೀಸ್ ಅದನ್ನು ಮುಂದುವರಿಸಲಿಲ್ಲ. ಶಾಹುರವರು ಅಧಿಕಾರಕ್ಕೆ ಬಂದ ಕೂಡಲೇ ಶಿವಶಕವನ್ನು

ನೆನಪುಮಾಡಿಕೊಂಡರು. ಇದು ಅವರ ಮನಸ್ಥಿತಿ ಹೇಗೆ ಕೆಲಸಮಾಡುತ್ತದೆಂಬುದಕ್ಕೆ ಸೂಚನೆಯಾಗಿದೆ. ಶಾಹುರವರು ಛತ್ರಪತಿಯ ಕುಟುಂಬದ ಪರಂಪರೆಯ ಬಗ್ಗೆ ಕೇವಲ ಮಾತನಾಡುವವರಲ್ಲ. ಅವರು ಜನರಿಗಾಗಿ ಛತ್ರಪತಿಯವರು ಹಾಕಿಕೊಂಡಿದ್ದ ಕಲ್ಯಾಣಕಾರಿ ಧೋರಣೆಗಳನ್ನು ಮುಂದುವರಿಸುವಲ್ಲಿ ಆತುರರಾಗಿದ್ದರು. ಒಮ್ಮೆ ಅವರು ಆ ಮಾರ್ಗದಲ್ಲಿ ಹೊರಟಾಗ ಪರ್ವತಾಕಾರದ ಕಷ್ಟ–ಕಾರ್ಪಣ್ಯಗಳು ಎದುರಾದರೂ ಅವರು ವಿಚಲಿತರಾಗಲಿಲ್ಲ. ಅವರು ಸಿಂಹಾಸನವನ್ನು ಬಿಡಲು ಸಿದ್ಧವಾಗಿದ್ದರು ಆದರೆ ಅವರು ಬ್ರಿಟಿಷ್ ಅಧಿಕಾರಿಗಳು ಬಹುಜನ ಸಮಾಜದ ಏಳಿಗೆಯ ಕೆಲಸಗಳನ್ನು ಮಾಡಲು ಬಯಸುತ್ತಿದ್ದರಿಂದ ತಮ್ಮ ಗುರಿಯಾದ ಬಹುಜನ ಸಮಾಜದ ಕಲ್ಯಾಣದೊಂದಿಗೆ ರಾಜಿಮಾಡಿಕೊಳ್ಳಲು ಸಿದ್ಧರಿರಲಿಲ್ಲ.

## ಸರ್ ಸ್ಟೀವರ್ಟ್ ಮಿಟ್‌ಫೋರ್ಡ್ ಫ್ರೇಜರ್

ಶಾಹುರವರು ಛತ್ರಪತಿ ಶಿವಾಜಿಯವರ ಪರಂಪರೆಯನ್ನು ನಿಭಾಯಿಸುವ ಅವರ ಮನವರಿಕೆಯು ಹೀಗೆ ಆಡಳಿತ ಸಾಗಬೇಕೆಂಬುದನ್ನು ಸೂಚಿಸುತ್ತದೆ. ಆದರೆ ಈ ಸಂಧಿಕಾಲದಲ್ಲಿ ಅವರು ಸರ್ ಸ್ಟೀವರ್ಟ್ ಮಿಟ್‌ಫೋರ್ಡ್ ಫ್ರೇಜರ್ ಅವರನ್ನು ಗುರು ಮತ್ತು ಮಾರ್ಗದರ್ಶಕರಾಗಿ ತಮ್ಮ ಜೀವನದಲ್ಲಿ ಪಡೆದದ್ದು ಅವರ ಅದೃಷ್ಟ ಫ್ರೇಜರ್ ಅವರು ಶಾಹುರವರಿಗೆ ಹೆಜ್ಜೆ ಹೆಜ್ಜೆಗೂ ಬೆಂಬಲ ನೀಡಿದರು. ಅವರಿಗೆ ಪ್ರೋತ್ಸಾಹಿಸಿದರು. ಇಡೀ ಜೀವನದ ಉದ್ದಕ್ಕೂ ಅವರ ಜೊತೆಗಿದ್ದರು ಮತ್ತು ಅವರ ವ್ಯಕ್ತಿತ್ವವನ್ನು ರೂಪಿಸಿದರು.

ಫ್ರೇಜರ್ ಅವರು ಬ್ರಿಟಿಷ್ ಇಂಡಿಯಾ ಸೇವೆಯಲ್ಲಿ ಐ.ಸಿ.ಎಸ್. ಅಧಿಕಾರಿಯಾಗಿದ್ದರು. ಅವರು ನಾಸಿಕದಲ್ಲಿ ಸಹಾಯಕ ಕಲೆಕ್ಟರ್ ಆಗಿ ಕೆಲಸ ಮಾಡಿದರು ಮತ್ತು ದಾಂಗ್ ಮತ್ತು ಸುರಗಣದಲ್ಲಿ ೪ ವರ್ಷಗಳವರೆಗೆ ಪೊಲಿಟಿಕಲ್ ಏಜೆಂಟರಾಗಿದ್ದರು. ೧೮೮೯ರಲ್ಲಿ ಭಾರತದ ಸರಕಾರವು ಫ್ರೇಜರ್ ಅವರನ್ನು ಶಾಹು ಮಹಾರಾಜರಿಗೆ ಮತ್ತು ತಮ್ಮ ಸಹೋದರ ಬಾಪು ಸಾಹೇಬರಿಗೆ, ಕಾಗಲ್‌ನ ಮುಖ್ಯಸ್ಥರಿಗೆ ಮತ್ತು ಭಾವನಗರದ (ಭಾವು ಸಿಂಗ್‌ಜಿ) ಕನ್‌ವರ್ ಸಾಹೇಬರಿಗೆ ತಿಂಗಳಿಗೆ ೧,೦೦೦ ರೂ.ಗಳ ವೇತನದಲ್ಲಿ ಟ್ಯೂಟರ್ ಮತ್ತು ಪೋಷಕರಾಗಿದ್ದರು. ಫ್ರೇಜರ್ ಅವರು ಧಾರವಾಡದಲ್ಲಿ ನೆಲೆಸಬೇಕು ಮತ್ತು ಮಹಾರಾಜರಿಗೆ ಶಿಕ್ಷಣವನ್ನು ವ್ಯವಸ್ಥೆಗೊಳಿಸಬೇಕೆಂದು ಸರಕಾರಿ ಆಜ್ಞೆ ಹೇಳಿತ್ತು.

೧. ಫ್ರೇಜರ್ ಅವರು ಕೊಲ್ಹಾಪುರದಲ್ಲಿ ಮೇ ೨೨, ೧೮೮೯ರಲ್ಲಿ ಕೆಲಸಕ್ಕೆ ಸೇರಿಕೊಂಡರು. ಮಹಾರಾಜರ ಶಿಕ್ಷಣ ಧಾರವಾಡದಲ್ಲಿ ಜೂನ್ ೧೧ರಂದು ಪ್ರಾರಂಭವಾಯಿತು. ಹೀಗೆ ಶಾಹು ಮತ್ತು ಫ್ರೇಜರ್ ನಡುವೆ ಗುರು–ಶಿಷ್ಯ ಸಂಬಂಧ ಮೇ ೧೮೮೯ರಲ್ಲಿ ಪ್ರಾರಂಭವಾಯಿತು. ಆ ಸಂಬಂಧ ಮೇ ೬, ೧೯೨೨ ರವರೆಗೆ ಮುಂದುವರೆದಿತ್ತು. ಅಂದು ಶಾಹುರವರು ದಿವಂಗತರಾದರು. ಫ್ರೇಜರ್ ಅವರು ಡಿಸೆಂಬರ್ ೩೧, ೧೯೧೯ರಲ್ಲಿ ಸರಕಾರಿ ಸೇವೆಯಿಂದ ನಿವೃತ್ತರಾದರು. ಆದರೆ ಶಾಹುರವರೊಂದಿಗಿನ ಬಲಿಷ್ಠ ಬಾಂಧವ್ಯದ ಸ್ನೇಹ ನಿವೃತ್ತರಾದ ಮೇಲೂ ಮುಂದುವರಿಯಿತು.

ಮೂವತ್ತುಮೂರು ವರ್ಷಗಳು ಬಾಳಿದ ಶಾಹು ಫ್ರೇಜರರ ಸಂಬಂಧಗಳು ಹಲವು ವಿಧದಲ್ಲಿ ಮುಖ್ಯವಾದವು. ಮೇ ೧೮೮೯ ರಿಂದ ೧೮೯೪ ರವರೆಗೆ ಫ್ರೇಜರರು ಶಾಹುರವರಿಗೆ ಗುರು ಮತ್ತು ಮಾರ್ಗದರ್ಶಕರಾಗಿದ್ದರು. ಅವರು ಧಾರವಾಡ ಮತ್ತು ಬೆಳಗಾಮಿನಲ್ಲಿ ಅಕ್ಟೋಬರ್ ೧೮೯೫ರಿಂದ ಮಾರ್ಚ್ ೧೮೯೬ರವರೆಗೆ ಸಹಾಯಕ ನ್ಯಾಯಾಧೀಶರಾಗಿದ್ದರು. ೧೮೯೬ ರಿಂದ ಮಾರ್ಚ್ ೧೯೦೨ರವರೆಗೆ

ಮೈಸೂರು ಮಹಾರಾಜರಿಗೆ ಗುರು ಮತ್ತು ಜೊತೆಗಾರರಾಗಿದ್ದರು. ೧೯೦೪ರಲ್ಲಿ ಸ್ವಲ್ಪಕಾಲದವರೆಗೆ ಗ್ವಾಲಿಯರ್‌ನಲ್ಲಿ ಪೊಲಿಟಿಕಲ್ ಏಜೆಂಟರಾಗಿದ್ದರು. ೧೯೦೪ರಿಂದ ೧೯೦೬ರವರೆಗೆ ಕಲಕತ್ತ ಮತ್ತು ಶಿಮ್ಲಾದಲ್ಲಿ ಅಧಿಕೃತ ಡೆಪ್ಯುಟಿ ಸೆಕ್ರೆಟರಿಯಾಗಿ ಕಾರ್ಯ ನಿರ್ವಹಿಸಿದ್ದರು. ಆಮೇಲೆ ಮೈಸೂರಿನಲ್ಲಿ ಪೊಲಿಟಿಕಲ್ ಏಜೆಂಟರಾಗಿ ಮತ್ತು ಹೈದ್ರಾಬಾದಿನಲ್ಲಿ ರೆಸಿಡೆಂಟರಾಗಿದ್ದರು. ಫ್ರೆಜರ್ ಅವರು ಸೇವೆಯಿಂದ ಡಿಸೆಂಬರ್ ೧೯೧೯ರಲ್ಲಿ ನಿವೃತ್ತರಾದರು ಮತ್ತು ಮೇ ೧೯೨೦ರಲ್ಲಿ ಇಂಗ್ಲೆಂಡಿಗೆ ವಾಪಸ್ಸಾದರು.

**ಶಾಹು – ಫ್ರೆಜರರ ಪತ್ರವ್ಯವಹಾರ**

ಮೂವತ್ತುಮೂರು ವರ್ಷಗಳಲ್ಲಿ ಮೊದಲ ನಾಲ್ಕು ವರ್ಷಗಳನ್ನು ಧಾರವಾಡದಲ್ಲಿ ಆಶ್ರಮದ ರೀತಿಯ ಶಿಕ್ಷಣದಲ್ಲಿ ಕಾಲ ಕಳೆದರು. ತಮ್ಮ ಸ್ವಲ್ಪ ಕಾಲದಲ್ಲಿ ಗುರುಗಳಾದ ನಂತರ ಫ್ರೆಜರರನ್ನು ಬೇರೆ ಸಂಸ್ಥಾನಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿ ಐ.ಸಿ.ಎಸ್. ಅಧಿಕಾರಿಯಾಗಿ ನೇಮಕಮಾಡಲಾಗುತ್ತದೆ. ಆದರೆ ಶಾಹುರೊಡನೆ ಅವರ ಪತ್ರವ್ಯವಹಾರವು ನಿಲ್ಲದೆ ನಿರಂತರವಾಗಿ ಮುಂದುವರಿದಿತ್ತು. ಅವರು ತಮ್ಮ ರಜಾಕಾಲದಲ್ಲಿ ಇಂಗ್ಲೆಂಡಿನಲ್ಲಿ ಪತ್ರಗಳನ್ನು ಬರೆಯುತ್ತಿದ್ದರು. ಶಾಹುರವರು ಆಡಳಿತದಲ್ಲಿ ಎದುರಿಸಬೇಕಾದ ಕಷ್ಟಗಳನ್ನು ಮತ್ತು ರೆಸಿಡೆಂಟ್ ಮತ್ತು ಪೊಲಿಟಿಕಲ್ ಏಜೆಂಟರೊಡನೆ ಇದ್ದ ಭಿನ್ನಾಭಿಪ್ರಾಯಗಳನ್ನು ಮತ್ತು ಅದರಿಂದುಂಟಾದ ತಪ್ಪು ತಿಳುವಳಿಕೆಗಳನ್ನು ವಿವರಿಸುತ್ತ ಪತ್ರದಲ್ಲಿ ತಿಳಿಸುತ್ತಿದ್ದರು ಮತ್ತು ಅವರ ಸಲಹೆಗಳನ್ನು ಕೋರುತ್ತಿದ್ದರು. ಸುಮಾರು ಮೂವತ್ತು ವರ್ಷಗಳಲ್ಲಿ ಗುರು–ಶಿಷ್ಯರ ನಡುವೆ ನಡೆದ ಪತ್ರವ್ಯವಹಾರದ ನಿಖರ ಸಂಖ್ಯೆಯನ್ನು ತಿಳಿಸುವುದಕ್ಕೆ ಸಾಧ್ಯವಾಗುತ್ತಿಲ್ಲ. ಕೆಲವು ಪತ್ರಗಳಿಗೆ ಕಳುಹಿಸಿದ ಉತ್ತರಗಳಲ್ಲಿ ಉಲ್ಲೇಖಿಸಿದ ಪತ್ರಗಳು ಲಭ್ಯವಾಗುತ್ತಿಲ್ಲ. ಫ್ರೆಜರರು ಶಾಹುರವರಿಗೆ ಬರೆದ ಬಹುಮಟ್ಟಿಗೆ ಎಲ್ಲಾ ಪತ್ರಗಳು ಲಭ್ಯವಾಗುತ್ತವೆ. ಅವುಗಳಲ್ಲಿ ಕೆಲವು ಪತ್ರಗಳು ಗೌಪ್ಯಪತ್ರಗಳಾಗಿವೆ. ಆ ಕಾರಣಕ್ಕಾಗಿಯೇ ಅವುಗಳನ್ನು ನಾಶಮಾಡಲಾಗಿದೆ.

ಪತ್ರಗಳ ವಿಷಯದ ಮೇಲೆ ಪತ್ರಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು.

೧. ಶಾಹುರವರು ತಮ್ಮ ಗುರುಗಳ ಸಲಹೆಯನ್ನು ಕೇಳುತ್ತಾರೆ. ಮತ್ತು ಫ್ರೆಜರರು ಯಾವುದೇ ಅನುಮಾನವಿಲ್ಲದೆ ಉತ್ತರಿಸುತ್ತಾರೆ.

೨. ಬೇರೆ ಮಹಾರಾಜರು ಪ್ರಾರಂಭಿಸಿದ ಕೆಲವು ಒಳ್ಳೆಯ ಸುಧಾರಣೆಗಳನ್ನು ಶಾಹುರವರ ಗಮನಕ್ಕೆ ಫ್ರೆಜರ್ ಅವರು ತರುತ್ತಾರೆ.

೩. ಕೆಲವು ಪತ್ರಗಳು ವಿಚಾರಣೆಗಳು ಮತ್ತು ಎರಡು ಕುಟುಂಬಗಳ ನಡುವಣ ಪ್ರತಿಕ್ರಿಯೆಗಳು ಮತ್ತು ಅವರು ಪರಸ್ಪರ ವಿನಿಮಯ ಮಾಡಿಕೊಂಡು ಕಾಣಿಕೆಗಳ ಬಗ್ಗೆ ಬರೆದ ಪತ್ರಗಳು. ಅದೇ ವರ್ಗದಲ್ಲಿ ಬೇಟೆಯ ಟ್ರಿಪ್ಪಿನ (ಪ್ರವಾಸಗಳ) ಪತ್ರಗಳನ್ನು ಸೇರಿಸಬಹುದು. ಶಾಹು ಮತ್ತು ಫ್ರೆಜರರು ಇಬ್ಬರು ಒಳ್ಳೆಯ ಬೇಟೆಗಾರರು. ಅವರ ಪತ್ರಗಳು ಆನೆ, ಹುಲಿ, ಚಿರತೆಗಳು, ಕಾಡುಹಂದಿಗಳು ಮತ್ತು ಪಕ್ಷಿಗಳನ್ನು ಬೇಟೆಯಾಡುವ ಕುತೂಹಲಕರವಾದ ವಿವರಗಳನ್ನು ಒಳಗೊಂಡಿವೆ. ಅವರು ಬೇಟೆಯಾಡುವಾಗ ಆಗುವ ಗಾಯಗಳು ಮತ್ತು ದುರ್ಘಟನೆಗಳನ್ನು ಉಲ್ಲೇಖಿಸಿದ್ದಾರೆ. ಒಮ್ಮೊಮ್ಮೆ ದುರ್ಘಟನೆಗಳ ವಿವರಣೆಗಳಲ್ಲಿ ಅವರ ಪ್ರಾಣವು ಅಪಾಯಕ್ಕೊಳಗಾಗಿದ್ದ ವಿವರಣೆಗಳು ಇವೆ.

ಶಾಹು-ಫ್ರೆಜರರ ವಿಶೇಷ ರೀತಿಯ ಸಂಬಂಧದ ಬಗ್ಗೆ ಹೆಚ್ಚು ಅಧ್ಯಯನಗಳು ನಡೆದಿಲ್ಲ. ಅವರ ಪತ್ರವ್ಯವಹಾರವು ಅವರಿಬ್ಬರನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಮುಖವಾದದ್ದು. ಏಕೆಂದರೆ ಇಬ್ಬರು ಸ್ನೇಹಿತರು ಬರೆದ ಪ್ರೀತಿಯ ಪತ್ರಗಳು ಶುದ್ಧ ಕನ್ನಡಿಗಳಿದ್ದಂತೆ. ಅಲ್ಲಿ ಯಾವುದನ್ನು ಬಚ್ಚಿಡುವಂತಿಲ್ಲ. ಇವುಗಳು ಇಬ್ಬರ ಮನುಷ್ಯರ ನಡುವೆಯಿರುವ ಕೆಲವು ತಪ್ಪುಗ್ರಹಿಕೆಗಳನ್ನು ಸ್ಪಷ್ಟಗೊಳಿಸಲು ಸಹಾಯಮಾಡುತ್ತವೆ. ಘಟನೆಗಳಾದ ವಿಷಹಾಕಿದ ಪ್ರಕರಣ, ವೇದೋಕ್ತ ಚಳುವಳಿ, ಬ್ರಿಟಿಷರೊಡನೆ ಸಂಬಂಧಗಳು, ಬ್ರಾಹ್ಮಣೇತರರ ಪಕ್ಷ ಮತ್ತು ಸತ್ಯಶೋಧಕ ಸಮಾಜದ ಪುನರ್‌ಸ್ಥಾಪನೆಗಳನ್ನು ಈ ಪತ್ರವ್ಯವಹಾರಗಳ ಬೆಳಕಿನಲ್ಲಿ ಅಧ್ಯಯನಮಾಡಿದರೆ ಅವುಗಳು ಮತ್ತಷ್ಟು ನಿಚ್ಚಳವಾಗುತ್ತವೆ. ಕೊಲ್ಹಾಪುರದ ರಾಜ್ಯಪತ್ರದಲ್ಲಿ ಪ್ರಸ್ತಾಪಿಸಿರುವುದಕ್ಕೆ ಫ್ರೆಜರ್‌ರು ಒಬ್ಬ ವಸಾಹತುಶಾಹಿಯಾಗಿ ಇಲ್ಲಿ ಸಲ್ಲುವರೆ ಎಂಬುದಕ್ಕೆ ಉತ್ತರವಾಗಿದೆ.

## ಇಂಡಿಯಾದ ಆಚಾರ್ಯರ ಇಂಗ್ಲಿಷ್ ಅವತಾರ

ಬ್ರಿಟಿಷ್‌ರಾಜ್ ಕಾಲದಲ್ಲಿ ಬಂದ ಬ್ರಿಟಿಷ್ ಅಧಿಕಾರಿಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು:

೧. ಕೆಲವರು ಜಯಶೀಲರಾಗಿ ಪರಾಜಿತ ಜನರನ್ನು ಭಾರತದಲ್ಲಿ ಆಳುವಂತೆ ವರ್ತಿಸಿದರು. ಅವರಿಗೆ ಶೋಷಣೆಮಾಡುವುದಕ್ಕೆ ಭಾರತವು ಸಂಪದ್ಭರಿತ ಚಿನ್ನದ ಗಣಿಯಾಗಿದೆ. ಈ ವಿಧಾನದಲ್ಲಿ ಅವರಿಗೆ ಯಾವುದೇ ರೀತಿಯ ತಪ್ಪುಕಂಡುಬರುವುದಿಲ್ಲ. ರಾಬರ್ಟ್ ಕ್ಲೈವ್ ಮತ್ತು ವಾರೆನ್ ಹೇಸ್ಟಿಂಗ್ಸ್‌ರು ಈ ವರ್ಗವನ್ನು ಪ್ರತಿನಿಧಿಸುತ್ತಾರೆ.

೨. ಈ ವರ್ಗದಲ್ಲಿ ಅಧಿಕಾರಿವರ್ಗ ಭಾರತೀಯರು ಶ್ವೇತವರ್ಣೀಯರ ಭಾರವೆಂದು ನೋಡಿದರು. ಭಾರತೀಯರನ್ನು ಉಳಿಸಲು ಬಂದ ದೇವರ ಸೇವಕರಾಗಿ ಬಂದಿದ್ದಾರೆ. ಇವರಲ್ಲಿ ಮಿಷನರಿಗಳು ಮತ್ತು ಅಧಿಕಾರಿಗಳಾದ ಮ್ಯಾಕಾಲೆ, ಬೆಂಟಿಕ್ ಮತ್ತು ಫರ್ಗ್ಯೂಸನ್ ಅವರೆಲ್ಲರೂ ಶಿಕ್ಷಣವನ್ನು ಹರಡಲು ಮತ್ತು ಮೂಢನಂಬಿಕೆಗಳನ್ನು ಅಳಿಸಿಹಾಕಲು ಪ್ರಯತ್ನಿಸಿದರು.

೩. ಅಧಿಕಾರಿಗಳ ವರ್ಗದಲ್ಲಿ ಅವರ ಸಂಖ್ಯೆ ಕಡಿಮೆಯಾದರೂ ಸೋತವರ ಸಂಸ್ಕೃತಿ ಮತ್ತು ಜೀವನಶೈಲಿಯು ಅವರನ್ನು ಗೆದ್ದಿತು. ಅವರು ಸಂಪೂರ್ಣವಾಗಿ ಇಂಡಿಯಾ ಜೀವನದೊಂದಿಗೆ ಬೆರತುಬಿಟ್ಟರು. ಅವರ ಆಸಕ್ತಿಯು ಭಾರತದಲ್ಲಿ ಜನಾಂಗೀಯ ಪಕ್ಷಪಾತಗಳ (ಪೂರ್ವಗ್ರಹಗಳನ್ನು) ಗಡಿಗಳನ್ನು ದಾಟುವುದಾಗಿತ್ತು.

ಸರ್ ಸ್ಟೀವರ್ಟ್ ಮಿಟ್‌ಫೋರ್ಡ್ ಫ್ರೆಜರ್ ಅವರು ಮೂರನೇ ವರ್ಗದಲ್ಲಿ ಬರುತ್ತಾರೆ. ಒಬ್ಬ ಸಜ್ಜನನಾಗಿ ಅವರು ಸರಳ ಮತ್ತು ಚಿಂತನ ಪುರುಷರಾಗಿದ್ದರು. ಅವರಿಗೆ ಬ್ರಿಟಿಷ್ ಅಧಿಕಾರಿಯ ಗತ್ತು-ಗಮ್ಮತ್ತು ಇರಲಿಲ್ಲ. ಅವರು ಹೊಗಳುಭಟ್ಟರಾಗಿರಲಿಲ್ಲ. ಅವರು ಶಾಹುರವರಿಗೆ ಕೇವಲ ಅಧ್ಯಾಪಕರಾಗಿರಲಿಲ್ಲ. ಅವರು ಅವರಿಗೆ ಪೋಷಕರೂ ಆಗಿದ್ದರು. ಫ್ರೆಜರ್-ಶಾಹುರವರ ಸಂಬಂಧಗಳು ಆದರ್ಶ ಗುರು-ಶಿಷ್ಯರ ಬಂಧನಕ್ಕೆ ನಿದರ್ಶನವಾಗಿದೆ. ಪ್ರಸ್ತುತ ಶೈಕ್ಷಣಿಕ ಪದ್ಧತಿಯಲ್ಲಿ ಒಬ್ಬ ಅಧ್ಯಾಪಕ ಮತ್ತು ವಿದ್ಯಾರ್ಥಿ ನಡುವಣ ಅಂತಹ ನಿಕಟತೆಯು ಅಪರೂಪವಾಗಿದೆ. ನಿಜವಾಗಿ ಹೇಳುವುದಾದರೆ, ಫ್ರೆಜರರು ಭಾರತದ ಆಚಾರ್ಯರಾದ ವಸಿಷ್ಠ ಮತ್ತು ಸಂದೀಪನಿಯವರ ಮೂಸೆಯಲ್ಲಿ ಮೂಡಿಬಂದವರು.

ಫ್ರೆಜರ್ ಅವರು ಮಹಾರಾಜರಿಗೆ ಧಾರವಾಡದಲ್ಲಿ ಶಿಕ್ಷಣವನ್ನು ಕ್ರಮಬದ್ಧವಾಗಿ ವ್ಯವಸ್ಥೆಗೊಳಿಸಿದ್ದರು.

ದಿನ-ದಿನದ ಕಾರ್ಯಕ್ರಮಗಳನ್ನು ಕರಾರುವಾಕ್ಕಾಗಿ ಜಾರಿಗೊಳಿಸಿದರು. ಕಾರ್ಯಕ್ರಮವು ಜೂನ್ ೧೧, ೧೮೯೯ರಲ್ಲಿ ಪ್ರಾರಂಭವಾಯಿತು ಮತ್ತು ಮಹಾರಾಜರ ಮೊದಲ ಪ್ರಗತಿಯ ವರದಿಯನ್ನು ಕೊಲ್ಹಾಪುರದ ದರ್ಬಾರಿಗೆ ಏಪ್ರಿಲ್ ೧೧, ೧೮೯೦ರಲ್ಲಿ ಕಳುಹಿಸಿಕೊಡಲಾಯಿತು. ಫ್ರೆಜರರು ಬರೆಯುತ್ತಾರೆ: ಅವರು (ಶಾಹು) ಜಾಣರಲ್ಲ, ಆದರೆ ಅವರಿಗೆ ಸಮಾನ್ಯಜ್ಞಾನ ಚೆನ್ನಾಗಿದೆ ಮತ್ತು ಸಾಕಷ್ಟು ನೆನಪಿನ ಶಕ್ತಿಯಿದೆ. ಜೊತೆಗೆ ಅವರಿಗೆ ಕಲಿಯುವ ನಿಜವಾದ ಆಸಕ್ತಿಯಿದೆ ಮತ್ತು ತನ್ನ ಪಾಠ ಪ್ರವಚನಗಳಲ್ಲಿ ಶ್ರಮ ಮತ್ತು ಆಸಕ್ತಿ ವಹಿಸುತ್ತಾರೆ. ಅವರ ಇಂಗ್ಲಿಷ್ ಸಂಭಾಷಣೆ ಸ್ಪಷ್ಟವಾಗಿ ನಿಖರತೆ ಮತ್ತು ಸರಳತೆಯಲ್ಲಿ ಸುಧಾರಿಸಿದೆ... ಅವರು ಸಂಪೂರ್ಣವಾಗಿ ಸ್ವಪ್ರತಿಷ್ಠೆಯಿಂದ ಮುಕ್ತರಾಗಿದ್ದಾರೆ ಮತ್ತು ನಾನು ಅವರ ಪಾತ್ರದಲ್ಲಿ ನಿಸ್ವಾರ್ಥತೆಯ ಮತ್ತು ಚಿಂತನಾಪರತೆಯ ಕೆಲವು ನಿದರ್ಶನಗಳನ್ನು ನೋಡಿದ್ದೇನೆ".[2]

ಶಾಹುರವರು ಶಿಕ್ಷಣದ ಮಹತ್ವವನ್ನು ಅರಿತುಕೊಂಡರು. ಅವರು ಪುಸ್ತಕಗಳಿಗಿಂತ ಹೆಚ್ಚು ಅವಲೋಕನದಿಂದ ಹೆಚ್ಚು ಕಲಿತರು. ಅವರು ತರಗತಿಗಳಿಗೆ ಚಕ್ಕರ್ ಹೊಡೆಯಲಿಲ್ಲ. ವಿಶೇಷವಾಗಿ ಸಫಲ ಆಡಳಿತದ ಬಗ್ಗೆ ನೀಡಿದ ಫ್ರೆಜರರ ಉಪನ್ಯಾಸಗಳಿಗೆ ಅವರ ಇಂಗ್ಲೀಷು ಚೆನ್ನಾಗಿತ್ತು ಮತ್ತು ಸಂಭಾಷಣೆಯು ನಯವಾಗಿತ್ತು. ಅವರ ಓದುಗಾರಿಕೆಯು ಹೆಚ್ಚು ವಿಸ್ತಾರವಾಗಿರಲಿಲ್ಲ. ಆದರೆ ಅವರು ಒಳ್ಳೆಯ ಕೇಳುಗರಾಗಿದ್ದರು. ಅವರ ಉಪನ್ಯಾಸಗಳು ಅದನ್ನು ಸಾಧಿಸಿತೋರಿಸುತ್ತವೆ.

### ಫ್ರೆಜರರೊಂದಿಗಿನ ಮೂರು ಪ್ರವಾಸಗಳು

ಫ್ರೆಜರರ ನೇತೃತ್ವದಲ್ಲಿ ಶಾಹುರವರು ಇತರೆ ಮಹಾರಾಜರೊಡನೆ ಭಾರತದಲ್ಲಿ ಮೂರು ಅಧ್ಯಯನ ಪ್ರವಾಸಗಳಿಗೆ ಹೋಗಿದ್ದರು. ಎರಡು ಪ್ರವಾಸಗಳು ಉತ್ತರಭಾರತಕ್ಕೆ ಮತ್ತು ಒಂದು ಪ್ರವಾಸ ದಕ್ಷಿಣಭಾರತಕ್ಕೆ. ಈ ಪ್ರವಾಸಗಳು ಮಹಾರಾಜರ ಶಿಕ್ಷಣದ ಒಂದು ಭಾಗವಾಗಿತ್ತು. ಫ್ರೆಜರ್ ಅವರು ತಮ್ಮ ಕಿರುಪುಸ್ತಕವಾದ ಭಾರತದ ಮೂರು ಪ್ರವಾಸಗಳು ಮತ್ತು ಸಿಲೋನ್ ವಿಸ್ತೃತವಾಗಿ ವಿವರಿಸಿದ್ದಾರೆ. ಶಾಹು ಮತ್ತು ಮಹಾರಾಜರು ನಗರಗಳನ್ನು ಮತ್ತು ಐತಿಹಾಸಿಕ ಸ್ಥಳಗಳನ್ನು ನೋಡಬೇಕಿತ್ತು ಮತ್ತು ಪ್ರವಾಸದ ಕಾಲದಲ್ಲಿ ಅಧಿಕಾರಿಗಳನ್ನು ಮತ್ತು ಮಹಾರಾಜರನ್ನು ಭೇಟಿಮಾಡಬೇಕಾಗಿತ್ತು. ಪ್ರವಾಸಕಾಲದಲ್ಲಿ ಘಟನೆಗಳ ಬಗ್ಗೆ ಶಾಹುರವರ ಪ್ರತಿಕ್ರಿಯೆಗಳು ಮತ್ತು ಅವುಗಳ ಬಗ್ಗೆ ತಾವು ಫ್ರೆಜರೊಡನೆ ನಡೆಸಿದ ಸಂವಾದವು ಶಾಹುರವರ ವ್ಯಕ್ತಿತ್ವದ ರೂಪಣೆಯ ಬಗ್ಗೆ ಸಹಾಯಕವಾಗಿತ್ತು. ಮೊದಲ ೪,೮೯೯ ಮೈಲಿಗಳ ಪ್ರವಾಸವು ನಾಸಿಕ, ಜಬಲಪುರ, ಅಲಹಾಬಾದ್, ಕಲಕತ್ತ, ದಾರ್ಜಿಂಗ್, ಲಕ್ನೋ, ಆಗ್ರ, ಫತೇಹ್‌ಪುರ್‌ಸಿಕ್ರಿ, ರಾಜಕೋಟೆ ಮತ್ತು ಅಜ್ಮೇರ್‌ಗಳನ್ನು ಭೇಟಿ ನೀಡಬೇಕಾಗಿತ್ತು. ನಾಸಿಕ್‌ನಲ್ಲಿ ಬ್ರಾಹ್ಮಣ ಪೂಜಾರಿಗಳು ಶಾಹುರವರಿಗೆ ಕಿರುಕುಳ ನೀಡಿದ್ದು, ಕಾಶಿಯಲ್ಲಿ ಕೊಳಕು ಕೆರೆಯಲ್ಲಿ ಸ್ನಾನಮಾಡಲು ಶಾಹು ನಿರಾಕರಿಸಿದ್ದು, ಡಾರ್ಜಿಲಿಂಗ್‌ನಲ್ಲಿ ಟೀ ತೋಟಗಳ ಬಗ್ಗೆ ಶಾಹುರವರ ಕುತೂಹಲ ಮೊದಲಾದವುಗಳ ಬಗ್ಗೆ ಕಿರುಪುಸ್ತಕದಲ್ಲಿ ಫ್ರೆಜರವರು ಉಲ್ಲೇಖಿಸಿದ್ದಾರೆ. ತಾಜ್‌ಮಹಲ್ ನೋಡಿದ ನಂತರ ಶಾಹುರವರು ಫತೇಹ್‌ಪುರ್ ಸಿಕ್ರಿಗೆ ಭೇಟಿ ನೀಡಿದರು. ಅಲ್ಲಿ ಅಕ್ಬರನ ಧಾರ್ಮಿಕ ಸಹಿಷ್ಣುತೆಯನ್ನು ನೋಡಿ ಶಾಹುರವರು ಅದರ ಬಗ್ಗೆ ಚಿಂತನಾಮಗ್ನರಾದರು. ಮಸೀದಿಯ ಸಮೀಪವೇ ಮಹಾರಾಣಿ ಜೋಧಾಬಾಯಿ ಅವರಿಗಾಗಿ ಹಿಂದು ದೇವಸ್ಥಾನ ಕಟ್ಟಿಸಿದ್ದು, ಪೋರ್ಚುಗೀಸ್ ಮಹಾರಾಣಿಯ ಅರಮನೆ ಮತ್ತು ಒಂದು ಬಿಳಿ ಜೈನರ ದೇವಸ್ಥಾನಗಳು ಶಾಹುರವರಿಗೆ ಅಕ್ಬರನ ಧರ್ಮ ನಿರಪೇಕ್ಷತೆಯ ನೋಟದ ಒಂದು ವಿಚಾರ ತಿಳಿಯುತ್ತದೆ. ಔರಂಗಜೇಬನ ಧಾರ್ಮಿಕ ಮತಾಂಧತೆಯ ಸಿಟ್ಟಿನ ಪರಿಣಾಮದಿಂದ ಹಿಂದು ದೇವಸ್ಥಾನಗಳ ಅವಶೇಷಗಳನ್ನು ಅವರು ನೋಡಿದರು. ಗ್ರಂಥಗಳ

ಒಂದು ಡಜನ್ನು ಉಪನ್ಯಾಸಗಳಿಂದ ನೀಡಲಾಗದ ಪರಿಣಾಮವು ಶಾಹುರವರ ಮೇಲೆ ಈ ಸ್ಥಳಗಳ ಇತಿಹಾಸ ಮತ್ತು ಭೂಗೋಳಶಾಸ್ತ್ರಗಳು ಬೀರಿದವು. ಕೊಲ್ಹಾಪುರವು ಧರ್ಮನಿರಪೇಕ್ಷ ಪಟ್ಟಣ ಎಂಬ ಮಾನ್ಯತೆಯ ಮೂಲ ಇಲ್ಲಿ ಅಡಗಿದೆ. ಅವರು ಸ್ಥಳಗಳನ್ನು ವೀಕ್ಷಿಸಲು ಹೊರಟಂತೆ ಉದಾರಿ ಫ್ರೇಜರರು ಅವುಗಳ ಶೈಕ್ಷಣಿಕ ಪ್ರಾಮುಖ್ಯತೆಯನ್ನು ತಮ್ಮ ವ್ಯಾಖ್ಯಾನಗಳ ಮತ್ತು ವಿವರಣೆಗಳ ಮೂಲಕ ತರುತ್ತಿದ್ದರು.

ಅವರು ತಮ್ಮ ವರದಿಯಲ್ಲಿ ಬರೆದಿದ್ದಾರೆ:

"ವೀಕ್ಷಿಸಿದ ಸ್ಥಳಗಳಲ್ಲಿ ಪ್ರತಿಯೊಂದು ಸ್ಥಳವು ದೃಶ್ಯದ ಚಿತ್ರಗಳನ್ನು, ಕಟ್ಟಡಗಳನ್ನು ಮನಸ್ಸಿನಲ್ಲಿ ತುಂಬಿಸಿಕೊಳ್ಳಲು ಸಹಕಾರಿಯಾಗಿತ್ತು ಮತ್ತು ಇತಿಹಾಸವನ್ನು ಒಂದು ರೀತಿಯಲ್ಲಿ ಓದುವುದರಿಂದ ಇದನ್ನು ಎಂದಿಗೂ ಮಾಡಲು ಸಾಧ್ಯವಿಲ್ಲ ಮತ್ತು ಹಲವು ಹೊಸವಿಚಾರಗಳ ಮೊದಲ ಫಲವನ್ನು ಅವರ ಸಂವಾದದ ಲವಲವಿಕೆಯಲ್ಲಿ ಈಗಾಗಲೇ ಗಮನಿಸಿಯಾಗಿದೆ".[3]

ಮಹಾರಾಜರ ಎರಡನೇ ಪ್ರವಾಸವು ನವೆಂಬರ್–ಡಿಸೆಂಬರ್‌ನಲ್ಲಿ ದಕ್ಷಿಣಭಾರತ ಮತ್ತು ಸಿಲೋನನ್ನು ಒಳಗೊಂಡಿದೆ. ಈ ಪ್ರವಾಸದಲ್ಲಿ ಬಿಜಾಪುರ, ಹೈದರಾಬಾದ್, ಮದ್ರಾಸು, ಪಾಂಡಿಚೆರಿ, ತಾಂಜಾವೂರು, ಟ್ಯುಟಿಕೋರಿನ್, ಕೊಲಂಬೊ, ಕ್ಯಾಂಡಿ ಮತ್ತು ಬೆಂಗಳೂರು ವಾಪಸ್ಸು ಬರುತ್ತಾ ಮೈಸೂರುಗಳು ಸೇರಿವೆ. ಬೇಟೆಯಾಡುವುದು ಮತ್ತು ಅಧಿಕಾರಿ ಮತ್ತು ಮಹಾರಾಜರೊಂದಿಗೆ ಭೇಟಿಗಳು ಪ್ರವಾಸದ ನಿಯಮಿತ ಭಾಗವಾಗಿದೆ. ಮಹಾರಾಜರು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ, ಸಭೆಗಳಲ್ಲಿ ಅನುಸರಿಸಬೇಕಾದ ಶಿಷ್ಟಾಚಾರಗಳನ್ನು ಕಲಿಯಬೇಕಾಗಿದೆ. ಅವರು ತಮ್ಮ ವಂಶಗಳ ಇತಿಹಾಸವನ್ನು ಸಹ ಚರ್ಚಿಸಿದರು.

ಮೂರನೇ ಪ್ರವಾಸವು ಉತ್ತರ ಪಶ್ಚಿಮ ಪ್ರದೇಶವನ್ನು ಒಳಗೊಂಡಿತ್ತು. ಅದು ಮೌಂಟ್‌ಅಬು, ಜೋಧಪುರ ಆಳ್‌ವಾರ್, ಭರತಪುರ, ಮಥುರಾ, ವೃಂದಾವನ, ಸಾರಂಗಪುರ, ಹರಿದ್ವಾರ, ಅಮೃತಸರ, ಪೇಶಾವರ, ಲಾಹೋರ್, ಮುಲ್ತಾನ್, ಸಕ್ಕರ್, ಹೈದ್ರಾಬಾದ್ ಮತ್ತು ಕರಾಚಿಗಳನ್ನು ಒಳಗೊಂಡಿತ್ತು. ಫ್ರೇಜರ್ ಅವರಿಗೆ ಭಾರತದ ಇತಿಹಾಸ ಮತ್ತು ಭೂಗೋಳದ ಬಗ್ಗೆ ಒಳ್ಳೆಯ ಗ್ರಹಿಕೆಯ ಹಿಡಿತವಿತ್ತು. ಭೇಟಿನೀಡಿದ ಸ್ಥಳದ ಬಗ್ಗೆ ಅವರ ವ್ಯಾಖ್ಯಾನ, ಅಲ್ಲಿ ಪ್ರಚಲಿತವಾಗಿರುವ ಸಂಪ್ರದಾಯಗಳು ಮತ್ತು ಪ್ರದೇಶದ ಇತಿಹಾಸ, ಇವುಗಳ ಬಗ್ಗೆ ಅವರಿಗೆ ಪರಿಪೂರ್ಣ ಒಳನೋಟಗಳಿದ್ದವು. ಶಾಹು ಮಹಾರಾಜರು ಅಳ್ವಾರ್‌ನಲ್ಲಿ ಕುದುರೆತಳಿಯ ಸಂವರ್ಧನೆಯನ್ನು, ಪಂಜಾಬಿನಲ್ಲಿನ ನೀರಾವರಿ ಕಾಲುವೆಗಳ ಜಾಲವನ್ನು ಮತ್ತು ಅಬುವಿನಲ್ಲಿ ಸುಂದರವಾದ ವಾಸ್ತುಶಿಲ್ಪದ ಕೆತ್ತನೆಯನ್ನು ನೋಡಿದರು. ಮಹಾರಾಜರು ತಮ್ಮ ಸಂಸ್ಥಾನಗಳ ಭವಿಷ್ಯ ರೂಪಿಸುವವರಾಗಿದ್ದರಿಂದ ಅವರನ್ನು ಸಮರ್ಥ ಮತ್ತು ಸಂವೇದನಾಶೀಲ ಜೀವಿಗಳನ್ನಾಗಿ ಬದಲಾಯಿಸುವುದಕ್ಕೆ ಫ್ರೇಜರರು ಪ್ರಾಮಾಣಿಕ ಪ್ರಯತ್ನಮಾಡಿದರು.

## ಆಡಳಿತ ನಡೆಸುವುದಕ್ಕೆ ಸನ್ನದ್ಧಗೊಳಿಸುವುದು

ಶಾಹುರವರ ಪಟ್ಟಾಭಿಷೇಕದ ನಂತರ ಏಪ್ರಿಲ್ ೧೩, ೧೮೯೪ರಲ್ಲಿ ಅವರ ಕೊನೆಯ ಪ್ರಗತಿಯ ವರದಿಯನ್ನು ಸಲ್ಲಿಸಲಾಯಿತು.[4] ಅದು ಫ್ರೇಜರರ ಜೊತೆಯಲ್ಲಿ ಕೈಗೊಂಡ ಸಂಸ್ಥಾನದ ಶಾಹುರವರ ಪ್ರವಾಸದ ವರದಿಯನ್ನು ಕುರಿತಿದೆ. ೪ ವರ್ಷಗಳಲ್ಲಿ ಹೊರಜಗತ್ತಿನಲ್ಲಿ ಗಳಿಸಿದ ಜ್ಞಾನವು ಈಗ ಒಂದು ಹೊಸ ಆಯಾಮವನ್ನು ಪಡೆದಿದೆ. ಆಡಳಿತದ ಬಗ್ಗೆ ಕಲಿತ ನಂತರ ತಾವು ಆಳುವ ಪ್ರದೇಶ ಮತ್ತು ಜನರು

ಮತ್ತು ಅವರ ವಾಸ್ತವಿಕ ಸ್ಥಿತಿಗತಿಗಳನ್ನು ಹತ್ತಿರದಿಂದ ಅವಲೋಕಿಸುವುದು ಅತ್ಯಗತ್ಯ. ಮುಂದಿನ ವಿದ್ಯಾಭ್ಯಾಸ ಇಂಗ್ಲೆಂಡಿನಲ್ಲಿ ಮಾಡುವುದಕ್ಕಿಂತ ಮಿಗಿಲಾಗಿ ಈ ಪ್ರವಾಸ ಅತ್ಯಂತ ಉಪಯುಕ್ತವಾದುದು. ಪ್ರವಾಸವು ಹತ್‌ಕಾನನಂಗಳೆ, ಇಚಲಕಾರಂಜಿ, ಶಿರೋಳ್, ಕುರುಂದವಾಡ, ನಿಪ್ಪಾಣಿ, ಗಢಿಂಗ್‌ಲಾಜ್, ಮಲಕಾಪುರ ಮತ್ತು ಅಂಬಾಗಳನ್ನು ಒಳಗೊಂಡ ಭೇಟಿಯ ಸ್ಥಳಗಳು. ಶಾಹುರವರು ನಗರ ಮತ್ತು ಗ್ರಾಮೀಣ, ಫಲವತ್ತಾದ ಪ್ರದೇಶ ಮತ್ತು ಗುಡ್ಡಗಾಡು ಪ್ರದೇಶ ಮತ್ತು ಆದಿವಾಸಿ ಪ್ರದೇಶಗಳು ಮತ್ತು ಜನರ ವಿವಿಧ ರೂಢಿ ಮತ್ತು ಸಂಪ್ರದಾಯಗಳನ್ನು ಪರಿಚಯಮಾಡಿಕೊಂಡು ಅರಿತುಕೊಳ್ಳುವುದು ಫ್ರೆಜರರ ಉದ್ದೇಶವಾಗಿತ್ತು. ಶಾಹು ಕಛೇರಿಗಳಿಗೆ, ಆಸ್ಪತ್ರೆಗಳಿಗೆ, ನ್ಯಾಯಾಲಯಗಳಿಗೆ ಮತ್ತು ಶಾಲೆಗಳಿಗೆ ಭೇಟಿ ನೀಡಿದರು ಮತ್ತು ಅವುಗಳ ಕಾರ್ಯನಿರ್ವಹಣೆಯನ್ನು ನೋಡಿದರು. ಶಾಹುರವರು ಸಂಸ್ಥಾನಗಳ ಧೋರಣೆಗಳ ಪ್ರಯೋಜನಗಳು ಬಡವರಿಗೆ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ಬದುಕುತ್ತಿರುವ ಆದಿವಾಸಿಗಳಿಗೆ ತಲುಪುವುದರ ಬಗ್ಗೆ ಅರಿವಾಯಿತು. ಹಲವು ದಶಕಗಳವರೆಗೆ ರಾಜನನ್ನು ಹೊಂದಿರದ ಜನರು ಶಾಹುರವರನ್ನು ಸಂತೋಷ ಮತ್ತು ಸಂಭ್ರಮಗಳೊಂದಿಗೆ ಸ್ವಾಗತಿಸಿದರು.

ವಿಶೇಷತಜ್ಞರು ಶಾಹುರವರಿಗೆ ಕಾನೂನು ಮತ್ತು ಆಡಳಿತ ಯಂತ್ರದ ಬಗ್ಗೆ ತರಬೇತಿ ನೀಡಬೇಕೆಂದು ಫ್ರೆಜರರು ಸಲಹೆ ನೀಡಿದರು. ಅವರು ಶಾಹುರವರು ಇತರೆ ಗ್ರಂಥಗಳನ್ನು ಅಧ್ಯಯನ ಮಾಡುವುದು ಅಗತ್ಯವೆಂದು ಪರಿಭಾವಿಸಿದರು. ಅವರು ಶಾಹುರವರು ಆದರ್ಶ ಆಡಳಿತಗಾರ(ರಾಜ)ನಾಗಬೇಕೆಂದು ಹಾರೈಸಿದರು. ಅಂತಿಮವಾಗಿ ಫ್ರೆಜರರು ವಿಸ್ತೃತ ಉಪನ್ಯಾಸಗಳನ್ನು ನೀಡಬೇಕು ಮತ್ತು ವಿಷಯಗಳನ್ನು ಸಂಪೂರ್ಣವಾಗಿ ತಿಳಿಸಬೇಕೆಂದು ನಿರ್ಧರಿಸಲಾಯಿತು. ಆದ್ದರಿಂದ ಫ್ರೆಜರರು ಕಾನೂನು, ನ್ಯಾಯಾಂಗ, ಭಾರತೀಯ ದಂಡಸಂಹಿತೆ ಮತ್ತು ಆಡಳಿತವನ್ನು ಕುರಿತು ಮೂರು ತಿಂಗಳಿನ ಕೋರ್ಸನ್ನು ಶಾಹುರವರಿಗೆ ನಡೆಸಲಾಯಿತು. ಈ ಅವಧಿಯಲ್ಲಿ ಶಾಹುರವರು ಅತ್ಯುಪಯುಕ್ತವಾದ ಪುಸ್ತಕ ಮಹಾತ್ಮ ಫುಲೆಯವರ ಸಮಕಾಲೀನ ಮಾಮ ಪರಮಾನಂದರ 'ಲೆಟರ್ಸ್ ಟು ಎ ಪ್ರಿನ್ಸ್' ಎಂಬುದನ್ನು ಓದಿದರು. ಪಟ್ಟಾಭಿಷೇಕದ ಸಮಾರಂಭದಲ್ಲಿ ಗೌರ್ನರ್ ಲಾರ್ಡ್ ಹ್ಯಾರಿಸರು ಶಾಹುರವರ ಗುರುಗಳಾಗಿದ್ದ ಸ್ಟೀವರ್ಟ್ ಮಿಟ್‌ಫೋರ್ಡ್ ಫ್ರೆಜರರು ಮಾಡಿದ ಕೆಲಸಕ್ಕೆ ಭರ್ಜರಿ ಗೌರವ-ಅಭಿನಂದನೆಗಳನ್ನು ಸಲ್ಲಿಸಿದರು. ಅವರು ಹೇಳಿದರು: "ಫ್ರೆಜರರನ್ನು ಕೇವಲ ಗುರುಗಳಾಗಿ ಹೊಂದಿರುವುದು ಮಾತ್ರವಲ್ಲದೆ ಅವರು ನಿಮಗೆ ಸ್ನೇಹಿತ ಮತ್ತು ಜೊತೆಗಾರರಾಗಿರುವುದು ನಿಮ್ಮ ಅದೃಷ್ಟ; ಅವರು ಉನ್ನತ ಆದರ್ಶವನ್ನು ಹೊಂದಿದ್ದಾರೆ... ಅವರು ತಮ್ಮ ಪ್ರಮುಖ ಹೊಣೆಗೆ ಪಟ್ಟುಬಿಡದ ಮತ್ತು ಪ್ರೀತಿಯ ಏಕಾಂತತೆಯನ್ನು ನೀಡಿದ್ದಾರೆ".[5]

## ಸಂಸ್ಕಾರದಂತೆ ಶಿಕ್ಷಣ

ಧಾರವಾಡದಲ್ಲಿ ಮೇ ೧೮೮೯ರಲ್ಲಿ ಪ್ರಾರಂಭಗೊಂಡ ಶಿಕ್ಷಣವು ಏಪ್ರಿಲ್ ೧೮೯೪ರವರೆಗೆ ಮುಂದುವರಿದಿದ್ದ ಫ್ರೆಜರರಲ್ಲಿನ ಶಾಹುರವರ ಶಿಕ್ಷಣವು ಮುಕ್ತಾಯಗೊಂಡಿತು. ಫ್ರೆಜರರು ನೀಡಿದ ಶಿಕ್ಷಣ, ಅವರ ವ್ಯಕ್ತಿತ್ವ ಮತ್ತು ಜೀವನದಲ್ಲಿ ಅವರ ದೃಷ್ಟಿಕೋನಗಳು ಶಾಹುರವರ ಮನೋಪಟಲದ ಮೇಲೆ ಶಾಶ್ವತವಾದ ಪ್ರಭಾವಮುದ್ರಿಕೆಯನ್ನು ಒತ್ತಿಬಿಟ್ಟಿತು. ಶಾಹುರವರು ಸರಳಜೀವನದ ಬಗ್ಗೆ ಹೊಂದಿದ್ದ ಹೆಚ್ಚು ಪ್ರೀತಿ ಮತ್ತು ಕಷ್ಟದಾಯಕ ಜೀವನದ ಮೂಲಗಳು ಫ್ರೆಜರರ ಬೋಧನೆಯಲ್ಲಿವೆ. ಈ ಅವಧಿಯಲ್ಲಿ ಶಾಹುರವರ ವೈಯಕ್ತಿಕ ಜೀವನದ ಪ್ರಮುಖ ಸಂದರ್ಭಗಳಲ್ಲಿ ಫ್ರೆಜರರು ಎರಡು ಪತ್ರಗಳನ್ನು ಶಾಹುರವರಿಗೆ ಬರೆದಿದ್ದರು. ಅವು ಮುಖ್ಯವಾದವು. ಶಾಹುರವರು 'ವ್ರತಬಂಧ' (ಜನಿವಾರ ಧರಿಸುವ ಸಮಾರಂಭ)

ಹಾಗೂ ವಿವಾಹದ ಪ್ರಮುಖ ಎರಡು ಘಟನೆಗಳ ಮಹತ್ವವನ್ನು ಮನವರಿಕೆಮಾಡಿಕೊಳ್ಳಬೇಕೆಂದು ಫ್ರೇಜರರು ಎರಡು ಪತ್ರಗಳನ್ನು ಬರೆದಿದ್ದರು. ಜನಿವಾರ ಹಾಕಿಕೊಳ್ಳುವ ಸಮಾರಂಭದಲ್ಲಿ ಆಚರಿಸುವ ಆಚರಣೆಗಳು ಕೇವಲ ಆಚರಣೆಗಳಲ್ಲ. ಅವುಗಳಲ್ಲಿ ಗೂಢಾರ್ಥವಿದೆ. ಆದರೆ ಆಚರಣೆಗಳ ಮೂಲೋದ್ದೇಶದ ಬೆಲೆತೆತ್ತು ನಾವು ಆಚರಣೆಗಳ ಬಗ್ಗೆ ಲೇವಡಿ ಮಾಡುತ್ತೇವೆ. ಜನಿವಾರ ಹಾಕಿಕೊಳ್ಳುವ ಸಮಾರಂಭವು ಜೀವನದ ಸಂಧಿಕಾಲದಲ್ಲಿ ನಡೆಯುತ್ತದೆ. ಇದು ಬಾಲ್ಯಾವಸ್ಥೆಯಿಂದ ಪ್ರೌಢಾವಸ್ಥೆಗೆ ಸಂಕ್ರಮಿಸುವ ಕಾಲ. ವ್ಯಕ್ತಿಯ ಜೀವನದ ಬಗ್ಗೆ ಹೊಂದುವ ಮನೋಭಾವ ರೂಪಗೊಳ್ಳುವ ಕಾಲವದು. ಫ್ರೇಜರರು ಬರೆಯುತ್ತಾರೆ: "ನೀವು ಈಗ ಗಂಭೀರ ವಿಷಯಗಳ ಬಗ್ಗೆ ಗಮನಕೊಡಬೇಕು. ಮತ್ತು ನೀವು ನಿಮ್ಮ ಚಿಂತನೆ ಮತ್ತು ಕ್ರಿಯೆಗಳಿಗೆ ನೀವೇ ಜವಾಬ್ದಾರರೆಂಬುದನ್ನು ನೀವೇ ಭಾವಿಸಬೇಕು' (ಮಾರ್ಚ್ ೨೨, ೧೮೯೧).[6] ಶಾಹುರವರ ವಿವಾಹದ ಸಂದರ್ಭದಲ್ಲಿ ಶುಭಾಶಯವನ್ನು ಹೇಳುತ್ತಾ ಫ್ರೇಜರರು ವಿವಾಹವು ಸಂತೋಷದ ಹಬ್ಬವಲ್ಲ, ದೇವರ ಹೆಸರಿನಲ್ಲಿ ಅಂಗೀಕರಿಸಿದ ಹೊಣೆಯು ಕೂಡ ಆಗಿದೆಯೆಂದು ಸಲಹೆ ನೀಡಿದರು.[7]

ಫ್ರೇಜರರು ಮೇ ೧೭, ೧೮೯೧ರಲ್ಲಿ ಬರೆದ ಪತ್ರವು ಜೀವನದಲ್ಲಿ ಸಫಲತೆಯ ಗುಟ್ಟನ್ನು ಶಾಹುರವರಿಗೆ ತಿಳಿಸುತ್ತದೆ. ಶಾಹುರವರು ಮೂರು ವಿಷಯಗಳಿಗೆ ವಿಶೇಷ ಗಮನ ನೀಡಬೇಕೆಂದು ಫ್ರೇಜರರು ಬರೆಯುತ್ತಾರೆ.

೧. ಓದುಗಾರಿಕೆ, ಬರವಣಿಗೆ ಮತ್ತು ರಚನೆಗಳಿಗೆ ಗಮನ ನೀಡುವುದು.

೨. ಕೈಬರಹ ಸುಂದರವಾಗಿರುವುದು ಮಾತ್ರವಲ್ಲದೆ, ಉಡುಪುಗಳನ್ನು ಧರಿಸುವುದರಲ್ಲಿ ಸೊಗಸುಗಾರಿಕೆಯಿರಬೇಕು.

೩. ಪಾಠಗಳ ತಯಾರಿಕೆಯಲ್ಲಿ ಪರಿಪೂರ್ಣತೆಯಿರುವುದು ಮಾತ್ರವಲ್ಲದೆ, ನೀನು ಕೆಲಸ ಅಥವಾ ಆಟಗಳಲ್ಲಿ ಪೂರ್ಣತೆಯಿರಬೇಕು. ಈ ಮೂರು ವಿಷಯಗಳನ್ನು ಮನಸ್ಸಿನಲ್ಲಿಡಬೇಕು. ಎಚ್ಚರಿಕೆ, ಚೊಕ್ಕಟತನ, ಪರಿಪೂರ್ಣತೆ."[8]

ಶಾಹುರವರ ವಿವಾಹದ ನಂತರ ಶಾಹುರವರಿಗೆ ಫ್ರೇಜರರು ವಿಚಿತ್ರವಾದ ಒಂದು ಪತ್ರ ಬರೆಯುತ್ತಾರೆ. ಫ್ರೇಜರರಂತಹ ಗುರುಗಳು ತನ್ನ ಶಿಷ್ಯನಿಗೆ ಮಾತ್ರ ಬರೆಯಬಲ್ಲರು. ಫ್ರೇಜರರು ಬೆಂಗಳೂರಿನಿಂದ ಡಿಸೆಂಬರ್ ೧೬, ೧೮೯೧ರಲ್ಲಿ ಶಾಹುರವರಿಗೆ ಸೂಕ್ಷ್ಮವಿಷಯದ ಬಗ್ಗೆ ಪತ್ರ ಬರೆಯುತ್ತಾರೆ. ಮದುವೆಯಾದ ಸಮಯದಲ್ಲಿ ಮಹಾರಾಣಿಯವರ ವಯಸ್ಸು ೧೨ ವರ್ಷ ಕೂಡ ಆಗಿರಲಿಲ್ಲ. ಭಾರತದ ಸರಕಾರ ಆಗತಾನೆ ೧೨ ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯ ಜೊತೆಯಲ್ಲಿ ದೈಹಿಕ ಸಂಬಂಧವಿಟ್ಟುಕೊಳ್ಳುವುದು ಒಂದು ಅಪರಾಧ ಎಂದು ಕಾನೂನುಮಾಡಿತು. ಡಾಕ್ಟರರು ಸಹ ಅಂತಹ ದೈಹಿಕ ಸಂಬಂಧ ಸೂಕ್ತವಲ್ಲ ಎಂದು ಹೇಳುತ್ತಾರೆ. ಶಾಹುರವರ ತಂದೆ ಸಹ ಶಾಹು ೧೮ ವರ್ಷಗಳಿಗಿಂತ ಮೊದಲೆ ಮದುವೆಯಾಗಬಾರದೆಂದು ಸೂಚಿಸಿದ್ದರು. ಫ್ರೇಜರರು ಮುಂದುವರಿಸುತ್ತಾ ಹೇಳುತ್ತಾರೆ: "ಯುವರಾಣಿಯು ಪ್ರಾಪ್ತ ವಯಸ್ಕಳಾಗುವವರೆಗೆ ಅಂದರೆ ೧೮೯೪ರವರೆಗೆ ಆಕೆಯನ್ನು ಮುಟ್ಟುವುದಿಲ್ಲವೆಂದು ನೀವು ಒಬ್ಬ ಸಜ್ಜನನಾಗಿ ನನಗೆ ವಿಧಿಪೂರ್ವಕವಾಗಿ ಆಣೆಮಾಡಿ ಹೇಳಬೇಕೆಂದು ಬರೆದಿದ್ದರು." ಅದೇ ಪತ್ರದಲ್ಲಿ ಫ್ರೇಜರು ಬರೆಯುತ್ತಾರೆ: "ಇದು ಕೊಲ್ಹಾಪುರದ ಸಿಂಹಾಸನದ ಹಿತದೃಷ್ಟಿಯಿಂದ ಕೂಡ. ಕೊಲ್ಹಾಪುರದ ಸಂಸ್ಥಾನವು ಮತ್ತೊಂದು ದತ್ತು ತೆಗೆದುಕೊಳ್ಳುವುದಕ್ಕೆ ಹೋಗಬಾರದೆಂಬುದು ಸರಕಾರದ ಅಭಿಪ್ರಾಯವಾಗಿದೆ.[9] ಫ್ರೇಜರರಂತಹ ಗುರು ಶಿಷ್ಯನಿಂದ ವಿಚಿತ್ರವಾದ ವಚನವನ್ನು ತೆಗೆದುಕೊಳ್ಳುತ್ತಾರೆ. ನಿಜವಾಗಲೂ ಇದು ಅಪರೂಪದ್ದು.

### ತಂದೆಯಂತಹ ವ್ಯಕ್ತಿ ಫ್ರೇಜರ್

ಫ್ರೇಜರರು ಮೇ ೧೯೦೨ರಲ್ಲಿ ಇಂಗ್ಲೆಂಡಿಗೆ ಹೋದರು. ಶಾಹುರವರ ಗುರುಗಳ ಅವಧಿ ಕೊನೆಗೊಂಡಿತು. ಆದರೆ ಫ್ರೇಜರರ ಬೋಧನೆ ಮತ್ತು ಶಾಹುರವರ ಕಲಿಕೆ ಅಲ್ಲಿಗೆ ನಿಲ್ಲಲಿಲ್ಲ. ಶಿಕ್ಷಣ ಎಂದಿಗೂ ಮುಗಿಯುವಂಥದ್ದಲ್ಲ. ನಿಜವಾದ ಗುರು ಎಂದಿಗೂ ನಿವೃತ್ತಿ ಹೊಂದುವುದಿಲ್ಲ. ಈ ಶಿಕ್ಷಣ ಮೂವತ್ತು ವರ್ಷಗಳವರೆಗೆ ಮುಂದುವರಿಯಿತು, ಶಾಹುರವರ ನಿಧನದವರೆಗೆ. ಅದು ಪತ್ರವ್ಯವಹಾರದ ಮೂಲಕ ಮುಂದುವರಿಯಿತು. ಶಾಹುರವರು ಆಡಳಿತದಲ್ಲಿ ಎದುರಿಸಬೇಕಾದ ಕಷ್ಟಗಳ ಬಗ್ಗೆ ಫ್ರೇಜರ್ ಅವರಿಗೆ ತಿಳಿಸುತ್ತಿದ್ದರು ಮತ್ತು ಸಲಹೆಗಳನ್ನು ಕೇಳುತ್ತಿದ್ದರು. ಫ್ರೇಜರರು ಒಬ್ಬ ಹಿರಿಯ ಸಲಹೆಗಾರರಂತೆ ಪರಿಹಾರಗಳನ್ನು ಸೂಚಿಸುತ್ತಿದ್ದರು. ಅವರು ಶಾಹುರವರ ಯೋಜನೆಗಳಲ್ಲಿ ಬರಬಹುದಾದ ಸಮಸ್ಯೆಗಳನ್ನು ನಿರೀಕ್ಷಿಸುತ್ತಿದ್ದರು ಮತ್ತು ಅವರಿಗೆ ಅದರಂತೆಯೇ ತಿಳಿಸುತ್ತಿದ್ದರು. ತಂದೆಯಂತೆ ಫ್ರೇಜರರು ಶಾಹುರವರು ಒಬ್ಬ ಆದರ್ಶರಾಜನಾಗಿ ರೂಪಗೊಳ್ಳುವಾಗ ಅವರ ಬಗ್ಗೆ ಯಾವಾಗಲು ಎಚ್ಚರಿಕೆಯ ಕಣ್ಣು ಇಡುತ್ತಿದ್ದರು. ಮೇ ೩೦, ೧೯೦೨ರ ಪತ್ರದಲ್ಲಿ ಫ್ರೇಜರರು ಶಾಹುರವರು ಉಳಿಕೆಯ ಕೆಲಸಗಳನ್ನು ಪೂರ್ಣಗೊಳಿಸುವುದಕ್ಕೆ ಅನುಸರಿಸಿದ ವಿಧಾನದ ಬಗ್ಗೆ ಸಂತೃಪ್ತಿಯನ್ನು ವ್ಯಕ್ತಪಡಿಸಿದರು ಮತ್ತು ಸಹಾಯಕ ನ್ಯಾಯಾಧೀಶರಿಗೆ ಹೆಚ್ಚು ಅಧಿಕಾರಗಳನ್ನು ನೀಡಿದರೆ ಮುಖ್ಯ ನ್ಯಾಯಾಧೀಶರಿಗೆ ಕೇವಲ ನಾಗರಿಕ ಮನವಿಗಳನ್ನು ವಹಿಸಬೇಕೆಂದು ಶಾಹುರವರಿಗೆ ಸಲಹೆ ನೀಡಿದ್ದರು. ಶಾಹುರವರು ಬರುವ ಪೊಲಿಟಿಕಲ್ ಏಜೆಂಟರ ಬಗ್ಗೆ ಆತಂಕಗೊಂಡಿದ್ದರು. ಫ್ರೇಜರರು ಶಾಹುರವರಿಗೆ ಧೈರ್ಯ-ಉತ್ಸಾಹಗಳನ್ನು ತುಂಬಿ ತಮ್ಮ ಆಡಳಿತವು ಪಾರದರ್ಶಕ ಮತ್ತು ಬಹಿರಂಗವಾಗಿದ್ದರೆ ಯಾವ ಪೊಲಿಟಿಕಲ್ ಏಜೆಂಟ್ ಬಗ್ಗೆ ಭಯಪಡಬೇಕಾಗಿಲ್ಲ ಎಂದು ಹೇಳಿದರು. ಶಾಹು ಮತ್ತು ತಮ್ಮ ಸಹೋದರ ಬಾಪುಸಾಹೇಬ ಅವರ ಬೇಟೆಯಾಡುವ ಆಸಕ್ತಿಯ ಹಿನ್ನೆಲೆಯಲ್ಲಿ ಫ್ರೇಜರರು ಅಧಿಕಪ್ರಮಾಣದಲ್ಲಿ ಅನವಶ್ಯಕವಾಗಿ ಪ್ರಾಣಿಗಳನ್ನು ಕೊಲ್ಲುವುದನ್ನು ತಪ್ಪಿಸುವ ಸಲುವಾಗಿ ಕೆಲವು ನಿಯಮಾವಳಿಗಳನ್ನು ರೂಪಿಸಬೇಕೆಂದು ಸಲಹೆ ನೀಡಿದರು. ಇದರಿಂದ ಪರಿಸರ ಸಮತೋಲನವನ್ನು ಕಾಪಾಡಿದಂತಾಗುತ್ತದೆ ಮತ್ತು ಹೆಣ್ಣು ಕಾಡೆಮ್ಮೆಗಳ ಜಾತಿ ಕಡಿಮೆಯಾಗುತ್ತಿದೆ. ಅದರ ಬೇಟೆಯನ್ನು ನಿಲ್ಲಿಸಬೇಕು.[10]

ಶಾಹುರವರ ಮೇಲಿನ ಪ್ರೀತಿಯಿಂದ ಫ್ರೇಜರರು ಸಾಕಷ್ಟು ಅಪಾಯಗಳನ್ನು ತೆಗೆದುಕೊಂಡು ಇಂಗ್ಲೆಂಡಿನಿಂದ ಅಕ್ಟೋಬರ್ ೨೫, ೧೯೦೨ರಂದು ಶಾಹುರವರಿಗೆ ಪತ್ರ ಬರೆಯುತ್ತಾರೆ. ಪತ್ರದ ಕೊನೆಯಲ್ಲಿದ್ದ ಟಿಪ್ಪಣಿಯು ಪತ್ರವನ್ನು ಓದಿದ ನಂತರ ಹರಿದುಹಾಕು ಎಂದು ಹೇಳುತ್ತದೆ. ಪತ್ರವು ಕೊಲ್ಹಾಪುರದ ದಿವಾನರ ವೈಯಕ್ತಿಕ ಜೀವನವನ್ನು ಚರ್ಚಿಸುತ್ತದೆ. ದಿವಾನರು ಒಬ್ಬ ಮಹಿಳೆಯೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು. ಜನರು ಈ ಬಗ್ಗೆ ವದಂತಿ ಹಬ್ಬಿಸಿದ್ದರು. ಶಾಹುರವರು ದಿವಾನರು ಕೂಡಲೇ ಮಹಿಳೆಯೊಂದಿಗಿನ ಸಂಬಂಧವನ್ನು ಕಡಿದುಕೊಳ್ಳಬೇಕೆಂದು ಹೇಳುವಂತೆ ಫ್ರೇಜರರು ಶಾಹುರವರಿಗೆ ಸಲಹೆ ನೀಡಿದ್ದರು. ಒಂದು ವೇಳೆ ದಿವಾನರು ನಿರಾಕರಿಸಿದರೆ ಅವರನ್ನು ಕೆಲಸದಿಂದ ಕಿತ್ತುಹಾಕು. ನೀವು ಮಹಾರಾಜರು, ನೀವು ಮಹಾರಾಜರಂತೆ ವರ್ತಿಸಿ.[11]

ಅಕ್ಟೋಬರ್ ೧೯೦೫ರಲ್ಲಿ ಫ್ರೇಜರರನ್ನು ಧಾರವಾಡ ಬೆಳಗಾಮಿನಲ್ಲಿ ಒಬ್ಬ ನ್ಯಾಯಾಧೀಶರನ್ನಾಗಿ ನೇಮಕ ಮಾಡಲಾಯಿತು. ಬೆಳಗಾಮಿನಿಂದ ಮಾರ್ಚ್ ೨೨, ೧೯೦೬ರಂದು ಫ್ರೇಜರರು ಹೊಸ ಅರಮನೆಯಲ್ಲಿ ಬಿರುಕು ಬಿಟ್ಟುಕೊಂಡ ಬಗ್ಗೆ ಕೆಲವು ಸಲಹೆಗಳನ್ನು ನೀಡುತ್ತಾರೆ. ಬಾಂಬೆ ಸರಕಾರದ ಪರಿಣತರಿಂದ ಹೊಸ ಅರಮನೆಯನ್ನು ಪರೀಕ್ಷಿಸಿ ಕೂಡಲೇ ಪರಿಹಾರದ ಕ್ರಮಗಳನ್ನು ಕೈಗೊಳ್ಳಬೇಕೆಂದು ಫ್ರೇಜರರು

ಬರೆಯುತ್ತಾರೆ. ಫ್ರೆಜರರು ಹೊರಗಡೆ ಕೆಲಸಮಾಡುತ್ತಿದ್ದರೂ ಕೊಲ್ಹಾಪುರದ ಆಗು-ಹೋಗುಗಳ ಬಗ್ಗೆ ಸಾಕಷ್ಟು ಎಚ್ಚರಿಕೆ ವಹಿಸಿದ್ದರು.[12]

ಶಾಹುರವರು ಹೊಸ ಅರಮನೆಯನ್ನು ಪರೀಕ್ಷೆಗೊಳಪಡಿಸಲಾಯಿತೆಂದು ಪ್ರತ್ಯುತ್ತರ ನೀಡುತ್ತಾರೆ. ಅವರು ಆಡಳಿತದಲ್ಲಿ ಜಾರಿಗೊಳಿಸಿದ ಸುಧಾರಣೆಗಳ ಬಗ್ಗೆ ತಿಳಿಸುತ್ತಾರೆ. ಅವರು ತಾವು ಮುಖ್ಯ ಕಛೇರಿಯಲ್ಲಿ ಕೆಲಸಮಾಡಿದ್ದರಿಂದ ಕಛೇರಿಗಳ ಕಾರ್ಯವನ್ನು ಸೂಕ್ಷ್ಮವಾಗಿ ಪರೀಕ್ಷಿಸುವುದನ್ನು ಕುರಿತು ಬರೆದಿದ್ದರು. ಒಂದು ಸ್ಥಳದಲ್ಲಿ ಆರೋಪಿಯನ್ನು ವಿಚಾರಣೆಯಿಲ್ಲದೆ ೫ ತಿಂಗಳು ಸ್ಥಾನಬದ್ಧತೆಯಲ್ಲಿಡಲಾಗಿತ್ತು. ಒಂದು ತಿಂಗಳಿಗಿಂತ ಹೆಚ್ಚುಕಾಲ ಸ್ಥಾನಬದ್ಧತೆಯಲ್ಲಿಟ್ಟವರ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ ಆಜ್ಞೆಮಾಡಿದ್ದೇನೆಂದು ಶಾಹುರವರು ಬರೆಯುತ್ತಾರೆ. ಬಾಲಕಿಯರಿಗಾಗಿ ಗಧಿಂಗ್‌ಲಾಜ್‌ನಲ್ಲಿ ಒಂದು ಶಾಲೆಯನ್ನು ಮತ್ತು ಪನ್ಹಾಲದಲ್ಲಿ ಮುಸ್ಲಿಮರಿಗಾಗಿ ಒಂದು ಶಾಲೆಯನ್ನು ತೆರೆಯಲು ಆಜ್ಞೆಯನ್ನು ಹೊರಡಿಸಲಾಗಿದೆಯೆಂದು ಶಿಕ್ಷಣದ ಮಹತ್ವವನ್ನು ಅರಿತ ಫ್ರೆಜರರಿಗೆ, ತಮ್ಮ ಗುರುವಿಗೆ ತಿಳಿಸುತ್ತಾರೆ. ಜೂನ್ ೧೬, ೧೮೯೬ರಂದು ಒಂದು ಪತ್ರದಲ್ಲಿ ಫ್ರೆಜರರು ಕರ್ನಲ್ ಹಂಟರ್ ಮತ್ತು ಮೇಜರ್ ರೇ ಅವರ ನಡುವಣ ಜಗಳದಿಂದ ದೂರವಿರುವಂತೆ ಶಾಹುರವರಿಗೆ ಸಲಹೆ ನೀಡುತ್ತಾರೆ.[13]

ಕೂಡಲೇ ಫ್ರೆಜರರನ್ನು ಮೈಸೂರು ಮಹಾರಾಜರ ಗುರು ಮತ್ತು ಜೊತೆಗಾರರನ್ನಾಗಿ ವರ್ಗಾವಣೆ ಮಾಡಲಾಗುತ್ತದೆ. ಮೈಸೂರಿನಿಂದ ಬರೆದ ಪತ್ರ ಬಹಳ ಮುಖ್ಯವಾದುದು. ಮೈಸೂರು ಮಹಾರಾಜರ ಮದುವೆಯಲ್ಲಿ ಮೈಸೂರಿನ ಅರಮನೆಗೆ ಬೆಂಕಿ ಹತ್ತಿಕೊಳ್ಳುತ್ತದೆ. ಬೆಂಕಿಯನ್ನು ನಂದಿಸುವ ಯಾವ ಸಲಕರಣೆಯು ಇರಲಿಲ್ಲ. ನಷ್ಟವು ಸಾಕಷ್ಟು ಉಂಟಾಗಿತ್ತು. ಫ್ರೆಜರ್ ತಮ್ಮ ಶಿಷ್ಯನನ್ನು ನೆನಪಿಸಿಕೊಂಡರು. ಹೊಸ ಅರಮನೆಯಲ್ಲಿ ಸಹ ಇದೇ ಸನ್ನಿವೇಶವಿರಬಹುದೆಂದು ಊಹೆಮಾಡಿದರು. ಆದ್ದರಿಂದ ಕೂಡಲೇ ಅವರು ಶಾಹುರವರಿಗೆ ಪತ್ರಬರೆದು ಬೆಂಕಿ ನಂದಿಸುವ ಇಂಜಿನ್ನುಗಳನ್ನು ಅಳವಡಿಸಬೇಕೆಂದು ತಿಳಿಸಿದರು. ಕಾರ್ಯಕ್ರಮಗಳು ನಡೆಯುವಾಗ ಚಪ್ಪರದಲ್ಲಿ ಬಕೆಟ್ಟುಗಳ ತುಂಬ ನೀರು ತುಂಬಿಸಿ, ಒಂದು ಕೈಪಂಪನ್ನು ಅಳವಡಿಸಬೇಕೆಂಬ ವಿವರಗಳ ಪತ್ರವನ್ನು ಬರೆದಿದ್ದರು. ತಮ್ಮ ಶಿಷ್ಯರ ಬಗ್ಗೆ ಎಷ್ಟು ಲಕ್ಷ್ಯವಹಿಸುತ್ತಿದ್ದರೆಂಬುದಕ್ಕೆ ಈ ಪತ್ರವೇ ಸಾಕ್ಷಿಯಾಗಿದೆ.

## ವಿಷ ಉಣಿಸಿದ ಪ್ರಕರಣ

ಒಬ್ಬ ಬ್ರಿಟಿಷ್ ಅಧಿಕಾರಿಗೆ ವಿಷವುಣಿಸಿದ ಆರೋಪವು ಶಾಹುರವರ ಆಡಳಿತ ಆರಂಭದ ದಿನಗಳಲ್ಲಿ ಅವರ ಚಾರಿತ್ರ್ಯದ ಮೊದಲ ಪರೀಕ್ಷೆ ಎದುರಾಯಿತು. ಶಾಹುರವರು ಈ ವಿಚಾರಣೆಯ ಅವಧಿಯಲ್ಲಿ ಮಾನಸಿಕ ಹಿಂಸೆಗೆ ಗುರಿಯಾದರು. ಈ ವಿವಾದದ ಹಿಂದೆ ಬಂಡೆಯಂತೆ ದೃಢವಾಗಿ ನಿಂತು ಬೆಂಬಲಿಸಿದವರು ಫ್ರೆಜರ್. ಈ ಪ್ರಕರಣದ ಬಗ್ಗೆ ಸುಮಾರು ಒಂದು ಡಜನ್ನು ಪತ್ರಗಳ ವಿನಿಮಯವಾಗಿರುವುದು ಲಭ್ಯವಿದೆ. ಫ್ರೆಜರರು ತನ್ನ ಶಿಷ್ಯನಿಗೆ ಮಾನಸಿಕ ಸಮತೋಲನ ಕಳೆದುಕೊಳ್ಳಬೇಡ, ಆದರೆ ಧೈರ್ಯವಾಗಿ ಜಾಗೃತ ಚಿಂತನೆಯಿಂದ ಕ್ರಮ ಕೈಗೊಳ್ಳಬೇಕೆಂದು ಸಲಹೆ ನೀಡಿದ್ದರು. ಶಾಹುರವರು ದಿನಾಂಕ ೨೫ ನವೆಂಬರ್ ೧೮೯೮ರಂದು ಬರೆದ ಪತ್ರದಲ್ಲಿ ಪ್ರಕರಣದ ಬಗ್ಗೆ ತಮ್ಮ ಕಳವಳವನ್ನು ವ್ಯಕ್ತಪಡಿಸಿದ್ದರು. ರೇ ದಂಪತಿಗಳು (ಕರ್ನಲ್ ರೇ, ಪೊಲಿಟಿಕಲ್ ಏಜೆಂಟ್) ಸಂಚುಹೂಡಿದ್ದರು. ಶಾಹುರವರು ವಿರಾಮವಿಲ್ಲದೇ ಕಷ್ಟಪಟ್ಟು ಕೆಲಸಮಾಡುತ್ತಿದ್ದರೂ ರೇ ದಂಪತಿಗಳು ಶಾಹುರವರು ಆಡಳಿತವನ್ನು ಕಡೆಗಣಿಸುತ್ತಿದ್ದಾರೆಂಬ ಗುಲ್ಲನ್ನು

ಹಬ್ಬಿಸಿದರು. ಶಾಹುರವರು ಸತ್ಯಸಂಗತಿಗಳನ್ನು ಗೌರ್ನರರಿಗೆ ತಿಳಿಸಲು ಬಯಸಿದರು. ಆದರೆ ಅವರನ್ನು ಭೇಟಿಮಾಡಲು ಸಂದರ್ಶನವೇ ಸಿಗಲಿಲ್ಲ. ಶಾಹುರವರು ತಮ್ಮ ಎಲ್ಲಾ ಭಾವನೆಗಳನ್ನು ತಂದೆಗೆ ಮಗ ತಿಳಿಸುವಂತೆ ಫ್ರೇಜರರಿಗೆ ತಿಳಿಸಿದರು.[15] ಫ್ರೇಜರರು ನವೆಂಬರ್ ೨೯, ೧೮೮೯ರ ಪತ್ರಕ್ಕೆ ಪ್ರತ್ಯುತ್ತರ ಬರೆದು ಇಬ್ಬರ ನಡುವೆಯಿರುವ ವಿಶಿಷ್ಟ ಸ್ನೇಹತ್ವದ ಬಂಧನದ ಬಗ್ಗೆ ಬೆಳಕು ಚೆಲ್ಲುತ್ತಾರೆ. ಫ್ರೇಜರರು ಅವರಿಗೆ ಎಚ್ಚರಿಕೆಯಿಂದ ಮತ್ತು ಸಂಯಮದಿಂದ ಕಾರ್ಯ ನಿರ್ವಹಿಸು ಎಂದು ಸಲಹೆ ನೀಡುತ್ತಾರೆ. ಮತ್ತೆ ಹೇಳುತ್ತಾರೆ: "ತಾಳ್ಮೆಯಿಂದಿರು, ಮತ್ತು ಎದೆಗುಂದಬೇಡ ಅಥವಾ ಯಾವುದನ್ನೂ ಒರಟಾಗಿ ಅಥವಾ ಗಾಬರಿಯಿಂದ ಬೇಗನೆ ಮಾಡಬೇಡ."[16]

ಕರ್ನಲ್ ರೆ ಅವರೊಂದಿಗಿನ ಶಾಹುರವರ ಸಂಬಂಧ ಅತಿರೇಕಕ್ಕೆ ಎಳೆಯಿತು. ವಿಷ ತಿನ್ನಿಸುವುದು ಒಂದು ಆರೋಪವಾಗಿತ್ತು. ಈ ವಿಷಯದಲ್ಲಿ ಶಾಹುರವರು ಪರಿಶುದ್ಧರಾಗಿದ್ದರು. ಬೇಗನೆ ಬಾಂಬೆಯ ಸಿ.ಐ.ಡಿ. ಅಧಿಕಾರಿಗಳು ವಿಷವುಣಿಸುವ ಆಪಾದನೆಯು ಒಂದು ಶುದ್ಧಸುಳ್ಳು ಮತ್ತು ಸಿಕ್ಕಿಸಿದ್ದೆಂದು ತಮ್ಮ ವರದಿಯನ್ನೂ ನೀಡಿದರು. ಒಬ್ಬ ಹೆಮ್ಮೆಯ ಮತ್ತು ಆತ್ಮಗೌರವದ ಶಾಹುರವರು ಆ ಸನ್ನಿವೇಶದಲ್ಲಿ ಒರಟಾಗಿ ಮತ್ತು ರಭಸಮತಿಯಾಗಿ ನಡೆದುಕೊಳ್ಳಬಹುದಾಗಿತ್ತು. ಫ್ರೇಜರರು ಶಾಹುರವರಿಗೆ ಎಚ್ಚರಿಕೆಯಿಂದ ಮತ್ತು ಧೈರ್ಯದಿಂದ ಮತ್ತು ಸಂಯಮದಿಂದ ವರ್ತಿಸಲು ಸಲಹೆ ನೀಡಿದ್ದರು. ಅಧಿಕಾರಿಗಳ ಕಲಹದಲ್ಲಿ ಯಾವ ಪಕ್ಷವನ್ನು ವಹಿಸದೆ ಮತ್ತು ತನ್ನ ನಿಷ್ಪಕ್ಷಪಾತತನದಲ್ಲಿ ಆತ್ಮವಿಶ್ವಾಸವನ್ನು ಸದೃಢಗೊಳಿಸೆಂದು ಅವರು ಹೇಳಿದರು. ಫ್ರೇಜರರು ಗೌರ್ನರರನ್ನು ಭೇಟಿಯಾಗುವುದು ತಮ್ಮ ಹಕ್ಕೆಂದು, ಅದರ ಬಗ್ಗೆ ಒತ್ತಾಯಿಸಿ ಮತ್ತು ಗೌರ್ನರರ ಮುಂದೆ ಮುಚ್ಚುಮರೆಯಿಲ್ಲದೆ ಎಲ್ಲಾ ಸಂಗತಿಗಳನ್ನು ತಿಳಿಸಬೇಕೆಂದು ಅವರಿಗೆ ಹೇಳಿದರು. ತನ್ನ ಸ್ವಂತ ಸಹೋದರರ ವಿರುದ್ಧ ತನ್ನ 'ಭಾರತೀಯ' ಸ್ನೇಹಿತನಿಗೆ ಸಲಹೆನೀಡಿದ ನಂತರ ಫ್ರೇಜರರು ಹೇಳುತ್ತಾರೆ: "ಯಾವುದೇ ಸಂದರ್ಭದಲ್ಲಿ, ನನ್ನ ಪ್ರೀತಿಯ ಮಹಾರಾಜ, ಎದೆಗುಂದಬೇಡ ಮತ್ತು ಯಾವುದೇ ಒರಟು ಅಥವಾ ಅವಸರ ವರ್ತನೆಯು ನಿಮ್ಮ ವಿರುದ್ಧವೇ ನಿಭಾಯಿಸಲು ನಿಮ್ಮ ಅಡಿಟಿಪ್ಪಣಿಯನ್ನು ಬರೆಯುತ್ತಾರೆ: "ತಾಳ್ಮೆ, ಮಹಾರಾಜ ಮತ್ತು ಅದಕ್ಕೆ ಬದ್ಧನಾಗಿರು." ಅಂತಹ ಪತ್ರಗಳು ಶಾಹು ಮತ್ತು ಫ್ರೇಜರರ ನಡುವಣ ಆತ್ಮೀಯತೆಯನ್ನು ಮತ್ತು ಜನಾಂಗೀಯ ತಾರತಮ್ಯತೆಯ ಆಚೆಗಿನ ಪರಿಶುದ್ಧ ಸ್ನೇಹತ್ವವುಳ್ಳ ಒಂದು ಜಗತ್ತಿಗೆ ನಮ್ಮನ್ನು ಕೊಂಡೊಯ್ಯುತ್ತದೆ.

ಶಾಹುರವರು ತಳಮಳಗೊಂಡ ಮನಸ್ಥಿತಿಯಲ್ಲಿರುವಾಗ ಬರೆದ ಪತ್ರಗಳಿಗೆ ಫ್ರೇಜರರು ಹಲವಾರು ಸಣ್ಣಪುಟ್ಟ ಪ್ರಾಯೋಗಿಕ ಸಲಹೆಗಳನ್ನು ಪ್ರತ್ಯುತ್ತರದಲ್ಲಿ ನೀಡಿದ್ದಾರೆ. ಅವರು ಶಾಹುರವರು ಗೌರ್ನರರನ್ನು ಭೇಟಿಯಾದಾಗ ಹೇಗೆ ವರ್ತಿಸಬೇಕಾಗಿತ್ತು. ಅವರು ಏನನ್ನು ಮಾತನಾಡಬಹುದಾಗಿತ್ತು ಮತ್ತು ಅವರು ಯಾವ ಯಾವ ದಾಖಲೆಗಳನ್ನು ಕೊಂಡೊಯ್ಯಬಹುದಾಗಿತ್ತು ಎಂಬುದರ ಬಗ್ಗೆ ಫ್ರೇಜರರು ಬರೆಯುತ್ತಾರೆ. ಮೊದಲು ಪತ್ರವ್ಯವಹಾರ ನಡೆಸಿದ ಪತ್ರಗಳ ಪ್ರತಿಗಳನ್ನು ತೆಗೆದುಕೊಂಡು ಹೋಗಬೇಕು. ಭೇಟಿಯ ಸಮಯದಲ್ಲಿ ಮಾಡಬಹುದಾದ ಹೇಳಿಕೆಗಳ ಬಗ್ಗೆ ಯೋಚಿಸಿರಬೇಕು ಮತ್ತು ಅವುಗಳ ಬಗ್ಗೆ ಟಿಪ್ಪಣಿಗಳನ್ನು ಸಿದ್ಧಪಡಿಸಿಕೊಳ್ಳಬೇಕೆಂದು ಫ್ರೇಜರರು ಶಾಹುರವರಿಗೆ ಹೇಳುತ್ತಾರೆ. ರಾಜಕೀಯ ಏಜೆಂಟರೊಡನೆ ಇರುವ ಸಂಬಂಧಗಳು ಅತಿರೇಕಕ್ಕೆಳೆದುಕೊಂಡು ಹೋಗಿವೆ ಎಂಬ ಸಂಗತಿಯನ್ನು ಮುಚ್ಚಿಡುವಂತಿಲ್ಲ. ಮತ್ತು ಶ್ರೀ ಮತ್ತು ಶ್ರೀಮತಿ ರೇ ಅವರ ಹೆಸರು ಹೇಳುವಾಗ ಅನಗತ್ಯವಾಗಿ ತಮ್ಮ ಧ್ವನಿ ಏರಿಸುವಂತಿಲ್ಲ ಎಂದು ಅವರು ಸಲಹೆ ನೀಡಿದರು. ಫ್ರೇಜರರು ಪ್ರೋತ್ಸಾಹದ ಮಾತುಗಳಿಂದ ಮುಕ್ತಾಯಗೊಳಿಸುತ್ತಾರೆ. ಇವಕ್ಕೆ

ಬದ್ಧರಾಗಿ, ಮಹಾರಾಜರೆ, ಮನುಷ್ಯನು ಹೇಗೆ ರೂಪಗೊಂಡಿದ್ದಾನೆ ಎಂಬುದನ್ನು ತೋರಿಸುವುದಕ್ಕೆ ಇದು ಸಕಾಲವಾಗಿದೆ."

ಇಂಗ್ಲೆಂಡಿನಲ್ಲಿ ಮೂರು ತಿಂಗಳ ರಜೆಯನ್ನು ಮುಗಿಸಿಕೊಂಡು ಫ್ರೆಜರರು ವಾಪಸು ಬರುತ್ತಾರೆ ಮತ್ತು ಬೆಂಗಳೂರಿನ ಒಂದು ಪತ್ರದಲ್ಲಿ ಮಹಾರಾಜ ಎಂಬ ಬಿರುದನ್ನು ಪಡೆದಿದ್ದಕ್ಕೆ ಶಾಹುರವರಿಗೆ ಅಭಿನಂದನೆಗಳನ್ನು ತಿಳಿಸುತ್ತಾರೆ. ಶಾಹುರವರು ವದಂತಿಗಳನ್ನು ನಂಬದೆ ದೃಢವಾದ ಕ್ರಮಗಳನ್ನು ಕೈಗೊಳ್ಳಲು ಶಾಹುರವರು ಈಗ ಸಮರ್ಥರಾಗಿದ್ದಾರೆಂದು ಅವರು ಆತ್ಮ-ವಿಶ್ವಾಸವನ್ನು ವ್ಯಕ್ತಪಡಿಸುತ್ತಾರೆ.[17]

## ಶಾಹುರವರ ವಿದೇಶ ಪ್ರವಾಸ

ಇದೇ ಸಮಯದಲ್ಲಿ ಬ್ರಿಟಿಷರ ಮಹಾರಾಜನು ಶಾಹುರವರನ್ನು ಪಟ್ಟಾಭಿಷೇಕದ ಸಮಾರಂಭಕ್ಕೆ ಆಹ್ವಾನ ನೀಡಿದ್ದರು. ಶಾಹುರವರು ತಮ್ಮ ಸಂಸ್ಥಾನವನ್ನು ಬಿಟ್ಟು ವಿದೇಶಕ್ಕೆ ಹೋಗಲು ಬಯಸುತ್ತಿಲ್ಲ ಎಂಬುದನ್ನು ಫ್ರೆಜರರು ತಿಳಿದಿದ್ದರು. ಆದರೆ ಪಟ್ಟಾಭಿಷೇಕದ ಸಮಾರಂಭಕ್ಕೆ ಹೋಗುವುದು ಒಂದು ಸುವರ್ಣಾವಕಾಶ. ಅವರು ಪಶ್ಚಿಮದ ಅಭಿವೃದ್ಧಿ ಹೊಂದಿದ ದೇಶಗಳನ್ನು ನೋಡಬಹುದು, ಬ್ರಿಟಿಷ್ ಅಧಿಕಾರಿಗಳೊಂದಿಗೆ ಒಳ್ಳೆಯ ಸಂಬಂಧಗಳನ್ನು ಬೆಳೆಸಿಕೊಳ್ಳಬಹುದು, ಹೊಸ ನಗರಗಳನ್ನು, ಕಾರ್ಖಾನೆಗಳನ್ನು ಮತ್ತು ಜನರನ್ನು ಹತ್ತಿರದಿಂದ ನೋಡಬಹುದು ಮತ್ತು ಹೆಚ್ಚು ಪ್ರೌಢರಾಗಬಹುದು. ಫ್ರೆಜರರು ಬೆಂಗಳೂರಿನಿಂದ ಒಂದು ಪತ್ರ ಬರೆದು ಶಾಹುರವರು ಪಟ್ಟಾಭಿಷೇಕದ ಆಹ್ವಾನವನ್ನು ಒಪ್ಪಿಕೊಳ್ಳಬೇಕೆಂದು ಮನವೊಲಿಸುತ್ತಾರೆ.[18] ಫ್ರೆಜರರು ತಂದೆ ಮಗನಿಗೆ ಹೇಳುವಂತೆ ಶಾಹುರವರಿಗೆ ಸಲಹೆ ನೀಡುತ್ತಾರೆ. ಇಂಗ್ಲೆಂಡಿನಲ್ಲಿ ಹೇಗೆ ವರ್ತಿಸಬೇಕು, ಅವರು ಯಾವ ನಗರಗಳು ಮತ್ತು ಕೈಗಾರಿಕಾ ಕೇಂದ್ರಗಳಿಗೆ ಭೇಟಿ ನೀಡಬೇಕು ಎಂಬ ಬಗ್ಗೆ ಸಲಹೆ ನೀಡುತ್ತಾರೆ. ಅದೇ ಪತ್ರದಲ್ಲಿ ಫ್ರೆಜರರು ಬರೆಯುತ್ತಾರೆ: "ಹೋಗಬೇಕೆ ಅಥವಾ ಬೇಡವೆ ಎಂಬ ಪ್ರಶ್ನೆಗೆ ನಾನು 'ಹೋಗು' ಎಂದು ಒತ್ತಿಹೇಳುತ್ತೇನೆ. ಪಟ್ಟಾಭಿಷೇಕ ಒಂದು ಅದ್ಭುತವಾದ ದೃಶ್ಯ, ನೀನು ಮತ್ತೆ ಎಂದಿಗೂ ನೋಡಲಾರೆ. ನೀನು ಪ್ರವಾಸಹೋದಾಗ ಸಂತೋಷಪಟ್ಟಂತೆಯೇ ನೀನು ಜ್ಞಾನವನ್ನು ಗಳಿಸಿ ನಿನ್ನ ಚಾರಿತ್ರ್ಯವನ್ನು ಬೆಳಗಿಸುವೆ."

ಪತ್ರವು ಫ್ರೆಜರರು ಶಾಹುರವರ ಏಳಿಗೆಯ ಬಗ್ಗೆ ಎಷ್ಟು ಕಾಳಜಿ ವಹಿಸಿದ್ದರೆಂಬುದನ್ನು ತೋರಿಸುತ್ತದೆ. ತಾವು ಮೂರು ತಿಂಗಳು ರಜೆ ತೆಗೆದುಕೊಂಡು ಒಡನಾಡಿಯಾಗಿ ನನ್ನ ಜೊತೆಯಲ್ಲಿರಬೇಕು ಅಥವಾ ಅದು ಸಾಧ್ಯವಾಗದಿದ್ದಲ್ಲಿ ನನ್ನ ಒಡನಾಡಿಯಾಗಿ ಯಾರನ್ನಾದರೂ ಸೂಚಿಸಬೇಕೆಂದು ಕೋರುವ ಪತ್ರವನ್ನು ಶಾಹುರವರು ಫ್ರೆಜರರಿಗೆ ಬರೆದರು. ಶಾಹುರವರು ಒಬ್ಬ ನಾಗರಿಕ ಹೊಸ ಪೊಲಿಟಿಕಲ್ ಏಜೆಂಟ್ ಬೇಕೆಂದು ಶಾಹು ಬಯಸಿದ್ದರು. ಆದರೆ ಗೌರ್ನರರಿಗೆ ಆ ರೀತಿ ಸೂಚಿಸುವುದು ವಿವೇಕದ ಮಾತಲ್ಲ ಎಂದು ಪ್ರೆಜರ್ ಶಾಹುರವರಿಗೆ ಸಲಹೆ ನೀಡಿದರು.[19]

ಶಾಹುರವರು ಮೇ ೧೭, ೧೯೦೨ರಿಂದ ಆಗಸ್ಟ್ ೩೧, ೧೯೦೨ರವರೆಗೆ ಇಂಗ್ಲೆಂಡು ಮತ್ತು ಯೂರೋಪಿನ ಇತರೆ ದೇಶಗಳಿಗೆ ಪ್ರವಾಸ ಮಾಡಿದ್ದರು. ಬಾಪು ಸಾಹೇಬ ಮತ್ತು ದಿವಾನರಾದ ಸಬ್ನೀಸರು ಜೊತೆಯಲ್ಲಿ ಹೋಗಿದ್ದರು. ಬ್ರಿಟಿಷ್ ಅಧಿಕಾರಿ ಸರ್ ಕ್ಲಾಡ್‌ಹಿಲ್ ಅವರು ಸಹಚರರಾಗಿ ಹೋಗಿದ್ದರು. ಫ್ರೆಜರರ ಹೆಂಡತಿ ಅದೇ ಹಡಗಿನಲ್ಲಿ ಇಂಗ್ಲೆಂಡಿಗೆ ಹೊರಟರು. ಕ್ಯಾಂಬ್ರಿಡ್ಜ್ ಯೂನಿವರ್ಸಿಟಿಯು ಶಾಹುರವರಿಗೆ ಎಲ್.ಎಲ್.ಡಿ. ಯ ಗೌರವ ಪದವಿಯನ್ನು ಪ್ರದಾನಮಾಡಿತು. ಫ್ರೆಜರರು ಪತ್ರ ಬರೆದು

ಅವರನ್ನು ಅಭಿನಂದಿಸಿದರು ಮತ್ತು ಪದವಿ ಪ್ರಾಮುಖ್ಯತೆಯನ್ನು ವಿವರಿಸಿ ಹೇಳಿದರು. ಫ್ರೇಜರರು ಬರೆಯುತ್ತಾರೆ: "ಸಂಸ್ಥಾನದಲ್ಲಿ ಯಾವ ಬ್ರಾಹ್ಮಣನೂ ಅಕಾಡೆಮಿಕ್ ಅವಾರ್ಡುಗಳಲ್ಲಿ ನಿಮ್ಮನ್ನು ಮೀರಿಸಲಾರರು".[20]

ಫ್ರೇಜರರು ಈ ಮಾತುಗಳನ್ನು ವೇದೋಕ್ತ ಪ್ರಕರಣದ ಹಿನ್ನೆಲೆಯಲ್ಲಿ ಹೇಳಿದರು. ಆ ಪ್ರಕರಣದಲ್ಲಿ ಫ್ರೇಜರರು ತಮ್ಮ ಶಿಷ್ಯನ ಪರವಾಗಿ ತೊಡಗಿಸಿಕೊಂಡಿದ್ದರೆಂಬುದನ್ನು ಈ ಪತ್ರವು ಸಾಧಿಸಿ ತೋರಿಸುತ್ತದೆ. ೧೯೦೨ರಲ್ಲಿ ಮೂರು ತಿಂಗಳ ರಜೆಯಲ್ಲಿ ಇಂಗ್ಲೆಂಡಿನಲ್ಲಿ ಇರುವಾಗ, ಫ್ರೇಜರರು ಸೆಪ್ಟೆಂಬರ್ ೨೫ರಂದು ಪತ್ರ ಬರೆದು ಶಾಹುರವರ ಸಫಲ ವಿದೇಶಿ ಪ್ರವಾಸದ ಬಗ್ಗೆ ಅಭಿನಂದನೆಗಳನ್ನು ತಿಳಿಸುತ್ತಾರೆ. ಬ್ರಾಹ್ಮಣರೊಡನೆ ನಡೆಯುತ್ತಿರುವ ಹೋರಾಟದಲ್ಲಿ ಸರಕಾರವು ಹೋರಾಟದ ಪರವಾಗಿರುವುದೆಂಬ ವಿಶ್ವಾಸವನ್ನು ಅವರು ವ್ಯಕ್ತಪಡಿಸುತ್ತಾರೆ. ಶಾಹುರವರು ವಿವಿಧ ಸಮುದಾಯಗಳ ನಡುವೆ ಸಾಮರಸ್ಯದ ವಾತಾವರಣವನ್ನು ಶಾಹು ನಿರ್ಮಿಸುವುದರಲ್ಲಿ ಸಫಲರಾಗುತ್ತಾರೆಂದು ಆಶಾವಾದಿಯಾಗಿದ್ದರು.

## ವೇದೋಕ್ತ ವಿವಾದ

ವಿಷವುಣಿಸಿದ ಪ್ರಕರಣದಂತೆಯೇ ವೇದೋಕ್ತ ಅಧ್ಯಾಯವು ಕೂಡ ಶಾಹುರವರಿಗೆ ಒಂದು ಅತಿಕಷ್ಟದ ಪರೀಕ್ಷೆಯಾಗಿತ್ತು. ಒಂದು ಕಡೆ ಶಾಹು ಇದ್ದರೆ, ಇನ್ನೊಂದು ಕಡೆಗೆ ಲೋಕಮಾನ್ಯ ತಿಲಕ್ ನೇತೃತ್ವದ ಮಹಾರಾಷ್ಟ್ರದ ಇಡೀ ಕರ್ಮಠ ಬ್ರಾಹ್ಮಣತ್ವ. ಈ ಪ್ರಕರಣವನ್ನು ಬಾಂಬೆ ಸರಕಾರದ ಮಟ್ಟದಲ್ಲಿ ಹೋರಾಟ ನಡೆದಿತ್ತು ಮತ್ತು ಆಮೇಲೆ ಶಾಹುರವರಿಗೆ ಕಳಂಕ ಹಚ್ಚಲು ಮತ್ತು ಅವರನ್ನು ಸಿಂಹಾಸನದಿಂದ ಇಳಿಸಲು ವೈಸ್‌ರಾಯ್‌ವರೆಗೆ ಹೋಯಿತು. ಈ ವಿವಾದವು ಅಕ್ಟೋಬರ್ ೧೯೦೧ರಿಂದ ಮೇ ೧೯೦೫ರವರೆಗೆ ಮುಂದುವರಿದಂತೆ ಶಾಹುರವರು ಹೆಚ್ಚು ನೊಂದರು ಮತ್ತು ಹಲವಾರು ರಾತ್ರಿಗಳು ನಿದ್ದೆಯಿಲ್ಲದೆ ಕಳೆದರು. ಅವರು ಹಲವು ಪ್ರಮುಖ ವಿಷಯಗಳ ಬಗ್ಗೆ ನಿರ್ಧಾರಗಳನ್ನು ಕೈಗೊಳ್ಳಬೇಕಾಗಿತ್ತು. ಹಲವು ಕಟುಪರೀಕ್ಷೆಯ ಕ್ಷಣಗಳಿದ್ದವು. ಫ್ರೇಜರರು ಈ ಕಷ್ಟದಾಯಕ ಘಟ್ಟದಲ್ಲಿ ಶಾಹುರವರ ಪರವಾಗಿದ್ದರು. ನಿಜವಾದ ಸ್ನೇಹವು ಅಂತಹ ಕಷ್ಟಕಾಲದಲ್ಲಿ ಪರೀಕ್ಷೆಗೊಳಗಾಗುತ್ತದೆ. ಫ್ರೇಜರರು ಪರೀಕ್ಷೆಯನ್ನು ಪಾಸುಮಾಡಿದರು. ಶಾಹುರವರು ಸತ್ಯ ಮತ್ತು ನ್ಯಾಯದ ಕಡೆಯಿದ್ದಾರೆಂಬುದು ಫ್ರೇಜರರಿಗೆ ಖಚಿತವಾಗಿತ್ತು. ಅವರು ಬ್ರಾಹ್ಮಣರ ಕುಯುಕ್ತಿಗಳನ್ನು ಬಲ್ಲವರಾಗಿದ್ದರು. ಅವರು ಶಾಹುರವರು ನ್ಯಾಯಬದ್ಧ ಉದ್ದೇಶಕ್ಕೆ ಹೋರಾಡುತ್ತಿದ್ದಾರೆ ಮತ್ತು ಅವರು ಎಲ್ಲಾ ಅಧಿಕಾರವನ್ನು ಹೊಂದಿದ್ದರೂ ನ್ಯಾಯವಾದ ರೀತಿಯಲ್ಲಿ ವರ್ತಿಸುತ್ತಿದ್ದಾರೆಂದು ಅವರು ಕಂಡಿದ್ದರು. ಫ್ರೇಜರರು ಬ್ರಿಟಿಷ್ ಅಧಿಕಾರಿಯ ಅಪರೂಪದ ನಿದರ್ಶನವಾಗಿದ್ದಾರೆ. ಅವರು ತಮ್ಮ ಜೀವನದ ಹಾದಿಯನ್ನೇ ಅಪಾಯಕ್ಕೊಡ್ಡಿ ಸಾಮ್ರಾಜ್ಯದ ಒಬ್ಬ ಸಾಮಂತನನ್ನು ಬೆಂಬಲಿಸುತ್ತಾರೆ.

ಆಗಸ್ಟ್ ೪, ೧೯೦೩ರಲ್ಲಿ ಲಂಡನ್ನಿನಿಂದ ಬರೆದ ಪತ್ರದಲ್ಲಿ ಫ್ರೇಜರರು ಶಾಹುರವರಿಗೆ ಅಮೂಲ್ಯವಾದ ಮಾರ್ಗದರ್ಶನ ನೀಡುತ್ತಾರೆ. ಸರಕಾರದ ಹಿಡಿತದಲ್ಲಿದ್ದ ಸಾಮಂತರ ಎಲ್ಲಾ ಹಕ್ಕುಗಳನ್ನು ಶಾಹು ಪಡೆದಿದ್ದಕ್ಕೆ ಫ್ರೇಜರರು ಅಭಿನಂದಿಸುತ್ತಾ ಅವುಗಳನ್ನು ಪ್ರಸ್ತುತ ಸನ್ನಿವೇಶದಲ್ಲಿ ನ್ಯಾಯೋಚಿತವಾಗಿ ಬಳಸಬೇಕೆಂದು ಶಾಹುರವರಿಗೆ ಸಲಹೆ ನೀಡುತ್ತಾರೆ. ವೇದೋಕ್ತ ವಿವಾದದ ಬಗ್ಗೆ ಅವರು ಶಾಹುರವರಿಗೆ ಎಲ್ಲಾ ಸಾಮಂತರನ್ನು ಮನವೊಲಿಸಬೇಕು ಮತ್ತು ಅವರ ಕ್ಷಾತ್ರೀಯ ಸ್ಥಾನಮಾನ ಸಮಸ್ಯೆಯಲ್ಲಿ ಸಿಲುಕಿರುವುದರಿಂದ ಅವರೆಲ್ಲರನ್ನೂ ಒಟ್ಟಿಗೆ ಕೊಂಡೊಯ್ಯಬೇಕೆಂದು ಒತ್ತಿಹೇಳಿದರು. ಅವರ ಘನತೆ–ಗೌರವಕ್ಕೆ ಧಕ್ಕೆಯುಂಟಾಗಿದೆ. ಪತ್ರಿಕೆಗಳಿಗೆ

ತಮ್ಮ ನಿಲುವನ್ನು ಸಂಪೂರ್ಣವಾಗಿ ವಿವರಿಸಿ ಹೇಳಬೇಕೆಂದು ಫ್ರೆಜರರು ಶಾಹುರವರಿಗೆ ಸಲಹೆ ನೀಡಿದರು. ರಾಜೋಪಾಧ್ಯೆ ಅವರಿಗೆ ನೀಡಿದ್ದ ವತನದ ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಒದಗಿಬಂದ ಸನ್ನಿವೇಶಗಳನ್ನು ಜನರು ತಿಳಿದುಕೊಳ್ಳಬೇಕು. ರಾಜೋಪಾಧ್ಯೆ ಅವರಿಗೆ ಮತ್ತೆ ಮತ್ತೆ ಅವಕಾಶಗಳನ್ನು ತಮ್ಮ ನಿಲುವು ವಿವರಿಸಲು ತಮ್ಮ ಸಮರ್ಥನೆಗಳನ್ನು ಕೇಳಲು ಒಂದಕ್ಕಿಂತ ಹೆಚ್ಚು ಸಂದರ್ಭಗಳಲ್ಲಿ ಅವಕಾಶ ನೀಡಿದ್ದರು ಮತ್ತು ನಿರ್ಧಾರವು ಅವರ ಮೇಲೆ ಬಲಾತ್ಕಾರವಾಗಿ ಹೇರಲಾಯಿತೆಂಬುದನ್ನು ಜನರು ತಿಳಿಯಬೇಕು. ಇದೆಲ್ಲವೂ ಬ್ರಾಹ್ಮಣರ ಬಗೆಗಿನ ಯಾವುದೇ ದ್ವೇಷದಿಂದಲ್ಲ, ರಾಜೋಪಾಧ್ಯೆಯವರ ಬೇಜವಾಬ್ದಾರಿ ಸ್ವಭಾವದಿಂದ ಇದೆಲ್ಲ ಸಂಭವಿಸಿದೆಯೆಂಬುದನ್ನು ಪ್ರತಿಯೊಬ್ಬರೂ ಅರಿಯಬೇಕು. ಫ್ರೆಜರರು ಬರೆಯುತ್ತಾರೆ: "ಬ್ರಾಹ್ಮಣರನ್ನು ಒಂದು ವರ್ಗವಾಗಿ ಸೇಡಿನಿಂದ ಶಾಹು ಶಿಕ್ಷೆ ನೀಡುತ್ತಿದ್ದಾರೆಂದು ಹೇಳುವುದಕ್ಕೆ ಯಾವುದೇ ಅವಕಾಶ ನೀಡಬೇಡ".[22]

ಫ್ರೆಜರರ ಸಲಹೆಗೆ ಶಾಹುರವರ ಪ್ರತಿಕ್ರಿಯೆ ನೀರಸವಾಗಿದ್ದರೂ ತುಂಬಾ ಒಳನೋಟ ಉಳ್ಳದ್ದು. ಆತ್ಮ–ಗೌರವದ ಶಾಹುರವರು ಫ್ರೆಜರರ ಎಲ್ಲಾ ಸಲಹೆಗಳನ್ನು ಶಾಹುರವರು ಒಪ್ಪಲಿಲ್ಲ. ಬ್ರಾಹ್ಮಣರ ಹೆಚ್ಚುತ್ತಿರುವ ವಿರೋಧವನ್ನು ಪ್ರಸ್ತಾಪಿಸುತ್ತಾ ೧೬ ಸೆಪ್ಟೆಂಬರ್ ೧೯೦೫ರ ಪತ್ರದಲ್ಲಿ ಶಾಹುರವರು ಬರೆಯುತ್ತಾರೆ: ನಾನು ಖಂಡಿತವಾಗಿ ಅವರ ದಾರಿಗಳನ್ನು ನಿಲ್ಲಿಸಲಾರೆ ಅಥವಾ ನಾನು ಸಹ ಮಣಿಯುವುದಿಲ್ಲ. ನಾನು ನಿಜವಾದ ಒಂದು ಸದುದ್ದೇಶಕ್ಕಾಗಿ ಹೋರಾಡುತ್ತಿದ್ದೇನೆ ಎಂಬುದನ್ನು ನಾನು ಪ್ರಜ್ಞಾಪೂರ್ವಕವಾಗಿ ನಂಬಿದ್ದರಿಂದ ನಾನು ಧೈರ್ಯವಾಗಿ ಕ್ರಮ ಕೈಗೊಳ್ಳುತ್ತಿದ್ದೇನೆ... ನನ್ನ ಆಡಳಿತದ ಬಗ್ಗೆ ನನ್ನ ಜಾತಿಯ ಬಗ್ಗೆ ಬ್ರಾಹ್ಮಣರು ಲೇವಡಿ ಮಾಡುತ್ತಿದ್ದಾರೆ, ಪ್ರತಿಯೊಂದು ಅವರ ಪತ್ರಿಕೆಗಳಲ್ಲಿದೆ".[23]

ವಾಸ್ತವಿಕವಾಗಿ ಪುಣೆಯ ಪತ್ರಿಕೆಗಳು ವೇದೋಕ್ತ ಬೆಂಕಿಗೆ ತುಪ್ಪ ಸುರಿದವು. ಶಾಹುರವರಿಗೆ ತುಂಬಾ ನೋವಾಗಿದೆ. ಹಿಂದುಳಿದ ವರ್ಗಗಳಿಗೆ ಸರಕಾರಿ ಸೇವೆಗಳಲ್ಲಿ ಶೇಕಡ ೫೦ರಷ್ಟು ಮೀಸಲಾತಿಯನ್ನು ಈ ಸಂದಿಗ್ಧ ಸ್ಥಿತಿಯಲ್ಲಿ ನಿರ್ಧಾರ ಮಾಡಬೇಡವೆಂದು ಫ್ರೆಜರರು ನೀಡಿದ ಸಲಹೆಯನ್ನು ಶಾಹುರವರು ಒಪ್ಪಲಿಲ್ಲ. ಆದರೆ ಅಂತಹ ಭಿನ್ನಾಭಿಪ್ರಾಯಗಳು ಅವರ ಬಲಿಷ್ಠ ಸ್ನೇಹಬಂಧಕ್ಕೆ ಭಂಗ ತರಲಿಲ್ಲ.

ರಾಜೋಪಾಧ್ಯೆ ಅವರು ವೇದೋಕ್ತದ ಬಗ್ಗೆ ಬಾಂಬೆ ಸರಕಾರ ನೀಡಿದ್ದ ತೀರ್ಮಾನದ ವಿರುದ್ಧ ಭಾರತ ಸರಕಾರಕ್ಕೆ ಮನವಿ ಮಾಡಿಕೊಂಡರು. ಫ್ರೆಜರ್ ಅವರು ಭಾರತ ಸರಕಾರದ ವಿದೇಶ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯದರ್ಶಿಯಾಗಿ ೧೯೦೪ ಮತ್ತು ೧೯೦೬ರ ನಡುವೆ ಕಾರ್ಯ ನಿರ್ವಹಿಸುತ್ತಿದ್ದರು. ಬಾಂಬೆಯ ಸರಕಾರದ ಕಾರ್ಯದರ್ಶಿ ಸಿ. ಎಚ್. ಹಿಲ್ ಅವರು ತನ್ನ ಟಿಪ್ಪಣಿ ಸಮೇತ ಮನವಿಯನ್ನು ಮಾರ್ಚ್ ೩, ೧೯೦೫ರಲ್ಲಿ ಫ್ರೆಜರರಿಗೆ ರವಾನಿಸಿದರು. ಅವರು ಶಾಹುರವರ ಪಕ್ಷವು (ಪರ) ವೇದೋಕ್ತ ಪ್ರಕರಣದಲ್ಲಿ ಸರಿಯಾಗಿದೆ, ರಾಜೋಪಾಧ್ಯೆ ಅವರ ಮನವಿಯನ್ನು ಪರಿಗಣಿಸುವ ಅಗತ್ಯವಿಲ್ಲ ಮತ್ತು ಸಮಸ್ಯೆ ಇತಿಹಾಸದ ದೃಷ್ಟಿಯಿಂದ, ಬ್ರಿಟಿಷ್ ಸರಕಾರವು ಈ ವಿಷಯದಲ್ಲಿ ಹಸ್ತಕ್ಷೇಪಮಾಡುವ ಅಗತ್ಯವಿಲ್ಲ".[24]

## ಬೇಟೆ ಮತ್ತು ಮದುವೆ

ಶಾಹು ಮತ್ತು ಫ್ರೆಜರರು ಬೇಟೆಗಾರಿಕೆಯ ಪ್ರೇಮಿಗಳು ಅವರು ಪರಸ್ಪರ ತಮ್ಮ ಬೇಟೆಗಳ ಸಾಹಸ ಕಥೆಗಳನ್ನು ತಿಳಿಸುತ್ತಿದ್ದರು ಮತ್ತು ಬೇಟೆಯ ಕಾಲದಲ್ಲಿನ ರೋಮಾಂಚನಕಾರಿಯಾದ ಘಟನೆ ಮತ್ತು ಅವಘಡಗಳನ್ನು ವಿವರಿಸುತ್ತಿದ್ದರು. ಶಾಹುರವರು ಫ್ರೆಜರರಿಗೆ ಕೆಲವು ಬೇಟೆನಾಯಿಗಳನ್ನು ಕಳುಹಿಸುವಂತೆ

ಕೇಳಿದ್ದರು. ಅವರು ಕುದುರೆಗಳ ತಳಿಗಳನ್ನು ಬೆಳೆಸುವುದರಲ್ಲಿ ಆಸಕ್ತರಾಗಿದ್ದರು. ಇಬ್ಬರು ಪರಸ್ಪರ ಬೇಟೆಗಾಗಿ ಆಹ್ವಾನಗಳನ್ನು ಕೊಟ್ಟುಕೊಳ್ಳುತ್ತಿದ್ದರು. ಕೆಲವು ಪತ್ರಗಳು ಮಕ್ಕಳ ಬಗ್ಗೆ, ಅವರ ಶಿಕ್ಷಣದ ಬಗ್ಗೆ ಮತ್ತು ಅವರ ಮದುವೆಯ ಬಗ್ಗೆ ಹೇಳುತ್ತವೆ. ಅಂತಹ ಪತ್ರಗಳು ಎರಡು ಕುಟುಂಬಗಳ ನಡುವಣ ಆಸಕ್ತಿಯನ್ನು ಸ್ಪಷ್ಟಪಡಿಸುತ್ತವೆ. ಶಾಹುರವರು ಹಿಂದೂ ಧರ್ಮದಲ್ಲಿರುವ ವರ್ಣವ್ಯವಸ್ಥೆಯ ಬಗ್ಗೆ ಸಂಗ್ರಹಿಸಿದ್ದ ಮಾಹಿತಿಯನ್ನು ಅದರ ಬಗ್ಗೆ ಇಂಗ್ಲೀಷಿನ ವ್ಯಕ್ತಿ ಒಂದು ಪುಸ್ತಕ ಬರೆಯುವವರಿದ್ದಾರೆ. ಅವರ ಅವಲೋಕನಕ್ಕಾಗಿ ಆ ಮಾಹಿತಿಯನ್ನು ಕಳುಹಿಸಿಕೊಡಬೇಕೆಂದು ಫ್ರೇಜರರು ಶಾಹುರವರನ್ನು ಕೇಳಿದ್ದರು. ಶಾಹುರವರು ಪ್ರೊ. ಡೋಂಗ್ರೆ ಅವರಿಗೆ ವಿಷಯದ ಬಗ್ಗೆ ಅಧಿಕೃತ ವಿಷಯವನ್ನು ಸಂಗ್ರಹಿಸುವಂತೆ ಕೇಳಿದರು. ಬ್ರಾಹ್ಮಣರು ಬರೆದ ಪುಸ್ತಕಗಳಲ್ಲಿ ತಾವೇ ನಡೆಸಿದ ಅತ್ಯಾಚಾರಗಳ ಬಗ್ಗೆ ಮೌನವಹಿಸಿದ್ದರು. ತಾವು ಸಂಗ್ರಹಿಸಿದ ಎಲ್ಲಾ ಮಾಹಿತಿಯನ್ನು ಕಳುಹಿಸಿಕೊಡಲು ಶಾಹು ಪ್ರೊ. ಡೋಂಗ್ರೆ ಅವರಿಗೆ ಹೇಳಿದರು. ಅಧಿಕಾರದಲ್ಲಿದ್ದ ಬ್ರಾಹ್ಮಣರು ಮೊಘಲರಿಗಿಂತ ಅಧಿಕಪಟ್ಟು ಇತರೆ ಜಾತಿಗಳ ಮೇಲೆ ಅತ್ಯಾಚಾರಗಳನ್ನು ನಡೆಸಿದ್ದಾರೆಂದು ಹೊಸ ಮಾಹಿತಿ ಸೂಚಿಸುತ್ತದೆಯೆಂದು ಶಾಹುರವರು ಫ್ರೇಜರರಿಗೆ ಒಂದು ಪತ್ರದಲ್ಲಿ ತಿಳಿಸಿದ್ದಾರೆ.[25]

ಶಾಹುರವರು ನವೆಂಬರ್ ೨೯, ೧೯೦೭ರಲ್ಲಿ ಮತ್ತೊಂದು ಪತ್ರವನ್ನು ಬರೆದು ಬೇಟೆಯಾಡುವಾಗ ಗಂಭೀರವಾಗಿ ಗಾಯಗೊಂಡು ಆರು ತಿಂಗಳುಗಳವರೆಗೆ ಹಾಸಿಗೆಪೀಡಿತನಾಗಿದ್ದೇನೆಂದು ತಿಳಿಸಿದರು. ಆ ಸಮಯದಲ್ಲಿ ಫ್ರೇಜರರು ಮೈಸೂರಿನ ರಾಜಕೀಯ ಏಜೆಂಟರಾಗಿದ್ದರು. ಅವರು ತಾನು ಕಾವೇರಿ ಜಲಪಾತವನ್ನು ನೋಡಲು ಹೋಗುವೆನೆಂದು ಬರೆಯುತ್ತಾರೆ. ಅವರು ಕೂಡ ಚಿಕ್ಕ ಮತ್ತು ದೊಡ್ಡ ಜಲಪಾತಗಳನ್ನು ಹೇಗೆ ಉಪಯೋಗಿಸಬಹುದೆಂಬುದರ ಬಗ್ಗೆ ಕಂಡುಕೊಳ್ಳಲು ಬಯಸಿದ್ದರು. ಫ್ರೇಜರರು ಮೈಸೂರಿನಲ್ಲಿರುವ ರೇಷ್ಮೆ ಕೈಗಾರಿಕೆಯನ್ನು ಪರೀಕ್ಷಿಸಲು ಬಯಸಿದ್ದರು. ಶಾಹುರವರು ರೇಷ್ಮೆ ಉತ್ಪಾದನೆ ಬಗ್ಗೆ ಪ್ರಯೋಗ ನಡೆಸುತ್ತಿದ್ದರು. ಎಲ್ಲೋ ನಡೆಸಿದ ಸಫಲ ಪ್ರಯೋಗಗಳನ್ನು ತಮ್ಮ ಸಂಸ್ಥಾನದಲ್ಲಿ ನಡೆಸಲು ಯಾವಾಗಲೂ ಪ್ರಯತ್ನಿಸುತ್ತಿದ್ದರು.[26]

ಫ್ರೇಜರರ ಮಗಳು ಸಿಕಂದ್ರಾಬಾದಿನಲ್ಲಿ ನವೆಂಬರ್ ೧೯೧೬ರಲ್ಲಿ ಮದುವೆಯಾದರು. ಶಾಹುರವರು ಅನಾರೋಗ್ಯದಿಂದ ನರಳುತ್ತಿದ್ದರಿಂದ ಮದುವೆಗೆ ಹೋಗಲಾಗದೆಂದು ನಿರ್ಧರಿಸಿದ್ದರು. ಅವರು ಅದರ ಪ್ರಕಾರ ಅವರಿಗೆ ತಿಳಿಸಿದ್ದರು. ಆದರೆ ಶಾಹು ವಿಚಲಿತರಾಗಿದ್ದರು. ತಮ್ಮ ಗುರುಗಳ ಮಗಳ ಮದುವೆಯಿಂದ ದೂರ ಉಳಿಯುವುದು ಹೇಗೆ? ತಕ್ಷಣ ತಮ್ಮ ಯೋಜನೆಯನ್ನು ಬದಲಾಯಿಸಿಬಿಟ್ಟರು ಮತ್ತು ಮದುವೆಗಿಂತ ಒಂದುದಿನ ಮುಂಚೆ ತಂತಿಸಂದೇಶವನ್ನು ಫ್ರೇಜರರಿಗೆ ಕಳುಹಿಸಿಕೊಟ್ಟರು. ತಮ್ಮ ಇಬ್ಬರು ಪುತ್ರರೊಡನೆ ವಿಶೇಷ ರೈಲಿನಲ್ಲಿ ನವೆಂಬರ್ ೮ ರಂದು ಬೆಳಿಗ್ಗೆ ಸಿಕಂದ್ರಾಬಾದಿಗೆ ತಲುಪಿದರು. ಅವರು ಭೇಟಿಯಾದಾಗ ಶಾಹುರವರು ಫ್ರೇಜರರಿಗೆ ಹೇಳಿದರು: "ಇದ್ದಕ್ಕಿದ್ದ ಹಾಗೆ ಆಗಮಿಸಿದ್ದಕ್ಕೆ ನನ್ನನ್ನು ಕ್ಷಮಿಸಿ. ನನ್ನ ವಸತಿಯ ಬಗ್ಗೆ ತಾವು ಚಿಂತಿಸಬೇಡಿ. ನಾನು ರೈಲ್ವೆ ಬೋಗಿಯಲ್ಲಿ ತಂಗುವೆನು." ಶಾಹುರವರು ವಧುವಿಗೆ ಉಡುಗೊರೆ ಕೊಡಲು ಬಯಸಿದರು. ನಿಯಮಗಳ ಪ್ರಕಾರ ಅವಕಾಶವಿಲ್ಲದ್ದರಿಂದ ಕೊಡಬೇಡಿ ಎಂದು ಫ್ರೇಜರರು ಹೇಳಿದರು. ಶಾಹು ಅಸಂತೋಷಗೊಂಡರು. ಹಿಂದೆಯೂ ತನ್ನ ಧಾರವಾಡದ ವಾಸದ ಕೊನೆಯಲ್ಲಿ ಫ್ರೇಜರರ ಪತ್ನಿಗೆ ಉಡುಗೊರೆ ಕೊಡಲು ಬಯಸಿದಾಗ ಸಹ ಅದೇ ಕಾರಣಕ್ಕೆ ಫ್ರೇಜರರು ನಿರಾಕರಿಸಿದ್ದರು. ಶಾಹುರವರು ಸಿಕಂದ್ರಾಬಾದಿನಲ್ಲಿ ಎರಡು ದಿನ ಇದ್ದು ವಾಪಸ್ಸಾದರು.

**ಶಾಹು ಮತ್ತು ಸಾಮಾಜಿಕ ಬದಲಾವಣೆ**

೧೯೧೦ರ ನಂತರ ಶಾಹುರವರು ಆಸಕ್ತಿಯಿಂದ ಸಾಮಾಜಿಕ ಪರಿವರ್ತನೆಯಲ್ಲಿ ಕೆಲಸಮಾಡಲು ತೊಡಗಿದರು. ಅವರು ಹಲವು ಕಾನೂನುಗಳಾದ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಕುಲಕರ್ಣಿ ವತನ್ನಿನ ರದ್ದತಿ, ಅಸ್ಪೃಶ್ಯತೆಯ ನಿಷೇಧ ಮತ್ತು ಸಹಕಾರಿ ತತ್ವಗಳನ್ನು ಸಾಮಾನ್ಯ ವ್ಯಕ್ತಿಯ ಹಿತಕ್ಕಾಗಿ ಕಾನೂನುಗಳನ್ನು ಮಾಡಿದರು. ನಿಧಾನವಾಗಿ ಶಾಹುರವರ ಕೀರ್ತಿಯು ಮತ್ತು ಕೆಲಸವು ತಮ್ಮ ಸಂಸ್ಥಾನದಿಂದ ಹೊರಗಿರುವ ಬ್ರಿಟಿಷ್ ಪ್ರದೇಶಗಳಿಗೆ ಹರಡತೊಡಗಿತು. ಅವರು ತಮ್ಮ ಸಂಸ್ಥಾನದ ಹೊರಗಿರುವ ಹಲವು ಸಾಮಾಜಿಕ ಮತ್ತು ರಾಜಕೀಯ ಆಂದೋಲನಗಳ ಸಂಪರ್ಕಕ್ಕೆ ಬಂದರು. ಅವರೊಬ್ಬರೇ ಬಹುಜನ ಸಮಾಜದ ನಾಯಕರೆಂದು ಹೊಗಳಲಾಯಿತು. ಇವೆಲ್ಲವೂ ಬ್ರಾಹ್ಮಣೇತರರ ಪಕ್ಷವನ್ನು ಕಟ್ಟುವ ಕಡೆಗೆ ಕೊಂಡೊಯ್ದವು. ವಿಶ್ವದ ಮಹಾಯುದ್ಧವಾದ ಮೇಲೆ ಭಾರತವು ಸ್ವರಾಜ್ಯದ ಮಿತಹಕ್ಕುಗಳನ್ನು ಪಡೆಯುವುದರಲ್ಲಿತ್ತು. 'ಸ್ವದೇಶಿ ಆಡಳಿತ' (ಹೋಂ ರೂಲ್) ಎಂಬ ಪರಿಕಲ್ಪನೆಯ ಬಗ್ಗೆ ಚರ್ಚೆಗಳಾದವು. ಅಧಿಕಾರದ ವರ್ಗಾವಣೆಯಲ್ಲಿ ಬಹುಜನ ಸಮಾಜದ ಆಸಕ್ತಿಗಳನ್ನು ಕಡೆಗಣಿಸದೆ ಶಾಹುರವರು ಪ್ರಾಮಾಣಿಕವಾಗಿ ಖಾತರಿಗೊಳಿಸಲು ಬಯಸಿದ್ದರು. ಆದ್ದರಿಂದ ಅವರು ತಮ್ಮ ಸಂಸ್ಥಾನದ ಹೊರಗಿನ ಸುಸಂಗತ ಆಂದೋಲನಗಳಲ್ಲಿ ಅವರು ಭಾಗವಹಿಸಬೇಕಾಯಿತು. ಆದರೆ ಶಾಹುರವರು ಸಾಮಂತರಾಗಿದ್ದರಿಂದ ಅವರು ತಮ್ಮ ಮಿತಿಗಳೊಳಗೇ ಕೆಲಸಮಾಡಬೇಕಾಯಿತು. ಶಾಹುರವರು ತಮ್ಮ ಮಿತಿಗಳನ್ನು ಮೀರುತ್ತಿದ್ದಾರೆ ಎಂಬ ತಪ್ಪು ಕಲ್ಪನೆ ಇದ್ದೇ ಇತ್ತು. ಬ್ರಾಹ್ಮಣ ಪತ್ರಿಕೆಗಳು ಆ ಉದ್ದೇಶಕ್ಕಾಗಿಯೇ ಕೆಲಸ ಮಾಡುತ್ತಿದ್ದವು. ಅಂತಹ ಸಮಯದಲ್ಲಿ ಶಾಹುರವರು ಚೆನ್ನಾಗಿ ಅರಿತಿರುವ ತಮ್ಮ ಗುರುಗಳೊಂದಿಗೆ ಮುಕ್ತವಾಗಿ ಚರ್ಚಿಸುತ್ತಿದ್ದರು. ೧೮೯೫ ಮತ್ತು ೧೯೧೦ರ ನಡುವೆ ಶಾಹು ಮತ್ತು ಫ್ರೆಜರರ ನಡುವಣ ಪತ್ರವ್ಯವಹಾರಕ್ಕಿಂತ ೧೯೧೦ ಮತ್ತು ೧೯೧೯ರ ನಡುವೆ ಅವರಿಬ್ಬರ ನಡುವೆ ಕಡಿಮೆ ಪತ್ರವ್ಯವಹಾರಗಳು ನಡೆದಿವೆ. ಆದರೆ ಪತ್ರವ್ಯವಹಾರ ಎಂದಿಗೂ ನಿಲ್ಲಲಿಲ್ಲ. ಸಲಹೆಗಳನ್ನು ಕೇಳುವ ಸಂದರ್ಭಗಳು ಕಡಿಮೆಯಾದವು. ಆದರೆ ಪತ್ರವ್ಯವಹಾರ ಆರೋಗ್ಯ–ಭಾಗ್ಯಗಳ ಬಗ್ಗೆ ವಿಚಾರಿಸುವ ಪತ್ರವ್ಯವಹಾರ ನಿಲ್ಲಲಿಲ್ಲ. ೧೯೧೦ ಮತ್ತು ೧೯೧೯ರ ನಡುವೆ ಫ್ರೆಜರರು ಮೈಸೂರಿನಲ್ಲಿ ರಾಜಕೀಯ ಏಜೆಂಟ್ ಮತ್ತು ರೆಸಿಡೆಂಟ್‌ರಾಗಿ ಮೈಸೂರು, ಹೈದ್ರಾಬಾದ್, ಕಾಶ್ಮೀರ ಮತ್ತು ವಾಪಸ್ಸು ಹೈದ್ರಾಬಾದ್‌ಗೆ ಬಂದಿದ್ದರು.

ಮೊದಲನೇ ವಿಶ್ವಯುದ್ಧದ ಸಮಯದಲ್ಲಿ ಕೊಲ್ಹಾಪುರದಲ್ಲಿ ಸೈನಿಕ ನೇಮಕಾತಿಯ ಸಮಯದಲ್ಲಿ ಗಲಭೆಗಳು ನಡೆದವು. ಶಾಹು ಮತ್ತು ವುಡ್‌ಹೌಸ್‌ರ ನಡುವೆ ತಪ್ಪುಗ್ರಹಿಕೆಯಿತ್ತು. ಶಾಹುರವರು ರೇ ಅವರ ಸನ್ನಿವೇಶ ಪುನರಾವರ್ತಿಸಬಹುದೆಂದು ಭಾವಿಸಿದ್ದರು. ಅವರು ಫ್ರೆಜರರಿಗೆ ಮೇ ೮, ೧೯೧೭ ರಂದು ಕೊಲ್ಹಾಪುರದಲ್ಲಿದ್ದ ಸನ್ನಿವೇಶದ ಬಗ್ಗೆ ಪತ್ರ ಬರೆದಿದ್ದರು. ಶಾಹುರವರು ಗೌರ್ನರ್ ಲಾರ್ಡ್ ವಿಲ್ಲಿಂಗ್‌ಟನ್ ಅವರ ವಿಸ್ತರಣೆಗೆ ಮಾಡಿದ ಪ್ರಯತ್ನಗಳನ್ನು ಫ್ರೆಜರರು ಬೆಂಬಲಿಸಿದರು. ಫ್ರೆಜರರು ಹೋಮ್‌ರೂಲ್‌ನ ಬಗೆಗಿನ ಶಾಹುರವರ ವಿಚಾರಗಳನ್ನು ಒಪ್ಪಿಕೊಂಡಿದ್ದರು. ಆದರೆ ಅವರು ಪತ್ರದಲ್ಲಿ ಕೇಳುತ್ತಾರೆ: "ಜನರಿಂದ ಆಯ್ಕೆಗೊಂಡ ಮಂತ್ರಿಗಳಿಗೆ ಆಡಳಿತವನ್ನು ಬಿಟ್ಟುಕೊಡಲು ಎಷ್ಟು ಮಹಾರಾಜರು ಒಪ್ಪುತ್ತಾರೆ?"

ಫ್ರೆಜರರು ಯಾವಾಗಲೂ ಶಾಹುರವರ ಕಾರ್ಯಚಟುವಟಿಕೆಗಳ ಬಗ್ಗೆ ಸಂಸ್ಥಾನದೊಳಗೆ ಮತ್ತು ಹೊರಗೆ ಎಚ್ಚರಿಕೆಯಿಂದ ಗಮನಿಸುತ್ತಿದ್ದರು. ಶಾಹುರವರು ಬ್ರಾಹ್ಮಣೇತರ ಸಮುದಾಯದ ಬಗ್ಗೆ ತೆಗೆದುಕೊಂಡ ನಿರ್ಧಾರಗಳನ್ನು ಸಾಮಾನ್ಯವಾಗಿ ಒಪ್ಪುತ್ತಿದ್ದರೂ ಫ್ರೆಜರರು ಶಾಹುರವರು ತೆಗೆದುಕೊಂಡ ನಿರ್ಧಾರಗಳ

ಬಗ್ಗೆ ತಮ್ಮ ಕೆಲವು ಅಭಿಪ್ರಾಯಗಳನ್ನು ಹೇಳಲು ಹಿಂಜರಿಯುತ್ತಿರಲಿಲ್ಲ. ಶಾಹುರವರು ಆರ್ಯಸಮಾಜಕ್ಕೆ ನಿಕಟವಾಗುತ್ತಿರುವುದಕ್ಕೆ ಕಾರಣ ಅವರು ಬ್ರಾಹ್ಮಣ-ವಿರೋಧಿ ಮನೋಭಾವವೆಂದು ಬ್ರಾಹ್ಮಣ ಪತ್ರಿಕೆಗಳು ಆರೋಪಮಾಡತೊಡಗಿದವು. ಫ್ರೇಜರರು ಈ ಬಗ್ಗೆ ಮಾರ್ಚ್ ೩೧, ೧೯೨೦ರಲ್ಲಿ ಬರೆಯುತ್ತಾರೆ: "ಬ್ರಾಹ್ಮಣೇತರ ಏಳಿಗೆಗೆ ನೀವು ಮಾಡುವ ಪ್ರಯತ್ನಗಳನ್ನು ಬ್ರಾಹ್ಮಣ-ವಿರೋಧಿ ಆಂದೋಲನವೆಂದು ವ್ಯಾಖ್ಯಾನ ಮಾಡುವುದಕ್ಕೆ ಸಾವಿರ ಬಾರಿ ಅಯ್ಯೋ ಎಂದು ಕರುಣೆ ತೋರಿಸಬೇಕು".

ಶಾಹುರವರು ಕೋಮುವಾರು-ಪ್ರಾತಿನಿಧ್ಯದ ವ್ಯವಸ್ಥೆಗಾಗಿ ಸಾಕಷ್ಟು ಪ್ರಯತ್ನಿಸಿ ಒಪ್ಪಿಕೊಂಡರು. ಅವರು ಬಹುಮಟ್ಟಿಗೆ ಸಫಲರಾದರು. ಫ್ರೇಜರರು ಜುಲೈ ೧೮, ೧೯೧೯ರಂದು ಬರೆದ ತಮ್ಮ ಪತ್ರದಲ್ಲಿ ಹೇಳುತ್ತಾರೆ: "ಪಶ್ಚಿಮ ಭಾರತದಲ್ಲಿ ಈ ವಿಷಯದ ಬಗ್ಗೆ ಒಬ್ಬ ಭಾರಿ ಗೌರವಾನ್ವಿತ ವಕ್ತಾರನನ್ನು ಪಡೆದಿದ್ದಕ್ಕೆ ಈ ದೃಷ್ಟಿಯಿಂದ ನನ್ನ ಸಂಪೂರ್ಣ ಸಹಾನುಭೂತಿಯಿದೆ."

## ಫ್ರೇಜರರ ಕೊಲ್ಹಾಪುರದ ಐತಿಹಾಸಿಕ ಭೇಟಿ

ಶಾಹುರವರ ಬಾಲ್ಯದ ಗೆಳೆಯ ಭಾವನಗರದ ಮಹಾರಾಜ ಭಾವಿಸಿಂಘಜಿ ಅವರು ಜುಲೈ ೧೩, ೧೯೧೯ರಂದು ನಿಧನರಾದರು. ಫ್ರೇಜರರು ತಮ್ಮ ಸಂತಾಪಸೂಚಿಸಿ ಶಾಹುರವರಿಗೆ ಪತ್ರ ಬರೆದಿದ್ದರು. ಅವರು ಫ್ರೇಜರರನ್ನು ಬೇಗನೆ ನಿವೃತ್ತರಾಗುವರೆಂದು ತಿಳಿದು ಶಾಹುರವರು ಫ್ರೇಜರರಿಗೆ ಹೃದಯಸ್ಪರ್ಶಿ ಪತ್ರವನ್ನು ಆಗಸ್ಟ್ ೯, ೧೯೧೯ರಂದು ಪತ್ರ ಬರೆದರು. ಅವರು ಹೇಳುತ್ತಾರೆ: "ತಾವು ನಿವೃತ್ತಿ ಹೊಂದಿದ ಕೂಡಲೆ ಭಾರತ ಬಿಟ್ಟು ಹೋಗುವಿರೆಂದು ತಿಳಿದು ನನಗೆ ಬಹಳ ದುಃಖವಾಯಿತು. ಸರ್ ಕ್ಲಾಡೆ ಹಿಲ್ ಸಹ ಬೇಗನೆ ಭಾರತ ಬಿಡುವವರು. ನೀವಿಬ್ಬರು ನನಗೆ ಗೆಳೆಯ, ತತ್ವಜ್ಞಾನಿ ಮತ್ತು ದಾರಿದೀಪಕರಾಗಿದ್ದಿರಿ". ಫ್ರೇಜರರು ತಮ್ಮ ದೀರ್ಘ ಸೇವೆಯ ನಂತರ ಡಿಸೆಂಬರ್ ೩೧, ೧೯೧೯ರಲ್ಲಿ ನಿವೃತ್ತರಾಗುವವರು. ಭಾರತ ಬಿಟ್ಟು ಹೋಗುವುದಕ್ಕೆ ಮೊದಲು ಕೊಲ್ಹಾಪುರಕ್ಕೆ ಭೇಟಿ ನೀಡಬೇಕು ಮತ್ತು ತಮ್ಮ ಶಿಷ್ಯ ಸಾಧಿಸಿರುವ ಪ್ರಗತಿಯನ್ನು ಮತ್ತು ಅಲ್ಲಿ ಪ್ರಾರಂಭಮಾಡಿರುವ ಹೊಸ ಜನಪರ ಆಡಳಿತ ವ್ಯವಸ್ಥೆಯನ್ನು ನೋಡಬೇಕೆಂದು ತಮ್ಮ ಅಪೇಕ್ಷೆಯನ್ನು ತಿಳಿಸಿದರು. ಫ್ರೇಜರರು ಫೆಬ್ರವರಿ ೩, ೧೯೨೦ರಲ್ಲಿ ನೀಡಿದ ಭೇಟಿ ಫ್ರೇಜರರ ಐತಿಹಾಸಿಕ ಭೇಟಿಯಾಗಿತ್ತು. ಶಾಹು ತಮ್ಮ ಸಹೋದರ ಬಾಪು ಸಾಹೇಬ ಮತ್ತು ರಾಣಿಯವರು ಫ್ರೇಜರರ ಕುಟುಂಬವನ್ನು ಮೀರಜ್ ನಿಲ್ದಾಣದ ಭಾರೀ ಸಮಾರಂಭದಲ್ಲಿ ಬರಮಾಡಿಕೊಂಡರು. ಸಂಸ್ಥಾನದ ಜನರು ಮತ್ತು ಅಧಿಕಾರಿಗಳು ಬ್ಯಾಂಡ್‌ಬಜಂತ್ರಿಗಳಿಂದ ಮತ್ತು ಪುಷ್ಪಾರ್ಚನೆಗಳಿಂದ ಮೀರಜಿನಿಂದ ಕೊಲ್ಹಾಪುರಕ್ಕೆ ಫ್ರೇಜರರ ದಂಪತಿಗಳಿಗೆ ಸ್ವಾಗತಕೋರಿದರು. ಕೊಲ್ಹಾಪುರದಲ್ಲಿ ಬಹಿರಂಗ ಸನ್ಮಾನ ಸಮಾರಂಭವಿತ್ತು. ಹನ್ನೊಂದು ಶೈಕ್ಷಣಿಕ ಸಂಘಟನೆಗಳು (ವಿದ್ಯಾರ್ಥಿ ನಿಲಯಗಳ) ಫ್ರೇಜರರಿಗೆ ಗೌರವ-ಪಂಕ್ತಿಯ ಸನ್ಮಾನ ಮಾಡಿದರು.

ತಮ್ಮ ಸ್ವಾಗತ ಭಾಷಣದಲ್ಲಿ ಶಾಹು ಹೇಳಿದರು: "ಕಾಲು ಶತಮಾನದ ನಂತರ ಸರ್ ಸ್ಟಿವರ್ಟ್ ಫ್ರೇಜರರಾದ ತಾವು ಕೊಲ್ಹಾಪುರಕ್ಕೆ ಹಿಂದಿರುಗಿದ್ದೀರಿ. ಮತ್ತು ನಾನು ತಮ್ಮನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವೆನು. ನಾನು ಶ್ರೀಮತಿ ಫ್ರೇಜರರನ್ನು ಮತ್ತು ನಿಮ್ಮನ್ನು ನೋಡಿದಾಗ ಮತ್ತೊಮ್ಮೆ ನಮ್ಮ ಜೊತೆಯಲ್ಲಿದ್ದೀರಿ; ನಿಮ್ಮ ಜೊತೆಯಲ್ಲಿದ್ದ ಸಂತೋಷದ ಕ್ಷಣಗಳು ಮತ್ತೆ ನನಗೆ ಬಂದಿವೆಯೆಂದು ಭಾಸವಾಗುತ್ತಿದೆ ಮತ್ತು ಬಾಲ್ಯದ ಸಂತೋಷದಾಯಕ ಕಾಲ ಮರಳಿ ಬಂದಿದೆಯೆಂದು ನನಗೆ ಅನಿಸುತ್ತಿದೆ... ತಾವು ಶಿಷ್ಯರಿಗಾಗಿ ತೆಗೆದುಕೊಂಡ

ಶ್ರಮಕ್ಕೆ ಯಾವ ಫಲ ಸಿಕ್ಕಿದೆಯೆಂಬುದನ್ನು ನೋಡಲು ನಿಮಗೆ ಅವಕಾಶ ಸಿಕ್ಕಿದೆ. ನೀವು ಹಿಂದೆ ನೋಡಿದ್ದಕ್ಕಿಂತ ಹೆಚ್ಚುಪಾಲು ಕೊಲ್ಹಾಪುರ ಬದಲಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಈ ಬದಲಾವಣೆ ಯಾವ ದಿಕ್ಕಿನಲ್ಲಿ ಆಗಿದೆ ಎಂಬ ಮೌಲ್ಯಮಾಪನ ಮಾಡುವುದು ನಿಮಗೆ ಬಿಟ್ಟಿದ್ದು. ಜನರನ್ನು ಶಿಕ್ಷಿತರನ್ನಾಗಿ ಮಾಡುವುದಕ್ಕಾಗಿ, ಜೀವನದ ಉನ್ನತಮಟ್ಟಕ್ಕೆ ಅವರನ್ನು ಸ್ಫೂರ್ತಿಗೊಳಿಸುವುದಕ್ಕಾಗಿ, ನಮ್ಮ ಸಮಾಜದ ಕೃತಕಸ್ಥಿತಿಯ ಕಡೆಗೆ ಕೊಂಡೊಯ್ಯುವುದಕ್ಕೆ ಅಂದರೆ ಮನುಷ್ಯ ಮನುಷ್ಯರ ನಡುವೆ ಅಸಮಾನತೆಯನ್ನು ಎಲ್ಲಾ ದಿಕ್ಕುಗಳಲ್ಲಿ ನಿರ್ಮಿಸುವುದಕ್ಕೆ ಪ್ರಮುಖ ಕಾರಣವಾದ ಮೂಢನಂಬಿಕೆಯನ್ನು ಅಳಿಸಿಹಾಕುವುದಕ್ಕೆ ಈ ಕಾಲಾವಧಿಯ ಅಧಿಕಾರದ ನನ್ನ ಕಳಕಳಿಯ ಹಂಬಲವಾಗಿ ನಾನು ನನ್ನ ಅಧಿಕಾರವನ್ನು ಶಕ್ತಿಮೀರಿ ಬಳಸುತ್ತಿದ್ದೇನೆ. ಹೊಣೆಯು (ಕೆಲಸ) ಅಷ್ಟು ಸರಳ ಮತ್ತು ಸುಲಭವಲ್ಲ. ಯುಗ–ಯುಗಗಳ ಜಡತ್ವವನ್ನು ಮೀರಬೇಕಾಗಿದೆ ಮತ್ತು ಹಳೆ ವ್ಯವಸ್ಥೆಯ ವಿಷಯಗಳನ್ನು ಸಂಪೂರ್ಣವಾಗಿ ಬದಲಾಯಿಸಬೇಕಾಗಿದೆ. ನನ್ನಮಟ್ಟಿಗೆ ನಾನು ಏನು ಮಾಡಬೇಕಾಗಿತ್ತೊ ನಾನು ಭಾಗಶಃ ಮಾಡಿದ್ದೇನೆ. ಆ ಬಗ್ಗೆ ನಾನು ಹೇಳಬಾರದು. ಸಣ್ಣ ಪ್ರಮಾಣದಲ್ಲಿ ನಾನು ಸಫಲನಾಗಿದ್ದರೆ, ಅದರ ಲಾಭ ಇದರಲ್ಲಿ ಭಾಗವಹಿಸಿದವರಿಗೆಲ್ಲ ಸಲ್ಲುತ್ತದೆ.''

ಆ ಪತ್ರಕ್ಕೆ ಫ್ರೆಜರರು ನೀಡಿದ ಪ್ರತ್ಯುತ್ತರ ಹೀಗಿದೆ: ''ನನ್ನ ಹಳೆಯ ಮಿತ್ರ ಮಹಾರಾಜರು ನನ್ನನ್ನು ಬೀಳ್ಕೊಡುಗೆಯ ಸಮಾರಂಭಕ್ಕೆ ಕೊಲ್ಹಾಪುರಕ್ಕೆ ಭೇಟಿ ನೀಡಬೇಕೆಂದು ಆಹ್ವಾನಿಸಿದಾಗ ನಗರದ ಜನರ ಸಮಾರಂಭದಲ್ಲಿ ಶೈಕ್ಷಣಿಕ ಸಂಸ್ಥೆಗಳು ನೀಡಿದ ಗೌರವಕ್ಕೆ ಪ್ರತ್ಯುತ್ತರ ನೀಡಲು ನಾನು ಯೋಚಿಸಿ ಸಿದ್ಧತೆ ಮಾಡಿಕೊಳ್ಳಬೇಕಾಗಿತ್ತು...

ನೈತಿಕ ದೃಷ್ಟಿಯಿಂದಾಗಲಿ ಮತ್ತು ಜನರ ಭೌತಿಕ ಏಳಿಗೆಯ ದೃಷ್ಟಿಯಿಂದಾಗಲಿ ಅಥವಾ ಈಗ ಪರಿಚಯಿಸಿದ ಸರಕಾರದ ಸುಧಾರಿತ ಯೋಜನೆಯನ್ನು ಬ್ರಿಟಿಷ್ ಭಾರತದ ಸಾಮರ್ಥ್ಯದಲ್ಲಿ ಸಫಲವಾಗಿ ಕೆಲಸ ಮಾಡಬೇಕಾದರೆ ಶಿಕ್ಷಣದ ಪ್ರಸಾರ ವ್ಯಾಪಕವಾಗಿ ಭಾರತದಲ್ಲಿ ಅತ್ಯಗತ್ಯವಾಗಿ ಇಂದು ಆಗಬೇಕಾಗಿದೆ. ಯಾರೂ ಈ ತತ್ವವನ್ನು ನಿರಾಕರಿಸಲಾರರು. ಆದರೆ ಘನತೆವೆತ್ತ ಮಾನ್ಯ ಛತ್ರಪತಿ ಮಹಾರಾಜರು ದೀರ್ಘಕಾಲದಿಂದಲೂ ತಮ್ಮ ಮುಖ್ಯ ಮತ್ತು ವೈಯಕ್ತಿಕ ಗುರಿ ಜನರ ಸ್ಥಿತಿಗತಿಗಳನ್ನು ಸುಧಾರಿಸುವುದು ಹಾಗೂ ಗುರಿಗಳ ಸಾಧನೆಗೆ ವಿಧಾನಗಳಾದ ಶಾಲೆಗಳನ್ನು ದ್ವಿಗುಣಗೊಳಿಸುವುದು ಮಾತ್ರವಲ್ಲದೆ ಮತ್ತು ತಮ್ಮ ಸ್ವಶಕ್ತಿಯಿಂದ ಗಳಿಸಿಕೊಳ್ಳಲಾದ ನಿರುತ್ಸಾಹಿ ಜನರಿಗೆ ಜಾತಿ–ಮತ ಭೇದವಿಲ್ಲದೆ ಎಲ್ಲರಿಗೂ ಸಮಾನವಾಗಿ ಶಿಕ್ಷಣದ ಕೊಡುಗೆಯನ್ನು ಕೊಂಡೊಯ್ದು ನೀಡಿದರೆಂಬುದು ಅವರ ವಿಶೇಷ ಪ್ರತಿಭೆಯಾಗಿತ್ತು. ಮೊದಲಿನಿಂದಲೂ ಯಾವ ಭಾರತೀಯ ಮಹಾರಾಜನೂ ಮಹಾಕರುಣೆಯ ಹೃದಯವಂತಿಕೆಯನ್ನು ತೋರಿಸದಿದ್ದನ್ನು ಮನವರಿಕೆಮಾಡಿಕೊಂಡು ಅವರು ಕೆಳ ಮತ್ತು ಮೇಲುಜಾತಿಗಳ ಮುಸ್ಲಿಮರ ಮತ್ತು ಇಂಡಿಯಾದ ಕ್ರಿಶ್ಚಿಯನ್ನರ ಮತ್ತು ಹಿಂದುಗಳ ತನ್ನ ಎಲ್ಲಾ ಪ್ರಜೆಗಳಿಗೆ ಸಮಾನವಾಗಿ ತಂದೆಯಾಗಿದ್ದರು. ಒಬ್ಬ ಜಾಣತಂದೆಯಾಗಿ ತನ್ನ ಬಲಿಷ್ಠ ಮಕ್ಕಳಿಗಿಂತ ತನ್ನ ದುರ್ಬಲ ಮಕ್ಕಳನ್ನು ಗುರುತಿಸುವುದು ತನ್ನ ವಿಶೇಷ ಕರ್ತವ್ಯವೆಂದು ಬಗೆಯುತ್ತಾರೆ. ಅನುಕೂಲಸ್ಥ ಸಹೋದರರು ಏಕೈಕವಾಗಿ ಶೈಕ್ಷಣಿಕ ಪ್ರಯೋಜನಗಳನ್ನು ಪಡೆದು ತಾವೇ ಅನುಭವಿಸುತ್ತಿರುವುದರಲ್ಲಿ ಪಾಲು ಪಡೆಯಲು ಹಿಂದುಳಿದ ಜಾತಿಗಳ ಏಳಿಗೆಗಾಗಿ ಪ್ರೋತ್ಸಾಹಿಸುವುದು ಘನತೆವೆತ್ತ ಮಹಾರಾಜರ ಧೋರಣೆಯಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಭದ್ರವಾಗಿ ತಳವೂರಿದ ಪೂರ್ವಗ್ರಹಗಳು ಇದನ್ನು ಒಂದು ಮಹಾಕಾರ್ಯವನ್ನಾಗಿ ಮಾಡಿದೆ. ಅದನ್ನು ಯಾವ ವ್ಯಕ್ತಿ ತನ್ನ ಇಡೀ ಜೀವನದಲ್ಲಿ ಇದನ್ನು ಸಂಪೂರ್ಣವಾಗಿ ನೆರವೇರಿಸುವ ಭರವಸೆಯಿಲ್ಲ. ಆದರೆ ಘನತೆವೆತ್ತ ಮಹಾರಾಜರು ಕೇವಲ ಭವಿಷ್ಯಕ್ಕಾಗಿ ಆಶೋತ್ತರಗಳನ್ನು ಹೊಂದಿದವರಲ್ಲ ಮತ್ತು ಧೈರ್ಯ, ಶಕ್ತಿ ಮತ್ತು

ದೃಢಸಂಕಲ್ಪವುಳ್ಳ ರಾಜನು ಮಾತ್ರ ಕಷ್ಟಗಳನ್ನು ಮೀರಿ ಮಾಡಬಲ್ಲ, ಆದರೆ ನಿಮ್ಮ ಮಹಾರಾಜರು ಇದನ್ನು ಮಾಡಿ ತೋರಿಸಿದ್ದಾರೆ. ನಿಮ್ಮ ಮಹಾರಾಜರು ಹಲವಾರು ದಿಕ್ಕುಗಳಲ್ಲಿ ತಮ್ಮ ಕಾರ್ಯಚಟುವಟಿಕೆಗಳನ್ನು ತೆಗೆದುಕೊಂಡಿದ್ದನ್ನು ಕೊಲ್ಹಾಪುರದ ಪ್ರೇಕ್ಷಕರಿಗೆ ಮತ್ತೆ ಹೇಳುವುದು ಅನಾವಶ್ಯಕವಾಗುತ್ತದೆ. ರಾಜಧಾನಿಯಲ್ಲಿ ಅತ್ಯುತ್ತಮ ಶಾಲೆಗಳಲ್ಲಿ ಅವಕಾಶ ಪಡೆಯುವುದು ಹೊರಗಿರುವ ಹಳ್ಳಿಗಳ ಬಡವಿದ್ಯಾರ್ಥಿಗಳಿಗೆ ಅಸಾಧ್ಯವಾಗಿರುವಾಗ ಅವರು ಆ ಬಡವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳನ್ನು ಕಲ್ಪಿಸಿಕೊಡುವ ಅವರ ಶೈಕ್ಷಣಿಕ ಧೋರಣೆಯ ಬಗ್ಗೆ ಮಾತ್ರ ನಾವು ಇಂದು ಹೇಳಬಲ್ಲೆವು. ಮಹಾರಾಜರು ಎರಡು ದಿನಗಳ ಹಿಂದೆ ನನ್ನನ್ನು ಕರೆದುಕೊಂಡು ಈ ವಿದ್ಯಾರ್ಥಿ ನಿಲಯಗಳನ್ನು ತೋರಿಸಿದರು ಮತ್ತು ವಿಚಿತ್ರವಾಗಿ ಚಿಂತಿಸುವ ತಮ್ಮ ವಯಸ್ಸಾದ ಗುರುವಿನ ಕೈಯಲ್ಲಿ ಮುಸ್ಲಿಮರ ಒಂದು ಹೊಸ ವಿದ್ಯಾರ್ಥಿ ನಿಲಯಕ್ಕೆ ಅಡಿಪಾಯಕಲ್ಲನ್ನು ನಿಮ್ಮ ಮಹಾರಾಜರು ಹಾಕಿಸುತ್ತಿದ್ದಾರೆ. ಅವರು ಸಮುದಾಯದ ಹನ್ನೊಂದಕ್ಕಿಂತ ಹೆಚ್ಚು ವಿದ್ಯಾರ್ಥಿ ನಿಲಯಗಳನ್ನು ನಿರ್ಮಿಸಿದ್ದಾರೆಂಬುದು ಮಹಾರಾಜರ ಪ್ರೋತ್ಸಾಹ ಮತ್ತು ಔದಾರ್ಯಕ್ಕೆ ಸಾಕ್ಷಿಯಾಗಿದೆ...

ಯಾವುದೇ ವರ್ಗದಲ್ಲಿ ಹುಟ್ಟಿದವನಿಗೆ ಅವಕಾಶಗಳ ಸಮಾನತೆಯನ್ನು ಒದಗಿಸುವ ಘನತೆವೆತ್ತ ಮಹಾರಾಜರ ಗುರಿಯನ್ನು ನೆರವೇರಿಸಲು ಇವೆಲ್ಲ ಸಂಸ್ಥೆಗಳು ಸಹಾಯಮಾಡುತ್ತವೆಯೆಂದು ನಾನು ಭಾವಿಸುತ್ತೇನೆ ಮತ್ತು ಸಂಸ್ಥಾನವನ್ನು ಆಳುವುದಕ್ಕೆ ಸಂಸ್ಥಾನದ ದೈವಾನುಗ್ರಹವೆ ಕರೆಸಿದೆಯೆಂದು ಭಾವಿಸಿ ಆ ಸಂಸ್ಥೆಗಳು ಮಹಾರಾಜರ ಜನತಾಂತ್ರಿಕ ಆದರ್ಶವನ್ನು ಎತ್ತಿಹಿಡಿಯಬೇಕೆಂದು ಆಶಿಸುತ್ತೇನೆ."[27]

ತಮ್ಮ ಗುರುಗಳಾದ ಫ್ರೆಜರರಿಗೆ ಒಂದು ಸ್ಮಾರಕವನ್ನು ಕೊಲ್ಹಾಪುರದಲ್ಲಿ ಸ್ಥಾಪಿಸಬೇಕೆಂದು ಬಯಸಿದ್ದರು. ಆದ್ದರಿಂದ ಅವರು ಫೆಬ್ರವರಿ ೩, ೧೯೨೦ರಂದು ಶಾಹುಪುರಿಯಲ್ಲಿ ಫ್ರೆಜರ್ ಮಾರುಕಟ್ಟೆಯ ಅಸ್ತಿವಾರ ಹಾಕುವ ಸಮಾರಂಭವನ್ನು ಅವರು ವ್ಯವಸ್ಥೆಗೊಳಿಸಿದ್ದರು.

ಫ್ರೆಜರರು ತಮ್ಮ ಕುಟುಂಬ ಸಮೇತ ಬಾಂಬೆಯಿಂದ ಲಂಡನ್ನಿಗೆ ಮೇ ೨೮, ೧೯೨೦ರಂದು ಹೋಗುವವರಿದ್ದರು. ಸಹಜವಾಗಿ ತಮ್ಮ ಗುರುಗಳನ್ನು ಬೀಳ್ಕೊಡುವುದಕ್ಕೆ ಶಾಹುರವರು ಬಾಂಬೆಗೆ ಹೋಗಲು ನಿರ್ಧರಿಸಿದರು. ಮೇ ೧೮, ೧೯೨೦ರಂದು ಅವರು ತಮ್ಮ ಗುಮಾಸ್ತ ಪ್ರಭಾವಲ್ಕರ್ ಜೊತೆಯಲ್ಲಿ ಎರಡು ಮುತ್ತಿನ ಸರಗಳನ್ನು ಅವರ ಹೆಂಡತಿ ಮತ್ತು ಮಗಳಿಗೆ ತಮ್ಮ ಗುರುವಿನ ನೆನಪಿಗಾಗಿ ಕಳುಹಿಸಿಕೊಟ್ಟರು. ಮತ್ತು ಫ್ರೆಜರರನ್ನು ಅವುಗಳನ್ನು ಸ್ವೀಕರಿಸಲು ಕೋರಿದ್ದರು. ಎರಡು ಸಂದರ್ಭಗಳಲ್ಲಿ ಫ್ರೆಜರರು ಐಸಿಎಸ್ ಅಧಿಕಾರಿಯಾಗಿ ಐಸಿಎಸ್ ಸಂಹಿತೆಯನ್ನು ಕಟ್ಟುನಿಟ್ಟಾಗಿ ಪಾಲಿಸಿ ಅವುಗಳನ್ನು ಉದ್ದೇಶಪೂರ್ವಕವಾಗಿ ನಿರಾಕರಿಸಿದ್ದುಂಟು. ಶಾಹು ಮತ್ತು ತಮ್ಮ ನಿರ್ಗಮನದ ದಿನ ಗುರು ಮತ್ತು ಶಿಷ್ಯರು ದೀರ್ಘವಾದ ಸಂವಾದ ನಡೆಸಿದರು. ಸಮಾಜದಲ್ಲಿರುವ ದಲಿತರ ಸಮಸ್ಯೆಗಳ ಬಗ್ಗೆ ತನ್ನ ಸಂಸ್ಥಾನದ ಹೊರಗಡೆಯು ಧ್ವನಿ ಎತ್ತಲು ತಾನು ಭಾಗವಹಿಸುವುದಾಗಿ ಶಾಹು ತನಗೆ ಹೇಳಿದ್ದನ್ನು ನೆನಪಿಸಿಕೊಂಡರು. ಪತ್ರಿಕೆಗಳ ಯಾವುದೇ ರೀತಿಯ ಟೀಕೆ–ಟಿಪ್ಪಣಿಗಳು ಬಂದರೂ ತಾನು ಮುಂದೆ ಮಾಡಬೇಕೆಂದಿರುವ ಕೆಲಸಗಳನ್ನು ಶಾಹುರವರು ನಿಲ್ಲಿಸುವುದಿಲ್ಲ.

## ಪತ್ರವ್ಯವಹಾರ ಮುಂದುವರಿಯುತ್ತದೆ:

ಶಾಹುರವರು ಸಾಮಾಜಿಕ ಸುಧಾರಣೆಗಳ ಕಾರ್ಯಕ್ರಮಗಳನ್ನು ದೊಡ್ಡ ಪ್ರಮಾಣದಲ್ಲಿ ಮಾಡುವುದನ್ನು ಮುಂದುವರಿಸಿದರು. ಫೆಬ್ರವರಿ ೧೯೧೮ರಲ್ಲಿ ಕುಲಕರ್ಣಿ ವತನುಗಳನ್ನು ಮುಟ್ಟುಗೋಲು ಹಾಕಿಕೊಂಡರು;

ಗ್ರಾಮಪಂಚಾಯಿತಿ ಪದ್ಧತಿಯನ್ನು ಪ್ರಾರಂಭಿಸುವುದಕ್ಕೆ ಒಂದು ಅಗತ್ಯವಾದ ಕ್ರಮವಾಗಿತ್ತು. ಆದರೆ ಬಾಂಬೆ ಪ್ರಾಂತ್ಯದಲ್ಲಿ ಇದರ ವಿರುದ್ಧ ಒಂದು ದೊಡ್ಡ ಆಂದೋಲನವೇ ಇತ್ತು. ಬ್ರಾಹ್ಮಣರ ಪತ್ರಿಕೆಗಳು ಶಾಹುರವರು ಕತ್ತಿಗೆ ಸಮಾನರೆಂದು ಭಾವಿಸಿದರು. ಬ್ರಿಟಿಷ್ ಸರಕಾರಕ್ಕೆ ದೂರುಗಳು, ಪ್ರದರ್ಶನಗಳು ಮತ್ತು ಮೆರವಣಿಗೆಗಳು ಸರ್ವೇಸಾಮಾನ್ಯವಾದವು. ಮತ್ತೊಂದು ವೇದೋಕ್ತದಂತಹ ಚಳುವಳಿ ಶಾಹು ವಿರುದ್ಧ ಪ್ರಾರಂಭವಾಯಿತು. ಶಾಹುರವರು ಫ್ರೇಜರರಿಗೆ ರುಡ್ಕಿಕ್ಯಾಂಪಿನಿಂದ ತನ್ನ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಲು ಮೇ ೨೭, ೧೯೨೦ರಂದು ಒಂದು ಪತ್ರ ಬರೆದರು. ತನ್ನ ಸಂಸ್ಥಾನದಿಂದ ಹೊರಗಡೆಯ ಚಳುವಳಿಗಳಲ್ಲಿ ಭಾಗವಹಿಸಬಾರದೆಂಬ ಒತ್ತಡವಿತ್ತು. ಆದರೆ ಶಾಹುರವರು ಈಗ ಬಹುಜನ ಸಮಾಜದ ನಾಯಕರಾಗಿದ್ದರು. ಅವರು ಮಧ್ಯದಲ್ಲಿ ಸಮುದಾಯವನ್ನು ಕೈಬಿಡಬಾರದೆಂದು ಭಾವಿಸಿದರು. ಶಾಹುರವರು ಒಂದು ಪತ್ರದಲ್ಲಿ ಬರೆಯುತ್ತಾರೆ: "ನಾನು ಒಂದು ಪಕ್ಷವನ್ನು ಸ್ಥಾಪಿಸಿದ್ದೇನೆ. ನಮ್ಮ ಸಹಾಯದಿಂದ ಕೆಲವು ಪತ್ರಿಕೆಗಳನ್ನು ಪ್ರಾರಂಭಿಸಲಾಗಿದೆ. ಜನರ ಮುಂದೆ ನಮ್ಮ ನಿಲುವನ್ನು ತಿಳಿಸಲು ನಾವು ನಮ್ಮ ಸಂಸ್ಥಾನದ ಹೊರಗಡೆಯ ಸಭೆ-ಸಮಾರಂಭಗಳಲ್ಲಿ ಮಾತನಾಡಬೇಕಾಗಿದೆ. ನಾನು ಇಂದು ಇವೆಲ್ಲವುಗಳನ್ನು ನಿಲ್ಲಿಸಿ ಬಹುಜನ ಸಮಾಜದ ಆಂದೋಲನ ಬಿಟ್ಟು ಹೊರಟುಹೋದರೆ ಜನರು ಆಂದೋಲನದಲ್ಲಿ ಅಸ್ತವ್ಯಸ್ಥರಾಗುವರು. ಇದೇ ಜನರು ನನ್ನ ಯುದ್ಧ ಪ್ರಯತ್ನಗಳಲ್ಲಿ ನನಗೆ ಹೆಚ್ಚು ಸಹಾಯಮಾಡಿದ್ದಾರೆ. ಅವರೆಲ್ಲರೂ ಸರಕಾರಕ್ಕೆ ಸಹಾಯಮಾಡಿದ್ದಾರೆ. ಈಗ ನಾನು ಅವರ ಆತ್ಮವಿಶ್ವಾಸವನ್ನು ಹೇಗೆ ದುರುಪಯೋಗಪಡಿಸಿಕೊಳ್ಳಲಿ? ಸರಕಾರಕ್ಕೆ ಕುಲಕರ್ಣಿಗಳ ದುಷ್ಟಸಂಚು ಗೊತ್ತಿದೆ. ನಾನು ಒಬ್ಬ ಸಾಮಂತ ರಾಜನಾಗಿದ್ದರೂ ಮೊದಲಿಗೆ ನಾನು ಒಬ್ಬ ಮನುಷ್ಯ. ನಾನು ಅವರೊಡನೆ ಬದುಕಬೇಕಾಗಿದೆ. ನನ್ನ ಕಷ್ಟದ ದಿನಗಳಲ್ಲಿ ನನ್ನನ್ನು ಕೈಹಿಡಿದ ಜನರನ್ನು ನಾನು ಹೇಗೆ ಬಿಡಲಿ? ಬ್ರಾಹ್ಮಣರು ನನ್ನನ್ನು ಅಪಕೀರ್ತಿಗೆ ಗುರಿಮಾಡುತ್ತಿದ್ದಾರೆ ಮತ್ತು ನಾನು ರಾಜ್ಯವಾಳುವುದಕ್ಕೆ ಅಸಾಧ್ಯವನ್ನಾಗಿ ಮಾಡುತ್ತಿದ್ದಾರೆ. ಅವರು ಅವರ ಗುರಿಯಲ್ಲಿ ಸಫಲರಾಗದಿದ್ದರೆ, ನನ್ನ ಮೇಲೆ ಬಾಂಬು ಎಸೆದು ನನ್ನನ್ನು ಕೊಲ್ಲುವರು. ಸಾರ್ವಜನಿಕ ಭಾಷಣಗಳು ಅನಿವಾರ್ಯವಾಗುವವರೆಗೆ ನಾನು ಭಾಷಣಗಳನ್ನು ಮಾಡುವುದಿಲ್ಲ."

ಮಹಾರಾಜರು ಹತಾಶೆಯ ಧ್ವನಿಯಲ್ಲಿ ಮುಕ್ತಾಯಗೊಳಿಸುತ್ತಾರೆ. ಯಾವುದೇ ರೀತಿಯ ಗೌರವಕ್ಕೆ ಚ್ಯುತಿಬರದಂತೆ ನಾನು ನಿವೃತ್ತನಾಗುವುದಕ್ಕೆ ದೇವರು ನನಗೆ ಸಹಾಯಮಾಡಲಿ.

ವೇಲ್ಸ್‌ನ ರಾಜಕುಮಾರರು ಪುಣೆಗೆ ಭೇಟಿನೀಡಿದ ಬಗ್ಗೆ ಬರೆದ ಪತ್ರವನ್ನು ಫ್ರೇಜರರು ನೆನಪಿಸಿಕೊಳ್ಳುತ್ತಾರೆ. ಶಾಹು ಕಷ್ಟಗಳಿದ್ದರೂ ಈ ಭೇಟಿಯನ್ನು ವ್ಯವಸ್ಥೆಗೊಳಿಸಿ ಸಫಲಗೊಳಿಸಿದ್ದರು. ಅದು ಅಶಾಂತಿಯ ಕಾಲವಾಗಿತ್ತು. ಅವರ ಭೇಟಿಯನ್ನು ಬಹಿಷ್ಕರಿಸಲಾಗಿತ್ತು. ಆದರೆ ಶಾಹುರವರು ತಮ್ಮ ಪ್ರಯತ್ನಗಳಿಂದ ಸಫಲಗೊಳಿಸಿದ್ದರು. ಆ ಭೇಟಿಯನ್ನು ವ್ಯವಸ್ಥೆಗೊಳಿಸಿದ ಕೆಲವು ತಿಂಗಳುಗಳಲ್ಲಿ ಶಾಹು ಮೇ ೬, ೧೯೨೨ರಂದು ಅಕಾಲಿಕ ಮರಣಕ್ಕೆ ತುತ್ತಾದರು.

## ಫ್ರೇಜರರ ಗೌರವ ನಮನ

ತಮ್ಮ ಅಚ್ಚುಮೆಚ್ಚಿನ ಶಿಷ್ಯನ ಸಾವಿನ ಬಗ್ಗೆ ಸಂತಾಪ ವ್ಯಕ್ತಪಡಿಸುತ್ತಾ ಹೀಗೆ ಬರೆಯುತ್ತಾರೆ: "ಹೊಸ ಸಾಧ್ಯತೆಗಳ ಒಂದು ಜಗತ್ತನ್ನು ಬೆಳಗಿಸಲು ಪ್ರಾರಂಭವಾಗಿದ್ದ ಬೆಳಕನ್ನು ಕಳೆದುಕೊಂಡೆವೆಂದು ತನ್ನ ದೇಶದ ಸಾವಿರಾರು ಜನರು ಪರಿತಪಿಸಿದ್ದಾರೆ. ಒಬ್ಬ ಸಾಮಾಜಿಕ ಸುಧಾರಕರಾಗಿ ಸ್ವತಃ ಶಾಹುರವರೇ ಭಾರತದ ಆಳುವ ಮಹಾರಾಜರಲ್ಲಿ ಒಂದು ಸ್ಥಾನ(ಗೂಡು) ಮಾಡಿಕೊಂಡಿದ್ದರು. ಮತ್ತು ಅವರ ಸಾವಿನಿಂದ

ಉಂಟಾದ ಅಂತರವನ್ನು ಅವರು ಮಾಡಿದ ಸಾಧನೆಗಳಿಂದ ಅಳೆಯುವುದು ಮಾತ್ರವಲ್ಲದೆ ಮಾಡಬೇಕಾದ ಬೆಟ್ಟದಷ್ಟು ಕೆಲಸ ಇನ್ನೂ ಉಳಿದಿದೆಯಾದ್ದರಿಂದ ಭಾರತಕ್ಕೆ ಆದ ಅವರ ನಷ್ಟವನ್ನು ನಿಜವಾಗಿಯೂ ಅಳೆಯುವುದಕ್ಕೆ ಆಗುವುದಿಲ್ಲ. ಅವರು ಮರಾಠ ದೇಶದಲ್ಲಿ ಒಂದು ಜ್ಯೋತಿಯನ್ನು ಬೆಳಗಿಸಿದರು. ಅದನ್ನು ಬೇರೆಯವರು ಕೊಂಡೊಯ್ಯಬೇಕೆಂದು ನಾನು ಭಾವಿಸುತ್ತೇನೆ. ಅದರ ಬೆಳಕನ್ನು ಈಗ ನಂದಿಸುವುದಕ್ಕೆ ಸಾಧ್ಯವಿಲ್ಲ ಮತ್ತು ಅವರು ಪ್ರೀತಿಸಿದ ಮತ್ತು ಸೇವೆಮಾಡಿದ ಜನರಲ್ಲಿ ಅವರನ್ನು ಮರೆಯುವುದಕ್ಕೆ ಸಾಧ್ಯವಿಲ್ಲ".[28]

ಹೀಗೆ ಫ್ರೆಜರ್-ಶಾಹುರವರ ಸಂಬಂಧಗಳು ಮೇ ೧೮೮೯ರಲ್ಲಿ ಪ್ರಾರಂಭವಾಗಿ ಮೇ ೧೯೨೨ರಲ್ಲಿ ಶಾಹುರವರ ಮರಣದವರೆಗೆ ಮುಂದುವರಿದ ಫ್ರೆಜರರು ಶಾಹು ಸತ್ತನಂತರವೂ ಬಹಳ ದಿನಗಳವರೆಗೆ ಹೆಮ್ಮೆಯಿಂದ ನೆನಪಿಸಿಕೊಳ್ಳುತ್ತಿದ್ದರು.

## ದೈವಿಕ ಸ್ನೇಹ

ಶಾಹು-ಫ್ರೆಜರರ ಜೀವನದ ಉದ್ದಕ್ಕೂ ಸ್ನೇಹದ ಹಲವು ಮುಖಗಳು ಅದ್ಭುತವಾಗಿವೆ. ಗುರು-ಶಿಷ್ಯರ ಆದರ್ಶ ಸಂಬಂಧವು ಕೊನೆಗೆ ಸ್ನೇಹವಾಗಿ ಪರಿವರ್ತನೆಗೊಂಡಿತು. ಒಬ್ಬ ಆದರ್ಶ ಅಧ್ಯಾಪಕ ಅಂತಿಮವಾಗಿ ಒಬ್ಬ ಸ್ನೇಹಿತ, ತತ್ವಜ್ಞಾನಿ ಮತ್ತು ಮಾರ್ಗದರ್ಶಕರಾದರು. ಒಬ್ಬ ಅಧ್ಯಾಪಕನಾಗಿರುವುದು ಬಹು ಸುಲಭ. ಕೆಲವರು ಆಕಸ್ಮಿಕವಾಗಿ ಒಬ್ಬ ಅಧ್ಯಾಪಕರಾಗುತ್ತಾರೆ. ಆದರೆ ಒಂದು ಸಂಬಂಧ ಒಬ್ಬ ಗುರುವಾಗಿ ಪ್ರಾರಂಭಗೊಂಡು ಇಡೀ ಜೀವನಪೂರ್ತಿ ಪೋಷಕರಾಗಿ ಮುಂದುವರಿಯುವುದು ಬಹು ಅಪರೂಪ. ಶಿಷ್ಯರೊಂದಿಗಿನ ಬಹಳಷ್ಟು ಅಧ್ಯಾಪಕರ ಸಂಬಂಧವು ಕೋರ್ಸು ಮುಗಿದ ಕೂಡಲೇ ಮುಗಿದುಹೋಗುತ್ತದೆ. ಇಡೀ ಜೀವನಪೂರ್ತಿ ತಮ್ಮ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವುದನ್ನು ಭಾರತದ ಆಚಾರ್ಯರ ಪರಂಪರೆಯಲ್ಲಿ ನೋಡುತ್ತೇವೆ. ನಿಜವಾದ ಗುರು ಕೈಹಿಡಿದು ನಡೆಸಿಕೊಂಡು ಶಿಷ್ಯ ಹೋದ ಕಡೆಗೆ ಗುರುವು ಜೊತೆಯಲ್ಲಿ ಹೋಗುತ್ತಿರುತ್ತಾನೆ. ಫ್ರೆಜರರು ಈ ರೂಪದಲ್ಲಿ ಒಬ್ಬ ಗುರುವಾಗಿದ್ದರು. ಅವರು ವಿದ್ಯಾರ್ಥಿಯ ಕಷ್ಟದ ದಿನಗಳಾದ ವೇದೋಕ್ತ ಪ್ರಕರಣ ಅಥವಾ ವಿಷಹಾಕಿದ ಪ್ರಕರಣಗಳ ಸಂದರ್ಭದಲ್ಲಿ ತಮ್ಮ ವಿದ್ಯಾರ್ಥಿಯನ್ನು ಬಿಟ್ಟಿರಲಿಲ್ಲ. ಅವರ ಸ್ನೇಹ ಎಂದಿಗೂ ಮುಗಿಯಲಾಗದ ಸ್ನೇಹವಾಗಿತ್ತು. ವಾಸ್ತವಿಕವಾಗಿ ಇಬ್ಬರು ಭಿನ್ನವಾದ ವ್ಯಕ್ತಿಗಳು. ಫ್ರೆಜರರು ಒಬ್ಬ ಪಾಶ್ಚಿಮಾತ್ಯರು ಮತ್ತು ಶಾಹು ಒಬ್ಬ ಪೌರ್ವಾತ್ಯರು. ಒಬ್ಬರು ಬ್ರಿಟಿಷರು, ಮತ್ತೊಬ್ಬರು ಭಾರತೀಯರು. ರುಡ್‌ಯಾರ್ಡ್ ಕಿಪ್‌ಲಿಂಗರು ಹೇಳುವಂತೆ ಪೂರ್ವ ಮತ್ತು ಪಶ್ಚಿಮಗಳು ಎಂದಿಗೂ ಸೇರುವುದಿಲ್ಲ. ಆದರೆ ಶಾಹು-ಫ್ರೆಜರರ ಸ್ನೇಹ ಜನಾಂಗೀಯ ಭಾವನೆಗಳನ್ನು ಮೀರಿ ಹೋಗಿತ್ತು. ಶಾಹುರವರು ಒಬ್ಬ ಸಾಮಂತರಾಜರು ಮತ್ತು ಫ್ರೆಜರರು ಬ್ರಿಟಿಷ್ ಸರಕಾರದ ಒಬ್ಬ ಐಸಿಎಸ್ ಅಧಿಕಾರಿ. ಶಾಹುರವರು ಶಿವಾಜಿ ಸಿಂಹಾಸನದ ಒಬ್ಬ ವಾರಸುದಾರನಾಗಿ ಸಿಂಹಾಸನದ ಘನತೆ-ಗೌರವವನ್ನು ಕಾಪಾಡಲು ಬಯಸುತ್ತಿದ್ದರೆ, ಫ್ರೆಜರರು ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಆಸಕ್ತಿಗಳನ್ನು ರಕ್ಷಿಸಬೇಕಾಗಿತ್ತು. ಸಾಮ್ರಾಜ್ಯದ ಹಿತಾಸಕ್ತಿಗಳ ಮತ್ತು ಶಾಹುರವರ ಹಿತಾಸಕ್ತಿಗಳ ನಡುವೆ ಸಂಘರ್ಷವಿರುತ್ತಿತ್ತು. ಅಂತಹ ಸಂದರ್ಭಗಳಲ್ಲಿ ಫ್ರೆಜರರು ಸ್ನೇಹವನ್ನು ಒಂದು ಉತ್ತಮಮಟ್ಟಕ್ಕೆ ಕೊಂಡೊಯ್ಯುತ್ತಿದ್ದರು.

ನಿಜವಾಗಿಯೂ ಫ್ರೆಜರ್ ಮತ್ತು ಶಾಹುರವರು ದೈವಿಕ ಸ್ನೇಹಿತರಾಗಿದ್ದರು.

---

## ಆಧಾರ ಗ್ರಂಥಗಳು


1. Rajarshi Shahu Chhatrapati, Papes (English) Volume, edited by Dr. Vilas Sangve and Dr. B. D. Khane Paper 102.
2. Ibid, paper 118.
3. Ibid, paper 139.
4. Ibid, paper 173.
5. Ibid, paper 238.
6. Ibid, paper 140.
7. Ibid, paper 141.
8. Ibid, paper 149.
9. Ibid, paper 158.
10. Ibid, Volume ii, paper 7.
11. Ibid, paper 27.
12. Ibid, paper 135.
13. Ibid, paper 142, 146.
14. Ibid, paper 159.
15. Ibid, paper 222.
16. Ibid, paper 223.
17. Ibid, paper 287.
18. Ibid, Volume iv, paper 19.
19. Ibid, Volume iv, paper 21.
20. Ibid, Volume iv, paper 63.
21. Ibid, Volume iv, paper 85.
22. Ibid, Volume iii, paper 44.
23. Ibid, Volume iii, paper 47.

24. Ibid, Volume iv, paper 128.
25. Ibid, Volume v, paper 118.
26. Ibid, Volume iv, paper 153.
27. Memories of His Highness Shri Shahu Chhatrapati Maharaj of Kolhapur, Volume ii, A. B. Latthe, pp. 632-634.
28. Ibid, pp. 636-637.

---

## ೧೯

# ರಾಜರ್ಷಿ ಶಾಹು ಮತ್ತು ಡಾ. ಅಂಬೇಡ್ಕರ್: ಪ್ರೀತಿಯ ಸ್ನೇಹದ ಸಂಬಂಧ

**– ಡಾ. ಧಮ್ಮಪಾಲ ರತ್ನಾಕರ**

*ಫುಲೆ-ಶಾಹು-ಅಂಬೇಡ್ಕರ್ ಸಾಹಿತ್ಯದ ವಿದ್ವಾಂಸ*

**ಡಾ.** ಬಾಬಾಸಾಹೇಬ ಅಂಬೇಡ್ಕರ್ ಅವರು ಮುಂಬಯಿಯ ಸಿಡ್ನೆಹ್ಯಾಮ್ ವಾಣಿಜ್ಯ ಕಾಲೇಜಿನಲ್ಲಿ ಒಬ್ಬ ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿ ನವೆಂಬರ್ ೧೧, ೧೯೧೮ರಿಂದ ಕೆಲಸ ಮಾಡಿದರು. ಅವರ ಕೆಲಸ ದೀರ್ಘಕಾಲಿಕವಾದುದಲ್ಲ. ಅವರು ಲಂಡನ್ನಿಗೆ ಹೋಗಿ ತಮ್ಮ ಅಪೂರ್ಣಗೊಂಡ ಶಿಕ್ಷಣವನ್ನು ಸಂಪೂರ್ಣಗೊಳಿಸಲು ಬಯಸಿದ್ದರಿಂದ ದೀರ್ಘಕಾಲಿಕ ಹುದ್ದೆಯಲ್ಲಿ ಆಸಕ್ತರಾಗಿರಲಿಲ್ಲ. ಆ ಉದ್ದೇಶಕ್ಕಾಗಿ ಅವರಿಗೆ ಹಣದ ಅವಶ್ಯಕತೆಯಿತ್ತು. ಆದ್ದರಿಂದಲೇ ಅವರು ಆ ಕೆಲಸವನ್ನು ಅಂಗೀಕರಿಸಿರಲಿಲ್ಲ. ಅಷ್ಟೊತ್ತಿಗಾಗಲೇ ಬಾಬಾಸಾಹೇಬರು ತನ್ನ ಅಸ್ಪೃಶ್ಯ ಸಹೋದರರ ನೋವು ಮತ್ತು ಸಮಸ್ಯೆಗಳನ್ನು ಅರಿತಿದ್ದರು. ಆದರೆ ಅವರು ತಮ್ಮ ಶಿಕ್ಷಣವನ್ನು ಪೂರೈಸದ ಹೊರತು ಸಾಮಾಜಿಕ ಕಾರ್ಯದಲ್ಲಿ ತೊಡಗಬಾರದೆಂದು ನಿರ್ಧರಿಸಿದ್ದರು. ಆದರೆ ಅವರಿಗೆ ಅದು ಸಾಧ್ಯವಾಗಿರಲಿಲ್ಲ.

೧೯೧೯ರಲ್ಲಿ ಲಾರ್ಡ್ ಸೌತ್‌ಬರೋ ಸಮಿತಿಯು ಭಾರತಕ್ಕೆ ಭೇಟಿ ನೀಡಿತ್ತು. ಕರ್ಮವೀರ್ ವಿಠ್ಠಲ್‌ರಾಮ್ಜಿ ಸಿಂಧೆ ಮತ್ತು ನ್ಯಾಯಮೂರ್ತಿ ನಾರಾಯಣ ಚಂದಾವರ್‌ಕರ್ ಅವರು ಅಸ್ಪೃಶ್ಯರ ಪರವಾಗಿ ಅವರ ಮುಂದೆ ಹಾಜರಾಗಿರಬೇಕಾಗಿತ್ತು. ಆದರೆ ಅವರಿಬ್ಬರೂ ಅಸ್ಪೃಶ್ಯರ ನಿಜವಾದ ಸಮಸ್ಯೆಗಳ ವಿಚಾರ ಮತ್ತು ಅವರ ಜೀವನವನ್ನು ಅರೆದು ತಿನ್ನುವ ನೋವು ಗೊತ್ತಿರಲಿಲ್ಲ. ಈ ಇಬ್ಬರು ಸಮಿತಿಯ ಮುಂದೆ ಹಾಜರಾಗುವುದರಿಂದ ತಮ್ಮ ರಾಜಕೀಯ ಹಕ್ಕುಗಳನ್ನು ಕಳೆದುಕೊಳ್ಳುವ ಭಯದಿಂದ ಅಂಬೇಡ್ಕರರು ಸರಕಾರಿ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದುದರಿಂದ ಸಮಿತಿಯ ಮುಂದೆ, ತಮ್ಮ ವೃತ್ತಿಯನ್ನು ಅಪಾಯಕ್ಕೆ ಇಟ್ಟು (ಕಳೆದುಕೊಳ್ಳುವ) ಅಸ್ಪೃಶ್ಯರನ್ನು ಪ್ರತಿನಿಧಿಸುವ ಅವಕಾಶವನ್ನು ಪಡೆದುಕೊಂಡರು. ಸಮಿತಿಯ ಮುಂದೆ ಅಸ್ಪೃಶ್ಯರ ವಸ್ತುಸ್ಥಿತಿಯನ್ನು ಮಂಡಿಸುವಾಗ ಅವರ ಸ್ಥಿತಿಗತಿಗಳು, ಕಳವಳಗಳು ಮೊದಲಾದವುಗಳನ್ನು ಪ್ರಾಮಾಣಿಕವಾಗಿ ಸಾದರಪಡಿಸಿದರು. ಇದು ಅವರ ಸಾಮಾಜಿಕ ಕಾರ್ಯದ ಪ್ರಾರಂಭವಾಗಿತ್ತು.

ಆ ದಿನಗಳಲ್ಲಿ ಅಸ್ಪೃಶ್ಯರನ್ನು ಹೊರತುಪಡಿಸಿ ಶಿವರಾಮ್ ಜನ್ಬ ಕಾಂಬ್ಳೆರಂತಹವರು ಅಸ್ಪೃಶ್ಯರ ಪರವಾಗಿ ಪ್ರಾಮಾಣಿಕವಾಗಿ ಕೆಲಸ ಮಾಡುವವರು ಇರಲಿಲ್ಲ. ಅವರಲ್ಲಿ ಒಬ್ಬರು ಅಪವಾದವಾಗಿದ್ದರು. ಕೊಲ್ಹಾಪುರದ ಛತ್ರಪತಿ ಶಾಹು ಮಹಾರಾಜರು.

ಏಪ್ರಿಲ್ ೨, ೧೮೯೪ರಲ್ಲಿ ಅವರು ಸಂಸ್ಥಾನದ ಅಧಿಕಾರ ವಹಿಸಿಕೊಂಡಾಗಿನಿಂದ ತಮ್ಮ ಸಾವಿನವರೆಗೆ ಶಾಹುರವರು ಎಲ್ಲಾ ಮೂಲಭೂತ ಕ್ಷೇತ್ರಗಳಲ್ಲಿ ಸಕ್ರಿಯರಾಗಿದ್ದರು. ಅವರ ಕೆಲಸದ ಮುಖ್ಯ ಕೇಂದ್ರಬಿಂದು ಮಾನವಕೇಂದ್ರಿತವಾಗಿತ್ತು. ಅವರು ಪ್ರತಿಯೊಂದು ಕ್ಷೇತ್ರದಲ್ಲಿ ಬದಲಾವಣೆಯನ್ನು ಬಯಸುತ್ತಿದ್ದರು. ಅವರು ಜುಲೈ ೨೬, ೧೯೦೨ರಂದು ಅಸ್ಪೃಶ್ಯರ ಏಳಿಗೆಗಾಗಿ ಸರಕಾರಿ ಸೇವೆಯಲ್ಲಿ ಖಾಲಿಯಿರುವ ಹುದ್ದೆಗಳಿಗೆ ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಶೇಕಡ ೫೦ರಷ್ಟು ಹುದ್ದೆಗಳನ್ನು ಮೀಸಲಿಡುವ ಸುಗ್ರೀವಾಜ್ಞೆಯನ್ನು ಹೊರಡಿಸಿ ಮೊದಲ ಪ್ರಮುಖ ಕ್ರಮ ಕೈಗೊಂಡರು.

ಅಸ್ಪೃಶ್ಯರು ಸ್ವಲ್ಪ ಪ್ರಗತಿಯನ್ನು ಸಾಧಿಸಲು ಶಿಕ್ಷಣ ಮತ್ತು ಜಾಗೃತಿಗಳೆರಡೂ ಅವಶ್ಯಕವೆಂದು ಶಾಹುರವರು ಮನವರಿಕೆ ಮಾಡಿಕೊಂಡರು. ಅವರು ಅಸ್ಪೃಶ್ಯರಲ್ಲಿ ಜಾಗೃತಿಯ ಆಂದೋಲನ ಅಗತ್ಯವೆಂದು ಪ್ರಾಮಾಣಿಕವಾಗಿ ಪರಿಭಾವಿಸಿದರು. ಅವರು ಅಸ್ಪೃಶ್ಯರಲ್ಲಿಯೇ ಯಾರಾದರೊಬ್ಬರು ಆಂದೋಲನವನ್ನು ನಡೆಸಬೇಕೆಂದು ಬಯಸಿದ್ದರು. ಆ ಕ್ಷಣದಲ್ಲಿ ಅವರಲ್ಲಿ ಅಂತಹ ನಾಯಕತ್ವವಿಲ್ಲದಿದ್ದರೂ ಮುಂದೆ ಅಂತಹ ನಾಯಕತ್ವ ಮೂಡಿಬರುವುದೆಂದು ಅವರು ಭಾವಿಸಿದ್ದರು. ಅವರು ಸೀತಾರಾಮ್ ಶಿವತಾರ್ಕರ್ ಅವರಿಗೆ ಸೆಪ್ಟಂಬರ್ ೧೯೧೯ರಲ್ಲಿ ಬರೆದ ಪತ್ರದಲ್ಲಿ ಅವರು ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾರೆ. ಅವರು ಬರೆಯುತ್ತಾರೆ: "ನಾವು ಭೇಟಿಯಾಗಲಿಲ್ಲ. ಆದರೆ ನಾನು ನಿಮ್ಮೊಂದಿಗಿರುವೆನು. ಯಾರು ಬೇರೆಯವರ ಮೇಲೆ ಅವಲಂಬಿಸುತ್ತಾರೆ ಅವರ ಕತೆ ಮುಗಿದಂತೆಯೇ. ನಿಮಗೆ ಗೊತ್ತಿರುವ ಅವರಲ್ಲಿ ಯಾರು ಅತ್ಯುತ್ತಮರು, ಹೋರಾಡುವವರು ಮತ್ತು ಪ್ರಯತ್ನಶೀಲರು? ಅವರು ನನ್ನ, ಬರೋಡದ ಮಹಾರಾಜರ, ಹೈದ್ರಾಬಾದಿನ ನೈಜಾಮರ, ಚಂದಾವರ್‌ಕರ್‌ರ ಅಥವಾ ಶಿಂಧೆಯವರ ಅಭಿಪ್ರಾಯಗಳನ್ನು ಪರಿಗಣಿಸಬೇಕು. ಆದರೆ ಅವರು ನಾಯಕರಾಗಿರಬೇಕು. ನಾಯಕರು ಅವರಲ್ಲೊಬ್ಬರಾಗಿರಬೇಕು".[1] ಅಂಬೇಡ್ಕರರ ವ್ಯಕ್ತಿಯಲ್ಲಿ ಒಂದು ಹೊಸ ನಾಯಕತ್ವ ಅಸ್ಪೃಶ್ಯರಲ್ಲಿ ಮೂಡಿಬರಬೇಕು. ಮತ್ತು ಅದು ಈಗಾಗಲೇ ಅಸ್ಪೃಶ್ಯರ ಹಕ್ಕುಗಳಿಗಾಗಿ ಹೋರಾಟ ಪ್ರಾರಂಭವಾಗಿದೆ.

## ಮೊದಲ ಸಭೆ

೧೯೧೯ರಲ್ಲಿ ಒಂದು ಐತಿಹಾಸಿಕ ಮಹತ್ವದ ಘಟನೆ ನಡೆಯಿತು. ಶಾಹು ಮತ್ತು ಅಂಬೇಡ್ಕರರು ಮೊದಲ ಬಾರಿಗೆ ಭೇಟಿಯಾದರು. ಕೊಲ್ಹಾಪುರದಲ್ಲಿ ಶಾಹುರವರು ಪ್ರಾರಂಭಿಸಿದ ಆಂದೋಲನದಲ್ಲಿ ಕೆಲವರು ಶಿಕ್ಷಿತ ಅಸ್ಪೃಶ್ಯ ಯುವಕರಿದ್ದರು. ಅವರಲ್ಲಿ ಒಬ್ಬರು ದತ್ತೋಬ ಸಂತಾರಾಮ್ ಪವಾರ್. ಅವರ ಶಾಹುರವರಿಗೆ ಒಬ್ಬ ನಿಷ್ಠಾವಂತ ಸಹವರ್ತಿಯಾಗಿದ್ದರು ಮತ್ತು ಸರಕಾರಿ ಸೇವೆಯಲ್ಲಿದ್ದರು. ಅವರು ೧೯೧೦ರಿಂದಲೇ ಅಂಬೇಡ್ಕರರೊಂದಿಗೆ ಒಡನಾಡಿಯಾಗಿದ್ದರು.[2] ದತ್ತೋಬ ಪವಾರ್‌ರವರು ಶಾಹುರವರಿಗೆ ಅಂಬೇಡ್ಕರರ ಬಗ್ಗೆ ದೀರ್ಘವಾಗಿ ವಿವರಿಸಿ ಪರಿಚಯ ಮಾಡಿಕೊಟ್ಟರು. ಶಾಹುರವರು ಅಸ್ಪೃಶ್ಯರಲ್ಲಿ ಬುದ್ಧಿವಂತ ಶಿಕ್ಷಿತ ಯುವಕರು ಇರುವುದನ್ನು ಕೇಳಿ ಹರ್ಷಿತಗೊಂಡರು. ಅವರು ಅಂಬೇಡ್ಕರರ ಜೊತೆಯಲ್ಲಿ ಒಡನಾಟ ಬೆಳೆಸಿಕೊಳ್ಳಲು ಬಯಸಿದರು. ಅವರಿಬ್ಬರ ಭೇಟಿ ೧೯೧೯ರಲ್ಲಿ ಕೂಡಿಬಂತು.

ಶಾಹುರವರು ೧೯೧೯ರಲ್ಲಿ ಮುಂಬೈಗೆ ಹೋದಾಗ ಅವರು ಪನ್ಹಾಲ ವಸತಿನಿಲಯದಲ್ಲಿ ತಂಗಿದರು. ಅಂಬೇಡ್ಕರರ ವಿಳಾಸವನ್ನು ಪತ್ತೆಹಚ್ಚಲು ತನ್ನ ಕೆಲವು ಮಂದಿಯನ್ನು ಕಳುಹಿಸಿಕೊಟ್ಟರು. ಆದರೆ ಅವರು ಅವರ ವಿಳಾಸವನ್ನು ಪತ್ತೆ ಹಚ್ಚಲಾಗಲಿಲ್ಲ. ಆದರೆ ಅವರು ಪತ್ತೆ ಹಚ್ಚದಿದ್ದುದರಿಂದ ಶಾಹುರವರೇ ಸ್ವತಃ

ಅಂಬೇಡ್ಕರ್ ವಾಸ ಮಾಡುವ ಪರಲ್‌ಭಾಳುಗಳಿಗೆ ಹೋದರು. ಕೊಲ್ಹಾಪುರದ ಮಹಾರಾಜರು ಅಂಬೇಡ್ಕರರನ್ನು ನೋಡಲು ಬಂದಿದ್ದಾರೆ ಎಂಬ ಸಂದೇಶವನ್ನು ತಿಳಿದು ಅಂಬೇಡ್ಕರರು ತಮ್ಮ ಮನೆಯ ಎರಡನೇ ಮಹಡಿಯಿಂದ ಇಳಿದು ಬಂದರು. ಹೀಗೆ ಮಹಾರಾಜರ ಮತ್ತು ಅಂಬೇಡ್ಕರರ ಮೊದಲ ಸಲದ ಭೇಟಿ ಒಂದು ಪರಲ್‌ಭಾಳ್‌ನಲ್ಲಿ ನಡೆಯಿತು. ಶಾಹುರವರು ಸಂತೋಷಚಿತ್ತರಾಗಿದ್ದರು ಮತ್ತು ಯುವಕರಾದ ಅಂಬೇಡ್ಕರರನ್ನು ತಮ್ಮ ಪನ್ಹಾಲ ಲಾಡ್ಜಿಗೆ ಕರೆದುಕೊಂಡು ಹೋದರು. ಅವರು ನಾನಾ ವಿಷಯಗಳನ್ನು ಅಲ್ಲಿ ಚರ್ಚಿಸಿದರು. ಶಾಹುರವರು ಅದೇ ಭೇಟಿಯಲ್ಲಿ ಅಂಬೇಡ್ಕರರನ್ನು ಕೊಲ್ಹಾಪುರಕ್ಕೆ ಆಹ್ವಾನಿಸಿದರು ಮತ್ತು ಅಂಬೇಡ್ಕರರು ಆ ಆಹ್ವಾನವನ್ನು ಒಪ್ಪಿಕೊಂಡರು.[3]

## ಅಂಬೇಡ್ಕರರ ಕೊಲ್ಹಾಪುರದ ಭೇಟಿ

ಒಪ್ಪಿದಂತೆಯೇ ಅಂಬೇಡ್ಕರರು ಕೊಲ್ಹಾಪುರಕ್ಕೆ ಬಂದರು. ಅವರು ರೈಲ್ವೆ ನಿಲ್ದಾಣದ (ಆ ಕಾಲದಲ್ಲಿ) ಎದುರಿದ್ದ ಸರಕಾರಿ ವಸತಿಗೃಹದಲ್ಲಿ ತಂಗಿದರು. ಶಾಹು ಅವರು ಅವರನ್ನು ಮೆರವಣಿಗೆಯಲ್ಲಿ ಕೊಲ್ಹಾಪುರದಲ್ಲಿ ಕರೆದುಕೊಂಡು ಹೋದರು. ಅಂಬೇಡ್ಕರರಿಗೆ ರಾಜರ ಭವ್ಯ ಸ್ವಾಗತ ಮತ್ತು ಆತಿಥ್ಯ ನೀಡಲಾಯಿತು. ಅವರಿಬ್ಬರೂ ಸೊನ್‌ತಾಲಿ ಕ್ಯಾಂಪಿನಲ್ಲಿ ಊಟಮಾಡಿದರು ಈ ಸಭೆಯಲ್ಲಿ ಇಬ್ಬರೂ ದೀರ್ಘವಾದ ಚರ್ಚೆ-ಸಂವಾದಗಳಲ್ಲಿ ತೊಡಗಿದರು.

ಶಾಹುರವರು ಭೇಟಿಯ ಕೊನೆಯಲ್ಲಿ ಒಂದು ಅದ್ಭುತ ಸನ್ಮಾನ ಸಮಾರಂಭವನ್ನು ಸಾರ್ವಜನಿಕವಾಗಿ ಅಂಬೇಡ್ಕರರಿಗೆ ವ್ಯವಸ್ಥೆಗೊಳಿಸಿದ್ದರು. ಅಂಬೇಡ್ಕರರು ಕಾರ್ಯಕ್ರಮದಲ್ಲಿ ಹೀಗೆ ಹೇಳಿದರು: "ಛತ್ರಪತಿಗಳು ನನಗೆ ಪಟ್ಟವನ್ನು ತೊಡಿಸಿ ಸನ್ಮಾನ ಮಾಡಿದ್ದಾರೆ. ನಾನು ಸದಾ ಆ ಮನೋಭಾವವನ್ನು ಗೌರವಿಸುವೆನು."[4] ಮಾತುಗಳು ಅರ್ಥಗರ್ಭಿತವಾಗಿದ್ದವು.

## 'ಮೂಕನಾಯಕ'ನಿಗೆ ಸಹಾಯ

ತನ್ನ ವಿದ್ಯಾಭ್ಯಾಸ ಪೂರ್ಣಗೊಳಿಸುವಾಗ ಅನುಭವಿಸಿದ ಹಲವಾರು ಸಂಕಷ್ಟಗಳು, ಬರೋಡ ಸಂಸ್ಥಾನದಲ್ಲಿ ಮಾನಸಿಕವಾಗಿ ಚಿತ್ತ ಧೈರ್ಯಗೆಡಿಸಿದ ಅವಮಾನ ಮತ್ತು ತಾನೇ ಸ್ವತಃ ಅನುಭವಿಸಿದ ಜಾತೀಯತೆಯ ಉಜ್ವಲ ನೋವುಗಳಿದ್ದರೂ ತನ್ನ ಸಹೋದರರಿಗಾಗಿ ಹೋರಾಡಲು ಅಂಬೇಡ್ಕರರು ಸಿದ್ಧರಾಗಿದ್ದರು. ತನ್ನ ಪ್ರಾರಂಭದ ಹೋರಾಟದಲ್ಲಿಯೇ ಅವರು ಶಾಹುರವರ ವಿಶ್ವಾಸಪೂರ್ಣ ಮತ್ತು ಭರವಸೆಯ ಪ್ರಾಮಾಣಿಕ ಬೆಂಬಲ ಲಭ್ಯವಾಯಿತು. ಇದು ಒಂದು ಮಹಾ ಪರಿಹಾರವಾಗಿತ್ತು. ಅಂಬೇಡ್ಕರರು ಶಕ್ತಿ ಮತ್ತು ಭರವಸೆಯ ಸಿದ್ಧತೆಯ ಹೋರಾಟಕ್ಕೆ ಇದು ಸಹಾಯ ಮಾಡಿತು.

ಈ ಸಮಯಕ್ಕೆ ಅಂಬೇಡ್ಕರು ಭಾರತಕ್ಕೆ ಭೇಟಿ ನೀಡುತ್ತಿರುವ ಸೌತ್‌ಬರೋ ಕಮಿಟಿಯ ಮುಂದೆ ಅಸ್ಪೃಶ್ಯರ ಅಭಿಪ್ರಾಯಗಳನ್ನು ಜನತೆಗೆ ತಿಳಿಸುವುದಕ್ಕೆ ಒಂದು ಪತ್ರಿಕೆಯ ಅವಶ್ಯಕತೆಯಿದೆಯೆಂದು ಭಾವಿಸತೊಡಗಿದರು. ಅವರಿಂದ ಪ್ರೇರಣೆಗೊಂಡ ಅಸ್ಪೃಶ್ಯ ಸಾಮಾಜಿಕ ಕಾರ್ಯಕರ್ತರು ಶಾಹುರವರನ್ನು ಮುಂಬಯಿಯಲ್ಲಿ ಭೇಟಿ ಮಾಡಿದರು ಮತ್ತು ಅಂತಹ ಒಂದು ಪತ್ರಿಕೆಯ ಯೋಜನೆಯನ್ನು ಅವರ ಮುಂದೆ ಇಟ್ಟರು. ಶಾಹುರವರು ಕೂಡಲೇ ೨,೫೦೦ ರೂ.ಗಳ ಒಂದು ಚೆಕ್ಕನ್ನು ಅದರ ಪ್ರಾರಂಭಕ್ಕೆ ನೀಡಿದರು.[5] ಹೀಗೆ 'ಮೂಕನಾಯಕ' ಪಾಕ್ಷಿಕ ಪತ್ರಿಕೆ ಹುಟ್ಟನ್ನು ಪಡೆಯಿತು. ಅದರ ಉದ್ಘಾಟನಾ ಸಂಚಿಕೆ

ಜನವರಿ ೩೧, ೧೯೨೦ರಂದು ಪ್ರಕಟವಾಯಿತು. ವಿದರ್ಭದ ಯುವಕ ಮಹರ್‌ನಾದ ಸ್ನಾತಕ ಪದವಿ ಓದುತ್ತಿರುವ ಪಾಂಡುರಂಗ ನಂದ್‌ರಾಮ್ ಭಟ್ಕರ್ ಅದರ ಸಂಪಾದಕರಾಗಿದ್ದರು. ಅಂಬೇಡ್ಕರರು ಸರಕಾರಿ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದುದರಿಂದ ಪತ್ರಿಕೆಯ ಸಂಪಾದಕನಾಗಿರುವುದು ಅಪಾಯಕರವಾಗಿತ್ತು. ಆದರೆ ಬಹುಮಟ್ಟಿಗೆ ಬರವಣಿಗೆಯ ಎಲ್ಲಾ ಕೆಲಸಗಳನ್ನು ಅವರೇ ಮಾಡುತ್ತಿದ್ದರು. ಪಾಕ್ಷಿಕವು ಕಾಶೀನಾಥ. ರಘುನಾಥರ ನಂ.–೧೪, ಹರರ್‌ವಾಲಿ ಕಟ್ಟಡ, ಡಾ. ಬಾಟ್ಲಿವಾಲ ರಸ್ತೆ, ಪೋಮ್‌ಬಾವಡಿ, ಪರಲ್‌ನಲ್ಲಿರುವ ಮಿತ್ರಮುದ್ರಣದಲ್ಲಿ ಅಚ್ಚಾಗಿತ್ತು. ಪಾಕ್ಷಿಕದ ಮೊದಲ ೧೩ ಸಂಪಾದಕೀಯಗಳನ್ನು ಅಂಬೇಡ್ಕರರು ಬರೆದಿದ್ದರು. ಅವರು ಲಂಡನ್ನಿಗೆ ಹೋದ ಮೇಲೆ ಹೊಣೆಗಾರಿಕೆಯು ಭಟ್ಕರ್ ಮೇಲೆ ಇತ್ತು. ಅಸ್ಪೃಶ್ಯರ ಆಂದೋಲವನ್ನು ಬಲಪಡಿಸುವುದರಲ್ಲಿ ಮೂಕನಾಯಕ ಬಹಳ ಪರಿಣಾಮಕಾರಿಯಾಗಿತ್ತು.

## ಮನ್‌ಗಾವ್ ಸಮ್ಮೇಳನ

ಶಾಹು ಮತ್ತು ಅಂಬೇಡ್ಕರರ ನಡುವಣ ಸಂಬಂಧಗಳು ಗಟ್ಟಿಗೊಂಡಂತೆ ಅಸ್ಪೃಶ್ಯರ ಆಂದೋಲನಕ್ಕೆ ಇಬ್ಬರು ದೃಢ ಸೈದ್ಧಾಂತಿಕ ಸ್ತಂಭಗಳಾಗಿ ಪ್ರತಿನಿಧಿಸಿದ್ದರು. ಅವರ ಸದುದ್ದೇಶಕ್ಕಾಗಿ ತೀವ್ರಗತಿಯನ್ನು ನೀಡಲು ಅವರು ಈಗ ಜನರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ಮತ್ತು ಆಂದೋಲನವನ್ನು ಹೆಚ್ಚು ಚಲನಶೀಲಗೊಳಿಸಲು ಅವರು ತಮ್ಮ ನಡುವಣ ಸಾಮರಸ್ಯವನ್ನು ಬಲಗೊಳಿಸಲು ಬದ್ಧರಾದರು. ಇದೇ ಯಥಾವತ್ತಾಗಿ ನಡೆಯಿತು. ಮನ್‌ಗಾವ್ ಸಮ್ಮೇಳನ ಒಂದು ನಿದರ್ಶನ.

ದಕ್ಷಿಣ ಮಹಾರಾಷ್ಟ್ರ ದಲಿತ ಪರಿಷತ್ತಿನ ಪ್ರಥಮ ಸಮ್ಮೇಳನ ಮಾರ್ಚ್ ೨೦, ೨೧, ೧೯೨೧ರಲ್ಲಿ ಕೊಲ್ಹಾಪುರ ಸಂಸ್ಥಾನದ ಕಾಗಲ್ ಪ್ರದೇಶದಲ್ಲಿನ ಮನ್‌ಗಾವ್‌ನಲ್ಲಿ ವ್ಯವಸ್ಥೆಗೊಳಿಸಲಾಗಿತ್ತು.

ದತ್ತೋಬ ಪವಾರ್ ಅವರು ಸಮ್ಮೇಳನವನ್ನು ಸಂಘಟಿಸುವುದಕ್ಕೆ ಆಸಕ್ತಿಯನ್ನು ವಹಿಸಿದ್ದರು. ಅವರು ಈ ವಿಚಾರದಲ್ಲಿ ಶಾಹು, ಅಸ್ಪೃಶ್ಯ ನಾಯಕರಾದ ಡಾ. ರಮಾಕಾಂತ ಕಾಂಬ್ಳೆ, ಗಂಗಾರಾಮ್ ಕಾಂಬ್ಳೆ, ತುಕಾರಾಮ್ ಗಣಾಚಾರಿ, ಶಿವರಾಮ್ ಕಾಂಬ್ಳೆ, ರಾಮಚಂದ್ರ ಕಾಂಬ್ಳೆ ಮತ್ತು ನಿಂಗಪ್ಪ ಐದಾಳೆ ಅವರೊಡನೆ ಸಮಾಲೋಚನೆ ನಡೆಸಿದ್ದರು.[6] ಅವರು ಅಂಬೇಡ್ಕರರಿಗೆ ಸಮ್ಮೇಳನ ನಿರ್ಧಾರ ಮಾಡಲು ಶಾಹು ಅವರಿಗೆ ಪತ್ರ ಬರೆದಿದ್ದರು. ಐದಾಳೆ ಅವರು ಸಮ್ಮೇಳನದ ದಿನಾಂಕ ಮತ್ತು ಸಮಯವನ್ನು ಅಂಬೇಡ್ಕರರೊಂದಿಗೆ ನಿರ್ಧರಿಸಲು ಮುಂಬಯಿಗೆ ಹೋಗಿದ್ದರು.[7]

ಅಂಬೇಡ್ಕರರು ಮಾರ್ಚ್ ೨೦ರಂದು ಬೆಳಿಗ್ಗೆ ರೈಲಿನಲ್ಲಿ ಕೆಲವು ಸಹವರ್ತಿಗಳೊಂದಿಗೆ ಕೊಲ್ಹಾಪುರಕ್ಕೆ ಆಗಮಿಸಿದರು. ಅವರು ಶಾಹು ಮಹಾರಾಜರ ಸರಕಾರಿ ಅತಿಥಿ ಗೃಹದಲ್ಲಿ (ಈಗಿನ ಶಾಹುಪುರಿ ಪೊಲೀಸ್ ಠಾಣೆ) ತಂಗಿದರು. ಮಧ್ಯಾಹ್ನದ ಊಟದ ನಂತರ ಅವರು ರೈಲಿನಲ್ಲಿ ರುಡ್ಕಿಗೆ ಹೋದರು ಮತ್ತು ಅಲ್ಲಿಂದ ಮೂರು ಕಿಲೋಮೀಟರ್ ದೂರ ಮನ್‌ಗಾವ್‌ಗೆ ಹೋದರು. ಮನ್‌ಗಾವ್ ಪಾಟೀಲರು ಮತ್ತು ಸಮ್ಮೇಳನದ ಸಂಚಾಲಕರಾದ ಅಪ್ಪಸಾಹೇಬ ದಡ್‌ಗೊಂಡ, ಮತ್ತು ನೂರಾರು ಜನರು ಅವರನ್ನು ಸ್ವಾಗತಿಸಿದರು. ಶಾಹು ಮಹಾರಾಜರು ಕೂಡ ಸಮ್ಮೇಳನದಲ್ಲಿ ಭಾಗವಹಿಸುತ್ತಾರೆಂಬ ಮಾಹಿತಿಯನ್ನು ಈಗಾಗಲೇ ಜನರು ಅರಿತಿದ್ದರು. ಆದ್ದರಿಂದ ಸಾವಿರಾರು ಜನರು ಸಂಸ್ಥಾನದಿಂದ ಬಂದು ಸೇರಿದ್ದರು.

ಸಮ್ಮೇಳನ ನಾಲ್ಕು ಗಂಟೆಗೆ ಪ್ರಾರಂಭವಾಯಿತು. ಬಾಬಾಸಾಹೇಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ದತ್ತೋಬ ಪವಾರ್ ಮತ್ತು ನಿಂಗಪ್ಪ ಐದಾಳೆಯವರು ಪ್ರಾರಂಭದಲ್ಲಿ ಮಾತನಾಡಿದರು.

ಆಮೇಲೆ ಶಾಹುರವರು ಕುದುರೆಗಾಡಿಯಲ್ಲಿ ಬಂದು ತಲುಪಿದರು. ಭಾಸ್ಕರರಾವ್ ಜಾಧವ ಇತರರು ಅವರ ಜೊತೆಯಲ್ಲಿ ಬಂದರು. ಅಂಬೇಡ್ಕರರು ಛತ್ರಪತಿಗಳನ್ನು ಸ್ವಾಗತಿಸಿದರು ಮತ್ತು ವೇದಿಕೆಯ ಮೇಲೆ ಪೀಠವನ್ನು ಅಲಂಕರಿಸುವಂತೆ ಕೋರಿದರು.[8]

ಅಂಬೇಡ್ಕರರ ಜೀವನದಲ್ಲಿ ಮನ್‌ಗಾವ್ ಸಮ್ಮೇಳನ ಮೊದಲನೇ ಭಾರಿ ಸಾರ್ವಜನಿಕ ಸಭೆಯಾಗಿತ್ತು. ಸಮ್ಮೇಳನದಲ್ಲಿ ಅವರ ಹಾಜರಿಯು ಒಂದು ಐತಿಹಾಸಿಕ ಘಟನೆಯಾಗಿತ್ತು. ಸಮ್ಮೇಳನದಲ್ಲಿ ಶಾಹುರವರ ಭಾಷಣವು ಅಸ್ಪೃಶ್ಯರಿಗೆ ಒಂದು ಧೈರ್ಯ ತುಂಬುವುದು ಮಾತ್ರವಾಗಿರದೆ ಅಂಬೇಡ್ಕರರಿಗೂ ಧೈರ್ಯ ತುಂಬಿದ ಭಾಷಣವಾಗಿತ್ತು. ಪ್ರಾರಂಭದಲ್ಲಿ ಅವರ ಭಾಷಣವು ಅಂಬೇಡ್ಕರರನ್ನು ಧಾರಾಳವಾಗಿ ಹೊಗಳುವಂಥದ್ದಾಗಿತ್ತು. ಶಾಹು ಹೇಳುತ್ತಾರೆ: "ನನ್ನ ಪ್ರೀತಿಯ ಸ್ನೇಹಿತ ಅಂಬೇಡ್ಕರರು ಸಮ್ಮೇಳನದ ಅಧ್ಯಕ್ಷತೆ ವಹಿಸಿ ಸಮ್ಮೇಳನಕ್ಕೆ ಶೋಭೆ ತಂದಿದ್ದಾರೆ. ನಾನು ಬೇಟೆಯಾಡುವುದನ್ನು ಮೂಲೆಗೆ ತಳ್ಳಿ ಇಲ್ಲಿಗೆ ಅವರ ವಿಶೇಷ ಭಾಷಣದಿಂದ ಪ್ರಯೋಜನ ಪಡೆಯಬೇಕೆಂದು ಬಂದಿದ್ದೇನೆ. ಶ್ರೀಮಾನ್ ಅಂಬೇಡ್ಕರರು 'ಮೂಕನಾಯಕ' ಎಂಬ ಪಾಕ್ಷಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. ಮತ್ತು ಅವರು ಹಿಂದುಳಿದ ಎಲ್ಲಾ ಸಮುದಾಯಗಳ ಬಗ್ಗೆ ಬರೆಯುತ್ತಿದ್ದಾರೆ. ನಾನು ಅದಕ್ಕಾಗಿ ಅವರನ್ನು ಹೃದಯಪೂರ್ವಕವಾಗಿ ಅಭಿನಂದಿಸುತ್ತೇನೆ."

ಅಸ್ಪೃಶ್ಯರು ಗ್ರಾಮದ ಚಾವಡಿಯಲ್ಲಿ ಹಾಜರಿ ಹಾಕುವ ಪದ್ಧತಿಯನ್ನು ನಿಲ್ಲಿಸಿದ್ದೇನೆಂದು ಶಾಹು ಸೂಚಿಸಿದರು. "ನಾನು ಏಕೆ ಈ ಕ್ರಮ ಕೈಗೊಂಡೆ ಎಂಬ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸುತ್ತೇನೆ. ಕಡ್ಡಾಯ ಹಾಜರಿಯಿಂದ ಹಳ್ಳಿಯ ಕಾರ್ಮಿಕರು ಮತ್ತು ಇತರೆ ಅಧಿಕಾರಿಗಳು ಅವರನ್ನು ಶೋಷಣೆ ಮಾಡುತ್ತಿದ್ದರು. ಹಳ್ಳಿಯಲ್ಲಿ ಕೂಲಿಯ ದರ ನಾಲ್ಕು ಆಣೆಯಾದರೆ, ಅಧಿಕಾರಿಗಳು ಗೈರುಹಾಜರಿ ಎಂದು ಮಾರ್ಕ್ ಮಾಡುವೆವು ಎಂದ ಅವರನ್ನು ಬೆದರಿಸಿ, ಒತ್ತಾಯಪಡಿಸಿ ಯಾವುದೇ ಸಂಭಾವನೆಯಿಲ್ಲದೆ ಬಿಟ್ಟಿ ದುಡಿಸಿಕೊಳ್ಳುತ್ತಿದ್ದರು. ಹೆಚ್ಚೆಂದರೆ ಅವರು ಉಪವಾಸ ಸಾಯದಂತೆ ಏನೋ ಸ್ವಲ್ಪವನ್ನು ನೀಡುತ್ತಿದ್ದರು. ಈ ಇಪ್ಪತ್ತನೇ ಶತಮಾನದಲ್ಲಿ ಇದು ಗುಲಾಮತನದ ಕೆಟ್ಟ ರೂಪವಾಗಿತ್ತು. ಯಾರು ಹಾಜರಿ ಹಾಕಬೇಕಾಗಿತ್ತೋ ಅವರು ತಮ್ಮ ಅತಿಥಿಗಳು ಮತ್ತು ಸಂಬಂಧಿಕರು ಕಾಯಿಲೆ ಬಿದ್ದರೂ ಹೋಗಿ ನೋಡುವುದಕ್ಕೆ ಆಗುತ್ತಿರಲಿಲ್ಲ. ಒಮ್ಮೊಮ್ಮೆ ಸಂಬಂಧಿಕರು ಅಂಥ ಕಾರ್ಮಿಕರನ್ನು ನೋಡದೆ ಸತ್ತಿದ್ದಾರೆ. ಚಿಕ್ಕ ಮಕ್ಕಳ ತಂದೆ-ತಾಯಿಗಳು ಬಲಾತ್ಕಾರವಾಗಿ ಕಡ್ಡಾಯ ಹಾಜರಿಗೆ ಹಚ್ಚಿದ್ದರಿಂದ ಅವುಗಳನ್ನು ನೋಡಿಕೊಳ್ಳುವವರು ಇಲ್ಲದೆ ಅವರು ಸತ್ತಿದ್ದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಅವರ ತಂದೆ ತಾಯಿಗಳು ವಾಪಸ್ಸು ಬದಾಗ ಆ ಮಕ್ಕಳು ಸತ್ತುಬಿದ್ದಿರುತ್ತಾರೆ. ಇದಕ್ಕಿಂತ ಮಿಗಿಲಾದ ಅತ್ಯಾಚಾರ ಮತ್ತೊಂದು ಇದೆಯೇ?"

ಜಾತಿವ್ಯವಸ್ಥೆಯ ಬಗ್ಗೆ ಅವರು ಹೇಳುತ್ತಾರೆ: "ಭಾರತದಲ್ಲಿ ಬಿಟ್ಟರೆ ಇನ್ನೆಲ್ಲಿಯೂ ಜಾತಿಗಳಿಲ್ಲ. ಆದರೆ ನಮ್ಮದೇ ದೇಶದಲ್ಲಿ ಅದು ಬಲವಾಗಿದೆ, ನಮ್ಮ ಸಹೋದರ ಮತ್ತು ಸಹೋದರಿಯರನ್ನು ನಾಯಿ ಮತ್ತು ಬೆಕ್ಕುಗಳಿಗಿಂತ ಅಥವಾ ಸಗಣಿಗಿಂತ ಕೀಳಾಗಿ ನೋಡಲಾಗುತ್ತದೆ. ಈಗಲೂ ಕೂಡ ನಾನು ಶಿಸ್ತಿಲ್ಲದ ನಾಯಕರನ್ನು ಹೊಂದಿದ್ದೇವೆ. ಕೆಲವು ದಿನಗಳ ಹಿಂದೆ ಅಹಮದಾಬಾದ ಮತ್ತು ಅಮೃತಸರ ಅಥವಾ ಮುಂಬಯಿಗಳಲ್ಲಿ ಗಲಭೆಗಳು ನಡೆದು ಬಡಜನರು ಸಾಯುತ್ತಿದ್ದಾರೆ. ನಮಗೆ ಕೆಲಸಕ್ಕೆ ಬಾರದ ಹರಟೆ ಒಡೆಯುವ ನಾಯಕರು ಬೇಡ. ನಮಗೆ ಕಾರ್ಯೋನ್ಮುಖ ನಾಯಕರು, ಅವರು ಸಕ್ರಿಯವಾಗಿ ಜಾತಿಪದ್ಧತಿಯನ್ನು ಕೊನೆಗಾಣಿಸುವ, ಮತ್ತು ನಮ್ಮನ್ನು ಮಾನವಜೀವಿಗಳೆಂದು ಭಾವಿಸಿ ಉಪಚರಿಸುವ ನಾಯಕರು ಬೇಕಾಗಿದ್ದಾರೆ."

ಅಂಬೇಡ್ಕರರನ್ನು ಹೊಗಳುತ್ತಾ ಶಾಹು ಹೇಳುತ್ತಾರೆ: "ಪಂಡಿತ ಎಂಬ ಬಿರುದಿನಿಂದ ಅವರನ್ನು ಏಕೆ ಗೌರವಿಸಬಾರದು? ಅವರು ಮುತ್ತಿನಂತಹ ವಿದ್ವಾಂಸರು. ಅವರನ್ನು ಆರ್ಯ ಸಮಾಜ, ಬುದ್ಧ ಸಮಾಜ ಮತ್ತು ಕ್ರಿಶ್ಚಿಯನ್ ಸಮಾಜ ಸಂತೋಷದಿಂದ ಸ್ವಾಗತಿಸುವುದು. ಅವರು ನಿಮ್ಮ ಏಳಿಗೆ ಮಾಡಲು ಅಲ್ಲಿಗೆ ಹೋಗುವುದಿಲ್ಲ. ನೀವು ಅವರಿಗೆ ಅದಕ್ಕಾಗಿ ಕೃತಜ್ಞತೆಗಳನ್ನು ಹೇಳಬೇಕು. ನಾನೂ ಅದನ್ನೇ ಮಾಡುವೆನು.

"ನಾನು ನೀವು ನಿಮ್ಮವನೇ ಆದ ನಾಯಕನನ್ನು ಕಂಡುಕೊಳ್ಳುತ್ತಿರುವುದರಿಂದ ನಿಮ್ಮನ್ನು ಅಭಿನಂದಿಸುತ್ತೇನೆ. ನಿಮ್ಮ ಏಳಿಗೆಯನ್ನ ಮಾಡದೆ ಅಂಬೇಡ್ಕರರು ವಿಶ್ರಾಂತಿ ಪಡೆಯುವುದಿಲ್ಲವೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಒಂದು ಕಾಲ ಬರುವುದು, ಅವರು ಇಡೀ ಭಾರತಕ್ಕೆ ನಾಯಕರಾಗುವರು. ಕೊನೆಯಲ್ಲಿ ಅಂಬೇಡ್ಕರರು ವಾಪಸ್ಸು ಹೋಗುವುದಕ್ಕೆ ಮೊದಲು ರಜಪೂತವಾಡಿ ಕ್ಯಾಂಪಿನಲ್ಲಿ ನಮ್ಮ ಜೊತೆಯಲ್ಲಿ ಊಟಕ್ಕೆ ಬರಬೇಕೆಂದು ನಾನು ಅವರನ್ನು ಕೇಳಿಕೊಳ್ಳುತ್ತೇನೆ."[9]

ಸಮ್ಮೇಳನವು ಸರ್ವಾನುಮತದಿಂದ ಕೆಲವು ಠರಾವುಗಳನ್ನು ಪಾಸುಮಾಡಿತು. ಠರಾವು ಸಂಖ್ಯೆ ೨ ಬಹಳ ಮುಖ್ಯವಾದುದು. "ಅಸ್ಪೃಶರಿಗೆ ಸಮಾನತೆಯ ಹಕ್ಕನ್ನು ನೀಡುವ ಮೂಲಕ ಅವರು ಅವರಿಗಾಗಿ ಏಳಿಗೆಯ ಆಂದೋಲನವನ್ನು ಪ್ರಾರಂಭಿಸಿರುವುದರಿಂದ ಶಾಹು ಮಹಾರಾಜರ ಹುಟ್ಟಿದ ದಿನವನ್ನು ಒಂದು ಹಬ್ಬವಾಗಿ ಅಸ್ಪೃಶ್ಯರು ಆಚರಿಸಬೇಕೆಂಬುದು ಈ ಸಮ್ಮೇಳನದ ಅಭಿಪ್ರಾಯವಾಗಿದೆ."

ಸಮ್ಮೇಳನವು ೧೫ ಠರಾವುಗಳನ್ನು ಪ್ರಸ್ತಾಪಿಸಿತು ಮತ್ತು ಪಾಸು ಮಾಡಿತು. ಠರಾವು ಸಂಖ್ಯೆ ೩, ಅಸ್ಪೃಶ್ಯರ ವಿಮೋಚನೆಗಾಗಿ ಪ್ರಯತ್ನಿಸುವ ಇತರೆ ಮಹಾರಾಜರನ್ನು ಈ ಸಮ್ಮೇಳನವು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.[10]

ಮನ್‌ಗಾವ್ ಸಮ್ಮೇಳನವನ್ನು ಮಹಾ ಉತ್ಸಾಹದಿಂದ ಸಂಘಟಿಸಲಾಯಿತು. ಸಮ್ಮೇಳನ ಮನ್‌ಗಾವ್‌ನಲ್ಲಿ ನಡೆದಿದ್ದರಿಂದ ಮಾತ್ರ ಅಸ್ಪೃಶ್ಯರನ್ನು ಹಿಂಸಿಸಲಿಲ್ಲ. ಅವರು ಅಲ್ಲಿದ್ದಾರೆ. ಶಾಹು ಮತ್ತು ಅಂಬೇಡ್ಕರರ ಉಪಸ್ಥಿತಿ ಮತ್ತು ಅವರ ಭಾಷಣಗಳು ಅಸ್ಪೃಶ್ಯರಲ್ಲಿ ಹೆಚ್ಚು ಧೈರ್ಯ ತುಂಬಿತೆಂಬುದನ್ನು ನಿರಾಕರಿಸುವಂತಿಲ್ಲ. ಸಮ್ಮೇಳನವು ಅಂಬೇಡ್ಕರರಿಗೆ ಸಾರ್ವಜನಿಕ ಜೀವನದ ಆರಂಭವಾಗಿತ್ತು. ಪ್ರಾರಂಭದಲ್ಲಿಯೇ ಅಂಬೇಡ್ಕರರು ಶಾಹು ಮಹಾರಾಜರಂತಹ ಬೆಂಬಲಿಗರು ಸಿಕ್ಕಿದರು. ಅಂತಹ ಬೆಂಬಲ ಅವರಲ್ಲಿ ಮತ್ತಷ್ಟು ಹುಮ್ಮಸ್ಸು, ಧೈರ್ಯ ತುಂಬಿತು. ಅವರು ಹೊಸ ಭರವಸೆಗಳನ್ನು ಪೋಷಿಸಲು ಪ್ರಾರಂಭಿಸಿದರು. ಅಸ್ಪೃಶ್ಯರ ಅಖಿಲ ಭಾರತ ನಾಗಪುರ ಸಮ್ಮೇಳನವನ್ನು ಶಾಹು ಮಹಾರಾಜರ ಅಧ್ಯಕ್ಷತೆಯಲ್ಲಿ ಸಂಘಟಿಸಲಾಯಿತು. ಅದರ ಸಫಲತೆಯು ಮನ್‌ಗಾವ್ ಸಮ್ಮೇಳನದಿಂದ ಲಭ್ಯವಾಯಿತು. ಏಕೆಂದರೆ ಮನ್‌ಗಾವ್ ಸಮ್ಮೇಳನ ಸೂಕ್ತ ವಾತಾವರಣವನ್ನು ಇದಕ್ಕೆ ಮೂಡಿಸಿತ್ತು.

## ನಾಗಪುರದ ಸಮ್ಮೇಳನ

ಅಂಬೇಡ್ಕರರು ಅಸ್ಪೃಶ್ಯರಿಗೆ ರಾಜಕೀಯ ಹಕ್ಕುಗಳನ್ನು ಖಾತರಿಗೊಳಿಸಲು ಪ್ರಯತ್ನಪಡುತ್ತಿದ್ದವರು ರಾಜಿಗೆ ಸಿದ್ಧರಿರಲಿಲ್ಲ. ಅವರ ಸೌತ್‌ಬರೋ ಸಮಿತಿಯ ಮುಂದೆ ಹಾಜರಾಗಿದ್ದರು. ಆದರೆ ಅವರು ಕರ್ಮವೀರ ಶಿಂಧೆಯವರು ಅಸ್ಪೃಶ್ಯರಿಗೆ ಅಡ್ಡಿಯಾಗುವಂತೆ ಸರಕಾರ ಮೇಲೆ ಪ್ರಭಾವ ಬೀರಬಹುದೆಂದು

ಆತಂಕಗೊಂಡಿದ್ದರು. ಶಿಂಧೆಯವರು ಅಸ್ಪೃಶ್ಯರ ಪ್ರತಿನಿಧಿಗಳನ್ನು ಶಾಸನ ಪರಿಷತ್ತಿನ ಸದಸ್ಯರು ಆಯ್ಕೆ ಮಾಡಬೇಕೇ ಹೊರತು ಗೌರ್ನರರು ಅಥವಾ ಅಸ್ಪೃಶ್ಯರ ಸಂಘಟನೆಗಳು ಮಾಡಬಾರದೆಂದು ಸರಕಾರಕ್ಕೆ ತಿಳಿಸಿದ್ದರು.

ಸೌತ್‌ಬರೋ ಸಮಿತಿಯು ಶಿಂಧೆಯವರು ಹಾಜರಾಗಿ ಮಂಡಿಸಿದ ಅಭಿಪ್ರಾಯವನ್ನು ಒಪ್ಪಿಬಿಟ್ಟರೆ ಅಸ್ಪೃಶ್ಯರು ರಾಜಕೀಯ ಹಕ್ಕುಗಳನ್ನು ಕಳೆದುಕೊಳ್ಳುವರೆಂದು ಮನವರಿಕೆ ಮಾಡಿಕೊಂಡ ಅಂಬೇಡ್ಕರರು ಶಿಂಧೆಯವರು ಮಂಡಿಸಿದ ಅಭಿಪ್ರಾಯಗಳು ಹೇಗೆ ಅಸ್ಪೃಶ್ಯರಿಗೆ ಅಡ್ಡಿಯಾಗುತ್ತವೆಂಬುದನ್ನು ಜನರು ಅರಿತುಕೊಳ್ಳಲು ಒಂದು ಅಭಿಯಾನವನ್ನೇ ಪ್ರಾರಂಭಿಸಲು ನಿರ್ಧರಿಸಿದರು. ಅಸ್ಪೃಶ್ಯರ ರಾಜಕೀಯ ಆಕಾಂಕ್ಷೆಗಳನ್ನು ಸಾರ್ವಜನಿಕರಿಗೆ ಘೋಷಿಸುವ ಸಲುವಾಗಿ ಅಂಬೇಡ್ಕರರು ಶಾಹುರವರ ಅಧ್ಯಕ್ಷತೆಯಲ್ಲಿ ಒಂದು ಸಮ್ಮೇಳನ ಕರೆಯಲು ನಿರ್ಧರಿಸಿದರು. ಜಿ. ಎ. ಗವಾಯಿ, ಕೇಶವರಾವ್ ಖಂಡಾರೆ, ಕಾಲಿಚರಣ್ ನಂದ ಗವಳಿ ಅವರು ಸಮ್ಮೇಳನದ ಅಧ್ಯಕ್ಷತೆಯನ್ನು ಶಾಹುರವರು ವಹಿಸಬೇಕೆಂದು ಕೇಳಿಕೊಳ್ಳಲು ಕೊಲ್ಹಾಪುರಕ್ಕೆ ಹೊರಟರು. ಮಹಾರಾಜರು ಅವರನ್ನು ಕೇಳಿದರು: "ನನ್ನ ಬದಲಿಗೆ ಲೋಕಮಾನ್ಯ ತಿಲಕರನ್ನು ಏಕೆ ಕೇಳಿಕೊಳ್ಳಬಾರದು? ಗವಾಯಿ ಪ್ರತ್ಯುತ್ತರ ನೀಡಿದರು: "ಲೋಕಮಾನ್ಯರೇ ಅಷ್ಟೇ ಅಲ್ಲ, ಹಿಂದೂ ಧರ್ಮದ ಅವತಾರ ಪುರುಷನಾದ ಶ್ರೀರಾಮಚಂದ್ರನೂ ಕೂಡ ದಲಿತರ ಕಲ್ಯಾಣದ ಪರವಾಗಿಲ್ಲ. ನಮ್ಮಲ್ಲಿ ಅವರಿದ್ದ ಮನೋಭಾವವು ಮತದ ವಿರುದ್ಧವೆಂದು ತೋರುತ್ತದೆ. ದಯವಿಟ್ಟು ನಮ್ಮನ್ನು ಕ್ಷಮಿಸಿ, ನಾವು ನೇರವಾಗಿ ಮಾತನಾಡಿದ್ದಕ್ಕೆ, ಆದ್ದರಿಂದಲೇ ನಾವು ನಿಮ್ಮನ್ನು ಕಾಣುತ್ತಿರುವುದು." ಅಲ್ಲಿಗೆ ಶಾಹುರವರು ಸುಮ್ಮನಾದರು. ಶಾಹು ಹೇಳಿದರು: "ನಾನು ನನ್ನ ರಾಜ್ಯವನ್ನು ಕಳೆದುಕೊಂಡರೂ ಪರವಾಗಿಲ್ಲ. ನಾನು ನಿಮಗೆ ಅಗತ್ಯವಾದುದೆಲ್ಲವನ್ನೂ ನಾನು ಮಾಡುವೆನು."[11]

ಯೋಜಿಸಿದಂತೆಯೇ ಮೇ ೩೦ ರಿಂದ ಜೂನ್ ೧ ರವರೆಗೆ ಮೂರು ದಿನಗಳ ಅಖಿಲಭಾರತೀಯ ಬಹಿಷ್ಕೃತ ಸಮಾಜದ ಸಮ್ಮೇಳನವನ್ನು ಶಾಹುರವರ ಅಧ್ಯಕ್ಷತೆಯಲ್ಲಿ ಭರ್ಜರಿ ಮತ್ತು ಅತಿ ಉತ್ಸಾಹದಿಂದ ನಾಗಪುರದಲ್ಲಿ ನಡೆಸಲಾಯಿತು. ಒಂದು ದಿನಕ್ಕಿಂದ ಮುಂಚೆಯೇ ಶಾಹುಮಹಾರಾಜರು ಮುಂಬೈ ರೈಲಿನಲ್ಲಿ ಮೇ ೩೦ರಂದು ಬರುವರೆಂದು ತಿಳಿಸುವ ಕರಪತ್ರಗಳನ್ನು ಹಂಚಲಾಯಿತು.

ಶಾಹುರವರನ್ನು ಆಹ್ವಾನಿಸಲು ಬೆಳಿಗ್ಗೆಯೇ ರೈಲ್ವೆ ನಿಲ್ದಾಣದಲ್ಲಿ ಭಾರಿ ಜನಜಂಗುಳಿ ಸೇರಿತು. ಅವರು ಬೆಳಿಗ್ಗೆ ೬ ಗಂಟೆಗೆ ಬಂದಾಗ ಭಾರೀ ಸ್ವಾಗತ ಕಾದಿತ್ತು. ಶಾಹು ಮಹಾರಾಜರನ್ನು ಸ್ವಾಗತಿಸಲು ಘೋಷಣೆಗಳು ಆಕಾಶಕ್ಕೆ ಮುಟ್ಟುವಂತೆ ಮೊಳಗಿದವು. ಸಮ್ಮೇಳನವು ಸಂಜೆ ೫ ಗಂಟೆಗೆ ಪ್ರಾರಂಭವಾಯಿತು. ಪ್ರದರ್ಶನ ಮೈದಾನದಲ್ಲಿ ಒಂದು ದೊಡ್ಡ ಚಪ್ಪರವನ್ನು ಹಾಕಲಾಗಿತ್ತು. ವೇದಿಕೆ ಮೇಲೆ ಹಾಜರಿದ್ದ ನಾಯಕರಲ್ಲಿ ಶಾಹು ಮಹಾರಾಜರು, ಡಾ. ಬಾಬಾಸಾಹೇಬ ಅಂಬೇಡ್ಕರರು, ಸರ್ ಗಂಗಾಧರ ಚಿತನ್‌ವೀಸ್, ಶಂಕರರಾವ್ ಚಿತನ್‌ವೀಸ್, ಸರ್ ಬಿ. ಕೆ. ಬೋಸ್, ಬಾಬುರಾವ್ ಯಾದವ್, ಶ್ರೀಪತ್‌ರಾವ್ ಶಿಂಧೆ, ದತ್ತೋಬ ದಳವಿ, ಆರ್. ಎಸ್. ಪಾಪಣ್ಣ ಮತ್ತು ಶಿವರಾಮ್ ಜನ್ಬಾ ಕಾಂಬ್ಳೆ, ಕೃಷ್ಣರಾವ್ ಕಾಂಬ್ಳೆ, ಗೋವಿಂದ ಗೋಪಾಲ ಕಾಂಬ್ಳೆ ಮತ್ತು ಜಿ. ಎ. ಗವಾಯಿ ಅವರು ಇದ್ದರು. ಸ್ವಾಗತ ಸಮಿತಿಯ ಅಧ್ಯಕ್ಷ ಬಾಬು ಕಾಲಿಚರಣ್ ಅವರ ಪರಿಚಯ ಸ್ವಾಗತವಾದ ನಂತರ ಶ್ರೀಪತ್‌ರಾವ್ ಶಿಂಧೆ ಶಾಹು ಮಹಾರಾಜರ ಭಾಷಣವನ್ನು ಓದಿದರು. ಶಾಹುರವರು ತಮ್ಮ ಭಾಷಣದಲ್ಲಿ ಹೇಳಿದರು:

"ಯಾವುದೇ ವ್ಯಕ್ತಿ ಅಸ್ಪೃಶ್ಯ ಎಂದು ಕರೆಯುವುದು ಖಂಡನೀಯ. ನೀವು ಯಾರು ಅಸ್ಪೃಶ್ಯರಲ್ಲ, ನೀವು ಹೆಚ್ಚು ಬುದ್ಧಿವಂತರು, ಹೆಚ್ಚು ಧೈರ್ಯವಂತರು, ಹೆಚ್ಚು ಚಿಂತನಶೀಲರು ಮತ್ತು ತಮ್ಮನ್ನು ಅಸ್ಪೃಶ್ಯರೆಂದು ಭಾವಿಸುವ ಜನಕ್ಕಿಂತ ಹಿಂದಿ ದೇಶದ (ಹಿಂದುಸ್ಥಾನದ) ಸ್ವಾರ್ಥ-ತ್ಯಾಗಮಾಡುವ ಭಾಗಗಳು ಆಗಿದ್ದೀರಿ ನೀವು. ನಾನು ನಿಮ್ಮನ್ನು ಅಸ್ಪೃಶ್ಯರೆಂದು ಭಾವಿಸುವುದೇ ಇಲ್ಲ. ನಾವು ಸರಿಸಮಾನರು, ನಮಗೆ ಸಮಾನ ಹಕ್ಕುಗಳಿವೆ ಎಂಬ ವಿಚಾರದಿಂದಲೇ ನಾವೆಲ್ಲರೂ ಕೆಲಸ ಮಾಡೋಣ. . .. ನಮ್ಮದೇ ಬೇಗನೇ ಅಥವಾ ನಿಧಾನವಾಗಿ ಪ್ರಗತಿ ಹೊಂದುತ್ತದೆಯೆಂಬುದು ಜಾತಿಪದ್ಧತಿಯ ವಿನಾಶದ ಮೇಲೆ ಅವಲಂಬಿಸಿದೆ."

ಶಾಹುರವರು ಮುಕ್ತಾಯಗೊಳಿಸುತ್ತಾ ಹೇಳಿದರು, "ಇಂದು ನೀವು ನನ್ನನ್ನು ನಿಮ್ಮಲ್ಲಿ ಒಬ್ಬರನ್ನಾಗಿ ನನ್ನನ್ನು ಕಂಡಿದ್ದೀರಿ. ಗುರಿಯಂತೆಯೇ ನನ್ನನ್ನು ಪ್ರೀತಿಸಿರಿ. ಮಾರ್ಗದಲ್ಲಿ ಬರುವ ಎಲ್ಲಾ ವಿಘ್ನಗಳನ್ನು ಕಡೆಗಣಿಸಿ ನಿಮ್ಮ ಪ್ರಗತಿಯನ್ನು ಸಾಧಿಸಲು ನಾನು ಹಿಂದೆ-ಮುಂದೆ (ಹಿಂಜರಿದು) ನೋಡುವುದಿಲ್ಲ.[12]

ಕರ್ಮವೀರ ಶಿಂಧೆಯವರು ತನ್ನ ಪರವಾಗಿ ತನ್ನ ಸಹವರ್ತಿಗಳನ್ನು ನಾಗಪುರದ ಸಮ್ಮೇಳನಕ್ಕೆ ಕಳುಹಿಸಿದ್ದರು. ಅಸ್ಪೃಶ್ಯರ ಪರವಾಗಿ ಸರಕಾರಕ್ಕೆ ಕಳುಹಿಸಿದ ತಮ್ಮ ಅಭಿಪ್ರಾಯಗಳನ್ನು ಸಮ್ಮೇಳನ ಅನುಮೋದಿಸುವಂತೆ ಅವರನ್ನು ಕಳುಹಿಸಿಕೊಟ್ಟಿದ್ದರು. ಅವರ ಅಭಿಪ್ರಾಯಗಳು ಅಸ್ಪೃಶ್ಯರಿಗೆ ಅವಮಾನಕರವೆಂದು ಅಂಬೇಡ್ಕರರು ಕೋಪಗೊಂಡಿದ್ದರು. ಅವರು ತಮ್ಮ ಭಾಷಣದಲ್ಲಿ ಶಿಂಧೆಯವರ ಅಭಿಪ್ರಾಯಗಳನ್ನು ಖಂಡಿಸಿದರು. ತತ್ಪರಿಣಾಮವಾಗಿ ಸಮ್ಮೇಳನವು ಶಿಂಧೆಯವರ ಧೋರಣೆಯನ್ನು ವಿರೋಧಿಸುವ ಒಂದು ಠರಾವನ್ನು ಪಾಸು ಮಾಡಿದರು. ಸರಕಾರವು ಶಿಂಧೆಯವರು ಸಮಿತಿಯ ಮುಂದೆ ಮಂಡಿಸಿದ ಪ್ರಸ್ತಾವಗಳನ್ನು ಪರಿಗಣಿಸಬಾರದೆಂದು ಅದನ್ನು ಕೇಳಿಕೊಳ್ಳಲಾಯಿತು. ಶ್ರೀಪತ್‌ರಾವ್ ಶಿಂಧೆಯವರೂ ಸಹ ತಮ್ಮ ಭಾಷಣದಲ್ಲಿ ಸರಕಾರ ಕರ್ಮವೀರ ಶಿಂಧೆಯವರ ವಿಚಾರಗಳ ಪ್ರಕಾರ ನಡೆದುಕೊಳ್ಳಬಾರದೆಂದು ಹೇಳಿದರು, ಶಿವರಾವ್ ಜನ್ಬಾ ಕಾಂಬ್ಳೆ ಮತ್ತು ಶಿವತಾರ್ಕರ್ ಅವರು ಸಹ ಸಮ್ಮೇಳನದಲ್ಲಿ ಮಾತನಾಡಿದರು.

ಶಾಹು ಮಹಾರಾಜರು ಸಮ್ಮೇಳನದಲ್ಲಿ ೫,೦೦೦ ರೂ.ಗಳನ್ನು ನಿಶ್ಚಿತ ಠೇವಣಿಯ ನಿಧಿಗೆ ದೇಣಿಗೆಯಾಗಿ ನೀಡಿದರು. ಬಾಬು ಕಾಳಿಚರಣ್ ಅವರು ೧,೦೦೦ ರೂ.ಗಳನ್ನು ದೇಣಿಗೆಯಾಗಿ ನೀಡಿದರು.[13] ಸಮ್ಮೇಳನದ ಸಮಾರೋಪ ಕಾರ್ಯಕ್ರಮವನ್ನು ಜೂನ್ ೧ರಂದು ಠರಾವುಗಳ ಮಂಡನೆ ಮತ್ತು ಕೆಲವು ಮುಖ್ಯ ಠರಾವುಗಳನ್ನು ಪಾಸು ಮಾಡುವ ಕಾರ್ಯಕ್ರಮ ನಡೆಯಿತು. 'ಕೇಸರಿ' ಪ್ರತಿಕೆಯು ತನ್ನ ಜೂನ್ ೮ ೧೯೨೦ರ ಸಂಚಿಕೆಯಲ್ಲಿ ಶಾಹು ಸಮ್ಮೇಳನದಲ್ಲಿ ಮಾಡಿದ ಭಾಷಣದ ಬಗ್ಗೆ ಕಟುವಾಗಿ ಟೀಕಿಸಿತು. 'ರಾಜಕಾರಣ' ಪತ್ರಿಕೆಯು ಸಹ ಜೂನ್ ೧೩, ೧೯೨೦ರ ಸಂಚಿಕೆಯಲ್ಲಿ ಶಾಹುರವರು ಏಪ್ರಿಲ್ ೧೫, ೧೯೨೦ರಂದು ಉದಾಜೀ ಮರಾಠ ಹಾಸ್ಟಲಿನ ಅಸ್ತಿವಾರ ಹಾಕುವ ಸಮಾರಂಭದಲ್ಲಿ ಭಾಷಣ ಮಾಡಿದಾಗ ಜಾತಿಪದ್ಧತಿಯನ್ನು ಶಾಹುರವರು ಖಂಡಿಸಿದ್ದನ್ನು ಮಿತಿಮೀರಿ ಖಂಡಿಸಿತ್ತು.

ಶಾಹುರವರು ಜಾತಿಪದ್ಧತಿ ವಿನಾಶದಲ್ಲಿ ಸಕ್ರಿಯರಾಗಿದ್ದರು. ಅದರ ಭಾಗವಾಗಿ ಅಸ್ಪೃಶ್ಯ ಗಂಗಾರಾಮ್ ಕಾಂಬ್ಳೆ ಅವರು ಕೊಲ್ಹಾಪುರದಲ್ಲಿ ಪ್ರಾರಂಭಿಸಿದ್ದ ಹೋಟೆಲಿಗೆ ಧನಸಹಾಯ ಮಾಡಿದ್ದರು. ಶಾಹು ಮಹಾರಾಜರು ಸ್ವತಃ ಗೆಳೆಯರೊಂದಿಗೆ ಪ್ರತಿದಿನ ಆ ಹೋಟೆಲಿಗೆ ಹೋಗಿ ಚಹಾವನ್ನು ಕುಡಿಯುತ್ತಿದ್ದರು. ಇದನ್ನು ಉಲ್ಲೇಖಿಸುತ್ತಾ 'ರಾಜಕರಣ' ಪತ್ರಿಕೆಯು ಹೀಗೆ ಬರೆಯಿತು: "ಅಸ್ಪೃಶ್ಯನು ತಯಾರಿಸಿದ ಟೀ

ಸೇವನೆ ಮಾಡುವುದು ಧೈರ್ಯ–ಸಾಹಸವಲ್ಲ. ಅವರು ತಮ್ಮ ಭಾಷಣದಲ್ಲಿ ತಮ್ಮ ಸಿಂಹಾಸನವನ್ನು ಬಿಡುವುದಾಗಿ ಹೇಳಿದ್ದಾರೆ. ಆದರೆ ಅವರು ತನ್ನ ವಾರಸುದಾರರನ್ನು ಒಬ್ಬ ಮಹರನನ್ನು ಆರಿಸಿಕೊಳ್ಳುವರೇ?"[14] 'ಲೋಕಸಂಗ್ರಹ' ವಾರ ಪತ್ರಿಕೆಯು ಇದಕ್ಕೂ ಮೀರಿ ಆಚೆಗೆ ಹೋಗಿ ಹೇಳುತ್ತದೆ ಮತ್ತು ಸಂಸ್ಥಾನದಲ್ಲಿ ನಡೆದಿರುವ ಅಕ್ರಮಗಳನ್ನು ಸರಕಾರ ತನಿಖೆ ಮಾಡಬೇಕೆಂದು ಕೋರಿಕೊಂಡಿದೆ.[15] ಸಂಕ್ಷಿಪ್ತವಾಗಿ ಶಾಹುರವರು ಅಸ್ಪೃಶ್ಯರ ಕಲ್ಯಾಣಕ್ಕಾಗಿ ಮಾಡಿದ ಕೆಲಸಗಳ ಬಗ್ಗೆ ಬ್ರಾಹ್ಮಣ ಪತ್ರಿಕೆಗಳ ಕಟುಟೀಕೆಗಳು ದಿನದಿನಕ್ಕೂ ಅತಿತೀಕ್ಷ್ಣ ಮತ್ತು ಬಿರುಸಾಗತೊಡಗಿದವು.

## ಒಂದು ಹೆಜ್ಜೆ ಮುಂದೆ

ಶಾಹುರವರು ಅಸ್ಪೃಶ್ಯತೆಯ ನಿವಾರಣೆಗೆ ಪೂರ್ಣವಾಗಿ ತೊಡಗಿಸಿಕೊಂಡದ್ದರಿಂದ ಎಲ್ಲಾ ಕಡೆಗಳಿಂದಲೂ ಅವರ ಮೇಲೆ ವಿಷಕಾರುವ ದಾಳಿಗಳು ಹೆಚ್ಚು ನಡೆಯತೊಡಗಿದವು. ಶಾಹುರವರು ನೈತಿಕ ಧೈರ್ಯದಿಂದ ನಿರ್ಭಯವಾಗಿದ್ದರು. ಅವರು ಅಂತಹ ಟೀಕೆಗಳ ಮುಂದೆ ತಲೆಬಾಗಲಿಲ್ಲ ಅಥವಾ ಹತಾಶರಾಗಲಿಲ್ಲ. ಅದಕ್ಕೆ ವಿರುದ್ಧವಾಗಿ ಅವರು ಆಂದೋಲನಕ್ಕೆ ತನ್ನೆಲ್ಲ ಶಕ್ತಿಮೀರಿ ಸಹಾಯಮಾಡುವುದಕ್ಕೆ ಈಗ ಕಂಕಣಬದ್ಧರಾದರು. ಅವರು ಮತ್ತೊಂದು ಹೆಚ್ಚು ಸಕ್ರಿಯವಾದ ಕ್ರಮ ಕೈಗೊಂಡರು. ಅಂಬೇಡ್ಕರರು ತಾವು ಪ್ರಾರಂಭಿಸಿದ 'ದಮನಿತ ವರ್ಗಗಳ ಸಂಸ್ಥೆ' ನಿಧಿ ಸಂಗ್ರಹಿಸಲು ತಾವು ಇಡೀ ಭಾರತದ ಪ್ರವಾಸ ಕೈಗೊಳ್ಳಬೇಕೆಂಬ ಯೋಜನೆಯ ಬಗ್ಗೆ ಜೂನ್ ೪, ೧೯೨೦ರಂದು ಒಂದು ಪತ್ರವನ್ನು ಶಾಹುರವರಿಗೆ ಬರೆದರು. ಶಾಹುರವರ ಪ್ರತ್ಯುತ್ತರವು ಅಸ್ಪೃಶ್ಯರ ಬಗೆಗಿರುವ ತಮ್ಮ ನಿಜವಾದ ಕಾಳಜಿಯನ್ನು ಪ್ರತಿಬಿಂಬಿಸುತ್ತದೆ. ಅವರ ಬರೆಯುತ್ತಾರೆ: "ತಾವು ನಿಧಿ ಸಂಗ್ರಹಿಸಲು ಕಳುಹಿಸುವ ನಿಯೋಜನೆಯಲ್ಲಿ ನನ್ನ ಹೆಸರನ್ನು ಸೇರಿಸಲು ನಾನು ಸಂತೋಷವಾಗಿ ಒಪ್ಪಿದ್ದೇನೆ. ಈ ಉದ್ದೇಶಕ್ಕಾಗಿ ತಾವು ಸ್ಥಾಪಿಸುವ ಸಂಸ್ಥೆಗೆ ನಾನು ಉಪಾಧ್ಯಕ್ಷ ಅಥವಾ ಸಹಕಾರ್ಯದರ್ಶಿಯಾಗಿರಲು ನಾನು ಸಿದ್ಧ. ನಾವು ಅಖಿಲ ಭಾರತ ದಮನಿತ ವರ್ಗಗಳ ಶಿಕ್ಷಣ ನಿಧಿ ಎಂಬ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಾನು ಭಾವಿಸುತ್ತೇನೆ. ಅದಕ್ಕೆ ಒಳ್ಳೆಯ ಗೌರವಾನ್ವಿತ ಜನರನ್ನು ಆಯ್ಕೆ ಮಾಡಿ ಮತ್ತು ಸಂಸ್ಥೆಯ ಪರವಾಗಿ ಒಂದು ನಿಯೋಜನೆಯನ್ನು ಕಳುಹಿಸಿದರೆ ಹಣದ ಸಂಗ್ರಹಕ್ಕೆ ಅನುಕೂಲವಾಗುತ್ತದೆ. ನಾನು ವೈಯುಕ್ತಿಕವಾಗಿ ಅದಕ್ಕೆ ಸಹಾಯಕ ಕಾರ್ಯದರ್ಶಿಯಾಗಬಯಸುತ್ತೇನೆ ಮತ್ತು ಕೆಲಸವನ್ನು ಸಂತೋಷದಿಂದ ಮಾಡುವೆನು."[16]

ಪತ್ರವು ಶಾಹು ಮತ್ತು ಅಂಬೇಡ್ಕರರ ನಡುವೆಯಿರುವ ಮತ್ತು ಶಾಹು ಹಾಗೂ ಅಸ್ಪೃಶ್ಯರ ಆಂದೋಲನದ ನಡುವೆಯಿರುವ ಆತ್ಮೀಯತೆಯ ಸಂಬಂಧವನ್ನು ತೋರಿಸುತ್ತದೆ. ವೈಯಕ್ತಿಕವಾಗಿ ಅಂಬೇಡ್ಕರರು ಮಾತ್ರವಲ್ಲ, ಎಲ್ಲಾ ಅಸ್ಪೃಶ್ಯರು ಮತ್ತು ಅವರ ಆಂದೋಲನಗಳು ಛತ್ರಪತಿ ಶಾಹು ಮಹಾರಾಜರ ಬಲಿಷ್ಠ ಮತ್ತು ಸದೃಢವಾದ ಬೆಂಬಲವನ್ನು ಪಡೆದಿದ್ದಾರೆ. ಅಂಬೇಡ್ಕರರು ಶಾಹುರವರ ಜನ್ಮದಿನೋತ್ಸವ ಸಂದರ್ಭದಲ್ಲಿ ಶಾಹುರವರ ಗೌರವಾರ್ಥವಾಗಿ ಅವರು ಸಾಮಾನ್ಯ ಜನರಿಗೆ ಮತ್ತು ವಿಶೇಷವಾಗಿ ಅಸ್ಪೃಶ್ಯರಿಗೆ ಸಲ್ಲಿಸಿರುವ ಸೇವೆಯನ್ನು ಜನತೆಗೆ ತಿಳಿಸುವ ಸಲುವಾಗಿ 'ಮೂಕನಾಯಕ' ಪತ್ರಿಕೆಯ ವಿಶೇಷಾಂಕವನ್ನು ತರುವುದಕ್ಕೆ ನಿರ್ಧರಿಸುತ್ತಾರೆ. ಅವರು ಶಾಹುರವರ ಬಗ್ಗೆ ಹೆಚ್ಚು ಮಾಹಿತಿಯನ್ನು ಕೇಳಿದರು ಮತ್ತು ತಾನು ವೈಯಕ್ತಿಕವಾಗಿ ಕೊಲ್ಹಾಪುರಕ್ಕೆ ಬಂದು ಮಾಹಿತಿಯನ್ನು ಸಂಗ್ರಹಿಸುವೆನೆಂದು ಅಂಬೇಡ್ಕರರು ಜೂನ್ ೧೩, ೧೯೨೦ರಂದು ಮಹಾರಾಜರಿಗೆ ಪತ್ರ ಬರೆದರು. ಅವರು ಬರೆಯುತ್ತಾರೆ: 'ಮನ್‌ಗಾವ್ ಮತ್ತು ನಾಗಪುರ ಸಮ್ಮೇಳನಗಳಲ್ಲಿ ನಿರ್ಣಯಿಸಿದಂತೆ ಜೂನ್ ೨೬, ತಮ್ಮ ಹುಟ್ಟಿದ ಹಬ್ಬವನ್ನು ಎಲ್ಲಾ ಕಡೆಯೂ ಆಚರಿಲಾಗುವುದು. ಆ ದಿನ

ನೀವು ಆರ್ಥಿಕ ನೆರವು ನೀಡಿದ 'ಮೂಕನಾಯಕ' ಪಾಕ್ಷಿಕ ಪತ್ರಿಕೆಯ ವಿಶೇಷಾಂಕವನ್ನು ತರಲಾಗುವುದು. ಅದು ಘನತೆವೆತ್ತ ಮಹಾರಾಜರ ಫೋಟೋ ಮತ್ತು ತಾವು ಮಾಡಿದ ಮಹಾನ್ ಕೆಲಸಗಳ ಪರಿಚಯವನ್ನು ಒಳಗೊಂಡಿರುತ್ತದೆ. ನಾನು ಈ ಎಲ್ಲ ಮಾಹಿತಿ ಕೋರಿ ಪತ್ರವನ್ನು ನಿಮಗೆ ಬರೆದಿದ್ದೇನೆ. ನಾನು ಇನ್ನೂ ಆ ಮಾಹಿತಿಯನ್ನು ಪಡೆದಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ. ಕಾಲವು ಬಹಳ ಕಡಿಮೆಯಿದೆ. ನಾನೇ ನಿಮ್ಮಲ್ಲಿಗೆ ಬಂದು ಮಾಹಿತಿಯನ್ನು ಸಂಗ್ರಹಿಸಬೇಕೆಂದು ನಾನು ನಿರ್ಧರಿಸುತ್ತೇನೆ. ಆ ಉದ್ದೇಶಕ್ಕಾಗಿಯೇ ನಾನು ಕೊಲ್ಹಾಪುರಕ್ಕೆ ಈ ಸಂಜೆ ಹೊರಡುವೆನು. ನಾನು ಮಂಗಳವಾರ ಸಾಯಂಕಾಲ ಅಲ್ಲಿಗೆ ತಲುಪುವೆನು. ನಾನು ಖಂಡಿತವಾಗಿ ಬಂದು ನಿಮ್ಮನ್ನು ನೋಡುವೆನು."[17]

ಆ ವಿಶೇಷಾಂಕ ಪ್ರಕಟವಾಯಿತೇ ಇಲ್ಲವೇ ನನಗೆ ಖಚಿತವಾಗಿ ಸ್ಪಷ್ಟವಾಗಿಲ್ಲ. ಆದರೆ ಶಾಹುರವರ ಬಗ್ಗೆ ಅಂಬೇಡ್ಕರರು ಹೆಚ್ಚು ಗೌರವ, ಪ್ರೀತಿ ಮತ್ತು ನಂಬಿಕೆಯಿಟ್ಟಿದ್ದು ಸುಸ್ಪಷ್ಟ.

ಅಂಬೇಡ್ಕರರು ಸಮಕಾಲೀನ ಪ್ರತಿಗಾಮಿ ಬ್ರಾಹ್ಮಣವರ್ಗ ಶಾಹುರವರ ಬಗ್ಗೆ ಆರೋಪಗಳು ಮತ್ತು ದಾಳಿಗಳನ್ನು ಮಾಡಿದ್ದನ್ನು ಸಹಿಸಲಿಲ್ಲ. ತಮ್ಮ ಮೂಕನಾಯಕ ಪತ್ರಿಕೆಯ ಸಂಪಾದಕೀಯ 'ಕಾಕಘರ್ಜನೆ'ಯಲ್ಲಿ ಅವರು ಎಲ್ಲಾ ಆರೋಪಗಳನ್ನು ನಿರಾಕರಿಸಿದರು. ಮತ್ತು ಅದೇ ರೀತಿಯ ಟೀಕೆಗಳು ಮತ್ತೆಮತ್ತೆ ಪುನರಾವರ್ತನೆಯಾದರೆ ಸರಿಹೋಗುವುದಿಲ್ಲ ಎಂದು ಎಚ್ಚರಿಕೆಯನ್ನು ನೀಡಿದ್ದರು. ಶಾಹುರವರ ಕಾರ್ಯಚಟುವಟಿಕೆಗಳನ್ನು ಮತ್ತು ಅವರ ಸಾಧನೆಗಳನ್ನು ಉಜ್ವಲ ಶಬ್ದಗಳಲ್ಲಿ ಬರೆಯುತ್ತಾ ಅವರು ಹೇಳುತ್ತಾರೆ: "ತಾವು ಉಚ್ಚ ವರ್ಣದವರೆಂದು ಕರೆದುಕೊಳ್ಳುವ ತಮ್ಮನ್ನು ತಾವೇ ಶ್ರೇಷ್ಠವೆಂದು ಅಂದುಕೊಳ್ಳುವ ಬ್ರಾಹ್ಮಣ ಸಹೋದರರು ಅವರಂತೆಯೇ ನಮಗೂ ಸುಖ-ದುಃಖಗಳ ಭಾವನೆಗಳಿವೆಯೆಂದು ಎಂದಾದರೂ, ಯಾರಾದರೂ ವಿಚಾರಿಸಿದ್ದಾರೆಯೇ ಅಥವಾ ಭಾವಿಸಿದ್ದಾರೆಯೇ? ಯಾರಾದರೂ ಹಾಗೆ ಭಾವಿಸಿದ್ದರೆ ಅವರಿಗೆ ಜಗತ್ತಿಗೆ ತಿಳಿಸಲು ಧೈರ್ಯವಿಲ್ಲವಷ್ಟೇ. ಅವರು ಹೇಗೆ ಧೈರ್ಯ ಹೊಂದಲು ಸಾಧ್ಯ? ಏಕೆಂದರೆ ಒಬ್ಬ ವ್ಯಕ್ತಿ ಧೈರ್ಯ ಹೊಂದಬೇಕಾದರೆ ಅವನು ನಿರ್ಭಯನಾಗಿರಬೇಕಾಗುತ್ತದೆ. ನಿಜವಾದ ಕ್ಷತ್ರಿಯನು ಈ ಕೆಲಸದಲ್ಲಿ ನಿಜವಾದ ಅಧಿಕಾರಿಯಾಗಿರುತ್ತಾನೆ. ಆದ್ದರಿಂದ ನಿಜವಾದ ಕ್ಷತ್ರಿಯ ಶಾಹುಮಹಾರಾಜರು ಮಹಾತ್ಮರಾಗಿ, ಸ್ಪರ್ಶಮಣಿಯಂತೆ ಸಕ್ರಿಯರಾಗಿ ಉನ್ನತ ಜಾತಿಗಳು ಶತಮಾನಗಳವರೆಗೆ ಅಸ್ಪೃಶ್ಯರನ್ನು ನಿದ್ದೆಯಲ್ಲಿ ಮುಳುಗಿಸಿದ್ದವರನ್ನು ನಿದ್ದೆಯಿಂದ ಜಾಗೃತಗೊಳಿಸಿ ಅಸ್ಪೃಶ್ಯರ ಸ್ಥಿತಿಗತಿಗಳನ್ನು ಲೋಕದ ಮುಂದಿಟ್ಟರು. ನಮ್ಮ ಬ್ರಾಹ್ಮಣ ಸಹೋದರರು ಅಸ್ಪೃಶ್ಯರ ಆಂದೋಲನವನ್ನು ಸೋಲಿಸುವ ಏಕೈಕ ಉದ್ದೇಶದಿಂದ ಛತ್ರಪತಿಯವರ ಸುಗ್ರೀವಾಜ್ಞೆ ಮತ್ತು ಧೋರಣೆಗಳ ಬಗ್ಗೆ ಹೇಸುವಂತಹ ಟೀಕೆಗಳನ್ನು ಮಾಡಿದರೆ ಬ್ರಾಹ್ಮಣೇತರನಾದ ವ್ಯಕ್ತಿ ಅಥವಾ ಅಸ್ಪೃಶ್ಯನು ವಿಷಾದಿಸುತ್ತಾನೆ.[18]

## ಪರಸ್ಪರ ಸಮಾಲೋಚನೆ

ಈ ಇಬ್ಬರು ಮಹಾನುಭಾವರ ನಡುವೆ ೧೭ ಅಥವಾ ೧೮ ವರ್ಷಗಳ ವಯಸ್ಸಿನ ಅಂತರವಿದೆ. ಆದರೆ ಇಬ್ಬರೂ ಈ ಬಗ್ಗೆ ಗಮನಿಸಿದವರೇ ಅಲ್ಲ. ಶಾಹುರವರು ಅಂಬೇಡ್ಕರರ ವಯಸ್ಸನ್ನು ಗಮನಿಸದೆ ಅವರ ವಿದ್ವತ್ತು, ಅವರು ನಿಜವಾಗಿ ಅಸ್ಪೃಶ್ಯರ ಬಗ್ಗೆ ಹೊಂದಿದ್ದ ಕಾಳಜಿಯನ್ನಷ್ಟೇ ಪರಿಗಣಿಸಿದರು. ಆದ್ದರಿಂದ ಅವರು ಮನ್‌ಗಾವ್‌ನ ಸಮ್ಮೇಳನದಲ್ಲಿ ಅಂಬೇಡ್ಕರರನ್ನು 'ನನ್ನ ಪ್ರೀತಿಯ ಸ್ನೇಹಿತ ಅಂಬೇಡ್ಕರ್' ಎಂದು ಸಂಬೋಧಿಸಿದರು. ಅಸ್ಪೃಶ್ಯರು ಶಾಹುರವರಲ್ಲಿ ಒಬ್ಬ ನಿಜವಾದ ಸ್ನೇಹಿತನನ್ನು ಕಂಡುಕೊಂಡರು.

ಅಂಬೇಡ್ಕರರು ಸಹ ಶಾಹುರವರನ್ನು 'ಅಸ್ಪೃಶ್ಯರ ಸ್ನೇಹಿತ' ಎಂದು ಕರೆದರು. ಯಾರನ್ನು ಯಾರು ಏನು ಕರೆದರು ಎಂಬುದು ಪ್ರಶ್ನೆಯಲ್ಲ, ಆದರೆ ಅವರು ಎಷ್ಟು ನಿಕಟವರ್ತಿಗಳು ಮತ್ತು ಆತ್ಮೀಯರಾಗಿದ್ದರೆಂಬುದು ಬಹಳ ಮುಖ್ಯ. ಅವರಿಬ್ಬರೂ ಮುಕ್ತವಾಗಿ ಚರ್ಚೆಗಳನ್ನು ಮಾಡುತ್ತಿದ್ದರು. ಅವರಿಬ್ಬರೂ ಯಾವಾಗಲೂ ಸಮಾಜದ ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ಸರ್ವಾಂಗೀಣ ಪ್ರಗತಿಯನ್ನು ಹೇಗೆ ತರುವುದು ಎಂಬುದರ ಬಗ್ಗೆ ಮಾತನಾಡುತ್ತಿದ್ದರು. ಶಾಹುರವರು ೧೯೨೦ರ ಭೇಟಿಯಲ್ಲಿ ಅಂಬೇಡ್ಕರರಿಗೆ ಬ್ರಾಹ್ಮಣೇತರರ ಆಂದೋಲನವನ್ನು ಬ್ರಿಟಿಷ್ ಆಡಳಿತಗಾರರು ಮತ್ತು ಜನರಿಗೆ ತಿಳಿಸಲು ಇಂಗ್ಲಿಷ್‌ನಲ್ಲಿ ಒಂದು ಕಿರುಪುಸ್ತಕ ಬರೆಯುವಂತೆ ಹೇಳಿದ್ದರು. ಅಂಬೇಡ್ಕರರು ಪ್ರತ್ಯುತ್ತರಿಸಿದರು: ನಾನು ಶೀಘ್ರದಲ್ಲಿಯೇ ಅಧ್ಯಯನಕ್ಕಾಗಿ ಲಂಡನ್ನಿಗೆ ಹೋಗುವೆನು. ನನಗೆ ಇಲ್ಲಿ ಬರೆಯುವುದಕ್ಕೆ ಸಮಯವಿಲ್ಲ, ನಾನು ಅಲ್ಲಿ ಅದನ್ನು ಮಾಡುವೆನು."[19]

ಮೇ ೧೯೨೦ರಲ್ಲಿ ಒಬ್ಬ ಅಸ್ಪೃಶ್ಯ ವ್ಯಕ್ತಿ ಸಹಾಯವನ್ನು ಕೋರಿ ಶಾಹುರವರಿಗೆ ಒಂದು ಅರ್ಜಿಯನ್ನು ಬರೆದಿದ್ದನ್ನು ಶಾಹುರವರು ಅಂಬೇಡ್ಕರರಿಗೆ ಕಳುಹಿಸಿ ಅವರ ಪ್ರತಿಕ್ರಿಯೆಯನ್ನು ಕೇಳಿದ್ದರು.[20]

ತಿಲಕರು ಇದೇ ಸುಮಾರಿನಲ್ಲಿ ಒಂದು ಸಾರ್ವಜನಿಕ ಸಭೆಯಲ್ಲಿ ಮಹರರು ಅಪರಾಧಿ ಜನರೆಂದು ಹೇಳಿದ್ದರು. ಶಾಹುರವರು ತಿಲಕರ ಅನುಯಾಯಿಗಳು (ಶಿಷ್ಯರು) ಸಾರ್ವಜನಿಕ ನಿಧಿಯನ್ನು ನಿಭಾಯಿಸುವಾಗ ಅಕ್ರಮಗಳನ್ನು ಎಸಗಿದ್ದಾರೆ ಎಂಬ ಆರೋಪಗಳ ಸಂದರ್ಭದಲ್ಲಿ ಯಾವುದೇ ಕಾನೂನುಬದ್ಧ ಕ್ರಮ ಕೈಗೊಳ್ಳಲು ಸಾಧ್ಯವೇ ಎಂಬುದರ ಬಗ್ಗೆ ಮೆಸರ್ಸ್ ಲಿಟಲ್ ಮತ್ತು ಕಂಪನಿಯೊಡನೆ ಸಮಾಲೋಚಿಸಿ ಎಂದು ಒಂದು ಪತ್ರವನ್ನು ಅಂಬೇಡ್ಕರರಿಗೆ ಬರೆದಿದ್ದರು.

ಆ ಪತ್ರವು ಹೀಗಿದೆ:

ಛತ್ರಪತಿ
ಕೊಲ್ಹಾಪುರದ ಮಹಾರಾಜರು

ಕೊಲ್ಹಾಪುರ
೨೫ ಜೂನ್ ೧೯೨೦

ನನ್ನ ಪ್ರೀತಿಯ ಡಾ. ಅಂಬೇಡ್ಕರ್,

ದಯವಿಟ್ಟು ಎರಡು ಅಂಶಗಳ ಬಗ್ಗೆ ಮೆಸರ್ಸ್ ಲಿಟಲ್ ಮತ್ತು ಕಂಪನಿಯೊಡನೆ ಸಮಾಲೋಚನೆ ನಡೆಸಿ. ಮೊದಲನೆಯದಾಗಿ, ತಿಲಕರು ಮಹರರನ್ನು ಅಪರಾಧಿ ಪಂಗಡವೆಂದು ಕರೆದದ್ದು. ಅವರು ಅವರ ಮೇಲೆ ನಾಗರಿಕ ದಾವೆ ಹೂಡಬಹುದೇ? ಸಾರ್ವಜನಿಕ ನಿಧಿಯನ್ನು ದುರುಪಯೋಗಪಡಿಸಿಕೊಳ್ಳಬಹುದೇ? ಅವರ ಬಗ್ಗೆ 'ಸಂದೇಶ' ಪತ್ರಿಕೆಯಲ್ಲಿ ದೀರ್ಘವಾದ ಲೆಕ್ಕದ ವಿವರಗಳು ಪ್ರಕಟವಾಗಿವೆ. ಈ ಕಾರಣಗಳಿಂದ ಸಂಬಂಧಪಟ್ಟ ವ್ಯಕ್ತಿಗಳ ಮೇಲೆ ಅಪರಾಧಿ ಮತ್ತು ನಾಗರಿಕ ಅಥವಾ ಎರಡೂ ರೀತಿಯ ದಾವೆಗಳನ್ನು ಹಾಕಲು ಬರುತ್ತದೆಯೇ?

ನಿಮ್ಮ ವಿಶ್ವಾಸಿ
**ಶಾಹು ಛತ್ರಪತಿ**[21]

ಪತ್ರಕ್ಕೆ ಪ್ರತ್ಯುತ್ತರ ನೀಡುತ್ತಾ, ಅಂಬೇಡ್ಕರರು ಮಹಾರಾಜರಿಗೆ ಈ ಪ್ರಯತ್ನದಿಂದ ಮುಖ್ಯವಾದ ಫಲಿತಾಂಶ ಹೊರಬರುವುದಿಲ್ಲ ಮತ್ತು ಇದಕ್ಕೆ ವಿರುದ್ಧವಾಗಿ ಅವರಿಗೆ ತೊಂದರೆಯಾಗಬಹುದು ಎಂದು ತಿಳಿಸಿದರು.[22]

ಶಾಹು ಮತ್ತು ಅಂಬೇಡ್ಕರರು ಮುಖ್ಯ ವಿಷಯಗಳ ಬಗ್ಗೆ ಪರಸ್ಪರ ಸಮಾಲೋಚನೆ ನಡೆಸುತ್ತಿದ್ದರೆಂಬುದಕ್ಕೆ ಈ ಎಲ್ಲಾ ಘಟನೆಗಳಿಂದ ಸ್ಪಷ್ಟವಾಗುತ್ತದೆ. ಇಬ್ಬರು ಇಲ್ಲಿ ವಿಷಯಗಳನ್ನು ಪರಸ್ಪರ ಮೌಲ್ಯಮಾಪನ ಮಾಡಿ ಮತ್ತು ಪರಸ್ಪರ ಇಬ್ಬರೂ ಅವುಗಳನ್ನು ಬೆಂಬಲಿಸಿ ಇಬ್ಬರೂ ನಿರ್ಧರಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

## ಅಂಬೇಡ್ಕರರು ಲಂಡನ್ನಿಗೆ ಹೋಗುತ್ತಾರೆ

ಅಸ್ಪೃಶ್ಯರ ಹಕ್ಕುಗಳ ಆಂದೋಲನವು ಶಾಹು ಮತ್ತು ಅಂಬೇಡ್ಕರರ ನಡುವಣ ವಿಚಾರಗಳ ವಿನಿಮಯ ಮತ್ತು ಅವರ ಕಾರ್ಯಚಟುವಟಿಕೆಗಳ ಮೂಲಕ ರೂಪ ತಳೆಯುತ್ತಿತ್ತು. ಅಂಬೇಡ್ಕರರು ಆಂದೋಲನವನ್ನು ಅಥವಾ ತನ್ನ ಅಪರಿಪೂರ್ಣ ಅಧ್ಯಯನವನ್ನು ಕಡೆಗಣಿಸಲಿಲ್ಲ. ತಮ್ಮ ಅಧ್ಯಯನವನ್ನು ಪೂರೈಸಲು ಅವರು ಲಂಡನ್ನಿಗೆ ಮರಳಲು ಬಯಸಿದರು. ಅವರ ಏಕೈಕ ಉದ್ದೇಶಕ್ಕಾಗಿ ಸೇರಿದ್ದ ಪ್ರೊಫೆಸರ್ ಹುದ್ದೆಯನ್ನು ಬಿಟ್ಟು ಲಂಡನ್ನಿಗೆ ಹೋಗಲು ಸಿದ್ಧತೆಯನ್ನು ನಡೆಸಿದರು. ಶಾಹುರವರು ಸಹ ಅವರು ಅಧ್ಯಯನವನ್ನು ಕೈಗೊಳ್ಳಲಿ ಎಂದು ಕಾತುರರಾಗಿದ್ದರು. ಆದ್ದರಿಂದ ಅವರು ಬಾಂಬೆಯಲ್ಲಿರುವ ಪೊಲೀಸ್ ಕಮಿಷನರ್ ಗ್ರಿಫಿತ್ ಅವರಿಗೆ ಡಾ. ಅಂಬೇಡ್ಕರ್‌ರವರಿಗೆ ಬೇಗನೇ ವಿದೇಶಕ್ಕೆ ಹೋಗಲು ಅನುಮತಿ ನೀಡಲು ಕೋರಿಕೊಂಡಿದ್ದರು.[23] ಶಾಹುರವರು ಬಾಬಾಸಾಹೇಬರಿಗೆ ಹಣಕಾಸಿನ ನೆರವನ್ನು ಸಹ ನೀಡಿದರು. ಅವರು ಲಂಡನ್ನಿನಲ್ಲಿರುವ ತಮ್ಮ ಸ್ನೇಹಿತ ಸರ್ ಆಲ್ಫ್ರೆಡ್ ಪೀಸ್‌ರವರಿಗೆ ಅಂಬೇಡ್ಕರರನ್ನು ಪರಿಚಯ ಮಾಡಿಕೊಡುವ ಮತ್ತು ಅವರಿಗೆ ಸಹಾಯ ಮಾಡುವಂತೆ ಕೋರುವ ಒಂದು ಪತ್ರವನ್ನು ಬರೆದಿದ್ದರು. ಶಾಹು ಬರೆಯುತ್ತಾರೆ: "ಅಸ್ಪೃಶ್ಯ ಸಮುದಾಯದ ಮಹರ್‌ಜಾತಿಗೆ ಸೇರಿದ ಡಾ. ಅಂಬೇಡ್ಕರರಾದ ನನ್ನ ಸ್ನೇಹಿತನನ್ನು ನಿಮಗೆ ಈ ಮೂಲಕ ಪರಿಚಯ ಮಾಡಿಕೊಡುತ್ತಿದ್ದೇನೆ. ಅವರು ನ್ಯೂ ಯಾರ್ಕ್‌ನ ಕೊಲಂಬಿಯ ಯುನಿವರ್ಸಿಟಿಯ ಪಿಎಚ್.ಡಿ ಪದವಿ ಪಡೆದವರು ಮತ್ತು ಬಾಂಬೆಯಲ್ಲಿ ಅವರು ಸಿಡ್ನೇಹ್ಯಾಮ್ ವಾಣಿಜ್ಯ ಮತ್ತು ಅರ್ಥಶಾಸ್ತ್ರದ ಕಾಲೇಜಿನಲ್ಲಿ ಒಬ್ಬ ಪ್ರೊಫೆಸರ್ ಆಗಿದ್ದವರು. ಅವರು ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಮತ್ತು ಇನ್ಸ್‌ಕೋಲ್‌ನಲ್ಲಿ ಅಧ್ಯಯನ ಮಾಡಲು ಲಂಡನ್ನಿಗೆ ಬರುತ್ತಿದ್ದಾರೆ. ಅವರು ನಿಮಗೆ ಹಿಂದುಳಿದ ವರ್ಗಗಳು ಮತ್ತು ಬ್ರಾಹ್ಮಣ ನೌಕರಶಾಹಿಯ ನಡುವೆಯಿರುವ ವ್ಯತ್ಯಾಸವನ್ನು ವಿವರಿಸುವರು. ಅವರು ಹಿಂದುಳಿದ ವರ್ಗಗಳಿಗೆ ಸಹಾನುಭೂತಿ ತೋರಿಸುವ ವ್ಯಕ್ತಿಯೂ, ಎಂಥ ನೋವುಗಳನ್ನು ಅನುಭವಿಸಬೇಕಾಗುತ್ತದೆ, ತಾವು ಜನತಾಂತ್ರಿಕ ವ್ಯಕ್ತಿಗಳೆಂದು ಹೇಳಿಕೊಳ್ಳುವ ನೌಕರಶಾಹಿ ಈ ಬ್ರಾಹ್ಮಣರ ಕೈಯಲ್ಲಿ ಏನನ್ನು ಅನುಭವಿಸಬೇಕಾಗುತ್ತದೆ ಎಂಬ ಸಂಗತಿಗಳನ್ನು ಅವರು ವಿವರಿಸುವರು. ಅವರು ಬ್ರಾಹ್ಮಣರು ತಾವು ಕಳೆದುಕೊಂಡಿದ್ದ ನಿಜವಾದ ಅಧಿಕಾರವನ್ನು ಮರಳಿ ಪಡೆಯಲು ಮತ್ತು ಪುನರ್‌ಸ್ಥಾಪಿಸಲು ಹೋಮ್‌ರೂಲ್ ಅನ್ನು ಕೇಳುತ್ತಿದ್ದಾರೆ. ಈ ಬಗ್ಗೆ ಏಕಾಭಿಪ್ರಾಯ (ಸರ್ವಾನುಮತ) ಹೊಂದಿರುವ ಬ್ರಾಹ್ಮಣೇತರ ಹಿಂದುಗಳ ಅಭಿಪ್ರಾಯವನ್ನು ಅವರು ಇಂಗ್ಲೆಂಡಿನ ಬುದ್ಧಿವಂತ ಸಾರ್ವಜನಿಕರ ಮುಂದೆ ಮಂಡಿಸಲು ಉದ್ದೇಶಿಸಿದ್ದಾರೆ. ಭಾರತೀಯರಿಗೆ ಹಾಲಿಯಿರುವ ಯೋಜನೆ ಮತ್ತು ಸ್ವಯಂ-ಆಡಳಿತವು ಜನರನ್ನು ಸ್ವತಂತ್ರ ಮತ್ತು ಸಮಾನರನ್ನಾಗಿ ಮಾಡುವುದಿಲ್ಲ. ಆದರೆ ಅದು ಬ್ರಾಹ್ಮಣರನ್ನು ಮತ್ತಷ್ಟು ಬಲಶಾಲಿಗಳನ್ನಾಗಿ ಮಾಡುತ್ತದೆ. ರಾಜಕೀಯ ಅಧಿಕಾರ ಹೊಂದಿದ ಬ್ರಾಹ್ಮಣರ ಸ್ವಲ್ಪ ಜನಾಧಿಪತ್ಯ (ಆಲಿಗಾರ್ಕಿ) ಸಾಮ್ರಾಜ್ಯ ಒಂದು ಪೀಡೆಯಾಗುತ್ತದೆ ಮತ್ತು ಭಾರತದ ಜನರ ಮುಂದಕ್ಕೊಯ್ಯುವ ಪ್ರಗತಿಯನ್ನು ಹಿಂದಕ್ಕೆಳೆಯುತ್ತದೆ. ಬ್ರಾಹ್ಮಣೇತರರು ಭಾರತದಲ್ಲಿ ಹಲವು ಆಡಳಿತಗಳ ಮುಂದೆ ಮಾಡಿಕೊಂಡ

ಮನವಿಗಳಿಗೆ ಅವುಗಳು ಕಿವಿ ಕೊಡಲೇ ಇಲ್ಲ. ಆದರೆ ಅವರು ಬ್ರಿಟಿಷ್ ಸಾರ್ವಜನಿಕರಿಂದ ಸಹಾನುಭೂತಿ ಸಿಗಬಹುದೆಂದು ಆಶಾಜೀವಿಗಳಾಗಿದ್ದಾರೆ. ಆದ್ದರಿಂದ ತಾವು ಡಾ. ಅಂಬೇಡ್ಕರರು ಹೇಳುವ ಮಾತುಗಳಿಗೆ ದಯವಿಟ್ಟು ಕಿವಿಗೊಡಿ ಮತ್ತು ನಿಮಗೆ ಅನುಕೂಲವಾಗುವಂತಹ ಸಹಾಯವನ್ನು ಅವರಿಗೆ ಮಾಡಿ?"[24]

ಅಂಬೇಡ್ಕರರು ಲಂಡನ್ನಿನಲ್ಲಿ ಎದುರಿಸಬೇಕಾದ ಕಷ್ಟಗಳ ಬಗ್ಗೆ ಶಾಹು ಚಿಂತಿತರಾಗಿದ್ದರು. ಈ ಪತ್ರದ ಹಿಂದೆಯಿದ್ದ ಮುಖ್ಯ ಗುರಿಯೆಂದು ತೋರುತ್ತದೆ. ನಿರ್ಧಾರದಂತೆ ಬಾಬಾಸಾಹೇಬರು ಜುಲೈ, ೫, ೧೯೨೦ರಂದು ಮುಂಬಯಿ ಬಿಟ್ಟು ಲಂಡನ್ನಿಗೆ ಹೋದರು.

## ಅಸ್ಪೃಶ್ಯರಿಗಾಗಿ ಶಾಹುರವರ ಕೆಲಸ

ಅಂಬೇಡ್ಕರರು ಇಂಗ್ಲೆಂಡಿನಲ್ಲಿರುವಾಗಲೇ ಶಾಹುರವರ ಅಸ್ಪೃಶ್ಯತೆಯ ನಿವಾರಣೆಯ ಆಂದೋಲನ ಮುಂದುವರಿಯಿತು. ಅವರು ಈಗಾಗಲೇ ಗುಲಾಮತ್ವದಿಂದ ಅಸ್ಪೃಶ್ಯರನ್ನು ಮುಕ್ತಗೊಳಿಸುವ ಮತ್ತು ಅವರ ಸರ್ವಾಂಗೀಣ ಪ್ರಗತಿಗಾಗಿ ಕೆಲವು ಕ್ರಾಂತಿಕಾರಿ ನಿರ್ಧಾರಗಳನ್ನು ಕೈಗೊಂಡಿದ್ದರು. ಸೆಪ್ಟಂಬರ್ ೧೮, ೧೯೧೮ ಅನ್ನು ಅಸ್ಪೃಶ್ಯರ ಇತಿಹಾಸದಲ್ಲಿ ವಿಶೇಷವಾಗಿ ಮಹರರ ವಿಷಯದಲ್ಲಿ ಯುಗನಿರ್ಮಾಣ ದಿನವೆಂದು ಪರಿಗಣಿಸಬೇಕಾಗಿದೆ. ಆ ದಿನ ಛತ್ರಪತಿ ಶಾಹುರವರು ಮಹರ್ ವತನ ಪದ್ಧತಿಯನ್ನು ರದ್ದುಗೊಳಿಸಿದರು. ಅವರು ವತನಿನ ಭೂಮಿಯನ್ನು ಮಹರರಲ್ಲಿಯೇ ಉಳಿಯುವಂತೆ ಮಾಡಿದರು. ಆದರೆ ಅವರು ಗ್ರಾಮದ ಜೀತದಾಳುಗಳಲ್ಲ. ಅವರು ಇತರೆ ನಾಗರಿಕರಂತೆಯೇ ಸ್ವತಂತ್ರ ನಾಗರಿಕರಾದರು. ಇದುವರೆಗೆ ಮಹರರು ಮಾಡುತ್ತಿದ್ದ ಕೆಲಸವನ್ನು ಇನ್ನು ಮೇಲೆ ಸಂಬಳದ ಮೇಲೆ ನೇಮಕಗೊಂಡ ಸರಕಾರಿ ನೌಕರರು ಮಾಡಬೇಕಾಗುತ್ತದೆ. ಇದರಿಂದ ಖಜಾನೆಗೆ ಹೆಚ್ಚು ಹೊರೆ ಬೀಳುತ್ತದೆ. ಅಧಿಕಾರಿಗಳು ಇದನ್ನು ಶಾಹುರವರ ಗಮನಕ್ಕೆ ತಂದರು. ಆಗ ಅವರು ಪ್ರತ್ಯುತ್ತರ ನೀಡಿದರು. "ಖಜಾನೆಯು ಸಂಪೂರ್ಣವಾಗಿ ಖಾಲಿಯಾದರೂ ನಾನು ಲಕ್ಷಿಸುವುದಿಲ್ಲ. ಆದರೆ ನಾನು ಮಾನವಜೀವಿಗಳಿಗೆ ಮಾನವತ್ವವನ್ನು ನಿರಾಕರಿಸುವ ಸಂಪ್ರದಾಯವನ್ನು ಕೊನೆಗೊಳಿಸಬೇಕಾಗಿದೆ."[25]

ಜುಲೈ ೨೭, ೧೯೧೮ರಂದು ಶಾಹುರವರು ಮಹರ್, ಮಾಂಗ್, ರಾಮೋಶಿ ಮತ್ತು ಬೆರದ ಸಮುದಾಯಗಳನ್ನು ದಮನಕಾರಿ ಕಡ್ಡಾಯ ಹಾಜರಿ ಪದ್ಧತಿಯಿಂದ ಮುಕ್ತಗೊಳಿಸಿದರು. ಅವರು ತಲಾಟಿಗಳ ನೇಮಕಾತಿಯಲ್ಲಿ ಅಸ್ಪೃಶ್ಯರಿಗೆ ಆದ್ಯತೆಯನ್ನು ನೀಡಬೇಕೆಂದು ಆಗಸ್ಟ್ ೮ ಮತ್ತು ೧೦, ೧೯೧೮ರಂದು ಎರಡು ಆಜ್ಞೆಗಳನ್ನು ಹೊರಡಿಸಿದರು. ಅಸ್ಪೃಶ್ಯರಲ್ಲಿ ಅವಶ್ಯಕ ಯೋಗ್ಯತೆ ಕಂಡುಬಂದರೆ ಅವರು ಮುಖ್ಯ ಅಧಿಕಾರಿಯನ್ನಾಗಿ ನೇಮಿಸಬೇಕೆಂದು ಅವರು ಹೇಳಿದರು. ಮಹಾರಾಜರು ಅಸ್ಪೃಶ್ಯರನ್ನು ಮುಕ್ತಗೊಳಿಸಲು ಹಲವಾರು ನಿರ್ಧಾರಗಳನ್ನು ತೆಗೆದುಕೊಂಡರು. ಹಲವು ಆಜ್ಞೆಗಳನ್ನು ಹೊರಡಿಸಿದರು ಮತ್ತು ಜಾರಿಗೊಳಿಸಿದರು. ಅವರು ಆಜ್ಞೆಗಳನ್ನು ಉಲ್ಲಂಘಿಸುವವರ ವಿರುದ್ಧ ಕಾನೂನಿನ ಕ್ರಮಗಳನ್ನು ತೆಗೆದುಕೊಳ್ಳಲು ಪ್ರಾವಧಾನಗಳನ್ನು ಮಾಡಿದರು. ಇವುಗಳನ್ನು ಮಾಡುವಾಗ ಅವರು ಸಿಂಹಾಸನದ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಅಂಬೇಡ್ಕರರು ಲಂಡನ್ನಿಗೆ ಹೋದ ನಂತರ ಮಹಾರಾಷ್ಟ್ರದಲ್ಲಿನ ಅಸ್ಪೃಶ್ಯರ ಆಂದೋಲನ ಬಾಡಿಹೋಗದಂತೆ (ಶಕ್ತಿಹೀನ) ನೋಡಿಕೊಂಡರು. ಅದಕ್ಕೆ ವಿರುದ್ಧವಾಗಿ, ಅದಕ್ಕೆ ತೀವ್ರಗತಿಯನ್ನು ನೀಡಿದರು. ಅವರು ಜನರಿಗೆ ಅಂಬೇಡ್ಕರರ ಪ್ರಾಮುಖ್ಯತೆ, ಅವರ ಕೆಲಸ ಮತ್ತು ಅಸ್ಪೃಶ್ಯರ ಬಗ್ಗೆ ಅವರಿಗಿರುವ ನಿಜವಾದ ಕಾಳಜಿಗಳನ್ನು ನೆನಪಿಸುತ್ತಾ ಇದ್ದರು. ಜನರ ಮೇಲೆ ಬೀರಿರುವ ಅಂಬೇಡ್ಕರರ ಪ್ರಭಾವ ಕುಗ್ಗದಂತೆ

ಅವರು ಖಾತರಿಗೊಳಿಸುತ್ತಿದ್ದರು. ಈ ಬಗ್ಗೆ ದೆಹಲಿ ಸಮ್ಮೇಳನದಲ್ಲಿ ಶಾಹುರವರ ಭಾಷಣ ಗಮನಿಸಲು ಯೋಗ್ಯವಾಗಿದೆ. ಫೆಬ್ರವರಿ ೧೬, ೧೯೨೨ರಂದು ದೆಹಲಿಯಲ್ಲಿ ನಡೆದ ಅಖಿಲಭಾರತ ಅಸ್ಪೃಶ್ಯರ ಪರಿಷತ್ತಿನ ಸಮ್ಮೇಳನವು ಮೂರನೆಯ ಸಮ್ಮೇಳನವಾಗಿದೆ. ಶಾಹುರವರು ಅಧ್ಯಕ್ಷೀಯ ಭಾಷಣದಲ್ಲಿ ಹೇಳಿದರು: "ನಿಮ್ಮ ಅಧ್ಯಕ್ಷನಾಗುವ ಗೌರವ ಮತ್ತು ಆ ಹುದ್ದೆಯಲ್ಲಿ ಮಾತನಾಡುವ ಅಧಿಕಾರ ಅಂಬೇಡ್ಕರರಿಗೆ ಸೇರಿದೆ. ಅಂಬೇಡ್ಕರರು ನಿಮ್ಮಲ್ಲಿಯ ಒಬ್ಬ ವ್ಯಕ್ತಿಯೆಂದು ಹೆಮ್ಮೆಯಿಂದ ಹೇಳಬಲ್ಲೆ. ಅವರು ನನಗಿಂತ ಹೆಚ್ಚು ವಿದ್ವಾಂಸರು. ಈ ಕ್ಷಣದಲ್ಲಿ ಅವರು ಲಂಡನ್ನಿನಲ್ಲಿರುವುದರಿಂದ ದುರದೃಷ್ಟವಶಾತ್ ಅವರು ಸಮ್ಮೇಳನದಲ್ಲಿ ಭಾಗವಹಿಸುವುದಕ್ಕೆ ಆಗಲಿಲ್ಲ. ಆದರೆ ಅವರು ಎಲ್ಲೇ ಇರಲಿ, ಸದಾ ಅಸ್ಪೃಶ್ಯರ ಸ್ಥಿತಿಗತಿಗಳು ಅವರ ಹೃದಯವನ್ನು ಚುಚ್ಚುತ್ತಿರುತ್ತವೆ ಎಂದು ನಾನು ಖಂಡಿತವಾಗಿ ಹೇಳಬಲ್ಲೆ."[26] ಮುಕ್ತಾಯದಲ್ಲಿ ಶಾಹು ಹೇಳಿದರು: "ನೀವು ನಿಮ್ಮ ಮುಂದೆ ಶ್ರೀಮಾನ್ ಭೀಮರಾವ್ ಅಂಬೇಡ್ಕರರನ್ನು ನಿಮ್ಮ ಆದರ್ಶನಾಯಕನೆಂದು ಇಟ್ಟುಕೊಳ್ಳಿ ಮತ್ತು ಅವರ ಹಾಗೆ ನೀವು ಆಗಲು ಪ್ರಯತ್ನಿಸಿ. ನಾನು ನಿಮ್ಮ ಗುಲಾಮ. ನಾನು ನಿಮ್ಮ ಸೇವಕ, ನನ್ನ ಮೂಲಕ ನಿಮ್ಮ ಎಲ್ಲಾ ಕೆಲಸಗಳನ್ನು ಮಾಡಿಸಿಕೊಳ್ಳಿ"[27]

ಕೋಮಲ ವಿನಯದ ಒಬ್ಬ ರಾಜ, ಅಸ್ಪೃಶ್ಯರ ಬಗ್ಗೆ ನಿಜವಾದ ಪರಾನುಭೂತಿಯನ್ನು ಹೃದಯದ ಪಾರದರ್ಶಕತೆ ಮತ್ತು ಒಬ್ಬ ಸ್ನೇಹಿತನ ಗುಣಗಾನ ಮಾಡುವ ತೆರೆದ ಮನಸ್ಸುಳ್ಳವರು–ಶಾಹುರವರು ಈ ಎಲ್ಲಾ ಪ್ರಿಯವಾದ ಸ್ವಭಾವಗಳು ಅದ್ಭುತವಾಗಿ ನಿಜವಾಗಿ ಭಾಷಣದಲ್ಲಿ ಹೊರಮೂಡಿವೆ.[28]

### ಇಂಗ್ಲೆಂಡಿನಲ್ಲಿ ಅಂಬೇಡ್ಕರರ ಕಾರ್ಯ

ಅಂಬೇಡ್ಕರರು ತನ್ನ ಅಧ್ಯಯನ ಮಾಡುವುದರ ಜೊತೆಗೆ ಇಂಗ್ಲೆಂಡಿನಲ್ಲಿ ಅವರು ತಮ್ಮ ಎಲ್ಲಾ ಶಕ್ತಿ ಮತ್ತು ಕೌಶಲ್ಯಗಳನ್ನು ಬ್ರಿಟಿಷ್ ಜನರಿಗೆ, ನೌಕರಶಾಹಿಗೆ, ರಾಜಕಾರಣಿಗಳಿಗೆ, ಭಾರತದಲ್ಲಿನ ಬ್ರಾಹ್ಮಣೇತರರ ಆಂದೋಲನದ ಮಹತ್ವವನ್ನು ಮತ್ತು ಪ್ರಗತಿಪರ ಉದ್ದೇಶಕ್ಕಾಗಿ ಆಂದೋಲನವು ಸಂಕೀರ್ಣ ಸಾಮಾಜಿಕ ಸನ್ನಿವೇಶದಲ್ಲಿ ಮುಂದುವರಿಯುತ್ತಿರುವುದನ್ನು ವಿವರಿಸುವುದಕ್ಕೆ ಬಳಸುತ್ತಿದ್ದರು. ಫೆಬ್ರವರಿ ೩, ೧೯೨೧ರಲ್ಲಿ ಶಾಹುರವರಿಗೆ ಬರೆದ ಪತ್ರದಲ್ಲಿ ಅವರು ಹೇಳುತ್ತಾರೆ: "ಮಂದಗಾಮಿ ನಾಯಕರ ಸಲಹೆಯಂತೆ ಮಾಂಟೆಗ್ಯೂ ನಡೆದುಕೊಳ್ಳುವರು. ಆದರೆ ಅವರು ಬ್ರಾಹ್ಮಣೇತರರ ಆಂದೋಲನದ ಬಗ್ಗೆ ಹೀನ್ಯೆಸಿ ಮಾತನಾಡುವುದಿಲ್ಲವೆಂದು ನಾನು ಖಾತರಿಯಿಂದ ಹೇಳುತ್ತೇನೆ. ವಸ್ತುನಿಷ್ಠವಾಗಿ ಹೇಳುವುದಾದರೆ, ಬ್ರಾಹ್ಮಣೇತರರ ಆಂದೋಲನವನ್ನು ಅರ್ಥಮಾಡಿಕೊಳ್ಳುವುದಕ್ಕೆ ಹಲವರಾರೂ ಪ್ರಯತ್ನ ಮಾಡುತ್ತಿಲ್ಲ. ಇಲ್ಲಿ ಸುಧಾರಣಾ ಮಸೂದೆಯ ಕರಡನ್ನು ರಚಿಸಿದಾಗ ಬ್ರಾಹ್ಮಣೇತರರ ಮಹತ್ವದ ಬಗ್ಗೆ ಮನವೊಪ್ಪುವಂತೆ ಹೇಳಬಲ್ಲ ಯಾವ ಸಮರ್ಥ ನಾಯಕನೂ ಇಲ್ಲಿ ಇಲ್ಲ". ಇದು ವಿಷಾದನೀಯ ಸಂಗತಿಯಾಗಿದೆ. ಅದು ಬ್ರಾಹ್ಮಣರ ವಿರೋಧಿ ಚಳುವಳಿ ಎಂದು ವಿರೋಧಿಗಳಿಗೆ ಸುಲಭವಾಗಿಬಿಟ್ಟಿದೆ. ಆಂದೋಲನದ ಜನತಂತ್ರದ–ಪರ ಎಂಬ ಮಗ್ಗುಲನ್ನೇ ಕಗ್ಗತ್ತಲಿನಲ್ಲಿಡಲಾಗಿದೆ. ಅದನ್ನು ವಿಕೃತಗೊಳಿಸಲಾಗಿದೆ. ಈ ವಿಕೃತಗೊಂಡ ರೂಪವನ್ನೇ ಈಗ ಬ್ರಿಟಿಷ್ ಬುದ್ಧಿ ನೆನಪಿಸಿಕೊಳ್ಳುತ್ತಿದೆ.

ಈಗ ರಾಜಕೀಯ ಸುಧಾರಣೆಗಳ ಯೋಚನೆಯನ್ನು ಅಂತಿಮಗೊಳಿಸಲಾಗಿದೆ. ಭಾರತದಲ್ಲಿ ಎಷ್ಟರ ಮಟ್ಟಿಗೆ ತಾರತಮ್ಯತೆಯಿದೆ ಎಂಬುದನ್ನು ತಿಳಿದುಕೊಳ್ಳಲು ಯಾರೂ ಶ್ರಮಪಡಲು ತಯಾರಾಗಿಲ್ಲ. ಆದರೂ ನಾನು ಭವಿಷ್ಯಕ್ಕಾಗಿ ಸಿದ್ಧತೆ ನಡೆಸಲು ಪ್ರಾರಂಭಿಸಬೇಕಾಗಿದೆ. ಹೇಗೆ ಭಾರತದಲ್ಲಿ ಸಾಮಾಜಿಕ ಮತ್ತು

ರಾಜಕೀಯ ಸಂಕೀರ್ಣ ಸಮಸ್ಯೆಗಳು ಪರಸ್ಪರ ತಳುಕು ಹಾಕಿಕೊಂಡಿವೆ, ಆ ಪರಿಣಾಮಗಳನ್ನು ಕುರಿತು ಪ್ರತಿಯೊಬ್ಬ ಇಂಗ್ಲಿಷ್ ವ್ಯಕ್ತಿಗೆ ನನಗೆ ಅವಕಾಶ ಸಿಕ್ಕಿದಾಗಲೆಲ್ಲ ತಿಳಿಸಿ ಹೇಳಲು ಪ್ರಯತ್ನಿಸುತ್ತಿದ್ದೇನೆ. ಅವುಗಳ ಪರಿಣಾಮಗಳನ್ನು ಬೇಗನೇ ನೋಡಬಹುದು. ಅವುಗಳು ವ್ಯರ್ಥ ಎಂಬುದನ್ನು ಕಾಲವೇ ಹೇಳಬೇಕಾಗುತ್ತದೆ. ನಿಮ್ಮ ನಿರ್ದೇಶನದ ಪ್ರಕಾರ ಇಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸುವ ಸಾಧ್ಯತೆಯ ಬಗ್ಗೆ ನಾನು ಕೆಲವು ಪ್ರಭಾವಶಾಲಿ ವ್ಯಕ್ತಿಗಳೊಂದಿಗೆ ಚರ್ಚಿಸಿದ್ದೇನೆ. ಅವರೆಲ್ಲರೂ ಸರ್ವಾನುಮತದಿಂದ ವಿಷಯವನ್ನು ಬೆಂಬಲಿಸಿದರು. ಸಂಬಳದ ಕಾರ್ಯದರ್ಶಿಯಿಲ್ಲದಿದ್ದರೆ ಸಂಸ್ಥೆ ಬಹಳ ದಿನ ಉಳಿಯಲಾರದೆಂಬುದು ಅವರ ಅಭಿಪ್ರಾಯವಾಗಿದೆ. ಅಂದರೆ ವಾರ್ಷಿಕ ಖರ್ಚು–ವೆಚ್ಚಗಳು ೫೦೦ ಪೌಂಡುಗಳಾಗಬಹುದು. ಅಂತಹ ಸಂಸ್ಥೆ ಅಸ್ಪೃಶ್ಯರಿಗೆ ಪ್ರಯೋಜನವಾಗಬಹುದೆಂಬ ಖಾತರಿಯಿದೆ. ಆದರೆ ಖರ್ಚಿಗೆ ಬೇಕಾದದ್ದು ನಮ್ಮ ಶಕ್ತಿಗೆ ಮೀರಿದ್ದು.”

ಅವರು ಕೊನೆಗೆ ಬರೆಯುತ್ತಾರೆ: “ನನಗೆ ವೈಯಕ್ತಿಕ ಕೀರ್ತಿಯ ಆಸಕ್ತಿ ಇಲ್ಲ. ನಾನು ನನ್ನ ಜನರ ಸೇವೆ ಮಾಡುವ ಈ ಅವಕಾಶವನ್ನು ಕಳೆದುಕೊಂಡರೂ ಸಹ ಮಹಾರಾಜರು, ನಾನು ಸ್ವತಃ ಬೃಹತ್ ಪ್ರಮಾಣದಲ್ಲಿ ಸೇವೆ ಮಾಡಲು ಸಿದ್ಧನಾಗುತ್ತಿದ್ದಾನೆ ಎಂದು ಮನವರಿಕೆ ಮಾಡಿಕೊಳ್ಳುವರು. ನಾನು ಲಂಡನ್ ಟೈಮ್ಸ್ ಸಂಪಾದಕನನ್ನು ಸ್ನೇಹಿತನನ್ನಾಗಿ ಮಾಡಿಕೊಂಡಿದ್ದೇನೆ. ನಾನು ಕೊಟ್ಟ ಮಾಹಿತಿಯ ಆಧಾರದ ಮೇರೆಗೆ ಅವನು ಅಸ್ಪೃಶ್ಯರ ಬಗ್ಗೆ ಶಿಕ್ಷಣದ ಬಗ್ಗೆ ಬರೆದ ಲೇಖನದ ಕಟ್ಟಿಂಗ್ ಅನ್ನು ನಾನು ಈ ಮೂಲಕ ಕಳುಹಿಸಿಕೊಡುತ್ತಿದ್ದೇನೆ.”[29]

ಎರಡು ಅಥವಾ ಮೂರು ಬಗೆಯ ಕೆಲಸಕಾರ್ಯಗಳಲ್ಲಿ ಅಂಬೇಡ್ಕರರು ಕಾರ್ಯಮಗ್ನರಾಗಿದ್ದರಿಂದ ಶಾಸನ ಪರಿಷತ್ತಿನ ಸದಸ್ಯರಾಗುವುದಕ್ಕೆ ಮುಂಬಯಿಗೆ ವಾಪಸ್ಸು ಬರಬೇಕೆಂದು ಭಾರತದ ಮಾಂಟೆಗ್ಯು ಮಂತ್ರಿಯವರ ಮನವಿಯನ್ನು ಅವರು ವಿನಯಪೂರ್ವಕವಾಗಿ ನಿರಾಕರಿಸಿದರು.

ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ಆಂದೋಲನಗಳಿಗೆ ಶಾಹು ಮತ್ತು ಅಂಬೇಡ್ಕರರು ಅಗತ್ಯವಿರುವಂತೆಯೇ ಪರಸ್ಪರ ಇವರಿಬ್ಬರಿಗೂ ಅವರವರ ಅಗತ್ಯವಿದೆ. ಅವರ ಸಂಬಂಧ ಆಂದೋಲನಗಳಲ್ಲಿ ಸಹವರ್ತಿಗಳಾಗಿರುವುದಕ್ಕೆ ಸೀಮಿತವಾಗಿರಲಿಲ್ಲ. ಅವರಿಬ್ಬರ ನಡುವೆ ಸಂಬಂಧದ ಆತ್ಮೀಯ ಬಂಧ, ಗೌರವ, ಅಗತ್ಯ ಮತ್ತು ಪ್ರೀತಿಗಳು ಬೆಳೆದಿದ್ದವು. ಅವರ ಪತ್ರವ್ಯವಹಾರಗಳಲ್ಲಿ ಇದನ್ನು ಪರಿಭಾವಿಸಬಹುದು. ಇಬ್ಬರು ಪರಸ್ಪರ ಅದ್ಭುತವಾದ ನಂಬಿಕೆಯನ್ನಿಟ್ಟುಕೊಂಡಿದ್ದರು. ಇಬ್ಬರೂ ಪರಸ್ಪರ ಯಾವಾಗಲೂ ಅರ್ಥಮಾಡಿಕೊಳ್ಳುತ್ತಿದ್ದರು.

ಸೆಪ್ಟಂಬರ್ ೪, ೧೯೨೧ರಂದು ಶಾಹುರವರಿಗೆ ಪತ್ರ ಬರೆದು ಆರ್ಥಿಕ ನೆರವನ್ನು ಕೋರುತ್ತಾ ಅಂಬೇಡ್ಕರರು ಹೇಳುತ್ತಾರೆ: “ಭಾರತದಲ್ಲಿ ಪ್ರಗತಿ ಹೊಂದುತ್ತಿರುವ ಸಾಮಾಜಿಕ ಜನತಂತ್ರ ಕಡೆಗೆ ಕೊಂಡೊಯ್ಯುವ ಮಹಾ ಚಳುವಳಿಯ ಆಧಾರ ಸ್ತಂಭಗಳಾದ ನೀವುಗಳು ನಮಗೆ ಅತ್ಯಾವಶ್ಯಕವಾಗಿ ಬೇಕು.”[30]

## ಶಾಹುರವರ ಮರಣ

ಶಾಹುರವರು ಅಸ್ಪೃಶ್ಯರ ಮತ್ತು ಬ್ರಾಹ್ಮಣೇತರರ ಚಳುವಳಿಗಳ ಸ್ತಂಭವಾಗಿದ್ದರು. ದುರದೃಷ್ಟವಶಾತ್ ಸ್ತಂಭವು ಬಹಳ ಕಾಲ ಬಾಳಲಿಲ್ಲ. ಅವರ ಆರೋಗ್ಯ ತುಂಬಾ ಕೆಡುತ್ತಿತ್ತು. ಶಾಹುರವರು ಮೇ ೬, ೧೯೨೨ರಂದು ಮರಣ ಹೊಂದಿದರು. ಇದು ಬ್ರಾಹ್ಮಣೇತರರ ಮತ್ತು ಅಸ್ಪೃಶ್ಯರ ಆಂದೋಲನಗಳಿಗೆ

ಮತ್ತು ವಿಶೇಷವಾಗಿ ಆ ಸಮಯದಲ್ಲಿ ಲಂಡನ್ನಿನಲ್ಲಿದ್ದ ಅಂಬೇಡ್ಕರರಿಗೆ ಆಘಾತವಾಗಿತ್ತು. ಅವರು ಆಘಾತಕಾರಿಯಾದ ಸುದ್ದಿಯನ್ನು ಸ್ವೀಕರಿಸಿದ ಕೂಡಲೇ ರಾಜಾರಾಮ್ ಮಾಹಾರಾಜ ಅವರಿಗೆ ಮೇ ೧೦, ೧೯೨೨ರಂದು ಒಂದು ಪತ್ರ ಬರೆದರು: "ಘನತೆವೆತ್ತ ಮಹಾರಾಜರ ಮರಣದ ಸುದ್ದಿಯನ್ನು ದಿನಪತ್ರಿಕೆಗಳಲ್ಲಿ ಓದಿದ ನನಗೆ ಆಘಾತವಾಯಿತು. ನಾನು ಎರಡು ರೀತಿಯಲ್ಲಿ ಈ ಅನಾಹುತ ಘಟನೆಯಿಂದ ದುಃಖಕ್ಕೆ ಗುರಿಯಾಗಿದ್ದೇನೆ. ಅವರ ಮರಣದಿಂದ ನಾನು ನನ್ನ ವೈಯಕ್ತಿಕ ಆತ್ಮೀಯ ಸ್ನೇಹಿತನನ್ನು ಕಳೆದುಕೊಂಡಿದ್ದೇನೆ. ಮತ್ತು ದಮನಿತ ವರ್ಗಗಳು ಒಬ್ಬ ಮಹಾದಯಾಳುವನ್ನು ತಮ್ಮ ಸದುದ್ದೇಶದ ಮಹಾನಾಯಕನನ್ನು ಕಳೆದುಕೊಂಡಿವೆ."[31] ಲಂಡನ್ನಿನಿಂದ ಭಾರತಕ್ಕೆ ವಾಪಸ್ಸು ಬಂದ ಕೂಡಲೇ ಅಂಬೇಡ್ಕರರು ವೈಯಕ್ತಿಕವಾಗಿ ಕೊಲ್ಹಾಪುರಕ್ಕೆ ಹೋಗಿ ರಾಜಾರಾಮ್ ಮಹಾರಾಜರನ್ನು ಮತ್ತು ರಾಜನ ವಿಧವೆ ಮಾಹಾರಾಣಿ ಸಾಹೇಬರನ್ನು ಭೇಟಿ ಮಾಡಿ ಅವರ ದುಃಖದಲ್ಲಿ ಭಾಗಿಯಾದರು.

## ಶಾಹು ಬಗ್ಗೆ ಅಂಬೇಡ್ಕರರ ಪ್ರಶಂಸೆ

ಅಂಬೇಡ್ಕರರ ನಿಜವಾದ ಸಾರ್ವಜನಿಕ ಜೀವನ ಅವರು ವಿದ್ಯಾಭ್ಯಾಸ (ಅಧ್ಯಯನ)ವನ್ನು ಸಂಪೂರ್ಣವಾಗಿ ಮುಗಿಸಿಕೊಂಡು ಭಾರತಕ್ಕೆ ವಾಪಸ್ಸು ಬಂದ ಮೇಲೆ ಪ್ರಾರಂಭವಾಯಿತು. ಆದರೆ ಅವರು ಈಗ 'ಅಸ್ಪೃಶ್ಯರ ಮಹಾಸಮರ್ಥಕ ಅಥವಾ ಅವರಿಗೆ ಸಹವಾಸ (ಜೊತೆಗಾರಿಕೆ) ನೀಡಿ ಪ್ರತಿಯೊಂದನ್ನೂ ಮಾಡುವ ಸ್ನೇಹಿತ ಇಲ್ಲವಾಗಿದೆ.' ಶಾಹುರವರು ಮುಂಗಾಣಿದ್ದ ಸಾಮಾಜಿಕ ಸಮಾನತೆಯ ಆಂದೋಲನಕ್ಕೆ ತೀವ್ರಗತಿಯನ್ನು ನೀಡಿದರು (ವೇಗೋತ್ಕರ್ಷ). ಅವರು ತಮ್ಮ ಇಡೀ ಜೀವನವನ್ನು ಅದಕ್ಕಾಗಿಯೇ ನೀಡಿದರು. ಶಾಹುರವರು ಯೋಜಿಸಿದ್ದ ವಿಷಯ ಮತ್ತು ಯೋಜನೆಗಳನ್ನೇ ಅವರು ಕೈಗೊಂಡರು ಮತ್ತು ಅನುಸರಿಸಿದರು. ಅವರ ಕ್ರಾಂತಿಕಾರಿ ನಿರ್ಣಯಗಳನ್ನು ಅವರ ಸಂಸ್ಥಾನದಲ್ಲಿ ಸಾಮಾಜಿಕ ಮತ್ತು ಸರಕಾರಿ ಮಟ್ಟದಲ್ಲಿ ಕೈಗೊಳ್ಳಲಾಯಿತು. ಮಹರ್‌ವತನ್ ಮಸೂದೆಯು ಅವರ ಪ್ರಯತ್ನಗಳ ಫಲಿತಾಂಶಕ್ಕೆ ನಿದರ್ಶನವಾಗಿದೆ. ಅಂಬೇಡ್ಕರರು ಶಾಹುರವರು ಮಹರ್ ವತನ್ ಮಸೂದೆಯೊಂದಿಗೆ ಹೊಂದಿರುವ ಸಂಬಂಧವನ್ನು ನವೆಂಬರ್ ೪, ೧೯೨೭ರ 'ಬಹಿಷ್ಕೃತ ಭಾರತ' ಪಾಕ್ಷಿಕ ಪತ್ರಿಕೆಯ ಸಂಚಿಕೆಯಲ್ಲಿ ವಿವರಿಸಿದ್ದಾರೆ. ಅಂಬೇಡ್ಕರರು ಬರೆಯುತ್ತಾರೆ: "ದಿವಂಗತ ಶಾಹು ಛತ್ರಪತಿ ಮಹಾರಾಜರು ಮಹರರಿಗೆ ಶತ್ರುವಲ್ಲ. ಅಸ್ಪೃಶ್ಯರು ಅವರಂತಹ ಸ್ನೇಹಿತನನ್ನು ಎಂದೂ ಹೊಂದಿರಲಿಲ್ಲ ಮತ್ತು ಅಂತಹ ಒಬ್ಬ ಸ್ನೇಹಿತನನ್ನು ಭವಿಷ್ಯದಲ್ಲಿ ಪಡೆಯುತ್ತಾರೆ ಎಂಬುದು ಸಂದೇಹವಾಗಿದೆ. ಮಹರರ ಅಧೋಗತಿಗೆ ವತನುಗಳೇ ಕಾರಣ ಎಂಬುದನ್ನು ಅವರು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದರು. ಆ ಕಾರಣದಿಂದಲೇ ಅವರು ಆ ಪದ್ಧತಿಯನ್ನು ನಿಲ್ಲಿಸಿದರು."[32]

ಶಾಹುರವರು ಚರ್ಚಿಸಿದ ಸಾಮಾಜಿಕ ಜನತಂತ್ರದ ಬಗೆಗಿನ ಹಲವಾರು ಪರಿಕಲ್ಪನೆಗಳನ್ನು ಅಂಬೇಡ್ಕರರು ನಂತರ ಸಂವಿಧಾನದಲ್ಲಿ ಸೇರ್ಪಡೆ ಮಾಡಿದರು. ಅವಶ್ಯಕತೆ ಬಿದ್ದಾಗಲೆಲ್ಲಾ ಮತ್ತು ಅವಕಾಶವಿದ್ದಾಗಲೆಲ್ಲ ಅವರು ಶಾಹುರವರ ಕೃತಿಯನ್ನು (ಕಾರ್ಯ) ಶಬ್ದಗಳಲ್ಲಿ ಹೆಮ್ಮೆಯಿಂದ ಉಲ್ಲೇಖಿಸಿದ್ದಾರೆ. ಅವರು ಸದಾ ಸಾರ್ವಜನಿಕವಾಗಿ ಶಾಹುರವರು ತಮಗೆ ನೀಡಿದ ವೈಯಕ್ತಿಕ ಸಹಾಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸಿದ್ದಾರೆ ಮತ್ತು ಅವರಿಗೆ ಋಣಿಯಾಗಿದ್ದಾರೆ. ಕೊಲ್ಹಾಪುರದಲ್ಲಿ ಜನವರಿ ೧೩, ೧೯೪೦ರಲ್ಲಿ ಅಂಬೇಡ್ಕರರು ದಲಿತ ಪ್ರಜಾ ಪರಿಷತ್ತಿನ ಸಭೆಯಲ್ಲಿ ಹೇಳುತ್ತಾರೆ: "ಕೊಲ್ಹಾಪುರದಲ್ಲಿ ಒಂದು ವಿಷಯ ಖಚಿತ. ನಾನು ಮತ್ತು ಅಸ್ಪೃಶ್ಯರು ಕೊಲ್ಹಾಪುರದ ಬಗ್ಗೆ ಹೆಮ್ಮೆಪಡುತ್ತೇವೆ. ಶಾಹು ಮಹಾರಾಜರು ಕೊಲ್ಹಾಪುರದಲ್ಲಿ ಜನತಂತ್ರದ

ನಿಜವಾದ ಬೀಜಗಳನ್ನು ಬಿತ್ತಿದರು. ನಾವು ಗೋಬ್ರಾಹ್ಮಣ ಪ್ರತಿಪಾದಕ ಛತ್ರಪತಿ ಶಿವಾಜಿ ಮಹಾರಾಜರ ಜಯಂತಿಯನ್ನು ಆಚರಿಸುತ್ತೇವೆ. ಶಿವಾಜಿ ಮಹಾರಾಜರು ಬ್ರಾಹ್ಮಣವಾದವನ್ನು ನಾಶಮಾಡಲಿಲ್ಲ. ತಮ್ಮ ಪಟ್ಟಾಭಿಷೇಕಕ್ಕಾಗಿ ಚಿನ್ನ ಕೊಟ್ಟು ಕಾಶಿಯಿಂದ ಗಂಗಾ(ಗಾಗ)ಭಟ್ಟರನ್ನು ಕರೆಸಿದ್ದರು. ಬ್ರಾಹ್ಮಣತ್ವದ ವಿಷದ ಕೊಂಡಿಯನ್ನು ಮುರಿಯುವುದರಲ್ಲಿ ಶಿವಾಜಿಗಿಂತ ಬಹುಪಾಲು ಶಾಹು ಛತ್ರಪತಿಗಳು ಉತ್ತಮರು. ಶಾಹು ಮಹಾರಾಜರು ಕೆಲವು ದೋಷಗಳನ್ನು ಹೊಂದಿರಬಹುದು. ದೋಷಗಳಿಲ್ಲದ ಒಬ್ಬ ರಾಜನು ಇದ್ದಾನೆಯೇ? ಬರೀ ತಪ್ಪುಗಳನ್ನು ಹುಡುಕುವುದರಲ್ಲಿ ಪ್ರಯೋಜನವಿಲ್ಲ. ಬ್ರಾಹ್ಮಣವಾದವನ್ನು ನಾಶ ಮಾಡದ ಹೊರತು ನಮ್ಮ ಸಮಾಜ ಪ್ರಗತಿಯನ್ನು ಸಾಧಿಸಲಾರದು. ಶಾಹುರವರ ಮಹತ್ವ ಅದನ್ನು ನಾಶ ಮಾಡಲು ಮಾಡಿದ ಮಹಾ ಸಾಹಸ. ಅವರು ಸಮಾಜದಲ್ಲಿನ ಅಸಮಾನತೆಗಳನ್ನು ನಿರ್ಮೂಲನೆ ಮಾಡಲು ಎಲ್ಲಾ ಪ್ರಯತ್ನಗಳನ್ನೂ ಮಾಡಿದರು. ಅವರು ಬ್ರಾಹ್ಮಣತ್ವದ ಭದ್ರಕೋಟೆಯನ್ನು ಮುರಿದರು. ಇದು ಸಣ್ಣ ಸಾಧನೆಯೇನು ಅಲ್ಲ. ನನ್ನ ಸಾರ್ವಜನಿಕ ಜೀವನ ಪ್ರಾರಂಭವಾದದ್ದು ಶಾಹು ಮಹಾರಾಜರು ಅಧ್ಯಕ್ಷತೆ ವಹಿಸಿದ್ದ ಮನ್‌ಗಾವ್ ಸಮ್ಮೇಳನದಿಂದ. ನಮ್ಮೆಲ್ಲರಿಗೂ ಪ್ರಿಯವಾದ ಸಮಾನತೆಯ ತತ್ವದ ಪ್ರಚಾರಕ್ಕಾಗಿ ಅವರು ೨,೫೦೦ ರೂ.ಗಳನ್ನು ನೀಡಿದ್ದಕ್ಕೆ ನಾನು ಸದಾ ಅವರಿಗೆ ಚಿರಋಣಿಯಾಗಿದ್ದೇನೆ."[33]

**ಕಟ್ಟಕ್ಕರೆಯ ಸಂಬಂಧಿ**

ರಾಜರ್ಷಿ ಶಾಹು ಮಹಾರಾಜರ ಮತ್ತು ಡಾ. ಬಾಬಾಸಾಹೇಬ ಅಂಬೇಡ್ಕರರ ನಡುವಣ ಸಂಬಂಧ ಈ ತೆರನಾದದ್ದು. ಇಬ್ಬರು ಅಸಾಮಾನ್ಯ ಪುರುಷರು. ವ್ಯವಸ್ಥೆಯು ಈರ್ವರ ಮೇಲೆ ಜಾತಿ ಮತ್ತು ಮತಗಳ ಮುದ್ರೆಯನ್ನು ಒತ್ತಿದೆ. ಆದರೆ ಇಬ್ಬರೂ ಮಹಾನುಭಾವರು ಇವುಗಳನ್ನು ಮೀರಿಹೋಗಿದ್ದಾರೆ. ಶಾಹುರವರು ಒಂದು ಸಂಸ್ಥಾನದ ರಾಜರಾಗಿದ್ದರು ಮತ್ತು ಅಂಬೇಡ್ಕರರ ವಿದ್ವತ್ತಿನ ಪ್ರಶಸ್ತಿಗಳು ಮತ್ತು ಪಾಂಡಿತ್ಯಗಳು ಅಸಾಧಾರಣವಾದುವು. ಆದರೂ ಕೂಡ ಜಾತಿಯು ಅಂತಹ ಮನುಷ್ಯನಿಗೆ ಅಡ್ಡಿಯಾಗಿತ್ತು. ಬಾಲ್ಯತನದಿಂದ ಜಾತಿಪದ್ಧತಿಯಿಂದ ನರಳಿದ ಅವರು ತಮ್ಮ ಸಹೋದರರ ಸಮಸ್ಯೆಗಳನ್ನು, ನೋವುಗಳನ್ನು ಮತ್ತು ದುಮ್ಮಾನಗಳನ್ನು ಅನುಭವದಿಂದ ಅರಿತಿದ್ದರು. ಅವರಿಗೆ ಒಳ್ಳೆಯದಾಗಲೆಂದು ಇಡೀ ಜೀವನ ಹೋರಾಡಿದರು.

ಶಾಹು ಒಬ್ಬ ಕ್ಷತ್ರಿಯ. ರಾಜ್ಯಾಧಿಕಾರ ವಹಿಸಿಕೊಂಡ ಮೇಲೆ ತನ್ನ ರಾಜ್ಯದಲ್ಲಿ ಮೂಲಭೂತ ಬದಲಾವಣೆಗಳನ್ನು ತಂದರು. ಅವರು ಕೊಲ್ಹಾಪುರವನ್ನು ಸರ್ವೆ ಮಾಡಿಸಿದಾಗ ಪ್ರತಿಯೊಂದು ಕ್ಷೇತ್ರದಲ್ಲಿ ಬ್ರಾಹ್ಮಣರ ಯಜಮಾನಿಕೆ ಹೆಚ್ಚು ಇರುವುದು ಕಂಡುಬಂತು. ಆ ಜಾತಿವ್ಯವಸ್ಥೆಯ ಗಣಿಯಲ್ಲಿ ಶಾಹುರವರು ಸಾಮಾಜಿಕ ಸಮತೋಲನ ತರುವ ಸಲುವಾಗಿ ಕೆಲವು ಆಡಳಿತಾತ್ಮಕ ನಿರ್ಧಾರಗಳನ್ನು ಕೈಗೊಂಡರು. ಅದು ಬ್ರಾಹ್ಮಣೇತರ ಅಧಿಕಾರಿಗಳ ನೇಮಕ ಮಾಡುವುದನ್ನೂ ಒಳಗೊಂಡಿತ್ತು. ಅವರು ಬ್ರಾಹ್ಮಣರ ಯಜಮಾನಿಕೆ (ಎಜಮನಿ) ಯನ್ನು ಮಟ್ಟ ಹಾಕಲು ಇತರೆ ಎಲ್ಲಾ ಜಾತಿಗಳ ಜನರನ್ನು ತೊಡಗಿಸಿದರು. ಅವರು ತನ್ನ ರಾಜ್ಯಕ್ಕಿಂತ ಹೆಚ್ಚಿಗೆ ಜನರ ಲಕ್ಷ್ಯಕ್ಕೆ (ಕೇರ್) ಗಮನ ಕೊಟ್ಟರು. ಆದ್ದರಿಂದಲೇ ಅವರು ಯಾವುದೇ ವೈಯಕ್ತಿಕ ಕಾರಣಗಳಿಲ್ಲದಿದ್ದರೂ ಅಸ್ಪೃಶ್ಯರ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಪ್ರಾರಂಭಿಸಿದರು. ತನ್ನ ರಾಜ್ಯಕ್ಕಿಂತ ಜನರಿಗೆ ಹೆಚ್ಚು ಮಹತ್ವ ನೀಡುವುದು ಈ ಶತಮಾನದ ಒಂದು ಐತಿಹಾಸಿಕ ಘಟನೆಯಾಗಿದೆ. ಅಸ್ಪೃಶ್ಯನು ಸಹ ಒಬ್ಬ ಮನುಷ್ಯನೇ. ಅವನನ್ನು ಇತರರಿಂದ ದೂರವಿಟ್ಟಿರುವುದು ಏಕೆ? ಮಾನವಜೀವಿಗಳಿಂದ ಅವನ್ನು ಬೇರ್ಪಡಿಸಿರುವುದು ಏಕೆ? ಅವನ ಮೇಲೆ ಕೊಲ್ಲುವ ಈ ನಿರ್ಬಂಧಗಳು ಏಕೆ? ಗುಲಾಮಗಿರಿ

ಏಕೆ? ಈ ಪ್ರಶ್ನೆಗಳು ಶಾಹುರವರನ್ನು ಕಾಡಿದವು. ಅಸ್ಪೃಶ್ಯರಿಗೆ ಮಾನವ ಘನತೆಯನ್ನು ಮರಳಿ ನೀಡುವುದಕ್ಕೆ, ಅವರಿಗೆ ಪರಿಪೂರ್ಣ ಸ್ವಾತಂತ್ರ್ಯ ಸಿಗುವಂತೆ ಮಾಡುವ ಸಲುವಾಗಿ ಅವರು ಒಂದು ಆಂದೋಲನವನ್ನೇ ಪ್ರಾರಂಭಿಸಿಬಿಟ್ಟರು.

ವಾಸ್ತವಿಕವಾಗಿ ಶಾಹುರವರು ಅಸ್ಪೃಶ್ಯರನ್ನು ವಿಮೋಚನೆಗೊಳಿಸುವಾಗ ಆಂದೋಲನವನ್ನು ಪ್ರಾರಂಭಿಸಿದರು. ಅವರೇ ಅದನ್ನು ನಡೆಸಿದರು. ಆದರೆ ಅವರು ಅಸ್ಪೃಶ್ಯರು ಪ್ರಗತಿ ಹೊಂದಬೇಕಾದರೆ ತಮ್ಮಿಂದಲೇ ಒಬ್ಬ ನಾಯಕನನ್ನು ರೂಪಿಸಬೇಕೆಂದು ಅವರಿಗೆ ಮನವರಿಕೆ ಮಾಡಿಕೊಟ್ಟರು. ಈ ಅಭಿಪ್ರಾಯವನ್ನು ಸರಳ ಮಾತುಗಳಲ್ಲಿ ಹೇಳುವುದಾದರೆ, ಅವರೇ ಹೇಳುತ್ತಾರೆ: “ ಪ್ರಾಣಿಗಳು ಸಹ ಬೇರೆ ಪ್ರಾಣಿಗಳಿಂದ ತಮ್ಮ ನಾಯಕನನ್ನು ಆಯ್ಕೆ ಮಾಡಿಕೊಂಡಿಲ್ಲ. ಮನುಷ್ಯರು ಏಕೆ ಹಾಗೆ ಮಾಡಬೇಕು? ಜಿಂಕೆಗಳ ಗುಂಪು ಹಂದಿಯ ನೇತೃತ್ವದಲ್ಲಿ ನಡೆದಿಲ್ಲ ಅಥವಾ ಹಂದಿಗಳು ಒಂದು ಜಿಂಕೆಯ ನೇತೃತ್ವದಲ್ಲಿ ನಡೆದಿಲ್ಲ. ಪಾರಿವಾಳಗಳ ಗುಂಪು ಒಂದು ಬಾತುಕೋಳಿಯ ಹಿಂದೆ ಹೋಗುವುದಿಲ್ಲ. ಅಥವಾ ಬಾತುಕೋಳಿಗಳು ಪಾರಿವಾಳದ ಹಿಂದೆ ಹೋಗುವುದಿಲ್ಲ. ಅಥವಾ ಕಾಗೆಗಳು ಬಾತುಕೋಳಿಯ ಹಿಂದೆ ಹೋಗುವುದಿಲ್ಲ. ಹಾಗಾದರೆ ಮಾನವ ಸಮುದಾಯಗಳು ಇತರೆ ಜಾತಿಗಳ ನೇತೃತ್ವದಲ್ಲಿ ಏಕೆ ಹೋಗಬೇಕು? ಏನೇ ಇತಿಮಿತಿಗಳಿದ್ದರೂ ಅವನಿಗೆ ನಾವು ನಮ್ಮ ಜಾತಿಯವನನ್ನೇ ನಾವು ನಾಯಕನನ್ನಾಗಿ ಮಾಡಿಕೊಳ್ಳಬೇಕು.”[34]

ಈ ವಾದವು ಸಾಮಾಜಿಕ ಆತ್ಮಾವಲೋಕನಕ್ಕೆ ಒಂದು ಆಹ್ವಾನಪತ್ರಿಕೆ. ಸರಳತೆಯು ಅವನ ಸೂಕ್ಷ್ಮ ಚಿಂತನೆಯ ಪ್ರಕ್ರಿಯೆಯನ್ನು ಮುಚ್ಚಿಡುತ್ತದೆ. ಅಸ್ಪೃಶ್ಯರು ಡಾ. ಅಂಬೇಡ್ಕರರಲ್ಲಿ ತಮ್ಮ ಜಾತಿಯ ಚಲನಶೀಲ, ಯುವಕ ನಾಯಕನನ್ನು ಪಡೆದರು. ತಮ್ಮ ಜಾತಿಯಿಂದ ಬಂದ ಒಬ್ಬ ನಾಯಕನು ಸ್ಥಾಪಿತ ದಮನಕಾರಿ ಸಾಮಾಜಿಕ ವ್ಯವಸ್ಥೆಯನ್ನು ಮುರಿದರು ಮತ್ತು ಅದನ್ನು ಸಮಾನತೆಯ ನೆಲಗಟ್ಟಿನ ಮೇಲೆ ಪುನರ್‌ರೂಪಿಸಿದರು ಮತ್ತು ಶಾಹುರವರ ಕನಸನ್ನು ನನಸು ಮಾಡುವುದಕ್ಕೆ ಅದನ್ನು ಬದಲಾಯಿಸಿದರು. ಶಾಹುರವರು ಪ್ರಾರಂಭಿಸಿದ ಅಸ್ಪೃಶ್ಯರ ಆಂದೋಲನವನ್ನು ನಂತರ ಅಂಬೇಡ್ಕರರು ಮುಂದಕ್ಕೆ ಕೊಂಡೊಯ್ದರು. ದುರದೃಷ್ಟವಶಾತ್ ಇಂಗ್ಲೆಂಡಿನಿಂದ ಅಂಬೇಡ್ಕರರು ವಾಪಸ್ಸು ಬಂದಾಗ ಸಾಮಾಜಿಕ ಬಿರುಗಾಳಿಯಲ್ಲಿ ಧುಮುಕಿದಾಗ ಶಾಹುರವರು ಬದುಕಿರಲಿಲ್ಲ. ಅವರು ಕೆಲವು ವರ್ಷಗಳವರೆಗೆ ಬದುಕಿದ್ದರೆ ಅಸ್ಪೃಶ್ಯರ ಚಳುವಳಿ ಭಿನ್ನವಾಗಿಯೇ ಕಾಣುತ್ತಿತ್ತು. ಆದರೆ ಅಂಬೇಡ್ಕರರು ಚಳುವಳಿಯನ್ನು ನಿಲ್ಲಿಸಲಿಲ್ಲ. ಶಾಹು ಮುಂಗಾಣಿದ್ದ ತತ್ವಗಳಲ್ಲಿಯೇ ಅಂಬೇಡ್ಕರರು ತಮ್ಮ ಇಡೀ ಜೀವನವನ್ನು ಅಸ್ಪೃಶ್ಯರ ಸೇವೆಗಾಗಿಯೇ ಮುಡುಪಿಟ್ಟಿದ್ದರು. ಹಾಗೆಯೇ ಮಾಡುವಾಗ ಅವರು ಸದಾ ಮಹಾರಾಜರಿಗೆ ಋಣ ತೀರಿಸುತ್ತಿದ್ದರು.

ಶಾಹುರವರು ಅಂಬೇಡ್ಕರರಿಗಾಗಿ ಮಾಡಿದಂತೆಯೇ ಅಂಬೇಡ್ಕರರು ಶಾಹುರವರ ಆದರ್ಶಗಳನ್ನು ಮತ್ತು ಕೃತಿಗಳನ್ನು ಜೀವಂತವಾಗಿಟ್ಟರು. ಮತ್ತು ಶಾಹುರವರ ಹೊಳೆಯುವ ನೆನಪು ಜೀವಂತವಾಗಿಡುವುದಕ್ಕೆ ಗಮನ ಕೊಟ್ಟರು. ನಿಜವಾಗಿಯೂ ನಮ್ಮ ಯುಗದ ಈರ್ವರು ಮಹಾನುಭಾವರ ನಡುವಣ ಮಮತೆಯ ಬಂಧನ ಮುರಿಯುವಂಥದಲ್ಲ.

---

## ಆಧಾರಗ್ರಂಥಗಳು


1. Rajarshi- Ek Vyakti Darshan, Shyam Yedekar, Kolhapur, First edition, p. 137.
2. Dr. Bhimrao Ramji Ambedkar, Vol-1, Changdev Bhagwanrao Khairmode, Fourth Edition,1992, p. 235.
3. Rajarshi Shahu Gaurav Granth edited by P.B. Salunkhe, Second edition,1988, p. 496.
4. Ibid, p. 498.
5. Dr. Bhimrao Ramji Ambedkar, Vol.1, p. 235.
6. Mangaon Parishad 61st Smritimahotsav special issue-1982, Editor Ramesh Dhavare; Mee ani Mangaon Parishad, Narration by Gangadgar Yashwant Pol.
7. Ibid, Narration by Prabhu Yallappa Kambale.
8. Ibid, Narration by Gangadhar Yashwant Pol.
9. Rajarshi Shahu Chhatrapati Yanchi Bhashane, edited by Shyam Yedekar, First edition, 1971, p. 61.
10. Bahishkrit Bharat and Mooknayak, Mumbai, April 10, 1920, p. 379.
11. Rajarshi Shahu Chhatrapati, Dhananjay Keer, Second edition, 1992, p. 442.
12. Dr. Babasaheb Ambedkar-anche Mooknayak Pakshikatil Durmil Agralekh, Raghuvanshi Prakashan, Pune, p. 32.
13. Ibid, p. 35.
14. Rajarshi Shahi Chhatrapati, p. 448.
15. Ibid, p. 448.
16. Rajarshi Ek Vyaktidarshan, p. 141.
17. Patravyavaharatun Dr. Babasaheb Ambedkar, Editor Vijay Gangaram Survade, Tathaghat Prakashan, Kalyan,1986, p. 20.
18. Dr. Babasaheb Ambedkaranche Mooknayak Pakshikatil Durmil Agralekh, p. 32.
19. Dr. Bhimrao Ramji Ambedkar, Vol-2, Changdev Bhagwanrao Khairmode, Pune, Second Edition, 1991, p. 12.

20. Rajarshi Shahu Chhatrapati, p. 436.
21. Dr. Bhimrao Ramji Ambedkar, Vol-2, p. 13.
22. Ibid.
23. Rajarshi Shahu Chhatrapati, p. 450.
24. Dr. Bhimrao Ramji Ambedkar, Vol-2, p. 13.
25. Rajarshi Shahu-Ek Drushtikshep, Dr. jaising Pawar, Manjushri Prakashan, Kolhapur, p. 25.
26. Rajarshi Shahu Chhatrapati, p. 518.
27. Rajarshi Shahu Chhatrapati Yanchi Bhashane, p. 120.
28. Rajarshi Shahu Chhatrapati, p. 489.
29. Ibid, p. 489.
30. Ibid, p. 506.
31. Ibid, p. 528.
32. Dr. Bhimrao Ramji Ambedkar, Vol-2, p. 238.
33. Janata Patratil Lekh Dr. Babasaheb Ambedkar, Editor Arun Kambale, Popular Prakashan, Mumbai, First edition, 1992, p. 142.
34. Rajarshi Ek Vyaktidarshan, p. 138.

---

೨೦

# ಶಾಹು: ಆರ್ಥಿಕ ವಿಚಾರಗಳು ಮತ್ತು ಧೋರಣೆಗಳು

**– ಕಾಮ್ರೇಡ್ ಗೋವಿಂದ್ ಪನ್ಸಾರೆ**

*ಸಾಮಾಜಿಕ ಕಾರ್ಯಕರ್ತ*

ರಾಜರ್ಷಿ ಶಾಹುರವರ ವರ್ಚಸ್ಸು ಸಮಾಜದಲ್ಲಿ ಒಬ್ಬ ಸಮಾಜ ಸುಧಾರಕ ಎಂದೇ ಪ್ರಚಲಿತವಾಗಿತ್ತು. ಆದರೆ ಇತರೆ ಕ್ಷೇತ್ರಗಳಲ್ಲಿನ ಅವರ ಪ್ರಗತಿಪರ ದೃಷ್ಟಿಕೋನವನ್ನು ಇದು ನಿಸ್ತೇಜಗೊಳಿಸಿತು. ಒಬ್ಬ ಸಮಾಜ ಸುಧಾರಕ ಅಥವಾ ಒಬ್ಬ ಪ್ರಗತಿಪರನು ಬೇರೆ ವಲಯದಲ್ಲಿ ಕೂಡ ಅದೇ ರೀತಿಯ ಸುಧಾರಕ ವಿಧಾನವನ್ನೇ ಅನುಸರಿಸುತ್ತಾನೆ. ನಾಯಕರು ಒಂದು ವಿಧದಲ್ಲಿ ಪ್ರಗತಿಪರರಾಗಿದ್ದರೆ, ಬೇರೆ ವಲಯಗಳಲ್ಲಿ ಅವರು ನಾಯಕರಾಗಿರುವುದನ್ನು ಇತಿಹಾಸ ಕಂಡಿದೆ. ಹಾಗೆ ಆಗಿರುವುದಕ್ಕೆ ಅವರದೇ ಆದ ಸಮರ್ಥನೆಗಳಿರಬಹುದು. ಒಂದು ಕ್ಷೇತ್ರದಲ್ಲಿ ಒಬ್ಬ ವ್ಯಕ್ತಿಯ ಪ್ರಗತಿಪರತೆಯನ್ನು ಒಂದು ಕ್ಷೇತ್ರದ ಕೃತಿ(ಕಾರ್ಯಚಟುವಟಿಕೆ)ಗಳಿಂದಲೇ ತೀರ್ಮಾನಿಸುವುದು ಸರಿಯಲ್ಲ. ಒಟ್ಟರ್ಥದಲ್ಲಿ ವ್ಯಕ್ತಿಯ ವಿಧಾನ(ಗುರಿ)ವನ್ನು ನೋಡುವುದು ಉತ್ತಮ.

ಸ್ವರಾಜ್ಯದ ಬಗೆಗಿನ ಶಾಹುರವರ ನಿಲುವನ್ನು ಕುರಿತು ಹೆಚ್ಚಿನದನ್ನು ಹೇಳಲಾಗಿದೆ ಮತ್ತು ಈ ವಿಷಯದ ಬಗ್ಗೆ ಹೆಚ್ಚು ಚರ್ಚೆಯಾದರೆ ಉತ್ತಮ. ಅಭಿಪ್ರಾಯಗಳು ಮತ್ತು ಪ್ರತಿ–ಅಭಿಪ್ರಾಯಗಳು ಮೂಡಿಬಂದರೆ ಉತ್ತಮ ಮತ್ತು ಸದಾ ಸ್ವಾಗತಿಸಬೇಕು. ಅಂಥ ಚರ್ಚೆಗಳನ್ನು ಆಗದಂತೆ ಮಾಡುವುದು ಹಾನಿಕರವಾಗುತ್ತದೆ. ಕೆಲವು ವ್ಯಕ್ತಿಗಳು ಶಾಹುರವರ ಖಾಸಗಿ ಜೀವನ ಚರ್ಚಿಸುವುದಕ್ಕೆ ಹೆಚ್ಚು ಆಸಕ್ತಿ ತೋರಿದರೂ ಅದು ಅವರ ಅಭಿರುಚಿ ಮತ್ತು ಬುದ್ಧಿಮಟ್ಟವನ್ನು ತೋರಿಸುತ್ತದೆ.

ಆದರೆ ಶಾಹುರವರ ಆರ್ಥಿಕ ಧೋರಣೆ ಮತ್ತು ಆರ್ಥಿಕ ಚಿಂತನೆಗಳ ಬಗ್ಗೆ ಸಾಕಷ್ಟು ಚರ್ಚೆಯಾಗಿಲ್ಲ. ಈ ಮೊದಲು ಕೆಲವರಾದ ಅವರ ಜೀವನ ಚರಿತ್ರೆಕಾರರು ಮತ್ತು ಇತ್ತೀಚಿನ ದಿನಗಳಲ್ಲಿ ಕೂಡ ಆ ವಿಷಯವನ್ನು ಭಾಗಶಃ ತಿಳಿಸಿದ್ದಾರೆ. ಎರಡು ಸಂಶೋಧನೆಯ ಪುಸ್ತಕಗಳು ಶಾಹುರವರ ಆರ್ಥಿಕ ಧೋರಣೆಗಳ ಬಗ್ಗೆ ಗಂಭೀರವಾಗಿ ವಿಷಯಗಳನ್ನು ಮಂಡಿಸಿವೆ. ಅವುಗಳನ್ನು ೧೯೭೪ರಲ್ಲಿ ಪ್ರಕಟಿಸಲಾಗಿದೆ. ಅವು ಸಂಶೋಧಕರಿಗೆ ಸಾಕಷ್ಟು ಪ್ರಯೋಜನಕಾರಿಯಾಗಿವೆ. ಒಂದು ಪುಸ್ತಕದ ಹೆಸರು 'ಶ್ರೀ ಶಾಹು ಛತ್ರಪತಿಂಚೆ ಅರ್ಥಕರಣ', ಅದರಕರ್ತೃ ಪ್ರೊ. ಮೀನಾ ಕುಲಕರ್ಣಿ. ಡಾ. ವಿ. ಬಿ. ಘೂಗೆ ಬರೆದ 'ಛತ್ರಪತಿ ಶಾಹುಂಚೆ ಸಮಾಜವಾದಿ ಆರ್ಥಿಕ ಧೋರಣ್' ಎಂಬುದು ಮತ್ತೊಂದು ಪುಸ್ತಕ. ಈ ವಿಷಯದ ಬಗ್ಗೆ ಹೆಚ್ಚು ಚರ್ಚೆ ಮತ್ತು ಬರವಣಿಗೆಗಳು ಆಗಬೇಕಾಗಿದೆ.

## ಶಾಹುರವರ ಕಾಲ

ಒಬ್ಬ ವ್ಯಕ್ತಿಯ ಅಥವಾ ಘಟನೆಯ ಮೌಲ್ಯಮಾಪನ ಮಾಡುವಾಗ ಅವರ ಸಂಬಂಧಪಟ್ಟ ಕಾಲವನ್ನು ಪರಿಗಣಿಸುವುದು ಬಹಳ ಮುಖ್ಯವಾಗುತ್ತದೆ. ಇಲ್ಲದಿದ್ದರೆ, ೧೯೧೫ರ ಕಾಲದ ವ್ಯಕ್ತಿಯನ್ನು ೧೯೯೮ರ ಕಾಲದ ಅಳತೆಗೋಲಿನಿಂದ ಮೌಲ್ಯಮಾಪನ ಮಾಡುವುದರಿಂದ ಒಂದು ವಿಕೃತಚಿತ್ರ ಮೂಡಿಬರುತ್ತದೆ. ಕೆಲವು ಪರಿಣತರು ಮೌಲ್ಯಮಾಪನದ ಈ ಮೂಲಭೂತ ತತ್ವವನ್ನೇ ಕಡೆಗಣಿಸುತ್ತಾರೆ ಮತ್ತು ವಿಕೃತ ಚಿತ್ರವನ್ನು ಮಂಡಿಸುತ್ತಾರೆ. ಸ್ವರಾಜ್ಯದ ಬಗ್ಗೆ ಶಾಹುರವರ ನಿಲುವನ್ನು ಪರಿಗಣಿಸುವಾಗ ಹಲವರು ಅದೇ ತಪ್ಪನ್ನು ಮಾಡಿದ್ದಾರೆ. ಕೆಲವರು ಸಂಪೂರ್ಣ ಸುಳ್ಳುಗಳ ಮತ್ತು ಕುಚೋದ್ಯಗಳ ಹಾದಿಯನ್ನು ಹಿಡಿಯುತ್ತಾರೆ.

ಶಾಹು ಮಹಾರಾಜರು ಜೂನ್, ೨೬, ೧೮೭೪ರಲ್ಲಿ ಜನಿಸಿದರು. ಮಾರ್ಚ್ ೧೭, ೧೮೮೪ರಲ್ಲಿ ೧೦ ವರ್ಷದ ಹುಡುಗನಾಗಿರುವಾಗ ಅವರು ಕೊಲ್ಹಾಪುರದ ದತ್ತುಕ ಪುತ್ರನಾಗಿ ಸಿಂಹಾಸನವನ್ನೇರಿದರು. ಏಪ್ರಿಲ್ ೨, ೧೮೯೪ರಲ್ಲಿ ಅವರು ನಿಜವಾದ ಆಡಳಿತದ ಚುಕ್ಕಾಣಿಯನ್ನು ಹಿಡಿದರು. ಅವರು ಮೇ ೬, ೧೯೨೨ರಲ್ಲಿ ಮುಂಬಯಿಯಲ್ಲಿ ನಿಧನ ಹೊಂದಿದರು. ಅವರು ಒಟ್ಟು ೨೮ ವರ್ಷಗಳ ಕಾಲ ಆಡಳಿತ ನಡೆಸಿದರು.

ಭಾರತದ ರಾಷ್ಟ್ರೀಯ ಕಾಂಗ್ರೆಸ್ಸು ೧೮೮೫ರಲ್ಲಿ ಜನ್ಮ ತಾಳಿತು. ದಾದಾಭಾಯಿ ನವರೋಜಿ ಬಾರತದ ಬಡತನದ ಬಗ್ಗೆ ಪರಿಪೂರ್ಣವಾಗಿ ಅಧ್ಯಯನ ಮಾಡಿ ಸ್ವರಾಜ್ಯ ಮತ್ತು ಬಡತನಗಳ ನಡುವಣ ಪರಸ್ಪರ ಸಂಬಂಧವನ್ನು ಮಂಡಿಸಿದರು. ಮಹಾತ್ಮ ಗಾಂಧಿಯವರು ಇನ್ನೂ 'ಮಹಾತ್ಮ' ಅಥವಾ 'ರಾಷ್ಟ್ರಪಿತ' ಎಂಬ ಗೌರವ ಪಡೆಯಬೇಕಾಗಿದ್ದ ಅವರ ಆಗಿನ ಪಾತ್ರವೇನು? ಗಾಂಧಿಯವರು ಜನವರಿ ೩, ೧೯೨೨ರಲ್ಲಿ 'ಯಂಗ್ ಇಂಡಿಯಾ' ಪತ್ರಿಕೆಯ ಸಂಚಿಕೆಯಲ್ಲಿ ಬರೆಯುತ್ತಾರೆ: "ಈ ಸಂದರ್ಭದಲ್ಲಿ ಸಂಪೂರ್ಣ ಸ್ವಾತಂತ್ರ್ಯದ ಬಗ್ಗೆ ಒತ್ತಾಯಿಸುವುದು ಕಾನೂನುಬಾಹಿರ. ಅದು ಅನವಶ್ಯಕವಾಗಿ ದ್ವೇಷವನ್ನು ಹುಟ್ಟುಹಾಕುತ್ತಿದೆ. ಇದು ದೇವರ ಅಸ್ತಿತ್ವವಿಲ್ಲ ಎಂದು ಹೇಳುವುದಕ್ಕೆ ಸಮಾನವಾಗಿದೆ."

ಮತ್ತೊಬ್ಬ ಸ್ವಾತಂತ್ರ್ಯ ಹೋರಾಟದ ಭಾರತದ ನಾಯಕ ಜವಾಹರ್‌ಲಾಲ್ ನೆಹರೂ ತನ್ನನ್ನು "ಸಂಪೂರ್ಣ ಸ್ವಾತಂತ್ರ್ಯ" ದೊಂದಿಗೆ ತಳುಕು ಹಾಕುವುದನ್ನು ೧೯೨೧ರ ಠರಾವಿನಲ್ಲಿ ನಿರಾಕರಿಸುತ್ತಾರೆ. ೧೯೨೧ರಲ್ಲಿ ಅಹಮದಾಬಾದಿನಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ಸಿನ ಸಮ್ಮೇಳನದಲ್ಲಿ ಹಜರತ್ ಮೊಹಾನಿ ಅವರು ನಿರ್ಣಯದ ಮೂಲಕ "ಸಂಪೂರ್ಣ ಸ್ವಾತಂತ್ರ್ಯ ನಮ್ಮ ಗುರಿ" ಎಂದು ಘೋಷಿಸಿದರು. ಗಾಂಧಿ ನಿರ್ಣಯವನ್ನು ವಿರೋಧಿಸಿದರೆ, ಪಂಡಿತ ನೆಹರು ಸಹ ಅದಕ್ಕೆ ಭಾಗಿಯಾಗುವುದಕ್ಕೆ ನಿರಾಕರಿಸಿದರು. ಆದರೆ ಈ ಇಬ್ಬರು ನಾಯಕರು ಆಗ ಸ್ವರಾಜ್ಯದ ಬಗ್ಗೆ ಈ ನಿಲುವನ್ನು ತಾಳಿದರು. ಆದರೆ ಅವರನ್ನು ಸ್ವರಾಜ್ಯದ ಟೀಕಾಕಾರರೆಂದು ಹಣೆಪಟ್ಟಿ ಹಚ್ಚಿ ಕರೆಯಲಿಲ್ಲ. ಅವರ ಅಭಿಪ್ರಾಯವನ್ನು ಸರಿಯಾದ ದೃಷ್ಟಿಕೋನದಿಂದ ನೋಡಬೇಕಾಗಿದೆ.

## ದೃಶ್ಯ ಮತ್ತೆಲ್ಲೋ

ಕೆಲವು ರಾಜಸಂಸ್ಥಾನದ ಟ್ರಾವಂಕೂರ್, ಕೊಚ್ಚಿನ್, ಮೈಸೂರು ಮತ್ತು ಬರೋಡಗಳನ್ನು ಬಿಟ್ಟು ಇತರೆ ರಾಜಸಂಸ್ಥಾನಗಳು ತಮ್ಮ ಪ್ರಜೆಗಳ ಬಗ್ಗೆ ಗಮನವೇ ನೀಡಲಿಲ್ಲ. ಅವುಗಳು ಪ್ರಜೆಗಳು ತಮ್ಮ

ಸೇವೆಗಾಗಿ ಇದ್ದಾರೆಂದು ವರ್ತಿಸಿದರು. ಅವರು ಭೋಗಜೀವನದಲ್ಲಿ ಲೋಲುಪ್ತರಾಗಿದ್ದರು ಮತ್ತು ಹಣವನ್ನು ಲೂಟಿಮಾಡಿಬಿಟ್ಟವು. ಸದಾ ಆಳುವವರನ್ನು ಓಲೈಸಿದವು. ಅವುಗಳ ಜೀವನ ಆತ್ಮ-ಗೌರವವಿಲ್ಲದ ಗುಲಾಮಿ ಜೀವನವಾಗಿತ್ತು.

ಬ್ರಿಟಿಷರು ಭಾರತೀಯ ಜನರಿಗೆ ಒಳ್ಳೆಯದನ್ನು ಮಾಡಬೇಕೆಂಬುದರಲ್ಲಿ ಆಸಕ್ತರಾಗಿರಲಿಲ್ಲ. ಅವರ ನೀತಿ ಮತ್ತು ಕಾರ್ಯಕ್ರಮ ಭಾರತವನ್ನು ಶೋಷಣೆ ಮಾಡುವುದಾಗಿತ್ತು. ರಷಿಯಾ ೧೯೧೭ರ ಕೊನೆಗೆ ಒಂದು ಕಾರ್ಮಿಕ ಕ್ರಾಂತಿಯನ್ನು ಕಂಡಿತು. ಹೊಸ ಸೋವಿಯತ್ ಯೂನಿಯನ್ ಸಾಮ್ರಾಜ್ಯಶಾಹಿ ರಾಷ್ಟ್ರಗಳ ದಾಳಿಗಳನ್ನು ಪ್ರತಿಭಟಿಸುವುದರಲ್ಲಿ ನಿರತವಾಗಿತ್ತು ಮತ್ತು ಕಾರ್ಮಿಕರ ಆಡಳಿತವನ್ನು ಸಂರಕ್ಷಿಸುವುದರಲ್ಲಿ ಮಗ್ನವಾಗಿತ್ತು. ಕಾರ್ಮಿಕ ವರ್ಗ ಮತ್ತು ರೈತರ ಆಸಕ್ತಿಗಳನ್ನು ಸಂರಕ್ಷಿಸುವ ಹೊಸ ನೀತಿಯನ್ನು ಇನ್ನೂ ಜಾರಿಗೊಳಿಸಬೇಕಾಗಿತ್ತು ಮತ್ತು ಅದರ ಪ್ರಭಾವವನ್ನು ಜಗತ್ತು ಇನ್ನೂ ಭಾವಿಸಬೇಕಾಗಿತ್ತು. ಈ ಅಪವಾದವನ್ನು ಬಿಟ್ಟರೆ, ಜಗತ್ತಿನ ಇತರೆ ಆಡಳಿತಗಾರರ ನಿಲುವೇನಾಗಿತ್ತು?

ಅವರ ಸಿದ್ಧಾಂತವು ಆಂತರಿಕ ಕಾನೂನು ಮತ್ತು ಸುವ್ಯವಸ್ಥೆಯ ರಕ್ಷಣೆ ಮತ್ತು ಕಾಪಾಡುವುದು ರಾಜರ (ಆಡಳಿತಗಾರರ) ಹೊಣೆಯಾಗಿತ್ತು. ಮತ್ತು ಸರಕಾರ ಆರ್ಥಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದೆ ಇರುವುದು ಆಗಿತ್ತು. ಸರಕಾರ ತೆರಿಗೆಗಳನ್ನು ಮಾತ್ರ ಸಂಗ್ರಹಿಸಬೇಕು ಮತ್ತು ರಕ್ಷಣೆ ಮತ್ತು ಕಾನೂನು ಮತ್ತು ಸುವ್ಯವಸ್ಥೆಗಳಿಗಾಗಿ ಖರ್ಚು ಮಾಡಬೇಕೆಂದು ಅವು ಪ್ರತಿಪಾದಿಸುತ್ತಿದ್ದವು. ಇತರೆ ಆರ್ಥಿಕ ವ್ಯವಹಾರಗಳನ್ನು ಜನರಿಗೇ ಬಿಟ್ಟುಕೊಡಲಾಗಿತ್ತು. ಜನರನ್ನು ಸುಖಿಗಳನ್ನಾಗಿಡುವುದು ಅಥವಾ ಪ್ರಗತಿ ಸಾಧಿಸಲು ಅವರಿಗೆ ಸಹಾಯ ಮಾಡುವುದು ಅಥವಾ ಆರ್ಥಿಕ ಅಸಮಾನತೆಗಳನ್ನು ಕಿತ್ತುಹಾಕುವುದು ಒಂದು ಸರಕಾರದ ಹೊಣೆಯಾಗಿರಲಿಲ್ಲವೆಂಬುದೇ ಪರಮ ಪರಿಕಲ್ಪನೆಯಾಗಿತ್ತು.

"ಮುಕ್ತ ಅರ್ಥವ್ಯವಸ್ಥೆ" ಮತ್ತು "ಮುಕ್ತ ಪೈಪೋಟಿ" ಗಳು ಆರ್ಥಿಕ ಧೋರಣೆಗಳ ಮುಖ್ಯ ತತ್ವವಾಗಿತ್ತು. ಸಮರ್ಥರು ಉಳಿಯುತ್ತಾರೆ ಮತ್ತು ಅಸಮರ್ಥರು (ದುರ್ಬಲರು) ಅಳಿಯುತ್ತಾರೆ ಅಥವಾ ಮಿಗಿಲಾಗಿ ಅಳಿಯಲಿ ಎಂಬುದು ಪ್ರಚಲಿತವಾಗಿರುವ ಆರ್ಥಿಕ ತತ್ವವಾಗಿದೆ.

ನಾವು ಈ ಹಿನ್ನೆಲೆಯಲ್ಲಿ ರಾಜರ್ಷಿ ಶಾಹುರವರ ಆರ್ಥಿಕ ನೀತಿಯನ್ನು ಪರಿಶೀಲಿಸಬೇಕು.

## ವಾಸ್ತವ ಸ್ಥಿತಿ

ನಾನು ಇಲ್ಲಿ ಕೆಲವು ಸುಸಂಗತವಾದ ಅಂಶಗಳನ್ನು ಪರಿಗಣಿಸಬೇಕಾಗಿದೆ. ಶಾಹು ಆಳಿದ ಭೂಮಿ ಹೇಗಿತ್ತು. ಅದರ ಸಾಮರ್ಥ್ಯಗಳು ಏನಾಗಿದ್ದವು? ಭೂಮಿ ಮತ್ತು ಜನರ ಇತಿಮಿತಿಗಳೇನು?

ಶಾಹುರವರ ಸಂಸ್ಥಾನವು ಈಗಿರುವ ಕೊಲ್ಹಾಪುರ ಜಿಲ್ಲೆಗಿಂತ ಸ್ವಲ್ಪ ಹೆಚ್ಚಿಗೆ ಹರಡಿತ್ತು. ಕೊಲ್ಹಾಪುರ ಜಲ್ಲೆಯ ವಿಸ್ತೀರ್ಣ ೩,೧೮೮ ಚದರ ಮೈಲಿಗಳಿದ್ದರೆ ಅವರ ಆಡಳಿತದಲ್ಲಿದ್ದ ಒಟ್ಟು ವಿಸ್ತೀರ್ಣ ೩,೨೧೭ ಚದರ ಮೈಲಿಗಳು. ಈಗ ಕರ್ನಾಟಕದಲ್ಲಿರುವ ಕಾಟ್‌ಕೋಳ್ ಮತ್ತು ರಾಯಬಾಗ್‌ಗಳ ಪದೇಶಗಳು ಆಗ ಶಾಹು ರಾಜ್ಯದ ಭಾಗವಾಗಿದ್ದವು. ಜನಸಂಖ್ಯೆ ೮.೫ ಲಕ್ಷ ಮತ್ತು ೯.೫ ಲಕ್ಷದ ನಡುವೆ ಇತ್ತು. ಸಾಕ್ಷರತೆ ೧೮೯೩-೯೪ರಲ್ಲಿ ಶೇಕಡ ೨.೮ರಷ್ಟಿತ್ತು. ಅದು ೧೯೨೧-೨೨ ರಲ್ಲಿ ಶೇಕಡ ೪.೪ರಷ್ಟಕ್ಕೆ ಏರಿತ್ತು.

## ಕೃಷಿ

ಕೃಷಿ ಪ್ರಧಾನ ಕಸುಬಾಗಿತ್ತು. ೧೮೯೩-೯೪ರಲ್ಲಿ ೧೨,೯೪,೧೧೬ ಎಕರೆ ಭೂಮಿ ಕೃಷಿಗೊಳಗಾಗಿತ್ತು. ೧೯೨೧-೨೨ರಲ್ಲಿ ಅದು ೧೪,೨೬,೫೩೫ ಎಕರೆಗಳಿಗೆ ಏರಿತ್ತು. ಸುಮಾರು ಶೇಕಡ ೧೦ರಷ್ಟು ಕೃಷಿ ಭೂಮಿ ಹೆಚ್ಚಾಗಿತ್ತು.

ಭೂ ಹಿಡುವಳಿಗಳ ವೈಚಿತ್ರ್ಯ ಜನರು ಚಿಕ್ಕಚಿಕ್ಕ ಭೂ ಹಿಡುವಳಿಗಳನ್ನು ಹೊಂದಿದ್ದರು. ಸಣ್ಣ ಭೂ ಹಿಡುವಳಿಗಳು ಸಾಕಷ್ಟು ಫಸಲನ್ನು ಬೆಳೆಯಲಾರವು ಮತ್ತು ರೈತರು ದೊಡ್ಡ ಭೂ ಹಿಡುವಳಿಗಳನ್ನು ಹೊಂದಿರಬೇಕೆಂದು ಶಾಹು ಅಭಿಪ್ರಾಯಪಟ್ಟಿದ್ದರು. ಶಾಹುರವರ ಮಾರ್ಚ್ ೨೨, ೧೯೨೦ರಲ್ಲಿ ಮನ್‌ಗಾವ್‌ನಲ್ಲಿ ನಡೆದ ಸಮ್ಮೇಳನದಲ್ಲಿ ಶಾಹುರವರು ಒಂದು ಮಹರ್ ಸಮುದಾಯವನ್ನು ಕುರಿತು ಮಾತನಾಡಿದರು. ಅವರು ಸಭೆಗೆ ಹೇಳಿದರು: "ನಿಮ್ಮ ಭೂಮಿಯ ಪಾಲು ಪ್ರತಿಯೊಬ್ಬರೂ ೧೦ ಎಕರೆ ಭೂಮಿಯನ್ನು ಹೊಂದಿರಬೇಕು. ಭೂಮಿಯಿಂದ ಬಂದ ಆದಾಯವನ್ನು ನಿಮ್ಮಲ್ಲಿ ಹಿರಿಯರೊಬ್ಬರ ಕೈಗೆ ನೀಡಬೇಕು. ಆಗ ಅದು ನಿಮ್ಮನ್ನು ಹಸಿವಿನಿಂದ ಪಾರು ಮಾಡುತ್ತದೆ."

೧೯೧೩ರಲ್ಲಿ ಒಂದು ಕಾನೂನನ್ನು ಅವರು ಮಾಡಿದರು. ಅದರಿಂದ ಎಲ್ಲಾ ಇನಾಮ್ ಭೂಮಿಗಳು ಅವಿಭಾಜನೀಯವಾದವು. ಅವುಗಳನ್ನು ಭಾಗ ಮಾಡುವಂತಿಲ್ಲ. ಕ್ಷತ್ರಿಯರು ಆಗ ಕೃಷಿ ಮಾಡುವುದು ತಮ್ಮ ಘನತೆಗೆ ಕುಂದು ಎಂದು ಭಾವಿಸಿದರು. ಶಾಹು ಒಮ್ಮೆ ಹೇಳಿದರು: 'ಕೃಷಿಯಿಂದ ಎರಡು ಪ್ರಯೋಜನಗಳಿವೆ. ಅದು ವ್ಯಕ್ತಿಯನ್ನು ಶ್ರೀಮಂತನನ್ನಾಗಿ ಮಾಡುತ್ತದೆ ಮತ್ತು ಅದು ಮಾನವ ಜನಾಂಗದ ಹಿತಾಸಕ್ತಿಯ ಸಲುವಾಗಿದೆ. ಕೃಷಿ ಮಾಡುವುದು ಕ್ಷತ್ರಿಯರಿಗೆ ಹೀನಾಯವಲ್ಲ ವ್ಯಕ್ತಿಗಳು ಯಾವುದೇ ಕೆಲಸ ಮಾಡಿದರೂ ಅದು ಮಾನವನನ್ನು ಪ್ರಗತಿಗೊಳಿಸುತ್ತದೆ. ಸಮಾಜದ ಇಡೀ ಕಲ್ಯಾಣವನ್ನು ಕೀಳು ಅಥವಾ ಶೂದ್ರ ಎಂದು ಪರಿಗಣಿಸಲಾಗದು." ಇದು ಸ್ಪಷ್ಟವಾಗಿ ಶ್ರಮದ ಘನತೆಯ ಬಗ್ಗೆ ಅವರಿಗಿದ್ದ ವಿಚಾರವನ್ನು ತಿಳಿಸುತ್ತದೆ.

## ನೀರಾವರಿ

ಕೊಲ್ಹಾಪುರ ಸಂಸ್ಥಾನವು ಮಹಾರಾಷ್ಟ್ರದಲ್ಲಿ ಇತರೆ ಹಲವು ಪ್ರದೇಶಗಳ ಹಾಗೆ ಶಾಹುರವರ ಕಾಲದಲ್ಲಿ ಬರಪೀಡಿತ ಪ್ರದೇಶವಾಗಿತ್ತು. ಬರ-ಪೀಡಿತ ಪ್ರದೇಶಗಳಿಗೆ ಸಹಾಯಮಾಡುವುದು ಅವರ ಮುಖ್ಯ ಕಾಳಜಿಯಾಗಿತ್ತು. ಕೃಷಿಗೆ ಸಾಕಷ್ಟು ನೀರನ್ನು ಒದಗಿಸುವುದು ಬರಪರಿಸ್ಥಿತಿಯನ್ನು ನಿವಾರಣೆ ಮಾಡುವುದಕ್ಕೆ ಸೂಕ್ತಕ್ರಮವೆಂದು ಅವರು ಚೆನ್ನಾಗಿ ಅರಿತಿದ್ದರು. ಸಂಸ್ಥಾನದಲ್ಲಿ ನದಿಗಳು, ಬಾವಿಗಳು ಮತ್ತು ಕೆರೆಗಳಿದ್ದವು. ೧೯೧೫-೧೬ನೇ ಸಾಲಿನ ವರದಿಯು ನದಿಗಳು ೩೯,೭೮೩ ಎಕರೆಗಳಿಗೆ ನೀರು ಒದಗಿಸಿದರೆ, ಬಾವಿಗಳು ಮತ್ತು ಕೆರೆಗಳು ಕ್ರಮವಾಗಿ ೩೯,೮೪೫ ಎಕರೆಗಳಿಗೆ ಮತ್ತು ೨೩೨ ಎಕರೆಗಳಿಗೆ ನೀರಾವರಿಯನ್ನು ಒದಗಿಸಿದೆಯೆಂದು ತಿಳಿಸುತ್ತದೆ. ಅಂದರೆ ಒಟ್ಟು ೭೯,೮೬೦ ಎಕರೆ ಭೂಮಿಗೆ ನೀರನ್ನು ಒದಗಿಸಲಾಗಿತ್ತು. ಶಾಹುರವರು ಬದುವು ಮತ್ತು ಕೆರೆಗಳ ನಿರ್ಮಾಣವನ್ನು ಪ್ರೋತ್ಸಾಹಿಸಿದರು ಮತ್ತು ಧನಸಹಾಯ ಮಾಡಿದರು.

## ರಾಧಾನಗರಿ ಅಣೆಕಟ್ಟು

ಶಾಹುರವರು ರೂಪಿಸಿದ ರಾಧಾನಗರಿ ಅಣೆಕಟ್ಟೆಯ ಯೋಜನೆ ಮತ್ತು ಕಾರ್ಯನಿರ್ವಹಣೆಯನ್ನು

ಸೀಮಿತ ಹಣಕಾಸಿನಲ್ಲಿ ಮತ್ತು ತಾಂತ್ರಿಕ ಸಂಪನ್ಮೂಲಗಳಲ್ಲಿ ಕಾರ್ಯಗತಗೊಳಿಸಿದ್ದಕ್ಕೆ ಅವರ ಆಕಾಂಕ್ಷೆ ಮತ್ತು ದೂರದೃಷ್ಟಿಗೆ ಸಾಕ್ಷಿಯಾಗಿದೆ.

ಅಣೆಕಟ್ಟಿನ ಪೂರ್ವಭಾವಿ ಯೋಜನೆ ೧೯೦೭ರಲ್ಲಿ ಪ್ರಾರಂಭವಾಯಿತು. ನಿಜವಾಗಿ ಕಾರ್ಯಾರಂಭವಾದದ್ದು ನವೆಂಬರ್ ೧೯೦೯. ಮಹಾರಾಣಿ ಲಕ್ಷ್ಮಿಬಾಯಿಯವರೇ ತಮ್ಮ ಹೆಸರಿನ ಅಣೆಕಟ್ಟಿನ ಕೆಲಸವನ್ನು ನವೆಂಬರ್ ೧೯೦೯ರಲ್ಲಿ ಪ್ರಾರಂಭಿಸಿದರು. ನಿರ್ಮಾಣವು ಹಲವಾರು ಸಮಸ್ಯೆಗಳನ್ನು ಎದುರಿಸಿತು. ಹಣದ ಕೊರತೆಯಿತ್ತು. ನಿರ್ಮಾಣದ ಬಾಳಿಕೆಯ ಬಗ್ಗೆ ಅನುಮಾನಗಳನ್ನು ವ್ಯಕ್ತಪಡಿಸಲಾಯಿತು. ಹಲವಾರು ನಿರ್ಬಂಧಗಳಿಂದ ಹಲವಾರು ಸಂದರ್ಭಗಳಲ್ಲಿ ನಿರ್ಮಾಣದ ಕೆಲಸಗಳನ್ನು ನಿಲ್ಲಿಸಲಾಯಿತು; ಆದರೆ ಶಾಹು ಪಟ್ಟುಹಿಡಿದರು. ಬಹಳಷ್ಟು ಕೆಲಸ ಮಾಡಿದ್ದರೂ ಅವರು ಬದುಕಿರುವಾಗ ಅಣೆಕಟ್ಟು ಪೂರ್ತಿ ಆಗಿರಲಿಲ್ಲ. ಅದು ರಾಜಾರಾಮ್ ಮಹಾರಾಜರ ಕಾಲಾವಧಿಯಲ್ಲಿ ಮುಗಿಯಿತು. ವಿದ್ಯುತ್ ಉತ್ಪಾದನಾ ಘಟಕವನ್ನು ನಂತರ ಸ್ಥಾಪಿಸಲಾಯಿತು.

ಶಾಹು ಮಹಾರಾಜರು ಕೊಲ್ಹಾಪುರದಲ್ಲಿ ಹಸಿರುಕ್ರಾಂತಿಯ ಹರಿಕಾರರಾಗಿದ್ದರು. ಆ ಪ್ರದೇಶದ ಸುಸ್ಥಿರ ಕೃಷಿಯ ಅಭಿವೃದ್ಧಿಯು ಶಾಹುರವರ ಬಳುವಳಿಯಾಗಿತ್ತು. ಶಾಹುರವರ ಅಂತಹ ಮುನ್ನೋಟದ ಮನೋಭಾವ ಸಮಕಾಲೀನ ಆಡಳಿತಗಾರರಲ್ಲಿ ಸಿಗುವುದು ಅಪರೂಪ. ಆದ್ದರಿಂದಲೇ ಶಾಹುರವರನ್ನು ಒಬ್ಬ ಮಹಾನ್ ಆಡಳಿತಗಾರ (ಮಹಾರಾಜ) ಎಂದು ಪರಿಗಣಿಸಲಾಗಿದೆ.

## ಪ್ರಯೋಗಗಳು ಮತ್ತು ಸಂಶೋಧನೆ

ಕೃಷಿಯ ಸುಧಾರಣೆಗೆ ಹೊಸ ಕೃಷಿ ಉಪಕರಣಗಳ ಅಗತ್ಯವನ್ನು ಶಾಹುರವರು ಮನವರಿಕೆ ಮಾಡಿಕೊಂಡರು. ಅವರು ಒಮ್ಮೆ ಹೇಳಿದ್ದರು: “ಕೃಷಿಯ ಸುಧಾರಣೆಯು ಯಾವುದೇ ರಾಷ್ಟ್ರದ ಕಲ್ಯಾಣಕ್ಕೆ ಅತಿಮುಖ್ಯ. ಇತರೆ ದೇಶಗಳಿಗೆ ಹೋಲಿಸಿದಾಗ ನಮ್ಮ ದೇಶದಲ್ಲಿನ ಸರಾಸರಿ ಕೃಷಿ ಉತ್ಪಾದನೆ ಬಹಳ ಕಡಿಮೆ. ಈ ಉದ್ದೇಶಕ್ಕೆ ಹೊಸ ಹೊಸ ಉಪಕರಣಗಳು ಅಗತ್ಯ. . ..

ಕೊಲ್ಹಾಪುರದಲ್ಲಿ ೧೯೧೨ರಲ್ಲಿ ಒಂದು ಪ್ರತ್ಯೇಕ ಕೃಷಿಸಂಸ್ಥೆಯನ್ನು ಸ್ಥಾಪಿಸಲಾಯಿತು. ಆಧುನಿಕ ಕೃಷಿ ಉಪಕರಣಗಳ ಒಂದು ವಸ್ತು ಸಂಗ್ರಹಾಲಯವನ್ನು ಕೂಡ ತೆರೆಯಲಾಯಿತು. ಈ ಸಲಕರಣೆಗಳನ್ನು ಹೊಸ ಪ್ರಯೋಗಗಳನ್ನು ಮಾಡಲು ಕೃಷಿಕರಿಗೆ ನೀಡಲಾಯಿತು. ಅಷ್ಟೇ ಅಲ್ಲ, ಶಾಹುರವರು ಒಬ್ಬ ಪ್ರದರ್ಶಕರನ್ನು ನೇಮಿಸಿ, ಅವನು ರೈತರು ಹೊಸ ಪ್ರಯೋಗಗಳನ್ನು ಹೇಗೆ ಮಾಡಬೇಕೆಂಬುದನ್ನು ಅವರಿಗೆ ತೋರಿಸಿಕೊಡುತ್ತಿದ್ದರು.

ಕೃಷಿ ಮತ್ತು ಪ್ರಾಣಿಗಳ ಪ್ರದರ್ಶನ ನಿಯತವಾಗಿ ನಡೆಸಲಾಗುತ್ತಿತ್ತು. ಸ್ಪರ್ಧೆಗಳನ್ನು ನಡೆಸಲಾಗುತ್ತಿತ್ತು ಮತ್ತು ಬಹುಮಾನಗಳನ್ನು ನೀಡಲಾಗುತ್ತಿತ್ತು. ಆದರ್ಶ ಕೃಷಿಯ ಬಗ್ಗೆ ಪ್ರಯೋಗಗಳನ್ನು ನಡೆಸಲಾಗುತ್ತಿತ್ತು. ಕೃಷಿಯಲ್ಲಿ ಏನು ಸುಧಾರಣೆ ಸಾಧ್ಯವೋ ಅದನ್ನು ಮಾಡಲಾಗುತ್ತಿತ್ತು. ಹೀಗೆ ಶಾಹುರವರ ಆಡಳಿತದಲ್ಲಿ ಸ್ವಾತಂತ್ರ್ಯೋತ್ತರ ಕೃಷಿ ಸುಧಾರಣೆಯ ಬೀಜಗಳನ್ನು ನಿಜವಾಗಿ ಬಿತ್ತಲಾಯಿತು.

## ಬೆಳೆಗಳ ಮಾದರಿ

ಶಾಹುರವರು ಬೆಳೆಗಳ ನಾನಾ ವಿಧಗಳ ಕೃಷಿಯನ್ನು ಪ್ರೋತ್ಸಾಹಿಸಿದರು. ಪನ್ಹಾಳ ಮತ್ತು ದರ್‌ಗಢ್‌ಗಳಲ್ಲಿ

ಟೀ ಮತ್ತು ಕಾಫಿಗಳನ್ನು ಬೆಳೆಸಲಾಯಿತು. ಕೋಕೋ, ಏಲಕ್ಕಿ, ರಬ್ಬರ್, ಸೆಣಬು, ಆಲೂಗಡ್ಡೆ, ಅಂಬಾಡಿ, ಕಾಂಬೋಡಿಯ ಹತ್ತಿಗಳ ತೋಟಗಳನ್ನು ಇದೇ ಪ್ರದೇಶದಲ್ಲಿ ಬೆಳೆಸಲಾಯಿತು. ಸಸ್ಯೋದ್ಯಾನಗಳ ಮೂಲಕ ಉದ್ಯಾನಗಳನ್ನು ಅಭಿವೃದ್ಧಿಗೊಳಿಸಲಾಯಿತು, ರಾಸಾಯನಿಕ ಗೊಬ್ಬರಗಳಲ್ಲಿ ಪ್ರಯೋಗಗಳನ್ನು ಕೈಗೊಳ್ಳಲಾಯಿತು.

ಹಿರ್ದಾ, ಜಂಭೂಲ್, ಸೆಣಬು, ಗೋಡಂಬಿ, ಮಾವು, ತೇಗ, ಹಲಸು ಮೊದಲಾದ ತೋಟಗಳಿಗೆ ಹಣಸಹಾಯ ನೀಡಲಾಯಿತು. ಈ ಪ್ರಯೋಗಗಳು ಯಾವುದೇ ಫಲವನ್ನು ನೀಡಿದವೇ ಎಂಬುದು ವಿವಾದಾತ್ಮಕ. ಆದರೆ ಅವು ಶಾಹುರವರ ಸಾಹಸೋದ್ಯಮ ಮತ್ತು ನವೀನ ಸಂಶೋಧನೆಗಳ ಸ್ವಭಾವವನ್ನು ತೋರಿಸುತ್ತದೆ. ಇಂದಿನ ರೈತ ಕೊಲ್ಹಾಪುರ ಜಿಲ್ಲೆಯಲ್ಲಿ ಅದೇ ಬಳುವಳಿಯನ್ನು ಮುಂದಕ್ಕೆ ಕೊಂಡೊಯ್ಯುತ್ತಿದ್ದಾನೆ.

ಶಾಹುರವರು ಕೂಡ ಪ್ರಾಣಿಗಳ ಮಿಶ್ರತಳಿ ಉತ್ಪಾದನೆ, ಕೋಳಿ ಮತ್ತು ಬಾತುಕೋಳಿ ಸಾಕಾಣಿಕೆ ಮತ್ತು ಹಾಲಿನ ಉತ್ಪಾದನೆ ಮೊದಲಾದ ಕೃಷಿಗೆ ಪೂರಕವಾದ ಚಟುವಟಿಕೆಗಳ ಬಗ್ಗೆ ಚಿಂತನೆ ಮಾಡಿದ್ದರು.

## ಶಾಹು ಮತ್ತು ಸಹಕಾರಿ ಸಂಘಗಳು

ಕೊಲ್ಹಾಪುರವು ಇಂದು ಸಹಕಾರಿ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿರುವ ಜಿಲ್ಲೆಯಾಗಿದೆ. ಇದರ ಪ್ರಾರಂಭವನ್ನು ಶಾಹುರವರ ಕಾಲದಿಂದ ಗುರುತಿಸಬಹುದು. ೧೯೧೨ರಲ್ಲಿ ಸಹಕಾರಿ ಕಾನೂನನ್ನು ರೂಪಿಸಲಾಯಿತು. ಅವರ ಕಾಲದಲ್ಲಿಯೇ ನಗರ ಸಹಕಾರಿ ಬ್ಯಾಂಕು ಮತ್ತು ಬಲಭೀಮ ಸಹಕಾರಿ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು. ೧೯೨೦-೨೧ರಲ್ಲಿ ಸುಮಾರು ಒಟ್ಟು ೩೭ ಸಹಕಾರಿ ಸಂಘಗಳಿದ್ದವು.

ಶಾಹುರವರ ಭಾಷಣಗಳಿಂದ ಉದ್ಧರಿಸಿದ ಭಾಗದಲ್ಲಿ ಅವರು ಹೇಳುತ್ತಾರೆ: "ಕೆಲವು ಜನರು ತಮ್ಮ ಕೌಶಲ್ಯ, ಬುದ್ಧಿ, ಹಣ ಮತ್ತು ದೈಹಿಕ ಶ್ರಮವನ್ನು ಒಟ್ಟಿಗೆ ಸಂಗ್ರಹಿಸಬೇಕು. ಅವರು ಪರಸ್ಪರ ಸಹಕಾರ ನೀಡಬೇಕು. ಹಿಂದೆ ಒಂದು ಕುಟುಂಬ ಒಂದು ಸ್ಥಳದಲ್ಲಿ ಕೆಲಸ ಮಾಡುತ್ತಿತ್ತು ಮತ್ತು ಒಂದೇ ಕುಟುಂಬ ಲಾಭವನ್ನು ಪಡೆಯುತ್ತಿತ್ತು. ಕುಟುಂಬದ ನಿರ್ವಚನವನ್ನು ವಿಸ್ತರಿಸಲಾಗಿದೆ, ಸಾಧ್ಯವಾದಷ್ಟು ೧೦, ೨೦, ಅಥವಾ ೨೫ ಕುಟುಂಬಗಳು ಒಟ್ಟಿಗೆ ಒಂದು ವ್ಯವಹಾರ ಮಾಡಬೇಕಾಗಿದೆ. ಸಹಕಾರಿ ಕಾರ್ಖಾನೆಗಳನ್ನು ಅಥವಾ ಪತ್ತಿನ ಸಂಘಗಳನ್ನು ಅಥವಾ ಸಹಕಾರಿ ಅಂಗಡಿಗಳನ್ನು ಪ್ರಾರಂಭಿಸಿ."

ಕೊಲ್ಹಾಪುರ ಜಿಲ್ಲೆಯ ಪ್ರಸ್ತುತ ಹಣಕಾಸಿನ ಮತ್ತು ಸಮಗ್ರ ಪ್ರಗತಿಯು ತನ್ನ ಬೀಜಗಳನ್ನು ಶಾಹುರವರ ಕೃತಿ ಮತ್ತು ಚಿಂತನೆಗಳಲ್ಲಿದ್ದವು.

## ವ್ಯವಹಾರದ ಚಟುವಟಿಕೆಗಳು

ವ್ಯಾಪಾರ ಮತ್ತು ವ್ಯವಹಾರಗಳ ಕಾರ್ಯಚಟುವಟಿಕೆಗಳ ಬಗೆಗಿನ ಶಾಹುರವರ ಧೋರಣೆ ಸ್ಪಷ್ಟವಾಗಿ ಅವರ ಆರ್ಥಿಕ ಹಾದಿಯನ್ನು (ರೀತಿ) ಪ್ರತಿಬಿಂಬಿಸುತ್ತದೆ. ಕೈಗಾರಿಕೆಗಳನ್ನು ಪ್ರಾರಂಭಿಸಿ ನಡೆಸುವುದು ಒಬ್ಬ ರಾಜನ ಹೊಣೆಯಲ್ಲವೆಂಬುದು ಆ ಕಾಲದ ಪ್ರಮುಖ ಚಿಂತನೆಯಾಗಿತ್ತು. ಬ್ರಿಟಿಷರು ಸಹ ಅದೇ ಧೋರಣೆಯನ್ನೇ ಅನುಸರಿಸಿದರು. ಕೈಗಾರಿಕೆಗಳನ್ನು ಪ್ರೋತ್ಸಾಹಿಸುವುದು ಎಂದಿಗೂ ಅವರ ಆದ್ಯತೆಯಾಗಿರಲಿಲ್ಲ. ಅಂತಹ ಒಂದು ಸನ್ನಿವೇಶದಲ್ಲಿ, ಆ ವಿಷಯದ ಬಗ್ಗೆ ಶಾಹುರವರ ಚಿಂತನೆಗಳು ನಿಜವಾಗಿಯೂ ಮಹತ್ವದವು. ಅವರ ಭಾಷಣದ ಒಂದು ಉದ್ಧೃತ ಭಾಗವನ್ನು ಪರಿಶೀಲಿಸಿ: "ಆರ್ಥಿಕ

ಅಭಿವೃದ್ಧಿಯು ಕೈಗಾರಿಕೀಕರಣದ ಮೇಲೆ ಅವಲಂಬಿಸಿದೆ. ಜನರು ಸಹಕಾರಿ ಕಾರ್ಖಾನೆಗಳನ್ನು, ಸಂಘಗಳನ್ನು, ಮಾರುಕಟ್ಟೆಗಳ ವ್ಯವಸ್ಥೆಯನ್ನು ಜಾರಿಗೊಳಿಸಲು ಒಟ್ಟಿಗೆ ಬರಬೇಕು. ಕೊಲ್ಹಾಪುರ ಸಂಸ್ಥಾನವು ಈ ಉದ್ದೇಶಕ್ಕಾಗಿ ಸಹಾಯವನ್ನು ಒದಗಿಸುವುದು.'' ಇಲ್ಲಿ ಶಾಹುರವರು ಸಹಕಾರ ಮತ್ತು ಸಹಾಯ ಒದಗಿಸಲು ತಮ್ಮ ಸಿದ್ಧತೆಯನ್ನು ಒತ್ತಿಹೇಳಿರುವುದನ್ನು ಗಮನಿಸಬೇಕು.

ಮತ್ತೊಂದು ಉದ್ಧೃತವನ್ನು ನೋಡಿ....

''ಕೈಗಾರಿಕೆಯಲ್ಲಿ ಬಂಡವಾಳವಾದ ಮತ್ತು ಏಕಸ್ವಾಮ್ಯತೆಗಳು ಸರಿ ಅಲ್ಲ ಮತ್ತು ಕಾರ್ಮಿಕರು ಸಂಪೂರ್ಣವಾಗಿ ಅವುಗಳ ಮೇಲೆ ಅವಲಂಬಿಸುವುದು ಸರಿ ಅಲ್ಲ. ಆ ಪದ್ಧತಿ ಭಾರತಕ್ಕೆ ಸರಿಹೊಂದುವುದಿಲ್ಲ.'' ಬ್ರಿಟಿಷ್ ಆಡಳಿತಗಾರರ ಒತ್ತಡದಲ್ಲಿ ಸದಾ ಕೆಲಸ ಮಾಡುವ ಮಹಾರಾಜರು ಇಪ್ಪತ್ತನೇ ಶತಮಾನದ ಎರಡನೇ ದಶಕದಲ್ಲಿ ಆ ರೀತಿಯಲ್ಲಿ ಮಾತನಾಡುವ ಅವರ ಬುದ್ಧಿ ನಿಜವಾಗಿಯೂ ಅದ್ಭುತವಾದುದು. ಅದು ಸ್ಪಷ್ಟವಾಗಿ ಶಾಹುರವರ ಪ್ರಗತಿಪರ ಮನೋಭಾವವನ್ನು ಸೂಚಿಸುತ್ತದೆ.

ಇಲ್ಲಿ ಅವರ ಭಾಷಣದ ಉದ್ಧೃತ ಭಾಗವಿದೆ. ''ನಗರಪ್ರದೇಶಗಳಲ್ಲಿ ಕೈಗಾರಿಕೆಗಳ ಕೇಂದ್ರೀಕರಣವಾದರೆ ನಗರ ಪ್ರದೇಶಗಳಿಗೆ ಗ್ರಾಮೀಣ ಜನರ ವಲಸೆಗೆ ಕಾರಣವಾಗುತ್ತದೆ. ಅದು ಬದಲಿಗೆ ಹಣಕಾಸಿನ ಮತ್ತು ಸಾಮಾಜಿಕ ದುಷ್ಪರಿಣಾಮಗಳನ್ನುಂಟು ಮಾಡುತ್ತದೆ. ಇದನ್ನು ತಪ್ಪಿಸಲು ವಿಕೇಂದ್ರೀಕರಣ ಬಹಳ ಅಗತ್ಯ.

## ಧೋರಣೆಗಳಿಗೆ ತಕ್ಕ ಕ್ರಮಗಳು

ಶಾಹುರವರು ಒಬ್ಬ 'ಸಕ್ರಿಯ' ಸುಧಾರಕ ಎಂಬುದಕ್ಕೆ ಹೆಸರುವಾಸಿ ಮತ್ತು ಅವರು ಬರೀ ದೊಡ್ಡ ಮಾತುಗಳಲ್ಲಿ ಮುಳುಗಿದ ವ್ಯಕ್ತಿಯಲ್ಲ. ಸಂಸ್ಥಾನದಲ್ಲಿ ೧೯೦೬ರಲ್ಲಿ ಕೆಲ ವ್ಯಾಪಾರಸ್ಥರು ಒಂದು ಕೂಡು ಬಂಡವಾಳ ಕಂಪನಿಯನ್ನು ಸ್ಥಾಪಿಸಿದರು. ಮತ್ತು ಒಂದು ಬಟ್ಟೆ ನೇಯುವ ಗಿರಣಿ ಮಿಲ್ಲನ್ನು ಪ್ರಾರಂಭಿಸಿದರು. ಶಾಹುರವರು ಭಾರೀ ಮೊತ್ತವನ್ನು ಶೇರು ಬಂಡವಾಳವೆಂದು ಹೂಡಿದರು. ಅವರು ಅವರಿಗೆ ಭೂಮಿ ಲಭ್ಯವಾಗುವಂತೆ ಮಾಡಿದರು ಮತ್ತು ನೀರನ್ನು ಉಚಿತವಾಗಿ ಸರಬರಾಜು ಮಾಡಿದರು. ಶಾಹುರವರು ಅದಕ್ಕೆ ಅಸ್ತಿವಾರವನ್ನು ಹಾಕಿದರು ಮತ್ತು ಅದಕ್ಕೆ ಅವರ ಹೆಸರನ್ನು ಇಡಲಾಗಿದೆ. ಆ ಮಿಲ್ಲಿನ ಹೆಸರು ಶಾಹು ಮಿಲ್ಲು. ಅದು ಉತ್ಪಾದನೆಯನ್ನು ೧೯೧೦-೧೧ರಲ್ಲಿ ಪ್ರಾರಂಭಿಸಿತು. ಕೆಲವು ಆಂತರಿಕ ಭಿನ್ನಾಭಿಪ್ರಾಯಗಳಿಂದಾಗಿ ೧೯೧೫-೧೬ರಲ್ಲಿ ಅದರ ಮಾಲಿಕತ್ವ ಸಂಸ್ಥಾನಕ್ಕೆ ಸೇರಿತು. ಮಿಲ್ಲು ತದನಂತರ ಬಟ್ಟೆಯನ್ನು ತಯಾರಿಸಲು ಪ್ರಾರಂಭಿಸಿತು. ೧೯೦೮-೦೯ರಲ್ಲಿ ಇಚಲಕರಂಜಿಯಲ್ಲಿ ಒಂದು ಜಿನ್ನಿಂಗ್ ಕಾರ್ಖಾನೆಯನ್ನು ತೆರೆಯಲಾಯಿತು. ೧೯೧೨-೧೩ರ ಹೊತ್ತಿಗೆ ೬ ಕಾರ್ಖಾನೆಗಳು ಕೊಲ್ಹಾಪುರ, ಶೀರೋಳ, ಚಿಂಚ್ಲಿ ಮತ್ತು ಗಧಿಂಗ್ಲಾಜ್‌ಗಳಲ್ಲಿ ಪ್ರಾರಂಭವಾದವು. ಈ ಎಲ್ಲಾ ಕಾರ್ಖಾನೆಗಳು ಶಾಹುರವರಿಂದ ಸಹಾಯ ಪಡೆದವು.

೧೯೧೨-೧೩ರಲ್ಲಿ ರಾಯಬಾಗಿನಲ್ಲಿ ಶಾಹು ವೀವರ್ಸ್ ಅಸೋಸಿಯೇಷನನ್ನು ರೂಪಿಸಲಾಯಿತು; ವ್ಯವಹಾರದಲ್ಲಿ ವಿಫಲರಾದ ನಂತರ ಕೆಲವು ನೇಕಾರರು ಮತ್ತು ಕಾರ್ಮಿಕರು ಇತರೆ ಸ್ಥಳಗಳಿಗೆ ಹೋದರು. ಸಂಘದಲ್ಲಿ (ಅಸೋಸಿಯೇಷನ್) ಸುಮಾರು ೧೬೦ ಜನರು ಗಂಡಸರು ಮತ್ತು ಹೆಂಗಸರು ಸದಸ್ಯರಾಗಿದ್ದರು. ಶಾಹುರವರು ಅವರಿಗೆ ಬಡ್ಡಿಯಿಲ್ಲದ ಸಾಲ, ಆಶ್ರಯ ಮತ್ತು ಭೂಮಿಯನ್ನು ಒದಗಿಸಿಕೊಟ್ಟರು. ಅಲ್ಲಿ

ಸೀರೆಗಳು, ಧೋತಿಗಳು ಮತ್ತು ಹಾಸಿಗೆಯ ಹೊದಿಕೆಗಳನ್ನು ತಯಾರುಮಾಡಿದರು. ಅವರ ಉತ್ಪನ್ನಗಳಿಗೆ ದರ್ಬಾರಿನಿಂದ ಬೇಡಿಕೆ ಬರುವಂತೆ ಭರವಸೆ ನೀಡಿದರು.

ತನ್ನ ಪ್ರಜೆಗಳನ್ನು (ಜನರನ್ನು) ಚೆನ್ನಾಗಿ ನೋಡಿಕೊಂಡ ಮತ್ತು ಅವರು ಸ್ವತಂತ್ರರಾಗುವುದಕ್ಕೆ ಸಹಾಯ ಮಾಡಿದ ಮತ್ತೊಬ್ಬ ಮಹಾರಾಜನನ್ನು ಭಾರತದಲ್ಲಿ ಹುಡುಕುವುದಕ್ಕೆ ಬಹಳ ಕಷ್ಟ. ಅವರ ಆಡಳಿತಾವಧಿಯಲ್ಲಿ ಕೆಲವು ಎಣ್ಣೆಮಿಲ್ಲುಗಳು, ಬಣ್ಣದ ಕಾರ್ಖಾನೆಗಳನ್ನು ಮತ್ತು ಇತರೆ ಕೈಗಾರಿಕೆಗಳನ್ನು ಪ್ರಾರಂಭಿಸಿದರು. ಶಾಹುರವರು ೧೮೯೪ರಲ್ಲಿ ಅಧಿಕಾರಕ್ಕೆ ಬಂದಾಗ ಹೇಳಿಕೊಳ್ಳುವಂತಹ ಒಂದು ಕಾರ್ಖಾನೆಯೂ ಇರಲಿಲ್ಲ. ಅವರ ಆಡಳಿತದ ಕೊನೆಯಹೊತ್ತಿಗೆ ವ್ಯಾಪಾರ ಮತ್ತು ಕೈಗಾರಿಕೆಗಳು ನಿಜವಾಗಿಯೂ ಬೆಳೆದುಬಿಟ್ಟವು. ಅವರ ಆರ್ಥಿಕ ಧೋರಣೆಯು ಉದ್ಯೋಗಕ್ಕೆ ಮತ್ತು ಉತ್ಪಾದನೆಗೆ ಮತ್ತು ಸಮೃದ್ಧಿಗೆ ಹೆಚ್ಚು ಬಲ ನೀಡಿತು. ಪ್ರಗತಿಯಿಂದ ಪ್ರತಿಯೊಬ್ಬರೂ ಪ್ರಯೋಜನ ಪಡೆಯಬೇಕೆಂಬುದು ಅವರ ಆಸಕ್ತಿಯಾಗಿತ್ತು ಮತ್ತು ರಾಜನು (ಆಡಳಿತ ನಡೆಸುವವನು ಈ ಅಭಿವೃದ್ಧಿಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.)

## ರಸ್ತೆಗಳು ಮತ್ತು ರೈಲ್ವೆಗಳು

ಸಂವಹನ ಜಾಲ, ವಿಶೇಷವಾಗಿ ರಸ್ತೆಗಳು ಮತ್ತು ರೈಲ್ವೆಗಳು ಯಾವುದೇ ಪ್ರದೇಶದ ಕೈಗಾರಿಕೆಯ ಬೆಳವಣಿಗೆಗೆ ಮುಖ್ಯವಾದವುಗಳು. ಸಾಮಾಜಿಕ ವ್ಯವಹಾರಗಳಿಗೆ ಅವು ಅತ್ಯವಶ್ಯಕ. ಶಾಹುರವರು ಸಿಂಹಾಸನವನ್ನೇರಿದಾಗ ರಸ್ತೆಗಳು ಸಾಕಷ್ಟು ಇರಲಿಲ್ಲ. ಅವರು ರಸ್ತೆ ನಿರ್ಮಾಣದಲ್ಲಿ ಗಮನ ಹರಿಸಿದರು ಮತ್ತು ೧೮೫ ಮೈಲಿಗಳ ಹೊಸ ರಸ್ತೆಗಳ ನಿರ್ಮಾಣಕಾರ್ಯವನ್ನು ಮುಗಿಸಿದರು. ದರ್ಬಾರು ವೆಚ್ಚಗಳನ್ನು ಭರಿಸಿತು.

ಈ ಮೊದಲು ಕೊಲ್ಹಾಪುರ ಸಂಸ್ಥಾನದಲ್ಲಿ ೧,೦೦೦ ಚದರ ಮೈಲಿಗಳಿಗೆ ೭೨.೪ ಮೈಲಿಗಳ ರಸ್ತೆಗಳಿದ್ದವು. ಶಾಹುರವರು ೧೯೨೨ರಲ್ಲಿ ಮರಣ ಹೊಂದಿದಾಗ ೧,೦೦೦ ಚದರ ಮೈಲಿಗಳಿಗೆ ೧೭೫/೯ ಮೈಲಿಗಳ ರಸ್ತೆಗಳ ಉದ್ದ ಬೆಳೆಯಿತು. ಹಳ್ಳಿಗಳು ಪಟ್ಟಣಗಳ ಸಂಪರ್ಕವನ್ನು ಹೊಂದಿದ್ದವು. ಹಳ್ಳಿಗಳಲ್ಲಿ ಉತ್ಪಾದನೆಯಾದ ವಸ್ತುಗಳು ಮಾರುಕಟ್ಟೆಗಳನ್ನು ಪಡೆದಿದ್ದವು ಮತ್ತು ನಗರಗಳಲ್ಲಿ ಸೂಕ್ತ ಬೆಲೆಗಳು ಸಿಗುತ್ತಿದ್ದವು. ಬದಲಿಗೆ, ನಗರದ ಉತ್ಪನ್ನಗಳು ಕೃಷಿಗೆ ಪ್ರಯೋಜನಕಾರಿಯಾದ ಅಥವಾ ಗೃಹೋಪಯೋಗಿ ಉದ್ದೇಶಕ್ಕಾಗಿ ಹಳ್ಳಿಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಅಂತಹ ವ್ಯಾಪಾರ ಸಾಮಾಜಿಕ ಒಡನಾಟಕ್ಕೆ ಎಡೆಮಾಡಿಕೊಟ್ಟಿತು.

ಭಾರತೀಯ ರೈಲ್ವೆಗಳು ಬಹಳ ಕಾಲದವರೆಗೆ ಖಾಸಗಿ ಒಡೆತನದಲ್ಲಿದ್ದವು. ಆದರೆ ಕೊಲ್ಹಾಪುರ ಸಂಸ್ಥಾನದಲ್ಲಿ ರೈಲ್ವೆಯನ್ನು ಸಾರ್ವಜನಿಕ ಒಡೆತನದಲ್ಲಿ ಪ್ರಾರಂಭಿಸಲಾಯಿತು. ಶಾಹುರವರು ೧೮೮೮ರಲ್ಲಿ ಕೊಲ್ಹಾಪುರ ನಗರವನ್ನು ಮೀರಜ್ ರೈಲ್ವೆ ಜಂಕ್ಷನ್‌ಗೆ ಸಂಪರ್ಕ ಕಲ್ಪಿಸುವ ಕಾಮಗಾರಿಯನ್ನು ಪ್ರಾರಂಭ ಮಾಡಿದರು. ಅದು ೧೮೯೧ರಲ್ಲಿ ಪೂರ್ಣಗೊಂಡಿತು. ಖರ್ಚುಗಳನ್ನು ಸರಕಾರ ಮತ್ತೆ ಭರಿಸಿತು. ರೈಲ್ವೆಗಳಲ್ಲಿ ಹೂಡಿದ ಒಟ್ಟು ಹಣ ೨೩.೨೬ ಲಕ್ಷಗಳು ೧೯೦೬ರ ಕೊನೆಗೆ. ಒಂದು ವಿಶಿಷ್ಟ ಪ್ರದೇಶದ ಸಾರಿಗೆ ವಿಧಾನಗಳ ಮತ್ತು ಅಭಿವೃದ್ಧಿ ನಡುವಣ ನೇರ ಸಂಪರ್ಕದ ಬಗ್ಗೆ ಶಾಹುರವರಿಗೆ ಅರಿವಿತ್ತು. ಆದ್ದರಿಂದ ಅವರು ಆದ್ಯತೆಯ ಮೇರೆಗೆ ಅದನ್ನು ತೆಗೆದುಕೊಂಡರು. ಕೊಲ್ಹಾಪುರ–ನಿಪ್ಪಾಣಿ–ರಾಯಬಾಗ್ ರೈಲ್ವೆ ರಸ್ತೆಯನ್ನು ಯೋಜಿಸಲಾಗಿತ್ತು. ಆದರೆ ರಾಧಾನಗರಿ ಅಣೆಕಟ್ಟು ಹಣದ ಕೊರತೆಯಿಂದ

ಕುಂಠಿತಗೊಂಡಿತ್ತು. ಆದ್ದರಿಂದ ರೈಲ್ವೆ ಯೋಜನೆಯನ್ನು ಕೈ ಬಿಡಲಾಯಿತು. ಶಾಹುರವರು ತಮ್ಮ ಆದ್ಯತೆಗಳನ್ನು ಚೆನ್ನಾಗಿ ಅರಿತಿದ್ದರು. ರೈಲ್ವೆ ರಸ್ತೆಗಳು ಮುಖ್ಯವೆನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಅಣೆಕಟ್ಟು ಕೃಷಿಯ ಅಭಿವೃದ್ಧಿಯ ದೃಷ್ಟಿಯಿಂದ ಹೆಚ್ಚು ಮುಖ್ಯವಾಗಿತ್ತು.

## ವ್ಯಾಪಾರ

ವ್ಯಾಪಾರ ಆರ್ಥಿಕ ಬೆಳವಣಿಗೆಯನ್ನು ಕೊಂಡೊಯ್ಯುವುದೆಂದು ಅವರು ನಂಬಿದ್ದರು. ವಾಣಿಜ್ಯದ ವರ್ಧನೆಗೆ ಶಾಹು ಅವರು ಮೂಲಕಾರಣಕರ್ತರಾದರು. ಕಾರ್ಖಾನೆಗಳಲ್ಲಿ ಅಥವಾ ಕೈಗಾರಿಕೆಗಳಲ್ಲಿ ತಯಾರಿಸುವ ವಸ್ತುಗಳ ಮಾರಾಟ ಸಮಸ್ಯೆಯಾಗಿರಲಿಲ್ಲ, ಆದರೆ ಕೃಷಿ ಉತ್ಪನ್ನಗಳ ಮಾರುಕಟ್ಟೆಗಾಗಿ ಏನಾದರೂ ಮಾಡಬೇಕಾಗಿತ್ತು. ಅವರು ಕೊಲ್ಹಾಪುರದಲ್ಲಿ ಮಾರುಕಟ್ಟೆ ಕೇಂದ್ರ ತೆರೆಯುವ ಉಪಕ್ರಮವನ್ನು ಕೈಗೊಂಡರು. ಆಗ ನಿಪ್ಪಾಣಿ ವಾಣಿಜ್ಯದ ಕೇಂದ್ರವಾಗಿತ್ತು. ಶಾಹುರವರು ನಿಪ್ಪಾಣಿಯ ವ್ಯಾಪಾರಸ್ಥರ ಸಭೆಯನ್ನು ಕಾಗಲ್ಲಿನಲ್ಲಿ ಕರೆದರು. ಮತ್ತು ಅವರೊಡನೆ ಕೊಲ್ಹಾಪುರದಲ್ಲಿ ಮಾರುಕಟ್ಟೆ ಸ್ಥಾಪಿಸುವ ಬಗ್ಗೆ ಚರ್ಚಿಸಿದರು. ಅವರು ಕೊಲ್ಹಾಪುರದಲ್ಲಿ ವ್ಯಾಪಾರಿ ಸಂಸ್ಥೆಗಳನ್ನು ತೆರೆಯುವವರಿಗೆ ಹಲವು ಉತ್ತೇಜನಗಳನ್ನು ಮತ್ತು ರಿಯಾಯಿತಿಗಳನ್ನು ನೀಡಿದರು.

ಶಹಪುರಿ ವಾಣಿಜ್ಯ ಕೇಂದ್ರವನ್ನು ೧೮೯೫ರಲ್ಲಿ ಸ್ಥಾಪಿಸಲಾಯಿತು. ಇಲ್ಲಿ ವ್ಯಾಪಾರಸ್ಥರಿಗೆ ತೆರಿಗೆ ವಿನಾಯಿತಿಗಳನ್ನು ಬಿಟ್ಟು ಉಚಿತವಾಗಿ ಭೂ ನಿವೇಶನಗಳನ್ನು ನೀಡಲಾಯಿತು. ಆಗ ವಾಣಿಜ್ಯ ಕೇಂದ್ರವು ನಗರದಿಂದ ಬಹಳ ದೂರವಿತ್ತು ಮತ್ತು ರೈಲ್ವೆ ನಿಲ್ದಾಣಕ್ಕೆ ಸಮೀಪವಾಗಿತ್ತು ಮತ್ತು ಸರಿಯಾಗಿ ಇತ್ತು. ಅಂಚೆ ಇಲಾಖೆ ವಾಣಿಜ್ಯ ಕೇಂದ್ರದ ಸಮೀಪ ಅಂಚೆ ಮತ್ತು ತಂತಿ ಸೌಲಭ್ಯಗಳನ್ನು ಒದಗಿಸುವಂತೆ ಅದಕ್ಕೆ ಮನವಿ ಮಾಡಿಕೊಳ್ಳಲಾಯಿತು.

ಶಾಹುರವರು ಕೇಂದ್ರೀಕರಣವನ್ನು ತಪ್ಪಿಸಲು ಜಯಸಿಂಗಪುರ ಮತ್ತು ಗಧಿಂಗ್ಲಾಜ್‌ಗಳಲ್ಲಿ ವಾಣಿಜ್ಯ ಕೇಂದ್ರಗಳನ್ನು ಮತ್ತೆ ಪ್ರಾರಂಭಿಸುವಂತೆ ಪ್ರೋತ್ಸಾಹಿಸಿದರು. ತತ್ಪರಿಣಾಮವಾಗಿ ಜಯಸಿಂಗಪುರ ಹೊಗೆಸೊಪ್ಪಿನ ವ್ಯಾಪಾರ ಕೇಂದ್ರವಾದರೆ ಗಧಿಂಗ್ಲಾಜ್ ಬೆಲ್ಲ, ಮೆಣಸಿನಕಾಯಿ ಮತ್ತು ನೆಲಗಡಲೆ ಕಾಯಿಗಳ ವಾಣಿಜ್ಯ ಕೇಂದ್ರವಾಯಿತು. ಕೊಲ್ಹಾಪುರ ಬೆಲ್ಲದ ಮಾರುಕಟ್ಟೆಗೆ ಹೆಸರುವಾಸಿ. ಕೊಲ್ಹಾಪುರ ಬೆಲ್ಲ ಇಡೀ ದೇಶದಲ್ಲಿ ಖ್ಯಾತಿಯನ್ನು ಪಡೆದಿದೆ. ಈ ಹಿಂದೆ ಕೊಂಕಣದ ರಾಜಾಪುರ ಬೆಲ್ಲದ ಪ್ರಮುಖ ಮಾರಿಕಟ್ಟೆಯಾಗಿತ್ತು. ಕೊಲ್ಹಾಪುರ ಪ್ರದೇಶದಲ್ಲಿ ಬೆಲ್ಲ ತಯಾರಾದರೆ, ಮಾರಾಟವಾಗುತ್ತಿದ್ದುದು ರಾಜಾಪುರದಲ್ಲಿ. ಶಾಹುರವರಿಗೆ ತುಂಬಾ ಕೃತಜ್ಞತೆಗಳು, ಕೊಲ್ಹಾಪುರ ಕೂಡ ಬೆಲ್ಲದ ಪ್ರಮುಖ ವ್ಯಾಪಾರ ಕೇಂದ್ರವಾಯಿತು.

ಈ ಎಲ್ಲಾ ಪ್ರಯತ್ನಗಳಿಂದ ಸಹಜವಾಗಿ ಕೃಷಿ ಮತ್ತು ಉತ್ಪನ್ನಗಳ ರಫ್ತಿನಲ್ಲಿ ಹೆಚ್ಚಳವಾದ ರೀತಿಯಿಂದ ಸಕಾರಾತ್ಮಕ ಫಲಿತಾಂಶಗಳು ಕಂಡುಬಂದವು. ೧೮೯೪-೯೫ರಲ್ಲಿದ್ದ ೬ ಲಕ್ಷ ರೂ.ಗಳ ರಫ್ತು ೧೯೨೧ರ ಹೊತ್ತಿಗೆ ೩೦ ಲಕ್ಷ ರೂ.ಗಳಿಗೆ ಏರಿತು. ಹೆಚ್ಚಳವು ಬಹುಮಟ್ಟಿಗೆ ೫ ಪಟ್ಟಾಯಿತು. ವಾಣಿಜ್ಯದ ಬೆಳವಣಿಗೆಗೆ ಯಾವ ಮಹಾರಾಜನೂ ಇಷ್ಟು ಪ್ರಯತ್ನ ಮಾಡಿರಲಿಲ್ಲ.

## ಬರ-ನಿವಾರಣೆಯ ಯೋಜನೆ

ದೇಶದ ಇತರೆ ಭಾಗಗಳಂತೆಯೇ ಕೊಲ್ಹಾಪುರದ ಪ್ರದೇಶ ಸಾಂದರ್ಭಿಕ ಬರಗಾಲಗಳನ್ನು ಅನುಭವಿಸಿದೆ. ಶಾಹುರವರ ಆಡಳಿತದಲ್ಲಿ ಸಂಸ್ಥಾನವು ಮೂರು ಬಾರಿ-೧೮೯೬-೯೭, ೧೮೯೯-೧೯೦೦ ಮತ್ತು ೧೯೧೮-

೧೯ನೇ ಸಾಲುಗಳಲ್ಲಿ ಬರಗಾಲವನ್ನು ಅನುಭವಿಸಿತು. ಅಲ್ಲೆ, ಶಿರೋಳ ಮತ್ತು ರಾಯಬಾಗ್ ಪ್ರದೇಶಗಳು ತೀವ್ರವಾದ ಬರಕ್ಕೆ ಗುರಿಯಾದವು. ಶಾಹುರವರು ಬರಪೀಡಿತ ಪ್ರದೇಶಗಳಲ್ಲಿ ಸಾಲನೀಡಿಕೆ, ದಿನಗೂಲಿಯ ಮೇರೆಗೆ ಉದ್ಯೋಗಗಳ ನೀಡಿಕೆ, ಸೂಕ್ತ ಬೆಲೆಗಳಲ್ಲಿ ಆಹಾರ ಪದಾರ್ಥಗಳ ಸರಬರಾಜು, ಪಶುಗಳ ಆರೈಕೆಯ ಬಗ್ಗೆ ನಿಗಾ, ಹುಲ್ಲಿನ ಸರಬರಾಜು ಮತ್ತು ಸರಕಾರಿ ಭೂಮಿಯಲ್ಲಿ ಪಶುಗಳ ಮೇಯುವಿಕೆಗೆ ಅವಕಾಶ ಮೊದಲಾದ ಕ್ರಮಗಳನ್ನು ಕೈಗೊಳ್ಳುವ ಮೂಲಕ ಬರವನ್ನು ನಿಭಾಯಿಸಿದರು. ಬೇರೆ ಅಧಿಕಾರಿಗಳು ಇರುವುದಲ್ಲದೆ, ಭಾಸ್ಕರರಾವ್ ಜಾಧವ ಅವರನ್ನು ವಿಶೇಷವಾಗಿ ಬರ-ಕಮಿಷನರ್ ಆಗಿ ನೇಮಿಸಿದರು.

ಬರಗಳಿಂದ ಪಾರಾಗಲು ಶಾಹುರವರು ಸಹ ದೀರ್ಘಕಾಲಿಕವಾದ ಅಣೆಕಟ್ಟುಗಳ, ಬಾವಿಗಳ ಮತ್ತು ಕೆರೆಗಳ ನಿರ್ಮಾಣವನ್ನು ಉಪಕ್ರಮಿಸಿದರು (ಕೈಗೊಂಡರು).

### ಕಾರ್ಮಿಕರು ಮತ್ತು ಶಾಹು

ಶಾಹುರವರ ಅವಧಿಯಲ್ಲಿ ಆಧುನಿಕ ಕಾರ್ಮಿಕ ಆಂದೋಲನ ಇನ್ನೂ ಬೇರೂರಬೇಕಾಗಿತ್ತು. ಅವರು ಮುಂಬಯಿಯ ಪರೇಲ್‌ನಲ್ಲಿ ನವೆಂಬರ್ ೧೦, ೧೯೧೮ರಂದು ಕಾರ್ಮಿಕರ ರ್‍ಯಾಲಿಯಲ್ಲಿ ಭಾಷಣ ಮಾಡಿದರು. ಮತ್ತೆ ನವೆಂಬರ್ ೨೪, ೧೯೧೮ರಂದು ಮುಂಬಯಿಯಲ್ಲಿ ಪೀಪಲ್ಸ್ ಯೂನಿಯನ್‌ನಲ್ಲಿ ಉದ್ಘಾಟನಾ ಭಾಷಣವನ್ನು ಮಾಡಿದರು.

ಈ ಎರಡು ಭಾಷಣಗಳಲ್ಲಿ ಶಾಹುರವರು ಕಾರ್ಮಿಕರು ಸಂಘಗಳಲ್ಲಿ ಸಂಘಟಿತರಾಗಬೇಕೆಂದು ಒತ್ತಿಹೇಳಿದರು. "....ಸಾವಿರಾರು ಜನರ ಜೀವನಗಳು ಬಂಡವಾಳಶಾಹಿಗಳ ಮರ್ಜಿ ಮತ್ತು ಸ್ವಾರ್ಥಗಳ ಮೇಲೆ ಅವಲಂಬಿಸಿರುವುದು ನ್ಯಾಯವಲ್ಲ" ಎಂದು ಹೇಳಿದರು. ಅವರು ಯೂರೋಪ್ ಮತ್ತು ರಷಿಯಾದಲ್ಲಿರುವ ಕಾರ್ಮಿಕ ಸಂಘಗಳ ನಿದರ್ಶನಗಳನ್ನು ನೀಡಿದರು.

ಶಾಹು ಒಬ್ಬ ಮಹಾರಾಜರು. ಅವರ ಅವಧಿ ೧೯೨೨ಕ್ಕಿಂತ ಮೊದಲಿನದು. ಮತ್ತು ಆಗ ಬ್ರಿಟಿಷರು ಇಡೀ ದೇಶವನ್ನು ಆಳುತ್ತಿದ್ದರು. ಕೊಲ್ಹಾಪುರವು ಸೀಮಿತ ಆರ್ಥಿಕ ಸಾಮರ್ಥ್ಯವನ್ನು ಹೊಂದಿದ ಒಂದು ಚಿಕ್ಕ ಸಂಸ್ಥಾನವಾಗಿತ್ತು. ಒಟ್ಟಾರೆ ವಾತಾವರಣವು ಯಥಾಸ್ಥಿತಿಯಾಗಿತ್ತು. ಅಂತಹ ಸನ್ನಿವೇಶದಲ್ಲಿ ಶಾಹುರವರ ದೃಷ್ಟಿಕೋನ ಪ್ರಗತಿಪರವಾಗಿತ್ತು ಮತ್ತು ಅವರ ಕ್ರಮಗಳು ಸಂತೋಷಕರ, ಆಶ್ಚರ್ಯಕರ ರೀತಿಯಲ್ಲಿ ಬಂದವು.

---

### ಆಧಾರ ಗ್ರಂಥಗಳು

1. Rajarshi Shahu Maharajanchi Bhashane, Ed. Bhagwan Rao Jadhav.
2. Shri Shahu Chhatrapatiche Arthakaran: Prof. Meena Kulakarni and Prof. B. S. Kulakarni.
3. Chhatrapati Shahunche Samajvadi Arthik Dhoran: Dr. V. B. Ghuge.

---

೨೧

# ರಾಧಾನಗರಿ ಅಣೆಕಟ್ಟು: ಕೊಲ್ಹಾಪುರಕ್ಕೆ ಒಂದು ವರ

**ಮೀನಾ ಕುಲಕರ್ಣಿ**

*ಅರ್ಥಶಾಸ್ತ್ರದ ಪ್ರಾಧ್ಯಾಪಕರು*

*"ಮಣ್ಣಿನ ಉತ್ಪಾದಕತೆಯನ್ನು ಸುಧಾರಿಸುವ ಮತ್ತು ನಿಮ್ಮ ಜನರಿಗೆ ಹೆಚ್ಚಿನ ಸಮೃದ್ಧಿಯನ್ನು ನೀಡುವ ನಿಮ್ಮ ನಿಜವಾದ ಅಪೇಕ್ಷೆಯನ್ನು ನೀವು ತೆಗೆದುಕೊಳ್ಳಲು ಪ್ರಸ್ತಾಪಿಸಿರುವ ನೀರಾವರಿಯ ಒಂದು ಬೃಹತ್ ಯೋಜನೆಯು ಒತ್ತಿಹೇಳುತ್ತದೆ ಎಂದು ಹೇಳಲು ನನಗೆ ಸಂತೋಷವಾಗುತ್ತದೆ."*

*(ಲಾರ್ಡ್ ವಿಲ್ಲಿಂಗ್ಟನ್, ಮುಂಬಯಿ ಗೌರ್ನರರು ೨೫-೧೧-೧೯೧೩ರಲ್ಲಿ ಕೊಲ್ಹಾಪುರದಲ್ಲಿ ಮಾಡಿದ ಭಾಷಣದಲ್ಲಿ)*

## ಆರ್ಥಿಕ ಪ್ರಗತಿ ಮತ್ತು ಕೃಷಿಯ ಅಭಿವೃದ್ಧಿ

ಯಾವುದೇ ದೇಶದ ಆರ್ಥಿಕ ಪ್ರಗತಿಯ ಪ್ರಕ್ರಿಯೆಯು ಕೃಷಿ-ಕೈಗಾರಿಕೆ ಮತ್ತು ಸೇವಾವಲಯಗಳ ಅಭಿವೃದ್ಧಿಯೊಂದಿಗೆ ಬೆಸೆದುಕೊಂಡಿದೆ. ಎಲ್ಲಾ ಆರ್ಥಿಕ ಪ್ರಯತ್ನಗಳ ಮುಖ್ಯ ಗುರಿ ನಾಗರಿಕರ ಜೀವನಸ್ತರವನ್ನು ಹೆಚ್ಚಿಸುವುದು ಮತ್ತು ಆರ್ಥಿಕ ಅಸಮಾನತೆಗಳನ್ನು ತಗ್ಗಿಸುವುದು. ಇಪ್ಪತ್ತನೇ ಶತಮಾನದಲ್ಲಿ ಬಹುಮಟ್ಟಿಗೆ ಎಲ್ಲಾ ರಾಷ್ಟ್ರಗಳು ಕಲ್ಯಾಣರಾಜ್ಯದ ಪರಿಕಲ್ಪನೆಯನ್ನು ಒಪ್ಪಿಕೊಂಡಿವೆ. ವಾಸ್ತವಿಕ ಹಣ ಹೂಡಿಕೆಯ ಬಗ್ಗೆ ಕೇಂದ್ರೀಕರಿಸುವ ಅಗತ್ಯ ದೇಶದ ವ್ಯವಹಾರಗಳ ಕೇಂದ್ರದಲ್ಲಿ ಸಾಮಾನ್ಯ ಮನುಷ್ಯನನ್ನು ಇಡುವ ಬಗ್ಗೆ ಸರ್ವಸಮ್ಮತ ಅಭಿಪ್ರಾಯವಾಗಿದೆ. ಒಂದು ಬಡ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಕೃಷಿ ಆಧಾರಿತ ದೇಶವಾದ ಭಾರತದಲ್ಲಿ, ವಿಶೇಷವಾಗಿ ಸ್ವಾತಂತ್ರ್ಯಪೂರ್ವ ಅವಧಿಯ ಪ್ರತಿಕೂಲ ಪರಿಸ್ಥಿತಿಗಳಲ್ಲಿ ಇದನ್ನು ಸಾಧಿಸುವುದು ಕಷ್ಟಸಾಧ್ಯ. ಆದರೆ ಕೆಲವು ರಾಜ ಸಂಸ್ಥಾನಗಳು ಈ ಉದ್ದೇಶಗಳ ಸಾಧನೆಯ ಕಡೆಗೆ ಪ್ರಯತ್ನ ಮಾಡಿವೆ ಮತ್ತು ರಾಜರ್ಷಿ ಶಾಹುರವರ ಕೊಲ್ಹಾಪುರ ಸಂಸ್ಥಾನ ಅವುಗಳಲ್ಲಿ ಒಂದಾಗಿದೆ.

ಶಾಹುರವರು ತನ್ನ ಪ್ರಜೆಗಳ ಮುಂದೆ ಕೆಲವು ಗುರಿಗಳನ್ನು ಮುಂದಿಟ್ಟಿದ್ದರು. ಜನರು ಅನಕ್ಷರಸ್ಥರು, ಬಡವರು, ಹಿಂದುಳಿದವರು ಮತ್ತು ಜಾತಿವಾದಿಗಳು. ಶಾಹುರವರ ಪ್ರಯತ್ನಗಳು ಸಾಮಾನ್ಯ ಮನುಷ್ಯನನ್ನು ಜಾಗೃತಗೊಳಿಸುವುದು, ಅವನ ಶಕ್ತಿಸಾಮರ್ಥ್ಯಗಳ ಬಗ್ಗೆ ಪ್ರಜ್ಞೆ ಮೂಡಿಸುವುದು, ಅವರ ಜೀವನಸ್ತರವನ್ನು ಸುಧಾರಿಸುವುದು, ಅವನನ್ನು ಶಿಕ್ಷಣಕ್ಕೆ ಲಭ್ಯವಿರುವ ಸೌಲಭ್ಯಗಳನ್ನು ಪಡೆಯುವಂತೆ ಮಾಡುವುದು, ಮತ್ತು ವ್ಯಾಪಾರ ಮತ್ತು ವ್ಯವಹಾರಗಳನ್ನು ಪ್ರಾರಂಭಿಸುವಂತೆ ಪ್ರೋತ್ಸಾಹಿಸುವುದರ ಕಡೆಗೆ ಇತ್ತು. ದೃಢಕ್ರಮಗಳು

ಅವರ ಆರ್ಥಿಕ ಪರಿಕಲ್ಪನೆಗಳನ್ನು ಬೆಂಬಲಿಸಿದವು. ಅವರು ತಮ್ಮ ಅಧಿಕಾರ ಮತ್ತು ಸಂಪನ್ಮೂಲಗಳನ್ನು ಜನರ ಕಲ್ಯಾಣಕ್ಕಾಗಿ ಬಳಸಿದರು. ಕೃಷಿ, ಸಹಕಾರಗಳು, ವ್ಯಾಪಾರ, ವ್ಯವಹಾರ, ಸಾರಿಗೆ, ಸಂವಹನ, ಶಿಕ್ಷಣ, ಆರೋಗ್ಯ, ಕಾರ್ಮಿಕರಂಗ ಮತ್ತು ಮಾನವಸಂಪನ್ಮೂಲ ಹೂಡಿಕೆ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಶಾಹುರವರ ಸಾಧನೆಗಳು ಭಾರತದಲ್ಲಿ ನಿಜವಾಗಿಯೂ ಅತ್ಯದ್ಭುತವಾದವುಗಳು. ಅವರ ಏಕೈಕ ಗುರಿ, ಸಾಮಾನ್ಯ ಮನುಷ್ಯನ ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಬೌದ್ಧಿಕ ಪ್ರಗತಿಯಾಗಿತ್ತು. ನೈಸರ್ಗಿಕ ಮತ್ತು ಮಾನವನಿರ್ಮಿತ ಕಷ್ಟಗಳ ವಿರುದ್ಧ ಹೋರಾಡಲು ಅವರು ಎಲ್ಲಾ ಶಕ್ತಿಸಾಮರ್ಥ್ಯಗಳನ್ನು ಕೃಷಿಯ ಅಭಿವೃದ್ಧಿಗೆ ಬಳಸಿದರು. ಆಗ ಬ್ರಿಟಿಷ್ ಇಂಡಿಯಾದಲ್ಲಿದ್ದ ಶೇಕಡ ೮೦ರಷ್ಟು ಜನಸಂಖ್ಯೆ ಕೃಷಿಯನ್ನೇ ಜೀವನೋಪಾಯಕ್ಕಾಗಿ ಅವಲಂಬಿಸಿತ್ತು. ಕೊಲ್ಹಾಪುರದ ರಾಜಸಂಸ್ಥಾನದಲ್ಲಿ ಬಹುಮಟ್ಟಿಗೆ ಇಡೀ ಜನಸಂಖ್ಯೆ ಕೃಷಿಯ ಮೇಲೇ ಬದುಕಿತ್ತು. ಭಾರತದಲ್ಲಿ ರೈತ ಬಡವ, ಅಜ್ಞಾನಿ, ಸಾಂಪ್ರದಾಯಿಕ ಕೃಷಿಯ ವಿಧಾನಗಳನ್ನೇ ಅನುಸರಿಸುತ್ತಿದ್ದಾನೆ, ಮತ್ತು ಹಣದ ಕೊರತೆಯನ್ನು ಎದುರಿಸುತ್ತಿದ್ದಾನೆಂದು ಶಾಹು ಚೆನ್ನಾಗಿ ಅರಿತಿದ್ದರು. ಬೇರೆ ದೇಶಗಳ ಉತ್ಪಾದಕತೆಗೆ ಹೋಲಿಸಿದರೆ ನಮ್ಮ ದೇಶದ ಉತ್ಪಾದಕತೆ ಬಹಳ ಕಡಿಮೆ. ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಯಾವುದೇ ಸಂಘಟಿತ ವ್ಯವಸ್ಥೆಯಿಲ್ಲ. ದೇಶದ ಅಭಿವೃದ್ಧಿಗೆ ಕೃಷಿಯ ಅಭಿವೃದ್ಧಿ ಅತ್ಯಾವಶ್ಯಕವೆಂದು ಮತ್ತು ಗ್ರಾಮೀಣ ಬಡತನ ತಗ್ಗಿಸಲು ರೈತನ ಸ್ಥಿತಿಯನ್ನು ಸುಧಾರಿಸಬೇಕೆಂದು ತಮ್ಮ ಹಲವು ಭಾಷಣಗಳಲ್ಲಿ ಶಾಹು ಹೇಳಿದ್ದರು. ಈ ಗುರಿಯ ಕಡೆಗೆ ಅವರು ಕೃಷಿ-ಸಂಶೋಧನೆ, ಬೇಸಾಯದಲ್ಲಿ ಹೊಸ ಪ್ರಯೋಗಗಳು, ಕೃಷಿಯ ಆಧುನಿಕೀಕರಣ, ಪೂರಕ ಚಟುವಟಿಕೆಗಳು, ಸಹಕಾರಿ ಪ್ರಯೋಗಗಳ ಪ್ರೋತ್ಸಾಹ, ನೀರಾವರಿ ಮತ್ತು ಕಿಂಗ್ ಎಡ್ವರ್ಡ್ ಅಗ್ರಿಕಲ್ಚರಲ್ ಇನ್ಸ್ಟಿಟ್ಯೂಟ್ ಎಂಬಂತಹ ಹಲವಾರು ಉಪಕ್ರಮಗಳನ್ನು ಅವರು ಕೈಗೊಂಡರು. ಸಂಸ್ಥಾನವು ಹಲವು ಸಂದರ್ಭಗಳಲ್ಲಿ ಬರವನ್ನು ಎದುರಿಸಬೇಕಾಯಿತು. ಹೊಸಕೆರೆಗಳ ನಿರ್ಮಾಣ ಸೇರಿದಂತೆ ಮತ್ತು ಹಳೆ ಕೆರೆಗಳ ದುರಸ್ತಿ, ಮೊದಲಾದ ಕ್ರಮಗಳನ್ನು ಕುಡಿಯುವ ನೀರಿನ ಸರಬರಾಜಿಗಾಗಿ ಮತ್ತು ಕೃಷಿಯ ನೀರಾವರಿಗಾಗಿ ತೆಗೆದುಕೊಳ್ಳಲಾಯಿತು. ಈ ಸಣ್ಣ-ಪುಟ್ಟ ಯೋಜನೆಗಳ ಜೊತೆಗೆ ಶಾಹುರವರು ದೀರ್ಘಕಾಲಿಕ ರಾಧಾನಗರಿ ಅಣೆಕಟ್ಟೆಯ ಯೋಜನೆಯನ್ನು ಹಾಕಿಕೊಂಡರು ಮತ್ತು ಕಾರ್ಯಗತಗೊಳಿಸಿದರು. ಅದು ಮಹಾರಾಜರ ನೆನಪಿಗೆ ಸೂಕ್ತವಾಗಿದೆಯೆಂಬುದಕ್ಕೆ ಸಾಕ್ಷಿಯಾಗಿದೆ.

### ಯೋಜನೆ

ಅವರು ೧೯೦೨ರಲ್ಲಿ ಇಂಗ್ಲೆಂಡಿಗೆ ಪ್ರವಾಸಕ್ಕಾಗಿ ಹೋಗಿದ್ದಾಗ ಅಂತಹ ಒಂದು ಅಣೆಕಟ್ಟೆಯ ವಿಚಾರ ಅವರ ಮನಸ್ಸಿನಲ್ಲಿ ಹೊಳೆಯಿತು. ಬ್ರಿಟಿಷರು ಸಂಪನ್ಮೂಲಗಳನ್ನು ಬಹಳ ಎಚ್ಚರಿಕೆಯಿಂದ ಮತ್ತು ಹೆಚ್ಚು ಪ್ರಯೋಜನಕಾರಿಯಾಗಿ ಬಳಸುತ್ತಾರೆಂದು ಮತ್ತು ಭಾರತೀಯರು ಅದನ್ನು ಅನುಕರಿಸುವುದು ಸೂಕ್ತವೆಂದು ಅವರು ಹೇಳುತ್ತಾರೆ. ಗುಡ್ಡಗಾಡು ಪ್ರದೇಶಗಳಲ್ಲಿ ಯಥೇಚ್ಛವಾಗಿ ಮಳೆ ಸುರಿಯುತ್ತದೆ. ಮಳೆಯ ನೀರನ್ನು ತಡೆದು ನಿಲ್ಲಿಸದಿರುವುದರಿಂದ ನೀರೆಲ್ಲ ನದಿಗಳ ಮೂಲಕ ಸಮುದ್ರ ಸೇರುತ್ತದೆ. ಸಂಪದ್ಭರಿತ ಭೂಮಿ ಒಣಗಿರುತ್ತದೆ. ತನ್ನ ದೇಶದಲ್ಲಿ ನೀರಿನ ಸಂಪನ್ಮೂಲವನ್ನು ಸದುಪಯೋಗ ಪಡಿಸಿಕೊಳ್ಳದಿರುವುದಕ್ಕೆ ಶಾಹು ಪರಿತಪಿಸಿದರು. ಅವರು ಜೀವನದುದ್ದಕ್ಕೂ ಈ ಬಗ್ಗೆ ಯೋಚಿಸಿ ಸಂಧಾನ ಮಾಡುತ್ತಿದ್ದರು. ಬರಪರಿಸ್ಥಿತಿಯನ್ನು ನಿಭಾಯಿಸಲು ಸಣ್ಣ ಕೆರೆಗಳ ಮತ್ತು ಬಾವಿಗಳ ನಿರ್ಮಾಣ ಮತ್ತು ಹಾಲಿ ಅಸ್ತಿತ್ವದಲ್ಲಿರುವ ಕೆರೆಗಳ ದುರಸ್ತಿ ಕ್ರಮಗಳನ್ನು ಸಣ್ಣ ಪ್ರಮಾಣದಲ್ಲಿ ಕೈಗೊಂಡಿದ್ದರು. ಇಂಗ್ಲೆಂಡಿನಿಂದ

ವಾಪಸ್ಸು ಬಂದ ಮೇಲೆ ಶಾಹುರವರು ಕೊಲ್ಹಾಪುರ ಸಂಸ್ಥಾನಕ್ಕೆ ಅನ್ವಯಿಸುವ ನೀರಾವರಿ ನೀತಿಯ ಘೋಷಣೆಯನ್ನು ೩-೨-೧೯೦೨ರಲ್ಲಿ ಅಧಿಸೂಚನೆಯನ್ನು ಹೊರಡಿಸಿದರು. ಲೋಕೋಪಯೋಗಿ ಇಲಾಖೆಯಲ್ಲಿ ಒಂದು ನೀರಾವರಿಯ ಪ್ರತ್ಯೇಕ ವಿಭಾಗವನ್ನು ತೆರೆಯಲಾಯಿತು. ಶಂಕರ್ ಸೀತಾರಾಮ್ ಗುಪ್ತೆ ಅವರನ್ನು ನೀರಾವರಿ ಅಧಿಕಾರಿಯೆಂದು ನೇಮಕ ಮಾಡಲಾಯಿತು. ಅವರಿಗೆ ಹಳ್ಳಿಗಳಲ್ಲಿ ನೀರಾವರಿ ಸೌಲಭ್ಯಗಳು ದೊರೆಯುವ ಬಗ್ಗೆ ಸಮಗ್ರ ಸರ್ವೆ ಮಾಡುವ ಹೊಣೆಗಾರಿಕೆಯನ್ನು ವಹಿಸಲಾಯಿತು. ಪ್ರತಿಯೊಂದು ಹಳ್ಳಿಯು ಕೃಷಿಗೆ ನೀರನ್ನು ಸರಕಾರಿ ಕೆರೆ ಮತ್ತು ಖಾಸಗಿ ಬಾವಿಗಳಿಂದ ನೀರನ್ನು ಸರಬರಾಜು ಮಾಡುವ ಒಂದು ಯೋಜನೆಯನ್ನು ರೂಪಿಸಲಾಯಿತು. ಸರ್ವೆಯನ್ನು ಕಾರ್ಯರೂಪಕ್ಕೆ ತರುವ ಸಲುವಾಗಿ ನೀರಾವರಿ ಇಲಾಖೆಗೆ ಹೆಚ್ಚುವರಿ ಸಿಬ್ಬಂದಿಯನ್ನು ನೇಮಿಸಲಾಯಿತು. ಅವಶ್ಯಕ ಸಾಮಗ್ರಿ ಮತ್ತು ಉಪಕರಣಗಳಿಗಾಗಿ ೬೦೦ ರೂ.ಗಳ ಅನುದಾನವನ್ನು ನೀಡಲಾಯಿತು. ಪ್ರತಿಯೊಂದು ತಾಲೂಕಿನ ಕಂದಾಯ ಅಧಿಕಾರಿ ನೀರಾವರಿ ಅಧಿಕಾರಿಗೆ ಮಾಹಿತಿ ಒದಗಿಸುವಂತೆ ಹೇಳಲಾಯಿತು. ಅಧಿಕಾರಿಗಳು ಸಾಧ್ಯವಾಗುವ ನೀರಾವರಿ ಯೋಜನೆಗಳ ವರದಿ ನೀಡಬೇಕಾಗಿತ್ತು. ಕೊಲ್ಹಾಪುರ ಸಂಸ್ಥಾನದ ಕಾರ್ಯನಿರ್ವಾಹಕ ಇಂಜಿನಿಯರ್ ಡಿ. ಎ. ವಿಚಾರೆ ಅವರು ಒಂದು ಯೋಜನೆಯನ್ನು ಸೂಚಿಸಿದರು. ಅದರ ಪ್ರಕಾರ ಫೆಜಿವಾಡೆಯ ಸಮೀಪ ಭೋಗವತಿ ನದಿಗೆ ಮತ್ತು ಭೂದರ್‌ಗಢ್ ತಾಲೂಕಿನ ದೂದ್‌ಗಂಗಾ ನದಿಗಳಿಗೆ ಎರಡು ಅಣೆಕಟ್ಟುಗಳನ್ನು ಕಟ್ಟುವುದು. ಅದಕ್ಕೆ ಸರ್ವೆ ನಡೆಸಲಾಯಿತು. ಬಹಳ ಚರ್ಚೆಗಳ ನಂತರ ಶಾಹುರವರು ಕೊಲ್ಹಾಪುರದ ಪಶ್ಚಿಮದ ೩೦ ಮೈಲಿಗಳ ದೂರದಲ್ಲಿರುವ ಫೆಜಿವಡೆ ಬಳಿ ಭೋಗವತಿ ನದಿಗೆ ಅಣೆಕಟ್ಟು ಕಟ್ಟಲು ೧೯೦೭ರಲ್ಲಿ ನಿರ್ಧರಿಸಿದರು. ಅದು ಕೊಲ್ಹಾಪುರ ಜಿಲ್ಲೆಯಲ್ಲಿ ಕೃಷಿಯಲ್ಲಿ ಸಂಪೂರ್ಣ ಬದಲಾವಣೆಯನ್ನೇ ಮಾಡಿಬಿಟ್ಟಿತು. ಮತ್ತು ಮಹಾರಾಷ್ಟ್ರದಲ್ಲಿ ಪ್ರಥಮ ಹಸಿರುಕ್ರಾಂತಿಯನ್ನು ಘೋಷಿಸಿತು.

**ಶಾಹುರವರ ಒಳಗೊಳ್ಳುವಿಕೆ**

ರಾಧಾನಗರಿ ಅಣೆಕಟ್ಟಿನ ಬಗ್ಗೆ ನಿರ್ಧಾರ ಕೈಗೊಂಡಾಗ ಶಾಹುರವರು ಸಂಪೂರ್ಣವಾಗಿ ಅದರಲ್ಲಿ ತೊಡಗಿಸಿಕೊಂಡರು. ಉದ್ದಕ್ಕೂ ಅವರು ಅದರ ಬಗ್ಗೆಯೇ ಚಿಂತಿತರಾಗಿದ್ದರು. ಅವರು ತಮ್ಮ ಪತ್ರಗಳಲ್ಲೊಂದರಲ್ಲಿ ಹೇಳುತ್ತಾರೆ: "ಈ ಯೋಜನೆಯನ್ನು ಪೂರೈಸಿದಾಗ ನನ್ನ ಜೀವನದ ಕೆಲಸ ಮಾಡಿದಂತಾಗುತ್ತದೆ." ಅಣೆಕಟ್ಟು ನಿರ್ಮಿಸುವುದೇ ಅವರ ಜೀವನದ ಹೆಗ್ಗುರಿ (ಮಿಷನ್ನು) ಆಯಿತು. ಅವರು ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಅಣೆಕಟ್ಟು ನಿರ್ಮಾಣಕ್ಕೆ ಅನುಕೂಲವಾಗುವ ಪ್ರತಿಯೊಂದು ಸಾಧ್ಯವಾಗುವ ಕ್ರಮವನ್ನು ತೆಗೆದುಕೊಂಡರು. ಅವರು ಆಗಿನ ಬಾಂಬೆಯ ಗೌರ್ನರ್, ಗೌರ್ನರರ ಸಲಹಾಮಂಡಳಿ, ಬಾಂಬೆ ಸಂಸ್ಥಾನದ ಲೋಕೋಪಯೋಗಿ ಇಲಾಖೆ ಮತ್ತು ಅದರ ಇಂಜಿನಿಯರುಗಳ ಜೊತೆಯಲ್ಲಿ ಸಮಯ ಸಿಕ್ಕಿದಾಗಲೆಲ್ಲ ಚರ್ಚಿಸುತ್ತಿದ್ದರು. ಈ ಪರಿಣಿತರಿಂದ ಬಂದ ಸಲಹೆಗಳ ಬೆಳಕಿನಲ್ಲಿ ಅವರು ತಮ್ಮ ಮೂಲ ಯೋಜನೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದರು. ಬಾಂಬೆ ಸರಕಾರದ ಬೆಂಬಲವಿಲ್ಲದೆ ಯೋಜನೆಯು ಪರಿಪೂರ್ಣವಾಗಲಾರದೆಂದು ಅವರಿಗೆ ಚೆನ್ನಾಗಿ ತಿಳಿದಿದ್ದರಿಂದ ಅವರು ಆ ವಿಷಯದ ಬಗ್ಗೆ ಬಾಂಬೆ ಸರಕಾರದ ಮನವೊಲಿಸಿದರು. ಅಣೆಕಟ್ಟಿನ ನಿರ್ಮಾಣ ಕಾರ್ಯವನ್ನು ಶೀಘ್ರಗೊಳಿಸುವುದಕ್ಕಾಗಿ ಯೋಚಿಸಿ ಅವರು ಗೌರ್ನರರು ಅಣೆಕಟ್ಟಿನ ಪ್ರದೇಶಕ್ಕೆ ಭೇಟಿ ನೀಡುವಂತೆ ಅವರನ್ನು ಮನವೊಲಿಸಿದರು.

ಗೌರ್ನರರು ಭೇಟಿ ನೀಡುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ಸಂಬಂಧಪಟ್ಟ ಬ್ರಿಟಿಷ್ ಅಧಿಕಾರಿಗಳಿಗೆ ಕೋರಿ ಪತ್ರ ಬರೆದರು. ಅವರ ಪ್ರಯತ್ನಗಳು ಅಂತಿಮವಾಗಿ ಸಫಲವಾದವು. ೧೯೦೭–೦೮ರ ಸಾಲಿನ ಆಡಳಿತಾತ್ಮಕ ವರದಿಯ ಪ್ರಕಾರ ಆಗಿನ ಬಾಂಬೆ ಗೌರ್ನರರಾದ ಲಾರ್ಡ್ ಲ್ಯಾಮಿಂಗ್‌ಟನ್ ಮಾರ್ಚ್-೨೧ ಮತ್ತು ಮಾರ್ಚ್ ೨೪, ೧೯೦೮ರ ನಡುವೆ ಕೊಲ್ಹಾಪುರಕ್ಕೆ ಭೇಟಿ ನೀಡಿದ್ದರು. ಗೌರ್ನರರು ಮಾರ್ಚ್ ೨೩, ೧೯೦೮ರಂದು ದಾಜಿಪುರದಲ್ಲಿದ್ದ ಪ್ರಾಜೆಕ್ಟಿನ ನಿವೇಶನಕ್ಕೆ ಭೇಟಿ ನೀಡಿದ್ದರು. ಅವರು ಶಾಹುರವರಿಗೆ ಕೊಲ್ಹಾಪುರದ ಸಂಸ್ಥಾನಕ್ಕೆ ಅಣೆಕಟ್ಟಿನಿಂದ ಪ್ರಯೋಜನವಾಗುವುದರಿಂದ ಎಲ್ಲಾ ಸಹಾಯ ಮಾಡುವುದಾಗಿ ಭರವಸೆ ನೀಡಿದರು. ದಿನಾಂಕ ಮಾರ್ಚ್ ೯, ೧೯೦೯ರ ಪತ್ರವ್ಯವಹಾರದಲ್ಲಿ ಗೌರ್ನರರು ಬರೆಯುತ್ತಾರೆ: "ಈ ಅತ್ಯುತ್ತಮ ಕಾಮಗಾರಿಯು ನಿಮ್ಮ ಪ್ರಯೋಜನಕಾರಿ ಆಡಳಿತಕ್ಕೆ ಶಾಶ್ವತವಾದ ಸ್ಮಾರಕವೊಂದಾಗುವುದೆಂಬುದು ನಮ್ಮ ಕಳಕಳಿಯ ಅಪೇಕ್ಷೆಯಾಗಿದೆ . . .. ಇದು ಒಂದು ಸುಂದರವಾದ ಪರಿಕಲ್ಪನೆ. ಮಹಾಸಾಧ್ಯತೆಗಳ ಪರಿಪೂರ್ಣತೆಯಾಗಿದೆ ಮತ್ತು ನಿಮ್ಮ ಸಂಸ್ಥಾನಕ್ಕೆ ಮಾಡುವ ಅಂತಹ ಮಹಾನ್ ಮತ್ತು ಶಾಶ್ವತವಾದ ಪ್ರಯೋಜನಕ್ಕಿಂತ ಘನತೆವೆತ್ತ ಮಹಾರಾಜರು ಮತ್ತೇನು ಮಾಡಲು ಸಾಧ್ಯ."

ಗೌರ್ನರರು ಅಣೆಕಟ್ಟಿನ ಸೂಕ್ತ ಮಾರ್ಗದರ್ಶನಕ್ಕಾಗಿ ಕೊಲ್ಹಾಪುರಕ್ಕೆ ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್ ಮತ್ತು ಕಾರ್ಯದರ್ಶಿಗಳನ್ನು ನಿಯೋಜಿಸಿದರು. ಶಾಹುರವರ ನಾಸಿಕ್ನಲ್ಲಿರುವ ಭಾರೀ ನೀರಾವರಿ ಯೋಜನೆಗೆ ನವೆಂಬರ್ ೧೯೦೯ರಲ್ಲಿ ವಿಷಯ ತಿಳಿದುಕೊಳ್ಳಲು ಭೇಟಿ ನೀಡಿದರು. ಶಾಹುರವರು ಬಾಂಬೆಯ ರಾಜಕೀಯ ಇಲಾಖೆಗೆ ಬರೆದ ಪತ್ರದಲ್ಲಿ (ನವೆಂಬರ್ ೫, ೧೯೦೯) ಈ ಭೇಟಿಯ ಪ್ರಸ್ತಾಪವಿದೆ, ಆದರೆ ನಿರ್ದಿಷ್ಟ ಪ್ರಾಜೆಕ್ಟಿನ ಉಲ್ಲೇಖವಿಲ್ಲ.

ಈ ಎಲ್ಲಾ ಪತ್ರವ್ಯವಹಾರಗಳು (ಸಂವಹನಗಳು) ಅತ್ಯುತ್ತಮ ಮತ್ತು ದೋಷರಹಿತ ಅಣೆಕಟ್ಟೆ ನಿರ್ಮಾಣಕ್ಕೆ ಖಾತರಿಗೊಳಿಸುವ ಶಾಹುರವರ ನಿರಂತರ ವೈಯಕ್ತಿಕ ಪ್ರಯತ್ನಗಳನ್ನು ತೋರಿಸುತ್ತವೆ. ಮಹಾರಾಣಿ ಲಕ್ಷ್ಮೀಬಾಯಿ ಅವರ ಹೆಸರಿನಲ್ಲಿ ಕಟ್ಟಿಸುತ್ತಿರುವ ಈ ಅಣೆಕಟ್ಟಿನ ನಿಜವಾದ ಕೆಲಸವನ್ನು ಅವರೇ ನವೆಂಬರ್ ೧೯೦೯ರಂದು ಉದ್ಘಾಟಿಸಿದರು.

### ಭೌಗೋಳಿಕ ಸನ್ನಿವೇಶ

ಕೊಲ್ಹಾಪುರದ ೬೦ ಮೈಲಿಗಳ ದೂರದಲ್ಲಿ ಸಹ್ಯಾದ್ರಿ ಬೆಟ್ಟಗಳ ಸಾಲಿನಲ್ಲಿ ಭೋಗವತಿ ನದಿ ಹುಟ್ಟುತ್ತದೆ. ಅದು ತನ್ನ ದಾರಿಯಲ್ಲಿ ತಿರುಗಿ ಗುಡ್ಡಗಾಡು ಪ್ರದೇಶಗಳ ಮೂಲಕ ಕೊಲ್ಹಾಪುರ ತಲುಪಿ. ಅಲ್ಲಿಂದ ಬಯಲು ಪ್ರದೇಶದಲ್ಲಿ ಹರಿಯುತ್ತದೆ. ಈ ಪ್ರದೇಶವು ೨೦೦ ಇಂಚುಗಳ ಮಳೆಯನ್ನು ಪಡೆಯುತ್ತದೆ. ಪಶ್ಚಿಮಘಟ್ಟಗಳಲ್ಲಿ ಹುಟ್ಟುವ ಭೋಗವತಿ ಮತ್ತು ಇತರೆ ೧೫ ನದಿಗಳು ಫಲವತ್ತಾದ ಪೂರ್ವದ ಬಯಲು ಪ್ರದೇಶಗಳಲ್ಲಿ ಹರಿಯುತ್ತದೆ. ಈ ಭೌಗೋಳಿಕ ಪರಿಸ್ಥಿತಿಯನ್ನು ಪರಿಗಣಿಸಿ, ಶಾಹುರವರು ಭೋಗವತಿ ನದಿಗೆ ೪೦ ಅಡಿ ಎತ್ತರದ ಅಣೆಕಟ್ಟನ್ನು ಕಟ್ಟಲು ನಿರ್ಧರಿಸಿದರು. ಅದು ಅಣೆಕಟ್ಟೆಗೆ ಒಂದು ಸೂಕ್ತವಾದ ನಿವೇಶನವಾಗಿತ್ತು. ಇದು ಅಸ್ತಿವಾರಕ್ಕೆ (ಬುನಾದಿ) ಸುಲಭವಾಗಿ ಬಲಿಷ್ಠವಾದ ಒಂದು ಸ್ತರಶ್ರೇಣಿಯಾಗಿತ್ತು. (ಜಲಾನಯನ ಪ್ರದೇಶ ೪೨.೫ ಚದರ ಮೈಲಿಗಳು. ಅಣೆಕಟ್ಟಿನ (ಜಲಾಶಯ) ನೀರು, ಏಳು ಚದರ ಮೈಲಿಗಳರೆಗೆ ಹರಡಿಕೊಂಡಿರುತ್ತದೆ. ೧೯೫೨ರ ಲೋಕೋಪಯೋಗಿ ಇಲಾಖೆಯ ಪ್ರಕಾರ) ಯಥೇಚ್ಛವಾಗಿ

ಜಲಾನಯನ ಪ್ರದೇಶದಲ್ಲಿ ಮಳೆ ಸುರಿಯುವುದರಿಂದ ಅಣೆಕಟ್ಟು ತನ್ನ ಸಾಮರ್ಥ್ಯ ತುಂಬುವುದೆಂದು ನಿರೀಕ್ಷಿಸಲಾಗುತ್ತದೆ. ಅಣೆಕಟ್ಟು ಕಟ್ಟಿದಾಗಿನಿಂದ ಸರಾಸರಿ ವಾರ್ಷಿಕ ೧೭೪.೮೬ ಇಂಚುಗಳ ಮಳೆಯಾಗುತ್ತದೆ. ಶೇಕಡ ೨೦ರಷ್ಟು ನೀರು ಆವಿ ಮತ್ತು ಸೋರಿಹೋಗುವುದನ್ನು ಬಿಟ್ಟು ಶೇಕಡ ೮೦ರಷ್ಟು ಸಂಗ್ರಹವಾದ ನೀರು ಬಳಸಲಾಗುವುದು. ಅಣೆಕಟ್ಟು ಪೂರ್ಣವಾದಾಗ ಅದರ ಎತ್ತರ ೧೪೦ ಅಡಿಯಾಗುತ್ತದೆ.

## ಪರಿಣತರೊಡನೆ ಸಮಾಲೋಚನೆ

ಅದರ ನಿರ್ಮಾಣದ ಹಂತದಲ್ಲಿ ಶಾಹುರವರು ನಿರಂತರವಾಗಿ ಬ್ರಿಟಿಷ್ ಪರಿಣತರ ಸಂಪರ್ಕದಲ್ಲಿದ್ದರು. ಅವರು ಕೊಲ್ಹಾಪುರದ ಮಾಜಿ ರಾಜಕೀಯ ಏಜೆಂಟ್, ಲೆಫ್ಟಿನೆಂಟ್ ಕರ್ನಲ್ ಡಬ್ಲ್ಯು. ಬಿ. ಫೆರಿಸ್, ಸರ್ ಡಬ್ಲ್ಯು. ಟಿ. ಮಾರಿಸನ್, ಬಾಂಬೆಯ ಮಾಜಿ ಗೌರ್ನರ್ ಲಾರ್ಡ್ ಸಿಡ್ನೆಹ್ಯಾಮ್, ಮತ್ತು ಬಾಂಬೆ ಸರಕಾರದ ಮುಖ್ಯ ಇಂಜಿನಿಯರ್ ಎ. ಹಿಲ್ ಅವರೊಡನೆ ಸಂವಹನ ನಡೆಸುತ್ತಿದ್ದರು. ಅವರು ಲೆಫ್ಟಿನೆಂಟ್ ಕರ್ನಲ್ ಫೆರೀಸ್ ಅವರಿಗೆ ಬರೆಯುತ್ತಾರೆ: "ನೀವು ನಮ್ಮನ್ನು ಬಿಟ್ಟು ಹೋದ ಮೇಲೆ ನಾನು ೨೦ ಕೆರೆಗಳನ್ನು ಕಟ್ಟಿಸಿದ್ದೇನೆ. ಆದರೆ ನನಗೆ ತೃಪ್ತಿಯಾಗಿಲ್ಲ. ಆದ್ದರಿಂದ ನಾನು ಒಂದು ಭಾರೀ ನೀರಾವರಿ ಯೋಜನೆಯನ್ನು ಕೈಗೊಂಡಿದ್ದೇನೆ. ಮತ್ತು ಕೆರೆಯು (ಅಣೆಕಟ್ಟು) ಭಾರತದಲ್ಲಿಯೇ ಅತಿ ದೊಡ್ಡದು. ನಾನು ನನ್ನ ಎಲ್ಲಾ ಶಕ್ತಿಯನ್ನು ಅದಕ್ಕೆ ಸುರಿದಿದ್ದೇನೆ. ಈಗ ನಾನು ಮತ್ತು ಬಾಬಾಸಾಹೇಬರು ನಿವೇಶನದಲ್ಲಿ ಕೆಲಸ ಮಾಡುತ್ತಿದ್ದೇವೆ. ಅದು ಸಫಲವಾಗುವುದೆಂದು ನಾನು ಅಭಿಲಾಷೆ ಪಡುತ್ತೇನೆ." ಅವರು ನಿರ್ಮಾಣದ ವಸ್ತುಗಳು, ಅಣೆಕಟ್ಟಿನ ಬಲ, ಇಂಜಿನಿಯರುಗಳ ನೇಮಕ ಮತ್ತು ನಿರ್ಮಾಣದ ಪರಿವೀಕ್ಷಣೆ ಮೊದಲಾಗಿ ನಾನಾ ವಿಷಯಗಳ ಬಗ್ಗೆ ಸಲಹೆ ಕೇಳಲು ಹಿಲ್ ಅವರೊಂದಿಗೆ ತಮ್ಮ ಪತ್ರವ್ಯವಹಾರದಲ್ಲಿ ಅವರು ಚರ್ಚಿಸಿದ್ದರು. ಆ ಕಾಲಕ್ಕೆ ಈ ಯೋಜನೆಯು ಮಹತ್ವಾಕಾಂಕ್ಷೆಯದು. ಆದ್ದರಿಂದ ಶಾಹುರವರು ಮತ್ತೆ ಮತ್ತೆ ಅಗತ್ಯ ಸಂಪನ್ಮೂಲಗಳು, ಸಾಲ ಮತ್ತು ಇತರೆ ಸಹಾಯಕ್ಕಾಗಿ ಬಾಂಬೆ ಗೌರ್ನರರೊಂದಿಗೆ ಸಮಾಲೋಚನೆ ನಡೆಸುತ್ತಿದ್ದರು. ಮಹಾರಾಜರ ಒತ್ತಾಯದ ಮೇರೆಗೆ ಹಲವು ಬ್ರಿಟಿಷ್ ಅಧಿಕಾರಿಗಳು ಅಣೆಕಟ್ಟಿನ ನಿವೇಶನಕ್ಕೆ ಭೇಟಿ ನೀಡಿದ್ದರು. ಮತ್ತು ಶಾಹುರವರ ಕೆಲಸವನ್ನು ಮೆಚ್ಚಿದರು. ಬ್ರಿಟಿಷ್ ಅತಿಥಿಗಳಿಗೆ ಬೇಟೆಯ ಮಿಷನ್ನುಗಳನ್ನು ದಾಜಿಪುರ್ ಕಾಡುಗಳಲ್ಲಿ ವ್ಯವಸ್ಥೆಗೊಳಿಸಿದ್ದರು.

## ಅಣೆಕಟ್ಟಿನ ನಿರ್ಮಾಣದ ವಾಸ್ತವತೆ

ಅಣೆಕಟ್ಟಿನ ನಿರ್ಮಾಣದ ಗುತ್ತಿಗೆಯನ್ನು ಪ್ರಾರಂಭದಲ್ಲಿ ಬಾಂಬೆಯ ಕೌಡರ್ ಅಂಡ್ ಕಂಪನಿಗೆ ನೀಡಲಾಗಿತ್ತು. ಆದರೆ ಕಂಪನಿಯು ಕೊಲ್ಹಾಪುರ ದರ್ಬಾರಿನೊಡನೆ ಮಾಡಿಕೊಂಡ ಒಪ್ಪಂದದ ಪ್ರಕಾರ ಕಾಮಗಾರಿಯನ್ನು ಮಾಡಲಿಲ್ಲ. ೧೯೦೮-೦೯ನೇ ಸಾಲಿನ ವರದಿಯ ಪ್ರಕಾರ ಯೋಜನೆಯ ಅಂದಾಜು ಮಾಡಿದ ವೆಚ್ಚ ೩೩ ಲಕ್ಷ ರೂ.ಗಳು. ೧೯೦೯ರ ಮುಂದಕ್ಕೆ ಕಾಮಗಾರಿಯನ್ನು ಭಾಗಶಃ ಗುತ್ತಿಗೆ ಪದ್ಧತಿಯ ಪ್ರಕಾರ ಮತ್ತು ಭಾಗಶಃ ಕೊಲ್ಹಾಪುರ ಸಂಸ್ಥಾನದ ಇಲಾಖೆಯಿಂದ ಮಾಡಲಾಗುತ್ತಿತ್ತು. ಶಾಹುರವರ ಕಿರಿಯ ತಮ್ಮ ಬಾಪುಸಾಹೇಬರು ನಿರೀಕ್ಷಕ ಮಿಟ್ಟರ್, ಮತ್ತು ಸಹಾಯಕ ಇಂಜಿನಿಯರ್ ಗುಪ್ತೆಯವರ ಸಹಕಾರದಿಂದ ವೈಯಕ್ತಿಕವಾಗಿ ಉಸ್ತುವಾರಿ ಮಾಡುತ್ತಿದ್ದರು. ಬುನಾದಿಯ ಕೆಲಸ ಬಹು ಬೇಗನೇ ನಡೆಯಿತು. ಏಕೆಂದರೆ ನಿವೇಶನದ ಬಳಿಯಿದ್ದ ಜಾಗ ಕಲ್ಲುಬಂಡೆಯಾಗಿತ್ತು. ಪ್ರಾಥಮಿಕ ಕೆಲಸಗಳಾದ ಕ್ವಾರಿಗಳ (ಗಣಿಗಳ) ಪ್ರಾರಂಭ, ಅಡ್ಡಪಟ್ಟಿ ಕಟ್ಟುವುದು, ಮರಳಿನ ಸಂಗ್ರಹ ಮೊದಲಾದವು ನಡೆದವು.

ಒಂದು ವರ್ಷದ ನಂತರ ಕಲ್ಲಿನ ಕೆಲಸ ಪ್ರಾರಂಭವಾಯಿತು. ಬಾಂಬೆ ಸರಕಾರದ ಲೋಕೋಪಯೋಗಿ ಇಲಾಖೆಯ ಕಾರ್ಯದರ್ಶಿ ಹಿಲ್ ಅವರು ನಿವೇಶನಕ್ಕೆ ಭೇಟಿ ನೀಡಿದರು. ಮತ್ತು ಬುನಾದಿಯ ಕೆಲಸ ಮತ್ತು ಕಲ್ಲಿನ ಕೆಲಸದ ಬಗ್ಗೆ ಸಂತೃಪ್ತಿಯನ್ನು ವ್ಯಕ್ತಪಡಿಸಿದರು. ೧೯೧೦-೧೧ನೇ ಸಾಲಿನ ವರದಿಯ ಪ್ರಕಾರ ಬ್ರಿಟಿಷ್ ಇಂಜಿನಿಯರ್ ಹ್ಯಾಂಕಲ್ ಅವರ ಮಾರ್ಗದರ್ಶನದಲ್ಲಿ ಬಲದಂಡೆಯ ಕಾಲುವೆಯ ಸರ್ವೆ ಕೆಲಸವನ್ನು ಮಾಡಿಸಲಾಯಿತು. ಬಾಂಬೆ ಸರಕಾರವು ಸೂಪರಿಂಟೆಂಡೆಂಟಿಂಗ್ ಎಂಜಿನಿಯರ್ ರೈಲ್ ಅವರು ಪ್ರತಿ ಮೂರು ತಿಂಗಳಿಗೊಮ್ಮೆ ಅಣೆಕಟ್ಟೆಯ ನಿವೇಶನಕ್ಕೆ ಭೇಟಿ ನೀಡಬೇಕೆಂದು ಅವರಿಗೆ ಹೇಳಲಾಯಿತು. ೧೯೧೩-೧೪ನೇ ಸಾಲಿನ ವರದಿಯ ಪ್ರಕಾರ ಬಿ. ಪಿ. ಜಗತಾಪ್ ಅವರನ್ನು ಕಾರ್ಯನಿರ್ವಾಹಕ ಇಂಜಿನಿಯರ್ ಆಗಿ ನೇಮಕ ಮಾಡಲಾಯಿತು. ರಾಧಾನಗರಿ ಅಣೆಕಟ್ಟಿನ ಮೇಲೆ ಯಾವುದೇ ಖರ್ಚು ೧೯೧೮-೧೯ನೇ ಸಾಲಿನಲ್ಲಿ ಆಗಿಲ್ಲದಿರುವುದರಿಂದ ಆಡಳಿತಾತ್ಮಕ ವರದಿ ಈ ವರ್ಷ ಕಾಮಗಾರಿಯನ್ನು ನಿಲ್ಲಿಸಲಾಗಿತ್ತೆಂದು ಹೇಳುತ್ತದೆ. ಈ ಕೆಳಕಂಡ ಪಟ್ಟಿಯು ನಿರ್ಮಾಣದ ವಾರ್ಷಿಕ ಪ್ರಗತಿಯನ್ನು ತೋರಿಸುತ್ತದೆ.

| ವರ್ಷ | ನಿರ್ಮಾಣ (ಘನ ಅಡಿ) | ಖರ್ಚು | ಕಾಮಗಾರಿ |
|---|---|---|---|
| ೧೯೦೯-೧೦ | — | ೬೬೦೦೦ | ೨೦೦೦ |
| ೧೯೧೦-೧೧ | ೨,೦೦,೦೦೦ | ೬೮೨೯ | ೩೦೦೦ |
| ೧೯೧೧-೧೨ | ೨,೫೨,೭೦೦ | ೧,೨೯,೧೭೩ | ೩೧೦೦ |
| ೧೯೧೨-೧೩ | ೪,೧೦,೫೭೭ | ೪,೪೭,೦೬೭ | ೩೧೦೦ |
| ೧೯೧೩-೧೪ | ೯,೧೨,೯೭೭ | ೨,೦೭,೯೬೮ | ೩೧೦೦ |
| ೧೯೧೪-೧೫ | ೭,೬೧,೦೦೦ | ೧,೯೯,೧೬೭ | ೩೦೦೦ |
| ೧೯೧೫-೧೬ | ೬,೦೦,೦೦೦ | ೨,೨೫,೨೧೯ | — |
| ೧೯೧೬-೧೭ | ೫,೦೯,೩೦೦ | ೧,೮೩,೧೦೪ | ೨೦೦೦ |
| ೧೯೧೭-೧೮ | ೬೧,೧೨೮ | ೩೩,೯೪೬ | — |

(ಉಲ್ಲೇಖ: ಕೊಲ್ಹಾಪುರ ಸಂಸ್ಥಾನದ ೧೯೦೯-೧೯೧೮ರವರೆಗಿನ ಆಡಳಿತದ ವರದಿಗಳು)

ಸಂಪನ್ಮೂಲಗಳ ಕೊರತೆ, ಆಧುನಿಕ ತಂತ್ರಜ್ಞಾನದ ಕೊರತೆ ಮೊದಲಾದ ಹಲವಾರು ಅಡ್ಡಿ-ಆತಂಕಗಳನ್ನು ಮೀರಿ, ೪೦ ಅಡಿ ಎತ್ತರದ ಅಣೆಕಟ್ಟನ್ನು ೧೪ ಲಕ್ಷ ರೂ.ಗಳ ಖರ್ಚಿನಲ್ಲಿ ೧೯೧೮ರಲ್ಲಿ ನಿರ್ಮಾಣದ ಕಾಮಗಾರಿಯನ್ನು ಸಂಪೂರ್ಣಗೊಳಿಸಲಾಯಿತು. ಪ್ರತಿ ಸಲವೂ ಜಲಾಶಯದಲ್ಲಿ ತಾತ್ಕಾಲಿಕ ಬಾಂದುಗಳ ಮೂಕ ಸುಮಾರು ೬ ದಶಲಕ್ಷ ಘನ ಅಡಿ ನೀರನ್ನು ಸಂಗ್ರಹಿಸಿ ಕೃಷಿಗೆ ಸರಬರಾಜು

ಮಾಡಲಾಗುತ್ತಿತ್ತು. ೧೯೪೬ ಮತ್ತು ೧೯೫೭ರ ನಂತರ ಅಣೆಕಟ್ಟಿನ ಎತ್ತರವನ್ನು ಎತ್ತರಿಸಿ ಕಾಮಗಾರಿಯನ್ನು ಸಂಪೂರ್ಣಗೊಳಿಸಲಾಯಿತು.

ಶಾಹುರವರು ಲಕ್ಷ್ಮಿ ಜಲಾಶಯದ ಬಳಿ ಒಂದು ಚಿಕ್ಕ ಪಟ್ಟಣವನ್ನು ಸ್ಥಾಪಿಸಿದರು ಮತ್ತು ಅದಕ್ಕೆ ಅವರ ಮಗಳ ಹೆಸರನ್ನು ಇಟ್ಟರು. ಆದ್ದರಿಂದ ಅದು ರಾಧಾನಗರಿ ಎಂದು ಹೆಸರುವಾಸಿಯಾಗಿದೆ. ಅವರ ರಾಧಾನಗರಿಯ ಅಭಿವೃದ್ಧಿಗೆ ಎಲ್ಲಾ ಸಹಾಯಗಳನ್ನು ಮಾಡಿದರು ಮತ್ತು ಅಲ್ಲಿ ಅವರು ವ್ಯಾಪಾರ ಮತ್ತು ಟೀ ತೋಟಗಾರಿಕೆಯನ್ನು ಉತ್ತೇಜಿಸಿದರು.

## ನಿರ್ಮಾಣದಲ್ಲಿ ಎದುರಿಸಿದ ಸಮಸ್ಯೆಗಳು

ಅಣೆಕಟ್ಟು ಕಟ್ಟುವಾಗ ಕೆಲವು ಸಮಸ್ಯೆಗಳು ಉದ್ಭವಿಸಿದವು. ಪ್ರಾರಂಭದಲ್ಲಿ ಗುತ್ತಿಗೆದಾರರು ಸಾಕಷ್ಟು ಅನುಭವದಾರರಾಗಿರಲಿಲ್ಲ. ಯೋಜನೆಯು ಆರ್ಥಿಕವಾಗಿ ಪ್ರಯೋಜನಕಾರಿಯಾಗಿರಬೇಕೆಂಬ ಬಗ್ಗೆ ಸಂದೇಹಗಳು ಮೂಡಿದವು. ಕರವೀರ ಮತ್ತು ಆಲ್ಟೆ ತಾಲ್ಲೂಕುಗಳಿಗೆ ಪ್ರಯೋಜನವಾಗಲು ಒಂದು ಉದ್ದವಾದ ಕಾಲುವೆ ಗುಡ್ಡಗಾಡು ಪ್ರದೇಶದಿಂದ ಹಾದು ಬರಬೇಕಾಗಿತ್ತು. ನದಿಪ್ರವಾಹವನ್ನು ತಿರುಗಿಸಿ ಕೊಲ್ಹಾಪುರ ಸಂಸ್ಥಾನದ ಎಲ್ಲೆಗಳ ಹೊರಗಡೆ ಪ್ರದೇಶದಲ್ಲಿ ಕಾಲುವೆಯನ್ನು ನಿರ್ಮಾಣಮಾಡುವುದು ಮತ್ತೊಂದು ಆಯ್ಕೆಯಾಗಿತ್ತು. ಜಲಾನಯನ ಪ್ರದೇಶ ೨೦೦ ಇಂಚುಗಳಷ್ಟು ಮಳೆಯನ್ನು ವರ್ಷ ಪಡೆಯುತ್ತಿದ್ದರಿಂದ ಅಣೆಕಟ್ಟೆಯ ಬಾಳಿಕೆಯ ಬಗ್ಗೆ ಶಾಹುರವರ ಆತಂಕವಿತ್ತು. ಆದ್ದರಿಂದ ಅವರು ತಮ್ಮ ಕಾರ್ಯನಿರ್ವಾಹಕ ಇಂಜಿನಿಯರುಗಳನ್ನು ಹಿಲ್ ಅವರೊಂದಿಗೆ ಚರ್ಚಿಸಲು ನಿಯೋಜಿಸಿದ್ದರು. ಯೋಜನೆಯು ಸಫಲವಾಗಬೇಕು ಮತ್ತು ತನ್ನ ಸಂಸ್ಥಾನದ ಜನರು ಪ್ರಯೋಜನ ಪಡೆಯಬೇಕೆಂಬುದೇ ಶಾಹುರವರ ಕಾಳಜಿಯಾಗಿತ್ತು. ಬೇರೆ ಸಂಸ್ಥಾನಗಳಲ್ಲಿ ಅಂತಹ ಯೋಜನೆಗಳು ವಿಫಲಗೊಂಡಿದ್ದನ್ನು ಶಾಹು ಕಂಡಿದ್ದರು. ಉದಾಹರಣೆಗೆ ಭಾವನಗರದ ಬಳಿಯಿರುವ ಬಂದರು ಅಥವಾ ಕಾಥೆವಾಡದಲ್ಲಿರುವ ಕೆರೆಗಳಲ್ಲಿ ನೀರೇ ಸಂಗ್ರಹವಾಗುವುದಿಲ್ಲ. ಯೋಜನೆಗಳಲ್ಲಿ ದೋಷಗಳಿದ್ದರಿಂದ ಅವು ವಿಫಲವಾದವು ಎಂದು ಅವರು ನಂಬಿದ್ದರು. ಆದ್ದರಿಂದ ಅವರು ಈ ದೋಷಗಳನ್ನು ತಪ್ಪಿಸಲು ಬಯಸಿದ್ದರು. ಅವರು ಒಮ್ಮೆ ಹೇಳಿದ್ದರು: "ನಾನು ಒಬ್ಬ ಸಾಮಾನ್ಯ ಮನುಷ್ಯನಾಗಿ ನಾನು ಸಾಮಾನ್ಯ ಪ್ರಜ್ಞೆ, ಬುದ್ಧಿ, ಪ್ರಯೋಗಳನ್ನು ಅಂತಹ ವಿಫಲತೆಗಳು ಉಂಟಾಗದಂತೆ ಬಳಸುತ್ತೇನೆ."

ಶಾಹುರವರು ಹಲವಾರು ಇಂಜಿನಿಯರುಗಳ ಪರಿಣತಿಯನ್ನು ಕೋರಿದರು ಮತ್ತು ಇಬ್ಬರು ಇಂಜಿನಿಯರುಗಳು ಒಂದು ಧ್ವನಿಯಲ್ಲಿ (ಅಭಿಪ್ರಾಯ) ಮಾತನಾಡಿದ್ದನ್ನು ಎಂದಿಗೂ ಕಾಣಲಿಲ್ಲ ಎಂಬ ತೀರ್ಮಾನಕ್ಕೆ ಬಂದರು. ಹಿಲ್, ಹ್ಯಾಂಕಲ್, ರೈಟ್ ಮತ್ತು ದಲಾಲರು ನಾನಾ ರೀತಿಯ ಸಲಹೆಗಳನ್ನು ನೀಡಿದರು. ಶಾಹು ಗೊಂದಲಗೊಂಡರು ಮತ್ತು ಅಣೆಕಟ್ಟಿನ ಭವಿಷ್ಯದ ಬಗ್ಗೆ ಆತಂಕಗೊಂಡರು. ಮೈಸೂರು ಸಂಸ್ಥಾನದಲ್ಲಿ ಮಾರಿಕಣಿವೆ ಅಣೆಕಟ್ಟನ್ನು ನಿರ್ಮಿಸಿದ ಪರಿಣತ ಇಂಜಿನಿಯರು ದಲಾಲರನ್ನು ನೇಮಿಸಲು ಅವರು ಬಯಸಿದರು. ಆದರೆ ಅವರು ಮೊದಲು ಹಿಲ್ ಅವರನ್ನು ಈ ನೇಮಕದ ಬಗ್ಗೆ ಸಮಾಲೋಚಿಸಲು ಬಯಸಿದರು. ದಲಾಲರು ಮೊದಲೇ ಅಣೆಕಟ್ಟಿನ ನಿವೇಶನಕ್ಕೆ ಭೇಟಿ ನೀಡಿದ್ದರು ಮತ್ತು ಅವರು ಮರಳು ಕಳಪೆಯದು, ಸುಣ್ಣದಕಲ್ಲು ಕೆಳದರ್ಜೆಯದು, ಬುನಾದಿ ಬಲವಾಗಿಲ್ಲ ಮತ್ತು ಅದನ್ನು ಮತ್ತಷ್ಟು ಅಗಲಮಾಡಬೇಕಾಗಿತ್ತು... ಎಂದು ಪ್ರತಿಯೊಂದು ವಿಷಯದಲ್ಲೂ ತಪ್ಪುಗಳನ್ನು ಹುಡುಕಿದ್ದರು... ಆದರೆ

ಹಿಲ್ ಅವರು ನಿರ್ಮಾಣದ ವಸ್ತುಗಳು ಉತ್ತಮ ಗುಣಮಟ್ಟದವು ಮತ್ತು ಅಸ್ತಿವಾರದ ಕೆಲಸವು ಬಲಿಷ್ಠವಾಗಿದೆಯೆಂದು ಭಾವಿಸಿದರು. ಆದ್ದರಿಂದ ಶಾಹು ಅವರು ದಲಾಲರು ಅನಾವಶ್ಯಕವಾಗಿ ವಿಷಯಗಳನ್ನು ಅತಿಶಯಗೊಳಿಸುತ್ತಿದ್ದಾರೆಂದು ಭಾವಿಸಿದರು ಮತ್ತು ಹಿಲ್ ಅವರ ಅಭಿಪ್ರಾಯವನ್ನು ಒಪ್ಪಿಕೊಂಡರು. ಇವೆಲ್ಲವು ಸಂಭವಿಸಿದ್ದರಿಂದ ಅವರು ಸ್ವಲ್ಪ ನಿರಾಶರಾದರು. ಮತ್ತು ಒಮ್ಮೆ ಅವರು ಹೇಳಿದರು: "ಅದು ನನಗೆ ಹೆಚ್ಚು ಆತಂಕವನ್ನು ನೀಡಿದರೂ ಈ ಕೆಲಸ ಪ್ರಾರಂಭಿಸಿದ್ದಕ್ಕಾಗಿ ನಾನು ಪಶ್ಚಾತ್ತಾಪಪಡುತ್ತಿರಲಿಲ್ಲ".

## ಶಾಹುರವರ ಮರಣದ ನಂತರ ಪ್ರಗತಿ

ಹಣಕಾಸು ಮತ್ತು ಇತರೆ ನಿರ್ಬಂಧಗಳಿಂದ ಅವರು ಬದುಕಿರುವಾಗಲೇ ಅಣೆಕಟ್ಟೆಯ ನಿರ್ಮಾಣದ ಕಾಮಗಾರಿ ಮುಗಿಸಲು ಆಗಲಿಲ್ಲ. ಕೊಲ್ಹಾಪುರ ಸಂಸ್ಥಾನ ಸರ್ವ ಪ್ರಯತ್ನಗಳನ್ನು ಮಾಡಿತು. ಬಾಂಬೆ ಸರಕಾರ ಸಹ ಸಾಧ್ಯವಾದ ಎಲ್ಲಾ ಸಹಾಯಮಾಡಿತು. ೧೯೪೬ರ ನಂತರ ನಿರ್ಮಾಣದ ವೇಗ ತೀವ್ರಗೊಂಡಿತು. ೧೯೪೯ ಮತ್ತು ೧೯೫೫ ನಡುವೆ ೨೪೫ ಅಡಿಗಳಿಗೆ ಏರಿಸಲಾಯಿತು. ಜಲಾಶಯದಲ್ಲಿ ೮೩.೨೬ ಮಿಲಿಯನ್ ಘನ ಅಡಿ ನೀರು ಸಂಗ್ರಹವಾಯಿತು. ಮೂಲತಃ ಅಣೆಕಟ್ಟನ್ನು ಕೃಷಿಗೆ ನೀರು ಒದಗಿಸಿ, ತನ್ಮೂಲಕ ಬರಗಾಲಗಳ ತೀವ್ರತೆಯನ್ನು ತಗ್ಗಿಸುವುದು ಉದ್ದೇಶವಾಗಿತ್ತು. ತದನಂತರ ವಿದ್ಯುತ್ ಶಕ್ತಿಯನ್ನು ಉತ್ಪಾದಿಸಲಾಯಿತು ಮತ್ತು ಕುಡಿಯುವ ನೀರನ್ನು ಕೊಲ್ಹಾಪುರ ನಗರಕ್ಕೆ ಒದಗಿಸಲಾಯಿತು. ೧.೨ ಮೆಗಾವಾಟ್ ವಿದ್ಯುತ್ ಶಕ್ತಿಯನ್ನು ಉತ್ಪಾದಿಸುವ ೪ ಜನರೇಟರುಗಳನ್ನು ಸ್ಥಾಪಿಸಲಾಯಿತು. ಅವು ವರ್ಷಕ್ಕೆ ಒಂದು ಕೋಟಿ ಯುನಿಟ್ಟುಗಳ ವಿದ್ಯುತ್‌ಶಕ್ತಿಯನ್ನು ಉತ್ಪಾದಿಸುತ್ತವೆ. ೧೯೪೦ರ ನಂತರ ಹೆನ್ರಿ ಹೋವರ್ಡ್, ಎಂ. ವಿಶ್ವೇಶ್ವರಯ್ಯ, ಸಿ. ಜಿ. ಕೋಲೆ ಅವರು ಅಣೆಕಟ್ಟಿನ ನಿವೇಶನಕ್ಕೆ ಭೇಟಿ ನೀಡಿ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದ್ದರು.

ಪ್ರಾರಂಭದಲ್ಲಿ ಹರಿವು ನೀರಾವರಿಯ ಮೂಲಕ ಕೃಷಿಗೆ ನೀರನ್ನು ಒದಗಿಸುವ ಯೋಜನೆಯಾಗಿತ್ತು. ಆದರೆ ನದಿಯು ಕಣಿವೆಯಿಂದ ಹರಿಯುತ್ತಿತ್ತು. ವಿಚಿತ್ರವಾದ ಭೌಗೋಳಿಕ ಸನ್ನಿವೇಶದಿಂದ ಬೆಟ್ಟಗಳನ್ನು ಕಡಿದು ಅಥವಾ ಸುರಂಗಗಳನ್ನು ಕೊರೆದು ಕಾಲುವೆಗಳನ್ನು ನಿರ್ಮಿಸುವುದು ಪ್ರಾಯೋಗಿಕವಾಗಿರಲಿಲ್ಲ. ನದಿಯು ಹರಿದು ಬಯಲುಪ್ರದೇಶಗಳನ್ನು ತಲುಪಿದಾಗ ಕಾಲುವೆಗಳನ್ನು ಅಥವಾ ಇತರೆ ಅಂತಹ ನೀರು ಕಾಲುವೆಗಳು ನೀರಾವರಿಗೆ ಸಾಧ್ಯವಾಗುತ್ತವೆ. ರಾಧಾನಗರಿ ಅಣೆಕಟ್ಟೆಯ ವಿಷಯದಲ್ಲಿ ಅಣೆಕಟ್ಟೆಯಿಂದ ನದಿಗೆ ಹರಿದ ನೀರನ್ನು ಮೊದಲು ನಿಲ್ಲಿಸಿ ಒಂದು ತಾತ್ಕಾಲಿಕ ಬದುವಿನಲ್ಲಿ ಸಂಗ್ರಹಿಸಲಾಗುವುದು ಮತ್ತು ನಂತರ ನೀರಾವರಿಗೆ ನೀರನ್ನು ಬಿಡಲಾಗುವುದು. ಪ್ರತಿ ಸಲ ಬದುವಿನಿಂದ ನೀರು ಬಿಡುವುದರಿಂದ ಭೂಮಿಯ ಸವಕಳಿ ಉಂಟಾಗುವುದರಿಂದ ಈ ಪದ್ಧತಿಯು ಹೆಚ್ಚು ದುಬಾರಿಯೆಂದು ಸಾಧಿತವಾಗಿದೆ.

ನಂತರ ರಾಜರಾಮ್ ಮಹಾರಾಜರು ೧೯೩೮ರಲ್ಲಿ ಕೊಲ್ಹಾಪುರದ ಸಮೀಪ ಬಾವ್ಡಾ ಬಳಿ ಶಾಶ್ವತವಾದ ಮೊದಲ ಬದುವನ್ನು ನಿರ್ಮಾಣಮಾಡಿದ್ದಾರೆ. ಅದು ಕೊಲ್ಹಾಪುರ ರೀತಿಯ ಬದುಗಳ ಪ್ರಾರಂಭವಾಗಿದ್ದರಿಂದ ಈಗ ಅವು ಮಹಾರಾಷ್ಟ್ರದಲ್ಲಿ ಸಾಮಾನ್ಯವಾಗಿಬಿಟ್ಟಿವೆ. ಪ್ರಸ್ತುತ, ಭೋಗವತಿ ಮತ್ತು ಪಂಚಗಂಗಾ ನದಿಗಳಿಗೆ ಖಾಸಗಿ ಮತ್ತು ಸರಕಾರದ ಒಟ್ಟು ೧೩ ಆಹಾರ ಧಾನ್ಯಗಳ ಬೆಳೆಗೆ ಒದಗಿಸಲಾಗುವುದು. ಕೊಲ್ಹಾಪುರ ಜಿಲ್ಲೆಯಲ್ಲಿ ಬಲಿಷ್ಠ ಸಹಕಾರಿ ಸಂಘಗಳು ಏತನೀರಾವರಿಯ ಬಹುತೇಕ ಉಪಕರಣಗಳನ್ನು ಈಗ ಹೊಂದಿವೆ ಮತ್ತು ಕೆಲವರು ವೈಯಕ್ತಿಕವಾಗಿ ಸಹ ಅವುಗಳನ್ನು ಹೊಂದಿದ್ದಾರೆ. ೧೯೫೨ರ ಬಾಂಬೆ

ಸಂಸ್ಥಾನದ ಸಾರ್ವಜನಿಕ ಲೋಕೋಪಯೋಗಿ ಇಲಾಖೆಯ ವರದಿಯ ಪ್ರಕಾರ ರಾಧಾನಗರಿ ಅಣೆಕಟ್ಟು ೧೧,೦೦೦ ಎಕರೆಗಳ ಕಬ್ಬಿನ ಬೆಳೆಗಳಿಗೆ ಮತ್ತು ೩,೦೦೦ ಎಕರೆಗಳ ಆಹಾರ ಧಾನ್ಯಗಳ ಕೃಷಿಗೆ ನೀರು ಸರಬರಾಜು ಮಾಡಿದೆ. ಯೋಜನೆ ಸಂಪೂರ್ಣವಾಗಿ ನಿರ್ಮಾಣಗೊಂಡು ಕಾರ್ಯ ಮಾಡತೊಡಗಿದರೆ ಅದು ಕಬ್ಬಿನ ಬೆಳೆಯ ೧೨,೦೦೦ ಎಕರೆಗಳಿಗೆ ಮತ್ತು ಆಹಾರ ಧಾನ್ಯಗಳ ಕೃಷಿಗೆ ೧೦,೦೦೦ ಎಕರೆಗಳ ಭೂಮಿಗೆ ನೀರು ಒದಗಿಸಲಾಗುವುದೆಂದು ನಿರೀಕ್ಷಿಸಲಾಗಿತ್ತು. ಆದರೆ ೧೯೮೦ರ ಹೊತ್ತಿಗೆ ಅದರ ಒಟ್ಟು ೨೬,೫೦೦ ಹೆಕ್ಟೇರುಗಳ ಸಾಮರ್ಥ್ಯದಲ್ಲಿ ೧೭,೮೦೦ ಹೆಕ್ಟೇರುಗಳ ಭೂಮಿಗೆ ನೀರು ಉಣಿಸಲಾಗುತ್ತಿದೆ.

### ಅಣೆಕಟ್ಟಿನ ಮುಖ್ಯ ಲಕ್ಷಣಗಳು

೧. ೧೪೦ ಅಡಿ ಕಲ್ಲಿನ ಅಣೆಕಟ್ಟು.

೨. ಅಣೆಕಟ್ಟಿನ ಬುಡದಲ್ಲಿ ವಿದ್ಯುತ್‌ಶಕ್ತಿಯ ಉತ್ಪಾದನೆಯ ಸ್ಟೇಷನ್ನು ಇದೆ ಮತ್ತು ಇಲ್ಲಿ ಉತ್ಪಾದನೆಯಾದ ವಿದ್ಯುತ್ತನ್ನು ಏತ ನೀರಾವರಿ ಯೋಜನೆಗಳಿಗೆ, ಕೈಗಾರಿಕೆ ಮತ್ತು ಗೃಹೋಪಯೋಗಿ ಉದ್ದೇಶಗಳಿಗೆ ಬಳಸಲಾಗುತ್ತಿದೆ.

೩. ಮುಖ್ಯವಾಗಿ ಕಬ್ಬು ಬೆಳೆಯುವುದಕ್ಕಾಗಿ ನೀರು ಸರಬರಾಜಿಗಾಗಿ ಕೊಲ್ಹಾಪುರ ರೀತಿಯ ಬದುವುಗಳು.

೪. ಭೋಗವತಿ ಮತ್ತು ಪಂಚಗಂಗ ನದಿಗಳ ನೀರನ್ನು ಕೃಷಿಗಾಗಿ ಎರಡು ನದಿಗಳ ದಡಗಳು ಬಳಸುತ್ತಿವೆ.

೫. ಕೊಲ್ಹಾಪುರ ಮತ್ತು ಇಚಲಕಾರಂಜಿ ನಗರಗಳಿಗೆ ನೀರನ್ನು ಸರಬರಾಜು ಮಾಡಲಾಗುವುದು.

೬ ಮೀನು ಹಿಡಿಯುವಿಕೆ ಮತ್ತು ಮೀನುಗಾರಿಕೆಯನ್ನು ಕೈಗೊಳ್ಳಲಾಗಿದೆ.

೭ ಬೋಟಿಂಗ್‌ಗೆ ಪ್ರೋತ್ಸಾಹ ನೀಡಲಾಗಿದೆ.

೮. ಎರಡು ನದಿಗಳಿಗೆ ಬದುವುಗಳನ್ನು ಹಾಕಿರುವುದರಿಂದ ಸಾರಿಗೆ ಸಾಧನಗಳು ಲಭ್ಯವಾಗಿವೆ.

೯. ಕೃಷಿಗೆ ಕಡಿಮೆ ದರದಲ್ಲಿ ನೀರು ಸರಬರಾಜಾಗುತ್ತಿರುವುದರಿಂದ ಆಹಾರ ಧಾನ್ಯಗಳಿಗೆ ಹೆಚ್ಚು ಪ್ರೋತ್ಸಾಹ ದೊರಕಿದೆ.

### ಯೋಜನೆಯ ಪ್ರಯೋಜನಗಳು

ರಾಧಾನಗರಿ ಅಣೆಕಟ್ಟು ಮೂಲಭೂತವಾದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ಕೊಲ್ಹಾಪುರ ಜಿಲ್ಲೆಯಲ್ಲಿ ಮತ್ತು ಅದರ ಗ್ರಾಮಾಂತರ ಪ್ರದೇಶಗಳಲ್ಲಿ ತಂದಿತು. ಬದಲಿಗೆ, ಅದು ಬೆಲ್ಲದ ಉತ್ಪಾದನೆಯನ್ನು ಹೆಚ್ಚಿಸಿತು. ಮತ್ತು ಸಕ್ಕರೆ ಕಾರ್ಖಾನೆಗಳನ್ನು ನೆರೆಯುವಂತೆ ಮಾಡಿತು. ಸಕ್ಕರೆ ಕಾರ್ಖಾನೆಗಳು ಶಿಕ್ಷಣ, ಕ್ರೀಡೆಗಳು, ಮನರಂಜನಾ ಸವಲತ್ತುಗಳ ಬಗ್ಗೆ ಗಮನ ಹರಿಸಿದವು. ವ್ಯಾಪಾರ, ಸಾರಿಗೆ ಮತ್ತು ಸಂವಹನ ಜಾಲಗಳು ವಿಸ್ತರಣೆಗೊಂಡವು. ಆಹಾರ ಧಾನ್ಯಗಳ ಉತ್ಪಾದನೆ ದ್ವಿಗುಣಗೊಂಡಿತು. ನಗದು ಹರಿವು, ಹಳ್ಳಿಗಳ ರೈತರ ಮನೆಗಳಲ್ಲಿ ಹೆಚ್ಚಾಯಿತು. ಗೃಹ ಮತ್ತು ಸಣ್ಣ ಕೈಗಾರಿಕೆಗಳ ಜೊತೆಗೆ ಕೃಷಿ ಆಧಾರಿತ ಸಣ್ಣ ಕೈಗಾರಿಕೆಗಳು ಪ್ರಗತಿ ಹೊಂದಿದವು. ಹೈನು ವ್ಯವಹಾರ,

ಕೋಳಿಸಾಕಾಣಿಕೆ, ಪಶುಸಂಗೋಪನೆಗಳು ಸಮೃದ್ಧಿಗೊಂಡವು. ಈ ಎಲ್ಲಾ ಬದಲಾವಣೆಗಳು ಉದ್ಯೋಗದ ಅವಕಾಶಗಳನ್ನು ಹೆಚ್ಚು ಮಾಡಿದವು.

ರಾಧಾನಗರಿ ಅಣೆಕಟ್ಟು ಮತ್ತು ೧೩ ಕೊಲ್ಹಾಪುರ ಮಾದರಿಯ ಬದುವುಗಳು ಕಬ್ಬಿನ ೧೭,೪೧೦ ಹೆಕ್ಟೇರುಗಳ ಹೊಲಗಳಿಗೆ ಮತ್ತು ರಬಿ ಬೆಳೆಗಳ ೯,೪೫೦ ಹೆಕ್ಟೇರ್‌ಗಳು ಸೇರಿದಂತೆ ಒಟ್ಟು ೨೬,೮೬೦ ಹೆಕ್ಟೇರ್ ಭೂಮಿಗೆ ನೀರಾವರಿ ಒದಗಿಸುವ ಸಾಮರ್ಥ್ಯವನ್ನು ಹೊಂದಿವೆ. ಕರವೀರ, ರಾಧಾನಗರಿ, ಹತ್‌ಕಣ, ಶಿರೋಳ, ಪನ್ಹಾಳ ತಾಲೂಕುಗಳ ೧೩೩ ಹಳ್ಳಿಗಳಿಗೆ ನೀರಾವರಿ ಲಭ್ಯವಾಗಿದೆ. ಭೋಗವತಿ ನದಿಯ ೮೩ ಏತನೀರಾವರಿ ಯೋಜನೆಗಳು ಮತ್ತು ಪಂಚಗಂಗಾ ನದಿಯ ೧೪೧ ಯೋಜನೆಗಳು ಕಾರ್ಯನಿರತವಾಗಿವೆ. ೧೯೯೩–೯೪ರಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ೧೩,೨೮,೫೧೦ ಯುನಿಟ್ಟುಗಳಿಗೆ ಏರಿದೆ.

ಅಣೆಕಟ್ಟು ಪ್ರತಿ ವರ್ಷ ಅದರ ಸಾಮರ್ಥ್ಯಕ್ಕೆ ಸರಿಯಾಗಿ ತುಂಬುತ್ತದೆ. ಮತ್ತು ಈ ಪ್ರದೇಶವು ಸಂಪದ್ಭರಿತವಾದ ಪ್ರಯೋಜನಗಳನ್ನು ಪಡೆಯುತ್ತಿದೆ. ೫.೯೫ ಕೋಟಿ ರೂ.ಗಳನ್ನು ೧೯೯೫ರ ವರೆಗೆ ಅದನ್ನು ಬಲಪಡಿಸಲು ಖರ್ಚುಮಾಡಿದ್ದರೆ, ಅದರ ನಿರ್ಮಾಣಕ್ಕೆ ೧.೦೯ ಕೋಟಿ ರೂ.ಗಳನ್ನು ಖರ್ಚುಮಾಡಲಾಯಿತು.

ರಾಧಾನಗರಿಯ ಅಣೆಕಟ್ಟಿನ ನಿರ್ಮಾಣ ಆಗಿನ ಕಥೆಯಾಗಿದೆ. ಶಾಹುರವರ ಮುನ್ನೋಟಕ್ಕೆ ಒಂದು ಜೀವಂತ ಸ್ಮಾರಕವಾಗಿದೆ. ಪಕ್ಕದ ಪ್ರದೇಶವನ್ನು ಒಟ್ಟಿಗೆ ಸಂಪದ್ಭರಿತ ಮಾಡುತ್ತಾ ಭೋಗವತಿ ನದಿಯ ನೀರಿನ ಅಣೆಕಟ್ಟೆಯ ಮೂಲಕ ಹರಿಯುತ್ತಿದೆ. ರಾಧಾನಗರಿ ಯೋಜನೆಯು ಅನುಸರಿಸಲು ಯೋಗ್ಯವಾಗಿದೆ. ದೇಶದ ಅರ್ಥವ್ಯವಸ್ಥೆಯು ಅಂತಹ ಯೋಜನೆಗಳಲ್ಲಿ ಎಲ್ಲೆಲ್ಲೂ ಅಳವಡಿಸಿಕೊಂಡರೆ ಸಮೃದ್ಧಿಯಾಗುವುದು.

## ಆಧಾರಗ್ರಂಥಗಳು


1. Shahu Chhatrapatinche Nivdak Aadesh - Part 1 & 2: Ed, Bhaskar Dhatavkar.
2. Rajarshi Shahu Chhatrapati Papers, Volume IV, Volume V, Volume VI: Ed. Dr. Vilas Sangave.
3. Shahu Chhatrapati - A Royal Revolutionary: Dhananjay Keer.
4. Memoirs of His Highness Shri Shahu Chhatrapati Maharaja of Kolhapur: Vol.1- A. B. Latthe.
5. Reports on the General Administration of Kolhapur State - 1901-02 to 1920-21.
6. Report of the Radhanagari Irrigation cum-Hydro-Electro Project- Irrigation Portion- May 1952, Public Works Department, Kolhapur Division- Prepared by Dr. A. S. Adke.
7. Notes on Kolhapur, type bunds Irrigation Department, Maharashtra Government, Kolhapur Irrigation Circle, Kolhapur.

8. Shri Shahu Chhatrapatinche Arthakaran: Meena Kulkarni and B. S. Kulkarni.
9. Economics of a multiple-purpose river dam-report of an inquiry into the economics benefits of the Hirakud dam: N. V. Sovani and Nilakanth Rath.
10. Rajarshi Shahu Gaurav Granth: Ed.P. B. Salunkhe and others.
11. Economic Effects of Irrigation: D. R. Gadget.
12. Chhatrapatis of Kolhapur: Manohar Malgaonkar.
13. 'Asian Drama' An Inquiry Into the Poverty of Nations, Vol. I, II, III: Myrdal Gunnar.
14. Marathi Vishwakosh, Vol. 14 (1989).

---

೨೨

# ಶಾಹು ಪ್ರಾರಂಭಿಸಿದ ಧನಗರ್-ಮರಾಠ ಅಂತರ್‌ಜಾತಿಯ ವಿವಾಹ

**– ವಸುಧಾ ಜೆ. ಪವಾರ್**

*ಇತಿಹಾಸ ವಿದ್ವಾಂಸರು*

ಮಹಾ ಸುಧಾರಕ ರಾಜರ್ಷಿ ಶಾಹು ಛತ್ರಪತಿಗಳು ಆಧುನಿಕ ಮಹಾರಾಷ್ಟ್ರ ನಿರ್ಮಾಣದಲ್ಲಿ ಅತ್ಯಮೂಲ್ಯ ಕಾಣಿಕೆಯನ್ನು ನೀಡಿದ್ದಾರೆ. ಮಹಾತ್ಮ ಫುಲೆಯವರ ವಿಚಾರಧಾರೆಯನ್ನು ಬಳುವಳಿಯಾಗಿ ಪಡೆದ ಭಾರತದ ಮಹಾರಾಜರಾದ ಅವರು ಮಹಾರಾಷ್ಟ್ರದ ಇತಿಹಾಸದಲ್ಲಿ ತಮ್ಮ ವಿಶಿಷ್ಟ ಸ್ಥಾನವನ್ನು ರೂಪಿಸಿಕೊಂಡಿದ್ದಾರೆ ಶಾಹು.

ಬ್ರಿಟಿಷರ ಆಡಳಿತದಲ್ಲಿ ಇತರೆ ಮಹಾರಾಜರಂತೆ ವೈಭವದ ಜೀವನದಲ್ಲಿ ಓಲಾಡುವ ಬದಲಿಗೆ ಅವರು ಒಬ್ಬ ಮಹಾರಾಜರಾಗಿ ನಿಜವಾದ ರಾಜಧರ್ಮವಾದ "ರಾಜರ ಅಧಿಕಾರ ಮತ್ತೇನು ಅಲ್ಲ, ಆದರೆ ಅದು ಸಾಮಾಜಿಕ ಸೇವೆಯ ಒಂದು ಸಾಧನ" ಎಂಬ ತತ್ವಕ್ಕೆ ಬದ್ಧರಾಗಿ ನಿಜವಾಗಿ ಬದುಕಿದವರು. ಅವರು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಅಸ್ಪೃಶ್ಯತೆಯ ರದ್ದತಿ ವರ್ಣಭೇದದ ರದ್ದತಿ, ಅಂತರ್‌ಜಾತೀಯ ವಿವಾಹಗಳ ಪ್ರೋತ್ಸಾಹ, ದಮನಿತರ ಶಿಕ್ಷಣದ ಪ್ರಸಾರಕ್ಕಾಗಿ ಆಂದೋಲನಗಳನ್ನು ಹಮ್ಮಿಕೊಂಡ ಅಪರೂಪದ ಮಹಾರಾಜರು.

## ಜಾತಿಆಧಾರಿತ ತಾರತಮ್ಯತೆಯ ರದ್ದತಿಯ ಬಗ್ಗೆ ಶಾಹುರವರ ಚಿಂತನೆಗಳು:

ಜಾತಿಆಧಾರಿತ ತಾರತಮ್ಯತೆಯ ರದ್ದತಿಯು ಶಾಹುರವರ ಪ್ರಥಮ ಆದ್ಯತೆಯಾಗಿತ್ತು. ಅಸ್ಪೃಶ್ಯತೆಯೊಂದಿಗೆ ತಳುಕು ಹಾಕಿಕೊಂಡಿರುವ ಅಂತಹ ತಾರತಮ್ಯತೆಯು ಹಿಂದು ಸಮಾಜಕ್ಕೆ ಒಂದು ಕಳಂಕ ಮತ್ತು ಸಾಮಾಜಿಕ ಅಸಮಾನತೆಗೆ ಮತ್ತು ರಾಷ್ಟ್ರದ ಸಾಮರಸ್ಯದ ಕೊರತೆಗೆ ಮುಖ್ಯ ಹೊಣೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಮೇಲುಜಾತಿಗಳು, ಪ್ರತಿಷ್ಠಿತ ವರ್ಗಗಳು ಅಂತಹ ಕ್ರಮವನ್ನು ಕೈಗೊಳ್ಳಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಶಾಹು ಹೇಳ್ತಾರೆ: "ಜಪಾನಿನಲ್ಲಿದ್ದ ಜಾತಿಆಧಾರಿತ ತಾರತಮ್ಯವನ್ನು ಅಲ್ಲಿನ ಮೇಲುವರ್ಗದ ಸಮುರಾಯ್ ಜನರು ಆಸಕ್ತಿಯಿಂದ ಜಾತಿಯ ತಾರತಮ್ಯತೆಯನ್ನು ಕಿತ್ತೆಸೆದುಬಿಟ್ಟರು. ಅವರು ಆ ರೀತಿ ಮಾಡದೆ ಇದ್ದಿದ್ದರೆ ಜಪಾನಿನ ಪರಿಸ್ಥಿತಿಗಳು ಎಂದೆಂದಿಗೂ ಸುಧಾರಿಸುತ್ತಿರಲಿಲ್ಲ. ಕೆಳಜಾತಿಗಳ ಸೌಲಭ್ಯಹೀನ ಕೆಳವರ್ಗಗಳು ಜಾತಿಆಧಾರಿತ ತಾರತಮ್ಯತೆಯನ್ನು ನಾಶಮಾಡಲು ಆಂದೋಲನ ನಡೆಸಿದ್ದರೆ ಫಲಿತಾಂಶಗಳು ಅತ್ಯಂತ ವಿನಾಶಕಾರಿಯಾಗಿರುತ್ತಿದ್ದವು... ಅದನ್ನೇ

ಯುಥಾಕಥಿತ ಮೇಲುವರ್ಗಗಳು ಆಂದೋಲನವನ್ನು ನಡೆಸಿದ್ದರೆ ಅದು ಇತರೆ ವರ್ಗಗಳಿಗೆ ಒಂದು ನಿದರ್ಶನವಾಗಿ ಕಾಣುತ್ತಿತ್ತು. ಮೇಲುಜಾತಿಗಳು ಒಂದು ಹೆಜ್ಜೆ ಕೆಳಗೆ ಇಳಿದು, ಕೆಳಜಾತಿಗಳಿಗೆ ಸಹಾಯಹಸ್ತ ನೀಡಿ, ಅವರನ್ನು ಮೇಲಕ್ಕೆ ಎತ್ತಿದರೆ ಅದು ಆದರ್ಶವಾಗುತ್ತದೆ. ಕಠಿಣವಾಗಿರುವ ಈ ಕೆಲಸ ಬಹುಶಃ ಸಫಲವಾಗುತ್ತಿತ್ತು. ಮರಾಠರಾದ ನಾವು ಸಹ ನಮ್ಮ ಬಲಿಷ್ಠ ಜಾತಿಯ ಸಂರಚನೆಯನ್ನು ರದ್ದುಗೊಳಿಸಬೇಕು ಮತ್ತು ಒಂದಾಗಬೇಕು..."[1]

ಜಾತಿಆಧಾರಿತ ತಾರತಮ್ಯತೆಯನ್ನು ಪರಿಣಾಮಕಾರಿ ರೀತಿಯಲ್ಲಿ ರದ್ದುಗೊಳಿಸಲು ಅಂತರ್–ಜಾತಿಯ ವಿವಾಹಗಳನ್ನು ಪ್ರೋತ್ಸಾಹಿಸಬೇಕೆಂದು ಶಾಹುರವರು ಸಾರ್ವಜನಿಕವಾಗಿ ಮತ್ತು ಬಹಿರಂಗವಾಗಿ ತಮ್ಮ ಬಂಡಾಯಕಾರಿ ಚಿಂತನೆಯನ್ನು ಪ್ರತಿಪಾದಿಸಿದರು. ತಮ್ಮ ಭಾಷಣಗಳ ಒಂದರಲ್ಲಿ ಹೇಳುತ್ತಾರೆ: "ಈ ದೇಶದ ಪ್ರಗತಿ ಮತ್ತು ಅದರ ಕಾಲಾವಧಿಯ ಚೌಕಟ್ಟು ಜಾತಿ ತಾರತಮ್ಯತೆಯನ್ನು ರದ್ದುಗೊಳಿಸುವುದರ ಮೇಲೆ ಅವಲಂಬಿಸಿದೆ. ಇದಕ್ಕಾಗಿ ಬೇರೆ–ಬೇರೆ ಜಾತಿಗಳ ನಡುವೆ ಮದುವೆಗಳ ಮುಖಾಂತರ ಸಂಬಂಧಗಳನ್ನ ವ್ಯಾಪಕವಾಗಿ ಬೆಳೆಸುವುದು ಅತ್ಯಾವಶ್ಯಕ. ಜನರು ಅನ್ನ ಮತ್ತು ಹಣಕ್ಕಾಗಿ ಜಾತಿಗಳ ನಡುವೆ ಸುಲಭವಾಗಿ ವ್ಯವಹರಿಸುತ್ತಾರೆ. ಮದುವೆಗಳ ಅದಲು–ಬದಲುಗಳ ವಿಚಾರದಲ್ಲಿ ಹಾಗಾಗುವುದಿಲ್ಲ. ಅಂತಹ ವಿನಿಮಯದಲ್ಲಿ ಎಲ್ಲಾ ಕಾನೂನಿನ ಮತ್ತು ಸಾಮಾಜಿಕ ಅಡೆ–ತಡೆಗಳನ್ನು ರದ್ದುಗೊಳಿಸಬೇಕು".[2]

ಮತ್ತೊಂದು ಸಂದರ್ಭದಲ್ಲಿ ಶಿವಾಜಿ ಮತ್ತು ಅಕ್ಬರರು ಜಾತಿಯ ತಾರತಮ್ಯತೆಯನ್ನು ಪರಿಣಾಮಕಾರಿಯಾಗಿ ರದ್ದುಗೊಳಿಸಲು ತಡೆದದ್ದನ್ನು ಶಾಹುರವರು ಮುಕ್ತಕಂಠದಿಂದ ಹೊಗಳಿದರು. ಅವರು ಹೇಳುತ್ತಾರೆ: "ಛತ್ರಪತಿ ಶಿವಾಜಿ ಸಹ ಮುಸ್ಲಿಮರನ್ನು ಮರಾಠರನ್ನಾಗಿ ಮತಾಂತರಗೊಳಿಸಿದನು ಮತ್ತು ರಾಷ್ಟ್ರೀಯ ಸದುದ್ದೇಶಕ್ಕಾಗಿ ಮಹರರ ಮತ್ತು ಮಾಂಗರ ಫಿರಂಗಿದಳ (ಮೇಲುಜಾತಿಗಳ ಅಡಿಯಲ್ಲಿ) ಗಳನ್ನು ನಿರ್ಮಿಸಿದರು. ಹೀಗೆ ಅಸ್ಪೃಶ್ಯತೆಯನ್ನು ನುಚ್ಚುನೂರು ಮಾಡಿದರು. ಅಕ್ಬರರು ಹಿಂದು ಮತ್ತು ಮುಸ್ಲಿಂ ಭಾವೈಕ್ಯತೆಯನ್ನು ಏರ್ಪಡಿಸಿದರು. ಅವರು ಹಿಂದು ಮಹಿಳೆ ಜೋಧಾಬಾಯಿಯನ್ನು ಮದುವೆಯಾದರು ಮತ್ತು ಆಕೆ ಹಿಂದುಮತದಲ್ಲಿರುವುದಕ್ಕೆ ಅವಕಾಶಮಾಡಿಕೊಟ್ಟಿದ್ದಕ್ಕೆ ನಾವು ಅವರಿಗೆ ನಮಸ್ಕರಿಸಬೇಕು... ಅಂತಹ ಒಂದು ಕೆಲಸ ಇಪ್ಪತ್ತನೇ ಶತಮಾನದಲ್ಲಿ ಅಸಾಧ್ಯವಾದದ್ದನ್ನು ಒಬ್ಬ ಮುಸ್ಲಿಮ್ ಚಕ್ರವರ್ತಿ ೧೭ನೇ ಶತಮಾನದಲ್ಲಿ ನೆರವೇರಿಸಿದ್ದರು."[3]

## ನುಡಿದಂತೆ ನಡೆ

ಶಾಹುರವರು ತಮ್ಮ ನುಡಿಗಳನ್ನು ಕೃತಿಗಳೊಂದಿಗೆ ಸಮೀಕರಿಸಿದರು. ಎಲ್ಲಾ ಶಾಲೆಗಳಲ್ಲಿ, ಸ್ಯಾನಿಟೋರಿಯಂಗಳಲ್ಲಿ, ಸರಕಾರಿ ಕಛೇರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಜಾತಿಆಧಾರಿತ ತಾರತಮ್ಯತೆ ಮತ್ತು ಅಸ್ಪೃಶ್ಯತೆಗಳ ಎಲ್ಲಾ ವಿಧಗಳನ್ನು ತಡೆಯುವ ಒಂದು ಸಾರ್ವಜನಿಕ ಅಧಿಸೂಚನೆಯನ್ನು ಅವರು ಪ್ರಕಟಿಸಿದರು. ಅವರು ಈ ಅಧಿಸೂಚನೆಯನ್ನು ಕಾನೂನಾಗಿ ಬದಲಾಯಿಸಿದರು.[4] ಅವರು ಒಂದು ದೊಡ್ಡ ಹೆಜ್ಜೆಯಿಟ್ಟು ಮುಂದೆ ಮತ್ತು ಜಾತಿಆಧಾರಿತ ಕಾನೂನಿನ ಭದ್ರಬುನಾದಿಯನ್ನೇ ಬೇರುಸಹಿತ ಕಿತ್ತುಹಾಕಿದರು ಮತ್ತು ಅಂತರ್‌ಜಾತಿಯ ಮದುವೆಗಳನ್ನು ಕಾನೂನುಬದ್ಧಗೊಳಿಸಿದರು. ಹೊಸ ಕಾನೂನಿನ ಕರಡುರಚನೆ ಪ್ರಾರಂಭವಾಯಿತು, "ಈ ದಿನಗಳಲ್ಲಿ ಹಲವು ಜಾತಿಗಳು ಹಿಂದು ಮತ್ತು ಜೈನ ಅಥವಾ ಹಿಂದೂ ವ್ಯಕ್ತಿಯನ್ನು ಯಾವುದೇ ನಿರ್ಬಂಧವಿಲ್ಲದೆ ಬೇರೆ ಜಾತಿಯಿಂದ ವ್ಯಕ್ತಿಯನ್ನು ಮದುವೆಯಾಗುವುದಕ್ಕೆ

ಅವಕಾಶ ಕಲ್ಪಿಸಿಕೊಡುವುದು ನ್ಯಾಯವಾಗಿದೆ. ಅಂತಹ ವ್ಯಕ್ತಿಗಳ ಮದುವೆಗಳನ್ನು ಕಾನೂನು ಒಪ್ಪಿಕೊಳ್ಳುವುದನ್ನು ಖಾತರಿಗೊಳಿಸುವುದಕ್ಕೆ ಒಂದು ಸೂಕ್ತ ಪ್ರಕ್ರಿಯೆಯನ್ನು ನಿರ್ಧರಿಸಬೇಕಾಗಿದೆ".[5]

ಶಾಹುರವರು ತಮ್ಮ ಸಂಸ್ಥಾನದಲ್ಲಿ ೧೯೧೯ರಲ್ಲಿ ಈ ಕ್ರಾಂತಿಕಾರಿ ಕಾನೂನನ್ನು ಜಾರಿಗೊಳಿಸಿದರು. ಆ ಕಾಲದಲ್ಲಿ ಇದೊಂದು ಭಾರಿ ದಿಟ್ಟಕ್ರಮವಾಗಿತ್ತು. ೧೯೧೭ರಲ್ಲಿ ವಿಠ್ಠಲಭಾಯಿ ಪಟೇಲರು ಕೇಂದ್ರೀಯ ಶಾಸನ ಪರಿಷತ್ತಿನಲ್ಲಿ ಅಂತರ್‌ಜಾತಿಯ ವಿವಾಹಗಳನ್ನು ಕಾನೂನುಬದ್ಧಗೊಳಿಸುವ ಮಸೂದೆಯೊಂದನ್ನು ಮಂಡಿಸಿದರು. ಇಡೀ ದೇಶದಲ್ಲಿ ಈ ಮಸೂದೆ 'ಪಟೇಲ್ ಮಸೂದೆ' ಎಂದು ಖ್ಯಾತಿಪಡೆಯಿತು. ಅಷ್ಟೇ ಅಲ್ಲದೆ ಈ ಮಸೂದೆಯು ಲೋಕಮಾನ್ಯ ತಿಲಕ, ಪುರಿ ಶಂಕರಾಚಾರ್ಯ ಮತ್ತು ಕರವೀರ ಶಂಕರಾಚಾರ್ಯರ ನೇತೃತ್ವದ ಯಥಾಸ್ಥಿತಿವಾದಿಗಳ ಮತ್ತು ಕರ್ಮಠವಾದಿಗಳ ಲಾಬಿಯ ಕಟುವಿರೋಧವನ್ನು ಎದುರಿಸಬೇಕಾಯಿತು. ಆದರೆ ಪ್ರಗತಿಪರ ನಾಯಕರಾದ ಸರ್ ತೇಜ್ ಬಹಾದೂರ್ ಸಪ್ರು, ಲಾಲಾಲಜಪತರಾಯ್, ಶಾಹು ಮಹಾರಾಜರು ಈ ಮಸೂದೆಯನ್ನು ಬೆಂಬಲಿಸಿದರು. ಈ ಮಸೂದೆ ಪಾಸಾದರೆ 'ಧರ್ಮ'ದ ಸರ್ವನಾಶ ಮತ್ತು 'ಜನಾಂಗೀಯ ಸಂಕರ'ವಾಗುವುದೆಂದು ಕರ್ಮಠರ ಲಾಬಿ ಭಯಗೊಂಡಿತು. ಜಾತಿಆಧಾರಿತ ತಾರತಮ್ಯತೆಯನ್ನು ಆಚರಿಸುವುದೇ ನಿಜವಾದ ಮತವೆಂದು ನಂಬಿದವರಿಗೆ ಅಂತಹ ಭಾವನೆ ಸಹಜವಾದದ್ದೆ.

ಬರೋಡದ ಸಯ್ಯಾಜಿರಾವ್ ಮಹಾರಾಜರು ಸಹ ಶಾಹುರವರಂತೆ ಪ್ರಗತಿಪರ ಮತ್ತು ಸುಧಾರಕ ಮಹಾರಾಜರಾಗಿದ್ದರು. ಅವರ ಮಗಳು ಇಂದಿರಾ ರಾಜೆ ಬಂಗಾಳದ ಕೂಚ್‌ಬಿಹಾರದ ಮಹಾರಾಜನನ್ನು ಮದುವೆಯಾಗಲು ನಿರ್ಧರಿಸಿದಾಗ (ಮಹಾರಾಜ ನರೇಂದ್ರ ನಾರಾಯಣ) ಅವರು ತಮ್ಮ ಒಪ್ಪಿಗೆಯನ್ನು ನೀಡಿದರು. ಕೂಚ್‌ಬಿಹಾರ್‌ರ ವಂಶ ಬೆಂಗಾಳಿ ಕ್ಷತ್ರಿಯರು, ಅವರು ತಮ್ಮ ಜೀವನದ ರೀತಿಯೆಂದು ಬ್ರಹ್ಮೋ ಸಮಾಜವನ್ನು ಅಂಗೀಕರಿಸಿದ್ದರು.

ಶಾಹುರವರು ಸಯ್ಯಾಜಿರಾವ್ ಅವರ ಈ ನಿರ್ಧಾರವನ್ನು ಬಹಳ ಮೆಚ್ಚಿದರು. ಅವರು ನಂತರ ತನ್ನ ಮಗ ರಾಜಕುಮಾರ ರಾಜಾರಾಮ್ ಅವರೊಡನೆ ಸಯ್ಯಾಜಿರಾವ್ ಅವರ ಮೊಮ್ಮಗಳು ಇಂದುಮತಿರಾಜೆ ಜೊತೆಯಲ್ಲಿ ಸಾರ್ವಜನಿಕವಾಗಿ ಬರೋಡದ ಧೈರ್ಯದ ಅಂತರ್ ಸಂಸ್ಥಾನದ ವಿವಾಹ ಒಪ್ಪಲಾಯಿತು. ಶಾಹುರವರು ಮತ್ತೊಂದು ಹೆಜ್ಜೆ ಮುಂದೆ ಹೋಗಲು ಬಯಸಿದ್ದರು. ಎರಡು ಕ್ಷತ್ರಿಯ ಕುಟುಂಬಗಳ ನಡುವಣ ಅಂತರ್‌ಜಾತಿಯ ಮದುವೆಗಳಿಗಿಂತ ಹೆಚ್ಚಿಗೆ ಅವರು ಸಾಮಾಜಿಕ ಶ್ರೇಣಿಯಿಂದ ಕೆಳಗಿಳಿಯಲು ಯೋಜಿಸಿದ್ದರು. ತನ್ನ ಕ್ಷತ್ರಿಯ ರಾಜಕುಟುಂಬ ಮತ್ತು ಇಂದೋರಿನ ಧನಗರಜಾತಿಯ ಕುಟುಂಬಗಳ (ಕುರುಬ ಜಾತಿಯ) ನಡುವೆ ಮದುವೆ ನಡೆಸುವ ಧೈರ್ಯ ಮತ್ತು ಸಾಹಸಮಯ ವಿವಾಹವನ್ನು ನಡೆಸಲು ಯೋಚಿಸಿದ್ದರು. ಅವರು ತಮ್ಮ ಚಿಕ್ಕಪ್ಪನ ಮಗಳು ಅಂದರೆ ತಮ್ಮ ಸಹೋದರಿಯ ಜೊತೆಯಲ್ಲಿ ಹೋಳ್ಕರರ ತುಕೋಜಿರಾವ್ ಅವರ ಮಗ ಯಶವಂತರಾವ್ ಜೊತೆಯಲ್ಲಿ ಮದುವೆಮಾಡಲು ಅವರು ಮಾತುಕತೆ ನಡೆಸಿದ್ದರು.

ಶಾಹುರವರು ಮೊದಲಿಗೆ ಕೊಲ್ಹಾಪುರ ಮತ್ತು ಇಂದೋರ್‌ಗಳ ಮರಾಠ ಮತ್ತು ಧನಗರ್ (ಕುರುಬರ) ಸಮುದಾಯಗಳ ನಡುವೆ ಅಂತರ್‌ಜಾತಿಯ ವಿವಾಹಗಳನ್ನು ನಡೆಸಲು ಯೋಜನೆಯನ್ನು ರೂಪಿಸಿದ್ದರೂ ಶಾಹುರವರು ತುಕೋಜಿರಾವ್ ಅವರಿಗೆ ಬರೆದ ಪತ್ರದಲ್ಲಿ ಅಂತಹ ಮದುವೆಗಳಿಗೆ ಸಿದ್ಧವಾಗಿರುವ ಕುಟುಂಬಗಳಲ್ಲಿ ವಿಶ್ವಾಸ ಮತ್ತು ಶ್ರದ್ಧೆಗಳನ್ನು ಮೂಡಿಸಿದರೆ ಅವರು ಅಂತಹ ಮದುವೆಗಳಿಗೆ

ಸಿದ್ಧರಾಗುವರು ಅಥವಾ ಅವುಗಳ ಬಗ್ಗೆ ಕನಿಷ್ಠಪಕ್ಷ ಕುತೂಹಲಿಗಳಾಗುವರು ಎಂದು ಹೇಳಿದ್ದರು. ತುಕೋಜಿರಾವರು ಇಂದೋರ್‌ನಲ್ಲಿ ಧನಗರರ(ಕುರುಬರ) ಸಮುದಾಯದ ಸಭೆಯನ್ನು ಕರೆದು ಅವರು ನೀಡಿದ ಒಪ್ಪಿಗೆಯನ್ನು ಶಾಹುರವರಿಗೆ ತಿಳಿಸಿದ್ದರು. ಇಬ್ಬರು ಮಹಾರಾಜರು ಬೇಗನೆ ಪರಸ್ಪರ ಸಮಾಲೋಚನೆಗಳನ್ನು ನಡೆಸಿ ಮುಂದೆ ಹೋಗಲು ನಿರ್ಧರಿಸಿದರು ಮತ್ತು ಅಂಥ ೧೦೦ ಅಂತರಜಾತಿಯ ಮದುವೆಗಳನ್ನು ನಡೆಸಲು ಮುಂದುವರೆದರು. ೬೦ ಸಾವಿರ ರೂ.ಗಳನ್ನು ಅಂತಹ ಮದುವೆಗಳಿಗೆ ಖರ್ಚುಮಾಡಲು ನಿರ್ಧರಿಸಿದರು ಮತ್ತು ಮದುವೆಯ ದಂಪತಿಗಳಿಗೆ ಭೂಮಿ ಇತ್ಯಾದಿ ಸೇರಿದಂತೆ ಎಲ್ಲಾ ವಿಧವಾದ ಸಹಾಯಮಾಡಲು ಎರಡು ಸಂಸ್ಥಾನಗಳು ಒಪ್ಪಿಕೊಂಡವು. ಯೋಜನೆಯಂತೆ ೨೫ ಜೋಡಿ ಅಂತರ್‌ಜಾತಿಯ ಮದುವೆಗಳು ನಡೆದವು ಮತ್ತು ಚೆನ್ನಾಗಿಯೆ ಸಫಲವಾದವು.[6] ಮಹಾರಾಜರು ತಮ್ಮ ನಡುವೆಯೇ ಒಮ್ಮೆ ಅಂತರ್‌ಜಾತಿಯ ಮದುವೆ ಪ್ರಾರಂಭಿಸಿದರೆ ಅಂತರ್‌ಜಾತಿಯ ಮದುವೆಗಳ ಆಂದೋಲನವನ್ನು ಪ್ರಜೆಗಳೇ ಅನುಸರಿಸುವರೆಂದು ಶಾಹು ಮಹಾರಾಜರು ಬಯಸಿದರು. ಆದ್ದರಿಂದ ತಮ್ಮ ರಾಜಕುಟುಂಬಗಳಿಂದಲೇ ಆಂದೋಲನ ಪ್ರಾರಂಭವಾಯಿತು. ಅವರ ಚಿಕ್ಕಪ್ಪನವರು ಕಾಗಲ್‌ನ ರಾಜಸಂಸ್ಥಾನದ ಮುಖ್ಯಸ್ಥರು ಕಾಕಾಸಾಹೇಬ ಮಹಾರಾಜರು. ಅವರ ಮಗಳು ಚಂದ್ರಪ್ರಭಾ ಯಶವಂತರಾಮ್ ಅವರನ್ನು ಮದುವೆಯಾಗುವವರಿದ್ದರು.

ದುರಾದೃಷ್ಟವಶಾತ್ ಶಾಹುರವರು ತಮ್ಮ ಮುಂದೆಯೇ ಈ ಮದುವೆ ನಡೆಯುವುದನ್ನು ನೋಡಲು ಸಾಧ್ಯವಾಗಲಿಲ್ಲ. ಮೇ ೬, ೧೯೨೨ರಂದು ಅವರು ಇದ್ದಕ್ಕಿದ್ದಹಾಗೆ ಮರಣಹೊಂದಿದರು. ಈ ಮದುವೆಯನ್ನು ಸದ್ಯಕ್ಕೆ ಮುಂದೂಡಲಾಯಿತು. ೧೯೨೪ರಲ್ಲಿ ಶಾಹುರವರ ವಾರಸುದಾರ ರಾಜಾರಾಯರು ತಮ್ಮ ತಂದೆಯ ಅಭಿಲಾಷೆಯನ್ನು ನೆರವೇರಿಸಿದರು.

## ಹೋಳ್ಕರ ಘಾಟ್ಗೆಯವರ ಮದುವೆಯ ನಿಶ್ಚಿತಾರ್ಥ

ಇಂದೋರಿನಲ್ಲಿ ೩೦ ಡಿಸೆಂಬರ್ ೧೯೨೩ರಲ್ಲಿ ಭಾಜಭಜಂತ್ರಿಗಳಿಂದ ವಧು-ವರರ ನಿಶ್ಚಿತಾರ್ಥ ನಡೆಯಿತು. ಪುಣೆಯಲ್ಲಿ ಸ್ಥಾಪಿತಗೊಂಡಿರುವ ಸತ್ಯಶೋಧಕ ಸುಧಾರಣಾವಾದಿ ಶ್ರೀಪತ್‌ರಾವ್ ಶಿಂಧೆಯವರ ಮಾಲಿಕತ್ವದ ದಿನಪತ್ರಿಕೆ 'ವಿಜಯಿಮರಾಠ'ವು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತ ಹೀಗೆ ಬರೆಯಿತು: "ಧನಗರ್(ಕುರುಬ) ಮತ್ತು ಮರಾಠರ ಎರಡು ರಾಜಕುಟುಂಬಗಳ ನಡುವೆ ಈ ಮದುವೆ ನಡೆಯಿತು. ವಧು-ವರರನ್ನು ಶ್ರೀಮತ್ ಕ್ಷಾತ್ರ ಜಗದ್ಗುರುಗಳು ಆಶೀರ್ವದಿಸಿದರು". ಬರೋಡ, ಧಾರ್, ದೇವಾಸ್ ಮತ್ತು ಇತರೆ ಸಾಮಂತ ರಾಜ ಸಂಸ್ಥಾನಗಳು ಈ ಮದುವೆಗೆ ಶುಭಕೋರುವ ತಂತಿಸಂದೇಶಗಳನ್ನು ಕಳುಹಿಸಿದ್ದರು. ಶಾಹುರವರ ಅಭಿಲಾಷೆಯಂತೆ ಆಯಿಸಾಹೇಬ ಮಹಾರಾಜ (ಶಾಹುರವರ ರಾಣಿ) ಮತ್ತು ಅಕ್ಕಾಸಾಹೇಬ ಮಹಾರಾಜ (ಶಾಹುರವರ ಪುತ್ರಿ) ಅವರು ಈ ಪವಿತ್ರ ಮದುವೆ ಸಫಲವಾಗುವುದಕ್ಕೆ ಪ್ರಮುಖಪಾತ್ರ ವಹಿಸಿದ್ದರು."[7]

## ಇಂದೋರ್‌ನಲ್ಲಿ ಮದುವೆಯ ಸಮಾರಂಭ

ಇಂದೋರ್‌ನಲ್ಲಿ ೯ ಫೆಬ್ರವರಿ ೧೯೨೪ರಂದು ಭವ್ಯವಾಗಿ ಮದುವೆ ನಡೆಯಿತು. 'ವಿಜಯಿಮರಾಠ' ಪತ್ರಿಕೆಯು ಅದರ ವರದಿಗಳನ್ನು ವಿವರವಾಗಿ ಪ್ರಕಟಿಸಿತ್ತು.

ಸಮಕಾಲೀನ ಸಂಪ್ರದಾಯಗಳ ಪ್ರಕಾರ ಮದುವೆಯ ಆಚಾರಗಳು ಫೆಬ್ರವರಿ ೧ರಿಂದ ಫೆಬ್ರವರಿ ೯ರವರೆಗೆ ನಡೆಯುತ್ತವೆ. ಆದರೆ ರಾಜಾರಾಮ್ ಮಹಾರಾಜರು ಅನಿವಾರ್ಯ ಕಾರಣಗಳಿಂದ ವಿವಾಹದಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ. ಆದರೂ ಅವರು ತಮ್ಮ ಹಲವರು ನಂಬಿಕಸ್ಥ ಸರದಾರರಾದ ನಿಂಬಾಳ್ಕರ್, ಸವರ್‌ಡೆಕರ್, ಗಾಯಿಕ್‌ವಾಡ್ ಮೊದಲಾದರವನ್ನು ಕಳುಹಿಸಿಕೊಟ್ಟಿದ್ದರು. ಕೊಲ್ಹಾಪುರದ ಗುಂಪಿನಲ್ಲಿ ಹಲವು ಸತ್ಯಶೋಧಕರಾದ ಬಾಬುರಾವ್ ಜಗತಾಪ್, ಶ್ರೀಪತ್‌ರಾವ್ ಶಿಂಧೆ ಮೊದಲಾದವರು ಸೇರಿದ್ದರು. ಉದಾರ ಕೊಡುಗೆಗಳ ಜೊತೆಯಲ್ಲಿ ಹಲವು ಸಾಮಂತರಾಜರು ಹಲವರನ್ನು ನಿಯೋಜಿಸಿದ್ದರು. ಈ ನಿಯೋಜನೆಯಲ್ಲಿ ಬರೋಡ, ಮೈಸೂರು, ಪಾಟಿಯಾಲ, ಭಾವನಗರ ಮೊದಲಾದ ಸಾಮಂತ ಮಹಾರಾಜರು ಸೇರಿದ್ದರು. ಈ ಮದುವೆಯ ವ್ಯವಸ್ಥೆಯ ಘಟನೆಯಲ್ಲಿ ಪ್ರತಿಯೊಬ್ಬರೂ ಪ್ರೀತಿಯಿಂದ ಶಾಹುರವರನ್ನು ನೆನಪಿಸಿಕೊಂಡರು. 'ವಿಜಯ ಮರಾಠ' ಪತ್ರಿಕೆಯ ಸಂಪಾದಕರಾದ ಶ್ರೀಪತ್‌ರಾವ್ ಶಿಂಧೆಯವರು ಛತ್ರಪತಿಗಳ ಸುಂದರವಾದ ಫೋಟೋಗ್ರಾಫ್‌ನ್ನು ತುಕೋಜಿರಾವ್ ಅವರಿಗೆ ಈ ಸಂದರ್ಭದಲ್ಲಿ ಅರ್ಪಿಸಿದರು. ದಾಖಲೆಗಳ ಲಭ್ಯತೆಯ ಪ್ರಕಾರ ತುಕೋಜಿರಾವ್ ಅವರು ಎದ್ದುನಿಂತರು ಮತ್ತು ಮರಾಠರ ವಿಚಿತ್ರ ಶೈಲಿಯಲ್ಲಿ ಶಾಹುರವರ ಫೋಟೋಗೆ ನಮಸ್ಕಾರ ಮಾಡಿದರು-(ಮುಜ್ರ).[8]

ಮಹಾರಾಷ್ಟ್ರದ ಸಾಮಾಜಿಕ ಕರ್ಮಠತ್ವದ ಪತ್ರಿಕೆಗಳಾದ 'ಕೇಸರಿ' ತನ್ನ ಸ್ವಭಾವಕ್ಕೆ ಅನುಗುಣವಾಗಿ ಸಾಮಾಜಿಕವಾಗಿ ಬಹುಮುಖ್ಯವಾದ ಈ ಘಟನೆಯ ಬಗ್ಗೆ ಲಕ್ಷ್ಯವೇ ಕೊಡಲಿಲ್ಲ. ಸತ್ಯಶೋಧಕ ಸಮುದಾಯ ಈ ಘಟನೆ ಬಗ್ಗೆ ಖಂಡನೆಮಾಡಿದ್ದು, ಪುಣೆಯ 'ಯಥಾಕಥಿತ' ಪ್ರಗತಿಪರ ಮತ್ತು 'ಮಂದಗಾಮಿ' ಪತ್ರಿಕೆಗಳು ಈ ಘಟನೆ ಬಗ್ಗೆ ಉದಾಸೀನತೆ ತೋರಿದ್ದು ಆಶ್ಚರ್ಯವಾಗುತ್ತದೆ.[9]

ಸತ್ಯಶೋಧಕ ಆಂದೋಲನ ಮತ್ತು ಅದರ ನಾಯಕರು ಹೃತ್ಪೂರ್ವಕವಾಗಿ ಈ ಘಟನೆಯನ್ನು ಸ್ವಾಗತಿಸಿದ್ದು ಸ್ವಾಭಾವಿಕ. 'ವಿಜಯ ಮರಾಠ' ಪತ್ರಿಕೆ 'ಕಾಗಲ್ ಮತ್ತು ಇಂದೋರ್ ರಾಜಕುಟುಂಬಗಳ ಮಿಲನ' ಎಂಬ ತಲೆಬರಹದಲ್ಲಿ ಸಂಪಾಕೀಯವನ್ನು ಬರೆಯಿತು ಮತ್ತು ಶಾಹುರವರ ಸದುದ್ದೇಶವನ್ನು ಪ್ರಶಂಸಿಸಿತು. ಅದು "ಛತ್ರಪತಿ ಶಾಹುರವರು ತಾವು ಬದುಕಿರುವ ಕಾಲದಲ್ಲಿ ಬ್ರಾಹ್ಮಣೇತರರ ಆಂದೋಲನಕ್ಕೆ ಜೀವತುಂಬಿದರೆಂದು ಬರೆಯಿತು. ಈ ಬಗ್ಗೆ ಯಾವುದೇ ಸಂದೇಹವಿಲ್ಲ. ಅವರ ಚಿಂತನೆಗಳು ಈಗ ಕ್ರಿಯೆ ಮತ್ತು ವಾಸ್ತವಿಕತೆಯಾಗಿ ಪರಿವರ್ತನೆಯಾಗುತ್ತಿರುವುದನ್ನು ಲಕ್ಷಾಂತರ ಅನುಯಾಯಿಗಳು ನೋಡುತ್ತಿರುವುದು ಸಂತೋಷದ ಸಂಗತಿಯಾಗಿದೆ".[10]

## ಐತಿಹಾಸಿಕ ವಿಶ್ಲೇಷಣೆ

ಆ ಕಾಲದಲ್ಲಿ ಅಂತರ್‌ಜಾತಿಯ ವಿವಾಹಗಳು ಅಸಮಾನಾಂತರವಾದ ಘಟನೆಗಳಾಗಿದ್ದವು. ಮಹಾತ್ಮಫುಲೆ ಮತ್ತು ಶಾಹು ಮಹಾರಾಜ ಅಂತಹವರು ಕಾರ್ಯೋನ್ಮುಖಿ – ಸುಧಾರಕರಾಗಿದ್ದರು. ಇಂದು ಸಹ ಮರಾಠ ಸಮಾಜದ ಉನ್ನತ ವಲಯಗಳಲ್ಲಿ ಅಂತರ್‌ಜಾತಿಯ ವಿವಾಹಗಳ ಅಪವಾದಗಳೇ ಈ ದಿನಗಳಲ್ಲಿ ಅಂತಹ ಜನರನ್ನು ಬಹಿಷ್ಕರಿಸದಿರುವುದೇ ಒಳ್ಳೆಯ ಸಂಗತಿಯಾಗಿದೆ. ಆದರೆ ಆ ಕಾಲದಲ್ಲಿ ಇಂತಹ ಸ್ವರೂಪದ ಯಾವುದನ್ನೇ ಮಾಡಿದರೂ ಅದಕ್ಕೆ ಖಂಡಿತವಾಗಿ ತೊಂದರೆಗಳನ್ನು ಬರಮಾಡಿಕೊಂಡಂತೆಯೇ. ಆದರೆ ಅಂತಹ ತೊಂದರೆದಾಯಕ ಸನ್ನಿವೇಶಗಳನ್ನು ಎದುರಿಸುವುದು ಶಾಹುರವರ ಹುಟ್ಟುಗುಣವಾಗಿತ್ತು. ಸುಧಾರಣೆಗಳನ್ನು ಜಾರಿಗೊಳಿಸುವಾಗ ಅವರು ಎಂದೆಂದಿಗೂ ಕರ್ಮಠ ಸಮಾಜವನ್ನು ಕೇರ್ ಮಾಡಲಿಲ್ಲ.

ಆದರೆ ಇಂದು ಮರಾಠ ಸಮಾಜವನ್ನು ಪರೀಕ್ಷಿಸಿದ ನಂತರ ಶಾಹುರವರು ಮಾತ್ರವೇ ಅದನ್ನು ಮತ್ತು ಇತರೆ ಧೈರ್ಯ–ಸಾಹಸದ ಸಾಮಾಜಿಕ ಪ್ರಯೋಗಗಳನ್ನು ಮಾಡಬಲ್ಲರು ಎಂಬ ತೀರ್ಮಾನದಿಂದ ನಾವು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವರ ಅನುಯಾಯಿಗಳು ಅಂತಹ ಕ್ರಮಗಳು ತಮ್ಮ ಶಕ್ತಿ–ಸಾಮರ್ಥ್ಯಗಳಿಂದ ಹೊರತಾದ್ದು ಎಂದು ಯಾವಾಗಲು ಪರಿಭಾವಿಸಿದ್ದರು. ಜನರ ಸಾಮಾಜಿಕ ಮನಶಾಸ್ತ್ರ ಶಾಹುರವರ ದೀರ್ಘಕಾಲಿಕ ಮುನ್ನೋಟವನ್ನು ಅನುಸರಿಸದಿರುವುದು ದುರಾದೃಷ್ಟ.

---

## ಆಧಾರ ಗ್ರಂಥಗಳು


1. Krantisookte: Raajarshi Shaahu (ed.) S. S. Bhole, 1975.
2. Ibid.
3. Ibid.
4. Chhatrapati Shahu Maharajaani Kayadekanoo, D. R. Bagade, 1982.
5. Ibid.
6. Rajarshi Shahu – Ek Drishtikshep, Dr. Jayasingrao Pawar, P. 49; Rajarshi Shahu, Dhanjay Keer, 1979.
7. Vijayi Maratha, 21 Jan. 1924.
8. Ibid, 18 Feb, 1924,
9. Ibid.
10. Nivadak Vijayi Maratha (ed.) Dr. Jayasingrao Pawar and Dr. Ramesh Jadhav.


---

೨೩

# ಶಾಹು – ನಮ್ಮವನೇ ಆದ ಅಬ್ರಾಹಂ ಲಿಂಕನ್

**ಗಣೇಶ ಅಕಾಜಿ ಗವಾಯಿ**

*ಅಸ್ಪೃಶ್ಯರ ನಾಯಕ ಮತ್ತು ಬಹಿಷ್ಕೃತ ಭಾರತದ ಸಂಪಾದಕ*

*ಹಲವರು ಬದುಕಿದರು, ಹಲವರು ಬದುಕುವರು*

*ಹಲವರು ಮಾಡುವರು.........*

*ಆದರೆ ಅವನಂತೆ ಯಾರೂ ಇಲ್ಲ.....*

ಮಹಾರಾಷ್ಟ್ರದ ಮಹಾ ಆಸ್ತಿಯಾದ ಶಾಹು ಮಹಾರಾಜರ ಮೇಲೆ ವಿಧಿ ಮೇ ೬, ೧೯೨೨ರಂದು ಇದ್ದಕ್ಕಿದ್ದ ಹಾಗೆ ಮುಗಿಬಿದ್ದಿತು ಮತ್ತು ಮಹಾನಾಶಕ್ಕೆ ಎರವಾಯಿತು.

ಮಹಾರಾಷ್ಟ್ರದ ಪರ್ವತ, ಬ್ರಾಹ್ಮಣರ ಆತ್ಮಗಳ ಪರಿಶುದ್ಧಕ, ಬ್ರಾಹ್ಮಣೇತರರ ಆತ್ಮ–ವಿಶ್ವಾಸ, ಅಸ್ಪೃಶ್ಯರ ದೇವರು, ಇಂಗ್ಲಿಷ್‌ನವರ ಒಬ್ಬ ಸ್ನೇಹಿತ ನಮ್ಮನ್ನು ಅನಾಥರನ್ನಾಗಿ ಮಾಡಿಬಿಟ್ಟ. ನಾವು ದಿಕ್ಕು ತೋರದಂತಾಗಿದ್ದೇವೆ, ಗೊಂದಲಕ್ಕೊಳಗಾಗಿದ್ದೇವೆ.

ಕೆಟ್ಟ ಸುದ್ದಿಯು ಅಸ್ಪೃಶ್ಯರಿಗೆ ಬರಸಿಡಿಲು ಹೊಡೆದಂತಾಯಿತು. ಮತ್ತು ಅವರ ಎದೆಯನ್ನು ಸೀಳಿಬಿಟ್ಟಿತು. ವೈಯಕ್ತಿಕ ಅಪಾಯಗಳನ್ನು ಪರಿಗಣಿಸದೆ ಶಾಹುರವರು ತಾವು ಪ್ರೀತಿಸಿದ ಮಹಾರಾಷ್ಟ್ರದ ಜನತೆಯ ಪರಿಸ್ಥಿತಿಗಳನ್ನು ಸುಧಾರಿಸಲು ಪಣತೊಟ್ಟಿದ್ದರು. ಅಸ್ಪೃಶ್ಯರ ಬಗ್ಗೆ ಇದ್ದ ಅವರ ಪ್ರೀತಿ ಅಸಾಧಾರಣವಾದದ್ದು. ಬಾಂಬೆ, ನಾಗಪುರ ಮೊದಲಾದ ಕಡೆಗಳಲ್ಲಿ ಕೆಲವು ಅಸ್ಪೃಶ್ಯರು ಅತ್ಯದ್ಭುತವಾದ ಸಾಮಾಜಿಕ ಕಾರ್ಯಗಳನ್ನು ಇಂದು ಮಾಡುತ್ತಿದ್ದಾರೆ. ಅದರ ಕೀರ್ತಿ ಶಾಹುರವರಿಗೆ ಸಲ್ಲುತ್ತದೆ. ಶಾಹುರವರು ಅಗತ್ಯವಿರುವ ವ್ಯಕ್ತಿಗಳಿಗೆ ಹಣಕಾಸಿನ ಸಹಾಯ ಮಾಡುವುದಲ್ಲದೆ, ಅವರು ವೈಯಕ್ತಿಕವಾಗಿ ಬಡವರ ಮತ್ತು ದಮನಿತರ ಕಲ್ಯಾಣದಲ್ಲಿ ಆಸಕ್ತಿ ವಹಿಸುತ್ತಿದ್ದರು ಮತ್ತು ಸಮಾಜಕ್ಕಾಗಿ ಕೆಲಸಮಾಡಲು ಜನರನ್ನು ಪ್ರೋತ್ಸಾಹಿಸುತ್ತಿದ್ದರು.

ನಿರಂತರವಾದ ಗುಲಾಮಿತನದ 'ವತನ'ವನ್ನು ಅಸ್ಪೃಶ್ಯರ ಮೇಲೆ ಹೇರಲಾಗಿತ್ತು. ಅವರು ಮೌಢ್ಯ–ಅಜ್ಞಾನದಿಂದ ಮಾನಸಿಕ ಗುಲಾಮರಾಗಿದ್ದರು. ಅವರ ಮೇಲೆ ಸ್ಪರ್ಶನಿಷೇಧ ಹೇರಿದ್ದರಿಂದ ಅವರನ್ನು ಮೂಕಪ್ರಾಣಿಗಳಿಗಿಂತಲೂ ಹೆಚ್ಚು ದುಃಖಿತ ಮತ್ತು ಅಸಹಾಯಕರನ್ನಾಗಿ ಮಾಡಲಾಗಿತ್ತು. ಅವರಿಗೆ ಅಂಟಿದ್ದ ಅಸ್ಪೃಶ್ಯ ಎಂಬ ಕಳಂಕವನ್ನು ಅಳಿಸಿಹಾಕಲು ಹಲವು ಶತಮಾನಗಳಿಂದಲೂ ಯಾವ ಋಷಿ ಅಥವಾ ಸಾಧುವಿಗೆ ಸಾಧ್ಯವಾಗದಿದ್ದನ್ನು ಸಾಧಿಸಲು ದೇವರು ನಮ್ಮ ಶಾಹುರವರಿಗೆ ಅಪಾರವಾದ ಶಕ್ತಿ–ಸಾಮರ್ಥ್ಯವನ್ನು (ಅಧಿಕಾರ) ನೀಡಿದ್ದರು. ಬ್ರಾಹ್ಮಣೇತರರ ಸಮಾಜದ ಕಿರೀಟ(ಮಹಾರಾಜ)ದಲ್ಲಿ ಶಾಹು ಮುತ್ತುಮಣಿಯಾಗಿದ್ದರು

ಮತ್ತು ಅವರ ಮಮತೆಯ ರಾಜರಾಗಿದ್ದರು; ನಾವು(ಅಸ್ಪೃಶ್ಯರು) ಬ್ರಾಹ್ಮಣೇತರ ಜನರ ಪರಿಪೂರ್ಣ ಸಹಾನುಭೂತಿಯನ್ನು ಪಡೆದಿದ್ದೇವೆ. ಶಾಹು ದೃಢಸಂಕಲ್ಪದ ವ್ಯಕ್ತಿಯಾಗಿದ್ದರು ಮತ್ತು ಅವರು ಯಾವಾಗಲೂ ಸಮಸ್ಯೆಗಳನ್ನು ಪರಿಹರಿಸಲು ಮಾರ್ಗಗಳನ್ನು ಕಂಡುಕೊಳ್ಳುತ್ತಿದ್ದರು. ಅವರು ನಾಗಪುರದ ಸಮ್ಮೇಳನದಲ್ಲಿ ಅಸ್ಪೃಶ್ಯರಿಗೆ ಹೇಳಿದರು: "ನೀವು ಎಂದಾದರೂ ತುರ್ತಿನ ವಿಪತ್ತನ್ನು ಎದುರಿಸಬೇಕಾದರೆ ನಾನು ನನ್ನ ಸಿಂಹಾಸನವನ್ನು ನನ್ನ ಮಗನಿಗೆ ಕೊಟ್ಟು ನಾನು ನಿಮ್ಮ ಸೇವೆಯಲ್ಲಿರುವೆನು...". ಈ ಮಾತುಗಳು, ಸ್ವರ್ಗದಲ್ಲಿರುವ ಬುದ್ಧ ಮತ್ತು ದೇವರುಗಳಿಗೆ ಹೊಗಳಲು ಯೋಗ್ಯವಾಗಿದೆ. ಇನ್ನೂ ನಮ್ಮ ಕಿವಿಗಳಲ್ಲಿ ಗುನುಗುಟ್ಟುತ್ತಿವೆ. ಶಾಹುರವರು ಅಸ್ಪೃಶ್ಯತೆಯನ್ನು ನಿರ್ಮೂಲನೆಮಾಡಲು ಐತಿಹಾಸಿಕ ವಿಕಾಸಕ್ಕಾಗಿ ಕಾಯುವುದಕ್ಕೆ ಆಗುವುದಿಲ್ಲ ಅಥವಾ ಮತ್ತೊಂದು ಮತವನ್ನು ಆಲಂಗಿಸಿಕೊಳ್ಳುವುದು ವ್ಯರ್ಥ ಅಥವಾ ಖಾಲಿ (ಒಣ) ಭಾಷಣಗಳಲ್ಲಿ ತೊಡಗುವುದರಿಂದ ಪ್ರಯೋಜನವಿಲ್ಲವೆಂದು ಅವರು ಇತಿಹಾಸದಿಂದ ಸಾಕಷ್ಟು ಅರಿತಿದ್ದರು. ಅವರು ತಮ್ಮ ಅತ್ಯಂತ ಶಕ್ತಿಶಾಲಿ ಆಯುಧವನ್ನು ಬಳಸಲು ತೊಡಗಿದರು. ರೋಮ್ ಮತ್ತು ಜಪಾನುಗಳು ಪರೀಕ್ಷಿಸಿದ ಆಯುಧ –ಅಸ್ಪೃಶ್ಯತೆಯನ್ನು ನಿರ್ಮೂಲನೆಮಾಡಲು; ಕಾನೂನಿನ ಬಲ! ಈ ಆಯುಧ ಹೇಗೆ ಪರಿಣಾಮಕಾರಿಯಾದದ್ದು ಎಂದು ನೋಡಲು ನೀವು ಬಯಸಿದರೆ, ಆಗ ನೀವು ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ನಡುವೆ ಸಾಮರಸ್ಯವಿರಬೇಕೆಂದು ಹೇಳುವ ಬ್ರಾಹ್ಮಣರಲ್ಲಿನ ಚಿಂತನೆಯ ಹೊಸ ಅಲೆಗೆ ಸ್ವಲ್ಪ ಗಮನ ನೀಡಿ!

ನಾವು ನಿಜವಾಗಲು ನತದೃಷ್ಟರು. ನಮ್ಮವರೇ ಆದ ಅಬ್ರಾಹಂ ಲಿಂಕನ್, ಪ್ರೀತಿಯಿಂದ ಬಿತ್ತಿದ ಬೀಜವು ವಿಷವನ್ನು ಉತ್ಪಾದನೆಮಾಡುವುದಿಲ್ಲ ಎಂಬುದನ್ನು ರುಜುವಾತುಪಡಿಸಿದ್ದಾರೆ. ಅವರ ಹೆಸರೇ ಶತ್ರುಗಳ ಹೃದಯಗಳಲ್ಲಿ ಭಯವನ್ನು ಮೂಡಿಸುತ್ತದೆ. ಅಸ್ಪೃಶ್ಯತೆಯ ನಿರ್ಮೂಲನೆಯ ವಿಧಾನಗಳನ್ನು ಬ್ರಿಟಿಷ್ ಆಡಳಿತಗಾರರು ಅನುಕರಿಸಬೇಕು. ಅವರು ಅಸ್ಪೃಶ್ಯತೆಯ ಕಳಂಕವನ್ನು ಅಳಿಸಿಹಾಕಿ ಭಾರತದ ಮುಖವನ್ನು ಹೊಳೆಯುವಂತೆ ಮಾಡಿ, ಸಾಧ್ಯವಾದ ಕಿರುಕುಳಗಳನ್ನು ಮತ್ತು ಅವಮಾನಗಳನ್ನು ಎದುರಿಸಲು ನಮ್ಮನ್ನು ಬಿಟ್ಟು ಅಂತಿಮ ಯಾತ್ರೆ ಕೈಗೊಂಡಿದ್ದಾರೆ.

ಭಗವಾನ್ ಶಾಹುರವರ ಇಚ್ಛಾಶಕ್ತಿಯೇ ನಮ್ಮ ಮತ. ದೇವರು ತನ್ನ ದರ್ಬಾರನ್ನು ಕರೆದು ತನ್ನ ವಿಶ್ವದಲ್ಲಿ ಈ ಮಹಾತ್ಮನನ್ನು ಸ್ವಾಗತಿಸಿ ಮತ್ತು ಸನ್ಮಾನಮಾಡಲಿ. ಮುಂಬಯಿ, ಪುಣೆ, ನಾಗಪುರ, ದೆಹಲಿ ಅಥವಾ ಮದ್ರಾಸುಗಳಿಗೆ ಸೇರಿದ ಭಾರತದ ಬಹಿಷ್ಕೃತ ಜನರೆಲ್ಲರ ಭಾವನೆ ಇದಾಗಿದೆ.

*(ಕೃತಜ್ಞತೆಗಳೊಂದಿಗೆ ಬಹಿಷ್ಕೃತ ಭಾರತದಿಂದ ತೆಗೆದುಕೊಳ್ಳಲಾಗಿದೆ).*

---

೨೪

# ಶಾಹುರವರ ಜೀವನ ಮತ್ತು ಕಾರ್ಯ

**ಭಗವಂತರಾವ್ ಪಾಲೇಕರ್**

*ಸತ್ಯಶೋಧಕ ಮತ್ತು ಜಾಗೃತಿಯ ಸಂಪಾದಕ, ಬರೋಡ*

ಕರವೀರ ಸಂಸ್ಥಾನದ ಛತ್ರಪತಿ ಶಾಹು ಮಹಾರಾಜರು ಮುಂಬಯಿಯಲ್ಲಿ ಅಕಾಲಿಕ ಮರಣದಿಂದ ಕೆಲವೇ ಕೆಲವು ಅಸಹಿಷ್ಣುತೆಯ ವ್ಯಕ್ತಿಗಳನ್ನು ಬಿಟ್ಟರೆ ಮಹಾರಾಷ್ಟ್ರದಲ್ಲಿರುವ ಹಿರಿಯ ಮತ್ತು ಕಿರಿಯರಾದ ಪ್ರತಿಯೊಬ್ಬರೂ ಆಘಾತಗೊಂಡರು. ಗಾಯಕ್‌ವಾಡ ರಾಜಕುಮಾರಿ ಲಕ್ಷ್ಮಿದೇವಿಯವರ ಮದುವೆಗೆ ಅವರು ಬರೋಡದಲ್ಲಿದ್ದಾಗ ಇಲ್ಲಿನ ಜನರು ಶಾಹುರವರ ಕೊನೆಯ ದೃಶ್ಯವನ್ನು ನೋಡುತ್ತೇವೆಂದು ಅವರು ಭಾವಿಸಿಯೇ ಇರಲಿಲ್ಲ. ಇಡೀ ಮಹಾರಾಷ್ಟ್ರ ಪ್ರಾಂತ್ಯ ಇಂದು ಅವರ ಮರಣಕ್ಕೆ ಸಂತಾಪಸೂಚನೆಯಲ್ಲಿ ಮುಳುಗಿಹೋಗಿದೆ. ಮಹಾರಾಷ್ಟ್ರದ ಹೊರಗಿರುವ ಮರಾಠಿ ಮಾತನಾಡುವ ಹಿಂದುಳಿದ ವರ್ಗಗಳು ಅವರ ಮರಣದಿಂದ ಗಾಬರಿಗೊಂಡಿದ್ದಾರೆ. ಶಾಹುರವರು ಸಂಸ್ಥಾನ ಒಬ್ಬ ಪ್ರಸಿದ್ಧ ಮುಖ್ಯಸ್ಥರಾಗಿದ್ದರು. ತಮ್ಮ ಕೆಲಸ-ಕಾರ್ಯಗಳು ಮತ್ತು ಸಾಮರ್ಥ್ಯಗಳ ಬಲದಿಂದ ಜನರ ಮನ್ನಣೆಗಳಿಸಿದ್ದರಿಂದ ಅವರು ಸಂಸ್ಥಾನದ ಮುಖ್ಯಸ್ಥರಾಗಿದ್ದರು.

## ಅಸಾಧಾರಣವಾದ ಬುದ್ಧಿಶಕ್ತಿ

ಕುದುರೆಸವಾರಿ ಮತ್ತು ಬೇಟೆಯಾಡುವಿಕೆಯಲ್ಲಿ ಶಾಹುರವರ ಸಾಧಾರಣವಾದ ಕೌಶಲ್ಯಗಳು ಮತ್ತು ಅವರ ಆಶ್ಚರ್ಯಕರವಾದ ದೈಹಿಕಬಲಗಳು ಅವರ ಅಸಾಧಾರಣವಾದ ಬೌದ್ಧಿಕಶಕ್ತಿಯೊಂದಿಗೆ ಸರಿಹೊಂದುತ್ತಿದ್ದವು. ಬಲವಂತರಾವ್ ತಿಲಕರು ಅವರ ಬುದ್ಧಿಶಕ್ತಿಯನ್ನು ಮೆಚ್ಚಿಕೊಂಡಿದ್ದರು. ಶಾಹುರವರು ಪ್ರಾರಂಭದಲ್ಲಿ ಹಳೆಪದ್ಧತಿಯ ಸಾಮಾಜಿಕ ಪರಿಸರದಲ್ಲಿ ರೂಪಗೊಂಡವರು. ಆದರೆ ಅವರು ಸಾಮಾಜಿಕ ಸುಧಾರಣೆಗಳ ಅನಿವಾರ್ಯತೆಯನ್ನು ಬೇಗನೆ ಸಾಕಷ್ಟು ಅರ್ಥಮಾಡಿಕೊಂಡಿದ್ದರು. ಕೊಲ್ಹಾಪುರದ ವೇದೋಕ್ತ ಪ್ರಕರಣವು ಹಿಂದುಳಿದ ಜಾತಿಗಳ ತೀವ್ರ ಬಂಡಾಯದ ಮೊದಲ ಸಮರದ ಕೂಗಾಗಿತ್ತು. ಹಲವರು ವೇದೋಕ್ತದ ಬಗ್ಗೆ ಭಿನ್ನಾಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಅದು ಬ್ರಾಹ್ಮಣೇತರರಲ್ಲಿ ಆತ್ಮ-ಗೌರವವನ್ನು ಮತ್ತೆ ಪ್ರಜ್ವಲಿಸುವಂತೆ ಮಾಡಿತೆಂದು ಎಲ್ಲರೂ ಒಪ್ಪುತ್ತಾರೆ. ಈ ಪ್ರಕರಣದ ನಂತರ ಶಾಹುರವರು ಧಾರ್ಮಿಕ ಬದಲಾವಣೆಗಳ ಕಡೆಗೆ ತಿರುಗಿದರೆಂಬುದನ್ನು ನಿರಾಕರಿಸುವಂತಿಲ್ಲ. ಶಾಹುರವರು ಪ್ರಾಯೋಜಿಸಿದುದರಿಂದ ಈ ಆಂದೋಲನವು ಮಹಾರಾಷ್ಟ್ರದಲ್ಲಿ ವೇಗವಾಗಿ ಕಾಳ್ಗಿಚ್ಚಿನಂತೆ ಹರಡಿಬಿಟ್ಟಿತು.

ಶಾಹುರವರ ಸ್ಥಾನದಲ್ಲಿ ದುರ್ಬಲ ಅಥವಾ ಮೃದುಸ್ವಭಾವದ ರಾಜನಿದ್ದಿದ್ದರೆ ಇಷ್ಟೊತ್ತಿಗೆ ಜಾತಿಶಕ್ತಿಗಳು ಅವನನ್ನು ಸಂಪೂರ್ಣವಾಗಿ ಮಹಾರಾಷ್ಟ್ರದಲ್ಲಿ ಮುಗಿಸಿಬಿಡುತ್ತಿದ್ದವು. ಆದರೆ ಶಾಹುರವರು ತನ್ನ ವಿರೋಧಿಗಳಿಗೆ

ಅಧಿಕ ಬಲಿಷ್ಠರಾಗಿದ್ದರು. ಅವರ ಪ್ರತಿಯೊಂದು ಸಂಚಿಗೆ ಅವರು ಪ್ರತಿಸಂಚನ್ನು ಹೂಡುತ್ತಿದ್ದರು. ಶಾಹುರವರ ವರ್ಚಸ್ಸನ್ನು ಕೆಡಿಸಲು, ದುಷ್ಟಕಾರ್ಯಗಳಲ್ಲಿ ಸಿಕ್ಕಿಸಲು, ಬ್ರಾಹ್ಮಣರಾಜರು ಮತ್ತು ಅವರ ಜಾತಿಯ ಜನರೇ ಅವರ ಸಿಂಹಾಸನವನ್ನು ಹಾಳುಮಾಡಲು ಪ್ರಯತ್ನಿಸಿದರು. ಆದರೆ ಅವರೆಲ್ಲರ ಸಂಚುಗಳು ಮುತ್ಸದ್ಧಿಯಾದ ರಾಜನ ಅತ್ಯುತ್ತಮ ವ್ಯೂಹರಚನೆಗಳ ಮುಂದೆ ವ್ಯರ್ಥವಾಗಿಬಿಟ್ಟವು. ಇಂದು ಈ ಎಲ್ಲಾ ಉಲ್ಲೇಖಗಳನ್ನು ಮಾಡಲು ನಮಗೆ ದುಃಖವಾಗುತ್ತದೆ. ಆದರೆ ಕೆಲವು ಬ್ರಾಹ್ಮಣ ವಿರೋಧಿಗಳು ಮತ್ತು ಅವರ ದಿನಪತ್ರಿಕೆಗಳು ಶಾಹುರವರೊಡನೆ ದ್ವೇಷದ ವಿಷಕಾರುತ್ತಿದ್ದವು ಎಂದರೆ ಅವರು ಸಾವಿನಲ್ಲಿ ಅವು ಸಾಮಾನ್ಯ ಶಿಷ್ಟಾಚಾರವನ್ನು ಮತ್ತು ಔಪಚಾರಿಕತೆಯನ್ನು ತೋರಿಸಲಿಲ್ಲ. ಈ ಸಂದರ್ಭದಲ್ಲಿ ಕೂಡ ಅವರ ನಿರಂತರವಾದ ದ್ವೇಷವನ್ನು ಗಮನಿಸುವಂತೆ ಅನಿವಾರ್ಯ ಮಾಡಿಬಿಟ್ಟಿದೆ.

## ಮೂಲತಃ ಔದಾರ್ಯರು

ಮಹಾರಾಜರ ಮತ್ತೊಂದು ಮುಖ್ಯ ಗುಣ ಅವರ ಸಾಮಾಜಿಕ ಮತ್ತು ಧಾರ್ಮಿಕ ಉದಾರವಾದ. ಆರ್ಯಸಮಾಜದ ಆಂದೋಲನವಾಗಲಿ, ವೇದೋಕ್ತ ಪ್ರಕರಣವಾಗಲಿ, ಅಸ್ಪೃಶ್ಯರ ವಿಮೋಚನೆಯಾಗಲಿ, ಶಿಕ್ಷಣದ ಪ್ರಸಾರವಾಗಲಿ, ಹಿಂದುಳಿದ ವರ್ಗಗಳ ಸುಧಾರಣೆಯಾಗಲಿ ಶಾಹುರವರು ಪ್ರತಿಯೊಂದು ಪ್ರಗತಿಪರ ಸುಧಾರಣಾ ಆಂದೋಲನಕ್ಕೆ ಬೆಂಬಲ ನೀಡುತ್ತಿದ್ದರು. ಮಹಾರಾಜ ಶಾಹುರವರು ಒಬ್ಬ ಮರಾಠನಾಗಿದ್ದಕ್ಕೆ ಹೆಮ್ಮೆಪಡುತ್ತಿದ್ದರು. ಅವರು ಮರಾಠರಲ್ಲಿ ಶಿಕ್ಷಣ ಪ್ರಸಾರ ಮಾಡುವುದಕ್ಕೆ ಅವರು ಸದಾ ಯಾವುದೇ ಪ್ರಯತ್ನಕ್ಕೆ ಸಹಾಯಮಾಡುತ್ತಿದ್ದರು. ಅವರ ಹೃದಯವು ಮರಾಠರ ಸಾಮಾಜಿಕ ಮತ್ತು ಧಾರ್ಮಿಕ ಸ್ಥಾನಮಾನದ ಕುಸಿತಕ್ಕೆ ಬಾಧೆಪಡುತ್ತಿತ್ತು. ಆದರೆ ಅವರ ಮುನ್ನೋಟ ಮರಾಠ ಸಮುದಾಯಕ್ಕೆ ಮಾತ್ರ ನಿರ್ಬಂಧಿತವಾಗಿರಲಿಲ್ಲ. ಅವರ ಗುರಿ ಸಾಮಾಜಿಕ ಮತ್ತು ಧಾರ್ಮಿಕ ಸಮಾನತೆಯಾಗಿತ್ತು ಮತ್ತು ಅವರು ತಮ್ಮ ಜಾತಿಯ ಸಹೋದರರೇ ಇದನ್ನು ವಿರೋಧಿಸಿದರೆ ಸಹಿಸುತ್ತಿರಲಿಲ್ಲ. ಶಿಕ್ಷಣದಲ್ಲಿ ಹಿಂದುಳಿದಿರುವ ಎಲ್ಲಾ ವರ್ಗಗಳಿಗೆ ಅವರು ಔದಾರ್ಯದ ಪ್ರೀತಿ ಮತ್ತು ಸಹಾಯಹಸ್ತವನ್ನು ನೀಡುತ್ತಿದ್ದರು. ಅಸ್ಪೃಶ್ಯರಿಗೆ ಅವರ ಮಮತೆಪೂರ್ಣ ಬದ್ಧತೆಯು ಯಾವುದೇ ಪ್ರಗತಿಪರ ಸಮಾಜಸುಧಾರಕನಿಗೆ ಹೆಮ್ಮೆಪಡುವಂತೆ ಮಾಡುತ್ತಿತ್ತು.

ಶಾಹುರವರು ಕಾರ್ಯೋನ್ಮುಖ ಸುಧಾರಕರು ಮತ್ತು ಖಾಲಿ ಮಾತನಾಡುವವರಲ್ಲ. ಅವರು ಧೈರ್ಯವಾಗಿ ವೇದೋಕ್ತ ಪ್ರಕರಣ ಕಾರ್ಯನಿರತರಾದರು. ಮತ್ತು ಅಸ್ಪೃಶ್ಯತೆಯ ನಿವಾರಣೆಯ ಅವರ ಪ್ರಾಯೋಗಿಕ ಸಾಧನೆಗಳು ಬರೀ ಮಾತನಾಡುವ ಸುಧಾರಕರಿಗೆ ನಾಚಿಕೆಯನ್ನು ಉಂಟುಮಾಡುತ್ತಿದ್ದವು. ನಿಜವಾದ ಒಬ್ಬ ನಾಯಕರಾಗಿ ಅವರು ವೈಯಕ್ತಿಕವಾಗಿ ಸ್ಪರ್ಶನಿಷೇಧವನ್ನು ಕೊನೆಗಾಣಿಸಲು ನಿದರ್ಶನವನ್ನು ಮಾಡಿ ತೋರಿಸುತ್ತಿದ್ದರು. ಮದ್ರಾಸ್ ಪ್ರೆಸಿಡೆಂಸಿಯಲ್ಲಿ ಡಾ. ನಾಯರ್ ಅವರಿಂದ ಬ್ರಾಹ್ಮಣೇತರರು ಜಾಗೃತಗೊಂಡಿದ್ದಕ್ಕಿಂತ ಹೆಚ್ಚು ಮಹಾರಾಷ್ಟ್ರದಲ್ಲಿ ಶಾಹುರವರಿಂದ ಬ್ರಾಹ್ಮಣೇತರರು ಜಾಗೃತಗೊಂಡಿದ್ದರು. ಶಾಹುರವರು ಅಸ್ಪೃಶ್ಯತೆಯನ್ನು ನಾಶಮಾಡುವಲ್ಲಿ ತೋರಿಸಿದ ಸಕ್ರಿಯ ಧೈರ್ಯದಷ್ಟು ಮದ್ರಾಸಿನ ಬ್ರಾಹ್ಮಣೇತರ ನಾಯಕರು ತೋರಿಸುವುದಕ್ಕೆ ಸಾಧ್ಯವಾಗಲಿಲ್ಲ. ಅವರು ಸಮಾಜ ಸುಧಾರಣೆಗೆ ಸಾಧ್ಯವಾದ ಪ್ರತಿಯೊಂದು ವಿಧಾನವನ್ನು ಬಳಸಿದರು ಮತ್ತು ಈ ವಿಧಾನವಾಗಲಿ ಅಥವಾ ಆ ವಿಧಾನವಾಗಲಿ ಒತ್ತಾಯಪಡಿಸಲಿಲ್ಲ ಅಥವಾ ಯಾವುದೇ ಒಂದು ಮತ ಅಥವಾ ಪಂಥವನ್ನಾಗಿ ಎತ್ತಿಹಿಡಿಯಲಿಲ್ಲ. ಅವರು ಸತ್ಯಶೋಧಕ ಸಿದ್ಧಾಂತವನ್ನು ಹಾಗೂ ಆರ್ಯಸಮಾಜದ ವಿಧಾನವನ್ನು ಬಳಸಿದರು. ಅವರು ಸಾಮಾಜಿಕ ಜಾಗೃತಿಯನ್ನು

ತರುವುದರಲ್ಲಿ ಅವರು ವೈಯಕ್ತಿಕ ಜಾತಿಗಳ ಸುಧಾರಣೆಯನ್ನು ಬೆಳೆಸಿದರು ಮತ್ತು ಅದೇ ಸಮಯದಲ್ಲಿ ಅವರು ಜಾತಿಯ ವ್ಯತ್ಯಾಸಗಳನ್ನು ಕೊನೆಗಾಣಿಸುವುದಕ್ಕೆ ಪ್ರಚಾರಮಾಡಿದರು.

**ಯುಗನಿರ್ಮಾಣದ ಕೊಡುಗೆ**

ಒಬ್ಬ ವ್ಯಕ್ತಿಯ ಮಹತ್ವವನ್ನು ಅವನ ಅಥವಾ ಅವಳ ಕೊಡುಗೆಯ ಆಧಾರದ ಮೇರೆಗೆ ಮೌಲ್ಯಮಾಪನ ಮಾಡಬೇಕಾಗುತ್ತದೆ. ಚಾರಿತ್ರ್ಯದ ದೋಷಗಳು ಅಥವಾ ಧೋರಣೆಗಳ ಕೊರತೆಯು ಅವರ ಕೊಡುಗೆಯ ಪ್ರಮಾಣ ಮತ್ತು ಗುಣಕ್ಕೆ ಗೌಣವಾಗುತ್ತವೆ. ಶಾಹುರವರ ಕಾರ್ಯ ಮಹತ್ತರವಾದುದು. ಹಲವಾರು ಶತಮಾನಗಳಿಂದಲೂ ಸಾಮಾಜಿಕ ಗುಲಾಮಗಿರಿಯ ಬಂಧನಕ್ಕೆ ಒಳಗಾಗಿರುವ ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳಲ್ಲಿ ಆತ್ಮಗೌರವವನ್ನು ಜಾಗ್ರತಗೊಳಿಸುವುದು ಮತ್ತು ಬೋಧಿಸುವುದು ಶಾಹುರವರ ಗುರಿಯಾಗಿತ್ತು. ಈ ಮಾರ್ಗದಲ್ಲಿ ಅವರನ್ನು ಬೆಂಬಲ ಮತ್ತು ಉತ್ತೇಜನಗಳಿಂದ ಸ್ವಲ್ಪ ದೂರದವರೆಗೆ ಮುಂದಕ್ಕೆ ಅವರು ಕೊಂಡೊಯ್ಯಬೇಕಾಗಿತ್ತು. ಅವರು ನಿಸ್ವಾರ್ಥದಿಂದ ಧೈರ್ಯವಾಗಿ ಈ ಹೊಣೆಯನ್ನು ಪೂರೈಸಿದರು. ಪ್ರಾಚೀನ ಕ್ಷತ್ರಿಯರಾದ ಗೌತಮ ಬುದ್ಧರು ಉದಾರತೆಯ ರೂಪದಲ್ಲಿ ಧರ್ಮವನ್ನು ಮುಂಗಾಣಿದ್ದ ದಾರಿಯಲ್ಲಿಯೇ ಶಾಹು ಅನುಸರಿಸಿದ್ದರು. ಆದ್ದರಿಂದಲೇ ಹಿಂದುಳಿದ ವರ್ಗಗಳು ಮತ್ತು ಅಸ್ಪೃಶ್ಯರು ಅವರನ್ನು ರಾಜರ್ಷಿ ಎಂದು ಒಪ್ಪಿದ್ದು.

ಶಾಹುರವರು ತಮ್ಮ ದೈನಂದಿನ ರೂಢಿಗಳಲ್ಲಿ ಮತ್ತು ಜೀವನಶೈಲಿಯಲ್ಲಿ ನಿಜವಾದ 'ರಾಜರ್ಷಿ' ಆಗಿದ್ದರು. ಅವರಿಗೆ ವೈಭವಶಾಲಿ ಮತ್ತು ಅಲಂಕಾರಿಕ ಉಡುಪುಗಳನ್ನು ತೊಡುವುದರಲ್ಲಿ ಆಸಕ್ತಿಯಿರಲಿಲ್ಲ. ಅವರ ಅವಶ್ಯಕತೆಗಳು ಕೇವಲ ಕೆಲವು ಮತ್ತು ಮಿತವ್ಯಯಕಾರಿಯಾಗಿದ್ದವು. ಮಹಾರಾಜರ ಗತ್ತು ಅವರ ಬದುಕಿನ ಶೈಲಿಯಲ್ಲಿ ಗೋಚರಗೊಳ್ಳಲಿಲ್ಲ. ಆದರೆ ಅವರ ಹೃದಯ-ವೈಶಾಲ್ಯದಲ್ಲಿ ಮತ್ತು ಬೇರೆಯವರ ಬಗೆಗಿನ ವರ್ತನೆಯಲ್ಲಿ ಕಾಣಿಸುತ್ತಿತ್ತು. ಅವರು ಸಾಮಾನ್ಯ ಜನರೊಂದಿಗೆ ಬೆರೆಯುವುದರಲ್ಲಿ ಮುಜುಗರಪಡಲಿಲ್ಲ ಮತ್ತು ಅತ್ಯಂತ ಕಡುಬಡವರು ಅವರನ್ನು ಭೇಟಿಮಾಡುವುದರಲ್ಲಿ ಹೆದರಲಿಲ್ಲ. ಪ್ರತಿಯೊಬ್ಬರಿಗೂ ಅವರು ಎಟಕುತ್ತಿದ್ದರು. ಅವರಿಗೆ ಪೊಳ್ಳುತನ ಅಥವಾ ಒಣಜಂಭ ಗೊತ್ತಿರಲಿಲ್ಲ. ಅವರು ಜನರೊಂದಿಗೆ ನಿಕಟವಾದ ಪ್ರತಿಕ್ರಿಯೆಗಳನ್ನು ಹೊಂದಿದ್ದರಿಂದ ಮುಖ್ಯವಾಗಿ ತಮ್ಮ ಸಂಸ್ಥಾನದಲ್ಲಿನ ಆಗು-ಹೋಗುಗಳ ಬಗ್ಗೆ ಶಾಹು ಚೆನ್ನಾಗಿ ಅರಿತುಕೊಂಡಿದ್ದರು. ಅವರು ಒಬ್ಬನ ಮನಸ್ಸನ್ನು ಅರಿತುಕೊಳ್ಳುವುದರಲ್ಲಿ ನಿಪುಣರಾಗಿದ್ದರು ಮತ್ತು ಯಾರು ಸಹ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಅವರ ಮಾನಸಿಕ ಮತ್ತು ನೈತಿಕ ಧೈರ್ಯ ಅವರ ದೈಹಿಕ ಧೈರ್ಯಕ್ಕೆ ಸರಿಹೊಂದುತ್ತಿತ್ತು. ಸಾಮಾಜಿಕ ಸುಧಾರಣೆಯ ಆಂದೋಲನವನ್ನು ಮುಂದಕ್ಕೆ ಒಯ್ಯುವಾಗ ಅವರು ಜನರ ಯಥಾಸ್ಥಿತಿ ಅಭಿಪ್ರಾಯಗಳಿಗೆ ಲಕ್ಷ್ಯ ಕೊಡುತ್ತಿರಲಿಲ್ಲ. ಅವರನ್ನು ಭಯಪಡಿಸಲು ಮಾಡಿದ ಎಲ್ಲಾ ಸಂಚುಗಳನ್ನು ಮತ್ತು ಕೆಟ್ಟ ಕೃತ್ಯಗಳಲ್ಲಿ ಅವರನ್ನು ಸಿಕ್ಕಿಸಲು ಮಾಡಿದ ಎಲ್ಲಾ ಸುಳ್ಳು ಧೈರ್ಯವಾಗಿ ಎದುರಿಸಿದರು. ಅವರು ಅಸ್ಪೃಶ್ಯರಿಗೆ ಮಮಕಾರವನ್ನು ತಮ್ಮ ಕೃತಿಗಳ ಮೂಲಕ ತೋರಿಸಿದರು ಮತ್ತು ಬ್ರಾಹ್ಮಣರ ಕೋಪವನ್ನು ಬರಮಾಡಿಕೊಂಡರು. ತಮ್ಮ ಜಾತಿಯ ಜನರೇ ಅವರನ್ನು ಟೀಕೆಮಾಡಿದರು. ಶಾಹು ಅವುಗಳಿಗೆ ಗಮನವನ್ನೇ ಕೊಡಲಿಲ್ಲ ಮತ್ತು ಅಂತಹ ದಾಳಿಗಳನ್ನು ಧೀರಸಂಯಮದಿಂದ ಅನುಭವಿಸಿದರು.

ಬೇಟೆಯಲ್ಲಿ ಶಾಹುರವರು ಹುಲಿ ಅಥವಾ ಕರಡಿಗಾಗಿ ಎಂದೂ ಹೆದರಿದವರಲ್ಲ. ಕೋಪಗೊಂಡ

ಆನೆ ತಮ್ಮ ಕಡೆಗೆ ಬಂದಾಗ ಅವರು ಹಿಂಜರಿಯಲಿಲ್ಲ ಮತ್ತು ಧೈರ್ಯವಾಗಿ ಹಾಗೆಯೇ ನಿಂತಿದ್ದರು. ಹಾಗೆಯೇ ಸಾರ್ವಜನಿಕ ಅಭಿಪ್ರಾಯ ಮೌಢ್ಯದಿಂದ ರೂಪಗೊಂಡು ಅವರ ವಿರುದ್ಧ ತಿರುಗಿಬಿದ್ದಾಗ ಭಯ ಅವರ ಹೃದಯವನ್ನು ತಟ್ಟಲೇ ಇಲ್ಲ. ಶಾಹುರವರು ಹಿಂದಿನ ಯುಗದಲ್ಲಿ ಹುಟ್ಟಿದ್ದರೆ, ಅವರ ಗುಣಗಳು ಸಮಾಜದ ಕಲ್ಯಾಣ ಕಾರ್ಯಕ್ಕಾಗಿ ಅಪಾರವಾದ ವ್ಯಾಪ್ತಿ–ಅವಕಾಶಗಳು ದೊರೆಯುತ್ತಿದ್ದವು. ಅವರು ಅದ್ಭುತಗಳನ್ನು ಸಾಧಿಸಬಹುದಾಗಿತ್ತು. ನಾನಾ ಕಾರಣಗಳಿಂದಾಗಿ ಅವರ ಬಗ್ಗೆ ಹಲವು ಪೂರ್ವ–ಗ್ರಹಿಕೆಗಳಿವೆ. ಒಂದು ಸಾರ್ವಜನಿಕ ಅಭಿಪ್ರಾಯವನ್ನು ಎಂದಿಗೂ ಶಾಂತಗೊಳಿಸಲಿಲ್ಲ. ಜನರ ಸೇವೆಯೇ ಅವರ ಬದ್ಧತೆಯಾಗಿತ್ತು. ಅವರು ಬ್ರಾಹ್ಮಣ ಜಾತಿಯನ್ನು ದ್ವೇಷಿಸಿದ್ದರೆಂದು ಹಲವರು ನಂಬಿದ್ದರು. ಅವರು ಯಾವ ಜಾತಿಯನ್ನೂ ದ್ವೇಷಿಸಲಿಲ್ಲ ಎಂಬುದು ನಿಜ ಸಂಗತಿ.

### ಜಾತಿಪದ್ಧತಿಯ ವಿರೋಧಿ, ಜಾತಿಯ ವಿರುದ್ಧ ಅಲ್ಲ

ತತ್ವಗಳ ಬಗ್ಗೆ ವಿವಾದವಿದೆಯೇ ಹೊರತು ಯಾವುದೇ ನಿರ್ದಿಷ್ಟ ಜಾತಿಯನ್ನು ದ್ವೇಷಿಸುವುದು ಅಲ್ಲ. ಶಾಹುರವರು ಹಲವು ಬ್ರಾಹ್ಮಣರಿಗೆ ಆಶ್ರಯ ನೀಡಿದರು. ಇತರೆ ಹಲವರು ಅವರ ನಿರಂತರ ಸಾಲದಲ್ಲಿದ್ದರು. ಇಂದು ಸಹ (೧೯೨೨) ಹಲವು ಬ್ರಾಹ್ಮಣರು ಅವರ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನು ಹೊಂದಿದ್ದಾರೆ. ಪೂರ್ವಗ್ರಹಪೀಡಿತ ಜಾತಿಯ ಒಣಜಂಭ ಬಿಟ್ಟಿರುವ ಬ್ರಾಹ್ಮಣನು ಶಾಹುರವರಿಗೆ ಪ್ರಿಯನಾಗಿರುವನು. ಅವರು ಜಾತಿಯ ಒಣಹೆಮ್ಮೆಯಿಂದ ಉಬ್ಬಿಹೋದ ಬ್ರಾಹ್ಮಣೇತರರನ್ನು ಇಷ್ಟಪಡುತ್ತಿರಲಿಲ್ಲ. ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಲ್ಲಿ ಶಾಹುರವರ ಕೊಡುಗೆಯು ಚಿರಕಾಲವಿರುವಂಥದ್ದು. ಅದು ರಾಷ್ಟ್ರೀಯ ಆಂದೋಲನದ ಅಸ್ತಿವಾರಗಳನ್ನು ಬಲಪಡಿಸಲು ಮುಖ್ಯವಾದುದು. ಈ ಕೊಡುಗೆಯೊಂದಿಗೆ ಅವರನ್ನು ಯಾವ ಹಿಂಜರಿಕೆಯಿಲ್ಲದೆ ಭಾರತದ ರಾಷ್ಟ್ರೀಯ ಶ್ರೇಷ್ಠ ನಾಯಕರು ಎಂದು ಪರಿಗಣಿಸಬಹುದು.

ಅವರ ಅಕಾಲಿಕ ಮರಣವು ಅವರ ಪ್ರೀತಿಯಿಂದ ಪೋಷಿಸಿದ ಆಂದೋಲನವನ್ನು ಸ್ತಬ್ಧಗೊಳಿಸಿತು. ಮರಾಠರು ಭಯಚಕಿತರಾದರು. ಸತ್ಯಶೋಧಕ ಆಂದೋಲನ ತನ್ನ ಬಲಗೈಯನ್ನು ಕಳೆದುಕೊಂಡಿತು. ಮತ್ತು ಅಸ್ಪೃಶ್ಯ ಬಗ್ಗೆಯಿದ್ದ ಪ್ರೀತಿಯ ಆಶ್ರಯ ಮತ್ತು ಉದಾರತೆ ಕುಸಿದುಬಿತ್ತು. ಆದ ನಷ್ಟವನ್ನು ಸರಿಪಡಿಸುವುದಕ್ಕೆ ಅರ್ಧಶತಮಾನದಲ್ಲಿ ಸರಿಪಡಿಸುವುದಕ್ಕೆ ಸಾಧ್ಯವಿಲ್ಲ. ಪ್ರತಿಭಾಶಕ್ತಿಗಳ ರಸಜ್ಞ, ಉತ್ಸಾಹಿ ಯುವ ಸಾಮಾಜಿಕ ಕಾರ್ಯಕರ್ತರ ಬೆಂಬಲಿಗ, ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳ ಮಹಾನಾಯಕ ಇನ್ನಿಲ್ಲ. ಧೈರ್ಯ–ಸಾಹಸ ಶಾಹುರವರ ಅಪ್ರತಿಮ ಸ್ವಭಾವವಾಗಿತ್ತು. ತಮ್ಮ ಹಿಂದೆ ಬಿಟ್ಟುಹೋಗಿರುವ ಸೈನಿಕರು ಅಂತಹದೇ ಧೈರ್ಯ ತೋರಿಸಿದರೆ ಮತ್ತು ತಾವು ಸಾಕಿ–ಪೋಷಿಸಿದ ನ್ಯಾಯಬದ್ಧ ಆಂದೋಲನಗಳನ್ನು ಮುಂದುವರಿಸುವುದನ್ನು ಅನುಸರಿಸಿದರೆ ಶಾಹು ಸಂತೋಷಪಡುವರು.

*('ಜಾಗೃತಿ', ಮೇ ೧೩, ೧೯೨೨ರಿಂದ ಕೃತಜ್ಞತೆಗಳಿಂದ ಸ್ವೀಕರಿಸಲಾಗಿದೆ)*

---

೨೫

# ಶಾಹು – ದಮನಿತರ ಸಂರಕ್ಷಕ

**ಶ್ರೀಪತ್‌ರಾವ್ ಶಿಂಧೆ**

*'ವಿಜಯಿ ಮರಾಠ'ದ ಸಂಪಾದಕರು, ಸತ್ಯಶೋಧಕದ ನಾಯಕರು*

## ದಮನಿತರ ಸಂರಕ್ಷಕ ಇನ್ನಿಲ್ಲ

ಶನಿವಾರ ಬೆಳಗಿನ ಮುಂಜಾವಿನ ವೇಳೆಯಲ್ಲಿ ಜಯಶಾಲಿಗಳಾದ ಮರಾಠರ ಪ್ರಸಿದ್ಧ, ದಮನಿತ ವರ್ಗಗಳ ಸಂರಕ್ಷಕ, ಎಲ್ಲಾ ಬ್ರಾಹ್ಮಣೇತರರ ಸಮುದಾಯಗಳ ನಾಯಕ, ಸತ್ಯದ ವಿಜೇತ, ತನ್ನ ಬಡಪ್ರಜೆಗಳ ಮೇಲೆ ಪ್ರೀತಿ ಮತ್ತು ಮಮತೆಯ ಕೊಡೆ ಹಿಡಿದ ಶಾಹು ಮಹಾರಾಜರು ಭೂಮಿಯಿಂದ ನಿರ್ಗಮಿಸಿದ್ದಾರೆ.

ಮಹಾರಾಷ್ಟ್ರದ ಪ್ರಾಣ (ಜೀವ) ಇನ್ನಿಲ್ಲ, ಅದರ ದೈವಿಕ ಬೆಳಕು ಆರಿಹೋಯಿತು. ಭಾವೀ ಜನತಂತ್ರದ ಬುನಾದಿಯನ್ನು ಹಾಕಿದ ಮಹಾರಾಜ ಈಗ ಸದಾಕಾಲಕ್ಕೆ ಮೌನವಾಗಿದ್ದಾರೆ. ಶಿಕ್ಷಣವೆಂಬ 'ಮಂತ್ರ'ವನ್ನು ಪರಿಚಯಿಸುವ ಮೂಲಕ ಮಾಂತ್ರಿಕನು ಜೀವವಿಲ್ಲದ ಕಲ್ಲುಗಳನ್ನು–ದಮನಿತ ವರ್ಗ–ಜೀವಂತ ಮಾನವ ಜೀವಿಗಳನ್ನು ಪರಿವರ್ತಿಸಿ ದಿಢೀರನೆ ಚಮತ್ಕಾರದಿಂದ ಮಾಯವಾಗಿದ್ದಾರೆ.

ಛತ್ರಪತಿ ಶಾಹುರವರ ಜೀವನ ಸಾಕಷ್ಟು ಸ್ಫೂರ್ತಿದಾಯಕವಾಗಿದೆ. ಅವರ ಜೀವನದ ಸುಂದರವಾದ ಚಿತ್ರವನ್ನು ಪ್ರಕಟಿಸಿದಾಗ ಮಹಾರಾಷ್ಟ್ರ ಅವನತಿ ಹೊಂದಿದಾಗಿನಿಂದ ಒಂದು ನೂರು ವರ್ಷಗಳಲ್ಲಿ ಶಾಹುರವರ ಘನತೆಯ ಮತ್ತು ಬುದ್ಧಿವಂತ ನಾಯಕನು ಹುಟ್ಟಿಲ್ಲವೆಂದು ಅಥವಾ ಅವರಿಗೆ ಸಮಾನರಾದವರು ಬರುವುದಿಲ್ಲವೆಂದು ಬುದ್ಧಿಜೀವಿಗಳು ಒಪ್ಪುತ್ತಾರೆ. ಉನ್ನತ ಶ್ರೇಷ್ಠ ನೈತಿಕ ಗುಣಮಟ್ಟದ ನಿರ್ದುಷ್ಟ ನಿರ್ಧಾರಗಳನ್ನು ಮಾಡುವ ಸಾಮರ್ಥ್ಯದ ವರವನ್ನು ಅವರು ಪಡೆದಿದ್ದರು. ಅವರು ಬೇಗನೇ ಮತ್ತು ವಿಚಿತ್ರ ನಿರ್ಧಾರಗಳಿಂದ ಸೂಕ್ಷ್ಮ ಹಾಗೂ ಗೋಜಲುಗಳಿಂದ ಕೂಡಿದ ಸಂಚಿನ ರಾಜಕೀಯ ಸನ್ನಿವೇಶಗಳನ್ನು ಬಿಡಿಸುವ ಜಾಣ್ಮೆಯ ನಿದರ್ಶನಗಳು ಸಾಕಷ್ಟಿವೆ. ಅವರನ್ನು ಸರಿಯಾಗಿಯೇ ಬ್ರಾಹ್ಮಣೇತರರ ಭೀಷ್ಮಾಚಾರ್ಯ ಎಂದು ಕರೆಯಲಾಗಿದೆ. ಅವರ ಸಾಪನಿಂದ ವಸಾಹತು ಆಡಳಿತಗಾರರು ಒಬ್ಬ ನಂಬಿಕಸ್ಥ ರಾಜಕೀಯ ಸ್ನೇಹಿತನನ್ನು ಮತ್ತು ಬ್ರಾಹ್ಮಣೇತರರ ಸಾಮಂತ ಸಂಸ್ಥಾನಗಳು ಒಬ್ಬ ಬುದ್ಧಿವಂತ ಗುರುವನ್ನು ಕಳೆದುಕೊಂಡವು; ಇತಿಹಾಸವು ಹೀಗೆ ದಾಖಲೆ ಮಾಡುವುದು.....

ಶಾಹುರವರ ಚಾರಿತ್ರ್ಯದ ಸಾರಸತ್ವ ಅವರ ರಾಜಕೀಯ ಕುಶಾಗ್ರಮತಿಯೊಂದೇ ಅಲ್ಲ. ಅವರು ಕೇವಲ ರಾಜಕಾರಣದಲ್ಲಿಯೇ ಮುಳುಗಿದ್ದರೆ ಅವರು ರಾಷ್ಟ್ರೀಯ ಕಪಿಸೈನ್ಯದ ತೀವ್ರದಾಳಿಗೆ ಗುರಿಯಾಗುತ್ತಿರಲಿಲ್ಲ. ತಮ್ಮ ಸಹಜ ದೂರದೃಷ್ಟಿಯಿಂದ ಅವರು ಮಹಾರಾಷ್ಟ್ರದ ಸ್ಥಿತಿಗತಿಗಳನ್ನು ತೀಕ್ಷ್ಣವಾಗಿ ಅವಲೋಕನ ಮಾಡಿ ಅದರ ಪತನದ ಕಾರಣಗಳನ್ನು ನಿಖರವಾಗಿ ವಿಶ್ಲೇಷಿಸಿದರು ಮತ್ತು ಈ ಅವನತಿಗೆ ಕಾರಣಕರ್ತರಾದ

ಶಕ್ತಿಗಳನ್ನು ವಸ್ತುನಿಷ್ಠವಾಗಿ ಕಂಡುಹಿಡಿದರು. ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಮಾಡಿದರು, ಶಾಹುರವರು ವಿಶ್ವಾಸಘಾತುಕ ಪುರೋಹಿತಶಾಹಿಯನ್ನು ಸಂಪೂರ್ಣವಾಗಿ ಬೇರುಸಹಿತ ಕಿತ್ತುಹಾಕಲು ನಿರ್ಧರಿಸಿದರು. ಮೇಲುಜಾತಿಗಳು ಹುಟ್ಟಿನಿಂದ ತಾವು ಶ್ರೇಷ್ಠ ಎಂಬ ಪೊಳ್ಳುಭಾವನೆಯನ್ನು ಕೆಳಜಾತಿಗಳಿಗೆ ಬೋಧಿಸುವ ಮೂಲಕ ಬ್ರಾಹ್ಮಣರ ಐತಿಹಾಸಿಕ ಅಧಿಕಾರವನ್ನು ತುಳಿದು ಶಾಹುರವರು ನಾಶ ಮಾಡಿದ್ದರಿಂದ ಬ್ರಾಹ್ಮಣರು ವಿಶೇಷವಾಗಿ ಚಿತ್‌ಪಾವನ್ ಬ್ರಾಹ್ಮಣರು ಅವರನ್ನು ದ್ವೇಷಿಸಿದರು. ಮಾನವ ಜೀವಿಗಳು ಸಮಾನವಾಗಿ ಹುಟ್ಟಿದ್ದಾರೆ, ಮೇಲುಜಾತಿ ಅಥವಾ ಕೆಳಜಾತಿಗಳು ಇಲ್ಲ, ಅಸ್ಪೃಶ್ಯರು ಅಥವಾ ಸ್ಪೃಶ್ಯರು ಇಲ್ಲ, ಅಥವಾ ಬ್ರಾಹ್ಮಣರು ಮಾತ್ರ 'ಮೋಕ್ಷ'ದ ಏಕೈಕ ಏಜೆಂಟರಲ್ಲ (ಪುನರ್ಜನ್ಮದಿಂದ ಸ್ವಾತಂತ್ರ್ಯ). ಪ್ರತಿಯೊಬ್ಬರೂ ಸಾಧನೆಗೆ ಸಮರ್ಥರು. ಕೆಳಜಾತಿಗಳ ಜಗತ್ತಿನಲ್ಲಿ ಅಂತಹ ಉದಾತ್ತವಾದ ಆದರ್ಶಗಳನ್ನು ಪ್ರಚಾರಮಾಡಲು ಅವರು ಹುಟ್ಟಿನಿಂದ ಪರಮ ಶ್ರೇಷ್ಠರು ಎಂಬ ಬ್ರಾಹ್ಮಣ್ಯದ ಪರಿಕಲ್ಪನೆಯ ಮೇಲೆ ಧೈರ್ಯವಾಗಿ ದಾಳಿ ಮಾಡಿದರು ಮತ್ತು ಬ್ರಾಹ್ಮಣೇತರ ಜಾತಿಗಳಲ್ಲಿ ಅವರದೇ ಆದ ಘನತೆಯ ಪ್ರಜ್ಞೆಯನ್ನು ತುಂಬಿದರು ಮತ್ತು ಅವರ ಸಂಘಟನೆಯನ್ನು ಕಟ್ಟಿ ಬೆಳೆಸಿದರು. ಶಿವಾಜಿ ಮಹಾರಾಜ ಮಾಡಲಾರದ ಭಗೀರಥ ಪ್ರಯತ್ನವನ್ನು ಇಪ್ಪತ್ತನೇ ಶತಮಾನದ ಶಾಹುರವರು ಅದನ್ನು ಸಫಲವಾಗಿ ಪೂರೈಸಿದರು. ಬ್ರಾಹ್ಮಣೇತರರ ಜನರಲ್ಲಿ ಮೂಡಿದ ಮಾಂತ್ರಿಕ ಜಾಗೃತಿಯು ಧಾರ್ಮಿಕ ಯಜಮಾನಿಕೆಯ ಪಾರುಪತ್ಯಗಾರರ ಹೃದಯಗಳಲ್ಲಿ ಭಯ-ಭೀಕರತೆಯ ಕಂಪನವುಂಟಾಯಿತು. ಸಾಮಾಜಿಕ ಜೀವನದಲ್ಲಿ ಆದ ಅಸಾಧಾರಣ ಅದ್ಭುತ ಬದಲಾವಣೆಯು ಶಾಹು ಛತ್ರಪತಿಯವರಿಗೆ ಸಲ್ಲುತ್ತದೆ. ಆದ್ದರಿಂದಲೇ ಪುಣೆಯ 'ಕೇಸರಿ'ಯ ದುಷ್ಟಕೂಟ ಶಾಹುರವರನ್ನು ಅತಿಯಾಗಿ ದ್ವೇಷಿಸುತ್ತದೆ. ಶಾಹುರವರು ಒಬ್ಬ 'ಧರ್ಮದ್ರೋಹಿ' ಎಂದು ಕರೆಯುವುದಕ್ಕೆ ರೂಪಿಸಿದ ದುಷ್ಟಕೂಟದ ಹಿಂದೆ ಬ್ರಾಹ್ಮಣರ ಪಾರಮ್ಯ ಪ್ರಾಚೀನ ವೈದಿಕ ನಂಬಿಕೆಯ ಬೇರುಗಳನ್ನು ಈ ಮಹಾನುಭಾವ ಛತ್ರಪತಿ ಸ್ವತಃ ಧೈರ್ಯವಾಗಿ ಕಿತ್ತೆಸೆದರು.

ಪುಣೆಯಲ್ಲಿ ೧೯/೧೧/೧೯೨೧ರಲ್ಲಿ ಶಿವಾಜಿ ಮಹಾಶಯನ ಸ್ಮಾರಕವನ್ನು ಉದ್ಘಾಟನೆ ಮಾಡಿದಾಗ ಶಾಹು ಮತ್ತು ಅವರಲ್ಲಿದ್ದ ಮಹಾರಾಷ್ಟ್ರದ ಶ್ರದ್ಧೆಗೆ ಜನರ ಪ್ರೀತಿ ಮತ್ತು ಮಮತೆಗಳು ಹೊರಬಂದವು. ೪೦,೦೦೦ಕ್ಕೂ ಅಧಿಕ ಜನರು, ಮಹಾರಾಷ್ಟ್ರದ ಪ್ರತಿನಿಧಿಗಳು ಮತ್ತು 'ಮಾಳವ'ರು ಸಮಾರಂಭದಲ್ಲಿ ಸೇರಿದ್ದರು. ಶಾಹುರವರು ವೇಲ್ಸ್‌ನ ರಾಜಕುಮಾರರು ವ್ಯಕ್ತಿಗತವಾಗಿ ಈ ಜನರನ್ನು ನೋಡಬೇಕೆಂದು ಯೋಚಿಸಿದ್ದರು ಮತ್ತು ತನ್ನ ಜೊತೆಯಲ್ಲಿ ಜನಜಂಗುಳಿಗೆ ಸೇರಬೇಕೆಂದು ಕೋರಿಕೊಂಡಿದ್ದರು. ಗೌರ್ನರರು ತಮ್ಮ ಅಳುಕನ್ನು ವ್ಯಕ್ತಪಡಿಸಿದಾಗ ಶಾಹು ಹೇಳಿದರು: "ಹೆದರಬೇಡಿ, ನನ್ನ ಬಗ್ಗೆ ನನ್ನ ಜನರು ಮಮತೆಯಿಟ್ಟಿರುವುದರ ಬಗ್ಗೆ ನನಗೆ ಸಂಪೂರ್ಣವಾಗಿ ನಂಬಿಕೆಯಿದೆ. ನನ್ನ ಜೊತೆಯಲ್ಲಿ ರಾಜಕುಮಾರರು ಇರುವವರೆಗೆ 'ಛಾಫೇಕರ್' ವಿಧಗಳು ಅವರ ಮೇಲೆ ಕಣ್ಣು ಹಾಕುವುದಕ್ಕೆ ಅವಕಾಶವೇ ಇಲ್ಲ. ಒಂದು ವೇಳೆ ಅವರು ಗುಂಡು ಹಾರಿಸಿದ್ದೇ ಆದರೆ, ನಾನು ಸಾಯುವವರೆಗೆ ನನ್ನ ಎದೆ ಆ ಗುಂಡುಗಳನ್ನು ತಡೆಯುವುದು. ಶಾಹುರವರು ವೈಯಕ್ತಿಕವಾಗಿ ರಾಜಕುಮಾರರನ್ನು ಗುಂಪಿನಲ್ಲಿ ಘೋಷಣೆಗಳೊಂದಿಗೆ ಕೊಂಡೊಯ್ದರು. ಶಾಹುರವರು ಎಂತಹ ನಂಬಿಕೆ ಮತ್ತು ಎಂತಹ ಜನಪ್ರಿಯತೆಯನ್ನು ಅನುಭವಿಸಿದರು. ನಮ್ಮ ಲಾರ್ಡ್ ಶ್ರೀ ಶಾಹು ಛತ್ರಪತಿಯವರು ನಿಜವಾಗಿ ಇಷ್ಟಪಟ್ಟ ಅವರ ಬಗ್ಗೆ ಬರೆದ ನಮ್ಮ ಅಭಿಪ್ರಾಯವನ್ನು ನಮ್ಮ ಓದುಗ ಈಗಾಗಲೇ ಗ್ರಹಿಸಿರಬೇಕು. ಅವರ ಬಗ್ಗೆ ಪ್ರಕಟವಾಗಿರುವ ಸಾರ್ವಜನಿಕ ಅಭಿಪ್ರಾಯವನ್ನು ನೋಡುವುದರ ಮೂಲಕ ಅವರ ಮಹತ್ವವನ್ನು ನಾವು ಇಂದು ನೋಡುತ್ತಿದ್ದೇವೆ. ಶಾಹುರವರ ಎಲ್ಲಾ ಕೆಲಸವು ಬ್ರಾಹ್ಮಣರ ಸ್ಥಾಪಿತ ಪಾರಮ್ಯತೆಯ ವಿರುದ್ಧವಿದ್ದುದರಿಂದ ಶಾಹುರವರ ಬಗ್ಗೆ ಅಭಿಪ್ರಾಯವು ಅನಿವಾರ್ಯವಾಗಿ ಪೂರ್ವಗ್ರಹೀತವಾಗಿರುತ್ತದೆ. ಅವರ ಮಿಷನ್ನು (ಹೆಗ್ಗುರಿ) ಮಹತ್ವವಾದದ್ದರಿಂದ ತೀಕ್ಷ್ಣವಾದ ಬ್ರಾಹ್ಮಣರ

ಮಾತುಗಳು (ಭಾಷೆ) ಅವರ ಗುರಿಯನ್ನು ಕುರಿತು ಬಲಾತ್ಕಾರವಾಗಿ ಹೊಗಳಬೇಕಾಗಿದೆ. ಬ್ರಾಹ್ಮಣರಿಗೆ ಅದರ ಲಾಭ ಸಿಗದಿದ್ದರೂ ಶಾಹುರವರ ಮಹತ್ವದ ಒಂದು ಭಾಗವು ಸಲ್ಲುತ್ತದೆ. ಬಾಂಬೆಯ 'ಇಂದುಪ್ರಕಾಶ್' ಮತ್ತು 'ತಿಲಕ್' ಪತ್ರಿಕೆಗಳು ರಾಜರ್ಷಿ ಅವರನ್ನು ಮುಕ್ತಕಂಠದಿಂದ ಪ್ರಶಂಸಿಸಿ ಅವರಿಗೆ ಕಂಬನಿಯನ್ನು ಅರ್ಪಿಸಿದವು. ಅವುಗಳ ಅಭಿಪ್ರಾಯದಲ್ಲಿ ಮಹಾರಾಜರು ಭಾರತದ ಇತಿಹಾಸದಲ್ಲಿ ತಮ್ಮ ಹೆಸರನ್ನು ಕೆತ್ತಿಸಿಕೊಂಡ ಅಸಾಧಾರಣ ಪುರುಷರಾಗಿದ್ದರು. 'ಇಂದು' ಪತ್ರಿಕೆಯು ದಮನಿತರ ಏಳಿಗೆಯು ಅವರ ಮಿಷನ್ನಿನ ಶಕ್ತಿಯೇ ಸಮಾಜದಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿತೆಂದು ಅಭಿಪ್ರಾಯಪಟ್ಟಿದೆ. 'ತಿಲಕ್' ಪತ್ರಿಕೆಯು ಅಸಾಮಾನ್ಯವಾದ ಮುತ್ತು-ರತ್ನ ಕೊನೆಯುಸಿರೆಳೆಯಿತೆಂದು ವಿಷಾದಿಸಿತು. ಬೆಳಗಾವಿಯ 'ಚೈತನ್ಯ' ಪತ್ರಿಕೆಯು ಮಹಾರಾಜರ ಸಾವು ಸಾಮಾಜಿಕ ಸದುದ್ದೇಶದ ಪ್ರಮುಖ ವ್ಯಕ್ತಿಯನ್ನೇ ಕಸಿದುಕೊಂಡು ಬಿಟ್ಟಿತು ಮತ್ತು ಅವರ ಅಸಾಧಾರಣವಾದ ಚೈತನ್ಯವು ಅನುಗುಣವಾಗಿತ್ತು. ಶಾಹುರವರ ಕಟು ಟೀಕಾಕಾರರಾದ ಸ್ವಧರ್ಮದ ಪ್ರಕಟನೆಕಾರ ಕುರ್ತಕೋಟಿಯವರು ಅವರಿಗೆ ಸಂತಪಟ್ಟವನ್ನು ಕಟ್ಟಿ ಅವರ ಮರಣ ಇಡೀ ಮಹಾರಾಷ್ಟ್ರವನ್ನು ದುಃಖದ ಕಡಲಲ್ಲಿ ಮುಳುಗಿಸಿಬಿಟ್ಟಿತೆಂದು ಹೇಳುತ್ತಾರೆ. ಪತ್ರಿಕೆಗಳಾದ 'ಜ್ಞಾನಪ್ರಕಾಶ', 'ಲೋಕಸಂಗ್ರಹ'ಗಳು ಬ್ರಾಹ್ಮಣ-ಪರ ಪತ್ರಿಕೆಗಳಾದರೂ ಶಾಹುರವರನ್ನು ಹೊಗಳುವುದರಲ್ಲಿ ಕ್ರೀಡಾ ಮನೋಭಾವವಿಲ್ಲದಿದ್ದರೂ ಅಸ್ಪೃಶ್ಯ ಸಮುದಾಯ ಕ್ರಾಂತಿಕಾರಿ ಜಾಗೃತಿಯಲ್ಲಿ ಅವರ ವಿಶಿಷ್ಟ ಸಾಧನೆಗಳನ್ನು ಮತ್ತು ಅವರ ಮಹಾಬುದ್ಧಿಮತ್ತೆ ಮತ್ತು ಮಹಾಪರಾಕ್ರಮವನ್ನು ಒಪ್ಪಿಕೊಂಡಿದ್ದಾರೆ. 'ಪ್ರಗತಿ', 'ಜಿನ್‌ವಿಜಯಿ', 'ಪ್ರಬೋಧನ್', 'ಆರ್ಯಬಹನು', 'ಜ್ಞಾನಸಾಗರ', ಸಯಾಜಿವಿಜಯ', 'ಸುಬೋಧ ಪತ್ರಿಕಾ', ಮೊದಲಾದ ಪತ್ರಿಕೆಗಳು ತಮ್ಮ ಹೃದಯಪೂರ್ವಕ ಕೃತಜ್ಞತೆಗಳನ್ನು ಭಾರತದ ದುರದೃಷ್ಟ ಜನತೆಗೆ ಮಾಡಿದ ಕೆಲಸಕ್ಕಾಗಿ ಅರ್ಪಿಸಿವೆ. ಅವು ಅವರ ಶ್ರೇಷ್ಠ ಬುದ್ಧಿಮತ್ತೆ ಮತ್ತು ದೈಹಿಕಶಕ್ತಿಗಳನ್ನು ಹೊಗಳಿದವು. ಬ್ರಾಹ್ಮಣೇತರರ ಪತ್ರಿಕೆಗಳಲ್ಲಿ ಒಂದನ್ನು ಬಿಟ್ಟು ಉಳಿದವು ಶಾಹುರವರ ಮರಣದಿಂದ ಉಂಟಾದ ಶೂನ್ಯವನ್ನು ತುಂಬಲು ಸಾಧ್ಯವಿಲ್ಲವೆಂದು ಒಪ್ಪಿಕೊಂಡವು. ಮತ್ತು ಇದು ನಿಜವೂ ಕೂಡ! ಬ್ರಾಹ್ಮಣೇತರ ಸಮುದಾಯಗಳು ಭಾರತದಲ್ಲೆಲ್ಲಾ ಪ್ರತಿ ದಿನ ನೂರಾರು ಸಂತಾಪಸೂಚಕ ಸಭೆಗಳನ್ನು ನಡೆಸಿದವು. ನಗರಗಳಾದ ದೆಹಲಿ, ಬರೋಡ, ಗ್ವಾಲಿಯರ್, ಇಂದೋರ್, ದೇವಾಸ್, ಧಾರ್, ಮುಂಬೈ, ಪುಣೆ, ಸತಾರಾ, ಕೊಲ್ಹಾಪುರ, ಬೆಳಗಾವಿ, ಹುಬ್ಬಳ್ಳಿ, ಧಾರವಾಡ, ಮದ್ರಾಸು ಮೊದಲಾದ ಕಡೆಗಳಲ್ಲಿ ಬ್ರಾಹ್ಮಣೇತರರಲ್ಲಿ ವ್ಯಕ್ತಪಡಿಸಿದ ಸಂತಾಪವು ಹೃದಯ ಕಲಕುವಂತದ್ದು. ಮದ್ರಾಸಿನ ಬ್ರಾಹ್ಮಣೇತರರ ಶ್ರೇಷ್ಠ ನಾಯಕರಾದ ಸರ್ ಪಿ. ತ್ಯಾಗರಾಜ ಚೆಟ್ಟಿ, ಗೌರವಾನ್ವಿತ ರಾಜಾರಾಮರಾಯ ನಿಂಗಾರ್, ಡಾ. ನಟೇಶ್ ಮೊದಲಿಯಾರ್, ಜಿ. ನಾರಾಯಣಸ್ವಾಮಿ ಮತ್ತು ಇತರರು ದೊಡ್ಡ ಮೆರವಣಿಗೆಗಳನ್ನು ನಡೆಸಿದರು ಮತ್ತು ಶಾಹುರವರ ರಾಷ್ಟ್ರೀಯವಾಗಿ ಮುಖ್ಯವಾದ ಕೆಲಸವನ್ನು ನಿರರ್ಗಳ ಭಾಷಣಗಳಲ್ಲಿ ಹೊಗಳಿದರು ಮತ್ತು ಅವರಿಗೆ "ಭಾರತದ ಬ್ರಾಹ್ಮಣೇತರರ ಮಹಾನಾಯಕ", "ಜನತಾಂತ್ರಿಕರ ಜನತಾಂತ್ರಿಕ" ಎಂಬ ಬಿರುದುಗಳನ್ನು ನೀಡಿದರು. ನಿರರ್ಗಳ ಹೊಗಳಿಕೆಯ ಆಚೆಗೂ, ಅವರ ಗೌರವಾರ್ಥ ಸ್ಮಾರಕಗಳನ್ನು ಸ್ಥಾಪಿಸಲು ನಿರ್ಧಾರ ಮಾಡಿದರು. ಇದರರ್ಥವೇನು? ಶಾಹುರವರು ಮಹಾತ್ಮರಲ್ಲಿ ಮಹಾತ್ಮರು. ಅವರ ಹೃದಯದಲ್ಲಿ ಬಡವರ ಬಗ್ಗೆ ಸಹೋದರಭಾವದ ಮಹಾಕರುಣೆ ಮತ್ತು ಪ್ರೀತಿಗಳು ತುಂಬಿ ತುಳುಕುತ್ತಿತ್ತು.

*(ಕೃತಜ್ಞತೆಗಳೊಂದಿಗೆ 'ವಿಜಯಿ ಮರಾಠ', ೧೫ ಮತ್ತು ೨೯ ಮೇ ೧೯೨೨ ಸಂಚಿಕೆಗಳಿಂದ ತೆಗೆದುಕೊಳ್ಳಲಾಗಿದೆ.)*

---

ಸಂಪುಟ – II

(ವಿಭಾಗ – II)

# ರಾಜರ್ಷಿ ಶಾಹು ಛತ್ರಪತಿ ಅವರ ಭಾಷಣಗಳು

# ಸಂಪಾದಕರ ಟಿಪ್ಪಣಿ

ರಾಜರ್ಷಿ ಶಾಹು ಛತ್ರಪತಿ ಮಹಾರಾಜರು ತಮ್ಮ ಆಡಳಿತಾವಧಿಯಲ್ಲಿ ವಿವಿಧ ವೇದಿಕೆಗಳಲ್ಲಿ ಹಲವಾರು ಭಾಷಣಗಳನ್ನು ಮಾಡಿದ್ದಾರೆ. ಈ ಭಾಷಣಗಳು ಅವರ ಜೀವನಚರಿತ್ರೆಯ ಮೂಲಸಾಮಗ್ರಿಗಳ ಒಂದು ಮುಖ್ಯ ಭಾಗವಾಗುತ್ತದೆ. ಅವು ಅವರ ಸಾಮಾಜಿಕ ಕ್ರಾಂತಿಕಾರಿ ಚಿಂತನೆಗಳಿಗೆ ಮುಖ್ಯ ಬುನಾದಿಯನ್ನು ಪ್ರತಿಬಿಂಬಿಸುತ್ತವೆ. ಮತ್ತು ಅವರ ಕೃತಿ–ಕಾರ್ಯಗಳನ್ನು ಮೌಲ್ಯಮಾಪನ ಮಾಡುವುದಕ್ಕೆ ಒಂದು ಮಹತ್ತರವಾದ ಸಂಪನ್ಮೂಲವಾಗುತ್ತದೆ. ಈ ಭಾಷಣಗಳನ್ನು ಪರಿಗಣಿಸದಿದ್ದರೆ ಶಾಹುರವರ ಬಗ್ಗೆ ಬರೆದ ಯಾವುದೇ ಜೀವನಚರಿತ್ರೆ ಪರಿಪೂರ್ಣವಾಗಲಾರದು.

ಕೆಲವು ಸಾಮಾಜಿಕ ಸಂಸ್ಥೆಗಳು ನಡೆಸಿದ ಸಮಾರಂಭಗಳಲ್ಲಿ ಶಾಹುರವರು ಕೆಲವು ಭಾಷಣಗಳನ್ನು ಮಾಡಿದ್ದಾರೆ. ಈ ಸಂಘಟನೆಗಳ ಹೆಸರುಗಳು ಭಾಷಣಗಳ ಸಾಮಾಜಿಕ ಪ್ರಸ್ತುತತೆಯನ್ನು ಸೂಚಿಸುತ್ತವೆ. ಉದಾಹರಣೆಗೆ (೧) ಅಖಿಲ ಭಾರತೀಯ ಮರಾಠ ಶಿಕ್ಷಣ ಪರಿಷತ್ತು; (೨) ಕಾಮಗಾರ್ ಮೇಳವ (ಕಾರ್ಮಿಕ ಮೇಳ) ಪರೆಲ್; (೩) ಆರ್ಯಧರ್ಮ ಪರಿಷತ್, ನವಸಾರಿ, ಗುಜರಾತ್; (೪) ಅಖಿಲ ಭಾರತೀಯ ಕುರ್ಮಿ ಕ್ಷತ್ರಿಯ ಸಾಮಾಜಿಕ ಪರಿಷತ್, ಕಾನಪುರ, ಉತ್ತರಪ್ರದೇಶ; (೫) ಅಸ್ಪೃಶ್ಯ ವರ್ಗಾಚಿ ಪರಿಷತ್ (ಅಸ್ಪೃಶ್ಯರ ಸಮ್ಮೇಳನ), ಮನ್‌ಗಾವ್, ಕೊಲ್ಹಾಪುರ; (೬) ಶ್ರೀ ಉದಾಜಿ ಮರಾಠ ವಿದ್ಯಾರ್ಥಿ ವಸತಿಗೃಹ (ಉದಾಜಿ ಮರಾಠ ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯ), ನಾಸಿಕ; (೭) ಸೋಮವಂಶೀಯ ಸಮಾಜ ಅಧಿವೇಶನ (ಸೋಮವಂಶೀಯ ಸಮುದಾಯದ ಅಧಿವೇಶನ) ನಾಸಿಕ; (೮) ಅಖಿಲ ಭಾರತೀಯ ಬಹಿಷ್ಕೃತ ಸಮಾಜ ಪರಿಷತ್ (ಅಖಿಲ ಭಾರತೀಯ ಬಹಿಷ್ಕೃತ ಸಮುದಾಯಗಳ ಸಮ್ಮೇಳನ), ನಾಗಪುರ; (೯) ಕರ್ನಾಟಕ ಬ್ರಾಹ್ಮಣೇತರ ಸಾಮಾಜಿಕ ಪರಿಷತ್ತು, ಹುಬ್ಬಳ್ಳಿ; (೧೦) ಅಖಿಲ ಭಾರತೀಯ ಅಸ್ಪೃಶ್ಯ ಪರಿಷತ್ತು, ದೆಹಲಿ; ಮೊದಲಾದವುಗಳು.

ಶಾಹುರವರು ತಮ್ಮ ಭಾಷಣಗಳಲ್ಲಿ ಕೆಲವು ಸಾಮಾಜಿಕ ವಿಷಯಗಳು ಮತ್ತು ಸಮಸ್ಯೆಗಳ ಬಗ್ಗೆ ತಮ್ಮ ಪ್ರಗತಿಪರ ವಿಚಾರಗಳನ್ನು ಮಂಡಿಸುತ್ತಾ ಚರ್ಚಿಸಿದ್ದಾರೆ. ಈ ವಿಷಯಗಳು ಅಸ್ಪೃಶ್ಯತೆ, ಜಾತಿಪದ್ಧತಿ, ತಾರತಮ್ಯತೆ, ಹಿಂದುಳಿದ ವರ್ಗಗಳ ಏಳಿಗೆ, ಸಮಾನತೆಯ ತತ್ವ, ಬೌದ್ಧಿಕ ಸ್ವಾತಂತ್ರ್ಯ, ಸಾಮಾಜಿಕ ನೀತಿಗಳು, ಶಿಕ್ಷಣದ ಪ್ರಾಮುಖ್ಯತೆ, ವಿಧವಾ–ಪುನರ್‌ವಿವಾಹ, ಪರದಾ (ಬುರ್ಖಾ) ಪದ್ಧತಿ, ಮಹಾತ್ಮಫುಲೆ, ಆರ್ಯಸಮಾಜ, ಮಹಾತ್ಮ ಗಾಂಧಿ, ವ್ಯವಹಾರ, ಕೃಷಿ, ಕೈಗಾರಿಕೆ, ಕಾರ್ಮಿಕ ಸಂಘಗಳು, ಸಹಕಾರಿ ಆಂದೋಲನ ಮೊದಲಾದ ಹಲವು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಸಂಗತಿಗಳನ್ನು ಒಳಗೊಂಡಿವೆ. ಈ ವಿಷಯಗಳ ಬಗ್ಗೆ ಅವರ ಚಿಂತನೆಗಳನ್ನು ಓದುವುದರಿಂದ ಶಾಹುರವರ ಬಹುಮುಖ ಚಿಂತನೆ, ಮುನ್ನೋಟ ಮತ್ತು ಅವರ ಸೈದ್ಧಾಂತಿಕ ಚಾರಿತ್ರ್ಯದ ಬಗ್ಗೆ ಒಳನೋಟಗಳನ್ನು ಪಡೆಯಲು ಓದುಗನಿಗೆ ಸಹಕಾರಿಯಾಗುತ್ತದೆ.

---

೧

# ಪೂರ್ವಿಕರ ಕಳಂಕರಹಿತ ಘನತೆಯನ್ನು ಕಾಪಾಡುವುದು

ರಾಜರ್ಷಿ ಶಾಹುರವರು ಮರಾಠ ಬಟಾಲಿಯನ್ (ದೊಡ್ಡಸೇನೆ) ಕುರಿತು ಮಾಡಿದ ಭಾಷಣವಿದು (ಮಾರ್ಚ್ ೨೩, ೧೯೧೬). ಮೊದಲನೇ ವಿಶ್ವಯುದ್ಧದಲ್ಲಿ ಬ್ರಿಟಿಷ್‌ಸೇನೆಯ ಮರಾಠ ದೊಡ್ಡಸೇನೆ ಇರಾಕಿನ ಟೈಗ್ರೀಸ್ ನದಿಯ ದಡಗಳ ನಡುವೆ ಸಿಕ್ಕಿಹಾಕಿಕೊಂಡಿತು. ಆಹಾರ ಪದಾರ್ಥಗಳ ಸರಬರಾಜು ಸಿಗದೆ ಮರಾಠ ಸೈನಿಕರು ಹಸಿವಿನ ಸಾವಿಗೆ ಸಮೀಪ ಬಂದಿದ್ದರು. ಅವರು ಬಹಿಷ್ಕೃತರಾಗಿ ಕುದುರೆ ಮಾಂಸ ತಿನ್ನದೆ ಬೇರೆ ಯಾವ ಪರ್ಯಾಯವು ಇರಲಿಲ್ಲ. ಈ ಸಮಾಚಾರವನ್ನು ಕೇಳಿ, ಶಾಹುರವರು ಅವರ ಕುಗ್ಗುತ್ತಿರುವ ಆತ್ಮ-ಶಕ್ತಿಯನ್ನು ಹೆಚ್ಚಿಸಲು ಈ ಪತ್ರವನ್ನು ಕಳುಹಿಸಿಕೊಟ್ಟರು. ಅವರು (ಸೈನಿಕರು) ಬದುಕಲೇಬೇಕು ಮತ್ತು ತಮ್ಮ ಪೂರ್ವಿಕರ ಕಳಂಕರಹಿತ ಘನತೆಯನ್ನು ಎತ್ತಿಹಿಡಿಯಬೇಕೆಂದು ಶಾಹು ಅವರಿಗೆ ಪ್ರಚೋದನೆ ನೀಡಿದರು.

---

ಮರಾಠ ಬಟಾಲಿಯನ್‌ಸಲ್ಲಿರುವ ನನ್ನ ಸಹೋದರರೇ, ಅಧಿಕಾರಿಗಳೇ, ಸೈನಿಕರೇ:

ಕಳೆದ ಎರಡು ವರ್ಷಗಳಿಂದ ಬ್ರಿಟಿಷ್ ಸರಕಾರ ಯುದ್ಧದ ಗದ್ದಲದಲ್ಲಿ ಸಿಕ್ಕಿಹಾಕಿಕೊಂಡಿದೆ. ನಮ್ಮ ಪರಾಕ್ರಮಿ ಪೂರ್ವಿಕರ ಕಳಂಕರಹಿತ ಘನತೆಯನ್ನು ಎತ್ತಿಹಿಡಿಯುವುದರಲ್ಲಿ ಮರಾಠರು ಧೈರ್ಯ-ಸಾಹಸಗಳನ್ನು ತೋರಿಸುವ ಬಗ್ಗೆ ನಾವು ಹೆಮ್ಮೆಪಡಬೇಕಾಗಿದೆ. ನಾನು ಬ್ರಿಟಿಷ್ ಸೈನ್ಯಕ್ಕೆ ಕರ್ನಲ್ ಆಗಿರುವುದು ನಿಮಗೆ ಗೊತ್ತಿರಬಹುದು ಮತ್ತು ನಮ್ಮ ಹುಡುಗರ ಸಾಹಸ ಧೈರ್ಯ ನನ್ನನ್ನು ವಿಶೇಷವಾಗಿ ಹೆಮ್ಮೆಪಡುವಂತೆ ಮಾಡಿದೆ.

ನಾವು ವೈಯಕ್ತಿಕವಾಗಿ ವಿಶ್ವಯುದ್ಧದಲ್ಲಿ ಭಾಗವಹಿಸದಿರುವುದಕ್ಕೆ ನಮ್ಮಲ್ಲಿ ಹಲವರಿಗೆ ನಿರಾಶೆಯಾಗಿದೆ. ನಮ್ಮ ಸಹೋದರರು ರಾತ್ರಿ-ಹಗಲು ಹೋರಾಡುತ್ತಿರುವುದಕ್ಕೆ ಮತ್ತು ಮಹಾಕಷ್ಟಗಳನ್ನು ಅನುಭವಿಸುತ್ತಿರುವುದರ ಬಗ್ಗೆ ನಮಗೆ ಸಂತೃಪ್ತಿಯಿದೆ. ನನ್ನ ಮರಾಠ ಸಹೋದರರು ದೃಢನಿಷ್ಠೆ ಮತ್ತು ಶ್ರಮಗಳಿಂದ ತಮ್ಮ ಪವಿತ್ರ ಕರ್ತವ್ಯಗಳನ್ನು ಮಾಡುತ್ತಿದ್ದಾರೆ. ಅವರ ಯುದ್ಧನಿಷ್ಠೆ ಕುದುರೆ ಮಾಂಸ ತಿನ್ನಲು ಬಿಡುತ್ತದೆ ಮತ್ತು ಅವರು ಬಹಿಷ್ಕೃತದ ಭಯಪೀಡಿತರಾಗಿ ದ್ವಂದ್ವದಲ್ಲಿ ಸಿಕ್ಕಿಹಾಕಿಕೊಂಡು ನನ್ನ ಸಹೋದರರು ಪೇಚಾಡುತ್ತಿದ್ದಾರೆ. ಶತ್ರುಗಳು ಸುತ್ತಲು ಆವರಿಸಿರುವುದರಿಂದ ಆಹಾರ ಸರಬರಾಜು ಆಗುತ್ತಿಲ್ಲ. ಸರಕಾರ ಎಷ್ಟೇ ಪ್ರಯತ್ನಪಟ್ಟರೂ ಆಹಾರ ಪದಾರ್ಥಗಳನ್ನು ಒದಗಿಸಲು ಸಾಧ್ಯವಾಗುತ್ತಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಏನು ಸಿಗುತ್ತದೋ

ಅದನ್ನು ತಿಂದು ಬದುಕಬೇಕಾಗುತ್ತದೆ. ಇದನ್ನು ಮಹಾಭಾರತದಲ್ಲಿ ಹೇಳಲಾಗಿದೆ. ಅದು ಕಷ್ಟದ ದಿನಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಸಹ ಹೇಳುತ್ತದೆ. ಕುದುರೆಮಾಂಸ ತಿನ್ನುವುದು ನಿಷೇಧವಲ್ಲ ಎಂದು ನಮ್ಮ ಧರ್ಮಗ್ರಂಥಗಳು ಹೇಳಿವೆ.

ನಿಮಗೆಲ್ಲ ಮಹಾಅಶ್ವಮೇಧ ಯಜ್ಞವನ್ನು ಹಿಂದಿನ ಕಾಲದಲ್ಲಿ ನಡೆಸಲಾಗುತ್ತಿತ್ತು ಎಂಬುದು ನಿಮಗೆ ಗೊತ್ತಿರಬಹುದು. (ಯುದ್ಧದ ಕುದುರೆಯನ್ನು ದೇವರಿಗೆ ಬಲಿಕೊಟ್ಟು ಅದರ ಮಾಂಸವನ್ನು ತಿನ್ನುವ ಪದ್ಧತಿಯನು ವೈದಿಕ ಆಚರಣೆಯಾಗಿದೆ) ನೀವು ಶತ್ರುಗಳ ಬಲೆಯಲ್ಲಿ ಸಿಕ್ಕಿರುವುದರಿಂದ ನೀವು ಅದನ್ನೇ ಮಾಡಿ ಮತ್ತು ಯಾವ ಸಮಸ್ಯೆಯೂ ಇಲ್ಲ. ನಾನು ಮತ್ತು ನನ್ನ ಸಂಬಂಧಿಕರು ಈ ಯುದ್ಧದಲ್ಲಿ ಭಾಗವಹಿಸದಿದ್ದರೆ ನಾವು ನಿಮ್ಮ ಕಷ್ಟವನ್ನು ಮತ್ತು ಈ ಸಮಸ್ಯೆಯನ್ನು ಹಂಚಿಕೊಂಡು ನಿಮ್ಮ ಸಮಸ್ಯೆಯನ್ನು ಬಗೆಹರಿಸುತ್ತಿದ್ದೆವು. ದುರಾದೃಷ್ಟವಶಾತ್ ನಿಮ್ಮ ಜೊತೆಯಲ್ಲಿ ಸೇವೆಮಾಡುವ ಭಾಗ್ಯ (ಅವಕಾಶ) ಸಿಗಲಿಲ್ಲ ಮತ್ತು ಈಗ ನಾನು ಬಂದು ನಿಮ್ಮನ್ನು ಭೇಟಿಮಾಡುವುದು ಅಸಾಧ್ಯವಾಗಿದೆ. ಆದ್ದರಿಂದ ನನ್ನ ಪ್ರೀತಿಯ ಸಹೋದರರೇ, ನೀವೇ ಹುರುಪು ತುಂಬಿಸಿಕೊಳ್ಳಿ ಮತ್ತು ಧರ್ಮಗ್ರಂಥಗಳಲ್ಲಿ ಹೇಳಿರುವ ಕರ್ತವ್ಯಗಳನ್ನು ನೆನಪಿಸಿಕೊಳ್ಳಿ. ಯಾವುದೇ ರೀತಿಯ ಆಹಾರ ಸಿಕ್ಕಿದರೂ ಅದನ್ನು ತಿಂದು ಬದುಕಿ ಎಂದು ನಾನು ಹೃದಯಪೂರ್ವಕವಾಗಿ ನಿಮ್ಮನ್ನು ಕೇಳಿಕೊಳ್ಳುತ್ತೇನೆ. ತಾವು ತಮ್ಮ ಕರ್ತವ್ಯವನ್ನು ಮಾಡುವ ಮೂಲಕ ನಿಮ್ಮ ಪೂರ್ವಿಕರ ಘನತೆಯನ್ನು ಎತ್ತಿಹಿಡಿಯಿರಿ.

ಮರಾಠ ಸಾಮ್ರಾಜ್ಯ ನನ್ನ ಮಹಾಪೂರ್ವಿಕ ಮತ್ತು ಸ್ಥಾಪಕ ಶಿವಾಜಿಯವರು ಒಮ್ಮೆ ತನ್ನ ಅನುಯಾಯಿಗಳೊಂದಿಗೆ ದೆಹಲಿಯಲ್ಲಿ (ಅದು ಆಗ್ರ ಎಂದಾಗಿರಬೇಕು. ಅದು ದೆಹಲಿ ಅಲ್ಲ – ಸಂಪಾದಕ.) ಸಿಕ್ಕಿಹಾಕಿಕೊಂಡರು. ಅವರು ಹೇಗೆ ಪರಾರಿಯಾದರೆಂಬುದು ನಿಮಗೆ ತಿಳಿದಿರಬಹುದು. ನೀವು ಕುದುರೆ ಮಾಂಸವನ್ನು ತಿನ್ನುವುದರಿಂದ ನಿಮಗೆ ಯಾರೂ ಛೀಮಾರಿ ಹಾಕುವುದಿಲ್ಲ. ನಿಮ್ಮನ್ನು ಬಹಿಷ್ಕರಿಸುವುದಿಲ್ಲವೆಂದು ನಾನು ನಿಮಗೆ ಆಣೆಮಾಡುತ್ತೇನೆ. ನೀವು ನನ್ನನ್ನು ನಂಬಿ. ನಿಮ್ಮ ಬದಲಿಗೆ ನಾನೇ ಅಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆಂದು ಭಾವಿಸುತ್ತೇನೆ. ನಾನು ನಿಮ್ಮ ಸ್ಥಿತಿ–ಗತಿಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ನೀವು ವಾಪಸ್ಸು ಬಂದ ಮೇಲೆ ನೀವು ಯಾವುದೇ ಧಾರ್ಮಿಕ ಕಾರ್ಯಮಾಡಿದರೆ ಅಥವಾ ಮದುವೆಕಾರ್ಯ ಮಾಡಿದರೆ ನಿಮ್ಮನ್ನು ಯಾರೂ ಬಹಿಷ್ಕರಿಸುವುದಿಲ್ಲವೆಂದು ನಾನು ದೇವರ ಮೇಲೆ ಆಣೆಯಿಟ್ಟು ಪ್ರಮಾಣ ಮಾಡುತ್ತೇನೆ.

ನಾನು ಈ ಪತ್ರಕ್ಕೆ ಸಹಿಮಾಡಿ, ಭದ್ರವಾಗಿ ಸೀಲು ಹಾಕಿದ್ದೇನೆ. ನೀವು ನನ್ನ ಮಾತುಗಳನ್ನು ಕಡೆಗಣಿಸುವುದಿಲ್ಲವೆಂದು ನಾನು ಭಾವಿಸುತ್ತೇನೆ. ನೀವು ಅನಾವಶ್ಯಕವಾದ ಧಾರ್ಮಿಕ ಆಕ್ಷೇಪಣೆಗಳನ್ನು ಎತ್ತದೆ ನೀವು ನಿಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವಿರಿ ಮತ್ತು ನಿಮ್ಮ ಹಿರಿಯರ ಘನತೆಯನ್ನು ಕಾಪಾಡಲು ನಿಮ್ಮ ಪವಿತ್ರಕರ್ತವ್ಯ ಮಾಡುವಿರಿ ಎಂದು ನಾನು ತಿಳಿದಿದ್ದೇನೆ.

---

೨

# ಶಿಕ್ಷಣವೊಂದೇ ಪರಿಹಾರ

ಅಖಿಲ ಭಾರತೀಯ ಮರಾಠ ಶಿಕ್ಷಣ ಪರಿಷತ್ತಿನ ೧೧ನೇ ಸಮ್ಮೇಳನವು ಡಿಸೆಂಬರ್ ೨೭, ೧೯೧೭ರಲ್ಲಿ ಖಾಮ್‌ಗಾವ್‌ನಲ್ಲಿ ನಡೆಯಿತು. ಸಮ್ಮೇಳನದ ಅಧ್ಯಕ್ಷರಾಗಿ ರಾಜರ್ಷಿ ಶಾಹುರವರು ಈ ಕೆಳಗಿನ ಭಾಷಣವನ್ನು ಮಾಡಿದರು. ಹಿಂದುಳಿದ ವರ್ಗಗಳಿಗೆ ಶಿಕ್ಷಣವೊಂದೇ ಪರ್ಯಾಯವೆಂದು ಅವರು ನಂಬಿದ್ದರು. ಅವರು ಹೇಳುತ್ತಾರೆ: "ಶಿಕ್ಷಣವಿಲ್ಲದೆ ಯಾವುದೇ ದೇಶ ಮುಂದುವರಿಯುವುದಿಲ್ಲವೆಂದು ಇತಿಹಾಸ ಹೇಳುತ್ತದೆ. ಅಜ್ಞಾನ-ಮೌಢ್ಯದಲ್ಲಿ ಮುಳುಗಿರುವ ದೇಶದಲ್ಲಿ ಯುದ್ಧದ ಮಹಾವೀರರು ಮತ್ತು ರಾಯಭಾರಿಗಳು ಎಂದಿಗೂ ಜನಿಸುವುದಿಲ್ಲ. ಆದ್ದರಿಂದ ಭಾರತಕ್ಕೆ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಅವಶ್ಯಕತೆಯಿದೆ... ಈ ಮೊದಲು ನಾವು ಜಾತಿಯ ಅಡ್ಡಗೋಡೆಯನ್ನು ಮುರಿದೇವು, ಬೇಗನೆ ನಾವು ಸ್ವಾತಂತ್ರ್ಯಕ್ಕೆ ಯೋಗ್ಯರಾಗುವೆವು. ನಮ್ಮ ಮನಸ್ಸುಗಳಲ್ಲಿ ಈ ತತ್ವ ನಾಟಿದ ದಿನವು ನಮ್ಮ ದೇಶಕ್ಕೆ ಅತ್ಯುತ್ತಮ ದಿನವಾಗುತ್ತದೆ.

---

ಶ್ರೀ ಕ್ಯಾಂಡೋನ್, ಸಹೋದರಿಯರೆ, ಸಹೋದರರೆ:

ಮರಾಠ ಸಮುದಾಯವು ನನ್ನನ್ನು ಇಲ್ಲಿಗೆ ಆಹ್ವಾನಿಸಿದ್ದಕ್ಕೆ ನಾನು ಹೆಮ್ಮೆಪಡುತ್ತೇನೆ. ನಾನು ಇಲ್ಲಿಗೆ ಒಬ್ಬ ಮಹಾರಾಜನಾಗಿ ಬಂದಿಲ್ಲ. ಆದರೆ ಒಬ್ಬ ಮರಾಠನಾಗಿ ಬಂದಿದ್ದೇನೆ. ನಾನು ನಿಮ್ಮಲ್ಲಿ ಒಬ್ಬನೆಂದು ನೀವು ಭಾವಿಸುವಿರಿ ಎಂದು ನಾನು ಯೋಚಿಸುತ್ತೇನೆ. ನೀವು ನನ್ನನ್ನು ಒಬ್ಬ ಪದಾತಿ ಸೈನಿಕ ಅಥವಾ ರೈತ ಅಥವಾ ನೀವು ಬಯಸಿದಂತೆ ನನ್ನನ್ನು ಕರೆಯಬಹುದು. ಯುದ್ಧವೀರರಲ್ಲಿ ನನ್ನನ್ನು ನೀವು ನನ್ನ ವಂಶದ ಆಧಾರದಿಂದ ಒಬ್ಬ ಸೈನಿಕನೆಂದು ಕರೆಯಬಹುದು. ರೈತರಲ್ಲಿ ನನ್ನನ್ನು ಒಬ್ಬ ಪಾಟೀಲ ಅಥವಾ ಒಬ್ಬ ರೈತ ಎಂದು ಕರೆಯಬಹುದು. ಕೆಲಸದ ನಿರ್ಬಂಧಗಳು ಕೊನೆಯ ಘಳಿಗೆಯವರೆಗೂ ಈ ಸಮ್ಮೇಳನದಲ್ಲಿ ಹಾಜರಾಗುವ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ ನಿಮ್ಮನ್ನು ಭೇಟಿ ಮಾಡುವ ಅವಕಾಶವನ್ನು ಕಳೆದುಕೊಳ್ಳಬಾರದೆಂದು ನಾನು ಮನವರಿಕೆ ಮಾಡಿಕೊಂಡೆ. ನನ್ನ ಪೂರ್ವಿಕರ ಹಳ್ಳಿ ವೆರೂಲ್‌ನಲ್ಲಿ ನಮಗೆ ಪಾಟೀಲ್ ಎಂಬ ಬಿರುದು ನೀಡಲಾಯಿತು, ಅದು ಇಲ್ಲಿಗೆ ಸಮೀಪದಲ್ಲಿದೆ. ನನ್ನ ನೆಲದ ಬಗ್ಗೆ ನನಗೆ ಅಪಾರವಾದ ಗೌರವವಿದೆ ಮತ್ತು ನನ್ನ ಜನರ ಮುಂದೆ ರೈತನಾಗಿ ನಿಂತಾಗ ಅದು ನನಗೆ ಬಹಳ ಸಂತೋಷ ಕೊಡುತ್ತದೆ.

ಶಿಕ್ಷಣವೊಂದೇ ಪರಿಹಾರ ಎಂಬುದು ನನ್ನ ದೃಢ ಅಭಿಪ್ರಾಯ. ಶಿಕ್ಷಣವಿಲ್ಲದೆ ಯಾವ ದೇಶವೂ ಮುಂದುವರಿಯಲಾರದೆಂದು ಇತಿಹಾಸ ಹೇಳುತ್ತದೆ. ಮೌಢ್ಯದಲ್ಲಿ ಮುಳುಗಿರುವ ದೇಶದಲ್ಲಿ ಮಹಾನ್ ಪರಾಕ್ರಮಶಾಲಿಗಳು ಅಥವಾ ರಾಯಭಾರಿಗಳು ಎಂದಿಗೂ ಹುಟ್ಟಲಾರರು. ಆದ್ದರಿಂದ ಭಾರತಕ್ಕೆ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಅವಶ್ಯಕತೆಯಿದೆ. ಇತಿಹಾಸದಲ್ಲಿ ನಮ್ಮ ಗತಕಾಲವು ಕಗ್ಗತ್ತಲಿನಲ್ಲಿತ್ತು. ಕೇವಲ ಒಂದೇ ಒಂದು ಜಾತಿ ಶಿಕ್ಷಣದಲ್ಲಿ ಏಕಸ್ವಾಮ್ಯತೆಯನ್ನು ಪಡೆದಿತ್ತು. ಮನು ಮತ್ತು ಶಾಸ್ತ್ರಗಳ ಇತರೆ ಲೇಖಕರು ಮನುವನ್ನು ಅನುಸರಿಸಿ ವಿವಿಧ ಜಾತಿಗಳ ಕಸುಬುಗಳ ಬಗ್ಗೆ ಬರೆದರು. ಆ ಕಾಲದ ಆದರ್ಶಗಳ ಪ್ರಕಾರ ವಿವಿಧ ಜಾತಿಗಳ ಮೇಲೆ ನಿರ್ಬಂಧಗಳನ್ನು ಹೇರಿದರು ಮತ್ತು ಇದರ ಮೂಲಕ ಕೆಳಜಾತಿಗಳ ಜನರಿಗೆ ಶಿಕ್ಷಣದ ಬಾಗಿಲುಗಳನ್ನು ಮುಚ್ಚಿಬಿಟ್ಟರು. ಅಷ್ಟೇ ಅಲ್ಲ, ಅವರು ತಮ್ಮ ಧಾರ್ಮಿಕ ಗ್ರಂಥಗಳಾದ ವೇದಗಳನ್ನು ಓದಲು ಸಹ ಬಿಡಲಿಲ್ಲ. ಹಿಂದೂ ಧರ್ಮವನ್ನು ಬಿಟ್ಟರೆ ಹಾನಿಕಾರಕ ಮತ್ತು ಕುರುಡು ನಂಬಿಕೆಗಳನ್ನು ಹೊಂದಿರುವ ಯಾವ ಧರ್ಮವೂ ಇಲ್ಲ. ೧೮೫೭ರ ನಂತರ ಕಳೆದ ೬೦ ವರ್ಷಗಳಿಂದಲೂ ಬ್ರಿಟಿಷ್ ಸರಕಾರ ಎಲ್ಲಾ ಜನರಿಗೂ ಶಿಕ್ಷಣದ ಬಾಗಿಲುಗಳನ್ನು ತೆರೆದಿದೆ. ಅಂದಿನಿಂದ ನಾವು ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದೇವೆ.

ಈಗ ಎಲ್ಲಾ ಕಡೆಗಳಿಂದಲೂ ಸ್ವರಾಜ್ಯ (ಸ್ವಯಂ–ಸರಕಾರ) ಬೇಕೆನ್ನುವ ಕೂಗನ್ನು ಕೇಳುತ್ತಿದ್ದೇವೆ. ನಾವು ಅದಕ್ಕೆ ನಿಜವಾಗಿ ಅರ್ಹರಾಗಿದ್ದೇವೆಯೇ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ನಮಗೆ ಖಂಡಿತವಾಗಿ ಸ್ವರಾಜ್ಯ ಬೇಕು. ಬ್ರಿಟಿಷ್ ಸರಕಾರವು ನಮ್ಮ ತಲೆಗಳಲ್ಲಿ ಮೊದಲಿಗೆ ಸ್ವರಾಜ್ಯದ ವಿಚಾರವನ್ನು ತುಂಬಿತು ಮತ್ತು ಅವರು ನಮ್ಮ ಜನತೆಯ ಪ್ರಗತಿಯ ವಿರುದ್ಧ ಇಲ್ಲ ಎಂದು ನಾನು ಭಾವಿಸುತ್ತೇನೆ. ಅವರು, ಮನುವಿನಂತಲ್ಲದೆ ನಮ್ಮ ಹಾದಿಯಲ್ಲಿ ಯಾವ ಅಡೆ–ತಡೆಗಳನ್ನು ಒಡ್ಡದಿರುವುದಕ್ಕೆ ನಾವು ಅವರಿಗೆ ಕೃತಜ್ಞರಾಗಿರಬೇಕು. ನಾವು ಪ್ರಗತಿ ಹೊಂದುವುದಕ್ಕೆ ಅವರು ಉತ್ಸುಕರಾಗಿದ್ದಾರೆ. ಸ್ವರಾಜ್ಯದಂತಹ ಮುಖ್ಯವಾದ ವಿಷಯವನ್ನು ಚರ್ಚಿಸುವುದಕ್ಕೆ ಇದು ಸಮಯ ಅಥವಾ ಸ್ಥಳವೂ ಅಲ್ಲ. ನನ್ನ ಅಭಿಪ್ರಾಯವು ಸಿಡ್ನೆಹ್ಯಾಮ್ ಅವರ ಅಭಿಪ್ರಾಯಗಳಗೆ ಸಮಾನವಾಗಿವೆ. ಅವರು ನನ್ನ ಸ್ನೇಹಿತರು ಮತ್ತು ನಾನು ಅವರನ್ನು ಮೆಚ್ಚಿಕೊಳ್ಳುತ್ತೇನೆ. ಅವರು ಭಾರತವು ಇನ್ನೂ ಜಾತಿಯ ಬಂಧನಕ್ಕೆ ಕಟ್ಟಿಹಾಕಿಕೊಂಡಿದೆಯೆಂದೂ, ಅದು ಸ್ವರಾಜ್ಯದಿಂದ ಪೂರ್ಣವಾಗಿ ಪ್ರಯೋಜನ ಪಡೆದುಕೊಳ್ಳಲಾರದೆಂದು ಅವರು ನಂಬಿದ್ದಾರೆ. ಅಧಿಕಾರವು ಮೇಲುಜಾತಿಗಳ ಕೈಯಲ್ಲಿರುವುದೆಂದು ಅವರು ಭಯಚಕಿತರಾಗಿದ್ದಾರೆ. ಜಾತಿಪದ್ಧತಿಯನ್ನು ಮುರಿಯುವ ಕಾಲ ಬರುವುದೆಂದು ನಾನು ಅಭಿಪ್ರಾಯಪಡುತ್ತೇನೆ. ನಮ್ಮ ಕಲ್ಯಾಣವಾಗುವುದೆಂದು ನನ್ನ ಮನಸ್ಸಿನಲ್ಲಿದೆ. ನಮ್ಮಲ್ಲಿ ಜಾತಿಯ ತಾರತಮ್ಯತೆಗಳು ಮತ್ತೆ ನಮ್ಮ ನಡುವೆ ತಪ್ಪು ತಿಳುವಳಿಕೆಯಿರುವವರೆಗೂ ನಾವು ನಮಗೇ ಹಾನಿ ಮಾಡಿಕೊಳ್ಳುವೆವು. ನಮ್ಮ ನಮ್ಮಲ್ಲಿರುವ ಅಂತಃಕಲಹಗಳನ್ನು ಕೊನೆಗಾಣಿಸಲು ನಮ್ಮ ಅರ್ಥಹೀನ ಜಾತಿಪದ್ಧತಿಯಿಂದ ಮುಕ್ತಿ ಪಡೆಯಬೇಕು ಮತ್ತು ಸ್ವರಾಜ್ಯಕ್ಕಾಗಿ ನಮ್ಮನ್ನು ನಾವು ಅರ್ಹರನ್ನಾಗಿ ಮಾಡಿಕೊಳ್ಳಬೇಕೆಂಬುದನ್ನು ನಾವು ಮನವರಿಕೆ ಮಾಡಿಕೊಳ್ಳಬೇಕು.

ಪುರಾಣಗಳಲ್ಲಿ ಕ್ಷತ್ರಿಯರ ನಿರ್ಮೂಲನೆಯ ಕಥನವನ್ನು ಪುನಃ ಹೇಳುವುದು ಸೂಕ್ತವಾಗಿದೆ. ಮರಾಠರು ತಮ್ಮನ್ನು ತಾವೇ ಕ್ಷತ್ರಿಯರೆಂದು ಕರೆದುಕೊಳ್ಳುವುದು ನಮಗೆಲ್ಲರಿಗೂ ತಿಳಿದಿದೆ. ಪಾಂಡವರ ಕಾಲದಿಂದಲೂ ಅವರು ಕ್ಷತ್ರಿಯವರ್ಗ (ಯುದ್ಧ ಮಾಡುವ ವರ್ಗ) ವೆಂದು ಹೆಸರುವಾಸಿಯಾಗಿದ್ದಾರೆ. ಕ್ಷತ್ರಿಯವರ್ಗವನ್ನು ನಿರ್ಮೂಲನೆ ಮಾಡಲಾಗಿದೆಯೆಂಬುದನ್ನು ನಾನು ನಂಬುತ್ತಲೇ ಇಲ್ಲ. ನಮ್ಮ ಪ್ರಸ್ತುತ

ಸಮಾಜ ಇದು ಅಸತ್ಯ ಎಂದು ನಂಬುತ್ತದೆ. ಪುರಾಣಗಳಿಂದ ಈ ಕತೆಗೆ ಮತ್ತೊಂದು ವ್ಯಾಖ್ಯಾನವನ್ನು ನೀಡಲಾಗಿದೆ– ಭೂಮಂಡಲ ಕ್ಷತ್ರಿಯರಿಂದ ಮುಕ್ತಗೊಂಡಿದೆ, ಅದು ಒಮ್ಮೆ ಮುಕ್ತಗೊಂಡಿಲ್ಲ, ೨೧ ಬಾರಿ ಭೂಮಂಡಲ ಕ್ಷತ್ರಿಯರಿಂದ ಮುಕ್ತವಾಗಿದೆ. ಕೃಷಿ ಮಾಡುವ ಮತ್ತು ಯುದ್ಧ ಮಾಡುವ ಗುಣಗಳು ಸಾಮಾನ್ಯವಾಗಿ ಒಟ್ಟೊಟ್ಟಿಗೆ ಕಂಡುಬರುತ್ತವೆ. ರೈತರನ್ನು ಮೂರನೇ ಹಂತಕ್ಕೆ ಬಡ್ತಿ ನೀಡಿದ್ದರಿಂದ ಕ್ಷತ್ರಿಯರನ್ನು ನಿರ್ಮೂಲನೆ ಮಾಡಲಾಗಿದೆಯೆಂದು ಹೇಳಿದ್ದನ್ನು ನಂಬಲಾಗುತ್ತಿತ್ತು. ಮತ್ತು ಈ ಸಮಯದಲ್ಲಿ ಇದನ್ನು ಯಾರೂ ನಿರಾಕರಿಸಿರಲಿಲ್ಲ. ಕ್ಷತ್ರಿಯರ ಇಡೀ ಗುಂಪನ್ನೇ ಸರ್ವನಾಶ ಮಾಡಲಾಗಿದೆಯೆಂದು ಸ್ಮೃತಿಪುರಾಣಗಳ ಉಲ್ಲೇಖಗಳು ಸೂಚಿಸುತ್ತವೆ. ಮುಂದಿನ ಹಂತದಲ್ಲಿದ್ದ ಜನರು ಕಾಲ ಕಳೆದಂತೆ ವೈಶ್ಯರಿಗಿಂತ ಕೆಳಕ್ಕೆ ಕ್ಷತ್ರಿಯರಿಗೆ ಹಿಂಬಡ್ತಿ ನೀಡಿ ಅವರನ್ನು ಶೂದ್ರರ ಗುಂಪಿಗೆ ಸೇರಿಸಲಾಯಿತೆಂದು ಹೇಳತೊಡಗಿದರು. ಈ ಎಲ್ಲಾ ಜಾತಿಗಳ ಬದಲಾವಣೆಗಳು ಸಮಾಜದಲ್ಲಿ ಆಸಕ್ತರ ಹೋರಾಟಕ್ಕೆ ಕಾರಣವಾದವು. ವಿಶ್ವದಲ್ಲಿರುವ ಇತರ ಭಾಗಗಳ ಘಟನೆಗಳಿಂದ, ಉದಾಹರಣೆಗೆ ಜಪಾನು, ನಮ್ಮ ಜಾತಿಪದ್ಧತಿಯನ್ನು ಮುರಿಯಬೇಕಾಗಿದೆ ಎಂಬುದನ್ನು ನಾವು ಗಮನಿಸಬೇಕಾಗಿದೆ. ಅಂತಹ ಬದಲಾವಣೆಗಳನ್ನು ತರುವುದು ನಮ್ಮ ಗುರಿಯಾಗಿರಬೇಕು. ನನಗೆ ಬ್ರಾಹ್ಮಣ ಮತ್ತು ಮರಾಠರ ಬೆಂಬಲವಿಲ್ಲದಿದ್ದರೆ ಈ ಪ್ರಯೋಗದಲ್ಲಿ (ಸಾಹಸ) ಸಫಲತೆಯನ್ನು ನಿರೀಕ್ಷಿಸುವುದು ಸಾಧ್ಯವಾಗುವುದಿಲ್ಲ.

ನಮ್ಮ ಗುರಿಯನ್ನು ಪ್ರಸ್ತುತ ಸನ್ನಿವೇಶದಲ್ಲಿ ಸಾಧಿಸಲು ಜನರನ್ನು ಸಿದ್ಧಗೊಳಿಸಲು ನಾವು ಸಮಾಜವನ್ನು ಶಿಕ್ಷಿತರನ್ನಾಗಿ ಮಾಡಬೇಕಾಗಿದೆ.

ಈ ಮುಖ್ಯ ಸಮಸ್ಯೆಯನ್ನು ಪರಿಹರಿಸಲು ಇದೊಂದೇ ಮಾರ್ಗ ಆದ್ದರಿಂದ ಪ್ರತಿಯೊಂದು ಸಮಾಜವೂ ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯ ಕಲ್ಯಾಣಕ್ಕಾಗಿ ಶ್ರಮಪಡಬೇಕಾಗಿದೆ. ನಾನು ಲಕ್ಷ್ಯದಿಂದ ವಿವಿಧ ಸಮಾಜಗಳ ಶಿಕ್ಷಣದ ವಿಧಾನಗಳನ್ನು ಅನುಸರಿಸುತ್ತಿದ್ದೇನೆ ಮತ್ತು ಅದನ್ನೇ ಪ್ರಚಾರ ಮಾಡಲು ಬಯಸುತ್ತಿದ್ದೇನೆ. ಈ ರೀತಿಯಲ್ಲಿ ಪ್ರಮುಖ ಮರಾಠ ಕುಟುಂಬಗಳಿಗೆ ಸಹಾಯ ಮಾಡಲು ಪ್ರಯತ್ನಿಸುತ್ತಿದ್ದೇನೆ. ಜಾತಿಪದ್ಧತಿಯನ್ನು ಮುರಿಯಬೇಕೆಂದು ನಾನು ಮತ್ತೆ ಒತ್ತಿ ಹೇಳುತ್ತೇನೆ. ಕ್ಷತ್ರಿಯ ರಾಮನು ಮತ್ತೆ ಪರಶುರಾಮನನ್ನು ಸೋಲಿಸಿ ಗೆದ್ದನು ಎಂಬ ಹಳೇ ಕತೆಗಳನ್ನು ನಾವು ಮರೆಯಬೇಕು. ನಾವು ಅಂತಹ ಕತೆಗಳನ್ನು ನೆನಪಿಸಿಕೊಳ್ಳುವುದನ್ನು ನಾವು ಮುಂದುವರಿಸಿದರೆ, ನಾವು ರಾಮ ಮತ್ತು ಪರಶುರಾಮರ ಯುದ್ಧವನ್ನು ಮುಂದುವರಿಸುವೆವು. ನಾವು ಈ ಜಾತಿ–ಕಲಹಕ್ಕೆ ಕೊನೆಯನ್ನು ಶಾಶ್ವತವಾಗಿ ಹೇಳಲೇಬೇಕು. ಹುಟ್ಟಿನಿಂದ ಮೇಲುಜಾತಿಗಳು ಮತ್ತು ಭೂಮಾಲಿಕ ವರ್ಗಗಳು ಒಂದು ವರ್ಗಪದ್ಧತಿಯಾಗಿ ರೂಪುಗೊಳ್ಳುತ್ತವೆ ಮತ್ತು ಇದನ್ನು ನಾವು ಪ್ರಗತಿಪರ ಸಮಾಜಗಳಲ್ಲಿ ನೋಡಬಹುದು. ಈ ವರ್ಗಪದ್ಧತಿಯು ಜಾತಿಪದ್ಧತಿಯಷ್ಟು ಕೆಟ್ಟದ್ದಲ್ಲ ಮತ್ತು ರಾಷ್ಟ್ರನಿರ್ಮಾಣದ ದಾರಿಯಲ್ಲಿ ಅದು ಅಡ್ಡ ಬಂದಿಲ್ಲ. ಜನ್ಮಸಿದ್ಧ ಹಕ್ಕನ್ನು ಕರ್ತವ್ಯ ಮತ್ತು ಹೊಣೆಗಾರಿಕೆಗೆ ತಳುಕುಹಾಕಿಕೊಂಡಿದೆ.

ಎಲ್ಲಾ ಮೇಲುಜಾತಿಗಳು ಸುಧಾರಣಾ ಚಳುವಳಿಗಳಲ್ಲಿ ಭಾಗವಹಿಸುವುದು ಅವುಗಳ ಕರ್ತವ್ಯವಾಗಿದೆ. ಜಪಾನಿನಲ್ಲಿ ಸಮುರಾಯಿ ಜಾತಿಯು ಕ್ಷತ್ರಿಯ ಜಾತಿಯಾಗಿದ್ದು ಜಾತಿಯ ನಿರ್ಬಂಧಗಳನ್ನು ಮುರಿಯುವುದರಲ್ಲಿ ಮುಂಚೂಣಿಯಲ್ಲಿತ್ತು. ಈ ಇಪ್ಪತ್ತನೇ ಶತಮಾನದ ಛತ್ರಪತಿ ಶಿವಾಜಿಯವರಾದ ನಮ್ಮ ಮಹಾ ಪೂರ್ವಿಕರು ನಮ್ಮ ಮುಂದೆ ಬಿಟ್ಟುಹೋಗಿರುವ ಆದರ್ಶಗಳನ್ನು ನಾವು ಅನುಸರಿಸಬೇಕು. ಅವರು ಹಾಕಿಕೊಟ್ಟ ನಿದರ್ಶನವನ್ನು ನಾವು ಕಡೆಗಣಿಸಬಾರದು. ಫಲ್ಟಾನಿನ ನಿಂಬಾಳ್ಕರ್ ಕುಟುಂಬದ ಒಬ್ಬ ವ್ಯಕ್ತಿಯು ಇಸ್ಲಾಂ

ಮತಕ್ಕೆ ಮತಾಂತರಗೊಂಡು ಮುಸ್ಲಿಂ ಮಹಿಳೆಯನ್ನು ಮದುವೆಯಾದರು. ಶಿವಾಜಿಯು ತಮ್ಮ ಜಾತಿಗೆ ಅವನನ್ನು ಮತ್ತೆ ಸೇರಿಸಿಕೊಂಡು ಬರಮಾಡಿಕೊಂಡರು ಮತ್ತು ತಮ್ಮ ತಾಯಿ ಜೀಜಾಬಾಯಿಯ ಆಶೀರ್ವಾದ ಪಡೆದು ತಮ್ಮ ಮಗಳನ್ನು ನಿಂಬಾಳ್ಕರರ ಮಗನಿಗೆ ಕೊಟ್ಟು ಮದುವೆ ಮಾಡಿಸಿದರು.

ರಾಷ್ಟ್ರನಿರ್ಮಾಣಕ್ಕೆ ಇದೊಂದು ನಿದರ್ಶನ. ಈ ಮಹಾನುಭಾವನಿಗೆ (ಶಿವಾಜಿ) ಗೌರವ ತೋರುವುದೆಂದರೆ ಅವರು ಹಾಕಿಕೊಟ್ಟ ದಾರಿ(ಮಾರ್ಗ)ಯನ್ನು ಅನುಸರಿಸುವುದು. ನಾವು ಬಹು ಬೇಗನೇ ಜಾತಿಯ ಕಪಿಮುಷ್ಟಿಯನ್ನು ಮುರಿದರೆ ನಾವು ಬೇಗನೇ ಸ್ವರಾಜ್ಯಕ್ಕೆ ಅರ್ಹರಾಗುವೆವು. ಈ ತತ್ವ ನಮ್ಮ ಮನಸ್ಸಿನಲ್ಲಿ ನಾಟಿದ ಕೂಡಲೇ ನಮ್ಮ ದೇಶಕ್ಕೆ ಒಳ್ಳೆಯ ದಿನವಾಗುವುದು. ಜಪಾನು ಒಂದೇ ಹೊಡೆತದಲ್ಲಿ ಜಾತಿವ್ಯವಸ್ಥೆಯನ್ನು ಮುರಿದುಹಾಕಿತು ಮತ್ತು ಅದರ ಫಲಿತಾಂಶವನ್ನು ನಾವು ಇಂದು ನೋಡುತ್ತಿದ್ದೇವೆ. ಅದು ಇಂದು ವಿಶ್ವದಲ್ಲಿ ಅತಿ ಮುಂದುವರಿದ ದೇಶವಾಗಿದೆ.

ನಾನು ಶಿವಾಜಿ ಮತ್ತು ಅಕ್ಬರರ ಪ್ರಶಂಸಕ. ಅವರು ದೂರದೃಷ್ಟಿಯುಳ್ಳವರು ಮತ್ತು ಈ ಮಹಾದೇಶವನ್ನು ಒಗ್ಗೂಡಿಸುವ ಗುರಿಯನ್ನು ಹೊಂದಿದ್ದರು. ನಾವು ಈ ಮಹಾರಾಷ್ಟ್ರದ ನಾಯಕರನ್ನು ಅನುಸರಿಸಬೇಕು. ಭಿನ್ನಭಿನ್ನ ಜಾತಿಗಳ ನಡುವೆ ದ್ವೇಷ–ಅಸೂಯೆಗಳನ್ನು ಬೆಳೆಸುವ ಯಾವುದೇ ಗುಂಪಿನ ಜೊತೆಯಲ್ಲಿ ಸಹಕರಿಸಲು ನಾನು ಬಯಸುವುದಿಲ್ಲ. ಸಾಮಾನ್ಯ ಜನರ ಒಳಿತಿಗಾಗಿ ಜಾತಿಗಳ ಸಾಮರಸ್ಯಕ್ಕಾಗಿ ನಮ್ಮ ಮಹಾನ್ ದೇಶದ ನೈತಿಕ ಮತ್ತು ಸಾಮಾಜಿಕ ಪ್ರಗತಿಗಾಗಿ ನಾವು ಗರಿಷ್ಠ ಪ್ರಯತ್ನಗಳನ್ನು ಮಾಡಬೇಕು. ಜಾತಿಪದ್ಧತಿ ಉಳಿದರೆ, ಸ್ವರಾಜ್ಯದ ಅರ್ಥ ಅಧಿಕಾರವು ಕೇವಲ ಕೆಲವೇ ಕೈಗಳಲ್ಲಿ ಹತೋಟಿಯಲ್ಲಿರುತ್ತದೆ. ಇದರರ್ಥ ನಾನು ಸ್ವರಾಜ್ಯದ ವಿರೋಧಿಯಲ್ಲ. ನಮಗೆ ಸ್ವರಾಜ್ಯ ಬೇಕು. ಜಾತಿವಾದದ ಕೆಟ್ಟ ಪರಿಣಾಮಗಳು ದೂರವಾಗುವವರೆಗೆ ನಮಗೆ ರಕ್ಷಣೆ ಬೇಕಾಗಿದೆ ಮತ್ತು ಬ್ರಿಟಿಷ್ ಸರಕಾರದ ಮಾರ್ಗದರ್ಶನ ಬೇಕು. ನಾವು ಸ್ವರಾಜ್ಯ ಗಳಿಸಿದ ಮೇಲೆ ಅಧಿಕಾರವು ಮೇಲುಜಾತಿಗಳ ಅಲ್ಪಸಂಖ್ಯಾತರ ಕೈಯಲ್ಲಿ ಅಧಿಕಾರ ಕೇಂದ್ರೀಕರಣವಾಗದೆಂದು ಖಾತರಿಯಾಗಬೇಕು. ಕನಿಷ್ಠ ಹತ್ತು ವರ್ಷಗಳವರೆಗೆ ಜಾತಿವಾರು ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಹಕ್ಕನ್ನು ನೀಡಬೇಕು. ಆಗ ಮಾತ್ರ ನಾವು ನಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗುವೆವು. ಒಮ್ಮೆ ನಾವು ಇದನ್ನು ಅರ್ಥಮಾಡಿಕೊಂಡರೆ, ನಮಗೆ ಜಾತಿವಾರು ಪ್ರಾತಿನಿಧ್ಯ ಬೇಕಾಗುವುದಿಲ್ಲ. ಜಾತಿವಾರು ಪ್ರಾತಿನಿಧ್ಯವಿಲ್ಲದಿದ್ದರೆ ಏನಾಗುತ್ತದೆ ಎಂಬುದಕ್ಕೆ ನಮ್ಮ ಮುನಿಸಿಪಾಲಿಟಿ ಉತ್ತಮ ನಿದರ್ಶನ. ಕೆಳಜಾತಿಗಳ ಪ್ರಾತಿನಿಧ್ಯ ನಾಮಮಾತ್ರಕ್ಕೆ ಅಲ್ಲಿರುತ್ತದೆ; ಈ ತಪ್ಪು ಮತ್ತೆ ಮರುಕಳಿಸದಿರಲಿ.

ನಾವು ಶಿಕ್ಷಣದ ಸಮಸ್ಯೆ ಮತ್ತು ಅದರ ವಿವಿಧ ಮುಖಗಳ ಬಗ್ಗೆ ಗಮನವನ್ನು ಕೇಂದ್ರೀಕರಿಸಬೇಕು. ನಾವು ಸೈನಿಕರು ಮತ್ತು ರೈತರಾಗಿ ಉಳಿಯುವುದಕ್ಕೆ ಸಂತೋಷಪಡುವುದಿಲ್ಲ. ನಾವು ಮೇಲುಜಾತಿಗಳ ವೃತ್ತಿಗಳಾದ ವಾಣಿಜ್ಯ ಮತ್ತು ವ್ಯಾಪಾರಗಳಿಗೆ ಪ್ರವೇಶಿಸಲು ಬಯಸುತ್ತೇವೆ. ಇಪ್ಪತ್ತನೇ ಶತಮಾನದಲ್ಲಿ ದೇಶದ ಪ್ರಗತಿಯು ವ್ಯಾಪಾರ ಮತ್ತು ವಾಣಿಜ್ಯ ಹಾಗೂ ಅದರ ಸಂಬಂಧಿತ ವ್ಯವಹಾರಗಳ ಮೇಲೆ ಅವಲಂಬಿಸಿರುತ್ತದೆ. ನಿಜವಾಗಿ, ವ್ಯಾಪಾರ ಮತ್ತು ವಾಣಿಜ್ಯಗಳು ಪಾಶ್ಚಿಮಾತ್ಯ ದೇಶಗಳ ಧರ್ಮವಾಗಿದೆ. ಇಲ್ಲಿ ಧರ್ಮವು ಸ್ವಾರ್ಥವನ್ನು ಪೂರೈಸಿಕೊಳ್ಳುವ ಸಾಧನವಾಗಿದೆ. ವ್ಯವಹಾರ ಮಾಡುವುದಕ್ಕೆ ನಮಗೆ ಧೈರ್ಯವಿಲ್ಲದಿದ್ದರೆ ನಮ್ಮ ಎಲ್ಲಾ ಚಲನೆಗಳು ಅರ್ಥಹೀನ. ನಾನು ನನ್ನ ಇಬ್ಬರು ಮಕ್ಕಳನ್ನು ಇದರಲ್ಲಿ ತೊಡಗಿಸಿದ್ದೇನೆ. ಅವರು ಹೊಸ ಕ್ಷೇತ್ರವನ್ನು ಒಪ್ಪಿಕೊಂಡರು ಮತ್ತು ಅವರು ಅದರಲ್ಲಿ ಪ್ರಗತಿ ಹೊಂದುತ್ತಿದ್ದಾರೆ.

ಬಹುಸಂಖ್ಯಾತರು ಕೃಷಿಯಲ್ಲಿ ತೊಡಗಿದ್ದರೂ ನಮ್ಮ ಜನರಿಗೆ ಶಿಕ್ಷಣ ಬೇಕೇಬೇಕು. ಶಿಕ್ಷಣವಿಲ್ಲದಿದ್ದರೆ ಚಲನೆಯೇ ಇರುವುದಿಲ್ಲ.

ನಮಗೆ ಉಸಿರಾಡುವುದನ್ನು ಮತ್ತು ತಿನ್ನುವುದನ್ನು ಕಲಿಸಬೇಕಾಗಿರುವುದರಿಂದ ನಾನು ಆಶ್ಚರ್ಯಪಡುತ್ತೇನೆ. ಇಂದು ಕೃಷಿಯು ಕ್ರಮಬದ್ಧವಾಗಿಬಿಟ್ಟಿದೆ. ಕೃಷಿಯಲ್ಲಿ ಸಫಲರಾಗಬಯಸುವವರು ಹೊಸ ಮಾದರಿಗಳನ್ನು ಅರಿಯಲು ಓದಬೇಕಾಗಿದೆ. ಪ್ರಸ್ತುತ ವಿಶ್ವಯುದ್ಧದಲ್ಲಿ ಮರಾಠರು ಯುದ್ಧಭೂಮಿಯಲ್ಲಿ ತಮ್ಮ ಪೂರ್ವಿಕರು ಗಳಿಸಿದ ಘನತೆ–ಗೌರವವನ್ನು ಎತ್ತಿಹಿಡಿದಿದ್ದಾರೆ. ಅವರು ಆಳುವವರೆಗೆ ತಮ್ಮ ನಿಷ್ಠೆಯನ್ನು ತೋರಿಸಿದ್ದಾರೆ ಸಹ.... ಆಧುನಿಕ ಯುದ್ಧಪದ್ಧತಿಗಳಲ್ಲಿ ಶಿಕ್ಷಣ ಬೇಕೇಬೇಕು. ಎಲ್ಲಾ ಸೈನಿಕರು ಯುದ್ಧದ ವಿಜ್ಞಾನ(ಶಾಸ್ತ್ರ)ವನ್ನು ತಿಳಿದುಕೊಳ್ಳಲು ಹೇಗೆ ಓದುವುದು ಎಂಬುದನ್ನು ತಿಳಿದುಕೊಳ್ಳುವ ಅಗತ್ಯವಿದೆ. ಇಲ್ಲಿ ಶಿಕ್ಷಣದ ಪ್ರಶ್ನೆಯು ಅತಿ ಮುಖ್ಯವಾಗುತ್ತದೆ. ಶಿಕ್ಷಣ ಪಡೆದ ಮರಾಠರು ಉತ್ತಮ ಸೈನಿಕರಾಗುವರು.

ಇಂದಿನ ಯುದ್ಧಗಳಲ್ಲಿ ಫಿರಂಗಿ ಪಡೆಗಳನ್ನು ನಿಭಾಯಿಸುವ ಮನುಷ್ಯರು ಶ್ರೇಷ್ಠ ಗಣಿತಶಾಸ್ತ್ರಜ್ಞರಾಗಿರ ಬೇಕಾಗುತ್ತದೆ. ಇದನ್ನೇ ನಾನು ಮತ್ತೆ ಒತ್ತಿ ಹೇಳಬೇಕಾಗುತ್ತದೆ– ಎಲ್ಲಾ ಮರಾಠರು ಸುರಿತ ವಿದ್ಯಾವಂತರಾಗಬೇಕಾಗುತ್ತದೆ. ಪ್ರಸ್ತುತ ಯುದ್ಧವು ಸಾಮ್ರಾಜ್ಯಗಳಿಗೆ ಚೆನ್ನಾಗಿ ಸೇವೆ ಮಾಡುವ ಅವಕಾಶ ನೀಡಿದೆ. ಮೊದಲು ಅಂತಹ ಅವಕಾಶವನ್ನು ನಾವು ಪಡೆದಿರಲಿಲ್ಲ ಮತ್ತು ಅಂತಹ ಅವಕಾಶ ಬಹುಶಃ ಮತ್ತೆ ನಮಗೆ ಸಿಗಲಾರದು. ಇಂಥ ಸನ್ನಿವೇಶದಲ್ಲಿ ಎಲ್ಲಾ ಜಾತಿಗಳು ಮತ್ತು ಗುಂಪುಗಳು ಸರಕಾರಕ್ಕೆ ಸಹಾಯ ಮಾಡಬೇಕೆಂದು ನಾನು ಭಾವಿಸುತ್ತೇನೆ. ಅವರು ಮುಂದೆ ಬಂದು ತಮ್ಮ ಗತವೈಭವಕ್ಕೆ ಉಚಿತವಾಗುವಂತೆ ಕಾರ್ಯ ನಿರ್ವಹಿಸಬೇಕಾದ ನಾವು ನಮ್ಮ ಕರ್ತವ್ಯದಲ್ಲಿ ವಿಫಲರಾದರೆ ನಾವು ಸದಾಕಾಲಕ್ಕೆ ಪಶ್ಚಾತ್ತಾಪಪಡಬೇಕಾಗುತ್ತದೆ.

---

೩

# ನಿಮ್ಮ ಹಕ್ಕುಗಳಿಗಾಗಿ ಹೋರಾಡಿ

ಮುಂಬಯಿಯ ಪರೇಲ್‌ನಲ್ಲಿ ನವೆಂಬರ್ ೧೦, ೧೯೧೮ರಂದು ಕಾರ್ಮಿಕರ ರ‍್ಯಾಲಿ ನಡೆಯಿತು. ಬಾಂಬೆ ಪ್ರೆಸಿಡೆನ್ಸಿಯ ಜನಪ್ರಿಯ ಗೌರ್ನರ್ ಲಾರ್ಡ್ ವಿಲ್ಲಿಂಗ್‌ಟನ್ ಅವರ ಸೇವಾವಧಿಯನ್ನು ವಿಸ್ತರಿಸಬೇಕೆಂದು ಕೇಳಲು ಒಂದು ಸಭೆಯನ್ನು ಸಂಘಟಿಸಲಾಗಿತ್ತು. ವಿಲ್ಲಿಂಗ್‌ಟನ್‌ರು ತಮ್ಮ ಐದುವರ್ಷಗಳ ಕಾಲಾವಧಿಯನ್ನು ಗೌರ್ನರ್ ಆಗಿ ಮುಗಿಸಿದ್ದರು ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಬಹಳ ಲಕ್ಷ್ಯವಹಿಸಿದ್ದರು. ರಾಜರ್ಷಿ ಶಾಹುರವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದ ತಮ್ಮ ಭಾಷಣದಲ್ಲಿ ಅವರು ಇದನ್ನು ಹೇಳುತ್ತಾ ಪ್ರಾರಂಭಿಸಿದರು: "ನಿಮ್ಮಲ್ಲಿ ನಾನು ಒಬ್ಬನು. ಕಾರ್ಮಿಕರು ತಮ್ಮ ಹಕ್ಕುಗಳ ಸಂರಕ್ಷಣೆಗಾಗಿ ಕ್ರಮಬದ್ಧವಾಗಿ ಸಂಘಟಿತರಾಗಬೇಕೆಂದು ಕರೆಯಿತ್ತರು. ಅವರು ಹಿಂದುಳಿದ ವರ್ಗಗಳ ಏಳಿಗೆಗಾಗಿ ಸಂವಿಧಾನದಲ್ಲಿ ಜಾತಿಪ್ರಾತಿನಿಧ್ಯದ ಬೇಡಿಕೆಯನ್ನು ಸಹ ಅವರು ಕೇಳಿದರು.

---

ನನ್ನ ಪ್ರೀತಿಯ ಸಹನಾಗರಿಕರೆ,

ನಾನು ಇಂದಿನ ಸಭೆಯಲ್ಲಿ ಅಧ್ಯಕ್ಷತೆವಹಿಸಲು ನಿಮ್ಮ ಆಹ್ವಾನವನ್ನು ಮಹಾಸಂತೋಷ ಮತ್ತು ಹೆಮ್ಮೆಯಿಂದ ಒಪ್ಪಿಕೊಂಡಿದ್ದೇನೆ ಮತ್ತು ನಾನು ನಿಮ್ಮಲ್ಲಿ ಒಬ್ಬನಾಗಿದ್ದೇನೆ.

ಹಿಂದುಳಿದ ವರ್ಗಗಳ ಜನರಿಗೆ ಮಾರ್ಗದರ್ಶನ ನೀಡುವಲ್ಲಿ ಮತ್ತು ಅವರು ಉನ್ನತ ಸ್ಥಾನಗಳಲ್ಲಿರುವುದನ್ನು ನೋಡಲು ನಾನು ಮಹಾಸಂತೋಷಪಡುತ್ತೇನೆ. ನಾನು ನಿಮ್ಮ ನಾಯಕನಾಗಿದ್ದರೂ ನಾನು ನಿಮ್ಮನ್ನು ಅಡ್ಡದಾರಿಯಲ್ಲಿ ಎಂದಿಗೂ ನಡೆಸುವುದಿಲ್ಲವೆಂದು ನಿಮಗೆ ಭರವಸೆ ನೀಡುತ್ತೇನೆ. ಮೇಲುವರ್ಗಗಳ ಸಭೆಗೆ ಸ್ವೀಕರಿಸಿದ ಆಹ್ವಾನದಿಂದ ಪಡೆದ ಸಂತೋಷಕ್ಕಿಂತ ಮಿಗಿಲಾಗಿ ನಿಮ್ಮ ಆಹ್ವಾನ ಸ್ವೀಕರಿಸಿದ್ದರಿಂದ ನನಗೆ ಹೆಚ್ಚು ಸಂತೋಷವಾಗಿದೆ. ಮೇಲುವರ್ಗಗಳು ತಮ್ಮ ಕಾಲ ಮೇಲೆ ತಾವೇ ನಿಂತುಕೊಳ್ಳುವುದಕ್ಕೆ ಸಮರ್ಥರಾಗಿರುವುದರಿಂದ ನಾನು ಎಂದಿಗೂ ಅವರ ಆಹ್ವಾನವನ್ನು ಒಪ್ಪಿಕೊಳ್ಳುವುದಿಲ್ಲ. ಒಮ್ಮೊಮ್ಮೆ ಅವರು ನನಗೆ ಸನ್ಮಾನಮಾಡಲು ಬಯಸುವರು. ಆದರೆ ನಾನು ಅವರ ಆಹ್ವಾನವನ್ನು ಒಪ್ಪಿಕೊಳ್ಳುವುದಿಲ್ಲ. ನಾನು ಅವರಿಗೆ ನನಗಿಂತ ಗೌರವಾನ್ವಿತರೂ, ಯೋಗ್ಯರೂ ಹಲವರು ಇದ್ದಾರೆಂದು ನಾನು ಅವರಿಗೆ ಹೇಳುತ್ತಿದ್ದೆ.

ಮುಂಬಯಿ ನಗರ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಪ್ರಸಿದ್ಧಿ. ವ್ಯವಹಾರ ಮತ್ತು ಕೈಗಾರಿಕೆಗಳು

ಶ್ರೀಮಂತರ ಬಂಡವಾಳ ಮತ್ತು ಕೈಗಾರಿಕೋದ್ಯಮಿಗಳ ವ್ಯವಸ್ಥಾಪನೆಯ ಕೌಶಲ್ಯಗಳ ಮೇಲೆ ಅವಲಂಬಿತವಾಗಿದೆಯೆಂದು ಈಗಲೂ ಜನರು ಸಂಸ್ಥಾನದಲ್ಲಿ ಚಿಂತಿಸುತ್ತಿದ್ದಾರೆ. ಪಾಶ್ಚಿಮಾತ್ಯ ದೇಶಗಳಲ್ಲಿ ಬಂಡವಾಳಶಾಹಿ ಮತ್ತು ಕಾರ್ಮಿಕವರ್ಗ ಎಂಬ ಎರಡು ವರ್ಗಗಳಿವೆ. ಬಂಡವಾಳಶಾಹಿಗಳು ಅಪಾರವಾದ ಅಧಿಕಾರಗಳನ್ನು ಹೊಂದಿದ್ದಾರೆ. ಆದರೆ ಕಾರ್ಮಿಕರು ಸಹ ಈಗ ತಮ್ಮ ಕಾರ್ಮಿಕ ಸಂಘಗಳನ್ನು ಕಟ್ಟಿದ್ದಾರೆ. ಹುಲ್ಲಿನ ಒಂದು ಎಳೆಗೆ ಶಕ್ತಿ (ಬಲ) ಇಲ್ಲ. ಆದರೆ ಹಲವಾರು ಹುಲ್ಲಿನ ಎಳೆಗಳನ್ನು ಕೂಡಿಸಿ ಹೊಸೆದರೆ ಆನೆಯನ್ನು ಕಟ್ಟಿಹಾಕಬಹುದು. ಇಂಗ್ಲೆಂಡಿನಲ್ಲಿ ಕಾರ್ಮಿಕರು ತಮ್ಮ ಸಂಬಳದ ಹೆಚ್ಚಳಕ್ಕಾಗಿಯೇ ಹೋರಾಡುತ್ತಾರೆ. ಆ ಸಮಾಜದಲ್ಲಿ ಅವರು ವರ್ಗವಾಗಿ ಹುಟ್ಟಿದರೂ ಬೆಳವಣಿಗೆಗೆ ಬಾಧೆಯಿಲ್ಲ. ಅವರು ಕೂಡಲೇ ಮೇಲುವರ್ಗಗಳೊಂದಿಗೆ ಬೆರೆಯುತ್ತಾರೆ. ಇಲ್ಲಿ ಪರಿಸ್ಥಿತಿ ಬೇರೆಯಾಗಿದೆ. ಇಂಗ್ಲೆಂಡಿನಲ್ಲಿ ಕಾರ್ಮಿಕ ಸಂಘಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ಅವರ ಪ್ರತಿನಿಧಿಗಳು ಸಂಸತ್ತಿಗೆ ಹೋಗಿದ್ದಾರೆ ಮತ್ತು ಅವರು ಸಚಿವ ಸಂಪುಟದ ಭಾಗವಾಗಿದ್ದಾರೆ. ಅವರು ತಮ್ಮ ಜನರ ಹಕ್ಕುಗಳನ್ನು ಸಂರಕ್ಷಿಸುತ್ತಾರೆ.

ಭಾರತದಲ್ಲಿ ಬಹುಸಂಖ್ಯಾತ ಹಿಂದುಳಿದ ವರ್ಗಗಳು ರೈತರಾಗಿದ್ದಾರೆ. ನಾನು ಕೂಡ ಅವರಲ್ಲಿ ಒಬ್ಬನಾಗಿದ್ದೇನೆ. ಕೈಗಾರಿಕೆಯಲ್ಲಿ ಕೆಲಸಮಾಡುತ್ತಿರುವ ಕಾರ್ಮಿಕರು ಕೂಡ ರೈತರೆ. ಆದ್ದರಿಂದ ನಾವೆಲ್ಲರೂ ಒಂದೇ ಎಂದು ಯೋಚಿಸುವುದು ಉತ್ತಮ. ನಮ್ಮ ದೇಶದಲ್ಲಿ ಕೂಡ ಕಾರ್ಮಿಕರ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣವನ್ನು ನೋಡಿಕೊಳ್ಳುವುದು ಅತ್ಯಗತ್ಯ. ಭಾರತದಲ್ಲಿ ಶಿಕ್ಷಿತರ ಮತ್ತು ಹಿಂದುಳಿದ ವರ್ಗಗಳ ಸಮಸ್ಯೆ ಇತ್ತೀಚೆಗೆ ಹುಟ್ಟಿಕೊಂಡದ್ದು. ವರ್ಗತಾರತಮ್ಯತೆಯಿಂದ ಬಹುಮಟ್ಟಿಗೆ ಹಿಂದುಸಮಾಜ ಬಾಧೆಪಡುತ್ತಿದೆ ಎಂಬುದು ನನ್ನ ಅಭಿಪ್ರಾಯ.

ಕ್ರಿಶ್ಚಿಯನ್ನರು, ಮುಸ್ಲಿಮರು ಮತ್ತು ಬೌದ್ಧರು ಹಿಂದುಳಿದ ವರ್ಗಗಳ ಸಹಾನುಭೂತಿ ಮತ್ತು ಮಮತೆಯಿಂದ ಪರಿಗಣಿಸುತ್ತಾರೆ. ಅವರು ಬೇರೆ ಧರ್ಮದವರಾಗಿದ್ದರೂ ಅವರು ನಮಗೆ ಹತ್ತಿರದವರೆಂದು ನಾವು ಭಾವಿಸುತ್ತೇವೆ. ಇಂಗ್ಲೆಂಡಿನಲ್ಲಿ ಬಂಡವಾಳವಾದಿಗಳ ಆಸಕ್ತಿಗಳು ಕಾರ್ಮಿಕ ಆಸಕ್ತಿಗಳಿಂದ ಭಿನ್ನವಾಗಿದ್ದರೂ, ಅವರ ಪ್ರತಿನಿಧಿಗಳು ಕಾರ್ಮಿಕರ ಹಕ್ಕುಗಳನ್ನು ಸಂರಕ್ಷಿಸಲು ಕೆಲಸಮಾಡುವುದಿಲ್ಲ. ಅಂತಹದ್ದೇ ಪರಿಸ್ಥಿತಿಯನ್ನು ಇಲ್ಲಿ ನೋಡುತ್ತೇವೆ. ಮೇಲುವರ್ಗಗಳು ಹಿಂದುಳಿದ ವರ್ಗಗಳ ಹಕ್ಕುಗಳನ್ನು ಸಂರಕ್ಷಿಸುವುದಿಲ್ಲ. ಇದಕ್ಕೆ ಜಾತಿವಾರು ಮತ್ತು ವರ್ಗವಾರು ಚುನಾಯಿತ ಪ್ರತಿನಿಧಿಗಳ ಅಗತ್ಯವಿದೆ. ಈ ವಿಶೇಷ ಯೋಜನೆ ಅತ್ಯಗತ್ಯ. ಪ್ರಾರಂಭದಿಂದಲೂ ನಾನು ಇದೇ ಅಭಿಪ್ರಾಯವನ್ನು ಹೊಂದಿದ್ದೇನೆ ಮತ್ತು ನಾನು ಅದನ್ನು ಖಾತರಿಗೊಳಿಸಲು ಪ್ರಯತ್ನಿಸುತ್ತಿದ್ದೇನೆ.

ಇಂಗ್ಲೆಂಡಿನಲ್ಲಿ ಕಾರ್ಮಿಕರು ಕಾರ್ಮಿಕ ಸಂಘಗಳನ್ನು ತಮ್ಮ ಪ್ರಗತಿಗಾಗಿ ಸ್ಥಾಪಿಸಿದ್ದಾರೆ ಮತ್ತು ಸ್ವಾವಲಂಬನೆಯ ಮಾರ್ಗವನ್ನು ಅಂಗೀಕರಿಸಿದ್ದಾರೆ. ನಾವು ಸಹ ಅಂಥ ಕಾರ್ಮಿಕ ಸಂಘಟನೆಗಳನ್ನು ಕಟ್ಟಬೇಕಾಗಿದೆ. ನಮ್ಮ ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡಬೇಕು ಮತ್ತು ಆರೋಗ್ಯಪಾಲನೆಯ ಜಾಗೃತಿಯನ್ನು ಹೆಚ್ಚಿಸಬೇಕು ಮತ್ತು ಹೀಗೆ ನಮ್ಮ ಪ್ರಗತಿಯನ್ನು ಖಾತರಿಗೊಳಿಸಬೇಕು. ಬೇರೆಯವರು ನಮಗಾಗಿ ಮಾಡಬೇಕೆಂದು ನಿರೀಕ್ಷಿಸುವುದು ನಮ್ಮ ದುರ್ಬಲತೆಯ ಸಂಕೇತವಾಗುತ್ತದೆ. ಇದನ್ನು ಸದಾ ನೆನಪಿನಲ್ಲಿಡಿ. ತಮ್ಮ ಜನರ ಸಹಾಯದಿಂದ ಶಿವಾಜಿ ಮಹಾರಾಜರು ಬೇರೆ ಧರ್ಮಗಳಿಂದ ನಮ್ಮ ಧರ್ಮಕ್ಕೆ ಒದಗಿದ ಗಂಡಾಂತರವನ್ನು ನಿಭಾಯಿಸಿದರು. ಇಂದು ಸಹ ನಮ್ಮ ಧಾರ್ಮಿಕ ಕಾರ್ಯಗಳು ಆರ್ಥಿಕ ಮತ್ತು ಇತರೆ ಹಕ್ಕುಗಳು ಕರ್ಮಠ ಸಂಪ್ರದಾಯವಾದಿಗಳಿಂದ ಹಲವು ಅಡ್ಡಿ-ಆತಂಕಗಳನ್ನು ಎದುರಿಸುತ್ತಿವೆ. ನಾವೆಲ್ಲರೂ

ಅದನ್ನು ಕಿತ್ತುಹಾಕಲು ಹೋರಾಡಬೇಕಾಗಿದೆ. ನಾವೆಲ್ಲರೂ ಸರಿಸಮಾನರೆಂದು ಭಾವಿಸುವ ಬ್ರಿಟಿಷರ ಸಂರಕ್ಷಣೆಯ ಕೊಡೆಯನ್ನು ಹೊಂದಿದ್ದೇವೆ ಮತ್ತು ಅವರು ಬಡವರ ಬಗ್ಗೆ ಮಹಾಕರುಣೆಯನ್ನು ಹೊಂದಿದ್ದಾರೆ. ನಾವು ಇದನ್ನು ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದ್ದೇವೆ. ಆದ್ದರಿಂದಲೇ ನಾವೆಲ್ಲರೂ ಇಲ್ಲಿ ಇಂದು ಸೇರಿದ್ದೇವೆ.

ಹಿಂದೆ ಶಿಕ್ಷಣ ಪಡೆಯುವುದಕ್ಕೆ ಹಲವಾರು ತೊಂದರೆಗಳಿದ್ದವು. ಸತಾರದ ಮಹಾರಾಜರೆ ಸ್ವತಃ ಕಳ್ಳತನದಲ್ಲಿ ಮಧ್ಯರಾತ್ರಿ ಹೊತ್ತಿನಲ್ಲಿ ಶಿಕ್ಷಣ ಪಡೆಯಬೇಕಾದರೆ ಬೇರೆಯವರ ಸ್ಥಿತಿ ಏನಾಗಿರಬಹುದೆಂದು ಏನು ಹೇಳಲಿ? ಆದರೆ ಅಂತಹ ಸ್ಥಿತಿ ಇಂದು ಇಲ್ಲ. ಬ್ರಿಟಿಷ್ ನಿಷ್ಪಕ್ಷತನದ ಮನೋಭಾವದಿಂದ ಓದುವುದಕ್ಕೆ ಮತ್ತು ಬರೆಯುವುದಕ್ಕೆ ಕಲಿಯಲು ಯಾವ ನಿರ್ಬಂಧಗಳು ಇಲ್ಲ. ಆದರೆ ನಾವು ಅವರಿಗೆ ಕೃತಜ್ಞತೆಗಳನ್ನು ಹೇಳಿದರೆ ಇಷ್ಟು ಸಾಕಾಗಲಾರದು. ನಾನು ಬೇಗನೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಪ್ರಾರಂಭಿಸಲು ಯೋಚಿಸಿದ್ದೇನೆ. ಆದರೆ ಹಿಂದುಳಿದ ವರ್ಗಗಳ ಪ್ರತಿನಿಧಿಗಳು ಪರಿಷತ್ತಿನಲ್ಲಿರದಿದ್ದರೆ ಇದು ಆಗುವುದಿಲ್ಲ. ನಾವು ನಮ್ಮ ಗುರಿಗಳನ್ನು ಶಾಂತಿಯುತವಾಗಿ ಮಂಡಿಸಬೇಕಾಗಿದೆ. ಈ ಹೋರಾಟದಲ್ಲಿ ಆ ನಮ್ಮ ಆಯುಧಗಳು ಐಕ್ಯತೆ, ಸಹೋದರಭಾವ, ನಂಬಿಕೆ ಮತ್ತು ಸತತ ಪರಿಶ್ರಮಗಳಾಗಿರಬೇಕು.

ನನ್ನ ಒಳ್ಳೆಯ ಸ್ನೇಹಿತರಾದ ದಿವಂಗತರಾದ ನ್ಯಾಯಮೂರ್ತಿ ರಾನಡೆ, ಗೋಪಾಲಕೃಷ್ಣ ಗೋಖಲೆಯವರು ಹಿಂದುಳಿದ ವರ್ಗಗಳ ಪ್ರಗತಿಗೆ ಸಾಕಷ್ಟು ಕೆಲಸಗಳನ್ನು ಮಾಡಿದ್ದರು. ಹಿಂದುಳಿದ ವರ್ಗಗಳಲ್ಲಿ ಶಿಕ್ಷಣವನ್ನು ಹರಡಲು ನನಗೆ ವಿಶೇಷವಾಗಿ ಸ್ಫೂರ್ತಿ ನೀಡಿದ್ದಾರೆ. ಇಂದು ಸಹ ಸರ್ ಶಂಕರನ್ ನಾಯರ್, ಸರ್ ಇಬ್ರಾಹಿಂ ರಹೀಮ್‌ತುಲ್ಲಹ್, ಶ್ರೀ ಪಟೇಲ್, ಮಹಾತ್ಮ ಗಾಂಧಿ, ಮದ್ರಾಸಿನಿಂದ ಡಾ. ನಾಯರ್ ಮತ್ತು ಆರ್. ಬಿ. ತ್ಯಾಗರಾಜ್ ಚೆಟ್ಟಿ ಮತ್ತು ನಮ್ಮ ಪ್ರದೇಶದ ನನ್ನ ಸ್ನೇಹಿತರಾದ ಕೊಠಾರಿ. ವೊಡ್ರಾ, ಲಠ್ಠೆ, ಮುಕುಂದರಾವ್ ಪಾಟೀಲರು ಈ ದಿಕ್ಕಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಆದರೆ ಅಂಥ ಜನರ ಸಂಖ್ಯೆ ಬಹಳ ಕಡಿಮೆ. ನಮ್ಮಲ್ಲಿರುವ ಯುವಕರಿಗೆ ನಾನು ಹೃತ್ಪೂರ್ವಕವಾಗಿ ಈ ಉದ್ದೇಶದ ಸಾಮಾಜಿಕ ಕಾರ್ಯಕ್ಕೆ ತಮ್ಮನ್ನು ತಾವೇ ಸಮರ್ಪಿಸಿಕೊಂಡು ನಮ್ಮ ಸಹೋದರರ ಪ್ರಗತಿಗೆ ಸಹಾಯಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಇಂಗ್ಲಿಷ್ ಜನರ ಔದಾರ್ಯದ ಉತ್ತಮ ಉದಾಹರಣೆ ಮತ್ತು ನಮ್ಮ ಗೌರ್ನರರ ಮತ್ತು ಅವರ ಹೆಂಡತಿಯ ಮನಸ್ಸಿನಲ್ಲಿ ಅವರು ಸಂಸ್ಥಾನದ ಕಲ್ಯಾಣವನ್ನು ಹೊತ್ತಿದ್ದಾರೆ. ಸರ್ ವಿಲಿಯಂ ವೆಡ್ಡರ್‌ವರ್ನ್, ಹ್ಯೂಮ್, ಸರ್ ಜಾರ್ಜ್ ಬರ್ಡ್‌ವುಡ್ ಮತ್ತು ಇತರೆ ಜನರು ನಮ್ಮ ದೇಶಕ್ಕಾಗಿ ಕೆಲಸಮಾಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ನನ್ನ ಸ್ನೇಹಿತ ವೇಲಂಟೈನ್ ಚಿರೋಲ್ ಮತ್ತು ಲಾರ್ಡ್ ಸಿಡ್ನೆಹ್ಯಾಂ ಅವರು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಕೆಲಸ ಮಾಡುತ್ತಿದ್ದಾರೆ. ನಾನು ನಿರಂತರವಾಗಿ ಅಂತಹ ಔದಾರ್ಯದ ಜನರನ್ನು ಹೊಂದುವ ಭಾಗ್ಯವಿರುವುದರಿಂದ, ನಮ್ಮ ಪ್ರಗತಿ ತೀವ್ರಗತಿಯಲ್ಲಿ ಸಾಗುವುದರಲ್ಲಿ ಯಾವ ಅನುಮಾನವೂ ಇಲ್ಲ. ಲಾರ್ಡ್ ವಿಲ್ಲಿಂಗ್‌ಟನ್ ಅವರು ಮತ್ತೊಂದು ಐದು ವರ್ಷಗಳ ಅವಧಿಗೆ ಮುಂದುವರಿಸಬೇಕೆಂಬುದು ನಮ್ಮ ಬೇಡಿಕೆಯಾಗಿದೆ. ಇಂದು ಹಿಂದುಳಿದ ವರ್ಗಗಳ ಧ್ವನಿಗೆ ಮನ್ನಣೆ ಸಿಗುತ್ತಿದೆ. ನಾವು ನಮ್ಮ ದುಃಖ ದುಮ್ಮಾನಗಳನ್ನು ಹೇಳಬಹುದು. ಇಂಗ್ಲೀಷಿನ ಜನರು ಬಹುಮತ ಅಭಿಪ್ರಾಯದ ಪ್ರಿಯರು. ಜನರ ಆಸಕ್ತಿಗಳ ದೃಷ್ಟಿಯಿಂದ ಗೌರ್ನರನ್ನು ಮುಂದುವರಿಸಲಿ ಮತ್ತು ಸರಕಾರವು ನಮ್ಮ ಬೇಡಿಕೆಯನ್ನು ಅನುಕೂಲಕರವಾಗಿ ಪರಿಗಣಿಸುವುದೆಂದು ನಾನು ಭಾವಿಸಿದ್ದೇನೆ.

ಈ ಯುದ್ಧವು ಭಾರತದ ರಾಜಕೀಯ ನಿಷ್ಠೆ ದೃಢವಾಗಿದೆಯೆಂದು ಇಡೀ ವಿಶ್ವಕ್ಕೆ ಸ್ಪಷ್ಟಪಡಿಸಿದೆ. ಹಿಂದುಳಿದ ವರ್ಗಗಳು ಕೂಡ ಈ ಸಂದಿಗ್ಧ ಕಾಲದಲ್ಲಿ ಸರಕಾರವನ್ನು ಬೆಂಬಲಿಸಿವೆ. ಅವರು ತಮ್ಮ ನಿಷ್ಠೆಯನ್ನು ಪರಾಕ್ರಮದ ಮೂಲಕ ಯುದ್ಧಭೂಮಿಯಲ್ಲಿ ಸಾಧಿಸಿ ತೋರಿಸಿದ್ದಾರೆ. ದೇಶದ ಬಗ್ಗೆ ಭಾವೀ ಯೋಜನೆಯನ್ನು ರೂಪಿಸುವಾಗ ಹಿಂದುಳಿದ ವರ್ಗಗಳ ಹಕ್ಕುಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂಬುದು ದುರಾದೃಷ್ಟದ ಸಂಗತಿಯಾಗಿದೆ. ಅವರು ವಿಶ್ವದ ಯುದ್ಧದಲ್ಲಿ ಚಕ್ರವರ್ತಿಗಳಿಗಾಗಿ ತಮ್ಮ ಪ್ರಾಣಗಳನ್ನೇ ತೆತ್ತಿದ್ದಾರೆ. ಸರಕಾರವು ಈ ವೀರ ಯೋಧರ ಕುಟುಂಬಗಳನ್ನು ಮರೆಯಬಾರದೆಂಬುದು ನಮ್ಮ ಕಳಕಳಿಯ ಕೋರಿಕೆ. ಯುದ್ಧವು ಮುಕ್ತಾಯ ಹಂತದಲ್ಲಿದೆ. ದೇವರು ಸಫಲತೆಯೊಂದಿಗೆ ಸತ್ಯದ ಕಡೆಗೆ ಅನುಕೂಲ ಮಾಡಿಕೊಟ್ಟಿದ್ದಾನೆ ಮತ್ತು ಕ್ರೂರಿ ರಾಷ್ಟ್ರಗಳನ್ನು ಸೋಲಿಸಲಾಗಿದೆ. ಬ್ರಿಟಿಷರು ಸಣ್ಣ ದೇಶಗಳಾದ ಬೆಲ್ಜಿಯಂ, ಸರ್ಬಿಯ ಮೊದಲಾದವುಗಳಿಗೆ ಹೋರಾಡಿದಂತೆಯೇ ಈಗ ಹಿಂದುಳಿದ ವರ್ಗಗಳ ಪರವಾಗಿ ಹೋರಾಡಬೇಕಾಗಿದೆ. ಈ ಉದ್ದೇಶಕ್ಕಾಗಿ ಅವರು ಮೇಲುವರ್ಗಗಳು ಒಪ್ಪದ ಕೆಲವು ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ನನ್ನ ಒಳ್ಳೆಯ ಸ್ನೇಹಿತ ಮತ್ತು ಮಾರ್ಗದರ್ಶಕ ಲಾರ್ಡ್ ಸಿಡ್ನೆ ಹ್ಯಾಂ ಅವರು ವಿದೇಶದಲ್ಲಿ ಕೋಮುವಾರು ಪ್ರಾತಿನಿಧ್ಯದ ವಿಷಯದ ಬಗ್ಗೆ ಕೆಲಸ ಮಾಡುತ್ತಿದ್ದಾರೆ. ನಮ್ಮ ಪರವಾಗಿ ಈ ಪ್ರಯತ್ನಗಳು ಸಫಲವಾಗುವವೆಂದು ನಾನು ಭರವಸೆಯಿಂದಿದ್ದೇನೆ. ನಾವು ಸಹ ನವೀಕರಿಸಿದ ಪ್ರಯತ್ನಗಳಿಂದ ಈ ಸದುದ್ದೇಶಕ್ಕಾಗಿ ಹೋರಾಡಲು ನಮ್ಮ ಹೋರಾಟವನ್ನು ಮುಂದುವರಿಸಬೇಕು.

ಅಂತಿಮವಾಗಿ ನಾನು ಬೆಲ್ಜಿಯಂ ಮತ್ತು ಸರ್ಬಿಯಗಳ ನಿದರ್ಶನಗಳನ್ನು ನಿಮ್ಮ ಮುಂದೆ ಇಡುವೆನು. ಜರ್ಮನಿ ಮತ್ತು ಆಸ್ಟ್ರಿಯ ಎಂಬ ಬಲಿಷ್ಠ ದೇಶಗಳ ದಾಳಿಗೆ ತುತ್ತಾದರೂ ಅವರು ಯುದ್ಧವನ್ನು ಮಾಡಿದರು ಮತ್ತು ತಮ್ಮ ಶಕ್ತಿ ಏನೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟರು. ಅವರು ಕಷ್ಟಕಾಲದಲ್ಲಿ ತಮ್ಮ ನಿಲುವನ್ನು ಬಿಟ್ಟುಕೊಡಲಿಲ್ಲ. ಅವರು ಈಗ ಸಫಲತೆಯನ್ನು ನೋಡುತ್ತಿದ್ದಾರೆ. ನಾವು ಸಹ ನಮ್ಮ ಹಕ್ಕುಗಳಿಗಾಗಿ ಹೋರಾಡಬೇಕು. ದೇವರು ಸಫಲತೆಯಿಂದ ಸತ್ಯದ ಕಡೆಗಿರುವನೆಂಬ ಶ್ರದ್ಧೆಯನ್ನು ಇಟ್ಟುಕೊಳ್ಳಿ. ಲಾರ್ಡ್ ವಿಲ್ಲಿಂಗ್‌ಟನ್ ಅವರ ಐದು ವರ್ಷ ಮತ್ತೊಂದು ಅವಧಿಯ ಮುಂದುವರಿಕೆಯನ್ನು ಪಡೆಯುವ ಪ್ರಯತ್ನಗಳು ಸಫಲವಾಗಲಿಯೆಂದು ನಾನು ಪ್ರಾರ್ಥಿಸುತ್ತೇನೆ.

---

೪

# ಇಂಗ್ಲೆಂಡಿನಲ್ಲಿರುವಂತೆಯೇ ನಾವು ಕಾರ್ಮಿಕ ಸಂಘಗಳನ್ನು ಸ್ಥಾಪಿಸಬೇಕು

ನವೆಂಬರ್ ೨೪, ೧೯೧೮ರಂದು ಮೊದಲ ವಿಶ್ವಯುದ್ಧದ ಮಿತ್ರಕೂಟ ದೇಶಗಳ ಗೆಲುವಿನ ಆಚರಣೆಗಾಗಿ ಮುಂಬಯಿ ಕಾರ್ಮಿಕರು ಒಂದು ಸಾರ್ವಜನಿಕ ಸಭೆಯನ್ನು ವ್ಯವಸ್ಥೆಗೊಳಿಸಿತು. ಶಾಹು ಮಹಾರಾಜರಿಂದ ಸ್ಫೂರ್ತಿಪಡೆದು ಕಾರ್ಮಿಕರ ಸಂಘಟನೆಯಾದ 'ದಿ ಪೀಪಲ್ಸ್ ಯೂನಿಯನ್' ಎಂಬ ಸಂಸ್ಥೆಯನ್ನು ಈ ಸಭೆಯಲ್ಲಿ ಪ್ರಾರಂಭಿಸಲಾಯಿತು. ಶಾಹು ಮಹಾರಾಜರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಹೇಳಿದರು: "ಇಂಗ್ಲೇಂಡಿನಲ್ಲಿರುವಂತೆಯೇ ಇಲ್ಲಿ ನಾವು ಕಾರ್ಮಿಕರ ಸಂಘಗಳನ್ನು ಕಟ್ಟಬೇಕು. ಪ್ರತಿಯೊಬ್ಬರೂ ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಿರಬೇಕು". ಕಾರ್ಮಿಕರು ತಮ್ಮ ಆತ್ಮ-ಗೌರವ ಮತ್ತು ಅಸ್ಮಿತೆ(ಗುರುತು)ಯ ಬಗ್ಗೆ ಎಚ್ಚರಗೊಳ್ಳಲು ಶಾಹು ಮಹಾರಾಜರು ಒಮ್ಮೆ ಹೇಳಿದರು: "ನಾನು ಕೊಲ್ಹಾಪುರ ಸಿಂಹಾಸನದ ಮೇಲೆ ಕುಳಿತಿದ್ದರೂ ನಾನು ನನ್ನನ್ನು ಒಬ್ಬ ಸೈನಿಕ, ಒಬ್ಬ ರೈತ ಮತ್ತು ಒಬ್ಬ ಕಾರ್ಮಿಕ ಎಂದು ಕರೆದುಕೊಳ್ಳಲು ಹೆಮ್ಮೆಯಾಗುತ್ತದೆ."

---

ನನ್ನ ಪ್ರೀತಿಯ ಸಹೋದರರೇ,

ಕಳೆದ ನವೆಂಬರ್ ೧೦ರಂದು ಪರೆಲ್‌ನಲ್ಲಿ ನಡೆದ ಭಾರಿ ಸಭೆಯಲ್ಲಿ ನಿಮ್ಮ ಮನಸ್ಸುಗಳಲ್ಲಿನ ಭಾವನೆಗಳಿಗೆ ನಾವು ಮಾತುಗಳನ್ನು ನೀಡಿದ್ದೆವು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ ಕಾರ್ಮಿಕರ ಸಂಘಗಳಂತೆಯೇ ನೀವು ಸಂಘಗಳನ್ನು ಕಟ್ಟಿ ಮತ್ತು ಸಾಮರಸ್ಯದ ಮೂಲಕ ನಿಮ್ಮ ಭವಿಷ್ಯವನ್ನು ಸುಧಾರಿಸಿಕೊಳ್ಳಿ ಎಂದು ನಾನು ಒತ್ತಾಯಿಸಿದ್ದೆನು. ಅದರ ಪ್ರಕಾರ ನೀವು ಪೀಪಲ್ಸ್ ಯೂನಿಯನ್ ಎಂಬ ಸಂಘಟನೆಯನ್ನು ಸ್ಥಾಪಿಸಿದ್ದೀರಿ. ಇದು ಒಂದು ಒಳ್ಳೆಯ ಬೆಳವಣಿಗೆ.

ಇಂಗ್ಲೆಂಡಿನಲ್ಲಿ ಬಂಡವಾಳವಾದಿಗಳ ಮತ್ತು ಕಾರ್ಮಿಕರ ಪರ ಎಂಬ ಎರಡು ಬಲಿಷ್ಠ ರಾಜಕೀಯ ಪಕ್ಷಗಳಿವೆ. ಅವರ ಹಿತಾಸಕ್ತಿಗಳು ಪರಸ್ಪರ ಸಂಘರ್ಷಮಯವೆಂಬ ಸಾಮಾನ್ಯ ಭಾವನೆಯಿದೆ. ವಾಸ್ತವಿಕವಾಗಿ, ಇತರರ ಕಾನೂನುಬದ್ಧ ಹಕ್ಕುಗಳ ಬಗ್ಗೆ ಆಕ್ರಮಣ ಮಾಡದೆ ತಮ್ಮ ತಮ್ಮ ಹಕ್ಕುಗಳ ಬಗ್ಗೆ ಪ್ರತಿಯೊಬ್ಬರೂ ಲಕ್ಷ್ಯವಹಿಸಿದರೆ ವಿವಾದ(ಜಗಳ) ಗಳಿಗೆ ಎಡೆಯಿಲ್ಲ. ಮೇಲುಜಾತಿಯ ಜನರು ಮನವರಿಕೆ ಮಾಡಿಕೊಂಡು ಅದರ ಪ್ರಕಾರ ಕೆಳಜಾತಿಗಳನ್ನು ಸ್ವಾಭಿಮಾನದಿಂದ ತಲೆಯೆತ್ತಿಕೊಂಡು ತಿರುಗಾಡುವಂತೆ ಮಾಡುವ

ದಿನವನ್ನು ಸ್ವರ್ಣಾಕ್ಷರಗಳಲ್ಲಿ ಬರೆದ ದಿನ ಎಂದು ಹೇಳಬಹುದು. ಅಂತಹ ದಿನದ ಉದಯ ತೀರ ಹತ್ತಿರದಲ್ಲಿದೆಯೆಂದು ನಾನು ಭಾವಿಸುತ್ತೇನೆ. ಭಾರತದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಪಕ್ಷಗಳಿವೆ. ಅವುಗಳ ನಡುವೆಯಿರುವ ವ್ಯತ್ಯಾಸಗಳು ಇಷ್ಟರಲ್ಲಿಯೇ (ದಿನದಲ್ಲಿ) ಸ್ಪಷ್ಟವಾಗುತ್ತವೆ. ಅನಕ್ಷರತೆ ಮತ್ತು ಮೌಢ್ಯದಿಂದ ಬ್ರಾಹ್ಮಣೇತರರ ಗುಂಪಿನ ಜೀವನ ಅಧೋಗತಿಗೆ ಇಳಿಯುತ್ತಿದೆ. ಇಂದು ಅವರು ಸಂಪೂರ್ಣವಾಗಿ ಗುಲಾಮರಾಗಿದ್ದಾರೆ. ಅವರ ಶ್ರಮದ ಮೇಲೆ ಬದುಕುವ ಜನರು ಎಂದೆಂದಿಗೂ ದೈಹಿಕ ಕೆಲಸಕಾರ್ಯಗಳನ್ನು ಮಾಡುವುದಿಲ್ಲ. ಕೆಲವು ಬಾರಿ ಕಾರ್ಮಿಕ ವರ್ಗವನ್ನು ಪ್ರಚೋದಿಸಿ ದಾರಿ ತಪ್ಪಿಸಲಾಗುವುದು. ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸುವುದಕ್ಕಾಗಿ ಪಶ್ಚಿಮದ ಬಂಡವಾಳಶಾಹಿ ತತ್ವಗಳನ್ನು ಕಾರ್ಮಿಕ ವರ್ಗವನ್ನು ಶೋಷಿಸುವುದಕ್ಕೆ ಬಳಸಲಾಗುವುದು. ನಾವು ನಿಸ್ವಾರ್ಥದಿಂದ ಕಾರ್ಮಿಕರ ಸ್ಥಿತಿಗತಿಗಳನ್ನು ಸುಧಾರಿಸಲು ಕೆಲಸ ಮಾಡಬೇಕಾಗಿದೆ. ನೀವೆಲ್ಲರೂ ಅದನ್ನು ಮಾಡುತ್ತಿರುವಿರಿ ಮತ್ತು ನಾನು ನಿಮಗೆ ಅಭಿನಂದನೆಗಳನ್ನು ಹೇಳಬೇಕು.

ಬ್ರಾಹ್ಮಣರು ಬ್ರಾಹ್ಮಣ ಸಭಾ, ಶಂಕರವಾಡಿ ತಮಗೋಸ್ಕರವೇ ಮೀಮಾಂಸೆಯ ವಿದ್ಯಾಲಯದ ಪ್ರತ್ಯೇಕ ಸಂಸ್ಥೆ ಕಟ್ಟಿಕೊಂಡಿದ್ದಾರೆ ಮತ್ತು ಬೇರೆಯವರನ್ನು ಅವುಗಳಿಂದ ದೂರವಿಟ್ಟಿದ್ದಾರೆ. ಅವರು ಹೀಗೆ ಅಸಾಮರಸ್ಯಕ್ಕೆ (ಅನೈಕ್ಯತೆ) ಬುನಾದಿ ಹಾಕಿದ್ದಾರೆ. ವಾಸ್ತವಿಕವಾಗಿ, ಸಂವೇದನಾಶೀಲರಾದ ಮತ್ತು ವಿದ್ಯಾವಂತವರ್ಗ ಸಾಮರಸ್ಯ ಮತ್ತು ಇತರರಿಗೆ ಪ್ರೀತಿ ತೋರಿಸುವ ನಿದರ್ಶನಗಳನ್ನು ಹಾಕಬೇಕು. ಆದರೆ ಅವರು ಹಾಗೆ ಮಾಡುತ್ತಿಲ್ಲ. ಆರ್ಯಸಮಾಜವು ಈ ಹೊಣೆಯನ್ನು ತಾನೆ ವಹಿಸಿಕೊಂಡು ನಿಭಾಯಿಸುತ್ತಿದೆ. ನಾನು ಆರ್ಯಸಮಾಜದ ಪ್ರಸಿದ್ಧನಾಯಕ ಸರ್ ಪ್ರತಾಪಸಿಂಹ ಮಹಾರಾಜರ ಶಿಷ್ಯ. ನಾನು ಈ ವಿಷಯದ ಬಗ್ಗೆ ಹಲವು ಪುಸ್ತಕಗಳನ್ನು ಓದಿದ್ದೇನೆ. ದಯಾನಂದ ಸರಸ್ವತಿಯವರು ಆರ್ಯಸಮಾಜದ ವಿಚಾರಗಳನ್ನು ತಮ್ಮದೇ ವಿಚಾರಗಳೆಂದು ಪ್ರತಿಪಾದಿಸುತ್ತಿಲ್ಲ. ಸ್ವಾಮಿ ದಯಾನಂದ, ನಿತ್ಯಾನಂದ, ನನ್ನ ಸ್ನೇಹಿತ ಆತ್ಮಾರಾಮ್ ಮತ್ತು ಪರಮಾನಂದ ಅವರು ವೇದಗಳಲ್ಲಿ ಪ್ರತಿಪಾದಿತ ಕಾಲಾತೀತ (ಶಾಶ್ವತ) ತತ್ವಗಳನ್ನು ಮತ್ತೆ ಬೆಳಕಿಗೆ ತರುತ್ತಿದ್ದಾರೆ. ಪೂಜಾರಿಗಳು ತಾವು ಒಂದು ಜಾತಿಗೆ ಕಟ್ಟುಬಿದ್ದು ಧರ್ಮದೊಳಕ್ಕೆ ತುರುಕಿದ ಸುಳ್ಳು (ತಪ್ಪು) ವಿಚಾರಗಳನ್ನು ಈ ಪವಿತ್ರ ಮಹಾನುಭಾವರು ನಾಶಮಾಡುತ್ತಿದ್ದಾರೆ. ಅದಕ್ಕಾಗಿ ನಾವು ಈ ಮಹಾನುಭಾವರಿಗೆ ಕೃತಜ್ಞತೆಗಳನ್ನು ಸಲ್ಲಿಸಬೇಕು.

ಆರ್ಯಸಮಾಜದ ತತ್ವಗಳನ್ನು ನಾನು ಹೇಗೆ ಒಪ್ಪಿದೆ ಎಂಬ ಸಂಗತಿಯನ್ನು ಸಂಕ್ಷಿಪ್ತವಾಗಿ ಹೇಳುವೆನು. ಮಹಾರಾಜ ಪ್ರತಾಪಸಿಂಹರು ಯುದ್ಧ ಪ್ರಾರಂಭವಾದಾಗಿನಿಂದ ಫ್ರಾನ್ಸ್‌ನಲ್ಲಿ ಯುದ್ಧಮಾಡುತ್ತಿದ್ದರು. ನಾನು ಮತ್ತು ಅವರು ಮಹಾರಾಜ ಪಟ್ಟಾಭಿಷೇಕದ ಸಂಮಾರಂಭಕ್ಕೆ ಹಡಗಿನಲ್ಲಿ ಇಂಗ್ಲೆಂಡಿಗೆ ಹೋದೆವು. ಅವರು ಪ್ರಯಾಣದಲ್ಲಿ ಈ ಎಲ್ಲಾ ತತ್ವಗಳನ್ನು ನನಗೆ ವಿವರಿಸಿ ಹೇಳಿದರು. ಕೆಲವು ವರ್ಷಗಳ ನಂತರ ನಾನು ಪಂಡಿತ ಆತ್ಮರಾಮ್‌ಜಿ ಅವರನ್ನು ಭೇಟಿಮಾಡಿದೆ. ಅದಾದ ನಂತರ ನಾನು ಆರ್ಯ ಸಮಾಜದ ಅನುಯಾಯಿಯಾದೆನು. ಹಾಲಿಕೂಚ್ ಬಿಹಾರದ ಮಹಾರಾಜರು ಒಬ್ಬ ಆರ್ಯ ಸಮಾಜದ ಅನುಯಾಯಿ. ಆರ್ಯ ಸಮಾಜ, ಬ್ರಹ್ಮಸಮಾಜ ಮತ್ತು ಪ್ರಾರ್ಥನಾ ಸಮಾಜಗಳು ದಬ್ಬಾಳಿಕೆಯ ಪೂಜಾರಿಗಳ ನೊಗವನ್ನು ಕಿತ್ತುಹಾಕಿದ ನಂತರ ಅಸ್ತಿತ್ವಕ್ಕೆ ಬಂದವು. ಬಂಡವಾಳಶಾಹಿಗಳ ದಬ್ಬಾಳಿಕೆಯನ್ನು ವಿರೋಧಿಸಲು (ಪ್ರತಿಭಟಿಸಲು) ಕಾರ್ಮಿಕ ಸಂಘಗಳನ್ನು ಕಟ್ಟುವುದು ಬಹುಮುಖ್ಯ. ಆದರೆ ಅದಕ್ಕಿಂತ ಮುಖ್ಯವಾದದ್ದು ಖೋಟಾ (ಅಪದ್ಧ) ಧಾರ್ಮಿಕ ಮೋಸವನ್ನು ಕಿತ್ತೆಸೆಯುವುದು ಅತಿಮುಖ್ಯ. ಆದ್ದರಿಂದಲೇ ನಾನು ಆರ್ಯ ಸಮಾಜವನ್ನು ಹೊಗಳುವೆನು. ಆದರೆ ಖೋಟಾ ಧಾರ್ಮಿಕ ಜನರು ಆರ್ಯ ಸಮಾಜವನ್ನು ವಿರೋಧಿಸುತ್ತಾರೆ.

ಆರ್ಯ ಸಮಾಜ ಯುದ್ಧವೀರರಾದ ಲಾರ್ಡ್ ಕಿಚ್ನರ್ ಮತ್ತು ಲಾರ್ಡ್ ಫ್ರೆಂಚ್ ಅವರು ಆರ್ಯರ ಕ್ಷತ್ರಿಯರು. ಅವರು ಆರ್ಯಧರ್ಮದ ಅನುಚರರಾಗಬಲ್ಲರು. ಹೀಗೆ ಆರ್ಯ ಸಮಾಜವು ಬ್ರಿಟಿಷ್ ರಾಷ್ಟ್ರದೊಂದಿಗೆ ನಮ್ಮನ್ನು ಒಟ್ಟುಗೂಡಿಸುವ ಒಂದು ಬೆಸುಗೆಯ ಕೊಂಡಿಯಾಗಿದೆ. ಇದಕ್ಕೆ ಉತ್ತಮ ನಿದರ್ಶನ ಮಹಾರಾಜ ಪ್ರತಾಪಸಿಂಹರು.

ಬ್ರಾಹ್ಮಣರ ಮತ್ತು ಬ್ರಾಹ್ಮಣೇತರರ ನಡುವೆಯಿರುವ ಒಡಕು ಸರಿಹೋಗಬಹುದೆಂದು ಮತ್ತು ಎಲ್ಲರೂ ಒಟ್ಟುಗೂಡಬಹುದೆಂದು ನನ್ನ ನಂಬಿಕೆ. ಆದರೆ ಎಲ್ಲಿಯವರೆಗೆ ಅಂಥ ಪ್ರತ್ಯೇಕ ಸಂಘಟನೆಗಳು ಇತರರನ್ನು ಪ್ರತ್ಯೇಕವಾಗಿಡಲು ನಡೆಸಲಾಗುವುದೊ ಅಲ್ಲಿಯವರೆಗೆ ನಮ್ಮ ಪ್ರತ್ಯೇಕ ಸಂಸ್ಥೆಗಳನ್ನು ನಡೆಸಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಬ್ರಾಹ್ಮಣೇತರರು ಮಾತ್ರ ಸೇರಿಸಿಕೊಳ್ಳಬೇಕೆಂಬ ನಿಯಮವನ್ನು ಆಕ್ಷೇಪಾರ್ಹವೆಂದು ಭಾವಿಸುವಂತಿಲ್ಲ. ನಾವು ಕಾಣುವ ಜಾತಿವಿಭಜನೆ ವಿಶ್ವದ ಮತ್ತೆಲ್ಲಿಯೂ ಕಾಣುವುದಿಲ್ಲ. ಯಾವ ದೇಶವೂ ಸ್ವತಂತ್ರ ಪೂಜಾರಿ ಜಾತಿಯನ್ನು ಹೊಂದಿಲ್ಲ. ವೇದಗಳ ಕಾಲದಲ್ಲಿ ನಾವು ಸಹ ಪೂಜಾರಿ ಜಾತಿಯನ್ನು ಹೊಂದಿರಲಿಲ್ಲ. ಅದನ್ನು ಇತ್ತೀಚಿನ ಕಾಲದಲ್ಲಿ ನಿರ್ಮಿಸಲಾಗಿದೆ. ಇದು ಎಲ್ಲಾ ಅಧಿಕಾರವನ್ನು ತನ್ನ ಕೈಗಳಲ್ಲಿ ಕೇಂದ್ರೀಕರಿಸಿಕೊಂಡಿದೆ ಮತ್ತು ಸ್ವಲ್ಪ ಜನಾಧಿಪತ್ಯವನ್ನು ನಡೆಸುತ್ತಿದೆ. ಇದು ಬಹುಜನ ಸಮುದಾಯಕ್ಕೆ ಸಹಾಯಕವಾಗಿಲ್ಲ. ಬಹುಜನ ಸಮುದಾಯದ ಆಸಕ್ತಿಗಳನ್ನು ಮತ್ತು ಅಭಿವೃದ್ಧಿಯನ್ನು ಕಡೆಗಣಿಸಿದೆ. ಇದಕ್ಕೆ ಪರಿಹಾರ ಸ್ವ-ಅವಲಂಬನೆ. ನೀವು ರಚಿಸಿರುವ ಸಂಘಟನೆಗೆ ಅಧ್ಯಕ್ಷ ಪದವಿಯನ್ನು ಒಪ್ಪಿಕೊಳ್ಳಲು ನನಗೆ ಸಂತೋಷವಾಗುತ್ತದೆ.

ವಿಶ್ವಯುದ್ಧ ಕೊನೆಗೊಂಡಿದೆ. ಮಿತ್ರಕೂಟ ಗೆದ್ದಿದೆ. ನಾವು ಇಲ್ಲಿ ಜಯವನ್ನು ಆಚರಿಸಲು ಇಲ್ಲಿದ್ದೇವೆ. ನಾನು ಈ ಬಗ್ಗೆ ಕೆಲವು ಮಾತುಗಳನ್ನು ಹೇಳುವೆನು.

ಯುದ್ಧದಲ್ಲಿ ಭಾರತವು ಮಹತ್ತರವಾದ ಪಾತ್ರವನ್ನು ನಿರ್ವಹಿಸಿದೆ. ಅದು ಸಾಮ್ರಾಜ್ಯಶಾಹಿ ಸರಕಾರಕ್ಕೆ ಎಲ್ಲ ವಿಧಗಳಲ್ಲಿ ಸಹಾಯಮಾಡಿದೆ. ಸೈನಿಕರು ಯುದ್ಧಭೂಮಿಯಲ್ಲಿ ಹೋರಾಡಿದ್ದಾರೆ. ಮತ್ತು ತಮ್ಮ ಪರಾಕ್ರಮವನ್ನು ತೋರಿಸಿದ್ದಾರೆ. ನಮ್ಮ ಮರಾಠವೀರರು ಅದ್ಭುತವಾಗಿ ಹೋರಾಡಿದ್ದಾರೆ. ಯುದ್ಧವು ಕ್ಷತ್ರಿಯರ ಧರ್ಮ... ವೀರರು ನಿಜವಾದ ಧರ್ಮದಿಂದ ಬದುಕುವವರು. ಧರ್ಮವನ್ನು ಸರಿಯಾಗಿ ಅನುಸರಿಸುತ್ತಾರೆ. ಅವರು ಪರಿಶುದ್ಧರೆಂಬುದನ್ನು ನೆನಪಿಡಿ. ಈ ಸಹೋದರರು (ಸೈನಿಕರು) ವಾಪಸ್ಸು ಬಂದಾಗ ಅವರನ್ನು ಸನ್ಮಾನಿಸುವ ಮೂಲಕ ನಾವು ಪರಿಶುದ್ಧರಾಗೋಣ. ಧರ್ಮ ಸಂರಕ್ಷಣೆಯ ನೆಪದಲ್ಲಿ ಅವರನ್ನು ಪಶ್ಚಾತ್ತಾಪಕ್ಕೆ ಗುರಿಪಡಿಸುವುದು ಬೇಡ. ಬ್ರಾಹ್ಮಣರು ನೀಡುವ ಪರಿಶುದ್ಧವಲ್ಲದ ತೀರ್ಥವನ್ನು ಕುಡಿಯಬೇಕೆಂದು ಹೇಳುವ ವಿಚಾರವೇ ನಮ್ಮ ಮನಸ್ಸಿಗೆ ಹಿಡಿಸುವುದಿಲ್ಲ. ಬ್ರಾಹ್ಮಣರು ಮತ್ತು ವೈಶ್ಯರು ಜಾತಿವ್ಯವಸ್ಥೆಯಲ್ಲಿ ಮುಂದುವರಿದವರು. ಆದರೆ ಯುದ್ಧಗಳಲ್ಲಿ ಹೋರಾಡುವುದಕ್ಕೆ ಹಿಂಜರಿಯುತ್ತಾರೆ. ಶೂದ್ರರೆಂದು ಪರಿಗಣಿತರಾಗಿರುವ ಲಕ್ಷಾಂತರ ಕ್ಷತ್ರಿಯರು ಮೆಸಪಟೋಮಿಯ ಯುದ್ಧರಂಗಗಳಲ್ಲಿ ಹೋರಾಡಿದ ಪರಾಕ್ರಮದ ಗಾಥೆಯನ್ನು ಓದಿದ ಮೇಲೆ ಬ್ರಾಹ್ಮಣ ಮತ್ತು ವೈಶ್ಯಗು ನಾಚಿಕೆಪಡಬೇಕು.

ಬ್ರಾಹ್ಮಣರು ಯುದ್ಧಗಳನ್ನು ಮಾಡಲು ನಿರಾಕರಿಸುತ್ತಾರೆ. ಜನರನ್ನು ದಾರಿ ತಪ್ಪಿಸುವುದರಲ್ಲಿಯೇ ನಿರತರಾಗಿರುತ್ತಾರೆ. ಮತ್ತು ಸರಕಾರಕ್ಕೆ ಅಡ್ಡಿಆತಂಕಗಳನ್ನು ಒಡ್ಡುತ್ತಿರುತ್ತಾರೆ. ಇಂಥ ಬ್ರಾಹ್ಮಣರನ್ನು ಅನುಕರಿಸುವ ಜನರಿಗೆ ಹೇಗೆ ವಿವರಿಸಿ ಹೇಳುವುದು ನಮಗೆ ಗೊತ್ತಿಲ್ಲ. ನಮ್ಮ ಕ್ಷತ್ರಿಯರು ಅವರನ್ನು ಈಗ ಶೂದ್ರರೆಂದು

ಭಾವಿಸುವರು. ಅವರು ಯುದ್ಧಭೂಮಿಯಲ್ಲಿ ತಮ್ಮ ಪರಾಕ್ರಮವನ್ನು ಮೆರೆದಿದ್ದಾರೆ. ನಾವು ಅವರಿಗೆ ಅಭಿನಂದನೆಗಳನ್ನು ಸಲ್ಲಿಸಬೇಕು. ಕೇವಲ ಹುಟ್ಟಿನಿಂದ ಕ್ಷತ್ರಿಯರಾಗಿರುವವರ ಮಟ್ಟಕ್ಕಿಂತ ಈ ಪರಾಕ್ರಮಿ ಕ್ಷತ್ರಿಯರ ಮಟ್ಟವು ಉತ್ತಮವಾಗಿದೆ. ನಾನು ನಮ್ಮ ಪರವಾಗಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಈ ಜನರನ್ನು ಮತ್ತು ಪರಿಷತ್ತಿಗೆ ತಮ್ಮ ಸಮುದಾಯದ ಪ್ರತಿನಿಧಿಗಳನ್ನು ಆಯ್ಕೆಮಾಡುವ ತಮ್ಮ ಸಮುದಾಯದ ಹಕ್ಕನ್ನು ನಿರಾಕರಿಸುವ ಸ್ವಾರ್ಥಪರ ಜನರ ಬಗ್ಗೆ ನಾನು ಕರುಣೆ ತೋರಿಸುತ್ತೇನೆ. ಸ್ವಾರ್ಥ ಜನರು ಇತರರ ನ್ಯಾಯಬದ್ಧ ಹಕ್ಕುಗಳನ್ನು ಒಪ್ಪಿಕೊಳ್ಳದಿದ್ದರೂ ದೇವರ ಮತ್ತು ದೇವರಂತಹ ಕಿಂಗ್ ಜಾರ್ಜರ ಕೋರ್ಟಿನಲ್ಲಿ ಇದನ್ನು ಒಪ್ಪಿಕೊಳ್ಳಲಾಗುವುದೆಂದು ನಾನು ಖಂಡಿತವಾಗಿ ಭಾವಿಸುತ್ತೇನೆ. ಮೇಲುಜಾತಿಗಳ ಸ್ವಲ್ಪ ಜನಾಧಿಪತ್ಯದ ದಬ್ಬಾಳಿಕೆಯಿಂದ ಅವರು ಬಹುಸಂಖ್ಯಾತರಾದ ಕ್ಷತ್ರಿಯರು ಮತ್ತು ಶೂದ್ರರನ್ನು ಕಾಪಾಡುವವರು ಮತ್ತು ಅವರ ಕಾನೂನುಬದ್ಧ ಹಕ್ಕುಗಳನ್ನು ನೀಡುವರೆಂದು ನಾನು ಭಾವಿಸುತ್ತೇನೆ. ದೇಶಕ್ಕಾಗಿ ತಮ್ಮ ಪ್ರಾಣಗಳನ್ನೇ ಪಣಕ್ಕೊಡ್ಡಿ ಸಿದ್ಧರಾಗಿರುವ ನಿಮಗೆ ಮಹಾರಾಜರು (ಕಿಂಗ್) ರಾಜಕೀಯ ಹಕ್ಕುಗಳನ್ನು ನೀಡಲು ಅರ್ಹರಾಗಿದ್ದಾರೆ.

ಎಲ್ಲೆಲ್ಲೂ ಜನತಂತ್ರದ ಗಾಳಿ ಬೀಸುತ್ತಿರುವಾಗ ಕ್ಷತ್ರಿಯರು ಮತ್ತು ಶೂದ್ರರು ಧಾರ್ಮಿಕ ನಿರಂಕುಶತ್ವದ ಮುಂದೆ ತಲೆಬಾಗುವುದನ್ನು ನಿರೀಕ್ಷಿಸುವುದಕ್ಕೆ ಸಾಧ್ಯವಿಲ್ಲ. ನನ್ನ ಸ್ನೇಹಿತರಾದ ವ್ಹೋರಾ ಮತ್ತು ಕೊಠಾರಿ ಹಾಗೂ ನಮ್ಮ ನಾಯಕರ ಮಾತನ್ನು ಕೇಳಿದರೆ ನಿಮಗೆ ಬಹಳ ಪ್ರಯೋಜನವಾಗುತ್ತದೆ. ವ್ಹೋರಾ ಮತ್ತು ಕೊಠಾರಿ ಅವರು ತಮಗೆ ನಷ್ಟವಾಗುತ್ತಿದ್ದರೂ ನಿಮ್ಮ ಕಲ್ಯಾಣಕ್ಕಾಗಿ ಪತ್ರಿಕೆಯನ್ನು ನಡೆಸುತ್ತಿದ್ದಾರೆ. ನಾವು ಅವರಿಂದ ಕಲಿಯಬೇಕು ಮತ್ತು ನಾವು ಅವರಿಗೆ ಬೆಂಬಲ ನೀಡಬೇಕು. ನನ್ನ ಪ್ರೀತಿಯ ಅಧ್ಯಾಪಕರಾದ ಲಾರ್ಡ್ ಸಿಡ್ನೆಹಾಮ್ ಮತ್ತು ಅವರ ಶಿಷ್ಯರು ನಾವು ಪ್ರಾಚೀನ ಕಾಲದಿಂದಲೂ ಹೊರುತ್ತಿರುವ ಸ್ವಲ್ಪ ಜನಾಧಿಪತ್ಯದ ಹೊರೆಯನ್ನು ಇಳಿಸಲು ಸಹಾಯ ಮಾಡುತ್ತಿದ್ದಾರೆ. ಅವರು ಸಫಲರಾಗದಿದ್ದರೆ, ಯುದ್ಧದಲ್ಲಿ ತೋರಿಸಿರುವ ನಿಮ್ಮ ಪರಾಕ್ರಮ ನಮಗೆ ಪ್ರಯೋಜನವಾಗಲಾರದು. ನಾವು ಸ್ವಲ್ಪ ಜನಾಧಿಪತ್ಯದ ದಬ್ಬಾಳಿಕೆಯಲ್ಲಿ ನುಚ್ಚುನೂರಾಗುವೆವು. ನಾವು ಈ ದಬ್ಬಾಳಿಕೆಯ ನೊಗವನ್ನು ಕಿತ್ತೆಸೆಯದಿದ್ದರೆ ನಮ್ಮನ್ನು ನಾವು ಸುಧಾರಿಸಿಕೊಳ್ಳಲಾರೆವು.

ಜರ್ಮನಿಯು ತನ್ನ ರಾಜಕೀಯ ಅಧಿಕಾರವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಈ ಪ್ರಸ್ತುತ ಯುದ್ಧವನ್ನು ಪ್ರಾರಂಭಿಸಿತ್ತು. ಅದು ಜರ್ಮನ್ ರಾಜಪ್ರಭುತ್ವದ ವಿನಾಶದೊಂದಿಗೆ ಪತನಗೊಂಡಿತು. ಮತ್ತು ಜನರ ಅಧಿಕಾರ ಸ್ಥಾಪನೆಗೊಂಡಿತು. ಅಂಥದ್ದೇ ಯುದ್ಧವನ್ನು ನಮ್ಮ ಸಮಾಜದಲ್ಲಿ ನಡೆಯುತ್ತಿದೆ. ಇದು ರಕ್ತರಹಿತ ಯುದ್ಧವಾಗಿರುವುದೇ ವ್ಯತ್ಯಾಸ. ಇಲ್ಲಿ ಒಂದು ರೀತಿಯ ಆಡಳಿತಶಾಹಿಯಿದೆ. ಅದು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತನ್ನ ಪ್ರಾಬಲ್ಯವನ್ನು ಮುಂದುವರಿಸುವ ಸಲುವಾಗಿ ಎಲ್ಲಾ ರಾಜಕೀಯ ಹಕ್ಕುಗಳನ್ನು ಪಡೆಯುವ ಇಚ್ಛೆಯಿಂದ ಪ್ರಚೋದನೆಗೊಂಡಿದೆ. ಬಹುಸಂಖ್ಯಾತ ಸಮುದಾಯವು ಅದರಿಂದ ಮುಕ್ತಿಯನ್ನು ಬಯಸುತ್ತಿದೆ ಮತ್ತು ಎಲ್ಲಾ ಮಾನವಹಕ್ಕುಗಳನ್ನು ಅಪೇಕ್ಷಿಸುತ್ತಿದೆ. ಅದು ಅನಕ್ಷರಸ್ಥ ಮತ್ತು ಮೌಢ್ಯದಿಂದ ಕೂಡಿದ ಸಮುದಾಯವಾಗಿದೆ. ಹಲವು ಮಹಾನುಭಾವರು ಬಹುಸಂಖ್ಯಾತರ ವಿಮೋಚನೆಗಾಗಿ ಕೆಲಸಮಾಡುತ್ತಿದ್ದಾರೆ. ಆರ್ಯಸಮಾಜ, ಬ್ರಹ್ಮೋಸಮಾಜ, ಸತ್ಯಶೋಧಕ ಸಮಾಜ ಮತ್ತು ಇತರೆ ಸಂಸ್ಥೆಗಳು ಸಮಾನತೆಯ ತತ್ವವನ್ನು ಪ್ರಚಾರಮಾಡುತ್ತಿವೆ. ಅವರೆಲ್ಲರೂ ಎಲ್ಲಾ ಜೀವಿಗಳು ಒಬ್ಬ ದೇವರ ಮಕ್ಕಳು, ಹುಟ್ಟಿನ ಆಧಾರದ ಮೇಲೆ ಮನುಷ್ಯ–ಮನುಷ್ಯರ ನಡುವೆ ತಾರತಮ್ಯವೆಸಗುವುದು ಪಾಪ ಎಂದು ಜನರಿಗೆ

ಹೇಳುತ್ತಿದ್ದಾರೆ. ಅವರು ಬಹುಸಂಖ್ಯಾತರು ತಮ್ಮ ಹಕ್ಕುಗಳ ಬಗ್ಗೆ ಅರಿವು ಮೂಡಿಸುತ್ತಿದ್ದಾರೆ. ಅಂತಹ ಸಂಘರ್ಷಗಳು ಪ್ರತಿಯೊಂದು ಸಮಾಜದಲ್ಲಿ ಸರ್ವೇಸಾಮಾನ್ಯ. ಅವು ಹಲವು ದೇಶಗಳಲ್ಲಿ ಮುಂದುವರಿಯುತ್ತವೆ. ಇಲ್ಲಿ ಕೂಡ, ಇದು ಹೊಸದೇನು ಅಲ್ಲ. ಈ ಸ್ವಭಾವದ ಸಂಘರ್ಷ ಒಂದು ಜೀವಂತ ದೇಶದ ಲಕ್ಷಣದ ಸೂಚನೆಯಾಗಿದೆ. ಈ ಯುದ್ಧದಲ್ಲಿ ಯಾವ ಆಯುಧಗಳನ್ನು ಬಳಸಬೇಕೆಂದು ನಾನು ಈಗಾಗಲೆ ಹೇಳಿದ್ದೇನೆ.

ಐಕ್ಯತೆ, ಪರಸ್ಪರ ಪ್ರೀತಿ, ಪರಸ್ಪರ ವಿಶ್ವಾಸ ಮತ್ತು ಸತತಶ್ರಮ ನಮ್ಮ ಸಾಧನಗಳಾಗಬೇಕು. ಬಂಡವಾಳಶಾಹಿಗಳ ಮತ್ತು ಕಾರ್ಮಿಕರ ಪರದ ಪಕ್ಷಗಳ ನಡುವೆ ನಡೆಯುತ್ತಿರುವ ಸಂಘರ್ಷವೆಂದು ನಾನು ಈಗಾಗಲೇ ಹೇಳಿದ್ದೇನೆ. ಯುದ್ಧದ ಪರಿಣಾಮದಿಂದ ಅಧಿಕಾರವು ಕಾರ್ಮಿಕಪರ ಪಕ್ಷಕ್ಕೆ ಹಸ್ತಾಂತರವಾಗುವುದು. ರಷಿಯ ಮತ್ತು ಜರ್ಮನಿಗಳು ಸರ್ವಾಧಿಕಾರಿ ರಾಜಪ್ರಭುತ್ವಗಳು ಎರಡು ಅತಿದೊಡ್ಡ ಕೇಂದ್ರಗಳು. ಈಗ ಅವು ಕಾರ್ಮಿಕ ಪಕ್ಷಗಳ ಜನತಾಂತ್ರಿಕ ಸರಕಾರಗಳನ್ನು ರಚಿಸಲಿವೆ. ಇಂಗ್ಲೆಂಡಿನಲ್ಲಿ ಕೂಡ ನಿಧಾನವಾಗಿ ಕಾರ್ಮಿಕ ಪಕ್ಷಬಲವನ್ನು ಪಡೆಯುತ್ತಿದೆ. ತಟಸ್ಥ ದೇಶಗಳಾದ ಹಾಲೆಂಡು ಸಹ ಈ ಅಲ್ಲೋಲಕಲ್ಲೋಲದಲ್ಲಿ ಪರಿಣಾಮವಿಲ್ಲದೆ ಸುಮ್ಮನೆ ಉಳಿಯಲಾರದು. ಪ್ರತಿಯೊಬ್ಬ ವಯಸ್ಕನು ಮತದಾನದ ಹಕ್ಕನ್ನು ಪಡೆದಾಗ ಬಹುಸಂಖ್ಯಾತ ಸಮುದಾಯದ ಅಭಿಲಾಷೆಯ ಪ್ರಕಾರ ಆಡಳಿತ ನಡೆಯುವುದೆಂದು ಅರ್ಥ. ಅಲ್ಪಸಂಖ್ಯಾತರು ಅನುಭವಿಸಿದ ಅಧಿಕಾರ ಕಡಿಮೆಯಾಗುವುದು. ಇದು ಅನಿವಾರ್ಯ. ನಾವು ಸಹ ಅಂತಹ ಹಕ್ಕುಗಳನ್ನು ಪಡೆಯುವೆವು. ಅವುಗಳನ್ನು ಪಡೆಯಲು ನಾವು ನಿಸ್ವಾರ್ಥವಾಗಿ ಹೋರಾಡಬೇಕಾಗಿದೆ.

ನಾವು ಅನಕ್ಷರಸ್ಥರು ಮತ್ತು ಅಜ್ಞಾನಿಗಳು. ನಾವು ಆ ವಿಧಾನಕ್ಕೆ ಹೊಂದಿಕೊಂಡು ಕೆಲಸ ಮಾಡುತ್ತಿದ್ದೇವೆ. ಏಕೆಂದರೆ ನಾವು ನಮ್ಮ ಸಹಕಾರಿ ಪತ್ತಿನ ಸಂಘಗಳನ್ನು ಶಾಲೆಗಳೆಂದು ಪರಿಗಣಿಸಬೇಕು ಮತ್ತು ಕಲಿಯುವುದಕ್ಕೆ ಪ್ರಾರಂಭಿಸಬೇಕು. . .. ನಾವು ಅಂತಹ ಉಪಯೋಗಕಾರಿ ತತ್ವಗಳನ್ನು ಅಂಗೀಕರಿಸಬೇಕು ಮತ್ತು ಅವುಗಳನ್ನು ಪೋಷಿಸಿ ಬೆಳೆಸಬೇಕು, ನಮ್ಮ ಹಕ್ಕುಗಳನ್ನು ಕಲಿಯಲು ನಾವು ಸಾಕಷ್ಟು ಪ್ರಬಲರಾಗುವೆವು.

ಇಂಗ್ಲೆಂಡಿನಲ್ಲಿರುವಂತೆಯೇ ನಾವು ಕಾರ್ಮಿಕ ಸಂಘಗಳನ್ನು ಹೊಂದಬೇಕು. ಪ್ರತಿಯೊಬ್ಬನೂ ತನ್ನ ಹಕ್ಕುಗಳ ಬಗ್ಗೆ ಜಾಗೃತನಾಗಿರಬೇಕು. ಬ್ರಾಹ್ಮಣ ಮತ್ತು ವೈಶ್ಯರ ಪ್ರವೃತ್ತಿಗಳನ್ನು ಹೊಂದಿರುವ ಜನರು ಬಂಡವಾಳಶಾಹಿಗಳನ್ನು ಮೀರಿಸುತ್ತಾರೆ. ಆದ್ದರಿಂದ ಜನರು ಬಂಡವಾಳವಾದಿಗಳ ಮೇಲೆ ಪ್ರಾಬಲ್ಯ ಸಾಧಿಸದ ಹೊರತು ಬೆಳೆಯುವುದಿಲ್ಲ. ಕಾರ್ಮಿಕ ಎಂಬ ಪದದ ಬಗ್ಗೆ ನಾಚಿಕೆಪಡುವಂಥದ್ದು ಏನೂ ಇಲ್ಲ. ನಾನು ಕೊಲ್ಹಾಪುರದ ರಾಜಸಿಂಹಾಸನವನ್ನು ಏರಿದ್ದರೂ ನಾನು ಒಬ್ಬ ಸೈನಿಕ ಮತ್ತು ನನ್ನ ತಾಯಿ ಘೋರ್ಪಡೆ ಕುಟುಂಬದವರು ಮತ್ತು ನನ್ನ ಸಾಕು(ದತ್ತು)ತಾಯಿ ಶಿರ್ಕೆ ಕುಟುಂಬದವರು. ಅವರೆಲ್ಲರೂ ರೈತರು. ಕೀಳು ಅನಕ್ಷರಸ್ಥ ಜನರ ಸಹವಾಸವಿಟ್ಟುಕೊಳ್ಳುವುದು ಒಳ್ಳೆಯದಲ್ಲ ಎಂಬ ಭಾವನೆಯಲ್ಲಿ ಹಲವರಿದ್ದಾರೆ. ನನಗೆ ಆ ರೀತಿ ಸಲಹೆ ನೀಡಿದ್ದರು. ನನ್ನ ಕುಟುಂಬಗಳು ಅಂತಹ ಜನರ ಪ್ರೀತಿಮಮತೆಗಳ ನಡುವೆ ಬೆಳೆದದ್ದರಿಂದ ಆ ಗುಣಗಳು ನನಗೆ ಹುಟ್ಟಿನಿಂದಲೇ ಬಂದಿರುವುದರಿಂದ ಅಂಥ ಬೋಧನೆಗಳು ನನ್ನ ಮೇಲೆ ಪ್ರಭಾವ ಬೀರಲಿಲ್ಲ. ನನ್ನ ನರನಾಡಿಗಳಲ್ಲಿ ಸೈನಿಕರ ಮತ್ತು ರೈತರ ರಕ್ತ ಹರಿಯುತ್ತಿದೆ. ಅವರು ಜೊತೆಯಲ್ಲಿರುವುದು ನನಗೆ ಪರಮಾನಂದ.

ಒಬ್ಬ ಇಂಗ್ಲಿಷ್ ಮಹಾನುಭಾವನು ಹೇಳಿದ್ದಾನೆ: "ಸದ್ಗುಣಗಳು ಅರಮನೆಗಳಿಗಿಂತ ಹೆಚ್ಚು ಗುಡಿಸಲುಗಳಲ್ಲಿರುತ್ತವೆ, ನನ್ನ ಅನುಭವ ತದ್ರೂಪವಾಗಿದೆ. ನಾನು ರಾಜನ ಬಗೆಗಿನ ಸಮಗ್ರತೆ, ಸಹೋದರಭಾವ, ರಾಷ್ಟ್ರೀಯತೆ, ನಿಷ್ಠೆ ಮತ್ತು ಅಸೂಯೆ ಇಲ್ಲದಿರುವಿಕೆ ಮತ್ತು ಮೊದಲಾದ ಅನೇಕ ಗುಣಗಳನ್ನು ನಿಮ್ಮಲ್ಲಿ ನೋಡುತ್ತೇನೆ. ಆದ್ದರಿಂದಲೇ ನಾನು ನಿಮ್ಮ ಬಗ್ಗೆ ಹೆಚ್ಚು ಗೌರವವಿಟ್ಟುಕೊಂಡಿದ್ದೇನೆ. ನಾನು ನಿಮ್ಮಲ್ಲಿ ಒಬ್ಬನೆಂದು ಪರಿಗಣಿಸಬೇಕೆಂದು ನಾನು ಬಯಸುತ್ತೇನೆ.

ನಾವು ಮತ್ತು ನಮ್ಮ ಹಕ್ಕುಗಳನ್ನು ಬಳಸುತ್ತಿರುವವರು ಈರ್ವರೂ ಯುದ್ಧದಿಂದ ನಮ್ಮನಮ್ಮ ಪಾಠಗಳನ್ನು ಕಲಿಯಬೇಕು. ಯುದ್ಧದಲ್ಲಿ ಮಿತ್ರಪಕ್ಷಗಳ ಸಂಪೂರ್ಣ ಜಯಕ್ಕೆ ದೇವರಿಗೆ ಧನ್ಯವಾದಗಳನ್ನು ಹೇಳೋಣ ಮತ್ತು ಸಾರ್ವಭೌಮ ಸರಕಾರಕ್ಕೆ ಅಭಿನಂದನೆಗಳನ್ನು ಸಲ್ಲಿಸೋಣ.

---

೨೫

# ಆರ್ಯಧರ್ಮ ಸಮಾನತೆ ಮತ್ತು ರಾಷ್ಟ್ರೀಯ ಸಮಗ್ರತೆಯನ್ನು ಬೆಳಸುತ್ತದೆ

ಗುಜರಾತಿನ ನವಸಾರಿಯಲ್ಲಿ ಡಿಸೆಂಬರ್ ೧೪, ೧೯೧೮ರಲ್ಲಿ ಆರ್ಯಸಮಾಜದ ಹನ್ನೊಂದನೇ ಸಮ್ಮೇಳನ ನಡೆಯಿತು. ಶಾಹುರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಬ್ರಾಹ್ಮಣ ಸಮುದಾಯದ ಅವನತಿ ಮತ್ತು ಸ್ವಾಮಿ ದಯಾನಂದ ಸರಸ್ವತಿ, ಬಾಬು ಕೇಶವ ಚಂದ್ರಸೇನ್ ಮತ್ತು ಮಹಾತ್ಮ ಜೋತಿರಾವ್ ಫುಲೆ ಅವರು ಕೆಸರಿನಲ್ಲಿ ಸಿಕ್ಕಿ ಒದ್ದಾಡುತ್ತಿರುವ ಬಹುಸಂಖ್ಯಾತ ಸಮುದಾಯವನ್ನು ಹೊರತರಲು ಮಾಡಿದ ಪ್ರಯತ್ನಗಳನ್ನು ವಿಶ್ಲೇಷಿಸಿದರು. ಬ್ರಾಹ್ಮಣೇತರರಿಗೆ ವೇದಗಳ ಹಕ್ಕನ್ನು ನೀಡುವ ಮೂಲಕ ಸಮಾನತೆಯ ಸಮಾಜವನ್ನು ಸ್ಥಾಪಿಸಲು ಪ್ರಯತ್ನ ಮಾಡುತ್ತಿದ್ದ ಆರ್ಯಧರ್ಮವನ್ನು ಅವರು ಕೊಂಡಾಡುತ್ತಾರೆ. ಅವರು ವಿಶ್ವಯುದ್ಧದ ನಂತರ ಒಂದು ಸಂಯುಕ್ತ (ಸಮಗ್ರ) ವಿಶ್ವದ ಹಿನ್ನೆಲೆಯಲ್ಲಿ ಒಂದು–ವಿಶ್ವ, ಒಂದು–ಕುಟುಂಬ ಎಂಬ ಪರಿಕಲ್ಪನೆಗೆ ಬೆಂಬಲ ನೀಡಲು ಕರೆ ನೀಡುತ್ತಾರೆ.

---

ನನ್ನ ಪ್ರೀತಿಯ ಆರ್ಯ ಸಹೋದರರೇ,

ಆರ್ಯಧರ್ಮದ ಹನ್ನೊಂದನೆಯ ಸಮ್ಮೇಳನಕ್ಕೆ ಅಧ್ಯಕ್ಷತೆ ವಹಿಸಲು, ಪ್ರಾಸ್ತಾವಿಕ ಭಾಷಣ ಮಾಡಲು ಆಹ್ವಾನಿಸಿ ಗೌರವ ನೀಡಿದ್ದಕ್ಕೆ ನಾನು ತಮಗೆ ತುಂಬಾ ಧನ್ಯವಾದಗಳನ್ನು ಹೇಳುತ್ತೇನೆ. ನಾನು ಹೆಚ್ಚು ಕೆಲಸವನ್ನು ಆರ್ಯ ಸಮಾಜಕ್ಕೆ ಮಾಡಿಲ್ಲ. ನಾನು ಮಾಡಿದ ಸಣ್ಣಪುಟ್ಟ ಕೆಲಸಗಳಿಗೆ ನೀವು ಸೂಚಿಸಿದ ಮೆಚ್ಚುಗೆ ನನ್ನ ಉತ್ಸಾಹವನ್ನು ಇಮ್ಮಡಿಗೊಳಿಸಿದೆ. ಇನ್ನು ಮುಂದೆ ನಾನು ದೊಡ್ಡ ಪ್ರಮಾಣದಲ್ಲಿ ಕೆಲಸ ಮಾಡುವೆನೆಂಬ ಭರವಸೆಯಿದೆ. ಈ ಸಮ್ಮೇಳನದ ಅಧ್ಯಕ್ಷನಾಗಿ ಆರ್ಯ ಸಮಾಜಕ್ಕೆ ಸೇವೆಮಾಡಲು ಅವಕಾಶ ಕಲ್ಪಿಸಿದ್ದಕ್ಕೆ ಧನ್ಯವಾದಗಳು. ಈ ಸದುದ್ದೇಶಕ್ಕೆ ನನ್ನ ಸೇವೆಯನ್ನು ತಾವು ಸ್ವೀಕರಿಸಬೇಕೆಂದು ನಾನು ಕೋರುತ್ತೇನೆ. ವಿಶ್ವದ ಯುದ್ಧದಲ್ಲಿ ಸಾಮ್ರಾಜ್ಯದ ಸರಕಾರದ ಸಂಪೂರ್ಣ ಸಫಲತೆಗಾಗಿ, ನ್ಯಾಯದ ಜಯಕ್ಕಾಗಿ ಮತ್ತು ಆರ್ಯರ ಪ್ರದೇಶಕ್ಕೆ ಮುಂಬರುವ ಅಪಾಯವನ್ನು ತಪ್ಪಿಸಿದ್ದಕ್ಕಾಗಿ ಸರ್ವಶಕ್ತನಾದ ಆ ದೇವರಿಗೆ ನಾವೆಲ್ಲಾ ಕೃತಜ್ಞತೆಗಳನ್ನು ಸಲ್ಲಿಸೋಣ.

ಯುದ್ಧದಿಂದಾಗಿ ಸಮಾನತೆಯ ತತ್ವದ ಮೇಲೆ ಸ್ಥಾಪನೆಗೊಂಡ ನಮ್ಮ ಆರ್ಯಧರ್ಮ ಸಾರ್ವತ್ರಿಕವಾಗಿ ಒಪ್ಪಿತವಾಗಿದೆ. ಈ ಬಗ್ಗೆ ನಂತರ ನಾನು ಹೆಚ್ಚು ಮಾತನಾಡುವೆನು. ಮಹರ್ಷಿ ದಯಾನಂದ ಮತ್ತು ನನ್ನ

ಗುರು ಸ್ವಾಮಿ ವೀರಜಾನಂದ ಅವರು ಆರ್ಯರ ನಾಡಿನಲ್ಲಿ ಜ್ಞಾನದೀವಿಗೆಯನ್ನು ಹಚ್ಚಿದ್ದಾರೆ. ಅದು ಕೆಲವು ದೈವಿಕ ಯೋಜನೆಗಳನ್ನು ಸೂಚಿಸುತ್ತದೆ. ದೇಶದಲ್ಲಿ ಧಾರ್ಮಿಕ ಪರಿಸ್ಥಿತಿಯು ಎಲ್ಲೆ ಮೀರಿ ಅಧೋಗತಿಗೆ ಇಳಿದಿದೆ. ಏಕೆಂದರೆ ವೇದಗಳು ನಿರೂಪಿಸಿದ ಅಧಿಕೃತ ಆರ್ಯಧರ್ಮದ ಅಪವ್ಯಾಖ್ಯಾನಗಳ ಅರ್ಥದ ಪದರಗಳ ಪರಿಶುದ್ಧರೂಪವನ್ನು ಗ್ರಹಿಸುವುದಕ್ಕೆ ಸಾಧ್ಯವಾಗುತ್ತಿಲ್ಲ. ಋಷಿವರ್ಯರು ಬರೆದ ಪ್ರಾಚೀನ ಗ್ರಂಥಗಳ ವ್ಯಾಖ್ಯಾನಗಳ ಬಗೆಗಿನ ಟೀಕೆ–ಟಿಪ್ಪಣಿಗಳನ್ನು ವಂಚಕ ಮತ್ತು ಅಪ್ರಾಮಾಣಿಕ ಬ್ರಾಹ್ಮಣ ಪುರೋಹಿತರು ತಪ್ಪಾಗಿ ಬಳಸಿ ಪರಿಸ್ಥಿತಿಯನ್ನು ಮತ್ತಷ್ಟು ಹಾಳುಮಾಡಿದರು. ಕೆಳದರ್ಜೆಯ ಮೂರ್ತಿಪೂಜೆಯ ಜನರ ಕೀಳುಪದ್ಧತಿಗಳನ್ನು ಪ್ರೋತ್ಸಾಹಿಸಿದವು ಮತ್ತು ಅವು ಎಲ್ಲಿಲ್ಲದ ಪ್ರಾಶಸ್ತ್ಯವನ್ನು ಗಳಿಸಿದವು. ಪೂಜಾರಿಗಳು ತಮ್ಮನ್ನು ತಾವೇ ಪರಿಶುದ್ಧರೆಂದು ಕರೆದುಕೊಳ್ಳತೊಡಗಿದರು. ಬ್ರಾಹ್ಮಣವಾದದ ಸಾರಸತ್ವವು ಗುಣ ಮತ್ತು ಸಾಧನೆಗಳ ಮೇಲೆ ಅವಲಂಬಿತವಾಗಿದೆ. ಆದರೆ ಅದು ಹುಟ್ಟಿನಿಂದ ಒಂದು ಜಾತಿಯಾಗಿಬಿಟ್ಟಿತು. ಜನರ ಮನಸ್ಸಿನ ಮೇಲೆ ತೀರ್ಥಯಾತ್ರೆಯ ಕಲ್ಪನೆಯ ಮಹತ್ವವನ್ನು ಹೇರಲಾಯಿತು. ಅದು ಬ್ರಾಹ್ಮಣರಿಗೆ ಯಥೇಚ್ಛವಾಗಿ ಆಹಾರ ಮತ್ತು ಹಣವನ್ನು ತಂದುಕೊಟ್ಟಿತು. ಅವರು ಬರುಬರುತ್ತಾ ಸೋಮಾರಿಗಳಾದರು. ಅವರು ವ್ಯಸನಗಳಿಗೆ ಬಲಿಯಾದರು. ಅವರು ಅಧ್ಯಯನ ಮತ್ತು ಜ್ಞಾನಪಿಪಾಸುಗಳಾಗಲಿಲ್ಲ. ಮುಗಿಯಲಾರದ ಆಚರಣೆಗಳನ್ನು ಮಾಡುವ ಬಗ್ಗೆ ಪ್ರಕರಣಗ್ರಂಥಗಳ ಬರೆಯಲಾಯಿತು ಮತ್ತು ಹುಟ್ಟಿನಿಂದ ಸಾಯುವವರೆಗಿನ ಅಸಂಖ್ಯಾತ ಸಂದರ್ಭಗಳಿಗೆ ಶುಲ್ಕ ಮತ್ತು ದಕ್ಷಿಣೆಗಳನ್ನು ನೀಡಬೇಕಾಗಿತ್ತು. ಸತ್ತವರ ವಾರ್ಷಿಕ ತಿಥಿಗಳ ಸಂದರ್ಭದಲ್ಲಿ ಸತ್ತವರಿಗೆ ಪಿಂಡ (ಅನ್ನ) ಮತ್ತು ವೈಭವ ಭಕ್ಷ್ಯಭೋಜ್ಯಗಳನ್ನು ಕಳುಹಿಸುವ ಹೆಸರಿನಲ್ಲಿ ಹಣ ಕೀಳಲು ಗರುಡಪುರಾಣ ಅಂತಹ ಗ್ರಂಥಗಳಿಗೆ ಪ್ರಕರಣ ಗ್ರಂಥಗಳನ್ನು ಬರೆದು ಸಿದ್ಧಗೊಳಿಸಿದರು.

ತಮ್ಮನ್ನು ಬ್ರಾಹ್ಮಣರೆಂದು ಕರೆದುಕೊಳ್ಳುವವರು ಅಜ್ಞಾನಿಗಳ ಬೆವರಿನ ಮೇಲೆ ತಮ್ಮ ಸುಖಜೀವನ ಅನುಭವಿಸಲು ತೊಡಗಿದರು. ಅವರು ಗಳಿಸಿದ ಜ್ಞಾನವು ಅವನತಿಯಲ್ಲಿದೆ.

ಬ್ರಾಹ್ಮಣರು ತಮ್ಮ ಮಕ್ಕಳು ಒಳ್ಳೆಯ ಜೀವನ ನಡೆಸಲೆಂದು ಅಬ್ರಾಹ್ಮಣರಿಗೆ ಶಿಕ್ಷಣವನ್ನು ನಿಷೇಧಿಸಿದರು. ನಂತರ ಅವರು ಜ್ಯೋತಿಷ್ಯ ಶಾಸ್ತ್ರವನ್ನು ಹರಡಿದರು ಮತ್ತು ಒಂದು ವಿಶಿಷ್ಟ ಗ್ರಹದ ದೋಷದಿಂದ ನಿಮ್ಮ ಜೀವನದಲ್ಲಿ ಅನಾಹುತವಾಗುವುದೆಂದು ದುರ್ಬಲರನ್ನು ಎದುರಿಸುತ್ತಿದ್ದರು. ಅವರು ಈ ದಿನ ಶುಭದಿನ, ಆ ದಿನ ಅಶುಭ ದಿನ, ಈ ದಿನ ಮಾತ್ರ ಪ್ರಯಾಣಿಸು, ಆ ದಿನ ಬೇಡ, ಮದುವೆ ಮತ್ತು ಜನಿವಾರಹಾಕಿಕೊಳ್ಳುವ ಸಮಾರಂಭಗಳನ್ನು ಶುಭದಿನದಂದು ಆಚರಿಸಿ ಎಂದು ಹೇಳುತ್ತಿದ್ದರು. ಇಂಥ ಎಲ್ಲಾ ಹುಚ್ಚು ವಂಚನೆಗಳಿಂದ ಸಮಾಜದ ಮೇಲೆ ಹಿಡಿತ ಸಾಧಿಸಿದ್ದರು. ಪೂಜಾರಿ ಸೂಚಿಸಿದ ದಿಕ್ಕೆ ಪೂರ್ವವೆಂದು ತಿಳಿಯುವ ಮಟ್ಟಕ್ಕೆ ಪರಿಸ್ಥಿತಿ ಬಿಗಡಾಯಿಸಿಬಿಟ್ಟಿತ್ತು. ಮತ್ತು ಪೂಜಾರಿ ಹೇಳಿದ ದಿನವೇ ಅಮಾವಾಸ್ಯವಾಗಿತ್ತು. ಪೂಜಾರಿ ನಿಷ್ಕರ್ಷಿಸಿದ ಧರ್ಮವನ್ನೇ ಬ್ರಾಹ್ಮಣೇತರರ ಪರಿಪಾಲಿಸಬೇಕೆಂದು ಮತ್ತು ಅವರು ಹೇಳಿದ ಮಾತೇ ದೇವರನ್ನು ಸಂತೃಪ್ತಗೊಳಿಸಲಾಗುವುದೆಂದು ಅವರು ನಂಬತೊಡಗಿದರು. ಜನರು ದನಗಳಿಗಿಂತ ಉತ್ತಮವಲ್ಲ ಎಂಬ ಹಂತಕ್ಕೆ ಬಂದುಬಿಟ್ಟರು. ಬಹುಸಂಖ್ಯಾತರಿಗೆ ಶಿಕ್ಷಣ ನಿರಾಕರಿಸಿದ್ದರಿಂದ ದೇಶವು ತುಂಬ ಬಾಧೆ ಪಡಬೇಕಾಯಿತು. ಜಾತಿಪದ್ಧತಿಯನ್ನು ಪ್ರತಿಭೆ ಮತ್ತು ಸಾಧನೆಯ ಆಧಾರದ ಮೇಲೆ ನಿರ್ಮಿಸಲಾಯಿತು. ಆಧಾರವು ಅದೇ ಉಳಿಯಬೇಕು. ಆದರೆ ಒಬ್ಬ ಬ್ರಾಹ್ಮಣನು ಹುಟ್ಟಿನಿಂದಲೇ ಒಬ್ಬ ಬ್ರಾಹ್ಮಣನಾಗಿರಬೇಕು ಮತ್ತು ಸಹಜವಾಗಿಯೇ ಬೇರೆಯವರೆಲ್ಲರೂ ತಮ್ಮ ಹುಟ್ಟಿನಿಂದಲೇ ಜಾತಿಗಳನ್ನು ಹೊಂದಬೇಕಾಯಿತು. ಇದು ಜಾತಿಯ ತಾರತಮ್ಯತೆಗೆ ಕಾರಣವಾಯಿತು. ಮೂಲ ನಾಲ್ಕು ಜಾತಿಗಳು ಈಗ ೪,೦೦೦ ಜಾತಿಗಳಿಗೆ

ಎಡೆಮಾಡಿಕೊಟ್ಟವು. ಇದು ಸಮಾಜದ ವಿಘಟನೆಗೆ ಎಡೆಮಾಡಿಕೊಟ್ಟಿತು. ತಾರತಮ್ಯತೆಯು ದ್ವೇಷವನ್ನು ಬೆಳೆಸಿತು ಮತ್ತು ದೇಶದ ಐಕ್ಯತೆಯು ತೊಂದರೆಗೊಳಗಾಯಿತು. ಇದರ ಪರಿಣಾಮವು ಧಾರ್ಮಿಕ ವಲಯದ ಅವನತಿಗೆ ಸೀಮಿತವಾಗಿರಲಿಲ್ಲ. ವಿದೇಶಿಯರು ಆರ್ಯಾವರ್ತದ ಮೇಲೆ ದಾಳಿಮಾಡಿದರು. ಮತ್ತು ದೇಶದೊಳಗೇ ವಿಭಜನೆಯಿದ್ದುದ್ದರಿಂದ ಶತ್ರುಗಳನ್ನು ಚೆನ್ನಾಗಿ ಬೆಳೆಸಿದರು. ಅದು ಸಂಪೂರ್ಣ ಗುಲಾಮಸ್ಥಿತಿಗೆ ತಂದೊಡ್ಡಿತು. ಕಲಿಕೆ ಮತ್ತು ಅರಿವುಗಳು ಅವನತಿಗೊಂಡವು. ಕಸಬು ಮತ್ತು ಕಲೆಗಳು ಮತ್ತು ಕೌಶಲ್ಯಗಳು ಕ್ಷೀಣಗೊಂಡವು. ದೇಶವು ಅಧ್ವಾನದಲ್ಲಿತ್ತು. ರಜಪೂತರು ವಿದೇಶಿಯರ ಆಡಳಿತದಿಂದ ನಮ್ಮನ್ನು ಮುಕ್ತಗೊಳಿಸಲು ಬಹಳ ಶ್ರಮಪಟ್ಟರು. ಸಮಾಜವು ಒಳಗೆಯೇ ನಿತ್ರಾಣಗೊಂಡಿದ್ದರಿಂದ ಅವರ ಪ್ರಯತ್ನಗಳು ವಿಫಲಗೊಂಡಿದ್ದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಮರಾಠರು ಎರಡನೆಯ ಪ್ರಮುಖ ಮತ್ತು ಸಫಲವಾದ ಪ್ರಯತ್ನ ಮಾಡಿದರು. ಒಂದು ಘಟ್ಟದಲ್ಲಿ ಇಡೀ ದೇಶವನ್ನೇ ಗೆಲ್ಲಬಹುದೆಂದು ಭಾವಿಸಿದ್ದರು. ಆದರೆ ಮರಾಠರ ಅಧಿಕಾರ ನಿಧಾನವಾಗಿ ಬ್ರಾಹ್ಮಣರ ಕೈಗೆ ಹಸ್ತಾಂತರವಾಯಿತು. ಬ್ರಾಹ್ಮಣ-ಬ್ರಾಹ್ಮಣೇತರರ ಸಂಘರ್ಷ ತೀವ್ರಗೊಂಡಿತು ಮತ್ತು ಮರಾಠರ ಅಧಿಕಾರವನ್ನು ಕಿತ್ತುಕೊಳ್ಳಲಾಯಿತು. ಬ್ರಿಟಿಷರು ಅಧಿಕಾರ ವಹಿಸಿಕೊಂಡರು, ಅವರು ಎಲ್ಲರಿಗೂ ಸಮಾನ ನ್ಯಾಯ ಒದಗಿಸಿಕೊಟ್ಟರು. ಮತ್ತು ಆಳುವವರ ಮೊದಲ ಕರ್ತವ್ಯ ಎಲ್ಲರಿಗೂ (ಪ್ರಜೆಗಳಿಗೆ) ಶಿಕ್ಷಣವನ್ನು ನೀಡುವುದು ಎಂದು ಮನವರಿಕೆ ಮಾಡಿಕೊಂಡರು.

ಬ್ರಿಟಿಷರ ಆಡಳಿತ ಸ್ಥಾಪನೆಗೊಂಡ ನಂತರ ಹಲವಾರು ಮಿಷನರಿಗಳು ಭಾರತಕ್ಕೆ ಬಂದರು. ಅವರು ಜನರಿಗೆ ಇಂಗ್ಲೀಷಿನಲ್ಲಿ ಶಿಕ್ಷಣ ನೀಡಲು ಮೊದಲು ಮಾಡಿದರು ಮತ್ತು ತಮ್ಮ ಧರ್ಮವನ್ನು ಬೋಧಿಸತೊಡಗಿದರು. ಬ್ರಿಟಿಷ್ ಸರಕಾರ ಶಿಕ್ಷಣ ಇಲಾಖೆಯನ್ನು ತೆರೆಯಿತು ಮತ್ತು ಜನರಲ್ಲಿ ಹೊಸ ವಿಚಾರಗಳನ್ನು ಬಿತ್ತತೊಡಗಿತು. ಪ್ರಸ್ತುತ ಸಮಯದಲ್ಲಿ ನಾವು ಮೂವರು ಪ್ರಮುಖ ಧಾರ್ಮಿಕ ಸುಧಾರಕರನ್ನು ಮಹರ್ಷಿ ದಯಾನಂದ, ಬಾಬು ಕೇಶವಚಂದ್ರಸೇನ್ ಮತ್ತು ಜೋತಿರಾವ್ ಫುಲೆ ನೋಡಿದ್ದೇವೆ. ಈ ಮೂವರಲ್ಲಿ ಸಾದೃಶ್ಯಗಳು ಹೆಚ್ಚಿಗಿವೆ. ಆದರೆ ಅವರು ಭಿನ್ನ-ಭಿನ್ನ ದೃಷ್ಟಿಕೋನಗಳು ಮತ್ತು ತಮ್ಮ ಅನುಚರರಿಗೆ ಭಿನ್ನ-ಭಿನ್ನ ಕಾರ್ಯಕ್ರಮಗಳನ್ನು ಹೊಂದಿದ್ದರು. ಅವರು ಬದುಕಿದ ಪರಿಸ್ಥಿತಿಗಳು, ಅವರು ಪಡೆದ ಶಿಕ್ಷಣ ಭಿನ್ನವಾಗಿದ್ದರಿಂದ ಅವರು ಭಿನ್ನಭಿನ್ನವಾಗಿದ್ದರು.

ಮಹರ್ಷಿ ದಯಾನಂದರು ನಮ್ಮ ಗುಜರಾತ್ ಪ್ರಾಂತ್ಯದವರು. ಅವರ ಬಗ್ಗೆ ಹೆಮ್ಮೆಪಡುವುದು ನಮಗೆ ಸಹಜ. ಅವರು ಉತ್ತರಭಾರತದಲ್ಲಿ ಶಿಕ್ಷಣ ಪಡೆದರು. ಸ್ವಾಮಿ ವೀರಜಾನಂದರು ಕೂಡ ಅದೇ ಪ್ರದೇಶದವರು. ಆ ಪ್ರದೇಶದಲ್ಲಿ ರೂಢಿಯಲ್ಲಿದ್ದ ಸನ್ನಿವೇಶದಿಂದ ಇಬ್ಬರು ಪ್ರಭಾವಿತರಾಗುವುದು ಸಹಜ. ಬಾಬು ಕೇಶವಚಂದ್ರಸೇನರು ಬಂಗಾಳದವರು. ಬ್ರಿಟಿಷ್ ಆಡಳಿತ ಪ್ರಾರಂಭವಾದದ್ದು ಅಲ್ಲಿಂದಲೆ, ಆದ್ದರಿಂದ ಇಂಗ್ಲೀಷಿನ ಶಿಕ್ಷಣ ಪ್ರಸಾರವಾದದ್ದು ಅತಿಹೆಚ್ಚು ಅಲ್ಲಿಯೆ. ಆದ್ದರಿಂದಲೇ ಕೇಶವಚಂದ್ರಸೇನರು ಪಶ್ಚಿಮದ ಯುನಿಟೇರಿಯನ್ ಚರ್ಚಿನ ಪ್ರಭಾವವನ್ನು ಪ್ರಕಟಪಡಿಸುತ್ತಾರೆ.

ಜೋತಿರಾವ್ ಫುಲೆ ಮಹಾರಾಷ್ಟ್ರದಲ್ಲಿ ಬೆಳದ ಸನ್ನಿವೇಶವು ಬಹಳ ಭಿನ್ನವಾಗಿದೆ. ಇವರು ಬ್ರಾಹ್ಮಣೇತರರಲ್ಲಿ ಒಬ್ಬರು. ಬ್ರಾಹ್ಮಣಿಕೆಯ ವಿಚಾರಗಳ ಪ್ರಕಾರ ಅವರು ವಿದ್ಯಾಭ್ಯಾಸ ಪಡೆಯುವ ಹಕ್ಕಿಲ್ಲ. ಅವರಿಗೆ ಧಾರ್ಮಿಕ ಜ್ಞಾನ ಬಂದಿದ್ದು ಕ್ರಿಶ್ಚಿಯನ್ ಮಿಷನರಿಗಳು ಬರೆದ ಪುಸ್ತಕಗಳಿಂದ ಮತ್ತು ಬ್ರಾಹ್ಮಣರು ಬ್ರಾಹ್ಮಣೇತರರ ಸಮುದಾಯಗಳು ಮಾಡಬಹುದಾದ ಮತ್ತು ಮಾಡಬಾರದೆಂದು ಬರೆದ ಬ್ರಾಹ್ಮಣರ ಕಾಲ್ಪನಿಕ ವಿಚಾರ ಬರವಣಿಗೆಗಳಿಂದ ಜ್ಞಾನವನ್ನು ಪಡೆದುಕೊಂಡರು. ಆದರೆ ಫುಲೆಯವರು ಚಿಂತನಪರರು

ಮತ್ತು ಕುತೂಹಲಕಾರಿಗಳಾಗಿದ್ದರು. ಫುಲೆಯವರು ಬ್ರಾಹ್ಮಣರ ಆಟವನ್ನು (ಸಂಚನ್ನು) ಕೂಡಲೆ ಕಂಡುಕೊಂಡರು. ಸ್ವಾಮಿ ದಯಾನಂದರು ಸ್ವತಂತ್ರವಾಗಿ ವೇದಗಳನ್ನು ಅಧ್ಯಯನ ಮಾಡಿದರು ಮತ್ತು ಜ್ಞಾನದ ಸಂಸ್ಕೃತದ ಖಜಾನೆಯನ್ನು ಪಡೆದರು. ಅವರು ಆರ್ಯಧರ್ಮದ ಉನ್ನತ ತತ್ವಗಳನ್ನು ಸ್ಪಷ್ಟವಾಗಿ ಗ್ರಹಿಸಿದರು. ಇತರೆ ಧರ್ಮಗಳಿಂದ ಆರ್ಯಧರ್ಮ ಶ್ರೇಷ್ಠ ಎಂಬ ಸಂಗತಿಯನ್ನು ಯಾವ ಭಾರತೀಯನು ತಿಳಿದಿರಲಿಲ್ಲ ಎಂಬುದು ಅತಿಶಯವೇನು ಅಲ್ಲ. ಈ ಮೂರು ಜನರು ಭಿನ್ನಭಿನ್ನವಾದ ಸಾಮಾಜಿಕ ಸನ್ನಿವೇಶಗಳಲ್ಲಿ ಭಿನ್ನವಾಗಿ ಶಿಕ್ಷಣಪಡೆದ ವ್ಯಕ್ತಿಗಳಾಗಿದ್ದರು.

ದಕ್ಷಿಣದಲ್ಲಿರುವಂತೆಯೇ ಉತ್ತರದಲ್ಲಿ ಬ್ರಾಹ್ಮಣರು ಹುಟ್ಟಿನ ಮೇಲೆ ಅವಲಂಬಿತರಾಗಿದ್ದರು. ಆದರೆ ಅಲ್ಲಿ ಅವರು ನಾಲ್ಕು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಅಸ್ತಿತ್ವವನ್ನು ನಂಬಿದ್ದರು. ಬ್ರಾಹ್ಮಣರನ್ನು ಬಿಟ್ಟು ಇತರ ಜನರು ವೇದಗಳು ಮತ್ತು ಇತರೆ ಕ್ಷೇತ್ರಗಳಲ್ಲಿ ಅಧ್ಯಯನ ಮಾಡುವ ಹಕ್ಕನ್ನು ಪಡೆದಿದ್ದಾರೆಂದು ಅವರು ನಂಬಿದ್ದರು. ದಕ್ಷಿಣ ಭಾರತದಲ್ಲಿ ಬ್ರಾಹ್ಮಣೇತರ ಸಮುದಾಯದವರು ಹೆಚ್ಚುಕಮ್ಮಿ ವೇದಗಳ ಜ್ಞಾನ ಪಡೆದಿರಲಿಲ್ಲ. ಜೊತೆಗೆ ಅದು ಇತರ ಜ್ಞಾನದ ಕ್ಷೇತ್ರದಲ್ಲಿ ಕೂಡ ಜ್ಞಾನವಿರಲಿಲ್ಲ. ಉತ್ತರದಲ್ಲಿ ಬ್ರಾಹ್ಮಣರು ಧರ್ಮದ ವಿಷಯಗಳಲ್ಲಿ ಪ್ರಾಬಲ್ಯ ಪಡೆದಿದ್ದರು. ಬೇರೆ ಕ್ಷೇತ್ರಗಳಲ್ಲಿ ಬ್ರಾಹ್ಮಣೇತರರು ಅವಲಂಬಿಗಳಾಗಿರಲಿಲ್ಲ. ಆದ್ದರಿಂದ ಸಾಮಾಜಿಕ ಸಮೀಕರಣ ಸಮತೋಲನವಾಗಿತ್ತು. ದಕ್ಷಿಣದಲ್ಲಿ ಬ್ರಾಹ್ಮಣೇತರರು ಏನನ್ನೂ ಕಲಿತಿರಲಿಲ್ಲ. ಆದ್ದರಿಂದ ಬ್ರಾಹ್ಮಣರು ಎಲ್ಲಾ ಕ್ಷೇತ್ರಗಳಲ್ಲಿ ಪ್ರಾಬಲ್ಯ ಪಡೆದಿದ್ದರು. ಅವರು ಧಾರ್ಮಿಕ, ರಾಜಕೀಯ, ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಪ್ರಬಲರಾಗಿದ್ದರು. ತತ್ಪರಿಣಾಮವಾಗಿ ಬ್ರಾಹ್ಮಣೇತರರ ಸಮುದಾಯದ ಸ್ಥಿತಿ ಕರುಣಾಜನಕವಾಗಿತ್ತು. ಈ 'ನೌಕರಶಾಹಿ'ಯನ್ನು ಮುರಿಯಲು ಒಮ್ಮೊಮ್ಮೆ ಪ್ರಯತ್ನ ಮಾಡಲಾಗಿತ್ತು. ಆದರೆ ಬ್ರಾಹ್ಮಣೇತರರ ಸಮುದಾಯದ ಅವಲಂಬನೆಯು ಬ್ರಾಹ್ಮಣರ ಧಾರ್ಮಿಕ ಯಜಮಾನಿಕೆಯನ್ನು ನೇರವಾಗಿ ದಾಳಿಮಾಡದ ಹೊರತು ಕೊನೆಗೊಳ್ಳುವುದಿಲ್ಲ. ಇದನ್ನು ಮನವರಿಕೆ ಮಾಡಿಕೊಂಡ ಜೋತಿರಾವ್ ಫುಲೆ ಅವರು ಬ್ರಾಹ್ಮಣರ ಅಧಿಕಾರದ ದುರ್ಬಲ ಅಂಶಗಳನ್ನು ಖಂಡಿಸಲು ಪ್ರಾರಂಭಿಸಿದರು. ಸತ್ಯಶೋಧಕ ಜೋತಿರಾವ್ ಅವರ ಮುಖ್ಯ ದೃಷ್ಟಿಕೋನವು ದೇವರು ಮತ್ತು ಮಾನವನ ನಡುವೆ ಏಜೆಂಟನ (ಮಧ್ಯಸ್ಥಗಾರ) ಅವಶ್ಯಕತೆಯಿಲ್ಲ ಎಂಬುದು. ಅವರು ಬ್ರಾಹ್ಮಣರ ಮಧ್ಯಸ್ಥಿಕೆಯ ಮನುಷ್ಯನಿಲ್ಲದೆ ಜನರೇ ಸ್ವತಃ ತಮ್ಮ ಧಾರ್ಮಿಕ ಆಚರಣೆಗಳನ್ನು ತಾವೇ ನಡೆಸಿಕೊಳ್ಳಬಹುದೆಂದು ಹೇಳತೊಡಗಿದರು. ಬಹುಸಂಖ್ಯಾತರು ಯುಗಗಳಿಂದಲೂ ಬ್ರಾಹ್ಮಣರ ಮೇಲೆ ಗುಲಾಮಿ ಅವಲಂಬನೆಯ ಮೇಲೆ ಬದುಕಿದ್ದರು. ಮತ್ತು ತತ್ಪರಿಣಾಮವಾಗಿ ಅವರು ಮೌಢ್ಯರಾಗಿಬಿಟ್ಟಿದ್ದರು. ಆದ್ದರಿಂದ ಸತ್ಯಶೋಧಕ ಸಮಾಜದ ಕೆಲಸವು ಒಮ್ಮೊಮ್ಮೆ ತೊಂದರೆಗಳನ್ನು ಎದುರಿಸಬೇಕಾಯಿತು. ಆದರೆ ಸುಧಾರಕರು ಸದಾ ಇಂಥವುಗಳನ್ನು ಎದುರಿಸಬೇಕಾಗುತ್ತದೆ ಮತ್ತು ಅಂಥ ತೊಂದರೆಗಳನ್ನು ಜಯಿಸಬೇಕಾಗುತ್ತದೆ.

ಸ್ವಾಮಿ ದಯಾನಂದಜಿ ಅವರು ಪ್ರತಿಯೊಬ್ಬ ಮನುಷ್ಯ ವೇದಗಳ ಹಕ್ಕನ್ನು ಪಡೆದಿದ್ದಾನೆಂದು ಪ್ರತಿಪಾದಿಸಿದರು. ಅವರು ಉತ್ತರಭಾರತದಲ್ಲಿ ವೇದಗಳ ಜ್ಞಾನವನ್ನು ಹರಡಿದರು. ಲಕ್ಷಾಂತರ ಜನರು ಆರ್ಯಸಮಾಜವನ್ನು ಸೇರಿದರು ಮತ್ತು ಗುರುಕುಲಗಳನ್ನು, ಶಾಲೆಗಳನ್ನು, ಕಾಲೇಜುಗಳನ್ನು ಮತ್ತು ಹುಡುಗಿಯರ ಕಾಲೇಜುಗಳನ್ನು ಸ್ಥಾಪಿಸಿದರು. ಪ್ರತಿಯೊಬ್ಬ ವ್ಯಕ್ತಿಯು ವೇದಗಳನ್ನು ಕಲಿಯುವ ಹಕ್ಕನ್ನು ಹೊಂದಿದ್ದಾನೆ ಎಂಬ ಸಂಗತಿಯು ಮಾನವ ಸಮುದಾಯದ ಜನರ ಆವಶ್ಯಕ ಸಮಾನತೆಯನ್ನು ಮನವರಿಕೆ ಮಾಡಲು ಸಹಾಯವಾಯಿತು. ಸಾಮಾನ್ಯವಾಗಿ ಜೀವನದ ಮಟ್ಟ ಹಲವು ಹಂತಗಳಲ್ಲಿ ಸುಧಾರಿಸಿತು

ಮತ್ತು ಅದು ಮತ್ತಷ್ಟು ಏರಲು ಮುಂದುವರಿಯಿತು. ಸ್ವಾಮಿ ದಯಾನಂದರ ಅಭಿಪ್ರಾಯಗಳು ಉತ್ತರ ಭಾರತದಲ್ಲಿ ಬಹುಬೇಗನೆ ಹರಡಿದವು. ಆದರೆ ಅವು ದಕ್ಷಿಣ ಭಾರತದಲ್ಲಿ ವಿರೋಧವನ್ನು ಎದುರಿಸಬೇಕಾಯಿತು.

ಇದಕ್ಕೆ ನಾನು ಮಾತನಾಡಿದ "ಬ್ರಾಹ್ಮಣ ನೌಕರಶಾಹಿ" ಇರಬಹುದು. ಸ್ವಾಮೀಜಿಯವರು ಪುಣೆಯಲ್ಲಿದ್ದಾಗ "ಬ್ರಾಹ್ಮಣ ನೌಕರಶಾಹಿಯು" ಅವರ ಚಿಂತನಾಪರವಾದ ಡಿಸ್‌ಕೋರ್ಸ್‌ನ್ನು ಕೇಳಿ, ಆರ್ಯ ಸಮಾಜವು ತಮಗೆ ಒಂದು ವಿಷವೆಂದು ಅವರು ಮನವರಿಕೆ ಮಾಡಿಕೊಂಡರು. ಅದು ಸ್ವಾಮೀಜಿಯವರ ಮೆರವಣಿಗೆಯನ್ನು ವಿರೋಧಿಸಲು "ಗಾರ್ದಭಾ(ಕತ್ತೆಯ)ನಂದ" ಸರಸ್ವತಿಯವರ ಎಂಬ ಕೀಳುತಂತ್ರದ ಮೆರವಣಿಗೆಯನ್ನು ಆಚರಿಸಿದರು. ಬ್ರಾಹ್ಮಣರು ಮೂರ್ತಿಪೂಜೆಯನ್ನು ಕಳೆದುಕೊಂಡರು. ಅವರು ಇನ್ನೇನು ಯೋಚನೆ ಮಾಡಬಲ್ಲರು. ಸ್ವಾಮೀಜಿಯವರ ಮುಂದೆ ಒಂದು ಕತ್ತೆ ಎಂಬ ಮೂರ್ತಿಯನ್ನು ನಿಲ್ಲಿಸುವ ಮೂಲಕ ಸಮಾಜದ ಸ್ಥಿತಿಯೇನು ಮತ್ತು ಅವರ ಯೋಗ್ಯತೆ ಏನು ಎಂಬುದನ್ನು ಪ್ರತಿಯೊಬ್ಬರು ಮನವರಿಕೆ ಮಾಡಿಕೊಳ್ಳುವಂತೆ ಮಾಡಿದರು. ಜೋತಿರಾವ್ ಫುಲೆ ಮತ್ತು ಅವರ ಅನುಚರರು ಮಧುರವಾದ ಮಾತುಗಳು ಮತ್ತು ಅರ್ಥಗರ್ಭಿತವಾದ ಸರಣಿಯು ಬ್ರಾಹ್ಮಣರಿಗೆ ಅರ್ಥವಾಗುವುದಿಲ್ಲವೆಂದು ಮನವರಿಕೆ ಮಾಡಿಕೊಂಡು ಮುಯ್ಯಿಗೆ ಮುಯ್ಯಿ ಎಂಬ ಅವರ ಭಾಷೆಯನ್ನೇ ಬಳಸಿದರು. ನಿಜವಾದ ಧರ್ಮ ಮತ್ತು ಧಾರ್ಮಿಕ ಅಧ್ಯಯನಗಳು ದಕ್ಷಿಣ ಭಾರತದ ಭೂಮಿಗೆ ಪ್ರವೇಶಮಾಡಬೇಕಾದರೆ, ಸತ್ಯಶೋಧಕ ಸಮಾಜದಂತಹ ಸಂಸ್ಥೆಗಳು ಜನತೆಯನ್ನು ಸಿದ್ಧಗೊಳಿಸಬೇಕು. ಅವರು ಕಳೆಗಳನ್ನು ಬೇರುಸಹಿತ ಕಿತ್ತುಹಾಕಬೇಕು ಮತ್ತು ಕಲ್ಲುಮುಳ್ಳುಗಳಿಂದ ಕೂಡಿದ ಭೂಮಿಯನ್ನು ಹಸನುಮಾಡಿ ಆರ್ಯ ಧರ್ಮವೆಂಬ ಬೀಜವನ್ನು ಬಿತ್ತಿ ಎಲ್ಲರ ಸಂತೋಷವನ್ನು ಬೆಳಸಬೇಕು. ಬ್ರಹ್ಮಧರ್ಮ(ಬ್ರಹ್ಮೊ ಸಮಾಜ)ವು ಯಾವುದೇ ಒಂದು ಧರ್ಮಗ್ರಂಥವನ್ನು ಹೊಂದಿಲ್ಲ. ಅದರ ತತ್ವಗಳು ಜೇನುಹುಳ ಪ್ರತಿಯೊಂದು ಪುಷ್ಪದಿಂದ ಮಧುವನ್ನು ಹೀರುವಂತೆ ಅದು ಎಲ್ಲಾ ಧರ್ಮಗಳಿಂದಲೂ ಅತ್ಯುತ್ತಮವಾದುದನ್ನು ಹೀರಿಕೊಂಡಿದೆ. ಅವುಗಳನ್ನು ಒಪ್ಪಲು ಎಲ್ಲಾ ಜನರು ಅಂಥ ಬುದ್ಧಿಮತ್ತೆಯನ್ನು ಹೊಂದಿಲ್ಲ. ಆದ್ದರಿಂದ ಅದರ ಪ್ರಸಾರವು ದೊಡ್ಡ ಪ್ರಮಾಣದಲ್ಲಿ ಆಗಲಿಲ್ಲ. ಆರ್ಯ ಸಮಾಜದ ಗಟ್ಟಿಬುನಾದಿ ವೇದಗಳು. ಆರ್ಯಾವರ್ತದಲ್ಲಿರುವ ಪ್ರತಿಯೊಬ್ಬನೂ ವೇದಗಳ ಅಧಿಕೃತತೆಯನ್ನು ಒಪ್ಪುತ್ತಾನೆ. ಆದ್ದರಿಂದ ವೇದದ ಅಭಿಪ್ರಾಯಗಳು ಹರಡಿದವು. ಅವುಗಳು ಆರ್ಯಾವರ್ತದಲ್ಲಿ ದೊಡ್ಡ ಪ್ರಮಾಣದಲ್ಲಿ ಹರಡುತ್ತಾ ಮುಂದುವರಿಯುವುದರಲ್ಲಿ ಯಾವುದೇ ಸಂದೇಹವಿಲ್ಲ.

ಆರ್ಯಾವರ್ತ ಏಕೈಕ ಒಂದು ರಾಷ್ಟ್ರವಲ್ಲ. ಪ್ರಸ್ತುತ ಬ್ರಿಟಿಷರ ಆಡಳಿತವು ಇಡೀ ಈ ಭೂಖಂಡವನ್ನು ವ್ಯಾಪಿಸುತ್ತದೆ. ಸಮಗ್ರ ಭಾರತದ ಕಲ್ಪನೆ ಬೆಳೆಯುತ್ತಿದೆ. ಆರ್ಯ ಸಮಾಜದ ಕೊಡುಗೆಯು ಸಮಗ್ರ ಭಾರತದ ಪರಿಕಲ್ಪನೆಯನ್ನು ಬಲಿಷ್ಠಗೊಳಿಸುತ್ತಿರುವುದು ಸ್ತುತ್ಯಾರ್ಹ. ಆರ್ಯ ಸಮಾಜವು ಈ ದೇಶದಿಂದ ಪ್ರತಿಯೊಬ್ಬ ವ್ಯಕ್ತಿಯನ್ನು ಅವನು ಯಾವ ಜಾತಿ, ಮತಕ್ಕೆ ಸೇರಿರಲಿ ಅನುಸಂಧಾನಿಸುತ್ತದೆ. ಅದು ಪ್ರತಿಯೊಬ್ಬ ಆರ್ಯೇತರನನ್ನೂ ತನ್ನ ಆವರಣದೊಳಕ್ಕೆ ಸೇರಿಸಿಕೊಳ್ಳುತ್ತದೆ ಮತ್ತು ಅವನಿಗೆ ಆರ್ಯರ ಎಲ್ಲಾ ಹಕ್ಕುಗಳನ್ನು ನೀಡುತ್ತದೆ. ಉದಾಹರಣೆಗೆ ಅಂತರ್‌ಜಾತೀಯ ವಿವಾಹ ಮತ್ತು ಸಹಭೋಜನ. ವಿದ್ವಾಂಸರು ಟ್ಯೂಟನ್ನರು ಮತ್ತು ಅಮೇರಿಕನ್ನರು ಆರ್ಯರೆಂದು ಒಪ್ಪಿದ್ದಾರೆ. ಆದ್ದರಿಂದ ಆರ್ಯ ಸಮಾಜ ಅವರನ್ನು ಬರಮಾಡಿಕೊಳ್ಳುವುದಕ್ಕೆ ಹಿಂದು-ಮುಂದು ನೋಡುವುದಿಲ್ಲ. ಪ್ರಾಚೀನ ಕಾಲದಲ್ಲಿ ಎಲ್ಲಾ ಆರ್ಯರ ಗುಂಪುಗಳು ಉತ್ತರ ಧ್ರುವದ ಸಮೀಪದ ಪ್ರದೇಶಗಳಲ್ಲಿ ಒಟ್ಟೊಟ್ಟಿಗೆ ಜೀವನ ನಡೆಸುತ್ತಿದ್ದರು. ತದನಂತರ

ಅವರು ವಲಸೆ ಹೊರಟು ನಾನಾ ಗುಂಪುಗಳಲ್ಲಿ ನಾನಾ ದಿಕ್ಕುಗಳಿಗೆ ಹೊರಟರು. ಪಶ್ಚಿಮದ ಕಡೆಗೆ ಹೊರಟ ಗುಂಪುಗಳು ಈಗ ಬಲಿಷ್ಠ ಯೂರೋಪಿನ ರಾಷ್ಟ್ರಗಳಾಗಿವೆ. ನಾವು ಪೂರ್ವದ ಕಡೆಗೆ ಹೊರಟವರ ವಂಶಸ್ಥರಾಗಿದ್ದೇವೆ. ಆದ್ದರಿಂದ ಯೂರೋಪಿಯನ್ನರು ಮತ್ತು ಅವರ ವಂಶಸ್ಥರಾದ ಅಮೇರಿಕನ್ನರು ನಮಗೆ ಪರಕೀಯರಲ್ಲ. ಪಶ್ಚಿಮದ ಮಹಾಯುದ್ಧವೀರರಾದ ಲಾರ್ಡ್ ಕಿಚ್ನರ್ ಮತ್ತು ಮಹಾದಂಡನಾಯಕ ಫ್ರೆಂಚ್ ಅವರು ತಮ್ಮ ಭವ್ಯಯುದ್ಧಗಳಲ್ಲಿ ತಮ್ಮ ಮಹಾಪರಾಕ್ರಮವನ್ನು ಮೆರೆದಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ ಅವರು ಕ್ಷತ್ರಿಯರು. ಅವರು ಒಪ್ಪಿದರೆ ನಾವು ಅವರಿಗೆ ಆರ್ಯಧರ್ಮದ ದೀಕ್ಷೆ ನೀಡಬಹುದು. ನಾವು ಸಾವಿರಾರು ವರ್ಷಗಳು ಬೇರೆ ಬೇರೆಯಾಗಿ ಬದುಕು ನಡೆಸಿದ್ದರೂ ನಮ್ಮ ಚಿಂತನೆ ಮತ್ತು ಕೃತಿಗಳ ನಡುವೆ ಅಗಾಧವಾದ ವ್ಯತ್ಯಾಸಗಳು ಉಂಟಾಗಿರುವುದು ಸಹಜವಾಗಿದೆ. ಆದರೆ ನಮ್ಮ ಮೂಲಭೂತ ತತ್ವಗಳು ಅವೇ ಆಗಿವೆ. ಅವುಗಳಿಗೆ ಜಾತಿಭೇದಗಳಿಲ್ಲ. ನಮ್ಮ ನಿಜವಾದ ಧರ್ಮ ಅವುಗಳನ್ನು ಅಂಗೀಕರಿಸುವುದಿಲ್ಲ. ಅಷ್ಟವಲ್ಲ ಬ್ರಾಹ್ಮಣರ ಹಿಂದುಮತ "ಸ್ಪರ್ಶ"ಕ್ಕೆ ಮಹತ್ವ ಕೊಡುತ್ತದೆ. ಮತ್ತು ಅದು ಹೀಗೆ ಜಾತಿಗಳ ನಡುವೆ ದ್ವೇಷ–ಅಸೂಯೆಗಳನ್ನು ಬಿತ್ತುತ್ತದೆ. ಆರ್ಯ–ಧರ್ಮ ಸಾಮರಸ್ಯವನ್ನು ಕಲ್ಪಿಸುತ್ತದೆ. ಅದು ಹಲವಾರು ಜಾತಿಗಳನ್ನು ಮತಗಳನ್ನು ಧರ್ಮಗಳನ್ನು ಒಗ್ಗೂಡಿಸಲು ಸಹಾಯಮಾಡುತ್ತದೆ.

ಯೂರೋಪು, ಅಮೇರಿಕ ಮತ್ತು ಜಪಾನುಗಳಲ್ಲಿ ಸಮಾನತೆಯ ತತ್ವ ಚಾಲ್ತಿ ಪಡೆದಿದೆ. ನಾನು ಅಲ್ಲಿ ಒಂದೇ ಕುಟುಂಬದಲ್ಲಿರುವ ಸಹೋದರರು, ಗಂಡ ಮತ್ತು ಹೆಂಡತಿ ಮೊದಲಾದವರು ಭಿನ್ನಭಿನ್ನ ಧರ್ಮಗಳಿಗೆ ಸೇರಿದವರು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಆರ್ಯ ಸಮಾಜ ಗಂಡನು ಭಿನ್ನ ಧರ್ಮವನ್ನು ಹೊಂದಿ ಪರಿಪಾಲಿಸುತ್ತಿರುವ ಹೆಂಡತಿ ಅಥವಾ ತದ್ವಿರುದ್ಧವಾಗಿ ಇಬ್ಬರೂ ಕೂಡಿ ಸಾಮರಸ್ಯ ಜೀವನ ನಡೆಸುತ್ತಿರುವುದು ಸಾಧ್ಯವಿದೆ. ಪ್ರತಿಯೊಬ್ಬರು ಸಂಪೂರ್ಣವಾದ ವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದಿರಬೇಕು. ಆರ್ಯ ಸಮಾಜವು ಇದನ್ನು ತನ್ನ ಅನುಚರರಿಗೆ ನೀಡುತ್ತಿದೆ. ಬ್ರಾಹ್ಮಣಿಕೆಯ ಹಿಂದುಧರ್ಮ ಇದನ್ನು ವಿರೋಧಿಸುತ್ತದೆ. ಆದ್ದರಿಂದ ಜನರು ಇದರಿಂದ ಭ್ರಮನಿರಸನಗೊಳ್ಳುತ್ತಿದ್ದರೆ ಆರ್ಯಧರ್ಮ ಎಲ್ಲರನ್ನು ಒಟ್ಟಿಗೆ ಸೇರಿಸುತ್ತದೆ. ಆದರೆ ನಾವು ಒಂದೇ ಒಂದು ರಾಷ್ಟ್ರದ ತತ್ವಕ್ಕೆ ಸೀಮಿತಗೊಳ್ಳಬಾರದು. ಇತ್ತೀಚಿನ ವಿಶ್ವಯುದ್ಧದಲ್ಲಿ ದೇಶಗಳ ದೇಶಪ್ರೇಮದಿಂದ ಯುದ್ಧ ಸಂಭವಿಸಿತು. ಆದರೆ ಈಗ ಮಹಾಚಿಂತಕರು "ರಾಷ್ಟ್ರಗಳ ಸಂಘ" ವನ್ನು ಸ್ಥಾಪಿಸಲು ಯೋಚಿಸುತ್ತಿದ್ದಾರೆ. ಆರ್ಯ ಸಮಾಜ ಕೂಡ ಅಂಥ ಸಾಮರ್ಥ್ಯಗಳನ್ನು ಹೊಂದಿದೆ. ಆದರೆ ಆರ್ಯಧರ್ಮವನ್ನು ಎಲ್ಲಾ ಕಡೆಗೂ ಹರಡಬೇಕೆಂದು ಯೋಚಿಸುವುದು ತಪ್ಪಾಗುತ್ತದೆ.

ಆರ್ಯಧರ್ಮದ ಮಹತ್ವವನ್ನು ಅರಿತ ಸಿಸೋದಿಯ ವಂಶಸ್ಥ ಉದೇಪುರದ ಮಹಾರಾಣ ಸಜ್ಜನಸಿಂಹ ಮತ್ತು ಜೋಧಪುರದ ಮಹಾರಾಜ ಪ್ರತಾಪಸಿಂಹ ಅವರು ಅದರ ತತ್ವಗಳನ್ನು ಹರಡಲು ಮಹಾಪ್ರಯತ್ನ ಪಡುತ್ತಿದ್ದಾರೆ. ಈ ದೇಶವು ಚೆನ್ನಾಗಿ ಕಾರ್ಯ ನಿರ್ವಹಿಸಬೇಕೆಂದು ಬಯಸುವವರು ಈ ಕೆಲಸದಲ್ಲಿ ತಮ್ಮ ಕೊಡುಗೆಯನ್ನು ನೀಡಬೇಕು. ಹಿಂದು ಧರ್ಮವು ನಿರಂತರವಾದುದೆಂದು ಮುಗ್ಧಜನರಿಗೆ ಖೋಟಾ ಬ್ರಾಹ್ಮಣಿಕೆಯ ಧರ್ಮದ ಮಹತ್ವವನ್ನೂ ವಿವರಿಸಲಾಗುತ್ತಿದೆ. ವೇದಗಳಲ್ಲಿ ನಿರಂತರ ತತ್ವಗಳನ್ನು ನಿರೂಪಿಸಲಾಗಿದೆ. ಅವು ಅತ್ಯುತ್ತಮವಾದವು. ಈ ಕುಯುಕ್ತಿಯ ಜನರು ಅವುಗಳನ್ನು ಜನರಿಂದ ಮುಚ್ಚಿಟ್ಟರು ಮತ್ತು ತಮ್ಮದೇ ಆದ ವಿಚಾರಗಳನ್ನು ಪುರಾಣ ಮತ್ತು ಸ್ಮೃತಿಗಳಿಂದ ತೆಗೆದುಕೊಂಡು ಸೇರಿಸಿದರು. ಪುರಾಣ ಮತ್ತು ಭಾರತ ಗ್ರಂಥಗಳ ಅನೈತಿಕತೆಯನ್ನು ತಮ್ಮ ಮತ್ತು ತಮ್ಮ ಜಾತಿಗಳ ಜನರ ವೈಭೋಗದ ಜೀವನಕ್ಕೆ ಅನುಕೂಲವಾಗಲೆಂದು ಪ್ರೋತ್ಸಾಹಿಸಿದರು. ಇವೆಲ್ಲವೂ ನಮ್ಮ ಧರ್ಮಗ್ರಂಥಗಳೆಂದು

ಹೇಳಿಕೊಳ್ಳುವುದಕ್ಕೆ ನಾಚಿಕೆಯಾಗುತ್ತದೆ. ಈ ಧರ್ಮಗ್ರಂಥಗಳು ಅಥವಾ ಅವುಗಳ ಅನ್ಯೆತಿಕತೆಯ ಭಾಗಗಳು ಋಷಿಗಳಿಗೆ ಸಂಬಂಧಿಸಿಲ್ಲ. ಇಂಗ್ಲಿಷ್ ಯುಗದಲ್ಲಿ ಜ್ಞಾನದ ಬಾಗಿಲುಗಳು ತೆರೆದಿರುವುದರಿಂದ ನಾವು ಇವುಗಳೆಲ್ಲರ ಬಗ್ಗೆ ಜಾಗೃತಗೊಳ್ಳುತ್ತಿದ್ದೇವೆ. ನಾವು ಅವುಗಳನ್ನು ಖಂಡಿಸಲೇಬೇಕು.

ದಕ್ಷಿಣಭಾರತದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳು ಕರುಣಾಜನಕವೆಂದು ನಾನು ಈಗಾಗಲೇ ಹೇಳಿದ್ದೇನೆ. ನನ್ನ ವಿಚಾರದಲ್ಲಿ ನನ್ನ ಜಾತಿಯ ಜನರನ್ನೇ ಒಡೆಯಲು ಹೇಗೆ ಬ್ರಾಹ್ಮಣರು ಪ್ರಯತ್ನಿಸಿದರೆಂದು ನಾನು ಹೇಳುವೆನು. ನಾನು ಒಬ್ಬ ರಾಜನಾಗಿ ವಿಷ್ಣುವಿನ ಭಾಗವೆಂದು ಅವರು ನನಗೆ ಹೇಳಿದರು. ಆದ್ದರಿಂದ ನಾನು ಒಬ್ಬ ಕ್ಷತ್ರಿಯ. ಆದ್ದರಿಂದ ನಾನು ನಿಮಗೆ ಎಲ್ಲಾ ವೈದಿಕ ಆಚರಣೆಗಳನ್ನು ಆಚರಿಸಲು ಸಿದ್ಧವೆಂದು ನನಗೆ ಹೇಳಿದರು. ಆಗ ಈ ಕುಯುಕ್ತಿಯ ಬ್ರಾಹ್ಮಣರು ನನ್ನ ಮತ್ತು ನನ್ನ ಜಾತಿಯ ನಡುವೆ ವಿಭಜನೆ ಉಂಟುಮಾಡಲು ಪ್ರಯತ್ನಿಸಿದರು. ಮರಾಠಾ ಜನರಲ್ಲಿ ಜಗಳ ಹಚ್ಚಲು ಅವರು ಮರಾಠರಲ್ಲಿ ಕೆಲವರು ಅತ್ಯುತ್ತಮರು ಮತ್ತು ಇತರರು ಅತ್ಯಂತ ಕೀಳು ಎಂದು ಜಗಳದ ಬೀಜ ಬಿತ್ತಿದರು. ಆರ್ಯಸಮಾಜ ಈ ಪ್ರದೇಶದಲ್ಲಿ ಗಮನಹರಿಸಿ ತನ್ನ ಅಭಿಪ್ರಾಯಗಳನ್ನು ಹರಡಲು ವಿಶೇಷ ಪ್ರಯತ್ನ ಮಾಡಬೇಕು. ನಾಸಿಕ ಮತ್ತು ಫಂಡರಾಪುರಗಳಲ್ಲಿ ಕಪಟ ಧಾರ್ಮಿಕ ಗುರುಗಳು ಅಧಿಕವಾಗಿದ್ದಾರೆ. ನಾವು ನಮ್ಮ ಶಾಲೆಗಳನ್ನು, ಗುರುಕುಲಗಳನ್ನು ಮತ್ತು ದೇವಸ್ಥಾನಗಳನ್ನು ತೆರೆದು ಎಲ್ಲರಲ್ಲಿ ನಿಜವಾದ ಧರ್ಮದ ಜ್ಞಾನವನ್ನು ಹರಡಬೇಕಾಗಿದೆ.

ಭಾರತದ ಶಾಸನ ಪರಿಷತ್ತಿನಲ್ಲಿ ಗೌರವಾನ್ವಿತ ಪಟೇಲರು ಮಂಡಿಸಲಿರುವ ಮಸೂದೆಯ ಬಗ್ಗೆ ಬೆಂಬಲ ಸೂಚಿಸಲು ಈ ಸಮ್ಮೇಳನದಲ್ಲಿ ಠರಾವನ್ನು ಪಾಸುಮಾಡುತ್ತಿರುವುದು ಒಳ್ಳೆಯದು. ಜಾತಿಪದ್ಧತಿಯು ಸಮಾಜದ ವಿವಿಧ ವಿಭಾಗಗಳ ನಡುವೆ ಮದುವೆಗಳನ್ನು ತಡೆಯುವ ಮೂಲಕ ಸಮಾಜವನ್ನು ವಿಭಜಿಸುತ್ತಿದೆ. ದೇಶವನ್ನು ಒಗ್ಗೂಡಿಸುವಲ್ಲಿ ಆರ್ಯಸಮಾಜದ ಕೆಲಸ ಪ್ರಯೋಜನಕಾರಿಯೆಂದು ನಾನು ಈಗ ತಾನೇ ಮಾತನಾಡಿದ್ದೇನೆ. ಗೌರವಾನ್ವಿತ ಪಟೇಲರು ಮಂಡಿಸುವ ಮಸೂದೆ ಈ ಉದ್ದೇಶಕ್ಕೆ ಸಹಕಾರಿಯಾಗಿದೆ.

ಮದುವೆಗಳು ಭಿನ್ನಭಿನ್ನ ಜಾತಿಗಳ ನಡುವೆ ಬಾಂಧವ್ಯದ ಸೇತುವೆಗಳನ್ನು ಕಟ್ಟದ ಹೊರತು ಜಾತಿಯ ತಾರತಮ್ಯತೆಯ ತೀವ್ರತೆ ತಗ್ಗುವುದಿಲ್ಲ. ಎಲ್ಲಾ ಪ್ರಾಂತ್ಯಗಳಲ್ಲಿ ಬ್ರಾಹ್ಮಣ ಸಮುದಾಯವು ಈ ಮಸೂದೆಯನ್ನು ವಿರೋಧಿಸಲು ಮುಂದೆ ಬರುವುದು. ಅವರ ಉದ್ದೇಶ ಸುಸ್ಪಷ್ಟ. ತಮ್ಮ ಕಪಟಧರ್ಮದ ಪ್ರಾಬಲ್ಯವನ್ನು ಸಾಧ್ಯವಾದ ಮಟ್ಟಿಗೆ ಮುಂದುವರಿಸುವುದಕ್ಕೆ ಎಲ್ಲಾ ದಿಕ್ಕುಗಳಿಂದಲೂ ಅವರು ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಬಹುಮಟ್ಟಿಗೆ ಎಲ್ಲಾ ಬ್ರಾಹ್ಮಣೇತರರ ವಿಭಾಗಗಳು ಈ ಮಸೂದೆಯ ಬಗ್ಗೆ ಪರವಾಗಿದ್ದಾರೆ. ಅವರು ವಿವಿಧ ಜಾಗಗಳಲ್ಲಿ ಸಭೆಗಳನ್ನು ನಡೆಸುತ್ತಿದ್ದಾರೆ ಮತ್ತು ಮಸೂದೆಯ ಪರವಾಗಿ ಠರಾವುಗಳನ್ನು ಪಾಸುಮಾಡುತ್ತಿದ್ದಾರೆ. ಗೌರವಾನ್ವಿತ ಭೂಪೇಂದ್ರನಾಥ ಬಸು ಅವರು ಅಂಥದ್ದೇ ಒಂದು ಮಸೂದೆಯನ್ನು ಈ ಮೊದಲು ಮಂಡಿಸಿದ್ದರು. ಆದರೆ ಈ ಸ್ವಾರ್ಥಿಜನರು ಪಟ್ಟಭದ್ರ ಹಿತಾಸಕ್ತಿಗಳಿಂದ ಇದರ ಬಗ್ಗೆ ಭಾರೀ ಗದ್ದಲವೆಬ್ಬಿಸಿದರು. ಮತ್ತು ಈ ಮಸೂದೆಯ ಉದ್ದೇಶ ಧರ್ಮವನ್ನು ಕೊನೆಗೊಳಿಸುವುದೆಂದು ವಾದ ಮಾಡಿದ್ದರು. ಈ ಮಸೂದೆಯ ಆಧಾರದ ಮೇಲೆ ಕಾನೂನುಗಳನ್ನು ಇಂದೋರ್, ಬರೋಡ ಮತ್ತು ಕೊಲ್ಹಾಪುರ ಸಂಸ್ಥಾನಗಳಲ್ಲಿ ಈಗಾಗಲೇ ಜಾರಿಗೊಳಿಸಲಾಗಿತ್ತು. ಅಲ್ಲಿ ಆರ್ಯಧರ್ಮವನ್ನು ಬೆಳೆಸಲಾಗಿತ್ತು. ಈ ಸಂಸ್ಥಾನಗಳಲ್ಲಿ ಧರ್ಮಕ್ಕೆ ತೊಂದರೆಯಾದ ಯಾವ ಚಿಹ್ನೆಯೂ ಕಂಡುಬರುತ್ತಿರಲಿಲ್ಲ. ಆದರೆ ಧರ್ಮ

ಎಂದರೆ ಪೂಜಾರಿಗಳ ಶುಲ್ಕ ಎಂಬುದು ಸ್ಪಷ್ಟವಾಗಿತ್ತು, ಅದಕ್ಕೆ ಭಂಗ ಬಂದಿತ್ತು. ಆ ಶುಲ್ಕವನ್ನು ರದ್ದುಗೊಳಿಸಿದರೆ ದೇಶವು ಸುಭಿಕ್ಷವಾಗುವುದು.

ನನ್ನ ಭಾಷಣವನ್ನು ತಾವು ಸಾವಧಾನದಿಂದ ಕೇಳಿದ್ದಕ್ಕೆ ನಾನು ನಿಮಗೆ ಮತ್ತೊಮ್ಮೆ ಧನ್ಯವಾದಗಳನ್ನು ಹೇಳುತ್ತೇನೆ. ಆರ್ಯಧರ್ಮದ ತತ್ವಗಳು ಎಲ್ಲಾ ಕಡೆಗಳಲ್ಲಿ ಹರಡಲಿ ಎಂದು ಹೇಳುತ್ತೇನೆ. ಆರ್ಯಧರ್ಮದ ತತ್ವಗಳು ಎಲ್ಲಾ ಕಡೆ ಹರಡಲಿ ಎಂದು, ಎಲ್ಲಾ ಕಾಲಗಳಲ್ಲಿ ದೇಶವು ಸಮೃದ್ಧವಾಗಲೆಂದು, ವಿಶ್ವದ ಎಲ್ಲಾ ಕಡೆಗಳಲ್ಲಿ ಶಾಂತಿ ಮತ್ತು ಸುಖ ನೆಲೆಸಲೆಂದು ನಾನು ದೇವರಲ್ಲಿ ಪ್ರಾರ್ಥಿಸುತ್ತಾ ನನ್ನ ಭಾಷಣವನ್ನು ಮುಗಿಸುತ್ತೇನೆ.

---

೬

# ಜ್ಞಾನದ ಯುಗ

**ಖಾನಪುರದಲ್ಲಿ ಹದಿಮೂರನೆಯ ಕುರ್ಮಿ ಕ್ಷತ್ರಿಯರ ಸಮ್ಮೇಳನವು ಏಪ್ರಿಲ್ ೧೯, ೧೯೧೯ರಂದು ನಡೆಯಿತು. ಶಾಹುರವರು ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಮತ್ತು ಈ ಕೆಳಗಿನ ಭಾಷಣವನ್ನು ಮಾಡಿದರು. ಇಲ್ಲಿ ಶಾಹುಮಹಾರಾಜರು ಹಿಂದು ಸಮಾಜದ ಒಳಗಿರುವ ಹಾಲಿ ಜಾತಿಪದ್ಧತಿಯ ಸಮಾಜಶಾಸ್ತ್ರೀಯ ಮತ್ತು ರಾಜಕೀಯ ವಿಶ್ಲೇಷಣೆಯನ್ನು ಇಲ್ಲಿ ಮಾಡಿದ್ದಾರೆ. ಬ್ರಿಟಿಷರ ಶಾಂತಿಯುತ ಆಡಳಿತ, ಇಂಗ್ಲಿಷ್ ಶಿಕ್ಷಣ, ಸುಧಾರಕರಾದ ಮಹರ್ಷಿ ದಯಾನಂದರು ನಡೆಸಿದ ಧಾರ್ಮಿಕ ಸುಧಾರಣೆಗಳೆಂಬ ಮೂರು ಅಂಶಗಳು ಪ್ರಸ್ತುತ ಭಾರತದಲ್ಲಿ ಜಾಗೃತಿಯನ್ನು ತಂದವೆಂದು ಅವರು ಸ್ಪಷ್ಟವಾಗಿ, ಖಚಿತವಾಗಿ ಹೇಳಿದ್ದಾರೆ. ಅವರು ಪ್ರಸ್ತುತ ಯುಗವು ಜ್ಞಾನದ ಯುಗವೆಂದು ಒತ್ತಿಹೇಳಿದ್ದಾರೆ ಮತ್ತು ಜ್ಞಾನದ ಮೂಲಕ ಸ್ವ–ಸುಧಾರಣೆ, ಈ ಸಮ್ಮೇಳನದಲ್ಲಿ ಶಾಹುರವರಿಗೆ "ರಾಜರ್ಷಿ" ಎಂಬ ಬಿರುದನ್ನು ನೀಡಲಾಯಿತು.**

---

ನನ್ನ ಪ್ರೀತಿಯ ಕ್ಷತ್ರಿಯ ಸಹೋದರರೇ,

ನಾನು ನಿಮ್ಮಲ್ಲಿ ಒಬ್ಬನು. ನನ್ನನ್ನು ನೀವು ಒಬ್ಬ ಸೈನಿಕ, ರೈತನೆಂದು ಕರೆಯಿರಿ; ನನ್ನ ಪೂರ್ವಿಕರು ರೈತಾಪಿವರ್ಗ. ನನ್ನ ಪೂರ್ವಿಕರು ನಡೆಸುತ್ತಿದ್ದ ವೃತ್ತಿಬಾಂಧವರ ಸಮ್ಮೇಳನಕ್ಕೆ ಅಧ್ಯಕ್ಷತೆ ವಹಿಸಲು ನನ್ನನ್ನು ನೀವು ಆಹ್ವಾನಿಸಿದ್ದೀರಿ. ನಾನು ತುಂಬ ಹರ್ಷಿತನಾಗಿದ್ದೇನೆ.

ನಾನು ಜ್ಞಾನಿಯು ಅಲ್ಲ ಅಥವಾ ಯೋಗ್ಯ ಅರ್ಹನೂ ಅಲ್ಲ. ನನಗಿಂತ ಹೆಚ್ಚು ಬುದ್ಧಿವಂತರಿದ್ದಾರೆ. ನಾನು ಒಬ್ಬ ರೈತಾಪಿಯಾಗಿರುವುದರಿಂದ, ನಾನು ಮಹಾಶಯ ಶಿವಾಜಿ ಮಹಾರಾಜರ ರಾಜ ಹಾಗೂ ಅವರ ಸೊಸೆ ಪರಾಕ್ರಮಶಾಲಿಯಾದ ಮಹಾರಾಣಿ ತಾರಾಬಾಯಿ ಅವರ ರಾಜಕುಟುಂಬಕ್ಕೆ ಸೇರಿದವನಾಗಿದ್ದರಿಂದ ನೀವು ನನಗೆ ಅಧ್ಯಕ್ಷರನ್ನಾಗಿ ಮಾಡಿ ನನಗೆ ಗೌರವ ನೀಡಿದ್ದೀರಿ. ನನ್ನ ಸಾಮರ್ಥ್ಯಕ್ಕಾಗಿ ಅಲ್ಲ. ನಿಮ್ಮ ಬಯಕೆ ವ್ಯಕ್ತಪಡಿಸಿದಾಗ ನಾನು ಮುಂಬಯಿಯಲ್ಲಿ ಜ್ವರದಿಂದ ನರಳುತ್ತಿದ್ದೆ. ನಾನು ಬೇಗನೇ ಚೇತರಿಸಿಕೊಂಡೆ. ನಾನು ಹಿಂದಿಯಲ್ಲಿ ಭಾಷಣ ಮಾಡುವುದಕ್ಕೆ ಬಹಳ ಕಷ್ಟಪಟ್ಟೆ. ರೈಲಿನಲ್ಲಿ ಹಿಂದಿಯನ್ನು ಮೂರು ದಿನಗಳವರೆಗೆ ಅಭ್ಯಾಸ ಮಾಡಿ, ನಾನು ಹಿಂದಿಯಲ್ಲಿ ಭಾಷಣ ಮಾಡಲು ನಿರ್ಧರಿಸಿದೆ. ಹಿಂದಿ ನನ್ನ ಮಾತೃಭಾಷೆಯಲ್ಲ. ಲಿಪಿ ನನಗೆ ಚಿರಪರಿಚಿತವಲ್ಲ. ಆದ್ದರಿಂದ ಸ್ವಾಮಿ ಪರಮಾನಂದರು ನನ್ನ ಭಾಷಣವನ್ನು ಓದುವರು. ನನ್ನ ಸಂಬಂಧಿಯಾದ, ನನಗೆ ತಂದೆ ಸಮಾನರಾದ ಅವರನ್ನು ನಾನು

ಗುರುವೆಂದೇ ಪರಿಭಾವಿಸುವ ಗೌರವಾನ್ವಿತ ಖಾಸೆರಾವ್ ಜಾಧವರವರು ಇಲ್ಲಿಗೆ ಬಂದಿರುವುದು ನನಗೆ ಇಮ್ಮಡಿ ಹರ್ಷವನ್ನು ತಂದಿದೆ. ನಿಮ್ಮ ಸೇವೆಯನ್ನು ಮಾಡಲು ನನಗೆ ಶಕ್ತಿ ಕೊಡು ಎಂದು ದೇವರಲ್ಲಿ ಪ್ರಾರ್ಥನೆ ಮಾಡುವೆ. ನಾನು ನಿಮ್ಮ ಅಭಿಲಾಷೆಯಂತೆ ಭವಿಷ್ಯದಲ್ಲಿ ನಿಮ್ಮ ಸೇವೆ ಮಾಡುವೆನು.

ನಾನು ಒಂದು ವಿಷಯದ ಬಗ್ಗೆ ಮಾತನಾಡುವೆನು. ಅದನ್ನು ಮಾತನಾಡುವುದಕ್ಕೆ ಇದು ಸೂಕ್ತ ಸ್ಥಳವಲ್ಲ. ಆದರೆ ಯಾರೇ ಆಗಲೀ ನಮ್ಮ ಸುತ್ತಮುತ್ತಲೂ ನಡೆಯುತ್ತಿರುವುದನ್ನು ನಿರ್ಲಕ್ಷಿಸುವಂತಿಲ್ಲ. ಈ ದಿನಗಳಲ್ಲಿ ನಡೆಯುತ್ತಿರುವ ಸಂಘರ್ಷ ನನಗೆ ಸ್ವಲ್ಪವೂ ಇಷ್ಟವಿಲ್ಲ. ಬ್ರಿಟಿಷರು ವಿದ್ಯಾಭ್ಯಾಸ ನೀಡಿದ್ದಿದ್ದರೆ ಈ ಸಂಘರ್ಷ ಸಂಭವಿಸುತ್ತಿರಲಿಲ್ಲ. ಸರಕಾರ ನಮಗೆ ಜ್ಞಾನವನ್ನು ನೀಡಬೇಕು ಮತ್ತು ನಾವು ಈ ವಿಷವನ್ನು ವಾಪಸ್ಸು ಕೊಡಬೇಕಾಗಿತ್ತು. ಇದು ವೈರುಧ್ಯವಲ್ಲವೇ? ನಮಗೆ ಜ್ಞಾನ ಕೊಡುವವರು ನಮ್ಮನ್ನು ಗುಲಾಮಿ ಸಂಕೋಲೆಗಳಿಂದ ಖಂಡಿತವಾಗಿ ಬಿಡುಗಡೆಗೊಳಿಸುವರು. ಆ ಬಗ್ಗೆ ನನಗೆ ಖಾತರಿಯಿದೆ. ತನ್ನ ತಂದೆಗೆ ಮಗುವು ತನ್ನ ಅವಶ್ಯಕತೆಗಳನ್ನು ಕೇಳಿದಂತೆ ನೀವು ನಿಮಗೆ ಅಗತ್ಯವಾಗಿರುವ ವಿಷಯಗಳನ್ನು ಸರಕಾರವನ್ನು ಕೇಳಿ; ಸರಕಾರವು ಖಂಡಿತವಾಗಿ ಕೊಡಲು ಒಪ್ಪುವುದು. ಪ್ರೀತಿಯಿಂದ ವಿಷಯಗಳು ಬದಲಾಗುವುವು; ಆದರೆ ಬಲಾತ್ಕಾರದಿಂದ ಎಂದಿಗೂ ವಿಷಯಗಳು ಬದಲಾಗುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಭಾರತದ ಪ್ರತಿಯೊಂದು ಪ್ರದೇಶದಲ್ಲಿ ಅಭಿವೃದ್ಧಿಯ ಚಿಹ್ನೆಗಳು ಕಂಡುಬರುತ್ತಿರುವುದು ಶುಭ ಲಕ್ಷಣ. ದಿನ ಬಿಟ್ಟು ದಿನ ಜಾತಿ ಮತ್ತು ಧರ್ಮಗಳ ಸಂಘಟನೆಗಳ ಸಂಖ್ಯೆ ಹೆಚ್ಚಾಗುತ್ತಿವೆ. ನಾನು ಇದು ಸಕಾರಾತ್ಮಕ ಸೂಚನೆಯೆಂದು ಭಾವಿಸುತ್ತೇನೆ ಮತ್ತು ಕೆಲವು ಪರೋಪಕಾರಿ ಯೋಜನೆಗಳಾದ ಶಿಕ್ಷಣ, ಸಾಮಾಜಿಕ ಸುಧಾರಣೆಗಳು, ಧರ್ಮದ ಪ್ರಚಾರ ಮೊದಲಾದವುಗಳನ್ನು ಇಂದಿಗೂ ನಡೆಸುತ್ತಿರುವುದರಿಂದ ನಾನು ಅವುಗಳು ಸಫಲವಾಗಲಿ ಎಂದು ಪ್ರಾಮಾಣಿಕವಾಗಿ ಹಾರೈಸುತ್ತೇನೆ. ಭವಿಷ್ಯದಲ್ಲಿ ಅವರು ಅವುಗಳು ಉನ್ನತವೆಂದು ಉದ್ದೇಶಿಸಿದರೆ, ಅವು ಖಂಡಿತವಾಗಿ ಬೆಳೆಯುತ್ತವೆಯೆಂದು ನಾನು ಆಶಿಸುತ್ತೇನೆ. ಈ ಜಾಗೃತಿಯ ಬಗ್ಗೆ ಯಾರಾದರೂ ಕಾರಣಗಳನ್ನು ವಿಚಾರಿಸಿದರೆ, ಈ ಕೆಳಕಂಡ ಮೂರು ಕಾರಣಗಳನ್ನು ಖಚಿತವಾಗಿ ಸೂಚಿಸಬಹುದು: ಮೊದಲನೆಯ ಮತ್ತು ಅತಿ ಮುಖ್ಯವಾದ ಕಾರಣ ಬ್ರಿಟಿಷರ ಶಾಂತಿಯುತ ಆಡಳಿತ, ಎರಡನೆಯದು ಇಂಗ್ಲಿಷ್ ಶಿಕ್ಷಣ ಮತ್ತು ಮೂರನೆಯದು ಧಾರ್ಮಿಕ ನಾಯಕರಿಂದ ಧಾರ್ಮಿಕ ಸುಧಾರಣೆಗಳು. ಬ್ರಿಟಿಷ್ ಸರಕಾರ ನ್ಯಾಯಬದ್ಧವಾಗಿ ಮಾಡಿರುವ ಈ ಅನುಕೂಲವನ್ನು ಭಾರತೀಯರನು ಕಡೆಗಣಿಸುವಂತಿಲ್ಲ. ಮತ್ತು ಅವರು ಸರಕಾರಕ್ಕೆ ಸದಾ ನಿಷ್ಠೆಯನ್ನು ತೋರಿಸಬೇಕು. ಮಹಾ ಧಾರ್ಮಿಕ ನಾಯಕರಾದ ಮಹರ್ಷಿ ದಯಾನಂದ ಸರಸ್ವತಿಯಂಥವರು ವಿಶೇಷವಾಗಿ ಜನರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿರುವುದನ್ನು ಮರೆಯುವಂತಿಲ್ಲ.

ಇಂಗ್ಲಿಷ್ ಶಿಕ್ಷಣವು ಭಾರತೀಯರಿಗೆ ಮೂರನೇ ಕಣ್ಣನ್ನು ನೀಡಿತು. ಇದು ಒಂದು ಮಹಾ ವರ. ಈ ವರದಿಂದ ನಾವು ಯಾರು, ನಮ್ಮ ಸ್ಥಾನಮಾನ ಹಿಂದೆ ಏನಾಗಿತ್ತು, ಇಂದು ನಮ್ಮ ಸ್ಥಾನಮಾನ ಏನು, ಮುಂದೆ ನಮ್ಮ ಸ್ಥಾನಮಾನ ಏನಾಗಿರುವುದು ಎಂಬುದನ್ನು ಅರ್ಥಮಾಡಿಕೊಂಡೆವು. ಇದು ಒಂದು ಅದೃಷ್ಟದ ಸನ್ನಿವೇಶ. ಭಾರತದಲ್ಲಿ ಪ್ರದೇಶಗಳಲ್ಲಿ, ಜಾತಿಗಳಲ್ಲಿ, ಧರ್ಮದಲ್ಲಿ ಮತ್ತು ಸಮಾಜದಲ್ಲಿ ಸುಧಾರಣೆ ಮತ್ತು ಬದಲಾವಣೆಗಳನ್ನು ಕೈಗೊಳ್ಳುತ್ತಿರುವ ಎಲ್ಲರಿಗೂ ನಾನು ಸಹಾನುಭೂತಿಯನ್ನು ವ್ಯಕ್ತಪಡಿಸುವೆನು. ಈ ಸದುದ್ದೇಶದಲ್ಲಿ ಭಾಗಿಯಾಗಲು ನಾನು ಸ್ವತಃ ಇಷ್ಟಪಡುವೆನು. ಆದ್ದರಿಂದಲೇ ನಾನು ಇಲ್ಲಿಗೆ ಬಂದಿರುವೆ.

ನಾವು ವಾಸಿಸುವ ದೇಶವನ್ನು ಆರ್ಯಾವರ್ತ ಎಂದು ಕರೆಯಲಾಗುತ್ತದೆ. ಏಕೆಂದರೆ ಆರ್ಯರು ಈ ದೇಶದ ಮೊದಲ (ಮೂಲ) ನಿವಾಸಿಗಳು (ನೆಲಸಿಗರು). ಆರ್ಯರು ಟಿಬೆಟ್(ತ್ರಿಷ್ಟಿತ್, ತಿಬ್ಬತ್)ನಿಂದ ಬಂದವರು. ಆರ್ಯರಿಗೆ ಎರಡು ವರ್ಣಗಳಿದ್ದವು: ಆರ್ಯವರ್ಣ ಮತ್ತು ದಸ್ಯುವರ್ಣ. ಎರಡೂ ವರ್ಣಗಳೂ ಒಂದೇ ವಂಶದಿಂದ ಹುಟ್ಟಿದವು.

ದಸ್ಯುವರ್ಣಕ್ಕೆ ಸೇರಿದ ಜನರು ಆರ್ಯರ ಗುಣಗಳನ್ನು ಅನುಸರಿಸುವುದರಿಂದ ಆರ್ಯವರ್ಣದವರಾದರು. ಆರ್ಯರು ದಸ್ಯುಗುಣಗಳನ್ನು ಅನುಸರಿಸುವುದರಿಂದ ದಸ್ಯುಗಳಾದರು. ಸಮಾಜವು ಹೆಚ್ಚು ಸಂಕೀರ್ಣವಾಗತೊಡಗಿದಾಗ ನಾನಾ ಬಗೆಯ ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಲು ನಾಲ್ಕು ವರ್ಣಗಳಾದವು. ಈ ಕೆಳಕಂಡ 'ನಿರುಕ್ತ'ದಲ್ಲಿ ವರ್ಣದ ನಿರ್ವಚನವನ್ನು ಹೇಳಲಾಗಿದೆ: ವರ್ಣೋ ವರ್ಣೋತಿ (ವರ್ಣವನ್ನು ಪಡೆಯಲು ಸಾಧ್ಯ) ಆದ್ದರಿಂದ ವರ್ಣದ ವಿಶೇಷಗುಣಗಳನ್ನು ಒಬ್ಬ ಮನುಷ್ಯ ಗಳಿಸುವುದರಿಂದ ಒಂದು ವರ್ಣವನ್ನು ಪಡೆಯಲು ಸಾಧ್ಯ. ಜೊತೆಗೆ ವರ್ಣವನ್ನು ಬದಲಾಯಿಸಬಹುದು. ಆದ್ದರಿಂದಲೇ ಅದನ್ನು ವರ್ಣ ಎಂದು ಕರೆಯಲಾಯಿತು. (*ನಿರುಕ್ತ: ಸಂಪಾದನೆ, ೨, ಸಂಪುಟ ೩)

"ಧರ್ಮವನ್ನು ಆಚರಿಸುವುದರಿಂದ (ಪರಿಪಾಲಿಸುವುದರಿಂದ) ಕೆಳವರ್ಣಕ್ಕೆ ಸೇರಿದ ವ್ಯಕ್ತಿಗಳು ಮೇಲು ವರ್ಣವನ್ನು ಪಡೆಯಬಹುದು. ಹಾಗೆಯೇ ಮೇಲುವರ್ಣಕ್ಕೆ ಸೇರಿದ ವ್ಯಕ್ತಿ ಧರ್ಮವನ್ನು ಪರಿಪಾಲಿಸದಿದ್ದರೆ ಅವನು ಕೆಳಮಟ್ಟಕ್ಕೆ ಸೇರಲು ಅರ್ಹನಾಗಿರುತ್ತಾನೆ. ಇದು ವೈದಿಕ ಕಾಲದಿಂದ ಮಹಾಭಾರತದ ಕಾಲದವರೆಗೆ ಇತ್ತು."

"ವೇದಗಳನ್ನು ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಮತ್ತು ಅಧ್ಯಯನ ಮಾಡುವುದು, ಬೇರೆಯವರಿಗೆ ಬೋಧನೆ-ಕಲಿಸುವುದು, ಯಜ್ಞಯಾಗಾದಿಗಳನ್ನು ನಡೆಸುವುದರಲ್ಲಿ ಸಹಾಯಮಾಡುವುದು, ದಾನಗಳನ್ನು ನೀಡುವುದು ಮತ್ತು ದಾನಗಳನ್ನು ಸ್ವೀಕರಿಸುವುದು- ಇವೆಲ್ಲವೂ ಬ್ರಾಹ್ಮಣನ ಕರ್ತವ್ಯಗಳು."

"ಶಾಂತ ಮನಸ್ಸು, ಸಂಯಮ, ಪಶ್ಚಾತ್ತಾಪ, ಆಂತರಿಕ ಮತ್ತು ಬಾಹ್ಯಶುದ್ಧೀಕರಣ, ಕ್ಷಮಿಸುವ ಶಕ್ತಿ, ತಪಸ್ಸು ಚರ್ಯೆ, ಜ್ಞಾನ ಮತ್ತು ವಿಜ್ಞಾನ (ದೇವರ ಬಗ್ಗೆ ಜ್ಞಾನ ಮತ್ತು ಜೀವಂತ ಪ್ರಾಣಿಗಳ ಬಗ್ಗೆ ಮತ್ತು ಪ್ರಕೃತಿಯ ಬಗ್ಗೆ ಜ್ಞಾನ), ದೇವರ ಬಗ್ಗೆ ಶ್ರದ್ಧೆ- ಇವೆಲ್ಲವೂ ಒಬ್ಬ ಬ್ರಾಹ್ಮಣನ ಕರ್ತವ್ಯಗಳೂ ಕೂಡ."

"ಪ್ರಜೆಗಳ ರಕ್ಷಣೆ, ಅವರುಗಳ (ಪ್ರಜೆಗಳ) ಪ್ರಯೋಜನಕ್ಕೆ ದಾನ ನೀಡುವುದು, ಯಜ್ಞಯಾಗಾದಿಗಳನ್ನು ನಡೆಸುವುದು, ವೇದಾಧ್ಯಯನ, ಯುದ್ಧಮಾಡುವುದು, ನಿರ್ಭಯದಿಂದ ಇರುವುದು, ಕೆಚ್ಚೆದೆಯವನಾಗಿರಬೇಕು, ಒಬ್ಬ ಜಾಣ ತಂತ್ರಗಾರನಾಗಿರಬೇಕು, ಭೋಗಲಾಲಸಿಯಾಗಿರಬಾರದು, ಜಾಗೃತನಾಗಿರಬೇಕು, ಯುದ್ಧಭೂಮಿಯಿಂದ ಹಿಮ್ಮೆಟ್ಟಬಾರದು, ಜನರ ರಕ್ಷಣೆಗಾಗಿ ತನ್ನನ್ನು ತಾನೇ ತ್ಯಾಗ ಮಾಡಿಕೊಳ್ಳಬೇಕು ಮತ್ತು ದೇವರಲ್ಲಿ ನಂಬಿಕೆಯಿಡಬೇಕು, ಇವೆಲ್ಲವೂ ಒಬ್ಬ ಕ್ಷತ್ರಿಯನ ಕರ್ತವ್ಯಗಳು.

"ದನಕರುಗಳನ್ನು ಸಾಕುವುದು-ಬೆಳೆಸುವುದು, ದಾನ ನೀಡುವುದು, ಯಜ್ಞಯಾಗಾದಿ, ಮೊದಲಾದವುಗಳನ್ನು ನಡೆಸುವುದು, ವೇದಾಧ್ಯಯನ, ವಿದೇಶ ವ್ಯಾಪಾರ, ಬ್ಯಾಂಕಿಂಗು ಮತ್ತು ಕೃಷಿಗಳು ಸೇರಿದಂತೆ ವ್ಯವಹಾರ-ವ್ಯಾಪಾರ ಮಾಡುವುದು, ಇವೆಲ್ಲವೂ ಒಬ್ಬ ವೈಶ್ಯನ ಕರ್ತವ್ಯಗಳು."

"ಕಲಾಕೌಶಲ್ಯಗಳನ್ನು ಗಳಿಸುವುದು, ಬ್ರಾಹ್ಮಣರ, ಕ್ಷತ್ರಿಯರ ಮತ್ತು ವೈಶ್ಯರ ಸೇವೆ ಮಾಡುವುದು ಶೂದ್ರರ ಕರ್ತವ್ಯಗಳು, ಇದು ಅವರ ಸ್ಥಿತಿ-ಗತಿ." (ಮನು)

ವೇದಗಳ ಕಾಲದಲ್ಲಿ ಜನರು ಮಾಡುವ ಕರ್ತವ್ಯಗಳಿಗನುಗುಣವಾಗಿ ವರ್ಣಗಳನ್ನು ವಿಭಾಗಮಾಡಲಾಗಿತ್ತು. ಪುರುಷರು ಮತ್ತು ಮಹಿಳೆಯರು ವೇದಗಳನ್ನು ಅಧ್ಯಯನ ಮಾಡುವ ಹಕ್ಕಿತ್ತು. ವೈದಿಕ ಋಷಿಗಳು ಭಿನ್ನಭಿನ್ನ ಸಾಮಾಜಿಕ ವರ್ಗಗಳಿಗೆ ಸೇರಿದ್ದರು. ಮಹಿಳೆಯರು ಧರ್ಮಗ್ರಂಥಗಳನ್ನು ತಿಳಿದಿರುವವರೆಗೂ ಆರ್ಯಾವರ್ತ ಸ್ವರ್ಗಕ್ಕೆ ಸಮಾನವಾಗಿತ್ತು. "ಮಹಿಳೆಯರು ಮತ್ತು ಶೂದ್ರರು ವೇದಗಳ ಅಧ್ಯಯನ ಮಾಡಬಾರದೆಂದು ಕಾಲ್ಪನಿಕ ಶ್ರುತಿಗಳು ನಿಷೇಧಿಸಿವೆ. ವೇದದ ಮಂತ್ರಗಳನ್ನು ಶೂದ್ರರು ಕೇಳಿದರೆ ಅವರ ಕಿವಿಗಳೊಳಗೆ ಕರಗಿಸಿದ ಸೀಸವನ್ನು ಹುಯ್ಯಬಾರದು. ಆದರೆ ವರ್ಣವ್ಯವಸ್ಥೆ ಅನುವಂಶಿಕವಾಯಿತು. ಭಿನ್ನಭಿನ್ನ ವರ್ಣಗಳಿಗೆ ಹಂಚಿದ ಕರ್ತವ್ಯಗಳನ್ನು ಜನರು ಸ್ವತಂತ್ರವಾಗಿ ನಿರ್ವಹಿಸುವುದಕ್ಕೆ ಕಷ್ಟವಾಯಿತು. ಮತ್ತು ಜನರು ತಮ್ಮ ವರ್ಣಗಳಿಗೆ ನಿಗದಿಗೊಳಿಸಿದ ಕರ್ತವ್ಯಗಳನ್ನು ನೆರವೇರಿಸುವುದನ್ನು ನಿಧಾನವಾಗಿ ಜನರು ಬಿಡತೊಡಗಿದರು. ಸಾಮಾಜಿಕ ಸಂರಚನೆ ದುರ್ಬಲಗೊಂಡಿತು. ಕೊನೆಗೆ ಗುಣಲಕ್ಷಣಗಳಿಂದ ಆಧಾರಿತವಾಗಿದ್ದ ವ್ಯವಸ್ಥೆ (ಪದ್ಧತಿ) ಅನುವಂಶಿಕವಾಯಿತು. ಯಾರೂ ಇದನ್ನು ಪ್ರತಿಭಟಿಸಲು ಧೈರ್ಯ ಮಾಡಲಿಲ್ಲ. ನಿಯಮಾವಳಿಗಳನ್ನು ರೂಪಿಸಲಾಯಿತು, ಮತ್ತು ಸ್ಮೃತಿಗಳಲ್ಲಿ ಸೇರಿಸಲಾಯಿತು.

ಇಂದು ವರ್ಣವ್ಯವಸ್ಥೆಯು ಹುಟ್ಟು ಆಧಾರಿತವಾಗಿದೆ. ತಂದೆ-ತಾಯಿಗಳು ಬ್ರಾಹ್ಮಣರಾಗಿದ್ದರೆ ಅವರ ಸಂತಾನವು ಬ್ರಾಹ್ಮಣರೆಂದು ಕರೆಯಲು ಅರ್ಹರಾಗಿದ್ದಾರೆ. ಹಾಗೆಯೇ ಒಬ್ಬ ಕ್ಷತ್ರಿಯರಾಗಿದ್ದರೆ, ಅವನು ಕ್ಷತ್ರಿಯನಾಗುತ್ತಾನೆ. ಆದರೆ ಅವನು ಕ್ಷತ್ರಿಯನ ಗುಣ-ಲಕ್ಷಣಗಳನ್ನು ಹೊಂದಿರಬಹುದು ಅಥವಾ ಹೊಂದದೇ ಇರಬಹುದು. ವೈಶ್ಯನ ತಂದೆತಾಯಿಗಳಿಗೆ ಹುಟ್ಟಿದ ಮಗುವು ಒಬ್ಬ ವೈಶ್ಯನಾಗುತ್ತಾನೆ, ಮತ್ತು ಶೂದ್ರನ ತಂದೆತಾಯಿಗಳಿಗೆ ಹುಟ್ಟಿದ ಮಗುವು ಒಬ್ಬ ಶೂದ್ರನಾಗುತ್ತಾನೆ. ಅವನು ಉತ್ತಮ ಗುಣಗಳನ್ನು ಹೊಂದಿದ್ದರೂ ಶೂದ್ರನಾಗುತ್ತಾನೆ. ಹಳೆಯ ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ತಮ್ಮ ಗುಣಲಕ್ಷಣಗಳಿಂದ ಅವರು ಏನಾಗಿದ್ದರೂ ಅದನ್ನು ತಮ್ಮ ಹುಟ್ಟಿನಿಂದ ನಮ್ಮ ಹೆಮ್ಮೆ ಎಂದು ತೋರಿಸುತ್ತಿದ್ದಾರೆ. ಮತ್ತು ಯಾವುದೇ ಹೊಸ ವ್ಯಕ್ತಿ ಮೊದಲ ಮೂರು ವರ್ಣಗಳಲ್ಲಿ ಪ್ರವೇಶಿಸಲು ಕಷ್ಟವಾಗುತ್ತಿದೆ. ಯಾವ ವ್ಯಕ್ತಿ ಇತಿಹಾಸವನ್ನು ಅಧ್ಯಯನ ಮಾಡಿದ ಅವನಿಗೆ ಈ ಪದ್ಧತಿಯಿಂದ ಹಿಂದು ಸಮಾಜಕ್ಕೆ ಆಗಿರುವ ಹಾನಿಯು ಅರ್ಥವಾಗುತ್ತದೆ. ಈ ಅವಧಿಯಲ್ಲಿ ಸುಮಾರು ಐದು ಸಾವಿರ ಜಾತಿಗಳನ್ನು ನಾಲ್ಕು ವರ್ಣಗಳಿಂದ ಮೂಡಿಬಂದಿವೆ. ತತ್ಪರಿಣಾಮವಾಗಿ ಹಿಂದು ಸಮಾಜದ ಸಾಮಾಜಿಕ ಬಲ ಕುಗ್ಗಿಹೋಗಿದೆ. ಪ್ರತಿಯೊಂದು ಜಾತಿಯೂ ಮತ್ತೊಂದು ಜಾತಿಯೊಂದಿಗೆ ಭೋಜನ ಮಾಡುವುದಿಲ್ಲ ಮತ್ತು ಒಂದು ಜಾತಿಯು ಮತ್ತೊಂದು ಜಾತಿಯೊಂದಿಗೆ ವೈವಾಹಿಕ ಸಂಬಂಧಗಳನ್ನು ಸ್ವಾಗತಿಸುವುದಿಲ್ಲ. ಒಂದು ಜಾತಿಯು ದಮನವನ್ನು ಎದುರಿಸುತ್ತಿದ್ದರೆ ಮತ್ತೊಂದು ಜಾತಿಯು ಮೂಕಪ್ರೇಕ್ಷಕವಾಗಿರುತ್ತದೆ, ಅವು ನೋವು ಅನುಭವಿಸುವವರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುವುದಿಲ್ಲ. ವಾಸ್ತವಿಕವಾಗಿ ಮಾನವರು ಒಂದು ಜಾತಿ. ಕಾನೂನುದಾತರು ಈ ಜಾತಿಯನ್ನು ಹೀಗೆ ವಿವರಿಸಿದ್ದಾರೆ: "ಒಂದೇ ರೀತಿಯ ಗುಣಗಳನ್ನು ಉಳ್ಳವರು, ಒಂದೇ ಆಕಾರವನ್ನು ಮತ್ತು ಒಂದೇ ಮಾದರಿ(ರೀತಿ)ಯ ಸಂತಾನೋತ್ಪತ್ತಿ ಉಳ್ಳವರು ಒಂದೇ ಜಾತಿಗೆ ಸೇರುತ್ತಾರೆ. ಹಾಗೆಯೇ ವ್ಯಾಕರಣದಲ್ಲಿ ಕೂಡ ಒಂದೇ ರೀತಿಯ ದೇಹವುಳ್ಳವರು ಅದೇ ಗುಂಪಿಗೆ ಸೇರಿರುತ್ತಾರೆಂದು ಹೇಳಲಾಗಿದೆ. ಉದಾಹರಣೆಗೆ, ಮನುಷ್ಯ, ಗೋವು, ಕುದುರೆ, ಆನೆ, ಅರಳಿಮರ ಇತ್ಯಾದಿಗಳು."

ಹಿಂದುಗಳು ವರ್ಣಪದ್ಧತಿ ವಿಶ್ವದಲ್ಲಿ ಎಲ್ಲೆಲ್ಲಿಯೂ ಅಸ್ತಿತ್ವದಲ್ಲಿದೆಯೆಂದು ಚಿಂತಿಸುತ್ತಾರೆ. ಇದು ಬರಿಯ ತಪ್ಪುಕಲ್ಪನೆ. ಐತಿಹಾಸಿಕವಾಗಿ ವಿಶ್ವವು ಶ್ರೇಣೀಕೃತ ವ್ಯವಸ್ಥೆಗಳನ್ನು ಹೊಂದಿತ್ತು. ಬೇರೆ ದೇಶಗಳಲ್ಲಿ ಕೂಡ ವರ್ಣವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಅವರ ವರ್ಣವ್ಯವಸ್ಥೆ ಮತ್ತು ನಮ್ಮ ವರ್ಣವ್ಯವಸ್ಥೆಯ ನಡುವಣ ವ್ಯತ್ಯಾಸವು ಬೇರೆ ದೇಶಗಳಲ್ಲಿ ವರ್ಣವ್ಯವಸ್ಥೆಯು ಗುಣ–ಲಕ್ಷಣಗಳ ಆಧಾರದ ಮೇಲಿತ್ತು, ನಮ್ಮ ದೇಶದಲ್ಲಿ ಅದು ಆನುವಂಶಿಕವಾಗಿದೆ. ಅಲ್ಲಿ ಅವರ ಜೀವಿತಕಾಲದಲ್ಲಿ ವರ್ಣವನ್ನು ಬದಲಾಯಿಸಿಕೊಳ್ಳಬಹುದು. ಆದರೆ ಇಲ್ಲಿ ವರ್ಣ ಎಂದೆಂದೂ ಬದಲಾಗುವುದಿಲ್ಲ. ಇದೆಲ್ಲವೂ ಹಲವು ಶತಮಾನಗಳಿಂದ ಬಂದ ಆಚರಣೆಯಾಗಿಬಿಟ್ಟಿದೆ. ವೇದಗಳು ಮತ್ತು ಇತರೆ ಧರ್ಮಗ್ರಂಥಗಳು ವೈರುಧ್ಯದ ಸಾಕ್ಷ್ಯಾಧಾರಗಳನ್ನು ನೀಡುತ್ತವೆ.

"ಕ್ಷತ್ರಿಯರು ಪವಿತ್ರ ಜನಿವಾರದ ಸಂಸ್ಕಾರವನ್ನು ಕಡೆಗಣಿಸಿದರೆ ಅವರು ತಮ್ಮ ಕ್ಷತ್ರಿಯ ವರ್ಣವನ್ನು ಕಳೆದುಕೊಂಡು ಶೂದ್ರರಾಗುತ್ತಾರೆ" ಎಂದು ಮನುಸ್ಮೃತಿ ಹೇಳುತ್ತದೆ.

ಮನುಸ್ಮೃತಿ ಮತ್ತೆ ಹೇಳುತ್ತದೆ: "ಪೌಂಡ್ರ, ಬೌಂದ್ರ, ದ್ರವಿಡ, ಕಾಂಬೋಜ, ಯವನ, ಶಕ, ಪರದ್, ಪಲ್ಲವ, ಚೀನ, ಕಿರಾತ, ದಡ್ ಮೊದಲಾದವುಗಳು ಮೇಲೆ ಹೇಳಿದ ತಮ್ಮ ಕರ್ತವ್ಯಗಳನ್ನು ಮಾಡದಿದ್ದುದರಿಂದ ಬೇರೆಬೇರೆ ಜಾತಿಗಳಾದವು. ಅವರಲ್ಲಿ ಕೆಲವರು ಮ್ಲೇಚ್ಛ ಭಾಷೆಯನ್ನಾಡಿದರೆ ಇತರರು ಆರ್ಯರ ಭಾಷೆಗಳನ್ನು ಮಾತನಾಡುತ್ತಿದ್ದಾರೆ. ಅವರೆಲ್ಲರನ್ನೂ ದಸ್ಯುಗಳೆಂದು ಕರೆಯಲಾಗುತ್ತಿತ್ತು."

ಕೆಲವು ವರ್ಣಗಳು ವಿಧಿ–ಆಚರಣೆಗಳ ಅನುಗುಣವಾಗಿ ಅನುಸರಿಸದಿದ್ದುದರಿಂದ ಮಾತ್ರವಲ್ಲದೆ ಮೌಢ್ಯ ಮತ್ತು ಬ್ರಾಹ್ಮಣರ ಶೋಷಣಾವರ್ತನೆಯಿಂದ ಮ್ಲೇಚ್ಛ ಎಂಬ ಒಂದು ಜಾತಿಯು ಚಾಲ್ತಿಗೆ ಬಂತು.

ವಿಷ್ಣುಪುರಾಣದ ನಾಲ್ಕನೇ ಅಧ್ಯಾಯವು ಬಾಹು ಎಂಬ ತ್ರಿಶಂಕುವಂಶದ ರಾಜನ ಬಗ್ಗೆ ಹೇಳುತ್ತದೆ. ಅವನನ್ನು ಹೈಹ್ಯ, ತಾಲ, ಜಂಘ ಮೊದಲಾದ ಕ್ಷತ್ರಿಯರು ಸೋಲಿಸಿದರು. ಅವನು ತನ್ನ ರಾಣಿಯ ಜೊತೆಯಲ್ಲಿ ಕಾಡಿನಲ್ಲಿ ವಾಸ ಮಾಡುತ್ತಿದ್ದನು. ನಂತರ ಅವನು ಸತ್ತ ಮೇಲೆ ಅವನ ರಾಣಿ ಸತಿ ಹೋಗಬೇಕೆಂದು ಬಯಸಿದ್ದಳು. ಅವಳು ಗರ್ಭವತಿಯಾಗಿದ್ದರಿಂದ ಒಬ್ಬ ಋಷಿ ಅವಳನ್ನು ಸತಿ ಹೋಗುವುದನ್ನು ತಡೆದನು. ಋಷಿಯು ಕ್ಷತ್ರಿಯರನ್ನು ನಾಶ ಮಾಡುವ ಒಬ್ಬ ಧೀರ ಮಹಾರಾಜನು ಅವಳಿಗೆ ಹುಟ್ಟುವನೆಂದು ಭವಿಷ್ಯ ಹೇಳಿದನು. ರಾಣಿಯು ಸತಿ ಹೋಗಲಿಲ್ಲ ಮತ್ತು ಅವಳು ಋಷಿಯ ಆಶ್ರಮದಲ್ಲಿ ವಾಸಿಸತೊಡಗಿದಳು. ಆ ಋಷಿಯು ವಸಿಷ್ಠರನ್ನು ಕರೆದನು. ಒಬ್ಬ ಗಂಡುಮಗು ಆಕೆಗೆ ಜನಿಸಿತು. ಅವನನ್ನು ಸಾಗರ ಎಂದು ಕರೆಯಲಾಯಿತು. ಅವನಿಗೆ ಋಷಿಯು ಯುದ್ಧಕಲೆಯನ್ನು ಕಲಿಸಿದರು. ಅವನು ಬೆಳೆದ ಮೇಲೆ ತಾಯಿಯ ಇತಿಹಾಸವನ್ನು ತಿಳಿದುಕೊಂಡನು. ಅವನು ಕ್ಷತ್ರಿಯರೊಂದಿಗೆ ಹೋರಾಡಿದನು ಮತ್ತು ಅವರೆಲ್ಲರನ್ನೂ ಸೋಲಿಸಿದನು. ಎಲ್ಲಾ ಕ್ಷತ್ರಿಯರು ವಸಿಷ್ಠರ ಬಳಿಗೆ ಹೋದರು. ಆಗ ವಸಿಷ್ಠರು ಸಾಗರನಿಗೆ ಹೇಳಿದರು. "ಮಗುವೇ, ಈ ಕ್ಷತ್ರಿಯರನ್ನು ಕೊಲ್ಲಬೇಡ, ನಾನು ಅವರ ದ್ವಿಜರ (ಎರಡು ಬಾರಿ ಹುಟ್ಟುವ) ಸ್ಥಾನಮಾನವನ್ನು ತೆಗೆದುಕೊಂಡುಬಿಟ್ಟಿದ್ದೇನೆ ಮತ್ತು ಅವರನ್ನು ಧರ್ಮದಿಂದ ಬಹಿಷ್ಕರಿಸಿದ್ದೇನೆ. ಅವರು ಬದುಕಿದ್ದರೂ ನಾನು ಅವರನ್ನು ಕೊಂದಿದ್ದೇನೆ. ಅವರು ಜೀವಂತ ಹೆಣಗಳು.: ಆಗ ಸಾಗರನು ಈ ಕ್ಷತ್ರಿಯ ಜನಾಂಗಗಳನ್ನು ಬದಲಾಯಿಸಿದನು. ಅವರ ತಲೆಜುಟ್ಟುಗಳನ್ನು ಕತ್ತರಿಸಿದನು.

ಮತ್ತು ಅವರನ್ನು ಯವನರೆಂದು ಕರೆದನು. ಅವರ ವೇದಗಳನ್ನು ಮತ್ತು ಇತರೆ ಗ್ರಂಥಗಳನ್ನು ಅಧ್ಯಯನ ಮಾಡುವ ಹಕ್ಕನ್ನು ಕಸಿದುಕೊಂಡನು. ಅವರನ್ನು ಕ್ಷತ್ರಿಯಧರ್ಮದಿಂದ ಹೊರಹಾಕಲಾಯಿತು. ಪರಶುರಾಮರ ಭಯಂಕರ ಕೃತ್ಯಗಳಿಂದ ಕೆಲವು ಕ್ಷತ್ರಿಯರು, ಕ್ಷತ್ರಿಯವರ್ಣ ತ್ಯಜಿಸಿದರು ಮತ್ತು ತಾವೆಲ್ಲರೂ ಸೇರಿಕೊಂಡು ತಮ್ಮದೇ ಆದ ಬೇರೆ ಜಾತಿಗಳನ್ನು ರೂಪಿಸಿಕೊಂಡರು.

ನಮ್ಮ ದೇಶದಲ್ಲಿ ಈ ರೀತಿಯಲ್ಲಿ ಸಾವಿರಾರು ಜಾತಿಗಳು ಜನ್ಮ ತಾಳಿದವು. ಇತಿಹಾಸದ ಒಂದು ಕಾಲಘಟ್ಟದಲ್ಲಿ ನಿಮ್ಮ ಜಾತಿಗಳು ಕ್ಷತ್ರಿಯ ವರ್ಣದಿಂದ ಪ್ರತ್ಯೇಕಗೊಂಡಿರಬಹುದು. ಐತಿಹಾಸಿಕವಾಗಿ ಜಗತ್ತು ಈ ರೀತಿಯಲ್ಲಿ ಹಲವು ಬಾರಿ ಬದಲಾಗಿರಬಹುದು. ಅದು ಇನ್ನೂ ಬದಲಾಗುತ್ತಿದೆ ಮತ್ತು ಭವಿಷ್ಯವನ್ನು ಬದಲಾಯಿಸಬಹುದು. ಇದು ಪ್ರಕೃತಿಯ ನಿಯಮ. ಮಹಾಭಾರತದ ಕಾಲದವರೆಗೆ ಈ ದೇಶದ ಕ್ಷತ್ರಿಯರು ಇತರೆ ದೇಶಗಳ ಕ್ಷತ್ರಿಯರೊಂದಿಗೆ ವಿವಾಹವಾಗುತ್ತಿದ್ದರು. ಮಹಾಭಾರತದಲ್ಲಿ ಉದಾಹರಣೆಗಳೊಂದಿಗೆ ಸುಲಭವಾಗಿ ನೋಡಬಹುದು. ಅರ್ಜುನನು ಉಲೂಪಿಯನ್ನು ಮದುವೆಯಾಗಿದ್ದು, ಧೃತರಾಷ್ಟ್ರನು ಗಾಂಧಾರಿಯನ್ನು ಮದುವೆಯಾದದ್ದು ಇತ್ಯಾದಿ. ಇತಿಹಾಸವು ಮಹಾಭಾರತದ ಕಾಲಕ್ಕಿಂತ ಮೊದಲು ಅಂತಹ ಮದುವೆಗಳ ಬಗ್ಗೆ ಹೇಳುತ್ತದೆ.

ನಾನು ಈಗ ಪ್ರಸ್ತುತ ಸಮಸ್ಯೆಗಳ ಬಗ್ಗೆ ಕೆಲವು ಸಂಗತಿಗಳನ್ನು ಹೇಳಬಯಸುತ್ತೇನೆ. ನೀವು ಮನಃಪೂರ್ವಕವಾಗಿ ಕ್ಷತ್ರಿಯಧರ್ಮವನ್ನು ಆಲಂಗಿಸಿಕೊಳ್ಳಲು ಬಯಸಿದರೆ ನಾನು ಹೃದಯಪೂರ್ವಕವಾಗಿ ಸ್ವಾಗತಿಸುತ್ತೇನೆ. ನೀವು ಕ್ಷತ್ರಿಯರಾದಿರಿ. ನೀವು ಪ್ರಯತ್ನಮಾಡಿ ಕ್ಷತ್ರಿಯರ ಗುಣ-ಲಕ್ಷಣಗಳನ್ನು ಗಳಿಸಿರಿ. ನಮ್ಮ ದೇಶದ ಬಡಜನರನ್ನು ರಕ್ಷಿಸಲು ಸಿದ್ಧರಾಗಿರಿ. ನಾವು ಕ್ಷತ್ರಿಯರಾಗುವುದಕ್ಕೆ ವೇದಗಳ ಪ್ರತಿಯೊಂದು ಸಮ್ಮತಿಯೂ ಇದೆ. ದೇವರು ಅದನ್ನು ಮನವರಿಕೆ ಮಾಡಿಕೊಳ್ಳಲು ಎಲ್ಲಾ ವಿಧಾನಗಳನ್ನು ನೀಡಿದ್ದಾನೆ. ಪ್ರತಿಯೊಬ್ಬನೂ ಎಲ್ಲಾ ವರ್ಣಗಳ ಗುಣ-ಲಕ್ಷಣಗಳನ್ನು ಗಳಿಸಿಕೊಂಡರೆ ದೇಶವು ಸುಧಾರಿಸುವುದು. ಇದು ಜ್ಞಾನದ ಯುಗ ಎಂಬುದನ್ನು ನಾವೆಲ್ಲರೂ ನೆನಪಿಡಬೇಕು. ಜ್ಞಾನವು ಎಲ್ಲ ಮನಸ್ಸುಗಳನ್ನು ಬೆಳಗಿಸಿದೆ. ನೀವು ಹುಟ್ಟಿನಿಂದ ಬ್ರಾಹ್ಮಣ ಅಥವಾ ಕ್ಷತ್ರಿಯನಾದರೆ ನಿಮ್ಮನ್ನು ಯಾರೂ ಗೌರವಿಸುವುದಿಲ್ಲ. ಹುಟ್ಟಿನಿಂದ ಕ್ಷತ್ರಿಯ ಎಂಬ ಪಟ್ಟಿಯನ್ನು ನಿಮ್ಮ ಹೆಸರುಗಳಿಗೆ ಸೇರಿಸಬೇಡಿ. ನಾವು ಕ್ಷತ್ರಿಯರು, ನೀವು ಇಂತಿಂಥ ವಂಶಕ್ಕೆ ಸೇರಿದ್ದೇವೆಯೆಂದು ವಾದ ಮಾಡಬೇಡಿ. ಇದು ಪ್ರಗತಿ ಹೊಂದಲು ಉತ್ತಮ ಮಾರ್ಗವಲ್ಲ. ಜನಗಣತಿಯ ಅಧಿಕಾರಿಗಳು ಅಥವಾ ಯಾರಾದರೂ ನಿಮ್ಮ ಬಗ್ಗೆ ಹೇಳಿದರೆ ಅದರ ಬಗ್ಗೆ ಲಕ್ಷ್ಯ ಕೊಡಬೇಡಿ. ನಿಮ್ಮ ಜಾತಿಯಲ್ಲಿ ವೇದೋಕ್ತ ಸಂಸ್ಕಾರ, ವೇದೋಕ್ತ ಕರ್ಮ ಮತ್ತು ಒಳ್ಳೆಯ ಕೃತಿಗಳಿಗೆ ಪ್ರಯತ್ನಿಸಿ ಮತ್ತು ಹರಡಿ. ನಿಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಿ ಮತ್ತು ಬಡಬಗ್ಗರಿಗೆ ಸಹಾಯಮಾಡಿ.

ಕುರ್ಮಿಗಳಲ್ಲಿ ವಿಧವೆಯರ ಪುನರ್‌ವಿವಾಹದ ಪದ್ಧತಿಯಿರುವುದು ಸಂತೋಷದ ಸಂಗತಿ. ಇದನ್ನು ಗಮನಿಸಲೇಬೇಕು. ನಿಮ್ಮ ಕ್ಷತ್ರಿಯ ಜಾತಿಯಲ್ಲಿ ಶಿಶುಹತ್ಯೆ ಮತ್ತು ವಿವಾಹೇತರ ಲೈಂಗಿಕ ಸಂಬಂಧಗಳಿಂದ ಮುಕ್ತವಾಗಿರುವುದೆಂದು ನಾನು ನಂಬುತ್ತೇನೆ. ಇದು ಪ್ರಕೃತಿವಿಕೋಪಗಳಂತೆ ಸಹಜವಾದದ್ದು. ಇದು ಮಾನವ ಸಮಾಜವನ್ನು ಆರೋಗ್ಯವಾಗಿಡುವುದಕ್ಕೆ ಸಹಾಯ ಮಾಡುತ್ತದೆ. ವೇದಗಳು ಇದನ್ನು ಬೆಂಬಲಿಸುತ್ತವೆ. ನನ್ನ ಸರಕಾರ ವಿಧವಾ ಪುನರ್‌ವಿವಾಹಕ್ಕೆ ಕಾಯ್ದೆಯನ್ನು ಪಾಸು ಮಾಡಿದೆ. ಈ ವಿಧವಾ ಪುನರ್‌ವಿವಾಹವನ್ನು

ಆಚರಿಸದ ಜಾತಿಗಳು ಶಿಶುಹತ್ಯೆ ಮತ್ತು ವಿವಾಹೇತರ ಲೈಂಗಿಕ ಸಂಬಂಧಗಳ ವಿಕೋಪಗಳನ್ನು ಎದುರಿಸಬೇಕಾಗುತ್ತದೆ. ಈ ರೀತಿಯಲ್ಲಿ ಪ್ರತಿ ವರ್ಷ ಸಾವಿರಾರು ಮಕ್ಕಳು ಸಾಯುತ್ತಿರುವುದು ದುಃಖದ ಕತೆಯಾಗಿದೆ.

ಭಾರತೀಯರು ಅಭಿವೃದ್ಧಿಗೆ ಮೂರು ವಿಧಾನಗಳನ್ನು ಯೋಚಿಸುತ್ತಾರೆ: ಪರ್ದಾ, ಸ್ವಜಾತಿಯಲ್ಲಿ ಮದುವೆ ಮತ್ತು ಇತರೆ ಜಾತಿಗಳೊಂದಿಗೆ ಸಹಭೋಜನ ಮಾಡದಿರುವುದು.

ಕ್ಷತ್ರಿಯ ಮಹಿಳೆಯರಾದ ಕೊಲ್ಹಾಪುರ ವಂಶದ ಸ್ಥಾಪಕರಾದ ಮಹಾರಾಣಿ ತಾರಾಬಾಯಿ, ಮಹಾರಾಣಿ ಅಹಲ್ಯಾಬಾಯಿ, ಝಾನ್ಸಿ ಲಕ್ಷ್ಮಿಬಾಯಿ, ಮಹಾರಾಣಿ ಕಮಲಾಬಾಯಿ ಅವರು ಸಫಲವಾಗಿ ಸಂಸ್ಥಾನಗಳನ್ನು ನಡೆಸಿದರು ಮತ್ತು ಶತ್ರುವಿನ ಜೊತೆಯಲ್ಲಿ ಯುದ್ಧಭೂಮಿಯಲ್ಲಿ ಹೋರಾಡಿದರು. ಅವರು ಪರ್ದಾ ವ್ಯವಸ್ಥೆಯನ್ನು ಅನುಸರಿಸಿದ್ದರೆ ಇವೆಲ್ಲವೂ ನಡೆಯುತ್ತಿರಲಿಲ್ಲ. ಇಂದೂ ಸಹ ಪರ್ದಾ ಆಚರಣೆಯು ಎಲ್ಲಾ ಪ್ರಾಂತ್ಯಗಳಲ್ಲಿ ಪ್ರಚಲಿತವಾಗಿಲ್ಲ. ಪರ್ದಾ ಪದ್ಧತಿ ಮಹಾರಾಷ್ಟ್ರ, ಮದ್ರಾಸು, ಗುಜರಾತು ಮೊದಲಾದ ಕಡೆಗಳಲ್ಲಿ ಇಲ್ಲ. ಕೆಲವು ಬೇರೆ ಪ್ರದೇಶಗಳಲ್ಲಿ ಕೆಲವು ಜಾತಿಗಳಲ್ಲಿ ಪರ್ದಾವನ್ನು ಆಚರಿಸಲಾಗುತ್ತದೆ. ಪರ್ದಾಪದ್ಧತಿಯಿಂದ ಮಹಿಳೆಯರಲ್ಲಿನ ಧೈರ್ಯ-ಸಾಹಸ ಎಂಬ ಗುಣವೇ ಹಾಳಾಗಿಬಿಟ್ಟಿದೆ. ನಿಮ್ಮಲ್ಲಿ ಮದುವೆಗಳಿಗೆ ಕೃಷಿಯೇ ಪ್ರಧಾನ ಪರಿಗಣನೆಯಾಗಿರುವುದು ನನಗೆ ಸಂತೋಷ ತಂದಿದೆ. ಕೃಷಿಯು ಒಂದು ಮಹತ್ವದ್ದು ಮತ್ತು ಪರಿಶುದ್ಧವಾದದ್ದು. ವೇದಗಳ ಕಾಲದಲ್ಲಿ ಒಬ್ಬ ಚಕ್ರವರ್ತಿ, ರಾಜ ಮತ್ತು ಅವನ ಮಂತ್ರಿಗಳು ಕೃಷಿಯ ಅಭಿವೃದ್ಧಿಗಾಗಿ ಕನಿಷ್ಠ ವರ್ಷದಲ್ಲಿ ಒಮ್ಮೆಯಾದರೂ ಭೂಮಿಯನ್ನು ಉಳುಮೆ ಮಾಡುತ್ತಿದ್ದರು. ಭೂಮಿಯನ್ನು ಉಳುಮೆ ಮಾಡಿ ಒಂದು ಬೀಜಬಿತ್ತಿ ಸಾವಿರಾರು ಧಾನ್ಯಗಳನ್ನು ಪಡೆಯುವುದು ಮತ್ತು ಅಪಾರ ಜನಸ್ತೋಮಕ್ಕೆ ತಿನಿಸುವುದು ನನ್ನ ಅಭಿಪ್ರಾಯದಲ್ಲಿ ಕೀಳು ಮತ್ತು ಕೆಟ್ಟ ಕೆಲಸವಲ್ಲ. ನಾನು ನನ್ನ ಮಗನನ್ನು ವಿದೇಶದ ಮತ್ತು ಅಲಹಾಬಾದಿನ ಶಾಲೆಗಳಿಗೆ ಕೃಷಿ ಅಧ್ಯಯನಕ್ಕೆ ಕಳುಹಿಸಿದ್ದೆ. ಕೃಷಿ ಎರಡು ರೀತಿಯ ಪ್ರಗತಿಯನ್ನು ತರುತ್ತದೆ. ನೀನು ಸಂತೋಷವಾಗಿರುತ್ತೀಯ ಮತ್ತು ಬೇರೆಯವರನ್ನು ಸಂತೋಷಪಡಿಸುತ್ತೀಯ. ಕೃಷಿಯು ಪಶುಸಂಗೋಪನೆ ಮತ್ತು ಸಂರಕ್ಷಣೆಗೆ ಸಂಬಂಧಿಸಿದೆ. ಈ ಉದ್ದೇಶದಿಂದ ಪಶುಸಂಗೋಪನೆಯ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಬೇಕಾಗಿದೆ. ನಮ್ಮ ದೇಶ ಹಾಲು ಮತ್ತು ತುಪ್ಪದಲ್ಲಿ ಶ್ರೀಮಂತವಾಗಿರಬೇಕು.

ಕೃಷಿಯಲ್ಲಿ ತೊಡಗುವುದು ನೀವು ಕ್ಷತ್ರಿಯನಾಗಿರುವುದಕ್ಕೆ ತೊಡಕಾಗುವುದಿಲ್ಲ. ಕಸಬುಗಳಲ್ಲಿ ತೊಡಗಿರುವ ಜನರು ಸಮಾಜಕ್ಕೆ ಸಮೃದ್ಧಿಯನ್ನು ತರುವುದು ಯಾವುದೇ ರೀತಿಯಲ್ಲಿ ಕಳಪೆ ಎಂಬುದನ್ನು ನಾನು ಒಪ್ಪುವುದಿಲ್ಲ.

ಯೂರೋಪಿನಲ್ಲಿ ಕೃಷಿಕರನ್ನು ಸುಸಂಸ್ಕೃತರೆಂದು ಪರಿಗಣಿಸಲಾಗುತ್ತದೆ. ಕೃಷಿಕರು ಸರಕಾರಿ ಕೆಲಸಗಳಲ್ಲಿ ಸಾಕಷ್ಟು ಘನತೆಗೌರವಗಳನ್ನು ಪಡೆದಿದ್ದಾರೆ. ಯಾರೂ ಸಹ ಚಪ್ಪಲಿ ಹೊಲಿಯುವವನನ್ನು ಅಥವಾ ಕಸಗುಡಿಸುವವನನ್ನು ಕೀಳೆಂದು ಭಾವಿಸುವುದಿಲ್ಲ. ಆದರೆ ಭಾರತದಲ್ಲಿ ಶಿಕ್ಷಿತ ಜನರು ಅಂಥ ಕೆಲಸಗಳಿಗೆ ಹೋಗುವುದಿಲ್ಲ; ಅವರು ತಮ್ಮನ್ನು ಶೂದ್ರರೆಂದು ಭಾವಿಸುತ್ತಾರೆಂದು ಯೋಚಿಸುತ್ತಾರೆ. ಸಂಪತ್ತು ಈ ರೀತಿಯಲ್ಲಿ ನಿರ್ಮಾಣ ಮಾಡುವುದಕ್ಕಾಗುವುದಿಲ್ಲ. ಸಂಪತ್ತು ಇಲ್ಲದೆ ದೇಶವನ್ನು ಹೇಗೆ ಅಭಿವೃದ್ಧಿಪಡಿಸುವುದು?

ದೇವರು ಸರ್ವಶಕ್ತನು! ನನ್ನ ದೇಶದಲ್ಲಿ ಜನರು ಬುದ್ಧಿವಂತರಾಗಲಿ, ಅವರ ಹೃದಯಗಳು ಜ್ಞಾನದಿಂದ ಬೆಳಗಲಿ, ನಾವೆಲ್ಲರೂ ಅಣ್ಣ–ತಮ್ಮಂದಿರಂತೆ ಬಾಳೋಣ. ನಾವೆಲ್ಲರೂ ಸುಖ–ದುಃಖಗಳನ್ನು ಸಮನಾಗಿ ಹಂಚಿಕೊಳ್ಳೋಣ. ನಾವೆಲ್ಲರೂ ದೈಹಿಕವಾಗಿ, ಆಧ್ಯಾತ್ಮಿಕವಾಗಿ ಮತ್ತು ಸಾಮಾಜಕವಾಗಿ ಅಭಿವೃದ್ಧಿ ಹೊಂದೋಣ ಮತ್ತು ಭೂಮಿಯಲ್ಲಿ ಈ ಜಗತ್ತನ್ನು ಸ್ವರ್ಗವನ್ನಾಗಿ ಮಾಡೋಣ. ಕೊನೆಯದಾಗಿ, ನಾನು ಕುರ್ಮಿಕ್ಷತ್ರಿಯರಿಗೆ ಕೃತಜ್ಞತೆಗಳನ್ನು ಸಲ್ಲಿಸುವೆನು, ಮತ್ತು ನಿಮ್ಮ ಸಮುದಾಯದ ಅಭಿಲಾಷೆಗಳನ್ನು ನೆರವೇರಿಸಲಿ ಮತ್ತು ಸಮೃದ್ಧಿಯನ್ನು ನೀಡಲಿ ಎಂದು ನಾನು ದೇವರಲ್ಲಿ ಪ್ರಾರ್ಥನೆ ಮಾಡುತ್ತೇನೆ.

---

೭

# ಇಡೀ ವಿಶ್ವವನ್ನು ಒಳಗೊಳ್ಳುವ ಧರ್ಮ– ಆರ್ಯಧರ್ಮ

ಸೌರಾಷ್ಟ್ರದ ಭಾವನಗರದಲ್ಲಿ ಮಾರ್ಚ್ ೮, ೧೯೨೦ರಂದು ಅಖಿಲ ಭಾರತ ಆರ್ಯಧರ್ಮದ ಸಮ್ಮೇಳನ (ಆರ್ಯ ಸಮಾಜ) ನಡೆಯಿತು. ಸಮಾರೋಪ ಸಮಾರಂಭದಲ್ಲಿ ರಾಜರ್ಷಿ ಶಾಹು ಈ ಕೆಳಕಂಡ ಭಾಷಣವನ್ನು ನೀಡಿದರು. ಇಲ್ಲಿ ಶಾಹುರವರು ಸ್ವಾಮಿ ದಯಾನಂದ ಸರಸ್ವತಿಯವರ ಜೀವನ ಮತ್ತು ಕೃತಿಗಳ ಮಹತ್ವದ ಬಗ್ಗೆ ಒತ್ತುಕೊಟ್ಟು ಅವರು ಸ್ಥಾಪಿಸಿದ ವೈದಿಕ ಧರ್ಮದ ನಂಬಿಕೆಯು ರಾಷ್ಟ್ರವನ್ನು ಸಶಕ್ತಗೊಳಿಸುವುದಕ್ಕೆ ಅತ್ಯಂತ ಸೂಕ್ತ ವಿಧಾನವೆಂದು ತಿಳಿಸುತ್ತಾರೆ. ಶಾಹುರವರು "ವೈದಿಕ ಧರ್ಮವು ಇತರೆ ಶ್ರದ್ಧೆ(ನಂಬಿಕೆ)ಗಳಿಗಿಂತ ಅತಿ ಮಹತ್ವದ್ದೆಂದು ನಾನು ಅದನ್ನು ಸ್ವೀಕರಿಸಿದ್ದೇನೆ" ಎಂದು ಸಾರ್ವಜನಿಕವಾಗಿ ಘೋಷಿಸುತ್ತಾರೆ. ಸ್ವಾಮಿ ದಯಾನಂದ ಸರಸ್ವತಿಯವರು ಪ್ರತಿಪಾದಿಸಿದ ವೈದಿಕ ಧರ್ಮವು ಭವಿಷ್ಯದಲ್ಲಿ ಜಗತ್ತನ್ನೇ ಗೆಲ್ಲಬಹುದೆಂದು ತಮ್ಮ ಭರವಸೆಯನ್ನು ವ್ಯಕ್ತಪಡಿಸುತ್ತಾರೆ.

---

ಪ್ರೀತಿಯ ಸಜ್ಜನರೇ,

ಭಾರತದ ಇತಿಹಾಸದ ಬಗ್ಗೆ ಕಣ್ಣು ಹಾಯಿಸೋಣ.

ಸಹಸ್ರವರ್ಷದ ಹಿಂದಿನ ಭಾರತ ಮತ್ತು ಇಂದಿನ ಭಾರತದ ನಡುವೆ ಅಗಾಧವಾದ ವ್ಯತ್ಯಾಸವಿದೆ. ಗುಣಗಳಾದ (ಮೌಲ್ಯ) ಧೈರ್ಯ, ವಿವೇಕ, ಧರ್ಮನಿಷ್ಠೆ, ಔದಾರ್ಯತೆಗಳು ಈಗ ಮಾಯವಾಗಿವೆ. ಇಂದು ಭಾರತದಲ್ಲಿ ನಡೆಯುವ ದುರಾಚಾರದ ಬಗ್ಗೆ ಆಶ್ಚರ್ಯವನ್ನು ವ್ಯಕ್ತಪಡಿಸುವುದನ್ನು ನಾವು ನಿಲ್ಲಿಸಿಬಿಟ್ಟಿದ್ದೇವೆ. ದುರಾಚಾರಗಳಾದ ಬಾಲ್ಯವಿವಾಹ, ಬಹುವಿವಾಹ ಪದ್ಧತಿ, ಮದ್ಯಪಾನ, ಮಹಿಳೆಯರಲ್ಲಿ ಶಿಕ್ಷಣದ ಕೊರತೆ, ಜಾತಿಪದ್ಧತಿ ಮೊದಲಾದವುಗಳಿಂದ ಸಮಾಜವು ಜೀವರಹಿತವಾಗಿದೆ.

ಜಾತಿಪದ್ಧತಿಯ ಉದಾಹರಣೆಯನ್ನೇ ತೆಗೆದುಕೊಳ್ಳಿ. ಇಡೀ ಭಾರತದಲ್ಲಿ, ಅದರಲ್ಲೂ ವಿಶೇಷವಾಗಿ ಮಹಾರಾಷ್ಟ್ರದಲ್ಲಿ ಬ್ರಾಹ್ಮಣರನ್ನು ಬಿಟ್ಟರೆ ಉಳಿದ ಜಾತಿಗಳಿಗೆ ಸೇರಿದ ಜನರ ಜೀವನದ ಸ್ಥಿತಿ ಚಿಂತಾಜನಕವಾಗಿದೆ. ಈ ಜಾತಿಗಳು ಅಭಿವೃದ್ಧಿ ಮತ್ತು ಪ್ರಗತಿ ಹೊಂದಲು ಅವಕಾಶಗಳನ್ನೇ ನಿರಾಕರಿಸಲಾಗಿದೆ. ಇಂದು ಇಪ್ಪತ್ತನೇ ಶತಮಾನದದಲ್ಲಿ ಕೆಲವು ಜನರನ್ನು ಅಸ್ಪೃಶ್ಯರೆಂದು ಪರಿಗಣಿಸಲಾಗಿದೆ. ಅವರು ಒಂದು ನಿರ್ದಿಷ್ಟ ಜಾತಿಯಲ್ಲಿ ಹುಟ್ಟಿದಿರುವುದೇ ಅವರ ತಪ್ಪಾಗಿದೆ.

ಇಡೀ ಭಾರತದಲ್ಲಿ ಐಕ್ಯತೆ, ಪ್ರೀತಿ ಮತ್ತು ಸಹಕಾರಗಳನ್ನೇ ಕಾಣುವುದಿಲ್ಲ. ನಮ್ಮ ಮೂರ್ಖತನವೇ ಇದಕ್ಕೆ ಕಾರಣ. ಇಂದು ಭಾರತದಲ್ಲಿ ತಮ್ಮ ಸಹ-ಸಹೋದರರ ನೆರಳು ತಮ್ಮ ಮೇಲೆ ಬಿದ್ದರೆ ಸಹಿಸಿಕೊಳ್ಳಲಾರದ ಜನರು ಇದ್ದಾರೆ. ಈ ಜನರು ತಮ್ಮನ್ನು ತಾವೇ ಶ್ರೇಷ್ಠರೆಂದು ಭಾವಿಸಿದ್ದಾರೆ ಮತ್ತು ಅವರು ತಮ್ಮ ಹುಟ್ಟಿನ ಶ್ರೇಷ್ಠತೆಯ ದಂಬಾಚಾರದ ತಪ್ಪುಗ್ರಹಿಕೆಯಲ್ಲಿ ಮುಳುಗಿಹೋಗಿದ್ದಾರೆ ಮತ್ತು ಯಥಾಕಥಿತ ಕೀಳುಜನರ ಮೇಲೆ ನಿರಂತರವಾಗಿ ಅನ್ಯಾಯವೆಸಗುತ್ತಿದ್ದಾರೆ.

ವೇದ ಆದರ್ಶವಾದ ಮೇಲು ಅಥವಾ ಕೆಳವರ್ಣಗಳನ್ನು ಒಬ್ಬ ವ್ಯಕ್ತಿಯ ಗುಣಲಕ್ಷಣಗಳ ಮೇಲೆ ನಿರ್ಧರಿಸಲಾಗುತ್ತದೆ. ಪ್ರಾಚೀನ ಋಷಿಗಳು ಇದನ್ನು ಪ್ರಚಾರ ಮಾಡಿದ್ದರು. "ಪುರಾಣದ" ಕಾಲಗಳಲ್ಲಿ ಬ್ರಾಹ್ಮಣರು ಇದನ್ನು "ಬ್ರಾಹ್ಮಣರು ಬ್ರಾಹ್ಮಣರಿಗೆ ಹುಟ್ಟಿದರೆ ಬ್ರಾಹ್ಮಣರಾಗುತ್ತಾರೆ" ಎಂದು ವ್ಯಾಖ್ಯಾನ ಮಾಡತೊಡಗಿದರು. ಅವರು ಅದನ್ನು ಜಾರಿಗೊಳಿಸಲು ಪುಸ್ತಕಗಳನ್ನು ಬರೆದರು. 'ಸ್ತ್ರೀ ಶೂದ್ರನಾಧೀಯತಾ' (ಸ್ತ್ರೀ ಮತ್ತು ಶೂದ್ರರಿಗೆ ಜ್ಞಾನವಿಲ್ಲ) ಎಂಬುದು ಹೆಚ್ಚುಕಡಿಮೆ ಒಂದು ಪವಿತ್ರ ಶ್ಲೋಕವಾಯಿತು. ತತ್ಪರಿಣಾಮವಾಗಿ ಸ್ತ್ರೀಯರು ಮತ್ತು ಶೂದ್ರರು ಜ್ಞಾನಪಡೆಯಲು ಸಾಧ್ಯವಾಗಲಿಲ್ಲ. ಈ ಪರಿಸ್ಥಿತಿಯು ಬಹಳ ಕಾಲದವರೆಗೆ ಇತ್ತು ಮತ್ತು ಶೂದ್ರರು ತಮ್ಮನ್ನೇ ತಾವು ಅಸ್ಪೃಶ್ಯರೆಂದು ಭಾವಿಸಿಕೊಂಡು ಅಸ್ಪೃಶ್ಯರಾಗಿ ಉಳಿಯಬೇಕಾಯಿತು. ಬ್ರಾಹ್ಮಣರು ಇದರಿಂದ ಪ್ರಯೋಜನ ಪಡೆದರು ಮತ್ತು ಬ್ರಾಹ್ಮಣರು ಹುಟ್ಟಿನಿಂದ ಬ್ರಾಹ್ಮಣರಾದ್ದರಿಂದ ಅವರು ಸಮಾಜದಲ್ಲಿ ಏಕಸ್ವಾಮ್ಯತೆಯನ್ನು ಪಡೆದುಕೊಂಡರು.

ವಾಸ್ತವಿಕವಾಗಿ ಒಬ್ಬ ಬ್ರಾಹ್ಮಣನ ಜೀವನ ಐಹಿಕವಾಗಿ ಇರಬೇಕಾಗಿಲ್ಲ. ಆದರೆ ಎಂದಿನಿಂದ ಮೇಲು ಅಥವಾ ಕೀಳುಗಳ ವಿಮರ್ಶೆಯ ಮಾನದಂಡವನ್ನು ಅನ್ವಯಿಸಲಾಯಿತು. ಅಂದಿನಿಂದ ಯಥಾಕಥಿತ "ಗುರು" ಗಳು ಜೀವನವನ್ನು ಅನುಭವಿಸಲು ಪ್ರಾರಂಭಿಸಿದರು. ಅವರು ಪ್ರತಿಯೊಂದು ಸಂದರ್ಭವನ್ನು, ಹುಟ್ಟಿನಿಂದ ಸಾಯುವವರೆಗಿನ ಮತ್ತು ಒಬ್ಬ ವ್ಯಕ್ತಿ ಸತ್ತನಂತರವೂ ಅವರು ಶ್ರಾದ್ಧಾದಂತಹ ಘಟನೆಗಳನ್ನು ನಿರ್ಮಿಸಿ ಶೋಷಣೆ ಮಾಡುತ್ತಿದ್ದಾರೆ.

ಸಜ್ಜನರೇ! ಬ್ರಾಹ್ಮಣರು ಪ್ರಭುತ್ವದ ತುತ್ತತುದಿಯಲ್ಲಿದ್ದಾಗ "ಅಷ್ಟವರ್ಷಾಭವೇತ್ ಗೌರೀ" (ಹುಡುಗಿ ಎಂಟು ವರ್ಷದವಳಾಗಿರಬೇಕು) ಎಂಬುದು ವೇದ-ಮಂತ್ರದ ವಿರೋಧಿಯಾಗಿದ್ದಾಗ ಮತ್ತು ರಾಷ್ಟ್ರೀಯ ಅಸ್ಮಿತೆ (ಗುರುತು) ಸಂಕಟದಲ್ಲಿದ್ದಾಗ ಸ್ವಾರ್ಥಿಗಳಾಗಿದ್ದರು. ಅಂಥ ಸಂದಿಗ್ಧ ಕಾಲದಲ್ಲಿ ಮಹರ್ಷಿ ದಯಾನಂದ ಅವರು ಭಾವನಗರದ ಸಮೀಪದ ಭಾವುರವಿಹಳ್ಳಿಯಲ್ಲಿ ಹುಟ್ಟಿದ್ದರು. ಅಲ್ಲಿ ಈ ಪ್ರಸ್ತುತ ಸಮ್ಮೇಳನ ನಡೆಯುತ್ತಿದೆ.

ಅವರು ತಮ್ಮ ರಾಷ್ಟ್ರವನ್ನು ಜಾಗೃತಗೊಳಿಸುವುದು ಮಾತ್ರವಲ್ಲದೆ ಇಡೀ ವಿಶ್ವವನ್ನು ಜಾಗೃತಗೊಳಿಸುವುದಕ್ಕೆ ಕಾರ್ಯಪ್ರವೃತ್ತರಾಗಿದ್ದಾರೆ. ಅವರು ಪ್ರಾಯಶ್ಚಿತ್ತವನ್ನು ಮುಗಿಸಿದರು, ವೇದಗಳ ಅಧ್ಯಯನ ಮಾಡಿದರು, ಪ್ರಸ್ತುತ ಭಾರತದಲ್ಲಿರುವ ಪರಿಸ್ಥಿತಿಯನ್ನು ಪರಿವೀಕ್ಷಿಸಿದರು ಮತ್ತು ನಿಸ್ವಾರ್ಥದಿಂದ ಭಾರತದಲ್ಲಿ ಉಲ್ಬಣಿಸುತ್ತಿರುವ ವಾದ-ವಿವಾದ, ವೈಷಮ್ಯಗಳಲ್ಲಿ ಧುಮುಕಿದ್ದಾರೆ. ಅವರು ಪ್ರಾಚೀನ ಋಷಿಗಳು ದಾರಿತಪ್ಪಿದ ಮಕ್ಕಳಿಗೆ ಸರಿಯಾದ ದಾರಿಯನ್ನು ತೋರಿಸಿದ್ದಾರೆ. ಅವರನ್ನು ತೆಗಳಲಾಯಿತು, ದ್ವೇಷಿಸಲಾಯಿತು ಮತ್ತು ಹಿಂಸಿಸಲಾಯಿತು. ಆದರೆ ಈ ಸಂಕಷ್ಟಗಳನ್ನು ಪರಿಗಣಿಸದೆ ಮಹಾನ್, ನಿಸ್ವಾರ್ಥಿ ಋಷಿಗಳಾದ ಮಹರ್ಷಿ ದಯಾನಂದರು ವೈದಿಕಧರ್ಮವನ್ನು ಎತ್ತಿಹಿಡಿದರು. ಯಥಾಕಥಿತ ಬ್ರಾಹ್ಮಣರು ಅವರ ಬಗ್ಗೆ

ಅಸೂಯೆಗೊಂಡಿದ್ದರು. ಅವರು ದಯಾನಂದರನ್ನು ಕಾರ್ಯಚಟುವಟಿಕೆಗಳಿಂದ ತಡೆಯಲು ಮಹಾಪ್ರಯತ್ನ ಮಾಡಿದರು. ಆದರೆ ದೈವದಿಂದ ನಿಯಾಮಕಗೊಂಡ ಒಂದು ಚಲನೆಯನ್ನು ಯಾರಿಂದಲಾದರೂ ನಿಲ್ಲಿಸಲು ಸಾಧ್ಯವೇ? ಅವರ ಹತ್ತು ವರ್ಷಗಳ ಬೋಧನೆ ಪಂಜಾಬ್ ಸಂಯುಕ್ತ ಪ್ರಾಂತ್ಯ, ರಜಪುತಾನ, ಬಂಗಾಳ, ಬಿಹಾರ ಮೊದಲಾದ ಕಡೆಗಳಲ್ಲಿ ಜಾಗೃತಿಯ ಅಲೆಯನ್ನು ಕಂಡಿತು. ಅವರು ಸಾವಿರಾರು ಅನುಚರರನ್ನು ಹೊಂದಿದ್ದರು. ಇಂದು ಇಡೀ ಉತ್ತರಭಾರತದಲ್ಲಿ, ಅಷ್ಟೇ ಅಲ್ಲ ಇಡೀ ಭಾರತದಲ್ಲಿ ವೇದವಿರೋಧಿ ಸ್ತೋತ್ರಗಳ ಬದಲಿಗೆ "ಬ್ರಹ್ಮಚರ್ಯೇಣ ಕನ್ಯಾವಾ ಯುವಾನಂ ವಿಂದತೆ ಪತಿಮ್, ಶೂದ್ರೆ ಬ್ರಾಹ್ಮಣಾಮತಿ ಬ್ರಾಹ್ಮಣೋ ಯತಿ ಶೂದ್ರತಾಮ್" ಎಂಬ ವೇದದ ಸ್ತೋತ್ರಗಳು ರಾರಾಜಿಸುತ್ತಿವೆ.

ಆರ್ಯ ಸಮಾಜದ ಕಾರ್ಯಚಟುವಟಿಕೆಗಳು ಇಡೀ ವಿಶ್ವಕ್ಕೆ ಚಿರಪರಿಚಿತವಾಗಿವೆ. ಅಸ್ಪೃಶ್ಯತೆಯೆಂಬ ನಿಷೇಧವನ್ನು ನೆಲಸಮಗೊಳಿಸುವ ಮೂಲಕ ಅವರು ಯುದ್ಧದ ಸಮಯದಲ್ಲಿ ಸಾಕಷ್ಟು ಸಹಾಯ ಮಾಡಿದರು. ಹಿಂದೆ ವಿದೇಶ ಪ್ರಯಾಣ ಮೈಲಿಗೆಯೆಂದು ಭಾವಿಸಲಾಗಿತ್ತು. ಈಗ ಅದು ಅಪೇಕ್ಷಣೀಯ. ಆರ್ಯಧರ್ಮವು ಇಡೀ ಮಾನವಜನಾಂಗಕ್ಕೆ ಇದೆ. ಹಲವು ಯೂರೋಪಿಯನ್ನರು ಸ್ವೀಕರಿಸಿದ್ದಾರೆ ಮತ್ತು ಕೆಲವರು ಆರ್ಯಧರ್ಮವನ್ನು ಸ್ವೀಕರಿಸುತ್ತಿದ್ದಾರೆ. ವಾಸ್ತವಿಕವಾಗಿ ಹೇಳುವುದಾದರೆ ಲಾರ್ಡ್ ಕಿಚ್ನರ್, ಸರ್ ಹೇಗ್, ಲಾರ್ಡ್ ಫ್ರೆಂಚ್ ಮೊದಲಾದವರನ್ನು ಆರ್ಯರೆಂದು ಪರಿಗಣಿಸಬೇಕಾಗುತ್ತದೆ. ಏಕೆಂದರೆ ಈ ಯುದ್ಧವೀರರು ಪ್ರಶಂಸನೀಯ ರೀತಿಯಲ್ಲಿ ಕ್ಷತ್ರಿಯಧರ್ಮವನ್ನು ನೆರವೇರಿಸಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಆರ್ಯಧರ್ಮವು ರಾಜರನ್ನು ಮತ್ತು ಪ್ರಜೆಗಳನ್ನು ಪ್ರೀತಿಯ ಬಂಧನದಲ್ಲಿ ಒಟ್ಟಿಗೆ ಕೂಡಿಸುತ್ತದೆ. ಈ ಆರ್ಯಧರ್ಮ ಇಡೀ ಜಗತ್ತನ್ನು ಗೆಲ್ಲುತ್ತದೆ ಎಂಬುದು ನನ್ನ ದೃಢವಿಶ್ವಾಸ. ಪ್ರತಾಪಸಿಂಹ, ಸಜ್ಜನಸಿಂಹ ಅವರು ಈ ಆರ್ಯಧರ್ಮದ ಅನುಚರರೆಂಬುದು ನಿಜವಾಗಲೂ ಹೆಮ್ಮೆಯ ವಿಷಯ. ನಾವು ಅದನ್ನು ಅನುಸರಿಸಬೇಕು. ಸ್ವಾರ್ಥಜನರು ಕೂಗಾಟ–ಹಾರಾಟ ಮಾಡಿದರೂ ನಿಜವಾದ ಬ್ರಾಹ್ಮಣರ ಮತ್ತು ಶಿಕ್ಷಿತ ಜನರ ಬೆಂಬಲವನ್ನು ಗಳಿಸಿದ್ದೇವೆ. ದಕ್ಷಿಣದಲ್ಲಿ ಇನ್ನೂ ಸಾಕಷ್ಟು ಕೆಲಸ ಮಾಡಬೇಕಾಗಿದೆ. ಈ ದೇಶದಲ್ಲಿ ಭ್ರಾತೃತ್ವವನ್ನು ಬೆಳೆಸುವುದು ಆರ್ಯರ ಕರ್ತವ್ಯವಾಗಿದೆ.

"ಸತ್ಯಶೋಧಕ ಸಮಾಜ" ದಂತಹ ಸಂಸ್ಥೆಗಳು ಕೆಲವು ಬದಲಾವಣೆಗಳನ್ನು ತಂದಿದ್ದರೂ ಅವರು ಮುಯ್ಯಿಗೆ ಮುಯ್ಯಿ ವಿಧಾನವನ್ನು ಅಳವಡಿಸಿಕೊಂಡಿರುವುದರಿಂದ ಅವರು ಮಹತ್ತರವಾದುದನ್ನು ಸಾಧಿಸಲು ಸಾಧ್ಯವಾಗಿಲ್ಲ. ರಾಷ್ಟ್ರದ ರೋಗಗಳನ್ನು ವಾಸಿಮಾಡುವುದಕ್ಕೆ ಅತ್ಯುತ್ತಮ ಔಷಧಿ ವೈದಿಕಧರ್ಮ– ಹಿಂದುಗಳು ತಮ್ಮ ಅಂತರಂಗಗಳಲ್ಲಿ ವೇದಗಳ ಬಗ್ಗೆ ಹೆಮ್ಮೆಪಡುತ್ತಾರೆ. ಮತ್ತು ಆರ್ಯಸಮಾಜದ ಪರವಾಗಿದ್ದಾರೆ. ಆರ್ಯಧರ್ಮ ಸಮಾಜದ ಸೇವೆಗಾಗಿ ಇದೆ.

ಮಹಾಜನರೇ! ನಾನು ಇತರೆ ಶ್ರದ್ಧೆ–ನಂಬಿಕೆಗಳಿಗಿಂತ ವೈದಿಕಧರ್ಮವು ಹೆಚ್ಚು ಮುಖ್ಯವಾದದೆಂದು ಮನವರಿಕೆ ಮಾಡಿಕೊಂಡು, ಅದನ್ನು ಅನುಸರಿಸುತ್ತಿದ್ದೇನೆ.

ಜನರ ಮಾನಸಿಕ ಅಭಿವೃದ್ಧಿಯ ಉದ್ದೇಶಕ್ಕಾಗಿ (ಬೆಳವಣಿಗೆ) ಸಂಯುಕ್ತ ಪ್ರಾಂತ್ಯದ ಆರ್ಯಪ್ರಸಾರಕ ಸಭೆಗೆ ನಾನು ರಾಜಾರಾಮ್ ಕಾಲೇಜು, ಹೈಸ್ಕೂಲು, ಗುರುಕುಲ, ಅನಾಥಾಲಯ, ಸರದಾರ್ ಬೋರ್ಡಿಂಗ್ ಎಂಬ ಸಂಸ್ಥೆಗಳನ್ನು ನೀಡುತ್ತಿದ್ದೇನೆ. ಈ ಅಭಿವೃದ್ಧಿಯು ಜ್ಞಾನದ ಮೂಲಕ ಸಾಧ್ಯ. ಆದ್ದರಿಂದ ನಾನು ಜ್ಞಾನದ ಈ ಕೀಲಿಕೈಯನ್ನು ಆರ್ಯ ಸಮಾಜಕ್ಕೆ ಹಸ್ತಾಂತರಿಸುತ್ತಿದ್ದೇನೆ. ನಾನು ಸಾಧ್ಯವಾದದ್ದನ್ನು ಮಾಡಿದ್ದೇನೆ.

ನೀವು ಪ್ರೌಢಶಾಲೆಗಳನ್ನು, ಗುರುಕುಲಗಳನ್ನು, ಸಂಸ್ಥೆಗಳನ್ನು ಫಂಡರಾಪುರ, ಜ್ಯೋತಿಬಾ ಮೊದಲಾದ ಕಡೆಗಳಲ್ಲಿ ತೆರೆಯಬೇಕೆಂದು ನನ್ನ ಅಪೇಕ್ಷೆ. ನಾನು ನನ್ನ ಕರ್ತವ್ಯಗಳನ್ನು ನೆರವೇರಿಸಿದ್ದೇನೆ. ಪ್ರತಿಯೊಂದು ನಿಮ್ಮ ಕೈಯಲ್ಲಿದೆ. ಈಗ ಇಷ್ಟೇ ಅಲ್ಲ, ವೈದಿಕಧರ್ಮ ಹರಡಲಿಲ್ಲವೆಂದರೆ ತಪ್ಪು ಸಂಪೂರ್ಣವಾಗಿ ನಿಮ್ಮ ಆರ್ಯಪ್ರಸಾರಕದ್ದಾಗುತ್ತದೆ. ಕೆಲವರು ನಿಜವಾದ ಕಾರ್ಯಕರ್ತರು ಸ್ವಲ್ಪ ಸಮಯವನ್ನು ನನಗಾಗಿ ಮೀಸಲಿಡುವರೆಂದು ನಾನು ಭಾವಿಸುತ್ತೇನೆ.

ಆರ್ಯ ಸಹೋದರರರೇ! ನಮ್ಮಲ್ಲಿರುವ ಕ್ರಿಯಾಶೀಲಹೀನತೆ ಇನ್ನೂ ಹೋಗಿಲ್ಲ. ಋಷಿಯ ಸ್ಫೂರ್ತಿಯು ಶಿಕ್ಷಿತ ಜನರಲ್ಲಿ ಇನ್ನೂ ಕೆಲಸ ಮಾಡುತ್ತಿದೆ. ಎಲ್ಲ ಸಂಸ್ಥೆಗಳು, ಪರಿಷತ್ತುಗಳು "ಯಥೇಮಾಂ ವಾಚಂ ಕಲ್ಯಾಣಿಮ್" ಎಂಬ ವೇದದ ಪರಿಕಲ್ಪನೆಯನ್ನು ಅನುಸರಿಸುತ್ತಾ ತಮ್ಮ ಕರ್ತವ್ಯಗಳನ್ನು ನೆರವೇರಿಸುತ್ತಿಲ್ಲ. ಆರ್ಯ ಸಮಾಜವು ಈ ಪರಿಕಲ್ಪನೆಯನ್ನು ಅನುಸರಿಸಿ ಗುರುಕುಲಗಳನ್ನು, ಅನಾಥಾಲಯಗಳನ್ನು, ಶಾಲೆಗಳನ್ನು, ಕಾಲೇಜುಗಳನ್ನು ಪ್ರಾರಂಭಿಸಿವೆ ಮತ್ತು ಜಾತಿಯ ತಾರತಮ್ಯತೆಯಿಲ್ಲದೆ ವೇದದ ಜ್ಞಾನವನ್ನು ಪ್ರಸಾರಮಾಡುತ್ತಿವೆ. ನಾವು ಋಷಿಯ ಆದರ್ಶದಿಂದ ಬಹಳ ದೂರದಲ್ಲಿದ್ದೇವೆ. ಇದು ಜಡತೆಗೆ ಸಮಯವಲ್ಲ. ನಾವು ಸಕ್ರಿಯರಾಗಬೇಕು. ಪಟೇಲರ ಮಸೂದೆಯ ಉದಾಹರಣೆಯನ್ನು ತೆಗೆದುಕೊಳ್ಳಿ. ನಾವು ಅದನ್ನು ಅನುಸರಿಸಬೇಕು. ವೇದಗಳು ನಿಗದಿಗೊಳಿಸಿರುವ ಗುಣ–ಸಾಮರ್ಥ್ಯಗಳ ಆಧಾರದ ಮೇಲೆ ನಾವು ವರ್ಣವ್ಯವಸ್ಥೆಯನ್ನು ಅನುಸರಿಸುತ್ತಿದ್ದೇವೆಂಬುದನ್ನು ರುಜುವಾತುಪಡಿಸಬೇಕಾಗಿದೆ.

ನಾನು ನಿಮ್ಮ ಬಹಳ ಸಮಯವನ್ನು ತೆಗೆದುಕೊಂಡುಬಿಟ್ಟೆ, ತಾವು ಗಮನವಿಟ್ಟು ಉತ್ಸಾಹದಿಂದ ನನ್ನ ಭಾಷಣವನ್ನು ಕೇಳಿದ್ದೀರಿ. ಇದಕ್ಕಾಗಿ ನಾನು ಪ್ರಾಮಾಣಿಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಋಷಿಗಳಾದ ದಯಾನಂದ ಸರಸ್ವತಿಯವರ ಜೀವನ ನಿಮ್ಮ ಹೃದಯಗಳಲ್ಲಿ ಸ್ವಲ್ಪ ಬದಲಾವಣೆ ತಂದಿರಬಹುದು. ಹಾಗಾದರೆ ಕಾಥೇವಾಡದ ಬಾಲ ಮೂಲ ಶಂಕರ ಅವರು ಭಯಂಕರವಾದ ಪ್ರತಿಜ್ಞೆ ಮಾಡಿ, ಮನೆಬಿಟ್ಟು ಹೊರಗೆ ಹೋದರು; ವೇದದ ಬೋಧನೆಗಳನ್ನು ಅನುಸರಿಸುತ್ತೇವೆ ಮತ್ತು ಪ್ರಚಾರ ಮಾಡುತ್ತೇವೆಯೆಂಬ ಹೊಣೆಯಲ್ಲಿ ಹಿಂಜರಿಯುವುದಿಲ್ಲವೆಂದು ಆಣೆಮಾಡಿ. ಸಹೋದರರರೇ! ನೆನಪಿಡಿ, ಸತ್ಯಕ್ಕೆ ಜಯ ಎಂಬುದನ್ನು. ಇದನ್ನು ಮನಸ್ಸಿನಲ್ಲಿಡಿ, "ಋಷಿಗಳ ಮಿಷನ್ನನ್ನು" (ಹೆಗ್ಗುರಿ) ಹರಡಲು ಪ್ರಯತ್ನಿಸಿ. ದೇವರು ಸಕ್ರಿಯ ಕಾರ್ಯಕರ್ತರಿಗೆ ನಿಮ್ಮಂತೆಯೇ ಸಹಾಯ ಮಾಡುವುದರಿಂದ ದೇವರು ನಿಮಗೆ ಬಲ ನೀಡುವನು.

---

೮

# ನಿಮ್ಮ ಜಾತಿಯವನೇ ನಿಮ್ಮ ನಾಯಕನಾಗಲಿ

**ಕೊಲ್ಹಾಪುರದ ಸಮೀಪದಲ್ಲಿರುವ ಮನ್‌ಗಾವ್‌ನಲ್ಲಿ ೨೨ ಮಾರ್ಚ್, ೧೯೨೦ರಂದು ಅಖಿಲ ಮಹಾರಾಷ್ಟ್ರ ಅಸ್ಪೃಶ್ಯರ ಸಮ್ಮೇಳನ ನಡೆಯಿತು. ಅಸ್ಪೃಶ್ಯರ ಯುವನಾಯಕ ಡಾ. ಅಂಬೇಡ್ಕರರು ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರೆ ಶಾಹುರವರು ಮುಖ್ಯ ಅತಿಥಿಗಳಾಗಿದ್ದರು. ಶಾಹುರವರು ಸಮ್ಮೇಳನದಲ್ಲಿ ಪ್ರಾಚೀನಕಾಲದ ಅಸ್ಪೃಶ್ಯರು ಕಡ್ಡಾಯವಾಗಿ ಹಾಜರಿ ಹಾಕುವುದು (ಅಂದರೆ ನಿರ್ದಿಷ್ಟ ಜಾತಿಗಳ ಅಥವಾ ಪಂಗಡಗಳ ವ್ಯಕ್ತಿಗಳು ಪೋಲೀಸ್ ಠಾಣೆಯಲ್ಲಿ ಅಥವಾ ಸರಕಾರಿ ಅಧಿಕಾರಿಗಳ ಮುಂದೆ ಕಡ್ಡಾಯವಾಗಿ ಹಾಜರಿಯಾಗುವ ಪದ್ಧತಿ) ಅಸ್ಪೃಶ್ಯರಿಗೆ ಅನ್ಯಾಯವಾಗಿತ್ತು ಎಂಬ ಪದ್ಧತಿಯನ್ನು ರದ್ದುಗೊಳಿಸುವುದು ಹಾಗೂ ಮತ್ತೆ ಮುಂದೆ ಜೀತಪದ್ಧತಿಯನ್ನು ರದ್ದುಗೊಳಿವುದಾಗಿ ಘೋಷಿಸಿದರು. ಬೇರೆ ಜಾತಿಗಳ ನಾಯಕರನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ಅಸ್ಪೃಶ್ಯರಿಗೆ ಕರೆಕೊಟ್ಟರು. ಅವರು ಡಾ. ಅಂಬೇಡ್ಕರರಿಗೆ "ಪಂಡಿತ" ಮತ್ತು "ವಿದ್ವಾಂಸರಲ್ಲಿ ಮುತ್ತು" ಎಂಬ ಬಿರುದುಗಳನ್ನು ಕೊಟ್ಟು ಕರೆದರು.**

---

**ಇಂ**ದು ನನ್ನ ಗೆಳೆಯ ಅಂಬೇಡ್ಕರರು ಸಮ್ಮೇಳನದ ಅಧ್ಯಕ್ಷತೆ ವಹಿಸುತ್ತಿದ್ದಾರೆ. ಅವರ ಭಾಷಣದಿಂದ ಪ್ರಯೋಜನ ಪಡೆಯಬೇಕೆಂದು ನಾನು ಉದ್ದೇಶಪೂರ್ವಕವಾಗಿ ಬೇಟೆಯ ಪ್ರಯಾಣವನ್ನು ರದ್ದುಗೊಳಿಸಿದೆನು. ಹಿಂದುಳಿದ ವರ್ಗಗಳ ಸದುದ್ದೇಶಕ್ಕಾಗಿ ಪ್ರತಿಪಾದಿಸುತ್ತಿರುವ ಡಾ. ಅಂಬೇಡ್ಕರರ ಹೊಸ ಪತ್ರಿಕೆ "ಮೂಕನಾಯಕ"ಕ್ಕೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಈ ಸಂದರ್ಭದಲ್ಲಿ ಹಾಜರಿ ಪದ್ಧತಿಯನ್ನು ನಾನು ಏಕೆ ರದ್ದುಗೊಳಿಸುವುದಕ್ಕೆ ಇಷ್ಟಪಟ್ಟೆ ಎಂಬುದನ್ನು ತಿಳಿಸಬಯಸುತ್ತೇನೆ. ಹಾಜರಿಯಿಂದ ಗ್ರಾಮಾಧಿಕಾರಿಗಳು ಮತ್ತು ಇತರೆ ಅಧಿಕಾರಿಗಳು ಈ ಬಡಜನರನ್ನು ಶೋಷಿಸುತ್ತಿದ್ದರು. ರೂಢಿಯಲ್ಲಿರುವ ಕೂಲಿ ೧೨ ಆಣೆಗಳು ಕೊಡಬೇಕಾಗಿದ್ದರೂ ಅಧಿಕಾರಿಗಳು ಅವರು ಮುಫತ್ತಾಗಿ (ಬಿಟ್ಟಿಯಾಗಿ) ಕೆಲಸ ಮಾಡಬೇಕಾಗಿತ್ತು. ಅವರ ಮೇಲೆ ಹಾಜರಿ ಪದ್ಧತಿಯನ್ನು ಹೇರಿ ತಮ್ಮ ಬಯಕೆಯಂತೆ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಯಾವಾಗಲಾದರೊ ಅವರ ಹೊಟ್ಟೆಪಾಡಿಗಾಗಿ ಸ್ವಲ್ಪ ಕೊಡುತ್ತಿದ್ದರು.

ಇಪ್ಪತ್ತನೇ ಶತಮಾನದಲ್ಲಿ ಗುಲಾಮಿತನದ ಈ ವಿಧ ರೂಢಿಯಲ್ಲಿತ್ತು. ಈ ಹಾಜರಿ ಪದ್ಧತಿಯ ಕೆಳಗೆ ಬರುವವರೆಲ್ಲರೂ ತಮ್ಮ ರೋಗಪೀಡಿತ ಬಂಧುಗಳನ್ನು ನೋಡುವ ಹಾಗಿರಲಿಲ್ಲ. ತಮ್ಮ ಹತ್ತಿರದವರನ್ನು

ನೋಡದೆ ರೋಗಿಷ್ಠ ಬಂಧುಗಳು ಸತ್ತಿದ್ದು ಉಂಟು. ರೋಗದಿಂದ ನರಳುತ್ತಿದ್ದ ತಮ್ಮ ಮಕ್ಕಳನ್ನು ಅನಿವಾರ್ಯವಾಗಿ ಬಿಟ್ಟು ಕಡ್ಡಾಯವಾಗಿ ಕೆಲಸಕ್ಕೆ ಹೋಗಬೇಕಾದುದರಿಂದ ಆ ಮಕ್ಕಳು ಆರೈಕೆಯಿಲ್ಲದೆ ಸತ್ತಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಇದಕ್ಕಿಂತ ಕ್ರೌರ್ಯ ಮತ್ತಾವುದಿದೆ? ಹಲವು ಸಂದರ್ಭಗಳಲ್ಲಿ ಮೇಲುಜಾತಿಯ ಜನರು ಬಲೂತೆದಾರರನ್ನು ಕೆಲಸಮಾಡುವಂತೆ ಮಾಡುತ್ತಾರೆ ಮತ್ತು ನಂತರ ಅವರಿಗೆ ಕೂಲಿ ಕೊಡಲು ನಿರಾಕರಿಸುತ್ತಾರೆ. ಹಾಜರಿಯ ಭಯದಿಂದ ಯಾರೂ ದೂರು ಕೊಡುವುದಿಲ್ಲ.

ಮೇಲುಜಾತಿಯ ಪಾಟೀಲ, ಕುಲಕರ್ಣಿ ಮೊದಲಾದವರಿಗೆ ಮನೆಗಳನ್ನು ಕಟ್ಟುವಾಗ ಗುತ್ತಿಗೆದಾರರು ಕೆಳಜಾತಿಗಳಾದ ಬಡಮರಾಠರ, ಸೂರ್ಯವಂಶಿಗಳ, ಸೋಮವಂಶಿಗಳ ಮತ್ತು ಇತರರಿಂದ ಕಾನೂನುಬದ್ಧ ಕೆಲಸಕ್ಕಿಂತ ಹೆಚ್ಚಿಗೆ ದುಡಿಸಿಕೊಂಡು ಸುಲಿಗೆ ಮಾಡುತ್ತಾರೆ. ಹಳ್ಳಿಯಲ್ಲಿ ಕಳ್ಳತನ ನಡೆದಾಗ ಹಾಜರಿಯಲ್ಲಿರುವವರಿಗೆ ಕೆಟ್ಟ ಕಾಲವಾಗಿರುತ್ತದೆ. ಅವರೆಲ್ಲಾ ಗುಣಗಳನ್ನು ಕಡೆಗಣಿಸಲಾಗುತ್ತದೆ ಮತ್ತು ತನಿಖೆ ಮತ್ತು ಕಿರುಕುಳಗಳನ್ನು ಅನುಭವಿಸಬೇಕಾಗುತ್ತದೆ. ಹಾಜರಿಯಲ್ಲಿದ್ದವರ ಕಡೆಯಿಂದ ಅಪರಾಧಿ ಚಟುವಟಿಕೆಗಳಲ್ಲಿ ತೊಡಗಿದವರ ಸಂಖ್ಯೆ ಹಾಜರಿಯಲ್ಲಿ ಇಲ್ಲದವರು ತೊಡಗಿದ ಅಪರಾಧಿಗಳಿಗಿಂತ ಕಡಿಮೆ ಸಂಖ್ಯೆಯಲ್ಲಿರುವುದನ್ನು ನನ್ನ ಅನುಭವದಿಂದ ನಾನು ಹೇಳಬಲ್ಲೆ. ಹಾಜರಿಯಿಂದ ಮುಗ್ಧ ಜನರನ್ನು ಬ್ರಾಂಡು ಮಾಡುವ ಮೂಲಕ ಅವರನ್ನು ಅಪರಾಧಗಳಿಗೆ ಪ್ರಚೋದನೆ ಮಾಡಿದ್ದು ಮಾತ್ರ ಸಾಧನೆಯಾಗಿದೆ. ಅವರಿಗೆ ಪ್ರಾಮಾಣಿಕರಾಗಿ ಮತ್ತು ಜಾಗರೂಕರಾಗಿ ವರ್ತಿಸುವ ಅವಶ್ಯಕತೆಯೇ ಇಲ್ಲ. ಯಾವಾಗಲೂ ಅವರನ್ನು ಹಾಜರಿ ಕೊಡುವುದಕ್ಕೆ ಕರೆಯಲಾಗುತ್ತದೆ. ಏಕೆ ಅವನು ಪ್ರಾಮಾಣಿಕನಾಗಿರಬೇಕು? ಅವರ ಮನಸ್ಥಿತಿಯಲ್ಲಿ ಇದು ಹಾಜರಿಯ ಪರಿಣಾಮವಾಗಿತ್ತು. ನಾನು ಹಾಜರಿಯನ್ನು ರದ್ದುಗೊಳಿಸಿದಾಗಿನಿಂದ ಅಪರಾಧಗಳು ಕಡಿಮೆಯಾಗಿವೆ. ಪ್ರತಿಯೊಬ್ಬರೂ ಪ್ರಾಮಾಣಿಕವಾಗಿ ವರ್ತಿಸಲು ಬಯಸುತ್ತಾರೆ.

ಬಲೂತೆದಾರರಲ್ಲಿ ಜಗಳಗಳು ಕಡಿಮೆಯಾಗಿವೆ. ತಲಾಟಿಗಳನ್ನು ನೇಮಕಮಾಡುವುದು ಇನ್ನೂ ಹೊಸದು. ಆದರೆ ಹಳ್ಳಿಗಳಲ್ಲಿ ಜಗಳಗಳು ಮತ್ತು ವ್ಯಾಜ್ಯಗಳು ಕಡಿಮೆಯಾಗಿವೆಯೆಂದು ನಾನು ಗಮನಿಸಿದ್ದೇನೆ.

ಆದರೆ ನಾನು ವೇಥ್‌ಬಿಗಾರ್ (ಜೀತಪದ್ಧತಿ) ಪದ್ಧತಿಯನ್ನು ನಿಲ್ಲಿಸಿಲ್ಲ. ಆದರೆ ಈ ಜನರು ವತನಕ್ಕೆ ಜೋತುಬಿದ್ದಿದ್ದಾರೆ. ಆದರೆ ಎಷ್ಟು ವತನು? ಸಾಮಾನ್ಯವಾಗಿ ಸ್ವಲ್ಪ ಭೂಮಿ ಅಥವಾ ಒಂದು ಶೋವೆಲನಷ್ಟು (ಒಂದು ಸೊಲಿಗೆ) ಧವಸಧಾನ್ಯಗಳನ್ನು ಕೊಡುವುದು. ಆದರೆ ಅವರ ಜೀವನಕ್ಕೆ ಸಾಕಾಗುತ್ತಿರಲಿಲ್ಲ. ಆದರೆ ಅದಕ್ಕೆ ಜೋತುಬೀಳುವುದಕ್ಕೆ ಸಾಕಾಗುತ್ತಿತ್ತು. ಅವರ ಉಪಜೀವನಕ್ಕೆ ಮತ್ತೇನೂ ಇರಲಿಲ್ಲ, ಅವರು ಕಳ್ಳತನ ಮಾಡಬೇಕಾಗಿತ್ತು. ನಾನು ಎಲ್ಲಾ ಬಲೂತೆದಾರರನ್ನೂ ಮತ್ತು ವತನದಾರರಾದ ಮಹರರನ್ನು ಈ ಅಲ್ಪ ವತನುಗಳಿಗಾಗಿ ಅವುಗಳ ಹಿಂದೆ ಬೀಳಬೇಡಿ ಎಂದು ಕೇಳಿಕೊಂಡೆನು. ಅವುಗಳನ್ನು ಬಿಟ್ಟುಬಿಡಿ. ನಿಮ್ಮ ಮಹರ್ ವತನುಗಳನ್ನು ೧೦ ಎಕರೆಯ ಭೂಮಿ ಪ್ರತಿಯೊಬ್ಬರಿಗೂ ಬರುವಂತೆ ಕಟ್ಟುಗಳಾಗಿ ವಿಭಾಗಿಸಿ. ಈ ವತನಿನಿಂದ ಬಂದ ಆದಾಯವನ್ನು ಹಿರಿಯ ಮಹರನಿಗೆ ಹಂಚಿ, ಒಂದು ಹಳ್ಳಿಯಲ್ಲಿ ೮ ಜನ ಮಹರರಿರಲಿ ಬಿಡಿ, ಅವರನ್ನು ಸನದಿಶೀಲೆದಾರರನ್ನಾಗಿ ನೇಮಕ ಮಾಡಿ. ಇದು ಗುಲಾಮಿ ಪದ್ಧತಿಯಿಂದ ಹೊರಬರುವುದಕ್ಕೆ ಸಾಧ್ಯವಾಗುತ್ತದೆ. ಹೊಸ ಸನದುಗಳನ್ನು ಹಂಚುವ ವ್ಯವಸ್ಥೆಯನ್ನು ಮಾಡುವೆನು. ಆದ್ದರಿಂದ ಉಳಿದ ಮಹರರು ಹಳ್ಳಿಯಿಂದ ಹೊರಹೋಗಲು ಸ್ವತಂತ್ರರು. ಅಥವಾ ಅವರು ಬೇರೆ ಯಾವುದೇ ವೃತ್ತಿಯನ್ನು ಕೈಗೊಳ್ಳಬಹುದು. ಈ ರೀತಿಯಲ್ಲಿ ಅವರೆಲ್ಲರೂ ಬದುಕಬಹುದು ಮತ್ತು ಅವರು ಉಪವಾಸ ಬೀಳುವಂತಿಲ್ಲ. ಕರವೀರ ಮಹಲಿನಿಂದ ಮಹರರು ಈ ಪ್ರಸ್ತಾಪವನ್ನು ಒಪ್ಪಿದರು. ಇನ್ನುಳಿದವರು

ಅನುಸರಿಸುವರೆಂದು ನಾನು ಖಂಡಿತಾ ಭಾವಿಸಿದ್ದೇನೆ. ನನ್ನ ಗೆಳೆಯ ಡಾ. ಅಂಬೇಡ್ಕರರು ಈ ವಿಷಯದಲ್ಲಿ ನನಗೆ ಸಹಾಯ ಮಾಡುವರೆಂದು ಭಾವಿಸಿದ್ದೇನೆ.

ಈ ಪ್ರಯತ್ನದಲ್ಲಿ ಪ್ರಖ್ಯಾತರೂ, ಶಿಕ್ಷಿತರೂ ಆದ ಕೇಶವರಾವ್ ಮತ್ತು ರಾವ್ ಬಹಾದ್ದೂರ್, ಬಾಬು ಕಾಲಿಚರಣ್ ಅವರು ತಮ್ಮ ಇಡೀ ಜೀವನವನ್ನೇ ಹಿಂದುಳಿದ ವರ್ಗಗಳ ಏಳಿಗೆಗೆ ಮುಡುಪಿಟ್ಟ ಅವರು ನನಗೆ ಬಹಳ ಸಹಾಯ ಮಾಡಿದರು. ಪಾಟೀಲರು ಕೂಡ ತಮ್ಮ ಸಹಕಾರವನ್ನು ನೀಡುವರೆಂದು ನಾನು ಭಾವಿಸಿದ್ದೇನೆ. ಸ್ಥಳೀಯ ವ್ಯಾಪಾರಸ್ಥರಾದ ರಾಮ್‌ಭಾವು ಶಿರ್‌ಗಾಂವ್ಕರ್ ಅವರು ಖಂಡಿತವಾಗಿ ನನ್ನನ್ನು ಬೆಂಬಲಿಸಿದರು.

ನಾನು ಹಾಜರಿಯನ್ನು ರದ್ದುಗೊಳಿಸಿದಾಗ, ಹಾಜರಿಯಲ್ಲಿದ್ದ ಜನರು ಕೊಲ್ಹಾಪುರ ಸಂಸ್ಥಾನವನ್ನು ಬಿಟ್ಟು ಬ್ರಿಟಿಷ್ ಪ್ರದೇಶಕ್ಕೆ ಹೋಗಿದ್ದರೆ ಅಂಥವರ ಪಟ್ಟಿಯನ್ನು ಕೊಡಬೇಕೆಂದು ನನ್ನನ್ನು ಕೇಳಲಾಗಿತ್ತು. ಸತಾರಾದ ಪೊಲೀಸ್ ಸೂಪರಿಂಟೆಂಡೆಂಟ್ ಅವರು ನನಗೆ ಬರವಣಿಗೆಯಲ್ಲಿ ೩೦-೦೫-೧೯೧೯ರಂದು ಪತ್ರ ಬರೆದು ಕೇಳಿದ್ದರು, ಅದಕ್ಕೆ ನಾನು ೦೪-೦೬-೧೯೧೯ರಂದು ಪತ್ರ ಬರೆದು ವಿಷಾದವನ್ನು ವ್ಯಕ್ತಪಡಿಸಿದ್ದೆ. ನಾನು ಹಾಜರಿಯನ್ನು ಸಂಪೂರ್ಣವಾಗಿ ರದ್ದುಗೊಳಿಸಿರುವುದರಿಂದ ಅಂತಹ ಮಾಹಿತಿಯನ್ನು ನಾನು ಒದಗಿಸಲಾರೆ. ನಾನು ಅಪರಾಧಿಗಳಾದ ಅಸ್ಪೃಶ್ಯರ ಯಾವುದೇ ವ್ಯಕ್ತಿಯ ಮಾಹಿತಿಯನ್ನು ಒದಗಿಸಬಲ್ಲೆ. ಅವರು ಪ್ರಾಮಾಣಿಕರು ಮತ್ತು ಕಾನೂನು ಪರಿಪಾಲಿಸುವವರನ್ನು ಅಪರಾಧಿಗಳೆಂದು ಹಣೆಪಟ್ಟಿ ಕಟ್ಟಲು ನನ್ನ ಅಂತಃಸಾಕ್ಷಿ ಒಪ್ಪುವುದಿಲ್ಲ. ಹೀಗೆ ನಾನು ಹಾಜರಿಯನ್ನು ರದ್ದುಗೊಳಿಸಿದೆನು.

ತಲಾಟಿ ಪದ್ಧತಿಗೆ ಸಂಬಂಧಿಸಿದಂತೆ ಸೇವೆಗೆ ವತನದಾರರು ನಿಮಗೆ ಬೇಕಿಲ್ಲದಿದ್ದರೆ, ಪಾಟೀಲರು ನಿಮಗೆ ಏಕೆ ಬೇಕೆಂದು ಕೆಲವರು ಕೇಳಿದರು. ಇಲ್ಲ! ಇಲ್ಲ! ಎಂದಿಗೂ ಇಲ್ಲ! ಪಾಟೀಲರು ಏಕೆ ಬೇಕೆಂಬುದಕ್ಕೆ ಕೆಲವು ಕಾರಣಗಳಿವೆ. ಒಂದು ಗ್ರಾಮದಲ್ಲಿ ಒಬ್ಬ ಜವಾಬ್ದಾರಿ ಅಧಿಕಾರಿಯಿರಬೇಕೆಂದು ಒಬ್ಬ ಅವಿದ್ಯಾವಂತ ಹಳ್ಳಿಗಮಾರನೂ ಒಪ್ಪುವನು. ಅದೇ ವಿಷಯವಾದರೆ ನನ್ನ ಅಭಿಪ್ರಾಯದಲ್ಲಿ ಒಬ್ಬ ಪಾಟೀಲನು ಇರಲಿ. ಆದರೆ ಅವನು ಕುಲಕರ್ಣಿ ವತನದಾರನಂತೆ ಹೊರಗಿನವನಲ್ಲ. ಪಾಟೀಲರ ವತನವನ್ನು ಆದಿಲ್‌ಷಾಹ ಸುಲ್ತಾನರು ನೀಡಿದ್ದರು. ಅವರು ಹಳ್ಳಿಗಳನ್ನು ಸ್ಥಾಪಿಸಿದರು. ಸಾಮಾನ್ಯವಾಗಿ ಗ್ರಾಮದ ಪಾಟೀಲನು ಹಳ್ಳಿಯ ಬಹುಸಂಖ್ಯಾತ ಜಾತಿಯಿಂದ ಬಂದವನಾಗಿರುತ್ತಾನೆ. ಅವನು ಕುಲಕರ್ಣಿಯಂತಲ್ಲ. ಕುಲಕರ್ಣಿ ತನ್ನ ಜಾತಿಯ ಜನರನ್ನು ಹಳ್ಳಿಯಲ್ಲಿ ಹೊಂದಿರುವುದು ಬಹು ಅಪರೂಪ. ಕುಲಕರ್ಣಿಯನ್ನು ತನ್ನ ಜಾತಿಗೆ ಸೇರಿದ ವಕೀಲರು, ನೌಕರಶಾಹಿಗಳು ಬೆಂಬಲಿಸುತ್ತಾರೆ. ಆದ್ದರಿಂದ ಹಳ್ಳಿಯ ಜನರು ಅವನನ್ನು ಕಂಡರೆ ಹೆದರಿಕೊಳ್ಳುತ್ತಾರೆ. ಅವರು ಗ್ರಾಮದ ಸಮುದಾಯದ ಕಲ್ಯಾಣದ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಅವನು ಸಾಮಾನ್ಯವಾಗಿ ಸಾಂದರ್ಭಿಕವಾಗಿ ಹಳ್ಳಿಯ ಬಡಜನರ ಬೆಲೆತೆತ್ತು ಅಥವಾ ಅವರ ಕಲ್ಯಾಣವನ್ನು ಅಲಕ್ಷಿಸಿ ತನ್ನನ್ನು ಬೆಂಬಲಿಸಿದ ನೌಕರಶಾಹಿಯನ್ನು ಮತ್ತು ಅಧಿಕಾರಿಗಳನ್ನು ಬೆಂಬಲಿಸುತ್ತಾನೆ. ಆದರೆ ಪಾಟೀಲರಿಗೆ ಸಂಬಂಧಿಸಿದಂತೆ ಇದು ಭಿನ್ನವಾಗಿದೆ. ಪಾಟೀಲರ ಜಾತಿಯೇ ಹಳ್ಳಿಯಲ್ಲಿ ಬಹುಸಂಖ್ಯಾತರಾಗಿರುವುದರಿಂದ ಅವನು ವಿಧಿಯಿಲ್ಲದೇ ಈ ರೀತಿಯಲ್ಲಿ ವರ್ತಿಸಬೇಕಾಗುತ್ತದೆ. ಆದರೆ ಒಂದು ವೇಳೆ ಗ್ರಾಮದಲ್ಲಿ ಇಬ್ಬರು ಪಾಟೀಲರಿದ್ದರೆ ಕೆಲವು ಸ್ವಾರ್ಥಿಗಳು ಅವರ ನಡುವೆ ಜಗಳ ಹಚ್ಚುತ್ತಾರೆ. ಹಳ್ಳಿಯಲ್ಲಿ ಒಬ್ಬನೇ ಪಾಟೀಲನು ಇರುವ ಕಡೆ ಅಪರಾಧವು ಗಮನಾರ್ಹವಾಗಿ ಕಡಿಮೆಯಿರುತ್ತದೆ. ನಮ್ಮ ಆಡಳಿತಾಧಿಕಾರಿಗಳು ಅದನ್ನು ದೃಢೀಕರಿಸಬೇಕಾಗುತ್ತದೆ.

ನಾನು ಅಸ್ಪೃಶ್ಯರ ಏಳಿಗೆಯ ಬಗ್ಗೆ ಕೈಗೊಂಡ ಕ್ರಮಗಳನ್ನು ಕುರಿತು ಬಾಬುರಾವ್ ಯಾದವ್ ಅವರು ದಾಖಲಿಸಿರುವ ಒಂದು ಕಿರುಪುಸ್ತಕವನ್ನು ಪ್ರಕಟಿಸಿದ್ದಾರೆ. ಈ ಕೆಲಸಕ್ಕಾಗಿ ನಾನು ಅವರಿಗೆ ಚಿರಋಣಿ. ಸತ್ಯಶೋಧಕ ಸಮಾಜ, ಆರ್ಯಸಮಾಜ ಮತ್ತು ಅಮೇರಿಕನ್ ಮಿಷನ್ನು ಈ ಪ್ರಯತ್ನದಲ್ಲಿ ಅವರು ಸಹಾಯ ಮಾಡುತ್ತಿದ್ದಾರೆ. ನಾನು ಕೂಡ ಅವರಿಗೆ ಕೃತಜ್ಞನಾಗಿದ್ದೇನೆ. ದುರದೃಷ್ಟವಶಾತ್ ನಮ್ಮ ಶಿಕ್ಷಿತ ಜನರು ಪ್ರಾಮಾಣಿಕವಾಗಿ ಕೇವಲ ಕೆಲವರು ಮಾತ್ರ ಇದರಲ್ಲಿ ತೊಡಗಿಸಿಕೊಂಡರು. ಈ ದುರದೃಷ್ಟ ಜನರ ಕಲ್ಯಾಣಕ್ಕಾಗಿ ನಿಧಾನವಾಗಿ ಇಡೀ ಸಮಾಜ ಪ್ರಯತ್ನಿಸುವುದೆಂದು ನಾನು ಭಾವಿಸಿದ್ದೇನೆ.

ಮಹರ್, ಮಾಂಗ್, ಚಂಭಾರ್, ಧೋರ್ ಅವರು ವಾಸ್ತವಿಕವಾಗಿ ವೈಶ್ಯರಾಗಿದ್ದರು, ಅವರು ಮೊದಲಿಗೆ ವ್ಯಾಪಾರಸ್ಥರಾಗಿದ್ದರು. ಅವರು ಅಸ್ಪೃಶ್ಯರೆಂದು ಯಾರು ನಿರ್ಧರಿಸಿದರು. ನಾವು ಒಬ್ಬ ಸರಿಯಾದ ನಾಯಕನನ್ನು ಆಯ್ಕೆ ಮಾಡಿಕೊಂಡಿಲ್ಲವೆಂದು ಇಲ್ಲಿ ನೆರೆದಿರುವ ಜನರಿಗೆ ನನ್ನ ಅಭಿಪ್ರಾಯವನ್ನು ತಿಳಿಸುತ್ತಿದ್ದೇನೆ. ನಮ್ಮಲ್ಲಿರುವ ಕೆಲವು ಸ್ವಾರ್ಥಿ ಜನರು ತಮ್ಮ ಸಿಹಿಮಾತುಗಳಿಂದ ಅನಕ್ಷರಸ್ಥ ಜನರನ್ನು ಮೋಸಗೊಳಿಸುತ್ತಿದ್ದಾರೆ ಮತ್ತು ಸರಿಯಲ್ಲದ ನಾಯಕನನ್ನು ನೇಮಿಸುತ್ತಿದ್ದಾರೆ. ಪ್ರಾಣಿಗಳು ತಮ್ಮಲ್ಲಿಯೇ ಒಂದನ್ನು ನಾಯಕನನ್ನಾಗಿ ಮಾಡಿಕೊಂಡಿವೆ. ಒಂದು ಪ್ರಾಣಿಯು ಎಂದಿಗೂ ಪಕ್ಷಿಗಳ ನಾಯಕನಾಗಿಲ್ಲ ಅಥವಾ ಒಂದು ಪಕ್ಷಿಯು ಎಂದಿಗೂ ಪ್ರಾಣಿಗಳ ಪ್ರತಿನಿಧಿಯಾಗಿಲ್ಲ. ಹಸುಗಳು, ಹೋರಿಗಳು ಮತ್ತು ಕುರಿಗಳಿಗೆ ಒಬ್ಬ ಮನುಷ್ಯನು ನಾಯಕನಾಗಿದ್ದಾನೆ. ಆದ್ದರಿಂದಲೇ ಅವು ಕೊನೆಗೆ ಕಸಾಯಿಖಾನೆಗಳನ್ನು ಸೇರಬೇಕಾಗುತ್ತದೆ.

ಬ್ರಾಹ್ಮಣರು ಒಂದು ಅಲ್ಪಸಂಖ್ಯಾತ ಗುಂಪು ಆದರೆ ಅವರು ಹಿಂದುಳಿದ ವರ್ಗಗಳನ್ನು ಮತ್ತು ಕ್ಷತ್ರಿಯರನ್ನು ಕೂಡ (ಕ್ಷತ್ರಿಯರು ಅವರನ್ನು ಮೊಘಲರಿಂದ ರಕ್ಷಿಸಿದರು ಮತ್ತು ಅವರ ಪೂರ್ವಿಕರಾದ ರಾಮ ಮತ್ತು ಕೃಷ್ಣರು ಅವರ ಮನೆದೇವತೆಗಳಾದರು) ಶೂದ್ರರೆಂದು ಮತ್ತು ಸಗಣಿಗಿಂತ ಕೀಳೆಂದು ಅವರು ಮುಟ್ಟಿದರೆ ಶುದ್ಧೀಕರಣಕ್ಕೊಳಗಾಗುತ್ತಾರೆ. ಅಂಥವರನ್ನು ನಾವು ನಮ್ಮ ನಾಯಕರೆಂದು ಕರೆಯಬಹುದೇ? ಅಂತಹ ನಾಯಕರನ್ನು ಪಶ್ಚಿಮ ಅಥವಾ ವಿಶ್ವದಲ್ಲಿ ಎಲ್ಲಿಯಾದರೂ ಯಾರು ಅಂಗೀಕರಿಸುತ್ತಾರೆ?

ಸಗಣಿ ಅಥವಾ ಮಲಕ್ಕಿಂತ ಕಡೆಯೆಂದು ಕರೆದ ಜನರು ತಮ್ಮನ್ನು ನಾಯಕರೆಂದು ಪರಿಗಣಿಸಬೇಕೆಂದು ಆಶಿಸುವುದು ನಿಜವಾಗಿಯೂ ಅವರ ಪಾಲಿಗೆ ನಾಚಿಕೆಗೇಡಿತನವಾಗುತ್ತದೆ! ನಾನು ವಯಸ್ಸಿಗೆ ಬಂದಾಗ ನನ್ನ ಸಂಸ್ಥಾನದಲ್ಲಿ ಒಬ್ಬ ಬ್ರಾಹ್ಮಣೇತರನು ವಕೀಲನಾಗಲೀ ಅಥವಾ ಆಡಳಿತಗಾರನಾಗಲೀ ಇರಲಿಲ್ಲ. ಆದರೆ ಈಗ ಅವರು ಕಾನೂನು ಪದವಿಗಳನ್ನು ಗಳಿಸಿರುವುದರಿಂದ ಹಲವಾರು ವಕೀಲರಿದ್ದಾರೆ. ನಾನು ಸರಕಾರಿ ಹುದ್ದೆಗಳನ್ನು ಮತ್ತು ಕಾನೂನಿನ ಸನದುಗಳನ್ನು ವಿಶೇಷ ಪ್ರಕರಣಗಳೆಂದು ಅಸ್ಪೃಶ್ಯರಿಗೆ ನೀಡಿದ್ದೇನೆ. ಬೇಗನೇ ಅವರು ಬೇರೆಯವರು ದಕ್ಷರಾಗಿರುವಂತೆಯೇ ಅವರು ತಮ್ಮ ವೃತ್ತಿಗಳಲ್ಲಿ ದಕ್ಷರಾಗುವರೆಂದು ನಾನು ಭಾವಿಸುತ್ತೇನೆ. ನಾನು ಸ್ವಯಂ ಆಡಳಿತವನ್ನು ಜನರಿಗೆ ನೀಡಲು ಬಯಸಿದ್ದೇನೆ. ಮತ್ತು ನಾನು ಕೋಮುವಾರು ಪ್ರಾತಿನಿಧ್ಯವನ್ನು ನೀಡಲು ಯೋಜಿಸಿದ್ದೇನೆ. ಇದರಿಂದ ಪ್ರತಿಯೊಬ್ಬರಿಗೂ, ಅಸ್ಪೃಶ್ಯರಿಗೂ ಸಹ ಇದರಿಂದ ಪ್ರಯೋಜನವಾಗುತ್ತದೆ.

ರಾಜಕಾರಣ ಮತ್ತು ಅಸ್ಪೃಶ್ಯತೆಯ ನಡುವೆ ಯಾವ ಸಂಬಂಧವಿದೆಯೆಂದು ನನ್ನನ್ನು ಹಲವರು ಕೇಳಿದರು. ಒಂದು ವೇಳೆ ಯಾವುದೇ ಇದ್ದರೂ ಅದರಂತೆಯೇ ನಾವು ಸರಿಯಾಗಿ ವರ್ತಿಸಬೇಕು.

ಅಸ್ಪೃಶ್ಯರನ್ನು ನೀವು ಮಾನವರೆಂದು ಸಮಾನವಾಗಿ ಉಪಚರಿಸದೆ ಇದ್ದರೆ ಅದು ರಾಜಕಾರಣ ಎನ್ನಿಸಿಕೊಳ್ಳುವುದಿಲ್ಲ ಎಂದು ನಾನು ಹೇಳಿದ್ದೇನೆ. ಯಾರು ರಾಜಕೀಯ ಜೀವನದಲ್ಲಿ ಭಾಗವಹಿಸಬೇಕೆಂದು ಬಯಸುವವರೊ ಅವರು ಎಲ್ಲಾ ಮಾನವರನ್ನು ಘನತೆಗೆ ತಕ್ಕಂತೆ ಪರಿಗಣಿಸಬೇಕು. ನೀವು ಈ ರೀತಿಯಲ್ಲಿ ಅವರನ್ನು ಪರಿಗಣಿಸದೇ ಇದ್ದರೆ ನೀವು ಹೇಗೆ ರಾಷ್ಟ್ರಸೇವೆಯನ್ನು ಮಾಡುವಿರಿ? ಯಾರು ಈ ರೀತಿಯಲ್ಲಿ ವರ್ತಿಸುತ್ತಾರೆ, ಅವರು ರಾಷ್ಟ್ರದ ಸೇವೆಯನ್ನು ಮಾಡುತ್ತಿದ್ದಾರೆ ಎಂದು ಹೇಳಬಹುದು.

ಭಾರತವನ್ನು ಬಿಟ್ಟರೆ ಯಾವುದೇ ರಾಷ್ಟ್ರವು ಜಾತಿಪದ್ಧತಿಯನ್ನು ಹೊಂದಿಲ್ಲ. ದುರದೃಷ್ಟವಶಾತ್ ಭಾರತದಲ್ಲಿ ಜಾತಿಯ ಪೂರ್ವಗ್ರಹಗಳು ತೀವ್ರವಾಗಿರುವುದರಿಂದ ನಮ್ಮ ಸಹ–ನಾಗರಿಕರನ್ನು ಬೆಕ್ಕು ಮತ್ತು ನಾಯಿಗಳಿಗಿಂತ ಕಡೆಯಾಗಿ ನೋಡುತ್ತೇವೆ. ಮತ್ತು ನಾವು ಅಯೋಗ್ಯರನ್ನು ನಾಯಕರಾಗಿ ಆಯ್ಕೆಮಾಡಿಕೊಳ್ಳುವುದರಿಂದಲೇ ಅಹಮದಾಬಾದು, ಅಮೃತಸರ ಮತ್ತು ಮುಂಬೈಗಳಲ್ಲಿ ನಡೆದ ದೊಂಬಿ–ಗಲಭೆಗಳಲ್ಲಿ ಅಮಾಯಕರಾದ ಬಡಜನರು ಸತ್ತಿದ್ದಾರೆ. ನಮಗೆ ನಾಯಕರು ಬೇಡ ಎಂದು ಹೇಳುತ್ತೇವೆ. ನಮಗೆ ಕೆಲಸ ಮಾಡುವವರು, ಜಾತಿಯ ಅಡ್ಡಗೋಡೆಗಳನ್ನು ಕೆಡವುವವರು, ಮತ್ತು ಜನರನ್ನು ಮಾನವರೆಂದು ಸರಿಸಮಾನವಾಗಿ ಕಾಣುವ ನಾಯಕರನ್ನು ನಾವು ಬಯಸುತ್ತೇವೆ. ಅಂಬೇಡ್ಕರರು ಉದಾರ ಅಭಿಪ್ರಾಯಗಳನ್ನು ಹೊಂದಿರುವುದರಿಂದ ನಾನು ಅವರನ್ನು ಹೊಗಳುತ್ತೇನೆ: ಇಂದು ಅವರಿಗೆ ನಾನು ಏಕೆ 'ಪಂಡಿತ' ಎಂಬ ಬಿರುದನ್ನು ಕೊಡಬಾರದು? ಅವರು ಬುದ್ಧಿವಂತರಲ್ಲಿ ಮುತ್ತಿನಂತಹವರು. ಅವರನ್ನು ಆರ್ಯ ಸಮಾಜಗಳು, ಬೌದ್ಧರು ಅಥವಾ ಕ್ರಿಶ್ಚಿಯನ್ನರು ಸಂತೋಷವಾಗಿ ಒಪ್ಪುತ್ತಾರೆ. ತಮ್ಮ ಆವರಣಗಳಲ್ಲಿ ಒಪ್ಪಿಕೊಳ್ಳುತ್ತಾರೆ. ಆದರೆ ನಿಮ್ಮನ್ನು ಮೆಚ್ಚಿಸಲು ಅವರು ಅಲ್ಲಿಗೆ ಹೋಗುವುದಿಲ್ಲ. ನೀವು ಅವರಿಗೆ ಕೃತಜ್ಞರಾಗಿರಿ. ನಾನು ಸಹ ಕೃತಜ್ಞನಾಗಿದ್ದೇನೆ.

---

೬

# ಜಾತಿ ನಾಶಮಾಡಿ, ಒಟ್ಟಾಗೋಣ

ನಾಸಿಕ್‌ನಲ್ಲಿ ಉದಾಜಿ ಮರಾಠ ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯಕ್ಕೆ ೧೫ ಏಪ್ರಿಲ್ ೧೯೨೦ರಂದು ಅಸ್ತಿವಾರ ಹಾಕುವ ಸಂದರ್ಭದಲ್ಲಿ ಶಾಹುರವರು ಮಾಡಿದ ಭಾಷಣವಿದು. ಜಾತಿಪದ್ಧತಿ ಹೇರಿದ ಸಾಮಾಜಿಕ ಗುಲಾಮಿ ಪದ್ಧತಿಯನ್ನು ಕಿತ್ತುಹಾಕದ ಹೊರತು ಸಮಾಜ ನಿಜವಾಗಿ ಪ್ರಗತಿ ಹೊಂದಲಾರದೆಂದು ಅವರು ಒತ್ತಿಹೇಳಿದರು. ಜಾತಿಪದ್ಧತಿಯನ್ನು ಭದ್ರವಾಗಿ ಉಳಿಸಿಕೊಂಡು ಸಾಮಾಜಿಕ ಸುಧಾರಣೆಗಳನ್ನು ಮಾಡಬೇಕೆಂದು ಹೇಳುವ ಬ್ರಾಹ್ಮಣ ನಾಯಕರು ಕೇವಲ ಒಂದು ಧಾರ್ಮಿಕ ನೌಕರಿಶಾಹಿ ವ್ಯವಸ್ಥೆಯನ್ನು ನಿರ್ಮಾಣಮಾಡುತ್ತಾರೆ. ಅಷ್ಟೆ. ಜಾತಿಪದ್ಧತಿಯ ನಿರ್ಮೂಲನೆ ಮತ್ತು ಸಾಮಾಜಿಕ ಸಾಮರಸ್ಯವೇ ಸರ್ವರ ವಿಮೋಚನೆಗೆ ಏಕೈಕ ಮಾರ್ಗವಾಗಿದೆ.

---

ಮರಾಠ ವಿದ್ಯಾರ್ಥಿ ನಿಲಯದ ಅಸ್ತಿವಾರ ಶಿಲಾನ್ಯಾಸ ಮಾಡಲು ನನ್ನನ್ನು ನನ್ನ ಮರಾಠಿ ಸಹೋದರರು ಆಹ್ವಾನಿಸಿರುವುದು ನನ್ನ ಗೌರವವೆಂದು ಭಾವಿಸುವೆ. ನಾನು ನನ್ನ ಸಮಾನವಾದ ಉತ್ಸಾಹದಿಂದ ಈ ಹೊಣೆಯನ್ನು ಸಂತೋಷವಾಗಿ ನೆರವೇರಿಸುವೆನು. ಮರಾಠ ಧ್ಯೇಯದ ಚಿರಪರಿಚಿತ ಆಶ್ರಯದಾತರಾದ ಧಾರ್‌ನ ಮಹಾಔದಾರ್ಯದ ಮಹಾರಾಜ ಪವಾರ್ ಅವರು ಈ ಸಂಸ್ಥೆಯ ಸಸಿಯನ್ನು ನೆಟ್ಟಿದ್ದಾರೆ. ಅದಕ್ಕೆ ಅವರ ಬದ್ಧತೆಯಿಲ್ಲದಿದ್ದರೆ ತೋಟಗಾರನ ಕೇರು ಇಲ್ಲದಿದ್ದರೆ ಅದು ಮರವಾಗಿ ಬೆಳೆಯುತ್ತಿರಲಿಲ್ಲವೆಂದು ನಾನು ಹೇಳಲು ತೊಡಗಿದ್ದೇನೆ. ನಿಸ್ವಾರ್ಥಿಗಳು, ತ್ಯಾಗಮಯಿಗಳು, ಕರ್ತವ್ಯನಿಷ್ಠರು ಮತ್ತು ಸತ್ಯಪ್ರೇಮಿಗಳಾದ ಕೆಲಸಗಾರರು ಬಹಳ ಎಚ್ಚರಿಕೆಯಿಂದ ಬೆಳೆಸುತ್ತಿದ್ದರೂ ಸಂಸ್ಥೆಯು ಏಕೆ ಪ್ರವರ್ಧಮಾನಕ್ಕೆ ಬರಲಿಲ್ಲ? ಪಾಟೀಲರ ವರ್ಗ ನಡೆಸುತ್ತಿರುವ ಸಮುದಾಯಕ್ಕೆ ಕಾಲ ಮತ್ತು ಗೌರವಕ್ಕೆ ತಕ್ಕಂತಹ ಕೆಲಸಗಳನ್ನು ಅವರು ಮಾಡಿದ್ದರೆಂಬುದನ್ನು ಮರಾಠರ ಇತಿಹಾಸ ಸಾಕಷ್ಟು ರುಜುವಾತುಪಡಿಸುತ್ತದೆ. ಗೆದ್ದ ಆ ಕಠಿಣ ದಿನಗಳಲ್ಲಿ ಅವರು ಯುದ್ಧೋಚಿತ ಅಧಿಕಾರಗಳನ್ನು ಹಿಡಿದಿರಲಿಲ್ಲ ಮತ್ತು ಅಂದಿನ ಶಾಂತಿಯ ದಿನಗಳಲ್ಲಿ ಅವರು ಜನರ ನಿಜವಾದ ಶತ್ರುವಾದ ಅಜ್ಞಾನ–ಮೌಢ್ಯದ ವಿರುದ್ಧ ಯುದ್ಧ ನಡೆಸಿದ್ದರು. ನನ್ನ ಸ್ನೇಹಿತರಾದ ವಾಣಿಯ ರಾವ್ ಬಹಾದೂರ್ ಥೋರಟ್ ಪಾಟೀಲ್ ಮತ್ತು ಪಿಂಪಲ್‌ಗಾವ್ ಬಸ್ವಂತ್‌ನ ದಾದಾ ಮೋರೆ ಅವರು ಗೌರವಾನ್ವಿತ ವರ್ಗಕ್ಕೆ ಸೇರಿದವರು, ಸಣ್ಣವರೇನು ಅಲ್ಲ. ಈ ವಿದ್ಯಾರ್ಥಿ ನಿಲಯದ ಧ್ಯೇಯಕ್ಕಾಗಿ ಈ ಈರ್ವ ಸಜ್ಜನರು ಪಟ್ಟಶ್ರಮ ಮತ್ತು ತ್ಯಾಗಗಳು ಹೇಳುವುದಕ್ಕೆ ಚಿರಪರಿಚಿತವಾಗಿವೆ. ಈ ಧ್ಯೇಯಕ್ಕೆ ಬೆಂಬಲಿಸಿದವರ ಪಟ್ಟಿ ಬಹಳ ದೀರ್ಘವಾಗಿರುವುದರಿಂದ ನಾನು

ಅವರಿಗೆ ಗೌರವ ಸಲ್ಲಿಸುವುದಕ್ಕೆ ಮತ್ತು ಅವರ ಒಳ್ಳೆಯ ಕೆಲಸವನ್ನು ಮೆಚ್ಚಿಕೊಳ್ಳುವುದಕ್ಕೆ ಮಾತ್ರ ಸೀಮಿತನಾಗುವೆನು...

ಈ ವಿದ್ಯಾರ್ಥಿ ನಿಲಯದ ಧೋರಣೆಯು ಅನುಕರಿಸಲು ಯೋಗ್ಯವಾಗಿದೆ. ಮರಾಠ ಶೈಕ್ಷಣಿಕ ಸಮ್ಮೇಳನದ ಸಮಯದಲ್ಲಿ ಕೊಡುಗೈ ದಾನಿಗಳ ವಂತಿಗೆಗಳಿಂದ ಬೆಳೆದ ಈ ಸಂಸ್ಥೆಯ ಸಂಘಟಕರು ಈ ವಿದ್ಯಾರ್ಥಿ ನಿಲಯವನ್ನು ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೆ ತೆರದಿಟ್ಟಿದ್ದು ಮಾತ್ರವಲ್ಲದೆ ಅವರೆಲ್ಲರೂ ದೇಶಭಕ್ತರು ಮತ್ತು ಉದಾರ ಮನಸ್ಸಿನ ವ್ಯಕ್ತಿಗಳಾಗಿದ್ದರೆಂದು ಧಾರಾಳವಾಗಿ ಹೇಳುತ್ತದೆ. ಎಲ್ಲಾ ಜನರು ದೇವರ ಮಕ್ಕಳು, ಅವರೆಲ್ಲರು ಅಣ್ಣತಮ್ಮಂದಿರೆಂದು ಬೋಧಿಸುವ ಸತ್ಯಶೋಧಕ ಸಮಾಜದ ಸತ್ಯಾಗ್ರಹದ ತತ್ವವನ್ನು ಆಚರಣೆಗೆ ತರಲು ನೈತಿಕ ಧೈರ್ಯವನ್ನು ತೋರಿ ಪ್ರಯತ್ನ ಮಾಡುತ್ತಿರುವವರಿಗೆ ಎಷ್ಟು ಹೊಗಳಿದರೂ ಎಂದೆಂದಿಗೂ ಸಾಕಾಗಲಾರದು. ಈ ವಿಶ್ವಪ್ರಜೆಯೆಂಬ ತತ್ವವೇ ಧ್ಯೇಯವಾಕ್ಯವಾಗಿ ಸಾಧ್ಯವಾದಷ್ಟು ಮಟ್ಟಿಗೆ ಎಲ್ಲಾ ಕಡೆಗಳಿಗೂ ಹಬ್ಬಿಸಬೇಕು. ಅದು ಜಾತಿಯಲ್ಲಿರುವ ವಿವಿಧ ದೃಷ್ಟಿಕೋನಗಳನ್ನು ಸಾಮ್ಯಗೊಳಿಸುವುದಕ್ಕೆ ಅದು ಒಂದು ಸಾಧನವಾಗಿದೆಯೆಂಬುದರಲ್ಲಿ ಯಾರಿಗೂ ಅನುಮಾನವಿಲ್ಲ.

ಒಂದಾನೊಂದು ಕಾಲದಲ್ಲಿ ನಾನು ಒಬ್ಬ ಯಥಾಸ್ಥಿತಿವಾದಿ(ಸಂಪ್ರದಾಯವಾದಿ)ಯಾಗಿದ್ದೆ ಮತ್ತು ಜಾತಿಪದ್ಧತಿಯನ್ನು ಮುಂದುವರಿಸುವುದರಲ್ಲಿ ನಂಬಿಕೆಯಿಟ್ಟ ಕರ್ಮತತ್ವದ ಬೆಂಬಲಿಗ ನಾನಾಗಿದ್ದೆನೆಂದು ನಾನು ಹೃದಯಪೂರ್ವಕವಾಗಿ ಒಪ್ಪಿಕೊಳ್ಳುತ್ತೇನೆ. ಅದರಿಂದ ನಾನು ಬೇರೆಯವರ ಪ್ರಗತಿಗೆ ಅಡ್ಡಿಯಾಗುತ್ತಿದ್ದೇನೆಂಬ ವಿಚಾರವೇ ನನಗೆ ಆಗ ಹೊಳೆದಿರಲಿಲ್ಲ. ಮತ್ತು ಬೇರೆ ಜಾತಿಗಳ ಸಭೆಗಳಲ್ಲಿ ಅಧ್ಯಕ್ಷತೆ ವಹಿಸುವುದು ಮೊದಲು ಅಧಾರ್ಮಿಕತೆಯ ಕೃತ್ಯವಾಗಿತ್ತು. ಇಂದಿಗೂ ಕೂಡ ನಾನು ನಿರ್ದಿಷ್ಟ ಜಾತಿಗಳ ಸಭೆಗಳಿಗೆ ಅಧ್ಯಕ್ಷತೆ ವಹಿಸುತ್ತೇನೆ. ಆದರೆ ಕಾರಣವು ತೀರಾ ಭಿನ್ನವಾಗಿದೆ. ಆ ಸಮಯದಲ್ಲಿ ನಾನು ಜಾತಿಸ್ಫೂರ್ತಿಯನ್ನು ತುಂಬುವುದು ತಪ್ಪೆಂದು ಭಾವಿಸಿದ್ದೆ. ಈಗ ಜಾತಿಸಭೆಗಳಿಗೆ ಅಧ್ಯಕ್ಷತೆ ವಹಿಸುವುದರಿಂದ ಜಾತಿಯ ಭಾವನೆಯನ್ನು ಬಲಪಡಿಸುತ್ತಿದ್ದೇನೆಂಬ ಭಯದಿಂದ ನಾನು ಈ ಅಂತಹ ಸಭೆಗಳಿಗೆ ಅಧ್ಯಕ್ಷತೆ ವಹಿಸುವುದಿಲ್ಲ.

ವಿವಿಧ ಸಮುದಾಯಗಳ ನಾಯಕರಿಗೆ ತಿಳಿಸಲು ನನ್ನ ಬಳಿ ಒಂದೇ ಒಂದು ಸಂದೇಶವಿದೆ. ಸಂಕುಚಿತ ಮನೋಭಾವ ಹೊಂದಬೇಡಿ. ಮುಂದಿನ ಭವಿಷ್ಯದ ಬಗ್ಗೆ ಮುನ್ನೋಟವಿರಲಿ. ಜಾತಿಗಳನ್ನು ವಿಸರ್ಜಿಸುವುದು ಈಗ ಒಂದು ಅಗತ್ಯವಾಗಿದೆ. ಜಾತಿಗಳನ್ನು ಎತ್ತಿಹಿಡಿಯುವುದು ಒಂದು ಪಾಪ. ಜಾತಿಗಳು ನಮ್ಮೆಲ್ಲರ ಸಾಮಾನ್ಯ ಅಭಿವೃದ್ಧಿಗೆ ಒಂದು ದೊಡ್ಡ ಅಡ್ಡಿ–ಆತಂಕವಾಗಿದೆ. ಆದ್ದರಿಂದ ನಾವು ಧೈರ್ಯ–ಸಾಹಸ ಮಾಡಿ ಅದನ್ನು ನಿರ್ಮೂಲನೆ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ನಿಮ್ಮ ಜಾತಿಗಳ ಸಭೆಗಳನ್ನು ನಡೆಸಿ, ಆದರೆ ಅವು ಗುರಿಗಳ ಸಾಧನೆಗೆ ಮಾರ್ಗಗಳೆಂಬುದನ್ನು ಗಮನಿಸುವುದನ್ನು ಮರೆಯಬೇಡಿ. ನಿಮ್ಮ ಜಾತಿಯ ಸಭೆಗಳು ಜಾತಿಪದ್ಧತಿಯನ್ನು ತೀವ್ರಗೊಳಿಸಲು ಮತ್ತು ಬಲಪಡಿಸಲು ಸಹಾಯಕವಾಗುವಂತೆ ಮಾಡಬೇಡಿ.

ಜಾತಿಪದ್ಧತಿಯು ಸಹಜವಾದುದು ಮಾತ್ರ ವಲ್ಲದೆ, ಅದು ಸಮಾಜದ ಭದ್ರತೆ ಮತ್ತು ಪ್ರಗತಿಗಾಗಿ ಕೂಡ ಅತ್ಯವಶ್ಯಕವೆಂದು ಹೇಳುವುದರಲ್ಲಿ ಮೇಲುವರ್ಗಗಳು ದಣಿಯುವುದಿಲ್ಲ. ಹೀಗೆ ಸಮರ್ಥಿಸುವವರು ತಮ್ಮ ಸಾಮಾಜಿಕ ಘನತೆಯನ್ನು ಕಾಪಾಡಿಕೊಳ್ಳುವುದರಲ್ಲೇ ಆಸಕ್ತರಾಗಿದ್ದಾರೆಂಬುದನ್ನು ಪತ್ತೆಹಚ್ಚಲು

ಹೆಚ್ಚಿನ ಬೌದ್ಧಿಕ ಕಸರತ್ತು ಬೇಕಾಗಿಲ್ಲ ಮತ್ತು ಅದರ ಶಿಶು ಜಾತಿಪದ್ಧತಿಯು ಯಾವುದೇ ಇತರ ಗ್ರಹಗಳಲ್ಲಿ ಅಸ್ತಿತ್ವದಲ್ಲಿಲ್ಲ. ಅದು ಇರುವುದು ಈ ಭೂಮಂಡಲದಲ್ಲಿ ಮಾತ್ರ. ಹಳೆಕಾಲದ ಜಾತಿಪದ್ಧತಿಯ ಪರಿಣಾಮವಾಗಿ ಈ ದೇಶ ಹಳೇಕಾಲದ ಗುಲಾಮಿಪದ್ಧತಿಗೆ ಬಲಿಯಾಗಿದೆ. ಈ ದೇಶದ ಭಾಗ್ಯಗಳಿಗೆ ಮಾಡಿರುವ ಊನಗಳಿಗಿಂತ ಹೆಚ್ಚಿಗೆ ಜಾತಿಪದ್ಧತಿ ಮಾಡಿದೆಯೆಂದು ಯಾರು ಹೇಳಬಲ್ಲರು? ಜನರನ್ನು ವಿಭಜಿಸಿ ಅಭೇದ್ಯವಾದ ಗೋಡೆಗಳನ್ನು ಕಟ್ಟಿರುವಾಗ... ಸಾಮರ್ಥ್ಯವೆಂಬುದು ಪ್ರಶ್ನೆಯೇ ಅಲ್ಲ. ಹಲವರು ಜಾತಿಭೇದಗಳಿರಲಿ, ಆದರೆ ಜಾತಿದ್ವೇಷ ಇರಬಾರದೆಂದು ಹೇಳುತ್ತಾರೆ. ಇದು ಅವರ ಪ್ರಾಮಾಣಿಕ ಅಭಿಪ್ರಾಯವಾದರೆ, ನಾನು ಅವರ ಅಜ್ಞಾನದ ಬಗ್ಗೆ ಅನುಕಂಪ ತೋರುತ್ತೇನೆ. ಜಾತಿದ್ವೇಷವಿರುವುದು ಜಾತಿಯ ತಾರತಮ್ಯತೆಯ ಕಾರಣದಿಂದ. ಇದನ್ನು ತಪ್ಪಿಸಲು ಇರುವ ಏಕೈಕ ಪರಿಹಾರ ಅದರ ಮೂಲಕಾರಣವನ್ನು ತೆಗೆದುಹಾಕುವುದು.

ಜಾತಿವೈಷಮ್ಯವು ಒಂದು ಹಳೆಯ ಜಾಡ್ಯವಾಗಿ ಅದು ಭಾರತದ ಜನರ ಜೀವನವನ್ನೇ ಹೀರಿಬಿಡುತ್ತಿದೆ. ಕ್ಷತ್ರಿಯರ ಸರ್ವನಾಶಮಾಡುವ ಪರಶುರಾಮನ ಕೃತ್ಯ ಅಥವಾ ಪೇಶ್ವೆಗಳು ಬ್ರಾಹ್ಮಣೇತರರ ಮನೆ ಗುಡಿಸಲುಗಳನ್ನು ಕೆಡವಿ ನೆಲಸಮಮಾಡುವ ಅವರ ಕೃತ್ಯಗಳು ಬೇರೇನು ಅಲ್ಲ. ಅವು ಈ ಜಾತಿ ವೈಷಮ್ಯದ ಪ್ರತಿಫಲನ. ಬ್ರಾಹ್ಮಣರ ಪವಿತ್ರ ಜನಿವಾರಗಳನ್ನು ಮತ್ತು ಕತ್ತರಿಸಿದ ಅವರ ಜುಟ್ಟುಗಳನ್ನು ಸಂರಕ್ಷಿಸಿದ ಮಹಾರಾಜ ಶಿವಾಜಿ ಮತ್ತು ಮರಾಠ ಯುದ್ಧವೀರರನ್ನು ಶೂದ್ರರೆಂದು ಹಣೆಪಟ್ಟಿ ಹಚ್ಚಿ ಕರೆಯಲು ಬ್ರಾಹ್ಮಣರಿಗೆ ಮತ್ತೇನು ಕಾರಣವಿರಬೇಕು? ಜಾತಿಯ ವೈಷಮ್ಯವನ್ನು ನಿವಾರಿಸಬೇಕಾದರೆ ಮೊದಲು ಜಾತಿಪದ್ಧತಿಯನ್ನು ರದ್ದುಗೊಳಿಸಿ ನಾವೆಲ್ಲರೂ ಒಂದಾಗಬೇಕು.

ಜಾತಿಪದ್ಧತಿಯನ್ನು ಮುರಿಯುವ ನೆಪದಲ್ಲಿ ನಾನು ಜಾತಿ ಶತ್ರುತ್ವವನ್ನು ಬೆಳಸುತ್ತಿದ್ದೇನೆಂದು ನನ್ನ ಮೇಲೆ ಆರೋಪ ಹೊರಿಸಲಾಗುತ್ತಿತ್ತು. ಇದು ಆಧಾರರಹಿತ ಆರೋಪವಾಗಿದೆ. ವಿರೋಧಿಗಳ ಬಗ್ಗೆ ಮುಗಿಬೀಳುವಾಗ ನಾನು ನನ್ನ ಜಾತಿಯ ಬಗ್ಗೆ ಗರ್ವಪಡುವುದಿಲ್ಲ; ಗೌರವಾನ್ವಿತ ಅಥವಾ ಧರ್ಮವನ್ನು ಬಳಸಿಕೊಂಡು ನಾನು ಜಾತಿಯ ಭೂತಗಳನ್ನು ಹೊಡೆಯುವುದಿಲ್ಲ. ಅಂತಹ ಪರೋಕ್ಷ ದಾಳಿಗಳು ಖಂಡನೀಯವೆಂದು ನಾನು ಪರಿಗಣಿಸುತ್ತೇನೆ. ಸಾಮಾನ್ಯ ಪ್ರಗತಿಯ ಹಾದಿಯಿಂದ ಹೊರಗಿರುವವರು ಅಥವಾ ಹೊರಗೆ ಹಾಕಿರುವವರನ್ನು ನಾನು ಪ್ರೀತಿಯಿಂದ ಅವರನ್ನು ಅಪ್ಪಿಕೊಳ್ಳುವೆನು ಅಥವಾ ತನ್ನ ಸಮುದಾಯವೆಂದು ಬಗೆದು ನನ್ನ ಕೈಲಾದಷ್ಟು ಮಟ್ಟಿಗೆ ಅವರನ್ನು ಸಮಾಜದಲ್ಲಿ ಅವರ ಸೂಕ್ತ ಸ್ಥಳದವರೆಗೆ ನಡೆಸುವೆನು. ಇದು ನನ್ನ ಕರ್ತವ್ಯವೆಂದು ನನ್ನ ಅಂತಃಸಾಕ್ಷಿ ಹೇಳುವುದರಿಂದ ಇದನ್ನು ನಾನು ಮಾಡುವೆನು. ದಮನಿತರನ್ನು ಸೂಕ್ತ ಸಮಯದಲ್ಲಿ ಹಿಡಿದು ಎತ್ತದಿದ್ದರೆ ಅವರು ಜಾತಿಗಳ ಬೀಸುಕಲ್ಲಿನಲ್ಲಿ ಸಿಕ್ಕಿ ಅರೆದು ನುಣ್ಣಗಾಗುವರು. ಆದ್ದರಿಂದ ದಮನಿತ ಜಾತಿಗಳನ್ನು ಬೆಂಬಲಿಸುವುದು ಜಾತಿಗಳ ನಡುವೆ ಶತ್ರುತ್ವವನ್ನು ಪ್ರೋತ್ಸಾಹಿಸಿದಂತಾಗುವುದಿಲ್ಲ.

ಹುಟ್ಟಿನಿಂದ ಮನುಷ್ಯರನ್ನು ಕೀಳೆಂದು ಕರೆಯುವ ಪದ್ಧತಿ ನಿಂತ ದಿನವು ನನ್ನ ಜೀವನದ ಅತ್ಯಂತ ಸಂತೋಷದ ದಿನವಾಗುತ್ತದೆ. ಜಾತಿಪದ್ಧತಿಯಲ್ಲಿ ನನಗೆ ನಂಬಿಕೆಯಿಲ್ಲದಿರುವುದನ್ನು ನಾನು ಸಾರ್ವಜನಿಕ ಜೀವನದಲ್ಲಿ ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದೇನೆ. ನನ್ನ ಸುತ್ತಮುತ್ತ ಇರುವ ಜನರಲ್ಲಿರುವ ಜಾತಿಯ ಹೆಮ್ಮೆಯನ್ನು ಕಿತ್ತುಹಾಕುವುದರಲ್ಲಿ ನನ್ನ ಪ್ರಯತ್ನಗಳು ಸಫಲವಾಗಿಲ್ಲ. ಈ ಸಭೆಗೆ ಅಧ್ಯಕ್ಷತೆ ವಹಿಸಲು ಸೂಕ್ತವಲ್ಲವೆಂದು ನನಗೆ ಅನಿಸುತ್ತಿದೆ. ತಮ್ಮ ಸಹಮಾನವ ಮತ್ತು ಸಹಮಹಿಳೆಯರನ್ನು ಕೀಳೆಂದು

ಭಾವಿಸುವ ನೀಚರಾದ ಹಲವು ಮೂರ್ಖರನ್ನು ಭೇಟಿಯಾಗಿದ್ದೇನೆ. ಅವರೆಲ್ಲರೂ ತಮ್ಮನ್ನು ತಾವೇ ಜನತೆಯ ನಾಯಕರೆಂದು ನಾಚಿಕೆಯಿಲ್ಲದೆ ಹೇಳಿಕೊಳ್ಳುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ.

ಸಮುರಾಯ್ ವರ್ಗದವರು ಹುಟ್ಟಿನಿಂದ ಬರುವ ಘನತೆಯನ್ನು ತ್ಯಜಿಸಿಬಿಟ್ಟಾಗ ಜಪಾನಿನ ಸಮಗ್ರತೆಗೆ ಅನುಕೂಲವಾಯಿತು. ನಮ್ಮ ದೇಶದ ಬ್ರಾಹ್ಮಣರು ಅವರನ್ನು ಅನುಸರಿಸುವುದಕ್ಕೆ ಇದಾ ಸಕಾಲವಲ್ಲವೆ? ಕ್ಷತ್ರಿಯರು ಜನರ ಪ್ರಗತಿಹಾದಿಯಲ್ಲಿ ಎಲ್ಲರಿಗೂ ಕನಿಷ್ಠ ಸಹಾಯಮಾಡುವುದು ಕರ್ತವ್ಯವಾಗುತ್ತದೆ. ಹುಟ್ಟಿನಿಂದ ನಮಗಿಂತ ಉತ್ತಮರೆಂದು ಬ್ರಾಹ್ಮಣರನ್ನು ಪವಿತ್ರಗೊಳಿಸಿ ಎತ್ತರಿಸುವ ಸಮಾರಂಭವನ್ನು ಇನ್ನು ಮುಂದೆ ಮಾಡುವುದಿಲ್ಲ. ಹುಟ್ಟಿನಿಂದ ನಾವೆಲ್ಲರೂ ಪರಸ್ಪರ ಸಮ ಎಂಬ ಸಮಾರಂಭವನ್ನು ಪ್ರಾರಂಭಿಸಬೇಕು. ಭೇದಭಾವದ ಪ್ರಯೋಜನವನ್ನು ಬ್ರಾಹ್ಮಣರು ಅನುಭವಿಸುತ್ತಿರುವುದನ್ನು ಕಿತ್ತುಹಾಕಲು ಇನ್ನು ಮುಂದೆ ಬ್ರಾಹ್ಮಣರನ್ನು ಧಾರ್ಮಿಕ ಸಮಾರಂಭಗಳನ್ನು ನಡೆಸಿಕೊಡಲು ಕರೆಯಬಾರದು. ಇನ್ನು ಮುಂದೆ ವೃತ್ತಿಪರ ಬ್ರಾಹ್ಮಣರು ವಿವರಿಸುವ ಗ್ರಂಥಗಳನ್ನು ಅಥವಾ ಅವರು ಹೇಳುವ ಬೋಧನೆಗಳನ್ನು ಕೇಳಬಾರದು; ಏಕೆಂದರೆ ನಮ್ಮಲ್ಲಿ ಈಗಾಗಲೇ ರಕ್ತಗತವಾಗಿರುವ ಗೌರವದ ಭಾವನೆಯನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ. ಮತ್ತು ಅದನ್ನು ಅಳಿಸಿಹಾಕುವುದೇ ಈಗ ನಮ್ಮ ಕರ್ತವ್ಯವಾಗಬೇಕು. ನಮ್ಮ ಪೂರ್ವಿಕರಾದ ರಾಮ ಮತ್ತು ಕೃಷ್ಣರನ್ನು ಬ್ರಾಹ್ಮಣರು ದೇವರನ್ನಾಗಿ ಮಾಡಿರುವುದು ಮತ್ತು ಪೂಜಿಸಿರುವುದು ಬ್ರಾಹ್ಮಣರು ಕ್ಷತ್ರಿಯರಿಗಿಂತ ಕೆಳಗಿನವರು (ಕೀಳು) ಎಂಬುದು ನಿರ್ವಿವಾದದ ಸತ್ಯಸಂಗತಿಯಾಗಿದೆ. ನಾನು ನಿಷ್ಕಪಟನಾಗಿ ಮಾತನಾಡುವುದಕ್ಕೆ ನನ್ನನ್ನು ಕ್ಷಮಿಸಿ. ಆದರೆ ನಾನು ಭಾರತರಾಷ್ಟ್ರವನ್ನು ಸಿಂಹಾಸನಕ್ಕೇರಿಸಲು ಬ್ರಾಹ್ಮಣರನ್ನು ತಮ್ಮ ಪರಮಾಧಿಕಾರದಿಂದ ಇಳಿಸಲು ನಾವು ಮಾಡುತ್ತಿರುವ ಪ್ರಯತ್ನಗಳಲ್ಲಿ ಯಾವುದೇ ರೀತಿಯ ಸಡಿಲತೆ ಬರಬಾರದು.

ನಾನು ಬ್ರಾಹ್ಮಣರಿಗೆ ತೋರಿಸುತ್ತಿರುವ ಪ್ರೀತಿಗೆ ಬದಲಾಗಿ ಅವರು ನನ್ನನ್ನು ದ್ವೇಷಿಸಲು ಆಯ್ಕೆ ಮಾಡಿಕೊಂಡರೆ ನಾನು ಅದಕ್ಕೆ ತಕ್ಕ ಉತ್ತರ ನೀಡದಿದ್ದರೆ ನನಗೆ ನಾನೇ ನನ್ನ ಬಗ್ಗೆ ಸದ್ಭಾವನೆ ಇರಬೇಕೆಂಬ ಬ್ರಾಹ್ಮಣರು ಮತ್ತು ನನ್ನ ಧ್ಯೇಯಕ್ಕೆ ದ್ರೋಹ ಮಾಡಿಕೊಂಡ ಹಾಗಾಗುತ್ತದೆ. ಷರತ್ತಿನ ಮೇಲೆ ಅವರು ನನ್ನ ಅರಮನೆಯಲ್ಲಿ ಅಧಿಕೃತವಾಗಿ ಧಾರ್ಮಿಕ ಕಾರ್ಯಕ್ರಮಗಳನ್ನು ನೆರವೇರಿಸಲು ನಾನು ಒಪ್ಪಿಕೊಂಡಿದ್ದೇನೆ. ಈ ಷರತ್ತನ್ನು ಮುರಿದರೆ ಬ್ರಾಹ್ಮಣ ಪೂಜಾರಿಗಳನ್ನು ಬದಲಾಯಿಸಿ, ಅವರ ಸ್ಥಾನದಲ್ಲಿ ಮರಾಠರನ್ನು ನೇಮಿಸಲಾಗುವುದು. ಅವರು ನನ್ನನ್ನು ಒಬ್ಬ ಮನುಷ್ಯನನ್ನಾಗಿ ಪರಿಗಣಿಸುವವರೆಗೂ ಅವರು ನನ್ನ ಆಶ್ರಯಕ್ಕೆ ಅರ್ಹರಾಗಿರುತ್ತಾರೆ. ಅವರು ನನ್ನನ್ನು ಒಂದು ಪ್ರಾಣಿಯೆಂದು ಕಾಣತೊಡಗಿದ ತಕ್ಷಣ ಅವರು ಅದನ್ನು (ಆಶ್ರಯ) ಕಳೆದುಕೊಳ್ಳುವರು. ತಾವೇ ಗ್ರಂಥಗಳಲ್ಲಿ ಬರೆದ ಕತೆಗಳನ್ನು ಕಂಠಪಾಠ ಮಾಡುವ ಮೂಲಕ ಬ್ರಾಹ್ಮಣರ ಯಜಮಾನಿಕೆಯನ್ನೇ ನಿರಂತರಗೊಳಿಸುವರು ಮತ್ತು ತಮ್ಮ ಯಥಾಕಥಿತ ಶ್ರೇಷ್ಠತೆಯ ಸಂದೇಶವನ್ನು ಹರಡುವರು. ನಾನು ಅವರು ಧಾರ್ಮಿಕ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದನ್ನು ನಿಲ್ಲಿಸಬೇಕು. ಈ ಬ್ರಾಹ್ಮಣ ಆಡಳಿತಶಾಹಿಯನ್ನು ನಾಶಮಾಡದ ಹೊರತು ಈ ದೇಶ ಪ್ರಗತಿ ಹೊಂದುವುದಿಲ್ಲ.

'ಲೋಕಸಂಗ್ರಹ'ದ ಸಂಪಾದಕ ನನಗಿಂತ ಬಹಳ ವಿವೇಕವಂತ ಮತ್ತು ವಿದ್ವಾಂಸನೆಂದು ನಾನು ಒಪ್ಪಿಕೊಳ್ಳುತ್ತೇನೆ. ನಾನು ಅವನಿಂದ ಕಲಿಯಬೇಕಾದುದು ಸರಿ. ಆದರೆ ಅವರು ನನ್ನ ಸ್ಥಿತಿಯನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆಂದು ಹೇಳಲು ನಾನು ವಿಷಾದಿಸುತ್ತೇನೆ. ಅವರು ನನ್ನ ಭಾಷಣವನ್ನು ಒಟ್ಟಾರೆಯಾಗಿ ಪರಿಶೀಲಿಸಿ ನಾನು ಎಸಗಿದ ಭಾಷಣದಲ್ಲಿ ತಪ್ಪುಗಳನ್ನು ನನ್ನ ಗಮನಕ್ಕೆ ತಂದಿದ್ದಕ್ಕೆ ನಾನು ಅವರನ್ನು

ಗೌರವಿಸುತ್ತೇನೆ. ಆದರೆ ನನ್ನ ಕರ್ತವ್ಯದ ಹಾದಿ ಎಲ್ಲಿದೆಯೆಂಬುದನ್ನು ಅವರ ಆದೇಶಕ್ಕೆ ತಲೆಬಾಗಲು ನಾನು ಒಪ್ಪುವುದಿಲ್ಲ. ಪ್ರೀತಿ ಪ್ರೀತಿಯನ್ನುಂಟು ಮಾಡುತ್ತದೆ. ದ್ವೇಷ ದ್ವೇಷವನ್ನುಂಟು ಮಾಡುತ್ತದೆ; ಬುದ್ಧಿಗೇಡಿಗಳು ಸಹ ಪ್ರೀತಿಗೆ ಪ್ರೀತಿಯನ್ನು ನೀಡುತ್ತಾರೆ. ನಾನು ಒಬ್ಬ ಕ್ರೀಡಾಪಟು. ಮತ್ತು ನಾನು ಕೊಲ್ಹಾಪುರದಿಂದ ೨೦೦ ಮೈಲಿಗಳ ದೂರದ ಕಾಡಿನಲ್ಲಿ ಬಿಟ್ಟುಬಂದಿದ್ದ ಆಫ್ರಿಕಾದ ಚಿರತೆಯು ನನ್ನ ಬಳಿಗೆ ವಾಪಸ್ಸು ಬಂದಿದ್ದನ್ನು ನೆನಪಿಸಿಕೊಳ್ಳುತ್ತೇನೆ. ಆದರೆ ನನ್ನ ಪ್ರೀತಿಯನ್ನು ಅದು ವಾಪಸ್ಸು ಕೊಟ್ಟಿದೆಯೇ? ನಾನು ಅದಕ್ಕೆ ನಿರ್ದಯೆಯಿಂದ ನೋಡಿಕೊಂಡಿದ್ದರೆ ಅದು ಸಂತೋಷದಿಂದ ಓಡಿಹೋಗುತ್ತಿತ್ತು ಅಥವಾ ಅದು ನನಗೆ ಹಾನಿ ಮಾಡಬಹುದಿತ್ತು. ಇದು ಸಾಮಾನ್ಯ ಮಾನವಜನಾಂಗಕ್ಕೆ ಖಂಡಿತವಾಗಿ ಬಹು ಗಂಭೀರವಾದ ಒಂದು ತತ್ವಜ್ಞಾನವಲ್ಲ. ಆದರೆ ಸುಶಿಕ್ಷಿತರೆಂಬ ಹಿನ್ನೆಲೆಯಲ್ಲಿ ತಮ್ಮನ್ನು ತಾವೇ ಜನತೆಯ ನಾಯಕರೆಂದು ಹೇಳಿಕೊಳ್ಳುವವರಿಗೆ ಒಂದು ಸಣ್ಣ ವಿಷಯವಾಗಬಹುದು. ಆದರೆ ನೈತಿಕ ಶ್ರೇಷ್ಠತೆ ಎಂಬ ಭಾವನೆ ಬೇರೆಯವರನ್ನು ಕೀಳು ಮತ್ತು ಅಸ್ಪೃಶ್ಯರು ಎಂದು ಕರೆಯುವ ಗ್ರಹಿಕೆಯನ್ನು ಹುಟ್ಟುಹಾಕಬಹುದೆಂಬ ಭಾವನೆ ಮನಸ್ಸಿನಲ್ಲಿ ಹಾದುಹೋಗುತ್ತದೆ. ಮತ್ತು ನಾನು ಇದನ್ನು ಎಲ್ಲಾ ಪ್ರಜ್ಞಾವಂತ ಜನರ ಗ್ರಹಿಕೆಯೆಂದು ಹೇಳಹುದು.

ಮುಂಬೈ, ಸೋಲಾಪುರ, ಅಹಮದಾಬಾದ್, ಅಮೃತಸರ ಮತ್ತು ಲಾಹೋರುಗಳಲ್ಲಿ ನಡೆದ ಗಲಭೆಗಳಲ್ಲಿ ಬಡಜನ ನೊಂದರು. ಅವರ ಶಿಕ್ಷಿತ ನಾಯಕರು ಕಳ್ಳಬೆಕ್ಕಿನಂತೆ ಜಾರಿಕೊಂಡು ಸುಭದ್ರರಾದರು. ಸಾಮಾನ್ಯ ಜನರು ಈ ಕುಯುಕ್ತಿಯ ನಾಯಕರನ್ನು ಅರ್ಥಮಾಡಿಕೊಳ್ಳುವುದಕ್ಕೆ ತುಂಬಾ ಮುಗ್ಧರು. ನನಗೆ ಮಹಾತ್ಮ ಗಾಂಧಿ, ಡಾ. ಸತ್ಯಪಾಲ ಮತ್ತು ಕಿಶ್‌ಚುಲು ಬಗ್ಗೆ ಅಪಾರ ಗೌರವವಿದೆ. ಅವರ ಉದ್ದೇಶ ಈ ಗಲಭೆಗಳನ್ನು ನಡೆಸಿತು ಎಂದು ಹೇಳುತ್ತೇನೆ. ಅವರ ಕಟ್ಟಾ ಅನುಯಾಯಿಗಳ ತಪ್ಪಿನಿಂದಾಗಿ ಅವರ ಮೇಲೆ ನಿಂದೆಯನ್ನು ಹೊರಿಸಲಾಗಿದೆ. ನನ್ನ ಟೀಕಾಕಾರರಾದ 'ರಾಜಕಾರಣ' ಪತ್ರಿಕೆಯ ಸಂಪಾದಕರು ನನ್ನ ಭಾಷಣದ ಇಡೀ ಪಠ್ಯವನ್ನು ಮುದ್ರಿಸಲಿ, ನಂತರ ನಿರ್ದಿಷ್ಟವಾಗಿ ಪ್ಯಾರ ಆದ ಮೇಲೆ ಪ್ಯಾರ ವ್ಯಾಖ್ಯಾನ ಮಾಡಲಿ. ಸಂದರ್ಭ ಬಿಟ್ಟು ಕೇವಲ ಒಂದು ಭಾಷಣದ ಕೆಲವೇ ಕೆಲವು ಉದ್ಧೃತ ಭಾಗಗಳನ್ನು ಮುದ್ರಿಸುವುದು ತಪ್ಪುಗ್ರಹಿಕೆ ಮತ್ತು ಅಪಾರ್ಥಕ್ಕೆ ಎಡೆಮಾಡಿಕೊಡುತ್ತದೆ.

ಯೂರೋಪಿನ ಅಥವಾ ಭಾರತದ ಮಹಾನುಭಾವರ ಜೀವನಗಳು ಮನುಷ್ಯ–ಮನುಷ್ಯರ ನಡುವೆಯಿರುವ ಕೃತಕ ಭಿನ್ನತೆಗಳನ್ನು ರದ್ದುಗೊಳಿಸಲು ಅವಶ್ಯಕತೆಯ ಪುರಾವೆಗಳಾಗಿವೆ. ಲೋಥರ್ ಅಥವಾ ಶಿವಾಜಿಯವರು ಮುಸಲ್ಮಾನರನ್ನು ಮರಾಠರನ್ನಾಗಿ ಮಾಡಿದರು ಮತ್ತು ಅವರು ಮಹರರ ಮತ್ತು ಮಾಂಗರ ಫಿರಂಗಿ ದಂಡು ಮತ್ತು ಕುದುರೆ–ದಂಡುಗಳಿಗೆ ಪ್ರವೇಶ ಮಾಡುವ ಮೂಲಕ ಸ್ಪರ್ಶನಿಷೇಧದ ಪರಿಕಲ್ಪನೆಗೆ ಭಾರಿ ಪೆಟ್ಟು ಕೊಟ್ಟರು. ಮಹಾಶಯ ಚಕ್ರವರ್ತಿ ಅಕ್ಬರರು ನಮ್ಮ ನಿಜವಾದ 'ಮಹಾತ್ಮರು' ರಜಪೂತ ಹಿಂದೂ ರಾಣಿ ಜೋಧಾಬಾಯಿ ಅವರನ್ನು ಮದುವೆಯಾಗುವ ಮೂಲಕ ಹಿಂದೂ ಮತ್ತು ಮುಸಲ್ಮಾನರ ನಡುವೆ ಐಕ್ಯತೆಯನ್ನು ಮೂಡಿಸಿದರು. ಅವರು ಆಕೆಯನ್ನು ಒಬ್ಬ ಹಿಂದುವಾಗಿಯೇ ಉಳಿಯಲು ಬಿಟ್ಟರು ಮತ್ತು ಸೂರ್ಯನಿಗೆ ತೀರ್ಥವನ್ನು ಅರ್ಪಿಸಲು ವ್ಯವಸ್ಥೆ ಮಾಡಿಕೊಟ್ಟರು. ೨೦ನೇ ಶತಮಾನದಲ್ಲಿ ಅಸಾಧ್ಯವಾದದ್ದನ್ನು ೧೭ನೇ ಶತಮಾನದಲ್ಲಿ ಒಬ್ಬ ಮೊಹಮ್ಮಡನ್ ಚಕ್ರವರ್ತಿಯಿಂದ ಸುಲಭವಾಗಿ ತರಲು ಸಾಧ್ಯವಾದದ್ದನ್ನು ಕಂಡ ಆಗ್ರಾದ ಕೋಟೆಯು ಸಾಕ್ಷಿಯಾಗಿ ನಿಂತಿದೆ ಮತ್ತು ಅದನ್ನು ಎತ್ತಿತೋರಿಸುತ್ತದೆ.

ಬ್ರಿಟಿಷ್ ಸರಕಾರವು ಜನರನ್ನು ಜ್ಞಾನಿಗಳನ್ನಾಗಿ ಮಾಡುವ ಉದ್ದೇಶದಿಂದ ಶಿಕ್ಷಣದ ಸಂಸ್ಥೆಗಳನ್ನು ಜನರ ಎಲ್ಲಾ ವರ್ಗಗಳಿಗಾಗಿ ತೆರೆದಿದೆ. ಮಹಾರಾಣಿ ವಿಕ್ಟೋರಿಯಾ ಮತ್ತು ಅವರ ವಂಶಸ್ಥರ ಕಾಲದಿಂದಲೂ ನಾವು ಶಿಕ್ಷಣವನ್ನು ಪಡೆಯಲು ವಿಪುಲವಾದ ಅವಕಾಶಗಳನ್ನು ನೀಡುತ್ತಾ ಬಂದಿದೆ. ಇದಕ್ಕೆ ಸಮಾನಾಂತರವಾದುದನ್ನು ನಾವು ರಾಮರಾಜ್ಯದಲ್ಲೂ ಕಾಣುವುದಿಲ್ಲ. ಇದಲ್ಲದೆ, ಜ್ಞಾನಾಮೃತವನ್ನು ಉದ್ದೇಶಪೂರ್ವಕವಾಗಿ ಬ್ರಾಹ್ಮಣರ ಕೈಗಳಿಗೇ ನೀಡಲಾಗಿತ್ತು. ಸಹಜವಾಗಿ ಸ್ವರಾಜ್ಯದ ಮಹಾಬಯಕೆ ಬ್ರಾಹ್ಮಣರಿಂದ ಪ್ರಾರಂಭವಾಗುತ್ತದೆ; ಕೋಮುವಾರು ಪ್ರಾತಿನಿಧ್ಯವನ್ನು ಬಯಸುವುದರಿಂದ ಅದರ ಜೊತೆಯಲ್ಲಿಯೇ ರಾಜಕೀಯ ಅಧಿಕಾರದ ಹಂಚಿಕೆಯಾಗುತ್ತದೆ. ಹೀಗೆ ಇದನ್ನು ಬಯಸುವವರೆಲ್ಲರನ್ನೂ ದೇಶದ ದ್ರೋಹಿಗಳು ಮತ್ತು ಶತ್ರುಗಳೆಂದು ಅವರು ಸಹಜವಾಗಿ ಕರೆಯುತ್ತಾರೆ.

ನನ್ನ ಪ್ರಜೆಗಳು ಒಂದು ವಿಶಿಷ್ಟ ದೃಷ್ಟಿಯಲ್ಲಿ ಗೌರವವನ್ನು ಸಾಧಿಸಿರುವುದರಿಂದ ನಾನು ಅವರ ಬಗ್ಗೆ ಹೆಮ್ಮೆಪಡುತ್ತೇನೆ. ಅವರ ನಿದರ್ಶನವನ್ನು ಮತ್ತೆಲ್ಲಿಯೋ ಅನುಸರಿಸಲಾಗುವುದು. ಹೆಮ್ಮೆಯ ಪ್ರಜ್ಞೆಯಿಂದ ಬ್ರಿಟಿಷರು ಬ್ರಿಟಿಷ್ ಪಾರ್ಲಿಮೆಂಟನ್ನು 'ಪಾರ್ಲಿಮೆಂಟುಗಳ ತಾಯಿ' ಎಂದು ನಾನು ಹೆಮ್ಮೆಯಿಂದ ಕರೆಯುವೆನು. ಮರಾಠರ, ಜೈನರ, ಲಿಂಗಾಯಿತರ, ಸಾರಸ್ವತರ, ಮುಸ್ಲಿಮರ, ದೈವದ್‌ನ್ಯಾಸರ, ಪಾಂಚಾಲರ, ಸಿಂಪಿಗಳ ಭ್ರಾತೃತ್ವದ ತತ್ವಗಳ ಆಧಾರದ ಮೇಲೆ ಕೆಲಸ ಮಾಡುವ ಆರ್ಯ ಸಮಾಜದಂತಹ ಸಂಸ್ಥೆಗಳಿವೆ. ಇವುಗಳಿಗೆ ಕಿರೀಟಪ್ರಾಯವಾಗಿ ಅಸ್ಪೃಶ್ಯತೆಯನ್ನು ನಿವಾರಣೆ ಮಾಡುತ್ತಿರುವ ಅಸ್ಪೃಶ್ಯರ ವಿದ್ಯಾರ್ಥಿ ನಿಲಯವಿದೆ. ಅರ್ಹತೆಯಿರುವ ಅಸ್ಪೃಶ್ಯ ಸದಸ್ಯರಿಗೆ ವಕೀಲಿವೃತ್ತಿಯನ್ನು ಕೈಗೊಳ್ಳಲು ಅನುಕೂಲವಾಗುವಂತೆ ಅವರಿಗೆ ಸನದುಗಳನ್ನು ನೀಡಲಾಗಿದೆ. ಕೊಲ್ಹಾಪುರವು ಮನುಷ್ಯ-ಮನುಷ್ಯರ ನಡುವೆಯಿರುವ ಕೃತಕ ಭೇದ-ಭಾವಗಳನ್ನು ರದ್ದು ಮಾಡುವುದರಲ್ಲಿ ಪ್ರಮುಖ ಪಾತ್ರ ವಹಿಸಿರುವುದು ಮಾತ್ರವಲ್ಲದೆ ಪುರುಷ ಮತ್ತು ಮಹಿಳೆಯರಿಗೆ ಸಮಾಜದಲ್ಲಿ ಸಮಾನ ಸ್ಥಾನಮಾನ ನೀಡುವುದರಲ್ಲಿ ಮುಂಚೂಣಿಯಲ್ಲಿದೆ. ಈ ಪ್ರಯತ್ನದಲ್ಲಿ ನನಗೆ ಉತ್ಸಾಹಭರಿತರಾಗಿ ಬೆಂಬಲ ನೀಡಿದ ನನ್ನ ಪ್ರೀತಿಯ ಪ್ರಜೆಗಳಿಗೆ ಗೌರವ ನಮನ ಸಲ್ಲಿಸದೆ ಈ ಸಂದರ್ಭವನ್ನು ಹಾಗೆಯೇ ಬಿಟ್ಟುಬಿಡುವುದಿಲ್ಲ.

ಎಲ್ಲಾ ಜನರಿಗೂ ಸಾಮಾಜಿಕ, ಕೈಗಾರಿಕಾ, ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳಲ್ಲಿ ಪ್ರಗತಿಯನ್ನು ಸಾಧಿಸಲು ಅವಕಾಶ ನೀಡಲು ಮತ್ತು ತಮ್ಮ ಹೊಣೆಗಾರಿಕೆಯ ಸೂಕ್ತ ಪಾಲನ್ನು ನಿರ್ವಹಿಸಲು ಕಲಿಯುವುದಕ್ಕೆ ಅವಕಾಶ ನೀಡುವುದನ್ನೇ ನಾನು ಕೋಮುವಾರು ಪ್ರಾತಿನಿಧ್ಯವೆಂದು ಕರೆಯುತ್ತೇನೆ. ಯಾರು ಹಿಂದುಳಿದಿದ್ದಾರೋ ಅವರಿಗೆ ಸಹಾಯ ಮತ್ತು ಪ್ರೋತ್ಸಾಹ ನೀಡುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ ಮತ್ತು ಅವರ ಪ್ರಕಾರ ಯಾರು ದಮನಕ್ಕೊಳಗಾಗಿದ್ದಾರೋ ಅವರಿಗೆ ನಾನು ಸಹಾಯಹಸ್ತ ನೀಡುತ್ತಿರುವೆನು. ಬೆಳೆದ ತಮ್ಮ ಮಕ್ಕಳು ತಮ್ಮನ್ನು ತಾವೇ ನೋಡಿಕೊಳ್ಳುವುದರಿಂದ ಅವರನ್ನು ನೋಡಿಕೊಳ್ಳುವ ಅಗತ್ಯವಿಲ್ಲ. ಅವರು ತಮ್ಮ ಮಕ್ಕಳಲ್ಲಿ ಯಾರು ದುರ್ಬಲರಾಗಿರುವರೋ ಅವರು ತಮ್ಮ ಕಾಲುಗಳ ಮೇಲೆ ತಾವು ನಿಂತುಕೊಳ್ಳುವುದಕ್ಕೆ ಆಗುವುದಿಲ್ಲವೋ ಅವರ ಬಗ್ಗೆ ಅವರು ಹೆಚ್ಚು ಗಮನ ನೀಡುತ್ತಾರೆ. ಅವರಲ್ಲಿ ಕೆಲವರಿಗೆ ಬೆಂಬಲ ನೀಡುವವರು ಬೇರೆಯವರನ್ನು ತಮ್ಮ ಭುಜಗಳ ಮೇಲೆ ಹೊತ್ತುಕೊಂಡು ಹೋಗುವರು. ಇದೇ ತಂದೆ ತಾಯಿಗಳ ಕರ್ತವ್ಯವಾಗಿದೆ. ಕೇವಲ ಮೂರ್ಖರು ಮಾತ್ರ ಇದನ್ನು ಅನ್ಯಾಯ, ತಾರತಮ್ಯವೆಂದು ಕರೆಯುತ್ತಾರೆ. ನಾನೇನು ಮಾಡುವುದಿಲ್ಲ. ಅಂಥ ತಂದೆ-ತಾಯಿಗಳನ್ನು ಅನುಸರಿಸಿ ನಾನು ಹಿಂದುಳಿದ ವರ್ಗಗಳಿಗೆ ಮತ್ತು ದಮನಿತ ಜನರಿಗೆ ಹೆಚ್ಚಿನ ಅನುಕೂಲಗಳನ್ನು ಮತ್ತು ಹೆಚ್ಚಿನ ಪ್ರೋತ್ಸಾಹವನ್ನು

ನೀಡುವೆನು. ನಾನು ಉದಾರವಾಗಿ ಸಂಸ್ಥಾನದ ಸೇವೆಯಲ್ಲಿ ಸೇರಿಸಿದ್ದೇನೆ, ಅವರಿಗೆ ವಕೀಲಿ ವೃತ್ತಿ ನಡೆಸಲು ಸನದುಗಳನ್ನು ನೀಡಿದ್ದೇನೆ, ಮತ್ತು ಕಲಿಕೆಯ ನೀರಿನ ಬುಗ್ಗೆಗಳಿಗೆ ಹೋಗುವಂತೆ ನಿರ್ದೇಶಿಸಿದ್ದೇನೆ. ನಾನು ಅವರ ವಿಮೋಚನೆ ಬೇಗನೇ ಆಗಲಿ ಎಂದು ಆಶಿಸುತ್ತೇನೆ. ಬ್ರಾಹ್ಮಣೇತರರನ್ನು ಉನ್ನತೀಕರಿಸುವ ಧೈರ್ಯದ ಪ್ರಯತ್ನಗಳನ್ನು ಬ್ರಾಹ್ಮಣದ್ವೇಷ ಎಂದು ವ್ಯಾಖ್ಯಾನ ಮಾಡುವುದನ್ನು ನಾನು ಅನ್ಯಾಯವೆಂದು ಭಾವಿಸುತ್ತೇನೆ. ಬಹುಶಃ ಅವರು ಈ ಆರೋಪವನ್ನು ಪ್ರಾಮಾಣಿಕವಾಗಿ ಮಾಡಿರಬಹುದು.

ಬ್ರಾಹ್ಮಣನು ಗಳಿಸಿರುವ ಉನ್ನತ ಸ್ಥಾನಮಾನಗಳನ್ನು ಹೊಟ್ಟೆಕಿಚ್ಚಿನಿಂದ ಕಿತ್ತೊಗೆಯಲು ಕೋಮುವಾರು ಪ್ರಾತಿನಿಧ್ಯದ ಗುಮ್ಮನನ್ನು ಎತ್ತಲಾಗಿದೆಯೆಂದು ಕೆಲವರು, ವೃತ್ತಿರಾಜಕಾರಣ ಬ್ರಾಹ್ಮಣರು ಎಬ್ಬಿಸಲಾಗಿದೆಯೆಂದು ಕೆಲವರು ವಾದಿಸುತ್ತಾರೆ. ಇದು ಶುದ್ಧ ತಪ್ಪುಕಲ್ಪನೆ; ನಮ್ಮ ಬ್ರಾಹ್ಮಣ ಸ್ನೇಹಿತರು ಮುಟ್ಟಿರುವ ರಾಜಕೀಯ ಪ್ರಾಮುಖ್ಯತೆಯನ್ನು ನಾವು ಒಪ್ಪಿಕೊಳ್ಳುತ್ತೇವೆ. ನೀವು ಓಡಬಲ್ಲಿರಿ, ನಾವು ನಡೆಯಲಾರೆವು, ಏಕೆಂದರೆ ನಾವು ಇನ್ನೂ ನಮ್ಮ ಕಾಲುಗಳ ಮೇಲೆ ನಿಂತುಕೊಳ್ಳುವುದನ್ನೇ ಕಲಿತಿಲ್ಲ. ನಡೆಯುವ ತೊಂದರೆಯಿಂದ ನಮ್ಮನ್ನು ಉಳಿಸಲು ತಾವು ನಮ್ಮನ್ನು ತಮ್ಮ ಭುಜಗಳ ಮೇಲೆ ಹೊತ್ತುಕೊಂಡು ಹೋಗಲು ತಾವು ದಯವಿಟ್ಟು ತಯಾರಾಗಿದ್ದೀರಿ. ನಾವು ಈ ಕರುಣೆಗೆ ತುಂಬ ಕೃತಜ್ಞರಾಗಿದ್ದೇವೆ. ಆದರೆ ನಿಮ್ಮ ಕರುಣೆಯ ಪರಿಣಾಮವು ನಿರಂತರವಾಗಿ ನಾವು ಊನವಾಗಿರುವಂತೆ ಮಾಡುತ್ತದೆ ಎಂಬ ನಮ್ಮ ಪ್ರಾರ್ಥನೆಯನ್ನು ದಯವಿಟ್ಟು ಪರಿಗಣಿಸಿ. ನೀವು ನಮಗೆ ಮತ್ತೆ ಮತ್ತೆ ಪ್ರಯತ್ನ ಮಾಡಿ ಕಲಿಯುವುದಕ್ಕೆ ತಾವು ನಮ್ಮನ್ನು ಬಿಡದಿದ್ದರೆ ಹಾಗೆ ಕಲಿಯಲು ಎಂದಿಗೂ ಆಗುವುದಿಲ್ಲ. ನಾವು ನಡೆಯುವುದನ್ನು ಕಲಿಯುವ ಪ್ರಯತ್ನಗಳಲ್ಲಿ ಬೀಳುವುದು ಮತ್ತು ಏಳುವುದನ್ನು ಕಂಡು ನಮ್ಮನ್ನು ಮೆಚ್ಚಿಕೊಳ್ಳಿ ಮತ್ತು ಪ್ರೋತ್ಸಾಹಿಸಿ, ಆದರೆ ದಯವಿಟ್ಟು ನಮ್ಮ ಹಾದಿಯಲ್ಲಿ ಅಡ್ಡಿ–ಆತಂಕಗಳನ್ನು ಒಡ್ಡಬೇಡಿ. ಬೆಂಬಲವಿಲ್ಲದೆ ನಮ್ಮ ಅಭಿಲಾಷೆಗಳಿಂದಲೇ ಪ್ರಚೋದಿತರಾಗಿ ನಮ್ಮ ಪ್ರಯತ್ನಗಳಿಂದಲೇ ನಾವು ನಿಂತುಕೊಳ್ಳುವೆವು. ಆದ್ದರಿಂದ ದಯವಿಟ್ಟು ನಮ್ಮನ್ನು ತಪ್ಪು ತಿಳಿಯಬೇಡಿ.

ನನ್ನ ಪ್ರಜೆಗಳಿಗೆ ಸ್ವರಾಜ್ಯ ನೀಡುವುದಕ್ಕೆ ನಾನು ಸಂಪೂರ್ಣವಾಗಿ ವಿರುದ್ಧವಾಗಿದ್ದೇನೆಂದು ಕೆಲವು ಪತ್ರಿಕೆಗಳು ನನ್ನ ಮೇಲೆ ಆರೋಪ ಹೊರಿಸಿವೆ. ಇದು ಮತ್ತೆ ಶುದ್ಧ ಸುಳ್ಳು. ಒಂದು ಭಾಷಣದ ಆಧಾರದ ಮೇರೆಗೆ ಆರೋಪ ಮಾಡಲಾಗಿದೆ. ನಾನು ಹೇಳಿದ್ದೆ:

"ಜನರಲ್ಲಿರುವ ಶಿಕ್ಷಣದ ಸಾಮಾನ್ಯ ಮಟ್ಟವು ವೃದ್ಧಿಗೊಳ್ಳಬೇಕು; ಅದು ಕನಿಷ್ಠಪಕ್ಷ ಅಂಶತಃ ಉನ್ನತವರ್ಗಗಳ ಮಟ್ಟಕ್ಕೆ ಸಮನಾಗುವವರೆಗೂ ಸುಧಾರಣೆಗಳ ದಿಕ್ಕಿನಲ್ಲಿ ಯಾವುದೇ ಸಂವಿಧಾನಾತ್ಮಕ ಬದಲಾವಣೆಗಳನ್ನು ಮಾಡುವುದಕ್ಕೆ ನಾನು ಮೀನಾಮೇಷ ಎಣಿಸುತ್ತೇನೆ ಎಂದು ನನ್ನ ಅಭಿಪ್ರಾಯವನ್ನು ಈ ಬಗ್ಗೆ ತಿಳಿಸಬಲ್ಲೆನು."

ನನ್ನ ಮಾತುಗಳನ್ನು ಹೇಗೆ ತಿರುಚಿದ್ದಾರೆ ಮತ್ತು ತಪ್ಪುತಪ್ಪಾಗಿ ಹೇಳಿದ್ದಾರೆಂಬುದು ಇದು ಸ್ಪಷ್ಟಪಡಿಸುತ್ತದೆ. ಎಲ್ಲಾ ಕೆಳಜಾತಿಗಳು ಶಿಕ್ಷಣ ಪ್ರಾರಂಭಿಸುವವರೆಗೆ ಮತ್ತು ಜನರ ಎಲ್ಲಾ ವಿಭಾಗಗಳು ತಮ್ಮ ಹಕ್ಕುಗಳ ಬಗ್ಗೆ ತಿಳಿದುಕೊಳ್ಳುವವರೆಗೆ ಮತ್ತು ಆ ಹಕ್ಕುಗಳನ್ನು ಚಲಾಯಿಸುವ ಸಾಮರ್ಥ್ಯ ಪಡೆಯುವವರೆಗೆ ಸಮಾಜಕ್ಕೆ ಸ್ವಯಂ ಆಡಳಿತವನ್ನು ವಹಿಸುವುದು ಕ್ಷೇಮವಲ್ಲವೆಂಬುದು ನನ್ನ ನಂಬಿಕೆ.

ನಮ್ಮ ದೇಶದಲ್ಲಿ ಜಾತಿಗಳ ಆಡಳಿತವು ಜನರ ಮನಸ್ಸುಗಳನ್ನು ಅಧಿಕಾರಯುತವಾಗಿ ನಿಯಂತ್ರಿಸುತ್ತದೆ

ಮತ್ತು ಈ ದೇಶದಲ್ಲಿ ಶೇಕಡ ೭೦ರಿಂದ ೮೦ರಷ್ಟು ಜನರು ತಮ್ಮ ಹಕ್ಕು ಮತ್ತು ಕರ್ತವ್ಯಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಚೆನ್ನಾಗಿ ಸಿದ್ಧರಾಗಿಲ್ಲ. ಆದ್ದರಿಂದ ರಾಜಕೀಯ ಅಧಿಕಾರವು ತನ್ನ ಹಿತವನ್ನೇ ಕಾಪಾಡಿಕೊಳ್ಳುವ ಏಕೈಕ ಜಾತಿಯ ಜನರ ಕೈಗಳಿಗೆ ಅಧಿಕಾರ ಹೋಗುವುದು, ಅವರು ಸಮಾಜಕ್ಕೆ ಭಯಂಕರವಾದ ಗಂಡಾಂತರವನ್ನು ಉಂಟುಮಾಡುವರು. ಸ್ವಾರ್ಥಪರ ವ್ಯಕ್ತಿಗಳ ಕೈಯಲ್ಲಿರುವ ಅಧಿಕಾರವು ಇತರರನ್ನು ದಮನಗೊಳಿಸುವ ಸಹಜ ಅಪೇಕ್ಷೆಯನ್ನು ಹೇಗೆ ಪೂರೈಸುತ್ತದೆಂಬುದನ್ನು ಇತಿಹಾಸ ಸ್ಪಷ್ಟವಾಗಿ ತಿಳಿಸುತ್ತದೆ. ಆರ್ಯರು ಮತ್ತು ಅನಾರ್ಯರ ನಡುವಣ ಹೋರಾಟಗಳು ಅಥವಾ ಪೇಶ್ವೆಗಳ ದೃಷ್ಟಿಕೋನದಿಂದ ಈ ಐತಿಹಾಸಿಕ ಪ್ರಕ್ರಿಯೆಯವರೆಗಿನ ಇತ್ತೀಚಿನ ಹೆಚ್ಚು ಹೋರಾಟಗಳು ನಿದರ್ಶನ ನೀಡುತ್ತವೆ. ಸ್ವ-ಉನ್ನತಿಯ ಅವಕಾಶವು ಸಜ್ಜನರನ್ನು ದುರ್ಜನರನ್ನಾಗಿ ಪರಿವರ್ತಿಸುವಾಗ, ಬೇರೆಯವರನ್ನು ಗುಲಾಮತ್ವದಲ್ಲಿಡುವುದೇ ಕಸುಬಾಗುಳ್ಳವರಿಗೆ, ಮತ್ತು ಅದನ್ನು ಮತ್ತೆ ಮುಂದುವರಿಸಲು ಈಗಾಗಲೇ ತಮ್ಮ ಅಪೇಕ್ಷೆಗಳ ಸೂಚನೆಗಳನ್ನು ನೀಡಿರುವವರ ಕೈಗಳಿಗೆ ರಾಜಕೀಯ ಅಧಿಕಾರವನ್ನು ನೀಡುವ ಅವಶ್ಯಕತೆ ಇದೆಯೇ? ನಾನು ಹೇಳಿದ ಮಾತಿನ ಸತ್ವವದು. 'ಕೇಸರಿ' ಪತ್ರಿಕೆ ಮತ್ತು ಅದರ ಅನುಚರರ ಧೋರಣೆ ಮತ್ತು ಕುಯುಕ್ತಿತನ ನಿಮಗೆ ಚೆನ್ನಾಗಿ ಗೊತ್ತಿದೆ. ಕಡ್ಡಾಯ ಶಿಕ್ಷಣ ಮಾಡುವುದಕ್ಕೆ ಬದಲಾಗಿ ಶಾಲಾ ಕಟ್ಟಡಗಳ ವಿಸ್ತರಣೆ ಮತ್ತು ಅವುಗಳನ್ನು ವಿಶಾಲಗೊಳಿಸುವುದಕ್ಕೆ ಪ್ರಥಮ ಆದ್ಯತೆ ನೀಡಬೇಕೆಂಬ 'ಕೇಸರಿ' ಪತ್ರಿಕೆಯ ವಾದವು ಖಂಡಿತವಾಗಿ ಬುದ್ಧಿವಂತರನ್ನು ಗೊಂದಲಕ್ಕೀಡುಮಾಡುತ್ತದೆ. 'ಎಲ್ಲರಿಗೂ ಬ್ರೆಡ್ಡು ನೀಡುವವರೆಗೆ ಕೇಕು ಇಲ್ಲ' ಎಂಬುದು ಇಂಗ್ಲಿಷ್ ಲೇಬರ್ ಪಾರ್ಟಿಯ ತತ್ವ, ಭಾರತದಲ್ಲಿ ಶೇಕಡ ೧೦ರಷ್ಟು ಜನ ಹಬ್ಬವನ್ನು ಆಚರಿಸಿದರೆ ಶೇಕಡ ೯೦ ರಷ್ಟು ಜನರು ಉಪವಾಸವಿರುತ್ತಾರೆ. ಉಪವಾಸವಿರುವ ಜನರಿಗೆ ಒರಟು ಧಾನ್ಯಗಳ ಆಹಾರವನ್ನು ಬಡಿಸುವುದಕ್ಕೆ ಮೊದಲೇ ಹಬ್ಬದೂಟ ಮಾಡುತ್ತಿರುವವರು ತುಪ್ಪವನ್ನು ಬಡಿಸಿ ಎಂದು ಒತ್ತಾಯಪಡಿಸುವುದು ಬಡಜನರ ಬಗ್ಗೆ ಅವರಿಗಿರುವ ಕಪಟ ತಳಮಳವನ್ನು ತೋರಿಸುತ್ತದೆ. ಶಾಸನ ಪರಿಷತ್ತುಗಳು ಲಿಂಗಾಯತರು, ಜೈನರು ಮತ್ತು ಇತರೆ ವ್ಯಾಪಾರಸ್ಥರು ತಮ್ಮ ಕೌಶಲ್ಯಗಳನ್ನು ತಕ್ಕಡಿಗಳಲ್ಲಿ ತೂಕ ಮಾಡುವುದಕ್ಕೆ ಅಥವಾ ರೈತರು ಉಳುಮೆಗಳಲ್ಲಿ ತಮ್ಮ ಕೌಶಲ್ಯಗಳನ್ನು ಪ್ರದರ್ಶಿಸುವುದಕ್ಕೆ ಸ್ಥಳಗಳಲ್ಲಿರಿ ಎಂದು ಹೇಳುವ ಖಂಡನಾರ್ಹ ಹೇಳಿಕೆಗಳನ್ನು ಸಾರ್ವಜನಿಕವಾಗಿ ಪ್ರಕಟಿಸುವುದಕ್ಕೆ ಈ ಬುದ್ಧಿವಂತ ಜನರಿಗೆ ನಾಚಿಕೆಯಾಗದಿರುವುದನ್ನು ಅರ್ಥಮಾಡಿಕೊಳ್ಳುವುಕ್ಕೆ ನಾನು ವಿಫಲನಾಗುತ್ತಿದ್ದೇನೆ.

ಬ್ರಿಟಿಷರ ಕೈಯಿಂದೊಂದು ಸಮುದಾಯವಾಗಿರುವ ಬ್ರಾಹ್ಮಣರ ಕೈಗೆ ಅಧಿಕಾರವನ್ನು ಹಸ್ತಾಂತರಿಸುವುದನ್ನು ನಾನು ಅಸಮ್ಮತಿಸುತ್ತೇನೆ. ಪರಶುರಾಮನ ಕಾಲದಿಂದಲೂ ಇತಿಹಾಸ ನಮಗೆ ಏನು ಹೇಳುತ್ತಿದೆ? ವಾಸ್ತವಿಕವಾಗಿ ಇತರರಿಗಿಂತ ಶಿಕ್ಷಣದಿಂದಲೇ ಶ್ರೀಮಂತರಾಗಿದ್ದ ಬ್ರಾಹ್ಮಣರು ಬೇರೆಯವರನ್ನು ಸಂವಿಧಾನಬದ್ಧವಾಗಿ ದಾಸ್ಯದಲ್ಲಿಡುವುದಕ್ಕೆ ಹೇಗೆ ಹೆಣಗಿದರೆಂಬುದನ್ನು ಮರೆಯುವುದಕ್ಕೆ ಆಗುವುದಿಲ್ಲ. ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವು ಕೆಳವರ್ಗಗಳು ಗತಕಾಲದ ಈ ಪೀಡೆಯನ್ನು ಕಿತ್ತು ಎಸೆಯಲು ಸಮರ್ಥವಾಗುನಂತೆ ಮಾಡುವ ಶಕ್ತಿವರ್ಧಕ ಟಾನಿಕ್ ಆಗಿದೆ. ನಾನು ನನ್ನ ಸಂಸ್ಥಾನದಲ್ಲಿ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಿದ್ದೇನೆ ಮತ್ತು ಮುಂದಿನ ತಲೆಮಾರು ಸಾಕ್ಷರಸ್ಥವಾಗುವುದರಲ್ಲಿ ನನಗೆ ಅನುಮಾನವಿಲ್ಲ.

ನಾನು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡುವಾಗ ನಾನು ಪ್ರೌಢ ಮತ್ತು ಕಾಲೇಜಿನ ಶಿಕ್ಷಣವನ್ನು

ಕಡೆಗಣಿಸಲಿಲ್ಲ. ನನ್ನ ಸಂಸ್ಥಾನವು ಸತಾರಾ ಅಥವಾ ಬೆಳಗಾವಿ ಜಿಲ್ಲೆಗಳಿಗಿಂತ ಚಿಕ್ಕದು ಮತ್ತು ಆದರೂ ಕೂಡ ೭ ಪ್ರೌಢಶಾಲೆಗಳು ಅಸ್ತಿತ್ವದಲ್ಲಿವೆ. ಮತ್ತು ಮತ್ತೆ ಎರಡು ಪ್ರೌಢಶಾಲೆಗಳನ್ನು ಇಷ್ಟರಲ್ಲಿಯೇ ಪ್ರಾರಂಭಿಸಲಾಗುವುದು. ಇವುಗಳೆಲ್ಲದರ ಮೇಲೆ ಒಂದು ಸುಸಜ್ಜಿತ ಕಾಲೇಜು ಇದೆ.

ನಾನು ನನ್ನ ಪ್ರಜೆಗಳಿಗೆ ಆದಷ್ಟು ಬೇಗನೇ ಸ್ವರಾಜ್ಯ ನೀಡಲು ನಾನು ಬಹು ಕಾತರನಾಗಿ ಶಿಕ್ಷಣದಿಂದ ಪ್ರಚೋದಿತನಾಗಿದ್ದೇನೆ ಎಂಬುದನ್ನು ನೀವು ಅರ್ಥ ಮಾಡಿಕೊಳ್ಳುವಿರಿ ಎಂಬುದರಲ್ಲಿ ನನಗೆ ಸಂದೇಹವಿಲ್ಲ. ನನ್ನ ಎಲ್ಲಾ ಪ್ರಜೆಗಳು ಪ್ರಾದೇಶಿಕ ಭಾಷೆಯ ಮೂರನೇ ತರಗತಿಯ ಸಾಕ್ಷರತೆಯ ಪರೀಕ್ಷೆಗೆ ತಲುಪಿದರೆ ನಾನು ಬಹಳ ಸಂತೋಷದಿಂದ ಸರಕಾರದ ಹೊಣೆಗಾರಿಕೆಯನ್ನು ಅವರಿಗೆ ವಹಿಸುವೆನು ಮತ್ತು ನಿವೃತ್ತನಾಗಿ ಪೆನ್ಷನ್ನಿನಿಂದ ನಾನು ನೆಮ್ಮದಿಯಾಗಿ ಜೀವನ ಕಳೆಯುವೆನು. ಕಾನೂನು ಮತ್ತು ಸುವ್ಯವಸ್ಥೆಯ ಭಾರ ಇಂದು ನನ್ನ ಮೇಲಿದೆ ಮತ್ತು ಇಂದು ಒಳ್ಳೆಯ ಸರಕಾರ ನನ್ನ ಹೆಗಲ ಮೇಲಿದೆ. ಪ್ರಜೆಗಳು ಸೂಕ್ತ ಕಂದಾಯ ಕೊಡುವುದಕ್ಕೆ ಹೊಣೆಗಾರರು ಮಾತ್ರ. ಭವಿಷ್ಯದಲ್ಲಿ ತೆರಿಗೆ ಕೊಡುವ ಹೊಣೆಗಾರಿಕೆ ಮತ್ತು ಕಂದಾಯಗಳ ನಿರ್ವಹಣೆಯು ಪ್ರಜೆಗಳಿಗೆ ಸೇರಿದ್ದು. ಆದರೆ ನನ್ನ ಪ್ರಜೆಗಳು ಪೂರ್ಣವಾಗಲ್ಲದಿದ್ದರೂ ಭಾಗಶಃ ಅಂತಹ ಹೊಣೆಗಾರಿಕೆಯನ್ನು ತೆಗೆದುಕೊಳ್ಳುವುದಕ್ಕೆ ಯೋಗ್ಯರಾಗಿರಬೇಕು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇಡೀ ಜನಸಂಖ್ಯೆಯಲ್ಲಿ ಒಂದು ಭಾಗಕ್ಕೆ ಉನ್ನತ ಶಿಕ್ಷಣ ತಲುಪಿರುತ್ತದೆಯೆಂಬುದನ್ನು ನಾನು ನಂಬುತ್ತೇನೆ. ಇಡೀ ಜನಸ್ತೋಮ ಅಜ್ಞಾನದಲ್ಲಿ ಮುಳುಗಿರುವಾಗ ಜನಸಂಖ್ಯೆಯ ಒಂದು ಸಣ್ಣ ಭಾಗ ಶಿಕ್ಷಿತವಾಗಿದ್ದರೆ ಯಾವದೇ ರಾಜಕೀಯ ಅಧಿಕಾರದ ವರ್ಗಾವಣೆಯು ಶಿಕ್ಷಿತರ ಕೈಗೆ ಸೇರಿ, ಅದು ಒಂದು ಸ್ವದೇಶಿ ಆಡಳಿತಶಾಹಿಯಾಗಿ ರೂಪುಗೊಳ್ಳುತ್ತದೆ. ನಮಗೆ ಇಂಥ ಆಡಳಿತಶಾಹಿಯ ಸಾಕಷ್ಟು ಅನುಭವ ಆಗಿದೆ. ಶಾಹು-೧ (ಮೊದಲನೆಯ ಶಾಹು) ಅವರ ತಪ್ಪಿನ ಮೂಲಕ ಪೇಶ್ವೆಗಳು ಹೆಚ್ಚುಹೆಚ್ಚು ಅಧಿಕಾರ ಕಬಳಿಸಲು ಅವಕಾಶವನ್ನು ಪಡೆದರು. ಆದರೆ ಪೇಶ್ವೆಗಳ ಆಡಳಿತದ ಪರಿಣಾಮ ಶಾಹು ಜೈಲುವಾಸ ಅನುಭವಿಸಿದ್ದು ಮತ್ತು ಜಾತಿಯ ಭಾವನೆಯನ್ನು ಬೆಳೆಸಿದ್ದು. ಪೇಶ್ವೆಗಳ ಆಡಳಿತದಲ್ಲಿ ಅಸ್ಪೃಶ್ಯರು ತಮ್ಮ ಕತ್ತುಗಳಿಗೆ ಕುಡಿಕೆಗಳನ್ನು ಮತ್ತು ತಮ್ಮ ಸೊಂಟದ ಬಟ್ಟೆಗಳಿಗೆ ಪೊರಕೆಗಳನ್ನು ಕಟ್ಟಿಕೊಂಡು ಓಡಾಡಬೇಕಾಗಿತ್ತು. ಯಾರೂ ಅಂತಹ ದಿನಗಳನ್ನು ಆಹ್ವಾನಿಸಲು ಬಯಸುವುದಿಲ್ಲ. ಅವರ ಆಗಮನವನ್ನು ತಡೆಯಲು ಅತ್ಯುತ್ತಮ ಮತ್ತು ಪರಿಣಾಮಕಾರಿ ಮಾರ್ಗವೆಂದರೆ ರಾಜಕೀಯ ಅಧಿಕಾರ ಕೊಡುವುದಕ್ಕೆ ಮೊದಲು ಅವರು ಅವುಗಳನ್ನು ಹೇಗೆ ಬಳಸಬೇಕೆಂಬುದನ್ನು ತಿಳಿದುಕೊಳ್ಳಬೇಕು ಮತ್ತು ಅದರ ದುರುಪಯೋಗ ತಡೆಯಲು ಅವರನ್ನು ಸಿದ್ಧಗೊಳಿಸಬೇಕು.

ಮಗನು ಬೆಳೆದು ಮನೆಯ ವ್ಯವಹಾರವನ್ನು ತೆಗೆದುಕೊಳ್ಳಲು ಸಿದ್ಧನಾದಾಗ ನಮ್ಮ ಹಳೆಯ ಆರ್ಯರ ಜೀವನದ ನಿಯಮ ತಂದೆಯು ನಿವೃತ್ತನಾಗಬೇಕು. ಈ ಪ್ರಾಚೀನ ನಿಯಮಕ್ಕೆ ನನ್ನ ಪ್ರಜೆಗಳು ತಮ್ಮನ್ನು ತಾವೇ ನಿರ್ವಹಿಸಿಕೊಳ್ಳಲು ಯೋಗ್ಯರಾದಾಗ ನಿವೃತ್ತಿವೇತನದ ಮೇಲೆ ನಾನು ನಿವೃತ್ತನಾಗಬೇಕು. ನಾನು ಅತ್ಯಂತ ಪ್ರೀತಿಯಿಂದ ಬಯಸುವ ಈ ಇಷ್ಟಾರ್ಥವು ಬಹಳ ಮೊದಲೇ ನೆರವೇರುವುದೆಂದು ನಾನು ಮನವರಿಕೆ ಮಾಡಿಕೊಳ್ಳುತ್ತೇನೆ.

ನಾನು ಇಲ್ಲಿಯವರೆಗೆ ಏನನ್ನು ಹೇಳುತ್ತಿದ್ದೆನೋ, ಅದನ್ನು ನಾನು ನಿಷ್ಕಳಂಕವಾಗಿ ಹೇಳಿದ್ದೇನೆ. ನಾನು ಹೇಳಿದ್ದು ಅಪಾರ್ಥವಾಗದಿರಲಿ. ಒಂದು ಗಾಡಿಯು ತನ್ನ ದಾರಿಯಲ್ಲಿ ಸುಗಮವಾಗಿ ಹೋಗುವ ಮೊದಲು ಅದರ ಎರಡು ಚಕ್ರಗಳು, ಮತ್ತು ನೊಗಗಳು ಬಲಿಷ್ಠ ಮತ್ತು ಸ್ಥಿರವಾಗಿರಬೇಕೆಂದು ನಿರೀಕ್ಷಿಸಬೇಕೆಂದು

ನನ್ನ ಅಭಿಪ್ರಾಯ. ಹೊಸ ಸುಧಾರಣೆಯ ಕಾಯ್ದೆಯ ಮೂಲಕ ಬ್ರಿಟಿಷ್ ಇಂಡಿಯಾದಲ್ಲಿರುವ ರಾಜಕೀಯ ಅಧಿಕಾರವನ್ನು ನಾಗರಿಕ ಸೇವೆ ಮತ್ತು ಜನತಾ ಪ್ರತಿನಿಧಿಗಳ ನಡುವೆ ವಿಭಾಗಿಸಲಾಗುವುದು ಮತ್ತು ನಾಗರಿಕ ಸೇವೆಯಲ್ಲಿ ನಿಹಿತವಾಗಿರುವ ಅಧಿಕಾರವು ನಿಧಾನವಾಗಿ ಜನತೆಯ ಪ್ರತಿನಿಧಿಗಳ ಕೈಗೆ ಹೋಗುವಂತೆ ಕಲ್ಪಿಸಲಾಗಿದೆ. ಅಂತಹ ಸರಕಾರದ ಒಂದು ದ್ವಿಪ್ರಭುತ್ವ (ಜೋಡಿ ಆಡಳಿತದ) ಪದ್ಧತಿಯು ದೇಶೀಯ ಸಂಸ್ಥಾನಗಳ ವಿಚಿತ್ರ ಸನ್ನಿವೇಶಗಳಿಗೆ ಹೆಚ್ಚು ಸೂಕ್ತವಾಗಲಾರದೆಂದು ನನ್ನ ಭಯ. ಅಲ್ಲಿ ಅಧಿಕಾರವು ಪ್ರಜೆಗಳು, ನಾಗರಿಕ ಸೇವೆಗಳು, ದೇಶೀಯ ಆಡಳಿತಗಾರ (ರಾಜ) ಮತ್ತು ಬ್ರಿಟಿಷ್ ಸರಕಾರಗಳ ನಡುವೆ ಹಂಚಿಕೆಯಾಗುವುದು. ಅದು ಅಧಿಕಾರವನ್ನು ಇವುಗಳ ನಡುವೆ ಹಂಚುವುದಿಲ್ಲ ಮತ್ತು ಅದು ನಿಧಾನವಾಗಿ ಜನರ ಕೈಗೆ ಹೋಗುವುದು. ನನ್ನ ಜನರು ಅಧಿಕಾರವನ್ನು ಚಲಾಯಿಸುವುದನ್ನು ಅರ್ಥಮಾಡಿಕೊಳ್ಳುವುದರಲ್ಲಿ ಪ್ರಬುದ್ಧರಾದ (ಪ್ರೌಢರಾದರೆ) ಕೂಡಲೇ ಪರಿಪೂರ್ಣ ಅಧಿಕಾರವನ್ನು ನನ್ನ ಜನರಿಗೆ ವಹಿಸಿಕೊಡಲು ನಾನು ಅಪೇಕ್ಷಿಸುತ್ತೇನೆ. ಅವರು ಈ ಹಂತದವರೆಗೆ ಬೆಳೆಯುವವರೆಗೆ ಕೇವಲ ಕೆಲವೇ ಕೆಲವರು ಹಲವರ ಅನಾನುಕೂಲಕ್ಕಾಗಿ ಏಕಸ್ವಾಮ್ಯಮಾಡಿಕೊಳ್ಳುವುದರಿಂದ ಯಾವುದೇ ರಾಜಕೀಯ ಅಧಿಕಾರವನ್ನು ಹಸ್ತಾಂತರ ಮಾಡುವ ಬಗ್ಗೆ ತಳಮಳವಿರುತ್ತದೆ ಎಂದು ನನ್ನ ಭಾವನೆ. ಪ್ರಜೆಗಳು ಪರಿಪೂರ್ಣ ಸ್ವಯಂ ಆಡಳಿತದ ವಶದಲ್ಲಿ (ಸ್ವಾಧೀನ) ಆಡಳಿತಗಾರ(ರಾಜ)ನು ಅದರ ಉತ್ತಮ ಮಾರ್ಗದರ್ಶಕನಾಗುತ್ತಾನೆ. ದೇಶೀಯ ಸಂಸ್ಥಾನಗಳ ಪ್ರಜೆಗಳು ಆಗ ಬ್ರಿಟಿಷರಿಗೆ ಹೊಣೆಯಾಗಿರುತ್ತಾರೆ ಮತ್ತು ಅಡಳಿತಗಾರನಿಗೆ ಜವಾಬ್ದಾರರಲ್ಲ. ಎರಡು ಸನ್ನಿವೇಶಗಳಲ್ಲಿ ಅಂಥದ್ದು ವ್ಯತ್ಯಾಸವಾಗಿರುವುದರಿಂದ ದೇಶೀಯ ಸಂಸ್ಥಾನಗಳಿಗೆ ಅನ್ವಯಿಸುವುದಕ್ಕೆ ರಾಜಕೀಯ ಸುಧಾರಣೆಗಳನ್ನು ಇಡಿಯಾಗಿ ಬ್ರಿಟಿಷ್ ಯೋಜನೆಯನ್ನು ನಕಲು ಮಾಡುವುದು ಅಪಾಯಕಾರಿಯಾಗುತ್ತದೆ.

ಸಾಮಾಜಿಕ ಸುಧಾರಣೆಗಳಿಗಿಂತ ಮೊದಲು ರಾಜಕೀಯ ಸುಧಾರಣೆಗಳಾಗಬೇಕೆಂಬುದು ಒಂದು ವಿವಾದವಾಗಿ ಬೆಳಕು ಕೊಡುವುದಕ್ಕೆ ಬದಲು ಹೆಚ್ಚು ಕಾವನ್ನೇ ಕೊಟ್ಟಿತು. ಅವೆರಡಕ್ಕೂ ಒಂದು ಗಾಡಿಗೆ ಎರಡು ಚಕ್ರಗಳಿದ್ದಂತಹ ಸಂಬಂಧವಿದೆ. ಒಂದೇ ಒಂದು ಚಕ್ರವನ್ನು ನೆಚ್ಚಿಕೊಂಡು ಗಾಡಿ ನಡೆಸಿ ಸಫಲವಾಗುವುದು ಅಸಾಧ್ಯ ಎಂಬುದು ಸಾಮಾನ್ಯ ಜ್ಞಾನ. ರಾಜಕೀಯ ಸುಧಾರಣೆಗಳಿಗಾಗಿಯೇ ವಾದ ಮಾಡಿ, ಸಾಮಾಜಿಕ ಸುಧಾರಣೆಗೆ ಗಮನವನ್ನೇ ಕೊಡುವುದಿಲ್ಲ ಅಥವಾ ಅದರ ತುರ್ತನ್ನು ನಿರಾಕರಿಸುವುದು ಅದರ ಮೂಲೋದ್ದೇಶಗಳ ಬಗ್ಗೆ ಗುಮಾನಿಪಡಲು ಸಾಕಷ್ಟು ಕಾರಣವಿರುತ್ತದೆ. ಅವರನ್ನು ವಂಚಕ ಮತ್ತು ಕುಯುಕ್ತಿಗಳು ಎಂದು ಕರೆಯುವುದರಲ್ಲಿ ತಪ್ಪೇನಿಲ್ಲ.

ಜನರಿಗೆ ಸ್ವಯಂ ಆಡಳಿತವನ್ನು (ಸ್ವರಾಜ್ಯ) ನೀಡುವ ಮೊದಲು ಬ್ರಿಟಿಷ್ ಸರಕಾರ ಜನರಲ್ಲಿ ಶಿಕ್ಷಣವನ್ನು ಹರಡಲು ಸತತ ಶ್ರಮಪಡುವುದು ಅತ್ಯುತ್ತಮ. ಚೆಲ್ಲಿದ ಹಾಲಿನ ಬಗ್ಗೆ ಪ್ರಲಾಪಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಜನರ ನಾಯಕರೆಂದು ಹೇಳಿಕೊಳ್ಳುವವರಿಗೆ ನಾನು ನನ್ನ ಸ್ನೇಹಿತ ರಾವ್ ಬಹಾದೂರ್ ಥೋರಟ್ ಅವರ ನಿದರ್ಶನವನ್ನು ಅನುಸರಿಸಿ ಎಂದು ಒತ್ತಾಯಪಡಿಸುತ್ತೇನೆ ಮತ್ತು ತಮ್ಮ ಸಹೋದರರನ್ನು ಹೇಳಲಾಗದಷ್ಟು ತಲೆಮಾರುಗಳವರೆಗೆ ಪರತಂತ್ರದಲ್ಲಿಟ್ಟಿದ್ದೀರಿ, ಅವರ ವಿಮೋಚನೆಗಾಗಿ ರಾಜಕೀಯ ಸ್ವಾತಂತ್ರ್ಯವನ್ನು ಬಳಸಿ ಎಂದು ನಾನು ಆಗ್ರಹಪಡಿಸುತ್ತೇನೆ.

---

೧೦

# ನಿಮ್ಮ ಜನರನ್ನು ಶಿಕ್ಷಿತರನ್ನಾಗಿ ಮಾಡುವ ಹೊಣೆಯನ್ನು ವಹಿಸಿಕೊಳ್ಳಿ

**ದಿನಾಂಕ ೨೦, ಏಪ್ರಿಲ್ ೧೯೨೦ರಂದು ನಾಸಿಕ್‌ನಲ್ಲಿ ಶಾಹುರವರು "ಸೋಮವಂಶೀಯ ಸಮಾಜ"ದ ಸಭೆಯಲ್ಲಿ ಹಿಂದುಳಿದ ಜಾತಿಗಳ ವಿಮೋಚನೆಗಾಗಿ ಬ್ರಾಹ್ಮಣ ನಾಯಕರ ಕಾಳಜಿಯ ನಿಜಸ್ವರೂಪವನ್ನು ವಿವರಿಸುತ್ತಾರೆ.**

---

ಪ್ರೀತಿಯ ಗೆಳೆಯರೇ,

ತಮ್ಮ ಆಹ್ವಾನಕ್ಕೆ ನಾನು ತುಂಬಾ ಆಭಾರಿ ಮತ್ತು ನೀವು ಸಂಘಟಿಸಿದ 'ಸಮಾಜ'ದ ಸಭೆಗೆ ನಾನು ತುಂಬಾ ಹರ್ಷಿತನಾಗಿದ್ದೇನೆ. ಇಂದಿನ ದಿನಗಳಲ್ಲಿ ಹೋರಾಟ ತುಂಬಾ ಕುತೂಹಲಕಾರಿ ಮತ್ತು ವಿಸ್ತೃತವಾಗಿರುವುದರಿಂದ ಬದುಕುಳಿಯಲು ಅದಕ್ಕೆ ಬೇಕಾಗಿರುವ ಶಕ್ತಿಸಂಪನ್ನವನ್ನು ಸಮುದಾಯದ ಶಿಕ್ಷಣದಿಂದ ಸಾಧ್ಯವೆಂಬುದನ್ನು ನಿಮ್ಮ ಸಮುದಾಯದ ನಾಯಕರು ಈ ಕಾಲದಲ್ಲಿ ಗುರುತಿಸಿರುವುದು ಪರಿಗಣಿತವಾದ ಪರಿಹಾರವೆಂದು ನನಗೆ ಅನಿಸುತ್ತದೆ. ನೀವು, ಬಡವರು ಮತ್ತು ದಮನಿತರಾಗಿದ್ದರೆ, ನೀವು ಈ ದಮನಿತ ಪರಿಸ್ಥಿತಿಗಳಿಂದ ಮೇಲೆದ್ದು ಪ್ರಗತಿ ಹೊಂದಬೇಕಾದರೆ ನಿಮ್ಮ ಸಮುದಾಯಕ್ಕೆ ಸೇರಿದ ನಾಯಕರು ಮೇಲೆತ್ತುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಎಲ್ಲಾ ಹೋರಾಟಗಳ ಸಫಲತೆಗೆ ಸ್ವ-ಸಹಾಯವೇ ಕೀಲಿಕೈ. ಈ ನಿಲುವಿನಿಂದ ನಿಮ್ಮಲ್ಲಿಯೇ ಕೆಲವರು ನಾಯಕರಾಗಿದ್ದೀರಿ. ಆದರೆ ನಿಮ್ಮನ್ನು ಅಭಿನಂದಿಸಲಾರರು.

ಅಂತಹ ಒಂದು ಸಂದರ್ಭದಲ್ಲಿ ಅಂತಿಮವಾಗಿ ನಿಮ್ಮನ್ನು ಕಲ್ಯಾಣದ ಕಡೆಗೆ ಕೊಂಡೊಯ್ಯುವ ಮಾರ್ಗಗಳ ಬಗ್ಗೆ ನಾನು ತೆರೆದ ಮನಸ್ಸಿನಿಂದ ನನ್ನ ಅಭಿಪ್ರಾಯವನ್ನು ತಿಳಿಸುವುದು ನನ್ನ ಕರ್ತವ್ಯವೆಂದು ನಾನು ಬಗೆದಿದ್ದೇನೆ...

ನಾನು ಒಬ್ಬ ದೇಶೀಯ ಸಂಸ್ಥಾನದ ರಾಜನಾಗಿದ್ದು ಬ್ರಿಟಿಷ್ ಪ್ರದೇಶಗಳಲ್ಲಿ ಮಾತನಾಡುವುದಕ್ಕೆ ನನ್ನನ್ನು ಒಮ್ಮೊಮ್ಮೆ ತೆಗಳಲಾಗಿದೆ. ನಾನು ಇಲ್ಲಿಗೆ ಸಂಸ್ಥಾನದ ಒಬ್ಬ ರಾಜನಾಗಿ ಬಂದಿಲ್ಲವೆಂದು ಮೊದಲಿಗೆ ಸ್ಪಷ್ಟಪಡಿಸುತ್ತೇನೆ. ಆದರೆ ನಾನು ಇಲ್ಲಿಗೆ ಒಬ್ಬ ಗೆಳೆಯನಾಗಿ ಬಂದಿದ್ದೇನೆ. ಮತ್ತು ಮಾನವೀಯ ಹೃದಯವುಳ್ಳ ಒಬ್ಬ ವ್ಯಕ್ತಿಯು ಲಕ್ಷಾಂತರ ಜನರ ದುಸ್ಥಿತಿಗೆ ಮನ ಕರಗಿ ನನ್ನ ದೇಶಬಾಂಧವರ ಸೇವಕನಾಗಿ ಬಂದಿದ್ದೇನೆ. ಪ್ರಜೆಗಳಾಗಿ ನನ್ನನ್ನು ನನ್ನ ದೇಶಬಾಂಧವರು ಸಂಧಿಸಿ ನನ್ನ ಅಭಿಪ್ರಾಯಗಳನ್ನು ಯಾವುದೇ ವಿಷಯದ ಬಗ್ಗೆ ಕೋರಿದಾಗ ನಾನು ಮೌನವಹಿಸುವುದು ಅಥವಾ ಅವರ ತಡೆಹಿಡಿಯುವುದು ಶಿಷ್ಟಾಚಾರವನ್ನು

ಮುರಿದಂತೆ ಎಂದು ನಾನು ಭಾವಿಸುತ್ತೇನೆ. ಎರಡನೆಯದಾಗಿ, ದೇಶೀಯ ಸಂಸ್ಥಾನಗಳನ್ನು ಬ್ರಿಟಿಷ್ ಪ್ರದೇಶಗಳಿಗೆ ಹಸ್ತಾಂತರ ಮಾಡದೆ ಸೇರಿಸಲಾಗಿದೆ. ಪ್ರಜೆಗಳಂತೆ ಅಥವಾ ಒಪ್ಪಂದಗಾರರಂತೆ ನಾವು ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿದವರು ಮತ್ತು ಹೀಗಿರುವಾಗ ನಮಗೆಲ್ಲ ಸಮಾನ ಹಿತಾಸಕ್ತಿಗಳಿವೆ. ಆದ್ದರಿಂದ ನಾನು ನಮ್ಮೆಲ್ಲರನ್ನು ಕಾಡುತ್ತಿರುವ ಸಮಸ್ಯೆಗಳ ಬಗ್ಗೆ ನನಗೆ ಆಸಕ್ತಿಯಿದೆ. ನಾನೇನು ಯಾವ ಪಾಪವನ್ನು ಮಾಡುತ್ತಿಲ್ಲ. ಅವುಗಳಲ್ಲಿ ಆಸಕ್ತಿ ತೋರುವುದು ಅದು ನನ್ನ ಕರ್ತವ್ಯವಾಗಿದೆ.

ಆಕಸ್ಮಿಕ ಹುಟ್ಟಿನ ಆಧಾರದ ಮೇಲಿರುವ ಸಾಮಾಜಿಕ ಭೇದ–ಭಾವಗಳಿಗೆ ಯಾವುದೇ ಬೇರೆ ದೇಶದಲ್ಲಿ, ನಮ್ಮ ದೇಶವನ್ನು ಬಿಟ್ಟರೆ, ಧಾರ್ಮಿಕ ಸಮ್ಮತಿಯಿಲ್ಲ. ಮೇಲುಜಾತಿಗಳು ನಿಮ್ಮನ್ನು ಉಪಚರಿಸಿದ ರೀತಿಗಳಲ್ಲಿ ಸಾಮಾಜಿಕ ಭೇದ–ಭಾವಗಳ ವಿಕಾರರೂಪ ಪ್ರತಿಫಲಿತವಾಗುವುದನ್ನು ನೀವು ನೋಡಬಹುದು. ನೀವು ನಮ್ಮ ಅಣ್ಣ–ತಮ್ಮಂದಿರಾಗಿದ್ದೀರಿ. ನಿಮ್ಮನ್ನು ಬೆಕ್ಕುಗಳು, ಹಂದಿಗಳು ಮತ್ತು ನಾಯಿಗಳಿಗಿಂತ ಕಡೆಯಾಗಿ ನಿಮ್ಮನ್ನು ಅಸ್ಪೃಶ್ಯರೆಂದು ಪರಿಗಣಿಸುವುದು ಅಮಾನವೀಯವಲ್ಲವೆ? ಅಸ್ಪೃಶ್ಯತೆಯ ತತ್ವವು, ಹಿಂದುಗಳ ಜೀವನವನ್ನು ಆಳುತ್ತಿರುವ ಧರ್ಮಗ್ರಂಥಗಳಿಗೆ ಇತ್ತೀಚೆಗೆ ಸೇರ್ಪಡೆಯಾಗಿದೆಯೆಂಬುದು ನನ್ನ ಚಿಂತನೆ. ಏಕೆಂದರೆ ನಾವು ಇಂದು ಸೇರಿರುವ ಈ ಯಾತ್ರಾಸ್ಥಳದಲ್ಲಿ ಮಹರರ ಸ್ನಾನಘಟ್ಟಗಳು ಬೇರೆ ಬೇರೆ ಸಮುದಾಯಗಳ ಸ್ನಾನದ ಹೊಂಡಗಳ ನಡುವೆ ಇವೆ. ಆದ್ದರಿಂದ ಅಂತಹ ಒಂದು ಸನ್ನಿವೇಶದಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದು ಅಸಾಧ್ಯ.

ಹೀಗಿದ್ದರೂ ಕೂಡ ನಮ್ಮ ಸಾಮಾನ್ಯ ಜೀವನದಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದು ಮತ್ತು ಪರಿಪೂರ್ಣ ಸಾಮಾಜಿಕ ಒಡನಾಟದ ಪ್ರಯೋಜನಗಳನ್ನು ನಿರಾಕರಿಸುವುದು ನಾಚಿಕೆಗೇಡಿನ ಕೆಲಸವಲ್ಲವೆ? ನಮ್ಮ ಹಿಂದು ಸಮಾಜದಲ್ಲಿ ಮೇಲುಜಾತಿಗಳು ಈ ಸಾಮಾಜಿಕ ಅಪರಾಧಕ್ಕಾಗಿ ಪಶ್ಚಾತ್ತಾಪಪಟ್ಟರೆ ಮಾತ್ರ ಅವರಲ್ಲಿ ದೇಶಭಕ್ತಿಯ ನಿಜವಾದ ಸ್ಫೂರ್ತಿ ಬೆಳೆಯುತ್ತದೆ. ಶಿಕ್ಷಿತ ವರ್ಗಗಳಿಗೆ ದೇಶಕ್ಕಾಗಿ ಸ್ಫೂರ್ತಿ ಮತ್ತು ಪ್ರೀತಿಗಳ ಮಾರ್ಗದರ್ಶನ ನೀಡಿದಾಗ ನಿಮಗೆ ಯಾವುದೇ ಶಾಶ್ವತವಾದ ಸಹಾಯ ಅವರು ನೀಡಬಹುದೆಂದು ನಿರೀಕ್ಷಿಸಬಹುದು. ನಾನು ಅಧಿಕಾರಕ್ಕೆ ಏರಿದಾಗ ಕೊಲ್ಹಾಪುರದಲ್ಲಿ ಒಂದೇ ಒಂದು ಜಾತಿಯ ಶಿಕ್ಷಿತ ಜನರು ಪ್ರಾಬಲ್ಯ ಪಡೆದಿದ್ದರು. ಹಿಂದುಳಿದ ವರ್ಗಗಳಿಗೆ ಸೇರಿದ ಶಿಕ್ಷಿತನೊಬ್ಬನೂ ಸರಕಾರಿ ಸೇವೆಯಲ್ಲಿ ಇರಲಿಲ್ಲ. ಅವರ ಸ್ಥಾನಮಾನವನ್ನು ಎತ್ತರಿಸಲು ಸಂಸ್ಥಾನದ ನಾಗರಿಕ ಸೇವೆಗಳಿಗೆ ಉದಾರಭಾವನೆಯ ರೀತಿಯಲ್ಲಿ ಅವರನ್ನು ಸೇರಿಸುವ ಧೋರಣೆಯನ್ನು ಅನುಸರಿಸುವುದು ಸೂಕ್ತವೆಂದು ನಾನು ಪರಿಭಾವಿಸಿದೆ. ನಾನು ಅವರಲ್ಲಿ ಅರ್ಹರಿಗೆ ವಕೀಲಿವೃತ್ತಿ ನಿರ್ವಹಿಸಲು ಸನದುಗಳನ್ನು ನೀಡಿದೆ. ಅವರ ಶಿಕ್ಷಣಕ್ಕಾಗಿ ವಿದ್ಯಾರ್ಥಿವೇತನಗಳನ್ನು ಸ್ಥಾಪಿಸಿದೆನು ಮತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದೆನು. ಕಳೆದ ೨೫ ವರ್ಷಗಳಲ್ಲಿ ಮಾಡಿದ ನನ್ನ ಒಳ್ಳೆಯ ಕೆಲಸದ ಪ್ರತಿಫಲಗಳು ಈಗ ಕ್ಷಿತಿಪಟಲದ ಮೇಲೆ ಕಾಣಿಸುತ್ತಿವೆ. ಅಸ್ಪೃಶ್ಯರಲ್ಲದೆ ಹಿಂದುಳಿದ ಜಾತಿಗಳು ನಿಧಾನವಾಗಿ ಮತ್ತು ಖಂಡಿತವಾಗಿ ಮುಂದುವರಿಯುತ್ತಿವೆ. ಅವರ ಸ್ಥಿತಿಯು ಮಗುವಿನಂತೆ ಈಗ ತಾನೇ ನಡೆಯುವುದಕ್ಕೆ ಕಲಿಯುತ್ತಿವೆ. ಆದರೆ ನೀವು ಮಗುವಿನಂತೆ ಇನ್ನೂ ಸಮತೋಲನವಾಗಿ ಅಥವಾ ನಿಲ್ಲಲು ಕಲಿತಿಲ್ಲ. ನಿಮ್ಮ ಅಸಹಾಯಕ ಸ್ಥಿತಿಯಿಂದ ನೀವು ಹೀಗೆ ಇದ್ದೀರಿ. ಈಗ ನನ್ನ ಗಮನ ನಿಮ್ಮ ಕಡೆಗೆ ಹರಿದಿದೆ. ನನ್ನ ಧೋರಣೆಯು ನಿಮ್ಮನ್ನು ಪ್ರೋತ್ಸಾಹಿಸುತ್ತದೆ. ಮತ್ತು ನಾನು ಜೀವನದ ಉದ್ದಕ್ಕೂ ನಿಮಗೆ ಸಹಾಯಮಾಡುವೆನು.

ನನ್ನ ಸಂಸ್ಥಾನದಲ್ಲಿ ನಿಮ್ಮ ಏಳಿಗೆಗಾಗಿ ನಾನು ಏನು ಮಾಡುತ್ತಿದ್ದೇನೆಂಬುದನ್ನು ನಿಮ್ಮ ಜಾತಿಯ ಮನುಷ್ಯರೇ ನನ್ನ ಪ್ರಜೆಗಳು ನಿಮಗೆ ತಿಳಿಸುವರು.

ನನ್ನ ಪ್ರದೇಶದಲ್ಲಿ ಇತ್ತೀಚೆಗೆ ನಡೆದ ನಿಮ್ಮ ಜನರ ಸಮ್ಮೇಳನದಲ್ಲಿ ನಾನು ಮಾಡಿದ ಚಿಕ್ಕ ಭಾಷಣಕ್ಕೆ ಪುಣೆಯ ಪತ್ರಿಕೆಗಳು ನಿಷ್ಕರುಣೆಯಿಂದ ನನಗೆ ಸಾಕಷ್ಟು ಹಿಂಸೆ-ಕಿರುಕುಳ ಕೊಟ್ಟರು. ನನ್ನಂತಹ ಅಶಿಕ್ಷಿತ ವ್ಯಕ್ತಿಯ ಭಾಷಣದ ಮೇಲೆ ವ್ಯಾಖ್ಯಾನ ಮಾಡುವುದಕ್ಕಾಗಿ ಆ ಪತ್ರಿಕೆಗಳು ಸಾಕಷ್ಟು ಜಾಗ (ಕಾಗದ ಸ್ಥಳ) ಮತ್ತು ಅಮೂಲ್ಯವಾದ ಸಮಯವನ್ನು ಹಾಳುಮಾಡಿದ್ದಕ್ಕಾಗಿ ನಾನೇ ಆಶ್ಚರ್ಯಪಡುತ್ತೇನೆ. ಅವರು ನನ್ನ ವಿಚಾರಗಳನ್ನು ತಪ್ಪಾಗಿ ತಿಳಿಸುತ್ತಿದ್ದಾರೆಂದು ನನಗೆ ಭಯವಾಗುತ್ತದೆ. ನಾನು ಮರಾಠಿ ಭಾಷೆಯ ಮೇಲೆ ನನಗೆ ಪ್ರಭುತ್ವವಿಲ್ಲದಿರುವುದರಿಂದ ನಾನು ಹೇಳಿದ ವಿಚಾರಗಳನ್ನು ಅವರು ತಪ್ಪಾಗಿ ಗ್ರಹಿಸಿ ತಪ್ಪಾಗಿ ವ್ಯಾಖ್ಯಾನ ನೀಡುತ್ತಿರಬಹುದು ಮತ್ತು ಬ್ರಾಹ್ಮಣರನ್ನು ಹೀಯಾಳಿಸಲು ನಾನು ಆಂದೋಲನವನ್ನು ನಡೆಸುತ್ತಿರುವ ಪ್ರಮುಖ ವ್ಯಕ್ತಿಯೆಂದು ಚಿತ್ರಿಸಲು ಅವರು ಪ್ರಯತ್ನಿಸುತ್ತಿದ್ದಾರೆ. ಅವರು ನೀಡಿರುವ ಈ ಗೌರವ(ಕ್ರೆಡಿಟ್)ವನ್ನು ನಾನು ನಿರಾಕರಿಸುತ್ತೇನೆ. ಏಕೆಂದರೆ ಅವರು ನೀಡುತ್ತಿರುವ ಕೀರ್ತಿಯಲ್ಲಿ ನನ್ನದೇನು ಪ್ರಮುಖ ಪಾತ್ರವಿಲ್ಲ. ಇದರಲ್ಲಿ ಹುರುಳಿಲ್ಲವೆಂದು ನಾನು ನಿರಾಕರಿಸುತ್ತೇನೆ. ಜಾತಿವ್ಯವಸ್ಥೆಗೆ ಮನ್ನಣೆ ನೀಡುವ ಹಿಂದು ಧರ್ಮವೊಂದನ್ನು ಬಿಟ್ಟರೆ, ವಿಶ್ವದಲ್ಲಿ ಯಾವ ಧರ್ಮವೂ ಜಾತಿವ್ಯವಸ್ಥೆಗೆ ಮನ್ನಣೆ ನೀಡಿಲ್ಲ ಎಂಬ ಮುಖ್ಯ ಅಂಶವನ್ನು ನಾನು ಪ್ರೇಕ್ಷಕರಿಗೆ ಮನದಟ್ಟು ಮಾಡಲು ಸಮ್ಮೇಳನದಲ್ಲಿ ನಾನು ಹೇಳಿದ್ದೆ. ಈ ವಿಷಯದ ಬಗ್ಗೆ ಹೇಳುತ್ತಾ ಜಾತಿಗಳು ಅನೇಕ ಸಾಮಾಜಿಕ ಜಗಳಗಳಿಗೆ ಕಾರಣವಾಗಿರುವುದರಿಂದ ಅವುಗಳನ್ನು ರದ್ದುಗೊಳಿಸಬೇಕೆಂದು ನಾನು ಹೇಳಿದ್ದೆ. ಅವರು ಪರಶುರಾಮನು ಎಲ್ಲಾ ಕ್ಷತ್ರಿಯರನ್ನು ಬ್ರಾಹ್ಮಣರ ಹಿತಕ್ಕಾಗಿ ಸರ್ವನಾಶಮಾಡಿದ್ದನೆಂದು ಹೇಳುತ್ತಾರೆ ಮತ್ತು ರಾಮ ಮತ್ತು ಕೃಷ್ಣ(ಕ್ಷತ್ರಿಯರು) ಅವರು ಬ್ರಾಹ್ಮಣರ ಗುಡಿ-ಗೋಪುರಗಳಲ್ಲಿ ದೇವರುಗಳಾಗಿ ಪ್ರತಿಷ್ಠಾಪಿತರಾಗಿ ಪೂಜೆಗೊಳಗಾಗಿದ್ದಾರೆ. ಪೇಶ್ವೆಯವರು ಶಾಹು ಮಹಾರಾಜರಿಗೆ ಆಶ್ರಯ ನೀಡಿದರೂ ಮಹಾರಾಜ ಪ್ರತಾಪಸಿಂಹರು ಪೇಶ್ವೆಗಳ ಕೊನೆಗೆ ಅವರ ಸಹಾಯಕ್ಕೆ ಬಂದರು. ಅಂತಹ ಸಾಮಾಜಿಕ ಪಲ್ಲಟಗಳು ಅಂತಿಮವಾಗಿ ಜಾತಿಯ ಭಾವನೆಗಳಿಂದ ಪ್ರಚೋದನೆಗೆ ಒಳಗಾಗುತ್ತವೆ. ಜಾತಿಗಳನ್ನು ಬಿಟ್ಟು ಸದೃಢ ಬುನಾದಿಗಳ ಮೇಲೆ ಸ್ವಯಂ-ಆಡಳಿತದ ಸಂರಚನೆಗಳನ್ನು ಕಟ್ಟಬೇಕೆಂಬುದು ನನ್ನ ಕಳಕಳಿಯ ಸಲಹೆಯಾಗಿದೆ. ಆದ್ದರಿಂದ ಸಾಮಾಜಿಕ ಸಾಮರಸ್ಯವಿಲ್ಲದ ಸ್ವಯಂ ಆಡಳಿತವು ಅನಪೇಕ್ಷಣೀಯ ಮತ್ತು ಅಭದ್ರವೆಂಬುದು ನನ್ನ ನಂಬಿಕೆಯೆಂದು ನಾನು ಮತ್ತೆ ಮತ್ತೆ ಒತ್ತಿಹೇಳುತ್ತೇನೆ.

ಕೆಲವು ದಿನಗಳ ಹಿಂದೆ ಸೇಂಟ್ ಕೊಲಂಬಸ್ ಸ್ಕಾಚ್ ಮಿಷನನ್ನು ಮತ್ತು ಅಮೇರಿಕದ ಮಿಷನ್ನಿನ ನನ್ನ ಹಳೆ ಸ್ನೇಹಿತನನ್ನು ಬಾಂಬೆಯಲ್ಲಿ ಭೇಟಿಮಾಡುವ ಸಂದರ್ಭ ಒದಗಿಬಂದಿತ್ತು. ಮಿಸ್ ಸುದರ್‌ಲ್ಯಾಂಡ್, ಡಾ. ವೇಲ್ ಮತ್ತು ಡಾ. ವೇನ್‌ಲೆಸ್ ಅವರು ಸಪ್ತಸಮುದ್ರಗಳನ್ನು ದಾಟಿ ನಮ್ಮ ಜನರಿಗೆ ಜೀವನ ಮತ್ತು ಶಿಕ್ಷಣ ನೀಡಲು ನಿಸ್ವಾರ್ಥ ಭಾವನೆಯಿಂದ ಕೇವಲ ಜೀವನದ ಅಗತ್ಯಗಳನ್ನು ಮಾತ್ರ ಪಡೆದು ಸೇವೆ ಸಲ್ಲಿಸುತ್ತಿದ್ದರು. ನಮಗೆ ಏನೂ ಆಗಬಾರದೆಂದು ಅವರು ನಮ್ಮ ಜೀವನದ ರೀತಿ-ನೀತಿಗಳನ್ನು ಮತ್ತು ಅಷ್ಟೆ ಅಲ್ಲ, ಆಹಾರ ಪದಾರ್ಥಗಳನ್ನು ಅಳವಡಿಸಿಕೊಂಡರು. ಅಂತಹ ಅಪರಿಚಿತರು ನಮ್ಮ ದೇಹ ಮತ್ತು ಮನಸ್ಸುಗಳನ್ನು ಪರಿಪಕ್ವಗೊಳಿಸುತ್ತಿದ್ದಾರೆ. ಅವರು ನಿಜವಾಗಿಯೂ ಪವಿತ್ರ ವ್ಯಕ್ತಿಗಳು. ಅವರಿಗೆ ಸರಿಹೊಂದುವ ಏಕಾಂಗಿ ನಿದರ್ಶನ ಗಾಂಧಿ ಎಂದು ಹೇಳಬಹುದು. ಮಾನವ ಜನಾಂಗದ ಸೇವೆಯೇ ದೇವರ ಸೇವೆ

ಎಂಬ ತತ್ವದಡಿಯಲ್ಲಿ ನಿಸ್ವಾರ್ಥ ಧ್ಯೇಯದಿಂದ ದಮನಿತರ ಮತ್ತು ರೋಗಿಗಳ ಸೇವೆಯನ್ನು ಮಾಡುತ್ತಿರುವ ವಿದೇಶಿ ಮಿಷನ್ನುಗಳ ಹಾಗೆ ಎಷ್ಟು ಸಂಸ್ಥೆಗಳು ನಮ್ಮಲ್ಲಿ ಹೇಳಿಕೊಳ್ಳುವ ಹಾಗೆ ಕೆಲಸಮಾಡುತ್ತಿವೆ? ಕೆಲವು ಪತ್ರಿಕೆಗಳು ಗಾಂಧಿ ಮತ್ತು ಸ್ವಾಮಿ ಶ್ರದ್ಧಾನಂದರ ಬಗ್ಗೆ ಹೇಳಿದ್ದನ್ನು ತಪ್ಪಾಗಿ ವರದಿಮಾಡಿದ್ದವು. ಮತ್ತು ಗಾಂಧಿ ಮತ್ತು ಶ್ರೀಮತಿ ಬೆಸೆಂಟರು ನಿಜವಾಗಿ ಪವಿತ್ರ ವ್ಯಕ್ತಿಗಳು. ಆದರೆ ನಾನು ಪವಿತ್ರ ವ್ಯಕ್ತಿಗಳು ಎಂದರೆ ಎಲ್ಲಾ ಮಾನವಜೀವಿಗಳಂತೆ ತಪ್ಪು (ದೋಷ) ಮಾಡದವರು ಎಂದು ಭಾವಿಸಿದ್ದೆ. ಗಾಂಧಿಯವರು ತಮ್ಮ ತಪ್ಪುಗಳನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಳ್ಳುವುದರಿಂದ ನಾನು ಅವರ ಬಗ್ಗೆ ಹೇಳಿದ ಮಾತುಗಳ ಬಗ್ಗೆ ಅವರು ಕೋಪಗೊಳ್ಳುವುದಿಲ್ಲ. ಆದರೆ ಗಾಂಧಿ ಏಕಾಂಗಿ (ಅಪರೂಪ) ನಿದರ್ಶನವಾಗಿರುವುದರಿಂದಲೇ ಅವರ ವ್ಯಕ್ತಿತ್ವ ನಮ್ಮ ಪ್ರೀತಿ ಮತ್ತು ಗೌರವಗಳನ್ನು ಸೆಳೆದಿದೆ.

ನಮ್ಮ ನಾಯಕರೆಂದು ಇತರರನ್ನು ಒಪ್ಪಿಕೊಳ್ಳುವ ಮೊದಲು ನಾವು ಅವರ ಚಾರಿತ್ರ್ಯ, ನೀತಿ ಮತ್ತು ನೈತಿಕ ಧೈರ್ಯಗಳನ್ನು ಒರೆಗಲ್ಲಿಗೆ ಹಚ್ಚಬೇಕಾಗುತ್ತದೆ.

ಹಲವು ಸಂದರ್ಭಗಳಲ್ಲಿ ಶಿಕ್ಷಿತ ಜಾತಿಗಳ ನಾಯಕರು ದಮನಿತರ ಬಗ್ಗೆ ಸಹಾನುಭೂತಿಯ ಹೊಳೆಯನ್ನೇ ಹರಿಸುವುದನ್ನು ನಾವು ನೋಡಿದ್ದೇವೆ. ಅಂತರ ಭೋಜನ ಅಥವಾ ಅಂತಹ ಇತರೆ ಉಪಕ್ರಮಗಳ ಬಗ್ಗೆ ಕ್ರಮಕೈಗೊಳ್ಳುವ ಸಮಯದಲ್ಲಿ ಹೆಂಡತಿ ಮಕ್ಕಳಿಂದ ವಿರೋಧವಿದೆಯೆಂದು ನೆಪಹೇಳಿ ಹಿಂದೆ ಸರಿಯುತ್ತಾರೆ. ಆದರೆ ಇದು ಅಪಹಾಸ್ಯ. ಆದರೆ ಸನಾತನ ಕಾಲದಿಂದಲೂ ನಮ್ಮ ಹಿಂದು ಧೀರ ಮಹಿಳಾಮಣಿಗಳು ಕಣ್ಣುಮುಚ್ಚಿಕೊಂಡು ತಮ್ಮ ಗಂಡಂದಿರ ಚಿತೆಗಳನ್ನು ಏರಿದ್ದಾರೆ. ಅವರು ಅಂತಹ ಕ್ಷುಲ್ಲಕ ಉದ್ದೇಶವಾದ ಅಂತರ್‌ಭೋಜನಕ್ಕೆ ಆಕ್ಷೇಪಿಸುತ್ತಾರೆ ಎಂದು ಹೇಳುವುದು ಇಡೀ ಹಿಂದು ಮಹಿಳಾತನಕ್ಕೆ ಅವಮಾನ ಮಾಡಿದಂತೆಯೆ. ಈ ಗಂಡಸರ (ಮನುಷ್ಯರ) ಮನಸ್ಸಿಲ್ಲದಿರುವುದು ಅಥವಾ ನೈತಿಕ ಧೈರ್ಯದ ಕೊರತೆಯಿಂದ ಮಹಿಳೆಯರ ನೆಪ ಒಡ್ಡಿ ತಪ್ಪಿಸಿಕೊಳ್ಳುತ್ತಿದ್ದಾರೆ. ಆದ್ದರಿಂದ ಅಂತಹ ಹೇಡಿ ನಾಯಕರ ತುಟಿ ಮಾತ್ರದ ಸಹಾನುಭೂತಿಯಿಂದ ನೀವು ಏನಾದರೂ ಭೌತಿಕವಾಗಿ ಲಾಭಗಳಿಸಲು ಸಾಧ್ಯವೆ ಎಂಬ ಬಗ್ಗೆ ನೀವು ಆಲೋಚಿಸಬೇಕೆಂದು ನಾನು ನಿಮ್ಮನ್ನು ಕೇಳುತ್ತೇನೆ. ಒಬ್ಬ ಶಿಕ್ಷಿತ ಬ್ರಾಹ್ಮಣನು ಸ್ವರಾಜ್ಯವನ್ನ ತಂದುಬಿಟ್ಟರೆ ತಾವು ಅಂತರ್‌ಜಾತಿಯ ಭೋಜನ ಮಾಡಲು ಸಿದ್ಧನಾಗಿದ್ದೇನೆಂದು ನಿಪ್ಪಾಣಿಯಲ್ಲಿ ಒಂದು ದಿನ ಘೋಷಿಸಿಬಿಟ್ಟನು. ನಿಮ್ಮ ಜೊತೆಯಲ್ಲಿ ಊಟಮಾಡುವಂತಹ ಚಿಕ್ಕ ವಿಷಯಕ್ಕೆ ಅಂತಹ ಮಹಾ ಷರತ್ತನ್ನು ವಿಧಿಸುವ ವ್ಯಕ್ತಿಯಿಂದ ಎಷ್ಟರಮಟ್ಟಿನ ಸಹಾನುಭೂತಿ ನಿಮ್ಮ ಬಗ್ಗೆ ಇಟ್ಟುಕೊಂಡಿದ್ದಾನೆಂಬ ಬಗ್ಗೆ ನೀವು ಯೋಚಿಸಿ. ಅಂತಹ ನಟನಾ ಚತುರರ ಮೇಲೆ ನಿಮ್ಮ ವಿಮೋಚನೆಗಾಗಿ ಸದ್ಭಾವನೆ ಇಡುವುದಕ್ಕೆ ಬದಲಾಗಿ ನೀವೇ ನಿಮ್ಮ ಗಂಡಸರು ಮತ್ತು ಮಹಿಳೆಯರನ್ನು ಶಿಕ್ಷಿತರನ್ನಾಗಿ ಮಾಡುವ ಹೊಣೆಯನ್ನು ಅವರ ಮೇಲೆ ಅವಲಂಬಿಸದೆ ನೀವೇ ವಹಿಸಿಕೊಳ್ಳಿ ಎಂದು ನಾನು ಪ್ರಾಮಾಣಿಕವಾಗಿ ಸಲಹೆ ನೀಡುತ್ತಿದ್ದೇನೆ. ನನ್ನ ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳ ಉನ್ನತೀಕರಣಕ್ಕಾಗಿ ಕೆಲವು ವಿಶೇಷ ಕ್ರಮಗಳನ್ನು ಕೈಗೊಂಡಾಗ ನಮ್ಮ ಮೇಲುಜಾತಿಗಳ ಶಿಕ್ಷಿತ ವರ್ಗವು ಅಸಮಾಧಾನವನ್ನು ವ್ಯಕ್ತಪಡಿಸಿತು. ದುರ್ಬಲ ಮತ್ತು ರೋಗಿಯ ಮಗು ಆರೋಗ್ಯವಾಗಿ ಗಟ್ಟಿಮುಟ್ಟಾಗಿರುವ ಮಗುವಿನ ಸಮಕ್ಕೆ ಬರಲೆಂದು ವೈದ್ಯರು ಮತ್ತು ಮಹಿಳಾ ವೈದ್ಯರು ಒಂದು ಕ್ರಮವನ್ನು ಅನುಸರಿಸಿ ಆ ದುರ್ಬಲ ಮಗುವಿಗೆ ಪೌಷ್ಟಿಕ ಆಹಾರವನ್ನು ನೀಡಿ ಉಪಚರಿಸಲು ಎಲ್ಲರು ಒಪ್ಪುತ್ತಾರೆ. ಆದರೆ ನಾನು ಅದೇ ವಿಧಾನವನ್ನು ಅಸ್ಪೃಶ್ಯರ ವಿಷಯದಲ್ಲಿ ಅನ್ವಯಿಸಬೇಕೆಂದು ಹೇಳಿದಾಗ ನನ್ನನ್ನು ತೆಗಳುತ್ತಾರೆ. ಏಕೆ? ಪೂನಾದ ಕೆಲವರು ನನ್ನ ಸಮುದಾಯವನ್ನು

ಮುಂದೆ ತರುವುದಕ್ಕಾಗಿ ಈ ತಾರತಮ್ಯತೆಯನ್ನು ಅನುಕೂಲಕರವಾದ ವಿಧಾನವೆಂದು ಅನುಸರಿಸುತ್ತಿದ್ದೇನೆಂದು ಆರೋಪಿಸುತ್ತಾರೆ. ನಾನು ಇದು ಸುಳ್ಳು ಆರೋಪವೆಂದು ನಿರಾಕರಿಸಿದ್ದೇನೆ. ಛತ್ರಪತಿ ಶಿವಾಜಿ ಅವರು ಹಾಕಿಕೊಟ್ಟ ಮೇಲ್ಪಂಕ್ತಿಗೆ ಭಂಗ ಬರುವಂತಹ ಯಾವುದೇ ಅವಮಾನಕರ ಕೆಲಸವನ್ನು ಮಾಡುವುದಿಲ್ಲವೆಂದು ನಾನು ಪ್ರಮಾಣ ಮಾಡಿ ಹೇಳುತ್ತೇನೆ. ಹಿಂದುಳಿದ ಜಾತಿಗಳ ವಿಮೋಚನೆಗಾಗಿ ಮಾಡುವ ನನ್ನ ಪ್ರಯತ್ನಗಳು ಬ್ರಾಹ್ಮಣರ ಬಗೆಗಿನ ಅಸೂಯೆಯೆಂದು ಪ್ರತಿಬಿಂಬಿಸುವುದು ಸೂಕ್ತವಲ್ಲ. ನನ್ನ ನಂಬಿಕಸ್ಥ ಮತ್ತು ಅಧಿಕಾರಿಗಳಲ್ಲಿ ಹಲವರು ಬ್ರಾಹ್ಮಣರು. ಹಲವು ಬ್ರಾಹ್ಮಣರು ನನ್ನಿಂದ ಇನಾಮ್‌ಗಳನ್ನು ಅನುಭವಿಸುತ್ತಿದ್ದಾರೆ. ನನ್ನ ಬ್ರಾಹ್ಮಣ ಪ್ರಜೆಗಳು ಅವರ ಹಿತಾಸಕ್ತಿಗಳನ್ನು ಕಡೆಗಣಿಸಿಲ್ಲವೆಂದು ಅವರು ಪರೀಕ್ಷಿಸುವರು.

ಮನ್‌ಗಾವ್ ಸಮ್ಮೇಳನದ ನನ್ನ ಭಾಷಣದಲ್ಲಿ ಅತಿಬೇಗನೆ ಸಣ್ಣ ಪ್ರಮಾಣದಲ್ಲಿ ನನ್ನ ಜನರಿಗೆ ಸ್ವರಾಜ್ಯ ನೀಡುವೆನೆಂದು ನನ್ನ ಅಪೇಕ್ಷೆಯನ್ನು ವ್ಯಕ್ತಪಡಿಸಿದ್ದೇನೆ. ನಾನು ನನ್ನ ಪ್ರಜೆಗಳಿಗೆ ಮಾತು ಕೊಟ್ಟಿದ್ದ ಸ್ವರಾಜ್ಯದ ಬಗ್ಗೆ ಕಾಲ ಮತ್ತು ಪ್ರಮಾಣದ ವಿವರಗಳ ಬಗ್ಗೆ ಭವಿಷ್ಯ ನುಡಿಯಲು ಒಬ್ಬ ಸಂಪಾದಕನನ್ನು ಭವಿಷ್ಯಜ್ಞರನ್ನು ಆಹ್ವಾನಿಸಿದ್ದನು. ನಾನು ಅವರು ಕೇಳಿದ ಸಾಧಿಸಬಹುದಾದ ವಿವರಗಳನ್ನು ಸಂತೋಷವಾಗಿ ಒದಗಿಸುತ್ತಿದ್ದೆ. ಇದು ಬಹುಹಿತಾಸಕ್ತಿಗಳ ಸಂಕೀರ್ಣಗೊಂಡ ಪ್ರಶ್ನೆ(ಸಮಸ್ಯೆ)ಯಾಗಿತ್ತು ಮತ್ತು ಬಹುಬೇಗನೆ ನಿರ್ಧಾರವನ್ನು ನಾನು ಘೋಷಿಸಲಿಲ್ಲವೆಂದು ಹೇಳಲು ವಿಷಾದಿಸುತ್ತೇನೆ. ಸೋಲಾಪುರದಲ್ಲಿ ಮತ್ತೊಂದು ದಿನ ನಡೆದ ಒಂದು ಸಭೆಯಲ್ಲಿ ಒಬ್ಬ ಭಾಷಣಕಾರನು ಉನ್ನತವರ್ಗದ ಹಿಂದುಗಳು ಇಷ್ಟಪಟ್ಟರೆ ಅವರು ಅಸ್ಪೃಶ್ಯತೆಯನ್ನು ಕ್ಷಣದಲ್ಲಿ ನಿವಾರಿಸಬಲ್ಲರು ಎಂದು ಹೇಳಿದನು. ಇದು ಇಷ್ಟು ಸುಲಭದ ಕೆಲಸವಾಗಿದ್ದರೆ ಏಕೆ ಇದುವರೆಗೂ ಇದನ್ನು ಸಾಧಿಸಿಲ್ಲವೆಂದು ನಾನು ಪ್ರಶ್ನೆಯನ್ನು ಕೇಳುತ್ತೇನೆ. ಅಥವಾ ಅದರ ಈಡೇರಿಕೆಯ ದಿನವನ್ನು ಯಾರಾದರು ಹೇಳಬಲ್ಲಿರಾ? ಚಪ್ಪಲಿ ಹೊಲಿಯುವ ಗಣಪತಿಗೆ ಒಮ್ಮೆ ತನ್ನ ಸಾರೋಟದಲ್ಲಿ ಅವಕಾಶ ಮಾಡಿಕೊಟ್ಟಿದ್ದನ್ನು ಹೇಳುವ ಮೂಲಕ ಒಬ್ಬ ನಾಯಕನು ಅಸ್ಪೃಶ್ಯರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸಿದನು. ಅವನು ಏಕೆ ತನ್ನ ಜಾತಿಯ ಪೂರ್ವಗ್ರಹಿಕೆಗಳನ್ನು ಇದುವರೆಗೂ ಎಸೆದು ಬಿಸಾಕಲಿಲ್ಲ? ಎಂದು ನಾನು ಕೇಳಿದೆನು. ಅವನು ಇದನ್ನು ಮಾಡಲು ಎಂದು ಸಿದ್ಧವಾಗಿದ್ದಾನೆ?

ಅಂತಹ ನಾಯಕರು ಇದ್ದರೂ ಹಿಂದು ಸಮಾಜ ನಿಧಾನವಾಗಿ ಅಸ್ಪೃಶ್ಯತೆಯಲ್ಲಿ ನಂಬಿಕೆಯನ್ನು ಕಳೆದುಕೊಳ್ಳುತ್ತಿದೆ ಮತ್ತು ನನ್ನ ಪ್ರಜೆಗಳು ಪರಸ್ಪರ ತಮ್ಮನ್ನು ತಾವೇ ಅಣ್ಣ-ತಮ್ಮಂದಿರೆಂಬ ಭಾವನೆಯಿಂದ... ಉಪಚರಿಸಲು ಸಿದ್ಧವಾಗಿರುವುದನ್ನು ತೋರಿಸಿದಾಗ ಅವರು ಸ್ವಯಂ ಆಡಳಿತವನ್ನು ಪಡೆಯಲು ಅರ್ಹರಾಗಿರುತ್ತಾರೆ ಎಂಬ ಭವಿಷ್ಯವನ್ನು ಹೇಳಲಾಗುತ್ತದೆ.

ನೀವು ಕೈಗೊಂಡಿರುವ ಪವಿತ್ರ ಕೆಲಸವನ್ನು ಹಿಂಜರಿಯದೆ ಮುಂದುವರಿಸಿ ಮತ್ತು ಅಂತಿಮ ಜಯದಲ್ಲಿ ದೇವರು ಖಂಡಿತವಾಗಿ ಸಹಾಯಮಾಡುವನೆಂದು ಹೇಳುತ್ತಾ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ.

---

೧೧

# ಧರ್ಮ ಮತ್ತು ಜಾತಿಪದ್ಧತಿ

**ನಾಗಪುರದಲ್ಲಿ ೩೦ ಮೇ ೧೯೨೦ರಂದು ನಡೆದ ಅಖಿಲ ಭಾರತ ದಮನಿತ ವರ್ಗಗಳ ಸಮ್ಮೇಳನದಲ್ಲಿ ಶಾಹುರವರು ಮಾಡಿದ ಅಧ್ಯಕ್ಷೀಯ ಭಾಷಣವಿದು – ಜಾತಿಪದ್ಧತಿಯ ನಿರ್ಮೂಲನೆಗೆ ಅಂತರ್‌ಜಾತೀಯ ವಿವಾಹವೊಂದು ಪ್ರಮುಖ ಕ್ರಮವೆಂದು ಶಾಹು ಒತ್ತಿಹೇಳಿದರು. ಈ ಭಾಷಣದಲ್ಲಿ ತಮ್ಮ ಮೂಲಭೂತ ಸಿದ್ಧಾಂತ ಮತ್ತು ನಂಬಿಕೆಗಳಿಂದ ಮೂಡಿಬಂದ ಕ್ರಾಂತಿಕಾರಿ ಕೃತ್ಯ(ಕ್ರಮ)ಗಳನ್ನು ಪ್ರತಿಪಾದಿಸುತ್ತಾರೆ.**

---

ಸ್ವಾಗತ ಸಮಿತಿಯ ಅಧ್ಯಕ್ಷರೆ ಮತ್ತು ಸಜ್ಜನರೆ,

ನನ್ನ ಪೂರ್ವ ಒಪ್ಪಿಗೆಯಿಲ್ಲದೆ ನನ್ನನ್ನು ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಬೇಕೆಂದು ಕರೆಯುತ್ತಿರುವುದು ನನಗೆ ಬಹಳ ಸಂತೋಷವಾಗುತ್ತಿದೆ. ಒಂದಾನೊಂದು ಕಾಲದಲ್ಲಿ ನಾನು ನಿಮಗೆ ಪ್ರೀತಿ ತೋರಿಸದಿದ್ದರೂ ನೀವು ನನ್ನನ್ನು ನಿಮ್ಮಲ್ಲಿ ನಾನು ಒಬ್ಬನೆಂದು ನನ್ನನ್ನು ನೀವು ಕಾಣುತ್ತಿರುವುದು ನನಗೆ ತುಂಬಾ ಸಂತೋಷವಾಗಿದೆ. ನಾನು ನನ್ನ ತಪ್ಪನ್ನು ಕಂಡುಕೊಂಡಿದ್ದೇನೆ. ನನ್ನನ್ನು ನಂಬಿ, ಸಜ್ಜನರೆ, ನಾನು ನನ್ನ ಪ್ರೀತಿಯನ್ನು ನಿಮಗೆ ಮುಂದುವರಿಸುವೆನು.

ಒಬ್ಬ ಸೂಕ್ತವಲ್ಲದ ವ್ಯಕ್ತಿಯನ್ನು ಅಧ್ಯಕ್ಷನನ್ನಾಗಿ ನೀವು ಆಯ್ಕೆ ಮಾಡಿರುವುದು ನನಗೆ ಭಯವಾಗುತ್ತದೆ. ನಾನು ಈ ಸಮ್ಮೇಳನದ ಕಾರ್ಯಕಲಾಪಗಳನ್ನು ನಡೆಸಲು ಮಾರ್ಗದರ್ಶನ ನೀಡುವಂಥ ಸಾಕಷ್ಟು ವಿದ್ವತ್ತು ನಿಜವಾಗಿ ನನ್ನಲ್ಲಿ ಇಲ್ಲ. ಕೆಲವು ಸ್ವಾರ್ಥಿಗಳು ಕೇವಲ ಮುಖವಾಡ ಧರಿಸಿ, ತಮ್ಮ ತಿರಸ್ಕೃತ ಜನರ ಬಗ್ಗೆ ಸದ್ಭಾವನೆ ಮತ್ತು ಪ್ರೀತಿಯನ್ನು ತೋರಿಸುವ ನಾಟಕವಾಡಿ ತಮ್ಮ ಉನ್ನತಿಗಾಗಿ ಬೇಳೆ ಬೇಯಿಸಿ ಕೊಳ್ಳುತ್ತಾರೆ. ಆದ್ದರಿಂದ ನಾನು ದೇವರಲ್ಲಿ ಅಂಥ ಕೀಳು ಮನಸ್ಸು ಕೊಡಬೇಡವೆಂದು ಪ್ರಾರ್ಥಿಸುತ್ತೇನೆ. ಇಂದು ನಮ್ಮ ಮುಂದೆ ಅಸ್ಪೃಶ್ಯರ ಬೆಳಕಿನ ಮನಸ್ಸು ಇದೆ. ಆ ಶಬ್ದ ರೂಢಿಯಲ್ಲಿರುವುದರಿಂದ ಸುಮ್ಮನೆ ಅಸ್ಪೃಶ್ಯ ಎಂಬುದನ್ನು ಬಳಸಿದ್ದೇನೆ. ನೀವು ಅಸ್ಪೃಶ್ಯರಲ್ಲ. ಆದರೆ ಮತ್ತೊಂದು ವಿಧದಲ್ಲಿ ನೀವು ಭಾರತರಾಷ್ಟ್ರದ ಸದಸ್ಯರು, ಹೆಚ್ಚು ಬುದ್ಧಿವಂತರು, ಹೆಚ್ಚು ತ್ಯಾಗಶೀಲರು ಹಾಗೂ ಹೆಚ್ಚು ಧೀರರು ಮತ್ತು ನಿಮ್ಮನ್ನು ಅಸ್ಪೃಶ್ಯರೆಂದು ಕರೆಯಲು ಹೆದರುವವರಿಗಿಂತ ನೀವು ಒಳ್ಳೆಯ ಮನೋಭಾವದವರು. ನಾವು ಸಮಾನ ಸ್ಥಾನಮಾನವುಳ್ಳ ಸಹೋದರರರೆಂಬ ನಿಷ್ಠೆಯಿಂದ ಕೆಲಸಮಾಡಬೇಕು ಮತ್ತು ನಾವು ಸಮಾನವಾದ ಹಕ್ಕುಗಳನ್ನು ಹೊಂದಿರುವವರೆಂದು ನಾವು ಪರಸ್ಪರ ಗೌರವಿಸಬೇಕು. ಸುಳ್ಳಿನಿಂದ ಸತ್ಯವನ್ನು

ಕಂಡುಹಿಡಿಯುವುದನ್ನು ಕಲಿತ ಅನುಭವಿಗಳನ್ನು ಸುಳ್ಳು ತಂತ್ರಗಾರರು ಮೋಸಮಾಡುವುದಕ್ಕೆ ಎಂದಿಗೂ ಸಾಧ್ಯವಿಲ್ಲ.

ತಾವು ನನ್ನನ್ನು ಈ ಸಮ್ಮೇಳನಕ್ಕೆ ಅಧ್ಯಕ್ಷತೆಯನ್ನು ವಹಿಸಲು ಕರೆದಿರುವಿರಿ, ಆದರೂ ನಾನು ಯಾವುದೇ ಒಂದು ಸಮುದಾಯದ ನಾಯಕನಲ್ಲ ಅಥವಾ ನಾನು ಹಾಗೆ ಆಗುವುದಕ್ಕೆ ಇಚ್ಛೆಪಡುವುದಿಲ್ಲ. ತಪ್ಪು ನಂಬಿಕೆಯಿಂದ ನನ್ನನ್ನು ನಾಯಕನೆಂದು ಅನುಸರಿಸುವವರನ್ನು ನಾನು ನಾಯಕನಲ್ಲವೆಂದು ಅವರಿಗೆ ಹೇಳುತ್ತೇನೆ. ನನ್ನ ಚಿಂತನೆಗಳು ಮತ್ತು ಕೃತ್ಯಗಳು ಯಾರನ್ನೂ ಪ್ರತಿನಿಧಿಸುವುದಿಲ್ಲ; ಆದರೆ ಅವು ನನ್ನವು. ಮತ್ತು ನನ್ನ ಸಂಬಂಧಿಕರು ಮತ್ತು ನನ್ನ ಸ್ನೇಹಿತರು ಸಾಧಕ–ಬಾಧಕಗಳನ್ನು ಸರಿಯಾಗಿ ಪರಿಗಣಿಸದೆ ಅನುಕರಿಸಬಾರದು. ನಾನು ಅಂತಹ ವಿಚಾರಗಳಲ್ಲಿ ಅವರ ಸ್ವ–ನಿರ್ಧಾರಕ್ಕೆ ಪೂರ್ತಿಯಾಗಿ ಬಿಟ್ಟುಕೊಡುವೆನು.

ಭಾರತದ ಸಹಮಾನವರಾದ ಪ್ರಜೆಗಳಾದ ನಾವು ಯಾವುದೇ ಜಾತಿ–ಧರ್ಮ (ಮತ) ಸೇರಿದರೂ ಪರವಾಗಿಲ್ಲ, ನಾವು ಭಾರತೀಯರಾಗಿದ್ದೇವೆ. ವ್ಯಕ್ತಿಯ ದೃಷ್ಟಿಯಿಂದ ಧರ್ಮವು ಚಿಂತೆಯ ವಿಷಯವಾಗಿದ್ದರೂ ರಾಷ್ಟ್ರೀಯ ವ್ಯವಹಾರಗಳಿಗೆ ಅದು ಬಾಧಕವಾಗಿಲ್ಲ. ಧರ್ಮ ದೇವರ ಬಳಿಗೆ ಹೋಗುವ ಒಂದು ದಾರಿಯೆಂದು ಬಹುಮಟ್ಟಿಗೆ ಸಾಮಾನ್ಯವಾಗಿ ಒಪ್ಪಿರುವ ಒಂದು ನಿರ್ವಚನವಾಗಿದೆ. ಲಂಡನ್, ಮುಂಬಯಿ ಅಥವಾ ಕಲಕತ್ತಾ ಮಹಾನಗರಗಳಿಗೆ ನಾನಾ ಕಡೆಗಳಿಂದ ಬಂದು ಸೇರುವ ರಸ್ತೆಗಳಂತೆಯೇ ನಾನಾಧರ್ಮಗಳು ಸರ್ವಶಕ್ತನಾದ ದೇವರ ಬಳಿಗೆ ನಮ್ಮನ್ನು ಕೊಂಡೊಯ್ಯುತ್ತವೆ.

ಧರ್ಮಗಳು ಭಿನ್ನ–ಭಿನ್ನವಾದರೂ ಬೇರೆ ಬೇರೆ ರಸ್ತೆಗಳು ಒಂದೇ ಗುರಿ(ಧ್ಯೇಯ)ಯ ಕಡೆಗೆ ಕೊಂಡೊಯ್ಯುತ್ತವೆ ಎಂಬ ಹೋಲಿಕೆಯು ನಿಜ. ಆದರೆ ಭಿನ್ನ–ಭಿನ್ನ ಧರ್ಮಗಳ ಜನರು ಒಂದೇ ಗುರಿಯನ್ನು ಏಕೆ ಪರಸ್ಪರ ದ್ವೇಷಿಸುತ್ತಾರೆಂಬುದು ನಿಜವಾಗಿಯೂ ಆಶ್ಚರ್ಯವಾಗುತ್ತದೆ. ಅವರು ಭಿನ್ನ ಭಿನ್ನ ದಾರಿಗಳನ್ನು ಆಯ್ಕೆಮಾಡಿಕೊಳ್ಳುವುದಕ್ಕೆ ಅವರಿದ್ದ ಭಿನ್ನಭಿನ್ನ ಪರಿಸರಗಳು ಮುಖ್ಯ ಕಾರಣವಾಗುತ್ತದೆ. ಈ ಪರಿಸರಗಳಿಂದ ಮೂಡಿಬಂದ ಈ ವಿವಿಧ ಧರ್ಮಗಳ ಬಗ್ಗೆ ಕೇವಲ ಊಹೆ ಮಾಡಬಹುದಷ್ಟೆ. ಅವನು ವಿಶಿಷ್ಟ ಧರ್ಮವನ್ನು ಅನುಸರಿಸುವ ಮೂಲಕ ದೇವರ ಸಾಮೀಪ್ಯಕ್ಕೆ ಹೋಗಿದ್ದಾನೆಂದು ಯಾರು ಇದುವರೆಗೂ ದೃಢವಾಗಿ ಹೇಳಿಲ್ಲ. ತನ್ನ ಧರ್ಮವೊಂದೇ ನಿಜವಾದ ಧರ್ಮ, ಉಳಿದವುಗಳೆಲ್ಲಾ ಮಿಥ್ಯೆ (ಸುಳ್ಳು) ಎಂದು ಯಾರು ಇದುವರೆಗು ಅಧಿಕೃತವಾಗಿ ವಾದಿಸಿಲ್ಲವೆಂದು ಹೇಳಬಹುದು.

ಧರ್ಮಕ್ಕೆ ನಿಜವಾದ ಮೂಲ ಬುನಾದಿ ಕರುಣೆ. ಸ್ವಾರ್ಥಪರತೆಯು ಅವನತಿಗೆ ದೂಡುತ್ತದೆಯೆಂದು ಸಂತ ಕಬೀರರು ಹೇಳುತ್ತಾರೆ. ನಿಜವಾದ ಧರ್ಮ ಸಹಮಾನವರ ಸೇವೆ ಮಾಡುವುದು ಮತ್ತು ಮನುಷ್ಯನಲ್ಲಿ ದೇವರನ್ನು ಕಂಡುಕೊಳ್ಳುವುದು ಮತ್ತು ಮನುಷ್ಯನನ್ನು ಗೌರವಿಸುವುದು ಒಳಗೊಂಡಿರುತ್ತದೆ. ಈ ವಿಷಯದ ಬಗ್ಗೆ ಎಲ್ಲಾ ಧರ್ಮಗಳ ಒಮ್ಮತವಿದೆ. ಬೇರೆಯವರಿಗೆ ಒಳ್ಳೆಯದನ್ನು ಮಾಡುವುದು ಸದ್ಗುಣ ಮತ್ತು ಬೇರೆಯವರಿಗೆ ಕೆಡುಕುಂಟುಮಾಡುವುದು ಪಾಪವೆಂದು ಎಲ್ಲಾ ಧರ್ಮಗಳು ಬೋಧಿಸುತ್ತವೆ. ಹೀಗೆ ಬೇರೆ ಬೇರೆ ಧರ್ಮಗಳಲ್ಲಿ ಮುಖ್ಯಾಂಶಗಳ ಬಗ್ಗೆ ಒಮ್ಮತವಿರುವಾಗ ಅವುಗಳ ಅನುಯಾಯಿಗಳು ಪರಸ್ಪರ ದ್ವೇಷಿಸುವುದು ನಿಜವಾಗಿಯೂ ತಪ್ಪು. ಈ ದೇಶದಲ್ಲಿ ಹಲವಾರು ಯುದ್ಧಗಳು ನಡೆದಿವೆ. ಅವೆಲ್ಲವೂ ದೀರ್ಘಕಾಲಿಕ ಪ್ರಭುತ್ವಕ್ಕಾಗಿ ನಡೆದ ಯುದ್ಧಗಳು.

ಅಕ್ಬರ್ ಮತ್ತು ಶಿವಾಜಿ ನಡೆಸಿದ ಯುದ್ಧಗಳು ಜಾತಿ ಅಥವಾ ಮತಕ್ಕಾಗಿ ನಡೆಸಿದ ಯುದ್ಧಗಳಲ್ಲ.

ಅಕ್ಬರರ ಆಶ್ರಯದಲ್ಲಿ ಹಲವು ಮರಾಠರು, ರಜಪೂತರು ಮತ್ತು ಹಿಂದು ಅಧಿಕಾರಿಗಳು ಮತ್ತು ವೀರರು ಬೆಳೆದು ಬಂದರು. ಹಾಗೆಯೇ ವಿಜಯನಗರದ ಸೈನ್ಯ ಮತ್ತು ಶಿವಾಜಿ ಹಲವು ಮಹಮದೀಯರನ್ನು ಎದುರಿಸಿದರು. ಅವರೆಲ್ಲರೂ ತಮ್ಮ ಸಹ–ಸಂಬಂಧಿಗಳೊಡನೆ ಹೋರಾಡಿದರೂ ಅವರು ತಮ್ಮ ಸಾಮರಸ್ಯ ಮತ್ತು ಪ್ರಾಮಾಣಿಕತೆಗಳಿಂದ ಎಂದಿಗೂ ಪ್ರತ್ಯೇಕವಾಗಲಿಲ್ಲ.

ನಾನು ಎಲ್ಲಾ ಧರ್ಮಗಳ ನಿಜವಾದ ಸಾರಸತ್ವವನ್ನು ಮೇಲೆ ಸೂಚಿಸಿದ್ದೇನೆ ಮತ್ತು ಒಂದು ರಾಷ್ಟ್ರವು ಅದಕ್ಕೆ ಅನುಗುಣವಾಗಿ ಸಕ್ರಿಯವಾಗಿ ಕೆಲಸಮಾಡಿದರೆ ಅದು ತನ್ನ ಪ್ರಗತಿಯನ್ನು ಖಾತರಿಗೊಳಿಸುತ್ತದೆ. ಮಾನವರಲ್ಲಿ ದೇವರನ್ನು ಕಾಣು ಎಂಬ ಧರ್ಮದ ಸತ್ವವನ್ನು ನಾವು ಮರೆತುಬಿಟ್ಟದ್ದೇವೆ. ಮತ್ತು ಅದರ ಬದಲಿಗೆ ಕೆಲವು ನಕಲಿ ಗ್ರಂಥಗಳ ಬಲದ ಮೇಲೆ ಆಧಾರಗೊಂಡ ನಿರ್ದಯಿಗಳಿಗಿಂತ ಕಡೆಯಾಗಿ ನಮ್ಮ ಸಾಮಾನ್ಯ ಜನಾಂಗದಲ್ಲಿ ಹೆಚ್ಚಿನ ಭಾಗವನ್ನು ಕೀಳೆಂದು ಘೋಷಿಸಲಾಗಿದೆ. ಉತ್ಸಾಹಭರಿತ ಪ್ರಾರ್ಥನೆ ಕುಯುಕ್ತಿಯ ತಂತ್ರಗಳಿಂದ, ವಾದ್ಯಗಳನ್ನು ಬಾರಿಸುವ ಮೂಲಕ, ಪೂಜೆ–ಪುರಸ್ಕಾರಗಳ ಮೂಲಕ, ಅಥವಾ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡುವ ಮೂಲಕ ಸರ್ವಶಕ್ತ ದೇವರನ್ನು ಸಂತೋಷಗೊಳಿಸಲು ನಾವು ಸಾಧ್ಯವೇ? ಅಂತಹ ಮೋಸದ ವಿಧಾನಗಳಿಂದ ಸರ್ವಶಕ್ತ ದೇವರನ್ನು ನಾವು ಗೆಲ್ಲಲು ಸಾಧ್ಯವೆ? ಅದರ ಬದಲಿಗೆ ಅವನ ಅವಕೃಪೆ ಮತ್ತು ಶಿಕ್ಷೆಯನ್ನು ನಾವು ಖಂಡಿತವಾಗಿ ಪಡೆಯುತ್ತೇವೆ. ಅವನ (ದೇವರ) ಮಕ್ಕಳನ್ನು ಸಮಾನತೆ ಮತ್ತು ಭ್ರಾತೃತ್ವ ಭಾವನೆಯಿಂದ ಪರಿಗಣಿಸುವುದೇ ಅವನ ಕೃಪಾಕಟಾಕ್ಷ ಪಡೆಯುವುದಕ್ಕೆ ಏಕೈಕ ದಾರಿಯಾಗುತ್ತದೆ.

ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪನೆಯು ನಿಜವಾಗಿ ಒಂದು ವರ, ವಿಶೇಷವಾಗಿ ಅದರಲ್ಲು ಅಸ್ಪೃಶ್ಯರಿಗೆ ಒಂದು ನಿರ್ದಿಷ್ಟ ಜಾತಿಯ ಪಾರಮ್ಯತೆಯನ್ನು ಎತ್ತಿಹಿಡಿಯುತ್ತಿದ್ದ ಮನುಸ್ಮೃತಿಗಳ (ಕಾನೂನುಗಳ) ಸ್ಥಾನದಲ್ಲಿ (ಬದಲಿಗೆ) ಇಂದು ನಾವು ಭಾರತದ ಶಾಸನಗಳಲ್ಲಿ ತಂದಿರುವ ಕಾನೂನುಗಳು ಕಾನೂನಿನ ಮುಂದೆ ಸಮಾನತೆಯ ತತ್ವವನ್ನು ಮಾನ್ಯಮಾಡಲಾಗಿದೆ. ಬ್ರಾಹ್ಮಣರನ್ನು ಗಲ್ಲಿಗೇರಿಸಬಾರದೆಂದು ಘೋಷಣೆಮಾಡುವುದು, ಮತ್ತು ಎಲ್ಲಾ ಧಾರ್ಮಿಕ ಸಮಾರಂಭಗಳಲ್ಲಿ ಅವರು ಸರ್ವಶಕ್ತ ದೇವರಿಗೆ ಸಮಾನರೆಂದು ಭಾವಿಸಬೇಕು ಮತ್ತು ಇತರೆ ಎಲ್ಲಾ ಜಾತಿಗಳು ನಿಕೃಷ್ಟ ಎಂದು ನಂಬಬೇಕು ಮತ್ತು ಅವೆಲ್ಲವೂ ಬ್ರಾಹ್ಮಣರ ಗುಲಾಮರಾಗಿ ಸೇವೆಮಾಡಲು ನಿರ್ಮಿತವಾಗಿವೆ ಎಂಬ ಇವೆಲ್ಲವೂ ಅಂತಃಸಾಕ್ಷಿಯನ್ನು ಮತ್ತು ಉನ್ನತ ಮಾನವೀಯ ಎಲ್ಲ ಮೌಲ್ಯಗಳನ್ನು ನಿಃಸತ್ವಗೊಳಿಸುತ್ತವೆ. ವಾಸ್ತವಿಕವಾಗಿ ಆಧುನಿಕ ಕಾಲದಲ್ಲಿ ಅಂತಹ ಕಾನೂನುಗಳನ್ನು ರೂಪಿಸಲು ಯಾರಾದರೂ ನಾಚಿಕೆಪಡುತ್ತಾರೆ. ಕೆಲವು ನಿರ್ದಿಷ್ಟ ವರ್ಗದವರು ವೇದಗಳನ್ನು ಓದಬಾರದೆಂದು ನಿಷೇಧಿಸುವ ಕಾನೂನುಗಳು ಒಮ್ಮೆ ಭಾರತದಲ್ಲಿದ್ದವು ಮತ್ತು ಕಾನೂನುಗಳನ್ನು ಉಲ್ಲಂಘಿಸಿ ವೇದಗಳನ್ನು ಓದಿದವರ ಕಣ್ಣುಗಳಿಗೆ ಕಾದ ಬರೆಗಳನ್ನು ಹಾಕುವ ಮತ್ತು ಚುಚ್ಚು ಶಿಕ್ಷೆಗಳನ್ನು ನೀಡಲಾಗುತ್ತಿತ್ತು. ಅಂತಹ ಅಮಾನವೀಯ ಕಾನೂನುಗಳನ್ನು ರದ್ದುಗೊಳಿಸಿದ್ದಕ್ಕೆ ಬ್ರಿಟಿಷ್ ಸರಕಾರಕ್ಕೆ ಕೃತಜ್ಞತೆಗಳನ್ನು ಸಲ್ಲಿಸಬೇಕು. ಆದರೆ ಹಿಂದು ಕಾನೂನಿನಲ್ಲಿ ಸಾಕಷ್ಟು ಸುಧಾರಣೆಗಳನ್ನು ಮಾಡಬೇಕಾಗಿದೆ. ರಾಷ್ಟ್ರೀಯ ಪ್ರಜ್ಞೆ ಮತ್ತು ಪ್ರಗತಿಯ ಪ್ರಜ್ಞೆಗಳು ಹಿಂದು ಸಮಾಜದೊಳಕ್ಕೆ ಒಳಹೊಕ್ಕಿವೆ. ಮದುವೆ, ವಿದೇಶಿ ಪ್ರಯಾಣ, ಸಹಿಷ್ಣುತೆ ಬಗೆಗಿನ ನಮ್ಮ ಮನೋಭಾವಗಳು ನಮ್ಮ ಮನಸ್ಸಿನಲ್ಲಿ ದೃಢವಾಗಿ ಬೇರೂರಿವೆ. ಹಿಂದು ಸಮುದಾಯ ಪ್ರಗತಿ ಹೊಂದಬೇಕಾದರೆ ನಾವು ಅವುಗಳಿಗೆ ಕಾನೂನಿನ ಬೆಂಬಲ ನೀಡಬೇಕಾಗಿದೆ.

ಬ್ರಿಟಿಷ್ ಸರಕಾರವು ಕಾನೂನಿನ ಮುಂದೆ ಎಲ್ಲರೂ ಸಮಾನತೆಯನ್ನು ಪಡೆದಿದ್ದಾರೆ ಎಂದು ಘೋಷಿಸಿದೆ. ಮತ್ತು ಬ್ರಿಟಿಷ್ ಮಿಷನರಿಗಳು ಅಸ್ಪೃಶ್ಯರನ್ನು ಉಪಚರಿಸುವ ಮೂಲಕ ಭ್ರಾತೃತ್ವ ಭಾವನೆಯನ್ನು ಉದ್ಘಾಟಿಸಿದ್ದಾರೆ. ಹಾಲೆಂಡು ಮತ್ತು ಬೆಲ್‌ಜಿಯಮ್ಮಿನ ಸರಕಾರಗಳು ತಮ್ಮ ಸಾರ್ವಭೌಮತ್ವದಡಿಯಲ್ಲಿ ಬದುಕುತ್ತಿರುವ ಜನರ ಆಸಕ್ತಿಗಳನ್ನು ಕಡೆಗಣಿಸುತ್ತಿದ್ದವು. ಆದರೆ ಬ್ರಿಟಿಷರು ಬಹಳಷ್ಟು ಜನರು ವಿರೋಧಿಸುತ್ತಿದ್ದರೂ ನಮಗೆ ಸ್ವರಾಜ್ಯವನ್ನು ನೀಡುತ್ತಿದ್ದಾರೆ. ಶ್ರೇಷ್ಠ ಮುತ್ಸದ್ಧಿಗಳ ಮಾರ್ಗದರ್ಶನ ಪಡೆಯುತ್ತಿರುವ ಬ್ರಿಟಿಷ್ ಸಾಮ್ರಾಜ್ಯಕ್ಕೆ ನಾವು ನಿಷ್ಠೆಯನ್ನು ತೋರಿಸಬೇಕು ಮತ್ತು ಆಭಾರಿಯಾಗಿರಬೇಕು. ಈ ದೇಶವು ಬ್ರಿಟಿಷ್ ಜನರಿಗೆ ತುಂಬಾ ಆಭಾರಿಯಾಗಿದೆ. ಇತ್ತೀಚಿನ ಯುದ್ಧದಲ್ಲಿ ಭಾರತದ ಜನತೆ ಜಾತಿ–ಮತಗಳ ಭೇದವನ್ನು ಮರೆತು ಬ್ರಿಟಿಷ್ ರಾಜ್‌ಗೆ ಬೆಂಬಲ ನೀಡಿತ್ತು. ನಮ್ಮನ್ನು ಬ್ರಿಟಿಷ್ ಸಾಮ್ರಾಜ್ಯದ ಭಾಗವನ್ನಾಗಿ ಮಾಡಿದ್ದು ನಮ್ಮ ದೈವ ಕೃಪೆಯೆಂದು ಭಾವಿಸುತ್ತೇನೆ.

ಮದ್ರಾಸಿನ ಅಸ್ಪೃಶ್ಯರು ತಮ್ಮ ಸಹ–ಧರ್ಮೀಯರಿಂದ ಅಮಾನವೀಯವಾದ ಅವಮಾನವನ್ನು ಅನುಭವಿಸಬೇಕಾಗಿತ್ತು. ಮದ್ರಾಸಿನ ಬ್ರಾಹ್ಮಣರು ಬ್ರಾಹ್ಮಣೇತರರನ್ನು ಅಮಾನವೀಯವಾಗಿ ಹಿಂಸಿಸಿದ್ದು ಕುಪ್ರಸಿದ್ಧಿಯಾಗಿದೆ. ಆದ್ದರಿಂದ ದಿವಂಗತ ಡಾ. ನಾಯರ್ ಅವರು ಬ್ರಾಹ್ಮಣೇತರರಲ್ಲಿ ಆತ್ಮ–ಗೌರವ ಮತ್ತು ತಮ್ಮ ಹಕ್ಕುಗಳ ಬಗ್ಗೆ ಪ್ರಜ್ಞೆಮೂಡಿಸಲು ಅವರು ಮಾಡಿದ ಪ್ರಯತ್ನಗಳಿಗೆ ನಾವು ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಬೇಕು. ಅವರು ಪಂಚಮರ ಮತ್ತು ತಮ್ಮ ದೇಶೀಯ ಪಂಚಮರ ಗುಂಪಿಗೆ ಸೇರಿದ ಎಲ್ಲರ ಉನ್ನತಿಗಾಗಿ ಬಹಳ ಶ್ರಮಪಟ್ಟರು. ದಮನಿತ ವರ್ಗಗಳ ಉನ್ನತಿಗಾಗಿ ಆಸಕ್ತಿವಹಿಸಿದ ಸರ್ ಶಂಕರನ್ ನಾಯರ್ ಅವರನ್ನು ನಾನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ.

ಈ ದೇಶದ ವಿಮೋಚನೆಯು ಜಾತಿಪದ್ಧತಿಯ ರದ್ದತಿಯ ಮೇಲೆ ಅವಲಂಬಿಸಿದೆ ಎಂಬುದು ನನ್ನ ಅಭಿಪ್ರಾಯ. ಆದ್ದರಿಂದ ವಿರೋಧವಿದ್ದರೂ ಅಂತರ್‌ಜಾತೀಯ ವಿವಾಹಗಳು ಬೃಹತ್ ಪ್ರಮಾಣದಲ್ಲಿ ನಡೆಸುವ ಅತ್ಯಾವಶ್ಯಕತೆಯಿದೆ. ಸಹಭೋಜನ, ಆಹಾರದ ವಿನಿಮಯ ಅಥವಾ ಹಂಚಿಕೆಗಳು ಜಾತಿಗಳೊಳಗೆ ಈಗ ಹೆಚ್ಚಾಗುತ್ತಿದೆ ಮತ್ತು ಎಷ್ಟೇ ವಿರೋಧವಿದ್ದರೂ ಅದು ಹೆಚ್ಚಾಗುವುದು. ಆದರೆ ಅಂತರ್‌ಜಾತಿಯ ವಿವಾಹಗಳ ಬಗ್ಗೆ ಹೆಚ್ಚು ಹೇಳುವುದಕ್ಕೆ ಆಗುವುದಿಲ್ಲ. ಹೆಚ್ಚು ಅಂತರ್‌ಜಾತಿಯ ವಿವಾಹಗಳು ಹೆಚ್ಚು ಹರಡಬೇಕಾದರೆ ಮೊದಲು ಅಂತರ್‌ಜಾತಿಯ ವಿವಾಹಗಳು ಕಾನೂನುಬಾಹಿರ ಎಂದು ಹೇಳುವ ಈಗಿನ ಕಾನೂನುಗಳನ್ನು ಮತ್ತು ಅಂತಹ ಮದುವೆಗಳಿಂದ ದಂಪತಿಗಳಿಗೆ ಹುಟ್ಟಿದ ಮಕ್ಕಳಿಗೆ ಉತ್ತರಾಧಿಕಾರಿಯ ಹಕ್ಕುಗಳನ್ನು ನಿರಾಕರಿಸುವ ಕಾನೂನುಗಳನ್ನು ನಾವು ಮೊದಲು ಬದಲಾಯಿಸಬೇಕಾಗಿದೆ. ಆದ್ದರಿಂದ ಕೇಂದ್ರೀಯ ಶಾಸನ ಪರಿಷತ್ತಿನಲ್ಲಿರುವ ಗೌರವಾನ್ವಿತ ಪಟೇಲ ಮಸೂದೆ ಪಾಸುಮಾಡುವುದು ಅತ್ಯಗತ್ಯ. ಆ ಮಸೂದೆಯು ಬ್ರಾಹ್ಮಣರ ಘನತೆಯನ್ನು ಕಡಿಮೆಮಾಡುವುದರಲ್ಲಿ ಯಾವುದೇ ಅನುಮಾನವಿಲ್ಲ. ಆದ್ದರಿಂದ ಬ್ರಾಹ್ಮಣ ಪತ್ರಿಕೆಗಳು ಮಸೂದೆಯನ್ನು ಕಟುವಾಗಿ ವಿರೋಧಿಸಿದವು. ಅವರು ದೇಶದ ಬಹುಹಿತಾಸಕ್ತಿಗಳನ್ನು ತ್ಯಜಿಸಬೇಕೆಂದು ಅವರು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಒಂದು ಹೆಣ್ಣು ಮತ್ತು ಗಂಡು ಮದುವೆಯಾಗದೆ ಗಂಡ–ಹೆಂಡತಿಯಾಗಿ ಜೀವನ ನಡೆಸುವುದು ತಪ್ಪೇನು ಅಲ್ಲವೆಂದು ಕರ್ಮಠ ಬ್ರಾಹ್ಮಣ ಗುಂಪಿನವರು ಭಾವಿಸುತ್ತಾರೆ. ಆದರೆ ಧಾರ್ಮಿಕ ವಿಧಿ ವಿಧಾನಗಳಿಂದ ಆ ಸಂಬಂಧಗಳನ್ನು ಶಾಸ್ತ್ರಬದ್ಧಗೊಳಿಸುವುದಕ್ಕೆ ಅವರ ಆಕ್ಷೇಪಣೆಯಿದೆ. ಏಕೆಂದರೆ ಅಂತಹ ಕ್ರಿಯೆಗಳನ್ನು ಒಂದು ನೈತಿಕ ಕ್ರಿಯೆಯ ಘನತೆಗೇರಿಸುತ್ತವೆಂಬುದು ಅವರ ಆತಂಕವಾಗಿತ್ತು. ಧಾರ್ಮಿಕ ಸಮ್ಮತಿಗಳನ್ನು ತಡೆಹಿಡಿಯುವ ಮೂಲಕ ಅವರು ವಿವೇಚನೆಯಿಲ್ಲದೆಯೇ ಸಾರ್ವಜನಿಕ ನೈತಿಕತೆಯ ಶತ್ರುಗಳಾಗಿ ವರ್ತಿಸುತ್ತಿದ್ದಾರೆ.

ನನ್ನ ಸ್ನೇಹಿತ ಅರುಂದಲೆ ಅವರ ನಿದರ್ಶನವನ್ನು ಹೇಳುವ ಮೂಲಕ ನಾನೇನು ಸಹಾಯಮಾಡಲಾರೆ. ಅವರು ಬ್ರಾಹ್ಮಣ ಹುಡುಗಿಯ ಜೊತೆಯಲ್ಲಿ ಮದುವೆಯಾದದ್ದು ಕರ್ಮಠ ಬ್ರಾಹ್ಮಣರ ಕೋಪಕ್ಕೆ ಕಾರಣವಾಯಿತು. ನಾವು ಪೂರ್ವಗ್ರಹಪೀಡಿತ ಕಣ್ಣುಗಳಿಂದ ಈ ಘಟನೆಯನ್ನು ನೋಡದೆ ಇದ್ದರೆ, ಅಂತಹ ಹೆಚ್ಚಿನ ಘಟನೆಗಳ ಬಗ್ಗೆ ಹೆಚ್ಚು ಉತ್ತಮವಾಗಿ ಹೇಳಬಲ್ಲೆವು. ದುಬಾರಿ ಮದುವೆ ಸಮಾರಂಭಗಳು ಜನರ ಹಣವನ್ನು ವ್ಯರ್ಥಮಾಡುತ್ತವೆಯೆಂದು ಮತ್ತು ಅದೇ ಹಣವನ್ನು ಲಾಭದಾಯಕವಾಗಿ ಶಿಕ್ಷಣದ ಮೇಲೆ ಖರ್ಚುಮಾಡಬಹುದಾಗಿತ್ತೆಂದು ಹಲವರು ದೂರುತ್ತಾರೆ. ಆದರೆ ಈ ಜನರೇ ಸುಲಭ ಖರ್ಚಿನಲ್ಲಿ ನೋಂದಣಿ ಮಾಡಿಸುವ ಮೂಲಕ ಮದುವೆಗಳಿಗೆ ಸಮ್ಮತಿ ನೀಡುವ ವಿಧಾನಗಳನ್ನು ಒಪ್ಪುವುದಿಲ್ಲ. ನೋಂದಣಿ ಮಾಡಿಸಿದ ಹಿಂದು ಮದುವೆಗಳು ಕಾನೂನಿನ ಮಾನ್ಯತೆ ಪಡೆದಿಲ್ಲ. ಇದು ಒಬ್ಬ ಮದುವೆಯಾದ ಭಾರತೀಯನು ಇಂಗ್ಲೆಂಡ್ ಅಥವಾ ಫ್ರಾನ್ಸ್‌ಗಳಲ್ಲಿ ಆ ದೇಶಗಳ ಕಾನೂನಿನ ಪ್ರಕಾರ ಮದುವೆಯಾಗಲು ಕಾನೂನುಗಳು ನಿಗದಿಗೊಳಿಸಿದ ಪ್ರಕಾರ ಮದುವೆಯಾಗಲು ಅವಕಾಶಮಾಡಿಕೊಟ್ಟಿದೆ. ಈ ಅವಕಾಶವನ್ನು ಬಳಸಿಕೊಂಡ ಹಲವಾರು ಜನರು ಇದ್ದಾರೆ. ಅವರು ತಮ್ಮ ನಿಷ್ಠೆಯ ಮತ್ತು ಕರ್ತವ್ಯನಿಷ್ಠೆಯ ಪತ್ನಿಯನ್ನು ಬಿಟ್ಟುಬಿಟ್ಟಿದ್ದಾರೆ. ಆ ಪತ್ನಿಯರು ನಾಚಿಕೆ ಮತ್ತು ಅವಮಾನಗಳಿಗೆ ಗುರಿಯಾಗಿ ನರಳುತ್ತಿದ್ದಾರೆ. ಇದು ಭಾರತದ ಹಲವಾರು ವಿಧವೆಯರ ದುಸ್ಥಿತಿಯಾಗಿದೆ. ಆದರೆ ಅಂತಹ ಒಂದು ಸನ್ನಿವೇಶವು ಕರ್ಮಠ ಗುಂಪಿನ ಬಗ್ಗೆ ವಿವೇಚನೆ ಮಾಡುವುದಿಲ್ಲ. ವಿವಾಹಗಳ ನೋಂದಣಿಯು ಇಂಥ ಕಳ್ಳವಿಧಾನಗಳನ್ನು ತಡೆಯುವುದರಲ್ಲಿ ಯಾವ ಸಂಶಯವು ಇಲ್ಲ. ವಿವಾಹಗಳ ನೋಂದಣಿಯು ಅಂತರ್‌ಜಾತಿಯ ಮದುವೆಗಳಿಗೆ ಒಂದು ರಾಜಮಾರ್ಗವಾಗುತ್ತದೆ. ಆದರೆ ಇದರ ವಿರುದ್ಧ ಹೋರಾಡಲು ಕರ್ಮಠ ಬ್ರಾಹ್ಮಣರು ಸಾಲುಗಟ್ಟಿ ನಿಲ್ಲುತ್ತಾರೆ. ಮಿಶ್ರಿತ ಮದುವೆಗಳ ಮಗುವು (ಸಂತಾನ) ಶ್ರೇಷ್ಠತೆಯಲ್ಲಿ ಪೈತೃಕ (ತಂದೆಯ) ಅಥವಾ ಜ್ಞಾತಿ (ರಕ್ತಸಂಬಂಧಿಯ)ಯ ಸ್ಥಾನಮಾನ ಅಥವಾ ಘನತೆಯ ಪಾಲನ್ನು ಹೊಂದಬೇಕಾಗುತ್ತದೆ ಎಂಬುದು ಸರಿಯಲ್ಲ ಎಂದು ವಾದಿಸಲಾಗುತ್ತದೆ. ಇದು ಒಂದು ಕುಂಟು ನೆಪವಾಗುತ್ತದೆ. ಹಾಲಿ ಅಸ್ತಿತ್ವದಲ್ಲಿರುವ ಕಾನೂನು ಒಬ್ಬ ಕ್ರಿಶ್ಚಿಯನ್ನನ್ನು ಅಥವಾ ನೋಂದಣಿಯ ಪ್ರಕಾರ ಈಗಾಗಲೆ ಮದುವೆಯಾಗಿರುವ ಒಬ್ಬ ಹಿಂದುವನ್ನು ಇತರೆ ಸಹ ಹಿಂದು ವಾರಸುದಾರರೊಂದಿಗೆ ಪಾಲುಪಡೆಯಲು ಅವಕಾಶ ನೀಡುವ ಈ ಕಾನೂನಿನ ಬಗ್ಗೆ ನೆಪವೊಡ್ಡುವವರ ಬಗ್ಗೆ ತಾಳ್ಮೆಯಿಂದಿರುವುದು ವಿಚಿತ್ರವೆನಿಸುತ್ತದೆ. ಪಟೇಲರ ಮಸೂದೆಯು ಭಾರತದಲ್ಲಿರುವ ಹಿಂದುಳಿದ ವರ್ಗಗಳ ಏಳಿಗೆಗೆ ಅನುಕೂಲ ಮಾಡುವುದು. ಆದ್ದರಿಂದ, ಈ ಮಸೂದೆ ಬೆಂಬಲಿಸುವವರಿಗೆ ನಾವು ಆಭಾರಿಯಾಗಿರಬೇಕು.

ಬೇರೆಯವರ ತಟ್ಟೆಯಲ್ಲಿ ನೊಣ ಬಿದ್ದಿದ್ದರೆ ನಾವು ನೋಡುತ್ತೇವೆಯೆ ಹೊರತು ನಮ್ಮ ತಟ್ಟೆಯಲ್ಲಿ ಹೆಗ್ಗಣ ಬಿದ್ದಿದ್ದರೆ ನೋಡುವುದಿಲ್ಲ ಎಂಬ ಒಂದು ಗಾದೆಯಿದೆ. ಇದು ಒಮ್ಮೊಮ್ಮೆ ನಮ್ಮ ಜೀವನದ ಅನುಭವ. ಬ್ರಿಟಿಷರು ಭಾರತವನ್ನು ಲೂಟಿಮಾಡುತ್ತಿದ್ದಾರೆಯೆಂದು ಭಾರತೀಯರನ್ನು ಭ್ರಮೆಗೊಳಪಡಿಸುತ್ತಾ ಅಪನಂಬಿಕೆಯನ್ನು ಕಳೆದು ೧೦ ಅಥವಾ ೨೦ ವರ್ಷಗಳಿಂದ ಬ್ರಾಹ್ಮಣರು ದ್ರೋಹವನ್ನು ಹರಡುತ್ತಿದ್ದಾರೆ. ಸತ್ಯಶೋಧಕ ಸಮಾಜ ಬ್ರಾಹ್ಮಣರು ತಮ್ಮ ಖೋಟಾ ಗ್ರಂಥಗಳಲ್ಲಿ ಬರೆದಿರುವ ಸುಳ್ಳುಹೇಳಿಕೆ ಮತ್ತು ಒರಟುತನಗಳನ್ನು ಬಹಿರಂಗಗೊಳಿಸುವುದೇ ಅವರ ಮುಖ್ಯಗುರಿಯಾಗಿದ್ದು, ಅದು ಅವುಗಳನ್ನು ತಡೆಯುವ ಚಟುವಟಿಕೆಗಳಲ್ಲಿ ನಿರತವಾಗಿರುವಾಗ ಬ್ರಾಹ್ಮಣರು ಬ್ರಿಟಿಷ್ ಸರಕಾರ ಅವರ ಚಟುವಟಿಕೆಗಳಿಗೆ ತಡೆ ಒಡ್ಡಬೇಕೆಂದು ಕೇಳುವುದಕ್ಕೆ ಅವರು ನಾಚಿಕೆಯೇ ಪಡಲಿಲ್ಲ.

ನುಡಿದಂತೆ ನಡೆಯುವ ಸಂತ ತುಕಾರಾಮರ ಉಕ್ತಿಗಳನ್ನು ನಾನು ಸ್ವಾಗತಿಸುತ್ತೇನೆ ಮತ್ತು ನಾವೆಲ್ಲರು ಅವರನ್ನೂ ಗೌರವಿಸಬೇಕು. ಆದುದರಿಂದ ವಂಚಕಜನರು ಬಹಿರಂಗವಾಗಿ ನಿಮಗೆ ಎಲ್ಲಾ ರೀತಿಯ ಸಹಾನುಭೂತಿಗಳನ್ನು ತೋರಿಸುತ್ತಾ ನಿಮ್ಮ ಉನ್ನತಿಯ ಉತ್ತಮ ಕೆಲಸಗಳಿಗೆ ಅಡ್ಡಿಪಡಿಸುವ ಕೀಳು ಕೃತ್ಯಗಳಲ್ಲಿ ತೊಡಗುವ ಅವರನ್ನು ನಾನು ಸಕಾರಾತ್ಮಕವಾಗಿ ಇಷ್ಟಪಡುವುದಿಲ್ಲ. ನನ್ನ ಇತ್ತೀಚಿನ ನಾಸಿಕದ ಭಾಷಣವು ಕಟುಟೀಕೆಗೆ ಗುರಿಯಾದ ವಿಷಯವಾಗಿತ್ತು. ವೈಯಕ್ತಿಕವಾಗಿ ಅದು ಮೋದವನ್ನು ನೀಡುತ್ತದೆ. ಕೊಲ್ಹಾಪುರದ ವ್ಯವಹಾರಗಳನ್ನು ವೈಯಕ್ತಿಕವಾಗಿ ಏನೂ ತಿಳಿಯದೆ ಮತ್ತು ಅವರಿವರ ಕಿವಿಮಾತುಗಳನ್ನು ಕೇಳಿಕೊಂಡು ಸರಿಯಾಗಿ ತೂಗಿ ನೋಡದೆ (ಮೌಲ್ಯಮಾಪನ ಮಾಡದೆ) ಅಥವಾ ಸಾಕ್ಷ್ಯಾಧಾರಗಳನ್ನು ಮಂಡಿಸದೆ ತಮ್ಮ ಅಭಿಪ್ರಾಯಗಳನ್ನು ಹೇಳಿಬಿಡುವವರನ್ನು ಏನೆಂದು ಕರೆಯಬೇಕು.

ಅಂತಹ ತೂಕವಿಲ್ಲದ ಬೊಜ್ಜುಮಾತು ಮತ್ತು ತೊಡಕಿನ ವಾಗ್ಧಾರೆಗಳು ಪ್ರತಿಯೊಬ್ಬರನ್ನು ಹೆದರಿಸಿ ಒಂದು ನಿರ್ದಿಷ್ಟವರ್ಗದ ಸ್ಥಾಪಿತ ಹಕ್ಕುಗಳಿಗೆ ಶರಣಾಗುವಂತೆ ಮಾಡುವ ಮುಖ್ಯ ಗುರಿಯನ್ನು ನಾನು ಬಲ್ಲೆ. ಜನತೆಯ ನಾಯಕರು ಮತ್ತು ಹಿತೈಷಿಗಳೆಂದು ತಮ್ಮನ್ನು ತಾವೇ ಹೇಳಿಕೊಂಡು ಜಂಬ ಕೊಚ್ಚಿಕೊಳ್ಳುವ ಸ್ವಲ್ಪಜನಾಧಿಪತ್ಯವನ್ನು ಎತ್ತಿಹಿಡಿಯುವವರ ಬಗ್ಗೆ ನಾನು ಅಯ್ಯೋ ಎನ್ನಬೇಕಾಗುತ್ತದೆ. ಅಂಥ ಗೊಡ್ಡು ಸಂಪ್ರದಾಯವಾದಿಗಳು ಸಾಮಾಜಿಕ ಸುಧಾರಣೆಗಳ ಚಳುವಳಿಯನ್ನು ನಡೆಸುವರೆಂದು ನಿರೀಕ್ಷಿಸುವುದಕ್ಕೆ ಸಾಧ್ಯವಿಲ್ಲ.

ಕಾಗೆಗಳು ಕೇವಲ ಗಾಯಗಳನ್ನು ಮಾತ್ರ ನೋಡುತ್ತವೆ. ಅದೇ ರೀತಿಯಲ್ಲಿ ಗೊಡ್ಡುಸಂಪ್ರದಾಯವಾದಿಗಳು ಕೇವಲ ಪ್ರಗತಿಯ ಬೆಲೆ ಏನಾಗಬಹುದೆಂದು ಮಾತ್ರ ನೋಡಬಲ್ಲರು. ಅಸ್ಪೃಶ್ಯ ಸಮುದಾಯಗಳಲ್ಲಿ ಯೋಗ್ಯರಾದ ಕೆಲವರಿಗೆ ವಕೀಲಿ ವೃತ್ತಿ ನಿರ್ವಹಿಸಲು ಸನದುಗಳನ್ನು ನೀಡಿದಾಗ ನನ್ನನ್ನು ಕಟುವಾಗಿ ಟೀಕಿಸಿದರು. ಭಾರತದಲ್ಲಿ ಕೆಲವು ವರ್ಗಗಳು ವೈದ್ಯ ಅಥವಾ ಕಾನೂನಿನ ವೃತ್ತಿಗಳು ತಮಗೆ ವಾಂಶಿಕವಾಗಿ ಪ್ರತ್ಯೇಕವಾಗಿ ಮೀಸಲಿಡಲಾಗಿದೆಯೆಂಬ ಭ್ರಮೆಯಲ್ಲಿವೆ. ಸರಿಯಾದ ಜಾಗಕ್ಕೆ ಸರಿಯಾದ ವ್ಯಕ್ತಿಯಿರಬೇಕೆಂಬ ತತ್ವದಲ್ಲಿ ವಾದ-ವಿವಾದವಿಲ್ಲ. ಆದರೆ ಆ ತತ್ವವನ್ನು ಕಾಲದ ಬದಲಾವಣೆಗಳಿಗೆ ಹೊಂದುವಂತೆ ಮಾರ್ಪಡಿಸುವ ಅವಶ್ಯಕತೆಯಿದೆ. ಬ್ರಿಟಿಷ್ ಸರಕಾರವು ಪೂರ್ವಕಾಲದಲ್ಲಿ ರಾಜಕೀಯ ಶಿಕ್ಷಣ ನೀಡುವ ಸಲುವಾಗಿ ಕಡಿಮೆ ಅರ್ಹತೆಗಳಿದ್ದ ವ್ಯಕ್ತಿಗಳಿಗೆ ಕಲೆಕ್ಟರ್ ಅಥವಾ ನ್ಯಾಯಮೂರ್ತಿಗಳ ಹುದ್ದೆಗಳನ್ನು ನೀಡಿತ್ತು... ನಾನು ಅಸ್ಪೃಶ್ಯರಿಗೆ ನೀಡಿರುವ ಡಿಪ್ಲೋಮಗಳನ್ನು ಬ್ರಾಹ್ಮಣರಿಗೆ, ಕಾಯಸ್ಥರಿಗೆ ಅಥವಾ ಸಾರಸ್ವತರಿಗೆ ನೀಡಿದ್ದರೆ ಯಾವುದೇ ಟೀಕೆಗಳು ಬರುತ್ತಿರಲಿಲ್ಲ. ವಾಸ್ತವಿಕವಾಗಿ ಈ ಸಮುದಾಯಗಳಿಗೆ ಸೇರಿದ ಅಭ್ಯರ್ಥಿಗಳು ಅಂತಹ ಡಿಪ್ಲೋಮಗಳನ್ನು ಸ್ವೀಕರಿಸಿದ್ದರೆ ಯಾವುದೇ ಟೀಕೆಯನ್ನು ಪ್ರಚೋದಿಸುತ್ತಿರಲಿಲ್ಲ. ಅಂತಹದ್ದೇ ಒಂದು ಪ್ರಶಸ್ತಿಯನ್ನು ಮರಾಠ ಅಥವಾ ಅಸ್ಪೃಶ್ಯ ಅಭ್ಯರ್ಥಿಗಳಿಗೆ ನೀಡಿದ್ದರೆ ಒಂದು ಮಹಾಗದ್ದಲವೇ ಉಂಟಾಗುತ್ತಿತ್ತು ಎಂಬುದು ನನ್ನ ಟೀಕಾಕಾರರ ಮನಸ್ಸಿನ ಶ್ರೇಷ್ಠತೆಗೆ ಒಂದು ನಿರ್ದಿಷ್ಟ ಚಿಹ್ನೆಯಾಗಿರುತ್ತಿತ್ತು! ಮಹರ್ ಮತ್ತು ಮಾಂಗರಿಗೆ ಇದುವರೆಗೂ ಮುಚ್ಚಿದ ಉನ್ನತ ಹುದ್ದೆಗಳಿಗೆ ಬಲಾತ್ಕರಿಸಿ ಮೆಟ್ರಿಕ್ಯುಲೇಟೆಡ್ ಪಾಸಾದ ಅವರನ್ನು ಪ್ರವೇಶ ನೀಡಿದ್ದನ್ನು ಬ್ರಾಹ್ಮಣ ಸಮುದಾಯಗಳು ನೋಡಿ ಮಾನಸಿಕವಾಗಿ ತಬ್ಬಿಬ್ಬಾಗಿವೆ. ಮಹರರು ಮತ್ತು ಮಾಂಗರು ಕ್ರಿಶ್ಚಿಯನ್ನರಾಗಿದ್ದರೆ ಅವರು ವಿಚಲಿತರಾಗುತ್ತಿರಲಿಲ್ಲ. ಬಹುಮಟ್ಟಿಗೆ ದೇಶೀಯ ಸಂಸ್ಥಾನಗಳು ಮಹರರು ಮತ್ತು ಮಾಂಗ್ ಅವರಿಗಿಂತ ಶಿಕ್ಷಣದಲ್ಲಿ ಹಿಂದುಳಿದಿದ್ದ ಮೇಲುಜಾತಿಗಳ ಅಭ್ಯರ್ಥಿಗಳಿಗೆ ಡಿಪ್ಲೋಮಗಳನ್ನು ನೀಡಿ ನಾನು ಅವರನ್ನು ವಕೀಲರನ್ನಾಗಿ ಮಾಡುತ್ತಿದ್ದೆ. ಅಂತಹ ಕ್ರಮದ

ಬಗ್ಗೆ ಯಾರೂ ದೂರು ನೀಡಿದ್ದನ್ನು ನಾನು ಕೇಳಲಿಲ್ಲ. ನಾನು ಡಿಪ್ಲೋಮಗಳನ್ನು ನೀಡುವ ನನ್ನ ಮುಖ್ಯ ಉದ್ದೇಶ ಅಸ್ಪೃಶ್ಯರಿಗೆ ಕಾನೂನಿನ ವೃತ್ತಿಯನ್ನು ತೆರೆಯುವುದಾಗಿತ್ತು. ಇದು ಮತ್ತು ಇತರೆ ಅನೇಕ ಕ್ಷೇತ್ರಗಳು ಹಲವು ಶತಮಾನಗಳವರೆಗೆ ಸಂಪ್ರದಾಯ ಮತ್ತು ಬಲಾತ್ಕಾರದಿಂದ ಮುಚ್ಚಲ್ಪಟ್ಟಿದ್ದವು. ಅವರ ಸ್ಥಿತಿಗತಿಗಳನ್ನು ಸುಧಾರಿಸುವುದು ಮತ್ತು ಅವರಲ್ಲಿ ಆತ್ಮ-ವಿಶ್ವಾಸವನ್ನು ತುಂಬುವುದಾಗಿತ್ತು.

ಒಂದು ಕುದುರೆಗೆ ನೀರನ್ನು ತೋರಿಸಿದಾಗ ಮಾತ್ರ ಅದು ಕುಡಿಯುತ್ತದೆ ಎಂದು ನಾನು ಒಬ್ಬ ಕ್ರೀಡಾಪಟುವಾಗಿ ನನ್ನ ಅನುಭವವು ಹೇಳುತ್ತದೆ. ಈ ಹಿಂದುಳಿದ ವರ್ಗಗಳಿಗೆ ಅವಕಾಶಗಳನ್ನು ತೋರಿಸಿದಾಗಲೇ ಅವರು ಅವಕಾಶವನ್ನು ಹೇಗೆ ನಿರ್ಮಿಸುವುದು ಎಂಬುದನ್ನು ಕಲಿಯುತ್ತಾರೆಂಬ ಹೋಲಿಕೆಯಿಂದ ನಾನು ವಾದಿಸುತ್ತೇನೆ. ಈ ಜನರು ಸಹಜ ಸಾಮರ್ಥ್ಯಗಳಿಂದ ಶೂನ್ಯರಾಗಿಲ್ಲ ಎಂಬುದು ನನಗೆ ಚೆನ್ನಾಗಿ ಮನವರಿಕೆಯಾಗಿದೆ. ಅವರು ಅವಕಾಶದ ಅಗತ್ಯದಲ್ಲಿದ್ದಾರೆ. ರುಜುವಾತು ಬೇಕಾಗಿದ್ದರೆ ಅದಕ್ಕೆ ಯಾವುದೇ ಕೊರತೆಯಿಲ್ಲ. ಮಾತಂಗ, ತುಂಕ, ಪರಾಶರ, ವಶಿಷ್ಠ, ಚೋಖಮೇಲ ಹಾಗು ಇಂತಹ ಇತರೆ ಸಮುದಾಯಗಳು ಕೀಳೆಂದು ಪರಿಗಣಿತವಾಗಿದ್ದರೂ ಅವರು ಕೆಳಸಮುದಾಯಗಳಲ್ಲಿ ಋಷಿಗಳಾಗಿ ಹುಟ್ಟಿದರು ಮೇಲಿನ ಹೇಳಿಕೆಗೆ ಸಾಕಷ್ಟು ಸಾಕ್ಷ್ಯವಾಗಿದೆ. ತೀರಾ ಇತ್ತೀಚೆಗೆ ಮುಂದುವರೆದ ದೇಶವಾದ ಇಂಗ್ಲೆಂಡಿನಲ್ಲಿ ಕೋರ್ಟ್ ಆಫ್ ಇನ್‌ಗಳಲ್ಲಿ ಕೆಲವು ನಿರ್ದಿಷ್ಟಗಳವರೆಗೆ ಕೇವಲ ಊಟಮಾಡಿದ ಜನರಿಗೆ ಬ್ಯಾರಿಸ್ಟರ್ ಆಫ್ ಡಿಪ್ಲೋಮಗಳನ್ನು ನೀಡಲಾಗುತ್ತಿತ್ತು. ಮೆಟ್ರಿಕ್ಯುಲೇಶನ್ ಮಾಡಿಲ್ಲದ ಭಾರತೀಯರೂ ಸ್ವತಃ ಈ ಅವಕಾಶವನ್ನು ಬಳಸಿಕೊಂಡರು. ಆದರೆ ಈ ಡಿನ್ನರ್ ಬ್ಯಾರಿಸ್ಟರುಗಳು ಯಾವುದೇ ಕೋರ್ಟ್ ಆಫ್ ಲಾನಲ್ಲಿ ಪ್ರಕರಣಗಳನ್ನು ನಡೆಸಲು ಅರ್ಹರಾಗಿದ್ದರು ಮತ್ತು ಈ ವರ್ಗವು ಹಲವಾರು ಪ್ರಸಿದ್ಧ ಲಾಯರುಗಳನ್ನು ಹುಟ್ಟುಹಾಕಿದರು(ತಯಾರು) ಎಂಬುದು ಪ್ರಶಂಸನೀಯವಾದುದು.

ಅಸ್ಪೃಶ್ಯರಿಗೆ ವಕೀಲಿವೃತ್ತಿ ನಿರ್ವಹಿಸಲು ಸನದುಗಳನ್ನು ನೀಡಿ ಅವರ ಸ್ಥಾನಮಾನವನ್ನು ಎತ್ತರಿಸಲು ನಾನು ಪ್ರಯತ್ನಮಾಡಿದಾಗ ಆಶ್ಚರ್ಯಕರವಾದ ರೀತಿಯಲ್ಲಿ ಮೇಲುವರ್ಗಗಳು ಈ ಕ್ರಮ ತಮಗೆ ಅವಮಾನ ಮಾಡುವಂಥದ್ದು ಎಂದು ಭಾವಿಸಿದ್ದರು. ಆದರೆ ಅವರು ತಪ್ಪು ತಿಳಿದಿದ್ದರು. ಅವರ ವಿದ್ಯಾರ್ಹತೆಗಳ ಮಟ್ಟವನ್ನು ಎತ್ತರಿಸುವವರೆಗೆ ಸರಿಸಮಾನವಾಗಿ ಪರಿಗಣಿಸುವ ಸಮಾನತೆಗಾಗಿ ಕಾಯಬೇಕೆಂಬ ನೇರಕ್ರಮದ ಧೋರಣೆಯ ಅಪೇಕ್ಷೆಯು ಈ ಭೂಮಂಡಲದಲ್ಲಿ ಎಲ್ಲಿಯೂ ಸರಿಹೊಂದದ ಹೃದಯಹೀನ ಮತ್ತು ಚಿಂತನಹೀನ ಸಾಮಾಜಿಕ ದಬ್ಬಾಳಿಕೆಯನ್ನು ಕೊನೆಗಾಣಿಸಲಾರದು. ತುರ್ತುವಾದ (ಇಮ್ಮಿಡಿಯೇಟಿಸಂ) ಒಂದು ಸಫಲವಾದ ಮಾರ್ಗವಾಗಿದೆ ಎಂಬುದು ನನ್ನ ಬಲವಾದ ನಂಬಿಕೆ. ವೃದ್ಧ ಜನರ ಮನೋಭಾವವನ್ನು ಬಾಧೆಪಡಿಸುವ ನೆಪವನ್ನು ಒಡ್ಡಿ ಸಾಮಾಜಿಕ ಸುಧಾರಣೆಗಳ ಪರವಾಗಿರುವ ಯಾವುದೇ ಕ್ರಮಗಳನ್ನು ಅನಿರ್ದಿಷ್ಟ ಕಾಲದವರೆಗೆ ನಿಧಾನಗೊಳಿಸುವ ಸಾಮಾಜಿಕ ಸುಧಾರಕರ ರೀತಿಗಳನ್ನು ಅನುಸರಿಸಲು ನಾನು ಬಯಸುವುದಿಲ್ಲ. ದೇಶದ ವಿವೇಕದ ಮನಸ್ಸು ಜಾತಿಪದ್ಧತಿಯ ಅನಿಷ್ಟಗಳನ್ನು ಒಪ್ಪಿದೆ. ಯಾರು ಅದನ್ನು ರದ್ದುಗೊಳಿಸುವ ಕೆಲಸವನ್ನು ಪ್ರಾರಂಭಿಸಬೇಕೆಂಬುದು ಪ್ರಶ್ನೆಯಾಗಿದೆ.

ಸಾಮಾನ್ಯವಾಗಿ ತಳವರ್ಗದ ಜಾತಿಗಳು ಈ ಕೆಲಸವನ್ನು ಕೈಗೊಳ್ಳಬೇಕೆಂದು ವಾದಮಾಡಲಾಗುತ್ತದೆ. ಆದರೆ ಅವರ ಪ್ರಯತ್ನಗಳು ಹೆಚ್ಚು ಫಲಕಾರಿಯಾಗುವುದಿಲ್ಲ ಎಂಬುದನು ದೃಢನಂಬಿಕೆ. ಇದರ ಚಲನೆಯನ್ನು ಸಾಮಾಜಿಕ ಶ್ರೇಣಿಯಲ್ಲಿ ಮೇಲಿರುವವರು ಪ್ರಾರಂಭಿಸಬೇಕು. ಯುಗಯುಗಗಳಿಂದ ಹುಟ್ಟಿನಿಂದ ಸಾಮಾಜಿಕ ಘನತೆಯನ್ನು ಅನುಭವಿಸಿದವರು ತಮ್ಮ ವಿಶಿಷ್ಟತೆಯನ್ನು ಬಿಟ್ಟುಕೊಡಲು ಒಪ್ಪಬೇಕು. ಜಪಾನಿನ

ಸಮುದಾಯದವರು ತಮ್ಮ ಸಾಮಾಜಿಕ ಘನತೆಯನ್ನು ಬಿಟ್ಟುಕೊಟ್ಟರು. ಅದು ಜಾತಿ ತಾರತಮ್ಯತೆಯ ವಿನಾಶದ ಪ್ರಾರಂಭವಾಗಿತ್ತು ಜಪಾನಿನಲ್ಲಿ. ಜಾತಿಗಳ ರದ್ದತಿಯು ಪ್ರಯತ್ನಗಳನ್ನು ತಳಜಾತಿಗಳಿಂದ ಪ್ರಾರಂಭಿಸಿದರೆ ಸಫಲತೆ ಪಡೆಯುವುದು ಅಸಂಭವ. ಅದಕ್ಕೆ ಬದಲಾಗಿ ಮೇಲು ಜಾತಿಗಳೇ ಪ್ರಾರಂಭಿಸಿದರೆ ಅದಕ್ಕೆ ಒಳ್ಳೆಯ ಪ್ರತಿಕ್ರಿಯೆ ದೊರೆಯುತ್ತದೆ. ಆದರೆ ಅಂಥ ಉಪಕ್ರಮ ಮೇಲುಜಾತಿಗಳು ಕೈಗೊಳ್ಳುವವರೆಗೆ ತಳಜಾತಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಸ್ಥಾನಮಾನ ಉತ್ತಮಪಡಿಸಿಕೊಳ್ಳುವ ಪ್ರಯತ್ನಗಳನ್ನು ಮುಂದುವರಿಸಬೇಕು. ತಳಜಾತಿಗಳು ಒಂದು ಮೆಟ್ಟಿಲು ಏರಿದರೆ ಮತ್ತು ಮೇಲುಜಾತಿಗಳು ಒಂದು ಮೆಟ್ಟಿಲು ಇಳಿದು ತಳದಲ್ಲಿರುವವರಿಗೆ ಸಹಾಯಹಸ್ತ ನೀಡಿದರೆ ದ್ವೇಷ ಅಥವಾ ಸುಳ್ಳು ಆಪಾದನೆಗಳು ಎರಡು ಕಡೆಗೆ ಇಲ್ಲದೆ ಜಾತಿಪದ್ಧತಿ ರದ್ದತಿಯ ಮುಂದುವರಿಕೆಯಲ್ಲಿ ಭಾರೀ ಪ್ರಗತಿಯಾಗುತ್ತದೆ. ಐಕ್ಯತೆಗಾಗಿ ಮರಾಠರು ತಮ್ಮ ಜಾತಿಯನ್ನು ಒತ್ತಾಯಪೂರ್ವಕವಾಗಿ ವಿಸರ್ಜನೆಮಾಡುವರು.

ಜಾತಿಗಳನ್ನು ನಾಶಮಾಡುವುದರಲ್ಲಿ ಧರ್ಮವು ಇನ್ನು ಮುಂದೆ ಅಡ್ಡಿ–ಆತಂಕವಾಗುವುದಿಲ್ಲ.

ಮೆಸಪಟೋಮಿಯಾದಲ್ಲಿ ಹಿಂದುಗಳು ಮತ್ತು ಮುಸಲ್ಮಾನರು ಭುಜಕ್ಕೆ ಭುಜಕೊಟ್ಟು ಧಾರ್ಮಿಕ ಭಿನ್ನಾಭಿಪ್ರಾಯಗಳಿದ್ದರೂ ಹೋರಾಡಿದರು. ಮೊಟ್ಟಮೊದಲಿಗೆ ತಾವು ಸಾಮ್ರಾಜ್ಯದ ಸದಸ್ಯರೆಂದು ಜನರು ಭಾವಿಸಿದ್ದರಿಂದ ಇತ್ತೀಚಿನ ಯುದ್ಧದಲ್ಲಿ ಅವರು ಜಯಸಾಧಿಸಲು ಸಮರ್ಥರಾದರು. ನಮ್ಮ ಜನರು ಕ್ರಿಶ್ಚಿಯನ್ ಅಧಿಕಾರವಿರುವ ಕಡೆಗಳಲ್ಲಿ ಸಾಕಷ್ಟು ನೋವು ಅನುಭವಿಸಿದರು. ಆದರೆ ಬ್ರಿಟಿಷರು ತಮ್ಮ ಸಹ–ಧರ್ಮೀಯರ ದುಷ್ಟ ಆಕಾಂಕ್ಷೆಗಳಿಂದ ನಮ್ಮನ್ನು ಸಂರಕ್ಷಿಸಿದರೆಂಬುದನ್ನು ಮರೆಯುವಂತಿಲ್ಲ. ಅವರು ಭಾರತೀಯ ಜನರನ್ನು ರಷಿಯನ್ನರ ಮತ್ತು ಆಫ್ಘನ್ನರ ಆಕಾಂಕ್ಷೆಗಳಿಂದ ಸಂರಕ್ಷಿಸಿದರು. ನಮ್ಮ ಐಕ್ಯತೆಯ ದಾರಿಯಲ್ಲಿ ಧರ್ಮ ಅಡ್ಡವಾಗಿ ಬರುತ್ತದೆ ಎಂದು ಹೇಳಲಾಗದು.

ನಾನು ಬಹಿರಂಗವಾಗಿ ನನ್ನ ಅಭಿಪ್ರಾಯಗಳನ್ನು ತಿಳಿಸುವುದರಿಂದ ಹಲವರು ನನ್ನನ್ನು ತೆಗಳುತ್ತಾರೆ. ಅವರ ಮುಖ್ಯಗುರಿ ಅಗ್ಗದ ಜನಪ್ರಿಯತೆಯನ್ನು ಗಳಿಸುವುದು. ಅವರು ಸ್ವತಃ ನಗೆಪಾಟಲಿಗೆ ಗುರಿಯಾಗುತ್ತಾರೆ. ನಾನು ಎಲ್ಲಾ ಹಿಂದುಳಿದ ವರ್ಗಗಳ ಸ್ಥಾನಮಾನವನ್ನು ಎತ್ತರಿಸಲು ಪ್ರಯತ್ನಿಸುತ್ತೇನೆ. ಆದರೆ ನನ್ನಪ್ರಯತ್ನಗಳನ್ನು ಮತ್ತು ಮಾತುಗಳನ್ನು ಅಪಾರ್ಥ ಮತ್ತು ವಿಕೃತಮಾಡಿ ನಾನು ಬ್ರಾಹ್ಮಣದ್ವೇಷಿ ಎಂದು ಖಂಡಿಸುತ್ತಾರೆ. ಈ ದೋಷಾರೋಪ ನ್ಯಾಯಬದ್ಧವೆ ಎಂಬುದನ್ನು ನಿರ್ಧರಿಸಲು ನಾನು ನಿಮಗೆ ಬಿಟ್ಟುಬಿಡುವೆ. ಸಜ್ಜನರೆ, ನೀವು ನನ್ನನ್ನು ನಿಮ್ಮವನೆಂದು ನನ್ನನ್ನು ಒಪ್ಪಿಕೊಂಡಿದ್ದೀರಿ. ನೀವು ಕೊನೆಯವರೆಗೂ ನನ್ನನ್ನು ಪ್ರೀತಿಸುವಿರಿ ಎಂಬ ಭರವಸೆ ಮತ್ತು ಸಂತೋಷ ನನಗೆ ಇದೆ. ನಾನು ನಿಮ್ಮ ಪ್ರಗತಿಯ ಧ್ಯೇಯಕ್ಕಾಗಿ ನಾನು ನೀಡಬಹುದಾದ ಸಹಾಯಹಸ್ತವನ್ನು ನೀಡುವೆನು. ಅದನ್ನು ಯಾವುದೇ ರೀತಿಯ ಟೀಕೆ ಅಥವಾ ಸನ್ನಿವೇಶ ತಡೆಯಲು ಸಾಧ್ಯವಿಲ್ಲವೆಂದು ನಾನು ನಿಮಗೆ ಭರವಸೆ ನೀಡುತ್ತೇನೆ.

---

೧೨

# ಭೂಮಿಯ ಮೇಲೆ ಬ್ರಾಹ್ಮಣರಿಲ್ಲ

**ನಾಗಪುರದಲ್ಲಿ ಮೇ ೩೦, ೧೯೨೦ರಲ್ಲಿ ದಮನಿತ ವರ್ಗಗಳ ಸಮ್ಮೇಳನದಲ್ಲಿ ಶಾಹುರವರು ಸಮಾರೋಪ ಸಮಾರಂಭದಲ್ಲಿ ಹೇಳಿದ ಮಾತುಗಳು ಇವು. ಈ ಭೂಮಂಡಲದಲ್ಲಿ ಬ್ರಾಹ್ಮಣರು ಮತ್ತು ಶೂದ್ರರು ಎಂಬ ವರ್ಣಗಳನ್ನು ಬಿಟ್ಟರೆ ಇಂದು ಇನ್ಯಾವ ವರ್ಣಗಳಿಲ್ಲ ಎಂಬ ಪ್ರಚಾರಕ್ಕೆ ಶಾಹು ಬಹಳ ಕಟುವಾಗಿ ಟೀಕಿಸುತ್ತಾರೆ. ಅವರು ಬ್ರಾಹ್ಮಣವಾದದ ನಿಜವಾದ ಸತ್ವ ಈ ಭೂಮಂಡಲದಲ್ಲಿ ಸರ್ವನಾಶವಾಗಿಬಿಟ್ಟಿದೆ ಎಂದು ಪ್ರತಿಕ್ರಿಯಿಸುತ್ತಾರೆ.**

---

ನಾನು ಯಾವಾಗಲೂ ನಿಮ್ಮ ಪರವಾಗಿರುವುದರಿಂದ ಒಂದು ವಿಶಿಷ್ಟ ಜಾತಿಯು ನನ್ನನ್ನು ಅಪಹಾಸ್ಯಮಾಡುತ್ತದೆ ಮತ್ತು ನನ್ನ ಮೇಲೆ ತೀವ್ರವಾಗಿ ದಾಳಿಮಾಡುತ್ತದೆ. ನಾನು ಇಂದು ನಿಮ್ಮ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದೇನೆ. ಅಂದರೆ ನಮ್ಮ ಮೇಲೆ ಹೆಚ್ಚು ಗದಾಪ್ರಹಾರ ಮತ್ತು ನನ್ನ ಮೇಲೆ ಹೊಸ ಪ್ರಚೋದನೆಗಳ ಅಲೆ. ಕೆಲವು ಪತ್ರಿಕೆಗಳು ನಮ್ಮ ಮೇಲೆ ಟೀಕಾತ್ಮಕವಾಗಿವೆ. ನಾನು ಅವುಗಳನ್ನು ಮೆಚ್ಚಿಕೊಳ್ಳುವೆನು. ನಿಮ್ಮೆಲ್ಲರ ಸೇವೆಮಾಡಲು ಮತ್ತು ನಿಮ್ಮ ಅರ್ಪಣೆಗಾಗಿ ಈ ಎಲ್ಲಾ ಅವಮಾನ ಮತ್ತು ಕಿರುಕುಳಗಳನ್ನು ನುಂಗಿಕೊಂಡು ಸಹನೆಯಿಂದಿದ್ದೇನೆ ಮತ್ತು ನೀವು ಬಯಸಿದಾಗ ನನ್ನನ್ನು ಕರೆಯಿರಿ. ನಾನು ನಿಮ್ಮ ಸೇವೆ ಮಾಡುವುದಕ್ಕೆ ತಾವು ಸಂಕೋಚಪಟ್ಟುಕೊಳ್ಳಬೇಡಿ.

ನಾವೆಲ್ಲರು, ನಾನು, ನನ್ನ ಸ್ನೇಹಿತರು ನಿಂಬಾಳ್ಕರ್, ಭೋಸಲೆ, ಬಾಬುರಾವ್ ಯಾದವ್, ಕದಮ್, ದತ್ತೋಬ ಪೈಂಟರ್, ಬೆಳಗಾಮಿನ ಪಾಟೀಲ್ ಅವರು ನಿಮ್ಮ ಸೇವೆಮಾಡುವುದಕ್ಕೆ ದೇಹ ಮತ್ತು ಸಮಯವನ್ನು ತ್ಯಾಗಮಾಡಲು ಆಣೆಮಾಡಿದ್ದೇವೆ. ನನ್ನ ಮಗ ಈಗ ಪ್ರೌಢನಾಗಿದ್ದಾನೆ ಮತ್ತು ಅವನು ನನ್ನ ಅನುಪಸ್ಥಿತಿಯಲ್ಲಿ ಸಂಸ್ಥಾನವನ್ನು ನೋಡಿಕೊಳ್ಳುವನು. 'ಸ್ವಲ್ಪ ಜನಾಧಿಪತ್ಯ' ನನ್ನ ಮೇಲೆ ತನ್ನ ಆಡಳಿತಶಾಹಿಯನ್ನು ಹೇರಿದರೆ, ನಾನು ನನ್ನ ಮಗನ ಗಮನಕ್ಕೆ ಸಂಸ್ಥಾನವನ್ನು ಬಿಡುವೆನು ಮತ್ತು ಸಂಪೂರ್ಣವಾಗಿ ನಿಮ್ಮ ಸೇವೆಯಲ್ಲಿ ಸಮರ್ಪಿಸಿಕೊಳ್ಳುವೆನು. ಇದು ನನ್ನ ವಾಗ್ದಾನ. ನನ್ನ ಸೇವೆಯನ್ನು ನೀವು ಒಪ್ಪಿರುವಿರಿ ಎಂದು ಭಾವಿಸುವೆನು.

**ಬೇರೆಯವರ ಅವಲಂಬಿಸುವವನು**

**ನಾಶಗೊಳ್ಳುವನು**

**ಸ್ವಪ್ರಯತ್ನ ಮಾಡುವವನು**

**ವಿಮೋಚನೆಗೊಳ್ಳುವನು.**

ಒಬ್ಬ ಸಂತರು ಹೇಳುತ್ತಾರೆ. ನಿಮಗೆ ಸಹಾಯ ಮಾಡುವರೆಂದು ನಾಟಕವಾಡುವ ಸ್ವಾರ್ಥಿ ಸಹೋದರರ ಬಗ್ಗೆ ಎಚ್ಚರವಾಗಿರಿ. ಅವರ ಕೈಯನ್ನು ಬಿಟ್ಟುಬಿಡಿ.

ನನ್ನ ಗೆಳೆಯ ಡಾ. ಪರಂಜಪೆ ಅವರು ಇಂದು ವರ್ಣಾಶ್ರಮ ಧರ್ಮದ ಪ್ರಕಾರ ಕ್ಷತ್ರಿಯರಿಲ್ಲವೆಂದು ಹೇಳುತ್ತಾರೆ. ನಾನು ಒಪ್ಪುವುದಿಲ್ಲ. ಬ್ರಾಹ್ಮಣರು ತಮ್ಮ ದೈನಂದಿನ ಬ್ರಾಹ್ಮಣತ್ವದ ವಿಧಿ ಆಚರಣೆಗಳ ಮೂಲಕ ತಮ್ಮ ತೇಜಸ್ಸನ್ನು ಹೆಚ್ಚಿಸುವರೆಂದು ಭಾವಿಸಲಾಗಿದೆ ಮತ್ತು ಅವರು ಮಹಾನುಭಾವರಾಗುವರು. ಅವರು ಶಾಪಹಾಕಿ ಭಸ್ಮಮಾಡಬಹುದು. ಇಂದು ಅಂತಹ ಬ್ರಾಹ್ಮಣರ ತೇಜಸ್ಸನ್ನು ನಮ್ಮ ಸುತ್ತಮುತ್ತ ನಾವು ನೋಡುತ್ತಿಲ್ಲ. ತದ್ವಿರುದ್ಧವಾಗಿ ಕೀಳುವರ್ಣದವರಾದ ದಸ್ಯು ಮತ್ತು ಚಂಡಾಲರ ಗುಣಗಳನ್ನು ಚಿಂತನೆ ಮತ್ತು ವರ್ತನೆಗಳನ್ನು ಅಳವಡಿಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಕೂಲಿಚಾಕರಿಯು ಅವರ ಪಾಶ್ಚರ್ ಆಯಿತು. ಅವರು ಬ್ರಾಹ್ಮಣರಲ್ಲ ಎನ್ನುವುದನ್ನು ಇದು ಒತ್ತಿ ಹೇಳುತ್ತದೆ. ಇದು ದಕ್ಷಿಣಭಾರತದಲ್ಲಿ ಸತ್ಯವಾಗಿದೆ.

ತೇಜಸ್ಸುಳ್ಳ ಯಾವ ಬ್ರಾಹ್ಮಣನನ್ನೂ ನಾವು ಸುತ್ತಮುತ್ತಲು ಕಾಣದೇ ಇರುವುದರಿಂದ ಬ್ರಾಹ್ಮಣರೆ ಭೂಮಂಡಲದಲ್ಲಿ ಇಲ್ಲವೇ ಇಲ್ಲ. ವೈಶ್ಯರಿದ್ದಾರೆ, ಅವರು ಧರ್ಮ ನಿರೂಪಿಸಿದ ವಾಣಿಜ್ಯ ಮತ್ತು ವ್ಯಾಪಾರಗಳನ್ನು ಅನುಸರಿಸುತ್ತಿದ್ದಾರೆ. ಶೂದ್ರರಿಗೆ ವಿಧಿಸಿದ್ದ ಕರ್ತವ್ಯಗಳನ್ನು ಶಿಸ್ತುಬದ್ಧವಾಗಿ ಮಾಡುತ್ತಿದ್ದಾರೆ. ಕ್ಷತ್ರಿಯರು ಪ್ರತಿದಿನ ಯುದ್ಧಮಾಡಬೇಕಾಗಿಲ್ಲ. ಆದರೆ ಅವರು ಕರೆ ಬಂದಾಗಲೆಲ್ಲಾ ಅವರು ತಮ್ಮ ಕರ್ತವ್ಯಮಾಡುತ್ತಾರೆ. ಇತ್ತೀಚಿನ ಯುದ್ಧದಲ್ಲಿ ಅದನ್ನು ನಾವು ನೋಡಿದ್ದೇವೆ. ಕ್ಷತ್ರಿಯರ ಅಸ್ತಿತ್ವದ ಬಗ್ಗೆ ಅನುಮಾನವೇ ಇಲ್ಲ. ಭೂಮಿಯ ಮೇಲೆ ನಾಶವಾದ ಏಕೈಕವರ್ಣ ಬ್ರಾಹ್ಮಣವರ್ಣ. ಬ್ರಾಹ್ಮಣರಿಗೆ ವಹಿಸುವ ವಿಧಿವತ್ತಾದ ಕರ್ತವ್ಯಗಳಾದ ಜ್ಞಾನಸಂಪಾದನೆ ಮತ್ತು ಅದನ್ನು ಹರಡುವುದು ಮತ್ತು ಪರಿಶುದ್ಧತೆಯನ್ನು (ಮಡಿ) ಕಾಪಾಡುವುದು ಇವುಗಳಲ್ಲಿ ಯಾವುದನ್ನೂ ಬ್ರಾಹ್ಮಣರು ಪರಿಪಾಲಿಸುತ್ತಿಲ್ಲ. ಇಂದು ಯಥಾಕಥಿತ ಬ್ರಾಹ್ಮಣರು 'ದಸ್ಯು'ಗಳಾಗಿದ್ದಾರೆ. ಕೂಲಿಸೇವಕರಾಗಿದ್ದಾರೆ. ಅದಕ್ಕಿಂತ ಮತ್ತೇನೂ ಹೆಚ್ಚಿಲ್ಲ. ಒಟ್ಟಾರೆಯಾಗಿ ಬ್ರಾಹ್ಮಣರು ಅಸ್ತಿತ್ವದಲ್ಲಿ ಇಲ್ಲ. ಆರು ಮೂರು ವರ್ಣಗಳು ಮಾತ್ರ ಇವೆ.

---

೧. ಶಾಹು ಬ್ರಾಹ್ಮಣ ನಾಯಕರನ್ನು ಕುರಿತು ಹೇಳಿದ್ದಾರೆ – ಸಂಪಾದಕ

---

೧೩

# ಸಾಮಾಜಿಕ ನೈತಿಕತೆ: ಸಾಮಾಜಿಕ ಸುಧಾರಣೆಗಳ ಪ್ರಮುಖ ಅಂಶ

ಕರ್ನಾಟಕದ ಹುಬ್ಬಿಯಲ್ಲಿ ಜುಲೈ ೨೭, ೧೯೨೦ರಲ್ಲಿ ನಡೆದ ಬ್ರಾಹ್ಮಣೇತರರ ಸಾಮಾಜಿಕ ಸಮ್ಮೇಳನದಲ್ಲಿ ಶಾಹುರವರು ಮಾಡಿದ ಅಧ್ಯಕ್ಷೀಯ ಭಾಷಣ. ತಮ್ಮ ಭಾಷಣದಲ್ಲಿ ಶಾಹುರವರು ಬ್ರಾಹ್ಮಣರು ಸೃಷ್ಟಿಸಿದ ಮಿಥ್ಯೆ (ಸುಳ್ಳು)ಗಳಾದ ಮಹಾಭಾರತ ಮತ್ತು ಪುಣ್ಯಪುರಾಣಗಳಾದ ಧಾರ್ಮಿಕ ಗ್ರಂಥಗಳ ಸೇರ್ಪಡೆಮಾಡಿದ್ದು, ಅವು ಹಿಂದು ಸಮಾಜವನ್ನು ಅವನತಿಗೊಳಿಸಿದವೆಂದು ವಿವರಿಸುತ್ತಾರೆ. ಸೃಷ್ಟಿಸಿದ ಧಾರ್ಮಿಕ ಗ್ರಂಥಗಳು ನಿಗದಿಗೊಳಿಸಿದ ಸಾಮಾಜಿಕ ವಿಧಿವಿಧಾನಗಳು (ನಿಯಮಗಳು) ಬ್ರಾಹ್ಮಣೇತರರಿಗೆ ಅನ್ವಯಿಸುವುದಿಲ್ಲ. ಅವರು ಮದ್ಯಪಾನ, ಬಾಲ್ಯವಿವಾಹ, ಕಡ್ಡಾಯ ವಿಧವೆತನ, ದೇವತೆಗಳಿಗೆ ಮಕ್ಕಳನ್ನು ಅರ್ಪಿಸುವುದು ಮತ್ತು ಇತರೆ ದುರಾಚಾರಗಳು ಹಿಂದುಸಮಾಜವನ್ನು ದೈಹಿಕವಾಗಿ, ಮಾನಸಿಕವಾಗಿ ಮತ್ತು ಬೌದ್ಧಿಕವಾಗಿ ಅವನತಿಗೊಳಿಸಿದವು ಎಂದು ಹೇಳುತ್ತಾರೆ. ಶಾಹುರವರು ಬ್ರಾಹ್ಮಣೇತರರು ತಮ್ಮಲ್ಲಿರುವ ಪರಸ್ಪರ ಭಿನ್ನಾಭಿಪ್ರಾಯಗಳನ್ನು ಮೀರಿ ಸುಧಾರಣೆಗಳ ಸಫಲತೆಯನ್ನು ನೆರವೇರಿಸುವರೆಂದು ತಮ್ಮ ನಿರೀಕ್ಷೆಗಳನ್ನು ಪ್ರಕಟಿಸಿದರು.

---

ಸರ್ ತ್ಯಾಗರಾಜ ಚೆಟ್ಟಿ, ನನ್ನ ಪ್ರೀತಿಯ ಅಣ್ಣಂದಿರೆ ಮತ್ತು ಅಕ್ಕಂದಿರೆ,

ನಾನು ಯೋಗ್ಯನಲ್ಲದಿದ್ದರೂ ನೀವು ನನ್ನು ಈ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದ್ದೀರಿ, ನಿಮ್ಮಲ್ಲಿ ನಾನು ಒಬ್ಬನೆಂದು ನೀವು ಪರಿಗಣಿಸಿದ್ದೀರಿ. ನಾನು ನಿಮ್ಮ ಬಗ್ಗೆ ಗರ್ವಪಡುತ್ತೇನೆ. ನಾನು ಧಾರವಾಡ, ಹುಬ್ಬಿಗಳಲ್ಲಿ ಅಧ್ಯಯನಮಾಡುವಾಗ ಈ ಸ್ಥಳಗಳಲ್ಲಿ ನನ್ನ ಯೌವ್ವನದ ಕಾಲವನ್ನು ಕಳೆದಿದ್ದೇನೆ. ನೀವು ಈ ಸಮ್ಮೇಳನಕ್ಕೆ ನನ್ನನ್ನು ಅಧ್ಯಕ್ಷರನ್ನಾಗಿ ಮಾಡಿರುವುದರಿಂದ ನಾನು ಮತ್ತೊಮ್ಮೆ ಇಲ್ಲಿಗೆ ಬಂದಿದ್ದೇನೆ.

ಈ ಸಮ್ಮೇಳನಕ್ಕೆ ನನ್ನ ಕೃತಜ್ಞತೆಗಳು. ಸರ್ ತ್ಯಾಗರಾಜ ಚೆಟ್ಟಿ ಮತ್ತು ಉತ್ಸಾಹಶೀಲ ಸಜ್ಜನರಾದ ಶ್ರೀ ಚಿಕ್ಕೋಡಿ, ಶ್ರೀ ಮೆಣಸಿನಕಾಯಿ ಮತ್ತು ಶ್ರೀ ಕಂಬ್ಳಿ ಅವರನ್ನು ಭೇಟಿಯಾಗಿದ್ದಕ್ಕೆ ತುಂಬ ಸಂತೋಷವಾಗುತ್ತದೆ ಮತ್ತು ಇವರೆಲ್ಲರೂ ಈ ಸಮ್ಮೇಳನದ ಸಫಲತೆಗೆ ತುಂಬಾ ಕೆಲಸಮಾಡಿದ್ದಾರೆ. ಬ್ರಾಹ್ಮಣರು ಜ್ಞಾನವನ್ನು ಸಂರಕ್ಷಿಸಿದರು ಮತ್ತು ಜ್ಞಾನದ ದೀಪ ಬೆಳಗುವದಂತೆ ಮಾಡಿಟ್ಟರು. ಇದಕ್ಕಾಗಿ ನಾವು ಅವರಿಗೆ ಕೃತಜ್ಞತೆಗಳನ್ನು ಹೇಳಬೇಕು. ಆದರೆ ಅದೇ ಸಮಯದಲ್ಲಿ ಮಹಾ ಉದಾರಿಗಳಾದ ರಾನಡೆ, ಗೋಪಾಲಕೃಷ್ಣ ಗೋಖಲೆ,

ಆಗರ್‌ಕರ್ ಅವರು ಆ ದಿನಗಳಲ್ಲಿ ಪ್ರತಿಯೊಬ್ಬರಿಗೂ ಜ್ಞಾನ ಎಟುಕುವಂತೆ ಮಾಡುತ್ತಿದ್ದರು ಮತ್ತು ಬೇರೆಯವರಿಗೆ ಶಿಕ್ಷಣ ಕೊಡಬಾರದೆಂಬ ಸ್ವಾರ್ಥಪರ ಆಚರಣೆ (ರೂಢಿ) ಪ್ರಚಲಿತದಲ್ಲಿ ಅಸ್ತಿತ್ವಕ್ಕೆ ಬರುತ್ತಿರಲಿಲ್ಲ. ಪ್ರತ್ಯೇಕ ಬ್ರಾಹ್ಮಣೇತರ ಸಮ್ಮೇಳನ ಕರೆಯುವ ಅವಶ್ಯಕತೆಯು ಇರುತ್ತಿರಲಿಲ್ಲ.

ನಾನು ಯಾವಾಗಲೂ ಜಾತಿರಹಿತ ಸಮಾಜವನ್ನು ಪ್ರತಿಪಾದಿಸುತ್ತೇನೆ. ಆದರೆ ನಾನು ಸಮಾಜದಲ್ಲಿ ವರ್ಗಗಳಿರಬೇಕೆಂದು ದೃಢವಾಗಿ ನಂಬಿದ್ದೇನೆ. ಬ್ರಾಹ್ಮಣರು ಮೊದಲೇ ಜಾತಿಪದ್ಧತಿಯನ್ನು ಭಾವಿಸಿದ್ದರು. ಹುಟ್ಟಿನಿಂದ ಬ್ರಾಹ್ಮಣನಾದವನು ಬ್ರಾಹ್ಮಣೇತರ ಮಹಿಳೆಯೊಂದಿಗೆ ನಡೆದುಕೊಂಡ ವರ್ತನೆ ಆಕೆಯ ಕುಟುಂಬದ ಕಲ್ಯಾಣಕ್ಕೆ ಕಾರಣವಾಗುತ್ತದೆ. ಉದಾಹರಣೆಗೆ, ಕೃಷ್ಣನ ಪತ್ನಿಯರು ಕೆಲವು ವಿಕೋಪಗಳನ್ನು ಎದುರಿಸುತ್ತಿದ್ದರು. ದಲ್‌ಭ್ಯ ಋಷಿಗೆ ಈ ಕೆಳಕಂಡ ವಿಧಿ–ವಿಧಾನವನ್ನು ಅನುಸರಿಸಬೇಕೆಂದು ಹೇಳಲಾಯಿತು. ಭಾನುವಾರ ದಿನಗಳಂದು ಹಸ್ತ, ಪುಷ್ಯ ಮತ್ತು ಪುನರ್ವಸು ರಾಶಿಯ ಪ್ರಾಬಲ್ಯದಲ್ಲಿ ಮಹಿಳೆಯು ಔಷಧೀಕರಿಸಿದ ನೀರಿನಲ್ಲಿ ಸ್ನಾನಮಾಡಬೇಕು. ನಂತರ ಆಕೆ ಸ್ವಾಮಿ ವಿಷ್ಣುವನ್ನು 'ಲಿಂಗಾಸ್ಥಾನಾಯ ನಮಃ ಕಂದರ್ಪವಿಧೇಯ ನಮಃ' ಎಂಬ ಮಂತ್ರ ಪಠಣಗಳೊಂದಿಗೆ ಪ್ರಾರ್ಥನೆಮಾಡಬೇಕು. ಆಮೇಲೆ ಒಬ್ಬ ಆರೋಗ್ಯವಂತ ಬ್ರಾಹ್ಮಣನನ್ನು ಕರೆಯಬೇಕು ಮತ್ತು ಅವನಿಗೆ ಸಿಹಿತಿಂಡಿಗಳನ್ನು ತಿನ್ನಿಸಬೇಕು. ಆಕೆ ಅವನನ್ನು ಕಾಮದೇವರು ಎಂದು ಪರಿಭಾವಿಸಬೇಕು ಮತ್ತು ಆಕೆ ನಗುಮುಖದಿಂದ ತನ್ನ ದೇಹವನ್ನು ಅವನಿಗೆ ಅರ್ಪಿಸಬೇಕು. ಮತ್ತು ಮಧುರವಾದ ಮಾತುಗಳನ್ನು ಅವನೊಡನೆ ಮಾತನಾಡಬೇಕು. ಆಕೆ ಅವನ ಆಶೆಗಳ ಈಡೇರಿಕೆಗಾಗಿ ಎಲ್ಲವನ್ನೂ ಮಾಡಬೇಕು. ತದನಂತರ ಆಕೆ ಭಾನುವಾರಗಳ ದಿನದಂದು ಯಾವ ಬ್ರಾಹ್ಮಣನು ಬಂದರೂ ಅವರ ಆಶೆಗಳನ್ನು ಈಡೇರಿಸಬೇಕು ಮತ್ತು ಅವನು ಹೋದ ನಂತರ ಆಕೆ ಇತರರ ಕಡೆಗೆ ತಿರುಗಬಹುದು. **(ಮತ್ಸ್ಯ ಪುರಾಣ: ಅಧ್ಯಾಯ ೬೯, ಕಲಕತ್ತಾ ಮುದ್ರಣ).**

ಮಹಾಭಾರತದಲ್ಲಿ ಗೃಹಸ್ಥನ ಕರ್ತವ್ಯಗಳನ್ನು ಈ ಕೆಳಕಂಡಂತೆ ಹೇಳಲಾಗಿದೆ: ಒಮ್ಮೆ ಒಬ್ಬ ಬ್ರಾಹ್ಮಣನು ಮಹಾರಾಣಿ ಓಘವತಿ ಬಳಿಗೆ ಹೋದನು ಮತ್ತು ಅವನು ಅವಳಿಗೆ ಹೇಳಿದನು: "ನಾನು ಒಬ್ಬ ಅತಿಥಿ, ನನ್ನ ಆಸೆಗಳನ್ನು ಈಡೇರಿಸು. ಇದು ಅತಿಥಿಯ ಬಗ್ಗೆ ಇರುವ ಕರ್ತವ್ಯ". ಮತ್ತು ಆಕೆಯನ್ನು ಪ್ರೀತಿಮಾಡತೊಡಗಿದ. ಆಗ ತಾನೆ ಅವಳ ಗಂಡ ರಾಜ ವಾಪಸ್ಸು ಬಂದಿದ್ದ ಮತ್ತು ಬಾಗಿಲನ್ನು ತಟ್ಟಿದ. ಬಾಗಿಲು ತಟ್ಟಿದ ಶಬ್ದವನ್ನು ಕೇಳಿ ಬ್ರಾಹ್ಮಣ ಒಳಗಿನಿಂದ ಕಿರುಚಿದನು, "ಓ ಅಗ್ನಿಯ ಮಗ, ಸುದರ್ಶನ, ನಾನು ಒಬ್ಬ ಬ್ರಾಹ್ಮಣ, ನಿನ್ನ ಅತಿಥಿ; ನಿನ್ನ ಹೆಂಡತಿ ಅತಿಥಿಗೆ ಯೋಗ್ಯವಾಗುವ ನನ್ನ ಆಸೆಯನ್ನು ನೆರವೇರಿಸುತ್ತಿದ್ದಾಳೆ". ಈ ಮಾತನ್ನು ಕೇಳಿ ರಾಜ ನಸುನಕ್ಕನು ಮತ್ತು ಹೇಳಿದನು, "ನಾನು ನನ್ನ ಎಲ್ಲಾ ಸಂಪತ್ತನ್ನು ಕೊಡುವೆನು. ನನ್ನ ಹೆಂಡತಿ ಮತ್ತು ನನ್ನ ಪ್ರಾಣವನ್ನೂ ಅತಿಥಿಗೆ ಕೊಡುವೆನು. ಇದು ನನ್ನ ವಚನ. ಇದು ಗೃಹಸ್ಥನ ಕರ್ತವ್ಯ". **(ಮಹಾಭಾರತ: ಅನುಶಾಸನ ಪರ್ವ, ಅಧ್ಯಾಯ ೨).**

ಈ ಮಾತಿಗೆ ಇದು ಪುರಾಣಗಳ ಹಳೆಕತೆಗಳೆಂದು ಕೆಲವರು ಆಕ್ಷೇಪಿಸುವರು. ಅವರನ್ನು ಉಲ್ಲೇಖಿಸುವುದು ಈಗ ಬೇಡ. ಆದರೆ ಈ ಪ್ರಕರಣವು ಇಂದಿನವರೆಗೆ ಅವುಗಳ ಪರಿಣಾಮಗಳಿಂದ ಜನರು ಬಾಧೆಪಡುವುದನ್ನು ರುಜುವಾತುಪಡಿಸುತ್ತದೆ. ಆಷಾಢ ವಿಕ್ರಮ ಸಂವತ್ಸರ ೧೯೫೭ರ ತಿಂಗಳಲ್ಲಿ ಅಲಹಾಬಾದಿನ ಒಬ್ಬ ಮನುಷ್ಯ ತನ್ನ ಹೆಂಡತಿಯನ್ನು ಒಬ್ಬ ಪೂಜಾರಿಗೆ ತನ್ನ ತಾಯಿಯ ಸಲಹೆ ಮತ್ತು ಪುರಾಣಗಳ ಬೋಧನೆಗಳ ಪ್ರಕಾರ ದಾನವಾಗಿ ಕೊಟ್ಟುಬಿಟ್ಟ. ಪೂಜಾರಿಯು ತನ್ನೊಂದಿಗೆ ಆಕೆಯನ್ನು ಮನೆಗೆ ಕರೆದುಕೊಂಡು ಹೋದ. ಆ ಮನುಷ್ಯನು ತನ್ನ ಹೆಂಡತಿಯನ್ನು ವಾಪಸ್ಸು ಕರೆದುಕೊಂಡು

ಹೋಗಲು ೫,೦೦೦ ರೂ.ಗಳನ್ನು ನೀಡಿದನು. ಆದರೆ ಏನೂ ಪ್ರಯೋಜನವಾಗಲಿಲ್ಲ. ಈ ವಿವಾದವು ಕೋರ್ಟು ಮೆಟ್ಟಿಲು ಹತ್ತಿತು. ಬ್ರಿಟಿಷ್ ಮ್ಯಾಜಿಸ್ಟ್ರೇಟರು ಕಾನೂನಿನ ಪ್ರಕಾರ ಈ ದಾನಗಳನ್ನು ಸ್ವೀಕರಿಸುವಂತಿಲ್ಲ ಮತ್ತು ಪೂಜಾರಿಯು ಶಿಕ್ಷೆಗೆ ಅರ್ಹನೆಂದು ತೀರ್ಪು ನೀಡಿದರು. ಈ ಬಗೆಗಿನ ವಿವರವಾದ ವರದಿಯು ಆ ದಿನಗಳಲ್ಲಿ ದಿನಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಒಂದೇ ಒಂದು ಜಾತಿ ಪ್ರಾಬಲ್ಯವಾಗಿರದಿದ್ದರೆ ಇಂಥ ಘಟನೆಗಳು ನಡೆಯುತ್ತಿರಲಿಲ್ಲ. ಆದ್ದರಿಂದ ಜಾತಿಗಳನ್ನು ನಾಶಮಾಡೋಣ ಮತ್ತು ವರ್ಗಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡೋಣ. ನಮ್ಮೊಂದಿಗೆ ಸಹಕಾರ ನೀಡುವವರಿಗೆ ಅಥವಾ ನಮ್ಮ ಧ್ಯೇಯದ ಕಾರಣಕ್ಕೆ ಸಹಾನುಭೂತಿ ತೋರದವರಿಗೆ, ಮನವರಿಕೆ ಮಾಡಿಕೊಡೋಣ. ಅವರಿಗೆ ಕೆಲವು ವಿವೇಕದ ಸತ್ಯಗಳನ್ನು ಹೇಳೋಣ. ಅವರು ಒಪ್ಪದಿದ್ದರೆ, ಅವರನ್ನು ತೆಗಳುವುದು ಬೇಡ, ನಮ್ಮ ದಾರಿಯಲ್ಲಿ ನಾವೇ ಹೋಗೋಣ. ದೇವರು ನ್ಯಾಯವಂತ, ಅವರು ತಮ್ಮ ತಪ್ಪುಗಳ ಬಗ್ಗೆ ಪಶ್ಚಾತ್ತಾಪಪಟ್ಟರೆ, ಮತ್ತು ಅವರು ಹಳೇ ದಾರಿಯಲ್ಲಿ ಖಂಡಿತ ಅವರು ಹೋಗುವುದಿಲ್ಲ. ನಾನು ಅಂಥ ಅವರನ್ನು ನಮ್ಮ ಆವರಣದೊಳಕ್ಕೆ ಸೇರಿಸಿಕೊಳ್ಳೋಣ. "ಚಾತುರ್ವರ್ಣ್ಯಂ ಮಯಾ ಸೃಷ್ಟಮ್ ಗುಣಕರ್ಮವಿಭಾಗಶಃ" ಎಂಬ ಆಧಾರದ ಮೇಲೆ ಶ್ರೇಷ್ಠತ್ವವನ್ನು ಸ್ಥಾಪಿಸುವ ಪ್ರಯತ್ನ ಇದೆಂದು ನಾನು ರುಜುವಾತುಪಡಿಸುವ ಅಗತ್ಯವಿಲ್ಲ.

(ನಾನು ಗುಣ ಮತ್ತು ಕರ್ಮಗಳ ಪರಿಗಣನೆಯಿಂದ ನಾಲ್ಕು ವರ್ಣಗಳನ್ನು ವಿಭಾಗಮಾಡಿದ್ದೇನೆ.)

ಋಷಿಗಳಾದ ವಶಿಷ್ಠರಂಥವರು ಕೀಳುಜಾತಿಯಲ್ಲಿ ಹುಟ್ಟಿದರು, ಆದರೆ ಅವರು ಗುಣ ಮತ್ತು ಕರ್ಮಗಳ ಆಧಾರದ ಮೇಲೆ ಬ್ರಾಹ್ಮಣರಾದರು. ಈ ಪರಂಪರೆ ಮುಂದುವರಿದಿದ್ದರೆ ಸಮಾಜದಲ್ಲಿ ಸದ್ಯದ ಅವನತಿಯ ಸ್ಥಿತಿ ಮತ್ತು ವಿಭಜನೆ ಅಸ್ತಿತ್ವಕ್ಕೆ ಬರುತ್ತಿರಲಿಲ್ಲ.

ಇತ್ತೀಚಿನ ಮಹಾಯುದ್ಧದಲ್ಲಿ ಸಾಮ್ರಾಜ್ಯಕ್ಕೆ ಒದಗಿಸಿದ ನೆರವು ನಮ್ಮ ಜನಸಂಖ್ಯೆಗೆ ಅನುಗುಣವಾಗಿರಲಿಲ್ಲ. ನಾನು ನೇಮಕಾತಿ ಮಂಡಳಿಯ ಸದಸ್ಯನಾಗಿರುವುದರಿಂದ ಇದನ್ನು ನಾನು ಚೆನ್ನಾಗಿ ಬಲ್ಲೆ. ಬ್ರಾಹ್ಮಣ-ಬ್ರಾಹ್ಮಣೇತರ ವಿಭಜನೆಯಿಲ್ಲದಿದ್ದರೆ ನಾವು ಸಾಮ್ರಾಜ್ಯಕ್ಕೆ ಚೆನ್ನಾಗಿಯೆ ಸಹಾಯಮಾಡಬಹುದಾಗಿತ್ತು. ಇದು ಸಹ ರಾಷ್ಟ್ರೀಯ ಧ್ಯೇಯಕ್ಕೆ ಸಹಕಾರಿಯಾಗುತ್ತಿತ್ತು.

ಜೈನರು ಮತ್ತು ಲಿಂಗಾಯತರು ಮೂಲತಃ ಹಿಂದುಗಳೇ. ಆದರೆ ಅವರು ಚೆನ್ನಾಗಿಯೇ ನೈತಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಉತ್ತಮರಾಗಿದ್ದರು. ಆದರೆ ಬ್ರಾಹ್ಮಣರು ಸ್ವಾರ್ಥದಿಂದ ಅವರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದರು. ಅವರು ನಿರಾಶರಾಗಿ ನಂಬಿಕೆ (ಶ್ರದ್ಧೆ)ಯನ್ನು ಬಿಟ್ಟು ಹೊಸ ನಂಬಿಕೆಯನ್ನು ಆಲಂಗಿಸಿಕೊಂಡರು. ಹೀಗೆ ಅವರು ಬ್ರಾಹ್ಮಣರ ದಬ್ಬಾಳಿಕೆಯಿಂದ ಮುಕ್ತರಾದರು. ಅವರು ತಮ್ಮ ಸಹೋದರರಾದ ಬಡ ಬ್ರಾಹ್ಮಣೇತರರನ್ನು ಮರೆಯಲಿಲ್ಲ. ತಾವು ಸ್ವತಂತ್ರಗೊಂಡರೂ ತಾವು ಹೇಗೆ ಶಿಕ್ಷಣ, ಉದ್ಯಮ ಮತ್ತು ವಾಣಿಜ್ಯಗಳಲ್ಲಿ ಹೇಗೆ ಅಭಿವೃದ್ಧಿ ಹೊಂದಿದ್ದೇವೆಂಬುದನ್ನು ಬಡಮರಾಠ ಮತ್ತು ಬ್ರಾಹ್ಮಣೇತರರಿಗೆ ವಿವರಿಸಿ ಹೇಳಿದರು... ನಮ್ಮ ಜೈನ ಮತ್ತು ಲಿಂಗಾಯತ ಸಹೋದರರು ದಮನಿತರಿಗೆ ಶಿಕ್ಷಣ ಮತ್ತು ಕೌಶಲ್ಯಗಳನ್ನು ವ್ಯಾಪಾರ ಮತ್ತು ವಾಣಿಜ್ಯಗಳಲ್ಲಿ ತರಬೇತಿ ನೀಡುವ ಮೂಲಕ ಸಹಾಯ ಮಾಡುತ್ತಿರುವುದಕ್ಕೆ ನನಗೆ ಬಹಳ ಸಂತೋಷವಾಗುತ್ತದೆ. ಇಂದಿನ ಸಂದರ್ಭಗಳಲ್ಲಿ ನಾವು ನಮ್ಮ ಪರಸ್ಪರ ಪ್ರೀತಿ ಮತ್ತು ಕಾಳಜಿಗಳನ್ನು ವ್ಯಕ್ತಪಡಿಸಿದ್ದೇವೆ.

ಉದಾರಿ ಬ್ರಾಹ್ಮಣರಾದ ರಾನಡೆ, ಗೋಖಲೆ, ಆಗರ್‌ಕರ್ ಅವರಿಂದ ನಮ್ಮ ಕೆಲಸಗಳಿಗೆ ಪಡೆದ ಸಹಕಾರ ಮತ್ತು ಅವರ ನಿಧನದ ನಂತರ ಆರಿದ ಬೆಳಕನ್ನು ನಾವು ಮತ್ತೆ ಹಚ್ಚಬೇಕಾಗಿದೆ. ನಾವು ಮತ್ತೆ ಅಂತಹ ಸಹಕಾರ ಪಡೆಯಲು ಪ್ರಯತ್ನಮಾಡಬೇಕಾಗಿದೆ.

"ಕೆಲವರು ಭಗವಂತನ ಬಾಯಿಯಿಂದ, ಕೆಲವರು ಅವನ ಕೈಗಳಿಂದ, ಕೆಲವರು ಎದೆಯಿಂದ ಮತ್ತು ಕೆಲವರು ಪಾದಗಳಿಂದ ಹುಟ್ಟಿದ್ದಾರೆ ಎಂದು ಹೇಳುವ ಬದಲಿಗೆ ಯಾರೂ ಇಡೀ ಮಾನವಜನಾಂಗ ಭಗವಂತನಿಂದ ಸೃಷ್ಟಿಯಾಗಿದೆ ಎಂದು ಸದುದ್ದೇಶದಿಂದ ಹೇಳಿದ್ದಾರೆ" ಎಂದು ಹೇಳುವುದನ್ನೇ ಕೇಸರಿಯ ಸಂಪಾದಕರು ಹೇಳುತ್ತಿದ್ದಾರೆ. ಆದರೆ ಸದುದ್ದೇಶಗಳು ಸರಿ ಇಲ್ಲದಿದ್ದರೆ, ಸೈತಾನನು ಕೂಡ ಬೈಬಲಿನಿಂದ ಸೂಕ್ತವಾದ ಸೂಕ್ತಿಗಳನ್ನು ಕಂಡುಕೊಳ್ಳುತ್ತಾನೆ. ನಾನು ಇದನ್ನೇ ಹೇಳುತ್ತಾ ಬಂದಿದ್ದೇನೆ. ನಾನು ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಆದರೆ ಯಾರು ನುಡಿದಂತೆ ನಡೆದುಕೊಳ್ಳುತ್ತಾರೆ, ಅವರನ್ನು ಗೌರವಿಸಲಾಗುತ್ತದೆ. ಯಥಾಕಥಿತ ಬ್ರಾಹ್ಮಣರು ಎಂದು ಬ್ರಾಹ್ಮಣೇತರರನ್ನು ಸಮಾನತೆಯ ಭಾವನೆಯಿಂದ ನಾವೆಲ್ಲರೂ ದೇವರ ಮಕ್ಕಳೆಂದು ಹೇಳಿದ್ದಾರೆ. ಅವರನ್ನು ಗೌರವದಿಂದ ಕಾಣುವುದನ್ನು ಮರೆತುಬಿಡಿ. ಈಗ ಮಾತ್ರ ಅವರು ಆ ಬಗ್ಗೆ ಹೇಳುತ್ತಿದ್ದಾರೆ, ಇಂದು ಒಂದು ಯಾವುದೋ ಒಂದರ ಚಿನ್ಹೆಯಲ್ಲವೆ?

ಅದೇ ಪತ್ರಿಕೆ ಬ್ರಾಹ್ಮಣರು ಕ್ಷತ್ರಿಯರ ಗುರುಗಳೆಂದು ಹೇಳುತ್ತದೆ. ಋಷಿ ವಸಿಷ್ಠರು ಒಬ್ಬ ಸೂಳೆಯ ಮಗನು. ಆದರೆ ಅವರು ಸಂಪೂರ್ಣವಾಗಿ ಗುಣ ಮತ್ತು ಕರ್ಮಗಳಿಂದ ಬ್ರಾಹ್ಮಣತನವನ್ನು ಸಂಪಾದಿಸಿದರು. ನಾವು ಯಾವಾಗಲೂ ಅಂಥ ಬ್ರಾಹ್ಮಣರನ್ನು ಗೌರವಿಸುತ್ತೇವೆ. ಅವರು ಹುಟ್ಟಿನಿಂದ ಶೂದ್ರರಾಗಿರಲಿ ಅಥವಾ ಅತಿಶೂದ್ರರಾಗಿರಲಿ ನಾವು ಗೌರವಿಸುತ್ತೇವೆ. ಎಲ್ಲಾ ಪುರಾಣಗಳು ಮತ್ತು ಮಹಾಪುರಾಣಗಳಾದ ಮಹಾಭಾರತ, ಭಾಗವತಗಳನ್ನು ಬ್ರಾಹ್ಮಣರು ಬರೆದಿದ್ದಾರೆ. ಅವುಗಳಲ್ಲಿರುವ ಅನುಶಾಸನ ಅಥವಾ ನಿರ್ದೇಶನಗಳು ಅವುಗಳನ್ನು ಬರೆದವರಿಗೆ ಅನುಸರಿಸಬೇಕಾದವುಗಳಿದ್ದವು. ಬರೆದವರು ನಿರೂಪಿಸಿದ ಈ ಅನುಶಾಸನಗಳು ಬೇರೆಯವರಿಗೆ ಅನ್ವಯಿಸುತ್ತಿರಲಿಲ್ಲ. ಕಾನೂನುಗಳ ಯಥಾಕಥಿತ ಪಂಡಿತರು ಈ ಮೂಲಭೂತ ತತ್ವಗಳನ್ನು ತಿಳಿದಿರಲಿಲ್ಲವೆ?

ಸಾಮಾಜಿಕ ಸುಧಾರಣೆಗಳ ಪ್ರಮುಖವಾದ ಒಂದು ಅಂಶ ಸಾಮಾಜಿಕ ಚಾರಿತ್ರ್ಯದ ಬೆಳವಣಿಗೆ. ಕೆಲವು ಹಾನಿಕರ ಸಂಪ್ರದಾಯ ಮತ್ತು ಧಾರ್ಮಿಕತೆಗಳಿಂದಾಗಿ ಇಂದು ಕೆಲವು ದುರಾಚಾರಗಳಾದ ಮದ್ಯಪಾನ, ಬಾಲ್ಯವಿವಾಹಗಳು, ಕಡ್ಡಾಯ ವಿಧವೆತನ, ದೇವರುಗಳಿಗೆ ಹೆಣ್ಣುಮಕ್ಕಳನ್ನು ಬಿಡುವುದು ಸಮಾಜದಲ್ಲಿ ಹೆಚ್ಚಾಗಿ ಬೆಳೆಯುತ್ತಿವೆ. ಇದು ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಹಾನಿಯಲ್ಲಿ ಪರಿಣಮಿಸಿದೆ. ನೀವು ಇದನ್ನು ಬದಲಾಯಿಸಲು ಕ್ರಮ ತೆಗೆದುಕೊಳ್ಳಬೇಕು. ಮುಖ್ಯ ಗುರಿ ನೈತಿಕ ಚಾರಿತ್ರ್ಯದ ನಿರ್ಮಾಣವಾಗಿರಬೇಕು. ಸಚ್ಚಾರಿತ್ರ್ಯದ ನಾಗರಿಕರಿಲ್ಲದಿದ್ದರೆ ರಾಷ್ಟ್ರದ ನಿರ್ಮಾಣ ಅಥವಾ ಉಗಮ ಅಸಾಧ್ಯ. ನಾವು ದೈಹಿಕ ಬಲಕ್ಕೆ ಹೆಚ್ಚು ಗಮನಕೊಡಬೇಕು. ನೈತಿಕ ಚಾರಿತ್ರ್ಯದ ಹಾನಿಯಿಂದ ದೈಹಿಕಬಲ ಮತ್ತು ಪರಾಕ್ರಮವಿದ್ದರೂ ಬಲಿಷ್ಠ ರಾಷ್ಟ್ರಗಳಾದ ರೋಮ್ ಚಿಂದಿಚಿಂದಿಯಾಯಿತು.

ಕೆಲವು ಹಿಂದು ಜಾತಿಗಳು ಕಳೆದ ಯುದ್ಧದಲ್ಲಿ ಮಹಾಸೇವೆಯನ್ನು ಸಲ್ಲಿಸಿವೆ. ಜಾತಿ ಮತ್ತು ಮತಗಳ ಭಿನ್ನತೆಗಳನ್ನು ಮೀರಿ ಸಿಂಹಾಸನ ಮತ್ತು ರಾಷ್ಟ್ರಕ್ಕೆ ನಿಷ್ಠೆಯನ್ನು ತೋರಿಸಿದವು. ಅವು ತಮ್ಮ

ಕರ್ತವ್ಯವನ್ನು ನಿಭಾಯಿಸಿವೆ. ಅವು ಬೇರೆಯವರಿಗೆ ಮಾರ್ಗವನ್ನು ತೋರಿಸಿವೆ. ಕಳೆದ ಯುದ್ಧದಲ್ಲಿ ಬ್ರಿಟಿಷ್ ಸರಕಾರವು ನಮಗೆ ನಮ್ಮ ಸಾಹಸವನ್ನು ಧೈರ್ಯವಾಗಿ ತೋರಿಸುವುದಕ್ಕೆ ರಾಷ್ಟ್ರ ಬೆಳೆಯುವುದಕ್ಕೆ ಸಹಾಯಮಾಡಲು ಮತ್ತು ಸಾರ್ವಭೌಮ ಚಕ್ರವರ್ತಿಗೆ ನಮ್ಮ ಭಾರಿ ಕರ್ತವ್ಯಗಳನ್ನು ತೋರಿಸುವುದಕ್ಕೆ ಅವಕಾಶಮಡಿಕೊಟ್ಟಿತ್ತು. ಇದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು. ಅವರಿಂದಾಗಿ ಧಾರ್ಮಿಕ-ಸಾಮಾಜಿಕ ವಿಕಾಸ ಮತ್ತು ಪ್ರಗತಿಗಳಿಗೆ ಹೆಚ್ಚು ಪ್ರಚೋದನೆ ಮತ್ತು ಪ್ರೋತ್ಸಾಹ ಸಿಕ್ಕಿತು.

೧೮೫೭ ನಂತರ ದೇಶದಲ್ಲಿ ಬ್ರಿಟಿಷರ ಅಧಿಕಾರದ ಕ್ರೋಡೀಕರಣ ನಡೆಯಿತು. ಅದಕ್ಕೆ ಮೊದಲು ನಾವು ನಾಗರಿಕರಾಗಿರಲಿಲ್ಲ. ರೈಲ್ವೆ ಮತ್ತು ತಂತಿಗಳು (ಟೆಲಿಗ್ರಾಫ್) ಇರಲಿಲ್ಲ. ನಮಗೆ ಧರ್ಮನಿರಪೇಕ್ಷತೆ ಮತ್ತು ವ್ಯವಸ್ಥಿತ ಸ್ಥಿತಿಯಿರಲಿಲ್ಲ. ಅವರು ನಮಗೆ ಶಿಕ್ಷಣ ಕೊಡಿಸಿದರೆಂಬುದನ್ನು ನಾವು ಮರೆಯುವಂತಿಲ್ಲ. ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ತಂದಿದ್ದರಿಂದ ನಾವು ಸ್ವಯಂ ಆಡಳಿತವನ್ನು ಕೇಳುತ್ತಿದ್ದೇವೆ.

ಮರಾಠರಂತೆ ಮುಸ್ಲಿಮರು ಕ್ಷತ್ರಿಯರ ಕರ್ತವ್ಯಗಳನ್ನು ಮಾಡಿದರು. ಅವರು ಅನುಸರಿಸುವ ಪರಂಪರೆಗಳು ಮರಾಠರು ಅನುಸರಿಸುವ ಪರಂಪರೆಗಳಿಗೆ ಸಮವಾಗಿವೆ. ಮರಾಠ ಸೈನ್ಯವು ಮುಸ್ಲಿಂ ಸರದಾರರನ್ನು ಹೊಂದಿತ್ತು ಮತ್ತು ಮುಸ್ಲಿಂ ಸೈನ್ಯವು ಮರಾಠರ ಸರದಾರರನ್ನು ನೇಮಿಸಿಕೊಳ್ಳುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಮರಾಠರು ಮತ್ತು ಮುಸ್ಲಿಮರು ಕೂಡಿ ಬ್ರಿಟಿಷ್ ಸೈನ್ಯದಲ್ಲಿ ಯುದ್ಧಮಾಡಿ ಮುಸ್ಲಿಮ್ ದೇಶಗಳಾದ ಟರ್ಕಿಯನ್ನು ಸೋಲಿಸಿವೆ. ಮುಸ್ಲಿಂ ದೇಶಗಳಾದ ಟರ್ಕಿ, ಪರ್ಷಿಯ, ಅಫ್ಘಾನಿಸ್ತಾನಗಳನ್ನು ರಷಿಯಾದ ಕರಡಿಮುಷ್ಟಿಯಿಂದ ಬಿಡಿಸಿದ ಕೀರ್ತಿ ಇಂಗ್ಲೆಂಡಿಗೆ ಸಲ್ಲುತ್ತದೆ. ೧೮೭೭ರಲ್ಲಿ ಕಾನ್‌ಸ್ಟಾಂಟಿನೋಪಲ್‌ನ್ನು ವಶಪಡಿಸಿಕೊಳ್ಳುವ ಮೂಲಕ ಯೂರೋಪಿನಿಂದ ಟರ್ಕಿಯನ್ನು ಅಳಿಸಿಹಾಕುವ ಯೋಜನೆಯನ್ನು ಹೊಂದಿತ್ತು. ಇಂಗ್ಲೆಂಡು ೧೮೮೦ರಲ್ಲಿ ಕಾಲಿಫವನ್ನು ಸಂರಕ್ಷಿಸಿತೆಂಬುದನ್ನು ಯಾರೂ ಮರೆಯಬಾರದು. ಇತ್ತೀಚಿನ ಯುದ್ಧದಲ್ಲಿ ಟರ್ಕಿಯಲ್ಲಿರುವ ತೀವ್ರಗಾಮಿ ಪಕ್ಷಗಳು (ರಾಡಿಕಲ್ ಪಾರ್ಟೀಸ್) ಜರ್ಮನಿಯೊಂದಿಗೆ ಕೈಜೋಡಿಸಿದವು. ಆದ್ದರಿಂದ ಇಂಗ್ಲೆಂಡು ಮನಸ್ಸಿಲ್ಲದೆ ಟರ್ಕಿಯ ಮೇಲೆ ಯುದ್ಧವನ್ನು ಸಾರಬೇಕಾಯಿತು.

ಅವರಿಗೆ ಕ್ಷಮಾಶೀಲತೆಯನ್ನು ತೋರಿಸಬಹುದು. ಆದರೆ ಅವರು ನಮ್ಮ ಶತ್ರುಗಳಾದಾಗ ಅವರನ್ನು ನಾವು ಸ್ನೇಹಿತರೆಂದು ಕರೆಯಬಹುದೇ? ಮತ್ತು ಭಾರತದ ಹಲವು ಹಿಂದುಗಳು ಮತ್ತು ಮುಸ್ಲಿಮರು ಅವರ ವಿರುದ್ಧ ಯುದ್ಧದಲ್ಲಿ ರಕ್ತ ಹರಿಸಿದರು. ಔರಂಗಜೇಬ್ ಮತ್ತು ಶಿವಾಜಿಯವರು ತಮ್ಮ ಸೈನ್ಯದಲ್ಲಿ ಹಿಂದು ಮತ್ತು ಮುಸ್ಲಿಂ ಸರದಾರರನ್ನು ಹೊಂದಿದ್ದರು. ಆದರೆ ಅವರು ತಮ್ಮ ರಾಷ್ಟ್ರೀಯ ಹಿತಾಸಕ್ತಿಗಳಿಗೆ ವಿರುದ್ಧವಾಗಿ ಏನನ್ನಾದರೂ ಬಯಸಿದ್ದರೇ? ಮರಾಠರು ಮತ್ತು ಮುಸ್ಲಿಮರು ಪರಂಪರಾಗತವಾಗಿ ತಾವು ಯಾರ ಸೇವೆಯನ್ನು ಮಾಡುತ್ತಿದ್ದರೋ ಅವರ ನಿಷ್ಠೆಯನ್ನು ತೋರಿಸುವುದನ್ನು ಪರಿಪಾಲಿಸುತ್ತಿದ್ದರು. ಅರಬರು ಮತ್ತು ಟರ್ಕಿಗಳು ನಮ್ಮ ಸಹೋದರರು. ಕೆಲವು ಔತ್ತರೇಯ (ಉತ್ತರದ) ಹೋರಾಟಗಾರರ ಅಪ್ಪಣೆಯ ಮೇರೆಗೆ ಅವರನ್ನು ಕಡೆಗಣಿಸುವುದು ಸರಿಯಲ್ಲ. ಅವರನ್ನು ನಾವು ಸ್ನೇಹಿತರೆಂದು ಪರಿಗಣಿಸಬೇಕೇ ಹೊರತು ಅವರು ಶತ್ರುಗಳಲ್ಲ. ಬ್ರಿಟಿಷ್ ಸರಕಾರ ಆವರ ಕಲ್ಯಾಣವನ್ನು ಪರಿಗಣಿಸುತ್ತಿರುವಾಗ ಇದನ್ನು ಎಚ್ಚರಿಕೆಯಿಂದ ನೋಡಬೇಕಾಗುತ್ತದೆ. ಇಂಗ್ಲೆಂಡು ಇಸ್ಲಾಮಿನ ಪವಿತ್ರ ಸ್ಥಳಗಳನ್ನು ರಕ್ಷಿಸುವ ಹೊಣೆಗಾರಿಕೆಯನ್ನು ವಹಿಸಿಕೊಂಡಿತು ಮತ್ತು ಎಲ್ಲರೂ ಮೆಚ್ಚುವ ಹಾಗೆ ಅದನ್ನು ಈಡೇರಿಸಿತು.

ಬ್ರಿಟಿಷ್ ಮತ್ತು ಭಾರತದ ಸರಕಾರ ಕೈಗೊಂಡ ಪ್ರಯತ್ನಗಳು ಸುಪರಿಚಿತವಾಗಿವೆ. ಕೆಲವು ವಿಷಯಗಳ ಬಗ್ಗೆ ಮುಸ್ಲಿಮರು ಇಷ್ಟಪಡದಿರುವುದು ಸಹಜ ಮತ್ತು ನನ್ನಂತಹ ನಿಜವಾದ ಹಿತೈಷಿಗಳು ಇದಕ್ಕಾಗಿ ಕರುಣೆ ತೋರಬೇಕಾಗುತ್ತದೆ. ಬ್ರಿಟಿಷ್ ಸರಕಾರ ಕೈಗೊಂಡ ಪ್ರಾಮಾಣಿಕ ಪ್ರಯತ್ನಗಳ ಬಗ್ಗೆ ಕೆಲವು ಹಿಂದೂ ಮತ್ತು ಮುಸ್ಲಿಂ ನಾಯಕರು ಸಂದೇಹಗಳನ್ನು ವ್ಯಕ್ತಪಡಿಸುತ್ತಾ ಸಾರ್ವಜನಿಕ ಅಭಿಪ್ರಾಯವನ್ನು ಪೂರ್ವಗ್ರಹಪೀಡಿತವನ್ನಾಗಿ ಮಾಡಲು ತೊಡಗಿದ್ದಾರೆ. ಇದು ನಿಜವಾಗಿಯೂ ಒಳ್ಳೆಯದಲ್ಲ. ಇದರಿಂದಾಗಿ ಜನರು ಸರಕಾರವನ್ನು ಇಷ್ಟಪಡುತ್ತಿಲ್ಲ. ಇದು ಒಳ್ಳೆಯ ವಿಷಯವೇ ಅಲ್ಲ. ಇದನ್ನು ಪರಿಗಣಿಸಿದ ಮಾನ್ಯ ಘನತೆವೆತ್ತ ನೈಜಾಮ್ ಸಾಹೇಬರು ಈ ಆಂದೋಲನದಲ್ಲಿ ಭಾಗವಹಿಸಬೇಡಿಯೆಂದು ತನ್ನ ಪ್ರಜೆಗಳಿಗೆ ಹೇಳಿದ್ದಾರೆ. ಅವರ ನಿದರ್ಶನ ಬ್ರಿಟಿಷ್ ಭಾರತದಲ್ಲಿ ಮತ್ತು ಬೇರೆ ಕಡೆಗಳಲ್ಲಿ ಅನುಸರಿಸಲಾಗುವುದೆಂದು ನಾವು ಭಾವಿಸುತ್ತೇನೆ. ಅಗೌರವಕ್ಕೀಡಾದ ಮತ್ತು ಸ್ವಯಂಘೋಷಿತ ನಾಯಕರು ನೈಜಾಮ, ಅರಬ್ಬರನ್ನು ಮತ್ತು ಟರ್ಕಿಗಳನ್ನು ಇನ್ನುಳಿದ ಮುಸ್ಲಿಮರು ಗೌರವಿಸದಂತೆ ಹೇಗೆ ಮನವೊಲಿಸುವರು ಮತ್ತು ಈ ನಾಯಕರನ್ನು ಹೇಗೆ ಅನುಸರಿಸುವರು? ಬಹುಸಂಖ್ಯಾತ ಮುಸ್ಲಿಮರು ಆಂದೋಲನವನ್ನು ಪ್ರಾರಂಭಿಸಿದಾಗ ಭಾರತದ ನಾಯಕರು ಸಹಾಯ ಮಾಡಿದರೆ ಆಗ ಅದನ್ನು ಸಮರ್ಥಿಸಿದಂತಾಗುತ್ತದೆ. ಆದರೆ ಕೆಲವೇ ಕೆಲವು ಅತೃಪ್ತ ಜನರಿಂದ ಪ್ರಾರಂಭಗೊಂಡ ಕಾನೂನುರಹಿತವಾದ ಮತ್ತು ಕಾನೂನುಬಾಹಿರವಾದ ಆಂದೋಲನದಲ್ಲಿ ಭಾಗವಹಿಸಬೇಡಿ ಮತ್ತು ನಿಮ್ಮ ಪತನಕ್ಕೆ ನೀವೇ ಕಾರಣಕರ್ತರಾಗುತ್ತೀರಿ. ಇತ್ತೀಚಿನ ಹಿಂದೂ-ಮುಸ್ಲಿಮರ ಐಕ್ಯಮತ್ಯದ ಪರಂಪರೆಯ ಸಾಮಾಜಿಕ ವ್ಯವಸ್ಥೆಯನ್ನು ಭಂಗಗೊಳಿಸಬೇಡಿ. ಸರಕಾರದೊಂದಿಗೆ ಸಹಕರಿಸದಿರುವುದು ತಮ್ಮ ಪ್ರಗತಿಯನ್ನು ತಾವೇ ನಿಲ್ಲಿಸಿಕೊಂಡಂತಾಗುತ್ತದೆ. ಸಮಾಜದ ಬುನಾದಿಯನ್ನು ಅಸ್ಥಿರಗೊಳಿಸಿದಂತಾಗುತ್ತದೆ. ಸರಕಾರ ಚೆನ್ನಾಗಿ ನಡೆದರೆ ನಮ್ಮ ಭೌತಿಕ, ಧಾರ್ಮಿಕ ಮತ್ತು ನೈತಿಕ ಪರಿಸ್ಥಿತಿಗಳನ್ನು ಸುಧಾರಿಸಲು ಒಳ್ಳೆಯ ಅವಕಾಶಗಳು ಸಿಗುತ್ತವೆ. ತಮ್ಮ ದೇಶ ಸಮೃದ್ಧಿಯಾಗಬಯಸುವವರು ಅಂತಹ ಆಂದೋಲನದಲ್ಲಿ ಭಾಗವಹಿಸುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಮೊದಲಿನ ಸಮ್ಮೇಳನಗಳಲ್ಲಿ ಯಾವ ಸಮ್ಮೇಳನವೂ ಮಾಂಟೆಗ್ಯೂ-ಛೆಲ್ಮಸ್‌ಫೋರ್ಡ್‌ನ ಸುಧಾರಣೆಯಲ್ಲಿನ ಸ್ವರಾಜ್ಯವನ್ನು ನಮಗೆ ನೀಡಿಲ್ಲ. ನಾವು ಅವುಗಳನ್ನು ದುರ್ಬಳಕೆ ಮಾಡಿಕೊಳ್ಳಬಾರದು. ನಾವು ಅವುಗಳನ್ನು ಸದ್ಬಳಕೆ ಮಾಡಿಕೊಳ್ಳಬೇಕು ಮತ್ತು ಚಕ್ರವರ್ತಿಗೆ ನಾವು ಸಾಧಿಸಿ ತೋರಿಸಬೇಕು. ನಾವು ಅವರು ದೀರ್ಘಾಯುಷಿಯಾಗಿರಲೆಂದು ಪ್ರಾರ್ಥಿಸೋಣ. ನಾವು ಒಳ್ಳೆಯ ನಾಯಕರನ್ನು ಆರಿಸೋಣ. ನಾವು ಸುಧಾರಣೆಗಳನ್ನು ಸಫಲ ಮಾಡೋಣ. ನಾವು ಕೆಟ್ಟ ನಾಯಕರನ್ನು ಆಯ್ಕೆ ಮಾಡಿದರೆ ಅದರ ಪರಿಣಾಮಗಳಿಗೆ ನಾವು ಹೊಣೆಯೇ ಹೊರತು ಸರಕಾರವಲ್ಲ. ನಾವು ಸಾಮಾಜಿಕ ಮತ್ತು ಧಾರ್ಮಿಕ ಪ್ರಗತಿಯನ್ನು ಸಾಧೀಸಬೇಕು. ಜಾತಿವಾದದಿಂದ ನಮ್ಮಲ್ಲಿ ಹಲವು ಗುಂಪುಗಳ ಸಂಘರ್ಷವಿದೆ. ನಾವು ಅವುಗಳನ್ನು ಕೊನೆಗೊಳಿಸಬೇಕು. ನಾವು ಪ್ರತಿಯೊಬ್ಬರನ್ನೂ ಶಿಕ್ಷಿತರನ್ನಾಗಿ ಮಾಡಬೇಕು. ನಾವು ಪ್ರತಿಯೊಬ್ಬರ ಶ್ರದ್ಧೆಯ (ನಂಬಿಕೆ) ಹಕ್ಕನ್ನು ಒಪ್ಪಬೇಕು. ಪ್ರಸ್ತುತ ಸಮ್ಮೇಳನವು ಈ ಎಲ್ಲವುಗಳನ್ನು ಹೇಗೆ ಜಾರಿಗೊಳಿಸಬೇಕೆಂಬ ಬಗ್ಗೆ ಯೋಚಿಸಬೇಕು. ಕಥಾಕಥಿತ ಬ್ರಾಹ್ಮಣರು ಈ ಕೆಲಸದಲ್ಲಿ ಸಹಾಯ ಮಾಡುವರು. ನಮ್ಮ ಹಿತೈಷಿಗಳಿಗೆ ನಾವು ಕೃತಜ್ಞರಾಗಿರಬೇಕು. ಬ್ರಾಹ್ಮಣೇತರರು ತಮ್ಮಲ್ಲಿರುವ ಭಿನ್ನಾಭಿಪ್ರಾಯಗಳನ್ನು ಕೊನೆಗೊಳಿಸಬೇಕು ಮತ್ತು ಇಂದು ನೀಡಿರುವ ಅವಕಾಶಗಳನ್ನು ಸದುಪಯೋಗ ಮಾಡಿಕೊಂಡು ಸಕ್ರಿಯರಾಗಿ ಸಾಮಾಜಿಕ

ಸಾಮರಸ್ಯ ಮತ್ತು ಧಾರ್ಮಿಕ ಸಹಿಷ್ಣುತೆಯನ್ನು ಜಾರಿಗೊಳಿಸಬೇಕು. ಈ ಸಮ್ಮೇಳನ ಒಂದು ಹೊಸ ಪ್ರಯತ್ನ, ನಾವು ಎಚ್ಚರಗೊಳ್ಳಬೇಕು ಮತ್ತು ಅದರಂತೆ ನಿರ್ವಹಿಸಬೇಕು. ನಾವು ಕಾಲ ಮತ್ತು ಹಣವನ್ನು ವ್ಯರ್ಥ ಮಾಡುತ್ತಿದ್ದೇವೆಯೆಂದು ಖಂಡಿಸುವವರು ಖಂಡಿಸಲಿ ಬಿಡಿ.

ಬ್ರಾಹ್ಮಣೇತರರಿಗೆ ಹಕ್ಕುಗಳನ್ನು ಪಡೆಯುವ ನಮ್ಮ ಧ್ಯೇಯ ನ್ಯಾಯವಾದುದು. ಅದು ಕರುಣೆಯಿಂದ ನಮ್ಮನ್ನು ಸ್ಫೂರ್ತಿಗೊಳಿಸಿರುವುದರಿಂದ ಅದು ಕೂಡ ಧಾರ್ಮಿಕವಾಗಿದೆ. ಅದು ಖಂಡಿತವಾಗಿ ದೈವಿಕ ಆಶೀರ್ವಾದ ಪಡೆದಿದೆ. ನಾವು ಕೆಲಸಕ್ಕೆ ತೊಡಗೋಣ. ನಾನು ನಿಮ್ಮೆಲ್ಲರ ಸೇವೆ ಮಾಡಲು ಸಿದ್ಧ. ನಮ್ಮ ಪ್ರಯತ್ನದಲ್ಲಿ ದೇವರು ಖಂಡಿತವಾಗಿ ಸಫಲತೆ ನೀಡುವನೆಂಬ ದೃಢನಂಬಿಕೆ ನನಗಿದೆ.

---

೧೪

# ಬೌದ್ಧಿಕ ಗುಲಾಮತನದಿಂದ ನೀವೇ ಮುಕ್ತರಾಗಿ

**ಶಾಹುರವರು ೨೭, ಜುಲೈ ೧೯೨೦ರಂದು ಕರ್ನಾಟಕದ ಹುಬ್ಬಿಯಲ್ಲಿ ನಡೆದ ಕರ್ನಾಟಕ ಬ್ರಾಹ್ಮಣೇತರರ ಸಾಮಾಜಿಕ ಪರಿಷತ್ತಿನ ಸಮಾರೋಪ ಸಮಾರಂಭದಲ್ಲಿ ಪ್ರಸ್ತುತ ಭಾಷಣವನ್ನು ಮಾಡಿದರು. ಈ ಭಾಷಣದಲ್ಲಿ ಶಾಹುರವರು ಬ್ರಾಹ್ಮಣರು ಬ್ರಾಹ್ಮಣೇತರರ ಮೇಲೆ ಹೇರಿರುವ ಬೌದ್ಧಿಕ ಗುಲಾಮಗಿರಿಯಿಂದ ತಮ್ಮನ್ನು ತಾವೇ ವಿಮೋಚನೆಗೊಳಿಸಿಕೊಳ್ಳಲು ಒಂದು ನಿರಂತರ ಹೋರಾಟವನ್ನು ಮಾಡಬೇಕೆಂಬ ಅವಶ್ಯಕತೆ ಕಂಡುಬಂದರೆ ಅಂತಹ ಒಂದು ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣಗಳನ್ನೇ ಪಣಕ್ಕೊಡ್ಡಬೇಕೆಂದು ಅವರಿಗೆ ಕರೆಯಿತ್ತರು.**

---

**ಕೆ**ಲವು ವರ್ಷಗಳ ಹಿಂದೆ ಕೆಲವು ಬ್ರಾಹ್ಮಣ ನಾಯಕರು ಸಾಮಾಜಿಕವಾಗಿ ಜಾಗೃತರೆಂದು ನಟಿಸಿ, ಸರಕಾರವು ಪ್ರಾಥಮಿಕ ಶಿಕ್ಷಣವನ್ನು ಒದಗಿಸಬೇಕೆಂದು ಗಲಾಟೆಮಾಡಿದರು. ಅವರು ನಿಜವಾಗಿ ಏನು ಮಾಡುವರು? ಅವರು ಕೇವಲ ಮಾತನಾಡುತ್ತಾರೆ. ಈಗ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳಿ. ಅವರು ಒಂದು ಆಂದೋಲನವನ್ನು ಪ್ರಾರಂಭಿಸಿದರು. ಅದನ್ನು ಮುಂದುವರಿಸಿದರು. ಇಂಡಿಯಾದ ಐ.ಸಿ.ಎಸ್ ಪರೀಕ್ಷೆಯನ್ನು ನಡೆಸಬೇಕೆಂಬ ಬಗ್ಗೆ ಆಯೋಗವನ್ನು ನೇಮಿಸಲಾಯಿತು. ಅದೃಷ್ಟವಶಾತ್ ಅವರು ಈ ವಿಚಾರದಲ್ಲಿ ಸಫಲರಾಗಲಿಲ್ಲ. ಇದರ ಹಿಂದೆ ಅಡಗಿರುವ ಸತ್ಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ. ಅವರು ಪ್ರಾಥಮಿಕ ಶಿಕ್ಷಣದ ಬಗ್ಗೆ ಪ್ರಾಮಾಣಿಕರಾಗಿದ್ದರೆ, ಅವರು ನಿಧಿಯನ್ನು ಫ್ರಾಥಮಿಕ ಶಿಕ್ಷಣಕ್ಕಾಗಿ ಸಂಗ್ರಹಿಸುತ್ತಿದ್ದರು. ಮತ್ತು ಅವರು ಐ.ಸಿ.ಎಸ್ ಪರೀಕ್ಷೆಗೆ ಮಾಡಿದಂತೆಯೇ ಹಳ್ಳಿಗಳಿಗೆ ಶಿಕ್ಷಕರನ್ನು ಕಳುಹಿಸಲು ತೊಡಗುತ್ತಿದ್ದರು. ಸಾಕಷ್ಟು ಹಣವನ್ನು ಕಾಲೇಜುಗಳನ್ನು ತೆರೆಯಲು ಮತ್ತು ಐ.ಸಿ.ಎಸ್ ವಿಷಯದಲ್ಲಿ ಸಂಗ್ರಹಿಸಿದರು. ಆದರೆ ಪ್ರಾಥಮಿಕ ಶಿಕ್ಷಣಕ್ಕೆ ಅವರು ಹಣವನ್ನು ಹೊಂದಿರಲಿಲ್ಲ. ಏಕೆ? ಏಕೆಂದರೆ ಬ್ರಾಹ್ಮಣೇತರರು ಇದರಿಂದ ಪ್ರಯೋಜನ ಪಡೆಯದಿರಲೆಂಬುದೇ ಸತ್ಯ.

ಸಂಸ್ಥೆಗಳಾದ ಅನಂತ ಬಾಲಿಕಾಶ್ರಮ ಎಂಬ ಸಂಸ್ಥೆಗಳನ್ನು ಸಾರ್ವಜನಿಕ ನಿಧಿಗಳಿಂದ ಕಟ್ಟಲಾಯಿತು. ಅಲ್ಲಿರುವ ನಿಯಮಾವಳಿಗಳನ್ನು ನೀವು ಪರೀಕ್ಷಿಸಿದರೆ ಬ್ರಾಹ್ಮಣರು ಮಾತ್ರ ಅದರಿಂದ ಪ್ರಯೋಜನ ಪಡೆಯಲು ಸಾಧ್ಯ ಎಂಬುದನ್ನು ನೀವು ಸುಲಭವಾಗಿ ಗಮನಿಸಬಹುದು. ಉದಾಹರಣೆಗೆ ವಿಧವೆಯ ಮನರ್‌ವಿವಾಹವನ್ನು ಆಚರಿಸದ ಜಾತಿಗಳಿಗೆ ಸೇರಿದ ಹುಡುಗಿಯರು ಮಾತ್ರ ಸಂಸ್ಥೆಯ ಪ್ರವೇಶಕ್ಕೆ ಅರ್ಹರು ಎಂಬ ನಿಯಮವನ್ನು ನೋಡಿ. ಕೇವಲ ಎರಡು ಜಾತಿಗಳು ಮಾತ್ರ ಈ ವರ್ಗಕ್ಕೆ ಸೇರುತ್ತವೆ:

ಬ್ರಾಹ್ಮಣರು ಮತ್ತು ಮರಾಠರು. ಬಹುಮಟ್ಟಿಗೆ ಮರಾಠ ಕುಟುಂಬಗಳು ಪರ್ದಾಪದ್ಧತಿಯನ್ನು ಆಚರಿಸುತ್ತಾರೆ. ಆದ್ದರಿಂದ ಉಳಿಯುವ ಒಂದು ಜಾತಿ ಬ್ರಾಹ್ಮಣರು. ಬ್ರಾಹ್ಮಣೇತರರು ಹಣವನ್ನು ವಂತಿಗೆಯ ರೂಪದಲ್ಲಿ ನೀಡುತ್ತಾರೆ. ಆದರೆ ಅವರು ಯಾವುದೇ ಪ್ರಯೋಜನ ನಿರೀಕ್ಷಿಸುವಂತಿಲ್ಲ. ಅಂತಹ ಬ್ರಾಹ್ಮಣರ ತಂತ್ರವನ್ನು ಒಪ್ಪಬೇಡಿ. ನಿಮ್ಮ ಶಿಕ್ಷಣಕ್ಕೆ ನೀವೇ ಹೊಣೆಯಾಗಿ, ಪ್ರಗತಿಯ ಹಾದಿಯಲ್ಲಿ ಮುಂದುವರಿಯಿರಿ.

ಇದು ಬ್ರಾಹ್ಮಣ–ಬ್ರಾಹ್ಮಣೇತರರ ಸಂಘರ್ಷದ ಪ್ರಾರಂಭವಾಗಿತ್ತು. ಪತ್ರಿಕೆಗಳು ನನ್ನನ್ನು ದೂಷಿಸಲು ಆರಂಭಮಾಡಿವೆ. ಪತ್ರಿಕೆಗಳು ದಿನವೂ ನನ್ನ ಮತ್ತು ನನ್ನ ಕುಟುಂಬದ ಬಗ್ಗೆ ಬೆದರಿಕೆಗಳನ್ನು ಮತ್ತು ಅನಾಗರಿಕ ವಿಷಯಗಳನ್ನು ಪ್ರಕಟಿಸುತ್ತಿವೆ. ನನ್ನನ್ನು ಬಗ್ಗಿಸುವುದಕ್ಕೆ ಸಾಧ್ಯವಾಗದಿದ್ದರೆ, ನಾನು ಧ್ಯೇಯಕ್ಕೆ ಬೆಂಬಲಿಸುವುದನ್ನು ನಿಲ್ಲಿಸಲು ನಿರಾಕರಿಸಿದರೆ, ಅವರು ರ್‍ಯಾಂಡ್, ಜಾಕ್‌ಸನ್ ಮತ್ತು ಜಾಧವರಾವ್ ಅವರ ಮೇಲೆ ಬಳಸಿದ ಕೀಳುಮಟ್ಟದ, ಹೇಡಿತನದ, ಅನಾಗರಿಕವಾದ ಸಾಧನಗಳನ್ನೇ ನನ್ನ ವಿರುದ್ಧ ಸಹ ಬಳಸಿದರು. ದೇವರು ಅಂತಹ ಹೇಡಿತನದ ಮತ್ತು ಅಮಾನವೀಯ ಆಯುಧಗಳನ್ನು ಬಳಸುವವರ ಕೋರಿಕೆಯನ್ನು ಈಡೇರಿಸಲಿ.

ಬ್ರಾಹ್ಮಣೇತರರ ಪ್ರಗತಿಯ ಕೆಲವು ಹೊಟ್ಟೆಕಿಚ್ಚಿನ ಜನರಿಗೆ ಅಸಹನೀಯವಾಗಿರುವುದರಿಂದ ಅವರು ಈ ಪ್ರಗತಿಯ ಹಾದಿಯಲ್ಲಿ ತಡೆಯೊಡ್ಡಲು ಬಯಸಿದ್ದಾರೆ. ನಮ್ಮ ದಾರಿಯಲ್ಲಿ ಅಡ್ಡಿ ಉಂಟುಮಾಡುವ ಉದ್ದೇಶಕ್ಕಾಗಿಯೇ ಕಳೆದ ರಾತ್ರಿ ಹುಬ್ಬಿಬಜಾರಿನಲ್ಲಿ ಬೆಂಕಿ ಹಚ್ಚಿದ್ದು ಮತ್ತು ಶ್ರೀನಂದಿಮೂರ್ತಿಯ ನಾಶ ಮೊದಲಾದವುಗಳನ್ನು ಮಾಡಲಾಗಿದೆಯೆ? ಅಂತಹ ನಿದರ್ಶನಗಳಿಂದ ಧೈರ್ಯಗುಂದುವುದು ಬೇಡ. ನಾವು ಹಿಂಜರಿಯುವುದು ಬೇಡ ಮತ್ತು ನಾವು ಹೆಚ್ಚು ಹುರುಪನ್ನು ತೋರಿಸಬೇಕು. ಅಂತಹ ಪ್ರಯತ್ನಗಳು ನಮ್ಮನ್ನು ಒಟ್ಟುಗೂಡಿಸುತ್ತವೆ. ಈ ಬಗ್ಗೆ ನನಗೆ ಸಂದೇಹವಿಲ್ಲ.

ಬ್ರಿಟಿಷರ ಆಡಳಿತದಲ್ಲಿ ಎಷ್ಟು ಪ್ರಗತಿಯಾಗಿದೆ ಎಂಬುದನ್ನು ಮತ್ತೆ ಮತ್ತೆ ಹೇಳುವ ಅವಶ್ಯಕತೆಯಿಲ್ಲ. ಕಿರಿಯ ಶ್ರೀ ಪ್ರತಾಪಸಿಂಹ ಮಹಾರಾಜರು ಬಂಧಿಯಾಗಿದ್ದಾಗ ಪೇಶ್ವೆಗಳು ಅವರಿಗೆ ಕಲಿಯಲು ಅವಕಾಶ ನೀಡಲಿಲ್ಲ. ಬುದ್ಧಿವಂತಳು ಮತ್ತು ಗೌರವಾನ್ವಿತರಾದ ಅವರ ತಾಯಿ ಅವರ ಓದು ಮತ್ತು ಬರಹ ಕಲಿಯಲು ಒಬ್ಬ ಬ್ರಾಹ್ಮಣೇತರ ಅಧ್ಯಾಪಕರನ್ನು ನೇಮಿಸಿದ್ದರು ಮತ್ತು ಮಧ್ಯರಾತ್ರಿಯಲ್ಲಿ ಪಾಠಕ್ಕಾಗಿ ಅವರನ್ನು ಎಬ್ಬಿಸುತ್ತಿದ್ದರು. ಪೇಶ್ವೆಗಳ ಪತನದ ನಂತರ ಮತ್ತು ಬ್ರಿಟಿಷರ ಆಡಳಿತದ ಆಗಮನದ ನಂತರ ಅವರು ತಮ್ಮ ಕ್ಷತ್ರಿಯರ ಹಕ್ಕುಗಳನ್ನು ಪುನರ್‌ಸ್ಥಾಪಿಸಲು ಪ್ರಯತ್ನಗಳನ್ನು ಮಾಡಿದರು. ಮತ್ತು ಬ್ರಾಹ್ಮಣರಿಗೆ ನೀಡಿದ್ದ ಅತಿಯಾದ ಮಹತ್ವವನ್ನು ತಡೆದರು. ಕೋಪಗೊಂಡ ಬ್ರಾಹ್ಮಣರು ಸಂಚುಗಳಲ್ಲಿ ತೊಡಗಿದರು. ಮತ್ತು ಅವರ ವಿರುದ್ಧ ಬ್ರಿಟಿಷರು ಪೂರ್ವಾಗ್ರಹಪೀಡಿತರಾಗುವಂತೆ ಪ್ರಯತ್ನಿಸಿದರು ಮತ್ತು ಅವರನ್ನು ಸಿಂಹಾಸನದಿಂದ ಕೆಳಗಿಳಿಸಿದರು. ಅವರು ಅದೇ ಪರಿಣಾಮಗಳಾಗುವವು ಎಂದು ಇಂದು ನನಗೆ ಬೆದರಿಕೆಗಳನ್ನು ಹಾಕುತ್ತಿದ್ದಾರೆ. ಆದರೆ ಸರ್ವಶಕ್ತ ದೇವರು ನ್ಯಾಯಮಾಡುವನೆಂಬ ನಂಬಿಕೆ ನನ್ನಲ್ಲಿ ದೃಢವಾಗಿದೆ. ಬ್ರಿಟಿಷ್ ಸರಕಾರ ಮತ್ತು ಮಹಾಕರುಣೆಯುಳ್ಳ ನಿಮ್ಮಂತಹ ಸ್ನೇಹಿತರಿರುವಾಗ ನಾನು ಶಾಂತವಾಗಿ ನನ್ನ ಕರ್ತವ್ಯಗಳನ್ನು ಈಡೇರಿಸುವುದರಲ್ಲಿ ಮುಂದುವರಿಯುವೆನು.

'ಸ್ಮೃತಿಗಳು' ಬ್ರಾಹ್ಮಣರನ್ನು ಈ ರೀತಿಯಾಗಿ ವಿವರಿಸಿವೆ: ಬ್ರಾಹ್ಮಣರು ಸದಾ ಜ್ಞಾನಶೀಲರು. ಇಂದಿನ ಬ್ರಾಹ್ಮಣರಲ್ಲಿ ಅಂತಹ ಒಬ್ಬ ಬ್ರಾಹ್ಮಣನನ್ನು ಕಾಣಲು ಸಿಗುವನೆ? ನನಗೆ ಸಂದೇಹವಿದೆ. ಮೇಲೆ

ಹೇಳಿದ ಕೀಳು ಕೃತ್ಯಗಳಲ್ಲಿ ತೊಡಗಿದ ವ್ಯಕ್ತಿಯನ್ನು ಬ್ರಾಹ್ಮಣ ಎಂದು ಹೇಗೆ ಕರೆಯುವುದು? ಇಂದಿನ ವಿಶ್ವದಲ್ಲಿ ನಿಜವಾದ ಬ್ರಾಹ್ಮಣರ ಅಸ್ತಿತ್ವದ ಬಗ್ಗೆ ಸಂದೇಹ ವ್ಯಕ್ತಪಡಿಸುವುದು ನನ್ನ ತಪ್ಪೆ? ಅವರು ಯುದ್ಧದಲ್ಲಿ ಭಾಗವಹಿಸುವುದರಿಂದ ಅವರು ಅಳಿಸಿಹೋಗಿಲ್ಲ ಎಂಬುದು ರುಜುವಾತಾಗಿದೆ. ವೈಶ್ಯರು ವ್ಯಾಪಾರದಲ್ಲಿ ಸಂಪತ್ತನ್ನು ಗಳಿಸಿದ್ದಾರೆ. ಬಡಶೂದ್ರರು ಬೇರೆಯವರ ಸೇವೆಮಾಡುವ ಮೂಲಕ ಬದುಕು ನಡೆಸುತ್ತಿದ್ದಾರೆ. ಬ್ರಾಹ್ಮಣರು ಮಾತ್ರ ತಮ್ಮ ಕರ್ತವ್ಯಗಳನ್ನು ಬಿಟ್ಟುಬಿಟ್ಟಿದ್ದಾರೆ. ಆದ್ದರಿಂದ ಅವರು ಪ್ರಾಚೀನ ವರ್ಣವ್ಯವಸ್ಥೆಯಲ್ಲಿ ಅವರಿಗೆ ಸ್ಥಾನವೇ ಇಲ್ಲ. ವರ್ಣಾಶ್ರಮವನ್ನು ಹೆಮ್ಮೆಯಿಂದ ಸಮರ್ಥನೆ ಮಾಡಿಕೊಳ್ಳುವವರು ಇದನ್ನು ಒಪ್ಪಬೇಕಾಗುತ್ತದೆ.

ನಾವೇನು ಮಾಡಬೇಕೆಂಬುದನ್ನು ನಾನು ಸಂಕ್ಷಿಪ್ತವಾಗಿ ಹೇಳುವೆನು. ಇಂದಿನಂತಹ ಸಮ್ಮೇಳನದಂತೆಯೇ ಹೆಚ್ಚು ಹೆಚ್ಚು ಸಮ್ಮೇಳನಗಳನ್ನು ವ್ಯವಸ್ಥೆಗೊಳಿಸಬೇಕು. ಬ್ರಾಹ್ಮಣೇತರರ ಆಂದೋಲನಗಳನ್ನು ಹೇಗೆ ನಡೆಸಬೇಕೆಂಬುದನ್ನು ಮದ್ರಾಸಿಗಳಿಂದ ನಾವು ಕಲಿಯಬೇಕು. ಮದ್ರಾಸಿನಿಂದ ಭಾಷಣಕಾರರನ್ನು ಕರೆಸೋಣ. ಮುಂಬಯಿ–ಪುಣೆಯಲ್ಲಿ ನಾವೇನು ಮಾಡಿದ್ದೇವೆಂಬುದನ್ನು ಅವರಿಗೆ ತೋರಿಸೋಣ. ಅವರು ಬರುವರೆಂಬ ಭರವಸೆ ನನಗೆ ಇದೆ. ಮುಂಬಯಿ ಅಥವಾ ಪುಣೆಯಲ್ಲಿ ಬ್ರಾಹ್ಮಣೇತರರ ಸಮ್ಮೇಳನವನ್ನು ಬೇಗನೆ ವ್ಯವಸ್ಥೆ ಮಾಡೋಣ. ಮುಂಬಯಿ ಅಥವಾ ಪುಣೆಯ ಬ್ರಾಹ್ಮಣೇತರರ ಆಂದೋಲನ ಮದ್ರಾಸಿಗಿಂತ ಬಹಳ ಹಿಂದುಳಿದಿದೆ. ಅಲ್ಲಿರುವ ಬ್ರಾಹ್ಮಣೇತರರ ನಾಯಕರಿಗಿಂತ ನಮ್ಮ ಬ್ರಾಹ್ಮಣೇತರ ನಾಯಕರು ಅನುಭವದಲ್ಲಿ ಇನ್ನೂ ಬಚ್ಚಾಗಳು.

ಪ್ರೀತಿಯ ಅಣ್ಣ–ತಮ್ಮಂದಿರೆ, ಒಂದಾಗಿ, ಹೋರಾಡಿ, ಬೌದ್ಧಿಕ ಗುಲಾಮತನದಿಂದ ನಮ್ಮನ್ನು ನಾವೇ ಮುಕ್ತಗೊಳಿಸಿಕೊಳ್ಳೋಣ. ಸ್ವಾತಂತ್ರ್ಯಕ್ಕಾಗಿ ನಿಮ್ಮ ಪ್ರಾಣಗಳನ್ನೇ ಪಣವೊಡ್ಡಿ. ನೀವೇನು ಮಾಡಬಹುದೋ ಅದನ್ನು ಮಾಡಿ. ಆದರೆ ನಿಮ್ಮನ್ನು ಪ್ರಾಣಿಗಳಿಗಿಂತ ಕಡೆಯಾಗಿ ಪರಿಗಣಿಸುವವರಿಂದ ಸ್ವತಂತ್ರರಾಗಿ. ಸಣ್ಣಪುಟ್ಟ ಭಿನ್ನಾಭಿಪ್ರಾಯಗಳನ್ನು ಮರೆತು ಒಂದಾಗಿ, ಮತ್ತು ಕಷ್ಟಪಟ್ಟು ಹೋರಾಡಿ, ದೇವರಿಗೆ ಒಪ್ಪಿಗೆಯಾಗುವಂತಹ ಕೃತ್ಯಗಳನ್ನೇ ಅನುಸರಿಸಿ. ಅನ್ಯಾಯಿಗಳಾಗಬೇಡಿ. ಮದ್ರಾಸಿನ ಸಹೋದರರ ಸಹಾಯದಿಂದ ನಾವೆಲ್ಲ ಮುನ್ನುಗ್ಗೋಣ.

ಸಾಮಾಜಿಕ ಸುಧಾರಣೆಗಳಲ್ಲಿ ನಾವು ಯಾವುದೇ ತಾಳ್ಮೆ ಮತ್ತು ನಿರಂತರತೆಯನ್ನು ತೋರಿಸದಿದ್ದರೆ ನಾವು ಯಾವ ರಾಜಕೀಯ ಗುರಿಗಳನ್ನು ಸಾಧಿಸಬಲ್ಲೆವು? ರಾಜಕೀಯವಾಗಿ ನಮ್ಮ ನಿಷ್ಠೆ ಸ್ಥಿರವಾಗಿಲ್ಲದಿದ್ದರೆ ಅದಕ್ಕೆ ಮೌಲ್ಯವಿದೆಯೆ? ಆದ್ದರಿಂದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳ ಬಗ್ಗೆ ಕೇಂದ್ರೀಕರಿಸಿ ಮತ್ತು ರಾಷ್ಟ್ರವನ್ನು ಕಟ್ಟಿ, ಆಗ ರಾಜಕೀಯ ಸುಧಾರಣೆಗಳು ವೇಗಗೊಳ್ಳುವುವು ಮತ್ತು ನಿಮ್ಮ ನಿಷ್ಠೆ ಯೋಗ್ಯಾರ್ಹವಾಗುತ್ತದೆ.

ಬ್ರಾಹ್ಮಣರು ಪ್ರಯತ್ನಿಸುವರು ಮತ್ತು ನಿಮ್ಮನ್ನು ಹೆದರಿಸುವರು. ಅವರು ನಿಮ್ಮನ್ನು ಮತ್ತು ಕುಟುಂಬದವರನ್ನು ಸಿಕ್ಕಾಪಟ್ಟೆ ತೆಗಳುವರು. ನೀವು ಇದನ್ನು ಪ್ರತಿಭಟಿಸಬೇಕಾಗುತ್ತೆ. ನಾನು ನಾಗಪುರದ ಒಂದು ಭಾಷಣದಲ್ಲಿ ಕೆಲವು ನಿರ್ದಿಷ್ಟ ಜಾತಿಯ ಜನರು ಮುಂದೆ ಬಂದು ಸಹಾಯಮಾಡುವರು ಎಂದು ಹೇಳಿದ್ದೆನು. ಅವರನ್ನು ನಂಬಬೇಡಿ ಮತ್ತು ನಿಮ್ಮ ಪ್ರಯತ್ನಗಳನ್ನು ಬಿಡಬೇಡಿ. "ಬೇರೆಯವರ ಮೇಲೆ ಅವಲಂಬಿಸಿದವರು ಮುಳುಗಿ ಸಾಯುವರು". ನನ್ನ ಬ್ರಾಹ್ಮಣೇತರ ಸಹೋದರರೆ, ಹಲವು ಬ್ರಾಹ್ಮಣರು

ನಿಮಗೆ ಸಹಾಯ ಮಾಡಲು ಮುಂದೆ ಬರುವರು. ಆದರೆ ನೀವು ದಯವಿಟ್ಟು ಅವರ ಮೇಲೆ ಅವಲಂಬಿಸಬೇಡಿ. ಖಾಮ್‌ಗಾವ್‌ನ ಮರಾಠ ಶಿಕ್ಷಣ ಸಮ್ಮೇಳನದಲ್ಲಿ ನಾನು ೧೦ ವರ್ಷಗಳವರೆಗೆ ಕೋಮುವಾರು ಪ್ರಾತಿನಿಧ್ಯ ಬೇಕೆಂದು ಕೇಳಿದ್ದೆನು. ಅದಕ್ಕೆ ಸಮ್ಮತಿ ಸಿಕ್ಕಿಲ್ಲ. ಆದರೆ ಆತ್ಮವಿಶ್ವಾಸವನ್ನು ಕಳೆದುಕೊಳ್ಳಬೇಡಿ. ನಮಗೆ "ಕೋಮುವಾರು ಪ್ರಾತಿನಿಧ್ಯದ ಭಿಕ್ಷೆ" ಬೇಕಾಗಿಲ್ಲ. ನಾವು ಮೊದಲು ಅರ್ಹರಾಗೋಣ. ಆಮೇಲೆ ಅಪೇಕ್ಷಿಸೋಣ. ಕೋಮುವಾರು ಪ್ರಾತಿನಿಧ್ಯದಿಂದ ನಾವು ಸ್ವಲ್ಪ ಸಮಯದವರೆಗೆ ಅರ್ಹರಾಗುವೆವು. ಈಗ ನಾವು ನಮ್ಮ ಹಕ್ಕುಗಳಿಗಾಗಿ ನಮ್ಮ ಬ್ರಾಹ್ಮಣ ಸಹೋದರರೊಂದಿಗೆ ಕಷ್ಟಪಟ್ಟು ಹೋರಾಡಬೇಕಾಗಿದೆ. ಪಾಂಡವರ ಸಹೋದರರಲ್ಲಿ ಒಬ್ಬನಾದ ಭೀಮಸೇನನು ಪ್ರತಿಯೊಂದು ಸೋಲಿನಿಂದ ೧೦ ಪಟ್ಟು ಬಲಿಷ್ಠನಾಗುತ್ತಿದ್ದನು. ಇದರ ಸಾರಸತ್ವವನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸೋಣ. ಹೆಚ್ಚು ವಿರೋಧದಲ್ಲಿ ನಾವು ನೊಂದರೆ, ನಾವು ಹೆಚ್ಚು ಅಡ್ಡಿ ಆತಂಕಗಳನ್ನು ಎದುರಿಸಿದರೆ, ಹೆಚ್ಚು ಕಷ್ಟಪಟ್ಟರೆ ನಾವು ಸಫಲರಾಗುತ್ತೇವೆ.

---

೧೫

# ಅತಿಯಾದ ಜಾತಿಯ ಹೆಮ್ಮೆಯನ್ನು ನಿಗ್ರಹಿಸಬೇಕು

೧೫ ಆಗಸ್ಟ್ ೧೯೨೦ರಂದು ಕೊಲ್ಹಾಪುರದಲ್ಲಿರುವ ಶ್ರೀ ರಾಜಾರಾಮ್ ಇಂಡಸ್ಟ್ರಿಯಲ್ ಸ್ಕೂಲ್ ಆಧುನಿಕ ಕೃಷಿ ಸಲಕರಣೆಗಳು ಮತ್ತು ಕೈಗಾರಿಕಾ ಉಪಕರಣಗಳ ಪ್ರದರ್ಶನವನ್ನು ವ್ಯವಸ್ಥೆಮಾಡಿತ್ತು. ಇದರೊಂದಿಗೆ ಕೊಲ್ಹಾಪುರದ ಆರ್ಯಕ್ಷತ್ರಿಯ ಸಮಾಜ ತಮ್ಮ ಜಾತಿಯ ಸಮ್ಮೇಳನವನ್ನು ವ್ಯವಸ್ಥೆಗೊಳಿಸಿತ್ತು. ಈ ಎರಡು ಸಮಾರಂಭಗಳ ಮುಖ್ಯ ಅತಿಥಿಯಾಗಿ ಶಾಹುರವರು ಭಾಷಣವನ್ನು ಮಾಡಿದರು. ರಾಷ್ಟ್ರದ ಅಭಿವೃದ್ಧಿಯಲ್ಲಿ ಕೈಗಾರಿಕೆ ಪ್ರಮುಖ ಪಾತ್ರ ವಹಿಸಿದರೂ ಭಾರತದಂತಹ ದೇಶದಲ್ಲಿ ಶೇಕಡ ೮೦ರಷ್ಟು ಜನಸಂಖ್ಯೆ ಕೃಷಿಯ ಮೇಲೆ ಅವಲಂಬಿಸಿದ್ದರೂ ಅದು ಲಾಭಪ್ರದವಾಗಬೇಕಾದರೆ ಅದು ಆಧುನಿಕ ಸಲಕರಣೆಗಳನ್ನು ಬಳಸಬೇಕಾಗುತ್ತದೆಯೆಂದು ಅವರು ಒತ್ತಿಹೇಳಿದರು. ಅವರು ಜಾತಿಯ ಅತಿಯಾದ ಹೆಮ್ಮೆಯನ್ನು ನಿಗ್ರಹಿಸಬೇಕೆಂದು ಎಚ್ಚರಿಕೆ ನೀಡಿದರು. ಏಕೆಂದರೆ ಜಾತಿಯ ಆಚೆಗೆ ವಿಶಾಲವಾದ ಸಮಾಜವಿದೆ ಮತ್ತು ಸಮಾಜಕ್ಕೆ ಸೇವೆ ಸಲ್ಲಿಸುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ.

---

**ಗೋ**ಷ್ಠಿಯ ಅಧ್ಯಕ್ಷತೆ ವಹಿಸುವುದಕ್ಕೆ ನನಗೆ ಹರ್ಷವಾಗುತ್ತಿದೆ ಮತ್ತು ನಿಮ್ಮನ್ನು ಪ್ರೋತ್ಸಾಹಿಸುವೆನು.

ನಾನು ಈಗ ತಾನೆ ನಿಮ್ಮ ಗುರಿ, ಉದ್ದೇಶ ಮತ್ತು ಚಟುವಟಿಕೆಗಳ ಬಗ್ಗೆ ಸ್ವಲ್ಪ ಮಾಹಿತಿಯನ್ನು ಓದಿದೆನು. ಅದು ನಿಜವಾಗಿಯೂ ಕುತೂಹಲಕಾರಿಯಾದ ಮಾಹಿತಿಯಾಗಿದೆ. ಜನರ ದೈಹಿಕ ಕೌಶಲ್ಯಗಳು ಎಲ್ಲರಿಗೂ ಗೊತ್ತಿರುವ ವಿಷಯವೆ. ಅಂತಹ ಕೌಶಲ್ಯದ ಅಗತ್ಯವಿದ್ದಾಗ ನಿಮ್ಮ ಜಾತಿಯ ಜನರನ್ನು ನೆನಪಿಸಿಕೊಳ್ಳುವೆನು. ನಾನು ದಿನವೂ ಬಳಸುವ ಹಲವು ವಸ್ತುಗಳು ನಿಮ್ಮ ಜಾತಿಯವರ ಕೌಶಲ್ಯದಿಂದ ಆದ ವಸ್ತುಗಳಾಗಿವೆಯೆಂದು ತಿಳಿಸಲು ನನಗೆ ಸಂತೋಷವೆನಿಸುತ್ತದೆ. ನನ್ನ ಪ್ರಜೆಗಳಲ್ಲಿ ಅಂತಹ ಕುಶಲಕರ್ಮಿಗಳನ್ನು ನಾನು ಹೊಂದಿರುವುದು ನನಗೆ ಹೆಮ್ಮೆಯೆನಿಸುತ್ತದೆ. ಈ ವಿಚಾರದಲ್ಲಿ ಕುಶಲ ವಸ್ತುಗಳ ವಸ್ತುಪ್ರದರ್ಶನವು ಈ ವಿಷಯದಲ್ಲಿ ನನಗೆ ಹೆಚ್ಚು ಜ್ಞಾನವನ್ನು ತಿಳಿಸುತ್ತದೆ. ನಾವು ಏನು ಮಾಡಬಹುದೆಂಬುದನ್ನು ಸ್ಪಷ್ಟವಾಗಿ ನೋಡಬಹುದು. ಈ ವಸ್ತು ಪ್ರದರ್ಶನವು ಸ್ವದೇಶಿ ಅನುಚರರಿಗೆ ಕಣ್ಣು ತೆರೆಸುವಂಥದ್ದು. ಎಷ್ಟು ವಸ್ತುಗಳನ್ನು ಮಾಡಲಾಗಿದೆಯೆಂಬುದನ್ನು ಅದು ತೋರಿಸುತ್ತದೆ. ಸ್ಥಳೀಯ ಕರಕುಶಲ ಕೌಶಲ್ಯಗಳನ್ನು ಪ್ರೋತ್ಸಾಹಿಸಲು ಈ ವಸ್ತು ಪ್ರದರ್ಶನವನ್ನು ಸಂಘಟಿಸುವುದು ಅವಶ್ಯಕ ಎಂಬುದನ್ನು ತೋರಿಸುತ್ತದೆ. ಅಂತಹ ರಾಷ್ಟ್ರೀಯ ಪ್ರದರ್ಶನಗಳನ್ನು ಅಂತಹ ಯಾವುದೇ ಸಂದರ್ಭದಲ್ಲಿ ಸಾಮಾನ್ಯವಾಗಿ ಸಂಘಟಿಸಬಹುದು. ನಿಮ್ಮ ಈ ಪ್ರದರ್ಶನವು ನಿಜವಾಗಿಯೂ ಮೆಚ್ಚುವಂಥದ್ದು ಮತ್ತು

ಆರಂಭಿಗರಿಗೆ ಮಾರ್ಗದರ್ಶನ ನೀಡುವಂಥದ್ದು. ಇದು ಗಿರಾಕಿಗಳಿಗೆ ಬಹು ಉಪಯುಕ್ತವಾದುದು ಮತ್ತು ಎಲ್ಲಿಂದ ವಸ್ತುಗಳನ್ನು ಮಾರಾಟಕ್ಕಾಗಿ ತರಿಸಬಹುದೆಂಬ ಮಾಹಿತಿಯು ಅವನಿಗೆ ಲಭ್ಯವಾಗುತ್ತದೆ.

ರಾಷ್ಟ್ರದ ಪ್ರಗತಿ ಸಂಪೂರ್ಣವಾಗಿ ಕೈಗಾರಿಕೆಯ ಅಭಿವೃದ್ಧಿಯ ಮೇಲೆ ಅವಲಂಬಿಸಿದೆ ಎಂಬುದು ಸಾರ್ವತ್ರಿಕವಾಗಿ ಒಪ್ಪಿದ ತತ್ವವಾಗಿದೆ. ನಾನು ಕೈಗಾರಿಕೆಯನ್ನು ಪ್ರೋತ್ಸಾಹಿಸಲು ಒಪ್ಪುತ್ತೇನೆ. ಆ ದಿಸೆಯಲ್ಲಿ ನಾನು ತೆಗೆದುಕೊಂಡ ಕ್ರಮಗಳನ್ನು ನೀವು ಅರಿಯಬಹುದು.

ಭಾರತ ಮೂಲತಃ ಕೃಷಿ ಪ್ರಧಾನವಾದ ದೇಶ. ಅದರ ಜನರ ಮುಖ್ಯ ಕಸುಬು ಕೃಷಿ. ಭಾರತದ ಜನಸಂಖ್ಯೆಯಲ್ಲಿ ಸುಮಾರು ಶೇಕಡ ೮೦ರಷ್ಟು ಜನ ಕೃಷಿಯ ಮೇಲೆ ಆಧಾರವಾಗಿದ್ದಾರೆ. ಕುಶಲಕರ್ಮಿಗಳು ನಿಸ್ಸಂದೇಹವಾಗಿ ಉತ್ತಮ ಕುಶಲಿಗಳಾಗಿದ್ದಾರೆ. ಆದರೆ ಅವರು ಪ್ರಸ್ತುತ ಸನ್ನಿವೇಶದಲ್ಲಿ ಮಷೀನುಗಳೊಂದಿಗೆ ಸ್ಪರ್ಧಿಸಲಾರರು. ಪಾಶ್ಚಿಮಾತ್ಯ ದೇಶಗಳಲ್ಲಿ ಬಂಡವಾಳಗಾರರು ಮತ್ತು ಕಾರ್ಮಿಕರ ನಡುವೆ ಒಂದು ಸಂಘರ್ಷವಿದೆ. ಇತ್ತೀಚಿನವರೆಗೆ, ಬಂಡವಾಳಗಾರರದು ಮೇಲುಕೈ ಆಗಿತ್ತು. ಈಗ ಕಾರ್ಮಿಕರ ಸರದಿಯಾಗಿದೆ. ಅವರು ಸಂಘಟಿತರಾಗಿ ತಮ್ಮ ಬೇಡಿಕೆಗಳನ್ನು ಮುಂದಿಡುತ್ತಿದ್ದಾರೆ. ಅವರು ಒಗ್ಗಟ್ಟಿನಿಂದಿರುವುದರಿಂದ ಅವರ ಬೇಡಿಕೆಗಳನ್ನು ಒಪ್ಪಲಾಗಿದೆ. ಆದರೆ ಇಂದು ಸಹ ಕಾರ್ಮಿಕರ ಸ್ಥಿತಿಗತಿಗಳು ಈ ದೇಶಗಳಲ್ಲಿ ಸರಿ ಇಲ್ಲ. ಅಂತಹ ರೀತಿಯ ಕಾರ್ಮಿಕವರ್ಗ ಭಾರತದಲ್ಲಿ (ಬಂಡವಾಳಶಾಹಿಗಳಿಂದ ಶೋಷಿತರಾದವರು) ಹುಟ್ಟಿಕೊಳ್ಳಬೇಕೆಂಬುದು ನನಗೆ ಸಮ್ಮತವಲ್ಲ. ಸಾವಿರಾರು ಜನರು ಒಬ್ಬ ಬಂಡವಾಳಗಾರನ ಸ್ವಾರ್ಥ ಮತ್ತು ಹುಚ್ಚಾಟಗಳ ಮೇಲೆ ಅವಲಂಬಿಸುವುದು ಸರಿ ಅಲ್ಲ. ಆದ್ದರಿಂದ ಪಶ್ಚಿಮದಲ್ಲಿ ಪ್ರಚಲಿತವಾಗಿರುವ ಕೈಗಾರಿಕೆಯ ಈ ವಿಧವು ನಮ್ಮ ದೇಶಕ್ಕೆ ಪ್ರಯೋಜನಕಾರಿಯಲ್ಲ.

ಜನರು ಕೃಷಿಯ ಮೇಲೆ ಬದುಕಲು ಸಾಧ್ಯವಿಲ್ಲ. ಕೃಷಿಯು ದಿನೇ ದಿನೇ ಹೆಚ್ಚಾಗುತ್ತಿರುವ ಜನರ ಹೊಟ್ಟೆಗೆ ನೀಡಲು ಕೃಷಿಯು ಸಾಕಾಗುತ್ತಿಲ್ಲವಾದ್ದರಿಂದ ಹೆಚ್ಚು ಜನರು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಹಳ್ಳಿಗಳನ್ನು ತೊರೆಯಲಾಗುತ್ತಿದೆ ಮತ್ತು ನಗರಗಳು ತುಂಬಿ ತುಳುಕುತ್ತಿವೆ. ಆದ್ದರಿಂದ ನಗರಗಳಲ್ಲಿ ಆರೋಗ್ಯ ಸೌಲಭ್ಯಗಳು ಕಳಪೆಯಾಗುತ್ತಿವೆ. ಬದಲಿಗೆ ಅವು ಹಳ್ಳಿಗಳ ಮೇಲೆ ಪರಿಣಾಮ ಬೀರುತ್ತಿವೆ. ಆದ್ದರಿಂದ ಈ ದೇಶದ ಹಿತವನ್ನು ಬಯಸುವವರು ಕೃಷಿಯ ಸುಧಾರಣೆಯ ಬಗ್ಗೆ ಗಮನ ಹರಿಸಬೇಕಾಗಿದೆ. ಬೇರೆ ದೇಶಗಳೊಂದಿಗೆ ಹೋಲಿಕೆ ಮಾಡಿದಾಗ ನಮ್ಮ ಸರಾಸರಿ ಕೃಷಿಯ ಉತ್ಪಾದನೆ ಬಹಳ ಕಡಿಮೆ. ಇದನ್ನು ಸುಧಾರಿಸಲು ಸಾಕಷ್ಟು ಅವಕಾಶವಿದೆ. ಕೃಷಿಯಲ್ಲಿರುವ ಹೆಚ್ಚಿನ ಜನಸಂಖ್ಯೆಯ ಬಹಳಷ್ಟು ಪ್ರಮಾಣದ ಜನರನ್ನು ಉಪಯೋಗಿಸಿಕೊಳ್ಳುವುದು ಉತ್ತಮ. ಮಿಕ್ಕಿದ ಹೆಚ್ಚಿನ ಜನರು ಕೈಗಾರಿಕೆಗೆ ಹೋಗಬೇಕು.

ಕೃಷಿಯನ್ನು ಸುಧಾರಿಸುವ ಸಲುವಾಗಿ ಉತ್ತಮ ನೇಗಿಲುಗಳು ಅವಶ್ಯ. ನೀವು ಈ ಕಡೆಗೆ ಗಮನಕೊಟ್ಟಿರುವುದು ನನಗೆ ತುಂಬಾ ಸಂತೋಷವಾಗಿದೆ. ನಿಮ್ಮಂತಹ ಕುಶಲಕರ್ಮಿಗಳು ಮನಸ್ಸುಮಾಡಿದರೆ ಕೊರತೆಯನ್ನು ಬೇಗನೇ ಖಂಡಿತ ನೀಗಿಸಬಹುದೆಂದು ನನ್ನ ಭಾವನೆ. ಉತ್ತಮ ಉಳುಮೆ ಮತ್ತು ನೀರಾವರಿ ಸಲಕರಣೆಗಳು ಪ್ರತಿಯೊಬ್ಬ ರೈತನಿಗೆ ಸಹಾಯಮಾಡುವುದು. ಆ ದಿಕ್ಕಿನಲ್ಲಿ ನಿಮ್ಮ ಪ್ರಯತ್ನಗಳಿಗೆ ನಾನು ಅಭಿನಂದಿಸುತ್ತೇನೆ. ನಿಮ್ಮ ಉತ್ತಮ ಗುರಿಗಳನ್ನು ಈಡೇರಿಸುವಲ್ಲಿ ನಾನು ಪ್ರತಿಯೊಂದು ಸಾಧ್ಯವಾದ ನೆರವನ್ನು ನೀಡುವೆನೆಂದು ಭರವಸೆ ನೀಡುತ್ತೇನೆ.

ಒಂದು ಜಾತಿಯಲ್ಲಿ ಶಿಕ್ಷಣ ಹರಡುವುದು ಪ್ರತಿಯೊಬ್ಬನ ಕರ್ತವ್ಯವಾಗುತ್ತದೆ. ಕೊಲ್ಹಾಪುರದಲ್ಲಿ ವಿದ್ಯಾರ್ಥಿ ನಿಲಯಗಳೆಂಬುದು ವಿಶೇಷವಾಗಿದೆ. ಯಾವ ನಗರವು ವಿದ್ಯಾರ್ಥಿ ನಿಲಯಗಳ ಬಗ್ಗೆ ಹೆಮ್ಮೆಪಡುವ ಹಾಗಿಲ್ಲ. ಇದು ಎಲ್ಲರು ಮೆಚ್ಚಬಹುದಾದ ಮತ್ತು ಸ್ತುತ್ಯಾರ್ಹವಾದ ಕೆಲಸವಾಗಿದೆ.

ನಾನು ಇಂಡಸ್ಟ್ರಿಯಲ್ ಸ್ಕೂಲ್ ಬಗ್ಗೆ ಹೇಳುವ ಅವಶ್ಯಕತೆಯಿಲ್ಲ. ಒಬ್ಬರ ಮಗುವಿಗೆ ಕೌಶಲ್ಯಗಳನ್ನು ಕಲಿಸುವ ದುರಾಚಾರಕ್ಕಾಗಿ ಹಲವರ ಕೌಶಲ್ಯಗಳನ್ನು ಕಳೆದುಕೊಳ್ಳಬೇಕಾಯಿತು. ಜ್ಞಾನವನ್ನು ರಹಸ್ಯವಾಗಿಡುವ ಮೂಲಕ ಜ್ಞಾನವನ್ನು ಸಂರಕ್ಷಿಸುವುದಕ್ಕೆ ಸಾಧ್ಯವಿಲ್ಲ. ನಮ್ಮ ಬ್ರಾಹ್ಮಣ ಸಹೋದರರು ಜ್ಞಾನವನ್ನು ರಹಸ್ಯವಾಗಿಡುವ ತಪ್ಪನ್ನು ಮಾಡಿದರು. ಬೇರೆಯವರು ಅವರನ್ನು ಅನುಸರಿಸಿದರು. ಈ ಆಚರಣೆಯ ಮೂಲಕ ಬ್ರಾಹ್ಮಣರ ಜ್ಞಾನ ಕುಂಠಿತವಾಯಿತು. ಬ್ರಾಹ್ಮಣೇತರರನ್ನು ಅಜ್ಞಾನದ ಕತ್ತಲಿಗೆ ನೂಕಲಾಯಿತು ಮತ್ತು ಕುಶಲಕರ್ಮಿಗಳು ತಮ್ಮ ಕೌಶಲ್ಯಗಳನ್ನು ಕಳೆದುಕೊಂಡರು. ಈಗ ನೀವು ಬೇರೆ ಜಾತಿಗಳಿಂದಲೂ ವಿದ್ಯಾರ್ಥಿಗಳನ್ನು ಈ ಸ್ಕೂಲಿಗೆ ಸೇರಿಸಿಕೊಳ್ಳುತ್ತಿದ್ದೀರಿ ಮತ್ತು ಅವರಿಗೆ ಈ ವಿಧಾನಗಳನ್ನು ಕಲಿಸುತ್ತಿದ್ದೀರಿ, ಇದು ಒಳ್ಳೆಯದು. ಹಿಂದೆ ಮಾಡಿದ್ದ ತಪ್ಪುಗಳನ್ನು ತಾವು ಮನವರಿಕೆ ಮಾಡಿಕೊಂಡಿದ್ದೀರಿ ಮತ್ತು ಅವುಗಳನ್ನು ಸರಿಪಡಿಸಲು ತಾವು ಕ್ರಮಗಳನ್ನು ಕೈಗೊಂಡಿದ್ದೀರಿ.

ಜಾತಿಪದ್ಧತಿಯು ಒಂದು ದೊಡ್ಡ ರೋಗ, ಭಾರತ ಅದರಿಂದ ಬಾಧೆಪಡುತ್ತಿದೆ. ನಾನು ಅದನ್ನೇ ಬಹಿರಂಗವಾಗಿ ಹೇಳಿದ್ದೇನೆ. ನನ್ನ ಕಡೆಯಿಂದ ಅದರ ನಿವಾರಣೆಗೆ ನಿರಂತರ ಪ್ರಯತ್ನ ನಡೆಯುತ್ತಿದೆ. ಈ ವಿಷಯದಲ್ಲಿ ಪ್ರಯತ್ನಗಳ ಆಧಾರದ ಮೇಲೆ ನಾನು ನಿಮ್ಮ ಜಾತಿಯನ್ನು ಪ್ರೋತ್ಸಾಹಿಸುವುದು ನಾನು ಬೋಧಿಸಿದ ಬೋಧನೆಗೆ ವಿರುದ್ಧವಿದೆ. ಅಥವಾ ಕೆಲವರು ನನ್ನನ್ನು ತೆಗಳುವರು. ಆದ್ದರಿಂದ ಈ ಬಗ್ಗೆ ಕೆಲವು ಮಾತುಗಳನ್ನು ಹೇಳಿದರೆ ವಿಷಯಾಂತರವಾಗುವುದಿಲ್ಲ. ಸ್ವಲ್ಪಮಟ್ಟಿಗೆ ಜಾತೀಯತೆಯನ್ನು ಮತ್ತು ಜಾತಿಯ ಸಂಕುಚಿತತೆಯನ್ನು ನಾಶಮಾಡುವುದು ಕಷ್ಟದ ಕೆಲಸವಾಗಿದೆ. ಕುಟುಂಬ ಮನುಷ್ಯನ ಕೇರನ್ನು ತೆಗೆದುಕೊಳ್ಳುತ್ತದೆ ಮತ್ತು ಅದಕ್ಕಾಗಿ ಅವನನ್ನು ತೆಗಳುವಂತಿಲ್ಲ. ಮನುಷ್ಯನು ತನ್ನ ಕುಟುಂಬದ ಆಚೆಗೆ ನೋಡದಿದ್ದರೆ ಅವನನ್ನು ಖಂಡಿತವಾಗಿ ತೆಗಳಬೇಕಾಗುತ್ತದೆ. ನೀನು ಹುಟ್ಟಿದ ಕಡೆಯಲ್ಲಿ ಗುಂಪಿನ ಅಭಿವೃದ್ಧಿಯ ಬಗ್ಗೆ ಹೊಣೆಯೆಂದು ಭಾವಿಸುವುದು ಸರಿಯೆ. ಆದರೆ ಒಂದು ಸಮಾಜವಿದೆ. ಆ ಗುಂಪಿಗಿಂತ ದೊಡ್ಡದಾದ ಒಂದು ಸಮಾಜವಿದೆ ಮತ್ತು ಅದರ ಸೇವೆಯನ್ನು ಸಹ ಮಾಡಬೇಕೆಂಬುದನ್ನು ಸಹ ಮನಸ್ಸಿನಲ್ಲಿಡಬೇಕಾಗುತ್ತದೆ. ಆದ್ದರಿಂದ ಜಾತಿಯ ಹೆಮ್ಮೆಯನ್ನು ನಿಗ್ರಹಿಸಬೇಕಾಗುತ್ತದೆ. ನಾವು ಹಿಂದುಗಳು ಮತ್ತು ನಮ್ಮ ರಾಷ್ಟ್ರದ ಅಭಿವೃದ್ಧಿಗೆ ನಾವು ಹೊಣೆಯೆಂಬುದನ್ನು ನಾವು ಮರೆಯುವಂತಿಲ್ಲ. ಸಂಕ್ಷಿಪ್ತವಾಗಿ ಜಾತಿಯ ಹೆಮ್ಮೆ ರಾಷ್ಟ್ರೀಯ ಒಳಿತಿಗಾಗಿ ಪೂರಕವಾಗಿರಬೇಕು ಮತ್ತು ರಾಷ್ಟ್ರವು ಸಾಮಾನ್ಯ ಒಳಿತನ್ನು ಕಡೆಗಣಿಸುವಂತಿಲ್ಲ.

---

೧೬

# ನಮ್ಮ ಹಕ್ಕುಗಳನ್ನು ಚಲಾಯಿಸೋಣ

**ದಿನಾಂಕ ೧೬ ಫೆಬ್ರವರಿ ೧೯೨೨ರಂದು ದೆಹಲಿಯಲ್ಲಿ ನಡೆದ ಮೂರನೆಯ ಅಖಿಲ ಭಾರತ ಅಸ್ಪೃಶ್ಯರ ಸಮ್ಮೇಳನದಲ್ಲಿ ಶಾಹುರವರು ಮುಖ್ಯ ಅತಿಥಿಗಳಾಗಿದ್ದರು. ಅವರು 'ಅಸ್ಪೃಶ್ಯರು' ಹೊಸ ಮತ್ತು ಘನತೆ–ಗಾಂಭೀರ್ಯದ ವೃತ್ತಿಗಳನ್ನು ವಶಪಡಿಸಿಕೊಳ್ಳಬೇಕೆಂದು ಮತ್ತು ಈ ವಿಷಯದಲ್ಲಿ ಡಾ. ಭೀಮರಾವ್ ಅಂಬೇಡ್ಕರರ ನಿದರ್ಶನವನ್ನು ಅನುಕರಿಸಬೇಕೆಂದು ಕರೆ ಕೊಟ್ಟರು.**

---

ನನಗೆ ನಿಮ್ಮ ಭಾಷೆ ಚೆನ್ನಾಗಿ ಗೊತ್ತಿಲ್ಲ. ನಾನು ಚೆನ್ನಾಗಿ ತಿಳಿಸಲು ಪ್ರಯತ್ನಪಡುವೆ. ದಯವಿಟ್ಟು ನನ್ನ ಹರಕು–ಮುರುಕು ಭಾಷೆಯನ್ನು ಕ್ಷಮಿಸುವಿರೆಂದು ನಾನು ಭಾವಿಸುತ್ತೇನೆ.

ನನಗಿಂತ ಹೆಚ್ಚು ಶಿಕ್ಷಿತರಾದ, ನಮ್ಮೊಂದಿಗಿರುವ ಡಾ.ಅಂಬೇಡ್ಕರರವರಿಗೆ ಅಧ್ಯಕ್ಷತೆವಹಿಸುವ ಗೌರವ ಮತ್ತು ತಮ್ಮ ಕುರಿತು ಮಾತನಾಡುವ ಗೌರವ ನಿಜವಾಗಿ ಅವರಿಗೆ ಸಲ್ಲಬೇಕಾಗಿತ್ತು. ದುರಾದೃಷ್ಟವಶಾತ್ ಈ ಸಮ್ಮೇಳನದಲ್ಲಿ ನಮ್ಮ ನಡುವೆ ಇರದೆ ಅವರು ಇಂಗ್ಲೆಂಡಿನಲ್ಲಿದ್ದಾರೆ. ಆದರೆ ಅವರು ಎಲ್ಲಿಯೇ ಇರಲಿ ಅವರ ಸಮುದಾಯದ ಸಹಮಾನವರ ನೋವು ದುಮ್ಮಾನಗಳಲ್ಲದೆ ಅವರ ಹೃದಯದ ಸಮೀಪ ಮತ್ಯಾವುದೂ ಸುಳಿಯುವುದಿಲ್ಲ ಎಂಬುದನ್ನು ನಾನು ಖಾತ್ರಿಪಡಿಸುತ್ತೇನೆ.

ತಾವೆಲ್ಲರೂ ತಮ್ಮ ಮನೆ–ಮಠಗಳನ್ನು ಬಿಟ್ಟು ನಮ್ಮ ಪ್ರೀತಿಯ ಮಹಾರಾಜ ಚಕ್ರವರ್ತಿ ಜಾರ್ಜ್–೫ ಅವರ ವಾರಸುದಾರರ ವೇಲ್ಸ್‌ನ ಘನತೆವೆತ್ತ ಮಾನ್ಯ ಮಹಾರಾಜರನ್ನು ಹೃದಯಪೂರ್ವಕ ಸ್ವಾಗತ ಕೋರಲು ತಾವೆಲ್ಲ ಬಂದಿದ್ದೀರಿ. ಮತ್ತು ಮಾನ್ಯ ಘನತೆವೆತ್ತ ಮಹಾರಾಜರು ತಮ್ಮನ್ನು ನೋಡಲು ಸಂತೋಷಗೊಂಡಿದ್ದಾರೆ ಮತ್ತು ತಮ್ಮ ಬಗ್ಗೆ ಗಾಢವಾದ ಮಮತೆಯನ್ನು ಹೊಂದಿದ್ದಾರೆ.

ತಾವು ಶಾಂತಮಾರ್ಗದಲ್ಲಿ ನಿಮ್ಮ ಪ್ರಗತಿಗಾಗಿ ಕೆಲಸಮಾಡಲು ನೀವೆಲ್ಲ ಇಲ್ಲಿ ಒಟ್ಟುಗೂಡಿದ್ದೀರಿ. ನಿಮಗೆಲ್ಲರಿಗೂ ಅಭಿನಂದನೆಗಳು. ನಿಮ್ಮಲ್ಲಿ ಸಲಹಾರೂಪದ ಹೊಸಹುರುಪು ನಿರ್ಮಾಣವಾಗಿದೆ. ನೀವು ಹೊಸಹುರುಪಿನ ಈ ಹೋರಾಟವನ್ನು ನಿರಂತರವಾಗಿ ಮುಂದುವರಿಸಿದರೆ, ಸ್ವ–ಪ್ರಗತಿಯ ಈ ಪ್ರಯತ್ನ ಸಾಮಾಜಿಕ ಹೀನ ಸ್ಥಾನಮಾನದಿಂದ ನಿಮ್ಮನ್ನು ನೀವೇ ವಿಮೋಚನೆಗೊಳಿಸಿಕೊಳ್ಳುವ ಈ ಕಠಿಣ ಹೋರಾಟದಲ್ಲಿ ದೇವರು ನೀವು ಸಫಲರಾಗಬೇಕೆಂದು ನಿಮ್ಮ ಪ್ರಯತ್ನಗಳಿಗೆ ಜಯದ ಕಿರೀಟವನ್ನು ತೊಡಿಸುವನು ಎಂದು ನನ್ನ ಭಾವನೆ. ನೀವು ವಂಶಪಾರಂಪರಿಕ ವೃತ್ತಿಗಳಿಗೆ ಅಂಟಿಕೊಳ್ಳಬೇಡಿಯೆಂದು

ನಿಮ್ಮಲ್ಲಿ ಪ್ರಾರ್ಥಿಸುತ್ತೇನೆ. ನಿಮ್ಮನ್ನು ನೀವು ಶಿಕ್ಷಿತರಾಗುವುದಕ್ಕೆ ನಿರ್ಣಾಯಕ ಹೋರಾಟಮಾಡಿ ಮತ್ತು ಸೇನೆಗೆ ಪ್ರವೇಶಮಾಡಿ ಮತ್ತು ಸರಕಾರದ ಹಲವಾರು ಇಲಾಖೆಗಳ ಹಲವಾರು ಕಛೇರಿಗಳಲ್ಲಿ ಕೆಲಸಕ್ಕೆ ಸೇರಿಕೊಳ್ಳಿ. ಇಷ್ಟು ಮಾತ್ರವಲ್ಲದೆ, ಕಾನೂನು, ವೈದ್ಯಕೀಯ, ವ್ಯಾಪಾರ ಮತ್ತು ವಾಣಿಜ್ಯದ ನಾನಾ ಕ್ಷೇತ್ರಗಳಲ್ಲಿ ಪೌಢಿಮೆಯನ್ನು ಸಾಧಿಸಿರಿ ಹಾಗೂ ನಿಮ್ಮನ್ನು ನೀವೇ ಮುಂದಕ್ಕೆ ತಳ್ಳಿಕೊಂಡು ಮುಂದುವರಿಯಿರಿ.

ನನ್ನ ಪುಟ್ಟ ಸಂಸ್ಥಾನದಲ್ಲಿ ನಿಮ್ಮ ಸಮುದಾಯದ ಜನರು ಅಂತಹ ಹುದ್ದೆಗಳನ್ನು ಪಡೆಯುತ್ತಿದ್ದಾರೆ ಮತ್ತು ಅಂತಹ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಅಷ್ಟೆ ಅಲ್ಲ, ಅವರಲ್ಲಿ ಒಬ್ಬರು ಸಹ ಸಿಟಿ ಮುನಿಸಿಪಲ್ ಕಮಿಟಿಯ ಅಧ್ಯಕ್ಷರು ಆಗಿದ್ದಾರೆ. ಇದನ್ನು ಕೊಚ್ಚಿಕೊಳ್ಳುತ್ತಿದ್ದೇನೆಂದು ನನ್ನನ್ನು ತೆಗಳಬಹುದು. ನೀವು ಪ್ರಯತ್ನಪಟ್ಟರೆ ನಿಮ್ಮಲ್ಲಿನ ಜನರು ಸಹ ಇದನ್ನು ಸಾಧಿಸಬಹುದೆಂದು ತಿಳಿಸುವುದಕ್ಕಾಗಿಯೇ ಇದನ್ನು ನಾನು ಹೇಳುತ್ತಿದ್ದೇನೆ. ದಯವಿಟ್ಟು ನನ್ನನ್ನು ಕ್ಷಮಿಸಿ. ವೇಲ್ಸ್‌ನ ಘನತೆವೆತ್ತ ಮಹಾರಾಜರು ಒಮ್ಮೆ ನಮ್ಮಲ್ಲಿಗೆ ಮತ್ತೆ ಬಂದಾಗ, ನೀವು ಸೇನೆಯಲ್ಲಿ, ನಾಗರಿಕ ಆಡಳಿತದಲ್ಲಿ ಅಧಿಕಾರಿಗಳಾಗಿ ಹಾಗೂ ಸ್ವತಂತ್ರ ವೃತ್ತಿಗಳ ಸದಸ್ಯರಾಗಿ ಅವರಿಗೆ ಹಾರ್ದಿಕ ಸ್ವಾಗತ ನೀಡುವುದಕ್ಕೆ ಅರ್ಹರಾಗಿ ನಮ್ಮ ಪ್ರೀತಿಯು ಅವರನ್ನು ಆಕರ್ಷಿಸುವುದರಲ್ಲಿ ವಿಫಲವಾಗುವುದಿಲ್ಲವೆಂದು ನಾನು ಖಂಡಿತವಾಗಿ ಹೇಳುತ್ತೇನೆ. ನಮ್ಮನ್ನು ನಾವೇ ಶಿಕ್ಷಿತರಾಗುವುದಕ್ಕೆ ಮತ್ತು ಜಾತಿಮತಗಳ ಭೇದಭಾವವಿಲ್ಲದಂತೆ ಮಾಡುವ ಸಮಾನ ಅವಕಾಶವನ್ನು ನೀಡಿದ ಧೋರಣೆಯ ಕಾರಣದಿಂದ ನಮ್ಮಲ್ಲಿ ಆದ ಹೊಸಜೀವನ ಮತ್ತು ಜಾಗೃತಿಯ ಧ್ಯೇಯವನ್ನು ನಾವು ಎಂದೆಂದಿಗೂ ಮರೆಯುವಂತಿಲ್ಲ. ಹೊಸ ಸುಧಾರಣೆಗಳ ಕಾಯ್ದೆಗಳಡಿಯಲ್ಲಿ ನಿಮ್ಮಲ್ಲಿ ಹಲವರು ವೋಟುಮಾಡುವ ಹಕ್ಕನ್ನು ಅನುಭವಿಸುತ್ತಿದ್ದೀರಿ. ನಮ್ಮನ್ನು ನಾವೇ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ನೈತಿಕವಾಗಿ ಏಳಿಗೆ ಮಾಡಿಕೊಳ್ಳುವುದಕ್ಕಾಗಿ ಸ್ವಯಂ ಆಡಳಿತದ ಪ್ರಗತಿಪರ ಸಾಕಾರಕ್ಕಾಗಿ ನಮ್ಮ ರಾಜಕೀಯ ಉದ್ದೇಶಗಳನ್ನು ನಿರ್ಧರಿಸುವುದರ ಮೂಲಕ ನಮ್ಮ ದಯಾಳುವಾದ ಸರಕಾರ ಹಲವು ದಾರಿಗಳನ್ನು ತೆರೆಯಲು ಹೊಸ ಸುಧಾರಣೆಗಳು ಅನುಕೂಲ ಮಾಡಿಕೊಟ್ಟದ್ದನ್ನು ನಾವು ವಿವೇಚನೆಯಿಂದ ಸದುಪಯೋಗ ಪಡಿಸಿಕೊಳ್ಳಬೇಕೆಂದು ನಾನು ಭಾವಿಸುತ್ತೇನೆ.

ಯಾವುದೇ ದೇಶದ ರಾಜಕೀಯ ಹಣೆಬರಹವು ಈ ದೇಶದ ಜನರ ಚಾರಿತ್ರ್ಯದ ಮೇಲೆ ಅವಲಂಬಿಸಿದೆ. ಆದ್ದರಿಂದ ವಿಶೇಷವಾಗಿ ನಮ್ಮ ಯುವಜನರ ಚಾರಿತ್ರ್ಯನಿರ್ಮಾಣಕ್ಕಾಗಿ ನಾವು ಮಹಾಪ್ರಯತ್ನಗಳನ್ನು ಮಾಡಬೇಕಾಗಿದೆ. ಮತ್ತು ನಮಗೆ ನೀಡಿರುವ ಹೊಸ ಹಕ್ಕುಗಳಿಗಾಗಿ ನಾವು ಅರ್ಹರೆಂಬುದನ್ನು ನಾವೇ ಸಾಧಿಸಿತೋರಿಸಬೇಕಾಗಿದೆ. ನೀವು ನಮ್ಮಲ್ಲಿ ಒಳ್ಳೆಯ ನಾಯಕರು ಮತ್ತು ನೀವು ಬಯಸಿದ ಉದ್ದೇಶದ ಸಾಕಾರದ ಕಡೆಗೆ ಒಂದು ಶಾಂತಿಯುತ ಮತ್ತು ಸೂಕ್ತದಾರಿಯಲ್ಲಿ ಹೋಗಿರುವವರನ್ನು ನೋಡಿ ನನಗೆ ಸಂತೋಷವಾಗಿದೆ.

ಭಾರತದ ರಾಷ್ಟ್ರದಲ್ಲಿ ಕಂಡ ಹೊಸ ಸ್ಫೂರ್ತಿಯ ಉತ್ಸಾಹದಲ್ಲಿ ನೀವು ರಾಷ್ಟ್ರವನ್ನು ಮರೆಯಬಾರದೆಂಬುದನ್ನು ನೆನಪಿಡಿ. ಹಲವು ಯುಗಗಳಿಂದ ಹಾದುಬಂದ ಅಸ್ಪೃಶ್ಯತೆಯ ರದ್ದತಿಯು ತನ್ನ ಬುಡವನ್ನೇ ಕಳೆದುಕೊಳ್ಳುತ್ತಿದೆ. ಅಸ್ಪೃಶ್ಯತೆಯ ರದ್ದತಿಯ ಪದವು ಗತಿಸಿಹೋದ ಶಬ್ದವಾಗಿ ಕಾಣಿಸಿಕೊಳ್ಳುವ ನವೋದಯ(Dawn) ಖಂಡಿತವಾಗಿ ಬಂದೇ ಬರುತ್ತದೆ. ನೀವು ನಿಮ್ಮ ಹಕ್ಕುಗಳನ್ನು ತದೇಕಚಿತ್ತದಿಂದ ಕಾಣುವುದನ್ನು ಕಲಿಯಬೇಕು. ನಿಮ್ಮ ಸಾಮಾಜಿಕ ಹಕ್ಕುಗಳ ಮೇಲೆ ಆಕ್ರಮಣವಾಗುವುದನ್ನು ನೀವು ಎಂದಾದರೂ ಕಂಡರೆ ನೀವು ದೃಢವಾಗಿರಬೇಕು ಮತ್ತು ನೀವು ನಿಮ್ಮ ಹಕ್ಕುಗಳನ್ನು ಹುರುಪಿನಿಂದ

ಹೋರಾಡುವ ಮತ್ತು ದ್ವೇಷದ ಮೂಲಕ ಸಂರಕ್ಷಿಸುವುದು ಅಲ್ಲ, ಆದರೆ ನೀವು ವಿವೇಚನೆ ಮತ್ತು ಪ್ರೀತಿಯ ಹುರುಪಿನಿಂದ ಸಂರಕ್ಷಿಸಬೇಕು. ಇವೆಲ್ಲವನ್ನೂ ಶಾಂತಿಯುತವಾಗಿ ಮಾಡಬೇಕಾದರೆ ನಾವು ಸರಕಾರದೊಂದಿಗೆ ಸಹಕರಿಸಬೇಕು ಮತ್ತು ಅವಶ್ಯಕತೆ ಬಿದ್ದಾಗಲೆಲ್ಲ ಸರಕಾರದ ಸಹಾಯವನ್ನು ತೆಗೆದುಕೊಳ್ಳಬೇಕು.

ಪ್ರಗತಿ ಮತ್ತು ಸಮೃದ್ಧಿಯ ಮಾರ್ಗ ರಕ್ತಕ್ರಾಂತಿ ಮತ್ತು ಬಂಡಾಯವಲ್ಲ, ಆದರೆ ಶಾಂತಿಯುತ ಕ್ರಾಂತಿಯೆಂಬುದು ವಿಶ್ವದ ಅಂಗೀಕೃತ ತತ್ವವಾಗಿದೆ. ಈ ೨೦ನೇ ಶತಮಾನದಲ್ಲಿ ವಾಷಿಂಗಟನ್ ಮತ್ತು ಜಿನೀವಾದಲ್ಲಿ ಅಂತಾರಾಷ್ಟ್ರೀಯ ಸಮ್ಮೇಳನಗಳು ಈ ತತ್ವದ ನಿರೂಪಣೆಗಳಾಗಿವೆ. ನಾವೆಲ್ಲರೂ ಅದೇ ತತ್ವವನ್ನು ಒಪ್ಪೋಣ ಮತ್ತು ಅನುಸರಿಸೋಣ.

ನಿಮ್ಮ ಮುಂದೆ ಶ್ರೀ ಭೀಮರಾವ್ ಅಂಬೇಡ್ಕರ್‌ರು ನಿಮ್ಮ ಮಹಾನಾಯಕರೆಂದು ಭಾವಿಸಿಕೊಂಡ ಚಿತ್ರವಿಟ್ಟುಕೊಳ್ಳಿ, ಅವರು ನಿಮ್ಮ ಆದರ್ಶ ಹಾಗೂ ಅವರಂತೆ ಆಗಲು ಮತ್ತು ಅವರನ್ನು ಅನುಕರಿಸಲು ಪ್ರಯತ್ನಿಸಿ. ನನ್ನ ನಮ್ರಸೇವೆಗಳು ನಿಮ್ಮ ಮುಂದೆ ಇವೆ. ನಾನು ನಿಮ್ಮ ಸೇವೆ ಮಾಡಲು ನನ್ನನ್ನು ಬಿಟ್ಟುಕೊಡಿ ಎಂದು ನಿಮ್ಮಲ್ಲಿ ಪ್ರಾರ್ಥಿಸುತ್ತೇನೆ.

ನಾನು ಸಂಕ್ಷಿಪ್ತವಾಗಿ ನನ್ನ ಭಾವನೆಗಳನ್ನು ನಿಮ್ಮ ಮುಂದಿಟ್ಟಿದ್ದೇನೆ. ಇದನ್ನು ಮಾಡಲು ನೀವು ಅವಕಾಶ ಕೊಟ್ಟಿದ್ದಕ್ಕಾಗಿ ನಾನು ನಿಮಗೆ ಋಣಿ. ನೀವು ನನ್ನ ಮಾತುಗಳನ್ನು ಸಾವಧಾನದಿಂದ ಕೇಳಿದ್ದಕ್ಕೆ ನನ್ನ ಕೃತಜ್ಞತೆಗಳು. ನಾನು ಸಮಾಪ್ತಿ ಮಾಡಲು ನಿಮ್ಮನ್ನು ಕೋರುತ್ತೇನೆ.

---

ಸಂಪುಟ – II

(ವಿಭಾಗ – III)

# ಆಯ್ದ ದಾಖಲೆಗಳು, ಪತ್ರವ್ಯವಹಾರಗಳು, ವರದಿಗಳು, ಲೇಖನಗಳು, ರಾಜಾಜ್ಞೆಗಳು, ಇತ್ಯಾದಿ

# ಸಂಪಾದಕರ ಟಿಪ್ಪಣಿಗಳು

ನಾನು ಈ ನೆನಪಿನ ಸಂಪುಟವನ್ನು ಸಂಪಾದಿಸುವಾಗ ಹಲವಾರು ವೈಯಕ್ತಿಕ ದಾಖಲೆಗಳು ಮತ್ತು ಸರಕಾರಿ ದಾಖಲೆಗಳನ್ನು ನೋಡಬೇಕಾಯಿತು. ಓದುಗರಿಗೆ ಅನುಕೂಲವಾಗಲೆಂದು ನಾವು ಆಯ್ದು ಇಲ್ಲಿ ಕೊಡಬೇಕಾಯಿತು.

ಈ ದಾಖಲೆಗಳು ವಿವಿಧ ವಿಷಯಗಳಿಂದ ಹಿಡಿದು ರಾಜರ ಸಮಾರಂಭಗಳು, ಆಹ್ವಾನ ಪತ್ರಿಕೆಗಳು ಮತ್ತು ಡಾ. ಬಾಬಾಸಾಹೇಬ ಅಂಬೇಡ್ಕರರವರಿಗೆ ಬರೆದ ಪತ್ರಗಳನ್ನು ಒಳಗೊಂಡಿದೆ. ಶಾಹು-ಅಂಬೇಡ್ಕರರ ನಡುವಿನ ಪತ್ರವ್ಯವಹಾರ ಮುಖ್ಯವಾಗಿದ್ದು ಅದು ಆಗ ಪ್ರಚಲಿತವಿದ್ದ ಸಾಮಾಜಿಕ ಆಂದೋಲನದ ಬಗ್ಗೆ ಬೆಳಕು ಚೆಲ್ಲುತ್ತದೆ. ಶಾಹುರವರು ಅಂಬೇಡ್ಕರರನ್ನು "ಲೋಕಮಾನ್ಯ ಅಂಬೇಡ್ಕರ್" ಎಂದು ಕರೆದರೆ, ಅಂಬೇಡ್ಕರರು ಶಾಹುರವರನ್ನು "ಭಾರತದ ಸಾಮಾಜಿಕ, ಜನತಾಂತ್ರಿಕ ಆಂದೋಲನದ ಆಧಾರಸ್ತಂಭ" ಎಂದು ಕರೆದಿದ್ದು ತುಂಬಾ ಆಸಕ್ತಿದಾಯಕವಾಗಿದೆ.

ಶಾಹುರವರು ವಿಚಾರೆ, ಅಣ್ಣಾ ಸಾಹೇಬ ಲಠ್ಠೆ ಮತ್ತು ಶ್ರೀಧರ ಪಂತ್ ತಿಲಕರಿಗೆ ಬರೆದ ಪತ್ರಗಳು ಮಹಾರಾಜರ ವ್ಯಕ್ತಿತ್ವದ ವಿವಿಧ ರೀತಿಯ ಮುಖಗಳನ್ನು ಅನಾವರಣಗೊಳಿಸುತ್ತದೆ. ಅವರು ವಿಧವೆಯಾದ ತಮ್ಮ ಸೊಸೆ ಇಂದುಮತಿ ರಾಣಿಸಾಹೇಬರಿಗೆ ಬರೆದ ಪತ್ರಗಳಲ್ಲಿ ಹೃದಯಸ್ಪರ್ಶಿ ತಂದೆಯ ಭಾವನೆಗಳು ಪ್ರತಿಬಿಂಬಿತವಾಗಿವೆ.

ಈ ಪತ್ರಗಳು ಸಹ ಸತ್ಯಶೋಧಕ ಸಮಾಜದ ಸಕ್ರಿಯ ಕಾರ್ಯಕರ್ತರು ಕೊಲ್ಹಾಪುರದಲ್ಲಿ ಬ್ರಾಹ್ಮಣೇತರರ ಆಂದೋಲನದ ಬಗ್ಗೆ ಹೊರತಂದ ಒಂದು ಕರಪತ್ರ, ಶಾಹುರವರ ಅಂತಿಮಯಾತ್ರೆಯ ವರ್ಣನೆ, ಈ ನಿರ್ದಿಷ್ಟ ಅವಧಿಯ ಸಾಮಾಜಿಕ ಇತಿಹಾಸವನ್ನು ಗುರುತಿಸಲು ಸಹಕಾರಿಯಾಗುವ ವಿಷಯಗಳನ್ನು ಒಳಗೊಂಡಿದೆ.

ಈ ಪತ್ರಗಳ ಮೂಲಸಾಮಗ್ರಿಯನ್ನು ಕೆಳಗೆ ನೀಡಲಾಗಿದೆ ಮತ್ತು ಮುಖ್ಯವಾದ ಭಾಗಗಳನ್ನು ದಪ್ಪಕ್ಷರಗಳಲ್ಲಿ ನಮೂದಿಸಲಾಗಿದೆ.

---

೧

# ಶಾಹುರವರ ದತ್ತುಸ್ವೀಕಾರ ಸಮಾರಂಭದ ಕರೆಯೋಲೆ

ಮಾರ್ಚ್ ೧, ೧೮೮೪

*ಮೂಲತಃ ಕಾಗಲ್‌ನ ಘಾಟ್ಗೆ ಕುಟುಂಬಕ್ಕೆ ಸೇರಿದ ಶಾಹುರವರನ್ನು ಕೊಲ್ಹಾಪುರದ ಛತ್ರಪತಿ ವಂಶ ದತ್ತುಪುತ್ರನನ್ನಾಗಿ ಸ್ವೀಕರಿಸಿತು. ಶಿವಾಜಿ–IV ನೆಯ ರಾಣಿ ಆನಂದಿಬಾಯಿ ಅವರು ಅವರನ್ನು ದತ್ತುಪುತ್ರನನ್ನಾಗಿ ಸ್ವೀಕರಿಸಿದರು. ಶಾಹುರವರ ಅಜ್ಜಿಯಾದ ಸಕವಾರ್ ಬಾಯಿಸಾಹೇಬರವರು ದತ್ತುಸ್ವೀಕಾರ ಸಮಾರಂಭದ ಆಹ್ವಾನ ಪತ್ರಿಕೆಯನ್ನು ರಾಮಚಂದ್ರ ಪಂಡಿತ ಅಲಿಯಾಸ್ ಬಾಬಾ ಮಹಾರಾಜ್ ಅವರಿಗೆ ಕಳುಹಿಸಿಕೊಟ್ಟರು. ಇದು ಐತಿಹಾಸಿಕ ಮಹತ್ವದ ಮೂಲ ದಾಖಲೆ.*

*ಬಹುಮಟ್ಟಿಗೆ ಮಾಡಿದ ಅನುವಾದವನ್ನು ಈ ಕೆಳಗೆ ಕೊಡಲಾಗಿದೆ.*

---

ಗೌರವಾನ್ವಿತ ಶ್ರೀ ಬಾಬಾ ಮಹಾರಾಜರವರಿಗೆ,

ಸಕವಾರ್ ಬಾಯಿಸಾಹೇಬ ಅವರ ವಿನಯಪೂರ್ವಕ ಕೋರಿಕೆ, ಶಕೆ ೧೮೦೫, ಜಮವಲ್ ಮಾಸ ತಾರೀಖು ೨, (ಮಾರ್ಚ್ ೧, ೧೮೮೪) ಇದು ಸರಿಯಾಗಿದೆ.

ಜಯಸಿಂಘರಾವ್ ಘಾಟ್ಗೆ ಅವರ ಮಗ ಯಶವಂತರಾವ್ ಘಾಟ್ಗೆ ಅವರನ್ನು ಸಿಂಹಾಸನಕ್ಕೆ ವಾರಸುದಾರರನ್ನಾಗಿ ಫಾಲ್ಗುಣ ವಧ್ಯ ಪಂಚಮಿ ಇಂದುವಾರಿ (ಮಾರ್ಚ್ ೧೭, ೧೮೮೪) ರಂದು ದತ್ತು ಸ್ವೀಕರಿಸಲು ನಿರ್ಧರಿಸಲಾಗಿದೆ ಎಂಬುದು ಹೊಸ ಬೆಳವಣಿಗೆ. ಗುಮಾಸ್ತರಾದ ರಾಮಚಂದ್ರನಾರಾಯಣ ಅವರು ಸಮಾರಂಭದ ಆಹ್ವಾನ ಪತ್ರಿಕೆಯನ್ನು ನಿಮ್ಮ ಬಳಿಗೆ ತರುತ್ತಿದ್ದಾರೆ. ದಯವಿಟ್ಟು ಸಮಾರಂಭದ ಕಾರ್ಯಕ್ರಮಕ್ಕೆ ದಯಮಾಡಿ. ಗೌರವಗಳೊಂದಿಗೆ.

(ಮಾರ್ಚ್ ೭, ೧೮೮೪ರಂದು ಸ್ವೀಕರಿಸಲಾಗಿದೆ.)

**(ಗುರು ಮಹಾರಾಜ ಸಂಗ್ರಹ)**

---

೨

# ಫ್ರೆಜರ್ ಅವರು ಶಾಹುರವರ ಪೋಷಕ ಬುವಸಾಹೇಬ ಇಂಗ್ಳೆ ಅವರನ್ನು ಮೆಚ್ಚುತ್ತಾರೆ

ಏಪ್ರಿಲ್ ೧೩, ೧೮೯೪

*ಶಾಹು ಮಹಾರಾಜರ ಪೋಷಕರಾದ ಬುವಸಾಹೇಬ ಇಂಗ್ಳೆ ಅವರ ಸಹಾಯದೊಂದಿಗೆ ಬ್ರಿಟಿಷ್ ನಾಗರಿಕ ಅಧಿಕಾರಿಗಳಾದ ಎಸ್. ಎಂ. ಫ್ರೆಜರ್ ಅವರ ಉಸ್ತುವಾರಿ ಮತ್ತು ಮಾರ್ಗದರ್ಶನದಡಿಯಲ್ಲಿ ಪಟ್ಟಾಭಿಷೇಕಕ್ಕೆ ಮೊದಲು ಶಾಹುರವರಿಗೆ ಶಿಕ್ಷಣ ನೀಡಲಾಯಿತು. ಈ ಕೆಳಕಂಡ ಪತ್ರದಲ್ಲಿ ಬುವ ಸಾಹೇಬರಿಗೆ ವಹಿಸಿದ ಕೆಲಸದಲ್ಲಿ ಅವರು ನಿರ್ವಹಿಸಿದ ಪಾತ್ರಕ್ಕೆ ಫ್ರೆಜರರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.*

---

ಕೊಲ್ಹಾಪುರ
ಏಪ್ರಿಲ್ ೧೩, ೧೮೯೪

ನನ್ನ ಪ್ರೀತಿಯ ಬುವ ಸಾಹೇಬರಿಗೆ,

ನಾನು ಈಗ ಕೊಲ್ಹಾಪುರ ಬಿಟ್ಟು ಹೊರಹೋಗಬೇಕಾಗಿರುವುದರಿಂದ ನೀವು ಘನತೆವೆತ್ತ ಮಾನ್ಯ ಮಹಾರಾಜ ಅವರೊಂದಿಗೆ ತಮ್ಮ ಸೇವೆಯಿರುವುದರಿಂದ ನಾನು ನಿಮಗೆ ಒಂದೆರಡು ಸಾಲಿನ ಮಾತುಗಳನ್ನು ತಿಳಿಸಬೇಕಾಗಿದೆ. ಐದು ವರ್ಷಗಳಲ್ಲಿ ಘನತೆವೆತ್ತ ಮಹಾರಾಜರು ನನ್ನ ಉಸ್ತುವಾರಿಯಲ್ಲಿರಬೇಕಾಗುತ್ತದೆ. ನೀವು ಧಾರವಾಡ, ಕೊಲ್ಹಾಪುರಗಳಲ್ಲಿ ನಿರಂತರವಾಗಿ ಅವರ ಒಡನಾಟದಲ್ಲಿರಬೇಕಾಗುತ್ತದೆ. ಮತ್ತು ಭಾರತ ಮತ್ತು ಸಿಲೋನಿನ ನಮ್ಮ ಪ್ರವಾಸಗಳಲ್ಲಿ ಮನ್‌ಕಾರಿಯ ಸಾಮರ್ಥ್ಯದಲ್ಲಿ ಮತ್ತು ನಿಮ್ಮ ಪ್ರಾಮಾಣಿಕತೆ, ಜೀವನದ ಪರಿಶುದ್ಧತೆ ಮತ್ತು ನಿದರ್ಶನ, ಹಾಗೂ ಪ್ರಮುಖವಾಗಿ ಸರಳತೆಗಳನ್ನು ನಾನು ಯಾವಾಗಲೂ ಪರಿಭಾವಿಸಿ ನಿಮ್ಮ ಒಡನಾಟದಲ್ಲಿ ಕಿರಿಯ ಮಹಾರಾಜರನ್ನು ಮತ್ತು ಅವರ ಸಹೋದರನನ್ನು ನಿಮಗೆ ನಾನು ಒಪ್ಪಿಸುತ್ತಿರುವೆನು. ಒಬ್ಬ ಪ್ರಥಮದರ್ಜೆಯ ಕ್ರೀಡಾಪಟುವಾಗಿ ಕುದುರೆ ಹತ್ತಿರುವಾಗ, ಬಂದೂಕು ಹಿಡಿದಿರುವಾಗ ಅಥವಾ ರೈಫಲ್ ಹಿಡಿದಿರುವಾಗ ನಿಮ್ಮ ಹಾಜರಿ ವಿಶೇಷವಾಗಿ ಪ್ರಮುಖವಾದದ್ದು. ನಾನೇ ಹುಡುಗರ ಜೊತೆಯಲ್ಲಿರಲು ಸಾಧ್ಯವಾಗದಿದ್ದಾಗ ಅವರನ್ನು ಸದಾ ನಿಮ್ಮ ಜತೆಯಲ್ಲಿ ಬಿಟ್ಟುಹೋಗುವುದು ಕ್ಷೇಮವೆಂದು ನಾನು ಭಾವಿಸುತ್ತೇನೆ. ನಾವೆಲ್ಲರೂ ಒಟ್ಟಿಗೆ ಕ್ರೀಡೆಗಳಲ್ಲಿ ಹಲವಾರು ದಿನ ಸಂತೋಷವಾಗಿ

ಕಳೆದಿದ್ದೇವೆ ಮತ್ತು ಇಲ್ಲಿಂದ ಮುಂದಕ್ಕೆ ಅಂತಹ ಹಲವಾರು ಸಂತೋಷದ ದಿನಗಳನ್ನು ಕಳೆಯೋಣ, ನಾನು ನಿಮಗೆ ಬೀಳ್ಕೊಡುತ್ತಿದ್ದೇನೆ. ನಿಮ್ಮ ಭವಿಷ್ಯದ ಸಮೃದ್ಧಿಗೆ ನಾನು ಶುಭವನ್ನು ಹಾರೈಸುತ್ತೇನೆ.

ತಮ್ಮ ವಿಶ್ವಾಸಿ,
ಎಸ್. ಎಂ. ಫ್ರೆಜರ್
ಐ.ಸಿ.ಎಸ್.

ವೆಂಕಟರಾವ್ (ಬುವಸಾಹೇಬ) ಇಂಗ್ಳೆ ಇವರಿಗೆ

(ವಿಜಯಸಿಂಗ್ ಹನುಮಂತರಾವ್ ಇಂಗ್ಳೆ ಅವರ ಸಂಗ್ರಹದಿಂದ)

---

೩

# ಕೊಲ್ಹಾಪುರದಲ್ಲಿ ದಿನಾಂಕ ಏಪ್ರಿಲ್ ೧೮, ೧೯೦೧ರಂದು ಮೊದಲನೆಯ ವಿಕ್ಟೋರಿಯಾ ಮರಾಠ ಬೋರ್ಡಿಂಗ್‌ನ ಉದ್ಘಾಟನೆಯಲ್ಲಿ ಜಿವಾಜಿರಾವ್ ಸಾವಂತ ಅವರು ಮಾಡಿದ ಐತಿಹಾಸಿಕ ಭಾಷಣ.

*ಬೋರ್ಡಿಂಗ್ ಶ್ರೇಣಿಗಳಲ್ಲಿ ಇದು ಮೊದಲ ಬೋರ್ಡಿಂಗ್ ಭವನವಾಗಿದೆ. ಹಾಜರಿದ್ದವರು ಬಾಪುಸಾಹೇಬ್ ಮಹಾರಾಜ, ದಾಜಿರಾವ್ ವಿಚಾರೆ, ಬಾಬಾಸಾಹೇಬ್ ಖಾನ್‌ವಿಲ್ಕರ್, ಭಾಸ್ಕರರಾವ್ ಜಾಧವ್, ಅಪ್ಪಾಸಾಹೇಬ್ ಮ್ಹಾಯ್‌ಸಲ್ಕರ್ ಮತ್ತು ಜಿವಾಜಿರಾವ್ ಸಾವಂತರು. ಮರಾಠ (ತಮ್ಮ) ಸಮುದಾಯದ ಹಿಂದುಳಿದಿರುವಿಕೆಯ ಬಗ್ಗೆ ನೊಂದ ಸುಶಿಕ್ಷಿತ ಮರಾಠ ನಾಯಕರ ಮನಸ್ಸುಗಳಲ್ಲಿದ್ದ ತಲ್ಲಣಗಳನ್ನು ಸಾವಂತರ ಭಾಷಣವು ಪ್ರತಿಬಿಂಬಿಸುತ್ತದೆ. ವಿದ್ಯಾರ್ಥಿ ನಿಲಯದ ಯೋಜನೆಯ ಹಿಂದೆ ಇದ್ದ ಶಾಹುರವರ ಸ್ಫೂರ್ತಿಯು ಸುಸ್ಪಷ್ಟ. ಇದು ಭಾಷಣದ ಉದ್ಧೃತ ಭಾಗ.*

---

ಸಮಾಜದ ಸಾಮಾಜಿಕ, ನೈತಿಕ ಮತ್ತು ಧಾರ್ಮಿಕ ವಲಯಗಳಲ್ಲಿ ಸಮಾನತೆಯಿದ್ದರೆ ಒಂದು ರಾಷ್ಟ್ರವನ್ನು ಮುಂದಕ್ಕೆ (ಪ್ರಗತಿ) ಕೊಂಡೊಯ್ಯಬಹುದು. ನಮ್ಮ ದೇಶದಲ್ಲಿ ಪ್ರಸ್ತುತ ದೃಶ್ಯವು ಈ ಬಗ್ಗೆ ಚಿಂತಾಜನಕವಾಗಿದೆ.

ಕರ್ಮ ಮತ್ತು ಗುಣಸ್ವಭಾವಗಳ ಮೇಲೆ ಆಧಾರವಾದ ಚಾತುರ್ವರ್ಣ ಪದ್ಧತಿಯ ಉತ್ಪನ್ನವಾದ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಮರಾಠ ಸಮುದಾಯದ ಸ್ಥಾನಮಾನವನ್ನು ಪರಿಗಣಿಸಲು ಇಂದು ನಾವು ಇಲ್ಲಿದ್ದೇವೆ.

ಕಳೆದ ಮೂರು ಶತಮಾನಗಳಲ್ಲಿ ಮರಾಠರು ಕೇವಲ ಮಹಾರಾಷ್ಟ್ರಕ್ಕೆ ಮಾತ್ರವಲ್ಲದೆ ಇಡೀ ಭಾರತಕ್ಕೆ ಒಳ್ಳೆಯದನ್ನು ಮಾಡಿದೆ. ಎಲ್ಲರಿಗೂ ತಿಳಿದಿರುವಂತೆ ಶಿವಾಜಿ ಮಹಾರಾಜರ ಕಾಲದಲ್ಲಿ ಅವರು ಏಳಿಗೆ ಹೊಂದಿದ್ದರು. ಆದರೆ ಸತಾರಾದ ಶಾಹು ಮಹಾರಾಜರ ಆಡಳಿತದ ನಂತರ, ಮರಾಠರು ವಿಗತಿಹೊಂದಲು (ಅವನತಿ) ಪ್ರಾರಂಭವಾಯಿತು. ಮತ್ತು ಇಂದು ಅವರ ಸ್ಥಿತಿಗತಿಗಳು ಅತ್ಯಂತ ದಾರುಣವಾಗಿವೆ. ಸುಶಿಕ್ಷಿತ ಮತ್ತು ಪರಿಪಕ್ವಗೊಂಡ ಮರಾಠರು ಈ ಪರಿಸ್ಥಿತಿಯನ್ನು ಸುಧಾರಿಸುವ ಹೊಣೆಗಾರಿಕೆ ಈಗ ಅವರ ಮೇಲಿದೆ.

ಈ ಪರಿಸ್ಥಿತಿಯನ್ನು ಬದಲಾಯಿಸಲು ಮತ್ತು ಮರಾಠರ ಸ್ಥಿತಿಗತಿಗಳನ್ನು ಸುಧಾರಿಸಲು, ಅವರನ್ನು ರಾಷ್ಟ್ರದ ಪ್ರಮುಖ ಅಂಗವನ್ನಾಗಿ ಮಾಡಲು ಮೊಟ್ಟಮೊದಲಿಗೆ ಸಮುದಾಯವನ್ನು ಶಿಕ್ಷಿತವನ್ನಾಗಿ ಮಾಡಬೇಕಾಗಿದೆ.

ನಾವು ಶೈಕ್ಷಣಿಕವಾಗಿ ಹಿಂದುಳಿದವರು, ಬಡತನದ ಕಾರಣದಿಂದ ಸಮುದಾಯದ ಹುಡುಗರು ಮತ್ತು ಹುಡುಗಿಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಈ ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡಲು ನಾವು ಏನಾದರೂ ಮಾಡಬೇಕಾಗಿದೆ.

ಜಾತಿ ಆಧಾರಿತ ಸಂಸ್ಥೆಗಳನ್ನು ಸ್ಥಾಪಿಸುವುದರಿಂದ ಸಮುದಾಯಗಳ ನಡುವೆ ಜಾತಿ–ವೈಷಮ್ಯ ಬೆಳೆಯುತ್ತದೆ ಎಂಬ ಭಾವನೆ ಕೆಲವು ವಲಯಗಳಲ್ಲಿದೆ. ಆದರೆ ಇದು ಸತ್ಯವಲ್ಲ.

ಯಾವುದೇ ಒಂದು ನಿರ್ದಿಷ್ಟ ಜಾತಿ ಮತ್ತು ಸಮುದಾಯಕ್ಕೆ ಶಿಕ್ಷಣದ ಪ್ರಯೋಜನವಾದರೆ ಅಂತಿಮವಾಗಿ ಅದು ಸಮಾಜದ ವಿವಿಧ ವಿಭಾಗಗಳ ನಡುವೆ ಸಾಮರಸ್ಯವನ್ನು ಏರ್ಪಡಿಸುತ್ತದೆ. ಆದ್ದರಿಂದಲೇ ಹಲವು ಉಪ–ಜಾತಿಗಳಾದ ಕಾಯಸ್ಥರು, ಗೌಡಬ್ರಾಹ್ಮಣರು ಮತ್ತು ಮುಸ್ಲಿಮರು ತಮ್ಮತಮ್ಮ ಸಮುದಾಯಗಳಲ್ಲಿ ಶಿಕ್ಷಣವನ್ನು ಪ್ರಸಾರ ಮಾಡಲು ನಿಧಿಗಳನ್ನು ಸ್ಥಾಪಿಸುತ್ತಿದ್ದಾರೆ.

ಯೂರೋಪಿನ ರಾಷ್ಟ್ರಗಳಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿದೆ ಮತ್ತು ಬಡಮಕ್ಕಳಿಗೆ ಸರಕಾರದ ಖರ್ಚಿನಲ್ಲಿ ಶಿಕ್ಷಣವನ್ನು ನೀಡಲಾಗುತ್ತದೆ. ಇಂಗ್ಲೆಂಡು, ಜರ್ಮನಿ, ಫ್ರಾನ್ಸ್‌ಗಳಲ್ಲಿ ಗಿರಣಿಯ ಕಾರ್ಮಿಕರು ದಿನಪತ್ರಿಕೆಗಳನ್ನು ಓದುತ್ತಾರೆ. ನಮ್ಮ ಸಮಾಜದ ಎಲ್ಲ ವರ್ಗಗಳಿಗೆ ಶಿಕ್ಷಣ ಪ್ರಸಾರವಾದರೆ ನಮ್ಮ ದೇಶ ರಾಷ್ಟ್ರತನವನ್ನು ಗಳಿಸುತ್ತದೆ ಎಂಬ ಭಾವನೆ ನಾನು ಯೂರೋಪಿಗೆ ಹೋದಾಗ ನನಗೆ ಹೊಳೆಯಿತು.

ಹಲವು ಮರಾಠ ನಾಯಕರಾದ ಬಾಳಾಸಾಹೇಬ ಗಾಯಕವಾಡರು ತಮ್ಮ ಜನರಿಗೆ ಶಿಕ್ಷಣ ನೀಡಬೇಕೆಂದು ಯೋಚಿಸಿದ್ದರು. ಈ ಚಿಂತನೆಯನ್ನು ಬಾಬಾಸಾಹೇಬ ಘಾಟ್ಗೆ, ಖಾನ್‌ವಿಲ್ಕರ್ ಮತ್ತು ಇತರರು ಬೆಂಬಲಿಸಿದರು. ಶಿಕ್ಷಣವನ್ನು ಪ್ರಸಾರ ಮಾಡಬೇಕೆಂಬ ದೃಷ್ಟಿಯಿಂದ ನಾನು 'ಮರಾಠ ಶಿಕ್ಷಣ ಸಂಸ್ಥೆ'ಯನ್ನು ಸ್ಥಾಪಿಸಬೇಕೆಂದು ಔಪಚಾರಿಕ ಸಲಹೆಯನ್ನು ನಾನು ಈಗ ಮಾಡುತ್ತೇನೆ. ಈ ಸಂಸ್ಥೆಯು ಮರಾಠರಿಗಾಗಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲು ಕಾರ್ಯಾರಂಭ ಮಾಡಬೇಕೆಂದು, ಅದಕ್ಕೆ 'ವಿಕ್ಟೋರಿಯಾ ಮರಾಠ ಸ್ಟೂಡೆಂಟ್ಸ್ ಇನ್ಸ್ಟಿಟ್ಯೂಷನ್' ಎಂಬ ಹೆಸರಿಡಬೇಕೆಂಬುದು ನನ್ನ ಭಾವನೆ.

ಈ ಸಂಸ್ಥೆಯನ್ನು ದಕ್ಷತೆಯಿಂದ ಮತ್ತು ಸರಿಯಾಗಿ ನಡೆಸುವುದು ಎಂದರೆ ಮರಾಠ ಸಮುದಾಯದ ಕಲ್ಯಾಣಕ್ಕಾಗಿ ಕೆಲಸ ಮಾಡುವುದೆಂದರ್ಥ. ಎಲ್ಲಾ ಸಮುದಾಯಗಳಿಗೆ ಶಿಕ್ಷಣವನ್ನು ಪ್ರಸಾರಮಾಡುವುದರಲ್ಲಿ ತಲ್ಲೀನರಾಗಿರುವ ಛತ್ರಪತಿ ಮಹಾರಾಜರಿಂದ ನಾವು ಈ ಧ್ಯೇಯಕ್ಕಾಗಿ ಸ್ಫೂರ್ತಿ ಪಡೆದಿದ್ದೇವೆ.

ಮಹಾರಾಷ್ಟ್ರದಲ್ಲಿ ನೆಲೆಸಿರುವ ಮರಾಠರಲ್ಲದೆ ಇಡೀ ಭಾರತದ ಮರಾಠರು ನಮ್ಮ ಆಂದೋಲನದ ಹಿಂದೆ ಚಾಲಕಶಕ್ತಿಯಾಗಿರುವ ಮಹಾರಾಜರಿಗೆ ನಾವೆಲ್ಲ ಕೃತಜ್ಞರಾಗಿರಬೇಕು. ಈ ಬಗ್ಗೆ ನಾವು ಮಾಡಿರುವ ನಮ್ಮ ಸಲಹೆಯು ಅವರ ಸಮ್ಮತಿಯನ್ನು ಪಡೆಯುವುದೆಂದು ನಾವೆಲ್ಲರೂ ಭಾವಿಸುತ್ತೇವೆ. ಮರಾಠರ

ಸ್ಥಿತಿಗತಿಗಳು ಸುಧಾರಿಸಬೇಕೆಂದು ಬಯಸುವ ಎಲ್ಲರನ್ನೂ ಜಾತಿ–ಮತ ಭೇದವಿಲ್ಲದೆ ಧನಸಹಾಯ ಮಾಡಲು ನಾವು ಹೃತ್ಪೂರ್ವಕವಾಗಿ ಆಹ್ವಾನಿಸುತ್ತೇವೆ. ಶಿಕ್ಷಣದ ಪ್ರಸಾರಕ್ಕಾಗಿ ಸಹಾಯ ಮಾಡುವುದು ಯೋಗ್ಯ ಧ್ಯೇಯಕ್ಕಾಗಿ ಬೆಂಬಲಿಸುವುದು.

ಮರಾಠರ ನಡುವಣ ಸುಧಾರಣೆಗಳ ಸೂರ್ಯ ದಿಗಂತದಲ್ಲಿ ಮೂಡುತ್ತಿದ್ದಾನೆ. ಮೋಡಗಳು ಅಡ್ಡ ಬರಬಹುದು, ಆದರೆ ಸೂರ್ಯನು ಅವುಗಳೆಲ್ಲವನ್ನು ದೂರಮಾಡುತ್ತಾನೆ. ಮತ್ತು ಮಧ್ಯಾಹ್ನದಲ್ಲಿ ಬೆಳಗುತ್ತಾನೆ ಮತ್ತು ನಮ್ಮ ಸಮುದಾಯವು ಶಿಕ್ಷಣದ ವೈಭವದಲ್ಲಿ ಸಂತೋಷವಾಗಿ ಮೆರೆಯಬಹುದು. ನಮ್ಮ ಸಂಸ್ಥೆಯು ದೀರ್ಘಕಾಲ ಮತ್ತು ಸದಾ ಬಾಳುವಂತೆ ಮಾಡಲೆಂದು ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ.

**(ಶ್ರೀ ಶಾಹುಛತ್ರಪತಿ ಮರಾಠ ವಸತಿಗೃಹ– ವಜ್ರಮಹೋತ್ಸವ ಸಂಪುಟ)**

---

೪

## ಶಾಹುರವರಿಂದ ವಿಚಾರೆ ಅವರಿಗೆ, ಒಂದು ವೈಯಕ್ತಿಕ ಪತ್ರ

*ದಿನಾಂಕ ಡಿಸೆಂಬರ್ ೧೨, ೧೯೧೧ರಂದು ದೆಹಲಿಯಲ್ಲಿ ಜಾರ್ಜ್–೫ ಅವರ ಪಟ್ಟಾಭಿಷೇಕದ ನೆನಪಿನಾಚರಣೆಯ ಗ್ರ್ಯಾಂಡ್ ದರ್ಬಾರಿನ ಸಭೆಯಲ್ಲಿ ಶಾಹುರವರು ಭಾಗವಹಿಸಿದಾಗ ಕೊಲ್ಹಾಪುರದ ಮುಖ್ಯ ಇಂಜಿನಿಯರ್ ಅವರಿಗೆ ಒಂದು ಪತ್ರ ಬರೆಯುತ್ತಾರೆ. ಅದರ ಹಿಂದಿನ ದಿನ ವೈಸ್‌ರಾಯ್ ಲಾರ್ಡ್ ಹಾರ್ಡಿಂಗ್ಸ್‌ರು ಶಾಹುರವರಿಗೆ ಗ್ರ್ಯಾಂಡ್ ಕಮಾಂಡರ್ ಆಫ್ ದ ಇಂಡಿಯನ್ ಎಂಪೈರ್ (ಜಿ.ಸಿ.ಐ.ಇ.) ಎಂಬ ಬಿರುದನ್ನು ನೀಡಿದರು. ಶಾಹುರವರ ನಿಂದಕರು ಅವರನ್ನು ಸಿಂಹಾಸನದಿಂದ ಇಳಿಸಲು ಸಂಚು ಹೂಡಿ ಕೆಸರು ಎರಚುವ ಅಭಿಯಾನವನ್ನು ಪ್ರಾರಂಭಿಸಿದ್ದರೂ ಬ್ರಿಟಿಷರು ನೀಡಿದ ಈ ಪದವಿಯು ಅವರು ಅವರ ಮೇಲಿಟ್ಟ ಗೌರವದ, ವಿಶ್ವಾಸದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತದೆ. ಶಾಹುರವರ ತಮಗಾದ ಹಿಗ್ಗು ಮತ್ತು ಗೆಲುವುಗಳನ್ನು ನಿಕಟವರ್ತಿಯಾದ ವಿಚಾರೆಯವರೊಂದಿಗೆ ಹಂಚಿಕೊಳ್ಳುತ್ತಾರೆ.*

---

ರಾಜಶ್ರೀ ವಿಚಾರೆಸಾಹೇಬ್ ಇವರಿಗೆ,

ಹಲವು ಶುಭಕಾಮನೆಗಳು.

ಇಂದು ನಾನು ಜಿಸಿಐಇ ಎಂಬ ಬಿರುದನ್ನು ಪಡೆದೆನು. ಹಲವು ಗೌರವಗಳು ನನಗೆ ಬಂದಿವೆ. ಆದರೆ ನನ್ನ ವಿರುದ್ಧ ಕೆಲಸ ಮಾಡಿದ "ನಮ್ಮ ಸ್ನೇಹಿತರು" ಮತ್ತು ಅವರೆಲ್ಲರೂ ನನ್ನನ್ನು ಜೈಲಿನಲ್ಲಿರಿಸಲು ಬಹಳ ಪ್ರಯತ್ನಪಟ್ಟಿದ್ದರು. ಅಂಥವರಿಗೆ ಇದು ಅತಿ ಮಹತ್ವದ್ದಾಗಿದೆ. ಅವರು ಅದನ್ನು ಮಾಡಲು ಅವರಿಗೆ ಸಾಧ್ಯವಾಗಲಿಲ್ಲ, ಆದರೆ ನನ್ನ ಮುಖಕ್ಕೆ ಕೆಸರೆರಚುವ ಕೆಲಸವನ್ನು ಮತ್ತು ನನ್ನ ವರ್ಚಸ್ಸಿಗೆ ಕಳಂಕ ಹಚ್ಚುವ ಕೆಲಸವನ್ನು ಭರಾಟೆಯಿಂದ ಮಾಡಿದರು. ನಾನೊಬ್ಬ ಅನಾಥನಾಗಿದ್ದೆ, ಆದರೆ ಸರ್ವಶಕ್ತನಾದ ದೇವರು ನನ್ನನ್ನು ರಕ್ಷಿಸಿದನು ಮತ್ತು ನನ್ನ ಮುಖಕ್ಕೆ ಎರಚಿದ್ದ ಕಳಂಕವನ್ನು ತೊಡೆದುಹಾಕಿದನು. ದೇವರು, ಮಹಾರಾಜ ಎಡ್ವರ್ಡ್–VII ಮತ್ತು ಜಾರ್ಜ್–V ಅವರುಗಳು ನನಗೆ ನ್ಯಾಯ ಕೊಡಿಸಿದರು ಮತ್ತು ನನಗೆ ಅಂಟಿದ್ದ ಕಳಂಕವನ್ನು ಅಳಿಸಿಹಾಕಿದರು. ನಾನು ಅವರಿಗೆ ಪ್ರಾರ್ಥನೆಯನ್ನು ಸಲ್ಲಿಸಬೇಕಾಗಿದೆ. ಇದಕ್ಕಾಗಿ ನಾನು ಎಂದೆಂದಿಗೂ ಸರ್ವಶಕ್ತನಾದ ದೇವರಿಗೆ ಕೃತಜ್ಞನಾಗಿದ್ದೇನೆ.

"ನಮ್ಮ ಸ್ನೇಹಿತರು" ನಾನು ಅನುಭವಿಸಿದ ಅಗ್ನಿಪರೀಕ್ಷೆಯಿಂದ ಇನ್ನೂ ಸಂತೃಪ್ತರಾಗಿಲ್ಲ ಮತ್ತು ನನ್ನನ್ನು "ವಂಚಕ" ಮತ್ತು ಒಬ್ಬ "ಆಷಾಢಭೂತಿ" ಎಂದು ಕರೆಯುತ್ತಾ ಪ್ರಚಾರ ಮಾಡುತ್ತಿದ್ದಾರೆ.

ನನ್ನ ಜೊತೆಯನ್ನು ನೀವು ಬಿಡಬೇಡಿ, ನೀವು ನನ್ನ ನೌಕರರಲ್ಲ, ಆದರೆ ನೀವೊಬ್ಬ ನನ್ನ ಸ್ನೇಹಿತರು.

ಶಾಹು ಛತ್ರಪತಿ

(ಮೋಡಿ ಅಕ್ಷರಗಳಲ್ಲಿ ಸಹಿ)

(ವಿಚಾರ ಸಂಗ್ರಹ)

---

೫

# ಸತ್ಯಶೋಧಕ ಸಮಾಜದ ಬಗ್ಗೆ ಭಾಸ್ಕರರಾವ್ ಜಾಧವ್

*ಕೊಲ್ಹಾಪುರ ಸತ್ಯಶೋಧಕ ಸಮಾಜವನ್ನು ಜನವರಿ ೧೯೧೧ರಲ್ಲಿ ಸ್ಥಾಪಿಸಲಾಯಿತು. ಅದರ ಅಧ್ಯಕ್ಷರು ಭಾಸ್ಕರರಾವ್ ಜಾಧವ್. ಒಂದು ವರ್ಷದೊಳಗೆ ಪುಣೆ ಮತ್ತು ನಾಸಿಕ್‌ಗಳಲ್ಲಿ ಅದರ ಸಮ್ಮೇಳನವನ್ನು ನಡೆಸಲಾಯಿತು.*

*ವೇದೋಕ್ತ ಪ್ರಕರಣದಿಂದ ಉಂಟಾಗಿದ್ದ ಉದ್ರಿಕ್ತ ಪರಿಸ್ಥಿತಿ ಇತ್ತೀಚೆಗೆ ತಣ್ಣಗಾಗಿತ್ತು. ಜಾಧವ್ ಅವರು ಈ ಹಿನ್ನೆಲೆಯಲ್ಲಿ ಮಹಾತ್ಮ ಫುಲೆಯವರ ಮೂಲ ವಿಚಾರಗಳನ್ನು ಹುಡುಕುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.*

*ಈ ಲೇಖನ ಕಿರುಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಆದರೆ ಅದು ಲಭ್ಯವಾಗುತ್ತಿಲ್ಲ. ಅದು ಒಂದು ಅಪರೂಪದ ಐತಿಹಾಸಿಕ ದಾಖಲೆಯಾಗಿದೆ. ಮಹಾತ್ಮ ಫುಲೆಯವರು ತಮ್ಮ "ಗುಲಾಮಗಿರಿ" ಎಂಬ ಪುಸ್ತಕದ ಮೊದಲ ಪುಟಗಳಲ್ಲಿ ಇಂಗ್ಲಿಷ್ ಇತಿಹಾಸಕಾರ ಹೆನ್ರಿ ಮೀಡ್ ಅವರ ಉದ್ಧರಣವನ್ನು ನೀಡಿದ್ದಾರೆ. ಜಾಧವ್ ಅವರು ಅದೇ ಉದ್ಧರಣವನ್ನು ತಮ್ಮ ಲೇಖನದ ಮೊದಲಲ್ಲಿ ಕೊಡುತ್ತಾರೆ.*

---

# ಸತ್ಯಸಮಾಜ

**ಬಿ. ವಿ. ಜಾಧವ,** ಎಂ.ಎ., ಎಲ್‌ಎಲ್.ಬಿ.

"ಬ್ರಾಹ್ಮಣರಿಗೆ ವಿಶಿಷ್ಟ ಸಂಪನ್ಮೂಲಗಳನ್ನು ನೀಡಿ ಹಲವಾರು ಯುಗಗಳು ಕಳೆದಿವೆ; ಆದರೆ ಜಾಗರೂಕ ವಿಶ್ವ ನಾಗರಿಕನು ವಿಶ್ವದ ಉಪಕಾರಿಗಳ ಪಟ್ಟಿಯಲ್ಲಿ ಅವರನ್ನು ಸೇರಿಸಲು ಹಿಂಜರಿಯುತ್ತಾನೆ. ಅವರು ಪ್ರಾಚೀನ ಪಾಂಡಿತ್ಯದ ಜ್ಞಾನಭಂಡಾರಗಳ ಬಗ್ಗೆ ಜಂಭ ಕೊಚ್ಚಿಕೊಳ್ಳುತ್ತಾರೆ. ಅವರು ಹೆಚ್ಚು ಸಂಪತ್ತನ್ನು ಕ್ರೋಡೀಕರಿಸಿದರು ಮತ್ತು ಅಪಾರವಾದ ಅಧಿಕಾರವನ್ನು ಪಡೆದರು. ಆದರೆ ಅದು ಯಾವ ಉದ್ದೇಶಕ್ಕೆ? ಯಾರ ಒಳಿತಿಗಾಗಿ? ಅವರು ಅತ್ಯಂತ ಹೀನ ಮೌಢ್ಯಗಳನ್ನು ಪೋಷಿಸಿದರು ಮತ್ತು ಅವರ ಎಗ್ಗಿಲ್ಲದ ಆಷಾಢಭೂತಿತನವನ್ನು ಆಚರಿಸಿದರು. ಸಿರಿಸಂಪತ್ತಿನ ಅಪರೂಪದ ಉಡುಗೊರೆಗಳನ್ನು ತಾವೇ ಆಕ್ರಮಿಸಿಕೊಂಡು ಸುಖ–ಸಂತೋಷಗಳನ್ನು ಅನುಭವಿಸಿದರು ಮತ್ತು ಜಗತ್ತಿಗೆ ಗೊತ್ತಿರುವ ಜಿಗುಪ್ಸೆಯ ಪದ್ಧತಿಯನ್ನು ನಿರಂತರಗೊಳಿಸಿದರು. ಅವರ ಹ್ರಾಸವಾಗುತ್ತಿರುವ ಅಧಿಕಾರದಿಂದ ನಾವು ರಾಷ್ಟ್ರೀಯ ಪುನರ್ನಿರ್ಮಾಣದ ಮಹಾಕಾರ್ಯವನ್ನು ಸಾಧಿಸಬೇಕಾಗಿದೆ."

ಮೀಡ್ ಅವರು ಹೇಗೆ ಬ್ರಾಹ್ಮಣರ ಸ್ವ–ಉನ್ನತಿಯ ಧೋರಣೆಯನ್ನು, ಅದರಡಿಯಲ್ಲಿ ಅವರು ಭಾರತದ ಜನಸ್ತೋಮವನ್ನು ದೈಹಿಕ ಮತ್ತು ಮಾನಸಿಕವಾಗಿ ಗುಲಾಮರನ್ನಾಗಿ ಮಾಡಿದ್ದನ್ನು ಮೆಚ್ಚುವಂತೆ ಸಾರಸಂಗ್ರಹಗೊಳಿಸಿದ್ದಾರೆ. ಮತ್ತು ಅವರು ಧೈರ್ಯವಾಗಿ ಭಾರತವನ್ನು ಒಂದು ರಾಷ್ಟ್ರವಾಗಿ ಪುನರುಜ್ಜೀವನಗೊಳಿಸುವ ಸಾಧನೆಯನ್ನು ಮಾಡಬೇಕೆಂದು ಸೂಚಿಸಿದ್ದಾರೆ. ಅವರ ಪ್ರಕಾರ ಬ್ರಾಹ್ಮಣನ ಅತಿಮಾನುಷ ಶಕ್ತಿಯ ಪ್ರಭಾವವನ್ನು ನುಚ್ಚುನೂರು ಮಾಡಬೇಕು ಮತ್ತು ಅವನೇ ಕೆಳಮಟ್ಟಕ್ಕೆ ಇಳಿಯಬೇಕು ಅಥವಾ ಅವನನ್ನು ಉನ್ನತ ಸ್ಥಾನಮಾನದಿಂದ ಕೆಳಕ್ಕೆ ಇಳಿಸಬೇಕು. ಈ ತೀರ್ಮಾನಕ್ಕೆ ಮತ್ತೊಬ್ಬ ಮಹಾನ್ ವ್ಯಕ್ತಿ ಜೋತಿರಾವ್ ಫುಲೆ ಬಂದಿದ್ದಾರೆ. ೧೮೨೭ರಲ್ಲಿ ಶೂದ್ರ ದಂಪತಿಗಳ ಮಗನಾಗಿ ಹುಟ್ಟಿದರು. ಅವರು ಜ್ಞಾನ ಗಳಿಸುವುದಕ್ಕೆ ಅಯೋಗ್ಯರೆಂದು ಅವರನ್ನು ಕಾಣಲಾಯಿತು. ಅವರು ಕೇವಲ ಕೆಲವು ವರ್ಷಗಳ ಕಾಲ ಶಾಲೆಯ ಶಿಕ್ಷಣ ಪಡೆದರು. ಅವರು ಜ್ಞಾನವನ್ನು ಗಳಿಸಲು ಸ್ವಾವಲಂಬಿಗಳಾಗಬೇಕಾಯಿತು. ಜನರ ಕರುಣಾಜನಕ ಸ್ಥಿತಿ ಮೊದಲಿಗೆ ಅವರನ್ನು ಆಕರ್ಷಿಸಿತು ಮತ್ತು ಸರಕಾರಿ ಸೇವೆ ಸೇರುವ ಮಹಾ ಆಸೆಯನ್ನು ಮಹಾತ್ಯಾಗದಿಂದ ಹತ್ತಿಕ್ಕಿದರು ಮತ್ತು ಸಾರ್ವಜನಿಕ ಧ್ಯೇಯಕ್ಕಾಗಿ ತಮ್ಮನ್ನು ತಾವೇ ಸಮರ್ಪಿಸಿಕೊಂಡರು. ಅವರು ಹೆಣ್ಣುಮಕ್ಕಳ ಶಿಕ್ಷಣವನ್ನು ಮತ್ತು ದಮನಿತರ ಶಿಕ್ಷಣವನ್ನು ಪ್ರಾರಂಭಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದರು. "ಸತ್ಯಶೋಧಕ ಸಮಾಜ" ವನ್ನು ಸ್ಥಾಪನೆ ಮಾಡಿದ್ದು ಅವರ ಮಹತ್ವದ ಕಾರ್ಯವಾಗಿತ್ತು.

ಬ್ರಾಹ್ಮಣ ಪೂಜಾರಿಗಳ ತಂತ್ರದಿಂದ ಬೌದ್ಧಿಕ ಮತ್ತು ಧಾರ್ಮಿಕ ದಾಸ್ಯಕ್ಕೆ ಬಲಿಯಾಗಿದ್ದ ಬ್ರಾಹ್ಮಣೇತರರ ಸಮುದಾಯಗಳ ವಿಮೋಚನೆಯ ಗುರಿಯಿಂದ ೧೮೭೩ರಲ್ಲಿ ಸತ್ಯಶೋಧಕ ಸಮಾಜವನ್ನು ಸ್ಥಾಪಿಸಲಾಯಿತು. ಜೋತಿರಾವ್ ಅವರು ಪೌರೋಹಿತ್ಯದ ಮಂತ್ರಗಾರಿಕೆ ಮತ್ತು ಮೋಸಗಳನ್ನು ಬಹಿರಂಗಗೊಳಿಸಲು ಅವರು ಮರಾಠಿಯಲ್ಲಿ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿ ತಮ್ಮ ಭಾವೀ ಅನುಯಾಯಿಗಳ ಮನಸ್ಸುಗಳನ್ನು ತಯಾರುಮಾಡಿದರು. ಅವುಗಳ ಬಹುಮುಖ್ಯವಾದ ಪುಸ್ತಕ "ಗುಲಾಮಗಿರಿ".

ನಂತರದ ಪುರಾಣಗಳಲ್ಲಿ ನೀಡಿದ ದೇವರ ಮೊದಲ ಆರು ಅವತಾರಗಳ ಕಥೆಗಳನ್ನು "ಗುಲಾಮಗಿರಿ"ಯು ಪರಿಶೀಲಿಸುತ್ತದೆ ಮತ್ತು ಈ ಆರು ಅವತಾರಗಳಲ್ಲಿ ಮೊದಲ ಮೂರು ಅವತಾರಗಳು ಕೀಳುಪ್ರಾಣಿಗಳಲ್ಲಿ ಜನ್ಮತಾಳಿದ ಮಹತ್ವವನ್ನು ಮತ್ತು ನಾಲ್ಕನೇ ಅವತಾರವನ್ನು ಮರದ ಕಂಬದಿಂದ ಜನ್ಮತಾಳಿದ್ದನ್ನು ಕಟುವಾದ ಶಬ್ದಗಳಲ್ಲಿ ಪರಿಹಾಸ್ಯ ಮಾಡುತ್ತಾರೆ. ಬ್ರಾಹ್ಮಣ್ಯದ ಸಿದ್ಧಾಂತದ ಪೊಳ್ಳುತನವನ್ನು ರುಜುವಾತು ಪಡಿಸಿದ ನಂತರ ಜೋತಿರಾವ್ ಅವರು ಕುತಂತ್ರಿಯಾದ ಪುರೋಹಿತನು ಆರ್ಯರ ಆತಿಥ್ಯಕಾರ(ಆತಿಥೇಯ)ರ ಹಿಂದೂಸ್ಥಾನವನ್ನು ಗೆದ್ದು ಉತ್ತರಾಧಿಕಾರದ ಹಕ್ಕನ್ನು ಪಡೆಯುವುದಕ್ಕಾಗಿ ನಡೆಸಿದ ಧಾರ್ಮಿಕ ನಾಯಕನ (General) ಅತ್ಯಾಚಾರ ಮತ್ತು ದ್ರೋಹಗಳನ್ನು ಮುಚ್ಚಿಹಾಕಲು ಮೂರ್ಖತನದ ಅಸಂಗತ ಕಥೆಗಳನ್ನು ಒತ್ತಾಯಪೂರ್ವಕವಾಗಿ ಕಂಡುಹಿಡಿದಿದ್ದನ್ನು ವಿವರಿಸುತ್ತಾರೆ. ಮತ್ತು ಅವರ ಹೆಸರುಗಳನ್ನು ಅಥವಾ ಮಿಗಿಲಾಗಿ ಅವತಾರಗಳ ನೆಪದಲ್ಲಿ ಅಡ್ಡ ಹೆಸರುಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ಮಹಾರಾಷ್ಟ್ರದ ಸಾಮಾನ್ಯ ಜನರಲ್ಲಿ ಪ್ರಚಲಿತವಾಗಿರುವ ಕೆಲವು ವಿಶಿಷ್ಟ ಸಂಪ್ರದಾಯದ ಆಚರಣೆಗಳಿಗೆ ಬ್ರಾಹ್ಮಣರು ಕೂಡ ಪುರಾಣಗಳಿಂದ ಸಮರ್ಥನೆಗಳನ್ನು ನೀಡಲು ಅಸಮರ್ಥರಾಗಿರುವುದನ್ನು ಜೋತಿರಾವ್ ಅವರು ಅದ್ಭುತವಾಗಿ ವಿವರಿಸಿದ್ದಾರೆ.

ಬ್ರಾಹ್ಮಣರು ಹೇಗೆ ಕೂಟಗಳನ್ನು ರಚಿಸಿಕೊಂಡರು ಮತ್ತು ಇತರರನ್ನು ಭಯಗೊಳಿಸುತ್ತಿದ್ದರು,

ಮತ್ತು ಹೇಗೆ ಅವು ಬ್ರಿಟಿಷ್ ಅಧಿಕಾರಿಗಳನ್ನು ಮೋಸಗೊಳಿಸುತ್ತಿದ್ದರು, ಮತ್ತು ಹೇಗೆ ಅವರು ಮುನಿಸಿಪಾಲಿಟಿ ಮತ್ತು ಮಂಡಳಿಗಳಲ್ಲಿ ಸ್ವೇಚ್ಛಾವೃತ್ತಿಯಿಂದ ಆಡಳಿತ ನಡೆಸುತ್ತಿದ್ದರೆಂದು, ಹೇಗೆ ಅವರು ಬ್ರಾಹ್ಮಣರ ಹಿತಾಸಕಿಗಳನ್ನು ನೋಡುತ್ತಿದ್ದರು ಮತ್ತು ಇತರೆ ಬ್ರಾಹ್ಮಣೇತರ ಸಮುದಾಯಗಳ ಬಗ್ಗೆ ಕಿವುಡರಾಗುತ್ತಿದ್ದರೆಂಬ ಬಗ್ಗೆ ಅವರು ತಮ್ಮ ಶಕ್ತಿಯುತ ಲೇಖನಿಯಿಂದ ಸ್ಪಷ್ಟವಾಗಿ ಬರೆದು ಅವರ ಕೃತ್ಯಗಳನ್ನು ಬಯಲು ಮಾಡಲು ಮುನ್ನುಗ್ಗುತ್ತಿದ್ದರು. ಪ್ರಸ್ತುತ ಶಿಕ್ಷಣದ ಆಡಳಿತದಲ್ಲಿ ಅಧ್ಯಾಪಕರನ್ನು ವಿಶೇಷವಾಗಿ ಬ್ರಾಹ್ಮಣ ಸಮುದಾಯದವರನ್ನೇ ನೇಮಿಸಿಕೊಳ್ಳುತ್ತಿದ್ದ ಪದ್ಧತಿಯನ್ನು ತೀವ್ರವಾಗಿ ಖಂಡಿಸಿದರು. ಬ್ರಾಹ್ಮಣೇತರರಿಗೆ ಕಲಿಸುವುದು ಅಪಚಾರಕ್ಕೆ ಸಮಾನವೆಂದು ಅವರ ಭಾವನೆಯಾಗಿತ್ತು. ಮತ್ತು ಬ್ರಾಹ್ಮಣರಿಗೆ ವಿಶೇಷ ಸವಲತ್ತುಗಳಿಗೆ ಇದರಿಂದ ಸಂಚಕಾರವಾಗುತ್ತದೆಯೆಂದು ಅವರು ಸಂಪೂರ್ಣವಾಗಿ ಅರಿತಿದ್ದರು. ಆದ್ದರಿಂದ ಅವರು ಬ್ರಾಹ್ಮಣೇತರರಿಗೆ ವಿದ್ಯೆ ಕೂಡದೆಂದು ಹೇಳಲು ಮತ್ತು ಪ್ರೋತ್ಸಾಹಿಸದಿರಲು ಅವರು ಬಹಳ ಪ್ರಯತ್ನಪಟ್ಟರು. ಆದರೆ ಅವರ ಪ್ರಯತ್ನಗಳೆಲ್ಲ ಸಫಲವಾಗಲಿಲ್ಲ. ದಯಾಳುವಾದ ಬ್ರಿಟಿಷ್ ಸರಕಾರ ಒಂದು ಶತಮಾನದಿಂದಲೂ ತಮ್ಮ ಪ್ರಜೆಗಳಿಗೆ ಎಲ್ಲ ವರ್ಗಗಳಲ್ಲಿ ಶಿಕ್ಷಣವನ್ನು ಹರಡಲು ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದರೂ ಬ್ರಾಹ್ಮಣೇತರರ ಶೈಕ್ಷಣಿಕ ಮಟ್ಟ ಸುಧಾರಿಸಲೇ ಇಲ್ಲ ಎನ್ನುವುದಕ್ಕೆ ಇದು ಸ್ಪಷ್ಟ ಸಾಕ್ಷ್ಯವಾಗಿದೆ. ಜೋತಿರಾವ್ ಅವರು "ಗುಲಾಮಗಿರಿ" ಯನ್ನು ಬರೆದದ್ದು ಬ್ರಾಹ್ಮಣರು ಶೂದ್ರರಿಗೆ ಮೋಸಮಾಡುತ್ತಿದ್ದಾರೆಂದು ಹೇಳುವುದು ಮಾತ್ರವಲ್ಲದೆ ನಿರಂತರವಾಗಿ ಅನುಸರಿಸುತ್ತಿರುವ ಉನ್ನತವರ್ಗಗಳ ಶಿಕ್ಷಣದ ಹಾನಿಕರ ವ್ಯವಸ್ಥೆಯನ್ನು ಇಂಗ್ಲಿಷ್ ಮುತ್ಸದ್ದಿಗಳಾದ ಸರ್ ಜಾರ್ಜ್ ಕ್ಯಾಂಬೆಲ್ ಮತ್ತು ಇತರರು ಈ ಶಿಕ್ಷಣ ವ್ಯವಸ್ಥೆಯು ಸರಕಾರದ ಹಿತಾಸಕ್ತಿಗಳಿಗೆ ಹೆಚ್ಚು ಕಿರುಕುಳಕಾರಿ ಮತ್ತು ಹಾನಿಕರವಾದದೆಂದು ಖಂಡನೆ ಮಾಡಿದ್ದರೆಂದು ಹೇಳುವುದು ಅವರ ಗುರಿಯಾಗಿತ್ತು.

ಘನತೆ ಮತ್ತು ಅಧಿಕಾರಕ್ಕೆ ಭಾಗಶಃ ಹಾನಿಯಾದದ್ದನ್ನು ಸೂಕ್ಷ್ಮಮತಿಯಿಂದ ಅರಿತ ಬ್ರಾಹ್ಮಣ ಉಪಾಧ್ಯಾಯರು ತಮ್ಮ ಅಧೀನದಲ್ಲಿದ್ದ ಕಚ್ಚಾ ಮನಸ್ಸಿನ ಬ್ರಾಹ್ಮಣ ಯುವಕರಲ್ಲಿ ಬ್ರಿಟಿಷ್ ಆಡಳಿತದ ವಿರುದ್ಧ ಕಿಚ್ಚನ್ನು ಹಚ್ಚಲು ಪ್ರಯತ್ನಿಸಿದರು. ಜೋತಿರಾವ್ ಅವರು ತಮ್ಮ ತೀರ್ಮಾನಗಳ ಬಗ್ಗೆ ತಲುಪಲು ಅವರು ತಮ್ಮದೇ ಆದ ನೋವನ್ನು ಅನುಭವಿಸಿದ್ದರಿಂದ ಈ ಅಂಶದ ಬಗ್ಗೆ ಅವರು ಯಾವುದೇ ರೀತಿಯ ಕಲ್ಪನೆಯನ್ನು ಮಾಡಿರಲಿಲ್ಲ. ಜೋತಿರಾವ್ ಅವರು ವಿದೇಶೀ ನೊಗದಿಂದ ಮಾತೃಭೂಮಿಯನ್ನು ವಿಮೋಚನೆಗೊಳಿಸಲು ತಮ್ಮ ಸಾಕ್ಷರತಾ ಶಿಕ್ಷಣಕ್ಕೆ ಭಂಗ ತರುವ ಬಂದೂಕುಗಾರಿಕೆ ಅಥವಾ ಬಿಲ್ಲುಗಾರಿಕೆ ಮತ್ತು ಕತ್ತಿವರಸೆಯ ಕೌಶಲ್ಯಗಳನ್ನು ಸ್ವತಃ ಕಲಿಯಲು ತೊಡಗಿದಾಗ ಬ್ರಾಹ್ಮಣ ಉಪಾಧ್ಯಾಯರೊಬ್ಬರು ಬ್ರಿಟಿಷರ ವಿರುದ್ಧವಿರುವ ತಮ್ಮ ವಿಷವನ್ನು ಯುವಕನಾದ ಮತ್ತು ಗಾಢ ಮನಸ್ಸಿನವನಾದ ಜೋತಿರಾವ್ ಅವರಲ್ಲಿ ಬ್ರಿಟಿಷರ ಬಗ್ಗೆ ದ್ವೇಷದ ವಿಷವನ್ನು ತುಂಬುವುದರಲ್ಲಿ ಸಫಲರಾದರು (ಗುಲಾಮಗಿರಿ, ಅಧ್ಯಾಯ-೧೪). ಮಿಷನರಿಗಳೊಂದಿಗಿನ ಸಹವಾಸ ಸಂಪರ್ಕದಿಂದ ಈ ಬ್ರಾಹ್ಮಣರ ಕುತಂತ್ರಗಳನ್ನು ಬೇಗನೇ ನೋಡಿದರು ಮತ್ತು ಅವರ ದುಷ್ಟ ವಿಚಾರಗಳನ್ನು ಬಿಟ್ಟುಬಿಟ್ಟರು; ಮತ್ತು ೧೮೭೩ರಲ್ಲಿ ಅವರು ತನ್ನ ದೇಶಬಾಂಧವರಿಗೆ ಮತ್ತು ಆಳರಸರಿಗೆ (ಬ್ರಿಟಿಷರಿಗೆ) ಎಚ್ಚರಿಕೆಯನ್ನು ಕೊಟ್ಟರು. ದುರದೃಷ್ಟವಶಾತ್ ಸರಕಾರ ಅದಕ್ಕೆ ಲಕ್ಷ್ಯ ಕೊಡಲಿಲ್ಲ ಮತ್ತು ತನ್ನ ಹಳೆಯ ಹಾದಿಯಲ್ಲಿಯೇ ಕಣ್ಣು ಮುಚ್ಚಿಕೊಂಡು ನಡೆಯತೊಡಗಿತು. ಮತ್ತು ಶಿಕ್ಷಣ ಇಲಾಖೆಯು ಸಂಪೂರ್ಣವಾಗಿ ಬ್ರಾಹ್ಮಣರ ಕೈಯಲ್ಲೇ ಇತ್ತು. ಸರ್ (ಆಗ ಶ್ರೀ) ವ್ಯಾಲಂಟೈನ್ ಚಿರೋಲ್ ವಿವರಿಸಿದ ದಾರುಣ ಸ್ಥಿತಿಗತಿಗಳು ಕೆಟ್ಟ ಪರಿಣಾಮಗಳನ್ನು ಬೀರಿದವು.

ಜೋತಿರಾವ್ ಅವರು ಅಪಾಯದ ಆಗಮನವನ್ನು ಪರಿಭಾವಿಸಿದರು ಮತ್ತು ತನ್ನ ಸಹೋದರರು ಬ್ರಾಹ್ಮಣರ ಬಲೆಗಳಿಗೆ ಬೀಳುವುದನ್ನು ತಪ್ಪಿಸಲು ಬಹಳ ಕಾಳಜಿ ವಹಿಸಿದ್ದರು. ತಮ್ಮ "ಗುಲಾಮಗಿರಿ" ಪ್ರಕಟಣೆಯಾದ ಕೂಡಲೇ "ಸತ್ಯಶೋಧಕ ಸಮಾಜ" ವನ್ನು ಪ್ರಾರಂಭಿಸಿದರು ಮತ್ತು ಬ್ರಾಹ್ಮಣೇತರರ ಒಂದು ಸಂಸ್ಥೆಯನ್ನು ಕಟ್ಟಲು ಮುಂದಾದರು. ಈ ಸಂಸ್ಥೆಯು ಬ್ರಾಹ್ಮಣರ ಉದ್ದೇಶ ಮತ್ತು ಆಕಾಂಕ್ಷೆಗಳ ಬಗ್ಗೆ ನಂಬಿಕೆಯಿಡದಿರುವುದು ಮತ್ತು ತಮ್ಮ ವಿಮೋಚನೆಗಾಗಿ ಬ್ರಿಟಿಷ್‌ರಾಜ್‌ಗೆ ಬೆಂಬಲಿಗರಾಗಿ ಮತ್ತು ನಿಷ್ಠಾವಂತ ಪ್ರಜೆಗಳಾಗಿ ಉಳಿಯುವುದೆಂದು ನಿರ್ಧರಿಸಿತು.

ಸತ್ಯಶೋಧಕ ಸಮಾಜವು ಪ್ರತಿ ವಾರ ಸಭೆಗಳನ್ನು ನಡೆಸಿತು. ಮತ್ತು ತನ್ನ ಕೆಲಸವಾದ ಪ್ರಚಾರವನ್ನು ಮುಂದುವರಿಸಿತು. ದೇವರು ಮತ್ತು ಮನುಷ್ಯರ ನಡುವೆ ಮಧ್ಯಸ್ಥಗಾರನ ಅವಶ್ಯಕತೆ ಇರಬಾರದೆಂಬುದೇ ಅದರ ಸಿದ್ಧಾಂತವಾಗಿತ್ತು. ಸತ್ಯಶೋಧಕ ಸಮಾಜದ ಪ್ರಕಾರ ಪ್ರತಿಯೊಬ್ಬನೂ ಬೇರೆ ಮನುಷ್ಯನ ಹಾಗೆ ತನ್ನದೇ ಆದ ರೀತಿಯಲ್ಲಿ ದೇವರನ್ನು ಪೂಜಿಸಲು ಅಥವಾ ಪ್ರಾರ್ಥನೆಗಳನ್ನು ಸಲ್ಲಿಸಲು ಸಮರ್ಥರು. ಸಮಾನತೆಯ ಈ ಸಿದ್ಧಾಂತ ಮತ್ತು ದೌರ್ಜನ್ಯಕಾರಿ ಪೂಜಾರಿಯ ಸೇವೆಗಳ ನಿರಾಕರಣೆಯು ಹಲವು ಅನುಯಾಯಿಗಳನ್ನು ಆಕರ್ಷಿಸಿತು. ಮತ್ತು ಬ್ರಾಹ್ಮಣ ಉಪಾಧ್ಯಾಯನಿಲ್ಲದೆ ಮದುವೆಗಳು ಮತ್ತು ಇತರೆ ಸಮಾರಂಭಗಳು ನಡೆಯತೊಡಗಿದವು. ಬ್ರಾಹ್ಮಣರು ಇದರಲ್ಲಿ ತಮ್ಮ ಪಾರಮ್ಯತೆಗೆ, ಧಾರ್ಮಿಕ ಮತ್ತು ಲೌಕಿಕ ವಿಷಯಗಳಿಗೆ ಹೊಡೆತವೆಂದು ಅರಿಯತೊಡಗಿದರು. ಏಕೆಂದರೆ ಸತ್ಯಶೋಧಕ ಸಮಾಜ ಬ್ರಾಹ್ಮಣರ ಮಹತ್ವವನ್ನು ಸಾರಿಹೇಳುವ ಪವಿತ್ರಗ್ರಂಥಗಳ ಎಲ್ಲಾ ಉಲ್ಲೇಖಗಳು ಪ್ರಕ್ಷೇಪ (ಸೇರ್ಪಡೆ) ಗಳೆಂದೂ ಅವರ ಧಾರ್ಮಿಕ ವ್ಯವಹಾರಗಳ ಅಧಿಕೃತತೆಯನ್ನೇ ನಿರಾಕರಿಸಿದ್ದು ಮಾತ್ರವಲ್ಲದೆ ಮೂಢನಂಬಿಕೆಯನ್ನೇ ಕಿತ್ತೆಸೆದರು ಮತ್ತು ಪೂಜಾರಿಗಳ ಗುಲಾಮರಾಗಿದ್ದ ಜನರ ಶಿಕ್ಷಣವನ್ನು ಹರಡುವುದರಲ್ಲಿ ಆಸಕ್ತಿಯಿಂದ ನಿರತರಾದರು.

ಇದರಿಂದ ಕೆರಳಿದ ಪೂಜಾರಿಗಳು ಮತ್ತು ಸಾಮಾನ್ಯ ಜನರು ಈ ಪ್ರತಿಭಟನಾ ಆಂದೋಲನವನ್ನು ಹೊಸಕಿ ಹಾಕಲು ತಮ್ಮ ಕೈಲಾದ ಮಟ್ಟಿಗೆ ಶ್ರಮಿಸಿದರು. ಮತ್ತು ಪ್ರಶ್ನಾರ್ಹವಾದ ವಿಧಾನಗಳನ್ನೂ ಬಳಸುವ ಮಟ್ಟಕ್ಕೆ ಇಳಿದಿದ್ದರು. ನಾಗರಿಕ, ಅಪರಾಧಿ ಮತ್ತು ಕಂದಾಯದ ಕೋರ್ಟುಗಳ ಯಂತ್ರವನ್ನು ಈ ಆಂದೋಲನದ ನಾಯಕರ ಮತ್ತು ಅನುಯಾಯಿಗಳ ವಿರುದ್ಧ ಕ್ರಮ ಕೈಗೊಳ್ಳಲು ಸಜ್ಜುಗೊಳಿಸಲಾಯಿತು ಮತ್ತು ಹಲವು ಬ್ರಾಹ್ಮಣ ನ್ಯಾಯಾಧೀಶರನ್ನು ಹುಡುಕಿ ತಮ್ಮ ಜಾತಿಯ ಬ್ರಾಹ್ಮಣರ ಪರವಾಗಿ ತೀರ್ಪುನೀಡಲು ಮತ್ತು ತಮ್ಮ ಜಾತಿಯ ಜನರ ಅನ್ಯಾಯಬದ್ಧ ಸವಲತ್ತುಗಳನ್ನು ಎತ್ತಿಹಿಡಿಯಲು ನೇಮಿಸಲಾಯಿತು. ಆದರೆ ಬಾಂಬೆ, ಅಮರೋತಿ ಮತ್ತು ನಾಗಪುರದ ಉಚ್ಚ ನ್ಯಾಯಾಲಯಗಳು ಮೇಲ್ಮನವಿಗಳಲ್ಲಿ ಈ ತೀರ್ಪುಗಳನ್ನು ತಿರಸ್ಕರಿಸಿದರು ಮತ್ತು ಸತ್ಯಶೋಧಕ ಸಮಾಜದವರ ಪರವಾಗಿ ಮುಖ್ಯ ತತ್ವಗಳನ್ನು ರೂಪಿಸಿದರು.

ಜೋತಿರಾವ್ ಸಾವು ಮತ್ತು ಅವರ ಕಟ್ಟಾ ಅನುಯಾಯಿಗಳ ದಸ್ತಗಿರಿಯಿಂದ ಈ ಆಂದೋಲನದ ಪ್ರಗತಿ ಕುಂಠಿತಗೊಂಡಿತು. ಆದರೆ ಅದು ಎಂದಿಗೂ ಸಾಯಲಿಲ್ಲ ಮತ್ತು ಅದು ಚದುರಿದಂತೆ ಹಲವು ಸ್ಥಳಗಳಲ್ಲಿದೆ. ಸಾಮಾನ್ಯ ಕಾರ್ಯನಿರ್ವಹಣೆ ಮತ್ತು ಸಹಕಾರ ಮತ್ತು ಆಂದೋಲನವನ್ನು ನಿರ್ದೇಶಿಸಲು ಒಂದು ಬಲಿಷ್ಠ ಕೇಂದ್ರ ಸಂಸ್ಥೆಯ ಕೊರತೆಯಿಂದ ಚಲ್ಲಾಪಿಲ್ಲಿಯಾಗಿ ಹರಡಿದ ಅನುಯಾಯಿಗಳು ಹೆಚ್ಚು ಕೆಲಸ ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಒಂದು ಸಮ್ಮೇಳನ ನಡೆಸುವ ಅವಶ್ಯಕತೆ ಕಂಡುಬಂತು

ಮತ್ತು ಅದು ದಿನಾಂಕ ೧೧ ಏಪ್ರಿಲ್, ೧೯೧೧ರಂದು ಪುಣೆಯಲ್ಲಿ ಬಾಂಬೆಯ ಪ್ರಸಿದ್ಧ ಕಟ್ಟಡ ಗುತ್ತಿಗೆದಾರರಾದ ದಿವಂಗತ ವ್ಯಂಕಯ್ಯ ಅಯ್ಯವರು ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಮ್ಮೇಳನವು ಚದುರಿದ ಎಲ್ಲಾ ಅಂಗಸಂಸ್ಥೆಗಳಿಗೆ ಒಟ್ಟುಗೂಡಿಸುವ ಶಕ್ತಿಯನ್ನು ನೀಡಿತು, ಆಂದೋಲನವನ್ನು ನಿರ್ದೇಶಿಸಲು ಒಂದು ಕೇಂದ್ರೀಯ ಸಂಸ್ಥೆಯನ್ನು ಆಯ್ಕೆ ಮಾಡಿತು ಮತ್ತು ಒಂದು ಸಂವಿಧಾನವನ್ನು ಅಂಗೀಕರಿಸಿತು. ಅದು ಸತ್ಯಶೋಧಕ ಸಮಾಜದ ತತ್ವಗಳನ್ನು ಸ್ಪಷ್ಟವಾಗಿ ನಿರ್ವಚಿಸಿತು. ಸಮ್ಮೇಳನದಲ್ಲಿ ಪಾಸುಮಾಡಿದ ಪ್ರಮುಖ ನಿರ್ಣಯಗಳು ಈ ರೀತಿಯಿವೆ:

"ಎರಡನೆಯದು–(ಎ) ಎಲ್ಲಾ ಮನುಷ್ಯರು ಒಬ್ಬ ದೇವರ ಮಕ್ಕಳು, ಹೀಗಾಗಿ ದೇವರು ಅವರ ತಂದೆ.

(ಬಿ) ತಾಯಿಯ ಬಳಿಗೆ ಹೋಗಲು ಅಥವಾ ತಂದೆಯನ್ನು ತೃಪ್ತಿಗೊಳಿಸಲು ಮಧ್ಯಸ್ಥಗಾರನ ಅವಶ್ಯಕತೆ ಅಥವಾ ದೇವರಿಗೆ ಭಕ್ತನು ಪ್ರಾರ್ಥನೆಗಳನ್ನು ಸಲ್ಲಿಸಲು ಅನುಕೂಲವಾಗುವುದಕ್ಕೆ ಬೋಧಕನ ಅಥವಾ ಪೂಜಾರಿಯು ಮಧ್ಯಸ್ಥಗಾರ(ದಲ್ಲಾಳಿ)ನಾಗುವ ಅವಶ್ಯಕತೆಯಿಲ್ಲ.

(ಸಿ) ಈ ತತ್ವವನ್ನು ಒಪ್ಪುವ ಯಾರಾದರೂ ಸತ್ಯಶೋಧಕ ಸಮಾಜದ ಸದಸ್ಯನಾಗಲು ಅರ್ಹನಾಗುತ್ತಾರೆ.

ಮೂರನೆಯ– ಪ್ರತಿಯೊಬ್ಬ ಸತ್ಯಶೋಧಕ ಸಮಾಜಿಯು ಈ ಕೆಳಗಿನದನ್ನು ವಿಧಿಬದ್ಧವಾಗಿ ಪರಿಪಾಲಿಸಬೇಕು: –

"ಎಲ್ಲಾ ಮಾನವರು ಒಬ್ಬ ದೇವನ ಮಕ್ಕಳು, ಆದ್ದರಿಂದ ಅವರೆಲ್ಲರೂ ಅಣ್ಣ–ತಮ್ಮಂದಿರು (ಅಕ್ಕ–ತಂಗಿಯರು) ಮತ್ತು ನಾನು ಯಾವಾಗಲೂ ಈ ತತ್ವದ ಮೇಲೆ ನಡೆದುಕೊಳ್ಳಲು ಪ್ರಯತ್ನಿಸುವೆನು. ಧಾರ್ಮಿಕ ಸಮಾರಂಭಗಳನ್ನು ಆಚರಿಸುವಾಗ ಮಧ್ಯಸ್ಥಗಾರನ ಸೇವೆಯ ಅವಶ್ಯಕತೆ ನನಗೆ ಬೇಕಾಗಿಲ್ಲ. ಮತ್ತು ನಾನು ಸದಾ ಇತರರನ್ನು ಇದನ್ನು ಪರಿಪಾಲಿಸಲು ಮನವೊಲಿಸುವೆನು. ನನ್ನ ಗಂಡು ಮಕ್ಕಳು ಮತ್ತು ಹೆಣ್ಣುಮಕ್ಕಳನ್ನು ಓದಿಸುವುದರಲ್ಲಿ ವಿಫಲನಾಗುವುದಿಲ್ಲ. ನಾನು ಸದಾ ಸರಕಾರಕ್ಕೆ ನಿಷ್ಠನಾಗಿರುವೆನು. ನಾನು ಈ ಘೋಷಣೆಯನ್ನು ದೇವರ, ಸರ್ವಾಂತರ್ಯಾಮಿ ಮತ್ತು ಸತ್ಯದ ಮಡಿಲಲ್ಲಿ ಮಾಡುವೆನು. ಈ ಪವಿತ್ರ ಪ್ರಮಾಣವನ್ನು ಪರಿಪಾಲಿಸುವುದಕ್ಕೆ ನನ್ನ ಜೀವನವನ್ನು ಸದುಪಯೋಗ ಮಾಡಿಕೊಳ್ಳಲು ಶಕ್ತನನ್ನಾಗಿ ಮಾಡಲು ಆ ಸರ್ವಶಕ್ತ ದೇವರು ನನಗೆ ಸಹಾಯ ಮಾಡಲಿ."

ಐದನೇ– ಈ ಸಮ್ಮೇಳನದ ಮುಖ್ಯ ಉದ್ದೇಶ ಧಾರ್ಮಿಕ ಆಚರಣೆಗಳನ್ನು ತಾನೇ ನಿರ್ವಹಿಸಬೇಕು. ಏನಾದರೂ ತೊಂದರೆಯಿದ್ದಲ್ಲಿ ಆತನು ಸತ್ಯಶೋಧಕ ಸಮಾಜದ ಬೇರೆ ಸದಸ್ಯರನ್ನು ಸಹಾಯಕ್ಕೆ ಕರೆಯಬೇಕು. ಆದರೆ ಅಂತಹ ಸಹಾಯಕರು ಯಾವುದೇ ಬಗೆಯ ಸಂಭಾವನೆಯನ್ನು ತಾನು ಮಾಡಿದ ಸೇವೆಗೆ ಪಡೆಯಬಾರದು. ಉದಾಹರಣೆಗೆ ಹಣ, ಬಟ್ಟೆ, ಪಡಿತರ ಇತ್ಯಾದಿ.

೧೦ನೆಯ– ಈ ಸಮ್ಮೇಳನ ಪ್ರಸ್ತುತ ದೇಶದ್ರೋಹದ ಆಂದೋಲನ ಹಾಗೂ ಹಿಂಸಾಚಾರಗಳನ್ನು ಖಂಡಿಸಬೇಕು. ಅಂತಹ ಆಂದೋಲನಗಳಿಂದ ಸತ್ಯಶೋಧಕ ಸಮಾಜದ ಸದಸ್ಯರು ದೂರವಿರಬೇಕೆಂದು ಕಳಕಳಿಯಿಂದ ಕೋರುತ್ತದೆ.

ಸತ್ಯಶೋಧಕ ಸಮಾಜದ ಕೆಲಸ ಹೆಚ್ಚು ಹುಮ್ಮಸ್ಸಿನಿಂದ ಪ್ರಾರಂಭವಾಯಿತು; ಬ್ರಾಹ್ಮಣರ ಪೂಜಾರಿಗಳ

ಸಹಾಯವಿಲ್ಲದೆ ನಾನಾ ಸ್ಥಳಗಳಲ್ಲಿ ಧಾರ್ಮಿಕ ಆಚರಣೆಗಳನ್ನು ನಡೆಸಲಾಯಿತು. ಶುಲ್ಕ-ದಕ್ಷಿಣೆಗಳ ನಷ್ಟ ಮತ್ತು ಮರ್ಯಾದೆ-ಕುಂದುಗಳನ್ನು ತೀವ್ರವಾಗಿ ಅನುಭವಿಸಬೇಕಾಯಿತು. ಮತ್ತು ೭ಕ್ಕೆ ಕಡಿಮೆಯಿಲ್ಲದ ನಷ್ಟ-ಪರಿಹಾರಗಳ ಕೇಸುಗಳನ್ನು ಪುಣೆಯ ಜಿಲ್ಲೆಯ ಖೇಡನ ಉಪ-ನ್ಯಾಯಾಮೂರ್ತಿಗಳ ಕೋರ್ಟಿನಲ್ಲಿ ಹಾಕಲಾಯಿತು. ಸತ್ಯಶೋಧಕ ಸಮಾಜದ ಸದಸ್ಯನಾದ ಕುಣ್ಬಿ ಮನೆಯವನು ತನ್ನ ಸಹೋದರನ ನೆರವಿನಿಂದ ಯಾವ ಶುಲ್ಕ-ದಕ್ಷಿಣೆಗಳನ್ನು ನೀಡದೆ ತಾನೇ ಶವಸಂಸ್ಕಾರವನ್ನು ನಡೆಸಿದ್ದನ್ನು ಪ್ರಶ್ನಿಸಿ ಪುಣೆಯ ಜಿಲ್ಲೆಯ ಖೇಡ ಎಂಬ ಹಳ್ಳಿಯ ಪೂಜಾರಿಯು ಶವಸಂಸ್ಕಾರ ನಡೆಸುವ ಮತ್ತು ಶುಲ್ಕ-ದಕ್ಷಿಣೆಗಳನ್ನು ಪಡೆಯುವ ಹಕ್ಕನ್ನು ಮೊಟಕುಗೊಳಿಸಲಾಗಿದೆಯೆಂದು ಈ ಬಗ್ಗೆ ಒಂದು ಕೇಸನ್ನು ಹಾಕಿದನು. ಆ ಏಳು ಕೇಸುಗಳಲ್ಲಿ ಈ ಒಂದು ಕೇಸು ಕೋರ್ಟಿನ ನ್ಯಾಯಾಲಯದ ಮುಂದೆ ಬಂದಿದೆ. ಸಂತೋಷಕರ ಅಥವಾ ದುಃಖಕರವಾದ ಎಲ್ಲಾ ಸಂದರ್ಭಗಳಲ್ಲಿ ತಮ್ಮ ಶುಲ್ಕಗಳನ್ನು ನೀಡಬೇಕು ಅಥವಾ ನೀಡುವಲ್ಲಿ ತಪ್ಪಿತಸ್ಥರಾದರೆ ಯಜಮಾನನ ಪೂರ್ವಜರು ಮತ್ತು ವಂಶಸ್ಥರು ಎಂದೆಂದಿಗೂ ತಪ್ಪದೆ ನರಕಕ್ಕೆ ಹೋಗುವರೆಂದು ಬ್ರಾಹ್ಮಣರು ಹೇಳುತ್ತಿದ್ದರು. ಆದರೆ ಅಜ್ಞಾನಿಯಾದ (ಮುಗ್ಧ) ಕುಣ್ಬಿ ಈ ಬೆದರಿಕೆಯ ಪೊಳ್ಳುತನ ಮನವರಿಕೆಯಾದ ಮೇಲೆ ತಮ್ಮನ್ನು ಹೆದರಿಸಿ ಗುಲಾಮರನ್ನಾಗಿ ಮಾಡಿಕೊಂಡಿದ್ದರ ವಿರುದ್ಧ ಕೋರ್ಟಿನಲ್ಲಿ ಕೇಸು ಹಾಕಲು ಹೋದರು.

ಎರಡನೆಯ ಸಮ್ಮೇಳನವು ನಾಸಿಕ್‌ನಲ್ಲಿ ಏಪ್ರಿಲ್ ೫, ೧೯೧೨ರಂದು ಸರಕಾರಿ ವೈದ್ಯಕೀಯ ಇಲಾಖೆಯ ನಿವೃತ್ತಿವೇತನದಾರರಾದ ಡಾ. ಸಂತಾಜಿ ರಾಮ್‌ಜಿ ಲಾಡ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸತ್ಯಶೋಧಕ ಸಮಾಜಕ್ಕೆ ಒಡ್ಡುವ ಬೆದರಿಕೆಗಳ ಹೊಸ ಅಪಾಯವನ್ನು ಮತ್ತು ಬಾಂಬೆ ಪ್ರೆಸಿಡೆನ್ಸಿಯಲ್ಲಿ ತನ್ನ ಸಹೋದರರಾದ ಸತ್ಯಶೋಧಕ ಸಮಾಜದವರು ಸನ್ನಿವೇಶಗಳಲ್ಲಿ ಕ್ಷೇಮಕರವಾಗಿರುವ ವಿಚಾರಗಳನ್ನು ಕುರಿತು ಚರ್ಚಿಸಿದರು. ಬಾಂಬೆಯನ್ನು ಬಿಟ್ಟು ಭಾರತದ ಪ್ರತಿಯೊಂದು ಭಾಗದಲ್ಲಿ ಯಾವ ಹಿಂದುವಾದರೂ ಯಾರನ್ನಾದರೂ ಪೂಜಾರಿಯನ್ನಾಗಿ ನೇಮಕ ಮಾಡಿಕೊಳ್ಳುವ ಹಕ್ಕನ್ನು ಸಂಪೂರ್ಣವಾಗಿ ಮಾನ್ಯ ಮಾಡಲಾಗಿದೆ ಮತ್ತು ಗ್ರಾಮ ಅಥವಾ ಕುಟುಂಬದ ಪೂಜಾರಿ ತನ್ನನ್ನು ಪೂಜಾರಿಯನ್ನಾಗಿ ನೇಮಕ ಮಾಡಿಕೊಂಡಿಲ್ಲವೆಂದು ತನ್ನ ಸತ್ತ ಕಕ್ಷಿಗಾರನ ವಿರುದ್ಧ ಕೇಸು ಹಾಕುವಂತಿಲ್ಲ. ಬಾಂಬೆ ಹೈಕೋರ್ಟ್ ಈ ಸಮಾನತೆಯ ತತ್ವವನ್ನು ಮಾನ್ಯ ಮಾಡಲಿಲ್ಲ. ಅದು ಗ್ರಾಮದ ಪೂಜಾರಿ ಸಂಸ್ಕಾರಗಳನ್ನು ವಿಧಿವಿಧಾನಗಳನ್ನು ನೆರವೇರಿಸುವುದು ಮತ್ತು ತನ್ನ ಸಂಪ್ರದಾಯದ ಶುಲ್ಕಗಳನ್ನು ಪಡೆಯುವುದು ಅವನ ಹಕ್ಕೆಂದೂ ಮತ್ತು ಆ ಹಕ್ಕನ್ನು ಮೊಟಕುಗೊಳಿಸಿದರೆ, ನಷ್ಟ ಪರಿಹಾರಕ್ಕೆ ಕೇಸು ಹಾಕಬಹುದೆಂದು ಕೋರ್ಟು ಭಾವಿಸಿತು. ಡಾ. ಲಾಡ್ ಅವರು ಈ ತೀರ್ಪುಗಳಲ್ಲಿ ಕೆಲವನ್ನು ಚರ್ಚಿಸಿದರು ಮತ್ತು ಸತ್ಯಶೋಧಕ ಸಮಾಜದವರು ಮನಃಸಾಕ್ಷಿಯಂತೆ ಮೊದಲನೇ ಸಮ್ಮೇಳನದ ೭ನೆಯ ನಿರ್ಣಯದಂತೆ ಪರಿಪಾಲಿಸಿದರೆ ಗ್ರಾಮದ ಪೂಜಾರಿಯು ಬಾಂಬೆಯ ಪ್ರೆಸಿಡೆನ್ಸಿಯಲ್ಲಿ ಯಾವ ಕ್ರಮವನ್ನೂ ಕೈಗೊಳ್ಳುವಂತಿಲ್ಲ ಎಂದು ತೋರಿಸಿಕೊಟ್ಟರು.

ಸಾಮ್ರಾಜ್ಯದ ಮಹಾಪ್ರಭುಗಳು ಭಾರತಕ್ಕೆ ಬಂದದ್ದರಿಂದ ಅವರಿಗೆ ಕೃತಜ್ಞತಾಪೂರ್ವಕ ಹಾಗೂ ನಿಷ್ಠೆಯ ಅಭಿನಂದನೆಗಳನ್ನು ಸಲ್ಲಿಸುವ ಪ್ರಮುಖ ನಿರ್ಣಯಗಳನ್ನು ಎರಡನೇ ಸಮ್ಮೇಳನದಲ್ಲಿ ಪಾಸುಮಾಡಿದರು. ಮತ್ತು ರಾಜನಿಷ್ಠೆಯನ್ನು ಬಲಪಡಿಸುವ ಮತ್ತು ದೇಶದ್ರೋಹದ ಆಂದೋಲನಕ್ಕೆ ಗಂಭೀರವಾದ ತಡೆಯೊಡ್ಡುವ ಹಾಗೂ ಸತ್ಯಶೋಧಕ ಸಮಾಜದ ಸದಸ್ಯರ ಗಮನಕ್ಕೆ ಮತ್ತೆ ತರುವ ೧೨ ನಿರ್ಣಯಗಳನ್ನು ಪೂನಾದಲ್ಲಿ ಪಾಸುಮಾಡಲಾಯಿತು.

ಆಂದೋಲನವು ಎಲ್ಲಾ ಜಿಲ್ಲೆಗಳಲ್ಲಿ ಹರಡುತ್ತಿದೆ. ಕೆಲಸ ಮಹತ್ವದ್ದು, ಆದರೆ ಕಾರ್ಯಕರ್ತರು ಕೆಲವರು ಮಾತ್ರ, ಬ್ರಾಹ್ಮಣೇತರರು ಬಹಳ ಉತ್ಸಾಹದಿಂದ ಈ ಸಂಘಟನೆಗೆ ಸೇರುತ್ತಿದ್ದಾರೆ. ಬೆಳಗಾವಿ, ಅಹಮದ್‌ನಗರ, ಠಾಣೆ, ಪೂನಾ, ಸೋಲಾಪುರ ಮತ್ತು ಖಾನ್‌ದೇಶಗಳು ಜಾಗೃತಗೊಳ್ಳುತ್ತಿವೆ. ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕು ಬಹಳ ಸಕ್ರಿಯವಾಗಿದೆ ಮತ್ತು ಮರಾಠರು ಮತ್ತು ಇತರರು ಪ್ರತಿ ವರ್ಷ ಬ್ರಾಹ್ಮಣ ಪೂಜಾರಿಗಳ ಮಧ್ಯಸ್ಥಿಕೆಯನ್ನು ಅಧಿಕ ಸಂಖ್ಯೆಯಲ್ಲಿ ತಿರಸ್ಕರಿಸುತ್ತಿದ್ದಾರೆ. ಚಿಕ್ಕೋಡಿಯ ಸತ್ಯಶೋಧಕ ಸಮಾಜದ ಶಾಖೆಯನ್ನು ಕೊಲ್ಹಾಪುರದಲ್ಲಿ ತೆರೆಯಲಾಯಿತು. ಮತ್ತು ಇಲ್ಲಿ ಅನುಯಾಯಿಗಳ ಸಂಖ್ಯೆ ಗಮನಾರ್ಹವಾಗಿ ಬೆಳೆಯುತ್ತಿದೆ. ಕುಂಬಾರರು ಮತ್ತು ನೇಕಾರರ ಸಮುದಾಯಗಳು ಕೆಲವು ವರ್ಷಗಳಿಂದ ಬ್ರಾಹ್ಮಣರ ನೊಗವನ್ನು ಕಿತ್ತೆಸೆಯಲು ಪ್ರಯತ್ನಿಸುತ್ತಿದ್ದಾರೆ ಮತ್ತು ಬ್ರಾಹ್ಮಣ ಪೂಜಾರಿಗಳು ಇಚಲಕರಂಜಿ ಕೋರ್ಟುಗಳಲ್ಲಿ ಅವರ ವಿರುದ್ಧ ನಾಗರಿಕ ದಾವೆಗಳನ್ನು ಹೂಡಿದ್ದರು ಮತ್ತು ಗೆಲುವುಗಳನ್ನು ಸಾಧಿಸಿದ್ದರು, ಆದರೆ ಈಗ ಅವರು ಕೊಲ್ಹಾಪುರದ ಘನತೆವೆತ್ತ ಮಾನ್ಯ ಮಹಾರಾಜ ಸಾಹೇಬರಲ್ಲಿ ವಿಶೇಷ ಮನವಿಯನ್ನು ಮಾಡಿಕೊಂಡಿದ್ದಾರೆ. ಪನ್ಹಾಲ ತಾಲೂಕಿನಲ್ಲಿ ತಿರಪನ್ ಹಳ್ಳಿಯಲ್ಲಿ ಮರಾಠರು ಮತ್ತು ಇತರರು ಕೆಚ್ಚೆದೆಯಿಂದ ಪೂಜಾರಿ ಮತ್ತು ಕುಲಕರ್ಣಿಗಳ ಜೊತೆಯಲ್ಲಿ ಅಸಮಾನವಾದ ಹೋರಾಟವನ್ನು ನಡೆಸುತ್ತಿರುವುದರಿಂದ ಸಹಜವಾಗಿ ಅವರು ಬ್ರಾಹ್ಮಣ ಅಧಿಕಾರಿಗಳಿಂದ ಸಹಾನುಭೂತಿಗಳನ್ನು ಪಡೆಯಬಹುದು. ಭೂಮಿ ಹದವಾಗಿದೆ ಮತ್ತು ನ್ಯಾಯೋಚಿತವಾಗಿ ಮತ್ತು ಸಮರ್ಥವಾಗಿ ಬೀಜಗಳನ್ನು ಬಿತ್ತಲು ಭೂಮಿ ಹಂಬಲಿಸುತ್ತಿದೆ. ಬೆಳೆಗಳು ಫಲ ನೀಡುವುದಕ್ಕೆ ವಿಫಲವಾಗಿರುವುದಿಲ್ಲ. ಪೂಜಾರಿಗಳ ಕುತಂತ್ರಗಳನ್ನು ಬಹಿರಂಗಗೊಳಿಸಲು ಪ್ರಯತ್ನಿಸುತ್ತಿರುವ ಸತ್ಯಶೋಧಕ ಸಮಾಜ ರಾಜಕೀಯ ವಿಚಾರಗಳಲ್ಲಿ ತಮ್ಮ ಸ್ವಯಂಘೋಷಿತ ಉದ್ದೇಶ ಮತ್ತು ಆಕಾಂಕ್ಷೆಗಳಲ್ಲಿ ಕಣ್ಣುಮುಚ್ಚಿಕೊಂಡು ನಂಬುವ ಬ್ರಾಹ್ಮಣ ಸಮುದಾಯದ ವಿರುದ್ಧ ತನ್ನ ಅನುಚರರನ್ನು ರಕ್ಷಕರಂತೆ ಇಡುತ್ತಿತ್ತು ಮತ್ತು ಬ್ರಿಟಿಷ್ ಸಿಂಹಾಸನಕ್ಕೆ ಜನತೆಯ ನಿಷ್ಠೆಯನ್ನು ಬಲಪಡಿಸುವುದಕ್ಕೆ ಮುನ್ನಡೆಯುತ್ತಿತ್ತು. ದಕ್ಷಿಣ(ಡೆಕ್ಕನ್)ದ ಬಹುಸಂಖ್ಯಾತ ರಾಜಕಾರಣಿಗಳು ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸೇರಿದವರು ಬ್ರಾಹ್ಮಣರಾಗಿದ್ದರು ಮತ್ತು ಅವರಲ್ಲಿ ಬಹಳಷ್ಟು ಮಂದಿ ಬ್ರಾಹ್ಮಣರ ಶ್ರೇಷ್ಠತ್ವವನ್ನು ಪುನರ್‌ಸ್ಥಾಪಿಸಬೇಕೆಂದು ಬಯಸಿದ್ದರು. ಅವರ ಅತೃಪ್ತಿಯ ಬಹುಭಾಗಕ್ಕೆ ಮುಖ್ಯ ಕಾರಣ ಬ್ರಿಟಿಷ್‌ರಾಜ್ ಆಗಮನದಿಂದ ಅವರ ಸಮುದಾಯದ ಘನತೆ-ಗೌರವ ಕಳೆದುಹೋಯಿತೆಂಬುದು ಅವರ ಪ್ರಜ್ಞೆಯಾಗಿತ್ತು. ಶಿಕ್ಷಣವು ನಿಧಾನವಾಗಿ ಆದರೆ ಖಚಿತವಾಗಿ ಹರಡುತ್ತಿದೆ ಮತ್ತು ಬ್ರಾಹ್ಮಣೇತರರ ಸಮುದಾಯಗಳು ತಮ್ಮನ್ನು ತಾವೇ ಸಮರ್ಥಿಸಿಕೊಳ್ಳತೊಡಗಿವೆ. ಮುಂಬರುವ ತಮ್ಮ ಅಧಃಪತನಕ್ಕೆ ಪ್ರಮುಖ ಕಾರಣವಾದ ಬ್ರಿಟಿಷ್ ಆಡಳಿತದ ದ್ವೇಷಕ್ಕೆ ಮತಾಂಧರಾದ ಬ್ರಾಹ್ಮಣರನ್ನು ಇದು ಕೆರಳಿಸಿತು. ಈ ಸಮಾಧಾನವು ಇತ್ತೀಚಿನ ಉಗ್ರವಾದಿ ಪ್ರಚಾರದಲ್ಲಿ ಪರಿಣಮಿಸಿದೆ.

ಇಂಗ್ಲೀಷಿನ ಮಹಾಪರಿವೀಕ್ಷಕರಾದ ಮೀಡ್ ಮತ್ತು ಭಾರತೀಯರಾದ ಜೋತಿರಾವ್ ಅವರು ಬ್ರಿಟಿಷ್ ಸರಕಾರದ ಬಗ್ಗೆ ರಾಜಕೀಯ ಅವಿಶ್ವಾಸವನ್ನು ಹರಡಲು ಮತ್ತು ಸರಕಾರ ಮತ್ತು ಬ್ರಿಟಿಷರ ಆಡಳಿತ ಮುಂದುವರಿಕೆಯು ದೇಶದ ಕಲ್ಯಾಣಕ್ಕೆ, ಪೂಜಾರಿ-ಕುಲಕರ್ಣಿಯವರ ಅನಾರೋಗ್ಯಕರವಾದ ಪ್ರಭಾವಗಳಿಂದ ಜನಸ್ತೋಮವನ್ನು ಸಂರಕ್ಷಿಸುವುದಕ್ಕೆ ಬ್ರಿಟಿಷ್ ಆಡಳಿತ ಎಷ್ಟು ಮುಖ್ಯವೆಂದು ಯೋಚಿಸುವವರಿಗೆಲ್ಲಾ ಗ್ರಾಮದ ಚಾವಡಿಗಳನ್ನು ವಿಚಾರಗಳನ್ನು ಹರಡಲು ಬಳಸಿದ್ದನ್ನು ಚೆನ್ನಾಗಿ ವಿವರಿಸಿದ್ದಾರೆ. ಈ ಉದ್ದೇಶದಿಂದ ಸತ್ಯಶೋಧಕ ಸಮಾಜವನ್ನು ಮೊದಲು ಪ್ರಾರಂಭಿಸಲಾಯಿತು ಮತ್ತು ಅದರ ಕೆಲಸವನ್ನು ಮುಂದುವರಿಲಾಯಿತು. ಈ ಕೆಲಸವು ಆಳುವವರಿಗೆ ಮತ್ತು ಪ್ರಜೆಗಳಿಗೆ ಅತ್ಯಗತ್ಯವಾಯಿತು ಮತ್ತು ರಾಷ್ಟ್ರದ ಪುನರುಜ್ಜೀವನದ ಮಹತ್‌ಕಾರ್ಯದ ಸಾಧನೆಯಲ್ಲಿ ನಿರತವಾದ ಈ ಆಂದೋಲನಕ್ಕೆ ಸಹಾಯಹಸ್ತವನ್ನು

ಪ್ರತಿಯೊಬ್ಬ ಸದ್ಭಾವನೆಯ ಮನುಷ್ಯನು ನೀಡಬೇಕಾಗಿದೆ. "ಶೂದ್ರರು ದೇಶದ ಪ್ರಾಣ ಮತ್ತು ಆಧಾರಸ್ಥಂಭಗಳಾಗಿದ್ದಾರೆ ಮತ್ತು ಸರಕಾರವು ಅವರನ್ನೇ ನೋಡಬೇಕು, ಬ್ರಾಹ್ಮಣರನ್ನಲ್ಲ. ಸರಕಾರವು ಅವರ ಸಂಕಷ್ಟಗಳಲ್ಲಿ ಹಣಕಾಸಿನ ಮತ್ತು ರಾಜಕೀಯ ನೆರವನ್ನು ನೀಡಬೇಕು. ಶೂದ್ರ ಹೃದಯಗಳು ಮನಸ್ಸುಗಳನ್ನು ಸಂತೃಪ್ತಿಗೊಳಿಸಿದರೆ ಬ್ರಿಟಿಷ್ ಸರಕಾರವು ಭವಿಷ್ಯದಲ್ಲಿ ಅವರ ನಿಷ್ಠೆಯ ಬಗ್ಗೆ ಯಾವುದೇ ರೀತಿಯ ತಪ್ಪುಗ್ರಹಿಕೆಗೆ ಅವಕಾಶವಿರುವುದಿಲ್ಲ."

ಘನತೆವೆತ್ತ ಸಾಮ್ರಾಜ್ಯ ಮಹಾಪ್ರಭುಗಳ ನಿಷ್ಠ ಪ್ರಜೆಗಳ ಒಂದು ಸಂಸ್ಥೆಯ ಸತ್ಯಶೋಧಕ ಸಮಾಜ. ಅವರ ಮೇಲೆ ಧಾರ್ಮಿಕ ವಿಷಯಗಳಲ್ಲಿ ಗುಲಾಮತ್ವವನ್ನು ಹೇರಲಾಗಿದೆ. ಅದರ ವಿರುದ್ಧ ಪ್ರತಿಭಟಿಸಲು ಅವರಲ್ಲಿ ಪುನರುಜ್ಜೀವವಾಗಬೇಕೆಂದು ಬ್ರಿಟಿಷ್ ಮಹಾಪ್ರಭುಗಳು ಮನವರಿಕೆ ಮಾಡಿಕೊಂಡರು. ವಂಶಪಾರಂಪರಿಕ ಪುರೋಹಿತರು ಮತ್ತು ತಮ್ಮ ಜಾತಿಯ ಜನರು ಈ ಗುಲಾಮಗಿರಿಯನ್ನು ನಿರಂತರವಾಗಿ ಮುಂದುವರಿಸಲು ಅವರು ತಮ್ಮ ಅಧಿಕಾರದಲ್ಲಿ ಒಳ್ಳೆಯದು ಅಥವಾ ಕೆಟ್ಟದನ್ನು ಮಾಡಲು ನಿರ್ಧರಿಸಿಬಿಟ್ಟರು. ಸತ್ಯಶೋಧಕ ಸಮಾಜದ ಪ್ರತಿಯೊಬ್ಬರೂ ಎಲ್ಲಾ ವಿಧಗಳಲ್ಲಿ ದುರ್ಬಲ (ಬಡವರು) ರಾಗಿದ್ದರು. ಅವರು ಸಂಪತ್ತಿನಲ್ಲಿ ಬಡವರು, ಶಿಕ್ಷಣದಲ್ಲಿ ಬಡವರು, ಮತ್ತು ಜೊತೆಗೆ ಪ್ರಭಾವದಲ್ಲಿ ಬಡವರಾಗಿದ್ದರು. ಅವರೆಲ್ಲರೂ ಬಹುಮಟ್ಟಿಗೆ ಮರಕಡಿಯುವವರು ಮತ್ತು ನೀರುಸೇದುವವರಾಗಿದ್ದರು. ಅವರ ವಿರೋಧಿಗಳು, ತದ್ವಿರುದ್ಧವಾಗಿ, ಈ ಪ್ರಪಂಚದಲ್ಲಿ ಸಫಲವಾಗಲು ಎಲ್ಲವನ್ನೂ ಹೊಂದಿದ್ದರು. ಅವರಿಗೆ ಸಕಲ ಐಶ್ವರ್ಯವಿತ್ತು, ಅವರು ಸುಶಿಕ್ಷಿತರಾಗಿದ್ದರು ಮತ್ತು ಅವರ ಸಮುದಾಯದ ಅನಾರೋಗ್ಯಕರ ಪ್ರಭಾವವು ಹಳ್ಳಿಯ ಚಾವಡಿಯಿಂದ ಸಾಮ್ರಾಜ್ಯದ ಪರಿಷತ್ತಿನವರೆಗೆ ಇತ್ತು.

ಆದ್ದರಿಂದ ಸತ್ಯಶೋಧಕ ಸಮಾಜವು ದಮನವನ್ನು ಕಿತ್ತುಹಾಕುವ ಮತ್ತು ನ್ಯಾಯ ಒದಗಿಸಬಯಸುವ ಎಲ್ಲಾ ಉದಾರಿಗಳಿಗೆ ಮತ್ತು ಮಹಾದಾನಿಗಳ ಸದ್ಭಾವನೆಗಳ ಜನರಲ್ಲಿ ಸತ್ಯಶೋಧಕ ಸಮಾಜಕ್ಕೆ ಅವರ ಧ್ಯೇಯಕ್ಕಾಗಿ ಸಹಾಯಹಸ್ತ ನೀಡಬೇಕೆಂಬ ಮನವಿ ಮಾಡಿಕೊಂಡರು. ಈಗಾಗಲೇ ತಮ್ಮ ವಿರುದ್ಧ ಹೂಡಿದ ವಿವಿಧ ದಾವೆಗಳನ್ನು ಸಮರ್ಥಿಸಿಕೊಳ್ಳಲು ಹಣ ಬೇಕಾಗಿದೆ, ತಮ್ಮ ನ್ಯಾಯಬದ್ಧ ಧ್ಯೇಯಕ್ಕಾಗಿ ಮೊರೆಯನ್ನು ತಿಳಿಸಲು ಸುದ್ದಿಪತ್ರಿಕೆಗಳನ್ನು ಮತ್ತು ಪುಸ್ತಕ ಮತ್ತು ಕಿರುಪುಸ್ತಕಗಳನ್ನು ಪ್ರಕಟಿಸಲು ಹಣ ಬೇಕಾಗಿದೆ. ಸಣ್ಣ ಮೊತ್ತವಾದರೂ ನಾವು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುವೆವು.

(ದಾಸರಾಮ್ ಪತ್ರಿಕೆಗಳು)

---

೬

# ಜಾಧವ್ ಅವರಿಗೆ ಶಾಹು ಬರೆದ ಪತ್ರ

ಜನವರಿ ೩೧, ೧೯೧೪

*ಶಾಹುರವರೇ ತಮ್ಮ ಕೈಬರಹದಲ್ಲಿ ಶ್ರೀ ಜಾಧವ್, ನಿರ್ದೇಶಕರು, ಮೀರಜ್ ಮಿಷನ್ನಿನ ಶಾಲೆ.*

---

ಕೊಲ್ಹಾಪುರ

೩೧/೧೧/೧೯೧೪

ನನ್ನ ಪ್ರೀತಿಯ ಶ್ರೀ ಜಾಧವ್,

ಮಿಷನ್ನಿನ ವಿದ್ಯಾರ್ಥಿಗಳ ಆಹ್ವಾನಪತ್ರಿಕೆಯನ್ನು ಒಪ್ಪಿಕೊಳ್ಳಲು ಬಹಳ ಬಹಳ ಸಂತೋಷವಾಗುತ್ತದೆ.

ಅವರು ನನ್ನನ್ನು ಅವರಲ್ಲಿ ಒಬ್ಬನೆಂದು ಪರಿಗಣಿಸಿದ್ದಕ್ಕೆ ನಿಜವಾಗಿಯೂ ನನಗೆ ಹೆಮ್ಮೆಯಾಗುತ್ತದೆ.

ಅವರು ನನಗೆ ನೀಡಿದ ಗೌರವವನ್ನು ನಾನು ಎಂದಿಗೂ ಮರೆಯಲಾರೆ. ನಾನು ಅದನ್ನು ಹೆಚ್ಚು ಗೌರವಿಸುವೆನು.

ತಾವು ನನಗೆ ಮತ್ತು ಬಾಳಾಸಾಹೇಬರಿಗೆ ಹೆಚ್ಚು ಅತಿಥಿ ಸತ್ಕಾರ ಮಾಡುವ ಅವಶ್ಯಕತೆಯಿಲ್ಲ. ನನ್ನ ಜೊತೆಯಲ್ಲಿ ನನ್ನ ಸೇವಕ ದತ್ತೂ ಅವನನ್ನು ಕರೆದುಕೊಂಡು ಬರುವೆ.

ತಮ್ಮ ವಿಶ್ವಾಸಿ,

ಶಾಹು ಛತ್ರಪತಿ

(ವಿಜಯಿ ಸುರ್ವಾಡೆ ಸಂಗ್ರಹ)

---

೭

# ಶಾಹು ಮಿಲ್: ರಘುಪತಿ ಪಂಡಿತ ಮಹಾರಾಜರ ಹೊಣೆಗಾರಿಕೆ

ಆಗಸ್ಟ್ ೧೪, ೧೯೧೫

*ರಘುಪತಿ ಪಂಡಿತ ಮಹಾರಾಜ ಅವರು ಶಾಹು ಮಹಾರಾಜರ ಆತ್ಮೀಯ ವಿಶ್ವಾಸಿ. ಸಾರ್ವಜನಿಕ ಹಿತಾಸಕ್ತಿಯ ಕೆಲಸಗಳ ಮುಖ್ಯ ಹೊಣೆಗಾರಿಕೆಯನ್ನು ತಮ್ಮ ನಂಬಿಕಸ್ಥ ಗೆಳೆಯರಿಗೆ ವಹಿಸುವುದು ಮತ್ತು ಅವರಿಂದ ಅವುಗಳನ್ನು ಮಾಡಿಸುವುದು ಶಾಹುರವರ ಒಂದು ವೈಚಿತ್ರ್ಯವಾಗಿತ್ತು.*

---

ಸ್ಟೇಷನ್ ಬಂಗ್ಲೋ
೧೪/೦೮/೧೯೧೫

ಗೌರವಾನ್ವಿತ ಶ್ರೀ ರಾಜಗುರು ಪಂಡಿತ ಮಹಾರಾಜ್ ಇವರಿಗೆ

ಬಾಪುಸಾಹೇಬರಿಗೆ ಕೆರೆಯ (ರಾಧಾನಗರಿ ಅಣೆಕಟ್ಟು) ಹೊಣೆಗಾರಿಕೆಯನ್ನು ಈಗ ತಾನೇ ವಹಿಸಿದಂತೆಯೇ ನಾನು ನಿಮಗೆ ಮಿಲ್ಲಿನ ಹೊಣೆಗಾರಿಕೆಯನ್ನು ವಹಿಸುವೆನು. ಇದು ತಮ್ಮ ಸ್ವಂತ ವೈಯಕ್ತಿಕ ಕೆಲಸವೆಂದು ಪರಿಗಣಿಸಬೇಕು ಮತ್ತು ಬಾಪು ಸಾಹೇಬರು ಮಾಡುತ್ತಿರುವಂತೆಯೇ ನೀವೂ ಸಹ ಇದನ್ನು ಸಾಧಿಸಲು ಪ್ರಯತ್ನಿಸಿ. ಈ ಉದ್ದೇಶಕ್ಕಾಗಿ ನೀವು ರಾವ್‌ಬಹಾದ್ದೂರ್ ದಿವಾನ್ ಸಾಹೇಬರೊಡನೆ ಸಮಾಲೋಚಿಸಿ. ಗೌರವಗಳೊಂದಿಗೆ

ಶಾಹು ಛತ್ರಪತಿ
(ಸಹಿ ಮೋಡಿ ಅಕ್ಷರಗಳಲ್ಲಿ)

---

೮

# ಶಾಹುರವರ ಮರಾಠ–ಧನಗರ (ಅಂತರ್‌ಜಾತೀಯ) ವಿವಾಹದ ಯೋಜನೆ

ಮೇ ೧೮, ೧೯೧೮

ಅಂತರ್‌ಜಾತೀಯ ಮದುವೆಗಳನ್ನು ಪ್ರೋತ್ಸಾಹಿಸುವುದು ಜಾತಿವಿನಾಶಕ್ಕೆ ಹೆಚ್ಚು ಪರಿಣಾಮಕಾರಿ ವಿಧಾನ ಎಂಬ ನಂಬಿಕೆಯಲ್ಲಿ ಶಾಹುರವರು ಅಚಲ ನಿಷ್ಠೆಯುಳ್ಳವರಾಗಿದ್ದರು. ಶಾಹು ಸಕ್ರಿಯ ಸುಧಾರಕರಾಗಿ, ಅವರು ಕೊಲ್ಹಾಪುರ ಮತ್ತು ಇಂದೋರ್ ಸಂಸ್ಥಾನಗಳಲ್ಲಿ ಮರಾಠ ಮತ್ತು ಧನಗರ (ಕುರುಬರ) ನಡುವೆ ಒಂದು ನೂರು ಅಂತರ್‌ಜಾತೀಯ ವಿವಾಹಗಳನ್ನು ಒಂದು ಭವ್ಯ ಸಮಾರಂಭದಲ್ಲಿ ನಡೆಸಬೇಕೆಂದು ಯೋಜನೆಯನ್ನು ಹಾಕಿಕೊಂಡಿದ್ದರು. ಅವರು ತಮ್ಮ ಅಧಿಕೃತ ಪುರೋಹಿತ ಗುಂಡೋಪಂತ್ ಪಿಶ್ವಿಕರ್ ಅವರನ್ನು ಅಲ್ಲಿನ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ಇಂದೋರ್‌ಗೆ ನಿಯೋಜಿಸಿದ್ದರು. ಈ ಕೆಳಕಂಡ ಪತ್ರದಲ್ಲಿ ಪಿಶ್ವಿಕರ್ ವೇದೋಕ್ತದ ಮತ್ತು ಅಂತಹ ಅಂತರ್‌ಜಾತೀಯ ಮದುವೆಗಳಿಗೆ ಇಂದೋರ್ ಆಸ್ಥಾನದ ಒಪ್ಪಿಗೆಯ ವಿವರವಾದ ಮಾಹಿತಿಗಳನ್ನು ಮಹಾರಾಜರಿಗೆ ಕೊಡುತ್ತಾರೆ.

---

॥ ಶ್ರೀ ॥

ಇಂದೋರ್
ಮೇ ೧೮, ೧೯೧೮

ಶ್ರೀಮನ್ ಮಹಾರಾಜ ಛತ್ರಪತಿ ಸಾಹೇಬ ಕರವೀರ ಸ್ವಾಮಿಗಳ ಸೇವೆಯಲ್ಲಿ,

ಗುಂಡೋ ಸಖಾರಾಮ್ ಪಿಶ್ವಿಕರ್‌ರವರ ಹಲವು ನಮ್ರ ನಮಸ್ಕಾರಗಳು ಮತ್ತು ಗೌರವಗಳು...

ನಾನು ಮೊನ್ನೆ ಕಳುಹಿಸಿದ ಪತ್ರ ಹುಜೂರರ ಕೈ ತಲ್ಪಿರಬಹುದು.

ನನಗೆ ಮಹಾರಾಜರು ಕೊಟ್ಟ ಆಜ್ಞೆಯ ಪ್ರಕಾರ ನಾನು ಜನರಲ್ ಮಾಟ್‌ಕರ್ ಸಾಹೇಬರು ಮತ್ತು ನಯಾಬ್ ದಿವಾನ್ ವಾಗ್ಲೆ ಸಾಹೇಬರೊಂದಿಗೆ ಮಾತನಾಡಿದ್ದೇನೆ. ಅವರು ಒಬ್ಬ ವೈದಿಕ ಪಂಡಿತ ಭಯ್ಯಾಶಾಸ್ತ್ರಿ ದ್ರಾವಿಡ್‌ರನ್ನು ಬರಹೇಳಿದರು. ನಾನು ವೇದೋಕ್ತದ ಬಗ್ಗೆ ಅವರೊಡನೆ ಮಾತನಾಡಿದೆ. ಅವರು ನನ್ನೊಂದಿಗೆ ಅಸಮ್ಮತಿಯನ್ನು ಸೂಚಿಸಲಿಲ್ಲ. ಆದರೆ ಅದರ ಬಗ್ಗೆ ಯೋಚಿಸಿ ನಂತರ ತಮ್ಮ

ಅಭಿಪ್ರಾಯವನ್ನು ತಿಳಿಸುವರೆಂದು ಹೇಳಿದರು. ನಿನ್ನೆ ಮತ್ತೆ ನಾನು ಮೂವರು–ನಾನು, ಜನರಲ್ ಮಾಟ್ಕರ್, ದಿವಾನ್ ವಾಗ್ಲೆ ಅವರು ಒಟ್ಟಿಗೆ ಸಭೆ ಸೇರಿದೆವು. ಅವರು ಹೋಳ್ಕರ್ ವಂಶದ ವಂಶವೃಕ್ಷವನ್ನು ನನಗೆ ತೋರಿಸಿದರು. ಇದನ್ನು ಇಂದಿನ ಮಹಾರಾಜರ ತಾತ ಶ್ರೀಮಂತ್ ತುಕೋಜಿರಾವ್ ಮಹಾರಾಜರು ತಯಾರಿಸಿದ್ದರು. ವಂಶವೃಕ್ಷದಿಂದ ಹೋಳ್ಕರ್ ಕುಟುಂಬವು ರಾಥೋಡ್ ಕ್ಷತ್ರಿಯರಿಂದ ಬಂದದ್ದು ಎಂಬುದು ಸಂಪೂರ್ಣವಾಗಿ ಸ್ಪಷ್ಟವಾಗುತ್ತದೆ. ವಂಶವೃಕ್ಷದಲ್ಲಿರುವ ಮಾಹಿತಿಯು ಸಂಪೂರ್ಣವಾಗಿದೆ ಮತ್ತು ಅದನ್ನು ಕರಾರುವಾಕ್ಕಾಗಿ ತಯಾರಿಸಲಾಗಿದೆ. ಉದಯಪುರದ ರಾಣಾಜಿ ಅವರಿಂದ ಶ್ರೀಮಂತ ತುಕೋಜಿರಾವ್, ಶ್ರೀ ಶಿವಾಜಿರಾವ್ ಮತ್ತು ಶ್ರೀ ಯಶವಂತರಾವ್ ಅವರು ರಾಜಪದವಿ (ಖಲಿತ್‌ಗಳು)ಗಳೊಂದಿಗೆ ಚಿನ್ನದ ಡಾಬು (ನಡುಪಟ್ಟಿ)ಗಳನ್ನು ಸ್ವೀಕರಿಸಿದ ಸಾಕ್ಷ್ಯವನ್ನು ಇದು ತೋರಿಸುತ್ತದೆ. ಸಂಪ್ರದಾಯದ ಪ್ರಕಾರ ಚಿನ್ನದ ಡಾಬುಗಳು ಕ್ಷತ್ರಿಯರಲ್ಲದೆ ಯಾರೂ ಅವುಗಳನ್ನು ಸವೆಸುವುದಕ್ಕಾಗುವುದಿಲ್ಲ ಮತ್ತು ಅಷ್ಟೇ ಅಲ್ಲ, ಶಾಸ್ತ್ರಗಳು ಅದನ್ನೇ ಹೇಳುತ್ತವೆ. ಶ್ರೀಮಂತ ತುಕೋಜಿರಾವ್ ಅವರ ಕಾಲದಲ್ಲಿಯೇ ಹೋಳ್ಕರ ವಂಶದ ಗುರುತನ್ನು (ಅಸ್ಮಿತೆ) ಸ್ಥಾಪಿಸಲು ಪ್ರಯತ್ನಗಳು ನಡೆದಿದ್ದವು ಎಂದು ನನಗೆ ಮಾಹಿತಿ ನೀಡಲಾಗಿದೆ. ಮುಂದುವರಿದ ಸಂಶೋಧನೆ ಹೆಚ್ಚು ಹೆಚ್ಚು ಸಾಕ್ಷ್ಯ ಸಂಗ್ರಹದ ಕೆಲಸ ಮುಂದುವರಿದಿದೆ. ವೈದಿಕ ಒಪ್ಪಿಕೆಯಂತೆ ಒಂದು ಪಟ್ಟಿಯನ್ನು ರಾಜೋಪಾಧ್ಯಾಯರಿಗೆ (ಅಧಿಕೃತ ಪುರೋಹಿತರು) ಮತ್ತು ಶಾಸ್ತ್ರಿಗಳಿಗೆ (ಪಂಡಿತರು) ನೀಡಲಾಗಿದೆ. ಮತ್ತು ಪ್ರತ್ಯುತ್ತರವನ್ನು ೪–೫ ದಿನಗಳಲ್ಲಿ ನಿರೀಕ್ಷಿಸಲಾಗಿದೆ.

ನಿಮ್ಮ ಘನತೆವೆತ್ತ ಮಹಾರಾಜರು ಮಾಮಸಾಹೇಬ ತಾಲ್ಚೆರ್‌ಕರ್ ಮೂಲಕ ನನಗೆ ವಹಿಸಿರುವ ಕೆಲಸವನ್ನು ಮುಗಿಸದೆ ಹೋಗುವಂತಿಲ್ಲ ಎಂದು ನನಗೆ ಆಜ್ಞೆ ಮಾಡಿದ್ದಾರೆ. ನಿಜವಾಗಿ ಮಾಮಸಾಹೇಬರು ನನಗೆ ಅನೇಕ ವಿಷಯಗಳಲ್ಲಿ ಸೂಕ್ತ ಸಲಹೆ ನೀಡಿದ್ದಾರೆ ಮತ್ತು ಸರಿಯಾಗಿ ನನಗೆ ಮಾಹಿತಿ ನೀಡಿದ್ದಾರೆ. ಅವರ ನಿಷ್ಠೆ ಛತ್ರಪತಿಯವರಿಗೆ ವಿವಾದಾತೀತವಾದದ್ದು ಮತ್ತು ಅವರು ಕೊಲ್ಹಾಪುರ ಆಸ್ಥಾನದ ಸಹಾನುಭೂತಿಗಳಲ್ಲಿ ಅವರು ಒಬ್ಬ ಒಳ್ಳೆಯ ಸಹಾನುಭೂತಿಗಳಾಗಿದ್ದಾರೆ.

ಮದುವೆಗಳಿಗೆ ಸಂಬಂಧಿಸಿದಂತೆ, ಧನಗರ (ಕುರುಬರ) ಸಮುದಾಯ ಸಭೆ ಸೇರಿತ್ತು ಮತ್ತು ಬಹುಸಂಖ್ಯಾತರು ಮಹಾರಾಜರ ಅಭಿಪ್ರಾಯವನ್ನೇ ಅನುಮೋದಿಸಿದರು. ಸಹಿ ಅಭಿಯಾನವನ್ನು ಪ್ರಾರಂಭಿಸಿದ್ದಾರೆ ಮತ್ತು ಈಗಾಗಲೇ ೧೦೦–೧೫೦ ಸಹಿಗಳನ್ನು ಸಂಗ್ರಹಿಸಲಾಗಿದೆ. ದುರದೃಷ್ಟವಶಾತ್ ವೈಶಾಖ ಮಾಸವು ಯಾವುದೇ ಮದುವೆಗಳ ಸಾಧ್ಯತೆಯನ್ನು ಪ್ರತಿನಿಷೇಧಿಸುವುದರಿಂದ ಕೂಡಲೇ ಯಾವುದೇ ಕ್ರಮ ಕೈಗೊಳ್ಳುವುದಕ್ಕೆ ಆಗುವುದಿಲ್ಲ.

ವೇದೋಕ್ತ ಆಚರಣೆಗಳನ್ನು ಇಲ್ಲಿ ಪ್ರಾರಂಭಿಸುವುದಕ್ಕೆ ಯಾವುದೇ ಅಡ್ಡಿ–ಆತಂಕಗಳು ನನಗೆ ಕಾಣುವುದಿಲ್ಲ. ಕರವೀರ ವೇದೋಕ್ತ ಪ್ರಕರಣದ ಧ್ವನಿಗಳು ಇನ್ನೂ ಕೇಳಿಬರುತ್ತಿರುವುದರಿಂದ ಕೀರ್ತಿಯನ್ನು ಅದಕ್ಕೆ ಸಲ್ಲಿಸಬೇಕಾಗುತ್ತದೆ. ಈ ಉದ್ದೇಶದಿಂದ ಮಾನ್ಯ ಮಹಾರಾಜರು ಅನುಭವಿಸಿದ ನೋವು–ಸಂಕಟಗಳ ಫಲಗಳನ್ನು ಎಲ್ಲಾ ಮರಾಠ ಕ್ಷತ್ರಿಯರು ಸುಲಭವಾಗಿ ಅನುಭವಿಸುತ್ತಿರುವವರು ವೇದೋಕ್ತಧರ್ಮ ಒಮ್ಮೆ ಕಾಲದ ಮರಳಿನಲ್ಲಿ ಕಳೆದುಹೋದದ್ದು ಈಗ ಮಾನ್ಯ ಮಹಾರಾಜರ ದಯೆಯಿಂದ ಹಲವು ಉಲ್ಲೇಖ ಮತ್ತು ಸಂಪನ್ಮೂಲಗಳಿಂದ ತೆರೆದುಕೊಂಡಿದೆ. ನಿಜವಾಗಲೂ ಕ್ಷತ್ರಿಯ ವಂಶದಲ್ಲಿ ಒಮ್ಮೆ ಹುಟ್ಟಿದವನ ಕರ್ತವ್ಯವಾಗಿದೆ. ಸಂಪನ್ಮೂಲಗಳು–ಜಗದ್ಗುರು (ಶಂಕರಾಚಾರ್ಯ)ಗಳ ಸಮ್ಮತಿ, ಕೊಲ್ಹಾಪುರ ಬ್ರಾಹ್ಮಣರ ಮತ್ತು ಮರಾಠರು ಮೊದಲಾದವರ ಸಮ್ಮತಿ...ಗಳು ಸೇರಿಕೊಂಡಿವೆ. ಹೀಗೆ ಛತ್ರಪತಿ ಶಾಹುರವರು ತಮ್ಮ

ನಿರಂತರ ೭-೮ ವರ್ಷಗಳ ಎಡೆಬಿಡದ ಪ್ರಯತ್ನಗಳಿಂದ ಈ ಹೊಣೆಯನ್ನು (ಕಾರ್ಯ) ಸುಲಭಗೊಳಿಸಿದರು. ಕೆಲವು ಕಿಡಿಗೇಡಿ ಜನರು ಇದನ್ನು ವಿರೋಧಿಸಿದರೂ ಅವರು ಮಾರ್ಗದಲ್ಲಿ ಯಾವುದೇ ಅಡೆತಡೆಗಳನ್ನು ಒಡ್ಡಲು ಸಾಧ್ಯವಾಗಲಿಲ್ಲ. ಕ್ಷತ್ರಿಯತನವನ್ನು ಮತ್ತು ಅದರ ಆಸಕ್ತಿಗಳನ್ನು ಸಂರಕ್ಷಿಸುವ ಇಡೀ ಕೀರ್ತಿ ಛತ್ರಪತಿಯವರಿಗೆ ಸಲ್ಲುತ್ತದೆ...

ವಧು ಮತ್ತು ವರರ ಎರಡು ಕುಟುಂಬಗಳ ಮೂಲಗಳನ್ನು ಪರಿಶೀಲಿಸುವ ವೇದೋಕ್ತದ ಬಗ್ಗೆ ಜನರು ಮಾತನಾಡುವ ಅಭಿಪ್ರಾಯಗಳು, ಮದುವೆಯಲ್ಲಿ ಗೌರವಗಳ, ಕುಂಕುಮದ, ಮತ್ತು ಉಡುಗೊರೆಗಳ ವಿನಿಮಯದ ಪ್ರಕ್ರಿಯೆಗಳು ಮೊದಲಾದವುಗಳನ್ನು ಕಾರ್ತಿಕ ಮಾಸದೊಳಗೆ ಪರಿಪೂರ್ಣಗೊಳಿಸಬೇಕಾಗುತ್ತದೆ, ನಂತರದ ತಿಂಗಳಿನ ಶುಭಮುಹೂರ್ತದಲ್ಲಿ ಮದುವೆಗಳನ್ನು ನಡೆಸಲಾಗುವುದು. ಮದುವೆಗಳಿಗೆ ಬಾಕಿಯಿರುವ ಕುಟುಂಬಗಳ ಪಟ್ಟಿಯನ್ನು ಅವರ ಸಾಮಾಜಿಕ ಸ್ಥಾನಮಾನ, ಆದಾಯ ಇತ್ಯಾದಿಗಳ ವಿವರಗಳು ಸಿದ್ಧವಾಗುತ್ತಿವೆ. ಅದೇ ರೀತಿಯ ಪಟ್ಟಿಯನ್ನು ಸಹ ನಮ್ಮ ಕಡೆಯಿಂದ ತಯಾರಿಸಬೇಕಾಗಿದೆ. ಇಲ್ಲಿ ವಧು ಮತ್ತು ವರರ ಕೊರತೆಯಿಲ್ಲ.

ನಾನು ಮತ್ತೆ ನಾಳೆ ಅಥವಾ ನಾಡಿದ್ದು ಮಹಾರಾಜ ಸಾಹೇಬರನ್ನು ಭೇಟಿಯಾಗುವೆನು.

ತಮ್ಮ ವಿಧೇಯ ಮತ್ತು ನಮ್ರ ಸೇವಕ
ರಾಜಾ ಧರ್ಮಾಧಿಕಾರಿ
ಜಿ. ಎಸ್. ಪಿಶ್ವಿಕರ್

**(ಕೊಲ್ಹಾಪುರ ಪತ್ರಾಗಾರ, ಶಾಹು ದಫ್ತರ್, ಪತ್ರ ಸಂಖ್ಯೆ ಆರ್. ೭೬೦೮)**

---

೬

# ಡಾ. ಕೃಷ್ಣಬಾಯಿ ಕೇಳವ್ಕರ್ ಅವರಿಗೆ ಶಾಹುರವರ ಪತ್ರ

೮ ಫೆಬ್ರವರಿ, ೧೯೧೯

*ಮಹಿಳಾ ಶಿಕ್ಷಣ ಅಧಿಕಾರಿಣಿಯಾದ ರಖ್ಮಬಾಯಿ ಅವರ ಮಗಳು ಕೃಷ್ಣಾಬಾಯಿ ಕೇಳವ್ಕರ್. ಆಕೆ ಶಾಹು ಮಹಾರಾಜರ ಸ್ಫೂರ್ತಿಯಿಂದ ಬಾಂಬೆಯ ಗ್ರ್ಯಾಂಟ್ ಮೆಡಿಕಲ್ ಕಾಲೇಜಿನಲ್ಲಿ ಅಧ್ಯಯನ ಮಾಡಿದರು ಮತ್ತು ಯೂರೋಪಿನಲ್ಲಿ ಉನ್ನತ ವೈದ್ಯಕೀಯ ಶಿಕ್ಷಣ ಪಡೆದು ಕೊಲ್ಹಾಪುರದ ಸರಕಾರಿ ಆಸ್ಪತ್ರೆಯಲ್ಲಿ ಒಬ್ಬ ವೈದ್ಯರಾಗಿ ಕೆಲಸಕ್ಕೆ ಸೇರಿಕೊಂಡರು. ಸಮಕಾಲೀನ ಮರಾಠ ಸಮುದಾಯದಲ್ಲಿ ಒಬ್ಬ ಮಹಿಳೆ ಅಂತಹ ಉನ್ನತ ವೈದ್ಯಕೀಯ ಅರ್ಹತೆಗಳನ್ನು ಪಡೆದವರು ಕಂಡುಬರುವುದು ಒಂದು ಅಪವಾದವಾಗಿದೆ. ಅಂತಹ ಗಮನಾರ್ಹವಾದ ಸಾಧನೆ ಮಾಡಿದ ಆಕೆಯನ್ನು ಮಹಾರಾಜರು ಪ್ರಮುಖವಾಗಿ ಮೆಚ್ಚಿಕೊಂಡರು. ಅವರು ಆಸ್ಪತ್ರೆಯಲ್ಲಿ ವಿಶೇಷ ಮಹಿಳಾ ವಿಭಾಗವನ್ನು ಕೃಷ್ಣಾಬಾಯಿ ಅವರಿಗಾಗಿ ತೆರೆದು ಅದಕ್ಕೆ ಆಕೆಯನ್ನು ಮುಖ್ಯಸ್ಥರನ್ನಾಗಿ ನೇಮಿಸುತ್ತಾರೆ.*

*ಈ ಪತ್ರವು ಆಸ್ಪತ್ರೆಯಲ್ಲಿ ಕೃಷ್ಣಾಬಾಯಿ ಎದುರಿಸಿದ ಹಲವು ತೊಂದರೆಗಳ ಸಂದರ್ಭದಲ್ಲಿ ಬರೆದ ಪತ್ರವಾಗಿದೆ. ಆಕೆಯ ದೂರುಗಳಿಗೆ ಬರೆದ ಉತ್ತರವು ಅರ್ಥಮಾಡಿಕೊಳ್ಳುವ ರೀತಿಯಲ್ಲಿದೆ. ಈ ಪತ್ರವು ಆಕೆಯ ಬಗ್ಗೆ ಶಾಹುರವರ ತಂದೆಯ ಮನೋಭಾವ ಮತ್ತು ಮಮತೆಯ ಭಾವನೆಗಳು, ಆಕೆಯ ಉನ್ನತ ಶಿಕ್ಷಣದ ಬಗ್ಗೆ ಶ್ರದ್ಧೆ ಮತ್ತು ಆಕೆಯ ಕೆಲಸ ಮಾಡುವ ಸಾಮರ್ಥ್ಯದ ಬಗ್ಗೆಯ ಮೆಚ್ಚುಗೆಗಳನ್ನು ಪ್ರತಿಬಿಂಬಿಸುತ್ತದೆ. ಮಹಾರಾಜರು ಆಸ್ಥಾನದ ಸರ್ಜನ್ ಡಾ. ತೆಂಗ್‌ಷಿ ಮತ್ತು ಮಹಾರಾಣಿ ಲಕ್ಷ್ಮಿಬಾಯಿ ಅವರ ಉಸ್ತುವಾರಿಯಲ್ಲಿ ಮಹಾರಾಜರು ಸರಕಾರಿ ಆಸ್ಪತ್ರೆಯಲ್ಲಿ ಅನಾಥರ ವಿಶೇಷ ವಾರ್ಡನ್ನು ಪ್ರಾರಂಭಿಸಿದ್ದನ್ನು ಈ ಪತ್ರ ತಿಳಿಸುತ್ತದೆ. ಮಹಾರಾಣಿ ಅವರು ತನ್ನ ಮಗ ರಾಜಕುಮಾರ ಶಿವಾಜಿಯ ಅಕಾಲಿಕ ಮರಣದ ದುಃಖವನ್ನು ಮರೆಯಲೆಂದು (ಸಹಿಸಿಕೊಳ್ಳಲೆಂದು) ಮತ್ತು ಇದರಲ್ಲಿ ತನ್ನನ್ನು ತಾನೇ ತೊಡಗಿಸಿಕೊಳ್ಳಲೆಂದು ಶಾಹುಮಹಾರಾಜರು ಈ ವ್ಯವಸ್ಥೆಯನ್ನು ಮಾಡಿದರು. ಈ ಬಗ್ಗೆ ಅವರು ಪತ್ರದಲ್ಲಿ ಹೇಳುತ್ತಾರೆ: "ಅನಾಥರ ಬಗ್ಗೆ, ನನ್ನ ಕುಟುಂಬದಲ್ಲಿ ಉಂಟಾದ ಸಾವಿನ ಅಗಲಿಕೆಯ ದುಃಖದ ನಂತರ ಇದೊಂದೇ ನನ್ನ ಹೆಂಡತಿಗೆ ಆಸಕ್ತಿದಾಯಕವಾಗಿದೆ."*

---

ಕೊಲ್ಹಾಪುರ
೮ನೇ ಫೆಬ್ರವರಿ, ೧೯೧೯

ನನ್ನ ಪ್ರೀತಿಯ ಡಾ. ಕುಮಾರಿ ಕೇಳವ್ಕರ್,

ದರ್ಬಾರಿಗೆ ನಿಮ್ಮ ಸೇವೆಗಳು ಅತ್ಯಗತ್ಯ. ದರ್ಬಾರು ನುಮ್ಮನ್ನು ಕಳೆದುಕೊಳ್ಳಲು ಮರುಗುತ್ತದೆ. ದರ್ಬಾರು ನೀವು ಸೇವೆಯನ್ನು ಬಿಡಬೇಕೆಂದು ಎಂದಿಗೂ ಬಯಸುವುದಿಲ್ಲ. ದರ್ಬಾರು ನಿಮ್ಮ ವಿದ್ಯಾರ್ಹತೆಗಳ ಬಗ್ಗೆ ಹೆಚ್ಚು ಸುಪರಿಚಿತವಾಗಿದೆ. ಮಹಿಳಾ ಡಾಕ್ಟರರು ತಾವು ಒಬ್ಬ ಮಹಿಳೆ ಎಂಬುದನ್ನು ಮತ್ತು ಪಶುಗಳ ಸರ್ಜನ್ ಅಲ್ಲವೆಂದು ಅರ್ಥಮಾಡಿಕೊಳ್ಳಲೇಬೇಕು ಮತ್ತು ಮಾನವಜೀವಿಗಳನ್ನು ಪ್ರಾಣಿಗಳಂತೆ ಒಬ್ಬ ನಿರ್ದಿಷ್ಟ ವೈದ್ಯರೊಬ್ಬರಿಗೇ ಬಲಾತ್ಕಾರವಾಗಿ ಬಿಡುವುದಕ್ಕೆ ಆಗುವುದಿಲ್ಲ. ಅವರೆಲ್ಲರೂ ಮಾನವಜೀವಿಗಳು. ಅವರು ಎಲ್ಲಿಗೆ ಹೋಗಬೇಕೆಂಬುದನ್ನು ಅವರು ಚೆನ್ನಾಗಿ ಯೋಚಿಸುತ್ತಾರೆ. ನೀವು ಬಯಸಿದರೆ ವೈದ್ಯಕೀಯ– ಕಾನೂನಿನ ಪ್ರಕರಣಗಳನ್ನು ನಿಮ್ಮ ಬಳಿಗೆ ಕಳುಹಿಸಿ ಕೊಡಲಾಗುವುದು. ಈ ವಿಷಯದ ಬಗ್ಗೆ ನಿಮ್ಮ ಅಪೇಕ್ಷೆಯನ್ನು ದಯವಿಟ್ಟು ತಿಳಿಸಿ. ಆದರೆ ನೀವು ಒಮ್ಮೊಮ್ಮೆ ಕೋರ್ಟುಗಳಿಗೆ ಅಲೆಯಬೇಕಾಗುತ್ತದೆ. ನೀವು ನಿಮ್ಮ ಸಹಾಯಕರಾದ ಪುರುಷರಿಗೆ ಕೆಲಸವನ್ನು ಬಿಟ್ಟುಕೊಡುವುದರಿಂದ ಪ್ರಸ್ತುತ ವ್ಯವಸ್ಥೆಯು ಹೆಚ್ಚು ಅನುಕೂಲಕರವಾಗುತ್ತದೆ ಮತ್ತು ಕಡಿಮೆ ಖರ್ಚಿನದಾಗುತ್ತದೆ. ನಿಮ್ಮ ಸಹಾಯಕರು ಎಲ್ಲಾ ಪ್ರಕರಣಗಳನ್ನು ವಹಿಸಿಕೊಳ್ಳುವುದಾದರೆ ಇಡೀ ವೈದ್ಯಕೀಯ ಕಾನೂನಿನ ಇಲಾಖೆಯನ್ನು ನಿಮ್ಮ ಸುಪರ್ದಿಗೆ ಕೊಡುವುದರಿಂದ ಡಾ. ತೆಂಗ್‌ಷಿ ಅವರ ಅತಿಯಾದ ಕೆಲಸದ ಹೊರೆ ಕಡಿಮೆಯಾಗಿ ಅವರು ಸಂತೋಷಗೊಳ್ಳುವರು. ಬ್ರಿಟಿಷರ ಜಿಲ್ಲೆಗಳಲ್ಲಿ ಒಬ್ಬ ಮಹಿಳಾ ವೈದ್ಯರು ಇಡೀ ಆಸ್ಪತ್ರೆಯ ಹೊಣೆಯನ್ನು ವಹಿಸಿರುವುದು ನಾನು ಇದುವರೆಗೂ ನೋಡಿಯೇ ಇಲ್ಲ. ಡಾ. ತಂಬೆ ಅವರು ಇಂದೋರ್‌ನಲ್ಲಿದ್ದಾಗ ಇಂಥದ್ದು ಅಲ್ಲಿ ಇರಲೇ ಇಲ್ಲ. ಈ ದೃಷ್ಟಿಯಿಂದ ಹೇಗೆ ದರ್ಬಾರು ನಿಮ್ಮ ಬಗ್ಗೆ ಸಂಪೂರ್ಣ ನಂಬಿಕೆಯಿಟ್ಟಿರುವುದನ್ನು ನೀವು ನೋಡಬಹುದು.

ನರ್ಸುಗಳಿಗೆ ಸಂಬಂಧಿಸಿದಂತೆ ನಿಮ್ಮ ನಿಯಂತ್ರಣದಲ್ಲಿರುವ ನರ್ಸುಗಳ ಸಂಖ್ಯೆಯಲ್ಲಿ ಕಡಿಮೆ ಮಾಡಿಲ್ಲ ಮತ್ತು ಹೆಚ್ಚು ನರ್ಸುಗಳನ್ನು ಡಾ. ತೆಂಗ್‌ಷಿ ಅವರಿಗೆ ನೀಡಿದ್ದರೆ ಅದರ ಬಗ್ಗೆ ತಾವು ತಲೆಬಿಸಿ ಮಾಡಿಕೊಳ್ಳಬೇಕಾಗಿಲ್ಲ. ನಿಮಗೆ ಹೆಚ್ಚಾಗಿ ಒಬ್ಬ ಸಹಾಯಕ ವೈದ್ಯರನ್ನು ಕೊಟ್ಟರೆ ಡಾ. ತೆಂಗ್‌ಷಿ ಅವರು ಮರುಗಬೇಕಾಗಿಲ್ಲ.

ಅನಾಥರಿಗೆ ಸಂಬಂಧಿಸಿದಂತೆ, ನಮ್ಮ ಕುಟುಂಬದಲ್ಲಿ ಸಾವಿನ ಅಗಲಿಕೆಯ ದುಃಖದ ನಂತರ ನನ್ನ ಹೆಂಡತಿಗೆ ಇದೊಂದೇ ವಿಷಯ ಅವಳಿಗೆ ಆಸಕ್ತಿದಾಯಕವಾಗಿದೆ. ಮತ್ತು ನನ್ನ ಹೆಂಡತಿಯು ಡಾ. ತೆಂಗ್‌ಷಿ ಅವರನ್ನು ತಂದೆಯೆಂದು ಭಾವಿಸಿದ್ದಾರೆ. ಮತ್ತು ಆದ್ದರಿಂದಲೇ ಅನಾಥರನ್ನು ನನ್ನ ಹೆಂಡತಿಗೆ ಮತ್ತು ಡಾ. ತೆಂಗ್‌ಷಿ ಅವರಿಗೆ ವಹಿಸಲಾಗಿದೆ. ಮತ್ತು ನಾನು ನನ್ನ ಹೆಂಡತಿಗೆ ಅನಾಥರನ್ನು ವಹಿಸುವುದರಿಂದ ನಾನು ಕರುಣೆ ತೋರಿಸಿ ಒಂದು ಒಳ್ಳೆಯ ಕೆಲಸ ಮಾಡುತ್ತಿದ್ದೇನೆಂದು ನನಗೆ ಅನಿಸುತ್ತದೆ. ಮಹಿಳೆಯರ ಸ್ವಭಾವ ತುಂಬಾ ಸೂಕ್ಷ್ಮ, ಇಬ್ಬರು ಮಹಿಳೆಯರು ಅಕ್ಕತಂಗಿಯಾಗಿದ್ದರೂ ಇಬ್ಬರೂ ಒಟ್ಟಿಗೆ ಕೂಡಿ ಕೆಲಸ

ಮಾಡಲಾರರು. ಅದು ಹಳೆಯ ಗಾದೆಮಾತು. ಆದ್ದರಿಂದ ನನ್ನ ಹೆಂಡತಿಯೊಂದಿಗೆ ಡಾ. ತೆಂಗ್‌ಷಿಯವರ ತಂದೆಯ ಸಂಬಂಧವು ಅನಾಥಾಲಯವನ್ನು ಹೆಚ್ಚು ಸಮರ್ಪಕವಾಗಿ ನಡೆಸಿಕೊಂಡು ಹೋಗುವರು ಮತ್ತು ಅದು ನನ್ನ ಹೆಂಡತಿಗೆ ಹೆಚ್ಚು ಸಂತೋಷದಾಯಕವಾಗಿರುತ್ತದೆ.

ನಿಮ್ಮ ಕಡೆಯಿಂದ ಯಾವ ನರ್ಸನ್ನು ತೆಗೆದುಕೊಂಡರೂ ನನಗೆ ದಯವಿಟ್ಟು ಕೂಡಲೇ ತಿಳಿಸಿ, ಜೊತೆಗೆ ಡಾ. ಸಿಂಕ್ಲೇರ್ ಮತ್ತು ಡಾ. ಸೈನ್ ಕಾಲದಲ್ಲಿ ಎಷ್ಟು ನರ್ಸುಗಳಿದ್ದರೆಂಬುದನ್ನು ದಯವಿಟ್ಟು ನನಗೆ ತಿಳಿಸಿ ಮತ್ತು ನೀವು ಒಳ ಮತ್ತು ಹೊರ ಪ್ರಕರಣಗಳನ್ನು ಎಷ್ಟು ಪಡೆದಿದ್ದೀರಿ ಎಂಬುದನ್ನು ತಿಳಿಸಿ.

ನಿಮ್ಮ ವಿಶ್ವಾಸಿ,
ಸಹಿ/– ಶಾಹು ಛತ್ರಪತಿ

**(ಡಾ. ಪ್ರಹ್ಲಾದ ಕೇಳವ್ಕರ್ ಸಂಗ್ರಹ)**

---

೧೦

# ಸಂದೇಶ ಪತ್ರಿಕೆಗೆ ಶಾಹುರವರ ನೆರವು

ಜನವರಿ ೩೧, ೧೯೨೦

*ಬಹುಜನ ಸಮಾಜದ ಧ್ವನಿಯನ್ನು ಎತ್ತುವ ಹಲವು ಪತ್ರಿಕೆಗಳಿಗೆ ಶಾಹುರವರು ಸ್ಫೂರ್ತಿ, ಪ್ರೋತ್ಸಾಹ ಮತ್ತು ನೆರವು ನೀಡಿದರು. ಅವರು ಉದಾರಿ ಬ್ರಾಹ್ಮಣರ ಮಾಲೀಕತ್ವದ ಸುಧಾರಕ ಮತ್ತು ಸಂದೇಶಕ ಪತ್ರಿಕೆಗಳಿಗೆ ಸಾಕಷ್ಟು ಸಹಾಯ ಮಾಡುವಲ್ಲಿ ಔದಾರ್ಯ ಮತ್ತು ತೆರೆದ ಮನಸ್ಸಿನವರಾಗಿದ್ದರು. ಆ ಪತ್ರಿಕೆಗಳು ನಿಜವಾದ ಸಾಮಾಜಿಕ ನ್ಯಾಯದ ಧ್ಯೇಯವನ್ನು ಎತ್ತಿಹಿಡಿದವು. ಈ ಕೆಳಗಿನ ಪತ್ರವು 'ಸಂದೇಶ' ಪತ್ರಿಕೆಗೆ ಹಣಕಾಸಿನ ನೆರವನ್ನು ನೀಡುವುದರ ಬಗ್ಗೆ ಕುರಿತಿದೆ. ಈ ನೆರವನ್ನು ಶಾಹುರವರು ತಮ್ಮ ಸ್ವಂತ ಇಚ್ಛೆಯಿಂದ ಕೊಲ್‌ಹಾಟ್ಕರರ (ಅದರ ಸಂಪಾದಕರು) ಕೋರಿಕೆಯಿಲ್ಲದೆ ನೀಡಿದ್ದು. ಈ ಸಾಲವನ್ನು ಮರಳಿ ವಾಪಸ್ಸು ನೀಡಬೇಕೆಂದು ಅವರು ನಿರೀಕ್ಷಿಸಿರಲಿಲ್ಲ. ನಂತರ 'ಸಂದೇಶ್' ಪತ್ರಿಕೆಯು ಕೊಲ್ಹಾಪುರದ ದರ್ಬಾರನ್ನು ಟೀಕಿಸತೊಡಗಿದಾಗ ಸೇಡಿನ ಮನೋಭಾವದಲ್ಲಿ ಸಾಲವನ್ನು ವಾಪಸ್ಸು ಮಾಡು ಎಂದು ಕೇಳಲು ಈ ಪ್ರಾಮಿಸರಿ ಸಾಲವನ್ನು ಪ್ರಚೋದನೆ ನೀಡಬಹುದೆಂದು ಭಾವಿಸಿ ಶಾಹುರವರು ತನ್ನ ಅಧಿಕಾರಿಗೆ ಅದನ್ನು ಹರಿದುಹಾಕಲು ಹೇಳುತ್ತಾರೆ.*

---

ಕೊಲ್ಹಾಪುರ
೩೧-೧-೧೯೨೦

**ಗೋಪ್ಯ**
ಗೌರವಾನ್ವಿತ ರಾಮಚಂದ್ರ ಅನಾನಜಿ
ಪ್ರಭಾವಲ್ಕರ್ ಅವರಿಗೆ

ದಯವಿಟ್ಟು ಶ್ರೀ ಕೊಲ್ಹಾಟ್ಕರ್, 'ಸಂದೇಶ'ದ ಸಂಪಾದಕರನ್ನು ಸಂಪರ್ಕಿಸಿ. ನಾನು ಅವರಿಗೆ ೪,೦೦೦ ರೂ.ಗಳ ಸಾಲವನ್ನು ನೀಡಲು ಬಯಸಿದ್ದೆ. ದಯವಿಟ್ಟು ಅದನ್ನು ವ್ಯವಸ್ಥೆಮಾಡಿ. ಒಬ್ಬ ವಕೀಲರ ಮೂಲಕ ಎಲ್ಲಾ ಔಪಚಾರಿಕಗಳನ್ನು ಮುಗಿಸಿದ ಮೇಲೆ, ನಾನು ರಾವ್‌ಬಹಾದ್ದೂರ್ ದಿವಾನ್ ಸೆಹೆಬ್ ಸಬ್ನೀಸ್ ಅವರಿಗೆ ಹೇಳಿದ ಮೊತ್ತವನ್ನು ವ್ಯವಸ್ಥೆ ಮಾಡುವಂತೆ ಹೇಳುವೆನು.

ಗೌರವಗಳೊಂದಿಗೆಶಾಹು ಛತ್ರಪತಿ
(ಸಹಿ ಮೋಡಿ ಅಕ್ಷರಗಳಲ್ಲಿ)

(ಕೊಲ್ಹಾಪುರ ಪತ್ರಾಗಾರ, ಶಾಹು ದಫ್ತರ್, ಪತ್ರಸಂಖ್ಯೆ ಆರ್. ೧೧೩೫೧)

೧೧

# ಮನ್‌ಗಾವ್ ಸಮ್ಮೇಳನದ ವರದಿ

**'ಮೂಕನಾಯಕ'ದಲ್ಲಿ ಪ್ರಕಟ**

ಏಪ್ರಿಲ್ ೧೧, ೧೯೨೦

ಕೊಲ್ಹಾಪುರ ಸಂಸ್ಥಾನದಲ್ಲಿ 'ಅಸ್ಪೃಶ್ಯರ' ಮೊದಲ ಸಮ್ಮೇಳನವು ಮಾರ್ಚ್ ೨೧ ಮತ್ತು ೨೨, ೧೯೨೦ರಂದು ಡಾ. ಬಾಬಾಸಾಹೇಬ ಅಂಬೇಡ್ಕರರ ಅಧ್ಯಕ್ಷತೆಯಲ್ಲಿ ನಡೆಯಿತು. ಅಂಬೇಡ್ಕರರೇ ಸ್ವತಃ ನೀಡಿದ ವರದಿಯನ್ನು ಅವರ ಪತ್ರಿಕೆಯಾದ 'ಮೂಕನಾಯಕ'ದಲ್ಲಿ ಕೊಡಲಾಗಿದೆ. ಶಾಹುರವರು ಸ್ವತಃ ಸಮ್ಮೇಳನದಲ್ಲಿ ಮುಖ್ಯ ಅತಿಥಿಯಾಗಿದ್ದರು. ಶಾಹುರವರು ಈ ವೇದಿಕೆಯಲ್ಲಿಯೇ ಡಾ. ಅಂಬೇಡ್ಕರರನ್ನು ಬಹಿರಂಗವಾಗಿ ಮತ್ತು ಯಾವುದೇ ಅನುಮಾನಗಳಿಲ್ಲದೇ ದಲಿತ (ಅಸ್ಪೃಶ್ಯರ) ನಿಜವಾದ ನಾಯಕರೆಂದು ಮತ್ತು ಪ್ರವರ್ಧಮಾನಕ್ಕೆ ಬರುತ್ತಿರುವ ಭಾವೀ ರಾಷ್ಟ್ರೀಯ ಭಾವೀ ನಾಯಕರೆಂದು ವಿವರಿಸಿದರು. ವಾಸ್ತವಿಕವಾಗಿ ಈ ಸಮ್ಮೇಳನವು ಮಹಾರಾಷ್ಟ್ರದ ಭಾವೀ ಸಾಮಾಜಿಕ ಇತಿಹಾಸಕ್ಕೆ ಅಸ್ತಿವಾರವನ್ನು ಹಾಕಿತು. ಈ ಕೆಳಕಂಡ ವರದಿಯು ಆಧುನಿಕ ಮಹಾರಾಷ್ಟ್ರದ ಇತಿಹಾಸದ ಪ್ರಮುಖ ದಾಖಲೆಯಾಗುತ್ತದೆ.

ವರದಿಯ ಕೊನೆಯಲ್ಲಿ ಡಾ. ಬಾಬಾಸಾಹೇಬ ಒಬ್ಬ ಸ್ವಯಂಸೇವಕ ರೆಂಡಾಲೆಯವರ ಹೆಸರಿನಲ್ಲಿ ಈ ಪತ್ರವನ್ನು ಮುದ್ರಿಸಿದ್ದಾರೆ. ಈ ಪತ್ರವು ಹೇಗೆ ಮೇಲುಜಾತಿಯ ಜನರು ಭಾಗವಹಿಸಿದ ಅಸ್ಪೃಶ್ಯರನ್ನು ಮತ್ತು ಸಮ್ಮೇಳನದ ಸಂಚಾಲಕರಾದ ಅಪ್ಪಾ ಸಾಹೇಬ ದಾದ್‌ಗೌಡ ಪಾಟೀಲರನ್ನು ಬಹಿಷ್ಕರಿಸಿದರು ಎಂಬುದನ್ನು ವಿವರಿಸುತ್ತದೆ. ಈ ಸುದ್ದಿ ಶಾಹುರವರಿಗೆ ತಲುಪಿದ ತಕ್ಷಣ, ಅವರು ಕೂಡಲೇ ಸೂಕ್ತ ದೇಶೀಯ ಹಳ್ಳಿಗರನ್ನು ಕರೆಸಿದರು ಮತ್ತು ಅವರಿಗೆ ಶಿಕ್ಷೆಯ ಎಚ್ಚರಿಕೆಯನ್ನು ನೀಡಿದರು. ಈ ಎಚ್ಚರಿಕೆ ಉದ್ದೇಶವನ್ನು ಈಡೇರಿಸಿತು.

---

**ದಕ್ಷಿಣ ಮಹಾರಾಷ್ಟ್ರದ ಬಹಿಷ್ಕೃತರ ಸಮ್ಮೇಳನ**

ಸಮ್ಮೇಳನದ ಮೊದಲ ಸಭೆಯು ದಿನಾಂಕ ಮಾರ್ಚ್ ೨೧ ಹಾಗೂ ೨೨, ೧೯೨೦ರಂದು ಕಾಗಲ್‌ನ ಜಹಗೀರಿನ ಅಂಚೆ ಮನ್‌ಗಾವ್‌ನಲ್ಲಿ ನಡೆಯಿತು.

ಮೊದಲ ದಿನ ಪಡ್ವ ಶುಭದಿನವಾಗಿದ್ದರೂ ಸಭೆಗೆ ೫,೦೦೦ಕ್ಕೆ ಮೀರಿ ಜನ ಸೇರಿದ್ದರು ಈ ಸಂಖ್ಯೆ ಇನ್ನೂ ಹೆಚ್ಚಾಗುತ್ತಿತ್ತು. ಆದರೆ ಹತ್ತಿರದಲ್ಲಿದ್ದ ಗ್ರಾಮಗಳ ಕುಲಕರ್ಣಿಗಳು, ತಲಾಟಿಗಳು ಮೊದಲಾದವರು

ಈ ಸಭೆಯು 'ಮತಾಂತರ'ಗೊಂಡವರದ್ದು ಮತ್ತು ಅದರ ಅಧ್ಯಕ್ಷ ಕೂಡ "ಮತಾಂತರ"ಗೊಂಡವರು ಎಂದು ವದಂತಿ ಹಬ್ಬಿಸಿದರು. ಸಭೆಯಲ್ಲಿ ಭಾಗವಹಿಸುವುದು ಪಾಪಕರವಾದದ್ದು ಮತ್ತು ಹೀಗೆ ಜನರ ಮನಸ್ಸು ಕೆಡಿಸಿದರು. ಆದರೂ ಕೊಲ್ಹಾಪುರ ಆಸ್ಥಾನದ ಹಿರಿಯ ಅಧಿಕಾರಿಗಳು ಮತ್ತು ಹಿತೈಷಿಗಳು ಭಾಗವಹಿಸಿದ್ದರು. ಕೆಲವು ಬ್ರಾಹ್ಮಣರೂ ಭಾಗಿಯಾಗಿದ್ದರು. ಡಿಪ್ರೆಸ್ಸಡ್ ಕ್ಲಾಸ್ ಮಿಷನ್ನಿನ ಅಥವಾ ಬಹಿಷ್ಕೃತ ಜನರ ಕಲ್ಯಾಣಕ್ಕಾಗಿ ಕೆಲಸ ಮಾಡುವ ಸಂಸ್ಥೆಗಳು ಯಾರನ್ನೂ ತಮ್ಮ ಪ್ರತಿನಿಧಿಗಳನ್ನಾಗಿ ಕಳುಹಿಸಿರಲಿಲ್ಲ.

೨೧ನೇ ತಾರೀಖು ಮೊದಲ ದಿನ ಸಂಜೆ ೫ ಗಂಟೆಗೆ ಸಮ್ಮೇಳನ ಪ್ರಾರಂಭವಾಯಿತು. ಸ್ವಾಗತಸಮಿತಿಯ ಮುಖ್ಯಸ್ಥ ದಾದಾಸಾಹೇಬ ರಾಜೆ ಸಾಹೇಬರು ಮೊದಲು ಮಾತನಾಡಿದರು. ತಮ್ಮ ಭಾಷಣದಲ್ಲಿ ಅವರು ಪ್ರತಿನಿಧಿಗಳು ಹಬ್ಬಗಳನ್ನು, ಮನೆಯ ತಾಪತ್ರಯಗಳೆಲ್ಲವೂ ಮರೆತು ದೂರದ ಹಳ್ಳಿಗಳಿಂದ ಸಮ್ಮೇಳನಕ್ಕೆ ಬಂದಿದ್ದಕ್ಕಾಗಿ ಅವರಿಗೆಲ್ಲ ಕೃತಜ್ಞತೆಗಳನ್ನು ಸಲ್ಲಿಸಿದರು. ಅವರು ಪ್ರಚಲಿತವಿರುವ ಸನ್ನಿವೇಶಗಳನ್ನು ವಿವರಿಸಿದರು ಮತ್ತು ಅಂತಹ ಒಂದು ಸಮ್ಮೇಳನ ಕರೆಯುವ ಅವಶ್ಯಕತೆಯನ್ನು ವಿವರಿಸಿದರು. ಅವರು ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಸುಧಾರಿಸಿಕೊಳ್ಳಲು ಇತರರ ಮೇಲೆ ಅವಲಂಬಿಸುವುದಕ್ಕೆ ಬದಲಾಗಿ ನಾನು ನಮ್ಮ ಸ್ವಂತ ಪ್ರಯತ್ನಗಳಿಂದಲೇ ಸಾಧಿಸಿಕೊಳ್ಳುವುದು ಅತಿ ಮುಖ್ಯವೆಂದು ಖಡಾಖಂಡಿತವಾಗಿ ಹೇಳಿದರು. ಶಿಷ್ಟಾಚಾರದ ಪ್ರಕಾರ ಶ್ರೀ ಭೀಮರಾವ್ ಅಂಬೇಡ್ಕರರ ಹೆಸರನ್ನು ಸೂಚಿಸಿ ಅನುಮೋದಿಸಲಾಯಿತು. ಅಂಬೇಡ್ಕರರು ಜನತೆಯ ಭಾರೀ ಉತ್ಸಾಹದ ಮಧ್ಯೆ ಅಧ್ಯಕ್ಷತೆ ವಹಿಸಿದರು.

ಅಧ್ಯಕ್ಷರು ತಮ್ಮ ಮಾತುಗಳಲ್ಲಿ ಹಲವು ದೃಷ್ಟಿಕೋನಗಳಿಂದ ಈ ಸಮ್ಮೇಳನದ ವಿಶಿಷ್ಟ ಸ್ವಭಾವವನ್ನು ಚರ್ಚಿಸಿದರು. ಈ ಪ್ರಾಂತ್ಯದಲ್ಲಿ ಮೊದಲ ಬಾರಿಗೆ ಇಂತಹ ಸಮ್ಮೇಳನ ನಡೆಯುತ್ತಿದೆ ಮತ್ತು ಜನರ ಬದ್ಧತೆ ಅಸಮಾನ್ಯವಾದುದು. ಬಹಿಷ್ಕೃತ ಸಮುದಾಯಗಳಿಂದ ಹುಟ್ಟಿ ಬರುತ್ತಿರುವ ಕ್ರಾಂತಿಕಾರಿ ಚಿಂತನೆ ಅಭೂತಪೂರ್ವವಾದುದು. ಇಲ್ಲಿಯವರೆಗೆ ಅಸ್ಪೃಶ್ಯರು ತಮ್ಮ ಕರುಣಾಜನಕ ದುಸ್ಥಿತಿಗೆ ತಮ್ಮ ದುರಾದೃಷ್ಟವೆಂದು ಹೇಳುತ್ತಿದ್ದರು ಮತ್ತು ಅದು ತಮ್ಮ ಕೈಯಲ್ಲಿ ಇಲ್ಲವೆಂದು ಮತ್ತು ಕೆಟ್ಟ ಕಾಲದಿಂದ ಹೊರಬರಬೇಕೆಂದು ನಂಬುತ್ತಿದ್ದರೆಂದು ಅವರು ಹೇಳಿದರು. ಆದರೆ ಇತ್ತೀಚಿನ ಪೀಳಿಗೆ ಆ ರೀತಿ ಯೋಚಿಸುವುದಿಲ್ಲ ಎಂದು ಹಾಗೂ ತಮ್ಮ ದುಸ್ಥಿತಿಗೆ ಬೇರೆಯವರ ತಪ್ಪು ಕೃತ್ಯಗಳೇ ಹೊಣೆ ಎಂಬ ಭಾವನೆಗೆ ಬಂದಿದ್ದಾರೆಂದು ಹೇಳಿದರು.

ಈ ಸಮಾರಂಭದ ವಿಶಿಷ್ಟತೆಯನ್ನು ಚರ್ಚಿಸಿದ ನಂತರ ಅಧ್ಯಕ್ಷರು ಬಹಿಷ್ಕೃತ ಸಮುದಾಯದ ಪ್ರಸ್ತುತ ಸ್ಥಿತಿಯನ್ನು ವಿಶ್ಲೇಷಿಸಿದರು. ತಾವು ಸೇರಿರುವ ಹಿಂದೂಮತದ ಧರ್ಮವು ಮಾನವರನ್ನು ಎರಡು ಸಿದ್ಧಾಂತಗಳ ಪ್ರಕಾರ ವಿಭಾಗಮಾಡಿದೆ ಎಂದು ಹೇಳಿದರು. ಒಂದು, ಸಾಮಾಜಿಕ ಸ್ಥಾನಮಾನ ಒಳ್ಳೆಯದು ಅಥವಾ ಕೆಟ್ಟದ್ದು, ಅದು ಹುಟ್ಟಿನಿಂದ ನಿರ್ಧರಿತವಾಗಿದೆ; ಎರಡು, ಪವಿತ್ರತೆ ಅಥವಾ ಅಪವಿತ್ರತೆ ಹುಟ್ಟಿಗೆ ಸಂಬಂಧಿಸಿದ್ದು. ಮತ್ತೆ ಹಿಂದುಗಳನ್ನು ಈ ಸಿದ್ಧಾಂತಗಳ ಮೇಲೆ ವಿಭಾಗ ಮಾಡಲಾಗಿದೆ. (೧) ಹುಟ್ಟಿನಿಂದ ಅತಿಶ್ರೇಷ್ಠರು ಮತ್ತು ಹೆಚ್ಚು ಪವಿತ್ರಗೊಂಡ ವರ್ಗ– ಬ್ರಾಹ್ಮಣರು. (೨) ಬ್ರಾಹ್ಮಣೇತರರು, ಸಾಮಾಜಿಕ ಸ್ಥಾನಮಾನದಲ್ಲಿ ಒಂದು ಹಂತದ ಕೆಳಗಿನವರು ಮತ್ತು ಬ್ರಾಹ್ಮಣರಿಂದ ಪವಿತ್ರತೆ ಪಡೆದವರು. (೩) ಅತ್ಯಂತ ಕೆಳಗಿನವರು, ತೀರ ತುಚ್ಚರು, ಯಾವುದೇ ಪಾವಿತ್ರ್ಯ ಮತ್ತು ಘನತೆಯನ್ನು ಪಡೆಯದವರು, ಬಹಿಷ್ಕೃತ ಸಮುದಾಯ.

ಮೇಲೆ ಹೇಳಿದ ವರ್ಗೀಕರಣ ಮತ್ತು ಅಸಮಾನ ವಿಭಾಗಗಳನ್ನು ವಿವರಿಸುತ್ತಾ ಅಧ್ಯಕ್ಷರು ಈ ವರ್ಗೀಕರಣಗಳ ಮೂರು ವರ್ಗಗಳ ಮೇಲೆ ಆಗುವ ಪರಿಣಾಮಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ಯೋಗ್ಯತೆಯಿಲ್ಲದ ಬ್ರಾಹ್ಮಣನು ಹುಟ್ಟಿನಿಂದ ಶ್ರೇಷ್ಠ ಮತ್ತು ಹುಟ್ಟಿಗೆ ಸಂಬಂಧಿಸದ ಪದ್ಧತಿಯಿಂದ ಪವಿತ್ರಗೊಂಡಿರುವುದರಿಂದ ಪ್ರಯೋಜನ ಪಡೆದಿದ್ದಾನೆ ಎಂದು ಸೂಚಿಸಿದ್ದರು. ಬ್ರಾಹ್ಮಣೇತರರು ಕೀಳು ಮತ್ತು ಅಸಮರ್ಥರೆಂಬ ಭಾವನೆಯನ್ನು ಖಂಡಿಸಲಾಯಿತು. ಅವರನ್ನು ಕಲಿಯುವುದಕ್ಕೆ ಬಿಡದಿದ್ದುದರಿಂದ ಅವರು ಹಿಂದುಳಿಯಬೇಕಾಯಿತು. ಇಷ್ಟಾದರೂ ಬ್ರಾಹ್ಮಣೇತರರಿಗೆ ಜ್ಞಾನ ಮತ್ತು ಸಂಪತ್ತು ಎಟಕುತ್ತಿತ್ತು. ಅವರು ಇಂದು ಈ ಗುಣಗಳನ್ನು ಹೊಂದಿಲ್ಲ. ಆದರೆ ನಾಳೆಯಾದರೂ ಅವುಗಳನ್ನು ಅವರು ಪಡೆಯಲೇಬೇಕಾಗುತ್ತದೆ. ಆದರೆ ಇಂದು ಅಸ್ಪೃಶ್ಯರು ಕರುಣಾಜನಕ ಸ್ಥಿತಿಯಲ್ಲಿದ್ದಾರೆ. ಹುಟ್ಟಿನಿಂದ ಅವರನ್ನು ಅಸಮರ್ಥರು ಮತ್ತು ಅಶುದ್ಧರೆಂದು ನಿಕೃಷ್ಟವಾಗಿ ಕಾಣಲಾಗಿದೆ. ಅಸಮರ್ಥರು ಮತ್ತು ಅಶುದ್ಧರೆಂದು ತಮ್ಮನ್ನು ತಾವೇ ಬಹಳ ಕಾಲದವರೆಗೆ ಭಾವಿಸಿ ಬಹಿಷ್ಕೃತರು ಪ್ರಗತಿಗೆ ಅತ್ಯವಶ್ಯಕವಾದ ಸದ್ಗುಣಗಳಾದ ಸ್ವಾಭಿಮಾನ ಮತ್ತು ಆತ್ಮ–ಗೌರವಗಳೆಲ್ಲಾ ಕಳೆದುಕೊಂಡು ಬಿಟ್ಟರು. ಇತರೆ ಹಿಂದುಗಳು ಅನುಭವಿಸುತ್ತಿರುವ ಎಲ್ಲಾ ಸಾಮಾಜಿಕ ಹಕ್ಕುಗಳು ಅವರಿಗೆ ಇಲ್ಲ. ಅವರು ಶಾಲೆಗಳಿಗೆ ಹೋಗುವ ಹಾಗಿಲ್ಲ. ಅವರು ಸಾರ್ವಜನಿಕ ಬಾವಿಗಳಿಂದ ನೀರು ಸೇದಿಕೊಳ್ಳುವ ಹಾಗಿಲ್ಲ, ಅಷ್ಟೇ ಅಲ್ಲ ಅವರು ಸಾಮಾನ್ಯ ರಸ್ತೆಗಳಲ್ಲಿ ತಿರುಗಾಡುವಂತಿಲ್ಲ. ಅವರು ಸಾರಿಗೆಯ ವ್ಯವಸ್ಥೆಯನ್ನು ಬಳಸುವಂತಿಲ್ಲ. ಇಂಥ ಸಣ್ಣ–ಪುಟ್ಟ ಹಕ್ಕಿನ ಸವಲತ್ತುಗಳನ್ನು ಅವರಿಗೆ ಸಿಗದಂತೆ ನಿಷೇಧಿಸಲಾಗಿತ್ತು. ಆರ್ಥಿಕ ರಂಗದಲ್ಲೂ ಕೂಡ ಸಮಾನವಾದ ಹಾನಿಯನ್ನು ನೋಡಬಹುದು. ಸಂಪತ್ತು ಗಳಿಸಲು ಮೂರು ಮಾರ್ಗಗಳಾದ ವ್ಯಾಪಾರ, ಸೇವೆಗಳು ಮತ್ತು ಕೃಷಿಗಳು ಅವರಿಗೆ ಎಟುಕುತ್ತಿರಲಿಲ್ಲ. ಅವರು ಅಸ್ಪೃಶ್ಯರಾದ್ದರಿಂದ ಅವರಿಗೆ ವ್ಯಾಪಾರ ಮಾಡಲು ಗಿರಾಕಿಗಳೇ ಸಿಗುತ್ತಿರಲಿಲ್ಲ. ಆದ್ದರಿಂದ ಅವರಿಗೆ ವ್ಯಾಪಾರ ಅಸಾಧ್ಯವಾಯಿತು. ಅದೇ ಅಸ್ಪೃಶ್ಯತೆ ಪ್ರಜ್ಞೆ ಮತ್ತು ಪ್ರತ್ಯೇಕತೆಯ ನೀತಿ ಅವರು ಕೆಲಸಗಳನ್ನು ಪಡೆಯದಂತೆ ತಡೆದಿದೆ. ಅಧ್ಯಕ್ಷರು ಈ ಸ್ಪರ್ಶ ನಿಷೇಧವು ಅವರನ್ನು ಮಿಲಿಟರಿಯಿಂದ ಹೊರಹಾಕಲು ಹೊಣೆಯೆಂಬುದನ್ನು ವಿವರಿಸುತ್ತಾರೆ. ಅದೇ ದುರಂತವನ್ನು ನಾವು ಕೃಷಿಯಲ್ಲೂ ಸಹ ನೋಡಬಹುದು.

ಆದ್ದರಿಂದ ಈ ಸಮುದಾಯ, ದಮನಿತರು, ತಿರಸ್ಕೃತರು, ಶೋಷಿತರು ಹೇಗೆ ಪ್ರಗತಿ ಹೊಂದುವುದು? ಅಧ್ಯಕ್ಷರು ಕೆಲವು ಸಾಧ್ಯವಾದ ಉತ್ತರಗಳನ್ನು ಹೊಂದಿದ್ದಾರೆ. ಸಹಜ ಗುಣಗಳು ಮತ್ತು ಅನುಕೂಲಕರ ಪರಿಸ್ಥಿತಿಗಳೆರಡು ಅಂತಿಮ ಪ್ರಗತಿಗೆ ಚಾಲಕ ಶಕ್ತಿಗಳಾಗಿವೆ. ಬಹಿಷ್ಕೃತರಲ್ಲಿ ಸಹಜ ಗುಣಗಳ ಕೊರತೆಯಿಲ್ಲವೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಪರಿಸ್ಥಿತಿಗಳು ಅನುಕೂಲಕರವಾಗಿಲ್ಲದ ಕಾರಣದಿಂದ ಅವರ ಬೆಳವಣಿಗೆ ಕುಂಠಿತವಾಗಿದೆ. ಅಸ್ಪೃಶ್ಯರ ಪರವಾಗಿ ಪರಿಸ್ಥಿತಿಗಳನ್ನು ಬದಲಾಯಿಸಲು ಹಲವಾರು ಸಲಹೆ ಸೂಚನೆಗಳಿವೆ. ಬಹಿಷ್ಕೃತ ಸಮುದಾಯ ತನ್ನ ರಾಜಕೀಯ ಶಕ್ತಿಯನ್ನು ನಿರ್ಮಿಸಬೇಕು ಮತ್ತು ಹೆಚ್ಚು ಮಾಡಿಕೊಳ್ಳಬೇಕೆಂಬುದು ಅಧ್ಯಕ್ಷರ ದೃಢ ಅಭಿಪ್ರಾಯ. ಕಾನೂನು ರೂಪಿಸುವ ಸಂಸ್ಥೆಗಳಲ್ಲಿ ಕೋಮುವಾರು ಪ್ರಾತಿನಿಧ್ಯ ಹೊಂದುವ ಮೂಲಕ ಇದನ್ನು ಸಾಧಿಸಬಹುದು. ಅಂತಿಮವಾಗಿ ಅಸ್ಪೃಶ್ಯರು ಸಂಘಟಿತರಾಗದೆ ಮತ್ತು ರಾಜಕೀಯ ಬಲಪಡೆಯದ ಹೊರತು "ಸತ್ಯಮೇವ ಜಯತೇ" ಎಂಬ ಘೋಷಣೆಯು ಪೊಳ್ಳಾಗಿ ಉಳಿಯುತ್ತದೆಯೆಂದು ಅವರು ಅಂತಿಮವಾಗಿ ಹೇಳಿದರು. ಅದಾದ ನಂತರ, ರೆಗ್ಯುಲೇಷನ್ ಕಮಿಟಿಯ್ನು ನೇಮಿಸಲಾಯಿತು. ಮತ್ತು ಮೊದಲ ದಿನದ ನಡಾವಳಿಗಳು ಸಮಾಪ್ತಗೊಳಿಸಲಾಯಿತು.

## ಎರಡನೆಯ ದಿನ

ಸಮ್ಮೇಳನ ಮೂರು ಗಂಟೆ (ಮಧ್ಯಾಹ್ನ)ಗೆ ಪ್ರಾರಂಭವಾಯಿತು. ಕೊಲ್ಹಾಪುರದ ಮಹಾರಾಜರು ತಾವು ಹಾಜರಿರುವ ಮೂಲಕ ಬಹಿಷ್ಕೃತ ಸಮುದಾಯದವರೆಲ್ಲವರನ್ನೂ ಸರಿ–ಸಮಾನರಾಗಿ ನೋಡಿದರು. ಪ್ರಾರಂಭದಲ್ಲಿ ಮತ್ತು ಸರ್ವಶಕ್ತನಾದ ದೇವರು ಮತ್ತು ಮಹಾರಾಜರನ್ನು ಹೊಗಳಲಾಯಿತು.

ಅದಾದ ನಂತರ. ಕೊಲ್ಹಾಪುರದ ಮಹಾರಾಜರು ತಮ್ಮ ಭಾಷಣವನ್ನು ಮಾಡಿದರು. (ಅವರ ಭಾಷಣವನ್ನು ಈ ಸಂಪುಟದಲ್ಲಿ ಮತ್ತೊಂದು ಕಡೆ ಕೊಡಲಾಗಿದೆ.) ಸಭೆಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಮಾಡಲಾಯಿತು.

೧. ಈ ಸಮ್ಮೇಳನವು ಬ್ರಿಟಿಷ್ ಸರಕಾರ ಮತ್ತು ಮೈತ್ರಿಕೂಟ ಯುದ್ಧದಲ್ಲಿ ಜಯಶೀಲವಾದುದಕ್ಕೆ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತದೆ.

೨. ಕರವೀರದ ಶ್ರೀ ಶಾಹು ಮಹಾರಾಜ ಛತ್ರಪತಿಯವರು ತಮ್ಮ ಸಂಸ್ಥಾನದಲ್ಲಿ ಬಹಿಷ್ಕೃತ ಜನರೆಲ್ಲರಿಗೂ ಸಮಾನ ಹಕ್ಕುಗಳನ್ನು ನೀಡುವ ಮೂಲಕ ಅವರ ವಿಮೋಚನೆಯ ಮಹಾಧ್ಯೇಯವನ್ನು ಕೈಗೊಂಡಿದ್ದಾರೆ. ಆದ್ದರಿಂದ ಈ ಸಮುದಾಯದ ಪ್ರತಿಯೊಬ್ಬ ವ್ಯಕ್ತಿಯೂ ಅವರ ಹುಟ್ಟಿದ ಹಬ್ಬವನ್ನು ಒಂದು ಪವಿತ್ರ ಹಬ್ಬವಾಗಿ ಆಚರಿಸಬೇಕೆಂಬುದು ಈ ಸಮ್ಮೇಳನದ ಅಭಿಪ್ರಾಯವಾಗಿದೆ.

೩. ಸಮ್ಮೇಳನವು ಬಹಿಷ್ಕೃತ ಸಮುದಾಯ ಪ್ರಗತಿಗಾಗಿ ಇತರೆ ಮಹಾರಾಜರು ಮಾಡುತ್ತಿರುವ ಉತ್ತಮ ಪ್ರಯತ್ನಗಳಿಗೆ ಅವರೆಲ್ಲರೂ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

೪. ಯಾವ ವ್ಯಕ್ತಿಯ ಪ್ರಗತಿಗೆ ಅನುಕೂಲಕರವಾದ ಸಾಮಾಜಿಕ ಪರಿಸ್ಥಿತಿಗಳು ಅತ್ಯಗತ್ಯ. ಹುಟ್ಟಿನ ಸಂಗತಿಯು ಬಹಿಷ್ಕೃತರನ್ನು ಅಶುದ್ಧರನ್ನಾಗಿ ಪರಿಗಣಿಸುವುದರಿಂದ ಅವರು ಯಾವುದೇ ಪ್ರಗತಿಗೆ ಅನರ್ಹರು. ಇದಲ್ಲದೆ ಅವರು ಹುಟ್ಟಿನ ಕಳಂಕವನ್ನು ಪಡೆದಿರುವುದರಿಂದ ಈ ಸಮುದಾಯ ಕನಿಷ್ಠ ಹಕ್ಕುಗಳಿಂದ ವಂಚಿತವಾಗಿದೆ. ಬಹಿಷ್ಕೃತರು ಸಹ ಭಾರತ ಸಾಮ್ರಾಜ್ಯದ ಭಾಗವೇ ಆಗಿರುವುದರಿಂದ ಅವರು ಇತರೆ ಭಾರತೀಯ ಜನರಂತೆಯೇ ಈ ಕೆಳಕಂಡ ಮಾನವ ಹಕ್ಕುಗಳನ್ನು ಪಡೆಯಲೇಬೇಕು.

(ಎ) ಸಾರ್ವಜನಿಕ ರಸ್ತೆಗಳು, ಬಾವಿಗಳು, ಕೆರೆಗಳು, ಶಾಲೆಗಳು, ಕ್ಷಯದ ಆಸ್ಪತ್ರೆಗಳು ಮತ್ತು ಪರವಾನಗಿ ಪಡೆದ ಮನರಂಜನಾ ಸ್ಥಳಗಳು, ಹೋಟೆಲ್ಲುಗಳು, ಸಾರಿಗೆ ವಾಹನಗಳು ಮೊದಲಾದವು ಸಾರ್ವಜನಿಕ ಸವಲತ್ತುಗಳು ಮತ್ತು ಬಹಿಷ್ಕೃತ ಸಮುದಾಯವು ಅವುಗಳನ್ನು ಅನುಭವಿಸಲು ಪೂರ್ಣ ಹಕ್ಕು ಪಡೆಯುವರು.

(ಬಿ) ಗುಣಾತ್ಮಕ ಸದ್ಗುಣಗಳಿಂದ ಅವರು ವ್ಯಾಪಾರ ನಡೆಸುವ ಮತ್ತು ಸೇವೆಗೆ ಸೇರುವ ಹಕ್ಕನ್ನು ಪಡೆದಿದ್ದಾರೆ.

ಅವರು ಈ ಹಕ್ಕುಗಳನ್ನು ಅನುಭವಿಸುವುದರಲ್ಲಿ ಸಂಕಷ್ಟಗಳನ್ನು

ಎದುರಿಸಬೇಕಾದಾಗಲೆಲ್ಲಾ ಸರಕಾರವು ಕಾನೂನಿನ ಮೂಲಕ ಆ ಕಷ್ಟಗಳನ್ನು ನಿವಾರಿಸಲು ಬಾಧ್ಯವಾಗಬೇಕೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ.

೫. ಪ್ರಾಥಮಿಕ ಶಿಕ್ಷಣವನ್ನು ಲೈಂಗಿಕ ತಾರತಮ್ಯವಿಲ್ಲದೆ ಆದಷ್ಟು ಬೇಗನೇ ಕಡ್ಡಾಯ ಮತ್ತು ಉಚಿತ ಮಾಡಬೇಕು.

೬. ಬಹಿಷ್ಕೃತ ಸಮುದಾಯದಲ್ಲಿ ಶಿಕ್ಷಣ ಪ್ರಸಾರ (ಮತ್ತು ಅದರ ಪ್ರಯೋಜನಗಳು) ವನ್ನು ಮಾಡುವುದು ಹೆಚ್ಚು ಅವಶ್ಯಕ. ಇಲ್ಲದಿದ್ದರೆ ಅವರ ಪ್ರಗತಿ ಅಸಾಧ್ಯ. ಈ ಗುರಿಯನ್ನು ಸಾಧಿಸಲು, ಶಾಲಾ ಅಧ್ಯಾಪಕರು, ಉಪಸಹಾಯಕರು, ಉಪಶೈಕ್ಷಣಿಕ ನಿರೀಕ್ಷಕರು ಮೊದಲಾದವರು ಶಿಕ್ಷಣ ಪ್ರಸಾರ ಮಾಡಲು ಮನಸ್ಸುಳ್ಳವರಾಗಿರಬೇಕು. ಪ್ರತಿಷ್ಠಿತ ವರ್ಗವು ಈ ಸಮುದಾಯದ ಶಿಕ್ಷಣವನ್ನು ಅಲಕ್ಷ್ಯ ಮಾಡುವವುದರಿಂದ, ಈ ಸಮ್ಮೇಳನವು ಬಹಿಷ್ಕೃತ ಸಮುದಾಯದ ಹುದ್ದೆಗಳಿಗೆ ಪ್ರವೇಶಿಸಲು ಅನುಕೂಲವಾಗುವಂತೆ ಅವರಿಗೆ ಸೂಕ್ತವಾದ ತರಬೇತಿ ನೀಡುವ ವ್ಯವಸ್ಥೆಯನ್ನು ಸರಕಾರ ಮಾಡಬೇಕೆಂದು ಬಲವಾಗಿ ಕೋರುತ್ತದೆ. ಈ ವರ್ಗಗಳಲ್ಲಿ ಶಿಕ್ಷಣ ಪ್ರಸಾರ ಮಾಡುವುದಕ್ಕಾಗಿ ಬಹಿಷ್ಕೃತ ಸಮುದಾಯದಿಂದ ಪ್ರತಿಯೊಂದು ಜಿಲ್ಲೆಯಲ್ಲಿ ಕನಿಷ್ಠಪಕ್ಷ ಒಬ್ಬ ಉಪ ಅಥವಾ ಸಹಾಯಕ ಉಪ ಶೈಕ್ಷಣಿಕ ನಿರೀಕ್ಷಕರನ್ನು ಆಯ್ಕೆ ಮಾಡಬೇಕು ಮತ್ತು ಟ್ರೈನಿಂಗ್ ಕಾಲೇಜಿನ ಮೂರನೇ ವರ್ಷದ ಪರೀಕ್ಷೆಯನ್ನು ಅಥವಾ ಮೆಟ್ರಿಕ್ಯುಲೇಷನ್ನು ಪಾಸು ಮಾಡಿದ ವ್ಯಕ್ತಿಯನ್ನು ಪ್ರಮುಖವಾಗಿ ಅರ್ಹನೆಂದು ಪರಿಗಣಿಸಬೇಕೆಂದು ಈ ಸಮ್ಮೇಳನದ ಅಭಿಪ್ರಾಯವಾಗಿದೆ.

೭ ಕೆಲವು ಸಂಸ್ಥಾನಗಳು ಮತ್ತು ಸಂಸ್ಥಾನವಾದ ಮೈಸೂರು ಮುಸ್ಲಿಮರಿಗೆ, ಬ್ರಾಹ್ಮಣೇತರರಿಗೆ ಮತ್ತು ಬಹಿಷ್ಕೃತರಿಗೆ ವಿದ್ಯಾರ್ಥಿವೇತನಗಳನ್ನು ನೀಡಿದ ರೀತಿಯಲ್ಲಿಯೇ ಸರಕಾರವು ಬಹಿಷ್ಕೃತ ಸಮುದಾಯದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ನೀಡಬೇಕೆಂದು ಸಮ್ಮೇಳನ ಕೋರುತ್ತದೆ.

೮. ಯಾವುದೇ ರೀತಿಯ ತಾರತಮ್ಯತೆಯಿಲ್ಲದೆ ಸ್ಪೃಶ್ಯ ಮತ್ತು ಅಸ್ಪೃಶ್ಯರಿಗೆ ಸಮಾನ ಶಾಲೆಗಳು ಇರಬೇಕೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ.

೯. ಇಂದು ಮಹರ್ ವತನದಾರರ ಸ್ಥಿತಿಗತಿಗಳು ದಾರುಣವಾಗಿವೆ. ಇದಕ್ಕೆ ಎರಡು ಕಾರಣಗಳಿವೆ:

(ಎ) ಹಳ್ಳಿಯ ಕೊಳಕು ಕೆಲಸಗಳಾದ ಸತ್ತ ಪ್ರಾಣಿಗಳನ್ನು ಎತ್ತಿಹಾಕುವುದು ಮೊದಲಾದ ಕೆಲಸಗಳನ್ನು ಮಹರರು ಮಾಡುತ್ತಿರುವುದರಿಂದ ವತನು ತನ್ನ ಘನತೆಯನ್ನು ಕಳೆದುಕೊಂಡಿದೆ.

(ಬಿ) ವತನದ ಜಮೀನು ಪ್ರತಿಯೊಂದು ಪೀಳಿಗೆಯಲ್ಲಿ ಹಂಚಿಕೆಯಾಗಿರುವುದರಿಂದ ಮತ್ತು ಇಂದು ಅದು ತುಂಡು-ತುಂಡುಗಳಾಗಿರುವ ಹಿಡುವಳಿಯು ಅವರ ಜೀವನಕ್ಕೆ ಸಾಕಾಗುವುದಿಲ್ಲ.

ವ್ಯವಸ್ಥೆಯಲ್ಲಿ ತೀವ್ರ ಬದಲಾವಣೆ ಅತ್ಯಗತ್ಯವೆಂದು ಸಮ್ಮೇಳನ ಭಾವಿಸುತ್ತದೆ. ಮಹರರು

ಚಿಕ್ಕ ಜೀವನಕ್ಕೆ ಸಾಕಾಗಲಾರದ ಚಿಕ್ಕ ಹಿಡುವಳಿಗಳನ್ನು ಹೊಂದುವ ಬದಲಿಗೆ ಮಹರರ ವತನ ಭೂಮಿಗಳ ಬಹುಭಾಗವನ್ನು ಮಹರರಲ್ಲಿಯೇ ಹಿರಿಯರಿಗೆ ಹಂಚುವುದರಿಂದ ಅವರು ಜೀವನಕ್ಕೆ ಸಾಕಾಗುವಷ್ಟು ಭೂಮಿಯನ್ನು ಹೊಂದುತ್ತಾರೆ. ಯಾರು ಭೂಮಿಯನ್ನು ಹೀಗೆ ಕಳೆದುಕೊಳ್ಳುವರೋ ಅಂಥವರಿಗೆ ಖಾಲಿಯಿರುವ ಭೂಮಿಯನ್ನು ಸೂಕ್ತ ಪರಿಹಾರದ ರೂಪದಲ್ಲಿ ಹಂಚಬೇಕು.

೧೦. ಯಾವುದೇ ಸಮುದಾಯವು ಸತ್ತ ಪ್ರಾಣಿಗಳನ್ನು ಆಹಾರವಾಗಿ ಸೇವಿಸುವುದು ಕಾನೂನಿನ ಪ್ರಕಾರ ಅಪರಾಧವೆಂದು ಪರಿಗಣಿಸಬೇಕೆಂದು ಈ ಸಮ್ಮೇಳನ ಶಿಫಾರಸು ಮಾಡುತ್ತದೆ.

೧೧. ಬಹಿಷ್ಕೃತ ಸಮುದಾಯಗಳ ಜನರನ್ನು ತಲಾಟಿಗಳಾಗಿ ನೇಮಿಸಬೇಕೆಂದು ಈ ಸಮ್ಮೇಳನ ಒತ್ತಾಯಿಸುತ್ತದೆ.

೧೨. ದಮನಿತರ ಸುಧಾರಣೆಗಾಗಿ ಮೇಲುಜಾತಿಯ ಸಮುದಾಯಗಳು ಮತ್ತು ವ್ಯಕ್ತಿಗಳು ಮಾಡಿರುವ ಪ್ರಯತ್ನಗಳಿಗೆ ಸಮ್ಮೇಳನವು ತುಂಬಾ ಆಭಾರಿಯಾಗಿದ್ದರೂ ಸಮ್ಮೇಳನವು ಬಹಿಷ್ಕೃತ ಸಮುದಾಯವು ಈ ಗುರಿಯ ಬಗ್ಗೆ ಸೂಚಿಸಿದ ಪರಿಹಾರಗಳು ಅಥವಾ ಕ್ರಮಗಳು ಅಂಗೀಕೃತವೆಂದು ಸರಕಾರ ಭಾವಿಸಬಾರದೆಂದು ಸರಕಾರವನ್ನು ಕೇಳಿಕೊಳ್ಳುತ್ತದೆ.

೧೩. ಬಹಿಷ್ಕೃತರು ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಪ್ರತ್ಯೇಕ ಚುನಾಯಿತ ಸಮುದಾಯವು ಶಾಸನ ಪರಿಷತ್ತುಗಳಿಗೆ ಚುನಾಯಿಸುವ ಮೂಲಕ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿಕೊಡಬೇಕೆಂದು ಸಮ್ಮೇಳನ ಒತ್ತಾಯಿಸುತ್ತದೆ.

೧೪. ಈ ಸಮ್ಮೇಳನವು ಸಫಲವಾಗುವಂತೆ ಮಾಡಿದ ಎಲ್ಲಾ ಸ್ವಯಂಸೇವಕರಿಗೆ ವಿಶೇಷವಾಗಿ ಶ್ರೀ ಅಪ್ಪಾ ದಾದ್‌ಗೌಡ ಪಾಟೀಲರಿಗೆ ಈ ಸಮ್ಮೇಳನವು ವಿಧಿಪೂರ್ವವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

೧೫. ಸಮ್ಮೇಳನವು ಸಂಬಂಧಪಟ್ಟ ಅಧಿಕಾರಿಗಳಿಗೆ ಮತ್ತು ಇತರೆ ಸಂಬಂಧಿಸಿದ ವ್ಯಕ್ತಿಗಳಿಗೆ ಮೇಲಿನ ನಿರ್ಣಯಗಳನ್ನು ಕಳುಹಿಸಿಕೊಡುವ ಹಕ್ಕನ್ನು ಅಧ್ಯಕ್ಷರಿಗೆ ನೀಡಲಾಗಿದೆ.

---

## ಸಮ್ಮೇಳನದ ಪರಿಣಾಮ

### ('ಮೂಕನಾಯಕ'ನಿಗೆ ಒಂದು ಪತ್ರ)

ಸಂಪಾದಕರಿಗೆ,

ಮೂಕನಾಯಕ

ಮಾರ್ಚ್ ೨೧, ೨೨ರಂದು ಮನ್‌ಗಾವ್‌ನಲ್ಲಿ ನಡೆದ ಸಮ್ಮೇಳನವು ಬಹುಮಟ್ಟಿಗೆ ಅಸ್ಪೃಶ್ಯ ಸಮುದಾಯಗಳಿಗೆ ಪ್ರಯೋಜನಕಾರಿಯಾಗಿರುವುದು ನಿಜ. ಅದೇ ಸಮಯದಲ್ಲಿ ಪ್ರತಿಷ್ಠಿತ ವರ್ಗಗಳ

ಕೋಪಕ್ಕೂ ಗುರಿಯಾಗಿದೆ ಹಾಗೂ ಅವರು ಮಹರ್ ಸಮುದಾಯಕ್ಕೆ ತೊಂದರೆ ಕೊಡಲು ಕಾರಣವಾಗಿದೆ. ಅವರು ಮಹರರು ಹಳ್ಳಿಗಳಿಗೆ ಪ್ರವೇಶಿಸುವುದನ್ನು, ಅಂಗಡಿಗಳಿಂದ ವಸ್ತುಗಳನ್ನು ಖರೀದಿಸುವುದನ್ನು, ಅಕ್ಕಪಕ್ಕದ ಕಾಡು–ಮೇಡುಗಳಲ್ಲಿ ಕಟ್ಟಿಗೆಗಳನ್ನು ಸಂಗ್ರಹಿಸುವುದನ್ನು, ಮತ್ತು ಸಾಮಾನ್ಯ ಬಾವಿಗಳಿಂದ ನೀರು ಸೇದಿಕೊಳ್ಳುವುದನ್ನು ನಿಷೇಧಿಸಿದರು. ಕರವೀರದ ಮಹಾರಾಜರು ಈ ಎಲ್ಲವನ್ನೂ ನಿಮಗೆ ಕೊಡುವರು ಮತ್ತು ನಿಮ್ಮನ್ನು ಸುಖವಾಗಿಡುವರೆಂದು ಛೇಡಿಸಿದರು. ತಮ್ಮ ಹಳ್ಳಿಯ ಅಂಗಡಿಗಳನ್ನು ಬಿಟ್ಟು ಪಕ್ಕದ ಹಳ್ಳಿಗಳಲ್ಲಿ ಖರೀದಿಸುವಂತೆ ಬಲಾತ್ಕರಿಸಲಾಯಿತು ಮತ್ತು ನೀರನ್ನು ಎರಡು ಮೈಲಿಗಳ ದೂರದಲ್ಲಿರುವ ನದಿಯಿಂದ ತರಬೇಕಾಯಿತು. ಹಳ್ಳಿಯಲ್ಲಿ ಮಹರರಿಗೆ ಸಂಬಂಧಿಸಿದ ಬಾವಿಯಿದ್ದರೂ ಅದು ಬೇಸಿಗೆಯಲ್ಲಿ ಬತ್ತಿಹೋಗಿತ್ತು ಮತ್ತು ಒಟ್ಟಾರೆಯಾಗಿ ಮಹರ್ ಸಮುದಾಯದ ಪರಿಸ್ಥಿತಿ ಚಿಂತಾಜನಕವಾಗಿತ್ತು. ಇದರಿಂದ ಪರಿಹಾರ ಪಡೆದುಕೊಳ್ಳಲು ಈ ಜನರು ಕಾಗಲ್ ಕೋರ್ಟಿಗೆ ಒಂದು ಮನವಿಯನ್ನು ಸಲ್ಲಿಸಿದರು. ಆದ್ದರಿಂದ ಮನವಿಯನ್ನು ಸಲ್ಲಿಸಿ ಇದರ ಬಗ್ಗೆ ಆದಷ್ಟು ಬೇಗನೇ ಕ್ರಮವನ್ನು ತೆಗೆದುಕೊಳ್ಳಬೇಕೆಂದು ನಮ್ರವಾಗಿ ಕೋರಿತ್ತು. ಆ ರೀತಿ ಮಾಡುವಾಗ, ಅಸ್ಪೃಶ್ಯರು ಬೇರೆಯವರಂತೆ ಮಾನವರೆಂಬುದನ್ನು ನೆನಪಿಡುವುದು ಅತ್ಯಗತ್ಯ. ಅವರು ತಮ್ಮನ್ನು ತಾವೇ ಒಂದು ರೀತಿಯ ದಾಸ್ಯತ್ವದಿಂದ ಮುಕ್ತಗೊಳಿಸಿಕೊಂಡರೂ ಮತ್ತೊಂದು ದಾಸ್ಯವನ್ನು ಅವರ ಮೇಲೆ ಹೇರಲಾಯಿತು. ಇದು ದುರದೃಷ್ಟವಾಗಿತ್ತು! ಸಮ್ಮೇಳನದ ನಂತರ ಜನರು ಸತ್ತಪ್ರಾಣಿಗಳನ್ನು ಮಹರರಂತೆ ಹೊತ್ತುಕೊಂಡು ಹೋದರು. ಮಹರ್ ಸಮುದಾಯದ ವಿರುದ್ಧ ಸ್ಥಳೀಯ ಜನರು ಸಂಚುಹೂಡಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ನಮ್ಮ ಘನ ಮಹಾರಾಜರು ಪರಿಸ್ಥಿತಿಯನ್ನು ನಿಷ್ಠುರವಾಗಿ ನಿಭಾಯಿಸುವರೆಂಬ ನಂಬಿಕೆ ನಮಗಿದೆ. ಅವರಲ್ಲದಿದ್ದರೆ ಮತ್ಯಾರು ಮಾಡುವರು?

ನಿಮ್ಮ
ಐದಾಳೆ

(ಮೂಕನಾಯಕ, ಏಪ್ರಿಲ್ ೧೦, ೧೯೨೦)

---

## ೧೨

# ವತನುಗಳ ಗುಲಾಮತ್ವದಿಂದ ಮಹರರ ಬಿಡುಗಡೆ

ಮೇ ೧೪, ೧೯೨೦

ಮಹರ್ ಸಮುದಾಯವು, ತಮ್ಮ ವತನುಗಳ ಗುಲಾಮಗಿರಿಯಲ್ಲಿ ಕೊಳೆತು ನಾರುತ್ತಿದ್ದರು. ಸಮುದಾಯವು ವತನಿಗೆ ಅಂಟಿಕೊಂಡಿತ್ತು. ಮತ್ತು ಅವರು ವತನಿನ ತುಂಡುಭೂಮಿಗಳನ್ನು ಬಿಟ್ಟುಕೊಡಲು ಅಸಮರ್ಥರಾಗಿದ್ದರು. ಶಾಹುರವರು ಒಂದು ಪರಿಹಾರವನ್ನು ಸೂಚಿಸಿದರು: ಕಸಬ ಕರವೀರಿನ ಎಲ್ಲಾ ಹಳ್ಳಿಗಳ ಎಲ್ಲಾ ಮಹರರ ದಾಖಲೆಯಲ್ಲಿರುವ ಭೂಮಿಯನ್ನು ಕ್ರೋಡೀಕರಿಸಿ; ಕುಟುಂಬಗಳು ಜೀವನೋಪಾಯಕ್ಕೆ ಸಾಕಷ್ಟು ಗಳಿಸುವ ರೀತಿಯಲ್ಲಿ ಕೆಲವು ಕುಟುಂಬಗಳಿಗೆ ಈ ಭೂಮಿಯನ್ನು ಪುನಃ ಹಂಚಿ. ಈ ಮಹರರು ಸರಕಾರಿ ಸೇವೆಯಲ್ಲಿ ಮುಂದುವರಿಯುವರು. ಉಳಿದ ಕುಟುಂಬಗಳೂ ವತನುಗಳಿಂದ ಮುಕ್ತರಾಗುವರು. ಇದರಿಂದಾಗಿ ಅವರು ಬಯಸಿದ ರೀತಿಯಲ್ಲಿ ತಮ್ಮ ಜೀವನೋಪಾಯವನ್ನು ಗಳಿಸುವರು. ಇದುವರೆಗೆ ಅವರು ಸ್ವತಂತ್ರವಾಗಿ ಗಳಿಸುವ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿತ್ತು. ಕಸಬ ಕರವೀರದಲ್ಲಿ ಇಡೀ ಮಹರ್ ಸಮುದಾಯ ಈ ವಿಚಾರವನ್ನು ಸಮ್ಮತಿಸಿದ ನಂತರ ಶಾಹುರವರು ೧೬ ಮಹರ್ ವ್ಯಕ್ತಿಗಳನ್ನು ಸರಕಾರಿ ನೌಕರರೆಂದು ಆಯ್ಕೆ ಮಾಡಿದರು. ಅವರು ಶಾಹುರವರಿಗೆ, ಆಯಿಸಾಹೇಬ, ಮಹಾರಾಜ, ರಾಜಕುಮಾರ ಅವರ ಕಛೇರಿಗಳಲ್ಲಿ ಸೇವೆ ಮಾಡಬೇಕಾಗಿತ್ತು ಮತ್ತು ಅವಶ್ಯಕತೆ ಬಿದ್ದರೆ ಅವರು ಮಹಾಲಕ್ಷ್ಮಿ ದೇವಸ್ಥಾನದಲ್ಲಿ ಕೆಲಸ ಮಾಡಬೇಕಾಗಿತ್ತು. ಶಾಹು ಮಹಾರಾಜರು ತಮ್ಮ ಸಂಸ್ಥಾನವಲ್ಲಿ ಇಡೀ ಮಹರರ ವತನವನ್ನು ರದ್ದುಗೊಳಿಸುವ ಮೊದಲು ನೆರವೇರಿಸಿದ ಪ್ರಯೋಗದ ಮೂಲರೂಪ ಇದಾಗಿತ್ತು. ಆಜ್ಞೆಯನ್ನು ಈ ಕೆಳಗೆ ಕೊಡಲಾಗಿದೆ.

---

## (ಛತ್ರಪತಿ ಶಾಹು ಮಹಾರಾಜರ ಮುದ್ರೆ)

ರೌದ್ರನಾಮ ಸಂವತ್ಸರದಲ್ಲಿ ಸ್ವಸ್ತಿಶ್ರೀ ರಾಜ್ಯಾಭಿಷೇಕ ಶಕ ೨೪೭ (ಮೇ ೧೪, ೧೯೨೦) ವೈಶಾಖ ಬಹುಳ ದಶಮಿ ಗುರುವಾರದ ದಿನ ಛತ್ರಪತಿ ಶಾಹು ಮಹಾರಾಜರು ಈ ಕೆಳಕಂಡಂತೆ ಸಾದು ತುಕಾರಾಮ್ ಬಂಗೆ ಅವರಿಗೆ ಆಜ್ಞಾಪಿಸುತ್ತಾರೆ:

ಗ್ರಾಮದ ಸಂಸ್ಕೃತಿ ಪ್ರಾರಂಭವಾದಾಗಿನಿಂದ ಮಹರ್ ಸಮುದಾಯವು ಜನ ಮತ್ತು ಸರಕಾರದ ಸೇವೆಯನ್ನು ನಿಷ್ಠೆಯಿಂದ ಮಾಡುತ್ತಿದ್ದಾರೆ. ಆದರೂ ಇಂದಿನವರೆಗೂ ಅವರಿಗೆ ಯಾರೂ ಪ್ರಗತಿಯ

ನಿಜವಾದ ದಾರಿಯನ್ನು ತೋರಿಸಿಲ್ಲ. ಅವರನ್ನು ಅಮಾನವೀಯವಾಗಿ ಗುಲಾಮರಂತೆ ಕಾಣಲಾಗಿದೆ. ಅವರೆಲ್ಲರೂ ಮಾನವರು. ಈ ಆಧುನಿಕ ಕಾಲದಲ್ಲಿ ಅವರನ್ನು ಈ ಗುಲಾಮಗಿರಿಯ ಭಾರದಿಂದ ಬಿಡುಗಡೆಮಾಡುವುದು ಮತ್ತು ಅವರು ಸುಸಂಸ್ಕೃತರಾಗಲು ಮತ್ತು ಸಮಾಜದಲ್ಲಿ ಗೌರವಾನ್ವಿತ ಸ್ಥಾನ ಪಡೆಯುವಂತೆ ಮಾಡುವುದು ಮೂಲಭೂತ ಮತ್ತು ಪವಿತ್ರವಾದ ಕರ್ತವ್ಯವಾಗಿದೆ. ಮಾನವರು ಇತರೆ ಸಹಮಾನವರನ್ನು ಮಾನವೀಯ ರೀತಿಯಲ್ಲಿ ಕಾಣುವ ಸಿದ್ಧಾಂತವನ್ನು ಇದೂ ಸಹ ಒಪ್ಪುತ್ತದೆ. ಇದನ್ನು ಮನವರಿಕೆ ಮಾಡಿಕೊಂಡು, ಮಹಾರಾಜರು ಕಸಬ ಕರವೀರದಲ್ಲಿ ಮಹರರ ಒಟ್ಟು ಕಂದಾಯದ ಭೂಮಿಯ ಪ್ರಮಾಣ ೧೨೯ ಎಕರೆ ಮತ್ತು ೮ ಗುಂಟೆಗಳು, ಅದರ ಒಟ್ಟು ಸೆಸ್ಸು ೪೯೭ ರೂಗಳು ಎಂದು ಯೋಚಿಸಿದರು. ಪ್ರಸ್ತುತ ಈ ಭೂಮಿಗಳು ಸಾಮೂಹಿಕವಾಗಿ ಸಂಖ್ಯೆ ೯ರಲ್ಲಿ ಎಲ್ಲಾ ಮಹರರ ಕ್ರೋಢೀಕೃತ ಹೆಸರುಗಳಲ್ಲಿ ದಾಖಲೆಯಾಗಿದೆ. ಮಹರರ ಸಮುದಾಯದ ಸೂಕ್ತ ಒಪ್ಪಿಗೆಯಂತೆ ೧೬ ವ್ಯಕ್ತಿಗಳನ್ನು ಸರಕಾರಿ ಸೇವೆಗಳಲ್ಲಿ ಲೀನಗೊಳಿಸಲಾಗಿದೆ. ಅವರ ಹೆಸರುಗಳು ಈ ಕೆಳಗಿನಂತಿವೆ.

೧. ಬಾಬುರಾವ್ ಆರ್ ಕಾಂಬ್ಳೆ

೨. ಕೃಷ್ಣರಾವ್ ಪರಶುರಾಮ್ ಕಾಂಬ್ಳೆ

೩. ನಾಗೋಜಿ ತಿಪಾಜಿ ಕಾಂಬ್ಳೆ

೪. ರಾಮ್‌ಶಂಕರ್ ಕೋಲೆ

೫. ಸಾದು ತುಕಾರಾಮ್ ಬಂಗೆ

೬. ಜ್ಯೋತಿ ನಾಯ್ಕು ಬಂಗೆ

೭. ಲಿಂಬಾರಿ ಶಾಂತು ಲಿಗಾಡೆ

೮. ಜ್ಯೋತಿ ಶುಭನಾ ಲಿಗಾಡೆ

೯. ಬಾಲಾಜಿ ಚೋಲಜಿ ಕಾಳೆ

೧೦. ನಾನು ರಾನೋಜಿ ಕಾಳೆ

೧೧. ಮಾಸು ಮಾನಾಜಿ ಕಾಳೆ

೧೨. ಮಾಸು ಲಕ್ಷ್ಮಣ ಕಾಳೆ

೧೩. ಆಬಾ ಜಾಕು ಸರ್ನಾಯ್ಕ

೧೪. ಸಾದು ರಾಣೋಜಿ ಸರ್ನಾಯ್ಕ

೧೫. ಭಾವು ತುಲ್ಸಾ ಕಾಳೆಕರ್

೧೬. ತುಳಸಪ್ಪ ಸಂತರಾಮ್ ಸರ್ನಾಯ್ಕ

ನೀವು ಅವರಲ್ಲಿ ಒಬ್ಬರಾಗಿದ್ದೀರಿ, ನಿಮಗೆ ಒಟ್ಟು ಮಹರರ ಭೂಮಿಯಲ್ಲಿ ೮ ಎಕರೆ, ೩ ಗುಂಟೆಗಳ ಭೂಮಿಯನ್ನು ಹಂಚಲಾಗಿದೆ. ಇದು ವಂಶಪಾರಂಪರ್ಯದ ಹಕ್ಕಿನ ಭೂಮಿಯಾಗಿದೆ. ಈ ೧೬ ಜನರು ಸರಕಾರದಲ್ಲಿ ಸೇವೆ ಮಾಡಲು ಜವಾಬ್ದಾರರು, ನೀವು ಮತ್ತು ನಿಮ್ಮ ವಾರಸುದಾರರು ಛತ್ರಪತಿಯವರಿಗೆ ಸಂಪೂರ್ಣ ನಿಷ್ಠೆ ಮತ್ತು ವಿಧೇಯತೆಯಿಂದ ಕೆಲಸ ಮಾಡಲು ಹೊಣೆಗಾರರು.

ನಿಮ್ಮ ಉಡುಗೊರೆ (ದಾನದ) ಭೂಮಿಗೆ ಸನದಿ ಶೀಲೆದಾರ್‌ರಿಗೆ, ಕೊಟಕಾರಿ ಮೊದಲಾದವರಿಗೆ ಅನ್ವಯಿಸುವ ನಿಯಮಾವಳಿಗಳೇ ಅನ್ವಯವಾಗುತ್ತವೆ.

ಈ ೧೬ ವ್ಯಕ್ತಿಗಳು ಸರಕಾರಿ ನೌಕರರಾಗಿ ಸೇವೆ ಮಾಡಬೇಕಾಗಿದೆ. ಅವರು ಮಹಾರಾಜರಿಗೆ, ಆಯಿ ಸಾಹೇಬರಿಗೆ, ರಾಜಕುಮಾರರಿಗೆ ಮೊದಲಾದವರಿಗೆ ಸೇವೆ ಮಾಡಬೇಕಾಗಿದೆ. ಆವಶ್ಯಕತೆ ಬಿದ್ದರೆ ಅವರು ಮಹಾಲಕ್ಷ್ಮಿ ಕರವೀರ ನಿವಾಸಿನಿಯಲ್ಲೂ ಕೆಲಸ ಮಾಡಬೇಕಾಗುತ್ತದೆ.

ಈ ೧೬ ಜನರನ್ನು ಸನದಿ, ಶೀಲೆದಾರ್ ದರ್ಜೆಯವರೆಂದು ಪರಿಗಣಿಸಬೇಕು. ಗಾವ್–ಕಾಮಗಾರ್ ಪಾಟೀಲ್, ಕುಲಕರ್ಣಿ, ಚೌಗುಲೆ ಮೊದಲಾದವರು ಸೇರಿದಂತೆ ಯಾರೂ ಅವರಿಗೆ ವೈಯಕ್ತಿಕ ಕೆಲಸಗಳನ್ನು ವಹಿಸುವಂತಿಲ್ಲ.

ಈ ನೇಮಕಗೊಂಡ ವ್ಯಕ್ತಿಗಳು ಈಗ ಸಾಕಷ್ಟು ಸಂಬಳವನ್ನು ಪಡೆಯುವುದರಿಂದ ಅವರಿಗೆ ಒಂದು ಪ್ರಗತಿಯ ಹಾದಿಯನ್ನು ರೂಪಿಸಿದಂತಾಗಿದೆ. ಆದ್ದರಿಂದ ಅವರು ತಮ್ಮ ಮುಂದಿನ ಪೀಳಿಗೆಯನ್ನು ವಿದ್ಯಾವಂತರನ್ನಾಗಿ ಮಾಡುವರೆಂಬ ಹಾಗೂ ಉತ್ತಮ ಸ್ಥಾನ ಗಳಿಸುವರೆಂಬ ವಿಶ್ವಾಸ ಮಹಾರಾಜರಿಗೆ ಇದೆ. ಮಹಾರಾಜರು ಮಹರ್ ಅವರನ್ನು ನೇರವಾಗಿ ಸರಕಾರಿ ಸೇವೆಗೆ ತಂದರು. ತತ್ಪರಿಣಾಮವಾಗಿ ಯಾವ ಮಹರನೂ ಜೀತಪದ್ಧತಿ ಮತ್ತು ದುಷ್ಟ ಸಂಪ್ರದಾಯಕ್ಕೆ ಬದ್ಧರಾಗಿ ಅವರು ಕೊಳಕು ಮತ್ತು ಅನಾರೋಗ್ಯಕರ ಕೆಲಸಗಳನ್ನು ಇನ್ನು ಮೇಲೆ ಮಾಡುವ ಅಗತ್ಯವಿಲ್ಲ. ಅವರು ಈಗಿನ ಸ್ಥಿತಿಯಿಂದ ಪ್ರವರ್ಧಮಾನಕ್ಕೆ ಬರುವರು ಮತ್ತು ತಮ್ಮ ನಿಜವಾದ ಪ್ರಗತಿಯನ್ನು ಪ್ರಾರಂಭಿಸುವರೆಂಬ ಪರಿಪೂರ್ಣ ಭರವಸೆ ಮಹಾರಾಜರಿಗಿದೆ. ಮಹಾರಾಜರು ಈ ಅವಕಾಶ ನೀಡಲು ಸಾಕಷ್ಟು ಕರುಣಾಮಯಿಯಾಗಿರುವುದರಿಂದ ಈ ಅವಕಾಶವನ್ನು ನಿಮಗೆ ನೀಡಿದ್ದಾರೆ. ನೀವು ಈಗ ರಾಜಕುಟುಂಬಕ್ಕೆ ನಿಷ್ಠೆಯಿಂದ ಸೇವೆ ಮಾಡುತ್ತಾ ಮತ್ತು ನಿಮಗೆ ನೀಡಿರುವ ಅವಕಾಶವನ್ನು ಬಳಸಿಕೊಳ್ಳುತ್ತಾ ಸುಖ–ಶಾಂತಿಯಿಂದ ಜೀವನ ನಡೆಸಿ.

**(ಗಂಗಾರಾಮ್ ಕಾಂಬ್ಳೆ ಸಂಗ್ರಹ)**

---

೧೩

## ಮೂಕನಾಯಕದ ವಿಶೇಷಾಂಕ

## ಅಂಬೇಡ್ಕರರ ಪತ್ರ

ಜೂನ್ ೧೩, ೧೯೨೦

*ಡಾ. ಬಾಬಾಸಾಹೇಬ ಅಂಬೇಡ್ಕರರು, ೧೯೨೦ರಲ್ಲಿ ಅಸ್ಪೃಶ್ಯರ ಮೇಲೆ ನಡೆಯುವ ದೌರ್ಜನ್ಯಗಳ ವಿರುದ್ಧ ತಮ್ಮ ಧ್ವನಿಯನ್ನು ಕೇಳಿಸುವಂತೆ ಮಾಡುವ ಸಲುವಾಗಿ. 'ಮೂಕನಾಯಕ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಶಾಹುಮಹಾರಾಜರು ಈ ಪತ್ರಿಕೆಗೆ ಮಹಾ ಔದಾರ್ಯದಿಂದ ಈ ಕಾರ್ಯಕ್ಕೆ ಪೋಷಕರಾಗಿದ್ದರು. ಇದಕ್ಕೂ ಮೊದಲು ಈ ಇಬ್ಬರು ಮಹಾವ್ಯಕ್ತಿಗಳು ಪರಸ್ಪರ ಗೌರವವನ್ನು ಮತ್ತು ಮನ್‌ಗಾವ್ ಮತ್ತು ನಾಗಪುರ ಸಮ್ಮೇಳನಗಳಲ್ಲಿ ನಿಕಟ ಸಂಪರ್ಕಗಳನ್ನು ಬೆಳೆಸಿಕೊಂಡಿದ್ದರು. ಅಂಬೇಡ್ಕರರು ಮಹಾರಾಜರ ಜನ್ಮಜಯಂತಿ ದಿನ (೨೬ ಜುಲೈ ೧೯೨೦) ವಿಶೇಷಾಂಕವನ್ನು ಪ್ರಕಟಿಸಲು ನಿರ್ಧರಿಸಿದರು.*

---

ಮೂಕನಾಯಕ<br>ಪರೇಲ್, ಮುಂಬಯಿ<br>೧೩-೦೬-೧೯೨೦

ಶ್ರೀಮನ್ ಮಹಾರಾಜ ಶಾಹು ಛತ್ರಪತಿಯವರಿಗೆ

ಕರವೀರ

ನಿಮ್ಮ ಸೇವೆಯಲ್ಲಿ.

ಮನ್‌ಗಾವ್ ಮತ್ತು ನಾಗಪುರ ಸಮ್ಮೇಳನಗಳು ಪಾಸು ಮಾಡಿದ ನಿರ್ಣಯಗಳ ಪ್ರಕಾರ ಜೂನ್ ೨೬ರಂದು ನಿಮ್ಮ ಹುಟ್ಟಿದ ಜಯಂತಿಯನ್ನು ಆಚರಿಸಲಾಗುವುದು. ಈ ದಿನದ ಸಂದರ್ಭದಲ್ಲಿ 'ಮೂಕನಾಯಕ' ಎಂಬ ಪತ್ರಿಕೆಯ ವಿಶೇಷಾಂಕವನ್ನು ಹೊರತರಲು ಯೋಜಿಸಲಾಗಿದೆ. ಈ ಸಂಚಿಕೆಯಲ್ಲಿ ಮಾನ್ಯ ಮಹಾರಾಜರು ಫೋಟೋ ಮತ್ತು ನಿಮ್ಮ ಆಡಳಿತಾವಧಿಯಲ್ಲಿ ಮಾಡಿದ ಸಾಧನೆಗಳ ವಿವರಣೆಯಿರುವುದು. ವಾಸ್ತವಿಕವಾಗಿ, ಅಂತಹ ವಿವರಗಳ ಪಟ್ಟಿಯನ್ನು ಕಳುಹಿಸಿಕೊಡಿ ಎಂದು ನಾನು ಮನವಿ ಮಾಡಿಕೊಂಡಿದ್ದೆ. ಆದರೆ ತಮ್ಮ ಕಡೆಯಿಂದ ಇಂದಿನ ದಿನಾಂಕದವರೆಗೂ ಯಾವುದೇ ಪ್ರತ್ಯುತ್ತರವಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ. ಕೇವಲ ಕೆಲವೇ ದಿನಗಳು ಮಾತ್ರ ಉಳಿದಿರುವುದರಿಂದ ನಾನೇ ವೈಯಕ್ತಿಕವಾಗಿ ನಿಮ್ಮಲ್ಲಿಗೆ ಬಂದು

ಬೇಕಾಗಿರುವ ಮಾಹಿತಿಯನ್ನು ಸಂಗ್ರಹಿಸಲು ನಿರ್ಧರಿಸಿದ್ದೇನೆ. ಈ ಉದ್ದೇಶಕ್ಕಾಗಿ ಇಂದು ಸಂಜೆ ಹೊರಟು ಮಂಗಳವಾರ ಕೊಲ್ಹಾಪುರ ತಲುಪುವೆನು. ಮಹಾರಾಜರು ನನ್ನನ್ನು ನೋಡಲು ಅನುಗ್ರಹ ತೋರುವರೆಂದು ಭಾವಿಸುವೆ.

ಗೌರವಗಳೊಂದಿಗೆ
ನಿಮ್ಮ ವಿಶ್ವಾಸಿ
ಭೀಮರಾವ್ ಅಂಬೇಡ್ಕರ್

**(ಮನ್‌ಗಾವ್ ಸಮ್ಮೇಳನದ ವಿಶೇಷಾಂಕ)**

---

೧೪

# ಶಾಹುರವರು ಅಂಬೇಡ್ಕರರಿಗಾಗಿ ಪಿಯಾಸ್ ಅವರಲ್ಲಿ ವಿನಂತಿ

ಜೂನ್ ೨೩, ೧೯೨೦

*ಡಾ. ಅಂಬೇಡ್ಕರರು ಉನ್ನತ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಜುಲೈ ೨೦, ೧೯೨೦ರಲ್ಲಿ ಹೊರಟರು. ಶೈಕ್ಷಣಿಕ ಪ್ರಗತಿಯೊಂದಿಗೆ ಅವರು ಭಾರತದಲ್ಲಿ ಬ್ರಾಹ್ಮಣೇತರರ ಆಂದೋಲನ ಮತ್ತು ಹಿಂದುಳಿದ ವರ್ಗಗಳ ಬಗ್ಗೆ ಅನುಕೂಲಕರವಾದ ಅಭಿಪ್ರಾಯವನ್ನು ಮೂಡಿಸಲು ಇಂಗ್ಲೆಂಡಿನಲ್ಲಿ ಕೆಲವು ನಾಯಕರನ್ನು ಭೇಟಿ ಮಾಡಲು ಯೋಜನೆಯನ್ನು ಹಾಕಿಕೊಂಡಿದ್ದರು. ಮನಸ್ಸಿನಲ್ಲಿ ಈ ದೃಷ್ಟಿಯಿಟ್ಟುಕೊಂಡು ಶಾಹುರವರು ಅವರಿಗೆ ಇಂಗ್ಲೆಂಡಿನಲ್ಲಿ ನಾಯಕರಾಗಿರುವ ಹಾಗೂ ತಮ್ಮ ಸ್ನೇಹಿತರಾಗಿರುವ ಸರ್ ಆಲ್ಫ್ರೆಡ್ ಪಿಯಾಸ್ ಅವರನ್ನು ಪರಿಚಯ ಮಾಡಿಕೊಟ್ಟರು.*

---

ಕೊಲ್ಹಾಪುರದ ಛತ್ರಪತಿ ಮಹಾರಾಜರು

ಜೈ ಭವಾನಿ

ಕೊಲ್ಹಾಪುರ
ಜೂನ್ ೨೩, ೧೯೨೦

ನನ್ನ ಪ್ರೀತಿಯ ಸರ್ ಆಲ್ಫ್ರೆಡ್ ಪಿಯಾಸ್,

ಮಹರ್ ಸಮುದಾಯಕ್ಕೆ ಸೇರಿದ ನನ್ನ ಸ್ನೇಹಿತ ಡಾ. ಅಂಬೇಡ್ಕರರವರನ್ನು ತಮಗೆ ಪರಿಚಯ ಮಾಡಿಕೊಡುತ್ತಿದ್ದೇನೆ. ಅವರು ನ್ಯೂ ಯಾರ್ಕ್‌ನ ಕೊಲಂಬಿಯ ಯುನಿವರ್ಸಿಟಿಯ ಪಿಎಚ್.ಡಿ. ಪದವಿ ಪಡೆದವರು ಮತ್ತು ಬಾಂಬೆಯ ಸಿಡ್ನೆಹ್ಯಾಮ್ ವಾಣಿಜ್ಯ ಮತ್ತು ಅರ್ಥಶಾಸ್ತ್ರದ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದರು. ಅವರು ಇಂಗ್ಲೆಂಡಿನಲ್ಲಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಇನ್ಸ್ ಆಫ್ ಕೋರ್ಟ್‌ನಲ್ಲಿ ಅಧ್ಯಯನ ಮಾಡಲು ಬರುತ್ತಿದ್ದಾರೆ. ಅವರು ಹಿಂದುಳಿದ ವರ್ಗಗಳು ಮತ್ತು ಬ್ರಾಹ್ಮಣ ನೌಕರಶಾಹಿಯ ನಡುವೆಯಿರುವ ವ್ಯತ್ಯಾಸಗಳನ್ನು ನಿಮಗೆ ವಿವರವಾಗಿ ತಿಳಿಸುವರು. ನೌಕರಶಾಹಿ ಬ್ರಾಹ್ಮಣರು ತಮ್ಮನ್ನು ತಾವೇ ಜನತಾಂತ್ರಿಕ ಜನರೆಂದು ಹೇಳಿಕೊಳ್ಳುವ ಅವರ ಕೈಗಳಡಿಯಲ್ಲಿ ಎಂಥ ನೋವನ್ನು ಅನುಭವಿಬೇಕಾಗುತ್ತದೆಯೆಂಬುದನ್ನು ಅವರು ನಿಮಗೆ ವಿವರಿಸುವರು. ಭಾರತದ ಹಲವಾರು ಆಡಳಿತಗಳು ಬ್ರಾಹ್ಮಣೇತರರ ಕುಂದು–ಕೊರತೆಗಳನ್ನು ಕಿವಿ ಮೇಲೆ ಹಾಕಿಕೊಳ್ಳಲಿಲ್ಲ. ಆದರೆ ಅವರು ಬ್ರಿಟಿಷ್

ಸಾರ್ವಜನಿಕರಿಂದ ಸಹಾನುಭೂತಿ ಸಿಗಬಹುದೆಂಬ ಭರವಸೆಯನ್ನು ಹೊಂದಿದ್ದಾರೆ. ತಾವು ದಯವಿಟ್ಟು ಅಂಬೇಡ್ಕರರ ಮಾತುಗಳನ್ನು ಕಿವಿಕೊಟ್ಟು ಕೇಳಿ ಮತ್ತು ಸಾಧ್ಯವಾದರೆ ನೀವು ಅವರಿಗೆ ಸಹಾಯ ಮಾಡಿ ಎಂದು ನಾನು ನಿಮ್ಮನ್ನು ಕೋರುತ್ತೇನೆ.

ತೊಂದರೆ ಕೊಟ್ಟಿದ್ದಕ್ಕೆ ಕ್ಷಮೆಯಿರಲಿ, ನನ್ನನ್ನು ನಂಬಿ.

ತಮ್ಮ ವಿಶ್ವಾಸಿ
ಸಹಿ/– ಶಾಹು ಛತ್ರಪತಿ

**(ವಿಜಯ ಸುರವಾಡೆ ಸಂಗ್ರಹ)**

---

೧೫

# ಲೋಕಮಾನ್ಯ ತಿಲಕರ ಬಗ್ಗೆ ದಾವೆ ಹೂಡಲು ಶಾಹುರವರು ಅಂಬೇಡ್ಕರರಿಗೆ ಬರೆದ ಪತ್ರ

ಜುಲೈ ೮, ೧೯೨೦

*ಈ ಪತ್ರವು ಸ್ವಲ್ಪ ಇತಿಹಾಸವನ್ನು ಹೊಂದಿದೆ. ತಿಲಕರು ಮಹರರ ಸಮುದಾಯವನ್ನು ಒಂದು ಅಪರಾಧಿ ಪಂಗಡವೆಂದು ೧೯೨೦ರಲ್ಲಿ ಪ್ರಚಾರ ಮಾಡಿದರು. ಶಾಹುರವರು ಇದರಿಂದ ಅವರ ಮೇಲೆ ಒಂದು ನಾಗರಿಕ/ಅಪರಾಧಿ ದಾವೆ ಅವರ ವಿರುದ್ಧ ಹೂಡಬಹುದೇ ಎಂದು ಅಂಬೇಡ್ಕರರನ್ನು ಕೇಳಿದ್ದರು. ಈ ಪ್ರಯತ್ನಗಳು ಏನನ್ನು ಹೆಚ್ಚು ಸಾಧಿಸಲಾರವು ಎಂದು ಅಂಬೇಡ್ಕರರು ಅಭಿಪ್ರಾಯ ತಿಳಿಸಿದರು. (ವಾಸ್ತವಿಕವಾಗಿ, ಈ ಸಮಯದಲ್ಲಿ ಅವರು ಇಂಗ್ಲೆಂಡ್ ಪ್ರಯಾಣಕ್ಕೆ ಸಿದ್ಧತೆಗಳನ್ನು ನಡೆಸುತ್ತಿದ್ದರು. ಪ್ರತ್ಯುತ್ತರವು ಶಾಹುರವರ ತಂತ್ರವನ್ನು ತೋರಿಸುತ್ತದೆ. ಅಂಬೇಡ್ಕರರು ಬ್ರಾಹ್ಮಣರ ಯಜಮಾನಿಕೆಯ ವಿರುದ್ಧ ಹೋರಾಡುವ ದಮನಿತ ವರ್ಗಗಳ ಪ್ರತಿನಿಧಿಯೆಂದು ಇಂಗ್ಲೆಂಡಿನಲ್ಲಿ ಸುಪರಿಚಿತರಾಗಿದ್ದರು ಎಂಬುದು ಮುಖ್ಯವಾಗಿತ್ತು ಶಾಹುರವರಿಗೆ.*

---

ಕೊಲ್ಹಾಪುರ<br>೩/೮ ಜುಲೈ, ೧೯೨೦

ನನ್ನ ಪ್ರೀತಿಯ ಡಾ. ಅಂಬೇಡ್ಕರ್

ಹೋದ ತಿಂಗಳಿನ ೨೮ನೇ ತಾರೀಖಿನ ಪತ್ರಕ್ಕೆ ತುಂಬ ಧನ್ಯವಾದಗಳು. ಕಾನೂನು ಕ್ರಮಗಳು ಊರ್ಜಿತವಾಗಬಹುದು ಅಥವಾ ಆಗದಿರಬಹುದು, ಆದರೆ ಅವುಗಳನ್ನು ಕೈಗೊಂಡರೆ ಉತ್ತಮ. ಪರವಾಗಿಲ್ಲ. ಅದು ಮುಖ್ಯವಲ್ಲ. ಯಾರು ಈ ಪ್ರಸಿದ್ಧ ಕಾನೂನು ಕ್ರಮಗಳನ್ನು ಜರುಗಿಸಿದರು ಎಂದು ವಿಚಾರಿಸುವುದು ಮುಖ್ಯವಾಗಬೇಕಷ್ಟೇ.

ನಿಮ್ಮ ವಿಶ್ವಾಸಿ,<br>ಸಹಿ/- ಶಾಹು ಛತ್ರಪತಿ

(ಕೊಲ್ಹಾಪುರ ಪತ್ರಾಗಾರ, ಶಾಹು ದಫ್ತರ್, ಪತ್ರ ಆರ್-೧೨೦-೧೩೦)

---

೧೬

# ಲಠ್ಠೆಯವರಿಗೆ ಶಾಹುರವರ ಪತ್ರ

ಜುಲೈ ೨೭, ೧೯೨೦

*'ತಾರು ಬಳಿಯುವ' ಪ್ರಕರಣದಲ್ಲಿ ತಪ್ಪಾಗಿ ಅವರನ್ನು ದೋಷಾರೋಪಣೆ ಮಾಡಿದ ನಂತರ ಸತ್ಯಶೋಧಕದ ನಾಯಕ ಅಣ್ಣಾಸಾಹೇಬ ಬಾಬಾಜಿ ಲಠ್ಠೆ ಅವರು ಕೊಲ್ಹಾಪುರ ಸಂಸ್ಥಾನದಿಂದ ೧೯೧೪ರಲ್ಲಿ ಓಡಿಹೋಗಬೇಕಾಯಿತು. ಶಾಹುರವರು ಅವರ ಬಗ್ಗೆ ಇದ್ದ ಗೌರವವನ್ನು ಕಳೆದುಕೊಳ್ಳಲಿಲ್ಲ. ಲಠ್ಠೆ ಅವರು ದಮನಿತರ ಏಳಿಗೆಗಾಗಿ ತಮ್ಮ ಹೋರಾಟವನ್ನು ಮುಂದುವರಿಸಿದ್ದರು. ನಂತರ, ಲಠ್ಠೆ ಅವರು ತಮ್ಮ ಸಂಸ್ಥಾನದಲ್ಲೇ ಅನವಶ್ಯಕವಾಗಿ ಸಂಕಟಕ್ಕೊಳಗಾಗಿದ್ದಕ್ಕೆ ಶಾಹು ವಿಷಾದಿಸಿದರು. ಛತ್ರಪತಿಯವರು ಷರತ್ತುರಹಿತ ಕ್ಷಮಾಪಣೆಯ ಪತ್ರವನ್ನು ಲಠ್ಠೆ ಅವರಿಗೆ ಕಳುಹಿಸಿಕೊಟ್ಟರು ಮತ್ತು ಅವರ ಸಹಾಯವನ್ನು ಕೋರಿದರು. ಪಾರದರ್ಶಕ ರಾಜ ನಿಜವಾಗಿಯೂ ತೆರೆದ ಮನಸ್ಸಿನವರಾಗಿದ್ದರು.*

---

ಕೊಲ್ಹಾಪುರದ ಛತ್ರಪತಿ ಮಹಾರಾಜರು

ಜೈ ಭವಾನಿ

ಹುಬ್ಬಿ
೨೭, ಜುಲೈ ೧೯೨೦

ನನ್ನ ಪ್ರೀತಿಯ ಲಠ್ಠೆಯವರೇ,

ಅನುಮಾನವಿಲ್ಲದೆ ಕ್ಷಮಿಸಿದ್ದೀರಿ ಎಂಬ ಭರವಸೆಯಿಂದ ತಾವು ಕೊಲ್ಹಾಪುರದಲ್ಲಿ ಪಟ್ಟ ತೊಂದರೆಗಾಗಿ ನನ್ನನ್ನು ಕ್ಷಮಿಸಿ ಎಂದು ತಮ್ಮ ಅನುಮತಿಯನ್ನು ನಾನು ಕೋರುತ್ತಿದ್ದೇನೆ. ಸೋವನಿ, ಕರಮಾರ್‌ಕರ್, ಮ್ಹಾಯಿಷಿಕರ್, ಚಿಪ್ರಿಕರ್ ಪಾಟೀಲ್ ಕಲ್ಲಪ್ಪ ಮತ್ತು ಇತರರು ನನ್ನನ್ನು ದಾರಿ ತಪ್ಪಿಸಿದರು. ತಮ್ಮ ಕೃತ್ಯಗಳು ನನ್ನ ತಲೆ ತಗ್ಗಿಸಿದವು, ನಾನು ನಾಚಿಕೆಪಡುವಂತೆ ಮಾಡಿದವು. ಅದಕ್ಕಾಗಿ ಈ ಸಂಕೋಚವಿಲ್ಲದ ಕ್ಷಮಾಪಣೆ. ದಯಪಿಟ್ಟು ಬ್ರಾಹ್ಮಣನು ಒಬ್ಬ ಮನುಷ್ಯನ ಸ್ನೇಹಿತರು ಮತ್ತು ಸಂಬಂಧಿಕರು ತನ್ನೊಡನೆ ಕಾದಾಡುವಂತೆ ಮಾಡುತ್ತಾನೆಯೆಂಬುದನ್ನು ನೆನಪಿಡುವಂತೆ ಮಾಡುತ್ತದೆ. ನಮ್ಮ ಯಥಾಕಥಿತ ಸ್ನೇಹಿತರು ಕುಯುಕ್ತಿಗಳ ವಿರುದ್ಧ ಸಂರಕ್ಷಿಸಿಕೊಳ್ಳಲು ಮತ್ತು ತಪ್ಪುಗ್ರಹಿಕೆಯನ್ನು ತಪ್ಪಿಸಲು ನಾವು ಇನ್ನು ಮುಂದೆ ಎಚ್ಚರಿಕೆಯಿಂದ ಇರಬೇಕಾಗುತ್ತದೆ.

ನಿಮ್ಮ ಶ್ರೇಷ್ಠ ಮತ್ತು ಮಹಾಚಿಂತನೆಗಳು, ನಿಮ್ಮ ತೀವ್ರವಾದ ದೇಶಪ್ರೇಮ, ನಮ್ಮ ದೇಶದ ಧ್ಯೇಯಕ್ಕಾಗಿ ಕೆಲಸ ಮಾಡಲು ನೀವು ಸಿದ್ಧವಾಗಿರುವಿಕೆ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಬಡವರು ಮತ್ತು ಅನಾಥರಿಗಾಗಿ ಸಹಾಯ ಮಾಡುವ ನಿಮ್ಮ ತೀವ್ರ ತುಡಿತಗಳನ್ನು ಪರಿಗಣನೆಗೆ ತೆಗೆದುಕೊಂಡಾಗ ಯಾರು ತಾನೇ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುತ್ತಾರೆ?

ನಿಮ್ಮ ಅಚ್ಚುಮೆಚ್ಚಿನ ವಿಶ್ವಾಸಿ
ಶಾಹು ಛತ್ರಪತಿ

**(ಅಣ್ಣಾ ಸಾಹೇಬ ಲಠ್ಠೆಯವರಿಂದ: ಶ್ರೀ ಮದ್ವನ ಜೀವನ್ ವಾ ವಿರಚಿತ ಕಾರ್ಯ)**

---

೧೭

# ಶಾಹುರವರಿಗೆ ಲಠ್ಠೆಯವರ ಮಹಾ ಔದಾರ್ಯದ ಉತ್ತರ

ಜುಲೈ ೧೮, ೧೯೨೦

ಲಠ್ಠೆಯವರ ತಕ್ಷಣದ ಪ್ರತ್ಯುತ್ತರವು ಕೊಲ್ಹಾಪುರದ ಬಗ್ಗೆ ಅವರಿಗಿರುವ ಅಚಲನಿಷ್ಠೆ, ಶಾಹುರವರ ಬಗ್ಗೆ ಅವರಿಗಿರುವ ಗೌರವ ಮತ್ತು ಕೃತಜ್ಞತಾಭಾವ ಹಾಗೂ ಗತಕಾಲದ ಘಟನೆಗಳನ್ನು ಪರಿಶೀಲಿಸುವ ಅವರ ಅನಾಸಕ್ತ ಮನೋಭಾವಗಳನ್ನು ತೋರಿಸುತ್ತದೆ.

---

ಬೆಳಗಾಂ

೨೮/೭/೧೯೨೦

ಮಹಾರಾಜರ ಗಮನಕ್ಕೆ ಸಲ್ಲಿಸಲಾಗಿದೆ.

ತಮ್ಮ ಪತ್ರದಲ್ಲಿರುವ ಔದಾರ್ಯದ ಮಾತುಗಳ ಬಗ್ಗೆ ನಾನು ಪೂರ್ಣವಾಗಿ ಓದಿ ತಿಳಿದುಕೊಂಡಿಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ. ನಾನು ಕನಿಕರಗೊಂಡೆ. ವಾಸ್ತವಿಕವಾಗಿ ೧೯೧೪ರ ಕಹಿ ಮತ್ತು ದುರದೃಷ್ಟ ಘಟನೆಗಳನ್ನು ಮರೆಯಲು ನಾನು ಈಗಾಗಲೇ ನಿರ್ಧಾರಕ್ಕೆ ಬಂದಿದ್ದೇನೆ. ಮತ್ತು ಇದಕ್ಕಿಂತ ಮೊದಲಿದ್ದ ಉಲ್ಲಾಸಕರ ದಿನಗಳನ್ನು ನಾನು ನೆನಪಿಸಿಕೊಳ್ಳುತ್ತೇನೆ. ತಾವು ಛತ್ರಪತಿ ವಂಶಸ್ಥರ ವಾರಸುದಾರರು. ಈ ಬಂಧನದ ಎಳೆಯು ನನ್ನ ಅತಿಯಾದ ಕೋಪದ ಮತ್ತು ಆಕರ್ಷಕ ಕ್ಷಣಗಳಲ್ಲಿ ನನ್ನನ್ನು ಸಮತೋಲನಗೊಳಿಸುತ್ತದೆ.

ನಿನ್ನೆಯ ನಿಮ್ಮ ಪತ್ರವು ಮಮತೆಯ ನಿಮ್ಮ ಭಾವನೆಗಳು ನನ್ನನ್ನು ಮೂಕಗೊಳಿಸಿದವು. ಅದು (ಕ್ಷಮಾಪಣೆ) ಬೇಕಾಗಿರಲಿಲ್ಲ; ಆದರೆ ನೀವು ನನ್ನ ಬಗ್ಗೆ ಇಟ್ಟ ವಿಶ್ವಾಸಕ್ಕೆ ನಾನು ತುಂಬಾ ಆಭಾರಿಯಾಗಿದ್ದೇನೆ. ಆದರೆ ಅಂತಿಮವಾಗಿ ಮಹಾರಾಜರು ನನ್ನ ನಿಷ್ಠೆಯನ್ನು ಒಪ್ಪಿಕೊಂಡಿದ್ದಾರೆಯೆಂದು ನನಗೆ ಹೆಮ್ಮೆ ಮತ್ತು ಸಂತೋಷವಾಗುತ್ತಿದೆ.

ಪ್ರತ್ಯುತ್ತರದಲ್ಲಿ ನೀವು ನನ್ನ ಬಗ್ಗೆ ತೋರಿಸಿದ ಪ್ರೀತಿಯ ಸುರಿಮಳೆಗೆ ನಾನು ಎಂದೆಂದಿಗೂ ಯೋಗ್ಯನಾಗಿರಬೇಕು, ಮತ್ತು ಕೊಲ್ಹಾಪುರ ಸಿಂಹಾಸನದ ಸೇವೆಯಲ್ಲಿ ನನ್ನೆಲ್ಲಾ ಶಕ್ತಿ–ಸಾಮರ್ಥ್ಯಗಳನ್ನು ಬಳಸುವೆನೆಂದು ಮಾತ್ರ ನಾನು ಹೇಳಬಲ್ಲೆ.

೧೯೧೪ರ ದುರದೃಷ್ಟದ ಘಟನೆಗಳ ಬಗ್ಗೆ ಮಹಾರಾಜರೊಡನೆ ನನಗೆ ಯಾವ

ಭಿನ್ನಾಭಿಪ್ರಾಯಗಳಿಲ್ಲವೆಂದು ಅಥವಾ ಮಹಾರಾಜರೊಂದಿಗೆ ಯಾವುದೇ ಭಿನ್ನಾಭಿಪ್ರಾಯಗಳನ್ನು ಹೊಂದಿರಲಿಲ್ಲವೆಂದು ನಿರೂಪಿಸಲು ನಾನು ಯಾವುದೇ ಪ್ರಯತ್ನ ಮಾಡುವುದಿಲ್ಲ. ಎಲ್ಲಾ ಮಾನವರ ದುಃಖಗಳು ಮತ್ತು ಪರಮಾನಂದಗಳು ಬದಲಿಸಲಾರದ ಶಕ್ತಿಗಳ (ನಿಯತ) ಪರಿಣಾಮಗಳೆಂದು, "ನಿಷ್ಠೆ"ಯ ಶಾಶ್ವತವಾದ ಗುಣಕ್ಕೆ ನಾನು ಬದ್ಧನಾಗಿರಲು ನಿರ್ಧರಿಸಿದ್ದೇನೆಂದು ಮಹಾರಾಜರಿಗೆ ವಿಶ್ವಾಸಪೂರ್ವಕವಾಗಿ ವಚನವನ್ನು ನೀಡುತ್ತೇನೆ. ಸ್ನೇಹದ ಭಾವನೆಯು ಸಮಾನತೆಯನ್ನು ಒಳಗೊಂಡಿರುತ್ತದೆ. ನೀವು ನಿಮ್ಮ ಸ್ನೇಹತ್ವವನ್ನು ನನಗೆ ಹೊರಿಸುತ್ತಿದ್ದೀರಿ, ಆದರೂ ನಾನು ಆ ಗೌರವವನ್ನು ವಹಿಸಿಕೊಳ್ಳಲು ಯೋಗ್ಯನೇ ಎಂದು ನಾನು ಭಾವಿಸುವುದಿಲ್ಲ. ನನ್ನ ಸೇವೆಗಳು ಯಾವಾಗ ಅಗತ್ಯವೆನಿಸುವುದೋ ಆಗ ಅವರು ನನಗೆ ಅಪ್ಪಣೆ ಕೊಡಬೇಕೆಂದು ನಾನು ಮಹಾರಾಜರಲ್ಲಿ ವಿನಂತಿಸುತ್ತೇನೆ. ನಾನು ನನ್ನ ಸೇವೆಯಲ್ಲಿ ಮಹಾರಾಜರ ಪಾದಾರವಿಂದಗಳಿಗೆ ಉತ್ಸಾಹಭರಿತನಾಗಿ ಅರ್ಪಿಸುವೆನು. ನನ್ನ ಮನಸ್ಸಿನಲ್ಲಿ ಯಾವುದೇ ಅಳುಕಿಲ್ಲದೆ ನಾನು ಈ ಪತ್ರವನ್ನು ಬರೆಯುತ್ತಿದ್ದೇನೆ.

ನಿಮ್ಮ ವಿಶ್ವಾಸಿ
ಬಿ. ಲಠ್ಠೆ

**(ಅಣ್ಣಾ ಸಾಹೇಬ ಲಠ್ಠೆ ಜೀವನ ವಾ ಕಾರ್ಯ)**

(ಮೂಲಪತ್ರವು ಇಂಗ್ಲಿಷಿನಲ್ಲಿತ್ತು. ಶ್ರೀಮದ್ವನ ಅವರು ಅದನ್ನು ತಮ್ಮ ಪುಸ್ತಕಕ್ಕೆ ಮರಾಠಿಗೆ ಅನುವಾದಿಸಿದ್ದಾರೆ. ಕೊಲ್ಹಾಪುರದ ಪತ್ರಾಗಾರದಲ್ಲಿ ಮೂಲಪತ್ರವು ಕಂಡುಬರುತ್ತಿಲ್ಲ.)

---

೧೮

# 'ಲೋಕಮಾನ್ಯ' ಅಂಬೇಡ್ಕರರಿಗೆ ಶಾಹುರವರ ಪತ್ರ

ವರ್ಷ ೧೯೨೦

ಶಾಹುರವರು ಮನ್‌ಗಾವ್ ಸಮ್ಮೇಳನದ ನಂತರ (ಮಾರ್ಚ್ ೧೯೨೦) ಮತ್ತು ಡಾ. ಅಂಬೇಡ್ಕರರು ಇಂಗ್ಲೆಂಡಿನ ಪ್ರವಾಸಕ್ಕಿಂತ ಮೊದಲು (ಜುಲೈ, ೧೯೨೦) ಅಂಬೇಡ್ಕರರಿಗೆ ಬರೆದ ಪತ್ರವು ಇಲ್ಲಿ ಅತಿ ಮುಖ್ಯವಾದುದು. ಇಲ್ಲಿ ದಿನಾಂಕವನ್ನು ನಮೂದಿಸಿಲ್ಲ. ಇಲ್ಲಿ ಅವರನ್ನು ಸಂಬೋಧಿಸುವಾಗ ಶಾಹುರವರು 'ಲೋಕಮಾನ್ಯ' ಎಂಬ ಬಿರುದನ್ನು ಡಾ. ಅಂಬೇಡ್ಕರರಿಗೆ ತಿಲಕರು ಬದುಕಿರುವಾಗಲೇ ನೀಡಿದರು. ಡಾ. ಅಂಬೇಡ್ಕರರು ಅಸ್ಪೃಶ್ಯರ ನಾಯಕರಾಗಿ ಬೆಳೆಯುವುದು ಮಾತ್ರವಲ್ಲದೇ, ಅವರು ಭಾರತದ ಹಿಂದುಳಿದ ವರ್ಗಗಳ ನಾಯಕರಾಗುವರೆಂಬ ಶಾಹುರವರ ಆಶಾವಾದವನ್ನು ಒತ್ತಿಹೇಳುತ್ತದೆ. ಅದು ಅಂಬೇಡ್ಕರರಲ್ಲಿರುವ ಗುಣಗಳ ಬಗ್ಗೆ ಶಾಹುರವರಿಗೆ ಇರುವ ವಿಶ್ವಾಸವನ್ನು ಪ್ರತಿಬಿಂಬಿಸುತ್ತದೆ. ಶಾಹುರವರು ನಿಜವಾದ ದ್ರಷ್ಟಾರರಾಗಿದ್ದರು.

---

'ಲೋಕಮಾನ್ಯ' ಅಂಬೇಡ್ಕರರಿಗೆ

ಅಸ್ಪೃಶ್ಯರ ಸಮುದಾಯದ ಬಗ್ಗೆ ಬರೆಯಲೇಬೇಕೆಂದು ನಾನು ಸದಾ ಚಿಂತಿಸುತ್ತಿದ್ದೆ. ಇಂದು ನಾನು ಪತ್ರವನ್ನು ಬರೆಯುತ್ತಿದ್ದೇನೆ. ತಾವು ಅದನ್ನು ಓದಿದ ಮೇಲೆ ನೀವು ನನಗೆ ಹೃದಯಪೂರ್ವಕವಾಗಿ ಸಹಾಯ ಮಾಡುವಿರಿ ಎಂದು ನಾನು ಪ್ರಾಮಾಣಿಕವಾಗಿ ಭಾವಿಸುತ್ತೇನೆ.

ತಡವಾಗಿ, ಅಸ್ಪೃಶ್ಯ ಜನರು ತಮ್ಮ ಸ್ಫೂರ್ತಿಯನ್ನು ಕಳೆದುಕೊಂಡರು ಮತ್ತು ವಿಶೇಷವಾಗಿ ಮಹರರು ತಮ್ಮ ಎಲ್ಲಾ ಆತ್ಮಗೌರವವನ್ನು ಕಳೆದುಕೊಂಡರು. ಬೇರೆ ಮಾನವರಂತೆಯೇ ತಾವು ಮಾನವರೆಂಬುದು ಅವರ ಮನಸ್ಸಿಗೇ ಹೊಳೆಯುವುದಿಲ್ಲ. ಈ ಚಿಂತನೆಯು ನನ್ನನ್ನು ಬಹಳ ಕಾಡಿತು. ಈ ಆಲಸ್ಯಕ್ಕೆ ಪ್ರಮುಖ ಕಾರಣ ಶಿಕ್ಷಣದ ಕೊರತೆಯೆಂದು ನಾನು ಯೋಚಿಸಿದೆ. ಯಾರೂ ಸಹ ಅವರನ್ನು ವಿದ್ಯಾವಂತರನ್ನಾಗಿ ಮಾಡಲು ಇಚ್ಛಿಸುತ್ತಿಲ್ಲ. ಕೆಲವು ಪರೋಪಕಾರಿ ದಾನಿಗಳು ಅವರಿಗೆ ಸಹಾಯಹಸ್ತ ನೀಡಿದರೆ ಅದನ್ನು ಹಿಡಿಯಲು ಸಿದ್ಧರಾಗಿಲ್ಲ.

ಒಮ್ಮೆ ನಾನು ಮಹರ್ ಸಹೋದರರನ್ನು ನನ್ನ ಬಳಿಗೆ ಎಲ್ಲರನ್ನೂ ಕರೆದೆ. ನನ್ನ ಕಾರಿನಲ್ಲಿ ಅವರನ್ನು ತಿರುಗಾಡಿಸಿದೆ; ಆಶ್ಚರ್ಯಕರವಾಗಿ ಅವರು ನನ್ನ ಮಮತೆಯನ್ನು ಅರ್ಥಮಾಡಿಕೊಳ್ಳಲೇ ಇಲ್ಲ.

ಬದಲಿಗೆ, ಅವರು ಒಂದೇ ಸಮನೆ, "ಬೇಡ, ಬೇಡ! ದಯವಿಟ್ಟು ಹತ್ತಿರ ಬರಬೇಡಿ" ಎಂದು ಹೇಳತೊಡಗಿದರು. ನಾನು ಏನೋ ಅಪರಾಧ ಮಾಡಿದವನಂತೆ. ಅಂತಹ ವರ್ತನೆಗೆ ಕಾರಣವೇನು? ಬ್ರಾಹ್ಮಣರ ಸರ್ವಾಧಿಕಾರಿ ಆಡಳಿತಶಾಹಿ ಮತ್ತು ನಿರೂಪಿಸಿರುವ ವ್ಯವಸ್ಥೆ.

ವತನದ ಭೂಮಿ ಎಲ್ಲಾ ಮಹರ್ ಸಮುದಾಯಕ್ಕೆ ಸೇರಿದ್ದು (ಸಮಸ್ತ ಮಹರ್) ಎಂಬ ಟಿಪ್ಪಣಿಯನ್ನು ಹೊಂದಿರುವ ಮಹರ್ ವತನದ ದಾಖಲೆಗಳಿವೆ. ೧೦೦-೧೫೦ ಮಹರರು ಕೇವಲ ೧೦-೨೦ ಎಕರೆ ಭೂಮಿಯನ್ನು ತಮ್ಮಲ್ಲಿ ಹಂಚಿಕೊಳ್ಳುವುದಕ್ಕೆ ಪಡೆಯುತ್ತಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವರ ಪ್ರತಿಯೊಂದು ಕುಟುಂಬವೂ ೨-೪ ಆರಗಳಷ್ಟು ಭೂಮಿಯನ್ನು ಪಡೆಯುತ್ತಾರೆ, ಅದರಿಂದ ಅವರ ಸದೃಢ ಜೀವನೋಪಾಯ ನಡೆಸಲು ಬಹು ಕಷ್ಟ.

ಆದರೆ ಈ ಪರಿಸ್ಥಿತಿಯು ಜೋಷಿಗಳು ಮತ್ತು ಕುಲಕರ್ಣಿಗಳ ವತನ್ ಭೂಮಿಗಳಲ್ಲಿ ಕಂಡುಬರುವುದಿಲ್ಲ. ಕೇವಲ ೫-೬ ಆರಗಳ ಜಮೀನಿಗಾಗಿ ಇಡೀ ಒಂದು ಮಹರ್ ಕುಟುಂಬದ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದೆ. ಇದರ ಜೊತೆಗೆ ಅವರು 'ಬಲೂತೆ'ಯ ಹೆಸರಿನಲ್ಲಿ ದೊಡ್ಡ ಸಮೂಹದ ಸೇವೆಯನ್ನು ಮಾಡಬೇಕಾಗಿದೆ. ಅವರು ಕೇವಲ ಸ್ವಲ್ಪವನ್ನೇ ಗಳಿಸಿದರೂ ಕುಲಕರ್ಣಿಗಳು ಮತ್ತು ಪಾಟೀಲರು ಅವರನ್ನು ಮತ್ತಷ್ಟು ದುಡಿಸಿಕೊಳ್ಳುತ್ತಾರೆ. ನಂತರ ಅವರ ಸ್ನೇಹಿತರು, ಕಂದಾಯ, ಶಿಕ್ಷಣ ಇಲಾಖೆಗಳಲ್ಲಿರುವ ಜನರು ಮತ್ತು ವಕೀಲರು- ಇವರೆಲ್ಲರೂ ಅವರಿಂದ ಬಲೂತೆಯ ಹೆಸರಿನಲ್ಲಿ ಯಥೇಚ್ಛ ಕೆಲಸವನ್ನು ಮಾಡಿಸಿಕೊಳ್ಳುತ್ತಾರೆ. ಚಪ್ಪಲಿಗಳನ್ನು ಹೊಲಿಸಿಕೊಳ್ಳುತ್ತಾರೆ, ಹಗ್ಗಗಳನ್ನು ಹೊಸೆಸಿಕೊಳ್ಳುತ್ತಾರೆ.

ಈ ದಿನಗಳಲ್ಲಿ ವಕೀಲರು ಮತ್ತು ಜೋತಿಷ್ಕರು ಪುಣೆಯಲ್ಲಿ ವಾಸಿಸುತ್ತಾರೆ. ಅವರ ಎಸ್ಟೇಟುಗಳು ಹಳ್ಳಿಗಳಲ್ಲಿವೆ. (ಕೊಲ್ಹಾಪುರ ಸಮೀಪ) ಮಾನ್ಯ ವಕೀಲರೊಬ್ಬರು ಮಹರರಿಂದ ಈ ಸ್ಥಳಗಳಲ್ಲಿ ಉಚಿತ ಶ್ರಮಜೀವಿಗಳು ಸಿಗುತ್ತಾರೆ. ಇದರ ಜೊತೆಗೆ ವಕೀಲರು ಈ ಕರುಣಾಜನಕ.... (ಅಪೂರ್ಣ) ಮುಕ್ತವಾಗಿ ಶೋಷಿಸುತ್ತಾರೆ.

**(ವಿಜಯಿ ಸುರ್ವಾಡೆ ಸಂಗ್ರಹ)**

---

೧೯

# ಶ್ರೀಧರ ತಿಲಕರಿಗೆ ಶಾಹುರವರ ಪತ್ರ

ಜುಲೈ ೩೦, ೧೯೨೦

*ಶಾಹುರವರು ತಿಲಕರು ಕೊನೆಯಲ್ಲಿ ರೋಗಪೀಡಿತರಾಗಿರುವಾಗ ಅವರ ಮಗ ಶ್ರೀಧರ ತಿಲಕರಿಗೆ ಸಂಬೋಧಿಸಿ ಪತ್ರ ಬರೆಯುತ್ತಾರೆ. ಶಾಹುರವರು ಬಹಿರಂಗವಾಗಿ ಪತ್ರ ಬರೆಯುವಾಗ ಬ್ರಿಟಿಷರ ಕೋಪವನ್ನು ತಮ್ಮ ಮೇಲೆ ಹಾಕಿಕೊಳ್ಳುವ ಅಪಾಯಕ್ಕೆ ತೊಡಗುತ್ತಾರೆ. ಶಾಹುರವರು ತಮ್ಮ ಅಂತರಾಳದಲ್ಲಿ ತಿಲಕರ ಬಗ್ಗೆ ಸದಾ ಮಹಾಮಮತೆ ಮತ್ತು ಗೌರವವನ್ನು ಹೊಂದಿದ್ದರು.*

---

ಕೊಲ್ಹಾಪುರದ ಛತ್ರಪತಿ ಮಹಾರಾಜ

ಜೈ ಭವಾನಿ

ಸ್ಟೇಷನ್ ಬಂಗ್ಲೋ
ಕೊಲ್ಹಾಪುರ
೩೦/೦೭/೨೦

ಶ್ರೀಧರಪಂತ ತಿಲಕರಿಗೆ,

ಲೋಕಮಾನ್ಯ ತಿಲಕರ ಅನಾರೋಗ್ಯದ ಸುದ್ದಿ ತಿಳಿದು ನನ್ನ ಮನಸ್ಸಿಗೆ ನೋವಾಯಿತು. ಅವರ ಅನಾರೋಗ್ಯದ ಬಗ್ಗೆ ನನಗೆ ತಂತಿಯ ಮೂಲಕ ದಿನವೂ ಮಾಹಿತಿಯನ್ನು ತಿಳಿಸುತ್ತಿರಬೇಕೆಂದು ನಾನು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ. ನನ್ನ ಅಭಿಪ್ರಾಯದಲ್ಲಿ ಅವರನ್ನು ಸುಮಧುರವಾದ ಪರಿಸರದಲ್ಲಿಡುವುದು ಉತ್ತಮ. ಅವರ ಮೀರಜ್‌ನಲ್ಲಿರುವ ನನ್ನ ಬಂಗ್ಲೆಯಲ್ಲಿ ತಂಗಬಹುದು. ಅವರು ಇಲ್ಲಿ ಬಂದರೆ ನುರಿತ ವೈದ್ಯರಾದ ವೈಲ್ ಮತ್ತು ವೇನ್‌ಲೆಸ್ ಅವರು ಖಂಡಿತವಾಗಿ ಅವರ ಆರೋಗ್ಯದ ಸುಧಾರಣೆಗೆ ಸಹಾಯ ಮಾಡಿಯೇ ಮಾಡುತ್ತಾರೆ. ನಾನು ಶ್ರೀ ತೋಫಖಾನೆ, ಶ್ರೀವಿಚಾರೆ ಮತ್ತು ಶ್ರೀ ಪೋಂಕ್ಷೆ ಅವರನ್ನು ನಿಮ್ಮ ಬಳಿಗೆ ಕಳುಹಿಸಿದ್ದೇನೆ.

ಶಾಹು ಛತ್ರಪತಿ
(ಸಹಿ/- ಮೋಡಿ ಅಕ್ಷರಗಳಲ್ಲಿ)

(ಜಯಂತ್‌ರಾವ್ ತಿಲಕ್ ಸಂಗ್ರಹ)

೨೦

# ಬ್ರಾಹ್ಮಣ- ಬ್ರಾಹ್ಮಣೇತರರ ಸಂಘರ್ಷ ಮತ್ತು ಸತ್ಯಶೋಧಕ ಜಲಸಾ

ಶಾಹುರವರ ಪತ್ರ ಶ್ರೀ ಆಡಂ ಅವರಿಗೆ

ಆಗಸ್ಟ್ ೨೦, ೧೯೨೦

*ಬಾಂಬೆ ಪ್ರಾಂತ್ಯದ ಒಬ್ಬ ಬ್ರಿಟಿಷ್ ಪತ್ರಾಂಕಿತ ಅಧಿಕಾರಿಯಾದ ಶ್ರೀ ಆಡಂ ಅವರಿಗೆ ಈ ಪತ್ರವನ್ನು ಬರೆದದ್ದು, ಶಾಹುರವರು ಅದರಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡುತ್ತಾರೆ. ಈ ಕಾಲಮಾನದಲ್ಲಿ ಬ್ರಾಹ್ಮಣೇತರರ ಆಂದೋಲನವು ತುತ್ತತುದಿಗೇರಿತ್ತು. ಬ್ರಾಹ್ಮಣ ನಾಯಕತ್ವ ಮತ್ತು ಬ್ರಾಹ್ಮಣ ಪತ್ರಿಕೆಗಳು ಶಾಹುರವರ ಮೇಲೆ ಹಿಗ್ಗಾಮುಗ್ಗಾ ದಾಳಿ ಮಾಡುತ್ತಿದ್ದವು. ಪರಿಷತ್ತಿನ ಚುನಾವಣೆಗಳನ್ನು ಘೋಷಿಸಿದ ಕಾಲವಾಗಿತ್ತು ಮತ್ತು ಚುನಾವಣಾ ಪ್ರಚಾರವು ತುತ್ತತುದಿಗೇರಿತ್ತು. ಸತ್ಯಶೋಧಕ ಸಮಾಜದ ಜಲಸಾಗಳು (ಸಂಗೀತದ ಕಾರ್ಯಕ್ರಮಗಳು) ಸಾಕಷ್ಟು ಕೋಲಾಹಲ ಎಬ್ಬಿಸಿದ್ದವು. ಲೋಕಮಾನ್ಯ ತಿಲಕರ ಮರಣವು ಇತ್ತೀಚಿನ ಒಂದು ಘಟನೆಯಾಗಿತ್ತು. ಮತ್ತು ಮಹಾರಾಷ್ಟ್ರದ ಸಾಮಾಜಿಕ-ರಾಜಕೀಯ ವೈಶಿಷ್ಟ್ಯಗಳು ಸಂಕ್ಷೋಭೆಯಲ್ಲಿದ್ದವು. ಈ ಪತ್ರವನ್ನು ಈ ಹಿನ್ನೆಲೆಯಲ್ಲಿ ಪರಿಗಣಿಸಬೇಕಾಗಿದೆ.*

---

ಕ್ಯಾಂಪ್ ರಾಯ್‌ಬಾಗ್
೨೦ ಆಗಸ್ಟ್, ೧೯೨೦

ನನ್ನ ಪ್ರೀತಿಯ ಶ್ರೀ ಆಡಂ ಅವರೇ,

ಬಾಂಬೆಯ 'ಸಂದೇಶ' ಪತ್ರಿಕೆಯು ಪ್ರಕಟಿಸಿದ ಒಂದು ಚಿತ್ರದ ಒಂದು ಪ್ರತಿಯನ್ನು ಈ ಮೂಲಕ ಕಳುಹಿಸಿಕೊಡುತ್ತಿರುವೆನು. ಚಿತ್ರವು ತಿಲಕರನ್ನು 'ಶ್ರೀಕೃಷ್ಣ'ನ ಮುಂದೆ ಭಾರತವು ಅರ್ಜುನನ ರೂಪವಾಗಿ ಮೊಣಕಾಲು ಊರಿ ಬೇಡಿಕೊಳ್ಳುವವನ (ಪ್ರಾರ್ಥಕ) ಭಂಗಿಯಲ್ಲಿ ತೋರಿಸಲಾಗಿದೆ. 'ಶ್ರೀಕೃಷ್ಣ' ಮತ್ತು 'ಅರ್ಜುನ' ಇವರಿಬ್ಬರೂ ಕ್ಷತ್ರಿಯರೆಂಬುದು ಎಲ್ಲರಿಗೂ ಗೊತ್ತಿದೆ. ಇಂದಿನ ಕ್ಷತ್ರಿಯರ (ಮರಾಠರ) ಪೂರ್ವಜರು ಇವರಿಬ್ಬರು ಕ್ಷತ್ರಿಯರು ನಮ್ರವಾಗಿ ಬ್ರಾಹ್ಮಣನ ಮುಂದೆ ತಲೆಬಾಗುವುದು ಸಹಜವಾಗಿ ಸಂಪೂರ್ಣವಾಗಿ ಕ್ಷತ್ರಿಯ ಮರಾಠರ ಭಾವನೆಗಳಿಗೆ ಅವಮಾನ ಮಾಡಿದಂತೆಯೇ ಬ್ರಾಹ್ಮಣರು ತಮ್ಮ ನಾಯಕನನ್ನು ಆಕಾಶದ ಎತ್ತರಕ್ಕೆ ಏರಿಸಿದರೆ ಯಾರೂ ಆಕ್ಷೇಪ ಮಾಡುವುದಿಲ್ಲ, ಆದರೆ ಅವರು ಅಂತಹ ಕುಚೇಷ್ಟೆಗಳನ್ನು ಮಾಡಬಾರದಾಗಿತ್ತು, ಆದರೆ ಅಂಥ ಕುಚೇಷ್ಟೆಗಳು ಯುದ್ಧವೀರರ ಸಮುದಾಯದ

ಭಾವನೆಗಳಿಗೆ ನೋವುಂಟುಮಾಡಿದಂತಾಗುತ್ತದೆ. ಆದರೆ ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರು ಬ್ರಾಹ್ಮಣೇತರರ ಮೇಲೆ ನಿರಂತರವಾದ ಸಾಮಾಜಿಕ ಮತ್ತು ಧಾರ್ಮಿಕ ಹಿಡಿತವನ್ನು ಹೊಂದಿದ್ದಾರೆಂಬ ಪ್ರಜ್ಞೆಯನ್ನು ಅವರ ಮನಸ್ಸಿನ ಮೇಲೆ ಮೂಡಿಸುವ ಸಲುವಾಗಿಯೇ ಈ ನಿದರ್ಶನದಲ್ಲಿ ಹೊಸ ಚಿತ್ರವನ್ನು ನೀಡಲು ಕುಯುಕ್ತಿಯ ಬ್ರಾಹ್ಮಣರು ಪ್ರಯತ್ನಿಸುತ್ತಿದ್ದಾರೆ. ಅಂತಹ ಚಿತ್ರಗಳನ್ನು ಖಂಡಿಸಲೇಬೇಕಾಗುತ್ತದೆ. ತಿಲಕರನ್ನು ದೈವೀಕರಿಸುವುದು ಮತ್ತು ಕೃಷ್ಣ–ತಿಲಕರನ್ನಾಗಿ ಮಾಡಿ ತಿಲಕರಿಗೆ ತಮ್ಮ ನಿಷ್ಠೆಗಳನ್ನು ತೋರಿಸುವುದರಲ್ಲಿ ಮಂದಿ ಸಹ ಈ ಹೀನಕೃತ್ಯದಲ್ಲಿ ಸೇರಿಕೊಂಡಿದ್ದಾರೆ. ಈ ಹೀನಕೃತ್ಯವು ಶ್ರೀಕೃಷ್ಣನನ್ನೇ ಅವಮಾನಗೊಳಿಸಿದಂತಾಗುತ್ತದೆ. ಇದನ್ನು ವೇದಿಕೆಯ ಮೇಲೆ ಅಭಿನಯಿಸಿದರೆ ಜೀಸಸ್ ಕ್ರೈಸ್ತ ಮತ್ತು ಪೈಗಂಬರರಿಗಿಂತ ಹೀನವಾದುದಾಗುತ್ತದೆ. ಬಾಂಬೆ ಮತ್ತು ಪುಣೆಯಲ್ಲಿ ತಿಲಕರ ಅಂತಿಮ ಸಂಸ್ಕಾರದ ಮೆರವಣಿಗೆಯಲ್ಲಿ ಅವರ ಅನುಯಾಯಿಗಳಾದ ಅನುಚರರು ಎಸಗಿದ ಪುಂಡಾಟಿಕೆಯ ಕೃತ್ಯಗಳು ಎಲ್ಲರಿಗೂ ತಿಳಿದ ವಿಷಯವೇ. ಅವರು ಬ್ರಾಹ್ಮಣೇತರರ ಹಿಂದುಗಳನ್ನು ಬಲಾತ್ಕಾರ ಮಾಡಿದ್ದಲ್ಲದೆ, ಯೂರೋಪಿಯನ್ನರ ಸೈನಿಕರು ಮತ್ತು ಮಹಿಳೆಯರು ತಮ್ಮ ಟೋಪಿ, ಪೇಟಗಳನ್ನು ಮತ್ತು ಹ್ಯಾಟುಗಳನ್ನು ಒತ್ತಾಯಪೂರ್ವಕವಾಗಿ ತೆಗೆಸಿ ತಿಲಕರಿಗೆ ಗೌರವ ಸಲ್ಲಿಸುವಂತೆ ಮಾಡಿದರು. ತಿಲಕರು ಮಾತ್ರ ಭಾರತವನ್ನು ಆಳಿದರು, ಬ್ರಿಟಿಷರಲ್ಲ ಎಂಬ ಸಂದೇಶವನ್ನು ಜನರಿಗೆ ತಲುಪಿಸುವುದಕ್ಕಾಗಿ ಇದನ್ನು ಎಸಗಿದರು. ಬ್ರಾಹ್ಮಣೇತರರು ಹುಬ್ಬಿಯಲ್ಲಿ ರಾಜಕೀಯ ಸಮ್ಮೇಳನ ನಡೆಸಿದ್ದಕ್ಕಾಗಿ ಅವರು ಮೂರು ನಂದಿಗಳನ್ನು ಧ್ವಂಸ ಮಾಡಿದರು. (ಲಿಂಗಾಯತರ ಪವಿತ್ರ ಹೋರಿಗಳ ದೇವರು) ಮತ್ತು ಬ್ರಾಹ್ಮಣೇತರರ ಕೆಲವು ಅಂಗಡಿಗಳಿಗೆ ಬೆಂಕಿ ಹಚ್ಚಿದರು. ಹೀಗೆ ಆಗಾಗ ಬ್ರಾಹ್ಮಣರು ತಮ್ಮ ಅವಕಾಶಗಳನ್ನು ಕಳೆದುಕೊಳ್ಳದೆ ತಮ್ಮ ಸಾಮಾಜಿಕ ಮತ್ತು ರಾಜಕೀಯ ಶ್ರೇಷ್ಠತೆಯನ್ನು ಬ್ರಾಹ್ಮಣೇತರರ ಮನಸ್ಸುಗಳ ಮೇಲೆ ಛಾಪು ಮೂಡಿಸುತ್ತಿದ್ದರು. ಈ ಕ್ರಮವು ಉನ್ನತವರ್ಗವಾದ ಕ್ಷತ್ರಿಯರಿಗೆ ಕೋಪ ಮತ್ತು ಕಿರಿಕಿರಿಯಾಗುತ್ತಿತ್ತು. 'ಲೋಕಸಂಗ್ರಹ' ಪತ್ರಿಕೆಯು ಒಂದು ಸಾರ್ವಜನಿಕ ಸಮಸ್ಯೆಯನ್ನಾಗಿ ಉದ್ದೀಪಿಸಲು ಮತ್ತು ನನ್ನ ಗೌರವವನ್ನು ಹರಾಜಿಗೆ ಹಾಕುವ ಸಲುವಾಗಿ ನನ್ನ ಕುಟುಂಬ ದೇವತೆಗಳ ಬಗ್ಗೆ ಹೊರಡಿಸಿದ ನನ್ನ ಖಾಸಗಿ ಆಜ್ಞೆಯನ್ನು ಕದ್ದು ಉದ್ದೇಶಪೂರ್ವಕವಾಗಿ ಕುಚೇಷ್ಟೆಗಾಗಿ ಪ್ರಕಟಿಸಿದ್ದಾರೆ. ಬ್ರಾಹ್ಮಣರು ಲೆಕ್ಕಾಚಾರದ ರೀತಿಯಲ್ಲಿ ಬ್ರಾಹ್ಮಣೇತರರನ್ನು ರೇಗಿಸುವ ಸಲುವಾಗಿ ಇಷ್ಟೆಲ್ಲಾ ಕುಚೇಷ್ಟೆಗಳನ್ನು ಮಾಡುತ್ತಿದ್ದರೂ ಸರಕಾರ ಸುಮ್ಮನೆ ಕುಳಿತಿದೆ ಎಂಬ ಭಾವನೆ ಬ್ರಾಹ್ಮಣೇತರರ ಮನಸ್ಸಿನಲ್ಲಿ ಮೂಡುತ್ತಿದೆ. ಶ್ರೇಷ್ಠ ಮತ್ತು ಘನ ವಿಕ್ಟೋರಿಯ ಮಹಾರಾಣಿಯವರು ನಿರೂಪಿಸಿರುವ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳಲ್ಲಿ ಹಸ್ತಕ್ಷೇಪ ಮಾಡುವುದಿಲ್ಲ ಅಥವಾ ಭಿನ್ನ ಸಮುದಾಯಗಳ ನಡುವಣ ತಕ್ಕಡಿಯನ್ನು ಸಮತೋಲನವಾಗಿ ಹಿಡಿದುಕೊಳ್ಳುವುದಿಲ್ಲ ಎಂಬ ಧೋರಣೆಗೆ ಅನುಗುಣವಾಗಿದೆಯೆಂಬುದು ನನಗೆ ತಿಳಿಯುತ್ತಿಲ್ಲ. ನಾನು ಇತ್ತೀಚೆಗೆ ಪೂನಾದಲ್ಲಿರುವ ಮಾನ್ಯರಾದ ಮಾಂಟೆಗ್ಯುಮರಿಯವರನ್ನು ಭೇಟಿ ಮಾಡಿದಾಗ ನಾನು ಪಾಸು ಮಾಡಿದ ಆಜ್ಞೆಯ ಸನ್ನಿವೇಶಗಳನ್ನು ವಿವರಿಸುವ ಒಂದು ಪತ್ರವನ್ನು ಮಾನ್ಯರಿಗೆ ನೀಡಿದ್ದೇನೆ. ಅದರ ನಕಲಿನ ಪ್ರತಿ ನನ್ನ ಬಳಿ ಇದೆ. ನಾನು ಪೂನಾದಲ್ಲಿರುವಾಗ ಮಾನ್ಯರನ್ನು ಭೇಟಿಯಾದಾಗ ಬ್ರಾಹ್ಮಣರ ಮುಖ್ಯಸ್ಥರು ಮತ್ತು ಬ್ರಾಹ್ಮಣ ಸಾರ್ವಜನಿಕರು ನನ್ನ ಆಜ್ಞೆಯಿಂದ ದಾಳಿ ಮಾಡಿದ ಸನ್ನಿವೇಶಗಳ ಬಗ್ಗೆ ನಾನು ಅವರಿಗೆ ತಿಳಿಸಿಲ್ಲ.

ಮೀರಜಿನ ಮುಖ್ಯಸ್ಥರು ಸ್ವತಃ ಒಬ್ಬರ ಬದಲಿಗೆ ಇಬ್ಬರು ಜಗದ್ಗುರುಗಳನ್ನು ಮಾಡಿದರು ಮತ್ತು ಅವರ ಆಶ್ರಿತನು ಎಲ್ಲಾ ಮರಾಠರನ್ನು ಸೇರಿದಂತೆ ಪ್ರತಿಯೊಬ್ಬ ಮಹಾರಾಜರನ್ನು ಮತ್ತು ಮುಖ್ಯಸ್ಥರನ್ನು

ಒಬ್ಬ ಶೂದ್ರ– ಯಾವುದೇ ಘನತೆ ಗೌರವವಿಲ್ಲದೆ ಕೆಳವರ್ಗದಲ್ಲಿ ಹುಟ್ಟಿದವನೆಂದು ಕರೆಯುತ್ತಾನೆ ಮತ್ತು ಅವರು ಬ್ರಾಹ್ಮಣರ ಸೇವೆ ಮಾಡಬೇಕಾಗುತ್ತದೆ. ಇದು ಖಂಡಿತವಾಗಿಯೂ ಎಲ್ಲಾ ಮರಾಠರ ಮನಸ್ಸನ್ನು ನೋಯಿಸುತ್ತದೆ. ಎಲ್ಲಾ ಮರಾಠರಾಗಲೀ ಅಥವಾ ಮಹಾರಾಜರಾಗಲೀ ಸರಕಾರಕ್ಕೆ ದೂರು ನೀಡಲಿಲ್ಲ. ಮಾಂಟೆಗ್ಯೂ ಮೆರಿ ಅವರನ್ನು ನಾನು ಭೇಟಿ ಮಾಡಿದ ಸಂದರ್ಭದಲ್ಲಿ ನೀಡಿದ ಟಿಪ್ಪಣಿಯನ್ನು ದಯವಿಟ್ಟು ಓದಿ. ಏಕೆಂದರೆ ಅದು ಮೋಸ–ಕುತಂತ್ರದ್ದು. ಮತ್ತು ನನ್ನ ಖಾಸಗಿ ದೇವತೆಗಳ ಪೂಜೆ–ಪುನಸ್ಕಾರಗಳ ಬಗ್ಗೆ ಹೊರಡಿಸಿದ ಆಜ್ಞೆಯ ವಿರುದ್ಧ ಬ್ರಾಹ್ಮಣರು ಪ್ರತಿಭಟಿಸುತ್ತಿರುವ ವಿಚಾರವನ್ನು ಮಾನ್ಯ ಘನತೆವೆತ್ತ ಚಕ್ರವರ್ತಿಗಳ ಗಮನಕ್ಕೆ ತರಬೇಕೆಂದು ನಾನು ಬಯಸುತ್ತೇನೆ. ಅದು ಸಂಸ್ಥಾನದ ರಾಜ್ಯಪತ್ರದಲ್ಲಿ ಪ್ರಕಟಿಸಿಲ್ಲ ಅಥವಾ ನನ್ನ ಖಾಸಗಿ ಇಲಾಖೆಯನ್ನು ಮೀರಿ ನಡೆದುಕೊಳ್ಳುವಂಥದ್ದಲ್ಲ. ಬ್ರಾಹ್ಮಣರೇ ಸ್ವತಃ ಬರೆದಿರುವ ಬ್ರಾಹ್ಮಣರ ಉಗಮವನ್ನು ಕುರಿತ ಅಧಿಕೃತತೆಯ ಬಗ್ಗೆ ಬ್ರಾಹ್ಮಣೇತರರು ಪ್ರತಿಭಟಿಸುವುದು ಮತ್ತು ಟೀಕೆ ಮಾಡುವುದು ಅಸಹಜವೇ? ಆದರೆ ಬ್ರಾಹ್ಮಣರು ಈಗ ಉಲ್ಲಂಘಿಸಿ ಬ್ರಾಹ್ಮಣೇತರರ ಭಾವನೆಗಳನ್ನು ಅಪಹಾಸ್ಯ ಮಾಡುತ್ತಿದ್ದಾರೆ. ಬ್ರಾಹ್ಮಣರ ಈ ಕುತಂತ್ರಗಳು ಬ್ರಾಹ್ಮಣೇತರರ ಹೆಮ್ಮೆಗೆ ಭಂಗ ತರುತ್ತಿವೆ ಮತ್ತು ಅವರು ಪ್ರತೀಕಾರಕ್ಕೆ ಎಡೆಮಾಡಿಕೊಡುವುದರಲ್ಲಿ ಆಶ್ಚರ್ಯವಿಲ್ಲ. ಇದು ಅಪೇಕ್ಷಣಿಯವೇ ಅಲ್ಲ. ಯಾವ ಪಕ್ಷಕ್ಕೂ ಔಚಿತ್ಯ ಮೀರಿ ನಡೆಯುವುದಕ್ಕೆ ಅವಕಾಶ ಕೊಡಬಾರದೆಂದು ನನ್ನ ಯೋಚನೆ.

ಸತ್ಯಶೋಧಕ ಸಮಾಜದ ಜಲಸಾಗಳಿಂದ ನನ್ನನ್ನು ಬ್ರಾಹ್ಮಣರು ದ್ವೇಷಿಸಲು ಪ್ರಾರಂಭಿಸಿದ್ದಾರೆ. ನಾನು ಸತ್ಯಶೋಧಕ ಸಮಾಜದ ತತ್ವಗಳನ್ನು ಇಷ್ಟಪಡುತ್ತೇನೆ ಮತ್ತು ಅವುಗಳು ಎಲ್ಲರಿಗೂ ತಿಳಿಯಲೆಂದು ಅಪೇಕ್ಷಿಸುತ್ತೇನೆ. ಇಷ್ಟನ್ನು ಬಿಟ್ಟರೆ ಅವುಗಳೊಂದಿಗೆ (ಜಲಸಾ) ನನಗೆ ಇನ್ನೇನೂ ಸಂಬಂಧವಿಲ್ಲ. ಬ್ರಾಹ್ಮಣರು ಈ ಜಲಸಾಗಳನ್ನು ಅಶ್ಲೀಲವೆಂದು ಕರೆಯುತ್ತಾರೆ, ಆದರೆ ಈ ಜಲಸಾಗಳು ಪ್ರತಿದಿನ ಈ ಅಶ್ಲೀಲಗಳನ್ನು ಪುರಾಣ ಮತ್ತು ಕೀರ್ತನೆಗಳನ್ನು ಜನರಿಗೆ ಬೋಧನೆ ಮಾಡುತ್ತಿದ್ದಾರೆ ಮತ್ತು ಬ್ರಾಹ್ಮಣರು ಅಂತಹ ಅಶ್ಲೀಲ ವಿಷಯಗಳನ್ನು ಧರ್ಮದ ನೆಪದಲ್ಲಿ ಜನರಿಗೆ ಬೋಧಿಸುತ್ತಿದ್ದಾರೆ ಮತ್ತು ಅವರಿಗೆ ಜಲಸಾಗಳ ಮೂಲಕ ಅವರ ಅಶ್ಲೀಲತೆಯನ್ನು ಜನರ ಗಮನಕ್ಕೆ ತರಲು ಅವರಿಗೇಕೆ ಜಲಸಾಗಳಲ್ಲಿ ತಿಳಿಸಬಾರದು? ನನಗೆ ಜಲಸಾಗಾರರ ಬಗ್ಗೆ ಸಹಾನುಭೂತಿಯಿದೆಯೆಂದು ನಾನು ಒಪ್ಪಿಕೊಳ್ಳುತ್ತಾನೆ. ಹೊಸ ಚುನಾವಣೆಗಳಲ್ಲಿ ಕೀರ್ತನೆಗಳು (ಬ್ರಾಹ್ಮಣರ ಸಂಗೀತದ ಮೂಲಕ ಉಪದೇಶ ನೀಡುವುದು) ಬ್ರಾಹ್ಮಣರಿಗೆ ಸಹಾಯ ಮಾಡುತ್ತಿರುವಂತೆಯೇ ಜಲಸಾಗಳು ಬ್ರಾಹ್ಮಣೇತರರಿಗೆ ಸಹಾಯ ಮಾಡುತ್ತಿವೆ.

ಮಾನ್ಯ ಘನತೆವೆತ್ತರಿಗೆ ಬರೆದಿರುವ ನನ್ನ ಟಿಪ್ಪಣಿಯನ್ನು ತಾವು ದಯವಿಟ್ಟು ಓದಬೇಕೆಂದು ನನ್ನ ನಮ್ರ ವಿನಂತಿ.

ತಮ್ಮ ವಿಶ್ವಾಸಿ
ಸಹಿ/– ಶಾಹು ಛತ್ರಪತಿ

**(ಕೊಲ್ಹಾಪುರ ಪತ್ರಾಗಾರ, ಶಾಹು ದಫ್ತರ, ಪತ್ರಸಂಖ್ಯೆ ಆರ್–೧೨೩೧೪)**

---

೨೧

# ಪರಿಷತ್ತಿನ ಚುನಾವಣೆಗಳನ್ನು ಸ್ಪರ್ಧಿಸಿ

ಸೆಪ್ಟಂಬರ್ ೧೦, ೧೯೨೦

*ಮಹಾರಾಜ ಶಾಹುರವರು ಈ ಪತ್ರವನ್ನು ನರಸಿಂಗಪುರದ ವತನದಾರ ಪಾಟೀಲ ಲಕ್ಷ್ಮಣ ರಾಮಚಂದ್ರ ಉರುಫ್ ಬಾಲಾಪಾಟೀಲ್ ಅವರಿಗೆ ಮಾಂಟೆಫೋರ್ಡ್ ಸುಧಾರಣೆಗಳನ್ನು ಅನುಸರಿಸಿ ನಡೆಯುವ ಚುನಾವಣೆಗಳ ಹಿನ್ನೆಲೆಯಲ್ಲಿ ಬರೆದಿದ್ದಾರೆ. ಶಾಸನ ಪರಿಷತ್ತಿನ ಸ್ಥಳೀಯ ನಾಯಕರು ಚುನಾವಣೆಗಳಲ್ಲಿ ಸ್ಪರ್ಧಿಸಲು ಮತ್ತು ಬ್ರಿಟಿಷ್ ಭಾರತದಲ್ಲಿ ದಲಿತರ ಸೇವೆ ಮಾಡಲು ಸಕ್ರಿಯರಾಗಿ ಪ್ರಚಾರ ಮಾಡಿದರು.*

---

ಛತ್ರಪತಿ ಮಹಾರಾಜರು

ಕೊಲ್ಹಾಪುರ

ಜೈ ಭವಾನಿ

ಸ್ಟೇಷನ್ ಬಂಗ್ಲೋ
ಕೊಲ್ಹಾಪುರ
೧೦-೦೯-೧೯೨೦

ಗೌರವಾನ್ವಿತ ಲಕ್ಷ್ಮಣ ರಾಮಚಂದ್ರ
ಉರುಫ್ ಬಾಲಪಾಟೀಲ ಅವರಿಗೆ
ನರಸಿಂಗಪುರ
ತಾಲ್ಲೂಕ ವಾಲ್ವೆ

ಜನರ ಸೇವೆಗಾಗಿ ನಿಮ್ಮಂಥವರು ಸ್ವಾರ್ಥ ಬಿಡುವುದು ಕರ್ತವ್ಯವಾಗಿದೆ, ನೀವು ಒಬ್ಬ ರೈತರು, ಜೊತೆಗೆ ನೀವು ವತನದಾರ ಪಾಟೀಲರಾಗಿದ್ದೀರಿ. ಆದ್ದರಿಂದ ನೀವು ಚುನಾವಣೆಗೆ ನಿಲ್ಲಿ. ನೀವು ಕೆಲವು ವರ್ಷಗಳಿಂದಲೂ ಸ್ಥಳೀಯ ಮಂಡಳಿಯ ಸದಸ್ಯರಾಗಿದ್ದೀರಿ ಮತ್ತು ಸಮುದಾಯದ ಸೇವೆಯಲ್ಲಿ ತೊಡಗಿದ್ದೀರಿ.

ಶಾಸನ ಪರಿಷತ್ತಿನ ಚುನಾವಣೆಗಳಿಗೆ ಸ್ಪರ್ಧಿಸಲು ಅರ್ಹರಾಗಿದ್ದೀರಿ. ಜನರ ಹೆಚ್ಚಿನ ಸೇವೆ ಮಾಡುವ ಅವಕಾಶವನ್ನು ದಯವಿಟ್ಟು ಕಳೆದುಕೊಳ್ಳಬೇಡಿ. ನಿಮ್ಮ ನಮ್ಮ ಪ್ರೀತಿ ಬೆಳೆಯುತ್ತಿರಲಿಯೆಂದು ಹಾರೈಸುತ್ತಾ.

ಸಹಿ/– ಶಾಹು ಛತ್ರಪತಿ

(ಮೋಡಿ ಲಿಪಿಯಲ್ಲಿ)

**(ವಿಜಯ ಸುರ್ವಾಡೆ ಸಂಗ್ರಹ)**

---

## ೨೨

# ರಾಜಕುಮಾರಿ ಇಂದುಮತಿಯವರಿಗೆ ಶಾಹುರವರ ಸಲಹೆ

ಅಕ್ಟೋಬರ್ ೧, ೧೯೨೦

*ತನ್ನ ಕಿರಿಯ ಸೊಸೆಯಾದ ರಾಜಕುಮಾರಿಯಾದ ಇಂದುಮತಿಯವರಿಗೆ ಪುಣೆಯ ಪ್ರವಾಸದಲ್ಲಿದ್ದಾಗ ಶಾಹುರವರು ಬರೆದ ಅಪರೂಪದ ಪತ್ರವಿದು.*

*೧೯೧೮ರಲ್ಲಿ ತನ್ನ ಮಗ ಆಕಸ್ಮಿಕವಾಗಿ ಅಕಾಲಿಕ ಮರಣಕ್ಕೆ ತುತ್ತಾದಾಗ ಅವರಿಗೆ ಅಪಾರವಾದ ದುಃಖವಾಗುತ್ತದೆ. ಅವರು ಬೇಗನೇ ಚೇತರಿಸಿಕೊಂಡು ಸೊಸೆಯಾದ ರಾಜಕುಮಾರಿ ಇಂದುಮತಿಯನ್ನು ತನ್ನ ಮಗಳೆಂದು ಪರಿಭಾವಿಸಿದರು. ಅವರನ್ನು ಸರಿಯಾದ ರೀತಿಯಲ್ಲಿ ಸಾಕಿ ಬೆಳೆಸಿದರು ಮತ್ತು ಆಕೆಯ ಶಿಕ್ಷಣವನ್ನು ಖಾತರಿಗೊಳಿಸಿ ಒಬ್ಬ ಸುಸಂಸ್ಕೃತ ಮಹಿಳೆಯಾಗಿ ಸ್ವತಂತ್ರ ವ್ಯಕ್ತಿತ್ವ ರೂಪಿಸಿಕೊಳ್ಳುವುದಕ್ಕೆ ಅನುವು ಮಾಡಿಕೊಟ್ಟರು. ಈ ಪತ್ರವು ಶಾಹುರವರ ತಂದೆಯ ಮಮಕಾರವನ್ನು ಎತ್ತಿ ತೋರಿಸುತ್ತದೆ. ಈ ಸಮಯದಲ್ಲಿ ರಾಜಕುಮಾರಿ ಅವರಿಗೆ ೧೪ ವರ್ಷ ವಯಸ್ಸಾಗಿತ್ತು.*

---

ಛತ್ರಪತಿ ಮಹಾರಾಜ
ಕೊಲ್ಹಾಪುರ
ಜೈ ಭವಾನಿ

ಸ್ಟೇಷನ್ ಬಂಗ್ಲೋ
ಕೊಲ್ಹಾಪುರ
೧೦-೦೯-೨೦

ಪ್ರೀತಿಯ ರಾಜಕುಮಾರಿ ಇಂದುಮತಿ

ರಾಯಬಾಗ್‌ನಿಂದ ಒಂದೂವರೆ ದಿನದಲ್ಲಿ ಪುಣೆಯನ್ನು ತಲುಪಿದ್ದೇವೆ. ಇಲ್ಲಿ ನಮಗೆ ೨-೪ ದಿನಗಳ ಕೆಲಸವಿದೆ. ತಾರಾಬಾಯಿ ಸಾಹೇಬ ಮಹಾರಾಜರು (ಶಾಹುರವರ ದೊಡ್ಡ ಸೊಸೆ) ತಮ್ಮ ಅತ್ತೆಯನ್ನು ಭೇಟಿ ಮಾಡಲು ರೂಕ್ಡಿಗೆ ಹೋಗುವರು. ನಿಮ್ಮ ಅತ್ತೆಯವರ ಸಂಪರ್ಕದಲ್ಲಿರಲು 'ಸಾದು' ಅವರನ್ನು ರೂಕ್ಡಿಗೆ ಕಳುಹಿಸಲಾಗುವುದು. ಆಕೆ ಆರೋಗ್ಯವಾಗಿಲ್ಲದಿದ್ದರೆ ಬೆಳಿಗ್ಗೆ ಆರು ಗಂಟೆಗೆ ರೂಕ್ಡಿಗೆ ಹೋಗಿ ಸಂಜೆ ೯ ಗಂಟೆಗೆ ವಾಪಸ್ಸು ಬನ್ನಿ.

ಆದರೆ ನಿಮ್ಮ ಅಧ್ಯಯನವನ್ನು ತಪ್ಪಿಸಬೇಡಿ. ಸೊನ್‌ತಾಲಿಯ ಹೊಣೆ ನಿಮ್ಮದು. ಮತ್ತು ಸೊನ್‌ತಾಲಿಯನ್ನು ನೋಡಿಕೊಳ್ಳಲು ಯಾರೂ ಇಲ್ಲ. ಮಾಮ ಸಹ ಅಲ್ಲಿ ಇಲ್ಲ ಮತ್ತು ಶ್ರೀಮತಿ ಸೇನಾಪತಿ ಅಕ್ಕಾಸಾಹೇಬ ಕೂಡ ಅಲ್ಲಿ ಇಲ್ಲ. ನೀನು ಇಬ್ಬರನ್ನೂ ಅತ್ತೆ-ಮಾವ ಎಂದು ಭಾವಿಸಬೇಕು. ಅವರು ನಿನ್ನೊಡನೆ ಕಟ್ಟುನಿಟ್ಟಾಗಿದ್ದರೆ ನೀನು ತಾಳ್ಮೆಯಿಂದ ಸಹಿಸಿಕೋ. ನಾನು ಇದನ್ನು ನಿನಗೆ ನಿಯತವಾಗಿ ಹೇಳುತ್ತಿದ್ದೇನೆ ಮತ್ತು ನಿನ್ನ ವಿಧೇಯತೆ ನನಗೆ ಸಂತೋಷ ತಂದಿತು.

ಸದಾ ನಿನ್ನ ಮಾರ್ಗದರ್ಶನದಲ್ಲಿರಲು ದೇವರು ನಿಮಗೆ ವಿವೇಚನೆ ಕೊಡಲಿ. ನಿನ್ನ ಯೋಗಕ್ಷೇಮ ಸಮಾಚಾರಗಳನ್ನು ಶ್ರೀಮತಿ ಸೇನಾಪತಿ ಅಕ್ಕಾಸಾಹೇಬ ಮತ್ತು ಶೆಡಬಾಳದಲ್ಲಿರುವ ಮಾಮ ಅವರಿಗೆ ಬರೆಯುತ್ತಾ ಇರು. ಕುದುರೆ ಸವಾರಿ ಮಾಡುವಾಗ ಅಥವಾ ಗಾಡಿಯಲ್ಲಿರುವಾಗ ತುಂಟತನ ಮಾಡಬೇಡ. ನೀನು ಯಾವಾಗಲೂ ಊಟವನ್ನು ನಿನ್ನ ಆಳು-ಕಾಳುಗಳ ಮತ್ತು ಇತರೆ ಹುಡುಗಿಯರ ಜೊತೆಯಲ್ಲೇ ಮಾಡು. ಎಲ್ಲರೂ ಕುಡಿದ ಮೇಲೆ ಟೀಯನ್ನು ಕುಡಿ. ಊಟದ ಸಮಯದಲ್ಲಿ ಪ್ರತಿಯೊಬ್ಬರನ್ನೂ ವಿಚಾರಿಸು. ನೀನು ಒಂದು ನಡತೆ-ವರ್ತನೆಯನ್ನು ನಿಭಾಯಿಸಿದರೆ ನಿನ್ನನ್ನು ಎಲ್ಲರೂ ಪ್ರೀತಿಸುವರು. ಋಷಿ ಕಣ್ವರು ತಮ್ಮ ಮಗಳಿಗೆ ಈ ರೀತಿ ಉಪದೇಶಿಸಿದ್ದರು:

ನಿಮ್ಮ ಹಿರಿಯರ ಸೇವೆಯಲ್ಲಿ ಸದಾ ಇರು,

ನಿನ್ನ ಗಂಡನ ಇತರೆ ಹೆಂಡತಿಯರನ್ನು ಪ್ರೀತಿಸು,

ನಿನ್ನ ಗಂಡ ಕೋಪಗೊಂಡಾಗ ನೀನು ನಮ್ರವಾಗಿರು,

ನಿನ್ನ ಸೇವಕರೊಂದಿಗೆ ದಯಾಳುವಾಗಿರು,

ನೀನು ನಿನ್ನ ಕರ್ತವ್ಯಗಳ ಬಗ್ಗೆ ನಿಷ್ಠನಾಗಿರು ಮತ್ತು

ನಿನಗೆ ಸಂಪತ್ತು ಸಮೃದ್ಧಿಗಳು ಬಂದಾಗ (ನಗುವಾಗ) ಗರ್ವಪಡಬೇಡ

ಅಂಥವರು ಮಾತ್ರ ಮನೆಯ ನಿಜವಾದ ಒಡತಿ (ಮಿಸ್ಟ್ರೆಸ್)

ಇತರರು ವಂಶಕ್ಕೆ ಶಾಪಗ್ರಸ್ಥರು....

ಇದನ್ನು ಸದಾ ನೆನಪಿಟ್ಟುಕೋ, ಮತ್ತು ನಿನ್ನ ವರ್ತನೆ ಇತರರಿಗೆ ಮಾದರಿಯಾಗಿರಲಿ.

ಸಂಪರ್ಕದಲ್ಲಿರು, ಮತ್ತು ನಮ್ಮ ಮಮತೆ-ಮಮಕಾರಗಳು ಬೆಳೆಯಲಿ.

ಸಹಿ/- ಛತ್ರಪತಿ ಶಾಹು
(ಮೋಡಿ ಅಕ್ಷರಗಳಲ್ಲಿ)

(ಕೃಪೆ- ಶ್ರೀ ಶಾಹುಜಿ ಛತ್ರಪತಿ ವಸ್ತು ಸಂಗ್ರಹಾಲಯ, ಕೊಲ್ಹಾಪುರ)

---

೨೩

# ಅಂಬೇಡ್ಕರರು ಶಾಹುರವರಿಗೆ: ಬ್ರಾಹ್ಮಣೇತರರ ಆಂದೋಲನ

ಫೆಬ್ರವರಿ ೩, ೧೯೨೧

*ಡಾ.ಅಂಬೇಡ್ಕರರು ಇಂಗ್ಲೆಂಡಿನಿಂದ ಪತ್ರ ಬರೆದಿರುವುದು ಸ್ವಯಂ-ವೇದ್ಯ. ಅಂಬೇಡ್ಕರರು ಬ್ರಾಹ್ಮಣೇತರರ ಆಂದೋಲನದ ಉದ್ದೇಶಗಳನ್ನು ಇಂಗ್ಲೆಂಡಿನ ಜನತೆಗೆ ಪ್ರಚಾರ ಮಾಡುವ ಗುರಿಯನ್ನ ಹೊಂದಿದ್ದರು. ಅಂಬೇಡ್ಕರರು ಆಂದೋಲನದ ಭವಿಷ್ಯವನ್ನು ಕುರಿತು ಸಹ ಹೇಳುತ್ತಾರೆ. ಇಬ್ಬರು ಮಹಾನುಭಾವರ ನಡುವಣ ಸಂಬಂಧದ ಮಹತ್ವವನ್ನು ಈ ಪತ್ರ ಒತ್ತಿಹೇಳುತ್ತದೆ.*

---

ಲಂಡನ್, ಫೆಬ್ರವರಿ, ೧೯೨೧
೧೦, ಕಿಂಗ್ ಹೆನ್ರಿ ರಸ್ತೆ
ಚೌಕ್ ಫಾರ್ಮ
ಎನ್.ಡಬ್ಲ್ಯೂ.೩

ನನ್ನ ಪ್ರೀತಿಯ ಮಹಾರಾಜ ಸಾಹೇಬ್,

ತಮ್ಮ ೧೪ ಡಿಸೆಂಬರ್ ೧೯೨೦ರ ಪತ್ರಕ್ಕೆ ತುಂಬಾ ಧನ್ಯವಾದಗಳು ಮತ್ತು ಪ್ರೋತ್ಸಾಹದಾಯಕ ವಿಷಯಗಳನ್ನು ಓದಲು ನನಗೆ ಬಹಳ ಸಂತೋಷವಾಯಿತು.

ಭಾರತದಲ್ಲಿರುವ ಮಂದಗಾಮಿಗಳು ಮಾಂಟೆಗ್ಯೂ ಮುಂದೆ ಮಂಡಿಸಿದ ನಿಲುವುಗಳಿಂದ ನಾನು ಭ್ರಮನಿರಸನಗೊಂಡಿದ್ದೇನೆ. ಮಾಂಟೆಗ್ಯೂ ಅವರು ಮಂದಗಾಮಿಗಳಿಂದ ಸುಳಿವನ್ನು ಪಡೆಯಬೇಕಾಗಿರುವುದರಿಂದ ಅವರು ಖಂಡಿತವಾಗಿ ಬ್ರಾಹ್ಮಣೇತರರ ಆಂದೋಲನದ ಬಗ್ಗೆ ನಿರ್ದಾಕ್ಷಿಣ್ಯವಾಗಿ ಮಾತನಾಡಲಾರರು. ಬ್ರಾಹ್ಮಣೇತರರ ಆಂದೋಲನದ ಬಗ್ಗೆ ಇಲ್ಲಿ (ಇಂಗ್ಲೆಂಡಿನಲ್ಲಿ) ಯಾರೂ ಅರ್ಥ ಮಾಡಿಕೊಳ್ಳಲು ಗಮನ ನೀಡಿಲ್ಲ. ಸುಧಾರಣೆಗಳ ಮಸೂದೆ ಪರಿಶೀಲನೆಯಲ್ಲಿರುವ ಸಂದಿಗ್ಧ ಸಮಯದಲ್ಲಿ ಬ್ರಾಹ್ಮಣೇತರರ ಆಂದೋಲನವನ್ನು ನಿರೂಪಿಸುವ ಒಬ್ಬ ನುರಿತ ಪರಿಣತನೂ ಇಲ್ಲದಿರುವುದನ್ನು ಕಂಡು ವಿಷಾದಿಸಬೇಕಾಗಿದೆ. ತತ್ಪರಿಣಾಮವಾಗಿ ಬ್ರಾಹ್ಮಣೇತರರ ಆಂದೋಲನದ ಶತ್ರುಗಳು ಅದು (ಆಂದೋಲನವು) ಬ್ರಾಹ್ಮಣರ-ವಿರೋಧಿ ಎಂದು ಸುಲಭವಾಗಿ ನಿರೂಪಿಸಲು ಅನುವು ಮಾಡಿಕೊಟ್ಟಿತು. ಅದರ ಜನತಾಂತ್ರಿಕ ಮಗ್ಗುಲನ್ನು ಉದ್ದೇಶಪೂರ್ವಕವಾಗಿ ದಮನ ಮಾಡಿರುವುದರಿಂದ ಅದರ ಒಂದು ವಿಕೃತರೂಪ ಬಹುಮಟ್ಟಿಗೆ

ಇಂಗ್ಲೆಂಡಿನ ಜನರ ಮನಸ್ಸಿನಲ್ಲಿ ನಾಟಿಬಿಟ್ಟಿದೆ. ಸುಧಾರಣೆಗಳು ಮುಗಿದುಹೋದ ವಿಚಾರವೆಂದು ಕೆಲವು ಜನರು ಭಾರತದಲ್ಲಿರುವ ಸಂಖ್ಯೆ ಅಥವಾ ಗುಂಪುಗಳ ಸ್ವಭಾವದ ಬಗ್ಗೆ ತಲೆಕೆಡಿಸಿಕೊಳ್ಳುವರು. ಭವಿಷ್ಯಕ್ಕಾಗಿ ನಾವು ಸಿದ್ಧರಾಗಬೇಕು, ನಾವು ಇಲ್ಲಿಂದಲೇ ಪ್ರಯತ್ನಿಸಬೇಕು. ಭಾರತದಲ್ಲಿರುವ ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳ ಅಂತರ್‌ಸಂಬಂಧಗಳ ಬಗ್ಗೆ ಸೂಕ್ತ ಪರಿಪ್ರೇಕ್ಷ್ಯದಲ್ಲಿ ನಾನು ಭೇಟಿಯಾದ ಇಂಗ್ಲಿಷ್ ವ್ಯಕ್ತಿಗೆ ತಿಳಿಸಲು ಪ್ರತಿಯೊಂದು ಅವಕಾಶವನ್ನೂ ಸದುಪಯೋಗಪಡಿಸಿಕೊಳ್ಳುವೆನು. ನನ್ನ ಪ್ರಯತ್ನಗಳೆಲ್ಲಾ ಸಂದರ್ಭದ ನಂತರವಾದುವು, ಅವು ಕೂಡಲೇ ಪರಿಣಾಮ ಬೀರುವುದಿಲ್ಲ. ಆದರೆ ಅವು ವ್ಯರ್ಥವಲ್ಲವೆಂದು ಸಮಯವೇ ಹೇಳುವುದು.

ಘನತೆವೆತ್ತ ಮಹಾರಾಜರ ತಮ್ಮ ನಿರ್ದೇಶನದ ಮೇರೆಗೆ ಇಂದು ಸಂಘ ಸ್ಥಾಪಿಸುವ ಬಗ್ಗೆ ನಾನು ಕೆಲವು ಮುಖ್ಯ ವ್ಯಕ್ತಿಗಳೊಂದಿಗೆ ಸಮಾಲೋಚಿಸಿದೆ. ಅವರು ನನ್ನ ಅಭಿಪ್ರಾಯಗಳನ್ನು ಮೆಚ್ಚಿಕೊಂಡರು ಮತ್ತು ಅವರೆಲ್ಲರೂ ಇಂಗ್ಲಿಷ್ ಸಮಾಜದಲ್ಲಿ ಪ್ರಭಾವಿ ಸ್ಥಾನಗಳಲ್ಲಿದ್ದಾರೆ. ಅವರೆಲ್ಲರೂ ಸರ್ವಾನುಮತದಿಂದ ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡರು, ಆದರೆ ಆ ಸಂಘಕ್ಕೆ ಒಬ್ಬ ವೇತನವಿಲ್ಲದ ಕಾರ್ಯದರ್ಶಿ ಇಲ್ಲದಿದ್ದರೆ ಅದು ಸತ್ತ ಸಂಘವಾಗುತ್ತದೆಯೆಂದು ಅವರೆಲ್ಲರೂ ಹೇಳಿದರು. ಅವರ ವಾರ್ಷಿಕ ಖರ್ಚು–ವೆಚ್ಚ ಕನಿಷ್ಠ ೫೦೦ ಪೌಂಡುಗಳು ಆಗಬಹುದು (ನಾನು ಖಚಿತವಾಗಿ ಮೊತ್ತವನ್ನು ಹೇಳಲಾರೆ. ಅದು ಹೆಚ್ಚು ಆಗಬಹುದು ಅಥವಾ ಕಡಿಮೆ ಆಗಬಹುದು) ಮತ್ತು ದಮನಿತ ವರ್ಗಗಳ ಪರಿಸ್ಥಿತಿಗಳನ್ನು ನಾನು ಚೆನ್ನಾಗಿ ನೋಡಿರುವುದರಿಂದ, ಸಂಘವು ಬಹಳ ಪ್ರಯೋಜನಕಾರಿಯೆಂದು ತಿಳಿದಿದ್ದರೂ ಜನರಲ್ಲಿ ಸಾಧನಗಳ (ಹಣದ) ಕೊರತೆಯಿರುವುದರಿಂದ ಇದು ಸಾಕಾರಗೊಳ್ಳಲಾರದು ಎಂಬ ತೀರ್ಮಾನಕ್ಕೆ ಬಂದಿದ್ದೇನೆ.

ಶ್ರೀಮಾನ್ ಮಾಂಟೆಗ್ಯೂ ಅವರು ನನ್ನನ್ನು ಎರಡನೆಯ ಸಂದರ್ಶನಕ್ಕೆ ಕರೆದಿದ್ದಾರೆ ಮತ್ತು ಬಾಂಬೆಯ ಶಾಸನ ಪರಿಷತ್ತಿನ ಒಬ್ಬ ಸದಸ್ಯರಾಗಿ ಇಂಡಿಯಾಗೆ ವಾಪಸ್ಸು ಬನ್ನಿ ಎಂದು ಒತ್ತಾಯ ಮಾಡಿದ್ದಾರೆಂಬ ಈ ವಿಚಾರ ಘನತೆವೆತ್ತ ತಮಗೆ ತಿಳಿದರೆ ತಾವು ಸಂತೋಷಪಡುವಿರಿ. ನಮ್ಮ ಮೊದಲನೆಯ ಸಭೆ(ಸಂದರ್ಶನ)ಯ ನಂತರ ಅವರು ವೈಸ್‌ರಾಯ್ ಮತ್ತು ಬಾಂಬೆಯ ಗೌರ್ನರರಿಗೆ ನನ್ನನ್ನು ಶಾಸನ ಪರಿಷತ್ತಿಗೆ ನಾಮನಿರ್ದೇಶನ ಮಾಡುವಂತೆ ತಂತಿಸಂದೇಶ ಕಳುಹಿಸಿರಬಹುದು. ನಾನು ಅವರ ಬಳಿಗೆ ವೈಯಕ್ತಿಕ ತೊಂದರೆಗಳನ್ನು ನಿವೇದಿಸಲು ಬರುವುದಿಲ್ಲ, ಆದರೆ ನಾನು ಧ್ಯೇಯವನ್ನು ಪ್ರತಿನಿಧಿಸುವೆನು ಎಂದು ಹೇಳಿದ್ದೆ. ನಾನು ಮೊದಲಿಗೆ ಭಾರತಕ್ಕೆ ವಾಪಸ್ಸು ಬರಬೇಕು ಮತ್ತು ನಂತರ ದಮನಿತ ವರ್ಗಗಳ ವಿಶಾಲವಾದ ಪ್ರಾತಿನಿಧ್ಯದ ಬಗ್ಗೆ ವೈಸ್‌ರಾಯ್ ಮತ್ತು ಬಾಂಬೆಯ ಗೌರ್ನರರೊಡನೆ ಅನುಸಂಧಾನ ನಡೆಸಬೇಕು ಮತ್ತು ಈ ವಿಚಾರದಲ್ಲಿ ನನ್ನ ವಾದಸರಣಿಯನ್ನು ಕೇಳದ ಹೊರತು ಪ್ರಾತಿನಿಧ್ಯದ ವಿಷಯವನ್ನು ಮುಕ್ತಾಯಗೊಳಿಸುವುದಿಲ್ಲವೆಂದು ಮುಚ್ಚಳಿಕೆ ಬರೆದುಕೊಡಲು ಅವರು ಸಿದ್ಧರಾಗಿದ್ದಾರೆ. ಇದೆಲ್ಲವೂ ನಿಜವಾಗಿಯೂ ಮನಸ್ಸನ್ನು ಸೆಳೆಯುತ್ತಿದೆ. ಆದರೆ ಅರ್ಧಕ್ಕೆ ನನ್ನ ಅಧ್ಯಯನವನ್ನು ಮುಗಿಸದೆ ಬರುವುದಕ್ಕೆ ನಾನು ಯೋಚಿಸುತ್ತಿಲ್ಲ. ನಾನು ನನ್ನ ವೈಯಕ್ತಿಕ ವೈಭವಕ್ಕೆ ಮಾರುಹೋಗಿಲ್ಲ ಮತ್ತು ನಾನು ನನ್ನ ಜನರಿಗೆ ಸಾಮಾಜಿಕ ಸೇವೆಯನ್ನು ಮಾಡುವುದು ತ್ಯಜಿಸಿದ್ದರೂ ನಾನು ಇನ್ನೂ ಉತ್ತಮ ಸೇವೆ ಮಾಡುವುದಕ್ಕೆ ಚೆನ್ನಾಗಿ ಸಿದ್ಧನಾಗಬೇಕಾಗಿರುವುದನ್ನು ಮಾನ್ಯ ಘನತೆವೆತ್ತ ನೀವು ನೋಡಬೇಕಾಗಿದೆ.

ನಾನು ಹತ್ತಿರದ ಭವಿಷ್ಯದಲ್ಲಿ ಲೇಬರ್ ಪಾರ್ಟಿಯ ಸಂಪರ್ಕ ಹೊಂದುವೆನು ಮತ್ತು ನಾವು ಅವರೊಂದಿಗೆ ಮುಕ್ತ ಮಾತುಕತೆ ನಡೆಸುವೆನು. ಭಾರತದಲ್ಲಿ ಪ್ರವಾಸ ಮಾಡುತ್ತಿರುವವರು ಶ್ರೀಯುತರಾದ ವೆಡ್ಜ್‌ವುಡ್ ಮತ್ತು ಸ್ಪೂರ್ ಅವರನ್ನು ತಾವು ಭೇಟಿಯಾಗಬಹುದೆಂದು ಘನತೆವೆತ್ತ ತಮಗೆ ನಾನು ಸೂಚಿಸಲೇ? ಅವರು ವಾಪಸ್ಸು ಬಂದಾಗ ನಾನು ಅವರನ್ನು ಭೇಟಿಯಾಗುವೆನು ಮತ್ತು ಈ ಕಾರ್ಯತಂತ್ರ ಪರಿಣಾಮವನ್ನು ನಂತರ ನಾನು ಘನತೆವೆತ್ತ ನಿಮಗೆ ತಿಳಿಸುವೆನು.

ನನ್ನ ಗೌರವಪೂರ್ವಕ ವಂದನೆಗಳು,

ತಮ್ಮ ವಿಶ್ವಾಸಿ
ಬಿ. ಆರ್. ಅಂಬೇಡ್ಕರ್

*ಟಿಪ್ಪಣಿ ನೋಡಿ: ನಾನು ಲಂಡನ್ ಟೈಮ್ಸ್ ಪತ್ರಿಕೆಯ ಸಂಪಾದಕರೊಂದಿಗೆ ಗೆಳೆಯರನ್ನು ಮಾಡಿಕೊಂಡಿದ್ದೇನೆ. ಮತ್ತು ಈ ಪತ್ರದೊಂದಿಗೆ ಲಗತ್ತಿಸಿದ ದಮನಿತರ ಶಿಕ್ಷಣದ ಬಗ್ಗೆ ಬರೆದ ಲೇಖನವನ್ನು ಕಳುಹಿಸುತ್ತಿರುವೆ. ನಾನು ಅದನ್ನು ಅವರು ಬರೆಯುವಂತೆ ಮಾಡಿದೆನು.*

---

೨೪

# ಮಹರ್ ವತನವನ್ನು ರದ್ದುಗೊಳಿಸಬೇಕೆಂದು ಮಹರರು ಬರೆದ ಅರ್ಜಿ

ಮೇ ೨೭, ೧೯೨೧

*ಮಹರ್ ವತನವನ್ನು ರದ್ದುಗೊಳಿಸುವ ಮೂಲಕ ಶಾಹು ಮಹಾರಾಜರು ಜೀತಪದ್ಧತಿಯ ಗುಲಾಮತ್ವದಿಂದ ಮಹರ್ ಸಮುದಾಯವನ್ನು ವಿಮೋಚನೆಗೊಳಿಸಿದರು. ಈ ಕ್ರಮ ಕೈಗೊಳ್ಳುವ ಮೊದಲು ಶಾಹುರವರು ಮಹರ್ ಸಮುದಾಯವು ತಮ್ಮ ದಾರುಣ ಸ್ಥಿತಿಯನ್ನು ತಾವೇ ಮನವರಿಕೆ ಮಾಡಿಕೊಳ್ಳಬೇಕೆಂದು ಈ ದುಷ್ಟ ಪದ್ಧತಿಯನ್ನು ತಾವೇ ರದ್ದುಪಡಿಸಲು ಕೋರಬೇಕೆಂದು ಬಯಸಿದ್ದರು. ಅಂತಿಮವಾಗಿ ಅವರ ಪ್ರಯತ್ನಗಳು ಫಲ ನೀಡಿದವು. ಹಳ್ಳಿಗಳಿಂದ ಮಹರ್ ಸಮುದಾಯವು ಒಟ್ಟಿಗೆ ಸೇರಿದರು ಮತ್ತು ಈ ಮನವಿಯೊಂದಿಗೆ ಅವರ ದರ್ಬಾರನ್ನು ಸಂಧಿಸಿದರು. ಶಾಹುರವರು ಎಲ್ಲಿಯೋ ಮಾಡಿದ ಭಾಷಣದ ವಿಚಾರಗಳು ಈ ಮನವಿಯು ಪ್ರತಿಬಿಂಬಿಸುತ್ತದೆ.*

---

ಶ್ರೀಮನ್ ಮಹಾರಾಜ ಛತ್ರಪತಿ<br>
ಕರವೀರದ ಸಾಹೇಬ್ ಸರಕಾರದ ಸೇವೆಯಲ್ಲಿ<br>
ನಿಮ್ಮ ವಿಧೇಯ ಸೇವಕರು<br>
ಎಲ್ಲಾ ವತನದಾರ ಮಹರರು<br>
ಕಾನಡೆವಾಡಿ, ಪೇಟೆ<br>
ಗಾಂಧಿ ಗ್ಲೀಜ್<br>
ಕರವೀರ

ನಮ್ಮ ನಮ್ರ ಮನವಿಯನ್ನು ಈ ಕೆಳಕಂಡಂತೆ ಸಲ್ಲಿಸಲಾಗಿದೆ.

ಕೃತಿಗಳು ಮತ್ತು ಮತಗಳು, ದುಷ್ಟ ಸಂಪ್ರದಾಯಗಳು, ಮತ್ತು ಹಿಂದು ಸಮುದಾಯದ ಬಂಧನಗಳು ನಮ್ಮನ್ನು ಅಸ್ಪೃಶ್ಯರೆಂದು ಪರಿಗಣಿಸಿ, ಬಹಿಷ್ಕರಿಸಿ, ಹಳ್ಳಿಯ ಹೊರಗೆ ವಾಸಿಸುವಂತೆ ಆಜ್ಞಾಪಿಸಲಾದ ನಾವು ಮಹರರು ಎಲ್ಲವನ್ನೂ ಕಳೆದುಕೊಂಡಿದ್ದನ್ನು ಮತ್ತೆ ನಾವು ಪಡೆಯಲಾರೆವೇ. ಬೇರೆ ಜಾತಿಗಳು ಮತ್ತು ಸಮುದಾಯಗಳಲ್ಲಿ ಜ್ಞಾನವು ಸಾಮಾಜಿಕ ಪ್ರಗತಿಯೊಂದಿಗೆ ಹೆಚ್ಚುತ್ತಿದೆ. ಆದರೆ ನಾವು ಎಲ್ಲವನ್ನೂ

ಕಳೆದುಕೊಂಡಿದ್ದೇವೆ ಮತ್ತು ನಮ್ಮನ್ನು ಪ್ರಗತಿಯಿಂದ ಆಚೆಗೆ ಇಡಲಾಗಿದೆ. ನಮ್ಮಲ್ಲಿಯೇ ನಾವು "ಮಾನವರು" ಎಂಬುದನ್ನು ಕಳೆದುಕೊಳ್ಳುವ ಅಂಚಿನಲ್ಲಿದ್ದೇವೆ ಮತ್ತು ಸ್ಥಿತಿಗತಿಗಳಲ್ಲಿ ನಾವು ತೀರಾ ಅತ್ಯಂತ ಕೆಳಸ್ಥಿತಿಯಲ್ಲಿದ್ದೇವೆ.

ಶ್ರೀಮನ್ ಮಹಾರಾಜರು ನಮ್ಮ ಸ್ಥಿತಿಯನ್ನು ಸುಧಾರಿಸಲು ಮತ್ತು ನಮ್ಮನ್ನು ಸಮಾಜದ ಮುಖ್ಯವಾಹಿನಿಗೆ ತರಲು ಹಲವಾರು ಪ್ರಯತ್ನಗಳನ್ನು ಮಾಡಿದ್ದಾರೆ; ಅವರು ನಮಗಾಗಿ ಶಾಲೆಗಳ ಬಾಗಿಲುಗಳನ್ನು ತೆರೆದರು ಮತ್ತು ವಿದ್ಯಾರ್ಥಿನಿಲಯಗಳನ್ನು ನಿರ್ಮಿಸಿದರು, ಉದ್ಯೋಗಗಳನ್ನು ನೀಡಿದರು, ಮತ್ತು ನಮ್ಮಲ್ಲಿ ಕೆಲವರನ್ನು ವಕೀಲರನ್ನಾಗಿ ಮಾಡಿದರು. ಅವರು ಅಸ್ಪೃಶ್ಯತೆಯನ್ನು ಅಳಿಸಿಹಾಕಿದರು ಮತ್ತು ನಮ್ಮನ್ನು ಅವರ ಮಕ್ಕಳೆಂದು ಪರಿಗಣಿಸಿದರು. ಆದ್ದರಿಂದ ಅವರು ನಮ್ಮ ಪಾಲಿನ ದೇವರು ಮತ್ತು ನಾವು ಅವರನ್ನು ಹಲವಾರು ಪೀಳಿಗೆಗಳವರೆಗೆ ಅವರ ಮತ್ತು ಅವರ ವಂಶಸ್ಥರ ಸೇವೆಯನ್ನು ಮಾಡುವೆವು.

ಆದರೆ ನಾವು ಬಹುಸಂಖ್ಯಾತ ಜನರನ್ನು ನೋಡಿದರೆ ನಮಗೆ ದುಃಖವಾಗುತ್ತದೆ ಮತ್ತು ನಾವು ಏನು ಮಾಡಬೇಕೆಂಬುದೇ ನಮಗೆ ತಿಳಿಯುವುದಿಲ್ಲ. ಬಹಳಷ್ಟು ಸುಧಾರಣೆಗಳು ನಮಗೆ ಬಹು ಅಲ್ಪವೆಂದು ಕಾಣುತ್ತವೆ.

ಹಿಂದುಗಳು "ವತನುಗಳನ್ನು" ಪಡೆಯಲು ಹಾತೊರೆಯುತ್ತಾರೆ. ಆದರೆ ನಮಗೆ ನಮ್ಮ ವತನುಗಳು ಮತ್ತು ನಮ್ಮ ವತನುಗಳ ಹೊಣೆಗಳು ನಮಗೆ ಘನತೆಯನ್ನು ತಂದುಕೊಟ್ಟಿಲ್ಲ ಅಥವಾ ನಾವು ಅವುಗಳ ಬಗ್ಗೆ ಹೆಮ್ಮೆಪಡುವುದಿಲ್ಲ. ಸಂಪ್ರದಾಯದ ಬಗ್ಗೆ ನಮ್ಮ ಕುರುಡು ನಿಷ್ಠೆ, ಕ್ರಿಮಿಕೀಟಗಳು ನರಕದಲ್ಲಿರುವಂತೆಯೇ ನಮಗೆ ಈ ವತನುಗಳು ನಮಗೆ ಪ್ರಿಯವಾಗಿಬಿಟ್ಟಿವೆ. ಈ ಕೀಳುಮಟ್ಟದ ಕೆಲಸದಿಂದ ನಮ್ಮನ್ನು ಮುಕ್ತಗೊಳಿಸಲು ಮಹಾರಾಜರು ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿದ್ದಾರೆ. ಅವರು ಪ್ರತಿ ೧೦ ಎಕರೆಗಳಿಗೊಬ್ಬ 'ಮಹರ್'ನಿಗೆ ಈ ಕೆಲಸ ಕೊಡಲು ನಿರ್ಧರಿಸಿದ್ದಾರೆ. ಉಳಿದವರೆಲ್ಲರೂ ಅವರ ಮನಸ್ಸಿಗೆ ಇಷ್ಟ ಬಂದದ್ದನ್ನು ಮಾಡಲು ಮುಕ್ತಗೊಳಿಸಿದ ಮಹರರು ತಮ್ಮ ಭೂಮಿಗಳನ್ನು ಕಿತ್ತುಕೊಳ್ಳಲಾಗಿದೆಯೆಂದು ಪರಿತಪಿಸಿರುವುದರಿಂದ ಮತ್ತು ಸ್ಥಳಾಂತರಗೊಂಡಿರುವುದರಿಂದ ಈ ಸುಗ್ರೀವಾಜ್ಞೆ ನಮಗೆ ಅನುಕೂಲಕರವಾಗಿಲ್ಲವೆಂದು ಭಾವಿಸಿದ್ದಾರೆ. ಕೆಲವರು ಯಾರು ಇದನ್ನು ಉಳಿಸಿಕೊಂಡಿದ್ದಾರೆ ಅವರು ದಾಸ್ಯತ್ವದಲ್ಲಿ ಉಳಿದುಬಿಟ್ಟಿದ್ದಾರೆ. ಆದ್ದರಿಂದ ವತನುಗಳ ನೊಗದಿಂದ ಸಂಪೂರ್ಣವಾಗಿ ಮುಕ್ತವಾಗದ ಹೊರತು ನಮ್ಮ ಸಮುದಾಯ ಎಂದೆಂದಿಗೂ ಸುಧಾರಿಸುವುದಿಲ್ಲ. ಆದ್ದರಿಂದ ವತನ ಆಧಾರಿತ ಸೇವೆಯನ್ನು ಸಂಪೂರ್ಣವಾಗಿ ರದ್ದುಗೊಳಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ.

ಆದ್ದರಿಂದ ನಮ್ಮ ನಿವೇದನೆಯನ್ನು ಈ ಕೆಳಗಿನಂತೆ ನಿರೂಪಿಸುತ್ತಿದ್ದೇವೆ.

ನಮಗೆ ಬಂದಿರುವ ಭೂಮಿ ಯಾವುದೇ ವಿಧಾನದಿಂದ ಬಂದಿದ್ದರೂ ಅದನ್ನು ಅದು ಇರುವಂತೆ ಬಿಟ್ಟುಬಿಡಬೇಕು. ಮತ್ತು ಅದರ ಬಗ್ಗೆ ಯಾವುದೇ ಬದಲಾವಣೆ ಮಾಡಬಾರದು. ಆದರೆ ಎಲ್ಲಾ ಮಹರ್ ವತನಗಳನ್ನು ಅನುದಾನಗಳ ೯ನೇ ಅನುಸೂಚಿಯಿಂದ ತೆಗೆದು ೫ನೇ ಅನುಸೂಚಿಗೆ ಬದಲಾಯಿಸಬೇಕು ಮತ್ತು ಎಲ್ಲಾ ಮಹರರನ್ನು ಅವರ ಕರ್ತವ್ಯಗಳಿಂದ ಮುಕ್ತಗೊಳಿಸಲಾಗಿದೆ. ಎಲ್ಲಾ ವತನಭೂಮಿಗಳನ್ನು ರೈತ್ವಾವನ್ನಾಗಿ* ಮಾಡಬೇಕು. ಹೀಗೆ ಭೂಮಿಯ ಹಿಡುವಳಿದಾರ ಭೂಮಿಯ ಮಾಲಿಕನಾಗುತ್ತಾನೆ. ಸರಕಾರದ ಅಥವಾ ವತನದ ಹೊಣೆಯಾಗಲೀ ನಮ್ಮಲ್ಲಿ ಯಾರಿಗೂ ಕೊಡಲು ಸಾಧ್ಯವಿಲ್ಲ.

ಇದು ನಮ್ಮ ಜೀವನೋಪಾಯಕ್ಕಾಗಿ ಬೇರೆ ಕೆಲಸ ಮಾಡಲು ನಾವು ಸ್ವತಂತ್ರರಾಗಿರುವಂತೆ ಮಾಡುತ್ತದೆ. ಯಾರು ಏನನ್ನೂ ಕಳೆದುಕೊಳ್ಳುವುದಿಲ್ಲ. ಆದ್ದರಿಂದ ಯಾರೂ ಅಸುಖಿಯಾಗಿರುವುದಿಲ್ಲ. ನಮ್ಮ ಮೊದಲಿನ ವತನದ ಪ್ರಕಾರ ಇಡೀ ಹಳ್ಳಿಯ ಸೇವಕರಾಗಿದ್ದೆವು. ಅಲ್ಲಿ ನಾವು ಸೌದೆಯನ್ನು ಕಡಿಯಬೇಕಾಗಿತ್ತು, ಸತ್ತ ಪ್ರಾಣಿಗಳ ಹೆಣವನ್ನು ಎತ್ತಿ ಸಾಗಿಸಬೇಕಾಗಿತ್ತು, ಮತ್ತು ಎಲ್ಲಾ ಕೊಳಕು ಕೆಲಸಗಳನ್ನು ಮಾಡಬೇಕಾಗಿತ್ತು. ಎಲ್ಲಿಯವರೆಗೆ ಈ ಕೆಲಸಗಳನ್ನು ನಮಗೆ ನೀಡಲಾಗಿತ್ತೋ ಅಲ್ಲಿಯವರೆಗೆ ನಾವು ಅಲ್ಲಿಯೇ ಉಳಿಯಬೇಕಾಗಿತ್ತು. ನಮ್ಮ ಹೆಸರಿನಲ್ಲಿರುವ ಈ ಜೀತದ ಕರ್ತವ್ಯಗಳನ್ನು ರದ್ದುಮಾಡಲಾಗಿದೆ. ನಾವು ಈಗ ಬೇರೆ ಕ್ಷೇತ್ರಗಳಿಗೆ ಪ್ರವೇಶಿಸಲು ಸ್ವತಂತ್ರರಾಗಿದ್ದೇವೆ. ಈಗ ಬದಲಿಗೆ ನಮಗೆ ಅಂಟಿರುವ ಅಸ್ಪೃಶ್ಯ ಕಳಂಕವನ್ನು ಮತ್ತು ಕೀಳುತನವನ್ನು ಕಿತ್ತುಹಾಕುವೆವು.

ವತನಿಗೆ ಅವಶ್ಯಕವಾಗಿರುವ ಸರಕಾರದ ಸೇವೆಯನ್ನು ಯಾರು ಮಾಡುವವರು ಎಂಬ ಪ್ರಶ್ನೆಯಿದೆ. ಉತ್ತರ ಬಹುಸುಲಭ. ನಮ್ಮ ಭೂಮಿಗಳು ಸರಕಾರಕ್ಕೆ ತೆರಿಗೆ ಕೊಡುವಂತೆ ಮಾಡಿದರೆ ಸರಕಾರಕ್ಕೆ ಆದಾಯ ಬರುವುದು. ಸರಕಾರವು ಯಾರನ್ನಾದರೂ ನೇಮಿಸಿಕೊಳ್ಳಬಹುದು ಮತ್ತು ಈ ಆದಾಯದಿಂದ ಅವರಿಗೆ ವೇತನ ನೀಡಿ ಅವರಿಂದ ಈ ಕೆಲಸಗಳನ್ನು ಮಾಡಿಸಿಕೊಳ್ಳಬಹುದು.

ಹೀಗೆ ನಾವು ಮಾನ್ಯ ಘನತೆವೆತ್ತ ಮಹಾರಾಜರನ್ನು ಕೋರುತ್ತೇವೆ. ದಯವಿಟ್ಟು ಎಲ್ಲಾ ಮಹರ್ ವತನುಗಳನ್ನು ರದ್ದುಗೊಳಿಸಿ ಮತ್ತು ನಮ್ಮ ಎಲ್ಲಾ ಭೂಮಿಯ ಮೇಲೆ ತೆರಿಗೆ ವಿಧಿಸಿ ಸಾಮಾನ್ಯ ಭೂಮಿಗಳನ್ನಾಗಿ ಮಾಡಿ. ಎಲ್ಲಾ ಮಹರರು ಎಲ್ಲಾ ಕರ್ತವ್ಯಗಳಿಂದ "ಮುಕ್ತರು".

ಇದು ನಮ್ಮ ನಮ್ರ ವಿನಂತಿ
ದಿನಾಂಕ ೨೭-೦೫-೧೯೨೧ ಕ್ರಿಶ
ಹೆಬ್ಬೆರಳಿನ ಗುರುತುಗಳು ಮತ್ತು ಅವರ ಛಾಯಾಚಿತ್ರಗಳು.
ದೋಂಡೊಪಿಲ್‌ನಾಕ್ ಕಾಂಬ್ಳೆ, ರಾಣೋಜಿ ನಾಗೋಜಿ ಕಾಂಬ್ಳೆ, ಯಲ್ಲಪ್ಪ ಚೂಡಪ್ಪ ಕಾಂಬ್ಳೆ, ಗಂಗಾರಾಮ್ ಯಮಜಿ ಕಾಂಬ್ಳೆ.

** ರೈತರು ಯಾವ ಭೂಮಿಗೆ ಸರಕಾರಕ್ಕೆ ತೆರಿಗೆಯನ್ನು ಕೊಡಬೇಕೋ ಆ ಭೂಮಿ.*

**(ಗಂಗಾರಾಮ್ ಕಾಂಬ್ಳೆ ಸಂಗ್ರಹ)**

---

೨೫

# ಮಹರ್ ವತನಿನ ಪದ್ಧತಿ

ಜೂನ್ ೨೧, ೧೯೨೧

*ಮಹರರ ವತನಗಳನ್ನು ರದ್ದುಗೊಳಿಸಬೇಕು ಮತ್ತು ಅವರ ಭೂಮಿಗಳನ್ನು ಕೊಲ್ಹಾಪುರ ಸಂಸ್ಥಾನದಲ್ಲಿ ರೈತವಾ ಭೂಮಿಗಳಿಗೆ ಸೇರಿಸಬೇಕೆಂಬ ಮಹರರ ಮನವಿಯ ಅರ್ಜಿಗಳನ್ನು ಸ್ವೀಕರಿಸಿದ ನಂತರ ಶಾಹುರವರು ಈ ಕೆಳಕಂಡ ಆಜ್ಞೆಯನ್ನು ಹೊರಡಿಸಿದರು.*

---

ಆಜ್ಞೆಯ ಸಂಖ್ಯೆ–೧೧೩

ರಾವ್‌ಸಾಹೇಬ್ ಹುಜೂರ ಚಿಟ್ನೀಸ್ ಅವರಿಗೆ
ಪ್ರಕಟಿಸಿದ ಆಜ್ಞೆಯು ಈ ಕೆಳಗಿನಂತಿದೆ:–

ಮಹರರು ತಮ್ಮ ಸಣ್ಣ–ಪುಟ್ಟ ವತನಿ ಭೂಮಿಗಳನ್ನು ರೈತವಾ ಭೂಮಿಗಳನ್ನಾಗಿ ಪರಿವರ್ತಿಸಲು ಮಹರರೆಲ್ಲ ಒಪ್ಪಿ ಮನವಿಯನ್ನು ಸಲ್ಲಿಸಿದ್ದರು. ಈ ಜನರನ್ನು ಬಿಡುಗಡೆಗೊಳಿಸಲು ಇದು ಅತ್ಯುತ್ತಮ ಮಾರ್ಗ. ಆದ್ದರಿಂದ ಮಹರರ ವತನಿ ಭೂಮಿಗಳನ್ನು ರೈತವಾ ಭೂಮಿಗಳ ಅನುಸೂಚಿಗಳಿಗೆ ವರ್ಗಾಯಿಸಲಾಗಿದೆ. ಈ ಭೂಮಿಗೆ ಸಂಬಂಧಿಸಿದ ಯಾವುದೇ ಇತ್ಯರ್ಥವಾಗಿಲ್ಲದ ವಿಷಯಗಳು ಅಥವಾ ಜಪ್ತಿಗೆ ಒಳಪಟ್ಟಿರುವುದನ್ನು ಕಿತ್ತುಹಾಕಲಾಗಿದೆ. ಈ ಆಜ್ಞೆಯ ಮೂಲಕ ಮಹರರಿಗೆ ಕಂದಾಯದ ನಿಯಮಾವಳಿಗಳ ಪ್ರಕಾರ ಪೂರ್ಣ ಹಕ್ಕುಗಳನ್ನು ನೀಡಲಾಗಿದೆ. ವಿನಿಮಯಕ್ಕಾಗಿ ಅವರು ಸೇವೆಯನ್ನು ಮಾಡಬೇಕಾಗಿಲ್ಲ ಅಥವಾ ಸೇವೆ ಮಾಡಬೇಕೆಂದು ಕೇಳಬೇಕಾಗಿಲ್ಲ. ಯಾವುದೇ ಕಛೇರಿಯಲ್ಲಿ ಮೂರು ದಿನಗಳಿಗಿಂತ ಹೆಚ್ಚು ದಿನ ಇತ್ಯರ್ಥಕ್ಕೆ ಈ ಆಜ್ಞೆಯನ್ನು ಇಡಬೇಕಾಗಿಲ್ಲ.

ಈ ಆಜ್ಞೆಗಳ ಜಾರಿಯ ಬಗ್ಗೆ ಮಾಮಲೆದಾರರು ಕೂಡಲೇ ವರದಿ ಮಾಡಬೇಕು. ಭೂಮಿಯು ಯಾರ ಸ್ವಾಧೀನದಲ್ಲಿದೆಯೋ ಅವರಲ್ಲಿಯೇ ಭೂಮಿ ಇರುವುದು. ಹಾಗಾಗದಿರುವುದಕ್ಕೆ ಯಾವುದೇ ರೀತಿಯ ಧೈರ್ಯ ಅಥವಾ ಕಾರಣ ಇರಬಾರದು.

ರಾಜಮುತವಾಡಿ ಕ್ಯಾಂಪ್

ಸಹಿ/–
ಶಾಹು ಛತ್ರಪತಿ
೨೬–೬–೧೯೨೧

(ಗಂಗಾರಾಮ್ ಕಾಂಬ್ಳೆ ಸಂಗ್ರಹ)

---

೨೬

# ಶಾಹು ಜನತಂತ್ರದ ಸಾಮಾಜಿಕ ಸ್ತಂಭ

ಸೆಪ್ಟಂಬರ್ ೪, ೧೯೨೧

*ಅಂಬೇಡ್ಕರರು ಮತ್ತೊಂದು ಪತ್ರವನ್ನು ಶಾಹುರವರಿಗೆ ಬರೆದು, ಅದರಲ್ಲಿ ಅವರು ಮಹಾರಾಜರಿಗೆ ಸಾಲ ಕೊಡುವಂತೆ ಕೋರುತ್ತಾರೆ ಮತ್ತು ಅದನ್ನು ಮರಳಿ ವಾಪಸ್ಸು ಕೊಡುವ ಭರವಸೆ ನೀಡುತ್ತಾರೆ. ಅಂಬೇಡ್ಕರರು ಶಾಹುರವರನ್ನು ಭಾರತದ ಸಾಮಾಜಿಕ ಜನತಂತ್ರದ ಸ್ತಂಭವೆಂದು ವಿವರಿಸುತ್ತಾರೆ.*

---

ಕೇರ್ ಆಫ್ ಹೆನ್ರಿ ಎಸ್. ಕಿಂಗ್ ಅಂಡ್ ಕಂ<br>
೯, ಪಾಲ್‌ಮಾಲ್<br>
ಲಂಡನ್ ಸೌತ್‌ವೆಸ್ಟ್<br>
೪ನೇ ಸೆಪ್ಟಂಬರ್, ೧೯೨೧

ನನ್ನ ಪ್ರೀತಿಯ ಮಹಾರಾಜ ಸಾಹೇಬ್

ಶ್ರೀಮಾನ್ ದಳವಿಯವರ ಸಲಹೆಯಂತೆ ನಾನು ನನ್ನ ಹಣಕಾಸಿನ ತೊಂದರೆಗಳನ್ನು ನಿಮ್ಮ ಮುಂದೆ ನಿವೇದಿಸುತ್ತಿದ್ದೇನೆ. ನನಗೆ ನಿಮ್ಮಿಂದ ಸ್ವಲ್ಪ ಪರಿಹಾರ ಸಿಗಬಹುದೆಂಬ ಭರವಸೆಯಿದೆ. ನಾನು ನಿಮ್ಮನ್ನು ಕೇಳುತ್ತಿರುವುದಕ್ಕೆ ಕ್ಷಮಾಪಣೆ ಕೋರುತ್ತೇನೆ. ಆದರೆ ತಾವು ನನ್ನನ್ನು ತಮ್ಮ ಸ್ನೇಹಿತನೆಂದು ಸಂತೋಷವಾಗಿ ಭಾವಿಸಿದ್ದರಿಂದ ನನ್ನ ತೊಂದರೆಗಳನ್ನು ಪರಿಹರಿಸುವಿರೆಂಬ ಭರವಸೆಯಿಂದ ನಾನು ಯೋಚಿಸುತ್ತಿದ್ದೇನೆ. ಆ ತೊಂದರೆಗಳು ಮುಖ್ಯವಾಗಿ ಭಾರತದ ವಿನಿಮಯ ಲಂಡನ್ನಿನಲ್ಲಿ ಕುಸಿದಿರುವುದರಿಂದ ಮುಖ್ಯವಾಗಿ ಈ ಸಮಸ್ಯೆ ಉದ್ಭವಿಸಿದೆ. ನಾನು ಭಾರತ ಬಿಟ್ಟಾಗ ಲಂಡನ್ನಿನಲ್ಲಿ ನನ್ನ ಎರಡು ವರ್ಷಗಳ ಖರ್ಚು ಎಷ್ಟು ಬರಬಹುದೆಂದು ಲೆಕ್ಕ ಹಾಕಿದ್ದೆ. ಮತ್ತು ಆಗ ಪ್ರಚಲಿತದಲ್ಲಿದ್ದ ವಿನಿಮಯದ ದರವನ್ನು ಕಂಡುಕೊಂಡಿದ್ದೆ. ನಾನು ಸಾಕಾಗುವಷ್ಟು ಹಣವನ್ನು ಉದ್ದೇಶಗಳಿಗೆ ಇಟ್ಟುಕೊಂಡಿದ್ದೆ. ನಾನು ಭಾರತ ಬಿಟ್ಟಾಗ ಆ ಹಣವನ್ನು ನನ್ನ ಸ್ನೇಹಿತನಲ್ಲಿಟ್ಟಿದ್ದೆ. ಅವನು ಆ ಹಣವನ್ನು ಹೂಡಿದ್ದರಿಂದ ಆಗ ಅದು ನನಗೆ ಎಟುಕಲಿಲ್ಲ. ಹೀಗಾಗಿ ಅದನ್ನು ಲಂಡನ್ನಿಗೆ ವರ್ಗಾಯಿಸಲಾಗಲಿಲ್ಲ. ಕಳೆದ ವರ್ಷ ಡಿಸೆಂಬರ್‌ನಲ್ಲಿ ಆ ಹಣವನ್ನು ನನಗೆ ಕಳುಹಿಸಿಕೊಟ್ಟನು. ಆಗ ನಾನು ವಿನಿಮಯದ ದರವು ಕುಗ್ಗಿರುವುದರಿಂದ ಲಂಡನ್ನಿನಲ್ಲಿ ನಗದಾದ ಹಣವನ್ನು ಸುಮಾರು ೧೫೦ ಪೌಂಡು ಹಣ ಕಡಿಮೆ ಬಿತ್ತು. ನಾನು ಕಾನೂನಿನ ಫೀ ೧೦೦ ಪೌಂಡು ಕಟ್ಟಬೇಕಾಗಿದೆ. ಮತ್ತೊಂದು ಪೌಂಡು ನಾನು ಭಾರತಕ್ಕೆ ವಾಪಸ್ಸು ಬರಲು ಸಾರಿಗೆ ವೆಚ್ಚಕ್ಕೆ

ಬೇಕಾಗುತ್ತದೆ. ಆದ್ದರಿಂದ ಒಟ್ಟಿಗೆ ನನಗೆ ೨೦೦ ಪೌಂಡು ಹಣ ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಬೇಕಾಗಿದೆ. ಘನತೆವೆತ್ತ ತಾವುಗಳು ಸಾಲದ ಮೂಲಕ ನನಗೆ ಸಹಾಯ ಮಡಿದರೆ ನಾನು ವಾಪಸ್ಸು ಬಂದಾಗ ಬಡ್ಡಿಸಮೇತ ಸಾಲ ವಾಪಸ್ಸು ಕೊಡುವೆನು. ಹಣದ ತುರ್ತು ಅತ್ಯಗತ್ಯವಾಗಿದೆ. ನನಗೆ ಗೊತ್ತಿರುವವರು ಕೆಲವೇ ಮಂದಿಯನ್ನು ನಾನು ಕೇಳಿದೆ. ಶ್ರೀ ದಳವಿಯವರನ್ನು ಕೇಳಿದಾಗ ಮತ್ತು ಅವರು ತಮ್ಮನ್ನು ನೇರವಾಗಿ ಕೇಳುವಂತೆ ಪತ್ರ ಬರೆಯಲು ಹೇಳಿದರು. ತಾವು ತಪ್ಪು ತಿಳಿದುಕೊಳ್ಳುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಘನತೆವೆತ್ತ ತಾವು ಆರೋಗ್ಯವಾಗಿರುವಿರೆಂದು ಭಾವಿಸುತ್ತೇನೆ. ಭಾರತದಲ್ಲಿ ಮುನ್ನಡೆಯುತ್ತಿರುವ, ಸಾಮಾಜಿಕ ಜನತಂತ್ರದ ಕಡೆಗೆ ಸಾಗುತ್ತಿರುವ ಮಹಾ ಆಂದೋಲನಕ್ಕೆ ತಾವು ಮಹಾಸ್ತಂಭವಾಗಿದ್ದೀರಿ, ನೀವು ಎಂದೆಂದಿಗೂ ನಮಗೆ ಬೇಕಾಗಿದ್ದೀರಿ.

ತಮ್ಮ ಉಪಕಾರಕ್ಕಾಗಿ ನಾನು ನಿಮ್ಮ ಪ್ರತ್ಯುತ್ತರವನ್ನು ನಿರೀಕ್ಷಿಸುತ್ತಿರುವೆನು.

**(ಕೊಲ್ಹಾಪುರ ಪತ್ರಾಗಾರ, ಶಾಹು ದಫ್ತರ್, ಪತ್ರಸಂಖ್ಯೆ ನಂ. ಆರ್–೧೩೪೨೦)**

---

೨೭

# ಶಾಹುರವರ ಮರಣಕ್ಕೆ ಅಂಬೇಡ್ಕರರ ಕಂಬನಿ

ಮೇ ೧೦, ೧೯೨೨

*ಶಾಹು ಮಹಾರಾಜರು ಮರಣ ಹೊಂದಿದಾಗ ಡಾ. ಅಂಬೇಡ್ಕರರು ಇಂಗ್ಲೆಂಡಿನಲ್ಲಿದ್ದರು. ಅವರು ಈ ಸಂತಾಪ ತಂತಿಯನ್ನು ಛತ್ರಪತಿ ರಾಜಾರಾಮ್ ಮಹಾರಾಜರಿಗೆ ಕಳುಹಿಸಿದ್ದರು.*

---

ಘನತೆವೆತ್ತ ಮಹಾರಾಜರ ಮರಣದ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿ ನನಗೆ ತುಂಬಾ ಆಘಾತವಾಯಿತು. ಈ ವಿಕೋಪದ ಘಟನೆಯಿಂದ ನನಗೆ ಎರಡು ರೀತಿಯಲ್ಲಿ ನೋವಾಗಿದೆ. ಅವರ ಮರಣದಿಂದ ನಾನು ವೈಯಕ್ತಿಕವಾಗಿ ಒಬ್ಬ ಒಳ್ಳೆಯ ಸ್ನೇಹಿತನನ್ನು ಕಳೆದುಕೊಂಡೆ. ಮತ್ತು ಹಿಂದುಳಿದ ವರ್ಗಗಳು ಒಬ್ಬ ಮಹಾ ಪರೋಕಾರಿಯನ್ನು ಮತ್ತು ತಮ್ಮ ಧ್ಯೇಯಗಳ ಮಹಾನಾಯಕನನ್ನು ಕಳೆದುಕೊಂಡಿವೆ. ನನ್ನ ದುಃಖದ ನಡುವೆ, ಈ ಮಹಾ ಅಗಲಿಕೆಗೆ ನಾನು ನನ್ನ ತೀವ್ರ ದುಃಖದೊಂದಿಗೆ ಮತ್ತು ಪ್ರಾಮಾಣಿಕ ಸಹಾನುಭೂತಿಯನ್ನು ತಮಗೆ ಮತ್ತು ರಾಜವಿಧವೆ ರಾಣಿಸಾಹೇಬರಿಗೆ ತಿಳಿಸುತ್ತೇನೆ.

ಡಾ. ಬಿ. ಆರ್. ಅಂಬೇಡ್ಕರ್

ಲಂಡನ್, ೧೦ ಮೇ, ೧೯೨೨

**(ಕೊಲ್ಹಾಪುರದ ಛತ್ರಪತಿ ಮಹಾರಾಜರ ನೆನಪುಗಳು, ಸಂಪುಟ ೧೧)**

---

ಸಂಪುಟ – II

(ವಿಭಾಗ – IV)

# ಮ್ಯಾನಿಫೆಸ್ಟೋಗಳು, ಅಧಿಸೂಚನೆಗಳು ಮತ್ತು ಆಜ್ಞೆಗಳು

# ಸಂಪಾದಕರ ಟಿಪ್ಪಣಿ

೧೮೯೪ರಿಂದ ೧೯೨೨ರವರೆಗಿನ ಅವಧಿಯ ಶಾಹು ಮಹಾರಾಜರ ಆಡಳಿತದಲ್ಲಿನ ಮ್ಯಾನಿಫೆಸ್ಟೋಗಳ, ಅಧಿಸೂಚನೆಗಳ, ಆಜ್ಞೆ ಮೊದಲಾದವುಗಳ ಸಂಗ್ರಹವು ಇಲ್ಲಿದೆ. ಕೊಲ್ಹಾಪುರದ ಪತ್ರಾಗಾರಗಳ ದಾಖಲೆಗಳ "ಕರವೀರ ಸರಕಾರದ ಗೆಜೆಟ್ಟಿ"ನಿಂದ ಇವುಗಳನ್ನು ತೆಗೆದುಕೊಳ್ಳಲಾಗಿದೆ.

ವಿವಿಧ ಇಲಾಖೆಗಳು (ಉದಾ: ಕಂದಾಯ, ಶಿಕ್ಷಣ, ಶಾಸನಗಳು ಮೊದಲಾದ) ಗೆಜೆಟ್ಟಿನಲ್ಲಿ (ರಾಜ್ಯ ಪತ್ರದಲ್ಲಿ) ಪ್ರಕಟಿಸಿದ ವಿವಿಧ ಅಧಿಸೂಚನೆಗಳಿಗೆ ಹುಜೂರರ ಕಛೇರಿ... ಅಂದರೆ ಶಾಹು ಮಹಾರಾಜರೇ ನೀಡಿದ ಅಂಗೀಕಾರದ ಮೇಲೆ ಆಧಾರಗೊಂಡಿವೆ. ಇಲ್ಲಿ ನಮೂದಿಸಿರುವ ಪ್ರತಿಯೊಂದು ದಾಖಲೆಗೂ ಪ್ರಾರಂಭದಲ್ಲಿ ಸಂಪಾದಕರ ಅಡಿಟಿಪ್ಪಣಿಯಿದೆ. ಹೀಗೆ ಅವುಗಳು ವಿವಿಧ ಇಲಾಖೆಗಳ ಮುಖ್ಯಸ್ಥರ ಹೆಸರುಗಳಲ್ಲಿ ಪ್ರಕಟವಾಗಿದ್ದರೂ ಅವುಗಳನ್ನು ಮಹಾರಾಜರದ್ದೇ ಎಂದು ಭಾವಿಸಬೇಕು.

ಸಂಸ್ಥಾನದಲ್ಲಿನ ವಿವಿಧ ಇಲಾಖೆಗಳು ವಿವಿಧ ವಿಷಯಗಳ ಬಗ್ಗೆ (ವರ್ಗಾವಣೆಗಳು, ನೇಮಕಾತಿಗಳು, ನಿಯೋಜಿತ ತೆರಿಗೆಗಳು ಇತ್ಯಾದಿ) ಹಲವು ನಿರ್ಣಯಗಳನ್ನು ಹುಜೂರ್ ಕಛೇರಿಯ ಟಿಪ್ಪಣಿಗಳಿಗಾಗಿ ಅಲ್ಲಿಗೆ ಕಳುಹಿಸಬೇಕಾಗಿತ್ತು. ಇಲ್ಲಿ ಶಾಹುರವರೇ ಅವುಗಳನ್ನು ಖುದ್ದಾಗಿ ಪರಿಶೀಲಿಸುತ್ತಿದ್ದರು ಮತ್ತು ನಿರ್ಣಯಗಳನ್ನು ಅಂಗೀಕರಿಸುತ್ತಿದ್ದರು ಅಥವಾ ನಿರಾಕರಿಸುತ್ತಿದ್ದರು. ಅಲ್ಲಿಂದ ಮುಂದಕ್ಕೆ, ಪಾಸುಮಾಡಿದ ನಿರ್ಣಯಗಳನ್ನು ಆಜ್ಞೆಗಳ ರೂಪದಲ್ಲಿ ಸಂಬಂಧಪಟ್ಟ ಇಲಾಖೆಗಳಿಗೆ ಕಳುಹಿಸಲಾಗುತ್ತಿತ್ತು. ಆಗ ಮಾತ್ರ ಸಂಬಂಧಪಟ್ಟ ಇಲಾಖೆ ಸರಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸುತ್ತಿತ್ತು. ಹಲವು ಬಾರಿ ಶಾಹುರವರೇ ಸ್ವತಃ ಹುಜೂರ್ ಕಛೇರಿಗೆ ಕೆಲವು ನಿರ್ಣಯಗಳನ್ನು ಕಳುಹಿಸಲು ಸಂಬಂಧಪಟ್ಟ ಇಲಾಖೆಗಳಿಗೆ ಆಜ್ಞೆಮಾಡುತ್ತಿದ್ದರು ಮತ್ತು ಅವುಗಳನ್ನು ರಾಜ್ಯಪತ್ರದಲ್ಲಿ ಆಜ್ಞೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿತ್ತು.

ಕೊಲ್ಹಾಪುರದ ಪತ್ರಾಗಾರದಲ್ಲಿ ಮೂಲ ನಿರ್ಣಯಗಳ ವರ್ಷವಾರು ರಿಜಿಸ್ಟರುಗಳು ಲಭ್ಯವಾಗುತ್ತವೆ. ಈ ನೋಂದಣಿ ಪುಸ್ತಕಗಳಲ್ಲಿ ಅನುಕ್ರಮದ ಸಂಖ್ಯೆ, ಸ್ವೀಕೃತಿಯ ದಿನಾಂಕ, ಕಿರುಇಲಾಖೆ, ವಿಷಯದ ವಸ್ತು, ಅಂತಿಮ ಆಜ್ಞೆಯ ದಿನಾಂಕ ಮತ್ತು ಅಂತಿಮ ಆಜ್ಞೆಗಳನ್ನು ಒಳಗೊಂಡ ಅಂಕಣಗಳಿವೆ. ಅಂತಿಮ ಆಜ್ಞೆಯ ಅಂಕಣದಲ್ಲಿ ನಿರ್ಣಯ ಅಂಗೀಕೃತವೇ ಅಥವಾ ಇಲ್ಲವೇ ಎಂಬ ಅಧಿಸೂಚನೆಯಿದ್ದು, ಮಹಾರಾಜರ ಸಹಿಯಾದ "ಶಾಹು ಛತ್ರಪತಿ" ಎಂದು ಇರುತ್ತದೆ.

"ಕರವೀರ ಸರಕಾರ ಗೆಜೆಟ್ಟಿ"ನಿಂದ ಆಯ್ಕೆಮಾಡಿ ಎತ್ತಿ–ತೆಗೆದ ಭಾಗಗಳನ್ನು ಕೊಡಲಾಗಿದೆ. ಅವುಗಳಲ್ಲಿ ಬಹಳಕ್ಕೆ ಸಾಮಾಜಿಕ ಮಹತ್ವವಿದೆ. ಅವುಗಳನ್ನು ಹಲವು ತನ್ನ ಸಂಸ್ಥಾನದ ಕಲ್ಯಾಣದ ಬಗೆಗಿರುವ ಶಾಹುರವರ ಪ್ರಾಮಾಣಿಕ ಕಾಳಜಿಯನ್ನು ಪ್ರತಿಬಿಂಬಿಸುತ್ತವೆ. ಸಾಮಾಜಿಕ ಸುಧಾರಣೆಗಳಿಗೆ ಸಂಬಂಧಿಸಿದಂತೆ ಹಲವು ಅವರ ಪ್ರಗತಿಪರ ದೃಷ್ಟಿಕೋನವನ್ನು ಮತ್ತು ಅವರ ಸಂಶೋಧನಾತ್ಮಕ ಬುದ್ಧಿಯನ್ನು ಬಿಂಬಿಸುತ್ತವೆ.

ಇತಿಹಾಸದ ಸಾಮಾನ್ಯ ಓದುಗ ಪತ್ರಾಗಾರಗಳಲ್ಲಿ ಅಂತಹ ಐತಿಹಾಸಿಕ ಸಂಪನ್ಮೂಲಗಳ ಕಡೆಗೆ ಸಾಮಾನ್ಯವಾಗಿ ಪತ್ರಾಗಾರಕ್ಕೆ ಹೋಗಲಾರ. ಆದ್ದರಿಂದ ಅಂತಹ ಸಂಪನ್ಮೂಲಗಳನ್ನು ಪರಿಚಯಿಸಲು ಮತ್ತು ಸಂಶೋಧಕನ ಮೂಲಗ್ರಂಥಗಳ ಅವಲೋಕನಕ್ಕಾಗಿ ನಾವು ತಮ್ಮ ಸಂಪಾದಕೀಯ ಟಿಪ್ಪಣಿಗಳೊಂದಿಗೆ ಆಯ್ದು ಎತ್ತಿ ತೆಗೆದ ಭಾಗಗಳನ್ನು ಪ್ರಕಟಿಸುತ್ತಿದ್ದೇವೆ. ಪ್ರತಿಯೊಂದು ಕರಡುಪ್ರತಿ(ಡ್ರಾಫ್ಟ್)ಯ ಕೊನೆಯಲ್ಲಿ, ರಾಜ್ಯಪತ್ರದ ಭಾಗ ಮತ್ತು ಪ್ರಕಟನೆಯ ದಿನಾಂಕವನ್ನು ಸೂಚಿಸಲಾಗಿದೆ.

---

೧

*೧೮೯೪ರಲ್ಲಿ ಶಾಹುರವರ ಪಟ್ಟಾಭಿಷೇಕದ ಸಂದರ್ಭದಲ್ಲಿ ಅವರು ತನ್ನ ಎಲ್ಲಾ ಪ್ರಜೆಗಳಿಗಾಗಿ ಒಂದು ಮ್ಯಾನಿಫೆಸ್ಟೋ ಘೋಷಣಾಪತ್ರವನ್ನು ಪ್ರಕಟಿಸುತ್ತಾರೆ. ಅದು ತನ್ನ ಪ್ರಜೆಗಳ ಕಲ್ಯಾಣ ಮತ್ತು ಸಂವೃದ್ಧಿಯ ಬಗ್ಗೆ ಅವರ ಪ್ರಾಮಾಣಿಕ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತದೆ.*

---

**ಘೋಷಣಾ ಪತ್ರ**

**ಶ್ರೀ ರಾಜ ಶಾಹು ಛತ್ರಪತಿ ಸ್ವಾಮಿ ಅವರಿಂದ**

**ಸ್ವಸ್ತಿ ಶ್ರೀ ರಾಜ್ಯಾಭಿಷೇಕ, ಶಕೆ ೨೨೦, ವಿಜಯನಾಮ ಸಂವತ್ಸರ,**

**ಫಾಲ್ಗುಣ ವದ್ಯ ೧೧, ಇಂದುವಸರೆ**

ನಾನು ಅಪ್ರಾಪ್ತ ವಯಸ್ಕನಾಗಿರುವುದರಿಂದ ಕೊಲ್ಹಾಪುರ ಸಂಸ್ಥಾನದ ಆಡಳಿತವನ್ನು 'ಆಡಳಿತ ಪರಿಷತ್ತು' ನಡೆಸುವುದಾಗಿ ಈ ಮೂಲಕ ನಮ್ಮೆಲ್ಲ ಪ್ರಜೆಗಳಿಗೆ ಘೋಷಣೆಯ ಮೂಲಕ ತಿಳಿಸಲಾಗಿತ್ತು. ಈಗ ನಾವು ಇಂದು ವಯಸ್ಕರಾಗಿದ್ದೇವೆ. ಆಡಳಿತ ಪರಿಷತ್ತಿನ ಆಡಳಿತ ಮುಕ್ತಾಯಗೊಳ್ಳುತ್ತದೆ ಮತ್ತು ಸಂಸ್ಥಾನದ ಆಡಳಿತದ ಹೊಣೆಗಾರಿಕೆ ಇಂದು ನಮ್ಮ ಮೇಲಿದೆ. ಅದರ ಪ್ರಕಾರವಾಗಿ ನಾವು ಇಂದಿನಿಂದ ಅಂದರೆ ಏಪ್ರಿಲ್ ೨, ೧೮೯೪ರಿಂದ ಆಡಳಿತ ನಡೆಸಲು ಪ್ರಾರಂಭಿಸಿದ್ದೇವೆ.

ನಮ್ಮ ಪ್ರಜೆಗಳು ಸಂತೃಪ್ತರಾಗಿರಬೇಕು ಮತ್ತು ಸಂತೋಷವಾಗಿರಬೇಕು. ಅವರ ಏಳಿಗೆ ಸದಾ ಪ್ರವರ್ಧಮಾನವಾಗಿರಬೇಕು ಮತ್ತು ನಮ್ಮ ಸಂಸ್ಥಾನ ಸದಾ ಸಮೃದ್ಧಿ ಹೊಂದಬೇಕೆಂಬುದು ನಮ್ಮ ಪ್ರಾಮಾಣಿಕ ಬಯಕೆಯಾಗಿದೆ. ಈ ಅಭಿಲಾಷೆಯನ್ನು ನೆರವೇರಿಸಲು ನಮ್ಮ ಎಲ್ಲಾ ಸಂಬಂಧಿಗಳು, ಜಹಗೀರುದಾರರು, ಇನಾಂದಾರರು, ಸರದಾರರು, ಗಣ್ಯವ್ಯಕ್ತಿಗಳು, ವ್ಯಾಪಾರಸ್ಥರು, ಕಾರ್ಮಿಕರು ಮತ್ತು ಎಲ್ಲಾ ಪ್ರಜೆಗಳು ಪರಿಶುದ್ಧ ಮನಸ್ಸಿನಿಂದ ಮತ್ತು ನಿಷ್ಠೆಯಿಂದ ಸಂಪೂರ್ಣ ಸಹಕಾರ ನೀಡುವರೆಂದು ನಾವು ಭರವಸೆ ಹೊಂದಿದ್ದೇವೆ. ನಮ್ಮ ಆಡಳಿತ ದೀರ್ಘವಾಗಿರಲೆಂದು ಮತ್ತು ಅದರ ಪ್ರಯತ್ನಗಳಲ್ಲಿ ಸಫಲವಾಗಲೆಂದು ನಾನು ತುಂಬ ಶ್ರದ್ಧೆಯಿಂದ ಸರ್ವಶಕ್ತನಾದ ದೇವರಲ್ಲಿ ಪ್ರಾರ್ಥನೆ ಮಡುತ್ತೇನೆ.

ಕೊಲ್ಹಾಪುರದಲ್ಲಿ ಹೊರ ಅರಮನೆ
ದಿನಾಂಕ ೨, ಏಪ್ರಿಲ್ ೧೮೯೪

**(ಕರವೀರ ಸರಕಾರ ಗೆಜೆಟ್, ಭಾಗ-೧, ೨/೪/೧೮೯೪)**

---

೨

*ಛತ್ರಪತಿಯವರು ಬೇಟೆಯಾಡುವ ಪ್ರಸಂಗಗಳಲ್ಲಿ ಅಥವಾ ಸರಕಾರಿ ನೌಕರರು ಅಧಿಕೃತ ಪ್ರವಾಸಮಾಡುವಾಗ ಸಾಮಾನ್ಯ ಜನರಿಂದ ವಿವಿಧ ಖರೀದಿಗಳನ್ನು ಮಾಡುವುದಕ್ಕೆ ಸಂಬಂಧಿಸಿದ ಆಜ್ಞೆ ಇದು. ಅಂತಹ ಖರೀದಿಗಳನ್ನು ಮಾಡುವಾಗ ಸಾಮಾನ್ಯ ಜನರು ತೊಂದರೆಗೆ ಒಳಗಾಗಬಾರದೆಂಬ ಶಾಹುರವರ ಕಾಳಜಿಯನ್ನು ಈ ಆಜ್ಞೆ ಪ್ರತಿಬಿಂಬಿಸುತ್ತದೆ. ಛತ್ರಪತಿ ಶಿವಾಜಿಯವರು ತಮ್ಮ ಚಿಪ್ಲುನ್ ಆಧಾರಿತ ಮಿಲಿಟರಿ ಕ್ಯಾಂಪಿನಲ್ಲಿ ಅಂಥದ್ದೇ ಒಂದು ಪ್ರಸಿದ್ಧ ಆಜ್ಞೆಯನ್ನು ಹೊರಡಿಸಿದ್ದರು.*

---

**ಸಾಮಾನ್ಯ ಇಲಾಖೆ**

ಘನತೆವೆತ್ತ ಮಾನ್ಯ ಛತ್ರಪತಿ ಸಾಹೇಬ್ ಅವರ ಬೇಟೆಯ ಪ್ರಸಂಗಗಳಲ್ಲಿ ಅಥವಾ ಈ ಸಂಸ್ಥಾನದ ಕೆಳ ಮತ್ತು ಉಚ್ಚ ಅಧಿಕಾರಿಗಳು ಅಧಿಕೃತ ಪ್ರವಾಸಗಳಿಗೆ ಹೋಗುವಾಗ ವಿವಿಧ ವಸ್ತುಗಳ ಖರೀದಿಯನ್ನು ನಿಯಂತ್ರಿಸುವ ನಿಯಮಾವಳಿಗಳು.

ಮಾನ್ಯ ಘನತೆವೆತ್ತ ಮಹಾರಾಜರು ಬೇಟೆಯಾಡಲು ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಪ್ರವಾಸ ಹೊರಟಾಗ, ಹೇಳಿದ ಕ್ಷೇತ್ರದ ಮಾಮಲೇದಾರರು ಕ್ಷೇತ್ರದ ಫೌಜುದಾರರಿಗೆ ಅತಿಥಿ ಸತ್ಕಾರಕ್ಕೆ ಆಜ್ಞೆ ಮಾಡುತ್ತಾರೆ ಎಂಬುದು ಮಹಾರಾಜರ ಅನುಭವ ದೃಢೀಕರಿಸುತ್ತದೆ. ಫೌಜುದಾರರು ಬದಲಿಗೆ ಈ ಕೆಲಸವನ್ನು ತನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಒಬ್ಬ ಪೊಲೀಸನಿಗೆ ವಹಿಸುತ್ತಾರೆ. ಆಗ ಪೊಲೀಸನು ಒಂದು ಸ್ಥಳದಲ್ಲಿ ಕುರಿಯನ್ನು ಸಂಗ್ರಹಿಸುತ್ತಾನೆ. ಮೊಟ್ಟೆಗಳು ಮತ್ತು ಕೋಳಿಗಳನ್ನು ನೆರೆಹೊರೆಯ ಪ್ರದೇಶಗಳಲ್ಲಿ ಸಂಗ್ರಹಿಸುತ್ತಾನೆ. ಮಾನ್ಯ ಮಹಾರಾಜರು ಒಂದು ನಿರ್ದಿಷ್ಟ ಪ್ರದೇಶದಿಂದ ಹೊರಟಾಗ ಕೆಲಸದ ಮೇಲೆ ಹಾಜರಿಯಿರುವ ಗುಮಾಸ್ತನು ಸಂಬಂಧಪಟ್ಟ ಅಧಿಕಾರಿಯಿಂದ ಲೆಕ್ಕಗಳನ್ನು ಪಡೆದುಕೊಳ್ಳುತ್ತಾನೆ ಮತ್ತು ಆಹಾರ ಪದಾರ್ಥಗಳನ್ನು ಪಡೆದಿದ್ದಕ್ಕೆ ಹಣವನ್ನು ಪಾವತಿ ಮಾಡುತ್ತಾನೆ. ಈ ಒಟ್ಟು ಹಣವು ಅವನಿಂದ ಫೌಜುದಾರನಿಗೆ, ಫೌಜುದಾರನಿಂದ ಪೊಲೀಸಿನವನಿಗೆ, ಪೊಲೀಸಿನವನಿಂದ ಗ್ರಾಮದ ಪಾಟೀಲನಿಗೆ ಮತ್ತು ಪಾಟೀಲನಿಂದ ಅಂತಿಮವಾಗಿ ಯಾರಿಂದ ವಸ್ತುಗಳನ್ನು ಖರೀದಿಮಾಡಲಾಗಿತ್ತೊ ಅವನಿಗೆ ಸಂದಾಯವಾಗುತ್ತದೆ. ಹೀಗೆ ಹಣಪಾವತಿಯನ್ನು ಮಾಡಬೇಕೆಂದು ನಿರೀಕ್ಷಿಸಲಾಗಿತ್ತು. ಆದರೆ ಅಂತಿಮ ವ್ಯಕ್ತಿ ಈ ಹಣವನ್ನು ಪಡೆದನೆಂಬುದು ಸಂದೇಹಾಸ್ಪದವಾಗಿತ್ತು. ಇದನ್ನು ತಪ್ಪಿಸುವ ಸಲುವಾಗಿ ಮತ್ತು ಬಡ ಪ್ರಜೆಗಳು ತಾವು ಮಾರಿದ ವಸ್ತುಗಳಿಗೆ ಪೂರ್ತಿ ಮೌಲ್ಯ ಸಿಗುವ ಸಲುವಾಗಿ ಮತ್ತು ಘನತೆವೆತ್ತ ಮಹಾರಾಜರ ಪ್ರವಾಸದ ಫಲವಾಗಿ ಯಾವ ಪ್ರಜೆಯು ಕಷ್ಟಕ್ಕೊಳಗಾಗಬಾರದೆಂದು ಖರೀದಿ ಮತ್ತು ಸರಬರಾಜುಗಳಿಗಾಗಿ ಈ ಕೆಳಕಂಡ ನಿಯಮಾವಳಿಗಳನ್ನು ರೂಪಿಸಿ ಘೋಷಿಸಲಾಗಿದೆ –

೧. ಗೋಧಿ, ಜೋಳ, ಅಕ್ಕಿ, ಬೇಳೆ–ಕಾಳುಗಳು, ಹಿಟ್ಟು, ಸಕ್ಕರೆ, ಮಸಾಲೆ ಪದಾರ್ಥ ಮೊದಲಾದವುಗಳು ಮಹಾರಾಜರಿಗೆ ಅವಶ್ಯಕವಾದ ವಸ್ತುಗಳನ್ನು ಕೊಲ್ಹಾಪುರದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಖಾಸಗಿ ಇಲಾಖೆ (ರಾಜನ ಖಾಸಗಿ ಇಲಾಖೆ) ಖರೀದಿ ಮಾಡಬೇಕು.

೨. ಖಾಸಗಿ ಇಲಾಖೆಯಿಂದ ಒಬ್ಬ ವ್ಯಕ್ತಿಯನ್ನು ಕುರಿ, ಮೊಟ್ಟೆ ಅಥವಾ ಕೋಳಿಗಳನ್ನು ಖರೀದಿಮಾಡಲು ಮುಂಚಿತವಾಗಿಯೇ ಕಳುಹಿಸಬೇಕು. ಅವನು ಹತ್ತಿರದ ಮಾರುಕಟ್ಟೆಯಲ್ಲಿ ಮಾರುಕಟ್ಟೆ ದಿನ ನಗದುಕೊಟ್ಟು ಬೇಕಾದ ವಸ್ತುಗಳನ್ನು ಖರೀದಿಮಾಡಬೇಕು. ಅಂಥದ್ದೇ ಪದಾರ್ಥ ಸರಕುಗಳನ್ನು ಖರೀದಿಮಾಡಬೇಕು. ಜೊತೆಗೆ ಕಟ್ಟಿಗೆ(ಸೌದೆ)ಯನ್ನು ಖರೀದಿಮಾಡಿ ಸರಬರಾಜು ಮಾಡಬೇಕು. ಖರೀದಿ ಮಾಡಿದ್ದಕ್ಕೆ ಪಾವತಿ ಮಾಡುವಾಗ ಕಂದಾಯದ ಅಧಿಕಾರಿ ಇದ್ದರೆ ಅವನ ಹಾಜರಿಯಲ್ಲಿ ಪಾವತಿ ಮಾಡಬೇಕು ಮತ್ತು ಸಹಿಯನ್ನು ಪಡೆಯಬೇಕು. ಅಂಥ ಅಧಿಕಾರಿ ಇಲ್ಲದಿದ್ದರೆ ಪಾವತಿಗಳನ್ನು ಗ್ರಾಮದ ಪಾಟೀಲ ಅಥವಾ ಕುಲಕರ್ಣಿಯವರ ಉಪಸ್ಥಿತಿಯಲ್ಲಿ ಮಾರಿ ಹಣ ಪಡೆದವನಿಂದ ರಸೀತಿಯನ್ನು ಪಡೆಯಬೇಕು.

೩. ಅಂಥ ವಸ್ತುಗಳನ್ನು ಪಡೆಯಲು ಪೋಲೀಸ್ ಸಿಬ್ಬಂದಿಗೆ ಯಾವುದೇ ಸಂದರ್ಭದಲ್ಲಿ ನಿರ್ದೇಶಿಸಬಾರದು. ಆದರೆ ಖಾಸಗಿ ಇಲಾಖೆಯ ಗುಮಾಸ್ತ ಆ ವಸ್ತುಗಳನ್ನು ಖರೀದಿಸುವಲ್ಲಿ ತೊಂದರೆ ಅನುಭವಿಸಿದರೆ ಅನಿವಾರ್ಯವಾದ ಸಂದರ್ಭದಲ್ಲಿ ಪೋಲೀಸ್ ಸಿಬ್ಬಂದಿಯ ಸಹಾಯ ಕೋರಬಹುದು.

೪. ಪರಿಚಾರಕರ ಸಮೇತ ಹಾಲಿನ ಸರಬರಾಜಿಗಾಗಿ ಎಮ್ಮೆಗಳನ್ನು ಕಳುಹಿಸಬೇಕು. ಒಂದು ವೇಳೆ ಇದು ಸಾಧ್ಯವಾಗದಿದ್ದಲ್ಲಿ ಖಾಸಗಿ ಇಲಾಖೆಯ ಅಂಗಸೇವಕ ಅಥವಾ ಗುಮಾಸ್ತನು ಹತ್ತಿರದ ಹಳ್ಳಿಗೆ ಹೋಗಿ ಅಲ್ಲಿ ರೂಢಿಯಲ್ಲಿರುವ ಬೆಲೆಯನ್ನು ಮಾಲಿಕನಿಗೆ ಕೊಟ್ಟು ಹಾಲನ್ನು ಸಂಗ್ರಹಿಸಬೇಕು. ಮಾನ್ಯ ಘನತೆವೆತ್ತ ಮಹಾರಾಜರು ನಿರ್ಗಮಿಸುವವರೆಗೂ ಪಾವತಿಯನ್ನು ತಡೆಹಿಡಿಯಬಾರದು.

೫. ಹುಲ್ಲು: ಬಹಳಷ್ಟು ಪ್ರದೇಶಗಳಲ್ಲಿ ಸರಕಾರಿ ಹುಲ್ಲುಗಾವಲುಗಳಿವೆ. ಆದ್ದರಿಂದ ಸ್ಥಳೀಯ ಹಳ್ಳಿಗರಿಂದ ಹುಲ್ಲನ್ನು ಖರೀದಿಮಾಡುವುದು ಅನಾವಶ್ಯಕ. ಆದರೂ ಹುಲ್ಲನ್ನು ಖರೀದಿಮಾಡುವ ಸಂದರ್ಭ ಒದಗಿಬಂದರೆ ಹುಲ್ಲು ಮಾರುವವನಿಗೆ ಸ್ಥಳದಲ್ಲೇ ಹಣಪಾವತಿಮಾಡಿ.

೬. ಮಹಾರಾಜರ ಜೊತೆಯಲ್ಲಿ ಬರುವವರಿಗೆ ಬೇಕಾದ ವಸ್ತುಗಳನ್ನು ಅಂಗಸೇವಕನು ಖಾಸಗಿ ಇಲಾಖೆಯಿಂದ ಒದಗಿಸುವನು. ಇದರಿಂದ ಅಂತಹ ಅವಶ್ಯಕತೆಗಳನ್ನು ಉಚಿತವಾಗಿ ಒದಗಿಸುವುದಿಲ್ಲವೆಂಬುದನ್ನು ಅರ್ಥಮಾಡಿಕೊಳ್ಳಿ, ಅಂಗರಕ್ಷಕನು ದರ್ಬಾರಿನಿಂದ ಇತರೆ ವಸ್ತುಗಳ ಮತ್ತು ದವಸಧಾನ್ಯಗಳ ಒಂದು ಪಟ್ಟಿಯನ್ನು ಹೊಂದಿರಬೇಕು ಮತ್ತು ಸೂಕ್ತ ಪಾವತಿಯನ್ನು ಪಡೆದು ಈ ವಸ್ತುಗಳನ್ನು ನೀಡಬೇಕು.

೭ ಕರವೀರ ಸಂಸ್ಥಾನದ ಅಧಿಕಾರಿಗಳು ತಾಲ್ಲೂಕುವಾರು ನಿರೀಕ್ಷೆಗಾಗಿ ಚಲಿಸುತ್ತಿರುವವರು. ಪಾಟೀಲ/ಕುಲಕರ್ಣಿಗಳ ಮೂಲಕ ಅವಶ್ಯಕ ವಸ್ತುಗಳನ್ನು ಖರೀದಿಸಬೇಕು ಮತ್ತು ಸ್ಥಳದಲ್ಲೇ ಪಾವತಿಸಬೇಕು. ಪಾವತಿಗಳು/ಸಾಲಗಳು ಅವರು ಹೋಗುವವರೆಗೂ ಉಳಿಸಿಕೊಳ್ಳಬಾರದು.

೮. ಭೂದರಗಡ್, ಪನ್ಹಾಲ ಮತ್ತು ಅದೇ ಪ್ರದೇಶಗಳಿಗೆ ಸೇರಿಕೊಂಡಿರುವ ಕೊಂಕಣದ ಹತ್ತಿರದ ಬೆಟ್ಟಗುಡ್ಡಗಳ ಮತ್ತು ಬಡಪ್ರದೇಶಗಳಿವೆ. ಈ ಪ್ರದೇಶಗಳಲ್ಲಿ ವಸ್ತುಗಳು ಸಿಗುವುದು ಬಹಳ ಕಷ್ಟ. ಆದ್ದರಿಂದ ನಗದುಕೊಟ್ಟು ಮಾರುಕಟ್ಟೆ ದಿನಗಳಲ್ಲಿ ಯಾವ ಯಾವ ಮಾರುಕಟ್ಟೆಗಳ ಸ್ಥಳಗಳಲ್ಲಿ ವಸ್ತುಗಳು ದೊರೆಯುತ್ತವೆ. ಅಲ್ಲಲ್ಲಿ ದವಸಧಾನ್ಯಗಳ ಶಾಪುಗಳ ಮೂಲಕ ಅವಶ್ಯಕ ವಸ್ತುಗಳನ್ನು ಖರೀದಿ ಮಾಡಬೇಕು.

೯. ಗೌರವಾನ್ವಿತ ರಾಜಕೀಯ ಏಜೆಂಟ್ ಅಥವಾ ಬ್ರಿಟಿಷ್ ಸರಕಾರದ ಇತರೆ ಅಧಿಕಾರಿಗಳು ಪ್ರದೇಶಕ್ಕೆ ಭೇಟಿ ನೀಡಿದಾಗ ಸಂಬಂಧಿಸಿದ ಮಾಮಲೆದಾರ, ಶಿರಸ್ತೆದಾರ ಮೊದಲಾದವರು ಯಾವುದೇ ಖರೀದಿ ಅಥವಾ ಅವರು ಮಾಡುವ ಎತ್ತುವಳಿಗೆ ನಗದು ಖಾತರಿಗೊಳಿಸಬೇಕು ಮತ್ತು ಸಂಬಂಧಪಟ್ಟ ಮಾರಾಟಗಾರನಿಗೆ ಪಾವತಿ ಮಾಡಬೇಕು.

ದಿನಾಂಕ ೧೫ ಮಾರ್ಚ್, ೧೮೯೪

ಆಡಳಿತ ಪರಿಷತ್ತಿನ ಆಜ್ಞೆಯ ಮೇರೆಗೆ

ಎಂ. ಕುವರ್ಜಿ
ದಿವಾನ್ ಸರಕಾರ, ಕರವೀರ

(ಕರವೀರ ಸರಕಾರ ಗೆಜೆಟ್, ಭಾಗ–೧, ೧೪/೪/೧೮೯೪)

---

೩

*ಪಶುವೈದ್ಯ ಆಸ್ಪತ್ರೆಗಳಲ್ಲಿ ಬಡಜನರ ಪಶುಗಳಿಗೆ ಹುಲ್ಲು ಸರಬರಾಜು ಮಾಡುವ ಬಗ್ಗೆ ವೈದ್ಯಕೀಯ ಇಲಾಖೆಯ ಅಧಿಸೂಚನೆ.*

---

## ಅಧಿಸೂಚನೆ

**ವೈದ್ಯಕೀಯ ಇಲಾಖೆ**

ದಿನಾಂಕ ೧೪, ಮೇ ೧೮೯೫

ರೋಗಪೀಡಿತ ಪಶುಗಳ ಮಾಲಿಕರು ಕಡುಬಡವರಾಗಿದ್ದು ಸಂಪೂರ್ಣವಾಗಿ ಮೇವನ್ನು ಒದಗಿಸಲು ಅಸಮರ್ಥರೆಂಬುದನ್ನು ಖಾತರಿಪಡಿಸಿಕೊಂಡು ಸರಕಾರವು ಅವರಿಗೆ ಯಾವ ಬೆಲೆಯಿಲ್ಲದೆ ಉಚಿತವಾಗಿ ಆಹಾರ ಮತ್ತು ಹುಲ್ಲನ್ನು ಕೊಲ್ಹಾಪುರದಲ್ಲಿರುವ ಶೇರಿಬಾಗಿನ ಎದುರಿನಲ್ಲಿರುವ ಪಶುವೈದ್ಯ ಆಸ್ಪತ್ರೆಯಲ್ಲಿ ನೀಡಲಾಗುವುದೆಂದು ಈ ಮೂಲಕ ಸಾರ್ವಜನಿಕರಿಗೆ ತಿಳಿಸಲಾಗಿದೆ.

ಇದರ ಜೊತೆಗೆ, ತಮ್ಮ ಎತ್ತುಗಳ, ಬೀಜದ ಕುದುರೆಗಳ ಮತ್ತು ಕುದುರೆಗಳಿಗೆ ಸಂತಾನಹರಣ ಮಾಡಿಸಬಯಸುವರು ಅವುಗಳನ್ನು ಉಚಿತ ಸಂತಾನಹರಣ ಚಿಕಿತ್ಸೆಗಾಗಿ ಆಸ್ಪತ್ರೆಗೆ ಕರೆದುಕೊಂಡು ಬರಬಹುದು.

ಎಂ. ಕುವರ್ಜಿ

ದಿವಾನ್ ಸರಕಾರ, ಕರವೀರ

(ಕರವೀರ ಸರಕಾರ ಗೆಜೆಟ್, ಭಾಗ–೧, ದಿನಾಂಕ–೧೮/೫/೧೮೯೫)

---

೪

*ಸುರಕ್ಷಿತ ಕಬ್ಬು ಅರೆಯುವ ಸಾಧನದ ಸಂಶೋಧನೆಗೆ ಬಹುಮಾನ ನೀಡುವ ಶಾಹುರವರ ಆಜ್ಞೆಯ ಘೋಷಣೆ.*

---

**ಜಾಹಿರಾತು**

**ಸಾಮಾನ್ಯ ಇಲಾಖೆ**

೨೯, ಮೇ ೧೮೯೫

ಕಬ್ಬು ಅರೆಯುವ ಯಂತ್ರಕ್ಕೆ ಕಬ್ಬು ನೀಡುವ ವ್ಯಕ್ತಿಯ ಕೈ ಗಾಯಗೊಂಡ ಮತ್ತು ಬೆರಳುಗಳು ಪುಡಿ-ಪುಡಿಯಾದ ಹಲವು ದುರ್ಘಟನೆಗಳು ಮತ್ತೆ ಮತ್ತೆ ಆಗುತ್ತಿರುವುದನ್ನು ನೋಡಲಾಗುತ್ತಿದೆ. ದರ್ಬಾರಿನ ಸರ್ಜನರಿಂದ ವರದಿಯನ್ನು ತರಿಸಿಕೊಂಡು ಅದನ್ನು ಮಾನ್ಯ ಘನತೆವೆತ್ತ ಮಹಾರಾಜರು ಪರಿಶೀಲಿಸುತ್ತಿದ್ದಾರೆ ಅವರ ಪರಿಶೀಲನೆಯ ವರದಿಯ ನಂತರ ಈ ಕೆಳಗಿನ ಘೋಷಣೆಯನ್ನು ಪ್ರಕಟಿಸಲಾಗಿದೆ.

ಕಬ್ಬು ಅರೆಯುವ ಕೆಲಸ ಮಾಡುತ್ತಿರುವಾಗ ಆಕಸ್ಮಿಕವಾಗಿ ಕೈ ಅದರಲ್ಲಿ ಸಿಕ್ಕಿಕೊಂಡಾಗ ಗಾಯವಾಗದೆ ಮಾನವನ ಕೈ ಕ್ಷೇಮವಾಗಿರುವಂತಹ ಕಬ್ಬು ಅರೆಯುವ ಯಂತ್ರವನ್ನು ಕಂಡುಹಿಡಿದರೆ ಅಥವಾ ಅಂತಹ ವಿಚಾರ ಹೊಂದಿದ್ದರೆ, ಅಂತಹ ಒಂದು ವಿಚಾರವಿದ್ದರೆ ಅಥವಾ ಜನವರಿ ೧, ೧೮೯೬ಕ್ಕಿಂತ ಮೊದಲು ಕಂಡುಹಿಡಿದಿದ್ದರೆ, ಅಂಥವರಿಗೆ ಸೂಕ್ತ ಬಹುಮಾನ ನೀಡಲಾಗುವುದು. ಪರಿಕಲ್ಪನೆಯು ಅತಿ ದುಬಾರಿಯಾಗದಿರಲಿ. ಅಂತಹ ವಿಚಾರವನ್ನು ಹೊಂದಿರುವವರು ಒಂದು ಮಾದರಿಯನ್ನು ತಯಾರು ಮಾಡಬೇಕು ಮತ್ತು ಅದನ್ನು ಈ ಕೆಳಗೆ ಸಹಿಮಾಡಿದವರಿಗೆ ತಿಳಿಸಿದ ದಿನಾಂಕದಂದು ಮಂಡಿಸಬೇಕು.

ಎಂ. ಕುವರ್ಜಿ

ದಿವಾನರು, ನಿಸ್‌ಬಾತ ಸರಕಾರ್, ಕರವೀರ

(ಕರವೀರ ಸರಕಾರ ಗೆಜೆಟ್, ಭಾಗ-೧, ಜೂನ್ ೧೮೯೫)

---

೫

*ಮರಾಠ ಯುವಕರಾದ ಭಾಸ್ಕರರಾವ್ ಜಾಧವ್ ಅವರು ಉತ್ತಮ ದರ್ಜೆಯಲ್ಲಿ ಎಂ. ಎ. ಯನ್ನು ಪಾಸುಮಾಡಿದ ವಿಷಯವನ್ನು ತಿಳಿದ ಶಾಹುರವರು ಅವರನ್ನು ವಿಶೇಷವಾಗಿ ಆಹ್ವಾನಿಸಿದರು ಮತ್ತು ಅವರನ್ನು ಸಹಾಯಕ 'ಸರ್‌ಸುಭೆ'ಯಾಗಿ ನೇಮಕಮಾಡಿದರು. ಆಜ್ಞೆ,*

---

**ಕಂದಾಯ ಇಲಾಖೆ**

ದಿನಾಂಕ ೮ ಜೂನ್ ೧೮೯೫

ಸಹಾಯಕ ಸರ್‌ಸುಭೆ ಹುದ್ದೆಯು ಖಾಲಿ ಇದೆ ಮತ್ತು ಶ್ರೀ ಭಾಸ್ಕರ್ ವಿಠೋಬ ಜಾಧವ್, ಎಂ. ಎ. ಅವರನ್ನು ಹುದ್ದೆಗೆ ನೇಮಿಸಲಾಗಿದೆ. ಅವರ ನೇಮಕಾತಿಯನ್ನು ಹುಜೂರ್ ಸರಕಾರ್‌ರ ನಿರ್ಣಯದ ಸಂಖ್ಯೆ ೧೩೭೬ರ ಪ್ರಕಾರ ಪರೀಕ್ಷಣದ (ಪ್ರೊಬೆಷನರಿ) ಸಹಾಯಕ ಸರ್‌ಸುಭೆಯ ಹುದ್ದೆಯಲ್ಲಿ ತಿಂಗಳಿಗೆ ೧೫೦/– ರೂ. ವೇತನದಲ್ಲಿ ೧, ಜೂನ್ ೧೮೯೫ರಿಂದ ನೇಮಕಮಾಡಿಕೊಳ್ಳಲಾಗಿದೆ.

ಆರ್. ಕೆ. ವೈದ್ಯ
ಸರ್‌ಸುಭೆ

**(ಕರವೀರ ಸರಕಾರ ಗೆಜೆಟ್, ಭಾಗ–೧, ೧೫, ಜೂನ್ ೧೮೯೫)**

---

೬

*ಕೊಲ್ಹಾಪುರ ಸಂಸ್ಥಾನದ ಮರಾಠ ಸಮುದಾಯದಲ್ಲಿ ಖಂಡೇರಾವ್ ಬಾಗಲ್ ಅವರು ಮೊಟ್ಟಮೊದಲನೆಯ ಕಾನೂನು ಪದವೀಧರರಾಗಿದ್ದರು. ಕರವೀರ ಸಂಸ್ಥಾನದಲ್ಲಿ ಅವರು ವಕೀಲಿ ವೃತ್ತಿ ನಿರ್ವಹಿಸಲು ಅನುಕೂಲವಾಗಲೆಂದು ಈ ಕೆಳಗಿನ ಚಾರ್ಟರು... ಖಂಡೇರಾವ್ ಅವರು ಪ್ರಸಿದ್ಧ ಸತ್ಯಶೋಧಕ ಸಮಾಜದ ನಾಯಕರು ಮತ್ತು ಪತ್ರಿಕಾಕರ್ತರೆಂದು ಹೆಸರುವಾಸಿಯಾದವರು.*

---

## ನ್ಯಾಯ ಇಲಾಖೆ

೧೮, ಜನವರಿ ೧೮೯೮

ಶ್ರೀ ಖಂಡೇರಾವ್ ಗೋಪಾಲ ಬಾಗಲ್ ಅವರು ಎಲ್‌ಎಲ್.ಬಿ. ಪರೀಕ್ಷೆಯನ್ನು ಪಾಸುಮಾಡಿದರು. ಹುಜೂರರ ನಿರ್ಣಯ ನಂ. ೯, ೧೮೯೮ನೇ ವರ್ಷವು ಅವರು ಕರವೀರ ಪ್ರಾಂತ್ಯದ ಎಲ್ಲಾ ನ್ಯಾಯಾಲಯಗಳಲ್ಲಿ ವಕೀಲಿ ವೃತ್ತಿ ನಿರ್ವಹಿಸಲು ಸನದನ್ನು ಅವರಿಗೆ ನೀಡಲಾಗಿದೆ.

ಎ. ಬಿ. ಗೋಖಲೆ
(ಸಹಾಯ ಮುಖ್ಯ ನ್ಯಾಯಾಧೀಶರು)

**(ಕರವೀರ ಸರಕಾರ ಗೆಜೆಟ್, ಭಾಗ–೧, ೨೯, ಜನವರಿ ೧೮೯೮)**

---

*ಪ್ಲೇಗು ಹರಡುವುದನ್ನು ತಪ್ಪಿಸುವ ಸಲುವಾಗಿ ಜನರು ಕೊಲ್ಹಾಪುರ ನಗರವನ್ನು ಬಿಡಬೇಕು ಮತ್ತು ಊರಹೊರಗಿನ ತಾತ್ಕಾಲಿಕ ಗುಡಿಸಲುಗಳಲ್ಲಿ ತಂಗಬೇಕೆಂದು ಶಾಹುರವರನ್ನು ಆಜ್ಞೆಮಾಡಿದರು. ಅದರ ಪ್ರಕಾರ ಬಹುಮಟ್ಟಿಗೆ ನಗರವನ್ನು ಜನರು ಬಿಟ್ಟುಬಿಟ್ಟರು. ಆದರೆ ಕೆಲವು ವ್ಯಾಪಾರಸ್ಥರು ಕಾಲಹರಣ ಮಾಡುತ್ತಿದ್ದರು. ಆದ್ದರಿಂದ ಪ್ರತಿಯೊಬ್ಬನೂ ನಗರವನ್ನು ಖಾಲಿಮಾಡಬೇಕೆಂದು ಕೇಳುವ ಶಾಹುರವರು ಎರಡನೇ ಆಜ್ಞೆಯನ್ನು ಹೊರಡಿಸಿದ್ದು ಇಲ್ಲಿದೆ. ಸರಕಾರವು ಕಟ್ಟಿರುವ ಗುಡಿಸಲುಗಳನ್ನು ಬಡವರಿಗೆ ಮತ್ತು ಕಾರ್ಮಿಕರಿಗೆ ಉಚಿತವಾಗಿ ಸರಕಾರ ಕಲ್ಪಿಸಿ ಕೊಡಲಾಗುವುದು ಎಂದು ಈ ಆಜ್ಞೆ ಸಹ ಹೇಳುತ್ತದೆ.*

---

## ಅಧಿಸೂಚನೆ

### ಸಾಮಾನ್ಯ ಇಲಾಖೆ

೨, ಜನವರಿ ೧೮೯೦

ಭಾರತದಲ್ಲಿನ ಇತರೆ ಪ್ರದೇಶಗಳಿಗೆ ಹೋಲಿಸಿದರೆ ಕೊಲ್ಹಾಪುರ ನಗರದಲ್ಲಿ ಪ್ಲೇಗಿನಿಂದ ಸತ್ತವರ ಸಂಖ್ಯೆ ಈ ಮೂರುವರೆ ತಿಂಗಳಲ್ಲಿ ಪ್ಲೇಗ್ ಹರಡಿ ನಂತರ ಕಡಿಮೆಯೆಂದು ಹೇಳಬಹುದು. ಈ ಮಾಹಿತಿ ನಿಮಗೆಲ್ಲರಿಗೂ ತಿಳಿಸುವುದಕ್ಕಾಗಿ ಪ್ರಕಟಿಸಲಾಗಿದೆ. ಇದಕ್ಕೆ ಪ್ರಮುಖ ಕಾರಣ ಪ್ಲೇಗು ಹರಡುವ ಮೂಲಸ್ಥಳವನ್ನು ಸಕಾಲದಲ್ಲಿ ಬಹುಮಟ್ಟಿಗೆ ಎಲ್ಲಾ ಪ್ರಜೆಗಳು ಖಾಲಿ ಮಾಡಿದ್ದಾರೆ. ಬೇರೆ ಸ್ಥಳಗಳ ಅನುಭವಗಳಿಂದ ರೋಗವನ್ನು ತಡೆಯುವುದನ್ನು ಖಚಿತವಾದ ಕ್ರಮವೆಂದು ಕಂಡುಬರುತ್ತದೆ. ಈ ದಿನಗಳಲ್ಲಿ ನಗರದಲ್ಲಿ ನಿವಾಸಿಗಳೇ ಇಲ್ಲ ಮತ್ತು ರೋಗದ ವ್ಯಾಪ್ತಿಯು ಅತಿಕಡಿಮೆ. ಆದ್ದರಿಂದ ಈ ಸಮಯದಲ್ಲಿ ಉಳಿದಿರುವವರು ಹೊರಟುಹೋದರೆ ಈ ಸಾಂಕ್ರಾಮಿಕ ರೋಗ ಹರಡುವುದಿಲ್ಲ. ನಗರ ಖಾಲಿಯಾದ ನಂತರ ಸಾರ್ವಜನಿಕ ಕೆಲಸಗಳಾದ ಸೋಂಕುನಿವಾರಣೆ ಮೊದಲಾದವುಗಳನ್ನು ಸಕಾಲದಲ್ಲಿ ಪರಿಪೂರ್ಣಗೊಳಿಸಲಾಗುವುದು ಮತ್ತು ಜನರು ಮಾನ್‌ಸೂನ್‌ಗಿಂತ ಮೊದಲು ಜನರು ತಮ್ಮ ಮೂಲ ಸ್ಥಳಗಳಿಗೆ ವಾಪಸ್ಸು ಬರಬಹುದು. ಇದು ಮಾನ್ಯರಾದ ಘನತೆವೆತ್ತ ಛತ್ರಪತಿ ಸಾಹೇಬ್, ಸರಕಾರ ಕರ್‌ವೀರ್ ಅವರ ಗಮನಕ್ಕೆ ಬಂದಿದೆ. ಆದ್ದರಿಂದ ಅವರು ನಗರವನ್ನು ಖಾಲಿಮಾಡಬೇಕೆಂದು ಈ ಅಧಿಸೂಚನೆಯನ್ನು ಹೊರಡಿಸಲು ಆಜ್ಞೆಮಾಡಿದ್ದಾರೆ.

೨. ಈ ಅಧಿಸೂಚನೆ ಪ್ರಕಟಗೊಂಡ ೮ ದಿನಗಳೊಳಗೆ ನಗರದ ಉಳಿದ ನಿವಾಸಿಗಳು ನಗರವನ್ನು ಖಾಲಿಮಾಡಿ ನಗರದ ಹೊರಗಡೆ ವಾಸಿಸಬೇಕು.

೩. ಈ ನಿರೂಪಿಸಿದ ದಿನಾಂಕದ ನಂತರವು ಅಂಗಡಿಗಳು ನಗರದಲ್ಲಿಯೇ ಉಳಿದರೆ, ಸಾರ್ವಜನಿಕರ

ಒಡನಾಟದಿಂದ ರೋಗವನ್ನು ಶಾಶ್ವತವಾಗಿ ತಂದಂತೆಯೇ. ಆದ್ದರಿಂದ ಮೇಲೆ ಹೇಳಿದ ಮಿತಿಯ ನಂತರವೂ ಯಾವ ವ್ಯಾಪಾರಸ್ಥನಿಗೂ ವ್ಯಾಪಾರ ಮಾಡಲು ಬಿಡುವುದಿಲ್ಲ. ಸಾರ್ವಜನಿಕರು ದವಸಧಾನ್ಯಗಳನ್ನು ಪಡೆಯಲು ಅನುಕೂಲವಾಗುವಂತೆ ನದಿಯ ಸಮೀಪ ಒಂದು ಮಾರುಕಟ್ಟೆಯ ವ್ಯವಸ್ಥೆಯನ್ನು ಪ್ರತ್ಯೇಕವಾಗಿ ಮಾಡಲಾಗಿದೆ. ಸದ್ಯಕ್ಕೆ ಅದು ಮುಂದುವರಿಯುವುದು.

೪. ತಮ್ಮ ಮನೆಗಳ ಸಂರಕ್ಷಣೆಗಾಗಿ ಕಾವಲುಗಾರನನ್ನು ನೇಮಿಸಬಯಸುವವರು ಅಥವಾ ಮುಂದೆ ನೇಮಿಸಬಯಸುವವರು ತಮ್ಮ ಹೆಸರುಗಳನ್ನು ನಮ್ಮಲ್ಲಿ ನೋಂದಣಿಮಾಡಿಕೊಳ್ಳಬೇಕು. ಅವರಿಗೆ ಪಾಸುಗಳನ್ನು ಕೊಡಲಾಗುವುದು. ಮಿತಿ ಹೇಳಿದ ನಂತರ ಅಂತಹ ಪಾಸು ಇಲ್ಲದವರು ನಗರದಲ್ಲಿ ರಾತ್ರಿ ಇರುವಂತಿಲ್ಲ. ಇಡೀ ನಗರವನ್ನು ಬಹಿರಂಗಗೊಳಿಸಿದಾಗ ಸರಕಾರವು ನಾಗರಿಕರ ಆಸ್ತಿ-ಪಾಸ್ತಿಗಳನ್ನು ರಕ್ಷಿಸುವ ಸಲುವಾಗಿ ಪೊಲೀಸ್ ಪಡೆಯನ್ನು ಹಾಕಲಾಗುವುದು.

೫. ಮೇಲೆ ಹೇಳಿದ ಕಲಂ (೨) ಸೂಚಿಸಿದ ಅಂತಿಮ ಕಾಲಾವಧಿಯ ನಂತರ ನಗರದ ಮಿತಿಗಳಲ್ಲಿ ಯಾರಾದರೂ ವಾಸಮಾಡಿದ್ದು ಕಂಡುಬಂದರೆ ಅವನು/ಅವಳನ್ನು ಬಲಾತ್ಕಾರದಿಂದ ಹೊರಹಾಕಲಾಗುವುದು ಮತ್ತು ಸರಕಾರ ನಿಯಮಾವಳಿಗಳನ್ನು ಅನುಸರಿಸಿಲ್ಲವೆಂದು ಆರೋಪವನ್ನು ಹೊರಿಸಲಾಗುವುದು.

೬ ಕಡುಬಡವರು ತಮ್ಮದೇ ಆದ ಗುಡಿಸಲುಗಳನ್ನು ಕಟ್ಟಿಕೊಳ್ಳಲು ಯಾವ ಬೆಲೆಯಿಲ್ಲದೆ ಉಚಿತವಾಗಿ ಕಟ್ಟಡದ ವಸ್ತುಗಳನ್ನು ಒದಗಿಸುವ ಅನುಕೂಲತೆಯನ್ನು ಕಲ್ಪಿಸಲಾಗಿದೆ. ಈ ವಸ್ತುಗಳನ್ನು (ಸಹಾಯಕ ಅಥವಾ ಹೆಚ್ಚಿನ ಸಹಾಯಕ ಪ್ಲೇಗ್ ಕಮಿಷನರಿಂದ ಪ್ರಶಸ್ತಿ ಪತ್ರ ಪಡೆದು) ಓವರ್‌ಸೀಸ್ ಹೆಡ್‌ಕ್ವಾರ್ಟರ್ಸಿನಿಂದ ಪಡೆಯಬಹುದು.

೭ ತಮ್ಮ ಅನ್ನವನ್ನು ಪಡೆಯಲು ದಿನ ದುಡಿಯುವ ಕಾರ್ಮಿಕರು ಕಲಂಬಿಕೆರೆಯ ಬಳಿ ಸರಕಾರ ನಿರ್ಮಿಸಿರುವ ಗುಡಿಸಿಲುಗಳಲ್ಲಿ ವಾಸಿಸಬಹುದು. ಕಲಂಬಿಕೆರೆಯ ಬಳಿ ಕೈಗೊಂಡಿರುವ ಪರಿಹಾರ ಕಾರ್ಯಗಳು ಅವರಿಗೆ ಉದ್ಯೋಗ ನೀಡುತ್ತದೆ ಮತ್ತು ಕೂಲಿಯನ್ನು ಕೊಡುತ್ತದೆ.

೮. ಜನರು ನಗರಕ್ಕೆ ಆದಷ್ಟು ಬೇಗನೆ ವಾಪಸ್ಸು ಬರಲು ಉದ್ದೇಶಿಸಲಾಗಿದೆ. ಆದ್ದರಿಂದ ನಗರವನ್ನು ಆದಷ್ಟು ಬೇಗನೆ ಖಾಲಿಮಾಡಿದರೆ ಸೋಂಕು ನಿವಾರಣೆಯ ಕೆಲಸವನ್ನು ಬೇಗನೆ ಪ್ರಾರಂಭಮಾಡಬಹುದು.

೯. ಈ ಅಧಿಸೂಚನೆ ಅಥವಾ ಸೋಂಕು ನಿವಾರಣೆಯ ಬಗ್ಗೆ ಯಾವುದೇ ರೀತಿಯ ಮಾಹಿತಿ ಬೇಕಾಗಿದ್ದರೆ ನಮ್ಮ ಕಛೇರಿಗೆ ಬಂದು ಅಥವಾ ಅದನ್ನೇ ಕೇಳುವ ಮೂಲಕ ಪಡೆಯಬಹುದು.

**ಆರ್. ವಿ. ಸಬ್ನೀಸ್**
ದಿವಾನ್ ಮತ್ತು ಪ್ಲೇಗ್ ಕಮಿಷನರ್, ಕೊಲ್ಹಾಪುರ.

**(ಕರವೀರ ಸಂಸ್ಥಾನದ ಗೆಜೆಟ್, ಭಾಗ-೧, ೬, ಜನವರಿ ೧೯೦೦)**

೮

*ಮನೆಗಳ ಮತ್ತು ಗೃಹೋಪಯೋಗಿ ವಸ್ತುಗಳ ಸೋಂಕು ನಿವಾರಣೆಯ ನಿಯಮಗಳು*

## ಅಧಿಸೂಚನೆ

### ಸಾಮಾನ್ಯ ಇಲಾಖೆ

೨೨, ಜನವರಿ ೧೯೦೦

ಕೊಲ್ಹಾಪುರ ನಗರವನ್ನು ಖಾಲಿಮಾಡಬೇಕೆಂದು ಅಧಿಸೂಚನೆಯನ್ನು ಪ್ರಕಟಿಸಿದ ನಂತರ ಎಲ್ಲಾ ಜನರು ನಗರ ಬಿಟ್ಟು ಹೋಗಿದ್ದು ತೃಪ್ತಿತರುವ ವಿಚಾರವಾಗಿದೆ. ಈ ಅಂಟು ಸೋಂಕಿನ ನಿವಾರಣೆಯ ಕೆಲಸ ಕೈಗೆತ್ತಿಕೊಳ್ಳಲಾಗಿದೆ. ಈ ಅಧಿಸೂಚನೆಯನ್ನು ಘನತೆವೆತ್ತ ಮಹಾರಾಜರ ಆಜ್ಞೆಯ ಪ್ರಕಾರ ಹೊರಡಿಸಲಾಗಿತ್ತು.

೨. ಫೆಬ್ರವರಿ ೧, ೧೯೦೦ರಿಂದ ಹದಿನೈದು ದಿನಗಳೊಳಗೆ ಪ್ರತಿಯೊಂದು ಮನೆಯ ಮಾಲಿಕ ಅಥವಾ ಆ ಮನೆಗೆ ಹೊಣೆಯಾಗಿರುವ ಪ್ರತಿಯೊಬ್ಬ ವ್ಯಕ್ತಿಯು ಸರಕಾರಿ ನಿಯಮಗಳಿಗೆ ಅನುಗುಣವಾಗಿ ಆ ಮನೆಯನ್ನು ಸೋಂಕು ನಿವಾರಣೆಯನ್ನು ಮಾಡಿಸುವ ವ್ಯವಸ್ಥೆಯನ್ನು ಕೈಗೊಳ್ಳಬೇಕು. ಸರಕಾರ ನೇಮಿಸಿದ ಉಸ್ತುವಾರಿಯ ಅಧಿಕಾರಿಯು ಈ ಕಾರ್ಯವನ್ನು ಪರಿಶೀಲಿಸುವನು. ಕಾಲದ ಮಿತಿಯೊಳಗೆ ಸೋಂಕು ನಿವಾರಣೆ ಮಾಡಿಸದ ಮನೆಗಳಿಗೆ ಸರಕಾರವೇ ಸೋಂಕು ನಿವಾರಣೆ ಮಾಡಿಸಿ ಭೂಕಂದಾಯದ ನಿಯಮಗಳಡಿಯಲ್ಲಿ ಖರ್ಚನ್ನು ಮಾಲಿಕನಿಂದ ವಸೂಲಿ ಮಾಡಲಾಗುವುದು.

೩. ತಮ್ಮ ಆಸ್ತಿ–ಪಾಸ್ತಿಗಳಿಗೆ ಸೋಂಕು ನಿವಾರಣೆ ಮಾಡಬಯಸುವವರು ಲಿಖಿತ ಬರವಣಿಗೆಯಲ್ಲಿ ಆರೋಗ್ಯ ಅಧಿಕಾರಿಗಳು, ಮುನಿಸಿಪಲ್ ಕಮಿಟಿ, ಸಿಟಿ ಕರವೀರ ಅವರಿಗೆ ತಿಳಿಸಬೇಕು ಮತ್ತು ಅಪೇಕ್ಷಿತ ಮೊತ್ತವನ್ನು ಅವರಲ್ಲಿ ಠೇವಣಿಯಿಡಬೇಕು.

೪. ಸೋಂಕು ನಿವಾರಣೆ ಮತ್ತು ಮನೆ ತೊಳೆಯುವುದಕ್ಕೆ ಬೇಕಾಗುವ ರಾಸಾಯನಿಕಗಳನ್ನು ತಮಗೆ ಬೇಕಾದ ಕಡೆಗಳಿಂದ ತಾವೇ ತರಬಹುದು. ಅವುಗಳನ್ನು ಸರಕಾರದ ಮೂಲಕವೇ ಖರೀದಿಸಬೇಕೆಂದು ಬಯಸುವವರು ಅಪೇಕ್ಷಿಸಿದ ಮೂಲಗಳಿಂದಲೇ ತರಿಸಬಹುದು.

೫. ಮನೆ ಮೊದಲಾದವುಗಳಿಗೆ ಸೋಂಕು ನಿವಾರಣೆ ಮಾಡಿಸುವ ವಿವರಗಳನ್ನು ಇಲ್ಲಿ ವ್ಯಾಪಕವಾಗಿ ಬಯಸುವವರು ಜಾರ್ಜ ಸಿಂಕ್ಲೇರ್ ದರ್ಬಾರಿನ ಸರ್ಜನರು ಸಂಗ್ರಹಿಸಿರುವ ಪುಸ್ತಕ

"ಪ್ಲೇಗ್ ರೋಗದ ಬಗೆಗಿನ ಟಿಪ್ಪಣಿಗಳನ್ನು" ಓದಬಹುದು. ಆದರೆ ವಿಷಕ್ರಿಮಿನಾಶಕದ ಪ್ರಕ್ರಿಯೆಯ ಸವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

**(ವಿವರಗಳನ್ನು ಬಿಟ್ಟುಬಿಡಲಾಗಿದೆ–ಸಂಪಾದಕ)**

ಕರ್ಪೂರದ ದ್ರವ್ಯ ಮೊದಲಾದ ರಸಾಯನಿಕಗಳನ್ನು ಖರೀದಿ ಮಾಡಲು ಅಸಮರ್ಥರಾಗಿರುವ ಬಡವರನ್ನು ಪ್ಲೇಗಿನ ಸಹಾಯಕ ಅಥವಾ ಹೆಚ್ಚಿನ ಸಹಾಯಕ, ಆಯುಕ್ತರು ಗುರುತಿಸಿ ಅವರಿಗೆ ಯಾವ ಬೆಲೆಯನ್ನು ವಿಧಿಸದೆ ಉಚಿತವಾಗಿ ಒದಗಿಸಲಾಗುವುದು.

ಮನೆಯು ಸಂಪೂರ್ಣವಾಗಿ ಸೋಂಕು ನಿವಾರಣೆ ಕ್ರಿಮಿನಾಶಕ ಹಾಕಲಾಗಿದೆ ಮತ್ತು ಅದು ವಾಸಮಾಡಲು ಈಗ ಸುರಕ್ಷಿತವಾಗಿದೆಯೆಂದು ಸಂಪೂರ್ಣವಾಗಿ ಖಚಿತಮಾಡಿಕೊಂಡು ಮತ್ತು ದೃಢೀಕರಿಸದ ಹೊರತು ಯಾರಿಗೂ ಮನೆಯನ್ನು ಮತ್ತೆ ಪ್ರವೇಶಿಸಲು ಅನುಮತಿ ಮತ್ತು ಪಾಸನ್ನು ಕೊಡಲಾಗುವುದಿಲ್ಲ. ಈ ಪಾಸುಗಳನ್ನು ಸಹಾಯಕ ಪ್ಲೇಗ್ ಕಮಿಷನರ್ ಅವರು ಸಹಿಮಾಡಿ ವ್ಯಾಪಾರ ಮಾಡುವುದಕ್ಕೆ ಅಥವಾ ಮನೆಯಲ್ಲಿ ಸೇರಿಕೊಳ್ಳುವುದಕ್ಕೆ ಮೊದಲಾದವುಗಳಿಗೆ ಅವರು ನೀಡುವರು. ಪಾಸಿಲ್ಲದೆ ಮನೆಯಲ್ಲಿ ವಾಸಮಾಡುವವರನ್ನು ಮನೆಯಿಂದ ಹೊರಗೆ ಬಲಾತ್ಕಾರವಾಗಿ ದಬ್ಬಲಾಗುವುದು ಮತ್ತು ಸರಕಾರದೊಂದಿಗೆ ಅನುಸರಿಸದಿರುವುದರಿಂದ ಅವರ ಬಗ್ಗೆ ಕಾನೂನಿನ ಕ್ರಮ ಕೈಗೊಳ್ಳಲಾಗುವುದು.

**ಆರ್. ವಿ. ಸಬ್ನೀಸ್**
ದಿವಾನ್ ಮತ್ತು ಪ್ಲೇಗ್ ಕಮಿಷನರ್, ಕರವೀರ

**(ಕರವೀರ ಸರಕಾರ ಗೆಜೆಟ್, ಭಾಗ–೧, ೨೭, ಜನವರಿ ೧೯೦೦)**

---

೯

*ತಮ್ಮ ಸಂಸ್ಥಾನದ ಬಹಳಷ್ಟು ಪ್ರದೇಶಗಳಲ್ಲಿ ತೀವ್ರ ಬರಗಾಲದ ಪರಿಸ್ಥಿತಿಗಳ ಸವಾಲುಗಳನ್ನು ಎದುರಿಸುವ ಸಲುವಾಗಿ ತಮ್ಮ ಸಂಸ್ಥಾನದಲ್ಲಿ ಒಂದು "ನೀರಾವರಿ ಧೋರಣೆ"ಯನ್ನು ಶಾಹುರವರು ೧೯೦೨ರಲ್ಲಿ ರೂಪಿಸುತ್ತಾರೆ ಮತ್ತು ಘೋಷಿಸುತ್ತಾರೆ. ಶ್ರೀ ಗುಪ್ತೆ ಅವರನ್ನು ನೀರಾವರಿ ಅಧಿಕಾರಿಯನ್ನಾಗಿ ನೇಮಿಸುತ್ತಾರೆ ಮತ್ತು ಸಂಸ್ಥಾನದಲ್ಲಿ ಪ್ರಧಾನ ಮತ್ತು ಕಿರಿಯ ಎಲ್ಲಾ ಕೆರೆಗಳನ್ನೂ ಮತ್ತು ಬಾವಿಗಳ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ ವರದಿ ನೀಡಲು ಅವರು ಒಂದು ಆಜ್ಞೆಯನ್ನು ಹೊರಡಿಸುತ್ತಾರೆ.*

---

## ಅಧಿಸೂಚನೆ

ಙ, ಫೆಬ್ರವರಿ ೧೯೦೨

ಕರವೀರ ತಾಲ್ಲೂಕಿನಲ್ಲಿ ನೀರಾವರಿ ಕಾಮಗಾರಿಗಳನ್ನು ಪ್ರಾರಂಭಿಸುವ ಮೂಲಕ ಬರಗಾಲದ ಪರಿಸ್ಥಿತಿಗಳನ್ನು ತಪ್ಪಿಸುವ ಸಲುವಾಗಿ ಹುಜೂರ್ ಆಜ್ಞೆಯ ಸಂಖ್ಯೆ ೧೦೪, ದಿನಾಂಕ ೨೩, ಜನವರಿ ೧೯೦೨ರ ಆಜ್ಞೆಯು ಶ್ರೀ ಶಂಕರ ಸೀತಾರಾಮ್ ಗುಪ್ತೆ ಅವರನ್ನು ನೀರಾವರಿ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆಯೆಂದು ಹೇಳುತ್ತದೆ. ಅದರ ವಿವರಗಳು ಇಂತಿವೆ:–

ನೀರಾವರಿ ಕಾಮಗಾರಿಗಳು ಮತ್ತು ಅಣೆಕಟ್ಟುಗಳ ನಿರ್ಮಾಣಗಳು ಬರಗಾಲ ಮತ್ತು ಕ್ಷಾಮಗಳನ್ನು ಎದುರಿಸುವುದಕ್ಕೆ ಹೆಚ್ಚು ಸಹಕಾರಿ ಎಂದು ಪರಿಗಣಿಸಿರುವುದರಿಂದ ದೊಡ್ಡ ಪ್ರಮಾಣ ಅಣೆಕಟ್ಟುಗಳ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದೆ. ಹಾಲಿ ಅಸ್ತಿತ್ವದಲ್ಲಿರುವ ನೀರಿನ ಕೆರೆಗಳನ್ನು ಮತ್ತು ಬಾವಿಗಳನ್ನು ನೀರಾವರಿಯ ಉದ್ದೇಶದ ಗರಿಷ್ಠ ಪ್ರಯೋಜನಕ್ಕಾಗಿ ನೀರಾವರಿ ವಿಭಾಗವನ್ನು ಸಾರ್ವಜನಿಕ ಲೋಕೋಪಯೋಗಿ ಇಲಾಖೆಯಿಂದ ಪ್ರತ್ಯೇಕಗೊಳಿಸಲಾಗಿದೆ ಮತ್ತು ಶ್ರೀ ಶಂಕರ್ ಸೀತಾರಾಮ ಗುಪ್ತೆ ಅವರನ್ನು ಅದರ ಮುಖ್ಯಸ್ಥರಾಗಿ ನೇಮಕ ಮಾಡಲಾಗಿದೆ. ಅವರು ಪ್ರಮುಖವಾಗಿ ಈ ಕೆಳಕಂಡಂತೆ ಒಂದು ವರದಿಯನ್ನು ಆದಷ್ಟು ಬೇಗನೆ ಮಂಡಿಸಿದ್ದಾರೆ.

ನೀರಾವರಿಗೆ ಯೋಗ್ಯವಾಗಿರುವ ನೀರಿನ ಮೂಲಗಳನ್ನು ಸ್ಥಳಗಳನ್ನು ಗುರುತಿಸುವುದು. ಅವು ಎಲ್ಲಿಂದ ನೀರನ್ನು ಪಡೆಯುವವು? ಪ್ರತಿ ಮೂರು ತಿಂಗಳಿಗೊಮ್ಮೆ ಅವು ಎಷ್ಟು ನೀರನ್ನು ಪಡೆಯಬಲ್ಲವು? ನೀರಿಗೆ ಒಂದು ಅಡ್ಡಕಟ್ಟೆಯನ್ನು ನಿರ್ಮಿಸಿದರೆ ಎಷ್ಟು ನೀರನ್ನು ಉಪಯೋಗಿಸಬಹುದು ಮತ್ತು ನೀರನ್ನು ಸಂಗ್ರಹಿಸಬಹುದು? ಯಾವ ರೀತಿಯ ಜೈವಿಕ ಮಣ್ಣು ಸಂಗ್ರಹವಾಗುವುದು? ಅದು ಕೃಷಿಗೆ ಪ್ರಯೋಜನಕಾರಿಯೇ ಅಥವಾ ಅಲ್ಲವೇ? ಹಾಲಿಯಿರುವ ನೀರಿನ ಕೆರೆಗಳಲ್ಲಿರುವ ನೀರು ನೀರಾವರಿಗೆ ಉಪಯೋಗಕಾರಿಯೆ? ಹೌದು ಎಂದಾದರೆ ಎಷ್ಟು ಎಕರೆಗಳಿಗೆ ನೀರುಣಿಸಬಹುದು ಮತ್ತು ಎಷ್ಟು

ಖರ್ಚು ಬೀಳಬಹುದು? ಹೀಗೆ ಕಂಡುಕೊಂಡ ಅಂಶಗಳನ್ನು ವಿವರವಾಗಿ ವರದಿ ಮಾಡಬೇಕಾಗುತ್ತದೆ. ಮೇಲಿನ ಪ್ರಶ್ನೆಗಳಿಂದ ಒಂದು ಪ್ರತ್ಯೇಕ ವರದಿಯನ್ನು ಕೆರೆಗಳಿಗೆ ಮತ್ತು ಸರೋವರಗಳಿಗೆ ಮಾಡಬೇಕಾಗುತ್ತದೆ.

ಸಂಸ್ಥಾನದಲ್ಲಿ ಸರಕಾರದ ಮತ್ತು ಖಾಸಗಿಯ ಬಾವಿಗಳ, ಸರೋವರಗಳ ಮತ್ತು ಕೆರೆಗಳಲ್ಲಿ ಲಭ್ಯವಿರುವ ನೀರಿನಿಂದ ಭೂಮಿಯ ಎಷ್ಟು ಎಕರೆಗಳು ನೀರಾವರಿಯಾಗುತ್ತವೆ ಎಂಬುದನ್ನು ತಾಲ್ಲೂಕುವಾರು ಒಂದು ಪ್ರತ್ಯೇಕ ಪಟ್ಟಿಯನ್ನು ತಯಾರು ಮಾಡಬೇಕು. ಪಟ್ಟಿಯು ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು. ಎಷ್ಟು ಕಪಿಲೆಗಳಿಂದ (ಬಕೆಟ್ಟು) ನೀರನ್ನು ಪಡೆಯಲಾಗುತ್ತದೆ. ಎಷ್ಟು ದಿನಗಳವರೆಗೆ ಮತ್ತು ಕಪಿಲೆಗಳಿಂದ ಎಂತಹ ಬೆಳೆಗಳನ್ನು ಬೆಳೆಯಲಾಗುತ್ತದೆ ಮತ್ತು ಕೆಲವು ಸುಧಾರಕ ಅಥವಾ ಬದಲಾವಣೆಗಳಿಗೆ ಬಾವಿಗಳು ಯೋಗ್ಯವಾಗಿವೆಯೇ ಎಂಬುದನ್ನು ಸಂಗ್ರಹಿಸಬೇಕು. ಅಂಥದ್ದೇ ಪ್ರತ್ಯೇಕವಾದ ಪಟ್ಟಿಯನ್ನು ಸರೋವರಗಳಿಗೆ, ಕೆರೆಗಳಿಗೆ ಸಂಸ್ಥಾನದಲ್ಲಿ ತಯಾರು ಮಾಡಬೇಕು. ನೀರಾವರಿ ಅಧಿಕಾರಿಯು ಅಂತಹ ಒಂದು ಪಟ್ಟಿಯ ಮಾದರಿಯನ್ನು ತಯಾರುಮಾಡಿ, ಹುಜೂರರ ಗಮನಕ್ಕೆ ಒಂದು ಪ್ರತಿಯನ್ನು ಕಳುಹಿಸಬೇಕು.

ಈ ವಿಭಾಗಕ್ಕೆ ಸರ್ವೆ ಮಾಡುವ ಉಪಕರಣಗಳಿಗಾಗಿ ಈಗ ೬೦೦/- ರೂ.ಗಳ ಹಣವನ್ನು ಮಂಜೂರು ಮಾಡಲಾಗಿದೆ. ಜೊತೆಗೆ ಈ ಕೆಳಕಂಡ ಕೆಲಸ ಮಾಡಲು ವ್ಯಕ್ತಿಗಳನ್ನು ಮತ್ತು ಅವರ ಸಂಬಳವನ್ನು ಹಂಚಲಾಗಿದೆ. ಒಬ್ಬ ಡ್ರಾಫ್ಟ್‌ಮ್ಯಾನ್ ಸಂಬಳ ೨೦/- ರೂ. ಒಬ್ಬ ಗುಮಾಸ್ತ ಸಂಬಳ ೧೨/- ರೂ. ಒಬ್ಬ ಮೇಸ್ತ್ರಿ ಸಂಬಳ ೧೫/- ರೂ. ಈ ಅಂಶಗಳ ಬಗ್ಗೆ ಗುಪ್ತೆ ಮತ್ತು ರಾವ್‌ಸಾಹೇಬ್ ವಿಚಾರೆ ಅವರ ಅಭಿಪ್ರಾಯಗಳನ್ನು ಪಡೆಯಬೇಕು ಮತ್ತು ಅದನ್ನು ಮಾನ್ಯ ಘನತೆವೆತ್ತ ಮಹಾರಾಜರ ಅವಗಾಹನೆಗೆ ಕಳುಹಿಸಿಕೊಡಬೇಕು.

ತಾಲ್ಲೂಕುವಾರು ಕಂದಾಯದ ಅಧಿಕಾರಿಗಳು ಅವಶ್ಯವಿರುವ ಎಲ್ಲಾ ಮಾಹಿತಿಯನ್ನು ನೀಡಬೇಕು ಮತ್ತು ಹೇಳಿದ ನೀರಾವರಿ ಅಧಿಕಾರಿಗೆ ಸಹಾಯ ಮಾಡಬೇಕೆಂದು ಈ ಆಜ್ಞೆಯು ಸೂಚಿಸುತ್ತದೆ.

**ಆರ್. ವಿ. ಸಬ್ನೀಸ್**
ದಿವಾನ್, ಕರವೀರ ಸರಕಾರ

**(ಕರವೀರ್ ಸರಕಾರ ಗೆಜೆಟ್, ಭಾಗ-೧, ೮, ಫೆಬ್ರವರಿ ೧೯೦೨)**

---

## ೧೦

*ಕೊಲ್ಹಾಪುರ ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳಿಗೆ ಶೇಕಡ ೫೦ರಷ್ಟು ಸರಕಾರಿ ಹುದ್ದೆಗಳನ್ನು ಮೀಸಲಾತಿ ನೀಡುವ ಪ್ರಸಿದ್ಧ ಘೋಷಣೆ (ಆಜ್ಞೆ). ಭಾರತದಲ್ಲಿ ಮೊಟ್ಟಮೊದಲಿಗೆ ಅಂಥ ಕ್ರಮ ತೆಗೆದುಕೊಂಡ ದಿಟ್ಟ ಅಗ್ರಗಾಮಿ ಹೆಜ್ಜೆಯಾಗಿದೆ.*

---

### ಅಧಿಸೂಚನೆ

**ಸಾಮಾನ್ಯ ಇಲಾಖೆ**

ಕೊಲ್ಹಾಪುರ, ಜುಲೈ ೨೬, ೧೯೦೨

ಕೊಲ್ಹಾಪುರ ಸಂಸ್ಥಾನದಲ್ಲಿ ಎಲ್ಲಾ ವರ್ಗಗಳ ಬೆಳವಣಿಗೆಗೆ ಮತ್ತು ಶಿಕ್ಷಣವನ್ನು ಪ್ರೋತ್ಸಾಹಿಸಲು ಕೈಗೊಂಡ ಇತ್ತೀಚಿನ ಪ್ರಯತ್ನಗಳು ಹಿಂದುಳಿದ ವರ್ಗಗಳ ಪರವಾಗಿ ಸಫಲವಾಗಬೇಕೆಂಬ ಭರವಸೆ ಸಫಲವಾಗಿಲ್ಲವೆಂದು ದಾಖಲಿಸಲು ಮಾನ್ಯರಾದ ಘನತೆವೆತ್ತ ಮಹಾರಾಜರು ವಿಷಾದಿಸುತ್ತಾರೆ. ಈ ವಿಷಯದ ಬಗ್ಗೆ ಮಾನ್ಯ ಮಹಾರಾಜರು ಗಂಭೀರವಾಗಿದ್ದಾರೆ ಮತ್ತು ಉನ್ನತ ವಿದ್ಯಾಭ್ಯಾಸಕ್ಕೆ ನೀಡುವ ಪ್ರೋತ್ಸಾಹವು ಸಾಕಷ್ಟು ಪ್ರಮಾಣದಲ್ಲಿ ಎಲ್ಲರಿಗೂ ಹಂಚಿಕೆಯಾಗದಿದ್ದುದೇ ಸಫಲತೆಯ ಕೊರತೆಗೆ ಕಾರಣವೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಇದನ್ನು ಒಂದು ನಿರ್ದಿಷ್ಟ ಹಂತದವರೆಗೆ ಕಿತ್ತುಹಾಕುವ ಸಲುವಾಗಿ ಮತ್ತು ಸಂಸ್ಥಾನದೊಳಗೇ ತನ್ನ ಘನತೆವೆತ್ತ ಮಹಾರಾಜರ ಪ್ರಜೆಗಳು ಒಂದು ಉನ್ನತ ಮಟ್ಟದವರೆಗೆ ಅಧ್ಯಯನ ಮಾಡಲು ಹಿಂದುಳಿದ ವರ್ಗಗಳಿಗೆ ಪ್ರೋತ್ಸಾಹ ನೀಡಲು ಸಂಸ್ಥಾನದಲ್ಲಿ ಈಗಿರುವುದಕ್ಕಿಂತ ಮಿಗಿಲಾಗಿ ಉದ್ಯೋಗದ ಹೆಚ್ಚಿನ ಪಾಲು ನೀಡುವ ಸಲುವಾಗಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡಲು ಮಾನ್ಯ ಘನತೆವೆತ್ತ ಮಹಾರಾಜರು ನಿರ್ಧರಿಸಿದ್ದಾರೆ.

ಈ ಧೋರಣೆಯ ಅನುಸರಣೆಗಾಗಿ ಮಾನ್ಯರಾದ ಘನತೆವೆತ್ತ ಮಹಾರಾಜರು ಈ ಆಜ್ಞೆಯ ದಿನಾಂಕದಿಂದ ಜಾರಿಗೆ ಬರುವಂತೆ ಖಾಲಿ ಬೀಳುವ ಉದ್ಯೋಗಗಳಲ್ಲಿ ಶೇಕಡ ೫೦ರಷ್ಟು ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಮೀಸಲಿಟ್ಟು ನೇಮಕಗಳನ್ನು ಮಾಡಬೇಕೆಂದು ನಿರ್ದೇಶಿಸಲು ಸಂತೋಷಿಸುತ್ತಾರೆ. ಎಲ್ಲಾ ಕಛೇರಿಗಳಲ್ಲಿ ಪ್ರಸ್ತುತ ಶೇಕಡ ೫೦ಕ್ಕಿಂತ ಕಡಿಮೆ ಅನುಪಾತದ ಹಿಂದುಳಿದ ವರ್ಗಗಳಿದ್ದರೆ, ಮುಂದಿನ ನೇಮಕಾತಿಯು ಆ ಹಿಂದುಳಿದ ವರ್ಗಗಳ ಸದಸ್ಯನಿಗೆ ನೀಡತಕ್ಕದ್ದು.

ಈ ಆಜ್ಞೆ ಪ್ರಕಟಿಸಿದ ನಂತರ ಪ್ರತಿ ಮೂರು ತಿಂಗಳಿಗೊಮ್ಮೆ ಎಲ್ಲಾ ಇಲಾಖೆಗಳ ಮುಖ್ಯಸ್ಥರು ನೇಮಕಾತಿಗಳನ್ನು ಮಾಡಿದ ವಿವರಗಳ ದಾಖಲೆಯನ್ನು ಸಲ್ಲಿಸಬೇಕು.

ಈ ಆಜ್ಞೆಗಳ ಉದ್ದೇಶಕ್ಕಾಗಿ ಹಿಂದುಳಿದ ವರ್ಗಗಳು ಎಂದರೆ ಬ್ರಾಹ್ಮಣರು, ಪ್ರಭುಗಳು, ಶೆಣ್ವಿಗಳು, ಪಾರ್ಸಿಗಳು ಮತ್ತು ಇತರೆ ಮುಂದುವರಿದ ಜಾತಿಗಳನ್ನು ಬಿಟ್ಟು ಉಳಿದ ಎಲ್ಲಾ ಜಾತಿಗಳು ಹಿಂದುಳಿದ ಜಾತಿಗಳೆಂದು ಅರ್ಥಮಾಡಿಕೊಳ್ಳಬೇಕು. ಮಾನ್ಯ ಘನತೆವೆತ್ತ ಛತ್ರಪತಿ ಮಹಾರಾಜರ ಆಜ್ಞೆಯ ಮೇರೆಗೆ

**ಕೆ. ಎನ್. ಪಂಡಿತ**
ಕಾರ್ಯಾಚರಣೆಯ ದಿವಾನ

(ಕರವೀರ ಸರಕಾರ ಗೆಜೆಟ್, ಭಾಗ-೧, ೨೬, ಜುಲೈ ೧೯೦೨)

**(ಕೊಲ್ಹಾಪುರ ಸಂಸ್ಥಾನದ ಹಿಂದುಳಿದ ವರ್ಗಗಳಿಗೆ ಮಹಾರಾಜರ ಮನೆಯ ಖಾಸಗಿ ಇಲಾಖೆಯಲ್ಲಿ ಶೇಕಡ ೫೦ರಷ್ಟು ಹುದ್ದೆಗಳನ್ನು ಮೀಸಲಿಡುವ ಬಗ್ಗೆ ಅದೇ ರೀತಿಯ ಅಧಿಸೂಚನೆ, ದಿನಾಂಕ ಜುಲೈ ೨೮, ೧೯೦೨)**

---

## ೧೨

*ಹಸಿರು ಸಂರಕ್ಷಕರಾದ ಶಾಹುರವರು ಒಂದು ಅಸಾಮಾನ್ಯವಾದ ಆಜ್ಞೆಯನ್ನು ಮಾಡುತ್ತಾರೆ.*

---

**ನಾಗರಿಕ ಇಲಾಖೆ**

೬, ನವೆಂಬರ್ ೧೯೦೩

ರಸ್ತೆಯ ಎರಡು ಮಗ್ಗಲುಗಳಲ್ಲಿ ಸರಕಾರಿ ಮಾಲಿಕತ್ವದ ಮರಗಳಿವೆ. ಜನರು ಅವುಗಳ ತಲೆ ಮತ್ತು ಕೊಂಬೆಗಳನ್ನು ಕಡಿಯುತ್ತಾರೆ. ಆದ್ದರಿಂದ ಅವುಗಳ ಬಂದೋಬಸ್ತಿಗಾಗಿ ಮಾನ್ಯ ಘನತೆವೆತ್ತ ಮಹಾರಾಜರು ನಿರ್ಣಯ ಸಂಖ್ಯೆ ೪೬೧ ನ್ನು ಪಾಸುಮಾಡುತ್ತಾರೆ ಮತ್ತು ಅದರ ಪ್ರಕಾರ ಆಜ್ಞೆ ಸಂಖ್ಯೆ ೧೨೯, ದಿನಾಂಕ ೨೭, ಅಕ್ಟೋಬರ್ ೧೯೦೩ರಿಂದ ದಿವಾನ್ ಸಾಹೇಬರ ಕಛೇರಿಯಿಂದ ಜಾರಿಗೆ ಬರುತ್ತದೆ. ಅದು ಈ ಕೆಳಗಿನಂತಿದೆ.

ರಸ್ತೆಬದಿಯ ಮರಗಳನ್ನು ಜನರು ಕಟ್ಟಿಗೆಗಾಗಿ ಕೊಂಬೆಗಳನ್ನು ಕಡಿಯುವುದರಿಂದ ಗ್ರಾಮದ ಕಾರ್ಮಿಕ ಮತ್ತು ತಾಲ್ಲೂಕಿನ ಅಧಿಕಾರಿಗಳು ಸಂಬಂಧಪಟ್ಟ ಪಟ್ಟಣಗಳ ಬಗ್ಗೆ ಜಾಗೃತರಾಗಿರಬೇಕು ಮತ್ತು ಮರಗಳನ್ನು ಸಂರಕ್ಷಿಸಿಕೊಳ್ಳುವಂತೆ ನೋಡಿಕೊಳ್ಳಬೇಕು. ಈ ವಿಚಾರವನ್ನು ಹಳ್ಳಿಗಳ ಪಾಟೀಲ ಮತ್ತು ಕುಲಕರ್ಣಿಗಳಿಗೆ ತಿಳಿಸಬೇಕು.

**ಆರ್. ಆರ್. ಶಿರ್‌ಗಾವ್‌ಕರ್**
ಸರ್–ಸುಭೆ

**(ಕರವೀರ್ ಸರಕಾರ ಗೆಜೆಟ್, ಭಾಗ–೧, ೫, ಡಿಸೆಂಬರ್ ೧೯೦೩)**

---

## ೧೩

*ಪುರುಷರಂತೆಯೇ ೧೮ ವರ್ಷ ಪೂರೈಸಿದ ಮಹಿಳೆಯರನ್ನು ವಯಸ್ಕರೆಂದು ಕಾನೂನಿನ ಶಬ್ದಗಳಲ್ಲಿ ಪರಿಗಣಿಸುವಂತೆಯೇ ಅವರನ್ನು ವಯಸ್ಕರೆಂದು ಸ್ಪಷ್ಟೀಕರಿಸುವ ಆಜ್ಞೆ*

---

**ಜಿಲ್ಲಾ ನೋಂದಣಿ ಅಧಿಕಾರಿಗಳಿಂದ**

ಕರವೀರ

ಈಗ ನಡೆಯುತ್ತಿರುವ ಪ್ರಕರಣದಲ್ಲಿ ಮಹಿಳೆಯನ್ನು ಯಾವ ವಯಸ್ಸಿನಲ್ಲಿ 'ವಯಸ್ಕಳು' ಎಂದು ಕರೆಯಬೇಕು. ಆದ್ದರಿಂದ ಖಸ್ಲಾಪ್ರಾಂತ್ಯ*ದಿಂದ ಮಾಹಿತಿಯನ್ನು ಕೇಳಲಾಗಿದೆ. ಅದರ ಪ್ರಕಾರ ಕರವೀರ ಪ್ರಾಂತ್ಯದ ರಾವ್‌ಬಹಾದೂರ್ ಸರ್ ಸುಭೆ ಸಾಹೇಬರು ಖಸ್ಲಾ ಪ್ರಾಂತ್ಯದಲ್ಲಿ ೧೮೭೫ರ ಪ್ರೌಢಾವಸ್ಥೆಯ ವಯಸ್ಸಿನ ಕಾಯ್ದೆ ೯, ಕಲಂ ೩, ಪ್ಯಾರ ೨ರ ಪ್ರಕಾರ ಒಬ್ಬ ಪುರುಷ ಅಥವಾ ಒಬ್ಬ ಮಹಿಳೆಯ ದಾಖಲೆಯ ಉದ್ದೇಶಕ್ಕಾಗಿ ೧೮ ವರ್ಷ ವಯಸ್ಸಾದವರು ವಯಸ್ಕರಾಗಲು ಅರ್ಹರಾಗುತ್ತಾರೆ. ಸಂಬಂಧಪಟ್ಟ ಆಜ್ಞೆ (ಸಂಖ್ಯೆ ೬೮೫) ಅಸ್ಪಷ್ಟವಾಗಿ ಪ್ರಜೆಯನ್ನು 'ವ್ಯಕ್ತಿ'ಯೆಂದು ಹೇಳಿದರೂ, 'ವ್ಯಕ್ತಿ' ಎಂಬ ಪದವನ್ನು ಪುರುಷ ಮತ್ತು ಮಹಿಳೆ ಇಬ್ಬರನ್ನು ಒಳಗೊಂಡಿರುತ್ತದೆ. ಆದ್ದರಿಂದ ಪುರುಷರಂತೆಯೇ ಮಹಿಳೆ ಕೂಡ ೧೮ ವರ್ಷ ಆಗುವವರೆಗೆ ವಯಸ್ಕಳಾಗುವುದಿಲ್ಲ.

ಆದ್ದರಿಂದ ಪ್ರಸ್ತುತ ಆಜ್ಞೆ ಸಂಖ್ಯೆ ೩೩ ಒಬ್ಬ 'ವ್ಯಕ್ತಿ' ಯು ೧೮ ವರ್ಷ ವಯಸ್ಸಾದಾಗ ಅವನು ವಯಸ್ಕನಾಗುತ್ತಾನೆಂದು; 'ವ್ಯಕ್ತಿ' ಎಂಬ ಪದವು ಪುರುಷ ಮತ್ತು ಮಹಿಳೆ ಇಬ್ಬರನ್ನು ಒಳಗೊಂಡಿರುತ್ತದೆ. ಅವರ ಪ್ರಕಾರ ಒಬ್ಬ ಮಹಿಳೆಯನ್ನು (ಈ ಆಜ್ಞೆಯ ಪ್ರಕಾರ) ೧೮ ವರ್ಷದ ವಯಸ್ಸಿನ ನಂತರ ಒಬ್ಬ 'ವಯಸ್ಕಳು' ಎಂದು ಪರಿಗಣಿಸಲಾಗುತ್ತದೆ.

೩, ಸೆಪ್ಟೆಂಬರ್ ೧೯೦೬

ಟಿ. ಎಂ. ಮರಾಠೆ
ಜಿಲ್ಲಾ ನೋಂದಣಿ ಅಧಿಕಾರಿಗಳು

ಕರವೀರ ಸರಕಾರ ಗೆಜೆಟ್, ಭಾಗ–೧, ೮, ಸೆಪ್ಟೆಂಬರ್ ೧೯೦೬)

---

## ೧೪

*ಕೊಲ್ಹಾಪುರ ಸಂಸ್ಥಾನದ ಗಡಿಗಳಲ್ಲಿರುವ ಒಂದು ಪಟ್ಟಣವಾದ ರಾಯಬಾಗ್ ಒಮ್ಮೆ ಬಟ್ಟೆ ನೇಯ್ಗೆಯ ಕಲೆಯಲ್ಲಿ ಪ್ರಸಿದ್ಧವಾಗಿತ್ತು. ಆದರೆ ಕೋಮು ಸಂಘರ್ಷ ಉಂಟಾಗಿದ್ದರಿಂದ ಮುಸ್ಲಿಂ ನೇಕಾರರು ಮತ್ತು ಲಿಂಗಾಯತ ನೇಕಾರರು ಪಟ್ಟಣವನ್ನು ಬಿಟ್ಟುಬಿಟ್ಟರು. ಪಟ್ಟಣವು ಸಂಸ್ಥಾನದಲ್ಲಿ ಬಡವಾಯಿತು. ಶಾಹುರವರು ಪಟ್ಟಣವನ್ನು ಹೇಗೆ ಪುನರ್‌ನಿರ್ಮಾಣ ಮಾಡಿದರೆಂಬುದನ್ನು ಆಜ್ಞೆಯು ತೋರಿಸುತ್ತದೆ.*

---

### ಅಧಿಸೂಚನೆ

**ಸಾಮಾನ್ಯ ಇಲಾಖೆ**

೨೧, ಸೆಪ್ಟೆಂಬರ್ ೧೯೦೮

ಒಳ್ಳೆಯ ನೇಯ್ಗೆಯ ವ್ಯವಹಾರವನ್ನು ಹೊಂದಿದ್ದ ರಾಯಬಾಗ್ ಪಟ್ಟಣವು ಇತ್ತೀಚೆಗೆ ಅಧೋಗತಿಗೆ ಇಳಿದಿದೆ. ಈ ಕೆಳಗಿನ ವ್ಯವಸ್ಥೆಗಳನ್ನು ಮಾಡಿದ್ದರಿಂದ ರಾಯಬಾಗಿನಲ್ಲಿ ನೆಲಸಿದ ಕೋಷ್ಟಿ (ನೇಕಾರರು) ಜನರು ಪ್ರವರ್ಧಮಾನಕ್ಕೆ ಬರುತ್ತಿದ್ದಾರೆ.

೧. ಈ ಮೊದಲು ಇಲ್ಲಿಗೆ ಬಂದು ನೆಲಸಿದ್ದ ನೇಕಾರರಿಗೆ ಭೂಮಿ ಮತ್ತು ಮನೆಯನ್ನು ಒದಗಿಸಿಕೊಡಲಾಗಿತ್ತು. ಈಗ ಅವರಿಗೆ ಬಂಡವಾಳದ ಅಗತ್ಯವಿದೆ. ಆದ್ದರಿಂದ ಸರಕಾರವು ಕೃಪೆ ತೋರಿ ಅವರಿಗೆ ೩,೦೦೦/- ರೂ. ಬಂಡವಾಳ ನೀಡಲು ನಿರ್ಧರಿಸಿದೆ. ಈ ಮೊತ್ತದಲ್ಲಿ ಲಿಂಗಾಯತ ಕೋಷ್ಟಿಗಳಿಗೆ ೨,೦೦೦/- ರೂ. ಮತ್ತು ಪೆಂಢಾರಿ ಕೋಷ್ಟಿಗಳಿಗೆ ೧,೦೦೦/- ರೂ. ಹಂಚಲಾಗಿದೆ. ಈ ಹಣವನ್ನು ಅವರಿಗೆ ೫ ವರ್ಷಗಳವರೆಗೆ ಬಡ್ಡಿರಹಿತವಾಗಿ ಒದಗಿಸಲಾಗಿದೆ. ಜೊತೆಗೆ, ಈ ಅವಧಿಯಲ್ಲಿ ಯಾವುದೇ ಸಮಯದಲ್ಲಿ ವ್ಯವಹಾರ ಹೆಚ್ಚಾದರೆ ಬಂಡವಾಳದ ಹಂಚಿಕೆಯನ್ನು ಅದರ ಪ್ರಕಾರ ಹೆಚ್ಚಿಸಲಾಗುವುದು.

೨. ಲಿಂಗಾಯತ ಕೋಷ್ಟಿಯ ಸಂಘ(ಸಹಕಾರಿ ಸಂಘ)ವನ್ನು ಮಾಡಲಾಗುವುದು ಮತ್ತು ಅದಕ್ಕೆ ಶಾಹು ನೇಕಾರರ ಸಂಘ ಎಂದು ಹೆಸರಿಡಲಾಗುವುದು.

೩. ಈ ಸಂಘಟನೆಗೆ ಒಂದು ದೀರ್ಘವಾದ ನಿಯಮಾವಳಿಯನ್ನು ಮತ್ತು ನಿಬಂಧನೆಗಳನ್ನು ರೂಪಿಸಲಾಗುವುದು ಮತ್ತು ಅವುಗಳನ್ನು ಇದರೊಂದಿಗೆ ಲಗತ್ತಿಸಲಾಗಿದೆ. ಪ್ರಸ್ತುತ ಈ ಸಂಘಟನೆಯನ್ನು ನಿಯಮಗಳ ಪ್ರಕಾರ ನಡೆಸಲಾಗುತ್ತಿದೆ.

೪. ಪೆಂಢಾರ ಕೋಷ್ಟಿ ಸಮುದಾಯಕ್ಕೆ ಒಂದು ಸಂಘಟನೆಯನ್ನು ರೂಪಿಸಲಾಗುವುದು. ಅದಕ್ಕೆ ಶ್ರೀ ರಾಜಾರಾಮ್ ನೇಕಾರರ ಸಂಘ ಎಂದು ಹೆಸರಿಡಲಾಗುವುದು.

೫. ಲಿಂಗಾಯತ ಕೋಷ್ಟಿ ಸಂಘಟನೆಗೆ ಮಾಡಿರುವ ನಿಯಮಾವಳಿಗಳನ್ನೇ ಇತರೆ ಸಂಘಗಳಿಗೆ ಅನ್ವಯಿಸಲಾಗುವುದು.

೬. ಈ ಸಂಘಟನೆಗಳೆಲ್ಲವೂ ಹೊಸದಾಗಿರುವುದರಿಂದ ಅವು ಪ್ರಸ್ತುತ ನೋಂದಣಿಯಿಂದ ವಿನಾಯಿತಿ ಪಡೆದಿವೆ. ಆದರೆ ಅವು ಒಂದು ಹಂತಕ್ಕೆ ಬಂದಾಗ ಅವುಗಳನ್ನು ನೋಂದಣಿ ಮಾಡಿಸುತ್ತವೆ.

೭ ರಾಯಬಾಗ್‌ನ ಮಹಲ್‌ಕರಿ ಅವರು ನೇರವಾಗಿ ಈ ಸಂಘಟನೆಗಳ ಬಗ್ಗೆ ಹುಜೂರ್ ಸರಕಾರ್ ಅವರೊಂದಿಗೆ ವ್ಯವಹರಿಸಬಹುದು.

೮. ಪ್ರಸ್ತುತ ಎರಡು ಸಂಘಟನೆಗಳಿಗೆ ರಾವ್ ಸಾಹೇಬ್ ಗಾಯಕ್‌ವಾಡ, ಹುಜೂರ್ ಚಿಟ್ನೀಸ್ ಅವರನ್ನು ಅಧ್ಯಕ್ಷರನ್ನಾಗಿ ಮತ್ತು ಗುರುನಾಥರಾವ್ ಮಹಲ್‌ಕರಿ ಅವರು ಉಪಾಧ್ಯಕ್ಷರಾಗಿ ಕೆಲಸ ಮಾಡುವರು.

೯. ರಾಯಬಾಗಿನ ಮಹಲ್‌ಕಾರಿ ಅವರು ಲಿಂಗಾಯತ ಕೋಷ್ಟಿ ವಸತಿಗಾಗಿ ಭೂಮಿಯನ್ನು ತೋರಿಸಿದರು. ಸಾಮಾನ್ಯ ಪ್ರಕ್ರಿಯೆಯಂತೆಯೇ ವ್ಯವಸ್ಥೆ ಮಾಡಲಾಗುವುದು. ಮುಸ್ಲಿಮರಿಗಾಗಿ ಮಸೀದಿಯ ಸಮೀಪ ಭೂಮಿಯನ್ನು ಒದಗಿಸಲಾಗುವುದು. ಅದಕ್ಕಾಗಿ ಪ್ರಕ್ರಿಯೆಯನ್ನು ಮಾಡಬೇಕಾಗಿದೆ.

ಹುಜೂರರ ಅಪ್ಪಣೆಯ ಮೇರೆಗೆ

**ಆರ್. ಆರ್. ಶಿವಗಾಂಕರ್**

ಇ. ದಿವಾನ್, ಕರವೀರ ಸರಕಾರ

**(ಕರವೀರ ಸರಕಾರ ಗೆಜೆಟ್, ಭಾಗ-೧, ೨೬, ಸೆಪ್ಟೆಂಬರ್ ೧೯೦೮)**

---

೧೫

*ರೋಗ, ವೃದ್ಧಾಪ್ಯ ಮತ್ತು ಆಪತ್‌ಕಾಲದಲ್ಲಿ ಬಡಮುನಿಸಿಪಲ್ (ಪೌರ) ನೌಕರರಿಗೆ ಸಹಾಯ ಮಾಡಲು ಒಂದು ಯೋಜನೆ.*

---

## ಮುನಿಸಿಪಲ್ ಇಲಾಖೆ

೨೯, ಅಕ್ಟೋಬರ್ ೧೯೦೯

ಕೊಲ್ಹಾಪುರ ಮುನಿಸಿಪಾಲಿಟಿಯ ಕೆಳದರ್ಜೆಯ ಕೆಲಸಗಾರರಾದ ಕಸಗುಡಿಸುವವರು, ಭಂಗಿಗಳು, ಚರಂಡಿ ಶುದ್ಧಿಗೊಳಿಸುವವರು, ಗೊಬ್ಬರ ಮಾಡುವವರು, ವಾಹನದ ಕಾರ್ಮಿಕರು ಮೊದಲಾದವರ ಸಂಬಳಗಳು ತೀರಾ ಕಡಿಮೆ. ಅವರು ಉಳಿತಾಯ ಮಾಡಲು ಸಾಧ್ಯವಿಲ್ಲ ಮತ್ತು ಹೀಗೆ ಅವರ ಕಾಯಿಲೆಗಳಿಗೆ, ವೃದ್ಧಾಪ್ಯಕ್ಕೆ ಮೊದಲಾದವುಗಳಿಗೆ ಹಣವಿರುವುದಿಲ್ಲ. ಆದ್ದರಿಂದ ಅವರ ಹಣಕಾಸಿನ ಸ್ಥಾನವನ್ನು ಸುಧಾರಿಸಲು ಮತ್ತು ಒಂದು ಪ್ರಾವಿಡೆಂಟ್ ನಿಧಿ ಸ್ಥಾಪಿಸಲು ನಿರ್ಧರಿಸಲಾಗಿದೆ. ಅದರ ಪ್ರಕಾರ ಹುಜೂರರ ನಿರ್ಣಯ ಸಂಖ್ಯೆ ೪೦೯, ದಿನಾಂಕ ೨೪, ಸೆಪ್ಟೆಂಬರ್ ೧೯೦೯ರಂದು ಪಾಸು ಮಾಡಲಾಯಿತು ಮತ್ತು ಅಂತಹ ಕಾರ್ಮಿಕರ ಪ್ರಾವಿಡೆಂಟ್ ಫಂಡಿನ ಯೋಜನೆಯ ಜಾರಿಯ ಕರಡು ಪ್ರತಿಗೆ ಒಪ್ಪಿಗೆ ನೀಡಲಾಗಿದೆ. ಕಥಿತ ಈ ಕರಡಿನ ಕಲಂ ೧೧ರ ಪಾಠ ಹೀಗಿದೆ:–

ಠೇವಣಿಯಿಟ್ಟ ಹಣವು (ಪ್ರಾವಿಡೆಂಟ್ ಫಂಡ್) ಯಾವುದೇ ಋಣಭಾರಕ್ಕೆ ಅಥವಾ ಯಾವುದೇ ಉದ್ದೇಶಕ್ಕೆ ಲೇವಾದೇವಿಗಾರರಿಂದ ಪಡೆದ ಸಾಲದ ಜಪ್ತಿಗೆ ಅಥವಾ ಸರಕಾರದ ಅಥವಾ ಮುನಿಸಿಪಾಲಿಟಿಯ ಯಾವುದೇ ಋಣಭಾರಕ್ಕೆ ಹೊಣೆಯಲ್ಲ.

ಹೀಗೆ ನಿಬಂಧನೆಯನ್ನು ಪಾಸು ಮಾಡಲಾಯಿತು. ಇದನ್ನು ಸಾರ್ವಜನಿಕರ ಗಮನಕ್ಕೆ (ಮಾಹಿತಿಗೆ) ಪ್ರಕಟಿಸಲಾಗಿದೆ.

**ಆರ್. ಆರ್. ಶಿರ್‌ಗಾವ್‌ಕರ್**
ಸರ್‌ಸುಭೆ

**(ಕರವೀರ ಸರಕಾರ ಗೆಜೆಟ್, ಭಾಗ–೧, ೬, ನವೆಂಬರ್ ೧೯೦೯)**

---

## ೧೬

## ದಮನಿತ ವರ್ಗಗಳ ಮಕ್ಕಳಿಗೆ ಉಚಿತ ಶಿಕ್ಷಣ

೧೬, ಡಿಸೆಂಬರ್ ೧೯೧೧

ಮಾನ್ಯ ಘನತೆವೆತ್ತ ಮಹಾರಾಜರ ಆಜ್ಞೆ ನೋಡಿ ನಿರ್ಣಯದ ಸಂಖ್ಯೆ ೬೬೨, ಹೊರಸಂಖ್ಯೆ ೧೧೪೫, ದಿನಾಂಕ ೨೪, ನವೆಂಬರ್ ೧೯೧೧ ಕೊರ್ವಿ, ವಡರರು ಮೊದಲಾದ ಜಾತಿಗಳ ಮಕ್ಕಳು ರಾಯಬಾಗ್‌ನಲ್ಲಿರುವ ಶಾಲೆಗೆ ಹೋಗಬಯಸುತ್ತಾರೆ. ಆದರೆ ಅವರು ಫೀಜು ಕಟ್ಟಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಶಾಲೆಗೆ ಹೋಗಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ದಮನಿತ ವರ್ಗಗಳ ಎಲ್ಲಾ ಮಕ್ಕಳಿಗೆ ಕೊಲ್ಹಾಪುರ ಸಂಸ್ಥಾನದ ಪ್ರದೇಶದಲ್ಲಿ ಉಚಿತವಾಗಿ ಶಿಕ್ಷಣ ನೀಡಲಾಗುವುದೆಂದು ಭಾವಿಸಲಾಗಿದೆ.

**ಆರ್. ಆರ್. ಶಿರ್‌ಗಾವ್‌ಕರ್**
ದಿವಾನ್, ಕರವೀರ ಸರಕಾರ

**(ಕರವೀರ ಸರಕಾರ ಗೆಜೆಟ್, ಭಾಗ–೧, ೧೬, ಸೆಪ್ಟೆಂಬರ್ ೧೯೧೧)**

---

೧೭

*ಗ್ರಾಮಪಾಟೀಲ ಪರಿಪೂರ್ಣವಾಗಿ ಹಳ್ಳಿಯಲ್ಲಿ ಒಬ್ಬ ಮಹಾರಾಜ, ಹಳ್ಳಿಯ ಅತ್ಯುನ್ನತ ಅಧಿಕಾರಿ, ಸರಕಾರಕ್ಕೆ ಅಧೀನನಾಗಿದ್ದಾನೆ. ಪಾಟೀಲರಿಗೆ ಶಿಕ್ಷಣ ನೀಡಲು ಮತ್ತು ಅವರ ಏಳಿಗೆಮಾಡಲು ಮತ್ತು ಅವರ ದಕ್ಷತೆ ಮತ್ತು ಪರಿಣಾಮಕಾರತ್ವವನ್ನು ಖಾತರಿಪಡಿಸುವ ಸಲುವಾಗಿ ಶಾಹುರವರು ಪಾಟೀಲರಿಗೆ ತರಬೇತಿ ನೀಡಲು ಒಂದು ಸಂಸ್ಥೆಯನ್ನು ಪ್ರಾರಂಭಿಸಿದರು.*

---

## ಅಧಿಸೂಚನೆ

"ದೆಹಲಿ ದರ್ಬಾರ ನೆನಪಿನ ಪಾಟೀಲರ ಶಾಲೆ"

ನೆನಪಿಗಾಗಿ ದರ್ಬಾರು ದೆಹಲಿಯಲ್ಲಿ ಡಿಸೆಂಬರ್ ೧೨ರಂದು ಸಭೆ ನಡೆದು ಕೊಲ್ಹಾಪುರ ನಗರದಲ್ಲಿ ಒಂದು ಶಾಲೆಯನ್ನು ಪ್ರಾರಂಭಿಸಬೇಕೆಂದು ಕಛೇರಿ ಆಜ್ಞೆ ಸಂಖ್ಯೆ ೧೪೩೪, ದಿನಾಂಕ ೨/೨/೧೯೧೨ ನೋಡಿ ಮತ್ತು ಘನತೆವೆತ್ತ ಛತ್ರಪತಿ ಅವರು ಅಂಗೀಕಾರ ನೀಡಿದರು.

ಶಾಲೆಯಲ್ಲಿ ಕಲಿಸಬೇಕಾದ ವಿಷಯಗಳು ಈ ಕೆಳಗಿನಂತಿವೆ:

(೧) ಗ್ರಾಮದ ಪೊಲೀಸರಿಗೆ ಸಂಬಂಧಿಸಿದ ಕಾನೂನುಗಳು ಮತ್ತು ಅಪರಾಧಿ ಪ್ರಕ್ರಿಯೆಯ ಸಂಹಿತೆಯ ತತ್ವಗಳು.

(೨) ಗ್ರಾಮದ ಆಡಳಿತದ ಲೆಕ್ಕಪತ್ರಗಳು, ಕಂದಾಯದ ದಾಖಲೆಗಳು, ಭೂ ದಾಖಲೆಗಳು ಇತ್ಯಾದಿ.

(೩) ಗ್ರಾಮೀಣ ಆರೋಗ್ಯಕ್ಕೆ ಸಂಬಂಧಿಸಿದ ಮಾಹಿತಿ.

(೪) ಭಾಷಾ ಅಧ್ಯಯನಗಳು, ವರದಿ ಬರೆಯುವುದು ಇತ್ಯಾದಿ.

(೫) ಕೊಲ್ಹಾಪುರ ಸಂಸ್ಥಾನದ ಇತಿಹಾಸ, ಭೂಗೋಳ ಶಾಸ್ತ್ರ, ಆಡಳಿತ ಮತ್ತು ಆಡಳಿತಕ್ಕೆ ಸಂಬಂಧಿಸಿದ ಮಾಹಿತಿ.

ಈ ಕೆಳಕಂಡ ಕಮಿಟಿಯಲ್ಲಿರುವವರು ಪ್ರತಿ ವರ್ಷ ಪರೀಕ್ಷೆಯನ್ನು ನಡೆಸುವರು.

(೧) ಶೈಕ್ಷಣಿಕ ನಿರೀಕ್ಷಕರು.

(೨) ರಾಜಾರಾಮ್ ಕಾಲೇಜಿನ ವಿಜ್ಞಾನದ ಪ್ರೊಫೆಸರ್.

(೩) ರಾವ್‌ಬಹಾದೂರ್ ಸರ್‌ಸುಭೆ ಅವರು ಆಡಳಿತದಿಂದ ಒಬ್ಬ ಅಧಿಕಾರಿಯನ್ನು ನೇಮಕ ಮಾಡುವರು.

ಈ ಪರೀಕ್ಷೆಯನ್ನು ಪಾಸುಮಾಡಿದ ವ್ಯಕ್ತಿಯನ್ನು ನಿಯಮಗಳ ಪ್ರಕಾರ ಪಾಟೀಲನನ್ನಾಗಿ ನೇಮಕ ಮಾಡಲಾಗುವುದು...

ಈ ಸಂಸ್ಥೆಯಲ್ಲಿ ಪ್ರವೇಶ ಬಯಸುವ ಅಭ್ಯರ್ಥಿಯು ಕೆಳಗೆ ಸಹಿಮಾಡಿರುವ ವ್ಯಕ್ತಿಯನ್ನು ಸಂಪರ್ಕಿಸಬಹುದು.

೧೬, ಏಪ್ರಿಲ್ ೧೯೧೨

**ಎ. ಬಿ. ಲಠ್ಠೆ**
ಶೈಕ್ಷಣಿಕ ನಿರೀಕ್ಷಕ

**(ಕರವೀರ ಸರಕಾರ ಗೆಜೆಟ್, ಭಾಗ–೧, ೨೦, ಏಪ್ರಿಲ್ ೧೯೧೨)**

---

೧೮

ಹುಡುಗಿಯರ ಶ್ರೀ ರಾಧಾಬಾಯಿ ಅಕ್ಕಾಸಾಹೇಬ್ ಮಹಾರಾಜ ವಿದ್ಯಾರ್ಥಿವೇತನ ಮತ್ತು ಭಾವನಗರದ ಶ್ರೀ ಮಹಾರಾಣಿ ನಂದಕುಮಾರ ವಿದ್ಯಾರ್ಥಿವೇತನಗಳಿಗೆ ಸಂಬಂಧಿಸಿದ ನಿಯಮಾವಳಿಗಳು:

೧. ೪೦/- ರೂ.ಗಳ ವಿದ್ಯಾರ್ಥಿವೇತನ ಮತ್ತು ಒಂದು ವರ್ಷದ ಅವಧಿಗೆ ನಿಯಮಗಳ ಪ್ರಕಾರ ಕೊಡಲಾಗುವುದು.

೨. ಕೊಲ್ಹಾಪುರ ನಗರದ ಮರಾಠಿ ಶಾಲೆಯ ನಾಲ್ಕನೇ ತರಗತಿಯ ವಿದ್ಯಾರ್ಥಿನಿಯರಿಗೆ ಮತ್ತು ಖಾವ್ಡ-ಇನ್‌ಫ್ಯಾಂಟ್ರಿಯವರು ಮೊದಲ ಎರಡು ರ್‍ಯಾಂಕು ಪಡೆದ ಇಬ್ಬರಿಗೆ ವಿದ್ಯಾರ್ಥಿವೇತನಗಳನ್ನು ನೀಡಲಾಗುವುದು. ಈ ಉದ್ದೇಶಕ್ಕಾಗಿ ಎಲ್ಲಾ ಶಾಲೆಗಳಿಗೆ ಈ ಪರೀಕ್ಷೆಯನ್ನು ಶೈಕ್ಷಣಿಕ ನಿರೀಕ್ಷಕರು ಏಕಕಾಲದಲ್ಲಿ ನಡೆಸುವರು ಮತ್ತು ವಿದ್ಯಾರ್ಥಿವೇತನಗಳನ್ನು ಘೋಷಿಸುವರು.

೩. ಖಾವ್ಡಾ-ಇನ್‌ಫ್ಯಾಂಟ್ರ ಮತ್ತು ಕೊಲ್ಹಾಪುರ ನಗರದ ಶಾಲೆಗಳನ್ನು ಬಿಟ್ಟು, ಇತರೆ ಪ್ರದೇಶದ ಶಾಲೆಗಳಿಗೆ ವಾರ್ಷಿಕ ಪರೀಕ್ಷೆಯ ಫಲಿತಾಂಶಗಳ ಆಧಾರದ ಮೇರೆಗೆ ಮತ್ತು ಶೈಕ್ಷಣಿಕ ನಿರೀಕ್ಷಕರ ವಿವೇಚನೆಯಲ್ಲಿ ಇತರೆ ಹೆಸರುಗಳನ್ನು ಹೆಚ್ಚು ಯೋಗ್ಯರಾದ ಮೂವರು ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನಗಳನ್ನು ನೀಡಲಾಗುವುದು. ವಿದ್ಯಾರ್ಥಿವೇತನಗಳಿಗೆ ಸೂಕ್ತ ಅಭ್ಯರ್ಥಿಗಳು ಸಿಗದಿದ್ದರೆ, ಅದೇ ವಿದ್ಯಾರ್ಥಿವೇತನಗಳನ್ನು ಕೊಲ್ಹಾಪುರ ಮತ್ತು ಬಾವ್ಡಾ-ಇನ್‌ಫ್ಯಾಂಟ್ರ ಪ್ರದೇಶದ ಶಾಲೆಗಳ ಪ್ರತಿಭಾ ಪಟ್ಟಿಯಲ್ಲಿರುವ ಮೂವರು ವಿದ್ಯಾರ್ಥಿನಿಯರಿಗೆ ನೀಡಲಾಗುವುದು.

೪. ಯಾವುದೇ ವಿದ್ಯಾರ್ಥಿನಿ ಏಕಕಾಲದಲ್ಲಿ ಎರಡು ವಿದ್ಯಾರ್ಥಿ ವೇತನಗಳನ್ನು ಪಡೆಯುವಂತಿಲ್ಲ.

೫. ವಿದ್ಯಾರ್ಥಿವೇತನದ ಅಭ್ಯರ್ಥಿಯು ವಿದ್ಯಾರ್ಥಿವೇತನವನ್ನು ಪಡೆಯುವಾಗ ಕೊಲ್ಹಾಪುರ ಸಂಸ್ಥಾನದ ಯಾವುದಾದರೂ ಒಂದು ಶಾಲೆಯಲ್ಲಿ ಓದುತ್ತಿರಬೇಕು. ಶಾಲೆಯ ಶಿಕ್ಷಣ ಮುಂದುವರೆಸುವಲ್ಲಿ ಯಾವುದೇ ಕೊರತೆಯಿದ್ದರೆ ಅಥವಾ ಅನಿಯತತೆಯಿದ್ದರೆ ಅಥವಾ ಮತ್ತಾವುದೇ ಕಾರಣಕ್ಕಾಗಿ ಶಿಕ್ಷಣದ ನಿರೀಕ್ಷಕರು ಬೇರೆಯಾಗಿ ಭಾವಿಸಿದರೆ, ವಿದ್ಯಾರ್ಥಿವೇತನವನ್ನು ನೀಡಲಾಗುವುದಿಲ್ಲ.

೬. ವಿದ್ಯಾರ್ಥಿವೇತನವನ್ನು ನಿಯಮ ೫ರ ಪ್ರಕಾರ ನಿರಾಕರಿಸಿದ್ದಲ್ಲಿ, ಪ್ರತಿಭಾಪಟ್ಟಿಯಲ್ಲಿರುವ ಮುಂದಿನ ವಿದ್ಯಾರ್ಥಿನಿಗೆ ಉಳಿಕೆಯ ಭಾಗದಲ್ಲಿ ಆ ವರ್ಷಕ್ಕೆ ನೀಡಬಹುದು.

೭. ವಿದ್ಯಾರ್ಥಿವೇತನವನ್ನು ತ್ರೈಮಾಸಿಕವಾಗಿ ಕಂತುಗಳಲ್ಲಿ ನೀಡಬಹುದು.

೮. ವಿದ್ಯಾರ್ಥಿವೇತನವನ್ನು ನವೆಂಬರ್‌ನಿಂದ ಅಕ್ಟೋಬರ್‌ವರೆಗೆ ನೀಡಬಹುದು.

೯. ಈ ವಿದ್ಯಾರ್ಥಿವೇತನಗಳನ್ನು ಬಿಟ್ಟು ೪೦/-ರೂ.ಗಳ ಇನ್ನೊಂದು ವಿದ್ಯಾರ್ಥಿವೇತನವನ್ನು ಶ್ರೀ ಸೌ. ರಾಧಾಬಾಯಿ ಅಕ್ಕಾಸಾಹೇಬ ಮಹಾರಾಜರ ಹೆಸರಿನಲ್ಲಿ ಉತ್ತಮ ನಡೆವಳಿಕೆಗಾಗಿ ನೀಡಬಹುದು. ಆದರೆ ಶಿಕ್ಷಣ ನಿರೀಕ್ಷಕರೊಂದಿಗೆ ಅಹಲ್ಯಾಬಾಯಿ ಹೆಣ್ಣುಮಕ್ಕಳ ಶಾಲೆಯ ಮಹಿಳಾ ಉಸ್ತುವಾರಿ ಅಧಿಕಾರಿಯು ಸಮಾಲೋಚಿಸಿ ಅತ್ಯುತ್ತಮ ವರ್ತನೆಯ ವಿದ್ಯಾರ್ಥಿನಿಯನ್ನು ಆಯ್ಕೆ ಮಾಡಬೇಕಾಗುತ್ತದೆ.

೧೦. ಮಹಿಳಾ ಉಸ್ತುವಾರಿ ಅಧಿಕಾರಿಯು ಆಯ್ಕೆಗೊಂಡ ವಿದ್ಯಾರ್ಥಿನಿಯೊಂದಿಗೆ ವಿದ್ಯಾರ್ಥಿವೇತನ ನೀಡುವ ಸ್ವರೂಪದ ಬಗ್ಗೆ ಚರ್ಚಿಸುವರು.

೩ ಮಾರ್ಚ್ ೧೯೧೩

ಎ. ಬಿ. ಲಠ್ಠೆ
ಶಿಕ್ಷಣ ನಿರೀಕ್ಷಕರು

(ಕರವೀರ ಸರಕಾರ, ಗೆಜೆಟ್, ಭಾಗ-೧, ೫, ಏಪ್ರಿಲ್ ೧೯೧೩)

---

*ಶಾಹುರವರು ಪ್ರತಿಯೊಂದು ವಿಧಾನವನ್ನು ಸಾರ್ವಜನಿಕ-ಮೆರವಣಿಗೆಗಳಿಗೆ, ಜಾತ್ರೆಗಳಿಗೆ, ಜಲಸಾಗಳಿಗೆ, ಉತ್ಸವಗಳಿಗೆ ಶಿಕ್ಷಣ ನೀಡಲು ಬಳಸಿಕೊಂಡರು. ಮಹಾಲಕ್ಷ್ಮಿ ರಥೋತ್ಸವಗಳಲ್ಲಿ ಅವರು ಕೃಷಿ ಮತ್ತು ಇಂಜಿನಿಯರಿಂಗ್ ವಸ್ತುಪ್ರದರ್ಶನಗಳನ್ನು ನಡೆಸಲು ಪ್ರಾರಂಭಿಸಿದರು. ಮಹಾಲಕ್ಷ್ಮಿ ರಥೋತ್ಸವ ಮತ್ತು ಜೋತಿಬಾ ಜಾತ್ರೆಗಳನ್ನು ನಡೆಸುವ ಹೊಣೆಯನ್ನು ತಮ್ಮ ಸಹೋದರ ಬಾಪುಸಾಹೇಬ ಮತ್ತು ರಾಜಾರಾಮ್ ಕಾಲೇಜಿನ ಪ್ರಾಂಶುಪಾಲ ಶ್ರೀ ಡರ್ಬಿ ಅವರಿಗೆ ವಹಿಸಿದರು. ಕುಸ್ತಿಸ್ಪರ್ಧೆ ಮತ್ತು ಇತರೆ ಸ್ಪರ್ಧೆಗಳು ಸಹ ನಡೆದವು. ಅದು ಮನರಂಜನೆಯೊಂದಿಗೆ ಶಿಕ್ಷಣವಾಗಿತ್ತು.*

---

## ಅಧಿಸೂಚನೆ

### ಇಂಜನಿಯರಿಂಗ್ ಮತ್ತು ಕೃಷಿ ಪ್ರದರ್ಶನ, ಕೊಲ್ಹಾಪುರ

### ೬ ಸೆಪ್ಟಂಬರ್, ೧೯೧೩

ಚೈತ್ರಶುದ್ಧ ಕೊಲ್ಹಾಪುರದ ೧೫ನೇ ಶ್ರೀ ಕರವೀರ ನಿವಾಸಿನಿ (ಮಹಾಲಕ್ಷ್ಮಿ ದೇವತೆ) ಮತ್ತು ವಾಡಿರತ್ನಗಿರಿಯ ಶ್ರೀ ಕೇದರಲಿಂಗ (ಜೋತಿಬಾ ದೇವರು)ರ ಮೆರವಣಿಗೆಯಲ್ಲಿ ಸಾವಿರಾರು ಭಕ್ತರು ಭಾಗವಹಿಸಿದ್ದರು. ಈ ಮೊದಲು 'ಮಾಯಕ್ಕರವರ' ಜಾತ್ರೆಯಲ್ಲಿ ಕೃಷಿ ವಸ್ತುಪ್ರದರ್ಶನಗಳು ಮೊದಲಾದವುಗಳು ನಡೆದಿದ್ದಂತೆಯೇ ಇಲ್ಲಿ ಕೂಡ ವಸ್ತುಪ್ರದರ್ಶನಗಳು ನಡೆಯಬೇಕು, ಇದರಿಂದ ಸಾರ್ವಜನಿಕರು ಮನರಂಜನೆಯ ಜೊತೆಗೆ ಶಿಕ್ಷಣವನ್ನು ಪಡೆಯುವರು. ಘನತೆವೆತ್ತ ಮಹಾರಾಜರು ಆಜ್ಞೆಯನ್ನು ಮಾಡಿದರು. ನೋಡಿ ಸಂಖ್ಯೆ ೬೯, ದಿನಾಂಕ ೧೪, ಆಗಸ್ಟ್ ೧೯೧೩:

(೧) ಕೃಷಿಗೆ ಸಂಬಂಧಿಸಿದ ಉಪಕರಣಗಳಾದ ನೇಗಿಲುಗಳು ಮೊದಲಾದವು, ಕೃಷಿಯ ಪ್ರಾಣಿಗಳು, ಕುದುರೆಗಳು, ಎಮ್ಮೆಗಳು, ಹಸುಗಳು, ನಾಯಿಗಳು ಮತ್ತು ಕುರಿಗಳು ಮೊದಲಾದವುಗಳನ್ನು ಪ್ರದರ್ಶಿಸಬೇಕು....

(೨) ಮೊದಲ ಜಾತ್ರೆಯ ಸಮಿತಿಯ ಅಧ್ಯಕ್ಷರು ಶ್ರೀ ಬಾಪುಸಾಹೇಬ್ ಘಾಟ್ಗೆ, ಸರ್ಜೆರಾವ್ ವಜರತ್ ಮಾ-ಅಬ್, ಕಾಗಲ್‌ನ ಮುಖ್ಯಸ್ಥರು ಸೀಯರ್ ಮತ್ತು ನಾನಾಸಾಹೇಬ್ ಮುಲಿಕ್ ಅವರು ಕಾರ್ಯದರ್ಶಿಗಳಾಗಿರುವರು. ರಾಜಾರಾಮ್ ಕಾಲೇಜಿನ ಪ್ರಾಂಶುಪಾಲ ಶ್ರೀ ಡರ್ಬಿ ಅವರು ಎರಡನೇ ವಸ್ತುಪ್ರದರ್ಶನವನ್ನು ಸಂಘಟಿಸುವರು.

(೩) ಎರಡು ವಸ್ತುಪ್ರದರ್ಶನಗಳು ಚೈತ್ರಶುದ್ಧ ೧೪ರಂದು ಪ್ರಾರಂಭವಾಗುವುವು ಮತ್ತು ೬ ದಿನಗಳವರೆಗೆ ನಡೆಯುವುವು.

(೪) ಎರಡು ವಸ್ತುಪ್ರದರ್ಶನಗಳಿಗೆ ಪ್ರವೇಶದರವನ್ನು ನಿಗದಿಗೊಳಿಸಲಾಗುವುದು ಮತ್ತು ಗೇಟಿನ ಸಂಗ್ರಹವು ವಸ್ತುಪ್ರದರ್ಶನಗಳ ಖರ್ಚನ್ನು ಸರಿದೂಗಿಸುವವು. ಸರಕಾರವು ಜೊತೆಗೆ ಅನುದಾನ ೪,೫೦೦/- ರೂ.ಗಳನ್ನು ನೀಡುವುದು....

ಕುಸ್ತಿ ಮತ್ತು ಸಾತ್‌ಮರಿ ಸ್ಪರ್ಧೆಗಳು ನಡೆಯುತ್ತವೆ.

---

**ಘನತೆವೆತ್ತ ಮಹಾರಾಜರ ಆಜ್ಞೆ**

೬, ಸೆಪ್ಟಂಬರ್ ೧೯೧೩

ಮುಂದಿನ ವರ್ಷದಿಂದ ಅಂಬಾಬಾಯಿ ದೇವತೆಯ ರಥೋತ್ಸವದ ದಿನ ಚೈತ್ರವದ್ಯ ೧, ಹಜರತ್‌ಬಾಬುಜಿಮಲ್‌ರ 'ಉರುಸ್' ಮತ್ತು ಮೂರನೆಯ ದಿನ 'ಧೋಂಡ್‌ಪೀರ್‌ರ ಉರುಸ್' ನಡೆಯುವುದು ಮತ್ತು ಕೃಷಿ ಮತ್ತು ಇಂಜಿನಿಯರಿಂಗ್ ವಸ್ತುಪ್ರದರ್ಶನಗಳು ೧೪ನೇ ಚೈತ್ರಶುದ್ಧದಂದು ನಡೆಯುತ್ತವೆ. ಎಲ್ಲಾ ಶಾಲಾ ಕಾಲೇಜುಗಳಿಗೆ ಮತ್ತು ಕಛೇರಿಗಳಿಗೆ ಈ ಮೂರು ದಿನಗಳು ರಜೆ ನೀಡಲಾಗಿದೆ.

ಘನತೆವೆತ್ತ ಮಹಾರಾಜರ ಆಜ್ಞೆ

**ಜಿ. ಆರ್. ಶ್ರೀಖಂಡೆ**
ಸಹಾಯಕ ದಿವಾನ

**ಆರ್. ಆರ್. ಶಿರ್‌ಗಾಂವ್‌ಕರ್**
ಪ್ರಭಾರ ಕೊಲ್ಹಾಪುರದ ದಿವಾನರು

**(ಕರವೀರ ಸರಕಾರ ಗೆಜೆಟ್, ಭಾಗ-೧, ೧೩, ಸೆಪ್ಟಂಬರ್ ೧೯೧೩)**

---

## ೨೦

# ಅನ್ವೇಷಕ ಮತ್ತು ಉದ್ಯಮಿಗಳಿಗೆ ಶಾಹುರವರ ಪ್ರೋತ್ಸಾಹ

೧೧, ಮೇ ೧೯೧೫

ಕೊಲ್ಹಾಪುರದ ನಿವಾಸಿಯಾದ ಅರ್ಜಿದಾರ ದತ್ತೋ ಬಾಬಾಜಿ ಕರಜ್‌ಗಾರ್ ಅವರು ಪೋಹ ತಯಾರುಮಾಡುವ ಒಂದು ರೋಲರ್–ಯಂತ್ರವನ್ನು ಕಂಡುಹಿಡಿದಿದ್ದರು ಮತ್ತು ಅವರು ಪೇಟೆಂಟ್‌ಗೆ ಅರ್ಜಿ ಸಲ್ಲಿಸಿದ್ದರು. ಅವರು ಸ್ಥಳೀಕರಾಗಿರುವುದನ್ನು ಗಮನಿಸಿ ಅವರಿಗೆ ಯಾವುದೇ ಶುಲ್ಕ ವಿಧಿಸದೆ ೧೪ ವರ್ಷಗಳವರೆಗೆ ಈ ಮೂಲಕ ಪೇಟೆಂಟ್ ನೀಡಲಾಗಿದೆ ಮತ್ತು ವಿಸ್ತರಣೆ ಬಯಸಿದಲ್ಲಿ ಶುಲ್ಕಗಳನ್ನು ಮಾಫಿ ಮಾಡುವ ಬಗ್ಗೆ ಪುನರ್‌ಪರಿಶೀಲಿಸಲಾಗುವುದು. ಘನತೆವೆತ್ತ ಮಾನ್ಯ ಮಹಾರಾಜರು ಆಜ್ಞೆಯನ್ನು ನೀಡಿದ್ದಾರೆ. ನೋಡಿ ನಿರ್ಣಯ ಸಂಖ್ಯೆ ೫೮೭, ದಿನಾಂಕ ೨೧, ನವೆಂಬರ್ ೧೯೧೪. ಯಾರೇ ಆಗಲೀ ಈ ಪೇಟೆಂಟ್‌ಗೆ ಸಲ್ಲಿಸಿರುವ ಆಕೃತಿಗೆ (ಡಿಸೈನ್) ತದ್ರೂಪದ ಒಂದು ಯಂತ್ರವನ್ನು ಅಭಿವೃದ್ಧಿಪಡಿಸಬಾರದು ಅಥವಾ ಉತ್ಪಾದಿಸಬಾರದು ಮತ್ತು ಈ ಸೂಚನೆಯನ್ನು ಎಲ್ಲರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಆರ್. ಆರ್. ಶಿರ್‌ಗಾಂವ್‌ಕರ್**
ಸಹಾಯಕ ದಿವಾನ, ಕರವೀರ ಸರಕಾರ

**(ಕರವೀರ ಸರಕಾರ ಗೆಜೆಟ್, ಭಾಗ–೧, ೧೫, ಮೇ ೧೯೧೫)**

---

೨೧

*ಈ ಸೂಚನೆಯು ಶಾಹುರವರ ವೈಚಾರಿಕತೆಯನ್ನು ಮತ್ತು ಅವರ ಸಂಪೂರ್ಣವಾಗಿ ರಾಜವೈಭವ ಮತ್ತು ಪೊಳ್ಳುಹೆಮ್ಮೆಗಳನ್ನು ಕಳೆದುಕೊಂಡಿದ್ದರೆಂಬುದನ್ನು ಸೂಚಿಸುತ್ತದೆ. ಜನರಿಗೆ ತಮ್ಮ ಮಗನನ್ನು ವೈಭವವಾಗಿ ಸನ್ಮಾನಿಸಬಾರದೆಂದು ವಿವೇಚನೆಯಿಂದ, ಮತ್ತು ಸೌಮ್ಯವಾಗಿ ಎಚ್ಚರಿಕೆಯನ್ನು ನೀಡುತ್ತಾರೆ.*

---

## ಸಾರ್ವಜನಿಕ ಅಧಿಸೂಚನೆ

ದಿನಾಂಕ ೨೬, ಆಗಸ್ಟ್ ೧೯೧೫

ರಾಜಕುಮಾರ ರಾಜಾರಾಮ್, ಅವರ ಸಹೋದರ ಮತ್ತು ಅವರ ಜೊತೆಗಾರರು ಇಂಗ್ಲೆಂಡಿನಿಂದ ಸ್ವಂತ ಮನೆಗೆ ತಮ್ಮ ವಿದ್ಯಾಭ್ಯಾಸ ಮುಗಿದ ಮೇಲೆ ವಾಪಸ್ಸು ಬರುತ್ತಿದ್ದಾರೆ. ನಿಷ್ಠಾವಂತ ನಮ್ಮ ನಾಗರಿಕರಂತೆಯೇ, ಘನತೆವೆತ್ತ ಮಹಾರಾಜರು ಸಹ ಈ ಘಟನೆಯ ಬಗ್ಗೆ ಸಂತೋಷಿತರಾಗಿದ್ದಾರೆ. ಭಿನ್ನಭಿನ್ನ ಸಮುದಾಯಗಳು, ಸಂಘಟನೆಗಳು, ಸಂಸ್ಥೆಗಳು ಅವರ ಮನೆಗೆ ಬರುವುದನ್ನು ಸಂಭ್ರಮಿಸಲು, ತಮ್ಮ ನಿಷ್ಠೆಯನ್ನು, ಮಮತೆಯನ್ನು ತೋರಿಸಲು ಕಾರ್ಯಕ್ರಮಗಳನ್ನು ಸಂಘಟಿಸುತ್ತಿದ್ದಾರೆ. ಇವುಗಳ ಖರ್ಚಿಗೆ ದೇಣಿಗೆಗಳನ್ನು ಕೇಳುತ್ತಿದ್ದರು.

ಸಂಗ್ರಹಿಸುವ ಹಣವನ್ನು ಊಟೋಪಚಾರ, ಬೆಳಕಿನ ಅಲಂಕಾರ, ಪಟಾಕಿಗಳನ್ನು ಸುಡುವುದು, ಇವೆಲ್ಲವೂ ಕ್ಷಣಿಕ ಸಂತೋಷವನ್ನು ನೀಡುತ್ತವೆ. ಪ್ರತಿಯೊಬ್ಬ ಸಂಘಟನೆಕಾರ ಅವಶ್ಯಕವಿದ್ದಷ್ಟು ಮೊತ್ತವನ್ನು ಖರ್ಚುಮಾಡಿದರೆ ಮತ್ತು ತಮ್ಮ ಮಟ್ಟಕ್ಕೆ ಅನುಗುಣವಾಗಿ ಖರ್ಚುಮಾಡಿದರೆ, ಉಳಿದ ಮೊತ್ತವನ್ನು ಔಪಚಾರಿಕ ಶಿಕ್ಷಣ ಹರಡುವುದಕ್ಕೆ ಬಳಸಿದರೆ ಅದು ಚಿರಸ್ಥಾಯಿಯಾಗಿ ಉಳಿಯುತ್ತದೆ. ಈ ವಿಚಾರವನ್ನು ಕೆಲವು ಸಂಘಟನೆಗಳು ಯೋಚಿಸಿದ್ದನ್ನು ಘನತೆವೆತ್ತ ಮಹಾರಾಜರು ಬಹಳ ಮೆಚ್ಚಿಕೊಂಡರು. ಅರಮನೆಯ ಸೇವಕರು ಮತ್ತು ಕಾವಲುಗಾರರು ತಾವು ಸಂಗ್ರಹಿಸಿದ ಮೊತ್ತದಲ್ಲಿ ಬಹುಪಾಲನ್ನು ದೀರ್ಘಕಾಲಿಕ ಹೂಡಿಕೆಗೆ ತೆಗೆದಿಟ್ಟು ಅದರಿಂದ ಬಂದ ಬಡ್ಡಿಯನ್ನು ತಮ್ಮ ಸಮುದಾಯದ ಯೋಗ್ಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ಮತ್ತು ಸಹಾಯ ನೀಡಲು ಬಳಸುವರು. ಇದು ಅತ್ಯುತ್ತಮ ಯೋಜನೆಯಾಗಿತ್ತು. ಮತ್ತು ಮಾನ್ಯ ಮಹಾರಾಜರಿಗೆ ತೃಪ್ತಿ ನೀಡಿತು. ರಾಜಕುಮಾರರು ವಿದ್ಯೆಯನ್ನು ಪಡೆದು ವಾಪಸ್ಸು ಬಂದ ಮೇಲೆ ನೆನಪಿನ ಉತ್ಸವವು ಸಾಮಾನ್ಯ ಜನರ ಮಕ್ಕಳು ಭವಿಷ್ಯದಲ್ಲಿ ವಿದ್ಯಾಭ್ಯಾಸವನ್ನು ಪಡೆಯಲು ಹುರಿದುಂಬಿಸುವುದು. ಮರಾಠರು, ಜೈನರು, ಲಿಂಗಾಯತರು, ಸಿಂಪಿಗಳು, ಸಾರಸ್ವತರು, ಮುಸಲ್ಮಾನರು ಮೊದಲಾದ ಸಮುದಾಯಗಳು ಸಂಗ್ರಹಿಸಿದ ಹಣವನ್ನು ತಮ್ಮ ವಿದ್ಯಾರ್ಥಿ ನಿಲಯಗಳಿಗೆ ಮತ್ತು ತಮ್ಮ ಜಾತಿಗಳ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಲು ಬಳಸುವರೆಂದು ಮತ್ತು ಎಲ್ಲರಿಗೂ ಪ್ರಯೋಜನವಾಗುವುದೆಂಬುದರಲ್ಲಿ ಸಂದೇಹವಿಲ್ಲವೆಂದು ಹುಜೂರರು ಭಾವಿಸಿದ್ದರು.

ಕಾಲಗಳು ತುಂಬಾ ಕಷ್ಟಕರವಾಗಿವೆ, ಪ್ರತಿಯೊಬ್ಬರೂ ಕಡಿಮೆ ಖರ್ಚುಮಾಡುವುದು ಅಗತ್ಯ, ಆದರೆ ವಿವೇಚನೆಯಿಂದ ಖರ್ಚುಮಾಡಬೇಕು; ಖರ್ಚುಗಳಿಂದ ಯಾವುದೇ ಆದಾಯವಿಲ್ಲದಿದ್ದರೆ ಅದನ್ನು ಪೂರ್ತಿಯಾಗಿ ತಪ್ಪಿಸಬೇಕು. ಯಾವುದು ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತದೆ. ಅದಕ್ಕೆ ಖರ್ಚನ್ನು ಹೆಚ್ಚು ಮಾಡಬೇಕು.

ದೇಣಿಗೆಗಳನ್ನು ಕೇಳುವಾಗ ಹಲವು ನಾಯಕರು ಒತ್ತಾಯ ಹಾಕುವರು ಅಥವಾ ಅಂತಹ ಸಂಗ್ರಹಗಳನ್ನು ಕಡ್ಡಾಯಗೊಳಿಸುವರು. ಇದು ಸಂಪೂರ್ಣವಾಗಿ ಸರಿ ಅಲ್ಲ. ಹುಜೂರರು ದೇಣಿಗೆಗಳನ್ನು ಸಂಗ್ರಹಿಸುವಾಗ ಯಾವುದೇ ರೀತಿಯ ಒತ್ತಡ ಹಾಕಬಾರದು. ದಾನಿಯು ತಮ್ಮ ಮನಃಪೂರ್ವಕ ಮತ್ತು ಸಂತೋಷವಾಗಿ ಕೊಡಲಿ ಎಂದು ಹುಜೂರರು ಭಾವಿಸಿದ್ದರು.

ಮರಾಠರು, ಜೈನರು, ಸಿಂಪಿಗಳು, ಲಿಂಗಾಯತರು, ಸಾರಸ್ವತರು, ಮುಸಲ್ಮಾನರು, ಬ್ರಾಹ್ಮಣರು ಮತ್ತು ಇತರೆ ಎಲ್ಲಾ ಸಮುದಾಯಗಳು ಅವರು ಸಂಗ್ರಹಿಸಿದ ದೇಣಿಗೆಗಳನ್ನು ಶಿಕ್ಷಣದ ಧ್ಯೇಯಕ್ಕೆ ಬಳಸಿದರೆ ಇದಕ್ಕಿಂತ ಒಳ್ಳೆಯದು ಮತ್ತೊಂದಿಲ್ಲ. ಈ ಸಲಹೆಯನ್ನು ಹುಜೂರರು ವ್ಯಾಪಾರಸ್ಥರು ಮತ್ತು ಇತರೆ ಸಮುದಾಯಗಳಿಗೆ ನೀಡಿದ್ದರು. ಮತ್ತು ಈ ಸುಸಂದರ್ಭದಲ್ಲಿ ಅವರು ವಿವೇಚನೆಯ ದಾರಿಯಲ್ಲಿ ಹೋಗುವರೆಂದು ನಿರೀಕ್ಷಿಸಿದ್ದರು.

ಭವಿಷ್ಯದಲ್ಲಿ ಎಂದಾದರೂ ಇಂಥ ಸಂದರ್ಭಗಳು ಒದಗಿಬಂದಾಗ ಸಂಗ್ರಹಗಳು ಪ್ರದೇಶವಾರು, ಸಮುದಾಯವಾರು ಅಥವಾ ಗ್ರಾಮ–ವಾರು ಯೋಗ್ಯರೀತಿಯಲ್ಲಿ ಬಳಸಲಿ ಎಂದು ಹುಜೂರರು ಬಯಸಿದ್ದರು.

ಹುಜೂರರ ಅಪ್ಪಣೆಯ ಮೇರೆಗೆ ಪ್ರಕಟಿಸಲಾಗಿದೆ
**ಆರ್. ಆರ್. ಶಿರ್‌ಗಾಂವ್‌ಕರ್**
ಪ್ರಭಾರ ದಿವಾನ, ಕರವೀರ ಸರಕಾರ
**(ಕರವೀರ ಸರಕಾರ, ಗೆಜೆಟ್, ಭಾಗ–೧, ೨೮, ಆಗಸ್ಟ್ ೧೯೧೫)**

---

**ಸೂಚನೆ:** ಕೊಲ್ಹಾಪುರದ ಎ. ಇ. ಆಸ್ಪತ್ರೆಯಲ್ಲಿ ೧, ಡಿಸೆಂಬರ್ ೧೯೧೭ರಿಂದ ನರ್ಸಿಂಗ್ ಕೋರ್ಸ್‌ನಲ್ಲಿ ತರಗತಿಗಳು ಪ್ರಾರಂಭವಾಗುವುವು. ಈ ಕೋರ್ಸಿಗೆ ಪ್ರವೇಶ ಬಯಸುವವರು ಗಣ್ಯವ್ಯಕ್ತಿಗಳು ನೀಡಿದ ನಡವಳಿಕೆ ಪತ್ರ ಮತ್ತು ಪ್ರಾದೇಶಿಕ ಭಾಷೆಯಲ್ಲಿ ೪ನೇ ತರಗತಿ ಪರೀಕ್ಷೆ ಪಾಸುಮಾಡಿದ್ದಕ್ಕೆ ಮುಖ್ಯೋಪಾಧ್ಯಾಯರು ನೀಡಿದ ಪತ್ರದೊಂದಿಗೆ ಖುದ್ದಾಗಿ ಬಂದು ಪ್ರವೇಶಕ್ಕೆ ಅರ್ಜಿ ಸಲ್ಲಿಸಿ. ಲಿಖಿತ ಪರೀಕ್ಷೆಯನ್ನು ನಡೆಸಲಾಗುವುದು. ಮತ್ತು ಮೊದಲ ಆರು ಹುಡುಗಿ ಅಭ್ಯರ್ಥಿಗಳಿಗೆ ಪ್ರತಿಭೆಯ ಪಟ್ಟಿಯಿಂದ ವಿದ್ಯಾರ್ಥಿವೇತನಗಳನ್ನು ನೀಡಲಾಗುವುದು.

**ಎ. ಇ. ಆಸ್ಪತ್ರೆ**
**ಕೊಲ್ಹಾಪುರ**

**ವಿ. ಎಸ್. ತೆಂಗ್ಸೆ**
ರದರ್ಬಾರ ಸರ್ಜನ್

**(ಕರವೀರ ಸರಕಾರ ಗೆಜೆಟ್, ಭಾಗ–೧, ೧೦, ನವೆಂಬರ್ ೧೯೧೭)**

---

## ೨೩

*ಅನಕ್ಷರಸ್ಥ ರೈತರಿಗೆ ಕಿರುಕುಳ ನೀಡುವ ಗ್ರಾಮದ ಪಾಟೀಲರ ಮತ್ತು ಕುಲಕರ್ಣಿಗಳ ಕುತಂತ್ರಗಳನ್ನು ತಡೆಯುವಲ್ಲಿ ಪ್ರಮುಖ ಕ್ರಮ.*

---

**ಅಧಿಸೂಚನೆ**

೨೨, ಜನವರಿ ೧೯೧೮

ಸ್ಥಳಿಯ ಸರಕಾರ ಮುಲ್ಕಿ ನಿರ್ಣಯ ಸಂಖ್ಯೆ ೫೩೩, ದಿನಾಂಕ ೪, ಜನವರಿ ೧೯೧೮ನ್ನು ನೋಡಿ, ಘನತೆವೆತ್ತ ಮಹಾರಾಜ ಆಜ್ಞೆಯ ಮೇರೆಗೆ ಈ ಕೆಳಕಂಡ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

ಕರವೀರ ಪ್ರದೇಶದ ಎಲ್ಲಾ ಪಾಟೀಲರು ಮತ್ತು ಕುಲಕರ್ಣಿಗಳು ತಮ್ಮ ಅಧೀನದಲ್ಲಿರುವ ಹಳ್ಳಿಗಳೊಳಗೆ ಹಣಕಾಸಿನ ವ್ಯವಹಾರಗಳಲ್ಲಿ ತೊಡಗಿದ್ದಾರೆಂಬುದನ್ನು ಗಮನಿಸಲಾಗಿದೆ. ಇದು ಬಡಜನತೆಗೆ ಬಹಳ ತೊಂದರೆಗೆ ಕಾರಣವಾಗುತ್ತದೆ; ಆದ್ದರಿಂದ ಎಲ್ಲಾ ಪಾಟೀಲರು ಮತ್ತು ಕುಲಕರ್ಣಿಗಳು ತಮ್ಮ ತಮ್ಮ ಕ್ಷೇತ್ರದ ವ್ಯಾಪ್ತಿಯಲ್ಲಿ ಖಾಸಗಿ ಹಣಕಾಸಿನ ವ್ಯವಹಾರ ನಡೆಸಬಾರದೆಂದು ಈ ಆಜ್ಞೆಯನ್ನು ಈ ಮೂಲಕ ಹೊರಡಿಸಲಾಗಿದೆ. ಈ ಆಜ್ಞೆಗಿಂತ ಮುಂಚಿತವಾಗಿ ನಡೆಸಿದ ಎಲ್ಲಾ ಹಣಕಾಸಿನ ವ್ಯವಹಾರಗಳನ್ನು ಸಂಪೂರ್ಣಗೊಳಿಸಬೇಕು ಅಥವಾ ಈ ದಿನಾಂಕದಿಂದ ಒಂದು ವರ್ಷದೊಳಗೆ ಬಗೆಹರಿಸಿಕೊಳ್ಳಬೇಕು ಮತ್ತು ಈ ಅವಧಿಯ ನಂತರ ಯಾವುದೇ ದೂರನ್ನು ಸಹಿಸಿಕೊಳ್ಳುವುದಿಲ್ಲ. ಈ ಕಾನೂನು ಪಾಟೀಲ ಅಥವಾ ಕುಲಕರ್ಣಿಗಳ ಹತ್ತಿರದ ಸಂಬಂಧಿಕರಿಗೂ ಅನ್ವಯವಾಗುತ್ತದೆ.

**ಬಿ. ಎಸ್. ವಿರಕ್ತಮಠ**

**ಚಿಟ್ನೀಸ್**

**( ಕರವೀರ ಸರಕಾರ ಗೆಜೆಟ್, ಭಾಗ–೧, ೨೬, ಜನವರಿ ೧೯೧೮)**

---

೨೪

## ಸಾರ್ವಜನಿಕ ಸೂಚನೆ

ಮುಲ್ಕಿ ನಿರ್ಣಯ ಸಂಖ್ಯೆ ೫೫೫ ದಿನಾಂಕ ೨೪, ಜನವರಿ ೧೯೧೮ ಸ್ಕೂಲ್‌ಬೋರ್ಡ್ ಹೊರಸಂಖ್ಯೆ ೮, ದಿನಾಂಕ ೨೩ ಜನವರಿ ೧೯೧೮ ಘನತೆವೆತ್ತ ಮಹಾರಾಜರ ಆಜ್ಞೆಯ ಮೇರೆಗೆ.

ಕೊಲ್ಹಾಪುರ ಸಂಸ್ಥಾನದಲ್ಲಿ ಶಿಕ್ಷಣವು ಪ್ರಾಥಮಿಕ ಶಾಲೆಯವರೆಗೆ ಉಚಿತ ಮತ್ತು ಕಡ್ಡಾಯ. ಸ್ವಾಮಿ ಪರಮಾನಂದ (ಆರ್ಯಸಮಾಜ) ಅವರು ಕೇರಳೆಯಲ್ಲಿ ಒಂದು ಪ್ರಾದೇಶಿಕ ಶಾಲೆಯನ್ನು ೪ನೇ ತರಗತಿಯವರೆಗೆ ಪ್ರಾರಂಭಿಸಿದ್ದಾರೆ. ಅದನ್ನು ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣದ ಯೋಜನೆಯಲ್ಲಿ ಸೇರಿಸಲಾಗಿದೆ. ಜೊತೆಗೆ ಪಥಗಾವಂಕರ್ ಬುವಾರವರ ಮಠದಲ್ಲಿ ಇಂಗ್ಲಿಷ್ ಮಾಧ್ಯಮದ ಶಾಲೆಯನ್ನು ಸ್ವಾಮಿ ಪರಮಾನಂದರ ಮಾರ್ಗದರ್ಶನದಲ್ಲಿ ತೆರೆಯುವುದನ್ನು ಈ ಯೋಜನೆಯೊಳಗೆ ಸೇರಿಸಿಕೊಳ್ಳಲಾಗುವುದು.

ರಾವ್ ಬಹಾದ್ದೂರ್ ದೊಂಗ್ರೆ ಅವರು ಎರಡೂ ಶಾಲೆಗಳನ್ನು ನೋಡಿಕೊಳ್ಳುವರು ಮತ್ತು ಶಾಲೆಯ ಖರ್ಚುಗಳಿಗಾಗಿ ೩,೦೦೦/- ರೂ.ಗಳನ್ನು ಮತ್ತು ವಿದ್ಯಾರ್ಥಿಗಳ ಊಟಕ್ಕಾಗಿ ಒಟ್ಟು ೨,೦೦೦/- ರೂ.ಗಳನ್ನು ಅಂದರೆ ಒಟ್ಟು ೫,೦೦೦/- ರೂ.ಗಳನ್ನು ಮುಂದಿನ ಆಯ-ವ್ಯಯ ಪತ್ರದಲ್ಲಿ ಒದಗಿಸಲಾಗುವುದು. ವಿದ್ಯಾರ್ಥಿಗಳ ಊಟ ಮತ್ತು ಬಟ್ಟೆ ಸರಳವಾಗಿರಬೇಕೆಂದು ಮತ್ತು ಶಿಕ್ಷಣದ ಮಟ್ಟ ಉನ್ನತವಾಗಿರಬೇಕೆಂದು ಅಪೇಕ್ಷಿಸಲಾಗಿದೆ. ಆದ್ದರಿಂದ ಈ ವಸತಿಶಾಲೆಗಳು ಅತ್ಯುತ್ತಮ ನಾಗರಿಕರನ್ನು ನಿರ್ಮಾಣ ಮಾಡಬೇಕು.

**(ಕರವೀರ ಸರಕಾರ, ಗೆಜೆಟ್, ಭಾಗ-೧, ೨೬, ಜನವರಿ ೧೯೧೮)**

---

## ಸಾರ್ವಜನಿಕ ಸೂಚನೆ

೨೪, ಜನವರಿ ೧೯೧೮

ಮುಲ್ಕಿ ನಿರ್ಣಯಸಂಖ್ಯೆ ೫೫೪, ಸ್ಕೂಲ್ ಔಟ್‌ವರ್ಡ್ ಸಂಖ್ಯೆ ೭, ದಿನಂಕ ೧೯೧೮ನ್ನು ನೋಡಿ, ಘನತೆವೆತ್ತ ಮಹಾರಾಜರ ಆದೇಶದ ಮೇರೆಗೆ, ಉಚಿತ ಮತ್ತು ಕಡ್ಡಾಯ ಶಿಕ್ಷಣಕಾಯ್ದೆ ಜಾರಿಯ ವ್ಯವಸ್ಥೆಗಳ ಬಗ್ಗೆ ನೀಡಿದ ತೀರ್ಪು ಈ ಕೆಳಕಂಡಂತಿದೆ.

೧. ಈ ಯೋಜನೆಯನ್ನು ನೋಡಿಕೊಳ್ಳುವುದಕ್ಕೆ ಒಂದು ಪ್ರತ್ಯೇಕ ಇಲಾಖೆಯಿದೆ.

೨. ಈ ಇಲಾಖೆಯು ನೇರವಾಗಿ ಘನತೆವೆತ್ತ ಮಹಾರಾಜರಿಗೆ ಅಧೀನ(ವರದಿ ಮಾಡಬೇಕು)ವಾಗಿರಬೇಕು ಮತ್ತು ಪ್ರೊ. ರಘುನಾಥ ನಾರಾಯಣ ಆಪ್ಟೆ ಅವರನ್ನು ಈ ಇಲಾಖೆಯ ನಿರ್ದೇಶಕರಾಗಿ ನೇಮಕ ಮಾಡಲಾಗಿದೆ. ಅವರ ಅಧಿಕಾರ ಈ ಇಲಾಖೆಗೆ ಮಾತ್ರ ಸೀಮಿತವಾಗಿದೆ.

೩. ಪ್ರೊ. ರಾಮಚಂದ್ರ ಬಾಬಾಜಿ ಪಂಡಿತರಾವ್ ಅವರನ್ನು ಶಿಕ್ಷಣದ ನಿರೀಕ್ಷಕರಾಗಿ ನೇಮಕ ಮಾಡಲಾಗಿದೆ. ಮತ್ತು ಈ ಇಲಾಖೆಯ ಎಲ್ಲಾ ಅಧಿಕಾರ ಅವರಲ್ಲಿ ನಿಹಿತವಾಗಿದೆ. ಅವರ ವೇತನ ತಿಂಗಳಿಗೆ ೧೨೫/- ರೂ. ಮತ್ತು ಭತ್ಯೆ ೨೫/- ರೂ.

೪. ಅವರು ಇಬ್ಬರು ಸಹಾಯಕರನ್ನು ಹೊಂದಲು ಅರ್ಹರು (ಸಂಬಳ ರೂ. ೩೦/- ಭತ್ತೆ ೧೫/- ರೂ.) ಅವರು ಪ್ರೊ. ಆಪ್ಟೆ ಅವರೊಡನೆ ಸಮಾಲೋಚಿಸಿ ಅವರನ್ನು ಆಯ್ಕೆ ಮಾಡಿಕೊಂಡು ನೇಮಕ ಮಾಡಿಕೊಳ್ಳಬಹುದು.

೫. ಬೇಕಾಗಿರುವ ಸಿಬ್ಬಂದಿ (ಎಸ್ಟಾಬ್ಲಿಷ್‌ಮೆಂಟ್)ಗೆ ಅವರು ಪ್ರೊ. ಪಂಡಿತರಾವ್ ಅವರಿಗೆ ಕೋರಿಕೆ ಸಲ್ಲಿಸಬೇಕು ಮತ್ತು ಅದನ್ನು ಪರಿಗಣಿಸಲಾಗುವುದು.

೬. ಈ ಇಲಾಖೆ ಸುಗಮವಾಗಿ ನಿರ್ವಹಿಸಲು ಕಂದಾಯ ಇಲಾಖೆ ಮತ್ತು ಅವರ ಸಹಾಯಕರು ಸೂಕ್ತ ನೆರವನ್ನು ನೀಡಬೇಕೆಂದು ಈ ಮೂಲಕ ಆದೇಶಿಸಲಾಗಿದೆ.

೭. ಆ ಆಜ್ಞೆಯು ೧೮, ಜನವರಿ ೧೯೧೮ರಿಂದ ಜಾರಿಗೆ ಬಂದಿದೆ.

೮. ಪ್ರೊ. ಪಂಡಿತರಾವ್ ಅವರಿಗೆ ಅವರ ಕರ್ತವ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿ ಹೇಳಬೇಕು.

೯. ಪ್ರಾಂಶುಪಾಲ ಡರ್ಬಿ ಅವರು ಪ್ರೊ. ಪಂಡಿತರಾವ್ ಅವರ ಸ್ಥಾನಕ್ಕೆ ಬದಲಿಯವರನ್ನು

ಕಾಲೇಜಿಗೆ ಕಂಡುಕೊಳ್ಳಲು ಅನುಮೋದನೆಗಾಗಿ ಪ್ರಸ್ತಾವನೆಯನ್ನು ಅವರು ಕಳುಹಿಸಿ ಕೊಡಬೇಕು.

೧೦. ಕಛೇರಿ ಸ್ಥಳವನ್ನು ಹಂಚಲಾಗಿದೆ.

ಇದನ್ನು ಕಾನೂನಿನ ಪ್ರಕಾರ ಜಾರಿಗೊಳಿಸಬೇಕು.

ಸಿ. ಎಸ್. ವಿರಕ್ತಮಠ, ಚಿಟ್ನೀಸ್

ಬಿ. ವಿ. ಜಾಧವ್ ಅಪರ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೨೬, ಜನವರಿ ೧೯೧೮)

---

೨೬

*ಶಾಹುರವರು ಉಚಿತ ಮತ್ತು ಕಡ್ಡಾಯ ಶಿಕ್ಷಣದ ಯೋಜನೆಗಾಗಿ ಹಣ ಒದಗಿಸಲು ಒಂದು ಕುಟುಂಬಕ್ಕೆ ಒಂದು ರೂ. ತೆರಿಗೆಯನ್ನು ವಿಧಿಸಿದ್ದಾರೆ.*

---

**ಸಾರ್ವಜನಿಕ ಸೂಚನೆ**

೨, ಫೆಬ್ರವರಿ ೧೯೧೮

ಮುಲ್ಕಿ ನಿರ್ಣಯಸಂಖ್ಯೆ ೬೫೮, ಮುಲ್ಕಿ ಹೊರಗೆ ಸಂಖ್ಯೆ ೩೦೭, ದಿನಾಂಕ ೨೩, ಫೆಬ್ರವರಿ ೧೯೧೮ಲನ್ನು ನೋಡಿ, ಘನತೆವೆತ್ತ ಮಾನ್ಯ ಮಹಾರಾಜರ ಆಜ್ಞೆಯ ಮೇರೆಗೆ ಇದು ನಿರ್ಣಯಿಸಿದ್ದು.

ಯುದ್ಧಕಾರಣ ಮತ್ತು ವಿವಿಧ ಇತರೆ ಕಾರಣಗಳಿಂದ ಒಟ್ಟಿಗೆ ಎಲ್ಲಾ ಬೆಲೆಗಳು ಹೆಚ್ಚಾಗಿವೆ, ಸರಕಾರದ ಖರ್ಚುಗಳು ಸಹ ಗಣನೀಯವಾಗಿ ಏರಿಕೆಯಾಗಿವೆ; ಆದ್ದರಿಂದ ಶಿಕ್ಷಣದ ಬಜೆಟ್ಟು ನರಳುತ್ತಿದೆ. ಆದರೆ ಜನರು ಆದಷ್ಟು ಬೇಗನೇ ಶಿಕ್ಷಿತರಾಗುವುದು ಅತ್ಯವಶ್ಯಕ. ಆದ್ದರಿಂದ ಒಂದು ಕುಟುಂಬಕ್ಕೆ ಹೆಚ್ಚಿಗೆ ಒಂದು ರೂ. ಅನ್ನು ಶಿಕ್ಷಣದ ಉದ್ದೇಶಕ್ಕಾಗಿ ವಿಧಿಸಿ ಮತ್ತು ಖಜಾನೆಯಲ್ಲಿ ಇದನ್ನು ಪ್ರತ್ಯೇಕವಾಗಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕು.

ರಾವ್‌ಸಾಹೇಬ್ ಆಪ್ಟೆ ಅವರಿಗೆ ಈ ಹಣವನ್ನು ಖರ್ಚುಮಾಡಲು ಅಧಿಕಾರ ನೀಡಲಾಗಿದೆ. ಇದು ಒಂದು ಕುಟುಂಬದಲ್ಲಿ ಎಲ್ಲಾ ಮಕ್ಕಳ ಶಿಕ್ಷಣವನ್ನು ಖಾತರಿಗೊಳಿಸುತ್ತದೆ ಮತ್ತು ಒಂದು ಕುಟುಂಬಕ್ಕೆ ಒಂದು ರೂ. ನಿಸ್ಸಂದೇಹವಾಗಿಯೂ ಅತಿ ಕಡಿಮೆಯ ಹಣವಾಗುತ್ತದೆ.

ಮಹದೇವ್ ಕೃಷ್ಣಜಿ ಕುರ್ನೆ — ಬಿ. ವಿ. ಜಾಧವ್

ಗುಮಾಸ್ತ — ಸಹಾಯಕ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ-೧, ೨, ಮಾರ್ಚ್ ೧೯೧೮)

---

## ೨೭

*ಶಾಹುರವರು ತಮ್ಮ ಸಂಸ್ಥಾನದಲ್ಲಿ ಗ್ರಾಮಪಂಚಾಯಿತಿ (ಹಳ್ಳಿಯ ಸ್ವಯಂ) ಎಂಬ ಸಂಸ್ಥೆಯನ್ನು ಪರಿಚಯಿಸುವಾಗ (ಜಾರಿಗೊಳಿಸುವಾಗ) ಕುಲಕರ್ಣಿಗಳ ಪಟ್ಟಭದ್ರ ಹಿತಾಸಕ್ತಿಗಳು ಭಾರಿ ಅಡೆತಡೆಯಾಗಿದ್ದವು. ಉದ್ರಿಕ್ತ ಸ್ಥಿತಿಯಲ್ಲಿ ಶಾಹುರವರ ಕುಲಕರ್ಣಿಗಳ ಸಾಂಪ್ರದಾಯಿಕ ವತನುಗಳನ್ನು ರದ್ದುಗೊಳಿಸಿದರು. ಇದರಿಂದ ಅವರ ಪ್ರಭಾವ ಹಳ್ಳಿಗಳಲ್ಲಿ ತೀವ್ರವಾಗಿ ಕುಸಿಯಿತು. ಅವರ ಇನಾಂ ಭೂಮಿಗಳು ಅವರೊಂದಿಗೆ ಮುಂದುವರಿದವು.*

---

## ಅಧಿಸೂಚನೆ

ೆ೮, ಫೆಬ್ರವರಿ ೧೯೧೮

ಮುಲ್ಕಿ ನಿರ್ಣಯ ಸಂಖ್ಯೆ ೬೫೭, ಮುಲ್ಕಿ ಹೊರಸಂಖ್ಯೆ ೩೦೬, ದಿನಾಂಕ ೨೩ ಫೆಬ್ರವರಿ ೧೯೧೮ನ್ನು ನೋಡಿ, ಘನತೆವೆತ್ತ ಮಹಾರಾಜರ ಆಜ್ಞೆಯ ಮೇರೆಗೆ, ಇದು ನಿರ್ಣಯಿಸಿದ್ದು ಮತ್ತು ಪ್ರಕಟಿಸಿದ್ದು ಈ ಕೆಳಗಿನಂತಿದೆ:

ಜನರಲ್ಲಿ ಶಿಕ್ಷಣ ಹರಡಿದಂತೆ, ಅವರಿಗೆ ಹೆಚ್ಚು ಹಕ್ಕುಗಳನ್ನು ಕೊಡುವ ಕಾಲ ಬಂದಿದೆ. ಬಿಕನೇರ್ ಮತ್ತು ಟ್ರಾವಂಕೂರ್ ಸಂಸ್ಥಾನಗಳಲ್ಲಿ ಸ್ವಯಂ ಆಡಳಿತಕ್ಕಾಗಿ ಗ್ರಾಮ ಪಂಚಾಯಿತಿಗಳನ್ನು ಪರಿಚಯಿಸುವ ಮೂಲಕ ಜನರನ್ನು ಸಬಲಗೊಳಿಸಲಾಗುತ್ತಿದೆ. ಘನತೆವೆತ್ತ ಮಾನ್ಯ ಮಹಾರಾಜರು ಅದನ್ನೇ ತಮ್ಮ ಸಂಸ್ಥಾನದಲ್ಲಿ ಜಾರಿಗೊಳಿಸಲು ಬಯಸಿದ್ದರು. ವತನ–ಹಿಡುವಳಿದಾರ ಕುಲಕರ್ಣಿಗಳು ಈ ಕೆಲಸದಲ್ಲಿ ಕಂಟಕರಾಗಿದ್ದಾರೆಂದು ಸಾಧಿತವಾಗುತ್ತಿದೆಯೆಂಬುದು ಪರಿಣಿತರ ಅಭಿಪ್ರಾಯವಾಗಿತ್ತು. ಅಶಿಕ್ಷಿತ ಜನಸಂಖ್ಯೆಯಲ್ಲಿ ಕುಲಕರ್ಣಿ ವತನು ಅವಶ್ಯಕವಾಗಿರಬಹುದು. ಆದರೆ ಈಗ ಕಾಲ ಬದಲಾಗಿದೆ. ಪ್ರಸ್ತುತ ವ್ಯವಸ್ಥೆಯಲ್ಲಿ ಒಂದು ಹಳ್ಳಿಯ ಗ್ರಾಮ ಪಂಚಾಯಿತಿಯಲ್ಲಿ ನಿಸ್ಸಂದೇಹವಾಗಿ ಕುಲಕರ್ಣಿ ಪ್ರಬಲವಾಗಿದ್ದಾನೆ. ಅವನ ಕೈಯಲ್ಲಿ ಮತ್ತು ತನ್ನ ಜಾತಿಯ ಜನರಲ್ಲಿ ಎಲ್ಲಾ ಅಧಿಕಾರವು ಕೇಂದ್ರೀಕರಣವಾಗುವುದರಿಂದ ಸಮಾಜದ ಬಹುಸಂಖ್ಯಾತರಾದ ರೈತರು ನರಳುವರು. ವತನ–ಹಿಡುವಳಿದಾರ ಪಾಟೀಲನು ಒಬ್ಬ ರೈತನಷ್ಟೇ. ಮತ್ತು ಅವನು ಗ್ರಾಮ ಪಂಚಾಯಿತಿಯ ಕಾರ್ಯನಿರ್ವಹಣೆಯಲ್ಲಿ ಅಡ್ಡಿಯಾಗಲಾರ.

ಗ್ರಾಮ ಪಂಚಾಯಿತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಕುಲಕರ್ಣಿ ವತನಿನ ಪದ್ಧತಿಯನ್ನು ರದ್ದುಗೊಳಿಸಬೇಕಾಯಿತು. ಆದ್ದರಿಂದ ಅದನ್ನು ರದ್ದುಗೊಳಿಸಲಾಗಿದೆಯೆಂದು ಕಾನೂನು ಮಾಡಲಾಗಿದೆ ಮತ್ತು ಕುಲಕರ್ಣಿಯ ಕೆಲಸಗಳನ್ನು ನಿರ್ವಹಿಸಲು ತಲಾಟಿಯನ್ನು ನೇಮಿಸಲಾಗುವುದು.

ಇಂದು ಕಾರ್ಯ ನಿರ್ವಹಿಸುತ್ತಿರುವ ಬಹಳಷ್ಟು ಕುಲಕರ್ಣಿಗಳು ಭೂಮಿಗಳಿಗೆ ಸನದುಗಳನ್ನು ಹೊಂದಿಲ್ಲ. ಅವರು ಈ ಭೂಮಿಗಳನ್ನು ಕಾನೂನಿನ ಮೂಲಕ ಸ್ವಾಧೀನ ಮಾಡಿಕೊಂಡಿಲ್ಲ, ಆದರೆ ಅವರು ಸಂಪ್ರದಾಯದಿಂದ ಪಡೆದಿದ್ದಾರೆ. ಅವರು ಕುಲಕರ್ಣಿಗಳಾಗಿ ಕೆಲಸ ಮಾಡುವವರೆಗೆ ಮಾತ್ರ ಆ ಭೂಮಿಗಳಲ್ಲಿ ಅವರು ಉಳಿದಿರುತ್ತಾರೆ. ಕುಲಕರ್ಣಿ ಪದ್ಧತಿ ರದ್ದಾಗಿದ್ದರೂ ಭೂಮಿಗಳು ಅವರೊಂದಿಗೇ ಮುಂದುವರಿಯುವುದಕ್ಕೆ ಹುಜೂರರು ಎಲ್ಲಾ ರೀತಿಯಲ್ಲೂ ಕರುಣಾಳು ಆಗಿರುವುದರಿಂದ ಅವರಿಗೆ ಭೂಮಿಯ ಕಾನೂನುಬದ್ಧ ಯಾವುದೇ ಹಕ್ಕಿಲ್ಲ. ಅಂತಹ ಕಾನೂನುಬದ್ಧ ಭೂಮಿಯ ಮಾಲೀಕತ್ವ ಅವರಿಗೆ ನೀಡಲಾಗಿದೆ. ಪ್ರಸ್ತುತ ಯಾವುದೇ ಸನದಿನ ಅನುಪಸ್ಥಿತಿಯಲ್ಲಿ ಕುಲಕರ್ಣಿಗಳು ತಮ್ಮ ಭೂಮಿಗಳನ್ನು ಒತ್ತೆಯಿಡುವಂತಿಲ್ಲ ಅಥವಾ ಅವುಗಳನ್ನು ಮಾರುವಂತಿಲ್ಲ. ಅವರು ಭೂಮಿಯನ್ನು ಬಹುಮಾನವಾಗಿ ನೀಡುವಂತಿಲ್ಲ ಅಥವಾ ತಮ್ಮ ಮರಣದ ನಂತರ ಅಥವಾ ವಿಲ್ಲಿನ ಮೂಲಕ ತಮ್ಮ ಮಕ್ಕಳಿಗೆ ಹಸ್ತಾಂತರ ಮಾಡುವಂತಿಲ್ಲ. ಅವರಿಗೆ ಕಾನೂನುಬದ್ಧ ಮಾಲೀಕತ್ವ ಹೊಂದಿದಾಗ ಅವರು ಅವುಗಳ ಹಕ್ಕನ್ನು ಅನುಭವಿಸಬಹುದು. ಮತ್ತು ಇದು ಅವರಿಗೆ ಪ್ರಯೋಜನವಾಗಬಹುದು.

ಹಾಲಿಕೆಲಸ ಮಾಡುತ್ತಿರುವ ಕುಲಕರ್ಣಿಗಳು ಹಾಲಿ ಫಸ್ಲಿ* ವರ್ಷದ ಕೊನೆಯವರೆಗೆ ಕೆಲಸ ಮಾಡಬಹುದು ಮತ್ತು ಅವರು ಆ ವರ್ಷಕ್ಕೆ ಮಾತ್ರ ಹಕ್ಕುಗಳನ್ನು ಪಡೆಯಬಹುದು. ಅವರಲ್ಲಿ ಅರ್ಹರಾದವರಿಗೆ ಸಂಬಳದ ತಲಾಟಿಗಳನ್ನಾಗಿ ಕೆಲಸ ಕೊಡಬಹುದು.

| | |
|---|---|
| ಮಹದೇವ್ ಕೃಷ್ಣಜಿ ಕುರ್ನೆ | ಬಿ. ವಿ. ಜಾಧವ್ |
| ಗುಮಾಸ್ತ | ಸಹಾಯಕ ಸರ್‌ಸುಭೆ |

(ಕರವೀರ ಸರಕಾರ ಗೆಜೆಟ್, ಭಾಗ-೧, ೨, ಮಾರ್ಚ್ ೧೯೧೮)

---

## ೨೮

*ಬಲೂತ ಪದ್ಧತಿಯ ರದ್ದತಿಯು ಶಾಹುರವರ ಒಂದು ಕ್ರಾಂತಿಕಾರಿ ಕ್ರಮವಾಗಿದ್ದು, ಅದು ಹಳ್ಳಿಯ ಬಲುತರಿಗೆ ಜೀವನೋಪಾಯದ ಸ್ವಾತಂತ್ರ್ಯವನ್ನು ನೀಡಿತು. ಅವರ ಜೀವನೋಪಾಯವು ಶತಮಾನಗಳವರೆಗೆ ಸಾಂಪ್ರದಾಯಿಕ ವೃತ್ತಿಗಳಿಗೆ ಅಥವಾ ಕರ್ತವ್ಯಗಳಿಗೆ ಮಾತ್ರ ನಿರ್ಬಂಧಗೊಳಿಸಿತ್ತು. ಈಗ ಅವರು ಯಾವುದೇ ಕೆಲಸ ಅಥವಾ ವೃತ್ತಿ ಕೈಗೊಳ್ಳಲು ಸಂಪೂರ್ಣ ಸ್ವತಂತ್ರರಾಗಿದ್ದಾರೆ.*

---

### ಅಧಿಸೂಚನೆ

೨೮, ಫೆಬ್ರವರಿ ೧೯೧೮

ಹುಜೂರ್ ಸರಕಾರರವರ ಮುಲ್ಕಿ ನಿರ್ಣಯ ಸಂಖ್ಯೆ ೬೫೬, ೧೯೧೮ರ ಮತ್ತು ೨೨, ಫೆಬ್ರವರಿ ೧೯೧೮ರ ತದನಂತರದ ಆಜ್ಞೆಯ ಸಂಖ್ಯೆ ೩೦೫ ಅನ್ನು ಈ ಮೂಲಕ ಜನರಿಗೆ ಸೂಚಿಸಲಾಗಿದೆ, ಅದು ಈ ಕೆಳಗಿನಂತಿದೆ:

ಬದಲಾಗುತ್ತಿರುವ ಕಾಲಘಟ್ಟಗಳಲ್ಲಿ ಬಹಳಷ್ಟು ಗ್ರಾಮೀಣ ಸಂಸ್ಥೆಗಳು ಇಂದು ಅಸ್ತಂಗತವಾಗುತ್ತಿವೆ ಮತ್ತು ಬಲೂತ ಪದ್ಧತಿಯ ಪಾವತಿ ಮೂಲೆಗುಂಪಾಗುತ್ತಿದೆ. ಸಂಪ್ರದಾಯವನ್ನು ಪರಿಪಾಲಿಸುವ ಕಡೆಗಳಲ್ಲಿ ಅದನ್ನು ಇನ್ನೂ ಅನುಸರಿಸಲಾಗುತ್ತಿದೆ, 'ಪ್ರಲೋಭನೆಯ–ಬಲೂತ'ಕ್ಕೆ ಹೆಚ್ಚು ಪಾವತಿ ಮಾಡಬೇಕಾಗಿದೆ, ಮತ್ತು ಅದು ಕೆಲಸ ಮಾಡಿದ್ದಕ್ಕಿಂತ ಅಗಾಧ ಪ್ರಮಾಣದ್ದಾಗಿರುತ್ತದೆ. ಇದರ ಜೊತೆಗೆ ವತನದಾರ ಕುಶಲಕರ್ಮಿ (ಬಲೂತ)ಗಳ ಕೌಶಲ್ಯಗಳು ನಶಿಸುತ್ತಿವೆ. ಆದ್ದರಿಂದ ಗ್ರಾಮ ಜೋಷಿ ಸೇರಿದಂತೆ ಯಾವುದೇ "ಅಲೂತೆ–ಬಲೂತಗಳಿಗೆ" ** ಯಾವುದೇ ಪಾವತಿ ಮಾಡಬಾರದೆಂದು ಕಾನೂನು ಮಾಡಲಾಗಿದೆ. ಅವರ ಸೇವೆಗಳು ಅಗತ್ಯ ಕಂಡುಬಂದಾಗ ನಗದು ಪಾವತಿ ಮಾಡದಂತೆ ಉಪಯೋಗಿಸಿಕೊಳ್ಳಿ. ಎಲ್ಲಾ ಕುಶಲಕರ್ಮಿಗಳು, 'ಗ್ರಾಮ ಜೋಷಿ'ಗಳು ಮತ್ತು 'ಉಪಾಧ್ಯಾಯರು' ಸೇರಿದಂತೆ ಬಲೂತ ಪದ್ಧತಿಯ ಸದಸ್ಯರು ಯಾವುದೇ ಕೆಲಸ ಮಾಡಲು ಅಥವಾ ಯಾವುದೇ ವೃತ್ತಿ ಅಂಗೀಕರಿಸಲು ಮತ್ತು ಅವರು ಬಯಸಿದ ಕಡೆ ಹೋಗಲು ಮತ್ತು ವಾಸಿಸಲು ಸ್ವತಂತ್ರರೆಂದು ಈ ಮೂಲಕ ಈ ಸೂಚನೆ ಎಲ್ಲರಿಗೂ ತಿಳಿಸುತ್ತದೆ. ಈ ಆದೇಶವು ಮಹರರಿಗೆ ಅನ್ವಯಿಸುವುದಿಲ್ಲ. ಏಕೆಂದರೆ ಅವರು 'ವತನದಾರ'ರಾಗಿದ್ದಾರೆ.

ಎಲ್ಲಾ ಬಲೂತ ಭೂಮಿಗಳನ್ನು ಮುಕ್ತಗೊಳಿಸಲಾಗಿದೆ (ರಾಯತವಾ) ಎಂದು ಘೋಷಿಸಲಾಗಿದೆ.

**ಮಹದೇವ ಕೃಷ್ಣಜಿ ಕುರ್ನೆ** — ಬಿ. ವಿ. ಜಾಧವ
ಗುಮಾಸ್ತ — ಅಪರ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೨, ಮಾರ್ಚ್ ೧೯೧೮)

## ೨೯

## ಅಧಿಸೂಚನೆ

೨೮, ಫೆಬ್ರವರಿ ೧೯೧೮

ಹುಜೂರರು ಈಗಾಗಲೇ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಕಾನೂನನ್ನು ಪಾಸುಮಾಡಿದ್ದಾರೆ ಮತ್ತು ಅದನ್ನು ದಿನಾಂಕ ೨೯, ಸೆಪ್ಟಂಬರ್ ೧೯೧೭ರಂದು ಗೆಜೆಟ್‌ನಲ್ಲಿ ಪ್ರಕಟಿಸಿದ್ದಾರೆ. ಸಂಪೂರ್ಣ ಸಾಕ್ಷರತೆ ಆಗದ ಹೊರತು ಜನತೆಯ ಸ್ಥಿತಿಗತಿಗಳು ಸುಧಾರಿಸಲಾರವು ಎಂಬ ಅಭಿಪ್ರಾಯದಲ್ಲಿ ಅವರಿದ್ದಾರೆ. ಈ ಗುರಿ ಸಾಧಿಸಲು ಒಂದು ಪ್ರತ್ಯೇಕ ಇಲಾಖೆಯನ್ನು ತೆರೆಯಲಾಗಿದೆ. ಮತ್ತು ರಘುನಾಥ ನಾರಾಯಣ ಆಪ್ಟೆ ಅವರನ್ನು ನಿರ್ದೇಶಕರಾಗಿ ನೇಮಕ ಮಾಡಲಾಗಿದೆ. ಪ್ರೊ. ಬಾಬಾಚಾರ್ಯ ಪಂಡಿತರಾವ್ ಅವರನ್ನು ಶೈಕ್ಷಣಿಕ ನಿರೀಕ್ಷಕರನ್ನಾಗಿ ಮತ್ತು ಶ್ರೀಧರ ರಘುನಾಥ ವಾಕಂಕರ್ ಅವರನ್ನು ಸಹಾಯಕ ನಿರೀಕ್ಷಕರನ್ನಾಗಿ ನೇಮಕ ಮಾಡಲಾಗಿದೆ. ಶೈಕ್ಷಣಿಕ ನಿರೀಕ್ಷಕ ಮತ್ತು ಸಹಾಯಕ ನಿರೀಕ್ಷಕರು ಹೋದ ಕಡೆಗಳಲ್ಲಿ ಎಲ್ಲಾ ಗ್ರಾಮದ ಕೆಲಸಗಾರರು, ಆಡಳಿತ ಅಧಿಕಾರಿಗಳು (ಅಮ್ಮಲ್‌ದಾರರು) ಸಹಾಯ ಮಾಡಬೇಕು ಮತ್ತು ಅವರೊಡನೆ ಸಹಕರಿಸಬೇಕು. ಅವರಿಂದ ಸಹಕಾರ ನೀಡುತ್ತಿಲ್ಲವೆಂದು ದೂರು ಬಂದರೆ ಅವರ ಬಗ್ಗೆ ಕಠಿಣಕ್ರಮ ಕೈಗೊಳ್ಳಲಾಗುವುದು. ಜೊತೆಗೆ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲಾ ವಿಚಾರಗಳ ವ್ಯವಹಾರವನ್ನು ಶ್ರೀ ಆಪ್ಟೆ ಅಥವಾ ಪ್ರೊ. ಪಂಡಿತರಾವ್ ಅವರೊಂದಿಗೆ ನಡೆಸಬೇಕು.

ಬಿ. ವಿ. ಹವಾಲ್ — ಆರ್. ಆರ್. ಶಿರ್‌ಗಾಂವ್‌ಕರ್
ಚಿಟ್ನೀಸ್ — ಅಪರ ದಿವಾನ, ಕರವೀರ ಸರಕಾರ

(ಕರವೀರ ಸರಕಾರ ಗೆಜೆಟ್, ಭಾಗ-೧, ೨, ಮಾರ್ಚ್ ೧೯೧೮)

* ಬಲೂತಾ- ಒಂದು ಹಳ್ಳಿಯ ೧೨ ಜನ ಸಾರ್ವಜನಿಕ ಸೇವಕರು (ಬಲೂತಾಗಳು) ಜೀವನಕ್ಕಾಗಿ ಒಂದು ಪಾಲು ಕಾಳು ಮತ್ತು ತೋಟದ ಉತ್ಪನ್ನವನ್ನು ವಹಿಸಿಕೊಡಲಾಗಿದೆ.

** ಅಲೂತ-ಬಲೂತಾಗಳಿಗೆ ಸಹಾಯಕ, ಗ್ರಾಮ ಸೇವಕ.

*ಜನರ ಕಡ್ಡಾಯ ಮತ್ತು ಉಚಿತ ಶಿಕ್ಷಣಕ್ಕಾಗಿ ಹೆಚ್ಚು ಖರ್ಚು ಬರುವುದರಿಂದ ಅದರಲ್ಲಿ ಸ್ವಲ್ಪ ಭಾಗವನ್ನು ಸಾಮಂತ ಭೂ ಹಿಡುವಳಿದಾರರಾದ ಇನಾಂದಾರರು, ಸರಜಾಮ್‌ದಾರರು ಮೊದಲಾದವರು ಹಂಚಿಕೊಳ್ಳಬೇಕು, ಹಾಗೂ ಜನರ ಕಲ್ಯಾಣಕ್ಕಾಗಿ ವಿಶೇಷವಾಗಿ ರೈತರಿಗಾಗಿ ನೀಡಬೇಕೆಂದು ಶಾಹುರವರು ಸದಾ ಭಾವಿಸಿದ್ದರು. ಅಂತಿಮವಾಗಿ ಈ ಕೆಳಕಂಡ ಆಜ್ಞೆಯನ್ನು ಕಾನೂನನ್ನಾಗಿ ಮಾಡಿದರು.*

---

## ನಾಗರಿಕ ಇಲಾಖೆ

೨೯, ಏಪ್ರಿಲ್ ೧೯೧೮

ಆಜ್ಞೆ ಹೊರಹೋಗುವ ಪತ್ರದ ಸಂಖ್ಯೆ ೩೬೫, ದಿನಾಂಕ ೨೫, ಮಾರ್ಚ್ ೧೯೧೮, ಹುಜೂರರ ನಿರ್ಣಯ ಸಂಖ್ಯೆ ೭೨೨ರ ಪ್ರಕಾರ ಈ ಕೆಳಕಂಡಂತಿದೆ:

ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೊಳಿಸಿದ ಪ್ರದೇಶಗಳಲ್ಲಿರುವ ಇನಾಂದಾರರ ಮತ್ತು ಸರಂಜಾಮದಾರರ ಮೇಲೆ ಅದಕ್ಕೆ ತಗಲುವ ಖರ್ಚಿನಲ್ಲಿ ಸ್ವಲ್ಪ ಭಾಗವನ್ನು ವಿಧಿಸುವುದು ಸೂಕ್ತ. ಅವರ ಸ್ಥಳೀಯ ಪ್ರಜೆಗಳ ಪ್ರಯೋಜನ ಮತ್ತು ಕಲ್ಯಾಣಕ್ಕಾಗಿ ಈ ಜನರು ಸಂತೋಷವಾಗಿ ಈ ತೆರಿಗೆಯನ್ನು ಭರಿಸಬೇಕೆಂದು ಹುಜೂರರು ಪರಿಭಾವಿಸುತ್ತಾರೆ. ಆದ್ದರಿಂದ ಈಗ ಶೇಕಡ ೧೦ರಿಂದ ೧೫ರಷ್ಟು ತೆರಿಗೆ ಕಟ್ಟುವವರು ಶಿಕ್ಷಣದ ಶುಲ್ಕವನ್ನು ಸೇರಿಸಿ ಶೇಕಡ ೨೦ರಷ್ಟು ತೆರಿಗೆಯನ್ನು ಫಸಲಿ ವರ್ಷ ೧೩೨೮ರಿಂದ ಕಟ್ಟಬೇಕು ಮತ್ತು ಅಂತಹ ಸಂಗ್ರಹ ಹೇಳಿಕೆಯನ್ನು ಜಮಾಬಂದಿಯ (ಕಂದಾಯ ಸಂಗ್ರಹ) ಸಮಯದಲ್ಲಿ ಸಿದ್ಧವಾಗಿಟ್ಟುಕೊಳ್ಳಬೇಕು.

| | |
|---|---|
| **ಗೋಪಾಲ ಗಂಗಾಧರ** | **ಬಿ. ವಿ. ಜಾಧವ** |
| **ಮುಖ್ಯ ಗುಮಾಸ್ತ** | **ಸಹಾಯಕ ಸರ್‌ಸುಭೆ** |

**(ಕರವೀರ ಸರಕಾರ ಗೆಜೆಟ್, ಭಾಗ–೧, ೧೧, ಮೇ ೧೯೧೮)**

---

೩೧

*ಜನರು ಜನತಂತ್ರ ಕಾರ್ಯ ಮಾಡುವುದನ್ನು ಅರಿತುಕೊಳ್ಳುವ ಸಲುವಾಗಿ ಶಾಹುರವರು ಗ್ರಾಮ ಪಂಚಾಯಿತಿಗಳನ್ನು (ಗ್ರಾಮದ ಸ್ಥಳೀಯ ಸಂಸ್ಥೆಗಳ) ತಮ್ಮ ಸಂಸ್ಥಾನದಲ್ಲಿ ಸ್ಥಾಪಿಸಲು ನಿರ್ಧರಿಸಿದ್ದಾರೆ. ಈ ಪ್ರಯೋಗವು ಆಯ್ದ ಕೆಲವು ಗ್ರಾಮಗಳಲ್ಲಿ ಪ್ರಾರಂಭವಾಗಿದೆ.*

---

## ಕಂದಾಯ ಇಲಾಖೆ

## ಅಧಿಸೂಚನೆ

೧೩, ಜುಲೈ ೧೯೧೮

ಕರವೀರ ಪ್ರಾಂತ್ಯದ ಹಳ್ಳಿಗಳಲ್ಲಿ ಗ್ರಾಮಪಂಚಾಯಿತಿಗಳನ್ನು ಸ್ಥಾಪಿಸುವ ಉದ್ದೇಶದಿಂದ ಹುಜೂರರು ಪ್ರಯೋಗದ ಆಧಾರದ ಮೇಲೆ ಯೋಜನೆಯನ್ನು ಪ್ರಾರಂಭಿಸಲು ನಿರ್ಧರಿಸಿದ್ದಾರೆ. ಹಾಗಿರುವಾಗ ಈ ಕೆಳಕಂಡ ಅಧಿಕಾರಿಗಳು ಮತ್ತು ಅವರ ಹೆಸರುಗಳ ಎದುರಿನಲ್ಲಿ ಪ್ರಸ್ತಾಪಿಸಿರುವ ಗ್ರಾಮ ಪಂಚಾಯಿತಿಗಳಲ್ಲಿ ಉಪಕ್ರಮಿಸಬೇಕು ಮತ್ತು ಪ್ರಾರಂಭಿಸಬೇಕು. ಮತ್ತು ತ್ರೈಮಾಸಿಕವಾಗಿ ವರದಿಗಳನ್ನು ಹುಜೂರರಿಗೆ ಸಲ್ಲಿಸಬೇಕು.

ಪಂಚಾಯಿತಿಗಳು ಕಿರು ನಾಗರಿಕ ಮತ್ತು ಅಪರಾಧಿ ಪ್ರಕರಣಗಳ, ನೈರ್ಮಲ್ಯ ಮತ್ತು ಹಳ್ಳಿ ರಸ್ತೆಗಳು, ನೀರು ಸರಬರಾಜು, ಶಾಲೆಯ ಉಸ್ತುವಾರಿ, ಮತ್ತು ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವ ಈ ಬಗೆಗಿನ ವಿವರವಾದ ನಿಯಮಾವಳಿಗಳು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗುವುದು.

| ಅಧಿಕಾರಿ | ಗ್ರಾಮ |
|---|---|
| ರಾಬ. ಭಾಸ್ಕರರಾವ್ ಜಾಧವ್ | ಉಂಚಗಾವ್ ಪೇಟ, ಕರವೀರ |
| ರಾಬ. ಖಂಡೇರಾವ್ ಗಾಯಕ್‌ವಾಡ್ | ಕಳಾಂಬೆ ಪೇಟ, ಕರವೀರ |
| ರಾವ್. ರಾಮಚಂದ್ರ ಆರ್ ಸಬ್ನೀಸ್ | ಚಿಖ್ಲಿ ಪೇಟ, ಕರವೀರ |
| ಕೃಷ್ಣಜಿ ದೊಂಡೊ ಮರಾಠೆ | ರುಕ್ಡಿ ಪೇಟ, ಹತ್ಕನಂಗ್ಲೆ ಪೇಟ, ಕರವೀರ |

ಸ್ವಾಮಿ ಜಗದ್ಗುರು ಕರವೀರ ಪೀಠ ಅವರಿಗೆ ಬಾವ್ಡಾವನ್ನು ವಹಿಸಲಾಗಿದೆ.

ಸಿ. ವಿ. ವಿರಕ್ತಮಠ
ಕಾರ್ಯದರ್ಶಿ

ಬಿ. ವಿ. ಜಾಧವ
ಸಹಾಯಕ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೧೩, ಜುಲೈ ೧೯೧೮)

---

## ೩೨

*ಹಾಜರಿಯ ದುಷ್ಟಪದ್ಧತಿಯ ಪ್ರಕಾರ ಯಥಾಕಥಿತ ಅಪರಾಧಿ ಪಂಗಡದವರು ದಿನನಿತ್ಯ ಹಾಜರಿ ಹಾಕುವ ಪದ್ಧತಿಯಿಂದ ವಿಮೋಚನೆಗೊಳಿಸುವ ಕ್ರಾಂತಿಕಾರಿ ದಿಟ್ಟಕ್ರಮ.*

---

### ಆಜ್ಞೆ ಸಂಖ್ಯೆ ೫

೨೭, ಜುಲೈ ೧೯೧೮

ಅಪರಾಧಿ ಪಂಗಡದವರು (ಟ್ರೈಬ್ಸ್) ದಿನಾ ಕಡ್ಡಾಯವಾಗಿ ಹಳ್ಳಿಯ ಪಾಟೀಲರ ಮುಂದೆ ಹಾಜರಿ ಹಾಕಬೇಕಾಗಿತ್ತು. ಇನ್ನು ಮುಂದಕ್ಕೆ ಕೆಳಗೆ ನಮೂದಿಸಿರುವ ಕೆಲವು ಪಂಗಡಗಳು ಹಾಜರಿ ಹಾಕುವುದರಿಂದ ವಿನಾಯಿತಿ ಪಡೆದಿದ್ದಾರೆ.

ಬಲಾತ್ಕಾರವಾಗಿ ಹಾಜರಿ ಹಾಕುವುದು ಈ ಜನರಿಗೆ ಮಹಾ ಅನಾನುಕೂಲಗಳನ್ನು ಒಡ್ಡುತ್ತದೆ ಮತ್ತು ಅವರು ನ್ಯಾಯಬದ್ಧ ರೀತಿಯಲ್ಲಿ ತಮ್ಮ ಜೀವನನೋಪಾಯವನ್ನು ಗಳಿಸುವ ಪ್ರಯತ್ನಗಳಲ್ಲಿ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಈ ಕಷ್ಟಗಳು ನಿವಾರಣೆಯಾಗಬೇಕು. ಆದ್ದರಿಂದ ಈ ಕೆಳಗಿನಂತೆ ಆಜ್ಞೆಯನ್ನು ಹೊರಡಿಸಲಾಗಿದೆ:

ನಾಲ್ಕು ಪಂಗಡಗಳಾದ ಮಹರ್, ಮಾಂಗ್, ರಾಮೋಷಿ ಮತ್ತು ಬೆರದ ಅವರು ಹಾಜರಾಗುವುದನ್ನು ನಿಲ್ಲಿಸಲಾಗಿದೆ. ಇದು ಅಪರಾಧಗಳಿಗೆ ಶಿಕ್ಷೆ ಅನುಭವಿಸುತ್ತಿರುವವರಿಗೆ ಅನ್ವಯಿಸುವುದಿಲ್ಲ. ಈ ಆಜ್ಞೆಯನ್ನು ತಕ್ಷಣದಿಂದಲೇ ಜಾರಿಗೊಳಿಸಬೇಕು. ಹೀಗೆ ಮಹಾರಾಜರ ಆದೇಶವನ್ನು ಪಾಸು ಮಾಡಲಾಗಿದೆ ಮತ್ತು ಅದರ ಪ್ರಕಾರ ಇದನ್ನು ಜಾರಿಗೊಳಿಸಬೇಕು.

ಡಿ. ಡಿ. ಸೋನ್‌ತಕ್ಕೆ
ಜಿಲ್ಲಾ ಮ್ಯಾಜಿಸ್ಟ್ರೇಟರು

(ಕರವೀರ ಸರಕಾರ ಗೆಜೆಟ್, ಭಾಗ–೧, ೩, ಆಗಸ್ಟ್ ೧೯೧೮)

---

೩೩

*ಶಾಹುರವರು ಅಸ್ಪೃಶ್ಯತೆಗೆ ಮತ್ತೊಂದು ಆಘಾತವನ್ನುಂಟು ಮಾಡಿದರು. ಈ ಕೆಳಗಿನ ಎರಡು ಆದೇಶಗಳು ಈ ವಿಷಯದಲ್ಲಿ ಶಾಹುರವರ ಕ್ರಾಂತಿಕಾರಿ ಉತ್ಸಾಹದ ಕೆಲವು ವಿಚಾರಗಳನ್ನು ನೀಡುತ್ತವೆ.*

---

**ಕಂದಾಯ ಇಲಾಖೆ**

**ಅಧಿಸೂಚನೆ**

೧೦, ಆಗಸ್ಟ್ ೧೯೧೮

ಹುಜೂರರ ನಿರ್ಣಯ ಸಂಖ್ಯೆ ೯೮, ಹೊರಹೋಗುವ ಪತ್ರದ ಸಂಖ್ಯೆ ೪, ದಿನಾಂಕ ೫, ಆಗಸ್ಟ್ ೧೯೧೮ರ ಆಜ್ಞೆಯ ಆಧಾರದ ಮೇಲೆ ಈ ಕೆಳಗಿನಂತೆ ಹೇಳಲಾಗಿದೆ:

ಅಸ್ಪೃಶ್ಯ ಸಮುದಾಯಗಳಿಂದ ತಲಾಟಿಗಳನ್ನು ನೇಮಕ ಮಾಡುವುದಕ್ಕೆ ಪ್ರತ್ಯೇಕವಾದ ಆದೇಶವನ್ನೇ ಪಾಸು ಮಾಡಲಾಗಿದೆ. ಅವರಲ್ಲಿ ದಕ್ಷತೆ ತೋರಿಸಿದವರಿಗೆ 'ಭಾಗ-ಕಾರಕೂನ್' (ಗುಮಾಸ್ತ) ಮತ್ತು 'ಸರ್-ಕಾರಕೂನ್'* ಎಂದು ಹುಜೂರರ ಆಜ್ಞೆಯ ಪ್ರಕಾರ ಬಡ್ತಿ ನೀಡಬೇಕಾಗಿದೆ.

**ಸಿ. ಎಸ್. ವಿರಕ್ತಮಠ**
**ಚಿಟ್ನೀಸ್**

**ಎನ್. ಪಿ. ಭಿಡೆ**
**(ಪರವಾಗಿ) ಸಹಾಯ ಸರ್‌ಸುಭೆ**

**(ಕರವೀರ ಸರಕಾರ ಗೆಜೆಟ್, ಭಾಗ-೧, ೧೭, ಆಗಸ್ಟ್ ೧೯೧೮)**

*** ಗುಮಾಸ್ತರ ಕೇಡರ್‌ನಲ್ಲಿ ಹಿರಿಯ (ಸೀನಿಯರ್)**

---

೩೪

## ಕಂದಾಯ ಇಲಾಖೆ

ಗಿ೬, ಆಗಸ್ಟ ೧೯೧೮

*ಹುಜೂರರ ನಿರ್ಣಯ ಸಂಖ್ಯೆ ೧೧೯ರ ಪ್ರಕಾರ ಹೊರಹೋಗುವ ಪತ್ರದ ಸಂಖ್ಯೆ ೮೧, ದಿನಾಂಕ ೮ನೇ ಆಗಸ್ಟ ೧೯೧೮, ಆಜ್ಞೆಯನ್ನು ಈ ರೀತಿಯಲ್ಲಿ ಹೊರಡಿಸಲಾಗಿದೆ:*

ತಲಾಟಿಗಳನ್ನು ನೇಮಕ ಮಾಡಿಕೊಳ್ಳುವ ಪ್ರಸ್ತುತ ಆಂದೋಲನದಲ್ಲಿ (ಡ್ರೈವ್) ಅಸ್ಪೃಶ್ಯ ಸಮುದಾಯಗಳ ಜನರಿಗೆ ಆದ್ಯತೆಯನ್ನು ನೀಡಲಾಗಿದೆ. ಅವರಲ್ಲಿ ಯಾರು ಅರ್ಹರಾಗಿರುವರೋ ಅವರಿಗೆಲ್ಲ ಇಲಾಖೆಗಳ ಮುಖ್ಯಸ್ಥರು ಸೇರಿದಂತೆ ಕಂದಾಯ, ನ್ಯಾಯಾಂಗ, ಪೊಲೀಸ್, ಸಾಮಾನ್ಯ ಆಡಳಿತವೇ ಮೊದಲಾದವುಗಳಲ್ಲಿ ಯಾವುದೇ ಹೊಣೆಗಾರಿಕೆಯ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಬೇಕು. ಇನ್ನು ಮುಂದೆ ಅವರ (ಯಥಾಕಥಿತ) ಅಸ್ಪೃಶ್ಯ ಸ್ಥಾನಮಾನವು ಯಾವುದೇ ಸರಕಾರಿ ಉದ್ಯೋಗದಲ್ಲಿ ಅಡ್ಡಿ ಮಾಡಕೂಡದು. ಈ ಆದೇಶವನ್ನು ಪ್ರಕಟಿಸಬೇಕು ಮತ್ತು ಗೆಜೆಟ್‌ನಲ್ಲಿ ಅಚ್ಚಾಗಬೇಕು.

ಬಿ. ವಿ ಹಾವಲ್
ಚಿಟ್ನೀಸ್

ಎನ್. ಪಿ. ಭಿಡೆ
(ಪರವಾಗಿ) ಸಹಾಯ ಸರ್‌ಸುಭೆ)

(ಕರವೀರ ಸರಕಾರ ಗೆಜೆಟ್, ಭಾಗ–೧, ೧೭, ಆಗಸ್ಟ ೧೯೧೮)

---

*ಉಚಿತ ಕಡ್ಡಾಯ ಶಿಕ್ಷಣ ಇಲಾಖೆಗೆ ಹುಜೂರರ ಆಡಳಿತದ ನಿರ್ಣಯ ಸಂಖ್ಯೆ ೮೨೯, ಆಜ್ಞೆ ೨೫, ದಿನಾಂಕ ೨೭ನೇ ಮೇ ೧೯೧೮ಲನ್ನು ನೋಡಿ. ಮತ್ತು ಅವರ ಹೊರಹೋಗುವ ಪತ್ರದ ಸಂಖ್ಯೆ ೧೮೬, ದಿನಾಂಕ ೨೫, ಅಕ್ಟೋಬರ್ ೧೯೧೮, ಆಜ್ಞೆ ಹೀಗೆ ಹೇಳುತ್ತದೆ:*

೧. ದೇವಸ್ಥಾನಗಳು, ಧರ್ಮಶಾಲೆಗಳು* ಮತ್ತು ಅಂತಹ ಇತರೆ ಸೂಕ್ತ ಕಟ್ಟಡಗಳು ಹಳ್ಳಿಗಳಲ್ಲಿ ಇದ್ದಲ್ಲಿ ಅವುಗಳಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಶಾಲೆಗಳನ್ನು ಕೂಡಲೇ ಪ್ರಾರಂಭಿಸಬೇಕು. ಯಾವುದೇ ರಿಪೇರಿ, ಮೇಲ್ಪಾವಣಿ ಮೊದಲಾದವುಗಳನ್ನು ಅಂಥ ಕಟ್ಟಡಗಳಿಗೆ ಮಾಡಿಸಬೇಕಾಗಿದ್ದರೆ ಕೂಡಲೇ ಸಂಬಂಧಪಟ್ಟ ಇಲಾಖೆಗಳಿಂದ ಮಾಡಿಸತಕ್ಕದ್ದು.

೨. ದೊಡ್ಡ ಹಳ್ಳಿಗಳಲ್ಲಿ ಅಥವಾ ಪಟ್ಟಣಗಳಲ್ಲಿ ಸೂಕ್ತವಾದ, ವಿಶಾಲವಾದ ಕಟ್ಟಡ ಸಾಕಷ್ಟು ವಿದ್ಯಾರ್ಥಿಗಳಿಗೆ ಸಿಗದಿದ್ದರೆ, ಅಥವಾ ಅಂಥ ಕಟ್ಟಡವನ್ನು ಬಾಡಿಗೆಗೆ ಪಡೆಯಬಹುದು, ಈ ವಿಷಯವನ್ನು ಕೂಡಲೇ ಯೋಜನೆಯ ಶಿಕ್ಷಣದ ನಿರೀಕ್ಷಕರಿಗೆ ವರದಿ ಮಾಡಿದರೆ ಅವರು ಈ ಪ್ರಸ್ತಾಪಿಸಿದ ಕಟ್ಟಡದ ನಿರ್ಮಾಣಕ್ಕೆ ಪರಿಗಣಿಸಬಹುದು.

೩. ಒಂದು ಹಳ್ಳಿಯಲ್ಲಿ ಒಂದೇ ಒಂದು ಸೂಕ್ತ ದೇವಸ್ಥಾನವಿದ್ದು ಅದರಲ್ಲಿ ಪ್ರಸ್ತುತ ಚಾವಡಿಯ ಪಾಟೀಲರು (ಹಳ್ಳಿಯ ಮುಖ್ಯಸ್ಥ) ನೆಲೆಸಿದ್ದರೆ ಈ ಚಾವಡಿಯನ್ನು ತನ್ನ ಮನೆಗೆ ವರ್ಗಾಯಿಸಿಕೊಳ್ಳಬೇಕು ಮತ್ತು ಶಾಲೆಯನ್ನು ಖಾಲಿಮಾಡಿದ ಜಾಗದಲ್ಲಿ ಪ್ರಾರಂಭಿಸಬೇಕು.

೪. ಲಭ್ಯವಿರುವ ಕಟ್ಟಡಕ್ಕೆ ರಿಪೇರಿ ಅವಶ್ಯಕವಾಗಿದ್ದರೆ ಕೂಡಲೇ ದೇವಸ್ಥಾನಗಳಿಂದ ಸಂಗ್ರಹವಾದ ಆದಾಯದಿಂದ ಆಡಳಿತವು ಮಾಡಿಸಿಕೊಡಬೇಕು.

೫. ಎಲ್ಲೆಲ್ಲಿ ಶಾಲೆಗೆ ವೇತನದ ಸರಕಾರಿ ಸೇವಕನನ್ನು ಒದಗಿಸಲು ಸಾಧ್ಯವಿಲ್ಲವೋ ಅಂಥ ಕಡೆಗಳಲ್ಲಿ ಗಾವ್‌ಕಾಮ್‌ಗಾರ್ (ಪಾಟೀಲ) ಶಾಲೆಗೆ ಅಂಚೆ ತಲುಪಿಸುವ ಅಥವಾ ಉಪಾಧ್ಯಾಯನ ಸಂಬಳ ತಂದುಕೊಡುವ ಮೊದಲ ಕೆಲಸಗಳನ್ನು (ಕರ್ತವ್ಯ) ಮಾಡಬೇಕಾಗುತ್ತದೆ.

**ಗೋಪಾಲ ಗಂಗಾಧರ**
ಚಿಟ್ನೀಸ್

**ಬಿ. ವಿ. ಜಾಧವ್**
ಸರ್‌ಸುಭೆ

(ಕರವೀರ ಸರಕಾರ್ ಗೆಜೆಟ್, ಭಾಗ–೧ ೩೦, ನವೆಂಬರ್ ೧೯೧೮)

* ಪ್ರಯಾಣಿಕರಿಗೆ ಉಚಿತ ವಸತಿಗಾಗಿ ನಿರ್ಮಿಸಿದ ಒಂದು ಕಟ್ಟಡ

---

೩೬

## ನಾಗರಿಕ ಇಲಾಖೆ

## ನೇಮಕಾತಿಗಳು

*೨೯, ಜನವರಿ ೧೯೧೯*

*ಹುಜೂರರ ಆಡಳಿತಾತ್ಮಕ ನಿರ್ಣಯ ಸಂಖ್ಯೆ ೪೦೮, ಹೊರಹೋಗುವ ಪತ್ರದ ಸಂಖ್ಯೆ ದಿನಾಂಕ ೧೬, ಜನವರಿ ೧೯೧೯, ಈ ಕೆಳಕಂಡ ನೇಮಕಾತಿಗಳನ್ನು ಮಾಡಲಾಗಿದೆ:*

ಅಸ್ಪೃಶ್ಯ ಸಮುದಾಯದಿಂದ ರಾಮಚಂದ್ರ ಸಖಾರಾಮ್ ಕಾಂಬ್ಳೆ ಅವರನ್ನು ರಾವ್‌ಸಾಹೇಬ ದಫ್ತರ್‌ದಾರ್* ಅವರ ಕಛೇರಿಯ ಲೆಕ್ಕದ ಶಾಖೆಯಲ್ಲಿ ದಫ್ತರ್‌ಬಂದ್ ಆಗಿ ೮/– ರೂ.ಗಳ ವೇತನದಲ್ಲಿ ಶಾಶ್ವತ ಹುದ್ದೆಯಲ್ಲಿ ನೇಮಕ ಮಾಡಲಾಗಿದೆ.

ದತ್ತು ಸಂತ್‌ರಾಮ್ ಪೊವಾರ್ ಅವರನ್ನು ಒಬ್ಬ ದಫ್ತರ್‌ಬಂದ್ ಆಗಿ ಮುಖ್ಯ ಪೊಲೀಸ್ ಕಛೇರಿಯಲ್ಲಿ ೮/–ರೂ.ಗಳ ಶಾಶ್ವತ ವೇತನದಲ್ಲಿ ನೇಮಕ ಮಾಡಲಾಗಿದೆ. ಧೊಂಡ್‌ದೇವ್ ರಾಮಚಂದ್ರ ವ್ಹಾಟ್ಕರ್ ಅವರನ್ನು ಒಬ್ಬ ದಫ್ತರ್‌ಬಂದ್ ಆಗಿ, ಅರಣ್ಯ ಕಛೇರಿಯಲ್ಲಿ ೮/– ರೂ.ಗಳ ವೇತನದಲ್ಲಿ ಸದ್ಯಕ್ಕೆ ನೇಮಕ ಮಾಡಲಾಗಿದೆ. ಧ್ಯಾನು ಗಾನು ನಿಕಮ್ ಅವರನ್ನು ದಫ್ತರ್‌ಬಂದ್ ಆಗಿ ಹೆಚ್ಚುವರಿಯಾಗಿ ೮/– ರೂ.ಗಳ ಶಾಶ್ವತ ವೇತನದಲ್ಲಿ ನೇಮಕ ಮಾಡಲಾಗಿದೆ. ನಿಕಮ್ ಅವರು ತಾತ್ಕಾಲಿಕ ಕೇಡರ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ, ಈಗ ಅವರು ಶಾಶ್ವತ ನೌಕರರಾಗಿದ್ದಾರೆ.

ಈ ನೇಮಕಗಳು ಜನವರಿ ೫, ೧೯೧೯ರಿಂದ ಜಾರಿಗೆ ಬರುತ್ತವೆ.

ಸಿ. ವಿ. ವಿರಕ್ತಮಠ
ಚಿಟ್ನೀಸ್

ಎನ್. ಪಿ. ಭಿಡೆ
ಸಹಾಯಕ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್ ಭಾಗ–೧, ೮, ಫೆಬ್ರವರಿ ೧೯೧೯)

---

೩೭

*ಕುಲಕರ್ಣಿ ವತನವನ್ನು ರದ್ದುಗೊಳಿಸಿದ ನಂತರ ಬ್ರಾಹ್ಮಣರ ಮತ್ತು ಬ್ರಾಹ್ಮಣೇತರರ ನಡುವೆ ವಾದ-ವಿವಾದದ ಚರ್ಚೆಯು ಉತ್ತುಂಗ ಶಿಖರಕ್ಕೇರಿತು. ಕೆಲವು ಬ್ರಾಹ್ಮಣೇತರರು ಸತ್ಯಾಗ್ರಹವನ್ನು ಅನುಸರಿಸಿದರೆ ಮತ್ತೆ ಕೆಲವರು ಕೇವಲ ಪುಂಡಾಟಿಕೆಯಲ್ಲಿ ತೊಡಗಿದರು. ತತ್ಪರಿಣಾಮವಾಗಿ ಶಾಹುರವರು ಗಲಭೆಗಳು ಸಂಭವಿಸಬಹುದೆಂದು ಮುಂಗಾಣಿಸಿದರು ಮತ್ತು ಕೂಡಲೇ ಈ ಕೆಳಕಂಡ ಆದೇಶವನ್ನು ಹೊರಡಿಸಿದರು:*

---

## ನಾಗರಿಕ ಇಲಾಖೆ
## ಅಧಿಸೂಚನೆ

೩೦, ಏಪ್ರಿಲ್ ೧೯೧೯

ಹುಜೂರರ (ಇಂಗ್ಲಿಷ್) ನಿರ್ಣಯ ಸಂಖ್ಯೆ ೩, ದಿನಾಂಕ ೨೮ನೇ ಏಪ್ರಿಲ್ ೧೯೧೯ರ ಪ್ರಕಾರ ಮತ್ತು ಆದೇಶಸಂಖ್ಯೆ ೨೮, ಅದನ್ನು ಪ್ರಕಟಿಸಬೇಕಾಗಿದೆ. ಅದು ಈ ಕೆಳಕಂಡಂತಿದೆ:

ಹುಜೂರರು ಕಾನ್‌ಪುರದಿಂದ ವಾಪಸ್ಸು ಬಂದ ಮೇಲೆ. ಕುಲಕರ್ಣಿಗಳು ಕೆಲಸಕ್ಕೆ ಮರಳಿ ಬರುವುದನ್ನು ತಡೆಯಲು ಕೆಲವು ಬ್ರಾಹ್ಮಣೇತರರು ಸತ್ಯಾಗ್ರಹವನ್ನು ಕೈಗೊಂಡದ್ದನ್ನು ಕೇಳಿ ಆಶ್ಚರ್ಯಚಕಿತರಾದರು. ಕೆಲವು ಬ್ರಾಹ್ಮಣೇತರರು ಪುಂಡಾಟಿಕೆಯಲ್ಲಿ ತೊಡಗಿದರು. ಬ್ರಾಹ್ಮಣೇತರರು ಕಟ್ಟಕಡೆಗೆ ಕುಲಕರ್ಣಿಗಳ ಭಾರವು ತಮ್ಮ ಬೆನ್ನಿನ ಹೊರೆಯಿಂದ ಕಳೆದುಬಿಟ್ಟಿತೆಂದು ಭಾವಿಸಿರಬೇಕು. ಕೆಲವರು ಈ ಆಂದೋಲನದಿಂದ ಬ್ರಾಹ್ಮಣರಿಗೆ ಮುಯ್ಯಿಗೆ ಮುಯ್ಯಿ ಎನಿಸಿರಬಹುದು. ಆದರೆ ಹುಜೂರರು ಸಂಪೂರ್ಣವಾಗಿ ಅಂತಹ ವಿಧಾನಗಳನ್ನೇ ಒಪ್ಪಲಿಲ್ಲ. ಮಾಮಲೆದಾರರು ಅಂತಹ ಆಂದೋಲನಗಳ ಬಗ್ಗೆ ಕಟ್ಟುನಿಟ್ಟಿನ ಎಚ್ಚರಿಕೆ ವಹಿಸಬೇಕು. ಕುಲಕರ್ಣಿಗಳ ವಿರುದ್ಧ ಅಸಹಕಾರ ಆಂದೋಲನವು ಸಾಮಾಜಿಕ ಗಲಭೆಗೆ ಎಡೆ ಮಾಡಿಕೊಡಬಾರದು.

ಜೊತೆಗೆ ರೈತರ ಮತ್ತು ಕುಲಕರ್ಣಿಗಳ ನಡುವೆ ಭೂಮಿಯ ಒಂದು ವಿವಾದದ ಬಗ್ಗೆ ಹುಜೂರರು ಕೇಳಿದಾಗ ಅಂತಹ ಭೂಮಿಗಳಲ್ಲಿ ರೈತರು ಬಲಾತ್ಕಾರವಾಗಿ ಕೃಷಿ ಮಾಡುತ್ತಿದ್ದರು. ಅದು ಹಾಗೇ ಆಗಿದ್ದರೆ ಮತ್ತು ಹುಜೂರರು ಹಾಗೇ ಆಗಬೇಕೆಂದು ಯೋಚಿಸುತ್ತಿರಲಿಲ್ಲ. ಕುಲಕರ್ಣಿ, ಜೋಷಿಗಳು ಮೊದಲಾದವರು ಕೂಡಲೇ ವಿಚಾರಣೆಯ ಪೀಠದ ಮುಂದೆ ಒಂದು ದೂರನ್ನು ದಾಖಲಿಸುತ್ತಿದ್ದರು. ಮತ್ತು ಸಂಬಂಧಪಟ್ಟ ಮಾಮಲೆದಾರರಲ್ಲಿ, ಪೊಲೀಸರಲ್ಲಿ ತಿಳಿಸುತ್ತಿದ್ದರು.

ಎಲ್ಲಾ ಮಾಮಲೆದಾರರು, ಮಹಲ್ಕಾರಿಗಳು ವಿಚಾರಣೆಯ ಪೀಠ ಮತ್ತು ಪೊಲೀಸ್ ಅಧಿಕಾರಿಗಳು ಈ ಆದೇಶದ ಪ್ರಕಾರ ಸಾಕಷ್ಟು ವ್ಯವಸ್ಥೆಗಳನ್ನು ಮಾಡುತ್ತಿದ್ದರು.

ಬಿ. ವಿ. ಜಾಧವ್
ಸಹಾಯಕ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೧೦, ಮೇ ೧೯೧೯)

೩೮

*ಬಲೂತೆದಾರರು ಮತ್ತು ಲೇವಾದೇವಿದಾರರು ಬೆಳೆದು ನಿಂತಿರುವ ಬೆಳೆಗಳ ಮೇಲೆಯೇ ತಮ್ಮ ಬಾಕಿಗಳನ್ನು ರೈತರಿಂದ ಸುಲಿಗೆ ಮಾಡುತ್ತಿದ್ದರು ಮತ್ತು ತನ್ಮೂಲಕ ಅವರನ್ನು ವಿಪರೀತವಾಗಿ ಶೋಷಿಸುತ್ತಿದ್ದರು. ಈ ಆದೇಶವು ಬಾಕಿ ವಸೂಲಿ ಮಾಡುವ ಈ ವಿಧಾನವನ್ನು ಕಾನೂನುಬಾಹಿರವೆಂದು ಮತ್ತು ವಿಚಾರಣೀಯ ಅಪರಾಧವೆಂದು ಘೋಷಿಸುತ್ತದೆ.*

---

## ಅಧಿಸೂಚನೆ

ಹುಜೂರ್ ಸರಕಾರ ಸಾಮಾನ್ಯ ನಿರ್ಣಯ ಸಂಖ್ಯೆ ೩೨, ದಿನಾಂಕ ೧೪, ಜೂನ್ ೧೯೧೯ನ್ನು ನೋಡಿ, ಅದನ್ನು ಈ ಕೆಳಕಂಡಂತೆ ಘೋಷಿಸಲಾಗಿದೆ:

೧. ಬಲೂತೆದಾರರು ಮತ್ತು ಲೇವಾದೇವಿಗಾರರು, ಬಾಕಿಯಿರುವಾಗಲೆಲ್ಲ ಅದನ್ನು ರೈತರಿಂದ ವಸೂಲಿ ಮಾಡಲು ಬೆಳೆಗಳು ನಿಂತಿರುವ ರೈತರ ಹೊಲಗಳಿಗೆ ಹೋಗಿ ಬಾಕಿ ವಸೂಲಿಗಾಗಿ ಹರಾಜು ಕೂಗುತ್ತಿದ್ದರು. ರೈತರು ಸಮಾಲೋಚನೆ ನಡೆಸಲು ಅಲ್ಲಿ ಯಾರೂ ಸಿಗುತ್ತಿರಲಿಲ್ಲ ಮತ್ತು ಹೀಗೆ ಅನ್ಯಾಯವಾಗಿ ಸಾಲ ಬಾಕಿ ವಸೂಲಿಯ ನೆಪದಲ್ಲಿ ಅವರನ್ನು ದರೋಡೆ ಮಾಡಲಾಗುತ್ತಿತ್ತು. ಇನ್ನು ಮುಂದೆ ಅಂಥ ವಸೂಲಿಯನ್ನು ದಮನ ಮತ್ತು ಕಾನೂನುಬಾಹಿರ ಕ್ರಮವೆಂದು ಪರಿಗಣಿಸಲಾಗುತ್ತದೆ. ರೈತರು ಯಾವುದೇ ಬಲೂತೆದಾರರ ಮತ್ತು ಲೇವಾದೇವಿದಾರರ ಯಾವುದೇ ಕೋರ್ಟಿನ ತೀರ್ಪಿಗೆ ಅವರ ಬೆಳೆಗಳ ಧಾನ್ಯಗಳು ಅವರ ಮನೆ ಸೇರುವವರೆಗೂ ಹೊಣೆಗಾರರಲ್ಲವೆಂದು ಘೋಷಿಸಲಾಗಿದೆ. ಈ ಘೋಷಣೆಯ ವಿರುದ್ಧ ಕ್ರಮ ಜರುಗಿಸುವವರು ಶಿಕ್ಷಾರ್ಹರು.

೨. ಸಾಂಪ್ರದಾಯಿಕ ೧೨ ಬಲೂತೆದಾರರು ಮತ್ತು ಅಲೂತೆದಾರರಿಗೆ ತಮ್ಮ ಸಾಂಪ್ರದಾಯಿಕ ಹಕ್ಕುಗಳೆಂದು ಏನನ್ನೂ ನೀಡುವಂತಿಲ್ಲ. ಸ್ವ-ಇಚ್ಛೆಯಿಂದ ನೀಡುವುದಕ್ಕೆ ಯಾವುದೇ ಆಕ್ಷೇಪಣೆಯಿಲ್ಲ. ಆದರೆ ಒಬ್ಬ ಸರಕಾರಿ ಸೇವಕನು, ಒಬ್ಬ ಲೇವಾದೇವಿಗಾರನು ಅಥವಾ ಯಾರೇ ಆಗಲಿ ಒತ್ತಾಯಪೂರ್ವಕವಾಗಿ ಪಾವತಿಯನ್ನು ತೆಗೆದುಕೊಂಡರೆ ಅಂಥ ವ್ಯಕ್ತಿ ೪ ದಿನಗಳೊಳಗಾಗಿ ಶಿಕ್ಷೆಗೆ ಅಥವಾ ೧೦೦ ರೂ.ಗಳ ದಂಡನೆಗೆ ಗುರಿಯಾಗುತ್ತಾನೆ. ಜಹಗೀರುದಾರರನ್ನು ಬಿಟ್ಟು ಇಡೀ ಪ್ರಾಂತ್ಯಕ್ಕೆ ಈ ಆದೇಶ ಅನ್ವಯವಾಗುತ್ತದೆ. ಮತ್ತು ಈ ಆದೇಶವನ್ನು ಈಗಾಗಲೇ ೨೯, ಮಾರ್ಚ್ ೧೯೧೯ರ ಗೆಜೆಟ್‌ನಲ್ಲಿ ಪ್ರಕಟಿಸಲಾಗಿದೆ.

೩. ಆದ್ದರಿಂದ ಮೊದಲಿನ ಆಜ್ಞೆಗಳ ಪ್ರಕಾರ ಪ್ರತಿಯೊಬ್ಬ ಗ್ರಾಮದ ಪಾಟೀಲ ಹಳ್ಳಿಯ ಡಂಗುರಗಾರರ ಮೂಲಕ ೧ ಮತ್ತು ೨ರ ಅಂಶಗಳನ್ನು ಘೋಷಿಸಲು ಪಡ್ವ ಹಬ್ಬ ಮತ್ತು ಅಕ್ಷಯ ತೃತೀಯ* ದಿನದಂದು ಪ್ರತಿ ವರ್ಷ ವ್ಯವಸ್ಥೆಯನ್ನು ಮಾಡಬೇಕು ಮತ್ತು ಅದರ ವರದಿಯನ್ನು ಹಿರಿಯ ಅಧಿಕಾರಿಗಳಿಗೆ ಕಳುಹಿಸಿಕೊಡಬೇಕು. ಇದನ್ನು ಮಾಡಲೇಬೇಕು. ಉಲ್ಲಂಘಿಸಿದರೆ ಪ್ರತಿಯೊಂದು ವಿಷಯದಲ್ಲಿ ಒಂದು ರೂ. ದಂಡ ತೆರಬೇಕಾಗುತ್ತದೆ.

ಹೀಗೆ ಹುಜೂರರಿಂದ ಸಂಬಂಧಪಟ್ಟವರಿಗೆ ಮತ್ತು ಸಾಮಾನ್ಯ ಸಾರ್ವಜನಿಕರಿಗಾಗಿ ಇದನ್ನು ಘೋಷಿಸಲಾಗಿದೆ.

**ಟಿ. ಆರ್. ಪಾಟೀಲ**

ಹುಜೂರ್ ಚಿಟ್ನೀಸ್

**(ಕರವೀರ ಸರಕಾರ ಗೆಜೆಟ್, ಭಾಗ– ೧, ೨೧, ಜೂನ್ ೧೯೧೯)**

---

೩೯

*ಶಾಹುರವರು ತನ್ನ ಕ್ರಾಂತಿಕಾರಿ ಕ್ರಮಗಳ ಪರಿಣಾಮಗಳ ಬಗ್ಗೆ ಒಂದು ಕಣ್ಣು ಇಡುತ್ತಿದ್ದರು. ಮಹರ್‌ರ ವತನುಗಳನ್ನು ಮುಟ್ಟುಗೋಲು ಹಾಕಿಕೊಂಡು ಭೂಮಿಗಳನ್ನು ಅವರ ಹೆಸರಿಗೆ ಉಚಿತವಾಗಿ ಮಾಡಿದಾಗ ಮಹರರು ಆ ಭೂಮಿಗಳನ್ನು ಅಡವಿಟ್ಟು ಸಾಲಗಳನ್ನು ಪಡೆಯಲು ಪ್ರಾರಂಭಿಸಿದರು. ಆದರೆ ಈ ಮೊದಲು ಹಾಗೆ ಮಾಡಲು ಬರುತ್ತಿರಲಿಲ್ಲ. ಕೂಡಲೇ ಶಾಹುರವರು ಮಹರರು ದಿವಾಳಿಯಾಗುವುದನ್ನು ತಾತ್ಕಾಲಿಕವಾಗಿ ತಡೆಯಲು ಅಂತಹ ಸಾಲಗಳನ್ನು ನಿಷೇಧಿಸುವ ಆಜ್ಞೆಯನ್ನು ಹೊರಡಿಸಿದರು.*

---

**ಅಧಿಸೂಚನೆ**

**ಕಂದಾಯ ಇಲಾಖೆ**

೨, ಜುಲೈ ೧೯೧೯

ಮಹರರ ವತನ ಭೂಮಿಗಳನ್ನು ರಾಯತವಾ ಸ್ಥಾನಮಾನವನ್ನಾಗಿ ಪರಿವರ್ತಿಸಿರುವುದರಿಂದ (ಸಾಮಾನ್ಯ ಸ್ಥಾನಮಾನ) ಯಾರೂ ಈ ಭೂಮಿಗಳು ಆಧಾರವೆಂದು ಅವುಗಳ ಮೇಲೆ ಸಾಲವನ್ನು ೫ ವರ್ಷಗಳವರೆಗೆ ನೀಡಬಾರದು. ಯಾರಾದರೂ ಆ ಸಾಲಗಳನ್ನು ವಿಸ್ತರಿಸಿದರೆ ಅಂತಹ ಸಾಲಗಳನ್ನು ಕಾನೂನುಬಾಹಿರವೆಂದು ಪರಿಗಣಿಸಲಾಗುವುದು. ಈ ಮೇಲಿನ ಆದೇಶವು ಹುಜೂರರ ನಿರ್ಣಯ ಸಂಖ್ಯೆ ೪೫, ದಿನಾಂಕ ೨೪, ಜೂನ್ ೧೯೨೧ರಿಂದ ಜಾರಿಗೆ ಬಂದಿದೆ.

| | |
|---|---|
| ಎಸ್. ಜಿ. ಸ್ವಾಮಿಬಿ. | ವಿ. ಜಾಧವ |
| ಕಿರಿಯ ಅಧಿಕಾರಿ | ಸರ್‌ಸುಭೆ |

(ಕರವೀರ ಸರಕಾರ ಗೆಜೆಟ್, ಭಾಗ–೧, ೯, ಜುಲೈ ೧೯೧೯)

---

## ಜಾಹಿರಾತು

೨೫, ಜೂನ್ ೧೯೧೯

ಕರವೀರ ಪ್ರದೇಶದ ಅಸ್ಪೃಶ್ಯ ಸಮುದಾಯಗಳ ವಿದ್ಯಾರ್ಥಿಗಳಿಗೆ ಈ ಕೆಳಗೆ ತಿಳಿಸುವುದೇನೆಂದರೆ–

ಶ್ರೀ ಮಹಾರಾಜರ ಸರಕಾರ ಕರವೀರವು ಆದೇಶವನ್ನು ಹೊರಡಿಸುವ ಮೂಲಕ (ನಿರ್ಣಯ ಸಂಖ್ಯೆ ೬೨೧) ಈ ಕೆಳಕಂಡ ನಿರ್ಧಾರಗಳನ್ನು ಕೈಗೊಂಡಿದೆ:

೧. ತಲಾಟಿ ತರಗತಿಗಳಿಗೆ ಹಾಜರಾಗುವ ಅಸ್ಪೃಶ್ಯ ಸಮುದಾಯಗಳ ವಿದ್ಯಾರ್ಥಿಗಳಿಗೆ ಮೂರು ತಿಂಗಳ ಅವಧಿಗೆ ತಿಂಗಳಿಗೆ ೮ ರೂ.ಗಳ ಪ್ರಕಾರ ೧೦ ವಿದ್ಯಾರ್ಥಿ ವೇತನಗಳನ್ನು ಮಂಜೂರು ಮಾಡಲಾಗಿದೆ.

೨. ಈ ವಿದ್ಯಾರ್ಥಿವೇತನಗಳು ಮೂರು ತಿಂಗಳುಗಳವರೆಗೆ ಮಾತ್ರ. ಮೊದಲ ತಂಡದ ವಿದ್ಯಾರ್ಥಿಗಳು ಹೊರಹೋದಾಗ ಅದೇ ಸಂಖ್ಯೆಯ ವಿದ್ಯಾರ್ಥಿವೇತನಗಳನ್ನು ಮುಂದಿನ ಮೂರು ತಿಂಗಳುಗಳವರೆಗೆ ನೀಡಲಾಗುವುದು.

೩. ಅಭ್ಯರ್ಥಿ ಈ ಕೆಳಗೆ ಸಹಿ ಮಾಡಿರುವವರಿಗೆ ಅರ್ಜಿಗಳನ್ನು ಸಲ್ಲಿಸಬೇಕು. ಅಭ್ಯರ್ಥಿಗಳು ಮುಲ್ಕಿ ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಆರ್. ಆರ್. ಚಿಟ್ನೀಸ್**
ಮೇಲ್ವಿಚಾರಕ ಆರ್ಯಸಮಾಜ, ಗೋಕುಲ
ಸಂಸ್ಥಾನ ಕರವೀರ

**(ಕರವೀರ ಸರಕಾರ ಗೆಜೆಟ್, ಭಾಗ–೧, ಜೂನ್ ೧೨, ೧೯೧೯)**

---

## ೪೧

*ಶಾಹು ತಮ್ಮ ಸಂಸ್ಥಾನದಲ್ಲಿ ಅಸ್ಪೃಶ್ಯತೆಯ ಅಮಾನವೀಯ ಪರಂಪರೆಯನ್ನು ರದ್ದುಗೊಳಿಸುವ ಈ ಮೂರು ಮುಖ್ಯ ಐತಿಹಾಸಿಕ ಮ್ಯಾನಿಫೆಸ್ಟೋಗಳು (ಘೋಷಣೆಗಳು)– ಈ ಮೂರು ಘೋಷಣೆಗಳಿಂದ ಅವರು ಕಂದಾಯ, ನ್ಯಾಯಾಂಗ, ಮತ್ತು ಸಾಮಾನ್ಯ ಇಲಾಖೆ ಹಾಗೂ ಸಾರ್ವಜನಿಕ ಸ್ಥಳಗಳಾದ ಶಾಲೆಗಳು, ಆಸ್ಪತ್ರೆಗಳು, ಬಾವಿಗಳು ಮತ್ತು ನೀರಿನ ಚಿಲುಮೆಗಳಲ್ಲಿ (ಬುಗ್ಗೆಗಳು) ಪರಿಪಾಲಿಸುವ ಅಸ್ಪೃಶ್ಯತೆಯನ್ನು ಕಾನೂನುಬದ್ಧವಾಗಿ ನಿಷೇಧಿಸಿದರು. ಈ ಘೋಷಣೆಗಳ ಬಗ್ಗೆ ಆಕ್ಷೇಪವಿದ್ದರೆ ಅಧಿಕಾರಿಗಳು ರಾಜೀನಾಮೆ ನೀಡಬೇಕೆಂದು ಕಟುವಾದ ಎಚ್ಚರಿಕೆಯನ್ನು ನೀಡಿದರು.*

---

### ಅಧಿಸೂಚನೆ

**ಕೊಲ್ಹಾಪುರ, ೨೨, ಆಗಸ್ಟ್ ೧೯೧೯**

ಸಂಖ್ಯೆ ೫: ಈ ಕೆಳಕಂಡ ಹುಜೂರರ ಆದೇಶವನ್ನು ಹುಜೂರ್ ಕಛೇರಿ ಸಂಖ್ಯೆ ೭೯, ದಿನಾಂಕ ೨೦, ಆಗಸ್ಟ್ ೧೯೧೯ರಂದು ಸಂಬಂಧಪಟ್ಟ ಅಧಿಕಾರಿಗಳಿಗೆ ಮಾಹಿತಿಗಾಗಿ ಪ್ರಕಟಿಸಲಾಗಿದೆ:

"ಸಂಸ್ಥಾನದಲ್ಲಿರುವ ಎಲ್ಲಾ ಅಧಿಕಾರಿಗಳು, ಕಂದಾಯ, ನ್ಯಾಯಾಂಗ ಅಥವಾ ಸಾಮಾನ್ಯ ಇಲಾಖೆಗಳು ಸಂಸ್ಥಾನದ ಸೇವೆಗೆ ಪ್ರವೇಶಿಸಿದ ಅಸ್ಪೃಶ್ಯರನ್ನು ಕರುಣೆ ಮತ್ತು ಸಮಾನತೆಯಿಂದ ಕಾಣಬೇಕು. ಸಂಸ್ಥಾನದ ಯಾವುದೇ ಅಧಿಕಾರಿಗೆ ಮೇಲಿನ ಆದೇಶದ ಪ್ರಕಾರ ಅಸ್ಪೃಶ್ಯರನ್ನು ಸಮಾನವಾಗಿ ಕಾಣಲು ಆಕ್ಷೇಪಣೆಯಿದ್ದರೆ ಅವರು ಈ ಆಜ್ಞೆ ಸ್ವೀಕರಿಸಿದ ಆರು ವಾರಗಳೊಳಗೆ ತಮ್ಮ ಹುದ್ದೆಗೆ ರಾಜೀನಾಮೆ ನೀಡುವ ತಿಳುವಳಿಕೆಯ ಪತ್ರವನ್ನು ಕೊಡಬೇಕು. ಅವರು ನಿವೃತ್ತಿವೇತನಕ್ಕೆ ಅರ್ಹರಲ್ಲ. ಘನತೆವೆತ್ತ ಮಾನ್ಯ ಮಹಾರಾಜರು ತನ್ನ ಪ್ರತಿಯೊಬ್ಬ ಪ್ರಜೆಯನ್ನು ಮಾನವರಂತೆ ಕಾಣಬೇಕೆಂದು ಮತ್ತು ಪಶುವಿನಂತೆ ಅಲ್ಲವೆಂದು ನಿರೀಕ್ಷಿಸುತ್ತಾರೆ. ಅವರು ಮಿಷನರಿಗಳ, ಆರ್ಯ ಸಮಾಜಿಗಳ, ರೈಲ್ವೆ ಅಧಿಕಾರಿಗಳ ಮತ್ತು ಸರಕಾರಿ ಅಧಿಕಾರಿಗಳು ಹಾಕಿಕೊಟ್ಟ ಮೇಲ್ಪಂಕ್ತಿಗಳ ಜಾಡಿನಲ್ಲಿ ನಡೆಯುತ್ತಾರೆಂದು ಮಾನ್ಯ ಮಹಾರಾಜರು ಬಯಸುತ್ತಾರೆ ಮತ್ತು ಭಾವಿಸುತ್ತಾರೆ."

ಘನತೆವೆತ್ತ ಛತ್ರಪತಿ ಮಹಾರಾಜರ ಆದೇಶದ ಮೇರೆಗೆ

**ಕೆ. ಗಾಯಕವಾಡ್**
ದಿವಾನರ ಆಪ್ತ ಸಹಾಯಕ

---

## ಅಧಿಸೂಚನೆ

ಕೊಲ್ಹಾಪುರ, ೨೨, ಆಗಸ್ಟ್ ೧೯೧೯

ಸಂಖ್ಯೆ ೬:– ಹುಜೂರ್ ಕಛೇರಿ ಸಂಖ್ಯೆ ೮೦, ದಿನಾಂಕ ೨೦ ಆಗಸ್ಟ್ ೧೯೧೯ರಂದು ಸಂಬಂಧಪಟ್ಟ ಅಧಿಕಾರಿಗಳು ಮತ್ತು ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಿದ ಕೆಳಗಿನ ಆದೇಶಪತ್ರ:

ನಮ್ಮ ಶಿಕ್ಷಣಸಂಸ್ಥೆಗಳಲ್ಲಿ ಕೂಡ ಸ್ಪೃಶ್ಯರನ್ನು ಮತ್ತು ಅಸ್ಪೃಶ್ಯರನ್ನು ಭಿನ್ನವಾಗಿ (ತಾರತಮ್ಯತೆ) ಕಾಣಲಾಗುತ್ತದೆ ಮತ್ತು ಶೈಕ್ಷಣಿಕ ಸಂಸ್ಥೆಗಳ ಪೌಳಿ ಗೋಡೆಗಳೊಳಗಿನ ಆವರಣದೊಳಕ್ಕೂ ಬರಲು ಅವಕಾಶ ನೀಡುತ್ತಿಲ್ಲ ಎಂಬುದು ಹುಜೂರರ ಗಮನಕ್ಕೆ ಬಂದಿದೆ. ಸಂಸ್ಥಾನದ ಶೈಕ್ಷಣಿಕ ಸಂಸ್ಥೆಗಳ ಮನೆಗಳನ್ನು ತಮ್ಮ ಖಾಸಗಿ ಮನೆಗಳೆಂದು ಭಾವಿಸಿ, ಅವರಿಗೆ ನೀಡಿಲ್ಲ ಮತ್ತು ಯಥಾಕಥಿತ ಅಸ್ಪೃಶ್ಯ ಮಾನವರನ್ನು ನಿರ್ಲಕ್ಷಿಸಿ ಕಾಣುವ ಹಕ್ಕು ನಿಮಗಿಲ್ಲ, ಅವರಿಗೆ ಪ್ರತಿಯೊಂದು ಪರಿಗಣನೆಯನ್ನು ನೀಡಬೇಕೆಂದು ನಿರೀಕ್ಷಿಸಲಾಗಿದೆ. ಸಂಸ್ಥೆಗಳಾದ ಶೈಕ್ಷಣಿಕ ಸಂಸ್ಥೆಗಳು ಬಡವರಿಗಾಗಿವೆ ಮತ್ತು ಅಷ್ಟೇ ಅಲ್ಲ, ಅತ್ಯಂತ ಬಡವರಾದ ಅಸ್ಪೃಶ್ಯ ಮಾನವರು ಸಮಾನತೆಯಿಂದ ಕಾಣಬೇಕೆಂಬ ಹಕ್ಕನ್ನು ಪಡೆದಿದ್ದಾರೆ. ಅವರು ತೆರಿಗೆಗಳನ್ನು ಕಟ್ಟುತ್ತಾರೆ, ಅವರನ್ನು ಏಕೆ ಕಡೆಗಣಿಸಬೇಕಾಗಿದೆ? ಶೈಕ್ಷಣಿಕ ಸಂಸ್ಥೆಗಳಾದ ಸರಕಾರದ ಅನುದಾನ ಪಡೆಯುವ ಮತ್ತು ಸರಕಾರಿ ಸಂಸ್ಥೆಗಳು ಅಥವಾ ಇತರೆಯಾದ ಕಟ್ಟಡಗಳು, ಆಟದ ಮೈದಾನಗಳು, ಮೊದಲಾದವುಗಳು ಸ್ಪೃಶ್ಯರಿಗಿಂತ ಮಿಗಿಲಾಗಿ ಅಸ್ಪೃಶ್ಯರನ್ನು ಹೆಚ್ಚು ಗೌರವ ಮತ್ತು ಕರುಣೆಯಿಂದ ಕಾಣಬೇಕು. ಏಕೆಂದರೆ ಸ್ಪೃಶ್ಯರು ತಮ್ಮದೇ ಆದ ರೀತಿಯಲ್ಲಿ ಶಿಕ್ಷಣವನ್ನು ಗಳಿಸಬಲ್ಲರು, ಆದರೆ ಅಸ್ಪೃಶ್ಯರು ತುಂಬಾ ಅಸಹಾಯಕರಾಗಿದ್ದಾರೆ.

ಅಸ್ಪೃಶ್ಯರನ್ನು ಸಮಾನವಾಗಿ ಕಾಣದಿದ್ದರೆ ಪ್ರಾಂಶುಪಾಲರಿಂದ ಹಿಡಿದು ಕೆಳದರ್ಜೆಯ ಉಪಾಧ್ಯಾಯರವರೆಗೆ ಪ್ರತಿಯೊಬ್ಬರ ಬಗ್ಗೆ ಖಂಡಿತವಾಗಿಯೂ ಕ್ರಮ ಜರುಗಿಸಲಾಗುವುದು. ಮತ್ತು ಖಾಸಗಿ ಸಂಸ್ಥೆಗಳಿಗೆ ನೀಡಿರುವ ಯಾವುದೇ ಸಹಾಯವನ್ನು ಹಿಂದಕ್ಕೆ ಪಡೆಯಲಾಗುವುದು.

ಮೀರಜ್‌ನಲ್ಲಿ ಅಮೇರಿಕನ್ ಮಿಷನ್ ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿ, ಮತ್ತು ಸಂತ ಜೇವಿಯರ್ ಮತ್ತು ವಿಲ್ಸನ್ ಕಾಲೇಜುಗಳು ಮತ್ತು ಬೆಂಗಳೂರಿನ ಮಿಷನ್ ಶಾಲೆಗಳು ಹಾಕಿಕೊಟ್ಟ ಉತ್ತಮ ನಿದರ್ಶನಗಳನ್ನು ಪರಿಪಾಲಿಸಿ, ಮತ್ತು ಪಂಚಗಣಿ ಮತ್ತು ಆರ್ಯಸಮಾಜ ಶಾಲೆಗಳು, ಕಾಲೇಜುಗಳು ಮತ್ತು ಗುರುಕುಲಗಳು ಹಾಗೂ ರೈಲ್ವೆ ಪ್ರಾಧಿಕಾರಗಳು ಸ್ಪೃಶ್ಯರ ಮತ್ತು ಅಸ್ಪೃಶ್ಯರ ನಡುವೆ ಯಾವ ತಾರತಮ್ಯತೆಯಿಲ್ಲದೆ ಕಾಣುವುದನ್ನು ಪರಿಪಾಲಿಸಿಯೆಂದು ಮಾನ್ಯ ಮಹಾರಾಜರು ಅಭಿಲಾಷಿಸುತ್ತಾರೆ. ಯಾವ ಅಸ್ಪೃಶ್ಯ ವಿದ್ಯಾರ್ಥಿ ಸಂಸ್ಥಾನ ಅನುದಾನಿತ ಶಿಕ್ಷಣಸಂಸ್ಥೆಗೆ ಸೇರಿದಾಗ ಅವನನ್ನು ಸಭ್ಯಸ್ಥನೆಂದು ಬಗೆದು ಗೌರವಿಸಬೇಕು ಮತ್ತು ಅವನನ್ನು ಶಾಲೆ ಕೊಠಡಿಗಳಿಗೆ ಕರೆದುಕೊಂಡು ಹೋಗಬೇಕು. ಸಂಸ್ಥಾನದ ಶಿಕ್ಷಣದ ಸಿಬ್ಬಂದಿಯಲ್ಲಿ ಯಾರಿಗಾದರೂ ಆಕ್ಷೇಪಣೆಯಿದ್ದರೆ ಅವರು ಈ ಆದೇಶ ಪಡೆದ ಆರು ವಾರಗಳೊಳಗೆ ತಮ್ಮ ರಾಜೀನಾಮೆಯನ್ನು ಕಳುಹಿಸಿಕೊಡಬೇಕು. ಆದರೆ ಅವರು ನಿವೃತ್ತಿವೇತನಕ್ಕೆ ಅರ್ಹರಲ್ಲ. ಸಹಾಯ ಪಡೆದ ಅಥವಾ ನೆರವು ಪಡೆದ ಶಿಕ್ಷಣ ಸಂಸ್ಥೆಗಳಿಗೆ ಯಾವುದೇ ಆಕ್ಷೇಪಣೆಯಿದ್ದರೆ, ದರ್ಬಾರು ಅನುದಾನ ಅಥವಾ ಸಹಾಯ ಪಡೆಯುತ್ತಿರುವ ಆ ಸಂಸ್ಥೆಗಳಿಗೆ ಅದನ್ನು ನಿಲ್ಲಿಸುವುದು. ಸಂಸ್ಥಾನವು ಅವುಗಳಿಗೆ ಆಟದ ಮೈದಾನ, ಮನೆಗಳು ಮತ್ತು ಇತರ ಚರ ಮತ್ತು ಅಚರ ಆಸ್ತಿಗಳನ್ನು ನೀಡಿದ್ದರೆ, ಅವುಗಳ ಮೇಲೆ ಸಂಸ್ಥಾನ ಭಾರೀ ತೆರಿಗೆಗಳನ್ನು ವಿಧಿಸುವುದು.. . .ಯಾವುದೇ ಶಾಲೆಯ ಅಧ್ಯಾಪಕ ಎಷ್ಟೇ ಕೆಲಸ

ಮಾಡಿದ್ದರೂ ಅಸ್ಪೃಶ್ಯ ವಿದ್ಯಾರ್ಥಿ ತಡವಾಗಿ ಶಾಲೆಗೆ ಬಂದರೆ ಅವನಿಗೆ ಸಹಾಯ ಮಾಡಬೇಕೆಂದು ನಿರೀಕ್ಷಿಸಲಾಗಿದೆ.

ರಾವ್ ಬಹಾದ್ದೂರ್ ದೊಂಗ್ರೆ ಅವರು ಸಂಸ್ಥಾನದ ಅಥವಾ ಅನುದಾನದ ಶಾಲೆಗಳ ಎಲ್ಲಾ ಅಧ್ಯಾಪಕರ ಪಟ್ಟಿಯನ್ನು ಈ ಆದೇಶದ ಪ್ರತಿಯೊಂದಿಗೆ ಒದಗಿಸಿಕೊಡುವರು.

ಘನತೆವೆತ್ತ ಛತ್ರಪತಿ ಮಹಾರಾಜರ ಸಾಹೇಬರ ಆದೇಶದ ಮೇರೆಗೆ

**ಕೆ. ಗಾಯಕವಾಡ್**
ದಿವಾನರ ಆಪ್ತ ಸಹಾಯಕ

---

## ಅಧಿಸೂಚನೆ

ಕೊಲ್ಹಾಪುರ, ೨೨, ಆಗಸ್ಟ್ ೧೯೧೯

ಹುಜೂರ್ ಕಛೇರಿ ಸಂಖ್ಯೆ ೮೧, ದಿನಾಂಕ ೨೦, ಆಗಸ್ಟ್ ೧೯೧೯ರಂದು ಸಂಬಂಧಪಟ್ಟ ಅಧಿಕಾರಿಗಳು ಮತ್ತು ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಿದ ಈ ಕೆಳಗಿನ ಆದೇಶವನ್ನು ಸ್ವೀಕರಿಸಲಾಗಿದೆ:

‘ನಮ್ಮ ಧರ್ಮದ ಆಸ್ಪತ್ರೆಗಳಲ್ಲಿ ಸ್ಪೃಶ್ಯ ಮತ್ತು ಅಸ್ಪೃಶ್ಯರನ್ನು ತಾರತಮ್ಯತೆಯಿಂದ ಪರಿಗಣಿಸಲಾಗುವುದೆಂದು ಹಾಗೂ ಅಸ್ಪೃಶ್ಯರನ್ನು ರೆಸಿಡೆನ್ಷಿಯಲ್ ಮನೆಗಳಿಗೆ ಬರಲು, ಕಾಂಪೌಂಡಿನೊಳಗೆ ಬರಲು ಅವಕಾಶ ನೀಡುವುದಿಲ್ಲ ಎಂಬ ಸಂಗತಿಯು ಘನತೆವೆತ್ತ ಮಹಾರಾಜರ ಗಮನಕ್ಕೆ ಬಂದಿದೆ. ಅವರ ನೈರ್ಮಲ್ಯಕ್ಕೆ ಈ ಮನೆಗಳನ್ನು ನೀಡಿಲ್ಲ ಮತ್ತು ಅವರಿಗೆ ಅಸ್ಪೃಶ್ಯ ಮಾನವರನ್ನು ನಿರ್ಲಕ್ಷ್ಯವಾಗಿ ಕಾಣುವ ಯಾವುದೇ ಹಕ್ಕು ಅವರಿಗೆ ಇಲ್ಲ. ಆದರೆ ಅವರು ಅವರಿಗೆ ಪ್ರತಿಯೊಂದು ಸೂಕ್ತ ಪರಿಗಣನೆಯನ್ನು ನೀಡಬೇಕಾಗಿದೆಯೆಂದು ಸ್ವೀಕರಿಸಲಾಗಿದೆ. ಧರ್ಮಸಂಸ್ಥೆಗಳು ಬಡವರಿಗಾಗಿ ಇವೆ ಮತ್ತು ಅತ್ಯಂತ ನಿರ್ಗತಿಕರಾದ ಅಸ್ಪೃಶ್ಯರನ್ನು ಸಮಾನತೆಯಿಂದ ಕಾಣಬೇಕಾಗಿದೆ. ಘನತೆವೆತ್ತ ಮಹಾರಾಜರು ತಮ್ಮ ವೈದ್ಯಕೀಯ ಸಿಬ್ಬಂದಿಯು ವಿದೇಶೀಯರು ವಿಶೇಷವಾಗಿ ಮೀರಜಿನ ಅಮೇರಿಕನ್ ಮಿಷನರಿಯವರು ಹಾಕಿರುವ ಉತ್ತಮ ನಿದರ್ಶನವನ್ನು ಅನುಸರಿಸುವರೆಂದು ಮಾನ್ಯ ಮಹಾರಾಜರು ಪ್ರಾಮಾಣಿಕವಾಗಿ ಭಾವಿಸಿದ್ದಾರೆ. ಅಸ್ಪೃಶ್ಯ ಅಥವಾ ಸ್ಪೃಶ್ಯನಾಗಲೀ ಯಾವುದೇ ರೋಗಿಯು ನಿವಾಸಿ ಮನೆಗಳಿಗೆ ಹೋದಾಗ ಆತನನ್ನು ಒಬ್ಬ ಸಜ್ಜನನೆಂದು ಗೌರವದಿಂದ ಕಂಡು ಮನೆಯೊಳಕ್ಕೆ ಕರೆದುಕೊಂಡು ಎಚ್ಚರಿಕೆಯಿಂದ ಆತನನ್ನು ಪರೀಕ್ಷಿಸಬೇಕು. ನಂತರ ಆಸ್ಪತ್ರೆಯೊಳಕ್ಕೆ ಔಷಧೋಪಚಾರಕ್ಕಾಗಿ ಕಳುಹಿಸಬೇಕು; ಅವರನ್ನು ಪ್ರಾಣಿಯಂತೆ ಹೊರಗೆ ಕಳುಹಿಸಬೇಡಿ. ವೈದ್ಯಕೀಯ ಸಿಬ್ಬಂದಿಯಲ್ಲಿ ಯಾರಿಗಾದರೂ ಉಪಚರಿಸಲು ಆಕ್ಷೇಪಣೆಯಿದ್ದರೆ ಅವರು ಈ ಆದೇಶ ಸ್ವೀಕರಿಸಿದ ಆರು ವಾರಗಳಲ್ಲಿ ತಮ್ಮ ರಾಜೀನಾಮೆಯನ್ನು ಕಳುಹಿಸಿಕೊಡಬಹುದು. ಆದರೆ ಅವರು ನಿವೃತ್ತಿವೇತನಕ್ಕೆ ಅನರ್ಹರಾಗುತ್ತಾರೆ. ಯಾವ ಅಧಿಕಾರಿಯೇ ಆಗಲಿ, ಎಷ್ಟೇ ಕಷ್ಟಪಟ್ಟು ಕೆಲಸ ಮಾಡಿದ್ದರೂ ಬಡರೋಗಿಯನ್ನು ಮೊದಲು ನೋಡಬೇಕೆಂದು ನಿರೀಕ್ಷಿಸಲಾಗಿದೆ. ಈ ನಿಯಮವು ಇಡೀ ವೈದ್ಯಕೀಯ ಸಿಬ್ಬಂದಿಯ ಉನ್ನತ ದರ್ಜೆಯ ಅಧಿಕಾರಿಯಿಂದ ಹಿಡಿದು ಕೆಳಗಿನ ದರ್ಜೆಯ ಬ್ಯಾಂಡೇಜು ಕಟ್ಟುವವನು ಅಥವಾ ನರ್ಸುಗೂ

ಅನ್ವಯಿಸುತ್ತದೆ. ಈಗ ಸೇವೆಯಲ್ಲಿರುವ ಆಸ್ಪತ್ರೆಯ ಪ್ರತಿಯೊಬ್ಬ ಸೇವಕ ಅಥವಾ ಉದ್ಯೋಗಿಗೆ ಈ ಆಜ್ಞೆಯ ಒಂದು ಪ್ರತಿಯನ್ನು ನೀಡಬೇಕು ಮತ್ತು ಜೊತೆಗೆ ಒಂದು ಪ್ರತಿಯನ್ನು ಆಸ್ಪತ್ರೆಯಲ್ಲಿ ಶಾಶ್ವತವಾಗಿರುವಂತೆ ಅವರ ಮಾರ್ಗದರ್ಶನಕ್ಕೆ ತೂಗುಹಾಕಬೇಕು...

ಘನತೆವೆತ್ತ ಮಾನ್ಯ ಛತ್ರಪತಿ ಮಹಾರಾಜ ಸಾಹೇಬರ ಆದೇಶದ ಮೇರೆಗೆ,

**ಕೆ. ಗಾಯಕವಾಡ್**
ದಿವಾನರ ಆಪ್ತ ಸಹಾಯಕ

**(ಕರವೀರ ಸರಕಾರ ಗೆಜೆಟ್ ಸಂಪುಟ–೨೩, ೨೩, ಆಗಸ್ಟ್ ೧೯೧೯)**

---

## ಸುಗ್ರೀವಾಜ್ಞೆ ಸಂಖ್ಯೆ ೩

### ೨೬, ಆಗಸ್ಟ್ ೧೯೧೯

ಕರವೀರ ಸಂಸ್ಥಾನದಲ್ಲಿ ಇನ್ನು ಮುಂದೆ ಯಾರೂ ಕಸಾಯಿಖಾನೆಗೆ ಹಸುಗಳನ್ನು ಮಾರುವಂತಿಲ್ಲ. ಅಂತಹ ಕೃತ್ಯ ಗಮನಕ್ಕೆ ಬಂದರೆ ಅಪರಾಧ ಮಾಡುವ ವ್ಯಕ್ತಿಗೆ ಭಾರೀ ದಂಡ ವಿಧಿಸಲಾಗುವುದು. ಹುಜೂರರ ಆದೇಶ ದಿನಾಂಕ ೨೪ನೇ ಆಗಸ್ಟ್ ೧೯೧೯ರ ಪ್ರಕಾರ ಇದನ್ನು ತಿಳಿಸಲಾಗಿದೆ. ಅದರ ಪ್ರಕಾರ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೆ ತಿಳಿಸಲಾಗಿದೆ. ಅದೇ ಘೋಷಣೆಯನ್ನು ತಮ್ಮ ಉಸ್ತುವಾರಿಯಲ್ಲಿ ಬರುವ ಪ್ರದೇಶಗಳಲ್ಲಿ ಡಂಗೂರ ಹಾಕುವವರ ಮೂಲಕ ಸಾರ್ವಜನಿಕರಿಗೆ ಪ್ರಕಟಿಸಬೇಕು.

**ಡಿ. ಎಚ್. ಗೋಖಲೆ**
ಪ್ರಭಾರ ಜಿಲ್ಲಾ ಮ್ಯಾಜಿಸ್ಟ್ರೇಟ್

**(ಕರವೀರ ಸರಕಾರ ಗೆಜೆಟ್, ಸಂಪುಟ–೧, ೩೦, ಆಗಸ್ಟ್ ೧೯೧೯)**

---

೪೩

*ಶಾಹುರವರ ಒಲವು ಆರ್ಯಸಮಾಜ ಮತ್ತು ಅದರ ಸಿದ್ಧಾಂತದ ಬಗ್ಗೆ ಇತ್ತೆಂಬುದು ಈ ಆದೇಶದಿಂದ ಸ್ಪಷ್ಟವಾಗುತ್ತದೆ. ಅಸ್ಪೃಶ್ಯ ಅಭ್ಯರ್ಥಿಗಳಿಗೆ ಪ್ರಥಮ ಆದ್ಯತೆ ಕೊಡಬೇಕೆಂಬುದನ್ನು ಇಲ್ಲಿ ಒತ್ತಿ ಹೇಳಲಾಗಿದೆ.*

---

## ೧. ಅಧಿಸೂಚನೆ

೧. ಮುಲ್ಕಿ ಪರೀಕ್ಷೆಗಳಂತೆಯೇ ಪ್ರತಿ ವರ್ಷ ಪಂಡಿತ ಆತ್ಮರಾಮ್ ಶಾಸ್ತ್ರಿಗಳಡಿಯಲ್ಲಿ ಗುರುಕುಲದಲ್ಲಿ ಈಗ ತಲಾಟಿ ಮತ್ತು ಪಾಟೀಲರ ತರಬೇತಿ ತರಗತಿಗಳನ್ನು ನಡೆಸಲಾಗುವುದು. ಈ ತರಗತಿಗಳಲ್ಲಿ 'ಸತ್ಯಾರ್ಥ-ಪ್ರಕಾಶ'ವನ್ನು ಕಲಿಸಲಾಗುವುದು.

೨. ಶ್ರೀ ಬಾಲಾಸಾಹೇಬ ಗಾಯ್ಕವಾಡ್ ಅವರು ಈ ತರಗತಿಗಳಿಗೆ ಅವಶ್ಯವಿರುವ ಉಪಾಧ್ಯಾಯರನ್ನು ನೀಡುವರು ಮತ್ತು ಅವರ ವೇತನಗಳು ವಿಶೇಷ ಸಮ್ಮತಿಯನ್ನು ಪಡೆದಿವೆಯೆಂದು ಭಾವಿಸಲಾಗುವುದು ಮತ್ತು ಮುಂದಿನ ಆಯ-ವ್ಯಯ ಪತ್ರದಲ್ಲಿ ಅದನ್ನು ಶಾಶ್ವತವಾಗಿ ಕಲ್ಪಿಸಲಾಗುವುದು. ಈ ಮೊತ್ತವನ್ನು ಪಂಡಿತ ಆತ್ಮರಾಮಶಾಸ್ತ್ರಿಯವರಿಗೆ ಕಳುಹಿಸಲಾಗುವುದು.

೩. ಪಾಟೀಲ ಮತ್ತು ತಲಾಟಿಗಳ ತರಗತಿಯ ಪರೀಕ್ಷೆಗಳ ಫೀಜು ಮುಲ್ಕಿ ಪರೀಕ್ಷೆಯ ಅರ್ಧದಷ್ಟಿರುವುದು ಮತ್ತು ಮೊತ್ತವನ್ನು ಹುಜೂರ್ ಖಜಾನೆಗೆ ಪಂಡಿತ ಆತ್ಮರಾಮ್ ಶಾಸ್ತ್ರಿ ಅವರು ಕಟ್ಟಬೇಕು.

೪. ಪಂಡಿತ ಆತ್ಮರಾಮಶಾಸ್ತ್ರಿ ಅವರು ತಲಾಟಿ ಪರೀಕ್ಷೆಯ ಫಲಿತಾಂಶವನ್ನು ಮಾಮಲೆದಾರ ಮತ್ತು ಮಹಲ್ಕಾರಿಗಳಿಗೆ ಕಳುಹಿಸುವರು ಮತ್ತು ಅದರ ಪ್ರಕಾರ ಅವರು ಫಲಿತಾಂಶದ ಆಧಾರದ ಮೇರೆಗೆ ಒಬ್ಬ ಒಳ್ಳೆಯ ವ್ಯಕ್ತಿಯನ್ನು ಆಯ್ಕೆ ಮಾಡಬಹುದು.

೫. ಅಭ್ಯರ್ಥಿಗಳ ಸಂಖ್ಯೆ ಅಧಿಕವಾಗಿರುವುದರಿಂದ ಕೆಲವರು ಪರೀಕ್ಷೆಗೆ ಕುಳಿತುಕೊಳ್ಳದೆ ಬಿಟ್ಟುಹೋಗುವರು. ಇಂಥ ಸಂದರ್ಭದಲ್ಲಿ ಬಿಟ್ಟುಹೋದ ಅಭ್ಯರ್ಥಿಗೆ ಮರು-ಪರೀಕ್ಷೆಯನ್ನು ನಡೆಸಲಾಗುವುದು.

'ತಲಾಟಿ' ಮತ್ತು ಅವನ ಆಯ್ಕೆಯು ವಿಶೇಷವಾಗಿ ಮಾಮಲೆದಾರರ ಅಧಿಕಾರಕ್ಕೆ ಸೇರಿದ್ದು. ಒಬ್ಬ ನಿರ್ದಿಷ್ಟ ತಲಾಟಿ ಅದಕ್ಷನಾಗಿದ್ದರೆ ಅವನನ್ನು ವಜಾಮಾಡಬಹುದು ಮತ್ತು ಮತ್ತೊಬ್ಬ ಹೊಸಬನನ್ನು

ನೇಮಕಮಾಡಬಹುದು. ಜೊತೆಗೆ ಮಾಮಲೆದಾರರಿಗೆ ವೇತನ ನೀಡುವ ಅಧಿಕಾರ, ದಂಡ ವಿಧಿಸುವ, ರಜೆಗಳನ್ನು ಮಂಜೂರು ಮಾಡುವ ಮೊದಲಾದ ಅಧಿಕಾರಗಳನ್ನು ನೀಡಲಾಗಿದೆ.

ಒಂದು ಪ್ರದೇಶದಲ್ಲಿ ಪ್ರಧಾನವಾಗಿರುವ ಜಾತಿಗೆ ಸೇರಿದವನನ್ನೇ ಬಹುಮಟ್ಟಿಗೆ ತಲಾಟಿಯನ್ನಾಗಿ ಆಯ್ಕೆಮಾಡಿಕೊಳ್ಳಲಾಗುವುದು. ಅಸ್ಪೃಶ್ಯ ಸಮುದಾಯಗಳಲ್ಲಿ ಮಹರ್, ಮಾಂಗ್, ಛಂಭಾರ್ ಮೊದಲಾದವರಿಗೆ ಆದ್ಯತೆಯನ್ನು ಕೊಡಬೇಕು. ಪ್ರತಿಯೊಂದು ಪೇಟೆ(ಠ) (ತಾಲ್ಲೂಕಿಗಿಂತ ಸಣ್ಣದಾದ ಆಡಳಿತ ವಿಭಾಗ) (ಹೋಬಳಿ)ಗೆ ಕನಿಷ್ಠ ೫ ಜನ ಅಸ್ಪೃಶ್ಯ ಮತ್ತು ಪ್ರತಿಯೊಂದು ಮಹಲ್‌ಗೆ ಕನಿಷ್ಠ ಮೂರು ಜನ ಅಸ್ಪೃಶ್ಯ ತಲಾಟಿಗಳಿರಬೇಕು...

ಶಾಹು ಛತ್ರಪತಿ

(ಕರವೀರ ಸರಕಾರ ಗೆಜೆಟ್, ಭಾಗ–೧, ೩೦, ಆಗಸ್ಟ್ ೧೯೧೯)

---

೪೪

## ಅಧಿಸೂಚನೆ

ಹುಜೂರರ ನಿರ್ಣಯ ಸಂಖ್ಯೆ ೩೫೪, ಹೊರಹೋಗುವ ಪತ್ರದ ಸಂಖ್ಯೆ ೨೬೪, ದಿನಾಂಕ ೮ನೇ ಅಕ್ಟೋಬರ್ ೧೯೧೯ರ ಪ್ರಕಾರ ಎಲ್ಲಾ ಜನರಿಗೆ ಈ ಮೂಲಕ ಮಾಹಿತಿಯನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

ಶ್ರೀಮನ್ ಸಕಲ ಸೌಭಾಗ್ಯ ಸಂಪನ್ನ ವಜ್ರಚೂಡೆ ಮಂಡಿತ ಮಾತೊ ಶ್ರೀ ಲಕ್ಷ್ಮಿಬಾಯಿ, ಮಹಾರಾಣಿ ಸಾಹೇಬ ಅವರ ಕೃಪಾಕಟಾಕ್ಷೆಯಿಂದ ಆಜ್ಞೆಮಾಡಿರುವುದರಿಂದ ಹಿಂದುಳಿದ ಸಮುದಾಯಗಳಲ್ಲಿ ಮಹಿಳೆಯರಿಗೆ ಪರದೆಯ (ಮುಸುಕು ಹಾಕಿಕೊಳ್ಳುವ ಪದ್ಧತಿ) ಯಾವ ನಿರ್ಬಂಧಗಳು ಇಲ್ಲದಿರುವುದರಿಂದ ಅವರಲ್ಲಿ ಯಾರು ವಿದ್ಯೆಯನ್ನು ಮುಂದುವರಿಸಬೇಕೆಂದು ಬಯಸುವವರು ಅವರು ತಮ್ಮ ಅರ್ಜಿಗಳನ್ನು ಅಪ್ಪಸಾಹೇಬ ಮಹಾಸಾಹೇಬ ಸುರ್ವೆ ಅವರಿಗೆ ಸಲ್ಲಿಸಿದರೆ ಅವರು ಅವರಿಗೆ ಅವರ ಊಟ ಮತ್ತು ವಸತಿಗಳ ವ್ಯವಸ್ಥೆ ಮಾಡುವರು.

**ಗೋಪಾಲ ಗಂಗಾಧರ**
ಚಿಟ್ನೀಸ್

**ಕೆ. ಗಾಯ್ಕವಾಡ್**
ಹಂಗಾಮಿ ಸರ್‌ಸುಭೆ

**(ಕರವೀರ ಸರಕಾರ ಗೆಜೆಟ್ ಭಾಗ–೧, ೧೬, ಅಕ್ಟೋಬರ್ ೧೯೧೯)**

---

*ಅಸ್ಪೃಶ್ಯತೆಯ ವಿನಾಶಕ್ಕೆ ಶಾಹುರವರಿಂದ ಮತ್ತೊಂದು ಐತಿಹಾಸಿಕ ಹೆಜ್ಜೆ ಮತ್ತು ಮೇಲುಜಾತಿಗಳು ಅದರ ಅರ್ಥವನ್ನು ತಿಳಿದುಕೊಳ್ಳುವಂತೆ ಮಾಡಿದರು.*

---

## ಅಧಿಸೂಚನೆ

## ಶಾಲೆಯ ಇಲಾಖೆ

೮, ಅಕ್ಟೋಬರ್ ೧೯೧೯

ಹುಜೂರರ ನಿರ್ಣಯ ಸಂಖ್ಯೆ ೩೪೦, ಹೊರಹೋಗುವ ಪತ್ರ ಸಂಖ್ಯೆ ೨೪೭, ದಿನಾಂಕ ೩೦, ಸೆಪ್ಟೆಂಬರ್ ೧೯೧೯ರ ಮೇಲೆ ಆಧಾರಿತ ಆಜ್ಞೆಯ ಪ್ರಕಾರ ಎಲ್ಲಾ ಜನರಿಗೆ ಈ ಮೂಲಕ ಈ ಕೆಳಗಿನಂತೆ ತಿಳಿಸಲಾಗಿದೆ:

ಮುಂಬರುವ ದಸರಾ ಹಬ್ಬದಿಂದ ಅಸ್ಪೃಶ್ಯ ಸಮುದಾಯದ ಮಕ್ಕಳಿಗೆ ನಡೆಸುವ ಎಲ್ಲಾ ಪ್ರತ್ಯೇಕ ಶಾಲೆಗಳನ್ನು ಕೊಲ್ಹಾಪುರ ಸಂಸ್ಥಾನದಲ್ಲಿ (ಜಹಗೀರುಗಳನ್ನು ಬಿಟ್ಟು) ಮುಚ್ಚಲಾಗುವುದು. ಅಲ್ಲಿಂದ ಮುಂದಕ್ಕೆ ಈ ಮಕ್ಕಳನ್ನು ಎಂದಿನಂತೆಯೇ ಇತರ ಮಕ್ಕಳನ್ನು ಸಾಮಾನ್ಯವಾಗಿ ಸೇರಿಸಿಕೊಳ್ಳುವಂತೆಯೇ ಸರಕಾರಿ ಶಾಲೆಗಳಲ್ಲಿ ಸೇರಿಸಿಕೊಳ್ಳಲಾಗುವುದು. ಸರಕಾರಿ ಶಾಲೆಗಳು ಸ್ಪರ್ಶನಿಷೇಧವನ್ನು ಅನುಸರಿಸದಿರುವುದರಿಂದ ಎಲ್ಲಾ ಜಾತಿ ಮತ್ತು ಧರ್ಮಗಳ ಮಕ್ಕಳು ಒಟ್ಟಿಗೆ ಕುಳಿತುಕೊಳ್ಳಬೇಕು.

**ಗೋಪಾಲ ಗಂಗಾಧರ**
ಚಿಟ್ನೀಸ್

**ಕೆ. ಗಾಯ್ಕವಾಡ್**
ಹಂಗಾಮಿ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೧೧, ಅಕ್ಟೋಬರ್ ೧೯೧೯)

---

೪೬

*ಸ್ಪರ್ಶ ನಿಷೇಧ ಅಥವಾ ತಾರತಮ್ಯತೆಯ ಯಾವುದೇ ಇತರೆ ಅಭಿವ್ಯಕ್ತಿ ಅಥವಾ ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲಿ ಯಥಾಕಥಿತ ಅಸ್ಪೃಶ್ಯರ ಪ್ರತ್ಯೇಕತಾ ನೀತಿಯನ್ನು ನಿಷೇಧಿಸುವ ಶಾಹುರವರ ಮತ್ತೊಂದು ಘೋಷಣೆ (ಮ್ಯಾನಿಫೆಸ್ಟೊ).*

---

## ನಾಗರಿಕ ಆಡಳಿತ

## ಅಧಿಸೂಚನೆ

೮, ಅಕ್ಟೋಬರ್ ೧೯೧೯

ಹುಜೂರರ ಆಡಳಿತದ ನಿರ್ಣಯ ಸಂಖ್ಯೆ ೩೫೩, ಹೊರಗೆ ಹೋಗುವ ಪತ್ರದ ಸಂಖ್ಯೆ ೨೫೫, ದಿನಾಂಕ ೬ನೇ ಸೆಪ್ಟೆಂಬರ್ ೧೯೧೯ರ ಪ್ರಕಾರ ಪಾಸುಮಾಡಿದ ಆದೇಶದಂತೆ:

ಎಲ್ಲಾ ಸಾರ್ವಜನಿಕ ಕಟ್ಟಡಗಳಲ್ಲಿ, ಸ್ಯಾನಿಟೋರಿಯಮ್ಮುಗಳಲ್ಲಿ, ಸಂಸ್ಥಾನದ ಭವನಗಳಲ್ಲಿ, ಸರಕಾರಿ ಉಚಿತ ಭೋಜನಾಲಯಗಳಲ್ಲಿ ಅಥವಾ ನದಿಗಳ ನೀರಿನ ಝುರಿಗಳಲ್ಲಿ ಅಥವಾ ಸಾರ್ವಜನಿಕ ಬಾವಿಗಳು ಮೊದಲಾದ ಕಡೆಗಳಲ್ಲಿ ಯಾವ ವ್ಯಕ್ತಿಯೊಡನೆ ಅಸ್ಪೃಶ್ಯತೆಯನ್ನು ಪರಿಪಾಲಿಸುವಂತಿಲ್ಲ. ಏಕರೀತಿಯ (ಸಮಾನರೂಪದ) ಸಮಾನತೆಯನ್ನು ಕ್ರೈಸ್ತ ಸಾರ್ವಜನಿಕ ಕಟ್ಟಡಗಳಲ್ಲಿ, ಸಾರ್ವಜನಿಕ ಬಾವಿಗಳಲ್ಲಿ ಆಚರಿಸಲಾಗುವುದು; ಜೊತೆಗೆ ಡಾ. ವೈಲೆ ಮತ್ತು ಡಾ. ವೇನ್‌ಲೆಸ್ ಅವರು ಅಮೇರಿಕನ್ ಮಿಷನ್ನಿನಲ್ಲಿ ಸಮಾನ ಕರುಣೆಯಿಂದ ಎಲ್ಲಾ ಮಾನವರನ್ನು ಸಮಾನವಾಗಿ ಪರಿಗಣಿಸುತ್ತಾರೆ. ಅಂತಹ ವರ್ತನೆಯನ್ನೇ ಸಂಸ್ಥಾನದಲ್ಲಿ ಎಲ್ಲರೊಂದಿಗೆ ವರ್ತಿಸಬೇಕು. ಒಂದು ವೇಳೆ ಇದನ್ನು ಜಾರಿಗೊಳಿಸದಿದ್ದರೆ ಗಾವ್‌ಕಾಮ್‌ಗಾರ ಪಾಟೀಲರು ಮತ್ತು ತಲಾಟಿಗಳು ಹೊಣೆಯಾಗುತ್ತಾರೆ. ಕಾನೂನಿನ ಪ್ರಕಾರ ಎಲ್ಲಾ ವ್ಯವಸ್ಥೆಗಳನ್ನು ಮಾಡಬೇಕು.

**ಗೋಪಾಲ ಗಂಗಾಧರ** — **ಕೆ. ಗಾಯ್ಕವಾಡ್**
ಚಿಟ್ನೀಸ್ — ಹಂಗಾಮಿ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ-೧, ಅಕ್ಟೋಬರ್ ೧೮, ೧೯೧೯)

---

೪೭

## ಕೊಲ್ಹಾಪುರದಲ್ಲಿ ಪಶುಗಳ ಭಾರಿ ಪ್ರದರ್ಶನ

೧ ರಿಂದ ೫ ಏಪ್ರಿಲ್ ೧೯೨೦

ಸ್ಥಳ: ಖಾಸ್‌ಬಾಗ್ ಮೈದಾನ

ಉಚಿತವಾಗಿ ಪಶುಗಳಿಗೆ ಮೇವನ್ನು ಸರಬರಾಜು ಮಾಡಲಾಗುವುದು. ಮಹಾರಾಜ ಛತ್ರಪತಿ ಸಾಹೇಬರ ಸರಕಾರ ಕರವೀರ ಕುದುರೆಗಳ ಮತ್ತು ವಿವಿಧ ರೀತಿಯ ಪಶುಪ್ರದರ್ಶನವನ್ನು ೧ನೇ ಏಪ್ರಿಲ್ ೧೯೨೦ರಂದು ಈ ಆಧುನಿಕ ಕಾಲದಲ್ಲಿ ಕೃಷಿಯ ಆಧುನಿಕ ಜ್ಞಾನವನ್ನು ಬೆಳೆಸಲು, ಪಶುಗಳ ತಳಿಗಳನ್ನು ಅಭಿವೃದ್ಧಿಪಡಿಸುವ ವಿಧಾನಗಳ ಮಾಹಿತಿಯನ್ನು ಹರಡಲು ಮತ್ತು ಹಸುಗಳನ್ನು ಸಂಗೋಪಿಸಲು ಹಾಗೂ ಜನರಿಗೆ ಸಾಮಾನ್ಯ ಮನರಂಜನೆ ನೀಡಲು ನಿರ್ಧರಿಸಿ ದೇಶೀಯ ಮತ್ತು ಆಮದುಮಾಡಿಕೊಂಡ ಕೋಳಿ ಮತ್ತು ಹುಂಜಗಳ ತಳಿಗಳ ಜೊತೆಯಲ್ಲಿ ಪ್ರದರ್ಶನದಲ್ಲಿ ಈ ಕೆಳಕಂಡ ಪಶುಗಳನ್ನು ತೋರಿಸಲಾಗುವುದು.

೧. ಪ್ರಾಣಿಗಳು: ಕುದುರೆಗಳು, ಹಸುಗಳು, ಎಮ್ಮೆಗಳು, ಕೋಣಗಳು ಮತ್ತು ಹೋರಾಡುವ ಹೋತಗಳು

೨. ಎತ್ತಿನ ಗಾಡಿಗಳಿಗೆ ಎತ್ತುಗಳು ಮತ್ತು ಬಲಿಷ್ಠ ಹೋರಿಗಳು.

ಈ ಮೊದಲು ೧೯೧೪–೧೫ರಲ್ಲಿ ಕೃಷಿ ಮತ್ತು ಜಾನುವಾರುಗಳ ಪ್ರದರ್ಶನ ನಡೆದಿತ್ತು. ಅದರಂತೆಯೇ ಈ ವರ್ಷ ಕೇವಲ ಜಾನುವಾರುಗಳ ಪ್ರದರ್ಶನವನ್ನು ಭಾರೀ ಪ್ರಮಾಣದಲ್ಲಿ ನಡೆಸಲಾಗುವುದು. ಜಾನುವಾರುಗಳಿಗೆ ಕೊಡುವ ಬಹುಮಾನಗಳು ಈ ಕೆಳಗಿನಂತಿವೆ.

(ಇಲ್ಲಿ ವಿವರಗಳನ್ನು ಕೊಡಲಾಗಿದೆ– ಸಂಪಾದಕ)

**ಟಿಪ್ಪಣಿ:** ಯೋಗ್ಯವಿಲ್ಲದ, ಕುಂಟುಪ್ರಾಣಿಗಳನ್ನು ತೋರಿಸುವ ಉದ್ದೇಶಕ್ಕೆ ಪ್ರವೇಶವಿಲ್ಲ.

ಅರ್ಜಿಗಳನ್ನು ೮ ದಿನಗಳ ಮುಂಚಿತವಾಗಿ ಪಾಲುಗೊಳ್ಳುವವರು ನೀಡಬೇಕು. ಪ್ರದರ್ಶಿಸುವ ಪ್ರಾಣಿಗಳನ್ನು ಒಂದು ದಿನ ಮುಂಚಿತವಾಗಿ ಕಳುಹಿಸಿಕೊಟ್ಟರೆ ಅವುಗಳಿಗೆ ಸೂಕ್ತ ಸ್ಥಾನದ ವ್ಯವಸ್ಥೆಯನ್ನು ಮಾಡಲಾಗುವುದು. ಪ್ರದರ್ಶಿಸುವ ಪ್ರಾಣಿಗಳಿಗೆ ಮುದ್ರಿತ ಅರ್ಜಿಗಳು ಈ ಕಛೇರಿಯಲ್ಲಿ, ಅಥವಾ ಸೂಕ್ತ ಪೇಟ ಅಥವಾ ಮಹಲ್‌ಗಳಲ್ಲಿ ಸಿಗುತ್ತವೆ.

ಕಛೇರಿಯ ವಿಳಾಸ: ಕೊಲ್ಹಾಪುರ ಖಾಸ್‌ಬಾಗ್ ಪ್ರದರ್ಶನ ಕಛೇರಿ ೭/೩/೧೯೨೦

**ಬಿ. ವಿ. ಜಾಧವ**
ಕಾರ್ಯದರ್ಶಿ
ಪ್ರದರ್ಶನ ಸಮಿತಿ, ಕೊಲ್ಹಾಪುರ

*ಕಾನೂನು ಮತ್ತು ನ್ಯಾಯಾಂಗದಲ್ಲಿ ಪ್ರತಿಷ್ಠಿತ ವರ್ಗಗಳು ಪಡೆದಿರುವ ಏಕಸ್ವಾಮ್ಯತೆಯನ್ನು ಕೊನೆಗಾಣಿಸಲು ಶಾಹುರವರು ಈ ಕ್ಷೇತ್ರದಲ್ಲಿ ಪ್ರವೇಶಿಸಲು ಎಲ್ಲಾ ಹಿಂದುಳಿದ ವರ್ಗಗಳಿಂದ ಪ್ರತಿಭಾವಂತ ಶಿಕ್ಷಿತ ಜನರಿಗೆ ಬಡ್ತಿ ನೀಡುವ ಮೂಲಕ ವಿಶೇಷ ಕ್ರಮಗಳನ್ನು ಕೈಗೊಂಡಿದ್ದು ಎಲ್ಲರಿಗೂ ಸುಪರಿಚಿತವಾಗಿದೆ. ಅವರು ಅಸ್ಪೃಶ್ಯ ಮತ್ತು ಹಿಂದುಳಿದ ವರ್ಗಗಳಿಂದ ಹಲವರಿಗೆ ವಕೀಲಿ ವೃತ್ತಿ ನಡೆಸಲು ಸನ್ನದುಗಳನ್ನು ನೀಡಿದರು ಮತ್ತು ಅವರನ್ನು ಸನ್ನದು ಪಡೆದ ಲಾಯರುಗಳನ್ನಾಗಿ ಮಾಡಿದರು. ಅವರ ಆದೇಶಗಳಲ್ಲಿ ಒಂದಾದ ಆದೇಶವು ಈ ಕೆಳಗಿನಂತಿದೆ. ಶಾಹುರವರ ಅಂತಹ ಹಲವು ಆದೇಶಗಳು ರಾಜ್ಯಪತ್ರದಲ್ಲಿ (ಗೆಜೆಟ್) ಸಿಗುತ್ತವೆ.*

---

## ನ್ಯಾಯಾಂಗ ಇಲಾಖೆ

ಈ ಕೆಳಗೆ ನಮೂದಿಸಿರುವವರಿಗೆ ಕರವೀರ ಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನು ನಿರ್ವಹಿಸಲು ಅವರಿಗೆ ಸನದುಗಳನ್ನು ನೀಡಲಾಗಿದೆ.

೧. ರಾಮಚಂದ್ರ ಸಖಾರಾಮ್ ಕಾಂಬ್ಳೆ

ನ್ಯಾಯಾಂಗ ನಿರ್ಣಯ ಸಂಖ್ಯೆ ೫೪, ದಿನಾಂಕ ೨೨/೨/೧೯೨೦

೨. ರಾಮಚಂದ್ರ ಶಿವರಾಮ ಕಾಂಬ್ಳೆ

ನ್ಯಾಯಾಂಗ ನಿರ್ಣಯ ಸಂಖ್ಯೆ ೫೫, ದಿನಾಂಕ ೨೨/೧/೧೯೨೦

೩. ದತ್ತಾತ್ರೇಯ ಸಂತ್‌ರಾಮ್ ಪೊವಾರ್

ನ್ಯಾಯಾಂಗ ನಿರ್ಣಯ ಸಂಖ್ಯೆ ೫೬, ದಿನಾಂಕ ೨೨/೨/೧೯೨೦

೪. ತುಕಾರಾಮ್ ಅಪ್ಪಾಜಿ ಗಣೇಶಾಚಾರ್ಯ

ನ್ಯಾಯಾಂಗ ನಿರ್ಣಯ ಸಂಖ್ಯೆ ೫೭, ದಿನಾಂಕ ೨೨/೨/೧೯೨೦

೫. ಕೃಷ್ಣರಾವ್ ಭಾವು ಸಾಹೇಬ್ ಶಿಂಧೆ

ನ್ಯಾಯಾಂಗ ನಿರ್ಣಯ ಸಂಖ್ಯೆ ೫೮, ದಿನಾಂಕ ೨೨/೨/೧೯೨೦

೬. ವಿಶ್ವನಾಥ ನಾರಾಯಣ ಕುಂಭಾರ್

ನ್ಯಾಯಾಂಗ ನಿರ್ಣಯ ಸಂಖ್ಯೆ ೫೯, ದಿನಾಂಕ ೨೨/೨/೧೯೨೦

ಹೀಗೆ ೬ ಜನರಿಗೆ ೬ ಸನ್ನದುಗಳನ್ನು ನೀಡಲಾಯಿತು. ಅವರಿಗೆ ಎರಡು ವರ್ಷಗಳವರೆಗೆ ಫೀಜುಗಳನ್ನು ವಜಾ ಮಾಡಲಾಯಿತು. ಮತ್ತು ಹುಜೂರರ ಆದೇಶದ ಮೇರೆಗೆ ಅವರು ಈ ಸನ್ನದು ಸ್ವೀಕರಿಸಿದ ಒಂದುವರೆ ವರ್ಷದೊಳಗೆ ಕಾನೂನು ಪರೀಕ್ಷೆಯನ್ನು ಪಾಸು ಮಾಡಬೇಕು.

ಎ. ಬಿ. ಗೋಖಲೆ
ಮುಖ್ಯ ನ್ಯಾಯಾಧೀಶ

---

## ೪೯

## ನಾಗರಿಕ ಇಲಾಖೆ

### ೩೧, ಜುಲೈ ೧೯೨೦

### ಸರ್‌ಸುಭೆ, ಕರವೀರ ಇಲಾಖೆಯಿಂದ

ಹುಜೂರರ ನಿರ್ಣಯ ಸಂಖ್ಯೆ ೧ ಮತ್ತು ಹುಜೂರರ ಆದೇಶದ ಹೊರಹೋಗುವ ಪತ್ರದ ಸಂಖ್ಯೆ ೫, ದಿನಾಂಕ ೨೬, ಜೂನ್ ೧೯೨೦ನ್ನು ನೋಡಿ, ಅದರಡಿಯಲ್ಲಿ ಇದನ್ನು ಈ ಕೆಳಗೆ ಪ್ರಕಟಿಸಲಾಗಿದೆ.

ಕಸಬ ಕರವೀರದಲ್ಲಿ ಮಹರರನ್ನು ನೇಮಕಮಾಡುವ ಬಗ್ಗೆ ನಿಯಮಾವಳಿಗಳನ್ನು ಈಗಾಗಲೇ ಪ್ರಕಟಿಸಲಾಗಿದೆ. ಅದರ ಪ್ರಕಾರ ಈ ಕೆಳಕಂಡ ಆದೇಶವನ್ನು ಹೊರಡಿಸಿರುವುದರಿಂದ ಅವರ ಸಾಮಾಜಿಕ ಸ್ಥಾನಮಾನ ಸಮಾಜದಲ್ಲಿ ಸುಧಾರಿಸಬಹುದು.

೧. ಕಸಬ ಕರವೀರದ ಮಹರರ ೧೬ ಮಂದಿಯನ್ನು ಆಯ್ಕೆ ಮಾಡಿ ಹಳ್ಳಿಯಲ್ಲಿ ಸಂಬಂಧಪಟ್ಟ ಕರ್ತವ್ಯಗಳನ್ನು ಮಾಡಬೇಕೆಂದು ಈ ಮೊದಲು ನಿರ್ಧರಿಸಲಾಗಿತ್ತು. ಅದು ಈಗ ರದ್ದು ಮಾಡಲಾಗಿದೆ. ಮತ್ತು ಈ ೧೬ ಮಂದಿಯನ್ನು ಕರವೀರ ನಗರ ಪೊಲೀಸ್ ಗೇಟಿನಲ್ಲಿ ಪೊಲೀಸರನ್ನಾಗಿ ಹೊಸದಾಗಿ ನೇಮಕ ಮಾಡಲಾಗಿದೆ. ಮತ್ತು ಅವರು ಪೊಲೀಸರಾಗಿ ಕೆಲಸ ನಿರ್ವಹಿಸುವರು. ಪೊಲೀಸ್ ಇಲಾಖೆಯು ಪ್ರತಿ ತಿಂಗಳು ರೂ. ೧೧೨/– ಅನ್ನು ಕರವೀರ ಪೇಟಗೆ ಕಳುಹಿಸಿಕೊಡುವುದು. ಮತ್ತು ಮಾಮಲೆದಾರರು ಹಳ್ಳಿಯ ಕೆಲಸಗಳನ್ನು ಈ ಹಣದಿಂದ ಮಾಡುವರು ಮತ್ತು ಲೆಕ್ಕಗಳನ್ನು ಇಡುವರು. ಈ ಆಜ್ಞೆಯು ಜುಲೈ ೧, ೧೯೨೦ರಿಂದ ಜಾರಿಗೆ ಬರುವುದು.

೨. ತಮ್ಮ ಸ್ವಂತ ಊರಿನಿಂದ ೧೨ ಮೈಲಿ ದೂರದಲ್ಲಿರುವ ಹಳ್ಳಿಯಲ್ಲಿಯೇ ವಾಸವಿದ್ದು ೮ ತಿಂಗಳ ಗಿಂತ ಹೆಚ್ಚು ಕಾಲ ಕೆಲಸ ಮಾಡಿದವರಿಗೆ ತಿಂಗಳಿಗೆ ೨ ರೂ. ಮತ್ತು ೮ ಆಣೆಗಳ ಭತ್ತೆಯನ್ನು ನೀಡಲಾಗುವುದು.

೩. ತಮ್ಮ ಮನೆಯಿಂದ ದೂರವಿದ್ದು ೮ ತಿಂಗಳು ಸೇವೆ ಸಲ್ಲಿಸಿದವರಿಗೆ ಆ ಹಳ್ಳಿಯ ಕೆಲಸದಿಂದ ೪ ತಿಂಗಳು ರಜೆಯನ್ನು ನೀಡಲಾಗುವುದು. ಈ ಅವಧಿಗೆ ಭತ್ತೆ ನೀಡುವ ಬಗ್ಗೆ ಹುಜೂರರು ನಂತರ ನಿರ್ಧರಿಸುವರು.

ಯಾವ ಮಹರನು ತನ್ನ ದಕ್ಷತೆಯಿಂದ ನಾಯ್ಕ ಹವಲ್ದಾರ್ ದರ್ಜೆಗೆ ಅಥವಾ ಜಾಮದಾರ್

ದರ್ಜೆಗೆ ಏರುವರು. ಅವನಿಗೆ ತನ್ನ ಸಂಬಳ ಬಿಟ್ಟು ಏರಿಸಿದ ೭/– ರೂ.ಗಳನ್ನು ಪೋಲೀಸ್ ಇಲಾಖೆ ನೀಡುವುದು.

ಇವು ಹುಜೂರರ ಆದೇಶಗಳು. ಅದಕ್ಕೆ ಅನುಗುಣವಾಗಿ ಏರ್ಪಾಡುಗಳನ್ನು ಮಾಡಬೇಕು.

**ಎನ್. ಪಿ. ಭಿಡೆ** — ಸಹಾಯಕ ಸರ್‌ಸುಭೆ

**ಬಿ. ವಿ. ಜಾಧವ್** — ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೭, ಆಗಸ್ಟ್ ೧೯೨೦)

---

೫೦

*ತೀರ್ಥಂಕರ ಪುಷ್ಪದಂತ ಸ್ವಾಮಿಯವರ ನಿರ್ವಾಣದ ದಿನ ಶಾಹುರವರು ಸಾರ್ವಜನಿಕ ರಜೆಯನ್ನು ಘೋಷಿಸಿದರು. ಆದರೆ ಆ ದಿನ ಪ್ರಾಣಿಗಳನ್ನು ಕಸಾಯಿಖಾನೆಯಲ್ಲಿ ಕೊಲ್ಲುವುದಕ್ಕೆ ಅನುಮತಿ ನೀಡಬಾರದೆಂಬ ಜೈನರ ಸಮುದಾಯದ ಬೇಡಿಕೆಗೆ ಪ್ರಾಯೋಗಿಕ ಕ್ರಮವನ್ನು ಕೈಗೊಂಡರು.*

---

## ಅಧಿಸೂಚನೆ

ಭಾದ್ರಪದ, ಶುದ್ಧ ೮ ಜೈನ ತೀರ್ಥಂಕರ ಪುಷ್ಪದಂತ ಸ್ವಾಮಿಗಳ ನಿರ್ವಾಣದಿನ ಮತ್ತು ಈ ದಿನ ಜೈನಸಮುದಾಯಕ್ಕೆ ಹಬ್ಬದ ದಿನ. ಆದ್ದರಿಂದ ಈ ದಿನವನ್ನು ಪ್ರತಿ ವರ್ಷ ಸರಕಾರಿ ರಜೆಯೆಂದು ಪರಿಗಣಿಸಲಾಗಿದೆ ಮತ್ತು ಅಂದು ಶಾಲಾಕಾಲೇಜುಗಳು, ಕಛೇರಿಗಳು ಮೊದಲಾದವುಗಳು ಮುಚ್ಚಿರುತ್ತವೆ.

ಜೈನಸಮುದಾಯದ ಮತ್ತೊಂದು ಬೇಡಿಕೆ ಈ ದಿನ ಕಸಾಯಿಖಾನೆಗಳಲ್ಲಿ ಪ್ರಾಣಿಗಳನ್ನು ಕೊಲ್ಲುವುದಕ್ಕೆ ಅನುಮತಿ ನೀಡಬಾರದೆಂಬುದು. ಆದ್ದರಿಂದ ಎಲ್ಲ ಪ್ರಜೆಗಳು ಸರಿಸಮಾನರು, ಒಬ್ಬರು ತಮ್ಮ ಆಹಾರದಿಂದ ವಂಚಿತರನ್ನಾಗಿ ಮಾಡುವ ಕಾನೂನನ್ನು ಪಾಸುಮಾಡಲು ಸಾಧ್ಯವಿಲ್ಲ. ಆದರೆ ಜೈನರು ಪ್ರಯತ್ನಗಳನ್ನು ಮಾಡಿ, ಸಾರ್ವಜನಿಕ ಸಹಾನುಭೂತಿಯನ್ನು ತಮ್ಮ ಕಡೆಗೆ ಪಡೆದುಕೊಂಡರೆ, ಜನಾಭಿಪ್ರಾಯ ಅವರ ಪರವಾಗಿದ್ದರೆ, ಬೇರೆ ಜಾತಿಗಳ ಮತ್ತು ಧರ್ಮಗಳ ಜನರು ಜೈನಸಮುದಾಯದ ಮನವಿಯನ್ನು ಗೌವಿಸಿದರೆ ಹುಜೂರರು ಸಾಧ್ಯವಾದಷ್ಟು ಮಟ್ಟಿಗೆ ಪ್ರಾಣಿಗಳನ್ನು ಕೊಲ್ಲುವುದನ್ನು ನಿಯಂತ್ರಿಸಲು ಸಂತೋಷಪಡುತ್ತಾರೆ.

**ಬಿ. ವಿ. ಹವಲ್**
**ಚಿಟ್ನಿಸ್**

**ಡಿ. ಡಿ. ಸೋನ್‌ತಕ್ಕೆ**
ಹಂಗಾಮಿ ದಿವಾನರು, ಸರಕಾರ ಕರವೀರ

---

೫೧

*ಶಾಹುರವರು ಅಸ್ಪೃಶ್ಯ ಸಮುದಾಯದ ಅವರ ಸಾಮಾಜಿಕ ಸ್ಥಾನಮಾನ ಸುಧಾರಿಸುವ ಸಲುವಾಗಿ ಅವರಲ್ಲಿ ಅನೇಕರ ಉಪನಾಮಗಳನ್ನು ಬದಲಾಯಿಸಿದರು. ಅಸ್ಪೃಶ್ಯ ಕಸ ಗುಡಿಸುವವನ 'ಭಂಗಿ' ಎಂಬ ಉಪನಾಮವನ್ನು 'ಪಂಡಿತ' ಕಲಿತ ಬ್ರಾಹ್ಮಣ ಎಂದು ಅರ್ಥಬರುವ ಹೆಸರನ್ನು ಇಟ್ಟುಕೊಳ್ಳಲು ಅನುಮತಿಯನ್ನು ನೀಡಿದರು.*

---

**ನಾಗರಿಕ ಇಲಾಖೆ**

೧, ಫೆಬ್ರವರಿ ೧೯೨೧

ಕರವೀರ ಮುನಿಸಿಪಲ್ ಸಮಿತಿ ಚುನಾಯಿತ ಪ್ರತಿನಿಧಿಗಳಿಂದ ರಚಿತವಾಗಿತ್ತು. ಸುವ್‌ಹನ್ ಬಾಲಭಂಗಿ ಸಮಿತಿಯ ಚುನಾಯಿತ ಪ್ರತಿನಿಧಿಯಾಗಿದ್ದ ಮತ್ತು ಅದರ ಪ್ರಕಾರ ಅವನ ಹೆಸರು ರಾಜ್ಯಪತ್ರದಲ್ಲಿ ಪ್ರಕಟವಾಗಿತ್ತು. ಆದ್ದರಿಂದ ಈ ಸದಸ್ಯನು ಹುಜೂರರಿಗೆ ತನ್ನ ಉಪನಾಮದ 'ಭಂಗಿ'ಯ ಬದಲಿಗೆ 'ಪಂಡಿತ' ಎಂಬ ಪದವನ್ನು ಉಪನಾಮದ ಹಿಂದೆ(Prefix) ಬಳಸಲು ಅನುಮತಿ ಕೊಡಿಯೆಂದು ಕೋರಿದ್ದರು. ಹುಜೂರರ ನಿರ್ಣಯ ಸಂಖ್ಯೆ ೪೮೯, ಒಳಬರುವ ಪತ್ರದ ಸಂಖ್ಯೆ ೧೦೨೪, ಉಪನಾಮ ಬದಲಾಯಿಸಿಕೊಳ್ಳಲು ಅನುಮೋದನೆ ನೀಡಿತು. ಆದ್ದರಿಂದ ಆತನನ್ನು ಎಲ್ಲರೂ 'ಸುವ್ಹಾನ್ ಬಾಲಪಂಡಿತ' ಎಂದು ಕರೆಯಲು ಮತ್ತು ಸಂಬೋಧಿಸಲು ತೊಡಗಿದರು.

**ಕೆ. ಗಾಯಕ್‌ವಾಡ್**

ಹಂಗಾಮಿ ದಿವಾನರು, ಸರಕಾರ ಕರವೀರ

(ಕರವೀರ ಸರಕಾರ ಗೆಜೆಟ್, ಭಾಗ-೧, ೫, ಫೆಬ್ರವರಿ ೧೯೨೭)

---

೫೨

*ಶಾಹು ಮಹಾರಾಜರು ತಮ್ಮ ಸಂಸ್ಥಾನಕ್ಕೆ ಕೆಲವು ಹೊಸ, ಪ್ರಗತಿಪರ ಕಾನೂನುಗಳನ್ನು ರಚಿಸಿದರು. ಹಾಗೆಯೇ ಬ್ರಿಟಿಷರ ಕಾನೂನುಗಳನ್ನು ಮಾರ್ಪಾಡು ಮಾಡಿಕೊಂಡು ರಚಿಸಿದರು. ಈ ಎಲ್ಲಾ ಕಾನೂನುಗಳನ್ನು "ಹಿಂದು ಕಾಯದ್ಯಾಚೆ ನಿಬಂಧ"* ಎಂಬ ಹೆಸರಿನಲ್ಲಿ ಕ್ರೋಡೀಕರಣ ಮಾಡಲಾಯಿತು ಮತ್ತು ಅವುಗಳನ್ನು ಜಾರಿಗೊಳಿಸಲಾಯಿತು.*

---

೧೪, ಮೇ ೧೯೨೧

ಹುಜೂರರ ಸಮ್ಮತಿಯ ಮೇರೆಗೆ ೨೨, ಅಕ್ಟೋಬರ್ ೧೯೨೧ರಲ್ಲಿ "ಹಿಂದು ಕಾಯದ್ಯಾಚೆ ನಿಬಂಧ" ಎಂಬ ಗ್ರಂಥ ಪ್ರಕಟವಾಗಿದ್ದು ಅದನ್ನು ಸಾಮಂತರನ್ನು ಬಿಟ್ಟು ಇಡೀ ಕರವೀರ ಇಲಾಖೆಗೆ ಅನ್ವಯಗೊಳಿಸಬೇಕು. ಇದು ಹುಜೂರರ ನಿರ್ಣಯ ಸಂಖ್ಯೆ ೧೮೨, ದಿನಾಂಕ ೫, ಮೇ ೧೯೨೧ರ ಒಳಪತ್ರ ಸಂಖ್ಯೆ ೩೧೦೭ರ ಪ್ರಕಾರ.

ಮೇ ೧೯೨೧

**ಬಿ. ವಿ. ಹವಲ್** — **ಯು. ಅಬ್ದುಲ್ಲ**
**ಚಿಟ್ನೀಸ್** — **ಹಂಗಾಮಿ ದಿವಾನ, ಸರಕಾರ ಕರವೀರ**

**(ಕರವೀರ ಸರಕಾರ ಗೆಜೆಟ್, ಭಾಗ–೧, ೨೧, ಮೇ ೧೯೨೧)**

*** ಹಿಂದೂ ಕಾನೂನುಗಳ ಬಗ್ಗೆ ಪ್ರಬಂಧಗಳು**

---

*ಸಂಪೂರ್ಣವಾಗಿ ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡಿದ ಮತ್ತು ಅಸ್ಪೃಶ್ಯರು ಎಲ್ಲರಿಗೂ ಸರಿಸಮಾನರಾದ ಮಾನವಜೀವಿಗಳೆಂಬ ಸ್ಥಾನಮಾನವನ್ನು ಪುನರ್‌ಸ್ಥಾಪಿಸಿದ ಶಾಹುರವರ ಮಹತ್ವದ ಕ್ರಮಗಳಲ್ಲಿ ಇದು ಒಂದಾಗಿದೆ. ವಸ್ತುನಿಷ್ಠ ಬುದ್ಧಿಯಿಂದ ಪ್ರಕಟಿಸಿದ ಹಲವು ಆಜ್ಞೆಗಳಲ್ಲಿ ಈ ಆಜ್ಞೆ ಬಹು ವಿಚಿತ್ರವಾಗಿದೆ.*

---

## ನಾಗರಿಕ ಇಲಾಖೆ

### ೨೭, ಜುಲೈ ೧೯೨೧

ಹುಜೂರರ ಆಡಳಿತದ ನಿರ್ಣಯ ಸಂಖ್ಯೆ ೧೬೮, ದಿನಾಂಕ ೧೫, ಜುಲೈ ೧೯೨೧, ಹೊರಹೋಗುವ ಪತ್ರದ ಸಂಖ್ಯೆ ೧೪೮, ದಿನಾಂಕ ೧೮, ಜುಲೈ ೧೯೨೧ ಅನ್ನು ನೋಡಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

ರೈತವಾ ಸ್ಥಾನಮಾನದಲ್ಲಿದ್ದು ವತನ ಭೂಮಿಗಳನ್ನು ಸಲ್ಲಿಸಿದ ಮಹರರಿಗೆ ವೇತ್‌ವರಲಾ*ದಿಂದ ವಿನಾಯಿತಿ ನೀಡಲಾಗಿದೆ. ತರಲ್ ಫಾಸ್ಟ್** ಸಮುದಾಯದ ಜನರಿಂದ ಬಲಾತ್ಕಾರವಾಗಿ ವೇತ್‌ವರಲಾ ಕೆಲಸವನ್ನು ಮಾಡಿಸಿಕೊಳ್ಳಬಾರದು. ದೇಹಬಲದಿಂದ ಯಾರಾದರೂ ಈ ಜನರಿಂದ ಸೇವೆಗಳನ್ನು ಮಾಡಿಸಿಕೊಂಡರೆ ನಿವೃತ್ತಿವೇತನ ನೀಡದೆ ಸರಕಾರಿ ಕೆಲಸದಿಂದ ಕೂಡಲೇ ಬಿಡುಗಡೆ ಮಾಡಲಾಗುವುದು. ಮತ್ತು ಅವನು ವತನದಾರನಾಗಿದ್ದರೆ ಅವನ ವತನವನ್ನು ಕೂಡಲೇ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹುಜೂರರು ಆದೇಶ ಮಾಡಿರುವುದರಿಂದ ಇದನ್ನು ಎಲ್ಲಾ ಗಾವ್‌ಕಾಮಗಾರರಿಗೆ ತಿಳಿಸಬೇಕು ಮತ್ತು ಅದರ ಪ್ರಕಾರ ಏರ್ಪಾಡುಗಳನ್ನು ಮಾಡಬೇಕು.

ಎಸ್. ಜಿ. ಸ್ವಾಮಿ
ಗುಮಾಸ್ತ

ಎ. ಜಿ. ಮೋಹಿತೆ
ಪ್ರಭಾರ ಸರ್‌ಸುಭೆ

(ಕರವೀರ ಸರಕಾರ ಗೆಜೆಟ್, ಭಾಗ–೧, ೬, ಆಗಸ್ಟ್ ೧೯೨೧)

* ವೇತ್‌ವರ್ಲಾ= ಯಾವುದೇ ಸಂಭಾವನೆ ನೀಡದೆ ಸೇವೆಗಳನ್ನು ಮಾಡಿಸಿಕೊಳ್ಳುವುದು.

** ತರಳ್ ಫಾಸ್ಟ್= ಮಹರ್ ಸಮುದಾಯದ ವ್ಯಕ್ತಿಗಳು ಒಂದು ಹಳ್ಳಿಯಲ್ಲಿ ತಿರುಗಾಡುವ ಕೆಲಸವನ್ನು ಮಾಡುವುದು.

---

ಅಸ್ಪೃಶ್ಯ ಜನರ ಸಾಮಾಜಿಕ ಘನತೆಯನ್ನು ಹೆಚ್ಚಿಸುವುದನ್ನು ಸೂಚಿಸುವ ಮತ್ತೊಂದು ಕ್ರಮವಿದೆ. ಯಥಾಕಥಿತ ಅಸ್ಪೃಶ್ಯರ ಕಲ್ಯಾಣದ ಬಗ್ಗೆ ಶಾಹುರವರ ಬಹುಶಃ ಕೊನೆಯ ಕ್ರಮವಾಗಿರಬಹುದು ಇದು.

---

## ಅಧಿಸೂಚನೆ ಸಂಖ್ಯೆ ೪೧

೨೫, ನವೆಂಬರ್ ೧೯೨೧

ನಾಗರಿಕ ಇಲಾಖೆಯಡಿಯಲ್ಲಿ ಶಾಲಾ ಇಲಾಖೆ ಇರುವಾಗ ರಾವ್‌ಬಹಾದ್ದೂರ್ ಸರ್‌ಸುಭೆ ಅವರು ಕಡ್ಡಾಯ ಪ್ರಾಥಮಿಕ ಶಾಲೆಗಳ ತನ್ನ ವಾರ್ಷಿಕ ವರದಿಯನ್ನು ಸಲ್ಲಿಸಿದರು. ಈ ವರದಿಯಲ್ಲಿ 'ಅಸ್ಪೃಶ್ಯ' ಎಂಬ ಪದವನ್ನು ಅಸ್ಪೃಶ್ಯ ಸಮುದಾಯದ ಮಕ್ಕಳಿಗೆ ಬಳಸಿದ್ದರು. ವರದಿಯನ್ನು ನೋಡಿದ ಹುಜೂರರು ಇನ್ನು ಮುಂದೆ 'ಅಸ್ಪೃಶ್ಯ' ಎಂಬ ಪದಕ್ಕೆ ಬದಲಾಗಿ ಮತ್ತೊಂದು ಪದ 'ಸೂರ್ಯವಂಶಿ'ಯನ್ನು ಬಳಸಬೇಕೆಂದು (ನೇರವಾಗಿ ಸೂರ್ಯನ ವಂಶದಿಂದ ಮೂಡಿಬಂದವರು) ಆಜ್ಞೆ ಮಾಡಿದರು. ಇದು ಹುಜೂರರ ನಿರ್ಣಯಸಂಖ್ಯೆ ೨೮, ಒಳಬರುವ ಪತ್ರಸಂಖ್ಯೆ ೪೭, ದಿನಾಂಕ ೧೫, ನವೆಂಬರ್ ೧೯೨೧. ಇದರ ಪ್ರಕಾರ ಎಲ್ಲಾ ಏರ್ಪಾಡುಗಳನ್ನು ಮಾಡಬೇಕು.

ಈ ಷರಾವು ಸರಿಯೆಂದು ಪ್ರಮಾಣಿಸುತ್ತೇನೆ.

ಬಿ. ವಿ. ಹವಲ್ — ಯು. ಅಬ್ದುಲ್ಲ
ಕಾರ್ಯದರ್ಶಿ — ಹಂಗಾಮಿ ದಿವಾನ, ಸರಕಾರ ಕರವೀರ

(ಕರವೀರ ಸರಕಾರ ಗೆಜೆಟ್, ಭಾಗ–೧, ದಿನಾಂಕ ೩ನೇ ಡಿಸೆಂಬರ್ ೧೯೨೧)

---

# ಪದಕೋಶ

ಆರೆ : ಆರ – ಭೂಮಿಯ ಒಂದು ಸಣ್ಣ ಘಟಕ.

ಅಭಂಗ : ದೇವತೆಯನ್ನು ಕುರಿತು ಸ್ತುತಿಸಲು ಛಂದೋಬದ್ಧವಾಗಿ ಕಟ್ಟಿದ ಹಾಡು ಇಲ್ಲವೇ ಗೀತೆ ಸಾಮಾನ್ಯ ಭಾಷೆಯಲ್ಲಿರುವ ಸ್ತೋತ್ರ

ಆಬ್ರು : ಗೌರವ, ಘನತೆ, ದೊಡ್ಡತನ

ಅಡ್ಡಪಾಲ್ಖಿ : ಅಡ್ಡಪಲ್ಲಕ್ಕಿ, ಲಿಂಗಾಯತ ಸ್ವಾಮಿಗೆ ವಿಶೇಷ ಗೌರವ ಕೊಟ್ಟು ಪಲ್ಲಕ್ಕಿಯಲ್ಲಿ ಕೂಡ್ರಿಸಿ, ಅವರನ್ನು ಹೊತ್ತುಕೊಂಡು ಮೆರವಣಿಗೆಯಲ್ಲಿ ಹೋಗುವುದು.

ಅಖಾಡ : ಕುಸ್ತಿಪಟುಗಳು ಕುಸ್ತಿ ಆಡುವುದಕ್ಕೆ ರಚಿಸಿದ ಪ್ರತ್ಯೇಕವಾದ ಸ್ಥಳ ಅಥವಾ ಕ್ಷೇತ್ರ

ಅಲೂತಗಳು–ಬಲೂತಗಳು: ಅಲೂತ – ಬಲೂತರಿಗೆ ಸಹಾಯಕವಾದ (ಗೌಣವಾದ) ಹಳ್ಳಿಯ ಅಧಿಕಾರಿ. ಬಲೂತ – ಒಬ್ಬ ಹಳ್ಳಿಯ ಸಾರ್ವಜನಿಕ ಸೇವಕ, ಅವನು ತೋಟದ ಬೆಳೆಯಲ್ಲಿ ದವಸಧಾನ್ಯ ಅಥವಾ ಉತ್ಪನ್ನದ ಒಂದು ಪಾಲನ್ನು ಪಡೆಯುತ್ತಾನೆ.

ಅಂಬಿಲ್‌ಕನ್ಯ : ಅಂಬಿಲ್ : ನಚನ ಹಿಟ್ಟಿಗೆ ಹುಳಿಮಜ್ಜಿಗೆ ಇತರೆ ಪದಾರ್ಥಗಳು ಹಾಕಿ ಮಾಡುವ ಅಂಬಲಿ.

ಆಪತ್–ಧರ್ಮ : ವಹಿಸಿದ ವಿಧಿಬದ್ಧ ಆಚರಣೆ ಅಥವಾ ಕೆಲವು ವಿಶಿಷ್ಟ ಪರಿಸ್ಥಿತಿಗಳಲ್ಲಿ ಬದಲಿ ಆಚರಣೆ ಅಥವಾ ಕರ್ತವ್ಯಗಳನ್ನು ವಹಿಸುವುದು.

ಆಶ್ರಮ : ಸಂತ ಅಥವಾ ಋಷಿಯ ಕುಟೀರ ಅಥವಾ ಮನೆ.

ಅಧ್ಲಿಯ : ಒಬ್ಬ ಪವಿತ್ರ ವ್ಯಕ್ತಿ; ಸಂತ ಅಥವಾ ಋಷಿ; ಧ್ಯಾನಾಸಕ್ತ ಅಥವಾ ತಪಸ್ವಿ

ಬಹಿಷ್ಕೃತ : ೧. ಜಾತಿಯಿಂದ ಹೊರಹಾಕಲ್ಪಟ್ಟವನು.

೨. ಜಾತಿಯಿಂದ ಪ್ರತ್ಯೇಕವಾಗಿಟ್ಟವನು ಅಥವಾ ಜಾತಿಯಿಂದ ಹೊರಗಿಟ್ಟವನು.

ಬಾಣ : ಒಂದು ಆಯುಧ.

ಬಂಜಾರ : ಒಂದು ಜಾತಿ ಅಥವಾ ವರ್ಗ ಅಥವಾ ಆ ಜಾತಿಯ ಒಬ್ಬ ವ್ಯಕ್ತಿ. ಅವರು ಉಪ್ಪು, ದವಸಧಾನ್ಯ ಮೊದಲಾದವುಗಳನ್ನು ಸಾಗಿಸುವರು.

ಭಜನ್ : ೧. ಅಲಂಕಾರ ಅಥವಾ ಪೂಜೆ.

೨. ಭಜನೆ, ದೇವರಿಗೆ ಹಾಡಿದ ಸ್ತೋತ್ರ ಅಥವಾ ಪದ್ಯ.

ಭಾಕರ್ (ಭಾಕರಿ) : ರೊಟ್ಟಿ, ಅನುಮೋದಿಸಿದ ಗೋಧಿಯ ಅನ್ನ ಅಥವಾ ಹಿಟ್ಟು, ಆದರೆ ಸಾಮಾನ್ಯವಾದ ಸಜ್ಜೆ ಅಥವಾ ಜೋಳದ ರೊಟ್ಟಿ.

ಭಟ್‌ಜಿ : ಬ್ರಾಹ್ಮಣರಿಗೆ ಸಾಮಾನ್ಯವಾಗಿ ಬಳಸುವ ಪದ ಅಥವಾ ಒಬ್ಬ ವೈದಿಕನಿಗೆ ಬಳಸುವ ಪದ.

ಬಿಗಾರಿ : ವಸ್ತುಗಳನ್ನು ಹೊರುವ ಅಥವಾ ಸಾಮಾನ್ಯ ಕೂಲಿಯಾಳು.

ಚಾಬುಕಸ್ವರ್ : ಕುದುರೆ ಪಳಗಿಸುವವನು; ಒಬ್ಬ ಕುದುರೆ ಸವಾರಿ; ಒಬ್ಬ ಒರಟು ಸವಾರಿ.

ಚಟ್ನಿ-ಭಾಕರ್ : ಚಟ್ನಿ: ಬಲಿತ ಮೆಣಸಿನಕಾಯಿಯ ಹೋಳುಗಳು.

ಭಾಕರ್ : ರೊಟ್ಟಿ ಅಥವಾ ಗೋಧಿಯ ಅನ್ನ ಅಥವಾ ಹಿಟ್ಟು, ಆದರೆ ಸಾಮಾನ್ಯವಾಗಿ ಸಜ್ಜೆ ಅಥವಾ ಜೋಳದ ರೊಟ್ಟಿ.

ಛಪ್ಪರ್‌ಬಂದ್ : ಛಾವಣಿ ಅಥವಾ ಛಾವಣಿಯ ತಡಿಕೆ ಮಾಡುವವನು, ಭಾರತದಲ್ಲಿ ಒಂದು ಅಲೆಮಾರಿ ಪಂಗಡ.

ಸಿನೇಮ ಕೇಸರಿ : ಸಿನೆಮಾದ ಕೇಸರಿ ಎಂದರ್ಥ.

ಚೋಲ್‌ಖಾನ : ಒಂದು ಕುಪ್ಪಸದ ಬಟ್ಟೆಯ ಜಾಲ.

ಚೋಳಿ : ತೋಳುಗಳಿರುವ ಮಹಿಳೆಯ ಒಂದು ರೀತಿಯ ಕುಪ್ಪಸ.

ದಫೇದಾರ್ : ಇಲಾಖೆಯ ಜವಾನರಲ್ಲಿ ಮೇಲಾಧಿಕಾರಿಯ ಬಿರುದು.

ದಲಿತ : ದಮನಿತ, ಕೆಳಜಾತಿಯವನು.

ದಂಡಪಟ್ಟ : ಒಂದು ಕೈಯಲ್ಲಿ ಬೇಲಿಯ ದೊಣ್ಣೆ ಮತ್ತು ಇನ್ನೊಂದು ಕೈಯಲ್ಲಿ ಆಯುಧವನ್ನು ಹಿಡಿದುಕೊಂಡಿರುವವನು.

ದರ್ಗಾ : ಮುಸ್ಲಿಮರ ಪ್ರಾರ್ಥನೆಯ ಸ್ಥಳ.

ದೇವದಾಸಿ : ಒಬ್ಬ ದೇವಸ್ಥಾನದ ನರ್ತಕಿ, ಮತ್ತು ದೇವಸ್ಥಾನಕ್ಕೆ ಸೇರಿದ ವೇಶ್ಯೆ.

ಧರ್ಮಸ್ಥಳ : ಪ್ರಯಾಣಿಕರು ತಂಗುವುದಕ್ಕೆ ಕಟ್ಟಿದ ಒಂದು ಭವನ.

ಧೋತಿ : ಪಂಚೆ, ಕಚ್ಚೆ.

ದಿಂಡಿ : ಮೂರ್ತಿಯ ಮೆರವಣಿಗೆ.

ದಿವಾನ್ : ೧. ಒಬ್ಬ ಪ್ರಧಾನಮಂತ್ರಿ.

೨. ಜಿಲ್ಲೆಯ ಕಂದಾಯ ಆಡಳಿತವನ್ನು ನೋಡಿಕೊಳ್ಳುವ ಒಬ್ಬ ಅಧಿಕಾರಿ.

ಫರಿಗಡ್ಗ : ವ್ಯಾಯಾಮಶಾಲೆಯ ಒಂದು ಉಪಕರಣ, ಒಂದು ರೀತಿಯ ಪೌರುಷಕಲೆ.

ಫೆಸಟಿ : ಮುಳ್ಳುಗಳಿಂದ ಕೂಡಿದ ಒಂದು ಕುಚ್ಚು (ಪರಕೆ).

ಗಡಕರಿ : ಆನೆಯ ಮುಂದೆ ಭರ್ಜಿ ಹಿಡಿದವನು.

ಗಣೇಶೋತ್ಸವ : ಗಜವದನನ ಉತ್ಸವ.

ಗಂಗೋತ್ರಿ : ಗಂಗೆ ಹುಟ್ಟುವ ಸ್ಥಳ (ಸ್ವರ್ಗ).

ಗಾನಮಹರ್ಷಿ : ಅಕ್ಷರಶಃ ಹಾಡಿನ ಕಲೆಯ ಋಷಿ.

ಗರ್ಭದಾನ : ಹಿಂದುಗಳಲ್ಲಿ ಅಗತ್ಯವಾದ ಮತ್ತು ಶುದ್ಧೀಕರಣದ ಆಚರಣೆ, ಗರ್ಭಧರಿಸುವ ಮೊದಲು ಅಥವಾ ಧರಿಸಿದಾಗ ಆಚರಿಸುವ ಬಲಿ.

ಗಟ್ಟೀಚೋರ್ : ಒಂದು ಅಪರಾಧಿ ಪಂಗಡ.

ಗಜಲ್ : ಒಂದು ಭಾವಗೀತೆ ಅಥವಾ ಪ್ರಗಾಥ.

ಘರಾನ : ಸಂಗೀತದಲ್ಲಿ ಒಂದು ಪಂಥ.

ಗುಮಾಸ್ತ : ಒಬ್ಬ ಏಜೆಂಟ್ ಅಥವಾ ಪ್ರತಿನಿಧಿ.

ಗುರುಕುಲ : ಗುರು ಶಿಷ್ಯರಿಗೆ ಕಲಿಸುವ ಒಂದು ಸ್ಥಳ ಅಥವಾ ಕೇಂದ್ರ.

ಹಾಜರಿ : ಅಪರಾಧಿ ಜಾತಿ ಅಥವಾ ಪಂಗಡದ ಒಬ್ಬ ಸದಸ್ಯರು ಕಡ್ಡಾಯವಾಗಿ ಹಾಜರಿ ಹಾಕುವುದು.

ಹಳದಿ-ಕುಂಕುಮ: ಹರಿಷಿನ-ಕುಂಕುಮ.

೧. ಚೈತ್ರಮಾಸ ಅಥವಾ ನವರಾತ್ರಿ ಸಂದರ್ಭಗಳಲ್ಲಿ ಮುತ್ತೈದೆಯರು ನೀಡುವ ಹರಿಷಿನ-ಕುಂಕುಮ ನೀಡುವ ಸಮಾರಂಭ.

೨. ಹರಿಷಿನ ಪುಡಿ ಅಥವಾ ಬಣ್ಣದ ಪುಡಿಯಿಂದ ತಯಾರು ಮಾಡಿದ ಕುಂಕುಮ ಅಥವಾ ಹರಿಷಿನ.

ಇಂದ್‌ಕೇಸರಿ : ಭಾರತದ ಸಿಂಹ, ಕುಸ್ತಿಸ್ಪರ್ಧೆಯಲ್ಲಿ ಅತ್ಯುನ್ನತ ಗೌರವ.

ಹಿಂದುಪದ್ಪಟ್‌ಷಾಹ: ಹಿಂದುಗಳ ಚಕ್ರವರ್ತಿ. ಛತ್ರಪತಿಯನ್ನು (ಮರಾಠ ರಾಜ) ಹಿಂದುಪದ್ಪಟ್‌ಷಾಹ ಎಂದು ಸಂಬೋಧಿಸುವುದು.

ಇನಾವ್ : ಯಾವುದೇ ಷರತ್ತಿಲ್ಲದೆ ಶಾಶ್ವತವಾಗಿ ಅನುಭೋಗಿಸಲು ಕೊಡುವುದು.

ಇನಾಮ್‌ದಾರ್ : ಇನಾಮಿನ ಒಬ್ಬ ಹಿಡುವಳಿದಾರ.

ಜಗದ್ಗುರು : ತಮ್ಮ ಜನರಿಗೆ ಬೋಧಕ(ಗುರು)ವಾಗಿರುವ ಅಥವಾ ಜ್ಞಾನದೀಕ್ಷೆ ನೀಡುವ ಅತ್ಯುತ್ತಮ ವ್ಯಕ್ತಿಗೆ ನೀಡಿದ ಬಿರುದು. ಈ ಅರ್ಥವನ್ನೇ ಯಾವುದೇ ಶ್ರೇಷ್ಠ ಗುರುವಿಗೆ ಅನ್ವಯಿಸಬಹುದು.

ಜಹಗೀರ್‌ದಾರ : ಒಂದು ಜಹಗೀರಿನ ಹಿಡುವಳಿದಾರ.

ಜಲ್ಸಾ : ಜನಪದ ಗೀತೆಯ ಸಮ್ಮೇಳನ ಅಥವಾ ಗೋಷ್ಠಿ.

ಜಂಬಿಯ : ಒಂದು ವಿಧದ ಬಾಕು ಅಥವಾ ಕಠಾರಿ.

ಜರತ್ ಕುಮಾರಿ ವಿವಾಹ್ : ಜರತ್: ಮುದುಕ ಅಥವಾ ಅತಿವಯಸ್ಸಾದ ಅಥವಾ ಹಣ್ಣು-ಹಣ್ಣು ಮುದುಕ

: ಕುಮಾರಿ: ಮದುವೆಯಾಗದ ಹುಡುಗಿ ಅಥವಾ ಹದಿಹರೆಯದ ಹುಡುಗಿ.

: ವಿವಾಹ: ಮದುವೆ. ವಯಸ್ಸಾದವನ ಜೊತೆಯಲ್ಲಿ ಮದುವೆಯಾಗುವ ಕ್ರಿಯೆ.

ಜಾತ್-ಇನಾಮ್ : ಒಬ್ಬ ವ್ಯಕ್ತಿಗೆ ಅವನು ಬದುಕಿರುವವರೆಗೆ ಮಾತ್ರ ಇನಾಮನ್ನು ಕೊಡುವುದು.

ಜಾತ್ ಪಂಚಾಯಿತ್: ಪಂಚಾಯಿತ್ – ಒಂದು ಪಂಗಡದ ಅಥವಾ ಜಾತಿಯ ಐದು ಜನ ಪಂಚಾಯಿತಿದಾರರ ಸಭೆ ಸೇರುವುದು.

ಜೋಗ್ತಿನ್ : ಭಿಕ್ಷೆ ಬೇಡುವ ಹೆಂಗಸನ್ನು ಜೋಗವ್ವ ಎಂದು ಕರೆಯಲಾಗುತ್ತದೆ; ರೇಣುಕಾ ಅಥವಾ ಎಲ್ಲಮ್ಮ ದೇವತೆಯ ಭಕ್ತೆ.

ಜೋಹರ್ ಮಾಯಿ-ಬಾಪ್: ಜೋಹರ್ : ತಮಗಿಂತ ಮೇಲುಜಾತಿಯವರನ್ನು ಗೌರವಿಸಲು ಈ ಪದಗಳನ್ನು ಕೆಳಜಾತಿಯವರು ಬಳಸುತ್ತಾರೆ.

ಕಲಾಮಹರ್ಷಿ : ಕಲೆಯ ಕ್ಷೇತ್ರದಲ್ಲಿ ಒಬ್ಬ ಋಷಿಯಾಗಿರುವವನು.

ಕಲಾಪುರ : ಕಲೆಗಳ ನಗರ.

ಕಲ್ಗಿವಾಲೆ : ಕಲಾಗಿ ಎಂಬ ಲಾವಣಿಗಳನ್ನು ಹಾಡುವವನು.

ಕಲಿಯುಗ : ವಿಶ್ವದ ನಾಲ್ಕನೆಯ ಯುಗ, ಕಬ್ಬಿಣದ ಯುಗ ಅಥವಾ ಪಾಪಗಳ ಯುಗ.

ಕಲ್ಪತರು : ೧. ಇಂದ್ರನ ಸ್ವರ್ಗದಲ್ಲಿ ಸಂಪದ್ಭರಿತವಾದ ಮರ.

೨. ಕೇಳಿದ್ದನ್ನೆಲ್ಲ ನೀಡುವ ಮರ.

ಕಾಮ್‌ದಾರ್ : ಸಾರ್ವಜನಿಕ ಅಧಿಕಾರಿ ಅಥವಾ ಸೇವಕ.

ಕರಮ್‌ವೀರ್ : ಕಾಯಕವೇ ಕೈಲಾಸ (ಕಾಯಕವೇ ಪೂಜೆ) ಎಂದು ಪರಿಪಾಲಿಸುವವನು. ನುಡಿದಂತೆ ನಡೆಯುವ ಮತ್ತು ನಡೆದಂತೆ ನುಡಿಯುವ ವ್ಯಕ್ತಿ.

ಕಸಬ : ಒಂದು ಮಹಲ್ ಅಥವಾ ಪರಗಣದ ಮುಖ್ಯ ಪಟ್ಟಣ.

ಕೀರ್ತನ : ಸಂಗೀತ ಮತ್ತು ಹಾಡುಗಾರಿಕೆಯಿಂದ ಒಬ್ಬ ದೇವರನ್ನು ಹೊಗಳುತ್ತಾ ಸಂಭ್ರಮಿಸುವುದು

ಕೀರ್ತನಾಕಾರ : ಕೀರ್ತನೆಗಳನ್ನು ಹಾಡುವವನು.

ಕೋಕಿಲಕಂಠಿ : ಕೋಕಿಲಕಂಠ; ಕೋಗಿಲೆಯಂತೆ ಹಾಡುವವನು.

ಕ್ಷತ್ರಿಯ ಕುಲವಂತರು: ಕುಲವಂತರು – ಕ್ಷತ್ರಿಯರ ಆಭರಣಗಾರರು. ಶಿವಾಜಿ ಮಹಾಶಯರು ತಮ್ಮ ಪಟ್ಟಾಭಿಷೇಕದ ಸಮಯದಲ್ಲಿ ಈ ಬಿರುದನ್ನು ಧರಿಸಿದರು.

ಕುಂಕುಮ : ೧. ಹರಿಷಿನಕ್ಕೆ ನಿಂಬೆ, ಪಟಿಕ ಮೊದಲಾದವುಗಳನ್ನು ಬೆರಸಿ ಕುಂಕುಮ ಪುಡಿಯನ್ನು ತಯಾರಿಸಲಾಗುವುದು.

: ೨. ಅದನ್ನು ಮುತ್ತೈದೆಯರ ಹಣೆಗೆ ಹಚ್ಚಲಾಗುವುದು.

ಕುಣ್ಬಿ : ಕೃಷಿ ವ್ಯವಸ್ಥೆಯ ಒಬ್ಬ ವ್ಯಕ್ತಿ; ಒಬ್ಬ ವ್ಯವಸಾಯಗಾರ ಅಥವಾ ರೈತಾಪಿ.

ಕುರ್ಮಿ : ರೈತಾಪಿವರ್ಗಕ್ಕೆ ಸೇರಿದ ಒಂದು ಜಾತಿ.

ಲಾವಣಿ : ಹೆಂಗಸರು ಹಾಡುವ ಗೀತೆಗಳ ಒಂದು ಪ್ರಕಾರ.

ಲೋಕರಾಜ : ಜನರ ರಾಜ.

ಲೋನಾರಿ : ಒಂದು ಜಾತಿ ಅಥವಾ ಆ ಜಾತಿಯ ಒಬ್ಬ ವ್ಯಕ್ತಿ. ಅವರು ಕಟ್ಟಿಗೆ ಸೀಳುವವರು, ಇದ್ದಲು ಮಾಡುವವರು ಮತ್ತು ಸುಣ್ಣದಕಲ್ಲನ್ನು ಸುಟ್ಟು ಸುಣ್ಣ ಮಾಡುವವರು.

ಮಧುಕರಿ : ಮನೆಮನೆಗೆ ಹೋಗಿ ಆಹಾರವನ್ನು ಭಿಕ್ಷೆಯಾಗಿ ಪಡೆದು ತಿಂದು ಜೀವಿಸುವನು.

ಮಹಾವಸ್ತ್ರ : ವೈಭವವಾಗಿರುವ ವಸ್ತ್ರ; ಶಾಲು ಮೊದಲಾದವು ಏಕವಸ್ತ್ರವಾಗಿರುವುದು.

ಮಹಲಕಾರಿ : ಒಂದು ಮಹಲ್ ಬಗ್ಗೆ ಉಸ್ತುವಾರಿ ವಹಿಸಿರುವ ಒಬ್ಬ ಕಂದಾಯ ಮತ್ತು ಪೊಲೀಸ್ ಅಧಿಕಾರಿ.

ಮಹರ್ಕಿ : ಮಹರ ಇನಾಮುಗಳ ಮೇಲೆ ವಿಧಿಸಿರುವ ತೆರಿಗೆ.

ಮಹಾರಾಷ್ಟ್ರ ಕೋಕಿಲ: ಕೋಕಿಲ – ಕಪ್ಪು ಅಥವಾ ಭಾರತದ ಕೋಗಿಲೆ. ಮಹಾರಾಷ್ಟ್ರದ ಹಾಡುಗಾರನಿಗೆ ಗೌರವಪೂರ್ವಕವಾಗಿ ನೀಡುವ ಬಿರುದು

ಮಹೆರ್ : ಮದುವೆಯಾದ ಹುಡುಗಿಯ ತಾಯಿಯ ಮನೆ, ತಂದೆ–ತಾಯಿಗಳ ಮನೆ, ತೌರು ಮನೆ.

ಮಾಮಲೆದಾರ : ಒಂದು ತಾಲ್ಲೂಕಿನ ಸರಕಾರಿ ಹುದ್ದೆ ಮತ್ತು ಕಂದಾಯವನ್ನು ಸಂಗ್ರಹಿಸುವ ಅಧಿಕಾರವನ್ನು ಹೊಂದಿರುವ ಅಧಿಕಾರಿ.

ಮಂಗಳಾಷ್ಟಕ : ಮದುವೆಗಳಲ್ಲಿ, ಮುಂಜಿಗಳಲ್ಲಿ ಮತ್ತು ಧಾರ್ಮಿಕ ವಿಧಿಗಳನ್ನು ಅಥವಾ ಅದರ ಕರ್ತರನ್ನು ಆಶೀರ್ವಾದ ಮಾಡುವ ಪದ್ಯ ಅಥವಾ ಸಾಲುಗಳನ್ನು ಪಠಿಸುವುದು.

ಮರ್ದಾನಿ ಖೇಲ್ : ಪೌರುಷ ಕ್ರೀಡೆಗಳು.

ಮಠ : ವಿರಕ್ತರು ಅಥವಾ ಭಕ್ತರು ವಾಸಿಸುವ ಸ್ಥಳ.

ಮೋರ್‌ಚಾಲ್ : ನವಿಲುಗರಿಗಳ ಒಂದು ಕುಚ್ಚು (ಬೀಸಣಿಕೆ). ದೇವರ ವಿಗ್ರಹಗಳಿಗೆ, ಮಹಾರಾಜ ಮೊದಲಾದವರಿಗೆ ಬೀಸಣಿಗೆಯಂತೆ ಬೀಸುವರು.

ಮೋತಿಜ್ವರ : ಗಂಟಲು ಬೇನೆ.

ಮೃಗಯಾ : ಬೇಟೆಯಾಡುವುದು.

ಮುರಳಿ : ಖಂಡೋಬ ದೇವರಿಗೆ ಒಬ್ಬ ಹೆಂಗಸನ್ನು ಬಿಡುವುದು.

ನಾಮ್‌ದಾರ್ : ಗೌರವಾನ್ವಿತ, ಹೆಸರಾಂತ.

ನವರಾತ್ರಿ : ೯ ಹಗಲು ಮತ್ತು ರಾತ್ರಿಗಳ ಕಾಲ ಮತ್ತು ವಿಶೇಷವಾಗಿ ಚೈತ್ರಮಾಸದ ಚಂದ್ರನ ಮೊದಲ ಮತ್ತು ಒಂಭತ್ತು ನಡುವಣ ದಿನಗಳು ಸೇರುತ್ತವೆ. ಹಾಗೆಯೇ ಅಶ್ವಿನಿ ತಿಂಗಳಿನ ಅವಧಿ ಮತ್ತು ಈ ಋತುವಿನ ಹಬ್ಬಗಳು ಕೂಡ.

ನಿರ್ವಾಣ : ಸಾವು, ಮರಣ.

ನೋಕರಶಾಹಿ : ನೌಕರಶಾಹಿ, ಆಡಳಿತಶಾಹಿ.

ಪದ್ಮಭೂಷಣ : ಭಾರತದ ರಾಷ್ಟ್ರಪತಿಗಳು ನೀಡುವ ಅತ್ಯುತ್ತಮ ಪ್ರಶಸ್ತಿಗಳಲ್ಲಿ ಒಂದು.

ಪಂಚಶೀಲ : ಶಾಂತಿಯ ಐದು ತತ್ವಗಳು.

ಪಾಂಡವಪಂಚಮಿ : ದೀಪಾವಳಿ ಅವಧಿಯಲ್ಲಿ ಮಹಾರಾಷ್ಟ್ರದಲ್ಲಿನ ಹಬ್ಬಗಳಲ್ಲಿ ಒಂದು.

ಪಂಕ್ತಿ ಪ್ರಪಂಚ : ಅತಿಥಿಗಳಿಗೆ ಉಪಚರಿಸುವ ಸಂದರ್ಭದಲ್ಲಿ ಎಸಗುವ ತಾರತಮ್ಯತೆ, ಪಕ್ಷಪಾತ.

ಪಂಜ : ಮಹಮದನ್ನರನ್ನು ಪ್ರತಿನಿಧಿಸುವ ಪ್ರಮುಖ ೫ ವ್ಯಕ್ತಿಗಳ ಬಿಗಿಮುಷ್ಟಿ.

ಪಂತ ಅಮಾತ್ಯ : ಮರಾಠರ ಮಂತ್ರಿ ಪರಿಷತ್ತಿನಲ್ಲಿನ ಕಂದಾಯ ಮಂತ್ರಿ.

ಪಾಟೀಲ : ಒಂದು ಹಳ್ಳಿಯ ನಿರ್ವಹಣಾಧಿಕಾರಿಯ ಮುಖ್ಯಸ್ಥ.

ಪೀಠ : ಗದ್ದುಗೆ (ಸ್ಥಾನ) ಎನ್ನುವ ಅರ್ಥದಲ್ಲಿ ಅಥವಾ ಪ್ರಮುಖ ನಿವಾಸ ಸ್ಥಳ ಅಥವಾ ಶಾಶ್ವತವಾದ ನೆಲೆ.

ಪೆಂಢಾರಿ : ಒಬ್ಬ ಪಿಂಡಾರಿ. ಹೆಸರುವಾಸಿಯಾದ ಲೂಟಿಕೋರ.

ಪೇಶ್ವಾಯಿ : ಪೇಶ್ವೆಗಳ ಆಡಳಿತ. ಮರಾಠ ಸಂಸ್ಥಾನದ ಪ್ರಧಾನಮಂತ್ರಿ ನಂತರ ಅವನು ಪರಿಪೂರ್ಣ ಅರಸನಾದ.

ಪೇಠ : ಪೇಠಾ, ಪೇಠೆ, ಪೇಟೆ; ಒಂದು ತಯಾರಿಕಾ ಅಥವಾ ವ್ಯಾಪಾರದ ಪಟ್ಟಣ. ಅದು ಕೂಡ ಒಂದು ಮಾರುಕಟ್ಟೆಯ ಪಟ್ಟಣ.

ಪೀರ್ : ಮಹಮದೀಯ ಸಂತ, ಅವರ ಪವಿತ್ರ ಸ್ಥಳದಲ್ಲಿ ಹರಕೆ ಮಾಡುತ್ತಾರೆ, ಕಾಣಿಕೆಗಳನ್ನು ಸಲ್ಲಿಸುತ್ತಾರೆ.

ಪಿತಾಮಹ : ತಂದೆಯ ತಂದೆ, ತಾತ.

ಪಿಥಾಳ : ಜುಣುಕ, ಕಾಳುಗಳ ಹಿಟ್ಟನ್ನು ಕುದಿಸಿ, ಮಸಾಲೆಹಚ್ಚಿದ ಪದಾರ್ಥ.

ಪ್ರಭು (ಕಾಯಸ್ಥ) : ಒಂದು ಜಾತಿ ಅಥವಾ ಆ ಜಾತಿಯ ಒಬ್ಬ ವ್ಯಕ್ತಿ.

ಪುರಾಣಿಕ : ೧. ಪುರಾಣಗಳಲ್ಲಿ ಪಾರಂಗತನಾದ ಒಬ್ಬ ಬ್ರಾಹ್ಮಣ.
೨. ಅವುಗಳ ಸಾರ್ವಜನಿಕ ನಿರೂಪಕ.

ಪೂರಣಪೋಲಿ : ಹೂರಣವಿಟ್ಟು ಮಾಡಿದ ಹೋಳಿಗೆ, ಒಬ್ಬಟ್ಟು.

ಪರ್ದಾ : ಪರದಾ, ಉತ್ತಮ ಜಾತಿಯ ಮಹಿಳೆಯರು ತಮ್ಮ ಖಾಸಗಿತನವನ್ನು ಕಾಪಾಡಿಕೊಳ್ಳಲು ಬಟ್ಟೆಯನ್ನು ದೇಹದ ತುಂಬ ಧರಿಸುವುದು.

ಪುರುಷಸೂಕ್ತ : ನಾರಾಯಣ ಎಂಬ ಋಷಿ ರಚಿಸಿದ ಋಗ್ವೇದದ ಒಂದು ಭಾಗ.

ರಾಮನವಮಿ : ರಾಮನು ಹುಟ್ಟಿದ ದಿನ.

| | | |
|---|---|---|
| ರಾಮ್‌ರಾಮ್ | : | ಹಿಂದುಗಳಲ್ಲಿ ಸಾಮಾನ್ಯರು ಪರಸ್ಪರ ಗೌರವ ತೋರಿಸಲು ಸಂಬೋಧನೆ ಮಾಡುವುದು. |
| ರಥೋತ್ಸವ | : | ದೇವರ ಮೂರ್ತಿಗಳನ್ನು ರಥದಲ್ಲಿಟ್ಟು ಮೆರವಣಿಗೆ ಮಾಡುವ ಕ್ರಮ ಅಥವಾ ಹಬ್ಬ. |
| ರಾಯತ್ | : | (ರಾಜನ) ಒಬ್ಬ ಪ್ರಜೆ (ಭೂಹಿಡುವಳಿದಾರನ); ಒಬ್ಬ ಗೇಣಿದಾರ; ಒಬ್ಬ ರೈತ. |
| ರಾಯತ್ವ | : | ೧. ರೈತವರ್ಗದ ಮೇಲೆ ವಿಧಿಸುವ ತೆರಿಗೆ. |
| | | ೨. ಸಾಮೂಹಿಕವಾಗಿ ಪ್ರಜೆಗಳು ಅಥವಾ ಗೇಣಿದಾರರು. |
| | | ೩. ಒಬ್ಬ ಗೇಣಿದಾರ ಅಥವಾ ಪ್ರಜೆಯ ಷರತ್ತು, ವ್ಯವಹಾರ ಅಥವಾ ಕರ್ತವ್ಯಗಳು. |
| ರಾಯತ್‌ವಾರಿ | : | ಬಹುವಿಧದಲ್ಲಿ ರೈತರಿಂದ, ರೈತರಿಗಾಗಿ ಮತ್ತು ರೈತರ. |
| ಸಾತ್‌ಮಾರಿ | : | ಆನೆಗಳ ಅಖಾಡದಲ್ಲಿ ಒಬ್ಬ ಹಿಂಸಕನಾದ ಮೇಲೆ ಮತ್ತೊಬ್ಬ ಹಿಂಸಕನು ಕೋಲುಗಳಿಂದ ಆನೆ ಅಥವಾ ಆನೆಗಳನ್ನು ಹೊಡೆಯುವ ಕ್ರೀಡೆ. |
| ಸಕೆ | : | ಒಂದು ನಿರ್ದಿಷ್ಟ ಮಾತ್ರೆಗಳ ಕಾವ್ಯರಚನೆ. |
| ಸಮಾಧಿ | : | ಒಬ್ಬ ಸನ್ಯಾಸಿಯನ್ನು ಹೂತ ಸ್ಥಳದಲ್ಲಿ ಒಂದು ತುಳಸಿಗಿಡ ಬೆಳೆಯುವಷ್ಟು ಜಾಗವಿರುವ ಸಣ್ಣ ಸೌಧ ಕಟ್ಟಿದ ಸ್ಥಳ. |
| ಸನದ್ | : | ಸನದು – ೧. ಒಂದು ಆದೇಶ ಅಥವಾ ನಿರೂಪ. |
| | | ೨. ನಿರ್ದೇಶಿಸುವ ಅಥವಾ ಅಧಿಕಾರ ನೀಡುವ ಮುಚ್ಚಿದ ಅಧಿಕೃತ ಆದೇಶಪತ್ರ. |
| ಸಂಗೀತ ಸಾಮ್ರಾಟ | : | ಶ್ರೇಷ್ಠ ಗಾಯಕ, ಗವಾಯಿ. |
| ಸಂಗೀತ ಸೂರ್ಯ | : | ಶ್ರೇಷ್ಠ ಗಾಯಕ, ಸಂಗೀತ ಸಾಮ್ರಾಟ. |
| ಸಂಸ್ಕಾರ | : | ಹಿಂದುಗಳಲ್ಲಿ ಆಚಾರ: ವಿಧಿಗಳನ್ನು ಶುದ್ಧೀಕರಣಗೊಳಿಸುವುದು. |
| ಸರಂಜಾಮ್‌ದಾರ್ | : | ಸರಂಜಾಮುಗಳ ಹಿಡುವಳಿದಾರ. |
| ಸರಂಜಾಮ್ | : | ಸೈನಿಕ ಸೇವೆಗಳ ಅಗತ್ಯಗಳಿರುವ ವ್ಯಕ್ತಿಗೆ ಭೂಮಿಗಳನ್ನು ಅಥವಾ ಹಳ್ಳಿಗಳನ್ನು ಅಥವಾ ಪ್ರದೇಶಗಳನ್ನು ನೀಡುವುದು. |
| ಸರ್‌ಸುಭೆ | : | ಒಬ್ಬ ಸಾರ್ವಜನಿಕ ಅಧಿಕಾರಿ, ಅವನು ಮಮ್ಲತ್‌ದಾರರ ಮತ್ತು ಸರಕಾರದ ನಡುವೆ ನಿಲ್ಲುವ ವ್ಯಕ್ತಿ. |
| ಷಾಹಿರಿ | : | ಶಾಹಿರ್ (ಸಂಚಾರಿ ಗಾಯಕ) ಅಥವಾ ಕವಿಗೆ ಸಂಬಂಧಿಸಿದವನು. |
| ಶಾಹಿರರ ಶಾರ್ದೂಲ | : | ಶಾಹಿರ–ಒಬ್ಬ ಕವಿ. ಹಾಡು ಮತ್ತು ಲಾವಣಿಗಳನ್ನು ಹಾಡುವ ಮೂಲಕ ಜೀವನೋಪಾಯವನ್ನು ಗಳಿಸುವವನಿಗೆ ಅನ್ವಯಿಸಲಾಗಿದೆ. ಶಾರ್ದೂಲ ಅಂದರೆ ಹುಲಿ. |
| ಶಂಕರಾಚಾರ್ಯ | : | ೧. ವೇದಾಂತ ತತ್ವಜ್ಞಾನದ ಪ್ರಖ್ಯಾತ ಗುರು. |

| | | |
|---|---|---|
| | | ೨. ಅವರು ಸ್ಥಾಪಿಸಿದ ಹಲವು ಮಠಗಳಿಗೆ ಅಥವಾ ಕಾಲೇಜುಗಳಿಗೆ ಸನ್ಯಾಸಿ ಅಧ್ಯಕ್ಷತೆ ವಹಿಸುವುದು. |
| ಶೇಣವಿ | : | ಶೇಣ್ವಿ – ಹಿಂದುಗಳ ಜಾತಿಯನ್ನು ವ್ಯಕ್ತಪಡಿಸುವುದು. |
| ಸೇರ್ | : | ಸೇರು – ತೂಕದ ಅಳತೆ. |
| ಶೇಟ್‌ಸರ | : | ಭೂಮಿಯ ತೆರಿಗೆ. |
| ಶಿಷ್ಯ | : | ವಿದ್ಯಾರ್ಥಿ. |
| ಶಿವಜಯಂತಿ | : | ಶಿವಾಜಿ ಮಹಾಶಯನ ವಾರ್ಷಿಕೋತ್ಸವ. |
| ಶ್ರಾದ್ಧ | : | ತೀರಾ ಇತ್ತೀಚೆಗೆ ಸತ್ತ ಪಿತೃವಿಗೆ ವಿಶೇಷವಾಗಿ ಆಚರಿಸುವ ಒಂದು ವಿಧಿ. ಅಥವಾ ಮೂರು ಪಿತೃಗಳ ವಂಶಸ್ಥರು ಅಥವಾ ಎಲ್ಲಾ ಪೂರ್ವಿಕರಿಗೆ ಸಾಮೂಹಿಕವಾಗಿ ಆಚರಿಸುವ ವಿಧಿಕರ್ಮ. |
| ಶ್ರಾವಣಿ | : | ೧. ಶ್ರಾವಣ ಮಾಸದಲ್ಲಿ ಹೊಸಜನಿವಾರವನ್ನು ತೊಡುವ ಒಂದು ಸಂಸ್ಕಾರ ಅಥವಾ ವಿಧಿಕ್ರಿಯೆ. |
| | | ೨. ಶ್ರಾವಣಮಾಸದಲ್ಲಿನ ಪೂರ್ಣಿಮೆ. |
| ಶ್ರೀವಸ್ತ | : | ೧. ವಿಷ್ಣುದೇವತೆಯ ಒಂದು ಹೆಸರು. |
| | | ೨. ವಿಷ್ಣುದೇವತೆಯ ಎದೆಯ ಮೇಲಿರುವ ಕೂದಲಿನ ಸುಳಿ(ಒಬ್ಬ ಬ್ರಾಹ್ಮಣನ ಪಾದದಿಂದ ಮೂಡಿದ ಗುರುತು. |
| ಶ್ರುತಿ | : | ಬೇರೆಬೇರೆಯಾಗಿ ಅಥವಾ ಸಾಮೂಹಿಕವಾಗಿರುವ ವೇದಗಳು. |
| ಸ್ಮೃತಿ | : | ಕಾನೂನು ಮೂಲತಃ ಮನು ಹೇಳಿದ ಕಾನೂನುಗಳ ಸಂಸ್ಥೆ ಮತ್ತು ಇತರೆ ಶಾಸನಕರ್ತರು ತಮ್ಮ ಶಿಷ್ಯರಿಗೆ ಹೇಳಿದ ಕಾನೂನುಗಳು; ಮತ್ತು ಅವರು ಬರವಣಿಗೆ ರೂಪಕೊಟ್ಟ ಕಾನೂನುಗಳು; ಜೊತೆಗೆ, ಈ ಕಾನೂನಿನ ಅಥವಾ ಸಂಹಿತೆಯ ಭಾಗ ಅಥವಾ ಯಾವುದೇ ಗ್ರಂಥ ಅಥವಾ ಸೂತ್ರ (ಕಟ್ಟಳೆ). |
| ಸುರಶ್ರೀ | : | ಸಂಗೀತ ಕ್ಷೇತ್ರದಲ್ಲಿ ನೀಡಿದ ಗೌರವಪ್ರಶಸ್ತಿ. |
| ತಕ್ಯ | : | ಮಹರರನ್ನು ಭೇಟಿಮಾಡುವ ಸಾರ್ವಜನಿಕ ಸ್ಥಳ. |
| ತಲಾಠಿ | : | ಹಳ್ಳಿಯ ಸ್ಟೈಪಂಟುದಾರ ಲೆಕ್ಕಿಗ ಮತ್ತು ನೋಂದಣಿದಾರ. |
| ತಮಾಶಾ | : | ಒಂದು ಜಾನಪದ ಗಾನಗೋಷ್ಠಿ. |
| ತಪಸ್ವಿ | : | ಭಕ್ತಿಯಲ್ಲಿ ತನ್ಮಯವಾಗಿರುವವನು ಮತ್ತು ದೇಹದಂಡನೆ ಹಾಗೂ ನಿಗ್ರಹ ಮಾಡುವವನು, ಉಗ್ರತಪಸ್ವಿ, ಋಷಿ. |
| ಠಗ್ | : | ಠಕ್ಕ, ವಂಚಕ. |
| ವಾಘ್ಯ ಮುರಳಿ | : | ವಾಘ್ಯ – ಒಂದು ವರ್ಗ ಅಥವಾ ಈ ವರ್ಗದ ಒಬ್ಬ ವ್ಯಕ್ತಿ. ಇವರೆಲ್ಲರೂ |

ಪುರುಷರು ಹುಟ್ಟಿದ ಕೂಡಲೇ ಇವರನ್ನು ಖಂಡೋಬ ದೇವರಿಗೆ ಅರ್ಪಣೆ ಮಾಡಲಾಗುತ್ತದೆ. ಮುರಳಿ – ಹೆಣ್ಣುಮಗುವನ್ನು ಖಂಡೋಬನಿಗೆ ಅರ್ಪಿಸಲಾಗುತ್ತದೆ.

ವರ್ಹದಿ : ಮದುವೆಯಲ್ಲಿ ಅತಿಥಿ.

ವರ್ಣಾಶ್ರಮ : ನಾಲ್ಕು ವರ್ಣಗಳು (ಹಿಂದು ಸಂಸ್ಥೆಯಲ್ಲಿ ಭವ್ಯವಾದ ವಿಭಜನೆ) ಮತ್ತು ನಾಲ್ಕು ಆಶ್ರಮಗಳು (ಬ್ರಾಹ್ಮಣರ ವ್ಯವಸ್ಥೆಗಳು ಅಥವಾ ಹಂತಗಳು).

ವಾಸ್ತುಶಾಂತಿ : ಕಟ್ಟಿದ ಹೊಸಮನೆಗೆ ಪ್ರವೇಶ ಮಾಡುವಾಗ ಅನಿಷ್ಟಗಳನ್ನು ಶಮನಮಾಡುವ ಸಲುವಾಗಿ ಆಚರಿಸುವ ವಿಧಿ.

ವೀಟ : ಮೊದಲಿಗೆ ಹೊಸದರಲ್ಲಿ ಬಳಸಿದ ಒಂದು ರೀತಿಯ ಭರ್ಜಿ, ನಂತರ ಹೊಲ ಉಳುಮೆ ಮಾಡಲು ಉಪಯೋಗಿಸುವ ಸಲಕರಣೆ.

ವಿಜಯದಶಮಿ : ಅಶ್ವಿನಿಯ ಹತ್ತನೆಯ ದಿನ, ದಸರಾ ಹಬ್ಬದ ದಿನ ಮತ್ತು ಹಿಂದು ಪಂಚಾಂಗದ ಪ್ರಕಾರ ಉತ್ತಮ ದಿವಸ.

ವತನದಾರ : ವತನದ ಹಿಡುವಳಿದಾರ.

*(ಟಿಪ್ಪಣಿ: ಬಹಳಷ್ಟು ಪದಗಳನ್ನು ಮೋಲ್ಸ್‌ವರ್ತರ ಮರಾಠಿ–ಇಂಗ್ಲಿಷ್ ನಿಘಂಟುವಿನಿಂದ ತೆಗೆದುಕೊಳ್ಳಲಾಗಿದೆ)*

---

# ಪದಸೂಚಿ

ಎ



ಬಿ

## ಆರ್



## ಎಸ್

ಟಿ

ತಾಜ್ ಮಹಾರಾಜ್ ಕೇಸ್.

ಥ್ಯಾಕರೆ, ಕೇಶವರಾವ್ (ಪ್ರಬೋಧಂಕರ್) (ಎಡಿಟರ್: ಪ್ರಬೋಧನ್).

ಥಿಯೋಸೊಫಿಕಲ್ ಸೊಸೈಟಿ.

ತಿಲಕ್ (ಲೋಕಮಾನ್ಯ) ಬಾಲಗಂಗಾಧರ.

ತೋಪಖಾನೆ, ಎ.ಡಿ.

ವಿ

ವೈಲ್ (ಡಾ.).

ವೇದೋಕ್ತ ಪ್ರಕರಣ.

ವಿಚಾರೆ, ದಾಜಿರಾವ್ ಅಮೃತ್.

ವಿಕ್ಟೋರಿಯಾ ಮರಾಠಾ ಬೋರ್ಡಿಂಗ್ (ವಿಕ್ಟೋರಿಯಾ ಮರಾಠಾ ಸ್ಟುಡೆಂಟ್ಸ್ ಅಸೋಸಿಯೇಶನ್.

ವಿಜಾಪೂರ್‌ಕರ, (ಪ್ರೊ.) ವಿಷ್ಣು ಗೋವಿಂದ್.

ವಿಜಯಿ ಮರಾಠಾ (ಪತ್ರಿಕೆ).

ಡಬ್ಲ್ಯು

ವೇನ್‌ಲೆಸ್ (ಡಾ.).

ವಿಲ್ಲಿಯಮ್ ಲೀ–ವರ್ನರ್ (ಪೊಲಿಟಿಕಲ್ ಏಜೆಂಟ್).

ವಿಲ್ಲಿಂಗ್ಡನ್ (ಲಾರ್ಡ್) (ಗವರ್ನರ್).

ವೈ

ಯಾದವ್, ಬಾಬುರಾವ್ (ಎಡಿಟರ್: ಗರೀಬಂಚ ಕೈವಾರಿ ಪತ್ರಿಕೆ).



ಸಾಮಾಜಿಕ, ಧಾರ್ಮಿಕ, ರಾಜಕೀಯ ಚಳುವಳಿಯನ್ನು ಮಾಡಿದ ಶಾಹೂ ಛತ್ರಪತಿಯವರು ಸಾಮಾನ್ಯನಿಗೂ ಸಹ ಎಲ್ಲ ಬಗೆಯ ಅಧಿಕಾರಗಳು ದೊರೆಯಬೇಕೆಂದು ಬಯಸಿದವರು. ರೈತರು, ಕಾರ್ಮಿಕರು, ಸ್ತ್ರೀಯರು, ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರಿಗೆ ಉಚಿತ ಶಿಕ್ಷಣ ನೀಡಿ ಅವರ ಉದ್ಧಾರದ ಸಲುವಾಗಿ ತಮ್ಮ ರಾಜ್ಯದಲ್ಲಿ ಕಾನೂನುಗಳನ್ನು ರೂಪಿಸಿ ಬ್ರಾಹ್ಮಣಶಾಹಿಯ ಗುಲಾಮಗಿರಿಯಿಂದ ಅವರನ್ನು ರಕ್ಷಿಸಿದರು. ಅಸ್ಪೃಶ್ಯ-ಹಿಂದುಳಿದ ವರ್ಗದವರಿಗೆ ಉಚಿತ ಶಿಕ್ಷಣ ನೀಡಿ ಉದ್ಯೋಗದಲ್ಲಿ ಮೀಸಲಾತಿಯನ್ನು ಜಾರಿಗೆ ತಂದರು. ಡಾ.ಅಂಬೇಡ್ಕರ್ ಅವರ ಪಾಂಡಿತ್ಯವನ್ನು ತುಂಬಾ ಮೆಚ್ಚಿಕೊಂಡಿದ್ದ ಶಾಹೂ ಅವರು ಅಂಬೇಡ್ಕರ್ ಅವರ ಬಗ್ಗೆ ತುಂಬಾ ಗೌರವವನ್ನೂ ಇಟ್ಟುಕೊಂಡಿದ್ದರು. ಭಾರತದ ಭವಿಷ್ಯವನ್ನು ನಿರ್ಮಿಸುವ ಸಂದರ್ಭದಲ್ಲಿ ಅಂಬೇಡ್ಕರ್ ಅನಿವಾರ್ಯವೆನ್ನುವಂತಹ ಮಹಾನ್ ನಾಯಕರಾಗಿ ಹೊರಹೊಮ್ಮುತ್ತಾರೆಂಬ ಭವಿಷ್ಯವಾಣಿಯನ್ನು ಅವರು ನುಡಿದಿದ್ದರು. ಇಂತಹ ಮಹಾನ್ ಸಮಾಜ ಸುಧಾರಕ ಶಾಹು ಮಹಾರಾಜ್ ಅವರ ಬದುಕು ಮತ್ತು ವಿಚಾರಗಳನ್ನೊಳಗೊಂಡ ಕೃತಿ ಇದು.

**ಡಾ.ಕೆ.ಮರುಳಸಿದ್ಧಪ್ಪ**

ಅಧ್ಯಕ್ಷರು





**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**

ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ

ಆವರಣದ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು ೫೬೦೦೫೬

